शैवभारतीभवनम्

ಧಾರವಾಡ

ಕಾರ್ತಿಕ (ಡಿಸೆಂಬರ)

ಸಂಪುಟ ೧೦

# ಜಯಕರ್ನಾಟಕ

ಹತ್ತನೆಯ ಹುಟ್ಟಿದ ಹಬ್ಬವನ್ನು
ಕಂಡು ಹಿಗ್ಗಿನಲಿಯುತ್ತಲಿರುವ
ಜಯಕರ್ನಾಟಕವು ಕನ್ನಡಿಗರೆಲ್ಲರ
ಹರಕೆಯನ್ನೂ ನೆರವನ್ನೂ
ಹಾರಯಿಸುತ್ತಲಿದೆ.

ಸಂಪಾದಕರು
ಬೆಳಗಾಂವಿ ರಾಮಚಂದ್ರ ಬಿ. ಎ.

ಸಂಚಿಕೆ ೧

ವಾ. ಚಂ. ೫-೮-೦ ಪರದೇಶ ರೂ. ೭.

ಬಿಡಿಸಂಚಿಕೆ ೦-೮-೨

ಈ ಸಂಚಿಕೆಗೆ ಮಾತ್ರ ಬೆಲೆ ೧ ರೂ.

CC-0. Jangamwadi Math Collection. Digitized by eGangotri

# ಗವರ್ನಮೆಂಟ ಸೋಪ ಫ್ಯಾಕ್ಟರಿ,

# ಬೆಂಗಳೂರು

SRI JAGADGURU VISHWARADHYA
JNANA SIMHASA[illegible]ANAMANDIR
LIBRARY.
Jangamwadi Math, VARANASI,
Acc. No. 4828

ನಾವು ಶುದ್ಧವಾದ ಸೋಪುಗಳನ್ನು ತಯಾರು ಮಾಡುವವರೆಂದು ನಮ್ಮ ಸೋಪುಗಳನ್ನು ಉಪಯೋಗಿಸುವವರೆಲ್ಲರಿಗೂ ತಿಳಿದ ವಿಷಯವಾಗಿದೆ.

ನಿಮಗೆ ಸೋಪು ಬೇಕಾದಾಗಲೆಲ್ಲಾ ದಯಮಾಡಿ ಮೈಸೂರ ಸೋಪುಗಳನ್ನು ಕೊಂಡು ಉಪಯೋಗಿಸಿದಲ್ಲಿ ನಮ್ಮ ಹಣವು ನಮ್ಮ ದೇಶದಲ್ಲಿಯೇ ಉಳಿಯುವದು

ನಮ್ಮ ದೇಶದಲ್ಲಿರುವ ಎಲ್ಲಾ ಅಂಗಡಿಗಳಲ್ಲಿ ನಮ್ಮ ಸೋಪುಗಳು ದೊರೆಯುತ್ತವೆ. ನಮ್ಮ ಸ್ಯಾಂಡಲ್ ಸೋಪನ್ನು ಉಪಯೋಗಿಸಿ ಅದರ ಗುಣವನ್ನು ಹೊಂದಿ.

**Government Soap Factory, Bangalore.**

CC-0. Jangamwadi Math Collection. Digitized by eGangotri

# ಜಯಕರ್ನಾಟಕ

## ೧೦ನೆಯ ಸಂಪುಟ

ಶಾ. ಶ. ವರುಷ ೧೮೫೩-೧೮೫೪, ಇಸವಿ ೧೯೩೧-೩೨

ಸಂಪಾದಕರು

**ಶ್ರೀ. ಬೆಳಗಾಂವಿ ರಾಮಚಂದ್ರ** ಬಿ. ಎ.

ಸಾಧನಕೆರೆ, ಧಾರವಾಡ

**ವಾರ್ಷಿಕ ಚಂದಾ ರೂ. ೫-೮-೦ (ಹಿಂದುಸ್ಥಾನ) ರೂ. ೭-೦-೦ (ಪರದೇಶ)**

CC-0. Jangamwadi Math Collection. Digitized by eGangotri

033m44
G1.10

# ನಮ್ಮ ಬಳಗ

( ಕೆಳಗಿನ ಎಲ್ಲ ಹೆಸರುಗಳ ಹಿಂದೆ ‘ ಶ್ರೀಯುತ ’ ಎಂಬುದನ್ನು ಸೇರಿಸಿ ಓದಿಕೊಳ್ಳುವುದು. ಸಂ. ಜ. ಕ.)



JAGADGURU VISHWARADHYA
JNANA SIMHASAN JNANAMANDIR
LIBRARY
Jangamawadi Math, Varanasi
Acc. No. 4828
CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

# ಈ ವರ್ಷದ ಲೇಖಗಳು



CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

## ಈಸಲ ಬಂದ ಚಿತ್ರಗಳು

[ ವಿ. ಸೂ. ದಪ್ಪಗಿನ ಅಕ್ಷರದಲ್ಲಿ ಹಾಕಿದುವುಗಳು ಆಯಾ ಸಂಚಿಕೆಯ ಮುಖಚಿತ್ರಗಳು. ]



CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

"ಓಂ ಶಾಂತಿಃ ಪುಷ್ಟಿಸ್ತು ಷ್ಟಿಶ್ಚಾಸ್ತು"

CC-0. Jangamwadi Math Collection. Digitized by eGangotri

## ಸಾಧನ ಔಷಧಾಲಯ, ಡಾಕಾ (ಬಂಗಾಲ)

ಅಧ್ಯಕ್ಷರು—ಶ್ರೀ ಜೋಗೇಶಚಂದ್ರ ಘೋಷ, M. A. F. C. S. (ಲಂಡನ್)

ಕಲಕತ್ತಾ ಶಾಖೆ—ಶ್ಯಾಮ ಬಝಾರ ಟ್ರ್ಯಾಮ್ ಡಿಪೋದ ಹತ್ತಿರ, ೨೧೩ ಬಹು ಬಝಾರ ಸ್ಟ್ರೀಟ, ಇಲ್ಲಿಯ ಔಷಧಗಳು ಆಯುರ್ವೇದ ಶಾಸ್ತ್ರ ಪದ್ಧತಿಯಿಂದ ತಯಾರಿಸಿದ ಶುದ್ಧ ಔಷಧಗಳು. ಕ್ಯಾಟಲಾಗು ಪುಕ್ಕಟೆ ದೊರೆಯುವದು. ಬೇನೆಗಳ ಲಕ್ಷಣವನ್ನು ತಿಳಿಸಿದರೆ ಲಕ್ಷ್ಯಪೂರ್ವಕವಾಗಿ ನಿದಾನ ಮಾಡಿ ಕಳಿಸುತ್ತೇವೆ.

**ಮಕರಧ್ವಜ ಸ್ವರ್ಣಸಿಂದೂರ**—ಎಲ್ಲ ಬೇನೆಗಳನ್ನೂ ಹೊಡೆದು ಹಾಕುವದು. **ವಾತ, ಪಿತ್ತ, ಕಫಗಳನ್ನು ಸರಿಯಾಗಿಟ್ಟು ವೀರ್ಯವನ್ನು ಬೆಳೆಸಿ ಆರೋಗ್ಯಭಾಗ್ಯವನ್ನು ಕೊಡುವದು ೧ ತೊಲೆಗೆ ೪ರೂ.**

**ಸಾರಿವಾದಿ ಸಾರ್ಸಾ**—ಗರ್ಮಿ, ಮೂತ್ರದ್ವಾರದ ಬೇನೆ, ಪಾರಜವಿಷ ಮೊದಲಾದವುಗಳಿಗೆ ಅತ್ಯದ್ಭುತವಾದ ಔಷಧ ೧ ಸೇರಿಗೆ ೩ ರೂ.

**ಶುಕ್ರಸಂಜೀವನ**—ನೀರಾದ ವೀರ್ಯಕ್ಕೂ ನಪುಂಸಕತೆ, ಸ್ವಪ್ನಾವಸ್ಥೆ ಮೊದಲಾದ ಸರ್ವಪ್ರಕಾರದ ವೀರ್ಯದೋಷಗಳಿಗೂ ಶಕ್ತಿದಾಯಕ ಔಷಧವು ೧ ಸೇರಿಗೆ ೧೬ ರೂ.

**ಅಬಲಾ ಬಾಂಧವ ಯೋಗ**—ಮುಟ್ಟಾದಾಗ ಬಿಳಿ-ಹಳದಿ-ಕಪ್ಪು ಬಣ್ಣದ ದ್ರವ ಬರುವದು. ಟೊಂಕಸೂಲಿ, ಬೆನ್ನಸೂಲಿ-ಗರ್ಭಸೂಲಿ, ನೇಮದಿಂದ ಮುಟ್ಟಾಗದಿರುವದು, ಬಂಜೆತನ ಮೊದಲಾದ ಹೆಣ್ಣುಮಕ್ಕಳ ಎಲ್ಲ ರೋಗಗಳಿಗೂ ಉತ್ತಮ ಉಪಾಯವು. ೧೬ ಡೋಜುಗಳಿಗೆ ೨ ರೂ. ೫೦ ಡೋಜುಗಳಿಗೆ ೫ ರೂ.

ಹೊಸ ನಾಟಕಗಳು

ಬಿಕರಿಗೆ ಸಿದ್ಧವಾಗಿವೆ.

### ಶ್ರೀಮಾನ್ ಅ. ನ. ಕೃಷ್ಣರಾಯರಿಂದ ವಿರಚಿತ ಸಾಮಾಜಿಕ ನಾಟಕಗಳು

| "ಆಹುತಿ" (ವಿಷಾದಾಂತ ಸಾಮಾಜಿಕ ನಾಟಕ). ಬೆಲೆ ಒಂದು ರೂಪಾಯಿ. | ಶ್ರೀಮಾನ್ ವರದಾಚಾರ್ಯರ ಸ್ಮಾರಕೋತ್ಸವದಲ್ಲಿ | 'ಆದದ್ದೇನು?' (ಏಕಾಂಕ ವಿನೋದಮಯ ವಿಷಾದಾಂತ ಸಾಮಾಜಿಕ ನಾಟಕ. ಬೆಲೆ: ೬ ಆಣೆ. | ಅಭಿನಯಿಸಿ ಮೆಚ್ಚುಗೆಯನ್ನು ಪಡೆದಿರುವ ನಾಟಕ |
|---|---|---|---|

ಉಜ್ವಲ ಪೌರಾಣಿಕ ನಾಟಕ

## "ಪರಶುರಾಮ"

ಶ್ರೀಮಾನ್ ಸೀತಾರಾಮ ಶಾಸ್ತ್ರಿಗಳಿಂದ ವಿರಚಿತ

ಬೆಲೆ: ೧೨ ಆಣೆಗಳು.

ಕನ್ನಡದ ಯಾವ ಪುಸ್ತಕಕ್ಕಾದರೂ ನಮಗೆ ಬರೆಯಿರಿ

ಪ್ರಕಾಶಕರು:—ವಿ. ಜಿ. ಟಿ. ಜನರಲ್ ಏಜನ್ಸಿ ಬಳೇಪೇಟೆ ಬೆಂಗಳೂರು ಸಿಟಿ

## ಉನ್ಮಾದ (ಹುಚ್ಚು) ರೋಗಕ್ಕೆ ಅಪ್ರತಿಮ ಚಿಕಿತ್ಸೆ

ಎಷ್ಟು ಹಳೆಯ ಉನ್ಮಾದ ರೋಗವಾದರೂ, ಎಷ್ಟೇ ಭಯಂಕರವಾಗಿದ್ದರೂ, **ಖಂಡಿತ ಗುಣ** ಹೊಂದುವುದರಲ್ಲಿ ಸಂಶಯವೇ ಇಲ್ಲ. ಅನುಮಾನದಿಂದ ಪ್ರಯೋಜನವಿಲ್ಲ. ಪ್ರತ್ಯಕ್ಷಕ್ಕೆ ಬೇರೆ ಪ್ರಮಾಣವೇಕೆ? **ಒಂದೇ ಒಂದು ವಾರದೊಳಗೆ ಗುಣ ಕಂಡುಬರುವದು.** ಇದರ ಸೇವನೆಯಿಂದ ಅಪಸ್ಮಾರ, ಹಿಸ್ಟೀರಿಯಗಳೂ ಸಂಪೂರ್ಣ ಗುಣ ಹೊಂದುವವು. ೧ ವಾರದ ಔಷಧಕ್ಕೆ ಕ್ರಯ ರೂ. ೪.

**ಸ್ವಪ್ನೇಂದ್ರಿಯಸ್ತಂಭನ:**— ಸ್ವಪ್ನೇಂದ್ರಿಯ, ಮೂತ್ರದಲ್ಲಿ ವೀರ್ಯಸ್ರಾವ ಮೊದಲಾದ ಯುವಕರ ರೋಗಗಳು ಇದರಿಂದ ಖಂಡಿತ ನಿರ್ಮೂಲವಾಗುವವು, ಎರಡು ವಾರಗಳ ಔಷಧಕ್ಕೆ ರೂ. ೩. ಕೆಟಲಾಗಿಗೆ ಬರೆಯಿರಿ. ಏಜಂಟರು ಬೇಕು.

**ಮೂಳ ನಾರಾಯಣ ಭಟ್ಟ ಸಿದ್ಧೌಷಧಭವನ, ಪೋಸ್ಟು ವಿಟ್ಲ, ದ. ಕನ್ನಡ.**

CC-0. Jangamwadi Math Collection. Digitized by eGangotri

# ಪರಿವಿಡಿ

[ಕೆಳಗಿನ ಎಲ್ಲ ಬರೆಹಗಾರರ ಹೆಸರಿನ ಹಿಂದೆ 'ಶ್ರೀಯುತ, ಎಂಬುದನ್ನು ಸೇರಿಸಿ ಓದಿಕೊಳ್ಳಬೇಕು. ಸಂ. ಜ. ಕ.]



CC-0. Jangamwadi Math Collection. Digitized by eGangotri




ಸಂಪುಟ ೧೦ | ಪ್ರಜೋತ್ಪತ್ತಿ ಸಂವತ್ಸರ, ಗೌರಿಯ ಹುಣ್ಣಿವೆ
ಚಾಲುಕ್ಯ ವಿಕ್ರಮ ವರ್ಷ ೮೫೬ | ಸಂಚಿಕೆ ೧

# ಹಸಿ-ಹಂಬಲ

'ಅಂಬಿಕಾತನಯದತ್ತ'

ಬಣ್ಣ ಬಣ್ಣದ ಹಕ್ಕಿ ಹೊನ್ನ ರನ್ನದ ಮೋಡ ।
ಸುಣ್ಣನೆಯ ಕಂಪ ಹೂ ತಣ್ಣನೆಯ ತಂಪುದೊರೆ ।
ಕಣ್ಣಮುಂದೆನ್ನಯೀ ತಾಳ ತಂತಿಯಸರಿಯು
ದಂಥ ಸಂತೆಯನು ನೆರಸಿ ॥
ಕಣ್ಣ ಕಟ್ಟಲು ಬಯಸುವವು ಬಣ್ಣದಾಟದಲಿ।
ನನ್ನ ನೆತ್ತರು ಅವರ ತಾಳಮೇಳವ ಕೂಡಿ ।
ಭಿನ್ನ ಆಟದ ಮರವೆ ಮನಸಿಗಾಗುವ ವರೆಗೆ –
ಏನಿದ್ದರೇನು ನನಗೆ? ॥ ೧ ॥

ಬೇಸಗೆಯ ಬಿಸಿಲ ಹೂವಿನ ಜೇನಿನಿನಿ ಹಸಿಯು ।
ಸೂಸಿ ಮೋಡದಿ ಹನಿವ ಮಿಂಚು ಮುತ್ತಿನ ತೊಟುಕು।
ಹಾಸಸಾಗರನಾದ ಚಂದಿರನ ಚಂದ್ರಿಕೆಯ
ಮೊಲೆಹಾಲಿನೊಂದೆ ಗುಟುಕು ॥
ಈ ಸವಿಗಳನು ಸವಿದು ಸವೆದ ನಾಲಗೆಗೀಗ ।
ಯಾ ಸವಿಯು ಹತ್ತಿಹುದೊ? ಹಗಲಿರುಳು ಜಿನುಗುವುದು
ಆ ಸರಸಮಾತುಗಳ ಮಾತೆಯಾಗುವ ವರೆಗೆ–
ಏನುಂಡರೇನು ನನಗೆ ? ॥ ೨ ॥

ರೋಮರಂಧ್ರಗಳರಳೆ ಶತಕೋಟಿ ಕಣ್ಣುಗಳು ।
ಆ ಮಹಾ ರೂಪ ಕಂಡಾ ಕಣಿಯನುಸಿರುವೆನು ।
ಸಾಮಗಾನದ ಸರಿಯ ನಿಸ್ಸೀಮ ಛಂದದೊಳು
ಸಾಸಿರುಸಿರೀಗಳಾಗಿ ॥
ಭೀಮ ವಿಕ್ರಮವಲ್ಲ ! ಹಾಹಾದಿ ಹೂಹುಗಳ ।
ಸ್ತೋಮವಿದು–ತಿರುಹಾಡು ಸಾಕು! ದೊರೆವಾಡುಗಳ।
ಸೀಮೆಗಳ ಸಾಮ್ರಾಟನಾಗಿ ಆಳುವ ವರೆಗೆ–
ಏನಾದರೇನು ನನಗೆ? ॥ ೩ ॥

ಬಹಳ ಹೊತ್ತಿನ ತನಕ ಒಳಗೆ ಜೀವಾಳದೊಳು ।
ಸಹಿಸಲಾರದ ನೋವನನುಭವಿಸುವನಿತರೊಳು ।
ಅಹಹ ! ಹೃದ್-ಬಂಧಗಳು ನಡುಗಿ ಸೊಲ್ಲುತ್ತಿಹವ-
ದೇಕೊ ತಮ್ಮಿಂದ ತಾವೆ ॥
ಕಹಳೆಗಳ ಕೂಗಿನೊಲು ತುಂಬ ಹುರಿದುಂಬಿಸುವ–।
ಗಹಗಹಿಸಿ ನಗುತ ಬರುವವನು ಯಾರೋ ಇವನು ?
ಅಹಹ ! ಮುಪ್ಪಿನ ಹೆಗಲ ಹತ್ತಿ "ಥಕಥೈ" ಎಂದು
ಕಂದ ಕುಣಿದಾಡುವವನು ॥ ೪ ॥

(೨೫-೮-'೧೯)

CC-0. Jangamwadi Math Collection. Digitized by eGangotri

# * ಜ್ಞಾನ ಸೌಂದರ್ಯಗಳ ಸಂಬಂಧ

ಲೇ:—ಪ್ರೊ. ಎಂ. ಹಿರಿಯಣ್ಣಯ್ಯನವರು, ಎಂ. ಎ. ಮೈಸೂರು

ಈ ಅವಿರತವಾದ ಸಂಸಾರಸತ್ರದಲ್ಲಿ ಒಂದರೆಗಳಿಗೆಯಾದರೂ ನಮ್ಮ ಮನಸ್ಸನ್ನು ವಿರಮಿಸಿ "ಮುದಮಲ್ಲಿ ಮುದವಿಲ್ಲಿ– ಮುದಮೆತ್ತಲುಂ" ಎನ್ನುವ ಹಾಗೆ ಅಪೂರ್ವವಾದ ಆನಂದವನ್ನು ತಂದುಕೊಡುವದೇ ಸೌಂದರ್ಯವು. ಈ ಅಪಾರವಾದ ಸಂಸಾರದ ಉಸುಬಿನ ಬಯಲಿನಲ್ಲಿ ಕಣ್ಮನಗಳಿಗೆ ಹರುಷವನ್ನು ತಂದುಕೊಡುವ ಹಸುರು ಗದ್ದೆಗಳೆಂದರೆ ಈ ಸೌಂದರ್ಯವೇ ಸರಿ. ಸೌಂ-ದರ್ಯವನ್ನು ಗುರುತಿಸಲು ಇದೊಂದೇ ಸಾಧನವು. ಸಂಸಾರದಲ್ಲಿ ನಾವು ಅಪೇಕ್ಷಿಸುವ–ಇಲ್ಲವೆ ತಾನಾಗಿಯೆ ಬಂದುಹೋಗುವ–ವಿರಾಮವು (ವಿಷಯಗಳಿಂದ ವಿಯೋಗವು) ಏನು ತಾನೆ ಸೂಚಿಸುವುದು ? ನಮ್ಮ ಜೀವನವು 'ನಮಗೆ ಅದು ಬೇಕು ಇದು ಬೇಕೆ'ನ್ನುವದನ್ನು ಸಾಧಿಸುವದಕ್ಕಾಗಿ ಹೂಡಿದ ಸಂತತವಾದ ಸಂಗ್ರಾಮವಾಗಿದೆ. ಶ್ರೀ. ಶಂಕರಾಚಾರ್ಯರು ಹೇಳುವಂತೆ ಅವಿದ್ಯಾ–ಕಾಮ–ಕರ್ಮಮೂಲವಾಗಿದೆ. ನಾವು ವಿಶಿಷ್ಟವಾದುದೊಂದು ಹಂಬಲವನ್ನು ಹಿಡಿಯದಿರುವಾಗ ಮನಸ್ಸು ಹಗುರಾದಂತೆ ನಮಗೆನಿಸುವದು. ಆದರೆ ಮನಸ್ಸಿಗೆ ದೊರೆಯುವ ಕ್ಷಣಿಕವಾದ ಈ ವಿರಾಮವಾದರೂ ವಿರುದ್ಧವಾದುದಲ್ಲ. ಯಾಕೆಂದರೆ ಹೊರಗಿನ ಹವ್ಯಾಸವು–ಹೋರಾಟವು ತಡೆದು ನಿಂತಿದ್ದರೂ, 'ಅದು ಬೇಕು ಇದು ಬೇಕು' ಎನ್ನುವ ಒಳಗಿನ ತಳಮಳವು ನಿಂತಿರುವದಿಲ್ಲ. ಹೊರಗಿನ ಹೋರಾಟದೊಡನೆ–ಒಳಗಿನ ಈ ತಳಮಳವೂ ಅಡಗಬೇಕು. ಅದುವೇ ಸಾತ್ವಿಕವಾದ ಸಂತೋಷವು. ಈ ತಳಮಳವೇ ಬಂಧನವು–ದುಃಖವು. ಅದನ್ನು ಮೀರಿ ನಿಲ್ಲುವದೇ ಬಿಡುಗಡೆಯು–ಸಂತೋಷವು. ಈ ತಳಮಳವನ್ನು–ಆಸಕ್ತಿಯನ್ನು–ಎರಡು ವಿಧವಾಗಿ ಇಲ್ಲದಂತೆ ಮಾಡಬಹುದು. ತಾತ್ಪೂರ್ತಿಕವಾದ ನಮ್ಮ ಬಯಕೆಗಳು ಕೈಗೂಡಿದಾಗ–ಇಲ್ಲವೆ ಆ ಸಮಯದಲ್ಲಿ ನಮಗೇನೂ ಬೇಕಾಗದಿರುವಾಗ ಕೆಲಕಾಲವಾದರೂ ಈ ಹಂಬಲವನ್ನು–ತಳಮಳವನ್ನು ಮೀರಿ ನಿಲ್ಲುವುದೇ ಸಾತ್ವಿಕ ಸೌಖ್ಯದ ಸೋಪಾನವಾಗಿದೆ. ಮೇಲಾಗಿ ವೇದಾಂತಿಗಳ ಮತದಿಂದ ಈ ಆನಂದವು ಹೊರಗಿನಿಂದ ಬರತಕ್ಕುದಲ್ಲ. ಅದು ಆತ್ಮಸ್ವರೂಪವೇ ಆಗಿರುವದು. ಅಜ್ಞಾನದಿಂದ ಆವೃತನಾದ ಆತ್ಮನಿಗೆ ತನ್ನ ಸ್ವರೂಪದ ಅರಿವು ಸಂತತವಾಗಿ ಬಾರದು. ಆತ್ಮಕ್ಕೆ ಮುಸುಕು ಹಾಕಿರುವ ಈ ಮಾಲಿನ್ಯವನ್ನು ಅನಾಸಕ್ತಿಯಿಂದ ತೊಳೆದು ಬಿಟ್ಟರೆ ಆತ್ಮನು ತನ್ನ ತಾನರಿತುಕೊಳ್ಳುವನು. ತನ್ನಲ್ಲಿಯೇ ಅಡಗಿರುವ ಆನಂದವನ್ನು ಅನುಭವಿಸುವನು. ಆತ್ಮಜ್ಞಾನಿಗೆ ಈ ಆನಂದವು ಸುಲಭಸಾಧ್ಯವೇ ಸರಿ. ಆತ್ಮಜ್ಞಾನವಿಲ್ಲದ ಅಜ್ಞಾನಿಗೂ ಕೂಡ ಅರೆಗಳಿಗೆಯಾದರೂ ಈ ಆನಂದದ ಅನುಭವವು ಅಜ್ಞಾತವಾಗಿಯಾದರೂ ಬಂದೇ ಬರುವದು. ಕಾಮ–ಕರ್ಮಗಳೆರಡನ್ನೂ ಹೊಡೆದುಹಾಕಿ ಬಿಟ್ಟರೆ ಬಲಹೀನವಾದ ಅವಿದ್ಯೆಯೊಂದು ಅವ್ಯಕ್ತವಾಗಿ ಉಳಿಯಬಹುದು. ಕಾಮ–ಕರ್ಮಗಳ ಬಂಧನದಿಂದ ಬಿಡುಗಡೆ ಹೊಂದಿ, ಅವಿದ್ಯೆಯನ್ನು ಅವ್ಯಕ್ತವಾಗಿರಿಸುವದೇ ಸೌಂದರ್ಯೋಪಾಸನೆಯ ಅವಸ್ಥೆಯು. ಈ ಅವಿದ್ಯೆಯನ್ನು ಕೂಡ ಅಳಿಸಿ ಬಿಡುವದೇ ಸ್ಥಿತಪ್ರಜ್ಞನ ಸ್ಥಿತಿಯು. ಕಲೋಪಾಸಕನಿಗೂ–ಆತ್ಮಜ್ಞಾನಿಗೂ ಇರುವ ಭೇದವಿಷ್ಟೇ– ಕಲೋಪಾಸಕನು ನಿರ್ಹೇತುಕವಾದ ಸಮಾಧಿಯಲ್ಲಿ ತೊಡಗುವನು, ಆದರೆ ಅವನಿಗಿನ್ನೂ ಆತ್ಮಸಾಕ್ಷಾತ್ಕಾರವಿಲ್ಲ. ಆದರೆ ಆತ್ಮಜ್ಞಾನಿಯು ಆತ್ಮಸ್ವರೂಪ–ದರ್ಶನದ ಸೌಖ್ಯವನ್ನು ಪ್ರತ್ಯಕ್ಷವಾಗಿ ಅನುಭವಿಸುವನು. ನಿಷ್ಕ್ರಿಯನಾಗದಿದ್ದರೂ ಅನಾಸಕ್ತನು. ಇದರಿಂದ ತಿಳಿದುಬರುವದೇನೆಂದರೆ–ಕಲೋಪಾಸಕನಿಗೂ ಆತ್ಮಜ್ಞಾನಿಗೂ ಅತ್ಯವಶ್ಯವಾದ ಸಾಧನವೆಂದರೆ–ಅನಾಸಕ್ತಿಯು.

ಆನಂದಪ್ರಾಪ್ತಿಯೇ ಕಲೋಪಾಸನೆಯ ಫಲವು. ಅನಾಸಕ್ತಿಯೇ ಆನಂದ ಪ್ರಾಪ್ತಿಯ ಸಾಧನವು. ಕಲೋ

---

* ಇದರ ಮೊದಲನೆಯ ಭಾಗವು ಕಳೆದ ವರ್ಷದ ಏಳನೆಯ ಸಂಚಿಕೆಯಲ್ಲಿ "ಸೌಂದರ್ಯಶಾಸ್ತ್ರದ ಉಗಮವೆಲ್ಲಿ" ಎಂದು ಪ್ರಸಿದ್ಧವಾಗಿದೆ.

CC-0. Jangamwadi Math Collection. Digitized by eGangotri

ಪಾಸಕನು ಈ ಅನಾಸಕ್ತಿಯನ್ನು ಸಾಧಿಸಲೇಬೇಕು. ಅಂದರೇ ಅವನಿಗೆ ರಸಾನುಭವವು ಒದಗುವದು. ಅವನಿಗೆ ಇದು ಸುಲಭವೂ ಆಗುವದು. ಯಾಕೆಂದರೆ ಅವನ ಕೃತಿಗಳೆಲ್ಲ ಕಲ್ಪನಾ ಸೃಷ್ಟಿಯಲ್ಲಿ. ಈ ಕಲ್ಪನಾಕುಸುಮಗಳು ಅವನಲ್ಲಿ ಯಾವ ಕಾಮನೆಯನ್ನೂ ಹುಟ್ಟಿಸವು. ಈ ಕಾಮನೆಗಳ ಬಲವು ತಗ್ಗಿದ ಮೇಲೆ ಮನಸ್ಸೂ ಹಗುರಾಗಿ ಅವನು ಸಹಜವಾದ ಹರುಷವನ್ನು ಹೊಂದುವನು. ಆತನ ಕೃತಿಗಳಲ್ಲಿ ಕಂಡುಬರುವ ತಾಳಮೇಳ-ಮಾಧುರ್ಯಗಳು ಈ ಆನಂದವನ್ನು ಸಾಧಿಸಲು ಸಹಕಾರಿಗಳಾಗುವವು. ಇದಲ್ಲದೆ ಈ ತಾಳ-ಪ್ರಾಸಗಳು ಆತನ ಕೃತಿಯಲ್ಲಿ ಏಕರೂಪತೆಯನ್ನಾದರೂ ತಂದುಕೊಡುವವು. ವಿಶ್ವದ ವಿವಿಧತೆಯಲ್ಲಿ ಏಕರೂಪತೆಯನ್ನು ಕಂಡು-ವಿಶ್ವತತ್ತ್ವವನ್ನರಿತು-ಜ್ಞಾನಿಯು ವಿಶೇಷವಾದ ಆನಂದವನ್ನು ಹೊಂದುವನು. ಕಲೋಪಾಸಕನಾದರೂ ಹೀಗೆಯೇ ಮಾಡುವನು. ಅವನಾದರೂ ಈ ವಿವಿಧತೆಯನ್ನೆಲ್ಲ ಶೋಭಿಸುವ ಏಕರೂಪತೆಯನ್ನೇ ಕಾಣುವನು. ಆದರೆ ಜ್ಞಾನಿಯ ದೃಷ್ಟಿಯು ವಿಶ್ವ-ತತ್ತ್ವದ ಕಡೆಗೆ; ಕಲೋಪಾಸಕನ ದೃಷ್ಟಿಯು ಕಲೆಗೆ ಆಧಾರಭೂತವಾದ ಕಲಾ-ತತ್ತ್ವದ ಕಡೆಗೆ. ನಿಜವಾಗಿ ಕಲೆಯ ಸೊಬಗನ್ನು ಸವಿಯುವವನು ಒಂದು ವಿಧವಾದ ಕೈವಲ್ಯಸುಖವನ್ನೇ ಹೊಂದುವನೆಂದು ಹೇಳಬಹುದು. ಆದರೆ ಈ ಸುಖವು ನಿತ್ಯವಾದುದಲ್ಲ. ಕೇವಲ ಕ್ಷಣಿಕವಾದುದು.

ಸಾಂಖ್ಯ ಸಿದ್ಧಾಂತವನ್ನಿಷ್ಟು ನಿರೀಕ್ಷಿಸೋಣ. ದ್ವೈತವು ಸಾಂಖ್ಯತತ್ತ್ವದ ತಿರುಳು. ಪ್ರಕೃತಿ-ಪುರುಷಗಳೆರಡೂ ನಿತ್ಯವಸ್ತುಗಳಾಗಿರುವವು. ಮನಸ್ಸು-ಬುದ್ಧಿ-ಅಹಂಕಾರಗಳು ಪ್ರಕೃತಿಯದೊಂದು ಅಂಗವಾಗಿಯೂ-ದೃಶ್ಯಸೃಷ್ಟಿಯೆಲ್ಲವೂ ಮತ್ತೊಂದು ಅಂಗವಾಗಿಯೂ ಇರುವವು. ಪುರುಷನು-ಅಂದರೆ ಆತ್ಮನು-ಕೇವಲ ಪ್ರಜ್ಞಾನ್ವಿತನು. ವಿಮುಖಗಳಾಗಿ ನಿಡಿದು ನಿಂತ ಪ್ರಕೃತಿ-ಪುರುಷಗಳನ್ನು ಸಂಮುಖವಾಗಿ ಮಾಡಿ ಅವುಗಳ ಸಂಬಂಧವನ್ನುಂಟು ಮಾಡುವದಕ್ಕಾಗಿಯೇ ಈ ಮನಸ್ಸು-ಅಹಂಕಾರಾದಿಗಳ ಯೋಜನೆಯು. ಪ್ರಕೃತಿಯ-ಜಡಸೃಷ್ಟಿಯ-ಅಂಗವೇ ಆದ ಬುದ್ಧಿಯಲ್ಲಿ ಪ್ರಕೃತಿ ಪುರುಷಗಳೆರಡನ್ನೂ ಒಂದೆಡೆಯಲ್ಲಿ ಎಳೆತರುವ ಶಕ್ತಿಯು ಎಲ್ಲಿಂದ ಬಂದಿತೆಂಬುದು ಬಹು ತೊಡಕಿನ ಪ್ರಶ್ನೆ. ಪ್ರಸ್ತುತಕ್ಕೆ ಅದು ನಮಗೆ ಬೇಕಿಲ್ಲ. ನಮಗಿಷ್ಟು ತಿಳಿದರೆ ಸಾಕು-ಬುದ್ಧಿಶಕ್ತಿಯಿಂದ ಪುರುಷನು ಜೀವನದ ಎರಡೂ ದಾರಿಗಳನ್ನು-ಧ್ಯೇಯಗಳನ್ನು ಕಂಡುಕೊಳ್ಳುವನು. ಸುಖದುಃಖಾನ್ವಿತವಾದ ಭೋಗಮಂದಿರದ ಕಡೆಗೆ ಹೋಗುವ ದಾರಿಯೊಂದನೆಯದು. ಸುಖದುಃಖಗಳೆರಡನ್ನೂ ವಿಚಾರಿಸಿಂತು ಆತ್ಮಜ್ಞಾನದ ಬೆಳಕಿನಲ್ಲಿ ಅಪವರ್ಗವನ್ನು-ಮೋಕ್ಷವನ್ನು ಕಂಡುಕೊಳ್ಳುವದು ಎರಡನೆಯದು.

ಇದಲ್ಲದೆ ಸಾಂಖ್ಯಸಿದ್ಧಾಂತದಲ್ಲಿ ಪ್ರಕೃತಿಯ ಸತ್ತ್ವ ರಜ-ತಮಗಳೆಂಬ ಮೂರು ಗುಣಗಳು ಒಳ್ಳೆ ಮಹತ್ತ್ವವುಳ್ಳವುಗಳಾಗಿರುವವು. ಈ ತ್ರಿಗುಣಾತ್ಮಕ ಪ್ರಕೃತಿಯೆ ಸಾಂಖ್ಯಸಿದ್ಧಾಂತದ ತಳಹದಿಯೆಂದು ಹೇಳಬಹುದು. ಈ ಮೂರು ಗುಣಗಳು ಪ್ರಕೃತಿಯ ಒಂದು ಅಂಗವಾದ ಜಡಸೃಷ್ಟಿಯನ್ನು ಆವರಿಸಿದಂತೆ ಅಂತರಿಂದ್ರಿಯಗಳಾದ ಮತ್ತೊಂದು ಅಂಗವಾದ ಬುದ್ಧಿ-ಅಹಂಕಾರಗಳನ್ನಾದರೂ ವ್ಯಾಪಿಸಿಕೊಂಡಿರುವವು. ಇವುಗಳಲ್ಲಿ ಸತ್ತ್ವವು-ಸುಖವನ್ನೂ, ರಜವು ದುಃಖವನ್ನೂ-ತಮವು ಮೋಹವನ್ನೂ ಉಂಟುಮಾಡುವವು. ಸಾಂಖ್ಯರು ವಿಶ್ವವನ್ನು ಈ ಸುಖದುಃಖಗಳ ತಕ್ಕಡಿಯಲ್ಲಿಯೇ ತೂಗಿ ಬೆಲೆ ಕಟ್ಟಿರುವರು. ಈ ತ್ರಿಗುಣಗಳು ಜಡಸೃಷ್ಟಿಯ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಪ್ರಮಾಣದಿಂದ ಕಂಡುಬರುವವು. ಕೆಲವುವಸ್ತುಗಳಲ್ಲಿ ಸತ್ತ್ವವು ಹೆಚ್ಚಿದ್ದರೆ ಕೆಲವದರಲ್ಲಿ ರಜವಾಗಲಿ-ತಮವಾಗಲಿ ಮಿಗಿಲಾಗಿರುವದು. ವಾಸನಾರಹಿತವಾದ-ವಿಶುದ್ಧವಾದ-ಬುದ್ಧಿಯು ಸ್ವಭಾವತಃ ಸಾತ್ತ್ವಿಕವಾಗಿರುವದು. ಈ ವಿಶುದ್ಧವಾದ ಬುದ್ಧಿಯು ಕೇವಲ ಜೀವನ್ಮುಕ್ತರಲ್ಲಿ ಮಾತ್ರ ಸಾಧ್ಯವು. ಆದರೆ ಬುದ್ಧಿಯು ಸ್ವಭಾವತಃ ಸಾತ್ತ್ವಿಕವಾಗಿದ್ದರೂ, ಸಾಮಾನ್ಯ ಜನರಲ್ಲಿ ಸಂಚಿತವಾದ ವಾಸನೆಗಳು ಅದನ್ನು ಸತ್ತ್ವಹೀನವನ್ನಾಗಿ ಮಾಡಿಬಿಡುವವು. ನೆನಪಿನಲ್ಲಿಡತಕ್ಕ ಇನ್ನೊಂದು ಸಂಗತಿಯೆಂದರೆ- ನಮಗಾಗುವ ಸುಖದುಃಖಗಳಿಗೆ ನಮ್ಮೊಳಗಿನ ಬುದ್ಧಿ ಹಾಗೂ ಬಾಹ್ಯ ವಸ್ತುಗಳ ಸಂನಿಕರ್ಷ-ಸಂಯೋಗಗಳೇ ಕಾರಣವಾಗಿರುವವು. ಸ್ವಭಾವತಃ ಸತ್ತ್ವಪ್ರಧಾನವಾದ ಬುದ್ಧಿಯು ಕೇವಲ ಸುಖವನ್ನೇ ಉಂಟುಮಾಡಬೇಕಾಗಿದ್ದರೂ, ಹಿಂದೆ ಹೇಳಿದಂತೆ ವಾಸನೆಗಳಿಂದ ವಿಕಾರ ಹೊಂದಿದ ಬುದ್ಧಿಯು ವಿಪರೀತ

CC-0. Jangamwadi Math Collection. Digitized by eGangotri

ಅನುಭವಗಳನ್ನುಂಟುಮಾಡುವದು. ವ್ಯಕ್ತಿಗಳಲ್ಲಿ-ವಾಸನೆಗಳು ಬೇರೆಯಾದಂತೆ-ಬುದ್ಧಿಯೂ ಭಿನ್ನವಾಗಿರುವದು. ಬುದ್ಧಿಯು ಭಿನ್ನವಾದಂತೆ ಸುಖದುಃಖಗಳ ಅನುಭವವಾದರೂ ವಿಪರೀತವಾಗುವದು. ಒಬ್ಬರಿಗೆ 'ಬೇವು' ಆದದ್ದು ಮತ್ತೊಬ್ಬರಿಗೆ 'ಬೆಲ್ಲ'ವಾಗಬಹುದು. ಒಬ್ಬರಿಗೆ ಸುರೂಪಿಯೆಂದು ತೋರಿದುದು ಮತ್ತೊಬ್ಬರಿಗೆ ಕುರೂಪಿಯಾಗಿ ಕಾಣಬಹುದು. ಈ ವಿವಿಧವಾದ ಅನುಭವಗಳೆಲ್ಲವೂ, ನೋಡುವವರ ವಿವಿಧವಾದ ವಾಸನೆಗಳಿಂದ ವಿಕೃತವಾದ ಬುದ್ಧಿಯನ್ನವಲಂಬಿಸಿವೆ.

ಸುಖದುಃಖಗಳ ಈ ವಿಪರೀತವಾದ ಅನುಭವಗಳಿಗೆ ಸಾಂಖ್ಯರ ಬುದ್ಧಿಯೇ 'ಪುರುಷನೆಂದೂ ಬುದ್ಧಿಗಾಗುವದೆಲ್ಲವೂ 'ಪುರುಷ'ನಿಗಾಗುವದೆಂದೂ ಇದ್ದ ತಪ್ಪುತಿಳುವಳಿಕೆಯೇ ಕಾರಣವಾಗಿರುವದು. ಪುರುಷನು ಬುದ್ಧಿಯ ಬಂಧನದಿಂದ ಬಿಡುಗಡೆ ಪಡೆದಹೊರತು ಸುಖದುಃಖಗಳ ಕಾಟವು ಆತನಿಗೆ ತಪ್ಪದು. ಆದರೆ ಸೃಷ್ಟಿಯ ವ್ಯವಹಾರದಲ್ಲಿ ಸಾಮಾನ್ಯರಿಗೆ ಇದು ಸಾಧ್ಯವಲ್ಲ. ಅವರವರ ಬುದ್ಧಿವಾಸನೆಗಳಿಗೆ ತಕ್ಕಂತೆ ಸರ್ವರೂ ಸುಖದುಃಖಗಳನ್ನನುಭವಿಸಲೇಬೇಕಾಗುವದು. ಕವಿಯೊಬ್ಬನು ಹೇಳುವಂತೆ ಜಗತ್ತಿನಲ್ಲಿ 'ಕ್ವಚಿದ್ ವೀಣಾವಾದನ'ವಾದರೆ 'ಕ್ವಚಿದ್ ಹಾಹೇತಿ ರುದಿತಮ್' ಇದು ಸಾರ್ವತ್ರಿಕವಾಗಿ ಕಂಡುಬರುವದು. ಜೀವನ್ಮುಕ್ತನ ಸ್ಥಿತಿಯು ಮಾತ್ರ ಬೇರೆ. ಅವನಿಗೆ ಸುಖದುಃಖಗಳೆರಡರ ಲೇಪವೂ ಇಲ್ಲ. ಪ್ರೀತಿಯೂ ಇಲ್ಲ-ದ್ವೇಷವೂ ಇಲ್ಲ. ವಿಜ್ಞಾನಭಿಕ್ಷುವು ಹೇಳುವಂತೆ-ಅವನ ಚಿತ್ತವೃತ್ತಿಯು ಗಿರಿಕಂದರಗಳಲ್ಲಿ ಗಾಳಿ ತಗಲದಿರುವ ಪ್ರಶಾಂತವಾದ ಸರೋವರದಂತೆ ಅವಿಚಲವಾದುದಾಗಿರುವದು.

ಆದರೆ ಬುದ್ಧಿ ಬಂಧನಗಳಿಗೊಳಗಾದ ಸಾಮಾನ್ಯ ಜನರಿಗೆ ಈ ಅವಿಚಲಿತವಾದ ಚಿತ್ತವೃತ್ತಿಯು ಕೇವಲ ಆದರ್ಶವು; ಅನುಭವ ಸಾಧ್ಯವಲ್ಲ. ಅರೆಗಳಿಗೆಯಾದರೂ ನಮ್ಮ ಬುದ್ಧಿಯನ್ನು ಮೀರಿ ನಾವು ನಿಲ್ಲಲಾರೆವು. ಆದರೆ ದುಃಖದಿಂದ ಕೆಲಕಾಲವಾದರೂ ಬಿಡುಗಡೆ ಹೊಂದಲು ಮಾತ್ರ ನಮಗೆ ಸಾಧ್ಯವಿದೆ. ದುಃಖ ಬೆರೆಯದ ಸುಖವು ಈ ಜಗತ್ತಿನಲ್ಲಿ, ಇಲ್ಲವೆಂದೇ ಹೇಳಬಹುದಾದರೂ-ಕಲೋಪಾಸನೆಯಿಂದ ನಾವು ಕೆಲಕಾಲವಾದರೂ ದುಃಖವನ್ನು ಮೀರಿ ನಿಂತು, ಸಂಸಾರದಲ್ಲಿ ಸಿಗಲಾರದ ಸುಖವನ್ನು ಆಸ್ವಾದಿಸಬಹುದು. ವಿಶ್ವಪ್ರಪಂಚದಿಂದ ಬಾಹ್ಯವಾದ ಕಲಾಪ್ರಪಂಚದಲ್ಲಿ ಮಾತ್ರವೇ ಈ ಸಾತ್ತ್ವಿಕವಾದ ಸುಖದ ಅನುಭವವು ಸಂಭವನೀಯವಾಗಿದೆ. ಕಲಾಸೃಷ್ಟಿಯು ವಿಶ್ವ ಪ್ರಪಂಚದಿಂದ ದೂರವಾಗಿದ್ದರೂ ತೀರ ವಿಭಿನ್ನವಾಗಿಲ್ಲ. ಆದರೆ ಅದು ಆದರ್ಶಪ್ರಪಂಚ; ಕಲ್ಪನಾಸೃಷ್ಟಿಯಾದುದರಿಂದ ನಮ್ಮ ಕಾಮನೆಗಳನ್ನು ಜಾಗ್ರತಗೊಳಿಸುವದಿಲ್ಲ. ಅಹಂಕಾರ-ಅಭಿಮಾನಗಳನ್ನು ಚೇತರಿಸುವದಿಲ್ಲ. ಮೇಲಾಗಿ ಈ ಕಲಾಕುಸುಮಗಳಿಗೆ ತ್ರಿಗುಣಗಳ ವಾಸನೆಯಿಲ್ಲ; ಅಂತೆಯೇ-ಸುಖದುಃಖಗಳ ಬಾಧೆಯೂ ಇಲ್ಲ. ಹೀಗಾಗಿ ಈ ಕಲಾಸೃಷ್ಟಿಯಲ್ಲಿ ಅಲೆದಾಡುವ ಮನಸು ಕ್ಷಣಕಾಲವಾದರೂ ಸಾಂಸಾರಿಕ ಸುಖದುಃಖಗಳಿಂದ ವಿರಾಮ ಹೊಂದುವದು. ಸಾಮಾನ್ಯರಿಗೆ ಅಲಭ್ಯವಾದ ಅನಾಸಕ್ತಿಯನ್ನು ತಾಳುವದು, ಆದರಿಂದಲೇ ಅಪೂರ್ವವಾದ ಸುಖವನ್ನು ಹೊಂದುವದು. ಕೆಲಕಾಲವಾದರೂ ಹೀಗೆ ಮನಸಿಗೆ ವಿರಾಮವನ್ನು ತಂದುಕೊಡುವದೇ ಕಲೆಯ ಕಲ್ಯಾಣಗುಣಗಳ ಹೆಚ್ಚುಗಾರಿಕೆ.

ಅನೇಕ ದರ್ಶನಶಾಸ್ತ್ರಗಳಲ್ಲಿ ವೇದಾಂತದ, ಆದಿತತ್ತ್ವಗಳಿಗೂ-ರಸ ತತ್ತ್ವಕ್ಕೂ ಇರುವ ಸಾಮ್ಯ ಸಂಬಂಧಗಳು ಸೂಕ್ಷ್ಮವಾಗಿಯೂ ಸ್ಪಷ್ಟವಾಗಿಯೂ ಹೇಳಲ್ಪಟ್ಟಿವೆ. ರಸದ ವಿವರಣೆಯಾದರೂ ವೇದಾಂತದ ಪಾರಿಭಾಷಿಕ ಶಬ್ದಗಳಲ್ಲಿಯೇ ಕಂಡುಬರುವದು. ಅಲಂಕಾರಶಾಸ್ತ್ರದಲ್ಲಿ ವೇದಾಂತದರ್ಶನಗಳ ತತ್ತ್ವಗಳೆಲ್ಲವೂ ಕಂಡುಬರುವವು. ಭಟ್ಟನಾಯಕನೆಂಬವನು ರಸದ ವಿವರಣೆಯಲ್ಲಿ ಸಾಂಖ್ಯಸಿದ್ಧಾಂತವೆಲ್ಲವನ್ನೂ ಎಳೆತಂದಿರುವನು. ಈ ಭಟ್ಟನಾಯಕನು ಪ್ರಸಿದ್ಧ ಅಲಂಕಾರಿಕನು. 'ಹೃದಯ ದರ್ಪಣ'ವೆಂಬ ಅಜ್ಞಾತ ಗ್ರಂಥವನ್ನು ಬರೆದಿರುವನು. ಕಾವ್ಯಪ್ರಕಾಶದಲ್ಲಿ ರಸತತ್ತ್ವವನ್ನು ಸಂಕ್ಷೇಪವಾಗಿ ಹೀಗೆ ಹೇಳಿರುವರು:-

न ताटस्थ्येन नात्मगतत्वेन रसः प्रतीयते नोत्पद्यते नाभिव्यज्यते अपि तु काव्येनाद्येचाभिधातो द्वितीयेन विभवादि साधारणी करणात्मना भावकत्वव्यापारेण भाव्यमानः स्थायी सत्वोद्रेकप्रकाशानन्दमयसंविद्विश्रान्तिसत्वेन भोगेन भुज्यते ॥

CC-0. Jangamwadi Math Collection. Digitized by eGangotri

ಈ ಪವೇಶನೆಯಲ್ಲಿ ಮೂರು ಮಾತುಗಳು ಮನನೀಯ ವಾಗಿವೆ. ಕಲಾಸೃಷ್ಟಿಯಲ್ಲಿಯ ವಸ್ತುಗಳಾಗಲಿ ವ್ಯಕ್ತಿಗಳಾಗಲಿ ಯಾರನ್ನೂ ಯಾವುದನ್ನೂ ಉದ್ದೇಶಿಸಿ ನಿರ್ಮಾಣವಾಗಿರುವದಿಲ್ಲ. ಅವು ಕೇವಲ ಕಾಲ್ಪನಿಕವಾದವುಗಳು-ಹೊರಗಿನವುಗಳು. ಹೀಗೆ ಲೌಕಿಕ ವಸ್ತು-ವ್ಯಕ್ತಿಗಳ ಸಂಬಂಧವನ್ನು ಮೀರಿ ಕೇವಲ ಅಲಿಪ್ತರಾಗಿ ಉಳಿಯುವದು ಸಾಮಾನ್ಯರಿಗೆ ಸುಲಭಸಾಧ್ಯವಲ್ಲ. ಆದರೆ ಕಲಾ ಪ್ರಪಂಚದಲ್ಲಿ ನಿರ್ಮಾಣವಾದ ಕಾಲ್ಪನಿಕ ವಸ್ತು-ವ್ಯಕ್ತಿಗಳು ಸಂಸಾರದ ಸೆರೆಯಿಂದ ಮನಸ್ಸನ್ನು ಸೆಳೆದು ಕ್ಷಣಕಾಲವಾದರೂ ವಿಶ್ರಾಂತಿ ಸುಖವನ್ನು ತಂದು ಕೊಡುವವು.

ಎರಡನೆಯ ಮಹತ್ತ್ವದ ಮಾತೆಂದರೆ, ಸೌಂದರ್ಯ ಸಾಕ್ಷಾತ್ಕಾರವಾಗುವವರೆಗಿರುವ ಕಲೋಪಾಸನೆಯ ಮೂರು ಮೆಟ್ಟಲುಗಳು. ಇವುಗಳಲ್ಲಿ ಕಾವ್ಯದ ಶಬ್ದಾರ್ಥವನ್ನರಿತು ಕೊಳ್ಳುವದು ಮೊದಲನೆಯದು. ಆ ಮೇಲೆ ಈ ಶಬ್ದಾರ್ಥಗಳಿಂದ ಯಾರಿಗೂ ಸಂಕುಚಿತವಾಗಿ ಸಂಬಂಧಿಸದ, ಸಾಮಾನ್ಯ ಸಂಗತಿಗಳನ್ನು ಸೋಸಿ ತೆಗೆಯುವದು ಎರಡನೆಯದು ಮೂರನೆಯದಾದ ಕಡೆಯ ಸ್ಥಿತಿಯೆಂದರೆ ರಸಾಸ್ವಾದನವು, ಇಲ್ಲವೆ ಸೌಂದರ್ಯದ ಸಾಕ್ಷಾತ್ಕಾರವು. ಹೀಗೆಲ್ಲ ವಿಚಾರ ಮಾಡಿ ನೋಡಲಾಗಿ ಸಾಂಖ್ಯಸಿದ್ಧಾಂತದಲ್ಲಿ ಹೇಳಿದಂತೆ ವ್ಯಕ್ತಿಗತವಾಗದಿರುವ ಕವಿಯ ಕಾಲ್ಪನಿಕವಾದ ವಸ್ತು-ವ್ಯಕ್ತಿಗಳೇ ಸಂಪೂರ್ಣವಾದ ರಸಾಸ್ವಾದವನ್ನು ಸೌಂದರ್ಯಸುಖವನ್ನು ತಂದುಕೊಡುವದೆಂಬ ಮಾತು ತಾತ್ತ್ವಿಕವಾಗಿಯೂ ಸಾಧಾರವಾಗಿಯೂ ಇರುವದೆಂದು ತಿಳಿದು ಬರುವದು. ಮೇಲೆ ಉದಹರಿಸಿದ ಸಂಸ್ಕೃತ ವಾಕ್ಯಗಳಲ್ಲಿ ಈ ಮೂರು ಅವಸ್ಥಾ ವಿಶೇಷಗಳು ಕಲೆಯ-'ವ್ಯಾಪಾರ' ಗಳೆಂದು ಹೇಳಿರುವರು. ಶಬ್ದಾರ್ಥದ ಜ್ಞಾನಕ್ಕೆ **'ಅಭಿಧಾ'** ಎಂದೆನ್ನುವರು. ಶಬ್ದಾರ್ಥದಲ್ಲಿ ಅಡಗಿದ ಒಳಗಿನ ಆಶಯ-ತಿರುಳಿಗೆ-**'ಭಾವನಾ'** ಎಂದೆನ್ನುವರು. ಕಾವ್ಯದಲ್ಲಿ ಮೇಲಿನ ಶಬ್ದಾರ್ಥವು ಮಹತ್ತ್ವವಾದುದಲ್ಲ. ಆದರೆ ಯಾರಿಗೂ ಸಂಕುಚಿತವಾಗಿ ಸಂಬಂಧಿಸದೆ, ಎಲ್ಲರಿಗೂ ಸಾಮಾನ್ಯವಾಗಿ ಸಂಬಂಧಿಸುವ ಒಳಗಿನ ಆಶಯವೇ ಮುಖ್ಯವಾದುದು. ಕಲೆಯಲ್ಲಿ-ಕಾವ್ಯದಲ್ಲಿ ಅಡಗಿದ ಈ ಆಶಯದಿಂದ ನವಗಾಗುವ ಅಪೂರ್ವವಾದ ಆನಂದಕ್ಕೆ 'ಭೋಗೀಕರಣ' ವೆನ್ನುವರು. ಈ ಅಲೌಕಿಕವಾದ ಭೋಗಕ್ಕಾಗಿಯೇ ಕಲೋಪಾಸಕನು ಸಾಹಸಪಡುವದು. ಸಾಂಖ್ಯಪರಿಭಾಷೆಯಲ್ಲಿ ಮಾನವನ ಉತ್ಕ್ರಾಂತಿಯ ಕಡೆಯ ಮೆಟ್ಟಲಿಗಾದರೂ **'ಭೋಗ'** ವೆಂದೇ ಕರೆದಿರುವರು. ಈ ಉಭಯಸಾಮಾನ್ಯವಾದ 'ಭೋಗ'ವೆಂಬ ಪಾರಿಭಾಷಿಕ ಶಬ್ದವು ಸಾಂಖ್ಯ-ಸೌಂದರ್ಯಶಾಸ್ತ್ರಗಳಲ್ಲಿರುವ ನಿಕಟವಾದ ಸಂಬಂಧವನ್ನು ಸೂಚಿಸುವದು. ಇದರಿಂದ ನಮಗೆ ಕಂಡುಬರುವದೆಂದರೆ, ಕಲೋಪಾಸನೆಯ ಫಲವಾದ ಸಾತ್ತ್ವಿಕ ಸಂತೋಷವು ಕೇವಲವಾಗಿ ಅನುಭವ ವಿಷಯವಾದದ್ದು. ಅದೊಂದು ಅಚಲವಾದ ಅವಸ್ಥಾ ವಿಶೇಷವಲ್ಲ. ಕಲೆಯ-ಕಾವ್ಯದ ಮೂರು ವ್ಯಾಪಾರಗಳಲ್ಲಿ ಶಬ್ದಾರ್ಥದ ಜ್ಞಾನವಾಗಬೇಕೆನ್ನುವದನ್ನು ಎಲ್ಲರೂ ಒಪ್ಪುವರು. ಆದರೆ ಉಳಿದ ಎರಡು ವ್ಯಾಪಾರಗಳು ಕೇವಲ ಕಲೆಗೆ ಸಂಬಂಧಿಸಿರುವವೆಂದು ಹೇಳುವದು ಮಾತ್ರ ಸೋಜಿಗವಾಗಿದೆ. ಆದರೆ ಈ ಕಲ್ಪನೆಯು ಸಾಂಖ್ಯಸಿದ್ಧಾಂತಕ್ಕನುಗುಣವಾಗಿ ಸಮಂಜಸವಾಗಿಯೇ ತೋರುವದು. ಸಾಂಖ್ಯರು ಹೇಳುವಂತೆ ಪುರುಷನು ಕೇವಲ ನಿಷ್ಕ್ರಿಯನು. ಪ್ರಕೃತಿಯೇ ಎಲ್ಲ ಕಾರ್ಯಪ್ರಪಂಚವನ್ನು ವಹಿಸಿಕೊಂಡಿರುವದು. ಪುರುಷನೆದುರಿಗೆ ತನ್ನ ಪ್ರಪಂಚವನ್ನೆಲ್ಲ ಮಂಡಿಸಿ ಆತನ ಮನಸ್ಸನ್ನದರ ಕಡೆಗೆ ಎಳೆದು ಆತನಿಗೆ ಸುಖದುಃಖವನ್ನುಂಟು ಮಾಡುವ ಕಾರ್ಯವಾದರೂ ಪ್ರಕೃತಿಯದೇ ಆಗಿದೆ. ಹೀಗಾಗಿ ಪ್ರಕೃತಿಯ ಕಾರ್ಯವು ಎರಡು ವಿಧವಾಗಿದೆ; ವಸ್ತು ಪ್ರಪಂಚವನ್ನು ನಿರ್ಮಾಣ ಮಾಡುವದು ಹಾಗೂ ಪುರುಷನಿಗೆ ಅದರಲ್ಲಿ ಆಸಕ್ತಿಯನ್ನು ಹುಟ್ಟಿಸಿ ಸುಖದುಃಖಗಳನ್ನುಂಟು ಮಾಡುವದು. ಕಾಲ್ಪನಿಕ ವಸ್ತು-ವ್ಯಕ್ತಿಗಳ ಸಹಾಯದಿಂದ ನಮಗೆ ಸಂತೋಷವನ್ನುಂಟು ಮಾಡುವ ಕಲೆಯಲ್ಲಾದರೂ ಈ ಉಭಯವಿಧವಾದ ವ್ಯಾಪಾರಗಳು ಕಂಡು ಬರುವವು.

ಒಟ್ಟಿನಲ್ಲಿ ಹೇಳಬೇಕಾದರೆ ಸಾಂಖ್ಯವೇದಾಂತಗಳಲ್ಲಿಯ ಸೌಂದರ್ಯಶಾಸ್ತ್ರದ ವಿಮರ್ಶೆಯು ಹೀಗಿರುವದು:— ನಿರಾಶಾವಾದಿಗಳೂ ದುಃಖದೃಷ್ಟಿಯುಳ್ಳವರೂ ಆದ ಸಾಂಖ್ಯರಿಗೆ ವಿಶ್ವವು ಸಂಪೂರ್ಣವಾಗಿ-ಸುಖಮಯವಾಗಿ ಸೌಂದರ್ಯಮಯವಾಗಿ ತೋರುವದಿಲ್ಲ. ಸುಖದೊಡನೆ ದುಃಖವೂ ಸೌಂದರ್ಯದೊಡನೆ ವಿರೂಪತೆಯೂ ಸಮ್ಮಿ



CC-0. Jangamwadi Math Collection. Digitized by eGangotri

ವಾಗಿರುವದೆಂದು ಸಾಂಖ್ಯರ ಸಿದ್ಧಾಂತವು. ಸೃಷ್ಟಿಯಲ್ಲಿ ಸುಖವೇ ಇಲ್ಲವೆಂದು ಸಾಂಖ್ಯರ ಮತವಿಲ್ಲ. ಆದರೆ ಸರ್ವದಾ ಸುಖವೇ ಇರುವದಿಲ್ಲವೆಂದೂ ಸುಖದೊಡನೆ ದುಃಖವನ್ನಾದರೂ ಅನುಭವಿಸಬೇಕಾಗುವದೆಂದೂ ಅವರ ತಿಳುವಳಿಕೆ. ಈ ಸೃಷ್ಟಿಯಲ್ಲಿಯೇ ಕಾಲೂರಿದರೆ ದುಃಖ ಬೆರೆಯದ ಶುದ್ಧ–ಸಾತ್ತ್ವಿಕವಾದ ಸಂತೋಷವು ಸದಾ ದೊರೆಯಲಾರದು. ಈ ಸೃಷ್ಟಿ-ಸಂಸಾರದ ಹೊರಗೆಯೇ ಈ ಬಗೆಯ ಸುಖಾನುಭೂತಿ. ಆದರೆ ಆಶಾವಾದಿಗಳೂ ಸಾನಂದ ದೃಷ್ಟಿಯವರೂ ಆದ ವೇದಾಂತಿಗಳಿಗೆ ಸೃಷ್ಟಿಯೆಲ್ಲವೂ ಸೌಂದರ್ಯದ ಆಗರವು. ಸೃಷ್ಟಿಯ ಈ ಸಹಜವಾದ ಸೌಂದರ್ಯಕ್ಕೂ ನಿಚ್ಛಳವಾಗಿ ತೋರುವ ತಾಳಮೇಳಗಳಿಗೂ ಯಾತರಿಂದಲೂ ಎಂದೂ ಬಾಧೆ ಬರಲಾರದೆಂದು ವೇದಾಂತಿಗಳ ಅಭಿಪ್ರಾಯವು. ಆತ್ಮತತ್ತ್ವದ ಉಪಸಿದ್ಧಾಂತವೇ ಈ ಅಭಿಪ್ರಾಯದಲ್ಲಿ ಕಂಡುಬರುವದು. ನೋಡಿದಲ್ಲೆಲ್ಲ ಆನಂದವನ್ನೇ ಕಾಣುವ ಆತ್ಮಜ್ಞಾನಿಯೇ ಹೆಚ್ಚಿನ ಕಲೋಪಾಸಕನು. 'ಸರ್ವಂ ಖಲ್ವಿದಂ ಆತ್ಮಾ' ಎಂದು ನಂಬಿ ಎಲ್ಲದರಲ್ಲಿಯೂ ಆತ್ಮರೂಪವನ್ನೇ ಕಾಣುವದು ಸಾಮಾನ್ಯರಿಗೆ ಸಾಧ್ಯವಲ್ಲ. ಆದರೂ ಆತ್ಮಜ್ಞಾನಿಗಾಗುವ ಅಮೃತಸೌಖ್ಯವನ್ನು ನಾವು ಅರೆಗಳಿಗೆಯಾದರೂ ಸೃಷ್ಟಿಸೌಂದರ್ಯ ನಿರೀಕ್ಷಣದಿಂದ ಆಗಾಗ ಅನುಭವಿಸಬಹುದು. ಆದರೆ ಈ ಸೌಂದರ್ಯವನ್ನು ಕಂಡುಕೊಳ್ಳುವಂತೆ ನಮ್ಮ ದೃಷ್ಟಿಯು ಯಾವಾಗಲೂ ಕುಶಲವಾಗಿರುವದಿಲ್ಲ. ಪ್ರತಿಭಾಶಾಲಿಯಾದ ಕವಿಯು ಮಾತ್ರ ನಾವು ಕಾಣದ ಸೌಂದರ್ಯವನ್ನು ಕಾಣುವನು. ಅದನ್ನರಿತುಕೊಳ್ಳುವನು. ಅದರ ಸವಿಯನ್ನು ತಾನನುಭವಿಸಿ ಉಳಿದವರಿಗೆ ಅನುಭವಿಸಲು ಮಾರ್ಗದರ್ಶಕನಾಗುವನು. ಸಾರಾಂಶವೇನೆಂದರೆ ನಮಗೆ ಕಾಣದ, ಸೂಕ್ಷ್ಮವಾದ ಸೃಷ್ಟಿ-ಸೌಷ್ಠವವನ್ನು ನಮ್ಮೆದೆಗೆ ತಗಲುವಂತೆ ನಮ್ಮ ಕಣ್ಮುಂದೆ ತಂದಿರಿಸುವುದೇ ಕಲೆಯ ಮರ್ಮವಾಗಿದೆ. ಸಂಸಾರದಲ್ಲಿ ಸಿಲುಕಿದ ಚಿತ್ತವೃತ್ತಿಯನ್ನು ಹೊರಗೆಳೆದು ಅದನ್ನೊಂದು ಬಗೆಯ ಅನಾಸಕ್ತಿ-ಯೋಗದಲ್ಲಿರುವಂತೆ ಮಾಡುವದೇ ಕಲೆಯ ಗುರಿಯೆಂದು ಸಾಂಖ್ಯರೂ ವೇದಾಂತಿಗಳೂ ಕೂಡಿಯೇ ಒಪ್ಪುವರು. ಆದರೆ ಕಲೆಯ ವಿಷಯಕ್ಕಿರುವ ಇವರಿಬ್ಬರ ಕಲ್ಪನೆಗಳು ಮಾತ್ರ ಕೊಂಚ ಬೇರೆಯಾಗಿರುವವು. ವ್ಯಕ್ತಿ ವೈಶಿಷ್ಟ್ಯವನ್ನೆಲ್ಲ–ತನ್ನನ್ನು ತಾನೇ–ಅರೆಗಳಿಗೆಯಾದರೂ ಮರೆತು ಬಿಟ್ಟು ವಿಶ್ವದೊಡನೆ ಸಮರಸವಾಗುವದೇ ನಿಜವಾದ ಕಲೋಪಾಸನೆಯೆಂದು ತತ್ತ್ವಾನ್ವೇಷಿಗಳಾದ ವೇದಾಂತಿಗಳು ಹೇಳಿರುವದುಂಟು. ಆದರೆ ಈ ಸತ್ಯಸೃಷ್ಟಿಯಿಂದ ಕೆಲವು ಕಾಲವಾದರೂ ದೂರ ಸಿಡಿದು ನಿಲ್ಲುವದೇ ಕಲೋಪಾಸನೆಯೆಂದು ಸತ್ಯಾನ್ವೇಷಿಗಳಾದ ಸಾಂಖ್ಯರ ಅಭಿಪ್ರಾಯವು. ಒಬ್ಬರು ಸೃಷ್ಟಿಯೊಡನೆ ಬೆರೆಯಬೇಕೆನ್ನುವರು; ಮತ್ತೊಬ್ಬರು ಬೇರೆಯಾಗಬೇಕೆನ್ನುವರು. ದೃಶ್ಯ ಸೃಷ್ಟಿಯಲ್ಲಿಯೇ ಹುದುಗಿಕೊಂಡಿರುವ ಸತ್ಯವನ್ನು ವ್ಯಕ್ತಗೊಳಿಸಲು ಕಲೋಪಾಸನೆಯು ಸಾಧನವೆಂದು ವೇದಾಂತಿಗಳುಸುರುವರು. ಆದರೆ ಮನಸ್ಸನ್ನು ಮೇಲಕ್ಕೆಳೆದು ವಿರಾಮಹೊಂದುವಂತೆ ಮಾಡುವದೇ ಕಲೆಯ ಕಾರ್ಯವೆಂದು ಸಾಂಖ್ಯರು ಸಾರುವರು. ಸೃಷ್ಟಿಯಲ್ಲಡಗಿಕೊಂಡಿರುವ ಸೌಂದರ್ಯವನ್ನೇ ವ್ಯಕ್ತಗೊಳಿಸುವವರು ವೇದಾಂತಿಗಳು. ಆದರೆ ನಮಗೆ ಕಾಣುವ ಸೃಷ್ಟಿ–ಸೌಂದರ್ಯಕ್ಕಿಂತಲೂ ಹೆಚ್ಚಿನ ಸೌಂದರ್ಯವನ್ನು ನಿರ್ಮಾಣ ಮಾಡಲು ಸಾಹಸಪಡುವವರು ಸಾಂಖ್ಯರು.

ಇನ್ನು ಕೊನೆಯ ಮಾತು. ನಾನು ವಿಚಿತ್ರವೆಂದು ತೋರುವ ಈ ವಿಷಯವನ್ನೇಕೆ ವಿಮರ್ಶೆಗಾಗಿ ಕೈಕೊಂಡೆನೆಂದು ಕೆಲವರು ಕೇಳಬಹುದು. ಸಂಸ್ಕೃತ ಸಾಹಿತ್ಯವು ಅಪಾರವಾಗಿದೆ. ಆದರೆ ವಿದ್ವಾಂಸರು ಕೈಕೊಂಡ ಸಂಶೋಧನೆಯ ಕ್ಷೇತ್ರವು ಮಾತ್ರ ಬಹಳೇ ಮರ್ಯಾದಿತವಾಗಿದೆ. ಸಂಶೋಧಕರೆಲ್ಲರೂ ಬಹುತರವಾಗಿ ಭಾಷಾವಿಷಯದ ಬೆನ್ನನ್ನೇ ಹತ್ತಿರುವರು. ಸಂಶೋಧಕರ ದೃಷ್ಟಿಯು ಹೀಗೆ ಸಂಕುಚಿತವಾಗುವದು ಸರಿಯಲ್ಲ. ಭಾಷಾವಿಜ್ಞಾನದಷ್ಟೇ ಸರಸವಾದ-ಶ್ರೇಷ್ಠವಾದ ಇನ್ನೂ ಅನೇಕ ವಿಷಯಗಳು ವಿವೇಚನೆಯಿಲ್ಲದೆ ಇದುವರೆಗೆ ಹಾಗೆಯೇ ಉಳಿದಿವೆ. ಇವುಗಳಲ್ಲಿ ಈ ಸೌಂದರ್ಯಶಾಸ್ತ್ರವೊಂದು. ಇಲ್ಲಿ ನಾನು ಮಾಡಿದ ಸೌಂದರ್ಯಶಾಸ್ತ್ರದ ವಿವೇಚನೆಯು ಸಂಪೂರ್ಣವಾಗಿಲ್ಲ. ಈ ಶಾಸ್ತ್ರದ ಹೆಚ್ಚಿನ ಸಂಶೋಧನೆಗಾಗಿ, ವಿಸ್ತೃತ ವಿವೇಚನೆಗಾಗಿ ಸಹಾಯವಾಗಬಹುದೆಂದು ನನಗೆ ಕಂಡುಬಂದ ಕೆಲವು ಕುರುಹುಗಳನ್ನು ಮಾತ್ರ ಈ ಲೇಖದಲ್ಲಿ ಕಾಣಿಸಿರುವೆ. ಇದರಿಂದ ಹೆಚ್ಚಿನ ಸಂಶೋಧನೆಗೆ ಸ್ಫೂರ್ತಿಯೂ ಸಹಾಯವೂ ಒದಗಿದರೆ ತೀರಿತು; ನನ್ನ ಶ್ರಮವು ಸಫಲವಾದಂತಾಯಿತು.

CC-0. Jangamwadi Math Collection. Digitized by eGangotri

# ಮುರಿದು ಬಿದ್ದ ವೀರ ಕಲ್ಲು

"ಶ್ರೀನಿವಾಸ" ಬೆಂಗಳೂರು

೧

ನಿನ್ನ ಹೆಸರು ಏನು ವೀರ ?
ಮುನ್ನ ಯಾವ ಕಾಲದಲ್ಲಿ,
ಇನ್ನು ಯಾವ ಸಾಹಸದಲಿ;

ಜೀವ ನನ್ನದಲ್ಲವೆಂದು,
ನೋವು ನನಗೆ ಸದರವೆಂದು,
ಸಾವದಾಡೆಯನ್ನು ಹೊಕ್ಕು;

ಊರ ಜನರ ಮನವನುಳಿಸಿ,
ವೀರನಹುದು ಇವನು ಎನಿಸಿ,
ಯಾರ ಕಣ್ಣ ನೀರ ಸುರಿಸಿ,

ಅಮರನಾದೆನೀ ?

೨

ಹಳ್ಳಿಯನ್ನು ದೋಚಬಂದ
ಕಳ್ಳಪಡೆಯ ಸುಗ್ಗಿ, ತರಹ
ದಳ್ಳುರಿ ಗೆಲುವಂತೆ ಗೆಲಿದೊ;

ಮೇವ ಮುಗಿಸಿ ಮನೆಗೆ ಬರುವ
ಗೋವಹಿಡಿದ ಹುಲಿಯ ಸಂಜೆ-
ಜಾವದಲ್ಲಿ ಕಾದಿ ತಡೆದೊ;

ನಾಡಿನೊಡೆಯನಾಣತಿಯನು
ಮಾಡ ಹೋಗಿ, ಹಗೆಗೆ ಸಿಕ್ಕಿ,
ಹೇಡಿಯಾಗೆನೆಂದು ನುಡಿದೊ;

ಎಂತು ಮಡಿದೆನೀ ?

೩

ಗಾಯವಡೆದು ಬಂದ ನಿನ್ನ,
ತಾಯಿ ಓಡಿ ಬಂದು ನೋಡಿ,
ಸಾಯೆನೇಕೆ ನಾನು ? ಎಂದು

ದೇವರೇ ಇವನನುಳಿಸು,
ಸಾವೆ ನಾನು ನನ್ನ ಕೊಳ್ಳು,
ದೇವ, ದೇವ, ಎಂದು ಕೂಗಿ,

ಹೆತ್ತ ಹೊಟ್ಟೆಯುಳಲಿನಲ್ಲಿ
ಅತ್ತು, ಮೊರೆದು, ನನ್ನ ಕಂದ
ಸತ್ತೆಯಾ ನನ್ನ ಬಿಟ್ಟು !

ಎಂದಳಪ್ಪುದು.

೪

ಮುದುಕನೊಬ್ಬ, ನನ್ನ ಮಗನು
ಎದವಿ ಬಂದ, ಇನ್ನು ಮೇಲೆ
ಬದುಕನವನು ನೋಡಿಕೊಂಬ,

ಎಂದು ಕನಸಲಿರುತ ನಡುವೆ
ಕಂದ ನಿನ್ನ ನೋಡಿ, ಆಸೆ
ನಂದಿ, ಜೀವ ಬೆಂದು, ಮುದುಡಿ;

ಆಸೆ ತೋರಿ, ನನಗೆ ಮೊದಲು,
ಮೋಸ ಮಾಡಿ ಹೊರಟು ಹೋದ;
ಈಶ್ವರಾಜ್ಞೆ, ನನ್ನ ಕರ್ಮ,

ಎಂದನಲ್ಲವೆ ?

೫

ಮದುವೆಯಾದ ಹೆಣ್ಣು–ಸುಖದಿ
ಬದುಕುವೆಂದು–ಬೇರೆ ಜನದ
ಎದುರು ಬಳಿಗೆ ಬಾರದವಳು,

ನಿನಗದೇನೊ ಆಯಿತೆಂಬ
ಜನದ ನುಡಿಯ ಕೇಳಿ, ತನ್ನ
ಮನದಿ ನಡುಗಿ ಹೆದರಿ ಕರಗಿ

ದೇವ ಇವನನಿಂದು ಸಲಹು !
ಜೀವವುಳಿಯೆ ಒಂದು ವರುಷ
ದೀವಟಿಗೆಯ ಹಿಡಿವೆ ನಿನಗೆ,

ಎಂದು ಬೇಡುತ;

೬

ಜಾಣೆ, ಮಗುವನೆತ್ತಿಕೊಂಡು,
ನಾಣ ಮರೆತು ಓಡಿ ಬಂದು,
ಪ್ರಾಣ ಹೋಹಸಮಯದಲ್ಲಿ;

CC-0. Jangamwadi Math Collection. Digitized by eGangotri

ನಿನ್ನ ತಲೆಯ ಮಡಿಲೊಳಿಟ್ಟು
ಕಣ್ಣ ನೀರ ನೊರಸಿಕೊಳುತ
ನನ್ನ ಬಿಟ್ಟು ಹೋಹರುಂಟೆ;
ನನ್ನ ಮಾತು ಇರಲಿ, ಇಕೊ,
ನಿನ್ನ ಮಗನ ನೋಡು ಬದುಕು,
ಕುನ್ನಿ ಕರೆಯುತಾನೆ ನೋಡು;
ಎಂದು ನುಡಿದಳು.

೭

ಊರ ಜನರು ಬಂದು, ಎಂಥ
ಶೂರ ಇವನು, ಎಂಥ ಧೀರ,
ನೂರು ಜನರು ಇವಗೆ ಸಮನೆ ?
ಗಂಡು ಕಾಣೊ, ಇವಗೆ ಬಂದು
ದಂಡು ಸಮನೆ ? ಏಸು ಇವನ
ಗುಂಡಿಗೆ ? ಎಂಬುದನು ಕೇಳಿ
ಮನದಿ ಸ್ವಲ್ಪ ಸುಖವನಾಂತು
ಕನಿಕರದಲಿ ತಾಯಿತಂದೆ
ತರುಣ ವನಿತೆಯರನು ನೋಡಿ
ಸ್ವಲ್ಪ ಕುದಿದೆಯಾ ?

ಲ

ಇನಿಸು ಕುದಿದು, ಮತ್ತೆ ಮನದಿ,
ಜನುಮ ಇಂದು ಸಫಲವಾಯ್ತು,
ಕೊನೆಗೆ ಬರಿಯ ಚಿಂತೆಯೇಕೆ ?
ಬದುಕ ಕೊಟ್ಟ ದೈವ ಬಂದು,
ಇದಿರು ನಿಂದು, ಇಂದು ನಿನ್ನ
ಎದೆಯ ರಕುತ ಬೇಕು, ಎನಲು
ಕೊಟ್ಟ ಸಾಲ ಕೊಡೆನು ಎನಲು
ಪುಟ್ಟ ಹೇಡಿಯೇ ನಾನು ?
ದಿಟ್ಟತನದಿ ಸುರಿದೆನದನು
ಎಂದು ನೆನೆದೆಯಾ ?

೯

ಜೀವಗಳ್ಳ ನೆನಿಸಿ ಬಾಳ್ವ
ಹೇವ ಬಾಳೆ ? ದಿಟ್ಟತನದ
ಸಾವು ಸಾವೆ ? ಎಂದಿಗಹುದು ?
ಇಷ್ಟರಿವರು ಇವರ ಪಾಡು
ಕಷ್ಟವಹುದು ಎಂದು ಓಡಿ
ಎಷ್ಟುಕಾಲ ಬಾಳಬಹುದು ?
ಅವನೆ ಬಾಳ ಕೊಟ್ಟ, ಕೊಂಡ;
ಇವರನವನೆ ಪೊರೆವ; ನನಗೆ
ಬವಣೆಯೇಕೆ ? ಎಂದು ತಿಳಿದು
ಶಾಂತನಾದೆಯಾ ?

೧೦

ನೋವು ಹೆಚ್ಚಿ ಕಣ್ಣ ಮಿಂಚ
ಸಾವ ಮುಗಿಲು ಮರೆಸಿ, ಮುಂಚಿ,
ಕಾವಳವನು ಕಟ್ಟುತಿರಲು;
ನೊಂದ ತಾಯಿ, ಬೇವ ತಂದೆ,
ಕಂದ, ಮಡದಿ, ಬಳಸಿನಿಂದ
ಮಂದಿ, ಇವರನೊಮ್ಮೆ ನೋಡಿ
ತೆರೆಯ ಮುಂದೆ ನಿನಗೆ ತಿಳಿದ
ಸರುವರೊಪ್ಪುವಂತೆ ಆಡಿ
ಗುರುವಿನಡಿಯ ನೆನೆದು ಕಣ್ಣ
ಮುಚ್ಚಿ ಮರೆದೆಯಾ ?

೧೧

ಊರಿಗಾಗಿ ಜೀವವಿತ್ತ
ವೀರನೆಂದು ಗ್ರಾಮವೆಲ್ಲ
ಸೇರಿ, ಮೆಚ್ಚಿ, ಅತ್ತು, ಮರುಗಿ;
ಶೂರನೆಂದು ಹಾಡಿ ಹೂವ
ಹಾರಗಳನು ಹೇರಿ ಬಳಿಯ
ಊರಲೆಲ್ಲ ಹೊಗಳಿ, ಮೆರೆಸಿ,
ಇಲ್ಲಿ ಮಣ್ಣು ಮಾಡಿ, ಹೆಸರು
ನಿಲ್ಲಲೆಂದು ಕತೆಯಕೆತ್ತಿ,
ಕಲ್ಲ ನೆಲೆಸಿ, ಬಲವ ಗುಡಿಯ
ಅಂದೆ ಸಮೆದರು.

೧೨

ಒಡಲ ಮುರುಕ ಮನೆಯೊಳಸುವ
ನೊಡರು ಗಾಳಿ ಮಳೆಯೊಳೆಂದೊ
ಕೆಡುವುದೆಂದು ಅರಿವೆವೆಲ್ಲ;

CC-0. Jangamwadi Math Collection. Digitized by eGangotri

ಸಡುವೆ ಒವ್ಮೆ ಅದನು ಜಗದ
ಒಡೆಯುಗಾರತಿಯನು ಬೆಳಗೆ
ಕೊಡುವ ಸಮಯ ಬಹುದು ಪುಣ್ಯ;

ಇಂಥ ವೇಳೆ ಬಹಳ ಜೀವ
ಹಿಂತೆಗೆವುದು; ಭೀತಿಯುಳಿದು
ನಿಂತು ಕೊಡುವ ಧೃತಿ ಒದಗುವ

ಪುಣ್ಯ ಮಿಕ್ಕುದು

೧೩

ಇನಿತು ಪುಣ್ಯ ನಿನ್ನದಾಯ್ತು;
ಜನುಮ ಅಂತು ಸಫಲವಾಯ್ತು;
ನೆನೆವು ನಾಡ ದೀಪವಾಯ್ತು;

ನಿನ್ನ ಕೃತಿಗೆ ಮೆರುಗು ಕೊಟ್ಟು,
ನಿನ್ನ ಹೊಗಳಿ ಹಾಡ ಕಟ್ಟಿ,
ನಿನ್ನವರನು ಸಂತಪಟ್ಟು,

ಬಹಳ ಕಾಲ ಸೀಮೆ, ನಿನ್ನ
ಮಹಿಮೆಯನ್ನು ನುಡಿಯುತಿತ್ತು;
ಗಹನವಾದ ನಡೆಯ ನೆನೆದು

ಪೂಜೆ ಮಾಡಿತು

೧೪

ಅಂದು ನಿನ್ನ ಸೇವೆ ಕೊಂಡು
ಬಂಧುವೆಂದು ಪೂಜೆಗೆಯ್ದ
ಚೆಂದದೂರು ಮುದುಗಿ, ಈಗ

ಇಲ್ಲಿ ನಿನ್ನ ಹೆಸರು ಕತೆಯ
ಬಲ್ಲ ಜನತೆಯಿಲ್ಲ; ನೆನೆವ
ಕಲ್ಲು ಮುರಿದು ಕೆಡೆದಿರುವುದು;

ಒಡಲು ಅಂದು ಅಳಿದ ತೆರದೆ
ಮಡಿದಿರುವುದು ಕೀರ್ತಿ ಇಂದು;
ಕೆಡಕಿ ಕಾಲ ನಿನ್ನ ಗುಡಿಯ

ಉರುಳಿಸಿರುವನು.

೧೫

ಲೋಕ ಮರೆಯೆ ನಿನಗೆ ಕೊರೆಯೆ ?
ಕಾಕು ಸೋಕದುರುವ ಕೀರ್ತಿ
ನಾಕದಲ್ಲಿ ಬೆಳೆಯುತಿಹುದು;

ಸರರ ನೆನವು ಮುಗಿಲ ಬರಹ,
ಬರೆದರಂದೆ ನಿನ್ನ ಹೆಸರ
ಸುರರು ಸ್ವರ್ಗ ಭಿತ್ತಿಗಳಲಿ;

ಬಾಳ ಬಿಟ್ಟ ಕ್ಷಣವೆ ನಿನಗೆ
ನಾಳೆಯೊಂದಿ ಬಾಡದೊಂದು
ವೀಳ್ಯಕೊಡಿಸಿ ಮೆಚ್ಚುತಿಹನು

ದೇವಸೀಗಳೂ.





CC-0. Jangamwadi Math Collection. Digitized by eGangotri

# ಪ್ರಲ್ಹಾದನ ಆಲ್ಹಾದವು

*( A Psycho-Spiritual interpretation )*

ಶ್ರೀ ಗು. ಭೀ. ಜೋಶಿ ಬಿ. ಎ. ಗದಗ

೧

ಪ್ರಲ್ಹಾದನ ಆಲ್ಹಾದಕ್ಕೆ ಅವನ ಜೊತೆಗಾರನೇ ಕಾರಣನು; ಈ ಜೊತೆಗಾರನು ಮುಗಿಲಲ್ಲಿ ಮೂಡುವನು; ಹೊಗೆಯಲ್ಲಿ ಅಡಗುವನು. ಆದರೂ ಪ್ರಲ್ಹಾದನು ಅವನನ್ನು ಒಮ್ಮೆ ಕಂಡು ಕೊನೆಯವರೆಗೆ ಕಾಯ್ದುಕೊಂಡನು. ಇವನು ಆ ಕಾಣದ ಗೆಳೆಯನನ್ನು ಕಂಡು ಕುಣಿಕುಣಿದಾಡುವನು. ಕೇಳದ ಶಬ್ದಗಳನ್ನು ಕೇಳಿ ಇವನ ಕೂದಲುಗಳು ನಿಮಿರುವವು. ಅರಿತವರು ಆನಂದಪಡುವರು; ಅರಿಯದವರು ಆಶ್ಚರ್ಯಪಡುವರು. ಅರಿಯದೇ ಅರಿತಿರುವೆನೆಂದು ಭಾವಿಸಿದ ಮೂಢನು ಇವನನ್ನು ಕೆಣಕಿ ಕಾಡಿಸಿದನು. ಹಿರಣ್ಯಕಶಿಪುವು ಇಬ್ಬಗೆಯಾದ ಜೀವನದ ಜಗ್ಗಾಟದಲ್ಲಿ ನುಗ್ಗಾಗಿರುವನು. ಮಾಯೆಯನ್ನು ತಿಳಿದವನಾದರೂ ಮಗನನ್ನು ದ್ವೇಷಿಸುವನು. ಮರಣವನ್ನು ಅರಿತವನಾದರೂ ಅಮರನೆಂದು ಭಾವಿಸುವನು. ಇದು ಆ ಅಗಾಧ ಮಹಿಮನ ಮಾಯೆಯು.

ಪ್ರಲ್ಹಾದನ ಆಲ್ಹಾದ ಕಮಲವು ಇಂಥ ಅಲ್ಲೋಲಕಲ್ಲೋಲವಾದ ಸಮುದ್ರದ ತೆರೆಗಳಿಗೆ ಹೊಯ್ದಾಡುತ್ತಿದ್ದರೂ ನಾಥನ ಮಂದಹಾಸದಲ್ಲಿ ಲೋಲಾಡುತ್ತ ಮಕರಂದ ಬೀರುವದನ್ನು ನೋಡಿದರೆ ಯಾರು ಬೆರಗಾಗಲಿಕ್ಕಿಲ್ಲ; ಬೆರಗಾಗಿ ಬೆಪ್ಪರಾಗದೆ ಅರುವಿನಿಂದ ಅದರ ಮರ್ಮವನ್ನು ಗುರುತಿಸಿದರೆ ಈ ನರಲೋಕದಲ್ಲಿರುವ ಅಮರತ್ವವು ಮನವರಿಕೆಯಾಗುವದು.

೨

ಹಿರಣ್ಯಕಶಿಪು:—ಏನು! ಈ ಜಗತ್ತಿನೊಳಗಿನ ಜೀವನೆಂದರೆ ಸ್ವರ್ಗದೊಳಗಿನ ದೇವತೆಗಳಿಗೆ ಹುಲ್ಲಿಗಿಂತಲೂ ಕಡೆಯಾಗಿರುವನೇ! ನಾನು ನನ್ನ ಶರೀರ ಬಲದಿಂದ ಹೊರಗಿನ ಜಗತ್ತಿಗೆ ಸ್ವಾಮಿಯಾದೆನು; ಮನಸ್ಸಿನ ಬಲವನ್ನು ಹೆಚ್ಚಿಸಿ ತಪಸ್ಸಿನ ತೇಜದಿಂದ ಸತ್ಯಲೋಕದ ಧಣಿಯನ್ನು ತಣಿಸಿದೆನು. ಈಗ ನನ್ನ ಅತುಲಬಲದಿಂದ ಭೂಮಿಯನ್ನು ಗಡಗಡ ನಡುಗಿಸುವೆನು; ನನ್ನ ದೇಹಸುಖಕ್ಕಾಗಿ ಇಂದ್ರ ಅಗ್ನಿ ವರುಣ ಮೊದಲಾದ ದೇವತೆಗಳು ಅಂಜಲಿಬದ್ಧರಾಗಿ ಕಾದಿರುವರು. ಇನ್ನೇನು ಆ ದೇವತೆಗಳ ಬಿಂಕವು! ಜಗವು ಜೀವನ ಸೌಖ್ಯಕ್ಕಾಗಿ ಜನ್ಮವೆತ್ತಿರುವದು. ಅತ್ತರೆ ಆಳಿಸುವದು; ನತ್ತರೆ ಕೊಲ್ಲುವದು; ಮತ್ತೆ ಒಳಹೊಕ್ಕು ಸಂಸಾರದ ಎಳೆಗಳನ್ನೇ ಜಗ್ಗತೊಡಗಿದರೆ ಮತ್ತನಾದ ಮೂಢನು ಮಣ್ಣು ಮುಕ್ಕುವನು; ಮುಕ್ಕಣ್ಣನು ಮಾಯವಾಗುವನು. ಇನ್ನುಳಿದವರ ಪಾಡೇನು! ನನ್ನಿಂದ ನಾನು ಬಂದಿರುವೆನು; ಅನ್ಯರ ಅರಸುತನಕ್ಕೆ ನನ್ನ ಒಪ್ಪಿಗೆ ಇಲ್ಲ. (ಅವನಲ್ಲಿ ಮತ್ತೊಂದು ಧ್ವನಿಯು ಕೇಳುವುದು) "ನಿನ್ನ ತಮ್ಮನು ಮಡಿದನಲ್ಲವೇ?" ಅಹುದು ಮಡಿದನು. "ಸೃಷ್ಟಿಯ ಸೂತ್ರಗಳೇ ನಿನ್ನ ಕೈಯಲ್ಲಿದ್ದರೆ ಹಿರಣ್ಯಾಕ್ಷನು ತಿರುಗಿಬರಲೊಲ್ಲನೇಕೆ?" ಅಹುದು ಬಾಳುವೆಯ ಬೆಳಕು ನನಗೆ ತಿಳಿದರೂ ಮರಣದ ಬಸಿರು ಇನ್ನೂ ಕಾಣದಾಗಿದೆ. ಎಚ್ಚರಿಕೆಯಲ್ಲಿ ಮಿನುಗುವ ಚುಕ್ಕೆಗಳನ್ನು ಎಣಿಸಬಲ್ಲೆನಾದರೂ ಕನಸಿನ ರಾಜ್ಯವನ್ನು ಕಂಡಿಲ್ಲ. ಒಮ್ಮೊಮ್ಮೆ ಕಗ್ಗತ್ತಲೆಯಲ್ಲಿ ಥಳಕ್ಕೆಂದು ಮಿಂಚಿದ ಕೂಡಲೆ ನನ್ನ ನಿರೂಪವು ವಿಮರ್ಶೆಗೆ ಬಂದು ಅಲ್ಪತ್ವವು ಮನದಟ್ಟಾಗುವದು. ಹಿರಣ್ಯಾಕ್ಷನನ್ನು ಆ ಮಿಂಚೇ ಸೆಳೆದಿರಬಹುದೇನು! ಏನು ನನ್ನಲ್ಲಿಲ್ಲದ ಸಾಮರ್ಥ್ಯವು ಬೇರೆ ಆ ಮಿಂಚಿನಲ್ಲಿರುವುದೇ! ಛೇ! ಕಣ್ಣುಕಟ್ಟು, ಮೋಸ, ನಾನೆಂದಾದರೂ ಇದಕ್ಕೆಲ್ಲ ಮರುಳಾಗುವೆನೇ! ಇಲ್ಲಿರುವ ಮರುಳು ಜನರು ತಮ್ಮೊಳಗಿನವನೊಬ್ಬನು ಹೆಚ್ಚಿದನೆಂದು ಅಸೂಯೆಯಿಂದ ಹುಯಿಲೆಬ್ಬಿಸುವರು. ಈಗ ಅಡಗಿದ ಶಕ್ತಿಯೂ ಗಡಬಡಿಸುತ್ತಿರುವದು. ಬಾಳುವೆಯ

CC-0. Jangamwadi Math Collection. Digitized by eGangotri

ಬಂಡಿಗೆ ಮರಣದ ಕೀಲನ್ನು ಸೇರಿಸಿ, ಆ ಶಕ್ತಿಯು ದರ್ಪದಿಂದ ಅದರಲ್ಲಿ ಕುಳಿತು ಮೆರೆಯುತ್ತಿರುವುದು. ಇನ್ನು ನಾನು ಇದರ ಅಹಂಕಾರವನ್ನು ಸಹಿಸೆನು. ಬಂಡಿಯು ಬಿದ್ದರೂ ಚಿಂತೆಯಿಲ್ಲ. ಕೀಲನ್ನಂತೂ ಕಿತ್ತು ಹಾಕುವೆನು! ಎಲೈ ಅಮರರ ಸುಳ್ಳು ಸಾಮರ್ಥ್ಯಕ್ಕೆ ಮರುಳಾದ ಮೂಢ ಮಾನವರೇ! ಜೀವನೇ ಜಗದೊಡೆಯನೆಂದು ಸಾರುವ ಈ ವೀರನ ಬೆನ್ನು ಕಟ್ಟಿರಿ. ಇಲ್ಲವೆ ನಿಮ್ಮನ್ನು ನನ್ನ ದಾರಿಯಿಂದ ದೂರವಾಗಿಡಬೇಕಾಗುವದು. ಹುಟ್ಟಿದ ಮನೆಯ ಹಿರಿಯತನವು ಹೆರವರದು ಹೇಗಾದೀತು?

೩

ಪ್ರಲ್ಹಾದ:—ಈ ಬೊಗರಿಯು ಗರಗರನೆ ತಿರುಗಿದಂತೆ ನನ್ನಲ್ಲಿಯೂ ಏನೊ ತಿರುಗಿದಂತಾಗುವುದು. ಅಹಹಾ! ಈ ಮರದ ಕೊಂಬೆಗಳೇಕೆ ಇಷ್ಟು ಅಂದವಾಗಿ ಕಾಣುವವು? ಎಲಿಗಳಿಗೇನು ಹಾವು ಕಚ್ಚಿರುವುದೋ? ಎಷ್ಟು ಹಸಿರಾಗಿರುವವು! ಮೋಡಗಳು ಹೀಗೇಕೆ ತುಂಟ ಹುಡುಗರ ತಂಡಗಳಂತೆ ಕುಣಿಕುಣಿದಾಡುತ್ತ ಗುಂಪುಗಟ್ಟಿಕೊಂಡು ಸುತ್ತುತ್ತಿರುವವು? ಗಾಳಿಯು ನನ್ನನ್ನು ಬಡಿಬಡಿದು ಎಬ್ಬಿಸಿದಂತೆ ಬೀಸುತ್ತಿರುವದು. ಹರಿಯುವ ನದಿಯು ನಿಂತು ನಿಂತು ನನ್ನನ್ನು ಕರೆಕರೆದು ಮುಂದೆ ಸಾಗುವಂತೆ ತೋರುತ್ತಿರುವದು. ದಿನಾಲು ಕಾಣುತ್ತಿರುವ ಈ ಗುಡ್ಡವು ನನ್ನನ್ನೇಕೆ ಇಷ್ಟು ದಿಟ್ಟಿಸಿ ನೋಡುತ್ತಿರುವುದು! ನನಗೆ ಏನೋ ವಿಚಿತ್ರಸಂತೋಷವಾಗುತ್ತಿರುವುದು. ಯಾರೊ ಮುದ್ದಾಡಿದಂತೆ ನನ್ನ ಮೈಮೇಲೆ ಕೂದಲುಗಳು ಎದ್ದವು........ತಲೆಯ ಮೇಲೆ ಕೈಯ್ಯನ್ನಾರಿಟ್ಟರು....ಇದು ಏನು! ಗುಡ್ಡಗಳೊಡೆದು ಪುಡಿಪುಡಿಯಾಗಿ ಮೋಡಗಳಲ್ಲಿ ಕೂಡಿಕೊಂಡುವು; ನದಿಯ ನೀರು ಮಂಜಾಗಿ ಬೆರೆತು ಹೋಯಿತು. ಗಿಡಗಳೆಲ್ಲ ಕರಗಿ ಕಾಣದಾದುವು. ನನ್ನ ಕಾಲ ಕೆಳಗಿನ ಗಟ್ಟಿ ನೆಲವು ಕುಸಿದು ಹೋಯಿತು. ಈ ಮೋಡಗಳ ತಂಡಗಳು ನನ್ನನ್ನು ಮೇಲಕ್ಕೆತ್ತಿ ಜೋಗುಳ ಹಾಡುತ್ತ ಜೀಕುತ್ತಿರುವವು. ಅದು ಏನು!! ಎಲ್ಲ ಕಡೆಗೂ ಮೆಲ್ಲ ಮೆಲ್ಲನೆ ಕೆಂಪಡರುತ್ತಿರುವುದು....ಏನು ವಿಚಿತ್ರ ಸುಗಂಧವಿದು?....ಹಾ ಕಮಲಗಳು ಅರಳುತ್ತಿರುವವು........ಅಲ್ಲಿ ಯಾರೋ ಒಂದು ಕಮಲದ ಮರೆಯಲ್ಲಿ ಕಿರುನಗೆಯಲ್ಲಿ ನಗುತ್ತಾ ಮೋರೆ ಹಾಕುತ್ತಿರುವರು! ನನ್ನಂತವನೇ ಒಬ್ಬ ಹುಡುಗ....ಹುಡುಗ! ಹುಡುಗ! ಇತ್ತ ಬಾ ಬೊಗರಿಯಾಡೋಣ ಬಾ....ಅಹಾ ಎಂತಹ ನಗೆಮೊಗವು ಏನು ಬೆಳಕು....ಎಷ್ಟು ಸುಂದರ....ಎಲ್ಲಿಯೋ ನೋಡಿರುವೆನು....ಅಹುದು. ನಾನು ಮಗುವಿದ್ದಾಗ ದಿನಾಲು ಕೆಣಕಿ ಕಾಡಿಸಿ ಕೊನೆಗೆ ಘೊಳ್ಳನೆ ನಕ್ಕ ತುಂಟನೇ ಇವನು....ನನ್ನ ಕಡೆಗೆ ಬರುವನು....ಇದು ಏನು! ಕಾಣದಾದನು....ಮೈಯೊಳಗಿನ ಕವಚವೇಕೆ ಸಡಿಲಾಯಿತು? ಅಬ್ಬಾ ಎಂತಹ ಠಕ್ಕನಿವನು! ಕವಚವನ್ನು ಸಡಿಲಿಸಿ ಪಿಸಿ ಪಿಸಿ ನಗುತ್ತ ನನ್ನ ಮೈಯ್ಯೊಳಗೆ ಮಾಯವಾದನಲ್ಲ! ಅದು ಯಾರು! ಅವ್ವನು....“ಅವ್ವಾ ಅವ್ವಾ”....ಎಲ್ಲ ಮೊಗ್ಗುಗಳು ಅರಳಿದುವು. ಹುಡುಗರು ಅವುಗಳೊಳಗಿಂದ ಮೋರೆಗಳನ್ನು ಮೇಲ್ಮಾಡಿ ಅವ್ವನನ್ನು ಏನೋ ಬೇಡುತ್ತಿರುವವು....“ಅವ್ವಾ ಬಾರೇ!” ಹೀಗೇಕೆ ನಗುವಳು! ಅಬ್ಬಾ! ಅಪ್ಪನು ಸಿಟ್ಟಾಗಿ ಗದೆಯನ್ನೆತ್ತಿಕೊಂಡು ಬಂದನು....ಅಪ್ಪಾ! ನನ್ನನ್ನೇಕೆಹೊಡೆಯುವೆ!....ಅವ್ವಾ! ಬಾರೆ ಬಿಡಿಸಿಕೊಳ್ಳೇ!....ಎಲೋ ತುಂಟ! ಒಳಗೆ ಅಡಗಿಕೊಂಡು ಏನುಮಾಡುವೆ?....ಬಾ ಬಿಡಿಸಿಕೊ!....ಏನು ಭಯಂಕರವಿದು ಅಪ್ಪನನ್ನು ಸಿಂಹವು ಮುರಿಯಿತು..... ಅವ್ವನೇಕೆ ನಗುತ್ತಿರುವಳು?....ಸಿಂಹವಲ್ಲ; ನನ್ನ ತುಂಟ ಗೆಳೆಯನು! ಇದು ಏನು ಮಂಜೆಲ್ಲ ಬಯಲಾಯಿತು!!

೪.

ಹಿರಣ್ಯಕಶಿಪು:—ಮಗೂ ನಿನಗೇನು ಬೇಕು?

ಪ್ರಲ್ಹಾದ:—ತಾತ! ನನ್ನ ತುಂಟ ಗೆಳೆಯ ನಾರಾಯಣನೊಬ್ಬನು ನನ್ನ ಜೊತೆಯಲ್ಲಿದ್ದರೆ ನನಗೆ ಏನೂ ಬೇಕಾಗುವುದಿಲ್ಲ. ಅಪ್ಪಾ! ಅವನ ನಗೆಮೊಗವನ್ನು ನೋಡಿದ ಕೂಡಲೆ ನನ್ನ ಹಸಿವು ನೀರಡಿಕೆಗಳು ಹರಿದು ಹೋಗುವವು. ಅವನು ಬಂದ ಕೂಡಲೆ ನನ್ನ ಚಿಣಿಕೋಲು ಚಂಡುಗಳನ್ನು ಬದಿಗಿಟ್ಟು ಅವನನ್ನು ಕಣ್ಣುತುಂಬ ನೋಡಿ ಅವನ ಸುತ್ತಲೂ ಕುಣಿದೇಕುಣಿದರೂ ದಣಿವೇ ಇಲ್ಲ; ಅವನ ತುಂಟತನಕ್ಕೆ ಸೀಮೆಯೇ ಇಲ್ಲ. ಆಟವಾಡುವಾಗಲೂ ನಗು; ಆಟವನ್ನು ಕೆಡಿಸುವಾಗಲೂ ನಗು; ಮರಳಲ್ಲಿ ಮನೆಗಳನ್ನು ಕಟ್ಟಿ ಕೊನೆಗೆ ಕಾಲಿನಿಂದ ಒದ್ದು ಘೊಳ್ಳನೆ ನಗುವನು.

ಹಿರಣ್ಯ:—ನೀನು ಅವನನ್ನು ಎಂದಿನಿಂದ ನೋಡುತ್ತಿರುವೆ?

CC-0. Jangamwadi Math Collection. Digitized by eGangotri

ಪ್ರಲ್ಹಾದ:—ಅಪ್ಪಾ! ನಾನು ತೀರ ಸಣ್ಣವನಿದ್ದಾಗ ಎಲ್ಲೋ ಕತ್ತಲೆಯಲ್ಲಿ ಮಲಗಿದ್ದೆನು; ಜೊತೆಯಲ್ಲಿ ನೀನು ಇದ್ದಿಲ್ಲ; ಅವ್ವನೂ ಇದ್ದಿಲ್ಲ. ಹೊರಗೆ ಬೆಳಕಿನಲ್ಲಿ ಯಾರೋ ಕತೆಯನ್ನು ಹೇಳುತ್ತಿದ್ದುದನ್ನು ಕೇಳಿದೆನು.-ಆ ತುಂಟ ನಾರಾಯಣನ ಕತೆಯೇ-ಅದಕ್ಕೆ ನಾನು ಹೂ ಎನ್ನುತ್ತಿದ್ದೆನು. ಕೂಡಲೆ ಒಂದು ಅಂದವಾದ-ನನ್ನಷ್ಟೇ ಸಣ್ಣ ಮಗುವು ಝುಗಝುಗಿಸುವ ಬೆಳಕಿನಲ್ಲಿ ನನ್ನೊಡನೆ ಆಡಹತ್ತಿತು. ಅಂದಿನಿಂದಲೆ ನಾನೂ ಅವನೂ ಗೆಳೆಯರಾಗಿರುವೆವು. ಅಪ್ಪಾ! ಏನು ಅವನ ಮುದ್ದು ಮೊಗವು!

ಹಿರಣ್ಯ:—ಅವನ ಮುದ್ದು ಮುಖಕ್ಕಷ್ಟೇ ಮರುಳಾಗಬೇಡ.

ಪ್ರಲ್ಹಾದ:—ಛೇ! ಮುದ್ದು ಮುಖವಷ್ಟೇ ಏಕೆ? ಅವನು ಯಾವುದರಲ್ಲಿ ಕಡಿಮೆ ಇರುವನು? ನಿನ್ನನ್ನು ಕೂಡ ಅವನು ನೆಲಕ್ಕಪ್ಪಳಿಸಿ ಬಿದ್ದು ಬಿದ್ದು ನಗುವನು.

ಹಿರಣ್ಯ:—ಸಾಕಿನ್ನು ನಿನ್ನ ಬಡಬಡಿಕೆ. ಹೀಗೆ ಇವನನ್ನು ಬಿಟ್ಟರೆ ತುಂಟರ ಸಹವಾಸದಿಂದ ಇವನೂ ತುಂಟನಾಗುವನು. ರಾಜಗುರುಗಳಿಗೆ ಹೇಳಿ ಇವನನ್ನು ಚೆನ್ನಾಗಿ ನಿರ್ಬಂಧದಲ್ಲಿಟ್ಟು ವ್ಯಾಸಂಗವನ್ನು ಪ್ರಾರಂಭಿಸಬೇಕು.

೫

ಹುಡುಗರು:—ಪ್ರಲ್ಹಾದ! ಅಭ್ಯಾಸವನ್ನು ಬಿಟ್ಟು ಹೀಗೆ ಗೂಳಿದನಗಳಂತೆ ತಿರುಗಿದರೆ ಗುರುಗಳಾದರೂ ಏನೆಂದಾರು?

ಪ್ರಲ್ಹಾದ:-ಈ ಅಭ್ಯಾಸದಿಂದ ನಮಗಾಗುವುದೇನು?

ಹುಡುಗರು:—ಮೊನ್ನೆ ಗುರುಗಳು "ಚಿಕ್ಕತನದಲ್ಲಿ ಅಧ್ಯಯನ ಮಾಡಿ ಗುರುಗಳನ್ನು ಒಲಿಸಿಕೊಂಡರೆ ಮುಂದೆ ನಿಮಗೆ ಸುಖವಾಗುವದು; ಸಂಖ್ಯೆಯ ಲೆಕ್ಕಗಳನ್ನು ಬಿಡಿಸಲಿಕ್ಕೆ ಕಲಿತರೆ ಮುಂದೆ ದೊಡ್ಡವರಾದಾಗ ಸಂಕಟದ ಲೆಕ್ಕಗಳನ್ನು ಬಿಡಿಸಲಿಕ್ಕೆ ನೆರವಾಗುವುದು" ಎಂದು ಹೇಳಿದರು.

ಪ್ರಲ್ಹಾದ:—ಮರುಳುತನ! ನಮ್ಮ ನಾರಾಯಣನ ಜೊತೆಯಲ್ಲಿರುವ ಸುಖವು ಈ ಹಾಳು ಹರಟೆಯಿಂದ ಎಂದಾದರೂ ಬರುವುದೆ! ಇನ್ನು ಸಂಕಟಗಳಿಗೆ ನಮ್ಮ ನಾರಾಯಣನ ಹೊರತು ಅನ್ಯರಾರು ಹೊಣೆಗಾರರಪ್ಪಾ? ಎಲ್ಲವನ್ನೂ ಬಿಟ್ಟು ನನ್ನೊಡನೆ ಆಡಲಿಕ್ಕೆ ಬಂದರೆ, ಏನು ತೊಂದರೆಗಳು ಬಂದರೂ ದೂರ ಮಾಡುವೆನೆಂದು ಆತ ಸಾರಿ ಸಾರಿ ಹೇಳಿರುವನು. ನಮ್ಮ ತಂದೆತಾಯಿಗಳು ನಮ್ಮನ್ನು ಅಡ್ಡದಾರಿಗೆ ಹಚ್ಚಿದರೆ ಅವರು ತಂದೆತಾಯಿಗಳೇ ಅಲ್ಲ; ನಮ್ಮ ಗುರಿಯನ್ನು ತಪ್ಪಿಸುವವರು ಗುರುಹಿರಿಯರಾದಾರೇ? ಬಾ ನಾರಾಯಣಾ। ಎಷ್ಟು ನಿನ್ನ ದಾರಿಯನ್ನು ನೋಡಬೇಕು। ನಿನ್ನ ಸಲುವಾಗಿ ನನಗೆ ಊಟವು ಬೇಡವಾಯಿತು; ಅವ್ವನೂ ಬೇಸರಾದಳು; ಅಪ್ಪನಂತೂ ನನ್ನ ದಾರಿಯನ್ನೇ ಬಿಟ್ಟನು. ನೀನೂ ಬಾರದಿದ್ದರೆ ನನಗಿನ್ನು ನೆರವಾರದು! ಇದು ನೋಡಿರಿ ಬಾಲಕರೆ! ಆ ಅರಳಿದ ಕುಸುಮಗಳಲ್ಲಿ ನಾರಾಯಣನು ಹೇಗೆ ಕುಣಿಯುತ್ತಿರುವನು ಅಗೋ ಆ ಗಿಡಗಳ ಎಲೆಗಳಲ್ಲಿ ಹಣಿಕೆಹಾಕುವನು. ಅದು ನೋಡಿರಿ ನದಿಯ ತೆರೆಗಳ ಮೇಲೆ ಹೇಗೆ ಲೋಲಾಡುವನು. ಮೋಡಗಳಲ್ಲಿ ಮಿಂಚಿದಾಗ ಮೂಡುವನು. ಇಲ್ಲಿ ಕಲ್ಲುಗಳಲ್ಲಿ ಕಾಣುವನು. ಇದು ನೋಡಿರಿ ನನ್ನಲ್ಲಿ ನಲಿಯುವನು। ನಿಮಗೂ ಒಲಿಯುವನು.

ಹುಡುಗರು:—ನಮಗೆ ಏನೂ ಕಾಣದು.

ಪ್ರಲ್ಹಾದ:—ನಿಜ! ನೀವಿನ್ನೂ ಅವನ ಜೊತೆಗಾರರಾಗಿಲ್ಲ. ಎಂದ ಮೇಲೆ ನಿಮ್ಮೊಡನೆ ಆಡಲಿಕ್ಕೆ ಅವನೇಕೆ ಬಂದಾನು? ಎಲ್ಲರನ್ನೂ ಬಿಟ್ಟು ಅವನ ಬೆನ್ನು ಹತ್ತಿರಿ! ಆದರೆ ಜೋಕೆ! ಬಲು ಮೋಸಗಾರನು! ಕಣ್ಣ-ಮುಚ್ಚಾಣಿಕೆಯ ಆಟದಲ್ಲಿಯಂತೂ ಅವನಿಗೆ ಯಾರೂ ಸರಿಯಿಲ್ಲ. ಹೊರಗೆ ಅಡಗಿದರೆ ನೀವು ಅವನನ್ನು ಹುಡುಕಿ ಹಿಡಿಯಬಹುದು. ನಿಮ್ಮಲ್ಲಿಯೇ ಅವಿತುಕೊಂಡು ಕುಳಿತಿರುವನು. ನೀವು ಮೂರು ಲೋಕಗಳನ್ನು ಹುಡುಕಿ ಬೇಸತ್ತು ನಿಮ್ಮಲ್ಲಿಯೆ ನೋಡಿದ ಕೂಡಲೆ ಖೊಳ್ಳೆಂದು ನಗುವನು. ಇಂಥ ಆಟವಾಡುವ ಹುಡ್ದರಿಯು ನಮ್ಮ ಜೊತೆಗಿದ್ದಾದರೆ ನಮಗೆ ಸೋಲು ಬರುವದು ಹೇಗೆ?

೬

ಹಿರಣ್ಯಕಶಿಪು:—ಜೀವನ ಜಯಭೇರಿಯನ್ನು ಹೊಡೆಯಿಸಿ ಸ್ವರ್ಗದವರ ಸೊಕ್ಕನ್ನು ಮುರಿಯಬೇಕೆಂದು ಹವಣಿಸಿದರೆ ಈ ಜಗತ್ತಿನವರೇ ನನ್ನ ಮೇಲೆ ಬೆಂಕಿಯನ್ನು ಕಾರುತ್ತಿರುವರು. ಜೀವನಲ್ಲಿ ಅಗಾಧ ಶಕ್ತಿಯು ಅಡಗಿರುವದು. ಹೊರಗೆಡವಿದರೆ ಈ ನಾಡೇಕೆ! ಸಪ್ತಲೋಕಗಳಿಗೂ ಅವನು ಒಡೆಯನಾಗಬಹುದು. ದೇವರು ದೇವರೆಂದು ಎಲ್ಲವನ್ನೂ ಅನ್ಯರಿಗೆ ನೀಡಿ ಅಡವೀ ಪಾಲಾಗುವ ಈ ಮೂಢರಿಗೆ ಏನೆನ್ನಬೇಕು! (ಇನ್ನೊಂದು

CC-0. Jangamwadi Math Collection. Digitized by eGangotri

ಧ್ವನಿಯು—“ ಇದು ನಿನ್ನ ಅಹಂಕಾರವು. ನೀನು
ಇದರಿಂದ ಅಡ್ಡದಾರಿಯನ್ನು ತುಳಿದು ಜೀವಕ್ಕೆ ಎರ
ವಾಗುವೆ ) ಏನು ವಿಚಿತ್ರ ಮಾಯೆಯಿದು ! ನನ್ನ
ಶತ್ರುಗಳಿಗೆ ನನ್ನಲ್ಲಿಯೂ ಪ್ರವೇಶವೆ !! ಆದರೂ
ಹಿಮ್ಮೆಟ್ಟುವುದಿಲ್ಲ. ಜೀವ ಸ್ವಾತಂತ್ರ್ಯದ ಸವಿಯು
ಜೀವನಿಗೆ ರುಚಿಸದ್ದರಿಂದ ಇನ್ನೂ ಈ ಉನ್ಮತ್ತ ದೇವತೆ
ಗಳ ಬೇಳೆಯು ಬೇಯುತಿರುವುದು. ಪ್ರಲ್ಹಾದನು ಚಿಕ್ಕ
ತನದ ಮರುಳುತನದಲ್ಲಿ ಕಪಟಿಗಳ ಕಾರಸ್ಥಾನಕ್ಕೆ ಒಳ
ಬಿದ್ದುದನ್ನು ನೋಡಿ ವಿಷಾದವಾಗುತ್ತದೆ. ಆದರೆ ನಾನು
ತತ್ವ ಪ್ರಿಯನು. ನನ್ನ ತತ್ವಕ್ಕೆ ವಿರುದ್ಧವಾಗಿ ನನ್ನ
ಮಗನು ಅಡ್ಡ ಬಂದರೆ ಅವನನ್ನೂ ಪಾತಾಳಕ್ಕೆ
ಮೆಟ್ಟದೆ ಬಿಡೆನು. ತ್ರಿಲೋಕೇಶ್ವರನಾದ ನನ್ನನ್ನು
ಧಿಕ್ಕರಿಸಿ ಅನ್ಯರಿಗೆ ಶರಣು ಹೋದವನು ಈ ಜಗತ್ತಿನಲ್ಲಿ
ಬಾಳಲಿಕ್ಕೆ ಯೋಗ್ಯನಲ್ಲ. ಇದು ತಂದೆ ಮಕ್ಕಳ ಬಡಿ
ದಾಟವಲ್ಲ. ತತ್ವಗಳ ತಿಕ್ಕಾಟವು. ಸತ್ಯದ ಸಂಶೋಧ
ನವು. ಕಡೆಯದ ಹೊರತು ಕಡೆಗೋಲಿಗೆ ಬೆಂಣೆಯು
ಹತ್ತುವದೇ ? ಮಾಯಾ ಮಮತೆಗಳನ್ನು ಬದಿಗಿಡ
ಬೇಕು. ಪ್ರಲ್ಹಾದನನ್ನು ಎಲ್ಲ ತರಹದ ಸಂಕಟಗಳಿಗೆ
ಗುರಿಮಾಡಿ ಅವನ ನಾರಾಯಣನ ಶಕ್ತಿಯನ್ನಾದರೂ
ಪರೀಕ್ಷಿಸಬೇಕು.

೭

ಪ್ರಲ್ಹಾದ:— ನಾರಾಯಣ ! ನಮ್ಮ ಗೆಳೆತನವು
ಇಂದಿಗೆ ಮುಗಿಯಿತೇನು ! ನಿನ್ನ ಭರವಸೆಯಿಂದ
ತಾಯಿಯ ಹಿತವನ್ನು ಧಿಕ್ಕರಿಸಿದೆನು; ತಂದೆಯ
ಸಿಟ್ಟನ್ನು ಲೆಕ್ಕಿಸಲಿಲ್ಲ. ಬಂಧುಬಳಗದವರ ಮಾತನ್ನಂತೂ
ಕಸಕ್ಕಿಂತಲೂ ಕಡೆ ಮಾಡಿದೆನು. ಸೋಲು ಗೆಲುವಿಗೆ
ಅಂಜಿದವನಿಗೆ ಆಟವೆಂದೂ ರಂಜಿಸುವದಿಲ್ಲೆಂದು ಸೊಲ್ಲು
ಸೊಲ್ಲಿಗೆ ನೀನು ಹೇಳಿದ ಮಾತು, ನನಗೆ ಮೇಲೆ ಮೇಲೆ
ನೆನಪಾಗುತ್ತದೆ. ತೋಟನ್ಯಾಯವನ್ನು ತೆಗೆಯ
ಬಾರದು; ಅಂದರೆ ಆಟದಲ್ಲಿ ಸೋಲಿನಿಂದಲೂ ಸವಿ
ಯುಂಟು. ನೀನು ನನ್ನ ಜೊತೆಗಾರನೆಂಬ ಹೆಮ್ಮೆ
ಯಿಂದ ನಮ್ಮಪ್ಪನೊಡನೆ ಸಡ್ಡು ಹೊಡೆದು ನಿಂತಿರು
ವೆನು. ಯಾಕೆ ! ಕೂಗಿದೊಡನೆ ಗುಡ್ಡದ ಮೇಲಿಂದ
ನೀನು ಹಾರಲಿಲ್ಲವೇ ! ಹಾವುಗಳು ಹರಿದು ಬಂದಾಗ
ನೀನು ಹದ್ದಾಗಿ ಬಂದು ಅವುಗಳನ್ನು ಚೆದರಿಸಿದ್ದನ್ನು
ನಾನೇನು ಮರೆತಿಲ್ಲ. ಅಬ್ಬಾ ! ಆ ಆನೆಯೆಂತಹದಪ್ಪಾ
ನೀನು ಅದರ ಮುಂದೆ ಹೋಗುವುದನ್ನು ನಾನೇನು
ನೋಡಲಿಲ್ಲವೇನು ? ಈಗೇಕೆ ನಿನಗೆ ಬರಲಿಕ್ಕೆ ತಡ
ವಾಯಿತು. ಯಾರೊಡನೆ ಆಡುತ್ತಿರುವೆ ! ಬೇಗ ಬಾ.
ಎಂಣೆಯು ಕಾಯ್ದು ನಮ್ಮಪ್ಪನಿಗಿಂತಲೂ ಹೆಚ್ಚಾಗಿ
ಸಿಟ್ಟಿಗೆದ್ದಂತೆ ಕಾಣುತ್ತದೆ. ಬಾ ! ಬೇಗನೇ ಬಾ।
ಮೋಡದಲ್ಲಿ ಮಿಂಚಿನೊಡನೆ ಆಟವಾಡುತ್ತಿರುವೆಯಾ !
ಇಲ್ಲವೆ ಗಾಳಿಯ ಮೇಲೆ ಕುಳಿತು ಅರಳಿದ ಹೂವು
ಗಳನ್ನು ಮುದ್ದಿಕ್ಕುತ್ತ ಅಲೆದಾಡುತ್ತಿರುವೆಯಾ !
ಅಥವಾ ತೆರೆಗಳ ಮೇಲೆ ಕುಳಿತುಕೊಂಡು, ಮೈಮರೆತು
ನೀರತುಂಬಲು ಬಗ್ಗಿದ ನಾರಿಯರ ಕೆನ್ನೆಗಳಿಗೆ ಕೈಯ್ಯಿ
ಕ್ಕುತ್ತ ಸುಳಿದಾಡುತ್ತಿರುವೆಯಾ. ಅಬ್ಬಾ ಏನು
ತುಂಟನೋ ! ಇಲ್ಲಿಯೇ ಕೊಪ್ಪರಿಗೆಯ ಕೆಳಗೆ ಅಡಗಿ
ರುವನು. ಅವನ ಬಾಯಿಂದ ಬೆಂಕಿಯು ಉರಿಯ
ನಾಲಗೆ ಚಾಚುವದು. ಬಾಯಿ ಮುಚ್ಚಿದೊಡನೆಯೆ
ಬೆಂಕಿಯು ಗಪ್ಪಾಗುವದು. ಎಲಾ ಕೊಪ್ಪರಿಗೆಯಲ್ಲಿ
ಕಾಣುತ್ತಿರುವೆಯಾ; ಇಗೊ ನಾನೂ ಜಿಗಿದೆನು.

೮

ಪ್ರಲ್ಹಾದ:—ಅಪ್ಪಾ ನಿನ್ನ ಮಾತಿಗೆ ಒಪ್ಪಿದೆನು; ಆದರೆ
ನಿನಗೇಕೆ ನಾರಾಯಣನು ಕಾಣಲೊಲ್ಲನು ? ನಾನೇನು
ಹೇಳಲಿ ?

ಹಿರಣ್ಯ:—ಮಗೂ ! ತುಂಟರ ಸಹವಾಸದಲ್ಲಿ ಬಿದ್ದು
ಕೆಟ್ಟು ಹೋದೆ. ಇನ್ನಾದರೂ ಬುದ್ಧಿಗಲಿ. ಹೀಗೆ
ಹುಚ್ಚನಂತೆ ಮಾಡಬೇಡ.

ಪ್ರಲ್ಹಾದ:—ಅಪ್ಪಾ ! ನೀನು ನನ್ನನ್ನು ಹೊಡೆದರೆ
ಅವನು ನನ್ನನ್ನು ಬಿಡಿಸುವನು. ನೀನು ನೂಕಿದರೆ
ಅವನು ಕಾಯುವನು. ಇಂಥ ನಾರಾಯಣನನ್ನು ಬಿಟ್ಟು
ನಾನು ಯಾರ ಬೆನ್ನು ಬೀಳಲಿ. ಆಟವಾಡುವಾಗ
ಅವನು ಹೇಳಿದ ಮಾತುಗಳು ನನ್ನ ಎದೆಯಲ್ಲಿ ನೆಟ್ಟಿರು
ವವು. ಸತ್ಯಕ್ಕೆ ಸಾವಿಲ್ಲವೆಂಬ ಅವನ ಒಲ್ಮೆಯ
ಮಾತು ನನಗೆ ಮನವರಿಕೆಯಾಗಿರುವದು.

ಹಿರಣ್ಯ:—ನಿಮ್ಮಂಥ ಹೇಡಿ ಹುಡುಗರ ಸಂಗದಲ್ಲೇ
ಅವನ ಚಿನ್ನಾಟ; ನನ್ನ ಮುಂದೆ ಬಂದರೆ ಆಗ ಅವನ
ನಾರಾಯಣತನ ತೋರಿಸುವೆನು.

ಪ್ರಲ್ಹಾದ:— ಅಪ್ಪಾ, ನಾನು ಮೊನ್ನೆ ಕಣ್ಮುಟ್ಟ
ನೋಡಿದುದನ್ನು ನಿನಗೆ ಹೇಳಿದರೆ ನೀನು ಬೆದರಿ
ಬಾಯಾರಿ ಹೋಗುತ್ತೀ. ಅವನ ದಾರಿಯನ್ನು
ನೋಡುತ್ತ ನಾನು ನಿಂತಿದ್ದೆನು. ಕೂಡಲೇ ನಾರಾ
ಯಣನೂ ಮುಗಿಲಿಗೆ ಹಾರಿ ಮೊಗವನ್ನು ದೊಡ್ಡದಾಗಿ



CC-0. Jangamwadi Math Collection. Digitized by eGangotri

ಬೆಳೆಯಿಸಿದನು. ಮುಖವನ್ನು ತಿದಿಯಂತೆ ಊದ ಹತ್ತಲು ಅನಂತ ಶಿಶುಗಳು ಕಣಗಳಂತೆ ಹೊರಬಿದ್ದುವು. ಉಸಿರನ್ನು ಒಳಗೆ ಎಳಕೊಂಡ ಕೂಡಲೆ ಅವೆಲ್ಲವೂ ಅವನ ಹೊಟ್ಟೆಯನ್ನು ಹೊಕ್ಕುವು. ನಮ್ಮ ಚಿಕ್ಕಪ್ಪನಂತೆ! ಹಿರಣ್ಯಾಕ್ಷನಂತೆ! ನನ್ನ ಕಡೆಗೆ ನೋಡಿ ನಗುತ್ತ ಅವನೂ ನಾರಾಯಣನ ಹೊಟ್ಟೆಯನ್ನು ಹೊಕ್ಕನು.

ಹಿರಣ್ಯ:—ವಿಶ್ವಾಸಘಾತ! ರಾಜದ್ರೋಹ! ಒಳಸಂಚು! ಎಲ್ಲಿ ಅವನು ಮೊದಲು ತೋರಿಸು! ಇಲ್ಲವಾದರೆ ನಿನ್ನ ಕತ್ತು ಕೆಳಗಿಳಿಯಿತೆಂದು ತಿಳಿ.

ಪ್ರಲ್ಹಾದ:—ಇಗೊ ಬಂದನು; ಬಿಸಿಲೊಳಗಿನ ಕಣಗಳಲ್ಲಿ ಕುಳಿತುಕೊಂಡು ಈ ಸಭೆಯನ್ನೆಲ್ಲಾ ಮುತ್ತಿದನು; ಅದು ನೋಡು ನಿನ್ನನ್ನು ಅಣಕಿಸುತ್ತ ಮತ್ತು ನಿನ್ನ ಹೊಟ್ಟೆಯನ್ನೇ ಹೊಕ್ಕನು; ಅಗೋ! ಮೇಲೆ ಜಂತೆಯಲ್ಲಿ ಹಣಿಕಿ ಹಾಕುವನು; ಅದೊ! ನಿನ್ನ ಕಾಲ ಕೆಳಗೆ ತಲೆ ಎತ್ತಿದನು! ಅಲ್ಲಿ ನಿನ್ನ ಸಿಂಹಾಸನದಲ್ಲಿ ಕುಳಿತನು: ಇಲ್ಲಿ ನೋಡು! ಈ ಕಂಬಕ್ಕೆ ಅವಿತು ನಿಂತಿರುವನು.

ಹಿರಣ್ಯ:—ಕಾಲ ಕಳೆಯುವುದಿನ್ನು ಸಾಕು! (ಎಂದು ಖಡ್ಗವನ್ನು ಹಿರಿಯುತ್ತಾನೆ).

ಪ್ರಲ್ಹಾದ:—ಅಪ್ಪಾ ಅದು ನೋಡು ಖಡ್ಗದಲ್ಲಿ ಅಡಗಿದನು.

ಹಿರಣ್ಯ:—ಬೇಡ ಬೇಡ (ಖಡ್ಗವನ್ನು ಚೆಲ್ಲಿ ಗದೆಯನ್ನು ಹೆಗಲ ಮೇಲೆ ಹೊರುತ್ತಾನೆ.)

ಪ್ರಲ್ಹಾದ:—ಅಪ್ಪಾ ನನ್ನ ನಾರಾಯಣನನ್ನು ಹೆಗಲ ಮೇಲೇಕೆ ಕುಳ್ಳಿರಿಸಿಕೊಂಡೆ?

ಹಿರಣ್ಯ:—ಏನು ಮೋಸವಿದು. (ಗದೆಯನ್ನು ಚೆಲ್ಲುತ್ತಾನೆ.)

ಈ ಮುಷ್ಟಿಯಿಂದಲೇ ನಿನ್ನ ನಾರಾಯಣನ ಪಾರುಪತ್ಯವನ್ನು ಮಾಡುತ್ತೇನೆ. (ಎಂದು ಅವಡುಗಚ್ಚಿ ಕಂಬಕ್ಕೆ ಗುದ್ದುತ್ತಾನೆ.

೬

(ನರಸಿಂಹನೆದುರಿಗೆ ಎಲ್ಲರೂ ನಡುಗುತ್ತ ನಿಂತಿರುವರು.)

ಎಲ್ಲರೂ:—ನಿನಗೆ ಒಲಿದ ಈ ಭೀಕರ ರೂಪವನಿಷ್ಟು ಶಾಂತಗೊಳಿಸು.

ಪ್ರಲ್ಹಾದ:—ಎಂಥ ಮರುಳ ಜನರು ನೀವು; ಚಿಕ್ಕ ಮಕ್ಕಳೊಡನೆ ಆಟವಾಡುವ ನಮ್ಮ ನಾರಾಯಣನಿಗೆ ನೀವು ಬೆದರುವಿರಾ! ವೇಷ ಹಾಕುವುದೊಂದು ಅವನ ಆಟವಾಗಿದೆ. ಅವನು ತುಂಟನಂತೆ ನಟಿಸಿದರೂ ಜಗಳಗಂಟನಲ್ಲ; ಜಗಳವನ್ನು ತೀರಿಸುವ ಜಾಣನು. ಜನರೇ! ಅವನಿಗೆ ಬೆದರಿ ಹಿಂದುಳಿಯಬೇಡಿರಿ ಅವನನ್ನು ಗುರುತಿಸಿ ಅವನೊಡನೆ ಗೆಳೆತನ ಬೆಳೆಯಿಸಿರಿ. ಎಂದರೆ ಅವನೆಂದೂ ನಮ್ಮನ್ನು ಬಿಡುವುದಿಲ್ಲ. ಅವನು ಸಿಂಹದ ಮುಖವನ್ನು ಹಾಕಿಕೊಂಡರೂ ಹುಡುಗರಿಗೆ ಅವನು ಮರಿಯು. ನಮ್ಮಪ್ಪನನ್ನು ಕೊಂದಿರುವನೆಂದು ಗುಣುಗುಟ್ಟುವಿರಾ! ಇಲ್ಲ ನಿಮಗೆ ಕಂಣಿಲ್ಲ! ಅದು ನೋಡಿ ಅವನು ನಮ್ಮಪ್ಪನನ್ನು ಎತ್ತಿಕೊಂಡು ಹೇಗೆ ಪ್ರೇಮದಿಂದ ಮಾತಾಡುತ್ತಿರುವನು! ಮೈಯು ರಕ್ತದಿಂದ ಕೆಂಪಾಗಿರುವದೆಂದು ಅನ್ನುವಿರಾ? ಛೇ ಅಲ್ಲ! ನಮ್ಮಂಥ ಬಾಲಕರ ಕೋಮಲ ಮನಸ್ಸನ್ನು ಕಿತ್ತುಕೊಂಡು ಬರುವಾಗ ಪ್ರೇಮದ ಹನಿಗಳು ಸಿಡಿದಿರುವವು. ಕರುಳು ಬಗೆದವನಿಗೆ ಕರುಣೆ ಎಲ್ಲಿಂದ ಬರುವದೆಂದು ಕೇಳಿದಿರಾ? ಕಲ್ಲೆದೆಯವನೆಂದು ಕೂಗುವ ನಿಮ್ಮಂತಹ ಮರುಳರಿಗೆ ಮನವರಿಕೆಯಾಗಲೆಂದು (ಅಂತಃಕರಣ) ಕರುಳನ್ನು ಕೊರಳಲ್ಲಿ ಹಾಕಿರುವನು. ಅದೋ ನೋಡಿರಿ ಈ ನರಹರಿಯ ಮುಖವು ತೆರೆಯಿತು. ಏನು ವಿಚಿತ್ರ ದೃಶ್ಯವಿದು. ಕಾರ್ಮುಗಿಲು ಕವಿದು ಬಂತು; ಬಿರುಗಾಳಿಯು ಬೀಸುತ್ತಿದೆ; ಕೋಲು ಮಿಂಚು ಕುಣಿಯುತ್ತಿದೆ........ ಬಯಲಾಯಿತು ........ ಆದರೆ........ಇವನಾರು?........ ಕರಾಳ ರೂಪದಿಂದ ರುಂಡವನ್ನು ಕಡಿಯುತ್ತಿರುವನು! ಧಡವನ್ನುರುಳಿಸುತ್ತಿರುವನು........ ಕಾಣಾದನು.... ರಕ್ತದ ಸಮುದ್ರವು ಸೂಸಿ ನಿಂತಿತು.........ರುಂಡಗಳು ಅರಳು ಮೊಗ್ಗೆಗಳಾದುವು........ಅತ್ತ ಕಡೆಯಿಂದ ಕೆಂಪೇರುತ್ತಿರುವ ಸೂರ್ಯನು ಮೇಲೇರುತ್ತಿರುವನು. ಅಹಾ! ಮೊಗ್ಗೆಗಳು ಅರಳಿದುವು. ಮಕರಂದವನ್ನು ಬೀರಿದುವು. ವಿನಯದಿಂದ ಬಾಗಿದುವು; ಭಯವು ಬಯಲಾಯಿತು; ಭಕ್ತಿಯು ಉಕ್ಕೇರಿತು. ಅದೋ ಸೂರ್ಯಮಂಡಲದಿಂದ ನಮ್ಮ ನಾರಾಯಣನು ಕುಣಿಯುತ್ತ ಬಂದು ಈ ಕಮಲಗಳನ್ನೆಲ್ಲಾ ಕಿತ್ತುಕೊಂಡು, ಒಂದನ್ನು ತಲೆಯ ಮೇಲಿಟ್ಟುಕೊಂಡನು; ಇನ್ನೊಂದನ್ನು ಕಿವಿಯಲ್ಲಿ ಮುಡಿದುಕೊಂಡನು. ಮತ್ತೊಂದನ್ನು ನೋಡಿ ನೋಡಿ ನಗುತ್ತಿರುವನು. ಉಳಿದುವು ಬಾಡಿ ಬಗ್ಗಿ ಬತ್ತಿ ಹೋದುವು. ನಾರಾಯಣಾ! ನಿನ್ನಾಟದ ನೋಟವು ಮನದಟ್ಟಾಯಿತು. ನಿನ್ನ ನಗು ನೂರು ಮಡಿಯಾಗಲಿ ನಿನ್ನಾಟವು ಸವಿ ಕಟ್ಟಾಗಲಿ; ಅಂದರೆ ನನ್ನಲ್ಲಿ ಆಲ್ಹಾದದ ಅಲೆಗಳು ಎದ್ದು ಕುಣಿದಾಡುವವು.

CC-0. Jangamwadi Math Collection. Digitized by eGangotri

# ನನ್ನಾಕೆಗೆ

ಆನಂದಕಂದ

ನಲ್ಲೆ! ನಿನ್ನ ರೂಪ ನೋಡಿದೆಲ್ಲ ಜನರು ಏನೊ ಏನೊ
ಅಲ್ಲಗಳೆದು ನುಡಿಯುವುದನು ಕೇಳುತಿರುವೆನು;

"ಕಿರಿದು ಮೂಗು" ಎನುವನೊಬ್ಬ
"ಹರವು ಬಾಯಿ" ಎನುವನೊಬ್ಬ

"ಕುರುಳ ಕರಿದು ಕಡಿಮೆ" ಎಂದು ಜರಿವನೊಬ್ಬನು;
"ಕೊರಳು ಸಣ್ಣಗೆಂ"ದು ಮೂಗ ಮುರಿವನೊಬ್ಬನು;

"ಕಣ್ಣ ನೋಟ ನಸುವೆ ಕೊಂಕು" ಎನ್ನುವನಿನ್ನೊಬ್ಬನು;
"ಕೆನ್ನೆಯಲ್ಲಿ ಕೆಂಪು ಸಾಲದೆ"ನ್ನುವ ಮತ್ತೊಬ್ಬನು;

"ಮೆಯ್ಯ ಬಣ್ಣ ಕೊಂಚ ಕಪ್ಪು"
"ಮೆಯ್ಗೆ ಕಡಿಮೆಯಹುದು ಒಪ್ಪು"

ಎಂದು ಮಂದಿ ಬಂದೊಂದನೆ ಕುಂದನೆತ್ತಿ ನುಡಿಯಲು
ತಂದುಕೊಳುವೆನಾಗ ನಿನ್ನ ಅಂದವನ್ನು ಮನದೊಳು;

ಹೊಂದಿ ನಿನ್ನೊಳಿರುವ ಕುಂದ ನಾನು ಕೂಡ ಕಾಣುವೆ;
"ಮಂದಿಯೆನುವ ಮಾತು ದಿಟವು" ಎಂದು ನೆನೆದು
ನೋಯುವೆ;

ಆದೊಡೇನಿದಚ್ಚರಿಯಿದು!
ಎದುರಿನಲ್ಲಿ ನೀನು ಬಂದು

ನಗೆಯ ಮೊಲ್ಲೆಮುಗುಳಿನೊಡನೆ ಸೊಗಸನು ಹರಹರ-
ಡುತ
ಹೊಗರನೊಗೆಯುತಿರುವ ನಿನ್ನ ಬೊಗಸೆಗಣ್ಣ ತಿರುಹುತ

ಕೆಳೆಯು ಬೆರೆತ ನಲುಮೆ-ನೋಟ ನನ್ನೆದೆಯಲಿ ನಿಲಿಸುತ
ಬಳಿಯಲಿ ನಿಂದಿರಲು ನೀನು ಸಲುಗೆನುಡಿಯನುಲಿಯುತ,

ಎಲ್ಲೆಲ್ಲಿಯು ಕುಂದ ಕಾಣೆ
ಸುಳ್ಳಲ್ಲವೆ ದೇವರಾಣೆ!

ಕಿರಿಯ ಮೂಗ ಹರವು ಬಾಯ ಕುರುಹ ಮರೆತು
ಬಿಡುವೆನು;
ಕುರುಳ ಬಣ್ಣ ಕೊರಳ ಸಣ್ಣ ಯಾವುದೇನ ಕಾಣೆನು;
ಹೊರಗೆ ಕಾಣದಿರುವಾವುದೊ ಮೆರುಗದೊಂದು
ಬೆರೆತು ನಿನ್ನ
ಕೊರತೆಯ ಕಳೆದಿಹುದು ಎಲ್ಲ ಸರಿಯು! ಎಂದು ಎನಿಸು
ತಿಹುದು

ಕಿರಿಯತನದಿ ತುಂಬುವೆರೆಯ
ನಿರುಕಿಸಲಂದೆನ್ನ ಹೃದಯ

ಅರಳಿ ನಕ್ಕು ನಲಿದ ಪರಿಯ ಅರಿಕೆ ನನಗೆ ಇರುವುದೆ,
ಗರತಿ ನಿನ್ನ ನೋಡಲದುವೆ ತೆರದಿ ಬಗೆಯು ನಗುವುದೆ;
ಜನಕೆ ಕಾಂಬುವೇಕೆ ಚೆನ್ನೆ! ನನಗೆ ಕಾಣವೇಕೆ ಕುಂದು?
ಜನದ–ನನ್ನ ನೋಟಗಳಿವು ಎನಲೆ ಬೇರೆ ಬಗೆಯವೆಂದು?

ಚಣಕೆ ಚಣಕೆ ಹೊಸತು ಚೆಲುವ
ನಿನ್ನಲಿ ನೋಡುವೆನೆ ಚೆಲುವೆ!
ಎನಿತು ನಿಟ್ಟಿಸಿದರು ಕಣ್ಗೆ–
ಮನಕೆ ತಣಿವದಿಲ್ಲ ಒಲವೆ!

ಎಲ್ಲಿಯ ನುಡಿ! ಕೊರತೆ ನಿನ್ನ ಚೆಲ್ವೊಳಗಿಹುದೇ?
ಎಲ್ಲ ಸುಳ್ಳು! ಜನರ ಕಂಗಳಲ್ಲಿಯೆ ಇಹುದೆ.

CC-0. Jangamwadi Math Collection. Digitized by eGangotri

# ಸಾವಿನಕೂಡ ಸರಸ

(ನಗೆ ಬರೆಹವೊಂದು)

ಬರೆದವರು—ಶ್ರೀ. ಬೇಂದ್ರೆ ದತ್ತಾತ್ರೇಯ ರಾಯರು, ಬಿ. ಎ.

**" ಮೃತ್ಯೋರ್ಮಾ ಅಮೃತಂ ಗಮಯ "**

" ಉಪನಿಷತ್ "

**" ಮಾತಿಗಂಜದವ ತುಂಟ, ಮರಣಗಂಜದವ ಬಂಟ. "**

" ಜಾನಪದ ವೇದ "

**" ಸಿಕ್ಕವರಿಗೆ ಸಿಕ್ಕುವದಿಲ್ಲ ಸಾವಿನ ಸಹವಾಸ "**

" ಸ್ವಾನುಭವ ವಚನ "

'ಸಾವು' ಎಂದಕೂಡಲೆ 'ಸಿಂಹ-ಹುಲಿ' ಎಂಬುದಕ್ಕಿಂತಲೂ ಹೆಚ್ಚು ಜನರು ಬೆಚ್ಚಿಬೀಳುವರು. ಸಿಂಹ ಹುಲಿಗಳು ಭಯದ ಉತ್ಸವ ಮೂರ್ತಿಗಳು, ಸಾವು ಮೂಲ ವಿಗ್ರಹ. ಕೆಲವು ಕೆಚ್ಚೆದೆಯವರು ಸಿಂಹ ಹುಲಿಗಳ ಬೇಟೆಯಾಡುತ್ತಾರೆ. ಕೆಲವು ಚದುರರು ಅವುಗಳ ಕೂಡ ಚಿನ್ನಾಟವಾಡುತ್ತಾರೆ. ಆದರೆ ಅಂಥವರೂ ಕೂಡ 'ಸಾವು' ಎಂದರೆ ಅರೆಸತ್ತಂತಾಗುವರು. ಶೆಕ್ಸಪಿಯರನು ಏನೇ ಹೇಳಿರಲಿ! ಎಂಥ ಹೇಡಿಗೂ ಸಾವು ಬರುವದೊಮ್ಮೆಯೆ. ಆದರೂ ಜೀವಿಗೆ ಅನೇಕ ಜನ್ಮಗಳಲ್ಲಿ ಈ ಬೇಡಾದ ಅನುಭವ ಬಂದು, ಸಾವಿನ ಹೆದರಿಕೆಯು ಎಲ್ಲರಿಗೂ ರಕ್ತಗತವಾಗಿ ಬಿಟ್ಟಿದೆ. ನಾವು ಬಾಯಿಂದ 'ಆತ್ಮವು ಅಮರವಾಗಿದೆ' ಎಂದುಕೊಂಡರೂ ಅಷ್ಟೇ; 'ಹುಟ್ಟಿದವನಿಗೆ ಸಾವು ತಪ್ಪಿಲ್ಲ' ಎಂದರೂ ಅಷ್ಟೇ. ಸಾವಿನ ಸೆಕೆಯೋ ಚಳಿಯೋ ಜೀವನಿಗೆ ಹತ್ತಿದ ಕೂಡಲೆ ರಕ್ತವು ಕುದಿಯಲೋ ತಣ್ಣಗಾಗಲೋ ಹತ್ತುವದು. ನಾವು ಹೆದರಲಿ, ಧೈರ್ಯವಾಗಿರಲಿ, ಸಾವು ನಮ್ಮ ಕೈಹಿಡಿಯುವದು ಜನ್ಮದಲ್ಲೊಮ್ಮೆಯೆ. ಅದು ಎಂಥ ಹಿಡಿತ! ಏನು ಸ್ಪರ್ಶ! ಆ ಕ್ಷಣದಲ್ಲಿ ಎಲ್ಲವೂ ಮರೆತು ಹೋಗುವದು. ಮೃತ್ಯುಯೋಗ ಎಂದು ಹೇಳುವದು ಅದಕ್ಕಾಗಿಯೇ.

ಇಂಥ ಈ ಮೃತ್ಯು, ಸಾವು, ಮರಣಗಳ ಕೂಡ 'ಸರಸ' ಎಂದರೆ ಮೈಗೆ ಮುಳ್ಳು ಬರುವವು. ಕೆಲವರಿಗೆ ಬೆವರು ಬಿಡಬಹುದು; ಕೆಲವರಿಗಂತೂ ನಡುಕ ಹಿಡಿಯಬಹುದು; ಮತ್ತೆ ಕೆಲವರಿಗೆ ಮೂರ್ಛೆಯೂ ಬರಬಹುದು. ಅಂಥ ಸರಸವಾಡುವ ಕೆಲಸ ನಾನು ಮಾಡಿದ್ದೇನೆ. 'ಎಂಥ ಗಟ್ಟಿಗ ಇವನು!' ಎಂದು ಕೂಗಬೇಡಿ. ನನಗೂ ಗಟ್ಟಿ-ಗರಿಗೂ ಅಜ-ಗಜಾಂತರ. ನಾನೂ ಗಟ್ಟಿಗ ನಿಜ. ಆದರೆ ನನ್ನ ರೀತಿ ಬೇರೆ. ವಜ್ರಕಾಯರಾದ ಗಟ್ಟಿಗರು ಒಂದು ಆ ತುದಿ; ನಾನು ಈ ತುದಿ. ಬಿರುಗಾಳಿಗೆ ಮರಗಳು ಮುರಿದುಕೊಂಡು ಬಿದ್ದಿವೆ, ಹುಲ್ಲು ಹಾಗಾಗಿದೆಯೇ? ನಾನು ವೈದ್ಯರ ಪಿಂಡನೆಂದು ಹೆಸರಾಗಿದ್ದೇನೆ. ಹುಟ್ಟಾ ಬೇನೆಕೊಳಕ ನಾನು. ಕತ್ತೆ ಚಿತ್ರಗಾರರ ಪಿಂಡ ಎಂದು ಹೇಳುವದಿಲ್ಲವೇ? ಚಿತ್ರಕನು ಅದರ ರೂಪರೇಷೆಯನ್ನು ನೋಡಿ ಗ್ರಹಿಸುವಷ್ಟು ಹೊತ್ತೂ ಅದು ಸ್ಥಿರವಾಗಿ ನಿಲ್ಲುವದಿಲ್ಲ. ನನ್ನ ದೇಹಪ್ರಕೃತಿ ಅದಕ್ಕೂ ಚಂಚಲ. ವೈದ್ಯರು ನನ್ನ ನಾಡಿ ನೋಡುವದನ್ನಂತೂ ಎಂದೋ ಬಿಟ್ಟಿದ್ದರು. ಎದೆ ಹಾರುವದರ ಮೇಲಿಂದ ಅವರು ನನ್ನ ಆರ್ಯೋಗ್ಯದ ಚಿಕಿತ್ಸೆ ಮಾಡುತ್ತಿದ್ದರು. ದಿನ ಬೆಳಗೂ ಸಾವಿಗೆ ಅಣಿಗೆಸಿ ಬರುತ್ತಿದ್ದ ನನ್ನ ಎದೆಯೂ ಬರಬರುತ್ತ ಹಾರುವದು ಕಡಿಮೆಯಾಯಿತು. ತಾನು ಸತ್ತಿಲ್ಲವೆಂದು ಹೇಳುವ ಮಟ್ಟಿಗೆ ಒಳಗಿಂದೊಳಗೆ ಹಾರುತ್ತಿದ್ದಿತೇನೋ! ಮೊದಲೇ ನನ್ನ ಕೈ ಬಿಟ್ಟ ವೈದ್ಯರು ನನ್ನೆದೆಗೂ ಕೈ ಹಚ್ಚದಾದರು ಪ್ರಾಣದ ಮೂಗನ್ನೆ ಹಿಡಿಯಬೇಕೆಂದೋ ಏನೋ! ನನ್ನ ಶ್ವಾಸೋಚ್ಛ್ವಾಸದಿಂದ

CC-0. Jangamwadi Math Collection. Digitized by eGangotri

ನನ್ನ ಚಿಕಿತ್ಸೆ ನಡಿಸಿದರು. ಬೇನೆಕೊಳಕರಂತೆ ಮುಟ್ಟಿ
ದರೆ ಕೆಟ್ಟೇನೆಂದು ತನ್ನಷ್ಟಕ್ಕೆ ಮೆಲ್ಲಗೆ ಉಳಿದ ಹೊತ್ತಿ
ನಲ್ಲಿ ಸಾಗಿರುತ್ತಿದ್ದ ನನ್ನ ಉಸಿರಾಟವು, ವೈದ್ಯರನ್ನು
ಕಂಡು ದಂಗು ಬಡಿದೋ ಏನೋ! ಹಾಗೆ ನಿಂತಲ್ಲಿ ನಿಂತು
ಬಿಡುತ್ತಿತ್ತು. ವೈದ್ಯರು ನಾನು ರೆಪ್ಪೆ ಬಡಿಯುವದರ
ಮೇಲಿಂದ ನನ್ನ ಜೀವಕಳೆ ಕಂಡುಕೊಂಡು ಹೋಗುತ್ತಿ
ದ್ದರು. ಈ ತಪಸ್ಸನ್ನು ನಾನು ಅನೇಕ ವರ್ಷ ಸಾಗಿಸಿ
ದೆನು. 'ತೋಳ ಬಂತಲೇ ತೋಳ ಬಂತು!' ಎಂದು
ಹೆದರಿಸಿದ ಕುರುಬರ ಹುಡುಗನಂತೆ ನಾನೆಷ್ಟೋ ಸಲ
ಮರಣದ ಹುಸಿಹುಯಿಲೆಬ್ಬಿಸಿದ್ದೆ. ಆದರಿಂದ ಬುದ್ಧಿ
ಕಲಿತ ನನ್ನ ಆಪ್ತರು ನಾನು ಒಂದೆರಡು ಸಲ ತೀರ
ಸತ್ತಂತಾಗಿದ್ದರೂ ಎದೆಗೆಡದೆ ಹಬ್ಬಕ್ಕಾಗಿ ಎಂದು ನನಗೆ
ಹೊಸಬಟ್ಟೆ ಹೊಲಿಸಿದ್ದರು. ಅವರಿಗೆ ಗೊತ್ತು! ನೆಲಕ್ಕೆ
ತಾಕಿದ ಚಂಡು ಮೇಲಕ್ಕೇಳುವದೆಂದು. 'ಹೊಳೆ ದಾಟಿದ
ಮೇಲೆ ಅಂಬಿಗರಬಿಂಡ' ಎಂದುಹೇಳುವರು; ನಾನೆಂದೋ
ಜನ್ಮದ ಹೊಳೆ ದಾಟಿದ್ದೆ. ಆದರೆ ಜನ್ಮದ ಆಚೆ ದಂಡೆ
ಮೇಲಿನವರು ನನ್ನನ್ನು ಅಸ್ಪೃಶ್ಯರಲ್ಲಿ ಎಣಿಸಿರಬೇಕೋ
ಏನೋ! ನನಗೆ ಎಲ್ಲ ರೋಗಗಳ 'ಇಂಜಕ್ಶನ್'' ಆಗಿದ್ದ
ರಿಂದ, ನಾನು ಉಳಿದ ಜನರಂತೆ ಯಾವದಾದರೊಂದು
ರೋಗದಿಂದ ಸತ್ತೇನೆಂಬ ಭಯವು ನನಗಿರಲಿಲ್ಲ. ನಾನು
ಸತ್ತರೆ ಸಾವಿನಿಂದ. ನಾನು ಸತ್ತರೆ ಅದರ ಶ್ರೇಯಸ್ಸೋ
ಅಪಕೀರ್ತಿಯೋ ಪೂರ್ಣವಾಗಿ ಸಾವಿಗೇ. 'ತನಗೇಕೆ
ಆ ಅಪವಾದ'ವೆಂದು ಸಾವು ನನಗೆ ಅಂಜುತ್ತಿರಬೇಕು
ಎಂದು ನನಗೆ ಬರಬರುತ್ತ ಧೈರ್ಯ ಬರತೊಡಗಿತು.
ಸಾವಿನ ಬಗ್ಗೆ ಹೆದರಿಕೆ ಕಡಿಮೆಯಾಗುತ್ತಲಾಗುತ್ತ
ಅದರ ಬಗ್ಗೆ ಒಂದು ಅನಾದರವುಂಟಾಗತೊಡಗಿತು. ನಿಜ
ವಾಗಿ ನೋಡಿದರೆ ಸಾವು ಎಂಥ ಪೂಜ್ಯ, ಅಪೂರ್ವ,
ಪ್ರೇಕ್ಷಣೀಯ ವಸ್ತುವಾಗಬೇಕು. ವರ್ಷಕ್ಕೊಮ್ಮೆ
ಬರುವ ಹಣ್ಣು ಏನು ರುಚಿ, ಹಬ್ಬ ಎಷ್ಟು ಪ್ರಿಯ!
ಎಂದಾದರೂ ಬರುವ ಗ್ರಹಣ ಧೂಮ-ಕೇತುಗಳು ಎಷ್ಟು
ಪ್ರೇಕ್ಷಣೀಯ! ನೂರು ವರ್ಷಕ್ಕೊಮ್ಮೆ ಬಂದೂ ಸಾವು
ಇಷ್ಟು ಅನಾದರಣೀಯವಾಗಬೇಕೆ? ಇದರ ಮೋರೆಯ
ನ್ನೇಕೆ ಜನರು ತಪ್ಪಿಸುವರೋ? ನನ್ನ ರೀತಿಯೇನೋ
ಬೇರೆಯಾಗಿತ್ತೆನ್ನಿ. ನನಗೆ ಸಾವಿನ ಬೆಟ್ಟಿಯೆಂದರೆ ಸರ್ಕಸಿ
ನೊಳಗಿನ ಕುರಿಗೆ ದಿನ ರಾತ್ರಿಯೂ ಆಗುವ ಹುಲಿಯ
ಬೆಟ್ಟಿಯಂತೆ. ಆ ಹುಲಿ ಕುರಿಗಳು ಒಂದೇ ತಳಿಗೆಯಲ್ಲಿ
ಹಾಲು ಕುಡಿಯುವಂತೆ, ನಾನು ಸಾವಿನ ಕೂಡ ಒಂದೇ
ಬಟ್ಟಲಲ್ಲಿ ದಿನಾಲು ಕಷಾಯ ಕುಡಿಯುತ್ತಿದ್ದೆ. ಸಾವಿಗೂ
ಬೆಚ್ಚದ ನಾನು ಒಮ್ಮೊಮ್ಮೆ ಆ ಕಷಾಯದಲ್ಲ ಬಿದ್ದ ನನ್ನ
ಮೋರೆಯ ನೆರಳನ್ನೆ ಕಂಡು ನಾನು ಬೆಚ್ಚಿ ಬೀಳುತ್ತಿದ್ದೆ.
ಆದರೆ ಅದನ್ನೆ ಕಂಡು ನನ್ನ ವೈದ್ಯರಿಗೆ ಸಂತೋಷ.
"ಇಷ್ಟು ಜೀವವಿದೆಯಲ್ಲ ಇವನಲ್ಲಿ" ಎಂದು; ಇದೇನು
ಸರಸವೋ ನಾವು ಬೇರೆ ಕಾಣೆವು ಎಂದು ಜುಗುಪ್ಸೆ
ಪಡಬೇಡಿ. ಇದು ನನ್ನ ಗರಡಿಸಾಧಕ ಮಾತ್ರ. ಚಮ
ತ್ಕಾರವೆಲ್ಲ ಮುಂದಿದೆ. ಹತ್ತು ಜನ ಕಳ್ಳರನ್ನೋಡಿಸಿದ
ಒಬ್ಬ ಕುಳ್ಳನ ಮಾತನ್ನು ಕೇಳಿಲ್ಲವೇ ನೀವು? ಅವನು
ಮುಂದೆ ಓಡುತ್ತಿದ್ದನಂತೆ, ಕಳ್ಳರು ಅವನನ್ನು ಹಿಡಿಯಲು
ಹಿಂದೆ ಓಡುತ್ತಿದ್ದರಂತೆ; ಹಾಗೆ ಇದುವರೆಗಿನ ನನ್ನ ಸರಸ.
ನಾನು ಮುಂದು ಮುಂದೆ ಓಡುತ್ತಿದ್ದೆ. ಸಾವು ನನ್ನ
ಹಿಂದಿನಿಂದ ಓಡುತ್ತಿತ್ತು. ಅಂತೂ ಸಾವನ್ನು ನಾನು
ಓಡಾಡಿಸಿದ್ದೇನೆ. ಆದರೆ ಬೇನೆ ಕೊಳಕನ ಜೀವನವು ಏನು
ಸಹ್ಯ. ರೋಗದಿಂದಾಗಲಿ ಔಷಧದಿಂದಾಗಲಿ ಯಾವ
ಹೆದರಿಕೆಯೂ ನನಗೆ ಇಲ್ಲದಾಗಿತ್ತು. ನನ್ನ ಜೀವನ
ದಿಂದಾಗಲಿ ಮರಣದಿಂದಾಗಲಿ ಯಾವ ಹೆದರಿಕೆಯೂ
ನನ್ನ ಆಪ್ತರಿಗೆ ಇಲ್ಲದಾಗಿತ್ತು. ನನ್ನ ಮರಣದ ಭಯ
ಅವರಿಗಿರಲಿಲ್ಲ. ನನಗೂ ಇರಲಿಲ್ಲ. ನನ್ನ ಜೀವನವನ್ನು
ಅವರು ಲೆಕ್ಕದಲ್ಲಿ ಹಿಡಿದಿರಲಿಲ್ಲ. ನನಗೂ ಅದರ ಲೆಕ್ಕ
ಹತ್ತುತ್ತಿರಲಿಲ್ಲ. ನನಗೆ ಇಂಥ ಜೀವನದ ಬೇಸರ ಬಂದಿತು.
ನಾನು ಹೀಗೇ ಅಮರನಾಗಿಬಿಟ್ಟರೆ ಹೇಗೆ? ಎಂಬ ವಿಚಾರ
ಹೊಳೆದು ಮೈ ನಡುಗಿತು. ಸಾವು ನನ್ನನ್ನು ತೀರಾ
ಮರೆತು ಬಿಟ್ಟಿರಬಹುದೇ! ಎಂದು ಚಿಂತೆಯುಂಟಾಯಿತು.
ವೈದ್ಯರು ನನ್ನ ಕೈ ಬಿಟ್ಟರು, ರೋಗ ಕೈ ಬಿಟ್ಟಿತು,
ಸಾವು ಕೈ ಬಿಟ್ಟಿತು, ಹಾಗಾದರೆ ಈ ಜೀವನ್ಮರಣದೊಳ
ಗಿಂದ ಕೈಗೊಟ್ಟು ನನ್ನನ್ನು ಬಿಡಿಸುವವರಾರು? ಬಹಳ
ಚಿಂತೆಗಿಟ್ಟಿತು, ತಲೆ ತುರಿಸಿದೆ, ಕೈಮೈ ತುರಿಸಿಕೊಂಡೆ,
ಎಲ್ಲಿಯೂ ವಿಚಾರವು ತಲೆದೋರಲೊಲ್ಲದು. ಬೇಸತ್ತು
ಹಾಗೆ ಗಾದೆಯ ಮೇಲೆ ಬಿದ್ದುಕೊಂಡೆ. 'ಅಯ್ಯೋ
ಬೇಸತ್ತೆ........' ಎಂದೆ. ಸರಿ ಒಂದು ವಿಚಾರ ಹೊಳೆ
ಯಿತು. ಸತ್ತ ಹೊರತು ಸಾಯಲು ಬೇರೆ ಉಪಾಯ
ವಿಲ್ಲ ಎಂದು! ಎಂಥ ಬಂಗಾರದಂಥ ಮಾತು, ಎಷ್ಟು
ಉಜ್ವಲವಾದ ವಿಚಾರ! ತಾನು ಸಾಯದೆ ಸ್ವರ್ಗವಿಲ್ಲ.
ಸಾವು ನಮ್ಮನ್ನು ಕೊಂದರೆ ಎಲ್ಲಿಯ ಸ್ವರ್ಗ? ಸಾವಿನ



CC-0. Jangamwadi Math Collection. Digitized by eGangotri

ಮೈಮೇಲೆ ನಾವು ಏರೇರಿ ಹೋಗಬೇಕು, ಅಪರ-ನಮ್ಮ ಮಲ್ಲಯುದ್ಧವಾಗಬೇಕು. ಪಟ್ಟಿಗೆ ಪಟ್ಟು, ಹಿಡಿತಕ್ಕೆ ಹಿಡಿತ ಆಗಿ ನಾವೂ ಸಾಯಬೇಕು. ಸತ್ತು ಅಮರ ರಾಗಬೇಕು, ಮತ್ತೆ ಸಾಯದವರಾಗಬೇಕು. ಅದೇ ವೀರ ಮರಣ! ಆದರೆ ರೂಢಿಯ ವೀರ ಮರಣದ ಕಲ್ಪನೆ ನನಗೆ ಸರಿ ಬರುವದಿಲ್ಲ. ಮೊದಲನೆಯ ಮಾತೆಂದರೆ, ಮೊದಲಿನಿಂದ ಕೊನೆಯವರೆಗೂ ಅದೆಲ್ಲ ಹಿಂಸಾ ಮಾರ್ಗ. ಎರಡನೆಯ ಮಾತೆಂದರೆ, ಎರಡನೆಯವರ ಕೈಯ್ಯಿಂದ ನಾವು ರಣದಲ್ಲಿ ಸಾಯುವೆವು. ಗುದ್ದಿದರೆ ಸಾಯುವ ನಾನು ಹಿಂಸಾಮಾರ್ಗದ ಜಾತಿವೈರಿಯಾಗಿದ್ದೆ ಎನ್ನಿ. ಮತ್ತು ಕೈಯಲ್ಲಿರುವ ಮರಣವನ್ನು ಎರಡನೆಯವ ರಿಂದ ಸ್ವೀಕರಿಸುವದು ನನಗೆ ಸಮ್ಮತವಿರಲಿಲ್ಲ. ಸಾಯು ವಂಥ ಕೆಲಸದಲ್ಲಿಯೂ ಪರರನ್ನವಲಂಬಿಸುವದೇಕೆ? ನಮ್ಮ ಪರಾವಲಂಬಿತ್ವಕ್ಕೆ ಇದಕ್ಕೂ ಹೀನ ಉದಾ ಹರಣೆ ಇದೆಯೇ? ಅಷ್ಟರಲ್ಲಿಯೇ "ಪೌರುಷಪ್ರಯತ್ನಕ್ಕೆ ದೈವವು ಕೈಗೊಡುವದು" ಎಂಬ ಗಾದೆಯ ಮಾತೂ ನೆನ ಪಿಗೆ ಬಂತು. ನಾನು ಸ್ವತಂತ್ರ ಪ್ರಯತ್ನದಿಂದ ಸಾಯುವ ಮಾರ್ಗ ಹಿಡಿದೆ. ಆ ಪ್ರಯೋಗಗಳ ಇತ್ಯರ್ಥವನ್ನು ಇಲ್ಲಿ ಕೊಟ್ಟಿದ್ದೇನೆ:—

ಸಾಯಬೇಕು ಎಂದು ಪ್ರಯತ್ನ ಮಾಡುವವರೆಗೂ ಸಾವು ತಮ್ಮ ಇಚ್ಛೆಯದಲ್ಲ ಎಂಬ ಮಾತು ಅಷ್ಟು ನಿಚ್ಚಳವಾಗಿ ಕಾಣುವದಿಲ್ಲ. ಸುಲಭವಾಗಿ ಎಂದು ಬಿಡುತ್ತೇವೆ-ನನಗೆ ಜನ್ಮ ಬೇಡಾದರೆ ಸತ್ತುಬಿಡುತ್ತೇನೆ. ಅನ್ನುವದು ಎಷ್ಟು ಸಲಭ. ಮರಣವು ಇಷ್ಟು ಸುಲಭ ವಿದ್ದರೆ ಬಡಬಗ್ಗರು ಕೊಳೆಯುತ್ತಿರಲಿಲ್ಲ. ಮತ್ತು ಇಚ್ಛಾ ಮರಣವೆಂಬುದು ಒಂದು ದೊಡ್ಡ ಸಿದ್ಧಿಯೆಂದೂ ಎನಿಸಿ ಕೊಳ್ಳುತ್ತಿರಲಿಲ್ಲ. ಬೇನೆಕೊಳಕತನವು "ಸಾವಿನ ಬಾಯಲ್ಲಿ ಸಿಕ್ಕ ತುತ್ತಲ್ಲ ಜೀವವು" ಎಂದು ಕಲಿಸಿದರೆ, "ಸಾವೂ ಜೀವದ ಬಾಯಿಗೆ ಸಿಕ್ಕ ತುತ್ತಲ್ಲ" ಎಂಬು ದನ್ನು ನನ್ನ ಆತ್ಮಹತ್ಯೆಯ ಪ್ರಯೋಗಗಳು ಕಲಿಸಿದುವು.

ನನ್ನ ಜೀವನದಲ್ಲಿ ಮುಂಚೆ ಎಂದೂ ತೋರದ ಗಾಂಭೀರ್ಯವು ನನ್ನಲ್ಲಿ ತಲೆದೋರಿತು. ನಾನು ವಿಚಾರ ಮಾಡತೊಡಗಿದೆ. ಸುಲಭವಾಗಿ ಸಾಯುವದು ಹೇಗೆ? ಎಂದು. ಉಸಿರೇ ಪ್ರಾಣ; ಈ ಉಸಿರಾಟವನ್ನೆ ನಿಲ್ಲಿಸಿದರೆ ಜೀವದ ಜಿಗಿದಾಟವೆ ನಿಲ್ಲುವದು. ನನ್ನ ಕಾರ್ಯ ಪ್ರವೃತ್ತಿಯೆಲ್ಲ ಕುದುರಿ ಬಂದಂತೆ-ನನಗೆ ವಿಚಾರ ಹೊಳೆ ಯುವದೊಂದೆ ತಡ, ನಾನು ಪ್ರಯೋಗವನ್ನೆ ಪ್ರಾರಂಭಿ ಸಿದೆ. ಇಲ್ಲಿ ಒಂದೆರಡು ಮಾತುಗಳನ್ನು ಹೇಳುವದು ಅತ್ಯಗತ್ಯ. ಒಂದು, ಈ ನನ್ನ ಆತ್ಮ ಹತ್ಯೆಯ ಉದ್ದೇಶ ವನ್ನು ನಾನು ಯಾರಿಗೂ ತಿಳಿಸಿರಲಿಲ್ಲ. ಇಷ್ಟೇ ಅಲ್ಲ, ಅದು ತಿಳಿಯಬಾರದೆಂದೆ ನಾನು ನನ್ನ ಊಟ-ಉಡಿಗೆ-ನಿದ್ರೆ ಮೊದಲಾದುವುಗಳನ್ನು ಹೆಚ್ಚು ನಿಯಮಿತವಾಗಿ ಮಾಡ ತೊಡಗಿದೆ. ಎರಡನೆಯ ಮಾತು, ನನಗೆ ಬಂಭವಿರಲಿಲ್ಲ, ತೋರಿಕೆಗಾಗಿ ಏನು ಮಾಡುವುದಕ್ಕೂ ಹೇಸಿಗೆ ನನಗೆ. ಮೂರನೆಯ ಮಾತು, ಸ್ವಯಂ ಮರಣ ಪ್ರಯೋಗಗಳು ನನ್ನ ಆತ್ಮ ಸಂತೋಷದಿಂದಲೂ "ಅಕ್ಕಲಹುಷಾರಿ"ಯಿಂ ದಲೂ ಸಾಗಿದ್ದುವು. ಈ ಮಾತುಗಳನ್ನು ನೆನೆಪಿಟ್ಟರೆ ನನ್ನ ಮುಂದಿನ ಮಾತುಗಳ ಸಂಶಯ ಯಾರಿಗೂ ಬರಲಿಕ್ಕಿಲ್ಲ.

ಹೇಳಿದ್ದೇನಷ್ಟೆ ಉಸಿರು ನಿಲ್ಲಿಸಿ ಪ್ರಾಣತ್ಯಾಗ ಮಾಡ ಬೇಕೆಂದು ನಾನು ಮಾಡಿದ ನಿರ್ಧಾರವನ್ನು? ನಾನು ಪ್ರಾರಂಭ ಮಾಡಿದ್ದು ಹೀಗೆ. ಮೊದಲು ಒಳಗೆ ಬಂದ ಉಸಿರನ್ನು ಒಳಗೇ ಎಳೆದಿಡಲು ಹವಣಿಸಿದೆ. ಅಶಕ್ತತೆಯ ಮೂಲಕ ಅದು ಸಾಧ್ಯವಾಗಲೊಲ್ಲದು. ಉಸಿರುಬಿಟ್ಟೆ, ಹಾಗೆಯೇ ಪಟ್ಟಿ ಪಟ್ಟಿ, ದೇಹದ ತಟ್ಟೆಯ ಮನೆಯು ಹಾಳಾಗುವ ವರೆಗೆ ಹಾಗೆಯೆ ಬಿಡಬೇಕೆಂದೆ. ಉಸಿರು ಬಿಡುವದಾದರೂ ಎಷ್ಟು ದೂರ? ಮತ್ತೆ ಹಾಗೆಯೆ ಎಳೆದು ಒಳಗೆ ಹೊಕ್ಕಳಕ್ಕೆ ಮುಟ್ಟಿಸಿದೆ. 'ಗುಬ್ಬೀ ಗುಬ್ಬೀ ಸತ್ತೆಯಾ?' ಎಂದರೆ 'ನಾನೇಕೆ ಸಾಯಲಿ ಹುಚ್ಚು ಹಾರುವಾ! ಜೋಕಾಲೀ ಆಡುತ್ತಿದ್ದೇನೆ' ಎಂದು ಹೇಳಿದಂತೆ ನನ್ನ ಜೀವವೂ ಹೇಳ ತೊಡಗಿತು. ನಾನೂ ಎದೆಗುಂದಲಿಲ್ಲ. ಈ ಉಸಿರಾಟದಿಂದ ಪ್ರಾಣವನ್ನು ಎಳೆ ದಾಡಿ-ಎಳೆದಾಡಿ, ಹಾಗೆಯೆ ಮಿಸುಕಾಡದಂತೆ ಇಂದಿಲ್ಲ ನಾಳೆ ಮಾಡಬಹುದೆಂಬ ಭರವಸೆಯಿಂದ ನಾನೆಷ್ಟೋ ದಿವಸ ಈ ಪ್ರಯತ್ನ ಸಾಗಿಸಿದೆ. ರೀತಿಯಲ್ಲಿ ಏನಾ ದರೂ ತಪ್ಪಿರಬಹುದೇನೋ, ಎಂದು ಉಸಿರಾಟದ ರೀತಿ ಯನ್ನು ತಿರುವು ಮುರುವು ಮಾಡಿದೆ. ಒಳಗಿದ್ದ ಉಸಿ ರನ್ನು ಹೊರಗೆ ದೂಡಿ ದೂಡಿ, ಕೊನೆಗೆ ಹೊರಗಿನದನ್ನು ಒಳಗೆ ನೂಕಿ ನೂಕಿ, ಆ ಮೇಲೆ ಕೆಲವು ಹೊತ್ತು ಆ ಉಸಿರ ಕಟ್ಟಿ ಹಾಕಿ ನೋಡಿದೆ. ಈ ಜಗ್ಗಾಟಕ್ಕೆ ಬೇಸತ್ತು ಪ್ರಾಣವು ದೇಹವನ್ನು ಬಿಡಬಹುದೆಂಬ ಭರವಸೆ ನನ ಗಿತ್ತು. ಮೊದಲೇ ನನಗೆ ಸಾವಿನ ಭಯವಿರಲಿಲ್ಲ. ಆದ

CC-0. Jangamwadi Math Collection. Digitized by eGangotri

ರಲ್ಲಿ ಬೇರೆ ಈಗ ಅದರ ಮೈಮೇಲೆ ಸಾಗಿಹೋಗುತ್ತಿದ್ದೆ. ಈ ನಿರ್ಣಯದಿಂದಲೋ ಏನೋ! ನನ್ನ ದೇಹಪ್ರಕೃತಿಯು ಸುಧಾರಿಸತೊಡಗಿತು. ನನ್ನ ರೋಗದ ಕಳೆ ಕಡಿಮೆ ಯಾಯಿತು. ಒಮ್ಮೆ ನಾನು ಸಹಜವಾಗಿ ಕೆಲವು ಪುಸ್ತಕಗಳನ್ನು ನೋಡುತ್ತಿರುವಾಗ 'ಪ್ರಾಣಾಯಾಮ'ದ ವಿಷಯ ಬಂದಿತು. ನನಗೆ ಆಶ್ಚರ್ಯವಾಯಿತು. ಭಯವಾಯಿತು. ಆಗ ನನ್ನ ತಪ್ಪು ನನಗೆ ತಿಳಿಯಿತು. ನಾನು ದಿನಾಲು ಮಾಡುತ್ತಿದ್ದುದು ಆತ್ಮಹತ್ಯೆಯ ಪ್ರಯತ್ನವಲ್ಲ, ಆಯುರ್ವೃದ್ಧಿಯ ಪ್ರಯತ್ನ ಎಂದು. ನನ್ನ ತಪ್ಪಾದ ಉಪಾಯಯೋಜನೆಗಾಗಿ ಪಶ್ಚಾತ್ತಾಪ ಪಟ್ಟೆ. ಆದರೆ ನಿಶ್ಚಯವನ್ನು ಬಿಡಲಿಲ್ಲ.

ಸಾಯುವ ಕೆಲಸದಲ್ಲಿ ಈ ಪೊಯ್ದಾಡುವ ಗಾಳಿಯನ್ನು ನಂಬದೆ, ಹೆಚ್ಚು ಮನಗಂಡ–ಗಟ್ಟಿ ಉಪಾಯವನ್ನು ಯೋಚಿಸಿದೆ. ಉರುಲು ಹಾಕಿಕೊಳ್ಳುವದಕ್ಕಿಂತ ಹೆಚ್ಚು ಸುಲಭವಾದ ತೀರ ಕೈಯೊಳಗಿನ ಉಪಾಯವು ಬೇರೆ ಯಾವುದು? ಸರಿ! ಅಂದೆ ರಾತ್ರಿ ಉರುಲು ಹಾಕಿಕೊಳ್ಳುವ ನಿಶ್ಚಯ ಮಾಡಿದೆ. ಬೆಳಗು ಮುಂಜಾವು ಮೂರು ನಾಲ್ಕು ಗಂಟೆಯ ಸಮಯಕ್ಕೆ, ಎಂದು ಗೊತ್ತು ಮಾಡಿಕೊಂಡು ಮಲಗಿದೆ. ಅಂದು ಮಲಗುವಾಗ ನಿರ್ವಿಚಾರವಾಗಿರುವ ನನ್ನ ಮನಸ್ಸು ಮತ್ತೆಂದೂ ಹಾಗಿರಲಿಲ್ಲ. ಅಂದು ಹತ್ತಿದ ನಿದ್ರೆ ಎಂಥ ನಿದ್ರೆಯದು! ಅದು ಹಾಗೆ ಮುಗಿಯದೆ ಸಾಗಿದ್ದರೆ ನನ್ನ ಕೆಲಸ ಮುಗಿದೇ ಬಿಡುತ್ತಿತ್ತು. ಆದರೇನು? ಬೆಳಗು ಮುಂಜಾವು ನನಗೆ ಆರು ಗಂಟೆಗೆ ಎಚ್ಚರಾಯಿತು. ಎಚ್ಚರಾದ ಮೇಲೆ ಕೆಲಹೊತ್ತಿನ ವರೆಗೆ ನನಗೆ ಮರಣದ ವಿಚಾರವೇ ಹೊಳೆಯಲಿಲ್ಲ. ಉದಯರಾಗಗಳನ್ನು ಹೇಳತೊಡಗಿದೆ. ಮನಸು ಅಷ್ಟು 'ಝೋಕಾ'ಗಿತ್ತು. ಹೇಳುತ್ತಾ ಹೇಳುತ್ತಾ 'ಕರುಣಿಸೋ ಕೃಷ್ಣಾ ಕರುಣಿಸೋ' ಬಂತು. ಬಂತು ಮರಣದ ನೆನಪು. ಎಷ್ಟು ಮರಗೂಳಿ ನಾನು! ಎಂದುಕೊಂಡೆ. ಮಾರನೆಯ ದಿನ ಗಲ್ಲಿಗೆ ಹಾಕುವ ಮನುಷ್ಯನ ಇಚ್ಛಾಪೂರ್ತಿಯನ್ನು ಮಾಡುವಂತೆ, ನಾನು ಅಂದು ಸ್ವೇಚ್ಛೆಯಾಗಿ ಆನಂದವಾಗಿ ಕಾಲ ಕಳೆದೆ. ಮೂರು ಗಂಟೆಗೆ ಎಚ್ಚರಾಗುವಂತೆ 'ಅಲಾರ್ಮ್' ಇಟ್ಟೆ. ನಿಶ್ಚಿಂತನ ನಿದ್ರೆಯ ಮುಂದೆ ಬೆದರು ಗಂಟೆಯೇ? ನನಗೆ 'ಅಲಾರ್ಮ'ನಿಂದ ಚಿಕ್ಕಾಡು ಕಡಿದಷ್ಟೂ ತೊಂದರೆಯಾಗಲಿಲ್ಲ.

ಇನ್ನೊಂದು ವಿಚಾರ ಹೊಳೆಯಿತು. ಮಲಗುವ ಪೂರ್ವದಲ್ಲಿ ಭೇದಿಗೆ ತಕ್ಕೊಳ್ಳಬೇಕು; ಅಂದರೆ ಎಚ್ಚರಾದೀತು ಎಂದು. ಭೇದಿಗೆ ತಗೊಳ್ಳುವದರಿಂದ ಇಚ್ಛೆಯಂತೆ ನಾಲ್ಕು ಗಂಟೆಗೆ ಎಚ್ಚರವೇನೋ ಆಯಿತು. ಆದರೆ ಆ ಭೇದಿಯ ಬಾಧೆಯನ್ನು ತೀರಿಸುವದರಲ್ಲಿ ಬೆಳಗಾಯಿತು. ಕೊನೆಗೆ ಈ ಹೊರಗಿನ ಉಪಾಯಗಳ ಬಗ್ಗೆ ವಿಶ್ವಾಸವು ಹಾರಿ, ನಾಲ್ಕಕ್ಕೆ ಏಳತಕ್ಕದ್ದು: ಎಂದು ಮನಸ್ಸಿನಲ್ಲಿ ಸಂಕಲ್ಪಮಾಡಿದೆ. ಸಂಕಲ್ಪಬಲದ ಮುಂದೆ ಬೇರೆ ಬಲವೇ? ಸಂಕಲ್ಪಕ್ಕೆ ಸರಿಯಾಗಿ ನಾನು ನಾಲ್ಕು ಗಂಟೆಗೆ ತಟ್ಟನೆ ಎದ್ದೆ. ಮಾಡಿದೆ, ಉರುಲು ಹಾಕಿಕೊಳ್ಳುವದರ ಸಿದ್ಧತೆ! ಸಿದ್ಧತೆ ಏನು? ಕೊರಲು ಉರುಲು ಸಾಯುವವರು ಈ ಮೂರು ಇದ್ದರೆ ತೀರಿತು. ಆ ಮೂರೂ ಇದ್ದುವು. ಸಾಯುವ ಮುಂಚೆ ದೇವರ ಪ್ರಾರ್ಥನೆ ಮಾಡಬೇಕೆಂಬ ಸುವಿಚಾರ ಬಂದಿತು. ಪ್ರಾರ್ಥನೆಗೆ ಕುಳಿತೆ. ಕಣ್ಣುಮುಚ್ಚಿ ಧ್ಯಾನಕ್ಕೆ ಪ್ರಾರಂಭವಾಯ್ತು. ಪ್ರಾರಂಭ ಪ್ರಾರಂಭದಲ್ಲಿ ಪ್ರಾರ್ಥನೆಯಧ್ಯಾನವಿತ್ತು. ಆದರೆ ಮುಂದೆ ಸೊಂಪಾದ ಬೆಳಗುಜಾವದ ಸಕ್ಕರೆಜೊಂಪು. ಯಥಾಪ್ರಕಾರ ಮುಂಜಾನೆ ಎಚ್ಚರ. ಹೀಗೆ ಕೆಲವು ದಿವಸ ನಡೆದ ಮೇಲೆ ನಾನು ದೇವರ ಪ್ರಾರ್ಥನೆಯನ್ನು ಮಾಡಬಾರದೆಂದು ಗೊತ್ತು ಮಾಡಿದೆ. ಯಾಕೆಂದರೆ, ಪ್ರಾರ್ಥನೆ ಮಾಡಲು ಹೋಗಿ ನಿದ್ದೆ ಹತ್ತಿಬಿಡುತ್ತಿತ್ತು. ಇದೂ ಅಲ್ಲದೆ ಸರ್ವಾಂತರ್ಯಾಮಿಯಾದ ಅವನಿಗೆ ಗೊತ್ತಿಲ್ಲದ್ದೇನು? ನಾನು ಅಂದು ನಾಲ್ಕು ಗಂಟೆಗೆ ಎಚ್ಚರಾದ ಕೂಡಲೆ, ಹಾಸಿಗೆಯನ್ನು ಸುತ್ತಿಟ್ಟೆ. ಶಾಸ್ತ್ರಕ್ಕಾಗಿ ದೇವರ ಪ್ರಾರ್ಥನೆಯನ್ನು ಒಂದು ನಿಮಿಷದಲ್ಲಿ ತೀರಿಸಿದೆ. ಮೈಮೇಲಿನ ಬಟ್ಟೆಗಳನ್ನೆಲ್ಲ ಸುತ್ತಿ ಒಂದು ಹಗ್ಗದಿಂದ ಕಟ್ಟಿ ಗೂಟಕ್ಕೆ ತೂಗ ಹಾಕಿದೆ. ಸಾಯುವ ಹೊತ್ತಿನಲ್ಲಿ ಮೈಮೇಲೆ ಬಟ್ಟೆ ಬರೆಗಳೇಕೆ? ಎಂದು ಒಂದು ಹಳೆಯ ಕೌಪೀನವನ್ನು ಹಾಕಿಕೊಂಡೆ. ಎಲ್ಲ ಸಿದ್ಧತೆಯಾಯಿತು. ಆದರೇನು? ಎಲ್ಲಿ ನೋಡಿದರೂ ಉರಲಿನ ಹಗ್ಗವೇ ದೊರೆಯಲೊಲ್ಲದು. ಹೊರಗೆ ಹೋಗಿ ತರಬೇಕೆಂದರೆ ದಿಗಂಬರ ವೇಷ! ಕೌಪೀನದಿಂದ ಉರುಲು ಹಾಕಿಕೊಳ್ಳಲೇ ಎನಿಸಿತು. ಆದರೆ ಆ ಕೊಳಕು ಅರಿವೆಯಲ್ಲಿ ನನ್ನ ಪುಷ್ಟವಾದ ಕೊರಳಿಗೆ ಉರುಲು ಹಾಕುವ ಗಟ್ಟಿತನವಿರಲಿಲ್ಲ. ಆ ಹಗ್ಗವನ್ನು ಹುಡುಕಿಯೇ ಹುಡುಕಿದೆ. ಬೆಳಗಾಗುವ ಸಮಯಕ್ಕೆ ಕಂಡು ಬಂತು, ಆ ಹಗ್ಗದಿಂದಲೇ

CC-0. Jangamwadi Math Collection. Digitized by eGangotri

ನನ್ನ ಬಟ್ಟೆಬರೆಗಳನ್ನು ಕಟ್ಟಿಟ್ಟಿದ್ದೆ. ಉರುಲು ಹಾಕಿಕೊಂಡು ಸಾಯುವವದು ನನ್ನ ಹಣೆಯಲ್ಲಿಲ್ಲ ಎಂದು ತೋಚಿದ್ದರಿಂದ ನಾನು ಆ ಹಾದೀ ಬಿಟ್ಟು ಬಿಟ್ಟೆ.

ಗುಂಡು ಹಾಕಿಕೊಳ್ಳುವ ವಿಚಾರ ಬಂತು. ಒಬ್ಬ ಗೆಳೆಯನ ಕಡೆಗೆ ದಿನಾಲು ಹೋಗಿ, ಗುರಿ ಹೊಡಿಯುವದನ್ನು ಕಲಿತೆ. ಆದರೆ ಅದರ ಉಪಯೋಗವನ್ನು ಸ್ವಂತ ಮಾಡಿಕೊಳ್ಳಬೇಕು; ಎಂದು ಮನಸಿನಲ್ಲಿ ಬಂದಾಗ ಜೀವ ಚರೆದುಕೊಂಡಿತು. ಸಾಯಲು ಒಪ್ಪಿದ ಜೀವವನ್ನು ಕಾಡು ಮೃಗದ ಬೇಟೆಯಾಡುವಂತೆ ಬೇಟೆಯಾಡುವದು ತರವಲ್ಲವೆಂದು ನನ್ನ ಸಾತ್ವಿಕ ಜೀವಕ್ಕೆನಿಸಿದ್ದರೆ ಸೋಜಿಗವೇನು? ಸರಿ! ಗುಂಡಿನ ಗುರಿ ತಪ್ಪಿತು. ವಿಷಕ್ಕೆ ಕೈ ಹಾಕದೆ ಬೇರೆ ಗತಿಯೇನು ಇನ್ನು? ವಜ್ರವನ್ನು ಅರೆದು ಕುಡಿಯಲಾ? ಛೀ! ಬಡ ಜೀವವನ್ನು ಕೊಲ್ಲಲು ಇಷ್ಟು ಬೆಲೆಯುಳ್ಳ ಉಪಾಯವೇಕೆ? ಅಫು ನುಂಗಲಾ? ಸಾಯುವ ಪೂರ್ವದಲ್ಲಿ ಅಮಲೇರಿ ಎಚ್ಚರ ತಪ್ಪಿ ಸಾಯುವದು ನನಗೆ ಸರಿದೋರಲಿಲ್ಲ. ಕಣ್ತೆರೆದು ನಾನು ಎಚ್ಚರದಿಂದ ಸಾಯಬೇಕು, ಎಂದು ನನ್ನ ಸಂಕಲ್ಪ. ಸೋಮಲ ಗಿಮಲ? ಬರಬರುತ್ತ ನನಗೆ ವಿಷಪ್ರಯೋಗವು ಸರಿಯಲ್ಲ ಎಂದು ತೋರಿತು. ಇತ್ತೀಚೆ ನಾನು ಚೆನ್ನಾಗಿ ಆರೋಗ್ಯವಂತನಾಗಿದ್ದೆ. ಇಂಥ ಆರೋಗ್ಯವಂತನು ಒಮ್ಮೆಲೆ ಸತ್ತರೆ ವಿಷಪ್ರಯೋಗವಾಗಿರಬೇಕೆಂದು ತಾನೇ ಅನುಮಾನ ಕಟ್ಟುವರು ಜನರು? ಮುಂದಿನ ಅನುಮಾನವೆಂದರೆ ಬೇರೆಯವರು ವಿಷ ಹಾಕಿರಬೇಕೆಂಬುದು. ಇದೇ ನನಗೆ ಬೇಡವಾದದ್ದು. ನನ್ನ ಸಾವಿನಿಂದ ಯಾರೂ ತೊಂದರೆಗೀಡಾಗಬಾರದೆಂದು ನನ್ನ ಆಶೆ. ಈ ಆಶೆಗೂ ಆ ವಿಷಕ್ಕೂ ಮೇಳ ಹೇಗೆ ಜೀಳಬೇಕು? ಸರಿ; ವಿಷದ ಕೈ ಬಿಟ್ಟೆ. ಇನ್ನು ಕೆರೆ ಬಾವಿಯ ಪಾಲಾಗುವದೆ ನನಗೆ ಉಪಾಯ. ಕೆರೆಯ ವಿಚಾರವನ್ನು ಮೊದಲೆ ಹೊಡೆದು ಹಾಕಿದೆ. ಜನಕ್ಕೂ ದನಕ್ಕೂ ಉಪಯೋಗವಾಗುವ ನೀರು ಕೆಡಿಸುವದು ಉಚಿತವಾಗಿ ತೋರಲಿಲ್ಲ. ಇನ್ನು ಭಾವಿಗಳು.

ಸೀ ನೀರಿನ ಭಾವಿಗಳಲ್ಲಿಯಂತೂ ನಾನು ಹಾರಿಕೊಳ್ಳಲಾರೆ. ಯಾವ ನೀರು ಕುಡಿದು ನಾನು ಬದುಕಿದೆನೋ ಅದರಲ್ಲಿಯೇ ನನ್ನ ಪ್ರಾಣ ಹೋಯಿತೆಂಬ ಅಪಕೀರ್ತಿ ಅದಕ್ಕೇಕೆ? ನಾನು ಕುದುರೆಸವಾರಿ ಮಾಡಿ ಊರ ಸುತ್ತಮುತ್ತಲಿನ ಎಲ್ಲ ಭಾವಿಗಳ ನಿರೀಕ್ಷಣೆ ಮಾಡಿದೆ. ಯಾಕೆಂದರೆ, ಸವುಳುನೀರಿನ ಭಾವಿಗಳಾದರೇನು! ಊರೊಳಗಿನವೆಲ್ಲ ಬಡಬಗ್ಗರಿಗೆ ಉಪಯೋಗ. ಅಂತೆಯೆ ನಾನು ಹೊರಗಿನ ಭಾವಿಗಳನ್ನು ಹಣಿಕಿ ಹಾಕಿದ್ದು. ಕೆಲವುಗಳಲ್ಲಿ ನೀರೇ ಇರಲಿಲ್ಲ. ಅವು ನನ್ನ ಕೆಲಸಕ್ಕೆ ಬಾರದುವುಗಳು. ನೀರಿದ್ದವುಗಳೋ ಬಳಕೆಯಿಲ್ಲದ್ದರಿಂದ ನಾರುತ್ತಿದ್ದುವು. ಅಂಥವನ್ನು ಹಾರಿ ನೀರು ಕುಡಿಯಲಾರದೆ- ಮುಳುಗಲಾರದೆ- ತೊಳಲಾಡುವದು ಏಕೆ? ನನಗೆ ಬೇರೆ ಈಸಲು ಬರುತ್ತಿತ್ತು. ಆ ಭಾವಿಗಳೂ ನನಗೆ ಸರಿಬೀಳಲಿಲ್ಲ. ಆಯಿತು ನಾನು ಕೈ ಊರಿದೆ.

ಹೀಗೆಯೆ ಕೆಲವು ದಿವಸ ನಡೆದಾಗ ನನಗೆ ಒಂದು ವಿಚಾರ ಬಂತು. ನಾನು ಇಷ್ಟು ಆರೋಗ್ಯವಂತನಾಗಿರುವಾಗ ಸಾಯುವವದೇಕೆ ಎಂದು. ಬೇನೆಯ ಜೀವಕ್ಕೆ ಬೇಸತ್ತು ಆಡಿದ ಮಾತನ್ನು ಆರೋಗ್ಯವಂತನಾದ ಮೇಲೂ ಹಾಗೆಯೆ ನಡೆಯಿಸಬೇಕೇ! ಎಂದು. ವೈದ್ಯರಿಂದ ಸಾಯದ, ರೋಗದಿಂದ ಸಾಯದ, ಔಷಧಗಳಿಂದ ಸಾಯದ ಸ್ವಪ್ರಯತ್ನಗಳಿಂದಲೂ ಸಾಯದ ಈ ಜೀವದಿಂದ ಯಾವುದಾದರೂ ಮಹತ್ತ್ವದ ಕಾರ್ಯವಾಗುವದಿದೆಯೋ ಯಾರು ಬಲ್ಲರು! ಈಗ ನನ್ನ ಜೀವನದಲ್ಲಿ ಯಾವುದೂ ಅತಿಯಿಲ್ಲ; ಎಲ್ಲವೂ ಮಿತಿ. ಆಹಾರ, ವಿಹಾರ, ವಿಚಾರ, ಆಚಾರ, ಎಲ್ಲವೂ ಸುಸೂತ್ರ. ಸಾವು ನನ್ನ ಚೇಷ್ಟೆಯಾಡಿತು ಕೆಲವು ದಿವಸ. ಈಗ ನಾವಿಬ್ಬರೂ ಗೆಳೆಯರು. ಒಬ್ಬರ ದ್ವೇಷ ಒಬ್ಬರಿಗಿಲ್ಲ. ಕೆಲವರ ಸರಸ ವಿರಸವಾಗುವದು. ನನ್ನ ಸರಸ ಸರಸತರವಾಯಿತು. ಮೃತ್ಯುವಿನಿಂದ ಅಮೃತತ್ವದ ಹಾದಿಯನ್ನು ಹುಡುಕುವದು ಎನ್ನುವರು. ಅದು ಇದೇ ಇರಬಹುದೇ? ಹಾಗಾದರೆ ಇದೇ ಸರಸ, ಇದಕ್ಕೂ ಬೇರೆ ಸರಸವಾವುದು?

CC-0. Jangamwadi Math Collection. Digitized by eGangotri

# ಚಿತ್ರಗಳಲ್ಲಿ ಕೊಡಗು

ಸವಿದು ಮೆದ್ದರೊ ಯಾರು ಪೂರ್ವದಿ ಹುಲಿಯು ಹಾಲಿನ ಮೇವನು?
ಕವಣೆ ತಿರಿಕಲ್ಲಾಟ ಹಗ್ಗಕೆ ಸೆಳೆದರೋ ಹೆಬ್ಬಾವನು?
ಸವರಿದಾನೆಯು ಸೊಂಡಿಲಿನ ರಣಕೊಂಬನಾರ್ ಭೋರ್ಗರೆದರೋ?
ಸವೆದು ಸವೆಯುದ ಸಾಹಸತ್ವದ ಕ್ಷಾತ್ರಬೇಟೆಯು ಮೆರೆದರೋ?

ಅವರು ಸೋಲ್ ಸಾವರಿಯರು !
ಅವರೆ ಕಡುಗಲಿ ಗರಿಯರು !
ಅವರೆ ಕೊಡಗಿನ ಹಿರಿಯರು !

—ಕವಿಶಿಷ್ಯ



ಕೊಡಗಿನ ಕೊನೆಯ ಅರಸನಾದ ವೀರರಾಜೇಂದ್ರನೂ
ಅವನ ಮಗಳಾದ ಗೌರಮ್ಮನೂ
(ಲಂಡನ್ನಿನೊಳಗೆ ೧೮೫೨ರಲ್ಲಿ ತೆಗೆದ ಭಾವಚಿತ್ರ)



ಕೊಡಗಿನ ಪೂರ್ವಜ
(ಹುಲಿಯು ಬೇಟೆಯಾಡುವವನೇ ಹೊಂದಿರಬಲ್ಲ
'ಗಲ್ಲಮೀಸೆ'ಯನ್ನುಳ್ಳವನು)

CC-0. Jangamwadi Math Collection. Digitized by eGangotri

# ಪ್ರಾಚೀನ ಹಿಂದುಸ್ಥಾನದ ಅರಸು

ಲೇಖಕರು:— ಶ್ರೀ. ಮಹಾಬಲ ಶಂಕರ ಹೆಗಡೆ, ಎಮ್. ಎ. ಎಲ್.ಎಲ್. ಬಿ., ಹೊನ್ನಾವರ

ಪ್ರಾಚೀನ ಹಿಂದುಸ್ತಾನದಲ್ಲಿ ರಾಜನೀತಿಶಾಸ್ತ್ರವು ಅತ್ಯಂತ ಪ್ರಗತಿಯನ್ನು ಹೊಂದಿತ್ತು. ಪಾಶ್ಚಾತ್ಯ ರಾಷ್ಟ್ರಗಳು ಅಂಧಕಾರದಲ್ಲಿ ಮುಳುಗಿದ್ದಾಗ ಭಾರತೀಯರು ರಾಜನೀತಿಯ ಮಹತ್ತನ್ನು ನೋಡಿ ಅದು ಸ್ವತಂತ್ರವಾದ ಶಾಸ್ತ್ರವೆಂದು ಕಲ್ಪಿಸಿ ತಮ್ಮ ರಾಜನೀತಿ ನೈಪುಣ್ಯವನ್ನು ಅಮೌಲ್ಯವಾದ ಗ್ರಂಥಗಳ ಮುಖಾಂತರ ವ್ಯಕ್ತಪಡಿಸಿದರು. ಹಿಂದೂಜನರು ಸಕಲಶಾಸ್ತ್ರಗಳಲ್ಲಿ ಹಿಂದುಳಿದವರೆಂದೂ ರಾಜಕಾರಣದ ಪರಿವೆಯು ಅವರಿಗಿದ್ದಿಲ್ಲವೆಂದೂ ಪ್ರತಿಯೊಂದು ಜನಾಂಗದವರು ತಿಳಿದುಕೊಂಡಿದ್ದರು. ಅರ್ಥಶಾಸ್ತ್ರವಿಶಾರದ ಶ್ರೀ. ಆರ್. ಶಾಮಶಾಸ್ತ್ರಿಯವರು ಕೌಟಿಲ್ಯಅರ್ಥಶಾಸ್ತ್ರವೆಂಬ ಗ್ರಂಥವನ್ನು ಮುದ್ರಿಸಿದನಂತರ ಭರತಖಂಡದ ಪ್ರಾಚೀನ ವೈಭವದ ಮೇಲೆ ಹೆಚ್ಚು ಬೆಳಕು ಬಿದ್ದಿತು. ಇದರಿಂದ ಭಾರತೀಯರಲ್ಲಿ ಜಾಗ್ರತಿಯುಂಟಾಗಲು ನೆರವು ಒದಗಿತು. ತಾವೂ ದೊಡ್ಡ ಜನಾಂಗದವರೆಂಬ ಭಾವನೆಯು ಹೆಚ್ಚು ಸ್ಪಷ್ಟವಾಯಿತು. ಗತವೈಭವವನ್ನು ಪುನಃ ಕರಗತ ಮಾಡಿಕೊಳ್ಳುವುದು ಪ್ರತಿಯೊಬ್ಬನ ಕರ್ತವ್ಯವೆಂಬ ಅಭಿಮಾನವು ಬೆಳೆಯಿತು.

ಭಾರತೀಯ ರಾಜನೀತಿಗ್ರಂಥಗಳಲ್ಲಿ ಕಂಡುಬರುವ ರಾಜಕೀಯ ವಿಚಾರಗಳು ಆಧುನಿಕ ಕುಶಲ ಮುತ್ಸದ್ದಿಗಳನ್ನು ದಂಗುಬಡಿಸುವಂತಹವಿರುತ್ತವೆ. ಬಲಿತ ವಿಚಾರಗಳಿಂದ ಅರಸರು ಹಿಂದಣ ಕಾಲದಲ್ಲಿ ರಾಜ್ಯವನ್ನು ಸುಸೂತ್ರವಾಗಿ ಆಳುತ್ತಿದ್ದರು. ಅಶೋಕ, ಅಕಬರ, ಶಿವಾಜಿಯಂಥ ರಾಷ್ಟ್ರೀಯ ವೀರರ ಹೆಸರುಗಳು ಜಗತ್ತಿನ ಇತಿಹಾಸದಲ್ಲಿ ಸುವರ್ಣಾಕ್ಷರದಿಂದ ಬರೆಯಲಿಕ್ಕೆ ತಕ್ಕುವಾದುವುಗಳು. ಕೌಟಿಲ್ಯನಂಥ ಅರ್ಥಶಾಸ್ತ್ರಜ್ಞರೂ ಮಾಧವ ವಿದ್ಯಾರಣ್ಯರಂಥ ರಾಜತಂತ್ರಪ್ರವೀಣರೂ ನಮ್ಮ ದೇಶದಲ್ಲಿ ನಾಮಾಂಕಿತರು. ವಿದ್ಯಾರಣ್ಯರಂತೂ ತಮ್ಮ ಬುದ್ಧಿಬಲದಿಂದ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿ ವಿಖ್ಯಾತಿಯನ್ನು ಹೊಂದಿದರು. ಹೀಗಿರಲು ರಾಜನೀತಿಶಾಸ್ತ್ರವು ನಮ್ಮ ನಾಡಿನಲ್ಲಿ ಮುಂದುವರಿದದ್ದು ಅಚ್ಚರಿಯ ಮಾತಲ್ಲ.

ರಾಜನೀತಿಗ್ರಂಥದಲ್ಲಿ ಕೌಟಿಲ್ಯನ ಅರ್ಥಶಾಸ್ತ್ರವು ಮಿಗಿಲಾದ ಗ್ರಂಥವು. ಕೌಟಿಲ್ಯನು ಬರೆದ ಗ್ರಂಥವು ಜ್ಞಾನಕೋಶವೆಂದರೆ ಅತ್ಯುಕ್ತಿಯಾಗಲಾರದು. ಅದರಲ್ಲಿ ಅರಸನ ಕರ್ತವ್ಯಗಳೂ ರಾಜ್ಯಪದ್ಧತಿಯೂ ಸರಸವಾಗಿ ಬಣ್ಣಿಸಲ್ಪಟ್ಟಿವೆ. ಇದಲ್ಲದೆ ಮಹಾಭಾರತ, ಶುಕ್ರನೀತಿಸಾರ, ಮನುಸ್ಮೃತಿ ಈ ಗ್ರಂಥಗಳಲ್ಲಿ ಪ್ರಾಚೀನ ಕಾಲದ ಅರಸನ ಬಗ್ಗೆಯೂ ಅವನ ರಾಜ್ಯಪದ್ಧತಿಯ ಬಗ್ಗೆಯೂ ಸಾಕಷ್ಟು ಸಂಗತಿ ಸಿಕ್ಕುತ್ತದೆ. ಪ್ರಸ್ತುತ ಲೇಖದಲ್ಲಿ ಪ್ರಾಚೀನ ಹಿಂದುಸ್ತಾನದ ಅರಸನ ಕರ್ತವ್ಯಗಳನ್ನೂ ಅವನ ಆಳಿಕೆಯ ಬಗೆಯನ್ನೂ ವಿವರಿಸಿರುವೆವು.

ಲೋಕದಲ್ಲಿ ಆನ್ವೀಕ್ಷಿಕೀ (ಸಾಂಖ್ಯ, ಯೋಗ, ಲೋಕಮತ), ಮೂರು ವೇದಗಳು, ವ್ಯಾಪಾರ, ದಂಡನೀತಿ ಎಂಬ ನಾಲ್ಕೇ ವಿದ್ಯೆಗಳೆಂದು ಕೌಟಿಲ್ಯನ ಮತ. [आन्वीक्षकी त्रयी वार्ता दण्डनीतिश्चेति विद्या;] ಮೂರು ವೇದಗಳು, ವ್ಯಾಪಾರ, ದಂಡನೀತಿ ಎಂಬ ಮೂರೇ ವಿದ್ಯೆಗಳೆಂದು ಮನುವಿನ ಅಭಿಪ್ರಾಯ. ಎಲ್ಲ ವಿದ್ಯೆಗಳು ದಂಡನೀತಿಯಿಂದ ಉಗಮವಾದುದರಿಂದ ದಂಡನೀತಿಯೆಂಬ ವಿದ್ಯೆಯೊಂದೇ ಜಗತ್ತಿನಲ್ಲಿರುವುದೆಂದು ಔಶನಸರ ಹೇಳಿಕೆ. ಆದರೆ ಕೌಟಿಲ್ಯನು ಮಾತ್ರ ರಾಜನೀತಿ ಅಥವಾ ದಂಡನೀತಿಗೆ ಯೋಗ್ಯ ಸ್ಥಾನವನ್ನು ಕೊಟ್ಟಿರುತ್ತಾನೆ. ಬಾರ್ಹಸ್ಪತ್ಯರು, ಔಶನಸರು, ಮನುವು ಇವರೆಲ್ಲ ರಾಜನೀತಿ ಶಾಸ್ತ್ರಜ್ಞರ ಶಾಖೆಯವರು. ಈ ಶಾಖೆಯವರು ರಾಜನೀತಿಯನ್ನು ಕುರಿತು ಬೇರೆ ಬೇರೆ ಗ್ರಂಥಗಳನ್ನು ಬರೆದಿರಬೇಕು. ಆದರೆ ಆ ಗ್ರಂಥಗಳೆಲ್ಲ ಕಾಲ



CC-0. Jangamwadi Math Collection. Digitized by eGangotri

ವಶಾತ್ ಗೆದ್ದಲಿಯ ಪಾಲಾಗಿರುವವೇನೋ! ನಮಗೆ ಉಪಲಬ್ಧವಾದ ಗ್ರಂಥಗಳು ಕಡಿಮೆ. ಮೇಲಣ ವಿವೇಚನೆಯಿಂದ ಭಾರತೀಯರು ರಾಜನೀತಿ ಶಾಸ್ತ್ರಕ್ಕೆ ತಕ್ಕ ಮರ್ಯಾದೆಯನ್ನು ಕೊಟ್ಟಿದ್ದರೆಂದೂ,ರಾಜನೀತಿ ಸಂಬಂಧವಾದ ಅನೇಕ ಗ್ರಂಥಗಳು ಮೊದಲು ಇದ್ದವೆಂದೂ, ಅದರಲ್ಲಿಯೂ ಬೇರೆ ಬೇರೆ ಪಂಗಡಗಳು ಇದ್ದವೆಂದೂ ಸ್ಪಷ್ಟವಾಗುತ್ತದೆ.

ಅರಸನನ್ನು ಆರಿಸುವ ಪದ್ಧತಿಯು ವೇದಗಳ ಕಾಲದಲ್ಲಿ ಪ್ರಚಾರದಲ್ಲಿತ್ತೆಂದು (೧) ಝಿಮ್ಮರ, (೨) ವೆಬರ, (೩) ಬ್ಲೂಮ ಫೀಲ್ಡ ಮೊದಲಾದ ವೈದಿಕ ಪಂಡಿತರ ಅಭಿಪ್ರಾಯವಿರುತ್ತದೆ.

ता इम् विशोन राजानं वृणाना-ಋಗ್ವೇದ ೧೦,೧೨೪,೮. (ಪ್ರಜೆಗಳು ಅರಸನನ್ನು ಆರಿಸುವಂತೆ)

त्वं विशो वृणतां राज्याय, विशस्त्वा सर्वा वाञ्छन्तु। ಎಂಬ ವಚನಗಳಿಂದ ಅರಸನನ್ನು ಆರಿಸುವ ಪದ್ಧತಿಯು ಸರ್ವಸಾಮಾನ್ಯವಾಗಿತ್ತೆಂದು ತೋರುತ್ತದೆ. ಅರಸುತನಕ್ಕೆ ಅನೇಕ ಹುರಿಯಾಳು (Candidates) ಗಳಿದ್ದರೆಂದು ಅಥರ್ವವೇದದ ಋಕ್ಕುಗಳಿಂದ ಕಾಣುತ್ತದೆ. ಸಪತ್ನರು ನಾಶವಾಗಲೆಂದೂ ಅವರ ಬಲವು ಕಡಿಮೆಯಾಗಲೆಂದೂ ಪ್ರಾರ್ಥಿಸುವ ಅನೇಕ ಋಕ್ಕುಗಳಿರುತ್ತವೆ. (ಅಥರ್ವವೇದ ೩, ೩-೪; ೧, ೯) ಹುರಿಯಾಳುಗಳು ಇಂದ್ರನನ್ನು ಕುರಿತು ವೈರಿಗಳು ಬಲಹೀನರಾಗಲೆಂದು ಪ್ರಾರ್ಥಿಸುತ್ತಿದ್ದರು. ಇದಲ್ಲದೆ ಮತದಾರರನ್ನು ತಮ್ಮ ಬಲಕ್ಕೆ ವಶಮಾಡಿಕೊಳ್ಳುವ ಉದ್ದೇಶದಿಂದ ಮಂತ್ರತಂತ್ರಗಳನ್ನು ಪ್ರಯೋಗಿಸುತ್ತಿದ್ದರು. (ಅಥರ್ವವೇದ ೩, ೫-೭).

ಅರಸನಿಗೆ ಋಗ್ವೇದದಲ್ಲಿ 'विशां पिता' (ಪ್ರಜೆಗಳ ತಂದೆ) ಎಂಬ ಸಾರ್ಥಕವಾದ ಅಭಿದಾನವು ಕೊಡಲ್ಪಟ್ಟಿದೆ. ಜನತೆಯಿಂದಲೇ ಅರಸನು ತನ್ನ ಅಧಿಕಾರವನ್ನು ಪಡೆದವನೆಂದೂ ಜನರನ್ನು ತಂದೆಯಂತೆ ಕಾಪಾಡುವುದು ಅವನ ಕರ್ತವ್ಯವೆಂದೂ ಇದರಿಂದ ಸ್ಪಷ್ಟವಾಗುತ್ತದೆ. ಯಜುರ್ವೇದದಲ್ಲಿ ಅರಸನು ಪ್ರಜೆಗಳ ಮಗುವೆಂದು ಹೇಳಲ್ಪಟ್ಟಿದೆ. ಜನರೇ ಅರಸನನ್ನು ಆರಿಸುವದರಿಂದಲೂ ಅವರೇ ಅವನಿಗೆ ಅಧಿಕಾರವನ್ನು ಕೊಡುವವರಾದ್ದರಿಂದಲೂ ಹೀಗೆ ಹೇಳಲಿಕ್ಕೆ ಕಾರಣವಾಯಿತು. ಅರಸನು ಜನರಿಂದ ಆರಿಸಲ್ಪಟ್ಟದ್ದರಿಂದ ಅವರ ಹಿತಕ್ಕಾಗಿಯೇ ಅವನು ದುಡಿಯತಕ್ಕದ್ದು. ಪ್ರಜೆಗಳ ಪ್ರೀತಿಯಲ್ಲಿಯೇ ಅವನು ಸಂತುಷ್ಟನಾಗಿರಬೇಕು. ಅವರ ಹೇಳಿಕೆಯಂತೆಯೇ ನಡೆಯತಕ್ಕದ್ದು ಎಂಬ ಅನುಮಾನವು ಹೊರಡುತ್ತದೆ.

ಅರಸನು ರಾಜ್ಯಭಾರವನ್ನು ಕೈಕೊಳ್ಳುವಾಗ "ಅರಸರೂ, **ರಾಜಕರ್ತರೂ**—ರಥಿಕರೂ, ನಗರಗ್ರಾಮಾಧಿಕಾರಿಗಳೂ—ನನ್ನೆಡೆಗೆ ಬರಲಿ" ಎಂದು ಬೇಡಿಕೊಳ್ಳುತ್ತಾನೆ. (ಅಥರ್ವವೇದ೩, ೫-೬-೭). ರಾಜಕರ್ತರೆಂದರೆ ಅರಸನನ್ನು ಆರಿಸುವವರು. ಯೋದ್ಧರು ಅಂದರೆ ಕ್ಷತ್ರಿಯವರ್ಗಕ್ಕೆ ಸೇರಿದವರೂ, ಪ್ರತಿಯೊಂದು ಗ್ರಾಮದ ಹಾಗೂ ಪಟ್ಟಣದ ಅಧಿಕಾರಿಗಳೂ ಅರಸನನ್ನು ಆರಿಸುತ್ತಿದ್ದರು. ಇವರಿಗೆಲ್ಲ ಮತ ಕೊಡುವ ಅಧಿಕಾರವಿತ್ತು.

ಅರಸನ ಆರಿಸುವಿಕೆಯಲ್ಲಿ ಜನಮತವೇ ಪ್ರಧಾನವಾಗಿದ್ದಿತೆಂದೂ ರಾಮಾಯಣದಿಂದಲೂ ವಿದಿತವಾಗುತ್ತದೆ. ದಶರಥನು ರಾಮನ ಪಟ್ಟಾಭಿಷೇಕ ಮಾಡಿಕೊಡಬೇಕೆಂದಾಗ ಬ್ರಾಹ್ಮಣರನ್ನೂ ಹಳ್ಳಿಗಳ ಮುಖ್ಯಸ್ಥರನ್ನೂ ಕರೆಯಿಸಿದನಂತೆ. नानानगरवास्तव्यान् पृथग्जानपदानपि। समानिनाय मेदिन्याः प्रधानान् पृथिवीपतिः ರಾಮಾಯಣ ಅಯೋಧ್ಯಾಕಾಂಡ. ೨. ೧. ೪೬). ದಶರಥನು ತೀರಿದನಂತರ ಅರಸನನ್ನು ಆರಿಸಲಿಕ್ಕೆ ಉದ್ಯುಕ್ತರಾದ ಸಭಿಕರಲ್ಲಿ ಕೆಲವರು ಇಕ್ಷ್ವಾಕುವಂಶದವನೊಬ್ಬನನ್ನು ಆರಿಸಬಹುದೆಂದು ಸೂಚಿಸಿದರು. ಆದರೆ ರಾಜ್ಯವನ್ನು ಭರತನಿಗೆ ಒಮ್ಮೆ ವಹಿಸಿದ್ದರಿಂದ ಅವನನ್ನೇ ಕರೆಕಳುಹಬೇಕೆಂದು ವಸಿಷ್ಠರು ಸೂಚಿಸಿದ ಬಳಿಕ **ರಾಜಕರ್ತರು** ಒಪ್ಪಿದರು. (वसिष्ठप्रमुखैर्द्विजैः नियुज्यमानो राज्याय) ಹೀಗಿರಲು ಅರಸನನ್ನು ಆರಿಸುವುದರಲ್ಲಿ ಪ್ರತಿಯೊಬ್ಬನಿಗೂ ವಿಶಿಷ್ಟವಾದ ಹಕ್ಕು ಇತ್ತೆಂದು ತೋರುತ್ತದೆ.

ಪ್ರತೀಪನು ತನ್ನ ಮಗನಾದ ದೇವಾಪಿಯನ್ನು ರಾಜ್ಯದ ಒಡೆಯನನ್ನಾಗಿ ಮಾಡಬೇಕೆಂದು ಹವಣಿಸುತ್ತಿದ್ದನು. ದೇವಾಪಿಯು ಸರ್ವಗುಣೋಪೇತನಾದರೂ ಚರ್ಮರೋಗದಿಂದ ದೂಷಿತನಾದ್ದರಿಂದ ಅವನಿಗೆ ಪಟ್ಟಾಭಿಷೇಕ ಮಾಡಬಾರದೆಂದು ಜನರು ಹಟತೊಟ್ಟರು. ಅರಸನಿಗೆ ವಿಷಾದವಾಯಿತು. ಆದರೂ ಜನರು ಒಪ್ಪಲಿಲ್ಲ. ಕಟ್ಟಕಡೆಗೆ ಜನರ ಬಲವೇ ಮೇಲಾಯಿತು.

CC-0. Jangamwadi Math Collection. Digitized by eGangotri

ದೇವಾಪಿಯ ಸಹೋದರನ ಪಟ್ಟಾಭಿಷೇಕ ಮಾಡಿದರು.
(ಮಹಾಭಾರತ ಉದ್ಯೋಗಪರ್ವ ಅಧ್ಯಾಯ ೧೪೯).
ಯಯಾತಿಯು ತನ್ನ ಕಿರಿಯ ಮಗನಾದ ಪುರುವನ್ನು ಅರಸನನ್ನಾಗಿ ನೇಮಿಸಬೇಕೆಂದು ಪ್ರಯತ್ನ ಮಾಡಲಾಗಿ ಜನರು ಇದಕ್ಕೆ ಅಡ್ಡಿ ಹೇಳಿದರು. ಹಿರಿಯ ಅರಸು ಗುವರನಿದ್ದಾಗ ಕಿರಿಯವನನ್ನು ಪಟ್ಟದಮೇಲೆ ಕುಳ್ಳಿರಿಸ ಲಿಕ್ಕೆ ಯಾರೂ ಮನಸ್ಸು ಮಾಡಲಿಲ್ಲ. ಆದರೆ ಯಯಾತಿಯು ಯೋಗ್ಯವಾದ ಕಾರಣಗಳನ್ನು ಕೊಟ್ಟು ಜನರನ್ನು ಬೇಡಿಕೊಂಡನಂತರ ಮಾತ್ರ ಪುರುವಿನ ಪಟ್ಟಾಭಿಷೇಕಕ್ಕೆ ಜನರು ಸಮ್ಮತಿಯನ್ನು ಕೊಟ್ಟರು.
(ಮಹಾಭಾರತ ಆದಿಪರ್ವ)

ಮಹಾಭಾರತ ರಾಮಾಯಣಗಳ ಕಾಲದಲ್ಲಿ ಜನರ ಮತಕ್ಕೆ ಪ್ರಾಧಾನ್ಯವಿತ್ತೆಂದೂ ಅವರ ಹೇಳಿಕೆಯಂತೆಯೇ ಅರಸನು ರಾಜ್ಯಭಾರವನ್ನು ಮಾಡುತ್ತಿದ್ದನೆಂದೂ ಮೇಲಣ ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ.

ವೇದಗಳ ಕಾಲದಲ್ಲಿ ಸಭೆ ಸಮಿತಿಗಳೆಂಬ ಸಂಸ್ಥೆಗಳಿದ್ದುವು. 'ಸಭೆ' ಸಮಿತಿಗಳು ಬೇರೆ ಬೇರೆ ಸಂಸ್ಥೆಗಳೆಂದೂ ಸಮಿತಿಯೆಂದರೆ ಮಧ್ಯವರ್ತಿ ಸಭೆಯೆಂದೂ 'ಸಭೆ'ಯೆಂದರೆ ಸ್ಥಾನಿಕ ಸಂಸ್ಥೆಯೆಂದೂ ಕೆಲವರ ಮತ. ಅರಸನು ಸಭೆಯಲ್ಲಿ ನೆರೆದವರ ಪ್ರೀತಿಯನ್ನು ಸಂಪಾದಿಸಲಿಕ್ಕೆ ಆದಷ್ಟು ಯತ್ನಿಸುತ್ತಿದ್ದನು.
(Atharvaveda- Whitney. ಪುಟ ೩೯೬).

ಸಮಿತಿಗಳಲ್ಲಿ ಆಗಾಗ ವಾದವಿವಾದಗಳು ನಡೆಯುತ್ತಿದ್ದುವು. ಪ್ರತಿಪಕ್ಷದವರನ್ನು ಸೋಲಿಸಲಿಕ್ಕೆ ದೇವತೆಗಳ ಸಹಾಯವನ್ನು ಸಭಿಕರು ಬೇಡುತ್ತಿದ್ದರು. ಇದರ ಹೊರತು ಮಂತ್ರತಂತ್ರಗಳನ್ನೂ ವನಸ್ಪತಿಗಳನ್ನೂ ಪ್ರಯೋಗಿಸುತ್ತಿದ್ದರು.
(ಅಥರ್ವವೇದ ವ್ಹಿಟ್ನೀ ಪುಟ ೬೭೦)

ಈ ಸಂಸ್ಥೆಗಳಲ್ಲಿ ಪ್ರಚಂಡ ತರ್ಕವು ನಡೆಯುತ್ತಿತ್ತು. ಜನರು ತಮ್ಮ ತಾರ್ಕಿಕಶಕ್ತಿಯಿಂದಲೂ ವಾಕ್ಚಾತುರ್ಯದಿಂದಲೂ ತಮ್ಮ ಪ್ರತಿಪಕ್ಷಿಗಳನ್ನು ತಮ್ಮ ಕಡೆಗೆ ಎಳಕೊಳ್ಳುತ್ತಿದ್ದರು. ಇವುಗಳ ಹೊರತು ಅಲ್ಲಿ ವಿಶೇಷ ಕಾರ್ಯಗಳು ಯಾವವಾಗಿದ್ದವು, ಎಂದು ಹೇಳಲಿಕ್ಕೆ ಸಾಕಷ್ಟು ಆಧಾರಗಳು ದೊರೆಯುವದಿಲ್ಲ.

ಪ್ರಜೆಗಳು ಸ್ವಧರ್ಮವನ್ನು ಪಾಲಿಸುವಂತೆ ಅರಸನು ಅನುಕೂಲತೆಯನ್ನು ಮಾಡಿಕೊಡತಕ್ಕದ್ದು. ಸ್ವಧರ್ಮ ಪರಿಪಾಲನೆಯಿಂದ ಇಹ ಪರಗಳಲ್ಲಿ ಸುಖವು ದೊರೆಯುತ್ತದೆ. ಆರ್ಯರ ಪದ್ಧತಿಗಳು ಅನುಸರಿಸಲ್ಪಟ್ಟರೆ ಲೋಕದಲ್ಲಿ ಸುಖಶಾಂತತೆಗಳು ನೆಲೆಸುವವು. ವರ್ಣಾಶ್ರಮ ಧರ್ಮಗಳು ಮಹತ್ವವಾದವು. ಅರಸನು ಆ ವರ್ಣಾಶ್ರಮಗಳ ವ್ಯವಸ್ಥೆಯನ್ನಿಡಬೇಕು ಎಂದು ಕೌಟಿಲ್ಯನ ಮತ. [ स्वधर्मः स्वर्गायानन्त्याय च । ............ तस्मात्स्वधर्मं भूतानां राजान व्यभिचारयेत् । स्वधर्मं संदधानो हि प्रेत्यचेह च नन्दति ಇತ್ಯಾದಿ. [ಅರ್ಥಶಾಸ್ತ್ರ ಅಧ್ಯಾಯ ೩]. ಕೌಟಿಲ್ಯನು ಹೇಳುವ 'ಸ್ವಧರ್ಮ'ದ ಆದರ್ಶವು स्वधर्मे निधनं श्रेयः परधर्मो भयावहः ಎಂಬ ಭಗವದುಕ್ತಿಯನ್ನು ಹೋಲುತ್ತದೆ. ಇದಲ್ಲದೆ 'ಅರಸನು ತನ್ನ ರಾಜ್ಯದಲ್ಲಿದ್ದ ಆರ್ಯರ ಪದ್ಧತಿಗಳನ್ನು ಬಿಡಕೂಡದು' ಎಂಬ ಉಪದೇಶವನ್ನು ಸಮ್ಮ ಆಳರಸರು ಚೆನ್ನಾಗಿ ನೆನಪಿನಲ್ಲಿ ಇಟ್ಟುಕೊಳ್ಳುವಂಥ ಮಾತಾಗಿದೆ. ಸನ್ ೧೮೫೮ನೆಯ ಇಸ್ವಿಯಲ್ಲಿ ವ್ಹಿಕ್ಟೋರಿಯಾ ಮಹಾರಾಣಿಯವರು ತಮ್ಮ ಜಾಹೀರನಾಮೆಯಲ್ಲಿ ತಾವು ಈ ದೇಶದ ಧಾರ್ಮಿಕ ವಿಷಯಗಳಲ್ಲಿ ಕೈಹಾಕುವದಿಲ್ಲೆಂದೂ ದೇಶದಲ್ಲಿ ಮೊದಲಿನಿಂದ ನಡೆದು ಬಂದ ಪದ್ಧತಿಗಳನ್ನು ತಾವು ಅನುಸರಿಸುವೆವೆಂದೂ ತಮ್ಮ ಪ್ರಜೆಗಳಿಗೆ ಅಭಯ ವಚನವನ್ನಿತ್ತರು. ಹಿಂದೂ ಜನರು ತಮ್ಮ ಪೂರ್ವಿಕರ ಆಚಾರ ಕಾನೂನುಗಳನ್ನು ಮಾನಿಸುವವರು. ಕಾಲಕ್ರಮೇಣ ಈ ಪದ್ಧತಿಗಳಿಗೆ ಒಂದು ತೆರದ ಪಾವಿತ್ರ್ಯ (Sanctity)ವು ಬಂದು ಅವು ಕಟ್ಟಳೆಗಳಿಗಿಂತಲೂ ಹೆಚ್ಚಾಗಿ ಜನರಿಂದ ಮಾನಿಸಲ್ಪಡುತ್ತಲಿವೆ. ಅರಸರು ಅವುಗಳನ್ನು ಲೆಕ್ಕಿಸದಿದ್ದರೆ ಜನರಲ್ಲಿ ಕ್ಷೋಭೆಯುಂಟಾಗಿ ರಾಜ್ಯವೇ ಮುಳುಗುವ ಪ್ರಸಂಗವು ಬರುತ್ತದೆ. ಈ ಸಂಗತಿಯನ್ನು ಕೌಟಿಲ್ಯನು ಚೆನ್ನಾಗಿ ಮನಗಂಡಿದ್ದನು.

ಅರಸನಿಲ್ಲದೆ ಹೆದರಿಕೆಯಿಂದ ಜಗತ್ತಿನ ಜನರೆಲ್ಲ ಚದರಿ ಹೋದಾಗ ಸೃಷ್ಟಿಕರ್ತನು ಈ ಜಗತ್ತಿನ ರಕ್ಷಣೆಯ ಬಗ್ಗೆ ಅರಸನನ್ನು ನಿರ್ಮಿಸಿದನೆಂದು ಮನುಸ್ಮೃತಿಯಲ್ಲಿ ಹೇಳಿದೆ. (ಮನು ೭. ೩). ಪ್ರಾಚೀನ ಭಾರತೀಯರಿಗೆ ಅರಸನಲ್ಲಿ ಅನುಪಮವಾದ ಭಕ್ತಿ. ಅವನೇ ಪರಮ ಪುರುಷನು. ಇಂದ್ರ, ವಾಯು, ಯಮ, ಸೂರ್ಯ, ಅಗ್ನಿ, ವರುಣ, ಚಂದ್ರ, ಕುಬೇರ ಇವರ ಅಂಶದಿಂದಲೇ

CC-0. Jangamwadi Math Collection. Digitized by eGangotri

ನಿರ್ಮಿಸಲ್ಪಟ್ಟದ್ದರಿಂದ ಅರಸನು ತನ್ನ ಕಾಂತಿಯಿಂದ ಎಲ್ಲ ಜನರನ್ನೂ ಹಿಂದೆಹಾಕುತ್ತಾನೆ. (ಮನು ೭. ೫). ಇದರಿಂದಲೇ राजा प्रत्यक्षदेवता ಎಂಬ ಉಕ್ತಿಯು ನಮ್ಮಲ್ಲಿ ಬಳಕೆಯಲ್ಲಿ ಬಂದಿರಬೇಕು. ಅಗ್ನಿಯು ಒಬ್ಬ ಮನುಷ್ಯನನ್ನು ಮಾತ್ರ ಸುಡಬಹುದು. ಆದರೆ ಅರಸನ ಕೋಪಾಗ್ನಿಯು ಕುಲಕುಟುಂಬವನ್ನು ಸುಡುತ್ತದೆ. ಅರಸನ ಸಲುವಾಗಿ **ದಂಡ** (Punishment)ವು ನಿರ್ಮಿಸಲ್ಪಟ್ಟಿತು. ಸಕಲ ಚರಾಚರ ಸೃಷ್ಟಿಯನ್ನು ದಂಡದ ಬಲದಿಂದಲೇ ಅರಸನು ಆಳುತ್ತಾನೆ. ಈ ಅರಸನ ವರ್ಣನೆಗಳಿಂದ ಜನರಲ್ಲಿ ರಾಜಭಕ್ತಿಯು ತುಂಬಾ ನೆಲೆಸಿದ್ದಿತೆಂದು ಅರಸನಿಗೆ ಹೆದರಿ ಜನರು ಪಾಪಭೀರುಗಳಾಗಿದ್ದರೆಂದು ಊಹಿಸಲಿಕ್ಕೆ ಅವಕಾಶವಿದೆ. ದೇವಾಂಶಸಂಭೂತನಾದ್ದರಿಂದ ಅರಸನಲ್ಲಿ ಅಪಾರವಾದ ಶಕ್ತಿ, ಬುದ್ಧಿ, ಧನ ಇವೆಲ್ಲವೂ ಒಟ್ಟುಗೂಡಿದ್ದವೆಂಬ ಅನುಮಾನವು ಹೊರಡುತ್ತದೆ.

ಅರಸನು ದುಷ್ಟರನ್ನು ಶಿಕ್ಷಿಸತಕ್ಕದ್ದು. ಶಿಷ್ಟರನ್ನು ಪರಿಪಾಲಿಸತಕ್ಕದ್ದು. ನ್ಯಾಯನೀತಿಯನ್ನನುಸರಿಸಿ ಶಿಕ್ಷೆಯನ್ನು ವಿಧಿಸುವದು ಅವನ ಕರ್ತವ್ಯವು. ಶಿಕ್ಷೆಯನ್ನು ವಿಧಿಸುವದರಲ್ಲಿ ಏನಾದರೂ ತಪ್ಪುಮಾಡಿದರೆ ವರ್ಣಸಂಕರವಾಗುವ ಸಂಭವವುಂಟೆಂದೂ ಜನರೆಲ್ಲ ರೇಗುವರೆಂದೂ ಮನುವಿನ ಅಭಿಪ್ರಾಯ. (ಮನು ೭. ೨೪).

ಅರಸನು ಆಶ್ರಮವ್ಯವಸ್ಥೆಯನ್ನೂ ವರ್ಣವ್ಯವಸ್ಥೆಯನ್ನೂ ಕಾಪಿಡಬೇಕು. ಜನರು ವರ್ಣಾಶ್ರಮಧರ್ಮಗಳನ್ನು ಪಾಲಿಸುವಂತೆ ಅವನು ನೋಡಬೇಕು. (ಮನು ೭. ೩೫). ಜನರು ಪತಿತರಾಗದಂತೆ ಅರಸನು ವ್ಯವಸ್ಥೆ ಇಡತಕ್ಕದ್ದು.

ಅರಸನು ವೇದ ಬಲ್ಲವರಿಂದ ಮೂರು ವೇದಗಳನ್ನೂ, ಶಾಶ್ವತವಾದ **ದಂಡನೀತಿ**ಯನ್ನೂ, ತರ್ಕಶಾಸ್ತ್ರವನ್ನೂ ಆತ್ಮವಿದ್ಯೆಯನ್ನೂ, ಜನರಿಂದ ವ್ಯಾಪಾರೋದ್ಯಮಗಳ ಶಾಸ್ತ್ರವನ್ನೂ ಕಲಿಯಬೇಕೆಂದು ಮನುಸ್ಮೃತಿಯಲ್ಲಿ ಹೇಳಿದೆ (ಮನು ೭,೪೩). ಇದರಿಂದ ಮನುವು ದಂಡನೀತಿ ಅಥವಾ ರಾಜನೀತಿ ಶಾಸ್ತ್ರಕ್ಕೆ ಮಹತ್ವವನ್ನು ಕೊಡುತ್ತಾನೆಂದು ತಿಳಿಯುತ್ತದೆ. ಮಾನವಶಾಖೆಯವರ ಮತದಂತೆ ಲೋಕದಲ್ಲಿ ತ್ರಿವೇದಗಳು, ವಾರ್ತಾ ಮತ್ತು ದಂಡನೀತಿ ಎಂಬ ಮೂರು ವಿದ್ಯೆಗಳು. ವಾರ್ತಾ ಮತ್ತು ದಂಡನೀತಿ ಎಂಬ ಎರಡೇ ವಿದ್ಯೆಗಳು ಇರುವವೆಂದು ಬಾರ್ಹಸ್ಪತ್ಯರ ಅಭಿಪ್ರಾಯ. ದಂಡನೀತಿಯೆಂಬ ಒಂದೇ ವಿದ್ಯೆಯಿರುವದೆಂದೂ, ಎಲ್ಲ ವಿದ್ಯೆಗಳ ಮೂಲವು ದಂಡನೀತಿಯೆಂದೂ ಔಶನಸರು ಹೇಳುತ್ತಾರೆ. ಆದರೆ ಕೌಟಿಲ್ಯನು ಈ ಪಂಗಡಕ್ಕೆ ಸೇರಿದವನಲ್ಲ. ಆನ್ವೀಕ್ಷಕಿ (ತರ್ಕಶಾಸ್ತ್ರ), ಮೂರು ವೇದಗಳು, ವಾರ್ತಾ(ವ್ಯಾಪಾರೋದ್ಯಮ), ದಂಡನೀತಿ ಇವೇ ನಾಲ್ಕು ವಿದ್ಯೆಗಳೆಂದು ಕೌಟಿಲ್ಯನು ಉಸುರುತ್ತಾನೆ. ಪ್ರಾಚೀನ ಕಾಲದ ಭಾರತೀಯರು ರಾಜನೀತಿಗೆ ಪ್ರಾಧಾನ್ಯವನ್ನು ಕೊಟ್ಟಿದ್ದರೆಂದು ಇದರಿಂದ ಸ್ಪಷ್ಟವಾಗುತ್ತದೆ. (ಕೌಟಿಲ್ಯನ ಅರ್ಥಶಾಸ್ತ್ರ, ಅಧ್ಯಾಯ ೨).

ಅರಸುತನದ ವಿಷಯವಾಗಿ ವೇದಗಳಲ್ಲಿ ಅನೇಕ ಉಲ್ಲೇಖಗಳಿರುವವು. ಜನರು ಅರಸನನ್ನು ಆರಿಸುತ್ತಿದ್ದರೆಂದು ಅವುಗಳಿಂದ ಕಾಣುತ್ತದೆ. (Bloomfild- Hymns of the Atharvaveda. Page 333. ) ಇದಲ್ಲದೆ ಅರಸುತನಕ್ಕೆ ಯೋಗ್ಯವಾದ ಮಾನವೂ ಇದ್ದಿತು. "ಅರಾಜಕತೆಯಿಂದ ಸರಳುತ್ತಿದ್ದ ಜನರು ಮೊದಲು ಮನುವೈವಸ್ವತನನ್ನು ತಮ್ಮ ಅರಸನನ್ನಾಗಿ ಆರಿಸಿದರು. ನಮ್ಮನ್ನು ಪಾಲಿಸುವವನಿಗೆ ಈ ಅಂಶವೆಂದು ಹೇಳಿ ಧಾನ್ಯದ ಒಂದು ಆರಾಂಶವನ್ನು, ಸರಕುಗಳ ಒಂದು ಹತ್ತಾಂಶವನ್ನು ಮನುವಿಗೆ ಕೊಟ್ಟರು. ಈ ತೆರಿಗೆಗಳಿಂದ ಜೀವಿಸುತ್ತಾ ಅರಸರು ಪ್ರಜೆಗಳ ಯೋಗಕ್ಷೇಮವನ್ನು ವಹಿಸಿಕೊಂಡರು" ಎಂದು ಅರ್ಥಶಾಸ್ತ್ರದಲ್ಲಿ ಉಕ್ತವಾಗಿದೆ. (ಅರ್ಥಶಾಸ್ತ್ರ ಅಧಿಕರಣ ೧ ಅಧ್ಯಾಯ ೧೩) ಜನರನ್ನು ಪಾಲಿಸಿದ ಬಗ್ಗೆ ಅರಸನಿಗೆ ತೆರಿಗೆಯನ್ನು ಕೊಡುವದೆಂದರೆ ಅವನಿಗೆ ವೇತನವನ್ನು ಕೊಟ್ಟಂತೆ. ಅದೇ ಇಂಗ್ಲರಾಜನೀತಿಶಾಸ್ತ್ರದಲ್ಲಿ Social Contract Theory ಎಂದು ಹೇಳುತ್ತಾರೆ.

ಚೌಲವಾದನಂತರ ರಾಜಪುತ್ರನು ಲಿಪಿಯನ್ನೂ ಗಣಿತವನ್ನೂ ಕಲಿಯಬೇಕೆಂದು ಕೌಟಿಲ್ಯನು ಹೇಳುತ್ತಾನೆ. ಮೌಂಜೀಬಂಧನದ ತರುವಾಯ ಅವನು ಮೂರು ವೇದಗಳನ್ನೂ ಆನ್ವೀಕ್ಷಕೀ, ವಾರ್ತಾ, ದಂಡನೀತಿ ಎಂಬ ವಿದ್ಯೆಗಳನ್ನು ಆ ಆ ವಿದ್ಯೆಗಳಲ್ಲಿ ಪಾರಂಗತರಾದವರಿಂದ ಕಲಿಯಬೇಕು. ಹದಿನಾರುವರ್ಷಗಳ

CC-0. Jangamwadi Math Collection. Digitized by eGangotri

ವರೆಗೆ ಬ್ರಹ್ಮಚರ್ಯವನ್ನು ಪಾಲಿಸಿ ನಂತರ ಮದುವೆಯಾಗಬೇಕು. ಈ ವಯೋಮರ್ಯಾದೆಯು ನಮ್ಮಲ್ಲಿ ಪ್ರಚಲಿತವಾದ ಬಾಲ್ಯವಿವಾಹದ ಪೂರ್ವಚಿನ್ಹೆಯಾಗಿರಬಹುದೇ ?

ಜ್ಞಾನವೃದ್ಧರೊಡನೆ ಬೆರೆತು ವಿನಯದಿಂದ ಅರಸುಗುವರಸು ಮುಂಜಾವಿನಲ್ಲಿ ಸೈನ್ಯದ ಜ್ಞಾನವನ್ನೂ ಮಧ್ಯಾಹ್ನದಲ್ಲಿ ಪುರಾಣ, ಆಖ್ಯಾಯಿಕೆ, ಧರ್ಮಶಾಸ್ತ್ರ, ಅರ್ಥಶಾಸ್ತ್ರ ಇವುಗಳ ಪರಿಚಯವನ್ನೂ ಮಾಡಿಕೊಳ್ಳಬೇಕೆಂದು ಕೌಟಿಲ್ಯನ ಅಂಬೋಣ. ಹೀಗಿರಲು ಬಾಲ್ಯದಿಂದಲೇ ರಾಜರಾಗುವವರಿಗೆ ಯೋಗ್ಯವಾದ ಶಿಕ್ಷಣವು ದೊರೆಯುತ್ತಿತ್ತು.

ಇಂದ್ರಿಯನಿಗ್ರಹವು ಪ್ರತಿಯೊಬ್ಬ ಮಾನವನ ಕರ್ತವ್ಯವು. ಲೋಕದಲ್ಲಿ ಹೆಸರು ಪಡೆಯಬೇಕೆಂಬ ಉದ್ದೇಶವುಳ್ಳವನು ಇಂದ್ರಿಯಗಳನ್ನು ಜಯಿಸಲೇಬೇಕು. ಷಡ್ರಿಪುಗಳ ತ್ಯಾಗದಿಂದ ಅಧ್ಯಯನದ ಹಾಗೂ ವಿನಯದ ಸಿದ್ಧಿಯಾಗುತ್ತದೆಯೆಂದು ಕೌಟಿಲ್ಯನು ಹೇಳುತ್ತಾನೆ. ಅರಸನು ರಾಜ್ಯವನ್ನು ಸುಸೂತ್ರವಾಗಿ ಆಳಬೇಕಾದರೆ ಷಡ್ರಿಪುಗಳನ್ನು ಜಯಿಸಬೇಕು. ಷಡ್ರಿಪುಗಳ ಕಾಟದಿಂದ ರಾಜ್ಯವನ್ನು ಕಳಕೊಂಡ ಅರಸರ ಉದಾಹರಣೆಗಳು ಅರ್ಥಶಾಸ್ತ್ರದಲ್ಲಿ ಕೊಡಲ್ಪಟ್ಟಿವೆ. (ಅರ್ಥಶಾಸ್ತ್ರ ಪುಟ. ೧೧) ಭೋಜನೆಂಬ ಅರಸನು ಬ್ರಾಹ್ಮಣ ಕನ್ಯೆಯನ್ನು ಕೆಡಿಸಲಿಕ್ಕೆ ಪ್ರಯತ್ನಮಾಡಿದ್ದರಿಂದ ರಾಜ್ಯವನ್ನು ಕಳಕೊಂಡದ್ದಲ್ಲದೆ ತಾನೂ ನಾಶವಾದನಂತೆ. ರಾವಣ ದುರ್ಯೋಧನರೂ ಇದೇ ವರ್ಗದವರು.

ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಅರಸನ ದೈನಿಕ ವೇಳಾ-ಪತ್ರಿಕೆಯು ಕೊಡಲ್ಪಟ್ಟಿದೆ. ಹಗಲಿನಲ್ಲಿಎ ಕಾಲವಿಭಾಗಗಳನ್ನು ಮಾಡಬೇಕೆಂದೂ ರಾತ್ರಿಯ ಹನ್ನೆರಡು ತಾಸುಗಳನ್ನು ಅದರಂತೆಯೇ ಪಾಲುಮಾಡಿಕೊಂಡೂ ಅರಸನು ತನ್ನ ರಾಜ್ಯಕಾರಭಾರವನ್ನು ಮಾಡತಕ್ಕದ್ದು. ಇಲ್ಲದಿದ್ದರೆ ಅರಸನು ತನಗೆ ಯುಕ್ತಕಂಡತೆ ಈ ವ್ಯವಸ್ಥೆಯನ್ನು ಮಾಡಿಕೊಳ್ಳಬಹುದು. ಪ್ರತಿಯೊಂದು ಭಾಗಕ್ಕೆ ನಲಿಕೆಯೆಂಬ ಹೆಸರು.

**ಹಗಲು**

೧ನೆಯ ನಲಿಕೆ– ಕಾವಲಿಗರನ್ನು ಅವರವರ ಸ್ಥಾನದಲ್ಲಿಟ್ಟು ಆಯವ್ಯಯಗಳ ಲೆಕ್ಕಾಚಾರ.

೨ನೆಯ ನಲಿಕೆ– ಪಟ್ಟಣಿಗರ ಹಾಗೂ ಹಳ್ಳಿಗರ ವ್ಯವಹಾರವನ್ನು ನೋಡುವದು.

೩ನೆಯ ನಲಿಕೆ– ಸ್ನಾನ, ಊಟ, ಅಧ್ಯಯನ.

೪ನೆಯ ನಲಿಕೆ– ತೆರಿಗೆಯ ವಸೂಲು, ಅಧಿಕಾರಿಗಳನ್ನು ಯುಕ್ತಸ್ಥಾನಗಳಲ್ಲಿ ನಿಯಮಿಸುವದು.

೫ನೆಯ ನಲಿಕೆ– ಪತ್ರಸಂಪ್ರೇಷಣ, ಗೂಢಚಾರರಿಂದ ಊರಸುದ್ದಿಗಳನ್ನು ತೆಗೆದುಕೊಳ್ಳುವದು.

೬ನೆಯ ನಲಿಕೆ– ಬಯಕೆಯ ಆಟಗಳನ್ನು ಆಡುವದು.

೭ನೆಯ ನಲಿಕೆ– ಹಸ್ತಿ, ಅಶ್ವ, ರಥ, ಪದಾತಿಗಳ ಮೇಲ್ವಿಚಾರಣೆ.

೮ನೆಯ ನಲಿಕೆ– ಸೈನ್ಯವನ್ನು ಕುರಿತು ಆಲೋಚನೆ.

**ರಾತ್ರಿ**

೧ನೆಯ ನಲಿಕೆ– ಗೂಢಚಾರರನ್ನು ಬರಮಾಡಿಕೊಳ್ಳುವದು.

೨ನೆಯ ನಲಿಕೆ– ಸ್ನಾನ, ಊಟ, ಅಧ್ಯಯನ.

೩ನೆಯ ನಲಿಕೆ, ೪ನೆಯ ನಲಿಕೆ, ೫ನೆಯ ನಲಿಕೆ–ನಿದ್ರೆ.

೬ನೆಯ ನಲಿಕೆ– ಹಾಸಿಗೆಯಿಂದೆದ್ದು ದಿನಚರಿಯ ಕಾರ್ಯವನ್ನು ಪರಿಶೀಲಿಸುವದು.

೭ನೆಯ ನಲಿಕೆ– ರಾಜ್ಯದ ಆಡಳತೆಯನ್ನು ನೋಡುವದು ಗುಢಚಾರರನ್ನು ಕಳಿಸುವದು.

೮ನೆಯ ನಲಿಕೆ– ಆಚಾರ್ಯರಿಂದಲೂ ಬ್ರಾಹ್ಮಣರಿಂದಲೂ ಆಶೀರ್ವಾದವನ್ನು ಪಡೆದು, ವೈದ್ಯ, ಅಡಿಗೆಯವ ಮೊದಲಾದವರನ್ನು ಕಂಡು, ಗೋಪ್ರದಕ್ಷಿಣೆ ಮಾಡಿ ಆಸ್ಥಾನವನ್ನು ಪ್ರವೇಶಿಸುವದು.

ಯಾರಾದರೂ ತಮ್ಮ ದೂರುಗಳನ್ನು ಹೇಳಿಕೊಳ್ಳತಕ್ಕವರಿದ್ದರೆ ಅವರು ಬಾಗಿಲಲ್ಲಿ ಬಹಳ ಹೊತ್ತು ಕಾಯುವಂತೆ ಮಾಡಬಾರದೆಂದು ಕೌಟಿಲ್ಯನು ಹೇಳುತ್ತಾನೆ. (ಅಧ್ಯಾಯ ೧೯) ಅರಸನು ತಾನೇ ಕೆಲಸ ಮಾಡದೆ ಪರರಿಗೆ ತನ್ನ ಕಾರ್ಯವನ್ನು ವಹಿಸಿದರೆ ಅವನು ಜನರ ಅಸಂತೋಷಕ್ಕೆ ಕಾರಣನಾಗುತ್ತಾನೆಂದು ಅವನ ಮತ. ದೇವ, ಪಾಷಂಡ, ಶ್ರೋತ್ರಿಯ, ಪಶು, ಪುಣ್ಯಸ್ಥಾನ, ಬಾಲ, ವೃದ್ಧ, ವ್ಯಾಧಿತ, ವ್ಯಸನಿ, ಅನಾಥ, ಸ್ತ್ರೀ, ಇವರ ಕಾರ್ಯಗಳನ್ನು ಅರಸನು ಸ್ವತಃ ವಿಚಾರಿಸಬೇಕು. ಪ್ರಜಾರಂಜನವೇ ಅರಸನ ಧ್ಯೇಯವಾಗಿತ್ತು.



CC-0. Jangamwadi Math Collection. Digitized by eGangotri

प्रजासुखेन सुखं राज्ञः प्रजानां च हिते हितम् ।
नात्मप्रियं राज्ञः प्रजानां तु प्रियं हितम् ॥

(ಕೌಟಿಲ್ಯ ಅಧ್ಯಾಯ ೧೯)

ಈ ಸುವರ್ಣಸೂತ್ರವನ್ನು ಪ್ರತಿಯೊಬ್ಬ ಅರಸನು ನೆನಪಿನಲ್ಲಿಟ್ಟುಕೊಂಡರೆ ಅನಾಹುತವಾಗುವ ಪ್ರಸಂಗವೇ ಬರುವಂತಿಲ್ಲ. ಪ್ರಜೆಗಳ ಹಿತದಲ್ಲಿಯೇ ತಮ್ಮ ಅಭ್ಯುದಯವುಂಟೆಂದು ನಮ್ಮ ಆಳರಸರಾದರೂ ಘಂಟಾಘೋಷವಾಗಿ ಸಾರುತ್ತಾರೆ. ಮೇಲಣ ವೇಳಾಪತ್ರಿಕೆಯನ್ನು ನೋಡಿದರೆ ಅರಸನು ಈಗಣ ಅನೇಕ ಸಂಸ್ಥಾನಿಕರಂತೆ ವ್ಯಸನಗಳಲ್ಲಿ ತನ್ನ ಹೊತ್ತನ್ನು ಹಾಳುಮಾಡುತ್ತಿದ್ದಿಲ್ಲವೆಂದು ಸ್ಪಷ್ಟವಾಗುತ್ತದೆ. ಅರಸನ ಪ್ರತಿಯೊಂದು ನಿಮಿಷವೂ ಬೆಲೆಯುಳ್ಳದ್ದು. ಪ್ರಜೆಗಳ ಹಿತದ ಬಗ್ಗೆ ಅವನು ಹಗಲಿರುಳು ದುಡಿಯಬೇಕು.

ಅರಸನು ರಾಜ್ಯವನ್ನು ಆಳಲಿಕ್ಕೆ ತನ್ನ ಬುದ್ಧಿಮತ್ತೆಯಿಂದ ಯೋಗ್ಯವಾದ ಅಧಿಕಾರಿಗಳನ್ನು ನೇಮಿಸಿಕೊಳ್ಳುತ್ತಿದ್ದನು. ಅವರನ್ನು ಅನೇಕ ರೀತಿಯಿಂದ ಪರೀಕ್ಷಿಸಿ ತನ್ನ ಕೆಲಸವನ್ನು ಮಾಡಿಕೊಳ್ಳುತ್ತಿದ್ದನು.

ಹೀಗಾಗಿ ಪ್ರಾಚೀನ ಹಿಂದುಸ್ಥಾನದ ಅರಸನು ಯಾವಾಗಲೂ ತನ್ನ ಹಿತದ ಕಡೆಗೆ ಲಕ್ಷ್ಯಕೊಡದೆ ಯಾವಾಗಲೂ ಪ್ರಜಾಹಿತತತ್ಪರನಾಗಿದ್ದನು. ಆದುದರಿಂದಲೇ ಜನರು ಅವನು ಸಾಕ್ಷಾತ್ ದೇವತೆಯೆಂದು ಭಾವಿಸುತ್ತಿದ್ದರು.

## ಪ್ರಾರ್ಥನೆ

ನಿನ್ನ ನಾಡೀ ನಾಡು, ನಿನ್ನ ಮಕ್ಕಳು ನಾವು
ಎಮ್ಮನ್ನು ನೀ ನಡೆಸು ದಿಗ್ವಿಜಯಕೆ;
ಭಾರತಾಂಬುಧಿಯಲ್ಲಿ ಹೆರರು ಕಡೆದಿಹ ವಿಷವ-
ನಿನ್ನೊಮ್ಮೆ ನೀ ಕುಡಿದು ಕಾಪಿಡಯ್ಯಾ ॥

ನಿನ್ನ ಹಣೆಗಣ್ಣೋಟವೆಮ್ಮಂತರಂಗಗಳ
ಮಡಿಕೆ ಮಡಿಕೆಗಳಲ್ಲು ಸುಳಿದು ಬರಲಿ;
ಎಮ್ಮ ಎಮ್ಮೊಳು ಬಲಿವ ವಿಷಮನೈಕ್ಯತೆಗಳನು
ಸುಟ್ಟು ನಿರ್ಮೂಲಗೊಳಿಸು ಚೇತನವನು ॥

ಹಿಂದು ಸಿಕ ಪಾರ್ಸಿಕ ಮುಸ್ಲೀಮ ಕ್ರೈಸ್ತರನು
ಸಿಂಹಳರ ಗೂರಖರ ಗಡಣಗಳನು;
ಒಮ್ಮತದ ದೃಢದಲ್ಲಿ ಚಲದಲ್ಲಿ ನಡೆಸಯ್ಯಾ
ಸ್ವಾಧೀನ ಜೀವನಕೆ ಸುಮ್ಮಾನಕೆ ॥

ನಿನ್ನ ನಾಯಕ ನೋಟ ಮುಂದೆ ದಾರಿಯ ಬೆಳಗಿ
ಎಮ್ಮ ನಡೆಯನು ನೇರ ಕೊಂಡೊಯ್ಯಲಿ;
ಒಂದು ರಕ್ತದ ಬಿಂದು ಧಮನಿಯಲ್ಲುಳ್ಳನಕ
ಒಂದುಸಿರು ನಿಲ್ವನಿತು ಶಕ್ತಿಯಿರುವನಕ ॥

ನಿನ್ನ ಡಮರುಗರವವು ದಿಕ್ಕುಗಳ ನಡುಗಿಸಲಿ
ನಿನ್ನ ಮೊನೆಕೈಶೂಲವಿರಿಯಿರಿಯಲಿ;
ನಿನ್ನ ನಗೆ ಮಕ್ಕಳಿಗೆ ಗೆಲ್ವದಟನೀಯುತಿರೆ
ನಿನ್ನ ಕೋಪವು ಅರಿಯ ಮದವುರಿಸಲಿ ॥

ಇಷ್ಟುದಿನ ಪ್ರಾಚೀನ ಕರ್ಮವನ್ನುಂಡಾಯ್ತು
ಘಾತಕವ ಪಾತಕವ ಭೋಗಿಸಾಯ್ತು;
ಎಮ್ಮ ಸೋದರರಕ್ತ ಹರಿಸಿ ಮಿಂದಿಹುದಾಯ್ತು
ಜನತೆ ಮಾನವ ಮಾರಿ ತಿರಿದುದಾಯ್ತು ॥

ಎಮ್ಮ ಮನೆಗಳ ಭಾಗ್ಯ ಹೆರವರಿಗೆ ಕೊಟ್ಟಾಯ್ತು
ಅವರ ಎಂಜಲನುಂಡು ಬಾಳಿಯಾಯ್ತು;
ಎಮ್ಮ ಗಂಡನು ಹೀರಿ ದಾಸ್ಯಕ್ಕೆ ದೂಡಿದರ
ಪಾದಘಾತವನೆದೆಯಲಾಂತುದಾಯ್ತು ॥

ನಿನ್ನ ಮುಕುಟದಿ ಹರಿವ ದಿವ್ಯ ಗಂಗೆಯ ಕಳುಹಿ
ಎಮ್ಮ ಕರಣಗಳನ್ನು ಶುಚಿಗೈಯಿಸು;
ನಿನ್ನ ಪ್ರೇಮವು ಮರಳಿ ಎಮ್ಮ ಕಾಯುವುದೆಂದು
ಭರವಸೆಯು ಬರುವಂತೆ ಕರುಣಿಸಯ್ಯಾ ॥

ನಿನ್ನಮರ ವಾಣಿಗಳು ಎಮ್ಮ ಎದೆಯೊಳಪೊಕ್ಕು
ಅಲ್ಲಿರುವ ಬಂಜೆತನ ಕಳೆಯಲಯ್ಯಾ;
ಬಲದಾನ ಜಯದಾನ ಗೈದೆಮ್ಮ ನಡೆಸು ಬಾ,
ಹೊಸ ರಾಷ್ಟ್ರಜೀವನದ ಸಾಧನಕ್ಕೆ ॥

ನಾವಿಟ್ಟ ಸಂಕಲೆಯ ಭಾರದಲಿ ಬಾಗಿರುವ
ಭಾರತಿಯ ಬಿಡುಗಡೆಗೆ ನಡೆಸೆಮ್ಮನು–
ನಾಳೆ ಹುಟ್ಟುವ ಮಕ್ಕಳಿಂಗಾದರೂ ನಾಡು
ಹಿರಿಬಾಳ ಸ್ವರ್ಗದಂತಾಗುವಂತೆ ॥

ವಿ. ನೇ.

CC-0. Jangamwadi Math Collection. Digitized by eGangotri

# ಯೂರೋಪು ಯಾತ್ರೆ

ಲೇಖಕರು:— ಹಾಸನದ ರಾಜೇರಾಯರು, ಪ್ಯಾರಿಸ್ (ಫ್ರಾನ್ಸ್)

ನಾವು ಚಿಕ್ಕ ಹುಡುಗರಿದ್ದಾಗ, ನಮ್ಮ ಅಜ್ಜ ಅಜ್ಜಿಯರು ಕಾಶೀರಾಮೇಶ್ವರದ ಯಾತ್ರೆಯನ್ನು ಮುಗಿಸಿಕೊಂಡು ತಿರುಗಿ ಬರುತ್ತಾರೆಂದು ಕೇಳಿ ಕೂಗಿ, ಕುಣಿದು, ಚಪ್ಪಾಳೆ ಹಾಕಿ ಸಂತೋಷವು ತಡೆಯಲಾರದೆ, ರಾತ್ರಿಯೆಲ್ಲಾ ಮಲಗದೇ ಗುಣುಗುಣುಗುಟ್ಟುತ್ತ ಕಾಲ ಕಳೆದೆವು. ಬೆಳಗಾಯಿತು. ಕಾಫಿ ಉಪ್ಪಿಟ್ಟನ್ನು ಮರೆತು, ಊರ ಬಾಗಿಲಲ್ಲಿ ನಿಂತು ಯಾವ ಗಾಡಿಯನ್ನು ನೋಡಿದರೂ "ಅಗೋ ತಾತ ಬಂದ, ತಾತ ಬಂದಾ...." ಎಂದು ಅನ್ನುತ್ತ ಒಬ್ಬರನ್ನೊಬ್ಬರು ಚುಗುಟುತ್ತಾ ಆತುರದಿಂದ ಕಾಯುತ್ತ ಹತ್ತು ಗಂಟೆಯವರೆಗೆ ಅಲ್ಲಿದ್ದೆವು. ಕೊನೆಗೆ ಅವರ ಗಾಡಿಯು ಬಂದಿತು. ಅಜ್ಜಿಯು ಇನ್ನೂ ಗಾಡಿಯಲ್ಲಿಯೇ ಇದ್ದರು. ಆದರೆ ನಮ್ಮ ತಾತನು ಮುಂದೆ ಮೆಲ್ಲಗೆ ಬರುತ್ತಿದ್ದರೂ ನಮ್ಮನ್ನು ನೋಡಿ ಓಡಿ ಬಂದು, ದಪ್ಪಿಕೊಂಡು ಏನು ಮಗೂ ಎಷ್ಟು ಬೇಗ ಬೆಳೆದೆಯೋ ಎಂದೆನ್ನುತ್ತ ಕಂಬನಿಗರೆಯತೊಡಗಿದರು. ನನ್ನ ತಂಗಿಯರೆಲ್ಲರು ನಮ್ಮ ಅಜ್ಜಿಯನ್ನು ಹುಡುಕುತ್ತ ಗಾಡಿಯ ಹಿಂದೆ ಓಡಿ "ಅಜ್ಜಿ ಅಜ್ಜಿ" ಎಂದು ಕರೆದು, ಅವರನ್ನು ಇಳಿಯುವ ಹಾಗೆ ಮಾಡಿಸಿ, ತಿಂಡಿಯನ್ನು ಕೇಳಲು ತೊಡಗಿದರು. ಇಷ್ಟರಲ್ಲೇ ನಾವು ಗಾಡಿಯಬಳಿಗೆಬಂದೆವು. ಪಾಪ! ಅಜ್ಜಿಯವರು ತಿಂಡಿಯನ್ನು ಎಲ್ಲಿಂದ ತಂದಾರು? ತಾವೇ ಹೊಟ್ಟೆಗಿಲ್ಲದೇ ಊರೂರು ಅಲೆದು, ಇದ್ದದ್ದನ್ನೆಲ್ಲಾ ಖರ್ಚು ಮಾಡಿ (ಏತಕ್ಕೆಂದು ಹೇಳಬೇಕೆ? ಕಾಶೀ ಬ್ರಾಹ್ಮಣರ ದುಡ್ಡಿನ ಆಶೆಗೆ) ಗಾಡಿಯ ಬಾಡಿಗೆಯನ್ನು ಕೂಡ ಮನೆಗೆ ಬಂದ ಮೇಲೆ ಕೊಡೋಣವೆಂದು ಅನ್ನುತ್ತ ಬಂದಿದ್ದರು. ಆದರೆ ಇದು ಮಕ್ಕಳಿಗೇನು ಗೊತ್ತು? ಕಾಶೀ ಎಂದರೆ ಒಂದು ದೊಡ್ಡ ಊರು. ಅಲ್ಲಿ ಮಿಠಾಯಿ ಮಾರುತ್ತಾರೆಂದು ನಮಗೆ ಯಾರೋ ಹೇಳಿದ್ದರು. ಆ ಮಿಠಾಯಿ ಬಾಯಿಯಲ್ಲಿ ರುಚಿರುಚಿಸುತ್ತಿದ್ದುದರಿಂದಲ್ಲವೇ ರಾತ್ರಿಯೆಲ್ಲಾ ನಿದ್ದೆಗೆಟ್ಟು ಬೆಳಗಾದರೆ ಸಾಕೆಂದು ಕಾದುದು! (ನಮ್ಮ ಅಜ್ಜಿ ಅಜ್ಜಂದಿರನ್ನು ಕಂಡರೆ ನಮಗೆ ಸ್ವಲ್ಪ ಪ್ರೇಮವೂ ಇದ್ದಿತು. ಆದರೆ ಮಕ್ಕಳಿಗೆ ಮಿಠಾಯಿ ಸಿಕ್ಕದಿದ್ದರೆ ಪ್ರೇಮವು ಹೇಗೆ ಸ್ಥಿರವಾಗಬಲ್ಲದು.)



ಶ್ರೀ. ಹಾಸನದ ರಾಜೇರಾಯರು

ಕೊನೆಗೆ ಮನೆಯ ಎದುರಿಗೆ ಗಾಡಿ ಬಂದು ನಿಂತಿತು. ನಮ್ಮ ತಂದೆತಾಯಿಗಳೂ ಅತ್ತೆ ಮಾವಂದಿರೂ ಎಲ್ಲರೂ ಸಂತೋಷದಿಂದ ಹಿಗ್ಗುತ್ತ ಯಾತ್ರೆ ಮಾಡಿಕೊಂಡು ಬಂದವರಿಗೆ ನಮಸ್ಕಾರ ಮಾಡಿ, ಗಾಡಿಯ ಸಾಮಾನುಗಳನ್ನೆಲ್ಲಾ ಇಳಿಸಿಕೊಂಡು, ಗಾಡಿಯವನಿಗೆ ದುಡ್ಡು ಕೊಟ್ಟು, ಅಜ್ಜ ಅಜ್ಜಿಯವರ ಸುತ್ತಲೂ ಕುಳಿತು ಕಾಶೀರಾಮೇಶ್ವರದ ಮಹಾತ್ಮೆಗಳನ್ನು ಕೇಳತೊಡಗಿದರು. ನಾವೂ ಸಹ ದೊಡ್ಡವರು ಹೇಗೆಮಾಡಿದರೋ ಹಾಗೇಮಾಡಬೇಕಲ್ಲವೇ? ನಾವೂ ಕಥೆಗಳನ್ನೆಲ್ಲಾ ಕೇಳಿದೆವು. "ಏನು ಹೇಳಲೀ ಸೀತೆ, ಆ ವಿಶ್ವೇಶ್ವರನ ದರುಶನ ಮಾಡಿದ ಕೂಡಲೇ ಸರ್ವಸಂಪತ್ತೂ ಬಂದಿತ್ತೆನ್ನುವ ಹಾಗೆ ಕಂಡಿತು. ಪ್ರತಿದಿನವೂ ಗಂಗೆಯಲ್ಲಿ ಮುಳುಗಿ ತೀರ್ಥಪ್ರಸಾದವನ್ನು ಮಾಡಿಕೊಂಡು, ತಿರುಗಿ ಹೋಗಿ ಮಟಮಟ ಮಧ್ಯಾಹ್ನದಲ್ಲಿ ಅಡಿಗೆಮಾಡಿ, ಬ್ರಾಹ್ಮಣರಿಗೆ ಊಟ ಹಾಕಿ, ಕೃಷ್ಣಾರ್ಪಣ ಎಂದು ಹೇಳಿ ಭೋಜನಕ್ಕೆ

CC-0. Jangamwadi Math Collection. Digitized by eGangotri

ಕುಳಿತು, ಆ ದಿನ ಮಾಡಿದ ಎಲ್ಲಾ ವಿಷಯಗಳನ್ನು ಯೋಚಿಸಿಕೊಂಡು ಎಷ್ಟು ಸಂತೋಷದಿಂದಿದ್ದೆವು. ಆದರೆ ಕೆಲವು ಬಾರಿ, ಕಪಿಗಳು ಕಣ್ಣು ಬಿಟ್ಟುಬಿಡುವದರಲ್ಲಿಯೇ ಪಾತ್ರೆಗೆ ಪಾತ್ರೆಯನ್ನೆ ತೆಗೆದುಕೊಂಡು ಬುಡಕ್ಕನೆ ಓಡಿ ಹೋಗುತ್ತಿದ್ದುವು. ಅಯ್ಯೋ! ಕಾಶಿಯಲ್ಲಿ ಕಪಿಯ ಯಾ......'' ಕಪಿ, ಎಂದೊಡನೆಯೇ ನಾವೆಲ್ಲರೂ ಒಬ್ಬರ ಮುಖವನ್ನು ಮತ್ತೊಬ್ಬರು ನೋಡುತ್ತ ಕಿಲಿಕಿಲಿ ಎಂದು ನಗಲಾರಂಭಿಸಿದೆವು. ಆದರೆ ಸೀತೆಯ ಮುಖದಲ್ಲಿ ಕೋಪದ ಜ್ವಾಲೆಯನ್ನು ಕಂಡಕೂಡಲೇ ಥಟಕ್ಕನೆ ಸುಮ್ಮನಾದೆವು.

ಹೀಗೆ ಕಾಶೀರಾಮೇಶ್ವರದ ಮಹಾತ್ಮ್ಯೆಗಳನ್ನು ಕೇಳಿ ಕೇಳಿ ಬೇಜಾರಾಯಿತು. (ಮಿಠಾಯಿ ತಂದರೇನು? ಮಿಠಾಯಿ ಇಲ್ಲದಿದ್ದರೆ ವಿಶ್ವೇಶ್ವರನ ಪ್ರಸಾದದ ರುಚಿ ಸಪ್ಪೆ....) ಸ್ನಾನ ಮಾಡುವಾಗಲಾಗಲೀ, ಊಟ ಮಾಡು ವಾಗಲಾಗಲೀ, ದಿನವೆಲ್ಲಾ ಒಂದೇ ರಾಮಾಯಣ. ವಿಶ್ವೇಶ್ವರ, ಕೇಳಿಕೇಳಿ ಸಾಕಾಯಿತು. "ಗಂಗೆಯಲ್ಲಿ ದೋಣಿ ತೇಲುವುದು...........ದೇವರ ವಾಹನದಂತಹ ದೋಣಿ...........ಗಂಗೆ ಯಮುನೆಯರ ಸಂಗಮದಲ್ಲಿ ಸ್ನಾನಕ್ಕಾಗಿ ಒಂದು ದೊಡ್ಡ ಊರನ್ನೇ ಕಟ್ಟಿರುವರು. ಏನು ಹೇಳಲೀ. ಯಮುನೆಯೂ, ನಿಜವಾಗಿ ಅಷ್ಟು ನೀಲವರ್ಣ. ಗಂಗೆಯು ತಳತಳಿಸಿ ಹೊಳೆಯುವ ವಜ್ರದ ಬಿಳುಪು........ಸಮುದ್ರದ ನೀರು, ಉಪ್ಪು ಕಣೇ ಸೀತೆ, ಶುದ್ಧ ಉಪ್ಪು ನೀರು. ಎಲ್ಲೆಲ್ಲಿಯೂ ಮರಳು....ಏನು ಹೇಳಲಿ...." ಇಗೋ ಯಾವಾಗಲೂ ಇದೇ ಆದಿನ ರಾತ್ರಿ ಹಾಸಿಗೆಯಲ್ಲಿ ಮಲಗಿ "ರಾಮೂ! ನಾನೂ ಯಾತ್ರೆ ಮಾಡುತ್ತೇನೆ ಕಣೋ. ತಾಳು ನೀನೇ ನೋಡುವೆ. ಅಜ್ಜ ಅಜ್ಜಿಯವರು ಮಿಠಾಯಿ ತರದಿದ್ದರೇನು. ನಾನು ನಿನಗೆ ಎಷ್ಟು ಬೇಕಾದರೆ ಅಷ್ಟು, ಗಾಡಿತುಂಬ ತುಂಬಿಕೊಂಡು ಬರುವೆನು.....ಖಂಡಿತ, ರಾಮೂ ಸುಳ್ಳಲ್ಲ. ಕಾಶಿ ಯಲ್ಲಾ, ಕಾಶಿಯಿಂದಾಚೆಗೆ....ಲಂಡನ್ನಿಗೇ ಹೋಗಿ ಮಿಠಾಯನ್ನು ತರುವೆನು, ಕೇಳು....ಅಳಬೇಡ. ಸುಮ್ಮ ನಿರು.....ಖಂಡಿತ. ಆದರೆ ಅಮ್ಮನಿಗೆ ಮಾತ್ರ ಹೇಳಬೇಡ ಚುಪ್!" ಹೀಗೆ ಹೇಳುತ್ತ ನನ್ನ ತಮ್ಮ (ಅಂದರೆ ಚಿಕ್ಕಪ್ಪನ ಮಗ) ರಾಮೂಗೆ ಸಮಾಧಾನ ಮಾಡಿ, ರಾತ್ರಿಯೆಲ್ಲಾ, "ಯಾತ್ರೆ ಮಾಡಬೇಕು..... ಆದರೆ ಹೇಗೆ? ದುಡ್ಡೆಲ್ಲಿಂದ ತರುವುದು....ನೋಡೋಣ." ಎಂದೆನ್ನುತ್ತ ನಿದ್ರೆಯ ಆಕಾಶದಲ್ಲಿ ವಿಮಾನದಂತೆ ತೇಲಿ ಹೋದೆನು. ಕನಸಿನಲ್ಲಿ ವಜ್ರವೈಡೂರ್ಯದ ಹಡಗುಗಳು, ನಮ್ಮೂರಿನ ತಾಲೋಕು ಕಚೇರಿಗಿಂತ ದೊಡ್ಡದಾದ ಅರಮನೆಗಳು, ದೀಪವೇಗದಿಂದ ಹೋಗುವ ರೆಕ್ಕೆಯುಳ್ಳ ಕುದುರೆಗಳು ಇವೆಲ್ಲವನ್ನು ನೋಡಿದೆನು. ಲಂಡನ್ನ ಪಟ್ಟಣದಲ್ಲಿ ಒಂದು ಮಹಾದೇವಾಲಯ. ಜನ ತುಂಬಿರುವರು. ಹೂವು ಹಣ್ಣುಗಳನ್ನು ಹಿಡಿದುಕೊಂಡು ಪ್ರಸಾದಕ್ಕಾಗಿ ಎಲ್ಲರೂ ನಿಂತಿರುವರು. ನಾನೂ ಸಂತೋಷದಿಂದ ಗರ್ಭ ಗುಡಿಯಲ್ಲಿ ನಿಂತು........ಅಷ್ಟರಲ್ಲೇ ಕನಸಿನಲ್ಲಿಯೇ "ಮಗೂ, ಮಗೂ," ಯೆಂದು ಕೇಳಿದೆ. ಕಣ್ಣು ಬಿಟ್ಟು ನೋಡುತ್ತೇನೆ. ಸೀತೆಯು "ಹೊತ್ತಾಯಿತು, ಹೊತ್ತಾ ಯಿತು. ಏಳೋ.... ಸ್ಕೂಲು ಹುಡುಗರೆಲ್ಲಾ ಹೋಗಿ ಒಂದು ಗಂಟೆಯಾಯಿತು. ನೀನು ಇನ್ನೂ ಹಾಸಿಗೆ ಯನ್ನು ಕೂಡ ಬಿಟ್ಟಿಲ್ಲಾ. ಏಳು ಮಲಗಿದ್ದು; ಸಾಕೂ" ಎಂದು ಕೂಗುತ್ತಿದ್ದಳು. ಬೇಗನೆ ಎದ್ದೆ. ಷರಾಯಿ ಕೋಟನ್ನು ಹಾಕಿಕೊಂಡೆನು. ಕಾಫಿಯು ಸುಡುಸುಡು ತ್ತಲಿದ್ದರೂ ಬೇಗನೆ ಕುಡಿದೆನು. ಬಾಗಿಲತನಕ ಹೋಗಿದ್ದ ವನು ತಿರುಗಿ ಬಂದೆನು. ಯಾರೂ ಇಲ್ಲದ್ದನ್ನು ನೋಡಿ ನಮ್ಮ ಹಾಸಿಗೆಯ ಬಳಿಗೆ ಓಡಿಹೋಗಿ ಮೆಲ್ಲಗೆ ರಾಮು ವನ್ನು ಎಬ್ಬಿಸಿ...."ರಾಮು ರಾಮು ಸುಮ್ಮನಿರು. ಅಳಬೇಡ. ನಾನೂ ಯಾತ್ರೆ ಮಾಡಿ ಮಿಠಾಯಿಗಳನ್ನು ಅಜ್ಜಿಯ ಹಾಗಲ್ಲಾ.. ನಿಜವಾಗಿಯೂ ತಂದುಕೊಡು ವೆನು.. ಬೆಳಗಿನ ಜಾವದ ಕನಸು ನಿಜವಾಗುವುದೆಂದು ಅನ್ನುವರು. ಇವತ್ತು ಬೆಳಗ್ಗೆ ನನ್ನ ಕನಸಿನಲ್ಲಿ ಲಂಡ ನ್ನಿನ ದೇವಸ್ಥಾನದಲ್ಲಿದ್ದೆ....ಕೇಳು ರಾಮು....ಮಿಠಾಯಿ ಯೇನೋ ಖಂಡಿತ. ಆದರೆ ಅಮ್ಮನಿಗೆ ಮಾತ್ರ ಹೇಳ ಬೇಡ.... ಕಾಶೀ ರಾಮೇಶ್ವರ.... ಲಂಡನ್ನು ಕೂಡ...."

* * * *

ಹೀಗೆ ಹೇಳಿದ ಹುಡುಗನು ಹನ್ನೆರಡು ವರ್ಷಗಳ ನಂತರ, ನಮ್ಮ ಈ ಪ್ರಪಂಚದ ಸರ್ವಕಷ್ಟಗಳನ್ನೂ ಧೃಢ ಮನಸಿನಿಂದ ಪರಾಜಿತವನ್ನಾಗಿ ಮಾಡಿ ನಿಂದಿಸಿದ ಸ್ನೇಹಿ ತರನ್ನು ಸ್ಮರಿಸುತ್ತಾ, ತ್ಯಜಿಸಿದ ತಂದೆಯನ್ನು ಸಹೋ ದರನಂತೆ ಕಾಣುತ್ತಾ, ಹಿಟ್ಟಿಲ್ಲದಿದ್ದರೆ ಏಕಾದಶಿ ಎನ್ನುತ್ತಾ, ಅನ್ನ ಕೊಟ್ಟ ಧಣಿಯು ದೇವರೆಂದು ಕರೆಯುತ್ತಾ, ಕಷ್ಟ

CC-0. Jangamwadi Math Collection. Digitized by eGangotri

ನಿಷ್ಠುರಗಳಿಗೆ ಹೆದರದೇ, ನಾವು ಏನು ಆಶಿಸುತ್ತೇವೋ ಅದು ಕೊನೆಗೆ ಬಂದೇ ಬರುವುದು ಎಂದು ನಂಬಿ....'ನಡೆ, ನಡೆ........ ಮುಂದೆ ನಡೆ....' ಎಂದು ಆತ್ಮವನ್ನು ಎತ್ತು ಗಳಂತೆ ಅಟ್ಟುತ್ತಾ, ಒಂದು ಸುದಿನ ಸರ್ಕಾರದ ಸ್ಕೊಲರ ಷಿಪ್ಪನ್ನು ಪಡೆದು, ಸರ್ವ ಜನರಿಂದ ಸಂತೋಷದಿಂದ ಆಶೀರ್ವದಿಸಿಕೊಂಡು.... ತನ್ನ ಊರನ್ನು ಸೀತೆಯನ್ನು ಗೆದ್ದ ರಾಮನಂತೆ ಹರುಷದಿಂದ ಬಿಟ್ಟು ಕೊಲಂಬೋ ನಗರದ ಕಡೆಗೆ ಪ್ರಯಾಣ ಬೆಳಸಿದನು. ಊರು ದೂರ ದೂರ ಹೋದಂತೆ, ಕಣ್ಣಲ್ಲಿ ಮೆಲ್ಲಗೆ ನೀರು ಬಂತಿತು. "ಹೇ ! ನಗರವೇ ! ನಿನ್ನ ತೊಡೆಯ ಮೇಲೆ ಮಲಗಿ ಮಗುವಿನಂತೆ ಹಾಲು ಕುಡಿದು, ಅತ್ತತ್ತ ಪತ್ತತ್ತ ಎಂದು ಉಚ್ಚರಿಸಿದೆನು. ಸುಳ್ಳು ಹೇಳಿದೆ. ಸಿಟ್ಟಿನಿಂದ ಕೆಟ್ಟ ಮಾತುಗಳನ್ನು ನುಡಿದೆ. ಹೀನ ಯೋಚನೆಗಳನ್ನು ಮನಸಿ ನಲ್ಲೆ ರಕ್ಷಿಸಿದೆ. ಆದರೆ ಮತ್ತೊಬ್ಬರಿಗೆ ಕೆಡುಕನ್ನು ಮಾಡ ಲಿಲ್ಲ. ಸುಜನರನ್ನು ಹೀಯಾಳಿಸಲಿಲ್ಲ. ದುರ್ಬಲರನ್ನು ಕೆಡವಲಿಲ್ಲ....ಹೇ ! ಪ್ರೇಮನಗರವೆ ನನ್ನ ತಪ್ಪುಗಳನ್ನು ಮರೆ. ನಿನ್ನ ಕೈ ಎತ್ತಿ ಆಶೀರ್ವದಿಸು....ನಾನು ತಿರುಗಿ ನಿನ್ನ ಬಳಿಗೆ ಬರುವಾಗ ನನ್ನ ಕೀಳು ಗುಣಗಳನ್ನು ಕಳೆಯಂತೆ ಕಿತ್ತು, ಉಷಃಕಾಲದ ಆಕಾಶದಂತೆ ನನ್ನ ಹೃದ ಯವನ್ನು ಪ್ರಸನ್ನ ಮಾಡಿ ನಿನಗೆ ಅರ್ಪಿಸುವೆನು. ಹೇ ! ದೇವತೆ! ಆಶೀರ್ವದಿಸು....." ಎಂಬ ಉದ್ಗಾರಗಳು ಮನ ಸ್ಸಿನಲ್ಲಿ ಮೂಡಹತ್ತಿದವು. ಎಷ್ಟು ಕೇಳಿದರೂ ಆಶೀ ರ್ವಾದವು ಎಲ್ಲಿಂದ ಬರುವುದು. ನಮ್ಮ ಹೃದಯದ ಸಂತೋಷವೇ ಆ ದೇವತೆಯ ಅನುಗ್ರಹವಲ್ಲವೇ ?

ಗಿಡಗುಡ್ಡನದಿಗಳು ದೊಡ್ಡ ಹಕ್ಕಿಗಳಂತೆ ಹಾರಿ ಹೋದುವು. ರೈಲು ನಿಂತಿತು. ಜನರು ಒಳಗೆ ಬಂದರು. ಮತ್ತೆ ಇಗೋ ಕೂಗಿತು. ಕಟ್ಟ ಕಟ್ಟ ಕಟ್ಟ ಎಂದು ಅತಿ ವೇಗದಿಂದ ಓಡಿತು......ಎಲ್ಲಿಗೆ....ಯಾರು ಬಲ್ಲರು? ನನ್ನ ಬಳಿಯಲ್ಲಿ ಕುಳಿತಿದ್ದ ಜನರಿಗೆ ನನ್ನ ಸಂತೋಷವೇನು ಗೊತ್ತು. ಹೂವುಗಳೂ ಹೂವಿನ ಮಾಲೆಗಳೂ ರಾಸಿ ರಾಸಿಯಾಗಿ ಎಲ್ಲಿಲ್ಲಿಯೂ ನಮ್ಮ ಕಂಪಾರ್ಟಮೆಂಟಿನಲ್ಲಿ ಕಾಣಬರುತ್ತಲಿದ್ದವು. ನನ್ನ ಪೆಟ್ಟಿಗೆಗಳನ್ನು ನೋಡಿ ನನ್ನ ಬಳಿ ಕುಳಿತಿದ್ದ ಒಬ್ಬ ಮಹಾಶಯನು ತನ್ನ ಹೆಂಡತಿಯ ಕಡೆಗೆ ತಿರುಗಿ....'ದೂರ ದೇಶಕ್ಕೆ ಹೋಗುವ ಹಾಗೆ ಕಾಣುತ್ತದೆ. ಚಿಕ್ಕ ಹುಡುಗ. ಆದರೆ ಈ ಕಾಲ ದಲ್ಲಿ ಏನು ತಾನೆ ಹೇಳಬಹುದು. ಚಿಕ್ಕಪುಟ್ಟವರೆಲ್ಲಾ ಬಿ. ಎ., ಎಂ. ಎ. ಪರೀಕ್ಷೆಗಳನ್ನು ಪ್ಯಾಸ ಮಾಡಿ ಪಾಶ್ಚಾತ್ಯ ದೇಶಗಳಿಗೆ ಹೋಗುವರು. ನಮ್ಮ ಹಾಗೆ ಮೆಟ್ರಿಕ್ ಪ್ಯಾಸು ಮಾಡಿ ಇಪ್ಪತ್ತುರು ರೂಪಾಯಿ ಗಳನ್ನು ಸಂಪಾದಿಸುವ ಕಾಲ ಹೋಯಿತು'.....ಎಂದು ಹೇಳಹತ್ತಿದನು. ಹಾಗೋ ಹೀಗೋ ಮಾತಾಡಿಸ ಬೇಕೆಂದು ನಿಶ್ಚಯಿಸಿ, ಒಬ್ಬ ಸುಮಾರು ನಲವತ್ತೈದು ವರ್ಷದ ಮಹನೀಯನು ನನ್ನ ಬಳಿ ಬಂದು 'ಏನು ಸ್ವಾಮಿ ! ಯಾವೂರಿಗೆ ? ನಿಮ್ಮ ಸಾಮಾನುಗಳನ್ನು ನೋಡಿದರೆ ದೂರ ದೇಶಕ್ಕೆ ಹೋಗುವ ಹಾಗೆ ಕಾಣು ತ್ತದೆ !'........ಎಂದರು. ಎಲ್ಲರು ಕಿವಿಗೊಟ್ಟು ಕೇಳಲು ನಿಂತರು. 'ಹೌದು ಸ್ವಾಮಿ. ದೂರ ದೇಶಕ್ಕೆ ಹೋಗು ವೆನು. ಹದಿನೈದು ದಿನ ಸಮುದ್ರದ ಮೇಲೆ ಪ್ರಯಾಣ ಮಾಡಬೇಕು. ಕೊನೆಗೆ ಫ್ರಾನ್ಸು ದೇಶಕ್ಕೆ ತಲುಪು ವೆನು. ನಿಮಗೆ ತಿಳಿಯದೇನು....ಫ್ರಾನ್ಸು ದೇಶ....' 'ನಾನೇನು ಬಲ್ಲೇ. ನಮ್ಮೂರಿನ ಸಾಲೆಯ ಮೆಷ್ಟ್ರು ಭೂವಿವರಣೆಯ ಕ್ಲಾಸಿನಲ್ಲಿ ಬೀಡೀಸೇದಲು ಆರಂಭಿಸುತ್ತಿದ್ದರು. ಅರ್ಧ ಗಂಟೆಗೆ ಒಂದು ಸರ್ತಿ. ಏನೋ ಮೈಸೂರು ದೇಶದಲ್ಲಿ ಎಷ್ಟು ಡಿಸ್ಟ್ರಿಕ್ಟುಗಳಿವೆ ಎಂದು ಕೇಳಿ, ಎಂಟು ಎನ್ನುವದರೊಳಗೆ ಮೂರ್ಖ, ಮೂರ್ಖನೆಂದು ಬಯ್ಯುತ್ತ ಕೆನ್ನೆಗೆ ಹೊಡೆದು, ಹೊರಗೆ ಬೀಡಿ ಹಚ್ಚಿಕೊಳ್ಳುವುದಕ್ಕೆ ಬೆಂಕೀಕಡ್ಡಿಯನ್ನು ಕೇಳಲು ಹೋಗುತ್ತಿದ್ದರು. ಏನು ಹೇಳಲಿ ನಮ್ಮೂರಿನ ಪಾಠ ಶಾಲೆ....' ಎಂದೆನ್ನುತ್ತ ನಗಲಾರಂಭಿಸಿದರು. ಫ್ರಾನ್ಸು ದೇಶದ ಬಗೆಗೆ ಕೆಲವು ವಿಚಾರಗಳನ್ನು ಹೇಳಿ, ಊರು ಹೊಲಗಳ ವಿಚಾರ ಮಾತನಾಡಿದೆವು. ಎಂತಹ ಸುಜ ನರು ನಮ್ಮ ಕರ್ನಾಟಕರು ! .... ಸಾಯಂಕಾಲ ವಾಯಿತು. ರೈಲು ಗುಂಟಕಲ್ಲಿಗೆ ಬಂದಿತು. ನಮ್ಮ ಹೊಸ ಸ್ನೇಹಿತರು ಬಳ್ಳಾರಿಯ ರೈಲನ್ನು ಹತ್ತಿದರು. ನಾನು ಮದ್ರಾಸಿನ ಕಡೆಗೆ ಹೊರಟೆ. ಕೆಲವು ಘಳಿಗೆ ಗಳಲ್ಲಿಯೇ ನನ್ನ ಪ್ರೇಮದ ಕರ್ನಾಟಕಮಾತೆಯನ್ನು ಬಿಟ್ಟು ಪರದೇಶವನ್ನು ಹೊಕ್ಕೆನು. ಎಲ್ಲಿಗೆ ಹೋದರೂ, ಎಂತಹ ಬ್ರಹ್ಮಲೋಕವೇ ಆಗಿರಲೀ, ನಮ್ಮ ಸ್ವದೇಶ ದಂತೆ ಎಂದಿಗೂ ಇರಲಾರದು. ಕರ್ನಾಟಕದ ಹನಿ ನೀರು ಕೂಡ ಪರದೇಶದ ಅಮೃತಕ್ಕಿಂತ ಶ್ರೇಷ್ಠ. ಹೇಗಾ



CC-0. Jangamwadi Math Collection. Digitized by eGangotri

ದರೇನು, ನಮ್ಮ ತಾಯಿಯು ಯಾವಾಗಲೂ ನಮ್ಮ ತಾಯಿ........ಜಯಕರ್ನಾಟಕ....!

ಕೊಲಂಬೋನಗರ. ಸಂಧ್ಯಾಕಾಲ. ಆಕಾಶದಲ್ಲಿ ಒಂದು ಮೇಘವೂ ಕೂಡ ಇರಲಿಲ್ಲ. ಸಮುದ್ರವು, ಬಾ, ಬಾ ಎಂದು ಕರೆಯುತ್ತ ನನ್ನ ಕಾಲಿನ ಬಳಿ ಹಾಡುತ್ತಿರುವುದು. ದೂರದಲ್ಲಿ ತೆಂಗಿನ ತೋಟಗಳು ಬ್ರಹ್ಮಾನಂದದಿಂದ ನಿದ್ರಿಸುತ್ತಲಿದ್ದುವು. ಒಂದು ದೊಡ್ಡ ನಕ್ಷತ್ರದ ಕೆಳಗೆ ಕೆಲವು ಹಡಗುಗಳು ತೇಲಿ ಹೋಗುತ್ತಲಿರುವವು. ಕೆಲವು ನಿಮಿಷಗಳು ಮಾತ್ರ ಕಣ್ಣು ಮುಚ್ಚಿಕೊಂಡೆ. ಎಂತಹ ಬ್ರಹ್ಮದ್ವಿಗ್ವಿಜಯಗಳನ್ನು ಕಂಡೆನು. ಸಮುದ್ರವೆಲ್ಲಾ ದೇವತೆಗಳ ಸಂಚಾರಭೂಮಿಯ ಹಾಗೆ ಕಂಡು ಬಂದಿತು. ರಾಮರಾವಣರ ಯುದ್ಧವು ನಿನ್ನೆಯೇ ನಡೆದಂತೆ ಎನಿಸಿತು. ನನ್ನ ಆತ್ಮವು ತನ್ನ ನಿಜ ಹೃದಯವನ್ನು ಹೊಕ್ಕು ಅಲ್ಲಿಯ ಸರ್ವ ತೇಜಸ್ಸನ್ನು ಕಂಡು ನಡುಗಿ ಆ ತೇಜಸ್ಸಿನಲ್ಲಿ ಮುಳುಗಿತು. ಸೃಷ್ಟಿಯ ಸ್ನೇಹದಿಂದಲ್ಲವೇ ನಮ್ಮ ಆತ್ಮವು ಬ್ರಹ್ಮನ ಕಡೆಗೆ ತಿರುಗುವುದು ? ಹೇ ಭರತಮಾತೆ ! ನಿನ್ನ ಪಾದದ ಬಳಿ ಮಲಗಿ ಪರಬ್ರಹ್ಮನ ದರ್ಶನವನ್ನು ಮಾಡಿದೆನು. ನಿನ್ನನ್ನು ಬಿಟ್ಟು, ನಿನ್ನ ಅಕ್ಕತಂಗಿಯರ ಬಳಿಗೆ ಹೋದರೂ ನಿನ್ನನ್ನು ಮರೆಯಲಾರೆ. ಗುಲಾಬಿಯನ್ನು ಕಂಡರೆ ತಾನೆ ಕಮಲವನ್ನು ಮರೆಯಬಲ್ಲೆನೆ. ಹೇ ! ಮಾತೆ ! ನಿನ್ನ ಪಾದದಲ್ಲಿ ನಿಂತು ಸಾಷ್ಟಾಂಗ ನಮಸ್ಕಾರವನ್ನು ಮಾಡುವೆನು.........!!

ಜಯ ಜಯ ಭಾರತ ಮಾತೆಗೆ
ಜಯ ಜಯ ಕರ್ನಾಟಕ ದೇವತೆಗೆ....!

* * *



ನಮ್ಮ ಹಡಗು ("Oronsay")

ಬೆಳಗಾಯಿತು. ಎಲ್ಲೆಲ್ಲಿ ನೋಡಿದರೂ ನೀಲಸಾಗರತಲ. ಮೇಘ ಕವಿದ ಆಕಾಶ. ಬಿಳಿಯ ಸೇವಂತಿಗೆ ಹೂವಿನ ಮಾಲೆಗಳಂತೆ ನೊರೆಗೂಡಿದ ಅಲೆಗಳು ಒಂದರ ಹಿಂದೊಂದು ತೇಲುತ್ತಿದ್ದುವು. ಕೆಲವು ಬಾರಿ ಭುಸ್ ಭುಸ್ ಎನ್ನುತ್ತ ದೊಡ್ಡ ಸರ್ಪಗಳಂತೆ ನಮ್ಮ ಹಡಗಿನ ಪಾರ್ಶ್ವಗಳಿಗೆ ಹೊಡೆದು ಹೆಡೆಯಂತೆ ಎದ್ದು ಕ್ಷಣ ಮಾತ್ರ ನಿಂದು ಭೂಸ್ ಭೂಸ್ ಎಂದು ಅನ್ನುತ್ತಾ ಪುನಃ ಸಮುದ್ರದ ಮಧ್ಯೆ ಅಡಗಿ ಹೋಗುತಿದ್ದುವು. ನನ್ನ ಆರಾಮುಕುರ್ಚಿಯಲ್ಲಿ ಕುಳಿತು ಸೃಷ್ಟಿಯ ಎರಡು ಮಹಾ ದೇವತೆಗಳನ್ನು ನೋಡುತ್ತ ಧ್ಯಾನ ಮಗ್ನನಾಗಿ ತತ್ವವಿಚಾರಗಳನ್ನು ಯೋಚಿಸತೊಡಗಿದೆನು. ಈ ಮಹಾ ಪ್ರಪಂಚದಲ್ಲಿ ನಾವು ಎಷ್ಟು ಚಿಕ್ಕ ಇರುವೆಗಳು ! ಇದೇ ಆಕಾಶದ ಕೆಳಗೆ ಎಷ್ಟು ಕೋಟಿ ಜನರು ವಾಸಿಸುತ್ತಿರುವರು! ಇದೇ ಸಮುದ್ರವು ಎಷ್ಟು ದೇಶಗಳಿಗೆ ಲಾಲಿ ಹಾಡಿ ಕೂಗಿ ಮಲಗಿಸುವುದು! ನಮ್ಮ ಊರು, ನಮ್ಮ ದೇಶ, ನಮ್ಮ ಮನೆ, ನಮ್ಮ ಸಹೋದರರು ಇವೆಲ್ಲ ಏತಕ್ಕೆ ? ಅವರು ಯಾರು ಸಮುದ್ರ ಆಕಾಶಗಳ ಮಧ್ಯೆ ನಾವು ಒಂದು ಸೊಳ್ಳೆಗಿಂತ ಕೀಳಲ್ಲವೇ ? ಸೊಳ್ಳೆಯಾದರೂ ಹಾರಬಲ್ಲದು....... ಆದರೆ ನಾವು....ಸೃಷ್ಟಿಯ ಗುಲಾಮರು. ಗುಲಾಮರು! ಹೌದು. ಗುಲಾಮರು ! ಆದರೆ ಏತಕ್ಕೆ ಗುಲಾಮರು! ಏನು ತಪ್ಪು ಮಾಡಿದೆವು!....ಹೀಗೆ ಕೇಳುತ್ತಾ ಹೋದರೆ ನಮ್ಮ ಆತ್ಮವು ತನ್ನ ನಿದ್ದೆಯನ್ನು ಬಿಟ್ಟು ಹೀಗೆ ಉತ್ತರ ಕೊಡುವುದು ಕೇಳಬರುವುದು.

"ಗುಲಾಮನೆ ನೀನು ? ಗುಲಾಮನಲ್ಲ. ಪ್ರೇಮ ಸಹೋದರ. ನಿನ್ನ ಸಣ್ಣ ಪ್ರಪಂಚವನ್ನು ಬಿಟ್ಟು ನಿಜ ಪ್ರಪಂಚವನ್ನು ಹೊಕ್ಕರೆ ಆ ನಿಜ ಪ್ರಪಂಚದಲ್ಲಿ ನೀನು ಗುಲಾಮನಲ್ಲ. ಸರ್ವದೇವತೆಗಳ ಮಧ್ಯೆ ನೀನೊಬ್ಬ ದೇವತೆ. ಆ ತಾಂಡವದ ನಾಟ್ಯದಲ್ಲಿ ನೀನೊಂದು ನಾಟ್ಯ."

ಹೀಗೆ ಯೋಚಿಸುತ್ತ ನನ್ನಲ್ಲಿ ನಾನೇ ವಾದಿಸುತ್ತ ಮಧ್ಯಾಹ್ನ ಹನ್ನೆರಡು ಗಂಟೆಯುವರೆಗೆ ನನ್ನ ಕುರ್ಚಿಯಲ್ಲಿಯೆ ಕುಳಿತಿದ್ದೆನು. ಕೊನೆಗೆ ಗಂಟೆ ಹೊಡೆದರು. ಊಟದ ಹೊತ್ತು. ಎಲ್ಲರೂ ಬೇಗ ಬೇಗನೆ ಎದ್ದು ತಮ್ಮ ತಮ್ಮ 'ಕ್ಯಾಬಿನ್ನಿ' ಗೆ ಹೋದರು. ನಾನು ಕೂಡ ಹೋದೆ. ಕೈಕಾಲು ತೊಳೆದುಕೊಂಡು ಊಟದ ಮನೆ

CC-0. Jangamwadi Math Collection. Digitized by eGangotri

ಯನ್ನು ಹೊಕ್ಕೆ. ಒಂದು ಸಾವಿರ ಜನರು....ಆಸ್ಟ್ರೇಲಿಯಾ, ನ್ಯೂಜಿಲೆಂಡ, ಇಟಲೀ, ಫ್ರಾನ್ಸ, ಜರ್ಮನೀ, ಇಂಗ್ಲಾಂಡು....ಎಲ್ಲಾ ದೇಶದ ಜನರೂ ನಮ್ಮ ಜೊತೆಯಲ್ಲಿ ಪ್ರಯಾಣಮಾಡುತ್ತಿದ್ದರು. ಮೂರನೇ ಕ್ಲಾಸಿರುವ ಹಡಗು. ಕ್ರಯ ಸುಲಭ. ಮುನ್ನೂರು ಐವತ್ತು ರೂಪಾಯಿಗಳಿಗೆ ಕೊಲಂಬೊನಗರದಿಂದ ಲಂಡನ್ನಿಗೆ ಮುಟ್ಟಿಸುವುದು. ತೃಪ್ತಿಯಾಗುವಂತಹ ಊಟವನ್ನು ಹಾಕುವರು. ಸುಖವಾಗಿ ಮಲಗುವಂತಹ ಹಾಸಿಗೆಯನ್ನೂ ಕೊಡುವರು. ಇನ್ನೇನು ಬೇಕು ? ನಿಜ ! ಒಂದು ಕ್ಯಾಬಿನ್ನಿನಲ್ಲಿ ಆರು ಜನ ಮಲಗಬೇಕು. ಆದರೆ ಸೆಕೆ ಕಾಲದಲ್ಲಿ ಕ್ಯಾಬಿನ್ನಿನಲ್ಲಿ ಯಾರು ಮಲಗುವರು. ಎಲ್ಲರೂ ತಮ್ಮ ತಮ್ಮ ಕುರ್ಚಿಯಲ್ಲಿ ಕುಳಿತು ಕಾಲು ಚಾಚಿಕೊಂಡು ಕದಲದಂತೆ ನಿದ್ದೆ ಹೋಗುವರು..... ಏನಾದರೂ ಆಗಲೀ ಹೆಚ್ಚು ದುಡ್ಡು ಖರ್ಚು ಮಾಡುವುದಕ್ಕೆ ಅಶಕ್ತನಾದಂತಹ ನನಗೆಮೂರನೇಯ ಕ್ಲಾಸಲ್ಲಾ, ಹತ್ತನೇಯ ಕ್ಲಾಸಾದರೇನು? ನಮ್ಮ ತಾತ ಮುತ್ತಾತಂದಿರು ಗುರುಗಳ ಆಶ್ರಮಕ್ಕೆ ಹೋಗುವ ರಸ್ತೆಯಲ್ಲಿ ಎಷ್ಟು ಕಷ್ಟವನ್ನು ಪಡಲಿಲ್ಲ ! ಆನೆ, ಹುಲಿ, ಚಿರುತೆಗಳ ಕಾಟವಿದ್ದರೂ, ದೇವರ ಹೃದಯದಲ್ಲಿ ತಮ್ಮ ಆತ್ಮವನ್ನಿಟ್ಟು ಒಂದೇ ಮನಸ್ಸಿನಿಂದ ಹೋಗಲಿಲ್ಲವೆ ? ಹುಲ್ಲಿನ ಮೆದೆಯೋ, ಆಟ್ಟದ ಕೊಟಡಿಯೋ, ಯಾವುದಾದರೇನು ಎಂದು ಅತ್ಯಂತ ಕಷ್ಟಗಳನ್ನೆಲ್ಲಾ ಮರೆತು ವಿದ್ಯೆಯೇ ಮುಖ್ಯವೆಂದು ಹೇಳಿ ಧೃಢಮನಸ್ಸಿನಿಂದ ಆರು ತಿಂಗಳಾದರೂ ಹೋಗುತ್ತಿರಲಿಲ್ಲವೇ ? ಮೂರನೇಯ ಕ್ಲಾಸಾದರೇನು. ವಿದ್ಯೆಯನ್ನು ಕಲಿಯುವುದಕ್ಕೆ ವಿಲಾಯತಿಗೆ ಹೋದರೆ **ಪಿ. ಎಂಡು. ಓ.** ಬೋಟೇ ಆಗಬೇಕೇನು. ನಮ್ಮ ಜೊತೆಯಲ್ಲಿದ್ದ ಕೆಲವು ಮಹಾ ಜನರು ಪಿ. ಎಂಡು ಓ. ಬೋಟಿನಲ್ಲಿ ಫಸ್ಟಕ್ಲಾಸಿನ ಜಾಗವು ಸಿಕ್ಕಲಿಲ್ಲವೆಂಬ ಶೋಕದಿಂದ ಕಳ್ಳರಂತೆ ಬಚ್ಚಿಕೊಂಡು ಮೂರನೆಯ ಕ್ಲಾಸಿನಲ್ಲಿ ಪ್ರಯಾಣಮಾಡುತ್ತಿದ್ದರು: 'ನ್ಯಾಪಲ್ಸ ತಂಕಾ ಸ್ವಾಮಿ.[ನೇಪಲ್ಸ್. ಅಲ್ಲಿಂದ ಮುಂದೆ ಲಂಡನ್ನಿಗೆ ವಿಮಾನದ ಮೂಲಕ ಹೋಗುವೆವು. ಪಿ. ಎಂಡು. ಓ. ಫಸ್ಟ ಕ್ಲಾಸು ಸಿಕ್ಕದಿದ್ದರೆ ತಾನೆ ವಿಮಾನದಲ್ಲಿ ಹೋದರೆ, ಅದಕ್ಕಿಂತ ಹೆಚ್ಚಲ್ಲವೆ.' ಇದನ್ನು ಕೇಳಿ ನಕ್ಕು, ' ನಮ್ಮ ಭಾರತ ಮಾತೆಯು ಇಂತಹ ಮೂರ್ಖರನ್ನೂ ಪ್ರಪಂಚಕ್ಕೆ ಕೊಟ್ಟಿದ್ದಾಳೆ ' ಎಂದು ಅನ್ನುತ್ತಾ ಸುಮ್ಮನಾದೆ. ಆದರೆ ನಮ್ಮ ಭಾರತೀಯರಲ್ಲಿದ್ದ ಆ ಪಿ. ಎಂಡು ಓ ಫಸ್ಟು ಕ್ಲಾಸಿನ ಮೂರ್ಖರಿಗಿಂತ ಹೆಚ್ಚು ಮೂರ್ಖರನ್ನು ಯುರೋಪಿನಲ್ಲಿ ನೋಡಿ ಒಂದು ಸೇರು ಹಾಲು ಕುಡಿದು ನಿಟ್ಟುಸಿರನ್ನು ಬಿಡಬೇಕಾಯಿತು..... ಆ ವಿಚಾರವನ್ನು ಮುಂದೆ ವಿವರಿಸುವೆನು. ತಡೆಯಿರಿ.

ಈ ಮಧ್ಯೆ, ಅಂದರೆ ಪಿ. ಎಂಡು ಓ. ಬೋಟಿನ ಫಸ್ಟ ಕ್ಲಾಸಿನ ವಿಚಾರದಲ್ಲಿ ನಮ್ಮ ಊಟದ ಮನೆಯನ್ನು ಮರೆತೇ ಬಿಟ್ಟೆ. ಆದರೆ ಇಗೋ ತಿರುಗಿ ಬಂದೆ. ಊಟದ ವಿಚಾರವನ್ನು ಹೇಳುವೆನು.

ನಮ್ಮಲ್ಲಿ ಸುಮಾರು ನೂರು ಜನ ಭಾರತೀಯರಿದ್ದರು. ಬಂಗಾಳ, ಪಂಜಾಬು, ಕಾಶ್ಮೀರ, ಹೈದರಾಬಾದು, ಮೈಸೂರು, ತ್ರಾವಿನಕೋರ ಎಲ್ಲಾ ಕಡೆಯಿಂದ ಪ್ರಯಾಣಿಕರು ಬಂದಿದ್ದರು. ಹಿಂದುಗಳು, ಮುಸಲ್ಮಾನರು ಕ್ರಿಸ್ತರು ಎಲ್ಲರೂ ಇದ್ದರು. ಆಂಗ್ಲೊ ಇಂಡಿಯನ್ನರೂ ಇದ್ದರು. ಆದರೆ ಅವರು ಭಾರತೀಯರೋ ಯುರೋಪಿಯನ್ನರೋ ಹೇಳಲಾಗುತ್ತಿದ್ದಿಲ್ಲ. ಸಾಧಾರಣವಾಗಿ ಹಿಂದುಸ್ಥಾನದಲ್ಲಿ ಇವರು ತಮ್ಮನ್ನು ಯುರೋಪಿಯನ್ನರೆಂದು ಕರೆದುಕೊಳ್ಳುವರು. ಯುರೋಪಿನಲ್ಲಿ ಇವರಿಗೆ ಭಾರತೀಯರೆಂದು ಹೇಳುವರು. ಆದರೆ ಈ ಎರಡರ ಮಧ್ಯೆ ಹಿಂದೂಸಾಗರದಲ್ಲಿ ಯಾವ ದೇಶದ ಮಕ್ಕಳೆಂದು ತಿಳಿಯಬೇಕಾಗಿದ್ದಿತೋ ನಾನೇನೂ ಹೇಳಲಾರೆ.

ಒಂದು ಟೇಬಲ್ಲಿಗೆ ಇಪ್ಪತ್ತು ಜನದಂತೆ ಕುರ್ಚಿಗಳನ್ನಿಟ್ಟಿದ್ದರು. ನಮ್ಮ ಭಾರತೀಯರೆಲ್ಲರು ಐದು ಟೇಬಲ್ಲನ್ನು ಆಕ್ರಮಿಸಿದ್ದರು. ನಮ್ಮ ಟೇಬಲ್ಲಿನಲ್ಲಿ ಯಾವಾಗಲೂ ಗದ್ದಲ. ನನ್ನ ಮುಂದೆ ಉತ್ತರದೇಶದ ಕೆಲವರು ರಾಕ್ಷಸರಂತೆ ತಿನ್ನುತ್ತ ಘಳಿಘಳಿಗೆಗೆ ಕಿಲಿಕಿಲಿ ಎಂದು ನಗುತ್ತ ಬಿಟ್ಟುಹೋದರೆ ಸಾಕಪ್ಪ ಎಂದು ಅನ್ನುವ ಹಾಗೆ ಮಾಡುತ್ತಿದ್ದರು. ಆದರೆ ದೇವರ ದಯದಿಂದ ಒಬ್ಬ ಮಹಾ ಸರಳಮನಸ್ಸುಳ್ಳ ಮುಸಲ್ಮಾನ ಹುಡುಗನು ನನ್ನ ಬಳಿ ಕುಳಿತು ಆಗಾಗ ಮಾತಾಡಿಸುತ್ತಿದ್ದನು. ನಾನು ಮಾಂಸಾಹಾರಗಳನ್ನು ತಿನ್ನುತ್ತಿರಲಿಲ್ಲವಾದುದರಿಂದ ಅಡಿಗೆಯ ಯಜಮಾನನಿಗೆ ಹೇಳಿ, ಅನ್ನ ಕಾಯಿಪಲ್ಯೆಗಳನ್ನು ಕೊಡುವ ಹಾಗೆ ಮಾಡುವುದಕ್ಕೆ ಹೋದಾಗ ಈ ಮುಸಲ್ಮಾನ ಹುಡುಗನು ನನ್ನ

CC-0. Jangamwadi Math Collection. Digitized by eGangotri

ಜೊತೆಯಲ್ಲಿ ಬಂದಿದ್ದನು. ಆ ಸ್ವಲ್ಪ ವೇಳೆಯ ಸಹವಾಸವು ಸ್ನೇಹವಾಗಿ ಪರಿಣಮಿಸಿತು. ಕೆಲವು ವೇಳೆ ನಮ್ಮ ಸ್ವದೇಶಿಗಳನ್ನು ಕಂಡು ಅವರ ಗಲಭೆಯನ್ನು ತಡೆಯಲಾರದೆ ನಾವಿಬ್ಬರೂ 'ದಯವಿಟ್ಟು, ಮೆಲ್ಲಗೆ ಮಾತನಾಡಿ, ಸ್ವಾಮಿ........' ಎಂದು ಹೇಳುತ್ತಿದ್ದೆವು. ಆದರೆ ಕೇಳುವವರು ಯಾರು! ಬಡಿಸುವ ಬಟ್ಲರ್ರು ಹಣ್ಣು ತಂದರಂತೂ ಎಲ್ಲರೂ ಹತ್ತು ದಿನ ಅನ್ನವಿಲ್ಲದ ನಾಯಿಯಂತೆ ಅದರ ಮೇಲೆ ದುಮುಕಿ, ಪರಚಿ, ಕಿತ್ತು, ಖೊಕ್‌ಖೊಕ್ ಎಂದು ನಗಲಾರಂಭಿಸುತ್ತಿದ್ದರು. ಕೊನೆಗೆ ತಡೆಯಲಾರದೆ ಊಟದ ಯಜಮಾನನು ಬಂದು 'ನಿಧಾನ....ನಿಧಾನ ಹೀಗೆ ಮಾಡುವುದು ಸರಿಯಲ್ಲ' ಎಂದು ಹೇಳಬೇಕಾಯಿತು. ಇದನ್ನು ಸುತ್ತುಮುತ್ತಲಿದ್ದ ಅನ್ಯ ದೇಶದ ಜನರು, ನಮ್ಮ ಕಡೆಗೆ ತಿರುಗಿ "ಹಾಗೆ ಆಗಬೇಕು. ಕಪಿಗಳೇ........" ಎಂದು ಅನ್ನುವ ಹಾಗೆ ನಗಲಾರಂಭಿಸಿದರು. ಇಗೋ ಇದೇ ನಮ್ಮ ಭಾರತೀಯರ ನಡೆವಳಿಕೆ.

ನಮ್ಮಲ್ಲಿ ಕೆಲವರು ಬ್ರಾಹ್ಮಣರು ಕೆಲವರು ವೈಶ್ಯರ್ರು ಇದ್ದರು. ಹುಟ್ಟಿದಾರಭ್ಯ ಮಾಂಸವನ್ನು ಮೂಸಿ ಸಹ ನೋಡಿದವರಲ್ಲ. ಆದರೆ, ಹೇಟು, ಸೂಟುಗಳನ್ನು ಧರಿಸಿದ ಮೇಲೆ ಕೆಂಪು ಮನುಷ್ಯನ ಹಾಗೆ ಮಾಡದಿದ್ದರೆ ನಗೆಗೀಡಾಗುವ ವಿಷಯವಲ್ಲವೇ. ದೋಣಿಯನ್ನು ಹತ್ತುವುದನ್ನೇ ಕಾದಿದ್ದರು. ಆ ದಿನ ರಾತ್ರಿಯೇ ಎಲ್ಲವನ್ನೂ ತಿನ್ನಲಾರಂಭಿಸಿದರು. ಫೋರ್ಕು, ಚಮಚಾ ಚೂರಿಗಳನ್ನು ಹಿಡಿಯುವುದಕ್ಕೆ ಮುಂಚೆ, ಸಾಹೇಬರಿಗಿಂತ ಹೆಚ್ಚಾಗಿ ಕೈಯಾಡಿಸುವುದಕ್ಕೆ ಮೊದಲು ಮಾಡಿದರು. ಇದರ ಮೇಲೆ ಸಿಗರೇಟು ಸೇದುತ್ತಿದ್ದವರು ನೆಟ್ಟಗೆ ಪೈಪಿನ ಅಭ್ಯಾಸವನ್ನೆ ಮಾಡತೊಡಗಿದರು. ಆಕ್ಸಫರ್ಡ ಬ್ಯಾಗ್ಸ್ (Oxford Bags) ತೊಟ್ಟುಕೊಂಡು, ಬ್ಲೆಜರ್ (Blezer) ಧರಿಸಿಕೊಂಡು, ಹಳದಿ, ಕೆಂಪು, ನೀಲ ನೆಕ್ಕಟೈ ಮೇಲೆ, ಚಿನ್ನದ ಪಿನ್ನನ್ನು ಚುಚ್ಚಿಕೊಂಡು, ಕನ್ನಡಿಯಂತೆ ಬೆಳಗುತ್ತಿರುವ ಜೊತೆಗಳನ್ನು ಹಾಕಿಕೊಂಡು, ಸೂಳೆಯ ಕೂದಲಿನಂತೆ ತಲೆಯನ್ನು ಬಾಚಿಕೊಂಡು, ಸ್ವಲ್ಪ ಮಾತ್ರ ಪವುಡರ್ ಬಳಿದುಕೊಂಡು ಮೆರೆಯುವ ಮಹಾಶಯರಿಗೆ ಪೈಪಿಲ್ಲದಿದ್ದರೆ ಅವಮಾನವಲ್ಲವೆ. ಆದರ ವಾಸನೆಯೇನೋ ತಡೆಯಲಾಗುವದಿಲ್ಲ. ಆದರೆ, ಖಂಡಿತವಾಗಿಯೂ ಪೈಪಿಲ್ಲದೇ ಇದ್ದರೆ ಜನರು "ಎಂತಹ ಹಳ್ಳಿಗಾಡಿನ ಮನುಷ್ಯ" ಎಂದು ಅನ್ನುವರು.........ಇನ್ನು ಮೇಲೆ ಸೊಸಾಯಿಟಿ ಮೆನರ್ಸ್ (Society Manners) ಕಲಿತುಕೊಳ್ಳಲೇ ಬೇಕು. ಅವರಂತೆ ನಾವು ಮಾ[illegible] ಬೇಕು.........ಇಲ್ಲದಿದ್ದರೆ.........ಇಲ್ಲದಿದ್ದರೆ ವಿಲಾ[illegible]ತಿಯ ಪ್ರಯಾಣ ಮಾಡಿದ್ದರಿಂದ ಏನು ಸಾರ್ಥಕ!!!

ನನ್ನನ್ನು ಕಂಡರೆ ನಮ್ಮ ದೇಶದ ಮಹನೀಯ[illegible] "ಸಾಕು. ಮುಚ್ಚೋ........" ಎಂದು ಅನ್ನುವ ಹಾ[illegible] ಮುಖವನ್ನು ಮುದುಡಿಸುತ್ತಿದ್ದರು. ನಾನೇನು ತಪ್ಪು ಮಾಡಿದ್ದೆ! ಒಬ್ಬನೇ ನನಗೆ ನಾನೆ ಒಂದು ಮೂಲೆಯ[illegible] ಕುಳಿತು ಓದುತ್ತಲಿರುತ್ತಿದ್ದೆ. ಅಥವಾ ನನ್ನ ಮುಸಲ್ಮಾ[illegible] ಸ್ನೇಹಿತನ ಸಂಗಡ ಮಾತನಾಡುತ್ತಿದ್ದೆ. ಇಲ್ಲದಿದ್ದ[illegible] ಆಸ್ಟ್ರೇಲಿಯಾ ದೇಶದಿಂದ ಬಂದಿದ್ದ ಕೆಲವು ವಿದ್ಯಾರ್ಥಿಗಳ ಜೊತೆಯಲ್ಲಿ ಹಿಂದುಸ್ತಾನದ ರಾಜಕೀಯ ವಿಚಾ[illegible]ಗಳನ್ನು ಕುರಿತು ಮಾತನಾಡುತ್ತಲಿರುತ್ತಿದ್ದೆ. ಇವ[illegible]ವುದರಲ್ಲೂ ತಪ್ಪು ಕಾಣುವುದಿಲ್ಲಾ........ಆದರೆ ಯಾ[illegible] ತಾನೆ ಗೊತ್ತು. ನಮ್ಮ ತಪ್ಪುಗಳು ನಮಗೆ ಕಂಡು[illegible]ವವೇ....

ಒಂದು ದಿನ ಬೆಳಗು. ಬಹಳ ಸೆಕೆಯಾಗಿದ್ದುದನ್ನು ನೋಡಿ ನಾನು ಧೋತರವನ್ನು ಉಟ್ಟುಕೊಂಡು ಊಟಕ್ಕೆ ಹೋದೆ. (ಹಿಂದಿನ ರಾತ್ರಿಯೇ ಈ ಯೋಚನೆಯನ್ನು ಮಾಡಿದ್ದೆ. ಕೆಲವು ಜನರನ್ನು ಧೋತ[illegible] ಉಟ್ಟುಕೊಳ್ಳುವಿರಾ ಎಂದು ಕೇಳಿದ್ದೆ. ಯಾರೂ ಸ[illegible]ಯಾಗಿ ಉತ್ತರ ಕೊಟ್ಟಿದ್ದಿಲ್ಲ). ನನ್ನನ್ನು ನೋಡಿ ಮೂ[illegible]ಯಲ್ಲಿ ಕುಳಿತಿದ್ದ ಕೆಲವು ಯುರೋಪಿಯನೈಜ್ (Europeanised) ಸಾಹೇಬರು, ನಗಲುಹತ್ತಿದ್ದರು........ "ನೋಡೋ! ನೋಡೋ! ಗಾಂಧಿಯ ಶಿಷ್ಯನನ್ನು ನೋಡೋ........" (ನಾನು ಖಾದಿಯ ಸೂಟುಗಳನ್ನು ಹಾಕಿಕೊಂಡದ್ದಕ್ಕೆ ಆ ಪರಿ ಹಾಸ್ಯ ಮಾಡಲು ತೊಡಗಿದ್ದರು.) ಸುಮ್ಮನೇ ನಾನು ನನ್ನ ಜಾಗದಲ್ಲಿ ಕುಳಿತುಕೊಂಡು ಭೋಜನವನ್ನು ಶುರು ಮಾಡಿದೆ. ಕೆಲವು ನಿಮಿಷಗಳ ನಂತರ ಒಬ್ಬ ಮರಾಠಾ ವಿದ್ಯಾರ್ಥಿಯೂ ಧೋತರ ಉಟ್ಟುಕೊಂಡು ಬಂದನು. ನಗುವು ಕಡಿಮೆಯಾಯಿತು. ಇತರ ದೇಶದ ಜನರೆಲ್ಲ ನಮ್ಮನ್ನು ನೋಡಲು ತೊಡಗಿದರು. ಊಟವಾದ ಮೇಲೆ ಯುರೋಪಿಯನ್ ಜನರು ತಮಗೆ ಪರಿಚಯವಿದ್ದ ಭಾರತೀಯರನ್ನು 'ನೀವೇತಕ್ಕೆ ನಿಮ್ಮ ದೇಶದ ಬಟ್ಟೆಗಳನ್ನು ಹಾಕಿಕೊಳ್ಳಲಿಲ್ಲಾ!' ಎಂದು ಕೇಳಲು ತೊಡಗಿದರು.

CC-0. Jangamwadi Math Collection. Digitized by eGangotri

ದಿನ ಸಂಜೆ ಯುರೋಪಿಯನ್ನೈಜ್ಡ್ ಸಾಹೇಬರುಗಳು ಕೂಡ (ಕೆಲವು ಹತ್ತು ಹನ್ನೆರಡು ಜನ ಬಿಟ್ಟು) ಎಲ್ಲರೂ ಧೋತರವನ್ನುಟ್ಟುಕೊಂಡು ಹಡಗಿನ ಡೆಕ್ಕಿ(Deck)ನ ಮೇಲೆ ಅಡಿಯಾಡಲಾರಂಭಿಸಿದರು. ಯುರೋಪಿಯನ್ ಹೆಂಗಸರೆಲ್ಲ ಸಂತೋಷದಿಂದ ಹಾರಿ ಕುಣಿದರು. ಎಲ್ಲೆಲ್ಲಿಯೂ "ಎಷ್ಟು ಭೂಷಣವಾದ ವೇಷ........" "ಅವರು ನಡೆಯುತ್ತಿದ್ದರೆ ಹಿಂದಿನ ಕಾಲದ ರೋಮನ್ನ(Romans) ರಂತೆ ಕಾಣುವುದು" "ನಮ್ಮ ಬಟ್ಟೆಗಳೇಕೆ ಹೀಗಿರುವುವು. ಅಂತಹ ದಿವ್ಯ ರೆಕ್ಕೆಗಳುಳ್ಳ ವೇಷದ ಮುಂದೆ ಇವು ಅಳುವಂತೆ ಕಾಣುವವು........" ಕೊನೆಗೆ ಸಾಹೇಬರೆಲ್ಲರೂ ಹಿಂದುಸ್ಥಾನದ ದೇಶವೇಷವನ್ನು ಧರಿಸಿದುದಲ್ಲದೆ, ನಮ್ಮಂತೆ ಮಹಾತ್ಮಾ ಗಾಂಧಿಯವರ ವಿಚಾರದಲ್ಲಿ ಮಾತನಾಡತೊಡಗಿದರು. ಹತ್ತು ದಿನಗಳಲ್ಲಿಯೇ ಅಂದರೆ ಪೋರ್ಟಸೇಯ್ಡ ಸೇರುವುದಕ್ಕಿಂತ ಮುಂಚೆ, ಎಲ್ಲರೂ "ನ್ಯಾಷನಲಿಸ್ಟ (Nationlist)" ಆದರು.

ಹತ್ತು ದಿನಗಳಾದರೂ ಒಂದು ಜನಪ್ರದೇಶವನ್ನು ಕೂಡ ನೋಡಿದ್ದಿಲ್ಲ. ಎಲ್ಲೆಲ್ಲಿಯೂ ನೀರು. ಯಾವಾಗಲೂ ನೀರು. ಕೊನೆಗೆ ಆ ದಿನ ಸಾಯಂಕಾಲವೇ ದೂರದಲ್ಲಿ ಕೃಷ್ಣವರ್ಣದ ಆಫ್ರಿಕಾಖಂಡವು ಆಕಾಶದಿಂದ ಮೆಲ್ಲಗೆ ಎದ್ದಿತು. ಮರಳಿನ ಗುಡ್ಡಗಳು, ಹಳ್ಳಿಗಳ ಹೊಗೆಯು, ಕೆಲವು ದೀಪದ ಮನೆಗಳೂ( Light Houses) ಕಾಣುತ್ತ ಬಂದುವು. ಕೆಲವು ಘಳಿಗೆಗಳಲ್ಲಿಯೇ ಸಮುದ್ರ ತೀರದಲ್ಲ ಒಂಟೆಯ ಸಾಲುಗಳೂ ಕಣ್ಣಿಗೆ ಬಿದ್ದುವು. ರಾತ್ರಿ ಹನ್ನೊಂದು ಘಂಟೆಯ ಸಮಯಕ್ಕೆ ಸುಯೆಜ್ ನಗರವನ್ನು ಮುಟ್ಟಿದೆವು. ರಾತ್ರಿಯಾದರೇನು ಹಡಗಿನಿಂದ ಇಳಿದು ಊರೆಲ್ಲಾ ಅಲೆದೆವು. ಮಧ್ಯರಾತ್ರಿಯಾದರೂ ಅಂಗಡಿಯ ಬಾಗಿಲುಗಳೆಲ್ಲ ತೆಗೆದಿದ್ದುದಲ್ಲದೇ ಎಲ್ಲೆಲ್ಲಿಯೂ ದಿನದಂತೆ ಗದ್ದಲವನ್ನು ನೋಡಿ ಬಹಳ ಆಶ್ಚರ್ಯವಾಯಿತು. ಒಂದು ಕೆಫೆ ( ಅಂದರೆ ಕಾಫಿ ಹಾಟಲು) ಯಲ್ಲಿ ಕುಳಿತು ಕಾಫಿಯನ್ನು ಕುಡಿದು ಮೂರು ಘಂಟೆಯ ಸಮಯಕ್ಕೆ ದೋಣಿಯಲ್ಲಿ ಹೊಕ್ಕು ಸುಖವಾಗಿ ನಿದ್ದೆ ಹೋದೆವು.

ಮರುದಿನ ಸುಯೆಜ್ ಕಾಲುವೆ (Suez Cannal). ಸುಮಾರು ನಮ್ಮ ಚೈತ್ರಮಾಸದ ಕಾವೇರಿಯಂತಿದ್ದಿತು. ಆದರೆ ಬಹಳ ಆಳವೆಂದು ಹೇಳಿದರು. ಎರಡುಕಡೆಯೂ ಮೈ ನಡುಗಿಸುವಂತಹ ಮರಳು ಪ್ರದೇಶವು ಆಕಾಶದ ತನಕ ಕಂಡುಬರುತ್ತಲಿದ್ದಿತು. ಜನರು ಅಲ್ಲಿ ಹೇಗೆ ವಾಸ ಮಾಡುತ್ತಾರೆಯೋ ಖಂಡಿತ ಹೇಳಲಾಗುವದಿಲ್ಲ. ಸುಮಾರು ಸೂರ್ಯಾಸ್ತದ ಕಾಲಕ್ಕೆ ಪೋರ್ಟಸೇಯ್ಡು ಬಂದೆವು. ಬಹಳ ಕಾಲ ನಿಲ್ಲದೆ ಮೆಡಿಟರೆನಿಯನ್ ಸಮುದ್ರವನ್ನು ಹೊಕ್ಕೆವು. ಮೂರು ದಿನಗಳ ನಂತರ ನ್ಯಾಪಲ್ಸನಗರವನ್ನು ಮುಟ್ಟಿದೆವು. ಬೆಳಗಿನ ಕಾಫಿ ತಿಂಡಿಯನ್ನು ಮುಗಿಸಿಕೊಂಡು ದೋಣಿಯಿಂದಿಳಿದೆವು. ಮಹಾರಾಜರು ಸ್ವಂತ ಸಂಚಾರಕ್ಕೆ ಇಟ್ಟುಕೊಂಡಿರುವ ಮೋಟಾರುಗಳಂತೆ ನಮ್ಮ ಎದುರಿಗೆ ಮೋಟಾರುಗಳ ಸಾಲುಗಳನ್ನು ನೋಡಿ ಯಾರಿಗೆ ಏನೂ ತಿಳಿಯದು !! ಯಾವ ದೊಡ್ಡ ಆಫೀಸರೋ ಆದಾವ ಮಂತ್ರಿಯೋ ನಮ್ಮ ಜಹಜಿನ ಮೇಲೆ ಬಂದಿರಬಹುದು.' ಎಂದು ಅಂದುಕೊಂಡು ನಾವು ಮುಂದೆ ಹೋಗುವುದರಲ್ಲೇ ಒಬ್ಬ ಅತಿ ಸೊಗಸಾದ ಬಟ್ಟೆಗಳನ್ನು ಧರಿಸಿಕೊಂಡ ಮಹಾಶಯನು ' ಗುಡ್‌ಮಾರ್ನಿಂಗ್ ಸರ್ (Good Morning Sir) ಎಂದು ಇಂಗ್ಲೀಷಿನಲ್ಲಿ ನಮಸ್ಕರಿಸಿ ಬಹಳ ಸುಲಭ ಕ್ರಯಕ್ಕೆ ನೇಪಲ್ಸ ಮತ್ತೂ ಪೊಂಪೆಯೀ ನಗರಗಳನ್ನು ತೋರಿಸುವೆನೆಂದು ಹೇಳಿದನು. ಹಾಗೇ ಆಗಲೀ ಎಂದು ಒಪ್ಪಿಕೊಂಡು ಅವನ ಜೊತೆಯಲ್ಲಿ ಹೋದೆವು. ಆರೆಲ್ಸ್‌ರಾಯಿಸಂತಿರುವ ಮೋಟಾರುಗಳಲ್ಲಿ ಒಂದರಲ್ಲೇ ನಮ್ಮನ್ನು ಕುಳ್ಳಿರಿಸಿಕೊಂಡು ಊರೆಲ್ಲಾ ತೋರಿಸಿದನು. ನೇಪಲ್ಸ್‌ನಗರವು ನಮ್ಮ ಪಟ್ಟಣಗಳಂತೇ ಕಂಡು ಬಂದಿತು. ಎಲ್ಲೆಲ್ಲಿಯೂ ಗದ್ದಲ. ಕೊಳಕು. ಹೆಚ್ಚೆಂದರೆ ಕಪ್ಪು ಮನುಷ್ಯರ ಜಾಗದಲ್ಲಿ ಕೆಂಪು ಮನುಷ್ಯರು....ಪೊಂಪೆಯ ಪುರಾತನ ವೈಭವಗಳನ್ನೂ ನೋಡಿದೆವು. ಈ ನಗರ ದೇವತೆ (ಅಥವಾ ರಾಕ್ಷಸಿಯೋ ?) ಯಾದ ವೆಸಯಿಸ್ ಜ್ವಾಲಾಮುಖಿಯು ಭೂಸ್ ಭೂಸ್‌ಗುಟ್ಟುತ್ತಲಿದ್ದಿತು..... ಯಾವಾಗ ತನ್ನ ರಾಕ್ಷಸನಿದ್ರೆಯಿಂದ ಏಳುತ್ತಾಳೆಯೋ ಯಾರು ಬಲ್ಲರು....ಮರು ದಿನ ಸಾಯಂಕಾಲ ಟೂಲಾನ್ (Towlon) ನಗರಕ್ಕೆ ತಲುಪಿದೆವು. ಕೊನೆಗೆ ಫ್ರಾನ್‌ಸು ದೇಶವನ್ನು ಮುಟ್ಟಿದೆ.



CC-0. Jangamwadi Math Collection. Digitized by eGangotri

# ಕನ್ನಡ ಲಿಪಿಯನ್ನು ಹೇಗೆ ತಿದ್ದಬೇಕು ?

ಲೇಖಕರು:— ರಾ| ಸಾ| ಜಿ. ಎಲ್. ಕೊಪ್ಪರು, ಎಲ್. ಎ. ಜಿ., ಧಾರವಾಡ ಫಾರ್ಮ



ನಮ್ಮ ಕನ್ನಡ ಲಿಪಿಯು ಬಹಳ ಪುರಾತನವಾದುದು. ಇದು ಕೈಬರಹಕ್ಕೆ ಯೋಗ್ಯವಾದುದು. ಹಿಂದಣ ಕಾಲದಲ್ಲಿ ಕೈಬರಹದ ಹೊರತು ಮತ್ತಾವ ಬರಹವೂ ಇರಲಿಲ್ಲ. ಅಂದಮೇಲೆ ಆ ಲಿಪಿಯು ಕಾಲಕ್ಕೆ ತಕ್ಕಂತೆ ಇದ್ದಿತು. ಈಗಲಾದರೂ ಕೈಬರಹಕ್ಕೆ ಅದನ್ನೇ ಉಪಯೋಗಿಸುವುದು ಅನುಕೂಲ. ಆದರೆ ನಮ್ಮ ಸದ್ಯದ ಲಿಪಿಯು ಮುದ್ರಣಕ್ಕೂ ಟಾಯಿಪ್ ರಾಯಿಟರಿಗೂ ತಕ್ಕಂತೆ ಇಲ್ಲ. ಈ ಕೆಲಸಗಳಲ್ಲಿ ಅದನ್ನು ಉಪಯೋಗಿಸುವುದು ತೊಂದರೆಯಾಗಿದೆ. ಇತ್ತಿತ್ತಲಾಗಿ ಕೈಬರಹವು ಹೆಸರಿಲ್ಲದಂತೆ ಹೋಗತೊಡಗಿದೆ. ಇಂಗ್ಲಿಷಿನಲ್ಲಿ ಎಲ್ಲ ಪತ್ರವ್ಯವಹಾರವು ಟಾಯಿಪ್ ರಾಯಿಟರಿನಿಂದಲೆ ನಡೆಯುತ್ತದೆ. ಕೈಬರಹದ ಕಾಗದಗಳು ಕ್ವಚಿತ್ತಾಗಿ ಕಣ್ಣಿಗೆ ಬೀಳುತ್ತವೆ. ಅಂಥ ಕಾಗದಗಳನ್ನು ಓದುವುದರಲ್ಲಿ ಸಹ ಬೇಸರವಾಗುವುದು. ಇಂತಹ ಕಾಲದಲ್ಲಿ ನಮ್ಮ ಲಿಪಿಯನ್ನು ಕಾಲಕ್ಕೆ ಸರಿಯಾಗಿ ತಿದ್ದುವುದು ಅವಶ್ಯವಾಗಿದೆ. ಹಾಗೆ ಮಾಡದಿದ್ದರೆ ಕನ್ನಡಿಗರಾದ ನಮಗೆ ಒಂದು ಬಗೆಯ ಕೊರತೆಯೆಂದು ಹೇಳಬೇಕಾಗುವುದು.

ಲಿಪಿಯನ್ನು ತಿದ್ದುವುದು ಸುಲಭವಲ್ಲ. ಇದರಿಂದ ಈ ಕೆಲಸದಲ್ಲಿ ಜನರು ಇನ್ನೂ ಕೈ ಹಾಕಿಲ್ಲ. ಕನ್ನಡ ತಿಳಿದವರೆಲ್ಲರು ಈ ಕೆಲಸವನ್ನು ಮಾಡಿಯೇ ತೀರಬೇಕೆಂದು ನಿಶ್ಚಯ ಮಾಡಿದರೆ ಅದು ಸುಲಭವಾಗಿ ಆಗಿ ಹೋಗುವುದು. ತಿದ್ದುಪಡೆಯಲ್ಲಿ ಲಿಪಿಯನ್ನು ತೀರ ಮಾರ್ಪಡಿಸಿ ಅದು ಕನ್ನಡದಂತೆ ಕಾಣದ ಹಾಗಾದರೆ ಜನರಿಗೆ ಸ... ಯೆನಿಸಲಾರದು. ಆದಷ್ಟು ಈಗಿನ ಸ್ವರೂಪವನ್ನು ...ಕಾದರೆ ಅದು ಪ್ರಿಯವಾಗುವುದು. ಇಂತಹ ತಿದ್ದುಪಡಿಯನ್ನು ಹೇಗೆ ಮಾಡಬೇಕು ? ಮತ್ತು ಅದರಲ್ಲಿ ಯಾವ ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು ಎಂಬುದನ್ನು ನನ್ನ ಮತಿಗೆ ಸಿಲುಕಿದಷ್ಟು ಕೆಳಗೆ ವಿವರಿಸುತ್ತೇನೆ.

ಲಿಪಿಯು ಮುದ್ರಣಕ್ಕೂ ಮತ್ತು ಟಾಯಿಪ್ ರಾಯಿಟರಿಗೂ ಉಪಯೋಗವಾಗಬೇಕಾದರೆ

(೧) ಅಕ್ಷರಗಳನ್ನು ಆದಷ್ಟು ಕಡಿಮೆ ಮಾಡಬೇಕು.

(೨) ಸ್ವರಗಳನ್ನು ವ್ಯಂಜನಗಳಿಗೆ ಕೂಡಿಸುವಾಗ ವ್ಯಂಜನಗಳಲ್ಲಾಗುವ ರೂಪಾಂತರಗಳನ್ನು ಮಾಡದೆ ಸ್ವರಗಳನ್ನು ಪ್ರತ್ಯೇಕ ಚಿನ್ಹಗಳಿಂದ ಕೂಡಿಸಬೇಕು.

(೩) ಒತ್ತಕ್ಷರಗಳನ್ನು ಕೆಳಗೆ ಬರೆಯದೆ ಸಾಲಿನಲ್ಲಿ ಬರೆಯಲಿಕ್ಕೆ ಬರಬೇಕು.

(೪) ಅಕ್ಷರಗಳ ಮೇಲಾಗಲಿ ಕೆಳಗಾಗಲಿ ಯಾವ ಅವಯವಗಳನ್ನೂ ಜೋಡಿಸಬಾರದು.

ಈ ಬಗೆಯಾಗಿ ತಿದ್ದಿದರೆ ಅದು ನಮ್ಮ ಕೆಲಸಕ್ಕೆ ಉಪಯೋಗವಾಗುವುದು. ಈ ಬಗೆಗೆ ಕೆಲವು ಸೂಚನೆಗಳನ್ನು ಇಲ್ಲಿ ಕೊಡುತ್ತೇನೆ.

(೧) ಅಕ್ಷರಗಳನ್ನು ಕಡಿಮೆ ಮಾಡುವುದು.

(ಅ) ಎಲ್ಲ ದೀರ್ಘಗಳನ್ನು ಒಂದೇ ಚಿನ್ಹದಿಂದ ಬರೆಯುವುದು.

CC-0. Jangamwadi Math Collection. Digitized by eGangotri

ಉದಾ:– ಅ ಅೀ ಇ ಇೀ ಉ ಉೀ ಋ ಋೀ ಎ ಎೀ ಐ ಒ ಒೀ ಔ

(ಬ) ಅದರಂತೆ ಎಲ್ಲ ಮಹಾಪ್ರಾಣಗಳನ್ನೂ ಒಂದೇ ಚಿಹ್ನದಿಂದ ಮಾಡುವದು.

ಉದಾ:– ಕ ಕಃ ಗ ಗಃ
ಚ ಚಃ ಜ ಜಃ
ಟ ಟಃ ಡ ಡಃ
ತ ತಃ ದ ದಃ
ಪ ಪಃ ಬ ಬಃ

ಮಹಾ ಪ್ರಾಣದಲ್ಲಿ 'ಹ'ದ ಉಚ್ಚಾರವಿರುವುದರಿಂದ ಅದರ ಚಿಹ್ನವನ್ನು ಇಲ್ಲಿ ಉಪಯೋಗಿಸಿದ್ದೇನೆ.

(೨) ಸ್ವರಗಳನ್ನೂ ವ್ಯಂಜನಗಳಿಗೆ ಕೂಡಿಸುವುದು.

— ೯ ೨ ೨೯ ು ುೀ ೆ ೆೀ ೃ ೂ ೂೀ ೌ

ಉದಾ:– ಕ ಕೀ ಕ೨ ಕ೨ೀ ಕು ಕುೀ ಕೆ ಕೆೀ ಕೃ
ಕೂ ಕೂೀ ಕೌ

ಕೆ ಕೇ ಗಳನ್ನೂ ಕು ಕುೀ ದಂತೆ ಸಹ ಬರೆಯಬಹುದು

(೩) ಒತ್ತಕ್ಷರಗಳನ್ನು ಅದೇ ಸಾಲಿನಲ್ಲಿ ಬರೆಯುವುದು.

ಅಕ್ಷರಗಳನ್ನು ಒಂದರ ಮುಂದೆ ಒಂದು ಬರೆದು ಅವುಗಳ ನಡುವೆ — ಈ ಚಿಹ್ನವನ್ನು ಮಾಡಬೇಕು.

ಉದಾ:– ಅಕ್ಕ = ಅ ಕ–ಕ
ವಸ್ತ್ರ = ವ ಸ–ತ–ರ

ಕ, ಸ, ತ, ಇವು ವ್ಯಂಜನಗಳಿದ್ದರೂ ಇವುಗಳನ್ನು ತಲೆ ಹೊಡೆದು ಏರೂಪ ಮಾಡಬಾರದು. ಇವುಗಳ ಮುಂದಿರುವ — ಈ ಚಿಹ್ನದಿಂದ (ಅ) ಸ್ವರ ಲೋಪವಾದ ಸಂಗತಿಯನ್ನು ಸೂಚಿಸಿದರೆ ಸಾಕು.

ಈ ಪ್ರಕಾರ ಮಾಡಿದರೆ ನಮಗೆ ಬೇಕಾಗುವ ಅಕ್ಷರಗಳು ಮತ್ತು ಚಿಹ್ನಗಳು ಯಾವುವೆಂದರೆ

ಅ ಇ ಉ ಋ ಎ ಐ ಒ ಔ ಕ ಗ ಚ
ಜ ಟ ಡ ಣ ತ ದ ನ ಪ ಬ ಎ ಯ
ರ ಲ ವ ಶ ಷ ಸ ಹ ಳ ೦ ಃ –
೯ ೨ ು ೆ ೃ ೂ ೌ ೧ ೨ ೩ ೪
೫ ೬ ೭ ೮ ೯ , ; . ? ! :

ಋ, ಮ ಮತ್ತು ಯ ಇವುಗಳನ್ನು ಉಕಾರದ ಚಿಹ್ನಕ್ಕೆ ಬಾಧೆ ಬರದಂತೆ ತಿದ್ದಬೇಕು.

ಈ ಬರಹವು ಹೇಗೆ ಕಾಣುವದು ?
ಕನ್ನಡ ಲಿಪಿಯನ್ನು ತಿದ್ದಬೇಕು.
ಅ ಕನ–ನಡ ಲ೨ಪ೨ ಯ ನ–ನು ತ೨ದ–ದಬೇಕು.

---

## ಕಾಲ

ನಿನಗೊಂದು ನಾಡಿಲ್ಲ;
ನಿನಗೊಂದು ಬೀಡಿಲ್ಲ,
ನೀನಂತು ಪರದೇಶಿಯಾದುದಿಲ್ಲ !

ನೀನು ಬಂದಾಗೆಲ್ಲ
ಬಾಳು ಕಬ್ಬಿನ ಬೆಲ್ಲ;
ನಿನ್ನೊಳಗೊ ಸಿಹಿ ರಸದ ಲೇಶವಿಲ್ಲ !

ಜಗವ ಸುತ್ತುವ ಜೋಗಿ;
ಕಾಸು ಕಾಣದ ಯೋಗಿ;
ಐಸಿರಿಯ ತಂದಿಡುವೆ ಹಿರಿಯ ಭೋಗಿ !

ಛತ್ರವೊಂದನು ಕಂಡು,
ತಣ್ಣನೆಯೆ ತಣಿದುಂಡು,
ಅದಕೆ ಶಾಪವನೀವೆ ಹೊರಗೆ ಬಂದು !

ಸೊಗ ನಿನ್ನ ಕಣ್‌ಮುಂದೆ;
ದುಗುಡ ಬೆನ್ನಿನ ಹಿಂದೆ;
ಜಗವ ಸುತ್ತುವುದೊಂದೆ ಮೊಗದಿ ಚಿಂತೆ !

ನಿನ್ನೆ ಭಾರತದಲ್ಲಿ !
ಇಂದು ಪಡುವಣದಲ್ಲಿ !
ನಾಳೆ ನೀ ಪದುಳಿಸುವ ಜಾಗವೆಲ್ಲಿ ?

ನಿನ್ನ ಮರ್ಮವದೇನು ?
ನಿನ್ನ ಧರ್ಮವದೇನು ?
ಜಗದೊಡೆಯ ನಿನಗಿತ್ತ ಕರ್ಮವೇನು ?

—ದಿನಕರ ದೇಸಾಯಿ

CC-0. Jangamwadi Math Collection. Digitized by eGangotri

# ರೋಹಿಣಿ

೧

ಬಾರೇ ಗೆಳತಿ
ಒಳಗೇ ಕುಳಿತಿ
ಅಟ್ಟಾ ಏರಿ
ಮೇಲೇ ನಿಂತಿ
ಕದಾ ಗಿದಾ ನೂಕಿಕೊಂಡು
ಚಿಲಕಾ ಗಿಲಕಾ ಹಾಕಿಕೊಂಡು
ಅಲ್ಲೇ ಕುಳಿತಿ
ಬಾರೇ ಗೆಳತಿ

೨

ಬಾರೇ ಜಾಣಿ
ಮಿಂಚಿನ ರಾಣಿ
ಅಪ್ಸರ ನಾರಿ
ಮೈ ಜರತಾರಿ
ಥಾಟ ಮಾಟ ಮಾಡಿಕೋತ
ಆಟ ಪಾಟ ಆಡಿಕೋತ
ಅಲ್ಲೇ ಕುಳಿತಿ
ಬಾರೇ ಗೆಳತಿ

೩

ಮುಗಿಲಾಗ್ ಹೊಳೆದಿ
ಮೇಲೇ ಇಳಿದಿ
ಒಳಗೇ ಉಳಿದಿ
ಅಲ್ಲೇ ಸುಳಿದಿ
ಏನೋ ಎಂತೋ ನೋಡಿಕೋತ
ತರನಾ ತರಲಾ ಹಾಡಿಕೋತ
ಅಲ್ಲೇ ಕುಳಿತಿ
ಬಾರೇ ಗೆಳತಿ

೪

ಎಂದೀಗೊಮ್ಮೆ
ಹಾಕುತ ಹಣಿಕಿ
ಮಾರೀ ತೋರಿ
ತುಸು ತುಸು ಇಣಿಕಿ
ಮಾಟಾ ಮೋಡೀ ಮಾಡಿಕೋತ
ಕಳ್ಳೀ ಆಟಾ ಆಡಿಕೋತ
ಅಲ್ಲೇ ಕುಳಿತಿ
ಬಾರೇ ಗೆಳತಿ

೫

ನೀ ಕೂತಲ್ಲಿ
ಜ್ಯೋತಿಯ ಥಾಳ
ನಾ ಕೂತಲ್ಲಿ
ಕತ್ತಲೆ ಕಾಳ
ಕಂಡೂ ಕಂಡೂ ಕೂತೇ ಕೂತಿ
ತಿಳಿದೂ ತಿಳಿದೂ ಹಾಗೇ ಇರತಿ
ಅಲ್ಲೇ ಕುಳಿತಿ
ಬಾರೇ ಗೆಳತಿ

೬

ಏಸೋ ಕಾಲಕೆ
ಅಟ್ಟಕೆ ಬಂದಿ
ಅಲ್ಲೀ ದಿಲ್ಲೀ—
ಗೆಂದರೆ ಬಂದೀ
ಬರತೀ ಬರತೀ ಬಂದೇ ಬರತೀ
ಎಷ್ಟೊತ್ತಾರೆ ಅಲ್ಲೇ ಇರತಿ
ಅಲ್ಲೇ ಕುಳಿತೀ
ಬಾರೇ ಗೆಳತಿ

೬-೯-೧೯೩೧

—ಮಧುರಚೆನ್ನ

CC-0. Jangamwadi Math Collection. Digitized by eGangotri

# ಆಪ್ತ ಮಿತ್ರಳೊಬ್ಬಳು

( ಜರ್ಮನಿಯಲ್ಲಿಯ ಒಬ್ಬ ಭಾರತೀಯನ ಅನುಭವ )

ಲೇಃ—ಶ್ರೀ. ಇ. ಎ. ಭಾಸ್ಕರರಾವ್, ಬರ್ಲಿನ್ ( ಜರ್ಮನಿ )



೧

'ಹೆರ್...............', 'ಫ್ರಾಯಲೀನ್ ಥಾಲ್'

'ನಿಮ್ಮನ್ನು ಕಂಡದ್ದು ಬಹಳ ಸಂತೋಷ'

'ಕುಮಾರಿ, ನಿಮ್ಮನ್ನು ಕಂಡದ್ದು ನನಗೂ ಬಹಳ ಸಂತೋಷ'

'ನೀವು ಯಾವ ಪ್ರಾಂತ್ಯದವರು? ನಿಮ್ಮ ಹೆಸರು ಬಂಗಾಳದ್ದಲ್ಲ.'

'ಅಲ್ಲ; ನಾನು ದಕ್ಷಿಣ ಹಿಂದೂ ದೇಶದವ.'

'ಬೆರ್ಲೀನ್‌ಗೆ ಯಾವಾಗ ಬಂದಿರಿ'?

'ಮೂರು ದಿನವಾಯಿತು.'

'ಅಷ್ಟರಲ್ಲಿ ಇವಳ ಪರಿಚಯವು ಹೇಗಾಯಿತು?'

'ನಿನ್ನೆ ವಿದ್ಯಾಲಯದ ಕಾರ್ಯದರ್ಶಿಗಳ ಕೊಠಡಿಯನ್ನು ಹುಡುಕಾಡುತ್ತ ಒದ್ದಾಡುತ್ತಿರಲು ಈಕೆ ನನ್ನ ಸಹಾಯಕ್ಕೆ ಬಂದರು; ಅನಂತರ ಪರಸ್ಪರ ಪರಿಚಯವಾಯಿತು; ಅಲ್ಲದೆ ಈಕೆಯೂ ನಾನೂ ಒಂದೇ ತರಗತಿಯಲ್ಲಿರುವೆವು.'

'ಒದ್ದಾಟವೇಕೆ? ಹಿಂದೂದೇಶದಲ್ಲಿ ಜರ್ಮನ್ ಕಲಿಯಲಿಲ್ಲವೋ?'

'ಕೊಂಚ ಕಲಿತಿರುವೆನು ಎಂದುಕೊಂಡಿದ್ದೆ; ಆದರೆ ಅದರಿಂದ ಇಲ್ಲೇನೂ ಉಪಯೋಗವಿಲ್ಲವೆಂದೂ ಕಂಡು-ಕೊಂಡಿರುವೆನು.'

'ಹಾಗಾದರೆ ನೀವು ಈ ಕೆಟ್ಟ ಹುಡುಗಿಯ ಜೊತೆ ಸೇರಬಾರದು.'

'ಏಕೆ?'

'ಕುಮಾರಿ ಷ್ರಾದೆರಳು ಯಾವಾಗಲೂ ಹಿಂದೂ ಹುಡುಗರನ್ನೇ ಹುಡುಕುತ್ತ, ಅವರೊಂದಿಗೆ ಇಂಗ್ಲಿಷ್ ಮಾತನಾಡುತ್ತ ತನ್ನ ಇಂಗ್ಲಿಷ್ ಕುದುರಿಸಿಕೊಳ್ಳಲು ಪ್ರಯತ್ನಿಸುತ್ತಾಳೆ.'

'ಸಾಕು, ಬಾಯಿಮುಚ್ಚು—ಪುಸ್ಟರ್, ನೀವು ಬಂಗಾಳಿಯಲ್ಲವಾದುದರಿಂದ ಇವಳು ಈ ಬಿನ್ನಾಣ ಬೀರುತ್ತಾಳೆ. ನೀವು ಬಂಗಾಳಿಯಾಗಿದ್ದಿದ್ದರೆ ನನಗಿಂತಲೂ ಹೆಚ್ಚು ಇವಳು ನಿಮ್ಮನ್ನು ಕೆಡಿಸುತ್ತಿದ್ದಳು. ಎಂದು ಕುಮಾರಿ ಷ್ರಾದೆರಳು ನಗುನಗುತ್ತ ಹೇಳಿದಳು.

'ಹೇಗೆ?'

'ಇವಳು ಬಂಗಾಲಿ ಕಲಿಯುತ್ತಿದ್ದಾಳೆ; ಮುಂದೆ ಹಿಂದೂದೇಶಕ್ಕೆ ಹೋಗಿ, ಅಲ್ಲಿ ಸ್ತ್ರೀಸುಧಾರಣೆಗಾಗಿ ಅಲ್ಲಿಯೇ ಜೀವಿಸಬೇಕೆಂದಿದ್ದಾಳೆ. ಕಲ್ಕತ್ತೆಯಲ್ಲಿ ನಿಲ್ಲ



CC-0. Jangamwadi Math Collection. Digitized by eGangotri

ಬೇಕೆಂದಿರುವಳು; ಬಂಗಾಳಿಗಳು ಸಿಕ್ಕಿದರೆ........ತಿಳಿದಿದೆ ಯಷ್ಟೆ, ಭಾಷೆ ಕಲಿತುಕೊಳ್ಳುವ ಹುಚ್ಚು.'

'ಓಹೋ ! ಈ ಬಗೆಯ ಕೆಟ್ಟ ಹುಡುಗಿಯರೇ ನನಗೆ ಸಿಕ್ಕಿದರೆ ನನಗೇನೂ ಚಿಂತೆಯಿಲ್ಲ.'

೧೯೧೪ನೆಯ ಇಸವಿಯಲ್ಲಿ ಯುದ್ಧವು ಪ್ರಾರಂಭವಾಗುವದಕ್ಕೆ ಹಿಂದಿನ ದಿನ, ಮುಂದೆ ಬರುವುದಕ್ಕಿದ್ದ ಗತಿಯನ್ನರಿಯದೆ, ರಾಜಭವನದ ಕೈದೋಟದಲ್ಲಿ ಕೈಸರ್ ವಿಲ್ಹೆಲ್ಮನು ಎಷ್ಟು ಹೆಮ್ಮೆಯಿಂದ ನಿಂತಿದ್ದಿರಬಹುದಾಗಿದ್ದಿತೋ, ಅಷ್ಟು ಹೆಮ್ಮೆಯಿಂದ, ಈಗ ಕೈಸರ್ ಫ್ರೀಡ್ರಿಕ್ ವಿಲ್ಹೆಲ್ಮ ವಿದ್ಯಾಲಯವಾಗಿರುವ ಆ ರಾಜಭವನದ ಕೈ-ದೋಟದಲ್ಲಿ ನಾನೂ ನಿಂತಿದ್ದೆ—ಪರದೇಶದಲ್ಲಿ ಅಡ್ಡಲಾಗುವ ತೊಡಕುಗಳಿಂದ ಪಾರಾಗಲು ನೆರವಾಗುವಂತಹ ಸರಳಮನಸ್ಸಿನ ಇಬ್ಬರು ವಿದ್ಯಾರ್ಥಿನಿಯರ ಪರಿಚಯವು ನನಗಾಯಿತಲ್ಲ, ಎಂದು.

ಆಗ ತಾನೇ ಸುರಿಯುತ್ತಲಿದ್ದ ಮಂಜು ನಿಂತಿದ್ದಿತು. ಅಂಗಳವೆಲ್ಲ ಹಿಟ್ಟು ಚೆಲ್ಲಿದಂತೆ ಬೆಳ್ಳಗಿದ್ದಿತು. ಚಳಿಯ ದೆಸೆಯಿಂದ ಎಲೆಗಳೆಲ್ಲ ಉದುರಿ ಹೋಗಿ, ವಿಕಾರವಾಗಿ ಅತ್ತಿತ್ತ ಕೊಂಬೆಗಳನ್ನು ಚಾಚಿರುವ ಗಿಡಗಳ ಬೆತ್ತಲೆತನವನ್ನು ನೋಡಿ ಸಹಿಸಲಾರದೆ, ಪ್ರಕೃತಿದೇವಿಯು ಬಹಳ ಚಮತ್ಕಾರವಾಗಿ ಈ ಮಂಜಿನ ಮುಸುಕನ್ನು ಅವುಗಳ ಮೇಲೆ ಬೀರಿದ್ದಂತೆ ತೋರಿತು. ಇದರಿಂದ ಕೊಂಬೆಗಳು ಎಲೆಗಳಿಲ್ಲದ ಕಡ್ಡಿಗಳಾಗಿರದೆ, ಕಡ್ಡಿಯೇ ಇಲ್ಲದ ಚಿತ್ರ ವಿಚಿತ್ರವಾಗಿರುವ ಬಿಳಿಯ ಹವಳದ ಬಳ್ಳಿಗಳಂತೆ ಕಾಣುತ್ತಿದ್ದವು. ನಡೆದಾಡುವ ಜನರು ಜಾರಿ ಬೀಳದಂತೆ ಬೀದಿಯಲ್ಲಿ ಬಿದ್ದಿದ್ದ ಮಂಜನ್ನೆಲ್ಲಾ ಮರದ ಸನಿಕೆಗಳಿಂದ ಕೆರೆದು, ಗುಡ್ಡೆಹಾಕುತ್ತಿದ್ದರು, ಆಳುಗಳು. ಮಾತನಾಡುತ್ತಿದ್ದಂತೆಯೇ, ಮೋಚಿಯ ಚಕ್ಕಳವನ್ನು ನೆನೆಸಿ, ಕಾಲಿಗೆ ಹತ್ತಿತು, ತಣುವು. ನಿಲುವಂಗಿ, ಅಂಗಿ, ಒಳಂಗಿಗಳನ್ನು ನಿರಾಯಾಸವಾಗಿ ಹರಿದು, ಎದೆಯ ಗೂಡನ್ನು ಮುತ್ತಿ, ಬೆನ್ನನ್ನು ಬಗ್ಗಿಸಿ, ಮೂಳೆಮೂಳೆಗೂ ಹತ್ತಿ, ಗುಂಡಿಗೆಯ ಬಿಸಿ ರಕ್ತವನ್ನು ಕಲ್ಲಾಗಿ ಮಾರ್ಪಡಿಸಲು ಯತ್ನಿಸುತ್ತಿದ್ದ ಛಳಿಗಾಳಿಗೆ ನನ್ನ ಉತ್ಸಾಹವನ್ನು ಧಾರೆಯೆರೆದರೂ ಅದನ್ನು ತೋರಿಸಿಕೊಳ್ಳದೆ, 'ಕುಮಾರಿಯರೆ, ಕ್ಷಮಿಸಿ, ಒಳಕ್ಕೆ ಹೋಗಿ ಮಾತಾಡೋಣವೆ?' ಎಂದೆ.

'ಪಾಪ, ಛಳಿಯೇನೋ, ನಿಮಗೆ.—ಬಂಗಾಳಿಯಲ್ಲಿದ್ದರೂ ಅವರನ್ನು ಎಷ್ಟು ಹೊತ್ತು ನೀನು ಇಲ್ಲಿ ಮಾತನಾಡಿಸುತ್ತ ನಿಲ್ಲಿಸಿಕೊಳ್ಳುವುದು? ಆಗಲಿ ಮಿಸ್ಟರ್—, ನಿಮ್ಮ ಕೆಲಸ ಮೊದಲು ನೋಡಿ. ನಾಳೆ ಭೇಟಿಯಾಗುತ್ತದಲ್ಲ, ಶಾಲೆಯಲ್ಲಿ.'

'ಔಫ್ ವೀಡರ್ ಸೇಹೆನ್'-ಹೋಗಿ ಬರುತ್ತೇನೆ-ಎಂದು ಹೇಳಿ ನಾನು ಹೊರಟು ಹೋದೆ.

೨

ಒಂದು ವಾರವಾಗಿದ್ದಿರಬಹುದು, ಕುಮಾರಿ ಥಾಲ್‌ ಪರಿಚಯವಾಗಿ; ಆಗಲೇ ಆಕೆಯೊಂದಿಗೂ ಕುಮಾರಿ ಷ್ರಾದೆರ್‌ಳೊಂದಿಗೂ ಫಲಾಹಾರ ಮಾಡಲು ಆಹ್ವಾನವು ಬಂದಿತು. ತಮ್ಮ ಅಡಿಯಾಳುಗಳೆಂದೆಣಿಸಿ ನಮ್ಮನ್ನು ತಿರಸ್ಕಾರ ಭಾವದಿಂದ ಕಾಣುವ ಬ್ರಿಟಿಶರಿಗೂ, ಆ ಭಾವವಿಲ್ಲದ—ಅವರಿಂದ ರಾಕ್ಷಸಗಣದವರೆಂದು ಪರಿಗಣಿಸಲ್ಪಟ್ಟಿರುವ—ಜರ್ಮನ್ನರಿಗೂ ಇರುವ ವ್ಯತ್ಯಾಸವಿದು ಎಂದುಕೊಂಡೆ ಆ ಪತ್ರವನ್ನೋದಿ.

ಹೋಗಬೇಕಾಗಿದ್ದ ದಿನ ಕೊಂಚ ಹೂಗಳನ್ನು ತೆಗೆದುಕೊಂಡು, ಹೊರಟೆ. ಗಗನದಲ್ಲಿ ಮತ್ತೊಮ್ಮೆ ಹಾಲುಗಡಲನ್ನು ಕಡೆಯುತ್ತಿರಲು ಕೆಳಕ್ಕೆ ಬೀಳುತ್ತಿದ್ದ ಬೆಣ್ಣೆಯೋ ಎಂಬಂತೆ ನಿಶ್ಶಬ್ದವಾಗಿ ಮಂಜಿನ ಬಿಳಿಯ ಹಳಕುಗಳು ಬೀಳುತ್ತಿದ್ದವು. ಕುಮಾರಿ ಥಾಲ್‌ಳ ಮನೆಯನ್ನು ಸೇರಿದೊಡನೆಯೇ, ಬೆಂಕಿಯ ಗೂಡಿನ ಬಳಿ ಕುಳಿತೆ. ಸುತ್ತಲೂ ಇದ್ದ ತೂಗುಪಟಗಳ ಕಡೆಗೆ ಕಣ್ಣುಗಳು ಸುಳಿದವು. ಎದುರಿನಲ್ಲಿ ಮಹಾತ್ಮಾಜಿಯವರು; ಒಂದು ಪಕ್ಕದಲ್ಲಿ ಕೈಲಾಸವಾಸಿಗಳಾದ ಚಿತ್ತರಂಜನದಾಸರು; ಇನ್ನೊಂದು ಪಕ್ಕದಲ್ಲಿ ರವೀಂದ್ರನಾಥ ಠಾಕೂರರು; ಅಪಕ್ಕೆದುರಿನಲ್ಲಿ ಸು ಭಾ ಷ ಚಂದ್ರ ಬೋಸರು; ಕಿಟಕಿಯ ಪಕ್ಕದಲ್ಲಿ ಹಿಂದೂದೇಶದ ದೊಡ್ಡ ನಕ್ಷೆ. ಮೇಜಿನ ಮೇಲೆ ತಾಜ್‌ಮಹಲಿನ ಹಾಲುಗಲ್ಲಿನ ಪ್ರತಿರೂಪ. ಪುಸ್ತಕಗಳ ಗೂಡನ್ನು ನೋಡಲು ಗೀತಾಂಜಲಿ ಮೊದಲಾದ ಹಲವು ವಂಗ ಗ್ರಂಥಗಳೂ, 'ಮದರ್ ಇಂಡಿಯ' 'ಅನ್‌ಹ್ಯಾಪಿ ಇಂಡಿಯ' 'ಸಿಸ್ಟರ್ ಇಂಡಿಯ' 'ಫಾದರ್ ಇಂಡಿಯ' ('ಬ್ರದರ್ ಇಂಡಿಯ' ಇದ್ದಿದ್ದರೂ ಆಶ್ಚರ್ಯವಿಲ್ಲ!) ಮುಂತಾದ ಆಂಗ್ಲ ಗ್ರಂಥಗಳೂ ಇದ್ದುವು. ನಮ್ಮೂರಿಂದ ಏಳು ಸಾವಿ

CC-0. Jangamwadi Math Collection. Digitized by eGangotri

ಮೈಲಿ ದೂರದಲ್ಲಿರುವ ಬೆರ್ಲಿನ್ ನಗರದ ಒಂದು ಮನೆಯಲ್ಲಿರುವೆನೆಂಬ ಭಾವವು ಎಳ್ಳಷ್ಟಾದರೂ ಮನಸ್ಸಿಗೆ ತೋರಲಿಲ್ಲ.

ಫಲಾಹಾರ-ಪಾನಾದಿಗಳು ಅಣಿಯಾಗಲು, ಅವನ್ನು ರುಚಿ ನೋಡುತ್ತ ಮಾತುಗಳಿಗಾರಂಭವಾಯಿತು.

'........ಇಲ್ಲ, ಅವರ ಪರೋಕ್ಷ ಪರಿಚಯವೂ ನನಗಿಲ್ಲ. ಕೇವಲ ಸಾಮಾನ್ಯ ಬರೆಹಗಾರರಿರಬಹುದು.'

'ಏನ್ರೀ ಹೀಗೆನ್ನುವಿರಿ? ಬಹಳ ಒಳ್ಳೇ ಸಣ್ಣ ಕತೆಗಳನ್ನವರು ಬರೆದಿರುತ್ತಾರೆ. ಒಂದೊಂದು ಸಣ್ಣ ವಾಕ್ಯದಲ್ಲಿಯೇ ಕಣ್ಣಿಗೆ ಪಟ ಕಟ್ಟಿದಂತೆ ಕಾಣುವಂತೆ ವರ್ಣಿಸುವ ಶಕ್ತಿ ಅವರಲ್ಲಿದೆ.'

'ಎಷ್ಟೋ ಮಂದಿ ಸಣ್ಣ ಕತೆಗಳನ್ನು ಈಗ ಬರೆಯುವವರು, ಏನೂ ಬರೆಯುವುದಕ್ಕಾಗದಿದ್ದರೆ ಸಣ್ಣ ಕತೆ ಬರೆದು ಬಿಡುವುದು! ಅಂತಹದೊಂದು ಪುಸ್ತಕ ನಿನಗೆ ಸಿಕ್ಕಿರುವುದರಿಂದ ಅವನ ಹೆಸರು ತಿಳಿದಿದೆ; ನಮಲ್ಲಿಯೂ ಬೇಕಾದಷ್ಟು ಮಂದಿ ಬರೆಹಗಾರರಿರುವರು.........'

'ನೀವು ಹೇಳುವುದು ಸರಿ, ಮಿಸ್ಟರ್. ಇವಳಿಗೆ ಹಿಂದೂದೇಶವೆಂದರೆ ಬಂಗಾಳ.' ಎಂದು ಕುಮಾರಿ ಷ್ರಾದೆರಳು ನನ್ನ ಪಕ್ಷ ವಕಾಲತ್ತು ಹಿಡಿದಳು.

ಇದರಿಂದ ಹುರಿದುಂಬಿದವನಾಗಿ, ದಕ್ಷಿಣ ಹಿಂದುಸ್ಥಾನ, ಅದರಲ್ಲಿ ಕರ್ನಾಟಕ, ಅದರಲ್ಲಿ ಮೈಸೂರು ಸೀಮೆ, ಒಂದಕ್ಕಿಂತ ಒಂದು ಪ್ರೇಕ್ಷಣೀಯವಾದುದೆಂದೂ, ಭೌತಿಕ ಶಾಸ್ತ್ರದಲ್ಲಿ ನೋಬೆಲ್ ಪಾರಿತೋಷಿಕವನ್ನು ಪಡೆದ ಹಿಂದೂ ಗೃಹಸ್ಥರು ದಕ್ಷಿಣಪ್ರಾಂತ್ಯದವರೆಂದೂ,...........ಆರಂಭಿಸಿ ದೊಡ್ಡ ಉಪನ್ಯಾಸ ಮಾಡಿಬಿಟ್ಟೆ.

'ಅದಿರಲಿ ಇದನ್ನು ಕೊಂಚ ತೆಗೆದುಕೊಳ್ಳಿ' ಎಂದಳು ಕುಮಾರಿ ಥಾಲ್.

'ಏನದು? ವೈನ್ ಎಂದು ಕಾಣುತ್ತೆ.'

'ಹೌದು, ಕೊಂಚ ತೆಗೆದುಕೊಳ್ಳಿ; ಛಳಿಗೆ ಒಳ್ಳೆಯದು.'

'ದಯವಿಟ್ಟು ಕ್ಷಮಿಸಿ; ನಾನು 'ವೈನ್' ಕುಡಿಯುವುದಿಲ್ಲ.'

'ಹಾಗನ್ನಬಾರದು; ನಾಲ್ಕಾರು ಹನಿ ತೆಗೆದುಕೊಂಡರೇನೂ ಪಾಪ ಬರುವುದಿಲ್ಲ; ಅಲ್ಲದೆ ಸಭೆಯಲ್ಲಿ ಮೂವರೇ ಇದ್ದರೂ 'ಹೆಲ್ತ್ ಕುಡಿಯುವುದಕ್ಕೆ.......'

'ಇಲ್ಲ, ಕ್ಷಮಿಸಬೇಕು. ನನ್ನ ಬಟ್ಟಲಿಗೆ ನೀರು ಹಾಕಿ; ಅದನ್ನೇ 'ವೈನ್' ಎಂದುಕೊಂಡು, ನಿಮ್ಮ 'ಹೆಲ್ತ್‌ಗೆ' ಕುಡಿಯುತ್ತೇನೆ.'

ಮತ್ತೆ ಕುಮಾರಿ ಷ್ರಾದೆರಳು ನನ್ನ ಪಕ್ಷ ವಹಿಸಲು ನಾನು ಗೆದ್ದೆ.

'ನಮ್ಮ ಕಡೆ ರಾಜರೂ ಇಂಗ್ಲಿಷ ಶ್ರೀಮಂತರಿಗೆ ಔತಣ ಮಾಡಿಸಿ, 'ಹೆಲ್ತ್ ಪ್ರಪೋಸ' ಮಾಡಬೇಕಾದಾಗ........'ಎಂದು ವಿಜಯ ಭಾಷಣ ಮಾಡಿದೆ.

'ಅಂತೂ 'ಬಾಂಬ್' ಗಳನ್ನು ತಯಾರು ಮಾಡುವುದೊಂದರಲ್ಲಿ ವಿನಾ, ಬೇರೆ ಎಲ್ಲಾ ವಿಚಾರಗಳಲ್ಲಿಯೂ ಕರ್ನಾಟಕದವರು ಬಂಗಾಳಿಗಳಿಗಿಂತ ಒಂದು ಕೈ ಹೆಚ್ಚಿನವರೆಂದು ತೋರಿಸಲು ಪ್ರಯತ್ನಿಸುತ್ತಿರುವಿರಿ.' ಎಂದು ಕುಮಾರಿ ಥಾಲ್‌ಳು ಹಂಗಿಸಿದಂತೆ ಹೇಳಿದಳು.

'ಅಂತೂ ಇವರು ಬಂಗಾಳಿಗಳೇ ಉತ್ತಮೋತ್ತಮರೆನ್ನುವವರೆಗೂ ನೀನು ಸುಮ್ಮನಾಗುವುದಿಲ್ಲ; ಅವರ ನಡೆ ನುಡಿಗಳನ್ನು ನೋಡಿ, 'ಅಯ್ಯೋ ಕರ್ನಾಟಕ ಭಾಷೆ ಕಲಿಯದೇ ಹೋದೆನಲ್ಲ!' ಎಂದು ಪಶ್ಚಾತ್ತಾಪಪಡುವವರೆಗೂ ಅವರು ನಿನ್ನನ್ನು ಬಿಡುವುದಿಲ್ಲ.' ಎಂದು ಹೇಳಿ ಕುಮಾರಿ ಷ್ರಾದೆರ್‌ಳು ಅಂದಿನ ಚರ್ಚೆಯನ್ನು ಮುಗಿಸಿದಳು.

೩

ಮಾರಣೆಯ ದಿನ ಸಾಯಂಕಾಲ ನನ್ನ ಕೆಲಸಗಳನ್ನು ತೀರಿಸಿಕೊಂಡು ಮನೆಗೆ ಹಿಂದಿರುಗುವಾಗ್ಗೆ ನನ್ನ ಮೇಜಿನ ಮೇಲೊಂದು ಬೇರ್ಲಿನ್‌ಮುದ್ರೆಯಿದ್ದ ಕಾಗದವಿದ್ದಿತು. ಅದನ್ನೊಡೆದು ನೋಡುತ್ತಲೆ ಮನಸ್ಸಿಗೆ ಬಹಳ ಆನಂದವಾಯಿತು. ವಂಗಪಕ್ಷಪಾತಿಯಾಗಿದ್ದ ಕುಮಾರಿಯು ದಕ್ಷಿಣ ಹಿಂದೂದೇಶದ ವಿಚಾರ ತಿಳಿದುಕೊಳ್ಳಲು ತವಕ ಪಡುತ್ತಿದ್ದಳೆಂದು ಆ ಕಾಗದದ ಬಂತಿ ಬಂತಿಯಲ್ಲಿಯೂ ತೋರುತ್ತಿದ್ದಿತು. ಈ ಭಾವದಿಂದ ಹಿಗ್ಗಿ ಹೆಮ್ಮೆಯಿಂದ ಧಾರಾಲೇಖಣಿಯನ್ನು ತೆಗೆದು ಧಾರಾಳ ಮನಸ್ಸಿನಿಂದ ಮಾರೋಲೆಯನ್ನು ಬರೆದೆ; 'ಆಗಬಹುದು. ನಾಡಿದ್ದು ಮಧ್ಯಾಹ್ನ ಮೂರು ಘಂಟೆಗೆ ವಿವಿಧವಸ್ತುಶಾಲೆಯ ಭಾರತೀಯ ಶಾಖೆಗೆ ಬನ್ನಿ; ಅಲ್ಲಿ

CC-0. Jangamwadi Math Collection. Digitized by eGangotri

ನಿಮ್ಮನ್ನೆದುರುಗೊಂಡು, ಬೇಕಾದ ವಿಗ್ರಹಗಳನ್ನು ತೋರಿಸಿ, ವಿವರಿಸುವೆನು.........' ಇತ್ಯಾದಿ.

ನಾನು ವಿವರಿಸಿದಷ್ಟೂ ಆಕೆಯ ಕುತೂಹಲವು ಹೆಚ್ಚುತ್ತಲೇ ಇದ್ದಿತು. ವಾರಕ್ಕೆರಡಾವರ್ತಿ ನಾವಲ್ಲಿ ಸಂಧಿಸುವುದು ಸಾಧಾರಣವಾಗಿ ಬಿಟ್ಟಿತು. ಇದು ಸಾಲದೆಂದು ಸಮಯವಾದಾಗಲೆಲ್ಲ ಆಕೆಯ ಮನೆಯಲ್ಲಿ ನಾವು ಸಂಧಿಸಿ, ಅನೇಕ ವಿಚಾರಗಳು ಮಾತನಾಡುತ್ತಿದ್ದೆವು.

ಒಮ್ಮೆ ಈ ರೀತಿ ಮಾತನಾಡುತ್ತಿದ್ದಾಗ, 'ಏನ್ರಿ ನಿನ್ನೆ ನಿಮಗೆ ಮನೆಯಿಂದ ಕಾಗದಗಳು ಬಂದಿರಬೇಕು-ಮನೆಯ ಸುದ್ದಿಯೇನು?' ಎಂದು ಕೇಳಿದಳು. ನನ್ನ ಬಂಧುಬಳಗದವರ ವಿಚಾರವೆಂದುಕೊಂಡು ಕೊಂಚ ಹೇಳಲು, 'ಅಲ್ರಿ, ರಾಷ್ಟ್ರೀಯ ಚಳವಳಿ ಹೇಗಿದೆ? ಬ್ರಿಟಿಶ ಲಾರ್ಡ್ ರಾಜನು ಹೇಗೆ ಮುಂದುವರಿಯುತ್ತಿರುವನು? ಎಂದು ಕೇಳಿದೆ' ಎಂದಳು.

'ನನಗೇನೂ ಹೆಚ್ಚಿನ ಮಾಹಿತಿ ಬಂದಿಲ್ಲ............'

'ನಿಮ್ಮ ಗೆಳೆಯರಾರಿಗೂ ಬಂದಿಲ್ಲವೆ?'

ಏನೋ ಒಂದಷ್ಟು ಹೇಳಿದೆ.

'ನೋಡಿರಿ, ಪಾಪ, ನಿಮ್ಮ ಸ್ನೇಹಿತರು ನಿಮ್ಮ ನಾಡಿನವರು ಮಿಸ್ಟರ್–ಪಾಪ ದೇಶಭ್ರಷ್ಟರಾಗಿ, ಜರ್ಮನಿಯ ಮರೆಹೊಕ್ಕಿರುವರು. ಇಂಗ್ಲೀಷರು ಕಲ್ಲೆದೆಯವರೆಂಬುದಕ್ಕೆ ಸಾಕ್ಷಿ! ಅವರಿಗೆ ಹೆಚ್ಚಿನ ಮಾಹಿತಿ ಬಂದೇ ಬರುತ್ತದೆಂದು ಹೇಳಬಹುದು. ಈ ರೀತಿ ಎಲ್ಲವನ್ನೂ ತ್ಯಾಗಮಾಡಿ ಬಂದಿರುವವರಿಗೆ ನಾಡಿನಮೇಲೆ ಮಮತೆಯಿಲ್ಲದಿರುವುದೆ?'

'ಈ ವಿಚಾರ ಅವರೊಂದಿಗೆ ನಾನು ಮಾತನಾಡುವುದೇ ಇಲ್ಲ. ಏಕೆಂದರೆ ಇದರ ನೆನಪಾಗುತ್ತಲೇ, ಅವರ ರಾಗಾನುರಾಗಗಳೆಲ್ಲ ಉಕ್ಕಿ...............'

'ಹೋಗಲಿ, ಇನ್ನೊಬ್ಬರಿಗೆ—ಮಿಸ್ಟರ್.... .........., ಅವರಿಗೇನೂ ಬಂದಿಲ್ಲವೇ?'

'ನಿಮ್ಮ ಕುತೂಹಲವನ್ನು ನೋಡಿದರೆ ಯಾವುದೋ ಒಂದು ಗೊತ್ತಾದ ವಿಷಯವನ್ನು ತಿಳಿದುಕೊಳ್ಳುವ ಹಂಬಲಿರುವಂತೆ ಕಾಣುತ್ತದೆ; ಅದು ಯಾವುದೆಂದು ಹೇಳಿದರೆ...........'

'ಬಿಡಿ, ಬಿಡಿ; ನಿಮ್ಮ ಪುರಾಣವನ್ನು ಪ್ರಾರಂಭಿಸಿ, ಹಂಪೆಯ ಪಂಪಾಪತಿ ದೇವಾಲಯದ ವಿಚಾರ ಹೇಳಬೇಕಲ್ಲವೆ, ಇಂದು.'

'ಇದನ್ನು ಕೇಳುವುದಕ್ಕೆ ನಿಮಗೆ ಬೇಸರವಾದಂತೆ ತೋರುತ್ತದೆ.'

'ಇಲ್ಲ. ಆ........ಶ್ರೀಯುತರು ಸಮಸತ್ತ್ವವಾದಿಗಳು (ಕಮ್ಯೂನಿಸ್ಟ್). ಅವರನ್ನು ಕೇಳಿದರೆ ಈ ವಿಚಾರಗಳು ತಿಳಿಯುತ್ತವೆ. ಯಾರಾರಿಗೆ ಯಾವಯಾವ ವಿಷಯಗಳು ರುಚಿಸಿರುತ್ತವೋ ಅವುಗಳನ್ನೇ ಕೇಳಬೇಕು. ಹೇಳಿ, ಪಂಪಾಪತಿಯ ವಿಚಾರ. ಅಲ್ಲಿ ಪೂಜೆ ನಡೆಯುತ್ತಿದೆ.........'

ನನಗೆ ಮುಂದರಿಸಲು ಮನಸ್ಸು ಬರಲಿಲ್ಲ. ಕೊಂಚ ಗೊಡ್ಡು ಹರಟೆಹೊಡೆದು ಬಂದುಬಿಟ್ಟೆ.

೪

'ಹಾಗಾದರೆ, ಕನ್ನಡವನ್ನು ಕಲಿಯಬೇಕೆನ್ನುವಿರೇನು?' ಎಂದು ಕುಮಾರಿ ಶಾರದೆಯ ಮನೆಗೆ ಆಹ್ವಾನಿತನಾಗಿ ಬಂದಿದ್ದ ಯುವಕನು ಫಲಾಹಾರ ಮಾಡುತ್ತ ಕೇಳಿದ, ನನ್ನನ್ನು.

'ನೀವು ಎಲ್ಲಿ ಕೆಲಸವನ್ನು ಮಾಡಬೇಕೆಂದಿರುತ್ತೀರೋ ಅಲ್ಲಿನ ಭಾಷೆ ನಿಮಗೆ ಅಗತ್ಯ. ಜರ್ಮನ್ ಮಿಶನ್‌ಗಳು ಮಂಗಳೂರು–ಧಾರವಾಡ ಮೊದಲಾದ ಕರ್ನಾಟಕ ಕೇಂದ್ರಗಳಲ್ಲಿಯೂ ಕೆಲಸ ಮಾಡುತ್ತಿರುವುದರಿಂದ, ಕೇಂದ್ರಗಳಲ್ಲೊಂದನ್ನಾರಿಸಿಕೊಳ್ಳಬೇಕಾದರೆ.......'

'ಕರ್ನಾಟಕ ಸಾಹಿತ್ಯವು ಪುಷ್ಕಳವಾಗಿದೆಯೋ?'

ಪೂಜ್ಯ ಕಿಟ್ಟೆಲ್ ವಿಶಾರದರಿಂದ ಆರಂಭಿಸಿ, ಒಂದು ಉಪನ್ಯಾಸಕ್ಕೆ ಮೊದಲು ಮಾಡಿದೆ. ಕುಮಾರಿ ಥಾಳ್‌... 'ಬಾಬೂಜಿ, ಇನ್ನಾಯಿತು; ನೀವು ನಮ್ಮ ಕೈಗೆ ಸಿಕ್ಕುವುದಿಲ್ಲ.' ಎಂದಳು.

'ಮಿಸ್ಟರ್........, ಈ ರೀತಿ ಮಾತನಾಡುತ್ತಿದ್ದರೆ ಈ ತರುಣಿಯರಿಗೆ ಬೇಸರವಾಗಬಹುದು; ಬೇರೆ ಸಂಧಿಸಿ ಮಾತನಾಡೋಣ. ನಿಮ್ಮಂತಹ ಭಾರತೀಯರನ್ನು ಅದರಲ್ಲಿಯೂ ಈಸಾಯಿಗಳನ್ನು ಕಂಡುದುದು ಬಹಳ ಸಂತೋಷ.' ಎಂದು ಆತನು ತನ್ನ ವಿಳಾಸವನ್ನು ಬರೆದುಕೊಡುತ್ತಿರುವಾಗ, ಏನನ್ನೋ ಯೋಚಿಸುತ್ತಲಿದ್ದ

CC-0. Jangamwadi Math Collection. Digitized by eGangotri

ಥಾಲ್ ಕುಮಾರಿಯು ಒಮ್ಮಿಂದೊಮ್ಮೆ 'ಏನಾದರೇನು, ಬಾಬೂಜಿ ಭಾರತೀಯರಲ್ಲ.' ಎಂದಳು.

'ಏನೆಂದಿರಿ?'

'ನೀವು ಭಾರತೀಯರಲ್ಲ.'

ಫಟ್ಟನೇ ಕೆನ್ನೆಗೆ ಕೊಟ್ಟಂತಾಯಿತು. ಒಂದು ನಿಮಿಷದಲ್ಲಿ ಚೇತರಸಿಕೊಂಡು 'ಹೇಗೆ?' ಎಂದೆ.

'ಭಾರತೀಯ ಸ್ವಾತಂತ್ರ್ಯಸಂಗ್ರಾಮದ ವಿಚಾರ ಕೊಂಚವೂ ಚಿಂತೆಯಿಲ್ಲ; ನಿಮ್ಮ ನಡೆ-ನುಡಿಗಳೆಲ್ಲವೂ ಪಾಶ್ಚಿಮಾತ್ಯ ಕ್ರಮಗಳನ್ನನುಸರಿಸಿವೆ.'

'ಇವು ಮಾತ್ರವೆ ಪ್ರಮಾಣಗಳು?'

'ಇವೇ ಅಲ್ಲ....ಏನೆಂದು ಹೇಳುವುದಕ್ಕೆ ಬಾರದು. ನಾನು ಹಲವು ಹಿಂದೂಗಳನ್ನು ನೋಡಿರುವೆನು. ಅವರಂತೆ ನೀವಿಲ್ಲ.'

ತಣ್ಣಗಾದೆ. ಕುಮಾರಿ ಷ್ರಾದೆರ್‌ಳು ಮತ್ತೆ ನನ್ನ ಸಹಾಯಕ್ಕೆ ಬಂದಳು. 'ನಿನಗೇನು ಬುದ್ಧಿಯಿಲ್ಲ. ನಿನ್ನ ಬಾಬೂಜಿಯವರು ಈಸಾಯಿಗಳು. ಆದುದರಿಂದ ಮತಸಂಬಂಧವಾದ ಅನೇಕ ಆಚಾರಪದ್ಧತಿಗಳನ್ನು ತಿಳಿದುಕೊಂಡಿರುವರು. ಅಷ್ಟಕ್ಕೇ ಭಾರತೀಯರಲ್ಲ ಎನ್ನುವದು ಸರಿಯೆ?' ಎಂದು ಗೆಳತಿಯನ್ನು ಜಬರಿಸತೊಡಗಿದಳು.

ಇನ್ನೊಬ್ಬ ಯುವಕನಿಗೂ ಕೊಂಚ ಧೈರ್ಯ ಬಂದು, 'ಪ್ರೊಪಗಾಂಡ' 'ಚರ್ಚ ರಿಫಾರ್ಮ್' ಇವುಗಳ ವಿಚಾರ ಹುರುಪಿನಿಂದ ಮಾತನಾಡಿದರೆಂದು ಹಾಗೆ ಹೇಳಿರಬಹುದು ನೀವು, ಕುಮಾರಿ,ಥಾಲ್. ಆದರೆ ಹಿಂದೂ ದೇಶದ ಅನೇಕಾನೇಕ ವಿಚಾರಗಳನ್ನು ತುಲನಾತ್ಮಕವಾಗಿ ಮಾತನಾಡುವಾಗ, ಪಾಶ್ಚಿಮಾತ್ಯ ಅಭಿಪ್ರಾಯಗಳನ್ನು ಕೆಲವೇಳೆ ಕೊಟ್ಟರೂ, ಎಷ್ಟು ಸಹಾನುಭೂತಿಯಿಂದ ಹೇಳಿದರೆಂದು—

'ಹೋಗಲಿ, ಬಿಡಿರಿ. ಕ್ಷಮಿಸಿ ಬಾಬೂಜಿ.'

'ಕೋಪಿಸಿಕೊಳ್ಳಬೇಡಿ, ಕುಮಾರಿ ಥಾಲ್. ಇವರ ವಿಚಾರ ಸರಿಯಾದ ಅಭಿಪ್ರಾಯ ಬರಲು ಪ್ರಯತ್ನಿಸುತ್ತಿರುವೆನಲ್ಲದೆ, ಅವರ ಕ್ಷಮಾಪಣೆ ಕೇಳಬೇಕೆಂದು ಸೂಚಿಸಲಿಲ್ಲ. ನನ್ನ ಅಭಿಪ್ರಾಯವೇನೆಂದು ಕೇಳುವಿರೇನು?'

'ಹೇಳಿ.'

'ಭಾರತೀಯರು ಸಂಪ್ರದಾಯಸಂಪನ್ನರೆಂಬ ಅಭಿಪ್ರಾಯವು ನನಗಿದ್ದಿತು. ಇವರನ್ನು ನೋಡಿದ ಮೇಲೆಯೂ ಆ ಅಭಿಪ್ರಾಯವನ್ನು ಬದಲಾಯಿಸಬೇಕಾದ ಅಗತ್ಯವು ಕಂಡುಬಂದಿಲ್ಲ.'

ಹೀಗೆ ಮಾತುಕತೆಗಳಾದನಂತರ ನಾನು ಮನೆಗೆ ಬಂದುಬಿಟ್ಟೆ.

ರಾತ್ರಿ ಹನ್ನೆರಡು ಗಂಟೆ. 'ದೂರನುಡಿ' ಯಂತ್ರವು ಗಣಗಣಿಸಿತು. ಬೇರೆ ಯಾರೂ ಎದ್ದು ಬಾರದಿರಲು, ನಿಲುವಂಗಿಯನ್ನು ತೊಟ್ಟು, ಎದ್ದುಹೋಗಿ, ಅದಕ್ಕೆ ಕಿವಿಗೊಟ್ಟೆ.

'ಮಲಗಿದ್ದಿರೇನೋ, ತೊಂದರೆ ಕೊಟ್ಟೆ. ಕ್ಷಮಿಸಬೇಕು; ನನ್ನ ಮನೆಗೆ ಕರೆಯಿಸಿ, ನಿಮ್ಮ ಮನಸ್ಸು ನೋಯಿಸಿ ಕಳುಹಿಸಬೇಕಾಯಿತು! ಅದಕ್ಕಾಗಿ ಕ್ಷಮಾಪಣೆ ಕೇಳಲು ಈಗ ನಿಮ್ಮನ್ನು ತೊಂದರೆಪಡಿಸಬೇಕಾಯಿತು.' ಎಂದಳು, ಕುಮಾರಿ ಷ್ರಾದೆರಳು.

'ಅದು ಅನಾವಶ್ಯಕ; ನಾನು ಆಹತನಾಗಲಿಲ್ಲ.'

'ನಿಮ್ಮ ಮಾತು ನಂಬುವುದಿಲ್ಲ. ನಿಜವಾಗಿಯೂ ನನ್ನ ಗೆಳತಿಯು ಮಾತುಕೇಳುತ್ತಲೇ ನಿಮ್ಮ ಮುಖವು ಕಳೆಗುಂದಿಹೋಯಿತು; ಮತ್ತೆ ಕಳೆಯೇರಲಿಲ್ಲ. ಇಷ್ಟು ಹೊತ್ತೂ ಅವಳೊಂದಿಗೆ ಅದನ್ನೇ ಚರ್ಚಿಸುತ್ತಿದ್ದೆ.'

'ತುಂಬಾ ಪ್ರಯಾಸಪಟ್ಟಿರುವಿರಿ; ವಂದನೆಗಳು. ಯಾವ ಕುಂದುಕೊರತೆಗಳನ್ನು ನನ್ನಲ್ಲಿ ಕಂಡು, ಆಕೆಯು.

'ಅಲ್ಲ, ಅಲ್ಲ; ನೀವು ಯಾರಲ್ಲಿ ದಿನದಿನಕ್ಕೂ ಹೆಚ್ಚು ವಿಶ್ವಾಸವನ್ನಿಡುತ್ತಿದ್ದಿರೋ ಆಕೆ ಈ ರೀತಿ ಹೇಳಿಬಿಟ್ಟಳಲ್ಲ ಎಂಬ ಚಿಂತೆ.'

'ಕುಮಾರಿ, ನೀವು ತಪ್ಪೆಣಿಸಿರುವಂತೆ ತೋರುತ್ತದೆ.'

'ಕ್ಷಮಿಸಿ; ಆ ವಿಚಾರ ಕುಚೇಷ್ಟೆಯಿಂದ ಮಾತನಾಡುತ್ತಿಲ್ಲ. ಆದರೆ ಒಂದು ರೀತಿ, ಹೀಗಾದುದು ಒಳ್ಳೆಯದೆಂದೇ ತಿಳಿದುಕೊಂಡಿರುವೆನು.'

'ಹೇಗೆ?'

'ಅವಳಿಗೆ ಹೇಳಬೇಡಿ, ನಾನು ಹೇಳುವುದನ್ನು. ಹಲವು ಹಿಂದೂವಿದ್ಯಾರ್ಥಿಗಳೊಂದಿಗೆ ಇದೇ ರೀತಿ ಬಹಳ ಸ್ನೇಹವನ್ನು ತೋರಿ, ಹಠಾತ್ತಾಗಿ ಬಿಟ್ಟುಬಿಟ್ಟಿರುವಳು. ನಿಮಗೂ ಹಾಗೆ ಆಗುವ ಸಂಭವವು ತಪ್ಪಿಹೋದುದು ಸಂತೋಷ.'



CC-0. Jangamwadi Math Collection. Digitized by eGangotri

'ಆಕೆಯೇಕೆ ಹಾಗೆ ಮಾಡಿದಳು?'

'ನಿಜವಾಗಿಯೂ ನನಗೆ ತಿಳಿಯದು ತಿಳಿದಷ್ಟು ಹೇಳಿರುವೆನು, ವಂಚನೆಯಿಲ್ಲದೆ.'

'ನಿಮ್ಮ ಸ್ನೇಹಶೀಲತೆಗೆ ಮೆಚ್ಚಿದೆನು ವಂದನೆಗಳು.' 'ದಯವಿಟ್ಟು ಅವಳಾಡಿದ ಮಾತುಗಳನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ನನ್ನ ಮನೆಗೆ ನಿಮ್ಮನ್ನು ಕರೆಯಿಸಿ........'

'ದಯವಿಟ್ಟು ಈ ಚಿಂತೆಯನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡಿಯೆಂದು ಮತ್ತೊಮ್ಮೆ ಬೇಡಿಕೊಳ್ಳುತ್ತೇನೆ.'

ಮಾತು ಮುಗಿಸಿ, ಬಂದು ಮಲಗಿದೆ. ನಮ್ಮ ಸ್ನೇಹವನ್ನು ನೋಡಿ, ಕುಮಾರಿ ಷ್ರಾದೆರಳಲ್ಲಿ ಅಸೂಯೆಯೂ ತೋರಿರಬಹುದೆ? ಕುಮಾರಿ ಥಾಲ್ ನಿಜವಾಗಿಯೂ ಶಂಕಿಸಬೇಕಾದಂತಹ ನಡತೆಯುಳ್ಳವಳೆ? ಪಾಶ್ಚಿಮಾತ್ಯ ತರುಣಿಯರ ನಡೆನುಡಿಗಳ ಇಂಗಿತವನ್ನು ಗೊತ್ತುಹಚ್ಚುವುದು ಹೇಗೆ? ಅಂತೂ ಇಬ್ಬರಲ್ಲೊಬ್ಬಳು ಶಂಕಾಸ್ಪದವಾದ ವರ್ತನೆಯುಳ್ಳವಳು. ಯಾರವಳು? ನಿರ್ಧರಿಸುವುದು ಕಷ್ಟವಾಗಿದ್ದಿತು. ನಿರ್ಧರಿಸಿದಹೊರತು ನಿದ್ದೆ ಬಾರದು; ನಿದ್ದೆ ಬಂದ ಹೊರತು ಈ ಚರ್ಚೆಯು ಕೊನೆಗಾಣದು!

೫

ಹಲವು ದಿನಗಳು ಕಳೆದುವು. ವಾಚನಾಲಯದಲ್ಲೊಂದುದಿನ ಓದುತ್ತಲಿದ್ದಾಗ 'ಎಷ್ಟು ಹೊತ್ತು ನಿಮ್ಮ ಮುಂದೆ ಹೀಗೆ ನಿಂತಿರಬೇಕು— ಬಾಬೂಜಿ?' ಎಂದುದು ಕೇಳಿಸಿ, ತಲೆಯೆತ್ತಿ ನೋಡಲು, ಕುಮಾರಿ ಥಾಲ್ ನಿಂತಿದ್ದಳು. 'ನೋಡಲಿಲ್ಲ, ಕ್ಷಮಿಸಿ' ಎನ್ನುತ್ತ ಆಕೆಯೊಂದಿಗೆ ಹೊರಗೆ ಬಂದೆ.

'ಬಾಬೂಜಿ, ಕ್ಷಮಿಸಬೇಕು; ಈಗ ತೊಂದರೆ ಕೊಟ್ಟದುದಕ್ಕಲ್ಲ, ನಿಮ್ಮ ಆಹ್ವಾನದಂತೆ ನಿನ್ನೆಯ ದಿನ ಬಾರದೇ ಇದ್ದುದಕ್ಕೆ.'

'ಹೆಚ್ಚಿನ ಕೆಲಸವೇನಾದರೂ......'

'ಇಲ್ಲ; ಅಲ್ಲಿಗೆ ಬರಲು ಇಷ್ಟವಿರಲಿಲ್ಲ.'

'ಪ್ರಶ್ನೆ?'

'ನಿಮ್ಮ ನಾಡಿನವರು ಸಿಕ್ಕಿದ ಸಿಚಾರ ಮನಸ್ಸಿಗೆ ಬಂದಂತೆ ಆಡಿಕೊಳ್ಳುವರು. ನಿಮ್ಮೊಂದಿಗೆ ಬಂದಿದ್ದರೆ...

'ಒಟ್ಟಿಗೆ ಹೋದ ಮಾತ್ರಕ್ಕೆ ಕಳಂಕವೆ? ಈ ಪದ್ಧತಿಯು ನಿಮಗೆ ಹೊಸದೆ? ನೀವೀಗ ಜರ್ಮನ್ನರಲ್ಲ ಎನ್ನಬಹುದೆ?'

'ಆ ಮಾತು ಬಿಡಿ. ನೀವು ಭಾರತೀಯರಲ್ಲವೆಂದುದು ತಪ್ಪು. ಭಾರತೀಯರೆಂದರೆ ಸಂನ್ಯಾಸಿಗಳು, ಸ್ವಾತಂತ್ರ್ಯ ಸಂಗ್ರಾಮಪಕ್ಷಪಾತಿಗಳು ಎಂದೇನೇನೋ ಭಾವಿಸಿದ್ದೆ. ಹಾಗಿಲ್ಲದಿದ್ದರೂ, ಪಾಶ್ಚಿಮಾತ್ಯ ಉಡುಗೆತೊಡುಗೆಗಳಿಗೆ ತಲೆಬಾಗಿದರೂ ಭಾರತೀಯರಾಗಿಯೇ ಇರಬಹುದು; ನಾನೆಂದು ಹೇಳಿದುದನ್ನು ಕ್ಷಮಿಸಿ.'

'ಒಂದು ವಿಷಯದಿಂದ ಮತ್ತೊಂದಕ್ಕೆ ಹಾರುತ್ತಿದ್ದೇವೆ. ನಿಮ್ಮ ಪರಿಚಿತರಾದ ಬಂಗಾಳಿಗಳೇ ಹೆಚ್ಚಾಗಿದ್ದ ಆ ವಿನೋದಕೂಟಕ್ಕೇಕೆ ಬರಲಿಲ್ಲ?'

'ಏನೋ ಮನಸ್ಸಿಗೆ ಕಳವಳವಾಯಿತು; ಬಿಡಿ. ಬಾರದೆ ಇದ್ದುದಕ್ಕೆ ಕ್ಷಮಿಸಿ, ಅದು ಮುಖ್ಯಾಂಶ.'

'ಮನ್ನಿಸಬೇಕಾದಂತಹ ಗುರುತರವಾದ ಅಪರಾಧವೇನೂ ಅಲ್ಲ. ಆದರೆ ನಿಮ್ಮ ನಡವಳಿಕೆ ಸೋಜಿಗವಾಗಿಯಲ್ಲದೆ, ನಿಮ್ಮ ಕಾರಣಗಳೂ ಸಮಂಜಸವಾಗಿಲ್ಲ!'

'ನೋಡಿ, ಆತ ಮಿ।....ಸಮಸತ್ತ್ವವಾದಿ; ನಾನು ಹಿಂದೂದೇಶಕ್ಕೆ ಹೋಗಬೇಕೆಂದಿರುವುದರಿಂದ ನನ್ನನ್ನು ಆತನ ಸಹಾಯಕಳನ್ನಾಗಿ ಮಾಡಿಕೊಂಡು, ತನ್ನ ಕೆಲಸವನ್ನು ಮುಂದರಿಸಬೇಕೆಂದಿರುವನು. ಆದರಿಂದ ಆತನ ಬಳಿಗೆ ಬರಲು ಇಷ್ಟವಿರಲಿಲ್ಲ.'

'ಹೋಗಲಿ ಬಿಡಿ. ಪಾಶ್ಚಿಮಾತ್ಯ ತರುಣಿಯರನ್ನು ಅರ್ಥಮಾಡಿಕೊಳ್ಳುವ ಶಕ್ತಿಯು ಭಾರತೀಯನಲ್ಲವೆಂದು ನಿರ್ಣಯಿಸಲ್ಪಟ್ಟಿರುವ ನನಗೂ ಇಲ್ಲ!'

'ನೋಡಿ, ಮತ್ತೆಮತ್ತೆ ಅದನ್ನೇ ಹೇಳುವಿರಿ.'

'ಬೇರೊಂದನ್ನು ಹೇಳುತ್ತೇನೆ: ಜರ್ಮನ್ ಪದವೊಂದು ಅರ್ಥವಾಗಿಲ್ಲ; ಯಾವಾಗ ಸಮಯವೆಂದು ಹೇಳಿದರೆ ಆಗ ಮನೆಗೆ ಬರುವೆನು; ನೀವು ವಿವರಿಸಬಹುದು.'

'ಅಗತ್ಯವಾಗಿ; ಸಾಯಂಕಾಲ ಐದುಗಂಟೆಗೆ ಮನೆಯಲ್ಲಿರುವೆನು; ಅನಂತರ ಎಲ್ಲಿಗೂ ಹೋಗುವುದಿಲ್ಲ. ಓದಬೇಕಾದುದು ಬಹಳವಿದೆ. ನೀವು ಬಂದರೆ ಸಂತೋಷವಾಗಿ ಒಂದೆರಡು ಗಂಟೆಗಳು ಹೇಳಿಕೊಡುವೆನು. ನಾನಿನ್ನು ಹೋಗಬೇಕು, ಕ್ಷಮಿಸಿ, ವಂದೇಮಾತರಂ!'

CC-0. Jangamwadi Math Collection. Digitized by eGangotri

' ಹೋಗಿ ಬನ್ನಿ, ವಂದೇಮಾತರಂ. '

' ಈ ಕುಮಾರಿಯ ನಡತೆಯನ್ನು ಹೇಗೆ ತಾನೇ ಶಂಕಿಸುವುದು ? ' ಎಂದುಕೊಂಡು, ಮತ್ತೆ ವಾಚನಾಲಯಕ್ಕೆ ಹೋದೆ.

ಮುಂತಿಳಿಸದೆ ಒಂದು ದಿನ ಸಾಯಂಕಾಲ ಆರು ಗಂಟೆಗೆ ಕುಮಾರಿ ಫಾಲ್‌ಳ ಮನೆಗೆ ಹೋದೆ. ಆಕೆಯು ನಡುಮನೆಯಲ್ಲಿ ದೂರನುಡಿಯಲ್ಲಿ ಮಾತನಾಡುತ್ತಿದ್ದುದರಿಂದ ಹೆಣ್ಣಾಳು ಬಾಗಿಲು ತೆಗೆದಳು. ಕುಮಾರಿಯು ಇದಾವುದನ್ನೂ ಗಮನಿಸಿದಂತೆ ತೋರಲಿಲ್ಲ. ಉದ್ದೇಶರಹಿತವಾಗಿ, ಆಕೆಗಾಗಿ ಕಾದುನಿಂತಿದ್ದ ನನಗೆ ಕೆಲವು ನಿಮಿಷಗಳಲ್ಲಿ ಆಕೆ ಮಾತನಾಡುತ್ತಿದ್ದುದನ್ನು ಕೇಳಲು ಕುತೂಹಲವು ತಲೆದೋರಿತು.

'ಇಲ್ಲ. ಆ ವಿಚಾರ ತಿಳಿದುಕೊಳ್ಳಲಾಗದು....ಹೌದು, ಅವನ ಪರಿಚಯ ಚೆನ್ನಾಗಿದೆ; ಆದರೂ ಬಲು ಹುಷಾರ್ ಆಸಾಮಿ........ಏನಂದಿರಿ ?........ಇಲ್ಲ. ಆಕ್ಸ್‌ಫೋರ್ಡಿನಲ್ಲಿರುವ ಗೆಳೆಯನ ಹೆಸರನ್ನೂ ಹೇಳಲಿಲ್ಲ....ಹೇಗೆ ಹೊರಡಿಸುವುದಕ್ಕಾಗುತ್ತದೆಂಬುದನ್ನು ಹೇಳಲಾರೆ.... ನೋಡಿದ್ದೇನೆ; ಆದರೇನು ಪ್ರಯೋಜನ ? ಅವನ ಮನೆಮಾತಿನಲ್ಲಿಯೇ ಬರೆಯಲ್ಪಟ್ಟಿರುತ್ತವೆ....ಬಂಗಾಳಿಯಲ್ಲ, ದ್ರಾವಿಡ ಭಾಷೆಯೊಂದಂತೆ........ಅಭ್ಯಂತರವಿಲ್ಲ. ಬನ್ನಿ ಟೈಪು ಮಾಡಿಕೊಡುತ್ತೇನೆ, ಪ್ರತಿಯಿದೆ........;

ಆಕೆಯೊಂದಿಗೆ ದೂರನುಡಿಯಲ್ಲಿ ಮಾತನಾಡುತ್ತಲಿದ್ದ ವ್ಯಕ್ತಿ ಯಾರೆಂಬುದು ತಿಳಿಯದಿದ್ದರೂ, ಆ ವ್ಯಕ್ತಿ ಹೇಳಿದುದು ಕೇಳಿಸದಿದ್ದರೂ ಈಕೆಯು ಜರ್ಮನ್‌ನಲ್ಲಿಯೇ ಮಾತನಾಡುತ್ತಿದ್ದರೂ ನನ್ನನ್ನು ಸಂಬೋಧಿಸಿ ಮಾತನಾಡುತ್ತಿದ್ದಳೆಂಬ ಭಾವವು ಮನಸ್ಸಿಗೆ ಹೊಳೆದು, ಇದನ್ನು ಕೇಳಿರಬಹುದೆಂಬ ಶಂಕೆಯೂ ಆಕೆಯ ಮನಸ್ಸಿಗೆ ಬಾರದಂತೆ ಮಾಡಲು, ಆಕೆಯು ಕೊಠಡಿಯಲ್ಲಿ ಹೋಗಿ ಕುಳಿತೆ. ಮೂರು ನಿಮಿಷದಲ್ಲಿ ಆಕೆ ಒಳಕ್ಕೆ ಬಂದವಳು ಕೊಂಚ ಬೆಚ್ಚಿ ' ಯಾವಾಗ ಬಂದಿರಿ ' ಎಂದಳು.

' ಬಂದೆರಡು ನಿಮಿಷವಾಯಿತು. '

' ನೀವು ಬಂದುದು ಕೇಳಿಸಲೇ ಇಲ್ಲ. '

' ಕೇಳಿಸಿರಲಾರದು; ದೂರನುಡಿಯಲ್ಲಿ ಮಾತನಾಡುತ್ತಿದ್ದರೆಂದು ತೋರುತ್ತದೆ. '

' ಹೌದು, ನನ್ನ ಗೆಳೆಯರೊಬ್ಬರಿಗೆ ಕೊಂಚ ಟೈಪು ಮಾಡಿಕೊಡಬೇಕಂತೆ; ಈಗ ಬರುತ್ತಾರೆ. '

' ಹಾಗಾದರೆ ನನ್ನಿಂದ ತೊಂದರೆಯೇನು ? '

' ಇಲ್ಲ. ಇಲ್ಲ; ಕೂಡಿ. '

ಮಾತನಾಡುತ್ತ ಹಿಂದೀಭಾಷೆಯಲ್ಲಿದ್ದ ಮಾಸಪತ್ರಿಕೆಯೊಂದನ್ನು ಕೈಗೆ ಕೊಟ್ಟು, ' ಈ ಚಿತ್ರಗಳ ವಿಚಾರ ಏನು ಬರೆದಿರುವರು ? ' ಎಂದು ಕೇಳಿದಳು.

' ನೀವು ಹಿಂದೊಮ್ಮೆ ವಿಚಾರಿಸಿದ್ದ ಶ್ರೀಯುತರ ಚಿತ್ರವಿದು. ಅವರು ಲಂಡನ್ನಿನಲ್ಲಿ ಇಂಗ್ಲೀಷ ಮಿತ್ರರೊಂದಿಗೆ ಫಲಾಹಾರ ಮಾಡುತ್ತಿರುವ ಚಿತ್ರವಿದು; ಅದು ತಿರುಗಾಡುತ್ತಲಿದ್ದಾಗ ತೆಗೆದ ಚಿತ್ರ. '

' ತಲೆಯಮೇಲಿರುವುದು ಗಾಂಧಿ ಟೋಪಿಯಲ್ಲವೆ?'

' ಹೌದು. '

' ಅವರು ರಾಷ್ಟ್ರೀಯ ಪಕ್ಷದವರೋ, ಸಮಸತ್ತ್ವವಾದಿಗಳೋ ? ಈ ಲೇಖನದಲ್ಲೇನು ಬರೆದಿರುವರು?'

' ಕ್ಷಮಿಸಬೇಕು; ಅಷ್ಟು ಹಿಂದಿ ನನಗೆ ಬಾರದು. '

ಈ ರೀತಿ ಮಾತನಾಡುತ್ತಿದ್ದಾಗ, ತಲೆಬಾಗಿಲು ಬಳಿಯಿದ್ದ ವಿದ್ಯುದ್ಘಂಟೆಯು ಗಣಗಣಿಸಲು, ಆಕೆಯು ಹೊರಕ್ಕೆ ಹೋಗಿ, ಒಬ್ಬ ಯುವಕನೊಂದಿಗೆ ಒಳಕ್ಕೆ ಬಂದಳು.

' ಮಿ....ಕರ್ನಾಟಕದವರು; ಮಿ. ವಾರ್‍ಲಿಂಗ್‌ಟನ್, ಇಂಗ್ಲಾಂಡಿನವರು ' ಎಂದು ಪರಿಚಯ ಮಾಡಿಕೊಟ್ಟಳು.

ಚುರುಕಾಗಿ ಒಂದು ಕ್ಷಣ ಆಕೆಯನ್ನು ನೋಡಿ, ಮುಗುಳ್ನಗೆಯಿಂದ ' ಬಹಳ ಸಂತೋಷ........' ಎಂದು ಮಾತು ಪ್ರಾರಂಭಿಸಿದನು. ಎಷ್ಟೆಷ್ಟೋ ಮಾತುಗಳಾದುವು; ನಾನಲ್ಲಿದ್ದುದು ಆತನಿಗೆ ಹಿತವಾಗಿದ್ದಂತೆ ತೋರದಿರಲು, ಕೊನೆಗೆ ' ನಿಮ್ಮ ಕೆಲಸಕ್ಕೆ ತೊಡಗಿ; ನಾನು ಹೊರಡುತ್ತೇನೆ. ' ಎಂದು ಹೇಳಿ ಹೊರಟೆ.

ಮನಸ್ಸಿನಲ್ಲಿ ಮಾತ್ರ ' ಅವನಾರು ? ಅವನೊಂದಿಗೆ ಈ ಕುಮಾರಿ ಮಾತನಾಡಿದ್ದಿರಬೇಕು. ಹಾಗಾದರೆ ಅವನಾರು ? ' ಎಂಬ ಪ್ರಶ್ನೆಯು ಉಳುಕೊಂಡಿತು. ನಲವತ್ತೆರಡು ಲಕ್ಷ ಪ್ರಜೆಗಳುಳ್ಳ ಬರ್ಲಿನ ನಗರದಲ್ಲಿ

CC-0. Jangamwadi Math Collection. Digitized by eGangotri

ಮತ್ತೊಮ್ಮೆ ಅವನನ್ನು ಗುರುತಿಸುವುದು ಹೇಗೆ? ಹಾಗೆ ಗುರುತಿಸಿರುವೆನೆಂದುಕೊಂಡ ಮನುಷ್ಯನು ಜರ್ಮನ್ನನಾಗೇಕಿರಬಾರದು? ಸಂಶಯವು ಮಾತ್ರ ಸಾಯಲಿಲ್ಲ.

೭

ಮತ್ತೆ ಕೆಲವು ದಿನಗಳು ಕಳೆದುವು. ಒಂದು ದಿನ 'ಭಾರತೀಯ ಸ್ವಾತಂತ್ರ್ಯಸಂಗ್ರಾಮ'ದ ವಿಚಾರ ಆಗ ತಾನೇ ನಮ್ಮ ತಾಯ್ನಾಡಿನಿಂದ ಬಂದಿದ್ದವರೊಬ್ಬರು ಉಪನ್ಯಾಸ ಮಾಡಿದರು. ಅಲ್ಲಿ ಈ ವ್ಯಕ್ತಿಯು ಕುಳಿತಿದ್ದಂತೆ ತೋರಲು ಹೋಗಿ ಮಾತನಾಡಿಸಿ, ಕುಮಾರಿ ಥಾಲ್‌ಳ ಗೆಳೆಯನೇ ಎಂದು ಗೊತ್ತುಮಾಡಿಕೊಂಡೆ. ಅನಂತರ ರಾಷ್ಟ್ರೀಯಚಳವಳಿಯಲ್ಲಿ ದೇಶಭ್ರಷ್ಟರಾಗಿರುವ ಹಿಂದೂ ಗೃಹಸ್ಥರೊಬ್ಬರಿಗೆ ಅವನನ್ನು ತೋರಿಸಿ ಯಾರೆಂದು ಕೇಳಿದೆ.

'ಅವನೆ? ನನ್ನ ಆಪ್ತಮಿತ್ರ' ಎಂದರು.

'ಹೇಗೆ?'

'ಅವನೊಬ್ಬ ಆಂಗ್ಲಗೂಢಚಾರನೆಂಬ ಅನುಮಾನ ಬಲವಾಗಿದೆ; ಗೂಢಚಾರನೇ ಎಂದು ಹೇಳಿದರೂ ತಪ್ಪಿಲ್ಲ. ನನ್ನಂತಹ ಆಸಾಮಿಗಳ ಮೇಲೆಲ್ಲಾ ಯಾವಾಗಲೂ ಕಣ್ಣಿಟ್ಟುಕೊಂಡು ತಿರುಗಿದರೂ, ಹಿಂದೂ ದೇಶದ ಗೆಳೆಯನಂತೆ ನಟಿಸುತ್ತಿರುವನು. ಇವನು 'ಮಿತ್ರ'ನಲ್ಲದೆ ಇನ್ನೇನು?'

ಅವರಲ್ಲಿಂದಾಚೆಗೇನು ಹೇಳಿದರೋ ನನಗೆ ಕೇಳಿಸಲಿಲ್ಲ. ನನ್ನ ಯೋಚನೆಗಳು ಬೇರೆ ಕಡೆಗೆ ಹರಿದುವು.

ಇವನು ಆಂಗ್ಲಗೂಢಚಾರನು. ಥಾಲ್ ಕುಮಾರಿಯು ಅವನ ಗೆಳತಿಯು! ಮನಸ್ಸಿನಲ್ಲಿದ್ದ ಸಂಶಯಗಳು ಮಾಯವಾದುವು. ಕಣ್ಣುಗಳ ಮೇಲಿದ್ದ ಪೊರೆಗಳು ಉದುರಿ ಹೋದುವು.

ಇಂತಹ ಕುಮಾರಿಯೇ ಅಲ್ಲವೆ ಹಿಂದೂಮಹಿಳಾ ಸುಧಾರಣೆಗಾಗಿ ಕಂಕಣ ಕಟ್ಟಿಕೊಳ್ಳಬೇಕಾಗಿರುವುದು.

## ಅಸಮಾಧಾನ

ನನ್ನ ಎದೆಯೊಳಗಿರುವ ಬೆಂಕಿಯು
ಇನ್ನು ಕೆಣಕಿಲ್ಲ
ನಿನ್ನ ಹೃದಯವನು!

ನನ್ನ ಬುದ್ಧಿಯೊಳಿರುವ ತೊಡಕು
ಇನ್ನು ತೊಡಕಿಲ್ಲ
ನಿನ್ನ ಬುದ್ಧಿಯನು

ಗೆಳತಿ! ನಿನ್ನೀ ನಗೆಯ ಮೊಗ್ಗೆಯು
ನಳನಳಿಸಲಿಲ್ಲ
ನಳಿನದೊಲುಮೆಯೊಲು!

ಸೆಳೆವ ಕಂಗಳ ಕಾಂತಿಜಲವು
ತುಳುಕಿ ಬರಲಿಲ್ಲ
ನಲಿವ ನಲುಮೆಯೊಲು

ಹೇಗೊ! ಏನೋ! ಗೆಳತಿ! ಕಾಣೆನು;
ಸಾಗಿ ಬರಲಿಲ್ಲ
ಯೋಗಸ್ಪರ್ಶವದು

ಭೋಗದಾಶೆಯೊಳಿದ್ದ ನಮ್ಮಯ
ಭಾಗಕಿರಲಿಲ್ಲ
ತ್ಯಾಗದೂಟವದು

ಭೂಮಿಯಾಕಾಶಗಳ ಪ್ರೇಮದ
ಆಳವಿರಲಿಲ್ಲ
ನಮ್ಮ ಪ್ರೀತಿಯೊಳು!

ಕಾಮವಾಸನೆಯನ್ನು ಅಳಿಸಿದ
ಶಾಂತಿಯಿರಲಿಲ್ಲ
ನಮ್ಮ ರೀತಿಯೊಳು;

ಮಡದಿ! ನಮ್ಮೀ ಪ್ರೇಮದೊಗಟವ
ಇಡಿ ಇಳೆಯೊಳಿಲ್ಲ
ಒಡೆದು ತಿಳಿವವರು!

ಮಿಡುಕಿ ಫಲವೇನಿಲ್ಲ: ನಾವೇ
ಕಡೆಗೆ ಇಹೆವಲ್ಲ
ಒಡನೆ ಬೆರೆವವರು!

—ವಿನಾಯಕ

CC-0. Jangamwadi Math Collection. Digitized by eGangotri



# ದಿವಂಗತರಾದ ಥಾಮಸ್ ಎಡಿಸನ್‌ರವರು

ಲೇ:— ಶ್ರೀ. ಬಿ. ಎನ್. ಶ್ರೀನಿವಾಸಯ್ಯನವರ, ಎಮ್. ಎಸ್. ಸಿ., ಆಗ್ರಾ

ಪ್ರಪಂಚದಲ್ಲಿ ಇದುವರೆಗೆ ಹುಟ್ಟಿದ ವೈಜ್ಞಾನಿಕರಲ್ಲೆಲ್ಲಾ, ಮನುಷ್ಯ ಸಾಮಾನ್ಯಕ್ಕೆ ಉಪಯುಕ್ತವಾದ ಸಾಧನಗಳನ್ನು ಕಲ್ಪಿಸಿದವರಲ್ಲಿ ಮೊದಲ ಸ್ಥಾನವನ್ನು ಪಡೆದ **ಥಾಮಸ್ ಆಲ್ವಾ ಎಡಿಸನ್** ಮಹನೀಯರು



ಇದೇ ಅಕ್ಟೋಬರ ತಿಂಗಳ ೧೮ನೆಯ ದಿವಸ ದಿವಂಗತರಾದರು. ಸಾಯುವ ಕಾಲಕ್ಕೆ ಎಡಿಸನ್ನರಿಗೆ ೮೪ ವರ್ಷದ ವಯಸ್ಸಾಗಿದ್ದಿತು.

ತಮ್ಮ ೧೨ನೆಯ ವರ್ಷದ ಸುಮಾರಿನಿಂದ ಅಂದರೆ ಹೆಚ್ಚುಕಡಿಮೆ ೭೦ ವರ್ಷಗಳ ಕಾಲ ಒಂದೇ ಸಮನೆ, ವಿರಾಮವೆಂದರೇನೆಂದರಿಯದೆ, ಲೋಕಸೇವೆಗಾಗಿ ತಮ್ಮ ಬುದ್ಧಿಶಕ್ತಿಯನ್ನೂ ಕಾರ್ಯಶಕ್ತಿಯನ್ನೂ ಪೂರ್ಣವಾಗಿ ಉಪಯೋಗಿಸಿ ದುಡಿದವರೆಂದರೆ ಎಡಿಸನ್ನರೇ. ಇವರಿಗಿಂತ ಹೆಚ್ಚು ಸಂಖ್ಯಾಕವಾಗಿ ಸಾಧನಗಳನ್ನು ಕಂಡುಹಿಡಿದವರು ಇದುವರೆಗೆ ಬೇರೊಬ್ಬರೂ ಇಲ್ಲ; ೧೦೦೦ಕ್ಕಿಂತ ಹೆಚ್ಚಾದ ಶೋಧನೆ (Invention) ಗಳಿಗೆ ಸರ್ವಸ್ವಾತಂತ್ರ್ಯದ ಹಕ್ಕು (Patent) ನ್ನು ಪಡೆದಿರುವರು. ಆಧುನಿಕ ಕಲ್ಪನೆಗಳು ಸಾಮಾನ್ಯವಾಗಿ ಅನೇಕ ಜನರ ಬುದ್ಧಿಯೋಗದಿಂದ ಫಲಿತವಾಗುವುವು; ಕಾರಣ, ಕಲ್ಪನೆಗಳ ಬಗ್ಗೆ ವಿಶಿಷ್ಟಾಧಿಕಾರವನ್ನು ನಿರ್ಣಯಿಸುವುದು ಹಲವು ಸಾರಿ ನ್ಯಾಯಸ್ಥಾನಗಳಿಗೆ ಸಹ ಕಷ್ಟಕರವಾಗುವುದು. ಎಡಿಸನ್ನರ ವಿಷಯದಲ್ಲಿ ಮಾತ್ರ ಇಂತಹ ಸಂಭವಗಳು ಅಪರೂಪವಾಗಿದ್ದುವು; ೧೮೭೭ರಲ್ಲಿ ಇವರು **ಫೋನೋಗ್ರಾಫ್**ಎಂಬ ಗಾನಯಂತ್ರದ ವಿಶಿಷ್ಟಹಕ್ಕಿನ ಬಗ್ಗೆ ಕೇಳಿದಾಗ, ಅಮೆರಿಕಾ ಸರಕಾರದವರು ಎಷ್ಟೆಷ್ಟು ಹುಡುಕಿದರೂ, ಇವರಿಗಿಂತ ಹಿಂದೆ ಯಾರಾದರೂ ಈ ಬಗೆಯ ಯಂತ್ರವನ್ನು ಕಂಡುಹಿಡಿದ ಗುರ್ತು ಎಲ್ಲಿಯೂ ಸಿಕ್ಕಲಿಲ್ಲ!

ಎಡಿಸನ್ನರ ಜೀವಮಾನವು ಎಲ್ಲ ವಿಧಗಳಲ್ಲಿಯೂ ಆದರ್ಶಪ್ರಾಯವಾಗಿದೆ. ಉದ್ಯೋಗವೇ ಇವರ ಜೀವನದ ಧ್ಯೇಯ. "ಜೀವಮಾನವು ಬಹು ಸಣ್ಣದು; ಮಾಡಬಹುದಾದ, ಮಾಡತಕ್ಕ, ಕೆಲಸಗಳಾದರೋ ಅಪಾರವಾಗಿವೆ" ಎಂದು ಅಡಿಗಡಿಗೆ ಹೇಳುತ್ತಿದ್ದರಂತೆ. ಎಡಿಸನ್ನರು ಬಹಳ ಬಡತನದಲ್ಲಿಯೇ ಹುಟ್ಟಿದವರು; ೧೨ನೆಯ ವಯಸ್ಸಿನಲ್ಲಿಯೇ ಹೊಟ್ಟೆಹೊರೆಯುವದಕ್ಕಾಗಿ ದುಡಿಯುವುದು ಇವರ ಪಾಲಾಯಿತು; ವಿದ್ಯಾಭ್ಯಾಸವೆಂದು ಈಗ ನಾವು ಯಾವುದನ್ನು ಕರೆಯುತ್ತೇವೆಯೋ ಅಂತಹ ಓದುಗಾರಿಕೆಯು ಪೋರ್ಟ್‌ಹ್ಯೂರನ್ ಎಂಬ ಸ್ಥಳದ ಶಾಲೆಯಲ್ಲಿ ಮೂರು ತಿಂಗಳಕಾಲ ಮಾತ್ರವೇ ಇವರಿಗೆ ಲಭಿಸಿದ್ದು. ಈ ತೆರನಾದ ಅಡ್ಡಿಗಳಿದ್ದರೂ ಇವರ ಬುದ್ಧಿಯಾಗಲಿ ಕಾರ್ಯದಕ್ಷತೆಯಾಗಲಿ ಉತ್ಸಾಹವಾಗಲಿ ಕುಂದಲಿಲ್ಲ. ೧೬ವರ್ಷದ ವಯಸ್ಸಿನಷ್ಟು ಚಿಕ್ಕವರಾಗಿರುವಾಗಲೇ ಇವರು ಸಾಮಾನ್ಯವಾಗಿ ಹುಡುಗರು ಓದಲಸಾಧ್ಯವೆಂದೆಣಿಸಿರುವ ನ್ಯೂಟನ್ನನ 'ಪ್ರಿನ್‌ಸಿಪಿಯಾ,' ಗಿಬ್ಬನ್ನನ 'ಡಿಕ್ಲೈನ್ ಅಂಡ್ ಫಾಲ್ ಆಫ್ ರೋಂ (ರೋಂ ನಗರದ ಅವನತಿ ಮತ್ತು ಪತನ)



CC-0. Jangamwadi Math Collection. Digitized by eGangotri

ಮುಂತಾದ ಕಠಿಣ ಗ್ರಂಥಗಳನ್ನು ಓದುತ್ತಿದ್ದರು. ಜೀವನಕ್ಕೋಸ್ಕರ ಗ್ರಾಂಡ್ ಟ್ರಂಕ್ ರೈಲ್ವೆಯ ಗಾಡಿಗಳಲ್ಲಿ ವೃತ್ತಪತ್ರಿಕೆಗಳನ್ನು ಮಾರುವ ಕಸಬನ್ನವಲಂಬಿಸಿದ್ದರು. ಆದರೆ ದೊರೆತ ಕಾಲದಲ್ಲೆಲ್ಲಾ ಪ್ರಯೋಗಗಳನ್ನು ನಡೆಯಿಸುವುದು, ಯೋಚಿಸುತ್ತಿರುವುದು ಇಂತಹ ಕಾರ್ಯಗಳನ್ನು ಮಾಡುವವರೇ ವಿನಾ ಸೋಮಾರಿತನದಿಂದ ಕಾಲ ಕಳೆಯುತ್ತಿರಲಿಲ್ಲ; ಬುದ್ಧಿಗೆ ಯಾವಾಗಲೂ ವಿಶ್ರಾಂತಿಯೇ ಇರಲಿಲ್ಲ. ವೃತ್ತಪತ್ರಿಕೆಗಳನ್ನು ಮಾರುವುದಕ್ಕಾಗಿ ಇವರು ಪ್ರಯಾಣ ಮಾಡುತ್ತಿದ್ದ ರೈಲುಬಂಡಿಯ ಒಂದು ಮೂಲೆಯಲ್ಲಿ ಅನೇಕ ಸಾಮಗ್ರಿಗಳನ್ನು ಕೂಡಿಹಾಕಿ ಪ್ರಯೋಗಗಳನ್ನು ನಡೆಯಿಸುತ್ತಿದ್ದರು; ಒಂದು ಸಾರಿ, ಅವರು ಮೂಲೆಯಲ್ಲಿಟ್ಟಿದ್ದ ರಂಜಕ (ಫಾಸ್ಫರಸ್)ದ ಸೀಸೆಯ ಮುಚ್ಚಳವು ಗಾಡಿಯ ಕುಲುಕಾಟದಿಂದ ಸಡಿಲು ಬಿದ್ದು, ಒಳಗಿದ್ದ ರಂಜಕವು ಸಿಡಿದು ರೈಲಗಾಡಿಯನ್ನೆಲ್ಲಾ ಭಸ್ಮೀಭೂತವಾಗಿ ಮಾಡುವುದರಲ್ಲಿತ್ತಂತೆ! ಹಾಗೂ ಹೀಗೂ ಉರಿಯನ್ನೇನೋ ರೈಲಿನವರು ಆರಿಸಿದರು; ಆದರೇನು, ಈ ಸಂಭವಕ್ಕೆ ಕಾರಣನಾದ ಬಡಹುಡುಗನನ್ನು ಮನಸ್ವಿ ಬೈದು ಗಾಡಿಯಿಂದ ಹೊರಕ್ಕೆ ನೂಕಿ ಬಿಟ್ಟರು. ಪಾಪ, ಆ ಹುಡುಗನ ಬುದ್ಧಿಕೌಶಲ್ಯವಾಗಲೀ ಆತನ ಪ್ರಯೋಗಗಳ ಮಹತ್ವವಾಗಲಿ ಅವರಿಗೇನು ಗೊತ್ತು! ಅಂತೂ, ಪ್ರೈತುಂಬ ಬಟ್ಟೆ ಇಲ್ಲದ, ಹೊಟ್ಟೆಗೆ ಹಿಟ್ಟಿಲ್ಲದ ಹುಡುಗನೊಬ್ಬನು ರೈಲು ರಸ್ತೆಯಲ್ಲಿ ನಿಂತು, ತನ್ನ ಪ್ರೀತಿಯ 'ಕಾರ್ಯಶಾಲೆ'ಯು ಹೊಗೆಬಂಡಿಯೊಡನೆ ದೂರ ದೂರ ಸರಿದು ಕಣ್ಣಿಗೆ ಕಾಣದ ಹಾಗೆ ಆಗುವ ವರೆಗೂ ನೋಡುತ್ತಿದ್ದನು. ಧೈರ್ಯಗುಂದಿದನೆ? ಇಲ್ಲ. ತಿರುಗಿ ತನ್ನ ಮನೆಗೆ ಹೋಗಿ ಅತಿಶಯವೇನೂ ನಡೆಯದೆ ಇದ್ದರೆ ಹೇಗೋ ಹಾಗೆಯೇ ತನ್ನ ಕಾರ್ಯಕಲಾಪದಲ್ಲಿ ಮತ್ತೊಮ್ಮೆ ತೊಡಗಿಯೇ ತೊಡಗಿದನು! ಇದಾದ ಸ್ವಲ್ಪ ದಿನಕ್ಕೇ, ತಾನು ವಾಸ ಮಾಡುತ್ತಿದ್ದ ಪೋರ್ಟಹ್ಯೂರನ್ ಎಂಬ ಸ್ಥಳಕ್ಕೂ, ಅದರ ಹತ್ತಿರದ ರೈಲ್ವೆ ನಿಲ್ದಾಣಕ್ಕೂ ತಂತ್ರೀಪಥ (Telegraphic line) ವನ್ನು ನಿರ್ಮಿಸಿ, ಈ ಪಥದ ಸಹಾಯದಿಂದ ಸಮಾಚಾರವನ್ನು ಕಳುಹಲು ಅಪೇಕ್ಷಿಸಿದವರಿಂದ ೧೫ ಸೆಂಟುಗಳ ಪ್ರತಿಫಲವನ್ನು ಪಡೆಯುವ ಏರ್ಪಾಡು ಮಾಡಿದನು. ಈ ಪಥನಿರ್ಮಾಣಕ್ಕೆ ಇವರು ಉಪಯೋಗಿಸಿದ ಸಲಕರಣೆಗಳಲ್ಲಿ ಮುಖ್ಯವಾದುದೆಂ[...] ದಾರಿಯುದ್ದಕ್ಕೂ 'ಇದ್ದ ಬೇಲಿಯಂತೆ!

ಆಕಸ್ಮಾತ್‌ಘಟನೆಗಳೇ ಇವರ ಮುಂದಣ ಜೀ[...] ಪ್ರಗತಿಯನ್ನು ನಿರ್ಧರಿಸಿದುವೆಂದರೆ ಅತಿಶಯೋಕ್ತಿಯಾ[...] ಲಾರದು. ಇಂಥವುಗಳಲ್ಲಿ ಮೊದಲನೆಯದನ್ನು ಕೇ[...] ಡೆಟ್ರಾಯಿಟ್ ಮತ್ತು ಪೋರ್ಟ್‌ಹ್ಯೂರನ್ ಸ್ಟೇಷ[...] ಗಳ ಮಧ್ಯೆ ಓಡಾಡುತ್ತಿದ್ದ, ಜನರು ಮಾತ್ರವ[...] ಸಾಮಾನುಗಳನ್ನೂ ಒಯ್ಯುತ್ತಿದ್ದ ರೈಲು ಗಾಡಿ[...] ಇವರು ವೃತ್ತಪತ್ರಗಳನ್ನು ಮಾರುತ್ತಿದ್ದಾಗ, ಒಂ[...] ದಿನ ಮೌಂಟ್ ಕ್ಲೆಮನ್ಸ್ ನಿಲ್ದಾಣದಲ್ಲಿ ಸಾಮಾ[...] ಭರ್ತಿ ಮಾಡುವ ಪ್ರಯುಕ್ತ ಗಾಡಿಯು ಅರ್ಧಗ[...] ನಿಲ್ಲಬೇಕಾಯಿತು; ಎಡಿಸನ್ನರು ನಿಲ್ದಾಣದಲ್ಲಿ [...] ದ್ದರು. ಭರ್ತಿಯಾಗಿದ್ದ ಗಾಡಿಯೊಂದನ್ನು, ಗಾ[...] ಪಜ್ಜೆಗೆ ಸೇರಿಸುವುದಕ್ಕಾಗಿ ರೈಲ್ವೆ ಜನರು ಕಂ[...] ಮೇಲೆ ತಳ್ಳಿಬಿಟ್ಟರು. ಸ್ಟೇಷನ್‌ಮಾಸ್ತರರ ೩ ವ[...] ಸಣ್ಣ ಮಗುವೊಂದು ಏನೂ ಅರಿಯದೆ ಕಂಬಿಗಳ ಮ[...] ಆಡುತ್ತಿತ್ತು. ಗಾಡಿಯು ವೇಗವಾಗಿ ಮುಂದುವರಿ[...] ತ್ತಿದೆ; ಇನ್ನೇನು, ಸ್ವಲ್ಪದಲ್ಲಿ ಮಗುವು ಚಕ್ರಗಳಿಗೆ ಸಿ[...] ಬಿಡಬೇಕು; ಇದನ್ನು ಕಂಡ ಎಡಿಸನ್ನರು ಮಿಂಚಿನ[...] ವೇಗವಾಗಿ ಹಾರಿ ಬಿದ್ದು, ತಮ್ಮ ಪ್ರಾಣದ ಮೇ[...] ಆಶೆಯನ್ನೂ ತೊರೆದು, ಮಗುವನ್ನು ಎತ್ತಿಕೊಂಡು ಕ[...] ಗಳನ್ನು ದಾಟಿ ಬಿಟ್ಟರು. ದೈವಯೋಗದಿಂದ ಎ[...] ಪ್ರಾಣಗಳೂ ಉಳಿದುವು. ಇದನ್ನು ಕಂಡ ಸ್ಟೇಷ[...] ಮಾಸ್ತರನು ಕೃತಜ್ಞತೆಯಿಂದ ತುಂಬಿದವನಾ[...] ಹಣವನ್ನು ಕೊಟ್ಟು ತನ್ನ ಕೃತಜ್ಞತೆಯನ್ನು ಸೂಚಿಸ[...] ಅಶಕ್ತನಾದುದರಿಂದ, ತಿಂಗಳಿಗೆ ೨೫ ಡಾಲರುಗಳ [...] ಳದ ಮೇಲೆ ಈ ಹುಡುಗನಿಗೆ, ರಾತ್ರಿಹೊತ್ತು [...] ಕಳುಹಿಸುವ ಮಾಸ್ತರನ ಕೆಲಸವನ್ನು ಕೊಡಿಸಿಕೊಟ್ಟ[...] ಎಡಿಸನ್ನರು ಮುಂದೆ ಪ್ರವೃದ್ಧಮಾನರಾದುದಕ್ಕೆ [...] ಹದಿಯಾದುದು ಈ ಕೆಲಸವೇ. ೧೬ ವಯಸ್ಸಾಗು[...] ಹೊತ್ತಿಗೆ, ತಂತೀಸಮಾಚಾರವನ್ನು ಕಳುಹಿಸುವುದ[...] ಅನೇಕ ಚಮತ್ಕಾರಗಳನ್ನು ಕಲಿತು ಆ ವಿದ್ಯೆ[...] ಅತ್ಯಂತ ಕುಶಲರೂ ಅನುಭವಶಾಲಿಗಳೂ ಆದ[...] ಸ್ವಭಾವತಃ ಎಡಿಸನ್ನರು ಚಮತ್ಕಾರ ಪ್ರಿಯ[...] ಪ್ರಯೋಗಶೀಲರೂ ಆಗಿದ್ದ ಕಾರಣ, ತಮ್ಮ ನೌಕರಿ[...]

CC-0. Jangamwadi Math Collection. Digitized by eGangotri

ಸಲುವಾಗಿ ಮಾಡಬೇಕಾಗಿದ್ದ ಕೆಲಸದಲ್ಲಿಯೇ ಅನೇಕ ಹೊಸದಾರಿಗಳನ್ನು ಕಂಡು ಹಿಡಿದು ಪ್ರಖ್ಯಾತರಾದರು. ೧೭ ನೆಯ ವಯಸ್ಸಿನಲ್ಲಿಯೇ, ಒಂದು ತಂತ್ರೀಪಥದಿಂದ ಇನ್ನೊಂದು ಪಥಕ್ಕೆ ಇನ್ನೊಬ್ಬ ಪ್ರವರ್ತಕನ ಸಹಾಯ ವಿಲ್ಲದೆಯೇ ತಂತ್ರೀಸಂಕೇತ (Telegraphic Signals) ಗಳನ್ನು ವರ್ಗಾಯಿಸುವ ಆತ್ಮಚಲಿತ (Automatic) ಯಂತ್ರವನ್ನು ನಿರ್ಮಿಸಿದರು!

ಇನ್ನೊಂದಾವೃತ್ತಿ, ಎಡಿಸನ್ನರು ಬೀದಿಯಲ್ಲಿ ಹೋಗುತ್ತಿರುವಾಗ 'ಲಾಸ್ ಕಂಪನಿ' ಎಂಬ ದೊಡ್ಡ ಮಂಡಲಿಯ ಕಚೇರಿಯಲ್ಲಿ ದೊಡ್ಡ ಯಂತ್ರವೊಂದು ಮುರಿದು ಬಿದ್ದಿರುವುದೂ, ಮಂಡಲಿಯ ಮುಖ್ಯಸ್ಥನು ಅದರ ಮುಂದೆ ಪೇಚಾಡುತ್ತಾ ನಿಂತಿರುವುದೂ ಇವರ ಕಣ್ಣಿಗೆ ಬಿದ್ದಿತಂತೆ. ೬೦೦ ದಳ್ಳಾಳಿಗಳಿಗೆ ವ್ಯಾಪಾರಕ್ಕೆ ಬಹಳ ಮುಖ್ಯವಾದ ಕೆಲವು ಸಂಗತಿಗಳನ್ನು ಮುದ್ರಿಸಿ ಕಳುಹಿಸುವ ಯಂತ್ರವದು. ಒಂದು ವಿಷಯದಲ್ಲಿ ಎಡಿಸನ್ನರು "ನಾನು ಇದರಲ್ಲಿರುವ ದೋಷವನ್ನು ನಿನಗೆ ತೋರಿಸಿ ಸರಿಮಾಡಿ ಕೊಡಬಲ್ಲೆ" ನೆಂದು ಮುಖ್ಯಸ್ಥನಿಗೆ ಹೇಳಿ ತಕ್ಷಣ ಸರಿಮಾಡಿಬಿಟ್ಟರಂತೆ! ಈ ಸಂಘಟನೆ ನಡೆದಾಗ, ಎಡಿಸನ್ನರಿಗೆ ನೌಕರಿಯೇನೂ ಇರಲಿಲ್ಲ; ಯಂತ್ರವನ್ನು ಸರಿಪಡಿಸಿದ್ದಕ್ಕಾಗಿ ತಕ್ಷಣ ನೌಕರಿಯೊಂದನ್ನು ಆ ಮಂಡಲಿಯ ಮುಖ್ಯಸ್ಥನು ಏರ್ಪಡಿಸಿ ಕೊಟ್ಟನು!

ಎಡಿಸನ್ನರು ಪಡೆದ ಮೊದಲನೆಯ ವಿಶಿಷ್ಟಾಧಿಕಾರ (Patent) ವು ೧೮೬೮ ರಲ್ಲಿ; ವಿದ್ಯುಚ್ಛಕ್ತಿಯ ಸಹಾಯದಿಂದ 'ವೋಟು' (Vote) ಗಳನ್ನು ಬರೆಯುವ ಸಾಧನಕ್ಕಾಗಿ! ಇವರಿಗೆ ೨೧ ವಯಸ್ಸಾಗಿರುವಾಗ, ಸಮುದ್ರದೊಳಗೆ ತಂತಿ ಸಮಾಚಾರವನ್ನು ಕಳುಹಿಸುವುದಕ್ಕಾಗಿ ಒಂದೇ ರಜ್ಜು (Cable) ವನ್ನು ಉಪಯೋಗಿಸಿ, ಅದನ್ನು ಎರಡು ಪಥಗಳಿಗೆ ಬರುವಂತೆ ಮಾಡುವ ಒಂದು ಸಾಧನವನ್ನು ನಿರ್ಮಿಸಿದರು! ಈ ಉಪಾಯವೊಂದರಿಂದಲೇ ಅಗಾಧವಾದ ಧನವು ಉಳಿತಾಯವಾಗಿ, ಎಡಿಸನ್ನರಿಗೆ ಬಾಸ್ಟನ್ ನಗರದಲ್ಲಿ ನೌಕರಿಯೊಂದು ದೊರೆಯಿತಂತೆ! ಬಾಸ್ಟನ್ ನಗರದಲ್ಲಿ ಇವರ ನಿರ್ಮಾಣಶಕ್ತಿ (Inventive Faculty) ಯು ದಿನೇ ದಿನೇ ಪಕ್ವವಾಗಿ, ಒಂದಾಗುತ್ತಲೊಂದು ಸಾಧನಗಳು ಇವರ ಶಕ್ತಿಯಿಂದ ಏರ್ಪಟ್ಟು ಕ್ರಮೇಣ ಆಧುನಿಕ ತಂತಿಪ್ರೇಷಣ (Modern Telegraphy) ಕ್ಕೆ ತಳಹದಿಯಾದುವು.

ತಂತಿದ್ವಿಮುಖೀ ಪ್ರೇಷಣ (Duplex Telegraphy), ಚತುರ್ಮುಖಿ ತಂತಿ ಪ್ರೇಷಣ (Quadruplex Telegraphy) ಆತ್ಮಚಲಿತತಂತಿಪ್ರೇಷಣ (Automatic Telegraph System) ಮೊದಲಾದ ಸಾಧನಗಳನ್ನೂ, ವಿದ್ಯುಲ್ಲೇಖನಿ (Electric Pen) ಯನ್ನೂ ನಿರ್ಮಿಸಿದರು. ಬೆಲ್ ಎಂಬವನು ನಿರ್ಮಿಸಿದ ಟೆಲಿಫೋನ (ಆಕರ್ಣನಯಂತ್ರ) ನ್ನು ವ್ಯವಹಾರಕ್ಕೆ ಉಪಯುಕ್ತವನ್ನಾಗಿ ಮಾಡಿದುದಕ್ಕೂ ಎಡಿಸನ್ನರೇ ಕಾರಣರು; ಇದಕ್ಕಾಗಿ ಇವರು ಸೂಕ್ಷ್ಮ ಶಬ್ದಗ್ರಾಹಿಯಾದ ಇಂಗಾಲಪ್ರೇಷಕ (Carbon Transmitter or Microphosne) ವೆಂಬ ಸಾಮಗ್ರಿಯನ್ನು ೧೮೭೭-೭೮ ರಲ್ಲಿ ಕಂಡುಹಿಡಿದರು. ಫೋನೋಗ್ರಾಫ್ ಎಂಬ ಮಾತನಾಡುವ ಯಂತ್ರವು ೧೮೭೭ ರಲ್ಲಿ ಕಂಡು ಹಿಡಿಯಲ್ಪಟ್ಟಿತು. ಕ್ರಮೇಣ, ಮೊದಲು ಮಾಡಿದ ೧೮ ಡಾಲರು ಕ್ರಯದ ಯಂತ್ರವು ಅವರಿಂದಲೇ ಸುಧಾರಿಸಲ್ಪಟ್ಟು ಈಗಿನ ಗ್ರಾಮೋಫೋನ ಯಂತ್ರವಾಗಿ ಪರಿಣಮಿಸಿದೆ. ಇದಲ್ಲದೆ 'ಎಡಿಫೋನ್' ಎಂಬ ಮತ್ತೊಂದು ಯಂತ್ರವನ್ನು, ಕಚೇರಿಗಳಲ್ಲಿ ಹೇಳಿ ಬರೆಯಿಸುವದಕ್ಕೆ ಅನುಕೂಲವಾಗುವದಕ್ಕಾಗಿ ನಿರ್ಮಿಸಿದರು.

ವಿದ್ಯುದ್ದೀಪದ ತಂದೆಯಾದರೂ ಎಡಿಸನ್ನರೇ! ೪೦ ಸಾವಿರ ಡಾಲರುಗಳನ್ನು ವೆಚ್ಚಮಾಡಿ ಅನೇಕ ಪ್ರಯೋಗಗಳನ್ನು ನಡೆಯಿಸಿ ವಿಫಲರಾಗಿ, ಕಡೆಗೆ ಇಂಗಾಲದಿಂದ ಮುಚ್ಚಲ್ಪಟ್ಟ ಹತ್ತಿಯದಾರವೇ ಮೂಲವಾಗಿ ಉಳ್ಳ ದೀಪವೊಂದನ್ನು ೧೮೭೯ ರಲ್ಲಿ ಕಂಡುಹಿಡಿದರು! ೪೦ ಸಾವಿರ ಡಾಲರುಗಳು ಗೋಲ್ಡ್ ಅಂಡ್ ಸ್ಟಾಕ್ ಟೆಲಿಗ್ರಾಫ್ ಕಂಪೆನಿಯವರಿಂದ ಇವರಿಗೆ ಕೊಡಲ್ಪಟ್ಟಿದ್ದವು!

ವಿದ್ಯುದ್ದೀಪವನ್ನು ಕಂಡು ಹಿಡಿದನಂತರ ೧೦ ವರ್ಷಗಳಲ್ಲಿ, ಈ ದೀಪಗಳನ್ನು ಹಚ್ಚುವುದಕ್ಕೆ ಮತ್ತು ಇತರ ಕೈಗಾರಿಕೆಗಳಿಗಾಗಿ ವಿದ್ಯುತ್ತನ್ನು ಉತ್ಪತ್ತಿಮಾಡಿ, ಅದನ್ನು ಬೇಕಾದ ಸ್ಥಳಗಳಿಗೆ ಹಂಚುವುದಕ್ಕೆ ಬೇಕಾದ ಏರ್ಪಾಡುಗಳು, ವಿದ್ಯುದುತ್ಪತ್ತಿಯಂತ್ರಗಳು, ವಿದ್ಯುತ್ತಿನಿಂದ ನಡೆಸಲ್ಪಟ್ಟ ರೈಲುಬಂಡಿ ಇವುಗಳ ನಿರ್ಮಾಣವಾಯಿತು. ೧೯೦೦ ರಿಂದ ೧೯೧೦ ರ ವರೆಗೆ, ಒಂದು ಹೊಸವಿಧವಾದ ಬ್ಯಾಟರಿ (Battery) ಯನ್ನು ತಯಾರುಮಾಡುವುದರಲ್ಲಿ ಮಗ್ನರಾದರು. ಇದಕ್ಕೆ

CC-0. Jangamwadi Math Collection. Digitized by eGangotri

ಮೊದಲೇ ಅಂದರೆ ೧೮೯೧ ರಲ್ಲಿ, ಚಲನಚಿತ್ರವನ್ನು ತೆಗೆಯುವ ಪೆಟ್ಟಿಗೆ (Kinetoscopic Camera) ಮತ್ತು ಚಲನಚಿತ್ರಗಳನ್ನು ಜನರಿಗೆ ತೋರಿಸುವ ಯಂತ್ರಗಳನ್ನು ನಿರ್ಮಿಸಿ ಇವುಗಳ ಬಗ್ಗೆ ವಿಶಿಷ್ಟಾಧಿಕಾರವನ್ನು ಪಡೆದಿದ್ದರು!

ಇದಲ್ಲದೆ ಈಗಿನ 'ಅಲೆಯಂಚೆ'ಯ ಸಂಬಂಧದಲ್ಲಿಯೂ ಎಡಿಸನ್ನರು ಶೋಧಗಳನ್ನು ಮಾಡಿದ್ದರು. ೧೮೮೩ ರಲ್ಲಿ ಇವರು ಕಂಡುಹಿಡಿದ 'ಎಡಿಸನ್ ಇಫೆಕ್ಟ' ಎಂಬುವುದೇ ಈಗಿನ ಅಲೆಯಂಚೆಯ ವಿದ್ಯುದ್ದ್ವಾರಕ್ಕೆ (Radio tube) ಮೂಲವೆಂದು ಹೇಳಬಹುದು. ೧೮೮೫ ರಲ್ಲಿ, ಚಲನೆಯಲ್ಲಿರುವ ರೈಲುಬಂಡಿ ಅಥವಾ ಹಡಗುಗಳಿಂದ ಸಂಕೇತಗಳನ್ನು ಪ್ರೇಷಿಸುವ ವಿಧಾನಗಳನ್ನು ಕಂಡುಹಿಡಿದರು.

೧೯೧೪ ರ ಮಹಾಯುದ್ಧದಲ್ಲಿ ಅಮೇರಿಕಾ ಸರಕಾರದವರಿಗೆ ಎಡಿಸನ್ನರಿಂದ ತುಂಬ ಸಹಾಯ ದೊರೆಯಿತು. ಯುದ್ಧವು ಆರಂಭವಾದಾಗ ಅನೇಕ ವೃತ್ತಪತ್ರಿಕೆಗಳು, ಸೈನ್ಯಗಳನ್ನೆಲ್ಲಾ ಒಂದೇ ಏಟಿಗೆ ನಾಶ ಮಾಡುವಂತಹ ವಿದ್ಯುದ್ಯಂತ್ರವನ್ನು ಎಡಿಸನ್ನರು ನಿರ್ಮಿಸುತಲಿದ್ದಾರೆಂಬ ಕ್ಷೋಭನಕರವಾದ ಸಮಾಚಾರಗಳನ್ನು ಹುಟ್ಟಿಸಿದರು! ಎಡಿಸನ್ನರು ಇಂತಹುದನ್ನೇನೂ ಮಾಡಲಿಲ್ಲ; ಆದರೂ ಅವರು ಮಾಡಿದ ಸೇವೆಗಳನ್ನು ಪರಿಶೀಲಿಸಿದರೆ, ಮಹಾಯುದ್ಧವನ್ನು ಗೆದ್ದ ಕೀರ್ತಿಯ ದೊಡ್ಡ ಭಾಗವು ಇವರಿಗೆ ಸಲ್ಲತಕ್ಕುದೆಂದು ನಿರ್ವಿವಾದವಾಗಿ ಕಾಣುವುದು. ಇವರು ಈ ಕಾಲದಲ್ಲಿ ಮಾಡಿದ ಆವಿಷ್ಕರಣಗಳೆಂದರೆ, ಸಮುದ್ರದ ಅಂತರ್ಭಾಗದಲ್ಲಿ ಸಂಚರಿಸುವ ಹಡಗುಗಳನ್ನು, ಚಲಿಸುತ್ತಿರುವ ಬೇರೆ ಹಡಗಿನಿಂದ ಹೊರಡುವ ಶಬ್ದದಿಂದ ಕಂಡುಹಿಡಿಯುವುದು, ಹಡಗನ್ನು ಬೇಕಾದಾಗ ತಟಕ್ಕನೆ ಅಡ್ಡತಿರುಗಿಸುವುದು, ಟಾರ್ಪೆಡೋ ಎಂಬ ನಾಶಕರ್ತವಿಮಾನುಗಳ ತಗಲುವಿಕೆಯಿಂದ ಆಗುವ ನಷ್ಟವನ್ನು ಕಡಿಮೆ ಮಾಡುವುದಕ್ಕೆ ಅನುಕೂಲವಾದ ಮೆತ್ತೆಗಳ ನಿರ್ಮಾಣ, ಟಾರ್ಪೆಡೋಗಳನ್ನು ಹತ್ತಿರ ಬರದಹಾಗೆ ಮಾಡುವ ಬಲೆಗಳ ನಿರ್ಮಾಣ, ನೀರಿನೊಳಗೆ ದಾರಿ ಕಾಣುವ ಹಾಗೆ ಮಾಡುವ ಅನ್ವೇಷಣದೀಪ (Search light), ಅನ್ವೇಷಣ ದೀಪಗಳ ಸಹಾಯದಿಂದ ಬಹು ತೀವ್ರವಾಗಿ ಸಂಕೇತಗಳನ್ನು ಕಳುಹಿಸುವುದು, ನೀರು ತೂರಿಕೊಂಡು ಹೋಗುವ ಗುಂಡುಗಳು, ಗಾಳಿಯಿಂದ ಸಾರಜನಕವನ್ನು ತಯಾರು ಮಾಡುವುದು, ಸಮುದ್ರದೊಳಗೆ ಹೋಗುವ ಹಡಗಗಳ ಉಪಯೋಗಕ್ಕಾಗಿ ಜಲಜನಕರನ್ನು ಪತ್ತೆಮಾಡುವ ಯಂತ್ರ, ಶತ್ರುವಿಮಾನಗಳು ಯಾವ ದಿಕ್ಕಿನಲ್ಲಿವೆಯೆಂಬುದನ್ನು ಪತ್ತೆ ಮಾಡುವುದು, ಗುಪ್ತವಾಗಿಟ್ಟ ಬಂದೂಕುಗಳನ್ನು ಶಬ್ದಶಾಸ್ತ್ರದ ಉಪಯೋಗದಿಂದ ಕಂಡುಹಿಡಿಯುವ ಬಗೆ, ಸಮುದ್ರದೊಳಗೆ ಹೋಗುವ ಹಡಗುಗಳ ಬಂದೂಕುಗಳು ತುಕ್ಕುಹಿಡಿಯದೆ ಇರುವ ಹಾಗೆ ಇಡುವ ಉಪಾಯ ಇವೇ ಮುಂತಾದುವು; ಇವಲ್ಲದೆ ಬೆನ್‌ಸಾಲ್, ಕಾರ್ಬಾಲಿಕ್ ದ್ರಾವಕ ಮುಂತಾದ ರಸಗಳನ್ನು ತಯಾರು ಮಾಡುವ ಯಂತ್ರಗಳನ್ನು ನಡೆಯಿಸಿ ಸೇವೆ ಮಾಡಿದರು.

ಇಷ್ಟು ಮಹತ್ತರವಾದ ಆವಿಷ್ಕರಣಗಳಿಗೂ ನಿರ್ಮಾಣಗಳಿಗೂ ಕಾರಣಭೂತರಾಗಿ, ಜಗತ್ತಿನ ವೈಜ್ಞಾನಿಕರಲ್ಲೆಲ್ಲಾ ಶ್ರೇಷ್ಠರೆಂದೆನಿಸಿಕೊಳ್ಳುವ ಭಾಗ್ಯವನ್ನು ಹೊಂದಿದವರಾದರೂ ಎಡಿಸನ್ನರ ಸ್ವಭಾವವು ಅವರು ಸಣ್ಣವಯಸ್ಸಿನಲ್ಲಿ ವೃತ್ತಪತ್ರಿಕೆಗಳನ್ನು ಮಾರುವ ಸ್ಥಿತಿಯಲ್ಲಿದ್ದಾಗ ಹೇಗೆ ಇದ್ದಿತೋ ಹಾಗೆಯೇ ಕಡೆಯವರೆಗೂ ಸರಳವಾಗಿದ್ದಿತು. ಅವರಿಗೆ ಸಂಭಾಚಾರವಾಗಲಿ, ತಮ್ಮ ವಿಷಯವಾಗಿ ಹೇಳಿಕೊಳ್ಳುವುದಾಗಲಿ, ಹೇಳಿದ್ದನ್ನು ಕೇಳುವುದಾಗಲೀ ರುಚಿಸುತ್ತಿರಲಿಲ್ಲ. ಯಾವಾಗಲೂ ಮೈಮುರಿದು ಕಷ್ಟಪಟ್ಟು ಕೆಲಸ ಮಾಡುವುದೊಂದು ಮಾತ್ರ ರುಚಿಸುತ್ತಿತ್ತು. ಇಂತಹ ಕೆಲಸವೇ ಮಹತ್ಕಾರ್ಯಗಳಿಗೆ ಮುಕ್ಕಾಲು ಪಾಲು ಕಾರಣವೆಂದೂ, ಕೇವಲ ಬುದ್ಧಿಶಕ್ತಿಯು ಕಾಲುಪಾಲು ಮಾತ್ರವೇ ಕಾರಣನೆಂದೂ ಅವರ ನಂಬಿಕೆ. ಇವರು ಸಣ್ಣವರಾಗಿರುವಾಗ, ಬೆಳಗಿನ ಜಾವ ೪ ಗಂಟೆಗೆ ತಮ್ಮ ನೌಕರಿಯನ್ನು ಮುಗಿಸಿಕೊಂಡು ತಮ್ಮ ಮನೆಗೆ ಸೇರುತ್ತಿದ್ದರು; ತಕ್ಷಣ ಬೆಳಕು ಹರಿಯುವವರಿಗೂ ಓದುತ್ತಲಿದ್ದು ಒಂದು ಮೈಲಿ ದೂರದಲ್ಲಿರುವ ತಮ್ಮ ಊಟದ ಮನೆಗೆ ಬೆಳಗಿನ ಊಟಕ್ಕೆ ಓಡಿ ಹೋಗುತ್ತಿದ್ದರು, ಯಾಕೆಂದರೆ ನಡೆದು ಹೋದರೆ ಇನ್ನೂ ಹೆಚ್ಚು ಕಾಲ ವೆಚ್ಚವಾಗುವುದೆಂದು! ಪಾಪ, ಊಟವನ್ನಾದರೂ ಪೂರ್ತಿಯಾಗಿ ಮಾಡುತ್ತಿದ್ದರೆನ್ನುವುದೇ ಎಷ್ಟೋ ಹೆಚ್ಚು! ಕಡೆಕಡೆಗೆ

CC-0. Jangamwadi Math Collection. Digitized by eGangotri

ಇವರ ಕಾರ್ಯಶಾಲೆಯಲ್ಲಿ ಇವರೊಡನೆ ಕೆಲಸ ಮಾಡುವುದೆಂದರೆ ಸಾಹಸವೆನಿಸುವಂತಿತ್ತು. ಒಮ್ಮೆ ಯಾವುದೋ ಮುಖ್ಯವಾದ ಕೆಲಸವನ್ನು ಮಾಡಬೇಕಾಗಿದ್ದಾಗ ಕೆಲಸಗಾರರನ್ನು ೬೦ ಗಂಟೆಗಳ ಕಾಲ ಕಾರ್ಯಶಾಲೆಯಲ್ಲಿ ಬೀಗ ಹಾಕಿ ಕೂಡಿಸಿ ಕೆಲಸ ಮಾಡಿಸಿದರಂತೆ!

ಹಣದ ಬಗ್ಗೆ ಅಥವಾ ಕೀರ್ತಿಯ ಬಗ್ಗೆ ಎಡಿಸನ್ನರಿಗೆ ಆಸೆ ಇರಲಿಲ್ಲ! ಆದರೆ ಇವೆರಡೂ ತಾವಾಗಿಯೇ ಬರುತ್ತಿದ್ದುವು! ಸೇವೆಯೇ ಎಲ್ಲಕ್ಕಿಂತ ದೊಡ್ಡದೆಂದು ಅವರ ದೃಢ ವಿಶ್ವಾಸ. ತಮ್ಮ ಮಹತ್ಕಾರ್ಯಗಳ ಬಗ್ಗೆ ಜಂಭಪಡುವುದಕ್ಕೆ ಅವರಿಗೆ ಕಾಲವಿರಲಿಲ್ಲ; ಜಂಭಪಡಲು ಆರಂಭಿಸಿದ್ದರೆ ಇವರಿಗೆ ಇನ್ನೂ ಯಾವುದಕ್ಕೂ ಕಾಲ ಸಿಗುವ ಸಂಭವವಿರುತ್ತಿರಲಿಲ್ಲ ಏಕೆಂದರೆ ಅಂತಹ ಮಹತ್ಕಾರ್ಯಗಳು ಸಾವಿರಾರಿದ್ದುವು. ವಿದ್ಯುದ್ದೀಪಗಳನ್ನು ಕಂಡುಹಿಡಿದುದಕ್ಕಾಗಿ ೪೦ ಸಾವಿರ ಡಾಲರುಗಳು ದೊರೆತ ಮೇಲೆ ಇವರಿಗೆ ಹಣದ ತಾಪವೆಲ್ಲಿ ಬಂತು! ಈ ಹಣದಿಂದ ತಮ್ಮ ಕಾರ್ಯಶಾಲೆಯನ್ನು ಬೇಕಾದ ಸಾಧನಗಳಿಂದ ತುಂಬಬಹುದಲ್ಲಾ ಎಂಬುದೇ ಅವರಿಗೆ ತೃಪ್ತಿ! ಅಲಂಕಾರ ಮಾಡಿಕೊಳ್ಳುವುದಾಗಲೀ, ಬಾಹ್ಯಾಡಂಬರಗಳಾಗಲೀ ಅವರಿಗೆ ತಿಳಿಯವು. ಮಾನವಕೋಟಿಗೆ ಅನುಕೂಲತೆಗಳನ್ನೂ ಸೌಖ್ಯವನ್ನೂ ಕಲ್ಪಿಸಿ ಕೊಡಬೇಕೆನ್ನುವುದೇ ಅವರ ಮುಖ್ಯ ಗುರಿಯಾಗಿತ್ತು. ಈ ದೃಷ್ಟಿಯಿಂದ ಅವರು ತಮ್ಮ ಜೀವಮಾನದಲ್ಲಿ ಏರ್ಪಡಿಸಿದ ನಿರ್ಮಾಣಗಳ ಪಟ್ಟಿಯು "ಹು ಈಸ್ ಹು" ಎಂಬ ಪುಸ್ತಕದಲ್ಲಿ ೩೧ ಸಾಲುಗಳನ್ನು ಆವರಿಸಿದೆ. ಅಂತೂ, ಒಟ್ಟಿನಲ್ಲಿ ಈ ದಿವಸ ನಾವು ವಿದ್ಯುದ್ದೀಪದ ಬೆಳಕನ್ನು ಕಂಡಿರುವೆವಾದರೆ, ದೂರ ದೇಶಗಳೊಡನೆ ತಂತಿಯ ಮೂಲಕವೂ ತಂತಿಯಿಲ್ಲದೆಯೂ ವ್ಯವಹರಿಸುವೆವಾದರೆ, ದೂರದೇಶದಲ್ಲಿರುವ ಜೀವಂತರಾಗಿರುವ ಅಥವಾ ದಿವಂಗತವಾಗಿರುವ, ಗಾಯಕರ ಗಾನಗಳನ್ನು ಮನೆಯಲ್ಲಿಯೆ ಕುಳಿತು ಕೇಳುವೆವಾದರೆ, ಚಲನಚಿತ್ರಗಳನ್ನು ನೋಡಿ ಆನಂದಿಸುವೆವಾದರೆ ಇವುಗಳಿಗೆಲ್ಲಾ ಎಡಿಸನ್ನರೇ ಕಾರಣರು! ಲೋಕವು ಎಲ್ಲಿಯವರೆಗೆ ಈ ಸಂತೋಷಗಳನ್ನು ಅನುಭವಿಸುವುದೋ ಅಲ್ಲಿಯವರೆಗೆ– ಅಂದರೆ ಆಚಂದ್ರಾರ್ಕವಾಗಿ– ಎಡಿಸನ್ನರ ಹೆಸರು ಜೀವಿಸುವುದು!

ಮೂರುವರ್ಷಗಳ ಹಿಂದೆ, ತಮಗೆ ವಯಸ್ಸಾಗುತ್ತಿರುವುದನ್ನು ತಿಳಿದು, ಎಡಿಸನ್ನರ ಕಾರ್ಯಶಾಲೆಯಲ್ಲಿ ತಮ್ಮ ಸ್ಥಾನಕ್ಕೆ ತಕ್ಕ ಯುವಕನೊಬ್ಬನನ್ನು ನೇಮಿಸಲು ನಿರ್ಧರಿಸಿ, ಅನೇಕ ಯುವಕರನ್ನು ಮೊದಲು ಚುನಾಯಿಸಿ, ಅವರ ಬುದ್ಧಿಶಕ್ತಿಯನ್ನು ಸೂಕ್ಷ್ಮವಾಗಿ ಪರೀಕ್ಷಿಸತಕ್ಕ ಒಂದು ಕಠಿಣಪರೀಕ್ಷೆಯನ್ನು ನಡೆಯಿಸಿ ಅವರ ಪೈಕಿ ಒಬ್ಬ ಯುವಕನನ್ನು ಕಂಡುಹಿಡಿದು ಅವನನ್ನು ತರಬಿಯತ್ತು ಮಾಡಿರುವರು.

ಈಗ ಎರಡು ತಿಂಗಳ ಹಿಂದೆ ಎಡಿಸನ್ನರು ಖಾಯಿಲೆ ಬಿದ್ದು, ಅಕ್ಟೋಬರ್ ೧೮ನೆಯ ದಿವಸ ದೈವಾಧೀನರಾದರು. ಇವರ ಗೌರವ ಮತ್ತು ಇವರ ಮುಖ್ಯ ನಿರ್ಮಾಣದ ಜ್ಞಾಪಕಾರ್ಥವಾಗಿ, ಇಡೀ ಅಮೆರಿಕಾ ಸಂಯುಕ್ತ ಸಂಸ್ಥಾನಗಳಲ್ಲಿ ಒಂದು ನಿಮಿಷದವರೆಗೆ ವಿದ್ಯುದ್ದೀಪಗಳನ್ನು ನಂದಿಸಿದರಂತೆ! ಇದಲ್ಲವೆ ತಕ್ಕ ಗೌರವ!

ಲೋಕಸಾಮಾನ್ಯದ ಕೃತಜ್ಞತೆಗೆ ಪಾತ್ರರಾದ ಈ ಮಹಾಶಯರ ಆತ್ಮಕ್ಕೆ ಪರಮಾತ್ಮನು ಶಾಂತಿಯನ್ನೀಯಲಿ! ಮತ್ತು ಅವರ ಮಹತ್ತಿನಿಂದ, ಅವರು ಆರಂಭಿಸಿದ ಶೋಧನಗಳು ಇತೋಪ್ಯತಿಶಯವಾಗಿ ಅವರ ಕಾರ್ಯಶಾಲೆಯಲ್ಲೂ ಬೇರೆ ಕಡೆಗಳಲ್ಲೂ ನಡೆದು ಜಗತ್ತಿನ ಸುಖಕ್ಕೂ ಶಾಂತಿಗೂ ತೃಪ್ತಿಗೂ ಕಾರಣವಾಗಲಿ!



CC-0. Jangamwadi Math Collection. Digitized by eGangotri

# ಉಪಯುಕ್ತವಾದ ಸಣ್ಣ-ಪುಟ್ಟ ಕೈಕೆಲಸಗಳು

ಲೇ— ಶ್ರೀ. ವಿ. ಆರ್. ಅಣ್ಣಾಸ್ವಾಮಿರಾವ, ಕಸಬಿನ ಚಿತ್ರಗಾರ, ಬೊಂಬಯಿ

ಜಯಕರ್ನಾಟಕದ ವಾಚಕರಿಗೆ ಉಪಯುಕ್ತವಾಗುವಂತೆ, ಸಣ್ಣ ಸಣ್ಣ ಕೈಕೆಲಸಗಳನ್ನು ಕುರಿತು ಆಗಾಗ್ಗೆ ಒಂದೊಂದು ಚಿತ್ರಸಹಿತವಾದ ಲೇಖನವನ್ನು ಬರೆಯಬೇಕೆಂದು ಉದ್ದೇಶಿಸಿದ್ದೇನೆ. ವಾಚಕರಿಗೆ ನನ್ನ ಲೇಖನದ ವಿಷಯ ಹೆಚ್ಚು ಮಾಹಿತಿ ಬೇಕಾದಪಕ್ಷದಲ್ಲಿ ನನಗೆ ತಿಳಿಸಿದರೆ, ಕೈಲಾದಷ್ಟು ಸಹಾಯ ಮಾಡಲು ನಾನು ಬದ್ಧಕಂಕಣನಾಗಿದ್ದೇನೆ.

ನಮ್ಮ ತಾಯಿನಾಡಾದ ಭಾರತ ಭೂಮಿಯಲ್ಲಿ ಕಾಲದ ಬೆಲೆಯನ್ನು ತಿಳಿಯದೆ ಬಹು ಜನರು ವ್ಯರ್ಥವಾಗಿ ಕಾಲಕಳೆಯುತ್ತಿರುವುದು ಬಹಳ ಶೋಚನೀಯವಾದ ಸಂಗತಿಯಾಗಿದೆ. ಹೀಗೆ ವೃಥಾ ಕಳೆಯುವ ಕಾಲವನ್ನು ಕೈಗಾರಿಕೆಯಲ್ಲಿ ಉಪಯೋಗಿಸಿದ್ದೇ ಆದರೆ ಹಿಂದುಸ್ಥಾನದ ಅಭಿವೃದ್ಧಿಗೆ ಎಷ್ಟು ಸಹಾಯವಾದೀತು! ಪಾಶ್ಚಾತ್ಯದೇಶದವರ ಏಳಿಗೆಗೆ ಕಾರಣವು ಕೈಕೆಲಸಗಳಲ್ಲವೆ? ಆದುದರಿಂದ ಇಂಥ ಅಮೂಲ್ಯವಾದ ಕಾಲದ ಬೆಲೆಯನ್ನು ಎಲ್ಲರೂ ಲಕ್ಷ್ಯಕ್ಕೆ ತಂದುಕೊಳ್ಳಬೇಕಾಗಿ ಅಪೇಕ್ಷಿಸುತ್ತೇನೆ.

ಅದನ್ನು ಸರಿಯಾಗಿ ಉಪಯೋಗಿಸಿದ ಹೊರತು ನಮಗೆ ಗೌರವವೂ, ಐಶ್ವರ್ಯವೂ, ಯಶಸ್ಸೂ ಎಂದಿಗೂ ಉಂಟಾಗಲಾರವು.

ಕಾಲದ ಉಪಯೋಗವನ್ನು ಸರಿಯಾಗಿ ಮಾಡಿಕೊಳ್ಳುವುದಕ್ಕೆ ಕೈಗಾರಿಕೆಯೊಂದೇ ಸುಮಾರ್ಗ. ಬಹು ವಿಧವಾದ ಕೈಕೆಲಸಗಳು ಇದ್ದರೂ ಅವೆಲ್ಲವೂ ಜನಗಳ ಕಣ್ಣಿಗೆ ಇನ್ನೂ ಹೊಳೆದಿಲ್ಲ. ಆದುದರಿಂದ ಸದ್ಯಕ್ಕೆ ಬಹಳ ಉಪಯೋಗವಾದ, ಮತ್ತು ಬಹು ಸುಲಭವಾದಂತಹ ಕಸಬುಗಳನ್ನು ಮಾತ್ರ ಪರೀಕ್ಷಿಸೋಣ. ಕಲಾಕೌಶಲ್ಯವು ಶಿಲ್ಪಿಗೆ ಚಿತ್ರಗಾರನಿಗೆ ಮಾತ್ರ ಗೊತ್ತಿದ್ದು ಸಾಧಾರಣ ಜನರಿಗೆ ಗೊತ್ತೇ ಇರುವುದಿಲ್ಲವೆಂಬ ಭ್ರಾಂತಿಯನ್ನು ಸಂಪೂರ್ಣವಾಗಿ ಬಿಡಬೇಕು. ಸಾಧನೆಯಿಂದ ಅಸಾಧ್ಯವಾದುದೆಲ್ಲವೂ ಸಾಧಿಸಲ್ಪಡುತ್ತದೆ. "ನಾನು ಚಿತ್ರಗಾರನಲ್ಲ. ಸುಂದರವಾದ ಬಣ್ಣದ ಕೆಲಸ ಮಾಡಲು ನನ್ನಿಂದ ಸಾಧ್ಯವಿಲ್ಲ. ಇದು ಚಿತ್ರಗಾರನ ಕೆಲಸ" ಎಂದು ಯಾರೂ ದಿಗಿಲುಬೀಳಬೇಕಾಗಿಲ್ಲ. ಬಣ್ಣಗಳನ್ನು ಗುರುತಿಸಲು ತಿಳಿದರೆ, ಕಲಾಜ್ಞಾನವಿಲ್ಲದವನೂ ಅತಿ ಸುಂದರವಾದ ಬಣ್ಣದ ತಸಬೀರುಗಳನ್ನು ಸ್ಟೆನ್‌ಸಿಲ್ (Stencil) ಗಳ ಸಹಾಯದಿಂದ ಸಾಧ್ಯವಾಗುತ್ತದೆ. ಈ (Stencil) ಸ್ಟೆನ್ಸಿಲ್‌ಗಳಾದರೋ ಬಹು ಸುಲಭ ಕ್ರಯಕ್ಕೆ ದೊರಕುವುವಲ್ಲದೆ ಬಹುಕಾಲ ಬಾಳಿಕೆಗೆ ಬರುತ್ತವೆ.

Stencil ( ಸ್ಟೆನ್‌ಸಿಲ್ ) ಅಂದರೆ ಏನು ? ಅದು ಯಾತರಿಂದ ತಯಾರಿಸಲ್ಪಡುತ್ತದೆ. ಅದನ್ನು ತಯಾರು ಮಾಡಲು ಸಾಧ್ಯವೆ ? ಆದರ ಉಪಯೋಗವೇನು ? ಇವುಗಳೆಲ್ಲವನ್ನು ಕುರಿತು ವಿಶದವಾದ ಸಚಿತ್ರ ಲೇಖನವು ಜಯ ಕರ್ನಾಟಕದ ಮುಂದಿನ ಸಂಚಿಕೆಗಳಲ್ಲಿ ಪ್ರಕಟಿಸಲ್ಪಡುತ್ತದೆ. ಸ್ಟೆನ್‌ಸಿಲ್‌ಗಳನ್ನು ಎಣ್ಣೆಯ ರಂಗು ( Oil colour ) ಅಥವಾ ಸಾಧಾರಣ ರಂಗು ( Water colour ) ಗಳಲ್ಲಿ ಉಪಯೋಗಿಸತಕ್ಕದ್ದು. ಎಣ್ಣೆಯ ರಂಗನ್ನು ಉಪಯೋಗಿಸಿದ ಪಕ್ಷದಲ್ಲಿ ಸ್ಟೆನ್‌ಸಿಲ್‌ಗಳನ್ನು ಟರ್‌ಪೆನ್‌ಟೈನ್ ( TURPENTINE) ನಲ್ಲಿ ತೊಳೆಯಬೇಕು. ಸಾಧಾರಣ ರಂಗುಗಳಾದ ಪಕ್ಷದಲ್ಲಿ ನೀರಿನಲ್ಲಿ ತೊಳೆಯಬೇಕು. ವಿಶೇಷ ನೆನಪಿನಲ್ಲಿಡಬೇಕಾದುದೇನೆಂದರೆ ಪ್ರತಿ ಸಲವೂ ಯಾವ ರಂಗನ್ನು ಉಪಯೋಗಿಸಿದಾಗಲೂ ಸ್ಟೆನ್‌ಸಿಲ್‌ಗಳನ್ನು ಮರೆಯದೇ ತೊಳೆಯಬೇಕು. ಹಾಗೆ ತೊಳೆಯದೇ ಉಪಯೋಗಿಸಿದರೆ ಚಿತ್ರವು ಕೊಳೆಯಾಗುತ್ತದೆ.

ಸ್ಟೆನ್‌ಸಿಲ್‌ಗಳ ಸಲುವಾಗಿ ಎರಡು ತರಹದ ಬ್ರಷ್ ( Brush ) ಗಳು ಮಾರಾಟಕ್ಕೆ ಸಿಕ್ಕುತ್ತವೆ. ಇವು ಯಾವುವೆಂದರೆ ಹಾಗ್ ಹೇರ್ ಬ್ರಷ್ (Hog hair brush)

CC-0. Jangamwadi Math Collection. Digitized by eGangotri

ಮತ್ತು ಜಪಾನ್ (Japan) ಬ್ರಷ್ ಇವೆರಡಲ್ಲಿ ಹಾಗ್ ಹೇರ್ ಬ್ರಷ್‌ನ್ನೆ ಬಹಳ ಜನ ಉಪಯೋಗಿಸುತ್ತಾರೆ. ಇವೆರಡೂ ತರಹದ ಬ್ರಷ್‌ಗಳ ಬೆಲೆಯೂ ಒಂದೇ ಆದರೆ ಹಾಗ್ ಹೇರ್ ಬ್ರಷ್ ಬಾಳಿಕೆ ಚೆನ್ನಾಗಿ ಬರುತ್ತದೆ; ಮತ್ತು ಬಹಳ ಉದ್ದವಾಗಿರುವುದರಿಂದ ಹಿಡಿತಕ್ಕೆ ಅನುಕೂಲವಾಗಿರುತ್ತದೆ.




ನಮಗೆ ಬೇಕಾದ ನಮೂನೆಯ ಸ್ಟೆನ್‌ಸಿಲ್‌ಗಳನ್ನು ಅಂಗಡಿಯಿಂದ ಕ್ರಯಕ್ಕೆ ತರಬಹುದು. ನಕಾಶೆಗಳನ್ನು ಬರೆಯಲು ತಿಳಿದಿದ್ದ ಪಕ್ಷಕ್ಕೆ ನಮಗೆ ಬೇಕಾದಂಥ ನಕ್ಷೆಗಳನ್ನು ಮನೆಯಲ್ಲಿಯೆ ತಯಾರಿಸಬಹುದು. ಸ್ಟೆನ್‌ಸಿಲ್‌ಗಳ ಸಹಾಯದಿಂದ ಸುಂದರ ರಂಗಿನ ಚಿತ್ರಗಳನ್ನು ಲ್ಯಾಂಪ್ ಷೇಡ್‌ಗಳ ಮೇಲೂ, ವಸ್ತ್ರ–ಸೀರೆ–ಗೋಡೆ–ಪುಸ್ತಕಮುಂತಾದ ಅನೇಕ ವಸ್ತುಗಳ ಮೇಲೂ ಛಾಪಿಸಬಹುದು.

(Lamp shade) ಲ್ಯಾಂಪ್‌ಷೇಡ್‌ಗಳನ್ನು ತಯಾರಿಸಬೇಕಂದರೆ ಇದರ ಸಲುವಾಗಿಯೇ ೩೦"×೨೦" ಅಂಗವುಳ್ಳ ಏಳು ತರಹದ ಬಣ್ಣದ ಕಾಗದಗಳು ದೊರೆಯುತ್ತವೆ. ಈ ಕಾಗದಗಳು ದಪ್ಪವಿದ್ದರೂ ಗಾಜಿನಂತೆ ಪಾರದರ್ಶಕವಾಗಿವೆ. ಈ ಸೈಜಿನ ಒಂದು ಕಾಗದದ ಬೆಲೆ ೪ಆಣೆಗಳು ಮಾತ್ರ, ಇದರಲ್ಲಿ ೬ಲ್ಯಾಂಪ್‌ಷೇಡ್‌ಗಳನ್ನು ಬಹುಸುಲಭವಾಗಿ ತಯಾರಿಸಬಹುದು. ಒಂದೊಂದು ಲ್ಯಾಂಪ್ ಷೇಡುಗಳೂ ಎರಡು ರೂಪಾಯಿಗೆ ಕಮ್ಮಿ ಇಲ್ಲದೆ ವ್ಯಾಪಾರವಾಗುತ್ತವೆ ಸ್ಟೆನ್‌ಸಿಲ್ ಪೇಪರ್ ಬ್ರಷ್ ಇವುಗಳು ಬೊಂಬಾಯಲ್ಲಿಯ ಸ್ಟೇಷನರಿ ಮಾರ್ಟ (Bombay Stationary Mart) ಅಥವಾ 'ನವಲಾಖಕಂಪನಿ' Navalakh Company ಯಲ್ಲಿ ದೊರೆಯುತ್ತವೆ.

ಮೊದಲು ಸಾಧಾರಣವಾದ ಪೇಪರಿನ ಮೇಲೆ ಮಾದರಿ ಚಿತ್ರದಲ್ಲಿರುವ ನಕಾಷೆಯಂತೆ ಚಿತ್ರಗಳನ್ನು ತಯಾರಿಸಿ ಬಳಿಕ ಈ ಕಾಗದವನ್ನು ಸ್ಟೆನ್‌ಸಿಲ್ ಪೇಪರಿನ ಮೇಲಿಟ್ಟು ಒಂದೇ ಸಮನಾಗಿ ಪೆನ್‌ಸಿಲ್ಲಿನ ಗುರುತಿದ್ದಂತೆಯೆ ಕತ್ತರಿಸಬೇಕು. ಇದಾದ ಕೂಡಲೆ ನಮಗೆ ಬೇಕಾದ ನಮೂನೆಯ ಚಿತ್ರಗಳನ್ನು ಸ್ಟೆನ್‌ಸಿಲ್ ಮೂಲಕ ಇದರ ಮೇಲೆ ರಂಗಿನಿಂದ ಅಚ್ಚು ಹಾಕಬೇಕು. ಬಣ್ಣವು ಒಣಗಿದ ಕೂಡಲೆ ಪೇಪರಿನ ಎರಡೂ ಕೊನೆಯ ಭಾಗಗಳನ್ನು ಸೇರಿಸಿ ಅಂಟಿಸಬೇಕು. ಬಣ್ಣಗಳು ಮತ್ತು ಪೇಪರ್ ಪಾರದರ್ಶಕವಾದುದರಿಂದ, ಬೆಳಕು ಇವುಗಳ ಮೂಲಕ ಚಮಕಿಸಿ ಬಹಳ ಆನಂದಕರವಾದ ದೃಶ್ಯವನ್ನು ಕೊಡುತ್ತದೆ. ಪಾಶ್ಚಾತ್ಯ ದೇಶದಲ್ಲಿ ಹೆಂಗಸರು–ಮಕ್ಕಳು ಇಂತಹ 'ಲ್ಯಾಂಪ್ ಷೇಡು' ಗಳನ್ನು ತಯಾರಿಸಿ ಜೀವನವನ್ನು ಬಹಳ ಸುಲಭವಾಗಿ ಕಳೆಯುತ್ತಲಿದ್ದಾರೆ. ನಮ್ಮ ಬಂಧುಭಗಿನಿಯರು ಈ ಮಾರ್ಗದಲ್ಲಿ ಪ್ರವೇಶಿಸಲು ಇಚ್ಛಿಸುವರೇನು ?

CC-0. Jangamwadi Math Collection. Digitized by eGangotri

# ಬಂಗಾರದ ಬರಗಾಲ

ಲೇ:— ಶ್ರೀ. ವಾಳವೇಕರ ಗುರುರಾಯರು ಬಿ. ಎ., ಎಲ್. ಎಲ್. ಬಿ.

೧೯೩೧ನೇ ಇಸ್ವಿಯ ೨೧ನೆಯ ಸಪ್ಟಂಬರಿನಿಂದ ಹಿಂದುಸ್ಥಾನದ ಪತ್ರಿಕೆಗಳಲ್ಲಿ ಚಲನ, ನಾಣ್ಯ, ಬಂಗಾರದ ಧಾರಣೆ, ಬಂಗಾರದ ನಿಧಿ ಮುಂತಾದ ವಿಷಯಗಳ ಬಗ್ಗೆ ರಭಸದಿಂದ ಚರ್ಚೆ ನಡೆದಿದೆ—ಈ ಚರ್ಚೆಯ ಸವಿಾಪದ ಕಾರಣವೆಂದರೆ ಹಿಂದುಸ್ಥಾನದ ಸ್ಟೇಟ ಸೆಕ್ರೆಟರಿಗಳು ಡುಂಡುಮೇಟಿನ ಪರಿಷತ್ತಿನ ಮುಂದೆ, ರೂಪಾಯಿಗೂ ಪೌಂಡಿಗೂ ಸಂಬಂಧ ಜೋಡಿಸುವುದನ್ನು ಕುರಿತು ಮಾಡಿದ ವಿಧಾನ. ಈ ಚರ್ಚೆಯ ಮೂಲಕಾರಣವು ಇಂಗ್ಲಂಡಿನಲ್ಲಿಯ ಬಿಕ್ಕಟ್ಟಿನ ಆರ್ಥಿಕ ಪರಿಸ್ಥಿತಿ ಎಂದರೆ ಇಂಗ್ಲಂಡಿನ ಬ್ಯಾಂಕಿನಲ್ಲಿಯ ಬಂಗಾರದ ಸಂಚಯದ ಕೊರತೆ; ಮತ್ತು ಬಂಗಾರಕ್ಕೂ ಪೌಂಡಿಗೂ ಆದ ಬಿಡುಗಡೆ. ಬಂಗಾರಕ್ಕೂ ಪೌಂಡಿಗೂ ಬಿಡುಗಡೆ ಆಗುವಂತಹ ವಿಪತ್ತು ಇಷ್ಟರಲ್ಲಿ ಇಂಗ್ಲಂಡಿನ ಮೇಲೆ ಏಕೆ ಬಂತು, ಆ ವಿಪತ್ತು ಹಿಂದುಸ್ಥಾನಕ್ಕೆ ಅದೇಕೆ ಬಡಕೊಳ್ಳುವ ಹವಣಿಕೆಯಲ್ಲಿದೆ ಎಂಬುದನ್ನೀಗ ವಿಚಾರಿಸುವಾ.

ಪಾರಿಭಾಷಿಕ ಶಬ್ದಗಳ ಬಳಿಕೆಯಿಲ್ಲದೆ ಚಲನದ ಹಾಗು ಹಣದ ಮೂಲತತ್ವಗಳ ಅರಿವು ಇಲ್ಲದ್ದರಿಂದಲೂ ಸದ್ಯದ ಆರ್ಥಿಕ ಪರಿಸ್ಥಿತಿಯ ಪರಿಶೀಲನವಿಲ್ಲದಿದ್ದುದರಿಂದಲೂ ಸಾಮಾನ್ಯ ಜ್ಞಾನದ ಕೊರತೆಯ ಮೂಲಕವೂ ಈ ವಿಷಯವು ಹೆಚ್ಚು ಗಡಚಾದದ್ದೆಂದು ಕಾಣುತ್ತದೆ. ಇದು ತೀರ ಹಗುರಾಗಿ ತಿಳಿಯಬಹುದಾದ ವಿಷಯವಲ್ಲವೆಂಬುದು ನಿಜ. ಆದರೆ ಈ ವಿಷಯವನ್ನು ತಿಳಿದುಕೊಳ್ಳುವುದು ನಮ್ಮ ರಾಷ್ಟ್ರದ ಹಿತದ ದೃಷ್ಟಿಯಿಂದ ಬಹಳ ಅವಶ್ಯವಾಗಿದೆ. ರಸಾಯನ ಶಾಸ್ತ್ರಜ್ಞರಾದ ಸರ ಪಿ. ಸಿ. ರೇ ಇವರು ಹೀಗೆ ಬರೆದಿದ್ದಾರೆ:— "....Every one that keeps in touch with the life of the nation must have something to say on the recent happening in the field of curency in Great Britain and India". ಶಕ್ಯವಿದ್ದ ಮಟ್ಟಿಗೆ ಪಾರಿಭಾಷಿಕ ಶಬ್ದಗಳನ್ನು ಬದಿಗಿಟ್ಟು, ವಿಷಯದ ಸಶಾಸ್ತ್ರ ವಿವೇಚನೆ ಮಾಡುವ ಗೊಡವೆಗೆ ಹೋಗದೆ ಸಾಮಾನ್ಯ ಜನರಿಗೆ ತಿಳಿಯುವಂತೆ ಬರೆಯುವ ಉದ್ದೇಶವನ್ನು ಕಣ್ಣೆದುರಿಗಿಟ್ಟುಕೊಂಡು ಈ ಲೇಖವನ್ನು ಬರೆದಿದ್ದೇನೆ.

ಆರ್ಥಿಕ ಸ್ಥಿತ್ಯಂತರಗಳನ್ನು ನಿರೀಕ್ಷಣ ಮಾಡುವವರಿಗೂ, ಮುಖ್ಯವಾಗಿ ಬೇರೆಬೇರೆ ರಾಷ್ಟ್ರಗಳ ಚಲನದ ಪರಿಸ್ಥಿತಿಯನ್ನು ಅವಲೋಕಿಸುವವರಿಗೂ, ಬೆಳ್ಳಿ ಬಂಗಾರದ ಧಾರಣೆಯನ್ನು ಗೊತ್ತುಮಾಡಿಕೊಂಡವರಿಗೂ ಇಂಗ್ಲಂಡಿನ ಮೇಲೆ ಈ ತರದ ಸಂಕಟ ಬರುವುದೆಂದು ಒಡೆದು ಕಾಣಿಸುತ್ತಿದ್ದಿತು. ಲಾರ್ಡ ಮ್ಯಾಕಮಿಲನ್ನರ ಕಮಿಟಿಯ ವರದಿಯು ಪ್ರಸಿದ್ಧವಾದಂದಿನಿಂದ ಇಂಗ್ಲಂಡಿನ ಆರ್ಥಿಕ ಸ್ಥಿತಿಯ ಬಗ್ಗೆ ಹೆಚ್ಚು ಚರ್ಚೆ ಪ್ರಾರಂಭವಾಯಿತು. ಸುಧಾರಿಸಿದ ಯುಗದಲ್ಲಿ ಪ್ರತಿಯೊಂದು ದೇಶದ ವ್ಯಾಪಾರವು ಬಹುತರವಾಗಿ ಉಳಿದ ಅನೇಕ ದೇಶಗಳ ಸಂಗಡ ಇರುವುದರಿಂದ, ಒಬ್ಬರಿಗೊಬ್ಬರು ಕೊಡಕೊಳ್ಳುವುದು ಇದ್ದೇ ಇರುತ್ತದೆ. ಕಾರಣ ಒಂದು ರಾಷ್ಟ್ರದವರು ಬೇರೆ ರಾಷ್ಟ್ರಗಳ ಆರ್ಥಿಕ ಸ್ಥಿತಿಯನ್ನು ತಿಳಿದುಕೊಳ್ಳಬೇಕಾಗುತ್ತದೆ. ಹಿಂದುಸ್ಥಾನಕ್ಕೂ ಇಂಗ್ಲಂಡಿಗೂ ಆರ್ಥಿಕಸಂಬಂಧವಷ್ಟೇ ಅಲ್ಲ ರಾಜಕೀಯ ಸಂಬಂಧವೂ ಇರುವುದರಿಂದ ಇಂಗ್ಲಂಡಿನಲ್ಲಿಯ ಆರ್ಥಿಕ ಸ್ಥಿತಿಯನ್ನು ನಾವು ಚೆನ್ನಾಗಿ ಅರಿತುಕೊಳ್ಳಬೇಕಾಗುತ್ತದೆ.

೧೯೩೧ನೆಯ ಇಸ್ವಿಯ ಸಪ್ಟೆಂಬರ್ ತಿಂಗಳ ೨೧ನೆಯ ತಾರೀಖಿನ ದಿವಸ ಇಂಗ್ಲಂಡು ಸುವರ್ಣ ಪರಿಣಾಮ ಪದ್ಧತಿಯನ್ನು (Gold standard) ನಿಲ್ಲಿಸಿಬಿಟ್ಟಿತು. ಅಂದರೆ ಪೌಂಡಿನ ನೋಟು ತಂದವರಿಗೆ ಬಂಗಾರ ಕೊಡುವ ಬ್ಯಾಂಕ ಆಫ್ ಇಂಗ್ಲಂಡಿನ ಹೊಣೆಗಾರಿಕೆಯು ಅಥವಾ ಜವಾಬುದಾರಿಯು ಇಲ್ಲದಂತಾಯಿತು. ೨೧ನೆಯ ತಾರೀಖಿನ ಮೊದಲು ಈ ತರದ ನೋಟು ತಂದವ

CC-0. Jangamwadi Math Collection. Digitized by eGangotri

ರಿಗೆ "ಬ್ಯಾಂಕ್ ಆಫ್ ಇಂಗ್ಲಂಡವು ಇಂತಿಷ್ಟು ಬಂಗಾರ ಕೊಡಲೇಬೇಕೆಂದು ಕಾಯದೆಯ ನಿ ಯ ಮ ವಿ ತ್ತು. ಪೌಂಡಿನ ನೋಟಿನ ಮೇಲೆ ಹೀಗೆ ಬರೆದಿರುತ್ತದೆ:—

"I promise to pay the bearer on demand the sum of one pound, London, for the Governer and company of the Bank of England..... Chief cashier"

ಒಂದು ಔಂಸು ಬಂಗಾರಕ್ಕೆ ೮೪ ಶಿಲಿಂಗ ೧೧ ಪೇನ್ಸಿ ನಂತೆ ಬಂಗಾರ ಕೊಡಲಿಕ್ಕೆ "ಬಾಂಕ್ ಆಫ್ ಇಂಗ್ಲಂಡ" ವು ಕಾಯದೆಯಿಂದ ಬದ್ಧವಿದ್ದಿತು. ವೊನ್ನಿನ ೨೧ನೆಯ ಸಪ್ಟಂಬರದಂದ ಪೌಂಡಿನ ನೋಟು ತಂದವರಿಗೆ ಬಂಗಾರ ಕೊಡುವುದಿಲ್ಲೆಂದು ಹೇಳುವ ಅಧಿಕಾರವು ಬ್ಯಾಂಕ್ ಆಫ್ ಇಂಗ್ಲೆಂಡಿಗೆ ಕಾಯದೆಯಿಂದ ದೊರೆಯಿತು. ಹಿಂದುಸ್ಥಾನದಲ್ಲಿ ಚಲನದ ನೋಟುಗಳನ್ನು ತೆಗೆಯುವ ಅಧಿಕಾರವು ಯಾವ ಬ್ಯಾಂಕಿಗೂ ಇಲ್ಲ. ಅದನ್ನು ಹಿಂದು ಸ್ಥಾನ ಸರಕಾರದವರು ತಮಗಾಗಿ ಕಾದಿಟ್ಟುಕೊಂಡಿದ್ದಾರೆ. ಇಂಗ್ಲಂಡಿನಲ್ಲಿ "ಬ್ಯಾಂಕ್ ಆಫ್ ಇಂಗ್ಲಂಡಿ"ಗೆ ನೋಟುಗಳನ್ನು ತೆಗೆಯುವ ಅಧಿಕಾರವು ಕಾಯದೆ ಯಿಂದ ಕೊಡಲ್ಪಟ್ಟಿದೆ. "ಬ್ಯಾಂಕ್ ಆಫ್ ಇಂಗ್ಲಂಡಿ" ನಷ್ಟು ಪತ್ತು, ಮಹತಿ, ವರ್ಚಸ್ಸು ಇವೆಲ್ಲ ಮಹಾ ಯುದ್ಧದ ವೊದಲು ಇನ್ನಾವ ಬ್ಯಾಂಕಿಗೂ ಇದ್ದಿಲ್ಲ. ಬ್ಯಾಂಕ್ ಆಫ್ ಇಂಗ್ಲಂಡಿನ ನೋಟುಗಳು ಬಂಗಾರ ವೆಂದು ಜನರ ತಿಳುವಳಿಕೆಯಾಗಿದ್ದಿತು. ಇಂಗ್ಲಂಡಿನ ಸರಕಾರದ ನೋಟುಗಳೆಂದರೆ ಬ್ಯಾಂಕ್ ಆಫ್ ಇಂಗ್ಲಂಡಿನ ನೋಟುಗಳೆಂದು ಹೇಳಬಹುದು. ಈ ಬ್ಯಾಂಕಿಗೆ ಬ್ರಿಟಿಶ ಸರಕಾರದ ಬೆಂಬಲವಿದೆ. ಹಿಂದುಸ್ಥಾನದಲ್ಲಿ ಸರಕಾರದವರು ನೋಟುಗಳನ್ನು ತೆಗೆಯುತ್ತಾರೆ, ಅದರಂತೆ ಇಂಗ್ಲಂಡಿನಲ್ಲಿ ಸಹ ಇರಬಹುದು, ಬ್ಯಾಂಕ್ ಆಫ್ ಇಂಗ್ಲಂಡು ತನ್ನ ನೋಟುಗಳನ್ನು ತಕ್ಕೊಂಡು ಬಂಗಾರ ಕೊಡುವುದಿಲ್ಲವೆಂದರೆ ಇಷ್ಟೊಂದು ಕೋಲಾಹಲವೇಕೆಂಬ ಕಲ್ಪನೆಯು ಸರಕಾರಕ್ಕಷ್ಟೇ ನೋಟು ತೆಗೆಯುವ ಅಧಿಕಾರವಿದೆಯೆಂಬ ಕಲ್ಪನೆಯುಳ್ಳವರಿಗೆ ಬರುವದು ಸಹಜ. ಆದರೆ ವಸ್ತುಸ್ಥಿತಿಯು ಮೇಲೆ ವಿವರಿಸಿದಂತೆ ಇದೆ.

ಬ್ಯಾಂಕ್ ಇಫ್ ಇಂಗ್ಲಂಡಿನ ಬ್ಯಾಂಕ್ ರೇಟು, (ಬಡ್ಡಿಯ ದರ) ಹಾಗೂ ಬ್ಯಾಂಕ್ ಆಫ್ ಇಂಗ್ಲಂಡಿನ ನೆಲಮನೆಯಲ್ಲಿ ಸಂಗ್ರಹಿಸಿಟ್ಟ ಬಂಗಾರ, ಮತ್ತು ಹುಂಡಿಯ ದರ (Ratio Exchange) ಇವುಗಳ ಮೇಲೆ ಇಂಗ್ಲಂಡಿನದಷ್ಟೇ ಅಲ್ಲ; ಪ್ರಪಂಚದ ವ್ಯಾಪಾರವು ಅವಲಂಬಿಸಿಕೊಂಡಿದ್ದಿತು. ಈಗ ಸಹ ಕೆಲವು ಮಟ್ಟಿಗೆ ಅವಲಂಬಿಸಿಕೊಂಡಿದೆ. ಬ್ಯಾಂಕ್ ರೇಟ್ ಅಂದರೇನು? ಅದು ಯಾತರ ಮೇಲೆ ಅವಲಂಬಿಸಿದೆ? ಅದನ್ನು ಹೇಗೆ ಜಾಹೀರಪಡಿಸುತ್ತಾರೆ? ಮುಂತಾದ ವಿಷಯಗಳನ್ನು ತಿಳಿದುಕೊಳ್ಳುವ ಲವಲವಿಕೆಯು ಅನೇಕರಲ್ಲಿ ಹುಟ್ಟಿದೆ. ಈ ತೆರದ ವಿಷಯಗಳನ್ನು ತಾತ್ತ್ವಿಕ ಹಾಗೂ ವ್ಯಾವಹಾರಿಕ ರೀತಿಯಿಂದ ಸಾಮಾನ್ಯ ಜನರಿಗಾಗಿ ವಿವೇಚನೆ ಮಾಡಿದ ಗ್ರಂಥಗಳಲ್ಲಿ "ಹಾರ್ಟ್‌ಲೆ ವಿದರ್ಸ್" ಇವರ ಪುಸ್ತಕಗಳು ಬಹು ಉಪಯುಕ್ತವಾದುವುಗಳೆಂದು, ಅವರ ಲೇಖನಗಳನ್ನು ಇತ್ತೀಚೆಗೆ ಮದ್ರಾಸಿನ ಹಿಂದು ಪತ್ರವು ಪ್ರಕಟಿಸುತ್ತಿರುತ್ತದೆ.

೨೧ ನೆಯ ಸಪ್ಟಂಬರಿನ ವೊದಲು ಇಂಗ್ಲಂಡಿನ ಆರ್ಥಿಕ ಪರಿಸ್ಥಿತಿ ಹೇಗಿದ್ದಿತ್ತೆಂಬುದನ್ನು ನೋಡುವಾ. ಇಂಗ್ಲಿಷ ಜನರಿಗೆ ಇಂಗ್ಲಂಡು ಜಗತ್ತಿನ ಕಾರಖಾನೆ (England is the workshop of the world) ಯೂ ಸಾಗರ ಮಹಾಸಾಗರಗಳ ಮೇಲಿನ ಸರ್ವ ಸತ್ತಾಧಾರಿಯೂ ಆಗಿದೆ (Britania rules the waves) ಎಂಬ ಜಂಭವಿದೆ. ಈ ತೆರದ ಬಡಿವಾರ ಬಡಿಯುವ ಸೊಗಸಿನ ಕಾಲವು ಇಂಗ್ಲಂಡಿಗೆ ಕೆಲವು ವರ್ಷಗಳವರೆಗಿದ್ದಿತು. ಆ ಕಾಲದಲ್ಲಿ ಬ್ರಿಟಿಶರು ಅಪಾರ ಸಂಪತ್ತನ್ನು ಗಳಿಸಿದರು. ಬ್ರಿಟಿಶ ನೌಕೆಗಳು ಭೂಮಂಡಲದ ಸರಕುಗಳನ್ನು ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಹೇರಿಕೊಂಡು ಹೋಗುತ್ತಿದ್ದುವು. ಇಷ್ಟು ಬಾಡಿಗೆ ಬ್ರಿಟಿಶರ ಉಡಿಯಲ್ಲಿ ಬೀಳುತ್ತಿದ್ದಿತು. ಹಡಗುಪಡೆಯನ್ನು ಕಟ್ಟುವಂತಹ ಅಜಸ್ರವಾದ ರಾಷ್ಟ್ರೀಯ ಉದ್ಯೋಗವು ನಡೆಯುತ್ತಿದ್ದಿತು. ಆದರೆ ಕಾಲಚಕ್ರವು ಸುಮ್ಮನಿರುವುದಿಲ್ಲ. ಅದು ತಿರುಗುತ್ತಿರುತ್ತದೆ. ಅದು ತಿರುಗಿದಂತೆ ಅದರ ಮೇಲಿರುವವರು ಬಿಸಿಲು ನೆ ರ ಳು ಗ ಳ ನ್ನು ಅನುಭವಿಸಬೇಕಾಗುತ್ತದೆ. ಕತ್ತಲೆ ಬೆಳಕುಗಳನ್ನು ಕಾಣಬೇಕಾಗುತ್ತದೆ. ಇಂಗ್ಲಂಡಿನ ಊರ್ಜಿತ ಸ್ಥಿತಿಯ ಕಾರಣಗಳನ್ನು ಚೆನ್ನಾಗಿ ತಿಳಿದುಕೊಂಡು ಜರ್ಮನಿ, ಜಪಾನ, ಅಮೇರಿಕಾ ವೊದಲಾದುವುಗಳು ಅದೇ ಮಾರ್ಗದಿಂದ ಸಂಪತ್ತಿಯ ಸಂಪಾದನೆ ಮಾಡಿಕೊಳ್ಳುವ ಉದ್ಯೋಗದಲ್ಲಿ ಬಿದ್ದುವು. ಜರ್ಮ



CC-0. Jangamwadi Math Collection. Digitized by eGangotri

ನರ ಹಡಗುಪಡೆಯಾಯಿತು. ಜಪಾನಿನ ಹಡಗುಪಡೆ ಯಾಯಿತು. ಬೇರೆ ಬೇರೆ ರಾಷ್ಟ್ರಗಳೂ ತಮ್ಮ ಹಡಗು ಪಡೆಯನ್ನು ಕಟ್ಟಿದವು. ಅದರಂತೆಯೆ 'ಅಮೇರಿಕಾ ಹಿಂದುಸ್ಥಾನ, ಇಜಿಪ್ತಗಳಿಂದ ಹತ್ತಿಯನ್ನು ಹೇರಿ ಕೊಂಡು ಹೋಗಿ ನೂಲು ತೆಗೆದು ಬಟ್ಟೆ ನೆಯಿದು ಅವು ಗಳನ್ನು, ಹತ್ತಿಯು ಬೆಳೆಯುವ ಜನಾಂಗಗಳಿಗೆ ಸಹ- ಇಂಗ್ಲಂಡು ಒಂದೇ ಮಾರಬೇಕೇಕೆ? ಹತ್ತಿಯ ಉದ್ಯೋಗದಿಂದ ಇಂಗ್ಲಂಡು ಘನತೆಗೇರಿದೆ. ನಾವು ಸಹ ಈ ಉದ್ಯೋಗ ಮಾಡಿ ಹಣ ದೊರಕಿಸಬೇಕೆ'ಂದು ಜರ್ಮನಿ ಜಪಾನ ಮೊದಲಾದವುಗಳು ನೂಲಿನ ಹಾಗೂ ಬಟ್ಟೆಯ ಗಿರಣಿಗಳನ್ನು ಹಾಕಿದವು. ಜರ್ಮನಿ ಜಪಾನಿ ನಂತಹ ಗಿರಾಕಿ ಹೋದದ್ದಲ್ಲದೆ, ಈ ದೇಶಗಳು ಹಿಂದು ಸ್ಥಾನ ಇಜಿಪ್ತಗಳಂತಹ ಪೇಟೆಗಳನ್ನು ಸಹ ಇಂಗ್ಲಂ ಡಿನ ಕೈಯಿಂದ ಬಿಡಿಸಹತ್ತಿದವು. ಮಹಾಯುದ್ಧದಲ್ಲಿ ಅಮೇರಿಕಾ ಜಪಾನ; ಮಹಾಯುದ್ಧದ ಬಳಿಕ ಕೆಲವು ಮಟ್ಟಿಗೆ ಜರ್ಮನಿ ಮೊದಲಾದವುಗಳು; ಬ್ರಿಟಿಶ ಪದಾ ರ್ಥಗಳನ್ನು ಕೊಳ್ಳುವ ಪೇಟೆಗಳನ್ನು ಮುಖ್ಯವಾಗಿ ಪೌರ್ವಾತ್ಯ ರಾಷ್ಟ್ರಗಳ ಪೇಟೆಗಳನ್ನು ಹಸ್ತಗತ ಮಾಡಿ ಕೊಂಡುವು. ಅದರಿಂದ ಇಂಗ್ಲಂಡಿನ ವ್ಯಾಪಾರವು ಕಡಿಮೆ ಯಾಯಿತು. ಬೇರೆ ಬೇರೆ ದೇಶಗಳು ಪರಕೀಯರ ಸರಕುಗಳಿಗೆ ಸುಂಕವನ್ನು ಹೇರಿದುದರಿಂದ ಇಂಗ್ಲಂಡಿನ ಮಾಲು ಆ ದೇಶಗಳಲ್ಲಿ ತುಟ್ಟಿಯಾಗಲು ತೊಡಗಿತು. ಎಲ್ಲ ಕಡೆಗೆ ಕಾಂಚನದ ಕೊರತೆಯಾದುದರಿಂದ ಅಗ್ಗದ ಮಾಲಿಗೆ ಹೆಚ್ಚಾಗಿ ಗಿರಾಕಿಗಳು ಬರುವುದು ಸಹಜ. ಬ್ರಿಟಿಶ ಮಾಲಿಗೆ ಹೆಚ್ಚು ಧಾರಣೆ ಬೀಳುತ್ತಿದ್ದುದರಿಂದ ಅದನ್ನು ತಕ್ಕೊಳ್ಳುವವರ ಸಂಖ್ಯೆ ಕಡಿಮೆ. ಇಂಗ್ಲಂಡಿ ನಲ್ಲಿ ಕೂಲಿ ಹೆಚ್ಚಿರುವುದರಿಂದಲೂ ಪಕ್ಕಾ ಮಾಲಿನ ಸಿದ್ಧತೆಗೆ ಬೇಕಾದ ಕಚ್ಚಾ ಮಾಲು ಪರದೇಶಗಳಿಂದಲೇ ಬರಬೇಕಾದುದರಿಂದಲೂ ಬ್ರಿಟಿಶ್ ಮಾಲಿಗೆ ಸ್ವಲ್ಪ ಹೆಚ್ಚು ಕ್ರಯ. ಇದೊಂದೆ ಅಲ್ಲದೆ ಇಂತಹ ಅನೇಕ ತೊಂದರೆಗಳಿದ್ದುದರಿಂದ ಬ್ರಿಟಿಶರ ಮಾಲಿಗೆ ಮೊದಲಿನಂತೆ ಗಿರಾಕಿ ಸಿಕ್ಕಲೊಲ್ಲದಾಯಿತು.

ಈ ಪರಿಸ್ಥಿತಿಗೆ ಹಿಂದುಸ್ಥಾನದ ಬಹಿಷ್ಕಾರವೂ ನೆರ ವಾದುದರಿಂದ ಅದಕ್ಕೆ ಹೆಚ್ಚು ಭೀಷಣ ಸ್ವರೂಪವು ಬಂದಿತು. ಬಹಿಷ್ಕಾರದಲ್ಲಿ ಬಲವಿಲ್ಲವೆಂದು ಆಳರಸರು ಹೇಳಿದರೂ ಅದರ ಬಿಸಿಯು ಬ್ರಿಟಿಶರಿಗೆ ಬಡಕ ತೆಂದು ಎಲ್ಲರಿಗೂ ಗೊತ್ತಾದ ಮಾತಾಗಿದೆ.

ಇಂಗ್ಲಂಡಿಗೆ ಬೇಕಾಗುವಷ್ಟು ಆಹಾರಪದಾರ್ಥಗ ಇಂಗ್ಲಂಡಿನಲ್ಲಿ ಬೆಳೆಯುವುದಿಲ್ಲ. ಬ್ರಿಟಿಶರು, ತಮ್ಮ ಕಾ ಖಾನೆಗಳಲ್ಲಿ ಗಿರಣಿಗಳಲ್ಲಿ ಸಿದ್ಧವಾದ 'ಪಕ್ಕಾಮಾಲು' ಗಳನ್ನು ಪರದೇಶಗಳಿಗೆ ಕಳುಹಿಸಿ ಪರದೇಶಗಳಿ ಆಹಾರಪದಾರ್ಥಗಳನ್ನು ತರಿಸಿಕೊಳ್ಳುತ್ತಾರೆ. ತಮ್ಮ ಪಕ್ಕಾ ಮಾಲಿಗೆ ಸಾಕಷ್ಟು ಗಿರಾಕಿ ಇಲ್ಲದಿದ್ದ ಆಹಾರಪದಾರ್ಥಗಳನ್ನು ತರಿಸುವುದನ್ನು ನಿಲ್ಲಿಸಲಿಕ್ಕಾ ಗುವುದಿಲ್ಲ. ಹೊಟ್ಟೆಯನ್ನು ಕಟ್ಟಲಿಕ್ಕಾಗುವುದಿ ಕೆಲಸಗಾರರು ಹೊಟ್ಟೆಗೆ ಬೇಡುತ್ತಾರೆ. ಕಾರಖಾ ದಾರರು ಗಿರಾಕಿ ಇಲ್ಲದಿರುದರಿಂದ ಒಂದು ವಾರ ಕೆಲವು ದಿವಸ ಮಾತ್ರ ಕಾರಖಾನೆಗಳನ್ನು ನಡೆಯಿ ಕ್ಕಾಗುತ್ತದೆಂದು ಹೇಳುತ್ತಾರೆ. ಹೀಗಾಗಿ ಕೆಲಸಗೇ ಗಳ ಸಂಖ್ಯೆ ಇಂಗ್ಲಂಡಿನಲ್ಲಿ ಬೆಳೆದಿದೆ. ಬ್ಯಾಂಕುಗ ಕಾರಖಾನೆದಾರರಿಂದ ಬರತಕ್ಕ ಹಣವು ಸರಿಯಾಗಿ ದಾಗಿದೆ.

ಉಗಿಯ ಯಂತ್ರದ ಶೋಧವಾದ ಬಳಿಕ ಔದ್ಯೋಗಿಕ ಕ್ರಾಂತಿಯ ಲಾಭವನ್ನು ಎಲ್ಲ ಮೊದಲು ಮತ್ತು ಬಹು ಕಾಲದವರೆಗೆ ತಕ್ಕೊಂಡ ಬ್ರಿಟಿಶರು. ಅದರಿಂದ ದೊರಕಿಸಿದ ಅಗಣಿತ ಸಂಪತ್ತಿ ಯನ್ನು ಬ್ರಿಟಿಶರು ಅನೇಕ ರಾಷ್ಟ್ರಗಳಿಗೆ ಸಾಲವೆಂ ಕೊಟ್ಟಿದ್ದಾರೆ. ಹೀಗೆ ಕೊಟ್ಟ ಸಾಲದ ಬಡ್ಡಿಯ ರಕಮು ಕೂಡ ಅಪರಂಪಾರವಾಗಿದೆ. ಬಡ್ಡಿಯ ಬದಲು ಬ್ರಿ ಶರು ಆಯಾ ದೇಶಗಳಿಂದ ಕಚ್ಚಾ ಮಾಲು ಹಾ ಆಹಾರಪದಾರ್ಥಗಳನ್ನು ತರಿಸಿಕೊಳ್ಳುತ್ತಾರೆ. ಇಂಗ್ಲಂ ಡಿನ ಆಯಾತ ( Imports ) ವು ನಿರ್ಗತ ( Exports ಕ್ಕಿಂತ ಹೆಚ್ಚಿದ್ದರೂ ಬಡ್ಡಿ ಮೊದಲಾದ ದಿಂದ ಬರುವ ಹಣ ಹೆಚ್ಚಿದ್ದುದರಿಂದ ಬಟ್ಟಿನ ಮೇ ಇಂಗ್ಲಂಡಿನ ಸಂಪತ್ತು ಬೆಳೆಯುತ್ತಿದ್ದಿತು. ಆರ್ಥಿ ಪರಿಸ್ಥಿತಿಯ ಬಿಕ್ಕಟ್ಟಿನ ಮೂಲಕ ಸಾಲಗಾರರು ಯನ್ನು ಸಮನಾಗಿ ಕಾಲಕ್ಕೆ ಸರಿಯಾಗಿ ಕೊಡ ಅಸಮರ್ಥರಾಗಿದ್ದಾರೆ. ಹೀಗಾಗಿ ಇಂಗ್ಲಂಡಿಗೆ ಕಷ್ಟ ಕಾಲವು ಬಂದೊದಗಿದೆ.

ಮಹಾಯುದ್ಧದಲ್ಲಿ ತಾವು ತೆಗೆದ ಸಾಲವನ್ನು ತೀರಿ

CC-0. Jangamwadi Math Collection. Digitized by eGangotri

ಲಿಕ್ಕೆ ಬ್ರಿಟಿಶರಿಗೆ ಇದೇ ವೇಳೆಯಲ್ಲಿಯೆ ಬಂಗಾರವನ್ನು ಪರದೇಶಗಳಿಗೆ ಕಳಿಸಬೇಕಾಗಿ ಬಂದಿತು. ಇಂಗ್ಲಂಡಿನ ಅಂದಾಜು ಪತ್ರಿಕೆಯ (ಬಜೆಟ್) ಆಯವ್ಯಯಗಳ ಜಾಯಿಗೂಡಿಸುವುದು ಕಠಿಣವಾಯಿತು. ಕೆಲಸವಿಲ್ಲದ ಕೆಲಸಗಾರರನ್ನು ಎಷ್ಟೆಂದು ಕಾಯುತ್ತಾರೆ! ಅವರ ಹೊಟ್ಟೆಗೆ ಕೊಡುವುದೆಲ್ಲಿಯ ವರೆಗೆ? ಧನದಿಂದ ತುಂಬಿದ ಫ್ರಾನ್ಸ ಮತ್ತು ಅಮೇರಿಕೆಗಳಲ್ಲಿ ಸಾಲ ತೆಗೆಯಬೇಕಾಯಿತು. ಈ ಎರಡೂ ದೇಶಗಳಲ್ಲಿ ಲೆಕ್ಕವಿಲ್ಲದಷ್ಟು ಬಂಗಾರದ ಸಂಚಯವಿದೆ; ಜಗತ್ತಿನಲ್ಲಿಯ (Monetary gold) ನಾಣ್ಯಗಳ ಬಂಗಾರದ ಅರ್ಧದಷ್ಟು ಬಂಗಾರವು ಅಲ್ಲಿದೆಯೆಂದು ತಜ್ಞರ ಮತ. ಫ್ರಾನ್ಸ ಮತ್ತು ಅಮೇರಿಕೆಗಳು ಬ್ರಿಟಿಶರಿಗೆ ಸಾಲಕೊಡದುದರಿಂದ ತನ್ನ ಹತ್ತರಿದ್ದ ಬಂಗಾರವನ್ನು ಕಾದುಕೊಳ್ಳದ ಹೊರತು ಗತ್ಯಂತರವಿಲ್ಲವೆಂದು ಇಂಗ್ಲಂಡಿಗೆ ಎನಿಸಿತು. ಕಾರಣ ಸಪ್ಟಂಬರ ತಿಂಗಳ ೨೧ ನೆಯ ತಾರೀಖಿನಿಂದ ಪೌಂಡಿನ ನೋಟು ತಂದವರಿಗೆ ಬಂಗಾರ ಕೊಡಲಿಕ್ಕೆ ಬ್ಯಾಂಕ ಆಫ್ ಇಂಗ್ಲಂಡು ಹೊಣೆಗಾರವಿಲ್ಲವೆಂದು ಹೇಳಬೇಕಾಯಿತು.

ಇಲ್ಲಿಯ ವರೆಗೆ ಇಂಗ್ಲಂಡಿನಲ್ಲಿ ಸುವರ್ಣ ಪರಿಮಾಣ ಪದ್ಧತಿಯನ್ನು ನಿಲ್ಲಿಸುವ ಪ್ರಸಂಗವು ಯಾಕೆ ಬಂದಿತೆಂಬುದನ್ನು ಹೇಳಿದೆ. ಇನ್ನು ಅದರಿಂದ ಹಿಂದುಸ್ಥಾನದ ಮೇಲೆ ಏನು ಪರಿಣಾಮವಾಗುತ್ತದೆಂಬುದನ್ನು ನೋಡುವಾ.

ಇಂಗ್ಲಂಡಿನಲ್ಲಿ ಸುವರ್ಣ ಪರಿಮಾಣ ಪದ್ಧತಿಯು ನಿಂತ ಕೂಡಲೆ ಹಿಂದುಸ್ಥಾನದ ವ್ಹಾಯಿಸರಾಯರು ೧೯೩೧ ನೆಯ ಇಸ್ವಿಯ ೬ ನೆಯ ಆರ್ಡಿನೆನ್ಸನ್ನು (Currency Ordinance) ತಾ. ೨೧-೯-೧೯೩೧ ನೆಯ ಇಸ್ವಿಯ ದಿವಸ ದಿವಸ ತೆಗೆದು ೧೯೨೭ ನೆಯ ಇಸ್ವಿಯ ಚಲನದ ಕಾಸೂನಿನ ೫ ನೆಯ ಕಲಮನ್ನು ರದ್ದುಪಡಿಸಿದರು. ಈ ೫ ನೆಯ ಕಲಮಿನ ಪ್ರಕಾರ ಹಿಂದುಸ್ಥಾನ ಸರಕಾರವು ೨೧ ರೂ. ೧೧ ಆ. ೯ ಪೈಗೆ ಒಂದು ತೊಲಿಯಂತೆ ಬಂಗಾರ ಮಾರಲು ಸಿದ್ಧವಿದ್ದಿತು. ಆ ಹೊಣೆಗಾರಿಕೆಯು ಅಥವಾ ಜವಾಬುದಾರಿಯು ಈ ಆರ್ಡಿನೆನ್ಸಿನಿಂದ ಇಲ್ಲದಂತಾಯಿತು. ಹೀಗಾದದ್ದು ಹಿಂದುಸ್ಥಾನಕ್ಕೆ ಒಳಿತಾಯಿತು. ಆದರೆ ಇಷ್ಟರಲ್ಲಿ ಸ್ಟೇಟ ಸೆಕ್ರೆಟರಿ ಸಾಹೇಬರು ರೂಪಾಯಿಗೂ ಬಂಗಾರಕ್ಕೂ ಇದ್ದ ಸಂಬಂಧವನ್ನು ಬಿಡಿಸಿ, ಅಥವಾ ಘಟಸ್ಫೋಟ ಮಾಡಿ ರೂಪಾಯಿಗೂ ಪೌಂಡಿಗೂ ಸಂಬಂಧ ಜೋಡಿಸುವದು ಒಳಿತೆಂದು ದುಂಡುಮೇಜಿನ ಪರಿಷತ್ತಿನ ಮುಂದೆ ಜಾಹೀರುಪಡಿಸಿದರು. ಲೆಜಿಸ್ಲೆಟಿವ್ಹ ಅಸೆಂಬ್ಲಿಯು ಸಿಮ್ಲಾದಲ್ಲಿ ಈ ಕಾಲಕ್ಕೆ ಕೂಡಿದ್ದಿತು. ಅದರ ಅನುಮತಿಯನ್ನೇನು ತಕ್ಕೊಳ್ಳಲೇ ಇಲ್ಲ. ಹಿಂದುಸ್ಥಾನ ಸರಕಾರಕ್ಕೆ ಈ ಪರಿಸ್ಥಿತಿಯಲ್ಲಿ ಏನು ಮಾಡಬೇಕೆಂಬುದು ಹೊಳೆಯದಾಗಿರಬೇಕು. ಮೂರು ದಿವಸ ಬ್ಯಾಂಕುಗಳನ್ನು ತಡೆದು ನಿಲ್ಲಿಸಿದುದಾಯಿತು. ಸ್ಟೇಟ್ ಸೆಕ್ರೆಟರಿಯವರ ಕೂಡ ವಿಚಾರವಿನಿಮಯವೂ ಆಯಿತು. ಹಿಂದುಸ್ಥಾನ ಸರಕಾರಕ್ಕೆ ಒಮ್ಮೊಮ್ಮೆ ತಮ್ಮ ಮತದ ವಿರುದ್ಧ–ಏಳು ಸಾವಿರ ಮೈಲುಗಳಾಚೆಗಿರುವ–ಸ್ಟೇಟ್ ಸೆಕ್ರೆಟರಿಯವರ ಅನುಮತಿಯಂತೆ ನಡೆಯಬೇಕಾಗುತ್ತದೆ. ವ್ಹಾಯಿಸರಾಯರು ತಾ. ೨೪-೯-೧೯೩೧ ನೆಯ ದಿವಸ, ೬ನೆಯ ಆರ್ಡಿನೆನ್ಸನ್ನು ರದ್ದುಪಡಿಸುವುದಕ್ಕಾಗಿ ೧೯೩೧ ರ ೭ ನೆಯ ಆರ್ಡಿನೆನ್ಸನ್ನು ತೆಗೆಯಬೇಕಾಯಿತು. ೭ ನೆಯ ಆರ್ಡಿನನ್ಸಿನಿಂದ ೧೯೨೭ ನೆಯ ಇಸ್ವಿಯ ಚಲನದ ಕಾಸೂನಿನ ೫ ನೆಯ ಕಲಮಿನ ಪುನರುಜ್ಜೀವನವಾಯಿತೆಂದು ಹೇಳಬಹುದು. ಆದರೆ ಈ ಆರ್ಡಿನನ್ಸಿನಲ್ಲಿ ಹಿಂದುಸ್ಥಾನ ಸರಕಾರದವರು ಯಾವ ದರದಿಂದ ಬಂಗಾರವನ್ನು ಮಾರುತ್ತಾರೆಂಬುದರ ಸ್ಪಷ್ಟ ಉಲ್ಲೇಖವಿಲ್ಲ. ಆರ್ಡಿನನ್ಸುಗಳ ಚರ್ಚೆಯನ್ನು ಇಲ್ಲಿಗೆ ಬಿಡುವಾ.

೧೯೨೭ ನೆಯ ಇಸ್ವಿಯಲ್ಲಿ ಕೂಡಿದ ಹಿಲ್ಟನ್ ಯಂಗ ಕಮಿಶನ್ನಿನವರು ರೂಪಾಯಿಗೂ ಪೌಂಡಿಗೂ ಇದ್ದ ಸಂಬಂಧವನ್ನು ಕಡಿದು ರೂಪಾಯಿಗೂ ಬಂಗಾರಕ್ಕೂ ಸಂಬಂಧವನ್ನು ಜೋಡಿಸಿದರು; ಒಂದು ರೂಪಾಯಿಗೆ ೮.೪೭ ಗ್ರೇನ ಬಂಗಾರವೆಂದು ನಿರ್ಣಯಿಸಿದರು. ಅದೇ ಕಮಿಶನ್ನಿನವರು ಒಂದು ರೂಪಾಯಿಗೆ ೧ ಶಿ. ೬ ಪೆನ್ಸು ಹುಂಡಿಯ ದರವೆಂದು ಗೊತ್ತುಪಡಿಸಿದರು. ಆ ಕಾಲಕ್ಕೆ ಇಂಗ್ಲಂಡಿನಲ್ಲಿ ಸುವರ್ಣ ಪರಿಮಾಣ ಪದ್ಧತಿಯು ಪ್ರಚಾರದಲ್ಲಿದ್ದಿತು. ಬಂಗಾರದಲ್ಲಿ ಪೌಂಡಿನ ಬೆಲೆ ಬಹಳ ಇಳಿದಿದ್ದಿಲ್ಲ. ೧ ಶಿ. ೬ ಪೆನ್ಸಿಗೆ ೮.೪೭ ಗ್ರೇನು ಬಂಗಾರ ದೊರೆಯುತ್ತಿದ್ದಿತು. ಈಗ ಪೌಂಡಿನ ಬೆಲೆಯು

CC-0. Jangamwadi Math Collection. Digitized by eGangotri

ಬಂಗಾರದ ಮಾಪಿನಲ್ಲಿ ಇಳಿದಿದೆ. ಕಾರಣ ೮.೪೭ ಗ್ರೇನು ಬಂಗಾರಕ್ಕೆ ೧ ಶಿ. ೬ ಪೆನ್ನಿಗಿಂತಲೂ ಹೆಚ್ಚು ಹಣ ಕೊಡಬೇಕಾಗುತ್ತದೆ. ಹುಂಡಿಯ ದರದ ಪ್ರಕಾರ ನಮಗೆ ಒಂದು ರೂಪಾಯಿಗೆ ೧ ಶಿ. ೬ ಪೆ. ದೊರೆಯು ವುದು. ೧ ಶಿ. ೬ ಪೆನ್ನಿಗಿಂತಲೂ ಹೆಚ್ಚಿಗೆ ಹಣ ಬೇಕಾದರೆ ನಮ್ಮ ಜೇಬಿನೊಳಗಿಂದ ಒಂದು ರೂಪಾಯಿಗಿಂತ ಹೆಚ್ಚು ಹಣ ತೆಗೆಯಬೇಕಾಗುತ್ತದೆ. ಅರ್ಥಾತ್ ಬಂಗಾರದ ಧಾರಣೆ ಏರುತ್ತದೆ. ಆದುದರಿಂದಲೇ ಪೇಟೆಯಲ್ಲಿ ಬಂಗಾರದ ಧಾರಣೆ ಏರಿದುದನ್ನು ನಾವು ನೋಡುತ್ತೇವೆ. ಹೀಗಾದ ಕಾರಣ ಪೌಂಡಿನ ಬೆಲೆ ಇಳಿಯಿತು. ಮತ್ತು ಕಡಿಮೆ ಬೆಲೆಯ ಪೌಂಡಿಗೂ ರೂಪಾಯಿಗೂ ಸಂಬಂಧ ಕೂಡಿಸುವುದರಲ್ಲಿ ಬಂದಿತು. ಬಂಗಾರದ ಧಾರಣೆ ಏರಿದುದರಿಂದ ಅದರ ಲಾಭ ತಕ್ಕೊಳ್ಳುವುದಕ್ಕಾಗಿ ವರ್ತಕರು ಏರಿಕೆಯ ಧಾರಣೆಯಿಂದ ಬಂಗಾರ ಮಾರಲು ತೊಡಗಿದರು. ಸಪ್ಟಂಬರು ತಿಂಗಳ ಕೊನೆಯೊಳಗೆ ಎಂದರೆ ಒಂದೇ ವಾರದಲ್ಲಿ ಸುಮಾರು ಒಂದುವರೆ ಕೋಟಿ ರೂಪಾಯಿ ಬಂಗಾರವು ರಾವಲಪಿಂಡಿ ಹಡಗಿನಿಂದ ದೇಶ ಬಿಟ್ಟು ಹೋಯಿತು.

ಪೌಂಡಿನ ಬೆಲೆ ಇಳಿದ ಬಗ್ಗೆ ಒಂದು ಉದಾಹರಣೆಯನ್ನು ಕೊಡುತ್ತೇನೆ. ಒಂದು ಪೌಂಡಿನಲ್ಲಿ ೧೧೩ಗ್ರೇನು ಬಂಗಾರ ಇರುತ್ತದೆ. ಒಂದು ಬಂಗಾರದ 'ಡಾಲರ್'ನಲ್ಲಿ ೨೩.೨೨ ಗ್ರೇನು ಬಂಗಾರ ಇರುತ್ತದೆ. ಈ ಎರಡೂ ನಾಣ್ಯಗಳಲ್ಲಿರುವ ಬಂಗಾರದ ಮಾಸದಿಂದ ಅವುಗಳ ನಡುವಿನ ಪ್ರಮಾಣ ಅಥವಾ ಧಾರಣೆ, ಒಂದು ಪೌಂಡಿಗೆ ೪.೮೬ ಡಾಲರ ಇರತಕ್ಕದ್ದು. ಅಂದರೆ ಒಂದು ಪೌಂಡಿಗೆ ೪.೮೬ ಡಾಲರ ದೊರೆಯತಕ್ಕದ್ದು. ಆದರೆ ಈಗ ೩.೬೦ ಡಾಲರ ಮಾತ್ರ ದೊರೆಯುತ್ತವೆ. ಇದರ ಮೇಲಿಂದ ಪೌಂಡಿನ ಧಾರಣೆ ಇಳಿದದ್ದು ಸ್ಪಷ್ಟವಾಗುತ್ತದೆ.

ಹುಂಡಿಯದರವೇನಿರಬೇಕು? ೧ ರೂಪಾಯಿಗೆ ೧ ಶಿ. ೬ ಪೆ. ಇರುವದು ಒಳ್ಳೆತೊ? ೧ ಶಿ. ೪ ಪೆ. ಇರುವುದು ಒಳ್ಳೆತೊ? ಅಥವಾ ಈ ದರವನ್ನು ನಿಶ್ಚಿತವಾಗಿ ಮಾಡದಿರುವುದು ಇಷ್ಟವೋ? ಮುಂತಾದ ವಿಷಯಗಳನ್ನು ಸದ್ಯಕ್ಕೆ ಬದಿಗಿಡುವುದು ಉಚಿತ. ಆದರಿಂದ ಸದ್ಯದ ವಿಷಯದ ತೊಡಕುಗಳು ಹೆಚ್ಚಾಗುತ್ತವೆ.

ಹಿಂದುಸ್ಥಾನ ಸರಕಾರದ ಮುಂದೆ (೧) ರೂಪಾಯಿಗೂ ಪೌಂಡಿಗೂ ಸಂಬಂಧ ಜೋಡಿಸಬೇಕೊ? (೨) ರೂಪಾಯಿಗೂ ಬಂಗಾರಕ್ಕೂ ಇರುವ ಸಂಬಂಧವನ್ನೇ ಸ್ಥಿರಪಡಿಸಬೇಕೊ? ಅಥವಾ (೩) ರೂಪಾಯಿಯ ಸಂಬಂಧವನ್ನು ಯಾವುದಕ್ಕೂ ಜೋಡಿಸದೆ ಹಾಗೆಯೆ ಬಿಡ ಬೇಕೊ? ಎಂಬ ಪ್ರಶ್ನೆಗಳಿದ್ದವು. ಸ್ಟೇಟ್ ಸೆಕ್ರೆಟ ಗಳು ರೂಪಾಯಿಗೂ ಪೌಂಡಿಗೂ ಸಂಬಂಧ ಜೋಡಿಸ ಬೇಕೆಂದು ಹೇಳಿದರು. ಹಿಂದೀ ಮುಂದಾಳುಗಳ ಪೌಂಡಿಗೂ ರೂಪಾಯಿಗೂ ಸಂಬಂಧ ಜೋಡಿಸಬಾ ದೆಂದು ಅಭಿಪ್ರಾಯಪಟ್ಟರು. ರೂಪಾಯಿಯ ಬೆಲೆಯು ಸ್ಥಿರವಾಗಿರಬೇಕು; ಕಾರಣ ಅದನ್ನು ಪೌಂಡಿಗೆ ಜೋಡಿ ಸಬೇಕು; ಎಂಬದಾಗಿ ಕೆಲವರ ಮತ. ರೂಪಾಯಿ ಬೆಲೆಯನ್ನು ಸ್ಥಿರಪಡಿಸುವುದಾದರೆ ಅದನ್ನು ಹೊಯ್ದಾ ಡುವ ಪೌಂಡಿಗೆ ಜೋಡಿಸಿ ಪ್ರಯೋಜನವಿಲ್ಲ. ಇ ಲ್ಲದೆ ಪೌಂಡಿನ ಬೆಲೆ ಇಳಿದುದರಿಂದಲೂ, ಮುಂದೆಯ ಕಡಿಮೆಯಾಗುವ ಲಕ್ಷಣಗಳು ತೋರುತ್ತಿದ್ದುದ ಲೂ, ರೂಪಾಯಿಯನ್ನು ಪೌಂಡಿಗೆ ಜೋಡಿಸುವು ರಿಂದ ಹಿಂದುಸ್ಥಾನಕ್ಕೆ ಹಾನಿಯಾಗುತ್ತದೆ. ಅ ಹೇಗೆ? ೧ ರೂಪಾಯಿಗೆ ೧ ಶಿ. ೬ ಪೆ. ಹುಂಡಿಯ ದ ಇದೆ. ೧ ರೂ. ಕೊಟ್ಟರೆ ನಮಗೆ ೧ ಶಿ. ೬ ಪೆನ್ಸು ದೊ ಯುತ್ತದೆ. ಅಂದರೆ ಈ ಕಾಗದ ತಂದವರಿಗೆ ೧ ಶಿ. ೬ ಪೆ ಕೊಡಬೇಕೆಂಬ ಅಧಿಕಾರಪತ್ರ ದೊರೆಯುತ್ತದೆ. ಆದ ಪೌಂಡಿನ ಧಾರಣೆ ಇಳಿದುದರಿಂದ ೧ ಶಿ. ೬ ಪೆನ್ನಿ ಅಧಿಕಾರ ಪತ್ರಕ್ಕೆ, ಮೊದಲು ೧ಶಿ. ೪ ಪೆನ್ನಿಗೆ ದೊರೆಯು ವಷ್ಟು ಬಂಗಾರ ಈಗ ದೊರೆಯುತ್ತದೆ. ೧ ಶಿ. ೬ ಪೆ. ದೊರೆಯಬೇಕಾದ ಬಂಗಾರ ದೊರೆಯುವದಿಲ್ಲ. ಇಷ್ಟು ನಷ್ಟವು ಪೌಂಡಿಗೂ ರೂಪಾಯಿಗೂ ಜೊತೆ ಕೂಡಿಸು ದರಿಂದ ಆಗುತ್ತದೆ. ಅರ್ಥಾತ್ ಇಳಿತರದ ಪೌಂಡಿ ರೂಪಾಯಿಯ ಸಂಬಂಧ ಜೋಡಿಸಿದುದರಿಂದ ರೂಪಾ ಯಿಗೆ ಕಡಿಮೆ ಬಂಗಾರ ದೊರೆಯುತ್ತದೆ. ಕಾರಣ ಪೌಂಡಿನ ಸಂಗತಿ ಬೇಡವೆಂದು ಹಿಂದೀ ವರ್ತಕ ಕೂಗುತ್ತಾರೆ.

ಪೌಂಡಿಗೂ ರೂಪಾಯಿಗೂ ಸಂಬಂಧ ಜೋಡಿಸು ವುದರಿಂದ ಹಾನಿಯಾಗುತ್ತದೆಂಬುನ್ನು ಎರಡನೆ ದೃಷ್ಟಾಂತ ಕೊಟ್ಟು ಉದಹರಿಸುವಾ.

CC-0. Jangamwadi Math Collection. Digitized by eGangotri

ಒಂದು ಪೌಂಡಿನಲ್ಲಿ ೧೧೩ ಗ್ರೇನು ಬಂಗಾರವೂ ೧ 'ಡಾಲರ'ದಲ್ಲಿ ೨೩.೨೨ ಗ್ರೇನು ಬಂಗಾರವೂ ಇರುತ್ತದೆ. ಒಂದು ರೂಪಾಯಿಗೆ ೮.೪೭ ಬಂಗಾರವೆಂದು ಹಿಲ್ಟನ್ ಯಂಗ್ ಕಮಿಶನ್ನಿನ ನಿರ್ಣಯವು. ಮೇಲಿನ ಕೋಷ್ಟಕದ ಪ್ರಕಾರ ಒಂದು ನೂರು ಡಾಲರುಗಳಲ್ಲಿ ೨೩೨೨ ಗ್ರೇನು ಬಂಗಾರ ಇರುತ್ತದೆಂದಾಯಿತು. ೧೦೦ ಡಾಲರಿನ ಸಾಮಾನನ್ನು ಅಮೇರಿಕೆಯಿಂದ ತರಿಸಬೇಕಾದರೆ ೧ ರೂ. ಗೆ ೮.೪೭ ಗ್ರೇನು ದರದಿಂದ ಸುಮಾರು ೨೭೦ ರೂಪಾಯಿಗಳನ್ನು ಕಳಿಸಬೇಕಾಗುತ್ತದೆ. ಆದರೆ ರೂಪಾಯಿಗೂ ಬಂಗಾರಕ್ಕೂ ಒಂದು ರೂಪಾಯಿಗೆ ೮.೪೭ ಗ್ರೇನು ಬಂಗಾರವೆಂದು ಇದ್ದ ಸಂಬಂಧವನ್ನು ತಪ್ಪಿಸಿ ರೂಪಾಯಿಯ ಸಂಬಂಧವನ್ನು ಪೌಂಡಿಗೆ ಜೋಡಿಸಿದರೆ ಏನಾಗುತ್ತದೆಂಬುದನ್ನು ನೋಡಿರಿ! ಪೌಂಡಿಗೂ ಡಾಲರಿಗೂ ಇರುವ ಸಂಬಂಧವನ್ನು ಮೊದಲು ನಾವು ನೋಡಬೇಕು. ಪೌಂಡಿಗೆ ಕಡಿಮೆ ಡಾಲರುಗಳು ದೊರೆತರೆ ಪೌಂಡಿನ ಸಂಗತಿಯಲ್ಲಿದ್ದ ರೂಪಾಯಿಗೂ ಕಡಿಮೆ ಡಾಲರುಗಳು ದೊರೆಯುತ್ತವೆ. ಒಂದು ನೂರು ಡಾಲರುಗಳ ಸಾಮಾನು ತರಿಸಬೇಕಾದರೆ ನಮಗೆ ೨೭೦ ರೂ. ಗಳಿಗಿಂತ ಹೆಚ್ಚು ರೂಪಾಯಿಗಳು ಬೇಕಾಗುತ್ತವೆ. ರೂಪಾಯಿಯನ್ನು ಪೌಂಡಿಗೆ ತೊಡಕಿಸುವುದರಿಂದ ಪೌಂಡಿಗೆ ರೂಪಾಯಿ ಎಷ್ಟು ಎಂಬುದನ್ನು ಮೊದಲು ನೋಡಬೇಕು. ಬಳಿಕ ಪೌಂಡಿಗೆ ಎಷ್ಟು ಡಾಲರುಗಳು ದೊರೆಯುತ್ತವೆಂಬುದನ್ನು ತಿಳಿದುಕೊಳ್ಳಬೇಕು. ಹೀಗಾಗದೆ ರೂಪಾಯಿಗೂ ಬಂಗಾರಕ್ಕೂ ಸಂಬಂಧವಿದ್ದುದಾದರೆ ರೂಪಾಯಿಗೆ ಇಷ್ಟು ಗ್ರೇನು ಬಂಗಾರವೂ ಡಾಲರಿನಲ್ಲಿ ಇಂತಿಷ್ಟು ಗ್ರೇನು ಬಂಗಾರವೂ ಇರುತ್ತದೆ. ಇಷ್ಟರಿಂದಲೆ ಒಂದು ಡಾಲರಿಗೆ ಎಷ್ಟು ರೂಪಾಯಿ ಎಂಬುದು ಸಹಜವಾಗಿಯೂ ಸುಲಭವಾಗಿಯೂ ಗೊತ್ತಾಗುತ್ತದೆ. ಇಂಗ್ಲಂಡಿನ ಆರ್ಥಿಕ ಸ್ಥಿತಿಯ ಮೇಲೆ ಪೌಂಡಿನ ಬೆಲೆ ಅವಲಂಬಿಸಿದೆ. ಆ ಆರ್ಥಿಕ ಸ್ಥಿತಿಯನ್ನು ನೋಡುತ್ತ ನಾವು ಪರಾವಲಂಬಿಗಳಾಗಿರಬೇಕೋ? ಆದುದರಿಂದಲೇ ರೂಪಾಯಿಯನ್ನು ಪೌಂಡಿಗೆ ಜೋಡಿಸಬಾರದು.

ಇಂಗ್ಲಂಡಿನಲ್ಲಿ ಮುಖ್ಯವಾಗಿ ಬ್ಯಾಂಕ್ ಆಫ್ ಇಂಗ್ಲಂಡಿನಲ್ಲಿ ಬಂಗಾರದ ಸಂಚಯವು ಕಡಿಮೆಯಾದುದರಿಂದ ಮತ್ತು ಬಹಳ ಬಂಗಾರವು ಫ್ರಾನ್ಸ್ ಅಮೇರಿಕೆಗಳಲ್ಲಿ ಸಂಚಿತವಾದುದರಿಂದ ಇಂಗ್ಲಂಡಿಗೆ ಬಂಗಾರದ ಬರಗಾಲ ಬಂದಿತು. ಕಾಂಚನದ ಕೊರತೆಯಾಯಿತು. ಇಂಗ್ಲಂಡಿನ ಮೇಲೆ ಕಠಿಣ ಆರ್ಥಿಕ ಪ್ರಸಂಗ ಬಂದಿತು. ಇದರೊಳಗಿಂದ ಪಾರಾಗಲಿಕ್ಕೆ ಇಂಗ್ಲಂಡಿನಲ್ಲಿಯ ಎಲ್ಲ ಪಕ್ಷಗಳೂ ಪಂಗಡಗಳೂ ಭಿನ್ನ ಭಾವನೆಗಳನ್ನು ಬಿಸಾಟಿ, ರಾಷ್ಟ್ರೀಯ ಸರಕಾರದ ಸ್ಥಾಪನೆಯಾಗದ ಹೊರತು ಗತ್ಯಂತರವಿಲ್ಲೆಂದು ತಿಳಿದು, ಇಂಗ್ಲಂಡಿನಲ್ಲಿ ರಾಷ್ಟ್ರೀಯ ಸರಕಾರದ ಸ್ಥಾಪನೆ ಮಾಡಿದುವು. ಇಂಗ್ಲಂಡಿನ ಬಂಗಾರದ ಬರಗಾಲದಿಂದ ನಾವು ಎಚ್ಚತ್ತು ನಮ್ಮ ಬಂಗಾರವನ್ನು ನಾವು ಕಾದುಕೊಳ್ಳಬೇಕೆಂದು ಅನೇಕ ಹಿಂದೀ ಮುಖಂಡರು ಹೇಳುತ್ತಾರೆ; ಪರದೇಶಗಳಿಗೆ ಹಿಂದುಸ್ಥಾನದಿಂದ ಬಂಗಾರ ಹೋಗದಂತೆ ಕಾಯದೆಯ ನಿರ್ಬಂಧನೆಯಾಗಬೇಕೆಂದು ಸೂಚಿಸುತ್ತಾರೆ. ಆದರೆ ಈ ವರೆಗೂ ಆ ತೆರದ ನಿರ್ಬಂಧನೆಯಾಗಿಲ್ಲ.



CC-0. Jangamwadi Math Collection. Digitized by eGangotri

# ಓಂಕಾರರವರ ಓಲೆ

ಕಳುಹಿಸಿದವರು—ಶ್ರೀ ದೇಶಪಾಂಡೆ ಮನೋಹರರಾಯರು ಬಿ. ಎ.

( ಶ್ರೀಮತ್ ಓಂಕಾರ ಸ್ವಾಮಿಗಳವರು ಸಮ್ಯಗ್ ಜ್ಞಾನಿಗಳು. ಅಜ್ಞಾತವಾಸದಲ್ಲಿಯೂ ಅವರ ಸಮಾಜ-ನಿರೀಕ್ಷಣವು ಸೂಕ್ಷ್ಮವಾಗಿ ನಡೆದಿದೆ. ನನಗೆ ಆಗಾಗ ಬರೆದ ಓಲೆಗಳಲ್ಲಿ ಅದು ಒಡೆದು ಕಾಣುತ್ತಿದೆ. ಇದೊಂದು ಮಾದರಿಯ ಓಲೆ. ಓದುಗರಿಗದು ರುಚಿಸಿದಲ್ಲಿ ಉಳಿದುವುಗಳನ್ನೂ ಪ್ರಕಟಿಸುವೆನು. ನನಗಂತೂ ಅವು ನವಜೀವನವನ್ನೆ ಕೊಟ್ಟಿವೆ. —ಮ. )

## ನಮಗೆ ಬೇಕಾದುದೇನು ?

ಆನಂದಭುವನ
ವಿಜಯಾದಶಮಿ ಶಕ ೧೮-

ಮಗು !

ಮುಂಜಾವಿನಿಂದ ಸಂಜೆಯವರೆಗೆ, ಪ್ರಭವದಿಂದ ಕ್ಷಯದವರೆಗೆ ನಡೆದ ನಮ್ಮ ಹೆಣಗಾಟವು ಏತಕ್ಕಾಗಿ? ಇದರ ಯೋಚನೆಯನ್ನೆಂದಾದರೂ ಮಾಡಿರುವೆಯಾ? ಅಗಾಧವಾದ ಮತಿಸಮುದ್ರವನ್ನು ಕಡೆದು, ಹಿರಿಯರು ಹಲವು ಉತ್ತರರತ್ನಗಳನ್ನು ಹೊರದೆಗೆದಿರುವರು. ಅವುಗಳನ್ನು ಪರೀಕ್ಷಿಸಿ ಅವುಗಳ ನಿಜವಾದ ಬೆಲೆಯನ್ನರಿತುಕೊಳ್ಳುವಾ!

ಇಡೀ ವಿಶ್ವದಲ್ಲಿ ನಡೆದಿರುವ ಹೋರಾಟವು- ಕಳಹವು ಜೀವನಾರ್ಥವಿರುವುದೆಂದು ಕೆಲವರ ಅಭಿಪ್ರಾಯ. 'ಸಬ್‌ಸೆ ಜೀವ ಪ್ಯಾರಾ' ಜೀವಿತವು ಎಲ್ಲಕ್ಕೂ ಪ್ರಿಯತಮವಿರುವುದರಿಂದ ತಾವು ಅನಂತ ಕಾಲದವರೆಗೆ ಬಾಳಬೇಕೆಂದು ಪ್ರತಿಯೊಬ್ಬನಿಗೆನಿಸುವದು ಸಹಜವು. ಆದುದರಿಂದಲೆ ದುರ್ಬಲರನ್ನು ನುಂಗಿ ಪ್ರಬಲರನ್ನು ಪ್ರತಿಕರಿಸುವದು; ವಿವಿಧೋಪಾಯುಗಳಿಂದ ತನ್ನನ್ನು ರಕ್ಷಿಸುವದು. ಪ್ರಾಣಿಗಳ ಈ ಸಹಜವೃತ್ತಿಯನ್ನನುಲಕ್ಷಿಸಿಯೆ 'ಆತ್ಮಾನಂ ಸತತಂ ರಕ್ಷೇದ್ದಾರೈರಪಿ ಧನೈರಪಿ' ಧನ ಕಾಮಿನಿಯರಿಗಿಂತಲೂ ಮೊದಲು ತನ್ನನ್ನು ಕಾಪಾಡತಕ್ಕದ್ದೆಂಬ ಪ್ರತಿವಚನವೂ, 'ಆಪ್ ಡುಬ್‌ಗಯೆ ತೊ ಡುಬ್ಗಯಿ ದುನಿಯಾ' ತಾನು ಮುಳುಗಿದ ಕೂಡಲೆ ಜಗತ್ತು ಮುಳುಗುವುದೆಂಬ ಕಬೀರದಾಸರ ವಚನವು ಒಳಿಕೆಯಲ್ಲಿವೆ. ಜೀವಿತವೇ ಮರಣಕ್ಕಿಂತಲೂ ಮಿಗಿಲಾದದ್ದು. 'ಜೀವಿತಂ ಮರಣಾತ್ ಶ್ರೇಯಃ' ಯಾಕೆಂದು ಬಾಳಿದರೆ ಧರ್ಮದ ಪ್ರಾಪ್ತಿ- 'ಜೀವನ್ ಧರ್ಮಮವಾಪ್ನುಯಾತ್' ಬಾಳು ! ಬೀಳಬೇಡ !! ಎಂದು ವಿಶ್ವಾಮಿತ್ರ ಮಹರ್ಷಿಗಳು ಸಾರಿದುದೂ ಇದಕ್ಕಾಗಿಯೇ! ಜೀವಿತವು ಮನುಜನ ಜೀವಾಳ. ಅದಕ್ಕಾಗಿ ಮನುಷ್ಯನು ಸರ್ವಸ್ವವನ್ನರ್ಪಿಸಲೂ ಸಿದ್ಧನಿರುವನು. ಪ್ರಾಣದ ಮೇಲಿನ ಈ ಅಸೀಮ ಪ್ರೀತಿಯನ್ನು ಕಂಡು ವಿದ್ವಾಂಸರು 'ಜೀವನಾರ್ಥಕಲಹ'ದ ( Struggle for existence ) ಸಿದ್ಧಾಂತವನ್ನು ಸ್ಥಾಪಿಸಿರುವರು.

ಆದರೆ ಪ್ರಪಂಚವನ್ನು ಕೊಂಚ ಬೇರೆ ದೃಷ್ಟಿಯಿಂದ ನಿರೀಕ್ಷಿಸಲು ನಮಗೆ ತೀರ ವಿಪರೀತವಾದ ನೋಟವು ಕಾಣುವದದರಲ್ಲಿ. ನಮ್ಮ ವಿದ್ಯಾರ್ಥಿಗಳ ಜೀವನವನ್ನೇ ನೋಡು ! ಅದರಲ್ಲಿ ನಿನಗೆ ಕಾಣುವದೇನು ? ವ್ಯಸನಗಳ ವಿಲಾಸವೈಪುಲ್ಯಗಳಿಗೂ, ಚಹ ಚುಟ್ಟಗಳ ಚೆಲ್ಲಾಟಕ್ಕೂ ಏನಾದರೂ ಮೇರೆಯಿದೆಯೇ ? ಅಂಗಸಾಧನೆಯಂತೂ ಎಲ್ಲಿ ಅಡಗಿದೆಯೋ ಏನೋ ? ಅದರ ಗುರುತಾದರೂ ಇದೆಯೋ ಇಲ್ಲವೋ ಈ ಮಾರಾಯರಿಗೆ? ಆದ್ದರಿಂದ ಅಪಚನ, ಅಗ್ನಿಮಾಂದ್ಯ, ಮಲಬದ್ಧತೆ- ಇವೇ ಮುಂತಾದ ವಿಕಾರಗಳಿಗೆ ಅವರು ಗುರಿಯಾಗಿರುವರು. ಬಲಕ್ಕಿಂತ ಚೆಲುವಿಗೆ ಮರ್ಯಾದೆ ಹೆಚ್ಚು. ನಿಜವಾದ ಚೆಲುವು ಬಲವನ್ನೇ ಸೇರಿರುವುದು. ಹೆಣವೆಂದಾದರೂ ಶೋಭಿಸುವದೇ ಸಿಂಗಾರದಿಂದ? ಇಂತಹ ವಿಕಟಭಾವಗಳೆಲ್ಲವು ಇವರ ವಿವೇಕಹೀನತೆಯನ್ನೇ ಹೊರಗೆಡಹುತ್ತಿವೆ. ಹೀಗಿರಲು ಬಾಳನ್ನು ಹಾಳು ಮಾಡುವ ಜತೆಗಾರರೊಡನೆ

CC-0. Jangamwadi Math Collection. Digitized by eGangotri

ಇವರ ಜೀವಿತ ಯಾತ್ರೆಯು ಎಷ್ಟು ದಿನ ನಡೆಯುವದು? ಅಕಸ್ಮಾತ್ತಾಗಿ ಅದು ಎಂದು ನಿಂತೀತೆಂಬ ಬಗ್ಗೆ ಏನಾದರೂ ಭರವಸೆಯಿದೆಯೋ? ಆದರೆ ಇದರ ಅರಿವಾದರೂ ಇರಬೇಕವರಿಗೆ? ಇವರು ತಮ್ಮ ನಲಿದಾಟದಲ್ಲಿಯೇ ಮೈಮರೆತಿರುವರು! ಇದೆಂತಹದಯ್ಯಾ ಜೀವನ ಪ್ರೇಮವು?

ಗೃಹಸ್ಥರ ಜೀವನದಲ್ಲಿಯೂ ಇದೇ ಹಾಡು! ಈ ವರ್ಗಕ್ಕೆ ಸೇರಿದ ವಕೀಲ–ವರ್ತಕ–ಮುಂತಾದ ಬಿಳಿ ಛಾಯೆಯವರು ಒಳ್ಳೆಯ ಬುದ್ಧಿವಂತರೆಂದೆನಿಸಲ್ಪಡುತ್ತಾರೆ. ಆದರೆ ದುರುಳರನ್ನು ದಂಡಿಸಿ ದೀನರನ್ನುದ್ಧರಿಸಲೋಸುಗವೇ ದೊರೆಯು ಬುದ್ಧಿಯನ್ನು ದಯೆಪಾಲಿಸಿದ್ದೆಂಬುದನ್ನರಿಯದವರು. ಬಡಜನರ ಅಜ್ಞಾನದ ಬಂಡವಾಳದ ಮೇಲೆ ನಡೆಸಿರುವರು ತಮ್ಮ ಹೊಟ್ಟೆ ಹೊರಕೊಳ್ಳುವ ಕಾರ್ಯವನ್ನು. ಔದಾರ್ಯದಿ ಸದ್ಗುಣಗಳ ಸೋಂಕು ಸಹ ತಗಲುವದಿಲ್ಲ ಈ ಪುಣ್ಯಾತ್ಮರಿಗೆ! ಆಯಾಸವಿಲ್ಲದೆ ಬಂದ ಹಣವನ್ನು ಅನಾಯಾಸವಾಗಿ ಭೋಗಗಳಲ್ಲಿ ಬೀರುವ ಕೆಲಸವೇ ಕೆಲಸ! ಹೀನದೀನರ ನೆತ್ತರದಿಂದ ನೆನೆದ ಹೊನ್ನಿನ ಹೇರಳತೆಯು ವಿಲಾಸಗಳ ರಮಣೀಯತೆಯನ್ನು ತಾಳಿ ಇವರ ರಕ್ತವನ್ನೇ ಹೀರುತ್ತಲಿದೆ. ಈ ಮೇರೆಗೆ ಇಂಥ ಭೋಗರೋಗಿಗಳ ದೇಹದಾರ್ಢ್ಯವೂ ಮನೋಬಲವೂ ಅಳಿದು ಅವರು ಉಬ್ಬಿದ ಹೆಣಗಳನ್ನೇ ವಿಶೇಷವಾಗಿ ಹೋಲುವದರಲ್ಲೇನಾಶ್ಚರ್ಯ? ಇಂಥ ಹೇಡಿ ಹೆಣಗಳು ದುರುಳರ ದಾಳಿಗೆ ತುತ್ತಾದಾಗ ಇವರ ದೈನ್ಯವನ್ನು ದೇವರೇ ಬಲ್ಲ! ಕಾಣುವದೇ ಇಲ್ಲಿ ಜೀವಿತದ ಬಯಕೆ?

ಯಮಧಾಮದ ಹೆದ್ದಾರಿಯ ಮೇಲಿನ ಶಾಂತಿಸದನಗಳಲ್ಲಿ ವಿಶ್ರಮಿಸುತ್ತಿರುವ ಈ ಕುಡುಕ ಕೂಲಿಕಾರರನ್ನು ಕಂಡೆಯಾ? ಹೊಟ್ಟೆಬಟ್ಟೆಗಳಿಗಾಗಿ ಹಗಲಿರುಳು ದುಡಿದು ನಾಲ್ಕಾಣೆಗಳನ್ನು ದೊರಕಿಸುವದು; ಆದರೆ ಹಸಿದ ಹೊಟ್ಟೆಯನ್ನು ತಣಿಸಲು–ದೇಹದ ದಣಿವನ್ನು ಹೊಗಲಾಡಿಸಲು, ಅನ್ನದ ಬಂದು ತುತ್ತನ್ನಾದರೂ ಹಾಕಬೇಕದರಲ್ಲಿ? ಅನ್ನವನ್ನು ಕೊಡುವದಂತೂ ಒತ್ತಟ್ಟಿಗಿರಲಿ, ಈ ಮೂಢರು ಹಸಿದ ಉದರದಲ್ಲಿ ಕೆಂಡದಂತಿರುವ ಸೆರೆ–ಹೆಂಡಗಳನ್ನು ಸುರಿದು ತಮ್ಮನ್ನು ಮತ್ತಿಷ್ಟು ಬಲಹೀನರನ್ನಾಗಿ ಮಾಡಿಕೊಳ್ಳುತ್ತಾರೆ. ಮತ್ತು ತಮ್ಮ ಕೂಡ ತಮ್ಮ ಬಳಗದವರ ಜೀವನರಥವನ್ನು ಕಾಲಪುರುಷನ ಕರಾಲವಾದ ದವಡೆಯಲ್ಲಿ ತೀವ್ರವೇ ನೂಕಿಬಿಡುತ್ತಾರೆ. ಎಂಥ ಆಸ್ಥೆಯಿದು ಜೀವಿತದ ಬಗ್ಗೆ?

ಮೇಲೆ ಕಾಣಿಸಿದ ಜನಸಾಮಾನ್ಯರ ಚಿತ್ರವನ್ನು ಕಂಡರೆ ಜೀವನವು ಮಾನವನ ಜೀವಾಳದ ಗುರಿಯಿದ್ದಂತೆ ತೋರುವದಿಲ್ಲ. ತಿನ್ನಲು ಬಾಳುವ ಧನಿಕನು ಸಾಯಲು ತಿನ್ನುವಂತೆ ತೋರುತ್ತಿದೆ. ಬಾಳಲು ಉಣ್ಣುವ ಮಾತೇ ಬೇಡ! ಏನು? ನಾವು ಬಾಳುವದರೋಸುಗ ಹೋರಾಡುತ್ತಿರುವೆವೊ? ಬಾಳುವ ಸಲುವಾಗಿ ನಾವು ಇದುವರೆಗೆ ಮಾಡಿದ್ದೇನು? ನಾವು ನಮ್ಮ ಆರೋಗ್ಯವನ್ನು ಕಾದುಕೊಂಡಿರುವೆವೊ? ನಮ್ಮ ದೇಹವು ನಮ್ಮನ್ನು ಕಾಪಾಡಬಲ್ಲದೊ? ಉಂಡ ತಿಂಡಿಯನ್ನು ನಾವು ಕರಗಿಸಲಾರೆವು! ಆ ಮೇಲೆ ಏರಿ ಬಂದ ಪುಂಡರ ರುಂಡವನ್ನು ಹಾರಿಸುವದೆಂತು? ಮತ್ತು ನಮ್ಮ ಹಾಗೂ ನಮ್ಮ ಬಾಂಧವರ ರಕ್ಷಣೆಯನ್ನು ಮಾಡುವದೆಂತು? ಸಂಘಶಕ್ತಿಯಾದರೂ ಇದೆಯೋ ನಮ್ಮಲ್ಲಿ? ಅದೂ ಇಲ್ಲ. ನಮ್ಮೆದುರಿಗೆ ಪುಂಡರು ನಮ್ಮ ಬಾಂಧವರ ಮೇಲೆ ಸಾಗಿಹೋಗುತ್ತಾರೆ– ಅವರನ್ನು ಕ್ರೂರತನದಿಂದ ಕೊಲ್ಲುತ್ತಾರೆ. ಆದರೆ ನಾವು ಹೇಡಿ–ಹೆದರಿಕೆಗೆ ಈಡಾಗಿ ಹೆಣಗಳಂತೆ ಇದ್ದಲ್ಲಿಯೇ ನಿಲ್ಲುತ್ತೇವೆ! ನಮ್ಮ ಕಲ್ಲೆದೆಯು ಎಳ್ಳಷ್ಟೂ ಕರಗುವದಿಲ್ಲ–ಮರಗುವದಿಲ್ಲ! ಮಗು, ಎಲ್ಲಿದೆ ಬಾಳುವೆಯ ಬಯಕೆ? ಜೀವಿಸುವದೆಂದರೆ ಅದೊಂದು ಸಾಮಾನ್ಯ ಸಂಗತಿಯೆಂದು ತಿಳಿಯಕೂಡದು. ಅದರ ಸಲುವಾಗಿ ಸಾವನ್ನಪ್ಪಿಕೊಳ್ಳಲು ಸಿದ್ಧನಾಗಬೇಕಾಗುತ್ತಿದೆ. ಸಾವಿಗೆ ಹೆದರುವ ಹೇಡಿಗಳನ್ನು ಬಾಳಗೊಡುವವರಾರು ಈ ಜಗತ್ತಿನಲ್ಲಿ? ಸಾವಿನ ಸಿದ್ಧತೆಯನ್ನು ಮಾಡಿದ ಜನಾಂಗಗಳೇ ಇನ್ನೂವರೆಗೆ ಜೀವದಿಂದಿವೆ. ಎಲ್ಲಿದೆ ಮರಣದ ಸಿದ್ಧತೆಯು ನಮ್ಮಲ್ಲಿ? ಹಾಗಾದರೆ ನಮಗೆ ಬೇಕಾದದ್ದೇನು? ಓಂ! ಓಂ!!

ನಿನ್ನ
ಕಲ್ಯಾಣವನ್ನು ಬಯಸುವ
**ಓಂ**

CC-0. Jangamwadi Math Collection. Digitized by eGangotri

# ೨೪—೨—೩೦

ಕತೆಗಾರರು—ಶ್ರೀ ಜಿ. ಪಿ. ರಾಜರತ್ನಂ, M. A., ಮೈಸೂರ

೨-೨-೩೦

"ಹೆಣ್ಣಿನಿಂದ ಮಾನವನಿಗೆ ಎಂದೂ ತೊಂದರೆಯು. ಅವಳು ಚೆಲುವೆಯಾದರೆ, ಅವಳನ್ನು ಪಡೆಯಬೇಕೆಂಬಾಸೆಯನ್ನು ಇತರರಲ್ಲಿ ಉಂಟು ಮಾಡುವಳು; ಅವಳ ಗಂಡನು ಪ್ರೇಮ ಸಂಶಯಕ್ಕೆ ಸಿಲುಕುತ್ತಾನೆ; ಅವಳು ಕುರೂಪಿಯಾಗಿದ್ದರೆ, ಅವಳ ಗಂಡನು ಇತರರನ್ನು ನೋಡಿ ಅಸೂಯೆ ಪಟ್ಟು, ಆ ಅಸೂಯೆಯಿಂದ ತೊಂದರೆಬೀಳುತ್ತಾನೆ. ಒಂದು ವೇಳೆ ಅವಳು ಸುರೂಪಿಯೂ ಅಲ್ಲದೆ, ಕುರೂಪಿಯೂ ಅಲ್ಲದಿದ್ದಲ್ಲಿ ಪುರುಷನು ಅವಳು ಸುಂದರಿಯೆಂದು ಭಾವಿಸಿಕೊಂಡು, ತಾನು ತಪ್ಪು ಮಾಡಿರುವೆನೆಂದು ತಿಳಿದುಕೊಂಡು, ಅದಕ್ಕಾಗಿ ಒದ್ದಾಡುತ್ತಾನೆ. ಇಷ್ಟೆಲ್ಲ ಒಬ್ಬ ಹೆಂಗಸಿನಿಂದ."

ಗಾರ್ಕಿ

ನನಗೆ ಮದುವೆಯಾಗಿ ಇಂದಿಗೆ ಸರಿಯಾಗಿ ಎರಡು ವರ್ಷ ಆಯಿತು. ಈ ಎರಡು ವರ್ಷ ಪ್ರತಿ ದಿನವೂ ನನ್ನ ಮನಸ್ಸಿನಲ್ಲಿ ಏನು ಹೊಳೆಯುತ್ತಿತ್ತು ಅದನ್ನೇ ಈ ಗಾರ್ಕಿಯೂ ಹೇಳಿದ್ದಾನೆ. ಆದರೆ ನಾನು ಸರಸ್ವತಿಯನ್ನು ಪ್ರೀತಿಸದಿರುವುದು ಯಾರ ತಪ್ಪು? ನನ್ನದೆ? ತಾಯಿಗಾಗಿ ಸಮ್ಮತಿಸಬೇಕಾಯಿತು. ಅಪ್ಪ ಸತ್ತು ಮೂರು ವರ್ಷವಾಗಿತ್ತು. ನನಗೆ ಕೆಲಸವಾಗಿ ಆರು ತಿಂಗಳವಾಗಿತ್ತು. ಅಮ್ಮ ಈ ಮದುವೆ ಏರ್ಪಡಿಸಿದಳು. ಅವಳ ಮಾತಿಗೆ ಬದಲು ಹೇಳುವ ಧೈರ್ಯ ಇರಲಿಲ್ಲ. ಅದಕ್ಕಾಗಿ, ಗಂಡಸಿಲ್ಲದ ಹೆಂಗಸಾದ ನನ್ನ ತಾಯನ್ನು ತೃಪ್ತಿಪಡಿಸುವುದಕ್ಕಾಗಿ ನಾನು ಈ ಮದುವೆ ಮಾಡಿಕೊಂಡುದಕ್ಕೆ ಈಗ ಅನುಭವಿಸಬೇಕೇ! ಅವಳಿಗೆ ನಾನೂ ವ್ಯತಿರಿಕ್ತವಾಗಿ ನಡೆದಿದ್ದರೆ—ಅವಳಿಗೆ ಹಿತಚಿಂತಕರು ಯಾರು? ಇದ್ದವನೊಬ್ಬ ಮಗ. ಒಪ್ಪಬೇಕಾಯಿತು. ನನಗಾಗಲಿ ಸರಸ್ವತಿಗಾಗಲಿ ಈ ಮದುವೆಯಿಂದ ಏನು ಸುಖ? ಅವಳೇನೊ ಮನಃಪೂರ್ವಕ ನನ್ನನ್ನು ಪ್ರೀ[...] ಸುತ್ತಾಳೆ. ಆದರೆ ನಾನು ಪ್ರೀತಿಸಲಾರೆ. ಪ್ರೀತಿ[...] ಬೇಕು—ಗೊತ್ತು—ಆದರೆ ಅಯ್ಯೋ! ಅವಳನ್ನು ನೋ[...] ದರೆ ಹೆಂಚಿಕಡ್ಡಿಗೆ ಸೀರೆ ಸುತ್ತಿದಂತಿದೆ. ಗೆದ್ದ[...] ತಿಂದ ಪುಸ್ತಕದ ಹಾಗಿದೆ ಅವಳ ಮುಖ. ತುಟಿ—ಅಬ್ಬಾ! ಆದರೆ ಅದು ಅವಳ ತಪ್ಪೆ? ನಾನು ಕಂಡೂ ಕಂಡ[...] ತಾಯತೃಪ್ತಿಗಾಗಿ ಮಾಡಿಕೊಂಡೆ. ಮಾಡಿಕೊಂಡುದಕ್ಕೆ ಪ್ರೀತಿಸಬೇಕು. 'ಈಸಬೇಕು ಇದ್ದು ಜೈಸಬೇಕು!' ದೇವರೆ ನನಗೆ ಧೈರ್ಯ ಕೊಡಬೇಕು.

೩-೨-೩೦

ಈ ದಿನ ಮಾವನವರಿಂದ ಕಾಗದ ಬಂತು. ಇದೇ ತಿಂಗಳು ೨೪ ಕ್ಕೆ ನಮ್ಮ ಶಾಂತಿಪ್ರಸ್ತ ನಿಷ್ಕರ್ಷೆಯಾಗಿ[...] ಯಂತೆ! ಅಮ್ಮನಿಗೋ ಹಿಡಿಸಲಾರದ ಸಂತೋಷ. ನನ್ನ ಒಳಗುದಿ ಯಾರಿಗೆ ಹೇಳಲಿ! ಜನರು ನನ್ನ ಗೆಲು[...] ಮುಖ ಕಂಡು 'ಇವನಿಗೇನಪ್ಪ ರಾಜ' ಎನ್ನುತ್ತಾ[...] ನನ್ನ ಸಂಕಟ ತೋಡಿಕೊಂಡರೆ ಯಾವ ಮಗ ನನ[...] ಸಹಾಯವಾಗಿ ನನ್ನ ಸಂಕಟನಿವಾರಣೆ ಮಾಡುವವನು[...] ಇವರೆಲ್ಲ ಮಾಡುವುದೆಂದರೆ 'ಅಯ್ಯೋ ಪಾಪ' ಎಂದಾರು[...] ಈ ಅಯ್ಯೋಪಾಪದಿಂದ ನನ್ನ ಬೇಗೆಯುಡುಗುವುದಾ[...] ಬೇಕಾದಷ್ಟು ಗೋಳಾಡುತಿದ್ದೆ.

ಆಗಬಹುದೆಂದು ಮಾವನವರಿಗೆ ಮರುಮಾತು ಬರೆ[...] ೨೪ ರ ನೆನಪು ಬಂದು ಅನ್ನ ಸಹ ಸೇರಲಿಲ್ಲ. ಅಮ್ಮ[...] ಎಂದಳು—ನನಗೆ ಸಂತೋಷವುಕ್ಕುತ್ತಿರುವಾಗ ಅನ್ನ[...] ವೆಲ್ಲಿ ಬೇಕಾಗುವುದೆಂದು. ಪಾಪ! ಅವಳ ನಂಬಿಗನನ್ನು[...] ನಾನೇಕೆ ಚೆದರಿಸಬೇಕು..... ನಾನು ಮಾಡು[...] ಗುಮಾಸ್ತೆಗಿರಿಯು ನನಗೆ ಸಂತೋಷವೆ? ಇಲ್ಲ—ಅದ[...]

CC-0. Jangamwadi Math Collection. Digitized by eGangotri

ನಾನು ಹೊಟ್ಟೆ ತುಂಬಲು ಮಾಡಬೇಕಾದ ಕರ್ತವ್ಯ. ಹಾಗೆಯೇ ನಾನು ಈಗ ಒಪ್ಪಿದುದೂ ಮದುವೆಯಾದುದಕ್ಕಾಗಿ ಮಾಡಬೇಕಾದ ಕರ್ತವ್ಯ.

ಬಲ್ಲವ ಬಲ್ಲ ಬೆನ್ನಿನ ಬಿಗಿತ!

ಅಯ್ಯೋ! ನಾನು ಮದುವೆ ಮಾಡಿಕೊಳ್ಳದಿದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಅದಕ್ಕಿಂತ ನನ್ನ ತಂದೆಗೇ ಮದುವೆಯಾಗದಿದ್ದಿದ್ದರೆ—!

೪-೨-೩೦

ಈ ದಿನ ಬೆಳಿಗ್ಗೆ ರೂಂನಲ್ಲಿ ಕುಳಿತು ಬೀದಿಯಲ್ಲಿ ಕೊಳದ ಕಡೆಗೆ ನೀರಿಗೆ ಹೋಗುವ ಹೆಂಗಸರನ್ನು ಕಂಡೆ. ಆ ಮಯೂರಾ ಕಲರ್ ಸೀರೆಯವಳು! ನನಗೆ ಅವಳನ್ನು ಮದುವೆಯಾಗುವ ಯೋಗವಿದ್ದಿದ್ದರೆ! ಆ ೨೪ ಇಂದೇ ಬರಬಾರದೇ! ಬದುಕು ಎಷ್ಟು ಸವಿಯಾಗಿರುತ್ತಿತ್ತು!

ಛೆ! ನಾನು ಮದುವೆಯಾದವನು. ೨೪ ರಿಂದ ಅವಳೊಡನೆ ಸಂಸಾರ ಮಾಡಬೇಕು. ಬೀದಿಯ ಹೆಂಗಸರ ಮೇಲೆ ನಾನು ಕಣ್ಣು ಹಾಕುವುದೆ? ಎಂತಹ ಕೆಲಸ! ಇದು ಪಾಪ! ನಾನು ಹೀಗೆ ಮಾಡಿದರೆ ನನ್ನ ಹೆಂಡತಿಯೇಕೆ ಬೇರೆಯವರನ್ನು ನೋಡಬಾರದು? ಅದೂ ಪಾಪ! ಇಷ್ಟಕ್ಕೂ ಅವಳ ರೂಪಿಗೆ ಮೆಚ್ಚುವವರಾರು?

ಅಯ್ಯೋ! ಏನಿದೀ ಹಾಳು ಯೋಚನೆಗಳು! ಈಚೆಗೆ ಏಕೆ ಹೀಗಾಯ್ತು ನನ್ನ ಮನಸ್ಸು! ಕೈ ಹಿಡಿದವಳನ್ನು ತೃಪ್ತಿಪಡಿಸಬೇಕಾದುದು ನನ್ನ ಕರ್ತವ್ಯ—ಯಾವ ಕರ್ತವ್ಯಕ್ಕೆ ಶರಣಾಗಿ ತಾಯ ಮಾತಂತೆ ಮದುವೆಯಾದೆನೋ ಅದೇ ಕರ್ತವ್ಯ. ಆದರೇನು ಮಾಡಲಿ? ಅವಳನ್ನು ಪ್ರೀತಿಸಲಾರೆ. ಅವಳ ನೆನಪು ಬಂದಾಗಲೆಲ್ಲ ತಣ್ಣನೆಯ ಬೆವರು ಬಸಿಯುತ್ತದೆ. ಪ್ರೀತಿಸಬೇಕು—ಪ್ರೀತಿಸಬೇಕು—ಹೌದು ಅರಿವುಂಟು.... ಆದರೆ ಪ್ರೀತಿಸಲಾರೆ....

ಪ್ರೀತಿ........! ೨೪!........ ಅಯ್ಯೋ ದೇವರೆ!

೫-೨-೩೦

ನೆನ್ನೆ ರಾತ್ರೆ ಒಂದು ಕನಸು. ನನ್ನ ಬದುಕಿಗೂ ಅದಕ್ಕೂ ಏನಾದರೂ ಸಂಬಂಧವುಂಟೆ? ಏನೊ!

ಯಮುನಾತೀರಕ್ಕೆ ಹೋಗಿದ್ದೆ. ಅಲ್ಲಿ ಹದಿನಾರು ಸಾವಿರ ಗೋಪಿಯರೊಡನೆ ಕೃಷ್ಣ ರಾಸವಾಡುತ್ತಿದ್ದ. ಗೋಪಿಯರ ರೂಪು ಕಂಡು, ಉನ್ಮತ್ತನಾಗಿ, ಅವರೆಡೆಗೋಡಿ, ನಡುವಿನ ಕೃಷ್ಣನನ್ನು ಸೆಳೆದು ಯಮುನೆಗೆಸೆದೆ. ಅವನು ಮುಳುಗಿದ ಸ್ಥಳದಲ್ಲಿ ದೊಡ್ಡದೊಂದು ಗುಳ್ಳೆ ಎದ್ದು ಸಿಡಿಯಿತು. ಗೋಪಿಯರೆಲ್ಲ ನನ್ನ ಸುತ್ತ ಒಲಿದು ಬಂದರು. ಅಷ್ಟರಲ್ಲಿ ಕಮಲಗಳ ನಡುವೆ ನೆಗೆದ ಬರಲಿ ಕಡ್ಡಿಯಂತೆ ಆ ಗೋಪಿಯರ ನಡುವೆ ಸರಸ್ವತಿ ಬಂದು ನನ್ನನ್ನು ತನ್ನೆಡೆಗೆ ಬೇಡಿದಳು. ನನಗೆ ರೇಗಿತು. ಕೃಷ್ಣನನ್ನು ಒಗೆದಂತೆಯೇ ಅವಳನ್ನೂ ಹೊಳೆಗೊಗೆದೆ. ಮುಳುಗಿದವಳು ಮೇಲೇಳಲಿಲ್ಲ. ಮರಳಿ ಬಂದು ಗೋಪಿಯರೊಡನೆ ನಲಿದೆ.

ಬೆಳಗಿನವರೆಗು ಇದೇ ಕನಸು. ಇದರರ್ಥವೇನೊ? ಸರಸ್ವತಿ ಸಾಯುವಳೆ? ಛೆ! ನಾನು ಅಂತಹದನ್ನು ಯೋಚಿಸಬಹುದೆ! ನನ್ನ ಹೆಂಡತಿ—ಏನೇ ಆದರೂ ನನ್ನ ಹೆಂಡತಿ. ಆದರಯ್ಯೋ! ಪ್ರೀತಿಸಲಾರೆ.... ಸಾಧ್ಯವಿಲ್ಲ.... ಏನು ಹೆಂಡತಿಯೊ! ದೇವರೆ! ನನಗಿದರಿಂದ ಪಾರು ಎಂದಿಗೋ!

೬-೨-೩೦

ಈ ದಿನ ಯಶೋಧರಚರಿತ್ರೆ ಓದಿದೆ. "ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್." ಪೊಲ್ಲಮೆಯಿದ್ದರೂ ನಲುಮೆ ಹುಟ್ಟುವುದೊ—ಅಥವಾ—ನಲುಮೆಯಿದ್ದಲ್ಲಿ ಪೊಲ್ಲಮೆಯು ಕಾಣಿಸುವುದಿಲ್ಲವೊ? ಯೋಚಿಸಲಾರೆ—ಮೆದುಳು ಕುದಿಯುತ್ತದೆ. ಯೋಚಿಸಿದರೆ ತಾನೆ ಏನು-ಸಾವು ಬರುವತನಕ ನಮ್ಮಿಬ್ಬರಿಗು ಬಿಗಿದ ಗಂಟು ಈ ಯೋಚನೆಗಳಿಗೆ ಬಿಚ್ಚುವುದೆ! ಅಯ್ಯೋ! ಅಮ್ಮನ ತೃಪ್ತಿಗಾಗಿ—ಬಂತಲ್ಲ ೨೪—!

ಅದೇ ಯಶೋಧರಚರಿತೆಯಲ್ಲಿ ಕಂಡೆ. "ತೀರದು ದಕ್ಕಲವರಲಾಗದು." ಸಂಕಲ್ಪ ಒಳ್ಳೆಯದು. ಮದುವೆಯಾದ ನನಗೆ ಇರುವ ಹೆಂಡತಿಯನ್ನು ಬಿಡುವ ಯೋಚನೆಯೇಕೆ? ಬೇರೆ ಹೆಂಗಸರ ಬಯಕೆಯೇಕೆ? "ತೀರದುದಕ್ಕಲವರಲಾಗದು."

ಹೇಳುವುದು ಸುಖ. ಬೇರೆ ಹೆಂಗಸರನ್ನು ಕಂಡ ಕ್ಷಣ ಹಿಂದಿನ ಸಂಕಲ್ಪಗಳೆಲ್ಲ ಮಾಯವಾಗುತ್ತವೆ. ನಾನು ಹಿಂದಿನ ಗುಂಡನಲ್ಲ. ನನಗೇನು ಬಂದಿದೆಯೊ ಕೇಡುಗಾಲ!

೧೫-೨-೩೦

ಈ ಹತ್ತು ದಿನಗಳಲ್ಲಿ ಮಹಾತ್ಮಾಜೀಯವರ ಆತ್ಮಕಥೆಯನ್ನು ಎರಡು ಬಾರಿ ಓದಿದೆ. ಮನಸ್ಸಿಗೆ ಶಾಂತಿ ಮರಳಿತು. ಮತ್ತೆಯೂ ಓದಬೇಕು. ಏನೇ ಆಗಲಿ—



CC-0. Jangamwadi Math Collection. Digitized by eGangotri

ಸರಸಿ ನನ್ನ ಹೆಂಡತಿ. ನನ್ನನ್ನವಳು ಪ್ರೀತಿಸುತ್ತಾಳೆ. ನಾನು ಅವಳನ್ನು ಪ್ರೀತಿಸಲೇಬೇಕು. ಅವಳ ಕುರೂಪ ದಲ್ಲಿಯೆ ಸುರೂಪ ಕಾಣುತ್ತೇನೆ. ಪ್ರೀತಿಸಿಯೇ ಪ್ರೀತಿಸು ತ್ತೇನೆ. ಈಗ ಅವಳನ್ನು ನೆನೆದರೆ ಮೈಯಲ್ಲೊಂದು ತರಹ ಹಿತಕರವಾದ ಜುಮ್ಮುಂಟಾಗುತ್ತದೆ. ಅವಳ ಹೆಸರಿನಲ್ಲಿ ಏನೋ ಮಂತ್ರವಿರುವಂತಿದೆ. ಸ-ರ-ಸಿ! ಏನು ಮೋಹನದ ಹೆಸರು!

ನನಗೀ ವಿವೇಕೋದಯಕ್ಕೆ ಕಾರಣನಾದ ಮಹಾತ್ಮ ನಿಗೆ ಎಷ್ಟು ಎರಗಿದರೂ ತೀರದು. ಸರಸಿಗೆ ಒಂದು ಪ್ರೇಮಪತ್ರ ಬರೆದೆ. ಚೆನ್ನಿಗೆ ಎಷ್ಟು ಸಂತೋಷವಾಗು ತ್ತದೊ! ಸದ್ಯ ನನ್ನ ಸಂಕಟ ದೂರಾಯಿತು. ದೇವರು ಮಹಿಮಾಸಮುದ್ರನು! ಈ ಹತ್ತು ದಿನಗಳಲ್ಲಿ ಪರ ಸ್ತ್ರೀಯ ಚಿಂತೆ ಬಂದಿಲ್ಲ. ಪರಸ್ತ್ರೀ! ಏಕೆ? ನನ್ನ ಹೆಂಡತಿ-ಥು! ಸರಸಿ ಚೆಲುವೆ. ಹಾ! ೨೪—!

ಹಾಳು ಕನಸುಗಳೂ ಇಲ್ಲ.

೧೬-೨-೩೦

ಇಂದು ಗುರುಗಳ ಮನೆಯಲ್ಲಿ ರಾಮಪಟ್ಟಾಭಿಷೇಕ. ಕರೆದಿದ್ದರು: ಹೋಗಿದ್ದೆ. ಕಳೆಯಿತೆಂದಿದ್ದ ಪೀಡೆ ಬಿಟ್ಟಿಲ್ಲ ಏನ್ನೂ. ರಾಮೋತ್ಸವ ಸಂಭ್ರಮದಲ್ಲಿ ಓಡಾಡುತ್ತಿದ್ದ ನಿರಿಸೀರೆಯಾಕೆಯ ಮೇಲೆ ಹಗಲೆಲ್ಲ ನನ್ನ ಕಣ್ಣಿತ್ತು. ನೋಡದಿರಲಾಗಲಿಲ್ಲ. ಅವಳನ್ನು ನೋಡುತ್ತಿದ್ದಷ್ಟು ಹೊತ್ತೂ, ಸರಸ್ವತಿಗಿಂತ ಅವಳನ್ನು ಮದುವೆಯಾಗಿದ್ದರೆ ಎಂದೆನಿಸುತ್ತಿತ್ತು. ನನಗೆ ಇನ್ನು ಮೇಲೆ ಮೇಲಿಲ್ಲ. ಅವಳು—ಅವರು ನನ್ನ ಗುರುಗಳಾಕೆ! ದೇವರೆ! ನಿನ್ನ ಸೇವೆಗೆ ಬಂದರೂ ನನಗೆ ಈ ಕೋಟಲೆಯಿಂದ ಮುಕ್ತಿ ಯಿಲ್ಲವೆ! ಗುರುಪತ್ನಿಗಾಶಿಸಿದ ಚಂದ್ರನೇನಾದ!

ಇದು ಹೀಗೆಯೆ ಇದ್ದರೆ—ಖಂಡಿತ ನನಗೆ ಹುಚ್ಚು ಹಿಡಿಯುತ್ತೆ. ಇಲ್ಲ ಸಹಿಸಲಶಕ್ಯವಾದರೆ ಉರುಲು ಹಾಕಿ ಕೊಳ್ಳುತ್ತೇನೆ. ದೇವರು ಮನುಷ್ಯನನ್ನಿಷ್ಟು ಪರೀಕ್ಷೆ ಮಾಡಬಾರದು. ಅಯ್ಯೋ! ನೆನ್ನೆಯ ಸಂಕಲ್ಪಗಳೇ!

೧೭-೨-೩೦

ನೆನ್ನೆ ರಾತ್ರಿ ಮತ್ತೆ ಹಿಂದಿನಂತೆಯೆ ಕನಸು. ಆದರೆ ಕೃಷ್ಣನಿರಲಿಲ್ಲ. ಸರಸ್ವತಿಯೂ ಬರಲಿಲ್ಲ. ಗೋಪಿಯ ರೊಡನೆ ಕುಣಿಯುತ್ತಿದ್ದಾಗ ರಾಧೆ ಹತ್ತಿರ ಬಂದು ಮುತ್ತ ಕೋರಿದಳು. ಅವಳನ್ನು ಅಪ್ಪಿದೆ. ರಾಧೆಯೆಂದು ನಾನು ಅಪ್ಪಿದುದು ಒಂದು ಪಾಪಾಸುಕಳ್ಳಿಪೊ[illegible] ಅಯ್ಯೋ! ಈ ಕನಸುಗಳಿಗೆ ಕೊನೆ ಎಂದೋ!

ಮಧ್ಯಾಹ್ನ ಕನ್ನಂಬಾಡಿಗೆ ಹೋಗಿದ್ದೆ. ಇವ[illegible] ಕ್ಯಾನೆಲ್‌ನಲ್ಲಿ ನೀರು ಬಿಟ್ಟರು. ಪ್ರವಾಹದಂತಿ[illegible] ನೋಡುತ್ತ ತಿರುಗಿದೆ. ನನ್ನ ಪಕ್ಕದಲ್ಲಿ ಹದಿನೇ[illegible] ಪ್ರಾಯದ ಹುಡುಗಿಯೊಬ್ಬಳು ನಿಂತಿದ್ದಳು. ಒಳ್ಳೆ[illegible] ತುಂಬು ದೇಹ. ಜುಮ್ಮೆಬ್ಬಿಸುವ ಮೈಕಟ್ಟು. ಸ[illegible] ತಿಯ ನೆನಪಾಗಿ, 'ಸರಸ್ವತಿಯ ಬದಲು ಈ ಹುಡು[illegible] ನನ್ನವಳಾಗಿದ್ದಿದ್ದರೆ' ಎಂದುಕೊಂಡೆ.

ಆ ಹುಡುಗಿಯನ್ನು ಕಂಡು ನನಗೆ ಮದುವೆಯಾ[illegible] ಯೆಂಬ ನೆನಪು ಅಳಿಯಿತು. 'ಈ ಹುಡುಗಿ ಈ ಪ್ರವಾ[illegible] ದಲ್ಲಿ ಬಿದ್ದರೆ—ನೋಡುತ್ತ ನೋಡುತ್ತ ಬಿದ್ದರೆ, ನಾ[illegible] ಬಿದ್ದು ಅವಳನ್ನು ಮೇಲಕ್ಕೆತ್ತುತ್ತೇನೆ. ನಾವಿಬ್ಬ[illegible] ಒಂದೇ ಜಾತಿ. ನಮ್ಮಿಬ್ಬರಿಗೂ ಮದುವೆಯಾಗುತ್ತ[illegible] ಆ ಮೇಲೆ ೨೪ ನೆಯ ತಾರೀಖು....'

ಅಷ್ಟರಲ್ಲೆ ಹಗಲ ಕನಸು ಚೆದರಿತು. ನಾ[illegible] ಯಾಯಿತು. ಹಿಂದಿರುಗಿದೆ.

ನಾನು ಮದುವೆಯಾದವನು ಪರಸ್ತ್ರೀಯರನ್ನು [illegible] ಸುವುದೆಂದರೇನು! ನನ್ನ ಹೆಂಡತಿಗೆ ನನ್ನ ಪ್ರೀ[illegible] ಮೊಡಲು ಸಲ್ಲತಕ್ಕದ್ದು. ಸರಸ್ವತಿಯನ್ನು ನಾನು ಪ್ರೀತಿ[illegible] ಬೇಕು. ಪ್ರಾಣ ಹೋದರೂ ಸರಿಯೆ—ಇಲ್ಲದ ಪ್ರೀ[illegible] ಯನ್ನು ಅಗಿಸಬೇಕು. ಕಂಡ ಕಂಡ ಹೆಂಗಸರನ್ನ[illegible] ಬಯಸಲು ನನಗೇನಾದರೂ ಮೆದಳು ಕೆಟ್ಟಿದೆಯೆ? [illegible] ಇಲ್ಲ. ೨೪ ನೆಯ ತಾರೀಖು ಇಂದೇ ಬಂದರೆ, ಯಾವು[illegible] ಹೆದರುವೆನೋ ಅದು ಬೇಗ ತೊಲಗಿದರೆ—ದೇವರೆ! [illegible] ದಂತೆ ಈ ಹೊತ್ತೂ ಬೇಡುವೆನು. ನನ್ನ ಹೆಂಡತಿ[illegible] ನನಗೆ ಪ್ರೀತಿಯುಂಟಾಗುವಂತೆ ಕರುಣಿಸು.

೧೮-೨-೩೦

ರಾಮು ಹೆಂಡತಿ ರುಕ್ಕು ಜಾಣೆ, ಚೆಲುವೆ. ಸರ[illegible] ಹಳ್ಳಿಗೊಡ್ಡು, ಕುರೂಪಿ. ಏನಾದರೂ ರೋಗ ಬ[illegible] ರಾಮು ಸರಸ್ವತಿ ಇಬ್ಬರೂ ಸತ್ತರೆ, ರುಕ್ಕುಗೆ ಗಂಡ[illegible] ವುದಿಲ್ಲ—ನನಗೆ ಹೆಂಡತಿ ಇರುವುದಿಲ್ಲ. ನಾವಿಬ್ಬ[illegible] ಮದುವೆಯಾದರೆ....೨೪ನೆಯ ತಾರೀಖು....ಆದರೆ ರು[illegible] ಅವಳ ತಂದೆ ತಾಯಿಗಳು ವಿಧವಾ ವಿವಾಹಕ್ಕೆ[illegible] ಬೇಕು. ಒಪ್ಪಿದ....

CC-0. Jangamwadi Math Collection. Digitized by eGangotri

ಅಯ್ಯೋ! ಏನಿದು ಅನ್ಯಾಯ ನಾನು ಚಿಂತಿಸುವುದು! ಮಿತ್ರದ್ರೋಹ! ಅವನು ಸಾಯುವುದಲ್ಲದೆ ಅವನ ಹೆಂಡತಿ – ಅಯ್ಯೋ! ನನಗಿನ್ನು ಉದ್ಧಾರವಿಲ್ಲ. ಸರಸ್ವತಿ ಸಾಯಬೇಕೆಂದೆನೇ! ಕೊಲೆಪಾತಕನಾದೆನೇ! ಇಲ್ಲ. ಖಂಡಿತ ನನಗೆ ಹುಚ್ಚು ಹಿಡಿಯುತ್ತೆ. ಅಮ್ಮನಿಗೆ ತೃಪ್ತಿ.... ೨೪ನೆಯ ತಾರೀಖು.... ಏನು ತೃಪ್ತಿಯೋ....

೧೯–೨–೩೦

ನೆನ್ನೆ ರಾತ್ರೆ ಮತ್ತೆ ಹಾಳು ಕನಸು. ಹದಿನಾರು ಸಾವಿರ ಗೋಪಿಯರೊಡನೆ ಯಮುನಾತೀರವಿಹಾರಿ ಯಾಗಿದ್ದೆ. ರಾಧೆಯು ಬಂದು ಬಂದು ಕೊಳಲನ್ನು ನನ್ನ ಕೈಯಲ್ಲಿಟ್ಟು ಬಾರಿಸ ಹೇಳಿದಳು. ತುಟಿಗೊತ್ತಿದೆ. ಊದಲು ಸಿಡಿಲಿನ ಸರಗಳು ಉರುಳಿದುವು. ಕೈಯ ಕೊಳಲು ಹಾವಾಯ್ತು. ನಾನು ನೋಟಮರವಾದೆ. ಹದಿನಾರು ಸಾವಿರ ಗೋಪಿಯರು ಹದಿನಾರು ಸಾವಿರ ಮುಳ್ಳುಪೊದೆಗಳಾಗಿ ನನ್ನ ಸುತ್ತ ಮನಸ್ವಿ ಕುಣಿಯ ತೊಡಗಿದರು. ಯಮುನೆಯು ಬತ್ತಿ ಅದರಡಿಯ ಮರ ಳಿನ ಮೇಲಿದ್ದ ಕೃಷ್ಣನ ಶವವು ಕಿಲಕಿಲ ಸಕ್ಕಿತು. ಆಕಾ ಶವೂ ಚಂದ್ರನೂ ಕೆಂಪಗಾದುವು. ಯಮುನೆಯ ಬಯಲು ರಕ್ತದಲ್ಲಿ ನೆನೆದಂತಿತ್ತು. ಕಿಟ್ಟನೆ ಕಿರಿಚಿದೆ. ಎಚ್ಚರಾಯ್ತು. ರೂಮಿನ ದೀಪವಾರಿ ಕತ್ತಲಾವರಿಸಿತ್ತು.

ಇಲ್ಲ – ಇನ್ನೂ ಹುಚ್ಚು ಹಿಡಿದಿರಲಿಲ್ಲ.

ಇಂದು ಮಧ್ಯಾಹ್ನ! ಅಬ್ಬ! ನನ್ನ ಕತೆ ಮುಗಿಯಿತು. ನನಗಿನ್ನು ಏಳಿಗೆಯಿಲ್ಲ. ಮಧ್ಯಾಹ್ನ ನನ್ನ ಕೊಠಡಿಗೆ ನನ್ನ ತಂಗಿ ಬಂದು 'ಅಣ್ಣಯ್ಯ' ಎಂದಳು. ರಾತ್ರಿ, ದೂರದ ದಿಗಂತದಲ್ಲಿ ಮಲಗಿದ ಕತ್ತಲೆಯ ಮುಸುಕೆತ್ತಿ ಇಣುಕುತಿರುವ ಚಂದ್ರಬಿಂಬದಂತೆ ಅವಳ ಕಪ್ಪನೆಯ ಕೇಶರಾಶಿಯ ಮಧ್ಯದಲ್ಲಿತ್ತು ಅವಳ ನಗುಮೊಗ. ಅವಳ ಕೆನ್ನೆಗಳು ಹಾಲಿನಲ್ಲಿ ತೇಲಿಬಿಟ್ಟ ಕಮಲದಂತಿದ್ದುವು. ಸರಸ್ವತಿ...... ೨೪ ನೆಯ........ 'ಬಾಮ್ಮ' ಎಂದೆ. ಹತ್ತಿರ ಬಂದಳು. ತಂಗಿಯೆಂಬುದನ್ನೂ ಮರೆದು ಅವಳನ್ನು ತಬ್ಬಿಕೊಂಡು, ಕೆನ್ನೆ........ ಕೆನ್ನೆಯ ಚರ್ಮ ನನ್ನ ಬಾಯಲ್ಲಿ ನಿಂತಿತು........ ಅಯ್ಯೋ!

ಇಲ್ಲ – ನನಗೆ ಹುಚ್ಚು ಹಿಡಿದಿಲ್ಲ. ಇದೆಲ್ಲ ನಡೆದುದು ನನಗೆ ಚೆನ್ನಾಗಿ ನೆನಪಿದೆ. ಎಲ್ಲ ಸರಿಯಾಗಿ ಬರೆಯುತ್ತಿ ದ್ದೇನೆ. ಇದೆಲ್ಲ ಬರೆಯುವುದೇಕೆ?........ ನನಗೆ ಹುಚ್ಚು ಹಿಡಿದಿದೆ. ೨೪ ನೆಯ ........ ಸ್ವಂತ ತಂಗಿಯಲ್ಲಿ ಅತ್ಯಾ ಚಾರ! ಅಯ್ಯೋ ನನ್ನ ಬಾಳೇ!

ಇಲ್ಲ – ಹುಚ್ಚಲ್ಲ. ಉರುಲೇ ಇದಕ್ಕೆ ತಕ್ಕ ಮಾರ್ಗ. ಬಾಳು ಬೇಸರವಾಗಿದೆ. ದೇವರು ನಮ್ಮ ನೆರವಿಗೆ ಬರ ದಿದ್ದರೆ, ನಮ್ಮ ಪಾಡು ನಾವೇ ನೋಡಿಕೊಳ್ಳಬೇಕು. ಆದರೆ ಕೈ ಹಿಡಿದ ಸರಸ್ವತಿ?.... ೨೪ ನೆಯ ತಾರೀಖು....

೨೦–೨–೩೦

ಇವತ್ತು ಡಾಕ್ಟರು ಬಂದಿದ್ದ. ಹುಚ್ಚಂತೆ! ನನಗೆ! ಅವನಿಗೇ–ಹುಚ್ಚು ಅವರಪ್ಪನಿಗೆ. ನನ್ನ ತಂಗಿ ಕೆನ್ನೆ ಗಾಯ ಮಾಡಿದೆನಂತೆ..... ಹಲಾಲಕೋರ.... ಸುಳ್ಳು ಹೇಳುತ್ತಾನೆ.... ಅವರ ತಾತನಿಗೆ ಹುಚ್ಚು ಹಿಡಿಸುತ್ತೇನೆ- ೩೯ ೩ ೦೦೦೮೬೨೦೧ ನಿಮ್ಮುಮ್ಮತ್ತಾತ ಹುಚ್ಚ–ಹುಚ್ಚಂತೆ- ತಾಯಿಗ್ಗಂಡ–ನಿನಗೆ ಹು–

(ತಾರೀಖಿಲ್ಲ. ಬರವಣಿಗೆ ಮಾತ್ರ ಹಿಂದಿನದೇ.)

ಈ ಕೋಣೆ ಕಬ್ಬಿಣ ದೊರೆ ಬಂಗಾರದ ಸಲಾಕಿ ಏ ನಾನೂ ನೀನೂ ಜೋಡಿ – ಹೊಲೆಯ – ಬೊಮ್ಮರಸ!

೮೯೬೪ – ೯೯೦ – ೭೮೦೦೪

ಖವುಭಂ ರಾಯೂಞಜ

ಬಾಗಿಲಿನಲ್ಲಿ ಗುಮ್ಮ ಖಾಕಿಬಟ್ಟೆ ಹಾಕಿಕೊಂಡು ನಿಂತಿವೆ.

೪×೩

———

೧೭×೫

———

೬೦
೭

———

೮೯೯
೦೮೨

———

೦೦೦೦೦ ಉತ್ತರ

ಆಮಪಞ axmp ಭಂಭಂಭ್ಯೈ.

ನಮ್ಮ ತಾಯಿಗೆ ಅಜ್ಜಿಗೆ ಮೂರು ಕೊಂಬು
ಬಾರೇ ಹುಡುಗಿ ನನ್ನ ಹಿಂದೆ
ಹುಚ್ಚಲೇ
ಅಯ್ಯೋ! ಸರಸ್ವತಿ! ಇಲ್ಲಿಗೂ ಬಂತೇ!

* * * *

(ಅದರ ಮಗ್ಗಲು ಹಾಳೆಯಲ್ಲಿ.)

**Poor chap!—rather Lucky Dog! committed suicide this morning.**

**24–2–30.**

**Lyf d Sgustos**
**Supdt**
**Mental Hospital**

CC-0. Jangamwadi Math Collection. Digitized by eGangotri

# ಕಾಮೆಡಿ

( ಪುಸ್ತಕಾವಲೋಕನ )

ಲೇಖಕರು:- ಪ್ರೊ. ವಿ. ಕೃ. ಗೋಕಾಕ, M. A., ಪುಣೆ

ಇದಕ್ಕೆ ಕನ್ನಡದಲ್ಲಿ ಸರಿಯಾದ ಶಬ್ದವನ್ನು ಕಂಡು ಹಿಡಿಯುವುದು ಬಲು ಕಷ್ಟವಾಗಿದೆ. 'ಕಾಮೆಡಿ' ಎಂದರೆ ಕೇವಲ ಹಾಸ್ಯರಸಪೂರಿತವಾದ ನಾಟಕವಲ್ಲ. ಈ ಬಗೆಯ ಸಾಹಿತ್ಯವು 'Thoughtful laughter' ಅಂದರೆ ಭಾವಗರ್ಭಿತವಾದ ನಗೆಯನ್ನು ಹುಟ್ಟಿಸುವುದೆಂದು 'ಮೆರೆಡಿಥ್'' ಎಂಬ ಆಂಗ್ಲಸಾಹಿತಿಯು ಹೇಳಿದ್ದಾನೆ. ಇದಲ್ಲದೆ ಕಾಮೆಡಿಯಲ್ಲಿ ಅನೇಕ ಪ್ರಕಾರಗಳಿವೆ. ಆದ ಕಾರಣ ಈ ಸಾಹಿತ್ಯವಿಭಾಗವನ್ನು 'ಕಾಮೆಡಿ' ಇಲ್ಲವೆ ಭದ್ರರೂಪಕವೆಂದು ಕರೆಯುವುದೇ ಉಚಿತವೆಂದು ತೋರುತ್ತದೆ. ಆದರಂತೆ 'ಟ್ರ್ಯಾಜಡಿ' ಎಂಬ ಶಬ್ದದ ಬದಲು 'ಶೋಕಜನ್ಯನಾಟಕ' 'ಶೋಕ ಪರ್ಯಾವಸಾಯಿ ನಾಟಕ' ಇಲ್ಲವೆ ''ವಿಷಾದಾಂತ ನಾಟಕ''ವೆಂದು ಉಪಯೋಗಿಸುವುದಕ್ಕಿಂತ 'ರುದ್ರನಾಟಕ' ವೆಂದು ಹೇಳುವುದು ಉತ್ತಮ ಪಕ್ಷವಾಗಬಹುದು. ಏಕೆಂದರೆ ಮೊದಲು ಹೇಳುವ ಶಬ್ದಗಳಿಂದ ಟ್ರ್ಯಾಜಡಿಯಲ್ಲಿರುವ ಉದಾತ್ತ ಭಾವನಾಲಹರಿಯ ಉದ್ವೇಗವು (The feeling of grandeur) ಸೂಚ್ಯವಾಗುವುದಿಲ್ಲ.

ರುದ್ರ ನಾಟಕಕ್ಕೂ ಭದ್ರ ನಾಟಕಕ್ಕೂ ಅಷ್ಟೇನು ಆಳವಾದ ಅಂತರವಿಲ್ಲ. ಆನಂದಾಶ್ರುಗಳ ಹಾಗು ದುಃಖಾಶ್ರುಗಳ ಉಗಮವು ಸರ್ವಸಾಧಾರಣವಾಗಿ ಒಂದೇ ಎಂದು ಮಾನಸಶಾಸ್ತ್ರಜ್ಞರು ಕಂಡುಹಿಡಿದಿದ್ದಾರೆ. ಇದಲ್ಲದೆ ಕಲೆಯೆಂದರಾದರೂ ಏನು? ಕಲಾಕೋವಿದನ ಅಂತಸ್ಫೂರ್ತಿಯಿಂದ ಹಾಗು ಕಾಣ್ಕೆಯಿಂದ ಸಚೇತನವಾಗಿ ಅರ್ಥಪೂರ್ಣವಾದ ಪ್ರಪಂಚವಷ್ಟೆ? ನಾಟಕವು 'ಟ್ರ್ಯಾಜಡಿ' ಇಲ್ಲವೆ 'ಕಾಮೆಡಿ'ಯಾಗಿ ಪರಿಣಮಿಸುವುದು ನಾಟಕಕಾರನ ಮನಃಸ್ಥಿತಿಯನ್ನು ಅವಲಂಬಿಸಿರುವುದು. ಜಗತ್ತೆಲ್ಲ ಅವನಿಗೆ ದುಃಖಮ[illegible]ವಾಗಿ ಕಂಡರೆ ಅವನ ಕಲಾಸೃಷ್ಟಿಯಲ್ಲಿ ಎಡೆಬಿ[illegible] ಕಾರ್ಮೋಡಗಳು ಮುಸುಕುವವು. ಅವನು ವಿನೋ[illegible] (Humourist) ಯಾಗಿದ್ದರೆ ಇಹದಲ್ಲಿ ಕಂಡುಬರುವ [illegible] ಕುಂದುಕೊರತೆಗಳೂ ಅವನ ಪರಿಹಾಸಪೂರ್ಣ ವಿಮರ್ಶೆ[illegible] ಗುರಿಯಾಗುವವು.

ಹಾಗಾದರೆ 'ಕಾಮೆಡಿ' ಎಂದರೆ ವಿನೋದಿಯ ದೃಷ್ಟಿ[illegible]ಕೋನದಿಂದ ಕಂಡುಬಂದ ಸೃಷ್ಟಿಯ ಪ್ರತಿಬಿಂಬ ಹಾಗು ವಿಮರ್ಶೆಯೆಂದ ಹಾಗಾಯಿತಲ್ಲ. ವಿನೋದಿಯ ರಹಸ್ಯ[illegible]ದಲ್ಲಿ ಜಾಣ್ಮೆಯೂ ಉಂಟು. ವಿಚಾರಪ್ರಚೋದ[illegible]ವಾದ ಭಾವನೆಗಳೂ ಮಾರ್ಮಿಕವಾದ ಮಾತುಗಳ[illegible] ಉಂಟು. ಟ್ರ್ಯಾಜಡಿಯಂತೆ ಈ ವಿಭಾಗವು ವಿಶೇಷವಾ[illegible] ಹೃದಯಸ್ಪರ್ಶಿಯಲ್ಲ. ಆದರೆ ಬುದ್ಧಿಯ ನಾಡಿಸ[illegible] ತನ್ನ ಕೈಮೆಯನ್ನು ಹೆಚ್ಚಾಗಿ ವಿಶದಪಡಿಸಿದ್ದರಿ[illegible] **ವಿಚಾರಾರ್ಹವಾದುದು.**

ಕಾವ್ಯವೂ ವಿನೋದಿಯ ಭಾವನಾಲಹರಿಯ[illegible] ಕೂಡಿದ ವಿಭಾಗಕ್ಕೆ 'Poetic comedy' ಇಲ್ಲವೆ ಕಾವ್ಯ[illegible]ಮಯ ಭದ್ರ ನಾಟಕವೆಂದುಹೆಸರು. ಇಂಗ್ಲಿಷಿನಲ್ಲಿ[illegible] ಇಂಥ ಅನೇಕ ನಾಟಕಗಳನ್ನು ಬರೆದವರಲ್ಲಿ ಶೇಕ್ಸಪಿಯ[illegible]ರನು ಅಗ್ರೇಸರನು. ಕಾವ್ಯವು ಮಿಶ್ರವಾಗದೆ ಶುದ್ಧವಾ[illegible]ಗಿದ್ದ 'ಕಾಮೆಡಿ'ಗೂ ಅನೇಕಶಾಖೆಗಳುಂಟು. (೧)Farc[illegible] ಇಲ್ಲವೆ ಹುಚ್ಚಾಟ. ಇದು ವಸ್ತುಪ್ರಧಾನವಾ[illegible] ಭದ್ರ ರೂಪಕವೆಂದು ಹೇಳಬಹುದು. (೨) ಶೇಕ್ಸ[illegible]ಯರನ ಕಾವ್ಯಾತ್ಮಕ ಭದ್ರ ನಾಟಕಕ್ಕೂ Comedy of incident (ವಸ್ತುಪ್ರಧಾನ), Comedy of romanc[illegible] ರೋಮಾಂಚನೀಯ), Comedy of humour ( ಹಾಸ್[illegible]

CC-0. Jangamwadi Math Collection. Digitized by eGangotri

ರಸಯುಕ್ತ) ಎಂದು ಅನೇಕ ಸಲ ಕರೆಯುವುದುಂಟು. (೩) Comedy of Humours ಇಲ್ಲವೆ ಸ್ವಭಾವ ವೈಚಿತ್ರ್ಯದ ನಾಟಕ. ಬೆನ್ ಜಾನ್‌ಸನ್ ಎಂಬ ಆಂಗ್ಲ ನಾಟಕಕಾರನು ಇದರ ಪ್ರಚಾರಕನು. ಇದಕ್ಕೆ Comedy of satire (ವಿಡಂಬನಾತ್ಮಕ) ಹಾಗು Comedy of character (ಪಾತ್ರಪ್ರಧಾನ) ಎಂದೂ ಹಲವು ಸಲ ಹೇಳುತ್ತಾರೆ. (೪) Comedy of manners ಇಲ್ಲವೆ ಸಾಮಾಜಿಕ ಭದ್ರ ನಾಟಕ. ಇದನ್ನು ಡೆಕರ್, ವಿಡಲ್ಬನ್, ಶರ್ಲೆ ಮುಂತಾದ ಆಂಗ್ಲ ನಾಟಕಕಾರರಿಂದ ತಿಳಿದುಕೊಳ್ಳಬಹುದು. ಇದು ಲೇಖಕನ ಸಮಕಾಲೀನ ಸಮಾಜದ ದೋಷಗಳನ್ನು ಇಲ್ಲವೆ ಸಮಾಜವನ್ನು ನಿರಂತರವಾಗಿ ಆಳುವ ಗುಣದೋಷಗಳನ್ನು ಸ್ಪಷ್ಟವಾಗಿ ತೋರಿಸುವ ಚಿತ್ರವೆಂದು ಹೇಳಬಹುದು. (೫) High Comedy ಇಲ್ಲವೆ ಉಚ್ಚ ತರಗತಿಯ ಭದ್ರ ನಾಟಕ. ಫ್ರಾನ್ಸ್ ದೇಶದ ಮೊಲಿಯರ್ ಎಂಬ ಪ್ರಸಿದ್ಧ ನಾಟಕಕಾರನು ಈ ರೀತಿಯಲ್ಲಿ ಮಿಗಿಲಾದ ನಾಟಕಗಳನ್ನು ರಚಿಸಿದನು. ಆಂಗ್ಲದೇಶದ ಆಸ್ಕರ ವಾಯಿಲ್ಡ್ ಎಂಬವನ ನಾಟಕಗಳಲ್ಲಿಯೂ ಈ ರೀತಿಯು ಗೋಚರವಾಗುವುದು. ಮಾನವೀಯ ಸ್ವಭಾವದಲ್ಲಿ ನಿರಂತರವಾಗಿ ಸೂಕ್ಷ್ಮರೀತಿಯಿಂದ ಕಂಡುಬರುವ ತಪ್ಪು ತಡೆಗಳನ್ನು ಬೈಲಿಗೆಳೆದು ವಿನೋದಿಯ ಕ್ಷಮಾಪೂರ್ಣ ದೃಷ್ಟಿಯಿಂದ ಹಾಗು ರಸವತ್ತಾದ ಸಂಭಾಷಣೆಗಳಿಂದ ಶ್ರೋತೃಗಣದ ಮನವನ್ನು ರಂಜಿಸುವುದೇ ಇದರ ಮುಖ್ಯ ಕಾರ್ಯವಾಗಿದೆ. 'ಕಾಮೆಡಿ'ಯ ಶ್ರೇಷ್ಠತಮವಾದ ಉದ್ದೇಶವೆಂದರೆ 'ಭಾವಗರ್ಭಿತವಾದ ನಗೆ'ಯನ್ನು ನಗಿಸುವುದು. ಈ ಪ್ರಕಾರದ ನಾಟಕಗಳಲ್ಲಿ ಈ ಉದ್ದೇಶವು ವಿಶೇಷವಾಗಿ ಸಾಧಿಸುವುದು.

ಹೀಗೆ ಇನ್ನೂ ಅನೇಕ ವಿಭಾಗಗಳನ್ನು ಮಾಡುತ್ತ ಹೋಗಬಹುದು. ಅಲ್ಲದೆ ಈ ವಿಭಾಗಗಳು ಪರಸ್ಪರ ವಿರೋಧಿಯಾಗಿಲ್ಲ; ಸ್ವಭಾವ ವೈಚಿತ್ರ್ಯದ ನಾಟಕದಲ್ಲಿ ಒಮ್ಮೆ ಸಾಮಾಜಿಕ ದೃಶ್ಯವು ಬೆರೆತು ಹೋಗಬಹುದು.

ಇನ್ನು 'ನಮ್ಮ ಸಮಾಜ'*ವೆಂಬ ನಾಟಕವನ್ನು ತೆಗೆದುಕೊಳ್ಳೋಣ. ಇದು ಒಂದು ಸಾಮಾಜಿಕ ರೂಪಕವೆಂದು (Comedy of manners) ಸಹಜವಾಗಿ ಗೊತ್ತಾಗುವುದು. ಆದರೆ ಇಲ್ಲಿಯೂ ಸ್ವಭಾವ ವೈಚಿತ್ರ್ಯ ರೂಪಕದ ರೀತಿಯು ಅಡಕವಾಗಿದೆ. ಉದಾ: ಯಶೋದಮ್ಮನು ತನ್ನ ಗಂಡನು ದೊಡ್ಡ 'Officer'ನಾಗಬೇಕೆಂದು ಬಯಸುವಳು. ರಂಗರಾಯನು ಕೊನೆಯವರೆಗೆ ಪಾಶ್ಚಾತ್ಯ ಪದ್ಧತಿಗಳ ಬೆನ್ನು ಹತ್ತಿರುವನು. ಇದಲ್ಲದೆ ಸನ್ಮಾರ್ಗದಲ್ಲಿಯೇ ಆಗಲಿ ಜೋಯಿಸ,ರಾಮಚಂದ್ರನ್, ಗೌರಮ್ಮ ಮುಂತಾದವರಲ್ಲಿ ಅವರವರ ವೈಚಿತ್ರ್ಯಗಳು ಇದ್ದೇ ಇವೆ.

ಆದರೂ ಇದನ್ನು ವಿಶೇಷವಾಗಿ ಸಾಮಾಜಿಕರೂಪಕವೆಂದೇ ವಿಮರ್ಶಿಸಬೇಕಾಗಿದೆ. ಈ ನಾಟಕವನ್ನೋದಿ 'ಸಮಾಜವು ಹೀಗಿದೆಯೇ' ಎಂದು ಕೇಳಿದರೆ 'ಇದೆ' ಎಂದು ಧಾರಾಳವಾಗಿ ಹೇಳಬಹುದು. ರಾಮಚಂದ್ರನಂಥ ಸಾಹಸಿಗಳು ನಮ್ಮ ಸಮಾಜದಲ್ಲಿದ್ದಾರೆ. ಯಶೋದಮ್ಮ, ಗೌರಮ್ಮನವರಂಥ ಹೆಣ್ಣುಮಕ್ಕಳೂ ಉಂಟು. ಆದರೆ ರಾಮಾಜೋಯಿಸರಂಥ ವಿಶಾಲ ದೃಷ್ಟಿಯ ಸಾಂಪ್ರದಾಯಿಕರು ದೊರೆಯುವರೋ ಇಲ್ಲವೋ ಸಂಶಯಾಸ್ಪದವಾಗಿದೆ.

ಆದರೆ ಜೋಯಿಸರಿಗೆ ಈ ನಾಟಕದಲ್ಲಿ ಕೊಟ್ಟ ಸ್ಥಾನವನ್ನು ಬೇರೆದೃಷ್ಟಿಯಿಂದ ನೋಡುವುದು ಅತ್ಯವಶ್ಯ. ಇಲ್ಲಿಯ ಪಾತ್ರಗಳನ್ನು ಎರಡು ಭಾಗವಾಗಿ ವಿಂಗಡಿಸಬಹುದು. ರಾಮಾಜೋಯಿಸ, ರಾಮಚಂದ್ರನ್, ಗೌರಮ್ಮ ಇವರ ಮುಖಾಂತರವಾಗಿ ಗ್ರಂಥಕರ್ತರು ತಾವು ಕಲಿಸಬೇಕಾದ ನೀತಿಪಾಠವನ್ನು ನಮ್ಮ ಕಣ್ಣೆದುರಿಗಿಟ್ಟಿದ್ದಾರೆ. ರಂಗರಾಯ, ಯಶೋದಮ್ಮ, ಕೃಷ್ಣಮೂರ್ತಿ, ಮುಂತಾದವರು ಸಮಾಜವು ಕೆಟ್ಟು ಹೋದ ಸ್ಥಿತಿಯನ್ನು ಉದಾಹರಿಸುವ ಬೊಂಬೆಗಳು.

ರಂಗರಾಯನು ಚುನಾವಣೆಗೆ (Election ) ನಿಂತುದೇ ಇಲ್ಲಿಯ ಸಂವಿಧಾನಕದಲ್ಲಿಯ ಮುಖ್ಯವಾದ ಸಂಗತಿ. ಬಿ. ಎ. ಪರೀಕ್ಷೆಗಾಗಿ ಓದುತ್ತಿದ್ದ ರಾಮಚಂದ್ರಯ್ಯನು ಇವನಿಗೆ ಕನ್ನಡದಲ್ಲಿ ಭಾಷಣಗಳನ್ನು ಬರೆದು ಕೊಡುತ್ತಾನೆ. ಮುಂದೆ ಪರೀಕ್ಷೆಗೆ ಕೂಡುವದಾಗುವುದಿಲ್ಲ. ಆಗ ತನ್ನ ತಂದೆಯು ರಾಮಾಜೋಯಿಸರಲ್ಲಿ ಇಟ್ಟ ೩೦೦ ರೂ. ಗಳನ್ನು ತೆಗೆದುಕೊಂಡು ಮುಂಬಯಿಗೆ ಹೋಗಿ ಪರಿಶ್ರಮದಿಂದ ಶ್ರೀಮಂತನಾಗುತ್ತಾನೆ. ರಂಗರಾಯರ ಮನೆಯಲ್ಲಿ ಅಕಸ್ಮಾತ್ತಾಗಿ ರಾಮಚಂದ್ರನನ್ನು ಕಂಡ ಜೋಯಿಸರಲ್ಲಿ ಆ ಹಣವು ಹೇಗೆ ಬಂದಿತೋ ತಿಳಿಯದು. ತನ್ನ ತಂದೆಯ ಹಣವೆಂದು ತಿಳಿಯದ

* ಶ್ರೀ. ಸಿ. ಕೆ. ವೆಂಕಟರಾಮಯ್ಯನವರು ಬರೆದುದನ್ನು ಬೆಂಗಳೂರಿನ ಸತ್ಯಶೋಧನ ಪುಸ್ತಕ ಭಾಂಡಾರದವರು ಪ್ರಸಿದ್ಧಿಸಿದ್ದಾರೆ. ಬೆಲೆ ೧ ರೂ.



CC-0. Jangamwadi Math Collection. Digitized by eGangotri

ರಾಮಚಂದ್ರನು ಎರಡನೆಯ ಅಂಕಿನಲ್ಲಿ ಕೊನೆಗೆಮಾಡುವ ಸ್ವಗತಪರ ಭಾಷಣವು ಕಲೆಯ ದೃಷ್ಟಿಯಿಂದ ಪೂರ್ಣವಾಗಿ ಅನುಚಿತವಾಗಿದೆ. ಮುಂದೆ ಆತನು ಜೋಯಿಸರ ಮಗಳಾದ ಲಲಿತೆಯನ್ನು ಮದುವೆಯಾಗುವನು. ಪರದೇಶಕ್ಕೆ ವಿದ್ಯಾರ್ಜನೆಗಾಗಿ ಹೋದ (ರಂಗರಾಯನ ಮಗ) ಕೃಷ್ಣಮೂರ್ತಿಯು ಒರ್ವ ವಿದೇಶೀಯ ಲಲನೆಯನ್ನು ಲಗ್ನವಾಗಿ ಬರುತ್ತಾನೆ.

ಜೋಯಿಸರ ಹಾಗು ರಾಮಚಂದ್ರಯ್ಯನ ಉದಾಹರಣೆಯಿಂದ ರಂಗರಾಯ, ಯಶೋದಮ್ಮ, ಕೃಷ್ಣಮೂರ್ತಿ,—ಇವರಲ್ಲಾದ ಮಾರ್ಪಾಟು ಗ್ರಂಥಕರ್ತರು ಮನಸ್ಸಿನಲ್ಲಿಟ್ಟುಕೊಂಡ ಮೊದಲನೆಯ ಧ್ಯೇಯವೆಂದು ಹೇಳಬಹುದು. ಎರಡನೆಯದೆಂದರೆ ಮುಂದೆ ಇವರೆಲ್ಲರೂ ನಿರ್ಮಲ ಮನಸ್ಸಿನಿಂದ ಮಾಡಲು ಪ್ರಯತ್ನಿಸುವ ಅಕೃತ್ರಿಮ ದೇಶಸೇವೆ. ಆದರೆ ಆ ವಿದೇಶೀಯ ತರುಣಿಯ ಕಥೆಯು ತುಸು ವಿಚಿತ್ರವಾಗಿದೆ. ಆಕೆಯ ವಿನಯಶೀಲತೆ ಮೊದಲಾದ ಗುಣಗಳನ್ನು ನೋಡಿ ರಾಮಚಂದ್ರಯ್ಯ ಹಾಗು ಜೋಯಿಸರು ಕೂಡ ಆಕೆಯನ್ನು ಅಭಿನಂದಿಸುವರು. ಇಂಥ ವಿವಾಹಗಳು ಇಂದಿನ ಸಮಾಜದಲ್ಲಿ ಅನಿಷ್ಟವೆಂದು ಸಾಧಿಸಿದ್ದರೆ ಹೆಚ್ಚು ಸ್ತುತ್ಯವಾಗುತ್ತಿದ್ದಿಲ್ಲವೇನು?

ಹಾಸ್ಯರಸದ ಸಂಯೋಜನೆಯು ಅಲ್ಲಲ್ಲಿ ಯಶಸ್ವಿಯಾಗಿದ್ದರೂ, ಹಲವು ಮಾರ್ಮಿಕ ವಚನಗಳು ಹಾಗು ಸನ್ನಿವೇಶಗಳು ಇಲ್ಲಿ ಬಂದಿದ್ದರೂ, ಗ್ರಂಥವು ಉಜ್ಜ್ವಲವಾಗಿಲ್ಲವೆಂದು ಹೇಳಬಹುದು. ಸಾಮಗ್ರಿಯು ಎಂತಹದೇ ಇರಲಿ ಅದನ್ನು ಸಾಹಿತ್ಯವಾಗಿ ಪಲ್ಲಟಗೊಳಿಸುವ ಕಲೆಯು ಪೂರ್ಣವಾಗಿ ಪರಿಪಾಕಕ್ಕೆ ಬರಬೇಕಾಗುವುದು. ಅದು ಇಲ್ಲಿ ಬಂದಿಲ್ಲ; ಏಕಂದರೆ ಇಲ್ಲಿ ಸಂಭಾಷಣೆಯೆಂದರೆ ನಾಟಕ, ನಾಟಕವೆಂದರೆ ಸಂಭಾಷಣೆ ಹೀಗಾಗಿ ಹೋಗಿದೆ. ಪ್ರತಿಯೊಂದು ಪ್ರವೇಶದಲ್ಲಿ ಪಾತ್ರಗಳು ಆರಾಮ ಕುರ್ಚೆಯಲ್ಲಿ ಕುಳಿತು ಸೊಗಸಾಗಿ ಹರಟೆ ಕೊಚ್ಚುತ್ತಾರೆ. ಪ್ರತ್ಯಕ್ಷ ಪ್ರಪಂಚದಲ್ಲಿ ಹೀಗಾಗಬಹುದು. ಆದರೆ ಅರ್ಥಪೂರ್ಣವಾದ ಕಲ್ಪನಾಸೃಷ್ಟಿಯಲ್ಲಿ ಸೌದಾಮಿನಿಯಂತೆ ಸುಳಿದ ಒಂದು ಮಾತು ಜನರ ಹೃದಯವನ್ನು ತಗಲಬೇಕಲ್ಲದೆ ಸಂವಿಧಾನಕವನ್ನು ಮುಂದರಿಸಬೇಕು. ಇಲ್ಲಿ ಆ ತರಹದ ಆವೇಶವೂ ಮಿತಭಾಷೆಯೂ ಇಲ್ಲ. ಈ ರೂಪಕದಲ್ಲಿಯ ವ್ಯಕ್ತಿಗಳು ಜಗತ್ತಿನ ಸರ್ವಸಾಧಾರಣ ವ್ಯಕ್ತಿಗಳಂತೆ ಸಾವಧಾನವಾಗಿ ವ್ಯವಹರಿಸಹತ್ತಿದ್ದರಿಂದ ಕಲೆಯ ಸಂಪ್ರದಾಯ, ನಿಯಮಗಳೆಲ್ಲ ಇಲ್ಲಿ ವ್ಯಕ್ತವಾಗಿದ್ದರೂ ಅವುಗಳ ಬಂಧನವು ಶಿಥಿಲವಾಗಿ ಈ ಸಾಮಾಜಿಕ ರೂಪಕದ ಅರ್ಥಪೂರ್ಣತೆಗೆ ಕುಂದು ಬರುತ್ತದೆ.

ಇನ್ನು 'ಆಷಾಢ ಭೂತಿ' * ಎಂಬ ನಾಟಕವನ್ನು ಅವಲೋಕಿಸುವಾ. ಇದು ಮೋಲಿಯರನ 'ಟಾರ್ಟ್ಯೂಫ' ಎಂಬ ರೂಪಕದ ರೂಪಾಂತರವು. 'ನಮ್ಮ ಸಮಾಜ'ದಂತೆ ಇದಾದರೂ ಒಂದು ಸಾಮಾಜಿಕ ರೂಪಕವಾಗಿದೆ. ಆದರೆ ಮೊದಲಿನ ನಾಟಕದಂತೆ ಇಲ್ಲಿ ಇಂಗ್ಲ ಭಾಷೆಯ ಯೋಜನೆಯಾಗಿಲ್ಲ. ಸಾಹಿತ್ಯದ ರೀತಿಯಿಂದ ಆಂಗ್ಲ ಭಾಷೆಯನ್ನು ಯಥಾತ್ಮಕ (realistic) ದೃಷ್ಟಿಯಿಂದ ಕನ್ನಡ ನಾಟಕಗಳಲ್ಲಿ ಉಪಯೋಗಿಸುವುದು ಎಷ್ಟರ ಮಟ್ಟಿಗೆ ಯಶಸ್ವಿಯಾಗುವುದೋ ನಾವು ಕಾಣೆವು. ಸಾಮಾಜಿಕ ದೃಶ್ಯವು ದೇಶ-ಕಾಲಗಳ ನೈಜವಾದ ಸ್ಥಿತಿಗತಿಯನ್ನು ಪ್ರತಿಬಿಂಬಿಸಬೇಕೆಂಬುದೇನೋ ನಿಜ. ಆದರೆ ಕಲಾಕುಶಲತೆಗೆ ಕೆಲವು ಕಟ್ಟುಗಳುಂಟು. ಅವುಗಳನ್ನು ಮೀರಿದಷ್ಟು ಸಾಹಿತ್ಯದ ಅಮರತೆಗೆ ಭಂಗವಾಗುತ್ತದೆ. ಇಂಗ್ಲಿಷಿನ ಕಾಲವು ಹೋದ ಮೇಲೆ ಆ ಭಾಷೆಯನ್ನು ವಿಪುಲವಾಗಿ ಉಪಯೋಗಿಸಿದ ಗ್ರಂಥಗಳ ಸೌಂದರ್ಯವು ಬಹ್ವಂಶವಾಗಿ ಕುಂದಿ ಹೋಗುವುದು. ಇಂಗ್ಲಿಷು ಆಳಿಯಲಿ ಇಲ್ಲವೆ ಉಳಿಯಲಿ, ಕಪ್ಪಿಗನು ಎತ್ತಿ ಹಿಡಿದ ಸಾಮಾಜಿಕ ಚಿತ್ರವು ಎಲ್ಲ ಕಾಲಕ್ಕೂ ಅನ್ವಯಿಸುವಂತಿದ್ದು ಸುಗಮ್ಯವಾಗಿರಬೇಕು. ಜೀವನದಲ್ಲಿ ಅಳಿದು ಹೋಗುವ ಅಂಶಗಳನ್ನು ಬಿಟ್ಟು ಸ್ಥಿರವಾಗಿರುವುದನ್ನು ಅಚಲ ಶ್ರದ್ಧೆಯಿಂದ ಭಜಿಸುವುದೇ ಕಲೆಯ ಮುಖ್ಯ ಕಾರ್ಯವಲ್ಲವೆ? ಹೀಗಿದ್ದ ಪಕ್ಷದಲ್ಲಿ ಶ್ರೀ. ಕೈಲಾಸಂ ಇವರು ಬರೆದ ನಾಟಕಗಳ ಭವಿತವ್ಯವೇನೆಂದು ಕೆಲವರು ಪ್ರಶ್ನಿಸಬಹುದು. ಅದು ಹಾಗಿರಲಿ. 'ಆಷಾಢ ಭೂತಿ'ಯಲ್ಲಿ ಇಂಗ್ಲಿಷಿನ ಬೆರಕೆಯಿಲ್ಲದ್ದರಿಂದ ನಾಟಕದ ಕಳೆಯು ಒಂದು ತೂಕ ಹೆಚ್ಚಾಗಿದೆ ಎಂದು ನಾವು ಹೇಳಿಬಿಡುವೆವು. ಸರ್ವರಿಗೂ ವಿದಿತವಾಗಿರುವ ಕೆಲವು ಪಾರಿಭಾಷಿಕ ಶಬ್ದಗಳು ಇಷ್ಟರಲ್ಲಿಯೇ ನಮ್ಮ ಜನಸಾಮಾನ್ಯ ಜೀವನದಲ್ಲಿ ಬೆರೆತು ಹೋಗಿವೆ.

* ಶ್ರೀ. ಎ. ಎನ್ ಮೂರ್ತಿರಾವ್, ಕರ್ನಾಟಕ ಸಂಘ ಮಹಾರಾಜಾ ಕಾಲೇಜ ಮೈಸೂರು ಇವರು ಬರೆದುದು, ಬೆಲೆ ೧-೦-೦

CC-0. Jangamwadi Math Collection. Digitized by eGangotri

ಅವುಗಳನ್ನು ಉಪಯೋಗಿಸಿದಲ್ಲಿ ವಿಶೇಷತಃ ನಾಟಕಕ್ಕೆ ಯಾವ ದೋಷವೂ ಇಲ್ಲ. ಆದರೆ ಯಥಾತ್ಮಕತೆಯನ್ನು ಹೆಗ್ಗುರಿಯನ್ನಾಗಿ ಮಾಡಿಕೊಂಡು ವಿಶ್ವವಿದ್ಯಾಲಯದ ಶಿಕ್ಷಣವನ್ನು ಹೊಂದಿದ ತಪ್ಪಣರಾಡುವ ಆಂಗ್ಲಕನ್ನಡ ವೆಂಬ ಅಪಭ್ರಂಶದ ಭಾಷೆಯಲ್ಲಿ ಸಾಹಿತ್ಯವಾಗಿ ಉಳಿಯ ಬೇಕೆಂದಿರುವ ನಾಟಕವನ್ನು ರಚಿಸುವುದು ಕೇವಲ ವಿಷಾದಕರವಾಗಿದೆ. ಇಂಥ ಗ್ರಂಥವು ತಿರುಳ್ಗನ್ನಡದ ಕಲ್ಪನೆಯನ್ನು ಜನರಿಗೆ ತಂದುಕೊಡಲಾರದು. ಅದಲ್ಲದೆ ಅವು ಇಂದಿನ ಜನರಿಗೆ ಮಾತ್ರ ಮನೋರಂಜನೆಯ ಸಾಧನೆಯಾಗಿ ಉಳಿಯಬಹುದು. ಶ್ರೀ. ಕೈಲಾಸಂ ಅವರಂಥ ಪ್ರತಿಭಾಸಂಪನ್ನರ ನಾಟಕಗಳೂ ಕೂಡ ಈ ಮುಸುಕನ್ನು ಹೊದ್ದು ನಿಂತಲ್ಲಿ ಅವುಗಳ ಅನಾವರಣ ಸಮಾರಂಭವು ಇಂದಿನಷ್ಟು ವಿಜೃಂಭಣೆಯಿಂದ ಮುಂದೆ ಜರುಗಲಾರದೆಂದು ನಮ್ಮ ಅಭಿಪ್ರಾಯ.

'High comedy' (ಸರಸ ಭದ್ರರೂಪಕವು) ಯು ಮೋಲಿಯರನ ನಾಟಕಗಳಲ್ಲಿ ಅತ್ಯುತ್ತಮವಾದ ಬೆಳ ವಣಿಗೆಯನ್ನು ಹೊಂದಿತಷ್ಟೆ. ಅದನ್ನು ಈ ರೂಪಾಂತರ ದಲ್ಲಿ ಕಾಣಬಹುದು. ಕಲೆಗೆ ಸಂಯಮವು ಎಷ್ಟು ಸಹ ಕಾರಿಯೆಂಬುದು ಇಲ್ಲಿ ತಿಳಿದು ಬರುವಂತಿದೆ. ಅನಾವ ಶ್ಯಕವಾದ ಯಾವ ಸಂದರ್ಭವೂ ಸನ್ನಿವೇಶವೂ ಸಂಭಾ ಷಣೆಯೂ ಇಲ್ಲಿರುವುದಿಲ್ಲ. ವಸ್ತುಪ್ರಧಾನ ಭದ್ರರೂಪಕ ದಲ್ಲಿರಬೇಕಾದ ರಸವತ್ತಾದ ಸಂವಿಧಾನಕವೂ ಇಲ್ಲಿದೆ; ಸಾಮಾಜಿಕ ರೂಪಕದಲ್ಲಿರುವ ವಿನೋದವೂ ಜಾಣ್ನು ಡಿಯೂ ಇಲ್ಲಿಯ ಸಂಭಾಷಣೆಗಳಲ್ಲಿ ತುಂಬಿಕೊಂಡಿವೆ. ಪಾತ್ರಪ್ರಧಾನ ರೂಪಕದಲ್ಲಿಯಂತೆ ಇಲ್ಲಿಯ ಸ್ವಭಾವ ನಿರೀಕ್ಷಣೆಯೂ ಸೂಕ್ಷ್ಮವಾಗಿದೆ. ಸಾಮಾಜಿಕ ಜೀವ ನದ ಒಂದು ದೃಶ್ಯವು ನಮ್ಮ ಕಣ್ಣೆದುರಿಗೆ ಬಂದು ನಿಲ್ಲು ವುದಲ್ಲದೆ ಸಿರಂತರವಾದ ಮಾನವೀಯ ಸ್ವಭಾವವನ್ನು ಇಲ್ಲಿ ನಿದರ್ಶಿಸಿರುವ ರೀತಿಯು "ಭಾವಗರ್ಭಿತವಾದ ಹಾಸ್ಯ"ವನ್ನುಂಟುಮಾಡುವುದು. ಹೀಗೆ ಭದ್ರರೂಪ ಕದ ಎಲ್ಲ ಪ್ರಕಾರಗಳ (Types) ವಿಧಾನಗಳೂ ಪರಿಪೂ ರ್ಣತೆಯನ್ನು ಹೊಂದಿದ ನಾಟಕವನ್ನು ನಾವು 'ಸರಸ ಭದ್ರರೂಪಕ' ಇಲ್ಲವೆ High comedy ಎಂದು ಕರೆಯ ಬಹುದು.

ಇಂಥ ರೂಪಕವು ಮೂಲತಃ ಬುದ್ಧಿಗಮ್ಯವಾಗಿರು ವುದಲ್ಲದೆ, ಹೃದಯಸ್ಪರ್ಶಿಯಲ್ಲ. ಈ ಮಾತು ಎಲ್ಲ ಭದ್ರ ರೂಪಕ ವಾಙ್ಮಯಕ್ಕೂ ಅನ್ವಯಿಸುತ್ತದೆ. ಅಂದರೆ ಈ ಸಾಹಿತ್ಯದ ವಿಭಾಗವು **ಮನಸ್ಸನ್ನು** ರಂಜಿಸಿ **ಬುದ್ಧಿ ಯನ್ನು** ಬೆಳಗಿಸುವುದೇ ಹೊರತು ಹೃದಯದ ಭಾವನಾ ಲಹರಿಗಳನ್ನು ಉಕ್ಕೇರಿಸುವುದಿಲ್ಲ. ಅದು ಹೃದಯ ಸ್ಪರ್ಶಿಯಾಗಹತ್ತಿದಂತೆ ನಾವು ವಿನೋದ ವಾಙ್ಮಯ (Comic literature) ವನ್ನು ಬಿಟ್ಟು ಕಾವ್ಯದ ಘಲವ ತ್ತಾದ ಪ್ರದೇಶದ ಕಡೆಗೆ ನಡೆದಿರುವೆವೆಂದು ಸಹಜವಾಗಿ ತಿಳಿಯಬಹುದು. ಬೆನ್ ಜಾನಸನ್ ಎಂಬ ಆಂಗ್ಲ ಲೇಖ ಕನ 'ವ್ಹಾಲ್ಪೋನ್' ಎಂಬ ಗ್ರಂಥದಲ್ಲಿ ಇದೇ ಬಗೆಯ ಮಾರ್ಪಾಟಾಗಿ ಮೊದಲು ಬುದ್ಧಿಗಮ್ಯವಾಗಿದ್ದ ರೂಪ ಕವು ಕೊನೆಗೆ ಹೃದಯಸ್ಪರ್ಶಿಯಾಗಿ ಹೋಗುತ್ತದೆ. ಕ್ರಮವಾಗಿ ಆತನ ವಿಡಂಬನೆಗೆ ಸಾಮಗ್ರಿಯು ಸಿಕ್ಕುತ್ತ ಹೋದುದೇ ಇದರ ಕಾರಣ. ಶೇಕ್ಸಪಿಯರನು ಕಾವ್ಯಾ ತ್ಮಕ ಭದ್ರ ರೂಪಕವೆಂಬ ಇನ್ನೊಂದು ಮಾದರಿಯ ನಾಟಕಗಳನ್ನು ರಚಿಸಿದನು. ವಿನೋದವಾಙ್ಮಯ ವಿಶಾರದರು ದೊರೆಯುವುದು ಅತಿ ಕಠಿಣವಾಗಿದೆ. ಅದ ರಲ್ಲಿಯೂ ಉಳಿದ ರಸಗಳೊಡನೆ ಮಿಶ್ರವಾಗದೆ ಶುದ್ಧ ವಿದ್ದ (pure) ಸರಸ ಭದ್ರ ರೂಪಕವನ್ನು ರಚಿಸುವ ಪ್ರತಿಭಾಶಾಲಿಯು ನೂರಾರು ವರ್ಷಗಳಲ್ಲಿ ಒಮ್ಮೆ ಹುಟ್ಟುವನು. ಮೋಲಿಯರನು ಅಂಥ 'ಸದಮಲ ಪ್ರತಿ ಭಾಂಚಿತ'ರಲ್ಲಿ ಒರ್ವನಾಗಿದ್ದಾನೆ.

ಹೃದಯಸ್ಪರ್ಶಿಯಾದ ರುದ್ರರೂಪಕಕ್ಕೂ ಬುದ್ಧಿ ಗಮ್ಯವಾದ ಭದ್ರರೂಪಕಕ್ಕೂ ಇರುವ ಅಂತರವನ್ನು ಕೆಲವು ಉದಾಹರಣೆಗಳಿಂದ ಇಲ್ಲಿ ಸ್ಪಷ್ಟೀಕರಿಸಬಹುದು. ಈ ನಾಟಕದ ಕಥೆಯಿಷ್ಟು: ಸುಸ್ವಭಾವದ ಶಂಕರಪ್ಪನ ತಾಯಿ ಪಾರ್ವತೆಮ್ಮ, ಹೆಂಡತಿ ಶಾರದೆಯು, ಮತ್ತು ಮಕ್ಕಳು ಸರಸ್ವತಿ, ಲಲಿತ, ಹಾಗು ರಾಮು ಎಂದಿ ದ್ದಾರೆ. ಕೃಷ್ಣಮೂರ್ತಿಯು ಶಂಕರಪ್ಪನ ಬೀಗ. ಅನಂತನು ಲಲಿತೆಯನ್ನು ಲಗ್ನವಾಗಲಪೇಕ್ಷಿಸುವ ಯುವಕ. ಸುಬ್ಬಾಶಾಸ್ತ್ರಿ ಎಂಬ 'ಕಾರ್ಯಸಾಧು'ವು ಶಂಕರಪ್ಪನ ಮೇಲೆ ತನ್ನ ವರ್ಚಸ್ಸನ್ನು ಚೆನ್ನಾಗಿ ಬೀಳಿಸಿ ಅವನ ಪ್ರಪಂಚದ ಸುಖವನ್ನು ತಾನು ಅಪಹರಿಸಲು ಪ್ರಯತ್ನಿಸುತ್ತಿರುವನು. ಆದರೆ ಕಾಲಾಂತರದಲ್ಲಿ ಇವನ 'ಕಾರ್ಯಸಾಧುತ್ವ'ವು ಶಂಕರಪ್ಪನಿಗೆ ಹೇಗೆ ಗೋಚರವಾಯಿತೆಂಬುದೇ ಇಲ್ಲಿ ಚಿತ್ರಿತವಾಗಿದೆ.

ಇನ್ನು ಮೊದಲನೆಯ ಸನ್ನಿವೇಶವನ್ನು ನೋಡುವಾ. ಕ್ರುದ್ಧಳಾದ ಪಾರ್ವತೆಮ್ಮನು ತನ್ನ ಸೊಸೆ ಹಾಗು ಮೊಮ್ಮಕ್ಕಳ ಮೇಲೆ ಮಾಡಿದ ಪುಷ್ಪವೃಷ್ಟಿಯು ನಮ್ಮ

CC-0. Jangamwadi Math Collection. Digitized by eGangotri

ಅಂತಃಕರಣವನ್ನು ಸೇರುವುದಿಲ್ಲ; ಆದರೆ ನಮ್ಮನ್ನು ನಗಿಸುವುದು. ಸುಧಾರಣೆಯ ಹಾದಿಯನ್ನು ಹಿಡಿದ ತರುಣವರ್ಗವು ಸಾಂಪ್ರದಾಯಿಕ ವರ್ತನೆಯಲ್ಲಿ ಸಿಲ್ಕಿ ಬಿದ್ದ ಹಿರಿಯರ ಅಸಂತುಷ್ಟತೆಗೆ ಹೇಗೆ ಪಾತ್ರವಾಗುವುದೆಂಬ ಮಾತೇ ಈ ನಗೆಯ ಮೂಲ ಕಾರಣವಾಗಿದೆ. ಅದರಂತೆ ಸುಬ್ಬಾಶಾಸ್ತ್ರಿಯು ಶಾರದೆಗೆ ಮೋಹಿಸಿ ಆಕೆಯ ಮನವೊಲಿಸಲು ಪ್ರಯತ್ನಿಸುವಾಗ ಶೃಂಗಾರ ರಸದ ಪೋಷಣೆಯಾಗುವುದಿಲ್ಲ. ಆದರೆ ಶಾಸ್ತ್ರಿಯ ನೀಚತನವು ಬೈಲಿಗೆ ಬಿದ್ದು ಜನರು ತಾವು ಮೋಸ ಹೋಗುವುದಲ್ಲದೆ ಜನರನ್ನು ಹೇಗೆ ಮೋಸಗೊಳಿಸುವರೆಂಬುದು ನಮಗೆ ಚೆನ್ನಾಗಿ ಮನದಟ್ಟಾಗುವುದು.

High comedy ಇಲ್ಲವೆ ಸರಸ ಭದ್ರರೂಪಕದ ರೀತಿಯನ್ನೂ ಸಹ ನಾವು ಇಲ್ಲಿ ಕಾಣಬಹುದು. ಆದರೆ ಅದನ್ನು ವಿಂಗಡಿಸಿ ಹೇಳುವುದು ಬಲು ಕಷ್ಟವಾಗಿದೆ. ಸಂವಿಧಾನಕವು ಇನ್ನೊಂದು ತೂಕ ಹೆಚ್ಚಾಗಿದ್ದರೆ ಇದೊಂದು ಹುಚ್ಚಾಟವಾಗುತ್ತಿತ್ತು. ಲಲಿತ, ಸರಸು, ಅನಂತ ಮುಂತಾದ ಸಾಮಾನ್ಯ ಪಾತ್ರಗಳಲ್ಲಿಯೂ ಒಂದೊಂದು ಸ್ವಭಾವವೈಚಿತ್ರ್ಯವಿದ್ದರೆ ಇದೊಂದು Comedy of humours ಇಲ್ಲವೆ ಸ್ವಭಾವ ವೈಚಿತ್ರ್ಯ ನಿದರ್ಶಕ ರೂಪಕವಾಗುತ್ತಿತ್ತು. ಇಲ್ಲಿ ವ್ಯಕ್ತಿಶಃ ಪ್ರತಿಯೊಂದು ಪಾತ್ರದ ಸೂಕ್ಷ್ಮಸ್ವಭಾವ ನಿರೀಕ್ಷಣೆಯಿರದಿದ್ದರೆ ಇದೊಂದು ಸಾಮಾಜಿಕ ರೂಪಕವಾಗುತ್ತಿತ್ತು. ಆದರೆ ಇವೆಲ್ಲ ಗುಣಗಳೂ ಸಂದರ್ಭಾನುಸಾರವಾಗಿದ್ದು ಮಾನವ್ಯದ ನಿರಂತರವಾದ ಗುಣಗಳನ್ನು ಬುದ್ಧಿಶಾಲಿಯ ಸುಸಂಸ್ಕೃತನ, ವಿನೋದಿಯ ಹಾಗು ವಿಡಂಬನಟೀಕಾಕಾರನ ದೃಷ್ಟಿಪಥದಿಂದ ನೋಡಿ ವಿಮರ್ಶಿಸುವ ಬಗೆಯು ಇಲ್ಲಿ ಸಹಜವಾಗಿ ಇದ್ದುದರಿಂದ ಇದೊಂದು ಸರಸ ಭದ್ರರೂಪಕವಾಗಿದೆ.

ಇದು ಮೋಲಿಯರನ 'ಟಾರ್ಟಫ್' ಎಂಬ ನಾಟಕದ ರೂಪಾಂತರವೆಂದು ಹಿಂದೆ ಹೇಳಿತಷ್ಟೆ. ಇನ್ನು ರೂಪಾಂತರದ ಯಶಾಪಯಶಗಳನ್ನು ವಿಮರ್ಶಿಸುವಾ. ಮೂಲಗ್ರಂಥದ ಮಾರ್ಪಾಟು ಇಲ್ಲಿ ಅನೇಕ ಬಗೆಯಿಂದ ಆಗಿದೆ. ಅವುಗಳನ್ನು ಸೋದಾಹರಣವಾಗಿ ಇಲ್ಲಿ ಕೊಟ್ಟಿದೆ: (೧) ಮೂಲದಲ್ಲಿದ್ದ ಕೆಲವು ಹೊಸ ಮಾತುಗಳನ್ನು ಸೇರಿಸುವುದು. ಈ ಮಾತುಗಳು ಯಥೋಚಿತವಾಗಿ ಸೇರಿಸಲ್ಪಟ್ಟಿವೆ: ಪು. ೪. ಪಾರ್ವತೆಮ್ಮನಿಗೆ ಶಾರದೆಯ ಉತ್ತರ. (೨) ನಮ್ಮ ಸಮಾಜದ ನಡಾವಳಿಯನ್ನನುಸರಿಸಿ ಕೆಲವು ಮಾತುಗಳನ್ನು ಬದಲಿಸಿಕೊಂಡಿದೆ. ಟಾರ್ಟಫ್‌ನು Pilgrim's Progress ಎಂಬ ಗ್ರಂಥದಲ್ಲಿ ಕರವಸ್ತ್ರವನ್ನಿಟ್ಟದ್ದಕ್ಕಾಗಿ ಡೋರಿನಾ ಇವಳನ್ನು ಬಯ್ಯುತ್ತಾನೆ. ಆದರೆ ಶಾಸ್ತ್ರಿಯು ಸರಸ್ವತಿಯನ್ನು ಮೇಲಿಂದಮೇಲೆ ಬೈತಲವನ್ನು ತಿದ್ದಿಕೊಳ್ಳುವಳೆಂದು ಹೀಯಾಳಿಸುತ್ತಾನೆ. 'Cato of our age' ಎಂಬುದಕ್ಕೆ 'ಬೃಹಸ್ಪತಿ' ಎಂದು ಸಂಧಿಸಿದೆ. (೩) ಪ್ರಾಂಸದ ವಿಲಾಸನಿರತ ಸಮಾಜದಲ್ಲಿ ಸಹಜವಾಗಿ ಬರುವ ಕೆಲವು ಸ್ವಚ್ಛಂದದ ಮಾತುಗಳನ್ನು ಬಿಟ್ಟಿದೆ. ಸುಬ್ಬಾಶಾಸ್ತ್ರಿಯು ಟಾರ್ಟಫ್‌ನಂತೆ ಶಾರದೆಯ ಕೈಹಿಡಿಯುವುದಿಲ್ಲ. (೪) ಕೆಲವು ದೊಡ್ಡ ದೊಡ್ಡ ಭಾಷಣಗಳ ಸಾರಾಂಶವು ಮಾತ್ರ ಇಲ್ಲಿ ದೊರಕುವುದು. ೫ನೆಯ ದೃಶ್ಯದಲ್ಲಿ ಕೃಷ್ಣಮೂರ್ತಿಯು ಶಂಕರಪ್ಪನಿಗೆ ಮಾಡಿದ ಉಪದೇಶ (ಪುಟ. ೧೬; ೭೦). (೫) ಒಮ್ಮೊಮ್ಮೆ ಒಂದು ಪಾತ್ರದ ಮಾತುಗಳನ್ನು ರೂಪಾಂತರದಲ್ಲಿ ಇನ್ನೊಂದು ವ್ಯಕ್ತಿಯು ಆಡುವ ಹಾಗೆ ಮಾಡಿದೆ. (೬) ಸಂವಿಧಾನಕದ ನೈಜತೆಯನ್ನು ಹೆಚ್ಚಿಸಲು ಕೆಲವು ಮಾತುಗಳನ್ನು ಹಾಕಿದೆ. ರೂಪಾಂತರದಲ್ಲಿ ರಾಮುವು ಸಿಟ್ಟಿನ ಭರದಲ್ಲಿ "ಆಸ್ತಿಯನ್ನೆಲ್ಲ ಅವನಿಗೇ ಬರೆದುಕೊಡು" ಎಂದು ಹೇಳಿದ ಮೇಲೆಯೇ ಶಾಸ್ತ್ರಿಗೆ ಶಂಕರಪ್ಪನು ತನ್ನ ಆಸ್ತಿಯನ್ನು ಬರೆದುಕೊಡುತ್ತಾನೆ.

ಲೇಖಕರು ತಾವಾಗಿಯೇ ಕಲ್ಪಿಸಿದ ನಾಟಕದ ಭಾಗಗಳನ್ನು ಪರೀಕ್ಷಿಸುವುದು ಅವಶ್ಯವಿದೆ. (೧) ಭೂಮಿಕಾ ಸೂಚನೆಗಳನ್ನು (stage directions) ಪ್ರತಿಯೊಂದು ದೃಶ್ಯದಲ್ಲಿ ಆಧುನಿಕ ನಾಟಕಕಾರರ ಪದ್ಧತಿಯನ್ನನುಸರಿಸಿ ಪರಿವರ್ತಕರೇ ಜೋಡಿಸಿದ್ದಾರೆ. (೨) ಅನೇಕ ದೃಶ್ಯಗಳನ್ನೊಳಗೊಂಡ ೫ ಅಂಕುಗಳನ್ನು ೫ ಪ್ರವೇಶಗಳನ್ನಾಗಿ ಮಾಡಿದ್ದಾರೆ. (೩) ಸ್ವಯಂವರದ ಸಂಪ್ರದಾಯವಿಲ್ಲದ ನಮ್ಮ ಸಮಾಜಕ್ಕೆ ಅನ್ವಯಿಸುವಂತೆ ಅನಂತನನ್ನು ಲಲಿತೆಯ ಮನೆಯಲ್ಲಿರುವ ವಿಶ್ವಾಸಪಾತ್ರನಾದ ತರುಣನನ್ನಾಗಿ ಮಾಡಿದ್ದಾರೆ. (೪) ಗಾಡಿಗೆ ಹೋಗುವ ಗಡಿಬಿಡಿಯಲ್ಲಿ ಪಾರ್ವತೆಮ್ಮನು ರೇಗಿಗೆದ್ದಿರುವುದು ಮನೋಹರವಾಗಿದೆ. (೫) ಟಾರ್ಟಫ್ ನಾಟಕದ ಕೊನೆಯಲ್ಲಿ ಅಧಿಕಾರಿಯು ಒಮ್ಮಿಂದೊಮ್ಮೆ ಟಾರ್ಟಫ್‌ನನ್ನು ಬಂಧಿಸುವುದು ಅಸಂಭವನೀಯವಾಗಿ

CC-0. Jangamwadi Math Collection. Digitized by eGangotri

ತೋರುತ್ತದೆ. ಈ ಸಂಶಯವನ್ನು ಹೋಗಲಾಡಿಸುವುದಕ್ಕಾಗಿ ಇನ್ಸಪೆಕ್ಟರರು ಗುಪ್ತವಾಗಿ ಮೊದಲೊಮ್ಮೆ ಶಂಕರಪ್ಪನ ಮನೆಗೆ ಬಂದು ಹೋದಂತೆ ಬರೆದಿದ್ದಾರೆ. (೬) ಅರಸನು ನಾಟಕವನ್ನು ನೋಡಲು ಬಂದಿರಲು ಮೋಲಿಯರನು ತನ್ನ ನಾಟಕದ ಕೊನೆಗೆ ಸೇರಿಸಿದ ಅರಸನ ಸ್ತುತಿಪಾಠವನ್ನು ಪರಿವರ್ತಕರು ಬಿಟ್ಟುಬಿಟ್ಟಿದ್ದಾರೆ. ಇವೆಲ್ಲ ಮಾರ್ಪಾಟುಗಳು ಸುಂದರವಾಗಿದ್ದು ಅವರ ರಚನಾಕೌಶಲ್ಯವನ್ನು ಪೂರ್ಣವಾಗಿ ಬೆಳಕಿಗೆ ತರುತ್ತವೆ. ಆದರೆ ಈ ರೂಪಾಂತರದಲ್ಲಿ ಕೆಲವು ದೋಷಗಳೂ ಇವೆ:

(೧) ಎಲ್ಮೀರಾ ಹಾಗು ಶಾರದೆ ಇವರ ಸ್ವಭಾವದಲ್ಲಿ ಬಹಳ ಅಂತರವಿದೆ. ಇಲ್ಲಿ ಮೂಲವನ್ನು ಲೇಖಕರು ಕಾಯ್ದಿದ್ದರೆ ಚೆನ್ನಾಗುತ್ತಿತ್ತು. ಎಲ್ಮೀರಳಂತೆ ಪ್ರೌಢೆಯಾಗಿ ಸುಸಂಸ್ಕೃತಳಿದ್ದು ಅಂಜಿಕೆಯನ್ನೇ ಅರಿಯದೆ ಇರುವ ಇಂದಿನ ಆರ್ಯ ಸ್ತ್ರೀಯಂತೆ ಶಾರದೆಯನ್ನು ಚಿತ್ರಿಸುವುದನ್ನು ಬಿಟ್ಟು ಲೇಖಕರು ಸಂಪ್ರದಾಯದ ಕೋಳೆಯಲ್ಲಿ ಸಿಕ್ಕು ಬಿದ್ದು ಬಾಗಿ ಬಳಕುವ ಗೃಹಿಣಿಯಂತೆ ಅವಳನ್ನು ಚಿತ್ರಿಸಿದ್ದಾರೆ. ಮೋಲಿಯರನಿಗೆ ಸ್ತ್ರೀಸ್ವಭಾವದ ಶ್ರೇಷ್ಠತೆಯ ವಿಷಯವಾಗಿ ದೃಢವಾದ ನಂಬಿಗೆಯಿತ್ತು. ಇಲ್ಲದಿದ್ದರೆ ಎಲ್ಮೀರಾ, ಡೋರಿನಾ, ಮೇರಿಯಾನೆ, ಮುಂತಾದ ಉಚ್ಚ ತರಗತಿಯ ತರುಣಿಯರನ್ನು ಆತನೆಂದೂ ಕಲ್ಪಿಸುತ್ತಿರಲಿಲ್ಲ. ಟಾರ್ಟಫನು ಮೈಮುಟ್ಟ ಬರಲು ಶಾರದೆಯಂತೆ ಎಲ್ಮೀರಳು 'ಗಾಬರಿಗೊಂಡು' "ಸರಸು! ರಾಮು!" ಎಂದು ಕೂಗದೆ ಶಾಸ್ತ್ರಿಯನ್ನು ಪೆದರಿಸಿ ಅವನ ಅವಹೇಲನೆಯನ್ನು ಮಾಡಿ ಮತ್ತೆ ಲಲಿತೆಯ ಲಗ್ನದ ಪ್ರಸ್ತಾಪವನ್ನೆತ್ತುತ್ತಾಳೆ. ರಾಮುವು ಶಾಸ್ತ್ರಿಯನ್ನು ಎಳೆಯುವಾಗ "ಗದ್ದಲ ಹತ್ತಿಸಿ ಬಿಡಬೇಡ. ಊರಿಗೆಲ್ಲ ಹರಡೀತು" ಎಂದು ಭಯಗ್ರಸ್ತಳಾದ ಶಾರದೆಯಂತೆ ಹುಚ್ಚು ಮಾತುಗಳನ್ನಾಡದೆ ಪ್ರೌಢೆಯಂತೆ ವಿನೋದಕರವಾಗಿ ಹೀಗೆ ನುಡಿಯುತ್ತಾಳೆ: "No, Damis, 'tis enough that he reforms......a wife will make herself merry with such follies and never trouble her husband's ears with them." "We know how to defend ourselves." ವ್ಯಕ್ತಿವ್ಯಕ್ತಿಯಲ್ಲಿಯೂ ಇರುವ ಮಾನವೀಯತೆಯನ್ನು ತಮ್ಮ ಹೆಣ್ಣುತನವು ಕೊಲ್ಲದಂತೆ ನೋಡಿಕೊಳ್ಳುವ ಮಹಿಳೆಯರು ಇಂದು ನಮ್ಮ ನಾಡಿನಲ್ಲಿ ಬೇಕಾಗಿದ್ದಾರೆ. ಇಂಥದೊಂದು ಮಾದರಿಯು ತಮ್ಮ ಕಣ್ಣೆದುರಿಗಿದ್ದರೂ ಲೇಖಕರು ಅದನ್ನು ಅಲಕ್ಷಿಸಿರುವುದು ವಿಷಾದಕರವಾಗಿದೆ.

(೨)ಆನೆಯ ದೃಶ್ಯದಲ್ಲಿರುವ ಶಾರದಾ–ಶಾಸ್ತ್ರಿಗಳ ಸನ್ನಿವೇಶವು ಮೂಲದಲ್ಲಿಯಷ್ಟು ಸುಂದರವಾಗಿಲ್ಲ. ಅದಲ್ಲದೆ ಶಾರದೆಯನ್ನು ಅಪ್ಪಿಕೊಳ್ಳಲು ಹೋಗುವ ಶಾಸ್ತ್ರಿಯು ಕೂಡಲೆ ಆಕೆಯ ಸ್ಥಳದಲ್ಲಿ ಶಂಕರಪ್ಪನನ್ನು ಕಾಣುವುದು ಇಲ್ಲಿ ವಿದಿತವಾಗಿಲ್ಲ.

(೩) ಏನು ಮಾಡಿದರೂ ಪರಿವರ್ತಕರು ಮೂಲದಲ್ಲಿ ಇರುವ ಮಹತ್ತ್ವದ ಕಾಗದಗಳಿದ್ದ ಕರಂಡಕವನ್ನು ಇಲ್ಲಿಯೂ ತರಬೇಕಾಗಿತ್ತು. ಅದರ ಉದ್ದೇಶವು ಹೀಗಿದೆ: ಅರಸನು ಸಿಟ್ಟಾದ ಹೊತ್ತಿನಲ್ಲಿ ಆನಂತನು ಶಂಕರಪ್ಪನೊಡನೆ ಸಹಾನುಭೂತಿಯನ್ನು ತೋರಿಸಿ ಮತ್ತೆ ಅವನ ವಿಶ್ವಾಸವನ್ನು ಸಂಪಾದಿಸುತ್ತಾನೆ. ಇದರಿಂದ ಲಲಿತಾ–ಅನಂತರ ವಿವಾಹವು ಆಗುವದಿದೆಯೆಂದು ಮನದಟ್ಟಾಗುವುದು.

(೪) ಮೂಲದಲ್ಲಿ ಟಾರ್ಟಫ್‌ನೇ ಅರಸನ ಅಪ್ಪಣೆಯನ್ನು ಪಡೆದು ಒರ್ವ ಅಧಿಕಾರಿಯೊಂದಿಗೆ ಶಂಕರಪ್ಪನನ್ನು ಬಂಧಿಸಲು ಬರುತ್ತಾನೆ. ಮುಂದೆ ಎಲ್ಲರೂ ಅಸಹಾಯರಾಗಿ ದಿಕ್ಕುಗಾಣದೆ ನಿಂತಿರಲು ಆ ಅಧಿಕಾರಿಯೇ ಟಾರ್ಟಫ್ (ಶಾಸ್ತ್ರಿ)ನನ್ನು ಬಂಧಿಸುವನು. ಈ ಸನ್ನಿವೇಶದ ಸೌಂದರ್ಯವು ರೂಪಾಂತರದಲ್ಲಿಲ್ಲ.

ನಾಟಕವು ಇವಿಷ್ಟು ದೋಷಗಳಿಂದ ಮುಕ್ತವಾದಲ್ಲಿ ಸರ್ವಾಂಗಸುಂದರವಾಗಿ ಸರಸ ಭದ್ರರೂಪಕದ ಉತ್ತಮ ಮಾದರಿಯಾಗುವದೆಂಬುವಲ್ಲಿ ಯಾವ ಸಂಶಯವೂ ಇಲ್ಲ.* ಪರಿವರ್ತಕರ ಕಲಾಕೌಶಲ್ಯವು ಅತ್ಯಂತ ಪ್ರಶಂಸನೀಯವಾಗಿದೆ.

ಹೀಗೆ 'ಕಾಮೆಡಿ'ಯ ವಿಷಯಕ್ಕೆ ಇಲ್ಲಿ ಕೆಲವು ಮಾತುಗಳನ್ನು ಹೇಳುವ ಪ್ರಸಂಗವು ಬಂದಿತು. ಇನ್ನು Farce ಇಲ್ಲವೆ ವಸ್ತುಪ್ರಧಾನರೂಪಕದ ರೀತಿಯನ್ನು ತಿಳಿಯಲಪೇಕ್ಷಿಸುವವರು ಜಯಕರ್ನಾಟಕ ಮಂಡಳದಿಂದ ಪ್ರಸಿದ್ಧವಾದ 'ತಿರುಕರ ಪಿಡುಗು' ಎಂಬ ಗ್ರಂಥವನ್ನು ಓದಿಕೊಳ್ಳಬಹುದು. Farce ಎಂದರೆ ಕೇವಲ ಹುಚ್ಚಾಟವಲ್ಲ. ಅದು ಉತ್ತಮವಾಗಿದ್ದ ಪಕ್ಷದಲ್ಲಿ ಸರಸ ಭದ್ರರೂಪಕದಷ್ಟೆ ಪ್ರಶಂಸನೀಯವಾಗಿ ಪರಿಣಮಿಸುವುದು.

---

* 'ಆಷಾಢಭೂತಿ' ಗ್ರಂಥವನ್ನು ಮೋಲಿಯರನ ನಾಟಕದ ಇಂಗ್ಲಿಷ ಭಾಷಾಂತರದ ಆಧಾರದಿಂದ ವಿಮರ್ಶಿಸಿದೆ.



CC-0. Jangamwadi Math Collection. Digitized by eGangotri

# ಮಸಣದಲ್ಲಿ

ಲೇ—ಕೃಷ್ಣಕುಮಾರ ಕಲ್ಲೂರ

[ಧಾರವಾಡದಲ್ಲಿ ಶುಕ್ರವಾರ ಪೇಟೆಯಿಂದ ಸೋಮೇಶ್ವರಕ್ಕೆ ಹೋಗುವ ದಾರಿಯಲ್ಲಿ, ಹಿರೇಕೆರೆಯನ್ನೂ ಗಚ್ಚಿನ ಭಾವಿಯನ್ನು ಮಿಕ್ಕಿ ಮುಂದೆ ಹೋದರೆ ಈ ದಾರಿಗೆ ಹೊಂದಿಯೇ ಎಡಗಡೆಗೆ ಜೋಡಿಯಾದೆರಡು ಗೋರಿಗಳ ತಲೆಗಿಂಬಿಗೆ ಎರಡು ಕಲ್ಬರೆಹಗಳು(Epitaphs) ಕಾಣುವವು. ಈ ಗೋರೆಗಳು ಇಬ್ಬರು ತೆಲುಗರ ಮಕ್ಕಳವು. ಆ ಕಲ್ಬರೆಹಗಳಿಂದ, ಅವರಿಬ್ಬರು ಅಣ್ಣತಂಗಿಯರೆಂದೂ, ಇಬ್ಬರೂ ತ[illegible] ತಮ್ಮ ೧೪ನೆಯ ವಯಸ್ಸಿಗೆ ತೀರಿದಂತೆಯೂ ತಿಳಿಯುವದು. ನಮ್ಮಲ್ಲಿ ಹೀಗೆ ಕಲ್ಬರೆಹಗಳನ್ನು (Epitaphs) ಬರೆಯುವ ರೂಢಿ ಕ[illegible] ಈ ಕಲ್ಬರೆಹಗಳಲ್ಲಿ ಕೊರೆದಿಟ್ಟ ಮಾತುಗಳೇನೊ ಬಹಳ ಹೃದಯಸ್ಪರ್ಶಿಯಾಗಿವೆ.]

೧

ಇಹುದೊಂದು ಕಾರಣವು;-ಕೇಳಬೇಡಿರಿ ಅದನು-;
ಆಕತದಿ ನಿತ್ಯ ಮಸಣದ ಯಾತ್ರೆ ನನಗಿಹುದು;
ಈ ಯಾತ್ರೆಯಲಿ ನನ್ನ ಮನಕೆ ಮೆಚ್ಚಿಕೆಯುಂಟು;
ಇದರಿಂದ ನನ್ನೆದೆಯು ಹಗುರಾಗಿ ತೇಲುವದು.
-ಸಾವು ಹುಟ್ಟಿನ ತೊಟ್ಟಿಲಡ ಚಟ್ಟಿನಲಿ ಮಲಗಿ,
ನಗುವು ಅಳುವಿನ ನಡುವೆ ತೂಗಾಡಿ, ಕೊನೆಗೊಮ್ಮೆ
ಚಿರನಿದ್ರೆಗೈವ ಇಲ್ಲಿಯ ಜನರ ನೆನಪಿನಲಿ
ಮೂಡಿ ತೋರ್ಪುದು ಜಗದ ಕಹಿಯೆಲ್ಲವನು ಮಿಕ್ಕ
ಸವಿಯೊಂದು !—ಅದಕಾಗಿ ಹಂಬಲಿಸಿ ನಾ ಗೈವ
ಈ ನಿತ್ಯ ಯಾತ್ರೆಯಲಿ, ನನ್ನೊಡಲ ದುರ್ಭರದ
ದುಃಖವಿನಿಸಿನಿಸಾಗಿ ಸವೆಯುತಿಹುದು !

೨

ಈ ಮಸಣದಂಚಿನಲಿ, ಜೋಡಿಯಲಿ ಮಲಗಿಹರು
ನಿತ್ಯನಿದ್ರೆಯ ತೊಡೆಯೊಳಿಬ್ಬರೆಳೆಗೂಸುಗಳು !—
ಅಣತಂಗಿಯರವರು !-;ಅವರ ಪ್ರೇಮಕೆ ಸವೆವ
ಜೀವಗಳ ಸೈಪಿಡುವ, ಆ ಮಗುಗಳೆದೆಯೊಲವೆ
ಒಡನುಡಿಯುವಂತಿರುವ, ಎರಡು ಕಲ್ಬರೆಹಗಳು
ದಾರಿಗರ ಕಣ್ಸೆಳೆದು ಕರೆಯುತಿಹವು.

ಮೂಕ ಶಿಲೆಗಳ ಮಾತಿನಿಂದ ನುಡಿಯುವರವರು:-
"* ಹುಟ್ಟಿಬಂದಕ್ಕರೆಯ ಜೀವಗಳ ನೋಯಿಸಿದೆ-
ವಾದರೂ, ನಾವು ನರಲೋಕದೆಲ್ಲಾ ಕಷ್ಟ
ಗಳ ನೀಗಿ ಸ್ವರ್ಗದಲಿ ಸುಖಿಸುತಿಹೆವೆಂಬುದನು
ಅರಿತು, ನಮ್ಮಯ ಜೀವವನು ಪ್ರೇಮವನು ನೆಚ್ಚಿ
ಮೆಚ್ಚಿದವರಾರಾರು ಕೊರಗದಿರಲಿ !'

೩

ಎಲೆ ಮಕ್ಕಳಿರ ! ನೋವು ತೀವಿದೀ ಜೀವನವ
ದಾಟಿ ಪಾರಾಗಿ ತೀರವ ಕಂಡು, ಕೊನೆಗೊಮ್ಮೆ
ಅಳಲು ಸುಳಿಯದ ಸುಖದ ಲೋಕವನು ಸೇರಿ[illegible]
ನಿಮ್ಮೆದೆಯು ಅಳುವ ಮರೆದಿರಬಹುದು ! ಜೀವ[illegible]
ಕೊರಗುಕೊರತೆಯನರಿಯದಂಥ ಚಿರನೂತನದ
ನಗೆಯು ನಿಮ್ಮಯ ಕಳೆಯ ಬೆಳಗುತ್ತಲಿರಬಹು[illegible]
—ಆದರೀ ಕೀಳ್ನೆಲದಿ, ನಮ್ಮ ಕಿರಿಜೀವನದಿ,
ಕಣ್ಣೀರ ಮೋಡಗಳೆ ತುಂಬಿದೀ ಮುಗಿಲಿಂದ
ಎಡೆಬಿಡದೆ ಅಳುವು ಮಳೆ ಕರೆವಾಗ, ಮಾನವರ
ಎದೆಯೊಡಲು ನೆರೆಯ ಸೆಳವಿಗೆ ಸಿಕ್ಕು ಕೊರೆವಾ[illegible]
ಎಂದಾದರೊಮ್ಮೊಮ್ಮೆ ಹುಸಿಮಿಂಚುನಗೆಯೊ[illegible]
ಸುಳಿಬಳಿದು ಅಣಕವನ್ನಾಡುತಿಹುದು !

§ § § §

೪

ದನಗಾಹಿಗಳು ಕೊಳಲ ನುಡಿಸಿ ನಲಿಯುವರಲ್ಲಿ
ಹಕ್ಕಿಪಕ್ಕಿಗಳೆಲ್ಲ ಮುಗಿಲ ಮಾಟಕೆ ಮರುಳು-
ಗೊಂಡು ಉಲಿಯುವವಿಲ್ಲಿ; ಅತ್ತ ನೋಡಾಯೆಡೆ
ತಿರುಕರನಿಬರು ಸೇರಿ ಜಗಳವಾಡುತಲಿಹರು;
ಚಿಕ್ಕಮಕ್ಕಳು ಕೆಲವರಿತ್ತ ಕೆಲೆದಾಡುವರು;
ಅಲ್ಲಿ ಕೆಲ ನೀರೆಯರು ನೀರು ತರೆ ಸಾರುವರು;

* ಇಲ್ಲಿ, ಬಹುಮಟ್ಟಿಗೆ, ಆ ಕಲ್ಬರೆಹಗಳಲ್ಲಿ ಬರೆದುದನ್ನು ಅನುಸರಿಸಿದ್ದೇನೆ.

CC-0. Jangamwadi Math Collection. Digitized by eGangotri

ಇತ್ತ ಬೇರೆಡೆಯಲ್ಲಿ ಚೊಕ್ಕ ಹಸುಗಳ ಕೆಲವು
ರಿಂಗಣಂಗುಣಿದು ಚಕ್ಕಂದದಿಂದೋಡುವವು;
ಆಯೆಡೆಯ ಮರಡಿಯಲಿ, ಬೆಡಗಿಗಳ ಜೀಡಿನಲಿ.§
ತರತರದ ಸಿಂಗರವು ಕೂಡಿಯೆಡೆಯಾಡುವದು;
—ಇಂತು, ಎಲ್ಲೆಡೆಯಲ್ಲಿ 'ಚೇತನ'ವು ಚಲಮಲಿಸಿ
ಲಾಸ್ಯತಾಂಡವವಾಡಿ ತಣಿವಾಗ, ಮಸಣದೀ
ಎಡೆಯಲ್ಲಿ 'ಆನಂದ' ಭೂತದೊಲು ಕುಣಿಯುವದು!
'ಪ್ರೇಮ'ಕಂಣಿಲಿಯಾಗಿ ಅಲೆದಲೆದು ದಣಿಯುವದು!
'ಜೀವನ'ವೆ ನಿರ್ಜೀವವಾಗಿ ಮಲಗಿಹುದಿಲ್ಲಿ!
ಅದರ ಬದಿಯಲಿ ಕುಳಿತು 'ವಿರಹಯಾತನೆ'
ಯೊಂದು
ವೆಮೌನಗಾನದಿ ನೆರಳಿ ಹಾಡಿ ಒರಲುತಲಿಹುದು!

ಗೋಳಿಡುತ ಬೀಸುವೀ ಗಾಳಿಯಾ ಹಾಡಿನಾ
ಆಲಾಪನೆಗೆ ಶ್ರುತಿಯ ಹಿಡಿಯುತಿಹುದು!

§ § § §

೫

'ಚೊಕ್ಕ ಮಕ್ಕಳೆ!' ನಿಮ್ಮ ಮರುಕದಕ್ಕರೆಯವರು
ಚಿರನಿರಂತರ ವೇದನೆಯ ಉರಿಯ ನರಕದಲಿ
ಹೊರಳಿ ನೆರಳುವರಿಲ್ಲಿ; ಅವರ ಹೃದಯದ ನಗೆಯು
ಕರಗಿ, ನೀರಾಗಿ, ನೆರೆಯಾಗಿ ಹರಿಯುತಲವರ
ಕೊಚ್ಚಿ ಕೊಂಡೊಯ್ಯುತಿರೆ, ಅದರ ಸೆಳವನು ತಡೆಯೆ
ಆಧಾರವಿನ್ನೆಲ್ಲಿ ಕಂದಗಳಿರಾ! '..............
ನಿಮ್ಮಳಿವಿಗಲ್ಲ; ನಾವಳುತಿಹುದು ನಮ್ಮೆದೆಯ
ಸಂಕಟಕೆ. ನಮ್ಮ ಈ ಅಳುವಿನೀ ನಿತ್ಯ ನಿ-
ರ್ವೇದನೆಯ ಗೀತದಲಿ ಬೆರೆಬೆರೆದು, ನಿಮ್ಮಂಥ
ಅಪರಿಮಿತ 'ಆನಂದಕಂದ' ಗಳ ಕಳಕೊಂಡ
ವಿಶ್ವದುಸಿರಿಂದಿಗೂ, ಎಂದಿಗೂ, ಸುಯ್-ಸುಯ್ದು
ಸೋಯೆಂದು ದನಿಗೂಡಿಸುತ್ತಿರುವದು!

§ ಇಲ್ಲಿಯ ಸಾರಸ್ವತಪುರಕ್ಕೆ ಬಳಕೆಯಲ್ಲಿ ಹೀಗನ್ನುವದುಂಟು. ಗೋರಿಗಳಿದ್ದಲ್ಲಿಂದ ನೋಡಿದರೆ ಇದು ನೇರವಾಗಿ ಇದುರಿಗೇ ಕಾಣುವದು.

## ತಂಗಿ ಅನಸೂಯೆಗೆ

(ಗೆಳೆಯನ ತಂಗಿ ಅನಸೂಯೆಯು ಮನಸ್ಸಿನ ವಿರುದ್ಧ ಊರಿಗೆ ಹೋದ ಮೇಲೆ ಬರೆದು ಕಳಿಸಿದುದು)

ಲೋಕದ ತಾಯೆ
ಶ್ರೀ ಅನಸೂಯೆ
ನನ್ನನು ಕ್ಷಮಿಸು
ನಿನ್ನನು ರಮಿಸು

ಹೃದಯದ ಕರೆಯನು
ಪ್ರೀತಿಯ ಮೊರೆಯನು
ಕೇಳದೆ ಬಂದೆ
ಕಂಬನಿ ತಂದೆ

ನಿನ್ನೆಳೆಗರುಳು
ಒಲವಿನ ತಿರುಳು
ಅದ ಹಗಲಿರುಳು
ಕಾಯುತ ಬಾಳು

ಬಾಳುವೆ ಝಳವು
ಬಡಿದರು ಒಲವು
ಬಾಡದ ಹಾಗೆ
ಹಾಡುತ ಸಾಗೆ

ಬೇಡಿದ ತೆರದಿ
ಬಾಳುವೆ ಇರದು
ನೋಡಿದ ತೆರದಿ
ಇಹುದದು ಕೆಳದಿ

ನೋಡುವುದಕೆ ಒಲ-
ವೊಂದೇ ಬಲ ಬಲ
ಆ ಒಲವಿನ ತಿಳಿ-
ಕಳೆಯನು ತಿಳಿತಿಳಿ

—ರಂಗನಾಥ

CC-0. Jangamwadi Math Collection. Digitized by eGangotri

# ಕರ್ನಾಟಕದ ಐತಿಹಾಸಿಕ ಕಾರ್ಯ

(ಪುಸ್ತಕಗಳ ಟಿಪ್ಪಣಿ)

ಲೇ—ಶ್ರೀ ಎಂ. ಗಣಪತರಾವ ಐಗಳ್, ಬಂಟವಾಳ



**೧ ಕಾರಂಜಿ ಮಹಾತ್ಮೆ**—೧೬ ಪುಟಗಳು. ಬಂಟವಾಳದಿಂದ ಈಶಾನ್ಯಕ್ಕೆ ಕಾರಂಜಿ ಎಂಬ ಒಂದು ಪುರಾಣ ಪ್ರಸಿದ್ಧವಾದ ಸ್ಥಳವಿದೆ. . ಇದರ ಜಾತ್ರೆಗೆ ನಾನು ಯಾವಾಗಲೂ ಹೋಗುತ್ತಿದ್ದೆ ಈ ಸ್ಥಳದ ಮಹಾತ್ಮೆಯನ್ನು ತಿಳಿದುಕೊಳ್ಳಬೇಕೆಂಬ ಆಸೆಯಿಂದ ಇದರ ಸ್ಥಳ ಪುರಾಣ ಹುಡುಕಿದೆ. ಈ ದೇವಸ್ಥಾನದ ಆಡಳಿತೆದಾರರು ತುಳು ಬರಹದಲ್ಲಿ ಸಂಸ್ಕೃತ ಭಾಷೆಯಲ್ಲಿ ಬರೆದ ಒಂದು ಓಲೆಯ ಗ್ರಂಥವನ್ನು ನನಗೆ ದಯಪಾಲಿಸಿದರು. ಇದನ್ನು ಆಧಾರವಾಗಿಟ್ಟುಕೊಂಡು ಕಾರಂಜಿ ಕ್ಷೇತ್ರವನ್ನೂ ಸುತ್ತುಮುತ್ತಲಿನ ಗ್ರಾಮಗಳನ್ನೂ ಸಂಚರಿಸಿ ಕಾರಂಜಿ ಮಹಾತ್ಮೆ ಎಂಬ ಪುಸ್ತಕವು ಬ[illegible]ಲ್ಪಟ್ಟಿದೆ.

**೨ ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇ[illegible]ಹಾಸ**—ಶಾಲಾ ಮಕ್ಕಳಿಗೆ ಭೂಗೋಳ ಪಾಠ ಕಲಿ[illegible]ವಾಗ 'ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆಯನ್ನು [illegible]ವರೆಗೂ ಯಾರೂ ಬರೆಯಲಿಲ್ಲ.' ಎಂಬ ಒಂದು ವಾ[illegible]ವನ್ನು ಒಂದು ಭೂಗೋಳ ಪುಸ್ತಕದಲ್ಲಿ ಓದ[illegible] ಆ ವಾಕ್ಯವು ಮನಸ್ಸಿಗೆ ಬಹಳ ಬೇಸರವನ್ನು ಉಂ[illegible] ಮಾಡಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಾವಿರಾ[illegible] ಮಂದಿ ಗ್ರೇಜುಯೇಟರುಗಳೂ, ಎಲ್. ಟಿ. ಪಾಸ[illegible] ಉಪಾಧ್ಯಾಯರುಗಳೂ, ದೊಡ್ಡ ದೊಡ್ಡ ಹಾ[illegible] ಕೋರ್ಟ ವಕೀಲರುಗಳೂ ಇದ್ದಾಗ್ಯೂ ಯಾರೊಬ್ಬ[illegible] ಈ ಚರಿತ್ರಶೋಧನೆಯ ಕೆಲಸಕ್ಕೆ ಕೈ ಹಚ್ಚಿದ್ದು ಕಂ[illegible] ಬರಲಿಲ್ಲ. ನಾನು ಬರೇ ಮೆಟ್ರಿಕ್ ಪರೀಕ್ಷೆ ಪಾಸಾ[illegible] ಸೆಕೆಂಡರಿ ಗ್ರೇಡ ಉಪಾಧ್ಯಾಯನಾಗಿ ಶೋಧನೆ ಮ[illegible] ಒಂದು ವೇಳೆ ಸಾಧ್ಯವಾದರೆ ಪುಸ್ತಕ ಬರೆಯಬಹುದ[illegible] ಅದನ್ನು ಅಚ್ಚು ಹಾಕಿಸುವದು ಹೇಗೆ? ಅಚ್ಚಾದ[illegible] ನನ್ನಂಥವರು ಬರೆದ ಪುಸ್ತಕ ಕೊಂಡುಕೊಳ್ಳುವ[illegible] ಯಾರು? ಎಂಬ ಪ್ರಶ್ನೆಗಳು ಹೊರಡುತ್ತಲೇ ಇದ್ದ[illegible] ಆದರೆ ಎಲ್ಲ ಭಾರವನ್ನು ಆ ಜಗದ್ರಕ್ಷಕನಾದ ಭಗವಂ[illegible] ಮೇಲೆ ಇಟ್ಟು ಕೆಲಸಕ್ಕೆ ಪ್ರಾರಂಭಿಸಿದೆ. ಅಷ್ಟ[illegible] ತಂದೆತಾಯಿಂದಿರೂ ಪತ್ನಿಯೂ ಒಂದೇ ವರ್ಷದಲ್ಲಿ ಕಾ[illegible]ವಾದರು. ೧॥ ವರ್ಷ ಪ್ರಾಯದ ಒಂದು ಮಗು[illegible] ವರ್ಷದ ಒಂದು ಮಗು ೭ ವರ್ಷಗಳ ಇನ್ನೊಂದು ಮ[illegible] ಈ ಮೂವರನ್ನು ಸಲಹುವ ಕೆಲಸ, ನನ್ನ ಚರಿತ್ರ ಶೋ[illegible]ನೆಯ ಕೆಲಸ, ಹೊಟ್ಟೆ ತುಂಬಿಸಲಿಕ್ಕೆ ಉಪಾಧ್ಯಾಯ[illegible] ಕೆಲಸ ಈ ಮೂರು ಕೆಲಸಗಳನ್ನು ಮಾಡಬೇಕಾಯಿತ[illegible] ಬಂಟವಾಳದ ಸುತ್ತಮುತ್ತಲಿನ ಊರುಗಳಲ್ಲಿ ಸಂ[illegible]

CC-0. Jangamwadi Math Collection. Digitized by eGangotri

ಶೋಧನೆಗೆ ನಡಕೊಂಡೇ ಹೋಗುವಾಗ ಮಕ್ಕಳನ್ನು ನೆರೆಮನೆಗಳಲ್ಲಿ ಬಿಟ್ಟು ಹೋಗುತ್ತಿದ್ದೆ. ನಂತರ ಜಿಲ್ಹೆಯ ದೂರ ದೂರ ಇರುವ ಭಾಗಗಳಿಗೆ ಹೋಗುವಾಗ ಮಕ್ಕಳ ಜಾಗ್ರುತೆ ನೋಡುವುದಕ್ಕಾಗಿ ತಿರುಗಿ ಮದುವೆ ಯಾದೆ. ಸಂಚರಿಸಲಿಕ್ಕೆ ಖರ್ಚಿಗೆ ಹಣವಿರಲಿಲ್ಲ. ಇದ ಕ್ಕಾಗಿ ನಡಕೊಂಡೇ ಸಂಚರಿಸಿದೆ. ಊಟದ ಖರ್ಚಿಗಾಗಿ ನಾನು ಬರೆದ 'ಸಾಬೂನು ತಯಾರಿಸುವ ವಿಧಾನ'ದ ಪುಸ್ತಕವನ್ನು ತೆಗೆದುಕೊಂಡು ಮಾರಲು ಹೋಗು ತ್ತಿದ್ದೆ. ಕೆಲವರು ಕೊಂಡುಕೊಳ್ಳುತ್ತಿದ್ದರು. ಇದರಿಂಧ ದಾರಿಯ ಖರ್ಚಿಗೆ ಸಾಧ್ಯವಾಯಿತು. ೧೯೧೫ ರಲ್ಲಿ ಆರಂಭಿಸಿದ ಈ ಶೋಧನೆಯ ಕೆಲಸವು ಸಾಧಾರಣ ೧೯೩೧ ರಲ್ಲಿ ಹೆಚ್ಚಿನ ಮಟ್ಟಿಗೆ ಮುಗಿಯಿತು. ಇಲ್ಲಿ ಹೇಳಿದ ಮನೆತನದ ಮಾತುಗಳು ನನ್ನ ಗೌರವವನ್ನು ಹೇಳಿಕೊಳ್ಳಲಿಕ್ಕೆ ಬರೆದುವುಗಳಲ್ಲ; ಇತಿಹಾಸ ಸಂಶೋಧ ಕನ ಕೆಲಸವು ಎಷ್ಟು ಸಂಕಷ್ಟಮಯವಾದುದೆಂಬುದನ್ನು ತಿಳಿಸಲು ಬರೆದುವುಗಳಾಗಿವೆ ಅಷ್ಟೆ. ಅಚ್ಚು ಹಾಕಿಸುವ ಕೆಲಸವನ್ನು ಯಾವ ರೀತಿಯಲ್ಲಿ ಮಾಡುವೆವೆಂಬುದನ್ನು ಆಲೋಚಿಸುವಾಗ ಪ್ರಕಟಿಸಲಿಕ್ಕೆ ಸಾಧಾರಣ ಒಂದು ಸಾವಿರ ರೂಪಾಯಿ ಅಂದಾಜಾಯಿತು. ಊಟಕ್ಕೆ ಗತಿ ಯಿಲ್ಲದವನು ಈ ಕೆಲಸಕ್ಕೆಂದು ಯಾವ ರೀತಿಯಲ್ಲಿ ಸಾವಿರ ರೂಪಾಯಿಗಳನ್ನು ಸಾಧ್ಯ ಮಾಡಬೇಕೆಂಬು ದನ್ನು ಆಲೋಚಿಸುವಾಗ ಶ್ರೀ ಶಿವಾಜಿ ಮಹಾರಾಜ ರಿಗೆ ಸಮರ್ಥ ರಾಮದಾಸ ಗುರುಗಳು ಹೇಳಿದ ಬುದ್ಧಿ ಮಾರ್ಗವನ್ನು ನನ್ನ ಅಜ್ಜಮ್ಮನವರು ಹೇಳಿದ ವಿಷಯವು ನೆನಪಿಗೆ ಬಂತು. ನನ್ನ ಸ್ನೇಹಿತರಾದ ಬಿ. ಪಕೀರ ಮಾಸ್ತರರೂ ಸತ್ಯ ಮಿತ್ರ ಬಂಗೇರರೂ ದೇವರು ಈ ವಿಷಯದಲ್ಲಿ ಸಹಾಯ ಮಾಡದೆ ಬಿಡಲಿಕ್ಕಿಲ್ಲವೆಂದು ಧೈರ್ಯ ಹೇಳಿದರು.

ಅಷ್ಟರಲ್ಲಿ, ನಾನು ಸ್ವದೇಶಾಭಿಮಾನಿ ಪತ್ರಿಕೆಗೆ ಲೇಖ ನಗಳನ್ನು ಬರೆಯುತ್ತಿದ್ದೆನಾದ್ದರಿಂದ ಆದರ ಸಂಪಾದಕ ರಾದ ಶ್ರೀಯುತ ಶ್ರೀನಿವಾಸ ಕಾಮತ್‌ರವರು ನನ್ನ ಕೂಡ ಮಾತನಾಡುವದಿದೆಯೆಂದು ಹೇಳಿ ಕಳಿಸಿದರು. ನಾನು ಹೋಗಿ ಮಾತುಕತೆ ನಡೆದಮೇಲೆ ದಕ್ಷಿಣಕನ್ನಡ ಜಿಲ್ಹೆಯ ಚರಿತ್ರೆಯನ್ನು ಶೋಧನೆ ಮಾಡಿ ಬರೆದುದರ ಕುರಿತು ಹೇಳಿದೆ. ಅವರು ಕೂಡಲೇ ಈ ಕೆಲಸಕ್ಕೆ ಉದ್ಯು ಕ್ತರಾದರು. ಹೇಗೋ ೧೯೩೩ನೇ ಇಸವಿ ಮಾರ್ಚ ತಿಂಗ ಳಲ್ಲಿ ಪುಸ್ತಕವು ಪ್ರಕಟವಾಯಿತು. ಇದರಲ್ಲಿರುವ ನಾಲ್ಕು ದೊಡ್ಡ ಪಡಿಯಚ್ಚುಗಳನ್ನು ಜಯಕರ್ನಾಟದ ಆಗಿನ ಸಂಪಾದಕರಾದ ಶ್ರೀ ವೆಂಕಟೇಶ ಭೀಮರಾವ ಆಲೂರ ವರು ದಯಪಾಲಿಸಿದರು. ಅಚ್ಚಾದ ಈ ಪುಸ್ತಕದ ಪ್ರತಿಗಳು ಹೆಚ್ಚಾಗಿ ಖರ್ಚಾಗಲು ಧಾರವಾಡ ಪ್ರಾಂತ್ಯ ದವರೂ ಉತ್ತರ ಜಿಲ್ಹೆಯವರೂ ಇನ್ನಿತರ ದೇಶವತ್ಸ ಲರೂ ಸಹಾಯಕರಾದಾಗ್ಯೂ ನಮ್ಮ ಜಿಲ್ಲೆಯ ಶಾಲೆಗಳ ದೊಡ್ಡ ದೊಡ್ಡ ಉಪಾಧ್ಯಾಯರುಗಳ ಪ್ರೋತ್ಸಾಹವು ಕಡಿಮೆಯಾದ್ದರಿಂದ ಪುಸ್ತಕದ ಖರ್ಚಿನ ಹಣವು ಪೂರ್ಣ ಸಿಕ್ಕುವದು ಕಷ್ಟವಾಯಿತು.

ಶಾರದಾ ಪ್ರೆಸ್ಸಿನವರಿಗೆ ನನ್ನಿಂದ ನಷ್ಟವಾಗಬಾರ ದೆಂದು ಎಲಿಮೆಂಟರಿ ಶಾಲಾ ಪಠ್ಯ ಪುಸ್ತಕಗಳನ್ನು ಬರೆಯಬೇಕೆಂದು ಆಲೋಚಿಸುವಷ್ಟರಲ್ಲಿ ಬಹಳ ಭಯಂ ಕರವಾದ ನೆರೆಯು ಬಂದು ನಾನು ಕೆಲಸ ಮಾಡುತ್ತಿದ್ದ ಶಾಲೆಯೂ ನನ್ನ ಬೀಡಾರವೂ ನಾನು ಶೋಧನೆ ಮಾಡಿ ಬರೆದಿಟ್ಟ ಅನೇಕ ಗ್ರಂಥಗಳೂ ನನ್ನ ತಂದೆಯ ವರು ಬರೆದಿಟ್ಟ ಹಲವು ಕೈಬರಹದ ಗ್ರಂಥಗಳೂ ನೆರೆಯ ಪಾಲಾದವು. ಆಗ್ಗೆ ನಮ್ಮೂರಾದ ಬಂಟವಾಳವು ಪೂರ್ಣವಾಗಿ ತೇಲಿಹೋಯಿತೆಂದು ಹೇಳಬಹುದು.

ನಂತರ ಕೆಲಸವನ್ನೂ ಗ್ರಂಥಗಳನ್ನೂ ಕಳಕೊಂಡು ಮಂಜೇಶ್ವರಕ್ಕೆ ಹೆಂಡತಿ ಮಕ್ಕಳೊಡನೆ ಹೋದೆ. ಅಲ್ಲಿ ಎರಡು ವರ್ಷಗಳ ವರೆಗೆ ಮಂಜೇಶ್ವರ ಜಮೀನುದಾ ರರೂ ಕಾಸರಗೋಡು ತಾಲೂಕು ಬೋರ್ಡ ಪ್ರೆಸಿಡಂ ಟರೂ, ಅನೇಕ ಪ್ರಾಚೀನ ಗ್ರಂಥಗಳ ಪುಸ್ತಕಭಂಡಾ ರದ ಮಾಲಿಕರೂ ಆದ ಶ್ರೀ. ವೈಕುಂಠಭಟ್ಟರವರು ನನ ಗೊಂದು ಕೆಲಸವನ್ನು ಕೊಟ್ಟರು. ಪುಸ್ತಕಭಂಡಾರ ವನ್ನು ಶೋಧನೆಗಾಗಿ ನನಗೊಪ್ಪಿಸಿದರು.

**೩ ಮಂಜೇಶ್ವರ ಸ್ಥಳಪುರಾಣ**— ಮಂಜೇಶ್ವರ ಊರೂ ಅಲ್ಲಿಯ ಶ್ರೀಮದನಂತೇಶ್ವರ ದೇವಸ್ಥಾನವೂ ಬಹಳ ಪುರಾತನ ಕಾಲದ್ದಿದ್ದರೂ ಅಲ್ಲಿಯ ಸಮಗ್ರ ಚರಿ ತ್ರೆಯು ಇರಲಿಲ್ಲ. ಆ ಊರಿನ ದೇವಸ್ಥಾನದ ಅರ್ಚಕ ರಾದ ಶ್ರೀ. ನಾರಾಯಣಭಟ್ಟರೂ ಅವರಅನುಜರಾದ ವಿಠಲ ಭಟ್ಟರೂ ನನ್ನನ್ನು ಪ್ರೋತ್ಸಾಹಿಸಿ ಹಳೆ ರೆಕಾರ್ಡು ಕೊಡಲು ಅವುಗಳ ಸಹಾಯದಿಂದಲೂ ಸುತ್ತುಮುತ್ತಲಿನ ಶೋಧನೆಯಿಂದಲೂ ಪುಸ್ತಕವನ್ನು ಬರೆದೆನು.



CC-0. Jangamwadi Math Collection. Digitized by eGangotri

೪ **ತುಳುಪಾಡ್ದನಗಳು—** ತುಳುದೇಶ ಅಥವಾ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅನೇಕ ದೇವಸ್ಥಾನಗಳು ಇವೆ; ಈ ದೈವಗಳ ಚರಿತ್ರೆಯು ಈ ಪಾಡ್ದನಗಳಲ್ಲಿ ಸರಿಯಾಗಿ ಇದೆ. ಇವುಗಳನ್ನು ಸಂಗ್ರಹಿಸಲಾಗಿ (೧) ಮುಂಡತ್ತಾಯ (೨) ಬೊಬ್ಬಯನ್ (೩) ದೈಯೊಂಗುಳು (೪) ತೋಡಕಿನಾರ (೫) ಕಲ್ಲುರ್ಟ–ಕಲ್ಲುಡ ಈ ೫ ಪಾಡ್ದನಗಳನ್ನು ಶ್ರೀ. ಕಾಮತರೇ ಪ್ರಕಟಿಸಿದರು. ಆದರೆ ಇವುಗಳು ಖರ್ಚಾಗಲಿಲ್ಲ. ನಂತರ ಕೋಟಿ-ಚೆನ್ನಯ ಎಂಬ ೬ನೇ ದೊಡ್ಡ ಪಾಡ್ದನವು ಅರ್ಧ ಪ್ರಿಂಟಾಗುವಾಗ ಪ್ರೋತ್ಸಾಹವು ಕಡಿಮೆಯಾಗಿ ಅರ್ಧದಲ್ಲಿಯೇ ನಿಲ್ಲಿಸಲಾಯಿತು.

ಈ ಕಾಲಕ್ಕೆ ಹಿಂದೆ ಹೇಳಿದಂತೆ ಎಲಿಮೆಂಟರಿ ಶಾಲಾ ಪಠ್ಯ ಪುಸ್ತಕಗಳನ್ನು ಬರೆಯತೊಡಗಿದೆ. ಎಲಿಮೆಂಟರಿ ಶಾಲೆಗಳ ಸಿಲೆಬಸ್ಸನ್ನು ಡಿಸ್ಟ್ರಿಕ್ಟ ಎಲಿಮೆಂಟರಿ ಎಜ್ಯುಕೇಶನಲ್ ಕೌನ್ಸಿಲಿನವರು ತಯಾರಿಸಿದರೂ ಅವುಗಳಿಗನುಸಾರವಾಗಿ ಯಾರೂ ಪುಸ್ತಕಗಳನ್ನು ಬರೆದಿರಲಿಲ್ಲ. ಇದಕ್ಕಾಗಿ ಅನೇಕ ಮಂದಿ ಉಪಾಧ್ಯಾಯರು ಪಠ್ಯ ಪುಸ್ತಕಗಳನ್ನು ಬರೆಯಬೇಕೆಂದು ಒತ್ತಾಯಪಡಿಸಿದರು. ಮೊದಲನೆಯವಾಗಿ ಮೂರನೆ ದರ್ಜೆ ಚರಿತ್ರೆ ಕಥೆಗಳು ನಂತರ ೪ನೇ ದರ್ಜೆ ೨ನೇ ದರ್ಜೆ ಚರಿತ್ರೆ ಕಥೆಗಳನ್ನು ಬರೆದೆ. ಅನಂತರ ೨ನೇ ೩ನೇ ೪ನೇ ೮ನೇ ದರ್ಜೆಗಳ ಸಿವಿಕ್ಸ ಮತ್ತು ನೀತಿಬೋಧೆಯನ್ನು ಬರೆದೆ. ನಂತರ ೪ನೇ ೫ನೇ ದರ್ಜೆಯ ದೇಹ ಶಾಸ್ತ್ರ ೨ನೇ ೩ನೇ ೪ನೇ ೮ನೇ ದರ್ಜೆ ಪ್ರಕೃತಿಶಾಸ್ತ್ರ ಇವುಗಳನ್ನು ಬರೆದೆ. ಆದಂತಿರಲಿ.

**ಕೊಡಗು ರಾಜ್ಯಭಾರಕ್ರಮ—** ಈ ಪುಸ್ತಕಗಳನ್ನು ಬರೆಯುತ್ತಿರುವಾಗಲೇ ಕೊಡಗು ಚರಿತ್ರೆಯ ವಿಷಯವಾಗಿ ಶೋಧನೆ ಮಾಡುತ್ತಾಯಿದ್ದೆ. ಇದನ್ನು ಅಚ್ಚುಹಾಕಿದರೆ ಖರ್ಚಾಗದೆ ಮೂಲೆಗೆ ಬಿದ್ದೀತೆಂಬ ಸಂಶಯದಿಂದ ಅದನ್ನು ಸ್ವಲ್ಪ ಸ್ವಲ್ಪವಾಗಿ ಸ್ವದೇಶಾಭಿಮಾನಿಯಲ್ಲಿ ೨॥ ವರ್ಷಗಳ ವರೆಗೆ ಪ್ರಕಟಿಸಿದೆ. ನಂತರ ಕಳೆದ ವರುಷ ಮೈಸೂರಿಗೆ ಹೋಗಿ ಅಲ್ಲಿಯ ಓರಿ[ಯಂ]ಟಲ್ ಲ್ಯಾಬ್ರೆರಿ, ಪಬ್ಲಿಕ್ ಲ್ಯಾಬ್ರೆರಿ, ಬೆಂಗಳ[ೂರು] ಪಬ್ಲಿಕ್ ಲ್ಯಾಬ್ರರಿ, ನಂಜನಗೂಡು ಪಬ್ಲಿಕ್ ಲ್ಯಾಬ್ರ[ೆರಿ]ಯಲ್ಲಿ ಸಿಕ್ಕಿದ ಅನುಭವಗಳನ್ನು ಸಂಗ್ರಹಿಸಿದೆ. ನಂ[ತರ] ಮಡಿಕೇರಿಗೆ ಒಂದು ಅಲ್ಲಿಯ ಅರಮನೆಯಲ್ಲಿರುವ ಕ[ಮಿ]ಶನರ ಆಫೀಸಿನಲ್ಲಿರುವ ರಿಕಾರ್ಡಿನ ಆಧಾರಗಳನ್ನು [...] ಕೊಂಡು ವಿರಾಜಪೇಟೆ, ಕೊಡಗು, ಶ್ರೀರಂಗಪಟ್ಟ[ಣ,] ಸಿದ್ದಾಪೂರ, ಅಮತ್ತಿ, ಫ್ರೆಜರಪೇಟೆ, ಹಾಲೇರಿ, [...] ಕಾವೇರಿ, ಭಾಗಮಂಡಲ, ಫ್ರೆಜರಪೇಟೆ, ಸೋಮವಾ[ರ]ಪೇಟೆ, ನಾಲ್ಕುನಾಡು ಅರಮನೆ ಮುಂತಾದವುಗಳನ್ನು [...] ಪೆರಿಯಾ ಪಟ್ಟಣವನ್ನೂ ಸಂಚರಿಸಿ ನೋಡಿ, ಸ್ವ[...] ಅನುಭವ ಪಡಕೊಂಡೆ. ಅನಂತರವೂ ಕಳೆದ ನವೆಂ[ಬರ]ದಿಂದ ಇಂದಿನ ವರೆಗೆ ಸಿಕ್ಕಿದ್ದನ್ನು ಸ್ವದೇಶಾಭಿಮಾ[ನಿ]ಯಲ್ಲಿ ಪ್ರಕಟಿಸಿದೆ. ಇನ್ನು ಸ್ವಲ್ಪ ಹಳೆ ರಿಕಾರ್ಡು ಕೆ[...] ಗಿನ ಬಹಳ ಪುರಾತನ ಕಾಲದ ಹವಿಕ ಬ್ರಾಹ್ಮಣರ [...] ಯಿಂದ ಸಿಕ್ಕುವದಿದೆ. ಸಿಕ್ಕಿದರೆ ಅದನ್ನೂ ಪ್ರಕಟಿ[ಸು]ತ್ತೇನೆ. ಇದಾದೊಡನೆ ಕೊಡಗು ರಾಜ್ಯಭಾರ ಕ್ರ[ಮ] ಎಂಬದನ್ನು ಪುಸ್ತಕ ರೂಪದಲ್ಲಿ ಅಚ್ಚು ಹಾಕ[...] ಶ್ರೀ. ಶ್ರೀನಿವಾಸ ಕದ್ರಿಯವರು ಅನುಕೂಲ ಮಾ[ಡಿದ]ವರು.

**ಉತ್ತರಕನ್ನಡಜಿಲ್ಲೆಯ ಚರಿತ್ರೆ—** ಇ[...] ವಿಷಯವಾಗಿ ೧೯೨೯, ೧೯೩೦, ೧೯೩೧ ರ ಕರ್ನಾ[ಟಕ] ಧುರೀಣನ ವಿಶೇಷ ಸಂಚಿಕೆಗಳಲ್ಲಿ ಉತ್ತರಕನ್ನ[ಡ] ಜಿಲ್ಲೆಯ ಹಳೆ ಅರಸರು, ಪೋರ್ತುಗೀಸರು, ಬಿಳಿಗಿ [ಅರ]ಸರು ಎಂಬ ಮೂರು ಲೇಖನಗಳನ್ನು ಬರೆದಿರುತ್ತೇ[ನೆ.] ಬಿಳಿಗಿ ಅರಸರ ವಿಷಯವು ಮೈಸೂರು ಓರಿಯಂಟ[ಲ್] ಲ್ಯಾಬ್ರೆರಿಯಲ್ಲಿ ಸಿಕ್ಕಿತು.

ಭಗವಂತನ ಕೃಪೆಯಿದ್ದರೆ ಮುಂದೆಯೂ ಈ [...] ನಮ್ಮ ಕರ್ನಾಟಕ ದೇಶದ ಐತಿಹಾಸಿಕ ಕಾರ್ಯವ[ನ್ನು] ಮುಂದುವರಿಸಬೇಕೆಂದು ಆಶಿಸುತ್ತೇನೆ.

CC-0. Jangamwadi Math Collection. Digitized by eGangotri

# ಚವ್ವೀಸ ತೀರ್ಥಂಕರರು

(ಕೊಪ್ಪಳದ ಗೆಳೆಯರಿಂದ)

ಈ ಮೂರ್ತಿಯೂ ಇದರೊಡನೆಯೆ ಪಂಚಪರಮೇಷ್ಠಿಗಳು ಎಂಬ ಇನ್ನೊಂದು ಮೂರ್ತಿಯೂ ಕೊಪ್ಪಳ ತಾಲೂಕ ಎಲಬುರ್ಗೆಯ ಬದಿಯಲ್ಲಿ ಅಗೆಯುವಾಗ ಹೊಲದೊಳಗಿನ ಒಂದು ದಿಬ್ಬದಲ್ಲಿ ನಾಲ್ಕೆಂಟು ವರ್ಷಗಳ ಹಿಂದೆ ದೊರೆತವು. ಅವುಗಳನ್ನು ಸರಕಾರದವರು ಕೊಪ್ಪಳದಲ್ಲಿಯ ಜೈನ ಬಸದಿಯಲ್ಲಿ ಪಂಚರ ಸಮಕ್ಷಮವಾಗಿ ಪೂಜೆ ಪುನಸ್ಕಾರಗಳು ನಡೆಯಬೇಕೆಂಬ ಆಶಯದಿಂದ ಇಟ್ಟಿದ್ದರು.

ಈ ಎರಡು ಮೂರ್ತಿಗಳು ಅತ್ಯಂತ ಸುಂದರವಾಗಿರುವುದರಿಂದ ಪ್ರಾಕ್ತನ ವಸ್ತು ಸಂಶೋಧನ ಶಾಖೆ (ಆರ್ಕಿಯಾಲಾಜಿಕಲ್ ಇಲಾಖೆ) ಯವರು ಇವುಗಳನ್ನು ತಮ್ಮ ಮ್ಯೂಜಿಯಮಿಗಾಗಿ ಮೊನ್ನೆ ಜುಲಾಯಿಯಲ್ಲಿ ಹೈದರಾಬಾದಿಗೆ ತರಿಸಿಕೊಂಡರು.



ಪ್ರಭಾವಲಯದಲ್ಲಿ ೨೪ ಜನ ತೀರ್ಥಂಕರರ ಮೂರ್ತಿಗಳು ಇರುವವು; ನಡುವೆ ಒಬ್ಬನು ಈ ಮೂರ್ತಿಯ ಗದ್ದುಗೆಯ ಮೇಲೆ 'ಸ್ವಸ್ತಿ ಶ್ರೀ ಮೂಲಗಣದ ಮಾದಣದಣ್ಣಾಯಕ ಮಾಡಿಸಿದ ಬಸದಿಗೆ ರಾಯರಾಜ ಗುರು ಮಂಡಳಾಚಾರ್ಯರಪ್ಪ ಶ್ರೀ ಮಾಘ್ನಂದಿ ಸಿದ್ಧಾಂತಚಕ್ರವರ್ತಿಗಳ....ಯ....ಕೊಪಣ ತೀರ್ಥದ ಎಂನೆಯರಪ್ಪಗೌಡನ ಪ್ರಿಯಾಂಗನೆ ಮಲೌವ್ವೆಗೆ ಪುಟ್ಟಿದ ಸುಪುತ್ರರು ಬೋಪಣಗೌಡಂ..ಜ..ಳಿ ಮುಖ್ಯವಾಗಿ ಮಹಾನೋಮಿ ಗೆಯುಚವ್ವೀಸತೀರ್ಥಂಕರರ ಸಂಗ ದೇಶೀಯ ಮಾಡಿಸಿ ಕೊಟ್ಟರು ಮಂಗಳ ಮಹಾ ಶ್ರೀ ಶ್ರೀ ಶ್ರೀ' ಎಂಬುದಾಗಿ ಬರೆಹ. ಈ ಬರೆಹದಲ್ಲಿ ಕೀರ್ತಿತನಾದ **ರಾಯರಾಜ ಗುರು ಮಂಡಳಾಚಾರ್ಯರಪ್ಪ ಶ್ರೀ ಮದ್ಮಾಘನಂದಿ ಸಿದ್ಧಾಂತಚಕ್ರವರ್ತಿಗಳು** ಜೈನ ಗುರು ಪರಂಪರೆಯಲ್ಲಿ ಪ್ರಖ್ಯಾತರು. ಮಹಾಬಲಕವಿಯ (ಕ್ರಿ.ಶ. ೧೨೫೪) ನೇಮಿನಾಥ ಪುರಾಣದಲ್ಲಿಯೂ ಕುಮುದೇಂದುವಿನ (ಕ್ರಿ.ಶ. ೧೨೭೫) ರಾಮಾಯಣದಲ್ಲಿಯೂ ಬಹುತರ ಎಲ್ಲ ಜೈನ ಪುರಾಣಗಳಲ್ಲಿ ಜೈನ ಕವಿಗಳಿಂದ ಸ್ತುತಿಸಲ್ಪಟ್ಟಿದ್ದಾನೆ. 'ಕುಮುದೇಂದುವು ಇವನನ್ನು ಕುಮುದೇಂದು ವ್ರತಿಪತಿನುತ ಹೊಯ್ಸಳ ರಾಯರಾಜ ಗುರುಮಾಘನಂದಿ ಮುನಿ' ಎಂದೂ ಸ್ತುತಿಸಿದ್ದಾನೆ. ಇವನು ಕುಮುದೇಂದುವಿನ ಗುರುವು. 'ಸಿದ್ಧಾಂತತ್ರಯ ಚಕ್ರೇಶ್ವರಂ' ಎಂದು 'ಅವನತ ಹೊಯ್ಸಳ ರಾಜ ಮುಕುಟ ಮಣಿಗಣ ಕಿರಣಂ' ಎಂದೂ ಹೊಗಳಿದನು. ಕ್ರಿ.ಶ. ೧೨೮೩ ರಲ್ಲಿಯ ಶ್ರವಣ ಬೆಳ್ಗೊಳದ ೩೫೪ ನೆಯ ಶಾಸನದಲ್ಲಿ ಒಬ್ಬ ಮಾಘನಂದಿಯನ್ನು 'ಶ್ರೀ ಮನ್ಮಹಾ ಮಂಡಳಾಚಾರ್ಯರುಂ ಆಚಾರ್ಯವರ್ಯರುಂ ಹೊಯ್ಸಳ ರಾಯರಾಜ ಗುರುಗಳುಂ' ಎಂದು ಕೀರ್ತಿಸಿದೆ. ಇವನು ಸುಮಾರು ೧೨೫೪ ರಲ್ಲಿ ಇದ್ದಿರಬಹುದೆಂದು ನಿರ್ಣೀತವಾಗಿದೆ. ಮೇಲಿನ ಶಾಸನದಲ್ಲಿ ಉಕ್ತನಾದ ಮಾಘನಂದಿಯೂ ಕುಮುದೇಂದುವಿನ ಹಾಗೂ ಶ್ರವಣ ಬೆಳ್ಗೊಳದ ಮಾಘನಂದಿಯೂ ಒಂದೇ ಆಗಲಿಕ್ಕಿಲ್ಲವೇ ?

CC-0. Jangamwadi Math Collection. Digitized by eGangotri

೧



**ನಟರಾಜ**

ಶಿಲ್ಪಿ—ಶ್ರೀ ಮಲ್ಲಯ್ಯ, ಆಂಧ್ರಜಾತೀಯ ಕಲಾಶಾಲೆ, ಮಚ್ಛಲಿಪಟ್ಟಣ

೨



**ಅಭಿಮಾನಧನ**

ಶಿಲ್ಪಿ—ಶ್ರೀ ವಿನಾಯಕ ಮಸೋಜಿ, ಶಾಂತಿನಿಕೇತನ

೩



**ಗೆಳೆತನ**

ಶಿಲ್ಪಿ—ಶ್ರೀ ಕೇಶವರಾವ, ಶಾಂತಿನಿಕೇತನ

CC-0. Jangamwadi Math Collection. Digitized by eGangotri

# ನನ್ನ ಪ್ರೀತಿಯ ಮೂರು ಚಿತ್ರಗಳು

ಸವಿಗಾರರು:— ಬೆಳಗಾಂವಿ ರಾಮಚಂದ್ರರಾಯರು

## ೧. ಧಗಧಗಿಸುವ ಸತ್ಯ

ಎಂತಹ ಘೋರ ಸಂಹಾರ! ಬ್ರಹ್ಮಾಂಡವನ್ನೆ ಸುಡಲೆದ್ದ ಈ ಕಿಚ್ಚಿಗೆ ಹಲವು ಲೋಕಗಳ ಉರುವಲವು ಸಾಲದು! ತೃಷಾರ್ತನಾದ ಯಜ್ಞೇಶ್ವರನೀತ. ಸೃಷ್ಟಿಯ ಹವಿಸ್ಸನ್ನೆಲ್ಲ ಎರೆದರೂ, ಈತನ ನೀರಡಿಕೆ ಹಿಂಗದು. ಸಿಕ್ಕಿದುದನ್ನೆಲ್ಲ ನೆಕ್ಕಿ ಮುಕ್ಕಲು ಸಾವಿರ ನಾಲಗೆಗಳು ಮುಂದು ಚಾಚಿವೆ. ಸುತ್ತಲಿನ ಕೆಂಪು ಕಿಚ್ಚಿನೊಳಗಿನಿಂದ ಧವಲ ಜ್ವಾಲೆಯೊಂದು ಸಿಡಿದೆದ್ದಿದೆ. ಪ್ರಿಯ ಪಾಠಕ ಮಹಾಶಯರೆ! ಒಂದು ಕಣ್ಣು ಪೂರಾ ಮುಚ್ಚಿ ಇನ್ನೊಂದನ್ನು ನಸು ತೆರೆದು ಕುಣಿವ ಮುಕ್ಕಣ್ಣನನ್ನು ಊರಿದ ಅಂಗಾಲಿನಿಂದ ಜಡೆಯ ಹಿಂದಣಿಂದ ಮೇಲಿದ್ದ ಚಂದ್ರಕಲೆಯ ಮೊನೆಯವರೆಗೆ ಚಿತ್ತಗೊಟ್ಟು ನೋಡಿದಿರಾದರೆ, ಹಬ್ಬಿದ ಬೆಂಕಿಯ ನಡುವೆ ಬಿಳಿಯ ಉರಿನಾಲಗೆಯೊಂದು ಕೋಲುಮಿಂಚಿನ ಹಾಗೆಯೆ – ನೆಟ್ಟನೆ, ಆದರೊಂದಿನಿಸು ಡೊಂಕಾಗಿ ನೆಗೆದು ಎದ್ದ ಹಾಗೆ ಕಾಣುವದಿಲ್ಲವೆ? ಕಲಾಕೋವಿದನಿಗೆ ಧ್ಯಾನಯೋಗವು ಅಗತ್ಯವೆಂಬುದನ್ನು ಈ ಚಿತ್ರವನ್ನು ಬರೆದಾತ ಬಲ್ಲ. ಲೋಕವನ್ನು ಹಾಳುಗೆಡಹುವ ದೇವನನ್ನು ಚಿತ್ರಿಸಬೇಕೆಂದು ಎಂದುಕೊಂಡ. ಆ ದೇವತಾಶಕ್ತಿಯನ್ನು ಒಂದು ಪರಿಶುಭ್ರ ಜ್ವಾಲೆಯನ್ನಾಗಿ ಕಂಡ. ಈ ಕಾಣ್ಕೆಯೆ ನಮ್ಮ ಪುರಾತನರ ಅಭಿಪ್ರಾಯದಲ್ಲಿ ಕಲಾವಂತನ ಕರ್ಮದ ಸಾರಸರ್ವಸ್ವ. ಈ ಕಾಣ್ಕೆ ಕಲಾಜೀವಿಯು ಮುಟ್ಟಬಹುದಾದ ತುರೀಯಸಿದ್ಧಿಯೆಂದೇನೂ ನಾನು ಸಾಧಿಸುತ್ತಿಲ್ಲ. ಆದರಿದು ಆತನಾಚರಿಸಬೇಕಾದ ಧ್ಯಾನಯೋಗದ ಮೊದಲಮೆಟ್ಟಲು – ಎಂಬುದು ಮಾತ್ರ ಖಂಡಿತ. ಈ ಪ್ರದೇಶದಲ್ಲಿ ಮುಂದುವರಿದು ಕಾಣಬೇಕಾದುದನ್ನು ಕಂಡುಕೊಂಡ ಧೀರರಿದ್ದಾರೆಂದು ಕೇಳಿದ್ದೇನೆ. ಅವರ ವಿಚಾರ ನಮಗೆ ಬೇಡ. ಪ್ರಕೃತ–ಚಿತ್ರಶಿಲ್ಪಿಯು ತನ್ನ ಚಿತ್ರವಿಷಯದ ಸ್ಥೂಲ ವಿವರಗಳನ್ನಲ್ಲದಿದ್ದರೂ, ಅದರ ಬೀಜಾತ್ಮಕ ರಚನೆಯನ್ನು ಅಚ್ಚೊತ್ತಿದ ಹಾಗೆ, ಬಹು ಬೇಗವಾಗಿ, ಆಳವಾಗಿ ಕಂಡುಕೊಳ್ಳಬೇಕು, ಎಂದಿಷ್ಟು ತಿಳಿದುಕೊಳ್ಳೋಣ. ಇನ್ನು ವಿವರಗಳನ್ನಾದರೂ ಬೇಗ ತುಂಬಲುಬೇಕು. ಬರಿ ಜ್ವಾಲೆಯೊಂದನ್ನು ಬಿಡಿಸಿದರೆ ಸಾಲದು. ಜ್ವಾಲೆಯು ಸೂಚನೆ ಮಾತ್ರವಾಗಿರಬೇಕು. ನಟರಾಜನ ತಾಂಡವವು ನಮ್ಮ ಪುರಾಣಗಳಲ್ಲೆಲ್ಲಾ ನಿನದಿಸುತ್ತಲಿದೆ. ಒಂದು ಕೈಯಲ್ಲಿ ತಲೆಬುರುಡೆ, ಇನ್ನೊಂದರಲ್ಲಿ ತ್ರಿಶೂಲ, ನಡುವಿಗೆ ಹುಲಿದೊಗಲು, ಕೊರಳಿಗೆ ಹಾವಿನ ಹಾರ, ಹಣೆಗಣ್ಣು, ಜಡೆಯಲ್ಲಿ ಚಂದ್ರಕಲೆ– ಈ ಬಣ್ಣನೆಯನ್ನು ಚಿತ್ರಕಾರ ಬಲ್ಲ. ಆದರೀ ವಿವರಗಳು ಆತನು ಕಂಡ ದರ್ಶನಕ್ಕೆ ಒಳಪಡಬೇಕು–ಅದನ್ನು ತಮಗೆ ಅಧೀನವಾಗಿ ಮಾಡಿಕೊಳ್ಳಬಾರದು, ಎಂದು ಆತನ ಆಸೆ. ಆತನೀ ಉದ್ದೇಶವು ಹೇಗೆ ಸಾಧ್ಯವಾಗಿದೆ ನೋಡಿ! ಕೆದರಿದ ಜಡೆ ಗಾಳಿಯಲ್ಲಿ ಹರವಿದ ಕಿಚ್ಚಿನ ಗೊಂಚಲ ಹಾಗೆ ಕಾಣುತ್ತಿದೆ. ತೀರ ಮೇಲಕ್ಕೆ ತ್ರಿಶೂಲದ ಮೂರು ಮೊನೆಗಳೂ ಪ್ರಲಯರುದ್ರನ ಪಳವಿಗೆಯಾಗಿ ಅಲೆಯುತ್ತಿವೆ. ಪ್ರಶಾಂತ – ಪ್ರಶೀತಲ ಚಂದ್ರಕಲೆ ಕೂಡ ಚಿತ್ರಕಾರನ ಆಶಯಕ್ಕೆ ಹೇಗೆ ಪೋಷಕವಾಗಿದೆ! ಚಿಕ್ಕದಾಗಿ ಇರತಕ್ಕ ಅದು ದೊಡ್ಡದಾಗಿ, ಕೆದರಿದ ಕೂದಲ ಹಿಂಭಾಗದಿಂದ ಕೋಡಿನಂತೆ ಮೇಲಕ್ಕೆದ್ದು, ನಟರಾಜನೆಂಬ ಧವಲ ಜ್ವಾಲೆಯ ಹದನ ಮೊನೆಯಾಗಿ ಮಿನುಗುತ್ತಿದೆ!

ಸಂಸ್ಕೃತಿಯೆಂದರೆ ಆಯಾ ಜನಾಂಗವು 'ಸತ್ಯ'ದ ಬಗೆಗೆ ಬಂದ ನಿರ್ಣಯಗಳ ಪುಂಜವೆಂದು ಹೇಳಬಹುದು. ಹಾಗೆಂದರೆ, 'ಶಿವತಾಂಡವ'ದ ಕಲ್ಪನೆಯು ನಮ್ಮ ಸಂಸ್ಕೃತಿಯ ಕೋಶದೊಳಗಣ ಒಂದು ಅಮೌಲ್ಯ ರತ್ನವೆಂದು ಹೇಳಬಹುದು. 'ಇದ ಪಡೆಯಲು ನಾವ್ ದುಡಿಯಲು ಬದ್ಧರು, ಇದ ಕಾಪಾಡಲು ಮಡಿಯಲು ಸಿದ್ಧರು' – ಎಂದು ಇದರ ಬಗೆಗೆ ನಾವು ಭಾರತೀಯರು ಹೇಳಬಹುದು. ಈ ಅಮರಕಲ್ಪನೆಯನ್ನು ಕಲ್ಲಿನಲ್ಲಿ,

CC-0. Jangamwadi Math Collection. Digitized by eGangotri

ಬಣ್ಣದಲ್ಲಿ, ಹಾಡಿನಲ್ಲಿ ರೂಪಗೊಳಿಸಲು ನಮ್ಮ ನಾಡಿನ ಶಿಲ್ಪಿಗಳ ಕುಲವೆ ಹಾತೊರೆದಿದೆ........ ಇದು ಪ್ರಲಯ ತಾಂಡವ. ಈ ನೃತ್ಯವು ಸೃಷ್ಟಿಯ ಅಂತರಾಳದಲ್ಲಿ ಅವಿರತವಾಗಿ ಸಾಗಿದೆ. ಇದರ ದೆಸೆಯಿಂದಲೆ ಹಳೆಯದು ಕಳಚಿ ಹೊಸದು ಚಿಗುರುತ್ತದೆ. ಸೃಷ್ಟಿಯು ನಿಮಿಷ ನಿಮಿಷಕ್ಕೆ ನವೋನವವಾಗಿ ಕಳೆಗೊಳುತ್ತಿರುವದು ಇದರ ಮೂಲಕವೆ. ಈ ಪ್ರಲಯಕಾಲನ ಕಾಲ್ತುಳಿತಕ್ಕೆ ಒಂದೊಂದು ವಿಶ್ವವು ನುಚ್ಚುನುರಿಯಾಗುತ್ತಿದ್ದರೆ, ಈತನ ನಾಟ್ಯದ ಛಂದಸ್ಸಿಗೆ ಒಂದೊಂದು ವಿಶ್ವವು ಮೈದಾಳುತ್ತಿದೆ. ಈತನನ್ನು ನಾವು ಬಲ್ಲೆವೆ? ನಿರ್ಮಲ – ನಿರ್ದಯ 'ಸತ್ಯ'ದ ಧಗಧಗಿಸುವ ಧವಲ ಜ್ವಾಲೆಯಿತು. ಆದರೀ ಜ್ವಾಲೆಗೊಂದು ಬಂಗಾರದ ಮುಚ್ಚಳಿಕೆಯಿದೆ. ತಿಳಿದೂ ತಿಳಿದೂ ನಾವೀ ಮುಚ್ಚಳಿಕೆಯನ್ನು 'ಸತ್ಯ'ವೆಂದು ಕರೆವುದರಲ್ಲಿ ಆನಂದಪಡುತ್ತೇವೆ. ನಮ್ಮ ಅಲ್ಪ ಪ್ರಯತ್ನಗಳು ಒಂದು ನಿಮಿಷದಲ್ಲಿ ಬೂದಿಯಾಗಿ ಹಾರಿಹೋಗಬಹುದೆಂಬದನ್ನು ನಾವು ಬೇಕೆಂತ ಮರೆಯುತ್ತೇವೆ. ಇಂತಹ ಕೃತಕ ಸಮಾಧಾನವಿರದಿದ್ದರೆ, ನಮಗೆ ಸಾಮಾನ್ಯರಿಗೆ ಜೀವನವೂ ದುಃಸಹವಾಗುತ್ತಿದ್ದಿತಲ್ಲ? ಆ 'ಸತ್ಯ'ವು ಒಂದಿನಿಸಾದರೂ ಆತ್ಮದರ್ಶನವನ್ನು ಮಾಡಿಸೀತೆಂಬ ಬೆದರಿಕೆಯಿಂದ ನಾವು ಬೆಚ್ಚಿಬೀಳುತ್ತಿರುವೆವು. ನಿಜವಾದ 'ಧರ್ಮ'ವನ್ನೆಲ್ಲಿ ಆಚರಿಸುವೆವೊ ಎಂದು ಅದರ ಆಡಂಬರವನ್ನು ಮಾತ್ರ ನಾವು ಪೂಜಿಸುವದು. ಈ ಕರ್ಮಕಾಂಡವನ್ನು ಭಸ್ಮೀಕರಿಸುವ ಶಿವತಾಂಡವವು ಮತ್ತೆ ನಮ್ಮೊಳಗೆ ನಾಟ್ಯವಾಡಬೇಕಾಗಿದೆ. ಧರ್ಮವೊಂದರಲ್ಲಿ ಎಂತಲ್ಲ – ಎಲ್ಲ ಕಡೆಗೂ ಇದೇ ಹಾಡು. ನಿಷ್ಠೆಯು ಆಚಾರವಿಚಾರಗಳಲ್ಲಿನ ಸಾಮರಸ್ಯವು. ಆ ನಿಷ್ಠೆಗೆ ನಮ್ಮ ಜೀವನವು ಎರವಾಗಿದೆ. ಅಂತಹ ನಿಷ್ಠಾಪೂರಿತ ಹೃದಯದಲ್ಲಿ ಮಾತ್ರ "ಜ್ಯೋತಿ ಬೆಳಗುತಿದೆ। ವಿಮಲ ಪರಂಜ್ಯೋತಿ ಬೆಳಗುತಿದೆ॥ ಮಾತು ಮನಂಗಳಿಂದತ್ತತ್ತ ಮೀರಿದ। ಸಾತಿಶಯದ ನಿರುಪಾಧಿಕ ನಿರ್ಮಲ........॥",

ಇನ್ನೊಂದು ಅಂಶ ಉಳಿಯಿತು. ಪ್ರಿಯ ವಾಚಕರೆ, ಅಂಗಾಂಗಗಳ ಭಂಗಿಯಲ್ಲ-ಮುಖದಲ್ಲಿ ಒಂದು ಬಗೆಯ ತಲ್ಲೀನತೆ-ಆತ್ಮವಿಲೀನತೆ ಕಾಣುವದಿಲ್ಲವೆ? ವಿಶ್ವಂಭರ ಸಂಹಾರವು ಸ್ಥೂಲ ದೃಷ್ಟಿಗೆ ಸ್ವಚ್ಛಂದ ಸ್ವೈರವಾಗಿ ತೋರುತ್ತಿದ್ದರೂ ದೈನಿಕ ನರ್ತಕನ ಆತ್ಮಚ್ಛಂದಕ್ಕೆ ಅನುವರ್ತಿಯಾಗಿಯೇ ಇದೆ. ಸಂಗೀತದೊಳಗಿನ ಆರೋಹಣಾವರೋಹಗಳು ಮನಬಂದತ್ತ ಸಾಗುವ ಹಾಗೆ ತೋರುತ್ತಿದ್ದರೂ, ಗಾಯಕನ ಅಂತರಂಗದ ಕಾಂಕ್ಷೆಯು ಸೂತ್ರರೂಪವಾಗಿ ಅವುಗಳನ್ನೆಲ್ಲ ಆತ್ಮವಶವಾಗಿಟ್ಟುಕೊಂಡಂತೆಯೆ, ಹೇತುಬದ್ಧವಾಗಿದೆ ಈ ತಾಂಡವಲೀಲೆ. ಅಂತೆಯೆ 'ರುದ್ರ'ನು 'ಶಿವ'ನೂ ಇದ್ದಾನೆ ನಮ್ಮ ಧರ್ಮಗ್ರಂಥಗಳಲ್ಲಿ.

ಅಡ್ಡತಿಡ್ಡ ಮೈಮಣಿತ, ಸೊಟ್ಟಪಟ್ಟ ಕೈಕಾಲು, ಮೇಲಕ್ಕೇರಿದ ಹುಬ್ಬು, ಜೋಲುಗಣ್ಣು – ಎಂದು ಭಾರತೀಯ ಚಿತ್ರಪ್ರಣಾಲಿಕೆಯನ್ನು ದೂರುವದುಂಟು. ಸರ್ವಸಾಮಾನ್ಯ ಪ್ರಸಂಗಗಳನ್ನು ಚಿತ್ರಿಸುವದರಲ್ಲಿ ಔಚಿತ್ಯ ಅನೌಚಿತ್ಯಗಳನ್ನು ನೋಡದೆ ಮೇಲಣ ಲಕ್ಷಣಗಳನ್ನು ತರುವುದು ಟೀಕಾಸ್ಪದವೆಂಬುದನ್ನು ನಾ... ಬಲ್ಲೆ. ಆದರಿಲ್ಲಿ ಒಂದು ಅಸಾಮಾನ್ಯ ವಿಷಯದ ಬಣ್ಣ... ಯಿದೆ. ಮಾತು – ಮನಸುಗಳನ್ನು ಮೀರಿದುದೆಂ... ಕೊಳ್ಳುವ ಒಂದು ಭಾವವನ್ನು ಪ್ರಕಟಗೊಳಿಸಲು ಚಿತ್ರಕಾರನು ಹಂಬಲಿಸಿದ್ದಾನೆ. ಅತಿಮಾನುಷವಾದ ಈ ದೇ... ನೃತ್ಯವನ್ನು ರೂಪಿಸುವದಕ್ಕೆ ನಾವು ದಿನಂಪ್ರತಿ ನೋಡುವ ವಾಡಿಕೆಯ ಅಂಗಭಂಗಿಗಳು–ಮೈಕೈಮಣಿ... ಗಳು ಉಪಯೋಗಕ್ಕೆ ಬಾರವು. ಆಧುನಿಕ ಪಾಶ್ಚಾತ್ಯ ನರ್ತಕೀಯರನೇಕ ನೃತ್ಯಗಳಲ್ಲಿ ಕೂಡ, ಸಾಮಾನ್ಯವಾ... ನಾವು ಕ್ರೋಧದಿಂದಾಗಲಿ, ಉದ್ರೇಕದಿಂದಾಗಲಿ, ಹರ್ಷದಿಂದಾಗಲಿ ಕುಣಿವಾಗಿನ ಮೈಕೈತಿರುಪವು ಕಂಡುಬರು... ದಿಲ್ಲ. ಅದೊಂದು ಬಗೆಯ ವಿದಗ್ಧ – ಸಂಸ್ಕಾರ – ಸಂಪನ್ನ ಅಂಗವಿಲಾಸವಿರುವದು. ಎಂದಮೇಲೆ ಅನಿರ್ವಚನೀಯವಾದ ಒಂದು ಅವಸ್ಥೆಯನ್ನು ರೇಖಾಮುಖಾಂತರವಾ... ಹೊರಪಡಿಸುವ ಪ್ರಯತ್ನವುಳ್ಳ ಇಂತಹ ಕಲಾಕೃತಿಗಳು ಭಾವಸೂಚಕವಾಗುವಂತೆ ಆದರೆ ಪ್ರಮಾಣದ ಅ... ಕ್ರಮಣವಾಗನಂತೆ ವಿವಿಧ ಅವಯವಗಳ ಹಿಗ್ಗುವಿ... ಎಷ್ಟು ಸಾಧ್ಯವೊ ಆ ತುಟ್ಟತುದಿಯವರೆಗೂ ಅವುಗಳ ಹಿಗ್ಗಿದ ಹಾಗೆ ಬಿಡಿಸಿದರೆ ತಪ್ಪೇನು? ಇತ್ತ ಲೋಕಗಳನ್ನು ನುಚ್ಚುನುರಿ ಮಾಡಲೆಸಗುವ ನಿರಂಕುಶ ರುದ್ರನಾಟ್ಯ... ಅತ್ತ ಎಂದೂ ಕದಲದ ಆತ್ಮಸ್ಥಿತಿ– ಈ ಪರಸ್ಪರ ವಿರುದ್ಧವಾಗಿ ತೋರುವ ಸಂಗತಿಗಳ ಸಮನ್ವಯವೇ ಚಿತ್ರಕಾರನ ಸಾಹಸವಾಗಿದೆ. ಕೈಕಾಲುಗಳ ಚೆಲ್ಲುವಿಕೆಯಲ್ಲಿ ಅಸ್ಥಿರ... ತೆಯೂ, ಆ ಚೆಲ್ಲುವಿಕೆಯಲ್ಲಿಯೂ ಒಂದು ಭಾವಸ್ಥ...

CC-0. Jangamwadi Math Collection. Digitized by eGangotri

ವನ್ನು ತೋರಿಸುವುದರಲ್ಲಿ ಮತ್ತು ಹುಬ್ಬುಗಳು ಮೇಲಕ್ಕೆ ಚಾಚಿದಂತಾಗಿ, ನೇತ್ರಗಳು ಅಂತರ್ಮುಖ ವಾಗಿ, ಮುಖವು ನಸು ಬಾಗಿದುದರಲ್ಲಿ ಆ ನಿಶ್ಚಲ ಆತ್ಮ ಸ್ಥಿತಿಯೂ ವ್ಯಕ್ತವಾಗಿವೆ.

### ೨. ಸಂತೃಪ್ತ ಸಂಸಾರ

ಮೇಲಿನ ವಿವೇಚನೆಯನ್ನೋದಿ 'ಸಾಕೀ ಗೂಡಾರದ ವೇದಾಂತ ('Mysticism)' ಎಂದು ಬೇಸರಿಯುವ ವಾಚಕರನೇಕ ಇದ್ದಾರೆಂಬುದು ನನಗೆ ಗೊತ್ತು. ಆದರೆ 'ಸತ್ಯ'ದ ಬಗೆಗೆ ನಮ್ಮ ಪೂರ್ವಿಕರ ಕಲ್ಪನೆಯೆ ಹಾಗೆ ಗೂಢವೂ ಗಾಢವೂ ಇದೆ-ಎಂತಲೆ ಗೂಢ ನಿಕ್ಷೇಪವನ್ನು ಗೊತ್ತುಹಿಡಿದು ಹೊರಕ್ಕೆ ತೆಗೆಯಲು ದಣಿವಾಗುವಂತೆಯೆ, ನಮ್ಮ ಬುದ್ಧಿಗೆ ಆಯಾಸವಾಗುತ್ತಿದೆ. ಇಂತಹ ಸನಾತನ ತತ್ತ್ವಗಳೆ ನಮ್ಮ ಜೀವನದ ಆಸ್ತಿವಾರವಾಗ ಬೇಕೆಂದು ನಮ್ಮವರ ಹಂಬಲವಿದ್ದರೂ, ನಮ್ಮ ಸಾಮಾನ್ಯ ಸಂಸಾರವು ಎಲ್ಲ ಬಗೆಯಿಂದಲೂ ಸುಖಪೂರ್ಣವಾಗಿರ ಬೇಕೆಂದು ಅವರ ಹಾರೈಕೆಯಿದ್ದಿತೆಂಬುದಕ್ಕೆ ಈ ಚಿತ್ರವೆ ಸಾಕ್ಷಿ. ಅಕ್ಕರತೆಯ ತಾಯಿ. ಮೈಯ ಠೀವಿಯಲ್ಲಿ ಮುಖದಲ್ಲಿ ರಾಜಕಳೆ-ಅದೊಂದು ವಿಧವಾದ ಗೌರವ ಭಾವ-ಪ್ರಬುದ್ಧ ಸೌಂದರ್ಯ. ಉಪವರ ಕನ್ಯೆಯ ಎಳೆ ಮೊಗವನ್ನು ಸಕೌತುಕಾನಂದದಿಂದ ಬೊಗಸೆಗಣ್ಣಿ ಗಳಿಂದ ನೋಡುತ್ತಿದ್ದಾಳೆ. ಮಗಳಿಗೆ ಹೆಳಲು ಹಾಕಿ, ಒಡವುತೊಡವುಗಳನ್ನು ಒಂದೊಂದಾಗಿ ಇಡುತ್ತಿದ್ದಾಳೆ. ಇನ್ನು ಕುಮಾರಿಕೆಯ ಮೊಗದಲ್ಲಿನ-ಅದರಲ್ಲೂ ಕಣ್ಣಿ ನಲ್ಲಿನ ನಿರ್ವ್ಯಾಜಮನೋಹರಭಾವವನ್ನು ನೋಡಿ! ಅವರಿಬ್ಬರ ಹಿಂಭಾಗದ ಆಲದ ಮರವನ್ನೂ, ಅವರು ಕುಳಿತುಕೊಂಡ ಚಾಪೆಯನ್ನೂ, ಅವರ ಉಡಿಗೆತೊಡಿಗೆಗಳನ್ನೂ ಸೂಕ್ಷ್ಮವಾಗಿ ನೋಡುವದನ್ನು ಮರೆಯಬೇಡಿ!....

ಇಂತಹ ಸಂತೃಪ್ತಸಂಸಾರದ ಚಿತ್ರಗಳು ನಮ್ಮಲ್ಲಿದೀಗ ಎಷ್ಟು ಕಣ್ಣೊಳಿಸುತ್ತಿವೆ? ಭರತಖಂಡವನ್ನೆ ವ್ಯಾಪಿಸುತ್ತಿರುವ ಬಡತನದ ಬೇಗೆಯ ಮೂಲಕವೋ-ನಮ್ಮ ಸಂಸ್ಕೃತಿಯ ಬಗೆಗೆ ನಮಗುಂಟಾದ ವಿಸ್ಮೃತಿ ಯಿಂದಲೊ, ಸಂತಪ್ತಸಂಸಾರದ ಚಿತ್ರಗಳು ಮಾತ್ರ ಹೇರಳವಾಗಿ ಕಣ್ಣಿಗೆ ಬೀಳುತ್ತಿವೆ! ನಾನೊಂದು ಹಳ್ಳಿಗೆ ಹೋಗಿದ್ದೆ. ಅಲ್ಲಿಯೊಂದು ಅದ್ವಿತೀಯ ಶಿಲ್ಪಕಲಾ ಸಂಪತ್ತಿಯುಳ್ಳ ಶಕ್ತಿಯ ದೇವಾಲಯ. ಆ ದೇವಾಲಯದ ಎಲ್ಲೆಗೆ ಹತ್ತಿಯೆ ಆ ಹಳ್ಳಿಯ ತಾಯಂದಿರು ತಮ್ಮ ಕೂಸುಗಳನ್ನು ಕೂಡಿಸುತ್ತಿದ್ದರು-ಏತಕ್ಕಾಗಿ ನೀವು ಬಲ್ಲಿರಿ. ಆ ಹೇಸಿಗೆ ಹಳ್ಳಿಯೊಳಗಿನ ಬೀದಿಗಳಗುಂಟ ಬಳ್ಳಿ ವರಿದಿದೆ. ಹಳ್ಳಿಯ ಮನೆಗಳೆಲ್ಲಾ ಒಟ್ಟಾರೆ ಅಸಡ್ಡಾಳ. ಸಾಮಾನ್ಯವಾಗಿ ನಮ್ಮೆಲ್ಲರ ಸಂಸಾರವು ಈ ಹಳ್ಳಿಯಂತೆಯೆ ತಾಳಗೆಟ್ಟು ಹೋಗಿದೆ. ಒಂದು ಅತುಲಸೌಂದರ್ಯ ಸಂಪನ್ನ ಸಂಸ್ಕೃತಿಯ ಸ್ಮೃತಿಚಿತ್ರವು ನಮ್ಮ ಮನಸ್ಸಿನಲ್ಲೇನೋ ತೂಗುತ್ತಿದೆ. ಆ ಜೆಲುವಿನ ಚಿತ್ರಕ್ಕೆ ತಕ್ಕಂತೆ ನಮ್ಮ ಸಂಸಾರವನ್ನೂ ಹಸಗೊಳಿಸ ಬೇಕೆಂದು ಮಾತ್ರ ನಮಗೆ ಹೊಳೆಯದು. ಒಂದು ಕಲ್ಪಿತ ಆನಂದವನ್ನು ನಾವು ಅನುಭವಿಸುತ್ತಲಿದ್ದೇವೆ. ನಮ್ಮ ಜೀವನದ ಕುರೂಪತೆ-ವಿಪರೀತತೆ ನಮಗೆ ತೋಚದು. ಈ ವಿಷಯದ ಬಗೆಗೆ ನಾನೊಂದೇ ಮಾತನ್ನು ಹೇಳಬಯಸುತ್ತೇನೆ. ಗೃಹಿಣೀ ಗೃಹಮುಚ್ಯತೇ-ಎಂದು ಒಂದು ಸುಭಾಷಿತ. ಮನೆಯಾಕೆಯ ಮೂಲಕವೇ ಮನೆ ಕಳೆಗೊಂಡು ತೊಳಗಿ ಬೆಳಗುತ್ತಿದೆ. ನೀರಸ ಸಂಸಾರ ದಲ್ಲಿ ಆಕೆಯೊಂದು ಸಂಗೀತಲಹರಿ. ಸುಭಾಷಿತದಲ್ಲಿಯೊಂದು ಬಿಟ್ಟರೆ ವ್ಯವಹಾರದಲ್ಲಿ ಗೃಹಿಣಿಗೆ ಉಚಿತವಾದ ಸ್ಥಾನವನ್ನು ನಾವು ಕೊಟ್ಟಿಲ್ಲ. **ರಾಷ್ಟ್ರೀಯ ಕಲೆಯ ಪುನರುಜ್ಜೀವನ** ಎಂದು ಮುಂತಾಗಿ ದೊಡ್ಡ ದೊಡ್ಡ ಶಬ್ದಗಳನ್ನು ನಾವು ಆಡಿಕೊಳ್ಳುವದುಂಟು. ಕಲೆಯ ಸಾರಸಂಪತ್ತಿ ಯಾರಿಗಾದರೂ ಜನ್ಮದಾರಭ್ಯ ವಿನಾಸ ಲಾಗಿದ್ದರೆ ಅದು ಸ್ತ್ರೀಜಾತಿಗೆಂಬುದನ್ನು ನಾವು ನೆನಪಿನಲ್ಲಿಡೋಣ. ಇಂತಹ ಕಲಾನಿಧಿಗಳನ್ನು ನಾವು ಜೀನ ರಂತೆ ಹೂಳಿಟ್ಟಿದ್ದೇವೆ. ಸಂಗೀತವೋ? ಸ್ತ್ರೀಯರ ಕಂಠ ದಲ್ಲಿ ಸರಸ್ವತಿಯ ಅವತಾರವಿದೆ! ಚಿತ್ರಕರ್ಮವೋ? ಅವರು ಮಾಡುವ ಕಾರಣೆ ಸಾರಣೆಯಲ್ಲಿ ವಿಶ್ವಕರ್ಮನ ಹಸ್ತಲಾಘವವಿದೆ! ನೃತ್ಯವೋ? ಅವರ ಅಂಗವಿಲಾಸದಲ್ಲಿ ಊರ್ವಶಿಯ ಆವಿರ್ಭಾವವಿದೆ! ಈ ದೇವದತ್ತ ಶಕ್ತಿ ಗಳನ್ನು ಅವರು ಅಯೋಗ್ಯವಾಗಿ ಬಳಿಸಬಹುದೆಂಬ ಭೀತಿಯೇ? ಶಾಲೀನತೆಯೂ ಆತ್ಮಸಂಯಮವೂ ಅವರ ಹುಟ್ಟುಗುಣಗಳು! ಅವರನ್ನು ಸೆರೆಮನೆಯಲ್ಲಿಟ್ಟು ಅವರ ಪಂಜರಸಂಗೀತವನ್ನು ಕೇಳುವುದರಲ್ಲಿ ಸಂತೋಷಬಡುವ ನಾವು ಅವರ ಸಹಜಾನಂದದ ಸ್ವಾತಂತ್ರ್ಯಸಂಜಾತ ಸಂಗೀತವನ್ನಿಷ್ಟು ಲಾಲಿಸುವಾ. ಸಮಾಜವನ್ನು ವಿವಿಧ



CC-0. Jangamwadi Math Collection. Digitized by eGangotri

ವಾಗಿ ಸುಖಪೂರ್ಣವಾಗಿ ಮಾಡಬಲ್ಲ ಶಕ್ತಿಗಳು ಬೆಣೆ ಬಡಿದ ಸೆಲೆಗಳಂತೆ ಕೆಲಸಕ್ಕೆ ಬಾರದಾಗಿವೆ. ಅವುಗಳನ್ನಷ್ಟು ಹೊರಗೆ ಹರಿಯಲು ಬಿಡೋಣ. ನಮ್ಮ ಊರು ಕೇರಿಗಳು ಹಸನಾಗುವದು, ನಮ್ಮ ಹಸುಮಕ್ಕಳಿಗೆ ಒಳ್ಳೆಯ ಶಿಕ್ಷಣ ದೊರೆಯುವುದು, ನಮ್ಮ ಸಭಾಮಂದಿರಗಳಲ್ಲಿನ ಹುಂಬಗುದಿಕೆ–ಗಜಬಜೆ ಕಡಿಮೆಯಾಗಿ ಅವು ಓರಣವಾಗಿ ನಯವಾಗಿರುವುದು, ನಮ್ಮ ರಂಗಭೂಮಿಗಳು ತಮ್ಮ ನಿಜವಾದ ಸ್ವಾಮಿನಿಯರಿಂದ ಮತ್ತೆ ಕಳೆಗೊಳುವುದು, ನಮ್ಮ ಮನೆಗಳು ಕಲಾಮಂಡಿತವಾಗಿ, ಗಾಢವಾದ ವಿವೇಕ ವಿಚಾರಸಮ್ಮತವಾದ ಸಂಸ್ಕೃತಿಗೆ ತವರಾಗುವುದು–ಹೀಗೆ ಅನೇಕ ಸಂಗತಿಗಳು ಹೆಣ್ಣು ಮಕ್ಕಳಿಗೆ ಉಚಿತ ಶಿಕ್ಷಣಸಮೇತವಾದ ಸ್ವಾತಂತ್ರ್ಯವನ್ನು ಕೊಡುವುದರಿಂದ ಸಾಧ್ಯವಾಗುವಂತಿವೆ.

**೩. ಭೂತಾನುಕಂಪ**

ಬಾಲದಿಂದ ನೊಣಗಳನ್ನು ಜಾಡಿಸುತ್ತ, ಕಣ್ಣು ಅರ್ಧ ಮುಚ್ಚಿ, ಆಕಳು ವಿಶ್ರಬ್ಧವಾಗಿ ಹೇಗೆ ನೀರು ಕುಡಿಯುತ್ತದೆ! ಹತ್ತಿರದಲ್ಲಿ ಹಗ್ಗ ಹಿಡಿದುಕೊಂಡು ಬಡಕ ಹುಡುಗ ಹೇಗೆ ನಿಂತುಕೊಂಡಿದ್ದಾನೆ. ಸ್ವಲ್ಪ ನಗುವು ಬರುವದು. ಆದರೆ ಅವರ ಮೈತ್ರಿಯನ್ನು ನೋಡಿ ಆನಂದವೂ ಆಗುವದು. ಮೊದಲಿನ ಚಿತ್ರದಲ್ಲಿ ಗೂಢ ವೇದಾಂತವು, ಎರಡನೆಯದರಲ್ಲಿ ಸುಖಮಯಸಂಸಾರವು, ಮೂರನೆಯದರಲ್ಲಿ ಮಾನವನಲ್ಲಿನ ಭೂತದಯೆ ತನಗಿಂತ ಕೆಳಗಿರುವ ಪ್ರಾಣಿ ಮಾತ್ರಗಳನ್ನೂ ಆದರಿಸುವುದು ತೋರಿಸಲ್ಪಟ್ಟಿದೆ. ಇಂತು ದೈವಿಕ ಪ್ರೀತಿಯೆಂಬ ಮಂದಾಕಿನಿಯು ಮನೋಬುದ್ಧಿಗಳಿಗೆ ನಿಲುಕದ ತತ್ತ್ವಗಳನ್ನು ಗೋಚರಗೊಳಿಸುವುದಲ್ಲದೆ, ನಮ್ಮ ದೈನಂದಿನ ಸಂಸಾರಕ್ಕೆ ಸೊಬಗಿನ ಒಪ್ಪವನ್ನು ನೀಡಿ, ಭೂತಮಾತ್ರಗಳನ್ನೂ ತನ್ನ ತೆಕ್ಕೆಯಲ್ಲಪ್ಪಿಕೊಂಡಾಗ ಮಾತ್ರ ನಮ್ಮ ಬಾಳುವೆ ಸಫಲ. ಇದುವೆ ಆರ್ಯಜೀವನ.

# ಬನಶಂಕರಿ

ಬನದೇವತೆಯು ಆಗ ನಿಂತಿದ್ದಳೇನೊ
ಬನದೊಳಗೆ ಅವಳು ಹಾಡುವಳೇನೊ!
ಬನದೊಳಗೆ ಅವಳು ಹಾಡುವಳೇನೊ! ॥ ೧ ॥

ಕೇಳಬೇಕೆಂಬಾಶೆ ಹುಟ್ಟಿತು ಆಗ
ಹಾಡುವ ಧ್ವನಿಯಂತು ಕೇಳಿತು ಎನಗೆ
ಹಾಡುವ ಧ್ವನಿಯಂತು ಕೇಳಿತು ಎನಗೆ ॥ ೨ ॥

ಬನದ ಸಿರಿಯ ನೋಡಿ ತಲ್ಲಣಗೊಂಡಿತು
ಮನಸಿನ ಸೊಗಸನು ಹೇಳಲಾರೆ
ಮನಸಿನ ಸೊಗಸನು ಹೇಳಲಾರೆ ॥ ೩ ॥

ಬನದೇವತೆಯನು ನೋಡುವೆನೆಂದು
ಕುಣಿಕುಣಿದಾಡಿದೆ ಅಂದೆಲ್ಲ ಹಗಲು
ಕುಣಿಕುಣಿದಾಡಿದೆ ಅಂದೆಲ್ಲ ಹಗಲು ॥ ೪ ॥

ಬನದೇವತೆಯನು ನೋಡಬೇಕೆಂದು
ತಿರುಗಿದೆ ಇರುಳಲ್ಲಿ ಬನದೊಳಗೆಲ್ಲ
ತಿರುಗಿದೆ ಇರುಳಲ್ಲಿ ಬನದೊಳಗೆಲ್ಲ ॥ ೫ ॥

ಸಿಕ್ಕಿದಳೇನೋ ಸಿಕ್ಕಿದಳೇನೋ
ಎನುತ ತಿರುಗಾಡಿದೆ ಬನದೊಳಗೆಲ್ಲ
ಎನುತ ತಿರುಗಾಡಿದೆ ಬನದೊಳಗೆಲ್ಲ ॥ ೬ ॥

ಬರುವೆನು ಈಗಲೆ ಎನ್ನುತಲವಳು
ಓಡಿದಳೆಲ್ಲಿಗೋ ಕಾಣಿಸಲಿಲ್ಲ
ಓಡಿದಳೆಲ್ಲಿಗೋ ಕಾಣಿಸಲಿಲ್ಲ ॥ ೭ ॥

ಬರುವೆನೆಂದು ಹೇಳಿ ಹೇಳಿ ಅವಳು
ಎನ್ನ ಕಣ್ಣಿಗೆ ಕಡೆಗೆ ಬೀಳಲಿಲ್ಲ
ಎನ್ನ ಕಣ್ಣಿಗೆ ಕಡೆಗೆ ಬೀಳಲಿಲ್ಲ ॥ ೮ ॥

—ಕಮಲಾ

CC-0. Jangamwadi Math Collection. Digitized by eGangotri

# ಕುಕ್ಕನೂರು

ಲೇ:— ಪಾಂಡುರಂಗ ಭೀಮರಾವ ದೇಸಾಯಿ, ಅಧ್ಯಾಪಕ ವಿದ್ಯಾನಂದ ಪಾಠಶಾಲೆ, ಕುಕನೂರು

[ ಕುಕನೂರಲ್ಲಿ ಶಿಲಾಲಿಪಿಗಳು ಹೇರಳವಾಗಿವೆ. ಅವೆಲ್ಲ ಬಹಳಮಟ್ಟಿಗೆ ಸುರಕ್ಷಿತವಾಗಿದ್ದು ಇಲ್ಲಿಯ 'ವಿದ್ಯಾನಂದ ಪಾಠಶಾಲೆ'ಯಿಂದ ಸಂಶೋಧಿತವಾಗಿವೆ. ಅವುಗಳಲ್ಲಿ ಹಲವು ಬಹಳ ಸರಸವಾಗಿವೆ. ಅವುಗಳಿಂದ ನಿಷ್ಪನ್ನವಾಗುವ ಕುಕ್ಕನೂರ ವೃತ್ತಾಂತವನ್ನು ಶೇಖರಿಸಿ ಇಲ್ಲಿ ಬರೆಯಲ್ಪಟ್ಟಿದೆ. ಪ್ರಬಂಧಗಳಲ್ಲಿಯ ವರ್ಣನೆಯು ಪೂರ್ಣವಾಗಿ ಶಾಸನಗಳನ್ನೇ ಅನುಸರಿಸಿರುತ್ತದೆ. ]

ನಮಾಮಿ ಯಾಮಿನೀನಾಥ ಲೇಖಾಲಂಕೃತ
ಕುಂತಳಾಮ್ ।
ಭವಾನೀಂ ಭವಸಂತಾಪ ನಿರ್ವಾಪಣ
ಸುಧಾನದೀಂ॥

ಚಾಲುಕ್ಯಸಾಮ್ರಾಜ್ಯ ಸಹಸ್ರರಶ್ಮಿಯು ಅಸ್ತಾಚಲದಿಂದ ಚಲಿತನಾಗಿದ್ದರೂ ಕರ್ನಾಟಕಸಾಮ್ರಾಜ್ಯ ಸೂರ್ಯನು ಇನ್ನೂ ಮಧ್ಯಾಕಾಶದಲ್ಲಿ ವಿರಾಜಿಸುತ್ತಿರುವನು. ಕಲ್ಯಾಣಪಟ್ಟಣದಲ್ಲಿ ಅಕಲ್ಯಾಣವನ್ನು ಹೂಡಿದ ಕಲಚೂರ್ಯರ ರಾಹುವು ಚಾಲುಕ್ಯರವಿಯನ್ನು ನುಂಗಿಬಿಟ್ಟಿದ್ದರೂ ಉತ್ತರ ದಕ್ಷಿಣದಲ್ಲಿ ಯಾದವ ಹೊಯ್ಸಳರ ನವಚಂದ್ರಬಿಂಬಗಳು ಕಳೆದುಂಬುತ್ತ ಆ ಸ್ವಾಮಿದ್ರೋಹಿಗೆ ಅರ್ಧಚಂದ್ರವನ್ನು ಕಾಣಿಸಲಿರುವವು. ಈ ಸಂಧಿಕಾಲದಲ್ಲಿ ದಕ್ಷಿಣದೇಶದ ಒಬ್ಬ ಯಾತ್ರಿಕನು

ದೇಶಂಗಳೊಳಗೆ ಕುಂತಳ- ।
ದೇಶಮೆ ಮಿಗಿಲಲ್ಲಿ ಕಾಳಿಕಾಜ್ಯೇಷ್ಠೆ ಕಪಾ॥
ಳೀಶರ್ನೆಲಸಿದ ಸುಕೃತದ ।
ರಾಶಿಗೆ ನೆಲೆಯಾದ ಮೈಮೆಯಿಂ ಭೂತಳ
ದೋಳ್ ॥

ಎಂಬೀ ಕುಂತಳದೇಶದ ಪ್ರಶಂಶೆಯನ್ನು ಕೇಳಿ ಆ ಕುಂತಳದಲ್ಲಿ ಲಲಾಮಭೂತಳಾಗಿ ಮೆರೆಯುವ ಶ್ರೀಜ್ಯೇಷ್ಠಾದೇವಿಯ ದರ್ಶನಾಕಾಂಕ್ಷೆಯನ್ನು ತಾಳಿ ಕುಂತಳ ದೇಶಕ್ಕೆ ಐತರುವನು. ಆ ದೇಶದಲ್ಲಿ ಮಾರ್ಗಕ್ರಮಣ ಮಾಡುತ್ತಿರುವಾಗ ಅಲ್ಲಿಯ ರಮ್ಯರಾಮಣೀಯಕವು ಆತನ ಹೃದಯವನ್ನು ಸೆಳೆದುಕೊಂಡು ಆತನ ಮುಖದಿಂದ

.......ಇಳಾ ಕಾಂತೆಯ
ಕುಂತಳವೆನೆ ಚೆಲ್ವನಾಯ್ತು ಕುಂತಳದೇಶ ॥
ಅದು ಕುಂತಳದೇಶವೆನಿಸಿ ।
ಪ್ಪುದರಿಂದಂ ಮಧ್ಯದೇಶಕಂ ಕಾಂಚೀದೇ- ॥
ಶದ ಚೆಲ್ವಿಗಂ ಮೇಲೆನಿ- ।
ಪ್ಪುದು ಕುಂತಳದೇಶದಿಂದೆ ಮೇಲ್‌ಪೆರವೊಳವೆ! ॥

ಭೂಕಾಂತೆಯು ಕೂದಲದಂತೆ ಚಂದ ಚಂದವಾಗಿರುವ ಈ ಕುಂತಳದೇಶವು ಮಧ್ಯದೇಶಕ್ಕಿಂತಲೂ, ಒಡ್ಯಾಣದಂತಿರುವ ಕಾಂಚೀದೇಶಕ್ಕಿಂತಲೂ ಎಷ್ಟಾದರೂ ಮೇಲೇ ಸೈ ಎಂಬ ಉದ್ಗಾರಗಳು ಹೊರಹೊಮ್ಮುವವು.

ಅಂತಾ ಕುಂತಳದೇಶಾ- ।
ಭ್ಯಂತರದೊಳು ಚೆಲ್ವನಪ್ಪ ಬೆಳ್ವಲ ನಾಡುಂ- ॥
ಟಂತದರಂತಃಸ್ಥಿತಿಯಿಂ- ।
ಕಾಂತಂ ತಾಂ ಕುಕ್ಕನೂರು ಮೂವತ್ತೆಂತು ॥

ಹೋಗ ಹೋಗುತ್ತ ಆತನು ಆ ಕುಂತಳಕ್ಕೆ ತಿಲಕಪ್ರಾಯವಾಗಿ ಬಂಗಾರದ ಹೂವಿನಂತೆ ಮಾಟ ಮಾಟವಾಗಿ ಒಪ್ಪುವ ಮುನ್ನೂರರ ಬೆಳ್ವಲ ನಾಡನ್ನು ಪ್ರವೇಶಿಸಿ ತನ್ನ ಉದ್ದಿಷ್ಟ ಸ್ಥಳವಿದ್ದ ಕುಕ್ಕನೂರು ಮೂವತ್ತನ್ನು ಕುರಿತು ಪ್ರಯಾಣ ಬೆಳಿಸುವನು. ಅಲ್ಲಿಯ ನಿಸರ್ಗಶ್ರೀಯ ನೋಟವು ಆತನ ಮಾರ್ಗಾಯಾಸವನ್ನು ಮಾಯಮಾಡುವದು.

ಎತ್ತಲುವೊಪ್ಪವಂ ತಳೆದ ಕುಂತಳದೇಶಕೆ ಚಿನ್ನ
ಪೂವೆ ತ- ।
ಳ್ತೆತ್ತವಳಂಕೆಗೊಂಡುದೆ ವಿರಾಜಿಸುತಿರ್ಪುದು
ಬೆಳ್ವೊಲಂ ತದ- ॥

CC-0. Jangamwadi Math Collection. Digitized by eGangotri

ತ್ಯುತ್ತಮ ದೇಶದೊಳ್ ತಿಳಕದಂತೆಸೆದಿಪ್ಪುದು
ಕುಕ್ಕನೂರು ಮಹ- ।
ವತ್ತು ಸುಗಂಧ ಶಾಳಿ ವಿಳಿತಂ ಲಳಿತಂ ಫಳಿತ-
ದ್ರುಮಾನ್ವಿತಂ ॥

ಅಷ್ಟರಲ್ಲಿ ಪ್ರಸನ್ನ–ಉತ್ಕಂಠಿತ ಭಾವದಿಂದ ಗಮ ನೋನ್ಮುಖನಾದ ಆತನ ಚಿತ್ತವನ್ನು ಅಲ್ಲಿಯ ಒಂದು ತೇಜೋಜ್ಯೋತಿಯು ಎಳೆಯತೊಡಗುವದು.

ಆ ಮೂವತ್ತರ ನಡುವೆ ಮ- ।
ಹಾಮಹಿಮಂ ಸರ್ವಸಂಪದಧಿಕತೆಯಿಂದಂ ॥
ಶ್ರೀಮನ್ಮಹಾಗ್ರಹಾರವ- ।
ಸಾಮಾನ್ಯಂ ಕುಕ್ಕನೂರು ವಿಗೆ ಸೊಗಯಿ
ಸುಗುಂ ॥

ಅನಾದಿಯಾದ, ಅಸಾಮಾನ್ಯವಾದ, ಮಹಾಮಹಿಮ ವಾದ, ಸರ್ವೈಶ್ವರ್ಯಸಂಪನ್ನವಾದ, ಆ ಪುಣ್ಯಮಯ ವಾದ ಮಹಾಗ್ರಹಾರವು ಬಳಿಸಾರಿದಂತೆ ಆತನ ಹೃದಯವು ಕುಣಿಯಹತ್ತುವದು. ಇದು ಶಿವಶಕ್ತಿ ಸ್ಫುರತ್ ಸಂಪುಟಕ್ಷೇತ್ರವು, ಇಲ್ಲಿ ಆದಿಪೀಠದಂಬಿಕೆ, ತಡಾಗದಂಬಿಕೆ, ವಾಸಂತಿದೇವಿ, ಶ್ರೀಗುಪ್ತೆ, ಚಾಮುಂಡಿ ಮುಂತಾದ ದೇವಿಯರು ನೆಲೆಯಾಗಿರುವರು. ಇದು ಸಿದ್ಧಯೋಗೀಶ್ವರರ ಪಾವನಭೂಮಿ ಮುಂತಾದ ವರ್ಣ ನಾತಿಶಯವನ್ನು ಕೇಳಿದ ಆತನ ಮನಸ್ಸು ಆತನ ಕಾಲ್ಗ ಗಳನ್ನು ಮುಂದು ಮುಂದಕ್ಕೆ ಪ್ರೇರಿಸುವುದು. ಆ ಮಹಾಗ್ರಹಾರದ ಪ್ರಮುಖ ಮಹಾಜನಂಗಳಾದ ಸುಗುಣ ಸಂಭಾವಿತರಾದ ಸಾಸಿರ್ವರ ಸಮಾಗಮ ಲಾಲಸೆಯು ಆತನಲ್ಲಿ ಪ್ರಜ್ವಲಿಸುವದು. ದೂರದಿಂದ ಪಾಲ್ಗಡಲಂತೆ ಸುತ್ತುವರಿದ ಹೆಗ್ಗೆರೆ, ಎರಣೀಗೇರೆ, ಮಾಗಣೀಗೇರೆ ಮುಂತಾದ ಜಲಾಶಯಗಳು ಆತನ ಕಣ್ಣುಗಳನ್ನು ತಣಿಸಹತ್ತುವವು. ಎಡಬಲದಲ್ಲಿ ಎತ್ತ ನೋಡಿದತ್ತ ಹಬ್ಬಿರುವ ದೇವರ ದಾನದ ಮಾನ್ಯದ ಹೊಲ ಗದ್ದೆಗಳನ್ನೂ, ಬಳಸಿ ಬೆಳೆದ ಬಾಳೆಯ ಬನವನ್ನೂ ನಾರಂ ಗದ ತನಿವಣ್ಣುಗಳನ್ನೂ ನಿರೀಕ್ಷಿಸುತ್ತ ನಿರೀಕ್ಷಿಸುತ್ತ ಆತನು ಊರಿಗೆ ಬಂದು ತಲ್ಪುವನು. ಅನಿತರೊಳ್ ಸ್ವರ್ಗಕ್ಕೆ ಕೈಚಾಚಿದ ಹೋಮಧೂಮವು ಆತನ ಕಣ್ಣಿಗೆ ಬೀಳು ವದು. ಮುಂದೆ ಹೋಗುವಷ್ಟರಲ್ಲಿ ಮಂದಿರಗಳೊಳಗಿನ ಗಂಟೆಗಳ ತುಮುಲವಾದ ಧ್ವನಿಯು, ವೇದಶಾಸ್ತ್ರಾಧ್ಯ ಯನಗಳ ಘೋಷವು, ಸ್ತವನಕೀರ್ತನೆಗಳ ನಿನಾದವು ಆತನ ಇಂದ್ರಿಯಗಳನ್ನು ಹರಣಮಾಡುವವು.

ಊರಲ್ಲಿ ಕೇರಿಕೇರಿಗಳನ್ನೂ, ಬೀದಿರಾಜಬೀದಿ ಗಳನ್ನೂ, ಗುಡಿ, ದೇಗುಲಗಳನ್ನೂ, ಮಂಟಪಸಾಲೆ ಗಳನ್ನೂ ನೋಡುತ್ತ ನೋಡುತ್ತ ಆತನು

ಸಾರ ನಾಲ್ಪತ್ತೆಂಟುಂ
ಕೇರಿಗಳಿಂ ಬಳಸಿ ಬೆಳೆದ ಬಾಳೆಯ ಬನದಿಂ ॥
ನಾರಂಗದ ತನಿವಣ್ಣಳಿ-
ನೋರಂತಿರೆ ಕುಕ್ಕನೂರು ಕಣ್ಗೆಸೆದಿಕ್ಕು ॥
ಪಲವುಂ ಮಂಟಪದಿಂ ದೇ-
ಗುಲದಿಂದಾ ಪಣ್ಯವೀಥಿಯಿಂ ಚೌವಟದಿಂ ॥
ಸಲೆ ವೇದಪಾಠದಿಂದಂ ।
ಪಲತೆರದಿಂ ಕುಕ್ಕನೂರು ಚೆಲ್ವಂ ತಳೆಗುಂ ॥

ಆತನು ಉಸುರುತ್ತ ಉಸುರುತ್ತ ಊರ ಒಡಲನ್ನು ಹೊಗುವನು.

ಅಲ್ಲಿಂದ ಆ ಅತಿಥಿಯು ವಿಶುದ್ಧಗಾತ್ರನೂ ವಿನೀತ ಚಿತ್ತನೂ ಆಗಿ ಕಲ್ಲೇಶ್ವರ, ಬ್ರಹ್ಮೇಶ್ವರ, ಗಣೇಶ್ವರ, ಸ್ವಯಂಭೂಪ್ರಸನ್ನ ಮಲ್ಲಿಕಾರ್ಜುನ, ಸ್ವಯಂಭೂ ಪ್ರಭುತ್ವದಿಂದ ಎಸೆವ ಒಂಭತ್ತು ಶಿವಲಿಂಗಗಳು, ಸೋಮೇಶ್ವರ, ವಸಂತಮಾಧವ ಮುಂತಾದ ದೇವತಾ ಸಂದರ್ಶನ ಪ್ರಸಾದಗ್ರಹಣ ಮಾಡಿ ಜಯಜಯಕಾರ ದೊಂದಿಗೆ ಜಗದ್ವರಿಷ್ಠೆಯರಾದ ಶ್ರೀಜ್ಯೇಷ್ಠಾದೇವಿಯರ ತಳಿರಡಿಗಳಲ್ಲಿ ಲೀನನಾಗುವನು. ಬಳಿಕ ದೇವಿಯವರ ಪುತ್ರರಾದ ಜ್ಞಾನತಪಃಸಿದ್ಧಿಗಳ ಮುಪ್ಪುರಿಯ ಮುಪ್ಪಿನ ಮುದುಕರಾದ ಯತೀಶ್ವರ ಸಿದ್ಧಾಂತಿ ಕಳೇ ಶ್ವರರ ದರ್ಶನದಿಂದ ಧನ್ಯನಾಗುವನು.

ಮುಂದೆ ಕೆಲ ದಿನ ಆ ಕ್ಷೇತ್ರದಲ್ಲಿ ವಾಸವಾಗಿದ್ದು ಅಲ್ಲಿಯ ಯತಿಗಳ, ಯೋಗಿಗಳ, ಯೋಗಿನಿಯರ, ತಾಪ ಸರ, ಸಿದ್ಧರ ಅನೇಕಾದ್ಭುತ ಕತೆಗಳನ್ನು ಕೇಳುತ್ತ ಅವರ ಸಮಾಗಮದಲ್ಲಿ ಪುನೀತನಾಗುವನು. ಇರಇರುತ್ತ ಕಿ ದೊರೆವೆತ್ತ ಅಗ್ರಹಾರದಲ್ಲಿ ಹೆಸರುವಾಸಿಯಾದ ಊರ ಹಿರಿಯರಾದ ಸಾಸಿರ್ವರೆಂಬ ಸಹಸ್ರ ಸಂಖ್ಯಾಕ ಬ್ರಾಹ್ಮಣಧುರೀಣರ ಅನೇಕ ಚರಿತೆಗಳು ಆತನನ್ನು ಬೆರಗುಗೊಳಿಸುವವು.

CC-0. Jangamwadi Math Collection. Digitized by eGangotri

ಎನೆ ನೆಗಳ್ದಗ್ರಹಾರದೊಳುದಗ್ರಗಣಿಗಳ್
ಸಮವಾಪ್ತ ಶಾಸ್ತ್ರ ಸ- ।
ಜ್ಜನರನವದ್ಯರರ್ಥಿಜನ–ಕಲ್ಪಕುಜರ್ ಕವಿತಾ
ಮಹಾರ್ಣವರ್ ॥
ಮನುಚರಿತರ್ ಸಮಸ್ತ–ಬುಧ ಸಂಸ್ತುತರೆಂದು
ಮಹಾಜನಂಗಳಂ ।
ಜನವಿನಿತಂ ಸಕೌತುಕದೆ ಸಂಸ್ತುತಿಗೆಯ್ವುದದೇ-
ನಹರ್ನಿಶಂ ॥

ಆ ಸಾಸಿರ್ವರ ಶೀಲಸಂಪನ್ನತೆ, ಅವರ ಪಾಂಡಿತ್ಯ, ಅವರ ಕರ್ತೃತ್ವಶಕ್ತಿ, ಅವರ ಬ್ರಹ್ಮಸಂಪತ್ತು ಇವುಗಳು ಆತನ ಹೃದಯವನ್ನು ಗೆದ್ದುಬಿಡುವವು.

ಇನಿತಿನಿತು ಅಲ್ಲಿಯ ದೇವರ ಬಗ್ಗೆ, ಅಲ್ಲಿಯ ಸಾಸಿರ್ವರ ಬಗ್ಗೆ, ಜನತೆಯಲ್ಲಿ, ರಾಜರಲ್ಲಿ, ಮಾಂಡಲಿಕರಲ್ಲಿ, ಪ್ರಧಾನರಲ್ಲಿ, ನಾಯಕರಲ್ಲಿ ಆಳವಾಗಿ ಬೇರೂರಿದ ಭಕ್ತಿ ವಿಶ್ವಾಸಗಳು ಚಾಲುಕ್ಯ, ಕಲಚುರಿ,* ಯಾದವ ಕುಲದ ಅರಸರಿಂದ ಆ ದೇವ–ಭೂದೇವರಿಗೆ ಬಿಟ್ಟ ಅಸಂಖ್ಯ ಧರ್ಮಗಳು, ದೇವೀಪ್ರಸಾದಪಾತ್ರನಾದ ಬೆಳ್ವಲ ನಾಡಧಿಕಾರಿ ಮಹಾಪ್ರಧಾನ ಧನ್ನುಗಿ ದಂಡನಾಯಕನು ಶ್ರೀಜ್ಯೇಷ್ಠೆಗೆ ಕೊಟ್ಟ ಮಹಾದಾನ, ತೇಜಿರಾಜ ದಂಡಾಧೀಶನು ಶ್ರೀಮಲ್ಲಿಕಾರ್ಜುನ ದೇವರಿಗೆ ಲಕ್ಷ ಕೊಡ ಹಾಲಿನಭಿಷೇಕ ಮಾಡಿ ಗ್ರಾಮದಾನ ಬಿಟ್ಟದ್ದು, ಅಂದಿನಿಂದ ಆ ದೇವರಿಗೆ ಹಾಲಮಲ್ಲಿಕಾರ್ಜುನನೆಂಬ ಹೆಸರು ಬಂದದ್ದು, ಎಷ್ಟು ಅಗಿದು ಒಯ್ದರೂ ಮತ್ತೆ ಭೂಮಿ ಗುದ್ದ ಬೆಳೆಯುತ್ತಿದ್ದ ಲಳಿತವಾದ ಕೆಮ್ಮಣ್ಣ ತಾಣದ ಮೈಮೆ ಮುಂತಾದ ವೃತ್ತಾಂತಗಳು ವಿಸ್ತಾರವಾಗಿ ಆತನಿಗೆ ವಿದಿತವಾಗುವವು. ಇಂತು ಪೇರರಿಕೆಯ ಆ ಪುಣ್ಯಪುರಿಯ ಪ್ರತಿಬಿಂಬವು ಆ ಕ್ಷೇತ್ರವಾಸಿಯ ಹೃತ್ ಫಲಕದ ಮೇಲೆ ಶಿಲಾಶಾಸನರೂಪವಾಗಿ ಕೊರೆದುಕೊಂಡು ನಿಲ್ಲುವದು. ನಲಿನಲಿವ ಬಗೆಯಿಂದ

ಬ್ರಹ್ಮಣ ಶಾಲೆಯಿಂ ಬ್ರಹ್ಮಕುಂಡದಿನಿವರ್ ಬ್ರಹ್ಮರೆನಿಪ್ಪ ದ್ವಿಜರಿಂದಂ ಕುಕ್ಕನೂರು ಬ್ರಹ್ಮಲೋಕಕ್ಕೆ ದೊರೆಯಾಯ್ತು।

ಚತುರಾಂಬೋಧಿ ಪರೀತ ಧಾತ್ರಿಯೊಳಳುಂಬಂ*
ಬೆಳ್ವಲಂ ನೋಳ್ಪೊಡ- ।
ಪ್ರತಿಮಂ ತಾನೆನೆ ಚೆಲ್ವನಾ ವಿಷಯದೊಳ್
ಸಂವೇಷ್ಟಿತಾರಾಮ ವಾ- ॥
ಪಿ ತಟಾಕಂ ಬಹುದೇವತಾ ಭವನದಿಂ ವೇದಾಢ್ಯರಿಂ
ಯಜ್ಞದೀ- ।
ಕ್ಷಿತರಿಂ ಶಾಸ್ತ್ರಪುರಾಣ ತರ್ಕವಿದರಿಂ ಶ್ರೀಕುಕ್ಕ
ನೂರೊಪ್ಪುಗುಂ ॥

ಶ್ರೀ ಕುಕ್ಕನೂರು ಬ್ರಹ್ಮಲೋಕಕ್ಕೆ ಸಮಾನವಾಯ್ತು, ಶ್ರೀ ಕುಕ್ಕನೂರು ಬ್ರಹ್ಮಲೋಕಕ್ಕೆ ಸಮಾನವಾಯ್ತು. ಎಂದು ಪುನಃ ಪುನಃ ಕೊಂಡಾಡುತ್ತ ಆ ಅಭ್ಯಾಗತನು ಆ ಮಹಾಗ್ರಹಾರವನ್ನು ಬೀಳ್ಕೊಳ್ಳುವನು.

* ವಿಜಯನಗರದ ಕಾಲದಲ್ಲಿಯೂ ಕುಕ್ಕನೂರು ಸರ್ವಮಾನ್ಯವಾಗಿತ್ತು.

*ಅಳುಂಬಂ= ಅಧಿಕವಾಗಿ

**ಭರತಖಂಡದ** ನೂತನ ಜನಾಂಗವು ಧರ್ಮದ ಮೇಲೆಯೇ ನೆಲೆಗೊಳ್ಳುವದು. ಯೋಗವೇ ಧರ್ಮಲಾಭದ ಶ್ರೇಷ್ಠಪಥವು. ಯೋಗಸಿದ್ಧ ವ್ಯಕ್ತಿಶಕ್ತಿಯು ತನ್ನನ್ನು ಬಹುಗುಣಿಸಿ ತನ್ನ ಸೀಮೆಯನ್ನು ವಿಸ್ತಾರಗೊಳಿಸುವದು. ಇಂಥವರ ವ್ಯಕ್ತಿ ಸ್ವಾತಂತ್ರ್ಯವು ಸಮುಸ್ತದಲ್ಲಿ ವಿಲೀನವಾಗುವದು. ಬಹು ಸ್ವರಗಳ ಮಿಲನದಿಂದ ಹ್ಯಾಗೆ ಏಕ ತಾನತೆಯು ಹುಟ್ಟುವದೋ ಹಾಗೆಯೇ ಇಂಥ ಬಹು ವ್ಯಕ್ತಿಗಳ ಐಕ್ಯದಿಂದ ಸಾಮರಸ್ಯಪೂರ್ಣವಾದ ಒಂದು ನೂತನ ರಾಜ್ಯವುಂಟಾಗುವದು. ಅದು ಆತ್ಮದ ಐಕ್ಯಮೂರ್ತಿಯಾಗುವದು; ದೇವ-ಸಮಾಜವಾಗುವದು.

**—ಶ್ರೀ ಅರವಿಂದಯೋಗಿ**



CC-0. Jangamwadi Math Collection. Digitized by eGangotri




## ಕೆರೆಗೆ ಹಾರ

( ಶ್ರೀ. ಕೃ. ಶ್ರೀ. ಬೆಟಗೇರಿಯವರಿಂದ ಸಂಗ್ರಹಿಸಲ್ಪಟ್ಟ ಕೋಲಿನ ಹಾಡು )

೧

ಕಲ್ಲನಕೇರಿ ಮಲ್ಲನಗೌಡಾ ಕೆರೆಯೊಂದ್ ಕಟ್ಟಿಸ್ಯಾನು *
ಕೆರೆಯೊಂದ ಕಟ್ಟಿಸ್ಯಾನು ಸೆರೆಮುಕ್ಕ ನೀರಿಲ್ಲ
ಸೆರೆಮುಕ್ಕ ನೀರಿಲ್ಲ ಹೊತ್ತಿಗಿ ತಗಸ್ಯಾರು
ಹೊತ್ತಿಗಿ ತಗಸ್ಯಾರು ಜೋಯಿಸ ಕೇಳ್ಯಾರು
"ದೇವರಲ್ಲ ದಿಂಡ್ರುಲ್ಲ ದೆವ್ವಲ್ಲ ಬೂತಲ್ಲ"
"ಹಿರಿಸೊಸಿ ಮಲ್ಲವನ ಹಾರವ ಕೊಡಬೇಕು"
ಹಾರವ ಕೊಟ್ಟರ ನೀರು ಬೀಳೂವಂದ್ರು
"ಹಿರಿ ಸೊಸಿನ್ನ ಕೊಟ್ಟರೆ ಹಿರಿತನಕ ಯಾರಿಲ್ಲ"
"ಕಡೆ ಸೊಸಿ ಭಾಗಿರತಿನ್ನ ಹಾರವ ಕೊಡಬೇಕು"
ಹಾರ ಕೊಡಬೇಕಂತ ಮಾತಾತು ಮನೆಯಾಗ

೨

ಸಣ್ಣ ಸೊಸೆ ಭಾಗೀರತಿ ತವರ ಮನೆಗೆ ಹೊಂಟಾಳು,
"ಅತ್ತೆವ್ವಾ ನಾ ನಮ್ಮ ತವರಮನೆಗೆ ಹೋಗತೀನು"
"ಸರ್ರನೆ ಹೋಗವ್ವಾ ಭರ್ರನೆ ಬಾರವ್ವಾ"
ಸಣ್ಣ ಸೊಸೆ ಭಾಗೀರತಿ ತವರಮನೆಗೆ ಹೋದಾಳು
ಮನೆ ಮುಂದ ಹೋಗುದಕ ಅವರಪ್ಪ ಬಂದಾನು
"ಎಂದಿಲ್ಲದೆ ಭಾಗೀರತಿ ಇಂದ್ಯಾಕ ಬಂದೆವ್ವ"
"ಬಾಡಿದ ಮಾರ್‍ಯಾಕ ಕಣ್ಣಾಗ ನೀರ್‍ಯಾಕ"
"ನಮ್ಮಾವ ನಮ್ಮತ್ತೆ ಬ್ಯಾರೆ ಇಡುತಾರಂತೆ"
"ಇಟ್ಟರ ಇಡಲೇಳು ಹೊಲಮನಿ ಕೊಡತೇನು"
"ಹೊಲಮನೆ ಒಯ್ದು ಹೊಳೆ ದಂಡ್ಯಾಗ್ಹಾಕಪ್ಪ"
ಅತ್ತತ್ತ ಹೊಗುತಲೆ ಅವರವ್ವ ಬಂದಳು
"ಎಂದಿಲ್ಲದೆ ಭಾಗಿರತಿ ಇಂದ್ಯಾಕಳುತಾ ಬಂದೆ?"
"ನಮ್ಮತ್ತಿ ನಮ್ಮ ಮಾವ ಬ್ಯಾರೇ ಇಡುತಾರಂತೆ"
"ಇಟ್ಟರ ಇಡಲೇಳು ವಾಲಿಜೋಡು ಕೊಡುತೇನೆ"
"ವಾಲಿಯ ಜೋಡೊಯ್ದು ಒಲಿಯಾಗ ಹಾಕವ್ವ"
ಮುಂದಕತ್ತ ಹೋಗುತಲೆ ಅವರಕ್ಕ ಬಂದಳು
ಅವರಕ್ಕ ಬಂದಾಳು ಭಾಗೀರತಿನ್ನ ಕೇಳ್ಯಾಳು
"ಎಂದಿಲ್ಲದೆ ಭಾಗೀರತಿ ಇಂದ್ಯಾಕ ಈ ದುಕ್ಕ"
"ನಮ್ಮತ್ತಿ ನಮ್ಮಾವ ಬ್ಯಾರೆ ಇಡುತಾರಂತೆ"
"ಇಟ್ಟರ ಇಡಲೇಳ ಮಕ್ಕಳ ಜೋಡಿಗೆ ಕಳವತೇನೆ"
"ಮಕ್ಕಳಿದ್ದರೇನಕ್ಕ ದುಕ್ಕ ಕಳದಾವೇನ?"
ಸಣ್ಣ ಸೊಸಿ ಭಾಗಿರತಿ ತವರಮನಿಯ ಬಿಟ್ಟು
ತವರಮನಿಯ ಬಿಟ್ಟು ಗೆಣತಿ ಮನೆಗೆ ನಡೆದಳು.
ತಲಬಾಗಿಲದಾಗ ಗೆಳತಿನ್ನ ಕಂಡಳು.
"ಎಂದಿಲ್ಲದೆ ಭಾಗೀರತಿ ಇಂದ್ಯಾಕ ಈ ಅಳುವು"
ಅಂಜಿ "ಹೇಳಲೆ ಗೆಳತಿ" ಅಳುಕಿ "ಹೇಳಲೆ ಗೆಳತಿ"
"ಅಂಜಬ್ಯಾಡ ಗೆಳತಿ ಅಳುಕಬ್ಯಾಡ ಗೆಳತಿ"
"ನಮ್ಮತ್ತೆ ನಮ್ಮಾವ ಕೆರೆಗ್ಹಾರ ಕೊಡತಾರಂತ"
"ಕೊಟ್ಟರ ಕೊಡಲೇಳು ಇಟ್ಹಾಂಗ ಇರಬೇಕ!"
ಸರ್ರನೆ ಹೋದಳು ಭರ್ರನೆ ಬಂದಳು

೩

ಬ್ಯಾಳಿಯ ಹಸಮಾಡ್ತ ಬಿಟ್ಟಳು ಕಣ್ಣೀರ.
"ಎಂದಿಲ್ಲದ ಭಾಗೀರತಿ ಇಂದ್ಯಾಕ ಕಣ್ಣೀರೆ"
"ಬ್ಯಾಳ್ಯಾಗಿನ ಹಳ್ಳು ಬಂದು ಕಣ್ಣಾಗೆಚಿದವು ಮಾವಾ"
ಅಕ್ಕಿಯ ಹಸಮಾಡ್ತ ಉಕ್ಕ್ಯಾವು ಕಣ್ಣೀರು.
"ಎಂದಿಲ್ಲದೆ ಭಾಗೀರತಿ ಇಂದ್ಯಾಕ ಕಣ್ಣೀರು"
"ಅಕ್ಯಾಗಿನ ಹಳ್ಳೊಂದು ಕಣ್ಣಾಗ ಬಿತ್ತತ್ತಿ"
ಉಕ್ಕುವ ನೀರಾಗ ಅಕ್ಕಿಯ ಸುರುವ್ಯಾರ
ಸಕ್ಕರಿ ಹಾಲಾಗ ಸ್ಯಾವಿಗಿ ಸುರಿವ್ಯಾರ

*ಪ್ರತಿಪಾದದ ಕೊನೆಗೂ "ಕೋಲೆನ್ನ ಕೋಲ" ಎಂದು ಹೇಳುವರು.

CC-0. Jangamwadi Math Collection. Digitized by eGangotri

ಹತ್ತು ಕೊಪ್ಪರಿಗೆ ನೀರು ಉಕ್ಕಿ ಮಳ್ಳತಿತ್ತು
"ನಿಂಗವ್ವ ಜಳಕಾ ಮಾಡಃ ನೀಲವ್ವ ಜಳಕಾ ಮಾಡಃ"
ನಿಂಗವ್ವ "ನಾವೊಲ್ಲೆ" ನೀಲವ್ವ "ನಾವೊಲ್ಲೆ"
"ಗಂಗವ್ವ ಜಳಕ ಮಾಡಃ ಗವರವ್ವ ಜಳಕ ಮಾಡಃ"
ಗಂಗವ್ವ "ನಾವೊಲ್ಲೆ" ಗವರವ್ವ "ನಾವೊಲ್ಲೆ"
"ಸಣ್ಣ ಸೊಸಿ ಬಾಗವ್ವ ನೀನರೆ ಜಳಕ ಮಾಡಃ"
ಸಣ್ಣ ಸೊಸಿ ಬಾಗೀರತಿ ಜಳಕನ ಮಾಡ್ಯಾಳು
ಜಳಕನ ಮಾಡ್ಯಾಳು ಬಂಗಾರಬುಟ್ಟಿ ತುಂಬ್ಯಾಳು
ಬಂಗಾರಬುಟ್ಟಿ ತುಂಬ್ಯಾಳು ಸಿಂಗಾರಸಿಂಬಿ ಮಾಡ್ಯಾಳು
ಸಿಂಗಾರಸಿಂಬಿ ಮಾಡ್ಯಾಳು ಮುಂದಮುಂದ ಹೊಂಟಳು
ಮುಂದ ಮುಂದ ಭಾಗೀರತಿ ಹಿಂದ್ಹಿಂದ ಎಲ್ಲಾರೂ
ಗಂಗಿ ಪೂಜೆ ಮಾಡ್ಯಾರ್ರ ಬೆಲಪತ್ರಿ ಏರಿಸ್ಯಾರಃ
ಬೆಲಪತ್ರಿ ಏರಿಸ್ಯಾರ್ ಈಬತ್ತೀ ಧರಿಸ್ಯಾರಃ
ಸೀರಿ ಕುಬುಸಾ ಎರಿಸ್ಯಾರ ಹೂಪಿನ ದಂಡಿ ಮುಡಿಸ್ಯಾರಃ
ಹೂವಿನ ದಂಡಿ ಮುಡಿಸ್ಯಾರ ನೇವದಿ ಮಾಡ್ಯಾರಃ
ನೇವದಿ ಮಾಡ್ಯಾರು ಎಲ್ಲಾರು ಉಂಡಾರು
ಎಲ್ಲಾರು ಉಂಡಾರು ಉಳಿದದ್ದು ತುಂಬ್ಯಾರು
ಉಳಿದದ್ದು ತುಂಬ್ಯಾರು ಬಂಗಾರಬುಟ್ಟಿ ಹೊತ್ತಾರು
ಬುಟ್ಟಿ ಹೊತ್ತು ನಡೆದಾರು ಬಂಗಾರ ಬಟ್ಲಾ ಮರತರು.
"ಗಂಗವ್ವ ನೀ ಹೋಗ! ಗವರವ್ವ ನೀ ಹೋಗ"
ಗಂಗವ್ವ "ನಾವೊಲ್ಲೆ" ಗವರವ್ವ "ನಾವೊಲ್ಲೆ"
"ನಿಂಗವ್ವ ನೀ ಹೋಗಃ ನೀಲವ್ವ ನೀ ಹೋಗಃ"
ನಿಂಗವ್ವ "ನಾವೊಲ್ಲೆ" ನೀಲವ್ವ "ನಾವೊಲ್ಲೆ"
"ಸಣ್ಣ ಸೊಸಿ ಭಾಗೀರತಿ ನೀ ತರಹೋಗವ್ವ"
ಸಣ್ಣ ಸೊಸಿ ಭಾಗೀರತಿ ಬಿರಿಬಿರಿ ನಡೆದಾಳು
ಬಿರಿಬಿರಿ ಹೋದಳು ಬಂಗಾರ ಬಟ್ಲ ತೊಗೊಂಡಳು.
ಒಂದು ಮೆಟ್ಲೇರುದಕ ಪಾದಕ ಬಂದಾಳು ಗಂಗಿ
ಎರಡು ಮೆಟ್ಲೇರುದಕ ಪಾದ ಮುಣಿಗಿಸ್ಯಾಳು ಗಂಗಿ
ಮೂರು ಮೆಟ್ಲೇರುದಕ ಮೊಣಕಾಲಿಗೆ ಬಂದಳು ಗಂಗಿ
ನಾಕು ಮೆಟ್ಲೇರುದಕ ನಡುಮಟ ಬಂದಳು ಗಂಗಿ
ಐದು ಮೆಟ್ಲೇರುದಕ ತುಂಬಿ ಹರಿದಾಳು ಗಂಗಿ
ಸಣ್ಣ ಸೊಸಿ ಭಾಗೀರತಿ ಕೆರಿಗ್ಹಾರವಾದಾಳು.

೪

ಗಂಡ ಮಾದೇವರಾಯ ದಂಡಿನಾಗೈದಾನು
ದಂಡಿನಾಗೈದಾನು ಕಂಡನು ಕೆಟ್ಟ ಕನಸ
ಸೆಲ್ಯ ಸುಟ್ಟಾಂಗಾತು ಕೋಲು ಮುರಿದ್ಹಾಂಗಾತು
ಕಟ್ಟಿಸಿದ ಮಾಲೆಲ್ಲ ತಟ್ಟನೆ ಬಿದ್ಹಾಂಗಾತು

ಗಂಡ ಮಾದೇವರಾಯ ಹತ್ತಿದ ಬತ್ತಲೆಗುದರಿ,
ಹತ್ತಿದ ಬತ್ತಲೆಗುದರಿ ಒತ್ತರ ಬಂದಾನ ಮನಿಗೆ,
ಬಂದ ಮಾದೇವನ ತಂದಿತಾಯಿ ನೋಡಿದರು.
"ಗಂಗವ್ವ ನೀರ ಕೊಡಃ ಗವರವ್ವ ನೀರ ಕೊಡ"
"ಗಂಗವ್ವ ನೀರ ಕೊಡುದ್ಯಾಕ? ಗವರವ್ವ ನೀರ ಕೊಡುದ್ಯಾಕ?
"ನನ ಮಡದಿ ಭಾಗೀರತಿ ಎಲ್ಲಿಗ್ಹೋಗ್ಯಾಳವ್ವ"
"ನಿನ ಮಡದಿ ಭಾಗೀರತಿ ತವರಿಗೆ ಹೋಗ್ಯಾಳಪ್ಪ"

೫

ಗಂಡ ಮಾದೇವರಾಯ ಹತ್ತಿದ ಬತ್ತಲೆಗುದರಿ
ಹತ್ತಿದ ಬತ್ತಲೆಗುದುರಿ ಹೊಂಟಾನತ್ತಿಯ ಮನೆಗೆ
ಬಂದಿರು ಅಳಿಯನ ನೋಡಿ ಅಂದಳು ಅತ್ತೆವ್ವ
"ನಿಂಬೆವ್ವ ನೀರ್ ಕೊಡಃ ನೀಲವ್ವ ನೀರ್ ಕೊಡಃ!
"ನಿಂಬೆವ್ವ ನೀರ್ ಕೊಡುದ್ಯಾಕ? ನೀಲವ್ವ ನೀರ್ ಕೊಡುದ್ಯಾಕ?
"ನನಮಡದಿ ಭಾಗೀರತಿ ಎಲ್ಲಿಗ್ಹೋಗ್ಯಾಳತ್ತೀ"
"ನಿನ ಮಡದಿ ಭಾಗಿರತಿ ಗೆಣತಿಮನೆಗೆ ಹೋಗ್ಯಾಳಪ್ಪ!"
ಗಂಡ ಮಾದೇವರಾಯ ಹತ್ತಿದ ಬತ್ತಲೆಗುದರಿ.
ಹತ್ತಿದ ಬತ್ತಲೆಗುದರಿ ಗೆಣತಿಮನೆಗೆ ಸ್ವಾರಿ.
ಬಂದಿರು ಮಾದೇವನ ಕಂಡಾಳು ಗೆಣತೆವ್ವ.
"ಬಾಳವ್ವ ನೀರ್ ಕೊಡ ಬಸವ್ವ ನೀರ್ ಕೊಡ"
"ಬಾಳವ್ವ ನೀರ್ ಕೊಡುದ್ಯಾಕಃ ಬಸವ್ವ ನೀರ್ ಕೊಡುದ್ಯಾಕ?"
"ನನ ಮಡದಿ ಭಾಗೀರತಿ ಎಲ್ಲಿಗ್ಹೋಗ್ಯಾಳಕ್ಕ"
"ನಿನ್ನ ಮಡದಿ ಭಾಗೀರತಿದು ಏನು ಹೇಳಲಿ ಸೂರಿ"
"ನಿಮ್ಮಪ್ಪ ನಿಮ್ಮವ್ವ ಕೆರಿಗ್ಹಾರ ಕೊಟ್ಟರಂತಃ"
ಗಂಡ ಮಾದೇವರಾಯ ಹತ್ತಿದ ಬತ್ತಲೆಗುದರಿ,
ಹತ್ತಿದ ಬತ್ತಲೆಗುದರಿ ಹೊಂಟಾನು ಹೌಹಾರಿ!
ಕೆರೆಯ ದಂಡಿಗೆ ಬಂದು ಕಣ್ಣೀರು ಇಟ್ಟಾನು,
ಕಣ್ಣೀರು ಇಟ್ಟಾನು ನಿಟ್ಟುಸುರು ಬಿಟ್ಟಾನು:
"ಸಾವಿರ ವರಹ ಕೊಟ್ಟರು ಸಿಗಲಾರದ ಸತಿ ನೀನು"
"ಸಿಗಲಾರದ ಸತಿ ನೀನು ನನ ಬಿಟ್ಟು ಎಲ್ಲಿ ಹೋದೆ?"
"ಮುನ್ನೂರು ವರಹಾ ಕೊಟ್ಟು ಮುತ್ತಿನೋಲೆ ಮಾಡಿಸಿದ್ದೆ
"ಮುತ್ತಿನೋಲೆ ಇಟಗೊಳ್ಳೊ ಮುತ್ತೈದೆ ಎಲ್ಲಿಹೋದೆ"
ಇಷ್ಟು ಮಾತಾಡಿ ಮಾದೇವ ಬಿಟ್ಟಾನು ಕಣ್ಣೀರು.
ಬಿಟ್ಟನು ಕಣ್ಣೀರ್ ಹಾರಿದ ಕೆರೆ ನೀರಾಗ.

CC-0. Jangamwadi Math Collection. Digitized by eGangotri

# ನಗೆ ಬಂದರೆ ನಕ್ಕು ಬಿಡಿ

### ಕಾಳನ ಕೋರಿಕೆ*

**ಲೇ—ಆನಂದ ಕಂದ**

ಕಾಳನು ಏಳೆಂಟು ವರುಷದ ಹುಡುಗ;
ಕಾಳಿಯು ಗುಡಿಗೊಂದು ದಿವಸ ಹೋದಾಗ–
ತೋಳೆತ್ತಿ ಕೈಮುಗಿದು ಕಣ್‌ಮುಚ್ಚಿ ನಿಂತು
ಕಾಳೀದೇವಿಗೆ ಬೇಡಿಕೊಂಡನು ಇಂತು:
"ಅಮ್ಮಮ್ಮಾ ! ನಮ್ಮೂರು ಬಲು ದೊಡ್ಡದಮ್ಮಾ !
ನಮ್ಮೂರಲಿಹ ಜನ ಕಮ್ಮೀ ಇಲ್ಲಮ್ಮಾ !
ಎರಡು ಲಕ್ಷದ ಮೇಲೆ ಇನ್ನೆಷ್ಟೋ ಸಾವಿರ
ಇರುವರು ಎಂದು ನಾನರಿತಿಹೆನಮ್ಮಾ !
ದಿನ ದಿನ ಬೆಳಗು ಸಂಜೆಯಲಿ ಇವರಿಗೆಲ್ಲ
ಕುಡಿಯಲು ಬಿಸಿಬಿಸಿ ಕಾಫೀ ಬೇಕಮ್ಮಾ !
ಅವರೆಲ್ಲಾ ಕುಡಿಯುವ ಕಾಫಿಯ ಲೆಕ್ಕವ
ವಿವರಿಸಿ ಹೇಳುವೆ ಕೇಳು ನಮ್ಮಮ್ಮಾ !
ಅಬ್ಬಬ್ಬಾ ! ತೀರ ಕಡಿಮೆಯಾಗಿ ಹಿಡಿದರು
ಒಬ್ಬೊಬ್ಬರಿಗೆ 'ಲೋಟ' ಎರಡು ಬೇಡೇನು ?
ನಾಲ್ಕು 'ಲೋಟ'ಕೆ ತಂಬಿಗೆ ತುಂಬುವದು ಹದಿ-
ನಾಲ್ಕು ತಂಬಿಗೆಗೊಂದು ಕೊಡ ತುಂಬದೇನು ?
ನೂರು ಮಂದಿಗೆ ನಾಲ್ಕು ಕೊಡವಾಗುವುದು ಹತ್ತು
ನೂರು ಮಂದಿಗೆ ನಾಲ್ಕುಹತ್ತು ಆಗುವುದು;
ಲಕ್ಷಮಂದಿಗೆ ನಾಲ್ಕುಸಾವಿರ ಕೊಡ ಕಾಫೀ,
ಲೆಕ್ಕವಾಯಿತೆ ನಮಗೆಷ್ಟು ಬೇಕೆಂದು ?
ನಮ್ಮೂರ ಜನಕೆಂಟು ಸಾವಿರಕೂ ಹೆಚ್ಚು
ಕಮ್ಮನೆಯಾ ಕಾಫೀ ಕೊಡಗಳು ಬೇಕಮ್ಮಾ !
ಒಂದೊಂದೇ ದಿನಕಿಷ್ಟು ಕೊಡಗಳು ಬೇಕಿರೆ
ಒಂದು ವರುಷಕೆಷ್ಟು ? ಲೆಕ್ಕ ನೋಡಮ್ಮಾ !

* ಕಾಳನು ಬೆಂಗಳೂರಿನವನು.

ಇಂದು ಈ ಲೆಕ್ಕವ ನಾ ಮಾಡಲಾರೆನು,
ಮುಂದಿನ ವರುಷಕೆ ಮಾಡಿ ಹೇಳುವೆನು.
ಇಂತಹ ಲೆಕ್ಕವ ಗುರುಗಳು ನಮಗಿನ್ನೂ
ಕಲಿಸಿಯೆ ಕೊಟ್ಟಿಲ್ಲ ಮಾಡಲಿನ್ನೇನು?
ಆದರು ನಾ ಸುಮಾರಾಗಿ ಹೇಳುವೆನು
ನಮ್ಮೂರ–ವರುಷದ–ಕಾಫೀ ಲೆಕ್ಕವನು;
ವರುಷದ ಕಾಫಿಯು ಸೇರಿ "ಕೆಂಪಾಂಬುಧಿ-
ಕೆರೆ"ಯಂಥಾ ಕೆರೆ ತುಂಬುವುದು ತಿಳಿ ನೀನು.
ಕೆರೆತುಂಬಾ ಕಾಫಿಯ ಕಾಸಬೇಕಾದರೆ
ವರುಷವೆಲ್ಲವು ಎಷ್ಟು ಶ್ರಮ ನಮಗಮ್ಮಾ !
ಇರುವೆ ನೀ ಸುಮ್ಮನೆ ಕರುಣೆಯು ಬರದೇನೆ ?
ಹರಿಸು ನಮ್ಮಗಳ ಈ ಕೊರತೆಯನಮ್ಮಾ !
ಇನ್ನೇನ ಬೇಡೆನು ನಿನ್ನನು ಕಾಡೆನು
ನನ್ನದಿದೊಂದೇ ಕೋರಿಕೆಯು ಕೇಳಮ್ಮಾ !
ಆಪತ್ತು ಬರದಂತೆ ನಮ್ಮೂರ ಜನಕೆಲ್ಲ
ಕಾಫೀಯ ಕೆರೆಯೊಂದ ಕೊಡು ನೀ ಕಾಳಮ್ಮಾ !
ದೋಸೆಯ ಬೆಟ್ಟವೊಂದಿದ್ದರು ಬೇಕು !"
ಇಲ್ಲದಿದ್ದರೆ ಕಾಫೀ ಕೆರೆಯೊಂದೇ ಸಾಕು:

### ಮುದುಕಿ

**' ಅಂಬಿಕಾತನಯದತ್ತ '**

ನಾಡ ಸಂರಕ್ಷಣೆಗೆ ತೋಪು ಇರದಿರಲು
ನಾಡಿಗೊಂದಿರಬೇಕು ಬಯ್ಯುವಾ ಮುದುಕಿ;
ಊರ ಸಂರಕ್ಷಣೆಗೆ ನಾಯಿ ಇರದಿರಲು
ಊರಿಗೊಂದಿರಬೇಕು ಬಾಯ್ಬಡಕ ಮುದುಕಿ;
ಕೇರಿಯನ್ನೆಚ್ಚರಿಸೆ ಗಂಟೆಯಿರದಿರಲು
ಕೇರಿಗೊಂದಿರಬೇಕು ಕೆಮ್ಮುವಾ ಮುದುಕಿ;
ಮನೆಮನೆಗೆ–ಪ್ಲೇಗಾಗಿ–ದೀಪವಿರದಿರಲು
ಮನೆಗೊಂದು ಇರಬೇಕು ಸಾಯದಾ ಮುದುಕಿ

CC-0. Jangamwadi Math Collection. Digitized by eGangotri

# ಮಾತಿಗೆ ತಕ್ಕ ಮರುಮಾತು



ಗಿರಾಕಿ—ಏನು ಸ್ವಾಮಿ ಆಣೆಗೊಂದು ಕಪ್ಪು ಚಹಾ! ಅದರಲ್ಲಿ ಒಂದು ನೊಣ ಹಾಕಿ ಕೊಡಬೇಕೆ ?

ಹೋಟಲಿನವ—(ನಗುತ್ತಾ) ಹಾಗಾದರೆ ಒಂದಾಣೆಯಲ್ಲಿ ನಿಮಗೆ ಆನೆ ಕುದುರೆ ಹಾಕಿ ಕೊಡಬೇಕೋ ?




ಆಕೆ—ದಸರಾ ಹಬ್ಬಕ್ಕೆ ಬಂಗಾರಬಳೆ ಬೇಡ; ಮುತ್ತಿನ ಸರಬೇಕು.

ಆತ—ಸರಿ ! ಆದರೆ ದಸರಾ ಹಬ್ಬದಲ್ಲಿ ಒಬ್ಬರಿಗೊಬ್ಬರು ಕೊಡುವುದು ಬಂಗಾರ; ಮುತ್ತನ್ನಲ್ಲ.

CC-0. Jangamwadi Math Collection. Digitized by eGangotri

# ಶ್ರೀ ಚಹಾಪುರುಷ ಧ್ಯಾನಮ್



ಹಂಟ್ಲೇ ಪಾಮರ ಬಿಸ್ಕಿಟವ್ವಯಪದೋ ಬೀರ್‌ಬಾಟ್ಲಿ ಜಾನುದ್ವಯಃ ।
ಸೋಡಾವಾಟರ ಬಾಟಲೋರು ಯುಗಲೋ ರೋಟೋದರೋ ಲೋಫುರಃ ॥
ಸ್ಪೂನುದ್ವಂದ್ವಕರೋ ಬಸೀ ಸುವದನಶ್ಚೀರೂಟನಾಸೋ ಬಿಡೀ–।
ಸೀಗಾರ್‌ನೇತ್ರಯುಗಃ ಪಲಾಂಡುಭಜಿಕಾ ಕರ್ಣೋಥ ಕಪ್ ಶಿರ್ಷಕಃ ॥
ಧೂಮ್ರಬಾಷ್ಪ ಜಟಾಜೂಟಃ ಸಬಟರ್ ನಾಯಿಫಾಯುಧಃ ।
ಸೇಂಗಾಧಾಣೇ ಪುಠಾಣೇ ಸನ್‌ಮಾಣಿಕ್ಯಃ ಕಾಜು ಕೌಸ್ತುಭಃ ॥
ಚಕ್ಲೀ ಚಂಡ ಸುದರ್ಶನೋ ನಿಶಿತ ಫೋರ್ಕ್ ಶೂಲಃ ಫುಗೇ ಕುಂಡಲಃ ।
ಕೋಡ್‌ಬಾಳೇವಲಯಃ ಸುಶೇವು ಶಬಲಶ್ಮಶ್ರುರ್ವಿರಡ್ಯಂಬರಃ ॥
ಚಿವ್‌ಡಾ ಮಾಲ್ಯಧರಸ್ಸು ಕೇಟ್‌ಲಿ ಕಮಠ ಸ್ಟೋವ್ಹಾಸನಃ ಪೇಯರಾಟ್ ।
ಲಿಪ್ಟನ್ ಬಂದಿಜನಸ್ತುತೋ ವಿಜಯತಾಂ ಕಾಫೀಪತಿಶ್ಚೀಮುನಿಃ ॥

ಚಿ. ರಾ. ಸಹಸ್ರಬುದ್ಧೇ

CC-0. Jangamwadi Math Collection. Digitized by eGangotri

# ಕೈಮಗ್ಗದ ಉದ್ಯೋಗ

ಲೇ—ಶ್ರೀ ಕೆ. ಎಸ್. ರಾವ್, L. T. M., A. T. I. ಬಿಹಾರ–ಓರಿಸಾ ಸರಕಾರದ ನೇಯ್ಗೆಯ ವಿಶೇಷಜ್ಞರು, ಪಾಟ್ನಾ

ನೇಯುವ ಉದ್ಯೋಗವು ಯಾವ ದೇಶದಲ್ಲಾಗಲಿ ಮನುಷ್ಯನಿಗೆ ಅವಶ್ಯವಿರುವ ಆಹಾರವನ್ನೊಂದುಳಿದು, ಉಳಿದೆಲ್ಲ ಉದ್ಯಮಗಳನ್ನು ಮಿಕ್ಕುತ್ತದೆ. ಅದು ಕೇವಲ ಉಪಯುಕ್ತತೆಯಿಂದ ಪ್ರಾರಂಭ ಮಾಡಿಕೊಂಡು ಮನವನ್ನು ತಣಿಸುವ ಅತ್ಯುಚ್ಚ ಕಲೆಯ ವರೆಗೂ ಹೋಗಿ ಮುಟ್ಟಿದೆ ತನ್ನ ಕ್ಷೇತ್ರದಲ್ಲಿ. ನಮ್ಮ ನೇಕಾರನ ಲಾಳಿಯು ಈಗಿನವರು ತಮ್ಮ ಉದ್ಯೋಗದಲ್ಲಿ ಉಪಯೋಗಿಸುವ ಸಕಲ ಸಲಕರಣೆಗಳಿಗಿಂತಲೂ ಸಾವಿರಾರು ವರ್ಷಗಳ ಪೂರ್ವದ್ದು. ಎಷ್ಟೋ ಸಂಸ್ಕೃತಿಗಳು ಮೂಡಿವೆ; ಮುಳುಗಿವೆ. ಕಲೆಗಳೂ ಬಂದಿವೆ; ಕಳೆತೋರಿ ಕಳೆದೂ ಹೋಗಿವೆ. ಆದರೆ ಕೈಯಿಂದ ನೇಯುವದು ಮಾತ್ರ ಹಿಂದುಸ್ಥಾನದಲ್ಲಿ ಇನ್ನೂ ನಿಂತುಕೊಂಡಿದೆ. ತನ್ನ ಪೂರ್ವದ ವೈಭವವನ್ನೆಲ್ಲಾ ಕಟ್ಟಿಕೊಳ್ಳುವದಾಗದಿದ್ದರೂ ನಿಂತಿದೆ ಮಾತ್ರ! ಅದು ಪೂರ್ವಜರಿಂದ ನೂರಾರು ವರ್ಷಗಳಿಂದಲೂ ನಿರಾತಂಕ ಪ್ರಗತಿಯನ್ನು ಹೊಂದಿ ಸಂಸ್ಕೃತಿಯ ಪ್ರಯತ್ನವಾಗಿ, ವ್ಯಾಮನಗಳ ಫಲವಾಗಿ, ಇನ್ನೂ ನಮ್ಮ ಕೈಯಲ್ಲಿದೆ. ಅದನ್ನು ಪ್ಲೇಗು ಒಯ್ಯಲಿಲ್ಲ; ಬರಗಾಲ ಒಡಿದು ನುಂಗಲಿಲ್ಲ; ಬೆಂಕಿ ಸುಡಲಿಲ್ಲ; ಪ್ರವಾಹವು ಮುಳುಗಿಸಲಿಲ್ಲ; ಯುದ್ಧಗಳು ಅದನ್ನು ಕೊಲ್ಲಲಿಲ್ಲ; ಕಡೆಗೆ ಯಂತ್ರಯುಗದ ಕಾರಖಾನೆಗಳ ಭಯಂಕರವಾದ ಸ್ಪರ್ಧೆ ಮೇಲಾಟಗಳೂ ಅದನ್ನು ಬಗ್ಗುಬಡಿಯಲಿಲ್ಲ.

ಕೈಮಗ್ಗದಿಂದ ನೇಯುವ ಉದ್ಯೋಗವು ಹಿಂದುಸ್ಥಾನದ ಉಳಿದೆಲ್ಲ ಕೈಗಾರಿಕೆಗಳಿಗಿಂತ ಪ್ರಮುಖವಾದದ್ದು; ಉದ್ಯೋಗದ ತಳಹದಿಯಾದ ಕಚ್ಚಾ ಪದಾರ್ಥದ ಕಿಮ್ಮತ್ತಿನಿಂದಷ್ಟೇ ಅಲ್ಲ. ಆದರೆ, ಆ ಉದ್ಯೋಗದಲ್ಲಿಯೇ ತೊಡಗಿದ ಜನಸಂಖ್ಯೆಯಿಂದಲೂ ಅದು ಮುಖ್ಯವಾಗಿದೆ. 'ಇದೆಲ್ಲ ಮುಳುಗಿ ಹೋಗುತ್ತಲಿರುವ ಉದ್ಯೋಗ! ಅದರ ದಿನಗಳು ಎಣಿಸುವಷ್ಟು ಉಳಿದಿವೆ. ಇಂದಿಲ್ಲ ನಾಳೆ ಅದರ ಸ್ಥಾನದಲ್ಲಿ ಯಂತ್ರದ ಮಗ್ಗದ ಸಾಮಾನುಗಳು ಬಂದು ತುಂಬುವವು.' ಎಂಬ ಅಭಿಪ್ರಾಯವು ಎಲ್ಲೆಡೆಗೂ ಹಬ್ಬಿದೆ. ನಿಜ, ಯಂತ್ರದಿಂದ ನೂಲುವದು ಪ್ರಾರಂಭವಾದಂದಿನಿಂದ ಅದರ ದುಷ್ಪರಿಣಾಮವು ಹಿಂದುಸ್ಥಾನದ ನೇಕಾರರ ಮೇಲೆ ಆದದ್ದರಿಂದ ನಿಜವಾಗಿಯೂ ಪರಿಸ್ಥಿತಿಯು ಬಹಳ ವ್ಯತ್ಯಾಸವಾಗಿದೆ. ರಾಟಿಯ ಒಂದೇಸಮನೆ ಇರದ ನೂಲಿನ ಮೇಲೆಯೇ ನೇಕಾರನು ಭಾರ ಹಾಕಿದ್ದಾಗ್ಗೆ, ಗಿರಣಿಯ ನೂಲಿನಿಂದ ಈಗ ನೇಯುವದರ ಅರ್ಧದಷ್ಟು ಕೂಡಾ ನೇಯುವದು ಆಗುತ್ತಿರಲಿಲ್ಲ. ಆದ್ದರಿಂದ ಮಾಲು ಹುಟ್ಟುವದು ಕಡಿಮೆಯಾಗಿದ್ದಿತು. ಸದ್ದುಮುದ್ದಾದ ಅರಿವೆಗೆ ಕೂಡಾ ಬಹಳ ಬೆಲೆ ಬೀಳುತ್ತಿತ್ತು. ಆದ್ದರಿಂದಲೇ ಬಹಳ ಜನರು ದಿಗಂಬರರಾಗಿ ತಿರುಗುತ್ತಿದ್ದರು. ಅರಿವೆಗಳನ್ನು ತೊಡುವುದೆಂದರೆ ಆಗ್ಗೆ ಐಷ ಆರಾಮ ಮಾಡಿದಂತಾಗುತ್ತಿತ್ತು. ಅದನ್ನು ಕಲ್ಪನೆಯಿಂದ ತಿಳಿಯಲು ಈಗ ಸಾಧ್ಯವಿಲ್ಲ. ನೂಲು ತೆಗೆಯುವದಕ್ಕೆ ಯಂತ್ರವು ಬಂದಾಗಿನಿಂದ ಅದೆಲ್ಲ ಸಂಪೂರ್ಣವಾಗಿ ಬದಲಾಗಿದೆ. ಆ ಯಂತ್ರವು ನಮ್ಮ ರಾಟಿಯಿಂದ ಮನೆಯಲ್ಲಿಯೇ ನೂಲುವ ಉದ್ಯೋಗವನ್ನು ನಿಃಪಾತ ಮಾಡಿದ್ದರೂ, ನಿಃಪಾತ ಹೊಂದುತ್ತಿರುವ ನೇಯುವ ಉದ್ಯೋಗವನ್ನು ಬದುಕಿಸಿರುತ್ತದೆ. ಗಿರಣಿಯ ನೂಲು ಅಗ್ಗವಾಗಿರುವದರಿಂದಲೂ, ಮತ್ತು ಸುಲಭವಾಗಿ ನೇಯುವದಕ್ಕೆ ಬರುವದರಿಂದಲೂ, ನೇಕಾರರಿಂದ ಬಹಳವಾಗಿ ಉಪಯೋಗಿಸಲ್ಪಡಹತ್ತಿದೆ. ಹತ್ತಿಯನ್ನು ನಯವಾದ ನೂಲಿಗೆ ತಂದಿಳಿಸುವುದಕ್ಕೆ ಹತ್ತುವ ಧಾರಣೆಯು ಅತಿಶಯವಾಗಿ ಇಳಿದದ್ದರಿಂದ ನೇಕಾರರಿಗೆ



CC-0. Jangamwadi Math Collection. Digitized by eGangotri

ತಮ್ಮ ಅರಿವೆಗಳನ್ನು ಅಗ್ಗವಾಗಿ ಮಾರುವುದಕ್ಕೂ ಮತ್ತು ಅಂಥ ಮಾಲಿಗೆ ಬೇಡಿಕೆಯನ್ನು ಹುಟ್ಟಿಸುವುದಕ್ಕೂ ಆಸ್ಪದವಾಯಿತು. ಈ ತರಹದ ಬೇಡಿಕೆಯು ಹುಟ್ಟಿಗೆ ಇನ್ನೂ ಅನೇಕ ಕಾರಣಗಳಿರಬಹುದು; ಅಂತೂ ಈ ಬೇಡಿಕೆಯ ಬಹುಭಾಗವು ಅರಳೀ ಗಿರಣಿಗಳಿಂದ ಪೂರೈಸಲ್ಪಡುತ್ತದೆ. (ಆ ಗಿರಣಿಗಳು ದೇಶೀಯವೂ ಇರಬಹುದು; ಅಥವಾ ಪರದೇಶಿಯವೂ ಇರಬಹುದು). ಸಮುದ್ರಮಾರ್ಗವಾಗಿ ಆಗುವ ವ್ಯಾಪಾರದಿಂದಲೂ ಮತ್ತು ಇಲ್ಲಿಯ ಕೆಲವು ಗಿರಣಿಗಳಿಂದಲೂ ಹೊರಟ ನೂಲು ಕೈಮಗ್ಗಗಳಿಗಾಗಿ ಹೆಚ್ಚೆಚ್ಚು ವಿನಿಯೋಗಿಸಲ್ಪಡಹತ್ತಿದೆಂಬ ಮಾತು ಆ ಆ ಗಿರಣಿಗಳ ಲೆಕ್ಕದಿಂದ ಕಂಡುಬರುತ್ತದೆ. ನೇಕಾರನು ಇನ್ನೂ ತನ್ನದೆನ್ನುವುದನ್ನು ಗಟ್ಟಿಯಾಗಿ ಕಾಯ್ದಿದ್ದಾನೆ ಎಂಬುದಕ್ಕೆ ಯಾವ ಬಗೆಯ ಪ್ರಶ್ನೆಯೂ ಇಲ್ಲ. ಇದಲ್ಲದೆ ಅವನ ಆರ್ಥಿಕ ಸ್ಥಿತಿಯು ಅದೆಷ್ಟೋ ಭಾಗದಲ್ಲಿ ಸುಧಾರಿಸುತ್ತಾ ನಡೆದಿದೆ. ಹೊಸಬರಿಗೆ ಇದೆಲ್ಲ ಮೂರ್ಖತನವೆಂದು ತೋರಬಹುದು. 'ಈಗಿನ ಯಂತ್ರಯುಗದಲ್ಲಿ ಈ ಕೈಮಗ್ಗಗಳಿಂದ ಕಡೆ ಬಾಳುವ ವ್ಯವಹಾರಿಕ ಫಲಿತಾಂಶವೇನಾದರೂ ಹೊರಡುವದೋ ?' ಎಂದು ಸಾಶಂಕರಾದ ಅರ್ಥಶಾಸ್ತ್ರಜ್ಞರಿಗೂ ಇದು ಹಾಗೇ ತೋರಬಹುದು. ರೈತರಿಂದ ತುಂಬಿರುವ ಹಿಂದುಸ್ಥಾನದಲ್ಲಿ ಮತ್ತು ಇನ್ನಿತರ ಏಶಿಯಾಖಂಡದ ದೇಶಗಳಲ್ಲಿ ಕಾಣುವ ಸ್ಥಿತಿಗಳಿಗೂ, ಪಶ್ಚಿಮದೇಶಗಳಲ್ಲಿಯ ಸ್ಥಿತಿಗಳಿಗೂ ಬಹಳ ಅಂತರವಿರುತ್ತದೆ. ಪಶ್ಚಿಮದ ಕೆಲ ದೇಶದವರು ತಮ್ಮ ರಾಜಕೀಯ ಶಕ್ತಿಯಿಂದ ಇಡೀ ಜಗತ್ತಿನ ವ್ಯಾಪಾರ ಸ್ಥಳಗಳನ್ನು ತಾವೊಬ್ಬರೇ ಗುತ್ತಿಗೆ ಹಿಡಿದಂತೆ ಮಾಡಿಕೊಂಡಿದ್ದಾರೆ. ೭ ಲಕ್ಷ ಜನರಿಗೆ ಹೊಟ್ಟೆಗಾಧಾರವಾಗಿ ೫೦ ಕೋಟಿ ಬೆಲೆಬಾಳುವ ಅರಿವೆಯನ್ನು ಹುಟ್ಟಿಸುವಂಥ ಹಿಂದುಸ್ಥಾನದ ಮನೆಮನೆಯ ಕೈಗಾರಿಕೆಯ ಕಸಬು ಗಿರಣಿಗಳ ಮೇಲಾಟಕ್ಕೆ ತುತ್ತಾಗದೆ ಸುಮಾರು ಒಂದು ನೂರು ವರ್ಷ ಬಾಳಿ ಸಾವಕಾಶವಾಗಿ ಮುಂದೆ ವೃದ್ಧಿಯನ್ನು ಹೊಂದಹತ್ತಿದೆಂಬ ಮಾತೇ ಅದು ಪುನಃ ಅನಂತವಾಗಿ ಬಾಳುವದೆಂಬದನ್ನು ನಿಸ್ಸಂಶಯವಾಗಿ ಸಾರುತ್ತದೆ. ಹಿಂದುಸ್ಥಾನವು ಕೃಷಿಪ್ರಧಾನ ದೇಶವು. ಸುಮಾರು ನೂರಕ್ಕೆ ೭೫ ರಂತೆ ಜನರು ಭೂಮಿಯ ಬೆಳೆಯ ಮೇಲೆಯೇ ಭಾರಹಾಕಿ ನಿಂತಿದ್ದಾರೆ. ಈಗಿ[ನ] ಸದ್ಯದ ಸ್ಥಿತಿಯಲ್ಲಿ ಒಕ್ಕಲತನವು ಹೊಟ್ಟೆಗಷ್ಟೇ ಕೇ[...] ಬೇಕಾದರೆ ಸಾಕುಬೇಕಾಗುತ್ತದೆ. ಅಂಥದರಲ್ಲಿಯ[...] ಮಳೆಗಾಲವು ಮರೆಯಾಯಿತೆಂದರೆ ಲಕ್ಷಾಂತರ ಜನ[...] ದುಃಖಕ್ಕೆ ಈಡಾಗುತ್ತಾರೆ. ಮಳೆಗಾಲವಾದ[...] ಹಿಂದುಸ್ಥಾನದಲ್ಲಿ ಇರುವುದೆಷ್ಟು ? ನಾಲ್ಕು ತಿಂಗ[ಳು] ಮಾತ್ರ. ಆದ್ದರಿಂದ ಒಕ್ಕಲಿಗನಿಗೆ ಉಳಿದ ಎಂಟು ತಿಂಗ[ಳು]ಗಳನ್ನು ಕೆಲಸವಿಲ್ಲದೇ-ಕೆಲಸವಿದ್ದರೂ ಕೆಲಸವೆ[...]ವಷ್ಟು ಅಲ್ಲ—ಕಳೆಯಬೇಕಾಗುತ್ತದೆ. ಆ ಕಾಲ[...] ಅವನು ಯಾವುದಾದರೊಂದು ಉದ್ಯೋಗವನ್ನು—ತ[...] ಒಕ್ಕಲತನಕ್ಕೆ ಉಪಯೋಗವಾಗುವಂತಹದನ್ನೂ, ತ[...] ಲಾಭವಾಗುವದನ್ನೂ—ನಿರ್ವಾಹವಿಲ್ಲದೆ ಆರಿಸಿಕೊ[ಳ್ಳ]ಬೇಕಾಗುತ್ತದೆ.

ಇದಲ್ಲದೆ ಹಿಂದುಸ್ಥಾನವು ವಿಸ್ತಾರವಾದ[...] ಭಿನ್ನ ಆಚಾರ,ಭಿನ್ನ ವೇಷ,ಭಿನ್ನ ರುಚಿಗಳಿಗಿರುವ ಅ[...] ಜಾತಿಗಳ ಜನರಿಂದ ತುಂಬಿದೆ. ಜನರಿಗೆ ನಾನಾ ತರ[...] ನಾನಾ ಸುಳಿಗಳ ಅರಿವೆಗಳು ಬೇಕಾಗುತ್ತವೆ. ಬಣ್ಣ[...] ಬೇರೆ ಬೇಕು. ಅಂದ ಮೇಲೆ ಇಂಥವರಿಗೆ ಬೇಕಾ[...] ತೊಡಕಿನ ನಮೂದರಿಗಳನ್ನು ಯಂತ್ರಗಳು ತಯಾರಿಸ[...] ಶಕ್ತವಾಗುವದಿಲ್ಲ; ಯಾಕಂದರೆ ಅದರಿಂದ ಅವಕ್ಕೆ ಲಾ[ಭ]ವಾಗುವದಿಲ್ಲ. ಇವು ನೇಕಾರರ ಮಗ್ಗಗಳಲ್ಲಿಯೇ ತಯಾ[...]ರಾಗತಕ್ಕದ್ದು ಸರಿಯೆ. ಗಿರಣಿಯವರು, ಒಂದ[...] ಗುತ್ತಿಗೆಯನ್ನು ಹೊತ್ತಿದ್ದರೆ, ನೇಕಾರರು ಈ ತರ[...] ಕಲಾಮಂಡಿತವಾದ ವಸ್ತ್ರಗಳನ್ನು ಹುಟ್ಟಿಸುವ[...] ಗುತ್ತಿಗೆಯನ್ನು ಹೊತ್ತಿದ್ದಾರೆ. ಇಷ್ಟೇ ಅಲ್ಲದೆ ನೇಯ[...] ಕಲೆಯಲ್ಲಿ ತನ್ನ ಬುದ್ಧಿ ಚಾತುರ್ಯವನ್ನು ತೋರಿಸ[...] ಕಾರ್ಯಕ್ಷೇತ್ರವನ್ನು ನಿರ್ಮಾಣ ಮಾಡಿಕೊಂಡಿದ್ದಾ[...] ಮತ್ತು ನಮ್ಮ ಹೆಣ್ಣುಮಕ್ಕಳು ಹಳೆಯ ಸಂಪ್ರದಾ[...]ಗಳಿಗೆ ನಿಷ್ಠರಾಗಿ ಉಳಿದಿದ್ದರಿಂದ ಈ ಕೈಮಗ್ಗ[...] ಉದ್ಯೋಗಕ್ಕೆ ಪ್ರಕೃತದಲ್ಲಿ ಪ್ರಗತಿಯು ಆಗಹತ್ತಿದೆ.

ಎರಡನೇ ದೇಶಗಳಲ್ಲಿ ವಿಶೇಷತಃ ಪಶ್ಚಿಮ ದೇಶ[...] ಹೋರೆಗಾರರು ಹುಡುಕಿ ತೆಗೆದ ಪದ್ಧತಿಯನ್ನು ನಮ[...] ನೇಕಾರರು ಇನ್ನೂ ಅಷ್ಟು ಉಪಯೋಗಿಸಿಲ್ಲ. [...] ಇತ್ತೀಚೆ ಶ್ರಮವನ್ನು ಳಿಸುವ ಅಂತಹ ಹೊಸ ಸಲಕ[ರಣೆ]ಗಳನ್ನು ಉಪಯೋಗಿಸುವದರಿಂದ, ಪ್ರಾಂತ್ಯ ಸರಕ[...]

CC-0. Jangamwadi Math Collection. Digitized by eGangotri

ಗಳಲ್ಲಿ ಅತ್ಯಲ್ಪ ಧನದೊಡನೆ ಕಡಿಮೆ ಕೆಲಸಗಾರರಿದ್ದಾಗ್ಯೂ, ನೇಕಾರರ ಉದ್ಯೋಗವು ಆಶ್ಚರ್ಯಕರ ಏಳ್ಗೆಯನ್ನು ಕಂಡುಕೊಂಡಿದೆ. ಈ ತರಹದ ಪ್ರಯತ್ನಗಳಿಗೆ ಈಗ ಸಾಮಾನ್ಯ ಜನತೆಯೂ ಅಡ್ಡ ಬರುವದೂ ಕೂಗಾಡುವದೂ ಕಂಡು ಬರುತ್ತಿದೆ. ಆದರೆ ಸೂಕ್ಷ್ಮವಾಗಿ ಇಡೀ ದೇಶವನ್ನು ಪರಿಶೀಲಿಸಿದರೆ ಈ ತರಹದ ಹೊಸ ಸುಧಾರಣೆಗಳಿಂದ, ಬಹಳವಾಗಿ ನೇಯುವ ಯಾವ ಸ್ಥಳಕ್ಕೂ ಭಂಗ ಉಂಟಾಗಿಲ್ಲ. ಆದ್ದರಿಂದ ನೇಕಾರರಲ್ಲಿ ಹಳೆಯದಕ್ಕೆ ಅಂಟಿಕೊಳ್ಳುವ ಜಿಡ್ಡತನವಿದೆಯೆಂದು ತಿಳಿದುಕೊಂಡಿರುವ ನಮ್ಮ ತಿಳುವಳಿಕೆಯೇ ತಪ್ಪಾದದ್ದಲ್ಲವೆ?

ಹೀಗಿದ್ದರೂ, ಕೈಮಗ್ಗದ ಉದ್ಯೋಗವು ಮುಂದರಿದು ಪೂರ್ಣತೆಯನ್ನು ಹೊಂದುವ ಪೂರ್ವದಲ್ಲಿ ಅದರಲ್ಲಿ ಮಾಡಬೇಕಾದ ಕೆಲಸವು ಇನ್ನೂ ಬಹಳವಿದೆ. ಅದು ಅಪೂರ್ಣ ಉಳಿಯುವದೆಂತಲ್ಲ; ಪೂರ್ಣತೆಯನ್ನು ಹೊಂದುವ ಶಕ್ತಿಯು ಅದರಲ್ಲಿದೆ. ಒಂದಿಲ್ಲೊಂದು ದಿನ ಹೊಂದುವದೂ ನಿಶ್ಚಯ. ನೇಯುವ ಉದ್ಯೋಗಕ್ಕೆ ಸಲಕರಣೆಗಳಾಗಿ ಇರುವ ಸಣ್ಣಪುಟ್ಟ ಉದ್ಯೋಗಗಳು ಒತ್ತಟ್ಟಿಗೇ ಸೇರಿರುವದರಿಂದ, ಪಾಪ, ಅಸಂಸ್ಕೃತ ಹೋರೆಗಾರರಿಗೆ ಬಹಳ ಅನಾನುಕೂಲವಾಗುತ್ತದೆ. ನೇಕಾರನಿಗೂ ತನ್ನ ಸ್ವಂತದ ದುಡ್ಡಿಲ್ಲದ್ದರಿಂದ ಎಷ್ಟೋ ಸಲ ಕೆಲಸವಿಲ್ಲದೆ ಕೂಡಬೇಕಾಗುತ್ತದೆ; ಇಲ್ಲವೆ ಅವನ ಗಳಿಕೆಯನ್ನೇ ಸಿಂಹನಂತೆ ಹರಿದು ತಿನ್ನುವ ಸಾವುಕಾರರನ್ನು ಬೇಡಬೇಕಾಗುತ್ತದೆ. ಹೀಗೆ ಬಡ್ಡಿ ತೆತ್ತಿ, ಬೇಡಿ ತಂದ ಹಣದಿಂದ ಅನನುಕೂಲವಾದ ಪೇಟೆಯಲ್ಲಿ ನೂಲು ಕೊಂಡು, ಅದರ ಮೇಲೆ, ತಾನು, ತನ್ನ ಮನೆಯವರೆಲ್ಲಾ ದುಡಿದು ಅರಿವೆಯನ್ನು ತಯಾರು ಮಾಡಬೇಕಾಗುತ್ತದೆ. ತಯಾರು ಮಾಡಿದ ಮೇಲಾದರೂ ದಲಾಲಿಯನ್ನುಳಿಸುವದಕ್ಕೋಸ್ಕರ ತಾವೇ ಆ ಅರಿವೆಗಳನ್ನು ಹೊತ್ತುಕೊಂಡು ಮನೆಮನೆಗೆ ತಿರುಗಿ ಮಾರಬೇಕಾಗುತ್ತದೆ. ಹೀಗೆ ಮಾಡುವದರಿಂದ ಅಷ್ಟು ವೇಳೆ ನೆಯ್ದಿದ್ದರೆ ಬರುವ ಕೂಲಿಯೂ ಹೋಗುತ್ತದೆ.

ಗದಗು ಹುಬ್ಬಳ್ಳಿಯಂಥ ನೇಯುವ ಕೇಂದ್ರಗಳಲ್ಲಿ, ಬಹುತರವಾಗಿ ಮುಂಗಡ ಹಣ ಕೊಟ್ಟು (ಧನ ರೂಪದಿಂದಾಗಲಿ—ನೂಲಿನ ರೂಪದಿಂದಾಗಲಿ) ಸಾವುಕಾರರೇ ನೇಕಾರರ ಎಲ್ಲ ಮಾಲನ್ನು ಕೊಂಡುಕೊಳ್ಳುತ್ತಾರೆ. ಇದರಿಂದ ನೇಕಾರನಿಗೆ ಹೊಟ್ಟೆಗೆ ತಿಟಿಪಿಟಿಯಾಗಿ ಸಾಲುವಷ್ಟೇ ಸಿಗುತ್ತದಲ್ಲದೆ ಹೆಚ್ಚಿಗೆ ಸಿಗುವದಿಲ್ಲ. ಈ ತರಹದಿಂದ ನಡೆಯುವ ಉದ್ಯೋಗದ ಕೊಂಕು ಕೊರತೆಗಳೆಂದರೆ—(೧) ದುಡಿಮೆಗಾಗಿ ಸಾಕಾಗುವಷ್ಟು ಹಣ, ಹೋರೆಗಾರರ ಹತ್ತರ ಇಲ್ಲದಿರುವುದು; (೨) ಹೋರೆಗಾರರಿಗೆ ನಿರಂತರವಾಗಿ ಕೆಲಸ ಸಿಕ್ಕದಿರುವುದು (೩) ನುರಿತ ಕೆಲಸ, ತಂತ್ರಜ್ಞಾನ (Technical knowledge) ಮರೆಯಾಗುವುದು, (೪) ಬಹಳ ಮಾಲು ಹುಟ್ಟಿತೆಂದರೆ ಅದಕ್ಕಾಗಿ ಮಾರ್ಕೆಟುಗಳನ್ನು ಹುಟ್ಟಿಸಲಿಕ್ಕೆ ಬೇಕಾಗುವ ಸಾಹಸ, ಮತ್ತು ಧೈರ್ಯವಿಲ್ಲದಿರುವುದು; (೫) ಸಮುದಾಯ ಸಮುತ್ಪತ್ತಿ (Mass-production) ಮತ್ತು ನಿಷ್ಣಾತ ವ್ಯವಸ್ಥೆಯ ಸೌಕರ್ಯಗಳನ್ನು ಸಂಪಾದಿಸುವದಕ್ಕೆ ಪರಸ್ಪರ ಸಹಾಯ, ಮತ್ತು ಸಂಘ ಪ್ರಯತ್ನವಿಲ್ಲದಿರುವುದು; ಸಾರಾಂಶವೇನಂದರೆ, ಇಷ್ಟು ದಿನವೂ ಇದ್ದ ಹಾಗೆ ನೇಕಾರನು ತನ್ನಷ್ಟಕ್ಕೆ ತಾನೇ ದುಡಿದುಕೊಂಡು ಇರಲಾರನು; ಅವನು ಎರಡನೇಯವರ ಮೇಲೆ ಧನದ ಸಲುವಾಗಿಯೂ ಮತ್ತು ಕೆಲವು ಗುಣಗಳ ಸಲುವಾಗಿಯೂ ಭಾರ ಹಾಕಲೇಬೇಕಾಗುತ್ತದೆಂಬ ಮಾತನ್ನು ಒಪ್ಪಬೇಕಾದದ್ದು. ಹೀಗೆಂದ ಮಾತ್ರಕ್ಕೆ ಅವನನ್ನು ಮಾನೆಮಾರು ಬಿಡಿಸಿ ಒಂದು ಗಿಜಗರಿಯುತ್ತಿರುವ ಕಾರಖಾನೆಯಲ್ಲಿ ತಂದು ಹೋಗಿಸಬೇಕೆಂಬರ್ಥವಲ್ಲ; ಮತ್ತು ಹಾಗೆ ಮಾಡುವದೂ ಆವಶ್ಯವಿಲ್ಲ. ನೇಕಾರರ ಸಹಕಾರೀ ಸಂಘಗಳೇ ಆದರ್ಶ ಸಂಘಟನೆಗಳಾಗಬಹುದು. ಆದರೆ ನಮ್ಮ ಹೋರೆಗಾರರು ಇನ್ನೂ ಸಾಕಷ್ಟು ಕಲಿತಿಲ್ಲ; ಈ ಸಹಕಾರ ಚಳವಳಿಯು ಹಿಂದುಸ್ಥಾನದಲ್ಲಿ ಇನ್ನೂ ಶಿಶುವಿರುವಾಗ, ಅಂಥ ಕಾರ್ಯದಲ್ಲಿ ಭುಜಕೊಟ್ಟು ಅದರ ಭಾರವನ್ನು ಹೊರುವಂಥ ಸಾಹಸದ ಹುಮ್ಮಸವೂ ಸಾಕಷ್ಟು ಇಲ್ಲ. ಕಾರಣ ಸದ್ಯಕ್ಕೆ ನೇಯುವ ಉದ್ಯೋಗವು ಜಗತ್ತಿನ ಇನ್ನಿತರ ಕಾರಖಾನೆಯ ಉದ್ಯೋಗಗಳಂತೆ ಸಾವುಕಾರಿಕೆಯ ತಳಹದಿಯ ಮೇಲೆ ಕಟ್ಟಲ್ಪಡಬಹುದೆಂದು ತೋರುತ್ತದೆ.

ಚೀನಾ ದೇಶದ ಕೈಹೆಣಿಕೆಯ ಉದ್ಯೋಗದ ವಿಷಯಕ್ಕೆ ಇಲ್ಲಿ ಹೇಳದಿರೆನು. ಅಲ್ಲಿ ಹೆಣೆಯುವವರು (ಬಹುತರವಾಗಿ ಹೆಣ್ಣುಮಕ್ಕಳು ಇಲ್ಲವೆ ಹುಡುಗಿ

CC-0. Jangamwadi Math Collection. Digitized by eGangotri

ಯರು) ಒಬ್ಬ ಸಾಹುಕಾರನ ಸಲುವಾಗಿ ದುಡಿಯುತ್ತಾರೆ. ಆ ಸಾಹುಕಾರನು ಅವರಿಗೆ ನಿರಂತರ ಕೆಲಸವನ್ನು ಒದಗಿಸಿ ಕೊಡುವ ಭಾರವನ್ನು ಹೊತ್ತಿರುತ್ತಾನೆ ಕೊಡಕೊಳ್ಳುವದರ ಭಾರದ ಚಿಂತೆಯಿಂದ ಅವರನ್ನು ಮುಕ್ತ ಮಾಡಿದ ಶ್ರೇಯವು ಸಾವುಕಾರನದೇ. ತಮ್ಮ ಅನುಕೂಲತೆಯ ಪ್ರಕಾರ ತಮ್ಮ ತಮ್ಮ ಮನೆಗಳಲ್ಲಿಯೇ ಕುಳಿತು ಕೆಲಸ ಮಾಡುವ ಸಂಪೂರ್ಣ ಸ್ವಾತಂತ್ರ್ಯವು ಅವರಿಗೆ ಇರುತ್ತದೆ. ಈ ತರಹದ ವ್ಯವಸ್ಥೆಯು ದಕ್ಷಿಣ ಹಿಂದುಸ್ಥಾನದ ಕೆಲ ಭಾಗಗಳಲ್ಲಿ ಇರುತ್ತದೆ. ಬೆಂಗಳೂರ ಹತ್ತಿರವಿರುವ ದೊಡ್ಡಬಳ್ಳಾಪುರದಲ್ಲಿ ಕೈಮಗ್ಗದ ಉದ್ಯೋಗದ ಉತ್ಕರ್ಷಕ್ಕೆ ಈ ತರಹದ ವ್ಯವಸ್ಥೆಯೇ ಕಾರಣವಾಗಿದೆ. ೧೯೦೦ ರ ವರೆಗೆ ಈ ಚಿಕ್ಕ ಪಟ್ಟಣದಲ್ಲಿ ೩೦ ನೇಕಾರರ ಮನೆಗಳಿದ್ದವಂತೆ! ದಟ್ಟಿ ದುಪ್ಪಟಿಗಳನ್ನು ನೇಯ್ದು ಅತಿಪ್ರಯಾಸದಿಂದ ಅವನ್ನು ಮಾರುತ್ತಿದ್ದರಂತೆ! ಈಗ ನೋಡಿದರೆ ದೊಡ್ಡಬಳ್ಳಾಪುರವು ನೇಯುವ ಕೇಂದ್ರುವಾಗಿ ಬಿಟ್ಟಿದೆ. ಅನೇಕ ಲಕ್ಷ ರೂಪಾಯಿಗಳ ಬೆಲೆ ಬಾಳುವ ವಸ್ತ್ರಗಳನ್ನು (ನೂಲಿನವೂ, ರೇಶ್ಮಿಯವೂ) ತಯಾರಿಸುವ ಒಂದು ಸಾವಿರ ಮಗ್ಗಗಳು ಅಲ್ಲಿ ಇರುತ್ತವೆ. ಈಗ ಮುಂಬೈಯಿಂದ ರಾಮೇಶ್ವರದ ವರೆಗೆ ಅವುಗಳ ವ್ಯಾಪಾರವಾಗುತ್ತದೆ. ಇಷ್ಟೆಲ್ಲ ಬೆಳೆಯಬೇಕಾದರೆ, ಒಂದು ವರ್ಷದಲ್ಲಿ ೫-೬ ತಿಂಗಳು ಊರೂರು ತಿರುಗಿ ತಮ್ಮ ನೇಕಾರರಿಗೆ ದುಡಿಮೆಯನ್ನೊದಗಿಸಿಕೊಂಡು ಬರುವ ೫-೬ ಸುಸಂಸ್ಕೃತ ನೇಕಾರರ ಸಾಹಸದ ಪ್ರಯತ್ನವೇ ಕಾರಣವಾಗಿರುವದು. ಈ ಪ್ರಕಾರ ಸುಸಂಘಟಿತ ಕಾರಖಾನೆಗೆ ಹತ್ತುವ ತತ್ವಗಳು ಈ ಮನೆಯ ಉದ್ಯಮಗಳಿಗೂ ಹತ್ತಬಹುದು. ಆದರೆ ಉದ್ಯಮಕ್ಷೇತ್ರದ ವಿಸ್ತಾರದಲ್ಲಿ ಬರುವ ದೋಷಗಳನ್ನೆಲ್ಲಾ ಇದರಲ್ಲಿ ಕಿತ್ತೊಗೆಯಬೇಕು.

ಇನ್ನೊಂದು ಮಾತು. ಬಿಹಾರದಲ್ಲಿರುವ ಕೈಮಗ್ಗದ ಉದ್ಯೋಗವು ಆಪರ್ಶಪ್ರಾಯವಾಗಿದೆ. ಅವರು ಲಂಡನ್ನಿಗೆ ಕೂಡಾ ನೇಯ್ದು ಕಳಿಸುತ್ತಾರೆ. ಆದರಲ್ಲಿ ನೂಲಿನ ಬಟ್ಟೆಗಳಿಷ್ಟೆ ಒಂದು ವರ್ಷಕ್ಕೆ ೧ ಲಕ್ಷ ರೂ. ಬೆಲೆ ಬಾಳುವಷ್ಟು ಹೋಗುತ್ತವೆ. ನೇಕಾರರೇ ತಮ್ಮದೊಂದು ಸಂಘವನ್ನು ಮಾಡಿಕೊಂಡು ಈ ಉದ್ಯೋಗವನ್ನು ನಡೆಯಿಸಿದ್ದಾರೆ. ಇದಕ್ಕೆ ಬಿಹಾರ ಸರಕಾರವೂ ತುಂಬಾ ಸಹಾಯ ಮಾಡುತ್ತದೆ. ಪಶ್ಚಿಮ ದೇಶದವರಿಗೆ ರುಚಿಸುವ ಸುಳಿಯ ಮಾದರಿಗಳನ್ನು ತಿಳಿಸುವದಕ್ಕಾಗಿ ಒಬ್ಬ ನುರಿತ ಯುರೋಪೀಯನನ್ನು ತಂದು ಕೆಲಕಾಲ ನಿಲ್ಲಿಸಿಕೊಳ್ಳುತ್ತಾರೆ. ಇದಲ್ಲದೆ ಲಂಡನ್ನ ಮತ್ತು ನ್ಯೂಜಿಲಂಡಗಳಲ್ಲಿ ಬೇಡಿಕೆಗಳನ್ನು ದೊರಕಿಸುವದಕ್ಕಾಗಿ ತಮ್ಮ ಏಜಂಟರನ್ನು ಇಟ್ಟಿರುತ್ತಾರೆ. ಇವರ ಹೇಳಿಕೆಯಂತೆಯೇ ನೇಕಾರರು ನೇಯ್ದು ಕೊಡುತ್ತಾರೆ; ಮತ್ತು ಆ ಏಜಂಟರೇ ನೇಕಾರರ ನಿಶ್ಚಿತವಾದ ಕೂಲಿಯನ್ನು ಕೊಡಬೇಕಾಗುತ್ತದೆ. ಹೀಗಾಗಿ ಈ ನೇಕಾರರು ಮೊದಲಿಗಿಂತ ಎರಡರಷ್ಟು ಹೆಚ್ಚು ಗಳಿಸುತ್ತಿದ್ದಾರೆ. ಮತ್ತು ದುಡಿಮೆಯೂ ಸಾಕಷ್ಟು ಸಿಗುತ್ತದೆ.

ಈಗ ಎರಡು ಉದಾಹರಣೆಗಳನ್ನು ತೋರಿಸಿದ್ದಾಯ್ತು. ಹಾಗೆ ಹೇಳುವುದರಲ್ಲಿ ನನ್ನದೊಂದು ವಿಶ್ವಾಸವಿದೆ. ಏನಂದರೆ—'**ಮಾರ್ಕೆಟ್ಟುಗಳ ವೈಜ್ಞಾನಿಕ ಜ್ಞಾನದ ಮೇಲೆಯೇ ಪಾಯೆ ಹಾಕಿ ನಿಂತ ಜಾಣ ಸಹಕಾರವೂ, ಉತ್ಪತ್ತಿವಿಕ್ರಯಗಳ ಸುಸಂಗತ ಸಂಯೋಗವೂ, ಉದ್ಯೋಗಕ್ಕೆ ಆರ್ಥಿಕ ದೃಷ್ಟಿಯಿಂದಲೂ ಕೂಡ ಕಳೆ ತುಂಬಿ ಕೊಡುತ್ತವೆ.** ಹಿಂದುಸ್ಥಾನದಲ್ಲಿರುವ ಕಲಿತ ಜನರು ಉದ್ಯೋಗಗಳಲ್ಲಿ ಮನಸು ಹಾಕಿ ಮುಂದೆ ಬಿದ್ದರೇನೆ ಆ ತರಹದ ಸಮಾಜಸವಾದ ಪುನರುಜ್ಜೀವನವು ಸಾಧ್ಯವು. ಶ್ರೇಷ್ಠವೆನಿಸಿಕೊಳ್ಳುವ ಬುದ್ಧಿಗಳೆಲ್ಲಾ ಕಾಯಿದೆ ಓದುವದರಲ್ಲಿಯೂ ಸರಕಾರದ ನೌಕರೀ ಮಾಡುವದರಲ್ಲಿಯೂ ತೊಡಗಿ ಹೋಗಿವೆ. ಇಡೀ ರಾಷ್ಟ್ರವನ್ನು ಎತ್ತಿ ಹಿಡಿದು ಆದರ್ಶಭೂಷಣವಾಗಿರುವ ಉದ್ಯೋಗ ಮತ್ತು ಒಕ್ಕಲತನ ಇವು ನಿರಕ್ಷರ ಬಡ ಜನತೆಯ ಕೈಯಲ್ಲಿ ಸಿಕ್ಕಿಕೊಂಡಿವೆ. ಹೀಗಿರಲು ಹಿಂದುಸ್ಥಾನವು ಸಾಕಷ್ಟು ನೈಸರ್ಗಿಕ ಸೌಭಾಗ್ಯಗಳಿದ್ದೂ, ದಾರಿದ್ರ್ಯದಲ್ಲಿರುವದಲ್ಲದೆ ಅನ್ಯ ಸಾಹಸಿಗರ ಸೆಳೆತಕ್ಕೆ ಈಡಾಗಿರುವುದು ಆಶ್ಚರ್ಯವೇನೂ ಅಲ್ಲ. ಈಗ ನೇಯುವ ಉದ್ಯೋಗವನ್ನು ಮುಂತರಬೇಕಾದರೆ ವಿದ್ಯಾಸಂಪನ್ನ ತರುಣರೇ ಬೇಕು! ಅಂಥ ತರುಣರಿಗೆ ಉದ್ಯೋಗದ ಬಗ್ಗೆ ಸಾಕಷ್ಟು ಜ್ಞಾನವನ್ನು ಮಾಡಿಕೊಡಲಿಕ್ಕೆ ಬಿಹಾರ ಓರಿಸಾದಲ್ಲಿದ್ದಂತೆ, ಶಾಲೆಕಾಲೇಜುಗಳು ಬೇಕು. ಇದಕ್ಕೆ ಸರಕಾರದ ಸಹಾಯವು ದೊರೆಯಬೇಕು.

CC-0. Jangamwadi Math Collection. Digitized by eGangotri

ಈ ಉಪನ್ಯಾಸ*ವನ್ನು ಮುಗಿಸುವದಕ್ಕೆ ಮೊದಲು ನಮ್ಮ ನೇಕಾರರು ಇತ್ತೀಚೆ ಅನ್ಯಾಯವಾಗಿ ಅನನುಕೂಲತೆಗೆ ಈಡಾದದ್ದನ್ನು ಹೇಳದಿರಲಾರೆನು. ಅದೇನೆಂದರೆ:—೧೯೨೭ ರಲ್ಲಿ ಹಿಂದುಸ್ಥಾನದ ಅರಳೆಯ ಗಿರಣಿಗಳಿಗೆ ಸಹಾಯ ಮಾಡುವದಕ್ಕೋಸ್ಕರ, ಹೊರಗಿನಿಂದ ಬರುವ ನೂಲು ಮತ್ತು ನೇಕಾರರು ಉಪಯೋಗಿಸುವ ಇನ್ನಿತರ ಕಚ್ಚಾ ಪದಾರ್ಥಗಳ ಮೇಲೆ ಸುಂಕವನ್ನು ಹೇರಿದ್ದು. ೧೯೩೩ರ ವರೆಗೆ ಹೇಗೋ ಈ ನೇಯುವ ಉದ್ಯೋಗವು, ಹಿಂದುಸ್ಥಾನ ಮತ್ತು ಪರದೇಶದ ಗಿರಣಿಗಳ ದವಡೆಯೊಳಗಿಂದ ಸಂರಕ್ಷಿಸಲ್ಪಟ್ಟಿತು. ಆದರೆ ಪುನಃ ೧೯೩೪ರಲ್ಲಿ ನೂಲಿನ ಮೇಲೆ ೧ ಪೌಂಡಿಗೆ ೧॥ ಆಣೆಯಂತೆ ಸುಂಕವು ಹೆಚ್ಚಿದೊಡನೆ, ಪಾಪ, ನೇಕಾರರ ಆಶೆಗಳೆಲ್ಲಾ ಅಳಿದವು. ಏರಿಸಿದ ಈ ಸುಂಕದಿಂದ ಪರದೇಶದ ನೂಲು ಬರುವುದು ಬಂದಾಗದೆ, ಹಿಂದುಸ್ಥಾನದ ಗಿರಣಿಗಳಿಗೆ, ತಮ್ಮ ಮಾಲಿನ ದರವನ್ನು ಹೆಚ್ಚಿಸಲಿಕ್ಕೆ ಅನುವು ಮಾಡಿಕೊಟ್ಟಂತಾಯಿತು. ಕಾರಣ ೧೦೦ಕ್ಕೆ ೯೦ ಜನರು ಈ ಹಿಂದುಸ್ಥಾನದ ಗಿರಣಿಗಳಿಂದ ಕಚ್ಚಾ ಪದಾರ್ಥಗಳನ್ನು ಕೊಂಡುಕೊಳ್ಳುತ್ತಾರೆ. ಇದರಿಂದ ಕೈಯಿಂದ ನೇಯುವವರನ್ನು ಕೊಂದು ಸಂಘಟಿತವಾದ ಗಿರಣಿಗಳ ಉದ್ಯೋಗವು ಬಲಿಯುತ್ತದೆ. ಆದ್ದರಿಂದ **ಎಲ್ಲ ನೇಕಾರರೂ ಕೂಡಿ ತಮ್ಮದೊಂದು ಸುಸಂಘಟಿತ ಸಂಸ್ಥೆಯನ್ನು ಮಾಡಿ, ವರ್ಷಕ್ಕೊಮ್ಮೆ ಕಲೆತು, ಅನಾಹುತವಾಗಿ ತಮ್ಮ ಹಾದಿಯಲ್ಲಿ ಎದುರು ಬರುತ್ತಿರುವ ಎಡರುಗಳನ್ನು ಧೈರ್ಯಸಾಹಸಗಳಿಂದ ದಾಟಿ ತಮ್ಮದೆನ್ನುವುದನ್ನು ಎಲ್ಲರಿಗೂ ತಿಳುಹಬೇಕು.**

* ಹೋದ ವರ್ಷ ಗದಗ ಬೆಟಗೇರಿಯಲ್ಲಿ ಜರುಗಿದ ಅಖಿಲಭಾರತ ಔದ್ಯೋಗಿಕ ಪ್ರದರ್ಶನಕ್ಕೆಂದು ಶ್ರೀ ರಾವ್ ಇವರು ಬರೆದು ಕಳುಹಿದ ಈ ಉಪನ್ಯಾಸವನ್ನು ಆ ಪ್ರದರ್ಶನದ ಕಾರ್ಯದರ್ಶಿಗಳಾಗಿದ್ದ ಶ್ರೀ ಎಸ್. ವ್ಹಿ. ಗುಳವಾಡಿಯವರು ನಮ್ಮೆಡೆಗೆ ಕಳುಹಿದುದಕ್ಕಾಗಿ ವಂದನೆಗಳನ್ನರ್ಪಿಸುತ್ತೇವೆ. ಸಂ. ಜ. ಕ.

# ಗಂಗಾದರ್ಶನ

ಪರಿವಳತಿ ಗಂಭೀರಗತಿಯಿಂದೆ ಗಂಗೆ ಹಿಮ- ।
ಗಿರಿಯುಡಿಗಳೊಳ್ ಸುಧಾಧವಲಜಲೆ ಹರಿಪಾದ- ।
ಸರಸಿಜೋದ್ಭವೆ ಧರೆಯ ಸಕಲಸೌಭಾಗ್ಯನಿಧಿ-
ಯುನ್ನತ ತರಂಗಾವಲಿ ॥
ಸಿರುಪಮಂ ಸೌಂದರ್ಯವಿರ್ಕಡೆಯ ತಡಿಗಳೊಳ್ ।
ತೆರತೆರದ ಪೂವಳ್ಳಿಗಳ ತಳ್ಕೆಯಿಂದೆಸೆವ ।
ಮರಗಳಿಂ ಚೆಲ್ವೆತ್ತ ದೇವತಾತ್ಮನ ನೆಳಲ್
ನೀರೊಳಿಂ ಸೊಂಪೆಸೆವುದೋ ! ॥ ೧ ॥

ಆಡುವಳ್ ನಲಿನಲಿದು ಕುಣಿವಳಾನಂದದಿಂ- ।
ದೋಡುವಳ್ ವೇಗದಿಂ ತೇಲಿಸುತೆ ನೊರೆಗಳಂ ।
ದೂಡುತುಂ ಕಲ್ಗಳಂ ಛಂದದಿಂದೆತ್ತಲುಂ
ತುಂತುರ್ಗಳಂ ಸೂಸುತೆ ॥
ನೋಡುತಂ ನಿಲ್ವಳಚ್ಚರಿಯಿಂದೆ ಗಿರಿವರನ ।
ಗಾಡಿಯಂ ಮನವೊಲ್ದು ಮಂಜುಲಧ್ವನಿಯಿಂದೆ ।
ಪಾಡುವಳ್ ಮಾರ್ದನಿಗಳಿಂ ತುಂಬೆ ಬೆಟ್ಟದಡಿ-
ಗಳ್ ಸುತ್ತಲೆಸಿತು ಚೆಲ್ವೋ ! ॥ ೨ ॥

ಇವಳ ಸೊಗಯಿಪ ಸೋಂಕಿಸಿಂ ಸೊಗಂದಾಳ್ದುಮಾ-
ಧವನೊಲ್ದು ಮಂದಹಾಸಂಗೆಯ್ಯೆ ಸಲಿಲವಿದು ।
ಧವಲವಾದತ್ತೇನೊ ಆ ಸ್ಮಿತದ ಛಾಯೆಯಿಂ-
ದದರಿಂದೆ ಮಾಧುರ್ಯವೋ ? ॥
ಭುವನತ್ರಯಂ ನಿನ್ನ ನಲ್ಮೆಗೆಳಸುವುದಂಬೆ ।
ದಿವಿಜನದಿ! ನಿನ್ನ ಪೆಂಪೆನಿತೊ! ನೀಂ ಮುರಿದು ಮು- ।
ಕ್ಕುವೆ ದುರಿತದುರ್ವಾರದಾವಾಗ್ನಿಯಂ! ನಮೋ
ವಿಶ್ವಸುತೆ ಭಾಗೀರಥೀ ! ॥ ೩ ॥

೧೨–೧೧–೧೯೩೧ ಸಾಲಿ ರಾಮಚಂದ್ರರಾಯ.



CC-0. Jangamwadi Math Collection. Digitized by eGangotri



**ಅಂತರಂಗ:** ಲೇ. ಶ್ರೀ. ದೇವಡು. ಬೆಲೆ ೧ ರೂ. ಕೃಷ್ಣಾ ಕಂಪನಿ. ಬೆಂಗಳೂರು.

ಇಂದಿನ ಆಂಗ್ಲರ ಕಲ್ಪನಾಸಾಹಿತ್ಯದಲ್ಲಿ ಎರಡು ಹೊಸ ತಾದ ವಿಷಯಗಳು ಪ್ರಬಲವಾಗಿವೆ. ಒಂದು ಲಿಂಗ, ಇನ್ನೊಂದು ಮಾನಸಶಾಸ್ತ್ರ. ೫೦-೬೦ ವರ್ಷಗಳ ಹಿಂದೆ ಅಲ್ಲಿಯ ಕಾದಂಬರಿಕಾರರು ತಮ್ಮ ಪಾತ್ರಗಳ ಸ್ವಭಾವದ ಸೂಕ್ಷ್ಮ ನಿದರ್ಶನಕ್ಕಾಗಿ ಮಾನಸಶಾಸ್ತ್ರ ವನ್ನು ಸಾಧನೆಯನ್ನಾಗಿ ಮಾಡಿಕೊಂಡರು. ಇಂದಿಸವರು ಸ್ತ್ರೀಪುರುಷರ ಸಂಬಂಧದಲ್ಲಿ ಏಳುವ ಅನೇಕ ಸಮಸ್ಯೆ ಗಳನ್ನು ಈ ಶಾಸ್ತ್ರದ ಸಹಾಯದಿಂದ ಬಿಡಿಸಲು ಪ್ರಯತ್ನಿಸುತ್ತಾರೆ.

'ಅಂತರಂಗ'ವೆಂಬ ಕಾದಂಬರಿಯು ಈ ರೀತಿಯಾಗಿ ನವೀನವವಾಗಿದೆ. ಇಲ್ಲಿಯ ಕಥಾವಸ್ತುವೆಂದರೆ ಈ ಸ್ತ್ರೀಪುರುಷರ ಸಂಪರ್ಕದಿಂದ ಉಂಟಾದ ಒಂದು ಪ್ರಶ್ನೆ. ಸಾತ್ತ್ವಿಕರಾದ ಭಟ್ಟರು ತಮ್ಮ ಪತ್ನಿಯಾದ ಪಾರ್ವತಮ್ಮ ನನ್ನು ಅತ್ಯಂತವಾಗಿ ಪ್ರೀತಿಸುತ್ತಾರೆ. ಆದರೆ ದೈವದ ವಿಚಿತ್ರಗತಿಯಿಂದ ಅವರು ಒರ್ವ ಮಹಾಶ್ವೇತೆಯಂತಹ ಬಸವಿಯಲ್ಲಿ ಅನುರಕ್ತರಾಗುತ್ತಾರೆ. ಹೀಗೆ ಮನೆಗೆ ಈರ್ವರು ಯಜಮಾನಿಯರಾಗಿ ಹೋಗುತ್ತಾರೆ. ಮುಂದೆ ಭಟ್ಟರ ಸತ್ಯಸಂಕಲ್ಪದಿಂದ, ಬಸವಿಯ ಉದಾತ್ತತ್ಯಾಗ ದಿಂದ, ಬಂದ ಸಂಕಟವು ದೂರಾಗಿ ಭಟ್ಟರು ತಮ್ಮ ಪತ್ನಿ ಯೊಡನೆ ಸುಖವಾಗಿ ಬಾಳುವರು. ಹೀಗೆ ಇಂತಹ ಸೂಕ್ಷ್ಮ ವಿಷಯಗಳನ್ನು ವಿಶುದ್ಧವಾದ ರೀತಿಯಿಂದ ಚಿತ್ರಿಸುವುದೆಂದರೆ ಒಂದು ಸಾಹಸವೇ ಸರಿ. ಆದರೆ ಈ ಲೇಖಕರ ಸಾಹಸವು ಯಶಸ್ವಿಯಹುದು.

ಮೊದಲಿನ ಕಾದಂಬರಿಗಳಿಗೂ ಇದಕ್ಕೂ ಇರು ವ್ಯತ್ಯಾಸವೆಂದರೆ ಮಾನಸಶಾಸ್ತ್ರದ ಯೋಜನೆ. ಭಟ್ಟ ಪಾರ್ವತಮ್ಮ, ಬಸವಿ, ರಾಯರು ಇವರ ಅಂತ ವನ್ನು ಲೇಖಕರು ಬಿಚ್ಚಿತೋರಿಸಿದ್ದಾರೆ. ಈ ಕಾರ್ಯ ಬೇಕಾದ ಆಳವಾದ ವಿಚಾರಶಕ್ತಿಯು ಅವರಲ್ಲಿದೆ. ಸಿನ ಹೊಂದಿಕೆ, ಕಳ್ಳರ ಪ್ರಸಂಗ, ಭಟ್ಟ-ಬಸವಿಯ ಸಂಪರ್ಕ,-ಇವುಗಳನ್ನು ಅರಳಿಸುವಲ್ಲಿ ಅವರ ಅಸಾ ನ್ಯವಾದ ಕಲಾಕೌಶಲ್ಯವು ಗೋಚರವಾಗುವು ಪ್ರತಿಯೊಂದು ಪುಟದಲ್ಲಿಯೂ ಮನೋವೃತ್ತಿಯನ್ನು ತೂಗುವ ಜಾಣ್ಮೆಯು ಕಂಡುಬರುವುದು.

ಆದರೆ ಮಾನಸಶಾಸ್ತ್ರದ ಪರಿಣಾಮವು ಅಧಿಕ ಗಲು ಕಾದಂಬರಿಯ ಉಳಿದ ಅಂಗಗಳಿಗೆ ಬೇಕಾ ಪ್ರಾಶಸ್ತ್ಯವು ಅನೇಕ ಸಲ ದೊರೆಯುವುದಿಲ್ಲ. ಒಮ್ಮೊಮ್ಮೆ ಕಥೆಯು ನಿಂತಂತೆ ಭಾಸವಾಗುವುದು. 'ವಿಚಾರಿತ ರಮಣೀಯತೆ'ಯಲ್ಲಿ ಕಥೆಗೆ ಬೇಕಾದ ಚಿತ್ರಾ ಕರ್ಷತೆಯು ಕಳೆದುಹೋಗುವುದು. ಕಥೆಯ ಪ್ರವಾಹ ಅವ್ಯಾಹತವಾಗಿ ಸಾಗಿ ಅಂತರಂಗದ ಅನುಶೋ ನೆಯು ಸ್ವಲ್ಪ ಲಗುಬಗೆಯಿಂದ ನಡೆಯಬೇಕಾಗಿತ್ತು ಇನ್ನೊಂದು ದೋಷವೆಂದರೆ ಭಟ್ಟರ ಉಪನ್ಯಾಸ. ಬಹು ತರವಾಗಿ ಇಲ್ಲಿಯ ಸಂಭಾಷಣೆಗಳು ಯಥೋಚಿತವಾ ಗಿವೆ. ಆದರೆ ೧೧೭-೨೦ ಪುಟಗಳ ಮೇಲೆ ಬರುವ ಉಪ ನ್ಯಾಸವು ಈ ಗ್ರಂಥದ ರಚನಾಕ್ರಮದಲ್ಲಿ ಒಂದು ದೊಡ್ಡ ದೋಷವಹುದು.

ಉತ್ತಮಕಲ್ಪನಾಸಾಹಿತ್ಯಕ್ಕೆ ಬೇಕಾದಂತೆ ಶೈಲಿಯು ಧೀರಗಂಭೀರವಾಗಿದೆ. ಕಾದಂಬರಿಗಳೆಂದರೆ ಕೇವ

CC-0. Jangamwadi Math Collection. Digitized by eGangotri

ಮನೋರಂಜನೆಯ ಸಾಧನಗಳಲ್ಲ; ಆದರೆ ಸಾಹಿತ್ಯದ ಉಳಿದ ಪ್ರಕಾರದಂತೆ ಈ ಶಾಖೆಯಾದರೂ ಚಿಂತನಪರ ವಾದುದು, ಮನಸೀಯವಾದುದು, ಎಂಬ ಮಾತನ್ನು ಈ ಗ್ರಂಥಕರ್ತರು ಸಪ್ರಮಾಣವಾಗಿ ಸಾಧಿಸಿ ತೋರಿಸಿದ್ದಾರೆ. ಶ್ರೀ. ಗಳಗನಾಥರವರ ಕಾದಂಬರಿಗಳಲ್ಲಿ ಇತಿಹಾಸದ ಬೆಡಗನ್ನು ನೋಡಿದ್ದೆವು. ಶ್ರೀ. ಪುಟ್ಟಣ್ಣನವರ ಗ್ರಂಥಗಳಲ್ಲಿ ಯಥಾತ್ಮಿಕತೆಗೆ ನಮ್ಮ ಕಣ್ಣು ತೆರೆಯಿತು. ಶ್ರೀ. ಕಾರಂತರವರ '**ದೇವದೂತ**'ದಲ್ಲಿ ಉಜ್ವಲವಾದ ವಿಡಂಬನೆಯು ಅತುಲವಾದ ಕಲ್ಪನಾಶಕ್ತಿಯೊಡನೆ ಬೆರೆತಿರುವುದನ್ನು ಕಣ್ಣಾರೆ ಕಂಡೆವು. ಆದರೆ ಶ್ರೀ. ದೇವುಡು ಶಾಸ್ತ್ರಿಗಳು ಆಧುನಿಕ ಆಂಗ್ಲ ಕಲ್ಪನಾ ಸಾಹಿತ್ಯದಲ್ಲಿ ಪ್ರಚಲಿತವಾದ ಎರಡು ಮುಖ್ಯ ವಿಷಯಗಳನ್ನು ಬಿಂಬಿಸಿ ತೋರಿಸಿದ್ದಾರೆ. ಶ್ರೀ. ಗಳಗನಾಥರು ಜನಜೀವನವನ್ನು ಹೊಕ್ಕು ಎಲ್ಲರ ಮನರಂಜಿಸಿದರು. ಶ್ರೀಯುತರಾದ ಪುಟ್ಟಣ್ಣ ಹಾಗು ಕಾರಂತರು ಕಾದಂಬರಿಕಾರನಿಗೆ ಆಳವಾದ ಅಭ್ಯಾಸವೂ ಉದ್ಯೋಗಪ್ರಿಯತೆಯೂ ಬೇಕೆಂದು ಸಿದ್ಧಪಡಿಸಿದರು. ಇಂದು ಈ ಗ್ರಂಥಕರ್ತರು ಕಲ್ಪನಾಸಾಹಿತ್ಯವನ್ನು ಪರಿಶೀಲಿಸುವವರಲ್ಲಿಯೂ ಸಹ ವಿಚಾರಪ್ರಿಯತೆಯೂ ತಕ್ಕಮಟ್ಟಿಗೆ ಭಾಷಾಜ್ಞಾನವೂ ಇರಬೇಕೆಂದು ಈ ತಮ್ಮ 'ಅಂತರಂಗದ' ದ್ವಾರವಾಗಿ ಸಾರಿಹೇಳಿದ್ದಾರೆ.

ವಿ. ಕೃ. ಗೋಕಾಕ

**ಗೀತಗಳು:** ಬರೆದವರು ಶ್ರೀ. ವಿ. ಸೀ.

ಹೊಸಗನ್ನಡ ಕವಿತೆಯ ಚರಿತೆಯಲ್ಲಿ ಹೊಸದೊಂದು **ಭಕ್ತ**–ಕವಿಗಳ ಪರಂಪರೆಯು ಮೆಲ್ಲನೆ ಹಬ್ಬತೊಡಗಿದೆ. ಶ್ರೀನಿವಾಸರು '**ಬಿನ್ನಹ**'ದಲ್ಲಿ ಅದನ್ನು ಮೊದಲು ಮಾಡಿದರು. ಶ್ರೀ. ವಿ. ಸೀ. ಯವರು ಈಗ ಅದರ ಹೊಸ ಹುರುಳನ್ನೆಲ್ಲ ತಮ್ಮ ಮೊದಲನೆಯ ಕಾವ್ಯ ಗ್ರಂಥವಾದ '**ಗೀತಗಳು**' ಎಂಬೀ ಕೃತಿಯಲ್ಲಿ ತೋರಿರುವರು. ಹೀಗೆಂದಮಾತ್ರಕ್ಕೆ ಈ ವರೆಗೆ ಹೆಸರಾದ ಉಳಿದ ನೂತನ ಕವಿಗಳು ಭಕ್ತಹೃದಯವನ್ನು ವ್ಯಕ್ತ ಮಾಡಿಲ್ಲವೆಂದಾಗಲಿ, ಭಕ್ತಕವಿಗಳು ಕೇವಲ ಭಕ್ತಿಕಾವ್ಯವನ್ನು ರಚಿಸುವವರೆಂದಾಗಲಿ ಅಭಿಪ್ರಾಯವಲ್ಲ. ಆದರೆ ಹಿಂದಿನ ದಾಸಕೂಟಕ್ಕೂ ಶರಣಸಂಪ್ರದಾಯಕ್ಕೂ ಇಂದಿನ ಭಕ್ತಕವಿಕುಲಕ್ಕೂ ಒಂದು ಬಗೆಯ ಸಂಸ್ಕೃತಿ ಸಂಬಂಧವಿದೆ. ಆದರೆ ಈ ಸಂಬಂಧವೆಷ್ಟೋ ಅಷ್ಟೇ ವ್ಯತ್ಯಾಸವಿದೆ. ಅಂತೇ ಇಂದಿನದು ಹೊಸಪರಂಪರೆ. ಶ್ರೀನಿವಾಸರು ಹೆಚ್ಚಾಗಿ ಸಂಬಂಧವನ್ನು ತೋರಿದರು. ವಿ. ಸೀ. ಯವರು ಮಾತ್ರ ವ್ಯತ್ಯಾಸವನ್ನು ಸಮಗ್ರವಾಗಿ ತೋರಿದ್ದಾರೆ. ಆ ವ್ಯತ್ಯಾಸದ ವೈಭವವನ್ನು ಕಂಡು ಇಂದಿನ ಭಕ್ತನ ಎಲ್ಲ ಲಕ್ಷಣಗಳನ್ನು ನಾವು ಅರಿತುಕೊಳ್ಳುವಂತಿದೆ. ದಾಸಕೂಟದ ಮುಖ್ಯಲಕ್ಷಣಗಳೆಂದರೆ ಒಂದು ಮತ- ಒಂದು ದರ್ಶನದಲ್ಲಿ ಅಚಲವಾದ ಶ್ರದ್ಧೆ, ದೇವನ ಸರ್ವವ್ಯಾಪಿಯಾದ ಅಸ್ತಿತ್ವದ ಬಗ್ಗೆ ನೆಟ್ಟ ನಂಬಿಕೆ, ಆತನ ನಾಮಸ್ಮರಣೆಯ ಪ್ರೀತಿ, ಪಲ್ಲವಿನುಡಿಗಳ ಕಟ್ಟುಳ್ಳ ಹಾಡುಗಳಲ್ಲಿ ಭಕ್ತಿಭಾವಗಳ ಪ್ರಕಟನ. ಇದರಲ್ಲಿ ನೆನೆಯಬೇಕಾದ ಮಾತೆಂದರೆ ದಾಸಕೂಟದ ಭಕ್ತಿಯಲ್ಲಿ ಸಂದೇಹದ ತೂಗಾಟ ಇಲ್ಲ. ದೇವನೇ ಇರುವನೇ ಇಲ್ಲವೋ ಎಂದು ಮುಂತಾದ ಅಳುಕು ಅಳ್ಳೆದೆಯ ಅಂಶವಿಲ್ಲ. ಆದರೆ ಆರ್ತತೆಯುಂಟು, ದೇವನು ನಿಷ್ಕರುಣಿಯೆಂಬ ಭಾವವು ಒಂದುದುಂಟು, ದೇವನ ಬರವಿಗೆ ಮೊರೆಯಿಟ್ಟು ಅವನನ್ನು ಕಂಡುದುಂಟು. ಇಂದು ಉದಯಿಸಿದ ಭಕ್ತಕವಿಜೀವನವೇ ಬೇರೆ. ಸಮರ್ಪಣ, ಚಿಂತನ ಮುಂತಾದ ಭಾವಗಳಲ್ಲಿಯೂ ಗೀತಬಂಧದಲ್ಲಿಯೂ ಹಳೆಯ ದಾಸಕೂಟದ ಸಾದೃಶ್ಯವಿದ್ದರೂ ದೇಶಕಾಲ ಭೇದದಿಂದ ಉಂಟಾದ ಹೊಸಚಿತ್ತವೃತ್ತಿಯ ಮೂಲಕ ಇಂದಿನ ಭಕ್ತಿಗೆ ಹೊಸ ರೂಪ, ಹೊಸ ಆತ್ಮ ಬಂದಿದೆ. ಅದನ್ನು ವಿ. ಸೀ. ಯವರ ಗೀತಗಳ ಭಾವಲೋಕವನ್ನು ಹೊಕ್ಕು ನಾವು ಅರಿತುಕೊಳ್ಳೋಣ. ಈ ಗೀತಗಳಲ್ಲಿ ಬಹಳಷ್ಟು, ಕವಿಯು ಸ್ವಾತ್ಮ, ಜಗತ್ತು, ದೇವರು ಇವರನ್ನು ಕುರಿತು ಬೇರೆಬೇರೆ ಮನೋವೃತ್ತಿಗಳಲ್ಲಿ ಹಾಡಿದವುಗಳಾಗಿವೆ. ಆ ಮನೋವೃತ್ತಿಗಳಿಗೆ ಮೂಲಾಧಾರವಾದುದು ಒಂದು ನಿಶ್ಚಿತವಾದ ಗ್ರಹಿಕೆಗಳ ಸೂಡು ಅಲ್ಲ; ಒಂದು ಮತ, ಒಂದು-ತತ್ತ್ವಜ್ಞಾನವಲ್ಲವೇ ಅಲ್ಲ. ಅದು ಆತ್ಮದ ಶಕ್ತಿಗಳೆಲ್ಲವನ್ನು ಸ್ವತಂತ್ರಚಿಕಿತ್ಸಕ ದೃಷ್ಟಿಯಿಂದ ಜಗತ್ತಿನ ಮೇಲೆ ಹಾರಾಡಬಿಟ್ಟ ಜಿಜ್ಞಾಸೆ. ಆದರೆ ಈ ಜಿಜ್ಞಾಸೆಯು ಬರೀ ಬುದ್ಧಿಯದಾಗಿರದೆ ಹೆಚ್ಚುಹೆಚ್ಚು ಹೃದಯಸ್ಫೂರ್ತಿಯ ಗುಂಟ ಸಾಗುವುದರಿಂದ ಇದರಲ್ಲಿ ಭಕ್ತಿಶ್ರದ್ಧೆಗಳಿಗಾಗಿ ಮೊರೆ, ದೇವನ ಕಾಣಬೇಕೆಂಬ ಕುತೂಹಲ, ಸೂಕ್ಷ್ಮತತ್ತ್ವದ ದಾಸಾನುದಾಸನಾಗಿ ಸ್ವಾರ್ಥ ಬಿಸುಟಬೇಕೆಂಬ ಹಂಬಲ ಇವು

CC-0. Jangamwadi Math Collection. Digitized by eGangotri

ಬೆಳೆದು ಬಲಿಯುತ್ತವೆ. ಆದರೆ ಬುದ್ಧಿಹೃದಯಗಳೆರಡೂ ಆಟವಾಡುವ ಜಿಜ್ಞಾಸೆಯಲ್ಲಿ ವಿರೋಧಿಭಾವಗಳಿಗೆ ಬಹಳ ಇಂಬುದೊರೆಯುತ್ತದೆ. ಅದನ್ನು ನಾವು ವಿ. ಸಿ. ಯವರಲ್ಲಿ ಕಾಣುತ್ತೇವೆ. 'ಭ್ರಮೆ' ಎಂಬ ಗೀತದಲ್ಲಿ 'ಪರವೆಂಬುದೊಂದಿರ್ಪುದೊ-ಇಲ್ಲವೊ' ಎಂದು ಮುಂದೆ 'ಪರತತ್ತ್ವ'ವೆಂಬಲ್ಲಿ ಕವಿಯು 'ಅರಿಯುವರೊ ಪರವೆಂದು, ಪರಮತತ್ತ್ವದ ಸಾರವೆಂದು' ಧರ್ಮ, ಆತ್ಮಗಳನ್ನು ಹೊಗಳುವನು. ಇದರಂತೆ 'ಕಸ್ಮೈದೇವಾಯ' ಎಂಬಲ್ಲಿ 'ಹಿಂದಿನಾ ದೇವರುಗಳೆಲ್ಲ ಮಡಿದುರುಳಿಹರು' ಎಂಬ ನಾಸ್ತಿಕನು 'ಪ್ರಾರ್ಥನೆ' 'ದೇವನ ಬರವು' 'ಶಿವ' ಮೊದಲಾದವುಗಳಲ್ಲಿ ದೇವಸ್ತುತಿ-ಪ್ರಾರ್ಥನೆ ಮಾಡುತ್ತಾನೆ. ಇದರಂತೆ ಇನ್ನೂ ಅನೇಕ ವಿರೋಧಿಭಾವಗಳನ್ನು ನಿರ್ದೇಶಿಸಬಹುದು. ಆದರೆ ಇವೆಲ್ಲವುಗಳಲ್ಲಿ ಅವಿರೋಧಿಯಾದ ಅಂತಃಕರಣಪ್ರೇರಣೆಯುಳ್ಳ ಜಿಜ್ಞಾಸೆಯು ಮೂಲವೆಂದು ನಾವು ಅರಿಯದ ಹೊರತು ಹಳೆಹಾದಿಯ ಕಟ್ಟುನಿಟ್ಟಿನ ವಿಮರ್ಶೆಯಿಂದ ಕವಿಜೀವದ ತಪ್ಪು ಬೆಲೆ ಕಟ್ಟಿದಂತಾಗುತ್ತದೆ. ಈ ವಿಷಯದಲ್ಲಿ ಶ್ರೀಯವರು ತಮ್ಮ ಮುನ್ನುಡಿಯಲ್ಲಿ ಹೇಳಿದ ಈ ನುಡಿಗಳನ್ನು ನಾವು ನೆನಪಿನಲ್ಲಿಡಬೇಕು. "ಒಂದು ಕ್ರಮಕ್ಕೆ ತಂದ, ಸಮದಹಾದಿಯ, ಹಿಂದಿನ ಕವಿತ್ವದಲ್ಲಿ ಓದುವವರಿಗೂ ಗೊತ್ತು-ಬರೆಯುವವರಿಗೂ ಗೊತ್ತು-ಹೀಗೆಯೇ ಹೇಳುತ್ತಾರೆ, ಹೀಗೆಯೇ ಬರೆಯುತ್ತಾರೆ ಎಂಬದಾಗಿ. ಸ್ವಾತಂತ್ರ್ಯದಿಂದ ಹೊಮ್ಮುತ್ತಿರುವ ಹೊಸ ಕವಿತ್ವದಲ್ಲಿ-ಆದರಲ್ಲಿಯೂ ಈ ಕಾಲದ ಮನೋಭಾವಗಳನ್ನು ಹಾಡಿತೋರಿಸುವ ಭಾವಗೀತದಲ್ಲಿ-ಒಬ್ಬರಹಾಗೆ ಒಬ್ಬರಿರುವುದಿಲ್ಲ; **ಒಬ್ಬರೇ ಇರುವುದಿಲ್ಲ ಒಂದೇರೀತಿ- ಒಂದೇ ಮಟ್ಟನಲ್ಲಿ**" ಇದನ್ನು ಮನಗಂಡ ನಾವು ವಿ. ಸೀ. ಯವರ ವಿವಿಧ ವೇಷಧಾರಿತ್ವಕ್ಕೆ ಎಷ್ಟೂ ಕನಲದೆ ಅವರ ಭಾವಸೃಷ್ಟಿಯ 'ಸಹಜತೆ, ಆಳ, ಸೊಗಸುಗಳಿಗಾಗಿ ಅವರನ್ನು ಕೊಂಡಾಡುತ್ತೇವೆ. ಅವರ ಹಾಡುಗಳನ್ನೋದು ಕೊಂಡು ಅಂತರಂಗದ ಸ್ವಾಭಾವಿಕ ಊರ್ಮಿಗಳನ್ನೆಲ್ಲ ಪಡೆದು ಉನ್ನತರಾಗಿ ನಲಿದಾಡುತ್ತೇವೆ. ಆದರೆ ಅವರ ಗೀತಗಳ ಬಂಧ, ಭಾಷೆ ಇವುಗಳನ್ನು ಚರ್ಚಿಸಬೇಕಾಗಿದೆ.

ತಮ್ಮ ವಿಜ್ಞಾಪನೆಯಲ್ಲಿ ವಿಮರ್ಶಕನ ಅಸ್ತ್ರಗಳನ್ನು ಮುಂಗಂಡು, ಅವರು ಕೆಲವು ಪ್ರತ್ಯಸ್ತ್ರಗಳನ್ನು ಮೊದಲೇ ತೂರಿರುವರು. '.......ಕವಿತೆಯಲ್ಲಿ ಕೇವಲ ಸಂಪ್ರದಾಯಬದ್ಧವಾದ ಶಬ್ದರೂಪಕ್ಕೂ, ಸಂಧಿನಿಯಮಗಳಿಗೂ, ಕಡೆಗೆ ನಿರ್ದುಷ್ಟತೆಗೂ ಮೀರಿದ ಗುಣವೊಂದಿದೆ ಎಂಬುದನ್ನು ಒಪ್ಪುವವರು ಯಾರೂ ಇಲ್ಲಿನ ದೋಷಗಳ ಕಡೆಗೆ ಹೆಚ್ಚು ಗಮನ ಹರಿಸಲಾರರೆಂದಿದ್ದೇನೆ' ಎಂ... ಅವರ ವಾಕ್ಯದಲ್ಲಿಯ ಕವಿತೆಯ 'ನಿಯತಿಕೃತ ನಿಯಮರಾಹಿತ್ಯ'ವನ್ನು ನಾವು ಒಪ್ಪಿಕೊಂಡರೂ ಆ ನಿಯಮರಾಹಿತ್ಯವು **ತೀರ** ಮೇರೆಮೀರಲಾಗದೆಂದು ನಾವು ಸಾಧಿಃ... ದಿರೆವು. ಪ್ರಾಯಶಃ ವಿ. ಸೀ. ಯವರೂ ಇದನ್ನು ಬಲ್ಲರು. ಆದರೆ ಅವರಿಗೆ ತೀರ ಮೇರೆ ಮೀರಿಲ್ಲ ತಮ್ಮ ರಚನೆ, ಎನಿಸಿರಬೇಕು; ಸಮಗೆ ಮಾತ್ರ ಕೆಲವು ಹಾಡುಗಳು ಬಂಧ ಭಾಷೆಗಳಲ್ಲಿ ಹೊಸದೃಷ್ಟಿಯಿಂದ ತೆಗೆದು ಕೊಳ್ಳಬಹುದಾದ ಸ್ವಾತಂತ್ರ್ಯವನ್ನು ಸಹ ಮಿಕ್ಕಿ ಬ... ಯಲಾಗಿವೆ ಎಂದು ತೋರುತ್ತದೆ. ಗೀತರಚನೆಯಲ್ಲಿ ನುಡಿಪಲ್ಲವಿಗಳಿರಬೇಕಲ್ಲದೆ ನುಡಿನುಡಿಗೆ ಒಂದೇ ಕಟ್ಟು ಇರುವುದು ಅತ್ಯಗತ್ಯ. ಈ ವಿಷಯದಲ್ಲಿ ಗೀತಕಾರನು ನಿಯಮಬದ್ಧನಾಗದಿದ್ದರೆ ಹಾಡುವ ಹಾಡಿಗೆ ಪ್ರತಿಯೊಂದು ನುಡಿಯಲ್ಲಿ ಬೇರೆ ರೀತಿ-ಗತಿಗಳು ಬಂದು ಅ... ನಿಜವಾಗಿ ಹಸಗೆಡುತ್ತದೆ. ವಿ. ಸೀ. ಯವರು 'ಸೃಷ್ಟಿ ಸಂಭ್ರಮ,' 'ಜೀವವಾಹಿನೀ,' 'ಪರತತ್ತ್ವ' ಮೊದಲಾದ ಗೀತಗಳನ್ನು ಸಾಕಷ್ಟು ನಿರ್ಬಂಧದಿಂದ ರಚಿಸಿದ್ದರೂ ಬಿಚ್ಚುನುಡಿಯ ಗೀತಗಳು ಬಹಳವಾಗಿವೆ. ಉದಾಹರಣೆಗಾಗಿ ಸಮರ್ಪಣ, ಒಲವು, ಆಸೆ, ಮೊರೆ, ಭ್ರಮೆ ಮೊದಲಾದವುಗಳನ್ನು ನೋಡಿದರೆ ಒಂದು ನುಡಿಯ ನಡೆಯಂತೆ ಇನ್ನೊಂದಿಲ್ಲ. ಇನ್ನು ತಾಳದ ವಿಷಯ... ಕವನಗಳಲ್ಲಿ ತಾಳವು ಕೇವಲ ಮಾತ್ರಾವಲಂಬಿಯಾ... ಗಿದ್ದು ಸುಸ್ಪಷ್ಟವಾದದ್ದಿರುತ್ತದೆ. ಆದರೆ ಹಾಡಿಸಲ್ಲ... ಕವನದ ತಾಳವು ಒಮ್ಮೊಮ್ಮೆ ಇರುವುದಾದರೂ ಒಮ್ಮೊಮ್ಮೆ ಅದು ಅಕ್ಷರ ಹಿಚುಕಿ ಎಳೆದು ಮಾತ್ರೆಗಳನ್ನು ಎಣಿಸುವ ಕ್ಲಿಷ್ಟ ತಾಳವೂ ಇರುತ್ತದೆ. ಅದನ್ನು ಕೆಲವೆಡೆಯಲ್ಲಿ ವಿ. ಸೀ. ಯವರು ತಮ್ಮ ಸಂಗೀ... ಸಖ್ಯದ ಮೂಲಕ ತಂದಿರುವರು. ಇಂಥ ಹಾಡುಗಳನ್ನು ಅವರು ಹಾಡಿ ಹೇಳದ ಹೊರತು ಸ್ವಾರಸ್ಯ ಹೊ... ಡುವುದು ದುರ್ಲಭ. ಇದಲ್ಲದೆ ಪಲ್ಲವಿಯಲ್ಲಿ ನಾಲ್ಕು ಮಾತ್ರೆಗಃ ಆದಿತಾಳವೆಂದು ತೋರಿದ್ದು ನುಡಿಯಲ್ಲಿ ಬೇರೆಯಾದಂತೆ ಭಾಸವಾಗುತ್ತದೆ. ಈ ಎಲ್ಲ ಸಂಗೀತ...

CC-0. Jangamwadi Math Collection. Digitized by eGangotri

# ಕದಿರೆಯ ದೃಶ್ಯಗಳು



## ದೇವಾಲಯ

ಕದ್ರಿಯು ಕಪಿಲಋಷಿಯ ಆಶ್ರಮವೆಂದು ಹೇಳುತ್ತಾರೆ. ಇಲ್ಲಿನ ದೇವಸ್ಥಾನವು ಮಂಜುನಾಥ ದೇವಾಲಯವು. ನಾಥ ಸಂಪ್ರದಾಯದ ಮೂಲಪುರುಷನಾದ ಮಚ್ಛೇಂದ್ರನಾಥನು ಇಲ್ಲಿ ಕೆಲವುಕಾಲ ವಾಸಿಸಿದ್ದನೆಂದೂ ಗುಡ್ಡದ ಮೇಲಿರುವ ಮಠವು ಅವನಿಂದ ಸ್ಥಾಪಿಸಲ್ಪಟ್ಟಿತೆಂದೂ ಲೌಕಿಕವಿದೆ. ಆ ಮಠಕ್ಕೆ ಜೋಗಿರಾಯನ ಮಠವೆಂದು ಹೆಸರು. ಅದರ ಅಧಿಪತಿಯು ಈಗಲೂ ಉತ್ತರ ಹಿಂದುಸ್ಥಾನದ ಕನ್ಯಾಕುಬ್ಜ ಬ್ರಾಹ್ಮಣ ವರ್ಗಕ್ಕೆ ಸೇರಿದವನು. ಈ ಜಿಲ್ಲೆಯಲ್ಲಿರುವ ಜೋಗಿ ಎಂಬ ಜಾತಿಯವರು ಮಚ್ಛೇಂದ್ರನಾಥನ ಶಿಷ್ಯರ ವಂಶಜರೆಂದು ಹೇಳುತ್ತಾರೆ. ಅವರಿಗೆ ಈ ಜೋಗಿರಾಯರೇ ಗುರುಗಳು.



## ನಿಸರ್ಗ

ಇಲ್ಲಿ ಏಳು ಕೆರೆಗಳಿವೆ. ಗುಡ್ಡದ ಮೇಲಿನ ಒಂದು ಝರಿಯಿಂದ ಹರಿದು ಬರುವ ನೀರು ಒಂದು ಕಲ್ಲಿನ ಗೋಮುಖ ಮಾರ್ಗವಾಗಿ ಈ ಕೆರೆಗಳಲ್ಲಿ ಹರಿಯುವಂತೆ ಮಾಡಿದ್ದಾರೆ. ಈ ನೀರಿಗೆ Medicinal proprerties ಇವೆಯೆಂದು ಹೇಳುತ್ತಾರೆ. ಕೆರೆಗಳಲ್ಲಿ ಸ್ನಾನ ಮಾಡಲಿಕ್ಕೆ ಜನರು ಯಾವಾಗಲೂ ಹೋಗುತ್ತಾರೆ.

ಈ ಕೆರೆಗಳಲ್ಲಿ ಕ್ರೈಸ್ತರೂ ಮುಸಲ್ಮಾನರೂ ಮೀಯಬಹುದು. ಆದರೆ ಹಿಂದೂ ಅಸ್ಪೃಶ್ಯರು ಮಾತ್ರ ಮೀಯಕೂಡದು !

CC-0. Jangamwadi Math Collection. Digitized by eGangotri



ಸ್ವದೇಶಾಭಿಮಾನಿ ಆಫೀಸು ಮತ್ತು ಶಾರದಾ ಛಾಪಖಾನೆ



ಕೈ. ವಾ. ಉಪೇಂದ್ರ ಪೈ.
ಸ್ವದೇಶಾಭಿಮಾನಿಯ ಪ್ರೇರಕರು



ಶ್ರೀ. ವಡೇರಬೆಟ್ಟು ಶ್ರೀನಿವಾಸ ಕಾಮತ್.
ಸ್ವದೇಶಾಭಿಮಾನಿಯ ಸಂಪಾದಕರು

CC-0. Jangamwadi Math Collection. Digitized by eGangotri

ತೊಡಕುಗಳನ್ನು ತರದೆ ಶ್ರೀನಿವಾಸರಂತೆ ಸರಳಬಂಧದ ಹಾಡುಗಳನ್ನು ವಿ. ಸೀ. ಯವರು ರಚಿಸಿದ್ದರೆ ಮುಖ್ಯವಾಗಿ ಗಮನಿಸಬೇಕಾದ ಭಾವಗೀತೆಯ ಬೆಡಗಿಗೆ ಹಾದಿ ಕಟ್ಟಾಗುತ್ತಿರಲಿಲ್ಲ. ಭಾವಗೀತೆಯ ರಾಜ್ಯದಲ್ಲಿ ಸಂಗೀತ ಸಖಿಯ ಸುಳಿದಾಟದಿಂದ ನಲಿವು ಉಂಟೇನೊ ನಿಜ. ಆದರೆ ಅವಳ ಸುಳಿದಾಟಕ್ಕೆ ಇಲ್ಲದ ಸಡಿಲುಕೊಟ್ಟು ಪ್ರಯೋಜನವಿಲ್ಲ. ಭಾವಗೀತೆ ಎದೆಯ ಹಾಡು, ಸಂಗೀತದ ಹಾಡಲ್ಲ. ಭಾಷೆಯ ಬಗೆಯಲ್ಲಿ ವಿ. ಸೀ. ಯವರ ಅನಿರ್ಬಂಧ ತತ್ತ್ವದ ಮೂಲಕ ಅದರ ಜೀವಕಳೆ, ನಾದ ಗುಣಗಳಿಗೆ ಕೆಲವು ಪ್ರಯೋಗಗಳ ಕಸರು ಕುಂದು ತರುತ್ತದೆ. ನಾವಿಲ್ಲಿ 'ಅದೋಷೌ ಶಬ್ದಾರ್ಥೌ' ಎಂಬ ಹಳೆಯ ತಕ್ಕಡಿಯಿಂದ ತೂಗುತ್ತಿಲ್ಲ. ಕಿವಿಗೆ ಕೇಸರಾಗದ ಅರಿಸಮಾಸಗಳಿಗೂ ಹೊಸಬಗೆಯ ಕನ್ನಡ–ಸಂಸ್ಕೃತ ಪದ ಸೃಷ್ಟಿಗೂ ನಮ್ಮ ಆಕ್ಷೇಪವೇನೂ ಇಲ್ಲ: ಆದರೆ ಸ್ವತಂತ್ರ ನೂತನ ಕವಿಯ ಹೊಣೆಯು ತನ್ನ ಮಾರ್ಪಾಟುಗಳಿಂದಾಗುವ ವಾಣಿಯ ಇಡಿಯ ಸೊಬಗನ್ನು ಕಾಯುವುದಿರುತ್ತದೆ. ವಿ. ಸೀ. ಯವರು ನಿಷ್ಕಾರಣವಾಗಿ ಕೆಲವು ಹಳಗನ್ನಡದ ಪ್ರತ್ಯಯಗಳನ್ನೂ ಉದ್ಗಾರಗಳನ್ನೂ ಬಿಂದುರಾಶಿಯನ್ನೂ ಹೊಸಗನ್ನಡದ ಹೊಳೆಯಲ್ಲಿ ಸೇರಿಸಿ ಅದರ ತಿಳಿಗೆ ಕೊರತೆಯನ್ನು ಕಲ್ಪಿಸಿರುವರು.

ಇದೆಲ್ಲ ಕೃತಿಬಂಧದ ಮಾತು. ಆದರೆ ಈ ಬಂಧದೊಳಗಿಂದ ಹಾಯ್ದು ಕವಿಹೃದಯದ ಮಂದಿರವನ್ನು ಹೊಕ್ಕರೆ ಅಲ್ಲಿರುವುದೆಲ್ಲ ಮುತ್ತು, ರತ್ನ, ಮಾಣಿಕ: ನಿರ್ಮಲವಾದ ಉದಾತ್ತವಾದ ಧ್ಯೇಯಜೀವ, ವಿವೇಕಪೂರ್ಣವಾದ ಜಗತ್ತಿನ ಅರಿವು, ಅನಂತವಾದ ಸಹಜವಾದ ಸ್ಫೂರ್ತಿ, ಶಿಶುವಿನ ಶುದ್ಧವಾದ ವಿಪುಲವಾದ ಆನಂದ, ಎಲ್ಲಕ್ಕೂ ಮೇಲಾಗಿ ಜಗದೊಡೆಯನಲ್ಲಿ ಸರ್ವಾರ್ಪಣಮಾಡಿದ 'ನೀನೇ ಗತಿ'ಯೆನ್ನುವ ದಾಸಭಾವ. ಇವುಗಳನ್ನು ಪ್ರಾರ್ಥನೆ ಎಂಬ ನಡುವಿನ ಹಾಗು ಕಡೆಯ ಗೀತಗಳಲ್ಲಿಯೂ ಮೊದಲನೆಯ ಹಾಡುಗಳಲ್ಲಿಯೂ ರಸಿಕರು ಓದಿ ನಲಿಯಬೇಕು. ಇನ್ನು ಜನಸಾಮಾನ್ಯರ ಹೃದಯವನ್ನು ಮಿಡಿಯುವ ಕೆಲವು ರಾಷ್ಟ್ರೀಯ ಪದಗಳೂ ಇವೆ. ಅವುಗಳಿಂದ ಕನ್ನಡಕಾವ್ಯದ ತೇರನ್ನು ನಾವು ಬೀದಿಯಿಂದ ಬೀದಿಗೆ ಎಳೆದು ಅದರ ಜೀವನಪ್ರಯೋಜನವನ್ನು ಜನತೆಗೆ ತಿಳುಹಿಸಬೇಕಾಗಿದೆ. ಇದೆಲ್ಲ ಆನಂದದಾಗರವನ್ನು ನೀಡಿದ್ದಕ್ಕಾಗಿ ವಿ. ಸೀ. ಯವರು ನಮಗೆ ಪೂಜ್ಯರೆಂದು ಬೇರೆ ಸಾರಬೇಕೆ?

—ರಂ. ಶ್ರೀ. ಮುಗಳಿ.

## ಸ್ವದೇಶಾಭಿಮಾನಿಯ ರಜತೋತ್ಸವ ಸಂಚಿಕೆ

ಮಂಗಳೂರಿನ ಸ್ವದೇಶಾಭಿಮಾನಿ ವಾರಪತ್ರಿಕೆಗೆ ಇಪ್ಪತ್ತೈದು ವರ್ಷಗಳು ತುಂಬಿದುದು ಕನ್ನಡಿಗರೆಲ್ಲರಿಗೆ ಆನಂದದ—ಅಭಿಮಾನದ ಸಂಗತಿಯಾಗಿದೆ. ಕನ್ನಡ ಪತ್ರಿಕೆಗಳಿಗೆ ಬಾಲಗ್ರಹದ ಪೀಡೆ ಬಹಳವೆಂಬುದು ಎಲ್ಲರಿಗೂ ಗೊತ್ತು. ಅಂತಹ ಪೀಡೆ ಪಿಡುಗುಗಳಿಗೆಲ್ಲ ಎದೆಗೊಟ್ಟು ನಿಂತು ಬದುಕಿ ಬಾಳಿದ ಜಟ್ಟಿ ಸ್ವದೇಶಾಭಿಮಾನಿ. ಮುಖ್ಯವಾಗಿ ದಕ್ಷಿಣ ಕನ್ನಡ ಜಿಲ್ಲೆಯ– ಆನುಷಂಗಿಕವಾಗಿ ಕರ್ನಾಟದ— ಸೇವೆಯನ್ನು ಶಕ್ತಿಮೀರಿ ಮಾಡಿದೆ ಸ್ವದೇಶಾಭಿಮಾನಿ.

ಈ ರಜತೋತ್ಸವ ಸಂಚಿಕೆಯು ಸರ್ವಾಂಗ ಸುಂದರವಾಗಿದೆ. ಮಂಗಳೂರಿನ ಅಂದವಾದ ಅಚ್ಚು, ದಪ್ಪಗಾದ ಬೆಳುಪು ಕಾಗದ, ಅಳತೆಯಿಲ್ಲದಷ್ಟು ಚಿತ್ರಗಳು. ಕನ್ನಡ ನಾಡಿನಲ್ಲಿ ಹೆಸರು ಹೊಂದಿರುವ ಲೇಖಕರ— ಕವಿಗಳ—ಲೇಖನ ಕವಿತೆಗಳು.

ಲೇಖನಗಳ ಆಯ್ಕೆಯು ಚೆನ್ನಾಗಿದೆ. ಸಂಸ್ಕೃತಿ ನಿದರ್ಶಕ ಲೇಖನಗಳಿವೆ. ಇತಿಹಾಸವಿದೆ. ಕಾವ್ಯವಿಚಾರವಿದೆ. ಲಲಿತಕಲಾ– ಚರ್ಚೆಯಿದೆ. ಉದ್ಯೋಗ ವ್ಯವಸಾಯಗಳ ವಿಷಯವಿದೆ. ವಿಜ್ಞಾನಪರಿಚಯವು ಇದೆ. ಸಮಾಜ ಸತ್ತಾವಾದದ ವಿಚಾರಗಳೂ ಇವೆ. ಕತೆಗಳಿವೆ. ಶಬ್ದಗಳ ವ್ಯುತ್ಪತ್ತಿ ಚರ್ಚೆಯೂ ಇದೆ. ಬರೆದವರು ಆಯಾ ವಿಷಯಗಳಲ್ಲಿ ಅರಿತುನುರಿತವರು. ಅಮೇರಿಕಾ ಜರ್ಮನಿ ಮೊದಲಾದ ಪರದೇಶಗಳಲ್ಲಿರುವ ಕನ್ನಡಿಗರೂ ತಮ್ಮ ಬರೆಹಗಳಿಂದ ಇದನ್ನು ಅಲಂಕರಿಸಿರುವರು. ಎಲ್ಲರೂ ತರಿಸಿ ಓದಬೇಕಾದುದು; ಸಂಗ್ರಹದಲ್ಲಿಡಬೇಕಾದುದು. ಬೆಲೆ ಪ್ರತಿಯೊಂದಕ್ಕೆ ಎಂಟಾಣೆಗಳು. ಸ್ವದೇಶಾಭಿಮಾನಿಯ ರಜತೋತ್ಸವವು ನಮಗೂ ಹಬ್ಬ. ಕನ್ನಡಿಗರೆಲ್ಲರಿಗೂ ಹಬ್ಬ, ಈ ಹಬ್ಬಕ್ಕೆ ಸಂಬಂಧಿಯಾಗಿರುವ ಚಿತ್ರಗಳನ್ನು ಜಯಕರ್ನಾಟಕದ ವಾಚಕರೂ ನೋಡಲೆಂಬ ಅಪೇಕ್ಷೆಯಿಂದ ಇಲ್ಲಿ ಮೂರು ಚಿತ್ರಗಳನ್ನು ಅಚ್ಚುಗೊಳಿಸಲಾಗಿದೆ. ಜಯಕರ್ನಾಟಕದ ಮೇಲೆ ಮಮತೆಯಿಟ್ಟು ಪಡಿಯಚ್ಚುಗಳನ್ನು ಒದಗಿಸಿ ಕೊಟ್ಟುದಕ್ಕಾಗಿ ಸ್ವದೇಶಾಭಿಮಾನಿಯ ಕಾರ್ಯಾಲಯದವರಿಗೆ ನಾವು ತುಂಬಾ ಋಣಿಯಾಗಿರುವೆವು.



CC-0. Jangamwadi Math Collection. Digitized by eGangotri



## ಕನ್ನಡನಾಡಹಬ್ಬ

ಮಂಗಳೂರಿನ ಕಂಠೀರವ ಪತ್ರಿಕೆಯ ಸಂಪಾದಕರು ಅಲ್ಲಲ್ಲಿ ಜರುಗಿದ ನಾಡಹಬ್ಬದ ವಿಷಯದಲ್ಲಿ ಅತ್ಯುತ್ತಮವಾದ ಅಗ್ರಲೇಖವೊಂದನ್ನು ಬರೆದಿದ್ದಾರೆ. ಕನ್ನಡಿಗರೆಲ್ಲರೂ ಅದನ್ನು ಅವಶ್ಯವಾಗಿ ಓದಬೇಕಾದುದರಿಂದ ಅದನ್ನಿಲ್ಲಿ ಮತ್ತೊಮ್ಮೆ ಕೊಡಲಾಗಿದೆ.

ಸಂ. ಜ. ಕ.

## ಕರ್ನಾಟಕದ ಕಾರ್ಯಭಾಗಗಳು

ಉತ್ಸಾಹಶಾಲಿಗಳಾದ ಉತ್ತರ ಕರ್ನಾಟಕಸ್ಥರು, ಈ 'ನಾಡಹಬ್ಬ'ದ ಸಂಭ್ರಮಪೂರ್ವಕವಾದ ಆಚರಣೆಯಿಂದ, ಮಿಕ್ಕುಳಿದ ಕರ್ನಾಟಕ ಪ್ರಾಂತಗಳನ್ನೂ ಹೇಗೆ ಜಾಗೃತಗೊಳಿಸಿರುವರೆಂಬುದನ್ನು ನಾವು ಮರೆಯುವುದಿಲ್ಲ. ಅಥವಾ ಅವರು ಮಾಡಿದರೆ ಮಾಡಲೆಂದು ಔದಾಸೀನ್ಯದಿಂದಲೋ, 'ಚೆನ್ನಾಗಿ ಮಾಡುತ್ತಾರೆ' ಎಂಬ ಶುಷ್ಕಪ್ರಶಂಸೆಯಿಂದಲೋ ನಾವು ಸುಮ್ಮನೆ ಕುಳಿತು ಕಾಲಹರಣ ಮಾಡುವುದೂ ಸರಿಯಲ್ಲ. ಅವರೊಂದು ಮೇಲ್ಪಂಕ್ತಿ ಹಾಕಿ ಕೊಟ್ಟಿದ್ದಾರೆ. ಅದನ್ನು ಇತರ ಕನ್ನಡಿಗರೂ ಅನುಸರಿಸಬೇಕು. ವಸ್ತುತಃ ಕರ್ನಾಟಕದ ಅಭ್ಯುದಯಕ್ಕಾಗಿ ಒಂದು ಪ್ರಾಂತವು ಇನ್ನೊಂದನ್ನು ಅನುಸರಿಸದೆ, ಏಕೋದ್ದೇಶದಲ್ಲಿ ಏಕೀಭವಿಸದೆ, ಇದ್ದಲ್ಲಿ ನಮ್ಮ ಏಕೀಕರಣವು ಸ್ವಪ್ನಪ್ರಾಯ. ನಮ್ಮ ಏಕೀಕರಣವು, ಅಥವಾ ಕನ್ನಡಿಗರ ಸ್ವರಾಜ್ಯವು ಹೊರಗಿನವರಿಂದ ಬರುವ ಹಾಗಿಲ್ಲ. ಆ ಕಾರ್ಯವು ನಮ್ಮಿಂದಲೇ ಸಿದ್ಧಿಸಬೇಕು. ಹಾಗೆ ಸಿದ್ಧಿಸಬೇಕಾದರೆ, ಏಕರೀತಿಯಾದ ಜನಜಾಗೃತಿ, ಏಕಮುಖವಾದ ಮಹತ್ಪ್ರಯತ್ನ, ಮೇಲಾಗಿ ಉದ್ದಿಷ್ಟಕಾರ್ಯದಲ್ಲಿ ಸಮಗ್ರಕರ್ನಾಟಕದ ಏಕಕಂಠದ ದೃಢಪ್ರತಿಜ್ಞೆ ಇವು ಅತ್ಯಾವಶ್ಯಕ. ಇವುಗಳಲ್ಲಿ, ಮೊದಲನೆಯದಾದ ಜನಜಾಗೃತಿಗೆ 'ನಾಡಹಬ್ಬ'ದಂತಹ ಚಿತ್ತಾಕರ್ಷಕವಾದ ಸಾರ್ವಜನಿಕ ಉತ್ಸವಗಳೇ ಉತ್ತಮೋಪಾಯವೆಂದರೆ ಅತ್ಯುಕ್ತಿಯಲ್ಲ. ನಾಡಹಬ್ಬದಿಂದ 'ಗತವೈಭವ'ದ ಸ್ಮರಣೆ, ಆ ಸ್ಮರಣೆಯಿಂದ ನಮ್ಮ ಪ್ರಕೃತ ದುರವಸ್ಥೆಯ ಚಿಂತನೆ, ಅಲ್ಲಿಂದ ಕರ್ನಾಟಕದ ಉದ್ಧಾರಕ್ಕಾಗಿ ಕನ್ನಡಿಗರಲ್ಲಿ ಐಕ್ಯ, ಏಕೋದ್ದೇಶದ ಸಾಧನೆ-ಹೀಗೆ ಸಂಕೋಲೆಯ ಗೊಣಸುಗಳಂತೆ, ಒಂದೊಂದಾಗಿ ಮುಂದಾಗಲು ಕಷ್ಟವೇನೂ ಇಲ್ಲ. ಇದನ್ನು-ಈ ಸ್ಫೂರ್ತಿಯನ್ನು, ದಕ್ಷಿಣ ಕನ್ನಡದವರಲ್ಲಿಯೂ ತುಂಬಿ, ಕರ್ನಾಟಕಕ್ಕೆ, ಕರ್ನಾಟಕದ ಐಕ್ಯಕ್ಕೆ ನೆರವಾಗುವಂತೆ ಅದನ್ನು ಮುನ್ನಡೆಯಿಸುವ ಭಾರವು, ಈಗ ಉತ್ತರ ಕರ್ನಾಟಕಕ್ಕೆ ದಯೆಮಾಡಿಸಿ, ಅಲ್ಲಿನ ಏರ್ಪಾಡುಗಳನ್ನು ಕಣ್ಣಾರೆ ಕಂಡು, ಅನುಭವಮಾಡಿಕೊಂಡು ಬರುವ ನಮ್ಮ ಜಿಲ್ಲೆಯ ಸಾಹಿತ್ಯಸೇವಕರ ಮೇಲೆಯೇ ಮುಖ್ಯವಾಗಿ ಬಿದ್ದಿದೆ. ಅದನ್ನು ನಿರ್ವಹಿಸುವ ಶಕ್ತಿಯನ್ನು ಭಗವಂತನು ಅವರಿಗೆ ದಯೆಪಾಲಿಸಲಿ!

ಯಾವ ರಾಷ್ಟ್ರದಲ್ಲಿ ಸಮಗ್ರ ಭಾರತ ಮುಖಂಡರು ಉದಯವಾಗಿದೆಯೋ, ಆ ರಾಷ್ಟ್ರವೂ, ಅದರ ಸಾಹಿತ್ಯಕಲೆಗಳೂ, ಅಲ್ಲಿನ ಪ್ರಜಾಗಣಕೋಟಿಯೂ ಅವರಿಂದಲೇ ಉನ್ನತಿಗೆ ಏರುವುದು. ಕರ್ನಾಟಕದಲ್ಲಿ ಅಂತಹ ವೀರರು ಜನಿಸಿಲ್ಲ. 'ಸುಟ್ಟ ಮನೆಯ ಬಿದುರುಗಳು'ಎನಿಸಿರುವ ಶ್ರೀಮಾನ್ ಗಂಗಾಧರ ದೇಶಪಾಂಡೆಯಂತಹವರು ಕೂಡ ಯಾವಾಗಲೂ ನಮ್ಮವರೇ ಎಂದು ಧೈರ್ಯಮಾಡಿಕೊಳ್ಳುವ ಹಾಗಿಲ್ಲ. ಅತ್ಯಾಯವಿದ್ದಾಗ ಮಾತ್ರ, ಅವರು 'ಕನ್ನಡದ ಕೋಲ' ಕಟ್ಟಿದ ನಿದರ್ಶನಗಳೂ ಉಂಟೆಂದರೂ ಅವರು ಕನ್ನಡಿಗರೋ, ಇತರರೋ ಹೇಗೆಂದು ಸಹ ಬರುವಂತಿಲ್ಲ. ಇದು ನಮ್ಮ ಮುಖಂಡರ ಹಾಡಾಯಿತು. ಇನ್ನು, ಸಭಾ ಸದಸ್ಯರ ವಿಷಯವನ್ನು ವಿಚಾರಿ

CC-0. Jangamwadi Math Collection. Digitized by eGangotri

ಹೋದರೆ, ನಮ್ಮ ಕರ್ನಾಟಕದ ಪ್ರತಿನಿಧಿಗಳೇ ಅಲ್ಲಿ ಕಡಿಮೆ. ಇದ್ದವರಿಗೂ 'ಕರ್ನಾಟಕ'ದ ಗೊಡವೆ ಬೇಕಿಲ್ಲ. ಅಥವಾ ಯಾರಾದರೂ ಅಲ್ಲಿ 'ಕನ್ನಡನಾಡಿನ ಸುದ್ದಿ'ಯನ್ನು ಅಪರೂಪವಾಗಿ ಬಾಯಿ ತಪ್ಪಿ ಪ್ರಸ್ತಾಪಿಸುವ ಸಾಹಸ ಮಾಡಿದರೆಂದರೆ,– ಆ ಪಾಪವನ್ನು ಕಟ್ಟಿಕೊಂಡರೆಂದರೆ,–ದೊರಕುವ ಉತ್ತರಗಳೆಲ್ಲ ನಿರಾಶಾಜನಕವಾದುವೇ. ಈ ಪರಿಸ್ಥಿತಿಯಲ್ಲಿ, ಜನಶಕ್ತಿಯೇ ಮುಖ್ಯ ಸಾಧನವೆಂಬುದು ಸ್ಪಷ್ಟ. ಆ ಶಕ್ತಿಯ ಉತ್ಪಾದನೆಗೆ 'ನಾಡಹಬ್ಬ'ದಂತಹ ಸಾರ್ವಜನಿಕ ಉತ್ಸವವೇ ಪ್ರಧಾನವೆಂದು, ಉತ್ತರ ಕರ್ನಾಟಕಸ್ಥರು ಕಂಡುಕೊಂಡಿದ್ದಾರೆ. ಅದನ್ನು ದಕ್ಷಿಣ ಕನ್ನಡಿಗರಲ್ಲದೆ ಇತರ ಕನ್ನಡಿಗರೂ ಅನುಸರಿಸಬಾರದೇ ?

ಕರ್ನಾಟಕದ ಮುಖ್ಯಾಂಗವಾದ ಮೈಸೂರು ಪ್ರಾಂತವು ಅಲ್ಲಿನ ಮಹಾರಾಜರ ಆಳಿಕೆಗೆ ಒಳಪಟ್ಟಿದೆ. ಅಲ್ಲಿನ ನಾಡಹಬ್ಬವೆಂದರೆ 'ನವರಾತ್ರಿ;' 'ದಸರೆ.' ದಸರೆಯಲ್ಲಿ ಮೆರವಣಿಗೆ, ಶೃಂಗಾರ, ಪೂಜೆ, ಸತ್ಕಾರ, ಔತಣ, ಆಟ ಪಾಟ ಇವೇ ಮೊದಲಾದ ಕಣ್ಮನಗಳನ್ನು ಸೂರೆಗೊಳ್ಳುವ ವೈಭವಸಾಮ್ರಾಜ್ಯದ ಮಾಮೂಲ ಪ್ರದರ್ಶನವಲ್ಲದೆ, ಅದರಲ್ಲಿ ಸಮಗ್ರಕರ್ನಾಟಕದ ಐಕ್ಯತೆಯನ್ನು ಸೂಚಿಸುವ, ಬಲಪಡಿಸುವ ಕುರುಹುಗಳೇನೂ ಹೆಚ್ಚಾಗಿ ಕಂಡುಬರುವುದಿಲ್ಲ. ಅಲ್ಲಿನ ಪತ್ರಿಕೆಗಳಾಗಲೀ, ಮಹಾಜನರಾಗಲೀ ಈ ಐಕ್ಯದ ವಿಷಯದಲ್ಲಿ ಆತುರರಾಗಿದ್ದಂತೆ ಭಾಸವಾಗುವುದಿಲ್ಲ. ಒಂದುವೇಳೆ ಐಕ್ಯದ ಉಪನ್ಯಾಸವೇಸಿದ್ದರೂ, ಸಂಸ್ಥಾನದ ಹೊರಗಿನ ಕನ್ನಡಿಗರಿಗಲ್ಲದೆ, ಒಳಗಿನವರು ಇದಕ್ಕೆ ಯಾವ ರೀತಿಯಿಂದ ಸಹಾಯ ಮಾಡಬೇಕು, ಬಲ್ಲವರೆಂಬುದನ್ನು ಸೂಚಿಸುವುದಿಲ್ಲ. ಏಕೀಕರಣದ ಸಮಸ್ಯೆಯಲ್ಲಿ ಮೈಸೂರಿನ ತೀರ್ಮಾನವು ಹೇಗೂ ಇರಲಿ,– ಸಮಗ್ರಕರ್ನಾಟಕದ ಐಕ್ಯದ ವಿಷಯದಲ್ಲಿ ಅದು ತನ್ನಿಂದಾದ ಸರ್ವಸಾಹಾಯ್ಯವನ್ನೂ, ಹೊರಗಿನ ಕನ್ನಡಿಗರಿಗೆ ಕೊಡಬೇಕೆಂದು ನಿರೀಕ್ಷಿಸುವದು ತಪ್ಪಲ್ಲ. ಅಂತಹ ಸಾಹಾಯ್ಯದಾನಕ್ಕೆ ಸಮುಚಿತವಾದ ಸಂದರ್ಭವು ದಸರೆಯನ್ನು ಬಿಟ್ಟರಿಲ್ಲ. ಬ್ರಿಟಿಷ್ ಕರ್ನಾಟಕದಲ್ಲಿ ಜನಶಕ್ತಿಯನ್ನು ಪ್ರಬಲಗೊಳಿಸಲು 'ನಾಡಹಬ್ಬ;' ಮೈಸೂರು ಕರ್ನಾಟಕದಲ್ಲಿ, ಕರ್ನಾಟಕದ ಐಕ್ಯವನ್ನು ಹೆಚ್ಚಿಸಲು 'ನವರಾತ್ರಿಯ ಹಬ್ಬ;'– ಇವೆರಡೂ ಏಕಕಾಲದಲ್ಲಿ ನಡೆದರೆ, ಕರ್ನಾಟಕದ ಮೇಲೆ ಕವಿದಿರುವ ಕಾರ್ಮೋಡವು ಮರೆಯಾಗಿ, ಶುಭ್ರವಾದ ಬೆಳದಿಂಗಳು ಪಸರಿಸುವಲ್ಲಿ ಸಂದೇಹವಿಲ್ಲ.

ಕನ್ನಡ ಸೀಮೆಯಲ್ಲಿ, ಎಷ್ಟೋ ಭಾಗಗಳು, ಇತರರ ಹಿಡಿತಕ್ಕೆ ಸಿಕ್ಕಿಹೋಗಿವೆ. ಅವುಗಳನ್ನು ನಮ್ಮ ಸ್ವಾಧೀನಕ್ಕೆ ಬರಮಾಡಿಕೊಳ್ಳುವುದು ಸುಲಭವಾಗಿಲ್ಲ. ಅವರಲ್ಲಿ ಕೆಲವರು ಪ್ರಬಲರಾದವರು, ತಾವೀಗ ಆಕ್ರಮಿಸಿದುದೂ ಸಾಲದೆ ಇನ್ನೂ ಸಿಕ್ಕಿದರೆ 'ಸ್ವಾಹಾ' ಮಾಡಿಬಿಡಲು ನಾಲಿಗೆ ಚಾಚಿ ನಿಂತಿದ್ದಾರೆ. ಇದನ್ನು, ಕಾಂಗ್ರೆಸಿನವರ ಮುಂದೆ ಒತ್ತಿ, ಅದರ ತೀರ್ಮಾನ ವಿಮರ್ಶೆಗಳ ಮೂಲಕ ನಮ್ಮದನ್ನು ನಾವು ಹಿಂದೆಪಡೆಯಬೇಕಾಗಿದೆ. ಕಾಂಗ್ರೆಸ್ ಆದರೂ, ಈ ಕಾರ್ಯವನ್ನು ಸಾಮಾನ್ಯಕ್ಕೆ ಮಾಡಿಕೊಟ್ಟೀತೆಂಬ ಭರವಸೆ ನಮಗಿಲ್ಲ. ಕರ್ನಾಟಕದ ಜನಶಕ್ತಿಯೂ, ಮೈಸೂರಿನ ಸತ್ಸಹಾಯವೂ ಇದಕ್ಕೆ ಅಗತ್ಯ ಬೇಕಾಗಿದೆ. ನಾಡಹಬ್ಬದಲ್ಲಿಯೂ, ನವರಾತ್ರಿಯಲ್ಲಿಯೂ ಈ ಕುರಿತಾದ ನಿರಂತರವಾದ ಪ್ರಯತ್ನವೂ, ಪ್ರಚಾರಕಾರ್ಯವೂ ನಡೆದಲ್ಲಿ, ಕಾಂಗ್ರೆಸ್ ಒತ್ತಾಯದ ಕಾರಣದಿಂದಾದರೂ ಇದರ ತೀರ್ಮಾನವನ್ನು ಮಾಡದೆ ಇರದು.

ಕೊಡಗಿನವರು, ನಾಡಹಬ್ಬದ ಮೂಲಕವಾಗಿ ಅಥವಾ ಇತರ ರೀತಿಯಿಂದ 'ಏಕೀಕರಣ'ವನ್ನು ಸಾಧಿಸಿಕೊಡಲು, ಎಷ್ಟುಮಟ್ಟಿಗೆ ಸಿದ್ಧರೋ! ಆದರೆ ಅವರೂ ತಮ್ಮ ಬೆಂಬಲವನ್ನು ಕೊಡಲೇಬೇಕಾಗಿದೆ. ಆಂಧ್ರರು, ಅವರಲ್ಲಿ ಕೆಲವು ಪ್ರಮುಖ ಮಂದಿಯಾದರೂ, ಈಗ ಕರ್ನಾಟಕಪ್ರಾಂತ ವಿಭಾಗದ ಕುರಿತು, ಬಾಯಲ್ಲಿಯಾದರೂ ಸಹಾನುಭೂತಿಪೂರ್ವಕವಾದ ಮಾತುಗಳನ್ನಾಡುತ್ತಿರುವಾಗ, ಕೊಡಗರು ಎಲ್ಲಿಯಾದರೂ ಹಿಂದೆ ನಿಂತರೆ, ಪರಿಹಾಸ್ಯಕ್ಕೂ, ಅಪಕೀರ್ತಿಗೂ ಗುರಿಯಾಗರೆ? ಸತ್ಯಾಗ್ರಹ ಸಮರದಲ್ಲಿ ಸಹಭಾಗಿಯಾದ ಕೊಡಗು, ಈ ಏಕೀಕರಣದ ಸ್ಥಾಪನಾಕಾರ್ಯದಲ್ಲಿಯೂ ನೆರವಾಗುವುದೆಂದೇ ನಂಬುವ.

### ಬಹಳ ಬಾಳಬೇಕಾದರೆ ಹುಲಿಯಾಗಬೇಕು

ಕೆಲಿಫೋರ್ನಿಯಾದಲ್ಲಿ ಇಬ್ಬರು ರಸಾಯನ ಪಂಡಿತರು, ಒಂದು ಹೊಸ ಶೋಧವನ್ನು ಮಾಡಿದ್ದಾರೆ. ಮೊದಲು ಅವರು ಹೆಗ್ಗಣ – ಪಾರಿವಾಳ ಮೊದಲಾದವುಗಳ ರಕ್ತದಲ್ಲಿ

CC-0. Jangamwadi Math Collection. Digitized by eGangotri

ಬಣ್ಣ ಮಿಶ್ರ ಮಾಡಿ ಪರೀಕ್ಷಿಸಿದರಂತೆ. ಆದರಿಂದ ಎಷ್ಟೋ ರೋಗ, ಕಿಲ್ಮಿಷಗಳು ನಾಶವಾದುವು. ಹಾವು ಕಚ್ಚಿಸಿ ಪರೀಕ್ಷೆ ಮಾಡಿದರು. ಅದಕ್ಕೂ ಜಯವು ಸಿಕ್ಕಿತು. ಅಲ್ಲಿಂದ ಒಂದು ಎತ್ತಿಗೆ ಇಲಿಯಿಂದ ಕಡಿಸಿ, ಆದನ್ನು ಪುನಃ 'Cango Red' ಬಣ್ಣವನ್ನು ಅದರ ಮೆದುಳಿನಲ್ಲಿ ಹಾಕಿ ಬದುಕಿಸಿದರು. ಪಾರಿವಾಳಕ್ಕೆ ಹಾವಿನ ವಿಷ ವನ್ನು ಚುಚ್ಚಿ ಹಾಕಿ, ತಿರುಗಿ ತಮ್ಮ ಬಣ್ಣಗಳನ್ನೇ ಉಪ ಯೋಗಿಸಿ ಮೊದಲಿನಂತೆ ಮಾಡಿದರು. ಇದರಂತೇ ಮನುಷ್ಯರಿಗೆ ಕೂಡಾ ಮಾಡಬಹುದೆಂದು ಅಂದಿದ್ದಾರೆ. ಬಣ್ಣಗಳನ್ನು ಪರೀಕ್ಷಿಸಿ, ಅವು ದೊಡ್ಡದೊಡ್ಡ ರೋಗ ಗಳಿಗೆ ಕೂಡಾ 'ಮದ್ದು' ಎಂದು ಅಭಿಪ್ರಾಯಪಟ್ಟಿ ದ್ದಾರೆ. ಬಣ್ಣಗಳಲ್ಲಿ ಮುಪ್ಪು ಹೀರುವ ಗುಣವಿದೆಯೆಂದು ಅವರಿಗೆ ಅನಿಸಹತ್ತಿದೆಯಂತೆ. ಇದನ್ನು ಗೊತ್ತುಹಿಡಿದೇ ಮೋಹರಮ್ಮದಲ್ಲಿ ಹುಲಿಯಾಗುತ್ತಿರಬಹುದಲ್ಲವೇ?

### ಧೂಮಕೇತು ಕೆಡಕನ್ನೇಕೆ ತರುವದು?

ಮೊನ್ನೆ ಮೊನ್ನೆ ಒಬ್ಬ ವೈಜ್ಞಾನಿಯು ಧೂಮಕೇತು ವಿನಲ್ಲಿ ವಿಷವಿರುವದೆಂದು ಕಂಡುಹಿಡಿದಿದ್ದಾನೆ. ಭೂಮಿಗೆ ಅದು ಸಮಿಾಪಿಸಿತೆಂದರೆ ಆ ವಿಷವು ಭೂಮಿಗೆ ಇಳಿದು ಬರುತ್ತದಂತೆ. ಆದರಿಂದ ಒಮ್ಮೊಮ್ಮೆ ಇಡೀ ಜನಾಂಗವೇ ನಾಶವಾಗುತ್ತದೆ. ಧೂಮಕೇತುವಿನಲ್ಲಿ ಎರಡು ಬಗೆಯ ವಿಷವಿರುತ್ತದೆ. ಒಂದು ತಲೆಯಲ್ಲಿ; ಇನ್ನೊಂದು ಬಾಲದಲ್ಲಿ. ತಲೆಯಲ್ಲಿದ್ದದ್ದಕ್ಕೆ 'Cyanogen' ಎನ್ನು ತ್ತಾರೆ. ಬಾಲದಲ್ಲಿಯದಕ್ಕೆ 'Carbon-Monoide' ಎನ್ನು ತ್ತಾರೆ. ಎರಡೂ ಅಪಾಯಕಾರಕವೇ! ತಲೆಯಲ್ಲಿಯ ವಿಷವೇ ರೂಪಾಂತರವನ್ನು ಹೊಂದಿ ಬಾಲಕ್ಕೆ ಬರುತ್ತ ದೆಂದು ಅವರ ಮತ. ಅದು ಹೇಗೆ ಬರುತ್ತದೋ ಆ ವಿಜ್ಞಾನಿಗಳಿಗೇ ಗೊತ್ತು!

Popular Science

### ಯುದ್ಧದ ಪರಮಶತ್ರುವಾದ ವಿಜ್ಞಾನಶಾಸ್ತ್ರ

ನೊಬೆಲ್ ಪಾರಿತೋಷಕವನ್ನು ಹೊಂದಿದ ವಿಖ್ಯಾತ ಶಾಸ್ತ್ರಜ್ಞರಾದ ಡಾ। ಮಿಲಿಗಾನ ಸಾಹೇಬನು ಬರೆ ಯುವುದೇನೆಂದರೆ— "ಶಾಸ್ತ್ರೀಯ ಜ್ಞಾನದ ಬೆಳವಣಿಗೆ ಯಿಂದ ಯುದ್ಧವನ್ನು ನಿಲ್ಲಿಸುವ ಚಳವಳವು ಯಶಸ್ವಿ ಯಾಗುವುದು. ಕಬ್ಬಿಣ, ವಿಷವಾಯು ಮೊದಲಾದವು ಗಳಿಂದ ಪ್ರಾಣವಿನಾಶಕ ಯಂತ್ರಗಳನ್ನು ತಯಾರು ಮಾಡಬಹುದೆಂಬುದು ನಿಜ. ಆದರೆ ಅದೇ ದ್ರವ್ಯಗಳ ನೇಗಿಲು, ಮೋಟಾರು, ನೇಯಿಗೆಯ ಯಂತ್ರ ಕೈ ಇತ್ಯಾದಿ ಉಪಕಾರಕ ವಸ್ತುಗಳನ್ನೂ ಮಾಡಬಹ ಲ್ಲವೆ? ಈ ವಿಚಾರಸರಣಿಯು ಜನರಲ್ಲಿ ಅಧಿಕಾಧಿಕವಾ ಬೇರೂರಿದಂತೆ ಯುದ್ಧ ವಿಚಾರವು ನಿರ್ಮೂಲಗೊಳ್ಳು ಹೋಗುವುದು. ಇದುವರೆಗೆ ಧರ್ಮ, ರಾಜಕಾ ಸಮಾಜ ಈ ಕಾರಣಗಳಿಂದ ಯುದ್ಧದ ಪ್ರಾಬಲ್ಯ ಇದ್ದಿತು. ಈಗ ಇವುಗಳೆಲ್ಲದರ ಮೇಲೆ ವಿಜ್ಞಾನಶಾಸ್ತ್ರ ಒಂದು ದೊಡ್ಡ ಉಪಾಯವನ್ನು ಹೂಡಿರುವುದು. ತಂ ಯಿಲ್ಲದೆ ಸುದ್ದಿಯನ್ನು ಹೇಳುವ ಯಂತ್ರ, ವಿಮಾ ಇತ್ಯಾದಿ ಸಾಧನಗಳಿಂದ ದೂರ ದೂರ ದೇಶಗಳೊಂ ಐಕಮತ್ಯವನ್ನು ಬೆಳೆಸುತ್ತಿರುವವು. ಅದು ಹೀಗೆ ಅಭಿವೃದ್ಧಿಗೊಂಡರೆ ಸಮಗ್ರ ಜಗತ್ತೇ ಒಂದು ರಾಷ್ಟ್ರ ವಾಗಿ ಯುದ್ಧಕ್ಕೆ ಅವಕಾಶವೇ ಇಲ್ಲದಂತಾಗುವುದು ಯಂತ್ರಗಳಿಂದ ಮನುಷ್ಯರು ದುರ್ಬಲರಾಗಿರುವರೆ ಹೇಳುತ್ತಿರುವರು. ಆದರೆ ಅದು ಸುಳ್ಳು. ಮನುಷ್ಯ ಕಾರಖಾನೆಗಳಲ್ಲಿಯೂ ಉಷ್ಣತಾವಾದಿಗಳಿರುವೆಡೆ ಲ್ಲಿಯೂ ಪಡುವ ಶ್ರಮವನ್ನು ನಿವಾರಿಸುವ ದೃಷ್ಟಿಯಿ ವಿಜ್ಞಾನಶಾಸ್ತ್ರದ ಪ್ರಗತಿಯು ನಡೆಯುತ್ತಲಿದೆ. ಇನ್ನು ಮುಂದೆ ಯುದ್ಧವಿಚಾರವನ್ನು ಮಾಡದೆ ವಿಜ್ಞಾ ಶಾಸ್ತ್ರದ ಅಭಿವೃದ್ಧಿಗಾಗಿ ಸಮಗ್ರ ಮಾನವಜಾತಿ ಪ್ರಯತ್ನ ಪಟ್ಟುದಾದರೆ, ಅದು ಪರಮೋಚ್ಚ ಉನ್ನತಿಯನ್ನೈದುವುದರಲ್ಲಿ ಸಂದೇಹವೇನು?" ಎಂ ಡಾಕ್ಟರ್ ಸಾಹೇಬನ ಈ ಸುಂದರವಾದ ಮನೋರಾಜ್ಯ ಸತ್ಯಸೃಷ್ಟಿಗಿಳಿದರೆ ಭೂಲೋಕದಲ್ಲಿ ಸ್ವರ್ಗಸುಖವಾ ಲಭಿಸಲು ಸಂದೇಹವೇ ಇಲ್ಲ. ಆದರೆ ಮಹತ್ವಾಕಾಂಕ್ಷೆ ಮತ್ಸರ, ಇತ್ಯಾದಿ ಮನೋವಿಕಾರಗಳನ್ನು ನಿರ್ಮೂ ಗೊಳಿಸುವ ಶಕ್ತಿಯು ವಿಜ್ಞಾನಶಾಸ್ತ್ರದಲ್ಲಿ ಇರದವ ಡಾಕ್ಟರ್ ಸಾಹೇಬನ ಭವಿಷ್ಯಜ್ಞಾನವು ಎಷ್ಟರಮಟ್ಟಿ ಸತ್ಯವಾಗುವುದೆಂಬ ಸಂಶಯವಿದ್ದೇ ಇರುವುದು.

—ಸುಧಾ (ಹಿಂದಿ)

### ಭಾರತೀಯ ಉದ್ಯೋಗಧಂದೆಗಳ ಸರ್ವನಾ

ಭಾರತೀಯರ ಉದ್ಯೋಗಧಂದೆಗಳನ್ನು ಸಂಪೂರ್ಣ ವಾಗಿ ನಾಶಮಾಡಲು ಕಂಪನಿ ಸರಕಾರವು ೭ ನಿಯ ಗಳನ್ನು ಮಾಡಿತು. ಅವು ಯಾವುವೆಂದರೆ:—

CC-0. Jangamwadi Math Collection. Digitized by eGangotri

(೧) ಇಂಗ್ಲೆಂಡಿನಲ್ಲಿ ತಯಾರಾದ ಮಾಲಿನ ಮೇಲೆ ಸ್ವಲ್ಪ ಕರ ಹೇರತಕ್ಕದ್ದು; ಅಥವಾ ಕರ ಹೇರದೇ ಭಾರತ ದಲ್ಲಿ ಬರಗೊಡಬೇಕು.

(೨) ಇಂಗ್ಲೆಂಡಿನಲ್ಲಿ ಮಾರಲ್ಪಡುವ ಭಾರತೀಯರ ಸಾಮಾನುಗಳ ಮೇಲೆ ಬಹಳ ಕರವನ್ನು ಹೇರಿ, ಇಂಗ್ಲೆಂ-ಡಿನ ಮಾಲಿಗಿಂತಲೂ ತುಟ್ಟಿ ಮಾಡಬೇಕು. ಅಲ್ಲಿ ಭಾರ ತೀಯರ ಸರಕುಗಳು ಮಾರಲ್ಪಡದಂತೆ ಮಾಡಬೇಕು.

(೩) ಭಾರತವರ್ಷದಲ್ಲಿ ಸುಂಕದಕಟ್ಟೆಯ ನಿಯಮ ಗಳಲ್ಲಿ ಬದಲಾವಣೆ ಮಾಡಬೇಕು. ಸುಂಕದ ದರದಲ್ಲಿ ಹೆಚ್ಚುಕಡಿಮೆ ಮಾಡಬೇಕು. ಇಂಗ್ಲೆಂಡಿನ ವ್ಯಾಪಾರಿ ಗಳಿಗೆ ಭಾರತೀಯರ ಕಚ್ಚಾಮಾಲು ಭಾರತದಲ್ಲಿಯೂ ತುಟ್ಟಿಯಾಗಿರಬೇಕು, ವಿಲಾಯತಿಯ ಮಾಲಿನ ಎದುರಿಗೆ ಅವರ ವ್ಯಾಪಾರವು ಕುಗ್ಗಿರಬೇಕು.

(೪) ಇಂಗ್ಲಿಷ ವ್ಯಾಪಾರಿಗಳಿಗೆ ಪ್ರತಿಯೊಂದು ರೀತಿ ಯಿಂದ ಸಹಾಯ ಮಾಡಬೇಕು. ಸೌಕರ್ಯಗಳನ್ನು ಒದಗಿಸಿ ಕೊಡಬೇಕು.

(೫) ಭಾರತೀಯ ಶಿಲ್ಪಿಗಳ ಮೇಲೆ ಬಲಾತ್ಕಾರ ಮಾಡಿ ಅವರ ಕೈಗಾರಿಕೆಯ ರಹಸ್ಯಗಳನ್ನು ಅರಿತು ಕೊಳ್ಳಲಿಕ್ಕೆಬೇಕು. ಆ ರಹಸ್ಯಗಳನ್ನು ಇಂಗ್ಲೆಂಡಿನ ಶಿಲ್ಪಿಗಳಿಗೆ ಹೇಳಬೇಕು. ಪ್ರದರ್ಶನಗಳ ಮೂಲಕ ಭಾರತೀಯರ ಕೊರತೆಗಳನ್ನು ಅರಿತುಕೊಳ್ಳಬೇಕು.

(೬) ಸರಕುಗಳನ್ನು ಒಯ್ಯಲಿಕ್ಕೆ, ತರಲಿಕ್ಕೆ ರೈಲು ಗಾಡಿಗಳ ವ್ಯವಸ್ಥೆ ಮಾಡಬೇಕು.

(೭) ಹಿಂದುಸ್ತಾನವನ್ನು ಸಂಪೂರ್ಣವಾಗಿ ವಶ ದಲ್ಲಿಟ್ಟುಕೊಳ್ಳಲು ಸಾಮ್ರಾಜ್ಯದ ವಿಸ್ತಾರವನ್ನು ಮಾಡತಕ್ಕದ್ದು. ಭಾರತೀಯರನ್ನು ಕಡೆತನಕ ಗುಲಾಮ ರನ್ನಾಗಿ ಮಾಡಿ ಇಡತಕ್ಕದ್ದು.

ಭವಿಷ್ಯ (ಹಿಂದೀ ಸಾಪ್ತಾಹಿಕ)

## ದಾಲ್ಚಿನ್ನಿ

ಸಂಗ್ರಾಹಕರು—ಶ್ರೀ ಕಶ್ಯಪ ಬೆಂಗಳೂರ

ದಾಲ್ಚಿನ್ನಿಯು ಒಂದು ಮರದ ಒಳತೊಗಟೆ. ಈ ಮರವು ಜಾವಾ, ಸುಮಾತ್ರ, ಜಮೇಕಾ, ಸಿಂಹಳ ಮತ್ತು ಪಶ್ಚಿಮದ್ವೀಪಗಳು, ದಕ್ಷಿಣ ಹಿಂದುಸ್ತಾನ (ಮದರಾಸು ಆಧಿಪತ್ಯ, ಕೊಡಗು ಮತ್ತು ಮಲಬಾರ್ ತೀರ) ಇಲ್ಲೆಲ್ಲಾ ಬೆಳೆಯುತ್ತದೆ. ಸಿಂಹಳದ್ವೀಪದಲ್ಲಿ ಇದು ಕಾಡುಗಳ ನಿವಾಸಿ. ಆದರೆ ಇವರ ವ್ಯವಸಾಯವು ಮುಖ್ಯ ಪಟ್ಟಣವಾದ ಕೊಲಂಬೋವಿನ ಸುತ್ತು ಮುತ್ತಲೇ. ಏಕೆಂದರೆ ಉಳಿದಕಡೆಗಳಲ್ಲಿ ಇದು ಚೆನ್ನಾಗಿ ಬೆಳೆಯುವುದಿಲ್ಲ.

ಮರವು ಸ್ವೇಚ್ಛೆಯಾಗಿ ಬೆಳೆದಾಗ ಇಪ್ಪತ್ತರಿಂದ ಮೂವತ್ತು ಅಡಿಗಳ ಎತ್ತರಕ್ಕೆ ಬೆಳೆಯುತ್ತದೆ; ಆದರೆ ವ್ಯವಸಾಯ ಮಾಡಿದಾಗ ಹತ್ತು ಅಡಿಗಳಿಗಿಂತಲೂ ಎತ್ತರವಾಗಿ ಬೆಳೆಯಗೊಡಿಸುವುದಿಲ್ಲ. ಎಲೆಗಳು ಪ್ರಾರಂಭ ದಲ್ಲಿ ಪ್ರಕಾಶಮಾನವಾದ ಕೆಂಪುಬಣ್ಣದಿಂದಿದ್ದು, ಬರ ಬರುತ್ತ ಹಳದಿಯ ಬಣ್ಣಕ್ಕೆ ತಿರುಗಿ, ಕಡೆಯಲ್ಲಿ ಅಚ್ಚ ಹಸುರಾಗಿ, ಅಂಡಾಕಾರದಿಂದ ದೊಡ್ಡವಾಗಿಯೂ ಇರು ತ್ತವೆ. ಬಲಿತ ಎಲೆಗಳಲ್ಲಿ ಒಂದು ತೆರದ ಸುವಾಸನೆ ಯಿದೆ. ಎಲೆಯನ್ನು ಮುರಿದಾಗ ಅದನ್ನು ಆಘ್ರಾಣಿಸ ಬಹುದು. ಹೂ ಬಿಟ್ಟಿರುವ ಕಾಲದಲ್ಲಿ, ಮರಗಳು ನೋಟಕ್ಕೆ ಬಲು ರಮ್ಯವಾಗಿರುವುವು. ಗೊಂಚಲು ಗೊಂಚಲಾಗಿರುವ ಹಸುರಿನ ಛಾಯೆಯುಳ್ಳ ಹೂಗಳು ದುರ್ವಾಸನೆಯುಳ್ಳವು.

ಸಜೀವಪದಾರ್ಥವಿರುವ ಮರಳುಗೋಡೇ ದಾಲ್ಚಿ ನ್ನಿಯ ವ್ಯವಸಾಯಕ್ಕೆ ಉತ್ತಮವಾದ ಪ್ರದೇಶ. ಆದುದ ರಿಂದ ಇಂಥಾ 'ಗೋಡಿ' ನಲ್ಲಿಯೇ ಬೀಜವನ್ನು ಬಿತ್ತ ಬೇಕು. ದಾಲ್ಚಿನ್ನಿಯ ಮರಗಳಿಗೆ ನೆರಳು ವಿಶೇಷವಾಗಿ ಬೇಕಾಗುವುದರಿಂದ, ಇದನ್ನು ಬೆಳೆಮಾಡುವ ಜಮೀನಿ ನಲ್ಲಿ ದೊಡ್ಡದೊಡ್ಡ ಮರಗಳಿರಬೇಕು. ಆರು, ಏಳು ವರ್ಷಗಳಲ್ಲಿ ಸಸಿಗಳು, ನಾಲ್ಕರಿಂದ ಆರು ಅಡಿಗಳ ಎತ್ತರ ಏಳುವುವು. ಇವುಗಳನ್ನು ಒಂಭತ್ತು ವರ್ಷಗಳ ವರೆಗೂ ಹುಲುಸಾಗಿ,ಅಡಚಣೆಯಿಲ್ಲದೆ ಬೆಳೆಯಿಸುತ್ತಾರೆ. ಇದೇ ಚಕ್ಕೆಯನ್ನು ತೆಗೆಯುವ ಕಾಲ. ಶ್ರಾವಣಮಾಸ ದಲ್ಲಿ ಮೂರುವರ್ಷ ವಯಸ್ಸಾದ ಕೊಂಬೆಗಳನ್ನೆಲ್ಲಾ ಕತ್ತರಿಸಿ, ತೊಗಟೆಯನ್ನು ಸುಲಿಯುವುದಕ್ಕೆ ಪ್ರಾರಂಭಿಸಿ ಮಾಘಮಾಸದವರೆಗೂ ಸುಲಿಯುತ್ತಿರುತ್ತಾರೆ.

ನೆಲಕ್ಕೆ ಸಮೀಪವಾಗಿರುವ ಕೊಂಬೆಗಳನ್ನು ತೊಗಟೆ ಗಾಗಿ ಮೂರು ವರ್ಷಕ್ಕೊಮ್ಮೆ ಕತ್ತರಿಸುವರು.

ಕೊಂಬೆಗಳಿಂದ ತೊಗಟೆಯನ್ನು ಬೇರೆ ಮಾಡಲು, ಅವುಗಳ ಮೇಲೆ ತೊಗಟೆಯ ಮಂದಕ್ಕೆ, ಉದ್ದವಾಗಿಯೂ ಮೂರು ಮೂರು ಅಡಿಗಳ ಉದ್ದಕ್ಕೆ ಅಡ್ಡವಾಗಿಯೂ



CC-0. Jangamwadi Math Collection. Digitized by eGangotri

ಸೀಳುತ್ತಾರೆ. ಆ ಮೇಲೆ ಆ ತುಂಡುಗಳನ್ನು ಇಪ್ಪತ್ತು ನಾಲ್ಕು ಗಂಟೆಗಳಕಾಲ ಕಂತೆಗಳಾಗಿ ಕಟ್ಟಿರುತ್ತಾರೆ. ಇದರಿಂದ ತೊಗಟೆಯನ್ನು ಸುಲಭವಾಗಿ ತೆಗೆಯಲು ಬಹಳ ಅನುಕೂಲವಾಗುತ್ತದೆ.

ಎಳೆಯ ಮತ್ತು ಮುದಿಯಾದ ಕೊಂಬೆಗಳ ತೊಗಟೆಯಲ್ಲಿ ಸಾಕಾದಷ್ಟು ಎಣ್ಣೆಯು ಸಿಕ್ಕುವುದಿಲ್ಲವಾದ್ದರಿಂದ ಅವುಗಳನ್ನು ತೆಗೆಯುವುದಿಲ್ಲ. ತೊಗಟೆಯನ್ನು ತಂದ ನಂತರ ಅವನ್ನು ಬಿಸಲಿನಲ್ಲಿ ಒಣಗಿಸುವರು. ಆಗ ಒಳಗಣ ಸಿಪ್ಪೆಯು ಹೊರಗಣ ತೊಗಟೆಯಿಂದ ಪ್ರತ್ಯೇಕವಾಗುತ್ತವೆ. ಒಳಗಿರುವುದನ್ನು ಈಚೆಗೆ ತೆಗೆಯುವರು. ಈ ತೊಗಟೆಯು ಹಳದಿಯ ಬಣ್ಣವಾಗಿಯೂ, ತೆಳ್ಳಗೆ ನುಣುಪಾಗಿ ಹೊಳೆಯುತ್ತಲೂ, ಬಗ್ಗಿಸುವುದಕ್ಕೆ ಅನುಕೂಲವಾಗಿಯೂ ಇರುವುದು. ಒಂದೊಂದು ಸುಮಾರು ಮೂರು ಅಡಿಗಳ ಉದ್ದವಿದ್ದು ಕೊಳವೆಗಳಂತೆ ಸುರಟಿಕೊಂಡಿರುತ್ತವೆ. ಮಾರಾಟಕ್ಕೆ ಕಳುಹಿಸುವಾಗ, ಒಂದರೊಳಗೆ ಮತ್ತೊಂದನ್ನು ಸೇರಿಸಿ, ಶಣಬಿನ ಬಟ್ಟೆಗಳಲ್ಲಿ ಸುತ್ತಿ, ಕಂತೆಗಳಾಗಿ ಕಟ್ಟಿ ರವಾನಿಸುತ್ತಾರೆ. ಉತ್ತಮವಾದ ದಾಲ್ಚಿನ್ನಿಯು ಹಳದಿಯ ಛಾಯೆಯುಳ್ಳದ್ದಾಗಿಯೂ, ಕಾಗದದಷ್ಟು ತೆಳ್ಳಗೂ, ಪಟಪಟ ಶಬ್ದದೊಡನೆ ಮುರಿಯುವದಾಗಿಯೂ ಇರುವುದು. ಒರಟಾಗಿರುವುದೇ ಕೀಳುತರ.

ತಾಯಿಮರವನ್ನು ಕಡಿದ ಮೇಲೆ, ಬುಡದ ಬೇರಿನಿಂದ, ಎಂಟುಹತ್ತು ಸಸಿಗಳು ಗಂಪುಗುಂಪಾಗಿ ಬೆಳೆಯುತ್ತವೆ. ಇವುಗಳಿಂದ ಹೊಂದಬಹುದಾದ ದಾಲ್ಚಿನ್ನಿಯು ಶ್ರೇಷ್ಠವಾದದ್ದು.

ರುಚಿಯಾಗಿರುವುದರಿಂದ ದಾಲ್ಚಿನ್ನಿಯನ್ನು ಅಡಿಗೆಗೆ ವಿಶೇಷವಾಗಿ ಉಪಯೋಗಿಸುತ್ತಾರೆ. ಉದರವಾಯುವಿಗೂ, ಚುರುಕು ಕೊಡುವುದಕ್ಕೂ, ಅಜೀರ್ಣಕ್ಕೂ, ಉಪಯೋಗವಾಗಿದೆ. ಇದನ್ನು ಪುಡಿಮಾಡಿ ಕೊಟ್ಟರೆ ಆಮಶಂಕೆರೋಗದವರಿಗೆ ಒಳ್ಳೆಯದು. ಗಂಟಲನ್ನು ಸರಿಪಡಿಸಿಕೊಳ್ಳುವುದಕ್ಕೂ, ಕೆಮ್ಮಿಗೂ ಉಪಯೋಗಿಸುತ್ತಾರೆ. ಸಾಧಾರಣವಾಗಿ ಬೇರೆ ಔಷಧಗಳ ಸಂ[illegible] ಪ್ರಯೋಗಿಸುವರು.

ಇದರಿಂದ ಎಣ್ಣೆಯನ್ನು ತೆಗೆದು ಅಸಹ್ಯಕರ[illegible] ಔಷಧಗಳಿಗೆ ರುಚಿಯನ್ನು ಕೊಡುವುದಕ್ಕಾಗಿ [illegible] ಯೋಗಿಸುವರು. ಇದು ಬಹಳ ತೀಕ್ಷ್ಣವಾದು[illegible] ಮೂರ್ಛೆ, ಹೊಟ್ಟೆಯ ಸೆಳೆತ ಮುಂತಾದ ರೋಗಗಳ[illegible] ಇದನ್ನು ಕೊಡುತ್ತಾರೆ. ಕಾಯಿಗಳಿಂದಲೂ ಎ[illegible] ಬರುವುದು. ಇದು ಆರಿದ ಮೇಲೆ ಮೇಣದಂತೆ ಗ[illegible] ಯಾಗುತ್ತದೆ. ಪೂರ್ವದಲ್ಲಿ ಸಿಂಹಳದ್ವೀಪದ ರಾಜ[illegible] ಇದರಿಂದ ಮೇಣದ ಬತ್ತಿಗಳನ್ನು ಮಾಡುತ್ತಿದ್ದ[illegible] ದಾಲ್ಚಿನ್ನಿಯಮರದ ಬೇರಿನಿಂದ ಕರ್ಪೂರವನ್ನು [illegible] ತೆಗೆಯುವರು.

## ಪ್ರಪಂಚದಲ್ಲೆಲ್ಲ ಅತ್ಯಂತ ದೊಡ್ಡದಾದ ಭೂಪಟ

(ಸಂಗ್ರಾಹಕರು ಶ್ರೀ. ಐ. ಎ. ರಾಮಸ್ವಾಮಿ)

ಈ ದೊಡ್ಡದಾದ ಭೂಪಟವು ಕ್ಯಾಲಿಫೋರ್ನಿಯಾ[illegible] ಮಾಡಲ್ಪಟ್ಟಿತು. ಅನಂತರ ಸ್ಯಾನ್‌ಫ್ರಾನ್‌ಸಿಸ್ಕೊ[illegible] "ಫೆರಿ" ಕಟ್ಟಡದಲ್ಲಿನ, ವಸ್ತುಪ್ರದರ್ಶನ ಶಾಲೆ[illegible] ಇಡಲ್ಪಟ್ಟಿತು. ಈ ಭೂಪಟದ ಉದ್ದ (೬೦೦) [illegible] ನೂರು ಅಡಿಗಳು. ಅಗಲು ಹದಿನೆಂಟು ಅಡಿಗಳು. ಸ್ಯಾ[illegible] ಫ್ರಾನ್‌ಸಿಸ್ಕೋದವರೂ, ಮತ್ತು ಇತರ ದೇಶಗಳವ[illegible] ಸೇರಿ ಇದರ ಬೆಲೆಯನ್ನು ಒಂದು ನೂರುಸಾವಿರ [illegible] ರ್‌ಗಳೆಂದು ಅಂದಾಜು ಮಾಡಿದ್ದಾರೆ. ಈ ಭೂಪ[illegible] ಕರ್ತೃಗಳು ಲಂಡನ್ನಿನ ಮಿ. ಜೆ. ಟಿ. ಎಡ್‌ವರ್ಡ್ಸ್ ಎ[illegible] ಆರ್. ಜೆ. ಎಸ್. ಎಂಬುವರು. ಇದನ್ನು ಸಿದ್ಧಪಡಿಸ[illegible] ಐವತ್ತಕ್ಕಿಂತ ಮೇಲ್ಪಟ್ಟ ಜನಗಳು ಒಂಬತ್ತು ತಿಂಗ[illegible] ಗಳ ಕಾಲ ಕೆಲಸ ಮಾಡಿದರು. ಈ ಭೂಪಟ[illegible] ಹೊಗೆಯ ಬಂಡಿಯ ರಸ್ತೆಗಳು ವಿದ್ಯುದ್ದೀಪದ ಕಂಬ[illegible] ಸಾಲುಗಳು, ಇವೇ ಮುಂತಾದುವುಗಳನ್ನೂ, ಉಪವ[illegible] ಗಳನ್ನೂ (Parks), ಆಯಾ ಬಣ್ಣಗಳಿಂದ ಚಿತ್ರಿಸ[illegible] ಟ್ಟಿದೆ. ಆಭೂಪಟವು ಇಷ್ಟು ವಿಸ್ತಾರವಾದದ್ದಾದರೂ ಸ[illegible] ಮಂದವಾದ ಗಾಜಿನ ಚಾಕಟ್ಟಿನಿಂದ ಸಂರಕ್ಷಿಸಲ್ಪಟ್ಟಿ[illegible]

CC-0. Jangamwadi Math Collection. Digitized by eGangotri




### ಹಿಂದೀಜನರಿಗೆ ಅಂಟಿಕೊಂಡ ರೋಗ

ಡಾ. ಪರಾಂಜಪೆಯವರು ಒಂದು ಪುಸ್ತಕವನ್ನು ಬರೆದು ಹಿಂದುಸ್ಥಾನಕ್ಕೆ ತಗುಲಿಕೊಂಡಿರುವ ರೋಗ ಚಿಕಿತ್ಸೆಯನ್ನು ಮಾಡಿದ್ದಾರೆ. ಡಾ. ಪರಾಂಜಪೆಯವರು ವಿದ್ವಾಂಸರೂ, ಫರ್ಗ್ಯೂಸನ್ ಕಾಲೇಜಿಗೆ ಅನೇಕ ವರ್ಷ ಆಚಾರ್ಯರೂ ಆಗಿದ್ದು ಈ ದೇಶದ ಸ್ಥಿತಿಗತಿಗಳನ್ನೆಲ್ಲ ಚೆನ್ನಾಗಿ ಬಲ್ಲವರೆಂದು ಹೇಳಬಹುದು. ಅವರು ಕೆಲವು ಮಾತುಗಳಲ್ಲಿ ಲೋಕಪ್ರೀತಿ ಅಪ್ರೀತಿಗಳನ್ನು ಲೆಕ್ಕಿಸದೆ ತಮಗೆ ಎನಿಸಿದ ಮಾತುಗಳನ್ನು ನಿರ್ದಾಕ್ಷಿಣ್ಯದಿಂದ ಹೇಳಿಬಿಡತಕ್ಕ ಸ್ವಭಾವದವರು. ಅವರ ಎಲ್ಲ ವಿಚಾರಗಳು ಮಾನ್ಯವಾಗುವಂತಿಲ್ಲದಿದ್ದರೂ, ಅವುಗಳಲ್ಲಿ ಎಷ್ಟೋ ಮನನೀಯವಾದವುಗಳಾಗಿರುತ್ತವೆಂಬಲ್ಲಿ ಸಂದೇಹವಿಲ್ಲ. ಡಾ. ಪರಾಂಜಪೆಯವರು ತಮ್ಮ ಗ್ರಂಥದಲ್ಲಿ ಹೇಳಿರುವ ಹಿಂದುಸ್ಥಾನಕ್ಕೆ ಅಂಟಿರುವ ದೊಡ್ಡ ಬೇನೆಯೆಂದರೆ:— ನಮ್ಮ ಜನಗಳಿಗಿರುವ ಶಬ್ದಪ್ರಮಾಣದಲ್ಲಿರುವ ಮಿತಿ ಮೀರಿದ ವಿಶ್ವಾಸ. ಪ್ರತ್ಯಕ್ಷಪ್ರಮಾಣಕ್ಕಿಂತಲೂ ಆಪ್ತವಾಕ್ಯದಲ್ಲಿ ನಂಬುಗೆ ಹೆಚ್ಚು ಹಿಂದೀಜನರಿಗೆ. ಬುದ್ಧಿಗೆ ಸಮ್ಮತವಾಗದಿದ್ದರೂ 'ವೇದದಲ್ಲಿ ಹೇಳಿದೆ' 'ಕುರಾಣದಲ್ಲಿ ಉಲ್ಲೇಖಿಸಿದೆ' ಎಂಬಿಷ್ಟರ ಸಲುವಾಗಿಯೆ ಬೇಕಾದ ಅಸಂಬಂದ್ಧ ಸಂಗತಿಗಳಿಗೂ ಅರಿವುಗೇಡಿಗಳಂತೆ ತಲೆದೂಗಲಿಕ್ಕೆ ಸಿದ್ಧರು ಈ ಜನರು! ಪೂರ್ವಪರಂಪರೆಗೆ ಹೂಡಿಕೊಂಡು ಈ ಜನರು ಗಾಣದ ಎತ್ತಿನಂತೆ ಕಣ್ಣು ಕಟ್ಟಿಕೊಂಡು ಸುತ್ತಲೂ ತಿರುಗುವುದರಲ್ಲೆ ಆನಂದವು ನಮ್ಮವರಿಗೆ! ತಿಳಿಗೇಡಿತನದ ನೆಚ್ಚಿಕೆಗಳೂ, ನಡತೆಗಳೂ,ಬೇಕಾದಷ್ಟು, ಜಾತಿಭೇದ,ಅಸ್ಪೃಶ್ಯತೆ ಮೊದಲಾದವುಳಿಂದ ಹಿಂದೀಸಮಾಜವು ಹುಳಿತಿದೆ. ಮಸೀದೆಯ ಮುಂದಿನಿಂದ ಅಸಹ್ಯ ಶಬ್ದವನ್ನುಂಟುಮಾಡುತ್ತ ಎಂಜಿನ್ನು, ಮೋಟಾರು, ರೈಲು ಮೊದಲಾದುವು ಹಾಯ್ದು ಹೋದರೂ ಮುಸಲ್ಮಾನರಿಗೆ ಅವರ ಪ್ರಾರ್ಥನೆಯಲ್ಲಿ ಅದಾವ ಆತಂಕವೂ ಉಂಟಾಗುವುದಿಲ್ಲ; ಆದರೆ ಹಿಂದೂ ಜನರ ಮಂಗಲಕರ ವಾದ್ಯಘೋಷಗಳನ್ನು ಕೇಳಿದೊಡನೆಯೆ ಅವರ ಪಿತ್ತವು ನೆತ್ತಿಗೇರುವುದು! ಸೋಲ್ಜರರಿಗೆ ತಿನ್ನಲಿಕ್ಕೆಂದು ಸಾವಿರಾರು ಆಕಳ ಕೊಲೆಯು ಪ್ರತಿದಿವಸ ನಡೆದಿದ್ದರೂ ಹಿಂದೂ ಜನರ ಗೋಭಕ್ತಿಗೆ ಬಾಧೆ ಬರುವುದಿಲ್ಲ; ಆದರೆ ಮುಸಲ್ಮಾನರು ಯಾವುದಾದರೊಂದು ಹಬ್ಬದದಿನ ಒಂದು ಆಕಳನ್ನು ಮೆರೆಯಿಸುತ್ತ ಹೊರಟೊಡನೆಯೆ ಆಯ್ತು; ಹಿಂದೂ ಧರ್ಮದ ಅಧಃಪಾತವಾದಂತೆ ಕಸಿವಿಸಿಗೊಳ್ಳುವರು! ಈ ಅವಿಚಾರ ಅಂದರೆ ವಿಚಾರಗೇಡಿತನವು ಹೋಗಿ, ವಿಚಾರಕ್ಕೆ,-ಅನುಭವಕ್ಕೆ,-ಪ್ರತ್ಯಕ್ಷ ಪ್ರಮಾಣಕ್ಕೆ ಪ್ರಾಧಾನ್ಯವು ದೊರೆತು ಜನರು ನಡೆಯಲಾರಂಭಿಸಿದರೆ ನಮ್ಮ ದೇಶಕ್ಕೆ ಬೇಗನೆ ಊರ್ಜಿತಾವಸ್ಥೆಯು ಬಾರದೆ ಇರಲಾರದು.

ಡಾ. ಪರಾಂಜಪೆಯವರು ಈ ಬಗೆಯಾಗಿ ಧಾರ್ಮಿಕ ಸಾಮಾಜಿಕ ವಿಷಯಗಳಲ್ಲಿ ನಿರ್ದಾಕ್ಷಿಣ್ಯದಿಂದ ತಮ್ಮ ಅಭಿಪ್ರಾಯಗಳನ್ನು ಹೇಳಿದಂತೆ ರಾಜ್ಯಾಂಗದಲ್ಲಿ ಅರಸಾಳುಗಳು ನಡೆಯಿಸಿದ, ಅನೀತಿ ಅನ್ಯಾಯ ಸುಲಿಗೆಗಳಿಂದಲೂ ನಮ್ಮ ದೇಶವು ಹೇಗೆ ಹಾಳಾಗಿದೆ, ಹಾಳಾಗುತ್ತಿದೆ,ಪಾರತಂತ್ರ್ಯವೆಂಬ ಈ ಮಹಾರೋಗವು ಹೋಗುವವರೆಗೂ ನಮ್ಮ ದೇಶವು ತಲೆಯನೆತ್ತಿ ಮೆರೆವುದು ಹೇಗೆ ಸಾಧ್ಯವಿಲ್ಲ, ಎಂಬ ಮಾತನ್ನು ಅಷ್ಟೇ ಸ್ಪಷ್ಟವಾಗಿಹೇಳಿ?

CC-0. Jangamwadi Math Collection. Digitized by eGangotri

ದ್ದರೆ ಅವರ ನಿಸ್ಪೃಹತೆಯು ಇನ್ನೂ ಅಷ್ಟು ಸ್ಪೃಹಣೀಯವಾಗುತ್ತಿತ್ತು.

**ಕನ್ನಡಿಗರೆಂದು ಇವರಿಗೆ ನೆನಪಿದ್ದಿದ್ದರೆ !**

'ಚಿನ್ನದ ಕಣಿಯದು ಮೈಸೂರು' 'ಗಂಧದ ಗುಡಿಯದು ಮೈಸೂರು' ಎಂದು ನವಕರ್ನಾಟಕದ ಜನಕರಲ್ಲಿ ಒಬ್ಬರಾದ ಮಾನ್ಯ ಶ್ರೀಕಂಠಯ್ಯನವರು ಹಾಡಿದ್ದು ಅನೇಕ ದೃಷ್ಟಿಯಿಂದ ಸಮರ್ಪಕವಾಗಿದೆ. ಈಗಿನ ಕರ್ನಾಟಕದ 'ಕೀರ್ತಿಯ ಕಲಶವು ಮೈಸೂರು' ಎಂದು ಹೇಳಿದರೂ ಅತಿಶಯೋಕ್ತಿಯಿಲ್ಲ ಅದರಲ್ಲಿ. ಆದರೆ ಅಲ್ಲಿಯ ಅನೇಕ ಜನರಲ್ಲಿ ಮೈಸೂರಿನಲ್ಲಿ ಕರ್ನಾಟಕ ಇದೆ, ಎಂದು ನಂಬಿದವರೆ ಹೆಚ್ಚು. ಹೊರ್ತು **ಕರ್ನಾಟಕದಲ್ಲಿ ಮೈಸೂರಿದೆ** ಎಂಬ ನೆನಪನ್ನು ಪ್ರತಿನಿತ್ಯದ ವ್ಯವಹಾರಗಳಲ್ಲಿಯೂ ಇಟ್ಟುಕೊಂಡವರು ಹಿಂದಕ್ಕಂತೂ ಬಹಳೆ ಸ್ವಲ್ಪ ಜನರಿದ್ದರು; ಆದರೆ ಈಗ ಅವರ ಸಂಖ್ಯೆಯು ದಿನದಿನಕ್ಕೆ ಹೆಚ್ಚುತ್ತಿರುವುದು ಆನಂದದ ಸಂಗತಿ. ಇನ್ನುಳಿದ ಭಾಗಗಳ ವಿಚಾರದಲ್ಲಿಯೂ ಇದೆ ಮಾತು ಅನ್ವಯಿಸುವುದು. ಅಮೇರಿಕೆಯಲ್ಲಿ ಮೊನ್ನೆ ಒಬ್ಬ ಮೈಸೂರು ಬಂಧುಗಳ ಅಪೂರ್ವ ಸನ್ಮಾನವಾಯಿತು. ಅವರು ತಾವು ಮೈಸೂರವರಷ್ಟೇ ಅಲ್ಲ ಕರ್ನಾಟಕದವರೂ ಅಹುದು ಎಂಬ ನೆನಪಿದ್ದರೆ ಆ ಸನ್ಮಾನ ಪ್ರಸಂಗದಲ್ಲಿ ಅವರು ತಮಗೆ ದೊರೆತ ಶ್ರೇಯೋಭಾಗವನ್ನು ಕರ್ನಾಟಕ ಮಾತೆಯ ಅಡಿಯಲ್ಲಿ ಮುಡುಪಿಡಬಹುದಾಗಿತ್ತು; ಆಯ್ತು. ಮೈಸೂರವರು, ಮಂಗಳೂರವರು ಧಾರವಾಡದವರು ಮಹಾಕಾರ್ಯಗಳಿಂದ, ಬುದ್ಧಿವೈಭವದಿಂದ ಹೊರನಾಡುಗಳಲ್ಲಿ ಬೆಳಕಿಗೆ ಬಂದರೆ, ಪರ್ಯಾಯದಿಂದ ಕರ್ನಾಟಕಕ್ಕೆ ಅಲ್ಪಸ್ವಲ್ಪಾದರೂ ಹೊಳಪು ಬಂದಂತೆಯೇ ಸರಿ. ಆದರೆ ಹೊಟ್ಟೆಯ ಮಕ್ಕಳೇ ತಮ್ಮ ತಾಯಿಯ ಹೆಸರನ್ನೆತ್ತಿ ಅವಳಿಗೆ ಸನ್ಮಾನಿಸದೆ ಮೂಲೆಗೆ ಕುಳ್ಳಿರಿಸಿದರೆ ಹೆರವರಾದರೂ ಏತಕ್ಕೆ ಮಾತನಾಡಿಸುವರು ? ಆಂಧ್ರ, ಬಂಗಾಲ, ಮಹಾರಾಷ್ಟ್ರಗಳಂತೆ ಅಖಿಲ ಭಾರತವರ್ಷೀಯ ಕಾರ್ಯಕಲಾಪಗಳಲ್ಲಿ, ಆಂದೋಲನಾದಿ ಉದ್ಯಮಗಳಲ್ಲಿ ಕರ್ನಾಟಕದ ಹೆಸರು ಅಷ್ಟು ಕೇಳಬರುತ್ತಿಲ್ಲ. ಹಿಂದೂದೇಶದ ಬೇರೆಬೇರೆ ಪ್ರಾಂತಗಳಲ್ಲಿಯೂ ಇಂಗ್ಲಂಡ, ಜರ್ಮನಿ, ಫ್ರಾನ್ಸ, ಅಮೇರಿಕಾ ಮೊದಲಾದ ಪರದೇಶಗಳಲ್ಲಿಯೂ ನಮ್ಮ ನಾಡಿನ ಅನೇಕ ಮಹನೀಯರು ತಮ್ಮ ಕರ್ತೃತ್ವ ಶಕ್ತಿ, ಬುದ್ಧಿವಂತಿಕೆ, ಸಾಹಸಗಳಿಂದ ತಮ್ಮ ತಮ್ಮ ಮಟ್ಟಿಗೆ ಹೆಸರುಗೊಂಡಿದ್ದಾರೆ. ಆದರೆ ಅವರಲ್ಲಿ ಕೆಲವರು ತಮ್ಮನ್ನು ದಕ್ಷಿಣ ಮಹಾರಾಷ್ಟ್ರದವರೆಂದುಕೊಳ್ಳುವರು; ಹಲವರು ಮೈಸೂರವರೆಂದು ಹೇಳುವರು; ಕೆಲಬರು ಕೆನರಾ ಸಾರಸ್ವತರೆಂದು ಹೆಸರಿಟ್ಟುಕೊಳ್ಳುವರು. ಆದರೆ ಅಖಂಡ ಕರ್ನಾಟಕದವರು ತಾವೆಂಬ ತಿಳಿವು [illegible]ವರು ತೀರ ಕಡಿಮೆಯಾಗಿದ್ದಾರೆ. ಆದುದರಿಂದಲೆ [illegible] ನಾಡುಗಳಲ್ಲಿ ಕರ್ನಾಟಕ ಸಂಘಗಳ ಬದಲು ಕನ್ನಡಿ[illegible] **ರಿಂದಲೆ ನಡೆದ ಮಹಾರಾಷ್ಟ್ರ ಸಂಘ, ಸಾರಸ್ವತ ಸಮಾಜ, ಮೈಸೂರ ಅಸೋಸಿಯೇಶನ್, ಸೌ[illegible] ಇಂಡಿಯನ್ ಲೀಗಗಳ ಹೆಸರೇ ಕೇಳಬರುತ್ತಿ[illegible]** ತಮಗೆ ಕರ್ನಾಟಕಮಾತೆಯೆ ಜನ್ಮವಿತ್ತವಳು [illegible] ಇವರೆಲ್ಲರಿಗೂ ನೆನಪಿದ್ದಿದ್ದರೆ ಅದೆಷ್ಟು ಚೆನ್ನಾಗುತ್ತಿತ್ತು. ಇಷ್ಟೆಲ್ಲ ಜನರ ಕಾರ್ಯಗೌರವದಿಂದ ಕನ್ನಡನಾಡಿನ ಕೀರ್ತಿಸುಗಂಧವು ದಿಗ್ದೇಶಗಳಲ್ಲಿಯೂ ಹಬ್ಬುವ[illegible] ಅನುಕೂಲವಾಗುತ್ತಿತ್ತಲ್ಲವೆ ?

**ದುಂಡುಮೇಜಿನಲ್ಲಿ ಕರ್ನಾಟಕದ ಪ್ರಶ್ನೆ**

ಮುಂಬೈ ಮತ್ತು ಮದ್ರಾಸ ಇಲಾಖೆಗಳಲ್ಲಿ [illegible] ಕರ್ನಾಟಕಜಿಲ್ಹೆಗಳನ್ನು ಒಂದುಗೂಡಿಸಿ [illegible] ಸ್ವತಂತ್ರಪ್ರಾಂತವನ್ನು ಮಾಡಬೇಕೆಂದು ದುಂಡು ಮೇಜಿಗೆ ಶ್ರೀ. ಬಿ. ಶಿವರಾಯರು ಬರೆದು ತಿಳಿಸಿದ್ದಾರೆ. ಮುಂಬೈ ಮತ್ತು ಮದ್ರಾಸ ಇಲಾಖೆಗಳಲ್ಲಿ ಹಂ[illegible] ಹಂಚಲ್ಪಟ್ಟುದರಿಂದ ಕನ್ನಡಿಗರು ಎರಡೂ ಇಲಾಖೆಗಳಲ್ಲಿ ಅಲ್ಪಸಂಖ್ಯಾಕರಾಗಿ ಮೂಲೆಗೆ ಬಿದ್ದಿದ್ದಾರೆ. [illegible]ರಿಂದ ಇವರಲ್ಲಿ ಯಾವ ಬಗೆಯ ಪ್ರಗತಿಯೂ [illegible] ಕನ್ನಡ ಜನಾಂಗದ ಏಳ್ಗೆಯಾಗಬೇಕಾಗಿದ್ದರೆ ಕರ್ನಾಟಕ ಏಕೀಕರಣವು ಅತ್ಯವಶ್ಯಕ, ಎಂಬುದೇ ಅವರು [illegible] ತಿಳಿಸಿದುದರ ತಿರುಳು.

ಅಕಲ್ಪಿತವಾಗಿ ದುಂಡುಮೇಜಿನಲ್ಲಿ ಮೂವರು ಕನ್ನಡಿಗರಿದ್ದರೂ ಅವರಲ್ಲಿ ಶ್ರೀ. ಬಿ. ಶಿವರಾಯರು ಮುಂ[illegible] ಬಂದು ಏಕೀಕರಣಪ್ರಶ್ನೆಗೆ ಚಾಲನೆ ಕೊಟ್ಟುದಕ್ಕಾಗಿ ಕರ್ನಾಟಕವು ಅವರಿಗೆ ತುಂಬಾ ಋಣಿಯಾಗಿದೆ. ಶ್ರೀ[illegible] ರಾಯರಿಗೆ ಸರ್ ಮಿರ್ಜಾ ಅವರೂ, ಸೌ. ರಾಧಾಬಾಯಿ ಸುಬ್ಬಾರಾಯನ್‌ರವರೂ ಬೆಂಬಲವನ್ನೀಯುವರೆಂದು [illegible]

CC-0. Jangamwadi Math Collection. Digitized by eGangotri

ಸುತ್ತೇವೆ. ದುಂಡುಮೇಜಿನಲ್ಲಿ ಈ ಪ್ರಶ್ನೆಯು ಮುಂದೆ ಬಂದುದರಿಂದ ಏಕೀಕರಣವು ಆಗಿಯೆ ಬಿಟ್ಟಿತೆಂದು ಯಾರೂ ತಿಳಿದಿಲ್ಲ. ದುಂಡುಮೇಜೇ ತುಂಡು ತುಂಡಾಗುವ ಸಮಯವು ಒದಗಿದಾಗ ಇನ್ನುಳಿದ ಪ್ರಶ್ನೆಗಳ ಮಾತೇಕೆ? ಆದರೂ ದುಂಡುಮೇಜಿನಲ್ಲಿ ಕರ್ನಾಟಕ



ಶ್ರೀ ಬಿ. ಶಿವರಾಯರು

ಏಕೀಕರಣವಿಚಾರವು ಆಗಲಿಕ್ಕೆ ಬೇಕು ಎಂದು ಕನ್ನಡ ಪ್ರತಿನಿಧಿಗಳು ಆಗ್ರಹಪಡಿಸಿದರೆಂಬ ಮಾತಿನಿಂದಾದರೂ ಕನ್ನಡಿಗರ ಬೇಡಿಕೆಗಳ ಅರಿವೇ ಇಲ್ಲದ – ಉಳಿದ ತೊಡಕುಗಳ ಮಬ್ಬಿನೊಳಗಿರುವ-ಹಿಂದುಸ್ತಾನ ಸರಕಾರಕ್ಕೆ ಎಚ್ಚರ ಹುಟ್ಟುವುದೆಂದು ಕೋರುತ್ತೇವೆ.

### ಅಖಿಲ ಭಾರತೀಯ ಶಿಕ್ಷಣ ಸಮ್ಮೇಲನ

ಈ ವರ್ಷ ಬೆಂಗಳೂರಲ್ಲಿ ಸೇರತಕ್ಕದ್ದಿದೆ. ಪರಿಷತ್ತಿನ ಜೊತೆಗೆ ಶಿಕ್ಷಣಕಾರ್ಯಕ್ಕೆ ಉಪಯುಕ್ತವಾದ ಅನೇಕ ಉಪಕರಣಗಳ ವಸ್ತುಪ್ರದರ್ಶನದ ಏರ್ಪಾಟೂ ಆಗಿದೆ. ರಾಷ್ಟ್ರೀಯ ಪಾಠಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ. ಸಂಪದ್ಗಿರಿರಾಯರು ಅದರ ಕಾರ್ಯದರ್ಶಿಗಳು. ಸಮ್ಮೇಲನ ಮತ್ತು ಪ್ರದರ್ಶನಗಳು ಡಿಸೆಂಬರ ೨೮-೩೧ನೆಯ ತಾರೀಖಿನ ವರೆಗೆ ನಡೆಯುವವು. ಆ ಸಮಯದಲ್ಲಿ ಹಿಂದೂದೇಶದ ಎಲ್ಲ ಪ್ರಾಂತಗಳ ಒಳ್ಳೊಳ್ಳೆಯ ಅಧ್ಯಾಪಕರು ದಯಮಾಡಿಸತಕ್ಕವರಿದ್ದಾರೆ; ಸಿಲೋನ ಮತ್ತು ಬ್ರಹ್ಮದೇಶಗಳ ಶಿಕ್ಷಣಪ್ರೇಮಿಗಳೂ ಇದರಲ್ಲಿ ಭಾಗತಕ್ಕೊಳ್ಳುವರು. ಆ ಕಾಲಕ್ಕೆ ಕರ್ನಾಟಕದ ಅನುಭವಿಕರಾದ ಅಧ್ಯಾಪಕರೂ ಶಿಕ್ಷಣಾಭಿಮಾನಿಗಳೂ ಸಮ್ಮೇಳನದಲ್ಲಿ ಮಹತ್ವದ ಭಾಗ ವಹಿಸಿ ಅದರ ಯಶಸ್ಸಿಗೆ ಕಾರಣರಾಗುವರೆಂದು ಕೋರುತ್ತೇವೆ. ಶಿಕ್ಷಕರು ಸಮ್ಮೇಳನಕ್ಕೆ ಬರುವುದಲ್ಲದೆ ತಮ್ಮ ಹಾಗು ತಮ್ಮ ಪರಿಚಿತರಲ್ಲಿ ಇರತಕ್ಕ ಶಿಕ್ಷಣದ ಉಪಯುಕ್ತ ಸಾಧನಗಳನ್ನು–ವಿದ್ಯಾರ್ಥಿಗಳು ಮಾಡಿದುವಿರಲಿ, ಶಿಕ್ಷಕರು ಸಿದ್ಧಪಡಿಸಿದುವಿರಲಿ–ಪ್ರದರ್ಶನಕ್ಕಾಗಿ ಕಳಿಸಬೇಕೆಂದು ಸಮ್ಮೇಳನದ ಕಾರ್ಯದರ್ಶಿಗಳು ಬಿನ್ನವಿಸಿದ್ದಾರೆ. ಇವುಗಳನ್ನು ಕಳಿಸುವ ಅವಧಿಯು ನವೆ. ೨೫ರಿಂದ ಡಿಸೆಂ. ೧೦ರ ಒಳಗಾಗಿ; ಕಾರ್ಯದರ್ಶಿಗಳ ಕಡೆಗೆ ಕಳುಹಿಸುವುದು.

ಈ ಸಂದರ್ಭದಲ್ಲಿ ಸಮ್ಮೇಳನಕ್ಕೆ ಹೋಗುವ ಮತ್ತು ಸಮ್ಮೇಳನದ ಯಶಸ್ಸು ತರುವ ಕರ್ನಾಟಕ ಬಂಧುಗಳಲ್ಲಿ 'ಅಖಂಡ ಕರ್ನಾಟಕ'ದ ದೃಷ್ಟಿಯಿಂದ ಒಂದು ಬಿನ್ನಹವಿದೆ. ಮಂಗಳೂರು ಮೈಸೂರು ಬಳ್ಳಾರಿ ಧಾರವಾಡ, ಕಾರವಾರ, ಕಲ್ಬುರ್ಗಿ ಮೊದಲಾದ ಕರ್ನಾಟಕದ ಯಾವ ಭಾಗದವರೇ ಆಗಲಿ ಅವರ ಕಾರ್ಯದ ಶ್ಲಾಘನೆ, ಶ್ರೇಯಸ್ಸೆಲ್ಲ ಪರಿಣಾಮತಃ ಕನ್ನಡನಾಡಿಗೇ ಸಲ್ಲುವಂತೆ ಎಚ್ಚರಪಡುವುದು ಕರ್ತವ್ಯವಾಗಿದೆ. ಹೊರಗಿನ ಪ್ರಾಂತಗಳಿಂದ ಬಂದ ಪ್ರತಿನಿಧಿಗಳಿಗೆ ಪ್ರದರ್ಶನದಲ್ಲಾಗಲಿ, ಸಮ್ಮೇಳನದಲ್ಲಾಗಲಿ ಅಖಂಡ ಕರ್ನಾಟಕದ ಸಮ್ಯಕ್ ಕಾರ್ಯವು ಕಣ್ಣಿಗೆ ಬೀಳುವಂತೆ ಏರ್ಪಾಟವಿರುವುದು ಅವಶ್ಯಕ. 'ಬೆಳಗಾಂವಿ ಶಿಕ್ಷಕರು ನಡಿಸಿದ ಮಾನಸಶಾಸ್ತ್ರದ ಸಂಶೋಧನೆಗಳು', 'ಮಂಗಳೂರ ವಿದ್ಯಾರ್ಥಿಗಳ ಕೈಕೆಲಸ', 'ಮೈಸೂರ ಶಾಲೆಗಳ ವಿದ್ಯಾರ್ಥಿಗಳು ನಡೆಸಿದ ಕೈಬರೆಹದ ಮಾಸಪತ್ರಿಕೆಗಳು' ಎಂದು ಮುಂತಾಗಿ ಉಪಭಾಗಗಳಿಗೆ ಪ್ರಾಮುಖ್ಯತೆಯನ್ನು ಕೊಡುವುದರಿಂದ ಅಖಂಡ ಕರ್ನಾಟಕಕ್ಕೆ ದೊರೆಯಬೇಕಾದ ಕೀರ್ತಿಯ ಬೆಳಕು ದೊರೆಕದೆ ಹೋಗುವುದು. ಕರ್ನಾಟಕದ ಉಪಭಾಗಗಳು ಮಾಡಿದ ಈ ಬಗೆಯ

SRI JAGADGURU VISHWARADHYA
JNANA SIMHASAN JNANAMANDIR
LIBRARY.
Jangamwadi Math, VARANASI,
Acc. No. 3668

CC-0. Jangamwadi Math Collection. Digitized by eGangotri

ಅಕ್ಷಮ್ಯ ಅಪರಾಧವೆ ಕನ್ನಡನಾಡಿನ ಹೆಸರು ತೊಳಗಿ ಬೆಳಗದಿರುವುದಕ್ಕೆ ಕಾರಣವು. ಧಾರವಾಡ, ಮೈಸೂರು, ಮಂಗಳೂರು ಮೊದಲಾದ ಯಾವದೇ ಭಾಗದ ಹೆಸರನ್ನು ಎತ್ತುವಾಗಲಾದರೂ '**ಕರ್ನಾಟಕದ ಭಾಗವಾದ ಮೈಸೂರು**' ಎಂದು ಮುಂತಾಗಿ ಆ ವಿಭಾಗವು ಕರ್ನಾಟಕದ ಒಂದು ಅಂಗವೆಂದು ಜನರೆದುರಿಗಿಡುತ್ತ ಹೋಗುವುದು ಅಖಂಡ ಕರ್ನಾಟಕದ ಉನ್ನತಿ, ಕೀರ್ತಿಯ ದೃಷ್ಟಿಯಿಂದ ಅತ್ಯಂತ ಅವಶ್ಯಕವಾಗಿದೆ.

### ಬೆಳಗಾಂವಿ ಜಿಲ್ಹೆಯ ಸಾಹಿತ್ಯಸಮ್ಮೇಳನದ ಸ್ತುತ್ಯ ಉಪಕ್ರಮ

ಬೆಳಗಾಂವಿಯ ಕರ್ನಾಟಕಾಭಿಮಾನಿಗಳಾದ ತರುಣರು ಪಂ. ತಾರಾನಾಥಜಿಯವರ ಅಧ್ಯಕ್ಷತೆಯಲ್ಲಿ ಜಿಲ್ಹಾ ಸಾ. ಸಮ್ಮೇಳನವನ್ನು ಕಳೆದ ನವರಾತ್ರಿಯಲ್ಲಿ ನೆರವೇರಿಸಿದರು. ಕರ್ನಾಟಕದ ಉಳಿದ ಜಿಲ್ಹೆಗಳಿಗೂ ಅನುಕರಣೀಯವಾದ ಒಂದು ಉದಾಹರಣವನ್ನು ಹಾಕಿಕೊಟ್ಟರು. ಸಮ್ಮೇಳನದಲ್ಲಿ ಗೊತ್ತಾದ ನಿರ್ಣಯಗಳೂ ಬಹಳ ಮಹತ್ವದವುಗಳಾಗಿವೆ. ಒಳ್ಳೆಯ ಗ್ರಂಥಗಳನ್ನು ಅಚ್ಚುಹಾಕಿಸಿ ಬೆಳಕಿಗೆ ತರುವುದಕ್ಕಾಗಿ ಒಂದು ಪ್ರಕಟನಾ ಮಂಡಲದ ಏರ್ಪಾಟವಾದುದು ಒಳಿತಾಯ್ತು. ಬೆಳಗಾಂವಿ ಜಿಲ್ಹೆಯ ಮರಾಠಿ ಶಾಲೆಗಳಲ್ಲೆಲ್ಲ ಪ್ರಾಂತ ಭಾಷೆಯಾದ ಕನ್ನಡವನ್ನು ಓದು ಬರೆವ ಮಟ್ಟಿಗಾದರೂ ಕಲಿಸಲೇ ಬೇಕೆಂದು—ಮತ್ತು ಆ ಶಾಲೆಗಳಲ್ಲಿ ಕರ್ನಾಟಕದ ಇತಿಹಾಸ ಭೂಗೋಲಗಳನ್ನು ಅಗತ್ಯ ವಿಷಯವೆಂದು ಪರೀಕ್ಷೆಗೆ ಇಡಲೇಬೇಕೆಂದು ಸ್ಕೂಲ್‌ಬೋರ್ಡಿನವರಿಗೆ ಅರಿಕೆ ಮಾಡಿಕೊಂಡುದು ಬಹಳ ಚೆನ್ನಾಯ್ತು. ಇಂತಹ ಮಹತ್ವದ ಹಲವು ಗೊತ್ತುಗಳಾಗಿವೆ. ಇವುಗಳೆಲ್ಲವೂ ಕಾರ್ಯರೂಪದಲ್ಲಿ ಪರಿಣಮಿಸಲಿಕ್ಕೆ ಎಡೆಬಿಡದೆ ಇದಕ್ಕೆ ಕೈ ತೊಳಕೊಂಡು ಬೆಂಬತ್ತುವುದು ಅಗತ್ಯ. ಮಹಾಸಭೆಯಲ್ಲಾದ ನಿರ್ಣಯಗಳು ಬೇಗನೆ ನಡೆವಳಿಯಲ್ಲಿ ಬರುವುದಕ್ಕೆ ಸಮ್ಮೇಲನದ ಕಾರ್ಯಕಾರಿ ಮಂಡಲಿಯವರಿಗೆ ಬಿಟ್ಟೂಬಿಡದೆ ಬಹಳ ಪರಿಶ್ರಮಪಡಬೇಕಾಗುವುದೆಂಬುದಕ್ಕೆ ಸಂದೇಹವಿಲ್ಲ.

### ೧೭ನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನ

ಈ ಸಾರೆ ಕಾರವಾರದಲ್ಲಿ ಸೇರುವುದು ಗೊತ್ತಾಗಿದೆ. ಯಾರು ಅಧ್ಯಕ್ಷರೆಂಬುದು ಇನ್ನೂ ಗೊತ್ತಾಗಿಲ್ಲ. ಸ್ವಲ್ಪ ತಡವಾದರೂ ಕಾರವಾರಕ್ಕೇ ಸಮ್ಮೇಳನವು ಜರಗ... ಏರ್ಪಾಟಾದುದು ಯೋಗ್ಯವಾಯ್ತು. ಕಾರವಾ... ಕನ್ನಡ ಜಿಲ್ಹೆಯೆಂದು ಎಲ್ಲರೂ ಬಲ್ಲರು. ಆದರೆ ಕನ್ನ... ದುರ್ಲಕ್ಷ್ಯದಿಂದ ಅಲ್ಲಿ ಮರಾಠಿಯು ತನ್ನ ಕೈ-ಕಾ... ಚಾಚುತ್ತಿದೆ. ಗಂಡುಮಕ್ಕಳ ಕನ್ನಡ ಶಾಲೆಗ... ಆದರೆ ಹೆಣ್ಣುಮಕ್ಕಳಿಗಾಗಿ ಮಾತ್ರ ಮುಖ್ಯ... ಮರಾಠಿಶಾಲೆಗಳೆ! ಇದರಿಂದ ಕನ್ನಡಕ್ಕೆ ಅದ... ವಾಯುವಾದಂತಿದೆ! ಕಾರವಾರ ಜಿಲ್ಹೆಯಲ್ಲಿ. ಕಾರವಾ... ಜಿಲ್ಹೆಯು ಕರ್ನಾಟಕದ ಅಭಿಮಾನಸ್ಥಾನ. ಕರ್ನಾ... ಸಂಸ್ಕೃತಿಯ ಎಷ್ಟೋ ಅವಶೇಷಗಳನ್ನು ... ಇನ್ನೂ ಕಾಣಬಹುದು. ಕನ್ನಡ ಜಿಲ್ಹೆಯು ಕ... ಸ್ಫೂರ್ತಿಯ ಆಗರ. ರವೀಂದ್ರ ಠಾಕೂರರು ಇಲ್ಲಿ... ಸೃಷ್ಟಿಸೌಂದರ್ಯವು ತಮ್ಮ ಮನವನ್ನು ಸೆಳ... ತೆಂದು ಬರೆದಿದ್ದಾರೆ. ಇಂತಹ ನಾಡಿಗೆ ನಮ್ಮ ಪ್ರಾ... ಕವಿಗಳು, ಗಮಕಿಗಳು, ವಾಗ್ಮಿಗಳು, ಸಂಸ್ಕಾ... ಆಗಾಗ್ಗೆ ಹೋಗಿ ಅಲ್ಲಿಂದ ಸ್ಫೂರ್ತಿಯನ್ನು ಪಡೆ... ತಮ್ಮಲ್ಲಿದ್ದ ನಾಲ್ಕು ಸಂಗತಿಗಳನ್ನು ಅವರಿಗೆ ... ಸಾಂಸ್ಕೃತಿಕ ಸ್ನೇಹಸಂಬಂಧಗಳನ್ನು ದಿನದಿನಕ್ಕೆ ವೃ... ಗತ ಮಾಡಿಕೊಳ್ಳುವುದು ಕರ್ತವ್ಯವಾಗಿಲ್ಲವೆ? ಈ ಬ... ಕರ್ತವ್ಯಪರಾಙ್ಮುಖತೆಯಿಂದಲೆ ಕನ್ನಡನಾಡು ... ಗುಂದಿದೆ. ಈ ವರೆಗೆ ಆದುದಾಯ್ತು; ಮುಂದಾ... ಸುಶಿಕ್ಷಿತರೆಲ್ಲ ಅಖಂಡಕರ್ನಾಟಕದ ಪ್ರತಿಯೊಂದು ಭಾ... ದಲ್ಲಿ ಪರಸ್ಪರರೊಳಗೆ ಪರಿಚಯ, ಪ್ರೀತಿ ವಿಶ್ವಾಸ... ನೆಲೆಗೊಳುವಂತೆ ಹೋಗುವುದು, ಬರುವುದು, ನುಡಿ... ವದು, ನಡೆಸುವದು ಅಗತ್ಯವಾಗಿದೆ. ಈ ಪ್ರಕಾರ ... ವಾರದ ಸಮ್ಮೇಲನವು ಉತ್ತರ ಕನ್ನಡ ಜಿಲ್ಹೆಯ ... ಕರಣದ ಸಾಂಸ್ಕೃತಿಕ ಸಂಬಂಧವನ್ನು ಕರ್ನಾಟ... ಉಳಿದ ಭಾಗದವರಿಗೆ ದಯಪಾಲಿಸಲೆಂದು ... ಪ್ರಾರ್ಥಿಸುತ್ತೇವೆ.

### ಕರ್ನಾಟದ ಸಾಹಿತ್ಯ ಸಮ್ಮೇಳನದ ರಚನೆಯ... ಆಗಬೇಕಾದ ಮಾರ್ಪಾಟಗಳು

ಸದ್ಯಕ್ಕೆ ಎರಡು ಸೂಚನೆಗಳನ್ನು ಮಾಡಬಯಸ... ತ್ತೇವೆ. (೧) ಅಧ್ಯಕ್ಷರ ಆಯ್ಕೆಯನ್ನು ಕು... (೨) ಸಮ್ಮೇಳನದ ಸಭೆಗಳ ಅಂತರ ರಚನೆಯ ...

(೧). ಸಾಧಾರಣವಾಗಿ ೧೯೨೧-೨೨ರ ವರೆಗೆ ಸಾ...

CC-0. Jangamwadi Math Collection. Digitized by eGangotri

ಸಮ್ಮೇಳನಕ್ಕೆ ಅಧ್ಯಕ್ಷರನ್ನು ಆರಿಸುವ ಅಧಿಕಾರವು ಸಾ. ಪರಿಷತ್ತಿನವರ ಕಡೆಗೆ ಇತ್ತು. ಆದರೆ ವಿಜಾಪುರದ ಸಾ. ಸಮ್ಮೇಳನದ ಕಾಲಕ್ಕೆ ಅಲ್ಲಿಯ ಸ್ವಾಗತ ಸಮಿತಿಯವರಿಗೂ ಪರಿಷತ್ತಿನ ಅಧಿಕಾರಿಗಳಿಗೂ ಅಧ್ಯಕ್ಷರು ಯಾರಿರಬೇಕೆಂಬ ಬಗ್ಗೆ ಮತಭೇದವಾಯ್ತು. ಮುಂದೆ ಹಿಂದಿನಪದ್ಧತಿಯಲ್ಲಿ ಸ್ವಲ್ಪ ಮಾರ್ಪಾಟವಾಯ್ತು. ಸ್ವಾಗತ ಸಮಿತಿಯವರು ನಾಲ್ಕು ಹೆಸರುಗಳನ್ನು ಪರಿಷತ್ತಿನವರಿಗೆ ಸೂಚಿಸಬೇಕು; ಪರಿಷತ್ತಿನವರು ತಾವೆ ಆ ನಾಲ್ವರಲ್ಲಿ ಅನುಕ್ರಮವಾಗಿ ಒಬ್ಬರಿಲ್ಲದಿದ್ದರೆ ಒಬ್ಬರನ್ನು ಸಮ್ಮತಿ ಪಡೆದು ಅಧ್ಯಕ್ಷಸ್ಥಾನಕ್ಕೆ ಆಮಂತ್ರಿಸಬೇಕೆಂಬ ಕ್ರಮವು ರೂಢಿಯಲ್ಲಿ ಬಂದಿತು. ಈಗ ಈ ನಿಯಮದಲ್ಲಿಯೂ ಸ್ವಲ್ಪ ಬದಲಾವಣೆ ಮಾಡುವುದು ಅವಶ್ಯವಿದೆ. ಕೇವಲ ಪರಿಷತ್ತಿನವರಿಗೆ ಅಧ್ಯಕ್ಷರನ್ನು ಆರಿಸುವುದು ಹೇಗೆ ಅಸಮರ್ಪಕವೋ ಹಾಗೆಯೆ ಬರಿ ಸ್ವಾಗತ ಮಂಡಲಿಯವರೂ ತಮಗೆ ಬೇಕಾದ ನಾಲ್ಕು ಹೆಸರುಗಳನ್ನು ಮುಂದೆ ಮಾಡುವುದೂ ಸರಿಯಲ್ಲ. ಸಮ್ಮೇಳನವು **ಅಖಿಲಕರ್ನಾಟಕದ** ಸಾಹಿತಿಗಳ ಸಮ್ಮೇಲನವು. ಅದರ ಅಧ್ಯಕ್ಷನು ಅಖಿಲಕರ್ನಾಟಕದ ಸಮ್ಮತಿಯಿಂದ ಆರಿಸಲ್ಪಟ್ಟವನಾಗಿರಬೇಕು. ಇದಕ್ಕಾಗಿ ಕರ್ನಾಟಕದ ಎಲ್ಲ ಭಾಗದ ಪ್ರಾತಿನಿಧಿಕ ಸಂಸ್ಥೆಗಳಿಂದಲೂ ಆಯಾ ವರುಷದ ಅಧ್ಯಕ್ಷಸ್ಥಾನಕ್ಕೆ ಯಾರನ್ನು ಆರಿಸುವಿರೆಂದು ಕೇಳಿ, ಬಂದ ಹೆಸರುಗಳಲ್ಲಿ ಬಹುಮತ ದೊರಕಿದವರಿಗೆ ಆ ಸಾರೆಯ ಅಧ್ಯಕ್ಷಪದವಿ ದೊರೆಯಬೇಕು. ಹೀಗಾದಲ್ಲಿ ಅಧ್ಯಕ್ಷ ಪದವಿಗೆ ಇನ್ನಿಷ್ಟು ಗೌರವವು ಹೆಚ್ಚುವುದು. ಕರ್ನಾಟಕದ ಪ್ರತಿಯೊಂದು ಭಾಗದವರಿಗೆ ಸಮ್ಮೇಳನದ ಬಗೆಗೆ ವರ್ಷದಲ್ಲಿ ಒಂದು ಸಲವಾದರೂ ನೆನಪು ಬರುವುದು; ಅಲ್ಪಸ್ವಲ್ಪ ವಿಚಾರವನ್ನೂ ಮಾಡಬೇಕಾಗುವುದು. ವಿಚಾರ, ಆಚಾರದಿಂದ ಸ್ನೇಹ ಸಂಬಂಧಗಳುಂಟಾಗುವವು. ಕರ್ನಾಟಕದಲ್ಲಿ ಸಾಹಿತ್ಯ ಸಂಸ್ಕೃತಿಯನ್ನೆ ಗುರಿಯಾಗಿಟ್ಟುಕೊಂಡು ಕೆಲಸ ಮಾಡುತ್ತಿರುವ ಸಾರ್ವಜನಿಕ ಸಂಸ್ಥೆಗಳಿಗೆ ಆ ವರುಷ ಅಧ್ಯಕ್ಷರು ಯಾರಿರಬೇಕೆಂದು ತಿಳಿಸುವ ಅಧಿಕಾರವು ಇರಬೇಕು; ಈ ಸಂಸ್ಥೆಗಳು ಸಾ. ಪರಿಷತ್ತಿಗೆ ೫ ರೂಪಾಯಿಗಳ ವಾರ್ಷಿಕ ಕಾಣಿಕೆಯನ್ನು ಸಲ್ಲಿಸಬೇಕೆಂದು ಗೊತ್ತುಪಡಿಸಬಹುದು. ಅಥವಾ ಅಖಂಡಕರ್ನಾಟಕದ ಜಿಲ್ಹೆಗಳಲ್ಲಿ ಒಂದೊಂದು ಜಿಲ್ಹಾಕ್ಕೆ ಸಾ. ಪರಿಷತ್ತಿನ ಏರ್ಪಾಟವಾದರೂಸರಿ. ಬೆಳಗಾಂವಿಜಿಲ್ಹೆಯವರು ಈಗಾಗಲೆಮುಂದಡಿಯನ್ನಿಟ್ಟಿದ್ದಾರೆ. ಈ ಬಗೆಯ ಅಖಿಲಕರ್ನಾಟಕದ ಎಲ್ಲ ಜಿಲ್ಹೆಗಳಲ್ಲಿ ಸಾ. ಪರಿಷತ್ತುಗಳ ಏರ್ಪಾಟವಾಗುವವರೆಗೆ ಮೊದಲು ಸೂಚಿಸಿದ ಸಂಸ್ಥೆಗಳಿಗೆ ಅಧ್ಯಕ್ಷರ ಹೆಸರು ತಿಳಿಸುವ ಅಧಿಕಾರವು ಕೊಡಲ್ಪಡಬಹದು. ಮುಖ್ಯವಾಗಿ ಹೇಳಬೇಕಾದುದೇನೆಂದರೆ **ಅಖಿಲ ಕರ್ನಾಟಕದ ಪ್ರಾತಿನಿಧಿಕ ಸಂಸ್ಥೆಗಳ ಸಮ್ಮತಿಯಿಂದ ಕ. ಸಾ. ಸಮ್ಮೇಳನದ ಅಧ್ಯಕ್ಷರು ಆರಿಸಲ್ಪಡಬೇಕು.** ಈ ಮಾತು ಕೈಗೂಡುವಂತೆ ಏನು ಗೊತ್ತುಮಾಡಿದರೂ ಆಗಬಹುದು. ಅಂದರೆ ಸಾಹಿತ್ಯ ಪರಿಷತ್ತಿನ ಕಾರ್ಯಕಲಾಪಗಳಲ್ಲಾದರೂ ಬ್ರಿಟಿಶ್‌ಕರ್ನಾಟಕ, ಸಂಸ್ಥಾನಿಕರ ಕರ್ನಾಟಕ ಎಂದು ಇಬ್ಭಾಗವಾದ ಕರ್ನಾಟಕಮಾತೆಯ ಭಗ್ನಮೂರ್ತಿಯನ್ನು ಕಾಣುವ ದುರ್ಭಾಗ್ಯವು ಬರಲಿಕ್ಕಿಲ್ಲ; ಸಾ. ಪರಿಷನ್ಮಂದಿರದಲ್ಲಿ ಸರ್ವಾಂಗಸುಂದರಳಾದ ಕರ್ನಾಟಕದೇವಿಯ ಅಭಿನ್ನ ಮೂರ್ತಿಗೆ ಅಧಿಷ್ಠಾನವು ದೊರೆತೀತೆಂದು ಆಶೆ.

(೨). ಸಮ್ಮೇಳನವು ನಡೆಯುವುದು ಸಾಧಾರಣವಾಗಿ ಮೂರುದಿನ. ಮೊದಲ ದಿನ ಸ್ವಾಗತಾಧ್ಯಕ್ಷರ ಮತ್ತು ಸಮ್ಮೇಳನಾಧ್ಯಕ್ಷರ ಉಪನ್ಯಾಸಗಳಾಗುವವು. ಮುಂದೆ ಕವಿತೆ, ಪ್ರಬಂಧಗಳನ್ನೋದುವುದು, ವಿಷಯನಿಯಾಮಕ ಮಂಡಲಕ್ಕೆ ಒಪ್ಪಿಗೆಯಾದ ಗೊತ್ತುಗಳನ್ನು ಸಭೆಯ ಮುಂದಿಟ್ಟು ಸಮ್ಮತಿಪಡೆಯುವುದು ಮೊದಲಾದ ಕೆಲಸಗಳು ನಡೆಯುವವು. ಈ ಬಗೆಯಾಗಿ ಮೂರು ದಿನಗಳ ಸಭೆ ಸಾಗುವುದು. ಸಾಹಿತ್ಯ, ಸಂಸ್ಕೃತಿಗಳ ವಿಚಾರದಲ್ಲಿ ಜನರಿಗೆ ಏನೂ ಅಭಿರುಚಿಯೆ ಇನ್ನೂ ಉಂಟಾಗದಿದ್ದ ಕಾಲಕ್ಕೆ ಈ ಬಗೆಯ ಕಾರ್ಯಕ್ರಮವೇನೆ ಸರಿಹೋಗುತ್ತಿತ್ತು. ಆದರೆ ಇತ್ತೀಚೆ ಸಾಹಿತ್ಯ ಸಮ್ಮೇಳನ ಸಭೆಗಳಲ್ಲಿ ನಡೆಯುವ ಕೆಲಕೆಲವು ಮಾತುಗಳ ಎಳೆದಾಟವನ್ನು ನೋಡಿದರೆ ಸಭೆಯ ರಚನಾಕ್ರಮದಲ್ಲಿ ಏನಾದರೂ ಮಾರ್ಪಾಟಗಳಾಗುವುದು ಇಷ್ಟವಾಗಿದೆಯೆಂದು ಯಾರಿಗಾದರೂ ಹೊಳೆಯದಿರಲಾರದು. ಸಮ್ಮೇಳನಕ್ಕೆ ಬರುವವರಲ್ಲಿ ಕವಿಗಳೂ, ಲೇಖಕರೂ, ಅನೇಕರು; ವಿಮರ್ಶಕರೂ, ವೈಯಾಕರಣಿಗಳೂ ಎಷ್ಟೋ; ಸಂಶೋಧಕರೂ, ಸಂಗ್ರಾಹಕರೂ ಹಲರು; ಗಮಕಿಗಳೂ ವಾಗ್ಮಿಗಳೂ ಕೆಲರು. ಹೀಗೆ ನಾನಾವಿಧ ಶಕ್ತಿಯ ಜನರು ಬಂದಿದ್ದು, ಅವರಿಗೆಲ್ಲ ತಾವು ವರ್ಷಾನುವರುಷ

CC-0. Jangamwadi Math Collection. Digitized by eGangotri

ಮಾಡಿದ ಕೆಲಸವನ್ನು ಸಮ್ಮೇಳನಕ್ಕೆ ದಯಮಾಡಿಸಿದ ಎಲ್ಲರೆದುರಿಡಬೇಕೆಂಬ ಹಂಬಲವು ಪ್ರತಿಯೊಬ್ಬರಿಗೂ ಸ್ವಲ್ಪ ಹೆಚ್ಚು ಕಡಿಮೆ ಇದ್ದೇ ಇರುತ್ತದೆ. ಆದರೆ ಈಗಿನ ಸಭೆಯ ರಚನೆಯಲ್ಲಿ ಇದಕ್ಕೆ ಸಾಕಷ್ಟು ಇಂಬು ಇಲ್ಲ. ಸಭೆಯಲ್ಲಿ ಕಾವ್ಯವಾಚನವು ನಡೆದೊಡನೆ ಪ್ರಬಂಧ ಲೇಖಕರು, ವಿಮರ್ಶಕರೇ ಮೊದಲಾದವರು 'ಇದೇನು ಕವಿಸಮ್ಮೇಲನವೆ?' ಎಂದು ಕೇಳುವರು; ಪ್ರಬಂಧಗಳಲ್ಲಿ ಇತಿಹಾಸದ ವಿಷಯವಿದ್ದರೆ ವೈಯಾಕರಣಿಗೆ ತಲೆ ಬೇಸರ; ಹೀಗಾಗಿ ಸಭೆಯಲ್ಲಿ ನಡುನಡುವೆ ಗಲಾಟೆ, ಗಜಬಜ, ಪಿಸುಗುಟ್ಟುವುದಕ್ಕೆ ಮೊದಲಾಗಿ ಅಸಡ್ಡೆಗೆ ಬರುವುದು ಕೆಲಸ.

ಇದನ್ನು ತಪ್ಪಿಸುವುದಕ್ಕಾಗಿ ಹೀಗೆ ಮಾಡಬಹುದೆಂದು ತೋರುತ್ತದೆ: ಮೊದಲ ದಿನ ಮಹಾಸಭೆಗೆ ಆರಂಭವಾಗಿ ಸ್ವಾ. ಅಧ್ಯಕ್ಷರ ಮತ್ತು ಮಹಾಸಭಾಧ್ಯಕ್ಷರ ಉಪನ್ಯಾಸಗಳು ಆಗಬೇಕು; ಮುಂದೆ ಬೇರೆಬೇರೆ ಉಪಸಭೆಗಳನ್ನು ಕಲ್ಪಿಸಿ ಒಂದೊಂದರಲ್ಲಿ ಕವಿತೆ, ಇತಿಹಾಸ, ವ್ಯಾಕರಣ, ಛಂದಸ್ಸು, ನಾಟಕ, ಹಳ್ಳಿಹಾಡುಗಳು ಮೊದಲಾದ ವಿಶಿಷ್ಟವಿಷಯಗಳನ್ನೆ ತಕ್ಕೊಂಡು ಚರ್ಚೆ ವಿಚಾರವಿನಿಮಯಾದಿಗಳು ಸಾಗಬೇಕು. ಇವುಗಳು ಸಮ್ಮೇಲನ ಮಂಟಪದಲ್ಲಿ ಒಂದೇಕಾಲಕ್ಕೆ ಬೇರೆ ಬೇರೆಡೆಗಳಲ್ಲಿ ನಡೆಯಬಹುದು. ಇದರಿಂದ ಒಂದೊಂದು ವಿಷಯದಲ್ಲಿಯೂ ವಿಶೇಷ ಅಭ್ಯಾಸ ಮಾಡಿದವರಿಗೂ ಮಾಡಬೇಕೆಂದಿರುವವರಿಗೂ ಯೋಗ್ಯವಾದ ಆಸ್ಪದವು ದೊರೆಯುವುದು. ಹಣ ಕಾಲ ವೆಚ್ಚಮಾಡಿ ದೂರದಿಂದ ಸಮ್ಮೇಳನಕ್ಕೆ ಬಂದು ತಮ್ಮ ಅಭ್ಯಾಸಪರಿಶ್ರಮಗಳ ಉಪಯೋಗವು ಏನೂ ಆಗದೆ ಹಿಂದಿರುಗಬೇಕಾದುದಕ್ಕೆ ಮರುಗಿದವರೂ, ಮರುಗುವವರೂ ಉಂಟು; ಸಹಜವಾಗಿ ತಕ್ಕ ಆಸ್ಪದವು ಇಲ್ಲದಿರುವಾಗ ಸುಮ್ಮನೆ ಮುಂದು-ಮುಂದು ಮಾಡಿ ಮುಂದೆ ಬಂದಂತಾದೀತಲ್ಲವೊ ಎಂಬ ಸಂಕೋಚಭಾವದಿಂದಲೂ ಎಷ್ಟೊ ಮಹನೀಯರು ಸಮ್ಮೇಳನಗಳಿಗೆ ಬರಲು ಅಸಿಪಿಸಿಗೊಳ್ಳುತ್ತಿದ್ದಾರೆ. 'ಜಾತ್ರೆಯ ಗದ್ದಲವೇ? ಏಕಾಂತವಾಸದಲ್ಲಿಯ ಸರಸ್ವತಿ ಪೂಜೆಯೆ ಸಮಗಿರಲಿ' ಎನ್ನುವವರುಂಟು. ಸಮ್ಮೇಳನದಲ್ಲಿ ಮೊದಲ ದಿನದ ಮಹಾಸಭೆಯಾದ ಬಳಿಕ ಮೇಲ್ಕಾಣಿಸಿದಂತೆ ಒಂದೊಂದು ವಿಶಿಷ್ಟವಿಷಯದ ಬೇರೆಬೇರೆ ಉಪಸಭೆಗಳು ನಡೆಯುವ ವ್ಯವಸ್ಥೆಯಾದರೆ ಅದರಿಂದ ಅನೇಕ ಅನುಕೂಲತೆಗಳಿವೆ; ಲಾಭಗಳು; ಒಂದೊಂದು ವಿಷಯದ ವಿಶೇಷ ಅಭ್ಯಾಸ ಮಾಡಿದವ... ಗೆಲ್ಲ ಆಸ್ಪದವು ಸಿಕ್ಕುವುದು. ಅಲ್ಲದೆ ಆಯಾ ವಿಷಯ... ಗಳಲ್ಲಿ ನಿಷ್ಣಾತರಾದವರಿಗೆ ಆ ವಿಶಿಷ್ಟಸಭೆಯ ಅಧಿಪತ್ಯದ ಮಾನಕೊಟ್ಟು ಅವರ ಪರಿಶ್ರಮಗಳನ್ನು ಗೌ... ಸಿದಂತಾಗುವುದು. ಈ ನಿಮಿತ್ತದಿಂದ ವಿವಿಧ ಶಾ... ವಿದ್ವಾಂಸರ ಆಗಮನವು ಆಗಲೇಬೇಕಾಗುವುದು. ... ದೊಂದು ಶಾಖೆಯ ಆಳವಾದ ಅಭ್ಯಾಸಕ್ಕೆ ಆರಂಭ... ಗುವುದು. ಈ ಉಪಸಭೆಗಳ ಆರಂಭಕ್ಕೆ ದಿನಾಲು ಕೊ... ವೇಳೆ ಮಹಾಸಭೆಯನ್ನು ಕೂಡಿಸಿ ಅಲ್ಲಿ ಎಲ್ಲರಿಗೆ ಸಾಮಾನ್ಯವಾಗಿರತಕ್ಕ ವಿಷಯ, ಠರಾವುಗಳನ್ನು ಗೊತ್ತುಪ... ಕೊಳ್ಳಬಹುದು.

ಈ ಪ್ರಕಾರದ ಸುಧಾರಣೆಗಳಾಗುವುದರಿಂದ ಸಾ... ಸಮ್ಮೇಳನವು ವಿಶೇಷ ಯಶಸ್ವಿಯಾದೀತೆಂದೂ ಸಾ... ತ್ಯದ ವಿವಿಧಾಂಗಗಳ ಅಭ್ಯಾಸಕ್ಕೆ ಚಾಲನೆ ದೊ... ಕರ್ನಾಟಕವಾಙ್ಮಯದ ಅಭಿವೃದ್ಧಿಗೆ ಕಾರಣವಾ... ತೆಂದೂ ತೋರುತ್ತದೆ.

## ಶುಭಲಕ್ಷಣಗಳು

ಕನ್ನಡನಾಡಿಗೆ ಮುಸುಕಿದ್ದ ನಿರಾಶೆ ನಿರುತ್ಸಾ... ಕಗ್ಗತ್ತಲೆಯು ತೊಲಗಿ ಶ್ರದ್ಧೆ, ವಿಶ್ವಾಸ ಪ್ರೀತಿಗಳ... ಣೋದಯವು ಇದೀಗ ಆಗುತ್ತಿರುವ ಉದಯಕಾ... ಶುಭಲಕ್ಷಣಗಳು ಅಲ್ಲಿ ಇಲ್ಲಿ ಒಡೆದು ಕಾಣುತ್ತವೆ. ... ರಿಗೆ ವಿರೋಧಿವಿದಾರಣ ಕರ್ನಾಟಕ (ಆರಿ) ಕೇಸರಿ... ಅವತರಿಸಿರುವುದು; ನಿಜಾಂಕರ್ನಾಟಕದ ತರು... ಇತಿಹಾಸ ಸಂಶೋಧನ ಕನ್ನಡ ವಾಚನಾಲ... ಪ್ರಸಾರ ಮೊದಲಾದ ಕೆಲಸಗಳನ್ನು ಕೈಕೊಂಡುದು... ಬೆಳಗಾಂವಿಯಲ್ಲಿ ಕನ್ನಡ ಗ್ರಂಥಮಾಲೆ, ಪತ್ರಿಕೆ, ... ಗಳು ತಲೆದೋರಿ ನೆಲೆಗೊಳ್ಳುತ್ತಿರುವುದು, ನಾ... ವನ್ನು ಮಾಡಿ ಕರ್ನಾಟಕ ಸಾಹಿತ್ಯ, ಸಂಸ್ಕೃತಿಗಳ... ರುಜ್ಜೀವನ ಮಾಡಬೇಕೆಂದು ಎಲ್ಲ ಭಾಗದ ಕನ್ನ... ಹೃದಯದಲ್ಲಿಯೂ ಆಕಾಂಕ್ಷೆಯು ಮೊಳೆಯುತ್ತಿ... ವುದು, ದಕ್ಷಿಣಕನ್ನಡಜಿಲ್ಲಾ ಲೋಕಲಬೋರ್ಡಿ... ಕರ್ನಾಟಕ ಏಕೀಕರಣವಾಗಬೇಕೆಂಬ ಠರಾವು ... ದುದು, ಕರ್ನಾಟಕ ಪತ್ರಿಕೆಗಳಲ್ಲಿ ಹೆಚ್ಚಾಗಿ 'ವಿಶ್ವ... ಟಕ 'ಪ್ರಜಾಮತ' ಮತ್ತು 'ಕಂಠೀರವ'ಗಳಲ್ಲಿ ಕ...

CC-0. Jangamwadi Math Collection. Digitized by eGangotri

ಕದ ಎಲ್ಲಭಾಗಗಳ ಚಟುವಟಿಕೆ ಚಳವಳಿಗಳ ಆತ್ಮೀಯ ಭಾವದ ಸಮಾಲೋಚನೆಯು ಪ್ರಚೋದಕ ರೀತಿಯಿಂದ ಬರೆಯಲ್ಪಡುತ್ತಿರುವುದು ಇವೇ ಮೊದಲಾದುವೆಲ್ಲ ಕರ್ನಾಟಕಕ್ಕೆ ಪ್ರಾಪ್ತವಾಗಲಿರುವ ಅನುಕೂಲ್ಯದ ಪೂರ್ವ ಸೂಚನೆಗಳೆಂದು ಯಾರು ತಾನೆ ಹೇಳರು ?

## ಮಹಾತ್ಮಾಜೀಯವರು ಬೇಡುವ ೧೦ ಲಕ್ಷದ ಬಲಿದಾನ

ರಾಷ್ಟ್ರೀಯ ಮಹಾಸಭೆಯ ಏಕಮಾತ್ರ ಪ್ರತಿನಿಧಿಗಳೆಂದು ಮ. ಗಾಂಧಿಯವರು ಇಂಗ್ಲೆಂಡಿಗೆ ಹೊರಡುವುದು ನಿಶ್ಚಿತವಾಯ್ತು; ಆಗ ಅನೇಕರು 'ನಿಮ್ಮೊಡನೆ ಇನ್ನೂ ಕೆಲ ಬಲ್ಲಿದರನ್ನು ಕರೆದೊಯ್ಯಿರಿ,' ಎಂದು ಆಗ್ರಹ ಪಡಿಸಿದರು; ಗಾಂಧಿಜೀಯವರು ಪ್ರತ್ಯುತ್ತರವಾಗಿ ಹೇಳಿದ್ದೇನಂದರೆ 'ದುಂಡುಮೇಜಿನಲ್ಲಿ ನಾವು ತೋರ್ಪಡಿಸುವ ಬುದ್ಧಿವೈಭವದಿಂದ ನಮಗೆ ಸ್ವರಾಜ್ಯವು ಸಿಕ್ಕುವುದಿಲ್ಲ.' 'ನಮ್ಮ ಮುಂಗೈ ಕಸುವಿನ ಮೇಲೆ ನಾವು ಸ್ವಾತಂತ್ರ್ಯವನ್ನು ದೊರಕಿಸಬೇಕಾಗಿದೆ. ಆದಕಾರಣ ಸರದಾರ ವಲ್ಲಭಭಾಯಿ ಅಥವಾ ಪಂ. ಜವಾಹಿರಲಾಲರಂತಹ ಬಲುಗೈ ಬಂಟರನ್ನು ಇಲ್ಲಿಂದ ಇಂಗ್ಲೆಂಡಿಗೆ ಒಯ್ಯುವುದು ಜಾಣ್ಮೆಯಾಗಲಾರದು. ಇಲ್ಲಿಯ ಜನರು ಹೊತ್ತು ಬಂದರೆ ಮತ್ತೆ ಹೋರಾಡಲಿಕ್ಕೂ ಸಿದ್ಧರಿರುವುದು ಅವಶ್ಯ.'

ಮ. ಗಾಂಧಿಯವರು ವಿಲಾಯತಿಗೆ ಹೋದ ಬಳಿಕ ಅಲ್ಲಿಯ ಪ್ರಮುಖರೊಡನೆ ಮಾತುಕಥೆಗಳಾದುವು; ಮಂತ್ರಿಮಂಡಳದೊಡನೆ ಸಂಭಾಷಣಗಳು ನಡೆದುವು. 'ಹಿಂದುಸ್ಥಾನವು ಇನ್ನೂ ಸ್ವರಾಜ್ಯವನ್ನು ನಡಿಸಲಿಕ್ಕೆ ಅರ್ಹವಾಗಿಲ್ಲ; ನೀವು ಜಾತಿಜಾತಿಗಳಲ್ಲಿ ಜಗಳಾಡುತ್ತಿದ್ದೀರಿ. ಕಾರಣ ನಾವು ನಿಮ್ಮ ಯೋಗ್ಯತೆಗೆ ತಕ್ಕಂತೆ ಸ್ವರಾಜ್ಯದ ಕೆಲವು ಅಧಿಕಾರಗಳನ್ನು ಕೊಡುವೆವು. ಅದರಿಂದ ನಿಮ್ಮ ದೇಶದ ಕಲ್ಯಾಣವಿದೆ. ಸುಮ್ಮನೆ ಸ್ವಾತಂತ್ರ್ಯದ ಮುಗಿಲ ಹೂ ಬಯಸಬೇಡಿರಿ.' ಎಂದು ಹಲವೆಡೆಗಳಿಂದ ಮ. ಗಾಂಧಿಯವರಿಗೆ ಎದುರುತ್ತರಗಳು ಬಂದುವು. ಗಾಂಧಿಜೀಯವರು ಒಂದೇ ಮಾತಿನಲ್ಲಿ ಅವರನ್ನೆಲ್ಲ ಮಾತಿಲಿಗಳನ್ನಾಗಿಸುತ್ತಿರುವರು.

'ಕಳೆದ ಸತ್ಯಾಗ್ರಹ ಸಂಗ್ರಾಮವನ್ನು ನಡೆಯಿಸಿ ನಾವು ಸ್ವರಾಜ್ಯಕ್ಕೆ ಯೋಗ್ಯರಿದ್ದೇವೆಂದು ಜಗತ್ತಿಗೆ ಸಿದ್ಧಮಾಡಿತೋರಿಸಿದ್ದೇವೆ. ನಮಗೆ ಪೂರ್ಣಸ್ವರಾಜ್ಯವನ್ನು ಕೊಡುವುದಿದ್ದರೆ ಕೊಡಿರಿ. ಇಲ್ಲವಾದರೆ ಬಿಡಿ; ನಾನು ಹೊರಟೆ. **೧೦ ಲಕ್ಷ ಜನರು ಭಾರತಮಾತೆಯ ಸ್ವಾತಂತ್ರ್ಯ ಸಂಪಾದನೆಗಾಗಿ** ತಮ್ಮ ನೆತ್ತರದ ಹೊಳೆಯನ್ನು ಹರಿಸಲು ಸೊಂಟ ಕಟ್ಟಿ ನಿಂತಿದ್ದಾರೆ.' ಎಂದು ಮಹಾತ್ಮಾಜೀಯವರು ಇಂಗ್ಲೆಂಡಿನಲ್ಲೆಲ್ಲ ಗುಡುಗುತ್ತಿದ್ದಾರೆ. ಅವರಮಾತಿನ ಸಿಡಿಲಿನ ಸೊಪ್ಪುಳದ, ತೀಕ್ಷ್ಣತೆಯ ಮಿಂಚಿನ ಪರಿಣಾಮವು ಅಲ್ಲಿಯ ಜನರ ಮೇಲೆ ಆಗದೆ ಇಲ್ಲ. ಆದರೂ ಮಿ. ಚರ್ಚಿಲ್ ಪ್ರಭೃತಿಗಳು ಗಾಂಧಿಜೀಯವರನ್ನು ಬರಿಗೈಯಿಂದಲೆ ಕಳಿಸಬೇಕೆಂದು ಸಂಚುನಡಿಸಿದ್ದಾರೆ. ಮಂತ್ರಿಮಂಡಳವು ಸಾಮ್ರಾಜ್ಯಾಭಿಮಾನಿಗಳಿಂದಲೆ ತುಂಬಿರುವುದರಿಂದ ಹಾಗೆ ಆಗುವುದು ಅಸಂಭವನೀಯವಿಲ್ಲ. ಮ. ಗಾಂಧಿಯವರು ತಿರುಳಿಲ್ಲದ ಸ್ವರಾಜ್ಯದ ತೆಂಗನ್ನು ತಕ್ಕೊಳ್ಳದೆ ತಾವು ಆಡಿದುದನ್ನು ಮಾಡಿತೋರಿಸಲಿಕ್ಕೆಂದು ಬೇಗನೆ ಹಿಂದುಸ್ಥಾನಕ್ಕೆ ಮರಳಿ ಬರುವವರಿದ್ದಾರೆಂಬ ಭವಿಷ್ಯವನ್ನು ಹೇಳುವುದಕ್ಕೆ ಯಾವ ಜೋಯಿಸನೂ ಬೇಕಾಗಿಲ್ಲ.

ಮಹಾತ್ಮಾಜಿಯವರು ಮತ್ತೆ ಸತ್ಯಾಗ್ರಹವನ್ನು ಆರಂಭಿಸುವ ಪ್ರಸಂಗವು ಒದಗಿದರೆ ಆಗ ಅವರು ಅಪೇಕ್ಷಿಸಿದಂತೆ ೧೦ ಲಕ್ಷ ಜನರು ಬಲಿದಾನಕ್ಕೆ ಸಿದ್ಧರಾಗುವುದು ಶಕ್ಯವಿದೆಯೆ ಎಂದು ಅನೇಕರಿಗೆ ಸಂಶಯ. ಕಳೆದ ಸತ್ಯಾಗ್ರಹವು ಮೊದಲು ಬರಿ ೮೦ ಜನರಿಂದ ಮೊದಲಾಯಿತು. ಮುಂದೆ ೮೦ ಸಾವಿರ ಜನರಿಗೆ ಬಲಿದಾನಕ್ಕೆ ಸ್ಫೂರ್ತಿ ಕೊಟ್ಟಿತು. ಬರೀ ೬೦ ಸಾವಿರ ಸತ್ಯಾಗ್ರಹಿ ಸೆರೆಯಾಳುಗಳೆ ಇದ್ದರು. ಅವರ ಹೊರ್ತು ಹೊರಗಿನಿಂದ ಸಹಾಯ ಕೊಡುತ್ತಿದ್ದ, ಮತ್ತು ಪ್ರತ್ಯಕ್ಷ ಕಾರ್ಯ ನಡಿಸುತ್ತಿದ್ದ ಹತ್ತಿಪ್ಪತ್ತುಸಾವಿರ ಜನರ ಲೆಕ್ಕವಿಲ್ಲ.

ಹಿಂದುಸ್ಥಾನವು ಪರಕೀಯರ ಕೈಯಲ್ಲಿರುವವರೆಗೆ ಅದು ಕ್ಷಯರೋಗಿಯಂತೆ ಪ್ರತಿಕ್ಷಣವೂ ನವೆಯುತ್ತ ನಡೆದಿದೆ. ಒಂದೊಂದು ವರ್ಷವೂ ಒಂದೊಂದು ಯುಗ. ಈ ಕುತ್ತಿನಲ್ಲಿ ನವೆದು ನವೆದು ಅಳಿದುಹೋಗುವುದಕ್ಕಿಂತ ರೋಗದೊಡನೆ ಹೋರಾಡಿ ಅದರಿಂದ ಮುಕ್ತನಾಗಬೇಕು, ನಿರೋಗಿಯಾಗಬೇಕು ಒಂದು; ಇಲ್ಲದಿದ್ದರೆ ಕಾದುತ್ತ ಕಾದುತ್ತ ಮಡಿಯಬೇಕು ಇನ್ನೊಂದು. ನವೆದು ನವೆದು ಹಾಸಿಗೆ ಹಿಡಿದು ಸಾಯುವುದು ಗಂಡಸಿಗೆ ತಕ್ಕುದಲ್ಲ.



CC-0. Jangamwadi Math Collection. Digitized by eGangotri

ವೀರಮರಣವನ್ನು ಬಯಸುವ ತರುಣರಿಗೆ ಭರತಖಂಡ ದಲ್ಲಿ ಕೊರತೆಯಿಲ್ಲ. ಆದಕಾರಣ ಸತ್ಯಾಗ್ರಹವು ಇನ್ನು ಆರಂಭವಾದರೆ ಕನಿಷ್ಠ ೧೦ ಲಕ್ಷ ಜನರು ತನಗೆ ಸಿಕ್ಕದೆ ಹೋಗಲಿಕ್ಕಿಲ್ಲವೆಂದು ಮಹಾತ್ಮಾಜಿಯವರು ಎಣಿಕೆ ಹಾಕಿದ್ದಾರೆ.

ಮ. ಗಾಂಧಿಯವರ ಮಾತನ್ನು ದಿಟವಮಾಡಿ ಹಿಂದುಸ್ಥಾನದ ತರುಣರು ಜಗತ್ತಿನಿಂದ ಹೊಗಳಿಸಿಕೊಳ್ಳುವರೊ ಅಥವಾ ಸಟೆಮಾಡಿ ಜಗತ್ತಿನಿಂದಲೂ, ಮುಂದಿನ ಪೀಳಿಗೆಯಿಂದಲೂ ಶಪಿಸಿಕೊಳ್ಳುವರೊ ಬೇಗನೆ ತಿಳಿಯ ತಕ್ಕುದಿದೆ.

## ಮೈಸೂರು ಮಹಿಳಾ ಸಮ್ಮೇಳನ

ಕಳೆದ ೪, ೫, ೬ನೇ ತಾ. ಗೆ ದಾವಣಗೆರೆಯಲ್ಲಿ ಸರ್. ಪುಟ್ಟಣ್ಣಚೆಟ್ಟರ ಧರ್ಮಪತ್ನಿಯವರ ಅಧ್ಯಕ್ಷತೆಯಲ್ಲಿ ಯಶಸ್ವಿಯಾಗಿ ಜರುಗಿತೆಂಬುದು ಸಂತೋಷ ವಾರ್ತೆ. ಅಧ್ಯಕ್ಷರು ನಮ್ಮ ನಾಡು ಉಳಿದ ಮುಂದುವರಿದ ನಾಡುಗಳ ಸಾಲಿನಲ್ಲಿ ತಲೆಯೆತ್ತಿ ನಿಲ್ಲಲು ತಕ್ಕುದಾಗುವಂತೆ ನಾವು ಎಲ್ಲಬಗೆಯಿಂದಲೂ ಪ್ರಯತ್ನಿಸಬೇಕೆಂದು ಹೇಳಿದುದು ಮನನೀಯವಾಗಿದೆ. ಅವರ ಸಂಪೂರ್ಣ ಭಾಷಣದ ಪ್ರತಿಯು ನಮಗೆ ಸಿಕ್ಕದ್ದರಿಂದ ಹೆಚ್ಚಿಗೆ ಬರೆಯಲು ಸಾಧ್ಯವಿಲ್ಲ. ಸಮ್ಮೇಳನಕ್ಕೆ ಹಿಂದೂಧರ್ಮದ ಎಲ್ಲ ಬಗೆಯವರೂ ಬಂದಿದ್ದರು. ಅಲ್ಲದೆ ಮುಸಲ್ಮಾನ ಮಹಿಳೆಯರೂ ಅನೇಕರು ಆಗಮಿಸಿದ್ದರು. ಸ್ತುತ್ಯ. ಮೈಸೂರಿನಲ್ಲಿ (ಕರ್ನಾಟಕದಲ್ಲಿ ಎನ್ನಬಹುದು) ಬ್ರಾಹ್ಮಣ ಬ್ರಾಹ್ಮಣೇತರ, ಹಿಂದೂ ಮುಸಲ್ಮಾನರೆಂದು ಭೇದ ಭಾವದಿಂದ ಬೇರೆ ಬೇರೆ ಸಮ್ಮೇಳನಗಳನ್ನು ಮಾಡುತ್ತಿರುವ ಗಂಡಸರು ಈ ಪೆಣ್ಮಣಿಗಳಿಂದ ಬುದ್ಧಿಗಲಿತರೆ ಅದೆಷ್ಟು ಒಳಿತಾದೀತು?

ಮೈಸೂರಿನ ಸಂಸ್ಥಾನದ ಮಹಿಳೆಯರ ೬ ನೆಯ ಸಮ್ಮೇಳನವಿದು. ರಾಜಕೀಯ ಚಳವಳಿಗಳಲ್ಲಿ ತಾನು ಮುಂದುವರಿದುದೆಂದು ತಿಳಿದುಕೊಂಡಿರುವ ಬ್ರಿಟಿಶ ಕರ್ನಾಟಕದಲ್ಲಿ ಈ ವರೆಗೆ ಮಹಿಳೆಯರ ಒಂದೂ ಸಮ್ಮೇಳನವಿಲ್ಲ! ಮೈಸೂರ ಮಹಿಳಾ ಸಮ್ಮೇಳನದವರು ಇದನ್ನೆ ಅಖಿಲಕರ್ನಾಟಕ ಮಹಿಳಾಸಮ್ಮೇಳನವಾಗಿ ವಿಕಸಿತವಾಗುವಂತೆ ಮಾಡಿದರೆ ಚೆನ್ನಾಗುವುದು. ಆದರೆ ಇದರಿಂದ ತೊಂದರೆ ಏನೂ ಇಲ್ಲವಷ್ಟೆ?

## ದುಂಡುಮೇಜಿನ ತುಂಡುತುಂಡು

ದುಂಡುಮೇಜಿನ ಪರಿಷತ್ತು ಎಂದು ಹೆಸರು, ಬರಿ ಹೆಸರು. ಅಲ್ಲಿರುವ ಮೇಜು, ನಿಜವಾಗಿ ದುಂಡಗಿಲ್ಲ; ದುಂಡನ್ನು ಎರಡು ನಿಟ್ಟಿನಿಂದ ಎಳೆದರೆ ಆಗುವ ಆಕಾರದ್ದಂತೆ. ಅಂತೂ ಇಲ್ಲಿಂದಲೆ ಸುಳ್ಳಿಗೆ ಆರಂಭವಾಯಿತು. ಮುಂದೆ ದುಂಡುಮೇಜಿನಲ್ಲಿ ಸೇರಿದವರೆಲ್ಲ ಆಡುವುದೆಲ್ಲ ದುಂಡು ಸುತ್ತಿ. ಸರಲವಾಗಿ ಸ್ಪಷ್ಟವಾಗಿ ಹೇಳುವವರು ಕೇಳುವವರು ಒಬ್ಬರೂ ಇಲ್ಲ. ಮಿ. ಮ್ಯಾಕ್ಡೊನಾಲ್ಡರು ಈ ಓಲಗದ ಅಧಿಪತಿಗಳು! ಈ ಓಲಗದ ಎರಡು ಕೂಟಗಳಾದವು; ಮೊದಲನೆಯ ಸಲದ ಕೂಟದಲ್ಲಿ ಆಗಾಮಿ ಸ್ವರಾಜ್ಯವು ಯಾವ ಬಗೆಯದಿರಬೇಕೆಂಬ ಬಗ್ಗೆ ವಿಚಾರ ವಿನಿಮಯವೂ, ಬ್ರಿಟಿಶ ಮಂತ್ರಿಗಳು ಬೇಕಾದಂತೆ ಆಶ್ವಾಸನಗಳನ್ನು ಕೊಡುವುದೂ ಬಹಳ ಸೊಗಸಾಗಿ ಸಾಗಿತ್ತು. ಇದಕ್ಕೆ ಕಾರಣವು ಆಗ ಕೂಲಿಕಾರ ತಂಡದವರು ಮಂತ್ರಿಗಳಾಗಿದ್ದೊ, ಹಿಂದುಸ್ಥಾನದಲ್ಲಿ ನಡೆದ ಸತ್ಯಾಗ್ರಹದ ಏಟುಗಳಿಂದ ಬ್ರಿಟಿಶ ಸಾಮ್ರಾಜ್ಯ ಪುರುಷನ ಮೈಯ್ಯು ಚೆನ್ನಾಗಿ ಮೆತ್ತಗಾಗುತ್ತಿದ್ದುದೊ, ಅಥವಾ ಮ. ಗಾಂಧಿಯವರಂತಹ ಖಂಡತುಂಡಿನ ಮಾತಿನ ಗಂಡಸುಗಾರ ಗಂಡಸು ಯಾವನೂ ಆ ಓಲಗದಲ್ಲಿ ಇಲ್ಲದುದೊ ಏನೊ ತಿಳಿಯದು. ಈಗ ಎರಡನೆಯ ಅಂಕು ನಡೆದಿದೆ. ಎಲ್ಲವೂ ವಿಪರೀತ! ತಾಳಮೇಳವೆ ಇಲ್ಲ ಒಂದರೊಂದರೊಳಗೆ; ತಾಳವಿಲ್ಲದಿದ್ದರೂ 'ಲಯ'ವು ಮಾತ್ರ ಎಲ್ಲದರಲ್ಲಿ. ಈಗ ದುಂಡುಮೇಜಿನ ಲಯವೆ ಒದಗಿದೆ. ಮಂತ್ರಿಮಂಡಳದ ಅಸಲುಬದಲು, ಸತ್ಯಾಗ್ರಹದ ಶಾಂತಿ, ಆಗಾಖಾನ ಶೌಕತಾಲಿ ಪ್ರಭೃತಿ ಮುಸಲ್ಮಾನರ ಮನೆಮುರುಕುತನಗಳಿಂದ ಬ್ರಿಟಿಶ ಸರಕಾರದವರು ಒಂದು ಬೆರಲ ಮೇಲಣ ಉಗುರನ್ನು ಇನ್ನೊಂದು ಬೆರಳ ಮೇಲೆ ಮಾಡಿ ತೋರಿಸುತ್ತಲಿದ್ದಾರೆ. ಆದರೆ ಮಹಾತ್ಮಾಜಿಯವರಿಗೆ ಈ ತರದ ಹುಡುಗಾಟವು ಬಗೆಹರಿಯಲೊಲ್ಲದಾಗಿದೆ. 'ಹಿಂದುಸ್ಥಾನಕ್ಕೆ ಸ್ವರಾಜ್ಯ ಕೊಡುವುದೆ ನಮ್ಮ ಗುರಿ ಎಂದು ಎನ್ನುತ್ತಿದ್ದಿರಿ, ನೀವು ಏನು ಏನು ಕೊಡತಕ್ಕವರು ಬಿಚ್ಚು ಮಾತಿನಲ್ಲಿ ಹೇಳಿರೆಂ'ದು ಗಾಂಧಿಜೀಯವರು ಕೇಳಿದುದಕ್ಕೆ ಕದ್ದುಮುಚ್ಚಿ ಮುಸುಕಿನ ಮಾತುಗಳೆ ನಡೆದಿವೆ. ಹಿಂದೂ ಜನರು ಸಂಪೂರ್ಣ ಸ್ವಾತಂತ್ರ್ಯಕ್ಕಾಗಿ ಹಂಬಲಿಸುತ್ತಿರುವಾಗ ಪ್ರಾಂತಿಕ

CC-0. Jangamwadi Math Collection. Digitized by eGangotri

ಸ್ವಾತಂತ್ರ್ಯವನ್ನು ಕೊಡುವೆವು; ಇಷ್ಟರಿಂದ ತಣಿದು ತಣ್ಣಗಾಗಿರೆಂದು ಮಂತ್ರಿಗಳು ನಮ್ಮ ದುಂಡುಮೇಜಿಗರಿಗೆ ಕಿವಿಮಾತು ಹೇಳುತ್ತಲಿದ್ದಾರೆ! ಹಿಂದುಸ್ತಾನ ಸರಕಾರದ ಕಾರಭಾರದಲ್ಲಿ ಏನೂ ಅಧಿಕಾರವು ದೊರೆಯದೆ ಬರಿ ಪ್ರಾಂತಿಕ ಸ್ವಾತಂತ್ರ್ಯದಿಂದ ನಮ್ಮ ಹಸಿವು ಅಡಗದು ಎಂದು ಗಾಂಧಿಜೀಯವರೆ ಏಕೆ ಶಾಸ್ತ್ರಿ ಸಪ್ರುಗಳೂ ತಿಳಿಸಿದ್ದಾರೆ. ಪ್ರಾಂತಿಕ ಸ್ವಾತಂತ್ರ್ಯಕ್ಕಿಂತ ಹೆಚ್ಚಿಗೆ ಕೊಡುವ ಮನಸಿಲ್ಲ ಬ್ರಿಟಿಶ ಮಂತ್ರಿಗಳಿಗೆ. ಆಪಕಾರಣ ದುಂಡುಮೇಜು ತುಂಡರಿಸಿ ನೆಲಕ್ಕುರುಳಿದ ಸುದ್ದಿಯು ಇಷ್ಟರಲ್ಲಿಯೆ ಕೇಳಬಂದರೆ ಸೋಜಿಗವಲ್ಲ.



ದುಂಡುಮೇಜಿನ ಸಭೆ

## ಪ್ರಾಂತಿಕ ಸ್ವಾತಂತ್ರ್ಯದ ಬಚನಾಗ!

ಬಚನಾಗ ಬಲು ಸಿಹಿ; ಸಕ್ಕರೆಗಿಂತ ಸಿಹಿ ತಿನ್ನುವಾಗ. ತಿಂದ ಮೇಲೆ? ಇಲ್ಲಿ ಬಾಳಿ ಬದುಕುವ ಬಯಕೆಯೆ ಇಲ್ಲ. ಬಚನಾಗದ ಸಿಹಿ, ಕೊನೆಯ ಸುಖದ ಸವಿ. ಸುಖದ ಕೊನೆಯ ಸಿಹಿ ಮಾತ್ರ ಅಲ್ಲ. ಪ್ರಾಂತಿಕಸ್ವಾತಂತ್ರ್ಯ ಸುಖವು ಹೀಗೆ; ಇದು ಬ್ರಿಟಿಶರು ಹಿಂದೀ ಜನರಿಗೆ ಕೊಡಬೇಕೆಂದಿರುವ ಬಚನಾಗ; ನಾಗರ ಹಾವಿನ ನಂಜು; ಕಾಲಕೂಟ. ಇದನ್ನರಿತೆ ಸಪ್ರು ಶಾಸ್ತ್ರಿಗಳಂತಹ ಬ್ರಿಟಿಶ ಪಕ್ಷಪಾತಿಗಳು ಸಹ 'ಪ್ರಾಂತಿಕಸ್ವಾತಂತ್ರ್ಯದ ವರದಾನವನ್ನು ದಯಮಾಡಿ ಕೊಡಬೇಡಿರಿ; ಅದನ್ನು ಕುರಿತು ಒಂದರಗಳಿಗೆ ವಿಚಾರ-ವಿವಾದವನ್ನು ಕೂಡ ಮಾಡುವ ಮನಸಿಲ್ಲ ನಮಗೆ' ಎಂದು ಕಟ್ಟುತ್ತರ ಕೊಟ್ಟಿದ್ದಾರೆ. 'ಪ್ರಾಂತಿಕಸ್ವರಾಜ್ಯವು ಸಿಕ್ಕಿತು ಅಷ್ಟೆ ಆಯ್ತು; ಕೈಗೆ ಬಂದುದನ್ನು ಬಾಯಲ್ಲಿ ಚಲ್ಲಿ ಹೆಚ್ಚಿನದರ ಸಲುವಾಗಿ ಮತ್ತೆ ಹೋರಾಡಬಾರದೇಕೆ?' ಎಲ್ಲವೂ ಕೈಬಿಡುವಾಗ ಕೈಗೆ ಹತ್ತಿದಷ್ಟೆ ಪುಣ್ಯವಲ್ಲವೆ? ಎಂದು ಹೇಳುವ ಬುದ್ಧಿವಂತರು ಕೆಲರು ಹೊರಡಬಹುದು. ಬಂದಷ್ಟು ಬರಲಿ ಎಂದು ಸಿಕ್ಕುದಕ್ಕೆ ನಾಲಿಗೆ ಚಾಚಿದರೆ ಹೊಟ್ಟೆ ಕೆಡುವುದು. ರೋಗವುಂಟಾಗುವುದು. ಮೇಲಾಗಿ ಆಶೆಬುರುಕಹೇಸಿ ಎಂಬ ಬಿರುದುಬಾವುಲಿ ಬೇರೆ! ಹಿಂದೀ ಜನರು ಹಿಂದುಸ್ತಾನ ಸರಕಾರದ ಆಡಳಿತದಲ್ಲಿ ಕೈ ನಡೆಯದೆ ಪ್ರಾಂತಿಕ ಸ್ವಾತಂತ್ರ್ಯದ ಮಾತಿಗೆ ಒಪ್ಪಿದರೆ ಹಿಂದುಸ್ತಾನವು ಬೇರೆ ಬೇರೆ ಪ್ರಾಂತಗಳಾಗಿ ಹರಿದು ಹಂಚಲ್ಪಟ್ಟು ಮುಂದೆ ಎಂದೂ ಒಂದುಗೂಡುವ ಆಶೆ

CC-0. Jangamwadi Math Collection. Digitized by eGangotri

ಯನ್ನು ಹಿಡಿಯುವುದೇ ಜೇತ. ಏಕೆಂದರೆ ಪ್ರತಿಯೊಂದು ಪ್ರಾಂತವೂ ಸ್ವತಂತ್ರ! ಎಲ್ಲ ಪ್ರಾಂತಗಳನ್ನು ಒಂದುಗೂಡಿಸುವ ಶಕ್ತಿಯು ಹಿಂದೀಯರ ಕೈಯಲ್ಲಿಲ್ಲವೆ ಇಲ್ಲ. ಇಷ್ಟು ದಿನ ಕೂಡಿಕೊಂಡಿದ್ದ ಬ್ರಹ್ಮದೇಶವನ್ನು ಬ್ರಿಟಿಶರು ಎಷ್ಟು ಹಂಚಿಕೆಯಿಂದ ಬೇರ್ಪಡಿಸುತ್ತಿರುವರೆಂಬುದು ಕಣ್ಣೆದುರಿಗೆ ನಡೆದ ಪ್ರತ್ಯಕ್ಷ ಪ್ರಮಾಣವೆ ಇದೆ; ಅಂಗೈ ಹುಣ್ಣಿಗೆ ಕನ್ನಡಿಯೇಕೆ? ಪ್ರಾಂತಿಕಸ್ವಾತಂತ್ರ್ಯದ ತತ್ವತ್ತಕ್ಕೆ ತಲೆದೂಗಿದರೆ ನಾಳೆನಮ್ಮ ಎಲ್ಲ ಪ್ರಾಂತಗಳಿಗೂ ಆಗುವುದು ಬ್ರಹ್ಮದೇಶದ ಹಣೆಬರೆಹವೆ. ರಾಷ್ಟ್ರೀಯ ಪಕ್ಷದ ಬ್ರಹ್ಮೀ ಮುಖಂಡರು ಹಿಂದುಸ್ಥಾನದಿಂದ ತಮ್ಮ ಪ್ರಾಂತವನ್ನು ಕೊಯ್ದು ತೆಗೆಯಬಾರದೆಂದು ಬೊಬ್ಬೆಯಿಡುತ್ತಿರುವರು! ಆದರೆ ಅದೇ ಬ್ರಹ್ಮದೇಶದೊಳಗಿಂದಲೆ ಕೆಲವು ಸದ್ಗೃಹಸ್ಥರನ್ನು ಆರಿಸಿ ಅವರ ಬಾಯಿಂದಲೆ ತಮ್ಮ ಪ್ರಾಂತವು ಹಿಂದುಸ್ಥಾನದಿಂದ ಬೇರೆಯಾಗಬೇಕೆಂದು ನುಡಿಸುತ್ತಿರುವರೂ ಇಲ್ಲವೊ? ಮುಸಲ್ಮಾನರಲ್ಲಿ ಡಾ|| ಅನ್ಸಾರಿ, ಮೌ. ಆಝಾದ ಮೊದಲಾದ ರಾಷ್ಟ್ರಭಕ್ತರನ್ನು ಬಿಟ್ಟರೆ ಧರ್ಮಾಂಧರಾದ ಇಕ್ಬಾಲ ಮೊದಲಾದವರಿಗೆ ಸಿಂಧ, ಪಂಜಾಬ, ಗಡಿನಾಡು, ಬಂಗಾಲ ಪ್ರಾಂತಗಳಲ್ಲಿ ಮುಸಲ್ಮಾನರು ಬಹಳ ಇರುವದರಿಂದ ಅವು ಹಿಂದೂ ಜನರ ಬಹುಸಂಖ್ಯಾಕರಾಗಿರುವ ಪ್ರಾಂತಗಳಿಂದ ಸ್ವತಂತ್ರವಾದರೆ ಅತ್ಯವಶ್ಯಕವಾಗಿ ಬೇಕಾಗಿದೆ! ಸ್ವಾತಂತ್ರ್ಯ ದೊರೆತ ಪ್ರಾಂತವು ಸಂಯುಕ್ತಭಾರತದ ಕಟ್ಟಿನಲ್ಲಿ ತನ್ನ ಇಷ್ಟವಿದ್ದರೆ ಬರಬಹುದು ಇಲ್ಲದಿದ್ದರೆ ಬಿಡಬಹುದು, ಎಂಬ ನಿಯಮವಿರುವದರಿಂದ ಮುಸಲ್ಮಾನರು ಅಧಿಕರಾಗಿರುವ ಸಿಂಧ ಮೊದಲಾದ ಭಾಗಗಳು ಹಿಂದುಸ್ಥಾನಕ್ಕೆ ಹೊರಗೆ ಆದಂತೆಯೆ ಸರಿ. ಇನ್ನು ಉಳಿದ ಪ್ರಾಂತಗಳ ಮಾತು. ಅಲ್ಲಿ ಲಾಂಗೂಲಚಾಲನೆ ನಡಿಸಿದ ತೆರಬಾಯಿಗಳೆಷ್ಟಿಲ್ಲ? ಬರುದು ಬಾವುಲಿಗಳಿಗಾಗಿ ಸಾಹೇಬರ ಬಾಗಿಲು ಕಾಯುತ್ತಿರುವವರೆಷ್ಟು ಸಿಂತಿಲ್ಲ? ಇಂತಹ ನಾಟಕೇಡಿ ಶಿಖಂಡಿಗಳನ್ನು ಮುಂದೆ ತಂದು ತಮ್ಮ ಪ್ರಾಂತವು ಸ್ವತಂತ್ರವೆ ಇರಬೇಕೆಂದು ನುಡಿಸುವ ಚಾತುರ್ಯವನ್ನು ಬ್ರಿಟಿಶರು ಹೊಸದಾಗಿ ಕಲಿಯಬೇಕಾಗಿದೆಯೆ? ಆದುದರಿಂದ ಪ್ರಾಂತಿಕ ಸ್ವಾತಂತ್ರ್ಯವೆಂಬ ತತ್ತ್ವವು ದೇಶಹಿತವಿಘಾತಕ. ಅದನ್ನು ಸ್ವೀಕರಿಸುವದರಿಂದ ಹಿಂದುಸ್ಥಾನಕ್ಕೆ ಎಳ್ಳಷ್ಟೂ ಕಲ್ಯಾಣವಿಲ್ಲ. ೩೫ ಕೋಟಿ ಜನರ ದೇಶವನ್ನು-ಜಗತ್ತಿನ ಒಂದು ಐದಾಂಶ ಜನಸಂಖ್ಯೆಯ ದೇಶವನ್ನು-ಒತ್ತಾಯದಿಂದ ಹತ್ತಿಕ್ಕಿ ಆಳುವುದು ಬ್ರಿಟಿಶರಿಗೆ ದಿನದಿನಕ್ಕೆ ಅಸಾ[ಧ್ಯ]ವಾಗುತ್ತ ನಡೆದಿದೆ. ಇಡೀ ಹಣ್ಣು ನುಂಗುವುದು ಕ[ಷ್ಟ]ವಾದ್ದಾಗ ಕೊಯ್ದು ಹೋಳು ಮಾಡಿ ಅರಗಿಸುವುದೊ[ಂದು] ಉಪಾಯವಲ್ಲವೆ? ಹಾಗೆ ಬ್ರಿಟಿಶರು ನಡಿಸಿದ ಕಾ[ರ್ಯ]ವಿದು. ಇದಕ್ಕೆ ಹಿಂದೀ ಜನರು ಮೋಸ ಹೋಗುವ[ದು] ಎಂದಿಗೂ ಸಾಧ್ಯವಿಲ್ಲ.

## ಗಾಂಧಿಜಿಯವರ ಇಂಗ್ಲೆಂಡಿನ ಭಾಷಣಗಳು

ಇಂಗ್ಲೆಂಡಿನಲ್ಲಿ ಕಾಲಿಟ್ಟಂದಿನಿಂದ ಈ ವರೆಗೆ ಆದ ಗಾಂಧಿಯವರ ಉಪನ್ಯಾಸಗಳು ಒಂದರಿಂದೊಂ[ದು] ಉಜ್ವಲವಾಗಿವೆ. ಒಂದೊಂದು ಭಾಷಣವೂ ಇಂಗ್ಲೆಂಡಿನೊಳಗಿನ ನಮ್ಮ ವಿರೋಧಿಗಳ ಎದೆ ಬಿರಿ[ಸುವ] ವಜ್ರಾಘಾತ; ಸತ್ಯಾನ್ವೇಷಿಗಳೂ ಸತ್ಯಪಕ್ಷಪಾತಿಗ[ಳೂ] ಆದ ಸಜ್ಜನರು ನೆಚ್ಚಿ ಮೆಚ್ಚಿ ಕೇಳಿಕೊಂಡ ಕ[ರ್ಣ]ಪೀಯೂಷ; ಸ್ವಾತಂತ್ರ್ಯಾಭಿಲಾಷಿಗಳಾದ ಭಾರತೀ[ಯ]ರಿಗೆ ಸ್ಫೂರ್ತಿ ಶಕ್ತಿಗಳ ಆಗರ.

ಈ ಉಪನ್ಯಾಸಗಳೆಲ್ಲವನ್ನು ಪ್ರತಿಯೊಬ್ಬ ಕನ್ನಡಿಗನು ಓದಬೇಕು; ಓದುವುದಾಗದಿದ್ದರೆ ಓದಿಸಿ ಕೇಳಬೇ[ಕು]. ಇವುಗಳನ್ನು ಓದಿ ಓದಿ, ನೆನೆನೆನೆದು ಮನದಲ್ಲಿ ಮೂ[ಡಿಸಿ]ಕೊಳ್ಳಬೇಕು. ಇವುಗಳನ್ನೋದಿ ಅರಗಿಸಿಕೊಂ[ಡವನು] ಸಂದೇಹರಾಯನು ಶ್ರದ್ಧಾವಂತನಾಗುವನು; ನಿ[ರು]ತ್ಸಾಹಿಯು ಉತ್ಸಾಹದ ಮೂರ್ತಿಯಾಗುವನು.

ಉಪನ್ಯಾಸಗಳು ಅಮೌಲಿಕವಾಗಿದ್ದರೂ ಅಲ್ಪಮೂ[ಲ್ಯ]ದಲ್ಲಿ ಎಲ್ಲರಿಗೂ ಕೊಳ್ಳಲು ಸಾಧ್ಯವಾಗುವಂತೆ ಪುಸ್ತ[ಕ] ರೂಪದಲ್ಲಿ ಅವನ್ನು ಕನ್ನಡದಲ್ಲಿ ಯಾರಾದರೂ ಬೇಗ[ನೆ] ಪ್ರಕಟಿಸಿದರೆ ಅದೊಂದು ಒಳ್ಳೆಯ ಕೆಲಸವಾಗುವ[ದು]. ಕರ್ನಾಟಕದಲ್ಲಿ ರಾಷ್ಟ್ರೀಯ ವಿಚಾರ ಪ್ರಸಾರಕ್ಕಾ[ಗಿ] ಈ ಉಪನ್ಯಾಸಗಳು, ಮಿ. ಬ್ರೈಲ್ಸಫರ್ಡರ ಲೇಖನಗ[ಳು] ಮೊದಲಾದುವು ಸಣ್ಣ ಸಣ್ಣ ಪುಸ್ತಕ ರೂಪದಿಂದ ಇಷ್ಟ[ರ]ಲ್ಲಿಯೆ ಪ್ರಕಟವಾಗಿ ಹಳ್ಳಿಪಳ್ಳಿಗಳಲ್ಲಿಯೂ ಮನೆ ಮನೆಗೆ ಹೋಗಿ ಬೀಳಬೇಕಾಗಿದ್ದಿತು. ಇರಲಿ; ಒಳ್ಳೆಯ ಕೆಲಸ ಯಾವಾಗ ಕೈಕೊಂಡರೂ ಒಳ್ಳೆಯದೆ.

## ಮೈಸೂರ ಸಂಸ್ಥಾನದಲ್ಲಿ ನಡೆದ ಪ್ರಜಾಪೀಡೆ

ಮೈಸೂರ ಸಂಸ್ಥಾನವು ರಾಮರಾಜ್ಯವೆಂದು ಹೇಳಿ[ಸಿ]ಕೊಳ್ಳುವ ಕಾಲವೂ ಒಂದಿತ್ತು. ಆದರೆ ಈಗ ರಾವಣ[ನ] ರಾಜ್ಯವು ನಡೆದಿರುವಂತೆ ಭಾಸವಾಗುತ್ತಿರುವ ಹಾ[ಗಿದೆ]

CC-0. Jangamwadi Math Collection. Digitized by eGangotri

ಲಂಡನ್ನಿನ ಬಡವರ ಕೇರಿಯಲ್ಲಿಳಿದ



ಮಹಾತ್ಮಾಜಿಯವರ ಕಿಂಗ್ಸ್ಲೆಹಾಲ್ ಎಂಬ ವಾಸಸ್ಥಳವು



CC-0. Jangamwadi Math Collection. Digitized by eGangotri

ಎಂಬುದು ಅಲ್ಲಿಯ ಪತ್ರಿಕೆಗಳಲ್ಲಿ ಕಂಡುಬರುತ್ತಿದೆ. ಬೆಂಗಳೂರು, ಮದ್ರಾಸಿನ ರಾಷ್ಟ್ರೀಯ ಕನ್ನಡ ಪತ್ರಿಕೆಗಳಲ್ಲಿ ಮೈಸೂರ ಸಂಸ್ಥಾನದ ಪ್ರಜೆಗಳ ಗೋಳಾಟದ ಸುದ್ದಿಯಿಲ್ಲದ ಒಂದು ದಿನವಿಲ್ಲ; ಒಂದೂ ವಾರವಿಲ್ಲ! ಜನರ ಹೊಟ್ಟೆಯೊಳಗಿನ ಕಿಚ್ಚು ಹೀಗೆ ಹೆಚ್ಚಾಗುತ್ತ ನಡೆದರೆ ಸಂಸ್ಥಾನಕ್ಕೆ ಅದು ಒಂದಿಷ್ಟೂ ಕ್ಷೇಮಕರವಲ್ಲ. ಹಿಂದೂ ದೇಶದಲ್ಲಿ ಒಳ್ಳೆ ಪ್ರಗತಿಪ್ರಿಯ ಸಂಸ್ಥಾನವೆಂದು ಹೆಸರಾಗಿ ಕರ್ನಾಟಕಕ್ಕೆ ಕೀರ್ತಿತಂದ ಮೈಸೂರು ಲೋಕನಿಂದೆಗೆ ಪಕ್ಕಾಗುತ್ತಿದೆ. ಅಲ್ಲಿಯ ಅನ್ಯಾಯಗಳನ್ನು ಕುರಿತು ನಿರ್ದಾಕ್ಷಿಣ್ಯದಿಂದ 'ವಿಶ್ವಕರ್ನಾಟಕ'ವು ಬರೆದಿರುವುದೇನೆಂದರೆ:-

"ಮೈಸೂರಿಗೇನೋ ಶನಿ ವಕ್ರಿಸಿದ ಹಾಗೆಯೇ ಕಾಣಬರುತ್ತದೆ. ಅದು ಪ್ರಜೆಗಳ ದುರ್ದೈವ. ಎಲ್ಲಿ ನೋಡಿದರೂ ದುರ್ವಾಸನೆ ಬರುತ್ತಿದೆ. ಅಂತೂ ಎಲ್ಲರೂ (ಮೂಗಿರುವವರು) 'ಏನೋ ನಾರುತ್ತಿದೆ' ಎಂದು ಗೊಣಗುಟ್ಟುತ್ತಿದ್ದಾರೆ.

ಆಡಳಿತದಲ್ಲಿ ಬಿಗಿ ತಪ್ಪಿದ ಹಾಗಿದೆ. ಕೇಂದ್ರ ಸರಕಾರದ ಸದಾಶಯಗಳನ್ನು ಸಾರ್ಥಕಪಡಿಸಬೇಕಾದ ಅಧಿಕಾರಿಗಳು

(೧) ಸ್ವಾರ್ಥಪರರೂ, ನಿರಂಕುಶ ಪ್ರವರ್ತಕರೂ ಆಗುತ್ತಿದ್ದಾರೆ.

(೨) ಪ್ರಜೆಗಳಿಗೂ ಪ್ರಭುತ್ವಕ್ಕೂ ಇರುವ, ಇರಬೇಕಾದ ಮಧುರ ಬಾಂಧವ್ಯವನ್ನು ಹಲವರು ಉದ್ದಿಶ್ಯಪೂರ್ವಕವಾಗಿ ನಾಶಪಡಿಸುತ್ತಿದ್ದಾರೆ.

(೩) ಸರಕಾರದ ನೀತಿಗೆ ಸಹ ವಿರೋಧವಾಗಿ ಹಲವರು ಸ್ವೇಚ್ಛೆಯಿಂದ ವರ್ತಿಸುತ್ತಿದ್ದಾರೆ.

(೪) ಶ್ರೀಮನ್ಮಹಾರಾಜರವರ ಕೀರ್ತಿಗೆ ಕಳಂಕ ತರುತ್ತಿದ್ದಾರೆ.

ನಾವಿದನ್ನು ಮೊದಲಿಂದ ಒತ್ತಿಒತ್ತಿ ಹೇಳುತ್ತ ಬಂದಿದ್ದೇವೆ. ಆದರೂ ಅಧಿಕಾರಿಗಳ ದೌರ್ಜನ್ಯಪೂರಿತ 'ದರಬಾರು' ಅಡ್ಡಿ ಆತಂಕಗಳಿಲ್ಲದೆ ನಡೆಯುತ್ತಿದೆ. ಆರ್ಥಿಕ ದುರವಸ್ಥೆಯಿಂದ ತೊಳಲುತ್ತಿರುವ ಬಡಜನರಿಗೆ ಅಧಿಕಾರಿಗಳ ದಬ್ಬಾಳಿಕೆಯೊಂದು ಹಗಲಿರುಳೂ ಬಾಧಿಸುತ್ತಿದೆ. ಇದರಿಂದ ನಾಡಿನ ಮೂಲೆಮೂಲೆಗಳಲ್ಲೂ 'ಬಿಸಿಯುಸಿರು' 'ನಿಟ್ಟುಸಿರು,' 'ಆಕ್ರೋಶ,' 'ರೋದನ' ಕೇಳಿಬರುತ್ತಿದೆ. ಏನೂ ಇಲ್ಲವೆಂದು ಕಣ್ಣು, ಕಿವಿ ಎಲ್ಲವನ್ನೂ ಮುಚ್ಚಿಕೊಳ್ಳುವವರಿಗೆ ಏನೂ ಇಲ್ಲ! ಆದರೆ ಒಂ ಮನೆಯಲ್ಲ, ಒಂದು ಹಳ್ಳಿಯಲ್ಲ, ಒಂದು ತಾಲ್ಲೂಕಲ್ಲ ಜಿಲ್ಲೆ ಜಿಲ್ಲೆಗಳೇ ಅಶಾಂತಿಕ್ಷೇತ್ರಗಳಾಗಿವೆ. ಇದಕ್ಕೆ ಪ್ರಧಾನವಾಗಿ ಅಧಿಕಾರಿಗಳ ವಿವೇಕಶೂನ್ಯ ವರ್ತನೆ ಕಾರಣವೆಂಬುದು ಎಲ್ಲರಿಗೂ ಗೊತ್ತಾಗಿದೆ. ಒಂದು ಜಿಲ್ಲೆಯಲ್ಲಿ 'ಇಲ್ಲಿ ಆಳುವವರು ಡೆಪ್ಟಿ ಕಮಿಷನರು' ಅನ್ನುತ್ತಾರೆ ಜನರು! ಹಾಗಾದರೆ ಆಳುವವರು ಯಾ ಅದೀಗ ಪ್ರಶ್ನೆ. ಇನ್ನೊಂದು ಜಿಲ್ಲೆಗೆ ಹೋದರೆ 'ಇ ರಾಮರಾಜ್ಯವಲ್ಲ ಸ್ವಾಮಿ' ಅನ್ನುತ್ತಾರೆ. ಮತ್ತಾ ರಾಜ್ಯ? ಅದೀಗ ಪ್ರಶ್ನೆ."

ರಾಜ್ಯಕ್ಕೆ ಕಳಂಕವು ಬಂದು ಆವರಿಸುತ್ತಿರುವಾ ಈ ಹೊತ್ತಿನಲ್ಲಿ ಧರ್ಮಪರಾಯಣರೆಂದು ಪ್ರಖ್ಯಾತರಾ ಶ್ರೀಮನ್ಮಹಾರಾಜರು ಮುಂದೆಬಂದು ಜನರ ಗೋಳ ವನ್ನು ದೂರಮಾಡಿ ಜನತಾಜನಾರ್ದನನ ಆಶೀರ್ವಾ ವನ್ನು ಪಡೆಯುವರೆ?

## ಕನ್ನಡತಾಯಿಯ ಕಣ್ಣೀರು

ಕಳೆದ ಸಪ್ಟೆಂಬರ್ ಮೂವತ್ತನೆಯ ತಾರೀಕಿನ ದಿ "ಕರ್ನಾಟಕ ಭಾಷಾರತ್ನ" ಶ್ರೀ. ಪಿ. ಆರ್. ಕರಿಬಸ ಶಾಸ್ತ್ರಿಗಳು ಕೈಲಾಸವಾಸಿಗಳಾದರು. ಇದೇ ನವೆಂಬ ೩ನೆಯ ತಾರೀಕಿನ ದಿನ ಶ್ರೀ. ಎಸ್. ಎನ್. ನರಹರಯ್ಯ ಬಿ. ಎ., ಎಲ್ ಎಲ್. ಬಿ. ಅವರು ದಿವಂಗತರಾದರು. ನಮ್ಮ ಸಾಹಿತ್ಯಕ್ಷೇತ್ರದೊಳಗಿನ ಹೂಗಿಡಗಳೆರ ಮುರುಟಿ ಹೋದುವು. ಭಾಷಾಮಾತೆಗೆ ತೊಡವು ಗಳನ್ನೊದವಿಸುತ್ತಿದ್ದ ಶಿಲ್ಪಿಗಳಿಬ್ಬರು ಮಾಯವಾದರು. ನುಡಿಯ ಊಳಿಗವನ್ನು ಮಾಡಿ ನಾಡನ್ನು ಮುಂದು ವರಿಸಲೆಂದಿರುವ ಬಂಟರಿಬ್ಬರು ಅಡಗಿಬಿಟ್ಟರು.

ಶ್ರೀ. ಕರಿಬಸವಶಾಸ್ತ್ರಿಗಳು ಕನ್ನಡಿಗರಿಗೆ ಮಾಡಿ ಉಪಕಾರವು ಅಷ್ಟಿಷ್ಟಲ್ಲ. ಜೈಮಿನಿಭಾರತ, ರಾಜಶೇಖರವಿಳಾಸ, ಶಬರಶಂಕರವಿಳಾಸ, ಪ್ರಭುಲಿಂ ಚರಿತ್ರೆ ಮೊದಲಾದ ಅನೇಕ ಕನ್ನಡ ಕಾವ್ಯಗಳನ್ನು ಪ ಶೋಧಿಸಿ ಅಭ್ಯಾಸಿಗಳಿಗೆ ಅನುಕೂಲತೆ ಮಾಡಿಕೊಟ್ಟ ಶ್ರೇಯಸ್ಸು ಶಾಸ್ತ್ರಿಗಳವರಿಗೆ ಸಲ್ಲತಕ್ಕುದು. "ವೀರ ಶೈವ ಮತಪ್ರಕಾಶಿಕೆ" ಎಂಬ ಮಾಸಪತ್ರಿಕೆಯ ಸಂಚಾ ಲಕರಾಗಿದ್ದರಲ್ಲದೆ ಅನೇಕ ವೀರಶೈವ ಮತಗ್ರಂಥಗಳನ್ನು ಬರೆದು ಪ್ರಕಟಿಸಿರುವರು. ಇವರ ಸಂಸ್ಕೃತ ಕರ್ನಾಟ

CC-0. Jangamwadi Math Collection. Digitized by eGangotri

ಭಾಷಾಪಾಂಡಿತ್ಯವು ಅಸಮಾನವಾದುದು. ನಿಜವಾದ ಮಾತಿದು. "ಸತ್ತೆಮ್ಮೆಗೆ ಸೇರು ತುಪ್ಪ"ವೆಂದಂತಹದಲ್ಲ.

ಶ್ರೀ. ಎಸ್. ಎನ್. ನರಹರಯ್ಯನವರು ವಿಶ್ವವಿದ್ಯಾಲಯದ ಪದವೀಧರರು. ಅಲ್ಲದೆ ಸಂಸ್ಕೃತ ಕನ್ನಡ ವಾಙ್ಮಯದ ಸಾಗರದಲ್ಲಿ ಮುಳುಗಿ ಮುಳುಗಿ ಎದ್ದವರು. ಆ ಸಾಗರದಲ್ಲಿ ಸಿಕ್ಕ ಅದೆಷ್ಟೊ ಆಣಿಮುತ್ತುಗಳನ್ನವರು ಕನ್ನಡಿಗರಿಗೆ ಸಲ್ಲಿಸಿರುವರು. ಸಾಹಿತ್ಯಶಾಸ್ತ್ರದಂತೆಯೆ ವೇದಾಂತ, ನ್ಯಾಯ, ರಾಜಕಾರಣಗಳಲ್ಲಿಯೂ ಹೊಕ್ಕು ಹೊರಕ್ಕೆ ಬಂದವರು. ಮನದಲ್ಲಿ ಮೂಡಿದ್ದುದನ್ನು ಜನಕ್ಕೆ ತೋರಿಸಬೇಕೆಂಬ ಹವಣಿಕೆಯಲ್ಲಿರುತ್ತಿರುವಾಗಲೆ ಕಾಲನು ಇವರನ್ನು ಕಟ್ಟಿಕೊಂಡು ಹೋದನು. ಇವರು ಬರೆಯುತ್ತಲಿದ್ದ ಅನೇಕ ಕನ್ನಡ ಇಂಗ್ಲಿಷ ಗ್ರಂಥಗಳು ಅಪೂರ್ಣವಾಗಿಯೆ ಉಳಿದುಬಿಟ್ಟಿವೆಯಂತೆ. ಶ್ರೀ. ನರಹರಯ್ಯನವರಲ್ಲಿದ್ದ ವಿಶೇಷ ಗುಣವೊಂದು: ಯಾವಾಗಲೂ ಅವರೆದುರು ವಿಶಾಲ ಕರ್ನಾಟಕವೇ ನಿಂತಿರುತ್ತಿದ್ದಿತು. ಕರ್ನಾಟಕ ಏಕೀಕರಣಕ್ಕಾಗಿ ಹಂಬಲಿಸುವವರಲ್ಲಿ, ಅವರೊಬ್ಬರು. ತಾವು ಮೈಸೂರಿನವರೆಂದು ಹೇಳಿ ಹೆಮ್ಮೆ ಪಡುವವರಲ್ಲ; ಕನ್ನಡಿಗರೆಂದು ಹೆಮ್ಮೆಪಡುವವರು.

ಇವರಿಬ್ಬರ ಅಗಲಿಕೆಯಿಂದ ಸುರಿಯುತ್ತಿರುವ ಕನ್ನಡ ತಾಯಿಯ ಅಳಲಿನ ಕಂಬನಿಗಳು ಆನಂದದ ಕಂಬನಿಗಳಾಗಿ ಪರಿಣಮಿಸುವಂತೆ ನಾವೇನು ಮಾಡಬೇಕು? ಅವರಿಬ್ಬರ ಆತ್ಮಕ್ಕೆಶಾಂತಿ ದೊರೆಯಲೆಂದು ಪರಮಾತ್ಮನನ್ನು ಪ್ರಾರ್ಥಿಸಿ, ಅವರು ನಡೆದು ಹೋದ ದಾರಿಯಲ್ಲಿ ಹಿಂಡುಗೊಂಡು ನಡೆಯಬೇಕಲ್ಲವೆ?

## ನಮ್ಮ ಮಾತು

ಇದೀಗ ಜಯಕರ್ನಾಟಕದ ಹತ್ತನೆಯ ವರುಷದ ಮೊದಲ ಸಂಚಿಕೆ. ಬಡವರಾದ ತಾಯಿತಂದೆಗಳು ತಮ್ಮ ಮಡುಮಗಳನ್ನು ಇದ್ದಷ್ಟರಲ್ಲಿಯೆ ತೆಳ್ಳಗೆಬೆಳ್ಳಗೆ ಮಾಡಿ ಕಳುಹಿಸುವಂತೆ ನಾವೂ ನಮ್ಮ ಕೈಯಲ್ಲಾದ ಮಟ್ಟಿಗೆ ಇದನ್ನು ಸಿಂಗರಿಸಿ **'ವಿಶೇಷ ಸಂಚಿಕೆ'** ಎಂದು ಹೆಸರಿಟ್ಟು ವಾಚಕರೆಡೆಗೆ ಕಳುಹಿಸಿದ್ದೇವೆ. ಜಯಕರ್ನಾಟಕದ ಸಾಂಪತ್ತಿಕ ಪರಿಸ್ಥಿತಿಯು ನಮಗೂ ಜನರಿಗೂ ತೃಪ್ತಿಕರವಾಗುವಂತೆ ಕೆಲಸಮಾಡಿ ತೋರಿಸುವಷ್ಟು ಅನುಕೂಲವಾಗಿಲ್ಲವೆಂಬುದನ್ನು ವಿಷಾದದಿಂದ ಹೇಳಬೇಕಾಗಿದೆ. ಅದರಲ್ಲಿ ಈ ಸಲವಂತೂ ಎಲ್ಲೆಲ್ಲಿಯೂ ನಿರಾಶೆಯ ಮೋಡಗಳ ಗುಡುಗಾಟವೇ ಕೇಳಬರುತ್ತಲಿದೆ. ಅದಕ್ಕಾಗಿ ಜಯಕರ್ನಾಟಕವು ಅಡಿಗಡಿಗೆ ಬೆಚ್ಚಿ ಬೀಳುತ್ತಲಿದೆ. ಅದರೆದೆಯನ್ನು ಗಟ್ಟಿಗೊಳಿಸುವುದು ಕನ್ನಡಿಗರೆಲ್ಲರ ಕೈಯಲ್ಲಿದೆ. ಕನ್ನಡಿಗರ ನೆರವಿನ ನಂಬುಗೆಯಿಂದಲೆ ಜಯಕರ್ನಾಟಕವು ಮುಂದಡಿಯಿಡುತ್ತಲಿದೆ.

ಕೊಡುತ್ತೇವೆಂದು ಹೇಳಿದ ಬರೆಹಗಳಲ್ಲಿ ಕೆಲವು ಲೇಖಗಳು ಹೊತ್ತಿಗೆ ದೊರೆಯಲಿಲ್ಲ. ಕೆಲವು ಬರಲೇ ಇಲ್ಲ. ಸಾಮಾಜಿಕ ನಾಟಕವು "ನಗೆಯ ಹೊಗೆ" ಎಂಬ ಹೆಸರಿನಿಂದ ಬರೆದು ಆಗಿದ್ದರೂ ಬೇರೆಬೇರೆ ಬರೆಹಗಳಿಗೆ ಎಡೆ ಕೊಡಬೇಕಾಗಿ ಬಂದುದರಿಂದ ನಾಟಕವನ್ನು ಮುಂದಿನ ತಿಂಗಳಿಗೆ ಕಾದಿಡಲಾಯಿತು. ಇನ್ನು ಬಣ್ಣದ ಚಿತ್ರಗಳ ಮಾತು. ಕನ್ನಡಿಗರಾದ ಚಿತ್ರಶಿಲ್ಪಿಗಳಿಂದಲೆ ಚಿತ್ರಿತವಾದ ಮೂರು ಬಣ್ಣದ ಚಿತ್ರಗಳೊಂದೆರಡನ್ನು ಹಾಕಬೇಕೆಂಬ ವಿಚಾರವಿದ್ದಿತು. ಆದರೆ ಅದಕ್ಕೆ ಬೇಕಾಗುವ ಪಡಿಯಚ್ಚುಗಳ ವೆಚ್ಚವು ಜಯಕರ್ನಾಟಕದ ಯೋಗ್ಯತೆಯ ಹೊರಗಿನದಾಗಿ ಕಂಡುಬಂದುದರಿಂದ ಆ ವಿಚಾರವನ್ನು ಅಲ್ಲಿಯೇ ಕರಗಿಸಬೇಕಾಯಿತು. ಆದರೂ ಹಿಂದಿನ ಕಾಲದ ಚಿತ್ರವೊಂದನ್ನು ಎರಡುಬಣ್ಣದಲ್ಲಿ ಹಾಕುವ ಏರ್ಪಾಡನ್ನು ಮಾಡಲಾಗಿದೆ. ಈ ಮೊದಲು ಪ್ರಸಿದ್ಧಪಡಿಸಿದಂತೆ ಹೆಚ್ಚಾದ ಬಣ್ಣದ ಚಿತ್ರಗಳನ್ನು ಹಾಕಲಿಲ್ಲ. ಅದಕ್ಕಾಗಿ ವಾಚಕರಲ್ಲಿ ಕ್ಷಮೆಯನ್ನು ಕೋರುವೆವು.

"ಕಾವ್ಯಶಾಸ್ತ್ರ ವಿನೋದ" "ಸಾಹಿತ್ಯ ಚರ್ಚೆ" "ಜಿಜ್ಞಾಸೆ" ಮೊದಲಾದ ಇನ್ನೂ ಎಷ್ಟೋ ವಿಷಯಗಳು ಈ ಸಂಚಿಕೆಯಲ್ಲಿ ಬರಬೇಕಾಗಿದ್ದುವು. ಆದರೆ ಹೆಚ್ಚು ಅವಕಾಶವಿಲ್ಲದುದರಿಂದ ಅವುಗಳನ್ನೆಲ್ಲ ಎರಡನೆಯ ಸಂಚಿಕೆಯಲ್ಲಿ ಪ್ರಾರಂಭಿಸಲಾಗುವುದು. ಈ ಸಂಚಿಕೆಯ ಬಗೆಗೆ ಇನ್ನೊಂದು ಹೆಚ್ಚಿನ ಮಾತು ಹೇಳುವುದೆಂದರೆ ಇದರಲ್ಲಿ ಅಚ್ಚಾಗಿರುವ ಕವಿತೆಗಳ ವಿಷಯದಲ್ಲಿ. ಸಾಮಾನ್ಯವಾಗಿ ಬರಬೇಕಾದಷ್ಟಕ್ಕಿಂತ ಹೆಚ್ಚಾಗಿ ಈ ಸಲ ಕವಿತೆಗಳು ಬಂದಿವೆ. ವಿಶೇಷಸಂಚಿಕೆಯೊಂದನ್ನೇ ಕೊಳ್ಳುವವರು ಬಹು ಜನರು. ಅವರಿಗೆ ಕನ್ನಡ ಕವಿಗಳಲ್ಲಿಯ ಆದಷ್ಟು ಹೆಚ್ಚು ಜನರ ಕವಿತೆಯ ಪರಿಚಯವಾಗಲೆಂಬುದೊಂದೇ ಉದ್ದೇಶವಿದಕ್ಕೆ. "ಇವೇನು ಕವಿತೆಗಳು" ಎಂದು ಪುಟಗಳನ್ನು ತಿರುವಿಹಾಕಿ ಮುಂದೆ ನಡೆಯಬಾರದು. "ಕವಿಗಳು ಕಷ್ಟಪಟ್ಟು ಬರೆದಿದ್ದಾರೆ. ತಿಳಿಯದಿದ್ದರೆ ತಿಳಿದುಕೊಳ್ಳಲಿಕ್ಕೆ ನಾವೂ ಕೊಂಚ ಕಷ್ಟಪಡೋಣ" ಎಂಬ ಭಾವನೆಯಿಂದ ಎಲ್ಲವನ್ನೂ ಓದಿ ನೋಡಬೇಕು.

CC-0. Jangamwadi Math Collection. Digitized by eGangotri

ವಿಶೇಷ ಸಂಚಿಕೆಗಾಗಿ ಉತ್ತಮೋತ್ತಮ ಲೇಖನಗಳ ನ್ನೊದವಿಸಿ ಕೊಟ್ಟ ಮಹನೀಯರೆಲ್ಲರ ಉಪಕಾರವು ಮರೆಯದಂತಹದು. ಕೊಡಗಿನ ಶ್ರೀ. ಪಿ. ಎಂ. ಮುತ್ತಣ್ಣ ಅವರೂ ಸ್ವದೇಶಾಭಿಮಾನಿಯು ಕಾರ್ಯಾಲಯದವರೂ ವಿಶ್ವಕರ್ನಾಟಕದ ವ್ಯವಸ್ಥಾಪಕರೂ ಬೇರೆ ಬೇರೆ ಚಿತ್ರಗಳ ಪಡಿಯಚ್ಚುಗಳನ್ನು ಕೊಟ್ಟು ಮಾಡಿದ ನೆರವು ಮತ್ತೆಮತ್ತೆ ನೆನಪುಮಾಡಿಕೊಳ್ಳುವಂತಹದು. ವಿನೋದ ಚಿತ್ರಗಳನ್ನು ಬರೆದುಕೊಟ್ಟ–ಕೊಡಲಿರುವ–ಹೈದರಾಬಾದಿನ ಶ್ರೀ. ಬಬ್ಬಲೀಯವರ ಉಪಕಾರವು ಸ್ಮರಣೀಯವಾದುದು. ಇವರು ಬರೆದ "**ಛೀ! ದುನಿಯಾ**" "**ಮಾಲೆಗಾತಿ**" ಎಂಬ ಸುಂದರ ಚಿತ್ರಗಳು ಮುಂದೆ ಬರಲಿರುವವು. ಚಹಾಮುಸಿಯ ಚಿತ್ರವನ್ನು ಬರೆದವರಾದ ಧಾರವಾಡದ ಶ್ರೀ ಬಾಪಟ ಮಾಸ್ತರರಿಗೂ ವಂದಿಸುತ್ತೇವೆ. ಕನ್ನಡಿಗರು ಎತ್ತಿದ ಕೈಯಿಂದ ಜಯಕರ್ನಾಟಕದ ಕಡೆಗೆ ನೋಡಿದಲ್ಲಿ ಅದೂ ತನ್ನ ಶಕ್ತಿವಿಾರಿ ಅವರ ಸೇವೆಯನ್ನು ಮಾಡದೆ ಬಿಡದು. ಪರಮಾತ್ಮನು ಹೆಚ್ಚುಹೆಚ್ಚು ಜನಸೇವೆ ಮಾಡುವಂತೆ ಜಯಕರ್ನಾಟಕಕ್ಕೆ ಸಾಕಷ್ಟು ಶಕ್ತಿಯನ್ನು ಕೊಡಲೆಂದು ನಮ್ಮ ಬಗೆಯ ಬಯಕೆ.

**ಈ ವರ್ಷದ ಈ ಸಂಚಿಕೆಯಿಂದ ಜಯಕರ್ನಾಟಕವು ಪ್ರತಿಪೌರ್ಣಿಮೆಗೆ ಹೊರಡದೆ ಪ್ರತಿ ೧ನೆಯ ತಾರೀಖಿಗೆ ಹೊರಡಹತ್ತಿದೆ.** ಆ ಆ ತಿಂಗಳ ಪುಸ್ತಿಗೆಗಳನ್ನು ೧ನೆಯ ವಾರದಲ್ಲಿ ಕಳಿಸುವುದು ಒಳಿತೆಂದು ಅನೇಕರಿಂದ ಸೂಚನೆ ಬಂದುವು. ಇದಕ್ಕೆ ಅನುಕೂಲವಾಗುವಂತೆ ಪ್ರಕಟನೆಯ ದಿನವನ್ನು ೧ನೆಯ ತಾರೀಖಿಗೆ ಬದಲಿಸಲಾಗಿದೆ. ಆ ಆ ತಿಂಗಳ ಸಂಚಿಕೆ ಮುಟ್ಟದವರು ೧೫ನೆಯ ತಾರೀಖಿನೊಳಗಾಗಿ ತಮ್ಮ ಚಂದಾದಾರರ ಸಂಖ್ಯೆಯೊಂದಿಗೆ ತಿಳಿಸಬೇಕು.

## ಮುಖಚಿತ್ರ ಪರಿಚಯ

"ಹೃದಯಾಕರ್ಷಣ" ಎಂಬುದು ನಾವು ಇಟ್ಟ ಹೆಸರು. ಈ ಚಿತ್ರವನ್ನು ಬರೆದವರಾರೆಂಬುದು ಗೊತ್ತಿಲ್ಲ. ಶ್ರೀ. ಬೇಂದ್ರೆ ದತ್ತರಾಯರ ಆಪ್ತಮಿತ್ರರೊಬ್ಬರು ಹಳೆಯ ಚಿತ್ರಗಳನ್ನು ಸಂಗ್ರಹಿಸಿ ಗುಂಪಿನ ಚಿತ್ರಕಲಾ ಸಂಗ್ರಹಕ್ಕಾಗಿ ಕಳುಹಿಸಿರುವರು. ಅವುಗಳಲ್ಲಿ ಇದೂ ಒಂದು ರಮಣೀಯವಾದ ಚಿತ್ರ.

ಮೂಲಚಿತ್ರದಲ್ಲಿ ಕೆಂಪು ಹಳದಿ ನೀಲಿ ಹೊನ್ನು ಬಣ್ಣಗಳು ಕಲೆಯ ಸೊಬಗನ್ನು ಕಣ್ಣಲ್ಲಿ ತುಂಬುತ್ತಿವೆ. ಈ ಮುದ್ರಿತಚಿತ್ರದ ಎರಡೇ ಬಣ್ಣಗಳು ಆಸೊಬಗನ್ನು ಹೊಮ್ಮಿಸುವುದಕ್ಕೆ ಸಮರ್ಥವಾಗಲಾರವು. ಈ ಚಿತ್ರದ ನಿಜವಾದ ಸೊಗಸನ್ನು ನೋಡಬೇಕೆನ್ನುವವರು ಮೂಲ ಪ್ರತಿಯನ್ನೇ ನೋಡಬೇಕಾಗುವುದೆಂದು ನಮ್ಮ ಅಭಿಪ್ರಾಯ. ನಿಜವಾದ ರೂಪವನ್ನು ನೋಡಿದರೆ ಹೇಗೆ, ನೀರೊಳಗಿನ ಪಡಿನೆಳಲನ್ನು ನೋಡಿದರೆ ಹೇಗೆ, ಅಷ್ಟೊಂದು ಅಂತರವು ಮೂಲ ಚಿತ್ರದಲ್ಲಿ ಮುದ್ರಿತ ಚಿತ್ರದಲ್ಲಿ ಉಂಟು.

ಈ ಚಿತ್ರವು ರಜಪೂತ ಕಲಾಸಂಪ್ರದಾಯಕ್ಕೆ ಸೇರಿದುದು. ಕಾರ್ಗಾಲ. ದಟ್ಟವಾದ ಮೋಡವು ಬಾನನ್ನು ಬಾಸಣಿಸಿದೆ. ಆ ಕಪ್ಪುಬಣ್ಣದ ಮೋಡದ ಮೇಲೆ ಅಲ್ಲಲ್ಲಿ ಹೊಗೆಮೋಡದ ತುಂಡುಗಳು ಓಡಾಡುತ್ತಿವೆ. ನಿಸರ್ಗರಮಣಿಯು ಮೇಘರಾಜನನ್ನು ಶಾಂತಪ್ರಸನ್ನ ಮುದ್ರೆಯಿಂದ ನೋಡುತ್ತಿದ್ದಂತೆ ಎನಿಸುವುದು. ಉ ಮನೆಯ ಮುಂಬದಿಯ ಅಂಗಣ. ಮೊಗಸಾಲೆಯ ಎಡದ ಭಾಗವು ಕಾಣುತ್ತಲಿದೆ. ಪಕ್ಕದ ಗೋಡೆ ದಟ್ಟವಾದ ಕಂದುಬಣ್ಣವಿದೆ. ಎದುರು ಗೋಡೆಯ ಮೇಲೆ ಬಣ್ಣಬಣ್ಣಗಳಿಂದ ರಂಗವಲ್ಲಿ ಹಸೆಗಳನ್ನು ತೆಗೆಯಲಾಗಿದೆ. ಗೋಡೆಯ ಕೆಳಬದಿಯ ಕಾರಣೆಯ ಸುತ್ತುಗಳೂ ನೆಲಗಟ್ಟಿನ ರಚನಾ ಕೌಶಲವೂ ಮನೋಹರವಾಗಿವೆ. ಮೊಗಸಾಲೆಯ ಎಡಪಕ್ಕಕ್ಕೆ ಕೈದೋಟ. ಕೈದೋಟಕ್ಕೆ ಅಂದವಾದ ಸುತ್ತುಗೋಡೆ. ಎತ್ತರವಾಗಿ ಕಾಣುತ್ತಿರುವ ಗಿಡದಲ್ಲಿಯ ವರ್ಣಮಿಶ್ರಣ ವೈಚಿತ್ರ್ಯವು ಬೆರಗುವಡಿಸುವಂತಹದಾಗಿದೆ. ಉದ್ಯಾನದ ವೃಕ್ಷಲತೆಗಳ ಹರಿತಚ್ಛಾಯೆಯು ದೂರದವರೆಗೆ ಹಬ್ಬಿಕೊಂಡು ಕಡೆಮುಗಿಲ(ಕ್ಷಿತಿಜ)ನ್ನು ಮುಸುಕಿ ಬಿಟ್ಟಿದೆ. ಇದನ್ನು ನೋಡಿನೋಡಿದಷ್ಟೂ ಶಿಲ್ಪಿಯ ಚಾತುರ್ಯಕ್ಕೆ ತಲೆಯು ಒಲೆದಾಡಲು ತೊಡಗುವುದು.

ಅಂಗಣದಲ್ಲಿ ಹಸುವೊಂದು. ಶ್ರೀಕೃಷ್ಣನು ಅದನ್ನು ಹಿಂಡುತ್ತಿದ್ದಾನೆ. ಬಳಿಯಲ್ಲಿಯೆ ಯಶೋದೆ. ಯಶೋದೆಗೆ ಹೊಂದಿಕೊಂಡು ಹಸುವಿನ ಹಸುಳೆ ನಿಂತಿದೆ. ಚಿತ್ರಕಾರನು ಈ ನಾಲ್ಕು ಜೀವಿಗಳ ಕಣ್ನೋಟದಲ್ಲಿ ತನ್ನ ಕಲಾಜೀವವನ್ನು ತುಂಬಿ ಬಿಟ್ಟಿರುವನು. ಹಸುಳೆ ತನ್ನ ತಾಯಿ ಹಸುವಿನ ಕಡೆಗೆ ಮೆಯ್ಯನೆಲ್ಲವನ್ನೂ ಕಣ್ಣಾಗಿಸಿ

CC-0. Jangamwadi Math Collection. Digitized by eGangotri

ನೋಡುತ್ತಲಿದೆ. ತಾಯಿಯಲ್ಲದೆ ತನಗಿನ್ನೇನೂ ಬೇಡ ವೆಂಬುದನ್ನು ಹಸುಳೆಯ ಭಾವಭಂಗಿಗಳಿಂದ ಹೊರ ಸೂಸುತ್ತಲಿದೆ. ಹಸುವು ಕೃತಜ್ಞತೆಯ ನೋಟದಿಂದ ತನ್ನನ್ನು ಸಾಕಿದವಳನ್ನು ನೋಡುತ್ತಲಿದೆ. ಕೃತಜ್ಞತೆಯು ಅದರ ರೋಮರೋಮಗಳಲ್ಲಿಯೂ ತುಂಬಿ ತುಳುಕುವಂತಿದೆ. ಆಕೆ ಬಳಿಯಲ್ಲಿದ್ದ ಹಸುಳೆಯನ್ನು ಬಿಟ್ಟು ಎದುರಿನಲ್ಲಿದ್ದ ಹಸುವನ್ನು ಬಿಟ್ಟು ಹಾಲಕರೆಯುತಲಿದ್ದ ಶ್ರೀಕೃಷ್ಣನನ್ನು—ಅಕ್ಕರೆಯ ಅರಳುಗಣ್ಣಿನ ನೆಟ್ಟನೋಟದಿಂದ—ನೋಡುತಲಿದ್ದಾಳೆ. ಶ್ರೀಕೃಷ್ಣನು ಇನ್ನಾವುದನ್ನೂ ಕಣ್ಣೆಟ್ಟು ನೋಡದೆ ನೋಟವನ್ನು ಒಳಕ್ಕೆ ಹೊರಳಿಸಿ ಇದೊಂದು ಆಟವೆಂಬ ಭಾವದಿಂದ ಹಸುವನ್ನು ಕರೆಯುತ್ತಲಿದ್ದಾನೆ. ಇವರೆಲ್ಲರ ನೋಟದಾಟಕ್ಕೆ ಯಾವ ಯಾವ ಅರ್ಥವನ್ನೂ ಹಚ್ಚಲಿಕ್ಕೆ ಬರುವಂತಿದೆ. ಮೂಲ ಚಿತ್ರದ ಸೊಗಸನ್ನು ಹಣದ ಕೊರತೆಯ ಮೂಲಕ ಇದ್ದುದಿದ್ದಂತೆಯೆ ಇಲ್ಲಿ ಪಡಿಮೂಡಿಸಿ ತೋರಿಸಲಾಗದಿದ್ದುದಕ್ಕೆ ನಮಗೆ ವಿಷಾದವೆನಿಸುತ್ತಿದೆ.

# ಸಾದರ ಸ್ವೀಕಾರ

೧. ವೀರ ವಲ್ಲಭಬಾಯಿ:— ಸಂಗ್ರಾಹಕರು: ಶ್ರೀ. ಅ. ಅ. ಚಿಕ್ಕೋಡಿ, ೦-೧೦-೦, ಜೀವನ ಚರಿತ್ರೆ. ತುಂಟರ ತಂಡ ಬೆಳಗಾಂವಿ.

೨. ಋತಂಭರ:- ಶ್ರೀ. ಎ. ಸೀತಾರಾಮಯ್ಯ ೦-೧-೦, ಪೌರಾಣಿಕ ಚಿಕ್ಕಕಥೆ. ಮಿಡಲ್‌ಸ್ಕೂಲ್ ತಿಪಟೂರ.

೩. ಶಿಶುಚಂದ್ರಿಕೆ:—ಶ್ರೀ. ಬಿ. ಶ್ರೀಕಂಠಯ್ಯ Excise Head clerk, ೦-೫-೦, ಕಾವ್ಯ. ಹಾಸನ.

೪. ಸಾಹಿತ್ಯದ ಹುರುಳು:—ಶ್ರೀ. ಪು. ತಿ. ನರಸಿಂಹಾಚಾರ್ಯ. ಉಪನ್ಯಾಸ. ಕರ್ನಾಟಕ ಸಂಘ. ಗೋರೂರು.

೫. ವೀರಶೈವ ಜನರಲ್ ಲಾಯಬ್ರರಿಯ ವರದಿ. ಗದಗ.

೬. ಹಾಲೂ ಅನ್ನದಗಿಡ:—ಶ್ರೀ. ಪ್ರ. ಗೋ. ಕುಲಕರ್ಣಿ. ಬಾಲಾನಂದ ಆಣೆಯ ಗ್ರಂಥಮಾಲೆ. ಬೆಳಗಾಂವಿ.

೭. ಧರ್ಮಸಂಭವ:—ಶ್ರೀ. ತಾರಾನಾಥರಾಯರು ಬರೆದುದು ಮತ್ತು ಶ್ರೀ. ವೆಂ. ಭೀ. ಆಲೂರರು ತಮ್ಮ ನವಜೀವನ ಗ್ರಂಥಮಾಲೆಯ ೨ನೆಯ ಪುಷ್ಪವೆಂದು ಪ್ರಕಾಶಿಸಿದುದು. ಬೆಲೆ ೧। ರೂ. ಧರ್ಮದ ಮೂಲ ತತ್ತ್ವಗಳ ಚರ್ಚೆ.

೮. ಲಕ್ಷ್ಮೀಬಾಯಿ (ಕಾವ್ಯ):—'ಜೈನಮಹಿಳೆ'ಯು ಬರೆದುದು. ದಕ್ಷಿಣ ಕನ್ನಡ ಜಿಲ್ಲೆಯ ನೆಲ್ಲಿಕಾರಪೇಟೆಯ ಶ್ರೀಮತಿ ಪಣಪಿಲ ಅರಮನೆ ದೇಜಮ್ಮನವರು ಪ್ರಕಟಿಸಿದುದು. **ಬೆಲೆ:— ಸದುಪಯೋಗ.**

೯. ನಾಡಗುಡಿ:— ಶ್ರೀ. ಕೃಷ್ಣ ಹರಿ ಕುಲಕರ್ಣಿ ೦-೧-೦, ಚಿಕ್ಕಕಥೆ. ಕರ್ಮವೀರ ಮುದ್ರಾಲಯ ಧಾರವಾಡ.

೧೦. ಕನ್ನಡ ಮೇಘ ಸಂದೇಶ (ಕಾವ್ಯ), ಶ್ರೀ. ಪಂಡಿತ ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿಗಳು ರಚಿಸಿದುದನ್ನು ಶಿವಮೊಗ್ಗೆಯ ಕರ್ನಾಟಕ ಸಂಘದವರು ಪ್ರಕಟಿಸಿರುವರು, ಕೌನ ೫೦ ಪುಟಗಳು, ಬೆಲೆ ೬ ಆಣೆ. ಬೆಂಗಳೂರಿನ ರಾಮಮೋಹನ ಕಂಪನಿಯಲ್ಲಿ ಸಿಗುವವು.

೧೧. ಸಾಧನ ಔಷಧಾಲಯ ಡಾಕಾ (ಬಂಗಾಲ) ಇವರು ತಯಾರಿಸಿದ ಕೆಲವು ಔಷಧಿಗಳು ನಮಗೆ ತಲುಪಿವೆ. ಆಯುರ್ವೇದ ಶಾಸ್ತ್ರಕ್ಕನುಸರಿಸಿ ತಯಾರಿಸಿರುವರು. ಎಲ್ಲ ರೋಗಗಳಿಗೂ ಅವರಲ್ಲಿ ಔಷಧವಿದೆ. ತಮ್ಮೂರಿಂದಲೇ ರೋಗವನ್ನು ಬರೆದು ತಿಳಿಸಿದರೆ ಚಿಕಿತ್ಸೆ ಮಾಡುವರು. ರೋಗಪೀಡಿತರೆಲ್ಲ ಇವರ ಲಾಭಪಡೆಯಬೇಕು.

೧೨. ಸ್ಟ್ಯಾಂಡರ್ಡ ಕಾಫಿ ಬೆಂಗಳೂರು; ಹಸ್ತಸ್ಪರ್ಶವಿಲ್ಲದೆ ತಯಾರಿಸಿದ ಇವರ ಕಾಫಿ ಪುಡಿಯು ಅತಿ ಮಧುರವಾಗಿದೆ. ಪಾಶ್ಚಿಮಾತ್ಯ ರೂಢಿಗನುಸರಿಸಿ ಎಲ್ಲವನ್ನೂ ವಿದ್ಯುತ್ ಯಂತ್ರಗಳ ಮೇಲೆ ತಯಾರಿಸಿರುವರು. ಕಾಫಿ ಪುಡಿಯನ್ನಪೇಕ್ಷಿಸುವವರು ಇವರಿಂದ ತರಿಸಬೇಕು.

೧೩. ಎಂ. ವಿ. ನಾರಾಯಣರಾಯರು. ಸತ್ಯನಾರಾಯಣ ಪರಿಮಳ ಫ್ಯಾಕ್ಟರಿ ಮೈಸೂರ, ಇವರ ಎಲ್ಲ ಮಾಪರಿಯ ಊದಬತ್ತಿಗಳು ನಮ್ಮಲ್ಲಿಗೆ ಬಂದಿವೆ. ಎಲ್ಲವುಗಳೂ ಪರಿಮಳಪೂರಿತವಾದವುಗಳು.

CC-0. Jangamwadi Math Collection. Digitized by eGangotri

೧೪. ಶ್ರೀಕ್ಷೇತ್ರ ಕಾಶಿಯ ಎಸ್. ಯು. ಸಾರಾಮು ಣಾಚಾರ್ಯ ಮತ್ತು ಕಂಪನಿಯವರ ೧೯೩೨ ನೇ ಇಸ್ವಿ ಕ್ಯಾಲೆಂಡರು ಕೈಸೇರಿದೆ.

೧೫. ಸ್ವದೇಶಿ ಕೈಪಿಡಿ:-ಸಂಪಾದಕರು ರಾ. ಶ್ರೀ. ಹುಕ್ಕೇರಿಕರ ಮತ್ತು ಎಂ. ಗೋವರ್ಧನರಾಯರು. ಪ್ರಕಾಶಕರು:- ಅಖಿಲ ಕರ್ನಾಟಕ ಸ್ವದೇಶಿ ಸಭಾ ಧಾರವಾಡ. ಸ್ವದೇಶಿ ಉದ್ಯೋಗಗಳ ಪರಿಚಯ ಮತ್ತು ವಿಳಾಸಗಳನ್ನೊಳಗೊಂಡ ಡೆಮಿ ಆಕಾರದ ೧೫೦+೨೨ ಪುಟಗಳುಳ್ಳ ಈ ಪುಸ್ತಕಕ್ಕೆ ಬೆಲೆ ನಾಲ್ಕೇ ಆಣೆಗಳಿವೆ. ಕನ್ನಡಿಗರೆಲ್ಲರೂ ಇದರ ಲಾಭಪಡೆಯ ಬೇಕಾಗಿ ನಮ್ಮ ಕೋರಿಕೆ.

೧೬. ಸುಬೋಧ ಪತ್ರಿಕೆ (ಬೆಂಗಳೂರು) ಪ... ವರ್ಷದ ಮೊದಲ ಸಂಚಿಕೆಯು ಇದೀಗ ಕೈಸೇ... ಎಂದಿನಂತೆ ವಿವಿಧ ರುಚಿಯ ಲೇಖನಗಳಿವೆ. ಅವಿಶ್ರಾ... ವಾಗಿ ಕಷ್ಟಪಡುತ್ತಿರುವ ಶ್ರೀ ಎಂ. ರಾಮರಾ... ಕನ್ನಡಿಗರು ನೆರವಾಗಿ ೬ನೇ ವರ್ಷದಲ್ಲಿ ಪತ್ರಿಕೆ... ಅಭಿವೃದ್ಧಿಯನ್ನು ಹೆಚ್ಚಾಗಿ ಹೊಂದಲೆಂದು ನಾವು ... ಸುತ್ತೇವೆ.

**सह्याद्रीच्या पायथ्याशीं** आक्रमण १ ले आवृ... कालचे गोमांतक, आठ स्वतंत्र प्रादेशिक कथा ले. विना... सदाशिव सुखटणकर प्र. लेखिका श्री. कमलादेवि ... रु. कौन ३३० ध्रुवप्रकाशनालय १४ टाटा ब्लाक म... हिल मुंबई.

## ನಮ್ಮಲ್ಲಿಯ ಪುಸ್ತಕಗಳು

| | | |
|---|---|---|
| ಹಕ್ಕಿ ಹಾರುತಿದೆ | ಗೆಳೆಯರ ಕವಿತೆಗಳು | ೦ – ೮–೦ |
| ಮಂಗನ ಮೆರವಣಿಗೆ | ಕಥೆಗಳು | ೦–೧೦–೦ |
| ತಿರುಕರ ಪಿಡುಗು | ಹುಚ್ಚಾಟಗಳು | ೦ ೧೦–೦ |
| ಗರತಿಯ ಹಾಡು | ಜನಪದ ಸಾಹಿತ್ಯ | ೦–೧೦–೦ |
| ಬಿಸಿಲುಗುದುರೆ | ಸಣ್ಣ ಕತೆಗಳು | ೦–೧೦–೦ |
| ಹರಟೆಗಳು | ಹಾಸಪರಿಹಾಸಗಳು | ೦–೧೦–೦ |
| ಹೊನ್ನ ಕನ್ನಡ ನಾಡು(ಅಚ್ಚಿನಲ್ಲಿ) | ಕನ್ನಡ ಸಾರಸ್ವತ ಸಂಪತ್ತಿ | ೦–೧೦–೦ |
| ಉಪನಿಷದ್ರಹಸ್ಯ | | ೩ – ೦–೦ |
| ಗೀರ್ವಾಣ ಭಾಷಾ ಪ್ರವೇಶ | | ೦–೧೨–೦ |
| ಅರವಿಂದ ಘೋಷರ ಚರಿತ್ರೆ | | ೦–೧೨–೦ |
| ಜನಜೀವನ | ನಾಟಕ | ೦ – ೮–೦ |
| ಸಿದ್ಧರಾಮೇಶ್ವರ ವಿಜಯ | ,, | ೦ – ೪–೦ |
| ಪ್ರತಿಭೆ | ಕಾವ್ಯಚರ್ಚೆ | ೦ – ೪–೦ |
| ಹಳ್ಳಿಗರ ಹಾಡುಗಳು | ,, | ೦ – ೪–೦ |
| ಕೃಷ್ಣಾಕುಮಾರಿ | ಚಿಕ್ಕ ಕಾವ್ಯ | ೦ – ೩–೦ |
| ನೌಕಾಕ್ರೀಡನ | ಕಾವ್ಯ ಲಹರಿ | ೦ – ೧–೦ |
| ಭಾವದೇವಿ | ,, | ೦ – ೨–೦ |
| ಸೆಳವು | ,, | ೦ – ೨–೦ |

**ಜಯಕರ್ನಾಟಕ ಕಾರ್ಯಾಲಯ ಧಾರವಾಡ**

### ಬಹಳ ಅಗ್ಗದ ಹಳೆ... ಸಂಚಿಕೆಗಳು

**ಜಯಕರ್ನಾಟಕ**

++++++

೧ನೇ ವರ್ಷ ...
೨ನೇ ,, ...
೩ನೇ ,, ೧, ೨, ...
೪ನೇ ,, ...
೫ನೇ ,, ೩, ೪, ...
೬ನೇ ,, ೭, ...
೭ನೇ ,, ...
ಸಂಪೂರ್ಣ ಸಂಪುಟಕ್ಕೆ ೩ ರೂ. ...
೮ನೇ ,, ೨, ೭, ೮, ೯, ...
೯ನೇ ,, ೨, ೩, ೯, ೧೦, ...
ಈ ವರ್ಷಗಳ ಸಂಚಿಕೆಯೊಂದಕ್ಕೆ ...

**ಸ್ವಧರ್ಮ**

೩ನೇ ,, ೨, ೫, ೯, ೭, ...
೪ನೇ ,, ೧, ೨, ೩...
೭, ೮, ೯ ರ ಹೊರತು ಉಳಿದ ...
ಗಳ ಸಂಚಿಕೆಯೊಂದಕ್ಕೆ ಒಂದ...

CC-0. Jangamwadi Math Collection. Digitized by eGangotri

ಸ್ಯಾಂಪಲ್ ] [ ಪುಕ್ಕಟೆ.

## ಉತ್ತಮ ಮಸಿ ಚೀಟುಗಳು

ನೀಲಿ, ಕಪ್ಪು, ಕೆಂಪು, ಜಾಂಬಳಿ, ಚೀಟುಗಳು.

**ದರಗಳು**

| | |
|---|---|
| ೫೦೦ ಚೀಟುಗಳಿಗೆ | ೧-೧೪-೦ |
| ೧೦೦೦ ,, | ೩-೦-೨ |
| ೧೦೦೦೦ ,, | ೩೨-೦-೦ |

ಹೆಚ್ಚಿನ ಮಾಹಿತಿ ಬಗ್ಗೆ ಪತ್ರವ್ಯವಹಾರ ಮಾಡಿರಿ.

**ಕರ್ನಾಟಕ ಇಂಕ ಕಂಪನಿ,**

ಬಾಗಲಕೋಟಿ

## ದ್ವೈತಾಚಾರ್ಯ ಶ್ರೀಮನ್ಮಧ್ವರ

"ವಿಷ್ಣುತತ್ವನಿರ್ಣಯ"ವೆಂಬ ಹೆಸರುಗೊಂಡ ಪುಸ್ತಕವನ್ನು ಪ್ರಕಟಿಸಲಾಗಿದೆ. ಅದ್ವೈತಖಂಡನ ಮತ್ತು ದ್ವೈತ ಪ್ರತಿಪಾದನ ಇವೆರಡನ್ನೂ ಒಳಗೊಂಡ ದ್ವೈತಗ್ರಂಥಗಳಲ್ಲಿ ಇದೊಂದು ರತ್ನವು.

ಇದಕ್ಕೆ ಕಾರವಾರದಲ್ಲಿಯ ಸಬ್‌ಜಜ್ ಪೋದ್ದಾರ ಬಳವಂತರಾಯರು ಉಪೋದ್ಘಾತವನ್ನು ಇಂಗ್ರೇಜಿಯಲ್ಲಿ ಮತ್ತು ಪ್ರಕಾಶಕರು ದ್ವೈತಸಾರವನ್ನು ಕನ್ನಡದಲ್ಲಿ, ಬರೆದಿದ್ದಾರೆ. ಪುಸ್ತಕದ ಬೆಲೆ ಎಂಟಾಣೆ ಮಾತ್ರ.

(ಟಪಾಲ ಖರ್ಚು ಬೇರೆ)

ಪ್ರತಿಗಳು ದೊರಕುವ ಪತ್ತೆ:- (ಪ್ರಕಾಶಕ)

**ವೆಂಕಟರಾವ್ ಮೊಕಾಸಿ, ಎಮ್. ಎ., ಕಾರವಾರ**

## ಎಚ್ಚರಿಕೆ

ಇದೇ ಸುಖದ ಹಾದಿ. ಮುಂದಾಗುವ ಕಷ್ಟನಷ್ಟಗಳನ್ನು ಇಂದೇ ತಿಳಿದು ಎಚ್ಚರಿಕೆಯಾಗಿದ್ದರೆ ಪ್ರಪಂಚದ ದುಃಖವು ಅರ್ಧಕ್ಕರ್ಧವಾದರೂ ಕಡಿಮೆಯಾಗಿಯೇ ತೀರಬೇಕು.

ಆ ಎಚ್ಚರಿಕೆಯನ್ನು ಕೊಡಲಿಕ್ಕೆ ದೊಡ್ಡ ದೊಡ್ಡ ಋಷಿ ಆಚಾರ್ಯರು **ಜ್ಯೋತಿಷ್ಯವನ್ನು** ಬರೆದಿಟ್ಟರು.

ನಿಮ್ಮ ಜನ್ಮಕುಂಡಲಿಯನ್ನಾಗಲಿ, ಹುಟ್ಟಿದ ವರ್ಷ ಸಮಯಗಳನ್ನಾಗಲಿ ನಮಗೆ ಬರೆಯಿರಿ. ಕೂಡಲೆ ನಿಮ್ಮ ಭವಿಷ್ಯವನ್ನು ಬರೆದು ನಮ್ಮ **ಭಾನುಪ್ರಸಾದರು** ತಿಳಿಸುವರು.

೫ ರೂ. ಗಳಿಗೆ ಈ ಲಾಭವನ್ನು ಪಡೆಯಬಹುದು.

**ಆದರೆ**

"ಪ್ರೇಮ" ಚಂದಾದಾರರಿಗೆ ೧॥ ರೂ. ಮಾತ್ರವೇ.

ವಿಳಾಸ:- **ಭಾನುಪ್ರಸಾದ ಪ್ರೇಮಾಯತನ**

ತುಂಗಭದ್ರಾ (ಬಳ್ಳಾರಿ ಜಿಲ್ಲಾ)

**"ಭಾನುಪ್ರಸಾದ"ರ ಕೆಲವು ಪ್ರಶಂಸೆಗಳು**

(೧) ಭವಿಷ್ಯವನ್ನು ಹೇಳುವ ಇವರ ಶಕ್ತಿ ಬೆರಗಾಗುವಂತೆ ಮಾಡುತ್ತದೆ........"

**ದೇಶಬಂಧು ಸಿ. ಆರ್. ದಾಸ್.**

(೨) "ಅತ್ಯದ್ಭುತವಾದ ಸತ್ಯವಕ್ತರಾದ ಜ್ಯೋತಿಷ್ಯ ವಿಜ್ಞಾನಿಗಳಿವರು........"

**ಶ್ರೀ. ಸರೋಜಿನಿದೇವಿ**

## ಲಂಡನ್ ಮೊದಲಾದ ಅನೇಕ ದೇಶಗಳಲ್ಲಿ ಬಹುಮಾನ ಹೊಂದಿರುವ ಅತ್ಯುತ್ತಮವಾದ ಸುಗಂಧ ದ್ರವ್ಯಗಳು

೪೦ ವರ್ಷದ ಅನುಭವದಿಂದ ತಯಾರಿಸುತ್ತಿರುವ ಅಗರ್‌ಬತ್ತಿಗಳು ಮತ್ತು ಇತರ ಯಲ್ಲ ವಿಧವಾದ ಸುಗಂಧ ದ್ರವ್ಯಗಳು ನಮ್ಮಲ್ಲಿ ಸುಲಭ ಕ್ರಯಕ್ಕೆ ದೊರೆಯುತ್ತೆ. ಕ್ಯಾಟಲಾಗಿಗೆ ಬರೆಯಿರಿ.

**ಟಿ. ಯಲ್. ಉಪಾಧ್ಯಾಯ ಅಂಡ ಸನ್ಸ**

**ಸುಗಂಧಕಾರೀ**

**ಮೈಸೂರು**

ನಿಮಗೆ ಅತ್ಯಂತ ರುಚಿಕರವೂ ಪರಿಶುದ್ಧವೂ ಆದ ಕಾಫಿಪುಡಿ ಬೇಕೋ?

ಹಾಗಾದರೆ

## ಸ್ಟಾಂಡರ್ಡ್ ಕಾಫಿ ಕಂಪನಿ

ಚಿಕ್ಕಪೇಟೆ ಬೆಂಗಳೂರುಸಿಟಿ— **ಇವರಿಗೆ ಬರೆಯಿರಿ.**

CC-0. Jangamwadi Math Collection. Digitized by eGangotri

# ಪರಿವಿಡಿ






ಕಾಫಿಪುಡಿ ಎಂದರೆ ಎಲ್ಲಾ ಕಾಫಿ ಪುಡಿಯೇ ? ಕುಡಿದರೆ ಕುಡಿಯಬೇಕು

**ಶ್ರೀ ದತ್ತಾತ್ರೇಯ ಕಾಫಿ ವರ್ಕ್ಸ್**

ಮೈಸೂರು ರೋಡು, ಬೆಂಗಳೂರ ಸಿಟಿ.

ಇವರಲ್ಲಿ ಹಸ್ತ ಸ್ಪರ್ಶವಿಲ್ಲದೇನೇ ತಯಾರಾದ ಉತ್ತಮ ಗಿರಿಕಾಫಿ ಇಂದ ಮಾಡಿದ ಕಾಫಿಯನ್ನು!! ಒಂದು ಸಾರಿ ಆರ್ಡರ್ ಕೊಟ್ಟು ನೋಡಿದರೆ ಎಲ್ಲಾ ಪ್ರದರ್ಶನಗಳಲ್ಲಿಯೂ ಭಂಗಾರ ಮತ್ತು ಬೆಳ್ಳಿ ಪದಕಗಳನ್ನೂ ಅಭಿನಂದನ ಪತ್ರಗಳನ್ನೂ ಇವರಿಗೆ ಕೊಟ್ಟಿರುವದು ಏಕೆಂಬುದು ಗೊತ್ತಾಗುತ್ತೆ.

ಹಳೇತರಗುಪೇಟೆಯಲ್ಲಿ ಇವರ ಬ್ರಾಂಚೊಂದಿದೆ.


CC-0. Jangamwadi Math Collection. Digitized by eGangotri



ಛೀ ದುನಿಯಾ !

ಚಿತ್ರಶಿಲ್ಪಿ:- ಬಾಬಲಿ ಹೈದರಾಬಾದ

CC-0. Jangamwadi Math Collection. Digitized by eGangotri





ಸಂಪುಟ ೧೦ | ಪ್ರಜೋತ್ಪತ್ತಿ ಸಂವತ್ಸರ, ಹೊಸತಿಲ ಹುಣ್ಣಿವೆ | ಸಂಚಿಕೆ ೨

ಚಾಲುಕ್ಯ ವಿಕ್ರಮ ವರ್ಷ ೮೫೭


# ಕೆಸರೊಳಗಿನ ಕಮಲ

ಮಧುರಚೆನ್ನ

೧

ಏಳು ಕಮಲವೆ, ನಿನ್ನ
ಯಾವ ಕರ್ಮದಿ ಬಂದು
ಇಂಥ ಕೆಸರಲ್ಲಿ ಬಿದ್ದೇeee?

ಹೇಳು ಕಮಲವೆ, ನಿನ್ನ
ಯಾವ ಪುಣ್ಯದಿ ಮತ್ತೆ
ಮೊಗವೆತ್ತಿ ಮೇಲಕ್ಕೆದ್ದೇeeee? ॥

೨

ಅಚ್ಛ ಮಾನಸದಲ್ಲಿ
ಇಚ್ಛೆಯಿಂದಿರಬಹುದು
ಏಸೊ ಯುಗಯುಗದ ವರೆಗೆ

ರೊಜ್ಜುಗೊಳದಲ್ಲಿ ನೀ
ಬಿದ್ದು ಬದುಕಿದಿಯಲ್ಲ!
ಚಿನ್ನ ಬಂದಂತೆ ಒರೆಗೆ ॥

೩

ಅಂಗಗುಣದಿಂದ ನೀ
ದಿನದಿನಕೆ ಬೆಳೆಬೆಳೆದು
ಕೆಸರ ಕೊಸರೇಳಬಹುದು

ಬಿಂಗಬಿಡಿಸುವ ಗಾಳಿ
ಭೋರೆಂದು ಬೀಸುತಿರೆ
ಕಲಕು ನೀರೇರಿ ಬಹುದು ॥

೪

ಅರಮನೆಯ ಪರದೆಯಲಿ
ಗಂಧದೆಣ್ಣೆಯ ದೀಪ
ಉರಿಯಬಹುದೇನು ಚೋದ್ಯ

ಮುರುಕು ಕೊಂಪೆಯ ಪಣತಿ-
ಗೇನು ಗತಿ? ರಾಜಸಿರಿ-
ಗೇನಾಯಿತು ಈ ಕುಚೋದ್ಯ? ॥

CC-0. Jangamwadi Math Collection. Digitized by eGangotri

೫

ಹೇಳು ಕಮಲವೆ, ಮೇಲೆ
ಮುಖಮಾಡಿ ದೈನಾಸ-
ದಿಂದೇನು ನೋಡುತಿರುವೇ?
ಗೋಳಿಟ್ಟು ಗೋಣೆತ್ತಿ
ಕೈಮುಗಿದು ಕೈಲಾಸ-
ದಿಂದೇನು ಬೇಡಿ ತರುವೇ? ॥

೬

ಏನಿಲ್ಲ, ಎಂತಿಲ್ಲ.
ಅಲ್ಲೆನ್ನ ದೊರೆ ನಲ್ಲ
ನಲ್ಲೆಯರ ಬಳಗದೊಳಗೆ
ತಾನಲ್ಲಿ ಇಹನಲ್ಲ!
ನಾನಿಲ್ಲಿ ಕೆಳಗೆಳಸಿ
ಕರೆಯುತಿಹೆನೊಳಗೆ ಒಳಗೆ ॥

೭

ಹದಿನಾರು ಸಾವಿರದ
ಅಬ್ಜಕೋಟಿಗುವಿಕ್ಕಿ
ರಾಣಿಯರು ರಾಜಮಣಿಗೆ
ಮದನಾರಿಯರ ಬಳಗ
ಮುತ್ತಿ ಮುಗಿಬಿದ್ದಿರಲು
ಬಹನೆ ಬಿಟ್ಟೆನ್ನ ಬಳಿಗೆ? ॥

೮

ಒಬ್ಬಳನು ಮುದ್ದಿಡುತ
ಒಬ್ಬಳನು ತೆಕ್ಕಿಸುತ
ಮತ್ತೊಬ್ಬಳನು ಬಳಿಸುತಾ
ಒಬ್ಬೊಬ್ಬಳನೆ ರಮಿಸಿ
ಉಬ್ಬುಬ್ಬಿಸುತ ಮತ್ತೆ
ನೋಟ ನನ್ನೆಡೆ ಸುಳಿಸುತಾ ॥

೯

ನನ್ನೆಯಿಂದೆನ್ನೆದೆಗೆ
ರನ್ನ ಮುದ್ರೆಯನೊತ್ತಿ
ನನ್ನೆ ಹಿಡಿಸಿರುವನಲ್ಲಾ
ಇನ್ನೆಂದಿಗೇ ಇರಲಿ!
ಸನ್ನಿಧಿಯ ಭರವಸದ
ಕೀಲು ಜಡಿಸಿರುವನಲ್ಲಾ ॥

೧೦

ಎಲ್ಲ ನಲ್ಲೆಯರಾಟ-
ವೆಲ್ಲ ಮುಗಿಯಲಿ, ಬಳಿಕ
ಬಾರದಿರದೆನ್ನ ಸರತಿ
ಅಲ್ಲಿಯವರೆಗಿಲ್ಲಿ ನಾ
ಅಳಿವಿಂಡಿನೊಡನಾಡಿ
ಹೊತ್ತು ನೂಕುವೆನು ಗರತಿ ॥

೧೧

ಏಳು ಕಮಲವೆ, ನಿನ್ನ
ಯಾವ ಕರ್ಮದಿ ಬಂದು
ಇಂಥ ಕೆಸರಲ್ಲಿ ಬಿದ್ದೇ??
ಹೇಳು ಕಮಲವೆ, ನಿನ್ನ
ಯಾವ ಪುಣ್ಯದಿ ಮತ್ತೆ
ಮೊಗವೆತ್ತಿ ಮೇಲಕೆದ್ದೇ??? ॥

"ತಚ್ಚಿಂತಾ ವಿಪುಲಾಹ್ಲಾದ ಕ್ಷೀಣಪುಣ್ಯಚಯಾ ತಥಾ
ತದಪ್ರಾಪ್ತಿ ಮಹದ್ದುಃಖ ವಿಲಿನಾಶೇಷ ಪಾತಕಾ" ॥

CC-0. Jangamwadi Math Collection. Digitized by eGangotri

# ನನ್ನ ಕಾಶ್ಮೀರ ಪ್ರವಾಸ

ಲೇಖಕ:—ಶೀ. ಕೃ. ನಾ. ಗೋಸಾವಿ ( ಭಾರತಸಂಚಾರಿ )

ನಾನು ಹಿಮಾಲಯದಲ್ಲಿ ಕಾಶ್ಮೀರದಿಂದ ದಾರ್ಜಿಲಿಂಗ ವರೆಗೆ ( ನೇಪಾಳ, ಕೈಲಾಸ ಬಿಟ್ಟು ) ಶ್ರೀ. ಬದರಿ- ಕೇದಾರ, ಗಂಗೋತ್ರಿ, ಸಿಮ್ಲಾ, ನೈನಿತಾಳ ಮೊದಲಾದ ಯಾವತ್ತೂ ಯಾತ್ರೆ ( ಸುಮಾರು ೩೦೦೦ ಮೈಲು ) ಮುಗಿಸಿದ್ದು ಅದನ್ನು ಮತ್ತೆ ಯಾವಾಗಾದರೂ ವಾಚಕರಿಗಾಗಿ ಬರೆಯುವೆನು.

विद्या वेश्मानि तुङ्गानि कुंकुमं सहिमं पयः ।
द्राक्षेति यत्र सामान्यमस्ति त्रिदिव-दुर्लभम् ॥
त्रिलोक्यां रत्नसूःश्लाघ्या तस्यां धनपतेर्हरित् ।
तत्र गौरी-गुरुः शैलः यत्तस्मिन्नपिमण्डलम् ॥

'राजतरंगिणी'

**ಮುನ್ನುಡಿ**

ಹಿಂದಮಾತೆಯ ಮುಕುಟಮಣಿಯಾಗಿರುವ ಕಾಶ್ಮೀರಕ್ಕೆ ನಂದನವನವೆಂದು ಹೆಸರು ಬರಲು ಅಲ್ಲಿಯ ಅದ್ಭುತ ಮನೋಹರವಾದ ಸೃಷ್ಟಿಸೌಂದರ್ಯವೇ ಕಾರಣವು. ನಿಸರ್ಗದೇವತೆಯು ತನ್ನ ಸಕಲಸಂಪತ್ತಿನಿಂದ ಒಡಗೂಡಿ ನಿಜಾನಂದದಲ್ಲಿ ಮೆರೆಯುತ್ತಿರುವಳು. ಅಲ್ಲದೆ ತನ್ನ ದರ್ಶನಲಾಭವನ್ನು ಹೊಂದಲು ಬಂದವರನ್ನು ತನ್ನಂತೆಯೇ ಕ್ಷಣ ಹೊತ್ತಾದರೂ ಅಖಂಡ ಆನಂದದಲ್ಲಿ ಮುಳುಗಿಸಿಬಿಡುವಳು. ಇವಳಂತಹ ಸೌಂದರ್ಯವು ಹಿಮಗಿರೀಂದ್ರನ ವಿಶಾಲಸಾಮ್ರಾಜ್ಯದಲ್ಲಿ ಮತ್ತಿನ್ನಾವ ಭಾಗದಲ್ಲಿಯೂ ಇಲ್ಲವೆಂದು ಹೇಳುವ ಮಾತನ್ನು ರಾಜತರಂಗಿಣಿಯೊಳಗಿನ ಮೇಲಿನವೆರಡು ಸಂಸ್ಕೃತಪದ್ಯಗಳು ಎತ್ತಿ ಹಿಡಿಯುತ್ತವೆ. ಹಿಮಶಿಖರಗಳ ಮಧ್ಯದಲ್ಲಿಯ ಫಲವತ್ತಾದ ಈ ವಿಶಾಲ ಭೂಮಿಯು, ಸರೋವರಗಳಿಂದಲೂ, ನದಿಗಳಿಂದಲೂ ತುಂಬಿತುಳುಕುತ್ತಿರುವ ಸೃಷ್ಟಿಯ ಈ ಬೆಡಗಿನ ಭಾಗವು ವಿದ್ಯೆಗೂ ಕಲಾಕೌಶಲ್ಯಗಳಿಗೂ ತವರುಮನೆಯಾಗಿರುವುದು. ಇಂತಹ ಪ್ರದೇಶವು ಪೃಥ್ವಿಯಲ್ಲಿ ಅನ್ಯತ್ರ ನೋಡಲು ದೊರಕುವದು ಅಸಾಧ್ಯವೆಂದು ಬರೆದರೆ ಅತಿಶಯೋಕ್ತಿಯಾಗಲಾರದು. ಈ ಸಂಗತಿಯನ್ನೇ ಸ್ವಲ್ಪ ವಿಸ್ತಾರವಾಗಿ ಬರೆದು ವಸ್ತುಸ್ಥಿತಿಯು ಒಡೆದು ಕಾಣುವಂತೆ ಮಾಡಿ ಕನ್ನಡಿಗರ ಎದುರಿಗಿರಿಸುವದೇ ಈ ಲೇಖನದ ಉದ್ದೇಶವಾಗಿರುವುದು.

**ಭೂಗೋಲ**

ಈ ನಂದನವನದ ಪೂರ್ವಕ್ಕೆ ತಿಬೇಟ, ದಕ್ಷಿಣಕ್ಕೆ ಪಂಜಾಬ, ಪಶ್ಚಿಮಕ್ಕೆ ವಾಯವ್ಯ ಸರಹದ್ದಿನ ಪ್ರಾಂತ, ಮತ್ತು ಅಫಗಾನಿಸ್ತಾನ, ಉತ್ತರಕ್ಕೆ ಕಾರಾಕೋರಂ ಪರ್ವತ ಮತ್ತು ಮಾಕಂಡ ಪ್ರದೇಶಗಳು ಇರುವವು. ಇದರ ಕ್ಷೇತ್ರಫಲವು ೮೦ ಸಾವಿರ ಮೈಲಿಗಿಂತ ಹೆಚ್ಚಾಗಿರುವುದಲ್ಲದೆ ಹೈದ್ರಾಬಾದಿಗಿಂತಲೂ ಚಿಕ್ಕದೂ, ಮೈಸೂರಿನಗಿಂತಲೂ ಹಿರಿಯದೂ ಆಗಿರುವುದು. ಇವರಲ್ಲಿ ಮುಖ್ಯವಾಗಿ ನಾಲ್ಕು ಭಾಗಗಳು—ಜಮ್ಮೂ, ಕಾಶ್ಮೀರ, ಸಣ್ಣ ತಿಬೇಟ ಮತ್ತು ಗಿಲಚಿತ. ಇವು ಒಂದರಕ್ಕಿಂತ ಒಂದು ಎತ್ತರ ಪ್ರದೇಶದಲ್ಲಿರುತ್ತವೆ. ಜಮ್ಮೂ ಪ್ರಾಂತ್ಯವು ಪಂಜಾಬಕ್ಕೆ ಹೊಂದಿ ಬೈಲುಪ್ರದೇಶದಲ್ಲಿದೆ. 'ಪೀರ ಪಂಜಾಲ' ಎಂಬ ೮೦೦೦ ಅಡಿ ಎತ್ತರವಾದ ಪರ್ವತವನ್ನು ದಾಟಿದ ಮೇಲೆ ಕಾಶ್ಮೀರದ ಸೀಮೆಯು ಮೊದಲಾಗುವುದು. ಈ ಭಾಗದಲ್ಲಿ ದೇವದಾರ್ವರದ ವೃಕ್ಷಗಳ ಮಧ್ಯದೊಳಗಿಂದಲೂ, ತರತರದ ಫಲಪುಷ್ಪಗಳ ಗಿಡಮರಗಳ ದಟ್ಟ ಅಡವಿಗಳೊಳಗಿಂದಲೂ ಝೇಲಂ, ಚೀನಾಬ ಮೊದಲಾದ ನದಿಗಳು ಹರಿಯುವವು. ಇವು ನೇತ್ರಾನಂದವನ್ನುಂಟು ಮಾಡುವುದರಿಂದಲೇ ಇದಕ್ಕೆ ನಂದನವನವೆಂದು ಹೆಸರು ಬಿದ್ದಿರುವುದು. ಇದರ ಉತ್ತರದಲ್ಲಿ ೧೮ ರಿಂದ ೨೫ ಸಾವಿರ ಅಡಿಗಳವರೆಗೆ ಎತ್ತರವಾಗಿ ಬೆಳೆದ ಹಿಮಶಿಖರಗಳು ಇರುವವು. ಇವುಗಳ ಬಳಿಯಲ್ಲಿಯೇ

CC-0. Jangamwadi Math Collection. Digitized by eGangotri

ಸಣ್ಣ ತಿಬೇಟವಿದೆ. ಇದರ ಉತ್ತರಕ್ಕೆ ಜಗತ್ತಿನೊಳಗಿನ ಎರಡನೆಯ ಶಿಖರವಾದ 'ಗೋಡ್ವಿನ್ ಆಸ್ಟಿನ್' (೨೮೫೫೦) ಇದೆ. ಈ ಭಾಗದ ಪಶ್ಚಿಮೋತ್ತರಕ್ಕೆ ಕಾಶ್ಮೀರ ಸಂಸ್ಥಾನದ ಎಲ್ಲಕ್ಕೂ ಎತ್ತರವಾದ 'ಗಿಲಚಿತ' ಪ್ರದೇಶವುಂಟು. ಇವೆಲ್ಲವುಗಳಲ್ಲಿ ರಾಜಧಾನಿಯಾದ ಶ್ರೀನಗರದ ಸುತ್ತಲಿನ ಪ್ರದೇಶವು ಬಹು ಫಲವತ್ತಾದದ್ದು ಇರುವುದು. ಅಕ್ಕಿ, ಗೋಧಿ, ಬದಾಮಿ, ಅಕ್ರೋಡ ದ್ರಾಕ್ಷಿ ಮೊದಲಾದುವುಗಳು ವಿಪುಲವಾಗಿ ಬೆಳೆಯುವುವು. ಈ ಬಯಲಿನಲ್ಲಿಯೇ ವೂಲರ್ (೩೦ ಮೈಲು ಸುತ್ತಳತೆ) ದಲ್ (೧೨ ಮೈಲ) ಮೊದಲಾದ ದೊಡ್ಡ ಸರೋವರಗಳೂ ನೆಲದೊಳಗಿಂದ ಪುಟಿದು ಬರುವ ಎಷ್ಟೋ ಸವಿನೀರಿನ ಸೆಲೆಗಳೂ, ಫಲಪುಷ್ಪಗಳಿಂದ ಪೂರಿತವಾದ ತೋಟಗಳೂ ಇರುವವು. ಒಟ್ಟಿನ ಮೇಲೆ ಶ್ರೀನಗರವನ್ನೂ ಅದರ ಸುತ್ತುಮುತ್ತಲಿನ ನೂರು ಮೈಲುಗಳವರೆಗಿನ ಭಾಗವನ್ನೂ ನೋಡಿದರೆ ಕಾಶ್ಮೀರದ ಪ್ರವಾಸವನ್ನು ಮಾಡಿದಂತಾಯಿತೆಂದು ಅನ್ನಬಹುದು. ಗುಲಮರ್ಗ–ಖಿಲನಮರ್ಗದಂತಹ ೯೦೦೦ ಅಡಿ ಎತ್ತರವಾದ ಹಿಮಪ್ರದೇಶದ ಹತ್ತಿರದಲ್ಲಿರುವ ಬಯಲುಗಳೂ, 'ಶಾರದ', 'ಅಮರನಾಥ', 'ಖೀರಭವಾನಿ' ಮುಂತಾದ ಯಾತ್ರಾಸ್ಥಳಗಳೂ, ಅನೇಕ ಸುಂದರ ನದಿ, ಸರೋವರ, ಕಾಲುವೆ, ಜಲಪಾತಗಳಿಂದೊಡಗೂಡಿದ ಕಮನೀಯವಾದ ಸ್ಥಾನಗಳೂ ನೋಡತಕ್ಕಂತಹವುಗಳಾಗಿವೆ.

ಈಗಿನ ವಿಸ್ತೀರ್ಣಕಾಶ್ಮೀರರಾಜ್ಯವು ಸ್ಥಾಪಿತವಾಗಲು

**ಇತಿಹಾಸ** ಒಬ್ಬ ಬಲಾಢ್ಯನಾದ ಹಿಂದೂ ರಾಜನ ಸತತ ಪರಿಶ್ರಮವೇ ಕಾರಣವೆಂದು ಹೇಳಬಹುದು. ಇದರ ಇತಿಹಾಸವು 'ರಾಜತರಂಗಿಣಿ' ಎಂಬ ಸಂಸ್ಕೃತಗ್ರಂಥದಲ್ಲಿ ಇರುವುದು. ಇದನ್ನು ಬರೆದವನು ಕಲ್ಹಣನು. * (ಇ. ಸ. ೧೧೪೮) ಇವನು ತನ್ನ ಕಾಲದವರೆಗೆ ಇತಿಹಾಸವನ್ನು ಬರೆದನು. ಅದನ್ನೇ ಮುಂದೆ ಜೋನರಾಜನೆಂಬವನು ೧೪೫೦ ರ ವರೆಗೆ ಮುಂದುವರಿಸಿದನು. ಇದೇ ಕಾಲದಲ್ಲಿ ಕಾಶ್ಮೀರದಲ್ಲಿ ಹಿಂದೂ ರಾಜ್ಯವು ಹಾಳಾಗಿ ಮುಸಲ್ಮಾನೀ ರಾಜ್ಯವು ಪ್ರಾರಂಭವಾಗಿತ್ತು. ಇದರ ವೃತ್ತಾಂತವನ್ನೆಲ್ಲ ಶ್ರೀವರಕವಿಯು ಬರೆದನು. ಅದನ್ನೇ ಕಡೆಯ ಸಂಸ್ಕೃ... ಕವಿಯು ೧೫೮೬ ರ ವರೆಗೆ ಎಲ್ಲ ಸಾದ್ಯಂತ ವರ್ಣಿಸಿ... ಬರೆದು ಇತಿಹಾಸವನ್ನು ಮುಂದುವರಿಸಿದನು. ಈ ಕಾ... ದಲ್ಲಿ ಕಾಶ್ಮೀರವು ಅಕಬರನ ಕೈಯಲ್ಲಿತ್ತು. ಅಂದಿ... ಈ ಪ್ರಾಂತ್ಯವು ಮುಸಲ್ಮಾನರ ಪರಗಣೆಯಾಯಿತು... ಹವೆಬದಲಾಯಿಸುವ ಆರೋಗ್ಯಮಂದಿರವಾಯಿ... ಇದು ಜಹಾಂಗೀರ, ಶಹಾಜಹಾನರಿಗೆ ಅತ್ಯಂತ ಪ್ರಿ... ವಾದ ಸ್ಥಾನವಾದದ್ದರಿಂದ ಅವರು ಅನೇಕ ಸುಂದರ... ಉದ್ಯಾನಗಳನ್ನೂ, ಪ್ರಾಸಾದಗಳನ್ನೂ ನಿರ್ಮಿಸಿ... ಜಹಾಂಗೀರನು ಸಾಯುವ ಕಾಲದಲ್ಲಿ ಕಾಶ್ಮೀ... ವನ್ನು ಸ್ಮರಿಸಿ ಪ್ರಾಣಬಿಟ್ಟನು. ಔರಂಗಜೇಬನೂ ಒ... ಸಲ ಇಲ್ಲಿಗೆ ಬಂದಿದ್ದನು. ಇವನ ಕಾಲದಲ್ಲಿಯೇ ಮು... ಲ್ಮಾನೀ ರಾಜ್ಯವು ಮಣ್ಣುಗೂಡತೊಡಗಿತು. ಇ... ೧೭೫೦ರಲ್ಲಿ ಕಾಶ್ಮೀರವು ಬೇರೆ ಸ್ವತಂತ್ರ ರಾಜ್ಯವಾ... ಆದರೆ ಪುನಃ ಸ್ವಲ್ಪ ಕಾಲದಲ್ಲಿ ಇದು ಅಫಗಾನ ಹಾ... ದುರಾಣೀ ಜನರ ಕೈವಶವಾದುದರಿಂದ ಪ್ರಜೆಗಳ ಮೇ... ಭಯಂಕರ ಬಲತ್ಕಾರವಾಗಲಾರಂಭಿಸಿತು. ಆಗ ಇಲ್ಲಿ... ಜನರು ಆ ಸಮಯಕ್ಕೆ ಪಂಜಾಬದಲ್ಲಿ ಉದಯಕ್ಕೆ ಬ... ಶೀಖರ ಸಹಾಯವನ್ನು ಕೇಳಿದರು. ಆದುದರಿಂ... ಜಿತಸಿಂಗನು ೧೮೧೪ ರಲ್ಲಿ ಕಾಶ್ಮೀರದ ಮೇಲೆ ದಂಡೆ... ಹೋದನು. ಆದರೆ ಅವನಿಗೆ ಯಶವು ದೊರೆಯ... ಮತ್ತೊಮ್ಮೆ ೧೮೧೯ ರಲ್ಲಿ ದೊಡ್ಡ ಸೈನ್ಯದೊಡ... ಪ್ರಸಿದ್ಧ ಸೇನಾಪತಿಯಾದ ಮಿಸರ ದಿವಾಣಚಂದನ... ಕಳುಹಿಸಿದನು. ಆ ಸೈನ್ಯದಲ್ಲಿಯೇ ಈಗಿನ ವಿಸ್ತೀ... ವಾದ ಕಾಶ್ಮೀರರಾಜ್ಯಸ್ಥಾಪಕನಾದ ಸರದಾರ ಗುಲಾ... ಸಿಂಗನೂ ಇದ್ದನು. ಆ ಸಲದ ದಾಳಿಯಿಂದ ಪಠಾಣ... ಸೋತರು. ನಂದನವನವು ಶೀಖರ ಕೈವಶವಾಯಿ... ಅದೇ ಮುಂದೆ ಸರದಾರ ಗುಲಾಬಸಿಂಗನ ವಶವಾ... ದ್ದನ್ನು– ಮತ್ತು ಹೇಗೆ ಬೆಳೆಯುತ್ತಾ ಹೋಗಿ ದೊ... ಹಿಂದೂ ರಾಜ್ಯವಾಯಿತೆಂಬದನ್ನು — ಸ್ವಲ್ಪ... ತಿಳಿಸುವೆನು.

ಗುಲಾಬಸಿಂಗನು ಡೋಗ್ರಾಜಾತಿಯ ರಜಪೂತ... ಜಮ್ಮೂದ ಹತ್ತರ ಇವನ ಸಣ್ಣ ಸಂಸ್ಥಾನವಿತ್ತು... ಜಿತಸಿಂಗನ ಸೈನ್ಯದಲ್ಲಿ ಸೇರಿ, ತನ್ನ ಶೌರ್ಯಸಾಹಸ... ಸ್ವಲ್ಪೇ ದಿನಗಳಲ್ಲಿ ಬಹಳ ಮುಂದೆ ಬಂದನು.

* ಹೆಸರಿನ ಮೇಲೆ ನೋಡಿದರೆ ಈತನು ಕನ್ನಡಿಗನಾಗಿ ತೋರುವನು.

CC-0. Jangamwadi Math Collection. Digitized by eGangotri

ಮುತ್ತಲಿನ ಎಲ್ಲ ಪುಂಡ ಚಿಕ್ಕ ಚಿಕ್ಕ ಸಂಸ್ಥಾನಿಕರನ್ನು ಸೋಲಿಸಿ ರಾಜ್ಯದಲ್ಲಿ ಶಾಂತಿಯನ್ನು ಸ್ಥಾಪಿಸಿದನು. ಇದರಿಂದ ರಣಜಿತಸಿಂಗನು ಸಂತುಷ್ಟನಾಗಿ ೧೮೨೦ ರಲ್ಲಿ ಇವನನ್ನು ಜಮ್ಮೂದ ಅರಸನನ್ನಾಗಿ ಮಾಡಿದನು. ಆ ನಂತರ ಕಾಶ್ಮೀರದ ಉಳಿದ ಮೂರು ಭಾಗದಲ್ಲಿ ತನ್ನ ರಾಜ್ಯವನ್ನು ೧೮೪೦ ರೊಳಗಾಗಿ ಸ್ಥಾಪಿಸಿಕೊಂಡನು. ೧೮೪೫ ರಲ್ಲಿ ಇಂಗ್ಲಿಷರಿಗೂ ಶೀಖರಿಗೂ ಯುದ್ಧವಾಯಿತು. ಆಗ ಗುಲಾಬಸಿಂಗನು ಶೀಖರಿಗೆ ಸಹಾಯಮಾಡಲಿಲ್ಲ. ಇದರಲ್ಲಿ ಇಂಗ್ಲೀಷರೇ ಜಯಶಾಲಿಗಳಾದರು. ಕಾಶ್ಮೀರವು ಅವರ ವಶಕ್ಕೆ ಹೋಯಿತು. ಆದರೆ ಇಂಗ್ಲಿಷರು ಅಪ್ರತ್ಯಕ್ಷ ರೀತಿಯಿಂದ ಹೊರಗಿನ ತೋರಿಕೆಗೆ ೭೫ ಸಾವಿರ ರೂ. ಗಳನ್ನು ಪಡೆದುಕೊಂಡು ಕಾಶ್ಮೀರವನ್ನು ಗುಲಾಬಸಿಂಗನ ಅಧೀನ ಮಾಡಿದರು. ಆದರೂ ಪ್ರತ್ಯಕ್ಷವಾಗಿ ತನ್ನ ಅಧೀನದಲ್ಲಿ ಕಾಶ್ಮೀರ ರಾಜ್ಯವನ್ನು ತೆಗೆದುಕೊಳ್ಳಲು ಗುಲಾಬಸಿಂಗನಿಗೆ ಬಹಳ ಕಷ್ಟಗಳನ್ನು ಅನುಭವಿಸಬೇಕಾಯಿತು. ಕೊನೆಗೆ ೧೮೪೬ ರಲ್ಲಿ ಗುಲಾಬಸಿಂಗನು ಮಹಾರಾಜನೆಂಬ ಬಿರುದು ಪಡೆದುಕೊಂಡನು. ೧೮೫೭ ರಲ್ಲಿ ಮರಣ ಹೊಂದಿದನು.

ನಂತರ ಇವನ ಮಗನಾದ ರಣವೀರಸಿಂಗನು ಪಟ್ಟಕ್ಕೆ ಬಂದನು. ಅದೇ ಕಾಲಕ್ಕೆ ಶಿಪಾಯಿಗಳ ಬಂಡು ಆಯಿತು. ಆಗ ಈ ರಾಜನು ಇಂಗ್ಲೀಷರಿಗೆ ಸಹಾಯಮಾಡಿದ್ದರಿಂದ ೧೮೬೦ ರಲ್ಲಿ ಗಿಲಚಿತವೂ ಇವನ ಅಧಿಕಾರದಲ್ಲಿಯೇ ಸಂಪೂರ್ಣವಾಗಿ ಬಂದಿತು. ಇವನು ಚೆನ್ನಾಗಿ ರಾಜ್ಯವಾಳಿದನು. ೧೮೮೫ ರಲ್ಲಿ ಇವನು ಸತ್ತ ಮೇಲೆ ಇವನ ಹಿರಿಯ ಮಗನಾದ ಪ್ರತಾಪಸಿಂಹನು ಸಿಂಹಾಸನವನ್ನೇರಿದನು. ಇವನೇ ಜಮ್ಮೂ ಕಾಶ್ಮೀರಗಳ ಅಧಿಪತಿಯಾಗಿ ಮೆರೆದನಲ್ಲದೆ ತನ್ನ ರಾಜ್ಯದಲ್ಲೆಲ್ಲ ರಾಜಮಾರ್ಗಗಳನ್ನು ಮಾಡಿಸಿ ಇಡೀ ಜಗತ್ತಿಗೇ ನಂದನವನದ ಪರಿಚಯಮಾಡಿಕೊಟ್ಟನು.

ಪ್ರತಾಪಸಿಂಹನು ವಿಶೇಷ ಧಾರ್ಮಿಕ ಸ್ವಭಾವದವನಿದ್ದದರಿಂದ ಪ್ರತಿವರ್ಷ ಯಾತ್ರಿಕರೊಂದಿಗೆ ಅಮರನಾಥಕ್ಕೆ ಹೋಗಿ ಬರುತ್ತಿದ್ದನು. ಇವನ ಕಾಲದಲ್ಲಿ ರಾಜಮಾರ್ಗಗಳು ಉಂಟಾದುದರಿಂದ ಅನೇಕ ದೇಶಗಳ ಕೂಡ ಕಾಶ್ಮೀರದ ಸಂಬಂಧವು ಬೆಳೆಯಿತಲ್ಲದೆ ವ್ಯಾಪಾರವೂ ಬೆಳೆಯಲಾರಂಭಿಸಿತು. ಅನೇಕ ದುರ್ಲಂಘ್ಯ ಪರ್ವತಗಳ ಮಧ್ಯದಲ್ಲಿ ೨೦೦ ಮೈಲು ದೂರದಲ್ಲಿದ್ದ ಶ್ರೀನಗರಕ್ಕೆ ಮೋಟಾರಿನಿಂದ ರಾವಳಪಿಂಡಿಯಿಂದ ಒಂದೇ ಒಂದು ದಿನದಲ್ಲಿ ಮುಟ್ಟಲು ಅನುಕೂಲವಾಗಿರುವುದು. ಈಗಿನ ಶಂಕರಪರ್ವತದ ಮೇಲಿನ ಗುಡಿಯೂ ಇವನ ಕಾಲದಲ್ಲಿಯೇ 'ತಖ್ತ ಸುಲೇಮಾನು' ಎಂಬ ಮುಸಲ್ಮಾನ ನಾಮಕರಣವನ್ನು ತೊರೆದು ಶಂಕರನ ಗುಡಿಯೆಂದು ಪ್ರಸಿದ್ಧವಾಯಿತು. ಈ ದೇವಸ್ಥಾನವು ರಾತ್ರಿಯಲ್ಲಿಯೂ ದೂರದಿಂದ ಕಾಣಬೇಕೆಂದು ನಮ್ಮ ಶ್ರೀ. ಮೈಸೂರ ಮಹಾರಾಜರವರು ೬ ದೊಡ್ಡ ವಿದ್ಯುದ್ದೀಪಗಳನ್ನು ಅದಕ್ಕೆ ದಯಪಾಲಿಸಿರುವರು. ಪ್ರತಾಪಸಿಂಗನ ತರುವಾಯ ಈಗಿನ ರಾಜನಾದ ಹರಿಸಿಂಗನು ಪಟ್ಟವೇರಿದನು.

**ಕಾಶ್ಮೀರವನ್ನು ಪ್ರವೇಶಿಸುವ ಮಾರ್ಗಗಳು**

ಕರ್ನಾಟಕದ ಮಧ್ಯವರ್ತಿಸ್ಥಳವಾದ ಹುಬ್ಬಳ್ಳಿಯಲ್ಲಿ ಉಗಿಬಂಡಿಯಿಂದ ಹೊರಟು ಮುಂಬೈ ಆಗ್ರಾ, ದಿಲ್ಲಿ ಮಾರ್ಗವಾಗಿ ರಾವಳಪಿಂಡಿಗೆ ಹೋಗಬೇಕು. ಹುಬ್ಬಳ್ಳಿಯಿಂದ ಮೇಲೆ ಹೇಳಿದ ಮಾರ್ಗದಿಂದ ಹೋದರೆ ೨೮ ರೂ. ೫ ಆಣೆ ರೇಲ್ವೆ ವೆಚ್ಚವು ತಗಲುವದು. ರಾವಳಪಿಂಡಿಯಿಂದ ಕಾಶ್ಮೀರದ ರಾಜಧಾನಿಯಾದ ಶ್ರೀನಗರವು ೧೯೬ ಮೈಲು ದೂರದಲ್ಲಿರುವದು. ಸುಂದರವಾದ ರಾಜಮಾರ್ಗವಿರುವದು. 'ಕಾರಿ'ನಿಂದ ಹೋದರೆ ಒಬ್ಬನಿಗೆ ೩೦ ರೂ. 'ಬಸ್ಸಿ'ನಿಂದ ಹೋದರೆ ೧೫ ರೂ. ಗಳ ವೆಚ್ಚವು ಬರುವದು. ಇದು ಒಂದು ಮಾರ್ಗ. ಎರಡನೆಯ ಮಾರ್ಗವು ಜಮ್ಮೂದಿಂದ. ಜಮ್ಮೂಕ್ಕೆ ಹುಬ್ಬಳ್ಳಿಯಿಂದ ಮುಂಬೈ, ದಿಲ್ಲಿ, ಅಮೃತಸರ, ವಜೀರಾಬಾದ್ ಇವುಗಳ ಮೇಲಿಂದ ಹೋಗಬೇಕಾಗುವದು. ಇದಕ್ಕೂ ವೆಚ್ಚವು ಮೇಲಿನಷ್ಟೇ ತಗಲುವದು. ಜಮ್ಮೂದಿಂದ ಶ್ರೀನಗರವು ೨೦೬ ಮೈಲು ದೂರದಲ್ಲಿರುವುದು. 'ಕಾರು' ಹಾಗೂ 'ಬಸ್ಸಿ'ನ ವೆಚ್ಚವು ಮೇಲಿನಷ್ಟೇ. ಆದರೆ ಈ ಎರಡೂ ಮಾರ್ಗಗಳಲ್ಲಿ ರಾವಳಪಿಂಡಿಯ ಮಾರ್ಗವು ಉತ್ತಮವಾದದ್ದೂ, ಅನಪಾಯಕಾರಕವಾದುದೂ ಇರುವದು. ಜಮ್ಮೂದಿಂದ ಹೋಗುವ ಮಾರ್ಗವು ಗಂಡಾಂತರದ ಮಾರ್ಗವಿರುವುದು. ಆದರೆ ಈ ಮಾರ್ಗವು ಎಷ್ಟು ಗಂಡಾಂತರವುಳ್ಳದ್ದು ಇರುವದೋ ಅಷ್ಟೇ ಸುಂದರವಾಗಿಯೂ ಇದೆ. ಇವುಗಳಲ್ಲಿ ಬೇಕಾದ ಒಂದು ಮಾರ್ಗದಿಂದ ಹೋಗಿ, ಮತ್ತೊಂದು ಮಾರ್ಗದಿಂದ ತಿರುಗಿ ಬರಬಹುದು. ಆದರೆ ಎರಡೂ ಮಾರ್ಗಗಳನ್ನು ನೋಡಲೇಬೇಕೆಂದು ನನ್ನ ಅಭಿಪ್ರಾಯ.

CC-0: Jangamwadi Math Collection. Digitized by eGangotri

ಆದರೆ ನಾನು ಮಾತ್ರ ಕೆಲವು ಅನಾನುಕೂಲತೆಗಳ ಮೂಲಕ ರಾವಳಪಿಂಡಿಯಿಂದಲೇ ಹೋಗಿ ಪುನಃ ಅದೇ ಮಾರ್ಗದಿಂದಲೇ ತಿರುಗಿ ಬಂದೆನು. ಆದರೂ ವಾಚಕರಿಗಾಗಿ ಜಮ್ಮೂದ ಮಾರ್ಗದ ವರ್ಣನೆಯನ್ನೂ ಆ ಮಾರ್ಗವಾಗಿ ತಿರುಗಿ ಬಂದ ನನ್ನ ಕರ್ನಾಟಕದ ಮಿತ್ರನೊಬ್ಬನಿಂದ ಅರಿತುಕೊಂಡು ಇಲ್ಲಿ ವಿವರಿಸಿದ್ದೇನೆ. ನಾನು ಯಾವ ಯಾವ ರೀತಿಯಿಂದ ಪ್ರವಾಸ ಮಾಡಿದೆನೋ ಅದೇರೀತಿಯಿಂದ ಪ್ರವಾಸದ ವರ್ಣನೆಯನ್ನು ಮಾಡುತ್ತ ಮುಂದಕ್ಕೆ ಸಾಗುವೆನು.

ಹರಿದ್ವಾರದ ಕುಂಭಯಾತ್ರೆ ಮುಗಿಸಿಕೊಂಡು ನಂದನವನದ ಕಡೆಗೆ ಹೊರಟೆನು. ಮಾರ್ಗದಲ್ಲಿ ಸಿಕ್ಕುವ ಅಮೃತಸರದಲ್ಲಿ ಮೂರು ದಿವಸವಿದ್ದು **ಶ್ರೀ ಲಾಲಜೀ ಚೇತನ** ಇವರಿಂದ ಕಾಶ್ಮೀರದಲ್ಲಿಳಿಯುವದಕ್ಕಾಗಿ ಶ್ರೀ ಶಂಕರಾಚಾರ್ಯರಿಗೊಂದು ಪತ್ರವನ್ನು ತೆಗೆದುಕೊಂಡು ಲಾಹೋರದ ಮೇಲಿಂದ ರಾವಳಪಿಂಡಿಗೆ ಬಂದು ಇಳಿದೆನು. ಸ್ಟೇಶನ್ನಿನ ಹತ್ತಿರದಲ್ಲಿಯೇ ಒಂದು ಧರ್ಮಶಾಲೆಯುಂಟು. ಅದರಲ್ಲಿಯೇ ಇಳಿದುಕೊಂಡೆನು. ಪಟ್ಟಣದೊಳಗಿರುವ ನೋಡತಕ್ಕಂತಹ ಸ್ಥಳಗಳನ್ನು ನೋಡಲು ಹೊರಟೆನು. ರಾವಳಪಿಂಡಿಯಲ್ಲಿ **ಟೋಪೀ ಪಾರ್ಕ್, ಕಂಟೋನಮೆಂಟ್,** ಮತ್ತು **ಮುಖ್ಯ ಪೇಟೆ,** ಇಷ್ಟೇ ನೋಡತಕ್ಕಂತಹ ಸ್ಥಾನಗಳೆಂದು ಹೇಳಿದ್ದುದರಿಂದ ಅವುಗಳನ್ನು ನಾನು ನೋಡಿಕೊಂಡು ... ಸ್ಥಳಕ್ಕೆ ಬಂದೆನು. ರಾತ್ರಿಯೊಂದನ್ನು ರಾವಳ... ಯಲ್ಲಿ ಕಳೆದು ಮರುದಿನ ಬೆಳಗಿನಲ್ಲಿ ೧೦ ಗಂಟೆಗೆ ಶ್ರೀ... ರಕ್ಕೆ ಹೋಗಲು ೮ ರೂಪಾಯಿಗಳಿಗೆ 'ಬಸ್ಸು'ಸೀಟ... ಗೊತ್ತುಮಾಡಿದೆನು.

ರಮಣೀಯ ಸ್ಥಾನಗಳು

ರಾವಳಪಿಂಡಿಯಿಂದ ೧೫. ಮೈಲಿನವರೆಗೂ ... ಪ್ರದೇಶವಿದ್ದು ಮುಂದೆ ... ಗಳನ್ನು ಏರುತ್ತ ಹೋಗಬೇಕಾ... ವದು. ಛತರ್, ಟ್ರೇಟ, ಕೋಡಾಗಲ್ಲಿಗಳನ್ನು ... ಸಂಜೆಯ ೫॥ ಗಂಟೆಗೆ ४೦ ಮೈಲು ದೂರದಲ್ಲಿ... ಸಮುದ್ರಪಾತಳಿಯಿಂದ ೭೫೦೦ ಅಡಿ ಎತ್ತರವಾ... ಮರಿ ಎಂಬ ರಮ್ಯಸ್ಥಾನಕ್ಕೆ ಬಂದೆನು. ಈ ಸ್ಥಾ... ಪಂಜಾಬ ಪ್ರಾಂತದ ಸೇನಾವಿಭಾಗದ ಹವೆಬದ...




ಝೇಲಂ ನದಿ

...ಸುವ ಸ್ಥಳವಾದದ್ದರಿಂದ ಮಾರ್ಗದಲ್ಲಿ ಕೆಂಪು ಸೈನಿ... ಸುಳಿದಾಟವೇ ಹೆಚ್ಚಾಗಿ ಕಂಡುಬಂತು. ಆದರೆ ... ಅನೇಕ ಜನರೂ ಬೇಸಿಗೆಯಲ್ಲಿ ಈ ಸ್ಥಳಕ್ಕೆ ಬ... ಆನಂದದಿಂದ ಕೆಲವು ದಿನಗಳವರೆಗೆ ಇದ್ದು ಹಿಂತಿರು... ವರು. ಕೆಲವರು ಹಾಗೆಯೇ ಮುಂದೆ ನಂದನವ... ಕಡೆಗೆ ನಡೆಯುವರು. ಈ ಭಾಗವು ಅರ್ಧವರ್ತು... ಬೆಟ್ಟದ ಮಧ್ಯದಲ್ಲಿರುವುದು. ಇಲ್ಲಿಂದ ಹಿಮಶಿಖ... ಹಾಗೂ ನದಿಕೊಳ್ಳಗಳ ಸ್ವರ್ಗೀಯ ದೃಶ್ಯವು ಎಲ್ಲರ... ಆನಂದಗೊಳಿಸುತ್ತದೆ.

CC-0. Jangamwadi Math Collection. Digitized by eGangotri

ಮರಿಯಿಂದ ಮುಂದಿನ ಮಾರ್ಗವು ಇಳುಕಲಿನ ದಾರಿಯಾಗಿರುವದರಿಂದ ೧-೨ ಗಂಟೆಗಳಲ್ಲಿಯೇ ಬಾಗಲಾ, ಪಾಗವಾರಿಗಳನ್ನು ದಾಟಿ ೬॥ ಗಂಟೆಯ ಸುಮಾರಿಗೆ ೨೪ ಮೈಲು ದೂರದಲ್ಲಿರುವ, **ಝೀಲಂ** ನದಿಯ ತಟದ ಮೇಲೆ ನಿಂತಿರುವ **ಕ್ವಾಲಾ** ಎಂಬ ಹೆಸರಿನ ಮನೋಹರವಾದ ಸ್ಥಾನಕ್ಕೆ ಬಂದು ಮುಟ್ಟಿದೆನು. ಈ ಮಾರ್ಗದಲ್ಲಿ ಸಾವಿರಾರು ದೇವದ್ವಾರದ ಮುಂಡಿಗೆಗಳನ್ನು ಪಂಜಾಬದವರೆಗೂ ವೇಗವಾಗಿ ತೇಲಿಸಿಕೊಂಡು ಹರಿದು ಹೋಗುವ ನದಿಯ ದೃಶ್ಯವು ಚಿತ್ತಾಕರ್ಷಕವಾಗಿದ್ದಿತು. ಬಸ್ಸಿನಲ್ಲಿ ಬಂದವರು ಈ ಸ್ಥಳದಲ್ಲಿ ಒಂದು ರಾತ್ರಿ ಇರಬೇಕಾಗುತ್ತದೆ. ಹೊತ್ತು ಮುಳುಗಿದ ಬಳಿಕ ಮುಂದಕ್ಕೆ ಹೋಗಲು ಅಪ್ಪಣೆಯಿರುವದಿಲ್ಲ. ಆದುದರಿಂದ ರಾವಳಪಿಂಡಿಯಿಂದ ಹೊರಟಂದಿನ ಮರುದಿನದ ಬೆಳಗಿನಲ್ಲಿ ಇಲ್ಲಿಂದ ಹೊರಡಬೇಕಾಗುತ್ತದೆ. ಅದರಂತೆಯೇ ನಾನೂ ಬೆಳಗಿನಲ್ಲಿ ಹೊರಟೆನು. ಇಲ್ಲಿಗೆ ನದಿಯ ಆಚೆಯ ದಂಡೆಗೆ ಕಾಶ್ಮೀರದ ನದಿಯು ಬರುವದು. ಆ ಮೇಲೆ ಮುಂದಕ್ಕೆ ಒಂದು ಸುಂಕದಕಟ್ಟೆಯಲ್ಲಿ ಎಲ್ಲ ಸಾಮಾನುಗಳ "ತಪಾಸಣೆ"ಯು ಮೂರು ತಾಸುಗಳವರೆಗಾಯಿತು. ನಂತರ ಮುಂದಕ್ಕೆ ಹೊರಟೆನು. ಇಂದಿನ ಮಾರ್ಗದ ಸೌಂದರ್ಯವೇ ವಿಚಿತ್ರವಾಗಿತ್ತು. ನೋಡಿದತ್ತ ದೇವದ್ವಾರದ ಮರಗಳು ಪರ್ವತಗಳ ಶಿಖರಗಳನ್ನು ಮುಚ್ಚಿದುವ ನೋಟ, ನಡುನಡುವೆ ಎರಡೂ ಬದಿಗೆ ಗೋಡೆಯಂತೆ ಕೊರೆದು ಮಾಡಿದ ಮಾರ್ಗ, ಮತ್ತು ಅಂಕಡೊಂಕಾಗಿ ಸತತವಾಗಿ ಹರಿಯುವ ನದಿಯ ಸೌಂದರ್ಯ ಇವೆಲ್ಲಾ ಕಣ್ಣಿಗೆ ಆನಂದವನ್ನುಂಟುಮಾಡಿದವು. ಮುಂದೆ **ಕೃಷ್ಣಗಂಗೆ** ಹಾಗೂ **ಝೀಲಂ** ನದಿಯ ಸಂಗಮದ ಸ್ಥಾನದಲ್ಲಿ **ಡುಮೇಲ್** ಎಂಬ ದೊಡ್ಡ ಹಳ್ಳಿಯು ಸಿಕ್ಕುತ್ತದೆ. ಅಲ್ಲಿಗೆ ಹೋಗುವಷ್ಟರಲ್ಲಿ ಊಟದ ಹೊತ್ತಾಯಿತು. ಆದ್ದರಿಂದ ಅಲ್ಲಿಯೇ ಒಂದೆರಡು ತಾಸುಗಳವರೆಗೆ ನಿಂತು ಊಟವನ್ನು ತೀರಿಸಿಕೊಂಡೆನು. ಆ ಮೇಲೆ ಸಂಜೆಯವರೆಗೆ ಕಠಿನವಾದ ಪರ್ವತಗಳನ್ನೂ, ದಟ್ಟಡವಿಗಳನ್ನೂ ದಾಟುತ್ತ, ಚಕೋತ, ಉರಿ, ಮಹೋರಾ ರಾಮಪುರಗಳ ಮೇಲಿಂದ **ಬಾರಾಮುಲ್ಲಾ** (ವರಾಹಮೂಲ) ಕ್ಕೆ ಬಂದೆನು. **ಬಾರಾಮುಲ್ಲಾ** ರಾವಳಪಿಂಡಿಯಿಂದ ೧೭೧ ಮೈಲು ದೂರದಲ್ಲಿರುವುದು. ಮಾರ್ಗದಲ್ಲಿರುವ ಮಹೋರಾದಿಂದಲೇ ಇಡೀ ಶ್ರೀನಗರಕ್ಕೆಲ್ಲ ವಿದ್ಯುಲ್ಲತೆಯು ಪೂರೈಸಲ್ಪಡುವದು. ಈ ಮಾರ್ಗದ ವರ್ಣನೆಯನ್ನು ಬಣ್ಣಿಸುವದು ನನ್ನ ಲೇಖಣಿಗಂತೂ ಆಗದ ಮಾತು.

ಬಾರಾಮುಲ್ಲಾದಿಂದ ಶ್ರೀನಗರದವರೆಗಿನ ಮಾರ್ಗವು ಸಮನಾಗಿರುವುದು. ಬೈಲುಪ್ರದೇಶದಲ್ಲಿರುವುದು. ಶ್ರೀನಗರದ ದಾರಿಯಲ್ಲಿ ಎರಡೂ ಬದಿಗಳಲ್ಲಿ ಆಕಾಶವನ್ನು ಚುಂಬಿಸುತ್ತಿರುವಂಥ **ಸಫೇದಾ** ( Poplar ) ಮರಗಳ ಸಾಲುಗಳು ಯಾತ್ರಿಕರ ಮನಸ್ಸನ್ನು ಆನಂದದ ಆಕಾಶದಲ್ಲಿ ವಿಹರಿಸಲು ಕರೆದುಕೊಂಡು ಹೋಗುವವು. ಬಾರಾಮುಲ್ಲಾದಿಂದ ಶ್ರೀನಗರವು ೩೪ ಮೈಲು ದೂರದಲ್ಲಿರುವುದು. ಅಲ್ಲಿಯವರೆಗೂ ಇವೇ ಗಿಡಗಳು ಇರುತ್ತವೆ. ಬಾರಾಮುಲ್ಲಾದಿಂದ ವೂಲರ ಸರೋವರದಲ್ಲಿ ಹಾಯ್ದು ಬೋಟಿನ ಮಾರ್ಗವಾಗಿಯೂ ಶ್ರೀನಗರಕ್ಕೆ ಹೋಗಬಹುದು. ಇಂತಹ ಸರೋವರವು ಹಿಂದುಸ್ತಾನದಲ್ಲಿ ಮತ್ತೊಂದು ಇಲ್ಲವೇ ಇಲ್ಲ. ಇವೆಲ್ಲ ನೋಟಗಳನ್ನು ನೋಡುತ್ತಾ ಸಂಜೆಯ ೬॥ ಗಂಟೆಗೆ ನಂದನವನದ ರಾಜಧಾನಿಯಾದ ಶ್ರೀನಗರಕ್ಕೆ ತಲ್ಪಿದೆನು. ರಾತ್ರಿಯನ್ನು **ಅಮೀರಾಕದಲ** ( Bridge ) ದಲ್ಲಿರುವ ಒಂದು ಧರ್ಮಶಾಲೆಯಲ್ಲಿಯೇ ಕಳೆದು ಮರುದಿನ ಬೆಳಗಿನಲ್ಲಿ ಶಂಕರಮಠಕ್ಕೆ ಹೋದೆನು.

ಹಿಮಾಲಯದಲ್ಲಿ ೫೦೦೦ ಅಡಿಗಳ ಎತ್ತರದ ಮೇಲಿರುವ ಶ್ರೀನಗರದ ಸುತ್ತುಮುತ್ತಲಿನ ವಿಶಾಲವಾದ ಬೈಲು ಪ್ರದೇಶವು ಬೇರೆ ಯಾವ ಭಾಗದಲ್ಲಿಯೂ ಇಲ್ಲವೆಂದರೂ ಅಡ್ಡಿಯಿಲ್ಲ. ನಗರದ ಮಧ್ಯದಲ್ಲಿ ಝೀಲಂ ನದಿಯು ಹಂದಿರುವದರಿಂದ ಒಟ್ಟಿಗೆ ೭ ಪೂಲುಗಳಿರುವವು. ಅದರಿಂದ ಹೊರಟ ಎಷ್ಟೋ ಕಾಲುವೆಗಳ ತಟಗಳ ಮೇಲೆ ಮನೆಗಳು ಕಟ್ಟಲ್ಪಟ್ಟಿರುವವು. ಸಮೀಪದಲ್ಲಿಯೆ ಇದ್ದ **ದಲ್** ಸರೋವರವೂ ಶ್ರೀನಗರದ ಶೋಭೆಯನ್ನೂ ಸೌಂದರ್ಯವನ್ನೂ ಹೆಚ್ಚಿಸುವುದು. ನದಿಯಲ್ಲಿ, ಕಾಲುವೆಗಳಲ್ಲಿ ಅತ್ತಿಂದ ಇತ್ತ, ಇತ್ತಿಂದ ಅತ್ತ ಅಡ್ಡಾಡುವ ಶೃಂಗರಿಸಲ್ಪಟ್ಟ ಚಿಕ್ಕ ಚಿಕ್ಕ ನಾವುಗಳೂ, ತೇಲಾಡುವ ಮನೆ ( House Boats ) ಗಳೂ ಪ್ರವಾಸಿಕರನ್ನು ಬೆರಗುಗೊಳಿಸುವವು. ವಿಲಾಯತಿಯವರು ಇಲ್ಲಿಗೆ ಬಂದಾಗ ಇದು ತಮ್ಮ '**ವೆನಿಸ್**' ಎಂದು ಹೇಳುವರು.

CC-0. Jangamwadi Math Collection. Digitized by eGangotri

ಶ್ರೀನಗರದ ಸುತ್ತಲೂ ಜಗತ್ತಿನಲ್ಲಿ ಶ್ರೇಷ್ಠವೆನಿಸಿಕೊಂಡ ನಿಶಾತ, ಶಾಲಮರ, **ಚಸ್ಮಾಶಾಹೀ**, ನಶೀಮ ಮೊದಲಾದ ತೋಟಗಳು ಇರುವವು. ಇವುಗಳಲ್ಲಿ ಪುಟಿಯುವ ನೂರಾರು ಕಾರಂಜಿಗಳನ್ನು ನೋಡಿದರೆ ಇವು ಆಕಾಶದ ಮೇಲೆ ಮಳೆ ತೂರುತ್ತಿರುವವೋ ಏನೋ ಎಂಬುವಂತೆ ಭಾಸವಾಗುವದು. ಇಲ್ಲಿ ಎಷ್ಟೋ ಜಲಪಾತಗಳೂ ಜನರನ್ನು ಆಚ್ಚರಗೊಳಿಸುವವು. ತೇಲಾಡುವ ಹೊಲ* ಗಳಿಂದ ಶೋಭಿಸುವ ಒಂದೆಡೆಗೆ **ದಲ್** ಸರೋವರವಿರುವದೆಂದು ಮೇಲೆ ಹೇಳಿಯೇ ಇದೆ. ಇನ್ನೊಂದೆಡೆಗೆ ೬೫೦೦ ಅಡಿ ಎತ್ತರವಾದ ಶಂಕರಪರ್ವತವುಂಟು. ಇದರ ಮೇಲೆ ನಿಂತು ನೋಡಿದರೆ ಶ್ರೀನಗರದ ಸುತ್ತುಮುತ್ತವಾದ ಮೂರ್ತಿಯು ಕಂಗೊಳಿಸುವುದು. ಇಷ್ಟೇ ಅಲ್ಲದೆ ಕಾಶ್ಮೀರದ ಪ್ರಾಚೀನ ಲಲಿತಕಲೆಗಳ ಕಲ್ಪನೆಯನ್ನು ತಂದುಕೊಡುವ ಪ್ರದರ್ಶನವೂ, ರೇಶಿಮೆಯ ಕಾರಖಾನೆಯೂ, ಜುಮ್ಮಾಮಶೀದೆಯೂ, ಹಾರ್ವನ್ ಕೆರೆಯೂ, ಹರಿಪರ್ವತ ಕಿಲ್ಲೆ ಮೊದಲಾದ ಸ್ಥಳಗಳೂ ದರ್ಶನೀಯವಾಗಿರುವವು.

ಶ್ರೀನಗರಕ್ಕೆ ಬಂದವರು ಪ್ರತಾಪಭವನ-ಶೀಖಧರ್ಮಶಾಲಾ-ಸನಾತನಧರ್ಮಶಾಲಾ – ಆರ್ಯಧರ್ಮಶಾಲಾ ಮೊದಲಾದ ಧರ್ಮಶಾಲೆಗಳಲ್ಲಿ, ಹೊಟೆಲುಗಳಲ್ಲಿ,ಬಂಗಲೆಗಳಲ್ಲಿ, ತೇಲಾಡುವ ಮನೆಗಳಲ್ಲಿ ಅಥವಾ ತಂಬೂಗಳಲ್ಲಿ ಇಳಕೊಳ್ಳಬಹುದು. ಅವುಗಳಲ್ಲಿ ಪ್ರತಿಯೊಂದು ತಹ



ಮನೋಹರವಾದ ಚಸ್ಮಾಶಾಹೀ ಬಾಗ

ಲಿರುವ ಸೃಷ್ಟಿದೇವಿಯ ಹಸರು ಸೀರೆಯ ಮೇಲೆ ಸುತ್ತುಗಟ್ಟಿರುವ ಹಿಮಾಲಯಪರ್ವತಗಳ ಸಾಲು, ಬೆಳ್ಳಿಯ ಪಟ್ಟಿಯಂತೆ ದೃಷ್ಟಿಗೆ ಗೋಚರವಾಗುವುದು. ಅಲ್ಲದೆ ಡೊಂಕಡೊಂಕಾಗಿ ಹರಿದ '**ಝೇಲಂ**' ನದಿಯು ಸೃಷ್ಟಿದೇವಿಯ ರಕ್ಷಣೆಗಾಗಿ ಬಿದ್ದುಕೊಂಡಿರುವಂತೆ ಕಾಣುವುದು. ಇಲ್ಲಿ ಕಟ್ಟಡಗಳು ನೋಡತಕ್ಕಂಥವುಗಳಿರುವುದಿಲ್ಲ. ಆದರೆ ಸದಾ ಸರ್ವಕಾಲ ಆನಂದವನ್ನುಂಟು ಮಾಡುವಂತಹ ಸೃಷ್ಟಿದೇವಿಯ ಮನೋಹರ

ಅನುಕೂಲತೆಯು ಇರುವುದು. ಅವುಗಳ ಬಾಡಿಗೆ ತಿಂಗಳೊಂದಕ್ಕೆ ೪೦ ರೂಪಾಯಿಗಳಿಂದ ೫೦೦ ರೂಪಾಯಿಗಳ ವರೆಗೂ ಇರುವುದು. ಆದರೆ ನಸಗೆ ಏಕಾಂತವಾಸವು ಹೆಚ್ಚಿಗೆ ಸೇರುವುದರಿಂದ ಶಂಕರಪರ್ವತದ ಗುಡಿಯಲ್ಲಿ ಇರಲು ಶಂಕರಮಠಾಧಿಪತಿಗಳಿಂದ ಅನುಕೂಲತೆಗಳನ್ನು ಒಡಗಿಸಿಕೊಂಡು, ದೇವಸ್ಥಾನದಲ್ಲಿಯೇ ಇರಹತ್ತಿದೆನು.

ಭಗವಂತನ ಇಚ್ಛೆಯಂತೆ ಶ್ರೀನಗರದಲ್ಲಿ ಕೆಲವು ದಿನಗಳ ವರೆಗೆ ಇದ್ದು, ಶ್ರೀ ಜುಗುಲಕಿಶೋರ ಬಿರಲಾ

* ತೇಲಾಡುವ ಹೊಲಗಳೆಂದರೆ ಒಂದು ಪ್ರಕಾರದ ಹುಲ್ಲುಗಡ್ಡೆಯನ್ನು ಒಣಗಿಸಿ ಆದರ ಮೇಲಾಗಲಿ ದೇವದ್ವಾರದ ಹಲಿಗೆಗಳ ಮೇಲಾಗಲಿ ಮಣ್ಣನ್ನು ಒಟ್ಟಿ ಬೆಳೆಯನ್ನು ಬೆಳಸುವರು.

CC-0. Jangamwadi Math Collection. Digitized by eGangotri

ಅವರ ಸಂಗಡ ಶ್ರೀನಗರದ ಸುತ್ತುಮುತ್ತಲಿನ ಪ್ರದೇಶವನ್ನು ನೋಡಿದೆನು. ಧ್ಯಾನ ಭಜನಾದಿಗಳಿಗೆ ಶ್ರೀಶಾರದಾಸ್ಥಾನವು ಒಳಿತಾದುದೆಂದು ಹೇಳಿದ್ದರಿಂದ **ನಂದರಾಮ**ನೆಂಬ ಮಿತ್ರನೊಂದಿಗೆ ೮೨ ಮೈಲು ದೂರದಲ್ಲಿರುವ ಶಾರದಾಸ್ಥಾನಕ್ಕೆ ಹೋದೆನು. ಅಲ್ಲಿ ಕೆಲವು ದಿನಗಳನ್ನು ಸ್ವಾಮಿ **ತಪೋವನಜೀ**ಯವರ ಸಂಗಡ ಧ್ಯಾನಮಗ್ನನಾಗಿ ಆನಂದದಲ್ಲಿ ಕಳೆದೆನು. ತಿರುಗಿ ಶಂಕರಪರ್ವತಕ್ಕೆ ಬಂದು ಅಲ್ಲಿರಹತ್ತಿದಾಗ **ಶ್ರೀ ಸೀತಾರಾಮ ಖೇಮುಕಾ** (ಸೆಕ್ರೆಟರಿ) ಹಾಗೂ **ಭಗೀರಥಜೀ ಕಾಂಡಿಯಾ** (ಮ್ಯಾನೇಜರ) ಎಂಬವರ ವಿಶೇಷ ಪರಿಚಯವಾಯಿತು. ಇವರ ಸಂಗತ ಇದ್ದುಕೊಂಡು ಇಡೀ ಕಾಶ್ಮೀರದ ಪ್ರವಾಸವನ್ನು ಮಾಡಿದೆನು. ಅದು ಈ ಪ್ರಕಾರ:-

ಮೇಲಿಂದ ಬಾರಾಮುಲ್ಲಾದ ವರೆಗೂ ಹೋಗಬಹುದು.

ಶ್ರೀ. ಬಿರಲಾರವರ ವಿನೋದಮಂಡಲಿಯ ಸಂಗಡ ಸ್ಪೇಶಲ್ ಮೋಟಾರಿನಿಂದ ಶ್ರೀನಗರವನ್ನು ಬಿಟ್ಟು ೩೫ ಮೈಲು ದೂರದಲ್ಲಿರುವ ಗುಲಮರ್ಗಕ್ಕೆ ಹೋದೆನು. ಗುಲಮರ್ಗದ ಅಡಿಯಲ್ಲಿರುವ ಟಾಂಗಮರ್ಗದ ವರೆಗೆ ಮಾತ್ರ ಮೋಟಾರುಗಳು ಹೋಗುತ್ತವೆ. ಮುಂದೆ ಕಾಲುನಡಿಗೆಯಿಂದಾಗಲಿ ಅಥವಾ ಕುದುರೆಯ ಮೇಲಿಂದಾಗಲಿ ಹೋಗಬೇಕು. ಗುಲಮರ್ಗವು ೯೦೦೦ ಅಡಿ ಎತ್ತರದಲ್ಲಿರುವುದು. ಇಲ್ಲಿ ವಿಶೇಷವಾಗಿ ಪಾಶ್ಚಿಮಾತ್ಯ ಪದ್ಧತಿಯಂತೆ ಕಟ್ಟಿದ ಕಟ್ಟಿಗೆಯ ಮನೆಗಳಿವೆ. ಪಾಶ್ಚಿಮಾತ್ಯರಿಗೆ ಬೇಕಾಗುವ ಎಲ್ಲ ಸೌಕರ್ಯಗಳೂ ಇಲ್ಲಿವೆ. ವಿಶೇಷವಾಗಿ ಪಾಶ್ಚಿಮಾತ್ಯರೇ ಬಹುದಿನಗಳ ವರೆಗೆ ವಾಸಿಸುತ್ತಾರೆ. ಇಲ್ಲಿ ವನಲಕ್ಷ್ಮಿಯ ಒನಪು ನೋಡ




ಜಗತ್ತಿನಲ್ಲಿ ಶ್ರೇಷ್ಠವೆನಿಸಿಕೊಂಡ ಶಾಲ್ಮರಬಾಗ

ಶ್ರೀನಗರದಿಂದ ತೇಲುವ ಮನೆಗಳಲ್ಲಿ ಕುಳಿತು ಕಮಲಗಳಿಂದ ತುಂಬಿದ ವಿಶಾಲವಾದ ಅಂಚಾಲ ಸರೋವರದಲ್ಲಿ ಹಾಯ್ದು ಪರ್ವತಗಳ ಅಡಿಯಲ್ಲಿರುವ-ಬಸಸಿರಿಯ ನೆರಳಲ್ಲಿರುವ-ಸುಮನೋಹರವಾದ ಗಂಧಾರಬಲ್ಲವೆಂಬ ಸಿಹಿನೀರಿನ ಸೆಲೆಯನ್ನು ನೋಡಿಕೊಂಡು ಅಲ್ಲಿಂದ ೧-೨ ಮೈಲು ದೂರದಲ್ಲಿರುವ ಖೀರಭವಾನಿ ಮಂದಿರಕ್ಕೆ ಹೋಗಿ ಅವಳ ದರ್ಶನ ತೆಗೆದುಕೊಂಡು ಹಿಂತಿರುಗಿದೆವು. ಇಲ್ಲಿಂದ **ಸಂವಲ** ಹಾಗೂ **ವೂಲರ** ಸರೋವರಗಳ

ತಕ್ಕಂತಹದಿರುತ್ತದೆ. ಇಲ್ಲಿಂದ ೧-೨ ಮೈಲು ದೂರದ ಮೇಲೆ ಇದಕ್ಕೂ ಎತ್ತರವಾದ ಖಿಲನ್‌ಮರ್ಗವು ಇರುತ್ತದೆ. ಅಲ್ಲಿ ಹಿಮದ ಪರ್ವತಗಳು ಇರುವವು. ಅಲ್ಲಿ ಜರೆಗುಂಡಿ ( Skating ) ಆಟವನ್ನು ವಿಶೇಷವಾಗಿ ಆಡಲು ಹೋಗುವರು. ಅದಕ್ಕೂ ಮುಂದೆ ೧೫ ಮೈಲಿನ ಮೇಲೆ ಕಡಿದಾದ ಬೆಟ್ಟವನ್ನೇರಿ ಹೋಗಿ ನೋಡಿದರೆ ಹಾಲಿನಂತೆ ಒಪ್ಪುವ ನೀರುಳ್ಳ ಕೆರೆಯೊಂದಿರುವುದು. ಇದಕ್ಕೆ **ಅಲ್ಲೋಪಥ್ಥರ**ವೆಂದು ಹೇಳುವರು. ಈ ಸ್ಥಾನಕ್ಕೆ

CC-0. Jangamwadi Math Collection. Digitized by eGangotri

ನಾನು ಹಾಗು ಸೀತಾರಾಮ ಶೇಮರಾ ಇಬ್ಬರ ಕುದುರೆಯ ಮೇಲಿಂದ ಹೋಗಿಬಂದೆವು. ಪರದೇಶದವರು ಇದನ್ನು ನೋಡಲು ವಿಶೇಷವಾಗಿ ಹೋಗುತ್ತಾರೆ.

ಇಷ್ಟು ನೋಡಿದ ನಂತರ ಮರಳಿ ಶ್ರೀನಗರಕ್ಕೆ ಬಂದು ಅಲ್ಲಿಂದ ಜಮ್ಮೂದ ಮಾರ್ಗಹಿಡಿದೆನು. ೧೫ ಮೈಲು ದೂರ ಹೋದಮೇಲೆ ಪಾಂಪೂರ ಎಂಬಲ್ಲಿ ಕೇಶರದ ಹೊಲಗಳು ಹತ್ತಿದುವು. ಮುಂದೆ ೨೦ ಮೈಲಿನ ಮೇಲೆ ಅನಂತನಾಗವೆಂಬ ಪಟ್ಟಣವು ಸಿಕ್ಕುವುದು. ಇಲ್ಲಿ ಅನೇಕ ಸೆಲೆಗಳು ಹುಟ್ಟಿ ಹರಿದಿರುವುದರಿಂದ ಅನಂತನಾಗ ವೆಂದು ಈ ವಸತಿಗೆ ಹೆಸರು ಬಿದ್ದಿದೆ. ಇಲ್ಲಿ ಗಂಧಕದ ಸೆಲೆಯೂ ಇರುವುದು. ಅದರಲ್ಲಿ ಸ್ನಾನ ಮಾಡುವುದ ರಿಂದ ಚರ್ಮರೋಗಗಳು ಇಲ್ಲದಾಗುವವು. ಇಲ್ಲಿಂದ ಮುಂದೆ ೨೦ ಮೈಲಿನ ಮೇಲೆ ಇರುವ ಝೇಲಂ ನದಿಯ ಉಗಮಸ್ಥಾನವಾದ ವ್ಹೇರಿನಾಗಕ್ಕೆ ಹೋದೆವು. ಇಲ್ಲಿ ನೀರು ನೆಲದೊಳಗಿಂದ ಹರಿದು ಬಂದು ಮೇಲೆ ಪುಟಿದು ಹರಿಯುತ್ತದೆ. ಇದೇ ಮುಂದೆ ಝೇಲಂ ನದಿಯೆಂದು ಪ್ರಸಿದ್ಧವಾಗುತ್ತದೆ. ತರತರದ ಹಣ್ಣಿನ ಗಿಡಗಳ ತೋಟಗಳು ಇದರ ಸುತ್ತಲೂ ಇವೆ. ಅಲ್ಲಿಂದ ತಿರುಗಿ ಬರುವಾಗ **ಅಚ್ಛ್ಯಾಲ್** ತೋಟಕ್ಕೆ ಹೋದೆವು. ಇದು ಕಾಶ್ಮೀರದಲ್ಲಿ ಒಂದನೇ ತರಗತಿಯ ತೋಟವೆಂದು ಹೆಸರಾಗಿದೆ. ಇಲ್ಲಿಯೇ ಒಂದು **"ಟ್ರಾವುಟ್ ಫಿಶರಿ"** (ಮೀನಗಳನ್ನು ಬೆಳೆಸುವ ಸ್ಥಳ)ಯೊಂದಿದೆ.

## ಅಮರನಾಥನ ಯಾತ್ರೆ

ಅನಂತನಾಗದಿಂದ ೩೭ ಮೈಲು ದೂರದಲ್ಲಿರುವ ಪಹಲಗಾಂವ ಎಂಬ ೭೨೦೦ ಅಡಿ ಎತ್ತರವಾದ ಪ್ರಕೃತಿಯ ಬೆಡಗಿನ ಸ್ಥಳಕ್ಕೆ ಹೋದೆವು. ಬೇಸಿಗೆಯ ಕಾಲದಲ್ಲಿ ವಿಶ್ರಾಂತಿಯನ್ನು ಹೊಂದಲು ಇಲ್ಲಿಗೆ ಅನೇಕರು ಬರುತ್ತಾರೆ. ವಿಶೇಷವಾಗಿ ಗುಲಮರ್ಗದಲ್ಲಿ ಪಾಶ್ಚಿಮಾತ್ಯರ ಬಂದು ವಾಸಿಸುವಂತೆ ಪಹಲಗಾಂವಕ್ಕೆ ಪೌರ್ವಾತ್ಯರು ಬಹುತರವಾಗಿ ಹಿಂದುಸ್ತಾನೀ ಜನರು ವಾಸಿಸಲು ಬರುವರು. ಇದಕ್ಕೆ ಹೋಗುವ ದಾರಿಯಲ್ಲಿ ಮಾರ್ತಾಂಡದೇವಾಲಯವೆಂಬ ಒಂದು ಪುರಾತನ ಗುಡಿಯಿದೆ. ಇದು ಕಟ್ಟಿಗೆಯ ಶಿಲ್ಪಕಲೆಯಲ್ಲಿ ಹೆಸರಾದುದು. ಇಲ್ಲಿಂದ ನಾನೊಬ್ಬನೇ ಅಮರನಾಥಕ್ಕೆ ಹೋದೆನು. ಉಳಿದವರು ಒಂದೆರಡು ದಿನಗಳಲ್ಲಿ ಪಹಾಲಗಾಂವದಿಂದ ಹಿಂತಿರುಗಿ ಹೋದರು.

ಅಮರನಾಥನ ಯಾತ್ರೆಗೆ ಹೋಗಬೇಕಾದರೆ ಎದೆಗೆ ಅಗ್ಗಿಷ್ಟಿಗೆ ಹಿಡಕೊಂಡು ಕಾಸಿಕೊಳ್ಳುತ್ತ ಹೋಗಬೇಕಾಗುವದೆಂದೂ, ಮಂಜುಗಡ್ಡೆಯ ಪೂಲು ಕೊಳ್ಳಗಳನ್ನು ದಾಟಿ, ಹಿಮದ ಪರ್ವತಶಿಖರದೊಳಗಿರುವ ಗುಹೆಯೊಳಗಿನ ಮಂಜುಗಡ್ಡೆಯ ಲಿಂಗ(ಅಮರನಾಥ)ದ ದರ್ಶನ ತೆಗೆದುಕೊಳ್ಳಬೇಕಾಗುವುದೆಂದೂ ಕೇಳಿದ್ದೆನು. ಅದ ರಿಂದ ಉಣ್ಣೆಯ ಪೋಷಾಕು ಮಾಡಿಕೊಂಡು ಜಾತ್ರೆಯ ಕಾಲಕ್ಕಿಂತ ಒಂದು ತಿಂಗಳ ಮೊದಲೇ ಹೊರಟೆನು. ಶ್ರೀ. ಭಗೀರಥಜೀಯವರು ಪಂಡಿತ ಸುಲ್ತಾನ ಭಟ್ಟ (ಭಕ್ಷ)ನೆಂಬ ಒಬ್ಬ ಪಂಢಾರಿಯನ್ನು ಮಾರ್ಗದರ್ಶಕನ್ನಾಗಿ ಮಾಡಿ ಸಂಗಡ ಕಳಿಸಿದ್ದರಿಂದ ಮೂರು ಗಂಡಾಂತರಗಳೊಳಗಿಂದ ಪಾರಾಗಿ ಬಂದೆನು. ಆದರೂ ಅನೇಕ ಲ್ಲಿಯೆ ಈ ಯಾತ್ರೆಯು ಕೊನೆಗಂಡಿತೆಂದು ನನ್ನಗ್ರಹಿಕೆ.

ಪ್ರತಿವರ್ಷ ಶ್ರಾವಣ ಪೌರ್ಣಿಮೆಗೆ ಅಮರನಾಥ ಜಾತ್ರೆಯಾಗುವುದು. ಆಗ ಎಷ್ಟೋ ಯಾತ್ರಿಕರು ಅಲ್ಲಿಗೆ ಹೋಗುವರು. ಆಗ ಸಹಾಯಬೇಕಾದ ಯಾತ್ರಿಕರಿಗೆ ಮಹಾರಾಜನಿಂದ ಅನ್ನ, ವಸ್ತ್ರ, ತಂಬು, ಉರವಲು , ಅಗ್ಗಿಷ್ಟಿಗೆಗಳೂ ದೊರೆಯುತ್ತವೆ. ಪಹಲ ಗಾಂವಿನಿಂದ ೪೦ ಮೈಲು ದೂರದಲ್ಲಿ ನಿಡಿದಾದ ಉನ್ನತವಾದ ಪರ್ವತಗಳನ್ನು ಏರಿ ಇಳಿದು ಹೋದಮೇಲೆ ಅಮರನಾಥನ ದರ್ಶನವಾಗುತ್ತದೆ. ಮಾರ್ಗದಲ್ಲಿ ಚಂದನವಾಡಿ, ಶಶಿನಾಗ, ಪಂಚತರಣಿಗಳು ಹತ್ತುತ್ತವೆ. ಈ ಮಾರ್ಗದ ಹೊರತಾಗಿ ಇನ್ನೂ ಒಂದು ಇದಕ್ಕಿಂತಲೂ ಕಠಿಣವಾದ ಮಾರ್ಗವಿದೆ. ಅದಕ್ಕೆ ಆಸ್ಥಾನಮರ್ಗದ ಮಾರ್ಗವೆಂದು ಹೇಳುತ್ತಾರೆ. ನಾನು ಕದುರೆಯನ್ನೇರಿ ಪಂಡಿತ ಸುಲ್ತಾನ ಭಟ್ಟನ ಸಂಗಡ ಹೊರಟೆನು. ಬೇಗನೆ ತಿರುಗಿಬರಬೇಕೆಂಬ ಹೇತುವಿನಿಂ- ಇವನು ನನ್ನನ್ನು ಆಸ್ಥಾನಮರ್ಗದ ಮಾರ್ಗ ದಿಂದಲೇ ಕರೆದುಕೊಂಡು ನಡೆದನು. ಆದರೆ ದಾರಿಯಲ್ಲಿ ಒಂದೆಡೆಗೆ ಒಂದು ಮಂಜುಗಡ್ಡೆಯ ಪೂಲನ್ನು ದಾಟು ವಾಗ ಮಂಜುಗಡ್ಡೆಯ ಪರ್ವತದೊಳಗಿಂದ ೪-೬ ಮೈಲು ಏರಿ ಹೋಗುವಾಗ ಕುದುರೆಯೂ ನಾನೂ ಒಮ್ಮೆ ಹಿಮದಲ್ಲಿ ಸಿಕ್ಕುಬಿದ್ದೆವು. ಅಮರನಾಥನ ಕೃಪೆಯಿಂದ ಇಬ್ಬರೂ ಪಾರಾಗಿ ಪಂಚತರಣಿಗೆ ಹೋಗಿ ಮುಟ್ಟಿದೆವು. ಈ ಮಾರ್ಗದಲ್ಲಿಯೇ **'ಶ್ವಾಸಕಟ್'** (ಉಸಿರುಬಂದಿ) ಎಂಬದೊಂದು ಸ್ಥಾನವುಂಟು. ಅಲ್ಲಿ ೧೫೧ ರಷ್ಟು ೫೦ ಸಾವಿರ ಜನರು ಮೋಡ ಮುಸುಕಿದ್ದರಿಂದ

CC-0. Jangamwadi Math Collection. Digitized by eGangotri

ಮಾರ್ಗವು ಸಿಗದೆ ಮರಣಕ್ಕೀಡಾದವು. ಇಲ್ಲೊಂದು ದೊಡ್ಡ ಮಂಜುಗಡ್ಡೆಯ ಕೆರೆ ಇರುವುದು. ಅದಕ್ಕೆ 'ಹಥ್ಯಾರನಾಗ'ವೆಂದೆನ್ನುವರು. ಅಂದರೆ 'ಕೊಲ್ಲುವ ಕೆರೆ' ಎಂಬ ಅರ್ಥ. ಪಂಚತರಣಿಯಲ್ಲಿಯೇ ಕುದುರೆಯನ್ನು ಬಿಟ್ಟು ನಡೆಯುತ್ತ ಮಂಜುಗಡ್ಡೆಯ ಕೊಳ್ಳಗಳೊಳಗಿಂದ ಹಾಯ್ದು ಅಮರನಾಥನ ಗುಹೆಯನ್ನು ಮುಟ್ಟಿದೆವು.

ಈ ಗುಹೆಯಲ್ಲಿ ಮೇಲಿನಿಂದ ನೀರಿನ ಹನಿಗಳು ಬೀಳುತ್ತಿರುವವು. ಅವು ಮರಳಿ ಗಟ್ಟಿಯಾಗಿ ಲಿಂಗಾಕಾರವಾಗುತ್ತವೆ. ಇದಕ್ಕೇ ಅಮರನಾಥನ ಲಿಂಗವೆಂದು ಹೇಳುತ್ತಾರೆ. ಇದು ಪೌರ್ಣಿಮೆಯ ವರೆಗೆ ಬೆಳೆಯುತ್ತದೆಂದೂ ಮತ್ತೆ ಅಮಾವಾಸ್ಯೆಯ ವರೆಗೆ ಕರಗುತ್ತ ಹೋಗುತ್ತದೆಂದೂ ಹೇಳುತ್ತಾರೆ. ಆದರೆ ಇದರ ನಿಜ ಸಂಗತಿಯು ಗೊತ್ತಾಗಿಲ್ಲ. ಗುಹೆಯಲ್ಲಿ ಮೂರು ನಾಲ್ಕುನೂರು ಜನರು ಕುಳಿತುಕೊಳ್ಳಲಿಕ್ಕೆ ಬರುವಷ್ಟು ಸ್ಥಾನವಿರುವುದು. ಸುತ್ತಲೂ ಹತ್ತು ಮೈಲುಗಳ ವರೆಗೆ ಎಲ್ಲಿಯೂ ಕಟ್ಟಿಗೆ ದೊರೆಯುವುದಿಲ್ಲ. ಬೆಂಕಿಯ ಹೊರತು ಯಾರಿಗೂ ಇಲ್ಲಿರುವುದೇ ಅಸಾಧ್ಯ. ನಾನಲ್ಲಿಗೆ ಹೋದಾಗ ಉದೇಪುರದ ಗೃಹಸ್ಥನೊಬ್ಬನು ಅಲ್ಲಿ ತಂಬು ಹೊಡೆದು ಧ್ಯಾನಸ್ಥನಾಗಿ ಕುಳಿತಿದ್ದನು. ನಾನು ತಿರುಗಿ ಹೊರಡಲು ಉದ್ಯುಕ್ತನಾದಾಗ ನನಗೆ ತನ್ನೊಡನೆಯೇ ಅಲ್ಲಿರಲು ಹೇಳಿದನು. ಆದರೆ ನಾನು ಬಿರಲಾಜೀಯವರಿಗೆ ತಿರುಗಿ ಬೇಗನೆ ಬರುವೆನೆಂದು ವಚನ ಕೊಟ್ಟಿದ್ದರಿಂದ ತಿರುಗಿ ಹೊರಡಲೇ ಬೇಕಾಯಿತು. ನಾನು ಈ ಪೂರ್ವದಲ್ಲಿ ಒಂದೇ ಒಂದು ಗಂಡಾಂತರದ ಉಲ್ಲೇಖ ಮಾಡಿರುವೆನು. ಉಳಿದವೆರಡು ಗಂಡಾಂತರಗಳು ಯಾವವೆಂದರೆ ಆಸ್ಥಾನಮರ್ಗದ ವರೆಗೆ ಮಂಜುಗಡ್ಡೆಯ ಶಿಖರದಿಂದ ಜರೆಯುತ್ತ ಬರುವಾಗ ತಲೆ ಕೆಳಗಾಗಿ ಗಂಡಾಂತರಕ್ಕೆ ಈಡಾಗಿದ್ದೆನು. ಮತ್ತೊಮ್ಮೆ ಕುದುರೆಯು ಗಾಬರಿಯಾಗಿ ನನ್ನನ್ನು ಕೆಳಕ್ಕೆ ಕೆಡವಿ ಓಡಿಹೋಯಿತು. ಕಡೆಗೆ ಅದು ಸಿಕ್ಕಿತು. ಕುದುರೆಯ ಸಂಗಡ ಹೌಹಾರಿದ ಪ್ರಾಣವೂ ತಿರುಗಿ ಬಂದಿತು. ಅಂತೂ ಅಮರನಾಥಕ್ಕೆ ಹೋಗಿ ಅಮರನಾಗಿ ಶ್ರೀನಗರಕ್ಕೆ ತಿರುಗಿದೆನು.

ಕಾಶ್ಮೀರೀಜನರ ಶೀಲ ಸ್ವಭಾವ ನಡೆ ಹಾಗೂ ನುಡಿಗಳು

ಕಾಶ್ಮೀರೀ ಜನರೆಲ್ಲ ಬಹುತರವಾಗಿ ಬಡವರೂ, ಪ್ರಾಮಾಣಿಕರೂ, ಕಷ್ಟಸಹಿಷ್ಣುಗಳೂ ಆಗಿದ್ದು, ತಮ್ಮಲ್ಲಿದ್ದಷ್ಟರಿಂದಲೇ ಅತಿಥಿಗಳ ಸತ್ಕಾರ ಮಾಡುವುದರಲ್ಲಿ ಹೆಸರಾಗಿರುವರು. ಇಲ್ಲಿ ನೂರಕ್ಕೆ ೯೫ ಜನರು ಮುಸಲ್ಮಾನರಿರುವರು. ಉಳಿದ ೫ ಜನರಲ್ಲಿ ಎಲ್ಲ ಜಾತಿಯವರೂ ಎಲ್ಲ ಪಂಗಡದವರೂ ಇರುತ್ತಾರೆ. ಆದರೆ ಇಲ್ಲಿರುವ ಮುಸಲ್ಮಾನರು ಬಲಾತ್ಕಾರದಿಂದ ಮುಸಲ್ಮಾನರಾದವರು. ಇದು ಅವರ ಹೆಸರು, ನಡೆನುಡಿಗಳ ಮೇಲಿಂದಲೇ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಉದಾ:—ಪಂಡಿತ ಗುಲಾಮ ಹೈದರ, ಪಂಡಿತ ಸುಲ್ತಾನ ಭಟ್ಟ(ಭಕ್ಷ)ತದಿ. ಈ ಹೆಸರುಗಳಿಂದ ಇವರು ಬ್ರಾಹ್ಮಣರಿದ್ದರೆಂದು ತಿಳಿಯುತ್ತದೆ. ಪಂಡಿತರೆಂಬ ಬಿರುದು ಬ್ರಾಹ್ಮಣರಿಗೇ ಪೂರ್ವದಲ್ಲಿ ಕೊಡಲ್ಪಡುತ್ತಿತ್ತು. ಕಚ್ಚಾ ಮುಸಲ್ಮಾನರೇ ಈಗಲೂ ಉತ್ತರ




ಕಾಶ್ಮೀರಿ ಜನರ ಮನೆಗೆಲಸಗಳು

CC-0. Jangamwadi Math Collection. Digitized by eGangotri

ಭಾರತದಲ್ಲಿ ಬ್ರಾಹ್ಮಣರ ಮನೆಗಳಲ್ಲಿಯೂ, ಕಾಶ್ಮೀರದ ಶಂಕರಾಚಾರ್ಯರ ಮಠ ಗುಡಿಗಳಲ್ಲಿಯೂ ನೀರು ತುಂಬುವುದು ಮೊದಲಾದ ಕಾರ್ಯಗಳನ್ನು ಮಾಡುತ್ತಾರೆ. ಬ್ರಾಹ್ಮಣಿಯು ಮಾಡಿಕೊಟ್ಟ ಅಡಿಗೆಯನ್ನು ಯಜಮಾನರಿಗೆ ಒಯ್ದು ಮುಟ್ಟಿಸುವ ಕಾರ್ಯವನ್ನು ಮಾಡುತ್ತಾರೆ. ಆದರೆ ಅವರು ಹಿಂದೂ ಜನರು ಮಾಡಿದ ಅಡಿಗೆಯನ್ನು ಉಣ್ಣುವುದಿಲ್ಲ. ಉಪಹಾರವನ್ನೂ ತೆಗೆದುಕೊಳ್ಳುವುದಿಲ್ಲ. ಇಷ್ಟು ಉಗ್ರ ಮುಸಲ್ಮಾನರಾಗಿರುವರು. ಇದಕ್ಕೆ ಪಂಜಾಬದ ಮೌಲ್ವಿಗಳ ಉಪದೇಶವೇ ಕಾರಣವಾಗಿದೆ. ಈ ಜನರು ಹೊರಗಿನಿಂದ ಬಂದ ಯಾತ್ರಿಕರಿಗೆ ಎಲ್ಲ ರೀತಿಯಿಂದ ಅನುಕೂಲತೆಗಳನ್ನು ಮಾಡಿಕೊಡುವರು.

ಈ ಜನರು ಹೆಚ್ಚಾಗಿ ಒಕ್ಕಲುತನ ಉಣ್ಣೆಬಟ್ಟೆಯ ನೇಯ್ಗೆಗಳಲ್ಲಿಯೆ ತಮ್ಮ ಕಾಲವನ್ನು ಕಳೆಯುವರು. ಇವರ ಆಹಾರವೆಂದರೆ ಅನ್ನ, ಗೋವಿನಜೋಳದ ರೊಟ್ಟಿ ಮತ್ತು ಕರಮಕೀ ಸಾಗ (ಹರಿವೆ ಸೊಪ್ಪಿನಂಥ ಒಂದು ಪಲ್ಲೆ) ಇವು. ಬೇಳೆಯ ಉಪಯೋಗವು ಕಡಿಮೆ. ಕಾಶ್ಮೀರವು ಹಣ್ಣುಹಂಪಲಕ್ಕೆ ಹೆಸರಾಗಿರುವುದು. ಆಲಬುಖಾರಾ, ದ್ರಾಕ್ಷಿ, ಸೇಬು, ಗಿಲಾಸ, ಬದಾಮ, ಅಕ್ರೋಡ, ಬೇದಾಣೀ ಮತ್ತು ಎಲ್ಲಕ್ಕೂ ಶ್ರೇಷ್ಠವಾದ ಬಗುಘೋಷಾ ಮೊದಲಾದ ಹಣ್ಣುಗಳು ವಿಪುಲವಾಗಿ ಬೆಳೆಯುತ್ತವೆ. ದುಡ್ಡಿಗೆ ೩–೪ ಸೇಬು ಹಣ್ಣುಗಳೂ, ನಾಲ್ಕಾಣೆಗೆ ೮೦ ತೊಲಿ ತೂಕದ ಒಂದು ಸೇರು ದ್ರಾಕ್ಷಿಯೂ ದೊರೆಯುತ್ತವೆ.

ಇಲ್ಲಿಯ ಉಣ್ಣೆಬಟ್ಟೆಗಳಲ್ಲಿ ಪಶ್ಮೀನಾ ಶಾಲುಗಳು, ರೇಶ್ಮೆ ಬಟ್ಟೆಗಳೂ ಜಗತ್ಪ್ರಸಿದ್ಧವಾಗಿವೆ. ಇಲ್ಲಿ ಚಿಮಣಿ ಎಣ್ಣೆ ಮತ್ತು ಕಡ್ಡಿಪೆಟ್ಟಿಗೆಯ ಕಾರಖಾನೆಗಳು ಉತ್ತಮ ರೀತಿಯಿಂದ ನಡೆಯಬಹುದೆಂದು ಅನೇಕ ಶೋಧಕರ ಮತವಿದ್ದರೂ ರಾಜರ ಸಹಾಯವಿಲ್ಲದ್ದರಿಂದ ಮುಂದಕ್ಕೆ ಬಾರದಾಗಿವೆ. ಯಾವಾಗ ಹೊರಬೀಳುವವೋ ದೇವ[illegible] ಬಲ್ಲ. ಕಟ್ಟಿಗೆಯಲ್ಲಿ ಕೆತ್ತಿಗೆಯ ಕೆಲಸವನ್ನು ಇ[illegible] ಚೆನ್ನಾಗಿ ಮಾಡುವರು. ಆಯುಧಗಳನ್ನು ತಯಾರಿ[illegible] ವರು. ಇದು ಲಲಿತಕಲೆಗಳ ಕಣಿಯೂ ಸರಿ.

ಕಾಶ್ಮೀರದಲ್ಲಿಯ ಇನ್ನೊಂದು ವಿಚಿತ್ರ ಸಂ[illegible] ಏನೆಂದರೆ ಕೋಸ್ತವಾಡ ಮತ್ತು ಪಾಡರ ಹಳ್ಳಿ[illegible] ಹೆಂಗಸರು ಬಹಳೇ ಸುಂದರಿಯರೆಂದು ಪ್ರಸಿದ್ಧ[illegible] ಅವರನ್ನು ಅಷ್ಟು ಸುಂದರಿಯರನ್ನಾಗಿ ಅಲ್ಲಿಯ ಪ್ರ[illegible] ತಿದೇವಿಯೇ ಮಾಡಿದ್ದಾಳೆ. ಆದರೆ ದೇವರ ಆ ವರದ ದು[illegible] ಪಯೋಗವು ಅಲ್ಲಿ ಬಹುದಿನಗಳಿಂದ ನಡೆದಿದೆ. ಅಲ್ಲಿ[illegible] ಜನರು ಕಲಕತ್ತಾ ಲಾಹೋರ ಕಡೆಗಳಲ್ಲಿಯ ಶ್ರೀಮ[illegible] ರಿಗೆ ತಮ್ಮ ಹೆಣ್ಣುಮಕ್ಕಳನ್ನು ಮಾರಿಕೊಳ್ಳುತ್ತಾ[illegible] ಕೇಳಿ ಮನಸ್ಸಿಗೆ ವ್ಯಸನವಾಯಿತು. ಇದನ್ನು ಹೋ[illegible] ಲಾಡಿಸುವ ಶಕ್ತಿಯು ಅಲ್ಲಿಯ ರಾಜ ಪ್ರಜೆಗಳ[illegible] ಲ್ಲಿಯೂ ಇಲ್ಲವೆಂದು ಕಂಡುಬಂತು. ಹೀಗೆಯೆ [illegible] ಯುತ್ತ ಹೋದರೆ ಲೇಖನವು ಬೆಳೆಯುವುದು.

ಶ್ರೀನಗರದಿಂದ ನಿಮ್ಮನ್ನು ಜಮ್ಮೂದ ಮಾರ್ಗ[illegible] ಊರಿಗೆ ಒಯ್ದು ಮುಟ್ಟಿಸುವುದು ಒಳಿತು. ಅದ[illegible] ರಿಂದ ಆದೇ ದಾರಿಯಿಂದ ಹೊರಡುವ. ದಾರಿಯ[illegible] ಕಣ್ಣುಗಳನ್ನು ಕುಕ್ಕಿಸುವಂತಹ ಸೃಷ್ಟಿಯ ಸೌ[illegible] ಅಲ್ಲಿರುವುದು. ಅನಂತನಾಗ, ವೆರಿನಾಗ, ಬನಿಹಾ[illegible] ಖಟೋಟ, ರಾಮುಬನ, ಪಟನೀ, ಪತಾರ, ಉಧ[illegible] ಪೂರಗಳ ಮೇಲಿಂದ ಹಾಯ್ದು ೨೦೩ ಮೈಲು ದೂ[illegible] ಲ್ಲಿರುವ ಜಮ್ಮೂಕ್ಕೆ ಹೋಗಿರಿ. ಆದರೆ ಸೃಷ್ಟಿಯ ಸೌ[illegible] ದರ್ಯವನ್ನು ಮರೆಯದಲೆ ಮನದಲ್ಲಿಟ್ಟುಕೊಂಡು ಫ[illegible] ಮತ್ತೊಮ್ಮೆ ಅಲ್ಲಿಗೆ ಹೋಗುವಾಗ ಜಮ್ಮೂದ ಮಾ[illegible] ದಿಂದ ಕಾಶ್ಮೀರವನ್ನು ಪ್ರವೇಶಿಸಿ, ರಾವಳಪಿಂಡಿ[illegible] ಮಾರ್ಗವಾಗಿ ಹಿಂತಿರುಗಿರಿ. ನಂದನವನದ ಆನಂ[illegible] ಆತಿಥ್ಯವನ್ನು ಸ್ವೀಕರಿಸಿ ಧನ್ಯಧನ್ಯರಾಗಿರಿ. ಇದ[illegible] ನನ್ನ ಕೊನೆಯ ವಿಜ್ಞಾಪನೆಯು.

CC-0. Jangamwadi Math Collection. Digitized by eGangotri

# ಫೆರೆಡೇ

ಲೆಖಕರು:- ಪ್ರೊ. ನಾಡಕರ್ಣಿ ವಾಮನರಾಯರು ಬಿ. ಎ., ಬಿ. ಎಸ್‌ಸಿ., ಸೆಂಟ ಝೆವಿಯರ್ಸ ಕಾಲೆಜು ಮುಂಬಯಿ



ಇಂದಿನ ಯುಗಕ್ಕೆ ವಿದ್ಯುತ್‌ಶಕ್ತಿಯ ಯುಗವೆಂದು ಕರೆದರೆ ಅತಿಶಯೋಕ್ತಿಯಾಗಲಾರದು. ವಿದ್ಯುತ್‌ಶಕ್ತಿಯು ಮನೆ, ಮಾರ್ಗಗಳನ್ನು ಬೆಳಗಿಸುತ್ತದೆ; ಗಾಡಿಗಳನ್ನು ಓಡಿಸುತ್ತದೆ; ಗಾಳಿಯನ್ನು ಬೀಸುತ್ತದೆ; ಯಂತ್ರಗಳನ್ನು ನಡೆಯಿಸುತ್ತದೆ; ಮುದ್ರಾಣಾಲಯಗಳನ್ನು ಸಾಗಿಸುತ್ತದೆ. ಈ ವಿದ್ಯುತ್ ಶಕ್ತಿಯು ಬೆಳಕಿಗೆ ಬಂದು ಕಳೆದ ಅಗಸ್ಟ ೨೯ನೆಯ ತಾರೀಖಿಗೆ ಒಂದು ಶತಮಾನವಾಯಿತು. ಇದನ್ನು ಕಂಡುಹಿಡಿದ ಪ್ರತಿಭಾಸಂಪನ್ನ ಶಾಸ್ತ್ರಿಯೇ ಫೆರೆಡೇ ಎಂಬಾತನು. ಈ ಅಗಾಧ ಶೋಧನೆಯ ಶತಮಾನ ದಿನವನ್ನು ಬಳ್ಳೇ ಹುರುಪಿನಿಂದ ಜರುಗಿಸಲು ಇಡಿಯ ಜಗತ್ತಿನ ವೈಜ್ಞಾನಿಕರೆಲ್ಲ ಲಂಡನ್ನಿನ ಕ್ವೀನ್ಸ ಹಾಲಿನಲ್ಲಿ (Queen's Hall) ಮೊನ್ನೆ ನೆರೆದಿದ್ದರು.

ಮಾಯ್‌ಕೆಲ್ (Michael) ಎಂಬ ಮಗುವು ೧೭೯೧ನೆಯ ಇಸವಿಯ ಸಪ್ಟೆಂಬರ ತಿಂಗಳ ೨೨ನೆಯ ತಾರೀಖಿಗೆ ಇಂಗ್ಲಂಡಿಗೆ ಸೇರಿದ ಸರೇ (Surrey) ಪ್ರಾಂತದಲ್ಲಿ ನ್ಯೂಯಿಂಗಟನ್ (Newington) ಎಂಬ ಊರಲ್ಲಿ ಜನ್ಮ ತಾಳಿತು. ಈ ಕೂಸಿನ ತಂದೆಯ ಹೆಸರು ಜೇಮ್ಸ್ ಫೆರೆಡೇ; (Games Faraday) ಮತ್ತು ತಾಯಿಯು ಮಾರ್ಜರೆಟ್ ಹೆಸ್ಟವೆಲ್ (Margaret Hastwell) ಎಂಬಾಕೆಯು. ಜೇಮ್ಸನು ಒಬ್ಬ ಬಡ ಕಮ್ಮಾರನಾಗಿದ್ದನು. ಆದುದರಿಂದ ಚಿಕ್ಕ ಮಾಯ್‌ಕೆಲ್‌ನು ಸಾಲೆಯ ಓದುಬರೆಹ ಕಲಿಯುವುದು ಸಹ ಕಷ್ಟಸಾಧ್ಯವಾಯಿತು. ಬಹಳೇ ಪರಿಶ್ರಮದಿಂದ ನಮ್ಮ ಚಿಕ್ಕ ಫೆರೆಡೇಯು ಪ್ರಾಥಮಿಕ ಶಿಕ್ಷಣದ ಮುಖ್ಯ ಅಂಗಗಳಾದ ಓದು, ಬರೆಹ ಮತ್ತು ಅಂಕಗಣಿತ ಇವುಗಳನ್ನು ತಕ್ಕಮಟ್ಟಿಗೆ ಕಲಿತುಕೊಂಡನು; ಆದರೆ ಕೆಲ ಕಾಲದ ನಂತರ ಅವನು ಸಾಲೆಗೆ ಸಹ ತಿಲಾಂಜಲಿಯನ್ನಿತ್ತು ಬೀದಿ ಬೀದಿ ಸುತ್ತಬೇಕಾದ ಕಠಿನ ಪ್ರಸಂಗವೂ ಬಂದೊದಗಿತು. ಅಂತೂ ಬಡತನವು ಈ ಹುಡುಗನ ಬೆನ್ನು ಹತ್ತದೆ ಬಿಡಲಿಲ್ಲ. ಫೆರೆಡೇಯು ೧೩ ವರ್ಷದ ಎಳೆಯ ಪ್ರಾಯದವನಾದಾಗ ಹೊಟ್ಟೆ ಹೊರಕೊಳ್ಳುವ ದೆಸೆಯಿಂದ ಒಬ್ಬ ಪುಸ್ತಕ ವ್ಯಾಪಾರಿಯ ಬಳಿಯಲ್ಲಿ ಕೆಲಸಕ್ಕೆ ನಿಲ್ಲಬೇಕಾಯಿತು. ಭಾನುವಾರದ ವರ್ತಮಾನ ಪತ್ರಗಳನ್ನು ಹಂಚುವುದೇ ಆತನ ಪಾಲಿಗೆ ಬಂದ ಕೆಲಸ! ಹೀಗೆ ಒಂದು ವರ್ಷವು ಕಳೆದ ಬಳಿಕ ಒಬ್ಬ ಪುಸ್ತಕ ಕಟ್ಟುವವನ (Book-Binder) ಹತ್ತರ ಆತನು ಏಳು ವರ್ಷದ ಉಮೇದವಾರನಾಗಿ ಕೆಲಸ ಮಾಡಲು ಒಪ್ಪಿದನು. ಈ ಚಿಕ್ಕ ಅಂಗಡಿಯೇ ಆತನಿಗೆ ಮಹಾ ವಿಶ್ವವಿದ್ಯಾಲಯವಾಗಿ ಪರಿಣಮಿಸಿತು. "ಕಟ್ಟಿಗೋಸುಗ ಬರುತ್ತಿರುವ ಶಾಸ್ತ್ರೀಯ ಪುಸ್ತಕಗಳನ್ನು ನಾನು ಬಹಳೇ ಆಸ್ಥೆಯಿಂದ ಓದುತ್ತಿದ್ದೆನು" ಎಂದು ಆತನೇ ಒಂದೆಡೆಗೆ ಹೇಳುತ್ತಾನೆ. "Marcet's Conversations in Chemistry" ಎಂಬ ಪುಸ್ತಕವನ್ನೂ ಬ್ರಿಟಾನಿಕಾ ಜ್ಞಾನಕೋಶ (Encyclopaedia) ದಲ್ಲಿಯ

CC-0. Jangamwadi Math Collection. Digitized by eGangotri

ವಿದ್ಯುತ್ ಶಕ್ತಿಯ ಮೇಲಿನ ಲೇಖಗಳನ್ನೂ ಆತನು ಈ ಅಂಗಡಿಯಲ್ಲಿಯೇ ಓದಿ ಮುಗಿಸಿದನೆಂತೆ! ದೃಢನಿಶ್ಚಯವೊಂದಿದ್ದರೆ ಮಾನವನಿಗೆ ಯಾವುದೂ ಅಸಾಧ್ಯವಲ್ಲ. ಸ್ವಲ್ಪ ವೆಚ್ಚದಲ್ಲಿ ಸಾಧ್ಯವಾಗುವ ರಸಾಯನಶಾಸ್ತ್ರದ ಅನೇಕ ಸುಲಭ ಪ್ರಯೋಗಗಳನ್ನೂ ಮಾಡಲಿಕ್ಕೆ ಆತನು ಮೊದಲು ಮಾಡಿದನು. ಗಾಜಿನ ಕೊಳವೆಯಿದ್ದ ಒಂದು ಚಿಕ್ಕ ವಿದ್ಯುತ್ ಯಂತ್ರವನ್ನು ಮೊದಲು ರಚಿಸಿ, ಬಳಿಕ ಒಂದು ನಿಜವಾದ ಕೊಳವೆಯಿಂದ ಪೂರ್ಣಗೊಳಿಸಿದನು. ಹೀಗೆ ಫೆರಡೇಯು ತನ್ನ ಪುಟ್ಟ ಪ್ರಯೋಗಗಳನ್ನು ನಡೆಯಿಸುತ್ತಿದ್ದಾಗಲೇ ಮಿಸ್ಟರ್ ಟೇಟಂ ಅವರು ಸ್ವಾಭಾವಿಕ ತತ್ವಜ್ಞಾನದ ( Natural Philosophy ) ಮೇಲೆ ಕೊಡುತ್ತಿರುವ ವ್ಯಾಖ್ಯಾನಗಳನ್ನು ಆಗಿಂದಾಗ ಕೇಳುತ್ತಿದ್ದನಂತೆ. ಹೀಗೆ ಕೆಲ ಕಾಲದಲ್ಲಿಯೇ ಹೋರೆಯಿಂದ ಕಟ್ಟುಬಿದ್ದ ಈ ಪ್ರತಿಭಾಸಂಪನ್ನ ಯುವಕನು ಶಾಸ್ತ್ರಸೇವೆಯ ಹೆಬ್ಬಾಗಿಲನ್ನು ಪ್ರವೇಶಿಸಲು ಪ್ರಯತ್ನಪಟ್ಟನು. ಮತ್ತು ಆತನ ಪ್ರಯತ್ನವಾದರೋ ಕೊನೆಗೆ ಫಲದ್ರೂಪವಾಗಿಯೇ ಪರಿಣಮಿಸಿತು.

೧೮೧೨ನೆಯ ಇಸವಿಯಲ್ಲಿ ಫೆರಡೇಯು ತನ್ನ ಯಜಮಾನನ ಗಿರಾಕಿಯೊಬ್ಬನ ಸಹಾಯದಿಂದ "ರಾಯಲ್ ಇನ್‌ಸ್ಟಿಟ್ಯೂಟಿನಲ್ಲಿ" ( Royal Institute ) ನಡೆಯುತ್ತಿರುವ 'ಸರ್ ಹಂಪ್ರೆ ಡೆವಿ'( Sir Humphrey Davy) ಅವರ ನಾಲ್ಕು ವ್ಯಾಖ್ಯಾನಗಳನ್ನು ಕೇಳಲು ಸಹಾಯವಾಯಿತು. ತನ್ನ ಭಾಷಣಗಳಲ್ಲಿ ತೋರಿಸಿದ ಜಾಣ್ಮೆ, ವಿದ್ವತ್ತು, ಶಾಸ್ತ್ರ ನೈಪುಣ್ಯ ಇವೇ ಮೊದಲಾದ ಗುಣಗಳು ಫೆರಡೇಯನ್ನು ಚೆನ್ನಾಗಿ ಆಕರ್ಷಿಸಿದುವು. ಫೆರಡೇಯು ಈ ವ್ಯಾಖ್ಯಾನಗಳ ಮೇಲೆ ಉತ್ತಮವಾದ ಟಿಪ್ಪಣಿಗಳನ್ನು ಡೆವಿಯವರಿಗೆ ಕಳುಹಿದಾಗ, ಅವರು ನಮ್ಮ ಯುವಕ-ವೈಜ್ಞಾನಿಕನ ಶಾಸ್ತ್ರಜ್ಞಾನವನ್ನು ಮೆಚ್ಚಿ, ಆತನಿಗೆ ಭೆಟ್ಟಿಯಾಗಲೊಪ್ಪಿದರು. ಮುಂದೆ ಇಬ್ಬರೂ ಭೆಟ್ಟಿಯಾದಾಗ ಡೆವಿಯವರು ಫೆರಡೇಯವರ ಬೆನ್ನು ತಟ್ಟಿ "ಶಾಸ್ತ್ರವು ಸಂಪತ್ತಿಗೆ ಸುಗಮವಾದ ದಾರಿಯಲ್ಲ; ಶಾಸ್ತ್ರಸೇವೆಯಲ್ಲಿ ನಿರತರಾದವರು ಶ್ರೀಮಂತರಾಗರು; ಶಾಸ್ತ್ರವು ತನ್ನ ಭಕ್ತರಿಗೆ ಹೆಚ್ಚು ಹಣವನ್ನು ಕೊಡಒಪ್ಪುವುದಿಲ್ಲ" ಎಂದು ಹೇಳಿದರಂತೆ. ಈ ಮಾತಿನಿಂದ ಫೆರಡೇಯ ದೃಢ ಸಂಕಲ್ಪವು ಭಗ್ನವಾಗಲಿಲ್ಲ. ಬಡವನಾದರೂ ಆಗಲಿ; ಶಾಸ್ತ್ರದೇವಿಯನ್ನು ಪೂಜಿಸುವೆ... ಎಂಬ ನಿಶ್ಚಯದಿಂದಲೇ ಆತನು ಮರಳಿದನು. ೧೮೧... ನೆಯ ಇಸವಿಯ ಮಾರ್ಚತಿಂಗಳಲ್ಲಿ ಡೆವಿಯವ... ಸಹಾಯದಿಂದ ಫೆರಡೆಯವರು ರಾಯಲ್ ಇನ್‌ಸ್ಟಿಟ್ಯೂ... ಟಿನ ಪ್ರಯೋಗ ಶಾಲೆಯಲ್ಲಿ ಸಹಾಯಕರಾಗಿ ನಿಯ... ಸಲ್ಪಟ್ಟರು. ಆಗ ಅವರಿಗೆ ವಾರಕ್ಕೆ ಬರಿ ೨೫ ಸಿಲಿಂ... ಸಂಬಳವು ದೊರೆಯುತ್ತಿತ್ತು.

ಅಂದಿನಿಂದ ಫೆರಡೇಯವರ ನಿಜವಾದ ಶಾಸ್ತ್ರೀ... ಜೀವನಕ್ಕೆ ಮೊದಲಾಯಿತೆಂದು ಹೇಳಬಹುದು. ಹೊ... ದಾಗಿ ಶೋಧಿಸಲ್ಪಟ್ಟ 'ನಾಯ್‌ಟ್ರೋಜನ್ ಕ್ಲೋರೈ...' ( Nitrogen Chloride ) ಎಂಬ ಪದಾರ್ಥಕ್ಕೆ ಸಂಬ... ಪಟ್ಟ ಪ್ರಯೋಗದಲ್ಲಿ ಫೆರಡೇಯವರು ಡೆವಿಯವ... ಬಹಳ ಸಹಾಯ ಮಾಡಿದರು. ಈ ಪ್ರಯೋಗವು ನ... ಯುತ್ತಿದ್ದಾಗ ಪದಾರ್ಥವೊಂದು ಒಡೆದು ಇಬ್ಬರಿ... ಅಪಾಯವುಂಟಾಯಿತು. ಫೆರಡೇಯವರು ಮೊದ... ಹೇಳಿದಂತೆ ಪ್ರಯೋಗಶಾಲೆಯಲ್ಲಿ ಇನ್ನೂ ಹೊಸಬ... ದ್ದರು. ಆದರೂ ಅವರು ಇದನ್ನೆಲ್ಲ ಆನಂದದಿಂದ ಸ... ದರೇ ಹೊರತು ಅಸಮಾಧಾನವನ್ನು ವ್ಯಕ್ತಪಡಿಸ... ಇದೇ ಕಾಲಕ್ಕೆ ಡೆವಿಯವರು ಯುರೋಪುಖಂಡವ... ಸುತ್ತಬೇಕೆಂದು ಹೊರಟರು. ಜೊತೆಯಲ್ಲಿ ಫೆರಡೇ... ರನ್ನು ತಮ್ಮ ಶಾಸ್ತ್ರೀಯ ಸಹಾಯಕರನ್ನಾಗಿಯ... ಖಾಸಗಿಕಾರ್ಯದರ್ಶಿಗಳನ್ನಾಗಿಯೂ ತೆಗೆದುಕೊಂಡ... ಈ ಪ್ರವಾಸವು ಹದಿನೆಂಟು ತಿಂಗಳವರೆಗೆ ನಡೆದು ಫ್ರಾ... ಇಟಾಲಿ, ಮತ್ತು ಸ್ವಿಝರಲಂಡ್ ದೇಶಗಳನ್ನು ಅವ... ತಿರುಗಿದರು. ಫೆರಡೇಯವರು ಈ ಪ್ರವಾಸದ ಕಾಲ... ತಾವು ಕಂಡ ಅನೇಕ ಸಂಗತಿಗಳನ್ನು ಒಂದು ಪುಸ್ತ... ಯಲ್ಲಿ ಬರೆದಿಟ್ಟಿದ್ದಾರೆ. ಅದರಲ್ಲಿಯ ಕೆಲವು ಭಾಗಗಳು... ಅವರ ಸೂಕ್ಷ್ಮದೃಷ್ಟಿಯನ್ನೂ ಶಿಸ್ತಿನಲ್ಲಿ ಅವರ... ಅಚಲಶ್ರದ್ಧೆಯನ್ನೂ ವ್ಯಕ್ತಗೊಳಿಸುತ್ತದೆ. ಈ ... ಯಾಗಿ ಪ್ರವಾಸವು ನಡೆಯುತ್ತಿದ್ದಾಗ ಡೆವಿ ಮತ್ತು ಫೆರಡೇಯವರು ಅನೇಕ ಹೊಸ ವಿಷಯಗಳ ಮೇ... ರಸಾಯನಶಾಸ್ತ್ರದ ಪ್ರಯೋಗಗಳನ್ನು ಹೂಡಿ... ಫ್ಲೋರೆನ್ಸಿನಲ್ಲಿದ್ದಾಗ ಸೋಜಿಗದ ಪ್ರಯೋಗವೊಂದ... ಇವರು ನಡೆಯಿಸಿದರು. ಡ್ಯೂಕನ ದೊಡ್ಡ ಟೆ... ( Great lens ) ಸಹಾಯದಿಂದ ಪ್ರಾಣವಾ...

CC-0. Jangamwadi Math Collection. Digitized by eGangotri

( Oxygen ) ವಿನಲ್ಲಿ ವಜ್ರವೊಂದನ್ನು ಸುಟ್ಟರು. ವಜ್ರವು ಸುಡುತ್ತಿರುವಾಗ ಅದು ಬಹಳೇ ಪ್ರಕಾಶವನ್ನು ತೋರಿ, ಕೊನೆಗೆ ಒಂದು ಬಗೆಯ ವಾಯುವು ಉತ್ಪನ್ನವಾಯಿತು. ಈ ವಾಯುವೇ ಕಾರಬೊನಿಕ್ ಎಸಿಡ್ ಗೆಸ್(Carbonic-asid Gas )ಎಂಬುದನ್ನು ಅವರು ಕಂಡುಹಿಡಿದರು. ಸಾವಿರಾರು ರೂಪಾಯಿ ಬೆಲೆಬಾಳುವ ವಜ್ರವೊಂದು ಮೂರು ಕಾಸಿನ ಇದ್ದಲಿಯೇ ಹೊರತು ಬೇರೆ ವಸ್ತುವಲ್ಲ, ಎಂಬ ಸಿದ್ಧಾಂತವು ಈ ಪ್ರಯೋಗದಿಂದ ಪ್ರತ್ಯಕ್ಷವಾಗಿ ಜನರಿಗೆ ಅಚ್ಚರಿಯನ್ನುಂಟು ಮಾಡದೆ ಬಿಡಲಿಲ್ಲ. ಫ್ಲೊರೆನ್ಸಿನಿಂದ ( Florence ) ಅವರು ಮುಂದೆ ಚೌರೆಲ್ಸ (Chevreuls ) ಪ್ರಯೋಗಶಾಲೆಯನ್ನು ಸಂದರ್ಶಿಸಿ, ಗೇ-ಲುಸೆಕ್‌ನ ( Gay-Lussac ) ವ್ಯಾಖ್ಯಾನವೊಂದನ್ನು ಕೇಳಿ, ವೆಸುವಿಯಸ್ ( Vesuvius ) ಪರ್ವತವನ್ನು ಸುತ್ತಿ, ವೊಲ್ಟಾ ( Volta ) ಎಂಬ ಪ್ರಸಿದ್ಧ ವೈಜ್ಞಾನಿಕರನ್ನು ಭೆಟ್ಟಿಯಾದರು.

೧೮೧೫ನೆಯ ಮೇ ತಿಂಗಳಲ್ಲಿ ಯುರೋಪು ಯಾತ್ರೆಯನ್ನು ಮುಗಿಸಿ ಇಬ್ಬರೂ ಇಂಗ್ಲಂಡಿಗೆ ಮರಳಿದ ಮೇಲೆ, ಫೆರೆಡೇಯವರು ರಾಯಲ್ ಇನ್‌ಸ್ಟಿಟ್ಯೂಟಿನಲ್ಲಿ ಮತ್ತೆ ಕೆಲಸ ಮಾಡತೊಡಗಿದರು. ಈ ಸಂಸ್ಥೆಯಲ್ಲಿದ್ದಾಗಲೇ ಅವರಿಗೆ ಪ್ರೋಫೆಸರ್ ಬ್ರೆಂಡರ ( Brande ) ಸಮೀಪ ಪರಿಚಯವುಂಟಾಯಿತು. ಇಲ್ಲಿ ಅವರು ಬಗೆಬಗೆಯ ಸಾಧನಸಾಹಿತ್ಯಗಳನ್ನು ಉಪಯೋಗಿಸಿ ಹೊಸ ಹೊಸ ಪ್ರಯೋಗಗಳನ್ನು ಮಾಡಲು ಶಕ್ತರಾದರು. ಫೆರೆಡೇಯವರ ಶಾಸ್ತ್ರೀಯ ಜೀವನದ ಮಧ್ಯಾಹ್ನ ಕಾಲವು ಈಗ ಪ್ರಾರಂಭವಾಯಿತು. "ಸಿಟಿ ಫಿಲೊಸೊಫಿಕಲ್ ಸೋಸಾಯಿಟಿ" (City Philosophical) ಎಂಬ ಸಂಸ್ಥೆಯ ಸದಸ್ಯರಿಗೆ ತಮ್ಮ ಅಗಾಧಶಾಸ್ತ್ರ ನೈಪುಣ್ಯದಿಂದೊಡಗೂಡಿದ ವ್ಯಾಖ್ಯಾನಗಳನ್ನು ಕೊಡಲಾರಂಭಿಸಿದರು. ಮುಂದೆ ೧೮೩೧ರಲ್ಲಿ ಫೆರಡೇಯವರು ಪ್ರಯೋಗಶಾಲೆಯ ಅಧಿಪತಿಗಳಾಗಿ ನಿಯಮಿಸಲ್ಪಟ್ಟರು. ಆಗ ಇವರ ಆರ್ಥಿಕ ಸ್ಥಿತಿಯು ತಕ್ಕಮಟ್ಟಿಗೆ ಸುಧಾರಿಸಿದ್ದುದರಿಂದ ಇವರು ಮದುವೆಯಾದರು. ಇವರು ತಮ್ಮ ಮದುವೆಯ ಕಾಲಕ್ಕೆ ವಿಶೇಷತರದ ಆಡಂಬರಕ್ಕೆ ಒಳಗಾಗದೆ, ಮದುವೆಯನ್ನು ಸರಳತನದಿಂದ ಸಾಗಿಸಿದರಂತೆ. ಏಕೆಂದರೆ ಬಾಹ್ಯಾಚರಣೆ—ಆಡಂಬರಾದಿಗಳಿಗೆ ಇವರು ಎಂದಿಗೂ ಮನಸ್ಸು ಹಾಕುತ್ತಿರಲಿಲ್ಲ.

೧೮೩೪ರಲ್ಲಿ ಡೆವಿಯವರು ಕೆಲಸದಿಂದ ನಿವೃತ್ತರಾದ ಬಳಿಕ ರಾಯಲ್ ಇನ್‌ಸ್ಟಿಟ್ಯೂಟಿನ ಎಲ್ಲ ಕೆಲಸವನ್ನು ಫೆರಡೇಯವರೇ ನೋಡಿಕೊಳ್ಳುತ್ತಿದ್ದರು. ಅಂದಿನಿಂದ ಅವರು ಅಗಾಧವಾದ ಸಂಶೋಧನ ಕಾರ್ಯವನ್ನು ನಡೆಯಿಸಿ ತಮ್ಮ ಜೀವನದ ಹೆಗ್ಗುರಿಯನ್ನು ಮುಟ್ಟಿದರು. ಅವರು ಸ್ಥಾಪಿಸಿದ ಕೆಲವು ಸಿದ್ಧಾಂತಗಳ ಮೇಲೆ ಇಂದಿಗೂ ವಿದ್ಯಾರ್ಥಿಗಳು ಶೋಧಗಳನ್ನು ನಡೆಯಿಸಿಯೇ ಇದ್ದಾರೆ. ತಮ್ಮ ಜೀವಮಾನದಲ್ಲಿ ಫೆರಡೇಯವರು ರಸಾಯನ ಶಾಸ್ತ್ರದ ಮೇಲೆ ಒಂದು ಸಾವಿರಕ್ಕೆ ಮಿಕ್ಕಿ ವ್ಯಾಖ್ಯಾನಗಳನ್ನು ಕೊಟ್ಟರಂತೆ! ಅದೇ ಕಾಲಕ್ಕೆ ಅವರು ರಾಯಲ್ ಇನ್‌ಸ್ಟಿಟ್ಯೂಟಿನ ಫೆಲೋ ( F. R. S. ) ಆಗಿ ಆರಿಸಲ್ಪಟ್ಟರು. ಇದರಿಂದ ಅವರಿಗೆ ಸಾರ್ವತ್ರಿಕ ಸನ್ಮಾನವಾಯಿತಲ್ಲದೆ, ತಮ್ಮ ಕೆಲಸದಲ್ಲಿ ಹೆಚ್ಚು ವಿಶ್ವಾಸವೂ ಉತ್ತೇಜನವೂ ದೊರೆತುವು. ಮುಂದೆ ಕೆಲವು ವರುಷಗಳಲ್ಲಿಯೆ ಫೆರಡೇಯವರು ರಸಾಯನ ಶಾಸ್ತ್ರದಲ್ಲಿ ಎಷ್ಟೋ ಹೊಸ ಶೋಧಗಳನ್ನು ಮಾಡಿದರು. 'ಬೆನ್‌ಝೀನ್' (Benzene) ಎಂಬ ಪದಾರ್ಥವನ್ನು ಕಂಡುಹಿಡಿದ ಮಹನೀಯರು ಇವರೇ. ವಾಯುಗಳನ್ನು (gases) ರಸಾಯನ ರೂಪಕ್ಕೆ (liquid state) ತರುವ ಯುಕ್ತಿಯನ್ನಾದರೂ ಇವರೇ ಕಂಡುಹಿಡಿದದ್ದು. 'ಒಪ್ಟಿಕಲ್ ಗ್ಲಾಸ್' (optical glass) ಮತ್ತು ಎಲೊಯ್ ಸ್ಟೀಲ್ (alloy steel) ಇವುಗಳನ್ನು ಮೊದಲು ತಯಾರಿಸಿದವರು ಫೆರಡೆಯವರು. ಹೀಗೆ ತಮ್ಮ ಅನೇಕ ಹೊಸ ಶೋಧಗಳಿಂದ ಇಂದಿನ ಉದ್ಯೋಗಮಂದಿರಕ್ಕೆ ತಳಹದಿಯನ್ನು ಹಾಕಿಕೊಟ್ಟ ಉಪಕಾರಕ್ಕೆ ಇವರು ಪಾತ್ರರಾಗುತ್ತಾರೆ. ಇದೇ ಕಾಲಕ್ಕೆ ತಮ್ಮ ಎಲ್ಲಕ್ಕೂ ದೊಡ್ಡದಾದ ಸಂಶೋಧನೆಯನ್ನು ನಡೆಯಿಸಿ, ವಿದ್ಯುತ್‌ಶಕ್ತಿಯನ್ನು ಕಂಡುಹಿಡಿದು ತಮ್ಮ ಹೆಸರು ಅಜರಾಮರವಾಗಿ ಬಾಳುವಂತೆ ಮಾಡಿದರು! ತಾವೇ ತಮ್ಮ ಈ ಪ್ರಯೋಗವನ್ನು ಕುರಿತು ಹೀಗೆ ಬರೆಯುತ್ತಾರೆ: "A cylinderical barmagnet of an inch in diameter, and eight inches and half in length, had one end just inserted into the end of helix cylinder [220 feet long], then it was quietly thrust into the whole length, and the galvanometer needle moved. Then pulled out, and again the needle moved; but in the

CC-0. Jangamwadi Math Collection. Digitized by eGangotri

apposite direction. The effect was repeated every time the magnet was put in and out, and therefore a wave of electricity was produced from a mere approximation of a magnet and not from its formation insite." ಈ ಸರಳ ಪ್ರಯೋಗವು ನಮ್ಮ ಜೀವನವನ್ನೇ ಬದಲಾಯಿಸಿ ಬಿಟ್ಟಿದೆ. ಇದು ವಿದ್ಯುತ್‌ಶಕ್ತಿಯ ಯುಗವು. ವಿದ್ಯುತ್‌ಶಕ್ತಿಯೇ ಈ ಯುಗದ ಶಕ್ತಿ. ಈ ಶಕ್ತಿಯು ಹುಟ್ಟಿದುದು ಮೇಲಿನ ಪ್ರಯೋಗದಿಂದ!

ಆದರೆ ವಿದ್ಯುತ್‌ಶಕ್ತಿಯನ್ನು ಹೊಸವಾಗಿ ಕಂಡುಹಿಡಿದಾಗ, ಅದರ ಮಹತ್ವವು ವಿದ್ಯಾವಂತರಿಗೂ ಸಹ ಗೋಚರವಾಗಲಿಲ್ಲ! ರಾಜತಂತ್ರಪ್ರವೀಣರೂ ಪಂಡಿತರೂ ಆದ ಗ್ಲಾಡ್‌ಸ್ಟನ್ (Gladstone) ಸಾಹೇಬರು ಸಹ "After all of what use is it?" ಎಂದು ಕೇಳಿಬಿಟ್ಟರಂತೆ! ಅದಕ್ಕೆ ಫೆರಡೆಯವರು "why sir, there is evry probability that you will be soon able to tax it." ಎಂದು ಉತ್ತರವಿತ್ತರು. ಒಮ್ಮೆ ರಾಯಲ್ ಇನ್‌ಸ್ಟಿಟ್ಯೂಟಿನ ಮಂದಿರದಲ್ಲಿ ಫೆರೆಡೆಯವರು ವಿದ್ಯುತ್ ಶಕ್ತಿಯನ್ನು ಕುರಿತು ಮಾತನಾಡಿ, ಅದರ ಪ್ರಯೋಗವನ್ನು ಜನರೆದುರಿಗೆ ಮಾಡಿ ತೋರಿಸಿದಾಗ, ವಿದ್ಯಾವಂತ ಹೆಂಗುಸೊಬ್ಬಳು ಅವರೆಡೆಗೆ ಬಂದು "But Professor Faraday, even of the effect you explained is obtained, what is the use of it?" ಎಂದು ಕೇಳಿದಳು. ಅದಕ್ಕೆ ಪ್ರೊಫೆಸರರು ಶಾಂತ ಮುದ್ರೆಯಿಂದ "Madam, will you tell me the use of a new born child?" ಎಂದು ಹಾಸ್ಯ ಗಾಂಭೀರ್ಯಗಳಿಂದ ಸೂಸುವ ಜಾಣ್ಮೆಯ ಪ್ರಶ್ನೆ ಮಾಡಿದರಂತೆ!

ಫೆರಡೇಯವರು ಒಬ್ಬ ಶ್ರೇಷ್ಠ ಪ್ರಯೋಗ ಶಾಸ್ತ್ರಗಳು. ಅವರ ವಿದ್ಯುತ್‌ಶಕ್ತಿಯ ಅಗಾಧ ಪ್ರಯೋಗಕ್ಕೆ ಸಂಬಂಧಿಸಿ, ಚಿಕ್ಕಪುಟ್ಟ ಪ್ರಯೋಗಗಳೂ ಹೇರಳವಾಗಿವೆ. ಅವುಗಳನ್ನು ಕುರಿತು ಬರೆಯಲು ಈ ಚಿಕ್ಕ ಬರೆಹದಲ್ಲಿ ಸಾಧ್ಯವಿಲ್ಲ. ಫೆರಡೇಯವರು ಪ್ರತಿಭಾಸಂಪನ್ನರಷ್ಟೇ ಅಲ್ಲ, ಅವರಲ್ಲಿ ಇಡಿಯ ಮಾನವ ಜಾತಿಯನ್ನೇ ಮೆಚ್ಚಿಸುವ ಮಹಾಗುಣವೊಂದಿದ್ದಿತು. ಅದಾವುದೆಂದರೆ ರಸಾಯನಶಾಸ್ತ್ರದಲ್ಲಿ ಅವರು ದುಡಿದದ್ದು ದುಡ್ಡಿಗೋಸುಗ ಅಲ್ಲ! ಶಾಸ್ತ್ರದಲ್ಲಿ ಅವರಿಗಿದ್ದ ಪ್ರೇಮಕ್ಕೋಸುಗ!

ಅವರ ಶೋಧನೆಯ ಲಾಭವನ್ನು ಪಡೆಯಲು ವ್ಯಾಪಾರ ಪ್ರಪಂಚವು ಅವರಿಗೆ ಅಪಾರ ಸಂಪತ್ತನ್ನು ಕೊಡುವ[illegible]ದಾಗಿತ್ತು. ಆದರೆ ಅವರು ಶ್ರೀಮಂತರಾಗುವ [illegible]ಯಿಂದ ಶಾಸ್ತ್ರಕಾರ್ಯವನ್ನು ಮಾಡಿದವರಲ್ಲ. ಪ್ರೊಫೆ[illegible]ಸರ ಟಿಂಡಾಲ್ (Tyndall) ಅವರು ಇವರ ವಿಷಯ[illegible]ವಾಗಿ ಈ ಪ್ರಕಾರ ಬಹು ರಮ್ಯವಾಗಿ ಬರೆಯುತ್ತಾರೆ: "Taking the duration of his life into accoun[t] the son of a blacksmith and an apprentice to [a] book-binder, had to decide between a fortu[ne] of L 150,000 on the one side, and his undow[e]red science on the other. He chose the latt[er] and died a poor man."

೧೮೩೩ ರಲ್ಲಿ ಫೆರೆಡೇಯವರು ರಾಯಲ್ ಇನ್‌ಸ್ಟಿಟ್ಯೂಟಿನಲ್ಲಿ ರಸಾಯನಶಾಸ್ತ್ರದ ಪ್ರೊಫೆಸರರಾಗಿ ನಿಯ[ಮಿ]ಸಲ್ಪಟ್ಟರು. ಆಗ ಅವರಿಗೆ ವರುಷಕ್ಕೆ ೧೦೦ ಪೌಂ[ಡು] ಸಂಬಳವು ದೊರೆಯುತಿದ್ದಿತು. ಅಲ್ಲದೆ ಅವರು ಉಪನ್ಯಾ[ಸ]ಗಳನ್ನು ಕೊಡಬೇಕೆಂಬ ನಿಯಮವೇನೂ ಇದ್ದಿಲ್ಲ.ಮು[ಂದೆ] ಕೆಲವು ವರುಷಗಳಲ್ಲಿಯೇ ಲಾರ್ಡ್ ಮೆಲ್‌ಬೋರ್ನ್ (Lord Melbourne) ಅವರು ಇಂಗ್ಲಂಡಿನ ಮು[ಖ್ಯ] ಮಂತ್ರಿಗಳಾದರು. ಮಂತ್ರಿಗಳು ಫೆರೆಡೇಯವ[ರನ್ನು] ಕಂಡು ಅವರಿಗೊಂದು ವಿಶ್ರಾಂತಿವೇತನವನ್ನು Pensi[on] ಕೊಡಬೇಕೆಂದು ಮನಸ್ಸು ಮಾಡಿದ್ದರು.. ಆದರೆ [ಇ]ರಿಬ್ಬರ ಭೆಟ್ಟಿಯಾದಾಗ ಮಾತಿಗೆ ಮಾತು ಬಂದು, [illegible] ಒಂದು ಪ್ರಸಂಗದಲ್ಲಿ ಮನಃಪೂರ್ವಕವಲ್ಲದೆ ಲಾರ್ಡ[ರು] ವಿಶ್ರಾಂತಿವೇತನಗಳಿಗೆ ಸಂಬಂಧಿಸಿ, "Humbug" [ಎಂಬ] ಶಬ್ದಪ್ರಯೋಗ ಮಾಡಿದರಂತೆ! ಮಾನಧನರಾದ ಫೆರೆಡೇಯವರಿಗೆ ಇದಿಷ್ಟೇ ಅಸಮಾಧಾನಕ್ಕೆ ಸಾಕಾಯಿತು. [illegible] ವೇತನವನ್ನು ತೆಗೆದುಕೊಳ್ಳಬಾರದೆಂಬ ದೃಢಸಂಕಲ್ಪದಿಂದ ಫೆರೆಡೇಯವರು ಅಲ್ಲಿಂದ ಹೊರಟರಂತೆ! ಆದರೆ ಲಾರ್ಡರು ತಮ್ಮ ನಿಜವಾದ ಅಭಿಪ್ರಾಯವು ಹಾಗಿ[ಲ್ಲ]ಲಿಲ್ಲವೆಂದು ತಿಳಿಹೇಳಿ, ಕ್ಷಮೆಯನ್ನು ಬೇಡಲು, ವೇತನವನ್ನು ಸ್ವೀಕರಿಸಿದರು.

ವೃದ್ಧಾಪ್ಯದಲ್ಲಿ ಫೆರೆಡೇಯವರ ಜ್ಞಾಪಕಶಕ್ತಿಯು ಅಷ್ಟು ಚುರುಕಾಗಿರಲಿಲ್ಲ. ಆದರೂ ಅವರು 'ಟ್ರಿನಿಟಿ ಹಾವುಸ' (Trinity House) ಮಂದಿರದ ದೀಪಸ್ತಂಭಗಳನ್ನು ಪರೀಕ್ಷಿಸಿ ವರದಿಯೊಪ್ಪಿಸುವ ಕಠಿಣ ಕೆಲಸವನ್ನು

CC-0. Jangamwadi Math Collection. Digitized by eGangotri

ಕೈಕೊಂಡಿದ್ದರು. ಕೆಲಸವನ್ನು ಮಾಡದೆ ಸುಮ್ಮನೆ ಕುಳಿತುಕೊಳ್ಳಲು ಅವರಿಂದ ಆಗುತ್ತಿರಲಿಲ್ಲವೆಂಬುದಕ್ಕೆ ಇದೊಂದೇ ಉದಾಹರಣೆ ಸಾಕು. ೧೮೬೭ ನೆಯ ಆಗಸ್ಟ್ ೨೫ನೆಯ ದಿವಸ ಖುರ್ಚಿಯ ಮೇಲೆ ಓದುತ್ತ ಕುಳಿತಲ್ಲಿಯೇ ಈ ಮಹಾ ವೈಜ್ಞಾನಿಕನು ಕೊನೆಯ ಉಸಿರನ್ನು ಬಿಟ್ಟನು. ಇಂತು ಶಾಸ್ತ್ರಕ್ಕೆ ಧಾರೆಯೆರೆದ ಜೀವನವು ಅಂದು ಶಾಂತತೆಯಲ್ಲಿ ಕೊನೆಗಂಡಿತು. ಶಾಸ್ತ್ರ ಕಾರ್ಯವೇ ಹೆಗ್ಗುರಿಯಾದ ಅವರ ಬಾಳು ಮಾನವ ಕೋಟಿಯ ಸೇವೆಗೈದು, ಮರೆಯಾಯಿತು. ಆದರೆ ಅವರ ಮಗುವಾದ ವಿದ್ಯುತ್‌ಶಕ್ತಿಗೆ ಸಾವಿಲ್ಲ! ಅಂತೆಯೇ ಮಗುವಿನ ತಂದೆಯೂ ಚಿರಂಜೀವಿ!! ಜಗತ್ತಿನ ಎಲ್ಲ ಜನಾಂಗದವರು ಅವರಿಗೆ ಶಾಸ್ತ್ರೀಯ ಬಹುಮಾನಗಳನ್ನಿತ್ತರು. ಕಮ್ಮಾರನ ಮಗುವೊಂದು ಸಂಶೋಧಕ-ಸಾರ್ವಭೌಮನಾಗಿ ಜಗತ್ತನ್ನು ಬೆರಗುಗೊಳಿಸಿತು! ಮೊದಲಿನಿಂದ ಕೊನೆಯವರೆಗೂ ಫೆರೆಡೇಯವರ ಜೀವನವು ಸರಳವಾಗಿದ್ದಿತು. ನಮ್ರತೆ ನಿರಹಂಕಾರಗಳಿಂದ ಅದು ಸುಗಂಧವನ್ನು ಬೀರಿ, ಅರಳಿದ ಹೂವಿನಂತೆ ಉಪಕಾರಿಯಾಗಿ ಸಾರ್ಥಕತೆಯನ್ನು ಪಡೆದಿದೆ.*

# ವಿಲಾಪ

ಪಿ. ಜಿ. ಆರ್.

ಹೊತ್ತು ನೆತ್ತಿಯನೇರೆ
 ಕತ್ತಲೊತ್ತಿದುದೆ?
ಮಧುನೃಪಾಲನ ಮೋರೆ
 ಹಿಮವನೆತ್ತಿದುದೆ?
ಪರಿಮಳದ ಒರತೆ ಇದು
 ಬತ್ತಿ ಬರಿದಾಯ್ತೆ?
ಜೀವನದ ಸುರನದಿಯು
 ಮಳಲ ಮರೆಯಾಯ್ತೆ?
ನನ್ನಳವೆ, ನಿನ್ನಳವೆ,
 ಅರಳವು ಮೃತ್ಯು
ಬೆನ್ನೊಳೇ ನೆಳಲಾಗಿ
 ಹಜ್ಜೆ ಹಾಕಿರಲು?
ಮೌನದೀ ಮುಗುಳಿಂತು
 ಅರಳಿ ಅರಳಾಯ್ತೊ,
ಅಂತೆ ತಾನಿಂದು ಮೌ-
 ನದೊಳೆ ಮರುಳಾಯ್ತು!

ನೋಡು, ನೋಡೀ ದೇಹ-
 ದವಯವದ ರಚನೆ,
ಹಾಡಲರಿಯದು ಇದರ
 ಸೊಬಗ ಕವಿರಸನೆ;
ಬಾಡಿರುವ ಕಣ್ಮಲರ್,
 ಬಿಗಿದಿರುವ ತೊಡಿಗಳ್,
ಹಾಡಳಿದ ನುಣ್ಗೊರಲ್,
 ಕದವು ಕನ್ನಡಿಗಳ್!
ಕಾಮನಲರಂಬಿವೇ
 ಭ್ರೂಲತೆಗಳಾಯ್ತೊ,
ಪ್ರೇಮಕಲಹದಿನಾರ
 ಸೋಲಿದರಿನಾಯ್ತೊ!
ಎಳಮೆಯೊಳಗಿಂತಳಿವು
 ಸಂಗಳಿಪುದೆಂದು
ತಿಳಿವರುಂಟಾರೆದೆಯಿ-
 ನೊಲ್ಮೆಯೊಗೆವಂದು!

* ಈ ಲೇಖನವನ್ನು ಬರೆಯಲು ಕೆಳಗಿನ ಗ್ರಂಥಗಳು ಸಹಕಾರಿ ಯಾಗಿವೆ:—

1. Famous Chemists by Tilden.
2. Journal of Chemical Education.
3. Discovery or Spirit of Invention by R. A. Gregory.


CC-0. Jangamwadi Math Collection. Digitized by eGangotri

# ಸುಬ್ಬಯ್ಯನಿಗೆ ಶರಣು

ಬರೆದವ:— 'ವಿಜಯ' ಬೆಟಗೇರಿ

ನಾನು ಬಿ. ಎ. ಪದವಿ ಪಡೆದುಕೊಂಡಿದ್ದೇನೆ. ನೀವೇ ನೋಡಿ; ಈಗಿನ ಕಾಲ! ಪ್ಯಾಸುಮಾಡಿದ ಮೇಲೆ ಮುಂದೆ ಏನು....! ಎಂಬ ಪ್ರಶ್ನೆಯು ಮುಂದೆದುತ್ತೆಂದು ಬಂದು ನಿಂತರೂ ನಮ್ಮ ಗೌರವ ಬಹಳ. ನನ್ನ ದೈವವೇ ಎಂದು ಹೇಳಿ; ನನ್ನ ಗೌರವಕ್ಕೆ ತಕ್ಕ ಮಾವ ನನಗೆ ಸಿಕ್ಕಿದಾನೆ. ನಮ್ಮಾಕೆ ತುಂಬಾ ಸಿರಿವಂತರ ಮಗಳು. ನನಗೂ ಹೆಮ್ಮೆ ಬಹಳ; ಸಿರಿವಂತನಾದ ಮಾವ ಸಿಕ್ಕಿದಾ ಅಂತ. ಅಯ್ಯೋ-ಸಿರಿವಂತ....! ಸಿರಿವಂತರು....! ಸಿರಿವಂತರ ಮನೆಯ ಸುಖ ನನಗೆ ಈ ವರೆಗೂ ಗೊತ್ತಿರಲಿಲ್ಲ ಬಿಡ್ರಿ; ಏನು? ಗೊತ್ತಿರಲಿಲ್ಲಾ ಅಂದೆ. ಅಹಹ! ಹೊಟ್ಟೆಯ ಮುರುಕ, ರಾಮ! ಮೂರು ದಿನಗಳಲ್ಲಿ ಆರು ಸೇರು ಕಂಡವಿಳಿದಿದೆ! ನಾನು ಈಗ ನಿಮಗೆ ಸೊರಗಿದಂತೆ ಕಾಣುವುದಿಲ್ಲವೇ? ನೀವೇ ಹೇಳಿ; ಸುಳ್ಳಾಡಕೂಡದು ತಿಳಿಯಿತೇ? ಏನ್ರಿ! ಆನೆಯಂತಹ ಮನುಷ್ಯ ಆಡು ಆಗಿಬಿಟ್ಟಿದ್ದೇನೆ!

ನೋಡಿ: ನಮ್ಮ ಮಾವ ಬಹಳೇ ಸಿರಿವಂತ.... ಸುಟ್ಟು ಬಿಡಿ, ಆ ಸಿರಿವಂತರ ಮಾತೇ ನನಗೆ ಬೇಸರು.....ಮತ್ತೂ ಹೇಳಬೇಕೆಂದು ಇಚ್ಛೆ: ನಮ್ಮ ಮಾವಂದಿರು ಧಾರವಾಡದಲ್ಲಿ ಸಬ್‌ರಜಿಸ್ಟ್ರಾರರು. ಸಂಬಳ ಸಾಕಷ್ಟು. ಮತ್ತೇನೋ ಅತಾರಲ್ಲಾ ಲಂಚ; ಅದೂ ಸಾಕಷ್ಟು. ಕೇಳುವುದೇನು? ಮನೆತುಂಬಾ ಸುಸರಿ,( ಸಾಧನೆಗಳು ) ಎಲ್ಲವೂ ಮನೆತುಂಬಾ! ಅವರ ಹೆಂಡತಿ! ಅವರೂ ಮನೆತುಂಬಾನೇ ಸರಿ.

ಈಗ ನನ್ನ ಮದುವೆಯಾಗಿ – ಎಲ್ಲವೂ ಆಗಿ – ಒಂದು ವರ್ಷ. ಸೌಖ್ಯದಿಂದಿರುವೆವು ನೋಡಿ; ಕಾಲೇಜು ಇಲ್ಲ ಒಣ ರಗಳೆ ಇಲ್ಲ; ಮುಕ್ತನೇ ಸರಿ ನಾನು. ತಿನ್ನುಣ್ಣುವುದಕ್ಕೆ ನಮ್ಮದು ಅನುಕೂಲ ಸ್ಥಿತಿ. ನನಗೆ ಬೇಕಾದ್ದೂ ಆದೇ! ಸುಳ್ಳೇನು? ನಮ್ಮ ಜಠರಾಗ್ನಿ ಸ್ವಲ್ಪ ಪ್ರಜ್ವಲಿತ. ಮಾತು ಮುಚ್ಚಿಟ್ಟುಕೊಳ್ಳುವ[illegible] ನಾಲಿಸಲ್ಲ. ಏನಿದ್ದುದೆಲ್ಲ

CC-0. Jangamwadi Math Collection. Digitized by eGangotri

ವನ್ನೂ ಬಡಬಡ ನುಡಿದು ಬಿಡುವವನು. ಒಮ್ಮೆ [illegible] ಎರೆಹೊಲದ ರೈತ ಮಲ್ಲಪ್ಪ "ಬೆಳಸಿ ತಿನ್ನಲಿಕ್ಕೆ ಬ[illegible] ಅಂತ ಹೇಳಿದ. ಹೋಗಿಬಂದೆ. ಆದರೆ ಅವನು ಇನ್ನೊ[illegible] ನನಗೆ ಅಮಂತ್ರಣ ಕೊಡುವನೆಂಬ ಭರವಸೆಯಿಲ್ಲ[illegible] ನನ್ನ ಊಹೆ. ನಮ್ಮ ತಾಯಿ ಹಬ್ಬ ಹುಣ್ಣಿ[illegible] ನನ್ನ ಎಡೆಬಡಿಸುವಾಗ ಒಂದೊಂದು ಕಡುಬು - ಹೋ[illegible] ಬಡಿಸುವುದು ಅಪರೂಪ! ನನ್ನ ಹೊಟ್ಟೆಯ ವೇ[illegible] ಗಾತರ ಅವಳಿಗೆ ಗೊತ್ತು! ದಿನಕ್ಕೆ ಮೂರಾವರ್ತಿ[illegible] ವನ್ನು ನಾನು ಈ ವರೆಗೂ ಬಿಟ್ಟಿಲ್ಲ. ನಾನು 'ಗ್ರಾ[illegible] ಏಟ'ನಿದ್ದು ಉಳಿದೆಲ್ಲ ವಿಷಯಗಳಲ್ಲಿ ಸುಧಾರ[illegible] ಊಟದ ವಿಷಯದಲ್ಲಿ ಮಾತ್ರ ಸುಧಾರಣೆಯಿಲ್ಲ. [illegible] ವೇಳೆಯಲ್ಲಿ ನನಗೆ ಉಳಿದವರಂತೆ ಮುರುಕ ಮಾ[illegible] ಬರುವುದಿಲ್ಲ. ಈಗೇನು? ಮನೆಯ ಕೂಸು! [illegible] ಒಳ್ಳೆಯ ಅಡಿಗೆ ಮಾಡಿ ಹಾಕುವಳು; ಚೆನ್ನಾಗಿದೆ[illegible] ಕಾಲೇಜಿನಲ್ಲಿರುವಾಗ ಕ್ಲಬ್ಬಿನ ಊಟ; ಒಬ್ಬ[illegible] ವಾಗುತ್ತಿದ್ದಿತು. ಹಬ್ಬ ಹುಣ್ಣಿವೆಯ ನೆಪ[illegible] ಯಾದರೂ ಒಂದು ಸಹಿ ಪದಾರ್ಥ ಅಲ್ಲಿ! ಕೇಳಕೂ[illegible] ಉಪಹಾರಕ್ಕಾದರೋ ಬರೀ ದೋಸೆ, ಉಪ್ಪಿಟ್ಟು[illegible] ಇವೇ. ಆ ಮೂರ್ಖ ಮುಂಡೆಗಂಡ ಅಡಿಗೆಯವ[illegible] ಮಾಡಿದರಂತೂ ಹಲ್ಲು ಚಳಿತು ಜುರುಗುಟ್ಟ[illegible] ಏನು ಹುಳಿಯೋ ಅದು! ಆಲಿಮನೆಗೆ ಹೋದರೆ[illegible] ಸೇರಿಗೆ ಕಡಿಮೆಯಲ್ಲದಷ್ಟು ಬಿಸಿ ಬಿಸಿ ಬೆಲ್ಲವನ್ನು[illegible] ಬಾಯಿಂದ ಬಡಿಯುತ್ತಿದ್ದೆ ನಾನು; ಆ ಹುಳಿ ನನಗೆ[illegible] ಸುವುದು ಹೇಗೆ? ಈಗೇನು ಚಾಕರಿಯ ಚಿಂತೆಯೇ[illegible] ಸರಿ. ಉಳಿದುದೆಲ್ಲವೂ ಸರಿಯಾಗಿದೆ. ನಮ್ಮಮ್ಮ[illegible] ರೊಂದು ಹಬ್ಬವನ್ನು ಮಾಡಿ ಕಡುಬು ಹೋ[illegible] ಮಾಡುವಳು. ಆ ದಿನ ನಿಜವಾಗಿಯೂ ಹೊಟ್ಟೆ[illegible] ಒಳ್ಳೇ ಆನಂದ ನನಗೆ. ಓದುಗರೇ! ನೀವು ನಗಬಹು[illegible] ಆದರೇನು? ಒಂದೇ ಮಾತಿನಲ್ಲಿ ಹೇಳಲೋ ನಿಮಗೆ[illegible]

ಹುಡುಗಾಟದ ಸ್ವಭಾವದ ಬಗೆಯನ್ನು! ನೋಡಿ, ಚಾಕರಿಯ ಚಿಂತೆಯಂತಹ ಕುತ್ತನ್ನು ಕೂಡ ಆ ಹಬ್ಬಗಳು ಮರೆಯಿಸಿ ಬಿಡುತ್ತಿವೆ.

ದೀವಳಿಗೆ ಎಲ್ಲರಿಗೂ ಎಷ್ಟೊಂದು ಆನಂದದಾಯಕ! ಎಷ್ಟೊಂದು ಸುಖಕಾರಿ! ಅಂತೆಯೇ ಎಲ್ಲರೂ ಅದರ ದಾರಿ ಕಾಯುವುದು. ಅದರಲ್ಲಿ ನೂತನ ಗೃಹಸ್ಥಾಶ್ರಮಿಗಳು ತಮ್ಮ ಆಶ್ರಮದ ಮೊದಲು ಮೆಟ್ಟಲಿನಲ್ಲಿಯೇ ಮೂರು ದಿನದ ಸ್ವರ್ಗೀಯ ಸೌಖ್ಯವನ್ನನುಭೋಗಿಸುವರಂತೆ..... ಅಳಿಯತನ! ಎಲೆ ನನಗಾಗಿಯೇ ಅದು ಮೂಲವಾಯಿತೋ? ಕೇಳಿ. "ಅಳಿಯತನವೆಂದರೇನು? ಇನ್ನೊಂದು, - ಸಿರಿವಂತರ ಮನೆಯ ಅಳಿಯತನವೆಂದರೇನು?" ಎಂದು ಯಾರಾದರೂ ಕೇಳಿದಲ್ಲಿ "ಮೂರು ದಿನ ಬೇಡಿ ಬಯಸಿ ಮಾಡಿದ ಮಾವನ ಮನೆಯಲ್ಲಿನ ಅಳಿಯನ ಉಪವಾಸ ವ್ರತ" ಎಂದು ನಾನು ತಟ್ಟನೆ ಹೇಳಿ ಬಿಡುವೆನು. ಆ ಪ್ರಾರಬ್ಧ ನನಗೆ, ನಾನು ಈ ಸಾರೆ ಅಳಿಯತನಕ್ಕೆ ಹೋಗಿದ್ದೆ. ಅಳಿಯತನಕ್ಕಾಗಿ ಆದರದ ಆಮಂತ್ರಣೆ ನನಗೆ; ಅಯ್ಯೊ ಆದರವೇ! ........ನಮ್ಮಾಕೆ ಈ ಮೊದಲೆ ಧಾರವಾಡಕ್ಕೆ ಹೋಗಿದ್ದಳು. ನಾನು, ಆಮಂತ್ರಣದ ದಾರೀ ಕಾಯುತ್ತ ಕುಳಿತಿದ್ದವನು, ಕೂಡಲೇ ಹೊರಟುಬಿಟ್ಟೆ. ನೋಡಿ, ನನಗಿದೊಂದು ಸುಗ್ಗಿಯ ಕಾಲವೆನಿಸಿತು; ಸಿರಿವಂತ ಮಾವ, ಅದರಲ್ಲಿ ಪಟ್ಟಣದಲ್ಲಿ ವಸತಿ; ಪ್ರತಿದಿನವೂ ಹೊಸ ಮಾದರಿಯ ಸವಿ ಪಕ್ವಾನ್ನಗಳ ಸಂತೆಯೇ ನೆರೆಯಬಹುದು, ಎಂದು ನನ್ನ ಭರವಸೆ. ಈಗ ನೋಡಿ; ಆಗಿನ ನನ್ನ ಸ್ಥಿತಿಯು ನೆನಪಾಗಿ ತಲೆಯು ಕಾಸ್ಸುದ್ದು ಹೋಗಿದೆ. ದಾರಿಯಲ್ಲಿ ಬಂಡಿಯೊಳಗೇ ಕುಳಿತು ಚಿತ್ರಿಸಿದ ಸವಿಗನಸುಗಳು ಕರಗಿ ಹೋಗಿವೆ. ಆದರೆ ಒಂದು ಮಾತ್ರ ಮನದಲ್ಲಿ ಮುದ್ರೆ ಹಾಕಿದಂತೆಯಾಗಿದೆ.

ಬಂಡಿಯಲ್ಲಿ ಕುಳಿತಾಗಲೇ ಮಾವನ ಮನೆಯಲ್ಲಿಯ ತಿಂಡಿಯ ತಂಡ, ನಾನು ಹೊದೊಡನೆಯೇ ನೀಡುವ ತಿನಿಸುಣಿಸುಗಳು ಕಣ್ಮುಂದೆ ಕುಣಿಯತೊಡಗಿದುವು. ಉಪಯೋಗವೇನು? ಹೊಟ್ಟೆಯಲ್ಲಿ ಹಸಿವು! ತಿಂಡಿಯ ಸಂಭ್ರಮದಲ್ಲಿಯೇ ಬಾಯಲ್ಲಿ ನೀರು ಸುರಿದು ಬಾಯಾರಿಕೆಯೊಂದು ಸಾಲದುದಕ್ಕೆ! 'ಗಂಡಸ್ಯೋಪರಿಪಿಟಿಕಾ ಸಂವೃತ್ತಾ' ಎನ್ನುವಂತೆ. ಇವೆಲ್ಲವುಗಳ ಸಂಭ್ರಮದಲ್ಲಿಯೇ ತಲೆದೂಗಿದೆ; ಕಣ್ಣಿಗೆ ಜೊಂಪು ಬಂದಂತಾಗಿ ನಿದ್ದೆ ಹತ್ತಿತು; ಅದೆಂತಹ ನಿದ್ದೆ? ಅರೆನಿದ್ದೆ, ಅದರಲ್ಲಿಯೇ ತಮಾಷೆಯಾದ ಕನಸೊಂದು!

ಮಾವನ ಮನೆಯಲ್ಲಿ ಕುಳಿತಿದ್ದೇನೆ; ಬೇರೆ ಬೇರೆ ತಿನಿಸುಗಳು; ಪೂರಿ, ಶ್ರೀಖಂಡ ಉಂಡಿ........ಪ್ಸ........ ಇನ್ನೂ ಬಾಯಲ್ಲಿ ನೀರು- ಈ ಮೊದಲಾದ ಸವಿದಿನಿಸುಗಳನ್ನು ಬಹು ಪರಿಷ್ಕಾರವಾಗಿ ಮಂಡಿಸಿದ್ದಾರೆ. ತೋಳೇರಿಸುತಾ ಇದ್ದೆ ತಿನಬೇಕೆಂದು; ಅಷ್ಟರಲ್ಲಿ ಕರಿಯ ಬಾವುಗವೊಂದು ಶ್ರೀಖಂಡಕ್ಕೆ ಹೆದರಿಕೆಯಿಲ್ಲದೆ ಬಾಯಿ ಹಾಕಲು ಅದನ್ನು ಹೊಡೆಯಬೇಕೆಂದೆಣಿಸಿ ಕೈಯ್ಯನೆತ್ತಿದೆ! - "ಅಯ್ಯೊ! ಇದೇನಣ್ಣಾ!?" ಎಂದ ನನ್ನ ತಮ್ಮ ಶಾಮು.-ಶಾಮನೂ ನನ್ನ ಕೂಡ ಬಂದಿದ್ದನು.-ಆತನು ಹುಟ್ಟುವುದರಲ್ಲಿ ನನಗೆ ಕಿರಿಯ ತಮ್ಮನಾಗಿದ್ದರೂ ಹೊಟ್ಟೆಯ ವಿಚಾರದಲ್ಲಿ ನನ್ನ ಹಿರಿಯಣ್ಣ! ನಾನು ತೋಳೇರಿಸುತಾ ಇದ್ದುದ್ದು, ನಿರೀಕ್ಷಿಸುತ್ತ ಕುಳಿತಿದ್ದ ಅವನು, ನಾನು ಕೈಯ್ಯನೆತ್ತಿದ ಮೇಲೆ ಹೆದರಿ ಕೂಗಿ ಕೇಳಿದ. 'ಇಲ್ಲೇಳು ತಮಾಷೆ ಮಾಡಿದೆ ಎಂದು' ಹೇಳಿದೆ! ಮಾಡುವುದಾದರೂ ಏನು? ಅಂತೂ ದಾರಿಯ ವಿಚಾರ ಹೀಗೆ.

ನಾವು (ಅಳಿಯದೇವರು) ಸುಪ್ರಸನ್ನ ಮುದ್ರೆಯಿಂದ ಮಾವಂದಿರ ಮನೆಯಂಗಳದಲ್ಲಿ ಇಳಿದೆವು. ಅವರಿರುವುದು ಮಾಳಗುಡ್ಡದಲ್ಲಿ. ಮನೆಯ ಸುತ್ತಲೂ ಸೊಗಸಾದ ತೋಟ. ಹೊರಗಿರುವಾಗಲೇ ಯೋಚಿಸಿದೆ. 'ಮೂರು ನಾಲ್ಕು ದಿನ ಇಲ್ಲಿರಬೇಕಾಗುವುದು. ಅಳಿಯ ಬಿಂಕದಿಂದಿರಬೇಕು'- ಮಾವಂದಿರ ಮನೆಯಲ್ಲಿ ಬಾಯಿಗೆ ಬೀಗ ಹಾಕಿಕೊಂಡಿರಬೇಕು, ಎಂಬ ವೇದವಾಕ್ಯ ನನ್ನ ತಲೆಯಲ್ಲಿ ಉರಿಯುತ್ತಿತ್ತು. ಯಾರಿಲ್ಲದಾಗ ಅವಳೊಡನೆ ಹರಟುತ್ತ ಕುಳಿತರೆ, ನಕ್ಕುನಲಿದರೆ ಹೊತ್ತು ಹೋಗಬಹುದು ಎಂದುಕೊಂಡೆ. ಅದೂ ಅಸಾಧ್ಯ! ಅದೇನೋ ಅಳಿಯನ ಸಂಗಡ ತೋಳವಿರಬೇಕಂತಲ್ಲ! ಅದೊಂದು ಸ್ಮೃತಿ ನಿರ್ಬಂಧ! ನಮ್ಮ ತಾಯಿ ಅಳಿಯನ ಸಂಗಡ ತೋಳ ಎಂದು ನಮ್ಮ ಶಾಮುನನ್ನು ಬೆನ್ನುಹಚ್ಚಿ ಬಿಟ್ಟಿದ್ದಳು. ಇನ್ನೊಂದು ಅವಳ ಆದೇಶ ನನಗೆ. "ಇಲ್ಲಿಯ ಹಾಗೆ ಅಲ್ಲಿ ಊಟ ಬೇತ ಕಣೋ. ಅಲ್ಲಿ ಹಾಕಿದ್ದೆಲ್ಲವನ್ನೂ ತಿಂದೇಳಕೂಡದು; ಅರ್ಧಮರ್ಧ ಇಟ್ಟೇಳುವುದು

CC-0. Jangamwadi Math Collection. Digitized by eGangotri

ಸಿರಿವಂತರ ಲಕ್ಷಣ; ತಿಳಿಯಿತೇ ?'' ಎಂದು ಮತ್ತೆ ಮತ್ತೆ ಹೇಳಿದ್ದಳು. ಅದೆಲ್ಲ ಇರಲಿ. ಹೊತ್ತು ಹೋಗುವ ಸಾಧನೆಯೇನು ಎಂದು ಯೋಚಿಸುತ್ತಿದ್ದ ನಾನು, ತೋಟವನ್ನು ನೋಡಿ ಆನಂದಬಟ್ಟೆ. ತೋಟದಲ್ಲಿ ಸುತ್ತಾಡಿಯಾದರೂ ಆನಂದಿಸಬಹುದು ಎಂದೆ.

ಬಂಡಿಯ ಅವಸರದ ಮೂಲಕ ಮುಂಜಾನೆ ಎಂಟು ಗಂಟೆಗೆ ಊಟ ಮಾಡಿದ್ದೆನು. ಸಂಜೆಯ ನಾಲ್ಕು ಗಂಟೆ ಈಗ, ಹೊಟ್ಟೆಯಲ್ಲಿ ಡೊಂಬರ ಕುಣಿತ! ಬಂಡಿಯಿಂದ ಕೆಳಗಿಳಿದೆ. ಗಾಡಿ ಬರುವುದನ್ನು ನೋಡುತ್ತ ನಿಂತಿದ್ದರೋ ಏನೋ ಮಾವಂದಿರು; ಸ್ವಾಗತಿಸಿ ಒಳಗೆ ಕರೆದೊಯ್ದರು.

ಒಳಗಿನ ಸೊಗಸನ್ನು ನೋಡಿ ಆಶ್ಚರ್ಯಗೊಂಡೆನು. ನನ್ನ ಸಲುವಾಗಿಯೇ ಮನೆಯು ಸಿಂಗರಿಸಿರಲಿಲ್ಲವೆಂತೆ. ಯಾವಾಗಲೂ ನಮ್ಮ ಮಾವ ಸ್ವಲ್ಪ Spendthrift. ಎಂದು ಆ ಮೇಲೆ ಸ್ನೇಹಿತರ ಬಾಯಿಂದ ಕೇಳಿದೆ.

ಮೊಗಸಾಲೆಯ ಸೊಬಗು ನನ್ನ ಮನವನ್ನಾಕರ್ಷಿಸಿ ಬಿಟ್ಟಿತು. ಬಹಳ ಅಚ್ಚುಕಟ್ಟುತನ. ನೆಲದ ಮೇಲೆ ರತ್ನ ಗಂಬಳಿ; ಮೇಲೆ ಜರದಂಚಿನ ಕುತನಿಯ ತೆಳುವಾದ ಗಾದಿಗಳು; ಬದಿಗಳಲ್ಲಿ ಕುಸುರಿನ ಫರ್ನೀಚರುಗಳು; ಆ ಗೋಡೆಯ ಬಣ್ಣ; ಆ ಆಲ್ಮೆರಾಗಳು; ಒಂದೇ ಎರಡೇ ! ಏನು ಹೇಳಲಿ? ಅವನ್ನೆಲ್ಲ ನೋಡಿ ನನಗೆ ಬಲು ಸೋಜಿಗ. ಬಿ. ಎ. ಆಗುವವರೆಗೆ ನಾನು ಧಾರವಾಡದಲ್ಲಿದ್ದರೇನಾಯಿತು ? ನಾನು ಹಳ್ಳಿಯವ; ಹಳ್ಳಿಯ ಸಂಸ್ಕೃತಿಯ ಪ್ರಭುತ್ವವೇ ನನ್ನ ಮೇಲೆ. ಮೊದಮೊದಲು ಮೇಲೆ ಕಾಲಿಡಲು ನನಗೆ ತುಂಬಾ ಎದೆಗುದಿ. ಆದರೇನು, ಅಳಿಯ ಎಂಬ ಹೆಮ್ಮೆಯೊಂದು, ಗಂಭೀರತೆಯಿಂದ ಹೋಗಿ ಕುಳಿತೆ. ಹೊರಗಿನ ಬರೀ ಬಯಲು ಆಡಂಬರದಿಂದ ಜಠರಾಗ್ನಿಯು ಶಾಂತವಾಗುವುದೆ? ಮಾಡುವುದೇನು ? ಬಂದದ್ದು ಭೋಗಿಸಿಯೇ ತೀರಬೇಕಲ್ಲವೇ!? ಏನಾದರೂ ಈಗ ಆಗಬಹುದೆಂದು ಮಾವಂದಿರ ಮಾತನ್ನು ಕಿವುಡುಗೇಳುತ್ತ ಕುಳಿತೆ. ಆದರೆ ಬರೀ ಮಾತಿನಿಂದೇನು ಹಿತ?

ಸಹಜವಾಗಿ ಆ ಕಡೆ ನೋಡಿದೆ. ನಮ್ಮಾಕೆ ನಡುಮನೆ ಬಾಗಿಲ ಬಳಿ ಬಂದು ಇಣಿಕಿ ನೋಡುತ್ತಿದ್ದಳು. ಜನರು ಇದೇನೋ ಬಲುಸೊಗಸಿನ ಸಂದರ್ಭವೆಂದು ತಿಳಿಯುವುದುಂಟು. ಹುಡುಗರಿಗೆ ಗೋಲಿಯಾಟದಲ್ಲಿ ಏನು ... [illegible]

ಸೊಗಸೋ ಅದಕ್ಕಿಂತ ಹೆಚ್ಚು ಸೊಗಸು ಇದ್ದ... ಯುವಕರಿಗೆ. ನನಗೂ ಈ ಸಂದರ್ಭ ಎಷ್ಟೋ ನ... ಸೊಗಸನ್ನೊದವಿಸಿ ಕೊಟ್ಟಿರುವುದು. ಆದರೆ ಈಗ ... ಅವರ ಪರಿಣಾಮ ನನ್ನ ಮೇಲೆ ಏನೂ ಆಗಲಿಲ್ಲ!

“ ಫಲಾಹಾರದ ಸಿದ್ಧತೆಯಾಗಿದೆ; ಚಿಕ್ಕಪ್ಪ! ... ಎಂದು ಆಕೆಯ ತಂಗಿ ಬಂದು ಮಾವಂದಿರಿಗೆ ಹೇಳಿ... “ ಏಳುವಿರಾ ” ಎಂದು ಮಾವ, ಅಂದರು.

ಎದ್ದು ಹೆಚ್ಚಿನ ಬಟ್ಟೆಗಳನ್ನು ತೆಗೆಯತೊಡಗಿದೆ. ... ದಲ್ಲಿ ಮಂಡಿಗೆಗಳಂತೂ ಉಬ್ಬುಬ್ಬಿ ಜೀಳುತ್ತಿದ್ದ... ಬಚ್ಚಲಮನೆಗೆ ಕರೆದೊಯ್ದರು. ಅಲ್ಲಿ ಎರಡು ... ಯುವ ತಂಬಿಗೆಗಳಲ್ಲಿ ಬಿಸನೀರು; ಸಾಬೂನು, ಟ... ಎಲ್ಲವೂ ಸಿದ್ಧವಿದ್ದುವು. ಕಾಲುತೊಳೆದುಕೊಂಡು ... ಹೋದೆವು. ನನಗೆ ತುಂಬಾ ತಿಂಡಿಯ ಆತುರ. ಆ ... ಮಣೆಗಳು, ಲಕಲಕಿಸುವ ಬೆಳ್ಳಿಯ ತಂಬಿಗೆ ಥಾಲಿ... ಚಿತ್ರವಿಚಿತ್ರವಾದ ರಂಗವಲ್ಲಿ. ಈ ಎಲ್ಲ ಆಡಂಬರ... ಒಪ್ಪುವ ತಿಂಡಿಗಳು ಹೇಗಿರಬಹುದು....; ಎಂದು ... ಸುತ್ತ ಮಣೆಯ ಮೇಲೆ ಕುಳಿತೆ.ಅತ್ತೆಯವರು ಬಡಿಸ... ಆರಂಭಿಸಿದರು. ಮುಂದೆ ವಿವಿಧವಾದ ಬೆಳ್ಳಿಯ ಕು... ತಟ್ಟೆಗಳನ್ನು ನೋಡಿ ಉಣಿಸುಗಳ ವೈವಿಧ್ಯವನ್ನು ... ಆತುರತೆಯ ಅತಿಶಯದ ಮೂಲಕ ಬಾಯಾಡಿಸ... ಗಿದೆ. ನಮ್ಮತ್ತೆಯವರ ಮೇಲೆ ನನಗೆ ತುಂಬಾ ಕೋ... ಅವರು ನಿಜವಾಗಿಯೆ ಗಜಗಮನೆಯವರು, ಕು... ಗಮನೆಯರೆಂದರೂ ಸರಿ! ಒಂದು ಹೆಜ್ಜೆ ಮುಂದಿಟ್ಟ... ಬೇಕಾದರೆ ಅವರಿಗೆ ಒಂದು ತಾಸು ನಟ್ಟು ಕಡಿ... ಶ್ರಮವೆನಿಸುತಿರಬಹುದು. ಅಂತೂ ಅರ್ಧ – ಮುಕ್ಕಾ... ಗಂಟೆಯಲ್ಲಿ ಎಡೆಬಡಿಸುವುದಾಯಿತು. ಅದೆಂತಹ ಬ... ವುದೊ ನಾ ಬೇರೆ ಕಾಣೆ. ಎಲ್ಲವೂ ಮಾದರಿ ( ... ಗಾಗಿ ಮುಂದೆ ತಂದು ಇಟ್ಟಂತೆ ತೋರಿತು. ... ತಟ್ಟೆಯಲ್ಲಿ ' ಟೀಸ್ಪೂನ್ ' ತುಂಬುವಷ್ಟು ಸಕ್ಕರೆ... ಪಾಕು ! ಇನ್ನೊಂದರಲ್ಲಿ – ನಿಜವಾಗಿಯೂ ನೋ... ನೆಲ್ಲಿಯ ಕಾಯಿಗಿಂತ ಸಣ್ಣದೇ ಆದ ಒಂದು ಉಂ... ಗುಂಡು ! ಬೇರೊಂದರಲ್ಲಿ ಒಂದು ತುತ್ತು ಉಪ್ಪಿಟ್ಟು... ( ನಮ್ಮ ವೈರಿ. ) ಅಷ್ಟರಲ್ಲಿ ಅಮ್ಮನ ... ವೊಂದು “ ಎಲ್ಲವನ್ನೂ ತಿಂದೇಳಕೂಡದು ” ಎಂ... ನೆನಪಾಯಿತು. ಮುಗಿಲು ಹರಿದುಬಿದ್ದಂತಾ...

CC-0. Jangamwadi Math Collection. Digitized by eGangotri

ಪೈಮೇಲೆ. ಸ್ವಲ್ಪ ಇದ್ದ ತಿಂಡಿಯು ಬಲು ರುಚಿಸುವು ದಲ್ಲವೇ? ನನಗೆ ಅದು ಬಲು ರುಚಿಯಾಗಿಬಿಟ್ಟಿತು. ಉಪ್ಪಿಟ್ಟು ನನಗೆ ಸೇರದ ತಿಂಡಿ; ಅದೂ ಕೂಡ ನನಗೆ ಅಮೃತವಾಯಿತು. ಎಲ್ಲವನ್ನೂ ತಿಂದು ಕೊಂಚ ಕೊಂಚ ಉಳಿಸಿದೆ ತಟ್ಟೆಯಲ್ಲಿ; ಬಹುಭಾಗ ಹೋಯಿತು ಹೊಟ್ಟೆ ಯಲ್ಲಿ. ಅದನ್ನಷ್ಟು ತಿಂದುಬಿಡಬೇಕೆಂದು ಆಸೆ. ಆ ಆಸೆ ಯಿಂದ ತಿಂಡಿಯ ಕಡೆಯಿಂದ ಕಣ್ಣುಗಳೇ ಕಿತ್ತ ದಾದುವು. ಆದರೇನು! ಅಮ್ಮನ ಆದೇಶದ ಈಟಿಯು ಆಘಾತವೊಂದಿದೆಯಲ್ಲ! ಆಗಿನ ನನ್ನ ಮನಶ್ಚಾಂಚಲ್ಯದ ವೈಚಿತ್ರ್ಯ ನೋಡಿ; ಯಾರಾದರೂ "ಅದನ್ನಷ್ಟು ತಿಂದೆದ್ದುಬಿಡು" ಎಂದು ಹೇಳುವವರಿದ್ದರೆ ಅದನ್ನು ನೆಕ್ಕಿಯೇ ಎದ್ದುಬಿಡುತ್ತಿದ್ದೆ. ಆದರೆ ನನಗೆ ಯಾರು ಅಂತಹ ಆಪ್ತರಲ್ಲಿ?

ಶಾಮು ಎಲ್ಲವನ್ನೂ ಒಂದು ನಿಮಿಷದಲ್ಲಿಳಿಸಿ ಇಳಿ ಮೊರೆ ಮಾಡಿಕೊಂಡು ಕುಳಿತಿದ್ದ. ಅವನು ನಿರ್ಭಯ ದಿಂದ ಇನ್ನಿಷ್ಟು ಹಾಕಿಸಿಕೊಂಡು ತಿನ್ನಬಹುದಿತ್ತು; ಆದರೆ ಅವನದು ಸ್ವಲ್ಪ ಮೂಕ ಸ್ವಭಾವ. ಮಂದಿಯಲ್ಲಿ ಮಾತು ಬರದು ಅವನಿಗೆ.

ಗಜಗಮನೆಯವರು ಸಮ್ಮತ್ತಿ ಎಂದು ಹೇಳಿಲ್ಲವೇ? ಇನ್ನೂ ಏನಾದರೂ ಅವರು ತಮ್ಮ ಮಂದಗತಿಯಿಂದ ತರುತ್ತ ದಾರಿಯಲ್ಲಿರಬೇಕು.... ಎಂದು ನನ್ನ ತರ್ಕ; ಆದ ರೇನು! ಮರೆಮಾತಿಗೆ ಬಿದ್ದವರು ಗುಡುಗು ಕೇಳಿ ನಡುಗುವಂತೆ "ಆಗಿದ್ದರೆ ಏಳಬಹುದು" ಎಂದ ಮಾವಂ ದಿರ ನುಡಿಯ ಸಿಡಿಲಿಗೆ ಬೆಂದುಹೋದೆ. ಮರಮರ ಮರುಗಿದೆ. ಅಯ್ಯೊ ದೈವವೇ! ಎಂದೆ. ನನ್ನನ್ನು ಕೇಳು ವವರಾರು ಅಲ್ಲಿ! ಅನಾಥ! ಏನು ಮಾಡುವುದಿದೆ? ನಿರಾಶೆ ಯಿಂದೆದ್ದು ಕೈತೊಳೆದೆ. ಹೊಟ್ಟೆಯಲ್ಲಿ ಕಾಗೆಗಳ ಚೀರಾಟ ಅಸಹನೀಯವಾಯಿತು.- ಇನ್ನೊಂದು ಮನ ದಲ್ಲಿನ ಮರುಕು; ನಮ್ಮ ಶಾಮು ಹೇಗೆ ತಡೆದಿರುವನೋ ಪಾಪ! ಎಂದು. ಆಕೆಗಾದರೂ ತಿಳಿಯಬಾರದೇ! ಎಂದು ಮನದಲ್ಲಿ ಕೋಪಗೊಂಡೆ. ಪಾಪ, ಅವಳಾದರೂ ಏನು ಮಾಡುವಳು! ಒಂದೆರಡು ತಿಂಗಳು ನಮ್ಮಲ್ಲಿದ್ದು, ಆ ಬಾಗಿಲ ಮರೆಗೆ ನಿಂತು, ಈ ಬಾಗಿಲ ಮರೆಗೆ ನಿಂತು ಎಲ್ಲರ ಆಹಾರ ಮೊದಲಾದುವುಗಳ ಪರಿಚಯವೇ ವಿಶೇಷ ವಿರಲಿಲ್ಲವಳಿಗೆ; ಎಂದಮೇಲೆ ನಮ್ಮ ಹೊಟ್ಟೆಯಳತೆ ಅವ ಳಿಗೆ ತಿಳಿಯುವುದು ಹೇಗೆ? ತನ್ನ ಗಂಡ ಗ್ರ್ಯಾಜುಏಟ ನಿದ್ದು ಅರ್ಧ ಕಡುಬು, ಅಡಿಕೆಯಷ್ಟು ಅನ್ನ ಉಣ್ಣುವ ಸೂಕ್ಷ್ಮ ಮನುಷ್ಯನೆಂದು ಅವಳು ಅಭಿಮಾನವನ್ನೂ ಪಡುತ್ತಿರಬಹುದು ಆ ವೇಳೆಯಲ್ಲಿ. ಈಗಲ್ಲ ಮತ್ತೆ; ಈಗ ಪಡಿ ತಪ್ಪೇಲಿಯೇ ನಮ್ಮ ಹೆಸರಿನಿಂದ ಒಲೆಯ ಮೇಲೆ ಕೂತರೂ ಅವಳಿಗೆ ಆಶ್ಚರ್ಯವಾಗದು.

ಹೊರಗೆ ಬಂದು ಬಿದ್ದುಕೊಂಡೆ. ಐದೂವರೆ ಗಂಟೆ ಯಾಗಿರಬಹುದಾಗ; ಕಂಗೆಟ್ಟು ಹೋದೆ. ಮುಂಗಾಣ ದಾದೆ. ವಿಚಾರಿಸಿ ವಿಚಾರಿಸಿ ಕೊನೆಗೆ ಉಡುಪಿ ಸುಬ್ಬಯ್ಯ ನವರಿಗೆ ಶರಣು ಹೋಗಬೇಕೆಂದು ನಿಶ್ಚೈಸಿದೆ. ಶಾಮೂ ಬರುತ್ತೀ ಏನೋ ಹೊರಗೆ? ಎಂದು ಶಾಮುನನ್ನು ಕರೆದು ಕೊಂಡು ಹೊರಹೊರಟೆ. ಆದರೆ ಮಾವಂದಿರು! "ತಿರು ಗಾಡಲಿಕ್ಕೆ ಹೋಗಬೇಕೆ? ಕಿಟ್ಟಾ, ಇವರ ಕೂಡ ನೀನೂ ಹೊರಡು" ಎಂದು ನಮ್ಮ ಬೀಯಗನಿಗೆ ಹೇಳಿದರು. ಅಯ್ಯೊ! ಎಂದೆ ಮನದಲ್ಲಿ. ಆದರೂ ಧೈರ್ಯ ತಂದು ಕೊಂಡು–"ಇಲ್ಲ ಇಲ್ಲಿ ನನ್ನ ಸ್ನೇಹಿತನೊಬ್ಬನಿರುವನು. ಅವನಿಗೆ ಈಗಲೆ ಬೆಟ್ಟಿಯಾಗಬೇಕಿದೆ; ಈಗ ಬಂದು ಆ ಮೇಲೆ ತಿರುಗಾಡಲಿಕ್ಕೆ ಹೋಗುವೆನು." ಎಂದವನೇ ಶಾಮುನನ್ನು ಕರೆದುಕೊಂಡು ಹೊರಟುಬಿಟ್ಟೆ; ಪಾರಾದೆ ಎಂದು ಮನದಲ್ಲಿ ಆನಂದ. ಅಣ್ಣತಮ್ಮಂದಿರು ಕೂಡಿ ಸುಬ್ಬಯ್ಯನಲ್ಲಿ ಹೊಟ್ಟೆತುಂಬ ತಿಂದು ತೇಗಿದೆವು.

ಓದುಗರೇ! ಸುಬ್ಬಯ್ಯನವರಿಗೆ ನಾವು ಶರಣು ಹೋಗದೆ ಇದ್ದರೆ ನಾನೇನು ನಿಮಗೆ ಈ ನನ್ನ ಅಳಿಯ– ತನದ ಕರುಣಕತೆಯನ್ನು ಹೇಳಲು ಬದುಕಿರುತ್ತಿರಲಿಲ್ಲ!

ಮುಂದಿನ ಮೂರು ದಿನಗಳ ಗೋಳು ತೋಡಿ ಕೊಳ್ಳುವುದೆಂದರೆ ಮೂರು ದಿನವೇ ಬೇಕು. ಆದುದರಿಂದ ಕ್ಷಮಿಸಿ, ಬೇಸರ ಬಂದಿರಬಹುದು ತಮಗೂ. ಮುಗಿ ಸುವೆನಿನ್ನು. ನಿರಭಿಮಾನತನದಿಂದ ಎಲ್ಲವನ್ನೂ ಬಡಬಡ ಆಡಿಬಿಟ್ಟ ನನ್ನನ್ನು ತಿರಸ್ಕಾರದಿಂದ ನೋಡಕೂಡದೆಂದು ನನ್ನ ವಿನಯದ ಕೋರಿಕೆ.


CC-0. Jangamwadi Math Collection. Digitized by eGangotri

# ಸೋವ್ಹಿಯಟ್ ರಶಿಯಾ

ಅಥವಾ

# ಅದ್ಭುತವಾದ ಪ್ರಯೋಗಶಾಲೆ

[ ಲೇ:— ಶಿವರಾವ ಮುನ್ನವಳ್ಳಿ ಬಿ. ಎ., ಎಲ್.ಎಲ್. ಬಿ.. ಅಥಣಿ ]

ಹಿಂದುದೇಶಕ್ಕೂ ರಶಿಯಾದೇಶಕ್ಕೂ ಹಲವು ಅಂಶಗಳಲ್ಲಿ ನಿಕಟವಾದ ಹೋಲಿಕೆಯಿರುವುದು. ಎರಡೂ ರಾಷ್ಟ್ರಗಳು ವಿಸ್ತಾರವಾದುವುಗಳು; ಲೋಕಸಂಖ್ಯೆಯಲ್ಲಿ ೧೦೦ಕ್ಕೆ ೮೫ ರಷ್ಟು ಅಶಿಕ್ಷಿತರು. ಅಜ್ಞಾನಿಗಳು, ಭಾವಿಕರು; ಒಕ್ಕಲುತನವೇ ಮುಖ್ಯೋದ್ಯೋಗ; ಉದ್ಯೋಗ ಕಲಾಕುಶಲತೆಗಳಲ್ಲಿ ಹಿಂದುಳಿದುವುಗಳು; ಜಾತಿ, ಧರ್ಮ, ಭಾಷೆ ಇವುಗಳಲ್ಲಿ ಕಂಡುಬರುವ ಭಿನ್ನತೆ; ಪ್ರಾಚೀನ ರೂಢಿಗಳು ಗಟ್ಟಿಯಾಗಿ ಬೇರೂರಿಕೊಂಡಿದ್ದ ರೀತಿ, ಇವೆಲ್ಲ ಎರಡೂ ರಾಷ್ಟ್ರಗಳಿಗೂ ಸಾಮಾನ್ಯವಾಗಿವೆ. ಆದರೆ, ಯುರೋಪಿಯ ಮಹಾಯುದ್ಧದ ಪೂರ್ವದಲ್ಲಿ ಇಂತಹ ಸ್ಥಿತಿಯಲ್ಲಿದ್ದ ರಶಿಯಾದೇಶವು ಇಂದು ಅತ್ಯಂತ ಭಿನ್ನವಾದ—ಆಶ್ಚರ್ಯಕರವಾದ ದೃಶ್ಯವನ್ನು ತೋರಿಸುತ್ತಲಿದೆ. ೧೯೧೭ ನೆಯ ಇಸ್ವಿಯ ನವ್ಹೆಂಬರ್ ತಿಂಗಳಲ್ಲಿ ರಶಿಯಾದೇಶದ ತುಂಬ ಘನಘೋರವಾದದ್ದೊಂದು ಕ್ರಾಂತಿಯ ಬಿರುಗಾಳಿಯು ಬೀಸಿತು. ಬಹುದಿನಗಳಿಂದ ದೃಢತರವಾಗಿ ನೆಲೆಗೊಂಡ ಸಮಾಜವೃಕ್ಷವು ಬೇರುಸಹಿತ ಕಿತ್ತುಬಿದ್ದಿತು. ರಾಜಕೀಯ, ಆರ್ಥಿಕ ವಿಷಯಗಳಲ್ಲಿ ಮಹತ್ವವಾದ ಸ್ಥಿತ್ಯಂತರಗಳು ಉಂಟಾದುವು. ಝಾರಶಾಹಿಯು ಪದಚ್ಯುತವಾಗಿ ಏಕತಂತ್ರೀಯವಾದ ಬಲುವೆಯ ಆಡಳಿತವು ಕೊನೆಗಂಡಿತು. ಕ್ರಾಂತಿಕಾರಕರಾದ "ಬೋಲ್ಸೆವ್ಹಿಕ್" ಎಂಬ ಸಮಾಜಸತ್ತಾವಾದಿಗಳು ಅಧಿಕಾರಸೂತ್ರಗಳನ್ನು ಕೈವಶಮಾಡಿಕೊಂಡರು. ಕರ್ತೃತ್ವಶಾಲಿಯಾದ 'ಲೇನಿನ್' ಎಂಬ ಮಹಾ ಪುರುಷನ ಕೈಯಲ್ಲಿ ರಶಿಯನ್ ಸಮಾಜನೌಕೆಯ ಚುಕ್ಕಾಣಿಯು ಸೇರಿತು. ಅಂದು ಮೊದಲುಗೊಂಡು ಇಂದಿನವರೆಗೆ ಸಮಾಜಶಾಸ್ತ್ರದ ಹೊಸ ಹೊಸ ಪ್ರಯೋಗಗಳು ಅಲ್ಲಿ ನಡೆದಿವೆ. ಅದನ್ನು ನೋಡಿ ಇಡಿ ಜಗತ್ತು ಬೆರಗುಗೊಂಡಿರುವುದು. ಅಲ್ಲಿಯ ಪ್ರಯೋಗಗಳ ಹಾಗೂ ಜನರ ಸ್ಥಿತಿಗತಿಯ ಕೊಂಚ ಪರಿಚ[illegible] ಕನ್ನಡ ಬಾಂಧವರಿಗೆ ಪ್ರಯೋಜನಕಾರಿಯಾದೀ[illegible] ಯಥಾಮತಿಯಾಗಿ ಅದನ್ನಿಲ್ಲಿ ವಿವರಿಸಲಾಗಿದೆ.

ಭೂತಲದ ಮೇಲಿಂದ ಬಂಡವಲಶಾಹಿಯನ್ನು [illegible] ಹೆಸರಿಲ್ಲದಂತೆ ಓಡಿಸಿಬಿಟ್ಟು ಒಕ್ಕಲಿಗರ - ಕೂಲಿಕಾ[illegible] ಸಾಮ್ರಾಜ್ಯವನ್ನು ಎಲ್ಲ ಕಡೆಗೂ ಸ್ಥಾಪಿಸುವುದಾ[illegible] ಯನ ಬೋಲ್ಸೆವ್ಹಿಕರು ಪಣತೊಟ್ಟು ಟೊಂಕಕಟ್ಟಿದ್ದಾ[illegible] ಅದು ಕಾರಣ ಬಲಿಷ್ಠ ಬಂಡವಲಗಾರ ರಾಷ್ಟ್ರಗಳ[illegible] ಲ್ಲಿಯೂ ಬ್ರಿಟಿಶ ರಾಷ್ಟ್ರವು ರಶಿಯಾದೇಶದ "ಸೋ[illegible] ಯಟ್" ಸಮಾಜರಚನೆಯ ವಿರುದ್ಧವಾಗಿ ಜಗತ್ತಿ[illegible] ಜನದ ಮತವನ್ನು ಕಲುಷಿತ ಮಾಡಿ, ಬೋಲ್ಸೆವ್ಹಿ[illegible] ಸಂಬಂಧವಾಗಿ ಅಲ್ಲದಸಲ್ಲದ ಸುಳ್ಳು ಸುದ್ದಿಗಳನ್ನು [illegible] ಡಲು ಅವಿಶ್ರಾಂತ ಯತ್ನ ಮಾಡತೊಡ[illegible] "ಸೋವ್ಹಿಯಟ್ ರಾಜ್ಯಕಾರಭಾರದಲ್ಲಿಯ ಕೆಲಸಗಾ[illegible] ರಿಗೆ ದೊರೆತ ಸ್ವರ್ಗೀಯ ಸುಖಶಾಂತಿಗಳನ್ನು ಬಚ್ಚಿ[illegible] ಕಾಲ್ಪನಿಕ ದೋಷಗಳನ್ನು ದಟ್ಟವಾದ ಬಣ್ಣಗ[illegible] ಬರೆದು ತೋರಿಸಿ ರಶಿಯಾವನ್ನು ತುಚ್ಛೀಕರಿಸು[illegible] ಬ್ರಿಟಿಶರಿಗೆ ಒಂದು ಆಟದಂತಾಗಿರುವುದು. ಆದರೆ ಸ[illegible] ದಿಂದ ಇತ್ತಿತ್ತಲಾಗಿ ನಿಷ್ಪಕ್ಷಪಾತಿಗಳಾದ ಪ್ರವಾ[illegible] ರಶಿಯಾದೇಶದ ನವೀನ ಸಮಾಜರಚನೆಯ ಅಂದ[illegible] ಚಿತ್ರವನ್ನು ಕಣ್ಣಾರೆ ಕಂಡು, ತಮ್ಮ ಸ್ವಾನುಭವ[illegible] ಜಗತ್ತಿನ ಮುಂದೆ ಹರಡಿದ್ದಾರೆ. ಇಂಗ್ಲಂಡು, ಅಮೆ[illegible] ಕಾಗಳ ಜನರು ಕೂಡ ಈಗೀಗ ರಶಿಯಾದೇಶದ ಅ[illegible] ಪ್ರಗತಿಯ ವಿಷಯದಲ್ಲಿ ತಮ್ಮ ಆಶ್ಚರ್ಯವನ್ನು [illegible] ಗೊಳಿಸತೊಡಗಿದ್ದಾರೆ. ಹಿಂದಭೂಮಿಯ ಪರ[illegible] ಕವೀಂದ್ರರಾದ ರವೀಂದ್ರರೂ, ಪಂಡಿತ ಜವ[illegible] ಲಾಲರೂ ಸೋವ್ಹಿಯಟ್ ಕಾರಭಾರದಿಂದ ರಶಿಯಾದ[illegible] ಕೆಲಸಗಾರರಿಗೆ ಅಪರಿಮಿತ ಕಲ್ಯಾಣವಾಗಿರುವ[illegible]

CC-0. Jangamwadi Math Collection. Digitized by eGangotri

ತಮ್ಮ ಲೇಖನಮಾಲೆಯಿಂದ ಸುಂದರ ಶಬ್ದಚಿತ್ರವನ್ನು ರೇಖಿಸಿದ್ದಾರೆ. ಆದರಿಂದ ಕೊಂಚಕೊಂಚವಾಗಿ ರಶಿಯಾ ದೇಶದ ವಿಷಯದಲ್ಲಿದ್ದ ಭ್ರಾಂತಿಯೂ ತಪ್ಪುತಿಳುವಳಿಕೆಯೂ ದೂರವಾಗತೊಡಗಿದೆ. ಹೀಗೆ ತೀರ ಅಲ್ಪ ಕಾಲದಲ್ಲಿ ಇಡೀ ಜಗತ್ತು ಬೆರಳು ಕಚ್ಚಿಕೊಳ್ಳುವಂತಹ ಅದ್ಭುತ ರೂಪಾಂತರವು ಅಲ್ಲಿ ಕಂಡುಬರುತ್ತಿರುವುದು. ಇದೆಲ್ಲವು ಸೋವ್ಹಿಯಟರು ಒಂದು ಕಡಿಮೆ ಹದಿನೈದು ವರ್ಷಗಳಲ್ಲಿ ಒದಗಿಸಿ ತಂದ ಚಮತ್ಕಾರವು!

ಸಮಾಜ ಸತ್ತಾವಾದಿಗಳ ಆದಿಗುರುವಾದ ಕಾರ್ಲ್ ಮಾರ್ಕ್ಸಿನ ಸಿದ್ಧಾಂತದ ತಳಹದಿಯ ಮೇಲೆ ರಶಿಯಾದಲ್ಲಿಯ ಸಮಾಜದ ಕಟ್ಟಡವು ರಚಿತವಾಗತೊಡಗಿರುವುದು. ರಾಷ್ಟ್ರವು ಪೂರ್ಣ ಸ್ವತಂತ್ರವಾಗಿರುವುದು. ಆ ದೇಶದಲ್ಲಿ ರಾಜರು, ನವಾಬರು, ಜಮೀನುದಾರರು, ಸಾವುಕಾರರು, ವ್ಯಾಪಾರಿಗಳು ಹೀಗೆ ಭಿನ್ನಭಿನ್ನವಾಗಿ ವರ್ಗೀಕರಿಸಲಿಕ್ಕೆ ಬರುವಂತಿಲ್ಲ. ಎಲ್ಲ ಸಮಾಜವು ರೈತರು, ಕೆಲಸಗಾರರು. ಇವರಿಂದ ಕೂಡಿದ್ದಿದ್ದು ರಟ್ಟೆ ಮುರಿದು ಹೊಟ್ಟೆ ಹೊರೆಯುವುದೇ ಶ್ರೇಷ್ಠವೆಂಬ ಭಾವನೆಯು ನೆಲೆಗೊಂಡಿದೆ. ಕೂಲಿಕಾರರೆಲ್ಲರೂ ತಮ್ಮ ತಮ್ಮ ಸೋವ್ಹಿಯಟ್‌ನಲ್ಲಿ ಸಂಘಟಿತರಾಗಿ ಸಹಕಾರದಿಂದ ರಾಜ್ಯಭಾರವನ್ನು ವಹಿಸಿದ್ದಾರೆ. ಹೀಗೆ ಉಳಿದ ಎಲ್ಲ ಸಮಾಜದಿಂದ ಭಿನ್ನತರದ್ದಾದ ಹೊಸ ಸಮಾಜವು ರಶಿಯಾದಲ್ಲಿ ಕಾಣುತ್ತಿರುವುದು.

"ತಮ್ಮ ತತ್ವಾನುಸಾರವಾದ ಸಮಾಜವು ಅಸ್ತಿತ್ವದಲ್ಲಿ ಬರಬೇಕಾದರೆ ಸುಸಂಸ್ಕೃತವೂ, ಸುಶಿಕ್ಷಿತವೂ ಆದ ನವೀನ ತರಗತಿಯ ಜನಸಮೂಹವು ಬೇಕು. ಅದಾಗಲು ಹೊಸ ಪದ್ಧತಿಯ ಶಿಕ್ಷಣಕ್ರಮವು ಪ್ರಾರಂಭವಾಗಬೇಕು" ಎಂದು ತಿಳಿದು ಎಲ್ಲರಿಗೂ ಪುಕ್ಕಟೆಯಾಗಿ ಶಿಕ್ಷಣವನ್ನು ಕೊಡುವ ಏರ್ಪಾಡನ್ನು ಸೋವ್ಹಿಯಟ್ ಕರ್ತರು ಎಲ್ಲಕ್ಕೂ ಮೊದಲು ಮಾಡಿದರು. ನಿರಕ್ಷರಿಗಳ ತವರಮನೆಯಂತಿದ್ದ ಆ ದೇಶದಲ್ಲಿ, ಈಗ ಪ್ರತಿಯೊಂದು ಮಗುವು — ಗಂಡಾಗಲೀ ಹೆಣ್ಣಾಗಲಿ — ೧೫ ವರ್ಷಗಳವರೆಗಾದರೂ ಶಾಲೆಗೆ ಹೋಗಿ, ಸಾಕ್ಷರತೆಯನ್ನು ಪಡೆಯಲೇಬೇಕೆಂದು ಕಟ್ಟಪ್ಪಣೆಯಾಗಿರುವುದು. ಕೆಲಸಗಾರರು ದುಡಿಯುವ ಕಾರಖಾನೆಗಳಲ್ಲಿ, ರೈತರು ಹೋರೆ ಮಾಡುತ್ತಿರುವ ಹೊಲಗಳಲ್ಲಿ, ಎಲ್ಲಿಯೊ ಮೂಲೆಯಲ್ಲಿರುವ ಚಿಕ್ಕಪುಟ್ಟ ಹಳ್ಳಿಗಳಲ್ಲಿ ಓದುಬರೆಹದ ಅರವಟ್ಟಿಗೆಗಳನ್ನು ಇಡಲಾಗಿದೆ. ಎಲ್ಲ ಶಾಲೆಗಳಲ್ಲಿ ಕಿಂಡರಗಾರ್ಟನ್ ಪದ್ಧತಿಯಿಂದ ಅಭ್ಯಾಸವು ಸಾಗಿರುವುದು. ವಯಸ್ಸಾದ ಕೂಲಿಕಾರರ ಸಲುವಾಗಿ ಇರುವ ರಾತ್ರಿಯ ಶಾಲೆಗಳೂ, ೪೦ ಸಾವಿರದಷ್ಟು ತಿರುಗಾಡುವ ವಾಚನಾಲಯಗಳೂ (Travelling Libraries), ೩೪೦೦೦ ಕ್ಕಿಂತಲೂ ಹೆಚ್ಚಾಗಿ ಓದುಮನೆಗಳೂ (Reading Huts) ಜಾಳಿಗೆಯಂತೆ ದೇಶದಲ್ಲೆಲ್ಲ ಪಸರಿಸಿರುವವು. ಇದರ ಸುಪರಿಣಾಮವೆಂದರೆ ಸುಧಾರಣೆಯ ಅತ್ಯುಚ್ಚ ಶಿಖರದ ಮೇಲಿದ್ದ ಬ್ರಿಟಿಶರ ೧೫೦ ವರ್ಷಗಳವರೆಗಿನ ರಾಜ್ಯದಾಡಳಿತದಲ್ಲಿ, ಹಿಂದುದೇಶಕ್ಕೆ ಕೈಗೂಡದ ಕಾರ್ಯವನ್ನು ಸೋವ್ಹಿಯಟರು ರಶಿಯಾದಲ್ಲಿ ಎಂಟೇ ವರ್ಷದ ಅವಧಿಯಲ್ಲಿ ಮಾಡಿಬಿಟ್ಟಿದ್ದಾರೆ. ನೋಡನೋಡುತಿರುವಾಗಲೇ ಲೋಕಶಿಕ್ಷಣದ ಹೊಳೆಗೆ ಮಹಾಪೂರವನ್ನು ತಂದುಬಿಟ್ಟಿದ್ದಾರೆ. ಅಲ್ಲಿಯ ಸರಕಾರದ ಪ್ರಕಟನೆಗಳ ಮೇಲಿಂದ ನೋಡಿದಲ್ಲಿ ನೂರಕ್ಕೆ ೩೪ ರಷ್ಟು ಜನಗಳು ಶಿಕ್ಷಣ ಹೊಂದಿದವರಿದ್ದಾರೆಂದು ತಿಳಿದುಬರುತ್ತದೆ. ಇದೊಂದು ಅಲೌಕಿಕವಾದ ಕಾರ್ಯವೆಂದೇ ಹೇಳಬಹುದಲ್ಲವೇ?

ಸೋವ್ಹಿಯಟರ ಛತ್ರಚ್ಛಾಯೆಯಲ್ಲಿದ್ದಾಗಿನಿಂದ ಅಲ್ಲಿಯ ರೋಗಿಗಳ ಆರೈಕೆಯು ಬಲು ಚೆನ್ನಾಗಿ ನಡೆಯುತ್ತಿದೆ. ಯಾವ ರೋಗವಾದರೂ, ಅದೊಂದು ಸಮಾಜಕಂಟಕವೆಂದು ತಿಳಿಯುತ್ತಾರೆ. ಉಳಿದ ರಾಷ್ಟ್ರಗಳಲ್ಲಿ ಸ್ವಾಭಾವಿಕವಾಗಿ ಹಣವಂತರು ಮಾತ್ರ ಉತ್ತಮೋತ್ತಮವಾದ ಔಷಧೋಪಚಾರಗಳ ಲಾಭವನ್ನು ಅನುಭವಿಸಲು ಶಕ್ತರಾಗುವರು. ಹಣವಿಲ್ಲದವರು ಹೆಚ್ಚಾಗಿ ತಕ್ಕುದಾದ ಆರೈಕೆಯಿಲ್ಲದೆ ಸತ್ತುಹೋಗುತಿರುವುದು ಎಲ್ಲರೂ ಕಂಗಂಡ ಮಾತು. ಆದರೆ ರಶಿಯಾದಲ್ಲಿ ಎಲ್ಲ ಔಷಧಾಲಯಗಳೂ, ಆಸ್ಪತ್ರಿಗಳೂ ಡಾಕ್ಟರ್ ಜನರೂ ಸಾರ್ವಜನಿಕರಾಗಿಯೆ ಇದ್ದುದರಿಂದ ಬಡವರಾಗಲಿ ಶ್ರೀಮಂತರಾಗಲಿ ಎಲ್ಲರೂ ಸರಿಸಮಾನತೆಯಿಂದ ಅದರ ಉಪಯೋಗವನ್ನು ಪಡೆಯುವರು. ಇಡೀ ಸಮಾಜದ ಒಡೆತನದಲ್ಲಿರುವ ಆಸ್ಪತ್ರಿಗಳಲ್ಲಿ ಯಾರೂ ತಮಗೆ ಅವಶ್ಯಕತೆಯಿದ್ದ ಔಷಧಕ್ಕಾಗಿ ಬೆಲೆ ಕೊಡಬೇಕಾದ ಕಾರಣವಿಲ್ಲ.

ಅದರಂತೆಯೇ ಕಟ್ಟಳೆಯ ವಿಚಾರ. ಕಾಯಿದೆ ಪಂಡಿತರ ವರ್ಗವೆಲ್ಲವೂ ರಾಷ್ಟ್ರದಿಂದಲೇ ಪರಿಪೋಷಣ

CC-0. Jangamwadi Math Collection. Digitized by eGangotri

ಹೊಂದುತಿರುವುದರಿಂದ, ಕಾಯಿದೇ ಜ್ಞಾನವು ಎಲ್ಲರಿಗೂ ಪುಕ್ಕಟೆಯಾಗಿ ದೊರಕುವುದು. ದೇಶದಲ್ಲಿ ಖಾಸಗೀ ಸ್ವತ್ತಿನ ಅಭಾವವಿರುವುದರಿಂದ ಇತರ ದೇಶದಲ್ಲಿ ನಡೆವಳಿಕೆಯಲ್ಲಿದ್ದ ಕಾನೂನುಗಳು ಬಹುತರವಾಗಿ ಅಲ್ಲಿ ಪ್ರಯೋಜನವಿಲ್ಲದುವುಗಳೇ ಆಗಿರುವವು. ನಾಗರಿಕ ನಾಗರಿಕರಲ್ಲಿ ನೆರೆಹೊರೆಯ ಜನರೊಡನೆ, ತಮ್ಮ ಕುಟುಂಬದ ಸಂಬಂಧಿಗಳೊಡನೆ, ಜಗಳವಾಡುವ ಪ್ರಸಂಗಗಳು ಯಾವಾಗಲಾದರೂ ಬರುವುದುಂಟು. ಆದರೆ ಈ ಜಗಳಗಳು ನ್ಯಾಯಾಸ್ಥಾನಕ್ಕೆ ಬರುವಂತೆಯೇ ಇಲ್ಲ. ಅಲ್ಲಿಯ ವಕೀಲರನ್ನು ಕುರಿತು "In Russia the chief qualification for a lawyer or a judge is not the knowledge of the intricacies of the law but a sympathatic understanding of the human nature" ಎಂಬುದಾಗಿ ಹೇಳುತ್ತಾರೆ.

ಸಾಮಾಜಿಕ ಅಪರಾಧ ಅಥವಾ ಗುನ್ಹೆಯ ವಿಷಯದಲ್ಲಿ ರಶಿಯಾದಲ್ಲಿಯ ಪ್ರಯೋಗವು ನಿಜವಾಗಿ ಲೋಕವಿಲಕ್ಷಣವಾಗಿದೆಯೆಂದೆನ್ನಲಿಕ್ಕೆ ಅಡ್ಡಿಯಿಲ್ಲ. ರಾಜಕೀಯ ಅಪರಾಧಿಗಳಿಗೆ ಮಾತ್ರ ಬಹು ಭಯಂಕರವಾದ ಯಾತನೆಯನ್ನು ಅನುಭವಿಸಬೇಕಾಗುವುದು. ರಾಜದ್ರೋಹಿಗಳು ಅನನ್ವಿತ ಶಿಕ್ಷೆಗೆ ಗುರಿಯಾದರೂ ಇನ್ನುಳಿದ ಸಾಮಾಜಿಕ ಅಪರಾಧಿಗಳ ಸಂಬಂಧದಲ್ಲಿದ್ದ ಅಲ್ಲಿಯ ಪದ್ಧತಿಯು ಅವರ್ಣನೀಯವೆಂದೇ ಹೇಳಬಹುದು. ಸಮಾಜದೊಳಗೆ ಜನರು ಅಪರಾಧ ಅಥವಾ ಗುನ್ಹೆಯನ್ನು ಮಾಡಲಿಕ್ಕೆ ಪ್ರವೃತ್ತರಾಗುವುದೇಕೆಂದರೆ ಅವರಲ್ಲಿಯ ಶಿಕ್ಷಣದ ಅಭಾವ, ಇಲ್ಲವೆ ವಿಪರೀತವಾದ ಪರಿಸ್ಥಿತಿ ಇವುಗಳ ಮೂಲಕವಾಗಿಯೆ. ಸುಸ್ಥಿತಿಯಲ್ಲಿದ್ದವನೂ, ಸುಶಿಕ್ಷಿತನೂ ಸಹಸಾ ಕೀಳುತರದ ಗುನ್ಹೆ ಮಾಡಲು ಮನಸ್ಸು ಮಾಡಲಾರನು. ಆದುದರಿಂದ ಈ ತರದ ಅಪರಾಧಿಗಳನ್ನು ಘೋರವಾದ ಶಾಸನಕ್ಕೆ ಈಡು ಮಾಡುವುದರ ಬದಲು ಅವರನ್ನು ಶಿಕ್ಷಣ ಸಂಸ್ಕಾರದ ಕುಲುಮೆಯೊಳಗೆ ಹಾಕಿ ಪುಟಗೊಳಿಸಿದರಾಯಿತು; ಎಂದು ಸೋವ್ಹಿಯಟರ ಮತ. ಅದರಂತೆಯೇ ಸೆರೆಯಾಳುಗಳನ್ನು ಅವರ ಸಲುವಾಗಿಯೇ ಕಾದಿಟ್ಟ ವಸಾಹತುಗಳಿಗೆ ಕಳುಹಿಸಿ ಅಲ್ಲಿ ಅವರವರ ಸ್ಥಿತಿಗತಿಗಳಿಗನುಸಾರವಾಗಿ ದುಡಿಯಲು ಕೆಲಸ ಕೊಡುತ್ತಾರೆ. ಅವರು ಮಾಡುವ ಕೆಲಸಕ್ಕೆ ತಕ್ಕ ಪ್ರತಿಫಲವೆಂದು ನಿಯಮಿತ ... ವನ್ನು ಗೊತ್ತುಮಾಡಿದ್ದಾರೆ. ಈ ಬಗೆಯಿಂದ ... ಶಿಕ್ಷೆಯ ಕಾಲಾವಧಿಯು ಸಮಾಪ್ತಿಯಾಗುವುದರೊ... ಅವರಲ್ಲಿ ಉದ್ಯೋಗ ಪ್ರೀತಿಯ ಅಂಕುರವನ್ನೂ ... ಉತ್ತಮ ನಾಗರಿಕರಾಗುವಂತೆ ವ್ಯವಸ್ಥೆ ಮಾಡಿ... ದ್ದಾರೆ. ಅಪರಾಧಿಗಳಾದ ತರುಣರ ದೇಖ... ಮಾಸ್ಕೋ ಶಹರದ ನೆರೆಯಲ್ಲಿ "Jurenile Colon..." ಎಂಬುದಿರುವುದು. ಅಲ್ಲಿ ೧೮ರಿಂದ ೩೪ ವರ್ಷದ ವಯ... ಹುಡುಗ ಹುಡುಗಿಯರು ಸ್ವೇಚ್ಛೆಯಿಂದ ಬೆ... ಲಿದ್ದು, ಉಚಿತವಾದ ಶಿಕ್ಷಣವನ್ನು ಹೊಂದಿ ಪ... ಚ್ಚಿದ ಹಾವಿನಂತೆ ಹೊಸಬರಾಗಿ ಹೊರಬೀಳುತ್ತಾ... ಒಬ್ಬನು ಅನ್ನುವುದೇನೆಂದರೆ "We come here bo... and we go out men" ಎಂದು. ಅವರನ್ನು ಕಾ... ಅಲ್ಲಿ ಸಿಪಾಯಿಗಳಿಲ್ಲ; ತುಬಾಕಿಯಿರುವುದಿಲ್ಲ; ಸುತ್ತ... ಆವಾರದ ಗೋಡೆಯಿರುವುದಿಲ್ಲ, ಯಾವ ತೆರದ ... ಬಂಧವೂ ಇಲ್ಲದೆ ಸಾವಿರಾರು ತರುಣ ತರುಣಿ... ಆನಂದವೃತ್ತಿಯಿಂದ ಬಂದಿವಾಸವನ್ನು ಕಳೆಯುತ್ತಾ...

ರಾಜ್ಯಕ್ರಾಂತಿಯಾಗುವ ಪೂರ್ವದಲ್ಲಿ ರಶಿಯಾದೇ... ಒಕ್ಕಲಿಗರ ಹಾಗೂ ಕೂಲಿಕಾರರ ಸ್ಥಿತಿಗತಿಯು ಅ... ಹೀನತರದ್ದಾಗಿದ್ದಿತು. ಸಮಾಜದಲ್ಲಿ ನೂರಕ್ಕೆ ... ರಿಗೆ ಶಿಕ್ಷಣದ ಗಾಳಿಯು ಕೂಡ ಸೋಂಕಿರಲಿಲ್ಲ. ... ನಿರಕ್ಷರಿಯೂ, ನಿರಾಧಾರವೂ ಆದ ಈ ವರ್ಗವು ... ವರ್ಗದವರ ದಬ್ಬಾಳಿಕೆಯ ಗಾಲಿಯ ಕೆಳಗೆ ... ಹಣ್ಣಾಗಿ ಹೋಗಿದ್ದಿತು. ಅನೇಕ ಜೀವಿಗಳು ... ಸ್ಥಾನದಲ್ಲಿಯಂತೆಯೇ ಅರೆಹೊಟ್ಟೆಯಿಂದ ಬಳಲುವು... ಸಾಮಾನ್ಯ ಮಾತಾಗಿದ್ದಿತು. ಅವರಿಗೆ ಮೈತುಂಬ ಕೆ... ವಿದ್ದಿಲ್ಲ; ಕೆಲಸವು ದೊರೆತರೆ ಸಂಬಳವು ಸಾಕಷ್ಟಿಲ್ಲ. ಇ... ಆರೋಗ್ಯಕರವಾದ ಮನೆಯಿರಲಿಲ್ಲ; ತಲೆಯ ಮೇ... ಆಳರಸರ ಘೋರವಾದ ಕರಭಾರ. ಮೊದಲು ಬಂ... ಕಡೆ ಸುಮಾರು ೨೦ ಜನ ಸ್ತ್ರೀ ಪುರುಷ ಕೆಲಸಗಾ... ರಿಗೆ ವಾಸಮಾಡಲಿಕ್ಕೆ, ಹವೆಯಾಡಲು ಬಂದೂ ... ಯಿರದ ೩೦೦ ಚೌರಸ ಫೂಟಿನಷ್ಟು ಸ್ಥಳವು ದೊರೆ... ತ್ತಿತ್ತಂತೆ. ಹೆಂಟೆಯ ಗೋಡೆಗಳಿಂದ ಮಾಡಿದ ರೋ... ತವರಮನೆಯಂತಿದ್ದ ಬಿಡಾರಗಳು. ಧೂಳು ಹೊ... ಯಿಂದ ಮುಸುಕಿದ ಅನಾರೋಗ್ಯಕರವಾದ ವಾತಾವ...

CC-0. Jangamwadi Math Collection. Digitized by eGangotri

ದಲ್ಲಿ ಮುಂಜಾವಿನಿಂದ ೧೧-೧೨ ತಾಸು-ಒಮ್ಮೊಮ್ಮೆ ೧೪ ತಾಸಿನ ವರೆಗೆ-ಬಿಡುವಿಲ್ಲದೆ ದುಡಿಯಬೇಕಾಗುತ್ತಿದ್ದುದರಿಂದ ಮೈಬೆವರು ಸುರಿಯುತ್ತಿದ್ದಿತು. ಇಂಥ ದುರವಸ್ಥೆಯು ನೋಡು ನೋಡುತಿರುವಾಗಲೆ ಮಿಂಚಿನಂತೆ ಮರೆಯಾಗಿದೆ. ಕ್ರಾಂತಿಕಾರರ ಹೊಸ ಬದಲಾವಣೆಗಳಿಂದ ಇಡಿ ಪೃಥ್ವಿಯ ಮೇಲಿನ ಎಲ್ಲ ಕೂಲಿಕಾರರಿಗಿಂತಲೂ ರಶಿಯನ್ ಕೂಲಿಕಾರರು ಸಧ್ಯಕ್ಕೆ ಅಧಿಕ ಸುಖ ಶಾಂತಿಗಳಿಂದ ಸಂತುಷ್ಟರಾಗಿ ಬಾಳಲಾರಂಭಿಸಿದ್ದಾರೆ. ಕಾರಖಾನೆಗಳಲ್ಲಿಯ ಕೆಲಸಗಾರರಿಗೆ ದಿನಾಲು ೭ ತಾಸು ದುಡಿಯಬೇಕಾಗುವುದು. ಅದರೊಳಗೇ ಭೋಜನದ ಸಲುವಾಗಿ ಒಂದು ಗಂಟೆಯ ವಿಶ್ರಾಂತಿಯ ರಜೆ ಸಿಕ್ಕುವುದು. ದಿನಂಪ್ರತಿ ಕೆಲಸದಲ್ಲಿ ತೊಡಗಬೇಕಾದುದು ಆರು ತಾಸುಗಳು ಮಾತ್ರ. ಅಲ್ಲಿ ಒಂದು ವಾರವೆಂದರೆ ೫ ದಿವಸಗಳಿಂದ ಕೂಡಿದುದು. ಪ್ರತಿ ಐದು ದಿವಸಗಳ ನಂತರ ಒಂದು ದಿನ ಸಂಪೂರ್ಣ ವಿಶ್ರಾಂತಿಯು. ವರುಷದಲ್ಲಿ ಎರಡು ವಾರ ಸಂಬಳದ ರಜೆಯು. ಬಿಡುವಿನ ದಿವಸಗಳಲ್ಲಿ ಮನೋರಂಜನೆಯ ಸಾಧನೆಗಳು ಎಲ್ಲರಿಗೂ ಪುಕ್ಕಟೆಯಾಗಿ ದೊರಕುವವು.

ತಿಂಗಳೊಂದಕ್ಕೆ ತೀರ ಕಡಿಮೆಯೆಂದರೆ ೭೫ ರುಬಲ್ (ಅಂದರೆ ೧೧೦ ರೂ.) ಸಂಬಳವು ನಿಯಮಿತವಾಗಿ ಸಿಕ್ಕುವುದು. ಕಲ್ಲಿದ್ದಲಿಯ ಖಣಿಯ ಕೆಲಸಗಾರರಿಗೆ ೧೦೦ ರುಬಲ್ (ಅಂದರೆ ೧೫೦ ರೂ.) ಮತ್ತು ಕೆಲವರಿಗೆ ೨೦೦ ರುಬಲ್ (೩೦೦ ರೂ.) ಸಂಬಳವು ದೊರಕುವುದುಂಟು. ಹೆಚ್ಚು ಯೋಗ್ಯತೆಯ ಎಂಜನಿಯರರಿಗೆ ೮೦೦ರಿಂದ ೧೦೦೦ ರುಬಲ್ಲಿನ ವರೆಗೆ ಸಂಬಳವು ಸಿಕ್ಕುವುದು. ಇದರಿಂದ ಕೆಲಸಗಾರರಲ್ಲಿ ಶ್ರೇಷ್ಠ-ಕನಿಷ್ಠ ತಾರತಮ್ಯವಿದ್ದಂತೆ ಸಂಬಳದಲ್ಲಾದರೂ ಹೆಚ್ಚು ಕಡಿಮೆಯ ತರಗತಿಯಿದ್ದುದು ಕಂಡುಬರುವುದು. In Russia "the value of man is determined by the value of the labour he performs as a social bein . Communists are not levellers. Communism means common ownership of all the means of production, distribution and exchange by the producers. This revolution in the mode of production does not forthwith etiminate the inequality in the productivity of the individual members of the working class. If each is given the value of his or her labour, the remuneration cannot possibly be uniform." ವರ್ಷದ ಕೊನೆಗೆ ಎರಡು ವಾರದ ಹಕ್ಕಿನ ರಜೆಯು ದೊರೆಯುವುದೆಂದು ಹಿಂದೆಯೆ ಹೇಳಿದೆ. ಆಗ ಸರಕಾರೀ ವೆಚ್ಚದಿಂದ ಹವೆಯ ಬದಲಾವಣೆಗೆಂದು ಕ್ರಿಮಿಯಾ ಪ್ರಾಂತ್ಯಕ್ಕೆ ಹೋಗಿ ಅಲ್ಲಿದ್ದ ಝಾರನ ಹಳೆಯ ಅರಮನೆಯಲ್ಲಿ ಕೂಲಿಕಾರರೆಲ್ಲರು ವಿಲಾಸದಿಂದ ಕಾಲಕಳೆದು ಬರುವರು.

ಕಾರಖಾನೆ, ಖನಿಗಳ ಸಮೀಪದಲ್ಲಿ ಹೊಸ ಮಾದರಿಯ ಪಟ್ಟಣಗಳನ್ನು ಕೂಲಿಕಾರರ ದೆಸೆಯಿಂದ ನೆಲೆಗೊಳಿಸತೊಡಗಿದ್ದಾರೆ. ಅವುಗಳಲ್ಲಿ ಶುದ್ಧ ಹವೆ, ಸ್ವಚ್ಛ ಬೆಳಕು, ವಿಪುಲವಾದ ನೀರು ಮೊದಲಾದುವುಗಳ ಸಮೃದ್ಧಿಯಿಂದ ಮನೆಗಳನ್ನು ನಿರ್ಮಿಸುತಲಿದ್ದಾರೆ. ಮನೆಗಳಲ್ಲಿ ಸ್ನಾನದ ಮನೆ, ಭೋಜನಶಾಲೆಯುಗಳು ಪ್ರತ್ಯೇಕ ಪ್ರತ್ಯೇಕವಾಗಿವೆ. ದನಕರು-ಕೋಳಿಗಳ ದೆಸೆಯಿಂದ ಸ್ವತಂತ್ರವಾದ ಕೊಟ್ಟಿಗೆ-ಹಕ್ಕೆಗಳು ಇವೆ. ಮನೆತುಂಬ ಮಿಂಚಿನ ದೀಪದ ಹೊಳವು. ಅಲ್ಲದೆ ಸುತ್ತಲೂ ಹೂದೋಟದ ಸಲುವಾಗಿ ಕಾದಿಟ್ಟ ಸ್ಥಳವಿರುವುದು. ಇಂಥ ಮಾದರಿಯ ಮನೆಗಳು ಬಾಡಿಗೆಯಿಲ್ಲದೆ ಅಥವಾ ಅತ್ಯಲ್ಪವಾದ ಬಾಡಿಗೆಯಿಂದ ರಶಿಯನ್ ಕೂಲಿಕಾರರಿಗೆ ದೊರಕುವಂತೆ ಏರ್ಪಾಡು ಮಾಡಲ್ಪಟ್ಟಿದೆ. ಇಷ್ಟೇ ಅಲ್ಲದೆ ಮುಪ್ಪಿನಕಾಲದಲ್ಲಿಯ ವಿಶ್ರಾಂತಿವೇತನ, ಆಯುಷ್ಯದ ವಿಮೆ, ಹೆಂಡಿರು ಮಕ್ಕಳ ಸಲುವಾಗಿ ಎಲ್ಲ ಅನುಕೂಲತೆ, ಪುಕ್ಕಟೆಯಾಗಿ ಔಷಧೋಪಚಾರದ ವ್ಯವಸ್ಥೆ, ನಿರುದ್ಯೋಗದಿಂದಿದ್ದಾಗ ಸರಕಾರದಿಂದ ಸಿಕ್ಕಬಹುದಾದ ಬತ್ಯ, ಪ್ರಾಥಮಿಕ-ಮಾಧ್ಯಮಿಕ ಶಿಕ್ಷಣ, ಸ್ತ್ರೀಯರಿಗೆ ಪ್ರಸೂತಿ ಕಾಲದಲ್ಲಿ ಬೇಕಾದ ವೈದ್ಯಕೀಯ ಸಹಾಯ ಹಾಗೂ ಆರುವಾರದ ಸಂಬಳದ ರಜೆಯು ಇವೆಲ್ಲ ಪ್ರತಿಯೊಬ್ಬ ಕೂಲಿಕಾರನಿಗೆ ಸಿಕ್ಕೇಸಿಕ್ಕುವವು. ಇವಲ್ಲದೆ ಕೆಲಸಗಾರರ ಮಾನಸಿಕೋನ್ನತಿಯ ಸಲುವಾಗಿ ಅಲ್ಲಲ್ಲಿ ಸೊಗಸಾದ ಉದ್ಯಾನಗಳನ್ನು ರಚಿಸಿ, ಬಿಡುವಿನ ಸಮಯವನ್ನು ಆನಂದದಿಂದ ಕಳೆಯಲು ಏರ್ಪಾಡು ಮಾಡಿದ್ದಾರೆ. ಮಾಸ್ಕೋದ ಎಡೆಯಲ್ಲಿ ಇಂತಹ ಮಾದರಿಯ "Park of recreation, culture and rest" ಎಂಬ ಹೆಸರಿನ ಉದ್ಯಾನವೊಂದು ಬಹು ರಮಣೀಯವಾಗಿರುವುದು. ಇಂತಹ ಎಲ್ಲ ವಿಶ್ರಾಂತಿ ಸ್ಥಾನಗಳೂ ಸುಖಸಾಧನಗಳೂ

CC-0. Jangamwadi Math Collection. Digitized by eGangotri

ಎಲ್ಲ ಕೂಲಿಕಾರರಿಗೆ ಸರಕಾರದ ವೆಚ್ಚದಿಂದಲೆ ಸಿಕ್ಕುತ್ತಿರುವವು. ಎಲ್ಲಿಯೂ ಇದಕ್ಕೆ ಅಪವಾದವೇ ಇಲ್ಲವೆಂದು ಹೇಳಬಹುದು.

ಇನ್ನು ಸೋವ್ಹಿಯಟರು ಪಂಚವಾರ್ಷಿಕ ಯೋಜನೆ (Five year plan) ಯಿಂದ, ತಮ್ಮ ರಶಿಯಾದೇಶವನ್ನು ಜಗತ್ತೇ ಬೆರಗುವಡುವಂತಹ ಪ್ರಯೋಗಶಾಲೆ (laboratory) ಯನ್ನಾಗಿ ಮಾಡಿದ್ದಾರೆಂದರೆ ಅತಿಶಯೋಕ್ತಿಯಾಗಲಾರದು, ಈ ಹಂಚಿಕೆಯಿಂದ ೧೯೨೮ರಿಂದ೧೯೩೩ರ ವರೆಗಿನ ಐದೇ ವರುಷದ ಕಾಲಾವಧಿಯಲ್ಲಿ ಬೇಸಾಯ, ಉದ್ಯೋಗ, ಶಿಕ್ಷಣ ಈ ವಿಷಯಗಳಲ್ಲಿ ಅಭೂತಪೂರ್ವವಾದ ಪ್ರಗತಿಯನ್ನುಂಟುಮಾಡಿಕೊಂಡಿದ್ದಾರೆ. ಕಮ್ಯೂನಿಸ್ಟರ ಮುಖಂಡನಾದ ಸ್ಟಾಲಿನ್‌ನು ಜಗತ್ತಿನ ಆರ್ಥಿಕ ಇತಿಹಾಸದಲ್ಲಿ ಎಂದೂ ಕಂಡುಕೊಳ್ಳದಂತಹ ಕೃತಿಯನ್ನು ಕೈಕೊಂಡಿದ್ದಾನೆ. ರಶಿಯನ್ನ ಸೊವ್ಹಿಯಟ್ ಸಂಘವು ಭೂಮಂಡಲದ ಒಂದು ಆರಾಂಶ ಭಾಗ ಎಂದರೆ ೮೩ ಲಕ್ಷ ಚೌರಸ ಮೈಲು ಪ್ರದೇಶವನ್ನು ವ್ಯಾಪಿಸಿರುವುದಲ್ಲದೆ ೧೬ ಕೋಟಿ ಮಾನವ ಜೀವಿಗಳನ್ನು ಪೋಷಿಸುತ್ತಿರುವುದು. ಇಂತಹ ಕೃಷಿಪ್ರಧಾನವಾದ ಹಾಗೂ ಹಳ್ಳಿಕೊಳ್ಳಿಯಲ್ಲಿದ್ದ ರಾಷ್ಟ್ರವನ್ನು ಐದೇ ವರ್ಷಗಳಲ್ಲಿ ಜಗತ್ತಿನ ಇನ್ನುಳಿದ ಉನ್ನತಿಯ ಶಿಖರದ ಮೇಲೆ ಮೆರೆಯುವ ರಾಷ್ಟ್ರಗಳ ಪಂಕ್ತಿಯಲ್ಲಿ ಕುಳ್ಳಿರಿಸಬೇಕೆಂಬ ತೀವ್ರವಾದ ಹವ್ಯಾಸದಿಂದ ಕಷ್ಟಪಡುತ್ತ, ಅದರ ಸಲುವಾಗಿ ನೀರಿನಂತೆ ದ್ರವ್ಯವನ್ನು ವೆಚ್ಚಮಾಡುತ್ತ ಎಡೆಬಿಡದೆ ಹೆಣಗುತಿರುವ ರಶಿಯನ್ನರು ಎಲ್ಲರಿಗೆ ಆದರ್ಶಪ್ರಾಯರಾಗಿ ಕುಳಿತಿದ್ದಾರೆ.

ಮೊದಲಿನಿಂದಲೂ ರಶಿಯಾ ಹಳ್ಳಿಗಳ ದೇಶ. ಬೇಸಾಯವೇ ಎಲ್ಲರ ಮುಖ್ಯ ಉಪಜೀವನದ ಸಾಧನವು. ಹಳೆಯ ಮಾದರಿಯ ರಂಟೆ, ಕುಂಟೆ ಮೊದಲಾದ ಉಪಕರಣಗಳನ್ನು ಉಪಯೋಗಿಸುವ ಕುಂಠಿತಮತಿಯ ಒಕ್ಕಲಿಗರು. ಭೂಮಿಯು ತುಣುಕು ತುಣುಕಾಗಿ ಪಟ್ಟಿಗಳ ರೂಪದಿಂದ ಹರಿದು ಹಂಚಿ ಹೋದದ್ದಾಗಿತ್ತು. ಬೆಳೆಗಳು ಅನಿಶ್ಚಿತವಾದ ಮಳೆಯನ್ನು ಅವಲಂಬಿಸಿದ್ದುದರಿಂದ ಸದಾ ಕಾಳಿನ ದುರ್ಭಿಕ್ಷ ಆ ದೇಶದಲ್ಲಿ. ಇಂತಹ ಸ್ಥಿತಿಯಲ್ಲಿರುತ್ತಿದ್ದ ರಶಿಯಾದೇಶದಲ್ಲಿ ಈಗ ಐದು ವರ್ಷದ ಯೋಜನೆಯ ಕಾಲದಲ್ಲಿ ನವೀನತರದ ಯಂತ್ರಸಾಹಿತ್ಯದ ಸಹಾಯದಿಂದಲೂ, ಸಾಂಘಿಕ ರೀತಿ... ಸರಕಾರಿ (Co-operative) ತತ್ವದ ಮೇಲೆ ಭೂ... ಸಾಗಿಸುವ ಕ್ರಮವು ಭರದಿಂದ ಆರಂಭ... ಯಾವುದೇ ಒಂದು ಹಳ್ಳಿಯಲ್ಲಿ ಚೂರುಚೂ... ಭೂಮಿಯ ಪಟ್ಟಿಗಳನ್ನು ಒಂದುಗೂಡಿಸಿ, ಒಂದೇ... ದೊಡ್ಡದಾದ ಹೊಲವನ್ನಾಗಿ ಮಾಡಿ, ಅದು ಎಲ್ಲ... ತನಕ್ಕೆ ಸೇರಿದುದೆಂದು ನಿರ್ಣಯಿಸಿ, ಆ ಹಳ್ಳಿ... ಒಕ್ಕಲಿಗರೂ ಸಹಕಾರಿತೆಯಿಂದ ದುಡಿಯುವ... ರಿಂದ ಅಪರಿಮಿತವಾಗಿ ವೇಳೆಯ ಹಾಗೂ ದ್ರವ್ಯ... ತಾಯವಾಗುವುದಲ್ಲದೆ, ಕೆಲಸವು ಸರಿಯಾಗಿ... ಬೆಳೆಯು ಹೆಚ್ಚಾಗಿ ಬರುವುದು. ವ್ಯವಸಾಯಕ್ಕೆ... ವಾದ ಯಾಂತ್ರಿಕ ಸಾಧನೆಗಳೂ ಕೃಷಿಶಾಸ್ತ್ರಜ್ಞ... ಗಳೂ ಸರಕಾರದವರಿಂದ ತಪ್ಪದೆ ಸಿಕ್ಕುತ್ತಿ... ತುಣುಕು-ತುಣುಕಾದ ಅಸಂಖ್ಯ ಭೂಭಾಗ... ದಕ್ಕಿಂತ ಒಂದೇ ಒಂದು ದೊಡ್ಡದಾದ ಹೊ... ಉತ್ತಿ ಬೆಳೆತೆಗೆಯಲು, ಶ್ರಮವು ಕಡಿಮೆಯಾಗಿ... ವಿಪರೀತವಾಗಿ ದೊರಕುವುದೆಂದು ಆರ್ಥಿಕ ಶಾ... ಪಿರುತ್ತದೆ. ೧೭೫ ಜನ ಕೂಲಿಕಾರರು ೬೦ ತಾಸು... ಮಾಡುವಷ್ಟು ಕೆಲಸವನ್ನು ಯಂತ್ರದ ಸಹಾ... ಒಂದೇ ಆಳು ೨೦ ದಿನಗಳಲ್ಲಿ ಕೊನೆಗಾಣಿಸುವು... ಇದರಿಂದ ಎಷ್ಟು ಶ್ರಮವು ಉಳಿತಾಯವಾಗುವುದು... ಲಕ್ಷದಲ್ಲಿ ಬರುವುದು. ಹೀಗೆಯೆ ಸಾಮುದಾ... ಪದ್ಧತಿಯಿಂದ ಕಾಳು ಒಕ್ಕಿ ವರ್ಷದ ಕೊನೆಗೆ ಎಲ್ಲ... ರಲ್ಲಿ ಅವರವರ ಅವಶ್ಯಕತೆಯಂತೆ ಹಂಚಲಾಗು... ಹೆಚ್ಚಾಗಿ ಉಳಿದ ಕಾಳು ದೊಡ್ಡ ದೊಡ್ಡ ಉಗ್ರಾಣ... ಆಪತ್‌ಕಾಲದ ಅಹಾರ ಸಾಧನೆಗಾಗಿ ಉಪಯೋಗ... ಬೇಕೆಂದು ಒಟ್ಟುಗೂಡಿಸಿ ಕಾದಿಡಲಾಗುವುದು. ಈ... ಕಾರದ-ಸಾಮುದಾಯಿಕ ಪದ್ಧತಿಯು ಬಹು... ದಿಂದ ಲೋಕಪ್ರೀತಿಗೆ ಪಾತ್ರವಾಗಿ ಹಳ್ಳಿಯಿಂದ... ಹೋಗಿ ರಶಿಯಾದಲ್ಲೆಲ್ಲ ಹಬ್ಬಲಾರಂಭಿಸಿದೆ.

ಸ್ವಾಭಾವಿಕಸಂಪತ್ತಿಗಳಿಂದಲೂ ಖನಿಜ ಸಂ... ಗಳಿಂದಲೂ ರಶಿಯಾದೇಶವು ತುಂಬಿತುಳುಕುತ್ತಿರು... ದೊಡ್ಡ ದೊಡ್ಡ ಹೊಳೆಗಳ ನೀರಿನಿಂದ ಜಲಶಕ್ತಿ (H... Power) ಯನ್ನು ಉತ್ಪನ್ನ ಮಾಡಲು ಬರುವ... ಬಿಸಿಲು ಬರಬ ಪ್ರದೇಶದಲ್ಲಿ ಉಷ್ಣೆಯೂ...

CC-0. Jangamwadi Math Collection. Digitized by eGangotri

ಚುಂಬಿತವಾದ ಮರಗಳ ಕಟ್ಟಿಗೆ–ಕೊರಡುಗಳೂ, ಉಳಿದ ಕೆಲವು ಕಡೆಯಲ್ಲಿ ಕಲ್ಲಿದ್ದಲಿ, ಕಬ್ಬಿಣ, ಪ್ಲಾಟಿನಮ್, ಬೆಳ್ಳಿ, ಬಂಗಾರ, ಮ್ಯಾಂಗೇನಿಜ್ ಮೊದಲಾದ ಖನಿಜ ಧಾತುಗಳೂ, ಕಲ್ಲೆಣ್ಣೆಯ ಬಾನಿಗಳೂ ವಿಪುಲವಾಗಿ ದೊರಕುವವು. ಈ ಎಲ್ಲ ನಿಸರ್ಗ ಸಿದ್ಧ ಸಾಮುಗ್ರಿಗಳು ಪೂರ್ವದಲ್ಲಿ ದುರ್ಲಕ್ಷ್ಯದಿಂದ ಹಾಗೆಯೇ ನಿರುಪಯೋಗಿಗಳಾಗಿ ಬಿದ್ದುಬಿಟ್ಟಿದ್ದುವು. ಆರ್ಥಿಕ ಸುಧಾರಣೆಯ ಕಂಕಣ ಕಟ್ಟಿದ ಸೋವ್ಹಿಯಟ್‌ರು ತಮ್ಮ ಪಂಚವಾರ್ಷಿಕ ಯೋಜನೆಯಲ್ಲಿ ೬೪,೬೦೦೦,೦೦೦,೦೦೦ ರುಬಲ್ (೧ ರುಬಲ್ = ೧॥ ರೂಪಾಯಿ) ವೆಚ್ಚ ಮಾಡುವುದನ್ನು ನಿಶ್ಚಯಿಸಿ ಆ ಎಲ್ಲ ನಿಸರ್ಗದತ್ತ ವಸ್ತುಗಳ ಲಾಭ ಪಡೆಯಬೇಕೆಂದು ಭಗೀರಥ ಪ್ರಯತ್ನ ಮಾಡಲುದ್ಯುಕ್ತರಾಗಿದ್ದಾರೆ. ಗಣಿಗಳನ್ನು ಅಗಿಯುವುದು, ಹೊಳೆಗಳ ಪ್ರವಾಹಕ್ಕೆ ಅಣೆಕಟ್ಟು ಹಾಕಿ ಜಲಸಂಚಯ ಮಾಡಿ ವಿದ್ಯುತ್ತನ್ನು ಹುಟ್ಟಿಸುವುದು, ಕಲ್ಲೆಣ್ಣೆಯ ಬಾನಿಗಳನ್ನಗಿಯುವುದು, ಕಲ್ಲಿದ್ದಲಿ ಕಬ್ಬಿಣಗಳನ್ನು ಶೋಧಮಾಡಿ ತೆಗೆಯುವುದು, ಗುಡ್ಡವನ್ನೊಡೆದು ಕಂಡಿಗಳನ್ನು ಕೊರೆಯುವುದು ಕಾರಖಾನೆಗಳಿಗೋಸುಗ ಕಟ್ಟಡಗಳನ್ನು ಕಟ್ಟುವುದು, ಉಗಿಬಂಡಿ ವಿಮಾನಗಳ ಮಾರ್ಗಗಳ ಜಾಳಿಗೆಯನ್ನು ತುಂಬ ಪಸರಿಸುವುದು ಇವೇ ಮೊದಲುಗೊಂಡ ಅದ್ಭುತ ಕಾರ್ಯಗಳು ರಶಿಯಾದಲ್ಲಿ ಅವಿಶ್ರಾಂತವಾಗಿ ಜರುಗುತ್ತಿರುತ್ತವೆ. ಈ ಪಂಚವಾರ್ಷಿಕ ಯೋಜನೆಯಿಂದ ಸೋವಿಯಟ್‌ರು ದೇಶದ ೧೬ ಕೋಟಿಯ ಜನಸಂಖ್ಯೆಯನ್ನೂ ಸದಾ ಉದ್ಯೋಗದಲ್ಲಿ ತೊಡಗಿಸಿ, ಜಗತ್ತಿನ ಎಲ್ಲ ರಾಷ್ಟ್ರಗಳ ಪೇಟೆಗಳಲ್ಲಿ ರಶಿಯಾದೇಶದ ಅಗ್ಗವಾದ ಪದಾರ್ಥಗಳು ದೊರಕುವಂತೆ ಮಾಡಿ, ಅಮೇರಿಕೆಯಂಥ ಉದ್ಯೋಗ ಶಿಖಾಮಣಿಯನ್ನು ಕೂಡ ಹಿಂದೊಗೆದು, ಉಳಿದ ಎಲ್ಲ ರಾಷ್ಟ್ರಗಳು ನಿರುದ್ಯೋಗದ ಬೇನೆಯಿಂದ ಪೀಡಿತವಾಗಿ ಕೈಕಟ್ಟಿ ಸುಮ್ಮನೆ ಕುಳ್ಳಿರುವಂತೆ ಮಾಡುವೆವೆಂದು ಸಾಹಸ ವಹಿಸಿದ್ದಾರೆ. ಭೂಲೋಕದ ಎಲ್ಲ ಸುಖಶಾಂತಿಯಿಂದ ತೃಪ್ತರಾದ ಅಲ್ಲಿಯ ಕೂಲಿಕಾರರು ಇಮ್ಮಡಿಯಾದ ಉತ್ಸಾಹದಿಂದ ಕೆಲಸ ಮಾಡುವುದನ್ನು ಕಂಡು, ಪರದೇಶಸ್ಥರ ಮನವು ಸಹಜವಾಗಿ ಬೆರಗುಗೊಳ್ಳುವುದು. ಆ ಉತ್ಸಾಹಕ್ಕೆ–ಹುರುಪಿಗೆ ನಿಜವಾಗಿ ಪಾರವೇ ಇಲ್ಲ, ಈ ಪಂಚವಾರ್ಷಿಕ ಯೋಜನೆಯಲ್ಲಿ ಕೈಕೊಂಡ ಅತ್ಯದ್ಭುತವಾದ ಕಾರ್ಯಗಳಲ್ಲಿ ಕೆಲವನ್ನು ಇಲ್ಲಿ ಮಾದರಿಗಾಗಿ ಉದಾಹರಿಸಬೇಕೆಂದಿದ್ದೇನೆ.

೧) ಯುಕ್ರೆನ್ನಿನಲ್ಲಿ ನಾಯಪರ್ ಎಂಬ ಹೆಸರಿನ ನದಿಗೆ ಅಣೆಕಟ್ಟು ಹಾಕಿ, ನೀರು ತಡೆದು, ಅದರ ಶಕ್ತಿಯಿಂದ ಅಮೇರಿಕೆಯೊಳಗಿನ 'ನಾಯಗಾರಾ' ಧಬಧಬೆಯಿಂದ ಹೊರಡಬಹುದಾದ ವಿದ್ಯುತ್ತಿಗಿಂತಲೂ ಇಮ್ಮಡಿಯಾದ ವಿದ್ಯುತ್ತಿನ ಉತ್ಪನ್ನವು ಅಲ್ಲಿ ಆಗುವಂತೆ ಯೋಜನೆ ಮಾಡತೊಡಗಿದ್ದಾರೆ. ಇದು ಅಲ್ಲಿ ೧೭೦೦೦ ಜನ ಕೆಲಸಗಾರರು ದುಡಿಯುತ್ತಿರುವರಲ್ಲದೆ ಮುಂದೆ ಅಲ್ಲಿಂದ ಹೊರಡುವ ವಿದ್ಯುತ್‌ಶಕ್ತಿಯ ಮೇಲೆ ೮೦ ಲಕ್ಷ ಕುಟುಂಬಗಳ ಉಪಜೀವನವಾಗುವುದಿರುತ್ತದೆ. ಅರ್ಧ ಕೆಲಸವು ಈಗ ಪೂರ್ತಿಹೊಂದಿದೆ.

೨) ಉರಲ್ ಪರ್ವತದ ನೆರೆಯಲ್ಲಿ ಅತ್ಯಂತ ಪ್ರಚಂಡವಾದ ಉಕ್ಕು–ಕಬ್ಬಿಣಗಳನ್ನು ತಯಾರಿಸುವ ಕಾರಖಾನೆಯೊಂದು ಅಣಿಯಾಗಲು ತೊಡಗಿದೆ.

೩) 'ಚೆಲಿಯಾಬಿಂಕ್ಸ' ಎಂಬಲ್ಲಿ ಲೋಕದಲ್ಲಿ ದೊಡ್ಡದಾದ 'ಟ್ರಕ್ಟರ್ಸ್' (ಯಂತ್ರದ ನೇಗಿಲು) ತಯಾರುಮಾಡುವ ಕಾರಖಾನೆಯು ಅಸ್ತಿತ್ವದಲ್ಲಿ ಬಂದಿದೆ. ಅಲ್ಲಿ ೧೨ ಸಹಸ್ರ ಕೆಲಸಗಾರರ ದುಡಿತದಿಂದ ೫೦,೦೦೦ ಹತ್ತು ಟನ್ನು ತೂಕದ ೬೦ ಅಶ್ವಶಕ್ತಿಯ ನೇಗಿಲುಗಳು ಪ್ರತಿವರ್ಷದ ಕೊನೆಯಲ್ಲಿ ರಶಿಯನ್ ರೈತರ ಕೈ ಸೇರುವಂತೆ ಯೋಜನೆಯಾಗಿದೆ.

೪) 'ನಿಜನಿ ನೋವ್ಹ ಗೊರಾಡ್' ಎಂಬ ಹೆಸರಿನ ಊರಿಂದ ೧೫ ಮೈಲು ದೂರದಲ್ಲಿ ಮೋಟಾರ್ ಗಾಡಿಗಳನ್ನು ಕಟ್ಟುವ ಕಾರಖಾನೆಯು ನಡೆದಿರುವುದು. ಆರು ತಿಂಗಳ ಹಿಂದೆ ಆ ಸ್ಥಳವು ೧೦–೨೦ ಜನ ಒಕ್ಕಲಿಗರು ಗುಡಿಸಲು ಕಟ್ಟಿಕೊಂಡಿದ್ದ ಒಂದು ಚಿಕ್ಕ ಊರಾಗಿದ್ದದ್ದು ಇಂದು ಅಲ್ಲಿ ೧೦ ಸಾವಿರಗಟ್ಲೆ ಕೆಲಸಗಾರರು ಮೋಟಾರು ಕಟ್ಟುವ ಕೆಲಸದಲ್ಲಿ ತೊಡಗಿದವರಾಗಿದ್ದಾರೆ. ಮೋಟಾರಿನ ಕಾರಖಾನೆಯ ಸಲುವಾಗಿ ನಿರ್ಮಿತವಾದ ಭವ್ಯವಾದ ಕಟ್ಟಡದ ತಳಹದಿಯು ೨೦೦೦ ಫೂಟು ಉದ್ದವಾಗಿರುವುದಂತೆ. ಇಂತಹ ದೊಡ್ಡ ಕಟ್ಟಡವು ಜಗತ್ತಿನಲ್ಲಿ ಇದೇ ಮೊದಲನೆಯದು! ಈ ಕಾರಖಾನೆಯ ನೆರೆಯಲ್ಲಿ ಕಮ್ಯುನಿಸ್ಟ ಜನರ ಮಾದರಿಯನಗರವು ಸುಶೋಭಿತವಾಗಿ ಕಂಗೊಳಿಸುತ್ತಿರುವುದು. ಈ ಸುಂದರಪುರದಲ್ಲಿ

CC-0. Jangamwadi Math Collection. Digitized by eGangotri

೨೫೦೦೦ ಜನ ಕೂಲಿಯವರಿಗೆ ಬಿಡಾರಮಾಡಿಕೊಂಡು ಇರಲು ಬರುವಂತೆ ವ್ಯವಸ್ಥೆಯಾಗಿರುವದು. ಸ್ವಚ್ಛವಾದ ಹವೆ ನೀರು ಬೆಳಕುಗಳಿಂದ ತುಂಬಿದ ಮನೆ, ಉಪವನ, ಶಾಲೆ,ನಾಟಕ–ಸಿನೆಮಾಗೃಹ, ದವಾಖಾನೆ, ಸಾಮು ದಾಯಿಕ ಭೋಜನಾಲಯ, ಉಪಹಾರಮಂದಿರ, ವಾಚ ನಾಲಯಗಳು.ವಿದ್ಯುತ್ಪ್ರಕಾಶದ ಹೊಳಪಿನಲ್ಲಿ ಪಗಡೆಯ ಪಟ್ಟದಲ್ಲಿ ಕೊರೆದು ತೆಗೆದಂಥ ಬೀದಿಗಳು ಇವೆಲ್ಲವು ಗಳಿಂದ ಆ ನಿವಾಸಸ್ಥಳವು ಮೋಹಕವಾಗಿರುವುದು.

೬) ಆರನೆಯದಾದ ಯೋಜನೆಯೆಂದರೆ "ಮಾಗನೆಟ ಗಾರ್ಕ್ಸ್" ಎಂಬ ಸ್ಥಳದಲ್ಲಿ ಕಬ್ಬಿಣ ಹಾಗೂ ಉಕ್ಕಿನ ಉತ್ಪತ್ತಿಯಾಗತಕ್ಕದ್ದಿರುವುದು. ಈ ಖನಿಜಗಳು ಹೊರ ಡುವ ಪರ್ವತವು ೩ ಮೈಲು ಉದ್ದವೂ, ೨ ಮೈಲು ಅಗಲೂ, ೧೦೦ ಫೂಟು ಎತ್ತರವೂ ಆಗಿರುವುದು. ಅದರ ಗರ್ಭದಲ್ಲಿ ೨೭॥ ಕೋಟಿ ಟನ್ ಶುದ್ಧಲೋಹವು ಇರುವು ದಾಗಿ ಶೋಧನೆಯಾಗಿದೆ. ಅದರಲ್ಲಿ ಈಗ ಸುಮಾರು ೪೦ ಕೋಟಿ ಡಾಲರ್ಸ ವೆಚ್ಚಮಾಡಿ ೩೫೦೦೦ ಕೂಲಿ ಕಾರರು ೮ ತಾಸಿನ ಮೂರು ಬಾರಿಯಂತೆ ಹಗಲು ರಾತ್ರಿ ಕೆಲಸ ಮಾಡುತ್ತಲಿದ್ದಾರೆ. ಆದರಲ್ಲಿ ಪ್ರತಿವರ್ಷ ೩೦-೪೦ ಲಕ್ಷ ಟನ್ ಕಬ್ಬಿಣವು ಹೊರಡುವುದು. ಅಲ್ಲಿಯ ಕೆಲಸಗಾರರಿಗೆ ತಿಂಗಳೊಂದಕ್ಕೆ ೧೭೫ ಡಾಲರ್ಸ ಸಂಬಳ ದೊರೆಯುವುದು. ಆದರೆ ರಶಿಯಾದ ಮುಖ್ಯಸ್ಥನಾದ ಸ್ಟಾಲಿನ್ನನಿಗೆ ೧೫೦ ಡಾಲರು ಮಾತ್ರ ಸಿಕ್ಕುವುದು!

೭) ಈ ಪಂಚವಾರ್ಷಿಕದ ಹಂಚಿಕೆಯಲ್ಲಿ ೪೯೦ ಕಿಲೋಮಿಟರ್ ವೈಮಾನಿಕ ಮಾರ್ಗಗಳ ಜಾಳಿಗೆಯನ್ನು ಪಸರಿಸಬೇಕೆಂದು ಗೊತ್ತು ಮಾಡಲಾಗಿದೆ. ಅದು ಪಾರುಗೊಂಡರೆ ಮಾಸ್ಕೋ ಪಟ್ಟಣದಿಂದ ತೆಹರಾನಕ್ಕೆ ೧೫-೨೦ ತಾಸುಗಳಲ್ಲಿ ಹಾರಿ ಹೋಗುವುದಕ್ಕೆ ಸಾಧ್ಯ ವಿದೆ. ಅಂತರಿಕ್ಷ ಮಾರ್ಗದಿಂದ ವ್ಯಾಪಾರದ ವಿಮಾನ ಗಳು ಏಶಿಯಾಖಂಡದೊಳಗಿನ ಅಫಗಾಣಿಸ್ತಾನ, ಇರಾಣ. ಸೈಬೇರಿಯಾ ದೇಶಗಳಲ್ಲಿ ಸರಕು ತುಂಬಿಕೊಂಡು ಎಡೆಬಿಡದೆ ಹಾರಾಡಲು ಅನುಕೂಲವಾಗುವುದು.

ಹೀಗೆ ಪ್ರಪಂಚಕ್ಕೆಲ್ಲ ಅತ್ಯದ್‌ಭುತವಾಗಿ ತೋರುವ ಪ್ರಯೋಗಗಳು ಸೋವ್ಹಿಯಟ್ ರಶಿಯಾದಲ್ಲಿ ಸಧ್ಯಕ್ಕೆ ನಡೆದಿರುವುವು. ಈ ಪ್ರಯೋಗಗಳ ಯಶಃಪರಿಣಾಮವು ಮುಂದುವರಿದ ಏಕ್ಕ ರಾಷ್ಟ್ರಗಳಿಗೆ ಒಂದು ದೊಡ್ಡ ಕಂಟಕವಂತೆ ಕಾಣುತ್ತಲಿದೆ. ಆದರಿಂದ ಭೂತಲದ ಮೇಲಿನ ಎಲ್ಲ ವ್ಯಾಪಾರೋದ್ಯೋಗಗಳಲ್ಲಿ ಒಂದು ಕ್ರಾಂತಿಯು ಸಂಭವಿಸುವುದರಲ್ಲಿ ಸಂದೇಹವಿಲ್ಲ.

**ಮನಸ್ಸು ಸ್ಥಿರವೂ, ಶಾಂತವೂ ಆದೊಡನೆ ಸತ್ಯವು ಪ್ರಕಾಶಿಸುವುದು.** ಭಗವಂತನಿಗೆ ಸ್ವಯಂ ಪ್ರಕಾಶನೆಂದದ್ದು ತುಂಬಾ ಸತ್ತ್ಯ. ಮನಸ್ಸು ನಿಶ್ಚಿಂತವೂ, ನಿಶ್ಚಲವೂ ಆದೊಡನೆ ಭಗವಂತನು ತನ್ನಿಂದ ತಾನೆ ಪ್ರಕಾಶಿಸುವನು. ವಿಜ್ಞಾನಕ್ಕೆ ವೇದೋಪನಿಷತ್ತುಗಳಲ್ಲಿ ಸೂರ್ಯಸ್ವರೂಪವಾಗಿ ಬಣ್ಣಿಸಿದ್ದಾರೆ. ಇದು ಕೂಡ ಒಳ್ಳೇ ಥಳಥಳಿಸುವ ಸತ್ತ್ಯಾನುಭವವು. ಆದಿತ್ಯ ವರ್ಣಜ್ಯೋತಿ ಪುರುಷನನ್ನು ಅನುಭವಿಸುವುದಕ್ಕಾಗುತ್ತದೆ. ಅಲ್ಲಿ ಸರ್ವರಿಗೂ ಹೀಗೆ ಮಾಡಲಿಕ್ಕೆ ಸಾಧ್ಯವಿದೆ. ವಿಜ್ಞಾನವನ್ನು ನಾಲ್ಕನೆಯ ಲೋಕವೆಂದು ಹೇಳಿದೆ. ಪ್ರತಿಯೊಂದು ಕ್ಷೇತ್ರಕ್ಕೂ ಒಂದೊಂದು ವಿಶಿಷ್ಟವಾದ ಬಣ್ಣವಿದೆ. ಸ್ಥೂಲಸತ್ತ್ವಕ್ಕೂ ಕೂಡ ಬಣ್ಣವಿದೆ ಇಲ್ಲಿ ಸ್ಥೂಲ ದ್ರವ್ಯವೆಂದರೆ ಬಾಹ್ಯವಸ್ತುವಲ್ಲ; ಮೂಲ ಜಡ ತತ್ತ್ವವು. ಇದರ ಬಣ್ಣವು ಕಿರುಮಂಜಿ. ವಿಜ್ಞಾನಕ್ಕೆ ಬಂಗಾರದ ಬಣ್ಣವಿದೆ. ಹಿರಣ್ಮಯಜ್ಯೋತಿ ಹೊಂಬಣ್ಣ. "ಹಿರಣ್ಮಯೇನ ಪಾತ್ರೇಣ ಸತ್ಯಸ್ಯ ಅಪಿಹಿತಮ್ ಮುಖಂ." ಇದೆಲ್ಲವೂ ಪ್ರತ್ಯಕ್ಷ ಸಿದ್ಧವಾದ ಅನುಭವವು. ವಿಜ್ಞಾನಸೂರ್ಯನ ಈ ಹೊಂಬಣ್ಣವು ಸತ್ಯಸತ್ಯವಾಗಿಯೂ ಸೂಕ್ಷ್ಮ ಮಾನಸ ಹಾಗೂ ಆಧ್ಯಾತ್ಮಿಕ ದೃಷ್ಟಿಗೆ ( Psycho spiritual realisation) ಪ್ರತ್ಯಕ್ಷ ವಾಗುವುದು. ವೈದಿಕ ಋಷಿಗಳಿಗೆ ಇಂಥ ಅನುಭವ ದೃಷ್ಟಿ ಇತ್ತು.

—ಶ್ರೀ ಅರವಿಂದರು

CC-0. Jangamwadi Math Collection. Digitized by eGangotri

# ಬೋಸಿಗ ಮಲ್ಲಿಗ

[ ಕನ್ನಡಿಗರ ಕೂಟದ ಮಲ್ಹಾರಿ ]

ತ್ರಿಭುವನ ಮಲ್ಲನಾದ ಚಾಳುಕ್ಯವಿಕ್ರಮನ ಆಳಿಕೆಯ ಕಾಲದ ಹೂಲಿಯ ತುರುಗಾಳೆಗದಲ್ಲಿ ಮಡಿದ, ಬೋಸಿಗ_ಮಲ್ಲಿಗರ ವೀರಗಲ್ಲಿನ ಆಧಾರದಿಂದ ಬರೆದುದು.

೧

ಇಬ್ಬರು ಹೂಲಿಯೊಳಿದ್ದರು ಕೂರ್ಪಿನ
ಚಿತ್ತಿನ ಗೆಳೆಯರು ಗೋವಳರು;
ಕೊಬ್ಬಿದ ಮೆಯ್ಯವರಗಲಾದೆದೆಯವ-
ರುಬ್ಬಿದ ತೋಳಿನ ಗಟ್ಟಿಗರು;
ಕಾಡೊಳು ದಿನವೂ ಕೂಡಿಯೆ ಕೆಳೆ ಕೆಲೆ–
ದಾಡುತೆ ಹಸುಗಳನೋವುವರು;
ಆಡುವರುಂಬರು ಬುತ್ತಿಯನಿಂಪಿನ
ಹಾಡನು ಕೊಳಲೊಳು ನುಡಿಸುವರು;
ಎಳಗರುಕೆಯನೊಲವಿಂದೀಯುತೆ ಕರು-
ಗಳನೊಯ್ಯನೆ ಮೆಯ್ದಡಹುವರು;
ಗಿಳಿಗಳನೊಸೆದಾದರಿಪರು ಕಪಿಗಳ-
ಸಣಕಿಸಿ ಕಲ್ಲೀಡಾಡುವರು;
ಅಗಲಿದ ಬೆದರಿದ ತುರುಗಳನೆಲ್ಲವ-
ನೊಂದೆಡೆ ತರುವರು ಕೂಗಿನೊಳೆ;
ತೆಗೆದಿಸಿವಣ್ಗಳನೊಬ್ಬನಿಗೊಬ್ಬನು
ಕೊಡುವನು, ತಿಂಬರು ಕೊಂಬೆಯೊಳೆ;
ಬಾರನು ಕೋಲನು ಕವಣೆಯನಾರ್ಪಸು
ನಂಬಿಯೆ ಸ್ವೇಚ್ಛೆಯೊಳಿರುತಿಹರು;
ಧೀರರೆರಡು ರೂಪಿನೊಳಿರುವೊಂದೆಯೆ
ಜೀವದ ಬೋಸಿಗ–ಮಲ್ಲಿಗರು.

೨

ಒಂದು ದಿನವಾ ತೋರ ಕೆಚ್ಚಲ
ದುಂಡು ಮೆಯ್ಯಾಕಳುಗಳು;
ಮಂದಗತಿಯೊಳು ಮೆಲುವವೆತ್ತದೆ
ಮೊಗವನಿರಿಸಿವೆ ಹುಲ್ಲೊಳು;
ಚೆದರಿದೊಡನಾಡಿಯನು ಕರೆವುವು
ಕಿವಿಯ ನಿಮಿರಿಸಿ ನೋಳ್ಪವು;
ಕೆದರಿ ನೆಲವನು ಕೋಡಿಸಿಂದಲಿ
ಸೊಗಸು ಮಿಗೆ ಕುಣಿಕುಣಿವುವು;
ಅತ್ತ ಕೊಳದೊಳು ಮಿಾಯುತಿದ್ದನು
ಮುಳುಗುತೀಸುತೆ ಮಲ್ಲಿಗ;
ಇತ್ತ ಕಾಯುತೆ ತಳಿರ ಜೊಂಪದ
ಗಿಡದೊಳಿದ್ದನು ಬೋಸಿಗ.
ಇಂತಿರಲು ಕಳ್ಳನೆಯೆ ಯಿಪ್ಪ-
ತ್ತಯ್ದು ಕಳ್ಳರ ಜಂಗುಳಿ
ಬಂತು ಕೊಡಲಿಯ ಬಾಳ ಬರ್ಚಿಯ
ಬಡಿಗೆಯೆತ್ತಿದ ಕೆಯ್ಯಲಿ;
ಒಡೆಯರಿಲ್ಲದನೆಣಿಸುತೆ,
ತುಡುಕು ತುಡುಕೆಂದೆರಗುತೆ,
ಹೊಡೆದು ಗೋಗಳನಟ್ಟುತೆ,
ತೊಡಗಿದರು ಕೊಂಡೊಯ್ಯೆ ಬೀಡಿಗೆ
ಮರೆಯ ಮಾರಿಯನರಿಯದೆ.

೩

ಬೋಸಿಗ ಸುಯ್ಯನೆ ಅಂಬೆರಡನು ತೆಗೆ-
ದೆಚ್ಚನು ಕೆಡಹಿದನಿಬ್ಬರನು
ಬೀಸಿದನೊಡನೆಯೆ ಕವಣೆಯ ಕಲ್ಗಳ-
ನುರುಳಿಸಿದನು ಧರೆಗಿಬ್ಬರನು.



CC-0. Jangamwadi Math Collection. Digitized by eGangotri

ರಭಸದಿ ಹೆಮ್ಮರದುದಿಯಿಂದೆ
ಧು-ಮ್ಮಿಕ್ಕಿದನೊಮ್ಮೆಗೆ ಮುನಿಸಿಂದೆ,
ಮ-ತ್ತ್ರವರನು ತರುಬಿದನುಕ್ಕಿಂದೆ;
ಛಳಿ-ಛಳಿಲೆನೆ ಸೆಳೆದನು ಬಾರಿಂದೆ,

ಮತ್ತರನೆದುರಿಸಿ ಹೋರಿದನೆ ಬ್ಬಿ-
ಬ್ಬರನೊರಗಿಸಿದನು ಕೋಲಿಂದೆ;

ಸುತ್ತಲು ಮುತ್ತಿದರಿವನದಟನು ಮುರಿ-
ದೊತ್ತಲು ತುಡುಗರು ಖತಿಯಿಂದೆ;

ನೆರವಿಲ್ಲಾಯುಧವಿಲ್ಲೆಂದೇನಾ
ಕಟುಕರ ಮನ ಕರಗಿದುದುಂಟೆ?

ಅರಿಗಳ ಮಧ್ಯದೊಳೊಬ್ಬನೆ ಬೋಸಿಗ
ಜಡಿದನು ಬೀರಗೆ ಬೆದರುಂಟೆ?

ಕಾದುತಿಹ ಬಂಟನಿಗೆ—ಮರೆಯಲ್ಲಿ ನಿಂದು ಹದ-
ನಾದ ಬರ್ಚಿಯನೊಬ್ಬ ಪಕ್ಕದೊಳು ಚುಚ್ಚಿದನು
ಯೋಧರಣದೇವತೆಯ ಪದವನಪ್ಪಿದನೊಲವಿ-
ಸಿಂದೆ ಸಾಷ್ಟಾಂಗವೆರಗಿ,
ಹೋದನಯ್ ಬೀರಬರ್ದಿಲಕೆ 'ದನದಕುತ್ತದೊಳು
ಬಹನೆ ಸಖ'ಎಂದು ಮರುಗಿ;

೪

ನೊಂದು ಗಾಯದಿಂದ ಬೆದರಿ
ಒಂದು ಮಣಕ ಬರಲು ಚೆದರಿ
ಮೊಗದ ಭಾವದಿಂದಲದನು
ಬಗೆದು ಮಲ್ಲ ಧಾವಿಸಿದನು,
ಪರಿವೆದಪ್ಪಲು
ಒದ್ದೆ ಮೆಯ್ಯೊಳು.

"ದನದ ಡುರಿಕೆಯಿಲ್ಲ ಕೊಳಲ ನಾದ ಕೇಳಲಿಲ್ಲವು.
ಬನವು ಹಕ್ಕಿಯುಲುವಿನಿಂದೆ ಭಣಭಣೆನುವುದೆಲ್ಲವು.
ಗಗನ ರೆಕ್ಕೆದೆರೆದ ಹದ್ದು-ಕಾಗೆಗಳಲಿ ಮುಚ್ಚಿದೆ.
ಹಗಲೆ ನೆರೆದ ನರಿಯು ಕೀಸರಿಂದೆ ದಿಕ್ಕು ತುಂಬಿದೆ.
ಏನು ದಗ್ಗುದುಳಿದ ಹೆಜ್ಜೆಯೇನು ಸುರಿದ ರಕುತವು!!
ಏನು ಮುರಿದು ಬಿದ್ದ ಬಡಿಗೆಯೇನು ಹರಿದ ಹಗ್ಗವು!!
ಏನು ಮೂರು ನಾಲ್ಕು ಹೆಣಗಳೇನಿದೇನಿದದ್ಭುತ!!
ಏನು ಗೆಯ್ದೆ ಬೋಸಿಗಣ್ಣ! ಎತ್ತ ನಡೆದೆ ಕೊಲ್ಲುತ?

ಹೋರಿ ಹೋರಿಯಾದೆಯೇನು? ನನ್ನ ನೊದರ...
ಹೋರಿಯಯ್ಯೊ! ನನ್ನ ಹೋರಿ ನೆತ್ತರಲ್ಲಿ ಮ...
ಹೀಗೆ ಗೋಳಿಡುತ್ತಲವನ
ಮೇಗೆ ಕೆಡೆದು ಬಿದ್ದು ದೊಪ್ಪ-
ನಾಗ ಮೆಯ್ಯ ಮರೆದ ಮಲ್ಲನಳಲ ಹೊರೆಯೊ...
ಆಗಸದಲಿ ಬೆರೆಯಿತಳುವು ಮಾಯೆಯೊಡಲೊ...

೫

ಒಯ್ಯನೆಚ್ಚರುಗೊಂಡು ಮಲ್ಲಿಗ
"ಅಯ್ಯೊ ಬೋಸಿಗ" ಎನ್ನುತೆ;
ಮೆಯ್ಯ ದೂಳನು ಕೊಡಹಿ, ನೆತ್ತರ-
ನೊರಸಿಯೊಲ್ಲಿಯ ತೀಡುತೆ,
ಕೆದರಿರುವ ತಲೆಗೂದಲನು ನೇ-
ವರಿಸಿ ನಾಡಿಯ ನೋಡುತೆ,
ಹೃದಯ ನಡುಗಿತು ಶೋಕ ಹೆಚ್ಚಿತು
ತಲೆಯ ತೊಡೆಯೊಳು ಕೊಳ್ಳುತೆ,
"ಅಂದು ಚಿಣಿಕೋಲಾಟವನು ಕೊಳ-
ಲಾಟವನು ಜತ್ತಾಗಿಯೆ
ಅಂದು ಹೊಡೆಚೆಂಡಾಟವನು ನಗೆ-
ಯಾಟವನು ಜತ್ತಾಗಿಯೆ
ಅಂದು ಗಜ್ಜುಗದಾಟವನು ನಲಿ-
ದಾಟವನು ಜತ್ತಾಗಿಯೆ
ಒಂದೆ ಕಲ್ಲಿಯ ಕೂಳನುಂಡಾ-
ಡಿದ್ದೆವೀ ನೆಳಲಲ್ಲಿಯೆ;
ಇಂದು ಕಾದಾಟದಲಿ ನೀನೊ-
ಬ್ಬನೆಯೆ ಹೋಹರೆ ಬೋಸಿಗ?
ನಿಂದೆನೊದಗದೆ ನಿನ್ನ ತೊಳಲಾ-
ಟದಲಿ ನಾನೆಂತಳ್ತಿಗ?
ಅಂದು ನಿನ್ನುಪವಾಸದಲಿ ತು-
ತ್ತಿಳಿದುದೇನೆನ್ನೊಡಲಿಗೆ?
ಅಂದಿನಿರುಳೊಳು ನಿನ್ನನಗಲಿರೆ
ನಿದ್ದೆ ಬಂದುದೆ ಕಣ್ಣಿಗೆ?
ಅಂದು ನಿನ್ನೊಡನಾಟವಿಲ್ಲದೆ
ಮನಕೆ ಸೊಗಸುಂಟಾದುದೆ?

CC-0. Jangamwadi Math Collection. Digitized by eGangotri

ಇಂದು ನೀನಗಲಿರಲು ನನ್ನನು
ಇಹುದೆ ಜೀವವು ದೇಹದೆ?

ಈ ಕಡೆಗೆ ನೋಡಿಲ್ಲಿ ಜೀವದ
ದಾತನಳಿಯಲು ಬಿದ್ದಿವೆ

ಈ ಕವಣೆಯೀ ಬಾರುಕೋಲೀ
ಕೊಳಲು ಹರಣವನುಳಿದಿವೆ;

ನಿನ್ನ ಬದುಕಿದು ಗೆಳೆಯ ! ನನ್ನಯ
ಬದುಕದಾಗಿರೆ ನಿಲ್ವನೆ?

ನಿನ್ನ ಬಾಳಿನ ಕಳ್ಳರನು ತುರು-
ಗಳ್ಳರನು ಬಾಳಿಸುವನೆ?

ಇನ್ನು ನಿನ್ನೊಲು ಕಾದುವೆ
ನಿನ್ನ ಮಗ್ಗಿಲೊಳೊರಗುವೆ
ನಿಲ್ಲು ನಾನೂ ಸಾರುವೆ
ಅಲ್ಲಿಯೂ ಜೊತೆಯಾಗುವೆ"

ಎಂದು ಕಂಬನಿಮಿಡಿದು ಮಲ್ಲಿಗ
ನೊಡನೆ ಧಾವಿಸಿ ನಡೆದನು;

ಅಂಧನಂತಿರೆ ತೊವಲಗುಣವಳಿ-
ದಿರಲು ಕನಲಿದ ರುದ್ರನು.

೬

ಗೆದ್ದೆವೆಂದುಬ್ಬಿನಲಿ ನಡೆದಿತ್ತು ಪಡೆ ದನದ
ಹಿಂಡ ಮುಮ್ಮಾಡಿಕೊಂಡು.

ಒದ್ದನೊಬ್ಬನನಿಬ್ಬರನು ಗುದ್ದಿದನು ಮೂವ-
ರೊರಗಿದರು ಬವಳಿಗೊಂಡು.

ಒಬ್ಬನನು ತಕ್ಕೆಮುಕ್ಕೆಯೊಳವುಕಿ ಮಲ್ಲನಿ-
ಕ್ಕಿದನು ಸಿಟ್ಟೆಲುವ ಮುರಿದು.

ಒಬ್ಬೊಬ್ಬನಾಗಿ ಬರಲೆಲ್ಲರನು ಬೀಳಿಸಿದ-
ನರಿಗಳೊಗ್ಗಾಗಿ ಬಂದು

ತೂಗಿದರು ಕೊಡಲಿಯನು;
ತಾಗಿದರು ಜಟ್ಟಿಯನು;
ದುಂಡಾಗಿ ನಿಂತವರು
ರುಂಡವನು ಬಿಚ್ಚಿದರು.
ಅಳಿದನಾಕಳಿಗಾಗಿ ಬೋಸಿಗಣ್ಣ;
ಕೆಳೆಯ ಕರ್ತವ್ಯಕ್ಕೆ ಮಲ್ಲಿಗಣ್ಣ.

೭

ಹೂಲಿಯ ಗವುಡನು ಈ ಸಂಗತಿಯನು
ಆಲಿಸಿದನು ಸಂಭ್ರಮವನು ತಾಳ್ದನು;
ಸಾಸಿಗರಳಿದಿಹ ಹಳುವಿಗೆ ಬಂದನು;
ಬೋಸಿಗ-ಮಲ್ಲರ ಮೆಯ್ಯನು ತಂದನು
ವೀರನಿನಾದವು ಬಾನನು ನಡುಗಿಸೆ,
ಪೌರರು ಅವರಾ ಗುಣವನು ಕೀರ್ತಿಸೆ,
ಕವಿಗಳು ನುಡಿಬೊಕ್ಕಸವನು ತೆರೆದಿರೆ,
ಗವುಡನು ನುಡಿದನು "ಸೈ ಸೈ ಪೂತುರೆ!
ತ್ರಿಭುವನ ಮಲ್ಲನ ವಿಕ್ರಮದೇವನ
ವಿಭವಕೆ ಕಳೆಯಿತ್ತುದು ನಿಮ್ಮಯಗುಣ!"

ಮಲ್ಲರ ತನುಗಳ ಮೆರೆಯಿಸಿ ಭೂಮಿಯ
ಮಡಿಲೊಳು ಹಾಕಿದರು.

ಕಲ್ಲೊಳು ಬೀರವ ಕಬ್ಬದಿ ಚಿತ್ರಿಸಿ-
ಯಲ್ಲಿಯೆ ನಿಲಿಸಿದರು.

೮

ಒಂದೆಯೆರಡಾಗಿದ್ದ ಜೀವವ-
ದೊಂದೆಯಾಯಿತು, ಪಂಚಭೂತಗ-
ಳಿಂದ ಹುಟ್ಟಿದ ತನುಗಳೆರಡವುಗಳಲಿ ಒಂದಾಗೆ,
ಒಂದೆಯೆರಡಾಗಿದ್ದ ವಿಕ್ರಮ-
ವಿಂದಡಗಿಯೂದತ್ತು ಸ್ಥಿರವಾ-
ದೊಂದೆ ಬೆಳ್ಜಸವೊಂದೆ ಕಲ್ಲೊಳು ಮಲ್ಲ–ಬೋಸಿಗರ

CC-0. Jangamwadi Math Collection. Digitized by eGangotri

# * ನಿರ್ಭಾಗ್ಯೆ

### ಸಣ್ಣ ಕತೆಯೊಂದು

**ಬರೆದವರು:— ಶ್ರೀ. ಪದ್ಮಾವತಿ, ಬಾಗಲಕೋಟೆ**

೧

ಗೌರೀಪುರವು ಚಿಕ್ಕಹಳ್ಳಿ; ವಿಜಯನಗರದ ರಾಮರಾಜನಿಂದ ನಮ್ಮ ಮನೆತನಕ್ಕೆ ಜಹಾಗೀರಿಯಾಗಿ ಸಿಕ್ಕ ಊರು. ಚಿಕ್ಕ ಹಳ್ಳಿಯಾದರೂ ಜನವಸತಿ ಹೆಚ್ಚು. ಊರ ಮುಂದೆ ಒಂದು ಕೆರೆ. ಊರಲ್ಲಿ ಕರಣಿಕರ ಮನೆಯೊಂದು. ಕರಣಿಕರ ಮಗಳಾದ ನಿರ್ಭಾಗ್ಯೆಯನ್ನು ಅರಿಯದವರೆ ಇಲ್ಲ. ಬಟ್ಟಗಿರುವ ಮುಖ, ಸಿಡಿದಾದ ಮೂಗು, ಅರಳಿದ ಕಮಲದಂತಹ ಕಣ್ಣು, ತಿಳಿಗಪ್ಪಿನ ಮೈಬಣ್ಣ, ಕಪ್ಪಿದ್ದರೂ ಮುಖಕ್ಕೆ ಕಳೆ ಬಹಳ, ಯಾರಾದರೂ ನೋಡಿದವರು ಸೌಂದರ್ಯಶಾಲಿನಿ ಎಂದೇ ಹೇಳಬಹುದು. ಏನಿದ್ದರೇನು! ಎಲ್ಲವೂ ಕಾಡಿನ ಬೆಳದಿಂಗಳು. ಬಾಲ್ಯದಲ್ಲಿಯೇ ವಿತಂತು! ಸಾಲದುದಕ್ಕೆ ಮಲತಾಯಿಯ ಮಮತೆ; ಯಾವಾಗಲೂ ಗಂಭೀರತೆಯಿಂದಲೆ ಇರುವಳು. ಎಲ್ಲರ ಜೊತೆಗೂ ಸೌಜನ್ಯದಿಂದಲೆ ಮಾತನಾಡುವಳು, ತನಗೆ ಕೇಡನ್ನೆಣಿಸಿದವರಿಗೂ ಕೇಡು ಬಯಸಳು. ತಕ್ಕಮಟ್ಟಿಗೆ ಓದುಬರೆಹ ಬಲ್ಲವಳು; ಹೃದಯವು ಹಸನಾದದ್ದು, ನಡತೆ ನಿರ್ಮಲ. ತಾನಾಯಿತು, ತನ್ನ ಮನೆಗೆಲಸವಾಯಿತು. ಹೋದರೆ ನೆರೆಮನೆಯ ಮಾಧವನ ಮನೆಗೆ. ಇಲ್ಲವೆ ಕೆರೆಯಕಟ್ಟೆಯ ಮೇಲಿದ್ದ ಬಕುಲದ ಗಿಡಕ್ಕೆ. ಹೇಗಿದ್ದರೇನು! ಮನೆಯಲ್ಲಿ ತಾಯಿಯ ಪ್ರೇಮಾದರದ ನುಡಿಗಳು ಯಾವಾಗಲೂ ನಡೆದೆ ಇರುವವು. ಒಂದು ದಿನವಾದರೂ ತಪ್ಪುತ್ತಿರಲಿಲ್ಲ. ಕೆಲಸ ಬೊಗಸೆಗಳನ್ನು ಎಷ್ಟು ಮಾಡಿದರೂ 'ನಮ್ಮವ್ವಾ ನಾನೇ ದುಡಿಯಬೇಕು, ಉಣುವವರಿಗೇನು ಬೇನೆ! ದುಡಿದು ದುಃಖಪಟ್ಟರೂ ಒಂದು ಕೆಲಸಕ್ಕಾದರೂ ನೆರವಿಗೆ ಬರುವುದಿಲ್ಲ. ಇವಳಿಗೇನು ಬೇನೆಯೇ? ಹದಿಮೂರು ವರ್ಷದ ವಿಂಡೆ, ನನಗಂತೂ ಸಾಕು ಸಾಕಾಗಿ ಹೋ[...] ಮಾಧವನ ಮನೆಗೆ ಹೋದಳೆಂದರೆ ಬರಲಿಕ್ಕೇ ಆ[...] ಅದೇನು ಮಾತೊ! ಮಹಾರಾಯರೇ, ನಿವೇನೊ [...] ಮಗಳೇನೊ' ಎಂಬ ಅಕ್ಕಸದ ನುಡಿಗಳು [...] ಮುಂದೆ ಯಾವಾಗಲೂ ನಡೆದೇ ಇರುವವು. ಮತ್ತೆ ಸುದೈವದ ದಿನವಿದ್ದರೆ ಒಂದೆರಡು ಬೈಗಳು [...] ದುರ್ದೈವದ ದಿನವಿದ್ದರೆ ನಾಲ್ಕಾರು ಏಟು. ಇ[...] ದಕ್ಕೂ ನಿರ್ಭಾಗ್ಯೆ ಸೊಪ್ಪು ಹಾಕುತ್ತಿರಲಿಲ್ಲ. ಸಮದುಃಖಸುಖಂ ಧೀರಂ ಸೋಮೃತತ್ವಾಯ ಕಲ್ಪತೆ' [...] ಗೀತೆಯ ಶ್ಲೋಕವನ್ನು ಗುಣಗುಣಿಸುತ್ತ ಸಮಾ[...] ದಿಂದಲೇ ಇರುವಳು.

೨

ನಿರ್ಭಾಗ್ಯೆಯನ್ನು ಎಲ್ಲರೂ 'ನಿರ್ಭಾಗ್ಯೆ' ಎಂದೇ [...] ಯುವರು. ಆದರೆ ಅವಳ ನಿಜವಾದ ಹೆಸರು ಶಾ[...] ಯೆಂದು. ಮಾಧು ಸುಶೀಲೆ (ಮಾಧವನ ಹೆಂಡತಿ) ರಾ[...] (ಮಾಧವನ ತಮ್ಮ) ಇವರನ್ನುಳಿದು ಮತ್ತಾರೂ ಶಾ[...] ಯನ್ನು ಕರೆಯುತ್ತಿರಲಿಲ್ಲ. ಮಾಧು ಸರಳ ಸ್ವಭಾ[...] ವನು. ದೀನರನ್ನು ಕಂಡರೆ ಅದೆಷ್ಟೊ ಕಳವಳ ಪಡುವ[...] ಸುಶೀಲೆಯಾದರೂ ಅವನಿಗೆ ತಕ್ಕ ಹೆಂಡತಿ. ಅ[...] ಸುಸ್ವಭಾವದವಳು. ನಿರ್ಭಾಗ್ಯೆಯನ್ನು ಕಂಡರೆ ಕ[...] ಪಡುವಳು. ಮಾಧು ಶಾಂತೆಗೆ ಸಂಸ್ಕೃತವನ್ನು [...] ಸುತ್ತಿದ್ದನು. ದೇಶದ ಬಗ್ಗೆ ಸಮಾಜದ ಬಗ್ಗೆ ಆ[...] ಮಾತಾಡುತ್ತ ಕುಳಿತರೆ ಅವರಿಬ್ಬರು ಜಗತ್ತನ್ನೇ ಮ[...] ಬಿಡುತ್ತಿದ್ದರು. ಇಷ್ಟಾದರೂ ಸುಶೀಲೆಯು ಒ[...] ದಿನವಾದರೂ ಸಿಟ್ಟುಸಿಡುಕುಗಳನ್ನು ಮಾಡುತ್ತಿ[...] ಮಾಧವನಿಗಿಂತಲೂ ಹೆಚ್ಚಾಗಿ ತಾನೂ ಪ್ರೀತಿಸು[...]

---

* ಉತ್ತರಕರ್ನಾಟಕದ ಹೆಣ್ಣುಮಗಳೊಬ್ಬಾಕೆ ಬರೆದುದು. [illegible] ಹಳ್ಳಿಗ ಇದ್ದಂತೆಯೆ ಮುದ್ರಿಸಿಬಿಟ್ಟಿದೆ. ಸಂ. ಜ. ಕ.

CC-0. Jangamwadi Math Collection. Digitized by eGangotri

ದ್ದಳು. ಮಾಧುವಿಗೆ ಜಗದ್ವಿಖ್ಯಾತ ರವೀಂದ್ರರ ಆಶ್ರಮ ಶಾಂತಿನಿಕೇತನಕ್ಕೆ ಹೋಗಬೇಕೆಂಬ ಹಂಬಲವು ದಿನ ದಿನಕ್ಕೆ ಹೆಚ್ಚಾಗಲುತೊಡಗಿತು. ಸುಶೀಲೆಗೂ ಚಿತ್ರ ಕಲೆಯ ಹುಚ್ಚು ಬಹಳ. ತಾನೂ ಬರುವೆನೆಂದು ಹಟ ಹಿಡಿದಳು. "ಅಕ್ಕಾ! ಅವನೊಬ್ಬನೆ ಹೋಗಲಿ ಬಿಡೆ, ನೀನಿಲ್ಲಿಯೇ ಇರು, ನೀವಿಬ್ಬರೂ ಹೋದರೆ ನನಗಾರು ?" ಎಂದು ಶಾಂತೆ ಕಂಬನಿಗರೆಯುತ್ತ ನುಡಿದಳು. ಶಾಂತೆ ಕಣ್ಣೀರಿಡುವುದನ್ನು ನೋಡಿ ಸುಶಿಲೆಯ ಹೊಟ್ಟೆಯಲ್ಲಿ ಕಳವಳವುಂಟಾಯಿತು. 'ಶಾಂತಾ! ಅಳಬೇಡ ನೋಡು ನನಗೆ ಚಿತ್ರಕಲೆಯ ಹುಚ್ಚು ಬಹಳ, ನನ್ನೊಬ್ಬಳನ್ನೆ ಕಳಿ ಸೆಂದರೆ ಕಳಿಸುವರೇ ಇವರು ? ಹೇಗಾದರೂ ಇವರು ಜೊತೆಗಿರುವರು. ಒಂದೆರಡು ವರ್ಷಗಳಲ್ಲಿಯೇ ತಿರುಗಿ ಬರುವೆವು. ರಾಮು ಸೀತೆ ಇರುವರಲ್ಲ, ಮನೆಗೆ ಬರುತ್ತಾ ಇರು ನಿನಗೇನಾದರು ಬೇಕಾದರೆ ರಾಮೂಗೆ ಕೇಳು, ಅವನು ಕೊಡುತ್ತಾನೆ" ಎಂದು ಹೇಳಿ ಹೊರಡುವ ಸಿದ್ಧತೆ ಯಲ್ಲಿ ತೊಡಗಿದಳು. ಮಾಧುವು ಹೋಗುವ ಮುಂದೆ ನಿರ್ಭಾಗ್ಯೆಯನ್ನು ಕರೆದು ಹೇಳಿದ. 'ಶಾಂತಾ! ಯಾವಾ ಗಲೂ ಅಳುತ್ತಾ ಕೂಡ್ರಬೇಡ, ತಿಳಿಯಿತೇನು ? ಯಾರು ಏನೆಂದರೂ ಮನಸ್ಸಿಗೆ ಹಚ್ಚಿಕೊಳ್ಳಬೇಡ. ಈಕೆಯೂ ಬರುವೆನೆಂದು ಹಟಹಿಡಿದಿರುವಳು. ಕರೆದುಕೊಂಡು ಹೋಗುತ್ತೇನೆ. ಓಲೆಗೆ ಉತ್ತರವನ್ನು ಬರೆಯುತ್ತಿರು,' ಎಂದು ನುಡಿದವನೇ ತಮ್ಮನ ಕಡೆಗೆ ಹೊರಳಿ 'ರಾಮೂ ಶಾಂತೆಯನ್ನು ನಮ್ಮ ಮನೆಗೆ ಬಂದಾಗೆಲ್ಲ ಆದರಿಸು ತ್ತಿರು, ಏನಾದರೂ ಬೇಡಿದರೆ ಕೊಡುತ್ತಿರು. ಜುಗುಪ್ಸೆ ತೋರಿಸಬೇಡ! ಪಾಪ! ಅನಾಥೆಯವಳು !! ಹೋಗಿ ಬರುತ್ತೇವೆ. ರಾಮೂ ಶಾಂತಾ ಜೋಕೆ' ಎಂದು ಮತ್ತೊಮ್ಮೆ ಹೇಳಿದನು. ಮಾಧವ ಸುಶೀಲೆ ಶಾಂತಿ ನಿಕೇತನಕ್ಕೆ ಹೊರಟುಹೋದರು.

೩

ಆಯಿತು, ನಿರ್ಭಾಗ್ಯೆಯು ಇಂದಿಗೆ ನಿಜವಾಗಿಯೇ ನಿರ್ಭಾಗ್ಯೆಯು. ತಮ್ಮ ಜೀವಕ್ಕಿಂತಲೂ ಹೆಚ್ಚೆಂದು ತಿಳಿದು ಪ್ರೀತಿಸುತ್ತಿದ್ದ ಮಾಧವ ಸುಶೀಲೆಯರೇನೊ ಹೊರಟುಹೋದರು. ರಾಮೂ ಕೆಲಸದವನು. ಒಂದು ದಿವಸ ಊರಲ್ಲಿ ಇದ್ದರೆ ನಾಲ್ಕು ದಿವಸ ಊರಲ್ಲಿರುತ್ತಿ ದ್ದಿಲ್ಲ. ಮನೆತನಕ ಹೋದರೆ ಮಾತನಾಡಿಸುವವರು ಯಾರು? ಸೀತೆ ಸಿಡುಕು ಸ್ವಭಾವದವಳು. ನಿರ್ಭಾಗ್ಯೆ ಯನ್ನು ಕಂಡರಂತೂ ಅವಳು ಬೆಂಕಿಯನ್ನು ಕಂಡಂತೆ ಮಾಡುವಳು; ಅದೇಕೊ ಅವಳಿಗೆ ಈಕೆಯನ್ನು ಕಂಡರೆ ಹಿಡಿಸಲಾರದಷ್ಟು ಸಿಟ್ಟು. ಮಲತಾಯಿಗೂ ಸೀತೆಗೂ ತವರೂರಿನ ಸಂಬಂಧ. ಆಕೆಯೇನಾದರೂ ಇಲ್ಲದು ದೊಂದು ಹೇಳುತ್ತಿರುವಳಾದೀತೇನು!' ಎಂಬ ಸಂಶ ಯವು! 'ಯಾರೇನು ಹೇಳುವುದು, ನಾನೇ ದುರ್ದೈವಿ, ಯಾರಿಗಂದೇನು ಫಲ' ಎಂಬ ಕಲ್ಪನೆಯು ಮತ್ತೊಮ್ಮೆ. ಮನದಳಲನ್ನು ತೋಡಿಕೊಳ್ಳುವುದಾರಮುಂದೆ, ? ಮನೆಯ ಸ್ಥಿತಿಯಂತೂ ಗೊತ್ತಿದೆ. ನೆರೆಹೊರೆಯವರ ಮುಂದೆ ಹೇಳಿದರೆ ಕೂಡಲೆ ಅವರ ಮನೆಗೆ ತಂತಿಯ ವರ್ತಮಾನ ಬಂದಂತೆ ಸುದ್ದಿ ಬರುತ್ತಿದ್ದಿತು. ರಾಮೂನ ಮುಂದೆ ಹೇಳಬೇಕೆಂದರೆ ಊರಲ್ಲಿರುವುದಿಲ್ಲ. ಸೀತೆ ಯಂತೂ ಆಕೆಯ ಜೊತೆಗೆ ಮಾತನ್ನೇ ಆಡುತ್ತಿದ್ದಿಲ್ಲ. ಕೆರೆ ಯಕಟ್ಟೆ, ಬಕುಲದಗಿಡ. ಗಿಡದಲ್ಲಿದ್ದ ಕೋತಿ-ಕೋಡಿಗ ಮೃಗಪಕ್ಷಿಗಳೇ ಆಕೆಯ ಸರ್ವಬಂಧುಬಳಗವು. ಮಡು ವಾಗಿ ನಿಂತುಕೊಂಡಿದ್ದ ತಿಳಿಗಂಗೆಯೆ ತಾಯಿ. ಮನೆಗೆಲಸ ಮುಗಿಯುತ್ತಲೆ ಕೆರೆಯ ಹಾದಿ. ತಾಯಿ ಕೆರೆಯ ಗಂಗ ಮ್ಮನ ಮುಂದಿಷ್ಟು ಮೂಕಮಾತಿನಿಂದ ಮನದಳುವನ್ನು ತೋಡಿಕೊಳ್ಳುವುದು, ಅನಂತರ ಮತ್ತೆ ಮನೆಗೆದ್ದು ಬರು ವುದು. ಬರುತ್ತಲೆ ತನ್ನುದ್ದ ಕೆಲಸವು. ಅದಲ್ಲದೆ ಅಳತೆಗೆಟ್ಟ ಬೈಗಳಿಗಂತೂ ಕೊರತೆಯೇ ಇಲ್ಲ. ಯಾವುದನ್ನಾದರೂ ತಾಳಿಕೊಂಡಿರುವುದೇ ನಿರ್ಭಾಗ್ಯಳ ಸ್ವಭಾವ ಧರ್ಮವು. ಇಂದು ಶುಕ್ರವಾರ, ಮಧ್ಯಾಹ್ನ ೩ ಗಂಟೆಯಾಗಿರ ಬಹುದು, ಮನೆಗೆಲಸವೆಲ್ಲ ಮುಗಿದಿದ್ದಿತು. ರಾಮೂನು ಎಲ್ಲಿಂದಲೊ ಬಂದನು. ಕಾರ್ಮೋಡದಲ್ಲಿ ಮಿಂಚು ಮೂಡಿದಂತೆ ನಿರ್ಭಾಗ್ಯೆಗೆ ದುಃಖದಲ್ಲಿಯೆ ಕೊಂಚ ಆನಂದ. ಆಗವಳು ಅಳುತಳುತಲೆ "ರಾಮು ! ಮಾಧೂ ಸುಶೀಲೆಯರದೇನಾದರೂ ಓಲೆಬಂದಿರುವುದೇ ? " ಎಂದು ಕೇಳಿದಳು "ನಿನ್ನೆಯೇ ಬಂದಿರುವುದು. ಚೆನ್ನಾಗಿ ದ್ದಾರಂತೆ. ನಿನಗೆ ಕಾಗದ ಬರೆಯುವುದಕ್ಕೆ ಹೇಳಿ ದ್ದಾರೆ. ಬರೆದು ಕೊಡುತ್ತೀಯಾ" ಎಂದು ಕೇಳಿದನು. ಆಕೆಯು ಏನೇನೊ ತನ್ನ ಮನಸ್ಥಿತಿಯನ್ನು ಒರೆದು ಅಂಚೆಗೆ ಹಾಕೆಂದು ಕೊಟ್ಟುಬಿಟ್ಟಳು. ತಾಯಿಯು ಎಲ್ಲಿದ್ದಳೊ ಏನೋ! ಧಾವಿಸಿ ಬಂದು "ಅದೇನೆ?" ಎಂದು ಕೇಳಿದಳು. "ಏನೂ ಇಲ್ಲ; ಸುಶೀಲೆಯ ಓಲೆಗೆ

CC-0. Jangamwadi Math Collection. Digitized by eGangotri

ಉತ್ತರ ಬರೆದೆ'' ಎಂದಳು. 'ಚೆನ್ನಾಯಿತು. ಏನು ಅವಳು ಸುಶೀಲೆಯೋ ದುಃಶೀಲೆಯೋ! ಅವಳ ಸಂಗತಿಯನ್ನು ಹಿಡಿದರೆ ಖಂಡಿತವಾಗಿಯೇ ನೀನು ಕೆಡುತ್ತೀ. ತಾನೂ ಸದ್ಗುಣಿ, ನಿನಗೂ ಸದ್ಗುಣವನ್ನು ಕಲಿಸುವಳು, ಏನೂ ಚಿಂತೆಯಿಲ್ಲ. ಹಾಲಿನಂತಹ ಕುಲಕ್ಕೆ ಕಲಂಕ ತಂದಿರುವೆ. ಯಾಕಾಗಲೊಲ್ಲದವ್ವಾ ನಾನೇನು ನಿನಗೆ ಹೇಳಲಿಕ್ಕೆ ನಿನ್ನ ತಾಯಿಯೆ?'' ಎಂದು ರಾಮೂನ ಕಡೆಗೆ ಹೊರಳಿ ''ರಾಮೂ ನೀನಿನ್ನು ನಮ್ಮ ಮನೆಗೆ ಬರಬೇಡ ತಿಳಿಯಿತೆ?'' ಎಂದಳು.

೪

ನಿರ್ಭಾಗ್ಯೆಗೆ ದಿಕ್ಕೇ ತೋಚದಂತಾಯಿತು. ''ತನ್ನದೇನೋ ನಡೆದೇ ಇದೆ. ತನ್ನ ಸಲುವಾಗಿ ರಾಮೂಗೆಷ್ಟು ತಾಪವು!'' ಎಂದು ದಿನಕ್ಕಿಂತಲೂ ಇಮ್ಮಡಿಯಾಗಿ ಅತ್ತಳು. ರಾಮೂ ಧೈರ್ಯದಿಂದಲೇ 'ಶಾಂತಾ ಅಳಬೇಡ, ಅವರು ಬೇಡವೆಂದರೆ ನಾನೇನು ಬಿಡುವುದಿಲ್ಲ. ಬಿಡುವು ದೊರೆತಾಗೆಲ್ಲ ಬರುತ್ತೇನೆ.' ಎಂದು ಧೈರ್ಯ ಹೇಳಿ, ಹೋಗುವ ಮುಂದೆ ವೈಶಾಖ ಪೌರ್ಣಿಮೆಯ 'ಜಯ-ಕರ್ನಾಟಕ'ವನ್ನು ಕೊಟ್ಟನು. ಮರುದಿವಸ ಶನಿವಾರ; ತಾಯಿಯು ಗುಡಿಗೆ ಹೋಗಿದ್ದಳು. ಮನೆಯಲ್ಲಿ ಒಬ್ಬಳೇ ಇದ್ದುದರಿಂದ ಜಯಕರ್ನಾಟಕವನ್ನು ಹಿಡಿದುಕೊಂಡು ''ದೇವತಾ ಪ್ರುಥಿವಿ'' ಎಂಬ ಹಾಡನ್ನು ನೋಡಿ, ಕವಿಯ ಪ್ರತಿಭಾಚಾತುರ್ಯವನ್ನೂ ಅವನ ಭಾವನಾಲಹರಿಯನ್ನೂ ಕಂಡು, ನಗುತೊಮ್ಮೆ ಅಳುತೊಮ್ಮೆ ಹಾಡುತ್ತ ಕುಳಿತಿದ್ದಳು. ತಾಯಿಯು ಗುಡಿಯಿಂದ ಬಂದವಳೆ ಹಸಿದ ಹುಲಿಯಂತೆ ಗದ್ದರಿಸಿದಳು. ಮುನ್ನೋಡಿ ಓದುತ್ತ ಕುಳಿತ ನಿರ್ಭಾಗ್ಯೆಯು ಬೆಚ್ಚಿಬಿದ್ದಳು. ತಿರುಗಿ ನೋಡಿದಳು. ಆ ರೌದ್ರಾವೇಶ ಆ ವೀರಭದ್ರನ ಅವತಾರವನ್ನು ನೆನೆದರೆ ಈಗಲೂ ಮೈಮೇಲೆ ಮುಳ್ಳೇಳುತ್ತವೆ. 'ಏನೇ, ಗಂಡುಬೀರಿ, ಮನೆಗೆಲಸಗಳನ್ನೆಲ್ಲ ಬಿಟ್ಟು ಓದುತ್ತ ಕುಳಿತಿರುವೆಯಾ? ಹೆಂಗಸು ಓದಿ ಕೆಟ್ಟಳಂತೆ! ಓದುವುದಾದರೂ ಏನದು? ಅದನ್ನು ಕೊಟ್ಟವರಾರು? ರಾಮೂ ಏನು? ಸೀತೆ ಅರಿಯದ ಹುಡುಗಿ, ಪಾಪ! ಅವಳ ಸಂಸಾರ-ಗೇಡು ಮಾಡಬೇಕೆಂದು ಬಗೆದಿರುವೆಯೇನು? ಗೈಯಾಳಿ!' ಎಂದು ಥಡಥಡ ಬೈಯತೊಡಗಿದಳು. ನಿರ್ಭಾಗ್ಯೆ ಅಳುತ್ತಲೆ 'ತಾಳುವಿಕೆಗಿಂತಧಿಕ ತಪವು ಇಲ್ಲ' ಎಂಬ ಶ್ರೀಪಾದ

ರಾಯರ ಪಲ್ಲವಿಯನ್ನು ಮನದೆದುರು ತಂದುಕೊಂಡು ಮತ್ತೆ ಕೆಲಸಕ್ಕೆ ನಡೆದಳು.

೫

ತಾಳುವಿಕೆಗೂ ಮಿತಿಯುಂಟು. ನಿರ್ಭಾಗ್ಯೆ ತಾಳುವುದಾದರು ಎಷ್ಟು! ತಾಯಿಯ ಕೋಪ, ತಾಪ, ಹೊರಗೆಲ್ಲಿಯೂ ಹೋಗಕೂಡದೆಂಬ ತಂದೆ ಕಠಿಣವಾದ ಕಟ್ಟು. ಇವೆಲ್ಲವುಗಳಿಂದ ಹೂವಿ ಹೃದಯಕ್ಕೆ ಬರೆಕೊಟ್ಟಂತಾಗಿ ಹೋಯಿತು. ಸುಶೀಲೆಯರು ಶಾಂತಿನಿಕೇತನಕ್ಕೆ ಹೋಗಿ ಎರಡು ವರ್ಷಗಳಾದುವು. ಮರಳಿ ಬರುವ ಸುದ್ದಿ ಇಲ್ಲ. ರಾಮೂನ ಜೊತೆಗೂ ಮಾತಾಡಕೂಡದು, ಕಟ್ಟೆಗೂ ಹೋಗಕೂಡದು. ಇಂದು ಸಂಕ್ರಾಂ ಹಬ್ಬ, ಜನರೆಲ್ಲರೂ ಹಬ್ಬದೂಟವನ್ನುಂಡು ಉಟ್ಟ ಎಳ್ಳು ಸಕ್ಕರೆಯನ್ನು ತೆಗೆದುಕೊಂಡು ತಮ್ಮ ಬಾಂಧವರಿಗೆ ಕೊಡಬೇಕೆಂದು ಸಂಭ್ರಮದಿಂದ ದ್ದರು. ನಿರ್ಭಾಗ್ಯೆಯು 'ತಾನಾರಿಗೆ ಕೊಡುವುದು' ಕೊಂಡಳು. ''ಆದೇಕೆ! ನಿನಗಿಲ್ಲವೇ ಹೋಗಿ ಕೊ ವರಿಗೆ'' ಎಂದಿತಾ ಮನವು. ಮನಸ್ಸು ಬಯಸ ಕೈಯಲ್ಲಿಯೇ ತುಸು ಎಳ್ಳುಸಕ್ಕರೆಯನ್ನು ತೆಕ್ಕೊಂ ಹೊರಹೊರಟಳು. ಯಾರು ಏನೆನ್ನುವರೋ ಎಂಬ ವಂತು ಇದ್ದೇ ಇದ್ದಿತು. ಹಾಗೆಯೇ ಹೋಗಿ ಮುಂದೆ ನಿಂತು ''ರಾಮಣ್ಣಾ'' ಎಂದು ಕೂಗಿ ಉತ್ತರವಿಲ್ಲ. ಒಳಗೆ ಹೋಗಿ ನಡುಗುವ ಧ್ವನಿ ''ಸೀತಾ! ರಾಮೂ ಮನೆಯಲ್ಲಿ ಇಲ್ಲವೇನೆ?'' ಕೇಳುವಷ್ಟರಲ್ಲಿಯೇ ಹುಲಿಯನ್ನು ನಾಚಿಸುವ ಗ ಗಿನ ಧ್ವನಿಯಿಂದ ''ಅದೇತಕ್ಕೇ? ಅವರೇತಕ್ಕೆ ಸಾಕಾಗಿಲ್ಲವೇನು ಇಷ್ಟು ದಿನದವರೆಗೆ ದುಡ್ಡು ಕೊಂಡದ್ದು! ಮತ್ತೇನು ಬೇಕಾಗಿದೆ ಈ ದಿವಸ? ಸೀ ಕುಪ್ಪುಸವೆ? ರೊಕ್ಕವೇ? ಬೇಕಾಗಿರುವುದಾದರೂ ನನಗೆ ಅದು ಬೇಕು. ನನಗೆ ಇದು ಬೇಕು. ಎಂದು ಲಿಕ್ಕೆ ನಾಚಿಕೆಯಾದರೂ ಹೇಗೆ ಬರುವದಿಲ್ಲವೋ ಅಪ್ಪ ಇಷ್ಟರೇ, ಏನೇನೂ ಅಲ್ಲದವರಿಗೆ ಬೇಡಲಿಕ್ಕೆ ಯಾದರೂ ಹೇಗೆ ಏಳುವದೊ ತಿಳಿಯದಾಗಿದೆ. ಹೇ ನಿರ್ಭಾಗ್ಯೆ ನೀನು, ನಮ್ಮ ಮನೆಗಿನ್ನು ಬರಬೇಡ ನಿಮ್ಮ ತಂದೆತಾಯಿಗಳಿಗೆ ಹೇಳಿ ನಿನ್ನ

CC-0. Jangamwadi Math Collection. Digitized by eGangotri

ಮಾಡಿಸುತ್ತೇನೆ'' ಎಂದು ಏನೇನೊ ಬೊಗಳಿದಳು. ಉರಿಯುವ ನೋವಿಗೆ ಉಪ್ಪನ್ನು ತೊಡೆದಂತಾಯಿತು. ಮಾಡುವುದೇನು? ಕೆರೆಯಕಟ್ಟೆಗೆ ಹೋಗಿ ಕುಳಿತುಕೊಂಡು ಅತ್ತಳು. ದುಃಖದ ವೇಗವು ಸಸು ಕಡಿಮೆ ಆಗಲು ಮೇಲಕ್ಕೆ ಮೋರೆ ಎತ್ತಿ ನೋಡುತ್ತಾಳೆ. ತಾಸು ರಾತ್ರಿ ಆಗಿದ್ದಿತು ತಾಯಿ ಏನೆನ್ನುವಳೊ, ಎಂದು ಲಗುಬಗೆಯಿಂದ ಮನೆಗೆ ಬಂದಳು. ತಾಯಿ ಹೊರಬಾಗಿಲಲ್ಲಿಯೆ ನಿಂತುಕೊಂಡು ಇವಳನ್ನೆ ಎದುರು ನೋಡುತ್ತಿದ್ದಳು. ಬರುತ್ತಲೆ 'ಬಂದೆಯಾ? ಇಂದೆಯೇ ಬಂದೆ! ಇದೆ ದೊಡ್ಡ ಪುಣ್ಯವು. ಬೆಂದ ಮನೆ ಬೇಯದ ಮನೆ ತಿರುಗುವುದಾಯಿತೆ? ಎಲ್ಲಿ ರಾಮೂಗೆ ಎಳ್ಳು ಕೊಡದಿದ್ದರೆ ಜಗತ್ತು ಮುಳುಗುತ್ತಿತ್ತೇನು? ನಾಚಿಕೆಗೇಡಿ! ಸುಟ್ಟ ಮೋರೆಯನ್ನು ಮಂದಿಗೆ ತೋರಿಸಲಿಕ್ಕೆ ಮನವಾದರೂ ಹೇಗೆ ಒಪ್ಪುವುದೊ! ಅವರು ಬರಲಿ ನಿಲ್ಲು ಹೇಳುತ್ತೇನೆ. ಬಂದೆ ಏತಕ್ಕೆ? ಹೋಗು ಸುಡುಗಾಡಿಗೆ! ತಂಣಗಾಗುವುದು'' ಎಂದು ಥಡಥಡ ಆಡಿಬಿಟ್ಟಳು.

೬

ನಿರ್ಭಾಗ್ಯೆಯು "ನಾನಿನ್ನು ಸುಡುಗಾಡಿಗೇ ಹೋಗಬೇಕು'' ಎಂದು ತನ್ನಷ್ಟಕ್ಕೆ ತಾನು ಮನದಲ್ಲಿ ಅಂದುಕೊಂಡು ಹೊರಟುಬಿಟ್ಟಳು. "ಎಲ್ಲಿಗೆ ಹೋದಳೊ! ಎಂದು ಹುಡುಕುವರಾದರೂ ಯಾರು? ಹೋಗುವುದಾದರೂ ಎಲ್ಲಿಗೆ? ಜೀವವೆ ಬೇಡವೆನಿಸುತ್ತಲಿದೆ, ನನ್ನಿಂದ ಜಗತ್ತಿನಲ್ಲಿ ಆಗಬೇಕಾದದ್ದಾದರೂ ಏನಿದೆ?'' ಎಂದು ಧೆನಿಸುತ್ತ ತನ್ನ ಸರ್ವಸೌಖ್ಯಸ್ಥಾನವಾದ ಕೆರೆಯಕಟ್ಟೆಯ ಕಡೆಗೆ ನಡೆದಳು. ಎಲ್ಲಿಗೂ ಹೋಗದೆ ತಾಯಿ ಗಂಗಮ್ಮನ ಮಡಿಲಲ್ಲಿ ಮಲಗಿಬಿಟ್ಟರಾಯಿತೆಂಬ ಹಿರಿದಾಸೆಯೊಂದು ಅವಳನ್ನು ಅತ್ತ ಕಡೆಗೆ ಕರೆದು ಎಳೆದುಕೊಂಡು ನಡೆಯಿತು. ಮೂರು ತಾಸು ರಾತ್ರಿಯಾಯಿತು. ಜಗವೆಲ್ಲ ನಿಃಶಬ್ದವಾಗಿ ಶಾಂತತೆಯಿಂದ ತುಂಬಿ ತುಳುಕುತ್ತಿದ್ದಿತು. ನೊಂದ ಮನದಿಂದ ನಿಟ್ಟುಸಿರಿಡುತ್ತ ನಿರ್ಭಾಗ್ಯೆಯೊಬ್ಬಳೆ. ಕೆರೆಯ ಮೇಲೆ ರಾಮೂನನ್ನು ಇನ್ನೊಮ್ಮೆ ನೋಡಬೇಕೆಂದು ಕಾಲಕಳೆದಂತೆ, ಆ ಕುತೂಹಲವು ಆ ಆಶೆಯು ಕುಗ್ಗಿತು. ಯಾವುದರ ಮೇಲೆಯೂ ಆಶೆಯು ಇಲ್ಲ. ತನ್ನ ಹೃದಯ ದೇವತೆಗೆ,ತಾಯಿಗೆ ನಮಸ್ಕರಿಸಿ,ಸುತ್ತಲೂ ನೋಡಿದಳು. ರಾಮೂ ಎಲ್ಲಿಂದ ಬಂದನೋ ದೇವರೇ ಬಲ್ಲ. "ಶಾಂತಾ! ಹತ್ತು ಘಂಟೆ ರಾತ್ರಿ ಆಯಿತು ಮನೆಗೆ ಹೋಗುವುದಿಲ್ಲವೆ? ಇಂಥ ರಾತ್ರಿಯಲ್ಲಿ ಒಬ್ಬಳೇ ಒಬ್ಬಳು, ಅದೇನು ಮಾಡುತ್ತಿರುವೆ?'' ಎಂದನು. ತಿರುಗಿ ನೋಡಿದಳು. "ರಾಮೂ ಎಲ್ಲಿಂದ ಬಂದೆ? ನಾನು ಇದುವರೆಗೆ ನಿನ್ನ ಕೊನೆಯ ಅಪ್ಪಣೆಯನ್ನು ತೆಗೆದುಕೊಳ್ಳಬೇಕೆಂದು ಹಂಬಲಿಸುತ್ತಿದ್ದೆ. ಸಮಯಕ್ಕೆ ಬಂದೆ. ಚೆನ್ನಾಯಿತು ಎಂದಳು. 'ಅದೇಕೆ ಶಾಂತಾ ಕಡೆಯ ಅಪ್ಪಣೆಯೇಕೆ? ಮನೆಗೆ ಬರುವುದಿಲ್ಲವೆ?'' ಎಂದನು. ನಿರ್ಭಾಗ್ಯೆಗೆ ಕುತ್ತಿಗೆ ಶಿರ ಬಿಗಿದು ಬಂದಿತು. ಮಾತೇ ಹೊರಡಲಿಲ್ಲ. ಕಂಣೋರಸುತ್ತಲೆ ಹೇಳಿದಳು. "ಇಲ್ಲ ನಾನಿನ್ನು ಮನೆಗೆ ಬರುವುದಿಲ್ಲ.''

ರಾಮೂ:— "ಮತ್ತೆಲ್ಲಿಗೆ ಹೋಗುವೆ?''

ಶಾಂತಾ:— "ಎಲ್ಲಿಯೇನು ಮನಬಂದಲ್ಲಿಗೆ.''

ರಾಮೂ:— "ನಮ್ಮ ಮನೆಗೆ ಬರುತ್ತೀಯಾ? ಅಲ್ಲಿಯೇ ಇರುವೆಯಂತೆ.'' ಅವನ ಮನೆಯೆಂದಕೂಡಲೆ ಆಕೆಯ ದುಃಖವು ಇಮ್ಮಡಿಸಿತು.

ಶಾಂತಾ:—"ಇಲ್ಲಪ್ಪಾ! ಎಲ್ಲಿಗೂ ಬರುವುದಿಲ್ಲ. ಇಲ್ಲಿರುವ ಗಂಗಮ್ಮ ಕೈಮಾಡಿ ಕರೆಯುತ್ತಿರುವಳು ಅವಳ ಬಳಿಗೆ ಹೋಗುವೆನು.''

ರಾಮೂ:— "ಇದೇನು ಶಾಂತಾ! ಹೀಗೇಕೆ ಹುಚ್ಚಿಯಂತೆ ಮಾಡುತ್ತಿ? ಯಾರು ಏನಾದರೂ ಅಂದರೇನು ನಿಮ್ಮ ಮನೆಯಲ್ಲಿ?''

ಶಾಂತಾ:— "ಇಲ್ಲ! ಯಾರು ಏನೂ ಅಂದಿರುವುದಿಲ್ಲ ನನಗೇ ಜೀವ ಬೇಡವೆನಿಸಿರುವುದು.''

ರಾಮೂ:- "ನಮ್ಮ ಮನೆಗಾದರೂ ಬಾ! ಅಲ್ಲಿಯೇ ಇರುವೆಯಂತೆ.'' ಶಾಂತೆಗೆ ಅಳುವ ತಡೆಯುವುದು ಕಷ್ಟವಾಯಿತು. ಅಳುತಳುತಲೆ ನುಡಿದಳು.

ಶಾಂತಾ:— "ರಾಮೂ ನಾನು ನಿನಗೆ ಏನಾದರೂ ಬೇಡುವೆನೆ? ನಿಜವಾಗಿ ಹೇಳು! ಇಂದು ನಿಮ್ಮ ಮನೆಗೆ ಎಳ್ಳು ಕೊಡಲಿಕ್ಕೆ ಬಂದಾಗ ನೀನು ಮನೆಯಲ್ಲಿರಲಿಲ್ಲ. ಸೀತೆ ಏನೇನೊ ಅಂದಳು. ಸಾಕಪ್ಪಾ ಸಾಕು! ನನಗಿನ್ನು ಜಗತ್ತೇ ಸಾಕು! ನಾನು ಇದುವರೆಗೂ ಜಗತ್ತೆಂದರೆ ಒಂದು ಆಕಳು, ಎಂದು ತಿಳಿದಿದ್ದೆನು. ಆದರೆ ಇಂದಿನ

CC-0. Jangamwadi Math Collection. Digitized by eGangotri

ಸಂಗತಿಯನ್ನೆಲ್ಲ ನೆನೆದುಕೊಂಡರೆ, ಅದು ಆಕಳಲ್ಲ ಆಕಳ ಸೋಗನ್ನು ಹಾಕಿಕೊಂಡ ಹುಲಿ; ಎಂದು ಸ್ಪಷ್ಟವಾಗಿ ಕಂಡುಬರುತ್ತದೆ. ಹೋಗಿಬರುತ್ತೇನೆ. ಮಾಧವ ಸುಶೀಲೆ ಯರಿಗೆ ನಾನು ಕೇಳಿದೆನೆಂದು ಹೇಳು. ನಿಮ್ಮ ಮೂವರ ಉಪಕಾರವನ್ನು ಮುಂದಿನ ಜನ್ಮಕ್ಕೆ ತೀರಿಸುವೆನು."

ರಾಮೂ ದಂಗುಬಡೆದು ನಿಂತ. ಮೈಮೇಲೆ ಸ್ಮೃತಿಯೆ ಇಲ್ಲ. ಈ ವೇಳೆಯನ್ನು ಸಾಧಿಸಿ ನಿರ್ಭಾಗ್ಯಳು ಕೆರೆಯಲ್ಲಿ ಧುಮುಕಿದಳು. ಗಂಗಮ್ಮನು ಮಾತ್ರ ಅವಳ... ಪ್ರೇಮಾದರದಿಂದ ಬರಮಾಡಿಕೊಂಡಳು. ನಿಶ್ಶಬ್ದವಾ... ರಾತ್ರಿಯಲ್ಲಿ "ಧಡಂ" ಎಂಬ ಶಬ್ದವನ್ನು ಕೇ... ರಾಮೂನು ಎಚ್ಚತ್ತು ನೋಡಲು ಅಲ್ಲೇನಿದೆ! ಧ... ಎಂಬ ಪ್ರತಿಧ್ವನಿಯು. ಆದರೊಡನೆ "ಜಗತ್ತೆಂದರೆ ... ಸೋಗನ್ನು ಹಾಕಿದ ಹುಲಿಯೋ" ಎಂಬ ರಾಮು... ಖೇದದ ಉದ್ಗಾರವು ಬೆರೆತುಬಿಟ್ಟಿತು.

## ದಿವಂಗತರಾದ



ವಿದ್ವಾನ್ ಎಸ್. ಎನ್. ನರಹರಯ್ಯನವರು ಬಿ. ಎ. ಎಲ್. ಎಲ್. ಬಿ.

[ ಇವರ ವಿಷಯವಾಗಿ ಕೆಲವು ಮಾತುಗಳನ್ನು ಕಳೆದ ಸಂಚಿಕೆಯ ಬಿಡಿನುಡಿಯಲ್ಲಿ ಬರೆಯಲಾಗಿದೆ ]

CC-0. Jangamwadi Math Collection. Digitized by eGangotri

### ಅಮೇರಿಕೆಯಲ್ಲಿಯ ಪ್ರಾಥಮಿಕ ಶಾಲೆಗಳಿಗಾಗಿ

# ಶಿಕ್ಷಕರನ್ನು ಅನುಗೊಳಿಸುವ ವಿಧಾನವು

ಲೇಖಕರು—ಶ್ರೀ. ಕೆ. ಎನ್. ಕಿಣಿ, M. A. Hons., A. M. ಕೋಲಂಬಿಯಾ ಔದ್ಯೋಗಿಕ ಶಿಕ್ಷಣದ ಮಾರ್ಗದರ್ಶಕರು ನ್ಯೂಯಾರ್ಕ

ಅಮೇರಿಕೆಯ ಪ್ರಜಾಪ್ರಭುತ್ವದಲ್ಲಿ, ಶಿಕ್ಷಕರನ್ನು ಅವರ ವ್ಯವಸಾಯಕ್ಕೋಸ್ಕರ ಸಜ್ಜುಗೊಳಿಸುವ ವಿಧಾನದ ತರಗತಿಯೂ ಬೇಡಿಕೆಯೂ, ಆ ದೇಶದ ಶಿಕ್ಷಕರ ಉಚ್ಚವಿದ್ಯಾಲಯುಗಳಲ್ಲಿ ಅನುಭವಕ್ಕೆ ಬರುತ್ತಿರುವ ಶಿಕ್ಷಣ ಸಂಶೋಧನದ ಸಹಾಯದಿಂದ ದಿನದಿನಕ್ಕೂ ಮಾರ್ಪಡುತ್ತಲಿವೆ. ಈ ವಿದ್ಯಾಲಯುಗಳು ವಿಶ್ವವಿದ್ಯಾಲಯ (University) ಗಳನ್ನು ಸರಿಗಟ್ಟುತ್ತವೆ. ಕಲಿಸುವಿಕೆಯ ರೀತಿವಿಶೇಷ (Technique) ವೂ ಆ ವಿಷಯಗಳ ವಿಶೇಷಮಹತ್ವವೂ ಶಿಕ್ಷಣಸಂಶೋಧನದಲ್ಲಿ ಸ್ಪಷ್ಟವಾಗತೊಡಗಿವೆ. ದೇಶದಲ್ಲಿಯ ಶಿಕ್ಷಣದ ಬೇಡಿಕೆ (Demand)ಯು ಶಿಕ್ಷಣ ಸಂಶೋಧನದಲ್ಲಾಗುತ್ತಿರುವ ಪ್ರಗತಿಯನ್ನವಲಂಬಿಸಿದೆ. ಈ ಪ್ರಕಾರ ನಾಡಿನ ಶಿಕ್ಷಣದ ಬೇಡಿಕೆಯೂ ವಾಡಿಕೆಯೂ ಕೈಯಲ್ಲಿ ಕೈಹಾಕಿ ಹೆಜ್ಜೆಯನ್ನಿಡತೊಡಗಿವೆ. ಇದರಿಂದ ಶಿಕ್ಷಕವೃತ್ತಿಯಲ್ಲಿ ಉಪವಿಶಾರದ (Undergraduates) ರನ್ನು ಅಣಿಗೊಳಿಸುವ ಶಾಲೆಗಳೆಲ್ಲಾ ಪೂರ್ಣವಿಶಾರದ (B. A. ಮತ್ತು B. S.c) ರನ್ನೇ ಉಂಟು ಮಾಡುವ-ಪೂರ್ಣವಾಗಿ ನಾಲ್ಕುವರ್ಷದ ಕ್ರಮವುಳ್ಳ ಕಾಲೇಜುಗಳಾಗತೊಡಗಿವೆ. ಪ್ರಾಥಮಿಕ ಶಾಲೆಯ ಶಿಕ್ಷಕನಾಗಲಿಕ್ಕೆ ಬರೀ ಪ್ರಶಸ್ತಿಪತ್ರದಿಂದ ನಡೆಯುವಂತಿಲ್ಲ; ಪೂರ್ಣ ಅಧಿಕೃತಪದವಿಯೇಬೇಕು.

ಪ್ರಾಥಮಿಕ ಶಿಕ್ಷಕರಾಗುವುದಕ್ಕೆ ಬೇಕಾದ ಮಹತ್ವದ ಮಾರ್ಗಗಳಾವುವೆಂದರೆ:—



ಅಮೇರಿಕೆಯಲ್ಲಿಯ ಶಿಕ್ಷಕರ ಶಿಕ್ಷಣ ಶಾಲೆಯೊಂದು

**೧) ವಿವಿಧವರ್ಗಗಳಿಗಾಗಿ ಬೇರ್ಪಡಿಸಿದ ವಿಧಾನ.**

(ಅ) ಕಿಂಡರ್‌ಗಾರ್ಟನ್

(ಆ) ಮೊದಲಿನ ೩ ಇಲ್ಲವೆ ೪ ವರ್ಷಗಳ ಪ್ರಾಥಮಿಕ ತರಗತಿ.

(ಇ) ಕೊನೆಯ ೩ ಇಲ್ಲವೆ ೪ ವರ್ಷಗಳ ಪ್ರಾಥಮಿಕ ತರಗತಿ.

(ಈ) ಹಳ್ಳಿಯ ಶಾಲೆಗಳು.

CC-0. Jangamwadi Math Collection. Digitized by eGangotri

ಸಂಗತಿಯನ್ನೆಲ್ಲ ನೆನೆದುಕೊಂಡರೆ, ಅದು ಆಕಳಲ್ಲ ಆಕಳ ಸೋಗನ್ನು ಹಾಕಿಕೊಂಡ ಹುಲಿ; ಎಂದು ಸ್ಪಷ್ಟವಾಗಿ ಕಂಡುಬರುತ್ತದೆ. ಹೋಗಿಬರುತ್ತೇನೆ. ಮಾಧವ ಸುಶೀಲೆ ಯರಿಗೆ ನಾನು ಕೇಳಿದೆನೆಂದು ಹೇಳು. ನಿಮ್ಮ ಮೂವರ ಉಪಕಾರವನ್ನು ಮುಂದಿನ ಜನ್ಮಕ್ಕೆ ತೀರಿಸುವೆನು."

ರಾಮೂ ದಂಗುಬಡೆದು ನಿಂತ. ಮೈಮೇಲೆ ಸ್ಮೃತಿಯೆ ಇಲ್ಲ. ಈ ವೇಳೆಯನ್ನು ಸಾಧಿಸಿ ನಿರ್ಭಾಗ್ಯಳು ಕೆರೆಯಲ್ಲಿ ಧುಮುಕಿದಳು. ಗಂಗಮ್ಮನು ಮಾತ್ರ ಅವಳನ್ನು ಪ್ರೇಮಾದರದಿಂದ ಬರಮಾಡಿಕೊಂಡಳು. ನಿಶ್ಶಬ್ದವಾದ ರಾತ್ರಿಯಲ್ಲಿ "ಧಡಂ" ಎಂಬ ಶಬ್ದವನ್ನು ಕೇಳಿ ರಾಮೂನು ಎಚ್ಚತ್ತು ನೋಡಲು ಅಲ್ಲೇನಿದೆ! ಧಡಂ ಎಂಬ ಪ್ರತಿಧ್ವನಿಯು. ಅದರೊಡನೆ "ಜಗತ್ತೆಂದರೆ ಆಕಳ ಸೋಗನ್ನು ಹಾಕಿದ ಹುಲಿಯೇ" ಎಂಬ ರಾಮುವಿನ ಖೇದದ ಉದ್ಗಾರವು ಬೆರೆತುಬಿಟ್ಟಿತು.

## ದಿವಂಗತರಾದ



ವಿದ್ವಾನ್ ಎಸ್. ಎನ್. ನರಹರಯ್ಯನವರು ಬಿ. ಎ. ಎಲ್. ಎಲ್. ಬಿ.

[ ಇವರ ವಿಷಯವಾಗಿ ಕೆಲವು ಮಾತುಗಳನ್ನು ಕಳೆದ ಸಂಚಿಕೆಯ ಬಿಡಿನುಡಿಯಲ್ಲಿ ಬರೆಯಲಾಗಿದೆ ]

CC-0. Jangamwadi Math Collection. Digitized by eGangotri

## ಅಮೇರಿಕೆಯಲ್ಲಿಯ ಪ್ರಾಥಮಿಕ ಶಾಲೆಗಳಿಗಾಗಿ

# ಶಿಕ್ಷಕರನ್ನು ಅನುಗೊಳಿಸುವ ವಿಧಾನವು

ಲೇಖಕರು—ಶ್ರೀ. ಕೆ. ಎನ್. ಕಿಣಿ, M. A. Hons., A. M. ಕೋಲಂಬಿಯಾ ಔದ್ಯೋಗಿಕ ಶಿಕ್ಷಣದ ಮಾರ್ಗದರ್ಶಕರು ನ್ಯೂಯಾರ್ಕ

ಅಮೇರಿಕೆಯ ಪ್ರಜಾಪ್ರಭುತ್ವದಲ್ಲಿ, ಶಿಕ್ಷಕರನ್ನು ಅವರ ವ್ಯವಸಾಯಕ್ಕೋಸ್ಕರ ಸಜ್ಜುಗೊಳಿಸುವ ವಿಧಾನದ ತರಗತಿಯೂ ಬೇಡಿಕೆಯೂ, ಆ ದೇಶದ ಶಿಕ್ಷಕರ ಉಚ್ಚವಿದ್ಯಾಲಯಗಳಲ್ಲಿ ಅನುಭವಕ್ಕೆ ಬರುತ್ತಿರುವ ಶಿಕ್ಷಣ ಸಂಶೋಧನದ ಸಹಾಯದಿಂದ ದಿನದಿನಕ್ಕೂ ಮಾರ್ಪಡುತ್ತಲಿವೆ. ಈ ವಿದ್ಯಾಲಯಗಳು ವಿಶ್ವವಿದ್ಯಾಲಯ (University) ಗಳನ್ನು ಸರಿಗಟ್ಟುತ್ತವೆ. ಕಲಿಸುವಿಕೆಯ ರೀತಿವಿಶೇಷ (Technique) ವೂ ಆ ವಿಷಯಗಳ ವಿಶೇಷಮಹತ್ವವೂ ಶಿಕ್ಷಣಸಂಶೋಧನದಲ್ಲಿ ಸ್ಪಷ್ಟವಾಗತೊಡಗಿವೆ. ದೇಶದಲ್ಲಿಯ ಶಿಕ್ಷಣದ ಬೇಡಿಕೆ (Demand)ಯು ಶಿಕ್ಷಣ ಸಂಶೋಧನದಲ್ಲಾಗುತ್ತಿರುವ ಪ್ರಗತಿಯನ್ನವಲಂಬಿಸಿದೆ. ಈ ಪ್ರಕಾರ ನಾಡಿನ ಶಿಕ್ಷಣದ ಬೇಡಿಕೆಯೂ ಮಾಡಿಕೆಯೂ ಕೈಯಲ್ಲಿ ಕೈಹಾಕಿ ಹೆಜ್ಜೆಯನ್ನಿಡತೊಡಗಿವೆ. ಇದರಿಂದ ಶಿಕ್ಷಕವೃತ್ತಿಯಲ್ಲಿ ಉಪವಿಶಾರದ (Undergraduates) ರನ್ನು ಅಣಿಗೊಳಿಸುವ ಶಾಲೆಗಳೆಲ್ಲಾ ಪೂರ್ಣವಿಶಾರದ (B. A. ಮತ್ತು B. S.c) ರನ್ನೇ ಉಂಟು ಮಾಡುವ-ಪೂರ್ಣವಾಗಿ ನಾಲ್ಕುವರ್ಷದ ಕ್ರಮವುಳ್ಳ ಕಾಲೇಜುಗಳಾಗತೊಡಗಿವೆ. ಪ್ರಾಥಮಿಕ ಶಾಲೆಯ ಶಿಕ್ಷಕನಾಗಲಿಕ್ಕೆ ಬರೀ ಪ್ರಶಸ್ತಿಪತ್ರದಿಂದ ನಡೆಯುವಂತಿಲ್ಲ; ಪೂರ್ಣ ಅಧಿಕೃತಪದವಿಯೇಬೇಕು.



ಅಮೇರಿಕೆಯಲ್ಲಿಯ ಶಿಕ್ಷಕರ ಶಿಕ್ಷಣ ಶಾಲೆಯೊಂದು

ಪ್ರಾಥಮಿಕ ಶಿಕ್ಷಕರಾಗುವುದಕ್ಕೆ ಬೇಕಾದ ಮಹತ್ವದ ಮಾರ್ಗಗಳಾವುವೆಂದರೆ:—

**೧) ವಿವಿಧವರ್ಗಗಳಿಗಾಗಿ ಬೇರ್ಪಡಿಸಿದ ವಿಧಾನ.**

(ಅ) ಕಿಂಡರ್‌ಗಾರ್ಟನ್

(ಆ) ಮೊದಲಿನ ೩ ಇಲ್ಲವೆ ೪ ವರ್ಷಗಳ ಪ್ರಾಥಮಿಕ ತರಗತಿ.

(ಇ) ಕೊನೆಯ ೩ ಇಲ್ಲವೆ ೪ ವರ್ಷಗಳ ಪ್ರಾಥಮಿಕ ತರಗತಿ.

(ಈ) ಹಳ್ಳಿಯ ಶಾಲೆಗಳು.



CC-0. Jangamwadi Math Collection. Digitized by eGangotri

**೨) ವರ್ಗಗಳೊಳಗಿನ ಕಾರ್ಯನಿರೀಕ್ಷಣೆ ಗೋಸ್ಕರ ಒದಗಿಸಿ ಕೊಡುವ ಅನೇಕ ಒಳ್ಳೆಯ ಸೌಕರ್ಯಗಳು.**

'ವಿಷಯಕ್ರಮ' (Content Course) ಕ್ಕೆ ಹೆಚ್ಚು ಮಹತ್ತ್ವವು ಕೊಡಲ್ಪಡುತ್ತಿದೆ. ಎಂದರೆ ಶಿಕ್ಷಕನು ಮುಂದೆ ಕಲಿಸಬಹುದಾದ ವಿಷಯಗಳನ್ನೇ ವಿವರವಾಗಿ ತಿಳಿಸಿ ಹೇಳಲಾಗುವುದು. ಪೂರ್ವದಲ್ಲಿ ವಿಷಯಕ್ರಮವು ಪದ್ಧತಿಕ್ರಮ (Method course) ದಿಂದ ತೀರ ಬೇರೆ ಯಾಗಿರುತ್ತಿತ್ತು. ಆದರೆ ಸದ್ಯಕ್ಕೆ ಎರಡೂ ಕ್ರಮಗಳ ಸಮನ್ವಯಕ್ಕೆ ಮಹತ್ತ್ವವನ್ನು ಕೊಡಲಾಗುತ್ತದೆ. ಹೀಗಾಗುತ್ತಿರುವುದರಿಂದ ವಿಷಯಗಳನ್ನು ಕಲಿಸುವ ವಿದ್ಯಾರ್ಥಿಗಳಿಗೆ ಕಲಿಸುವವರ್ಗ ಇವುಗಳಲ್ಲಿ ವಿಶಿಷ್ಟ ದಾರಿಯನ್ನು ಕಂಡು ಹಿಡಿದಿದ್ದು, ಮಾನವರೆಲ್ಲರಿಗೆ ಮಾರ್ಗದರ್ಶಿಗಳಾಗಿದ್ದಾರೆ. ಪ್ರತಿಯೊಂದು ಶಿಕ್ಷಕ ವಿದ್ಯಾಲಯದವರ ಆಡಳಿತದಲ್ಲಿ ಒಂದು ಕಲಿಸುವ ಶಾಲೆ (Training School) ಯ ವ್ಯವಸ್ಥೆ ಇದ್ದೇ ಇರುತ್ತದೆ. ಇದರಿಂದ ಅದೊಂದು ಶಿಕ್ಷಣದ ನಿರೀಕ್ಷಣ-ಪ್ರದರ್ಶನ ಗಳಿಗೆ ಪ್ರಯೋಗ ಶಾಲೆಯೇ ಇದ್ದಂತಿರುವುದು. ಪ್ರತಿ ಯೊಬ್ಬ ವಿದ್ಯಾರ್ಥಿಶಿಕ್ಷಕನು ೯೦ ತಾಸುಗಳಷ್ಟು ಇಲ್ಲಿ ಕಲಿಸಬೇಕಾಗುತ್ತದೆ. ವಿದ್ಯಾಲಯದಲ್ಲಿ ಬಹಳ ಜನ ವಿದ್ಯಾರ್ಥಿಶಿಕ್ಷಕರಿದ್ದರೆ, ನೆರೆಹೊರೆಯಲ್ಲಿದ್ದ ಪ್ರಾಥಮಿಕ ಶಾಲೆಗಳಿಗೆ ಹೋಗಿ ಕಲಿಸಲಿಕ್ಕೂ ಸ್ಥಾನಿಕಶಿಕ್ಷಣ



ಮಕ್ಕಳು ತಮಗೊಪ್ಪುವ ಕೆಲಸವನ್ನು ತಾವೇ ಆರಿಸುವುದು

ಪದ್ಧತಿಯ ನೈಪುಣ್ಯದಲ್ಲಿ ಸುಧಾರಣೆ ಮಾಡುವುದಕ್ಕೆ ಹೆಚ್ಚು ಅನುಕೂಲತೆಗಳುಂಟಾಗುತ್ತಿವೆ. ಪ್ರಾರಂಭ ದಲ್ಲಿಯೇ ಶಿಕ್ಷಣದ ತತ್ತ್ವವನ್ನು ಸೇರ್ಪಡಿಸುವುದನ್ನು ಎಲ್ಲರೂ ಬಿಟ್ಟುಬಿಡತೊಡಗಿದ್ದಾರೆ. ಅದರ ಸ್ಥಳದಲ್ಲಿ ವಿದ್ಯಾರ್ಥಿಗಳಿಗೆ ಶಿಕ್ಷಕನ ಕಾರ್ಯವೇನೆಂಬುದನ್ನು ತಿಳಿಸ ಲಿಕ್ಕೆ ಕೆಲವು ಪ್ರಾಸ್ತಾವಿಕ ಮಾತುಗಳನ್ನು ಹೇಳಿ ತತ್ತ್ವ ವಿವೇಚನೆಯನ್ನು ಕೊನೆಯ ಕಾಲಕ್ಕೆ ಮಾಡಲಾ ತ್ತದೆ. ಹೀಗಾಗುವುದರಿಂದ ವಿದ್ಯಾರ್ಥಿಗಳು ಮೊದಲು ತಾವು ಕಂಡ ವ್ಯಾವಹಾರಿಕ ದೃಷ್ಟಿಯನ್ನೇ ತಾತ್ತ್ವಿಕ ದೃಷ್ಟಿಯಿಂದ ನೋಡಿಕೊಳ್ಳಲು ಸುಲಭವಾಗುತ್ತದೆ.

ಅಮೇರಿಕೆಯ ಶಿಕ್ಷಕವಿದ್ಯಾಲಯಗಳ ಸಂಘದವರು ನಿರೀಕ್ಷಣವರ್ಗ (Observation class) ಮತ್ತು ಸಂಘದವರು ಒಪ್ಪಿಗೆಯನ್ನು ಕೊಡುತ್ತಾರೆ. ಇದರಿಂದ ಕಲಿಸುವಿಕೆಯ ರೀತಿ ನಡತೆಗಳ ವಿಷಯದಲ್ಲಿ ಪ್ರಾರಂಭ ದಲ್ಲಿಯೇ ವಿವರಗಳೆಲ್ಲಾ ತಿಳಿದುಬಂದು ನೈಪುಣ್ಯ ವುಂಟಾಗಿ ಮಕ್ಕಳ ಒಲವುಗಳೇನೆಂಬುದು ಗೊತ್ತಾಗಿ ಮುಂದೆ ಅವುಗಳನ್ನು ಸಲುಹಲಿಕ್ಕೆ ಈಗಿನಿಂದಲೇ ಮಾರ್ಗವು ತಿಳಿಯಾಗಿ ಬಿಡುವುದು.

### ಕಲಿಸುವ ವಿಷಯಗಳು

ಕಲಿಸುವ ವಿಷಯಗಳನ್ನವಲೋಕಿಸಿದರೆ ವಿಷಯ ವೈವಿಧ್ಯದಿಂದ ಯಾರಿಗಾದರೂ ಅಚ್ಚರಿಯಾಗದಿರದು. ವಿದ್ಯಾವಿಭಾಗದಲ್ಲಿ– ವೃತ್ತಿವಿಭಾಗದಲ್ಲಿ–ಎರಡೂ ಕಡೆ ವೈವಿಧ್ಯವು ಇದ್ದೇ ಇರುವುದು. ಪ್ರಾಥಮಿಕ ವಿಭಾಗದ ಶಿಕ್ಷಕವಿದ್ಯಾರ್ಥಿಯಾಗುವವನು ಹೈಸ್ಕೂಲಿನ ಶಿಕ್ಷಣ

CC-0. Jangamwadi Math Collection. Digitized by eGangotri

ವನ್ನು ಮುಗಿಸಿರಬೇಕೆಂದು ನಿಯಮವಿದ್ದರೂ, ಅಲ್ಲಿಗೇ ಅದು ತೃಪ್ತಿಕರವೆಂದು ತಿಳಿಯಲಾಗುವುದಿಲ್ಲ. ಆದುದರಿಂದ ವಿದ್ಯಾವಿಭಾಗದಲ್ಲಿ ಇಂಗ್ಲಿಷ್ ಭಾಷಾರಚನೆ ಮತ್ತು ವಾಙ್ಮಯ, ಕಾಲೇಜಿನ ಬೀಜಗಣಿತ, ಘನಾಭೂಮಿತಿ, ತ್ರಿಕೋಣ ಶಾಸ್ತ್ರ, ಭೂಗೋಲದ ತತ್ತ್ವಗಳು, ಇತಿಹಾಸ, ಸಂಗೀತ, ವನಸ್ಪತಿಶಾಸ್ತ್ರ, ಪ್ರಾಣಿಶಾಸ್ತ್ರ, ಶಾರೀರ ಮತ್ತು ಆರೋಗ್ಯ ಶಾಸ್ತ್ರ, ರಸಾಯನಶಾಸ್ತ್ರ, ಪದಾರ್ಥವಿಜ್ಞಾನಶಾಸ್ತ್ರ, ವ್ಯವಹಾರದ ಗಣಿತ, ಸ್ಥಾನಿಕ ಮಳೆಬೆಳೆಗಳ ವಿಚಾರ, ಸಂಸ್ಕೃತಿಯ ಇತಿಹಾಸ, ಅರ್ಥಶಾಸ್ತ್ರ, ಸಮಾಜಶಾಸ್ತ್ರ, ಹಾಗೂ ಔದ್ಯೋಗಿಕ ಕಲೆಗಳು ಇವೆಲ್ಲವುಗಳನ್ನು ನಾಲ್ಕು ವರ್ಷಗಳಲ್ಲಿ ಕಲಿಸಲಾಗುತ್ತದೆ. ವೃತ್ತಿ ವಿಭಾಗದಲ್ಲಿ ಶಿಕ್ಷಣದ ಸೇರ್ಪಡೆಯಾದ ಶಿಕ್ಷಣದ ಮೂಲ ಮಾತುಗಳೆಲ್ಲ ಅಮೇರಿಕೆಯ ಶಿಕ್ಷಣ ಸಂಶೋಧನದ ಪ್ರಯೋಗಶಾಲೆಗಳಲ್ಲಿಯೇ ಕಂಡು ಹಿಡಿದುವುಗಳೂ ಅಮೇರಿಕೆಯ ಪತ್ರಿಕೆಗಳಲ್ಲಿಯೇ ಪ್ರಸಿದ್ಧವಾದುವುಗಳೂ ಆಗಿರುತ್ತವೆ.

ಶೈಕ್ಷಣಿಕ ಪರೀಕ್ಷಣಗಳಿಗೆ (Test and measurements) ಶಿಕ್ಷಣದ ವಿಧಾನದಲ್ಲಿ ಮಹತ್ತ್ವದ ಸ್ಥಾನವಿದೆ. ಪದಾರ್ಥಗಳ ಪರಿಗಣನೆಯು (Statcial Measures) ಉಪಯೋಗವನ್ನೂ ಇಲ್ಲಿ ಮಾಡಿಕೊಳ್ಳುತ್ತಾರೆ. ವಿದ್ಯಾರ್ಥಿಗಳೇ ಇದರಲ್ಲಿಯ ಬಹುಭಾಗವನ್ನು ಯಾಂತ್ರಿಕರೀತಿಯಿಂದ ಮಾಡಿಕೊಳ್ಳುತ್ತಾರೆಂದು ನನಗೆ ಕಂಡು ಬಂದಿತು. ಕೆಲವು ವರ್ಗಗಳಲ್ಲಿ ಮೂರರಲ್ಲಿ ಒಂದುಪಾಲು ಹುಡುಗರಿಗಷ್ಟೇ ಇದರ ಅರ್ಥವಾಗು



ವೃತ್ತಿಶಿಕ್ಷಣಶಾಲೆ ನಿಕರಾಗುವಾ

ಮೂಲತತ್ತ್ವಗಳು, ಮಾನಸಶಾಸ್ತ್ರ, ಶಾರೀರಶಿಕ್ಷಣ ಮತ್ತು ಆರೋಗ್ಯ, ಕಲಿಸುವಿಕೆಯ ರೀತಿವಿಶೇಷ, ಯಾವುದೊಂದು ಹೆಚ್ಚಿನ ವಿಷಯವನ್ನು ಕಲಿವುಸುದು, ಸ್ವಭಾವ- ಶಿಕ್ಷಣ- ಪರೀಕ್ಷಣ- ಪರಿಮಾಣಪ್ರಮೇಯಗಳು. ಹಾಗು ಶಿಕ್ಷಣದ ತತ್ತ್ವಶಾಸ್ತ್ರ ಇವೆಲ್ಲವುಗಳನ್ನು ಆ ಕಾಲಾವಧಿಯಲ್ಲಿಯೇ ಮುಗಿಸಲಾಗುತ್ತದೆ. ಶಿಕ್ಷಣ ವಿಧಾನದಲ್ಲಿಯ ವಿಶಿಷ್ಟ ಸಂಗತಿಯೆಂದರೆ ಅಲ್ಲಿ ಉಪಯೋಗಿಸುವ ಉದಾಹರಣೆಗಳೂ ಮೂಲ ಮಾತುಗಳೂ ಎಲ್ಲಾ ಸಂಪೂರ್ಣವಾಗಿ ಅಮೇರಿಕೆಗೆ ಸಂಬಂಧಿಸಿದುವುಗಳೇ ಇರುವವು. ಕ್ರಮಿಕ ಪುಸ್ತಕಗಳೆಲ್ಲವೂ ಅಮೇರಿಕೆಯ ಗ್ರಂಥಕರ್ತರೇ ಬರೆದುವುಗಳಾಗಿರುವವು. ಅವುಗಳಲ್ಲಿ ತ್ತಿತ್ತೆಂದು ನನಗೆ ತಿಳಿದು ಬಂದಿತು. ಆದರೆ ಕ್ರಮೇಣ ಈ ಪದ್ಧತಿಯು ಹೆಚ್ಚು ಹೆಚ್ಚು ಪರಿಚಿತವಾಗತೊಡಗಿ ವಿದ್ಯಾರ್ಥಿಗಳಿಗೆ ಅದರ ಬಗ್ಗೆ ಹೆದರಿಕೆಯೆನಿಸುತ್ತಿರುವುದಿಲ್ಲ. ಈ ಪರಿಗಣನಾ ಶಾಸ್ತ್ರದ ಪಾರಿಭಾಷಿಕ ಶಬ್ದಗಳು ರೂಢವಾಗತೊಡಗಿದ್ದು, ತಿಳಿಯದಿದ್ದಲ್ಲಿ ವಿದ್ಯಾರ್ಥಿಗಳು ತಾವೇ ಪುಸ್ತಕಗಳಲ್ಲಿ ಅವುಗಳ ಅರ್ಥವನ್ನು ಕಂಡುಕೊಂಡು ಅವುಗಳ ಸ್ಪಷ್ಟೀಕರಣಕ್ಕಾಗಿ ಪ್ರಯತ್ನಪಡುತ್ತಾರೆ.

ಈ ಪದಾರ್ಥ ಪರಿಗಣನಾ ಶಾಸ್ತ್ರವು ಅಮೇರಿಕೆಯಲ್ಲಿ ಬಹು ಸಾಮಾನ್ಯವಿಷಯವಾಗತೊಡಗಿದೆ. ಏಕೆಂದರೆ ಅದು ಶಿಕ್ಷಣ, ವ್ಯವಹಾರ, ವ್ಯಾಪಾರ, ಉದ್ಯೋಗ, ಸಮಾಜ

CC-0. Jangamwadi Math Collection. Digitized by eGangotri

ಶಾಸ್ತ್ರ, ಔಷಧ, ಸಂಶೋಧನ ಇವುಗಳಿಗೆಲ್ಲಾ ಅನ್ವಯಿಸಲ್ಪಡುತ್ತಿದೆ. ಕಾರ್ಲ್‌ಪಿಯರ್ಸನರ ಮಕ್ಕಳಾದ ಡಾ. ಪಿಯರ್ಸನ್ ಎಂಬವರು ಲಂಡನ್ ವಿಶ್ವವಿದ್ಯಾಲಯದಿಂದ ಇಲ್ಲಿಗೆ ಬಂದು, ಈ ಶಾಸ್ತ್ರವಿಷಯಕ ಅನೇಕ ವ್ಯಾಖ್ಯಾನಗಳನ್ನು ಕೊಟ್ಟರು; ಆಗ ಅವರು ಈ ಪರಿಗಣನಾಶಾಸ್ತ್ರದ ತಾತ್ತ್ವಿಕ ಸಂಶೋಧನೆಯು ಇಂಗ್ಲಂಡಿ



ಗೃಹಿಣಿ ಶಿಕ್ಷಣ ವರ್ಗ

ನಲ್ಲಿ ಎಷ್ಟೋ ಮಟ್ಟಿಗೆ ಆಗಿದ್ದರೂ ಅದರ ವ್ಯಾವಹಾರಿಕ ಪ್ರಯೋಜನವು ಅಮೇರಿಕೆಯಲ್ಲಿದ್ದಂತೆ ಅಲ್ಲಿ ರೂಢವಾಗಿಲ್ಲವೆಂದು ತೋರಿಸಿಕೊಟ್ಟರು.

ಕೆಲವು ಶಿಕ್ಷಣ ವಿದ್ಯಾಲಯಗಳಲ್ಲಿ ಇತ್ತೀಚೆಗೆ 'ಸಂಸ್ಕೃತಿ' ಯೆಂಬುದಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡತೊಡಗಿರುವರೆಂಬ ಸಂಗತಿಯು ಒಡೆದು ಕಾಣುತ್ತಿದೆ. ಇದರಿಂದ ಮೊದಲಿನ ಎರಡು ವರ್ಷಗಳಲ್ಲಿ

ಸಂಪೂರ್ಣವಾಗಿ ಉದಾರಧೋರಣೆಯಿಂದ ಪ್ರ
ವಿಷಯಗಳನ್ನೇ ಕಲಿಸುತ್ತಾರೆ. ಹಾಗೂ ವೃತ್ತಿವಿಷ
ಗಳನ್ನು ಕೊನೆಯ ಎರಡು ವರ್ಷಗಳಲ್ಲಿ ಕಲಿಸುತ್ತಾ
ಹೀಗಾಗಲಿಕ್ಕೆ ಆರ್ಟ್ಸ್ ಕಾಲೇಜುಗಳೊಡನೆ ಇ
ಮೇಲಾಟವೂ ಕೆಲಮಟ್ಟಿಗೆ ಕಾರಣವಾಗಿದ್ದು
ಡಬ್ಲ್ಯೂ. ಸಿ. ಬ್ಯಾಗ್ಲಿಯವರ ಮಾತಿನಲ್ಲಿ ಹೇಳುವ
ಎಲ್ಲ ಶಿಕ್ಷಕರಿಗೂ ಹೆಚ್ಚು ವಿಶಾಲದೃಷ್ಟಿಯ ಹಾ
ಹೆಚ್ಚು ಗಭೀರ-ಗಂಭೀರವಾದ ಸಂಸ್ಕೃತಿಯ ಅವ
ಯುಂಟೆಂಬ ಮಾತಿಗೆ ದೊರೆತ ಬಹುಮಾನವೂ ಎ
ಮಟ್ಟಿಗೆ ಕಾರಣವಾಗಿದೆ. ಜನತೆಯ ಅಭಿಪ್ರಾ
ಒಲವು ಶಿಕ್ಷಕರ ವಿದ್ಯಾಲಯಗಳಲ್ಲಿ ವೃತ್ತಿವಿಭಾ
ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟು ಅವುಗಳನ್ನು ನ
ಸಬೇಕೆಂಬುದರ ಕಡೆಗೆ ಇರುತ್ತದೆಯೆಂದು ಹೇಳಬಹು

CC-0. Jangamwadi Math Collection. Digitized by eGangotri

#### ಜನ್ಮಲಗ್ನ-ಕುಂಡಲಿಗಳಲ್ಲಿ

# ದಾಂಪತ್ಯಯೋಗಗಳ ವಿಚಾರವು

ಶ್ರೀ ಕೃಷ್ಣರಾವ ಗೋಕಾಕ ವಕೀಲರು, ಸವಣೂರು

ನಮ್ಮ ಈ ಆರ್ಯಾವರ್ತದಲ್ಲಿ ಋಷಿಗಳ ಕಾಲದಿಂದ ವಧೂವರರನ್ನು ಆರಿಸಿ ಅವರ ನಡುವೆ ವಿವಾಹಸಂಬಂಧ ವನ್ನು ಗೊತ್ತುಪಡಿಸುವುದಕ್ಕೆ ಜ್ಯೋತಿಷಶಾಸ್ತ್ರದ ದೃಷ್ಟಿಯಿಂದ ಕೆಲವು ನಿಯಮಗಳನ್ನು ಮಾಡಿದ್ದಾರೆ. ಅವುಗಳಲ್ಲಿ ಸ್ಥೂಲಮಾನದಿಂದ ಒಂದು ನಿಯಮವು ಮಾತ್ರ ಪ್ರಚಾರದಲ್ಲಿರುವುದು; ಅದು ಯಾವುದೆಂದರೆ:— ವಧೂವರರ ಪರಸ್ಪರ ಜನ್ಮನಕ್ಷತ್ರಗಳ ಮೇಲಿಂದ; ನಾಡಿ ಮತ್ತು ಕೂಟ ಮುಂತಾದುವುಗಳ ಮೇಲಿಂದ; ೩೬ ಗುಣ ಗಳಲ್ಲಿ ಎಷ್ಟು ಗುಣಗಳು ಕೂಡಿ ಬರುತ್ತವೆಂಬುದನ್ನು ನೋಡಿ, ಕನಿಷ್ಠಪಕ್ಷಕ್ಕೆ ೧೮ ಗುಣಗಳು ಕೂಡಿ ಬಂದರೆ ಅದು ವಿವಾಹಕ್ಕೆ ಉತ್ತಮವೆಂದು ತಿಳಿದು ವಿವಾಹವನ್ನು ಮಾಡುತ್ತಾರೆ. ಎರಡನೆಯ ಕ್ರಮವೂ ಒಂದುಂಟು: ವಧೂವರರ ಕುಂಡಲಿಯಲ್ಲಿ ಪತಿಪತ್ನಿಯರಿಗೆ ಮಾರಕ ನಾದ ಮಂಗಳನ ದೋಷವು ಇದೆಯೋ ಹೇಗೆ? ಎಂದು ನೋಡತಕ್ಕ ಪರಿಪಾಠವು ಮೇಲಿನ ವರ್ಗದ ಜನರಲ್ಲಿ ಕೆಲವು ಪ್ರಾಂತ್ಯಗಳಲ್ಲಿ ಮಾತ್ರ ಕಂಡುಬರುತ್ತದೆ.

ಆದರೆ ಯಾವ ವರನಿಗೆ ಯಾವ ಕನ್ನಿಕೆಯ ಲಗ್ನವಾಗು ವುದು? ಅಥವಾ ಯಾವ ಕನ್ನಿಕೆಗೆ ಯಾವ ವರನ ಸಂಗಡ ಲಗ್ನವಾಗುವುದು? ಎಂಬುದನ್ನು ವಧೂವರರ ಜನ್ಮ ಲಗ್ನಕುಂಡಲಿಗಳ ಮೇಲಿಂದ ನೋಡತಕ್ಕ ಒಂದು ಕ್ರಮವೂ ಇರುತ್ತದೆ. ಇದರ ಬಗ್ಗೆ ಸಾಧಾರಣವಾಗಿ ಜನರು ವಿಚಾರವನ್ನು ಮಾಡುತ್ತಿರುವುದಿಲ್ಲ. ಯಾವುದೇ ಒಂದು ವಧುವಿಗೆ ಲಗ್ನವಾಗುವ ಪೂರ್ವದಲ್ಲಿ ಎಷ್ಟೋ ವರಗಳನ್ನು ನೋಡುವ ಪ್ರಸಂಗವು ಬರುವುದು. ಅದೇ ರೀತಿಯಾಗಿ ಒಬ್ಬ ವರನಿಗೆ ಲಗ್ನವಾಗುವ ಪೂರ್ವದಲ್ಲಿ ಎಷ್ಟೋ ವಧುಗಳನ್ನು ನೋಡುವ ಪ್ರಸಂಗವೂ ಬರು ವುದು. ಆದುದರಿಂದ ಈ ವಧೂವರರುಗಳಲ್ಲಿ ಇಂತಹ ವಧುವಿಗೆ ಇಂತಹ ವರನೊಡನೆಯೆ ಲಗ್ನಸಂಭವಿಸು ವುದು; ಮತ್ತು ಇಂತಹ ವರನಿಗೆ ಇಂತಹ ವಧುವಿನೊಡ ನೆಯೆ ಲಗ್ನ ಸಂಭವಿಸುವುದು; ಎಂಬುವ ಬಗ್ಗೆ ಅವರವರ ಜನ್ಮಲಗ್ನ ಕುಂಡಲಿಗಳ ಮೇಲಿಂದ ದಾಂಪತ್ಯಯೋಗದ ರೀತಿಗಳು ಗೊತ್ತಾದಲ್ಲಿ ವಧೂಪಕ್ಷದವರಿಗೂ ವರಪಕ್ಷ ದವರಿಗೂ ಲಗ್ನದ ಮಾತುಕತೆಗಳನ್ನು ಬೆಳೆಯಿಸಿ ಲಗ್ನ ನಿಶ್ಚಯ ಮಾಡುವುದರಿಂದ ಜನರಿಗೆ ವೇಳೆ ಹಾಗೂ ಧನದ ಹಾನಿಯಾಗದೆ ಸುಲಭರೀತಿಯಾಗಿ ವಿವಾಹಗಳನ್ನು ಮಾಡಲಿಕ್ಕೆ ಬರುತ್ತದೆ. ಆದುದರಿಂದ ನಾವು ಕಳೆದ ಕಾಲುಶತಮಾನದಲ್ಲಿ ಈ ವಿಷಯದಲ್ಲಿ ಅನೇಕಾನೇಕ ಜನರಿಗೆ ಹೇಳಿ ತಿಳಿದುಕೊಂಡಂತಹ ಅನುಭವಗಳನ್ನು, ಈ ಲೇಖನದ ಮೂಲಕ ನಮ್ಮ ಕರ್ನಾಟಕದ ಬಾಂಧವರ ಮುಂದೆ ಇಡಲು ಇಲ್ಲಿ ಯತ್ನಿಸಿದ್ದಾಗಿದೆ.

ಈ ಮೊದಲು ನಾವು ಎಂಟನೆಯ ವರ್ಷದ ಜಯ ಕರ್ನಾಟಕದ ಸಂಚಿಕೆಗಳಲ್ಲಿ ಬರೆದ ಲೇಖನಮಾಲೆಯ ಪ್ರಕಾರ 'ಮುಖಜ್ಯೋತಿಷ' ಶಾಸ್ತ್ರದ ಮೇಲಿಂದ ವಧೂವರರ ಜನ್ಮಲಗ್ನಗಳು ಕುಂಡಲಿಗಳಲ್ಲಿ ನಿಶ್ಚಯ ವಾಗಿ ಇರುತ್ತವೆಯೋ ಇಲ್ಲವೋ ಎಂಬುದನ್ನು ಸಿದ್ಧ ಪಡಿಸಿಕೊಂಡು, ನಾಡಿ, ಗಣ ಮತ್ತು ಕೂಟ ಮುಂತಾ ದುವುಗಳು ಕೂಡಿ ಬರುತ್ತವೆಯೋ ಇಲ್ಲವೋ ಎಂಬು ದನ್ನು ನೋಡಿಕೊಳ್ಳಬೇಕು. ಬಳಿಕ ವಧೂವರರುಗಳ ಕುಂಡಲಿಯಲ್ಲಿ ಸಾಮ್ಯವನ್ನು ನೋಡಬೇಕು.

ಪತಿಪತ್ನಿಯರ ಲಗ್ನಕುಂಡಲಿಗಳಲ್ಲಿ ರಾಹು ಕೇತು ಇವರಹೊರ್ತಾಗಿ ನವಗ್ರಹಗಳಲ್ಲಿಯ ಇತರ ಗ್ರಹಗಳಲ್ಲಿ ವಿದ್ಯುತ್‌ಶಕ್ತಿಯಂತೆ ಸಾಮ್ಯವು ಇರುತ್ತದೆ. ಪತಿಯ ಕುಂಡಲಿಯಲ್ಲಿ ಯಾವ ಸ್ಥಾನದಲ್ಲಿ ಯಾವುದೇ ರಾಶಿ ಇದ್ದಾಗಲೂ- ಯಾವ ಯೋಗವಾಗಲಿ ಗ್ರಹವಾಗಲಿ ಬಲಿಷ್ಠವಿರುವುದೋ ಅದೇ ಗ್ರಹಯೋಗವು ಅಥವಾ ಅದೇ ಗ್ರಹವು ಪತ್ನಿಯ ಕುಂಡಲಿಯಲ್ಲಿಯೂ ಅದೇ ಸ್ಥಾನ ದಲ್ಲಿ-ಯಾವುದೇ ರಾಶಿ ಇದ್ದಾಗಲೂ-ಅದೇ ಗ್ರಹಯೋಗವು ಅಥವಾ ಗ್ರಹವು ಇರುವುದು. ಈ ಪ್ರಕಾರದ ಪತಿಪತ್ನಿ ಗಳ ಕುಂಡಲಿಗಳೊಳಗಿನ ಗ್ರಹಯೋಗಗಳ ಸಾಮ್ಯಕ್ಕೆ ದಾಂಪತ್ಯಯೋಗವೆಂದೆನ್ನುತ್ತಾರೆ. ಹೀಗೆ ಯೋಗಗಳ ಸಾಮ್ಯವು ಇರದಹೊರ್ತು ಪರಸ್ಪರವಾಗಿ ವಿವಾಹವು ಸಂಭವಿಸುವುದಿಲ್ಲ. ಆದುದರಿಂದ ವಧೂವರರುಗಳನ್ನು

CC-0. Jangamwadi Math Collection. Digitized by eGangotri

ಶೋಧಿಸುವವರು ತಜ್ಞ ಜನರ ಕಡೆಯಿಂದ ಯೋಗಗಳನ್ನು ಶೋಧಿಸಿನೋಡಿ ಲಗ್ನಕ್ಕೆ ಕೈಹಾಕಬೇಕು. ಅಂದರೆ ಅಲ್ಪಾಯಾಸದಿಂದ ಕಾರ್ಯಗಳುಸಿದ್ಧಿ ಹೊಂದುವವು.

ಉದಾಹರಣಾರ್ಥವಾಗಿ ಕೆಲವು ದಂಪತಿಗಳ ಜನ್ಮ ಲಗ್ನಕುಂಡಲಿಗಳನ್ನು ಕೊಟ್ಟಿದ್ದೇವೆ. ಅವುಗಳ ಗುರತು ಮಾಡಿರುವ ಸ್ಥಾನಗಳ ಮೇಲಿಂದ ದಾಂಪ ಯೋಗಗಳ ವಿಚಾರವನ್ನು ಮಾಡಬೇಕು.

ಪತಿ




ಪತ್ನಿ




ಪತಿ




ಪತ್ನಿ




ಈ ಪ್ರಕಾರ ಮೇಲೆ ಬರೆದ + ಈ ಚಿನ್ಹಗಳ ಮೇಲಿಂದ ದಾಂಪತ್ಯಯೋಗದ ವಿಚಾರ ಮಾಡಬೇಕು. ಇದಲ್ಲದೆ ಪತಿಯ ಕುಂಡಲಿಯೊಳಗಿನ ಯಾವ ಸ್ಥಾನದಲ್ಲಿ ಯಾವ ಗ್ರಹಯೋಗವು ಅಥವಾ ಗ್ರಹವು ಇರುವುದೋ ಆದರಿಂದ

೭ನೆಯ ಸ್ಥಾನದಲ್ಲಿ ಪತ್ನಿಯ ಕುಂಡಲಿಯಲ್ಲಿ ಪ ಕುಂಡಲಿಯೊಳಗಿನ ಗ್ರಹಯೋಗವು ಅಥವಾ ಗ್ರ ಇರುವುದುಂಟು. ಹೀಗೆ ಯೋಗಗಳು ಇದ್ದ ಹೊ ಲ್ಲಿಯೂ ಅದಕ್ಕೆ ದಾಂಪತ್ಯಯೋಗವೆಂದೆನ್ನುತ್ತಾ

ಪತಿ




ಪತ್ನಿ




ಸಾರಾಂಶವೇನೆಂದರೆ ನಮ್ಮ ಪ್ರಾಚೀನ ಋಷಿಗಳು ಪ್ರತಿಯೊಬ್ಬ ಮನುಷ್ಯನ ಭಾವೀಸ್ಥಿತಿಯನ್ನು ತಿಳಿದುಕೊಳ್ಳುವುದರ ಸಲುವಾಗಿ ಈ ಜ್ಯೋತಿಷಶಾಸ್ತ್ರವನ್ನು

ರಚಿಸಿಟ್ಟಿದ್ದಾರೆ. ಅದರ ಸಹಾಯದಿಂದ ಆದಷ್ಟು ಸ ಶ್ರಮ, ದ್ರವ್ಯ ಹಾಗೂ ಕಾಲ ಇವುಗಳ ವ್ಯಯವು ಕಡಿ ಯಾಗುವಂತೆ ಪ್ರತಿಯೊಬ್ಬನೂ ಯತ್ನಮಾಡಬೇಕು

CC-0. Jangamwadi Math Collection. Digitized by eGangotri

# ನಗೆಯ ಹೊಗೆ

ಶ್ರೀ. ಬೇಂದ್ರೆ ದತ್ತ ರಾಮ ಬಿ. ಎ.

## ( ಸಾಮಾಜಿಕ ಸಮಸ್ಯೆಯ ಆವಿದ್ಧಪ್ರಯೋಗ )

### ಪಾತ್ರಗಳು

ವಿಶ್ವನಾಥರಾಯ ( ಒಬ್ಬ ಗೃಹಸ್ಥ )
ಗಂಗಾಬಾಯಿ ( ರಾಯರ ಹೆಂಡತಿ )
ಭಾಗೀರಥಿ ( ರಾಯರ ಮಗಳು )
ನಾಗವೇಣಿ ( ಉಂಡುಟ್ಟು ಸುಖಿಯಾಗಿದ್ದ ವಿಧವೆ )
ಸುಂದರಿ ( ನಾಗವೇಣಿಯ ವಿಧವೆಯಾದ ಮಗಳು )
ರಾಧಾಬಾಯಿ (ಹರಟೆಯಮಲ್ಲಕ್ಕ ಸುದ್ದಿಯಸೂರಕ್ಕ)
ತಿಪ್ಪಮ್ಮ ( ಗತಿಗೆಟ್ಟು ದಾಯಾದಿಗಳ ಮನೆಸೇರಿದವಳು )
ಚಂದ್ರಾಬಾಯಿ, ಇಂದಾಬಾಯಿ } ಊರಲ್ಲಿಯ ಬೇರೆ ಸ್ತ್ರೀಯರು

ಇವರಲ್ಲದೆ ಪುರಾಣಿಕರು, ವಿಶ್ವನಾಥರಾಯನ ನಾಲ್ಕುಜನ ಜೊತೆಗಾರರು, ಪುರಾಣ ಕೇಳುವವರು.

## ೧ನೆಯ ಪ್ರವೇಶ

( ಮಳಿಗಾಲ; ಮೋಡವು ಮುಸುಕಿಕೊಂಡು ಬಿಟ್ಟಿದೆ; ಹಗಲು ಎರಡು ಗಂಟೆಯ ಸಮಯ. ನಾಗವೇಣಿಯ ಮನೆಯ ಪಡಸಾಲೆ. ನಾಗವೇಣಿ ಎಲೆಹಚ್ಚುತಲಿದ್ದಾಳೆ. ಮುಂದೆಯೊಂದು ಇಧ್ವಲಿಯ ಒಳೆ; ಮೇಲೆ ಕಾಯಲಿಕ್ಕೆ ಇಟ್ಟ ಸಿಬರು. ಸುಂದರಿ ಒಂದು ಬದಿಯಲ್ಲಿ ಕುಳಿತುಕೊಂಡು ಕುಪ್ಪಸಕ್ಕೆ ಕಸೂತಿ ಹಾಕುತಿದ್ದಾಳೆ. ನಾಗವೇಣಿ ಗಟ್ಟಿಯಾಗಿ ಒಮ್ಮೆ ಆಕಳಿಸಿ ಮೈಮುರಿದುಕೊಂಡು ಮಾತನಾಡುವಳು.)

**ನಾಗವೇಣಿ:—** ಯಾಕs ಸುಂದರೀ ! ಬರೋ ಹೆಂಗಸಿಗೆ ಇಂದ ಹೊತ್ತ್ಯ ತಿಳೀವಲ್ಲದೋ ಏನು ಮಣ್ಣು?

**ಸುಂದರಿ:—** ಹಾಂಗಲ್ಲವ್ವಾ, ಗಂಡಸರು ಮನಿಯೊಳಗೆ ಇದ್ದವರು, ನಮ್ಹಾಂಗ ಉಂಡು ಕೈತೊಳಕೊಂಡವರೇ ಹರಟೀ ಬೆನ್ನಹತ್ತಲಿಕ್ಕೆ ಹ್ಯಾಂಗ ಒಂದಾರು?

**ನಾಗ:—** ಅಯ್ಯ-ಗಂಡಸರು ! ರಾಜ್ಯಕ್ಕ ಹೊರ್ತು ಆಯಿತಲ್ಲ! ನಾವೇನು ಗಂಡಸರ್ನ ಕಾಣದೇ ಮುಂಡೇರಾದೆವೇ ?

**ಸುಂದರಿ:—** ಇರಲಿ ಬಿಡವ್ವ ! ಏನು ಅಸಂಯ್ ಮಾತು ! ನಾನಂತೇನಿ ಇಂದ ಆಯಿತ್‌ವಾರಾ.... ಗಂಡಸರು ಮನೆಯೊಳಗs ಅಂದರ ತಾ ಬ್ಯಾರೇನs ಮಾತ ಹಚ್ಚತಾಳ.

**ನಾಗ:—** ಏ ಚುಚುಂದ್ರೀ ! ಆಯಿತ್‌ವಾರ ಅಂತ ಅಂದಾರೆ ಅಂದ್ಯಾ ?

**ಸುಂದರಿ:—** ಅನ್ನಲಿಲ್ಲವ್ವ, ನನ್ನ ತಪ್ಪಾತು. ನನ್ನ ಕೂಡ ಜಗಳಾಡ ಬ್ಯಾಡಾ; ನಿನ್ನ ಹುದ್ದರಿ ತಾರಾಬಾಯಿ ಇದೇ ಈಗ ಬರತಾಳ..... ನಿನ್ನ ಬಾಯಿಗೆ ನನ್ನ ಸೂಜಿ ಸೊಟ್ಟಹೋಯಿತು ಬಿಡs.....ಮುಂದೀ ಕುಬಸಾ!

**ನಾಗ:—** ನನ್ನ ಮನ್ಯಾಗ ನಾ ಬಾಯಿ ಮಾಡತೇನಿ; ನಿಂದೇನು ? ಮುಂದೀ ಕುಬಸಕ್ಕ ಕಸೂತಿ ಹಾಕಿ ಚೆಂದದ ಮಾತಾಡತಾಳ ಅಂಡಗೇಡಿ! ಬಿಡು ಅದನ್ನ! ಅದರಲ್ಲೇನು ಹೊಟ್ಟಿ ತುಂಬಿಸಿಕೋತಿಯಾ? ಕೂತು ತಿಂದರೂ ತೀರ ದಷ್ಟದ್ದs ನಂದು. ನೀ ಕುಬಸಕ್ಕ ಕಸೂತಿ ಹಾಕಿ ಕೊಟ್ಟರs ಮಂದಿ ನಿಂದಕ್ಕ ಹಾಕಿ ಕೊಡಬೇಕಾದ್ದೂ ಅಷ್ಟರಾಗs ಅದs. ( ನಗುವಳು )

**ಸುಂದರಿ:—** ( ಸಣ್ಣಮೋರೆ ಮಾಡಿ ನಿಟ್ಟುಸಿರು ಹಾಕಿ ) ಹೂಂ! ಕುಬಸದ ಗಂಟು ಹರಕೊಂಡು, ಇದs

CC-0. Jangamwadi Math Collection. Digitized by eGangotri

ಜಲ್ಮದಾಗ ವಡ್ಡರ ತಿಮ್ಮಿ ಆಗೇನಿ? ನನಗೇನು ಕುಬಸದ ಪರಿವಿ? ಆದರೆ, ಈ ಒಂದು ಜಲ್ಮಕ್ಕಿಲ್ಲ, ಆ ಮುಂದಿನ ಜಲ್ಮಕ್ಕೂ ಕುಬ್ಬಸಾ ಬ್ಯಾಡs ಬ್ಯಾಡs? ಕಸೂತಿ ಪುಣ್ಯಾ ಮುಂದಿನ ಬುತ್ತಿ!

**ನಾಗ:**— ನೀ ಮುಂದಿನ ಜಲ್ಮಕ್ಕ ಬರೋದರೊಳಗs, ಪೋಲಕಾ– ಝಗಾ ಬಂದಿರತಾವೇಳು? ಕುಬಸದ ಹಂಗ್ಯಾಕ?

**ಸುಂದರಿ:**— (ನಕ್ಕು) ಹಾಂಗಾದರs ನೀವೋದು ದೊಡ್ಡ ಮುಡ್ಡಮ್ಮ ಆಗಿ ಬಾ; ನಿನ್ನ ಹೊಟ್ಟೀಲೆ ನಾವೊಂದು ಸಣ್ಣ ಮುಡ್ಡಮ್ಮ ಆಗಿ ಬರತೇನಿ!

**ನಾಗ:**— ಸರಿ. ಮುಂದಿನ ಜಲ್ಮಕ್ಕೂ ನನ್ನ ಹೊಟ್ಟೀಲೇ ಬರೋ ಆಕಿ ಏನು ನೀ ಸುಂದ್ರಿ? ಈಗs ಅಪ್ಪೀ ತಪ್ಪೀ ಏನಾದ್ರೂ ಅಂದ್ರ ಹೊಟ್ಟೀ ಹರೀಲಿಕ್ಕೆ ಒರ್ತಿ. ನನ್ನಾಯೀ, ನೀ ಬ್ಯಾಡಾ ನನ್ನ ಹೊಟ್ಟೀಲೆ! ಜನ್ಮsು ಬ್ಯಾಡಾ ದೇವರs.... ಅಂತೇನಿ.

**ಸುಂದರಿ:**— ಹಾಂಗ ಹ್ಯಾಂಗಾದೀತವ್ವಾ! ಮತ್ತ ಸಾಯೋದು ಮತ್ತ ಹುಟ್ಟೋದು, ನಮ್ಮ ಬೆನ್ನಿಗೆ ಹತ್ತೇ ಅದ. ಕೈ ಹಿಡಿದವ್ರು ಕೈ ಬಿಟ್ಟು ಹೋದಮ್ಯಾಲೆ ಹೊಟ್ಟಿಗೆ ಹಾಕಾವ್ರ ಹೊಟ್ಟೀಲೇ ಬರೋದು ಹ್ಯಾಂಗ ತಪ್ಪೀತು? (ಕಣ್ಣೀರಿಡುವಳು)

**ನಾಗ:**— ಸಾಕು ಬಿಡs, ಏನಾರೇ ಮಾತಾಡೋದು ಕಣ್ಣೀರು ಹಾಕೋದು!

**ಸುಂದರಿ:**— ನೀ ಏನಾರೆ ಅಂತನಕೋ! ಕಾಣದ ವರ ಬೆಂಕಿ ಕಂಡವರಿಗೆ ತಿಳ್ಯೂದಿಲ್ಲಾ.

**ನಾಗ:**— ನಾ ಏನ ಕಂಡೇನಿ?

**ಸುಂದರಿ:**— ನನ್ನಾರೇ ಕಂಡೀದಿ.

**ನಾಗ:**— (ತಗ್ಗಿದ ದನಿಯಲ್ಲಿ) ಅದು ಖರೆ, ಮುಂದ ಕೂಡಿಸಿಕೊಂಡು ಅಳ್ಳಿಕ್ಕೆ.

**ಸುಂದರಿ:**— ಅಷ್ಟಾರೆ ಆದs ಅತ್ತೇನಂದ್ರ ಅರೆ. ನನಗೆ ಅಳೋ ಅಷ್ಟೂ ಆಧಾರಾ ಮಾಡಿಕೊಡಲಿಲ್ಲ ದೇವ್ರು; ನಮ್ಮಪ್ಪ. (ಹೊರಗೆ ಕಿವಿಗೊಟ್ಟು) ಇದೇನು ಮಳೆಯೊ ಗುಡುಗೋ?

(ತಾರಾಬಾಯಿಯ ಬಾಯಿ ಕೇಳಿಸುವುದು ಬೀದಿಯಲ್ಲಿ.)

'ಹೌದ್ಹೌದು ಅವರ್ಹಾಂಗ ಮಾಡಿದ್ರs. ನಾವು ಹಿಂಗ ಮಾಡವ್ರು. ಅಂತಿಗೆ ಅಂತು ಕೂಡಿದ್ರ ಸಂತಿಯಾಗೋದು

**ನಾಗ:**— (ಕಿವಿಗೊಟ್ಟು ಕೇಳಿ ನಕ್ಕು) ಇಲ್ಲಾ! ನನ್ನ ತಾರಾಬಾಯೀ ಬಾಯಿ ಅದು! ತಾರಾಬಾಯಿ! ತಾರಾ ಬಾಯಿ! ಬರ್ರಿ ಒಳಗ. ಬೀದಿಯೊಳಗs ಸಂತೀ ನೆ ಬ್ಯಾಡ್ರಿ.

(ತಂಬುಲತಟೆಯ ತಾರಾಬಾಯಿ ಬರುವಳು)

**ತಾರಾ:**— ಏನಂದ್ರಿ? ಬೀದ್ಯಾಗ ಸಂತಿ ಬ್ಯಾಡಂತೀರಾ ಏನು ನಡುಮನ್ಯಾಗ ನೆರಸೋಣs!

**ಸುಂದರಿ:**— (ನಸುನಗುತ) ಬಂದ್ರೀ ತೆರಬಾಯಿ...

**ತಾರಾ:**— (ಅಣಕಿಸುವ ದನಿಯಲ್ಲಿ) ಸುಂದ್ರೀ ಮು ಬಾಯಿ,

**ಸುಂದರಿ:**— (ತಪ್ಪು ತಿದ್ದಿಕೊಳ್ಳುವಂತೆ ನಾಲಗೆ ಕ ಅಲ್ಲs! ತಾರಾಬಾಯಿ–

**ತಾರಾ:**— ಹೌದs ಚುಚುಂದ್ರಿ!

**ನಾಗ:**— ಆಕೀ ಕೂಡೇನು ವಾದಾ! ಬರ್ರಿಲ್ಲೆ!

**ಸುಂದರಿ:**— ಅದೇ ಅಂದೆ, ನಾವೇನೀಡು ನಿ

**ನಾಗ:**— (ನಗುತ್ತ) ಒಬ್ಬರೇ ಬಂದ್ರೀ? ಹೊತ್ತಿ ಸರಿಯಾಗಿ ಬರೋದು ನಿಮಗ್ಯಾರಿಗೂ ಗೊತ್ತೇ ಇ

**ತಾರಾ:**— ಹೊತ್ತಿಗೆ ಸರಿಯಾಗೇ ಮನೀಬಿಟ್ಟೆ. ಕಚೇರಿ ಮುಟ್ಟೋದು ದೈವಾಧೀನಾ! ಚಂದ್ರಾಬಾ ಇಂದ್ರಾಬಾಯಿ ಗೃಹಾ (ಗೃಹಾ) ಅವs ಅಲ್ಲ ನ ಅವನ್ನ ದಾಟಿ ಬರಬೇಕು. ತಿಪ್ಪಮ್ಮನ ಧೂಮಕೇ ಬಂತು ಮುಂದೆ.

**ನಾಗ:**— ಯಾಕ? ಕಸಬರಿಗಿ ಹಿಡಕೊಂಡು ಮ್ಯಾಲೆ ಬಂದಳೇನು?

**ತಾರಾ:**— ಹಾಂಗ ಬಂದಿದ್ದರ ಪುಣ್ಯಾ! ಹುಂ ಅಳ್ಳಪಟ್ಟಣಾ ಹಿಡಕೊಂಡು ಇದುರಿಗೆ ಬಂದಳು. ಗಂಗಾಬಾಯೀ ಕಟ್ಟೀಮ್ಯಾಲಿಷ್ಟು ಕೂತು ಬಂದೆ.

**ನಾಗ:**— ಮತ್ತಾ ಗಂಗಾ-ಭಾಗೀರ್ಥಿ ಸುದ್ದಿಯೇ

**ಸುಂದರಿ:**— (ಸ್ವಗತ) ರಂಡಿ, ಮುಂಡಿ, ಬೋ ಅಮ್ಮ, ಇದರ ಹೊರ್ತು ಮಾತೇ ಇಲ್ಲೇನೋ ನ ವ್ವನಿಗೆ!

**ತಾರಾ:**— ಅದೇ ಮಾತಾಡತs ಬಂದೆ. ಇಂ ಬಾಯಿ ಚಂದ್ರಾಬಾಯಿ ಕೂಡ.

**ನಾಗ:**— ಎಲ್ಲಿದ್ದಾರವರು?

CC-0. Jangamwadi Math Collection. Digitized by eGangotri

**ತಾರಾ:**— ನಿಮ್ಮ ಭಾಗಾದೇರ ಮನಿಗೆ ಹೋಗ್ಯಾರ; ಇಗೋ ಬಂದರು ನೋಡ್ರಿ!

( ಇಂದ್ರಾಬಾಯಿ ಚಂದ್ರಾಬಾಯಿ ಬರುವರು. ಇಂದ್ರಾಬಾಯಿ ಸುಂದರಿಯ ಓರಗೆಯ ಮುತ್ತೈದೆ. ಚಂದ್ರಾಬಾಯಿ ಸ್ವಲ್ಪ ವಯಸ್ಸಾದ ಮುತ್ತೈದೆ )

**ನಾಗ:**— ಎಷ್ಟು ತಡಾ? ಏನಿದು ಇಂದ್ರಾಬಾಯಿ,?

**ಇಂದ್ರಾ:**— ಸಾಹೇಬ್ರು, ತಪ್ಪು ಹೊಟ್ಟ್ಯಾಗ ಹಾಕಿ ಕೊಳ್ಳಿರಿ. ( ಕಿರುನಗೆ ನಗುತ್ತ ಸಲಾಮು ಮಾಡುವಳು )

[ ಸುಂದರಿಯ ಕಸೂತಿ ನೋಡಲು ಹೋಗುವಳು ]

**ನಾಗ:**— ಮಳ್ಳಿ! ( ಚಂದ್ರಾಬಾಯಿಗೆ ) ನೀವಾರೆಯಾಕ ತಡಾ ಮಾಡಿದ್ರೀ ಚಂದ್ರಾಬಾಯೀ! ಆ ಹುಡುಗೀ ಬೆನ್ನ ಹತ್ತಿ?

**ಚಂದ್ರಾ:**— ನಿಮ್ಮ ಮಾತs ಒಂದ ಥರಾ ಏನೋ! ನಾನು ಮಾಡೋ ಕೆಲಸ ಮಾಡೋ ಕೈಲೆ ಮಾಡಿ ಬಿಟ್ಟು ಒಂದ್ರs ಆಡೋ ಬಾಯೀ ಕೆಲಸಕ್ಕs ಅಡ್ಡಿ ಏನೂ ಬರೂ ದಿಲ್ಲ.... ಅಂತ ಕೆಲಸಾ ತೀರಿಸಿ ಬಂದೆ.

**ನಾಗ:**— ಏನದು ಕೆಲಸ! ದೊಡ್ಡ ಕೆಲಸ!

**ಚಂದ್ರಾ:**—ಮಾಡಬೇಕಾದ ಕೆಲಸೆಲ್ಲಾ ದೊಡ್ಡೂವs ನಮ್ಮ ಸ್ವಾದರ ಮಾವನ ಬೀಗನ ಬೀಗಿಲ್ಲs....?

**ನಾಗ:**— ಆ ಶ್ಯಾಮು ಹೌದಲ್ಲೋ? ನಮ್ಮ ಭಾಗಾದಿಯ ಅಬಚೀ ಮಲತಮ್ಮನ ಸ್ವಾದರಸೊಸೀ ಮೈದುನಾ; ಅವಾ! ನಮಗ ದೂರಲ್ಲಾ!

**ಚಂದ್ರಾ:**— ಸರಿ! ಅವಗs ಗಂಗಾಬಾಯೀ ಮಗಳ್ನ ಕೊಡಬೇಕಂತಾರಂತ!

**ನಾಗ:**—ಭಾಗೀರ್ತಿನ್ನ ಶ್ಯಾಮೂಗs? ಈ ಮಂಗ್ಯಾನ್ ವೈದು ಆ ಮುಶ್ಯಾನ ಕೊಳ್ಳಾಗ ಕಟ್ಟಾವ್ರs?

**ಸುಂದರಿ:**— [ ಇಂದ್ರಾಬಾಯಿಗೆ ಚೀಸರದ ದನಿಯಲ್ಲಿ ] ಸಮ್ಮವ್ವಗ ಇಲ್ಲದ್ದೊಂದು ಉಸಾಬರಿ!

**ತಾರಾ:**— ಮಂಗ್ಯಾ ಮುಶ್ಯಾನ ಬಣ್ಣದ ಮಾತಿರಲಿ; ಆ ಮೊದಲಪರಕ್ಕs – ಮದಿವೀ ಮೊದಲs ಮೈನೆರೆದ ಹೆಣ್ಣ್ಯಾಕs? ಅವನೇನು ಗತಿಗೆಟ್ಯಾನs!

**ನಾಗ:**— ಯಾರು ಮೈನೆರೆದ್ರು? ಭಾಗೀರ್ತ್ಯs? ಎಂದ? ಯಾರು ನೋಡಿದ್ರೂ....?

**ತಾರಾ:**— ಯಾರ್ಹ್ಯಾಂಗ ನೋಡ್ತಾರ? ಅವರ ಮನಿ ಒಕ್ಕಲಗಿತ್ತಿ ಗುರುರಾಯರ ಮನೀ ಒಕ್ಕಲಗಿತ್ತೀ ಕೂಡ ಗುಜುಗುಜು ಮಾತಾಡತಿದ್ಲು; ನಾನು ಅವರ ಹಿತ್ತಲಕ್ಕ ಕರಬೇವಿಗೆ ಹೋಗಿದ್ದೆ. ಏನ್ರೇ ಅಂದೆ. ನಕ್ಕರು. ಅಲ್ಲಿ ನೋಡ್ತೇನಿ, ಭಾಗೀರ್ತಿ ತಮ್ಮ ಮನೀ ಹಿತ್ತಲದಾಗ ಒಂದ ಮೂಲ್ಯಾಗ ಹೆಂಟೀ ಗ್ವಾಡೀ ಕೇರೀತ್ಕ ಮೊಸಡೀ ಸಣ್ಣ ಮಾಡಿಕೊಂಡು ನಿಂತಿದ್ಲೂ. ಅದನ್ನ ನಾ ಕೂಡಲೇ ತಿಳಕೊಂಡೆ.

**ನಾಗ:**— ನೀವೇನು ಕೂಡಲೇ ತಿಳಕೋತೀರಿ! ಸರಿ ಹೋತು. ನಾ. ಹೇಳ್ತೇನಿ ಕೇಳ್ರಿ. ಅದನ್ನ ನಾ ತಿಳ ಕೊಂಡು ತಿಂಗಳಾತು. ಹೋದ ಅಮಾಸೀ ಸುಮಾರಿಗೆ ಕೂದಲಾ ಬಿಸಿಲಿಗೆ ಬಿಟ್ಟು ನಿಂತಿದ್ದಳು ಭಾಗೀರ್ತಿ. ನಾ ಗುಡಿಯಿಂದ ಬರತಿದ್ದೆ, ಆವಾಗs ನೋಡಿದೆ ಮುಖ ಲಕ್ಷಣ. ಸುಂದ್ರಿಗಂದೆ ನೋಡಿದ್ಯೇನs? ಯಾತರ ಲಕ್ಷಣಾ ಇದೂ ಅಂತ. ಬೋಸಡಿ ನನಗಂತಾಳ...ಕೂದಲಿದ್ದಾವ್ರು ಬಿಟ್ಟಾರು; ನಮಗ್ಯಾಕ ಅದರ ಗೊಡವೀ.... ಅಂತ. ಏ ಸುಂದ್ರಿ! ಕೇಳಿದ್ಯಾ ಭಾಗೀರ್ತಿ ಸುದ್ದಿ?

**ಸುಂದರಿ:**— [ ಬಿದಾಸೀನ್ಯದಿಂದ ] ಯಾರ ಮೈನೆರೆದ್ರೇನು; ಯಾರ ಮದುವಿಯಾದ್ರೇನು? ನನಗ್ಯಾಕವ್ವ ಅದರ ಪಂಚೈತಿ!

**ನಾಗ:**— ಹೌದವ್ವ! ನಾವs ಪಂಚೈತೀ ಮಾಡಾವ್ರು. ನಿನಗಿನ್ನ ಹೇಳ್ತೇನಿ; ಇನ್ನ ಆಕಿನ್ನ ಮುಟ್ಟಿಗಿಟ್ಟೀ; ಮುಂಚೇ ನಾ ಹೇಳಿರಲಿಕ್ಕೆ ಹೋದ ಶನಿವಾರ ಮುಟ್ಟಿಸಿಗೊಂಡಿ, ಹೊಸಾ ಕಲ್ಲಡಿಗಿ ಒಡದ ಹೋತು, ಮೈಲಿಗಿ ಕಲಿಸಿದ್ದಕ್ಕ. ನಾಳೆ ಪಂಚಗವ್ಯ ತಗೋ ನೋಡು!

**ಸುಂದರಿ:**—ನೀ ಕೊಟ್ಟದ್ದು ಕುಡೀತೇನಿ, ಇಟ್ಹಾಂಗ ಇರತೇನಿ – ನಾಕ ಮಂದ್ಯಾಗ್ಯಾಕ ನನ್ನ ಕಾಡ್ತೀ?

**ಚಂದ್ರಾ:**–ಹೌದ ಬಿಡ್ರೇ! ಆ ಕೂಸಿನ್ನೇನ ಕಾಡ್ತೀರಿ! ನಮ್ಮ ಮನೀ ಇದುರಿಗಿನ ವಸಂತರಾಯರ ಮನಿಯೊಳಗ ಏನೋ ಇತ್ತು. ಭಾಗೀರ್ತಿನ್ನ ಕುಮಾರ್ತಿ ಅಂತ ಕರದಿದ್ರು. ಎರಕೊಂಡಿದ್ದಳು ಅಂದ.

**ನಾಗ:**— [ ಅಣಕ-ಬೆರಗು ಬೆರೆತ ದನಿಯಲ್ಲಿ ] ಕಚ್ಚಿಗೆ ಬಂದ ಹುಡಗಿ ಕುಮಾರ್ತ್ಯೆ?

**ತಾರಾ:**— ವಸಂತರಾಯರಿಗೇನು, ತಮ್ಮ ಮಗಳ ಮದುವೀ ಇಪ್ಪತ್ತು ವರ್ಷಕ್ಕ ಮಾಡಿದ್ರು. ಆಕೀ ಇದುರಿಗೆ ಈಕಿ ಇನ್ನೂ ಹಸುಗೂಸು.

**ನಾಗ:**— ಏನು ಹಸುಗೂಸೋ, ಬರಬರತs ಇನ್ನ ಕಡಿಗಿ ಅಂಬೋದs ಕಡೀಗೆ ಅಗಿ ಬಿಡ್ತ್ಯದೇನೋ ಅಂತೇನಿ.

CC-0. Jangamwadi Math Collection. Digitized by eGangotri

**ತಾರಾ:**—ಮತ್ತ ಮುಟ್ಟಾದರೂ ಮುಟ್ಟಲಿಕ್ಕೆ ಬರ ತೀದ, ಅಂಬಾವ್ರೇ ಹುಟ್ಟಾವು ಇನ್ನ.

**ಚಂದ್ರಾ:**—ಮತ್ತ ಮಡೀ ಮ್ಯಾಲಿಗಿ ಅಂಬಾವ್ರು ಮ್ಯಾಲಿಗೊಬ್ಬರೋ, ಹರದಾರಿಗೊಬ್ರೋ !

**ಇಂದ್ರಾ:**—ಇದುನೋಡ್ರಿ, ಈ ಆಟದ ಮಡೀ ಮ್ಯಾಲಿಗಿ ಹೋಗಿ ಇನ್ನ ಮಾತಿನ ಮಡೀ ಮ್ಯಾಲಿಗಿ ಕಡೇ ಹೆಚ್ಚು ಲಕ್ಷ್ಯ ಕೊಡ್ತಾರ. ಹಳೇ ಮಡೀ ಕಾಲ.... ಹೋತು.

**ತಾರಾ:**—ಹೊಸ ಕಾಲ ಮಡೀಯಾರೆ ಉಳಿದೀತೋ ಇಲ್ಲೋ ! ಇಲ್ಲಿ ಹೇಳಲಿಕ್ಕೆ ಬರತಾಳ !

**ನಾಗ:**—ಹಿರೇರು ಕಿರೇರು ಅಂಬೋ ಮಾತಿನ ಮ್ಯಾಲಿ ಗೀನೂ ಇಲ್ಲಾ ಇವರಿಗೆ ?

**ಚಂದ್ರಾ:**—ಮತ್ತ, ನಾಕು ವರ್ಷ ಇಸಪಿಸ್ ಮಾಡಿ ದ್ದಕ್ಕ ಇಷ್ಟೂ ಬ್ಯಾಡಾ ?

[ತಿಪ್ಪವ್ವ ಒಮ್ಮೆಲೆ ಬರುವರು. ಉಟ್ಟದ್ದೊಂದು ಹರಕ ಮಡಿ ಸೀರೆ. ಮುಖಕ್ಕೆ ಕೈಗೆ ಹುರಿಹಂಚಿನ ಕಪ್ಪು ಹತ್ತಿಕೊಂಡಿದೆ ]

**ನಾಗ:**—ಎಲ್ಲಿಂದ ಬಂದೇ ದೆವ್ವಾ ? ಮಾರೀ ಕಪ್ಪಾರೆ ತೊಳಕೊಂಡು ಬರಬಾರದಿತ್ತs ?

**ತಿಪ್ಪ:**—ಇರಲಿ ಬಿಡವ್ವಾ.... ( ಮೋರೆ ಒರೆಸಿಕೊಳ್ಳಲು ಹೋಗಿ ಕೈ ಕಪ್ಪು ಇನ್ನಿಷ್ಟು ಹತ್ತುವುದು ಎಲ್ಲರೂ ನಗುವರು.)

**ತಾರಾ:**—[ ನಗುತ್ತ ] ಈಗ ಮಾತ್ರ ಶುದ್ಧ ದೆವ್ವಾತು ಏನು ಹೇಳಬೇಕು ಅಂತ ಬಂದ್ರೀ ? ಅಳ್ಳ ಹುರ್ಯೋದು ಅರ್ಧಾಕ್ಕ ಬಿಟ್ಟು ಬಂದ್ಹಾಂಗ ಕಾಣ್ತದ ?

**ತಿಪ್ಪ:**—ಹೌದು ಹೌದು! ಆ ಕಟ್ಟೀಮನೀ ಭಾಗೀರ್ತಿ, ಮೈನೆರದ್ಲs ?

**ತಾರಾ:**— [ ಹಂಗಿಸುವ ದನಿಯಲ್ಲಿ ] ಹೌದು ! ಮತ್ತ ನಿಮಗ ಗ್ವಾಪಸಗೀ ತರಲಿಕ್ಕೆ ಹೇಳ್ಯಾಳ.

**ತಿಪ್ಪವ್ವ:**—ಮುಚ್ಚಿ ಮೈನೆರದವರಿಗೆ ಮುಂಡೇ ರದs ಗ್ವಾಪಸಿಗಿ ಬಿಡ್ರೀ; ಆದರ, ಇದೇನ್ರೇ ಅಸಂಯಾ ! ಗಂಗಾಬಾಯಿಗೆ ಇಷ್ಟೂ ತಿಳಿಬಾರ್ದs ?

**ಚಂದ್ರಾ:**—ಯಾರ ಕೈಯಾಗಿಂದೇನದೂ ? ಅದರೂ ಮ್ಯಾಲಿಗೀ ಕಲ್ಲೊಸದು ಅಂದ್ರೇನು ?

**ತಾರಾ:**— ಅದು ಕೈಯಾಗಿನದಲ್ಲದಿದ್ರೂ ಮದುವಿ ಕೈಯಾಗಿನದಲ್ಲೇನು ? ಇದನ್ನ ಬಿಟ್ರೂ ಆದ್ಹ್ಯಾಂಗ ನಿಂತೀತು ?

**ತಿಪ್ಪವ್ವ:**— ಹೋಗ್ತೇನಿನ್ನs,

**ನಾಗ:**— ಇಷ್ಟ್ಯಾಕ ಗಡಿಬಿಡಿ? ಕೂಡಲಾ ...

**ಇಂದ್ರಾ:**— ಮಂದೀ ಮಾರಿಗೆ ಕಪ್ಪು ಹತ್ತಿ... ಖರೇನೋ ಸುಳ್ಳೋ-ಅಂತ ತಿಳಕೊಳ್ಳಿಕ್ಕೆ ಕಪ್ಪು ... ಬಂದಿದ್ಲು. ಕೆಲಸಾತು, ಇನ್ನು ಸಮಾಧಾನ... ಹೋಗ್ತಾಳ; ಬರತೇನಿ ನಾಗವೇಣ್ಯಮ್ಮ ! ... ತಾರಾಬಾಯಿ ಚಂದ್ರಾಬಾಯಿ !

**ತಾರಾ:**— ಯಾಕ ! ಇಂವ ಬರೇ ಹಾಜರೀ ... ಹೊರಟಿ ?

**ಚಂದ್ರಾ:**—[ ಕಣ್ಣೆ ಪುಟ ] ಮನಿಯೊಳಗ ಇದ್ದಾ... ಅಮ್ಮಲದಾರರು.

**ಇಂದ್ರಾ:**— ಬರ್ತೇನಿ ಸುಂದ್ರಾ !

**ನಾಗ:**— ಆಕಿ ನಮ್ಮ ಕಚೇರಿಗೆ ಬಂದಿದ್ಲ... ಕುಬ್ಬಸದ ಕಸೂತಿಗೆ ಬಂದಿದ್ಲು.

**ತಿಪ್ಪವ್ವ:**— ನಾನೂ ಹೋಗತೇನ್ರೆವ್ವಾ !

**ನಾಗ:**— ನಿಮ್ಮ ಮನೀ ಚಂಪಾನ ಮದಿವಿ... ಏನು ಇಲ್ಲs ಇಲ್ಲೋ ?

**ತಿಪ್ಪವ್ವ:**— ನನಗ ಕಣ್ಮುಚ್ಚಿ ದುಡ್ಯೋದೊ... ಗೊತ್ತು........ ಅವರು ಹಾಳಭಾವೀ ಬೀಳವಲ್ಲರ್... ಹೋಗ್ತೇನಿ ಬಿಡ್ರಿನ್ನ, ಒಲೀಮ್ಯಾಲ ಹಂಚ ಹಾ... ಬಿಟ್ಟ ಬಂದೇನಿ.

**ತಾರಾ:**— ಇಂದ್ರಾ ಯಜಮಾನ್ರು ಅಂತ... ಓಡಿದ್ಲು; ನಿನಗ್ಯಾವ ಯಜಮಾನ್ರು ಹೆದರಿಕೇ ... ಕವ್ವಾ !

**ತಿಪ್ಪವ್ವ:**— ಗಂಡಿಲ್ಲದs ದುಡ್ಯೋ ಮುಂಡೇ... ಮೊಣಕಾಲುದ್ದ ಹುಡುಗರೂ ಯಜಮಾನ್ರೇ. ... ಈಗ ಅಳ್ಳೂ....ಅಂತ ಬರ್ತಾವ ಮಕ್ಕಳು. ಇಲ್ಲಾ ... ಬಂತು ಒದಿಕಿ. [ ಎದ್ದು ಹೊರಡುವಳು ]

[ ಗಂಗಾಬಾಯಿ ಭಾಗೀರತಿಯೊಡನೆ ಬರುತ್ತಿರುವಳು ]

**ತಿಪ್ಪವ್ವ:**— [ ನೋಡಿ ಮೆಲ್ಲಗೆ ] ನಿಮ್ಮ ಮನೀ... ಭಾಗೀರಥಿ ಬಂದ್ಲು; ನೋಡ್ರಿ ಇನ್ನ.

[ ಗಂಗಾಬಾಯಿ ಭಾಗಿರಥಿ ಜೊತೆಯಾಗಿ ಬರುತ್ತಿರುವರು. ಹೊರಟಿದ್ದ ತಿಪ್ಪವ್ವ ಮತ್ತೆ ಹಾಗೆಯೆ ನಿಂತುಬಿಡುವಳು ]

**ನಾಗ:**—[ ಎದ್ದು ] ಅಲ್ಲಿ....ಅಲ್ಲಿ.... ಕೂಡ್ರಿ. ನೋಡ್ರಿ

**ತಾರಾ:**—ಇತ್ತಾಗ.... ತಾಕೀತು....

CC-0. Jangamwadi Math Collection. Digitized by eGangotri

**ಚಂದ್ರಾ:**— [ ಭಾಗೀರತಿಗೆ ] ಇತ್ಲಾಗ....ಮೂಲ್ಯಾಗ ಬಾರಕ್ಕs ನೀನು ? [ಭಾಗಿರಥಿ ಮೂಲೆಯಲ್ಲಿ ಸರಿದು ನಿಲ್ಲುವಳು]

**ಗಂಗಾಬಾಯಿ**— ಇದೇನು ? ಇಂದ್ಯಾಕಿಷ್ಟು ಉಪಚಾರ?

**ತಾರಾ:**— ಇದು ಉಪಚಾರ ಅಲ್ಲ; ಆಚಾರ!

**ಗಂಗಾ:**—( ಭ್ರಾಂತಳಾಗಿ ) ಹಾಂಗಾದರ ನಿಮಗ್ಯಾರಿಗೇನು ರಿದ್ಯೋ.... ಏನು....?

**ನಾಗ:**—ನಮಗ್ಯಾರಿಗೂ ಹುಟ್ಟಿದ ರಿದ್ದೀನೂ ಇಲ್ಲ; ಸತ್ತ ಸೂತಕನೂ ಇಲ್ಲಾ.

**ತಾರಾ:**— ( ಉಗುಳುನುಂಗುವ ದನಿಯಲ್ಲಿ ) ನಿಮಗs ಮುಟ್ಟಾದಪರ ಪ್ಯೆಲಗಿ ಅಂತ!

**ಗಂಗಾ**-ಯಾರು ? ಮುಟ್ಟಾದವರು ಯಾರು ? ಕಡಿಗೆ ಮೀರಿದ ನಾಸೋ ? ಮದುವ್ಯಾಗದ ನನ್ನ ಕೂಸೋ?

**ನಾಗ:**— ಮಗಳು ಮುದುಕಿಯಾದರೂ ತಾಯಿಗೆ ಕೂಸೇ; ವಯಸ್ಸಿಗೇನು ?

**ಚಂದ್ರಾ**— ಹೌದು. (ಭಾಗಿರಥಿಯು ಕಳವಳಗೊಂಡ ಭಾವವನ್ನು ತೋರಿಸುತ್ತ ಹೋಗುವಳು)

**ಗಂಗಾ:**-- ಇದೇನ್ರೇ – ಇಲ್ಲದ ಸಲ್ಲದ ಮಾತು! ಹೀಂಗಾದ್ರು ನಾ ಹೋಗಿ ಬಿಡ್ತೇನಿ. [ ಹೊರಟುನಿಲ್ಲುವಳು ]

**ತಾರಾ:**—ಹೋಗ್ರಿ! ಬೇಕಾದ್ರು ನಾಲ್ಕನೇ ದಿವಸ ಮತ್ತ ಬಂದೀರಂತ.

**ನಾಗ:**— ಸುಂದ್ರೀ, ಇಲ್ಲಿಷ್ಟು ಗ್ವಾಮಾ ಸಿಂಪಡಸವ್ವಾ, ಇವರು ಹೋದಕೂಡ್ಲೆ.

**ಗಂಗಾ:**-( ಹೋಗ ಹೋಗುತ್ತ ) ಹೌದ್ರವ್ವ! ಮಕ್ಕಳೂ ಮರೀ ಬೆಳ್ಯೋ ಮನಿ; ಮಡಿ ಮಾಡಿ ಇಡ್ರಿ. ( ಹೊರಟು ಹೋಗುವಳು )

**ನಾಗ:**-(ಸಿಟ್ಟಿಗೆದ್ದು) ಬೋಸಡಿ! ಮಕ್ಕಳುಮರಿ ಅಂತ! ತನ್ನ ಮಗಳು ಮದಿವೀ ಕಾಣಳು, ( ಕಣ್ಣೀರು ತಂದು ) ನಮ್ಮದು ಹೀಂಗಾಗೇದಂತ ಮನಿತನಕಾ ಬಂದು ಹೀಂಗಂದ ಹೋಗಬೇಕs! ಆಕೀ ಮಗಳು ಮದಿವೀನೂ ಕಾಣಲಿ, ಮಕ್ಕಳುಮರೀನೂ ಕಾಣಲಿ!

**ಸುಂದರಿ:**-- ಈ. ಅಂದನಿಸಿಕೊಂಬೋ ಚಂದಗೇಡಿತನಾ ಯಾಕ ಬೇಕವ್ವಾ ನಮಗs ?

**ನಾಗ:**-- ( ಬಿರುದನಿಯಲ್ಲಿ ) ನೀ ನನಗ ಪುರಾಣಾ ವೇದಾಂತಾ ಹೇಳಬ್ಯಾಡಾ; ಹೇಳಿದ್ದ ಕೆಲಸಾ ಮಾಡು!

**ತಾರಾ:**— ಸುಮ್ಮನಿರು ಸುಂದರಿ! ನಡೀರಿನ್ನು ಪುರಾಣದ ಹೊತ್ತೂ ಆತು; ಮನಿಗೆ ಹೋಗಿ ಇದೇ ಈಗ ಬರ್‍ತೇನಿ. ( ಹೊರಡುವಳು )

**ಚಂದ್ರಾ:**-- ನಾನೂ ಬಂದೆ. ( ಹೊರಡುವಳು )

**ಸುಂದರಿ:**— ಅವ್ವಾ! ಸಿಬರು ಸುಡ್ತಾವ ನೋಡು! ಒತ್ತಟ್ಟಿಗೆ ಸಗಿ, ಒತ್ತಟ್ಟಿಗೆ ಹೊಗಿ!

**ನಾಗ:**— ಇರಲಿ! ನೀನು ಮುಂದನೋಡಿ ನಿನ್ನ ಕೆಲಸಾ ಮಾಡು.

( ಸುಂದರಿಯು ಸಗಣಿನೀರು ಸಿಂಪಡಿಸುತಿರುವಾಗಲೆ ತೆರೆಯು ಬೀಳುವುದು. )

## ೨ ನೆಯ ಪ್ರವೇಶ

( ಪುರಾಣಕ್ಕೆ ಹೊರಟ ಹೆಂಗಸರ ಪ್ರವೇಶ. ಇಬ್ಬರು ಮುತ್ತೈದೆಯರು ಒಬ್ಬಳು ವಿಧವೆ. )

**ಮೊದಲನೆಯವಳು:**— ನಿನ್ನೆ ಎಲ್ಲಿಗೆ ಬಂದಿತ್ತು, ಪುರಾಣ?

**ಎರಡನೆಯವಳು:**-- ಸಿದ್ದಿಗೆ ಬಂದಿತ್ತು; ಗಂಟೀ ಕೇಳಿ ಎಚ್ಚರಾತು.

**ಮೂರನೆಯವಳು:**-- ನಾರದ ಬಂದಿದ್ದಾ ಅಂತ ಕಾಣಸ್ತದ.

**ಎರಡನೆ:**– ಸಾವಿತ್ರೀ ಕಥಿಯೊಳಗ ಎಲ್ಲೀ ನಾರದರೇ?

**ಮೊದಲನೆ:**--ನಿದ್ದೀಯೊಳಗ ಎಲ್ಲೀ ನಾರದಾ-ಎಲ್ಲೀದೇನು ? ಸಾವಿತ್ರೀ ಕಥಿಯೊಳಗs ನಾರದ ಬರೂದಿಲ್ಲೇನು? ನಿಮ್ಮದೊಂದು!

**ಮೂರನೆ:**— ಹೌದು ಹೌದು ಖರೆ! ಆದರ, ನಿನ್ನೆ ರಂಗವ್ವಾ! ನೀವು ಮುಂಚೆ ಹೋಗಿದ್ದಿಲ್ಲs ?

**ಮೂರನೆ:**-- ಹೌದು; ರುಕ್ಮಿಣಿಬಾಯಿ ಹೇಳ್ತಿದ್ಲು ಅಲ್ಲಿಗೆ ಬಂತು ಅಂತ.

(ಒಳಗೆ ಕೂಗು ಕೇಳುವುದು 'ನಿಂದರ್‍ರೇ ನಾವೂ ಬರ್‍ತೇವಿ'

**ಎರಡನೆ:**-- ನಡೀರೇ, ಪುರಾಣಕ್ಕ ಈಗs ಹೊತ್ತಾಗೇದ

**ಮೊದಲನೆ:**— ಏನು ನಿದ್ದಿಗೋ?

**ಎರಡನೆ:**— ಗುಡಿಯೊಳಗಾರೆ ನಿದ್ದೀ ಮಾಡೋಣು; ಬರ್‍ರಿ ರಂಗವ್ವಾ!

**ಮೂರನೆ:**—ಹೌದು ನಡೀರಿ! ಆ ಸೋಗಲಾಡಿಯರ ಜೋಡಿಯೇನು ನಮಗ?

CC-0. Jangamwadi Math Collection. Digitized by eGangotri

(ಎರಡನೆಯವಳು ಮೂರನೆಯವಳು ಹೊರಡುವರು)

**ಮೊದಲನೆ:—** ( ಒಳಗಿನವರಿಗೆ ) ತಾರಾಬಾಯಿ! ನಾಗವೇಣ್ಯಮ್ಮ! ಬರ್‍ರೆವ್ವಾ! ಜೋಡಿಯವರು ಬಿಟ್ಟು ಹೋದರು, ನೀವೋ ಮಜಲು ಮಾಡ್ತಾ ಬರ್‍ತೀರಿ.

(ತಾರಾಬಾಯಿ ನಾಗವೇಣಿ ಬರುವರು)

**ನಾಗ:—** ( ಮೊದಲನೆಯವಳಿಗೆ ) ಸಾವಿತ್ರೀ ಮದಿವಿಗೆ ನಮ್ಮಂಥ ಸನ್ಯಾಸಿಗಳ ಗಡಿಬಿಡಿ ಯಾಕೆ. ಅಲ್ಲೇನ್ರೇ?

**ಮೊದಲನೆ:—** ಪುರಾಣದಾಗ ಸಾವಿತ್ರಿ ಬಂದ್ರೂ ಹೋಗಬೇಕು; ಶೂರ್ಪಣಖಾ ಬಂದ್ರೂ ಹೋಗಬೇಕು. ನಡೀರಿ ನಡೀರಿ!

**ತಾರಾ:—** ನಿಮ್ಮ ಮಾತs ಖರೇ ಆಗಲಿ ನಡಿರಿ.

( ಎಲ್ಲರೂ ಹೋಗುವರು. )

## ೩ ನೆಯ ಪ್ರವೇಶ

( ಪುರಾಣಿಕರು ಪುರಾಣ ಹೇಳುತಿರುವರು. ಶ್ರೋತೃಗಳಾಗಿ ಕೆಲವು ಜನ ಹೆಂಗಸರೂ ನಾಲ್ಕಾರು ಜನ ಗಂಡಸರೂ ಕುಳಿತಿರುವರು. )

**ಪುರಾಣಿಕರು:—**

ಪುತ್ರೀಪ್ರದಾನಕಾಲಸ್ತೇ ನಚಕಶ್ಚಿದ್ವೃಣೋತಿ ತ್ವಾಮ್ ।
ಸ್ವಯಮನ್ವಿಚ್ಛ ಭರ್ತಾರಂ ಗುಣೈಃ ಸದೃಶಮಾತ್ಮನಃ

"ರಾಜನಾದ ಧಾವ ಅಶ್ವಪತಿ ಮಹಾರಾಜ ತನ್ನ ಮಗಳಾದ ಸಾವಿತ್ರಿಗೆ ಈ ಪ್ರಕಾರ ಹೇಳುವಂಥವನಾದಾ; ಅದೇನಂತಗತಂದರ:- ಹೇ ದಾವ ಪುತ್ರಿ! ಮತ್ತೇನದs ಅಲ್ಲಾ ನಿನ್ನನ್ನು ವರನಿಗೆ ಕೊಡುವ ಕಾಲ ಆಗಿಯೂ ಯಾರೂ ನಿನ್ನನ್ನು ವರಿಸಲಿಕ್ಕೆ ಒಲ್ಲರು; ಆದ ಕಾರಣ ಆ ದಾವ ನಿನ್ನಗುಣಕ್ಕ ಸರಿಹೋಗುವಂಥಾ ಗಂಡನ್ನ ನೀನೇ ಹುಡುಕಿಕೊಳ್ಳುವಂಥಾಕಿಯಾಗು.... ಅಂತಂಬುವಂಥಾತನಾಗ್ಯಾನ, ರಾಜನು ತನ್ನ ಮಗಳಿಗೆ ಆಡಿದಂಥಾ ದಾವ ಈ ಮಾತುಗಳನ್ನ ನಾವು ಬಹಳ ವಿಚಾರಮಾಡಿ ತಿಳಕೊಳ್ಳಬೇಕಂಥಾವಾಗಿವೆ. ಯಾಕಂತಂದರ ಈಗಿನ ಕಾಲಕ್ಕೆ ದಾವ ಕಲಿತವರಂಬೋರು, ಸುಧಾರಿಸಿದವರಂಬೋರು, ಮಡಿಮೈಲಿಗಿ ಮೂಲೀಯೊಳಗ ಕಟ್ಟಿಟ್ಟವರು ಆ ದಾವ ಪೂರ್ವಾಚಾರದ ತಲೀಮೆಟ್ಟಿ ತುಳೀತಕ್ಕವರು, ತಸ್ಮಾತ್ ಅವಿಚಾರಿಗಳು ಅಂತೇನಿದ್ದಾರಲ್ಲಾ ಅವರು 'ಸ್ವಯಮನ್ವಿಚ್ಛ ಭರ್ತಾರಂ' ಇಂಥಾದಾವ ಆಯ್ಕುಳ್ಳಿ ಮಾತು ಎತ್ತಾಡಿ, ಹೆಣ್ಣುಮಕ್ಕಳು ಸಿಕ್ಕವರನ್ನ ಮದವೀ ಮಾಡಿಕೊಳ್ಳಬೇಕು ಅಂಥಾ ಹೇಳುವಂಥವರಾಗತಾರ; ಮಾರಿ ನೋಡಿ ಮೋಹ... ಮರುಳಾಗಿ ಮದವಿಯಾಗೋದು ಅಹಿತಕರಾ... ಎಂಬೋದು ಅವರಿಗೆ ತಿಳಿಯೂದಿಲ್ಲಾ, ಆ ದಾವ ಹೆ... ಮಕ್ಕಳೂ ಇದ್ದಾರಲ್ಲಾ ಅವರು ಇಂಥಾ ಮಾತ್ಕ... ಹೆಣ್ಣುಬುದ್ಧಿಗೆ ಸರಿಯಾಗಿ ಕುಣೀತಾರ; ಏನಹೇಳ್ಲಿ... ಕಲಿಯುಗ ಬಂದದ್ದರಿಂದ ಆದಾವ ಕಲಿಯ ... ಯಿಂದ ಬ್ರಾಹ್ಮಣರ ಬುದ್ಧಿ ಕೂಡ ಮಂಕು... ಕ್ಷತ್ರಿಯಕನ್ಯೆ ಸಾವಿತ್ರೀ ಹಾಂಗ ಬ್ರಾಹ್ಮಣರ ಹೆ... ಮಕ್ಕಳೂ ಮಾಡಿದರ ಅಡ್ಡೀ ಏನು ? ಅಂತ ... ತರ್ಕಟಕ್ಕೆ ಬಲೀ ಬಿದ್ದು ಕೇಳುವಂಥಾವರಾಗತಾ... ಹೇಳಬೇಕು ?

ಪ್ರಾರ್ಥಿತಃ ಪುರುಷೋಯಶ್ಚ ಸವಿವೇದ್ಯಸ್ತ್ವಯಾ... ವಿಮೃಶ್ಯಾಹಂ ಪ್ರದಾಸ್ಯಾಮಿ ವರಯಸ್ತ್ವಂಯಥೇಪ್ಸಿತ...

ಹೇ ದಾವ ಮಗಳೇ! ಅಂತಂತಾನ ಅಶ್ವಪತಿ ಮ... ರಾಯ. ನಿನಗೆ ಬೇಕಾದಂಥಾ ಪುರುಷನ್ಯಾ... ಎಂಬೋದನ್ನ ನನಗೆ ನೀನು ಹೇಳುವಂಥಾಕಿಯಾ... ಆ ಮ್ಯಾಲೆ ನಾನು ಪೂರ್ವಾಪರವಿಚಾರಮಾಡಿ ... ನಿಗೆ ಕೊಡುವಂಥಾತನಾಗತೇನಿ. ನೀನೂ ... ಇಚ್ಛೆಯಂತೆ ವರಿಸುವಂಥಾಕಿಯಾಗು. ತಾನು ... ಕ್ಷತ್ರಿಯ ರಾಜನಾಗಿಯೂ, ಮಗಳು ಪ್ರೌಢೆಯಾ... ಅವರಲ್ಲಿ ಸ್ವಯಂವರ-ಗಂಧರ್ವವಿವಾಹಾದಿ ಪದ್ಧ... ಶಾಸ್ತ್ರಸಮ್ಮತವಾಗಿದ್ದರೂ ಕೂಡ ಅವನು '... ಶ್ಯಾಹಂ ಪ್ರದಾಸ್ಯಾಮಿ ' ನಾನು ವಿಚಾರ ... ಕೊಡತೇನಿ– ಅಂತಾನ. ಅರ್ಥಾತ್ ವಿಚಾರಿಗಳ ... ಬ್ಯಾರೇ, ಅವಿಚಾರಿಗಳ ಹಾದಿ ಬ್ಯಾರೇ, ಇದು ಹೇ... ಬ್ಯಾಡಾ. ಚತುರ್ದಶ ವಿದ್ಯಾ-ಚೌಸಷ್ಟಿಕಲೆಗಳ ... ಮಾಡಿದಂಥಾ ಆ ದಾವ ಹುಡಿಗಿಯರ ಬುದ್ಧಿಯೇ... ಬಹುದು. ಕಲಿತು ಕಣ್ಕೆಟ್ಟವರಿಗೆ ಒಳ್ಳೇದು ... ಅಂಬೋದು ಅವರ ಕನ್ನಡಿಯೊಳಗಿಂದಾ ಕಾಣ... ಹ್ಯಾಂಗ! ಆದರಾಗ ಬ್ಯಾರೆ ಈಗಿನ 'ವರಾ' ... ವಲ್ಲಾ 'ವರಾಹ' ಇದ್ದಾಂಗ ಮಹಾಸ್ವಾ... ಅಂಥೇಳತಾರ. ಏನು ತಿನಬೇಕು ಏನು ಬಿ... ಅಂಬೋ ವಿವೇಕನೇ ಇಲ್ಲಾ, ಸೀಮೀ ತ... ಸಿಗರೇಟು ಸೇದತಾರ—

( ಪುರಾಣಿಕರು ಪುರಾಣ ನಿಲ್ಲಿಸಿ ಸೀಕರಿಸಿ, ನಾಸೀ ಪುಡಿಯ ... ಯನ್ನು ಮೂಗಿಗೆ ಏರಿಸುವರು; ಒಂದೆರಡು ಸಲ ಸೀನುವರು )

CC-0. Sangamwadi Math Collection. Digitized by eGangotri

**ಮೊದಲನೆಯವಳು:**— ಇದೇನs ನಮ್ಮವ್ವಾ ! ಪುರಾಣ ನಡದಾಗ ಸೊಟಾ ಸೊಟಾ ಸೀನೋದು !

**ತಾರಾ:**— ನನಗಂತೂ ಅವರ ವಸ್ತ್ರಾ ನೋಡಿ ವಾಕರಿಕೀನs ಬರತsದ.

**ನಾಗ:**—ಪುರಾಣಿಕರ ನಡುವಿನ ಮಗಳಿಗೆ ಈಗೆಷ್ಟು ವರ್ಷರೇ ?

**ತಾರಾ:** —ಎಷ್ಟು-ಅಷ್ಟs.

**ನಾಗ:**—ಈಗ ಅಷ್ಟಾ, ಮದಿವ್ಯಾದ ಮೇಲೆ ಇನ್ನಷ್ಟಾ.

**ಚಂದ್ರಾ:**—ಮದವಿ ಆಗೋ ಮುಂಚೆ ಎಂಟು. ಆದ ಕೂಡಲೇ ಎಂಟು.

**ಮೂರನೆಯವಳು:**-ಅಷ್ಟು ದೊಡ್ಡಾಕೆಲ್ಲರೇ ಆಕಿ.

**ಎರಡನೆಯವಳು:**— ಸುಮ್ಮನs ಕೂಡ್ರೆವ್ವಾ, ಗಂಡಸರು ಇತ್ಲಾಗs ನೋಡಲಿಕ್ಕೆ ಹತ್ಯಾರ.

**ತಾರಾ:**—ನೀವು ಕಣ್ಮುಚ್ಚಿ ನಿದ್ದೀ ಮಾಡ್ರಿ ಅತ್ಲಾ ಗಿತ್ಲಾಗ ನೋಡ್ಡ್ಗs—ಸಾಕು.

**ಪುರಾಣಿಕ:**— (ಎರಡು ಸಲ ಕೆಮ್ಮಿ ಮೂಗುಜ್ಜಿಸಿಕೊಂಡು)

ಶ್ರುತಂಹಿ ಧರ್ಮ ಶಾಸ್ತ್ರೇಷು ಪಠ್ಯಮಾನಂ ದ್ವಿಜಾತಿಭಿಃ ॥
ತಥಾತ್ವಮಪಿ ಕಲ್ಯಾಣಿ ಗದತೋಮೇವಚಃ ಶೃಣು ॥
ಅಪ್ರದಾತಾ ಪಿತಾವಾಚ್ಯೋ ವಾಚ್ಯಶ್ಚಾನುಪಯನ್ಪತಿಃ ।
ಮೃತೇ ಪಿಶರಿ ಪುತ್ರಶ್ಚ ವಾಚ್ಯೋ ಮಾತುರರಕ್ಷಿತಾ ॥

ರಾಜನು ಮತ್ತ ಹೇಳುವಂಥಾತನಾಗತಾನ. ಹೇ ಮಗಳೆ ! ಬ್ರಾಹ್ಮಣರೆಲ್ಲಾರೂ ಧರ್ಮಶಾಸ್ತ್ರಗಳಲ್ಲಿ ಹೇಳಿದ್ದನ್ನ ನಾನು ಕೇಳಿದ್ದೇನಿ. ಅದನ್ನ ನೀನು ಕಲ್ಯಾಣದ ಇಚ್ಛೆಯುಳ್ಳಾಕಿಯಾಗಿ ಕೇಳುವಂಥಾಕಿಯಾಗು. ಏನು ರಾಜರದು ಧರ್ಮಶಾಸ್ತ್ರಗಳಲ್ಲಿ ಶ್ರದ್ಧೆ ! ಬ್ರಾಹ್ಮಣರು ಹೇಳಿದಂತೆ ಎಲ್ಲರೂ ಕೇಳುವಂಥಾ ಆ ಕಾಲ ಹೋಗಿ, ಇವರೇ ಎಲ್ಲಾರದೂ ಕೇಳುವಂಥಾ ಕೇಡುಗಾಲ ಈಗ ಬಂದsದ.

(ಇದೇ ಹೊತ್ತಿಗೆ ಗಂಗಾಬಾಯಿ ಬರುವಳು. ಹೆಂಗಸರಲ್ಲಿ ಗುಜುಗುಜುಗುಟ್ಟುವುದು, ಪಿಸುಪಿಸುಗುಟ್ಟುವುದು, ಸರಿದಾಟ ಆಲುಗಾಟ ನಡೆಯುವುದು.)

ಕೇಳಿರಿ, ಕೇಳಿರಿ, ಹುಡುಗಿ ವಯಸ್ಸಿಗೆ ಬಂದ್ರೂ ಕೂಡಾ ಯಾವ ತಂದಿ ಮದಿವೀ ಮಾಡೂದಿಲ್ಲೋ ಆ ಪಾಪಿ, ಅಧಮಾಧಮಾ, ಮಹಾಮೂರ್ಖಾ, ಮನೀ ಮುಳುಗಿಸುವವಾ, ಕುಲಸಂಹಾರಕಾ, ಅವನಿಗೆ ಶ್ರೀ ಮದ್ವ್ಯಾಸ ಮಹರ್ಷಿಗಳು 'ಅವಾಚ್ಯಃ' ಅಂತ ಹೇಳುವಂಥಾತರಾಗ್ಯಾರ. ಋತುಮತಿಯಾದವಳ ಸಮಾಗಮ ಮಾಡದ ಪತಿ 'ವಾಚ್ಯ' ಅಂತಂದರs ಮಂದೀ ಕಡಿಂದ ಹೆಸರು ಇಡಿಸಿಕೋತಾನ, ಅವನ ಒಗ್ಗೆ ಜನರು ಆಡಿಕೊಳ್ಳತಾರ. ತಂದಿ ತೀರಿದ ಮೇಲೆ ತಾಯಿಯ ಸಂರಕ್ಷಣ ಮಾಡದ ಮಗನಿಗೆ ಮಂದಿ ಹೆಸರಿಡತಾರ. ಆದರs ಸಕಾಲಕ್ಕ ಮದವೀ ಮಾಡದ ತಂದಿ ಅವಾಚ್ಯಾ. 'ಪಿತಾವಾಚ್ಯೋ' ಅವಾಚ್ಯಃ ಅಂತಂದರ-ಹೆಸರೆತ್ತಬಾರದು, ಮಾತು ತಗೀಬಾರದು, ಅವನ ಹೆಸರು ನಾಲಿಗೀಲೆ ನುಡಿದರs ಪಾಪ ಬರತsದ, ಅಂತಂತಾರ. 'ಅಪ್ರದಾತಾ ಪಿತಾವಾಚ್ಯೋ' ಅಂತ ಎಲ್ಲಾಕ್ಕು ಮೊದಲಿಗೇ ಹೇಳಿದ್ದರ ತಾತ್ಪರ್ಯ ಏನಂದ್ರs, ತಾಯಿನ್ನ ತೊರದ ಮಗಾ ಇನ್ನೂ ಬೇಕು; ಹೆಂಡತೀ ತೊಳಲಾಡಸೋ ಗಂಡ ಬೇಕು,ಆದರ ಮದುವಿಯಾಗದ ಮಗಳ ಮರುಗಿಗೀಡಾದ ತಂದಿ-ಅವಾ ಎಂಥಾ ತಂದಿ!-ಅವನ ಹೆಸರು ಎತ್ತಲಾಗದು. ಉಳಿದವರು ವಾಚ್ಯರು, ಇವಾ ಅವಾಚ್ಯ-ಬಯಿಸಿಕೊಳ್ಳಲಿಕ್ಕೆ ಯೋಗ್ಯ-ಅಂತಾರ. ವರಾ ಹುಡುಕೋದಾಗದಿದ್ದರ ಯಾವನಾದರೂ ನಮ್ಮಂಥಾ ಬಡ ಬ್ರಾಹ್ಮಣನಿಗೆ ಕೊಟ್ಟರೂ ಕನ್ಯಾದಾನದ ಫಲಾ ಬರತ್ಯದ, ಅದೂ ಆಗದಿದ್ದರ ತಣ್ಣಗs ಬಾವೀ ನುಗಿಸಿ ನಾರಾಯಣಾ ಅಂತ ಕೈಮುಗಿಯಬೇಕು—

( ಮತ್ತ ನಸ್ಯದ ಪುಡಿಯ ವಿಧಿವಿಧಾನ )

**ಎರಡನೆ:**—( ನಿದ್ದೆಯಿಂದೆಚ್ಚತ್ತು ಕೈಮುಗಿಯುವಳು )

**ತಾರಾ:**—( ನಗುತ್ತಾ ) ದೇವರ ಹೆಸರಿಲ್ಲಾ ದಿಂಡರ ಹೆಸರಿಲ್ಲಾ ಹೀಂಗ್ಯಾಕ ಕೈಮುಗಿದಿರಿ?

**ಎರಡನೆ:**—ನಾರದಾ ಶ್ರೀಮನ್ನಾರಾಯಣಗ–

**ನಾಗ:**—ಅಯ್ಯೋ ನಾರಾಯಣಾ!

**ಚಂದ್ರಾ:**—ಮಂದೀ ನಗಿಯೊಳಗs ಬತ್ತೀ ಕಮರ ಹೊಗೀ ಎತ್ತ್ಯ. ಇದೇನು ಖಾಟs ನಮ್ಮವ್ವ!

**ಪುರಾಣಿಕ:**— ವಿಶೇಷಕಾರಣಗಳ ಮೂಲಕ, ಈವತ್ತಿನ ದಾವ ಪುರಾಣ ಇಲ್ಲೇ ನಿಲ್ಲಿಸಬೇಕಾಗೇದ.

ಇತಿ ಶ್ರೀಮನ್ಮಹಾ ಭಾರತೇ ಅರಣ್ಯ ಪರ್ವಣಿ ಪತಿವ್ರತಾ ಮಹಾತ್ಮ್ಯ ಪರ್ವಣಿ ಚತುರ್ನವತ್ಯಧಿಕ ದ್ವಿಶತತಮೋಧ್ಯಾಯೇ ಷಟ್‌ತ್ರಿಂಶಂತಿ ಶ್ಲೋಕೋ ಸಮಾಪ್ತಃ

ಶ್ರೀಮನ್ನಾರಾಯಣಾರ್ಪಣಮಸ್ತು

( ಮಂಗಲಾರತಿಯಾಗುವುದು )

**ನಾಗ:**—ಇಂದಿನದು ಗಂಗಾರ್ಪಣಮಸ್ತು.

( ಗಂಗಾಬಾಯಿ ದುರುದುರನೆ ನೋಡುತ್ತ ಹೋಗುವಳು ಎಲ್ಲರೂ ಹೋಗುವರು. )



CC-0. Jangamwadi Math Collection. Digitized by eGangotri

## ೪ನೆಯ ಪ್ರವೇಶ

### ಸಂತೆಯ ಹಾದಿ

( ಇಬ್ಬರು ಮಾತನಾಡುತ್ತ ಬರುವರು. )

ಒಬ್ಬ:--(ಗಡಿಯಾಳಕ್ಕೆ ನಮಸ್ಕಾರ ಮಾಡುವನು) ಅಯ್ಯೋ! [ ಬೆಚ್ಚಿ ನಾಲಗೆ ಕಚ್ಚಿಕೊಳುವನು ]

ಇನ್ನೊಬ್ಬ:—ಏನರೀ ! ಸಿಕ್ಕದ್ದಕ್ಕೇ ಸಮಸ್ಕಾರ ಮಾಡತೀರೇನು ?

ಒಬ್ಬ:—(ಹುಚ್ಚುನಗಿ ನಗುತ್ತ) ದೇವರೂ ಅಂತ ಮಾಡಿದೆ.

ಇನ್ನೊಬ್ಬ:—ಅಂತ ಮಾಡಿದಿರಿ, ಅಂತ ಎಲ್ಯದs ಅಂತಕ್ಕs ?

ಒಬ್ಬ:—ಅಂತೂ ತಪ್ಪಾಗಲಿಲ್ಲ. ದೇವರಿಗೆ ನಮ್ಮ ದೊಂದು ಹೆಚ್ಚು ನಮಸ್ಕಾರ ಹೋಗಲಿ.

ಇನ್ನೊಬ್ಬ:--ಎಲ್ಲ್ಯದ್ವರೀ ದೇವರೂ? ದೇವರಲ್ಲದ್ದಕ್ಕ ನಮಸ್ಕಾರ ಮಾಡಿದರ ನರಕ ತಪ್ಪೂದಿಲ್ಲ.

ಒಬ್ಬ:—ದೇವರಿಲ್ಲದ ಸ್ಥಳಾನs ಇಲ್ಲಾ. ಗಡಿ ಯಾಳಕ್ಕ ಮಾಡಿದ ನಮಸ್ಕಾರನೂ ದೇವರಿಗೆ ಮುಟ್ಟಲಿ.

ಇನ್ನೊಬ್ಬ:—ಸರಿ, ಕಾಲಾಯತಸ್ಮೈನಮಃ ಒಂದು ಜಿಡೋಣ !

ಒಬ್ಬ:—ಆ-ಹಾ ! ಅಷ್ಟೇ ಅಷ್ಟೇ ! ಒಳ್ಳೇ ಮಂತ್ರಾ ಹೇಳಿ ಕೊಟ್ಟಿರಿ, ನಾನು ಎಷ್ಟೋ ಸಲ ಹೀಂಗ ಮಾಡತಿರ ತೇನಿ. ಒಳ್ಳೇ ಮಂತ್ರಾ ಹೇಳಿ ಕೊಟ್ಟಿರಿ.

ಇನ್ನೊಬ್ಬ:—ಒಳ್ಳೇಮಾತು, ತಪ್ಪಿದಕೆಲಸಕ್ಕೊಂದು ಒಪ್ಪೋ ಮಂತ್ರದ ಆನಿಕೀ ಕೊಟ್ಟರs ಎಲ್ಲಾ ಒಪ್ಪೇ ಹೋತs ? ನಮ್ಮ ವಿಶ್ವನಾಥರಾಯಾ ಹುಡಿಗಿನ್ನ ಬೆಳಿಸಿ, ಬೆಳೆದ ಹುಡಿಗೀ ಲಗ್ನಾನs ಮಾಡಬೇಕು....ಅಂತ ಧರ್ಮಶಾಸ್ತ್ರದಾಗ ಅದs....ಅಂತ ಹೇಳಿದ್ದಾಂಗಾತು ನಿಮ್ಮ ಮಾತು. ಒಳ್ಳೇ ತಪ್ಪೂ ಒಪ್ಪು.

ಒಬ್ಬ:— ಏನು ತಪ್ಪೋ ಏನು ಒಪ್ಪೋ ಮಾಹಾ ರಾಯಾ! ತಪ್ಪಬಾರದೂ ಅಂತ ಮಾಡೋದು, ಅದನ್ನ ತಿದ್ದಿ ಕೊಳ್ಳೋದು ದೇವರ ಭಾರಾ ! ವರಾ ಸಿಕ್ಕರs ಕೊಡ ಬಾರ್ದಂತಾನs ಅವಾ ! ಹುಡಿಗಿನ್ನ ಮನಿಯೊಳಗಿಟ್ಟ ಕೊಳ್ಳೊ ಪ್ರೀತಿಯೇನವಗs ! ಕಾಲ ಬರಬೇಕು ಎಲ್ಲಾ ದಕ್ಕೂ !

ಇನ್ನೊಬ್ಬ:— ಆಗಳೇ ನೀವು ನಮಸ್ಕಾರ ಮಾ... ಗಡಿಯಾಳದ ಕೊರಳಾಗ ಕಟ್ಟಲಿಕ್ಕೆ ಹೇಳ್ರಿ.... ರ್ಪಣಮಸ್ತು.... ಅಂತ ಮಂತ್ರಾ ಹೇಳಿ.

ಒಬ್ಬ:— ಒಂದಿಲ್ಲೊಂದು ದಿವಸ ಅದಕ್ಕೂ ಅ... ರಿಗೂ ಆ ಮಂತ್ರಾ ಹೇಳೋದು. ಪಲ್ಯಾದ ... ಬರ್ತೀರಾ ಹೋಗೋಣ ?

ಇನ್ನೊಬ್ಬ:— ನಡೀರಿ, ನನಗೂ ಅಲ್ಲೇ ... ಬೇಕಾಗೇದ. ( ಇಬ್ಬರೂ ಹೋಗುವರು. )

## ೫ನೆಯ ಪ್ರವೇಶ

(ಸ್ಥಳ: ವಿಶ್ವನಾಥರಾಯರ ಮನೆ. ರಾಯರೂ ಅವರ ... ಗಂಗಾಬಾಯಿಯೂ ಮಾತನಾಡುತ್ತ ಕುಳಿತಿದ್ದಾರೆ. ಗಂಗಾ... ಯದು ಚಿಂತೆಯಿಂದ ಬಾಡಿದ ಮುಖ. ರಾಯರದು ಚಿಂತ... ಮರೆಮಾಡಿದ್ದ ಗಾಂಭೀರ್ಯದ ಮುಖ.)

ಗಂಗಾ:— ಎಲ್ಲಾರೂ ನನ್ನ ತಲೀ ಕುಕ್ಕ... ಹತ್ಯಾರ ಹೋದಲ್ಲ್ಯೆಲ್ಲಾ ! ಇನ್ನ ಮತ್ತೊಮ್ಮೆ ... ಬಿಟ್ಟಾರೆ ಅಡ್ಯಾಡಿ ಬರ್ರಿ. ಇಲ್ಲದಿದ್ರ ನಾ ಪ್ರಾ... ಕೊಡ್ತೇನಿ. (ಕೊರಳು ಬಿಗಿದು ಕಂಬನಿ ಸುರಿಯುವಳು)

ವಿಶ್ವ:— ( ಬೇಸರುಗೊಂಡವನಾಗಿ) ಸರಿ, ನನ್ನ ಪ್ರಾ... ತಗೋ ನೀನು. ಊರು ಬಿಟ್ಟು ಅಡ್ಯಾಡಿದರ ಸಿ... ವರಾ ಏನು ಸಿಂಹಾ ಹುಲೀನs?

ಗಂಗಾ:— ಇಲ್ಲಾ ! ಹಾಂಗಾದರ ಮನ... ಒಡ್ಡಿದ ಬಲೀಯೊಳಗ ಬೀಳೋ ಇಲೀ ! ವರಾ!

ವಿಶ್ವ:—ನೋಡಿದ್ಯಾ ! ಹುಲೀ ಅಂದರ ಇಲೀ ... ಹೀಂಗs ನಾಳೆ ಜಗಳಾಡಲಿಕ್ಕೆ ಒಂದ ಅಸಾಮಿ ಮ... ಇರಲೀ.... ಅಂತ ವರಾ ಹುಡಕಲ್ಯಾ ?

ಗಂಗಾ:— ಲಗ್ನ ಅಂದರ ಬರೆ ಜಗಳಾಟನs ... ಮತ್ತ ಈ ಜಗಳಾಟ ಯಾಕs ಈಗ-ಮಾತ ತಪ್ಪ... ಇವತ್ತ ಸಾವಿತ್ರೀ ಆಖ್ಯಾನದಾಗ ಹೊತ್ತಿಗೆ. ಪು... ಮಾಡದವರು ಅವಾಚ್ಯಾ ಅಂತಾ ಹೇಳಿದರು.

ವಿಶ್ವ:— ಇಬ್ಬರೂ ಹೌದಲ್ಲೋ !

ಗಂಗಾ:— ಇಬ್ಬರೂ ಯಾಕ, ಗಂಡಸರು.

ವಿಶ್ವ:— ಯಾವ ಗಂಡಸು ಹೇಳಿದಾನಾ?

ಗಂಗಾ:— ಪುರಾಣಿಕಶಾಸ್ತ್ರಿಗಳು.

ವಿಶ್ವ:— ಸರಿ, ಅವಗೊಂದು ಹೆಣ್ಣು ಬೇಕಾಗಿ... ಹಾಂಗಂತಿದ್ದಾನು.

CC-0. Jangamwadi Math Collection. Digitized by eGangotri

**ಗಂಗಾ:—** ಅದನ್ನೂ ಅಂದರು.

**ವಿಶ್ವ:—** ಅನ್ನದ್ಧ ಏನು ಮಾಡ್ಯಾನು-ಘಟಿಂಗಾ! ಅವನಿಗೆ ಕೊಡೋದಕಿಂತ ಒಂದು ಹೆಣದ ಕೊರಳಾಗ ಕಟ್ಟಬೇಕು.

[ತಾಯಿತಂದೆಗಳ ಮಾತುಗಳನ್ನು ಕೇಳುತ್ತ ನಿಂತಿದ್ದ ಕಳವಳ ಗೊಂಡ ಭಾಗೀರಥಿಯ ಮುಖವು ಹಿಂದಿನ ಕಿಟಕಿಯಲ್ಲಿ ಕಾಣಿಸು ವುದು.]

**ಗಂಗಾ:—** ಅಷ್ಟಾರೆ ಮಾಡ್ರಿ ಹಳೇ ಕಥಿಯೊಳಗ ಹೇಳ್ತಾರಲ್ಲಾ ಆ ಗತಿ; ಅಂದರ ಸತಿಯಾರೆ ಹೋದಾಳು ಮುತ್ತೈದಿಯಾಗಿ.

**ವಿಶ್ವ:—** ನಾ ಎಲ್ಲಾ ಮಾಡೇನು, ಆದರ ಹೆಣಾ ಬ್ರಾಹ್ಮಣ್ರು ಕೊಡೂದಿಲ್ಲಾ. ಸತೀಗೂ ಸರಕಾರಾ ಬಿಡೂದಿಲ್ಲಾ. ಹೋಗ್ಲೋಗು, ಯಾರೋ ಹೊರಗ ಬಂಧ್ಹಾಂಗ ಕಾಣ್ತದ, ಒಳಗ ಹೋಗು! ನಾಳೆ ಮುಂಜಾನೆ ಮಗಳ ಕೆಲಸಕ್ಕs ಹತ್ತೇನಿ. ಕ್ರಿಯಾದಿಂದ ಹೇಳ್ತೇನಿ.

**ಗಂಗಾ:—** (ಒಳಗೆ ಹೋಗುತ್ತ) ಏನದನೋ ಆಕೀ ಕರ್ಮ.

[ನಾಲ್ಕುಜನ ರಾಯರ ಪರಿಚಯದವರು ಪ್ರವೇಶಿಸುತ್ತಾರೆ.]

**ಮೊದಲನೆ:—** ಏನು ರಾಯರs-ಕ್ರಿಯಾ ಕರ್ಮಾ ನಡದಿತ್ತು?

**ಎರಡನೆ:—** ಅಲ್ಲೋ! ಮದುವೀ ಕರ್ತೃ ಹುಡುಕ ತಿದ್ದರು....ಕಾಣ್ತದ.

[ನಡೆದಿರುವ ಮಾತುಗಳನ್ನು ಕಿಟಕಿಯ ಹಿಂದೆ ನಿಂತು ಭಾಗೀರ ಥಿಯು ಕೇಳುತ್ತಲೇ ಇರುವಳು.]

**ವಿಶ್ವ:—** ಹೂಂ! ಮದುವೀ ಮಾಡಬೇಕು....ಇದು ಕಾಣ್ತದ. ಮಾಡಬೇಕಾದ ಹುಡುಗಿ ಕಾಣ್ತದ. ಮಾಡಿ ಕೊಂಬೋ ಮದುಮಗನs ಕಾಣೂದಿಲ್ಲಾ. ಕರ್ತೃ ಗುಪ್ತ ಈ ವಿವಾಹವಾಕ್ಯ.

**ಮೂರನೆ:—** ಇಷ್ಟ್ಯಾಕ ವಿಚಾರ ಮಾಡ್ತೀರಿ, ಆ ತಿರುಕರ ಮುದುಕಾ ಇನ್ನೂ ಜೀವಂತ ಇದ್ದಾನಲ್ಲಾ! ಗೊತ್ತ ಮಾಡಿಟ್ಟ ವರಾ, ಕೊಡ್ರಿ ಅವಗ.

**ನಾಲ್ಕನೆ:—** ಭಾಗೀರ್ತಿ ಇನ್ನೂ ಚಿಕ್ಕಾಕಿ-ಅಂತೀರಾ ಹೀಂಗ ಚಾಷ್ಟೀ ಮಾಡಲಿಕ್ಕೆ?

(ಭಾಗೀರಥಿಯ ಮುಖದ ಮೇಲೆ ವ್ಯಸನದ ಬೇರೆಬೇರೆ ಗುರು ತುಗಳು ಕಾಣುವವು.)

**ಮೊದಲನೆ:—** ಆಕೀ ಚಾಷ್ಟಿ ಅಲ್ರೀ ಇದು. ಆಕೀ ಅಪ್ಪನ ಚ್ಯಾಷ್ಟಿ,ಮನಿಯೊಳಗs ಕೂತು ವರಾ ಹುಡುಕೋ ಅವರಿಗೆ ತಿರುಕರ ಮುದುಕರೇ ವರಾ ಅಂತ.

**ನಾಲ್ಕನೆ:—** ಅದೆಲ್ಲಾ ಆತು, ಹುಡಗಿ ಒಳಗs ಇರೋ ಆಕಿ. ಆಕೀ ಕಿವಿಗೆ ಬಿದ್ದರs ಮನಸಿಗೆ ಏನು ಅನಿ ಸೀತು ನೋಡ್ರಿ.

**ಎರಡನೆ:—** ಈಗಿನ ಹುಡುಗಿಯರಿಗೆ ಏನೂ ಅನಿಸೂ ದಿಲ್ಲಾ, ಮುದುಕ ಗಂಡನ್ನ ಮಾರಿ ಹರೇದವರನ್ನ ಕೊಂಡ ಕೊಂಡು ಬರೋ ಚದುರೇರು ಇವರು, ಘಟೋತ್ಕಚನ ಮಾಯಾಬಾಜಾರದಾಗ.

**ಮೂರನೆ:—** ಭಾಗೀರಥಿ ಅಂಥಾ ಹುಡುಗಿ ಅಲ್ಲಾ, ಏನಂದ್ರೂ.

**ಎರಡನೆ:—** ಆಕಿ ಅಲ್ಲಾ, ನಾಕು ಮಂದೀದು ನೋಡಿ ಕಲಿಯೋ ಜಾಣತನಾನೂ ಇಲ್ಲs ಆಕೀ ಹತ್ತರ? ಈಗ ಬ್ಯಾರೆ ಸಾಲಿಲ್ಲಾ ಸೂಲಿಲ್ಲಾ.

**ಮೊದಲನೆ:—** ಇದs ಸಾಲೀ ಸಾಲೀ-ಅಂತ ಮೊದಲ ಹುಡುಗಿಯರನ್ನ ಬೆಳಸ್ತೇವಿ, ಮುಂದ ಅಳಸ್ತೇವಿ.

(ಭಾಗಿರಥಿಯ ಕಣ್ಣಲ್ಲಿ ನೀರು ಕಾಣುವುದು.)

**ಮೂರನೆಯ:—** ಪ್ರೀತಿ ವಿವಾಹಾ-ಗೀತಿ ವಿವಾಹಾ ಅಂತ ಇತ್ತೀಚೆ ಹುಡುಗೂರು ಮಾತಾಡ್ತಾವ; ಹುಡುಗಿ ಯರನ್ನ ಹರಣ ಮಾಡಿಕೊಂಡುಹೋಗೂದಿಲ್ಲ ಯಾವನೂ ಬಂದು.

**ಮೊದಲನೆಯ:—** ವರದಕ್ಷಿಣೀ ಯಾಕ ಮುಳಗಿಸಿ ಕೊಂಡಾರೋ? ಏನು ಅದನ್ನೂ ಹರಣ ಮಾಡಬೇಕೋ?

**ನಾಲ್ಕನೆಯ:—** ಅದೇನು ಬ್ಯಾಡಾ! ಹುಡುಗಿಯರ ಕೊರಳಾಗ ವರದಕ್ಷಿಣೀ ಗಂಟುಕಟ್ಟಿಬಿಡಬೇಕು.

**ವಿಶ್ವ:—** ನಾ ಅಷ್ಟು ಮಾಡತೇನ್ರ್ಯಪಾ.

**ಎರಡನೆ:—** ಲಗೂ ಯಾವನಾರೆ ಹರಣ ಮಾಡಿದಾ ನೆಟ್ಟಗs, ಇಲ್ಲದಿದ್ದರ ಉರುಲು ಬಿದ್ದು, ಹರಣ ಹೋಗಿ ಮರಣ ಬರೋದು.

**ಮೂರನೆಯ:—** ಹಾಂಗs ಬಿಡ್ರಿ; ಮದುವಿಯಾ ಗಾವರದೊಂದು ಸಭೆ ಕರಿಸಿ, ಮದುವೀ ಬಗ್ಗೆ ಯಾರು ಚಲೋ ಮಾತಾಡ್ತಾರೋ ಅವರಿಗೆ ಮದುವೀ ಮಾಡಿ ಕೊಡ್ತೇವಿ.... ಅಂತ ಹೊಸಾ ಸ್ವಯಂವರಪದ್ಧತೀ ನೆರಸಬೇಕು.

CC-0. Jangamwadi Math Collection. Digitized by eGangotri

ನಾಲ್ಕನೆಯ:— ನೆರಸೋದು ನೆರಸ್ಯಾರು; ವರಾ ಒಂದು ವರಿಸಬೇಕಲ್ಲಾ!

ಒಂದನೆಯ:— ಅದಕ್ಕಿಂತ ಪುರಾಣದಾಗ ಹೇಳ ತಾರಲಾ ಹಾಂಗ ಯಕ್ಷಕಿನ್ನರರು ಬಂದು ಇವರ್ನ ಎತ್ತಿ ಕೊಂಡು ಹೋದ್ರ ನೆಟ್ಟಗಾಗಲಿಕ್ಕಿಲ್ಲಃ?

ಎರಡನೆ:— ಇಲ್ಲೀ ಚಲುವೇರ್ನ ವಯ್ಯಲಿಕ್ಕೆ, ಅಮ ರಾವತೀ ಅಲಕಾವತೀ ಹಾಳಬಿದ್ದಾವೇನು?

ವಿಶ್ವ:— ಅದು ಹುಚ್ಚು ಮಾತು! ನಮ್ಮ ಮಕ್ಕಳ ಮೇಲೆ ದೇವ್ರಃ ಕರುಣಿಸಬೇಕು, ಹೇಳ್ತಾರಲ್ಲಾ ಹಾಂಗ ಅಗ್ನೀ ಯಮಾ ಯಾರಾರೆ ಬಂದು.

( ಕಣ್ಣೀರು ಸುರಿಯುತಿದ್ದ ಭಾಗಿರಥಿಯ ಮುಖವು ಕಿಟಕಿಯಲ್ಲಿ ಕಾಣದಾಗುವುದು )

ಮೂರನೆಯ:— ಇಷ್ಟ್ಯಾಕ ಬ್ಯಾಸತ್ತೀರಿ? ಕನ್ಯಾ ದಾನ ಮಹಾಪುಣ್ಯ! ಮಗನಿಂದ ಒಂದು ಕುಲಾ ಉದ್ಧಾರಾ, ಮಗಳಿಂದ ಎರಡೂ ಕುಲಾ.

ವಿಶ್ವ:—ಈಗ ನಂದು ಪೂರಾ ಆಗ್ಯೇಃದ, ತನ್ನ ಕುಲದ ಉದ್ಧಾರ ಮಾಡಿಸಿಕೊಂಬೋ ಆ ಮದಿಮಗಾ ಎಲ್ಲಿ ದ್ದಾನೋ ಮಗಾ!

ನಾಲ್ಕನೆಯ:— ಇವತ್ಯಾಕೋ ನೀವು ಮನಸಲೇ ಸೋತೀರಿ, ಹೊರಡತೇವಿನ್ನ ನಾವೂ—ಮಳೀ ಬರೋ- ಹಾಂಗಾಗ್ಯೇಃದ. ಬರ್ರಿ ಏಳ್ರಿ.

ಮೂರನೆಯ:— ಇವರಿಗೇ ಇಷ್ಟು; ಆ ಹುಡುಗಿಗೆ ಚಿಂತಿ ಸಾವು ಆಗಿದ್ದೀತು. (ಎಲ್ಲರೂ ಹೊರಡುವರು ತರೆ ಬೀಳುವುದು)

## ೬ ನೆಯ ಪ್ರವೇಶ

### ಸ್ಮಶಾನದಲ್ಲಿ

[ ಚಿತೆ ಉರಿಯುತಿದೆ, ವಿಶ್ವನಾಥರಾಯ ತಲೆಹಿಡಿದುಕೊಂಡು ಮುಖ ತಗ್ಗಿಸಿ ಕುಳಿತಿದ್ದಾನೆ. ಉಳಿದವರು ಬೀಡೀ ಸೇದುತ್ತ ಹರಟೆ ಕೊಚ್ಚುತಿದ್ದಾರೆ. ]

ಮೊದಲನೆಯ:— ವಿಶ್ವನಾಥರಾಯರು ಅಗ್ನಿ ಯಮಾ ಬರ್ಲಿ—ಮಗಳ್ನ ಮದುವೆಯಾಗಲಿಕ್ಕೆ—ಅಂದರು, ಅಂದ್ಹಾಂಗಃ ಬಂದಃ ಬಿಟ್ಟರು.

ಎರಡನೆಯ:— ಸೀವೇಸ್ಃ ಅನ್ರಿ, ಆ ಹುಡುಗಿ ತಾನಾಗೇ ಸುಟಗೊಂಡಿದ್ದಾಳು—ಅಂತ ನನಗನಸೂ- ದಿಲ್ಲಾ.

ಮೂರನೆಯ:— ಏನೋರೆಪ್ಪಾ, ಆ ತಾ[illegible] ಹಾಡಿ ಹಾಡಿ ಅಳತಿದ್ದಳು "ನನ್ನ್ಯಾಕ ಉಳಸ[illegible] ನನ್ನ್ಯಾಕ ಉಳಸತೀರಿ" ಅಂತ ಅಂತಿದ್ಲು—ಓಡ್ಯ[illegible] ಹೋಗತಿದ್ದಳು ಮಗಳು—ಅಂತ.

ನಾಲ್ಕನೆಯ:—ಬೆಂಕೀ ತಾಪಕ್ಕೆ ಹುಚ್ಚೆದ್ದು ಓ[illegible] ಡತಿದ್ದಾಳು. ಇಷ್ಟ........!

ಮೂರನೆಯ:— ನಾ ಅಂತೇನಿ, ದೀಪಾ ಆರಿ[illegible] ಹತ್ತರ ಯಾತಕಿಟಕೊಂಡಿದ್ಲೋ ಹುಡುಗಿ ಅಂತ.

ಎರಡನೆಯ:— ಎಲ್ಲೀ ದೀಪ್ರೀ?ಮುಂಜಾನೆ [illegible] ಉರೀ ಹಾಕಲಿಕ್ಕೆ ಹೋಗ್ಯಾಳ, ಹಾಂಗಃ ಚಿಂತೀ ಮ[illegible] ಕೋತ ಕೂತಾಳ, ಸೆರಗಿಗೆ ಹತ್ತಿದ್ದು ಗೊತ್ತಾಗಿ[illegible] ಸೀರಿಗೆ ಫಾರಿಗೆ ಚಿಮಣೀಎಣ್ಣೀ ಗಿಣ್ಣೀ ಕೈ ಹತ್ತಿದ್ದಿ[illegible] ಹೊತ್ತಿಕೊಂಡಃದಃ ಆತು.

ಮೊದಲನೆಯ:— ಮೈಮ್ಯಾಲೆ ಚಿಮಣಿ[illegible] ಹಾಕ್ಕೊಂಡ್ಹಾಂಗ ಅದಃಅಂತ ಡಾಕ್ಟರುಅಂತಿದ್ನಂತ[illegible]

ಎರಡನೆಯ:— ಮೊದಲಂದಿದ್ದಾನು. ಆ[illegible] ಎಣ್ಣೀ ಖರ್ಚು ಅವನ ಕೈಯೊಳಗ ಬಿದ್ದ ಕೂ[illegible] ಇಲ್ಲಾ ಅಂದಿದ್ದಾನು.

ಮೂರನೆಯ:—ನಾ ಅಲ್ಲೇ ಇದ್ದನ್ಯಲ್ಲಾ! ಪಾ[illegible] ಡಾಕ್ಟರ ಏನಂದಾನ! ಅವಾ ಒಳ್ಳೇ ಮನುಷ್ಯಾ!

ನಾಲ್ಕನೆಯ:— ಸಾಯೋವಾಗ ಹುಡು[illegible] ದರೂ ಹೇಳಿದಳಃ.

ಮೊದಲನೆಯ:— ಹೇಳಿದಳಂತಃ—ನನ್ನ ಸಲುವಾ[illegible] ಏನೂ ಚಿಂತೀ ಮಾಡಬ್ಯಾಡ್ರೀ.... ಅಂತ.

ಎರಡನೆಯ:— ಎಲ್ಲೀ ಹೇಳೋದ್ರೀ? ಹ[illegible] ಬಾಯೇ ಹೋಗಿತ್ತಂತ! ಆಗೀಗ ಒಮ್ಮೆ ಕಣ್ಣು[illegible] ತಿದ್ಲು.

ಮೂರನೆಯ:— ಮಾತಿಗೆ ಮಾತು ಥಾಕ್ಲಿಲ್ಲಾ[illegible] ಹುಡುಗಿ ಸತ್ತು ಹತ್ತು ತಾಸಾಗಿಲ್ಲ. ಎಲ್ಲಾ ಹಾ[illegible] ಮಾತು ಹಾರ್ಯಾಡ್ತಾವ. ಸತ್ತದ್ದಾರೆ ಎಲ್ಲಾ[illegible] ಗೋತಾರ.

ಎರಡನೆಯ:— ಅದ್ಯಾಕ! ಸುಟ್ಟದ್ದೂ [illegible] ತಾರ ಇನ್ನ. ನೋಡ್ರಿ ನೋಡ್ರಿ! ಚಲೋ ಉರಿ [illegible] ಇಲ್ಲೋ?

ಮೂರನೆಯ:—ನಿನ್ನೆ ರಾತ್ರೀ, ಮಳೀ ಘನ [illegible]

CC-0. Jangamwadi Math Collection. Digitized by eGangotri

**ನಾಲ್ಕನೆಯ:—** ಊರೇನು ಕೊಚ್ಚಿಕೊಂಡು ಹೋಗ್ತ್ಯಾದೇನೋ— ಅನಿಸಿತ್ತು.

**ಮೊದಲನೆಯ:—** ಒಂದು ಜೀವಾನಾದ್ರೂ ಕೊಚ್ಚಿಕೊಂಡು ಹೋತಲ್ಲಾ.

**ಮೂರನೆಯ:—** ಅದು ಖರೇ! ಆದ್ರ ಬೆಂಕೀಲೆ ಮೊದಲೇ ಸುಟ್ಟು ಬದನೀಕಾಯಿ ಆಗಿರದಿದ್ರ, ಈ ಹೆಣ ಇವತ್ತಿನ ಈ ಹಸೀ ಕಟ್ಟಿಗೀಲೇ ಏನು ಸುಡತಿತ್ತೋ ಅಂತೀನಿ.

**ನಾಲ್ಕನೆಯ:—** ಮತ್ತ ಮಳೀ ಬೆಳಗದಿದ್ರ ನಾವು ನಾಳೆ ಬೆಳ್ಳಬೆಳಗೂ ಕೂತಿದ್ರೂ ಈ ಕೆಲಸಾಗತಿದ್ದಿಲ್ಲಾ.

**ಎರಡನೆಯ:—** ಅಲ್ಲಪಾ! ಮದಿವ್ಯಾಗದಿದ್ರ ಮೋಕ್ಷ — ಇಲ್ಲಾ ಅಂತಾರ. ಹಾಂಗಾದರ ಈ ಹುಡಿಗ್ಗೆ ಪುನರ್ಜನ್ಮ ಕಟ್ಟಿಟ್ಹಾಂಗs ಅನ್ನು.

**ನಾಲ್ಕನೆಯ:—** ಮೋಕ್ಷ ಇಲ್ಲದಿದ್ದರೂ ಇಲ್ಲ. ಆ ನರಕದೊಳಗಾದ್ರೂ ಕಾಯಂ ಆಗಿ ಇದ್ದುಬಿಟ್ರ ಸುಖ. ಮತ್ತ ಮತ್ತ ಹುಟ್ಟಿಬಂದ್ರ ಆ ಹುಡಿಗ್ಗೂ್ಯ ಸುಖ ಇಲ್ಲ ಆಕಿನ್ನ ಹಡೆದವರಿಗ್ಯೂ ಸುಖ ಇಲ್ಲ.

(ವಿಶ್ವನಾಥರಾಯನು ನಿಟ್ಟುಸಿರೊಂದನ್ನು ಬಿಡುತ್ತಾನೆ.)

**ಮೊದಲನೆಯ:—** ಆಯ್ತು ನಡೀರಿನ್ನ, ಸುಟ್ಟು ಹೋತು.

**ಎರಡನೆಯ:—**ಮತ್ತ ಮಳೀ ಹನಿ ಒಡೀತೇನೋ-ಅಂತೇನಿ.

**ನಾಲ್ಕನೆಯ:—** ಇನ್ನ ಮಳೀ ಬಿಟ್ಟು ಮಳೀ ಅಪ್ಪ ಬಂದ್ರೂ ಚಿಂತಿ ಇಲ್ಲಾ.

(ಹೊಗೆಹೊರಡಲು ತೊಡಗುವುದು)

**ಮೊದಲನೆಯ:—** ಏಳ್ರೀ ವಿಶ್ವನಾಥರಾಯರ್ರ! ಇನ್ನೇನು! ನಿಮ್ಮ ಚಿಂತಿ ಸುಟ್ಟು ಹೋಯ್ತು!

**ವಿಶ್ವ:—** ಬಡಕೊಳ್ಳಲಿಕ್ಕೆ ಬೂದಿ ಮಾತ್ರ ತುಂಬಾ ಉಳೀತು. ನಡೀರಿ, ಪಾಪ! ಆಕೀ ಮದುವೀ ಅಂದ್ರ ನಮಗೆಲ್ಲಾ ನಗೀ ಆಗಿತ್ತು; ಕಡೀಕ ಆಕಿಗೆ ಹೊಗೀ ಆತು — ಆತು.

**ಕೊನೆಯ ತೆರೆ ಬೀಳುವುದು.**

# ಅವಳ ಸಮಾಧಿಯ ಬಳಿಯಲ್ಲಿ

೧

ತಿರೆಯೊರಗಿರುವುದು ಕೆಳಗೆ
ಮೇಲಾಗಸವದು ಬೆಳಗೆ.
ಕಂದುತಲಿಹ ಚಂದ್ರನ ಬಳಿ
ಮಿನುಗುತಲಿರೆ ತಾರಾವಳಿ
ನೀರವತೆಯ ತಾಳಿ
ಬೀಸುತಲಿದೆ ಬನ-ಬಯಲಲಿ
ಕೊರೆವ ಕುಳಿರ್ಗಾಳಿ.

೨

ಮಲೆವೊನಲಿನ ತಡಿಯಲ್ಲಿ
ಈ ಆಲದ ಅಡಿಯಲ್ಲಿ
ಕಿರಿಯಲೆಗಳ ಏಳಿಪ ಜಲ
ಸಿಂಚನದಲಿ ಬಲು ನಿರ್ಮಲ—
ವಹ ಹಸುರಿನ ಮೇಲೆ
ಚಿರನಿದ್ರೆಯೊಳೊರಗಿರುವಳು
ಎನ್ನೊಲುಮೆಯ ಬಾಲೆ!

೩

ದೇಶಾಂತರಗಳೊಳಲೆದು
ಸುಯ್ಯೆನೆ ತನ್ನುಸಿರೆಳೆದು
ಈ ಎಡೆಯಲಿ ನವಮಾರುತ
ಪ್ರೇಮದ ಹದನವ ಸಾರುತ
ಹಾಡುವನೆಂದೆಂದೂ,
ಒಲವಿನ ಕಳೆ ಸುಳಿದಾಗಲೆ
ಬಾಳ್ ಸಾರ್ಥಕವೆಂದು!

೪

ಇದೊ ನನ್ನಿರುವಿನ ರಾಣಿ,
ಪ್ರೇಮಾಂತ್ಯದ ವಾಣಿ,
ನಿನ್ನೆಡೆಯಲೆ ಎದೆ ಮೊರೆವುದು!
ಜೀವವು ಸಾವಿಗೆ ಬರೆವುದು,
"ನೀ ಬಂದೊಡೆ ಏನು?
ಒಲವಿನ ಐಸಿರಿಯಳಿಯದು!
ಸೋತಿಹೆಯೈ ನೀನು!"

ಶ್ರೀ ಜಿ. ವಾಸುದೇವರಾವ್


CC-0. Jangamwadi Math Collection. Digitized by eGangotri

# ಜಿಜ್ಞಾಸೆ

## ರೂಪಕಗಳಲ್ಲಿಯ ಪ್ರಯೋಗಗಳು

### ಸುಕುಮಾರ (Comedy) ಮತ್ತು ಆವಿದ್ಧ (Tragedy) ಪ್ರಯೋಗಗಳು

ನಮ್ಮಲ್ಲಿ ಅರ್ಥಕ್ಕಿಂತ ಶಬ್ದದಬಗ್ಗೆ ಬಡಿದಾಟ ಹೆಚ್ಚು. ಸಾಹಿತ್ಯಶಾಸ್ತ್ರ ಚರ್ಚೆಯಲ್ಲಿ Comedy ( ಕಾಮೆಡಿ ) Tragedy (ಟ್ರಾಜೆಡಿ) ಗಳು ಎಬ್ಬಿಸಿದ ಗೊಂದಲವು ಈ ಬಗೆಯದು. ಯಾವುದೊಂದು ಭಾಷೆಯೊಳಗಿನ ಯಾವುದೇ ಸುಸಂಸ್ಕೃತ ಶಬ್ದದ ಜಾತಿವ್ಯಾಪ್ತಿ ( denotation ) ಮತ್ತು ಗುಣವ್ಯಾಪ್ತಿ( conotation )ಗೆ ಪೂರ್ಣವಾಗಿ ಸರಿಹೋಗುವ ಶಬ್ದವು ಮತ್ತೊಂದು ಭಾಷೆಯಲ್ಲಿ ದೊರೆಯುವುದು ಅಸಾಧ್ಯವೇ ಆಗಿದೆ. ಉದಾಹರಣೆ–ಯೋಗ, ಭಕ್ತಿ, ರಸ, ಧರ್ಮ, love, romance, lyric, religion. ಹೀಗಿದ್ದೂ ನಾವು ಮರುಳರಂತೆ ಈ ಕೊಳ್ಳಿದೆವ್ವಗಳ ಬೆನ್ನು ಹತ್ತಿ ಅಡ್ಡಹಾದಿ ಬಿದ್ದು ಒದ್ದಾಡುತ್ತೇವೆ. 'ಮನೆಯ ದೇವರು ಮಣ್ಣುಮುಕ್ಕುವಾಗ ಹೆರವೂರ ದೆವ್ವವು ಹೋಳಿಗೆ ಬೇಡುತ್ತಿತ್ತು' ಎಂಬಂತೆ ನಮ್ಮ ಸಾಹಿತ್ಯ ಶಾಸ್ತ್ರದೊಳಗಿನ ಶಬ್ದಗಳು ನಮ್ಮ ಅಜ್ಞಾನದ ಮೂಲಕ ಜಂಗುತಿನ್ನುತ್ತಿರುವಾಗ ಪರಭಾಷೆಯೊಳಗಿನ ಶಬ್ದಗಳಿಗೆ ಸರಿಯಾದ ಪ್ರತಿಶಬ್ದಗಳು ನಮ್ಮಲ್ಲಿಲ್ಲವಲ್ಲ-ಎಂದು ನಮ್ಮ ಪೀಕಲಾಟ. **ಸುಕುಮಾರಪ್ರಯೋಗ** ಮತ್ತು **ಆವಿದ್ಧಪ್ರಯೋಗ** ಈ ಪದಗಳು ನಮ್ಮ ಉಪೇಕ್ಷೆಗೀಡಾಗಿವೆ. ಅವುಗಳ ಯೋಗಕ್ಷೇಮವನ್ನು ಕುರಿತು ವಿಚಾರಿಸುವ. ಭರತನಾಟ್ಯಶಾಸ್ತ್ರದ ೧೮ನೆಯ ಅಧ್ಯಾಯದಲ್ಲಿ ಹೀಗೆ ಬರೆದಿದೆ—

> ಪ್ರಯೋಗೋ ದ್ವಿವಿಧಶ್ಚೈವ ವಿಜ್ಞೇಯೋ ನಾಟಕಾಶ್ರಯಃ ।
> **ಸುಕುಮಾರಸ್ತಥಾವಿದ್ಧೋ** ನಾಟ್ಯಯುಕ್ತಿಸಮಾಶ್ರಯಃ ॥ ೫೭
> ಡಿಮಃ ಸಮವಕಾರಶ್ಚ ವ್ಯಾಯೋಗೇಹಾಮೃಗೌ ತಥಾ ।
> ಏತಾನ್ಯಾವಿದ್ಧ ಸಂಜ್ಞಾನಿ ವಿಜ್ಞೇಯಾನಿ ಪ್ರಯೋಕ್ತೃಭಿಃ ॥೬೦
> ನಾಟಕಂ ಸಪ್ರಕರಣಂ ಭಾಣೋ ವೀಥ್ಯಂಕ ನಾಟಿಕೇ ।
> ಸುಕುಮಾರ ಪ್ರಯೋಗಾಣಿ ಮಾನುಷೇಷ್ವಾಶ್ರಿತಾನಿ ಚ ॥ ೬೨

ಇದರ ತಾತ್ಪರ್ಯವೇನಂದರೆ– ನಾಟಕದಲ್ಲಿ ಸುಕುಮಾರ ಆವಿದ್ಧ ಎಂದು ಎರಡು ಪ್ರಯೋಗಗಳಿವೆ. ಡಿಮ, ಸಮವಕಾರ, ವ್ಯಾಯೋಗ, ಈಹಾಮೃಗ ಈ ನಾ[illegible] ಆವಿದ್ಧರೂಪಕಗಳು. ನಾಟಕ, ಪ್ರಕರಣ, ಭಾಣ, [illegible] ಅಂಕ ಈ ಆಯ್ದು ಸುಕುಮಾರಪ್ರಯೋಗಗಳು. [illegible] ಶಾಸ್ತ್ರದಲ್ಲಿಯೂ, ದಶರೂಪಕ – ಸಾಹಿತ್ಯದ[illegible] ಗಳಲ್ಲಿಯೂ ಕೊಟ್ಟ ಈ ರೂಪಕಗಳ ವ್ಯಾಖ್ಯೆ[illegible]ಳನ್ನು ನೋಡಿದರೆ, ಯಾವ ಅಕ್ಕರಿಗರಿಗೂ ಸುಕು[illegible] ಪ್ರಯೋಗ ಮತ್ತು ಆವಿದ್ಧಪ್ರಯೋಗ ಈ ಮಾ[illegible] ಎಷ್ಟೋಮಟ್ಟಿಗೆ Comedy ಮತ್ತು Trag[illegible] ಜಾತಿಗುಣವ್ಯಾಪ್ತಿಗೆ ಸರಿಹೋಗುವವು; ಎಂದು [illegible] ಬರದಿರದು. ಹಾಗಾದರೆ ಈ ಮಾತುಗಳ ಜೀರ್ಣೋ[illegible]ವಾಗಬಾರದೇಕೆ? ಈ ಶಬ್ದದೈವತಗಳಿಗೆ ನಮ್ಮ [illegible] ವಿಮರ್ಶೆಯು ಸಂಸ್ಕಾರವನ್ನು ಕೊಟ್ಟರೆ ನಮ[illegible] ಬೇಕಾಗಿರುವ ಅರ್ಥವನ್ನೇ ಅವು ಕೊಡಲು ಸ[illegible]ವಾಗಿವೆ. Comedy ಮತ್ತು Tragedyಗಳ [illegible] ಅರ್ಥವ್ಯಾಪ್ತಿಯು ಪ್ರಾರಂಭದಲ್ಲಿರಲಿಲ್ಲವೆಂಬುದ[illegible] ಮಾತ್ಯಸಾಹಿತ್ಯೇತಿಹಾಸಾಭ್ಯಾಸಿಗೆ ತಿಳಿದ ಮಾತು[illegible] ಮೇಲೆ ಆವರ ಜೀವಂತಸಾಹಿತ್ಯದಲ್ಲಿ ದಿನದಿನವೂ [illegible] ಲಿರುವ ವಿಸ್ತಾರ-ಸಂಕೋಚಗಳನ್ನು ಹೊಂ[illegible] ಆವರ ಅಭಿಪ್ರಾಯಗಳಿಗೆ ಸರಿಹೋಗುವಂತೆ ನ[illegible] ಗಳನ್ನು ಯಾವಾಗಲೂ ತಿದ್ದುತ್ತ ತೀಡುತ್ತ ಕ[illegible] ದನ್ನು ಬಿಟ್ಟು, ಸಮ್ಮ ಶಬ್ದಗಳಿಗೇ ನವೀನಭಾ[illegible] ರೆದರೆ ತಪ್ಪೇ? ಭದ್ರು, ರುದ್ರ, ಶೋಭಾಂತ, ಕ್ಲೇ[illegible] ಹದಗೊನೆ, ಮುದಗೊನೆ, ದುಃಖಾಂತ-ದು[illegible] ಖೇದಾಂತ ಮೋದಾಂತ ಇವುಗಳ ಅನವಶ್ಯಕ [illegible] ನಿಯಮನವು ಅಗತ್ಯವಲ್ಲವೇ? ಸಾಹಿತಿಗಳು ತ[illegible] ಪ್ರಾಯಗಳನ್ನು ಬರೆಯುವ ಕೃಪೆಮಾಡುವರೇ!

**ಟೀಪು**—( ಭ. ನಾ. ಶಾ. ೧೮ ನೆಯ ಅ[illegible] ಭಾಷಾಂತರವು ರಂಗಭೂಮಿ ಸಂಪುಟ ೬. ಸಂ. ೧೧ ರ[illegible] ದ್ವಾಜರಿಂದ ಪ್ರಕಟಿತವಾಗಿದೆ. ರೂಪಕಗಳ ವರ್ಣನೆಯು [illegible] ಕೃತಿಯ ಯಲ್ಲಿ ಶ್ರೀ. ಎ. ಆರ್. ಕೃಷ್ಣಶಾಸ್ತ್ರಿಗಳಿಂದ [illegible]

—ಬೇಂದ್ರೆ [illegible]

CC-0. Jangamwadi Math Collection. Digitized by eGangotri



# ಎರಡು ಪೌರಾಣಿಕ ನಾಟಕಗಳು

(ಪುಸ್ತಕಾವಲೋಕನ)

ಲೇ:—ಪ್ರೊ. ವಿ. ಕೃ. ಗೋಕಾಕ, ಪುಣೆ

**(೧) ಸೊಹ್ರಾಬ್-ರುಸ್ತುಂ** ಲೇ:—ಶ್ರೀ ವಿ. ಸೀತಾರಾಮಯ್ಯನವರು ಬೆಂಗಳೂರು

**(೨) ಮಂಡೋದರಿ** ಲೇ:—ಶ್ರೀ ಸಿ. ಕೆ. ವೆಂಕಟರಾಮಯ್ಯನವರು ಬೆಂಗಳೂರು

'ಮ್ಯಾಥ್ಯೂ ಆರ್ನೊಲ್ಡ್' ಎಂಬ ಪ್ರಸಿದ್ಧ ಇಂಗ್ಲ ಕವಿಯು **'ಸೊಹ್ರಾಬ್-ರುಸ್ತುಂ** ಎಂಬ ಹೆಸರಿನ ಒಂದು ಮಹಾ ಕಾವ್ಯವನ್ನು ಬರೆದನು. ಅದು ಕಾವ್ಯವಾಗಿದ್ದುದರಿಂದ ಅದರಲ್ಲಿಯ ಕೆಲವು ಗುಣಗಳು ವಿ. ಸೀ ಅವರು ಅದೇ ವಸ್ತುವನ್ನಿಟ್ಟುಕೊಂಡು ಬರೆದ ನಾಟಕದಲ್ಲಿ ಇಲ್ಲವೆಂದು ಹೇಳಬಹುದು. ಉದಾಹರಣಾರ್ಥವಾಗಿ: "O thou young man, the air of Heaven is soft and warm and pleasant; but the grave is cold. Heaven's air is better than the cold, dead grave" ಎಂಬಲ್ಲಿಯ ರಸಮಯ ವಾಣಿಯು ಇದೇ ಭಾವನೆಯನ್ನೊಳಗೊಂಡ ಸೋಹ್ರಾಬನ ಭಾಷಣದಲ್ಲಿ ಬರುವುದಿಲ್ಲ. ಇದಲ್ಲದೆ ಆರ್ನೋಲ್ಡನ ಮೋಹಕವಾದ ಉಪಮೆಗಳಿಗೂ ಈ ನಾಟಕದಲ್ಲಿ ಸ್ಥಾನವಿಲ್ಲ. ಹಾಗೆಯೇ ಅವನ ಗಂಭೀರವಾದ ವರ್ಣನೆಯು ಇಲ್ಲಿ ಕಾಣಿಸಿಕೊಳ್ಳಲಾರದು.

ಹೀಗೆ ವಿಪರ್ಯಾಸವಾಗುವುದು ಸಹಜವಾಗಿದೆ. ನಾಟಕದ ಗುಣವು ನಾಟಕಕ್ಕೆ; ಕಾವ್ಯದ ಗುಣವು ಕಾವ್ಯಕ್ಕೆ. ಆದರೆ ಕಥೆಯು ಹೀಗೆ ರೂಪಾಂತರ ಹೊಂದುವಾಗ ಅದರ ಭಾವನೆಯಲ್ಲಿಯೂ ಒಂದು ಪ್ರಬಲವಾದ ಮಾರ್ಪಾಟಾಗಿದೆ. ಅದು ಒಂದು "ಟ್ರ್ಯಾಜಡಿ" ಇಲ್ಲವೆ ರುದ್ರ ದೃಶ್ಯ. ಕೊನೆಗೆ ಯಾವ ಸಮಾಧಾನವೂ ಇಲ್ಲ, ಯಾವ ದಂಪತಿಗಳ ಸಮ್ಮೀಲನವೂ ಇಲ್ಲ. ಸೊಹ್ರಾಬನು ಸಾಯಲಾರದೆ ಸಾಯುತ್ತಾನೆ. ರುಸ್ತುಮನು ದೈವದ ವಿಚಿತ್ರ ಕ್ರೂರತನಕ್ಕಾಗಿ ಕೊರಗುತ್ತಾನೆ:

Unwillingly the spirit fled away,
Regretting the warm mansion which it left,
And youth and bloom and this delightful world.

So on the bloody sand. Sohrab lay dead.
And the great Rustum drew his horseman's cloak
Down ov'r his face and sate by his dead son"

ಇದರಿಂದ ದೈವದ ಗತಿಯು ವಿದಿತವಾಗುವುದೇ ಹೊರತು ಮನಸ್ಸಿಗೆ ಯಾವ ಸಾಂತ್ವನವೂ ಇಲ್ಲ. ಆದರೆ ಇಂಥ ಶೋಕಾವಿಷ್ಟ ಸನ್ನಿವೇಶಗಳನ್ನು ಸ್ಮರಿಸುತ್ತ ಮನಸ್ಸು ಒಂದು ಉದಾತ್ತವಾದ ಶಾಂತಿಯ ಗುಹೆಯನ್ನು ಹೊಕ್ಕು ಬಿಡುವುದು:

"But the majestic river floated on,
Out of the might and hum of that low land,"

ಆದರೆ ನಾಟಕದಲ್ಲಿ ಹೀಗಿಲ್ಲ. ಸಾಯಲಾರದ ಸೊಹ್ರಾಬನು ವಿಧಿಸಿಯಮವು ಕಠಿಣವೆಂದು ತಿಳಿದಿದ್ದರೂ ಇಲ್ಲಿ

CC-0. Jangamwadi Math Collection. Digitized by eGangotri

ಸಂತೋಷದಿಂದ ಸಾಯುತ್ತಾನೆ: "ನನಗಿದು ಸಂತೋಷದ ದಿನ.... ಅಪ್ಪಾ, ಅಮ್ಮನನ್ನೂ ನಿಮ್ಮನ್ನೂ ಸೇರಿಸುವೆನೆಂದು ಅವರಿಗೆ ಮಾತು ಕೊಟ್ಟಿದ್ದೆ—ದೇವರು ದೊಡ್ಡವನು—ಆ ಆಶೆಯನ್ನು ನಡೆಯಿಸಿ ಕೊಟ್ಟ." ಇಲ್ಲಿ ಆಕ್ಸಸ್ ನದಿಯ ಶಾಂತ ಪ್ರವಾಹವು ಅವನ ಮನಸ್ಸಿನ ಶಾಂತಿಯನ್ನು ಮಾತ್ರ ಸೂಚಿಸುತ್ತದೆ. ಇದಲ್ಲದೆ ಮುಂದೆ ಆ ಸೊಹ್ರಾಬನು ಗತಪ್ರಾಣನಾಗಲು ಅವನ ಶವದ ಬದಿಗೆ ತಂದೆತಾಯಿಗಳು ಮತ್ತೆ ಕೂಡುತ್ತಾರೆ: "ಅದು ಹುಟ್ಟುವ ಮುಂಚೆ; ಅದು ತೀರಿಹೋದ ಮೇಲೆ ಇಲ್ಲಿ - ಹೀಗೆ." ಅದೃಷ್ಟದ ಹಾದಿಯು ವಿಸ್ಮಯಕಾರಕವಾದದ್ದು. ದಂಪತಿಗಳ ಪುನರ್ಘಟನೆಗಾಗಿ ಅವರ ಮಗನ ಸಾವನ್ನು ತಂದೊಡ್ಡುವುದು. ಅಂತೂ ಇಲ್ಲಿ ಸೊಹ್ರಾಬನ ಮರಣವು ಹೃದಯಭೇದಕವಾದ, ಮುಖ್ಯವಾದ ಸನ್ನಿವೇಶವಾಗಿದ್ದರೂ, ಅದು ಮನಸ್ಸಿನಲ್ಲಿ ಉಳಿಯುವ ಕೊನೆಯ ಮಾತಲ್ಲ. ದಂಪತಿಗಳ ಸಮ್ಮಿಲನಕ್ಕಾಗಿ ದೈವವು ತನ್ನ ಅತಿಮಾನುಷ ರೀತಿಯಿಂದ ಒದಗಿಸಿ ಕೊಟ್ಟ ಸಾಧನವಾಗಿ ಮಾತ್ರ ಬಂದಿದೆ. ಲೇಖಕರ ಮನಸ್ಸಿನಲ್ಲಿ ಮೊದಲು ಮೂಡಿದ ಚಿತ್ರವೇ ನಮ್ಮ ಮನಸ್ಸಿನಲ್ಲಿ ನಿರಂತರವಾಗಿ ಉಳಿಯುವುದು. ಈ ಮಾರ್ಪಾಟು ಮೋಹಕವಾಗಿದ್ದು ಸರ್ವಥಾ ಸ್ತುತ್ಯವಾಗಿದೆ. ಲೇಖಕರಿಗಿದ್ದ ಕಲ್ಪನಾಶಕ್ತಿಯ ಸಾಮರ್ಥ್ಯವನ್ನು ಇದು ನಿಶ್ಚಯವಾಗಿ ಅರಳಿಸಿ ತೋರಿಸುತ್ತದೆ. ಅವರು ಆರ್ನೋಲ್ಡನ ಚಿತ್ರದ ಬದಲು ಕಣ್ಣೆದುರಿಗೆ ಅದರ ಸಮಾನವಾದ ಇನ್ನೊಂದು ಚಿತ್ರವನ್ನು ಹಿಡಿದಿರುವರಲ್ಲದೆ ಮೊದಲಿನ ಚಿತ್ರವನ್ನು ಕೆಡಿಸಿಲ್ಲ. ಇದೊಂದು ಉಜ್ವಲವಾದ ನಾಟಕವೆಂದು ಹೇಳಬಹುದು.

ಆದರೆ ಲೇಖಕರ ಇನ್ನುಳಿದ ಉದ್ದೇಶಗಳು ಅಷ್ಟು ಚೆನ್ನಾಗಿ ಸಾಧಿಸಿಲ್ಲ. "ವಿಧಿಯು ಗಿಡುಗನಂತೆ ಹಾರಾಡಿ ಅವರ ಕಾರ್ಯಗಳನ್ನು ನಿರ್ಧರಿಸುತ್ತಿದ್ದಿತೆಂಬುದೂ ಇಲ್ಲಿ ಸ್ವಲ್ಪಮಟ್ಟಿಗೆ ಹೊರಡಬಹುದು" ಎಂದು ಅವರು ಹೇಳಿದ್ದಾರೆ. ಆದರೆ ನಮ್ಮ ಕಾರ್ಯಗಳನ್ನು ನಿರ್ಧರಿಸುವ ದೈವಗತಿಯನ್ನು ನಿರ್ಧರಿಸುವುದು ಅತಿ ಕಠಿಣವಾದ ಕೆಲಸ. ಆರ್ನೋಲ್ಡ ಕವಿಯು ಅದಕ್ಕಿಂತೇ ಈ ಕಗ್ಗಂಟನ್ನು ಬಿಚ್ಚಲು ಹವಣಿಸಿಲ್ಲ. ತನ್ನ ಕಾವ್ಯದ ಸುರಿಮಳೆಯಿಂದ, ಶೈಲಿಯ ಗಾಂಭೀರ್ಯದಿಂದ, ಉಪಮೆಗಳ ಸೌಂದರ್ಯದಿಂದ, ಹಾಗು ಕಥಾನಕದ ತೀವ್ರಗತಿಯಿಂದ ಈ ಭಾಗವನ್ನು ಮರೆಯಿಸಿಬಿಟ್ಟು ಒಟ್ಟಿನ ಈ ಅಮಾನುಷ ದ್ವಂದ್ವಯುದ್ಧವು ದೈವದ ಕೃತಿ ಕಾಣಿಸುವಂತೆ ಮಾಡಿದ್ದಾನೆ. ಆದರೆ ಬುದ್ಧಿ ವಲಸಕ್ಕೆ ಎಡೆಗೊಡುವ ನಾಟಕದಲ್ಲಿ ಮನಸ್ಸ ವಂತೆ ದೈವಗತಿಯನ್ನು ಚಿತ್ರಿಸಿ ತೋರಿಸುವುದು ಬಿಗಿಯಾದ ಮಾತು. ತಾಹಮಿನೆ, ಸುಲ್ತಾನ್, ಮಾನ್, ಅಫ್ರಾಸಿಯಾಬ್, ಪೆರಾನವೈಸ್,- ನಿಷ್ಫಲಪ್ರಯತ್ನಗಳು ದೈವದ ಸಾಮರ್ಥ್ಯ ತೋರಿಸುವಂತೆ ಲೇಖಕರು ಮಾಡಿದ್ದಾರೆ. ಹಳೆಯ ಕಥೆಗಳಲ್ಲಿರುವ ಸತ್ಯಾಂಶದ ಬಗ್ಗೆ ದಾಟಕ್ಕೆ ಪ್ರಾರಂಭವಾದ ಕೂಡಲೆ ಅವುಗಳ ವಿ ಸಂಶಯವು ಉತ್ಪನ್ನವಾಗುತ್ತದೆ. ಇದಲ್ಲದೆ ಹಾರಾಟವು ದಂಪತಿಗಳ ಸಮ್ಮಿಲನವನ್ನೊಳಗೊ ರೂಪಕಕ್ಕಿಂತ ಆರ್ನೋಲ್ಡನ ಕವಿತೆಯಲ್ಲಿ ಚೆನ್ನಾಗಿ ವ್ಯಕ್ತವಾಗುತ್ತದೆ.

ಇನ್ನೊಂದು ವಿಚಾರ. "ನಮ್ಮ ನಾಡಿನ ದಿ ಬಳಕೆಯ ಭಾಷೆಯಲ್ಲಿಯೇ ಇದನ್ನು ಬರೆಯುವ ಮಾಡಿದ್ದೇನೆ" ಎಂದು ಲೇಖಕರು ಹೇಳಿದ್ದಾರೆ. ಇದೇನು ಅಷ್ಟೊಂದು ಹೊಸತಾದ ಮಾತಲ್ಲ. ವಾಸರ 'ತಾಳೀಕೋಟೆ' ಯಲ್ಲಿ ಇದೇ ಮಾ ಶೈಲಿಯೇ ವ್ಯಕ್ತವಾಗುತ್ತದೆ. ಆದರೆ ಒಟ್ಟಾರೆ ಶೈಲಿಯಲ್ಲಿ ಸಂಯಮ, ಸಹಜಮನೋಹರತೆ- ಇವೆಯೆಂದು ಹೇಳಬಹುದು. ತಾಹಮಿನೆಯ ಕೆ ಮಾತುಗಳು ಎದೆಯನ್ನಿರಿಯದೆ ಬಿಡವು. ಆದರೆ ಇ ಕೆಲವುಪ್ರಯೋಗಗಳು ಮನೋರಂಜಕವಾಗಿಲ್ಲ. ರೀಕು ಜೈ!" "ಇರಾನ್‌ಕು ಜೈ" ಎಂದು ಉದ್ಘೋಷಿಸುವಾಗ ಅವರು ಇಂದಿನ ಆ ವನ್ನು ನೋಡಿ ಹೋಗಿದ್ದರೇನೋ ಎಂದೆನಿಸುತ್ತದೆ.

ಮೊದಲನೆಯ ನಾಲ್ಕುಪ್ರವೇಶಗಳು, ಪ್ರವೇಶ, ಹಾಗು ಕೊನೆಯ ಪ್ರವೇಶದ ಕಡೆಯ ಇವೇ ಮೊದಲಾದುವುಗಳಲ್ಲಿ ಲೇಖಕರ ಸ್ವಯಂಸ್ಫೂ ಯನ್ನು ಕಾಣಬಹುದು. ಉಳಿದುವುಗಳಿಗೆಲ್ಲ ಆರ್ನೋ ಕವಿತೆಯೇ ಮೂಲವಾಗಿದೆ. ಆದರೆ ನಾಟಕದಲ್ಲಿ ಹೊಸ ಕಲ್ಪನೆಯಿದೆ; ಪ್ರತಿಭೆಯ ಸಂಚಾರವಾಗಿದೆ

CC-0. Jangamwadi Math Collection. Digitized by eGangotri

ಈ ವಿಹಂಗಮಾವಲೋಕನದ ಮೇಲಿಂದ ಪೌರಾಣಿಕ ನಾಟಕದ ಸ್ವರೂಪವು ಸಹಜವಾಗಿ ಗೊತ್ತಾಗಬಹುದು. ಸರ್ವಸಾಧಾರಣ ಸಂವಿಧಾನಕಗಳಂತೆ ಪುರಾಣವೂ ( legend ) ನಾಟ್ಯಕಲೆಯ ಒಂದು ಕಥಾವಸ್ತುವಾಗ ಬಹುದು. ಆ ಮೇಲೆ ನಾಟ್ಯಶಾಸ್ತ್ರದ ಉಳಿದ ನಿಯಮ ಗಳೇ ಇಂತಹ ನಾಟಕಕ್ಕೂ ಅನ್ವಯಿಸುವವು. ಆದರೆ ವಸ್ತುವು ಪೌರಾಣಿಕವಾಗಿದ್ದರಿಂದ ಇನ್ನೂ ಕೆಲವು ಮಾತುಗಳನ್ನು ಲಕ್ಷ್ಯದಲ್ಲಿಡಬೇಕಾಗುವದು. ಪುರಾಣದ ಕಥೆಯ ಮೂಲದಲ್ಲಿ ಕೆಲವು ಗ್ರುಹಿಕೆಗಳಿರುವುದುಂಟು. ಅವುಗಳ ವಿಷಯವಾಗಿ ನಾಟಕಕಾರನು ಎಚ್ಚರಗೊಂಡವ ನಾಗಿರಬೇಕು. ಅಂದರೆ, ಬುದ್ಧಿಯ ಹಿಡಿತಕ್ಕೆ ಈ ಗ್ರಹಿಕೆ ಗಳನ್ನು ತರಲೇ ಕೂಡದೆಂದು ನಮಗೆನಿಸುತ್ತದೆ. ಉದಾ ಹರಣಾರ್ಥವಾಗಿ, ಸೊಹ್ರಾಬನ ಹುಚ್ಚು ಹಂಚಿಕೆಯನ್ನು ತಡೆದು ನಿಲ್ಲಿಸಲು ಯಾರೂ ಇರಲಿಲ್ಲವೇನೆಂಬ ಪ್ರಶ್ನೆಗೆ ಸಮರ್ಪಕವಾದ ಉತ್ತರವನ್ನು ಹೇಳುವವರಾರು? ಇಲ್ಲವೆ ಶ್ರೀ. ಸಿ. ಕೆ. ವೆಂಕಟರಾಮಯ್ಯನವರ **'ಮಂಡೋದರಿ'** ಯಲ್ಲಿರುವಂತೆ ಸರ್ವಗುಣಮಂಡಿತನಾದ ರಾವಣನು ತನ್ನ ಅಮೋಘವಾದ ಆತ್ಮಬಲವನ್ನು ಮರೆತು,ಲೋಕೋ ತ್ತರ ಸುಂದರಿಯಾದ ಹೆಂಡತಿಯ ಮನಸ್ಸನ್ನು ನೋಯಿಸಿ ಸೀತಾದ್ರೋಹವನ್ನೇಕೆ ಬಗೆದನು ? 'ದೈವಗತಿ!' ಎಂದು ಉತ್ತರವನ್ನಿತ್ತರೆ "ಏನೋ! ಯಾರು ಬಲ್ಲರು!" ಎಂದ ಹಾಗೆಯೇ ಸರಿ. ಅದರಂತೆ ಶೆಕ್ಸಪಿಯರನು ಸೃಷ್ಟಿಸಿದ 'ಲಿಯರ್' ರಾಜನಿಗೆ ತನ್ನ ಮೇಲಿದ್ದ ಮಕ್ಕಳ ಕೃತ್ರಿಮ ಪ್ರೇಮವನ್ನು ವಿಂಗಡಿಸಲು ಹೇಗೆ ಶಕ್ಯವಿದ್ದಿಲ್ಲ? ಇಂಥ ಸಂಗತಿಗಳು ಸಂಭವಿಸಿರಬಹುದು. ಬೆರಗು – ಬೆಡಗುಗಳ ತವರುಮನೆಯಾದ ಈ ಭೂಮಿಯಲ್ಲಿ ಇವೇನು ಅಸಂ ಭವನೀಯವಲ್ಲ. ಆದರೆ ಕಲೆಯ ಸೀಮೆಯಲ್ಲಿ ಇಂತಹ ಅನಿಶ್ಚಿತ ಸನ್ನಿವೇಶಗಳಿಗೆ ಆಸ್ಪದವಿದ್ದಲ್ಲಿ, ಅವು ಮನಸ್ಸಿ ನಲ್ಲಿ ನಡುವುದಿಲ್ಲ. ನಡುವಂತೆ ಮಾಡಲು ಒಂದೇ ಒಂದು ಹಾದಿಯಿದೆ:– "That willing suspension of disbelief which constitutes poetic faith" ಎಂದರೆ ಈ ಅವಿಶ್ವಾಸ ವೃತ್ತಿಯನ್ನೇ ಮಾಯವಾಗಿಸಿಬಿಡುವ ಜಾಣ್ಮೆ ಬೇಕು. ಇದೇ ಕಾವ್ಯಧರ್ಮದ ಆಧಾರ ಸ್ತಂಭದಂತಿದ್ದ ಸಿದ್ಧಾಂತ.

ಇದು ವಿ. ಸೀ ಯವರ ನಾಟಕದಲ್ಲಿ ತಕ್ಕಮಟ್ಟಿಗೆ ಸಾಧಿಸಿದೆ. **'ಮಂಡೋದರಿ'** ಯಲ್ಲಿ ಇದರ ಅವಶ್ಯ ಕತೆಯು ಹೆಚ್ಚಾಗಿದ್ದುದರಿಂದ, ಅಲ್ಲಿ ಹೆಚ್ಚಾಗಿ ಸಾಧಿಸಿದೆ. ರಾವಣನ ಹತ್ತುತಲೆ, ಸಮುದ್ರಸೇತು, ಇಂದ್ರ ನೊಡನೆ ಯುದ್ಧ, – ಇವುಗಳ ವಿಷಯದಲ್ಲಿ ನಮಗೆ ಗ್ರಂಥವನ್ನೋದುವಾಗ ಯಾವ ಸಂಶಯವೂ ಉತ್ಪನ್ನ ವಾಗುವುದಿಲ್ಲ. ಅಸುರರ ಸಂಭಾಷಣೆಗಳನ್ನು ಕೇಳಿ ಬುದ್ಧಿಯು ಸ್ವಲ್ಪಜೇತರಿಸಿಕೊಳ್ಳುವುದು. ಆದರೆ "ಅಸುರ ರಾಗಿದ್ದೂ ದೇವತ್ವವಿಲ್ಲದವರಾದಿರಿ" ಎಂಬ ನಾರದರ ಮಾತನ್ನು ಕೇಳಿ ಮತ್ತೆ ನಿದ್ರೆ ಹೋಗುವದು. ಒಂದು ಸಂದರ್ಭವು ಮಾತ್ರ ಸಂಶಯಾಸ್ಪದವಾಗಿ ಉಳಿಯು ವದು. ಲಕ್ಷ್ಮಣನನ್ನು ಸಂಜೀವಿನಿ ಕಡ್ಡಿಯಿಂದ ಉಳಿಸಿದ ಸುಷೇಣನು ಮಂಡೋದರಿಯನ್ನು ಬದುಕಿಸಿಕೊಳ್ಳಲು ಹೇಗೆ ಸಮರ್ಥನಾಗಲಿಲ್ಲ? ಮಂಡೋದರಿಯ ಮರಣದ ರೀತಿಯ ವಿಷಯಕ್ಕೆ ಪಾತ್ರಗಳ ನಡುವೆ ಬೆಳೆದ ಚರ್ಚೆಯೇ ಈ ಸಂಶಯಕ್ಕೆ ಕಾರಣವಾಗಿದೆ.

'ಮಂಡೋದರಿ'ಯು ಒಂದು ಉತ್ತಮವಾದ ರುದ್ರ ರೂಪಕವೆಂದು ಹೇಳಬಹುದು. 'ಟ್ರ್ಯಾಜಡಿ' ಗೆ ಬೇಕಾದ ಎಲ್ಲ ಅಲಂಕಾರಗಳಿಂದ ಇದು ಭೂಷಿತವಾಗಿದೆ. 'ನಮ್ಮ ಸಮಾಜ'ದಲ್ಲಿ ಸಂಯಮ ಶಕ್ತಿಯಿಲ್ಲವೆಂದು ನಾವು ಉಲ್ಲೇಖಿಸಿದ್ದೆವು. ಆದರೆ ಅನಂತವಾದ ರಾಮಾ ಯಣವನ್ನು ೧೩ ದೃಶ್ಯಗಳಲ್ಲಿಯೇ ಅರಳಿಸುವ ಪ್ರಸಂಗವು ಬಂದೊದಗಿದ್ದರಿಂದ ಇಲ್ಲಿಯ ಲೇಖಕರ ಬಿಗುವೂ ಕಥಾ ವೇಗವೂ ಆಶ್ಚರ್ಯಕಾರಕವಾಗಿವೆ. ಅನಾವಶ್ಯಕವಾದ ಒಂದು ಮಾತಾದರೂ ಈ ನಾಟಕದಲ್ಲಿದ್ದಂತೆ ತೋರುವ ದಿಲ್ಲ. ರಾವಣ, ಮಂಡೋದರಿ, – ಇವರೇ ನಾಯಕ – ನಾಯಕಿಯರು. ಆ ಮೇಲೆ ಸೀತಾಮಾತೆ, ವಿಭೀಷಣ ಮುಂತಾದವರು. ರಾವಣ — ಸೀತೆಯರ ನಡುವೆ ಮಂಡೋದರಿಯ ಮೂರ್ತಿಯು ನಯನಮನೋಹರ ವಾಗಿ ಕಂಗೋಳಿಸುತ್ತದೆ.

ಆಧುನಿಕ ಪೌರಾಣಿಕನಾಟಕಗಳಲ್ಲಿ ಇನ್ನೊಂದು ವೈಶಿಷ್ಟ್ಯವನ್ನು ಕಾಣಬಹುದು. ಆದಾವುದೆಂದರೆ ಇಂದಿನ ವಿಚಾರಕ್ಕೆ ಸರಿಯಾಗಿ ಹಿಂದಿನ ಪಾತ್ರಗಳ ಸ್ವಭಾವವನ್ನು ಹೊಂದಿಸಿಕೊಳ್ಳುವದು; ಅಂದರೆ ಹಳೆಯ ಕಥೆಗಳಲ್ಲಿಹೊಸ ತಾದ ಒಂದುಅರ್ಥವನ್ನು ಕಂಡುಕೊಳ್ಳುವುದು,ಹೀಗಾಗಿ ಹಿಂದಿನ ಅಮಾನುಷವ್ಯಕ್ತಿಗಳಿಗೆಲ್ಲ ನಾಟಕಕಾರರು ಮಾನವೀಯತೆಯನ್ನು (Humanisation)ಇತ್ತಿದ್ದಾರೆ. ಇಲ್ಲವೆ ತಮ್ಮ ಎದೆವುಗುವ ಭಾವಗಳಿಗೆ ಸರಿಹೋಗು



CC-0. Jangamwadi Math Collection. Digitized by eGangotri

ವಂತೆ ಆ ಕಥೆಗಳನ್ನು ಬದಲಿಸಿಕೊಂಡಿದ್ದಾರೆ. ಇದನ್ನು ಗದಾಯುದ್ಧ, ಸೊಹ್ರಾಬ್-ರುಸ್ತುಂ ಮುಂತಾದುವುಗಳಲ್ಲಿ ಕಾಣಬಹುದು. ಹಿಂದಿನ ಕವಿಗಳಿಗೂ ಇದೇನು ಅಪರಿಚಿತವಾಗಿದ್ದಿಲ್ಲ.

'ಮಂಡೋದರಿ'ಯ 'ಅವತಾರ'ವನ್ನು ವರ್ಣಿಸುವ ಕಾರ್ಯವನ್ನು ಕೈಕೊಂಡಿದ್ದ ಶ್ರೀ. ವೆಂಕಟರಾಮಯ್ಯನವರು ರಾವಣನ ರಾಕ್ಷಸೀವೃತ್ತಿಯನ್ನು ಸಹ ಕಿತ್ತೊಗೆದು ಆ ಪತಿವ್ರತೆಗೆ ತಕ್ಕ ಪತಿಯನ್ನಾಗಿ ಮಾಡಿದ್ದಾರೆ. ರಾವಣನು ಈಗ ನಿಶಾಚರನಲ್ಲ. ಆದರೆ ಚಂದ್ರನಂತೆ ಒಂದೇ ಒಂದು ಕಲಂಕದಿಂದ ಕಲುಷಿತನಾದ ಮಾನವನು. ಎಲ್ಲವೂ ಉಜ್ವಲವಾಗಿ, ಸ್ವಯಂಪ್ರೇರಿತವಾಗಿ ಹರಿದುಬಂದಿದೆ. ಎರಡನೆಯ ಅಂಕದ ಮೂರನೆಯ ದೃಶ್ಯವೂ ಮೂರನೆಯ ಅಂಕದ ಒಂದನೆಯ ದೃಶ್ಯವೂ ಅತ್ಯದ್ಭುತವಾಗಿವೆ. ಕೊನೆಯ ಪ್ರವೇಶವನ್ನು ಓದುವಾಗ ಹೃದಯದಲ್ಲಿ ತಳಮಳವಾಗುವದು. "ಧರ್ಮ....ನಾನು ನಂಬಲಿಲ್ಲ. ನೀನು ನಂಬು....." ಎಂಬ ರಾವಣನ ಮರಣವಾಕ್ಯವನ್ನು ಕನ್ನಡಿಗರು ಸಹಜವಾಗಿ ಮರೆಯಲಾರರು.

**ಕನ್ನಡಕೇಸರಿ**—ಐತಿಹಾಸಿಕ ನಾಟಕವು. ಬೆಳಗಾಂವಿಯಲ್ಲಿ ಹೊರಡುತಿರುವ "ಶ್ರೀಭುವನೇಶ್ವರೀ ಗ್ರಂಥಮಾಲೆ"ಯ "೧ನೆಯ ಗ್ರಂಥ"ವು. ಬರೆದವರು ಶ್ರೀ. ಬಿ. ಕಲ್ಯಾಣಶರ್ಮರು; ಪ್ರಕಾಶಕರು ಶ್ರೀ. ವೆಂಕಟೇಶ ಶ್ರೀನಿವಾಸ ಪಂಡಿತ ಬಿ. ಎ., ಎಲ್. ಎಲ್. ಬಿ. ಅವರು. ೮೨ ಪುಟಗಳು. ಬೆಲೆ ಎಂಟು ಆಣೆ

ಹಾಳಾಗಿ ಹೋದ ಕಿತ್ತೂರ ಸಂಸ್ಥಾನವನ್ನು ಮರಳಿ ಕಟ್ಟುವುದಕ್ಕೆ ಮಾಡಿದ ಪ್ರಯತ್ನವೇ ಈ ಐತಿಹಾಸಿಕ ನಾಟಕದ ಕಥಾವಸ್ತು. ಈ ಪ್ರಯತ್ನ ಮಾಡುವವರಲ್ಲಿ ಮುಂದಾಳುವಾದ ಸಂಗೊಳ್ಳಿಯ ರಾಯಣ್ಣನೇ ನಾಯಕನು. ನಾಟಕಕಾರರು ಅವನನ್ನೇ "ಕನ್ನಡ ಕೇಸರಿ" ಎಂಬ ಬಿರುದಿನಿಂದ ಕರೆದಿದ್ದಾರೆ. ನಮ್ಮಲ್ಲಿ ಐತಿಹಾಸಿಕ ನಾಟಕಗಳ ಕೊರತೆಯಿರುವುದೇನೋ ನಿಜ. ಆದರೆ ಆ ಕೊರತೆಯನ್ನು ಕಳೆಯಲು ಹೆಣಗುವವರು ಇತಿಹಾಸದೊಳಗಿಂದ ಉಚಿತವಾದ ಸನ್ನಿವೇಶಗಳನ್ನು ಆಯ್ದುಕೊಳ್ಳಬೇಕಾದುದು ಅವಶ್ಯಕ. ಪೌರ್ವಾತ್ಯ ಪಾಶ್ಚಾತ್ಯ ನಾಟಕಶಾಸ್ತ್ರವನ್ನು ಅಭ್ಯಸಿಸಬೇಕಾದುದು ಅಗತ್ಯ. ಕನ್ನಡ ರಂಗಭೂಮಿಯ ಮೇಲೆ ಬಂದಿರುವ ಇದುವರೆಗಿನ ನಾಟಕಗಳನ್ನು ಪರಿಶೀಲಿಸಿ ನೋಡಿದಲ್ಲಿ ಎಲ್ಲೆಲ್ಲಿಯೂ ಅಭ್ಯಾಸದ ಅಭಾವವೇ ಕಂಡುಬರು[...] ವುದು. ಪೌರಾಣಿಕ ನಾಟಕಗಳಲ್ಲಿಯ ನಾರದನ [...] ನೋವೆಬ್ಬಿಸುವ ಗಾಯನ, ವಿದೂಷಕನ ವಿಕಟಹಾ[...] ನಾಯಕನಾಯಿಕೆಯರ ಮಾತು-ಹಾಡುಗಳಲ್ಲಿ[...] ರಸಾಭಾಸ. ಇವೆಲ್ಲವೂ ಎಂದಿನಿಂದಲೊ ನಡೆದುಕೊ[...] ಬಂದುವು. ಇಂದೆಯೂ ಅದೇ ಸ್ಥಿತಿಯಲ್ಲಿವೆ. ಈ 'ಕ[...] ಕೇಸರಿ' ಒಂದು ಹೆಜ್ಜೆ ಮುಂದೆಯಿಟ್ಟಿದೆ. ಆ ಮು[...] ಹೆಜ್ಜೆಯೆಂದರೆ ಪುರಾಣವನ್ನು ಬಿಟ್ಟು ಇತಿಹಾಸದ ಕ[...] ನಡೆದುದು. ಇದೊಂದನ್ನು ಬಿಟ್ಟರೆ ಇನ್ನುಳಿದಾವ [...] ತಿಯನ್ನೂ ಇದರಲ್ಲಿ ನಾವು ಕಾಣಲಾರೆವು. ರಾಯಣ್ಣ[...] ವೈರಿಗಳ ಸೆರೆಯಲ್ಲಿ ಸಿಕ್ಕು ಪ್ರಾಣಾಂತ್ಯ[...] ಗುರಿಯಾಗುವುದರಲ್ಲಿ ಈ ನಾಟಕವು ಕೊನೆಗ[...] ರುದ್ರನಾಟಕದಲ್ಲಿರಬೇಕಾದ ಉತ್ಸಾಹ-ಶೋಕ[...] ಗಳು ಇದರಲ್ಲಿ ನಾಲ್ಕಾಣೆಯಷ್ಟಿದ್ದರೆ, ಎಲ್ಲಪ್ಪ-[...] ಇವರ ಅಸ್ವಾಭಾವಿಕಹಾಸ್ಯವು ಹನ್ನೆರಡಾಣೆಯ[...] ಅಂತಃಕರಣವನ್ನು ಅಲ್ಲಾಡಿಸಿಬಿಡುವಂತಹ ಭಾವ[...] ಪುಷ್ಟಿಯ ಕೊರತೆ ಎದ್ದು ಕಾಣುವಂತಿದೆ. ನಾಯಕ[...] ರಾಯಣ್ಣ-ಒಮ್ಮೊಮ್ಮೆ ನಾಗರಿಕಪಂಡಿತನಾಗಿ ಮ[...] ನಾಡುವನು. ಮತ್ತೆ ಒಮ್ಮೆ ಹಳ್ಳಿಯ ಹುಂಬ[...] ಮಾತನಾಡುವನು. ಶಾಂತಾನಂದನಂತಹ ಅಳುಬು[...] ಸನ್ಯಾಸಿಯಿಂದ ಈ ನಾಟಕಕ್ಕೆ ಯಾವ ಬಗೆಯ ಬ[...] ತಿಳಿಯದಾಗಿದೆ. ಮಾತನಾಡುವ ಭಾಷೆಯಲ್ಲಿ [...] ಬಹುದು; ಇಲ್ಲವೆ ಶುದ್ಧವಾದ ಭಾಷೆಯಲ್ಲಿ [...] ಬಹುದು. ಎರಡನ್ನೂ ಬೆರೆಯಿಸಿ ಬರೆದರೆ ಅಷ್ಟೊ[...] ಚೆನ್ನಾಗಿರದು. ಇಲ್ಲಿಯ ಹಾಡುಗಳಲ್ಲಿಯ ಭಾಷ[...] "ಇದೇನು ಕನ್ನಡವೇ?" ಎನ್ನುವಷ್ಟು ವಿಚಿತ್ರವಾ[...] ಕನ್ನಡದಲ್ಲಿ ತಲೆಯೆತ್ತುತ್ತಿರುವ ಪುಸ್ತಕಗಳು ಅ[...] ಒಳ್ಳೆಯವೆನಿಸಿಕೊಳುವಂತಿರಬೇಕೆಂದು ನಮ್ಮ ಆಕಾ[...] ಆದುದರಿಂದಲೆ ಕೆಲವೊಂದು ಮಾತುಗಳನ್ನು ಸ್ಪಷ್ಟ[...] ಹೇಳಿದುದರಿಂದ ಲೇಖಕರು-ಆತ್ಮೀಯ ಭಾವದ[...] ನಮ್ಮನ್ನು ಕ್ಷಮಿಸುವರೆಂದು ನಂಬಿರುವೆವು. [...] ತಲೂ ಹೆಚ್ಚಿನ ಯೋಗ್ಯತೆಯ ಗ್ರಂಥಗಳನ್ನು [...] ಅಪೇಕ್ಷಿಸುವೆವು.

**ಪಂಡಿತ ಮೋತೀಲಾಲ ನೆಹರು**—ಭುವನೇ[...] ಗ್ರಂಥಮಾಲೆಯ ಎರಡನೆಯ ಗ್ರಂಥವಿದು. ಶ್ರೀ. [...] ವೆಂಕಣ್ಣ ಅವರು ಪ್ರಕಾಶಕರು. ಕ್ರೌನ ಆ[...] ೪+೮೫ ಪುಟಗಳ ಪುಸ್ತಕ. ಬೆಲೆ ಆರುಆಣೆ.

CC-0. Jangamwadi Math Collection. Digitized by eGangotri

ಶ್ರೀ. ಬಳವಂತರಾವ ದಾತಾರ ಇವರ ಮುನ್ನುಡಿಯಿಂದೊಡಗೂಡಿದ ಈ ಪುಸ್ತಕದ ಆಯ್ಕೆಗಾರರು ಶ್ರೀ. ಬಿ. ಕಲ್ಯಾಣ ಶರ್ಮಾ ಅವರು. ಇವರು ತಮ್ಮ ಕಲ್ಪನೆಯಿಂದ 'ಮೋತಿಲಾಲ' ಎಂಬ ಶಬ್ದದ ಅರ್ಥವನ್ನು ಹೇಳಿ ಆ ಮೇಲೆ ಮುಂದೆ ಸಾಗಿರುವರು. ಮೋತಿಲಾಲರ ಚರಿತೆಯಿದೆಂದು ಮೊದಮೊದಲು ತೋರಿದರೂ ಅವರ ವ್ಯಾಖ್ಯಾನಗಳನ್ನೂ ಅವರ ಆಯುಷ್ಯದಲ್ಲಿ ಜರುಗಿದ ಮುಖ್ಯ ಮಾತುಗಳನ್ನೂ ಅವರ ಜೀವನದಲ್ಲಾದ ಪರಿವರ್ತನೆಗಳನ್ನೂ ಕೂಡಿಸಿಟ್ಟ ಪುಸ್ತಕವಿದೆಂದು ಓದಿದ ಮೇಲೆ ಗೊತ್ತಾಗುವದು. ಈ ಪುಸ್ತಕದಲ್ಲಿ ತುಂಬ'ಮೋತಿಲಾಲ' ಎಂಬ ಹೆಸರಿನಲ್ಲಿಯ 'ಮೋ-ದ' ಮುಂದಿನ ದೀರ್ಘವನ್ನು ಹಾರಿಸಿರುವರೇಕೋ ತಿಳಿಯದು.

ಭಾಷೆಯು ಸರಳವಾಗಿದೆ. ಮಾತಾಡುವ ಭಾಷೆಯೇ ಕೆಲಕೆಲವು ಕಡೆಗೆ ಬರೆಹದಲ್ಲಿಯೂ ಬಂದುಬಿಟ್ಟಿದೆ. ಅನುಚಿತವಾದ ಅಶುದ್ಧವಾದ ಮಾತುಗಳೂ ಇದರಲ್ಲಿ ಕೆಲವಿವೆ. ಉದಾ:- "ಸಿರಿಸಂಪತ್ತು ಸುಗುಣಗಳು ಮರದಿಂದ ತೂರುವಂತಿದ್ದುವು." (ಪು. ೨.) "ಜನೇ ತಾರೀಖಿನ ದಿವಸ ರಾತ್ರಿ ಬೆಳಗು ಮುಂಜಾನೆ ನಾಲ್ಕು ಗಂಟೆಗೆ" (ಪು. ೮೪.) ಇನ್ನೂ ಬೇಕಾದಷ್ಟು ದೊರೆಯುವವು. ಇಂತಹ ಪುಸ್ತಕಗಳು ಈಗ ಬೇಕೇಬೇಕು. ಈ ಪುಸ್ತಕದ ಕೊನೆಯಲ್ಲಿರುವ **ಸಿಡಿಲುಬಿತ್ತು** ಎಂಬ ಭಾಗವನ್ನು ಲೇಖಕರು ಎದೆಯು ಕರಗುವಂತೆ ಬರೆದಿದ್ದಾರೆ. ಇಂಥ ಧುರೀಣ ದೇಶಭಕ್ತರ ಚರಿತ್ರೆ-ವ್ಯಾಖ್ಯಾನಗಳು ಕನ್ನಡಿಗನ ಮನೆಯವಾಚನಾಲಯದಲ್ಲಿರಲವಶ್ಯವೆಂದು ನಮಗೆನಿಸುವುದು. ಮುದ್ರಣವೂ ಅಚ್ಚುಕಟ್ಟಾಗಿದೆ. ಬೆಳಗಾವಿಯಲ್ಲಿ ಬೇರೆ ಬೇರೆ ಕನ್ನಡ ಬರೆಹಗಾರರು ತಲೆಯೆತ್ತುತ್ತಿರುವುದು ನಮಗೆಲ್ಲ ಸಂತೋಷದ ಸಂಗತಿ.

---

ಗ। ಸಾಲಿ ರಾಮಚಂದ್ರರಾಯರ ಚಿರಂಜೀವ ಶ್ರೀಕೃಷ್ಣನು (ಜನನ ೨-೮-೧೯೧೪, ಹುಬ್ಬಳ್ಳಿ) ಪ್ಲೇಗಿನಿಂದ ೩-೧೨-೩೧ ದಿನ ಧಾರವಾಡದಲ್ಲಿ ದಿವಂಗತನಾದನು. ಚಿಕ್ಕ ವಯಸ್ಸಿನಲ್ಲಿಯೇ ರಾಷ್ಟ್ರದ ಸೇವೆಯನ್ನು ವೀರಪುತ್ರೋಚಿತವಾಗಿ ಮಾಡಿ ಜನ್ಮವನ್ನು ಸಾರ್ಥಕಗೊಳಿಸಿಕೊಂಡ ಇವನ ಅಕಾಲಿಕ ಮರಣಕ್ಕಾಗಿ ಯಾವ ಭಾವನೆಯನ್ನೂ ವ್ಯಕ್ತಗೊಳಿಸಲು ಶಬ್ದಗಳು ಬಾರವು. ಸಂ. ಜ. ಕ.

## ಪ್ರಾರ್ಥನೆ



ಸಾಲಿ ರಾಮಚಂದರಾಯರ ಚಿರಂಜೀವ ಶ್ರೀಕೃಷ್ಣನು

ಭುಗಿಲೆನುತೆ ಮೇಲ್ವಾಯ್ದು ಬರ್ಪ ದಳ್ಳುರಿಯ ನಾ-।
ಲಗೆಗಳುಗ್ರತೆಯೆನಿತೊ! ಶುದ್ಧಾತ್ಮನವನೆನ್ನ।
ಮಗನಾದನಾಹುತಿ! ಸುಡುತೆ ಮುಂಬರಿವುವಿವನೆಂತು
ಸುಗಿವೆನ್ನೆ ಸುತ್ತಲುಂ ಪರ್ಬುವೀಯುರಿಗಳ್ಗೆ!।
ಭಗವಂತ! 'ಶಾಂತಿ!' ಎನ್ನೈ, ತಂದೆ! ನಿನ್ನ ಸ-।
ಲ್ಮೆಗೆ ಪಾತ್ರವಾನಲ್ತೆ? ನೀಂ ಶಕ್ತಿ! ಸೈರಿಸಲ್ ಶಕ್ತಿಯಂ
ದಯೆಪಾಲಿಸಾ! ॥ ೧ ॥

ಬಿರುಗಾಳಿ ಬೀಸುವುದು ಕಡುಪಿಂದೆ ಬಿರ್ರೆನು-।
ತ್ತುರಿಗಳಂ ಪೆರ್ಚಿಸುತ್ತಮುಮು ಕರ್ವೊಗೆಗಳ-।
ಬ್ಬರದೆ ವಿಷಮಂ ತೂರುತುಸಿರನೇ ಕುಗ್ಗಿಪುವು!
ದುರ್ಬಲಂ ಜೀವಮಾಯ್ತು! ॥
ಅರರೆ! ಮೆಯ್ ಕುಸಿದವುದು! ಕಣ್ಗೆ ಕತ್ತಲೆಯಾಯ್ತು!।
ಕರುಣಾಳು! ಕೈನೀಡು! ನೀನಲ್ಲದಿನ್ನಾರ।
ನೆರವೆನಗೆ, ವಿಶ್ವಪತಿ! ನೀಂ ತಂದೆ! ನೀಂ ಮಗಂ! ನೀನೆನ್ನ
ಸಕಲಬಂಧು! ॥ ೨ ॥

ನಡೆವುದೈ ನೀನೆನ್ನ ಜತೆಯೊಳೆಡೆವಿಡದೆ ಕೆ-।
ಯ್ಪಿಡಿದಿನ್ನು ಮಗನವೋಲೀ ಕವಿದ ಕತ್ತಲೆಯು।
ನಡುವೆ ನೀಂ ಬೆಳಕಾಗಿ! ನೀಂ ನಿರಾಧಾರರಾಧಾರ
ವಾನೆಂದು ದೇವಾ! ॥

ನುಡಿದುದಂ ನಂಬಿರ್ಪೆನಾನಸನ್ಯಸೊ, ತಂದೆ!
ನುಡಿವುದೈ ಅಭಯವೆಂದೆನಗೊರ್ಮೆ! ಭೀತಿಯಂ।
ಬಿಡಿಸುವುದು ಭಗವಂತ! ಕರ್ತವ್ಯಪಥದೊಳ್ ನಡೆಯಿ-
ಸುವುದೆನ್ನನೊಲ್ದು! ॥ ೩ ॥

—ಸಾಲಿ ರಾಮಚಂದ್ರರಾಯ

CC-0. Jangamwadi Math Collection. Digitized by eGangotri

# ನಗೆ ಬಂದರೆ ನಕ್ಕುಬಿಡಿ

## ವಿದೂಷಕ ಪರಿಹಾಸ ಭಾಷೆ

ಸಂಪಾದಕ—W. P. B.

" ತೀರ ನಗೆಯಲ್ಲಿ ಹೇಳಿದ್ದನ್ನು ಪೂರಾ ನಿಜವೆಂದು ನಂಬಬೇಡಿರಿ! "

—ಕವಿ ಕಾಲಿದಾಸ

[ಇಲ್ಲಿಯ ಅಭಿಪ್ರಾಯಗಳಿಗೆ ನಾವಾರೂ ಜವಾಬ್ದಾರರಿಲ್ಲ. ಬೇಜವಾಬ್ದಾರ ರಾಜ್ಯದಲ್ಲಿ ಎಲ್ಲಿಯ ಜವಾಬದಾರಿ! ... ಡಬ್ಲ್ಯು. ಪಿ. ಬಿ. ಇವರೊಡನೆ ಪತ್ರವ್ಯವಹಾರ ಮಾಡುವವರು ' ಅಂಕಿತ ' ಗಳನ್ನು ತಮ್ಮ ' ಮುದ್ರಿಕೆ ' ' ಗುಪ್ತನಾಮ ' ... ಅವರ ನಿಜವಾದ ಹೆಸರುಗಳನ್ನು ಪ್ರಕಟಿಸಿ ಅವರಿಗೆ ಇಲ್ಲದ ಪ್ರಸಿದ್ಧಿಯನ್ನು ತಂದು ಕೊಡುವದು ನಮಗೆ ಬೇಕಾಗಿಲ್ಲ. ಈ ಸಲದ ... ಗಳು ಉದಾಹರಣೆಗಾಗಿವೆ ಎಂದು ತಿಳಿಯಬೇಕು.—ಸಂಪಾದಕ ಡಬ್ಲ್ಯು. ಪಿ. ಬಿ.]

### ೧ನೆಯ ಪತ್ರ

' ಮೊನ್ನೆ ನಮ್ಮ ಅಪ್ಪಾಭಟ್ಟರು 'ಸಾಖರಭಾತಿ'ನೊಳಗಿಂದ ಭತ್ತಾ ಎತ್ತಿ ತೆಗೆದಂತೆ, ಇಡೀ ' ಜಯಕರ್ನಾಟಕ' ದೊಳಗಿಂದ 'ಅನಹಿತ' ಎಂಬ ದೊಡ್ಡದೊಂದು ಶಬ್ದದೋಷವನ್ನು ಹುಡುಕಿ ಮಂದಿ ಬಂದಲ್ಲಿಯೂ ಬಾರದಲ್ಲಿಯೂ ಕಿರಚಾಡುತ್ತಿದ್ದರು. ನಿಮ್ಮ ಉತ್ತರವೇನು ?

—ಕೃಷ್ಣಚಂದ್ರ

**ಉತ್ತರ:—** ' ಅವರ ಕಿರಿಚಾಟಕ್ಕೆ ನಮ್ಮ ಉತ್ತರ ಎಲ್ಲ. ಅವರಂಥ ವಾಚಸ್ಪತಿ ಬೃಹಸ್ಪತಿಗಳೆದಿರು ಸಂಸ್ಕೃತ ವ್ಯಾಕರಣ-ನಿರುಕ್ತ ವಿಷಯಗಳಲ್ಲಿ ಬಾಯಿತೆರೆಯುವ ಯೋಗ್ಯತೆ ನಮ್ಮದಲ್ಲ. ಬಯ್ಯುವ ಇಚ್ಛೆಯಿಂದಾದರೂ ' ಅನಹಿತ ' ಎಂದು ಬರೆದವನು ' ಪ್ರಖ್ಯಾತ ಲೇಖಕ ' ಎಂದು ಹೊಗಳುವ ನೆವಮಾಡಿದರಲ್ಲ! ಆದೇ ಅವರ ದೊಡ್ಡಿಸ್ತನ-ದೊಡ್ಡಿಸ್ತಿಕೆ. ಹೇಗೆ ಬರೆದರೂ ಅಶುದ್ಧವೇ ! '

### ೨ ನೆಯ ಪತ್ರ

ದಯಮಾಡಿ ಕೆಳಗಿನ ಪದ್ಯವನ್ನು ಜನಪದಸಾಹಿತ್ಯದಲ್ಲಿ ಹಾಕಬೇಕು.'

ನಕ್ಕೋತ ನಲಕೋತ ಸೊಕ್ಕಾನಿ ಸುಳಿಧಾಂಗ ।
ಚಕ್ಕಂದದಿಂದ ಹೊರಟಾಳ ಇವಳ್ಯಾರು ।
ಅಕ್ಕವರಲ್ಲೇನೊ ನನಗೆಣಿಯಾ ॥

—ಕರಟಕ

**ಉತ್ತರ:—** ಜನಪದಸಾಹಿತ್ಯವೆಂದ ಕೂಡಲೆ ... ಕರ್ನಾಟಕದಲ್ಲಿ ಹೆಸರು ಬರುತ್ತದೆಂದು ತಿಳಿ... ಮೂರನೆಯ ಸಾಲಿನೊಳಗಿನ 'ಅಕ್ಕವರು' ಎಂ... ಹೆಣ್ಣುಸಾಲೆಯ ' ಶಿಕ್ಷಕಿಯ 'ರನ್ನು ಕುರಿತಿರು... ಇದು ಹಳೆಯದಲ್ಲ. ಮುದ್ರಿಸಲಾರೆವು. ಹ... ಪದಸಾಹಿತ್ಯವೇ ಹೊನ್ನು.

### ೩ ನೆಯ ಪತ್ರ

' ನಿಮ್ಮ ಪತ್ರಿಕೆಯಲ್ಲಿ ಗಹನ ವಿಷಯಗಳೇ ... ಪಾಮರ ರಂಜನೆಗಾಗಿ ನೀವು ಏನೂ ಪ್ರಯತ್ನ... ವದಿಲ್ಲ. ಹೀಗಾದರೆ ನಮಗೆ ಪತ್ರಿಕೆ ಬೇಡ'

—ನಿರಕ್ಷ...

**ಉತ್ತರ:—** ' ನಿಮ್ಮಿಂದಲೇ ಪತ್ರಿಕೆಯ ... ತುಂಬುವುದು. ನೀವು ಹೀಗೆ ಮಾಡಿದರೆ ಹೇ... ಒಂದೆರಡು ನಾಟಕ, ಎರಡುಮೂರು ಕಥೆ, ... ನಾಲ್ಕು ಹಾಸ್ಯ, ನಾಲ್ಕಾರು ಕವಿತೆಗಳನ್ನು ... ಗಿಯೇ ನಾವು ಪ್ರಕಟಿಸುವೆವು. ಪಂಡಿತರು ಅವ... ಮೂಸಿ ನೋಡುವರೇ ? ಸಾಹಿತ್ಯವು ಅವರಿಗೆ ಬ...

### ೪ ನೆಯ ಪತ್ರ

' ಸಂಪಾದಕ ಮಹಾಶಯ ! ಅಸ್ಪೃಶ್ಯರ ಹೋ... ದಲವೆದ್ದದ್ದು ನಿಮಗೆ ಗೊತ್ತೇ ಆದೆ. ಅದೀಗ ಗ... ಯವರೆಗೆ ಬರಲಿದೆ. ಸತ್ಯಪಕ್ಷಪಾತಿಗಳಾದ ನೀ... ವಿರುದ್ಧವಾಗಿ ಬರೆಯುವ ಧೈರ್ಯ ಮಾಡುವಿ... ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು ? '

—ಮ...

CC-0. Jangamwadi Math Collection. Digitized by eGangotri

**ಉತ್ತರ:**— ಸಂಪಾದಕರು, ಸೂಳೆಯರು, ವಕೀಲರು, ಕವಲೆತ್ತು, ಕೌನ್ಸಿಲರು, ಹೆಂಗಸರು, ಅರಸರು, ಹಿಂದುಳಿದವರು, ರಾಜಕಾರಣಿಗಳು, ಬಡೇಮಿಯಾ ಮತ್ತು ಬಸಲಿಂಗೀ ಅಂಡು ಕಂಪನಿಯವರು ಇವರೆಲ್ಲರಿಗೆ ಸ್ವತಂತ್ರಅಭಿಪ್ರಾಯವಿರುವದಿಲ್ಲ. ರೂಢಿಯಲ್ಲಿ ತಲೆಯೆತ್ತಿರುವ ತಲೆಯೆತ್ತಲಿರುವ ಪ್ರಬಲಮತವೇ ಅವರ ಮತ. ಆದ ಕಾರಣ........ ನಿಮಗೆ ಗೊತ್ತೇ ಇದೆ. ನಾವೇನು ಬರೆಯಬೇಕು? 'ಧರ್ಮಕ್ಕೆ ಮಡಿಯಲೇಬೇಕು' 'ಸ್ವಧರ್ಮೇನಿಧನಂ ಶ್ರೇಯಃ'. ಇಷ್ಟೂ ಮೀರಿ ನಮ್ಮ ಅಭಿಪ್ರಾಯವೇ ಬೇಕಾಗಿದ್ದರೆ—ತಿಳಿಯಿರಿ ನಾವು ನಿಮಗೆ ಅನುಕೂಲರಿದ್ದೇವೆ. ಈ ಶಾಬ್ದಿಕ ಅನುಕೂಲತೆಯು, ಅಸ್ಪೃಶ್ಯೋದ್ಧಾರಕರ ಕಾರ್ಮಿಕ ಬಲಕ್ಕೆ ಈಡೇ? ತಿಳಿಯಿರಿ—ನಾವು ನಿಮಗೆ ಪ್ರತಿಕೂಲರಿದ್ದೇವೆಂದು. ಸನಾತನಶಾಸ್ತ್ರದ ಬೆಂಬಲಕ್ಕಿಂತಲೂ ನಮ್ಮ ಪ್ರತಿಕೂಲ ಮತದ ಹೆದರಿಕೆಯೇ ನಿಮಗೆ?

### ೫ನೆಯ ಪತ್ರ

ಸ್ತ್ರೀಯರು ರಂಗಭೂಮಿಯಲ್ಲಿ ಬರುವ ಬಗ್ಗೆ ತಾವು ಅನುಕೂಲರಿರುವಂತೆ ತೋರುತ್ತದೆ. ಮನೆತನಸ್ಥ ಹೆಂಗಸರೇ ಪ್ರಮುಖವಾಗಿ ಬರಬೇಕು ಎಂದು ಪ್ರೇಕ್ಷಕರ ಮತ್ತು ನಟರ ಬಯಕೆಯ ಗಾಳಿ ಬೀಸುತ್ತಲಿದೆ. ಪ್ರೇಕ್ಷಕರ ಮನೋಧರ್ಮವು ಇನ್ನೂ ಮೋಜುಗಾರರದೇ ಇದೆ. ನಾಟಕಕಾರರು ಶೃಂಗಾರದ ಬೀದಿಯನ್ನು ದಾಟಿಲ್ಲ. ನಟರು ಹಳೆಯ ಗಂಡಸರೇ ಆಗಿದ್ದಾರೆ. ಉದಾಹರಣಾರ್ಥ................

—ಚದುರಂಗಿ

**ಉತ್ತರಃ**— 'ತಿಳಿಯಿತು ತಿಳಿಯಿತು, ನೀವನ್ನುವದೆಲ್ಲಾ ತಿಳಿಯಿತು. ಇದನ್ನು ಹೆಂಗಸರು ವಿಚಾರ ಮಾಡಬೇಕು. ಜೀವನ್ಮುಕ್ತರಾದ ನಟಿಯರು ನಟನೆ ಮಾಡಲಿಕ್ಕೆ ಸಿದ್ಧರಿದ್ದ ಮೇಲೆ,ಸ್ಥಿತಪ್ರಜ್ಞರಾದ ನಾವು ಪ್ರೇಕ್ಷಕರಾಗಲೂ ಸಿದ್ಧರೇ. ಈಗೋ ನೋಡಿರಿ ಚದುರಂಗಿ ಬಾಯಿ! ಯಾವ ತತ್ತ್ವವೂ ದೋಷಯುಕ್ತವಿರುವುದಿಲ್ಲ. ಯಾವ ಕರ್ಮವೂ ದೋಷರಹಿತವಿರುವುದಿಲ್ಲ. ಆದ ಕಾರಣ— ಆಚಾರ ಹೇಳುವ ಬಾಯಿಂದಲೇ ಬದನೆಕಾಯನ್ನು ತಿಂದರೂ, ಬದನೆಕಾಯಿಯ ದೋಷವು ಬಾಯಿಯನ್ನು ತಟ್ಟುವದೇ ಹೊರ್ತು ಆಚಾರವನ್ನು ಮುಟ್ಟಲಾರದು. ಇತಿ ಶಾಸ್ತ್ರಾರ್ಥಃ'.

### ೬ನೆಯ ಪತ್ರ

'ಶೂನ್ಯಸಂಪಾದನೆಯ ಮಾರ್ಗದ (Mystic) ಕವಿತೆಯೊಂದನ್ನು ಕಳಿಸಿದ್ದೇನೆ. ಅವಶ್ಯವಾಗಿ ಹಾಕಬೇಕು. ಪ್ರತಿಫಲವೇನಾದರೂ ದೊರಕೀತೇ?

—ಅನುಭಾವಿ

## ಶೂನ್ಯ

ಧಾಟೀಃಕತಿಕತಿ ಕಬ್ಬಿಣಾ, ಕಾಕಾದೇವಿ' ಎಂಬಂತೆ.

ದುಂಡು ಮೇಜಿನ ಸುತ್ತ
ದುಂಡು ದುಂಡು ಮಂದಿ,
ದುಂಡು ದುಂಡು ಮಂದಿಗೆ
ಬಂಡೀಗಾಲೀ ಹೊಟ್ಟೆ,
ಬಂಡೀಗಾಲೀ ಹೊಟ್ಟೆಗೆ
ಗುಂಡುಕಲ್ಲ ತಲೆಯು,
ಗುಂಡುಕಲ್ಲ ತೆಳಗೆ
ಸೊನ್ನೇ ಸುತ್ತಿದ ಮಿದುಳು,
ಸೊನ್ನೇ ಸುತ್ತಿದ ಮಿದುಳಿಗೆ
ಪೂಜಿ ಪೂಜಿ ಫಲವು,
ಪೂಜಿ ಪೂಜೀ ಫಲದೊಳಗೆ
ಚಕ್ರಗೋಪ್ಪೀ ಗೊರಟ,
ಚಕ್ರಗೋಪ್ಪಿ ಗೊರಟಕ್ಕೆ
ವಕ್ರ ಶನೀ ನೋಟ,
ಬೆಳ್ಳನ್ನವರಿಗಾಟ-
ಕಪ್ಪನ್ನವರಿಗೆ ಕಾಟ-
ತಂತಮ್ಮನೆಗೋಟ-
ಮುದುಕನದಿದು ಬ್ಯಾಟ.

**ಉತ್ತರಃ**— ನೀವು ಕವಿತೆಯನ್ನು ಗಂಭೀರವಾಗಿ ಬರೆದಿದ್ದರೂ ನಾವು ಚೇಷ್ಟೆಗಾಗಿ ಹಾಸ್ಯದಲ್ಲಿ ಹಾಕಿದ್ದೇವೆ. ತಪ್ಪುತಿಳಿದುಕೊಳ್ಳಬಾರದು. ಇನ್ನು ಶೂನ್ಯ ಸಂಪಾದನೆಯ ಮಾರ್ಗದ ಕವಿತೆಗೆ ದ್ರವ್ಯ ಸಂಪಾದನೆ ಏನಾಗಬೇಕು? ನೀವೇ ಹೇಳಿರಿ.



CC-0. Jangamwadi Math Collection. Digitized by eGangotri



### ಜಗತ್ತಿನ ಚಿನ್ನವೆಷ್ಟಾಗುವುದು ?

ಅಮೆರಿಕದ ಫೆಡರಲ್ ರಿಜರ್ವ್ ಬೋರ್ಡಿನವರ ಜುಲೈ ತಿಂಗಳ ವರದಿಯ ಪ್ರಕಾರ ಜಗತ್ತಿನಲ್ಲಿರುವ ಚಿನ್ನವನ್ನೆಲ್ಲ ಒಟ್ಟು ಸೇರಿಸಿದರೆ ೩೧.೪ ಘನ ಅಡಿಯ ಅಚ್ಚನ್ನು ಮಾಡ ಬಹುದೆಂದು ತಿಳಿದುಬರುವುದು. ಅದರ ತೂಕವು ೧೮,೬೦೦ ಟನ್ನುಗಳಾಗುವದು. ಅದರ ಬೆಲೆಯು ಸುಮಾರು ರೂ. ೩೯,೩೫,೨೬೧,೫,೫೦೦ ಆಗುವುದು. ಇದರಲ್ಲಿ ಜಗತ್ತಿನ ಬೇರೆ ಬೇರೆ ದೇಶಗಳಲ್ಲಿ ಕೆಳಗೆ ಸೂಚಿಸುವಂತೆ ಚಿನ್ನವು ಇರುವುದು.

| | | | |
|---|---|---|---|
| ೧ | ಯುನಾಯಿಟೆಡ್ ಸ್ಟೇಟ್ಸ್ | ರೂ. | ೧೫,೫೫೮,೯೭೩,೫೦೦ |
| ೨ | ಫ್ರಾನ್ಸ | ,, | ೯,೮೧೨,೯೯೨,೫೦೦ |
| ೩ | ಇಂಗ್ಲಂಡ | ,, | ೨,೫೭೨,೨೬೯,೦೦೦ |
| ೪ | ಜರ್ಮನಿ | ,, | ೧,೯೯೨,೮೧೬,೦೦೦ |
| ೫ | ಸ್ಪೇನ್ | ,, | ೧,೬೩೭,೦೦೨,೫೦೦ |
| ೬ | ಜಪಾನ | ,, | ೧,೪೭೮,೫೭೧,೫೦೦ |
| ೭ | ಅರ್ಜೆಂಟೈನ್ | ,, | ೧,೨೭೧,೦೬೦,೦೦೦ |
| ೮ | ಇಟಲಿ | ,, | ೯೭೯,೨೭೫,೫೦೦ |
| ೯ | ಸಾವಿಯಟ್ ರಶ್ಯಾ | ,, | ೯೧೬,೬೩೨,೫೦೦ |
| ೧೦ | ಬೆಲ್ಜಿಯಂ | ,, | ೭೦೪,೯೯೪,೦೦೦ |
| ೧೧ | ನೆದರ್ಲೆಂಡ್ಸ | ,, | ೬೩೩,೧೧೮,೫೦೦ |
| ೧೨ | ಇಂಡಿಯ (ಹಿಂದುಸ್ತಾನ) | ,, | ೫೧೫,೪೨೪,೦೦೦ |
| ೧೩ | ಕೆನಡಾ (ಅಮೇರಿಕಾ) | ,, | ೩೬೫,೫೬೯,೫೦೦ |
| ೧೪ | ಇತರ ದೇಶಗಳು | ,, | ೩,೦೦೩,೬೬,೫೦೦ |

### ಭಾರತೀಯ ಯುವಕರ ಸಾಮರ್ಥ್ಯ

ಶ್ರೀಯುತ ಡಾಹ್ಯಾಲಾಲ್ ಜಾನೀ ಎಂಬ 'ಕುಮಾರ' ಮಾಸಪತ್ರಿಕೆಯ ಗುಜರಾತಿ ಲೇಖಕನು ವಿಶೇಷ ಪರಿಶ್ರಮಪಟ್ಟು ಹಿಂದುಸ್ಥಾನದ ಯುವಕರ ಬಲದ ವಿಚಾರವಾಗಿ ಕೆಲವು ಸಂಗತಿಗಳನ್ನು ಸಂಗ್ರಹಿಸಿ ಹೀಗೆ ಬರೆದಿರು

CC-0. Jangamwadi Math Collection. Digitized by eGangotri

ವನು :– "ಹಿಂದುಸ್ತಾನದಲ್ಲಿ ೧೦,೦೦೦ ಜನಸ್ತು ವೆಡೆಯಲ್ಲಿ ೧೬೬೩ ಮಂದಿ ತರುಣ ತರುಣಿ... ಒಟ್ಟು ಜನಸಂಖ್ಯೆಯಲ್ಲಿ ಈ ಆರನೆಯ ಒಂ... ಜನರು ಯಾವ ಯಾವ ಚಮತ್ಕಾರಗಳನ್ನೆಸಗ... ದನ್ನು ಕಲ್ಪನೆಗೆ ತಂದುಕೊಂಡರೆ ಆಶ್ಚರ್ಯವಾ... ಅಖಿಲ ಹಿಂದುಸ್ಥಾನದ ಎಲ್ಲ ಯುವಕರೂ ಏ... ಕೆಲಸ ಮಾಡಲಾರಂಭಿಸಿದರೆ—(೧) ೩೦ ಫ... ಚೀಣದ ದೊಡ್ಡ ಗೋಡೆಯಂತಹ ಒಂದು ಗೋ... ಕಟ್ಟಬಲ್ಲರು. (೨) ಒಂದು ಘಂಟೆಯಲ್ಲಿ ೧... ನೂಲನ್ನು ನೂಲಬಹುದು (೩) ೧ ಘಂಟೆಯ... ಟನ್ನು ಹತ್ತಿಯನ್ನು ಹಿಂಜಬಲ್ಲರು. (೪) ... ನೂಲು ತೆಗೆದರೆ, ಚಂದ್ರಮಂಡಲವನ್ನು ದಾಟ... ವಷ್ಟು ಉದ್ದದ ನೂಲನ್ನು ತೆಗೆಯಬಲ್ಲರು. (೫) ... ಸ್ಥಾನದಲ್ಲಿರುವ ಎಲ್ಲ ಜಮೀನುಗಳನ್ನು ಉತ್ತ... ವರು (೬) ನಾಲ್ಕು ದಿನಗಳಲ್ಲಿ ಹತ್ತಿಯನ್ನು ... ಕೊಂಡು ಐದನೆಯ ದಿನ ನೂಲನ್ನು ತೆಗೆದು ... ತಮ್ಮ ೩೨ ಕೋಟಿ ಜನ ಬಂಧುಗಳಿಗೆ ಬಟ್ಟೆ... ಪೂರೈಸಬಲ್ಲರು.–ಇತ್ಯಾದಿಯಾಗಿ ಯುವಕರು ... ಕೆಲವು ಅದ್ಭುತ ಕೃತ್ಯಗಳ ಕಲ್ಪನೆಯನ್ನುಂಟು... ಕೊಟ್ಟಿರುವನು. ಭಾರತೀಯ ಯುವಕರ ಸಾ... ಸಾಮರ್ಥ್ಯವು ಮುಂಬೈಯಿಯ ೪೪ ಗಿರಣಿ(ಮಿ... ನೂರರಷ್ಟು ಎಂದರೆ ೪೩ ಲಕ್ಷ ಹಾರ್ಸ್ ಪವ... ಆಗುವುದು. ಒಂದು ಘಂಟೆಯವರೆಗೆ ಎಲ್ಲ ಯು... ಕೆಲಸ ಮಾಡಿದರೆ ೨॥ ಲಕ್ಷ ಟನ್ನು ಕೆರೋಸಿನ್ (ಸ... ಎಣ್ಣೆಯನ್ನು ಉಪಯೋಗಿಸಿದ ಯಂತ್ರದಲ್ಲಿ ... ವಾದಷ್ಟು ಸಾಮರ್ಥ್ಯವು ಉತ್ಪನ್ನವಾಗುವುದು. ... ಕ್ಕಿಂತಲೂ ಸುಲಭ ಭಾಷೆಯಲ್ಲಿ ಹೇಳುವುದಾದ...

ಯೊಬ್ಬ ಭಾರತೀಯ ತರುಣನೂ ತರುಣಿಯೂ ಒಂದು ಬಿಲ್ಲೆ (ಮೂರು ಪೈ) ಹೆಚ್ಚಿಗೆ ಸಂಪಾದಿಸಲು ಮತ್ತು ಒಂದು ಬಿಲ್ಲೆ ಖರ್ಚು ಕಡಿಮೆ ಮಾಡಲು ನಿಶ್ಚ ಯಿಸಿದರೆ, ಅದರಿಂದ ಸಂಗ್ರಹವಾಗುವ ದ್ರವ್ಯನಿಧಿಯಿಂದ ೧॥ ಕೋಟಿ ಮಂದಿ ಬಡವರ ಉದರನಿರ್ವಾಹವು ಸುಸೂತ್ರವಾಗಿ ಸಾಗುವುದು.''—ಈ ಲೇಖನ ವಿಚಾರ ದಿಂದ "ಹನಿ ಹನಿ ಕೂಡಿದರೆ ಹಳ್ಳ" ಎಂಬ ನಾಣ್ಣು ಡಿಯ ಯಥಾರ್ಥವು ವ್ಯಕ್ತವಾಗುವುದು. ಆದರೆ ಕಾರ್ಯ ಮತ್ತು ಸಂಪತಿ ಇವುಗಳ ಅಭ್ಯಾಸ ಮಾತ್ರ ಬೇಕು!

—ಹಂಸ [ಹಿಂದಿ]

## ವಿಕೃತವಿಚಾರಸರಣಿಯ ಪರಿಣಾಮ

ಜಗತ್ತಿನ ವಾಙ್ಮಯದ ಕೆಲವು ಶ್ರೇಷ್ಠ ಭಾಗಗಳಲ್ಲಿ ಕೇವಲ ಕಲೆಯ ಸೌಂದರ್ಯವು ಗೋಚರವಾಗುವುದು. ನೀತಿದೃಷ್ಟಿಯಿಂದ ಇವುಗಳು ಕೀಳುವರ್ಗಕ್ಕೆ ಸೇರ ಬಹುದು. ಇಂತಹ ವಾಙ್ಮಯನಿರ್ಮಾಣಕ್ಕೆ ಮೂಲ ಕಾರಣವಾವುದೆಂಬುದೊಂದು ದೊಡ್ಡ ಪ್ರಶ್ನೆ. ಇದಕ್ಕೆ ಕೆಲಜನ ತತ್ವಜ್ಞರು ಉಪಪತ್ತಿಯನ್ನು ತೋರುವಾಗ ಹೀಗೆ ಹೇಳಿರುವರು. ಪ್ರತಿಭಾಶಾಲಿಯಾದ ಮನುಷ್ಯರ ಅಂತರಂಗದಲ್ಲಿ ತುಂಬಿ ಸೂಸುವಂತಿರುವ ಕೆಲವು ಅತೃಪ್ತ ಮತ್ತು ಪ್ರಖರವಾದ ವಾಸನೆಗಳು ಯಾವುದಾದರೊಂದು ಕಾರಣದಿಂದ ಹೊರಹೊಮ್ಮುವ ಸಂಧಿಯನ್ನು ನೋಡು ತ್ತಿರುವವು. ಅವುಗಳ ವ್ಯಕ್ತರೂಪವೇ ಈ ಬಗೆಯ ವಾಙ್ಮಯವು. ಈ ವೃತ್ತಿಯ ಲೇಖಕರು ಆಧುನಿಕ ಯುಗದಲ್ಲಿ ಹೆಚ್ಚಾಗಿ ಹುಟ್ಟುತ್ತಿರುವರು. ಮನಃ ಸೃಷ್ಟಿಯ ಮೇಲೆ ಯಾವುದಾದರೂ ಗೂಢ ನಿರಾಶಾ ವಾದದ ಅಥವಾ ವಿಕೃತವಿಚಾರಗಳ ಆವರಣವು ಬಿದ್ದರೆ, ಕಲೆಯ ದೃಷ್ಟಿಯಿಂದ ಸುಂದರವೂ, ನೀತಿಯ ದೃಷ್ಟಿ ಯಿಂದ ಅಸಮಂಜಸವೂ ಆದ ವಾಙ್ಮಯ ಕುಸುಮಗಳು ವಿಕಸಿತವಾಗುವವು. ಮಿ. ಸ್ವಾರ್‌ಸನ್ ಎಂಬ ಲೇಖ ಕನು ಹೀಗೆ ಬರೆದಿರುವನು.— "ಶ್ರದ್ಧಾಹೀನತೆಯೇ ಇದಕ್ಕೆ ಮೂಲಕಾರಣ. ಪೂರ್ವಕಾಲದವರು ಯಾವು ದಾದರೊಂದರಲ್ಲಿ ಶ್ರದ್ಧೆಯನ್ನಿಟ್ಟುಕೊಂಡಿರುತ್ತಿದ್ದರು. ಈಗ ಕೇವಲ ಪುರಾಣಮತವಾದಿಗಳು ಮತ್ತು ಉಗ್ರ ಬೊಲ್ಸೆವಿಕ್‌ರವಿನಾ ಬೇರೆ ಶ್ರದ್ಧಾಳುಗಳಿಲ್ಲ. ಜಗತ್ತಿನಲ್ಲಿ ಉಳಿದ ಸುಶಿಕ್ಷಿತರಲ್ಲಿ ಶ್ರದ್ಧೆಯು ಸಡಿಲಾಗಿರುವುದು. ಆದರಿಂದ ನಿರಾಶೆ, ಭವಿಷ್ಯದ ವಿಚಾರವಾಗಿ ಭೀತಿ ಇವೇ ಮುಂತಾದ ಭಾವನೆಗಳು ಅವರ ಮನಸ್ಸನ್ನಾಕ್ರಮಿಸಿರು ವವು. ಮೇಲೆ ಹೇಳಿದ ವಾಙ್ಮಯವು ಉತ್ಪನ್ನವಾಗುವು ದಕ್ಕೆ ಇವೇ ಕಾರಣಗಳು."

—The New Statesman & Nation

## ಬೆರಗುಗೊಳಿಸುವ ಕನ್ನಡಿಗನೊಬ್ಬ

ಪ್ರೊಫೆಸರ್ ಎಲ್. ವಿ. ರಾವ್ ಎಂಬುವರೊಬ್ಬರು ಮೈಸೂರಿನ ಗೃಹಸ್ಥರು. ಇವರಿಗೆ ಯಾವ ಬಗೆಯ ವಿಷದ ಹೆದರಿಕೆಯೂ ಇಲ್ಲ. ಜೀವವುಳ್ಳ ಸರ್ಪಗಳನ್ನು ತಿನ್ನುವರು. ನೈಟ್ರಿಕ್ ಆಸಿಡ್ ಸಲ್‌ಫ್ಯೂರಿಕ್ ಆಸಿಡ್, ಮೊದಲಾದ ಅಸಹನೀಯವಾದ ವಿಷಗಳನ್ನು ಕುಡಿಯು ವರು. ಸಧ್ಯಕ್ಕೆ ಇವರ ಪ್ರಯೋಗಗಳು ಪುಣೆ ಬೊಂಬಾ ಯಿಗಳಲ್ಲಿ ನಡೆದಿವೆ. ಅನೇಕ ಜನ ಡಾಕ್ಟರುಗಳು, ವಿಜ್ಞಾನಪಂಡಿತರು ಇವರ ಅದ್ಭುತ ಪ್ರಯೋಗ ಗಳನ್ನು ಕಂಡು ಬೆರಗುಪಟ್ಟಿದ್ದಾರೆ.

ಶ್ರೀ. ರಾವ್ ಅವರು ಮೈಸೂರ ನಗರದವರೇ. ದೇಶಸ್ಥ ಬ್ರಾಹ್ಮಣರು. ಸುಮಾರು ಮೂವತ್ತು ವರ್ಷದವಯಸ್ಸು. ಮೊದಲು ಇವರು ವ್ಯಾಪಾರ ಮಾಡುತ್ತಿದ್ದರಂತೆ. ಬಳಿಕ ಪ್ರೊ. ರಾಮಮೂರ್ತಿಯವರ ಸರ್ಕಸಿನ ಮ್ಯಾನೇಜರ್ ಆಗಿದ್ದರು. ಈ ಸರ್ಕಸಿನೊಡನೆ ತಿರುಗಾಡುತಿರುವಾಗ ದಾರ್ಜಿಲಿಂಗದಲ್ಲಿ ಒಬ್ಬ ಸಾಧುವನ್ನು ಇವರು ಕಂಡರು. ಆ ಸಾಧುವು ಹತ್ತಾರು ಹಾವುಗಳನ್ನಿಟ್ಟುಕೊಂಡು ಆಡಿ ಸುತ್ತಲಿದ್ದನಂತೆ. ಸರ್ಕಸಿನಲ್ಲಿ ಈ ಜ್ಞಾನದ ಉಪ ಯೋಗವೇನಾದರೂ ಆದೀತೆಂದು ಬಗೆದು, ರಾವ್ ಅವರು ಹಾವುಗಳನ್ನಾಡಿಸುವ ವಿದ್ಯೆಯನ್ನು ತಮಗೆ ಕಲಿಸುವು ದಾಗಿ ಆ ಸಾಧುವನ್ನು ಕೇಳಿಕೊಂಡರಂತೆ. ಆ ಸಾಧುವು ಹಾವಿನ ವಿಷವನ್ನು ಹಿಂಗಿಸುವ ಔಷಧವನ್ನು ಕೊಡ ಲಿಕ್ಕೆ ಒಪ್ಪಿ, ಕೆಲವು ದಿವಸಗಳಾದ ಮೇಲೆ ಯಾವುದೋ ವನಸ್ಪತಿಯೊಂದನ್ನು ಕೊಟ್ಟನಂತೆ. ಆ ವನಸ್ಪತಿಯ ವಿಷಯವಾಗಿ ರಾವ್ ಅವರಿಗೆ ಮೊದಮೊದಲು ನಂಬುಗೆ ಉಂಟಾಗಲಿಲ್ಲ. ಆಗ ಅವರು ಬೆಕ್ಕು ನಾಯಿ ಕೋತಿ ಮೊದಲಾದುವುಗಳ ಮೇಲೆ ಅದರ ಪ್ರಯೋಗ ಮಾಡಿ ನೋಡಿದರು. ಮೊದಲು ಹಾವು ಕಚ್ಚಿಸಿ ಆ ಪ್ರಾಣಿಗಳು ಅರೆಜೀವಿಗಳಾಗುತ್ತ ಬಂದಾಗ ಈ ವನಸ್ಪತಿಯ ರಸ ವನ್ನು ಅವುಗಳ ಮೈಯಲ್ಲಿ ಸೇರಿಸಿದೊಡನೆಯೇ ಅವು

CC-0. Jangamwadi Math Collection. Digitized by eGangotri

ಚೇತರಿಸಿಕೊಂಡು ಮೇಲಕ್ಕೇಳುತ್ತಿದ್ದುವಂತೆ. ಅಲ್ಲದೆ ಭಯಂಕರ ವಿಷಯುಕ್ತ ಸರ್ಪಗಳಿಗೆ ಆ ಔಷಧಿಯನ್ನು ತಿನ್ನಿಸಿದೊಡನೆಯೆ ಅವು ಸತ್ತು ಹೋಗುವುವೆಂಬುದನ್ನೂ ಮನಗಾಣಿಸಿಕೊಂಡರಂತೆ. ಈಗ ಅದೇ ಔಷಧಿಯ ಸಹಾಯದಿಂದ ಹಲವುಬಗೆಯ ವಿಷಗಳನ್ನು ಸಹಜವಾಗಿ ತಿಂದು ಜೀರ್ಣಿಸಿಕೊಳ್ಳುತ್ತಿರುವರು.

ತಾವು ಮಾಡುವುದರಲ್ಲಿ ಗೂಢವಾವುದೂ ಇಲ್ಲವೆಂದು ಇವರು ಹೇಳುವರು; ಇಷ್ಟೇ ಅಲ್ಲದೆ ಯೋಗ್ಯ ಪ್ರತಿಫಲ ವೇನಾದರೂ ದೊರೆತಲ್ಲಿ—ಜನರ ಹಿತಕ್ಕಾಗಿ—ಯಾರಿಗೂ ಆ ವನಸ್ಪತಿಯನ್ನು ಹೇಳಿಬಿಡಲು ತಮ್ಮ ಒಪ್ಪಿಗೆಯಿದೆ ಯೆನ್ನುತಿರುವರು. ಇವರು ಬೊಂಬಾಯಿಯ ಲ್ಯಾಬೊರೇಟರಿಯೊಂದರಲ್ಲಿ ಭಯಂಕರ ವಿಷಯುಕ್ತ ಸರ್ಪದ ವಿಷವನ್ನು ಇಳಿಸಿ ತೋರಿಸುವವರಿರುವರಂತೆ. ವಿಜ್ಞಾನ ಪಂಡಿತರ ಬುದ್ಧಿಯನ್ನು ಕುಂಠಿತಗೊಳಿಸಿಬಿಡುವ ವನಸ್ಪತಿಗಳೂ ವ್ಯಕ್ತಿಗಳೂ ಭಾರತದಲ್ಲಿರುವರೆಂಬುದನ್ನು ತಿಳುಹಿಸುವುದಕ್ಕೆ ಇವರು ಯುರೋಪು ಅಮೇರಿಕಾದೇಶಗಳಿಗೆ ಪ್ರಯಾಣ ಬೆಳೆಯಿಸಲಿರುವರೆಂದು ವರ್ತಮಾನ. ಕನ್ನಡಿಗನೊಬ್ಬನ ಈ ಪ್ರಯೋಗವು ಕರ್ಣಾಟಕಸ್ಥರೆಲ್ಲರಿಗೆ ಅಭಿಮಾನಕರವಾದುದಲ್ಲವೆ!

## ಖಾದೀ ಮತಕ್ಕೆ ಹೊಸ ಶಿಷ್ಯರು

ಮದರಾಸಿನ ಮಹಾಜನಸಭೆಯವರು ಏರ್ಪಡಿಸಿದ 'ಸ್ವದೇಶೀ ವಸ್ತುಪ್ರದರ್ಶನ'ದ ಉತ್ಸವವನ್ನಾರಂಭಿಸುತ್ತ ಸರ್ ವಿಶ್ವೇಶ್ವರಯ್ಯನವರು ಅಮೋಘವಾದ ಭಾಷಣ ಮಾಡಿದರು. ಅದರ ಒಂದು ಭಾಗವಿದು:—

"ಯಂತ್ರಗಳು ಬಹು ಬೇಗ ಸುಲಭವಾಗಿ ಕಮ್ಮಿ ಬೆಲೆಗೆ ಸರಕನ್ನು ತಯಾರಿಸುವಾಗ್ಗೆ, ಕೈಯಿಂದ ನೂತು, ಕೈಮಗ್ಗದಲ್ಲಿ ನೇದ ಖದ್ದರಿನಿಂದ ಕಾಲ ನಷ್ಟವೂ ವೃಥಾಕಷ್ಟವೂ ಆಗುವುದೆಂದೂ, ಆ ಕಾಲವನ್ನೂ ಪ್ರಯತ್ನವನ್ನೂ ಹೆಚ್ಚು ಲಾಭವಾಗುವ ರೀತಿಯಲ್ಲಿ ಉಪಯೋಗಿಸಬಹುದೆಂದೂ ನಂಬಿದವರಲ್ಲಿ ನಾನೂ ಒಬ್ಬನಾಗಿದ್ದೆ. ಆದರೆ ದೇಶದ ಇಂದಿನ ಪರಿಸ್ಥಿತಿಯಲ್ಲಿ, ನಮ್ಮ ಮುಂದೆ ನಿರುದ್ಯೋಗಿಗಳ ಗುಂಪು ನಿಂತಿರುವಾಗ, ಮತ್ತು ನಿರುದ್ಯೋಗ ಪರಿಹಾರಕ್ಕೆ ಸರಿಯಾದ ದಾರಿಯೇ ಕಾಣದಿರುವಾಗ, ಖದ್ದರ್ ಚಳವಳಿಯು ನಿಜವಾಗಿಯೂ ಉಪಯೋಗಕಾರಿಯಾಗಿ ಪರಿಣಮಿಸುತ್ತಿದೆ ಎಂದು ವಿವೇಕಿಯಾದ ಪ್ರತಿ ಮನುಷ್ಯ... ಒಪ್ಪಲೇ ಬೇಕು. ನಮ್ಮ ದೇಶದವರಾದ ಮಹಾತ್ಮ ಗಾಂಧಿಯವರ ದಂಡನಾಯಕತ್ವದಲ್ಲಿ ಕಾಂಗ್ರೆಸ್ ಖದ್ದರ್ ಪ್ರಚಾರವನ್ನು ಬಹಳ ಉತ್ತಮರೀತಿ... ನ್ಯಾಯುವಾಗಿ ಮಾಡುತ್ತಿರುವುದು. ಈಗ ... ಉತ್ಪತ್ತಿಯಲ್ಲಿ ನಿರತರಾಗಿರುವ ಕೆಲಸಗಾ... ಮತ್ತಿಷ್ಟು ಲಾಭ ಬರುವ ಉದ್ಯೋಗಗಳಿಗೆ ಮಹಾತ್ಮ ಗಾಂಧಿಯವರು ಹಚ್ಚಲು ಪ್ರಯತ್ನಪಡುವರೆಂದು... ನಂಬಿಕೆಯುಂಟು. ಆ ಬಗ್ಗೆ ಎಳ್ಳಷ್ಟೂ ನನಗೆ ಸಂ... ವಿಲ್ಲ. ಆರ್ಥಿಕ ರೋಗದ ನಿವಾರಣೆಗೆ ಕೈಗಾರಿಕೆ, ... ಭ್ಯಾಸ ಇವೆರಡೇ ಮುಖ್ಯ ಔಷಧಗಳು. ಇನ್ನು ... ರಾಜಕೀಯ ದುಸ್ಥಿತಿಗಿಂತ ಆರ್ಥಿಕ ದುಸ್ಥಿತಿಯೇ ... ವುದು. ಹೊರಗಿನ ಇತರ ನಾಗರೀಕ ದೇಶಗಳೊ... ಸಮಾನವಾಗಿ ಹೆಜ್ಜೆ ಇಡಬೇಕಾದರೆ, ಹಿಂದುಸ್ಥಾನ... ಕೈಗಾರಿಕೆಗಳ ಅಭಿವೃದ್ಧಿಯು ಅಪಾರವಾಗಿ ಆಗ... ಮತ್ತು ಸಾಮಾನ್ಯ ತಿಳುವಳಿಕೆಯೂ ಉದ್ಯೋ... ಗುಟ್ಟೊಟ್ಟು ಜನರಲ್ಲಿ ಉಂಟಾಗುವಂತೆ ಮಾಡಬೇ...

—ವಿಶ್ವಕರ್ನಾಟಕ

## ಜಪಾನೂ ಶಾರೀರಿಕ ಉನ್ನತಿಯೂ

ಜಪಾನಿನಲ್ಲಿ ೩೦—೪೦ ವರ್ಷಗಳ ಹಿಂದೆ ಪ್ರ... ಮಾಡಿ ಬಂದವರು, ಇಂದು ಅಲ್ಲಿಗೆ ಹೋಗಿ ನೋಡಿ... ಅಲ್ಲಾಗಿರುವ ಬದಲಾವಣೆಗೆ ಅವರಿಗೆ ಆಶ್ಚರ್ಯ... ದಿರದು. ಪೂರ್ವಕಾಲದಲ್ಲಿ ಜೈನಿಯ ಉಪ... ವೀರ್ಯವಿಲ್ಲದ ಚಹರೆಯ ಹುಡುಗರು ಬೀದಿ... ತಿರುಗುತ್ತಿದ್ದುದನ್ನು ನೋಡಬಹುದಾಗಿತ್ತು. ... ಅಲ್ಲಿಯ ಸ್ಥಿತಿಯು ವಿಪರೀತವಾಗಿದೆ. ... ಮಕ್ಕಳು ಮುಂಚಿನ ಮಕ್ಕಳಿಗಿಂತಲೂ ಚೆನ್ನಾಗಿ... ಅಂಗುಲ ಎತ್ತರವಾಗಿರುವರು. ಅವರ ಉಡುಪೂ ಸ... ವಾಗಿರುವುದು. ಅವರ ಮುಖದ ಮೇಲೆ ಕಳೆ... ವುದು. ಜಪಾನಿಗಳು ಎಲ್ಲ ವಿಚಾರದಲ್ಲಿಯೂ ... ಉನ್ನತಿಯನ್ನು ಸಾಧಿಸಿಕೊಂಡಿರುವರು. ಹೀಗಿರು... ಅವರ ಶಾರೀರಿಕ ಉನ್ನತಿಯೂ ಏಕಾಗಬಾರದು. ... ಮುಂಚೆ ಬಿಗುವಾದ ಉಡುಪನ್ನು ಧರಿಸುತ್ತಿದ್ದುದ... ಅವರ ಅಂಗಾಂಗಗಳು ಸರಿಯಾಗಿ ಚಲಿಸಲವಕಾಶ... ಲ್ಲಿಲ್ಲ. ಈಗವರು ಸಡಿಲ (ಸೈಲ) ವಾದ ಉಡುಪನ್ನು ...

CC-0. Jangamwadi Math Collection. Digitized by eGangotri

ಲಾರಂಭಿಸಿದಂದಿನಿಂದ ಈ ಅಡಚಣೆಯು ದೂರವಾಗಿ ಶರೀರವು ಬೇಕಾದಂತೆ ಬಾಗಲಾರಂಭಿಸಿತು. ಮುಂಚೆ ಜಪಾನೀ ಮಕ್ಕಳು ಪಾಠಶಾಲೆಯಲ್ಲಿ ನೆಲದ ಮೇಲೆ ಕೂತುಕೊಳ್ಳುತ್ತಿದ್ದರು. ಆದರಿಂದ ಶರೀರವು ಬಾಗಿ, ಬೆನ್ನೆಲುಬಿನ ಬೆಳವಣಿಗೆಯು ಕುಗ್ಗಿತ್ತು. ಬೆಂಚು, ಕುರ್ಚಿಗಳನ್ನು ಉಪಯೋಗಿಸಲಾರಂಭಿಸಿದಂದಿನಿಂದ ಅವರ ಬೆನ್ನೆಲುಬಿನ ಬೆಳವಣಿಗೆಯು ಅಭಿವೃದ್ಧಿಗೆ ಬಂದಿತು. ಮತ್ತೆ ಇವೆಲ್ಲಕ್ಕಿಂತಲೂ ಜಪಾನ ಸರ್ಕಾರವು ಎಲ್ಲ ಶಾಲೆಗಳಲ್ಲಿ ಶಾರೀರಿಕಶಿಕ್ಷಣಕ್ಕಿತ್ತ ಪ್ರೋತ್ಸಾಹದಿಂದ ಈ ಉನ್ನತಿಯುಂಟಾಗಿರುವುದು. ಜಪಾನಿನ ಪಾಠಶಾಲೆಯಲ್ಲಿ ಹೆಚ್ಚು ಕಾಲ ಶಿಕ್ಷಣ ಹೊಂದಿದ ಹುಡುಗರು, ಅಶಿಕ್ಷಿತ ಹುಡುಗರಿಗಿಂತಲೂ ಹೆಚ್ಚು ಎತ್ತರವಾಗಿಯೂ ಬಲಿಷ್ಟರಾಗಿಯೂ ಇರುವರೆಂದು ಕಂಡುಬಂದಿದೆ. (ಹಿಂದುಸ್ಥಾನದಲ್ಲಿ ?) ಸರಿಯಾದ ತಳಹದಿಯನ್ನಿಟ್ಟು ಉಪಯುಕ್ತ ಶಿಕ್ಷಣವನ್ನೀಯುವುದರಿಂದ ಶರೀರಸ್ಥಿತಿಯು ಕೆಡುವುದಿಲ್ಲ. ಮತ್ತೆ ಯಾವುದಾದರೊಂದು ಜನಾಂಗವು ಪ್ರಯತ್ನಬಲದಿಂದ ತನ್ನ ಶರೀರಸಂಪತ್ತಿಯನ್ನು ಹೆಚ್ಚಿಸಿಕೊಳ್ಳಬಹುದೆಂಬ ಬೋಧೆಯು ಇದರಿಂದ ತಿಳಿದು ಬರುವುದು.

—The Japan Magazine

## ಮಹಾತ್ಮಾ ಗಾಂಧಿಯವರ ಪ್ರಾರ್ಥನೆ

ಪ್ರಾರ್ಥನೆಯು ಮಹತ್ವದ ವಿಚಾರವನ್ನು ಪ್ರತಿಯೊಂದು ಧರ್ಮವೂ ಹಾಡಿರುವುದು. ಮೊನ್ನೆ ತಾನೇ 'ರಾಜಪುತಾನಾ' ಹಡಗಿನ ಮೇಲೆ ಮಹಾತ್ಮಾಜಿಯವರು 'ಪ್ರಾರ್ಥನೆಯ ಮಹಿಮೆ' ಎಂಬ ವಿಷಯದ ಮೇಲೆ ಸುಂದರವಾದ ಪುಟ್ಟ ಉಪನ್ಯಾಸವನ್ನಿತ್ತರು. ಅದರ ಹಲವಂಶಗಳನ್ನು ಪ್ರತಿಯೊಬ್ಬ ವಿದ್ಯಾರ್ಥಿಯೂ ಮನನ ಮಾಡುವಂತಿರುವುದು. ಅವರು ಹೀಗೆ ಹೇಳಿರುವರು:—

"ಪ್ರತಿಯೊಂದು ಕಠಿಣಪ್ರಸಂಗದಲ್ಲಿ ಪರಮಾತ್ಮನ ಪ್ರಾರ್ಥನೆಯನ್ನು ಮಾಡಿರುವುದರಿಂದ ನನಗೆ ಮುಂದಿನ ಮಾರ್ಗವು ಸುಗಮವಾಗಿ ಕಂಡುಬಂದಿರುವುದು. ನಾನು ಪ್ರಾರ್ಥನೆ ಮಾಡದಿರುವಾಗ ನನಗೆ ಹುಚ್ಚು ಹಿಡಿದಿರುವಂತೆ ಭಾಸವಾಗಿರುವುದು. ಶರೀರಕ್ಕೆ ಆಹಾರದ ಅವಶ್ಯಕತೆಯಿರುವಂತೆಯೆ ಆತ್ಮಕ್ಕೆ ಪ್ರಾರ್ಥನೆಯ ಅವಶ್ಯಕತೆಯಿರುವುದು. ಆದರೆ ಇದರಲ್ಲಿರುವ ವ್ಯತ್ಯಾಸವೇನಂದರೆ ಆಹಾರವನ್ನು ಹೆಚ್ಚಾಗಿ ತಿಂದರೆ ಅಜೀರ್ಣವಾಗುವುದು. ಪ್ರಾರ್ಥನೆಯ ವಿಚಾರವು ಇದಕ್ಕೆ ವಿರುದ್ಧವಾಗಿರುವುದು. ನೀವು ಎಷ್ಟು ಅಧಿಕವಾಗಿ ಪ್ರಾರ್ಥನೆಯನ್ನು ಸಲ್ಲಿಸುವಿರೋ ಅಷ್ಟೂ ಅಧಿಕವಾಗಿ ನಿಮ್ಮ ಆತ್ಮವು ಉನ್ನತಿಯನ್ನೈದುವುದು ಮತ್ತು ನಿಮ್ಮ ಮನಸ್ಸಿಗೆ ಅಧಿಕ ಶಾಂತಿಯು ದೊರೆಯುವುದು. ಮಾನಸಿಕ ಆರೋಗ್ಯಕ್ಕಿಂತಲೂ ಅಧಿಕ ಮಹತ್ವದ ವಿಚಾರವು ವ್ಯವಹಾರದಲ್ಲಿ ಮತ್ತಾವುದಿರುವುದು ? ಮತ್ತೆ ನಿಮಗೆ ಆ ಆರೋಗ್ಯವು ಕೇವಲ ಪ್ರಾರ್ಥನೆಯಿಂದ ಮಾತ್ರವೇ ದೊರೆಯಬಲ್ಲದು. ಚಿತ್ತವನ್ನು ನಿರ್ಭಯವಾಗಿಯೂ ಆನಂದಮಯವಾಗಿಯೂ ಮಾಡಲು ಪ್ರಾರ್ಥನೆಯ ಹೊರತು ಬೇರೆ ಉಪಾಯವೇ ಇಲ್ಲ. ನನಗೆ ಸತ್ಯಸಂಶೋಧನೆಯಷ್ಟೇ, ಅಥವಾ ಅದಕ್ಕಿಂತಲೂ ಅಧಿಕಪ್ರಿಯವಾಗಿರುವ ವಿಚಾರವೆಂದರೆ ಪರಮಾತ್ಮ ಪ್ರಾರ್ಥನೆ."

—Hindu

## ಮಾತುಗಾರಿಕೆಯ ಮೂಲಕಾರಣ

ವಿ। ಜೆ. ಮಾಕ್ಸೆ ಎಂಬ ಲೇಖಕನು ಆಧುನಿಕಯುಗದ ವಿಚಾರವಾಗಿ ಬರೆವಾಗ ಹೀಗೆ ಹೇಳಿರುವನು.—

"ಈಗಿನ ಯುಗವು ಮಾತುಗಾರಿಕೆಯ ಯುಗವು. ಈಗ ನಾಲಿಗೆಯ ನಿಯಂತ್ರಣವು ಸಡಿಲವಾಗಿರುವುದರಿಂದ ಅದು ಸತತ ಕೆಲಸ ಮಾಡುತ್ತಿರುವುದು. ಅಕ್ಕಪಕ್ಕದಲ್ಲಿ ಮಾತು ಕಡಿಮೆಯಾಯಿತೆಂದು ಏನೋ 'ರೇಡಿಯೋದ ಮೂಲಕ ದೂರದ ಮಾತನ್ನೂ ಕೇಳಲು ಮಾನವನು ಅನುಕೂಲತೆಯನ್ನು ಕಲ್ಪಿಸಿಕೊಂಡಿರುವನು. ಚಿತ್ರಪಟವು ಕೂಡ ಮೂಕಾಗಿ ಚಲಿಸುವುದು ಅವನಿಗೆ ಸಹನೆಯಾಗದಾಯಿತು. ಆದ್ದರಿಂದಲೆ ಅವನು ಮಾತನಾಡುವ ಚಿತ್ರಪಟವನ್ನು ಪ್ರಾರಂಭಿಸಿರುವನು. ಅಂತೆಯೇ ಬೇರೆ ಬೇರೆ ಕ್ಲಬ್ಬು, ಸಂಘಗಳಲ್ಲಿ ತನ್ನ ಮಾತುಗಾರಿಕೆಯಿಂದ ಯಾವನು ಅಧಿಕ ಪ್ರಿಯನೆನಿಸಿರುವನೊ, ಅಂಥವನು ಶೀಘ್ರವಾಗಿ ಸಾರ್ವಜನಿಕ ಸಂಸ್ಥೆಗೆ ಚುನಾವಣೆ ಹೊಂದಿ ಬರಬಲ್ಲನು. ಯೋಗ್ಯತೆಯನ್ನಳೆಯುವ ವಿಧಾನವು ಹೀಗೆ ತಲೆ ಕೆಳಗಾದುದರಿಂದ ನಿಜವಾದ ಶೀಲವಂತನು ಪ್ರಸಿದ್ಧಿಗೆ ಬರುತ್ತಿಲ್ಲ. ತೋರಿಕೆ ಮತ್ತು ಕರ್ತೃತ್ವ ಶೂನ್ಯತೆ- ಇವುಗಳು ಈಗ ವಿಶೇಷ ಪ್ರಬಲವಾಗಿರುವವು. ಆದುದರಿಂದಲೆ ಪ್ರಜಾಪ್ರಭುತ್ವವು ಅವತರಿಸಿದ್ದರೂ ನಿಜವಾದ ಪ್ರಜಾಹಿತವನ್ನು ಸಾಧಿಸಲಾಗಿಲ್ಲ."

—America

CC-0. Jangamwadi Math Collection. Digitized by eGangotri




## ದುಂಡು ಮೇಜಿನ ಕನ್ನಡಿಗರು

ದುಂಡು ಮೇಜು ಕೆಟ್ಟ ಮುಹೂರ್ತದಲ್ಲಿಯೆ ಹುಟ್ಟಿ ದುದರಿಂದ ಅದು ಮುರಿದು ಬೀಳುವುದೆಂಬುವುದು ಈ



ಶ್ರೀ ಬಿ. ಶಿವರಾಯರು

ಮೊದಲೆ ಜಗತ್ತಿಗೆಲ್ಲ ಗೊತ್ತಾಗಿತ್ತು. ಆದುದರಿಂದ ಅದು ಕುಸಿದು ಬಿದ್ದ ಬಗ್ಗೆ ಯಾರಿಗೂ ಸೋಜಿಗವಿಲ್ಲ. ಆದರೆ ಅಲ್ಲಿ ಸೇರಿದ ಮಹಾಜನಗಳಲ್ಲಿ ಯಾರು—ಹೇಗೆ—ನಡೆದು ಕೊಂಡರೆಂಬುದು ಮಹತ್ವದ ಪ್ರಶ್ನೆಯಾಗಿದೆ. ಸ್ವಾರ್ಥಕ್ಕೆ ಬಲಿಬಿದ್ದು ನಾಡಿಗೆ ಕೇಡು ಬಗೆದವರು ಯಾರು ದೇ... ಬ್ರಿಟಿಶರ ಹೊರವಿಂಚಿಗೆ ಮರುಳಾಗದೆ, ಸಕ್ಕರೆಯ... ಸವಿಮಾತಿಗೆ ಬಾಯಬಿಡದೆ, ದೇಶಹಿತವನ್ನೇ ಕಣ್ಣ... ಟ್ಟುಕೊಂಡು ದೃಢನಿಶ್ಚಯದಿಂದಲೂ ಜಾಣ್ಮೆಯಿ... ಕೆಲಸ ಮಾಡಿದವರು ಯಾರು. ಯಾರು ? ಎಂಬುದು ... ಮಾನಪತ್ರಿಕೆಗಳ ವಾಚಕರಿಗೆಲ್ಲ ಸಾಧಾರಣವಾಗಿ ... ಸಂಗತಿಯು. ಮ. ಗಾಂಧಿಯವರು ಅದ್ವಿತೀಯ... ಅವರು ಅಲ್ಲಿ ಮಾಡಿದ ಕಾರ್ಯವೂ ಅದ್ವಿತೀಯ. ... ತೂಕಕ್ಕೆ ಸರಿಬಾರದಿದ್ದರೂ ಪಂ. ಮಾಲವಿಯ, ... ಸರೋಜಿನಿದೇವಿ, ಶ್ರೀ. ಠಾಕುರದಾಸ, ಬಿ. ಶಿವ... ಸರ್ ಮಿರ್ಝಾ, ಶ್ರೀಮತಿ ರಾಧಾದೇವಿ ಮೊದ... ವರು ಮಾಡಿದ ಕೆಲಸವೂ ಅತ್ಯಂತ ಮಹತ್ವದ್ದಾಗಿ...

ಇದರಲ್ಲಿ ಕರ್ನಾಟಕಸ್ಥರು ಅಭಿಮಾನಪಡತಕ್ಕ ... ಮಾತಿದೆ. ಕರ್ನಾಟಕದ ಪ್ರತಿನಿಧಿಗಳುಎಂದು ಸರ... ದವರು ಯಾರನ್ನೂ ಸ್ವತಂತ್ರವಾಗಿ ನಿಯ... ದ್ದಿಲ್ಲ; ( ಶ್ರೀ. ಕಂಬಳಿಯವರ ಹೆಸರು ಮೊದಲು ಪ್ರ... ವಾಗಿತ್ತು. ಆದರೆ ಅವರು ಕರ್ನಾಟಕದ ಪ್ರ... ಳೆಂದು ಆರಿಸಲ್ಪಟ್ಟಿರುವಸಂಭವಕ್ಕಿಂತಲೂ, ಜಾತಿ... ಭೂತವನ್ನು ಇಚ್ಛಾಮಾತ್ರದಿಂದ ಕುಣಿಸುವ ಮ... ಸಿದ್ಧಿಯ ತಂತ್ರಾಗಾರರೆಂದೇ ಅವರಹೆಸರು ಮುಂದೆ... ರುವುದು ಹೆಚ್ಚು ಸಂಭವನೀಯವಾಗಿ ತೋರುತ್ತ... ಆದರೂ ಕರ್ನಾಟಕದ ಸುದೈವದಿಂದ ಮೂವರು ಕ... ಗರು (ರಾ. ಬ. ಕಂಬಳಿಯವರು ಹೋಗಿದ್ದರೆ ನಾಲ್ವ... ದುಂಡುಮೇಜಿನಲ್ಲಿ ! ಶ್ರೀಮಾನ್ ಬೆನಗಲ್ ಶಿವರಾ... ರನ್ನುಳಿದು ಬೇರೆಯವರಿಂದ ಕರ್ನಾಟಕಕ್ಕೆ ಏನು...

CC-0. Jangamwadi Math Collection. Digitized by eGangotri

ವಾಯಿತೆಂದು ನಾವು ಇಷ್ಟು ಹಿಗ್ಗುಪಡಬೇಕು ಇವರ ಬಗ್ಗೆ ? ಎಂಬ ಪ್ರಶ್ನೆಯುಂಟಾದರೆ ಅವರಲ್ಲೇನು ಅಷ್ಟು ತಪ್ಪಿಲ್ಲ. ಕಾರಣಾಂತರಗಳಿಂದ ಇಂತವನು ತನ್ನ ತಂದೆಯೆಂದೆನ್ನಲು ಮಗನು ಮರೆಯುವನು, ನಾಚುವನು ಎಂದು ತಂದೆಯೂ ಅವನನ್ನು ಮರೆಯಬಹುದೇ ? ಸಂಬಂಧವನ್ನು ಕಡಿದುಕೊಳ್ಳಬಹುದೆ ? ಕರ್ನಾಟಕದಲ್ಲಿ ಹುಟ್ಟಿ ಬೆಳೆದು ಏಳ್ಗೆಯನ್ನು ಹೊಂದಿದ ಯಾರೇ ಆಗಲಿ, ಎಲ್ಲಿಯೇ ಇರಲಿ ಅವರ ಬದುಕು ಬಾಳು ಕನ್ನಡನಾಡಿಗೆ ಸಂಬಂಧಪಟ್ಟುದು. ಎಂದಬಳಿಕ ಅವರ ಸುಖದುಃಖಗಳೊಡನೆ ಹಿಗ್ಗುವ ತಗ್ಗುವ ಅಧಿಕಾರವು ಕರ್ನಾಟಕಕ್ಕಿಲ್ಲವೆ? ಸೌ. ಸು. ರಾಧಾದೇವಿಯವರು ಕರ್ನಾಟಕವನ್ನು ಮರೆತಿರಬಹುದು; ಆದರೆ ಕರ್ನಾಟಕವು ಅವರನ್ನು ಮರೆಯಲಾರದು. ಅವರು ದುಂಡುಮೇಜಿನಲ್ಲಿ ಯಾವುದೊಂದು ಪ್ರಶ್ನೆಯನ್ನೂ ವಿವೇಕದಿಂದ ವಿಮರ್ಶಿಸಿ ಅಭಿಪ್ರಾಯಪಡುತ್ತಿದ್ದರು. ಮುಖ್ಯಮಂತ್ರಿಗಳ ಆಶ್ವಾಸನಗಳಿಗೆ ಅವರು ಮೋಹಗೊಳ್ಳದೆ ತಮ್ಮ ಬಿಗುವು ಇಟ್ಟುಕೊಂಡೆ ಮಾತಾಡಿದರು. ಸರ್ ಮಿರ್ಝಾ ಅವರು ಸಂಸ್ಥಾನದ ಪ್ರಜೆಗಳಿಗೂ ಸಂಯುಕ್ತರಾಜ್ಯದ ಪ್ರತಿನಿಧಿ ಮಂಡಲಗಳಲ್ಲಿ ಆರಿಸಿ ಒರಲು ಅವಕಾಶವು ಇರಬೇಕೆಂದು ಅಭಿಪ್ರಾಯಪಟ್ಟುದು ಮಹತ್ವದ ಸಂಗತಿಯಾಗಿದೆ. ಎಲ್ಲ ಸಂಸ್ಥಾನಿಕರೂ ಅವರ ಕೈಯಾಳುಗಳೂ ಈ ಮಾತಿಗೆ ಎದುರಿಸುತ್ತಿದ್ದಾಗ ಸರ್ ಮಿರ್ಝಾ ಅವರು ಎತ್ತಿ ಹಿಡಿದುದು ಅಭಿನಂದನೀಯವು. ಸರ್ ಮಿರ್ಝಾ ಅವರ ಆಡಳಿತದಲ್ಲಿ ಮೈಸೂರ ಸಂಸ್ಥಾನದಲ್ಲಿ ನಡೆದ ಕ್ರೂರ ಘೋರ ಪ್ರಕಾರಗಳನ್ನು ನಾವು ದೂಷಿಸುವೆವಾದರೂ ಅವರು ದುಂಡುಮೇಜಿನಲ್ಲಿ ಮಹತ್ವದ ಅನೇಕ ಸಮಸ್ಯೆಗಳನ್ನು ಬಿಡಿಸುವುದಕ್ಕೆ ಶ್ರಮವಹಿಸಿದುದು ಶ್ಲಾಘನೀಯವಾಗಿದೆ. ಸಂಯುಕ್ತರಾಜ್ಯಘಟನೆಯಲ್ಲಿ ಬ್ರಿಟಿಶ ಹಿಂದುಸ್ತಾನದ ಪ್ರತಿನಿಧಿಗಳೊಡನೆ ಸೇರಿಕೊಂಡು ರಾಜ್ಯದಾಡಳಿತವನ್ನು ನಡಿಸಲಿಕ್ಕೆ ಸಂಸ್ಥಾನಿಕರು ಯಾರೂ ಮೊದಲು ಸಮ್ಮತಿಸಲಿಲ್ಲ. ಮೊದಲತುತ್ತಿಗೆ ಹರಳು ಬಂದು ಆರಂಭದಲ್ಲಿಯೆ ದುಂಡುಮೇಜು ಮುರಿದು ಬೀಳುತ್ತಿತ್ತು. ಆದರೆ ಅಂತಹ ಸಮಯದಲ್ಲಿ ಮಿಕ್ಕ ಸಂಸ್ಥಾನಿಕರು ಬರಲಿ ಬಾರದಿರಲಿ, ಮೈಸೂರು ಸಂಯುಕ್ತರಾಜ್ಯದಲ್ಲಿ ಸೇರಿಕೊಳ್ಳಲು ಸಿದ್ಧವಿದೆಯೆಂದು ಸಾರಿದವರು ಸರ್ ಮಿರ್ಝಾ ಅವರು. ಸರ್ ಮಿರ್ಝಾ ಅವರು ಮನೆಮುರುಕರೂ, ಸ್ವಾರ್ಥಿಗಳೂ ಆದ ಮುಸಲ್ಮಾನ ಪ್ರತಿನಿಧಿಗಳ ಮುತ್ಸದ್ದಿತನದ ವಿಚಾರವಾಗಿ ಯಾವ ಬಗೆಯಿಂದ ನಡೆದುಕೊಳ್ಳುತ್ತಿದ್ದರೆಂಬುದಿಷ್ಟು ಹೊರಗೆ ಬಂದಿದ್ದರೆ ಚೆನ್ನಾಗಿತ್ತು. ಇರಲಿ ! ಇನ್ನು ಶ್ರೀ. ಬೆನಗಲ್ ಶಿವರಾಯರ ವಿಚಾರ. ಅದನ್ನು ಕುರಿತು ಈ ಮೊದಲೇ ಬರೆದಿದ್ದೇವೆ. ಅದರ ಹೊರ್ತು ಇನ್ನೊಂದೆರಡು ಮಾತುಗಳುಂಟು. ದುಂಡುಮೇಜಿನಲ್ಲಿ ಕರ್ನಾಟಕ



ಸರ್ ಮಿರ್ಝಾ

ಏಕೀಕರಣದ ಪ್ರಶ್ನೆಯನ್ನು ಎತ್ತಿದರೆಂಬುದಿಷ್ಟೆ ಇವರ ಕಾರ್ಯವಲ್ಲ. ಕೂಲಿಕಾರರ ಪರವಾಗಿ ತುಂಬಾ ಮೈ-ಮುರಿದು ದುಡಿದಿರುವರು. ಮಹಾತ್ಮಾಜಿಯವರಿಗೆ ಕಾಲಕಾಲಕ್ಕೆ ತಮ್ಮ ಬೆಂಬಲವನ್ನೀಯುತ್ತಿದ್ದರು. ಮಹಾತ್ಮಾಜಿಯವರನ್ನು ನಿರಾಶೆಗೊಳಿಸಿ ಬರಿಗೈಯಿಂದ ಹಿಂದುಸ್ತಾನಕ್ಕೆ ಕಳಿಸಿದರೆ, ಬ್ರಿಟಿಶರು ಹಿಂದುಸ್ತಾನಕ್ಕೆ ಎರವಾಗಬೇಕಾದೀತೆಂದು ಮುಖ್ಯಮಂತ್ರಿಗಳಿಗೆ ಪತ್ರ

CC-0. Jangamwadi Math Collection. Digitized by eGangotri

ಬರೆದು ಎಚ್ಚರ ಕೊಡುವ ಧೈರ್ಯತೋರಿಸಿದರು. ಭಾವೀ ರಾಜ್ಯಾಂಗದಲ್ಲಿ ಜನಸಾಮಾನ್ಯರಿಗೆಲ್ಲ ಆಡಳಿತದ ಅಧಿಕಾರಗಳು ದೊರೆಯಬೇಕು, ಕೇವಲ ಶ್ರೀಮಂತರ ಕೈಯಲ್ಲೇ ಆಗಲಿ, ಬರಿ ಬುದ್ಧಿಜೀವಿಗಳ ವಶದಲ್ಲೇ ಆಗಲಿ ದೇಶದ ರಾಜ್ಯಸೂತ್ರಗಳು ಸಿಕ್ಕಿಕೊಂಡಿರಬಾರದು; ಎಂಬುದು ಇವರ ಧ್ಯೇಯ. ಅದನ್ನು ಕೈಗೂಡಿಸಿಕೊಳ್ಳು ವುದಕ್ಕಾಗಿ ಹೆಣಗುವುದೆ ಇವರ ಜೀವಿತದ ಕಾರ್ಯ. ಇಂತಹ ಉದಾರ ವಿಚಾರಗಳು ಕನ್ನಡಿಗರಲ್ಲಿ ಉಂಟೆಂಬ ಮಾತು ಯಾರಿಗೆ ತಾನೆ ಅಭಿಮಾನಾಸ್ಪದವಾಗಲಿಕ್ಕಿಲ್ಲ? ಶ್ರೀ. ಶಿವರಾಯರು ಇಂಗ್ಲೆಂಡಿನಿಂದ ಹಿಂದುಸ್ತಾನಕ್ಕೆ ಹೊರಟಿದ್ದು, ಕೆಲವೆಡೆಗಳಲ್ಲಿ ಅವರೂ ಅವರ ಹೆಂಡತಿ ಯವರೂ ಹಿಂದೂಧರ್ಮ, ಅದರ ಶ್ರೇಷ್ಠತೆ ಮೊದಲಾದ ವಿಷಯಗಳನ್ನು ಕುರಿತು ಉಪನ್ಯಾಸಗಳನ್ನು ಮಾಡು ತ್ತಿರುವುದಾಗಿ ವರ್ತಮಾನ ಬಂದಿದೆ. ದಾರಿಯಲ್ಲಿ ಅವರು ಗ್ರೀಸದೇಶದ ಸರಕಾರದ ಅತಿಥಿಗಳಾಗಿದ್ದರು. ಇದೂ ಒಂದು ನಮ್ಮ ನಾಡಿಗೆ ಭೂಷಣವೆ.

### ಪೂರ್ವ ಆಫ್ರಿಕೆಯ ತೊಡಕು

ಗೂಳಿ ಬಿದ್ದರೆ ಆಳಿಗೊಂದು ಕಲ್ಲು. ಹಿಂದೀ ಜನರಿಗೆ ಇದು ವಿಪರೀತ ಕಾಲ. ಎಲ್ಲೆಲ್ಲೂ ಅವರ ಪಾಡಿಗೆ ಕುತ್ತುಗಳ ಮೇಲೆ ಕುತ್ತುಗಳು. ಪೂರ್ವ ಆಫ್ರಿಕೆಯಲ್ಲಿ ಹಿಂದೀ-ಯರು ಅನೇಕಾನೇಕ ಮಂದಿ ನೆಲಸಿದ್ದಾರೆ. ತಮ್ಮ ದುಡಿಮೆಯಿಂದ ದುಡ್ಡುಳ್ಳವರೂ ಆಗಿದ್ದಾರೆ. ಆದರೆ ರಾಮೇಶ್ವರಕ್ಕೆ ಹೋದರೂ ಶನೇಶ್ವರನೊಂದು ಬೆನ್ನು ಬಿಡಬೇಕಲ್ಲ? ರಾಜಕೀಯ ಪಾರತಂತ್ರ್ಯದಲ್ಲಿರುವ ನಮ್ಮ ಪಾಪದ ಪ್ರಾಯಶ್ಚಿತ್ತವು ಅವರನ್ನು ಅಲ್ಲಿಯೂ ಸಂಕ ಷ್ಟಕ್ಕೆ ಈಡುಮಾಡಿದೆ. ಅಲ್ಲಿ ಹಿಂದೀಯರು ಯುರೋ ಪೀಯರ ಇಮ್ಮಡಿ (೨:೧); ಆದರೆ ಶಾಸನಸಭೆಯಲ್ಲಿ ಹಿಂದೀ ಯುರೋಪೀಯರ ಪ್ರಮಾಣವು ಮಾತ್ರ ಇದಕ್ಕೆ ವಿಪರೀತ । ೧:೨। ಅಲ್ಲಿಯ ಅನ್ಯಾಯವು ಇಷ್ಟಕ್ಕೆ ತೀರಿಲ್ಲ. ಅಲ್ಲಿಯ ಮೂಲನಿವಾಸಿಗಳ ಹಿತಸಂರಕ್ಷಣೆಯ ಸಲುವಾಗಿ ಶಾಸನಸಭೆಗೆ ಬಿಳಿಜನರನ್ನೇ ಗವ್ಹರ್ನರರು ಆಯ್ದುಕೊಳ್ಳುವರು; ತೋಳವು ಕುರಿಕಾಯ್ದ ಲೆಕ್ಕಾ ಚಾರ। ಹಿಂದೀಯರಿಗೆ ಇನ್ನೂ ಒಂದು ಕುತ್ತು ಎಂದರೆ ಆಯ್ಕೆಯ ( Election ) ಅನ್ಯಾಯದ ಪದ್ಧತಿ. ಶಾಸನ ಸಭೆಗೆ ಹಿಂದೀಯರೂ ಯುರೋಪೀಯರೂ ಬೇರೆಬೇರೆ ಯಾಗಿ ಆರಿಸಲ್ಪಡುವ ಪದ್ಧತಿಯನ್ನಿಟ್ಟಿದ್ದಾರೆ. [illegible] ರಿಂದ ಎರಡೂ ಸಮಾಜಗಳಲ್ಲಿ ಪರಸ್ಪರ ಪರಿಚ[illegible] ಸಹಾಯ, ಸಹಾನುಭೂತಿಗಳುಂಟಾಗಿ ದೃಢಸಂಬಂ[illegible] ಳುಂಟಾಗಲಿಕ್ಕೆ ದೊಡ್ಡ ತೊಂದರೆಯಾಗಿದೆ. ಎರಡೂ ಸಮಾ ಜಗಳ ಬಳಿಕೆಗೆ ಅವಕಾಶವೆ ಇಲ್ಲದಾಗಿದೆ. ಒಂದೇಪ್ರಾಂ[illegible] ಲ್ಲಿರುವವರು ಹೀಗೆ ಪರಸ್ಪರ ಭಿನ್ನವಾಗಿ ಪೂರ್ವಪಕ್ಷ[illegible] ಗಳಿಗೆ ಪೋಕೆ ಮಾಡಿಕೊಂಡು ನಡೆದರೆ ಆ ನಾಡಿನ[illegible] ಮನುಷ್ಯತ್ವವು ಮುಂದಡಿಯಿಡುವುದಕ್ಕಾದರೂ [illegible] ಕಾಶವೆಲ್ಲಿ? ಈ ಬಗೆಯ ಅನ್ಯಾಯಗಳನ್ನು ಇನ್ನು ಹೆ[illegible] ದಿನ ತಡೆದುಕೊಳ್ಳುವುದು ತಮ್ಮಿಂದಾಗದು; [illegible] ಸಮಾಧಾನದಿಂದ ಸಾಮೋಪಚಾರಗಳಿಂದ ಬಿನ್ನಹ[illegible] ವತ್ತಳೆಗಳ ಮುಖಾಂತರ ಹೇಳಿಕೊಳ್ಳುವುದೆಲ್ಲ [illegible] ತಾಯಿತು. ಕರನಿರೋಧನ ಚಳವಳಿಯ ಬ್ರಹ್ಮಾ[illegible] ವೊಂದೆ ಉಳಿದಿದೆ.'' ಎಂದು ಅಲ್ಲಿಯ ಹಿಂದೀ ಮು[illegible] ಳುಗಳ ನುಡಿಸಿಡಿಲು ಕೇಳಬರುತ್ತಲಿದೆ. ಸಿಟ್ಟು [illegible] ಹತ್ತು ಎಣಿಸು ಎಂಬುದು ಅನುಭವೋಕ್ತಿ. ಜನ[illegible] ಅನ್ಯಾಯವನ್ನು ಸಹಿಸಲಾರದುದಕ್ಕೆ ಕೆರಳಿ ದುರು[illegible] ಉರಿಯುತ್ತಲಿರುವಾಗ ಬ್ರಿಟಿಶ ಸರಕಾರವು ವಿಚಾ[illegible] ಮಂಡಳಗಳನ್ನು ನಿಯಮಿಸಿ ಕಾಲಹರಣ ಮಾ[illegible] ಯುಕ್ತಿಯನ್ನು ಚೆನ್ನಾಗಿ ಅರಿತುಕೊಂಡಿದೆ. ಈ[illegible] ಅನ್ಯಾಯ ವಿಚಾರಣೆಗಾಗಿಯೂ ಒಂದು ಕ[illegible] ನಿರ್ಮಿತವಾಗಿದೆ. ಆದರೆ ಹೊತ್ತುಗಳೆದು [illegible] ಹಾಳುಮಾಡುವುದಕ್ಕಿಂತಲೂ ಯಾವ ಹೆಚ್ಚಿನ [illegible] ಯೋಗವು ಇಂತಹ ಕಮಿಶನ್ನುಗಳಿಂದ ಆದ ಉದಾ[illegible] ಣಗಳು ತೀರ ವಿರಳ. ಹಿಂದುಸ್ತಾನವೆ ಬ್ರಿಟಿಶರ [illegible] ಗಿರುವ ವರೆಗೆ ಪರದೇಶದಲ್ಲಿರುವ ಹಿಂದೀಯರಿಗಾ[illegible] ತೊತ್ತು, ಆಳು ಎಂಬುದಕ್ಕಿಂತ ಹೆಚ್ಚಿನ ಸ್ಥಾನ[illegible] ಯಾರು ಕೊಡುವರು? ಹಿಂದುಸ್ತಾನವು ಪೂರ್ಣ ಸ್ವ[illegible] ಜ್ಯವನ್ನು ಪಡೆದದಿನ ಇವೆಲ್ಲ ಅನ್ಯಾಯಗಳು [illegible] ಗಿಯೆ ಮಾಯವಾಗುವವು. ಏಕೆಂದರೆ ೩೫,೦೦,೦[illegible] ಜನರ ಸ್ವತಂತ್ರ ದೇಶವನ್ನು ಆಗ ಕೆಣಕುವ ಬುದ್ಧಿ[illegible] ಯಾರಿಗೆ ಉಂಟಾಗುವ ಸಂಭವವಿಲ್ಲ.

### ನಮ್ಮ ನಾಡಿನ ಬಡತನ

ಹಿಂದೂದೇಶದ ಬಡತನವು ಲೋಕದಲ್ಲೆಲ್ಲ ಪ್ರಸಿ[illegible] ಅಲ್ಲಿ ಕೋಟ್ಯನುಕೋಟಿ ಜನರಿಗೆ ಇಡಿ ಆಯುಷ್ಯ[illegible]

CC-0. Jangamwadi Math Collection. Digitized by eGangotri

ಹೊಟ್ಟೆತುಂಬ ಊಟಮಾಡಿ ಗೊತ್ತಿಲ್ಲ. ಇವರಲ್ಲಿ ಅನೇ ಕಾನೇಕರಿಗೆ ಹಬ್ಬದೂಟವೆಂದರೆ ಅಕ್ಕಿಗಂಜಿಯ ನಾಲ್ಕಾರು ತುತ್ತು। ಅದೂ ಒಪ್ಪೊತ್ತೆಂದರೆ ಇನ್ನೊಂದು ಹೊತ್ತು ಏಕಾದಶಿ. ಮುಂಜಾನೆ ಏಕಾದಶಿ, ಸಂಜೆಗೆ ಶಿವರಾತ್ರಿವ್ರತ ಹಿಡಿದ ಜನಗಳ ಲೆಕ್ಕವಿಲ್ಲ. ನಾಚಿಕೆ ಮುಚ್ಚಲು ಒಂದುಗೇಣು ಅರಿವೆ ಕೊಳ್ಳಲು ನಾಲ್ಕು ಕಾಸುಗಳಿಲ್ಲದವರು ಕಡಿಮೆಯಿಲ್ಲ. ಬಟ್ಟೆಯ ದಾರಣೆ ಏರಿದಾಗ ಹೊಸತನ್ನು ಕೊಳ್ಳಲು ಕಾಸುಗಳಿಲ್ಲದುದಕ್ಕೆ ಹರಕುಬಟ್ಟೆಯನ್ನೆ ಉಟ್ಟುಕೊಂಡು ವರ್ಷಾವಧಿ ಕಾಲಹಾಕದವರು ಅಪರೂಪ. ಮೈತುಂಬ ಬೇಕಾಗುವ ಬಟ್ಟೆಕೊಳ್ಳಲು ಆಗದ್ದಕ್ಕೆ ಲುಂಗಿಯನ್ನಷ್ಟು ಮಾತ್ರ ಸುತ್ತಿಕೊಂಡು ಎದೆದೆರೆದು ಅಡ್ಡಾಡುವ ೧೫,೦೦೦,೦೦೦ ಹೆಣ್ಣುಮಕ್ಕಳಿರುವರು. ಮೊಳಕಾಲವರೆಗೆ ಬಟ್ಟೆ ಉಡುವವರು ೨೦,೦೦೦,೦೦೦ ಮಂದಿ. ಹುಟ್ಟಿದ ಮಕ್ಕಳಿಗೆ ಉಡುತೊಡಲು ಕೊಂಡುಕೊಡಲಾರದುದಕ್ಕೆ ೬–೭ ವರುಷದ ವರೆಗೂ ಬತ್ತಲೆಯಾಗಿ ಓಡಾಡುವುದು ಓಣಿಓಣಿಗಳಲ್ಲಿಯೂ ಕಾಣುವ ನೋಟವಾಗಿದೆ.''

ಇದು ಮಿಸ್ ಉಟ್ಲೆ ಎಂಬವಳು ತನ್ನ ಒಂದು ಗ್ರಂಥದಲ್ಲಿ ಮಾಡಿದ ಹಿಂದೂದೇಶದ ವರ್ಣನೆ. ನಮ್ಮದಲ್ಲ. ಒಬ್ಬ ಯುರೋಪೀಯಳು ಕಣ್ಣಾರೆ ಕಂಡು, ಅರೆದು ನೋಡಿ, ಒರೆದು ನೋಡಿ, ಬರೆದ ಮನಸರಿಕೆಯ ಮಾತುಗಳು.

ಇಷ್ಟೆಲ್ಲ ಬಡತನಕ್ಕೆ ಕಾರಣವೇನು ? ಪರಕೀಯರ ಆಳಿಕೆ. ಹಿಂದೂದೇಶವು ಬ್ರಿಟಿಶರ ತೊತ್ತಾಗಿದೆ. ಬೇಕಾದಂತೆ ಬಗೆಬಗೆಯಾಗಿ ದೇಶದ ಸುಲಿಗೆ ನಡೆದಿದೆ. ಇದನ್ನು ನಿಲ್ಲಿಸಬೇಕಾಗಿದ್ದರೆ ಸ್ವರಾಜ್ಯವೊಂದೇ ಉಪಾಯ. ಆದುದರಿಂದಲೆ ಮಹಾತ್ಮಾಜೀಯವರು ಸ್ವರಾಜ್ಯವಿಲ್ಲದೆ ನಾವು ಬದುಕಲಾರೆವು ಎಂದು ಘಂಟಾಘೋಷವಾಗಿ ಹೇಳುತ್ತಿರುವುದು. ಹೀಗೆ ಬ್ರಿಟಿಶರ ಕೈಯಲ್ಲಿ ಈ ದೇಶವು ಇನ್ನೂ ಕೆಲದಿನ ಉಳಿದರೆ ಈಗ ಅಷ್ಟು ಇಷ್ಟು ಉಂಡುಟ್ಟುಕೊಂಡು ಇರುವವರೂ ಭಿಕಾರಿಗಳಾಗುವರು. ಅಂತೂ ಇಂತೂ ಹೊಟ್ಟೆಗೆ ಇಲ್ಲದುದಕ್ಕೆ ನಮ್ಮ ನಮ್ಮೊಳಗೆ ಬಡಿದಾಡಿ ಕಡಿದಾಡಿ ಸಾಯುವುದು ನಮಗೆ ತಪ್ಪಿದ್ದಲ್ಲ. ಈ ದುರ್ಮರಣವನ್ನು ತಂದುಕೊಳ್ಳುವುದಕ್ಕಿಂತ,ಸಾವಿನ ಮೇಲ ಏರಿ ಹೋಗುವ ಗಡುಸಿನ ಗಂಡುಗಲಿಗಳೆನಿಸಿಕೊಳ್ಳುವುದು ಮಿಗಿಲಲ್ಲವೇ?

## ಬಂಗಾಳದ ಮೇಲೆಸೆದ ಹೊಸ ಕೂರಲಗು

ಮಸೆಮಸೆದು ಹದನಗೊಳಿಸಿ ಹಿಂದುಸ್ತಾನ ಸರಕಾರದವರು ಬಂಗಾಳದ ಮೇಲೆ ಹೊಸತೊಂದು ಕೂರಲಗನ್ನು ಎಸೆದಿರುವರು. ಇದಕ್ಕೆ ನಂಜಿನ ನೀರು ಕುಡಿಸಿದ್ದಾರೆ. ಇದು ಪ್ರತ್ಯಕ್ಷವಾಗಿ ತಾಗಿದಾಗಷ್ಟೆ ಜೀವ ಹಿಂಡುವುದೆಂತಲ್ಲ; ಹಾರಾಡುವ ಭಾಗದಲ್ಲೆಲ್ಲ ಇದರ ನಂಜಿನ ಗಾಳಿಯಿಂದಲೆ ಜನರ ಬಾಳುಬದುಕುಗಳೆಲ್ಲ ಬೆಂದು ಬೇಗುದಿಗೊಳ್ಳುತ್ತಲಿರುವವು. ಬಂಗಾಳದಲ್ಲಿ ದೆವ್ವಿನ ಕುಣಿತವನ್ನು ನಡೆಯಿಸಿರುವ ಹೊಸ ಶಾಸನಗಳ ಸ್ಥೂಲ ಕಲ್ಪನೆಯಾದರೂ ಬರಲೆಂದು ಆ ಕಟ್ಟಳೆಯ ಕೆಲವು ಅಂಶಗಳನ್ನಿಲ್ಲಿ ಕೊಡುತ್ತಲಿದ್ದೇವೆ.

'ಸರಕಾರ ಅಧಿಕಾರಿಗಳು ಬೇಕಾದವನನ್ನು ಬೇಕಾದಾಗ ಸೆರೆಹಿಡಿಯಬಹುದು.'

'ಬೇಕಾದವನಿರಲಿ, ಅವನಿಗೆ ಅಧಿಕಾರಿಗಳು, ನಿನ್ನ ಇರುವಿನ ವಿವರವನ್ನು ಹೇಳು ಎಂದು ಕೇಳಿದರೆ ಆತನು ಅದನ್ನು ಹೇಳಲಿಕ್ಕೆ ಬೇಕು; ಇವನು ಹೇಳಿದುದು ಸರಿಯಾಗಿದೆಯೆ ಎಂದು ಒರೆನೋಡುವುದಕ್ಕಾಗಿ ಆತನಿಗೆ ರಾಜನಿಯೋಗಿಯು ೨೪ ತಾಸುಗಳ ವರೆಗೆ ಸೆರೆಮನೆಯಲ್ಲಿಡಬಲ್ಲನು.'

'ಬೇಕಾಗಿರುವ ಆಸಾಮಿಯನ್ನು ಸೆರೆಹಿಡಿಯುವುದಕ್ಕೆ ಅಧಿಕಾರಿಗಳು ತಮ್ಮ ಮನಸ್ಸಿಗೆ ಬಂದ ಉಪಾಯಗಳನ್ನು ಕೈಕೊಳ್ಳಬಹುದು.'

'ಸೈನಿಕರಿಗಾಗಲಿ, ಸೆರೆಯಾಳುಗಳನ್ನಿಡುವುದಕ್ಕಾಗಲಿ, ಅಥವಾ ಬೇರೆ ಯಾವ ಕೆಲಸಕ್ಕಾಗಲಿ ಅವಶ್ಯಕವೆನಿಸಿದ ಕಟ್ಟಡಗಳನ್ನೂ ಭೂಮಿಗಳನ್ನೂ ಒಡೆಯನ ಸಮ್ಮತಿಯಿರಲಿ ಇಲ್ಲದಿರಲಿ ಅವನ್ನು ಅಧಿಕಾರಿಗಳು ತಮ್ಮ ವಶಕ್ಕೆ ಸೆಳೆದುಕೊಳ್ಳಬಲ್ಲರು.'

'ಡಿಸ್ಟ್ರಿಕ್ಟಮ್ಯಾಜಿಸ್ಟ್ರೇಟನು ತನ್ನ ಮನಸಿಗೆ ಬಂದ ಸ್ಥಳಕ್ಕೆ, ಕಟ್ಟಡಕ್ಕೆ, ಕಚೇರಿಗೆ, ಸ್ಟೇಶನ್ನಿಗೆ ಜನರು ಹೋಗಕೂಡದೆಂದಾಗಲಿ, ಇಂತೀ ಬಗೆಯಿಂದಲೆ ಹೋಗಬೇಕೆಂದಾಗಲಿ ಕಟ್ಟಪ್ಪಣೆ ಮಾಡಬಲ್ಲನು. ಇದೇ ತೆರನಾಗಿ ಬೇಕಾದ ರಾಜಮಾರ್ಗ, ಜಲಮಾರ್ಗ, ಸೇತುವೆ, (ಪೂಲು)ಗಳ ರಹದಾರಿಯನ್ನೂ ತಡೆಯಬಹುದು.'

ಶಿಕ್ಷಕರು, ಪ್ರೋಫೆಸರುಗಳೆಲ್ಲ, ಅಧಿಕಾರಿಗಳು ಹೇಳಿದ

CC-0. Jangamwadi Math Collection. Digitized by eGangotri

ರೀತಿಯಲ್ಲಿ ನಡೆದುಕೊಂಡು ಅವರಿಗೆ ಬೇಕಾಗಿರುವ ಮಾಹಿತಿಯನ್ನು ಪೂರೈಸತಕ್ಕದ್ದು.'

'ಅಧಿಕಾರಿಗಳು ಝಡತಿಯ ಸಲುವಾಗಿ ಬೇಕಾದ ಮನೆ ಹೊಗಬಹುದು; ಬೇಕಾದ ಮನುಷ್ಯನನ್ನು ಹೆಂಗಸಿರಲಿ ಗಂಡಸಿರಲಿ ಮುದುವನಿರಲಿ ಹುಡುಗನಿರಲಿ ಅಡಿದು ನೋಡಬಹುದು.

'ಬೇಕಾದ ಊರವರಿಗೆ ದಂಡ ಕಟ್ಟಬಹುದು. ಅದನ್ನು ಆ ಊರವರಿಗೆ ಹಂಚಿ, ಉಚ್ಚಿಕೊಳ್ಳಬಹುದು.'

ಸರಕಾರದವರು ಅನ್ಯಾಯಗಳ ವಿಚಾರಣೆಗಾಗಿ ಸ್ಪೆಶಲ್ ಟ್ರಿಬ್ಯೂನಲ್‌ಗಳನ್ನು ನಿಯಮಿಸುವರು.

'ಈ ನ್ಯಾಯಾಧಿಕಾರಿಗಳು ಆರೋಪಿತನು ನ್ಯಾಯ ಮಂದಿರದಲ್ಲಿ ಇಲ್ಲದಿದ್ದರೂ ವಿಚಾರಣೆ ನಡಿಸಿ ತೀರ್ಪು ಕೊಡಬಹುದು. ಇದರಲ್ಲಿ ಅಪರಾಧಿಯ ಸಮ್ಮತಿ ಅಸಮ್ಮತಿಗಳನ್ನು ಎಣಿಸುವಂತಿಲ್ಲ.'

'ಕೊಲೆಮಾಡಲು **ಪ್ರಯತ್ನ** ಮಾಡಿದ್ದು ಗೊತ್ತಾದರೂ ಶೂಲಕ್ಕೇರಿಸುವ ಶಿಕ್ಷೆಕೊಡುವ ಅಧಿಕಾರವು ಇವರಿಗಿದೆ.'

'ಕೆಲವು ನ್ಯಾಯವಿಚಾರಣೆಯನ್ನು ಗುಪ್ತವಾಗಿ ನಡಿಸುವ ಅಧಿಕಾರವೂ ಉಂಟು.'

ಈ ಎಲ್ಲ ಕಟ್ಟಳೆಗಳು ಕೇವಲ ಕೊಲೆಯ ಅಪರಾಧಿಗಳಿಗಂತೂ ಸರಿಯೆ. ಆದರೆ ಆರೋಪಿತರಿಗೆ ಆಶ್ರಯ ಕೊಟ್ಟವರೂ, ಅಧಿಕಾರಿಗಳ ಕೆಲಸಗಳಿಗೆ ಅಡ್ಡಿ ತರುವವರೂ ಮೊದಲಾದವರು ಸಹ ಶಿಕ್ಷೆಗೆ ಗುರಿಯಾಗಬೇಕಾಗುವುದು.

ಈ ಹೊಸ ಅಧಿಕಾರಗಳು ಸಿಗುವ ಮುನ್ನವೆ ಪೋಲಿಸರು ಮೊದಲಾದ ರಾಜನಿಯೋಗಿಗಳ ಪೀಡೆಯು ಜನರಿಗೆ ಅಷ್ಟು ಇಷ್ಟು ಇದ್ದಿಲ್ಲ. ಅದರಲ್ಲಿ ಈ ಹದನವಾದ ಉಕ್ಕಿನ ಉಗುರುಗಳು ದೊರೆತ ಬಳಿಕ ಬಂಗಾಲದಲ್ಲಿ ಏನು ನಡೆದಿರಬಹುದೊ ಮನಸಿಗೆ ನಿಲುಕದಾಗಿದೆ. ಈ ಕಟ್ಟಳೆಯು ಸಂಪೂರ್ಣವಾಗಿ ನಡೆವಳಿಯಲ್ಲಿರುವ ಚಿತಗಾಂಗ ಜಿಲ್ಲೆಯ ಸಂಕಷ್ಟಗಳು ಹೊರಗೆ ತಿಳಿಯಲಿಕ್ಕೂ ಅಸಾಧ್ಯವಾಗಿದೆ. ಏಕೆಂದರೆ ಅಲ್ಲಿಂದ ಜನರಿಗೆ ಹೊರಗೆ ಹೋಗಲಿಕ್ಕೆ ಅಪ್ಪಣೆಯಿಲ್ಲ. ಅಲ್ಲಿಯ ಸುದ್ದಿಗಳನ್ನು ಪ್ರಕಟಿಸಿದರೆ ಪತ್ರಿಕಾಕಾರರಿಗೆ ಕಠೋರ ಶಿಕ್ಷೆಯನ್ನು ವಿಧಿಸಿದ್ದಾರೆ!

## ಮುರುಕ ದುಂಡುಮೇಜಿನ ಮೂರು ಕಾಲುಗಳು

ದುಂಡುಮೇಜಿನ ಚರ್ಚೆಯ ವಿಷಯಗಳು ಮು[illegible] ವಾಗಿ ಮೂರು ಎಂದು ಮ. ಗಾಂಧಿಯವರು ಅ[illegible] ಸಲ ಹೇಳಿದ್ದಾರೆ. (೧) ದಂಡು, (೨) ದು[illegible] (೩) ದೊಡ್ಡಿತೆ. ( Foreign Relations ) ಇವ[illegible] ಮೂರು ಮಾತು. ಸ್ವರಾಜ್ಯದ ಜೀವಾಳವಿರು[illegible] ಇದರಲ್ಲಿ. ಆದರೆ ಬ್ರಿಟಿಶ ಮಂತ್ರಿಗಳು, ಇ[illegible] ಮಾತನ್ನೇ ಎತ್ತಬೇಡಿ; ಇವು ಕಾದಿಟ್ಟ ಖಾತೆಗಳು [illegible] ಹೇಳುತ್ತಿದ್ದಾರೆ. ಇವುಗಳನ್ನು ಬಿಟ್ಟು ಬೇ[illegible] ಸುಧಾರಣೆಗಳನ್ನೂ ನಾವು ನಿಮಗೆ ಕೊಡುವೆವು [illegible] ಬ್ರಿಟಿಶ ಸರಕಾರವು; ಜೀವವಿಲ್ಲದ ದೇಹದಿಂ[illegible] ಸ್ವರಾಜ್ಯದ ಹೆಣವನ್ನು ಸ್ವೀಕರಿಸಲಿಕ್ಕೆ ರಾಷ್ಟ್ರೀ[illegible] ಸಭೆಯು ಸಿದ್ಧವಿಲ್ಲ, ಎಂದು ಮಹಾತ್ಮಾಜೀಯ[illegible] ಲಂಡನ್ನಿನ ಚರ್ಚೆಯ ಈ ಮೂರೂ ಕಾಲುಗಳು [illegible] ದುದರಿಂದ ದುಂಡುಮೇಜು ಕುಸಿದುಬಿತ್ತು. ಮಹಾ[illegible] ತ್ಮಾಜೀಯವರು ಉಳಿದ ಆ, ಈ ಮಾತುಗಳಿಗೆ [illegible] ಛೋಂಕನೆದ್ದು ಹಿಂದೂದೇಶಕ್ಕೆ ಮರಳಿದ್ದಾರೆ.

ಡಾ. ಸಪ್ರು ಜಯಕರರು ಇನ್ನೊಮ್ಮೆ ಯತ್ನ[illegible] ನೋಡು ಎಂಬ ಪಾಠವನ್ನು ಕಂಠಪಾಠ ಮಾಡಿ[illegible] ಇನ್ನೂ ಒಮ್ಮೆ (ಅವರ ಇನ್ನೂ ಒಮ್ಮೆಗೆ ಮುಕ್ತಾ[illegible] ವಿಲ್ಲ!) ದುಂಡುಮೇಜಿನಲ್ಲಿ ತಮ್ಮದೊಂದು ಮ[illegible] ಮಾರ್ಗವನ್ನು ಸೂಚಿಸಿದರು. ಮಹಾತ್ಮಾಜೀಯ[illegible] ಕೇಳುವಂತೆ ದಂಡಿನ ಸಂಪೂರ್ಣ ಅಧಿಕಾರಗಳನ್ನು [illegible] ಒಪ್ಪಿಸಿಕೊಡುವ ಕಾರಣವಿಲ್ಲ. ಕೆಲವೊಂದು [illegible] ಅವಧಿಯವರೆಗೆ ದಂಡಿನ ಸರ್ವಾಧಿಕಾರವು ವೈಸರಾ[illegible] ಕಡೆಗೆ ಇರಲಿ. ಆದರೆ ದಂಡಿನ ಅಂಗವು (ಖಾತೆ) [illegible] ಹಿಂದೀ ಮಂತ್ರಿಯ ಕಡೆಗೆ ಇರಬೇಕು; ಈ ಮಂತ್ರಿ[illegible] ವೈಸರಾಯರಿಗೆ ಹೊಣೆ; ಇವನನ್ನು ಹಿಂದೀಯ[illegible] ಗಿಂದ ವೈಸರಾಯರು ತಮ್ಮ ಮನಸಿಗೆ ಬಂದ[illegible] ನೇಮಿಸಿಕೊಳ್ಳಬಹುದು; ಎಂದು ಡಾ। ಸಪ್ರು [illegible] ಬಿನ್ನವಿಸಿದರು. ಬ್ರಿಟಿಶ ಮಂತ್ರಿಗಳು ಈ ಮಾತ[illegible] ಹಾರಿಸಿದರು!

ದುಡ್ಡಿನ ಮಾತಿಗೂ ಹೀಗೇ ದುಂಡುಸುತ್ತು [illegible] ನಡೆದಿದೆ. ದೊಡ್ಡಿತೆ ( Foreign Relations ) [illegible]

CC-0. Jangamwadi Math Collection. Digitized by eGangotri

ಸ್ನಂತೂ ದೂರವಿರಿಸಲು ಲಾರ್ಡ ರೀಡಿಂಗ ಪ್ರಭೃತಿಗಳು ಸೂಚಿಸಿದ್ದಾರೆ. ಜಗತ್ತಿನ ಸ್ವತಂತ್ರರಾಷ್ಟ್ರಗಳಲ್ಲಿ ಯಾರಾರೊಡನೆ ಹೇಗೆ ಹೇಗೆ ಸಂಬಂಧಸೂತ್ರಗಳನ್ನು ಇಡಬೇಕೆಂಬುವ ಅಧಿಕಾರವು ದೊಡ್ಡಿತು; ಅದನ್ನು ನಡಿಸುವಷ್ಟು ಯೋಗ್ಯತೆಯು ಭಾರತೀಯರಿಗೆ ಇನ್ನೂ ಬಂದಿಲ್ಲ. ಈ ದೊಡ್ಡಿತೆಯ ಮಾತನ್ನು ಸಾಮ್ರಾಜ್ಯ ಸರಕಾರವು ಹಿಂದೀಯರಿಗೆ ಬಿಟ್ಟು ಕೊಡಲು ಸಿದ್ಧವಿಲ್ಲವೆಂದು ಬ್ರಿಟಿಶ ಪ್ರತಿನಿಧಿಗಳು ಪ್ರತಿಪಾದಿಸುತ್ತಲಿದ್ದಾರೆ.

ರಾಜ್ಯದ ಮೂರು ಅಂಗಗಳಿಲ್ಲದ ಸ್ವರಾಜ್ಯವು ಸ್ವರಾಜ್ಯವೆ? ಇದನ್ನು ಸ್ವೀಕರಿಸಿ, ಜನಸಾಮಾನ್ಯರನ್ನು ಸ್ವರಾಜ್ಯವು ಸಿಕ್ಕಿತೆಂಬ ಭ್ರಮೆಯಲ್ಲಿಡುವುದಕ್ಕೆ ರಾಷ್ಟ್ರೀಯ ಸಭೆಯು ಒಂದರಗಳಿಗೆಯೂ ಸಿದ್ಧವಾಗಲಾರದೆಂದು ಹೇಳಲಿಕ್ಕೆ ಯಾವ ದೊಡ್ಡ ಜೋಯಿಸನ ಅವಶ್ಯಕತೆಯೂ ಇಲ್ಲ.

## ಅಖಿಲಭಾರತ ಭಾಷಣಸ್ಪರ್ಧೆಯಲ್ಲಿ ಕನ್ನಡಿಗರ ಪ್ರಥಮ ವಿಜಯ

ಐದಾರು ವರುಷಗಳಿಂದಲೂ ಪ್ರಯಾಗದಲ್ಲಿ ನಡೆಯುತ್ತಿರುವ ಹಿಂದುಸ್ತಾನದ ಎಲ್ಲ ಕಾಲೇಜುಗಳ ಭಾಷಣ



ಶ್ರೀ ನೆಂಬಾರ್ ವೆಂಕಟಾಚಾರ್ಯರು

ಸ್ಪರ್ಧೆಯ ವಿಚಾರವನ್ನು ನಮ್ಮಲ್ಲಿ ಅನೇಕರು ಅರಿಯರು. ಈ ವರುಷ, ತಮ್ಮ ಅಪೂರ್ವವಾದ ವಿಜಯದಿಂದ **ಶ್ರೀ. ನೆಂಬಾರ್ ವೆಂಕಟಾಚಾರ್ಯರವರು** ಆ ಅರಿವನ್ನೂ ಅಭಿಮಾನವನ್ನೂ ಕನ್ನಡಿಗರಿಗೆ ಉಂಟುಮಾಡಿರುವರು. ಈ ಸ್ಪರ್ಧೆಗೆ ಕಾಶ್ಮೀರ, ಕಾಶಿ, ದಿಲ್ಲಿ, ಪಾಟ್ನಾ, ಅಲೀಗಡ, ಮುಂಬಯಿ ಮೊದಲಾದ ಬೇರೆಬೇರೆ ಭಾಗಗಳಿಂದ ಒಳ್ಳೊಳ್ಳೆ ವಕ್ತೃತ್ವಶಾಲಿಗಳು ಬಂದಿದ್ದರು. ನಾಲ್ಕೈದು ಸಾವಿರ ಪ್ರೇಕ್ಷಕರೆದುರಿಗೆ ದಿಸೆಂಬರ ೧೩ನೇ ತಾರೀಖಿನ ದಿನ ಪರೀಕ್ಷೆಯು ನಡೆಯಿತು. 'ಆಧುನಿಕ ಸುಧಾರಣೆಯು ಜಗತ್ತಿನ ಶಾಂತಿಸೌಖ್ಯಗಳಿಗೆ ವಿಘಾತಕವಾಗಿದೆಯೇ?' ಎಂಬುದೇ ಅಂದಿನ ಚರ್ಚೆಯ ವಿಷಯ. ಈ ವಿಷಯವನ್ನೆತ್ತಿ ಮೊದಲು ಹಲವರು ಮಾತನಾಡಿದರು. ಜನವು ಬೇಸತ್ತಿತ್ತು. ಕೊನೆಕೊನೆಗೆ ತಮ್ಮ ಪಾಳಿಯು ಬಂದರೂ ಹತ್ತು ನಿಮಿಷಗಳಲ್ಲಿ ಎಲ್ಲರ ಮನಮೆಚ್ಚುವಂತೆ ಶ್ರೀ. ವೆಂಕಟಾಚಾರ್ಯರು ಆಧುನಿಕ ಸುಧಾರಣೆಯು ವಿಘಾತಕವಾಗಿಲ್ಲೆಂದು ಸಮರ್ಪಕವಾಗಿ ಸಾಧಿಸಿ ಸೊಗಸಾದ ಭಾಷಣಮಾಡಿದರು. ಅದಕ್ಕಾಗಿ ಅವರಿಗೆ ಮೊದಲನೆಯ ತರಗತಿಯ ಬಂಗಾರದ ಪದಕದ ಬಹುಮಾನವು ದೊರೆತಿತು. ನಮ್ಮ ಕನ್ನಡನಾಡು ಅಸಾಧಾರಣಶಕ್ತಿಯ ಮಾತರಿವರ (ವಾಗ್ಮಿಗಳ) ಮೂಲಸ್ಥಾನವೆಂದು ನೃಪತುಂಗನ ಕಾಲದಿಂದಲೂ ವಿಖ್ಯಾತವಾಗಿದೆ. ಆ ಪರಂಪರೆಯು ಅಳಿದಿಲ್ಲ; ಅಚ್ಚಳಿಯದೆ ಇಂದಿಗೂ ಉಳಿದಿದೆ ಎಂಬ ಮಾತನ್ನು ಶ್ರೀ. ವೆಂಕಟಾಚಾರ್ಯರು ತಮ್ಮ ಅಮೋಘ ವಾಣಿಯಿಂದ ಎಲ್ಲರ ಮನವರಿಕೆಗೂ ತಂದುಕೊಟ್ಟುದಕ್ಕಾಗಿ ಅವರಿಗೆ ಎಷ್ಟು ಅಭಿನಂದನೆಗಳನ್ನು ಸಲ್ಲಿಸಿದರೂ ಕಡಿಮೆಯೆ.

ಶ್ರೀ. ವೆಂಕಟಾಚಾರ್ಯರ ಹುಟ್ಟೂರು ಮೈಸೂರು ಸಂಸ್ಥಾನದ ತುಮಕೂರು ಜಿಲ್ಹೆಯಲ್ಲಿರುವ ಪಾವುಗಡ. ಪ್ರಾಥಮಿಕ ಶಾಲೆಯಿಂದ ಮಹಾರಾಜಾ ಕಾಲೇಜಿನ ಎಂ. ಎ. ಪದವಿಯವರೆಗೆ ಇವರು ಶ್ರೇಷ್ಠವರ್ಗದಲ್ಲಿಯೇ ತೇರ್ಗಡೆ ಹೊಂದಿದರು. ವಿದ್ಯಾಲಯಗಳಲ್ಲಿ ಅಭ್ಯಾಸ ಮಾಡುತ್ತಿದ್ದಾಗಿನಿಂದಲೂ ಅವರು ಸಾರ್ವಜನಿಕ ಕಾರ್ಯಗಳಲ್ಲಿ ಅತ್ಯುತ್ಸಾಹದಿಂದ ಕೆಲಸ ಮಾಡುತ್ತಿದ್ದರಲ್ಲದೆ ಚರ್ಚಾಸಭೆಗಳಲ್ಲಿ ವಿಶೇಷವಾಗಿ ಭಾಗ ತೆಗೆದುಕೊಳ್ಳುತ್ತಿದ್ದರು. ಬೆಂಗಳೂರಲ್ಲಿ ೧೯೩೦ನೇ ಫೆಬ್ರುವರಿಯಲ್ಲಿ ಕೂಡಿದ ಇಂಟರ ಕಾಲೇಜಿಯೆಟ್ ಆರೇಶನಲ್ ಕಾಂಟೆಸ್ಟದಲ್ಲಿ ಇವರಿಗೆ ಬಂಗಾರ ಪದಕವು ದೊರೆತಿದೆ. ಇವರು ವಾಗ್ಮಿಗಳಲ್ಲದೆ ಲೇಖಕರೂ ನಾಟಕಕಾರರೂ ಅಹುದು; ಅಭಿನಯದಲ್ಲಿಯೂ ನಿಷ್ಣಾತರು. ಇವರು 'ಸಾವಿನ ಸಮಸ್ಯೆ' ಎಂಬ ಹೊಸಬಗೆಯ ಒಳ್ಳೆಯ ನಾಟಕವನ್ನು ಬರೆದಿದ್ದಾರೆ. ವಿಶ್ವ

CC-0. Jangamwadi Math Collection. Digitized by eGangotri

ವಿದ್ಯಾನಿಲಯದ ವಿದ್ಯಾರ್ಥಿಗಳು ಅದನ್ನು ಒಂದೆರಡು ಸಲ ಆಡಿರುವರು. ಜಯಕರ್ನಾಟಕದ ೯ನೆಯ ವರ್ಷದ ೫-೬ ಸಂಯುಕ್ತ ಸಂಚಿಕೆಯಲ್ಲಿ 'ತಿರುಕ' ಎಂಬ ಹೊಸ ರೀತಿಯ ನಿಬಂಧವನ್ನು ಬರೆದು ಎಲ್ಲರಿಗೆ ಪರಿಚಿತರಾಗಿದ್ದಾರೆ. ಇಂಥ ವಾಗ್ಮಿ ಶ್ರೇಷ್ಠ ವಿದ್ಯಾವಂತ ತರುಣ ಕನ್ನಡಿಗರಿಗೆ ನಮ್ಮ ಎದೆಯೊಲವು. ಉದಿತೋದಿತ ಕೀರ್ತಿಯ ಶ್ರೀ. ವೆಂಕಟಾಚಾರ್ಯರು ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದಿ ಕನ್ನಡ ನಾಡಿಗೂ ಕೀರ್ತಿಯನ್ನು ತರುವರೆಂದು ಹಾರೈಸುತ್ತೇವೆ.

### ಶ್ರೀ. ಅಣ್ಣಾಸಾಹೇಬ ವೀರಬಸಪ್ಪಾ ಮೊಕಾಶಿ

B. A. L. L. B. J. P.

ಇವರು ಮುಂಬೈಯಲ್ಲಿ ವಕೀಲರಾಗಿದ್ದಾರೆ. ಅಲ್ಲಿಯ ಲಿಂಗಾಯತ ಸಮಾಜದ ಅಧ್ಯಕ್ಷರು; ಕರ್ನಾಟಕಏಕೀಕರಣ ವಿಚಾರದಲ್ಲಿಯೂ ತುಂಬಾ ಆಸಕ್ತಿಯುಳ್ಳವರು.



ಶ್ರೀ ಅ. ವೀ. ಮೊಕಾಶಿ

ಇವರಿಗೆ ಮುಂಬೈ ಸರಕಾರದವರು ಮೊನ್ನೆ ತಾನೆ ಜೆ. ಪಿ. ಪದವಿಯನ್ನಿತ್ತಿದ್ದಾರೆ. ವೀರಶೈವರೊಳಗೆ ಇವರೆ ಮೊದಲನೆಯ ಜೆ. ಪಿ.



ಇವರು ಹಳೆಯ ಬಗೆಯ ಜಾತಿಗಳನ್ನು ಪ... ನಿಜಗುಣ ಶಿವಯೋಗಿಗಳು ಹೇಳಿದ ಕನ್ನಡ... **ಜಾತಿಯ** ಅಭಿಮಾನದಿಂದ ಮುಂಬೈಯಲ್ಲಿ ಕೆಲಸ... ಕರ್ನಾಟಕಕ್ಕೆ ಕೀರ್ತಿಯನ್ನು ತರುವರೆಂದು ನಂಬ...

### ಸರ್ ಮಿರ್ಝಾ ಅವರು ಸ್ವಾರ್ಥಿ ಮುಸಲ್ಮಾನ ಪ್ರತಿನಿಧಿಗಳಿಗೆ ಛೀಃ ಎಂದರು !

ಈ ಸಂಬಂಧದಿಂದ ಯಾವ ಇಂಗ್ಲೀಷಪತ್ರಿಕೆ... ಸಹ ನಿಸ್ಸಂದಿಗ್ಧವಾದ ಸುದ್ದಿಗಳು ಪ್ರಕಟವಾ... ಆದರೆ ಮದ್ರಾಸಿನ ಕನ್ನಡ **ಪ್ರಜಾಮತ**ದ ಪ್ರತಿನಿಧಿ... ಮೈಸೂರ ದಿವಾಣರನ್ನು ಪ್ರತ್ಯಕ್ಷವಾಗಿ ಮಾತ... ಒಂದು ಮಹತ್ವದ ಸುದ್ದಿಯೋಲೆಯನ್ನು ಪ್ರ... ದ್ದಾನೆ. ಅದರಲ್ಲಿ ಕಾಣಿಸಿರುವಂತೆ ಸರ್ ಮಿರ್ಝಾ... ಮನಃಪ್ರವೃತ್ತಿಯೆ ಬದಲಾಗಿದ್ದು ಇನ್ನು ... ಮೈಸೂರ ರಾಜ್ಯದ ಆಡಳಿತವನ್ನು ಹೆಚ್ಚು ... ಲೋಕಮತಾನುವರ್ತಿಯಾಗಿ ಮಾಡುವ ಬುದ್ಧಿ... ಸ್ಥಿರವಾಗಿ ಉಳಿಯಲೆಂದು ನಾವೂ ಹಾರೈಸುತ್ತೇ... ಕಾಶಿಯಿಂದ ಮರಳಿ ಬಂದಬಳಿಕ ನಾಲ್ಕು ದಿನ ... ಸದ್ಬುದ್ಧಿಯಂತೆ ಮಾತ್ರ ಆಗದಿರಲಿ. ಪ್ರಸ್ತುತ ದಿ... ಸಾಹೇಬರು ದುಂಡುಮೇಜಿನ ಮುಸಲ್ಮಾನರು ... ಅಂಬೇಡಕರ ಪ್ರಭೃತಿ ಸ್ವಯಂಪ್ರತಿಷ್ಠಿತರ ವಿಷಯ... ಹೀಗೆ ಅಭಿಪ್ರಾಯಪಟ್ಟರೆಂದು ಪ್ರಕಟವಾಗಿದೆ.

"ಅಸ್ಪೃಶ್ಯರ ಪ್ರತಿನಿಧಿಗಳಾದ ಶ್ರೀಯುತ ಅಂಬೇಡ... ಗಾಂಧೀಜಿಯವರು ಪಟ್ಟ ಅಭಿಪ್ರಾಯಗಳನ್ನು ಮನಸ್ಸಿ... ಕೀಳುನುಡಿಗಳನ್ನಾಡಿದ್ದೂ ಯೋಗ್ಯವಲ್ಲವೆಂದೂ, ಚಕ್ರ... ಬಂದಿದ್ದ ಮಹಮ್ಮದೀಯ ಪ್ರತಿನಿಧಿಗಳು ವಿಶೇಷ ಪ್ರಾತಿನಿಧ್ಯ... ಣೆಗಳ ವಿಚಾರವಾಗಿ ಹೂಡಿದ ವಿವಿಧ ವಾದಗಳೂ, ... ಸಮರ್ಪಕವಾದುವಲ್ಲವೆಂದೂ, ಹೇಳಿದರು."

ಸರ್ ಸಾಹೇಬರ ಅಭಿಪ್ರಾಯವು ಈಗ ಹೀಗಾ... ದುಂಡುಮೇಜಿಗೆ ೨ನೆಯ ಸಾರೆ ಹೋಗುವ ಮೊ... ಇದೇ ಅಭಿಪ್ರಾಯವು ಇದ್ದಿತೊ ತಿಳಿಯದು. ಈ... ಪ್ರಾಯವೆ ಮೊದಲೂ ಇದ್ದುದಾಗಿದ್ದರೆ ಮೌ. ಶ... ಪ್ರಭೃತಿಗಳಿಗೆ, ಜಾತಿದ್ವೇಷದ ಕಾಳ್ಗಿಚ್ಚನ್ನು ... ಸಲು ಹೊರಟ ರಾಷ್ಟ್ರದ್ರೋಹಿಗಳಿಗೆ ಮೈಸೂರ ಸ... ನದಲ್ಲಿ ಬೇಕಾದ ಹಾಗೆ ಚಳವಳಿ,ಸಭೆ ಸಮ್ಮೇಲನಗ... ಮಾಡಲಿಕ್ಕೆ ದಿವಾಣ ಸಾಹೇಬರು ಏಕೆ ಅವ...

CC-0. Jangamwadi Math Collection. Digitized by eGangotri

ಕೊಟ್ಟರೊ ತಿಳಿಯದು ! ವಿಚಾರ ಸ್ವಾತಂತ್ರ್ಯವಾದಿಗಳು ಎಂದೂ? ಹಾಗಾದರೆ ಕಾಂಗ್ರೆಸ್ಸಿನವರಿಗೇಕೆ ಹೀಗೆ ಅಷ್ಟಿ! ಅನ್ಯಾಯ? ದಿವಾಣ ಸಾಹೇಬರ ಇಚ್ಛೆಗೆ ವಿರುದ್ಧವಾಗಿಯೇ ಹೊರಗಿನ ಯಾವದೋ ಕಪ್ಪಿಣ ಕೈಯು ಸರ್ ಸಾಹೇಬರ ಕೈಯನ್ನು ಒತ್ತಿ ಹಿಡಿದು ಇದೆಲ್ಲವನ್ನೂ ಮಾಡಿಸುತ್ತಿರಬಹುದೆ?

### ಮ. ಗಾಂಧಿಯವರ ಕರುಳಿಗೆ ಬರೆ

ಬಂಗಾಳಿನಲ್ಲಿ ನಡೆವಳಿಯಲ್ಲಿ ತಂದ ಹೊಸ ಕಟ್ಟಳೆಯ ಘೋರ ಕ್ರೂರ ನಿಬಂಧನೆಗಳನ್ನು ಕೇಳಿ ಗಾಂಧಿಯವರಿಗೆ ಆದ ದುಃಖವನ್ನು ಶಬ್ದಗಳಿಂದ ಹೇಳಲಸಾಧ್ಯ. ಕರುಳಿಗೆ ಬರೆ ಕೊಟ್ಟುದಕ್ಕಿಂತಲೂ ಹೆಚ್ಚು ಉಮ್ಮಳಗೊಂಡರು. 'ಗಾಂಧೀಜಿಯವರು ಇತ್ತೀಚೆ ಎಷ್ಟೋ ವರ್ಷಗಳಲ್ಲಿ ಇಷ್ಟು ಎಂದೂ ಕಸಿವಿಸಿಪಟ್ಟಿರಲಿಲ್ಲ' ಎಂದು ಮಹಾತ್ಮಾಜೀಯವರ ಹತ್ತಿರದ ಶಿಷ್ಯರಾದ ಶ್ರೀ. ಮಹಾದೇವ ದೇಸಾಯಿಯವರು ಬರೆದಿದ್ದಾರೆ. 'ರೌಲೆಟ್ ಆಕ್ಟಿಗಿಂತಲೂ ಎಷ್ಟೊ ಪಟ್ಟು ಹೆಚ್ಚು ಭಯಂಕರವಾಗಿದೆ ಬಂಗಾಳಿನ ಹೊಸ ಕಾನೂನು.' ಗಾಂಧೀಜಿಯವರು ಉಸುರಿದುದನ್ನು ಶ್ರೀ. ಮಹಾದೇವ ಭಾಯಿಯವರು 'ಯಂಗ ಇಂಡಿಯಾದಲ್ಲಿ' ಬರೆದಿರುವರು, 'ಸರಕಾರವು ಹಿಂದೀ ಜನರಿಗೆ ಸ್ವರಾಜ್ಯವನ್ನು ಕೊಡಲಿಕ್ಕೆ ಸಿದ್ಧವಿಲ್ಲವೆಂದು ಅವರ ಈ ನಡತೆಯಿಂದ ಚೆನ್ನಾಗಿ ಕಂಡುಬರುವಂತಿದೆ. ಕೊಡುವೆವೆಂದು ಈಗ ವಚನ ಕೊಟ್ಟದ್ದು, ಹುರುಳಿಲ್ಲದ ಮಾತು; ಅವರು ಕೊಡಲಿರುವ ಸ್ವರಾಜ್ಯವು ಕೊಬ್ಬರಿ ತೆಗೆದ ತೆಂಗು. ಹುರುಳಿಲ್ಲ ನೆರಳು; ಈ ಭೀಕರ ಕಾನೂನು ಆಗಾಮಿ ಅಪಘಾತದ ಪೂರ್ವಸೂಚನೆಯಾಗಿದೆ; ಇದರಿಂದ ಚಳವಳಿಯು ಭುಗಿಲ್ಲೆಂದು ಯಾವ ಹೊತ್ತಿಗೆ ಹೊತ್ತಿಕೊಳ್ಳುವುದೊ ಹೇಳಲಾಗುವದಿಲ್ಲ. ಕಾನೂನು ಓಕರಿಕೆ ಬರುವಂತಿದೆ. ನಿಜವಾಗಿಯೂ ಇದು ಭೀಮ ಭಯಂಕರವಾಗಿದೆ. ನನಗಾಗಿ ಈ ಕಾನೂನಿನ ಒಂದು ಪ್ರತಿಯನ್ನು ಟೈಪು ಮಾಡಲು ಕುಳಿತ ಮಿತ್ರನಿಂದ ಅದನ್ನು ಪೂರ್ಣ ಮಾಡುವದಕ್ಕೂ ಆಗಲಿಲ್ಲ! (ಇಷ್ಟು ಅದು ಹೇಸಿಗೆ ಬರುವಂತಿದೆ.) ಅಸಹ್ಯವಾಯಿತವನಿಗೆ ಟೈಪು ಹೊಡೆಯುವುದು. **ನಾನು ಈ ಶಾಸನದ ನಡು ಮುಯುರಿವೆನು; ಇಲ್ಲವೆ ಆ ಪ್ರಯತ್ನದಲ್ಲಿ ನನ್ನ ನಡುವನ್ನಾದರೂ ಮುರಿದುಕೊಳ್ಳುವೆನು.** ನನ್ನಲ್ಲಿ ಅನಂತ ಶಾಂತಿಯಿದೆ; ಆದರೆ ಶಿಲೆಯ ಶಾಂತಿ ಮಾತ್ರ ನನ್ನಲ್ಲಿಲ್ಲ. ಹೊತ್ತು ಬರುತ್ತಲೆ ಎಲ್ಲವೂ ಸರಿಹೋಗುತ್ತದೆ ಎಂದು ನಾನು ಹೇಗೆ ಸ್ವಸ್ಥವಾಗಿ ಕುಳ್ಳಿರಲಿ?'

ಸುಖದುಃಖಗಳನ್ನು ಗೆಲ್ದು ಆತ್ಮನಿಗ್ರಹದಿಂದ ಯೋಗಿಯಂತೆ ಆಚರಿಸುತ್ತಿರುವ ಮ. ಗಾಂಧಿಯವರನ್ನೆ ಕುದಿಯ ಹಚ್ಚಿದ ಬಂಗಾಳದ ರಕ್ಕಸ ಕತ್ತರಿಯು ಅಲ್ಲಿಯವರಿಗೆ ಎಷ್ಟು ಬಾಧೆಪಡಿಸುತ್ತಿದ್ದೀತೋ!

### ಚಿತ್ರಪರಿಚಯ

ಇದೊಂದು ವಾಸ್ತವ ಚಿತ್ರ. ಇದನ್ನು ಚಿತ್ರಿಸಿದವರು ಶ್ರೀ. ಬಾಬಲಿಯವರು. ಕನ್ನಡಿಗರು. ಜಯಕರ್ನಾಟಕದ ಆಗಾಗಿನ 'ನಗೆಚಿತ್ರ'ಗಳಿಂದ ಇವರು ಎಲ್ಲರಿಗೂ ಪರಿಚಿತರೇ ಆಗಿರುವರು. ಅಂದಮೇಲೆ ಹೆಚ್ಚಿನ ಪರಿಚಯವೇಕೆ?

ಚಿತ್ರವನ್ನು ನೋಡಿದೊಡನೆ ಒಂದು ಭಾವ, ಒಂದು ಕಲ್ಪನೆ, ಹೊಳೆಯಬೇಕಷ್ಟೆ? ಇದಾವುದೂ ಆಗದೆ ಹೋದರೂ ಕಡೆಗೆ ಅನಿಸಿಕೆಗೆ ತೃಪ್ತಿಯಾದರೂ ಆಗಬೇಕು. ಈ ಚಿತ್ರದಿಂದ ಎಲ್ಲವೂ ಆಗುವದು.

ಚಿತ್ರವೇನೋ ಒಬ್ಬ ಸಾಮಾನ್ಯ ಭಿಕ್ಷುಕನದು. ವಾಸ್ತವವಾಗಿದೆ. ಹಾಗಾದರೆ ಚಿತ್ರಕಾರನ ಕೌಶಲ್ಯವೆಲ್ಲಿ? ಮುಖದಲ್ಲಿ! ಆ ನಿಂತ ತಲ್ಲೀನತೆಯಲ್ಲಿ! ಚಿತ್ರವು ಭಾವೋದ್ದೀಪಕವಾಗಿದೆ. ಅನಿಸಿಕೆಗೆ ತೃಪ್ತಿಕರವಾಗಿದೆ. ಕಲ್ಪನೆಯ ಮಿಂಚೂ ಹೊಳೆಯುವಂತಿದೆ. ಮುಖದಲ್ಲಿಯ ನಸುನಗೆಕೂಡಿದ ತಿರಸ್ಕಾರ ಭಾವವು ಆ ನಿಂತ ರೀತಿಗೆ ಸರಿಯಾಗಿ ಹೊಂದಿಕೆಯಾಗುತ್ತದೆ. ಭಿಕ್ಷೆಯಲ್ಲಿಯೂ ಗಂಭೀರತೆಯಿದೆಂದು ಚೆನ್ನಾಗಿ ತೋರಿಸುತ್ತದೆ ಆ ಮುಖ. ಭಿಕ್ಷುಕರನ್ನು ಕಂಡು ಕನಿಕರಪಡುವ ಅನಿಸಿಕೆಗೆ, ಭಿಕ್ಷುಕನಲ್ಲಿಯೂ ಆತ್ಮವಿದೆ – ಮನಶಾಂತಿಯಿದೆ – ಅಭಿಮಾನವಿದೆ – ಎಂದು ತಿಳಿಸಿ ತೃಪ್ತಿಯನ್ನುಂಟು ಮಾಡುವಂತಿದೆ ಈ ಚಿತ್ರ. 'ನಾನು ಭಿಕ್ಷುಕನಾದರೂ ನನ್ನ ಆತ್ಮಬಲದಿಂದ ನಿಲ್ಲಬಲ್ಲೆನು. ಈ ಜಗತ್ತಿನ ಹಂಗು ನನಗಿಲ್ಲ-' ಎಂಬ ಭಾವವು ಮುಖದ ಮೇಲೆ ಒಡೆದು ಕಾಣುತ್ತಿದೆ.

ಒಟ್ಟಿನ ಮೇಲೆ ಚಿತ್ರವು ರಮ್ಯವಾಗಿದೆ. ಇದೇ ರೀತಿಯಿಂದ ಇನ್ನೂ ಅನೇಕ ಚಿತ್ರಗಳನ್ನು ತೆಗೆದು ಶ್ರೀ. ಬಾಬಲಿಯವರು ಎಲ್ಲ ಕನ್ನಡಿಗರ ಆದರವಿಶ್ವಾಸಗಳಿಗೆ ಪಾತ್ರರಾಗಲೆಂದು ಹಾರೈಸುತ್ತೇವೆ.



CC-0. Jangamwadi Math Collection. Digitized by eGangotri

## ಪಂ. ಜವಾಹಿರಲಾಲರ ಕರ್ನಾಟಕ ಪ್ರವಾಸ

ಮಹಾಪುರುಷರು ತಮ್ಮಲ್ಲಿರುವ ಉದಾತ್ತಗುಣಗಳನ್ನು ತಮ್ಮ ಹತ್ತರ ಬಂದವರಲ್ಲಿಯೂ ಉಂಟುಮಾಡುವರು. ಮಹಾವಿಭೂತಿಗಳ ಸಹವಾಸ, ಸಂಬಂಧ, ಪರಿಚಯವು ಮೇಲಿಂದ ಮೇಲೆ ಆಗುತ್ತಿರಬೇಕೆಂದು ಹಂಬಲಿಸುವುದು ಇದಕ್ಕಾಗಿಯೆ. ಕರ್ನಾಟಕದಂತಹ ಉದಯೋನ್ಮುಖ ಪ್ರಾಂತಕ್ಕಂತೂ ಇದರ ಅವಶ್ಯಕತೆಯು ವಿಶೇಷವಾಗಿದೆ. ಒಂದೊಂದು ವಿಶೇಷ ಶಕ್ತಿಗಳ ಸಿದ್ಧಿಯನ್ನು ಪಡೆದ ಬೇರೆಬೇರೆ ಮಹಾಪುರುಷರನ್ನು ಈ ಪ್ರಾಂತಕ್ಕೆ ಕರೆತರುತ್ತಿರಬೇಕು; ಆದರಿಂದ ಅವರ ನಡೆನುಡಿಗಳು ಬರಬರುತ್ತ ನಮ್ಮ ತರುಣರ ಕೈಗನ್ನಡಿಯಾಗುವುದಕ್ಕೆ ಸಂದೇಹವಿಲ್ಲ. ಮಹಾಪುರುಷರ ಆಗಮನವೆಂದರೆ ಪ್ರಾಂತದಲ್ಲಿ ಆದೊಂದು ಹೊಸ ಶಕ್ತಿ ಸಂಚಾರವಾದಂತೆಯೆ. ಪಂ. ಜವಾಹಿರಲಾಲರ ಅಲ್ಪಾವಧಿಯ ಸ್ವಲ್ಪ ಸಹವಾಸದಲ್ಲಿ ಲಕ್ಷಾವಧಿ ಜನರಿಗೆ ಚೆನ್ನಾಗಿ ಇದರ ಅನುಭವವು ಬಂದಿರಲಿಕ್ಕೆ ಸಾಕು. ಪಂ. ಜವಾಹಿರಲಾಲರು ಕರ್ನಾಟಕಕ್ಕೆ ಬರುವರೆನ್ನುತ್ತಲೆ ಎಲ್ಲೆಡೆಗಳಲ್ಲಿ ಏನು ಉತ್ಸಾಹ! ತಮ್ಮ ತಮ್ಮ ಸ್ಥಳಗಳಿಗೆ ಕರೆದೊಯ್ಯಬೇಕೆಂಬ ಎಷ್ಟ... ಸೆಣಸಾಟ! ಪಂ. ಜವಾಹಿರಲಾಲರು ತಮ್ಮೂರಿಗೆ ಬ... ಸಬೇಕೆಂದು ಯಾವ ಕಷ್ಟಕ್ಕೂ ಎಷ್ಟು ವೆಚ್ಚಕ್ಕೂ ... ವಾಗಿರುವುದೇನು! ಇದೆಲ್ಲ ಸ್ತುತ್ಯ.

ಹಬ್ಬ, ಜಾತ್ರೆ ಮೊದಲಾದವುಗಳಲ್ಲಿ ಹಿಗ್ಗು ... ಗಳೊಡನೆ ಕುಗ್ಗು ಕುಸುಸುಗಳೂ ಕೆಲವೊಂದು ... ದಿಂದ ಉಂಟಾಗುವುದುಂಟು. ಆದರೆ ಆ ... ವನ್ನು ಶಾಂತವಿಚಾರದಿಂದಲೂ ವಿಮರ್ಶಾತ್ಮಕ... ಯಿಂದಲೂ ಕಿತ್ತೊ... ಬೇಕು. ಪಂ. ಜವಾ... ಲರು ಕರ್ನಾಟಕಕ್ಕೆ ... ಮಾಡಿಸಿದ್ದು ಇಲ್ಲಿಯ ... ಳಿಗೆ ಯಾವದಾದ... ನವೀನ ಸಂದೇಶವನ್ನು ... ಹುವುದಕ್ಕಲ್ಲ; ಸ್ಫೂ... ಕರ ಕೇಂದ್ರವನ್ನು ... ಸುವುದಕ್ಕೆ. ಈ ... ಕಾರ್ಯದೊಂದಿಗೆ ... ಮೇಲಿನ ಕೆಲ ಉ... ಬೆಟ್ಟಿಕೊಟ್ಟು ನಾಲ್ಕು... ಗಳನ್ನಾಡಿಸುದು ಉ... ಕಾದ ಗೌಣ ಕಾ... ಆದುದರಿಂದ ಪಂಡಿತ... ವರು ತಮ್ಮಲ್ಲಿ ಬರಲಿಲ್ಲ...



ಧಾರವಾಡದಲ್ಲಿ ಪಂ. ಜವಾಹಿರಲಾಲರ ಸ್ವಾಗತ

ಮುನಿದುಕೊಳ್ಳುವುದು ಎಂದೂ ಯೋಗ್ಯವೆನಿಸಲಾ... ಹುಬ್ಬಳ್ಳಿಯು ನೆರೆಯಲ್ಲಿದ್ದರೂ ಮೊದಲಿನ ಕಾರ್ಯ... ದಲ್ಲಿ ಧಾರವಾಡದ ಹೆಸರೂ ಇದ್ದಿಲ್ಲ. ಕಾರ್ಯ... ವನ್ನು ಗೊತ್ತುಪಡಿಸುವಾಗ ಎಷ್ಟೋ ವ್ಯಕ್ತಿ... ತಮ್ಮ ಸಿಟ್ಟು ಸೆಡುವುಗಳನ್ನು ಅಂಕೆಯಲ್ಲಿಟ್ಟು... ಲಿಕ್ಕೆ ಆಗುವುದಿಲ್ಲ. ಇದೂ ಎಷ್ಟೋ ಸಾರೆ ಅ... ಅಸಮಾಧಾನಕ್ಕೆ ಕಾರಣವಾಗುತ್ತದೆಂಬುದೂ ... ಆದರೂ ಯಾವದೊಂದು ವ್ಯಕ್ತಿಯ ಕೀಳ್ಮೆಗಾಗಿ ... ಉದಾತ್ತ ಕಾರ್ಯವನ್ನು, ಮಹತ್ವದ ತತ್ವವನ್ನು ... ಳಿಸುವುದು ಸರಿಯಲ್ಲ. 'ಮುಂದಾಳುಗಳು ...

CC-0. Jangamwadi Math Collection. Digitized by eGangotri

ಜಿಲ್ಲೆಯನ್ನು ಮರೆತಿರುವರು. ನಾವು ಕರ್ನಾಟಕದಲ್ಲಿ ಬೇಡವೆಂದು ಅವರ ಅಭಿಪ್ರಾಯವಿದ್ದಂತೆ ತೋರುತ್ತದೆ.' ಎಂದು ಸಿಡುಕಿನಿಂದ ನಮ್ಮ ಬಂಧುಗಳಲ್ಲಿ ಕೆಲರು ಎಷ್ಟೋ ಸಲ ಉಸುರುವುದು ಕೇಳಬರುವುದು. ನುಡಿಗಳು ನಮ್ಮ ಮನಸಿಗೆ ಮಾಡಹತ್ತಿರುವ ನೋವು ಅಷ್ಟು ಇಷ್ಟಲ್ಲ. ಅಖಿಲ ಕರ್ನಾಟಕದ ಜನರ ಹೃದಯಸಿಂಹಾಸನವನ್ನು ಅಲಂಕರಿಸುವ ಮುಖಂಡನಾವನೂ ಇನ್ನೂ ನಮ್ಮಲ್ಲಿ ಇಲ್ಲ. ಇದ್ದವರಲ್ಲಿ ಶ್ರೀ. ದಿವಾಕರರನ್ನು ಹೊರ್ತುಪಡಿಸಿ ಯಾರಿಗೂ ಅಖಂಡಕರ್ನಾಟಕದ ಕೆಲವರಿಗೆ ಕರ್ನಾಟಕ ಏಕೀಕರಣದ ಅವಶ್ಯಕತೆಯೂ ಎನಿಸುವುದಿಲ್ಲ. ಅಂತಹರೆದುರು 'ನಾವು ಕರ್ನಾಟಕದಲ್ಲಿ ಬೇಡವೆಂದು ತೋರುತ್ತದೆ' ಎಂದು ಬೆದರಿಕೆ ಹಾಕಿದರೆ ಆಗಬೇಕಾದ ಪ್ರಯೋಜನವೇನು ? ಹಿಂದೂ ದೇಶದ ಉನ್ನತಿಗೆ ಕನ್ನಡನಾಡು ಒಂದಾಗುವುದು ಅತ್ಯಂತ ಅವಶ್ಯಕ. ಕರ್ನಾಟಕಏಕೀಕರಣವು ನಮ್ಮ ಶ್ರದ್ಧಾವಿಷಯವು. ಯಾರು ಏನು ಮಾಡಿದರೂ ಇದಕ್ಕೆ ವಿಪರೀತವಾಗಿ ನಾವು ಏನೂ ನುಡಿಯಬಾರದೆಂದು ನಮ್ಮ ಬಂಧುಗಳಲ್ಲಿ ಸಪ್ರೇಮ ಪ್ರಾರ್ಥನೆ. ಬಳ್ಳಾರಿ, ಮಂಗಳೂರು, ಕಾರವಾರ ಬಂಧುಗಳು ನಡುನಡುವೆ ಒಮ್ಮೊಮ್ಮೆ ಸಿಟ್ಟಿನಲ್ಲಿ ಹಾಗೆ ಮಾತಾಡಿದ್ದುಂಟೆಂದು ಇಷ್ಟು ಬಿನ್ನವಿಸಬೇಕಾಯಿತು. ಅಸ್ತು. ಬಳ್ಳಾರಿ ಬಂಧುಗಳು ಪಂಡಿತಜೀಯವರು ತಮ್ಮಲ್ಲಿ ಬರಲಿಲ್ಲವೆಂದು ಸಿಟ್ಟಾದುದು ದೇಶಾಭಿಮಾನವನ್ನೇ ಸೂಚಿಸುತ್ತದೆ.

ಪಂ. ಜವಾಹಿರಲಾಲರು ಕರ್ನಾಟಕದ ಇಲ್ಲಿಯ ಜನಜಾಗೃತಿಯನ್ನು ಕಂಡು ಸಂತೋಷವನ್ನು ವ್ಯಕ್ತಗೊಳಿಸಿದರು, ಮತ್ತು ಕರ್ನಾಟಕದ ಗತಇತಿಹಾಸದ ಶೂರವೀರರನ್ನೂ ಮರೆಯಿಸುವಷ್ಟು ಶಕ್ತಿ ಸಾಹಸ ಸ್ವಾರ್ಥತ್ಯಾಗದಿಂದ ಕನ್ನಡಿಗರು ಆಗಾಮಿ ಯುದ್ಧದಲ್ಲಿ ಹೋರಾಡಿ ಕೀರ್ತಿಯನ್ನು ಲೋಕದಲ್ಲಿ ಮೆರೆಯಿಸಿರೆಂದು ಶುಭೇಚ್ಛೆಯನ್ನು ವ್ಯಕ್ತಪಡಿಸಿದ್ದಾರೆ.

## ಶ್ರೀಯುತ ಡಿ. ಜಿ. ಬಡಿಗೇರವರು

G. D. P. of Royal Academy London.



ಇವರು ಅತ್ಯಂತ ಸಾಹಸದಿಂದ ಇಂಗ್ಲೆಂಡಿಗೆ ಹೋಗಿ ತಮ್ಮ ಪ್ರೀತಿಯ ವಿಷಯವಾದ ಚಿತ್ರಕಲೆಯಲ್ಲಿ ನಿಷ್ಣಾತರಾಗಿ ಇದೇ ತಿಂಗಳಲ್ಲಿ ಮಾತೃಭೂಮಿಗೆ ಮರಳಿ ಬಂದಿದ್ದಾರೆ. ಬರುವಾಗ್ಗೆ 'Bloomsbury Gallary'ಯಲ್ಲಿ ತಮ್ಮದೇ ಒಂದು ಚಿತ್ರಪ್ರದರ್ಶನವನ್ನು ಮಾಡಿದರು. ಅದರಲ್ಲಿಯ ಚಿತ್ರಗಳ ಪೈಕಿ ಒಂದನ್ನು ಇಂಗ್ಲೆಂಡಿನ ರಾಜರು ಕೊಂಡುಕೊಂಡರು. ಪರೀಕ್ಷೆಯಲ್ಲಿ ಉತ್ತಮ ಮೆಚ್ಚುಗೆಯನ್ನೂ ಪಡೆದಿದ್ದಾರೆ. ಜಯಕರ್ನಾಟಕದಲ್ಲಿಯ '**ಬುದ್ಧನ ಮೋಹಾಕರ್ಷಣ**' ಎಂಬ ಚಿತ್ರದಿಂದ ಕರ್ನಾಟಕದ ಎಲ್ಲ ಜನರಿಗೂ ಇವರು ಪರಿಚಿತರಾಗಿದ್ದಾರೆ. ಇವರ ಚಿತ್ರಕಲೆಯ ವಿಷಯವಾಗಿ ಬರೆದು ತಿಳಿಸುವಂತಿಲ್ಲ. ನೋಡಿಯೇ ಆನಂದಪಡಬೇಕು. ಕರ್ನಾಟಕದಲ್ಲಿ ಅಲ್ಲಿ ಇಲ್ಲಿ ಇವರಿಗೆ ಈಗಾಗಲೆ ಸ್ವಾಗತವು ನಡೆದಿದೆ. ಮೊನ್ನೆ ಗದುಗಿನ ವೀರಶೈವತರುಣ ಸಂಘದವರು ಇವರಿಗೆ ಸ್ವಾಗತ ಮಾಡಿ ಮಾನಪತ್ರವನ್ನು ಕೊಟ್ಟಿದ್ದಾರೆ. ಇಂಥ ಸಾಹಸದ ವಿದ್ಯಾವಂತ ತರುಣರು ತಾವೂ ಕೀರ್ತಿಯನ್ನು ಸಂಪಾದಿಸಿ ಕರ್ನಾಟಕಕ್ಕೂ ಭೂಷಣರಾಗಲೆಂದು ನಮ್ಮ ಹಾರೈಕೆ.

CC-0. Jangamwadi Math Collection. Digitized by eGangotri

# ಸಾದರ ಸ್ವೀಕಾರ

೧೮. ಶ್ರೀಮದ್ ಭಗವದ್ಗೀತೆಯು: (ಶಾಂಕರ ಭಾಷ್ಯ ಸಮೇತ) ಅಧ್ಯಾಯ ೪-೨ ಅನುವಾದಕರು ಶ್ರೀ ವೈ. ಸುಬ್ಬರಾಯರು ಅಧ್ಯಾತ್ಮ ಪ್ರಕಾಶಕಾರ್ಯಾಲಯ ಬೆಂಗಳೂರು ನಗರ. ಬೆಲೆ, ಚಂದಾದಾರರಿಗೆ ೧ ರೂ. ಇತರಿಗೆ ೧-೪-೦ ಅಂಚೇ ವೆಚ್ಚ ಬೇರೆ.

೧೯. ಶ್ರೀ ಹನುಮದ್ವಿಲಾಸವು: ತಿಪ್ಪಣಾರ್ಯ ಕವಿಶೇಖರ ವಿರಚಿತ. ಸಂಪಾದಕರು ಶ್ರೀ ಯಂ. ರಾಮರಾಯರು.ಸುಬೋಧ ಪ್ರಕಟನಾಲಯ ಬೆಂಗಳೂರನಗರ. ಬೆಲೆ ಹನ್ನೆರಡಾಣೆ.

೨೦. ಶ್ರೀ ಕೃಷ್ಣಲೀಲಾಮೃತ: ಲೇಖಕರು ಭೀಮಾಚಾರ್ಯ ಒಡವಿ (ಕಾವ್ಯರತ್ನ) ಶಾಲಾಗುರು ಕದರಮಂಡಲಗಿ.ಪ್ರಕಾಶಕರು: ಗ. ಮು. ಶಿವಪೂಜಿ ದೇವಗಿರಿ ಅವರು. ಬೆಲೆ ಎಂಟು ಆಣೆ.

೨೧. ಸತೀ ಶಿರೋಮಣಿ (ಪೌರಾಣಿಕ ಗದ್ಯ ನಾಟಕ) ಲೇಖಕರು ಶಂಕರ ಅಣ್ಣಾಜಿ ಕುಲಕರ್ಣಿ. ನೂಲವಿ. ಪ್ರಕಾಶಕರು ಶ್ರೀ. ಗ. ಮು. ಶಿವಪೂಜಿ ದೇವಗಿರಿ ಅವರು. ಬೆಲೆ ಆರು ಆಣೆ.

೨೨. ಸದ್ಗುಣಿಯಾದ ವಿಮಲೆ ಅಥವಾ ಸತ್ಯಮೇಜಯಿ (ಸಾಮಾಜಿಕ ಕಾದಂಬರಿ) ಲೇಖಕರು ಶ್ರೀ ಎಲ್. ಬಿ. ಜಿಗಳಿ ಕುಪ್ಪೇಲೂರು, ಪ್ರಕಾಶಕರು, ಗ. ಮು. ಶಿವಪೂಜಿ ದೇವಗಿರಿ. ಬೆಲೆ ನಾಲ್ಕಾಣೆ.

೨೩. ತ್ರಿಶಂಕು ಸ್ವರ್ಗ: (ಸಾಮಾಜಿಕ ನಾಟಕ) ಲೇಖಕರು ಶ್ರೀ ಶಿವಾಜಿರಾವ ಬೆಂಗಳೂರಿನ ಸತ್ಯಶೋಧನ ಪುಸ್ತಕ ಭಾಂಡಾರದ ಪ್ರಕಟನೆ. ಬೆಲೆ ನಾಲ್ಕಾಣೆ.

೨೪. ಅಲರು: (ಕವಿತಾ ಸಂಗ್ರಹ) ಸಂಪಾದಕರು ಶ್ರೀ ಪೇಜಾವರ ಸದಾಶಿವರಾಯರು. ಮಂಗಳೂರಿನ ಮಿತ್ರಮಂಡಲಿಯ ಪ್ರಕಟನೆ. ಬೆಲೆ ನಾಲ್ಕಾಣೆ.

೨೫. ಬಡವರ ಭಾಗ್ಯ ಅರ್ಥಾತ್ ರಾಟಿ: (ಸಚಿತ್ರ) ಲೇಖಕರು ರಾಮಚಂದ್ರ ವೆಂಕಟೇಶ ಒಡವಿ. ಪ್ರಕಾಶಕರು,ನಾರಾಯಣ ತಮ್ಮಾಜಿ ರಾತಗಡೇ (ಪುಂಡಲೀಕಜಿ) ಕುಮರೀ ಖಾದೀ ಮಂದಿರ ಹುದಲಿ ಡಿ. ಬೆಳಗಾಂವಿ.ಬೆಲೆ ನಾಲ್ಕಾಣೆ.

೨೬. ಹಾದಿಗನ ಹರಟೆ, ಭಗವಂತನಲ್ಲಿ ಭಕ್ತನ ಬಯಕೆಗಳು: ಲೇಖಕರು, ಪ್ರಕಾಶಕರು ಶ್ರೀ ಮು. ರಾ. ಶಿವಪೂಜಿ ಮಾಲತೀಶಾರ್ಚಕ ದೇವಗಿರಿ.

೨೭. ನೀತಿ ಮುಕ್ತಾವಲಿ (ಪದ್ಯ ಲಘು ಟಿಪ್ಪಣಿ ಸಮೇತ) ಲೇಖಕ, ಶ್ರೀ ಲ. ಲಿ. ಶಿರಹಟ್ಟಿ (ತೊರವಿ) ಕನ್ನಡ ಶಾಲಾಧ್ಯಾಪಕ ವಿಜಾಪುರ. ಬೆಲೆ ೦-೨-೬.

೨೮. ರೈತರ ಭಾಗ್ಯೋದಯ: ಚಿಕ್ಕನಾಟಕ. ... ಶ್ರೀ ಭಾಲಚಂದ್ರ ವೆಂಕಟೇಶ ಘಾಣೇಕರ. ಸವ... ಸ್ನತಿ ಪುಷ್ಪಮಾಲಾ ಕಾರ್ಯಾಲಯ ಧಾರವಾಡ. ... ೨ ಆಣೆ.

೨೯. ಕೇಶವದಾಸರ ಕೀರ್ತನೆಗಳು: [ಭಾಗ ...] ಪ್ರಕಾಶಕರು ೧. ಶ್ರೀ. ಪರಮೇಶ್ವರ ಗಣೇಶ ... ಹೊನ್ನಾವರ. ೨. ಶ್ರೀ. ವೆಂಕಟಸುಬ್ಬ ಗೋ... ಹೆಗಡೆ ಕರ್ಕಿ ವಕೀಲ ಹೊನ್ನಾವರ. ಬೆಲೆ ೨ ಆಣೆ.

೩೦. ಅರುಣೋದಯ: [ಮಾಸಪತ್ರಿಕೆ] ಸಂ... ಕರು ಶ್ರೀ. ಪಂಡಿತ ವೆಂಕಟರಾಯರು ಬಿ. ಎ. ಎಲ್... ಬೆಳಗಾಂವಿ. ಹೊಸವರ್ಷದ ಮೊದಲನೆಯ ಸಂ... ಜಯಕರ್ನಾಟಕದಳತೆಯ ೪೨ ಪುಟಗಳು. ... ವಾ. ವ. ೩-೮-೦.

೩೧. ಶ್ರೀಕೃಷ್ಣಸಂದೇಶ: [ಮಾಸಪತ್ರಿಕೆ] ... ವರ್ಷದ ಮೊದಲನೆಯ ಸಂಚಿಕೆ. ಸಂಪಾದಕ ... ಪ್ರಕಾಶಕರು ಶ್ರೀ. ಮುದ್ರಾಡಿ ಜನಾರ್ದನಾಚಾ... ಡೇಮಿಯಾ ಅಷ್ಟಪತ್ರದ ೨೪ ಪುಟಗಳು. ವಾ. ವ. ...

೩೨. ಶ್ರೀಮನ್ಮಹಾರಾಜ ಸಂಸ್ಕೃತ ಮಹಾ... ಶಾಲಾ ಪತ್ರಿಕಾ [ತ್ರೈಮಾಸಿಕೀ] ಏಳನೆಯ ವ... ನಾಲ್ಕನೆಯ ಸಂಚಿಕೆ. ಸಂಪಾದಕ ಶ್ರೀ. ಎಚ್.ಯ... ನರಸಿಂಹಾರ್ಯ ಎಮ್. ಎ. ಶ್ರೀ ಮಹಾರಾ... ಸಂಸ್ಕೃತ ಕಾಲೇಜಿನ ಮುಖ್ಯೋಪಾಧ್ಯಾಯರು. ... ಚಂ. ವಿದ್ಯಾರ್ಥಿಗಳಿಗೆ ೧ ರೂಪಾಯಿ; ಇತರರಿಗೆ ... ವರೆ ರೂಪಾಯಿ.

೩೩. ಮಹಿಳಾಸೇವಾಸಮಾಜ ಬೆಂಗಳೂರ ಸಿಟಿ ... ೧೯೩೦-೩೧ನೆಯ ವರ್ಷದ ವರದಿ.

೩೪. ದೇವಗಿರಿಯ ಮಾಲತೀಶ ಮಂದಿರದ ೧೪ನೆ... ವರ್ಷದ ವರದಿ. ಪ್ರಕಾಶಕ ಶ್ರೀ. ಮು. ರಾ. ... ಪೂಜಿ ಮಂದಿರದ ವ್ಯವಸ್ಥಾಪಕ ಹಾಗು ಅರ್ಚಕ.

೩೫ ವೀರಭೂಮಿ: [ಕಥೆ] ಭಾವತರಂಗಮಾಲೆ... ಪ್ರಥಮ ತರಂಗ. ಲೇಖಕರು ಶ್ರೀ. ಎಸ್. ವೆ... ರಾಜ. ಪ್ರಕಾಶಕರು ಶ್ರೀ. ಎಸ್. ಯು. ಪಣಿ... ತುಳುನಾಡ್ ಛಾಪಖಾನೆ ಉಡುಪಿ.

**36. Mysore Archaeological Annual Re...** **for the year 1928–29 together with the exca... Mysore ...tion suppliment.**

CC-0. Jangamwadi Math Collection. Digitized by eGangotri

# ನಮ್ಮ ಚಂದಾದಾರರಲ್ಲಿ ಬಿನ್ನಹ

ನಮ್ಮ ಕಾರ್ಯಾಲಯದಲ್ಲಿಯೇ ಪೋಸ್ಟ್ ಆಫೀಸಿದೆ. ಪ್ರತಿಯೊಬ್ಬ ಚಂದಾದಾರರ ಸಂಚಿಕೆಯೂ ಸರಿಯಾಗಿ ಅಂಚೆಯಲ್ಲಿ ಬೀಳುವಂತೆ ನಾವು ತಕ್ಕ ಏರ್ಪಾಡು ಮಾಡಿರುವೆವು. ಸಂಚಿಕೆ ತಲ್ಪಲಿಲ್ಲೆಂದು ತಕರಾರು ಮಾಡುವವರು ಪ್ರತಿ ತಿಂಗಳ **೧೫ನೆಯ ತಾರೀಖಿನ** ಒಳಗಾಗಿಯೇ ನಮಗೆ ಕಾಗದವನ್ನು ಬರೆಯಬೇಕು. ಅಂದರೆ ವಿಚಾರ ಮಾಡಿ ಅವಶ್ಯವೆಂದು ಕಂಡರೆ ಮತ್ತೊಂದು ಪ್ರತಿಯನ್ನು ಕಳುಹಿಸುವೆವು. ೧೫ನೆಯ ತಾರೀಖು ಆದ ಮೇಲೆ ಬಂದ ತಕರಾರಿನ ಕಾಗದಗಳ ವಿಚಾರಣೆಯ ಹೊಣೆಯನ್ನು ನಾವು ಖಂಡಿತವಾಗಿಯೂ ಹೊರಲಾರೆವು. ಏನಾದರೂ ಕಾರಣದಿಂದ ಸಂಚಿಕೆ ಹೊರಡುವುದಕ್ಕೆ ತಡವಾದಲ್ಲಿ ಅದನ್ನು ಮೊದಲೇ ಚಂದಾದಾರರಿಗೆ ತಿಳುಹಿಸಲಾಗುವದು. ಈ ವರ್ಷದಿಂದ ಜಯಕರ್ನಾಟಕವು ತಪ್ಪದೆ ೧ನೆಯ ತಾರೀಖಿಗೆ ಹೊರಟೇ ತೀರುವಂತೆ ವ್ಯವಸ್ಥೆಯಾಗಿದೆ.

ವ್ಯವಸ್ಥಾಪಕ ಜ. ಕ.

---


## ಉನ್ಮಾದ(ಹುಚ್ಚು)ರೋಗಕ್ಕೆ ಅಪ್ರತಿಮ ಚಿಕಿತ್ಸೆ

ಎಷ್ಟು ಹಳೆಯ ಉನ್ಮಾದ ರೋಗವಾದರೂ, ಎಷ್ಟೇ ಭಯಂಕರವಾಗಿದ್ದರೂ, ಖಂಡಿತ ಗುಣ ಹೊಂದುವುದರಲ್ಲಿ ಸಂಶಯವೇ ಇಲ್ಲ. ಅನುಮಾನದಿಂದ ಪ್ರಯೋಜನವಿಲ್ಲ. ಪ್ರತ್ಯಕ್ಷಕ್ಕೆ ಬೇರೆ ಪ್ರಮಾಣವೇಕೆ? ಒಂದೇ ಒಂದು ವಾರದೊಳಗೆ ಗುಣ ಕಂಡುಬರುವದು. ಇದರ ಸೇವನೆಯಿಂದ ಅಪಸ್ಮಾರ, ಹಿಸ್ಟೀರಿಯಗಳೂ ಸಂಪೂರ್ಣಗುಣ ಹೊಂದುವವು. ೧ ವಾರದ ಔಷಧಕ್ಕೆ ಕ್ರಯ: ರೂ. ೪.

ಸ್ವಪ್ನೇಂದ್ರಿಯಸ್ತಂಭನ:– ಸ್ವಪ್ನೇಂದ್ರಿಯ, ಮೂತ್ರದಲ್ಲಿ ವೀರ್ಯಸ್ರಾವ ಮೊದಲಾದ ಯುವಕರ ರೋಗಗಳು ಇದರಿಂದ ಖಂಡಿತ ನಿರ್ಮೂಲವಾಗುವವು ಎರಡು ವಾರಗಳ ಔಷಧಕ್ಕೆ ರೂ. ೩. ಕೆಟಲಾಗಿಗೆ ಬರೆಯಿರಿ. ಏಜಂಟರು ಬೇಕು.

ಮಾಳ ನಾರಾಯಣ ಭಟ್ಟ ಸಿದ್ಧೌಷಧಭವನ, ಪೋಸ್ಟು ವಿಟ್ಲ, ದ. ಕನ್ನಡ.


CC-0. Jangamwadi Math Collection. Digitized by eGangotri

# ಪರಿವಿಡಿ

( ಎಲ್ಲ ಬರೆಹಗಾರರ ಹೆಸರುಗಳ ಹಿಂದೆ ಶ್ರೀ. ಎಂದು ಸೇರಿಸಿ ಓದಿಕೊಳ್ಳಬೇಕು. )




## ಒಳ್ಳೇ ತೈಲಚಿತ್ರಗಳು ಬೇಕೋ ?

ಹಾಗಾದರೆ ನಮ್ಮಲ್ಲಿಗೆ ಬರೆಯಿರಿ. ನಮ್ಮ ಜಯಕರ್ನಾಟಕ ಮಂಡಲದ ಸದಸ್ಯರಾದ ಶ್ರೀ. ಶಾಸ್ ರೇವಪ್ಪನವರು ತಮ್ಮ ಕಲಾಕುಶಲಹಸ್ತದಿಂದ ನಿಮ್ಮ ಚಿತ್ರವನ್ನು ತೈಲವರ್ಣದಲ್ಲಿ ಬರೆದುಕೊಡುವ ಅದರಲ್ಲಿ ನಿಮ್ಮ ಜೀವಕಳೆಯನ್ನೇ ನೀವು ಕಂಡುಕೊಳ್ಳುವಿರಿ. ಇದ್ದ ಚಿತ್ರವನ್ನು ದೊಡ್ಡದನ್ನಾಗಿ ಮಾ ಕೊಡುವ ಏರ್ಪಾಡೂ ಉಂಟು. ಆಯಿಲ್‌ಪೇಂಟಿಂಗ ಮತ್ತು ಎನ್‌ಲಾರ್ಜ ಮೆಂಟಿನ ಉತ್ತಮ ಕೆ ಯೋಗ್ಯ ಬೆಲೆಗೆ ಆಗಬೇಕಾಗಿದ್ದರೆ ನಮ್ಮಲ್ಲಿಗೇ ಬರೆಯಿರಿ.

ಕಾರ್ಯದರ್ಶಿ ಜಯಕರ್ನಾಟಕ ಕಲಾಶಾಲೆ
ಸಾಧನಕೇರಿ ಧಾರವಾಡ.


CC-0. Jangamwadi Math Collection. Digitized by eGangotri



ಕನ್ನಡರಾಜ್ಯರಮಾರಮಣರ ಕುಯೋಗ ನಿವಾರಣೆ.

ಚಿತ್ರಶಿಲ್ಪಿ:— ಶ್ರೀನಿವಾಸರಾವ ಭೆಬ್ಬಿ. ಬಾಗಿಲಕೋಟೆ.

CC-0. Jangamwadi Math Collection. Digitized by eGangotri




ಸಂಪುಟ ೧೦ | ಪ್ರಜೋತ್ಪತ್ತಿ ಸಂವತ್ಸರ, ಬನದ ಹುಣ್ಣಿವೆ | ಸಂಚಿಕೆ ೩
ಚಾಲುಕ್ಯ ವಿಕ್ರಮ ವರ್ಷ ೮೫೬

# *ನಾದಲೋಲ ಲಕ್ಷ್ಮೀಶ

## ಗಮಕಿಗಳಿಗೊಂದು ಬಿನ್ನಹ

ಲೇ—ಬೇಂದ್ರೆ ದತ್ತರಾಮ, ಬಿ. ಎ. ಧಾರವಾಡ

೧

ಕಾವ್ಯವು ದೃಶ್ಯ, ಶ್ರಾವ್ಯ ಎಂದು ಎರಡು ಬಗೆ. ದೃಶ್ಯ ಕಾವ್ಯಗಳಾದ ನಾಟಕಾದಿಗಳನ್ನು ಓದಿಯಾಗಲಿ, ನಟನಿಂದ ಓದಿಸಿಯಾಗಲಿ ಫಲವಿಲ್ಲ; ಅದನ್ನು ರಂಗಭೂಮಿಯಲ್ಲಿ ಆಡಿಸಿ ನೋಡಬೇಕು. ಹಾಗೆಯೆ ಶ್ರಾವ್ಯಗಳಾದ ಕಾವ್ಯಗಳ ದರ್ಶನದಿಂದ ಆಗಬೇಕಾದ ಲಾಭವಿಲ್ಲ; ಅದಕ್ಕೆ ಶ್ರವಣಬೇಕು. ನಮ್ಮ ಕನ್ನಡ ವಾಙ್ಮಯದಲ್ಲಿ ವೃತ್ತಭೂಯಿಷ್ಟವಾಗಿಯೂ ವಚನಮಯವಾಗಿಯೂ ಇರುವ ಚಂಪೂಕಾವ್ಯಗಳನ್ನು ಓದುಗಬ್ಬಗಳೆಂದೂ ಷಟ್ಪದಿ-ಸಾಂಗತ್ಯಾದಿಗಳನ್ನು ಹಾಡುಗಬ್ಬಗಳೆಂದೂ, ಕರೆದಿರುವುದೇನೋ ನಿಜ, ಆದರೆ ಅದಕ್ಕೆ ಪ್ರತಿಯಾಗಿ ವಚನಗಳನ್ನು ಹಾಡಿದರು – ಎಂಬುದಾಗಿಯೂ, ಕಾವ್ಯವನ್ನು ಓದಿದರು– ಎಂಬುದಾಗಿಯೂ, ಕೆಲವೆಡೆಗಳಲ್ಲಿ ಹೇಳಿದುದುಂಟು. ಪದಪ್ರಯೋಗವೇನೇ ಇರಲಿ ಎಲ್ಲ ಕವಿಗಳ ಇಚ್ಛೆಯು ಸ್ಪಷ್ಟವಾಗಿದೆ. ಕಂಟದಿಂದ ತಾಳೆಯೋಲೆಯ ಮೇಲೆ ಮೂಡಿದ ಶಬ್ದಸಂತತಿಯು ಕಾವ್ಯವಲ್ಲ; ಕವಿಗಮಕಿಗಳ ಕಂಠದಿಂದ ರಸಿಕರ ಹೃತ್ಪಟಲದಲ್ಲಿ ಮೂಡಿದುದು ಕಾವ್ಯ. ಹಾಡುಗಾರನ ಹಾಡು ಅವನ ಸೊಲ್ಲಿನೊಡನೆ ಅಡಗುವ ಅವನ ಜೀವದ ಛಾಯೆ. ಹಾಡು, ಹಾಡಿಕೆ ಮತ್ತು ಹಾಡುಗಾರ ಇದೊಂದು ತ್ರಿವೇಣೀ

* ಈ ಬರೆಹವು ಚಿಕ್ಕಮಗಳೂರಿನ ಕರ್ನಾಟಕ ಸಂಘದವರು ಪ್ರಕಟಿಸಲಿರುವ “ಲಕ್ಷ್ಮೀಶಕನಿಕಂಠಾಭರಣ” ಕ್ಕಾಗಿ ಬರೆದುದು. ಈ ಸಲದ ಕಾರವಾರದಲ್ಲಿ ಜರುಗಿದ ಸಾಹಿತ್ಯಸಮ್ಮೇಳನದಲ್ಲಿ ಓದಿದುದು.

CC-0. Jangamwadi Math Collection. Digitized by eGangotri

ಸಂಗಮವು. ಇದನ್ನು ವಿಂಗಡಿಸಲು ಬರದು. ಆದರೆ ಕವಿಯ ಮಾತು ಹಾಗಲ್ಲ. ಅವನು ತನ್ನ ಕಾವ್ಯಶರೀರ ವನ್ನು ಶಬ್ದಮೂರ್ತಿಯಲ್ಲಿ ಎರಕ ಹೊಯ್ದಿಡಬಲ್ಲ. ಆದರೆ ಆ ಶಬ್ದಶರೀರವೋ ಚಂದ್ರಾಪೀಡನ ಕಳೇವರದಂತೆ. ಗಮಕಿಯು ತನ್ನ ಉಸಿರೂದಿ ಅದಕ್ಕೆ ಜೀವಕಳೆ ತುಂಬಬೇಕು. ಧ್ವನಿಯು ಮೈಗರೆದಿರಬಹುದಾದರೂ, ನುಡಿಯ ನೆರಳು ತಲೆದೋರಿ ನಿಲ್ಲಬಹುದು — ಇದೇ ಕಾವ್ಯದ ವಿಚಿತ್ರ ಜೀವನ. ಮೊನ್ನೆ ಮೊನ್ನೆ ಗತಿಸಿದ ವೀಣೆಯ ಶೇಷಣ್ಣನವರ, ಬಿಡಾರ ಕೃಷ್ಣಪ್ಪನವರ ಗಾನಮಾತೃಕೆಗಳು ಅವರೊಡನೆ ಗತಿಸಿದುವು. ನೂರಾರು ವರ್ಷಗಳ ಹಿಂದಿನ ಲಕ್ಷ್ಮೀಶ ಕುಮಾರವ್ಯಾಸರ ಕಾವ್ಯವು ಇನ್ನೂ ಇದೆ. ಹೇಗೆ?— ಎಂದರೆ, ಚಂದ್ರಾಪೀಡಕಳೇವರದಂತೆ, ಎಂದೇ ನಾವು ಉತ್ತರ ಕೊಡಬೇಕು. ಕಾವ್ಯವಿಷಯವಲ್ಲಿ ಕವಿಗೆ ಪಿತೃಪದವಿ, ರಸಿಕರಿಗೆ ಜಾಮಾತೃಪದವಿ ಎಂದು ಹೇಳಿದ್ದಾರೆ. ಆದರೆ ಗಮಕಿಗೆ ಸಂಜೀವನಶಕ್ತಿಯುಳ್ಳ ಬ್ರಹ್ಮಪದವಿಯೆಂದು ಒತ್ತಿಹೇಳಬೇಕಾಗಿದೆ. ಅಥವಾ ವೀರಶೈವರೊಳಗಿನ ಲಿಂಗದೀಕ್ಷಾಗುರುಪದವಿ ಎಂದು ಹೇಳಿದರೂ ನಡೆಯುವುದು. ಆಡಿದ ಮಾತಿನ ಜೀವವು ಬರೆದ ಶಬ್ದ ಸಂಕೇತದಲ್ಲಿ ಬರದು. ಕಿವಿಯಿಂದ ಬಗೆಹೊಗಬೇಕು, ರಸವನೀಂಟಿಸಬೇಕು, ಆಗಲೆ ಆ ಕಾವ್ಯದ ಜನ್ಮ ಸಾರ್ಥಕವಾಯಿತು.

ವಾಚ್ಯವಾದ ಶಬ್ದಾರ್ಥಗಳು ಕಣ್ಣಿಗೆ ಕಾಣುವವು. ಆದರೆ ಯುಕ್ತಧ್ವನಿಯಿಲ್ಲದೆ ಭಾವವು ಹುಟ್ಟದು; ಅದು ಇಲ್ಲದೆ ಕವಿಹೃದಯವು ರಸಿಕಹೃದಯವನ್ನು ಮುಟ್ಟದು. ಶಬ್ದಕ್ಕೂ ವಾಚ್ಯಾರ್ಥಕ್ಕೂ ಇರುವ ಸಂಬಂಧವು ರೂಢ ಅಥವಾ ಸಾಂಕೇತಿಕವೆಂದು ಹೇಳಬಹುದಾದರೂ, ಕವಿಯು ಯೋಜಿಸುವ ಅಕ್ಷರಸಮೂಹಕ್ಕೂ ಅವನ ಭಾವನೆಗೂ ಇರುವ ಸಂಬಂಧವು ನಿಸರ್ಗಸಿದ್ಧವಾಗಿದೆ. ಕವನ ಸಂಗೀತಗಳು ಅವಳಿಜವಳಿಗಳಂತೆ ಕಾಣುವುದು ಇಲ್ಲಿಯೇ. ಆದರೆ ಸಂಗೀತವು ವಿದೇಹ; ಕವನವು ಸದೇಹ. ಸಂಗೀತವು ಪ್ರಾಣಮಾತ್ರ, ಕವನವು ಪ್ರಾಣದ ಗೋಚರಮೂರ್ತಿ. ಮೂರ್ತಿಯ ದೇಹಲಕ್ಷಣಗಳಲ್ಲಿ ಪ್ರಾಣದ ಪದವಿಯನ್ನು ಹೊಳೆಯಿಸುವುದು ಗಮಕಿಯ ಕಾರ್ಯ. ಗಮಕಿ ಗಾಯಕನಲ್ಲ. ಗಾಯಕನದು ವಾಯುವಿಹಾರ, ಗಮಕಿಯೋ ಶಬ್ದಾರ್ಥಸಾಹಿತ್ಯದಿಂದ ಕದಲಲಾಗದು. ಗಾಯಕನು ಸಾಹಿತ್ಯವನ್ನು ... ದ್ದಾದರೆ ಅವನಿಗೆ 'ರಾಗವೇ ರಸ, ಪದವು ... ದಾಸರ ಸಾಹಿತ್ಯದಲ್ಲಿ ರಾಗವು ರಸವಾಗಿ ... ವಾಗಿದ್ದ ಉದಾಹರಣೆಗಳು ಅಡಿಗೊಮ್ಮೆ ... ದೊರೆಯುವವು. ದಾಸರಿಗೆ ಶಬ್ದಸಾಹಿತ್ಯವು ... ವನು ಲೀಲೆಗಾಗಿ ಕಟ್ಟಿಕೊಂಡ ಈಸುಗುಂಬ ... ಕವಿಗಳಿಗೆ ಹಾಗಲ್ಲ. ಅವರಿಗೆ ರಸಾವತಾರ ... ವಾದ ದೇಹವೇ ಈ ಶಬ್ದವು; ಶಬ್ದಕ್ಕಿಂತ ... 'Poetry is suggestive sound' (Lamborn) ... ವಾದ ನಾದವೇ ಕಾವ್ಯ'' ಎಂದೂ 'Misers of ... syllable' (Keats) ''ನಾದಗಳನ್ನೂ ... ಒರೆದುನೋಡುವ ಜಿಪುಣರೀಕವಿಗಳು'' ... ಹೇಳಿದುದು ಯಥಾರ್ಥವಾಗಿದೆ. ಅಕ್ಕರಕ್ಕ ... ಯರಿಯದವರು ಅಕ್ಕರಿಗರು (Men of Letters) ... ದಾರು? ಇದನ್ನು ವ್ಯಕ್ತೀಕರಿಸುವುದೇ ... ಗಮಕ. ಗಮಕಿಯು ಕಾವ್ಯವೇದದ ಭಾಷ್ಯ ... ಗಾಯಕನ ಗಾನದಂತೆ ಇದೂ ವಿಂಚಿ ... ವಾಗುವ ತೇಜ. ಕವಿ-ಗಮಕಿ-ವಾದಿ-ವಾಗ್ಮಿ ... ಮಾಲೆಯೊಳಗಿನ ಮಣಿಗಳು. ಪೂರ್ವದ ರಾ... ಗಳಲ್ಲಿ ಇವರೆಲ್ಲರಿಗೂ ಮನ್ನಣೆಯಿತ್ತು. ನ... ಪ್ರೀತಿಯು ಕುಗ್ಗುತ್ತ ಹೋದಂತೆ ಗಮಕಿಯ ... ಮಸುಳುತ್ತಬಂದಿತು. ಗಮಕಿತ್ವದ ಅಸ್ತ... ಲೋಪ. ಹೀಗಾಗಿ ಇದ್ದ ಕಾವ್ಯಗಳ ಬೆ... ವಷ್ಟು ಬೀಳಲಿಲ್ಲ. ಜೈಮಿನಿಭಾರತವು ಇಂ... ಜನಪ್ರಿಯವಾಗಿದ್ದರೂ, ಗಮಕಿಗಳ ಭಾಷ್ಯ... ಜೀವದ ಸ್ವರವಿನ್ನೂ ಕೇಳುತ್ತಿಲ್ಲ. ನಮಗೆ ... ತ್ತಿರುವುದು ಅದರ ಸಪ್ಪುಳು ಮಾತ್ರ. ... ನಾದೋಪಾಸಕ. ಅವನ ಕವನದಲ್ಲಿ ನಾವು ... ಕಂಡುಕೊಳ್ಳದಿದ್ದರೆ ನಾವು ಏನನ್ನೂ ... ಗಮಕಿಗಳಿಲ್ಲದೆ ಲಕ್ಷ್ಮೀಶನ ಜೈಮಿನಿಗೆ ... ಹಾನಿಯು ಮತ್ತಾವ ಕಾವ್ಯಕ್ಕೂ ತಟ್ಟಿಲ್ಲ.

ಲಕ್ಷ್ಮೀಶನು 'ಕಾವ್ಯಮಿದು ಭುವ... ಜನರಿಂದೆ ಸುಶ್ರಾವ್ಯಮಪ್ಪಂತೆನ್ನ ವದನಾಬ್ಜ... ವ್ಯಾಪಿಸು' ಎಂದು ಬೇಡಿಕೊಳ್ಳುವನು. ಇ...

CC-0. Jangamwadi Math Collection. Digitized by eGangotri

ಜ್ಞಾನರಂ ತಲೆದೂಗಿಸದೆ ನುಡಿದೊಡಾಪದ |
ಕ್ಕೊಣೆಯಂ ಬಹುದೆಂದು ಸರಸೋಕ್ತಿಯಿಂದೆ ಗೀ |
ರ್ವಾಣ ಪುರನಿಲಯ ಲಕ್ಷ್ಮೀವರಂ ತಾನೆ **ಸಂಗೀತ-**

**ಸುಕಲಾನಿಪುಣನು |**

**ವೀಣೆಯಿಂಗಾನವುಂ ನುಡಿಸುವಂದದೊಳಿನ್ನ |**

**ವಾಣಿಯಿಂ ಕವಿತೆಯಂ ಪೇಳಿಸಿದನು,**

ಎಂದು ಹೇಳುವನು. ವಾಲ್ಮೀಕಿಯ ರಾಮಾಯಣವನ್ನು ಹೇಳುವ ಲವಕುಶರೂ

ವೀಣೆಯಂ ಕೈಗಿತ್ತು ಬಾಲಕರ ವದನದೊಳ್-
ವಾಣಿ ತಾಂ ನೆಲಸಿದಳೊ ಗಾನದೇವತೆಯ ಮೈ- |
ಗಾಣಿಕೆಯೊ ಮೋಹನದ ತನಿರಸವೊ ಸೊಗಯಿಸುವ ಕರ್ಣಾ-
ಮೃತವೊ ಪೇಳೆನೆ |
ಜಾಣುಣ್ಮೆ ಜೋಕೆಯಿಂ ಜತಿ-ರೀತಿ-ತಾಳ-ಪ್ರ- |
ಮಾಣ-ಕಂಪಿತ-ಮೂರ್ಛೆ-ರಸ-ಪಾಡು ಬೆಡಗು ಬಿ |
ನ್ನಾಣ ಲಯಮಾಹತಪ್ರತ್ಯಾಹತವ್ಯಾಪ್ತಿಯರಿದು ಕೇಳಿಸಿದರ
ವರು ||

ಎಂತೆ. ಕವಿತೆಯನ್ನು 'ಗೇಯರಸವೊಸರು' ವಂತೆ ಹಾಡಬೇಕೆಂಬುದು ಲಕ್ಷ್ಮೀಶನ ಅಭಿಪ್ರಾಯ. ಅದಕ್ಕೆ ಅನುಕೂಲವಾಗುವಂತೆಯೆ ಅವನ ಶಬ್ದರಚನೆಯಿದೆ. ಇದನ್ನು ಅವನು ಬಲ್ಲನು. ಚತುರಪದಗತಿಯು, ಸರಸಧ್ವನಿಯು ಲಾಲಿತಶ್ರುತಿರಂಜನವು ಪ್ರೌಢಪ್ರಬಂಧದ ಲಕ್ಷಣವೆಂದು ಅವನು ಬಗೆದಿದ್ದನು. ಅವನ ಷಟ್ಪದಿಯಾದರೂ ಅದಕ್ಕೆ ಸರಿಯಾಗಿ 'ನಿರುತ ಮಂಜುಳಶಬ್ದದಿಂದ ಕಿವಿಗಿಂಪಾಗಿ' ಚರಿಸುತ್ತಲಿತ್ತು. ಈ ರೀತಿಯಲ್ಲಿ ರಚಿತವಾದ ಕಾವ್ಯವನ್ನು ಅದರ ಸಾರ್ಥಕವಾಗುವಂತೆ ಹಾಡುವುದು ಗಮಕಿಯ ಕಾರ್ಯವಾಗಿದೆ. ಶ್ರೀಮಾನ್ ಭಾರತ ಬಿಂದೂರಾಯರು ಕುಮಾರವ್ಯಾಸನ ವಾಣಿಯನ್ನು ತಮ್ಮ ಗಮಕಿತ್ವದಿಂದ ಲಾಸ್ಯವಾಡಿಸುತ್ತಿದ್ದಾರೆ. ಅದನ್ನನುಸರಿಸಿ ಯಾರಾದರೂ ತರುಣ ಗಮಕಿಗಳು ಲಕ್ಷ್ಮೀಶನ ಸೇವೆಮಾಡಿದ್ದಾದರೆ ಆಗ ಲಕ್ಷ್ಮೀಶನ ವಾಣಿಯ ವೀಣೆಯ ಇಂಪು ವಿಶದವಾಗುವುದು. ಹಾಗೆ ನೋಡಿದರೆ, ಕುಮಾರವ್ಯಾಸನಿಗಿಂತ ಲಕ್ಷ್ಮೀಶನಿಗೇ ಗಮಕಿಗಳ ಅಗತ್ಯವು ಹೆಚ್ಚಾಗಿದೆ. ಇನ್ನೂ ಶಬ್ದಾಲಂಕಾರಗಳೆಂದು ತಿಳಿಯಲ್ಪಡುವ ಅವನ ಯಮಕಪ್ರಾಸಾನುಪ್ರಾಸಾದಿಗಳು ರಸಸೃಷ್ಟಿಗೂ ಪುಷ್ಟಿಗೂ ಬೇಕಾದ ಸಾಹಿತ್ಯವೆಂಬುದು ಆಗ ತಾನೇ ತಿಳಿಯಬೇಕು! ಕಡಲಂತೆ ಮೊರೆಯುವ, ಪಡೆಯಂತೆ ಹುಯ್ಲಿಡುವ, ಕಾಮಿನಿಯರಂತೆ ಕ್ರೀಡಿಸುವ, ಗಾಳಿಯಂತೆ ಸುಳಿಯುವ, ಹೊಳೆಯಂತೆ ಹರಿಯುವ, ದುಃಖಿತರಂತೆ ನರಳುವ, ಹೂವಿನಂತರಳುವ ಕಾಡಿನಂತೆ ಕಂಗೆಡಿಸುವ, ಬನದಂತೆ ಕಂಗೊಳಿಸುವ, ಬಾಲರಂತಾಡುವ, ಹಕ್ಕಿಯಂತೆ ಹಾಡುವ ಲಕ್ಷ್ಮೀಶನ ಲೀಲಾವತಾರಿಯಾದ ಷಟ್ಪದಿಯ ಸೊಗಸು, ಸೊಬಗು, ಬೆಡಗು, ಯಮಕ, ಬಿನ್ನಾಣಗಳು ಗಮಕಿಗಳಿಂದಲೆ ಪ್ರಕಾಶ ಹೊಂದಬೇಕು. ಲಕ್ಷ್ಮೀಶನು ಹೆಚ್ಚಾಗಿ ರಸಪಕ್ಷಪಾತಿ; ಅವನನ್ನು ಅರ್ಥಪ್ರಪಂಚವು ಆಕರ್ಷಿಸುವುದಿಲ್ಲ. ಪಾತ್ರಸೃಷ್ಟಿಯು ಮೋಹಿಸುವುದಿಲ್ಲ. ವಸ್ತುರಚನಾಸಂದರ್ಭವು ಬಂಧಿಸುವುದಿಲ್ಲ. ಅವನು ನೇರವಾಗಿ ತನ್ನ ಕಾವ್ಯನೌಕೆಯನ್ನು ರಸೋದಧಿಯಲ್ಲಿ ನೂಕಿಬಿಡುವನು. ಅಷ್ಟಾದಶವರ್ಣನೆಯ ಅಂಶವಿರಲಿ, ಅನಂತಭಾವರಸಗಳ ಲೇಶವಿರಲಿ, 'ಸವಿದನಿಯಿಂದ ಸಮೆದ' ಆದೊಂದು ಲೋಕದಲ್ಲಿ ಹೊಗಿಸಿಬಿಡುವನು. ವಿಗಲಿತವೇದ್ಯಾಂತರವಾದ ಆನಂದವೆಂದರೇನೆಂಬುವ ಅನುಭವವು ಬರುವದು ಆಗ. ಆದರೆ ಲಕ್ಷ್ಮೀಶನ ನಾದವೀಣೆಯನ್ನು ನುಡಿಸಬಲ್ಲ ಬಲ್ಲಿದನಾದ ಗಮಕಿಬೇಕು ಅದಕ್ಕೆ. ಇಲ್ಲದಿದ್ದರೆ ಎಲ್ಲವೂ ನೈಯಾಯಿಕರ ಘಟಪಟಾಧ್ಯಾಯವಾಗಿಯೋ ನಾಡಾಡಿಗಳ ರಂಜನೆಯ ಗುಂಜಾರವವಾಗಿಯೋ ಗಾಳಿಗೆಗಾಳಿ ಬಯಲಿಗೆ ಬಯಲಾಗಬಹುದು.

ರಸಃ ಕೋಪ್ಯಸ್ತು ಕಾಪ್ಯಸ್ತು ರೀತಿಃ ಕೋಪ್ಯಸ್ತು ವಾಗುಣಃ |
ಸಗರ್ವಂ ಸರ್ವಕರ್ಣಾಟಾಸ್ಟಂಕಾರೋತ್ತರ ಪಾಠಿನಃ ||

'ರಸವು ಯಾವುದೇ ಇರಲಿ, ರೀತಿಯು ಏನೇ ಇರಲಿ, ಗುಣವು ಎಂತಹದೇ ಇರಲಿ, ಎಲ್ಲ ಕರ್ಣಾಟಕರೂ ಬಿಂಕದ ಟಂಕಾರದಿಂದ ಕವಿತೆಯನ್ನೋದುವರು' ಎಂದು ಪಂಪನ ಸಮಸಾಮಯಿಕನಾದ ರಾಜಶೇಖರನೆಂಬ ಸಂಸ್ಕೃತ ಕವಿಯು ತನ್ನ ಕಾವ್ಯಮೀಮಾಂಸೆಯ ಪಾಠಪ್ರತಿಷ್ಠಾಧ್ಯಾಯದಲ್ಲಿ ಬರೆದಿದ್ದಾನೆ. ಕನ್ನಡಸಾಹಿತ್ಯದಲ್ಲಿ ಗಮಕಿಗಳ ಗಮಕದ ವಿಷಯ ಬಂದ ಬಂದೆಡೆಗೂ ಈ ನಿಂದೆಗೆ ಎಡೆಗೊಡುವ ಛಾಯೆಕೂಡ ಕಂಡುಬರದು. ರಾಜಶೇಖರನು ಯಾವ ಗಮಕಿಯನ್ನು ಕಂಡು ಹೀಗೆ ಬರೆದನೋ ದೇವರೇ ಬಲ್ಲ.

[೧] ಗಾನ- ತಾನ- ಮಾನಂಗಳಂ ತೋರಿ | ಅರ್ಥೋಲ್ಲೇಖಾದಿ ಸಾಂದರ್ಭಿಕವಿಶ್ರಮನರಿತು | ಪದಸಂವ್ಯಕ್ತಿಗೈದು | ಕೇಳ್ವರಿಗಿಂಪುಗೊಳಿಸಿ | ಮೃದುಮಧುರ **ವ್ಯಕ್ತ ವರ್ಣೋಚ್ಚಾರಣದಿಂ |**

CC-0. Jangamwadi Math Collection. Digitized by eGangotri

**ಭಾವಸೂಚಕರಾದ ಗಮಕಿಗಳು—**

'ವಿವೇಕಚಿಂತಾಮಣಿ' – ಶಂಭುಲಿಂಗಾಂಕಿತ ನಿಜಗುಣ ಶಿವಯೋಗಿ.

ಇದರಲ್ಲಿ 'ರಸಃ ಕೋಪ್ಯಸ್ತು ಕಾಪ್ಯಸ್ತು' ಎನ ಯದ್ವಾತದ್ವಾ ಹಾದಿಯಿಲ್ಲ.'ಸಾಂದರ್ಭಿಕ ಮಿಶ್ರ'ವನ್ನು ಅರಿಯದೆ ಓದುವವನು ಗಮಕಿಯೇ ಅಲ್ಲ. 'ಮೃದು ಮಧುರ ವ್ಯಕ್ತವರ್ಣೋಚ್ಚಾರಣದಿಂ ಭಾವಸೂಚನೆ' ಮಾಡುವುದು ಗಮಕಿಯ ಕೆಲಸ, ಹಾಗೆ ಬರೆಯುವುದು ಕವಿಗಳದು. ( Poetry is suggestive sound )

[೨] ಪದಪದದಕ್ಕರಕ್ಕರದ ವಾಕ್ಯದ ವಾಕ್ಯದ ವಿಶ್ರಮಂ ಲಯಂ|
ಪುದಿದ ಬೆಡಂಗಿನಿಂ **ಪುರುಳಿದಿರ್ಚಿಪಳಚ್ಚನೆ ಮಿಂಚಿ ತೋರಿತ-** ||
ತ್ತದುಚಿತಮಾಗಿ ಸೊಂಪುಕಳೆ ಪೊಣ್ಮೆಡಿದುಣ್ಮವ **ನುಣ್ಚ-ರಂಗಳಿಂ-** |
ದೊದವೆ ರಸಂಗಳೋಜೆವಡೆದೋದುವನೀ ಚಿಕದೇವಭೂವರಂ ||

'ಚಿಕ್ಕದೇವರಾಜ ವಿಜಯ' – ತಿರುಮಲಾರ್ಯ.

ಇದರಲ್ಲಿಯೂ 'ಬಿಂಕದ ಟಂಕಾರ' ಉಪದೇಶವಿಲ್ಲ. ಮಧುವ್ರತರ ಝೇಂಕಾರವಿದೆ. 'ಪುರುಳು ಪಳಚ್ಚನೆ ಮಿಂಚಿ ತೋರುವಂತೆ' ಕವಿಯು Miser of sound & syllable ಇರುವನೆಂಬುದನ್ನು ನೆನೆದು ಪ್ರತಿ ಅಕ್ಷರ ಪದ ವಾಕ್ಯಗಳನ್ನು ನುಣ್ಚರಗಳಿಂದ ರಸವುಂಟಾಗುವಂತೆ ಓದ ಬೇಕೆಂದು ಹೇಳಿದ್ದಾಗಿದೆ. ರಾಗವನ್ನೇ ರಸವನ್ನಾಗಿ ಪದವನ್ನು ಕಸವನ್ನಾಗಿ ಮಾಡುವ ಬಯಕೆಯು ಗಾನ-ಪ್ರಿಯ ತಿರುಮಲಾರ್ಯನಿಗೂ ಇಲ್ಲ.

(೩) ರತ್ನಾಕರನ ಕುಸುಮಾಜಿಯು ಭರತೇಶನ ಸಂಮುಖದಲ್ಲಿ "ಕಿರಿದೋಲೆಗಳನ್ನು ಎಡಗೈಯೊಳಾಂತು ಬಲಗೈಯಿಂದ ಭಾರಿದಂಡಿಗೆಯ ಮಿಡಿವುತ ಕನ್ನೆ ಗೋಗಿಲೆ ತಾನೆ ಬಾಯ್ದೆರೆದುದೊ ಯೆಂಬ ಬಿನ್ನಣವೆಸೆಸುಲು" ಕಾವ್ಯವನೋದಿದಳಂತೆ, ನೀತಿಕಾರನಾದ ಚೂಡಾರತ್ನನೂ 'ಪದವಿಟ್ಟಕ್ಕರಬಣಿತೆಯೊಳೋದುವುದಕ್ಕರಿಗರಮಾರ್ಗ' ಎಂದು ಹೇಳುವನು. ಎಲ್ಲರೂ ಕಾವ್ಯದ ನಾದ ಸೌಭಾಗ್ಯವು ಅದರ ಭಾವಸೌಂದರ್ಯವನ್ನು ವ್ಯಕ್ತಗೊಳಿಸು ವಂತೆಯೂ, ಕಾವ್ಯದ ಶಬ್ದಾರ್ಥವು ಮಿಂಚುವಂತೆಯೂ ಮಾಡಬೇಕೆಂದೇ ಉಪದೇಶಿಸುವರು. ಗಾನದಲ್ಲಿ ಸಾಹಿತ್ಯವನ್ನು ಮುಳುಗಿಸಬಾರದು, ತೇಲಿಸಬೇಕು. ಸ್ಥೂಲಶಬ್ದಾರ್ಥಸೃಷ್ಟಿಯು ಕವಿಯ ನಾದಭಾವಗಳ ಪ್ರತಿಧ್ವನಿಯಂತೆ ತೋರಬೇಕು. ದೇವನ ನಾದಸೃಷ್ಟಿ... ಪ್ರತಿಬಿಂಬವಲ್ಲವೆ ಪ್ರಪಂಚದ ಅರ್ಥಸೃಷ್ಟಿ! ... ಸೃಷ್ಟಿಯ ನಿಯಮವು ಎಲ್ಲಿಯೂ ಒಂದೆ. ಅಲ್ಲಿ ಕವಿ... ದೇವನೇನು !

ಇಲ್ಲಿಯವರೆಗೂ ಬಣ್ಣಿಸಿದ ಗಮಕಿಯ ಈ ಗಮಕ... '**ಕಾಕು**' ಎಂದು ಸಂಸ್ಕೃತದಲ್ಲಿ ಹೆಸರು. ... ವಿಚಾರವಾಗಿ ಭರತಮುನಿಯ ನಾಟ್ಯಶಾಸ್ತ್ರದ 'ಕಾ... ಸ್ವರ ವ್ಯಂಜನ' ಎಂಬ ಹತ್ತೊಂಬತ್ತನೆಯ ಅಧ್ಯಾಯ... ಮಹತ್ತ್ವದ ಸೂತ್ರಗಳಿವೆ. ಅದನ್ನು ವಿವರವಾಗಿ ... ಚರ್ಚಿಸುವ ಉದ್ದೇಶವೂ ಇಲ್ಲ, ಇದು ಸ್ಥಾನವೂ ... ಆದರೂ ಅದರ ಕೂಲಂಕಷಜ್ಞಾನದಿಂದ ಗಮಕಿ... ಸಂಸ್ಕಾರಹೊಂದುವುದೊಳಿತು. ಅಂತಹರಿಂದಲೇ ... ವೇದಿಲಕ್ಷ್ಮೀಶನ ನಾದಭಾಷ್ಯವು ಉಸಿರಲಾಗಬೇಕು.

ಕಾವ್ಯವನ್ನು ಹೇಳುವ ಅನೇಕ ಪದ್ಧತಿಗಳು... ಶಿಕ್ಷಕರ ಕಾಟಕಳೆಯುವುದಕ್ಕಾಗಿ ವಿದ್ಯಾರ್ಥಿಗಳು ... ಸರಿಸುವ 'ಎದ್ದೋದಿ' ರಾಗವು ಮೊದಲನೆಯದು. ... ಮಾರ್ಗದ ಪ್ರತಿಷ್ಠಾಪನಾಚಾರ್ಯರು ಶಿಕ್ಷಕ... 'ಕುರುಡೋದು' ಎಂಬ ನಾಣ್ಣುಡಿಯಿದೆ. ... 'ಕಿವುಡೋದು' ಎಂಬ ಮಾತು ರೂಢಿಯಾಗುವುದು... ಇಂಗ್ಲೀಷುಸಾಲೆಗಳಲ್ಲಿ ಪ್ರಚಾರಕ್ಕೆ ಬರುತ್ತಿ... 'Silent Reading' ಕಣ್ಣೋದಿಗೆ ಆದು ಸರಿಹೋಗು... ಮಾತು. ಕಿವಿಯಿಂದೀಂಟಿಸುವ ಪ್ರಯತ್ನವು ಕವಿಗ... ಗಳದಾದರೆ, ಕಣ್ಣಿಂದೋದಿಸುವ ಪ್ರಯತ್ನವು ಶಿ... ಕರ್ತರದು. ಸಾವಕಾಶವಾಗಿ, ಚಿತ್ರಗಳನ್ನು ಕಿವಿ... ನೋಡಿಸುವ ಪ್ರಯತ್ನವನ್ನೂ ಅವರು ಮಾಡು... ದೇನೋ ! ಇನ್ನೊಂದು ರೀತಿಯಿದೆ. ಆ ರೀತಿಯಲ್ಲಿ ... ಸೌಂದರ್ಯವನ್ನು ಮರೆಮಾಡಿ, ಸಾಧ್ಯವಿದ್ದರೆ ... ಅರ್ಥಗಾಂಭೀರ್ಯವು ಎದ್ದುಕಾಣುವಂತೆ ... ಯನ್ನು ಹೇಳಬೇಕಾಗುವುದು. ಗದ್ಯದ ಕೂಡ ಸಮ... ಹಕ್ಕಿನ ಬಲದಿಂದ ಏರಾಟವಾಡುವ ಪದ್ಯಮಾರ್ಗ... ರಾಗದ ದಾವಣಿಗೆ ಕಟ್ಟಿ ಸಾಹಿತ್ಯವನ್ನೆ ಛೇದಿಯು... ರಾಗರಸ ಮಾರ್ಗವು ಇನ್ನೊಂದು. ಇಲ್ಲಿ ಸಂಗೀತಸಾ... ಗಳು ಪರಸ್ಪರರ ಕೊರಳೊಳಗಿನ ಗುದ್ದಿ. ಅನ್ಯೋ... ಪೂರಕಗಳಲ್ಲ ಮಾರಕಗಳು. ಇಂತಹರ ಹಾಡು ಕೇ... ಸಾಹಿತ್ಯಸಂಗೀತಗಳು ಕೂಡಬಾರದು–ಎಂದು ಕೇ...

CC-0. Jangamwadi Math Collection. Digitized by eGangotri

ಹೇಳುತ್ತಿರಬೇಕು. ಮಧ್ಯಮಾರ್ಗವೊಂದಿರಲೇಬೇಕು. ಆ ಮಾರ್ಗವೇ ನಮ್ಮ ಕನ್ನಡ ಕವಿಗಮಕಿಗಳು ಅನುಸರಿಸಿದುದು. ಅಲ್ಲಿ ಸಾಹಿತ್ಯಸಂಗೀತಗಳು ಪರಸ್ಪರ ಪೂರಕಗಳು. ಸರಸ್ವತಿಯ ಸ್ತನದ್ವಂದ್ವಗಳು. ಆದರೆ ಗಮಕಿಗಳು ಇಲ್ಲದ್ದರಿಂದ, ತಮ್ಮ ಕೆಲಸ ಮಾಡದ್ದರಿಂದ, ಹಾಲಿಲ್ಲದಲ್ಲಿ ಮಜ್ಜಿಗೆಯೂ ಸಾಕು ಎಂದು ಈಗ ಒಮ್ಮೊಮ್ಮೆ ಕವಿಗಳೆ. ತಮ್ಮ ಕೊರಳಮೇಲೆ ಕೈಯಾಡಿಸಿ ಕಂಠವಿದೆಯೆಂದು ಮನಗಂಡು, ದಶಕಂಠರಾಗಿ ತಮ್ಮ ಕಾವ್ಯದ ಗುಂಡುಗಳ ಸುರಿಮಳೆಯನ್ನು ರಸಿಕರ ಎದೆಗೆ ಗುರಿಯಿಟ್ಟು ಸುರಿಸಬೇಕಾಗುವುದು. ಈ ದಶಕಂಠ ಮಾರ್ಗವೂ ಒಂದಿದೆ. ಆದರೆ ಅದು ಗಮಕಿಗಳನ್ನು ಕರೆಯುವ ಕೂಗು. (ರಾವಣನೂ ಒಳ್ಳೆಯ ಗಾಯಕನೆಂಬುದನ್ನು ನಾನು ಬಲ್ಲೆ.)

೨

ನಮಗೆ ಬೇಕಾದ ನಾದಧ್ವನಿಮಾರ್ಗದಂತೆ ಪದ್ಯಗಳನ್ನು ಹೇಳಬೇಕಾದರೆ, ಕೆಲವು ಸಂಗತಿಗಳನ್ನು ನೆನಪಿನಲ್ಲಿಡಬೇಕು. ಈ ಮಾರ್ಗದಲ್ಲಿ ಪ್ರಾಸಕ್ಕೆ ಅರ್ಥಯತಿಗೆ, ತಾಳಲಯಕ್ಕೆ,ಶಬ್ದಾಲಂಕಾರಗಳೆಂದೆನ್ನಿಸಿಕೊಳ್ಳುವ ನಾದಸಮುಯಗಳಿಗೆ, ವೃತ್ತರೂಪಕ್ಕೆ, ಪ್ರಾಧಾನ್ಯವಿದೆ. ನಮ್ಮ ನೃತ್ಯ, ಚಿತ್ರ, ಸಂಗೀತ, ವಿಗ್ರಹ, ಮಂದಿರಗಳು ಪರದೇಶಿಯರಿಗೆ ಹೇಗೆ ಅಲ್ಪ ಸ್ವಲ್ಪ ರಮ್ಯವಾಗಿಯೂ ಗಮ್ಯವಾಗಿಯೂ ಇವೆಯೋ ಹಾಗೆಯೇ ನಮ್ಮ ಕವಿತೆಯೂ ರಮ್ಯವೂ ಗಮ್ಯವೂ ಆಗಬೇಕಾದರೆ ಈ ಮಾರ್ಗವೇ ಹಾದಿ. ಈ ನಾದಧ್ವನಿಮಾರ್ಗವೇ ಚರಾಚರದ ಭಾಷೆ; ದೈವೀ ಪ್ರಾಕೃತ! ಭಾಷಾಭೇದವನ್ನು ಲೆಕ್ಕಿಸದೆ ಎಲ್ಲ ಭಾಷೆಗಳಲ್ಲಿಯೂ ಶ್ರುತಾಶ್ರುತವೀಣಾರವದಂತೆ ಮಿಂಚಿ ಮಾಯವಾಗುವ ಈ ನಾದಧ್ವನಿಯು ಭಿನ್ನ ಭಾಷೆಯೊಳಗಿನ ಕಾವ್ಯಗಳಲ್ಲಿ ಅಭಿನ್ನತೆಯನ್ನು ಹೊಳೆಯಿಸುವುದು; ಪಂಕ್ತಿಪ್ರಪಂಚವನ್ನು ಮಾಡದೆ ವಿಶ್ವಕಲೆಗಳ ಸಾಲಿನಲ್ಲಿ ಕಾವ್ಯವನ್ನು ಕೂರಿಸುವುದು.

ಇದರೊಳಗಿನ ಒಂದೊಂದು ಅಂಗದ ವಿಷಯವಾಗಿ ಒಂದೆರಡು ಮಾತುಗಳನ್ನು ಉದಾಹರಣೆಗಾಗಿ ಹೇಳುತ್ತೇನೆ.

**(೧) ಪ್ರಾಸ:**— ಯತಿಯನ್ನು ವಿಲಂಘಿಸಿ ದ್ವಿತೀಯಾಕ್ಷರಪ್ರಾಸವನ್ನು ದೇಶಿಯ ಲಕ್ಷಣವೆಂದು ಪೂರ್ವಾಚಾರ್ಯರು ನೃಪತುಂಗನ ಪೂರ್ವದಲ್ಲಿಯೇ ಸ್ವೀಕರಿಸಿದ್ದರು. ಈ ಪ್ರಾಸವು ಕವಿತೆಯ ಮೂಲಾಲಂಕಾರವಾದರೂ ಮೌಲಿಕವಾದ ಅಲಂಕಾರವಲ್ಲ. ಗದ್ಯದಿಂದ ಬೇರ್ಪಡಿಸುವ ಒಂದು ಕುರುಹು ಮಾತ್ರ. ಯತಿಯನ್ನು ಪಾಲಿಸುವ ದ್ವಿಪದಿ ತ್ರಿಪದಿ ಮೊದಲಾದುವುಗಳಲ್ಲಿ ದ್ವಿತೀಯಾಕ್ಷರ ಪ್ರಾಸದ ಸೊಗಸೂ ಅದರ ಅಸ್ತಿತ್ವದ ಅರಿವೂ ಉಂಟಾಗು 'ದು. ಆದರೆ ಯತಿಯನ್ನು ಬಿಟ್ಟ ವೃತ್ತಗಳಲ್ಲಿಯೂ, ದೇಸೀಯ ಜಾತಿಗಳಲ್ಲೊಂದಾಗಿದ್ದರೂ ವೃತ್ತಗಳ ಮಾರ್ಗವನ್ನೆ ಅನುಸರಿಸಿದ ಷಟ್ಪದಿಗಳಲ್ಲಿಯೂ ಈ ಪ್ರಾಸವು ನಾಲ್ಕಾರು ಸಾಲುಗಳನ್ನು ಪೋಣಿಸುವ ತೂತು. ಪ್ರಾಸದ ಪರಿಣಾಮವು ತೀರ ಕಡಿಮೆ. ಆದರೆ ಇನ್ನೊಂದು ರೀತಿಯಲ್ಲಿ ಇದನ್ನು ವಿಮರ್ಶಿಸಬಹುದಾಗಿದೆ. ಅದನ್ನು ಶಬ್ದಾಲಂಕಾರಚರ್ಚೆಯಲ್ಲಿ ನೋಡಬೇಕು. ಇಲ್ಲಿ ಇಷ್ಟೇ ಹೇಳಬಹುದು. ಪ್ರಾಸವನ್ನು ಬಿಟ್ಟು ಉಳಿದಾವ ಶಬ್ದಾಲಂಕಾರವಿಲ್ಲದ ಒಂದು ಷಟ್ಪದಿಯನ್ನೂ ಓದಿದರೆ ಪರಕೀಯರಿಗೆ ಅದೊಂದು ಬೋಳು ಪದ್ಯವಾಗಿ ತೋರುವುದು; ದ್ವಿತೀಯಾಕ್ಷರ ಪ್ರಾಸವಿದೆಯೆಂದು ನಾವು ಬಾಯಿಬಿಚ್ಚಿ ಪದಗಳನ್ನು ಚಿಚ್ಚಿ ತೋರಿಸಬೇಕಾಗುವದು. ಉದಾಹರಣೆಗಾಗಿ 'ಶ್ರೀವಧುವಿನಂಬಕ' ಎಂಬ ಮೊದಲ ಪದ್ಯವನ್ನೇ ತೆಗೆದುಕೊಳ್ಳೋಣ! ಇಲ್ಲಿ ವಕಾರ ಪ್ರಾಸವು ಕವಿತೆಯ ಮೈಯಲ್ಲಿ ಹುದುಗಿ ಹೋಗುವುದು.

**(೨) ಯತಿ:**— ಸಂಸ್ಕೃತಕಾವ್ಯಗಳ ಸಮಾನಸ್ಕಂಧತೆಯನ್ನು ಪಡೆಯಲು ಜೈನ ಕವಿಗಳು ಹವಣಿಸಿ, ತಮ್ಮ ಕವಿತೆಗಳಲ್ಲಿ ಅವರ ವೃತ್ತಗಳನ್ನು ಸ್ವೀಕರಿಸಿಯೂ ಅವರ ಯತಿಯನ್ನು ಬಿಟ್ಟು, ನಮ್ಮ ದ್ವಿತೀಯಾಕ್ಷರ ಪ್ರಾಸದ ಮುದ್ರೆಯನ್ನೊತ್ತಿಯೂ ನಮ್ಮ ಯತಿಯನ್ನೂ ಬಿಟ್ಟು, ಯತಿವಿಲಂಘನದ ಅರಿದಾದ ಮಾರ್ಗವನ್ನು ಅವಲಂಬಿಸಿದರು. ಪುರಾಣ ಕಾವ್ಯಗಳಿಗೂ ಆಖ್ಯಾನ (Narrative) ಗಳಿಗೂ ಇದು ಬೇಕೇ ಆಗಿತ್ತು. ಅಂತೆಯೆ ಷಟ್ಪದಿಕಾರರೂ ಅದನ್ನು ಸ್ವೀಕರಿಸಿದರು. ಹೀಗಿದ್ದೂ ಲಕ್ಷ್ಮೀಶನು ತನ್ನ ಕಾವ್ಯದಲ್ಲಿ ಯತಿಗೆ ಭಂಗಬಂದಿಲ್ಲವೆಂದು ಪ್ರತಿಜ್ಞೆಯಿಂದ ಹೇಳುವನು, ಮತ್ತು ಆ ಯತಿಗೆ ವರಯತಿಯೆಂದು ಕರೆಯುವನು. ಈ ವರಯತಿ ಯಾವುದು ? ವೃತ್ತಗಳೊಳಗಿನ ಯತಿಯು ತ್ರಿಕಾಲ ನಿಯ



CC-0. Jangamwadi Math Collection. Digitized by eGangotri

ನಿಯತವು. ಶಾರ್ದೂಲ ವಿಕ್ರೀಡಿತದಲ್ಲಿ ೧೯ ಅಕ್ಷರಗಳು. ೧೨ನೆಯ ಅಕ್ಷರದ ಕೊನೆಗೂ ಚರಣದ ಕೊನೆಗೂ ಯತಿಯಿದೆ. ಸಂಸ್ಕೃತದೊಳಗಿನ ಸಾವಿರ ಶಾರ್ದೂಲ ವಿಕ್ರೀಡಿತಗಳನ್ನು ನೋಡಿದರೂ ಒಂದೇ ಹಾಡು. ಶಾರ್ದೂಲವಾದರೇನು ಹರಿಣೀಯಾದರೇನು ಯತಿ ನಿಯಮುಸವು ಅವರಿಗೆ ಸದ್ಭಾಕಾಲವೂ ಇದೆ. ಕನ್ನಡದಲ್ಲಿ ಹಾಗಲ್ಲ. ಪಂಪನ, ನೇಮಿಚಂದ್ರನ,ಹೊನ್ನನ ಮತ್ತೇಭ ಶಾರ್ದೂಲ ವಿಕ್ರೀಡಿತಗಳು ಮತ್ತೇಭ-ಶಾರ್ದೂಲವಿಕ್ರೀಡಿತಗಳೇ ಆಗಿವೆ. ಸ್ವರಚಿತ ಬಂಧನವಲ್ಲದೆ ನಿಯತಬಂಧನವಿಲ್ಲ ಅವುಗಳಿಗೆ. ಉದಾಹರಣೆಗಾಗಿ ನೇಮಿಚಂದ್ರನ ಅರ್ಧನೇಮಿ ಪುರಾಣದೊಳಗಿನ ತ್ರಿವಿಕ್ರಮನ ಲೀಲೆಯ ವರ್ಣನೆಯನ್ನು ಓದಿಓದಿ ನೋಡಬೇಕು. ಕನ್ನಡದೊಳಗಿನ ಯತಿಯು ಅರ್ಥಯತಿಯು; ಅದೇ ವರಯತಿಯು. ಸಂಸ್ಕೃತವೃತ್ತಗಳಲ್ಲಿ ಯತಿಸ್ಥಾನಗಳಲ್ಲಿ ಪದಪೂರ್ಣತೆಯಿದೆ, ಅರ್ಥಪೂರ್ಣತೆಯಿಲ್ಲ. ಅರ್ಥವು ಒಂದು ಬಗೆಯಾಗಿ ಪೂರ್ಣವಾಗುವಲ್ಲಿಯೇ ನಿಲ್ಲುವುದು ಗಮಕಿಯ ಕಾರ್ಯ, ಅದೇ ವರಯತಿ. ರಾಜಶೇಖರನೂ **'ಅರ್ಥವಶೇನಚ ವಿರತಿಃ ಸರ್ವಸ್ವಮಿದಂ ಹಿಪಾಠಸ್ಯ'** ಗಮಕದ ಸರ್ವಸ್ವದಲ್ಲಿ ಅರ್ಥವಶವಾದ ವಿರಾಮಕ್ಕೆ ಅಂದರೆ ವರಯತಿಗೆ ಮಹತ್ವದ ಸ್ಥಾನವಿದೆ. ಇದರಲ್ಲಿ ಅಂಥದೇನು ಜಾಣತನವಿದೆ? ಎಂದು ಯಾರೂ ಚಟ್ಟನೆ ಎಂದುಬಿಡಬಹುದು. ಅದು ಸುಲಭ. ಆದರೆ ಕಾಲಿದಾಸನ ಮೇಘದೂತದೊಳಗಿನ ಮೊದಲನೆಯ ಪದ್ಯವನ್ನೂ ಜೈಮಿನಿಯೊಳಗಿನ ಮೊದಲನೆಯ ಪದ್ಯವನ್ನೂ ಅರ್ಥಯತಿಯ ದೃಷ್ಟಿಯಿಂದ ತೂಗಿನೋಡಿದರೆ, ಲಕ್ಷ್ಮೀಶನ ಸರಸತೆಯು ಕಂಡುಬರುವುದು. ಅದೇಕೆ? ಅದು ಕನ್ನಡ ಕವಿತೆಯ ಮನೆತನದ ಸೊತ್ತಾಗಿದೆ. 'ನಿಜಾನ್ವಯಕ್ರಿಯೆಗಳ್ಗೆ ದೂಷಣಂ ಬಾರದಂತೆ' ಬರೆಯುವ ಕವಿಗಳು 'ವರಯತಿಗೆ ಭಂಗ' ವನ್ನು ತರುವರೆಂತು? ಕಾಲಿದಾಸನ "ಕಶ್ಚಿತ್‌ಕಾಂತಾ" ಪದ್ಯದೊಳಗಿನ "ವರ್ಷಭೋಗ್ಯೇಣ ಭರ್ತುಃ"ಎಂಬೀ ಮಾತು ಅನ್ವಯವು ವ್ಯತಿರೇಕಿಸಿದ್ದರಿಂದ ತ್ರಿಶಂಕುಸ್ವರ್ಗದಲ್ಲಿ ತೂಗಾಡುತ್ತಿದೆ. ಅರ್ಥಯತಿಯ ಮಾರ್ಗವನ್ನು ಹಿಡಿದದ್ದರಿಂದ ಕನ್ನಡಕವಿಯ ಕಟ್ಟಡವು, ಸಾವಿರಾರು ಗುಡಿಗೋಪುರಗಳನ್ನು ಕಟ್ಟಿ ಕಟ್ಟಿಸಿದವರ ನಾಡಿಗೆ ಭೂಷಣಪ್ರಾಯವಾಗುವಂತೆ ಅಚ್ಚುಕಟ್ಟಾಗಿದೆ.

ಕವಿತೆಯನ್ನು ಓದಿ ಓದಿದಷ್ಟು ಭಾಗವು [illegible] ಹೃದ್ಗತವಾಗಿ ಬಿಡುವುದು. ಈ ಅರ್ಥಯತಿಯು [illegible] ಲಕ್ಷ್ಮೀಶನ ಪದ್ಯಗಳ ನಾದಮೂರ್ತಿಗೆ ರೂಪವ[illegible]

(೩) **ತಾಳಾಲಯ:**—ಗಣಮಾತ್ರೆಗಳ [illegible] ವೃತ್ತಾಕಾರವು ಛಂದದ ಅಸ್ಥಿಪಂಜರವು. [illegible] ಛಂದಸ್ಸು ತಾಳಲಯದಲ್ಲಿದೆ. ಗಣಮಾತ್ರೆ[illegible] ದೇಹಯಷ್ಟಿ. ಛಂದವು ಸ್ವರವ್ಯಂಜನಗಳ ನಾ[illegible] ದ್ರುತ, ಮಧ್ಯ, ವಿಲಂಬಿತಗತಿಗಳ ಹೃದಯಂಗ[illegible] ಸಮನ್ವಯ. ಇದಕ್ಕೆ Rhythm ಎಂದು ಆಂಗ್ಲ[illegible] ಶಾಸ್ತ್ರದಲ್ಲಿ ಹೆಸರು. ಈ ನಾದ ನೃತ್ಯವು ಭಾ[illegible] ವಾಗಿರುವುದು. ಇದರ ಭಂಗಿಗಳ ಸೂಕ್ಷ್ಮ[illegible] ಕಂಡು ಬೆರಗುವಡುವದೆ ಹೊರ್ತು ಪೃಥಃಕ[illegible] ಭೂತಗಳನ್ನು ಕಂಡುಹಿಡಿಯಲಾಗುವುದಿಲ್ಲ. [illegible] thm, ಈ ನಾದ ನೃತ್ಯ, ಈ **ನುಡಿಗುಣಿತ** [illegible] ಅದ್ವಿತೀಯಪ್ರತಿಭೆಯ ಸೂಚಕವಾಗಿದೆ. [illegible] ವನ್ನು ನೋಡಬೇಕಾಗಿದ್ದರೆ ವಾರ್ಧಕಷಟ್ಪ[illegible] ಬರೆದ ಇನ್ನುಳಿದ ಕವಿಗಳ ಯಾವುದೇ ಒಂದು [illegible] ದೊಡನೆ ಲಕ್ಷ್ಮೀಶನ ಯಾವುದೂ ಒಂದು ಪ[illegible] ಹೋಲಿಸಿ ನೋಡಬಹುದು. ಆಗ ಲಕ್ಷ್ಮೀಶ[illegible] 'ಚತುರಪದಗತಿಯ' ಬಿನ್ನಾಣವು ತಿಳಿದು[illegible] ಕವಿಗೆ **ಕಿವಿ** ಬೇಕು. ಷಟ್ಪದಿಕಾರರಾದ ಅನೇ[illegible] ಗಳಲ್ಲಿ ಈ ಕಿವುಡುತನದ ಅನುಭವವು ಕಂಡುಬ[illegible] ಲಕ್ಷ್ಮೀಶನದು ಶ್ರುತಿಹಚ್ಚಿಟ್ಟ ಸಾರಸ್ವತವೀ[illegible] ಗದ್ಯವಾಗಿ ತೋರುವ ಮಾತುಗಳಲ್ಲಿಯೂ [illegible] ಯನ್ನು ಮಿಂಚಿಸಬಲ್ಲನು- ತನ್ನೀ ನಾದವೃ[illegible] ನುಡಿಗುಣಿತದಿಂದ.

> ಜ್ವಾಲೆ ಬಳಿಕನುಜನಂ ಬೈದು ಕೋಪದೊಳಾ[illegible]
> ನಾಲಯದೊಳಿರದೆ ಪೊರಮಟ್ಟು ನಡೆತರೆ ಮುಂ[illegible]
> ಲೀಲೆಮಿಗೆ ನಲಿದುಲಿದು ಸುಳಿದಿಳಿದು ಬೆಳೆದಳ[illegible]
> ಪೊಳೆದು[illegible]
>
> —ಜೈಮಿನಿ. [illegible]

ಮೂರನೆಯ ಸಾಲಿನ ಜೊತೆಗೆ ಮೊದಲೆರಡು ಸಾ[illegible] ನಿಸ್ತೇಜವಾಗಿ ತೋರುವವು. ಆದರೂ ಅವುಗ[illegible] ಪ್ರಾಣನಾಡಿಯ ಸ್ಪಂದನವಿದೆಯೆಂಬುದು [illegible] ನಾಲಗೆಗೆ ತಿಳಿಯುವುದು. ಎರಡನೆಯ ಸಾಲಿನ[illegible] ಗತಿಯನ್ನು ಸೂಚಿಸುವ ಹ್ರಸ್ವಾಕ್ಷರಗಳ [illegible]

CC-0. Jangamwadi Math Collection. Digitized by eGangotri

ಮೊದಲನೆಯದರಲ್ಲಿಯ ಗತಿಯು ನಡುನಡುವೆ ಬರುವ ದೀರ್ಘಾಕ್ಷರಗಳಿಂದ ವಿಲಂಬಿತವಾಗಿದೆ. ಮೂರನೆಯ ಸಾಲಿನಲ್ಲಿ ಸ್ಖಲನಾದಾನುಕರಣದಿಂದಲ್ಲ, ರೂಢ ಶಬ್ದಾರ್ಥಗಳಲ್ಲಿಯೇ ಪ್ರಕೃತಿಯ ಆ ಶಬ್ದಸಂಗೀತವನ್ನು ಹೊಳೆಯಿಸಿದ್ದಾನೆ ಲಕ್ಷ್ಮೀಶನು. ತಾಳಲಯದ ಸೊಬಗು ಲಘು ಗುರುಗಳ ಅನಂತ ಸಮ್ಮೇಳನದಲ್ಲಿರುವುದು. ಅದಕ್ಕೆ ನಿಯಮಗಳನ್ನು ಹಾಕಿಕೊಡುವುದು ಸಾಧ್ಯವಲ್ಲ. ಅಭ್ಯಾಸದಿಂದ ಅವುಗಳನ್ನು ತಿಳಿದುಕೊಳ್ಳುವುದು ಸಾಧ್ಯ. B. A. Greening Lamborn ಈತನು Golden Treasury ಗೆ 'Poetic values' ಎಂದು ಬರೆದ ಟಿಪ್ಪಣಿಗಳಂತೆ ಜೈಮಿನಿಗೆ ಬರೆಯುವುದವಶ್ಯವಾಗಿದೆ.

(೪) ಶಬ್ದಾಲಂಕಾರಗಳು:– ವರ್ಣಗಳಲ್ಲಿ ಸ್ವರಸಮೂಹವು ಭಾವಸೂಚಕವಾಗುವಂತೆ ನಾದವೇತ್ತನಾದ ಕವಿ ಗಮಕಿಯ ಕೈಯಲ್ಲಿ ವ್ಯಂಜನಗಳು ಅರ್ಥಸೂಚಕವಾಗುವವು. 'ಮಂಗಳಿಂ ಪೆಂಗಳಿಂ' 'ಕಳಗಳಿಂ ಗಳಗಳಿಂ' ಎಂದು ಗಳಗಳವಾಡುವುದು ಸುಲಭ. ಆದರೆ ಗಳಗಳವೇಕೆ ಗುಳುಗುಳು ಏಕಲ್ಲ?–ಎಂದರೆ ಉತ್ತರವಿಲ್ಲ. ಲಕ್ಷ್ಮೀಶನ ಮುಕ್ಕಾಲುಮೂರುಪಾಲು ಪದ್ಯಗಳನ್ನು ಒಳ್ಳೆಯ ಗಮಕಿಯು ಪರಭಾಷೆಯವರಿದಿರು ಹಾಡಿ ಅರೆಪಾಲು ಭಾವಾರ್ಥವನ್ನು ಸೂಚಿಸುವುದು ಸೋಜಿಗದ ಮಾತಲ್ಲ. ಸಾಧ್ಯವಾದಮಾತು. ಅದು ಏಕೆ ಎಂದರೆ ಲಕ್ಷ್ಮೀಶನು ನಾದಧ್ವನಿಮಾರ್ಗದವನು. ಅವನ ಪ್ರಾಸಾನುಪ್ರಾಸಗಳು ಅವನ ಭಾವಾರ್ಥದ ಭಂಡಾರವನ್ನು ತೆರೆಯುವ ಬೀಗದ ಕೈಗಳು. ಅವನ ಯಮಕಗಳು ಕವಿಹೃದಯದ ಗಮಕಗಳು. ಇದು ಪಾಮರರ ಕರ್ಣರಂಜನೆಯಿರಬಹುದು. ಆದರೆ ಪಂಡಿತರಿಗೂ ನೇತ್ರಾಂಜನವಾಗದೆ ಇಲ್ಲ. 'ಪ್ರಸ್ತುತದೊಳೊಗೆದ' (೧.೩) ಈ ಪದ್ಯದೊಳಗಿನ 'ಆ' ಕಾರವು ವಿನಾಯಕನ ಆಕಾರವನ್ನು ಸೂಚಿಸುವುದು. 'ಕೆಡೆದೊಡಲ ಸೀಳಿಂದೆ' (೫.೪೪) ಈ ಪದ್ಯದೊಳಗಿನ 'ತುಂಡದಿಂ, ತಂಡದಿಂ, ಮುಂಡದಿಂ, ಖಂಡದಿಂದೆ' ಮತ್ತು 'ಆರಣದ ಲೋರಣದ ಮಾರಣದ ಕಾರಣದ ಪೂರಣದೊಳು' ಇವು ಬೆಲೆವೆಣ್ಣಿನ ಯಮಕ ಒಯ್ಯಾರಗಳಲ್ಲ. ಯುದ್ಧದ ರಣರಣಕವನ್ನೂ ಛಿನ್ನಭಿನ್ನವಾಗಿ ಬಿದ್ದ ಅವಯವಗಳ ಚಿತ್ರವನ್ನೂ ಮನಶ್ಚಕ್ಷುವಿನಿದಿರು ಕೇವಲ ನಾದವ್ಯಂಜನೆಯಿಂದ ತಿಳಿಯಪಡಿಸುವ ಕೌಶಲವಿದು.

ಕೊರಗುತಿರ್ದುವು ಕೊಡೆ ವೃಕ್ಷಲತೆಗಳ್ಬಾಡಿ।
ಸೊರಗುತಿರ್ದುವು ಶೋಕಭಾರದಿಂ ಕಲ್ಗಳುಂ।
ಕರಗುತಿರ್ದುವು.... (೧೯–೩೨)

ಇದು ಅನುಪ್ರಾಸದ ತ್ರಾಸವಲ್ಲ, ತತ್ಕಾಲಕ್ಕೆ ಎಲ್ಲ ಕಡೆಗೂ ಒಂದೇರೀತಿಯಾಗಿ ಉಂಟಾದ ದುಃಖದ ಪ್ರಭಾವವನ್ನು ಸೂಚಿಸುವ ಗಮಕ. ಹೀಗೆಯೆ ಅನೇಕ ಉದಾಹರಣೆಗಳನ್ನು ಕೊಡಬಹುದು. ಆದರೆ ಈಗಲೇ ಈ ವಿಷಯವು ಲಂಬಿತವಾಯಿತು. 'ಅಕ್ಕರಕ್ಕರದ' ವಿಚಾರವೂ ಕೂಲಂಕಷವಾಗಿ ಆಗಬೇಕಾದರೆ ಮೊನ್ನೆ ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ವಿ. ದೇವುಡು ನರಸಿಂಹಶಾಸ್ತ್ರಿಗಳು ಬರೆದ ಬಗೆಯ ಸಾದ್ಯಂತವಾದ 'ಶಿಕ್ಷಾ' ವಿಚಾರದ ತಳಹದಿಬೇಕು. ಅದೂ ಆಗುತ್ತಲಿದೆ. ಕನ್ನಡವು ಕಣ್ತೆರೆದಿದೆ. ತನ್ನ ಕಾವ್ಯಶಾಸ್ತ್ರವನ್ನು ಏರ್ಪಡಿಸಿಕೊಳ್ಳಲು ಅದು ಸಮರ್ಥವಾಗಲು ಬಹಳ ದಿನಗಳು ಬೇಕಾಗಿಲ್ಲ. ಏಕಕರ್ನಾಟಕದ ತೀವ್ರಭಾವನೆಯು, ಬರುವ ಭಾಗ್ಯದ ಸಂಚಕಾರವಾಗಿದೆ. ಜಗತ್ತಿಗೆ ಕನ್ನಡ ಸವಿನುಡಿಯು ಏನು ಕಾಣಿಕೆಯನ್ನೀಯಲಿದೆಯೊ ಅಂದು ತಿಳಿಯುವುದು. ಅಲ್ಲಿಯವರೆಗೂ ಸಿಕ್ಕ ಅಳೆಗೋಲಿನಿಂದ ನಮ್ಮ ಸಾಹಿತ್ಯವನ್ನು ಸಿಕ್ಕಂತೆ ಅಳೆದು 'ಎಣ್ಣೆಗೆ ಬೆಣ್ಣೆ ಸಣ್ಣ' ಎಂದು ಕಿರಿದುಕುಳ್ಳ ಎಂದರೆ ಆ ಮಾತಿಗೆ ನೆಲೆಯಿಲ್ಲ ಬೆಲೆಯಿಲ್ಲ.

CC-0. Jangamwadi Math Collection. Digitized by eGangotri

# ಬಡತನ

ಜಿ. ಪಿ. ರಾಜರತ್ನಂ M. A. ಮೈಸೂರು.

೧

ಬಡವರಾವು ! ಬಡವರಾವು !
ಬಡವರಲ್ಲ – ಧನಿಕರಾವು !
ನಮ್ಮ ಧನಂ
ಬಡತನಂ !
ಗುಂಡು ಗುಂಡು ಗುಂಡು ಗುಂಡು
ಸೊನ್ನೆಗಳಿಂದಿಡಿದ ಧನಂ–
ನಮ್ಮ ಧನಂ
ಬಡತನಂ !

ಮೇರುವಿನಿಂ ಮೇರುವರಂ
ಇಡೀ ವಿಶ್ವದಗಲದೊಳಂ
ಹಂಚಲಿಹುದು ನಮ್ಮ ಧನಂ !
ನಮ್ಮ ಧನಂ
ಬಡತನಂ !

ಧನಿಕನಿಟ್ಟ ಕಟ್ಟಿನಲ್ಲಿ
ಹೊರಕೆ ಹೊರಡದೊಂದು ಕಾಸು !
ಕೈಯನೆತ್ತಿ ಕೊಡುವರಾವು
ಕೊಳುವ ಗಂಡರೆಲ್ಲ ಬನ್ನಿ !
ಪಿಳ್ಳೆಯೊಂದಕಿಲ್ಲವೆನೆವು
ಬನ್ನಿ ! ಬನ್ನಿರೆಲ್ಲ ಬನ್ನಿ !

ಕಳ್ಳಕಾಕರೆತ್ತಲಾರ
ದೆತ್ತಲಮ್ಮದೆಮ್ಮ ಧನಂ !
ವೆಚ್ಚಮಾಡಲಷ್ಟಕಷ್ಟು
ಹೆಚ್ಚುತಿರುವ ನಮ್ಮ ಧನಂ !
ನಮ್ಮ ಧನಂ
ಬಡತನಂ !

ಬನ್ನಿ ! ಬನ್ನಿರೆಲ್ಲ ಬನ್ನಿ !
ಶೂನ್ಯದಿಂ
ಸೊನ್ನೆವರಂ
ಬೇಡಿದುದನು ಕೊಡುವರಾವು !
ನಮ್ಮ ಧನಂ
ಬಡತನಂ !
ಬನ್ನಿ ! ಬನ್ನಿರೆಲ್ಲ ಬನ್ನಿ !
ನಮ್ಮ ಧನಂ
ಬಡತನಂ

೨

ಹೊಂದಿರಲುದಾತ್ತಭಾವಂ
ಬಡತನವೆ ದುಷ್ಟದಾವಂ !
ಏನೆ ಬಂದರು ಬರಲಿ
ಏನೆ ಬಂದರು ಬರಲಿ
ಬೇಡವೀ ಬಡತನದ ಬೇಗೆ !
ದಾರಿಯಾವುದೊ ಇದನು ನೀಗೆ !

ಬಡತನಮುದಡಸಿರಲ್ಕೆ
ಹಿರಿತನಮುದಾತ್ತನಕ್ಕೆ !
ಮನಸು ನುಡಿ ನಡೆಗಳೊಳು
ಸ್ವಾತಂತ್ರ್ಯವುಡುಗಿರಲು
ಬೇಡವೀ ಬಡತನದ ಬೇಗೆ !
ದಾರಿಯಾವುದೊ ಇದನು ನೀಗೆ !

ಬಡತನವು ಹುಲಿಯ ದಾಡೆ !
ಬಡತನವು ಹಿರಿಯ ಪೀಡೆ !
ಬಡತನಕೆ ಸರಿಪಿಗಿಲು
ಇಲ್ಲ – ಹಗಲೇ ಹಗಲು !
ಘೋರವೀ ಬಡತನದ ಬೇಗೆ !
ಸಾವೊಂದೆ ದಾರಿಯಿದ ನೀಗೆ !

CC-0. Jangamwadi Math Collection. Digitized by eGangotri

# ನರ್ಮದಾ ನದಿ

ಶ್ರೀ. ಆರ್. ವ್ಯಾಸರಾವ್, ಬಿ. ಎ. ಬೆಂಗಳೂರು

ಭಾರತವರ್ಷದಲ್ಲಿ ಪುಣ್ಯಪ್ರದವೂ ಪುರಾಣಪ್ರಸಿದ್ಧವೂ ಆದ ನದಿಗಳಲ್ಲಿ ಮೊದಲನೆಯದು ಗಂಗಾ, ಎರಡನೆಯದು ನರ್ಮದಾ. ನರ್ಮದೆಯ ಉತ್ತರಕ್ಕೆ ಆರ್ಯಾವರ್ತ; ದಕ್ಷಿಣಕ್ಕೆ ದಕ್ಷಿಣದೇಶ ( ದಖ್ಖನ ); ಇದರ ಎಡದ ದಡ ಗೊಂಡವನ; ಬಲದ ದಡ ಪೂಜ್ಯವಾದ ವಿಂಧ್ಯಗಿರಿ. ಇದನ್ನು ಕುಣಿಯುವ ತರುಣಿ–ರೇವಾ, ಚಾಟುತನದ ಚತುರೆ – ನರ್ಮದಾ, ಚಂದ್ರುನತನಯೆ, ಮೈಕಲನ ಮಗಳು ಮುಂತಾಗಿ ಕರೆಯುತ್ತಾರೆ.

ಈ ನದಿಯ ಸೊಬಗನ್ನೂ, ಜನಗಳ ಮನಸ್ಸಿನಲ್ಲಿ ಇದು ಪಡೆದಿರುವ ಸ್ಥಾನವನ್ನೂ, ಸರಿಯಾಗಿ ತಿಳಿಯಬೇಕಾದರೆ ಹಿಂದುಸ್ತಾನದ ಮುಖ್ಯವಿಭಾಗಗಳ ತಾರತಮ್ಯಜ್ಞಾನವು ಆವಶ್ಯಕ. ಸ್ವಭಾವವಾಗಿ ಹಿಂದುಸ್ತಾನವು ಮೂರುವಿಭಾಗವಾಗಿರುತ್ತದೆ:— ಹಿಮಾಚಲ, ಗಂಗಾಸಿಂಧುಗಳ ಬೈಲು, ಮತ್ತು ದಕ್ಷಿಣದೇಶ.

**ಹಿಮಾಚಲ:**– ಭೂಮಿಯಲ್ಲಿ ಅತ್ಯಂತ ಎತ್ತರವಾಗಿ ತನ್ನ ತಳಭಾಗದಲ್ಲಿ ಉಷ್ಣವಲಯದ, ಪಾದಶ್ರೇಣಿಗಳ ಮೇಲೆ ಸಮಶೀತೋಷ್ಣವಲಯದ, ಮತ್ತು ಮಧ್ಯ ಶ್ರೇಣಿಗಳ ನೆತ್ತಿಗಳಲ್ಲಿ ಶೀತವಲಯದ ಗುಣಗಳನ್ನು ತೋರಿ ನಾಗರಿಕರು, ಆರ್ಯರು, ಪಾರ್ವತೇಯರು, ಲೆಪ್ಚಾರು ಕಾಡುಜನಗಳು, ಮಂಗೋಲರು, ಭೂತಿಯರು ಎಂಬ ಬೇರೆ ಬೇರೆ ಜನರಿಗೆ ಆಶ್ರಯ ಕೊಟ್ಟು, ಅನೇಕಬಗೆಯ ಕಾಡುಮೂಲಿಕೆಗಳೂ, ಫಲವೃಕ್ಷಗಳೂ, ವಿಧವಿಧವಾದ ಮೃಗಜಂತುಗಳೂ ಉಳ್ಳದಾಗಿ, ತೇಜಸ್ಸನ್ನು ಹುರಿಗಟ್ಟುವ ಚೊಕ್ಕಟವಾದ ಹವೆ, ನೀರುಗಳಿಗೆ, ಆಕರವಾಗಿ, ಕ್ಷಣಕ್ಷಣಕ್ಕೂ ಮಾರ್ಪಾಡು ಹೊಂದುತ್ತಿರುವ ಅದ್ಭುತಮನೋಹರ ದೃಶ್ಯಗಳನ್ನು ಬೀರುವ ಹಿಮ, ಬೆಳಕು, ಕತ್ತಲೆಗಳನ್ನುಳ್ಳದಾಗಿ ಉತ್ತರದಿಕ್ಕನ್ನು ಕಾಪಾಡುತ್ತಾ ನಿಂತಿರುವುದು ಈ ಹಿಮಾಚಲ ಪ್ರಾಂತ್ಯವು.

**ಗಂಗಾಸಿಂಧುಗಳ ಬೈಲು:**— ಅತ್ಯಂತ ಎತ್ತರವೂ ವಿಶಾಲವೂ ಆದ ಪರ್ವತಶ್ರೇಣಿಗಳು ಕರಗಲರಿಯದ ಮಂಜಿನ ಹೊದಿಕೆಯಿಂದ ವಿಶಾಲತರವೂ ಉನ್ನತತರವೂ ಆಗಿರಲು, ಇವುಗಳಲ್ಲಿ ಹುಟ್ಟುವ ಮಹಾನದಿಗಳು ಲೋಕಾತಿಶಯವೆನಿಸುವುದರಲ್ಲಿ ಏನು ಆಶ್ಚರ್ಯ! ಸಿಂಧು ಗಂಗಾ ನದಿಗಳು ಈ ಮಹಾಶ್ರೇಣಿಗಳ ಉತ್ತರ ದಕ್ಷಿಣ ಭಾಗಗಳ ಐಶ್ವರ್ಯವನ್ನು ಹೊತ್ತುಕೊಂಡು ದಕ್ಷಿಣಕ್ಕೆ ಹರಿದು ಹಿಂದುಸ್ತಾನದ ಸಾರವತ್ತಾದ ಗಂಗಾಸಿಂಧುಮೈದಾನವನ್ನು ತಯಾರಿಸಿ ಅನವರತವೂ ಅದನ್ನು ಮಂಗಳಕರವಾಗಿ ಮಾಡುವುವು. ಈ ಕಲ್ಯಾಣ ದೇಶವನ್ನು ನೋಡಿ ಅಸೂಯೆಪಡದ ಜನಾಂಗವೆ ಈ ಪ್ರಪಂಚದಲ್ಲಿ ವಿರಳ. ಇಲ್ಲಿಯ ಈ ನದಿಗಳು ತಮ್ಮಷ್ಟೆ ಸರಿಸಮನಾದ ದೊಡ್ಡವಾದ ಉಪನದಿಗಳನ್ನು ಒಳಕೊಂಡು ವಿಶಾಲವಾಗಿ, ವಿಶೇಷವಾಗಿ ಸಮಭೂಮಿಯಲ್ಲಿ ಹರಿದು, ವ್ಯವಸಾಯಕ್ಕೆ ಸಹಕಾರಿಗಳಾಗಿ ವಿಸ್ತಾರವಾದ ಪ್ರದೇಶಗಳನ್ನು ಫಲವತ್ತಾಗಿ ಮಾಡಿಯೂ, ಮಾಡುತ್ತಲೂ ಇವೆ.

ಹಿಮಾಲಯದ ನಾಗಗಳು ( ಉಪಶ್ರೇಣಿಗಳಿಗೆ ಹಿಮಾಲಯದಲ್ಲಿ ಈ ಹೆಸರು ) ಈ ಬೈಲಿನಿಂದ ಉತ್ತರಕ್ಕೆ ಕಡಿದಾಗಿ ಏರಿಹೋಗಿವೆ. ಬೈಲುಪ್ರದೇಶವು ಸುಮಾರು ೫೦೦–೬೦೦ ಅಡಿಗಳು ಸಮುದ್ರದ ಮಟ್ಟಕ್ಕಿಂತ ಎತ್ತರವಾಗಿರುತ್ತದೆ. ಈ ಬೈಲಿನ ಉತ್ತರಕ್ಕೆ ಶಿವಾಲಿಕವೆಂಬ ಪಾದಶ್ರೇಣಿಯು ೨೦೦೦ ದಿಂದ ೩೫೦೦ ಅಡಿಗಳಷ್ಟು ಎತ್ತರವಿರುವುದು. ಹಿಮಾಲಯದ ನಾಗಗಳು ೭೦೦೦–೮೦೦೦ ಅಡಿಗಳಷ್ಟು ಎತ್ತರವಾಗಿ ನಿಂತಿರುವುವು. ಇಲ್ಲಿಂದ ಮೇಲಕ್ಕೆ ಏರುತ್ತ ಏರುತ್ತ ಸಾಲಿನಮೇಲೆ ಸಾಲಾಗಿ ಮಧ್ಯಶ್ರೇಣಿಗಳು ೨೦,೦೦೦ ದಿಂದ ೨೫,೦೦೦ ಅಡಿಗಳವರೆಗೆ ಎದ್ದು ಯಾವಾಗಲೂ ಕರಗದ ಮಂಜಿನ ಹೊದಿಕೆಗಳಿಂದ ಆವೃತವಾಗಿರುವುವು. ಇಲ್ಲಿನ ಕಲ್ಲುಗಳು


CC-0. Jangamwadi Math Collection. Digitized by eGangotri

'ಪಾರ್ವತ್ಯ ಸೃಜನ ಸತ್ವಕ್ಕೆ' ಸಿಕ್ಕಿ ಮೇಲಕ್ಕೆ ಎತ್ತ ಲ್ಪಟ್ಟು ತಮ್ಮ ಅಡ್ಡಲು ಮೈಯನ್ನು ತೋರುವುವು. ಆದುದರಿಂದ ಇವು ಕಡಿದಾಗಿ ಭೂಮಿಯೊಳಕ್ಕೆ ಹೋಗಿ ನಿಲುಗಲ್ಲುಗಳೆಂದು ಮನಸ್ಸಿಗೆ ಹೊಳೆಯುವುವು.

**ದಕ್ಷಿಣದೇಶ:**– ಅತಿ ಸೌಖ್ಯದಿಂದ ಸಡಿಲವಾಗಬಾರ ದೆಂದೆ, ಕಷ್ಟದಿಂದ ಜೀವಿಸಬೇಕಾದ ಕಾಡು ಮೇಡು ದಿಣ್ಣೆ ತಿಟ್ಟುಗಳಿಂದ ಕೂಡಿದ ದಕ್ಷಿಣದೇಶವನ್ನು ವ್ಯಾಯಾಮಕ್ಕೆಂತಲೆ ಹಿಂದುಸ್ತಾನಕ್ಕೆ ದೈವಸೃಷ್ಟಿಯು ಬೆರೆಯಿಸಿರಬೇಕು. ಈ ಭಾಗದಲ್ಲಿ ಸಪಾಟನೆಲ ಗದ್ದೆ ಬೈಲು ಗಳು ಕಡಿಮೆ. ಕಾಡುದಿಣ್ಣೆಗಳೆ ಹೆಚ್ಚು.

ಗಂಗಾಸಿಂಧುಗಳ ಬೈಲಿನಿಂದ ದಕ್ಷಿಣಕ್ಕೆ ನೆಲವು ಮೆಲ್ಲನೆ ವಿಸ್ತಾರವಾದ ಮೈದಾನವಾಗಿ ಹಬ್ಬುವುದು. ಬೆಟ್ಟತಿಟ್ಟುಗಳು ಇದ್ದರೂ ಬಹಳ ಎತ್ತರದವಲ್ಲ. ಇವನ್ನು ದಾಟಿಬರಲು ವಿಂಧ್ಯಾಚಲದ ಮೇಲುಭಾಗವನ್ನು ಸೇರುವೆವು. ಇಲ್ಲಿನ ಕಲ್ಲುಗಳು ವಿಶೇಷವಾಗಿ ಹಾಸು ಗಲ್ಲುಗಳಾಗಿ ಬಹಳವಾದ ಬದಲಾವಣೆಗೆ ಸಿಕ್ಕದೆ ತಮ್ಮ ಮೇಲ್ಮೆಯನ್ನೇ ತೋರುವುದರಿಂದ ವಿಂಧ್ಯ ಅಗಸ್ತ್ಯೋ ಪಾಖ್ಯಾನವು ಹುಟ್ಟಿರಬೇಕು. ವಿಂಧ್ಯವು ಉತ್ತರ ದಿಂದ ನೋಡಿದರೆ ದೊಡ್ಡ ಪರ್ವತಶ್ರೇಣಿಯೆಂದೇ ತಿಳಿಯುವುದಿಲ್ಲ. ಈ ವಿಂಧ್ಯಾಚಲದ ಮೈದಾನದ ಪಶ್ಚಿಮಕ್ಕೆ ಮಾಳವ ಎಂದೂ, ಪೂರ್ವಕ್ಕೆ ಭಗೇಲಖಂಡ ವೆಂದೂ ಕರೆಯುತ್ತಾರೆ. ಸಿಪ್ರಾ, ಕಾಳಿ, ಸಿಂಧು, ಪಾರ್ವತೀ ಎಂಬ ಉಪನದಿಗಳಿಂದ ಕೂಡಿದ **ಚರ್ಮಣ್ವತೀ** (ಚಾಂಬಲ) ನದಿಯ ಪ್ರದೇಶಕ್ಕೆ **ಅವಂತಿ** ಎಂದೂ, ದಶಾನ ವಿಮಾಸಾ ಉಪನದಿಗಳಿಂದ ಕೂಡಿದ **ವೇತ್ರಾವತೀ** (ಬೆಟ್ವಾ) ನದಿಯ ಪ್ರದೇಶಕ್ಕೆ ದಶಾರ್ಣ ಅಥವಾ "**ವಿದಿಶಾ**" ಎಂದೂ ಕರೆಯುತ್ತಿದ್ದರು. ಕೇಣ ಮತ್ತು ತಮಸಾನದಿಗಳ ತಪ್ಪಲುಗಳು ಇನ್ನೂ ಪೂರ್ವಕ್ಕೆ ಇರುವುವು. ತಮಸಾನದಿಯದಡದಲ್ಲಿ ಪ್ರಖ್ಯಾತಕವಿ ವಾಲ್ಮೀಕರ ಆಶ್ರಮವಿತ್ತೆಂಬುದು ಎಲ್ಲರಿಗೂ ತಿಳಿದ ವಿಷಯ. ಈಗ ಮಾಳವದಲ್ಲಿ ಇಂದೂರು, ಧಾರಾ, ದೇವಾಸ, ಗ್ವಾಲಿಯರಿಗೆ ಸೇರಿದ ಉಜ್ಜಯಿನಿಯ ವಿಭಾಗ, ಭೂಪಾಲ ರಾಜ್ಯಗಳೂ, ದಶಾರ್ಣದಲ್ಲಿ ಭಗೇಲಖಂಡದ ಸಂಸ್ಥಾನಗಳು, ಮಧ್ಯ ಪ್ರಾಂತಕ್ಕೆ ಸೇರಿದ ಸಾಗರ, ದಾವೊ, ಮತ್ತು ಜಬ್ಬಲ ಪುರ ಜಿಲ್ಲೆಗಳೂ ಇರುವುವು ಎನ್ನಬಹುದು. [illegible] ತಿಟ್ಟಿನ ರೂಪವನ್ನು ಮೊಟ್ಟಮೊದಲು [illegible] ಗೋಧ್ರಾ ಪಟ್ಟಣಗಳ ಪೂರ್ವಭಾಗದಲ್ಲಿ ಸುಮಾ[illegible] ಮೈಲು ದೂರದಲ್ಲಿ ಪಡೆದು ಸೇರವಾಗಿ [illegible] ಹಬ್ಬುವುದು. ಇದನ್ನು ಆರವಳಿಪರ್ವತಗಳ [illegible] ಮಾಹೀನದಿಯ ವಿಸ್ತಾರವಾದ ಬೈಲು ಬೇರ್ಪ[illegible] ಪಶ್ಚಿಮಸಮುದ್ರದಿಂದ ಹಿಂದುಸ್ತಾನಕ್ಕೆ [illegible] ಈ ಮಾಹೀನದಿಯ ಪಥವೇ ಸುಗಮವು, [illegible] ಯಿಂದಲೆ ಈಗ ಅಹಮದಾಬಾದು ಮತ್ತು [illegible] ನಗರಗಳಿಂದ "ಬ್ರಾಡ್‌ಗೇಜು" ರೈಲು ರಸ್ತೆ[illegible] ಲಿಗೆ ಹೊರಟಿದೆ. ಪಂಚಮಹಲು ([illegible] ಜಿಲ್ಲೆಯ ದಕ್ಷಿಣ ಭಾಗದಲ್ಲಿ ಮೊದಲು ತಿಟ್ಟಾ[illegible] ಕೊಂಡ ವಿಂಧ್ಯೆಯು ಹಿಂದುಸ್ತಾನಕ್ಕೆ ಅಡ್ಡಲಾ[illegible] ಪುರದ ಜಿಲ್ಲೆಯವರೆಗೂ (ಸುಮಾರು ೬೦[illegible] ಗಳು) ಹೋಗಿ ಅಲ್ಲಿ ಈಶಾನ್ಯದಿಕ್ಕಿಗೆ ಬಂದು [illegible] ವನ್ನು ಚಾಚುತ್ತದೆ. ಈ ಬಾಹುವು ಕೈಮೂ[illegible] ಎಂಬ ಹೆಸರನ್ನು ಪಡೆದು ಬಿಹಾರ ಪ್ರಾಂತದಲ್ಲಿ [illegible] ಸ್ಥಡ (ರೋಹಿತಾಶ್ವಗೃಹ) ದ ವರೆಗೂ ([illegible] ೪೦೦ ಮೈಲುಗಳು) ಹಬ್ಬಿ ಶೋಣಭದ್ರಾ[illegible] ತೀರದಲ್ಲಿ ಅಡಗಿರುತ್ತದೆ. ಇನ್ನೊಂದು [illegible] ಪೂರ್ವಕ್ಕೆ ಹೋಗಿ ಮೈಕಲವೆಂಬ ಉತ್ತರ ದಕ್ಷಿ[illegible] ಹಬ್ಬಿರುವ ಸಾಲಿನ ಮೂಲಕ ಸಾತಪುಡ ಬೆಟ್ಟ[illegible] ಯೊಂದಿಗೆ ಬೆರೆಯುತ್ತದೆ. ಈ ಸಾತಪುಡ ಬೆಟ್ಟ[illegible] ವಿಂಧ್ಯೆಯ ಎದುರಾಗಿ ಅದರ ಉದ್ದಕ್ಕೂ ಹಬ್ಬಿ[illegible]

**ನರ್ಮದೆಯು** ಮೈಕಲದ ಉಚ್ಚ ಶಿಖರವಾ[illegible] ಕಾಂತ (ಅಮರ ಕಂಟಕ) ದಲ್ಲಿ ಹುಟ್ಟುತ್ತದೆ. ಉದ್ಭವಿಸುವ ಕಡೆಗೆ ದೊಡ್ಡ ಊಟೆಯೊಂದು ಇ[illegible] ಈ ಊಟೆಯ ನಾಲ್ಕೂ ಪಕ್ಕಗಳಿಗೆ ಸೋಪಾ[illegible] ಕಟ್ಟಿ ಕೊಳದಂತೆ ಮಾಡಿ, ಆ ಕೊಳದ ಮಧ್ಯದಲ್ಲಿ ಇರುವ ಸ್ಥಳದ ಮೇಲೆ ಗೋಪುರದಿಂದ ಅಲಂಕೃ[illegible] ಮಂಟಪವನ್ನು ಮಧ್ಯಪ್ರಾಂತದ (ನಾಗಪುರ[illegible] ರಾಜರಾಗಿದ್ದ ಭೋಸ್ಲೆಯವರು ಕಟ್ಟಿಸಿರುತ್ತಾ[illegible] ರಿಂದ ಊಟೆಯು ಯಾವಾಗಲೂ ಚೊಕ್ಕಟ[illegible] ಯಾತ್ರಿಕರ ಗದ್ದಲದಿಂದ ಕಶ್ಮಲವಾಗದೆ ಇ[illegible] ಕೊಳವು ಅಮರಕಾಂತೇಶ್ವರ ಮತ್ತು [illegible]

CC-0. Jangamwadi Math Collection. Digitized by eGangotri

ಮಂದಿರಗಳಿಂದ ಅಲಂಕೃತವಾಗಿ ರಮಣೀಯವಾದ ತೀರ್ಥವಾಗಿರುವುದು. ಇದಕ್ಕೆ ಸ್ವಲ್ಪದೂರದಲ್ಲಿ "ಕಬೀರ ಚೌಥ್ರ" ಎಂಬ ಪ್ರಖ್ಯಾತ ಮತಸ್ಥಾಪನಾಚಾರ್ಯರ ಬೃಂದಾವನವು ಇರುತ್ತದೆ. ಅಮರಕಾಂತ ಕ್ಷೇತ್ರವು ಮೊದಲು ಮಧ್ಯದೇಶಕ್ಕೆ ಸೇರಿತ್ತು. ಮರಾಠೆಯವರ



ಅಮರಕಂಟಕ

ಮೇಲೆ ಯುದ್ಧದಲ್ಲಿ ಸಹಾಯ ಮಾಡಿದ್ದಕ್ಕಾಗಿ ಈ ಕ್ಷೇತ್ರವನ್ನು ಕುಂಪಣಿಯವರಿಂದ ಬಹುಮಾನವಾಗಿ ರೇವಾ ಸಂಸ್ಥಾನದ (ಬುಂದೇಲಖಂಡದ) ರಾಜರು ಪಡೆದರು.

ಈ ನದಿಯು ಇಲ್ಲಿಂದ ಹೊರಟು ಮಂಡಳ ಜಿಲ್ಲೆಯಲ್ಲಿ ಹರಿದು ಮಂಡಳ ಪಟ್ಟಣದ ಹತ್ತಿರ ಸಹಸ್ರಧಾರೆಯೆನಿಸಿಕೊಂಡು ಜಬ್ಬಲಪುರದ ಹತ್ತಿರ (೮ ಮೈಲಿ ದೂರ) ವಿರುವ ತ್ರಿವಾರ (ತ್ರಿಪುರ) ವೆಂಬ ಕಡೆಗೆ ಬಹುಸುಂದರವಾಗಿ ವಿಶಾಲವಾದ ಜಲಪಾತದಲ್ಲಿ ಕುಣಿಕುಣಿದು ಮೂವತ್ತು ಅಡಿಗಳ ಕೆಳಕ್ಕೆ ಧುಮ್ಮಿಕ್ಕಿ ಧೂಮಧಾರೆಯೆನಿಸಿಕೊಂಡು ಚಂದ್ರಕಾಂತಶಿಲೆಗಳ ಓಣಿಯಲ್ಲಿ ಹರಿಯುತ್ತಿದೆ. ಬಿಳಿಯ ಮರ್ಮರಶಿಲೆಗಳ ಗುಡ್ಡಗಳ ನಡುವೆ ಇಕ್ಕಟ್ಟಿನ ಕಾಲುವೆಯಲ್ಲಿ ಆಳವಾದ ನೀರು ವೇಗವಾಗಿ ಹರಿಯುವ ಆ ಸೊಬಗು ನೋಟಕರ ಮನಸ್ಸನ್ನು ಮೋಹಿಸುತ್ತದೆ. ಪ್ರಕೃತಿಯ ಈ ಸೌಂದರ್ಯವನ್ನು ನೋಡಲು ಪ್ರಪಂಚದ ಎಲ್ಲಾ ಕಡೆಗಳಿಂದಲೂ ಜನರು ಬರುತ್ತಾರೆ. ನಮ್ಮ ಪೂರ್ವಿಕರು ಇದನ್ನು ನೋಡಿ, ಚಂದ್ರಶಿಲೆಗಳಿಂದ ಹರಿದು ಬರುವಂತಿರುವುದರಿಂದ ಈ ನದಿಯನ್ನು ಚಂದ್ರನ ಮಗಳು, ಸೋಮೋದ್ಭವಳು, ಎಂದು ಕರೆದಿರಬೇಕು.

ಇಲ್ಲಿಂದ ಮಶ್ಚಿಮಕ್ಕೆ ಈ ನದಿಯು ವಿಂಧ್ಯ ಮತ್ತು ಸಾತಪುಡ ಪರ್ವತ ಶ್ರೇಣಿಗಳ ಮಧ್ಯದಲ್ಲಿ ಹರಿಯುತ್ತದೆ. ಈ ಎರಡು ಶ್ರೇಣಿಗಳ ಮಧ್ಯೆ ನೆತ್ತಿಯಿಂದ ನೆತ್ತಿಗೆ ಸುಮಾರು ಅರವತ್ತೈದು ಎಪ್ಪತ್ತು ಮೈಲುಗಳ ಅಂತರ ವಿರುತ್ತದೆ. ವಿಂಧ್ಯೆಯ ಉತ್ತರಕ್ಕೆ ಗಂಗಾನದಿಯ ಭೂಮಿ; ಸಾತಪುಡದ ದಕ್ಷಿಣಕ್ಕೆ ಗೋದಾವರಿಯ ಭೂಮಿ. ಆದುದರಿಂದ ನರ್ಮದೆಗೆ ದೊಡ್ಡವಾದ ಉಪನದಿಗಳೆ ಇಲ್ಲ. ತನ್ನ ಇಕ್ಕಡೆಯ ಪರ್ವತಶ್ರೇಣಿಗಳಿಂದ ಹರಿದುಬರುವ ನಿರ್ಝರಿಗಳೆಲ್ಲವೂ ಸಣ್ಣಸಣ್ಣವು. ಈ ಎರಡು ಶ್ರೇಣಿಗಳು ಬಹಳ ಹತ್ತಿರವಿದ್ದು ಒಂದೇ ಬಗೆಯಾಗಿ ಹಬ್ಬಿರುವುದರಿಂದ ಇದನ್ನು ಒಂದೇ ಶ್ರೇಣಿಯೆಂದೇ ಕರೆಯಬಹುದು. ಅಂದರೆ ನರ್ಮದೆಯು ಈ ಪರ್ವತದ ಗಿರಿನದಿಯೆನ್ನಬಹುದು.



ನರ್ಮದೆಯ ಜಲಪಾತ (ಜಬ್ಬಲ್‌ಪೂರ್)

ಇದನ್ನು ಜ್ಞಾಪಿಸಲೆಂದೆ ಇದಕ್ಕೆ ರೇವಾ, (ಕುಣಿಯುವ ತರುಣಿ) ಮತ್ತು ನರ್ಮದಾ (ಕಲಕಲರವದ ಪರಿಹಾಸದಿಂದ ಮನಸ್ಸಿಗೆ ಇಂಪನ್ನು ಈಯುವ ನದಿ) ಎಂದು ಹೆಸರು ಇರುವುವು. ಇದು ಬೆಟ್ಟದ ಸಾಲನ್ನು ಪಾರಾಗಿ ಸಮಭೂಮಿಯಲ್ಲಿ ತನ್ನ ಒಟ್ಟು ೪೦೦ ಮೈಲು ಉದ್ದದಲ್ಲಿಯ ೬೦ ಮೈಲು ಮಾತ್ರ ಹರಿಯುತ್ತದೆ. ಇಲ್ಲಿಯವರಿಗೆ ಎಪ್ಪತ್ತು ಟನ್ ಭಾರ ಹೊರುವ ವಾಡೆಗಳು ಬರುವುವು. ಉಳಿದ ಭಾಗವು ಬೆಟ್ಟಗಳ ನಡುವೆ ಆಳವಾದ ಗುಂಡಿಯಲ್ಲಿ ಹರಿಯುವುದರಿಂದ ಅಣೆಕಟ್ಟು, ಕೆರೆ ಮುಂತಾದುವುಗಳನ್ನು ಸುಲಭವಾಗಿ ಕಟ್ಟಿ ವ್ಯವಸಾಯಕ್ಕೆ ಅನುಕೂಲಪಡಿಸಿಕೊಳ್ಳಲು ಆಗುವುದಿಲ್ಲ.

ವಿಂಧ್ಯ ಸಾತಪುಡಗಳಲ್ಲಿ ಸಾತಪುಡವೆ ೫೦೦ ರಿಂದ ೧೦೦೦ ಅಡಿಗಳಷ್ಟು ಹೆಚ್ಚು ಎತ್ತರವಾದ ಭೂಮಿಯನ್ನು

CC-0. Jangamwadi Math Collection. Digitized by eGangotri

ಉಳ್ಳದಾಗಿದೆ. ಮಧ್ಯಪ್ರಾಂತದ ಬೇಸಗೆಯ ರಾಜಧಾನಿಯಾದ ಪಚಮ್ಹಾರಿಯು ಸಾಕಪುರದ ಸಾಲಿನಲ್ಲಿ ಸಮುದ್ರ ಮಟ್ಟಕ್ಕಿಂತ ೩೫೦೦ ಅಡಿ ಹೆಚ್ಚು ಎತ್ತರದಲ್ಲಿದೆ. ವಿಂಧ್ಯವು ಸಾಧಾರಣವಾಗಿ ಸಮುದ್ರ ಮಟ್ಟಕ್ಕಿಂತ ೨೦೦೦ ಅಡಿಗಳಿಗಿಂತ ಹೆಚ್ಚು ಇರುವುದು ಅಪರೂಪ. ಒಂದೆರಡು ನೆತ್ತಿಗಳು ೨೫೦೦ ಅಡಿಗಳಿದ್ದರೂ ವಿಶಾಲವಾದ ಪ್ರದೇಶವು ಎಲ್ಲಿಯೂ ಇಷ್ಟು ಎತ್ತರವಾಗಿ ಇಲ್ಲ.

ನರ್ಮದೆಯು ಅಮರಕಾಂತದಲ್ಲಿ ೩೫೦೦ ಅಡಿಗಳ ಎತ್ತರದಲ್ಲಿ ಹುಟ್ಟಿದ್ದರೂ, ಜಬ್ಬಲಪುರದ ಪಶ್ಚಿಮಕ್ಕೆ ಒಂದುಸಾವಿರಕ್ಕಿಂತ ಹೆಚ್ಚಿಲ್ಲದ ಗುಂಡಿಯಲ್ಲಿ ನರಸಿಂಗಪುರ, ಹೊಸಂಗಾಬಾದು, ಮತ್ತು ನಿಮಾರ ಜಿಲ್ಹೆಗಳಲ್ಲಿ (ಮಧ್ಯಪ್ರಾಂತ) ಹರಿದು, ಇಂದೂರು ಧಾರಾಸಂಸ್ಥಾನಗಳ ಮುಖ್ಯ ನದಿಯಾಗಿ ಬೊಂಬಾಯಿ ಪ್ರಾಂತ್ಯದ ರೇವಾಕಂಠ ಸಂಸ್ಥಾನಗಳಿಗೆ ತನ್ನ ಹೆಸರನ್ನು ಇತ್ತು ಬೆಟ್ಟಗಳನ್ನು ಪಾರಾಗಿ ಭರೋಚ್‌ಜಿಲ್ಲೆಯನ್ನು ಸೇರಿ ಅಲ್ಲಿಂದಮೋಹನ ರೂಪವನ್ನು ತಾಳಿ ಸಮುದ್ರದಲ್ಲಿ ಬೆರೆವುದು. (ಮೋಹನವೆಂದರೆ— ಸಮುದ್ರವೂ ನದಿಯೂ ಪರಸ್ಪರ ಒಂದರ ಕಡೆಗೊಂದು ಸಮುದ್ರದ ಏರು ಇಳಿತಗಳನ್ನು ಅನುಸರಿಸಿ ಹರಿಯುವ ಭಾಗ)

ಈ ನದಿಯ ಮೇಲು ಭಾಗದಲ್ಲಿ ಚೇದಿರಾಜ್ಯವಿತ್ತಂತೆ. ಚೇದಿರಾಜರು ಮೈಕಲಾಧೀಶ್ವರರೆಂದು ಹೇಳಿಸಿಕೊಳ್ಳುತ್ತಿದ್ದರು. ಅವರ ರಾಜಧಾನಿಯಾದ ತ್ರಿಪುರವು "ಕಲನಾದಿನಿಯಾದ ಸೋಮೋದ್ಭವೆಯ ದಡದಲ್ಲಿ" ಇತ್ತು. ಈಗಿನ ತಿವಾರವೆಂಬ ಬ್ರಾಹ್ಮಣರ ಅಗ್ರಹಾರವೇ ಆ ಪಟ್ಟಣವೆಂದು ಹೇಳುತ್ತಾರೆ. ಈ ಅಗ್ರಹಾರದ ಬ್ರಾಹ್ಮಣರನ್ನು 'ತಿವಾರಿ' ಎನ್ನುತ್ತಾರೆ. ಶಿಶುಪಾಲನೆಂಬ ಪ್ರಖ್ಯಾತನಾದ ರಾಜನು ಈ ದೇಶದ ಅರಸನಾಗಿದ್ದನು.

ಈ ನದಿಯ ದಡದಲ್ಲಿ ಹೈಹಯವಂಶೀಯನಾದ ಕಾರ್ತವೀರ್ಯಾರ್ಜುನನು ಮಾಹಿಷ್ಮತೀ ನಗರಿಯಲ್ಲಿ ರಾಜ್ಯವಾಳಿದನು. ಈ ನಗರಿಯು ವಿಂಧ್ಯ ಮತ್ತು ಋಕ್ಷಪರ್ವತಗಳ ನಡುವೆ ನರ್ಮದೆಯ ದಡದಲ್ಲಿ ಇತ್ತಂತೆ. ಸಾತಪುಡ ಬೆಟ್ಟಗಳನ್ನು ಪೂರ್ವದಲ್ಲಿ ಋಕ್ಷಪರ್ವತವೆನ್ನುತ್ತಿದ್ದಂತೆ ಕಾಣುವುದು. ಇದನ್ನು ಗೊಂಡವನವೆಂತಲೂ ಹೇಳುವರು. ಸಾತಪುಡ ವಿಂಧ್ಯ ಕಿಬ್ಬಿಯಲ್ಲಿ ಅತಿ ಇಕ್ಕಟ್ಟಾದ ಸ್ಥಳದಲ್ಲಿ ಸನು[illegible] ಪರ್ವತಗಳ ಸಾಲನ್ನು ಪಾರಾಗುವುದಕ್ಕೆ [illegible] ರಾಜಪಿಂಪಳಾ ಮತ್ತು ಬರವಾನಿ ಸಂಸ್ಥಾನಗಳ[illegible] ಯುತ್ತದೆ. ಇದು ಜೌಗುದೇಶವೂ (ಅನೂಪ) [illegible] ಮಾಹಿಷ್ಮತಿಯು ಇಲ್ಲಿರಬಹುದೆ? ಆದರೆ ಹೈ[illegible] ನರ್ಮದೆಯ ಮೇಲುಭಾಗದಲ್ಲಿ ಆಳುತ್ತಿದ್ದ[illegible] ಕಾರ್ತವೀರ್ಯನು ತನ್ನ ಆಳಿಕೆಯ ಗುರುತಾದ [illegible] ಸ್ತಂಭಗಳನ್ನು ಹದಿನೆಂಟು ದ್ವೀಪಗಳಲ್ಲಿ ಸ್ಥಾ[illegible] ನಂತೆ. ಹಾಗಾದರೆ ಮಾಹಿಷ್ಮತಿಯು ಸಮ[illegible] ಬಹಳ ದೂರವಿದ್ದಿರಲಾರದು. ಈಚೆಗೆ 'ಮಾ[illegible] ಎಂಬ ಗ್ರಾಮವನ್ನು ಮಾಹಿಷ್ಮತಿಯೆಂದು [illegible] ಹಚ್ಚಿದ್ದಾರೆ. ಇದು ಮಧ್ಯಪ್ರಾಂತಗಳ [illegible] ಜಿಲ್ಲೆಯ ಮತ್ತು ಇಂದೂರ ಸಂಸ್ಥಾನದ ಎಲ್[illegible] ಇರುತ್ತದೆ. ಇದಕ್ಕೆ ೩—೪ ಮೈಲುಗಳು ಪಶ್ಚಿ[illegible] ಭರ್ವಾಹವೆಂಬ ಇಂದೂರ ಸಂಸ್ಥಾನದ ನಗರ[illegible] ತ್ತದೆ. ಮಹಿಷಾ ಎಂಬ ಶಬ್ದವು ಗ್ರಾಮ್ಯ ಭಾಷೆ[illegible] ಭಹಿಷ್ ಎಂದು ಉಚ್ಚರಿಸಲ್ಪಡುತ್ತದೆ. ಹಾ[illegible] ತ್ರಿಕೂಟವು ವಿಂಧ್ಯ, ಸಾತ್ಪುಡ ಮತ್ತು ಗಾವಿ[illegible] ಪರ್ವತಗಳೇ ಆಗಿರಬೇಕು. ಗಾವಿಲ್‌ಗಡ [illegible] ಸಾತ್ಪುಡಗಳ ಮಧ್ಯೆ ತಪತೀನದಿಯು ಹುಟ್ಟು[illegible] ಇದರ ಹತ್ತಿರದಲ್ಲಿಯೇ ಮುಸಲ್ಮಾನರ ಕಾ[illegible] ಪ್ರಖ್ಯಾತವಾಗಿದ್ದ ಅಹಿರಘಡ, (ಆಭೀರಘಡ— [illegible] ಭಾಷೆಯಲ್ಲಿ ಆಸೀರ್‌ಘರ್) ವೂ, ಮಾಂಡೋ[illegible] ಪುಸ್ತರಭೂಮಿಯೂ, ಧಾರ್ ಸಂಸ್ಥಾನವೂ, ಇರು[illegible] ಅಪರಾಂತ (ಕೊಂಕಣ) ವನ್ನು ಜಯಿಸಿ ತ್ರಿ[illegible] ನಾಯಕನನ್ನು ಗೆದ್ದು ರಘುವು ಪಾರ್ಸಿಕರನ್ನು [illegible] ಸಲು ಸಿಂಧೂದೇಶಕ್ಕೆ ಭೂಮಾರ್ಗದಿಂದ ಹೋದ[illegible] ಕಾಳಿದಾಸನು ಬರೆದಿರುತ್ತಾನೆ. ಎಂದರೆ ನ[illegible] ನದಿಯನ್ನು ದಾಟಿ, ಈಗಿನ ಗುಜರಾತ[illegible] ಮೂಲಕ ಅವನು ಪ್ರಯಾಣ ಮಾಡಿರಬೇಕು. [illegible] ಅವಂತಿಯ ದಕ್ಷಿಣಕ್ಕೆ ಮಾಹಿಷ್ಮತಿ, ಅದರ ದಕ್ಷಿ[illegible] ವಿದರ್ಭದೇಶ. ಜಬ್ಬಲಪುರದ ದಕ್ಷಿಣಕ್ಕೆ ದೊಡ್ಡ [illegible] ಗೊಂಡವನವು ಇರುತ್ತದೆ. ಇದರ ಆಗ್ನೇಯಕ್ಕೆ [illegible] ನದಿಯ ಜಲಾನಯನ ಭೂಮಿ, ಪೂರ್ವಕಾಲದಲ್ಲಿ [illegible] ಶಬರರ ದೇಶವಾಗಿತ್ತು.

CC-0. Jangamwadi Math Collection. Digitized by eGangotri

ಅಂತೂ ನರ್ಮದೆಯು ಬಹುಕಾಲದವರೆಗೂ ಆರ್ಯ ದ್ರಾವಿಡ ಸಂಸ್ಕಾರಗಳ ವಿನಿಮಯಸ್ಥಾನವಾಗಿದ್ದು ಪ್ರಖ್ಯಾತಿಯನ್ನು ಹೊಂದಿತ್ತು. ಈಗಲೂ ಈ ನದಿಯ ಮೋಹನದಿಂದ ಉದ್ಭವಸ್ಥಾನದವರೆಗೂ ಪ್ರದಕ್ಷಿಣೆ ಮಾಡಿದರೆ ಮುಕ್ತಿಸಾಧಕವೆಂದು ಪ್ರತೀತಿ ಇದೆ. ಇದು ಹೇಗಾದರೂ ಇರಲಿ, ಪೂರ್ವದ ಆರ್ಯರಿಗೆ ಈ ನದಿಯ ಥಡದಲ್ಲಿ ಹೊಸ ಅನುಭವಗಳು ದೊರೆತು, ತಮಗಿಂತ ಕಡಿಮೆಯದಲ್ಲದ ದ್ರಾವಿಡಸಂಸ್ಕಾರದೊಡನೆ ಪರಿಚಯವಾಗಿ ಜ್ಞಾನೋದ್ರೇಕವೇನೋ ಆಗುತ್ತಿತ್ತೆಂಬುದರಲ್ಲಿ ಸಂಶಯವು ಇರದು.

**ವಿಂಧ್ಯಾಗಸ್ತ್ಯೋಪಾಖ್ಯಾನ:**—ಹಿಮಾಲಯದಿಂದ ನೋಡಲು ಸೂರ್ಯನು ದಕ್ಷಿಣದಿಕ್ಕಿನಲ್ಲಿ ಹುಟ್ಟಿ ಅಲ್ಲಿಯೆ ಸುತ್ತಿ ಮುಳುಗುವನೆಂಬಂತೆ ಕಾಣುವುದು. ಆದುದರಿಂದ ಅವನು ಹಿಮಾಲಯನಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿದಂತೆ ಭಾಸವಾಗುತ್ತದೆ. ವಿಂಧ್ಯನು ತಾನೂ ಇದೇ ಮರ್ಯಾದೆಯನ್ನು ಸೂರ್ಯನಿಂದ ಪಡೆಯದೆ ಕೋಪಗೊಂಡು ಸೂರ್ಯನ ಪಥಕ್ಕೆ ಅಡ್ಡವಾಗಿ ಬೆಳೆದನಂತೆ. ಆಗ ಲೋಕಕ್ಕೆ ( ಆರ್ಯಾವರ್ತಕ್ಕೆ ) ಬೆಳಕು ದೊರೆಯದೆ ಇರಲು ದೇವತೆಗಳು ಅಗಸ್ತ್ಯರನ್ನು ಮೊರೆಹೊಕ್ಕರು. ಅವರು ತಮ್ಮ ಶಿಷ್ಯನಾದ ವಿಂಧ್ಯನನ್ನು ತಮಗಾಗಿ ದಾರಿಬಿಡಹೇಳಲು ವಿಂಧ್ಯನು ಮಲಗಿ ಅವರು ತನ್ನನ್ನು ದಾಟಿಹೋಗುವಂತೆ ದಾರಿಕೊಟ್ಟನು. ತಾವು ಬರುವವರೆಗೂ ಹಾಗೆಯೇ ಇರುವಂತೆ ಶಿಷ್ಯನಿಗೆ ಅಪ್ಪಣೆ ಮಾಡಿ ಅಗಸ್ತ್ಯರು ದಕ್ಷಿಣಕ್ಕೆ ಪಯಣ ಮಾಡಿದರು. ಅವರು ಇನ್ನೂ ಹಿಂತಿರುಗಿಲ್ಲ.

ಇಲ್ಲಿ ಎರಡು ಗುಟ್ಟುಗಳು ಅಡಗಿವೆ. ವಿಂಧ್ಯವು ಸರಿಸುಮಾರಾಗಿ ಕರ್ಕಾಟಕ ರಾಶಿಯ ಕೆಳಗೆ ಇರುತ್ತದೆ ಸೂರ್ಯನ ಉತ್ತರಾಯಣ ಪಥವು ಇಲ್ಲಿಗೆ ಮುಗಿಯುತ್ತದೆ. ವಿಂಧ್ಯದ ಕಲ್ಲುಗಳು ವಿಶೇಷವಾಗಿ ಹಾಸುಕಲ್ಲುಗಳು; ಮತ್ತು ಸ್ಥಾನವೈರೂಪ್ಯವು ಕಡಿಮೆಯಾದುದರಿಂದ ಪರ್ವತವು ಮಲಗಿದಂತೆ ಕಾಣುವುದು; ಅಲ್ಲದೆ ಹಿಮಾಲಯದ ನಿಲುಗಲ್ಲುಗಳೊಡನೆ ಹೋಲಿಸಿದರೆ ಎತ್ತರದಲ್ಲಿ ಮನುಷ್ಯನ ನಿಲುವಿಗೂ ಮಲಗಿಗೂ ಇರುವ ವ್ಯತ್ಯಾಸವು ಈ ಎರಡು ಪರ್ವತಗಳಲ್ಲಿ ತೋರುವುದು.

**ನಮಗೆ ಬೇಕಾದದ್ದು ಒಂದು ದೇವಜಾತಿ. ( Spirutual Humanity )** ಸಂಪೂರ್ಣವಾಗಿ ವಿಜ್ಞಾನವನ್ನೇರಿ ಸಕಲ ಅಹಂ ಪರಿತ್ಯಜಿಸದಿದ್ದರೆ ಎಂದಿಗೂ ಅದು ಸಂಭವವಿಲ್ಲ. ಹಿಂದೆ ಯಾರೂ ಕೊಡಲಾರದ್ದು ಈ ಯುಗದಲ್ಲಿ ಮೂಡಿದೆ. ಇಂದಿನ ಈ ಹೊಸ ಸಿರಿಯೇ ಕೊನೆಯದೆಂದೂ ಅಲ್ಲ. ಇಷ್ಟಕ್ಕೇ ಮುಗಿಯಿತೆಂತಲ್ಲ. ಅನಂತನಿಗೆ ಈ ಯುಗದಲ್ಲಿ ಮೂಡುವದಕ್ಕೆ ಎಷ್ಟು ಸಂಭವವಿದೆಯೋ ಮುಂದಿನ ಕಾಲದಲ್ಲಿ ಇದಕ್ಕಿಂತ ಹೆಚ್ಚು ಸಮೃದ್ಧಗೊಳಿಸುವವರು ಬರುವರು. ಅನಂತವನ್ನು ಬರಿದಾಗಿಸಿ ಬಿಡುವವರು ಯಾರಿದ್ದಾರೆ?

* * * * *

ಆತ್ಮಸಮರ್ಪಣೆ ಮಾಡಿದಬಳಿಕ ಅನೇಕರಿಗೆ ಬರುವ ಸಂದೇಹವೊಂದಿದೆ. ಯಾವನಿಗೆ ಸಮರ್ಪಿಸಿರುವೆವೋ ಅವನೇ ಎಲ್ಲಾ ಮಾಡಿಕೊಳ್ಳುವನೆಂಬುದು ಹೇಗೆ? ಆದರೆ ಸಮರ್ಪಿಸುವವನೊಬ್ಬನು ಸಿದ್ಧನಾದರೆ ಸ್ವೀಕರಿಸುವವನೊಬ್ಬನೂ ಸಿದ್ಧನಾಗಲಿಕ್ಕೇಬೇಕಾಗುತ್ತದೆ. ಆದರೆ ಕೊಡುವವನ ಸ್ವಭಾವವೇ ಅಡ್ಡಿಯಾದರೆ ತಕ್ಕೊಳ್ಳುವವನೇನು ಮಾಡಬೇಕು? ಕೊಡುವವನು ತಕ್ಕೊಳ್ಳುವವನಿಗೆ ಪೂರ್ಣ ಸ್ವತಂತ್ರತೆಯನ್ನಿಡಬೇಕು. ಅದರಲ್ಲೇನಾದರೂ ಒಂದು ಹಿಡಿತವಾಗಲಿ, ಬಿಗಿತವಾಗಲಿ ಇದ್ದರೆ ಆ ಸಮರ್ಪಿತ ವಸ್ತು ಹ್ಯಾಗೆ ಸ್ವೀಕರಿಸಲ್ಪಟ್ಟೀತು? ಮುಕ್ತ ಸ್ವತಂತ್ರತೆಯನ್ನು ಕೊಟ್ಟರೆ ಆಗ ಮಾತ್ರ ತಕ್ಕೊಳ್ಳುವ ಸಂಭವ. ತಕ್ಕೊಂಡವನು ಆಗ ಕೊಟ್ಟವನಿಗೆ ಯೋಗದ ಮೂಲತತ್ವಗಳನ್ನೂ ಅವುಗಳಲ್ಲಿ ಮುಂದರಿಯುತ್ತ ಶಕ್ತಿಯನ್ನೂ ಅನುಗ್ರಹಿಸುವನು. ಆದರೂ ಮನುಷ್ಯನು ತನ್ನ ಸ್ವಭಾವದ ದಾರಿಯಿಂದಲೇ ತೆಗೆದುಕೊಳ್ಳುವನು. ಅಹಂ ಹೋಗಿದ್ದರೂ ಸ್ವಭಾವದ ಸುಳಿದಾಟವು ಉಳಿದುಕೊಂಡಿರುತ್ತದೆ. ಸ್ವಭಾವದ ಪೂರ್ಣ ನಿರಸನವಾದಾಗಲೇ ಯೋಗವು ಪೂರ್ಣವಾಗಿ ನೆಲೆಗೊಳ್ಳುವುದು ಸಂಭವ.

ಶ್ರೀಅರವಿಂದರು



CC-0. Jangamwadi Math Collection. Digitized by eGangotri



# ಯುರೋಪು ಮತ್ತು ನಾವು

ಲೇಖಕರು:— ಶ್ರೀ. ಹಾಸನದ ರಾಜೀರಾಯರು ಪ್ಯಾರಿಸ್ (ಫ್ರಾನ್ಸ)

ಸಾಧಾರಣವಾಗಿ ಕರ್ನಾಟಕದ ಯಾವನೆ ಒಬ್ಬ ಹುಡುಗನನ್ನಾಗಲಿ ಹೆಂಗುಸನ್ನೇ ಆಗಲಿ ಯುರೋಪು ಎಂದರೇನು—ಎಂದು ಕೇಳಿದರೆ, ಅದು ಒಂದು ದೂರದ ದೇಶವೆಂದೋ ಈ ಪ್ರಪಂಚದ ಐದುಖಂಡಗಳಲ್ಲಿಯ ಒಂದು ಖಂಡವೆಂದೊ ಹೇಳುವರು. ಅದೇ ಪ್ರಶ್ನೆಯನ್ನು ನಲವತ್ತುವರ್ಷದವನೊಬ್ಬನಿಗೆ ಹಾಕಿದರೆ, "ಸರಿ! ಯುರೋಪು! ಆ ಹಾಳು ಕೆಂಪುಜನದ ದೇಶ. ಜಾತಿ ಇಲ್ಲ, ಕುಲವಿಲ್ಲ, ಧರ್ಮವು ಮೊದಲೇ ಇಲ್ಲ. ಯುರೋಪೇ, ಅದು ಕೆಂಪು ಜನರ ಕೊಂಪೆ" ಎಂದು ಹೇಳುವನು. ಈ ಮೂವರನ್ನೂ ಬಿಟ್ಟು ಈ ಕಾಲದ ಒಬ್ಬ ಯುನಿವರ್ಸಿಟಿ (ವಿಶ್ವವಿದ್ಯಾಲಯದ) ಹುಡುಗನನ್ನು ಕೇಳಿರಿ. "ಅದೇ! ಮಿಲ್ಟನ್, ಬ್ರೌನಿಂಗ, ಸ್ಕಾಟ್, ಟೆನಿಸನ್, ನೆಪಲಿಯನ್ ಮತ್ತು ಕೈಜರ್ ಇವರೆಲ್ಲರ ದೇಶ"ವೆಂದು ಹೇಳಿ ನಗುತ್ತಾ "ನೋಡೋಣ ಕಣೋ, ನಾನೂ ಅಲ್ಲಿಗೆ ಹೋಗಿ ದೊಡ್ಡ ದೊಡ್ಡ ಬಿರುದುಗಳ (ಡಿಗ್ರಿಗಳ) ನ್ನು ತೆಗೆದುಕೊಂಡು ಬರುವೆನು" ಎಂದು ಉತ್ತರ ಕೊಡುವನು. ಇದರಲ್ಲಿ ಯಾರ ವಿದ್ಯೆಯು ಹೆಚ್ಚು, ಯಾರ ವಿದ್ಯೆಯು ಕಡಿಮೆ, ಎಂದು ಹೇಗೆ ತಾನೆ ಹೇಳಬಲ್ಲೆವು? ತಮ್ಮನ್ನುತಾವು ಮಹಾ ಪಂಡಿತರೆಂದು ಎಲ್ಲರೂ ತಿಳಿಯುವರು.

ಈಗ ಯುರೋಪಿಗೆ ಬಂದು ಒಬ್ಬ ಯುರೋಪಿಯನನ್ನು, ಏನಯ್ಯಾ—ಸರ್ ಎಂದು ಬೇಕಾದರೆ ಕರೆಯಬಹುದು—"ಏನಯ್ಯಾ ಹಿಂದುಸ್ತಾನವೆಂದರೆ ಏನು?" ಎಂದು ಕೇಳೋಣ. ಹೆಂಗುಸರು, ಹುಡುಗರು, ಸಾಧಾರಣ ವಯಸ್ಸಿನ 'ಜಂಟಲಮನ್ನು'ಗಳು ಹಿಂದುಸ್ತಾನವೇ! ಕಪ್ಪುಜನರ ದೇಶ. ನಮ್ಮ ಇಂಗ್ಲೀಷಿನವರು ಅಲ್ಲಿ ಆಳುವರು. ಒಬ್ಬ ಮಹಾತ್ಮಾ ಗಾಂಧಿ ... ಕಪಿಯಿರುವನು. ಅವನು ಅಲ್ಲಿಯ ಕಳ್ಳರ ಗ... ಮುಖ್ಯಸ್ಥನಂತೆ, ಸರಕಾರವನ್ನು ತೆಗೆದು ಎ... ಕೆಂಪು ಪ್ರಯತ್ನಿಸುತ್ತಿರುವನಂತೆ. ಕಪಿ, ಏ... ಅವನ ಮುಖ ನೋಡಿದರೆ ವಾಂತಿ ಬರುವುದು... ಇದು ಏನು ನಮ್ಮ ಕಲ್ಪನೆ—ಎಂದು ತಿಳಿಯ... ನನ್ನ ಹೆಂಡತಿಯು ಈ ದೇಶದಲ್ಲಿ ಪ್ರೊಫೆಸರು. ... ಸಾಧಾರಣ ಜನರಿಗಿಂತ ಹೆಚ್ಚು ಓದಿದವಳು. ... ಯುನಿವರ್ಸಿಟಿ ಬಿ. ಎ. ಎಮ್. ಎ. ಅಲ್ಲದೆ ... ದಲ್ಲಿ ಕೂಡ ಓದಿರುವಳು. ಆದರೆ ಈಗ ಕೆಲವು... ಗಳ ಹಿಂದೆ ಗಾಂಧಿ ಎಂದರೆ, ಒಬ್ಬ ... "ಅಜಿಟೇಟರ್" (agitator) ಎಂದು ತಿ... ಇಂತಹ ವಿದ್ಯಾವಂತರೇ ಹೀಗೆ ಯೋಚಿಸಿದರೆ ... ರಣ ಜನರು ನಮ್ಮ ದೇಶದ ವಿಷಯವನ್ನು ಎ... ರೆಂಬುದನ್ನು ಕಂಡುಕೊಳ್ಳಲು ಬರುವುದು. ಮ... ಗಾಂಧಿಯವರು ಪ್ಯಾರಿಸ್ ನಗರದಲ್ಲಿ ಒಂದು ... ಇಳಿದಿದ್ದಾಗ ನನ್ನ ಹೆಂಡತಿಯು ಅವರ ಬ್ರಹ್ಮ... ಮುಖವನ್ನು ನೋಡಿ, "ಕ್ರೈಸ್ಟ (christ) ... ಎದ್ದು ಬಂದಂತೆ ಕಾಣುತ್ತದೆ" ಎಂದು ಹೇಳಿದ... ಈ ದೇಶಗಳಲ್ಲಿಯೂ ಕೆಲವರು ಹಿಂದುದೇಶದ ... ವನ್ನು ಬಲ್ಲವರಿರುವರು. ಇವರ ಸಂಖ್ಯೆಯು ದಿನ... ಹೆಚ್ಚುತ್ತಲಿದೆ. ಯೂರೋಪಿಯನ್ ಮಹಾ... ಮಹರ್ಷಿಗಳಾದ ರೋಮೇನ್ ರೋಲೆಂಡ (R... Rolland) ರವರು ಮಹಾತ್ಮಾ ಗಾಂಧಿಯವ... ಚರಿತ್ರವನ್ನು ಬರೆದುದಲ್ಲದೆ, ವಿವೇಕಾನಂದರು,ರಾ... ಪರಮಹಂಸರ ಚರಿತ್ರೆ, ಅವರ ಹೇಳಿಕೆಗಳು, ... ಜ್ಞಾನ ಇವುಗಳನ್ನೆಲ್ಲ ವಿವರಿಸಿ ಮೂರು ಪುಸ್ತ... ಬರೆದಿರುವರು.....ಆದರೆ ಇನ್ನೂ ಇಂತಹ ಮಹಾ... ಬಹಳ ವಿರಳರು.

CC-0. Jangamwadi Math Collection. Digitized by eGangotri

ಅಂದರೆ ಈ ಪ್ರಪಂಚದ ಚರಿತ್ರೆಯಲ್ಲಿ ಈಗ ತಾನೇ ನಾವು ಕಣ್ಣು ಬಿಡುತ್ತಿರುವೆವೆಂದು ತಿಳಿಯಬೇಕು. ಯೂರೋಪು ಖಂಡ, ಏಶಿಯಾಖಂಡ, ಅಮೇರಿಕಾಖಂಡ ಮಿಕ್ಕ ಖಂಡಗಳು ಇವೆಲ್ಲ ಬೇರೆ ಬೇರೆಯಲ್ಲ. ಎಲ್ಲವೂ ಒಂದರ ಪಕ್ಕದಲ್ಲಿ ಮತ್ತೊಂದು ಇರುವವಲ್ಲದೇ ಒಂದರ ಜ್ಞಾನ ತತ್ವಗಳನ್ನು ಮತ್ತೊಂದು ಖಂಡವೂ ಕೇಳಿ, ತಿಳಿದು ಕಲಿಯಬೇಕೆಂದು ಈಚೆಗೆ ತಾನೇ ನಾವು ಯೋಚಿಸುತ್ತಿರುವೆವು! ಯುರೋಪಿನ ಜನರೆಲ್ಲರೂ ಧರ್ಮವಿಲ್ಲದವರೆಂದು ತಿಳಿಯುವುದು ತಪ್ಪು. ಹಿಂದುಸ್ಥಾನವೆಲ್ಲ " ಕಪ್ಪು ಜನರ ಕೊಂಪೆ " ಎಂದು ತಿಳಿಯುವುದೂ ತಪ್ಪು. ಈ ಎರಡು ದೇಶಗಳೂ, ತಮ್ಮ ತಮ್ಮ ಆತ್ಮಜ್ಞಾನವನ್ನು ಮತ್ತೊಬ್ಬರಿಗೆ ತೋರಿಸಿ, ಅವರ ಜ್ಞಾನವನ್ನೂ ತಾವು ಸೇವಿಸಬೇಕು. ಹೀಗೆ ಮಾಡಿದರೆ ನಮ್ಮ ಪ್ರಪಂಚದ ಕಷ್ಟಗಳಲ್ಲ ಅರ್ಧವು ನಾಶವಾಗುವುವು. ಜನರೆಲ್ಲರೂ ಒಂದೇ. ಮತವೆಲ್ಲವೂ ಒಂದೇ. ಎಲ್ಲರನ್ನೂ ಭಕ್ತಿ ಮರ್ಯಾದೆಯಿಂದ ಕಾಣಬೇಕು! ಇತ್ಯಾದಿಯಾಗಿ ನಾವು ತಿಳಿದರೆ ಪ್ರಪಂಚದ ಏಳಿಗೆಗೆ ಎಷ್ಟು ತಾನೇ ಸಹಾಯವಾದೀತು! ಯುರೋಪಿಯನರೂ, ನಾವೂ ಹೀಗೆ ಯೋಚಿಸುತ್ತ ಬರಬೇಕು. ಕನಕದಾಸರು ಕೀಟ್ಸಿನ ಪಕ್ಕದಲ್ಲಿ ಕುಳಿತುಕೊಳ್ಳಬೇಕು. ಪಂಪನು ಪೋಪಿನ ಸಂಗಡ ವಾದಿಸಬೇಕು. ಶಂಕರಾಚಾರ್ಯರು ಬರ್ಗಸಾನರ ತತ್ವವನ್ನು ತಮ್ಮದೆಂದು ಒಪ್ಪಬೇಕು. ರೋಮನ್ ರೋಲಂಡ್‌ರವರು ಶ್ರೀ. ಶ್ರೀನಿವಾಸ ಕೈಲಾಸಂ ಅವರ ಪುಸ್ತಕಗಳ ಮಧ್ಯೆ ತೇಜಿಸಬೇಕು. ಹೀಗೆ ನಾವು ಯೋಚಿಸದಿದ್ದರೆ ನಮ್ಮ ಈ ಪ್ರಪಂಚವು ಹಾಳಾಗುವುದಕ್ಕೆ ಇನ್ನು ಎರಡೇ ದಿನಗಳಿವೆಯೆಂದು ಹೇಳಬಹುದು. ಯಾರು ಬಲ್ಲರು, ಕಲಿಯುಗವು ಬೇಗಬೇಗನೆ ಸಾಗುತ್ತಿದೆಯೇನೋ!

ಹಾಗಾದರೇ ಯೂರೋಪಿನ ಯಾವ ಯಾವ ವಿಚಾರಗಳನ್ನು ತಿಳಿಯಬೇಕು? ಯಾವ ಯಾವ ಕಡೆಗೆ ತಿರುಗಿ ನೋಡಬೇಕು? ಯಾವಯಾವ ಮಹಾತ್ಮರ ವಿಚಾರಗಳನ್ನು ಓದಿ ಗ್ರಹಿಸಬೇಕು? ಎಂದು ಕೇಳುವವರಿಗೆ ಉತ್ತರವಿಷ್ಟು:—

ಮೊದಲು " ಯುರೊಪ್ " ಎಂದರೇನು, ಎಂದು ಸರಿಯಾಗಿ ನೋಡೋಣ. ಇಂಗ್ಲಾಂಡಷ್ಟೇ ಯೂರೋಪು ಅಲ್ಲ. ಸಾಧಾರಣ ನಮ್ಮ ವಿದ್ಯಾರ್ಥಿಗಳು ಬರ್ಕ (Burke) ಮತ್ತು ಟೆನಿಸನ್ ( Tennyson ) ಅವರ ಪರಿಚಯವಿದ್ದರೆ "ಯುರೋಪೆಲ್ಲ ನೋಡಿದೆ" ಎಂದು ತಿಳಿಯುವರು. ಅದು ಶುದ್ಧ ತಪ್ಪು. ಇಂಗ್ಲಿಷ ಜನರನ್ನು ಕಂಡರೆ ಇಸ್ಸಿಳಿದ ಯುರೊಪಿಯನ್ನರು ಹಾಸ್ಯಮಾಡುವುದಲ್ಲದೇ ದುಡ್ಡಿನ ಕಿಲುಬನ್ನು ತಿನ್ನುವ ಕೀಳುಜನರೆಂದು ತಿರಸ್ಕಾರಮಾಡುವರು. ಆದರೆ ಇಂಗ್ಲಾಂಡು ಯೂರೋಪಿನ ಹಲವು ದೇಶಗಳಲ್ಲಿ ಒಂದು ದೇಶವೆಂದು ತಿಳಿಯಬೇಕು. ಎಂದರೆ ಫ್ರಾನ್ಸು, ಜರ್ಮನಿ, ರಶಿಯಾ ದೇಶಗಳೂ ಯೂರೋಪಿಗೆ ಸೇರಿದುವೆ. ಈ ದೇಶಗಳಲ್ಲಿಯೂ ಮಹಾತ್ಮರು ಹುಟ್ಟಿ, ಬೆಳೆದು ತಮ್ಮ ಜ್ಞಾನವನ್ನು ಇತರರಿಗೆ ತೋರಿಸಿ ಆಶೀರ್ವದಿಸಿರುವರು. ಜರ್ಮನಿಯಲ್ಲಿ ಗಟೆ ( Goethe ) ಷಿಲರ್ ( Schiller ) ಹೀಗೆಲ್ ( Hegel ) ಐನಸ್ಟೇನ್ ( Einstein ) ಇವರು ಇರುವರು. ಫ್ರಾನ್ಸಿನಲ್ಲಿ ಮೊಲಿಯೆರ್ ( Moliere ) ರಾಸೇನ್ ( Racine ) ಕಾರ್ನೆಯ್ ( Corneille ) ಡೆಕಾರ್ಚೆ ( Descants ) ವಿಕ್ಟರ್ ಹ್ಯೂಗೋ ( Victor Hugo ), ಲೆಕೋಂಟ್ ಡಲೀಲ್ (Lecowpte de Lisle) ರವರೂ ಇರುವರು. ರಸ್ಯಾದಲ್ಲಿ ಟೋಲ್ಸಟಾಯ ( Tolstoy ), ಡಸ್ಟೋವಿಯಿಸ್ಕಿ ( Dostoievieskу ) ಮತ್ತು ಗೋರ್ಕಿ ( Gorki ) ಯವರೂ ಇರುವರು. ಹೀಗೆ ಪ್ರತಿಯೊಂದು ದೇಶದಲ್ಲಿಯೂ ಮಹಾತ್ಮರನ್ನು ತೋರಿಸಬಹುದು. ಆದರೆ ಇವರುಗಳು ಲೋಕಕ್ಕಿತ್ತ ಮುಖ್ಯ ದಾನವು ಏನು— ಎಂದು ನೋಡೋಣ.

ನಮ್ಮ ಜನರು ಹೇಗೆ ಆತ್ಮಪ್ರಪಂಚದಲ್ಲಿ ಪ್ರತಿ ಮೂಲೆಯನ್ನೂ ಹುಡುಕುತ್ತ ಯಾತ್ರಿಸಿರುವರೋ ಹಾಗೆಯೇ ಯುರೋಪಿಯನ್ ಪಂಡಿತರು ಈ ಭೂಮಿಯ ಪ್ರತಿ ಬಿನ್ನೆ, ರಂಗು, ಗಂಧಗಳನ್ನು ಹುಡುಕುತ್ತ ತಮ್ಮ ಯಾತ್ರೆಯನ್ನು ಮಾಡಿರುವರು. ಪ್ರತಿ ಪದಾರ್ಥವನ್ನು ಚೂರು ಚೂರಾಗಿ ಮುರಿದು, ಬಿಡಿಸಿ, ದೃಷ್ಟಿಸಿ, ಅದರ ಅರ್ಥವನ್ನು ಕಂಡುಹಿಡಿಯುತ್ತಿರುವರು. ಇದಕ್ಕೆ (Scientific method) ವಿಜ್ಞಾನನಿಷ್ಠಮಾರ್ಗವೆಂದು ಕರೆಯುತ್ತಾರೆ. ಈ ಮಾರ್ಗದಲ್ಲಿ ಹೋದರೆ ನಮ್ಮ ಸ್ವಂತದ ಮೋಹ, ದುರಾಗ್ರಹಗಳನ್ನೂ ಒಂದು ಕಡೆಗೆ ಇಟ್ಟು, ಕಣ್ಣಲ್ಲಿ ಕಂಡದ್ದನ್ನು, ಎಲ್ಲರೂ ತಮಗೆ

CC-0. Jangamwadi Math Collection. Digitized by eGangotri

ತಾವೇ ನೋಡಿ, ಮುಟ್ಟಿ, ಕಾಣಬಹುದಾದ ವಿಚಾರಗಳನ್ನು ಕಂಡುಹಿಡಿಯಬಹುದು. ಈ ದೇಶದಲ್ಲಿ ವಿಜ್ಞಾನಿಗಳು, ಎಂತಹ ನಿಷ್ಠೆ — ಎಂತಹಯೋಗದಿಂದ ತಮ್ಮ ಕೆಲಸಗಳನ್ನು ಮಾಡುತ್ತಾರೆಂಬುದನ್ನು ನೋಡಿದರೆ "ಹೌದು ಇಲ್ಲಿಯೂ ಋಷಿಗಳಿರುವರು" ಎಂದು ಅನ್ನುವಹಾಗೆ ಆಗುತ್ತದೆ. ಇವರುಗಳು ಹಿಮಾಲಯ ಪರ್ವತದಲ್ಲಿ ಹೋಗಿ ಕುಳಿತು ಬ್ರಹ್ಮನನ್ನು ಹುಡುಕುತ್ತೇವೆಂದು ಹೇಳಿ ಕಣ್ಣುಮುಚ್ಚಿ ಯೋಗವನ್ನು ಮಾಡುವವರಲ್ಲ. ಈ ಪ್ರಪಂಚದಲ್ಲಿಯೇ ನಿಂತು, ಈ ಕಣ್ಣಿನಿಂದಲೇ ಎಲ್ಲವನ್ನೂ ನೋಡಿ, ತಮ್ಮ ಯೋಗವನ್ನು ಸಾಧಿಸುವವರು.

ಈ ಬಗೆಯ ವಿಜ್ಞಾನನಿಷ್ಠಮಾರ್ಗವನ್ನು ನಾವು ಕಲಿಯಬೇಕು. ನಮ್ಮ ಜನರಲ್ಲಿ ಸರಿಯಾಗಿ ಭಾಗಿಸಿ, ಸರಿಯಾಗಿ ಒಂದರಮೇಲೆ ಒಂದು ಜೋಡಿಸಿ, ಜ್ಞಾನದ ಪೂರ್ಣಾಂಶವನ್ನು ನೋಡುವ ಸ್ವಭಾವವಿಲ್ಲ. ಬಂದಹಾಗೆ ಬರೆಯುವೆವು; ಬಂದಹಾಗೆ ಯೋಚಿಸುವೆವು. ಅರ್ಥವೇನೋ ಆಗುತ್ತದೆ. ಕೆಲವರಲ್ಲಿ ಮಹಾ ಜ್ಞಾನವನ್ನೂ ಕಾಣಬಹುದು. ಆದರೆ ಎಲ್ಲವನ್ನೂ ಪಂಕ್ತಿಯಮೇಲೆ ಪಂಕ್ತಿಯಾಗಿ ತಿಳಿಯುವುದು ಕಷ್ಟ. ಆದರೆ ಈ ದೇಶಗಳಲ್ಲಿ ಯಾವ ವಿಚಾರವಾದರೇನು, ಪ್ರತಿಯೊಂದನ್ನೂ ಪಂಕ್ತಿಮಾರ್ಗದಿಂದ ಬರೆಯುವರು. ಒಂದುಸಲ ಮನಸ್ಸನ್ನಿಟ್ಟು ಓದಿದರೆ ಸಾಕು. ಎಲ್ಲವನ್ನೂ ಬೇಗನೆ ಗ್ರಹಿಸಬಹುದು. ಯುರೋಪಿನಿಂದ ನಾವು ಇದನ್ನು ಕಲಿಯಲೇಬೇಕು. ಗ್ರಹಿಸಲೇಬೇಕು. ನಮ್ಮ ವಿದ್ಯೆಯು ನಮ್ಮ ಜ್ಞಾನವು ಪ್ರಪಂಚಕ್ಕೆಲ್ಲ ಹರಡಬೇಕಾದರೆ ಈ ಮಾರ್ಗವನ್ನು ತೆಗೆದುಕೊಳ್ಳಬೇಕು. ಯುರೋಪಿನ ಋಷಿಗಳು ಲೋಕಕ್ಕೆ ಕೊಡುತ್ತಿರುವ ಮಹಾ ದಾನವು ಇದೆ.

ಆದರೆ ಹಿಂದುಸ್ತಾನವು ಯುರೋಪಿಗೆ ಏನು ಬಾಗಿಣವನ್ನು ಕೊಡುವುದೋ ನೋಡೋಣ. ಪ್ರಿಯ ಕರ್ನಾಟಕ ಮಹನಿಯರೆ! ದಯವಿಟ್ಟು ಇದನ್ನು ಕೇಳುವಿರೆಂದು ನಂಬಿರುವೆನು. ನಮ್ಮ ದೇಶವು ಮುಂದೆ ಬರಬೇಕಾದರೆ ನಮ್ಮ ಸಾಹಿತ್ಯ–ತತ್ವವಿಚಾರಗಳನ್ನು ಮೂಲೆಗೆ ಇಡದೇ ಅದರ ಅರ್ಥವನ್ನು ತಿಳಿಯಬೇಕು. ನೀವು ಎಷ್ಟುತಾನೇ ಕೀಟ್ಸ (Keets) ಮತ್ತು ಥೇಕರೆ (Thackaray) ಗಳನ್ನು ಓದಿದರೆ ತಾನೆ ಏನು! ...
ಕವಿಶ್ರೇಷ್ಠರು, ತತ್ತ್ವಜ್ಞಾನವನ್ನು ಬೋ...
ಪರಮಜ್ಞಾನಿಗಳು ಇವರೆಲ್ಲರ ಕೃತಿಗಳನ್ನು
ಗ್ರಹಿಸುವ ತನಕ ನಮ್ಮ ವಿದ್ಯೆಯು ಎಂದಿಗೂ ...
ಹತ್ತುವುದಿಲ್ಲ. ನಮ್ಮ ದುರದೃಷ್ಟಕ್ಕೆ ಸರಿಯ...
ಪರದೇಶದ ಸರ್ಕಾರದ ಆಳಿಕೆಯಿಂದ ...
ಪಂಡಿತರನ್ನು, ನಮ್ಮ ಮಹಾತ್ಮರನ್ನು ...
ಬಿಟ್ಟಿರುವೆವಲ್ಲದೆ ತಿರುಗಿ ಅವರನ್ನು ಹೀಯಾಳಿ...
ಹೀಗೆಮಾಡಿ ನಮ್ಮ ಸ್ವಂತಜ್ಞಾನವನ್ನು ಮರೆ...
ದಲ್ಲದೆ ಕಲಿತ ಪಾಶ್ಚಾತ್ಯ ವಿದ್ಯೆಯು ಕೂಡ ...
ನಮ್ಮ ಆತ್ಮವನ್ನು ಮುಟ್ಟದೆ ಉರುಳಿ ಹೋ...
ಏನು! ನಮ್ಮ ಭಗವದ್ಗೀತೆ ಪುರಾಣಗಳಲ್ಲಿರುವ...
ಕ್ಕಿಂತ ಯಾವುದು ತಾನೆ ಮೀರಿದೆ. ಈ ...
ಪ್ರಪಂಚದ ಸರ್ವ ಜ್ಞಾನವು ಆ ಭಗವದ್ಗೀತೆ...
ಅಧ್ಯಾಯಗಳಲ್ಲಿಲ್ಲವೇ?

ತಸ್ಮಾತ್ ತ್ವಮುತ್ತಿಷ್ಠ ಯಶೋಲಭಸ್ವ।
ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃ...
ಗೀತಾ

ನಮ್ಮ ಪುರಾತನರ ಅಂತರ್ಜ್ಞಾನವ...
ಹೋಗೋಣ. ನಮ್ಮ ಬ್ರಹ್ಮಜ್ಞಾನವನ್ನು ...
ಸೋಣ. ನಮ್ಮ ಆತ್ಮಕ್ಕೆ ತಿಳಿಯದ ಯಾವ ...
ತಾನೇ ಇದೆ. ಸರ್ವವೂ ಝಳ ಝಳ ...
ನಕ್ಷತ್ರಗಳು ಮಿಣುಕುವಂತೆ ಕಂಡುಬರುವುದು...
ತೇಜೋದರ್ಶನವನ್ನು ಲೋಕಕ್ಕೆ ಮಾಡಿಸಿಕೊ...
ನಮ್ಮ ಭಾರತಿಯ ಬಾಗಿಣ. ಆದರೆ ಹುಟ್ಟಿ...
ಈ ಪ್ರಪಂಚದ ಮೇಲೆ; ಈ ಪ್ರಪಂಚದ ಸೊಗಸು...
ನೋಡೋಣ. ಈ ಪ್ರಪಂಚದ ರಂಗು, ಗಂಧ, ...
ಗಳನ್ನೂ ಹುಡುಕಿ ರುಚಿಸೋಣ. ಇವೆರಡ...
ನಮ್ಮ ಆತ್ಮದ ಯಾತ್ರೆಯನ್ನು ಮುಗಿಸೋಣ. ...
ಲೋಕವು ಇಲ್ಲಲ್ಲದೆ ಮತ್ತೆಲ್ಲಿರುವುದು? ...
ಬೇಕಾದರೆ, ಮನುಷ್ಯನು ಮೊದಲು ಸಂಪೂರ್ಣ...
ಪುರುಷನಾಗಬೇಕಲ್ಲವೇ?

* * *

ಬೆಳಗಾಗುತ್ತಲಿದೆ. ಬೆಟ್ಟಗಳ ಹಿಂದಿನಿಂದ ಸೂ...
ಏಳುತ್ತಿರುವನು. ಒಂದು ಸರೋವರದ ಎರಡು ...

CC-0. Jangamwadi Math Collection. Digitized by eGangotri

ಇಬ್ಬರು ದೇವತೆಗಳು ಕುಳಿತು ರಾತ್ರಿಯನ್ನೆಲ್ಲ ಕಳೆದಿರುವರು. ಆ ಸರೋವರದಲ್ಲಿ ಎರಡು ಕಮಲಗಳು ಅರಳುತ್ತಿರುವ ಹೊತ್ತಿಗೆ ಇಬ್ಬರೂ ಥಟಕ್ಕನೆ ಎದ್ದು ತಮ್ಮ ಪ್ರಪಂಚವನ್ನು ಪ್ರವೇಶಿಸಲು ಹೋಗುವರು. ನೀರಿನಲ್ಲಿ ಇಳಿದ ಕೂಡಲೆ ಒಬ್ಬಳು ಇನ್ನೊಬ್ಬಳಿಗೆಂದಳು:–

"ಸಹೋದರೀ. ನನ್ನ ಆತ್ಮದ ಸಂಪೂರ್ಣ ತೇಜಸ್ಸಿನಿಂದ ಆ ಬ್ರಹ್ಮನ ಮುಖವನ್ನು ನೋಡಿದೆ. ಎಂತಹ ಆನಂದದ ಮುಖ...."

"ಏನು, ನೀನೂ ಆಗಲೇ ಎದ್ದೆಯಾ! ರಾತ್ರಿಯೆಲ್ಲಾ ಆ ನಕ್ಷತ್ರಗಳನ್ನು ನೋಡುತ್ತ, ಗಿಡಬಳ್ಳಿಗಳ ಯೋಗವನ್ನು ನೋಡುತ್ತ ಕುಳಿತಿದ್ದೆ. ಏನು ಹೇಳಲಿ; ಪ್ರತಿ ಮೂಲೆಯಲ್ಲಿಯೂ ಬ್ರಹ್ಮನ ಆನಂದಪ್ರಕಾಶವು ಕಂಡು ಬಂದಿತು....ಸಹೋದರೀ! ಹೇಗೆ ವಿವರಿಸಲಿ ಆವನ ಶಾಂತ ಮುಖವನ್ನು...." ಸೂರ್ಯನು ಏಳುತ್ತಲೇ ಏಕೇಂದ್ರು ಋಷಿಗಳು ಬಂದು, ಅವೆರಡು ಕಮಲಗಳನ್ನೂ ಕೊಯ್ದು, ವಿಶ್ವೇಶ್ವರನ ತಲೆಯಮೇಲಿಟ್ಟು, ಸಾಷ್ಟಾಂಗ ನಮಸ್ಕಾರವನ್ನು ಮಾಡಿದರು.....

ಭಾರತಮಾತೆಗೆ ಮಂಗಳಂ।

ಯೂರೋಪಿಗೆ ಮಂಗಳಂ।

## ಹೆಳವ ಬಾಲಕ

ಶ್ರೀ. ಪಿ. ಆರ್. ಶ್ರೀನಿವಾಸರಾವ, ಮುಂಬಯಿ

ಗೋಳ ಕೇಳುವರಾರು ಕೇಳಿ ಮರುಗುವರಾರು?
ಬಾಳುವುದು ಬಲುಕಷ್ಟ ತಾಳುವುದು ಬಲು ಕಷ್ಟ;
ಹೆಳವ ನನ್ನದು ಜೀವ ಬಾಳಬಾರದು ದೇವ!
ಹುಳುಗಳಾದರು ವಾಸಿ ಹೆಳವ ನಡೆಯನು ಪಾಪಿ;

ಬಾಲರೆಲ್ಲರು ಕೂಡಿ ನೆಗೆಯುವರು ನಲಿಯುವರು
ಬಾಲವನು ಮೇಗೆತ್ತಿ ಓಡುವವು ಗೋವುಗಳು;
ಕಾಲವನೆ ಮರೆವಂತೆ ಕುಣಿಯುವುದು ಮಿಗೆ ನವಿಲು
ಕಾಲ ಸೋಂಕಿಸದಂತೆ ಜಿಗಿಯುವುದು ಮರಿಜಿಂಕೆ;

ಹಾರುವವು ಹಕ್ಕಿಗಳು ಏರುವವು ಗಗನವನು
ಬೀರುವನು ಮಾರುತನು ಸೌರಭವ ಓಡುತಲಿ;
ಏರುವವು ಮಂಗಗಳು ಹಾರುವುವು ಗಿಡಗಳನು;
ಕೀರುವುವು ಸಂತಸದಿ ಸರಸದಲಿ ಓಡುತಲಿ;

ಓಡುವಳು ಕಾವೇರಿ ನೀಡುತಲಿ ಸವಿನೀರ
ಹಾಡುತಲಿ ಗಾನವನು ಇನಿದಾದ ರಾಗದಲಿ;
ಆಡುವುದು ಮರಿಯಂಚೆ ನೋಡುತಲಿ ಸರಸಿಯನು
ಕಾಡುವುದು ನಗೆಯಾಡಿ ಮಡದಿಯನು ಸರಸದಲಿ;

ಸಾಗುವುದು ಹೊಗೆಗಾಡಿ ಏರುವುದು ದಿಣ್ಣೆಗಳ
ನೀಗುವುದು ದೂರವನು ಹೋಗಿ ನೆಲೆ ಸೇರುವುದು;
ದೇಗುವವು ಬಂಡಿಗಳು ಬಾಗುತಲಿ ಕುಲುಕುತಲಿ
ಸಾಗುವವು ಎತ್ತುಗಳು ನೊಗದಿರಿತ ನೋವಿನಲಿ;

ಎಲ್ಲ ನೋಡಿದರೆನಗೆ ಜನಿಸುತಿರುವುದು ಬಯಕೆ
ಎಲ್ಲರಂದದಿ ನಾನು ಓಡಿಯಾಡುವೆನೆಂದು;
ಇಲ್ಲವಾಯ್ತೆನಗೀಗ ಈ ಪರಿಯ ಸುಖದಾಶೆ
ಎಲ್ಲ ಮುಗಿಯಿತು ಬೇಗ ಕನಸಿನಲಿ ಕಂಡಂತೆ;

ದಾರಿ ನಡಿಯುತಲಿದ್ದೆ ಊರ ಸೇರುತಲಿದ್ದೆ
ಸಾರಿ ಕುಣಿಯುತಲಿದ್ದೆ ಏರಿ ಧುಮ್ಮಿಕುತಿದ್ದೆ;
ಆರಮಕ್ಕಳ ಜೊತೆಗೊ ಸೇರಿ ನೆಗೆಯುತಲಿದ್ದೆ
ದೂರ ದೇವಾಲಯಕೆ ಸಾರಿ ಪೂಜಿಸುತಿದ್ದೆ;

ಮಿತ್ರರಾರೆನಗಿಲ್ಲ ಸತ್ಯ! ಬಾಂಧವರಿಲ್ಲ
ಸತ್ತರಾದರು ಮೇಲು ಅತ್ತುಬಳಲಲು ವ್ಯರ್ಥ;
ಎತ್ತ ನೋಡಿದರತ್ತ ನಿತ್ಯ ಜರಿವುದು ಲೋಕ
ಇತ್ತು ಪೊರೆವವರಾರೊ ಮತ್ತೊಬ್ಬರನು ಕಾಣೆ;

ಎಲ್ಲ ಮನುಜರಿಗಿಂತ ಒಳ್ಳೆಯದು ಕೈಗೋಲು
ಬಲ್ಲಿದರು ಗೊತ್ತಾಯ್ತು ಕಲ್ಲೆದೆಯರೆಂಬುವುದು,
ಸಲ್ಲಿಸುವೆ ಕೈಗೋಲೆ! ಎಲ್ಲೆ ಮೀರಿದ ಮಾನ
ನಲಿಸಿರುವೆ ಒಲಿಸಿರುವೆ ಅಲೆಸಿರುವೆ ಕಲಿಸಿರುವೆ;

ನನ್ನ ಕೈಗೋಲೆ! ನಾ ನಿನ್ನ ನೆಂದಿಗು ಮರೆಯೆ
ನನ್ನ ಮಿತ್ರನು ನೀನು, ನಿನ್ನ ಮಿತ್ರನು ನಾನು;
ನನ್ನ ಸೇವಿಪೆ ನೀನು, ನಿನ್ನ ಪೂಜಿಪೆ ನಾನು
ಇನ್ನು ಅಗಲೆವು ನಾವು, ಜನರು ನಾಚಲಿ ತಾವು.



CC-0. Jangamwadi Math Collection. Digitized by eGangotri

# ಹಳೇ ಹುಲಿಯಲ್ಲ-ಹಳೇ ಶನಿ

ಬರೆದವರು:- ಶ್ರೀ. ಕೇ. ಚಿದಂಬರಂ.

೧

ಬೆಂಕಿಪೆಟ್ಟಿಗೆಯ ಕಾರ್ಖಾನೆಗೆ ಚಂದಾ ಚೆನ್ನಾಗಿ ಕೂಡುತ್ತಿತ್ತು. ಇಂಜಿನಿಯರ್ ರಾಮಸ್ವಾಮಯ್ಯಂಗಾರ್ಯರು ಜಪಾನಿಗೆ ಹೋಗಿ ಕಾರ್ಖಾನೆಗಳ ಕೆಲಸವನ್ನು ಚನ್ನಾಗಿ ಕಲಿತುಕೊಂಡು ಬಂದಿದ್ದರು. ಚಂದಾ ಕೂಡಿಸಲು ಸ್ವತಃ ಹೊರಟಿದ್ದರು. ಅಲ್ಲಲ್ಲಿ ಸಭೆ ಸೇರಿಸಿ ದೇಶೀಯ ಕೈಗಾರಿಕೆಗಳ ಆವಶ್ಯಕತೆಯನ್ನು ಕುರಿತು ಮಾತನಾಡುತ್ತಿದ್ದರು. "ನಮ್ಮ ದೇಶದ ಕೈಗಾರಿಕೆಗಳು ಅಭಿವೃದ್ಧಿಗೆ ಬಂದುವೆಂದರೆ ಅಂದೇ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದಿತೆಂದು ತಿಳಿಯಿರಿ" ಎಂದು ಪ್ರತಿಸಭೆಯಲ್ಲಿಯೂ ಒತ್ತಿ ಒತ್ತಿ ಹೇಳುತ್ತಿದ್ದರು.

ಎಲ್ಲರೂ ಉತ್ಸಾಹದಿಂದ ಚಂದಾ ಕೊಡುತ್ತಿದ್ದರು. ಯಾರೂ-"ಈ ಕಾರ್ಖಾನೆಗಳಿಂದೆಲ್ಲ ನಮ್ಮ ದೇಶದಲ್ಲಿ ಏನು ಉದ್ಧಾರವಾಗುತ್ತದೆ? ಹಾಗೆ, ಹೀಗೆ," ಎಂದು ಹೇಳಲಿಲ್ಲ. ಆದರೆ ಪ್ಲೀಡರ್ ಗರುಡಯ್ಯಂಗಾರ್ಯರು ಮಾತ್ರ ತರಲೆಗೆ ಪ್ರಾರಂಭಿಸಿದರು.

ಮೂಗಿನ ತುದಿಯಲ್ಲಿ ಕುಳಿತಿದ್ದ ಮುರುಕು ಕನ್ನಡಕದಿಂದ ಇಂಜಿನಿಯರ ಕಡೆಗೆ ನೋಡುತ್ತ, 'ನಿಮಗೆ ಕೆಲಸವಿಲ್ಲ ಹೋಗಿ ಹೋಗಿ' ಎಂದು ಹಾಸ್ಯಮಾಡುವ ರೀತಿಯಲ್ಲಿ ನಗುತ್ತ-"ಏನು! ಬೆಂಕಿಪೆಟ್ಟಿಗೆ ಕಾರ್ಖಾನೆಯೊ ನೀವು ಸ್ಥಾಪಿಸುವುದು? ಎಂಥಾ ಬೆಂಕಿಪೆಟ್ಟಿಗೆ ಕಾರ್ಖಾನೆ? ನಾವು ಕಷ್ಟಪಟ್ಟು ದುಡಿದದ್ದನ್ನೆಲ್ಲ ಬೆಂಕಿಗೆ ಹಾಕಿಸುವುದಕ್ಕೆ ನೋಡುತ್ತಾ ಇದ್ದೀರೋ? ಹೀಗೆಲ್ಲ ಕೇಳಿ ಕೇಳಿದ್ದಕ್ಕೆಲ್ಲ ದುಡ್ಡು ಕೊಟ್ಟು ಮನೆಹಾಳು ಮಾಡಿಕೊಳ್ಳಲು ನನಗೇನೂ ತಿಕಲು ಹತ್ತಿಲ್ಲ. ಇಂಥಾದ್ದೇಷ್ಟೊ ನೋಡಿದ್ದೇನೆ ನಾನು. ಹಳೇ ಹುಲಿ ಸ್ವಾಮೀ ನಾನು; ನನ್ನನ್ನು ನೀವು ಬಲೆಗೆ[illegible] ಎಂದರು.

ರಾಮಸ್ವಾಮಯ್ಯಂಗಾರ್ಯರಿಗೆ ಮನಸ್ಸಿಗೆ [illegible] ಒಂದು ವಿಧವಾಯಿತು. ಯಾರೂ ಹೀಗೆ[illegible] ಎಲ್ಲರೂ ಉತ್ಸಾಹದಿಂದ ಚಂದಾ ಕೊಟ್ಟಿದ್ದರು[illegible] ಯ್ಯಂಗಾರ್ಯರನ್ನು ಕುರಿತು:—"ಏನು ಸ್ವಾಮಿ[illegible] ಹೇಳುತ್ತೀರಿ? 'ಎಂಥಾ ಬೆಂಕಿಪೆಟ್ಟಿಗೆ ಕಾರ್ಖಾನೆ' ಕೇಳುತ್ತೀರಿ. ಪ್ರಪಂಚದಲ್ಲಿ ಎಲ್ಲ ಕಡೆಯಲ್ಲಿಯೂ[illegible] ವಂಥಾದ್ದೇ. ಎಲ್ಲರೂ ದ್ರವ್ಯ ಸಹಾಯ [illegible] ದ್ದಾರೆ, ದೇಶೋದ್ಧಾರವಾಗಲಿ – ಎಂದು. ತಾವು[illegible] ಹೀಗೆಲ್ಲ ಮಾತನಾಡುವವರು" ಎಂದು [illegible] ರಾಮಸ್ವಾಮಯ್ಯಂಗಾರ್ಯರು. ಅದಕ್ಕೆ ಗರು[illegible] ಗಾರ್ಯರು—'ಎಲ್ಲರೂ ಕೊಡುತ್ತಿರಬಹುದು! ಎಲ್ಲರಿಗೂ ನನ್ನಷ್ಟು ಅನುಭವ ಎಲ್ಲಿದೆ? ಇಪ್ಪತ್ತು[illegible] ಕಾಲ ಕಷ್ಟಪಟ್ಟು ದುಡಿದವನು; ನನಗೆ ಗೊತ್ತಿ[illegible] ಈಗಿನ ಕಾಲದವರಿಗೆ ಏನು ಗೊತ್ತಿದೆ? ಎಲ್ಲರೂ[illegible] ಯುತ್ತಾರೆ. ದುಡ್ಡು ಕೇಳುವುದೇ ತಡ, [illegible] ದುಡ್ಡು ಹಾಳುಮಾಡುತ್ತಾರೆ ಈಗಿನ ಕಾಲದ[illegible] ಮನಸ್ಸಿಗೆ ಧೈರ್ಯವಾದ ಹೊರತು ನಾನು [illegible] ದಕ್ಕೂ ಒಂದು ಕಾಸೂ ಕೊಡುವುದಿಲ್ಲ. [illegible] ಳಿಗೆ ಒಂದು ಹೊಲಿಯುವ ಯಂತ್ರ ಬೇಕು [illegible] ಮನೆಯವಳು ಹಟಹಿಡಿದಾಗ, ನಾನೇ ಸ್ವತಃ ಹೋಗಿ, ಮಿಷನ್ನಿನ ಭಾಗಗಳನ್ನೆಲ್ಲ ಕೈಯಿಂದ[illegible] ನೋಡಿ, ಪರೀಕ್ಷೆ ಮಾಡಿ, ಮಿಷನ್ ಸರಿಯಾಗಿ[illegible] ಮನಸ್ಸಿಗೆ ಧೈರ್ಯಮಾಡಿಕೊಂಡು ಆದ[illegible] ತಂದೆ. ಅಂಥಾದ್ದರಲ್ಲಿ ಅದೂಕೂಡ ಈಗ ಕೆಟ್ಟು[illegible]

CC-0. Jangamwadi Math Collection. Digitized by eGangotri

ಬಂದಿದೆ. ತೆಗೆದುಕೊಂಡು ಇನ್ನೂ ಹನ್ನೆರಡು ವರ್ಷ ವಾಗಿಲ್ಲ. ಈ ಯಂತ್ರಗಳ ಹಣೆಯಬರಹವೇ ಇಷ್ಟು-ತೆಗೆದುಕೊಂಡ ನಾಲ್ಕುದಿನಗಳಲ್ಲೆ ಕೆಟ್ಟು ಹೋಗುತ್ತವೆ.

ಇಂಜನಿಯರಿಗೆ ಬಹಳ ಬೇಸರವಾಯಿತು. ಏನೂ ಕೊಡುವುದಿಲ್ಲ ಎಂದು ಹೇಳಿದ್ದರೆ ಹೊರಟುಹೋಗುತ್ತಿದ್ದರು. ಗರುಡಯ್ಯಂಗಾರ್ಯ್ಯರ ಪುರಾಣವು ಅವರಿಗೆ ಬೇಡವಾಗಿತ್ತು. ಆದ್ದರಿಂದ ಸ್ವಲ್ಪುಸಿಟ್ಟುಗೊಂಡು— 'ಹಾಗೇನೂ ಆಗೋದಿಲ್ರೀ! ಸರ್ಕಾರದವರ ಸಹಾಯ ವನ್ನೂ ತೆಗೆದುಕೊಂಡು, ಬುದ್ಧಿವಂತರನ್ನೇ ಕಾರ್ಖಾನೆ ಕೆಲಸಗಳಿಗೆ ನೇಮಿಸುತ್ತೇವೆ' ಎಂದರು.

ಗರುಡಯ್ಯಂಗಾರ್ಯರು 'ಏನು ಸರ್ಕಾರವೇ—ಅಯ್ಯಾ ನನಗೆ ಗೊತ್ತಿಲ್ಲದ ಸರ್ಕಾರವೆ! ಹಳೇಹುಲಿ ನಾನು ಎಂತ ಆಗಲೇ ಹೇಳಲಿಲ್ಲವೇ? ಸರ್ಕಾರದ ಆಫೀಸರುಗಳ ಕೈಯಲ್ಲಿ— ಆ ಹಳೇ ಹೆಗ್ಗಣಗಳ ಕೈಯಲ್ಲಿ ಕಾರ್ಖಾನೆ ಸಿಕ್ಕಿದರೆ, ದೇವರೇ ಗತಿ! ನಾವು ಕೊಟ್ಟ ದುಡ್ಡೆಲ್ಲ ಸೀರಿನಲ್ಲಿ ಹೋಮ ಮಾಡಿದ ಹಾಗೆಯೇ ಸರಿ ............'

ರಾಮಸ್ವಾಮಯ್ಯಂಗಾರ್ಯರಿಗೆ ಬಹಳ ಬೇಸರವಾಯಿತು. ಮುಖ ಗಂಟಿಕ್ಕಿದರು. ನೀವು ಕೊಟ್ಟರೆ ಕೊಡಿ; ಇಲ್ಲ ದಿದ್ದರೆ ಬಿಡಿ, ನಿಮ್ಮ ಪುರಾಣ ನಮಗೆ ಬೇಕಾಗಿಲ್ಲ' ಎಂದು ಹೇಳುವುದರಲ್ಲಿದ್ದರು. ಅಷ್ಟರಲ್ಲೆ ಗರುಡಯ್ಯಂಗಾರ್ಯರು 'ಮುಖ ಗಂಟುಹಾಕಬೇಡಿ. ಚಂದಾ ಕೊಡುತ್ತೇನೆ ನಾನು ಒಳ್ಳೆಯ ಕೆಲಸಗಳಿಗೆ ಹಣಕೊಡಲು ಸಂಕಟಪಡುವುದಿಲ್ಲ ನಾನು. ಕೊಡುವುದು ಎಷ್ಟೇ ಅಲ್ಪವಾಗಲಿ ಅದು ಸದ್ವಿನಿಯೋಗವಾಗಬೇಕು—ಅಂತ ನಾನು ಇಷ್ಟೆಲ್ಲ ಹೇಳುತ್ತಿರುವುದು' ಎನ್ನುತ್ತ ಪಾಕೀಟಿನಿಂದ ರೂಪಾಯಿಗಳನ್ನು ತೆಗೆದು, ಎರಡುಸಾರಿ ಹುಷಾರಾಗಿ ಎಣಿಸಿ, ಇದೋ ತಕ್ಕೊಳ್ಳಿ-ಎಂದು ಹೇಳಿ, ಕೊಡುವ ಮೊದಲು ಹೀಗೆ ಹೇಳಿದರು "ಕಾರ್ಖಾನೆ ಕೆಲಸ ಪ್ರಾರಂಭವಾಗುವ ಮೊದಲು ಸಾಮಾನುಗಳನ್ನೆಲ್ಲ ನೋಡುವುದಕ್ಕೆ ನಮಗೆ ಅವಕಾಶ ಕೊಡುತ್ತೀರಿ ತಾನೆ? ಯಾವುದನ್ನೆ ಆಯಿತು, ನಮ್ಮ ನಮ್ಮ ಕಣ್ಣಿಂದ ನಾವು ನೋಡುವುದು ಒಳ್ಳೆಯದು. ಅದಕ್ಕೆ ಒಂದು ಗಾದೆ ಇದೆ ಕೇಳಿ— ನಮ್ಮ ಕಣ್ಣು ನಮಗೆ ವಜ್ರ; ಇತರರದು ಕಲ್ಲು- ಎಂತ" ಲಕ್ಷರೂಪಾಯಿಯ ಪ್ರಾಣಿ ಹತ್ತು ರೂಪಾಯಿಗಳನ್ನು ಕೊಟ್ಟನು.

೨

ಗರುಡಯ್ಯಂಗಾರ್ಯರಿಗೆ ಮನಸ್ಸಿಗೆ ಸಮಾಧಾನವಾಗ ಲಿಲ್ಲ. 'ಕಾರ್ಖಾನೆ ಹತ್ತುಪಾಲಿಗೆ ಉದ್ಧಾರವಾಗುವುದಿಲ್ಲ- ಹಣಕೊಟ್ಟದ್ದು ಹಾಳು ಎಂತ ಕಾಣಿಸುತ್ತದೆ' ಎಂದು ಗೊಣಗುತ್ತಲೇ ಇದ್ದರು. ಇಂಜನೀಯರ್ ರಾಮಸ್ವಾಮಯ್ಯಂಗಾರ್ಯರು ಎಲ್ಲಿ ಸಿಕ್ಕರೆ ಅವರನ್ನು ಅಲ್ಲಿಯೆ ನಿಲ್ಲಿಸಿ 'ಏನ್ರೀ, ಏನಾಯ್ತು ಕಾರ್ಖಾನೆ? ಈಚೆಗೇನಾದರೂ ಚಂದಾ ದೊರೆಯುತ್ತಿದೆಯೋ 'ಎಂದು ಮುಂತಾಗಿ ವಿಚಾರಿಸುತ್ತಲೇ ಇದ್ದರು.

೩

ಕಾರ್ಖಾನೆಯ ಕಟ್ಟಡವು ತಯಾರಾಗುತ್ತಿತ್ತು. ಯಂತ್ರದ ಸಾಮಾನುಗಳೆಲ್ಲ ಬಂದು ಅವುಗಳನ್ನು ಜೋಡಿಸುತ್ತಿದ್ದರು. ಗರುಡಯ್ಯಂಗಾರ್ಯರು ಒಂದುದಿನ ಕಾರ್ಖಾನೆಗೆ ಹೋದರು. ಕಾರ್ಖಾನೆಯಲ್ಲೆಲ್ಲ ಸುತ್ತಿದರು. ನಾಣ್ಯವು ಒಳ್ಳೆಯದೊ ಕೆಟ್ಟದೊ ಎಂದು ಪರೀಕ್ಷಿಸುವುದಕ್ಕೆ ಅದನ್ನು ಸದ್ದುಮಾಡಿ ನೋಡುವಂತೆ, ಗರುಡಯ್ಯಂಗಾರ್ಯರು, ಕಬ್ಬಿಣದ ಯಂತ್ರದ ಸಾಮಾನುಗಳನ್ನು ತಮ್ಮ ಕೋಲಿನಿಂದ ಸದ್ದುಮಾಡಿಮಾಡಿ ನೋಡಿದರು. 'ಸರಿ! ಫರವಾ ಇಲ್ಲ' ಎನ್ನುವಂತೆ ಒಂದೊಂದು ಸಾರಿ ತಲೆಯನ್ನು ಅಲ್ಲಾಡಿಸುವರು. ಕೂಲಿಯವರು ಕೆಲಸಮಾಡುತ್ತಿದ್ದ ಒಂದು ಕಡೆಗೆ ಹೋದರು. ಕೂಲಿಯವರನ್ನು ನೋಡಿ, 'ಏನ್ರಯ್ಯಾ ಏನು ಮಾಡುತ್ತೀರಿ? ಸರಿಯಾಗಿ ಕೆಲಸ ಮಾಡಿ. ಕೂಲಿಗಾರರ ವಿಷಯವೆಲ್ಲ ನನಗೆ ಗೊತ್ತಿದೆ. ತಕಾರಿಕೆ ಕೆಲಸ ಮಾಡುತ್ತೀರಿ-ದುಡ್ಡು ಸೆಳೆಯುತ್ತೀರಿ. ಕಾರ್ಖಾನೆ ಪ್ರಾರಂಭಿಸಿದ ನಾಲ್ಕು ದಿವಸಕ್ಕೆ ಒಂದಲ್ಲ ಒಂದು ಚಕ್ರ ಸರಿಯಾಗಿ ತಿರಗುವುದಿಲ್ಲ. ಆಳು ಮಾಡಿದ್ದು ಹಾಳು ಎಂದು ಗಾದೆಯಿಲ್ಲವೇ! ....' ಎಂದು ಮುಂತಾಗಿ ಪ್ರಾರಂಭಿಸಿದರು.

ಕೆಲಸಗಾರರೆಲ್ಲ ಇವರ ಕಡೆ ತಿರುಗಿ ನೋಡಲಾರಂಭಿಸಿದರು. ಕೆಲಸದ ಮಧ್ಯದಲ್ಲಿ ಗಲಾಟೆ ಮಾಡುವರು ಇವರು ಯಾರೆಂದು ಕಾರ್ಖಾನೆಯ ಅಧಿಕಾರಿಯು 'ನೀವು ಯಾರ್ರೀ? ನಿಮಗಿಲ್ಲಿ ಏನ್ರೀ ಕೆಲಸ?' ಎಂದು ಗರುಡಯ್ಯಂಗಾರ್ಯರನ್ನು ಗದರಿಸಿದನು.

ಗರುಡಯ್ಯಂಗಾರ್ಯರು ಇಂತಹ ಗದರಿಕೆಗಳಿಗೆ ಹೆದರುವರೆ?— 'ಹಣಬೇಕಾದಾಗ ಮಾತ್ರ ನಮ್ಮ ಮನೆಯ

CC-0. Jangamwadi Math Collection. Digitized by eGangotri

ಬಾಗಿಲಿಗೆ ಬರುತ್ತೀರಿ. ಈಗ ನಾವಿಲ್ಲಿ ಬಂದರೆ, ಏನು ಕೆಲಸ ಎಂದು ನಮ್ಮನ್ನು ಗದರಿಸುತ್ತೀರಾ ? ಇಂಥಾದ್ದೆಷ್ಟೊ ನೋಡಿದ್ದೇನೆ ನಾನು. ಇಂಥಾ ಬೆದರಿಕೆಗಳಿಗೆಲ್ಲ ಬೆದರುವುದಕ್ಕೆ.... ಹಳೇ ಹುಲಿ ನಾನು ! ನಮ್ಮ ಹಣದ ಸಹಾಯ ಇಲ್ಲದಿದ್ದರೆ ನಿಮ್ಮ ಕಾರ್ಖಾನೆ ಎಲ್ಲಿ ಇರುತ್ತಿತ್ತೊ ?" ಎಂದರು. ಕಾರ್ಖಾನೆಯಲ್ಲಿ ಇನ್ನೊಂದು ಸುತ್ತು ಸುತ್ತಿ ಮನೆಗೆ ಹೊರಟರು.

೪

ಅಂದಿನಿಂದ ದಿನವೂ ಕಾರ್ಖಾನೆಗೆ ಬರಲು ಪ್ರಾರಂಭಿಸಿದರು. ಒಂದೊಂದು ದಿನ ಎರಡುಸಾರಿ ಕೂಡ ಬರಲು ಪ್ರಾರಂಭವಾಯಿತು. ಬಂದಾಗಲೆಲ್ಲ ಕೂಲಿಕಾರರ ಮೇಲೆ ಯಜಮಾನಿಕೆ ಮಾಡುವುದು; ಅವರನ್ನು ಗದರಿಸುವುದು; ಯಂತ್ರಗಳನ್ನು ಅಲ್ಲಿಂದ ತರಿಸಬೇಕಾಗಿತ್ತು, ಇಲ್ಲಿಂದ ತರಿಸಬೇಕಾಗಿತ್ತು ಎನ್ನುವುದು; ಕೊಳ್ಳುವುದರಲ್ಲಿ ಚೌಕಶಿ ಮಾಡುವುದೇ ಇಲ್ಲ ಇವರು-ಎಂದು ಗೊಣಗುವುದು; ಹೀಗೆಲ್ಲ ಆರಂಭವಾಯಿತು.

ಇದನ್ನೆಲ್ಲ ಸ್ವಲ್ಪ ಸಹಿಸಿಕೊಳ್ಳುವಂತೆ ಅಧಿಕಾರಿಗೆ ಹೇಳಿದ್ದರು. ಆದರೆ ಅವನಿಗೂ ಸಹಿಸಿ ಸಹಿಸಿ ಸಾಕಾಯಿತು. ಒಂದು ದಿವಸ ಗರುಡಯ್ಯಂಗಾರ್ಯರಿಗೆ ಹೇಳಿದನು–' ನೀವು ಹೀಗೆ ಪದೇ ಪದೇ ಬರುವುದು ಸರಿಯಲ್ಲ. ಬರಬೇಡಿ. ಹಗಲೂ ಇರಳೂ ಇಲ್ಲಿ ಬಂದು ಗಲಾಟೆ ಮಾಡಿದರೆ, ನಮ್ಮ ಕೆಲಸವೆಲ್ಲ ಹಾಳಾಗುತ್ತದೆ....ದಯವಿಟ್ಟು ಇಲ್ಲಿಂದ ಹೊರಡಿ '.

ಗರುಡಯ್ಯಂಗಾರ್ಯರು–'ಏನಂದಿರಿ, ಕೆಲಸವು ಹಾ ಗುತ್ತದೆಯೆ ? ಹಾಗಾದರೆ ನಾವು ಕೊಟ್ಟಹಣ ಏ ಬೇಕು ?'

ಅಧಿಕಾರಿಯು–' ಎಷ್ಟೋ ನೀವು ಕೊಟ್ಟ ಹಣ ' ಎಂದು ಸಿಟ್ಟಿನಿಂದ ಕೂಗಿಕೊಂಡನು.

ಗರುಡಯ್ಯಂಗಾರ್ಯರು–' ಎಷ್ಟಾದರೇನು. ಕಾಸಿಗೂ ಬೆಲೆಯಿದೆ. ನಾನು ಕೊಟ್ಟಿರುವುದು ರೂಪಾಯಿ '

ಅಧಿಕಾರಿಯು ಮೇಜಿನ ಡ್ರಾಯರನ್ನು ತೆಗೆ ರೂಪಾಯಿಗಳನ್ನು ಅವರಕಡೆಗೆ ಎಸೆದು,–" ಹಳೇ ಯಲ್ಲ – ಹಳೇ ಶನಿ ಇದು, ತೊಲಗಿ ಹೋಗಲಿ" ಕೊಂಡನು.

ಅಯ್ಯಂಗಾರ್ಯರು ಸಂತೋಷದಿಂದ ರೂಪಾಯಿ ತೆಗೆದುಕೊಂಡು, ' ಏಸದು, ಶನಿ ಗಿನಿ ಎನ್ನುತ್ತೀ ಚಂದಾಕೊಡುವುದಲ್ಲದೆ ನಿಮ್ಮಹತ್ತಿರ..........'

ಅಧಿಕಾರಿಗೆ ರೇಗಿ ಹೋಯಿತು; ಕಣ್ಣು ಕೆಂ ಯಿತು; ಮುಷ್ಟಿ ಕಟ್ಟಿಕೊಂಡು, ತೊಲಗುತ್ತೀ ಇಲ್ಲವೊ ಶನೀ ಇಲ್ಲಿಂದ– ಎಂದು ಹೆಜ್ಜೆ ಮುಂದಿಟ್ಟ ಅಧಿಕಾರಿಯು ಜೋರಾದ ಮೈಕಟ್ಟಿನವನು. ಸಿಟ್ಟಿ ಅವನ ಭೈರವ ರೂಪವನ್ನು ನೋಡಿ, ಐಯ್ಯಂಗಾ ಸರ್ರನೆ ರೂಮಿನ ಬಾಗಿಲನ್ನು ಸೆಳೆದುಕೊಂಡು ಯನ ಮಾಡಿದರು.*

* ( ರಷಿಯನ್ ಕಥೆಯೊಂದನ್ನವಲಂಬಿಸಿ ಬರೆದುದು. )

CC-0. Jangamwadi Math Collection. Digitized by eGangotri

## ವಿಜಯಾದಿತ್ಯನ

# ಅಮ್ಮಣಿಗಿ ತಾಮ್ರಶಾಸನವು


ಲೇಖಕರುಃ— ಪಂಡಿತ ಚಿದಿರೇಮಠದ ವೀರಭದ್ರಶರ್ಮ

ವೇದತೀರ್ಥ, ಕಾವ್ಯತೀರ್ಥ, ಸಾಹಿತ್ಯವಿಶಾರದ,

( ಕಾಶಿಯ ಶೈವಭಾರತೀಭವನ ಪರಿಶೋಧನ ಸಂಘದಿಂದ, )


**ಪ್ರಾಚೀನಶಾಸನಪ್ರಶಸ್ತಿ:—** ಪೂರ್ವಕಾಲದಲ್ಲಿ ರಾಜಾಧಿರಾಜರು, ಸುಪ್ರಸಿದ್ಧರಾದ ಪಂಡಿತ-ಯತಿ ಪುರೋಹಿತರಿಗೂ ಮಠಮಂದಿರಗಳಿಗೂ ಗೋ-ಭೂ-ಹಿರಣ್ಯಾದಿಗಳನ್ನು ದಾನವಾಗಿ ಕೊಟ್ಟು ಅವರನ್ನತಿ ಶ್ರದ್ಧೆಯಿಂದ ಸತ್ಕರಿಸುತ್ತಿದ್ದರು. ಅಂತೆಯೆ ನಮ್ಮ ಸನಾತನ ಧರ್ಮವು ಇದುವರೆಗೆ ಸನಾತನವಾಗಿ ಉಳಿಯಲು ಸಾಧ್ಯವಾಯಿತು. ಅತ್ಯುತ್ತಮವಾದ ಶಾಸ್ತ್ರಗಳೂ ಆಧ್ಯಾತ್ಮ ವಿದ್ಯೆಯೂ ಪರಂಪರೆಯಾಗಿ ಬದುಕಿಕೊಂಡಿರಲಿಕ್ಕೆ ಅವಕಾಶ ದೊರೆಯಿತು. ಆದರೆ ದಾನಗಳು ಕೇವಲ ವಾಗ್ದಾನಗಳಾಗಿರದೆ ಶಾಶ್ವತವಾಗಿ ನಡೆಯಲೆಂಬ ಉದ್ದೇಶದಿಂದ, ಶಿಲೆಗಳಲ್ಲಿಯೋ ತಾಮ್ರಪತ್ರಗಳಲ್ಲಿಯೋ ವಿಶದವಾಗಿ ಉಭಯತರ (ಕೊಡುವ ತೆಗೆದುಕೊಳ್ಳುವರ) ಪ್ರಶಸ್ತಿಗಳನ್ನು ಬರೆದು ಚಂದ್ರಸೂರ್ಯರ ಸಾಕ್ಷಿಯಾಗಿ ಪ್ರತಿಜ್ಞೆಮಾಡಿ ಕೊಡುತ್ತಿದ್ದರು. ಈ ಪದ್ಧತಿಯನ್ನು ನಮ್ಮ ಮಹರ್ಷಿಗಳೇ ಆವಿಷ್ಕರಿಸಿದರೆಂಬುವುದಕ್ಕೆ ಧರ್ಮಶಾಸ್ತ್ರಗಳು ಸಾಕ್ಷಿಯಾಗಿವೆ.—

> ॥ ದತ್ವಾ ಭೂಮಿಂನಿಬಂಧಂವಾ ಕೃತ್ವಾ ಲೇಖ್ಯಂತು ಕಾರಯೇತ್ ।
> ಆಗಾಮಿಭದ್ರನೃಪತಿ ಪರಿಜ್ಞಾನಾಯ ಪಾರ್ಥಿವಃ ॥೩೧೮॥
> ಪಟೇವಾ ತಾಮ್ರಪಟ್ಟೇವಾ ಸ್ವಮುದ್ರೋಪರಿ ಚಿಹ್ನಿತಂ ।
> ಅಭಿಲೇಖ್ಯಾತ್ಮನೋ ವಂಶಾನಾತ್ಮಾನಂಚ ಮಹೀಪತಿಃ ॥೩೧೯॥
> ಪ್ರತಿಗ್ರಹಪರೀಮಾಣಂ ದಾನಚ್ಛೇದೋಪವರ್ಣನಂ ।
> ಸ್ವಹಸ್ತಕಾಲಸಂಪನ್ನಂ ಶಾಸನಂ ಕಾರಯೇತ್ಸ್ಥಿರಂ ॥ ೩೨೦ ॥

ಆದರೆ ಪ್ರಾಚೀನಾಕ್ಷರಗಳು ಆಧುನಿಕಾಕ್ಷರಗಳಂತಿರದೆ ಕೇವಲ 'ಪ್ರಕೃತಿ' ಗಳಾದುದರಿಂದಲೂ ಮಧ್ಯಕಾಲದಲ್ಲಿ ಶಾಸನಪಠನಪರಂಪರೆಯು ತಪ್ಪಿಹೋದುದರಿಂದಲೂ ಆಧುನಿಕರಾದ ಮಹಾಮಹಾ ವಿದ್ವಾಂಸರಿಗೂ ಈ ಶಿಲಾತಾಮ್ರಶಾಸನಗಳನ್ನೋದಲಿಕ್ಕೆ ತಿಳಿಯುತ್ತಿರಲಿಲ್ಲ. ಇತ್ತೀಚೆಗೆ ಭಾರತದೇಶದಲ್ಲಿ ಆಂಗ್ಲರಾಡಳಿತವು ಪ್ರಾರಂಭವಾದೊಡನೆ ಕ್ರೀ. ಶ. ೧೭೮೪ ನೆಯ ಜನವರಿಯಲ್ಲಿ ಕಲಕತ್ತೆಯ ಪ್ರಾಚ್ಯಸಂಶೋಧನಸಂಘವು (Asiatic society) ಸ್ಥಾಪಿತವಾಯಿತು. ಅದು ಮೊದಲುಗೊಂಡು ಪ್ರಾಚ್ಯಪಾಶ್ಚಾತ್ಯಪಂಡಿತರನೇಕರು ದೃಢಪರಿಶ್ರಮ ಗೈದುದರಿಂದಲೇ ಭಾರತವರ್ಷದ ಇತಿಹಾಸವೂ ತಾಮ್ರಶಾಸನಾದಿ ಇತಿಹಾಸದ ಮಹತ್ವದ ಸಾಮಗ್ರಿಯೂ ಪ್ರಕಾಶಕ್ಕೆ ಬಂದಿತು.

**ಅಮ್ಮಣಿಗಿಯ ಶಾಸನವೃತ್ತಾಂತ:—** ಬೆಳಗಾವಿಯ ಚಂದ್ರಶೇಖರಮಠಾಧ್ಯಕ್ಷರೂ ನನ್ನ ಪ್ರಿಯ ಮಿತ್ರರೂ ಆದ **ಪಂಡಿತ ಶ್ರೀ. ಗುರುಲಿಂಗದೇವ ಸ್ವಾಮಿಗಳ**ವರಿಂದ ಈ ಶಾಸನದ ಒಂದು ಪತ್ರವು ಮೂರು ವರ್ಷಗಳ ಹಿಂದೆಯೇ ದೊರೆಯಿತು. ಇದರ ವಿಚಾರವಾಗಿ ಸ್ವಾಮಿಗಳು ಹೇಳಿದುದೇನಂದರೆ:— "೧೫ ವರ್ಷಗಳ ಹಿಂದೆ ನಮ್ಮ ಜನ್ಮಭೂಮಿಯಾದ ಅಮ್ಮಣಿಗಿಯ ಹಿರೆಯ ಮಠದಲ್ಲಿ ಈ ಶಾಸನವು ಮೊದಲು ಕಣ್ಣಿಗೆಬಿದ್ದಿತು. ಈ ಹಿರೆಯಮಠದ ಪೂರ್ವಜರು ಶ್ರೀಶೈಲದ ಬಳಿಯಲ್ಲಿರುವ ಸುಪ್ರಸಿದ್ಧ **ಸಾರಂಗಮಠಕ್ಕೆ** ಸೇರಿದವರಾಗಿದ್ದರು, ಅವರಲ್ಲಿ ಉತ್ಕೃಷ್ಟ ತಪಸ್ವಿಗಳೂ ವಿದ್ವಾಂಸರೂ ಆದ ಮಾಹೇಶ್ವರ ಮೂರ್ತಿಗಳಿದ್ದರು, ಪಶ್ಚಿಮ ಚಾಳುಕ್ಯ ರಾಜರಾಳಿಕೆಯಲ್ಲಿ ಪಂಡಿತಾದರಣವು ಬಹಳವಾಗಿದ್ದುದರಿಂದು ನಮ್ಮ ಪೂರ್ವಜರಲ್ಲಿ ಕೆಲವರು ಅಲ್ಲಿಂದ ಹೊರಟು



CC-0. Jangamwadi Math Collection. Digitized by eGangotri

ಅಮ್ಮಣಿಗಿಗೆ ಬಂದು ವಾಸಮಾಡಿದರು. ಶಾಸನವಿದು ಚಾಳುಕ್ಯ ಮಹಾರಾಜರುಗಳಿಂದ ಭೂದಾನ ನಿಮಿತ್ತ ವಾಗಿ ನಮ್ಮ ಪೂರ್ವಜರಿಗೆ ಕೊಡಲ್ಪಟ್ಟಿತೆಂಬ ಪ್ರಸಿದ್ಧಿಯು ಪರಂಪರೆಯಾಗಿ ಬಂದಿದೆ. ಮೂವತ್ತು ವರ್ಷಗಳ ಪೂರ್ವದಲ್ಲಿ ಈ ಶಾಸನದ ಮೂರು ಪತ್ರಗಳಿದ್ದುವು; ಈ ನಡುವೆ ಕೆಲವು ವೀರಶೈವ ವಿದ್ವಾಂಸರೂ ಇತರ ಪರಿಶೋಧಕರೂ ಅಮ್ಮಣಿಗಿಯ ಮಠದಲ್ಲಿಯ ಅನೇಕ ತಾಳೆಯೋಲೆಯ ಪುಸ್ತಕಗಳನ್ನೂ ತಾಮ್ರಪತ್ರಗಳನ್ನೂ ಸಂಗ್ರಹಿಸಿಕೊಂಡು ಹೋದಂತೆಯೂ ಮನೆಯವರ ಅಜಾಗ್ರತೆಯ ಮೂಲಕ ಕೆಲವು ಪತ್ರಗಳೆಲ್ಲಿಯೋ ವಿನಿಮಯವಾದಂತೆಯೂ ತಿಳಿದು ಬಂದಿದೆ. ಆದರೂ ಈ ಶಾಸನಕ್ಕೆ ಸಂಬಂಧಿಸಿದ ಉಳಿದ ಪತ್ರಗಳು ಸಿಕ್ಕಬಹುದೆಂದು ಆಶೆಯಿದೆ ".

**ಶಾಸನ ಪಠನ**:–ಈ ಶಾಸನವು ಎಂತಹ ಮುಹೂರ್ತದಲ್ಲಿ ಹೊರಕ್ಕೆ ಬಂದಿತೋ ಏನೋ! ಚಾಂಚಲ್ಯವು ಇದರ ಮುಖ್ಯ ಗುಣವಾಗಿ ಪರಿಣಮಿಸಿತೆಂದು ಹೇಳಬಹುದು. ಶಾಸನದಲ್ಲಿ ಏನಿದೆಯೋ ಎಂಬ ಅಭಿಲಾಷೆಯಿಂದ "ಪ್ರಾಚ್ಯತತ್ವವಿಶಾರದರಾದ" ಅನೇಕ ಮಿತ್ರರ ಸನ್ನಿಧಿಗಿದನ್ನು ಕಳುಹಿಸಿಕೊಂಡೆವು. ಮದ್ರಾಸು, ಮೈಸೂರು, ಹೈದರಾಬಾದು ಮುಂತಾದ ಪಟ್ಟಣಗಳನ್ನೆರಡು ವರ್ಷ ಕಾಲದವರೆಗೂ ಸುತ್ತಿಕೊಂಡು ಮರಳಿ ಈ ಶಾಸನವು ನಮ್ಮ ಕಡೆಗೇ ಬಂದುಬಿಟ್ಟಿತು. ಪ್ರಸಂಗವಶಾತ್ ಬನಾರಸ ಹಿಂದುವಿಶ್ವವಿದ್ಯಾನಿಲಯದ ಐತಿಹಾಸಿಕ ಪ್ರಧಾನಾಧ್ಯಕ್ಷರಾದ(ಈಗ ಸ್ವರ್ಗೀಯರು)ವಿದ್ವದ್ವರ್ಯ **ಆರ್. ಡಿ. ಬ್ಯಾನರ್ಜೀ**ಯವರ ಕಣ್ಣಿಗೆ ಬಿದ್ದಾಗ ಇದನ್ನವರು ಪ್ರೀತಿಯಿಂದೋದಿ ಇದ್ದ ತಿರುಳನ್ನು ಶ್ರೀಗುರು ಲಿಂಗದೇವಸ್ವಾಮಿಗಳವರ ಮುಂದೆ ತಿಳುಹಿಸಿದ್ದರು. ಇದನ್ನು ಮೊದಲೋದಿದ ಶ್ರೇಯಸ್ಸು ಶ್ರೀ. ಬ್ಯಾನರ್ಜಿಯವರಿಗೇ ಸಲ್ಲುವುದು. ಬಳಿಕ ನಾವೇ ಓದಿ ತಿಳಿದುಕೊಂಡರೆ ಆಗದೇ?–ಎಂದು ಯೋಚಿಸಿ ಅದರಲ್ಲಿಯ ಲಿಪಿಯನ್ನು ತಿಳಿದುಕೊಳ್ಳಲು ಹಣಗತೊಡಗಿದೆವು. ಬಹು ದಿವಸದಿಂದಿದ್ದ ನನ್ನ ಇತಿಹಾಸ ಪ್ರೇಮವನ್ನು ಈ ಶಾಸನವು ಜಾಗ್ರುತಗೊಳಿಸಿತು. ಶ್ರೀಗುರುಲಿಂಗದೇವಸ್ವಾಮಿಗಳು ನಾನು ಕೂಡಿ ಈ ಶಾಸನವನ್ನು ಓದಿ ಮುಗಿಸಿದ್ದರೂ ಬೇರೆ ಬೇರೆ ಕೆಲಸದ ಗಲಾಟೆಯಲ್ಲಿ ಅದರ ಸಕ್ರಮಪಾಠ ಟಿಪ್ಪಣ್ಯಾದಿಗಳಿಂದ ಲೇಖವನ್ನು ಸಿದ್ಧಗೊಳಿಸ[illegible] ಲಿಲ್ಲ. ಇತ್ತೀಚೆಗೆ ಸಂಕ್ಷಿಪ್ತ ಲೇಖನದೊಂದಿಗೆ [illegible] ಸಾಹಿತ್ಯ ಪರಿಷತ್ಪತ್ರಿಕಾಧ್ಯಕ್ಷರಾದ ಬ್ರ. ಶ್ರೀ. ಜಯ[illegible] **ರಾಮಯ್ಯ ಪಂತಲು** B. A. B. L. ಅವರಿಗೆ [illegible] ಲಾಗಿ ಅವರೀ ಶಾಸನವನ್ನಷ್ಟು ಮಾತ್ರ ಅಸ[illegible] ಟಿಪ್ಪಣಿಗಳಿಂದ ಪ್ರಕಟಿಸಿದರು. ಆದರೆ ಶಾಸನವ[illegible] ದವರಾರೆಂಬ ವಿಷಯವು ಜನತೆಗೆ ತಿಳಿ[illegible] ಮಾಡಲಿಲ್ಲ. ಕರ್ನಾಟಕ ರಾಜಶ್ರೇಷ್ಠರ ಶಾಸನವು [illegible] ಟಕದ ಪತ್ರಿಕೆಯಲ್ಲಿಯೇ ವಿಶದವಾಗಿ ಪ್ರಕಟವಾ[illegible] ದುದು ತಕ್ಕುದು;ಎಂತಲೆ ಅದನ್ನೀಗ **ಜಯಕರ್ನಾ**[illegible] ದಲ್ಲಿ ಪ್ರಕಟನೆಗಾಗಿ ಕಳಹಿಸಿರುವೆನು.

**ಶಾಸನದ ಆಕೃತಿ**:— ಈಗ ನಮ್ಮಲ್ಲಿ ತಾ[illegible] ವೊಂದೇ ಇರುವುದೆಂದು ಈ ಮೊದಲು ಹೇಳಿದ್ದೇ[illegible] ಪತ್ರವು ೯೩ ಅಂಗುಲದುದ್ದಳತೆಯೂ ೪೩ ಅಂಗು[illegible] ತೆಯೂ ಉಳ್ಳದಾಗಿದೆ. ಪತ್ರದ ಎರಡುಕಡೆಗ[illegible] ಒಂಬತ್ತು ಒಂಬತ್ತರಂತೆ ಪಂಕ್ತಿಗಳಿವೆ. ಪತ್ರ[illegible] ಲಿರುವ ನಾಲ್ಕೂ ಅಂಚುಗಳನ್ನು ಬಡಿದು ಮೇಲ[illegible] ಲಾಗಿದೆ. ಒಂದು ಕಡೆಯ ಕೊನೆಯು ಸ್ವ[illegible] ಹೋಗಿದೆ. ಒಟ್ಟಾರೆ ಶಾಸನಪತ್ರವು ಒಳ್ಳೆ[illegible] ಯಲ್ಲಿರುವುದು.

**ಶಾಸನದಾತೃ**:— ವಿಕ್ರಮಾದಿತ್ಯಸತ್ಯಾ[illegible] ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮ[illegible] ಭಟ್ಟಾರಕನ ಪೌತ್ರನೂ ವಿನಯಾದಿತ್ಯಸತ್ಯಾ[illegible] ಮಹಾರಾಜನ ಪುತ್ರನೂ ಆದ ಶ್ರೀವಿಜಯಾದಿ[illegible] ಶ್ರಯ ಮಹಾರಾಜನು ಎಲ್ಲರನ್ನಾಜ್ಞಾಪಿಸಿ ಘೋ[illegible] ಮಾಡುತ್ತಿರುವುದರಿಂದ ಈ ಶಾಸನವು ದಾನಪ[illegible] ಹುಟ್ಟಿರಬಹುದೆಂದೂಹಿಸಲವಕಾಶವಿರುವುದು. [illegible] ಲ್ಲಿಯ ನಾಮಸಾಮರ್ಥ್ಯಗಳಿಂದ ಈ ಶಾಸನದಾ[illegible] ಪಶ್ಚಿಮಚಾಳುಕ್ಯರಲ್ಲಿಯವನೊಬ್ಬನೆಂದು ನಿಶ್ಚಯ[illegible] ತಿಳಿಯುತ್ತದೆ. ಇವರೆಲ್ಲರೂ ಹಿಂದಕ್ಕೆ [illegible] (ಬಾದಾಮಿ) ನಗರದಲ್ಲಿ ರಾಜ್ಯವನ್ನಾಳುತ್ತಿರುವ[illegible] ಇವರಿಗೆ **ವಾತಾಪಿ ಚಾಳುಕ್ಯ**ರೆಂಬ ನಾಮವು [illegible] ಸಿಕ ಜಗತ್ತಿನಲ್ಲಿ ಪ್ರಸಿದ್ಧವಾಗಿರುವುದು. ನಾಮ[illegible] ದಿಂದ ಈ ವಿಜಯಾದಿತ್ಯನು ದ್ವಿತೀಯ ಪುಲಕೇಶಿ[illegible] ಶ್ರಯನಿಗೆ ಪ್ರಪೌತ್ರನೂ ಪ್ರಥಮ ವಿಕ್ರಮಾ[illegible]

CC-0. Jangamwadi Math Collection. Digitized by eGangotri

ಪೌತ್ರನೂ ಎಂಬುದು ಸರಿಯಷ್ಟೆ! ದ್ವಿತೀಯ ಪುಲಿಕೇಶಿಯ ಸೋದರನಾದ **ಕುಬ್ಜವಿಷ್ಣುವರ್ಧನ** ಮಹಾರಾಜನೂ ಈತನ ಮಕ್ಕಳೂ ಪೂರ್ವ (ವೇಂಗಿ ಅಥವಾ ಆಂಧ್ರ) ಚಾಳುಕ್ಯ ರಾಜ್ಯವನ್ನು ಸ್ಥಾಪಿಸಿ ಪಾಲಿಸುತ್ತಿದ್ದನು. ನಮ್ಮ ಶಾಸನಕರ್ತೃವಾದ ವಿಜಯಾದಿತ್ಯನ ತಂದೆಯ (ವಿನಯಾದಿತ್ಯನ) ಮತ್ತು ಮೊಮ್ಮಗನ (ಕೀರ್ತಿವರ್ಮನ) ಶಾಸನಗಳು ಸಿಕ್ಕಿರುವುದರಿಂದಲೂ ಇತರ ಶಾಸನಾವಲೋಕನಗಳಿಂದಲೂ **ವಿಜಯಾದಿತ್ಯನ ಕಾಲವು** ಕ್ರಿ. ಶ. ೬೯೬ ರಿಂದ ೭೩೩ ರ ವರೆಗೆಂದು ಇತಿಹಾಸಜ್ಞರು ನಿಶ್ಚಯಿಸಿರುತ್ತಾರೆ. ಹೆಚ್ಚಿನ ವಿಷಯಗಳು ಬೇಕಾದವರು "ಎಪಿಗ್ರಾಫಿಯಾ ಇಂಡಿಕಾ"ದ ಐದನೆಯ ಸಂಪುಟದಲ್ಲಿರುವ "Vakkaleruplats of KirthiVerma" ಎಂಬ ಲೇಖವನ್ನೂ Indian antiquary"ಯ ಆರನೆಯ ಭಾಗದಲ್ಲಿರುವ ಮೂವತ್ತನೆಯ ಲೇಖವನ್ನೂ ಅವಲೋಕಿಸಬೇಕು.

**ಪ್ರತಿಗ್ರಹೀತ:**— ಶಾಸನದ ಮುಂದಿನ ಪತ್ರಗಳು ಕಳೆದುದರಿಂದ ಪ್ರತಿಗ್ರಹಣಮಾಡಿದವರ ನಾಮವೇನೆಂಬುವುದನ್ನು ನಿಶ್ಚಯಿಸುವ ವಿಷಯದಲ್ಲಿ ನಿರ್ಭ್ರಾಂತ ಪ್ರಮಾಣಗಳಿನ್ನೂ ಸಿಕ್ಕಿರುವುದಿಲ್ಲ, ಆದರೂ ಬಹು ಪ್ರಾಚೀನಕಾಲದಿಂದ ಈ ಶಾಸನವು ಅಮ್ಮಣಿಗಿಯ ಹಿರೆಮಠದಲ್ಲಿರುವುದರಿಂದಲೂ ಆಪರ ಪ್ರಾಚೀನಾಚಾರ್ಯರು ಸುಪ್ರಸಿದ್ಧರೂ ತಪಸ್ವಿ ಪಂಡಿತರೂ ಆದುದರಿಂದಲೂ ಈ ಶಾಸನದ ಮುಂದಿನ ಪತ್ರಗಳೊಳಗೆ ಅವಶ್ಯವಾಗಿ ವೀರಶೈವ ಸ್ವಾಮಿಗಳಿಗರ್ಪಿಸಿದ ಕಾಲದಲ್ಲಿಯ ದಾನ ವಿಶೇಷಗಳುಲ್ಲೇಖಿಸಲ್ಪಟ್ಟಿರಬೇಕಾಗಿ ಊಹಿಸುವೆನು. ಎಂದಾದರೂ ಉಳಿದ ಪತ್ರಗಳು ಸಿಕ್ಕರೆ ವೀರಶೈವೇತಿಹಾಸಕ್ಕೆ ಮಹೋಪಕಾರವಾಗುವುದರಲ್ಲಿ ಸಂದೇಹವಿಲ್ಲ ಇದಕ್ಕೂ ಪ್ರಾಚೀನಗಳಾದ ವೀರಶೈವ ಸಂಬಂಧ ಶಾಸನಗಳು ಬೆಳ್ಳಿಗಾವಿ, ಕಲ್ಬುರಿಗೆ ಮುಂತಾದ ಗ್ರಾಮಗಳಲ್ಲಿ ಸಿಕ್ಕಿರುವುವೆಂದು ರೈಸ್ ಮೊದಲಾದವರ ಇಂಗ್ಲೀಷು ಲೇಖಗಳಿಂದ ಗೊತ್ತಾಗುವುದು, ಆದುದರಿಂದ ಈ ಶಾಸನವೂ ವೀರಶೈವರಿಗೆ ದಾನವಿತ್ತುದೇಕಾಗಿರಬಾರದು?

**ಶಾಸನಕಾಲವು:**—ಇದರಲ್ಲಿ "ಚತ್ವಾರಿಂಶತ್ಯುತ್ತರ ಷಟ್ಛತೇಷು ಶಕವರ್ಷೇಷ್ವತೀತೇಷು" (ಅಂದರೆಶಾಲಿವಾಹನ ಶಕ ವತ್ಸರಗಳು ೬೪೦, ಗತಿಸಲಾಗಿ—ಕ್ರಿ.ಶ.-೭೧೮,) ಎಂಬ ಸ್ಪಷ್ಟೋಲ್ಲೇಖವಿರುವುದರಿಂದ ಈ ಶಾಸನವು ಹುಟ್ಟಿ ಇಂದಿಗೆ ಹನ್ನೆರಡುನೂರ ಹದಿಮೂರು ವರ್ಷ [೧೨೧೩] ಗಳಾದುವೆಂಬುದು ಸಿದ್ಧಾಂತವೇ! ಮತ್ತಿದರ ಲಿಪಿಯೂ ಆಕೃತಿಯೂ ಏತತ್ಪ್ರಾಚೀನತೆಯನ್ನು ಸಾರುತ್ತಿರುವುದು, ಕಾಲ ನಿರ್ಣಯ ವಿಷಯದಲ್ಲಿದು ಇತರ ಶಾಸನಗಳಿಗೂ ಇತಿಹಾಸಕ್ಕೂ ಆದರ್ಶಪ್ರಾಯವೆಂಬ ಅಭಿಮಾನವು ನಮಗಿರಬೇಕು.

**ಸೂಚನಾ ವಿಶೇಷಗಳು:**—ಇದರಲ್ಲಿಯ ಅಕ್ಷರಗಳು ಪ್ರಾಚೀನಾಂಧ್ರ ಕರ್ನಾಟಕ ಲಿಪಿಗೆ ಸೇರಿವೆ. ಶಾಸನ ಪತ್ರದ ಒಂದು ಕಡೆಯ ಅಕ್ಷರಗಳು ದುಂಡಾಗಿಯೂ ಮತ್ತೊಂದುಕಡೆಯ ಅಕ್ಷರಗಳು ಇದಕ್ಕೆ ಕೊಂಚ ಭಿನ್ನವಾಗಿಯೂ ಕಾಣಿಸುವುದರಿಂದ ಇದನ್ನು ಬರೆದವರು ಇಬ್ಬರಿರಬಹುದೋ! ಎನಿಸುವುದು. ಅಕ್ಷರಗಳನ್ನು ಬರೆದ ತಗ್ಗಿನಲ್ಲಿ ಯಾವುದೋ ಒಂದು ಕಠಿನ ಪದಾರ್ಥವು ತುಂಬಿದ್ದಿತು. ನಾವೆಷ್ಟು ಪ್ರಯತ್ನಮಾಡಿದರೂ ಅದು ನಿಶ್ಶೇಷವಾಗಿ ಹೋಗಲಿಲ್ಲ. ಅಕ್ಷರಪ್ರತಿಬಿಂಬವು ಅಲ್ಲಲ್ಲಿ ಚೆನ್ನಾಗಿ ಬಾರದಿರುವುದಕ್ಕೆ ಕಾರಣವು ಇದುವೇ! ಎರಡನೆಯ ಕಡೆಯಲ್ಲಿ ತಗ್ಗುದಿನ್ನೆಗಳು ವಿಶೇಷವಾಗಿರುವುದರಿಂದ ಇದರ ಪಡಿಯಚ್ಚೂ (ಬ್ಲಾಕ್) ಸ್ಪಷ್ಟವಾಗಿಲ್ಲವು. ಸ್ವರಗಳಲ್ಲಿ ಇ ಏ ವರ್ಣಗಳೂ ಹಲ್ವರ್ಣಗಳಲ್ಲಿ ಕ ಖ ಗ ಘ ಙ, ಚ ಛ ಜ ಝ ಞ, ಟ ಠ ಡ ಢ ಣ ತ ಥ ದ ಧ ನ, ಪ ಫ ಬ ಭ ಮ, ಯ ರ ಲ ವ ಶ ಷ ಸ ಹ ಕ್ಷ ಜ್ಞಗಳೂ ಅನುಸ್ವಾರ-ವಿಸರ್ಗಗಳೂ ಬಂದಿವೆ. ಸ್ವರಮಾತ್ರೆಗಳಲ್ಲಿ 'ಊ ಔ' ಗಳೆರಡರ ಹೊರತು ಉಳಿದುವೆಲ್ಲ ಬಂದಿದ್ದರೂ ಈಕಾರದ ಮಾತ್ರೆಯು ಇಕಾರಕ್ಕಿಂತಲೂ ಭಿನ್ನವಾಗಿ ಕಾಣುತ್ತಿಲ್ಲ. ಹಲ್ಮಾತ್ರೆಗಳಲ್ಲಿ "ಕ ಗ ಚ ಛ ಜ ಟ ಡ ತ ದ ನ ಭ ಮ ಯ ರ ಲ ವ ಶ ಸ ಹ" ಗಳು ಮಾತ್ರ ಬಂದಿವೆ. ಅಲ್ಲಲ್ಲಿ ಮಹಾಪ್ರಾಣಗಳಿಗೋಸ್ಕರ ಅಲ್ಪಪ್ರಾಣಗಳು ಉಪಯೋಗಿಸಲ್ಪಟ್ಟಿವೆ. ಒಟ್ಟಿನಮೇಲೆ ಲೇಖನ ದೋಷಗಳು ಸ್ವಲ್ಪವಾಗಿರುವವು; ಕೆಲವು ತಪ್ಪುಗಳನ್ನೂ ಬಿಟ್ಟುಹೋದ ಅಕ್ಷರಗಳನ್ನೂ ( ), [] ಈ ಚಿನ್ಹೆಗಳಲ್ಲಿ ತೋರಿಸಿರುವೆನು. ಶಾಸನ ಪತ್ರದಿಂದ ನಾನು ಓದಿದ ಪ್ರಕಾರ ಕೆಳಗೆ ಮೂಲಪಾಠವನ್ನು ಪ್ರಕಟಿಸಿದ್ದೇನೆ. ಮೂಲ ಶಾಸನದ ಎರಡು ಪಡಿಯಚ್ಚು (ಬ್ಲಾಕು) ಗಳೂ ಇದರೊಡನೆ ಮುದ್ರಿತವಾಗಿರುವುವು.

CC-0. Jangamwadi Math Collection. Digitized by eGangotri



## ಅಮ್ಮಣಿಗಿ ತಾಮ್ರಶಾಸನದ ಮೊದಲನೆಯ ಕಡೆ.

ಪಂಕ್ತಿ

೧. ಥಾನ * ಪ್ರವರತುರಙ್ಗಮೇಣೈಕೇನೈವೋತ್ಸಾರಿತಾಶೇಷವಿಜಿಗೀಷೋರವನಿಪತಿತ್ರಿತಯಾಸ್ತ್ತರಿತಾ[ ೦ ] ಸ್ವಗುರೋ

೨. ಶ್ರಿ ( ಶ್ರಿಃ ) ಯಮಾತ್ಮಸಾಕ್ರಿ ( ತ್ಕೃ ) ತ್ಯ ಪ್ರಭಾವಕುಲಿಶದಲಿತಪಾಣ್ಡ್ಯ ಚೋಳಕೇರಳ ಕಳಭ್ರಪ್ರಭೃತಿ ಭೂಭೃದದಭ್ರವಿಭ್ರಮ

೩. ಸ್ಯಾಸನ್ನಾವನತಕಾಞ್ಚೀಪತಿಮಕುಟ ಚುಂಬಿ ( ಮ್ಬಿ ) ತ ಪಾದಾಂಬು ( ಮ್ಬು ) ಜಸ್ಯ ವಿಕ್ರಮಾದಿತ್ಯ ಸತ್ಯಾಶ್ರಯ ಶ್ರೀಪೃಥು (ಥಿ)

೪. ವೀವಲ್ಲಭಮಹಾರಾಜಾಧಿರಾಜ ಪರಮೇಶ್ವರ ಭಟ್ಟಾರಕಸ್ಯಪ್ರಿಯಸೂನೋ [ಃ] ಪಿತುರಾಜ್ಞಯಾಬಾಲೇನ್ದುಶೇಕ ( ಖ )

೫. ರಸ್ಯತಾರಕಾರಾತಿರಿವ ದೈತ್ಯಬಲಮತಿಸಮುದ್ಧತ ತ್ರೈರಾಜ್ಯಕಾಞ್ಚೀಪತಿಬಲಮವಷ್ಟಭ್ಯಕರದೀ

೬. ಕೃ ( ಕೃ ) ತಶವೇರಪಾರಸಿಕ ಸಿಂಹಳಾದಿದ್ವೀಪಾಧಿಪಸ್ಯ ಸಕಲೋತ್ತರಾಪಥನಾಥಮಥನೋಪಾರ್ಜ್ಜಿ

೭. ತೋರ್ಜ್ಜಿತಪಾಳಿಧ್ವಜಾದಿಸಮಸ್ತಪಾರಮೈಶ್ವರ್ಯಚಿಹ್ನಸ್ಯ ವಿನಯಾದಿತ್ಯಸತ್ಯಾಶ್ರಯಶ್ರೀಪೃಥಿ

೮. ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟ್ಟಾರಕಸ್ಯ ಪ್ರಿಯಾತ್ಮಜಶ್ಶ್ರೀಶವ ವಿವಾಧಿ



## ಎರಡನೆಯ ಕಡೆ

೧. ರುತ್ತರಾಪಥವಿಜಿಗೀಷೋರ್ಗುರ್ರೋರಗ್ರತ ಏವಾಹವವ್ಯಾಪಾರವಾಚರನ್ನರಾತಿಗಜಘಟಾಪಾಟನವಿಶೀ

೨. ರ್ಯ್ಯಮಾನ ( ಣ ) ಕ್ರ ( ಕೃ ) ಪಾಣಧಾರಸ್ಸಮುಗ್ರ ವಿಗ್ರಹಾಗ್ರೇಸರಸಸಾಹಸರಸಿಕಃಪರಾಮು ( ಮ್ರ್ಕ ) ಖೀಕ್ರ ( ಕೃ ) ತಶ

೩. ತ್ರುಮಣ್ಡಲ ( ಲೋ ) ಗಂಗಾಯಮುನಾಪಾಳಿಧ್ವಜಪಟ [ ಹ ] ಢಕ್ಕಾಮಹಾಶಬ್ದಚಿನ್ಹಕಮಾಣಿಕ್ಯಮತಂಗ( ಜ್ಗ ) ಜಾದೀನ್ಪಿತ್ರೃ [ಸಾ]

೪. ತ್ಕುರ್ವ್ವನ (ಸ್ವ) ರೈಃಪಲಾಯಮಾನೈರಾಸಾದ್ಯ ಕಥಮಪಿವಿಧಿವಶಾದಪನೀತೋಪಿ ಪ್ರತಾಪಾದೇವವಿಷಯಪ್ರಕೋಪ *

೫. ಮರಾಜಕಮುತ್ಸಾರಯನ್ವತ್ಸರಾಜ ಇವಾನಪ (ಪೇ) ಕ್ಷಿತಪರಸಹಾಯಕತ (ಸ್ತ್ರ) ದವಗ್ರಹಾನಿ (ನ್ನಿ) ರ್ಗ್ಗತ್ಯಸ್ವಭೂಜಾವಷ್ಟಂಭ (ಮ್ಭ)

೬, ಪ್ರಸಾಧಿತಾಶೇಷವಿಶ್ವಮ್ಭರ [ಃ] ಪ್ರಭುರಕ (ಖ) ಣ್ಡಿತಶಕ್ತಿತ್ರಯತ್ವ ( ತ್ವಾ ) ಥ (ಚ್ಛ) ತ್ರಮುದಭಜ್ಞನತ್ವಾದುದಾರತ್ವಾನ್ನಿರ

೭. ವದ್ಯತ್ವಾದ್ಯಸ್ಸಮಸ್ತ ಭುವನಾಶ್ರಯಸ್ಸಕಲಪಾರಮ್ಯೈಶ್ವರ್ಯ ವ್ಯಕ್ತಿಹೇತುಪಾಳಿಧ್ವಜಾತ್ಯುಜ್ವ ( ಜ್ಜ್ವ ) ಲಪ್ರಾಜ್ಯ

೮. ರಾಜ್ಯವಿಜಯಾದಿತ್ಯಸತ್ಯಾಶ್ರಯ ಶ್ರೀ ಪೃಥಿವೀವಲ್ಲಭಮಹಾರಾಜಾಧಿರಾಜ ಪರಮೇಶ್ವರ ಭಟ್ಟಾರಕಸ್ಸರ್ವ್ವಾ

೯. ನೇವಮಾಜ್ಞಾಪಯತಿ ವಿದಿತಮಸ್ತುವೋ (ಽ) ಸ್ಮಾಭಿಚ [ಶ್ಚ] ತ್ವಾರಿ [೦] ಶತ್ಯುತ್ತರಷಟ್ಛತೇಷುಶಕವರ್ಷೇಷ್ವತೀತೇಷು

---

* ಇಲ್ಲಿಯವೊಂದು ವಾಕ್ಯವು ಸಮಂಜಸವಾಗಿ ತಿಳಿಯಲಿಲ್ಲವು. ( ಲೇ )



CC-0. Jangamwadi Math Collection. Digitized by eGangotri

**ತಾತ್ಪರ್ಯವು** – " ಚಿತ್ರಕಂಠಾಭಿಧಾನವುಳ್ಳ ತುರಂಗಮವೊಂದರಿಂದಲೇ ಅನೇಕ ವೀರರನ್ನು ದೂರೀಕರಿಸಿ ರಾಜ್ಯತ್ರಯದಿಂದ ಸಂಪಾದಿಸಲ್ಪಟ್ಟ- ತನ್ನ ತಂದೆಯವರ ಲಕ್ಷ್ಮಿಯನ್ನಾತ್ಮವಶಮಾಡಿಕೊಂಡು, ತನ್ನ ಪರಾಕ್ರಮವೆಂಬ ವಜ್ರಾಯುಧದಿಂದ ಪಾಂಡ್ಯ ಚೋಳ ಕೇರಳ ಕಳಭ್ರಾದಿರಾಜರ ಭುಜಬಲಪರ್ವತಗಳನ್ನು ಭೇದಿಸಿದವನೂ ಯಾರಿಗೂ ಬಾಗದಿರುವ ಕಾಂಚೀರಾಜನಿಂದ ಪೂಜಿಸಲ್ಪಟ್ಟವನೂ ಆದ ವಿಕ್ರಮಾದಿತ್ಯಸತ್ಯಾಶ್ರಯ ಭಟ್ಟಾರಕನ ಪ್ರಿಯಪುತ್ರನಾದ, ತಂದೆಯವರ ಅಪ್ಪಣೆಯ ಮೇರೆಗೆ ( ಶಿವನಪ್ಪಣೆಯಿಂದ ಕುಮಾರಸ್ವಾಮಿಯು ರಾಕ್ಷಸ ಸೈನ್ಯವನೋಡಿಸಿದಂತೆಯಲ್ಲಿ) ಅತ್ಯುದ್ಧತನಾದ ತ್ರಿದೇಶ ಕಾಂಚೀರಾಜ ಸೈನ್ಯವಂ ಬಂಧಿಸಿ ಕವೇರ ಪಾರಸಿಕ ಸಿಂಹಳಾದಿ ದ್ವೀಪಾಧೀಶರಿಂದ ಕಾಣಿಕೆಯನ್ನು ಪಡೆದವನೂ ಸಮಸ್ತೋತ್ತರಾಖಂಡನಾಥರನ್ನು ಮಥಿಸಿ ಪಾಳಿಧ್ವಜಾದಿನಿಖಿಲ ಪಾರಮೈಶ್ವರ್ಯ ಚಿನ್ಹಗಳನ್ನು ಸಂಪಾದಿಸಿದವನೂ ಆದ ವಿನಯಾದಿತ್ಯಸತ್ಯಾಶ್ರಯ ಪೃಥ್ವೀವಲ್ಲಭ ಭಟ್ಟಾರಕನ ಪ್ರಿಯಪುತ್ರನು ಸಮಗ್ರಾಸ್ತ್ರ ಶಾಸ್ತ್ರವನ್ನು ಅಧ್ಯಯನ ಮಾಡಿ ಪಿತಾಮಹನು ದಕ್ಷಿಣ ದಿಗ್ವಿಜಯಕ್ಕೆ ಹೋದ ಬಳಿಕ ವಿವಿಧ ವಿಘ್ನಗಳನ್ನು ವಿಧ್ವಂಸಿಸಿ ಉತ್ತರದೇಶ ವಿಜಯಾಭಿಲಾಷೆಯಿಂದ ಪ್ರಯಾಣಿಸಿರುವ ತಂದೆಯವರ ಮುಂದೆಯೇ ಯುದ್ಧಕಾರ್ಯವನ್ನು ನೆರವೇರಿಸುವವನಾಗಿಯೂ ವೈರಿಜನಗಜ ಕುಂಭೋದ್ಭೇದನದಿಂದ ಸ್ವಖಡ್ಗಧಾರೆಯು ಸೀಳುತ್ತಿರಲು ಯುದ್ಧಾಂತ್ಯದವರೆಗೂ ಸರ್ವಾಗ್ರೇಸರನಾದುದರಿಂದಲೇ ಸಧೈರ್ಯರಸಿಕನೂ ಶತ್ರು ಸಂಘವನ್ನೇ ಹಿಮ್ಮೆಟ್ಟಿಸಿದವನೂ ಗಂಗಾಯಮುನಾ ಪಾಳಿಧ್ವಜಪದಢಕ್ಕಾ ಮಹಾ ಶಬ್ದಾಂಕಿತಗಳಾದ ಮಾಣಿಕ್ಯ ಗಜಾದಿಗಳನ್ನು ತಂದೆಯವರಿಗೊಪ್ಪಿಸಿದವನೂ ಶತ್ರುಗಳು ಹಿಂದಿರುಗಿ ಓಡುವಾಗ ದುರ್ದೈವದಿಂದ ಬಲತ್ಕಾರವಾಗಿ ಹಿಡಿದು ಒಯ್ಯಲ್ಪಟ್ಟವನಾದರೂ ಸ್ವಪರಾಕ್ರಮದಿಂದಲೇ "ದೇಶದಲ್ಲಿ ಉತ್ಪನ್ನವಾದ ಅರಾಜಕಕ್ರೋಧವನ್ನು ಹೋಗಲಾಡಿಸುವವನಾಗಿ " * ವತ್ಸರಾಜನಂತೆ ಇತರರ ಸಹಾಯವನ್ನಪೇಕ್ಷಿಸದೆ ಶತ್ರುಬಂಧನದಿಂದ ಹೊರಬಂದು ಸ್ವಭುಜ ಬಲದಿಂದೀ ವಿಶ್ವವನ್ನು ವಶಪಡಿಸಿಕೊಂಡವನೂ ಪ್ರಭುಮಂತ್ರೋತ್ಸಾಹಗಳೆಂಬ ಶಕ್ತಿತ್ರಯ ಯಿಂದಲೂ ಶತ್ರುಗರ್ವ ಪರಿಹರಣದಿಂದಲೂ ಯಿಂದಲೂ ನಿರ್ಮಲತ್ವದಿಂದಲೂ ಸಮಸ್ತ ನಾಗಿರುವವನೂ ನಿಖಿಲ ಪರಮೇಶ್ವರತ್ವ ಪಾಳಿಧ್ವಜದಿಂದ ಅತ್ಯುಜ್ವಲ ಸಾಮ್ರಾಜ್ಯ ಮಾನನೂ ಆದ **ವಿಜಯಾದಿತ್ಯಸತ್ಯಾಶ್ರಯ ರಾಜನು** ಎಲ್ಲರನ್ನೂ ಕುರಿತು ಆಜ್ಞಾಪಿಸುವುದೇ " ಪ್ರಜೆಗಳಿರಾ! ನಿಮಗಿದು ತಿಳಿದಿರಲಿ!! ವರ್ಷಂಗಳು ಆರುನೂರ ನಲವತ್ತು ( ೬೪೦ ) ಹೋಗುತ್ತಿರಲು " –

**ಅನುಬಂಧವು:—** ಶಾಸನಭಾಗವು ಸಿಕ್ಕಿದ್ದರೂ ವಿಜಯಾದಿತ್ಯನ ಪ್ರತಾಪವನ್ನು ಪರ್ಯಾಪ್ತವಾಗಿರುವುದು. ಪಶ್ಚಿಮ ಕಾಂಚೀರಾಜ ( ಪಲ್ಲವ ) ರೊಡನೆ ಕದನದಲ್ಲಿ ಪಡೆದು ಕಾವೇರೀ ತೀರದಲ್ಲಿ ಮತ್ತೊಂದು ಯನ್ನು ನೆಲೆಗೊಳಿಸಿದನೆಂದು ಇತರ ಶಾಸ ಗೊತ್ತಾಗುತ್ತದೆ. ಪರಾಕ್ರಮಾಭಿಮಾನವೋ ರಾಜ್ಯಾಶೆಯೋ ಅವರನ್ನು ಉತ್ತರದೇಶದ ಗಳಿಗೂ ಪ್ರೇರೇಪಿಸಿತು. ಬಹುಮಟ್ಟಿಗೆ ಪಡೆದಿದ್ದರೂ ಶತ್ರುಗಳೋಡುವಾಗ ಗೊಂದಲ ಯುವರಾಜನಾಗಿದ್ದ ವಿಜಯಾದಿತ್ಯನನ್ನು ರೆಂತಲೂ ವಿಜಯಾದಿತ್ಯನೊರ್ವನೇ ಸ್ವಭುಜಪ ದಿಂದ ಶತ್ರುಗಳನ್ನು ಹೊಡೆದು ಮರಳಿ ಬಂದು ಸಿಂಹಾಸನವನ್ನಾರೋಹಣ ಮಾಡಿದನೆಂತಲೂ ದಿಂದ ತಿಳಿದು ಬರುವ ಅದ್ಭುತ ಸಂಗತಿಯು ಗತವೈಭವಕ್ಕೊಂದು ಪ್ರಮಾಣವೆನ್ನುವಂತಿದೆ.

ಆಗಿನ ಕಾಲದ ರಾಜರಲ್ಲಿ ಗಂಗಾಯಮುನಾ ಧ್ವಜಾದಿ ಬಿರುದುಗಳು ಅತಿ ಪ್ರಸಿದ್ಧವಾಗಿದ್ದ ತ್ತವೆ. ಅಂತೆಯೇ ನಮ್ಮ ವಿಜಯಾದಿತ್ಯ ಉತ್ತರ ದೇಶದ ರಾಜರನ್ನು ಬಗ್ಗುಬಡಿದು ಗಳನ್ನು ಕಸಿದುಕೊಂಡು ತಂದೆಯವರಿಗೊಪ್ಪಿಸಿ 'ಗಂಗಾಯಮುನಾ'ಎಂಬುವು ಕಲಶಾಕೃತಿಯ ದ್ಯೋತಕ ಚಿನ್ಹಗಳಾಗಿರಬಹುದು. ಪಾಳಿಧ್ವ ವುದು ಜೈನರ ಸಿದ್ಧಾಂತದಂತೆ ಪರಮೇಶ್ವರ

* ಈ ವಾಕ್ಯವು ಮೂಲದಲ್ಲಿಯೇ ಸಂದಿಗ್ಧವಾಗಿರುವುದು.—( ಲೇ )

CC-0. Jangamwadi Math Collection. Digitized by eGangotri

ಭೌಮ) ತ್ವದ ಚಿನ್ಹವಾಗಿರುತ್ತದೆ. ಶ್ರೀಜಿನಸೇನಾ ಚಾರ್ಯ ವಿರಚಿತವಾದ ಆದಿಪುರಾಣದ ೨೨ನೆಯ ಸರ್ಗ ದಲ್ಲಿ ಹೀಗೆ ವಿವರಿಸಲ್ಪಟ್ಟಿದೆ. †

ಸ್ರಗ್ವಸ್ತ್ರಸಹಸಾನಾಬ್ಜ ಹಂಸವೀನಮೃಗೇಶಿನಾಂ।
ವೃಷಭೇಭೇಂದ್ರಚಕ್ರಾಣಾಂ ಧ್ವಜಾಸ್ಯುರ್ದಶ-
ಭೇದಕಾಃ ॥ ೧ ॥

ಅಷ್ಟೋತ್ತರಶತಂಜ್ಞೆಯಾಃ ಪ್ರತ್ಯೇಕಂಪಾಲಿಕೇತನಾಃ।
ಏಕೈಕಸ್ಯಾಂದಿಶಿಪ್ರೋಚ್ಚಾಸ್ತರಂಗಾಸ್ತೋಯಧೇರಿವ
॥ ೨ ॥

ಪವನಾಂದೋಲಿತಾಸ್ತೇಷಾಂ ಕೇತೂನಾಮಂಶುಕೋ-
ತ್ಕರಃ ॥
ವ್ಯಾಜುಹೂಷುರಿವಾಭಾಸಿ ಜಿನೇಜ್ಯಾಯೈನರಾಮ-
ರಾನ್ ॥ ೩ ॥

*　　*　　*　　*

ಇತ್ಯಮೀಕೇತವೋಮೋಹ ನಿರ್ಜಯೋಪಾರ್ಜಿತಾಬಭುಃ।
ವಿಭೋಸ್ತ್ರಿಭುವನೇಶತ್ವಂ ಶಂಸಂತೋಽನನ್ಯಗೋಚರಂ
॥ ೪ ॥

ದಿಶ್ಯೇಕಸ್ಯಾಂಧ್ವಜಾಸರ್ವೇ ಸಹಸ್ರಂಸ್ಯಾದಶೀತಿಯತ್।
ಚತಸೃಷ್ಟಪಿತೇದಿಕ್ಷು ಶೂನ್ಯದ್ವಿತ್ರಿಕಸಾಗರಾಃ ॥ ೫ ॥

"ಪುಷ್ಪಮಾಲೆ, ವಸ್ತ್ರ, ಮಯೂರ, ಕಮಲ, ಹಂಸ, ಗರುತ್ಮಂತ, ಸಿಂಹ, ವೃಷಭ, ಗಜ, ಚಕ್ರ" ಈ ಚಿನ್ಹ ಗಳುಳ್ಳ ಧ್ವಜಗಳು ಹತ್ತು ಬಗೆಯವಾಗಿವೆ. ಒಂದೊಂದು ಬಗೆಗೆ ನೂರೆಂಟರಂತೆ ನಿಲ್ಲಿಸಿದರೆ ಸಾವಿರದೆಂಬತ್ತು ಧ್ವಜ ಗಳಾಗುವವು. ಈ ಗುಂಪಿಗೆ ಪಾಳಿಧ್ವಜವೆನ್ನುವರು. ನಾಲ್ಕು ದಿಕ್ಕುಗಳಲ್ಲಿಯೂ ಈ ವಿಧವಾಗಿ ನಿಲ್ಲಿಸಿದರೆ ಧ್ವಜಗಳ ಸಂಖ್ಯೆ ನಾಲ್ಕುಸಾವಿರದ ಮುನ್ನೂರದಿಪ್ಪತ್ತಾ ಗುವುದು. ಇದಕ್ಕೂ ಪಾಳಿಧ್ವಜವೆಂದೇ ಹೆಸರು. ಜಿನ ಭಗವಂತನು ಮೊದಲು ಮೋಹತ್ಯಾಗಮಾಡಿ ತ್ರಿಭುವನ ಪತಿತ್ವವನ್ನು ಸಂಪಾದಿಸಿದಾಗ ಪಾಳಿಧ್ವಜವನ್ನು ಪ್ರಭುತ್ವ ಚಿನ್ಹವನ್ನಾಗಿ ಗ್ರಹಿಸಿದ್ದನಂತೆ. ಅಂದಿನಿಂದೆಲ್ಲರಾಜರೂ ಇದಕ್ಕೆ ಸಾಮ್ರಾಜ್ಯಬಿರುದುಗಳಲ್ಲಿ ಶ್ರೇಷ್ಠತೆಯನ್ನು ಕೊಟ್ಟಿರಬಹುದು. *

# ಸಂಕ್ರಾಂತಿ.

ಶ್ರೀ. ವಿನಾಯಕ.

ಅಹುದೇನು ಇಂದಿನೀ ಕ್ರಾಂತಿ ಸಂಕ್ರಾಂತಿ?
ಅಲ್ಲವೇನಿದು ಹೇಳು ಇದು ಬಯಲು ಭ್ರಾಂತಿ?
ಕ್ರಾಂತಿಗಳ ಸಿರಿನಾಡು ಕರಿನಾಡು ಗೆಳೆಯ;
ಮಾಧವನು ಸುರಿಸಿದನು ಮುತ್ತುಗಳ ಮಳೆಯ.
ಇರಿಸಿದನು ತಿಲವಾಗಿ ತನ್ನ ಹೃದಯವನು.
ಇನ್ನೆಂದು ನೋಡುವೆನು ನಾಡಿನುದಯವನು?

ಇಂದಿನೀ ಜೀವನವು ನಿಜಯೋಗವಹುದೆ?
ಅಲ್ಲವೇನಿದು ಅಗ್ನಿಗೆರಚಿರುವ ಸವುದೆ?
ಕಾದಿರುವ ಕಬ್ಬಿಣದ ಕೈಬಂದಿ, ಗೆಳೆಯ,
ಕಳೆದಿಹವು ನಾಡಿನಿರುವಾಳ್ತನದ ಕಳೆಯ;
ಕಾಲಿನಾಳು, ಬಿಲ್ಲಾಳು- ಎಲ್ಲ ಬರಿ ಆಳು?
ಮುಕ್ತಿಯನು ಸಾರುವುದದಿನ್ನೆಂದು ಬಾಳು?

ಭೋಗಿಯಾದೊಡನೆ ಕ್ರಾಂತಿಯು ಬರುವದೆಂದೆ.
ರೋಗಿಯಾಯಿತು ದೇಶ, ಬರಲಿಲ್ಲ ತಂದೆ.
ತ್ಯಾಗವಿಲ್ಲದೆ ಜೋಗಿಯಾಗಿಹೆವು ಗೆಳೆಯ !
ಮಾಗಿ ತಾಗುತ ತಂತು ಕೆನ್ನೀರ ಬೆಳೆಯ.
ಇನ್ನಾವ ಹೊಸ ಬೆಳಕ ಕಾಣುವುದು ನಾಡು?
ನುಡಿಯುವುದು ಇನ್ನಾವ ಹೊಸ ನುಡಿಯ ಹಾಡು?

ಇರಲಿ! ನೋಡೀ ಎಳ್ಳು ಸಕ್ಕರೆಯ ಸಿಹಿಯ.
ಇದರೆದುರು ಮರೆಯುವುದು ಇಂದಿರುವ ಕಹಿಯು.
ತಿಲಮಾತ್ರ ಸಂದೇಹವಿಲ್ಲವಿಲೆ ಗೆಳೆಯ!
ಕೆಲವು ಕಾಲದಿ ಮಾತೆ ಭೂಷಿಸುವಳಿಳೆಯ.
ಆದಕಾಗಿ ಇಂದಿಹುದು ನಮ್ಮ ಸಂಕ್ರಾಂತಿ.
ಇಲ್ಲದಿರಲಹುದಹುದು ಇದು ಬರಿಯ ಭ್ರಾಂತಿ!

---

† ಶ್ರೀ. ಜಯಂತಿರಾಮಯ್ಯ ಪಂತುಲು ಅವರಿಂದನ್ನು ಕಂಡವರು—(ಲೇ)

* (ಕರ್ನಾಟಕದ ಇತಿಹಾಸವನ್ನು ತಿಳಿಯಬೇಕೆಂದರೆ ಪ್ರಾಚೀನ ಶಾಸನಗಳಿಂದ ಎಷ್ಟು ಲಾಭವಿದೆಯೆಂಬುವುದನ್ನು ಎಲ್ಲರೂ ಗಮನಿಸಬೇಕಾಗಿದೆ. ಕಾಶೀ **ಶೈವಭಾರತೀಭವನ** ವು ಈ ಕೆಲಸವನ್ನು ಸ್ವಲ್ಪ ಮಟ್ಟಿಗೆ ಕೈಕೊಂಡಿರುವುದೆಂಬುದನ್ನು ತಿಳಿಸಲು ಸಂತೋಷವಾಗುತ್ತದೆ. ಕನ್ನಡಿಗರು ಶಾಸನಾದಿಗಳಿಂದ ಸಹಾಯ ಮಾಡಬೇಕಾಗಿ ಪ್ರಾರ್ಥನೆ—**(ಚಿ. ಮ. ವೀ. ಶರ್ಮ)**

CC-0. Jangamwadi Math Collection. Digitized by eGangotri

# ಮಕ್ಕಳ ಯಕೃನ್ನಾಳಸಂಬಂಧ ವ್ಯಾಧಿ

ಲೇಖಕರು:— ಶ್ರೀ. ಬಿ. ವೆಂಕಟೇಶಯ್ಯ, M. B. B. S. ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು.

ಈ ವ್ಯಾಧಿಯು ಮಕ್ಕಳಿಗೆ ಸಾಮಾನ್ಯವಾಗಿ ಪ್ರಾಪ್ತವಾಗುವುದು. ಇದೇ ತೆರದ ರೋಗವು ದೊಡ್ಡವರಿಗೂ ಸಂಭವಿಸುವುದುಂಟು. ಆದರೆ ಮಕ್ಕಳಿಗೆ ಬಂದ ರೋಗವು ಸಾಮಾನ್ಯವಾಗಿ ಗುಣವಾಗುವುದೇ ಇಲ್ಲ. ಮೊದಲು ಮೊದಲಿನಲ್ಲಿಯೇ ಚಿಕಿತ್ಸಿತರಾದ ಕೆಲವು ಮಕ್ಕಳು ಉಳಿದುಕೊಂಡಿರುವುದುಂಟು. ಆದುದರಿಂದ ಈ ಕಾಹಿಲೆಯನ್ನು ಮೊದಲೇ ತಿಳಿದುಕೊಳ್ಳುವುದರಿಂದ ಅದಕ್ಕೆತಕ್ಕ ಪರಿಹಾರೋಪಾಯವನ್ನು ನಡೆಯಿಸಲನುಕೂಲವಾಗುವುದು.

ಈ ರೋಗದಲ್ಲಿಯಕೃತ್ತಿ (Liver) ನಲ್ಲಿರುವ ಚಿಕ್ಕ ಚಿಕ್ಕನಾಳಗಳು (Biliary Capillaries) ವ್ಯಾಧಿಗ್ರಸ್ತಗಳಾಗಿ ತಮ್ಮಕಾರ್ಯವನ್ನು ಮಾಡದೆ ತಟಸ್ಥವಾಗುವುವು. ಅಂತಹ ಸಮಯದಲ್ಲಿ ಶರೀರದಲ್ಲಿ ಉತ್ಪನ್ನವಾಗುವ ವಿಷಸಂಬಂಧವಾದ ಪದಾರ್ಥಗಳು (Foxins) ಯಕೃತ್ತಿನಲ್ಲಿ ಭೇದಿಸಲ್ಪಡದೆ ಪುನಃ ಶರೀರವನ್ನೇ ಸೇರುವುವು. ಇದರಿಂದ ದೇಹಕ್ಕೆ ಅನಾನುಕೂಲ್ಯ ಪ್ರಾಪ್ತಿಯಾಗಿ, ಕಡೆಗೆ ದೊಡ್ಡದಾಗಿ ರೋಗವು ತಲೆದೋರ ಹತ್ತುವುದು.

ಯಕೃನ್ನಾಳ ಸಂಬಂಧಿಯಾದ ಈ ಬೇನೆಯು ಸಂಬಂಧಿಸಲು ಕಾರಣವೇನೆಂಬುದನ್ನು ಅನೇಕರು ಕಂಡು ಹಿಡಿಯಲು ಯತ್ನಿಸುತ್ತಿರುವರು. ಆದರೆ ಇದುವರೆಗೆ ಅದು ಇವರ ಬಲೆಗೆ ಬಿದ್ದಂತೆ ತೋರಿಬರಲಿಲ್ಲ. ಕೆಲವರು ಮಲಬದ್ಧತೆಯಿಂದ ಹೀಗಾಗುವುದುಂಟೆಂದು ಹೇಳುವರು. ಮತ್ತೆ ಹಲವರು ಮೇಹರೋಗದಿಂದ ಬರಬಹುದೆನ್ನುವರು. ಈ ಕಾಹಿಲೆಯು ಗಂಡುಮಕ್ಕಳಿಗೆ ಬರುವುದೇ ಹೆಚ್ಚು. ಅದರಲ್ಲಿಯೂ ಜ್ಯೇಷ್ಠಪುತ್ರನನ್ನೇ ಸಾಮಾನ್ಯವಾಗಿ ಬಾಧೆಪಡಿಸುವುದು. ಕೆಲವು ಮನೆತನಗಳಲ್ಲಿ ಇದು ಬಹಳವಾಗಿರುವುದು. ಮೊದಲು ಬಂ... ವಿಗೆ ಪ್ರಾಪ್ತವಾಗಿ ಬಲವಾಗುತ್ತಾ ಬಂ... ಸಾವಿಗೆ ಗುರಿಮಾಡುವುದು. ಬಳಿಕ ಎರಡನೆ... ವಿಗೂ ಹಾಗೆಯೇ ರೋಗವು ತಲೆದೋರಿ ಮೇ... ಮಗುವಿನಂತೆ ಇದೂ ಮರಣ ಹೊಂದುವುದು... ಜನಿಸಿದ ಶಿಶುಗಳೆಲ್ಲವೂ ನಾಶವಾಗುತ್ತಾ ... ಗಂಡುಮಕ್ಕಳನ್ನು ಪೀಡಿಸುವಷ್ಟು ಇದು ... ಮಕ್ಕಳನ್ನು ಪೀಡಿಸುವುದಿಲ್ಲ. ಎಂದರೆ ಹೆ... ಳಿಗೆ ಇದು ಬರುವುದೇ ಇಲ್ಲವೆಂದಲ್ಲ. ಅವರಿಗ... ಎಷ್ಟು ಚಿಕಿತ್ಸೆಗಳನ್ನು ಮಾಡಿದರೂ ಗುಣ... ಎಷ್ಟೋಜನ ಮಾತಾಪಿತೃಗಳ ಸಂಕಟಕ್ಕೆ ... ಭೂತವಾಗಿ ಅನೇಕ ವೈದ್ಯರ ಸಾಹಸವನ್ನು ... ಮಾಡುತ್ತ ಇದು ಮೆರೆಯುತ್ತಿರುವುದು.

ಈ ರೋಗವು ಮಾದಕ ದ್ರವ್ಯಗಳ ಸೇವ... ಗಲೀ, ಮೇಹಸಂಬಂಧ ರೋಗಗಳಿಂದಾಗಲೀ, ... ರಿಯಾ ಜ್ವರದಿಂದಾಗಲಿ, ಕ್ಷಯಸಂಬಂಧವಾದ ... ದಿಂದಾಗಲಿ ಪ್ರಾಪ್ತವಾಗುವುದೆಂದು ಹೇ... ಯಾವ ಆಧಾರವೂ ಇಲ್ಲ. ಆದರೆ ಕೆಲವು ... ಮಾತ್ರ ವಿಷಮಶೀತಜ್ವರ [Typhoid] ದಿಂ... ರಾದ ಬಳಿಕ ಇದರಿಂದ ಬಾಧೆಪಟ್ಟಿರುವುದುಂಟು. ಈ ರೋಗಗಳೆರಡಕ್ಕೂ ಇರುವ ಸಂಬಂಧವೇನೆ... ಯಾರೂ ಅರಿತಿಲ್ಲ.

ಇಂತಹ ಘೋರತರವಾದ ರೋಗದ ವಿಷ... ಯುವುದರಿಂದ ಪ್ರಯೋಜನವೇನೆಂದು ... ಪ್ರಶ್ನೆ ಮಾಡಬಹುದು. ಅದಕ್ಕೆ ಉತ್ತರವಾ... ಬೇಕಾದುದೇನೆಂದರೆ ಇಂತಹ ಘೋರವಾ... ವನ್ನು ಬೇರೆ ಯಾವುದಾದರೂ ರೋಗವೆಂದು ...

CC-0. Jangamwadi Math Collection. Digitized by eGangotri

ಮೊದಲು ಅಸಡ್ಡೆ ಮಾಡಿದರೆ ಕಡೆಗೆ ಅದು ಖಂಡಿತ ವಾಗಿಯೂ ಗುಣವಾಗುವುದೇ ಇಲ್ಲ. ಮತ್ತು ಈ ಕಾಹಿಲೆ ಯೆಂದು ಬೇರೊಂದು ಸಾಮಾನ್ಯವಾದ ಕಾಹಿಲೆಯು ಪ್ರಾಪ್ತವಾದಾಗಲೂ ಭೀತಿಪಟ್ಟರೆ, ವಾಸಿಯಾಗುವ ರೋಗವನ್ನು ವಾಸಿಯಾಗದ ರೋಗವೆಂದು ತಿಳಿದು ಅನ್ಯಾಯವಾಗಿ ಮಗುವನ್ನು ಕೊಂದಂತಾಗುವುದು. ಅಲ್ಲದೆ ಇದರ ವಿಷಯವಾಗಿ ತಿಳಿಯುವುದರಿಂದ ತಾಯಿ ತಂದೆಗಳಿಗೆ ತಮ್ಮ ಕರ್ತವ್ಯವನ್ನು ನಿರ್ಧರಿಸಲು ತಕ್ಕ ಮಟ್ಟಿಗಾದರೂ ಸಹಾಯವೆನಿಸುವುದು. ಆದುದರಿಂದ ಎಲ್ಲರೂ ಯಕೃನ್ನಾಳಸಂಬಂಧವ್ಯಾಧಿಯನ್ನು . ಅಲ್ಪ ಸ್ವಲ್ಪ ಅರಿಯುವುದು ಅತ್ಯವಶ್ಯಕ.

ಈ ಬೇನೆಯಲ್ಲಿ ಮೊದಲು ತೋರಿಬರುವ ಚಿಹ್ನೆ ಯೆಂದರೆ ಮಲಬದ್ಧತೆಯೇ ವಿಶೇಷವಾದುದು. ಕೆಲವು ಸಮಯಗಳಲ್ಲಿ ಅತಿಸಾರದ ಲಕ್ಷಣವಿರುವುದೂ ಉಂಟು. ಜ್ವರವೂ ಆಗಾಗ ತಲೆದೋರುತ್ತಿರುವುದು. ಬಹಳ ನಿಧಾನವಾಗಿ ಈ ರೋಗವು ಮಗುವನ್ನು ಸೇರುವುದು. "ಇಂಫ್ಲುಯೆಂಝಾ" "ವಿಷಮ ಶೀತಜ್ವರ" ಮೊದ ಲಾದ ರೋಗಗಳು ಪ್ರಾಪ್ತವಾಗುವಂತೆ ಇದು ಇದ್ದಕ್ಕಿ ದ್ದಂತೆಯೇ ತಟ್ಟನೆ ಬಂದುಬಿಡುವುದಿಲ್ಲ. ಸಾಮಾನ್ಯ ವಾಗಿ ಈ ರೋಗವೊದಗಿದ ಮಕ್ಕಳು ಮೊದಲುಮೊದಲಿ ನಲ್ಲಿ ಬಹಳ ಚಟುವಟಿಕೆಯಿಂದಿರುವರು. ಕ್ರಮೇಣ ಕಾಮಾಲೆಯು ಕಣ್ಣಿನಲ್ಲಿ ಕಾಣಿಸಿಕೊಳ್ಳಲಾರಂಭಿಸಿ ಕಣ್ಣುಗಳೆರಡೂ ಹಳದಿಯ ಬಣ್ಣವನ್ನು ತಾಳಲಾರಂಭಿ ಸುವುವು. ಕೆಲವು ಸಮಯಗಳಲ್ಲಿ ಹೊಟ್ಟೆಯಲ್ಲಿ ನೋವು ಕಾಣಿಸಿಕೊಂಡು ಬಳಿಕ ಕಾಮಾಲೆಯು ಪ್ರಾಪ್ತ ವಾಗುವುದು. ಯಕೃತ್ತು ಅಥವಾ ಕಾಲಖಂಡವು (Liver) ದೊಡ್ಡದಾಗಿ ಗಡ್ಡೆಯಂತೆ ಕಾಣಿಸಿಕೊಳ್ಳು ವುದು. ಗುಲ್ಮವೂ ವೃದ್ಧಿಹೊಂದಿ (Splenic Enlargement) ಗಡ್ಡೆಯಂತೆ ಎಡಭಾಗದಲ್ಲಿ ತೋರಿಬರಲಾರಂಭಿ ಸುವುದು. ಯಕೃತ್ತಿನ ಭಾರವು ಹೆಚ್ಚಾಗಿ ಬಲಭಾಗದಲ್ಲಿ ದೊಡ್ಡ ತೂಕವನ್ನು ಹೊತ್ತಂತಾಗುವುದು. ಮೊದಲು ಮೊದಲಿನಲ್ಲಿ ಅಲ್ಪಸ್ವಲ್ಪವಿದ್ದ ಕಾಮಾಲೆಯು (Jaundice) ಕ್ರಮೇಣ ಹೆಚ್ಚಾಗುತ್ತಾ ಬರುವುದು. ಕೆಲವು ಸಮಯಗಳಲ್ಲಿ ತಟ್ಟನೆ ಕಾಹಿಲೆಯೆಲ್ಲವೂ ವಾಸಿ ಯಾದಂತೆ ಕಂಡುಬರುವುದು. ಕಣ್ಣಿನ ಹಳದಿಯ ವರ್ಣವು ಮಾಯವಾಗುವುದು. ಜ್ವರವೂ ನಿಂತುಹೋಗುವುದು. ಮಗುವು ಆಡಿಕೊಂಡು ಓಡಾಡಿಕೊಂಡಿರುವುದು. ಇಂತಹ ಸಮಯದಲ್ಲಿ ತಂದೆತಾಯಿಗಳು ಮಗುವಿನ ಆರೋಗ್ಯ ವನ್ನು ಅಸಡ್ಡೆಮಾಡಿಬಿಡುವುದುಂಟು. ಈ ರೋಗದಲ್ಲಿ ಹೀಗೆ ವಾಸಿಯಾದಂತೆ ಕಂಡುಬರುವುದು ಸಹಜವಾದರೂ ಆಗ ನಿರಾಕರಿಸದೆ ಮಗುವಿಗೆ ಚಿಕಿತ್ಸೆಯನ್ನು ನಡೆಯಿ ಸುತ್ತಾ ಹೋಗಬೇಕು. ಪುನಃ ಅದೇ ಚಿಹ್ನೆಗಳು ತಲೆ ದೋರುವುವು. ಈಗ ಕಾಹಿಲೆಯು ಹೆಚ್ಚಾಗಿರುವಂತೆ ಕಂಡುಬರುವುದು. ಯಕೃತ್ತೂ ಮತ್ತು ಗುಲ್ಮವೂ ಈಗ ಆಕಾರದಲ್ಲಿ ಹಾಗು ಪರಿಮಾಣದಲ್ಲಿ ವೃದ್ಧಿಗೊಂಡಂತೆ ತೋರಿಬರುವುವು. ಮೂತ್ರದಲ್ಲಿ ಪಿತ್ತರಸವೂ ಈ ವೇಳೆಗೆ ಸೇರಿರುವುದು. ಆದರೆ ಮಲದಲ್ಲಿ ಮಾತ್ರ ಇತರ ಕಾಮಾಲೆ ರೋಗಗಳಲ್ಲಿರುವಂತೆ ಇರದೆ ಮಲದ ಸಾಮಾನ್ಯವಾದ ವರ್ಣವು ಇದ್ದೇ ಇರುವುದು. ಮಕ್ಕಳು ವಾಂತಿಮಾಡಿ ಕೊಳ್ಳುವಾಗ ರಕ್ತ ಬೀಳುವುದು ಈ ರೋಗದಲ್ಲಿ ಮೊದಲುಮೊದಲಿರುವುದಿಲ್ಲ. ಹಾಗೆಯೇ ಮಹೋ ದರವೂ (Ascites) ಮೊದಲು ಮೊದಲಿನಲ್ಲಿ ಕಾಣುವು ದಿಲ್ಲ. ಈ ಎರಡು ಚಿಹ್ನೆಗಳು ತೋರಿಬಂದಾಗ ಕಾಹಿ ಲೆಯು ಪರ್ಯವಸಾನ ಹೊಂದುವ ಸಮಯವೊದಗಿ ತೆಂದರಿಯುವುದಲ್ಲದೆ ಮಗುವು ಉಳಿದುಕೊಳ್ಳುವ ಸಂಭ ವವೂ ದೂರವಾಗುತ್ತ ಬಂದಿತೆಂದು ತಿಳಿಯಬೇಕು.

ಮಗುವಿನ ಬೆಳೆವಣಿಗೆಗೂ ಈ ರೋಗವು ಅಡಚಣೆ ಯನ್ನುಂಟುಮಾಡುವುದು. ಕಡೆಕಡೆಗೆ ಮಗುವಿಗೆ ಮೂಗಿನಲ್ಲಿ ರಕ್ತಸ್ರಾವವಾಗುವುದೂ, ಒಸಡುಗಳಿಂದ ನಿಷ್ಕಾರಣವಾಗಿ ರಕ್ತವು ಸುರಿಯುವುದೂ, ಮಲಪಿಸ ರ್ಜನೆಯಾಗುವಾಗ ರಕ್ತವು ಸ್ವಲ್ಪ ಸ್ವಲ್ಪ ಬೀಳುವುದೂ ಪ್ರಾರಂಭವಾಗುವುದು. ಅಂತ್ಯಕಾಲವು ಸಮೀಪಿಸುತ್ತ ಬಂದಂತೆಲ್ಲಾ ಶೋಭೆಯು [Dropsy] ತಲೆದೋರುತ್ತಾ ಬಂದು ಮಗುವಿನ ಆಶೆಯನ್ನು ದೂರಪಡಿಸುವುದು.

ಈ ರೋಗದ ನಿದಾನವಾಗುವುದು ಸ್ವಲ್ಪ ಕಷ್ಟತರ ವಾದ ಕಾರ್ಯವಾಗಿದೆ. ಏಕೆಂದರೆ ಬಾಲಪೀಡೆ ಯಲ್ಲಿಯೂ ಮತ್ತು ಮಕ್ಕಳಿಗೆ ಮೇಹಸಂಬಂಧದಿಂದ ಬರುವ ಯಕೃದ್ವ್ಯಾಧ್ಯದಲ್ಲಿಯೂ (Pericellnar Cirrtosis of Con enital S ylilis) ಇಂತಹ ಚಿಹ್ನೆಗಳೇ ತಲೆದೋರುವುವು. ಈ ಮೂರು ಕಾಹಿಲೆಗಳಲ್ಲಿಯೂ



CC-0. Jangamwadi Math Collection. Digitized by eGangotri

ಯಕೃತ್ತಿನ ಮತ್ತು ಗುಲ್ಮದಗಡ್ಡೆಗಳು ಎರಡೂ ಪಾರ್ಶ್ವಗಳಲ್ಲಿ ಕಂಡುಬರುವುವು. ಆದರೆ ಮೇಹ ಸಂಬಂಧ ಜಾಡ್ಯದಲ್ಲಿ ತಂದೆತಾಯಿಗಳಿಗೂ ಮೇಹದ ರೋಗ ಇರುವುದು. ಮಗುವಿನ ಮೂಗು ಚಪ್ಪಟೆಯಾಗಿದ್ದು ಆಕಾರವು ವಕ್ರವಾಗಿರುವದು. ಹಲ್ಲುಗಳು ಅಗಲ ವಾಗಿಯೂ ದೂರದೂರವಾಗಿಯೂ ಇರುವುವು. ರಕ್ತವು ಕೆಟ್ಟು ಹೋಗಿದ್ದು ಅದರ ಪರೀಕ್ಷೆಯಾದರೆ ಈ ಕಾಹಿ ಲೆಯು ಸುಲಭವಾಗಿ ತಿಳಿದುಹೋಗುವದು. ಬಾಲ ಪೀಡೆಯಲ್ಲಿ ಎಲುಬುಗಳು ವ್ಯತ್ಯಾಸವನ್ನು ಹೊಂದಿ ಹಿಂದಕ್ಕೋ ಅಥವಾ ಮುಂದಕ್ಕೋ ಬಗ್ಗಿ ಹೋಗಿರು ವುವು. ಭೇದಿಯಿರುವುದೂ ಉಂಟು. ಶ್ವಾಸಕೋಶಗಳು ಕೆಟ್ಟು ಬೇಗಬೇಗನೆ ಉಸಿರಾಡುವುದು ಇರುವುದು. ತಲೆಯ ಮೆದುಳಿನ ಬಳಿ ಗುಳಿ [ ತಗ್ಗು ] ಬಿದ್ದಂತಾಗಿ [ Fontanelle pevsisting ] ಅದು ಒಂದೂವರೆ ವರ್ಷ ವಾದ ಬಳಿಕಲೂ ಕಾಣಿಸುತ್ತಿರುವುದು. ಉದರವು ಪ್ರಾಮುಖ್ಯತೆಗೆ ಬಂದು ಮಗುವು ಮಂಕಾಗಿರುವುದು. ಈ ಚಿನ್ಹೆಗಳಿಂದ ಈ ರೋಗವನ್ನು ಕಂಡುಹಿಡಿದುಕೊಳ್ಳ ಬಹುದು. ಇವೆರಡೂ ರೋಗಗಳಲ್ಲದೆ ಬೇರೆರೋಗದಲ್ಲಿ ಮಗುವಿಗೆ ಗಡ್ಡೆಗಳು ಕಾಣಿಸಿಕೊಳ್ಳುವುದು ಅಪೂರ್ವ. ಪಿತ್ಥರಸದ ಚಲನೆಯು ಕೆಟ್ಟುಹೋಗಿ ಕಣ್ಣುಗಳೂ ದೇಹದ ವರ್ಣವೂ ಹಳದಿಯಬಣ್ಣಕ್ಕೆ ತಿರುಗುವುದು. ಹೊಟ್ಟೆಯಲ್ಲಿ ಗಡ್ಡೆಗಳಿರುವುದು, ಮಗುವಿಗೆ ಆಗಾಗ ಜ್ವರವು ಬರುವುದು ಇವೇ ಮೊದಲಾದ ಚಿನ್ಹೆಗಳು ಈ ರೋಗದ ನಿದಾನ ( Diagnosis ) ಕ್ಕೆ ಸಹಕಾರಿ ಯಾಗಿವೆ.

ಈ ಲೇಖನವು ಮಾಡತಕ್ಕ ಕೆಲಸದಲ್ಲಿ ಉಳಿದು ದೆಂದರೆ ಇದರ ಚಿಕಿತ್ಸೆಯೊಂದು ಮಾತ್ರ. ಆದರೆ ಈ ಭಾಗ ವನ್ನುಲ್ಲೇಖಿಸುವಾಗ ಬಹಳ ವಿಷಾದವಾಗುತ್ತದೆ. ಇದು ವರೆಗೆ ಎಷ್ಟೋಮಂದಿಯ ಮಕ್ಕಳು ಇದಕ್ಕೆ ತುತ್ತಾಗಿ ಹೋಗಿದ್ದಾರೆ; ಮತ್ತು ಆಗುತ್ತಲೂ ಇದ್ದಾರೆ. ಇದರಿಂದ ಜನಾಂಗಕ್ಕೆ ಬಹಳವಾಗಿ ನಷ್ಟವಾಗಿ ಹೋಗಿದೆ. ಇದು ಇಂತಹ ಕಾರಣದಿಂದ ಬರುವುದೆಂದು ಇದುವರೆಗೆ ಸರಿ ಯಾಗಿ ತಿಳಿದಿಲ್ಲ. ತಿಳಿಯುವವರಿಗೆ ಇದನ್ನು ತಡೆ... ಶಕ್ತಿಯು ಬಹಳ ಕಡಿಮೆ. ಇಂತಹ ರೋಗದ ಚಿಹ್ನೆ... ಕ್ರಮದಲ್ಲಿ ಮೊದಲು ಮೊದಲು ಎಚ್ಚರಿಕೆಯ... ವುದೇ ಒಳ್ಳೆಯದು. ಆಗ ಇದನ್ನು ತಡೆಯುವುದ... ವಾದರೆ ಅದನ್ನು ಬಳಿಕ ನಿಲ್ಲಿಸಲಾಗುವುದೇ ... ಮೊದಲು ಮೊದಲು ಗ್ರೇ ಪೌಡರ್ ( Grey pow... ಎಂಬ ಪುಡಿಗಳನ್ನು ತಿನ್ನಿಸುವುದರಿಂದಲೂ ... ಟ್ರೋಪೀನ್ ( Uro tropine ) ಮತ್ತು ಸೈಲೋ... ಪೀನ್ ( Cylo tropine ) ಎಂಬ ಔಷಧಗ... ಸೂಜಿಯ ಮೂಲಕ ( Injections ) ದೇಹಕ್ಕೆ ... ವುದರಿಂದಲೂ ಸ್ವಲ್ಪಮಟ್ಟಿಗೆ ಗುಣತೋರಿಬ... ರೋಗವು ವೃದ್ಧಿಗೊಂಡನಂತರ ಅದರ ಸ್ಥಿತಿಯನ್ನು... ವೈದ್ಯರು ಚಿಕಿತ್ಸೆಯನ್ನು ನಡೆಯಿಸಬೇಕಾಗು... ಈಚೆಗೆ ವಿಜಯನಗರದ ವೈದ್ಯರೊಬ್ಬರು ಈ ರೋಗ... ಔಷಧಮಾಡಿ ಅನೇಕ ಜನರಿಗೆ ಗುಣತೋರಿಸಿ... ನಮಗೆ ತಿಳಿದುದರಲ್ಲಿ ಭೇದಿಮಾಡಿಸುವ ಎಣ್ಣೆ... ಮಕ್ಕಳ ಗಡ್ಡೆಗಳನ್ನು ಕರಗಿಸಿ ಬಹಳ ಮಟ್ಟಿಗೆ ಉಪ... ಯಾಗಿರುವುದು. ಇದನ್ನು ರೋಗವು ಇನ್ನೂ ಹೆ... ವೃದ್ಧಿಗೊಳ್ಳದೆ ಇರತಕ್ಕ ಸಮಯದಲ್ಲಿ ... ಉಪಯೋಗಿಸಿದರೆ ಅದು ವಾಸಿಯಾಗುವ ಸಂಭ... ಹೆಚ್ಚು. ಸಾಮಾನ್ಯವಾಗಿ, ಈ ಕಾಹಿಲೆಯನ್ನು ... ಮಾಡುವ ಔಷಧವು ಯಾರಲ್ಲಿದ್ದರೂ ನಿಷ್ಪಕ್ಷಪಾ... ಬುದ್ಧಿಯಿಂದ ಅದನ್ನು ತರಿಸಿ ಸೇವಿಸುವುದು ಒಳ್ಳೆಯ... ಏಕೆಂದರೆ, ಕೈಮೀರಿದನಂತರ ಇದನ್ನು ಗುಣಪಡಿಸ... ಧ್ಯವಾಗುವುದು. ವೈದ್ಯಶಾಸ್ತ್ರವನ್ನರಿತವರು ಯ... ಆಗಲಿ, ತಮ್ಮದು ದೊಡ್ಡದು, ಇತರರದು ಚಿಕ್ಕದು... ಹಿಯಾಳಿಸದೆ ಇದಕ್ಕೆ ತಕ್ಕ ಪರಿಹಾರೋಪಾಯವ... ಕಂಡುಹಿಡಿಯುವುದರಿಂದಾಗಲಿ, ಒಂದು ವೇಳೆ ... ಕಂಡು ಹಿಡಿದಿದ್ದರೆ, ಅದನ್ನು ವೈದ್ಯರಿಗೂ ಇತರ... ತಿಳಿಸುವುದರಿಂದಾಗಲಿ, ಮುಂದರಿದು ಬಂದರೆ ಜನ... ಗಕ್ಕೆ ಉಪಕಾರವಾಗುವುದು; ದೇಶದ ಉನ್ನ... ಕಾರಣವಾಗುವುದು. ಲೋಕಕ್ಕೆ ಕ್ಷೇಮವಾಗು... ಅಂತಹ ಮಹನೀಯರಿಗೆ ಕೀರ್ತಿಯುಂಟಾಗುವುದು.

CC-0. Jangamwadi Math Collection. Digitized by eGangotri

# ಶ್ರೀನಿವಾಸರ ಪರಿಚಯ

ಲೇಖಕರು:— ಶ್ರೀ. ಕೆ. ಗೋಪಾಲಕೃಷ್ಣರಾಯರು ಬಿ. ಎ. ಬೆಂಗಳೂರು

ಈಚೀಚೆಗೆ ಯಾರೂ ಮರಕೋತಿ ಆಟ ಆಡುವುದನ್ನೇ ಕಾಣೆ. ಈಗೆಲ್ಲಾ ಕ್ರಿಕೆಟ್ಟು ಮೊದಲಾದುವು ಬಂದಿವೆ: ಎಲ್ಲಾ ದುಡ್ಡಿನ ಬಾಬತು. ನಾವು ಎಳೆಯರಾಗಿದ್ದಾಗ ನಮಗೆ ಆ ಆಟದಲ್ಲಿದ್ದ ಅಭಿರುಚಿ ಬೇರೆ ಯಾವುದರಲ್ಲಿಯೂ ಇರಲಿಲ್ಲ. "ಬ್ರಹ್ಮಚಾರೀ ಶತಮರ್ಕಟಃ" ಎಂಬ ಗಾದೆಯನ್ನು ನೀವೆಲ್ಲರೂ ಕೇಳಿದ್ದೀರಿ. ಶತ ಬಿಟ್ಟು ಸಾಸಿರ ಎಂದು ಬೇಕಾದರೂ ಹೇಳಬಹುದು. ನಮ್ಮ ಹಿರಿಯರು ನಮಗೆ ಆ ಗಾದೆಯನ್ನು ಆಶೀರ್ವದಿಸಿದಷ್ಟೂ ಖುಷಿ ಹೆಚ್ಚು, ಊಟವನ್ನು ಕೂಡ ಬಿಟ್ಟು ಮರದ ಮೇಲೆಯೇ ಇರುತ್ತಿದ್ದೆವು. ಇನ್ನು ಬೇಸಗೆ ಬಂದಿತೆಂದರೆ ಕೇಳಬೇಕೆ!! ಮೂರು ಹೊತ್ತೂ ಮಾವಿನ ಮರವಾಯಿತು; ನಾವಾಯಿತು. ಆಡಲು ಆಟ; ತಿನ್ನಲು ಕಾಯಿ. ಮನೆಯಿಂದ ಬರುವಾಗ ಅಜ್ಜಿಯನ್ನು ಪೀಡಿಸಿಯೋ ಠಕ್ಕರನ್ನು ಹೊಡೆದೋ ಜೋಬಿನ ತುಂಬ ಉಪ್ಪು ಕಾರದ ಪುಡಿಯನ್ನು ತುಂಬಿಕೊಂಡೇ ಬರುತ್ತಿದ್ದೆವು. ಇನ್ನು ನಮ್ಮನ್ನು ಮರದಿಂದ ಇಳಿಸಬೇಕಾದರೆ ಆ ಸೂರ್ಯದೇವನಿಗೂ ಸಾಕಾಗಿ, ಸೋತು, ಶರಧಿಗಿಳಿಯಬೇಕಾಗುತ್ತಿದ್ದಿತು. ನಾವಾಗ ಒಬ್ಬೊಬ್ಬರಾಗಿ ಮರದಿಂದ ಇಳಿಯಲು ಯತ್ನಿಸಬೇಕು. ಯಾತಕ್ಕೆ ಇದನ್ನು ಹೇಳಲು ಹೊರಟೆನೆಂದರೆ.... ಮುಂದೆ ಅದು ನಿಮಗೆ ತಿಳಿಯುತ್ತದೆ.

ಗುಂಡ ನಮ್ಮ ಸ್ನೇಹಿತರ ಪೈಕಿ ಬಹಳ ಹಳಬ. ಆಟಗಳಲ್ಲಿ ಅವನು ನಿಸ್ಸೀಮ. ಅವನಿಗೂ ನನಗೂ—ಲಂಗೋಟಿ ಸ್ನೇಹಿತರೋ ಏನೋ ಎನ್ನುತ್ತಾರಲ್ಲಾ ಅದರಹಾಗೆ—ಸ್ನೇಹ. ಅವನ ಮನೆಯ ಅಂಗಳದಲ್ಲಿಯೇ ನಾಲ್ಕೈದು ಮಾವಿನ ಮರಗಳಿದ್ದುವು. ಅವನೆಂದರೆ ನಮಗೆ ಹೇಗೆ ಪಂಚಪ್ರಾಣವೋ ಆ ಮರಗಳೂ ನಮಗೆ ಹಾಗೆ ಪಂಚಪ್ರಾಣ. ನನ್ನ ಬಾಲ್ಯದ ಮೂರು ವೀಸೆ ಕಾಲವನ್ನೆಲ್ಲಾ ಅದರ ಮೇಲೆ ಕಳೆದಿದ್ದೇನೆ. ಒಂದು ದಿನ ಸಂಜೆ,(ನಾವಿನ್ನೂ ಆಗ ಎರಡನೆಯ ತರಗತಿಯಲ್ಲಿ ಓದುತ್ತಿದ್ದೆವು) ಅವರ ಅಣ್ಣ ತನ್ನ ಚಿಕ್ಕಮನೆಯಲ್ಲಿ ಯಾವುದೋ ಪುಸ್ತಕವನ್ನು ಓದುತ್ತಿದ್ದವರು ಹೊರಗೆ ಬಂದು ನಮ್ಮನ್ನು ಕುರಿತು "ಇಲ್ಲಿ ಬನ್ನಿರೋ, ಇಲ್ಲಿ ತಮಾಷೆ ಓದಿ ಹೇಳುತ್ತೇನೆ ಕಥೇನ" ಎಂದರು. ನಮ್ಮ ಆಟದ ಮುಂದೆ ಅವರ ತಮಾಷೆಯೇ! "ಏನು ಕತೆ! ಯಾವ ಅಜ್ಜಮ್ಮನ ಪುರಾಣವೋ" ಎಂದುಕೊಂಡು ಅವರು ಕರೆದುದನ್ನು ಮನಸಕ್ಕೇ ತರಲಿಲ್ಲ. "ಲೋ, ಗೋಪಾಲಾ, ಗುಂಡಾ, ನಿಮ್ಮ ಮೇಷ್ಟರ ಕತೆ ಹೇಳುತ್ತೀನಿ ಇಲ್ಲಿ ಬನ್ನಿ ಇಲ್ಲಿ" ಎಂದರು. ನಮ್ಮ ಮೇಷ್ಟರ ಕತೆ! ಸ್ವಲ್ಪ ಮನಸ್ಸು ಆ ಕಡೆಗೆ ತಿರುಗಿತು. ಹುಡುಗರಾಗಿರುವಾಗ ನೋಡಿ ನಮ್ಮ ಮೇಷ್ಟರ ವಿಚಾರ ತಿಳಿದುಕೊಳ್ಳಬೇಕೆಂದರೆ ಬಹಳ ಉತ್ಸಾಹವಿರುತ್ತದೆ. ಅವರು ಹೇಗೆ ಊಟ ಮಾಡುತ್ತಾರೆ; ನಮ್ಮ ಹಾಗೆ ಕೈಯಿಂದಲೇ ಮಾಡುತ್ತಾರೆಯೆ; ನಸ್ಯವನ್ನು ಹೇಗೆ ಹಿಡಿಯುತ್ತಾರೆ; ಹೇಗೆ ಏರಿಸುತ್ತಾರೆ— ಇದು ಮೊದಲುಗೊಂಡು ಕೇಳಿ ತಿಳಿದುಕೊಳ್ಳಲು ಇರುವ ಕುತೂಹಲ ಯಾವುದರ ಮೇಲೆಯೂ ಇರುವುದಿಲ್ಲ. ಸ್ವಲ್ಪ ಬುದ್ಧಿ ಒಂದು ಮೆಟ್ಟಲು ಏರಿದ್ದರೆ ಮೇಷ್ಟರ ಹುಳುಕುಗಳನ್ನು ಹುಡುಕಲು ಹೊರಡುವುದು, ಅಡ್ಡ ಹೆಸರಿಡುವುದು, ಹೀಗೆಯೇ ಇನ್ನೂ...............ನಾವೂ ಇತರ ಹುಡುಗರಂತೆಯೇ ಅಲ್ಲವೆ! ಗುಂಡನ ಅಣ್ಣ ನಮ್ಮ ಮೇಷ್ಟರ ಕಥೆ ಹೇಳುತ್ತೇನೆ ಎಂದು ಪುಸ್ತಕವನ್ನು ತೆರೆದುಹಿಡಿದು, ಅವರು ಶಾಸ್ತ್ರಿಗಳಿಗೆ ನಸ್ಯ ಕೊಟ್ಟ ಸ್ಥಳದಿಂದ ಓದಿ ಹೇಳಲು ಮೊದಲು ಮಾಡಿದರು. ಆಗ ನಮ್ಮ ಆಟ ಸೂರ್ಯನ ಮುಂದೆ ಮಂಜುಮಾಯವಾಗುವಂತೆ ಎಲ್ಲಿಯೋ ಓಡಿಹೋಯಿತು. ಮರದಿಂದ ಇಳಿದು ಅವರ ಅಂಗಳದಲ್ಲಿ ಹೊಸ್ತಿಲ ಮೇಲೆ ಕುಳಿತು ಆದರದಿಂದ ಕೇಳತೊಡಗಿದೆವು. ಹಿಂದೆ ನಾವು ಕೇಳಿದುವೆಂದರೆ ಅಜ್ಜಿಯ

CC-0. Jangamwadi Math Collection. Digitized by eGangotri

ಕತೆಗಳೂ ತಪ್ಪಿದರೆ ಯಾವುದೋ ದೇಶದಲ್ಲಿ ಯಾವದೋ ಲೋಕದಲ್ಲಿ (ಅದಕ್ಕೆ ಕುಲವಿಲ್ಲ ಗೋತ್ರುವಿಲ್ಲ.) ನಡೆದ(?) ಕಥೆಗಳು. ಎಲ್ಲಿಯದು ಇಂತಹ ಕಥೆ! ನಮ್ಮ ಮೇಷ್ಟರ ಕಥೆ! ಹಿಂದೆ ಯಾರು ಈ ತರದ ಕಥೆಯನ್ನು ಬರೆದಿದ್ದಾರೆ!! ಕೇಳುತ್ತ ಕುಳಿತ್ತಿದ್ದೇವೆ. ಆಗ ಶಿವಪೂಜೆಯಲ್ಲಿ ಕರಡಿ ಬಿಟ್ಟಹಾಗೆ ಅವರ ಸ್ನೇಹಿತರೊಬ್ಬರು ಕರೆಯಲು ಬರಬೇಕೆ? ನಾವೆಷ್ಟು ಕೇಳಿಕೊಂಡರೂ ಗುಂಡನ ಅಣ್ಣ ಪುಸ್ತಕವನ್ನು ಕೊಡದೆ [ ಅವರು ಅದನ್ನು ಎಲ್ಲಿಯೋ ಎರವು ತಂದಿದ್ದರು ಎಂದು ತೋರುತ್ತದೆ ] ತಮ್ಮ ಕೊಠಡಿಯಲ್ಲಿ ಅದನ್ನಿಟ್ಟು ಬೀಗ ಹಾಕಿಕೊಂಡು ಹೊರಟುಹೋದರು. ಅದನ್ನು ಓದಬೇಕೆಂದಿರುವ ಆ ಹುಮ್ಮಸ್ಸಿನಲ್ಲಿ ನಮಗೆ ಅವರ 'ವಿಲ್ಲರು' ಬೀಗ ಒಂದು ತಡೆಯೇ! ಅಲ್ಲದೆ ಆಗ ನಮಗೆ ಕುಶಾಗ್ರಬುದ್ಧಿ; ಹೇಗೋ ಮಾಡಿ ಬೀಗ ತೆಗೆದು ಕತೆಯನ್ನು ಪೂರ್ತಿಯಾಗಿ ಓದಿಯೇ ಓದಿದೆವು. ಆ ಪುಸ್ತಕದಲ್ಲಿ ಇನ್ನಾವುದೂ ನಮಗೆ ಆಗ ರುಚಿಸಲಿಲ್ಲ. ಮೇಷ್ಟರ ಕಥೆಯೊಂದು, ರಾಮಭೀಮರ ಸಂವಾದವೊಂದು; ಅಂತೂ ಅಂದು ನಮ್ಮ ಮೆಚ್ಚಿನ ಮರಕೋತಿಯನ್ನು ಬಿಡಿಸಿ ಮರುಳು ಮಾಡಿ ಬಿಟ್ಟರು ಅಂದು ನಮ್ಮನ್ನು ಶ್ರೀನಿವಾಸರು.

ನಾವು ಹೈಸ್ಕೂಲಿಗೆ ಬರುವ ಹೊತ್ತಿಗೆ ನಮಗೆ ಅವರ ಕತೆಗಳ ಪರಿಚಯ ಹೆಚ್ಚುತ್ತ ಬಂದಿತು. 'ರಂಗಪ್ಪ'ನ ಸ್ನೇಹ ಬೆಳೆಯುತ್ತ ಬಂತು ಕ್ಷಿಪ್ರದಲ್ಲಿಯೇ ಅವನು ನಮ್ಮ ಪ್ರಿಯಮಿತ್ರನಾಗಿ ಹೋದ. ಅವನೂ ಆಗ ನಮ್ಮ ವಯಸ್ಸಿನವನೇ. ನಾವೂ ಅವನಂತೆ ಇರುವವರೇ. "ಒಂದೇ ವರ್ಣದ ರೆಕ್ಕೆಯ ಹಕ್ಕಿಗಳೆಲ್ಲವು ಸೇರುವುವೊಂದೆಡೆಯೇ' ಎನ್ನುವ ಸಮಾಚಾರ. ಅವನ ವಿಷಯದಲ್ಲಿ ನಮಗೆ ಹೆಚ್ಚು ಆದರ, ಕನಿಕರ. ಎಷ್ಟು ಸಲ ನಾವವನ ಆ ಮೂರು ಕತೆಗಳನ್ನು ಓದಿದ್ದೇವೆಯೋ! ಎಷ್ಟು ಜನಕ್ಕೆ ಅವನ್ನು ಓದಿ ಹೇಳಿದ್ದೆವೆಯೋ! ಅಷ್ಟರಲ್ಲಿ ಶ್ರೀನಿವಾಸರ "ಬಿನ್ನಹ" ವು ಬೇರೆ ಬಂದಿತು. ಅದರಲ್ಲಿಯ ರಾಣಿಯ ಮನೆ! 'ಎ' ಕ್ಲಾಸಿನಲ್ಲಿದ್ದಾಗ "ಗಿಳಿಯು ಪಂಜರದೊಳಿಲ್ಲಾ" ಎನ್ನುವುದನ್ನು ಹೇಗೆ ಕಂಠಪಾಠ ಮಾಡಿದ್ದೆವೊ! ಆದರೆ "ರಾಣಿಯು ಕಾಣಿಸದ" ಆ ರಾಣಿಯ ಮನೆಯನ್ನು ಒಂದೆರಡು ಸಲ ಓದುತ್ತಲೆ ಕಂಠಪಾಠವಾಯಿತು. ಇತರ ಕವನಗಳನ್ನು ... ಕೊಳ್ಳುವ ಸಾಮರ್ಥ್ಯವು ನಮಗಾಗ ಇರಲಿಲ್ಲ ... ರಸಿಕರಾದ ಶ್ರೀನಿವಾಸರು ಹೇಗಿರಬಹುದು. ... ನೋಡಬೇಕು ಎನ್ನುವ ಆಶೆ ಉದ್ಭವಿಸಿ ... ಲಾರಂಭಿಸಿತು. ಮನಸ್ಸಿನಲ್ಲಿ ಅವರು ಹೀಗಿ... ಹಾಗಿರಬಹುದು ಎಂದು ಕಲ್ಪಿಸಿಕೊಳ್ಳಲಾರಂ... ಕತೆಯಲ್ಲಿ ಶಾಮಣ್ಣನೆಂಬ ಮುದುಕನೆಂದು ... ಡಿದ್ದರೂ "ಘಾಟಿಯಿದ್ದಾರೆ ಅವರೆಂದಿಗೂ ... ರಲ್ಲ" ಎಂದು ತೋರುವುದು—ಎಂದು ಯೋ... ಏನೋ ಒಂದು ವಿಧವಾಗಿ ಅವರ ಮೂರ್ತಿ... ನಾವು ಕಲ್ಪಿಸಿಕೊಳ್ಳತೊಡಗಿದೆವು. ... ವಿಷಯದಲ್ಲಿಯೂ ಹಾಗೆ. ಅವನ ಸೃಷ್ಟಿಸೌ... ವನ್ನೂ ಮಹಾಮಹಿಮೆಯನ್ನೂ ಕಂಡಾಗ ... ಕಾಣಬೇಕೆಂಬ ಇಚ್ಛೆಯು ಅಧಿಕವಾಗುವ... ನನ್ನು ಈ ರೀತಿ ಇರಬಹುದೆಂದು ಯೋ... ಭಾವಿಸುವೆವು. ಕಂಡೆನೆಂದು ಭ್ರಮಿಸುವೆವು ... ತ್ತಾಗಿ ಕಂಡರೆ ನಮ್ಮ ಆನಂದಕ್ಕೆ ಪಾರವೆಲ್ಲಿ...

ನಾವೂ ಶ್ರೀನಿವಾಸರನ್ನು ಕಾಣಲು ... ದ್ದಾಗ ಕಾಣುವ ಸಂಯೋಗವು ನಾನಿನ್ನೂ ... ನಲ್ಲಿದ್ದಾಗಲೇ ಒಂದೊದಗಿತು. ಅಷ್ಟರಲ್ಲಿ 'ಶ್ರೀ... ಎನ್ನುವುದು ಅವರ ಪ್ರೇಮದ ಹೆಸರೆಂದೂ ... ನಿಜವಾದ ಹೆಸರು ಮಾಸ್ತಿ ವೆಂಕಟೇಶಅಯ್ಯಂ... ರೆಂದೂ ತಿಳಿಯಿತು. "ಸೆಂಟ್ರಲ್ ಕಾಲೇಜಿನ ... ಟಕ ಸಂಘದವರು ಮುದ್ದಣನ ಸ್ಮಾರಕೋತ್ಸವ... ತ್ತಾರೆ ಅಲ್ಲಿಗೆ ಅನೇಕ ಕರ್ನಾಟಕ ಮಹನೀ... ಬರುವರಲ್ಲದೆ ಮ॥ ರಾ॥ ಮಾಸ್ತಿ ವೆಂಕಟೇಶ ... ಗಾರ್ಯರೂ ದಯಮಾಡಿಸಿ ಮುದ್ದಣನ ವಿಷ... ಉಪನ್ಯಾಸ ಮಾಡುತ್ತಾರೆ" ಎಂದು ತಿಳಿಯಿತು. ... ನಾವು ಮುದ್ದಣನನ್ನು ಅರಿಯೆವು. ನಮ್ಮ ಪಠ್ಯ... ಗಳಾಗಿ ಪಠಿಸಿ ಪರಿಚಯಮಾಡಿಕೊಂಡಿದ್ದವರು ... ವಾಲ್ಮೀಕಿ ಕುಮಾರವ್ಯಾಸ, ಲಕ್ಷ್ಮೀಶ. ಗದ್ಯದಲ್ಲಿ ... ಕಾದಂಬರಿಯ ಪಿತಾಮಹರಾದ ಬಿ. ವೆಂಕಟಾಚಾ... ಅವರೊಂದಿಗೆ ಇತರ ಸಣ್ಣವರು; ಆದುದರಿಂದ ಮು... ಸ್ಮಾರಕೋತ್ಸವದ ದಿನ ಮುದ್ದಣನ ಭಾವಚಿತ್ರ... ವರಣದಲ್ಲಿ ಮುದ್ದಣನನ್ನು ನೋಡಲು ಆಶೆ...

CC-0. Jangamwadi Math Collection. Digitized by eGangotri

ನಾನಲ್ಲಿಗೆ ತೆರಳಿದು; ಶ್ರೀನಿವಾಸರನ್ನು ನೋಡುವ ಭರವಸೆಯಿಂದ. ನಾನಲ್ಲಿಗೆ ಹೋದಾಗ ಶ್ರೀನಿವಾಸರೇ ಮುದ್ದಣನ ರಾಮಾಶ್ವಮೇಧದ ಮೇಲೆ ವಿಮರ್ಶೆಯನ್ನು ಓದುತ್ತಿದ್ದರು. ನನ್ನ ಪಕ್ಕದಲ್ಲಿದ್ದವರನ್ನು ಕೇಳಿ ಅಲ್ಲಿದ್ದ ಮಹನೀಯರುಗಳಾರೆಂಬುದನ್ನು ವಿಚಾರಿಸುತ್ತಾ "ಈಗ ಓದುತ್ತಿರುವವರಾರು?" ಎಂದು ಕೇಳಿದೆ. "ಅವರು ಅಸಿಸ್ಟೆಂಟು ಕಮೀಷನ್ನರು ವೆಂಕಟೇಶ ಐಯ್ಯಂಗಾರ್ಯರು" ಎಂದು ಹೇಳಿದರು. ನಾನು ಯಾರನ್ನು ನೋಡಬೇಕೆಂದು ಬಂದಿದ್ದೆನೋ ಅವರ ದರ್ಶನವೇ ಮೊದಲು ಆದಹಾಗಾಯಿತು.

"ಶ್ರೀನಿವಾಸರಾದ ವೆಂಕಟೇಶ ಐಯ್ಯಂಗಾರ್ಯರು ಎಂದು ಹೇಳಬಾರದೆ? ಅಸಿಸ್ಟೆಂಟು ಕಮೀಶನರಂತೆ. ಒಳ್ಳೇ ಅಸಿಸ್ಟೆಂಟು ಕಮೀಶನರು!" ಎನ್ನಿಸಿತು. ಆ ಮೇಲೆ "ಅಯ್ಯೋ ಇವರಿಗೆಲ್ಲಾ ಏನು ಗೊತ್ತು, ಇವರೇ ಶ್ರೀನಿವಾಸರು ಎನ್ನುವದು" ಎಂದುಕೊಂಡೆ.

ಅವರನ್ನೇ ದಿಟ್ಟಿಸಿ ನೋಡತೊಡಗಿದೆ. ಅವರ ವರ್ಣನೆಯನ್ನು ನಾನಿಲ್ಲಿ ಕೊಡುವದಿಲ್ಲ. ನೀವೆಲ್ಲರೂ ಅವರನ್ನು ಕಂಡಿದ್ದೀರಿ. ಕೇಳಿದ್ದೀರಿ. ಆದರೆ ಅವರ ಮುಖದ ಮೇಲಿಂದ ಆ ಸ್ವಾಭಾವಿಕವಾದ ನಗುವನ್ನು ತಿಳಿಸದೆ ಇದ್ದರೆ ಮನಸ್ಸಿರುವುದಿಲ್ಲ. ಅಲ್ಲದೆ ಆಗ ಅವರು ಓದುತ್ತಿದ್ದ ವಿಷಯವೂ ಅವರಿಗೆ ಸರಿಯಾದುದೇ. ಮುದ್ದಣ ಮನೋರಮೆಯರ ಸಂಭಾಷಣೆ. ನಾನವರನ್ನು ದಿಟ್ಟಿಸಿ ನೋಡಿದಾಗ ಅವರು "ಆವದೇವಂ" "ಕಾಮದೇವಂ" "ಅಂತಪ್ಪೊಡೆ ನೀಂ ರತೀದೇವಿ" ಎಂದು ಓದುತ್ತಿದ್ದರು. ರಂಗಪ್ಪನ ವಿಷಯವನ್ನು ಬರೆದವರಿಗೆ ಇದು ಸರಿಯಾದ ವಿಷಯವಲ್ಲವೇ! ಅದನ್ನು ಕೇಳುತ್ತಲೆ ರಂಗಪ್ಪನ ವಿಷಯದ ಕಡೆಗೆ ನನ್ನ ಮನಸ್ಸು ಹೋಯಿತು. ಶ್ರೀನಿವಾಸರನ್ನು ಮನದಣಿಯೆ ನೋಡುತ್ತಿದ್ದೆನೇ ಹೊರತು ಅವರು ಹೇಳುತ್ತಿದ್ದುದನ್ನು ಆಲಿಸುತ್ತಿರಲಿಲ್ಲ. ಮನಸ್ಸಿನಲ್ಲಿ ಇನ್ನೇನೋ ತರಂಗಗಳೆದ್ದಿದ್ದುವು. ಅವರು ತನ್ನ ಪ್ರಬಂಧದ ಕೊನೆಗೆ ಬರುತ್ತ "ಇಂಥ ಕವಿಗಳನ್ನು ಪಡೆದುದು ಕರ್ನಾಟಕದ ಸೌಭಾಗ್ಯ" ಎಂದರು. ಅವರು ಹೇಳಿದುದು ಮುದ್ದಣನ ವಿಷಯದಲ್ಲಿ; ನನ್ನ ಮನಸ್ಸು ತಿಳಿದದ್ದು ಶ್ರೀನಿವಾಸರ ವಿಷಯದಲ್ಲಿ. "ನಿಮ್ಮಂತಹ ಕವಿಗಳನ್ನು ಪಡೆದಿರುವುದು ಕರ್ನಾಟಕದ ಸೌಭಾಗ್ಯ" ಎಂದು ತೋರಿತು. "ಇಂತಹ ಕವಿಯು ಜೀವಂತನಾಗಿದ್ದಾಗ ಅವನನ್ನು ಸರಿಯಾಗಿ ಕಾಣದೆ ಅವನ ಯೋಗ್ಯತೆ ಏನೆಂದು ಕಂಡು ಹಿಡಿಯಲಾರದೆ ಇದ್ದದ್ದು ಕರ್ನಾಟಕರ ಅನಭಿಜ್ಞತೆಯನ್ನು ತೋರಿಸುತ್ತದೆ." ಎಂದರು. ಅದು ನಮ್ಮ ಹೃದಯಕ್ಕೆ ಈಟಿಯಿಂದ ತಿವಿದಂತಾಯಿತು. ಮುದ್ದಣನ ಪಾಡು ಆಗಿಹೋಯಿತು. ನಾವು ಶ್ರೀನಿವಾಸರಿಗೆ ಏನುಮಾಡುವವರಿದ್ದೇವೆ?....ಎನ್ನಿಸಿತು. ಈ ವಿಚಾರವು ಮನದಲ್ಲಿ ಮೊಳಗುತ್ತಿದ್ದಾಗ ಅವರು ತಮ್ಮ ಪ್ರಬಂಧವನ್ನು ಮುಗಿಸಿ ಕೊನೆಗೆ ಹೇಳಿದ ಪದ್ಯವು ಮನದಲ್ಲಿ ಚೆನ್ನಾಗಿ ನಾಟಿತು.

"Song such as this hath need of no man's praise
Beauty like this can be concealed from none
Why should I hold a candle to the rays of
such a sun"

ಈಗ ನಾನು ಇಲ್ಲಿ ಮೇಣದ ಬತ್ತಿಯನ್ನು ಶ್ರೀನಿವಾಸರ ಸೂರ್ಯ ಪ್ರಭೆಯ ಮುಂದೆ ಹಿಡಿಯಲು ಹೊರಟಿರುವುದನ್ನು ಕಂಡರೆ ನನಗೆ ನಗು ಬರುತ್ತಿದೆ. 'ಏನಿದು ಹುಚ್ಚು' ಎನ್ನಿಸುತ್ತಿದೆ. "ಪ್ರತ್ಯಕ್ಷವಾಗಿ ದೇವನೆದುರಿಗೆ ಇರುವಾಗ ವಿಗ್ರಹದ ಹಂಬಲವು ನಮಗೇಕೆ?" ಎಂಬಂತೆ "ಅವರೇ ನಮ್ಮೆದುರಿಗೆ ಇದ್ದಾರೆ. ಇನ್ನೂ ಅವರ ಕತೆ ಕವಿತೆ ನಾಟಕಗಳು ನಮ್ಮೆದುರಿಗೆ ಇರುವಾಗ ಅವುಗಳ ಪರಿಚಯ ನೀವು ಮಾಡಲು ಹೊರಟಿರುವುದು ನಿಮ್ಮ ಹುಚ್ಚನ್ನು ವ್ಯಕ್ತಗೊಳಿಸುವುದಲ್ಲವೇ!" ಎಂದು ತಾವು ಆಕ್ಷೇಪಿಸಬಹುದು. ಯಾವಾಗಲೂ ನಮಗೆ ಒಬ್ಬರಲ್ಲಿ ಗೌರವವು ಅಧಿಕವಾಗಿ ಹಿಡಿದರೆ ನಾವು ಅವರ ವಿಷಯದಲ್ಲಿ ಕೃತಿಗಳನ್ನು ಪಾಡಲು ಹೊರಡುವೆವು. ಆದರೆ ನಾನಿಲ್ಲಿ ಅವರ ವಿಷಯದಲ್ಲಿ ಹೆಚ್ಚಾಗಿ ಏನನ್ನೂ ಹೇಳಲು ಯತ್ನಿಸುವುದಿಲ್ಲ. ಅವರು ರಸಿಕರೊಂದೇ ಅಲ್ಲ, ಸಾಧಕರು. ಸಾಹಿತ್ಯವನ್ನು ಯೋಗವೆಂದೆಣಿಸಿ ಸಾಧಿಸುತ್ತಿರುವವರು. ಅಧಿಕಾರವೋ ಬೇಕಾದಹಾಗಿದೆ. ಐಶ್ವರ್ಯವೂ ಅಷ್ಟೇ! ಆದರೆ ಕಿಂಚಿತ್ತಾದರೂ ಗರ್ವವುಂಟೇ. ಅಧಿಕಾರಸ್ಥಾನದಲ್ಲಿರುವಾಗ ತಪ್ಪಿತಸ್ಥನನ್ನು ಚೆನ್ನಾಗಿ ಆಂದು ಬಿಡುವರು. ಹೊರಗೆ ಬಂದರೆ ಎಷ್ಟು ನಯ, ವಿನಯ! ಒಂದು ದಿನ ಅವರು ಕಚೇರಿಯಲ್ಲಿದ್ದಾಗ ನಾನು ಅಲ್ಲಿಗೆ ಹೋಗಿದ್ದೆ. ನನ್ನನ್ನು ಬಂದೆಡೆ ಕೂಡಿಸಿ ತಾವು ಇನ್ನೂ ಉಳಿದಿದ್ದ ಕಾಗದಪತ್ರಗಳನ್ನು ನೋಡುತ್ತಿದ್ದರು.



CC-0. Jangamwadi Math Collection. Digitized by eGangotri

ಪಕ್ಕದಲ್ಲಿದ್ದ ಗುಮಾಸ್ತೆಗೆ ಆಗಾಗ ಸ್ವಲ್ಪ ಕಠಿನವಾಗಿ ಮಾತನಾಡಿದರು. ಎಲ್ಲಾ ಮುಗಿದ ಮೇಲೆ ಅವನನ್ನು ಹೊರಗೆ ಕಳುಹಿಸಿಕೊಟ್ಟು 'ಅಯ್ಯೋ ಪಾಪ' ಎಂದರು. "ಏನು ಸಾರ್" ಎಂದೆ. "ನೋಡಿ, ನಾನು ಅವರನ್ನು ಅನ್ನದೆ ಇದ್ದರೆ ಕೆಲಸ ಜರಗುವುದಿಲ್ಲ. ಅಂದರೆ ಅಯ್ಯೋ ಎನ್ನಿಸುತ್ತದೆ. ರಂಗದಲ್ಲಿ ಏನೇನು ಆಡಬೇಕೊ ಎಲ್ಲಾ ಆಡಿಬಿಡುವುದು. ಹೊರಗೆಬಂದಾಗ ಅಯ್ಯೋಪಾಪ ಎಂದು ಪೇಚಾಡುವುದು. ಸಾಧ್ಯವಾದಷ್ಟು ಸಹಾಯ ಮಾಡುವುದು." ಎಂದರು. ಇನ್ನೊಂದು ಸಂದರ್ಭದಲ್ಲಿ ಅವರ ಮನೆಗೆ ಹೋಗಿದ್ದೆ: ಅಲ್ಲಿಗೆ ಒಬ್ಬ ಬಡಮುದುಕ ಒಕ್ಕಲಿಗ ಬಂದಿದ್ದ. ಅವನು ಅವರ ಊರಿನವನಂತೆ. ಒಳಗಡೆ ಕೂಡಿಸಿ ತಮ್ಮ ಪತ್ನಿಯವರಿಂದಲೇ ಊಟಕ್ಕೆ ನೀಡಿಸುತ್ತಿದ್ದರು. ಇವರು ನನ್ನೊಡನೆ ಮಾತನಾಡುತ್ತ ಕುಳಿತಿದ್ದರೂ ಆಗಾಗ ಎದ್ದು ಒಳಕ್ಕೆ ಹೋಗಿ ವಿಚಾ... ಕೊಂಡು ಬರುತ್ತಿದ್ದರು. ಅವನು ಊಟಮಾಡಿಕೊಂಡು ... ಬಂದ. ಕೊಠಡಿಯಲ್ಲಿ ಒಂದು ಸೋಫ ಇತ್ತು ... ಅವನನ್ನು ಅದರ ಮೇಲೆ ಕೂಡಬೇಕೆಂದು ಕೇಳಿ... ಅವನು ನೆಲದ ಮೇಲೆ ಕೂಡಬೇಕು ಎಂದು ಹಟ... ತೊಡಗಿದನು. ಕೊನೆಗೆ ಅವರು ಅವನ ಕೈ... ಅದರ ಮೇಲೆ ಕೂಡಿಸಿ ಆ ಮೇಲೆ ಅವನು ಬಂದ ... ಗಳನ್ನು ಕೇಳತೊಡಗಿದರು. ಅವನು ಅವರ ಹಳ್ಳಿಯ... ನಾದ್ದರಿಂದ ತನ್ನ ಮಗನಿಗೆ ಇವರಿಂದ ಒಂದು ... ಮಾಡಿಸಿಕೊಡುವಂತೆ ಕೇಳಲು ಬಂದಿದ್ದ. ಅವನು ... ಉಪಚರಿಸಿದ ರೀತಿಯನ್ನು ಕಂಡು ನನ್ನ ಕಣ್ಣು... ನೀರು ತುಂಬಿದವು. ಇನ್ನೂ ಹೇಳಲು ಹೊರಟರೆ ... ಸನ್ನಿವೇಶಗಳು ಅನೇಕವಿವೆ.

# ದುರ್ವಿಚಾರ

ದುಷ್ಟಬುದ್ಧಿಯ ಕಥೆಯು ನಿಮಗೆ ಗೊತ್ತಿಲ್ಲವೆ? ಗೊತ್ತಿಲ್ಲದೆಯೇನು? ಚಂದ್ರಹಾಸೋಪಾಖ್ಯಾನ... ನೆನಪಿಗೆ ತಂದರೆ ಸಾಕು.

ಪರದೂಷಣೆಯಿಂದ ದೂಷಿತವಾದ ದುಷ್ಟಬುದ್ಧಿಯು ಪೂರ್ವಾವಸ್ಥೆಯ ಕ್ಷುದ್ರತನವನ್ನು ... ಮಹಾ ಅಸೂಯೆಯಾಗಿ – ಹೊಟ್ಟೆಕಿಚ್ಚಾಗಿ ಪರಿಣಮಿಸುವದು. ಯಾರದೇನೂ ಇವರಿಗೆ ಸಹನವಾಗದು. ... ಯಾರೂ ಮೇಲಾಗಬಾರದು. ತಾ ಗಳಿಸಿದ ಗೌರವ (?) ವು ಎಲ್ಲಿ ಮಣ್ಣುಪಾಲಾಗುವದೋ ಎಂಬ ... ಮೊದಲೇ ಇಲ್ಲ. ಈಗ ಇಲ್ಲದಾಗುವುದೆಂತೆಂಬ ಅರಿವಿಲ್ಲ. ಮೇಲಾಗುತ್ತಿರುವವರ ಮೇಲ್ಮೆಯನ್ನು ಮಣ್ಣು... ಸುವುದೊಂದೇ ಇವರ ಜೀವನ ಸರ್ವಸ್ವ. ಆದರೆ ಫಲವೇನೋ ಇದಕ್ಕೆ ವಿಪರೀತವಾಗಿಯೇ ಉಂಟಾಗು... ಮೇಲಕ್ಕೇಳುತ್ತಿರುವವರಿಗೆ ಇವರ ಅಡ್ಡಗಾಲಿನ ಅಡ್ಡಿಗಳೆಲ್ಲ ಹೆಚ್ಚು ಶಕ್ತಿಯನ್ನೇ ಉಂಟುಮಾಡುವವು. ಹರಿ... ಹಳ್ಳಕ್ಕೆ ಬಂಡೆಗಲ್ಲುಗಳ ಅಡ್ಡಿಯಾದಷ್ಟೂ ಒಳ್ಳೆಯದು. ಈ ಅಡ್ಡಿಯಿಂದ ಅದರ ವೇಗವು ಬಹುಗುಣಿತವಾಗು... ಗರ್ಜನೆಯು ಗಂಭೀರವಾಗುತ್ತದೆ. ಆ ಪ್ರವಾಹದಲ್ಲಿ ಇವು ಎಲ್ಲಿಯೋ ಮುಳುಗಿ ಗೊತ್ತಿಲ್ಲದಂತೆ ಅಡಗಿ ... ವವು. ಗತಿಶೀಲವಾದ ಶಕ್ತಿಗೆ ಪ್ರತಿಬಂಧವು ಪ್ರಯೋಜನಕರವಾಗಿದೆ. ದುರ್ವಿಚಾರದ ಬಲೆಗೆಬಿದ್ದ ದುರಾ... ಮದಾಂಧರಾಗಿ ನೀಚತನಕ್ಕಿಳಿದು ಅಧೋಗತಿಗೆ ಹೋಗಿ ಜಡರಾಗಿ ಅತಲಕ್ಕೆ ಇಳಿಯುವರೆಂಬ ಮಾತು ಪುರಾ... ಹಾಸಗಳಿಂದಲ್ಲದೆ ಇಂದಿನ ಜನಾಂಗದ ಅವನತಿಯಿಂದಲೂ ಒಡೆದು ಕಾಣುತ್ತಿದೆ. ದುರ್ವಿಚಾರದಿಂದ ದುಷ್ಟಬುದ್ಧಿ... ತಾವೇ ಅಧೋಗತಿಗಿಳಿಯುವರು. ಇಂಥಾ ಸಾಮರ್ಥ್ಯವಿದರಲ್ಲಿದೆ! ನಂಬಿದವನನ್ನೆ ನುಚ್ಚುನುರಿಗೊಳಿಸಿ... ದುರ್ವಿಚಾರದ ಸಹಜಲೀಲೆ

—ಮರಳ...

CC-0. Jangamwadi Math Collection. Digitized by eGangotri

# ಬೆಂದೊಡಲ ಬಿಸಿಯುಸಿರು

ಶ್ರೀ. ಕೃಷ್ಣಮೂರ್ತಿ ಪುರಾಣಿಕ ಬಾಗಲಕೋಟೆ

೧

ಸುಡು ಸುಡೆಲೆ! ಸುಡು ಜೀವ
ಸುಡುಗಾಡ ಸೇರೇಳು
ಹುಡುಕದಿರು ಸಂತಸವ ಬಾಳಿನಲ್ಲಿ;
ತಡೆಯಿಹುದು ನಿನಗಿಂದು ಧರ್ಮದಲ್ಲಿ.
ಒಡೆಯನಿರೆ ಮರೆಯಾಗಿ
ಹಡೆದವರು ಹೊರತಾಗಿ
ಕಡೆಗಾಲವೆಂದಿಹುದು ಕೇಳುತಿಹರು;
ಬಿಡುಗಡೆಯ ನೆನೆಯೆಂದು ಹೇಳುತಿಹರು.

೨

ಮದುವೆಯಾಗಿತ್ತಂತೆ
ವಿಧವೆಯಾಗಿಹೆನಂತೆ
ಅದಕಾಗಿ ನಾನಿಂದು ಸಾಯಬೇಕು !
ಬದಿಗಾಗಿ ನಾನಿಂದು ಮರುಗಬೇಕು!
ಮದುವೆಯಾಗಿಹುದೆಂದು
ವಿಧವೆಯಾಗಿಹಮೇಲೆ
ಸದಮಲರೆ ! ನಾನರಿತೆ ಯಾರತಪ್ಪು ?
ಬದಿಗಾಗಿ ದೂರುವದು ಯಾರಿಗೊಪ್ಪು ?

೩

ನನ್ನರಿವು ತಿಳಿಯದಿಹ
ಕಂದಮ್ಮ ನಾನಂದು
ನನ್ನ ಜನ್ಮದ ಜೋಡ ತಿಳಿಯಲೆಂತು ?
ನನ್ನೊಡೆಯನಿವನೆಂದು ಕರೆಯಲೆಂತು ?
ನನ್ನರಿವು ತಿಳಿದಾಗ
ನನ್ನ ಜೀವನದಲ್ಲಿ—
ತನ್ನ ಸೊಬಗನ್ನಿಡುವ ನಲ್ಲನೆಲ್ಲಿ ?
ತನ್ನ ಬಾಳನು ಮುಗಿಸಿ ಮಸಣದಲ್ಲಿ!

೪

ಇಂದು ಆರ್ಯರಬೇಳಕು
ಹಿಂದು ಧರ್ಮದ ತೇಜ
ಬೆಂದೊಡಲಿನಿದಿರಲ್ಲಿ ಕಮರಿತಲ್ಲ !
ಕಂದಮ್ಮನಳಲುರಿಯು ದಹಿಸಿತಲ್ಲ !
ತಂದೆಗಳು ಇವರಂತೆ
ಬಂಧುಗಳು ಇವರಂತೆ
ಬಂಧನವನೆಳೆತನಕೆ ಕಟ್ಟುತಿಹರು !
ಬಂಧನದಿ ಧರ್ಮವನು ಮೆಟ್ಟುತಿಹರು.

೫

ತಾರುಣ್ಯ ನೀನೇತ-
ಕೇರಿಬರುತಿಹೆಯುಕಟ!
ಹೋರಾಡಲಾರೆನಾ ದೂರಹೋಗು;
ಏರಾಟ ಸಹಿಸೆನಾ ಸಾಗು ಸಾಗು.
ಮಾರ ನಿನ್ನಯ ದಿಟ್ಟಿ
ತೂರದಿರು ನನ್ನೆಡೆಗೆ
ನಾರಿತನವೇನಾರೆ ಬಯಸಬಹುದು;
ನಿನ್ನಿಂದ ನೊಂದೆದೆಯು ಅಲುಗಬಹುದು.

೬

ಮಸಣದಲಿ ಉರಿಯುತಿಹ
ಹೊಸ ಬಾಳಕಿಡಿಗಳಿರ!
ಹೊಸಹುಟ್ಟ ಹೆಣ್ಣೊಡಲೊಳಿರಿಸಬೇಡಿ
ಕಸಕೆಯೂ ಕಡೆಯಾಗಿ ಬಾಳಬೇಡಿ!
ಹಸಗೆಟ್ಟು ಹೋಗಿಹುದು
ಹುಸಿಯಾಗಿ ಧರ್ಮವಿದು.
ಹೊಸನಡೆಯು ಹೊಸನುಡಿಯು ಬಾಳ್ವುದಿಲ್ಲ,
“ ಬೆಂದೊಡಲ ಬಿಸಿಯುಸಿರ ” ಕೇಳ್ವರಿಲ್ಲ!

CC-0. Jangamwadi Math Collection. Digitized by eGangotri

# ಸಾಮುದ್ರಿಕ ಪರಿಚಯ

ಲೇಖಕರು:—ಶ್ರೀ ಉಡುಪಿ ಕೆ. ಶ್ರೀನಿವಾಸಾಚಾರ್ಯರು, ಧಾರವಾಡ

ಸಾಮುದ್ರಿಕ ಶಾಸ್ತ್ರದ ವ್ಯುತ್ಪತ್ತಿವಿಚಾರದಲ್ಲಿ ಅನೇಕ ಜನರು ಭಿನ್ನ ಭಿನ್ನ ಅಭಿಪ್ರಾಯಗಳನ್ನು ಹೇಳುತ್ತಾರೆ. ಅನೇಕರಿಗೆ ಈ ವಿಚಾರದಲ್ಲಿ ತಿರಸ್ಕಾರವಿಲ್ಲದಿದ್ದರೂ ವಿಶ್ವಾಸವು ಕಡಿಮೆಯಿರುವುದು. ಈ ಶಾಸ್ತ್ರದ ಮಹತ್ತ್ವವನ್ನು ಬೋಧಿಸಲಿಕ್ಕೆ ಇತರಾಪೇಕ್ಷೆಯೇನೂ ಇರುವುದಿಲ್ಲ. ಅವರವರ ಭೂತ, ಭವಿಷ್ಯ ವರ್ತಮಾನ ವಿಚಾರಗಳನ್ನು ಇದೇ ಶಾಸ್ತ್ರಮೂಲಕವಾಗಿ ತಿಳಿದುಕೊಳ್ಳಬಹುದು; ಮತ್ತು ಜನ್ಮಪತ್ರವನ್ನು ಇದರ ಸಹಾಯದಿಂದಲೇ ಶುದ್ಧಪಡಿಸಿ ಇದರ ನಿಜವಾದ ತತ್ವಗಳನ್ನು ತಿಳಿಯಬಹುದು. ಇದರ ಪರಿಚಯವನ್ನು ಹೊಂದುವುದಕ್ಕಾಗಿ ಪಾಶ್ಚಾತ್ಯರು ಎಷ್ಟೋ ಸಾಹಸಗಳನ್ನು ಮಾಡಿರುತ್ತಾರೆಂಬುದು ಈಗಿನ ಅವರ ಗ್ರಂಥಗಳಿಂದಲೇ ತಿಳಿದುಬರುತ್ತದೆ. ನಮ್ಮ ಹಿಂದುಸ್ಥಾನದಲ್ಲಿಯೇ ಋಷಿಗಳಿಂದ ಕಲ್ಪಿತವಾದ ಗ್ರಂಥಗಳ ಸಹಾಯದಿಂದಲೂ ಸ್ವಾನುಭವದಿಂದಲೂ ಭಾವಿಸಿನೋಡಿದಲ್ಲಿ, ಈ ಶಾಸ್ತ್ರವು ಕೇವಲ ಉದರಂಭರಿಗಳ ಜೀವಿತೋಪಾಯವಲ್ಲವೆಂದೂ ಮತ್ತು ಮಹತ್ವವಾದ ವಿಷಯವು ಇದರಲ್ಲಡಗಿದೆಯೆಂದೂ ನಿಚ್ಚಳವಾಗಿ ಕಂಡುಬರುತ್ತದೆ. ಆದರೆ ಇಂದು ನಾವು ಈ ಶಾಸ್ತ್ರವನ್ನು ಮೂಲೆಗೊತ್ತಿದ್ದೇವೆ. ಪಾಶ್ಚಾತ್ಯರು ಮಾತ್ರ ಕೂಲಂಕಷವಾಗಿ ಇದರ ಅಧ್ಯಯನ ಮಾಡುತ್ತಿರುವರು. ನಮ್ಮ ದೇಶದಲ್ಲಾದರೋ ಅಸೂಯಾಪರರಾದ ಅನೇಕರು ಓಲೆಗರಿಯಲ್ಲಿದ್ದ ಗ್ರಂಥಗಳನ್ನು ಬಚ್ಚಿಟ್ಟಿರುವುದರಿಂದಲೂ ಶಿಷ್ಯೋಪದೇಶವು ಕಡಿಮೆಯಾಗಿರುವುದರಿಂದಲೂ, ಇದು ಬರಬರುತ್ತ ಮಾಯವಾಗುತ್ತಲಿದೆ; ಇದರ ಅಭಿವೃದ್ಧಿಗಾಗಿ ಯಾರಾದರೂ ತನು ಮನಧನಗಳನ್ನು ವೆಚ್ಚಮಾಡುತ್ತ ಪ್ರಯತ್ನಿಸುತ್ತಲಿದ್ದರೆ, ಅವರನ್ನು "ಛಿ" ಎಂಬಬಂದೇ ಶಾಸ್ತ್ರ... ಧಿಕ್ಕರಿಸುವುದು ಅನೇಕರ ಸಹಜವಾದ ಧ... ಏತಕ್ಕೆಂದರೆ ಈ ಶಾಸ್ತ್ರದಲ್ಲಿ ಪೂರ್ಣಾನುಭವ... ದದ ಹಲವು ಜನರು ದ್ರವ್ಯಾಶೆಯಿಂದ ಅಸ... ಮತ್ತು ಅತೃಪ್ತಿಕರವಾದ ಫಲಾಫಲಗಳನ್ನು ... ರಿಂದ ಇದರಲ್ಲಿ ಅವಿಶ್ವಾಸವು ಹುಟ್ಟಲು ಕಾರಣ... ಇದು ಕೇವಲ ಗ್ರಂಥಾಭ್ಯಾಸದಿಂದಲೇ ಪಾ... ಹೊಂದತಕ್ಕ ವಿಷಯವಲ್ಲ; ಅನೇಕತರ... ಖಾದಿಗಳನ್ನು ನೋಡಿ ನೋಡಿ ಬರುವ ... ಇದಕ್ಕೆ ಅತ್ಯಾವಶ್ಯಕವಾಗಿದೆ.

ಸಾಮುದ್ರಿಕವೆಂಬುದು ಫಲಜ್ಯೋತಿಷದ ... ಪ್ರಧಾನ ಅಂಗವಾಗಿದೆ. ಆದುದರಿಂದ ... ರೇಖಾಶಾಸ್ತ್ರಕ್ಕೂ ಇರುವ ಸಂಬಂಧವು ... ಗಳಿಂದ ವ್ಯಕ್ತವಾಗಿರುವುದು. ಈ ಶಾಸ್ತ್ರ... ವಿಷಯದಲ್ಲಿ ಅನೇಕರ ಅಭಿಪ್ರಾಯಗಳು ... ವಿಧಗಳಾಗಿವೆ. ಇದನ್ನು ಕೆಲವರು ಈಶ್ವರ... ಸಂವಾದಜನ್ಯವೆಂತಲೂ, ಕೆಲವರು ವಿಷ್ಣು ವೇ... ಎಂಬ ಬ್ರಾಹ್ಮಣನಾಗಿ ಇದನ್ನು ಪ್ರಕಟಿ... ಹೇಳುವರು. ಆದರೆ, ಶೇಷಶಾಯಿಯಾದ ... ನಾರಾಯಣರ ಸೌಂದರ್ಯ ಮತ್ತು ಶುಭಲಕ್ಷ... ನೋಡಿ ಬೆರಗಾದ ನದ – ನದಿಗಳಿಗೆ ಪತಿಯಾದ ಸ... ರಾಜನು ಇದರ ತತ್ತ್ವಗಳನ್ನು ಅರಿಯಲು ... ಪ್ರಯತ್ನಪಟ್ಟು ಕೊನೆಗೆ ಈ ಶಾಸ್ತ್ರವನ್ನು ... ರಿಂದ ಇದಕ್ಕೆ "ಸಾಮುದ್ರಿಕ ಶಾಸ್ತ್ರ" ಹೆಸರು ಬಂದದ್ದು ಸರ್ವಸಮ್ಮತವಾಗಿದೆ.—

सामुद्रमंगलक्षणामिति सामुद्रिकामिदांहि देहभाज्य। प्रथममवाप्य समुद्रः कृतवानिति कीर्त्यते क्षितौ॥

CC-0. Jangamwadi Math Collection. Digitized by eGangotri

ಎಂಬುದಾಗಿ ಜಗದ್ದೇವನಿಗೂ ಇದು ಸಮ್ಮತವಾಗಿದೆ ಮಾತ್ರವಲ್ಲದೆ, ನಾವು ಪೂರ್ವಜನ್ಮದಲ್ಲಿ ಸಂಪಾದಿಸಿದ ಪಾಪ ಪುಣ್ಯಗಳ ಫಲವೇ ರೇಖಾರೂಪದಿಂದ ಪರಿಣಮಿಸುವುದೆಂದು ಭಾವನೆಯಿದೆ. ಆವಶ್ಯಕವಾದ ಮತ್ತು ಶಾಸ್ತ್ರೀಯ ವೇದ್ಯವಾದ ಅಕ್ಷರ ಮಾಲಿಕೆಯಿಂದ ಅದರ ಫಲಾಫಲಗಳನ್ನು ವ್ಯಕ್ತಪಡಿಸುವ ಶಾಸ್ತ್ರವೆಂದರೆ ಸಾಮುದ್ರಿಕ ಶಾಸ್ತ್ರವೇ ಆಗಿದೆ.

"पूर्वभवान्तर जनितं शुभाशुभमिहापि लक्ष्यते येन ।
पुरुष स्त्रीणां सद्भिर्निगद्यते लक्षणं तदिह ॥"

ಇದು "ಅಂಗಸಾಮುದ್ರಿಕ, ಹಸ್ತಸಾಮುದ್ರಿಕ, ಸ್ತ್ರೀ ಸಾಮುದ್ರಿಕ" ಎಂದು ಮೂರು ವಿಧವಾಗಿ ಇದೆ. ಇವುಗಳಲ್ಲಿ ರೇಖಾಪರಿಚಯವನ್ನು ಹಸ್ತಸಾಮುದ್ರಿಕದಿಂದಲೇ ಪಡೆಯಬೇಕಾದುದರಿಂದ ಇದಕ್ಕಿದ್ದ ಪ್ರಧಾನತೆಯು ಯುಕ್ತವಾಗಿದೆ. ಇದನ್ನೇ ನಾರದ, ಲಕ್ಷಕ, ವರಾಹ, ಮಾಂಡವ್ಯ ಮೊದಲಾದ ಮಹರ್ಷಿಗಳು ಈ ವಿಚಾರವಾಗಿ ಗ್ರಂಥಗಳನ್ನು ರಚಿಸಿರುವರಲ್ಲದೆ ಭೋಜಾದಿಕವಿಗಳು ಕೂಡಾ ಇದರ ಮಹತ್ವವನ್ನರಿತು ಅನೇಕ ಗ್ರಂಥಗಳನ್ನು ರಚಿಸಿರುತ್ತಾರಾಗಿ ತಿಳಿಯಬರುತ್ತದೆ. ಕಾಲಾಂತರದಲ್ಲಿ ಈ ರೇಖಾಶಾಸ್ತ್ರವು ದುರ್ಗಮವೆಂದು ಭಾವಿಸಲ್ಪಟ್ಟು ಇದನ್ನು ಅನೇಕರು ಖಂಡಿಸಲಾರಂಭಿಸಿದರು. ಇತ್ತೀಚೆಗೆ ಪಾಶ್ಚಿಮಾತ್ಯರ ಸ್ವಾನುಭವ ಚತುರತೆಯಿಂದಲೂ ಕೆಲವು ಗ್ರಂಥಗಳ ಪರಿಚಯದಿಂದಲೂ ಇದಕ್ಕೆ ಒಂದು ವಿಧವಾದ ಪ್ರಾಮಾಣ್ಯವು ಉಂಟಾಗಿದೆ. ಜಾತಕದಲ್ಲಿ ಇದ್ದ ಹಾಗೆಯೇ ಹನ್ನೆರಡು ರಾಶಿಗಳು ರಾಹುಕೇತುಗಳನ್ನು ಬಿಟ್ಟು ಉಳಿದ ಗ್ರಹಗಳ ಸ್ಥಾನ ಚಿಹ್ನಾದಿಗಳೂ ವಿಶದವಾಗಿ ತಿಳಿದುಬರುತ್ತವೆ. ಈ ವಿಷಯವಾಗಿ ಕೆಲವು ಸಂಗತಿಗಳನ್ನು ಇಲ್ಲಿಯ ಹಸ್ತ ಚಿಹ್ನೆಗಳಿಂದ ತಿಳಿಯಬಹುದಾಗಿದೆ.




೧



೨

೧ನೆಯ ಕೈಯಲ್ಲಿ ಗ್ರಹಗಳ ಸ್ಥಳಗಳನ್ನೂ ಮತ್ತು ರಾಶಿಗಳ ಸ್ಥಾನಗಳನ್ನೂ ತೋರಿಸಿರುತ್ತದೆ.

೨ನೆಯ ಕೈಯಲ್ಲಿ ಗ್ರಹಗಳ ಚಿಹ್ನೆಗಳನ್ನೂ ಉಳಿದ ಕೆಲವು ಚಿಹ್ನೆಗಳನ್ನೂ ತೋರಿಸಿರುತ್ತದೆ.



CC-0. Jangamwadi Math Collection. Digitized by eGangotri

೩ ನೆಯ ಕೈಯಲ್ಲಿ ರೇಖೆಗಳ ಮಾಹಿತಿಯನ್ನು ತೋರಿಸಿರುತ್ತದೆ.



೨

೪ ನೆಯದರಲ್ಲಿ ಮುಖ್ಯವಾದ ಮೀನಾದಿ ಚಿ... ಳನ್ನು ತೋರಿಸಿರುತ್ತದೆ.



೪

ಒಂದನೆಯ ಕೈಯಲ್ಲಿ '೧' ಅಂಕಿಯನ್ನು ಹಾಕಿದ ಬೆರಳಿಗೆ ಶುಕ್ರನ ಬೆರಳೆಂದೂ '೨' ಅಂಕಿಯುಳ್ಳದ್ದು ಗುರುವಿನ ಬೆರಳೆಂದೂ '೩' ಅಂಕಿಯದು ಶನಿಯ ಬೆರಳೆಂದೂ '೪' ಅಂಕಿಯುಳ್ಳದಕ್ಕೆ ರವಿಯ ಬೆರಳೆಂದೂ '೫' ಅಂಕಿಯದಕ್ಕೆ ಬುಧನ ಬೆರಳೆಂದೂ ಹೇಳುವರು.

ಎರಡನೆಯ ಕೈಯಲ್ಲಿ '೧' ಈ ಗುರುತುಳ್ಳದು ನಕ್ಷತ್ರ (Star) ಚಿಹ್ನವೆಂತಲೂ '೨' ಗುರುತುಳ್ಳದು ಪದ್ಮಚಿಹ್ನವೆಂತಲೂ '೩' ಈ ಗುರುತುಳ್ಳದು ಅಧಿಕ ಚಿಹ್ನವೆಂತಲೂ ಹೇಳುತ್ತಾರೆ.

ಮೂರನೆಯ ಕೈಯಲ್ಲಿಯ ರೇಖೆಗಳಲ್ಲಿ:—

೧ನೆಯದು ಆಯುಷ್ಯರೇಖೆಯು,
೨ನೆಯದು ಮಸ್ತಕರೇಖೆಯು,
೩ನೆಯದು ಅಂತಃಕರಣರೇಖೆಯು
೪ನೆಯದು ಧನರೇಖೆಯು,
೫ನೆಯದು ಸೂರ್ಯರೇಖೆಯು,
೬ನೆಯದು ಬುಧನರೇಖೆಯು,
೭ನೆಯದು ಗುರುವಿನರೇಖೆಯು,
೮ನೆಯದು ಮಂಗಳನರೇಖೆಯು,
೯ನೆಯದು ಚಂದ್ರನರೇಖೆಯು,

ನಾಲ್ಕನೆಯ ಕೈಯಲ್ಲಿ ೧ನೆಯದು ಚತುಷ್ಕೋ... ೨ನೆಯದು ಜಾಲ, ೩ನೆಯದು ಮಕರರೇಖೆ, ೪ನೆ... ಮೀನರೇಖೆ, ೫ನೆಯದು ತ್ರಿಕೋಣ, ೬ನೆಯದು ... ಚಿಹ್ನ, ೭ನೆಯದು ಕಮಲಚಿಹ್ನ, ೮ನೆಯದು ... ರೇಖೆ, ೯ನೆಯದು ಧನ್ವಂತರಿಯ ಚಿಹ್ನ, ಹತ್ತನೆ... ಯವರೇಖೆ.

ಈ ಪ್ರಕಾರವಾಗಿ ಗ್ರಹಗಳ ಸ್ಥಾನಗಳನ್ನೂ ... ರೇಖೆಗಳನ್ನೂ ಚಿಹ್ನಗಳನ್ನೂ ಚೆನ್ನಾಗಿ ಪರೀ... ಅಳೆದು ಫಲಾಫಲಗಳನ್ನು ಹೇಳಿದರೆ ಎಂದೂ ... ಸವು ಬರಲಾರದು.

೧ನೆಯ ಕೈಯಲ್ಲಿ ಗುರುತಿಸಿದ ಪ್ರಕಾರ ಗು... ಸ್ಥಾನದಿಂದ ಮನುಷ್ಯನ ಪುಣ್ಯಕರ್ಮ, ಧರ್ಮ, ... ಮತ್ತು ಮೋಕ್ಷಾದಿ ಸಾಧನಗಳನ್ನು ತಿಳಿಯಬ... ಶನಿಯ ಸ್ಥಾನದಿಂದ ಅಪವಾದ, ಕುಶಲವಿದ್ಯೆ (... ಮೆಸ್ಮೆರಿಝಂ) ಸುಖ ಮುಂತಾದುವುಗಳನ್ನು ... ಬಹುದು. ಸೂರ್ಯನ ಸ್ಥಾನದಿಂದ ವಿದ್ಯಾ...

CC-0. Jangamwadi Math Collection. Digitized by eGangotri

ರಾಜಕೀಯಕಾರ್ಯ ಮುಂತಾದುವುಗಳನ್ನು ತಿಳಿಯಬಹುದು. ಬುಧನ ಸ್ಥಾನದಿಂದ ವೃತ್ತಿ-ಜ್ಞಾನ, ಪ್ರಾಪಂಚಿಕಸುಖ— ಮುಂತಾದುವುಗಳನ್ನು ತಿಳಿಯಬಹುದು. ಚಂದ್ರನ ಸ್ಥಳದಿಂದ ಜಲಪ್ರಯಾಣ, ಜಲಭೀತಿ, ಸ್ವಚ್ಛತೆ, ಬೆಡಗುಗಾರಿಕೆ, ಮಹತ್ವಾಕಾಂಕ್ಷೆ— ಮುಂತಾದುವುಗಳನ್ನು ತಿಳಿಯಬಹುದು. ಕುಜನಿಗೆ ಮಾತ್ರ ಎರಡು ಸ್ಥಾನಗಳಿರುವವು. ಬುಧನ ಸ್ಥಳದ ಕೆಳಗಿರುವ ಕುಜನಿಂದ ಬಂಧನ, ಜಗಳ—ಕಜ್ಜಿಗಳಲ್ಲಿಯ ಜಯಾಪಜಯ ಕುಡುಕತನ ಮುಂತಾದುವುಗಳನ್ನು ಹೇಳಬಹುದು. ಎರಡನೆಯ ಎಂದರೆ ಶುಕ್ರನ ಸ್ಥಳದ ಮೇಲಿರುವ ಕುಜನಿಂದ ಸ್ತ್ರೀಪ್ರಾಪ್ತಿ, ವ್ಯಭಿಚಾರ ಮುಂತಾದುವುಗಳನ್ನು ತಿಳಿಯಬಹುದು. ಶುಕ್ರನ ಸ್ಥಳದಿಂದ ರೋಗಾದಿಗಳನ್ನೂ ದೇಹದ ಬಲಾಬಲವನ್ನೂ ಸಂತತಿಯನ್ನೂ ತಿಳಿಯಬಹುದು.

ಆಯಾ ಗ್ರಹಗಳ ಸ್ಥಾನಗಳು ಉನ್ನತಗಳಾಗಿದ್ದು ಚಿಹ್ನೆಗಳೂ ಆಯಾ ಗ್ರಹಗಳ ರೇಖೆಗಳೂ ಸ್ಪಷ್ಟವಾಗಿ ಇದ್ದರೆ ವಿಶೇಷ ಫಲಗಳನ್ನು ಹೇಳಬೇಕು.

ರೇಖೆಗಳು ಅಪೂರ್ಣಗಳಾಗಿದ್ದರೆ ಅಲ್ಪ ಫಲಗಳೆಂದೂ ತುಂಡಾಗಿದ್ದರೆ ಆಯಾ ಭಾವನೆಗಳು ವೃದ್ಧಿಯಾಗಿ ನಾಶ ಹೊಂದುವುವೆಂದೂ ಫಲಗಳನ್ನು ಹೇಳಬೇಕು.

ಯಾರೇ ಆಗಲಿ ಅನೇಕ ಕೈಗಳನ್ನು ನೋಡಿ ಅನುಭವ ಪಡೆಯದೆಯೆ ಫಲಗಳನ್ನು ಹೇಳಬಾರದು; ಮತ್ತು ಹಸ್ತಪರೀಕ್ಷೆಯ ಕಾಲದಲ್ಲಿ ಮೊದಲು ಆಯುಷ್ಯವನ್ನು ನಿರ್ಧರಿಸಿಕೊಳ್ಳದೆ ಫಲಗಳನ್ನು ಹೇಳಬಾರದು. ಯಾಕೆಂದರೆ "आयुर्हीनं नराणांतु लक्षणैः किं प्रयोजनम्" ಎಂಬಂತೆ ಆಯುಷ್ಯವಿಲ್ಲದವನಿಗೆ ಲಕ್ಷಣಗಳನ್ನು ಹೇಳಿದರೆ ಪ್ರಯೋಜನವಾಗಲಾರದು. "ತೈಲವಿಲ್ಲದ ದೀಪವನ್ನು ವರ್ಣಿಸಿದಂತಾಗುವದು." ಆಯುಷ್ಯವನ್ನು ಎರಡು ಕೈಗಳಿಂದಲೂ ಅಂತಃಕರಣರೇಖೆಯಿಂದಲೂ ನಿರ್ಣಯಿಸಬೇಕು.

ಈ ಪ್ರಕಾರವಾಗಿ ಗ್ರಹ ಮತ್ತು ರಾಶಿಗಳ ಸ್ಥಾನಗಳಿಂದಲೂ ಗ್ರಹಸ್ಥಾನಗಳ ನೀಚೋಚ್ಚ ಸ್ಥಿತಿಗಳಿಂದಲೂ ಗ್ರಹಗಳ ಗೋಚರದಂತೆ ವ್ಯತ್ಯಾಸವಾಗತಕ್ಕ ರೇಖೆಯ ಮತ್ತು ಚಿಹ್ನೆಗಳಿಂದಲೂ ಫಲಾಫಲಗಳನ್ನು ಕಂಡು ಹಿಡಿಯಬಹುದು.

# ಹೆಣ್ಣು

ಶ್ರೀ. ಕಡೆಂಗೋಡ್ಲು ಶಂಕರಭಟ್ಟರು, ಮಂಗಳೂರು.

ಜಣಜಣರೆನ್ನುತ ಕಾಲಂದುಗೆಗಳ
ಒಣರಿಸಿ ಸಾವಿನ ಸದ್ದನು ಅಡಗಿಪೆ!
ಬಾಳುವೆ ಹುಸಿಯನು ನಸುನಗೆಯೆಸಳಿನ
ಸಾಲಲಿಮುಚ್ಚುತ ಭೀತಿಯ ತೊಡೆಯುವೆ!

ಮುಂಗುರುಳಿನ ಬೀಸಣಿಗೆಯ ಬೀಸುತ
ಹಿಂಗಿಸುತಿಹೆ ಬಗೆಬೆಂಕೆಯನೆಲ್ಲವ!
ಕಡೆಗಣ್ಣೋಟದ ಮಿಂಚಿನ ಗೊಂಚಲ
ಹೊಡೆದಪ್ಪಳಿಸುವೆ ಲಜ್ಜೆಯನೆಲ್ಲವ!

ಮಂದಗಮನದಲಿ—ಹಾರುವ ಸುಖಗಳ
ಹಿಂದೆಳೆದೀಕಣ್ಣೆದಿರೊಳೆ ನಿಲಿಸುವೆ!
ಅಳುಕುವ ಬಳುಕುವ ಬೆಡಗಿನ ಹಾವದೆ
ಅಳುಕಿಸಿ ಬಳುಕಿಸಿ ಸಗ್ಗವ—ನಡೆಯುವೆ!

ಹೆಣ್ಣೋ! ನೀ ಸೃಷ್ಟಿಯ ಇದಿರಾಳಿಯೊ?
ಮಣ್ಣನು ಮುಕ್ಕಿಸೆ ವಿಧಿಯನು—ಬಂದೆಯೊ?
ನಿಯಮದೆ ಬರುವಾದ್ಯಂತಗಳೆಲ್ಲವು
ನಯಭಯವಿಲ್ಲದೆ ನಿನ್ನನೆ ಸೇರ್ದುವು.

CC-0. Jangamwadi Math Collection. Digitized by eGangotri

# ಆರ್ಥಿಕ ಪ್ರಳಯ

ಲೇಖಕ :—ಶ್ರೀ. ಎ. ಶೇಷಯ್ಯಂಗಾರ್ಯರು ಎಮ್. ಎ. ಮೈಸೂರು

ಪ್ರಪಂಚದ ಆರ್ಥಿಕವಾತಾವರಣವು ಇನ್ನೂ ನಿರ್ಮಲವಾಗುತ್ತಿಲ್ಲ. ದಿನೇ ದಿನೇ ಕಪ್ಪೇರುತ್ತಿದೆ. ಇದೇ ರೀತಿಯಲ್ಲಿ ಜನಾಂಗಗಳು ಕಣ್ಣುಮುಚ್ಚಿಕೊಂಡಿದ್ದರೆ ಎಲ್ಲಾ ದೇಶಗಳಲ್ಲಿಯೂ ಒಂದು ಆರ್ಥಿಕಪ್ರಳಯವಾಗುವುದು ಸಂದೇಹವಿಲ್ಲ. ಅದರಲ್ಲಿಯೂ ಪಾಶ್ಚಿಮಾತ್ಯ ದೇಶಗಳಲ್ಲಿ ೧೯೩೨ನೆಯ ಇಸವಿಯು ಅತ್ಯಂತ ಭಯಂಕರವಾದ ವರ್ಷವಾಗುವ ಹಾಗೆ ತೋಚುತ್ತಿದೆ.

ಮುಖ್ಯವಾಗಿ ಬ್ರಿಟಿಷ್‌ನಾಣ್ಯದ ಬಲಹೀನತೆಯು ಎಲ್ಲಾ ದೇಶಗಳಿಗೂ ಕಷ್ಟವನ್ನು ತಂದಿದೆ. ಪಾರ್ಲಮೆಂಟಿನ ಚುನಾವಣೆಯಾದಕೂಡಲೆ ಸ್ಟರ್ಲಿಂಗಿನ ಬೆಲೆಯು ಹದ್ದುಬಸ್ತಿಗೆ ಬರುವುದೆಂದು ಎಲ್ಲರೂ ಆಸೆಯಿಂದಿದ್ದರು. ನ್ಯಾಷನಲ್ ಪಾರ್ಟಿಯವರ ಜಯಕ್ಕೂ, ಲೇಬರ್ ಪಾರ್ಟಿಯವರ ಅಪಜಯಕ್ಕೂ ಈ ಪ್ರಬಲವಾದ ಆಶೆಯೇ ಕಾರಣ. ಈಗ ಇಂಗ್ಲೆಂಡಿನಲ್ಲಿ ಬಹಳ ಬಲವಾದ ಸರ್ಕಾರವಿದೆ. ಎಂದೂ ಇಷ್ಟು ಬಲವಾದ ಸರ್ಕಾರವಿರಲಿಲ್ಲ. ಆದರೂ ಸ್ಟರ್ಲಿಂಗಿಗೆ ಬೆಲೆಯು ದಿನೇ ದಿನೇ ಕಡಿಮೆಯಾಗುತ್ತಿದೆ. ಇಂಗ್ಲೆಂಡಿನಲ್ಲಿ ಚಿನ್ನವೂ,ಸ್ಟರ್ಲಿಂಗೂ ಒಂದೇ ಬೆಲೆಯುಳ್ಳುವಾಗಿದ್ದಾಗ ಒಂದು ಇಂಗ್ಲಿಷ್ ಪೌಂಡಿಗೆ ೪.೮೬ ಅಮೆರಿಕನ್ ಡಾಲರುಗಳು ಬರುತ್ತಿದ್ದುವು. ಈಗಿನ ಬೆಲೆಯನ್ನು ನೋಡಿದರೆ ಪರಮಾಶ್ಚರ್ಯವಾಗುತ್ತದೆ.

ನವೆಂಬರ್ ೨೦ ೩.೭೪ ಡಾ.
,, ೨೭ ೩.೫೫ ,,
ಡಿಸೆಂಬರ್ ೧ ೩.೨೪ ,,
,, ೪ ೩.೩೯ ,,

ಈಗ ಕೆಲವು ದಿವಸಗಳಿಂದ ಪುನಃ ೩.೩೯ ರ ಬಳಿಯಲ್ಲಿ ಜೋತಾಡುತ್ತಿದೆ. ಒಟ್ಟಿನಲ್ಲಿ ಸಾಮಾನ್ಯವಾಗಿ ಒಂದು ಬ್ರಿಟಿಷ್ ಪೌಂಡಿಗೆ ಅಮೆರಿಕಾದಲ್ಲಿ ೧೪ ಶಿಲಿಂಗಿನ ಬೆಲೆಯಿದೆ.

ಈ ರೀತಿ ಸ್ಟರ್ಲಿಂಗಿನ ಚಾಂಚಲ್ಯದಿಂದ ಪ್ರ... ಆರ್ಥಿಕತಳಹದಿಯು ಸಡಿಲವಾಗುತ್ತಿದೆ. ಮು... ಸ್ಟರ್ಲಿಂಗ್ ಸೆಕ್ಯುರಿಟಿಯಲ್ಲಿ ಹಣವನ್ನು ... ಅನೇಕ ದೇಶಗಳಿಗೆ ಬಹಳ ನಷ್ಟವಾಗುತ್ತಿದೆ. ... ಗೇನೋ ಸದ್ಯಃ ಇದರಿಂದ ಉಪಕಾರವುಂಟು. ... ಗಿನ ಬೆಲೆಯು ಇಳಿದಷ್ಟೂ ಬ್ರಿಟಿಷ್ ಗಿರಣಿಯ... ಗಳನ್ನು ಪರದೇಶಗಳಿಗೆ ಕಳುಹಿಸಲು ಅ... 'ಬ್ರಿಟಿಷ್ ಬ್ಯಾಲೆನ್ಸ್ ಆಫ್ ಟ್ರೇಡ'ನ್ನು ಸರಿ... ಸಹಾಯವಾಗಿದೆ. ಅದೇ ರೀತಿಯಲ್ಲಿ ನಮ್ಮ ... ಯನ್ನು ಸ್ಟರ್ಲಿಂಗಿನ ಬಾಲಕ್ಕೆ ಅಂಟಿಸಿರುವ... ನಮ್ಮ ಬದುಕುಗಳಿಗೂ ಮಾರಾಟವು ಹೆಚ್ಚಾ... ಆದರೆ ಇತರ ದೇಶದವರು ನಮ್ಮ ದೇಶದಲ್ಲಿ ... ವನ್ನು ಹೊಂದುತ್ತಾರೆ. ಗೋಲ್ಡ್ ಸ್ಟ್ಯಾಂಡ... ಗಳು ಬಹಳ ಕಾಲ ನಮ್ಮ ಗಿರಾಕಿಗಳಾಗಿರಲು ... ವಾಗುತ್ತದೆ. ಮತ್ತು ನಾವು ಇತರ ದೇಶಗಳಿಂ... ವಾಗಿ ಪಡೆಯುತ್ತಿದ್ದ ಅನೇಕ ಸಾಮಗ್ರಿ... ಇಂಗ್ಲೆಂಡ್ ದೇಶದಿಂದಲೆ ಪಡೆಯಬೇಕಾಗಿದೆ. ... ರಿಯಲ್ ಪ್ರಿಫರೆನ್ಸ್' ದೆಸೆಯಿಂದ ಪರದೇಶದ ... ಗಳಿಗೆ ಬೆಲೆ ಹೆಚ್ಚುವುದರಲ್ಲಿ ಸಂಶಯವಿಲ್ಲ. ... ನಾವು ಇಂಗ್ಲೆಂಡನ್ನೆ ಹಿಂಬಾಲಿಸುತ್ತಿದ್ದರೆ ನಮಗೆ ... ದೇಶಗಳ ಗಿರಾಕಿಗಳು ತಪ್ಪಿ, ನಮ್ಮ ಆಮದು... ಬ್ರಿಟಿಷ್ ದ್ವೀಪದೊಂದಿಗೇ ನಡೆಯಬೇಕಾಗುವು...

ಹೀಗೆ ನಾಣ್ಯದ ಬೆಲೆಯನ್ನು ಕಡಿಮೆ ಮಾ... ದೊಂದೇ ಇಂಗ್ಲೆಂಡಿನ 'ಬ್ಯಾಲೆನ್ಸ್ ಆಫ್ ಟ್ರೇ... ಸರಿಮಾಡಲು ಸಾಲದು. ಕಳೆದ ಸಪ್ಟೆಂಬರ್ ಅಂತ್ಯ... ಈ ವರ್ಷ ತಾವು ಪರದೇಶಕ್ಕೆ ಕಳುಹಿಸಿರುವು... ಇಂಗ್ಲೆಂಡಿಗೆ ಆಮದಾಗಿರುವ ಪದಾರ್ಥಗಳ ... ಸುಮಾರು ೨೮ ಕೋಟಿ ೧೦ ಲಕ್ಷ ಪೌಂಡಿನಷ್ಟು ... ಗಿದೆ. ಪ್ರತಿವರ್ಷವೂ ಇಂಗ್ಲೆಂಡಿನ ರಫ್ತು ...

CC-0. Jangamwadi Math Collection. Digitized by eGangotri

ಹೆಚ್ಚಾಗುತ್ತಿತ್ತು. ಈ ವರ್ಷ ಅದು ತಲೆ ಕೆಳಕಾಗಿದೆ. ಈ 'ಬ್ಯಾಲೆನ್ಸ್ ಆಫ್ ಟ್ರೇಡ'ನ್ನು ತಿದ್ದುವುದು ನ್ಯಾಶನಲ್ ಸರ್ಕಾರದ ಮುಖ್ಯ ಕೆಲಸ. ಇದಕ್ಕಾಗಿ ಯಾವ ಇಂಗ್ಲೆಂಡ್ ದೇಶವು ಕಳೆದ ಒಂದು ಶತಮಾನದಿಂದಲೂ ತಮ್ಮ ವ್ಯಾಪಾರದ ಮೇಲೆ ಸುಂಕವನ್ನು ಹಾಕದೆ ತಮ್ಮ ಬಾಗಿಲನ್ನು ವಿಶಾಲವಾಗಿ ತೆರೆದಿದ್ದಿತೋ, ಅದೇ ಇಂಗ್ಲೆಂಡ್ ದೇಶವು ಈಗ ಒಂದು ಬಲವಾದ ಸುಂಕದ ಗೋಡೆಯನ್ನು ಕಟ್ಟುತ್ತಿದೆ. ಆ ಗೋಡೆಯ ತಳಹದಿಗಾಗಿ ಈಗಾಗಲೆ 'ಆಂಟಿ ಡಂಪಿಂಗಲ್' ಎಂಬಲಾಪ್ರಕಾರ ಸರ್ಕಾರದವರು ಬೇಕಾದಷ್ಟು ಅಧಿಕಾರವನ್ನು ಪಡೆದುಕೊಂಡಿದ್ದಾರೆ. ಇದರ ಪ್ರಕಾರ ಆಮದಾಗುವ ಯಾವ ಪದಾರ್ಥದ ಮೇಲಾದರೂ ಅದರ ಬೆಲೆಯಲ್ಲಿ ಶೇಕಡ ೧೦೦ ರ ವರೆಗೂ ಸುಂಕವನ್ನು ಹಾಕಬಹುದು. ಆಗಲೇ ಸರ್ಕಾರದವರು ಎರಡು ಆರ್ಡರುಗಳನ್ನು ಸಾದರಮಾಡಿದ್ದಾರೆ. ಇನ್ನೂ ಹೊಸ ಹೊಸ ಆರ್ಡರುಗಳು ಬರುವುದರಲ್ಲಿವೆ. ಆಹಾರ ಪದಾರ್ಥಗಳೂ ಕೂಡ ಈ ಹೊಸ ಕೊಡಲಿಯನ್ನು ತಪ್ಪಿಸಿಕೊಳ್ಳಲಾರವು.

ಇಂಗ್ಲೆಂಡಿನ ಈ ವರ್ತನೆಯು ನ್ಯಾಯಸಮ್ಮತವಾಗಿ ಕಂಡರೂ, ಇತರ ದೇಶಗಳ ಅತ್ಯದ್ಭುತವಾದ ಸುಂಕದ ಗೋಡೆಗಳೇ, ಇದಕ್ಕೊಂದು ಪ್ರಬಲವಾದ ಕಾರಣವಾದರೂ, ಇದರ ಫಲಿತಾಂಶವು ಪ್ರಪಂಚದಲ್ಲಿ ಒಂದು ಕ್ರಾಂತಿಯನ್ನುಂಟುಮಾಡದಿರಲಾರದು. ಮೊದಲು ಒಂದು ಸುಂಕಗಳ ಯುದ್ಧವಾಗಲೇಬೇಕು. ಈಗಾಗಲೇ ಫ್ರೆಂಚರು ಬ್ರಿಟನ್ ಮತ್ತು ಆಸ್ಟ್ರೇಲಿಯಾದಿಂದ ಬರುವ ಪದಾರ್ಥಗಳಿಗೆ ಶೇಕಡ ೧೫ ರಷ್ಟು, ಹಿಂದುಸ್ಥಾನದ ಸರಕುಗಳ ಮೇಲೆ ಶೇಕಡ ೭ ರಷ್ಟು ಹೆಚ್ಚು ತೆರಿಗೆಯನ್ನು (Sur Tax) ಹಾಕಿದ್ದಾರೆ. (ಕಳೆದ ವರ್ಷ ಇಂಡಿಯಾದಿಂದ ಸುಮಾರು ೧೩ ಕೋಟಿ ರೂಪಾಯಿನ ಸರಕುಗಳು ಫ್ರೆಂಚ್‌ದೇಶಕ್ಕೆ ರಫ್ತಾಗಿದ್ದವು) ದಕ್ಷಿಣಆಫ್ರಿಕ ಸರ್ಕಾರದವರೂ ಹೊಸತೆರಿಗೆಯನ್ನು ಹಾಕಲು ಸಿದ್ಧರಾಗುತ್ತಿದ್ದಾರೆ. ಹಾಲೆಂಡ್, ಬೆಲ್ಜಿಯಂ, ಡೆನ್ಮಾರ್ಕ್ ಮೊದಲಾದ ದೇಶಗಳಾಗಲೆ ಇಂಗ್ಲೆಂಡಿನೊಡನೆ ಸಂಧಾನಗಳನ್ನು ನಡೆಸುತ್ತಿವೆ. ಎಲ್ಲಾ ರಾಜಧಾನಿಗಳಲ್ಲಿಯೂ ಇದೇ ಗಲಾಟೆ. ಈ ಸಂದರ್ಭದಲ್ಲಿ 'ಲೀಗ್ ಆಫ್ ನೇಷನ್ಸ್' ಆರ್ಥಿಕ ಸಂಸ್ಥೆಯ ೩೬ನೆಯ ವಾರ್ಷಿಕ ವರದಿಯಲ್ಲಿ ಹೇಳಿರುವ ಒಂದು ಅಂಶವು ನೆನಪಿಗೆ ಬರುತ್ತದೆ. ಆ ಕಮಿಟಿಯವರು ಹೇಳುವುದೇನೆಂದರೆ, ಪ್ರತಿಯೊಂದು ದೇಶದವರೂ **"ತಮ್ಮ ಪದಾರ್ಥಗಳನ್ನು ಹೊರಗೆ ಕಳುಹಿಸಬೇಕು, ಆದರೆ ತಮ್ಮ ದೇಶಕ್ಕೆ ಇತರ ದೇಶಗಳ ಸರಕುಗಳು ಬರಕೂಡದು"** ಎಂದು ತಮ್ಮ ಸುಂಕದ ಗೋಡೆಗಳನ್ನೂ ಮತ್ತು ಕಾನೂನುಗಳನ್ನೂ ಬಲಪಡಿಸುವುದಾದರೆ ಅಂತರ್ರಾಷ್ಟ್ರೀಯ ವ್ಯಾಪಾರವೇ ನಿಂತುಹೋಗಬೇಕಾಗುವುದು. ಎಲ್ಲಾ ದೇಶದವರೂ ಸೇರಿ ತಮ್ಮ ಸುಂಕದ ಗೋಡೆಗಳನ್ನು ಮುರಿಯುವುದೊಂದೇ ಸರಿಯಾದ ಮಾರ್ಗ. ನಾವು ನೆನಪಿನಲ್ಲಿಡಬೇಕಾದುದು ಒಂದು ವಿಷಯ. ನಾವು ಕೊಳ್ಳಲು ಸಿದ್ಧರಿಲ್ಲದಿದ್ದರೆ, ನಮ್ಮ ಬದುಕುಗಳನ್ನು ಇತರರು ಕೊಳ್ಳಲಾಗುವುದಿಲ್ಲ.

ಈ ಮಧ್ಯೆ ಇನ್ನೊಂದು ದೊಡ್ಡ ಸಂಕಟ. ಯುದ್ಧಕ್ಕೆ ಪ್ರಾರಂಭಮಾಡಿದ ತಪ್ಪಿತಕ್ಕಾಗಿ ಜರ್ಮನಿಯವರು ಇತರ ದೇಶಗಳಿಗೆ ಬಹಳ ಹಣವನ್ನು ಕೊಡಬೇಕಾಗಿರುವುದು ಸರಿಯಷ್ಟೆ. ಈ ರಾಜಕೀಯ ಸಾಲದ ಜೊತೆಗೆ, ಜರ್ಮನರು ಇತರ ದೇಶಗಳಿಂದ ಪಡೆದುಕೊಂಡಿರುವ ಅಲ್ಪಾವಧಿಯ ಸಾಲಕ್ಕೆ 'ಬೇಸಲ್ ಕಮಿಟಿ'ಯ ವರದಿಯಂತೆ ೪೦ ಕೋಟಿ, ಅಥವಾ ಜರ್ಮನ್ ಸರ್ಕಾರದ ಸೆನ್ಸಸ್ ಪ್ರಕಾರ ೬೦ ಕೋಟಿ ಪೌಂಡುಗಳನ್ನು ಮುಂದಿನ ಫೆಬ್ರುವರಿ ತಿಂಗಳಲ್ಲಿ ಪಾವತಿಮಾಡಬೇಕು. ಕಳೆದ ವರ್ಷವೇ ಕೊಡಬೇಕಾಗಿದ್ದ ಈ ಎರಡು ವಿಧವಾದ ಸಾಲಗಳನ್ನೂ ಜರ್ಮನಿಯು ಕೊಡಲಾರದೆಂಬ ಕಾರಣದಿಂದ ಪ್ರೆಸಿಡೆಂಟ್ ಹೂವರನು ಕೆಲವು ತಿಂಗಳ ಅವಧಿಯನ್ನು ಕಲ್ಪಿಸಿದ್ದನು. ಈ ಅವಧಿಯು ಮುಗಿಯುತ್ತಿದೆ. ಆದರೆ ಜರ್ಮನಿಯು ಈ ಸಾಲವನ್ನು ತೀರಿಸುವ ಸ್ಥಿತಿಯಲ್ಲಿಲ್ಲ. ಇತರ ಜನಾಂಗದವರು ಸಹಾಯ ಮಾಡಿದ ಹೊರತು ಜರ್ಮನಿಯು ಉಳಿಯಲಾರದು. ಅದಕ್ಕಾಗಿ ಬೇಸಲ್ ಪಟ್ಟಣದಲ್ಲಿ ಚರ್ಚೆ ನಡೆಯುತ್ತಿದೆ. ಆದರೆ ಸುಮುಖವಾಗಿ ತೀರ್ಮಾನವಾಗುವ ಹಾಗೆ ಕಾಣುವುದಿಲ್ಲ. ಏಕೆಂದರೆ 'ರಿಪರೇಷನ್' ಸಾಲವನ್ನು ಸಂಪೂರ್ಣವಾಗಿ ಕಳೆದುಬಿಡದ ಹೊರತು ಜರ್ಮನಿಗೆ ಉಪಯೋಗವಿಲ್ಲ. ಹಾಗೆ ಮಾಡಲು ಯಾರೊಪ್ಪಿದರೂ ಫ್ರಾನ್ಸ್ ದೇಶವು ಒಪ್ಪುವ ಹಾಗಿಲ್ಲ. ಒಂದು ವೇಳೆ ಫ್ರಾನ್ಸ್



CC-0. Jangamwadi Math Collection. Digitized by eGangotri

ದೇಶವು ಒಪ್ಪಬೇಕಾದರೆ ಅಮೇರಿಕ ದೇಶದವರು ಇತರ
ರಿಗೆ ಕೊಟ್ಟಿರುವ ಯುದ್ಧದ ಸಾಲವನ್ನು ಕಳೆದುಬಿಡ
ಬೇಕು. ಅಮೇರಿಕಾದವರು ಇದಕ್ಕೊಪ್ಪುವುದಿಲ್ಲವೆಂದು
ಕಾಂಗ್ರೆಸ್ಸು ತೀರ್ಮಾನಿಸಿದೆ. ಈ ಗೊಂದಲವು ಹೇಗೆ
ಪರಿಹಾರವಾಗುವುದೋ ಎಂದು ಪ್ರಪಂಚವು ಹಾತೊರೆ
ಯುತ್ತಿದೆ. ಒಂದು ವೇಳೆ ಫ್ರಾನ್ಸ್ ಮತ್ತು ಅಮೆರಿ
ಕಾದವರು ಸೌಹಾರ್ದ್ರವನ್ನು ತೋರಿಸದೆ ಹೋ
(ಫ್ರೆಂಚ್‌ಪ್ರೈಮ್ ಮಿನಿಸ್ಟರ್ ಲಾವಲ್ಲರು ಹ
ರ್‍ರೊಡನೆ ನಡೆಯಿಸಿದ ಸಂಧಾನವು ಫಲಕಾರಿಯಾಗ
ಜರ್ಮನಿಯಲ್ಲಿ ಒಂದು ಪ್ರಳಯವಾಗುವುದಲ್ಲದೆ
ದೇಶಗಳಲ್ಲಿಯೂ ಅಲ್ಲೋಲ ಕಲ್ಲೋಲವಾಗು
ನಿಶ್ಚಯ.

# ಇನ್‌ಸ್ಟೈನ್ನಿನ ಬಿನ್ನಹ

(ಮೊನ್ನೆ ಮೊನ್ನೆ ಸೇರಿದ ಜಾಗತಿಕ ಯುದ್ಧನಿರೋಧಕಸಮಿತಿಗೆ ಬರೆದ ಪತ್ರದಲ್ಲಿಯ ಒಂದು ಭಾಗವಿದು.)

'ಯುದ್ಧದ ಭಯವು ಹೋಯಿತು' ಎನ್ನುವವರು ಮೂರ್ಖರ ಸ್ವರ್ಗದಲ್ಲಿದ್ದಂತೆ. ಮಹಾ ಯುದ್ಧ
ಪ್ರಳಯವನ್ನು ಒದವಿಸಿ ತಂದ ಅಂದಿನ ಸೈನ್ಯನಿಷ್ಠಪದ್ಧತಿ (Militarism) ಗಿಂತಲೂ ಬಲಿಷ್ಠವಾದ–ವಿಘಾತ
ಇಂದಿನ ಸೈನ್ಯನಿಷ್ಠಪದ್ಧತಿಯನ್ನು ನಾವೀಗ ಎದುರಿಸಬೇಕಾಗಿದೆ. ಸರಕಾರವು ಈ ಸೈನ್ಯನಿಷ್ಠಪದ್ಧತಿಗೆ
ಬಿದ್ದಿದೆ. ಆದರೆ ಜನತೆಯಲ್ಲಿ ಮಾತ್ರ ಅದಕ್ಕೆ ವಿಪರೀತವಾದ ಭಾವನೆಯು ಮೊಳೆದು ಬೆಳೆಯುತ್ತಲಿದೆ.
ನಿರ್ಭೀತಿಯಿಂದ ಈ ಕಲ್ಪನೆಯ ಬೆಳೆವಣಿಗೆಗೆ ನೀರೆರೆದು ಅನುಕೂಲತೆಯನ್ನುಂಟು ಮಾಡಬೇಕು. ಯುದ್ಧ
ಆಗಲಿ, ಅಥವಾ ಯುದ್ಧದ ಸಿದ್ಧತೆಯಲ್ಲಿಯೇ ಆಗಲಿ ಸೇರಿಕೊಳದಂತೆಯೂ ಅಹಿಂಸೆಯ ಕಡೆಗೆ ವನಸ್ಸೊಲಿಯು
ಜನತೆಗೆ ಮಾರ್ಗವನ್ನು ತೋರಿಸಿ ಕೊಡಬೇಕು. ಎಲ್ಲ ರಾಷ್ಟ್ರಗಳ ಕೆಲಸಗಾರರನ್ನು ಒಂದೇ ಕಡೆಗೆ ಕ
ಕಂಡವರನ್ನು ಕತ್ತರಿಸುವ ಮೃತ್ಯುದೇವತೆಯ ಕೈಯಲ್ಲಿಯ ಗೊಂಬೆಗಳಾಗದಿರಲಿಕ್ಕೆ ಮನವೊಲಿಸಬೇಕು.
ಯದ ಸೈನಿಕ ಶಿಕ್ಷಣಪದ್ಧತಿಗೆ ಈಗ ಹನ್ನೆರಡು ರಾಷ್ಟ್ರಗಳಲ್ಲಿಯ ತರುಣರು ಅಸಮ್ಮತಿಯನ್ನು ವ್ಯಕ್ತಪಡಿ

ಜಗತ್ತಿನಲ್ಲಿಯ ಯುದ್ಧದ ಹೆಸರನ್ನಡಗಿಸವುದಕ್ಕೆ ನಡುಕಟ್ಟಿ ನಿಂತವರೂ ಉಂಟು. ನಿಜವಾದ ಶಾಂತ
ಅಂತಹರಿಗೆ ಅವಶ್ಯವಾಗಿ ನೆರವಾಗಬೇಕು. ನನ್ನ ಬಂಧುಗಳಾದ ವಿಜ್ಞಾನಶಾಸ್ತ್ರಿಗಳಲ್ಲಿ ನನ್ನದೊಂದು ಕ
'ಯುದ್ಧಕ್ಕೆ ಸಹಕಾರಿಗಳಾಗುವಂತಹ ಯಾವ ಶಾಸ್ತ್ರಿಯಶೋಧಗಳನ್ನೂ ತಾವು ಮಾಡಿ, ಯುದ್ಧಕ್ಕೆ
ಬಾರದು.' ಬೋಧಕರಿಗೂ ನನ್ನದೊಂದು ಬಿನ್ನಹ: ಅವರು ತಮ್ಮ ರಾಷ್ಟ್ರದ ಇನ್ನುಳಿದ ಗ್ರಹಿಕೆಗಳನ್ನು
ಹಾಕಿ, 'ಅಹಿಂಸೆಯಲ್ಲಿಯೇ ಗೆಲವುಂಟು' ಎಂಬುದನ್ನು ತಾವು ಮನವರಿಕೆ ಮಾಡಿಕೊಳ್ಳಲಿ. ಮಕ್ಕಳಿಗೂ
ಕೊಡಲಿ. ಅಕ್ಕರಿಗರೂ ಈ ತತ್ತ್ವವನ್ನು ಸಾರಿಸಾರಿ ಹೇಳಲಿ.

ಶಾಂತಿಯನ್ನು ಸ್ಥಾಪಿಸುವೆವೆಂದು ಜಂಭಕೊಚ್ಚಿಕೊಳ್ಳುವ ವೃತ್ತಪತ್ರಿಕೆಗಳೆ! ನನ್ನ ಮಾತನ್ನು ಕೇಳಿ
ದಲ್ಲಿ ಸೇರಿಕೊಳದಂತೆ ಜನತೆಯ ಮನಸ್ಸನ್ನು ಅನುಗೊಳಿಸಿರಿ! ಸಂಪಾದಕರೆ! "ನಿಮಗೇನು ಬೇಕು? ಯುದ್ಧ
ಶಾಂತಿಯೋ? ಅಕ್ಕಪಕ್ಕದ ಜನರೆಲ್ಲ ನಿಶ್ಶಸ್ತ್ರ ವ್ರತವನ್ನು ಕೈಕೊಳ್ಳಲಿ, ಎಂದು ನೀವು ದಾರಿ ಕಾಯುತ್ತಲಿ
ವರೋ? ಅಥವಾ ಸ್ನೇಹದ ಕೈಯನ್ನು ಮುಂದೆ ಮಾಡುವವರೋ?" ಎಂದು ನಾಡಿನಲ್ಲಿಯ ಹೆಸರುಹೊಂದಿ
ರನ್ನು ಗಟ್ಟಿಮುಟ್ಟಾಗಿ ಕೇಳಿಬಿಡಿರಿ.

ಈಗ ಕಾಲ ಕಳೆದು ಉಪಯೋಗವಿಲ್ಲ. ಹೇಳಿಬಿಡಿ 'ನಿಮಗೆ ಯುದ್ಧವುಬೇಕೊ? – ಶಾಂತಿಯುಬೇ
ಯುದ್ಧವು ಬೇಕಾಗಿದ್ದರೆ, ವಿಜ್ಞಾನ, ಅರ್ಥ, ಉದ್ಯೋಗ, ಧರ್ಮ, ಇವೆಲ್ಲವುಗಳೂ ಯುದ್ಧದ ಉಪಕರಣ
ಪೋಷಕವಾಗುವಂತೇ ಮಾಡಿಕೊಳ್ಳಿ. ಯುದ್ಧವು ಬೇಡವಾಗಿದ್ದರೆ ಅವೆಲ್ಲವುಗಳನ್ನೂ ಯುದ್ಧನಿರೋಧದ ಕಡೆ
ಯೋಗ ಮಾಡಿಕೊಳ್ಳಿ. ನನ್ನ ಈ ಮಾತುಗಳನ್ನು ಓದಿದವರೂ ಕೇಳಿದವರೂ ಯಾವುದೇ ಒಂದರ ಬಗ್ಗೆ ಕೃತ
ರಾಗಬೇಕೆಂದು ನನ್ನಾಶೆ.

ಈಗಿನವರು ಮಾನವ ಜೀವಿತದಲ್ಲಿಯೇ ಹೊಸತಾದ ಈ ಅಹಿಂಸೆಯ ವ್ರತದ ಕಡೆಗೆ ಧೈರ್ಯದಿಂದ
ಹೆಜ್ಜೆ ಮುಂದಿಡಬೇಕು. ಯುದ್ಧದ ಪಶುವೃತ್ತಿಯಲ್ಲಿದ್ದ ಜನರಿಗೆ ತಿಳಿಹೇಳಬೇಕು. ಈಗ ಬೇಕಾದದ್ದು
ದ್ಧದ್ದನ್ನು ಒಡನುಡಿಯುವ ಧೈರ್ಯ. ಆ ಧೈರ್ಯವನ್ನು ತುಂಬಿರಿ.

CC-0. Jangamwadi Math Collection. Digitized by eGangotri

# ಬದಲಾವಣೆ

ಬರೆದವ :—ಶ್ರೀ. ನಾರಾಯಣ

ಸಂಜೆಯ ಹೊತ್ತು. ಕಾರ್ಖಾನೆಯ ಸಿಳ್ಳೆಯು ಕೂಗುವ ಸಮಯ. ಕಾರ್ಖಾನೆಗೆ ಸೇರಿದ ಹಾಗೆ ಇದ್ದ ವಿಸ್ತಾರವಾದುದೊಂದು ಬಯಲಿನಲ್ಲಿ ಚೆಲ್ಲಾಪಿಲ್ಲಿಯಾಗಿದ್ದ ಕೂಲಿಕಾರರ ಜೋಪಡಿಗಳು; ಗುಡಿಸಿಲಲ್ಲೆಲ್ಲ ಕಗ್ಗತ್ತಲೆ. ಕೊಳೆಗೆ ಅಳತೆಯಿಲ್ಲ. ಅಲ್ಲಲ್ಲಿಗೆ ತಿಪ್ಪೆಗಳು; ಕೊಚ್ಚೆ; ಮಧ್ಯೆ ಹಾದುಹೋಗುವ ದೊಡ್ಡದೊಂದು ಕಾಲುವೆ. ಆ ರೊಚ್ಚಿನಲ್ಲಿ, ದುರ್ಗಂಧವು ಇಡಗಿದ್ದ ತಿಪ್ಪೆಗಳ ಸಮೀಪದಲ್ಲಿ ಬತ್ತಲೆ ಮೈಯಲ್ಲಿ ಆಡಿಕೊಳ್ಳುತ್ತಿದ್ದ ಹತ್ತಾರು ಕೂಲಿಕಾರರ ಹುಡುಗರು; ಹಸಿವಿನಿಂದಲೊ ತಂದೆತಾಯಿಗಳಾರೂ ಮನೆಯಲ್ಲಿ ಇಲ್ಲದುದರಿಂದಲೊ ಅಲ್ಲಲ್ಲಿ ಕಿಟ್ಟನೆ ಕಿರಚುತ್ತಿದ್ದ ಮಕ್ಕಳ ಅಳುವಿನ ಧ್ವನಿ; ಹಿಟ್ಟನ್ನೋ ಕಟ್ಟನ್ನೋ ಬೇಯಿಸುತ್ತಿರುವ ಗುಡಿಸಿಲುಗಳಲ್ಲಿ ಹೊರಗೆ ಹೋಗಲು ಎಡೆಯಿಲ್ಲದೆ ಸುತ್ತಿಕೊಂಡಿದ್ದ ಹೊಗೆಯ ಕಂಪು.

ಆ ಕಡೆಯ ಮೂಲೆಯಲ್ಲಿ ಇಂತಹದೇ ಒಂದು ಗುಡಿಸಿಲು. ಒಳಕ್ಕೆ ಕುಳಿತುಕೊಂಡಿದ್ದ ಸಮಾರು ೨೫ ೩೦ ವರ್ಷದ ಹೆಂಗಸೊಬ್ಬಳು, ವಿಪರೀತವಾಗಿ ಅಳುತ್ತಿದ್ದ ಮಗುವನ್ನು ಸಮಾಧಾನ ಪಡಿಸುತ್ತಿದ್ದಳು. ಏನು ಮಾಡಿದರೂ ಮಗುವು ಅಳುವುದನ್ನು ನಿಲ್ಲಿಸಲಿಲ್ಲ. ಮಗುವಿಗೆ ಬೆಳಗಿನಿಂದಲೂ ಹೊಟ್ಟೆಗೇನೂ ಇರಲಿಲ್ಲ; ಮಗುವಿನ ತಂದೆತಾಯಿಗಳಿಗೆ ಹಿಂದಿನ ರಾತ್ರಿಯಿಂದಲೂ ಉಪವಾಸ.

ಕಾರ್ಖಾನೆಯ ಕೊನೆಯ ಸಿಳ್ಳೆಯು ಕೂಗಿತು. ಕಾಷ್ಠದಂತೆ ಒಣಗಿಹೋಗಿ ಸವೆದ ದೇಹವುಳ್ಳ ಕೂಲಿಕಾರರು – ಹೆಂಗಸರೂ ಹುಡುಗರೂ ಸಹ – ತಂಡೋಪತಂಡವಾಗಿ ಬರಲಾರಂಭಿಸಿದರು. ಒಬ್ಬರ ಮುಖದಲ್ಲಿಯೂ ಕಳೆಯಿಲ್ಲ – ಜೀವವಿದ್ದ ಲಕ್ಷಣವಿಲ್ಲ. ಮೈಯೆಲ್ಲವೂ ಧೂಳು ಮುಸುಕಿದ್ದಿತು. ಆ ಕೂಲಿಕಾರರ ಗುಂಪೊಂದು ಅಸಹ್ಯವಾದ ದೃಶ್ಯವಾಗಿದ್ದಿತು.

ಮಗುವಿನ ತಾಯಿಯು-"ತಾಳಪ್ಪಾ-ಅಕೋ ಅವರು ಬಂದರು. ಏನಾದರೂ ಒಂದಿಷ್ಟನ್ನು ತರುತ್ತಾರೆ; ಸುಮ್ಮನಿರು" ಎಂದಳು. ಮಗುವು ಸುಮ್ಮನಾಗಲಿಲ್ಲ. ಮಧ್ಯಾಹ್ನದಲ್ಲಿಯೂ ತಾಯಿ ಹಾಗೆಯೇ ಹೇಳಿದ್ದಳು. ಆದರೆ ಒಂದು ಗಂಟೆಯ ವಿರಾಮಕಾಲದಲ್ಲಿ ಮನೆಗೆ ಬಂದಿದ್ದ ತಂದೆಯು ಏನನ್ನೂ ತರಲಿಲ್ಲ. 'ಉಸ್' ಎಂದು ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತಿದ್ದವನು ಎರಡನೆಯ ಸಿಳ್ಳು ಕೇಳಿದೊಡನೆಯೇ ಹೊರಟು ಹೋಗಿದ್ದ. ಆದುದರಿಂದ ಮಗುವಿಗೆ ಚೆನ್ನಾಗಿ ಗೊತ್ತಿತ್ತು "ತಂದೆಯು ಬಂದರೂ ಉಪಯೋಗವಿಲ್ಲ" ಎಂದು.

ಮಗುವು ಅಳುತ್ತಲೇ ಇದ್ದಿತು. ತಾಯಿಯ ಕಣ್ಣಿನಲ್ಲಿಯೂ ನೀರು. ಮುಖವೆಲ್ಲ ಬಿಳುಪೇರಿ ಹೋಗಿದ್ದಿತು. ಮೈಯಲ್ಲಿ ನೋಡಿದಲ್ಲೆಲ್ಲ ಮೂಳೆಯಲ್ಲದೆ, ಬೇರೊಂದಿರಲಿಲ್ಲ. ಅಷ್ಟು ಹೊತ್ತಿಗೆ ಚಿನ್ನಪ್ಪನು ಬಂದ. ಕೈಕಾಲುಗಳು ಸೋತುಹೋಗಿದ್ದುವು. ಹರುಕು ಚಾಪೆಯೊಂದರ ಮೇಲೆ ಗೋಡೆಗೆ ಒರಗಿಕೊಂಡು ಕೂತು ಬಿಟ್ಟ.

ಮಗುವು ತಂದೆಯ ಕಡೆಗೆ ತಿರುಗಿಕೊಂಡು, ಹೊಟ್ಟೆಯನ್ನು ತೋರಿಸುತ್ತ, "ಅಪ್ಪಯ್ಯ !- ಹಸಿವು - ಒಂದು ಚೂರು ರೊಟ್ಟಿ ಬಾಳ ಹಸಿವು" ಎಂದು ಅತ್ತಿತು. ಚಿನ್ನಪ್ಪನು ಎರಡೂ ಕೈಗಳಿಂದ ಮುಖವನ್ನು ಮುಚ್ಚಿಕೊಂಡು ತಾನೂ ಅಳಲುತೊಡಗಿದ. ಅಳುವುದಲ್ಲದೆ ಇನ್ನೇನೂ ಆತನ ಕಡೆಯಿಂದ ಆಗುವಂತಿರಲಿಲ್ಲ.

ಮನೆಯೆಲ್ಲವನ್ನು ದೋಚಿದರೂ ಒಂದು ಕಾಳು ರಾಗಿಯಿಲ್ಲ. ತಿಂಗಳ ಕೊನೆ; ಕೈಯಲ್ಲಿ ಒಂದು ಬಿಡಿ ಕಾಸು ಇಲ್ಲ. ಇನ್ನೂ ಎರಡು ಮೂರು ದಿವಸಗಳಾದ ಮೇಲೆ ಸಂಬಳ. ಅದೂ ಹದಿನಾಲ್ಕು ರೂಪಾಯಿಗಳು; ತಿಂಗಳಾನು ತಿಂಗಳು ಬೆಳಗಿನ ಆರು ಗಂಟೆಯಿಂದ ಸಂಜೆಯ ಆರು ಗಂಟೆಯವರೆಗೆ ದುಡಿದರೂ ಚಿನ್ನಪ್ಪನಿಗೆ ದೊರೆ

CC-0. Jangamwadi Math Collection. Digitized by eGangotri

ಯುತ್ತಿದ್ದುದು ಹದಿನಾಲ್ಕೇ ರೂಪಾಯಿಗಳು! ಸಾಲದು ದಕ್ಕೆ ರಜಾ ಬಂದರೆ, ಖಾಯಿಲೆ ಬಿದ್ದರೆ, ಕೂಲಿಯಿಲ್ಲ. ಪಟ್ಟಣವಾಸ–ತುಟ್ಟಿಯ ದಿನಮಾನ. ಹೊಟ್ಟೆಗೆ ಹೇಗೆ ಸಾಲಬೇಕು ಹದಿನಾಲ್ಕು ರೂಪಾಯಿ?

ಹಿಂದಿನ ದಿವಸಕ್ಕೇ ರಾಗಿ ಗೀಗಿ ಎಲ್ಲಾ ಆಗಿ ಹೋಗಿ ದ್ದಿತು. ರಾತ್ರಿಗೇ ಏನೂ ಇರಲಿಲ್ಲ. ಚಿನ್ನಪ್ಪನ ಹೆಂಡತಿ ಸುತ್ತಮುತ್ತಲಿನ ಗುಡಿಸಿಲುಗಳಲ್ಲಿ ಸಾಲ ಕೇಳಿದಳು. ಎಲ್ಲಿಯೂ ದೊರೆಯಲಿಲ್ಲ; ಅವರಿಗೆ ಇದ್ದರಲ್ಲವೇ ಇನ್ನೊ ಬ್ಬರಿಗೆ ಕೊಡುವುದು! ಆದುದರಿಂದ ಇದ್ದ ಒಂದು ಚೂರು ಒಣಕಲು ಹಿಟ್ಟನ್ನೋ ರೊಟ್ಟಿಯನ್ನೋ ಮಗು ವಿಗೆ ಕೊಟ್ಟು, ಗಂಡ ಹೆಂಡತಿ ಉಪವಾಸ ಮಲಗಿಕೊಂಡಿ ದ್ದರು. ಚಿನ್ನಪ್ಪನು ಮೊದಲುದಿನದ ಸಂಜೆಯಲ್ಲಿ ಮನೆ ಬಿಟ್ಟು ಹೊರಕ್ಕೆ ಹೊರಟೇ ಇರಲಿಲ್ಲ.

ಮಗುವಿನ ಅಳು ಹೆಚ್ಚಿತು. ಚಿನ್ನಪ್ಪ ಅದನ್ನು ಎದೆಗೆ ಅಪ್ಪಿಕೊಂಡು ಸಂತಯಿಸಲು ಯತ್ನಿಸಿದ; ಸಾಧ್ಯವಾಗ ಲಿಲ್ಲ. ನಿರಂತರ ಶ್ರಮದಿಂದಲೂ, ಉಪವಾಸದಿಂದಲೂ, ಕಂಗೆಟ್ಟು ಬೆಂಡಾಗಿ ನಿಂತಿರುವ ಹೆಂಡತಿಯು ಒಂದು ಕಡೆ;–ಹೊಟ್ಟೆಗಿಲ್ಲದೆ ತೆರೆದಬಾಯಿ ಮುಚ್ಚದೆ ಕೂಗಿ ಕುಳಿತಿರುವ ಹಸುಳೆಯೊಂದು ಕಡೆ;–ಉಪವಾಸವಿದ್ದುದ ರಿಂದ ಸ್ವತಃ ಅನುಭವಿಸುತ್ತಿರುವ ಸಂಟಕವೊಂದು ಕಡೆ. ಹೀಗಾಗಿ ಚಿನ್ನಪ್ಪನಿಗೆ ದಿಕ್ಕು ತೋಚದಾಯಿತು.

ಏನನ್ನಾದರೂ ಅಡವಿಟ್ಟು ದುಡ್ಡು ತರೋಣವೆಂದರೆ, ಮನೆಯನ್ನೆಲ್ಲಾ ಹುಡುಕಿದರೂ ಮೂರು ಕಾಸು ಬೆಲೆ ಬಾಳತಕ್ಕ ಪದಾರ್ಥವಿರಲಿಲ್ಲ. ಕೊನೆಗೆ ಚಿನ್ನಪ್ಪನ ಹೆಂಡತಿ ಹುಡುಕಿ ನೋಡಿ, ಕೊಳೆಮುಚ್ಚಿದ್ದ ಒಂದು ಹಿತ್ತಾಳೆಯ ಕೊಡವನ್ನು ತೆಗೆದು, ಚೆನ್ನಾಗಿ ಬೆಳಗಿ ಕೊಟ್ಟಳು. ಚಿನ್ನಪ್ಪನು ಅದನ್ನೊಂದು ಹರಕು ಬಟ್ಟೆ ಯಲ್ಲಿ ಮುಚ್ಚಿಟ್ಟುಕೊಂಡು ಕಾರ್ಖಾನೆಯ ಸಮೀಪ ದಲ್ಲಿಯೇ ಇದ್ದ ಮಾರ್ವಾಡಿಯ ಗಿರಿವಿಯ (ಅಡವು) ಅಂಗಡಿಗೆ ಹೋದ. ಅಲ್ಲಿ ಅವನಂತೆಯೆ ಹತ್ತಾರು ಕೂಲಿ ಕಾರರು ಯಾವುಯಾವುದೋ ಪದಾರ್ಥಗಳನ್ನು ಅಡ ವಿಡಲು ತಂದಿದ್ದರು. ಆದರೆ ಅವರಲ್ಲಿ ಇನ್ನೊಂದು ವಿಶೇಷ; ಗಿರಿವಿ ಇಡತಕ್ಕ ಪದಾರ್ಥದೊಂದಿಗೆ ಎಲ್ಲರೂ ಒಂದೊಂದು ಸೀಸೆಯನ್ನು ತಂದಿದ್ದರು. ಅಂದು ಮಾರ್ವಾ ಡಿಯು ಕೊಡಲಿರುವ ದುಡ್ಡೆಲ್ಲವೂ ಮದಿರಾದೇವಿಯ ಉಪಾಸನೆಗೆ ಅಲ್ಲಿಯೇ ವಿನಿಯೋಗವಾಗಲಿದ್ದಿತು.

ಚಿನ್ನಪ್ಪನ ಹತ್ತಿರ ಸೀಸೆ ಗೀಸೆ ಏನೂ... ಅವನು ಕುಡಿಯುತ್ತಿದ್ದವನಲ್ಲವೆಂದಲ್ಲ... ಪರಿಣಾಮಗಳನ್ನು ಅರಿತು, ತನ್ನ ಸಂಸಾರ... ತಡವೆ ಅವನು ಕುಡಿತದ ಪರಿಣಾಮಫಲ... ಭವಿಸಿದ್ದನು. ಆದರೆ ಆ ಕೆಟ್ಟ ಅಭ್ಯಾಸ–... ವಾದುದು, ಅಜಿಂಕ್ಯವಾದುದು; ಅದನ್ನ... ಅವನಿಗೆ ಸಾಕಷ್ಟು ಮನೋದಾರ್ಢ್ಯವಿರ...

ಹಿಂದಿನ ದಿವಸ ಅವನು ಮನೆಯನ್ನು ಬಿ... ಹೊರಟಿರಲಿಲ್ಲ. ಆದುದರಿಂದ ಅವನಿಗೆ ಕುಡಿ... ವಾಗಿರಲಿಲ್ಲ. ಇಂದು ಮನೆಯಲ್ಲಿ ಎಲ್ಲರೂ... ಮಗುವು ಹಸಿವೆಯಿಂದ ಎಡೆಬಿಡದೆ ರೋದಿಸ... ಆದುದರಿಂದ ಇನ್ನು ಕುಡಿಯಲೇಬಾರದು... ಮಾಡಿ ಮಾರ್ವಾಡಿಯ ಅಂಗಡಿಗೆ ಬಂದಿದ್ದ...

ಅಲ್ಲಿ ಕೇಳಬೇಕೆ? ಮೂರು ರೂಪಾಯಿ... ಪದಾರ್ಥಕ್ಕೆ ಮೂರಾಣೆಯ ಬೆಲೆ! ಮ... ದ್ದರೂ ತೆಗೆದುಕೊಂಡು ಹೋಗುವ ಪ... ಅಲ್ಲಿ! ಚಿನ್ನಪ್ಪನ ಕೊಡಕ್ಕೆ ಹತ್ತಾಣೆಗಳು ದೊ... ಅದೂ ಸಾಲ–ಸಂಬಳ ಬಂದ ದಿವಸ ಬಂದು... ಕೊಟ್ಟರೆ ಅವನ ಕೊಡ ಪುನಃ ಅವನಿಗೆ... ಮಾರ್ವಾಡಿಯು ಕೊಡವನ್ನು ಕೊಡ. ಮ... ಗಳಿಗೆ ಹತ್ತಾಣೆಗೆ ಆರಾಣೆ ಬಡ್ಡಿ!!

ಚಿನ್ನಪ್ಪ ಹಾಗೆಯೇ ತೆಗೆದುಕೊಂಡ... ಆತುರ! ಹತ್ತಾಣೆಗಳನ್ನೂ ಅಂಗಿಯಲ್ಲಿ... ಹೊರಕ್ಕೆ ಬಂದ. ಪಕ್ಕದ ಅಂಗಡಿ... ಸಮ್ರಾಜ್ಞಿಯ ವಿಹಾರ ಮಂಟಪ. ಎಷ್ಟೋ... ಕುಡಿಯುತ್ತ ಕುಳಿತಿದ್ದರು. ಮೈಮೇಲೆ... ಕಟಬಾಯಿಗಳಲ್ಲಿ ನೊರೆ ನೊರೆಯಾಗಿದ್ದ... ಸುರಿದು ಹೋಗುವವರೆಗೂ ಕುಡಿಯುತ್ತ...

ಚಿನ್ನಪ್ಪ ನೋಡಿದ; ಕೊಂಚ ಮ... ಆದರೆ ತತ್‌ಕ್ಷಣದಲ್ಲಿಯೇ, ಹಸಿವಿನಿಂದ ಗೋ... ಕಂದಮ್ಮ–ಉಪವಾಸದಿಂದ ಕಂಗೆಟ್ಟಿದ್ದ... ರಡು ಚಿತ್ರಗಳೂ ಮನಸ್ಸಿನ ಮುಂದೆ ಬಂ... ಪ್ಪನು ಸ್ವಲ್ಪ ಸಡುಗಿ, ಕುಡಿಯಬಾರದು... ಮಾಡಿಕೊಂಡು, ಒಂದು ಸಾರೆ ತಲೆಯ... ಒಂದೆರಡು ಹೆಜ್ಜೆ ಮುಂದಕ್ಕೆ ಹೋದ...

CC-0. Jangamwadi Math Collection. Digitized by eGangotri

ಅಂಗಡಿಯಿಂದ ಮೂರು ನಾಲ್ಕು ಜನ ಜೊತೆಯ ಕೂಲಿ ಕಾರರು, ಮೈಮೇಲೆ ಅರಿವು ಇಲ್ಲದೆ – ಅದೇನೋ ಅವ-ರ್ಣನೀಯವಾದ ಆನಂದದಿಂದ – ಹಾಡುತ್ತಾ ಹೊರ ಬಿದ್ದುದನ್ನು ಚಿನ್ನಪ್ಪನು ನೋಡಿದ. ಅವರೆಲ್ಲರ ಕೈಯಲ್ಲಿಯೂ ಹೆಂಡವು ತುಂಬಿದ್ದ ಒಂದೊಂದು ಸೀಸೆ. ಚಿನ್ನಪ್ಪನ ಬಾಯಲ್ಲಿ ನೀರೂರಿತು. ತಾನೂ ಆ ಸುಖವನ್ನು ಕೊಂಚ ಅನುಭವಿಸೋಣವೆಂದು ಎನಿಸಿತು. ಆದರೆ ಮರುಕ್ಷಣದಲ್ಲಿಯೇ, ಕ್ಷುತ್ಪೀಡಿತರಾಗಿ ವಿಷಮಸ್ಥಿತಿಯಲ್ಲಿದ್ದ ಹೆಂಡತಿ ಮಕ್ಕಳ ಅವಸ್ಥೆಯು ನೆನಪಿಗೆ ಬಂದಿತು. ಹೀಗೆ ತೂಗುಯ್ಯಾಲೆಯ ಮನಸವನಾಗಿ ಹಿಂಜು ಮುಂಜು ನೋಡುತ್ತಿದ್ದ ಚಿನ್ನಪ್ಪನನ್ನು, ಗದ್ದುಗೆಯ ಮೇಲಿದ್ದ ವೀರಾಸ್ವಾಮಿಯು ಕೂಗಿದ. 'ಏನ್ಚಿನ್ನಪ್ಪ! ಇಷ್ಟಪರೂಪ? ನಿನ್ನೇಯಿಂದ ಇತ್ತ ಕಡೆ ಬರ್ಲೇ ಇಲ್ಲ!'

ಚಿನ್ನಪ್ಪ ತಿರುಗಿ ನೋಡಿದ ವೀರಾಸ್ವಾಮಿಯ ಕಡೆಗೆ. ಅವನ ಹೃದಯ ದೌರ್ಬಲ್ಯವು ಹೆಚ್ಚಾಯಿತು. "ನನ್ನ ಹತ್ತಿರ ಹತ್ತಾಣೆಗಳಿವೆ ಈಗ. ಇದರಲ್ಲಿ ಒಂದಾಣೆಯನ್ನು ಉಪಯೋಗಿಸುವ. ಈ ಕೆಟ್ಟ ಚಟಹಾಳು. ಅಭ್ಯಾಸ– ಒಮ್ಮೆಲೆ ಬಿಡಲು ಸಾಧ್ಯವಿಲ್ಲ. ಕೊಂಚ ಕೊಂಚವಾಗಿ ಬಿಟ್ಟುಬಿಡೋಣ" ಎಂದು ಮನಸ್ಸಿನಲ್ಲಿ ಯೋಚಿಸಿಕೊಂಡು ಚಿನ್ನಪ್ಪನು ಅಂಗಡಿಯ ಹೊಸ್ತಿಲಿನವರೆಗೂ ಬಂದ. ವೀರಾಸ್ವಾಮಿಯು ಮೇಲಕ್ಕೆತ್ತಿ ಮಡಿಸಲ್ಪಟ್ಟ ಬನೀನುಳ್ಳವನಾಗಿ, ಅಳೆಯುವ ಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡು, ಕುಳಿತಿದ್ದನು. ಅಕ್ಕಪಕ್ಕಗಳೆರಡರಲ್ಲಿಯೂ ಸಾಲುಸಾಲಾಗಿ ಇರಿಸಿದ್ದ ಮದ್ಯದ ಪಾತ್ರೆಗಳು. ಕೂಲಿಕಾರರ ಹರಣವನ್ನು ಮುಕ್ಕಾಲು ಪಾಲು ಕಾರ್ಖಾನೆಯವರು ಹೀರುತ್ತಿದ್ದರು; ಮಿಕ್ಕುದನ್ನು ವೀರಾಸ್ವಾಮಿಯು ಹೀರುತ್ತಿದ್ದ!!

ಚಿನ್ನಪ್ಪನು ಒಂದಾಣೆಯನ್ನು ವೀರಾಸ್ವಾಮಿಯ ಕೈಯಲ್ಲಿ ಹಾಕಿದ. ವೀರಾಸ್ವಾಮಿಯು ಕೊಂಚ ಮದ್ಯವನ್ನಳೆದು, ಒಂದು ತಗಡಿನ ಪಾತ್ರೆಯಲ್ಲಿ ಹಾಕಿಕೊಟ್ಟ. ಅದು ಚಿನ್ನಪ್ಪನ ಕೈಗೆ ಬಂದಿತು. ಇನ್ನೇನು ಅವನದನ್ನು ಬಾಯಿಗೆ ಸೋಂಕಿಸಿ ಕುಡಿಯಬೇಕು – ಆಗ ಇದ್ದಕ್ಕಿದ್ದ ಹಾಗೆಯೇ ಅವನು ಆ ಪಾತ್ರೆಯನ್ನು ಅಲ್ಲಿಯೇ ಕೆಳಗಿಟ್ಟು ಬಿಟ್ಟ. ಪಾತ್ರೆಯಲ್ಲಿ ಚಿನ್ನಪ್ಪನಿಗೆ ಕಾಣಬಂದುದು ಮದ್ಯವಲ್ಲ – ಕ್ಷುಧಾರ್ತಳಾಗಿದ್ದ ಹೆಂಡತಿಯ ದೈನ್ಯವದನ; ಹಸಿವಿನಿಂದ ಬಾಯ್ಬಿಡುತಲಿದ್ದ ತನ್ನ ಹಸುಗೂಸಿನ ಮುಖ.

ಚಿನ್ನಪ್ಪನು ಬೆದರಿ ಭಯಚಕಿತನಾಗಿ ಮದ್ಯದ ಪಾತ್ರೆಯನ್ನು ಅಲ್ಲಿಯೆ ಕೆಳಗಿಟ್ಟು ಬಿಟ್ಟು ಕಕ್ಕಾಬಿಕ್ಕಿಯಾದ. ವೀರಾಸ್ವಾಮಿಯು ಇದನ್ನೆಲ್ಲ ನೋಡುತ್ತಿದ್ದವನು ತಾನೇ ಕೆಳಗಿಳಿದು ಬಂದ. ಅಂಗಡಿಯಲ್ಲಿ ಇಂತಹ ಸನ್ನಿವೇಶಗಳು ಆಗಾಗ ಒದಗುತ್ತಲೇ ಇದ್ದುವು. ಅವನಿಗೇನೂ ಇದು ಹೊಸದಲ್ಲ. ಅನುಭವಿಕ. ಕೆಳಗೆ ಬಂದು ವೀರಾಸ್ವಾಮಿಯು, "ಏನ್ಚಿನ್ನಪ್ಪಾ, ಭ್ರಮೆ, ತಗೋ– ಕೊ–ಂಚ ಹಾಗನ್ನು; ಬೆಳಗಿನಿಂದ ಮೈಮುರಿದು ದುಡಿದಿದ್ದೀಯೆ; ಹಾಯಾಗುತ್ತೆ ಜೀವಕ್ಕೆ" ಎಂದು ತಾನೇ ಕೊಂಚ ಅವನ ಬಾಯಿಗೆ ಹಾಕಿದ.

ಕೆಲಸದ ನೆನಪಾಯಿತೋ ಇಲ್ಲವೋ, ಚಿನ್ನಪ್ಪನ ಮನಸ್ಸು ಹೇಗೆ ಹೇಗೋ ಆಯಿತು. ಕಾರ್ಖಾನೆಯಲ್ಲಿ ತಾನು ಪಟ್ಟಿದ್ದ ಶ್ರಮವನ್ನೆಲ್ಲಾ ತೆಗೆದುಹಾಕಿಬಿಡುತ್ತದೆ. -ಈ ಮದ್ಯ – ಎಂಬ ಭ್ರಮೆ ಅವನಲ್ಲಿನ್ನೂ ಅಳಿದಿರಲಿಲ್ಲ. ಸಾಲಮುದಕ್ಕೆ ಕೊಂಚ ಮದ್ಯವು ಬಾಯಿಗೆ ಬಿತ್ತೋ ಇಲ್ಲವೋ! ಚಿನ್ನಪ್ಪನ ನಿರ್ಧಾರ, ಶಪಥ, ಗಾಳಿಯ ಪಾಲಾದುವು.

ಮೊದಲು ಒಂದಾಣೆ; ಅನಂತರ ಇನ್ನೊಂದು; ಆ ಮೇಲೆ ಇನ್ನೊಂದು; ಮತ್ತೊಂದು. ಹೀಗಾಗಿ ಚಿನ್ನಪ್ಪನ ಬಳಿಯಿದ್ದ ಹತ್ತಾಣೆಗಳೂ ವೀರಾಸ್ವಾಮಿಯ ಪೆಟ್ಟಿಗೆಯನ್ನು ಸೇರಿದುವು. ಅಷ್ಟುಹೊತ್ತಿಗಾಗಲೇ ಚಿನ್ನಪ್ಪನ ಬುದ್ಧಿಯು ಮುಗಿಲಿನ ಮಾರ್ಗದಲ್ಲಿ ವಿಹಾರಮಾಡುತ್ತಿದ್ದಿತು. ಅವನಿಗೆ ಮೈಮೇಲಿನ ಅರಿವೇ ಇರಲಿಲ್ಲ; ಜಗ್ಗುತ್ತಾ, ಕೂಗುತ್ತಾ, ಮನೆಯ ಕಡೆಗೆ ಬಂದನು. ದೈವವಶಾತ್ ದಾರಿಯಲ್ಲೇನೂ ಅಪಾಯವಾಗಲಿಲ್ಲ.

ಮನೆಯಲ್ಲಿ ಚಿನ್ನಪ್ಪನ ಮಗುವು ಅತ್ತು, ಅತ್ತು ಸಾಕಾಗಿ, ಮತ್ತು ಜಂದಹಾಗಾಗಿ, ಒಂದೆಡೆ ಮಲಗಿಕೊಂಡಿತ್ತು. ತಾಯಿಯು ಹಸಿವಿನ ಬಾಧೆಯನ್ನು ತಾಳಲಾರದೆ, ಮಗುವಿನ ಪಕ್ಕದಲ್ಲಿ ಬಿದ್ದುಕೊಂಡಿದ್ದಳು; ಅವಳಿಗೆಲ್ಲಿಯ ನಿದ್ದೆ!

ಸ್ವಲ್ಪ ಹೊತ್ತಿನನಂತರ ಕೇಳಬಂತು ತನ್ನ ಗಂಡನ ಗಡುಸಾದ ಧ್ವನಿ. "ಅಂಗಡಿಯಿಂದ ಸಾಮಾನು ತಂದಿರುವನು, ಇನ್ನು ಊಟನಿಗುತ್ತೆ" ಎಂದು ಆಶೆಯುಳ್ಳವ



CC-0. Jangamwadi Math Collection. Digitized by eGangotri

ಳಾಗಿ ಆಕೆಯು ತಡವರಿಸುತ್ತ ಎದ್ದಳು. ಕಣ್ಣಿಗೆ ಕಾವಳ ಬಂದಿತು. ಸಾವಧಳಾಗಿ ನೋಡುತ್ತಾಳೆ! ಚಿನ್ನಪ್ಪನ ಮೀಸೆಗಳು ಹುರಿಗೊಂಡಿವೆ; ಕಣ್ಣುಗಳು ಅರಳಿ ಅಗಲ ವಾಗಿ ಕೆಂಬಣ್ಣಕ್ಕೆ ತಿರುಗಿವೆ; ಮೂಗುಬಾಯಿಗಳಲ್ಲಿ ಹಬೆ-ಸುರೆಯ ವಾಸನೆ.

ಆಕೆಗೆ ದುಃಖವು ಮಿತಿಮೀರಿ ಬಂದಿತು. ಇನ್ನು ಮೇಲೆ ಕುಡಿಯುವುದಿಲ್ಲವೆಂದು ತನ್ನಾಣೆ, ತನ್ನ ಮಗು ವಿನ ಆಣೆ, ಶ್ರೀರಾಮನಾಣೆ ಇಟ್ಟುಕೊಂಡಿದ್ದ. ತನ್ನ ಗಂಡನ ಅವಸ್ಥೆಯನ್ನು ನೋಡಿ, ಆಕೆಗೆ ಶೋಕವು ತೀರ ಹೆಚ್ಚಾಯಿತು. ಹಾಳು ಹೊಟ್ಟೆಯಲ್ಲಿ ಬಿದ್ದುಕೊಂಡಿದ್ದಾ ಮಗು - ಎರಡು ದಿವಸಗಳಿಂದಲೂ ತಾನು ಅನುಭವಿಸು ತ್ತಿರುವ ಹಸಿವಿನ ಅಸಹ್ಯವೇದನೆ-ತಿನ್ನುವ ಪದಾರ್ಥ ವನ್ನು ತರಲುಹೋದ ಗಂಡನು ಬಂದಿರುವ ಸ್ಥಿತಿ, ಇವೆ ಲ್ಲವುಗಳಿಂದ ಉಂಟಾದ ದುಸ್ಸಹ ಶೋಕವನ್ನು ತಾಳಲು, ಆಕೆಯ ಕಿರಿದಾದ ಹೃದಯದಲ್ಲಿ ಸ್ಥಳವಿರಲಿಲ್ಲ. ಗಂಟ ಲುಬ್ಬಿ ಆಕೆಯು 'ಗೊಳೋ' ಎಂದು ಅಳಲು ಪ್ರಾರಂ ಭಿಸಿದಳು.

ಚಿನ್ನಪ್ಪ ಕೂಗಿದ 'ಲೇ! ತಿನ್ನಲು ಏನಾದರೂ ತಾರೆ' ಎಂದು. ಸರಿಯಾಗಿ ನಿಲ್ಲಲು ತ್ರಾಣಸಾಲದೆ ಜೋಲಿ ಹೊಡೆಯುತ್ತಲಿದ್ದ. ಸಣ್ಣದಾಗಿದ್ದ ಜೋಪಡಿ; ಇನ್ನು ಮಲಗಿದ್ದ ಮಗುವಿನ ಮೇಲೆ ಎಲ್ಲಿ ಬೀಳುವನೋ ಎಂದು, ಚಿನ್ನಪ್ಪನ ಹೆಂಡತಿ ಮಗುವನ್ನು ಎತ್ತಿ ಎದೆಗೆ ಅವುಚಿ ಹಿಡಿದುಕೊಂಡಳು. ಹೀಗೆ ಮಾಡಿದುದರಿಂದ ಮಗುವು ತಟಕ್ಕನೆ ನಿದ್ರೆಯಿಂದ ಎಚ್ಚರಗೊಂಡು ಕಿಟ್ಟನೆ ಕಿರಿಚಿತು.

ಚಿನ್ನಪ್ಪನಿಗೆ ಮೈಮೇಲೆ ಪ್ರಜ್ಞೆ ಇರಲಿಲ್ಲ. ಅವನ ಮನಸ್ಸಿಗೆ ಏನು ತೋರಿತೋ ಏನೋ! ಅವನು "ಲವ.... ಡೀ....ಮ....ಮ್ಮ....ಗಂದೇ....ಚೀರ್ತೀ....ಯಾ...ನನ್ನೆ.. ದು....ದು....ದರಿ....ನಲ್ಲಿ" ಎಂದು ತೊದಲುತ್ತಾ ಮಗು ವನ್ನು ಸೆಳೆಯಲು ಪ್ರಾರಂಭಿಸಿದ. ಅವನ ಹೆಂಡತಿ- ಪಾಪ! ಅಬಲೆ! ಏನು ಮಾಡಿಯಾಳು! ಮಗುವನ್ನು ಚಿನ್ನಪ್ಪನು ಕಸಿದುಕೊಂಡು ಬಿಟ್ಟ. ಇನ್ನು ಮಗುವು ಬದುಕುವ ಆಶೆಯಿಲ್ಲವೆಂದು ತಿಳಿದು, ನೆರೆಯವರಾರಾದರೂ ಬಂದು ಬಿಡಿಸಲೆಂದು ಆಕೆ-ಮಾನಿನ್ಮೆ-ಮಾನತೊರೆದು ಬಾಯಿ ಬಡಿದುಕೊಂಡಳು. ಆದರೆ ಅಲ್ಲಿ ಬರುವವರು ಯಾರು? ಸುತ್ತುಮುತ್ತಲಿನವರ ಹಣೆಬ್ಬರಹವೂ

ಅದೇ; ಎಲ್ಲರೂ ಕುಡಿದಿದ್ದವರೇ! "ಲೋ-ಹೊ... ಮ....ಗಳ್ಗೆ....ಹಾಗೇ....ಹ್ಹಾಗ....ಹಾಗ್ಗೆ.... 'ಇನ್ನೊಂ....ದ್ಬುಡ್ಡೀ....ತಾ....ತ್ರಾ..ಠೋ... ಗೋ....ತಾ..ಹೋ..ಉ....ಊ...." ಎಂ... ತ್ತಿದ್ದವರೂ, ಕೇಕೆ ಹಾಕುತ್ತಿದ್ದವರೂ, ಅ... ಯುತ್ತಿದ್ದವರೂ, ಇವರೇ ಬಹುಮಂದಿ ಅಲ್ಲಿ... ಗಡೆ ಕತ್ತಲು. ಅಲ್ಲಲ್ಲಿ ಮಿಸುಗುಟ್ಟುತ್ತಿದ್ದ ... ದೀಪ. ವಿಶಾಲವಾದ ಬಯಲು. ಸಾಲದುದಕ್ಕೆ ... ಕೇಕೆಗಳೂ, ಕೂಗುಗಳೂ, ಜಗಳಗಳೂ ... ನಡೆದು ಹೊರಗಣ ಜನರಿಗೆ ಅವು ಸರ್ವಸಾಧಾ... ದ್ದುವು.

ಚಿನ್ನಪ್ಪನ ಹೆಂಡತಿ ಮಗುವಿನ ಆಶೆ... ತೊರೆದಳು. ತಾನೇ ಹೋಗಿ ಮಗುವನ್ನು ... ಕೊಳ್ಳಲು ಯತ್ನಿಸಿದಳು. ಆದರೆ ಚಿನ್ನಪ್ಪನು... ಬಲ; ತಾನೇನು ಮಾಡುತ್ತಿದ್ದೇನೆಂಬ ಪ್ರಜ್ಞೆ... ವಾದರೂ ಅವನಿಗೆ ಇದ್ದಿಲ್ಲ. ತನ್ನ ಗಂಡನು... ಯಿದ್ದಾಗ- ಅಂದರೆ ಸುರೆಯನ್ನು ಸೇವಿಸ... ಪ್ರತ್ಯಕ್ಷ ದೇವತೆ ಎಂಬುದು ಆಕೆಗೆ ಗೊತ್ತು... ರಣ ಕೂಲಿಕಾರರಲ್ಲಿ ಕಾಣಲಾಗದ, ದಯೆ, ... ಘನತೆಗಳನ್ನು ಚಿನ್ನಪ್ಪನಲ್ಲಿ ವಿಶೇಷವಾ... ಕಾಣಬಹುದಾಗಿದ್ದಿತು. ಆದರೆ ಈಗ! ಅವನು ... ಪ್ರಜ್ಞಾಶೂನ್ಯ!

ಮಗುವಿನ್ನೂ ಚೀರುತ್ತಲೇ ಇದ್ದಿತು; ... ಹೆಂಡತಿಯ ಕಂಠವೂ ಕುಗ್ಗಿರಲಿಲ್ಲ. ಇವರಿಬ್ಬ... ಗಳೂ ಸುತ್ತಲಿನ ಕತ್ತಲನ್ನು ಭೇದಿಸಿಕೊಂಡು ... ತಲಿದ್ದುವು.

ಅಷ್ಟುಹೊತ್ತಿಗೆ ಕಾರ್ಖಾನೆಯ ... (Mana er) ನಾಗಿದ್ದ ಸೆಟ್ಟಿ ವರ್ಧಮಾ... ಒಬ್ಬಳೇ ಒಬ್ಬ ಮಗಳಾಗಿದ್ದ ಗೀತಾಕು... ಯಾರ ಮನೆಗೋ ಹೋಗಿದ್ದವಳು ಮನೆ... ತ್ತಿದ್ದಳು ಕಾರ್ಖಾನೆಗೆ ಸೇರಿದಹಾಗಿದ್ದ... ವಾದ ಬಯಲಿನಲ್ಲಿ ಕೂಲಿಕಾರರ ಜೋಪಡಿ... ಗಳಲ್ಲಿ ಕೊಟ್ಟ ಕೊನೆಯದು ಚಿನ್ನಪ್ಪನದು; ... ಮೊದಲೇ ತಿಳುಹಿಸಿದೆಯಷ್ಟೇ. ಮ್ಯಾನೇಜ... ದೊಡ್ಡರಸ್ತೆಯಲ್ಲಿ ಹೋಗಬೇಕಾದರೆ, ಆ ವಿ...

CC-0. Jangamwadi Math Collection. Digitized by eGangotri

ಬಯಲನ್ನು ಬಳಸಿ ಬರಬೇಕಾಗಿದ್ದಿತು. ಆದರೆ ಚಿನ್ನಪ್ಪನ ಜೋಪಡಿಯ ಹಿಂದೆ ಎಂಟು ಹತ್ತು ಮಾರು ದೂರದಲ್ಲಿದ್ದ ಸಣ್ಣ ಕಾಲುದಾರಿಯಲ್ಲಿ ಹೋದರೆ, ದೊಡ್ಡ ರಸ್ತೆಯಲ್ಲಿ ಒಂದು ಒಂದೂವರೆ ಮೈಲಿನ ಉಳಿತಾಯವಾಗುವುದು.

ಗೀತೆಯು ಕೆಲಸವಿದ್ದುದರಿಂದಲೋ ಏನೋ, ದೊಡ್ಡ ರಸ್ತೆಯಲ್ಲಿಯೇ ಮೋಟಾರನ್ನು ಬಿಟ್ಟು, ಡ್ರೈವರನನ್ನು ಮನೆಗೆ ತರುವಂತೆ ಹೇಳಿ, ಇಬ್ಬರು ಜವಾನರೊಡನೆ, ಕಾಲುದಾರಿಯಿಂದ ಬರುತ್ತಿದ್ದಳು. ಈ ಆರ್ತಸ್ವರವನ್ನು ಕೇಳಿ, ತಟಕ್ಕನೆ ಅಲ್ಲಿಯೇ ನಿಂತುಬಿಟ್ಟಳು.

ಆದರೆ ಅದು ಒಂದುಕ್ಷಣಕಾಲ ಮಾತ್ರ. ಆ ಹಸು ಗೂಸಿನ ಕೂಗು ಅವಳ ಎಳೆಗರುಳನ್ನು ಕರಗಿಸಿ, ಸ್ಥೈರ್ಯ ವನ್ನೂ ವಿವೇಚನೆಯನ್ನೂ ಅವಳಲ್ಲಿ ಉದ್ರೇಕಗೊಳಿಸಿತು. ಗೀತೆಯು ಸರ್ರನೆ ಚಿನ್ನಪ್ಪನ ಗುಡಿಸಿಲಿನೆದುರಿಗೆ ಬಂದು, ಅವನ ಆ ಭಯಂಕರ ಕೃತ್ಯವನ್ನು ನೋಡಿ ಗಾಬರಿ ಗೊಂಡಳು; ಆದರೂ ವಿವೇಕಚಿತ್ತಳಾಗಿ, 'ಪಾಲೂ, ಏನು ನೋಡುತ್ತಿರುವೆಯೋ – ಅವನನ್ನು ಹಿಡಿದುಕೋ. ಕಾಳೂ, ಆ ಮಗುವನ್ನಿಲ್ಲಿ ಕೊಡು, ಊ, ಹೊರಡಿ ಎಂದು ಅಪ್ಪಣೆಮಾಡಿದಳು. ಪಾಲುವೂ, ಕಾಳುವೂ, (ಇಬ್ಬರು ಸೇವಕರು) ಚಿನ್ನಪ್ಪನಲ್ಲಿಗೆ ಹೋಗಿ ಮಗುವನ್ನು ಸುಲಭ ವಾಗಿ ಅವನ ಹಿಡಿತದಿಂದ ತಪ್ಪಿಸಿ, ಗೀತೆಯ ಕೈಗೆ ಕೊಟ್ಟು ಚಿನ್ನಪ್ಪನನ್ನು ಒಂದೆಡೆ ಕುಳ್ಳಿರಿಸಿದರು.

ಭೀತಿಗೊಂಡಿದ್ದಾ ಮಗುವು, ಗೀತೆಯ ಕೈಗೆ ಬಂದ ಮೇಲೆ ಕೊಂಚ ಅಳುವನ್ನು ಕಡಿಮೆ ಮಾಡಿತು. ಚಿನ್ನಪ್ಪ ನಿಗೆ ಹಿಂದಿನ ದಿವಸದಿಂದ ಉಪವಾಸವಿದ್ದುದೂ, ಅಂದು ವಿಪರೀತ ಕುಡಿದುದೂ, ಮನೆಗೆ ಬಂದಮೇಲೆ ಆದ ರಂಪೂ ಇವೆಲ್ಲದರಿಂದ ಆಯಾಸವಾಗಿ ಮತ್ತುಬಂದು ಹಾಗೆಯೇ ಉರುಳಿಕೊಂಡನು.

ಗೀತಾಕುಮಾರಿಯು ಒಮ್ಮೆ ನಿಶ್ಚೇಷ್ಟನಾಗಿ ಬಿದ್ದ ಚಿನ್ನಪ್ಪನ ಕಡೆಗೆ ನೋಡಿದಳು. ಒಮ್ಮೆ ಅತ್ತು ಅತ್ತು ಬಳಲಿ ಕೃಶವಾಗಿದ್ದ ಮಗುವಿನ ಕಡೆಗೆ ನೋಡಿದಳು. ಹದಿ ನೆಂಟು ಇಪ್ಪತ್ತು ವರ್ಷದ ಸರಳ ಹೃದಯದ ಹೆಂಗುಸು, ಮಗುವಿನ ಮೇಲಣ ಕರುಣೆಯಿಂದ ಚಿನ್ನಪ್ಪನ ವಿಷಯ ದಲ್ಲಿ ಕಾಠಿಣ್ಯವನ್ನು ವಹಿಸಿ, ಅವನನ್ನು ನೋಡಿ "ಬಿದ್ದಿರು ಗುಲಾಮ! ನಿನ್ನೀ ನೀಚಕೃತ್ಯಕ್ಕೆ ತಲೆಹಾರಿಸಿ ಬಿಡ ಬೇಕು" ಎಂದು ಗರ್ಜಿಸಿದಳು.

ಚಿನ್ನಪ್ಪನ ಹೆಂಡತಿಯು ಒಂದು ಕ್ಷಣಮಾತ್ರದಲ್ಲಿ ನಡೆದುಹೋದ ಇವಿಷ್ಟೂ ಕಾರ್ಯಗಳಿಂದ ಬೆರಗಾಗಿ ಸ್ತಂಭಿತೆಯಾಗಿ ನಿಂತಿದ್ದವಳು, ಗೀತೆಯ ಈ ಮಾತನ್ನು ಕೇಳಿ, ಸಿಂಹಿಣಿಯಂತೆ ಅವಳೆದುರಿಗೆ ಹಾರಿ ಬಂದು:—

'ಏನ್ರಾಯಿ – ತಲೆಹಾರಿಸಬೇಕೆ? ಯಾವ ಅಪರಾಧದ ಸಲುವಾಗಿ? ಕೂಲಿಕಾರರಾಗಿ ಹುಟ್ಟಿದುದಕ್ಕೋಸ್ಕ ರವೇ? ಅಯ್ಯೋ ಗ್ರಹಚಾರವೇ? ತಿಂಗಳದಿನವೆಲ್ಲಾ ದುಡಿದು ದುಡಿದು ಎದೆಯ ರಕ್ತಬಸಿದರೆ, ನೀವ್ಕಿ- ಸಾಡೋ ಹದಿನಾಲ್ಕುರೂಪಾಯೀ ಹಂಗಿಗೋ – ತಲೆ ಹಾರ್ಸೋದು? ಏನ್ರಾಯೀ – ಸಿಲ್ಲೋಕೆ ನೆರಳಿಲ್ಲ – ಕುಡಿ ಯೋಕೆ ಅಂಬಲಿಯಿಲ್ಲ; ಇಂಥಾ ಸ್ಥಿತೀಲಿ ಮಾರ್ವಾಡೀ ಅಂಗಡಿ; ಹೆಂಡದ ಅಂಗಡಿ; ಪಠಾಣರ ಬೆದರಿಕೆ. ಇಷ್ಟೂ ಆದ್ಮೇಲೆ ಪೋಲೀಸ್ನೋರ ಲಾಟೀ ಏಟುಗಳು; ಕೊಂಚ ಹೆಚ್ಚೂಕಡಿಮೆ ಆದರೆ! ಅಯ್ಯೋ – ಕಾರ್ಖಾನೆಯವರು ಕೊಡೋದು ಹದಿನಾಲ್ಕುರೂಪಾಯಿ; ಅದೂ ಕೆಲಸ ವಂದಿಗರಿಗೆ – ಸರ್ವೀಸ್ ಆದವರಿಗೆ; ಇಲ್ಲದೇ ಹೋದವರಿ ಗೆಲ್ಲಾ ಹತ್ತೇರೂಪಾಯಿ. ಇದರಲ್ಲಿ ತಿಂಗಳ್ಸಂಸಾರ; ಹೆಂಡ್ರುಮಕ್ಕಳಿಗೆ ಬಟ್ಟೆ, ಬರೆ, ಖಾಯಿಲೆ ಖರ್ಚು; ಸಾಲ ದ್ದಕ್ಕೆ ಇದೂ ಅದೂ ಅಂತ ನೀವ್ವಿಡ್ಕೊಳ್ಳೋದು. ಮೇಲೆ ಸಾಯಂಕಾಲ ಆಯ್ತೂ ಅಂದ್ರೆ ಸಾರಾಯಿ ಕುಡಿತ. ಏನಮ್ಮ! ಏನೆಂದು ನೀವು ವಿಚಾರಸ್ಕೊಂಡಿದ್ದೀರಿ ಈ ಬಡ್ಪಾಯಿಗಳನ್ನು? ನಿಮ್ಮ ಪ್ಪೋರಂತೂ ಈದಿಕ್ಕಿಗೇ ತಲೆಯಿಟ್ಟು ಮಲಗೋದಿಲ್ಲ!! ಇಕೋ ಇಲ್ನೋಡಿ – ಈ ಕೊಚ್ಚೆ, ಈ ಕೊಳೆ, ಈ ತಿಪ್ಪೆ. ಅಯ್ಯೋ – ಈ ಛಳಿ – ಗಡ ಗಡ ನಡುಗ್ಸಿ ಮೈಕೊರೀತಾ ಇದೆ – ಒಂದ್ಮಗುವಿನ್ಮೇ ಲಾದ್ರೂ, ಒಂದ್ಹೆಣ್ಮಗುವಿನ್ಮೇಲಾದ್ರೂ ಒಂದ್ಚಿಂದೀ ಬಟ್ಟೆ ಯಿದೆಯೇನ್ರಾಯೀ – ನೋಡಿ! ದೇವ್ರುಗೇಗೊತ್ತು – ಒಂದ್ಹೊತ್ತಿರು ರೊಟ್ಟೆನೂ ಇಲ್ವೇ ಈ ಪಾಪಿಗಳ್ಪಾಲಿಗೆ! – ಹುಟ್ಟಿದ್ದಿವಸದಿಂದ ಹೊಟ್ಟೇತುಂಬ ಊಟ ಮಾಡಿದ್ದರೆ ಈ ಸುತ್ತುಮುತ್ತಲಿರೋ ಮಕ್ಕಳು ಸೀವಿಟ್ಟಾಣೆ ತಾಯಿ. ಇದೆಲ್ಲಾ ಯಾರದ್ರುಮ್ಮಾ ತಪ್ಪು? ಎರಡ್ದಿವ್ಸ ದಿಂದಲೂ ಉಪವಾಸ ನಾವಿಬ್ಬರೂ. (ಗಂಡನ ಕಡೆ ತನ್ನ ಕಡೆ ಕೈತೋರಿಸಿ) ಬೆಳಿಗ್ನಿಂದ ಈ ಹಾಲು ಹಸುಳೇ ಹೊಟ್ಟೆಗೇನೂ ಇಲ್ವಲ್ಲಾ— ಏನ್ರಾಯೀ ಮಾಡೋದು? ನಿಮಗೆ ಕೊಂಚ ನೆಗಡಿಯಾದರೆ, ಕೊಂಚ

CC-0. Jangamwadi Math Collection. Digitized by eGangotri

ಕೆವ್ಮಾದರೆ ಮೋಟ್ಮೋಟಾರ್ನಲ್ಲಿ ಕರಿಸ್ತೀರಿ ಸಾವಿರ ರೂಪಾಯಿಸುರಿದು ! ನಮ್ಮನ್ಯಾರು ವಿಚಾರಿಸೋರು ? ನಮ್ಮಟ್ಟೀಲಿ ಇಲಿ ಹೆಗ್ಣ ದಿನಾಲು ಸಾಯ್ತ್ತವೆ ; ತಿಪ್ಪೆ ಕೊಚ್ಚೆ ನಾರ್ತ್ತವೆ; ಉಣ್ಣೋಕ್ಕಿಟ್ಟಿಲ್ಲ– ಉಡೋಕ್ಬಟ್ಟೆಯಿಲ್ಲ. ಜ್ವರ, ಚಳಿ ಇಲ್ದೇ ಇರೋ ಮನೆಯೇ ಇಲ್ಲ ನಮ್ಮಟ್ಟೀಲಿ. ಒಂದಾಸ್ಪತ್ರೆ ಇಲ್ಲ – ಒಂದೌಷಧವಿಲ್ಲ. ಹೀಗಿದ್ರೆ ನಿವ್ ಕೊಡೋ ಸಂಬ್ಳ ಎಲ್ಲಿ ಸಾಕಾಗುತ್ತೆ ತಾಯೀ ? ಅದಕ್ಕೇ ಒಡವೆ, ಪಾತ್ರೆ, ಎಲ್ಲಾ ಗಿರವೀ ಅಂಗಡಿಪಾಲು; ದೇಹ ನಿಮ್ಹತ್ತಿರ ಒತ್ತೆ – ಒಡವೆ ಮಾರ್ವಾಡೀಹತ್ತಿರ ಒತ್ತೆ. ಅಲ್ದೆ ಬರೋ ಎರ್ಡು ಕಾಸೂ ವೀರಾ ಸ್ವಾಮೀಗೆ ಕಾಣ್ಕೆ– ತಣ್ಣಗಾಗ್ಲೋಯ್ತುಕೆಲ್ಸ. ಇವಕ್ಕೆಲ್ಲಾ ಯಾರ್ತಾಯೀ ಕಾರಣ? ಯಾರ್ತಲೇ ಹಾರಿಸ್ಬೇಕು. ಅಕೋ ಅವರು (ಚಿನ್ನಪ್ಪನನ್ನು ತೋರಿಸುತ್ತಾ) ದೇವರಂತವರು. ಇನ್ನಂತಾವರು ಹುಟ್ಟೋದಿಲ್ಲ ನಮ್ಮಟ್ಟೀಲಿ. ( ಎದೆಯಮೇಲೆ ಕೈಯಿಟ್ಟುಕೊಂಡು ) ಈ ಬಡ್ಪಾಯೀನ, ಆ ಮಗೂನ, ಎಂದ್ರೆ ಪ್ರಾಣಾನೆ ಬಿಡ್ತಾರೆ. ಅಂಥವರು ಕುಡಿಯೋದ್ನಿಲ್ಸೋಕೆ ಏನೇನ್ಮಾಡಿದ್ದೀರಮ್ಮ ನೀವು, ಅಲ್ಲ ನಿಮ್ಮ ಕಾರ್ಖಾನೆಯೋರು ? ಇಕೊಳ್ಳಿತಾಯಿ – ನಾನೊಬ್ಬಳೇ ಅಲ್ಲ. ನನ್ನಂಥೋರು ನೂರಾರುಮಂದಿ. ನಾನೇ ಎಷ್ಟೋವಾಸಿ ಅವರೆಲ್ಲರಿಗಿಂತ. ಅಯ್ಯೋ ಶಿವ –ಏನ್ಕಷ್ಟ ಈ ಬಡ್ಪಾಪಿಗಳಿ....ಗೆ " ಎಂದು ಹೇಳುತ್ತಾ ಹೊಟ್ಟೆಯಲ್ಲಿ ಆಹಾರವಿಲ್ಲದುದರಿಂದಲೂ, ಶೋಕದ ಉದ್ವೇಗದಿಂದಲೂ, ಸಿಟ್ಟಿನ ಭರದಿಂದಲೂ, ಸಂತಪ್ತಳಾಗಿ ಆಕೆ ಕೆಳಗೆ ಬಿದ್ದುಬಿಟ್ಟಳು.

ಗೀತಾಕುಮಾರಿ ಅವಾಕ್ಕಾಗಿ ನಿಂತುಬಿಟ್ಟಳು–ಕಣ್ಣುಗಳಲ್ಲಿ ಅಜಸ್ರವಾಗಿ ಅಶ್ರುಧಾರೆಯು ಸುರಿದು, ಬೆಲೆಯುಳ್ಳ ಅವಳ ವಸ್ತ್ರಗಳನ್ನೆಲ್ಲಾ ತೋಯಿಸಿತು. ಪಾಲುವನ್ನು ಕೊಟ್ಟು ಕಳುಹಿಸಿ ಮೊದಲು ಮನೆಯಿಂದ ಕೊಂಚ ಆಹಾರಸಾಮಗ್ರಿಯನ್ನು ತರಿಸಿದಳು. ಕಾಳುವಿನ ಸಹಾಯದಿಂದ ಚಿನ್ನಪ್ಪನನ್ನೂ ಅವನ ಹೆಂಡತಿಯನ್ನೂ ಜೋಪಡಿಯೊಳಗೆ ಕರೆತಂದು ಉಪಚರಿಸಿದಳು.

* * * *

ಎರಡು ತಿಂಗಳನಂತರ. ಅಸ್ತವ್ಯಸ್ತವಾಗಿ ಕಟ್ಟಲ್ಪಟ್ಟ ಆ ಕೂಲಿಕಾರರ ಜೋಪಡಿಗಳಿದ್ದ ತಾಣದಲ್ಲಿ, ಸಾಲು ಸಾಲಾಗಿ ಗಾಳಿ ಬೆಳಕುಗಳಿಗೆ ತಕ್ಕಷ್ಟು ಅವಕಾಶವಿದ್ದ ದೊಡ್ಡ ಗುಡಿಸಿಲುಗಳು ಕಾಣುತ್ತಿದ್ದುವು. ಈಗ ಪೇಟೆಲಿನ ಮಾರ್ವಾಡಿಯ ಅಂಗಡಿಯಿಲ್ಲ; ಸಾರಾಯಿ ಅಂಗಡಿಯಿಲ್ಲ; ಅವಕ್ಕೆ ಬದಲಾಗಿ ಒಂದು ಶಾಲೆ ಇದೆ, ಒಂದು ಆಸ್ಪತ್ರೆ ಇದೆ. ಕೂಲಿಕಾರರು ಈಗ ಕುಡಿಯುವುದಿಲ್ಲ; ಪದಾರ್ಥವನ್ನ ಡವಿಡುವುದಿಲ್ಲ; ಹೆಂಡತಿಯರನ್ನೂ, ಮಕ್ಕಳನ್ನೂ ಒಡಿಯಹೋಗುವುದಿಲ್ಲ.

ಒಂದು ದಿನ ಪ್ರಾತಃಕಾಲ, ಕಾರ್ಖಾನೆಯ ಮ್ಯಾನೇಜರು ಶಾಲೆಯಬಳಿ ಬಂದನು. ಜೊತೆಯಲ್ಲಿ ಕೂಲಿಕಾರರ ಮೇಲ್ಮೆಗೆ ನಿಯೋಜಿಸಲಾಗಿದ್ದ ಚಿನ್ನಪ್ಪನು ಇದ್ದನು. ಗೀತಾಕುಮಾರಿಯೂ ತಂದೆಯ ಪಾರ್ಶ್ವದಲ್ಲಿದ್ದಳು. ಓರೆಯಾಗಿಕಟ್ಟಿದ್ದ ಕೇಶದಾಮದ ಮೇಲಿದ್ದ ಸ್ವರ್ಣಾಭರಣದ ವಜ್ರವು ತರುಣಾರುಣಕಿರಣದಲ್ಲಿ ಥಳಥಳಿಸುತ್ತಿತ್ತು. ಕಿವಿಗಳಲ್ಲಿದ್ದ ಲೋಲಕಿನ ವಜ್ರಗಳು ಆಕೆಯ ಮುದ್ದುಮುಖದ ಚಪಲಗತಿಯನ್ನನುಸರಿಸಿ ಮಿನುಗುಟ್ಟುತ್ತಾ, ಸ್ವಚ್ಛಕಪೋಲಗಳಲ್ಲಿ ಪ್ರತಿಬಿಂಬಿತವಾಗುತ್ತಿದ್ದುವು.

ಆಗ ಸಣ್ಣ ಮಗುವೊಂದು ಗೀತಳ ಕಾಲ್ಬಳಿ ಬಂದು 'ಅಮ್ಮಾ, ಅಮ್ಮಾ' ಎಂದಿತು. ಗೀತಳು ಕೆಳಗೆ ನೋಡಿ ಅತಿಪ್ರೀತಿಯಿಂದ— ಪ್ರೇಮದಿಂದ ಮಗುವನ್ನೆತ್ತಿಕೊಂಡಳು. ಅಷ್ಟರಲ್ಲಿಯೇ ಚಿನ್ನಪ್ಪನ ಹೆಂಡತಿ ಎಲ್ಲಿಂದಲೋ ಒಂದು ನಗುಮುಖದಿಂದ,

'ಯಾಕ್ತಾಯೀ – ಬಂಗಾರದಂಥೋರು ಈ ಗಲೀಜು ಮಗೂನ ಎತ್ಕೊಂತೀರಿ' ಎಂದಳು.

ಗೀತಳು. 'ಅವತ್ತು ನಿನ್ಗಂಡ ಇದನ್ನ ಸಾಯಿಸೋ ಪ್ರಯತ್ನದಲ್ಲಿದ್ದಾಗ ಗಲೀಜಾಗಿರಲಿಲ್ಲವೋ ಈ ಕೂಸು' ಎಂದು ಚಿನ್ನಪ್ಪನ ಕಡೆ ನೋಡಿ ನಕ್ಕಳು.

ಚಿನ್ನಪ್ಪ 'ತಾಯಿ ನಿಮ್ಮಾತಿಗೆ ಜವಾಬು ಕೊಡಲಿಕ್ಕೆ ನಮ್ಕಿಂದಾಗೋಲ್ಲ, ನೀವೇ ನಮ್ಮೆಲ್ರಿಗೂ ಮಹಾತಾಯಿ ಮಹಾ ಲಕ್ಷ್ಮಿ. ನಿಮ್ಮಿಂದಲೇ ಈ ಬದಲಾವಣೆ–ಈ ಸ್ವರ್ಗಸುಖ' ಎಂದು ಕಣ್ಣೀರುಸುರಿಸುತ್ತಾ ಕೈಮುಗಿದು ಹೇಳಿದನು.

CC-0. Jangamwadi Math Collection. Digitized by eGangotri

# ಕನ್ನಡಿಗರೊಬ್ಬರ ಪರಿಚಯ

ಪರಿಚಯಕಾರ:— ಪೇಜಾವರ ಸದಾಶಿವರಾವ್, ಮಂಗಳೂರು.

ಡಾ|| ದಾಸಣ್ಣಾಚಾರ್ಯರು ಮಂಗಳೂರಿನ ಹತ್ತಿರ ಇರುವ ಬಾಳೆಬೈಲಿನಲ್ಲಿ ಒಂದು ಪ್ರಸಿದ್ಧ ವೈದಿಕ ಕುಟುಂಬದಲ್ಲಿ ಜನ್ಮವೆತ್ತಿದರು. ಇವರ ಚಿಕ್ಕಂದಿನ ವಿದ್ಯಾಭ್ಯಾಸವು ಮಂಗಳೂರಿನ ಕೆನರಾ ಹೈಸ್ಕೂಲಿನಲ್ಲಿ ನಡೆದು ೧೯೧೨ನೆಯ ಇಸವಿಯಲ್ಲಿ ಸ್ಕೂಲ್‌ಫೈನಲ್ ಪರೀಕ್ಷೆಯಲ್ಲಿ ತೇರ್ಗಡೆಯಾದಬಳಿಕ, ಸೈಂಟ್ ಅಲೋಸಿಯಸ್ ಕೋಲೇಜಿನಲ್ಲಿ ಇಂಟರ್‌ಮೀಡಿಯೇಟ್ ಪರೀಕ್ಷೆ ಕೊಟ್ಟು, ಬಿ. ಎ. (ಆನರ್ಸ್) ಬಿರುದು ಪಡೆಯಲು ತಿರುಚಿನಾಪಳ್ಳಿಯ ಸೈಂಟ್ ಜೋಸೆಫ್ಸ್ ಕೋಲೇಜನ್ನು ಸೇರಿದರು. ಅಲ್ಲಿ ೧೯೧೭ನೆಯ ಇಸವಿಯಲ್ಲಿ ಆನರ್ಸ್‌ಪರೀಕ್ಷೆಯಲ್ಲಿ ಸಂಸ್ಥಾನದಲ್ಲಿ ಮೊದಲನೆಯ ಸ್ಥಾನವನ್ನು ಪಡೆದು, ಆರಣೀ ಜಹಗೀರುದಾರರ ಚಿನ್ನದಪದಕಕ್ಕೆ ಪಾತ್ರರಾಗಿ, ಬೆಂಗಳೂರಿನ 'ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸಾಯನ್ಸ'ನಲ್ಲಿ ಸರಕಾರದಿಂದ ವೇತನ ಪಡೆಯುತ್ತಾ ವಿಜ್ಞಾನಶಾಸ್ತ್ರದಲ್ಲಿ ಶೋಧನಾ ಕಾರ್ಯವನ್ನು ನಡೆಸುತ್ತಿದ್ದರು. ಈ ಶೋಧಗಳ ಫಲಿತಾಂಶವಾಗಿ ೧೯೨೨ ರಲ್ಲಿ ಜರ್ಮನಿಗೆ ಹೋಗಿ, ಅಲ್ಲಿಯ ಮ್ಯೂನಿಕ್ ವಿಶ್ವವಿದ್ಯಾಲಯದಲ್ಲಿ ನೋಬೆಲ್ ಪಾರಿತೋಷಕವನ್ನು ಪಡೆದ ವಿಲ್ಹ್ಯೆಮ್ ವೀನ್ (Wilhelm Wien) ರ ಕೈಕೆಳಗೆ ಬೆಳಕಿನ ವಿಚಾರವಾಗಿ ಶೋಧಗಳನ್ನು ನಡೆಸುತ್ತಾ, ೧೯೨೪ ರಲ್ಲಿ ಹಿಂದುಸ್ಥಾನದ ಹೈಕಮಿಶನರಾಗಿದ್ದ ಸರ್ ಅತುಳ ಚಟ್ಟರ್ಜಿಗಳಿಂದ ೧೫೦ ಪವನುಗಳ ವಿದ್ಯಾವೇತನಕ್ಕೆ ಭಾಗಿಗಳಾಗಿ ಪಿ. ಎಚ್. ಡಿ (Ph. D) ಪರೀಕ್ಷೆಯಲ್ಲಿ ಮೊದಲನೆಯ ತರಗತಿಯಲ್ಲಿ ತೇರ್ಗಡೆ ಹೊಂದಿದರು.



ಡಾ|| ದಾಸಣ್ಣಾಚಾರ್ಯರು

೧೯೨೬ ರಲ್ಲಿ ಶ್ರೀಯುತರು ಇಂಗ್ಲೆಂಡಿಗೆ ತೆರಳಿ ಲಂಡನ್ ವಿಶ್ವವಿದ್ಯಾಲಯದಲ್ಲಿ ಪ್ರೊ. ಎ. ಡಬ್ಲ್ಯೂ. ಪೋರ್ಟರರ ಕೈಕೆಳಗೆ 'X-ray'ಯ ವಿಚಾರವಾಗಿ ಕೆಲಸ ಮಾಡಿ ೧೯೨೮ ರಲ್ಲಿ ಅಮೇರಿಕಕ್ಕೆ ಹೋದರು. ಅಲ್ಲಿ, ನೋಬೆಲ್ ಪಾರಿತೋಷಕವನ್ನು ಪಡೆದ ಪ್ರಸಿದ್ಧ ರಸಾಯನ ಶಾಸ್ತ್ರಜ್ಞರಾದ ಪ್ರೊ. ಆರ್ಥರ್. ಎಚ್. ಕೊಂಪ್ಟನ್‌ರ ರಸಾಯನ ಗೃಹದಲ್ಲಿ 'X-ray' ವಿಚಾರವಾಗಿ ಇನ್ನೂ ಶೋಧನಡೆಸಿ, ೧೯೩೦ ರಲ್ಲಿ ಅಮೇರಿಕದ ಪ್ರಸಿದ್ಧ ರಸಾಯನ ಗೃಹಗಳನ್ನು ಸಂದರ್ಶಿಸಿ ಜಪಾನಿಗೆ ಬಂದರು. ಜಪಾನಿನಲ್ಲಿ ಸ್ವಲ್ಪ ಕಾಲ ಉಳಿದು, ಚೀನವನ್ನು ಕಂಡು, ತಾಯ್ನಾಡಿಗೆ ಮರಳಿ ಬಂದು, ಲಾಹೋರಿನ ಇಸ್ಲಾಮಿಯಾ ಕೋಲೇಜಿನಲ್ಲಿ ರಸಾಯನ ಗೃಹದ ಒಡೆತನವನ್ನೂ, ವಿಜ್ಞಾನಾಚಾರ್ಯನ ಪದವಿಯನ್ನೂ ಸ್ವೀಕರಿಸಿದರು. ಆದರೆ ಕಾರಣಾಂತರದಿಂದ ಈ ಕೆಲಸವನ್ನು ಬಿಟ್ಟು, ಈಗ ಹಿಂದೂ ವಿಶ್ವವಿದ್ಯಾಲಯದ ರಿಸರ್ಚ್ ಪ್ರೊಫೆಸರರಾಗಿ ನೇಮಕ ಹೊಂದಿ, M. Sc. ವಿದ್ಯಾರ್ಥಿಗಳಿಗೆ ಬೋಧಕರಾಗಿದ್ದಾರೆ.

ಆಚಾರ್ಯರು ಮೂರು ಖಂಡಗಳಲ್ಲಿ ವಿದ್ಯಾಭ್ಯಾಸವನ್ನು ಮಾಡಿ ಜ್ಞಾನವನ್ನು ಗಳಿಸಿದುದು ಮಾತ್ರವಲ್ಲದೆ, ಹಿಂದೂ ಸಂಸ್ಕೃತಿಯಲ್ಲಿ ಪಾಶ್ಚಾತ್ಯರಿಗೆ ಆದರ ಹುಟ್ಟುವಂತೆ ಮಾಡಲು ಯತ್ನಿಸಿದ್ದಾರೆ. ಹಿಂದುಸ್ಥಾನದ ನಾಗರಿಕತೆ, ಭಾರತೀಯಸಂಸ್ಕೃತಿ ಇವೇ ಮೊದಲಾದುವುಗಳ ವಿಷಯಕ್ಕೆ ಅನೇಕ ಭಾಷಣಗಳನ್ನು ಅಮೇರಿಕದಲ್ಲಿ ಮಾಡಿದ್ದಾರೆ. ಅಲ್ಲಿಯ ವಿದ್ವಾಂಸರಿಂದ ಸುವಿತ ಭಾಷಣಕಾರರೆಂದು ಪ್ರಶಂಸೆಯನ್ನು ಪಡೆದಿದ್ದಾರೆ. ಭಗವಂತನು ಇವರ ಜೀವನ ಪಥವನ್ನು ಸುಗಮವಾಗಿಸಲಿ.

CC-0. Jangamwadi Math Collection. Digitized by eGangotri




## ತುಂಟತುಂಟರಿಗೆ ಗಂಟುಬಿದ್ದರ

( ಒಂದು ನಗೆಯ ಲಾವಣಿ )

ಸಂಗ್ರಾಹಕರು:—ಶ್ರೀ. ಸಿಂಪಿ ಲಿಂಗಣ್ಣ

ಬೀಗನ ಮನಿಗೆ ಬೀಗ ಹೋದನೊ
ಅಕ್ಕನ ಮಾತಾಡಿಸಿ ಬರಬೇಕಂತಾ॥
ತುಂಟ ತುಂಟರಿಗೆ ಗಂಟು ಬಿದ್ದರ
ಗರದಿ ಆಗತ್ಯದ ಗಮ್ಮತಾ ॥ ಪಲ್ಲ ॥

ಅಕ್ಕನ ಗಂಡ ಭಾಳ ಜೀಸ ಇದ್ದನೊ
ಅವನಿಗಿಂತ ಹೇಣತಿ ಕೀಳಾ ॥
ಒಪ್ಪತ್ತು ಉಂಡವರು ಉಪ್ಪಾಸಮಾಡತಿದ್ರು
ಎರಡೊತ್ತು ಉಣ್ತಿದ್ದಿಲ್ಲ ಕೂಳಾ ॥

ಒಂದಿನ ಅಂತಾನ ಗಂಡ ಹೇಣ್ತಿಗೆ
" ನನ್ನ ಮಾತ ಕೇಳಸತಿಯಳ॥
ಹೋಳಿಗಿ ಉಣ್ಣೋಹಾಂಗ ಆಗ್ಯೈತಿ ಮನಸಾ
ಹುಕೀ ಬಂದು ಜೀವದಾಗ ಭಾಳ " ॥

ಗಂಡ ಹೇಣ್ತೀದು ಆಯ್ತೊಂದು ಮನಸಾ
ಯಾಕಾಗವೊಲ್ಲದಂದಳು " ಪುರುಷಾ ।
ಇಂದ ಬ್ಯಾಡ ನಾಳೀನದಿವಸ ನಾವು
ಮಾಡಿಕೊಂಡು ತಿನ್ನೋಣು ಅನ್ನರಸಾ ॥ "

ಮರುದಿನ ಮುಂಜಾನೆದ್ದು ಗಳಗ್ಯಾಗ ಕೈಹಾಕಿ
ಗೋದಿ ತಗದಾಳೊಂದು ಅದ್ದನಾ ।
ಅದ್ದನ ಹೂರಣ್ಣಾಕಿ ಹೋಳಿಗಿಮಾಡಿ
ಮ್ಯಾಲ ಅಟ್ಟಾಳೊ ಅಕ್ಕಿ ಅನ್ನಾ ॥

ಉಪ್ಪು ಎಣ್ಣಿ ಬೆಲ್ಲ ಉದ್ರಿ ಆಗತ್ಯದ
ತುಪ್ಪ ಆಯ್ತು ನಮ್ಮ ಮನೀದಿನ್ನಾ ।
ಅಂಗಡಿಯವರದಿಷ್ಟು ಸಾಲಆಗತ್ಯದ
ಕೊಟ್ಟಾಗ ತಗೋತಾರ ಅವರು ರಿಣಾ।

ಚಳಕಕಂತ ಗಂಡ ಹಳ್ಳಕ ಹೋದರ
ಬೀಗ ಬಂದಾ ಸಾಧಿಸಿ ಅದೇದಿನಾ ।
ಬೀಗನ ನೋಡಿ ಮುಚ್ಚುರಿ ಮಾಡಿದಾ
ಹಾದ್ಯಾಗಾಯ್ತೊ ಅಪ್ನ ದರ್ಶನಾ॥

(ಇಳುವು)

ಬೀಗ ತಿಳಿದ ತನ್ನ ಮನಸಿಗೆ ।
ದಾಡಿತಂದಾ ನಮ್ಮ ಹೊಳಗಿಗೆ ॥
ಮುಂಚೆ ಓಡಿಬಂದ ಮನಿಗೆ
ಮುಚ್ಚಿಡ ಮಾಡಿದ ಹೋಳಿಗೆ ॥
ನಿಮ್ಮ ತಮ್ಮ ಬಂದ ನಮ್ಮೂರಿಗೆ।
ಎಲ್ಲಿ ಕುಂತಿತ್ತು ಕಾಳಾಗೆ ॥

( ಏರು )

ಅಯ್ಯೋ ಖೋಡಿ ಇದುಯಾಕ ಬಂತಂತs
ತಲಿಕಟ್ಟಿ ಮಲಿಗ್ಯಾಳ ಬ್ಯಾನಿಯೆಂತಾ।
ತುಂಟ ತುಂಟರಿಗೆ ಗಂಟು ಬಿದ್ದರ
ಗರದಿ ಆಗತ್ಯದ ಗಮ್ಮತಾ ॥ ೧ ॥

ಬೀಗನ ಮನಿಗೆ ಬೀಗ ಬಂದರ
ಕುಡಿಯಂತ ಕುಡಲಿಲ್ಲ ಮುಕ್ಕನೀರಾ
ಅಕ್ಕಅನುವಾಕೀ ತಲಿಕಟ್ಟಿ ಮಲಿಗ್ಯಾಳ
ಸಾಯುವಹಾಂಗ ಆಗಿ ಜೋರಾ ॥

CC-0. Jangamwadi Math Collection. Digitized by eGangotri

ಬೀಗನ ಮುಂದ ಬೀಗ ಹೇಳತಾನ
" ನೋಡೊ ಬೀಗ ನಮ್ಮ ತಾಪತರಾ।
ಮೂರ್ದಿವಸಾಯ್ತು ಕೂಳ್ ನೀರ‍್ಕ ಕಂಡಿಲ್ಲ
ದಿಕ್ಕಿಲ್ಲ ರೊಟ್ಟೀ ಮಾಡುವರಾ " ॥

" ಹೂರಣ್ಕರೂಕಲ್ಲಾ ಹೊರಗ್ಯಾಕ ಇಟ್ಟಾದ
ಇದರದು ಏನು ಚಮತ್ಕಾರಾ ॥
ಮನಿಯೆಲ್ಲ ಹಿಡಿದ್ಕದ ದುಂದಕಾರ ಕಮರಿಂದು
ಖಚಿತ ಮಾಡ್ಯಾರ ಹೋಳಿಗಿ ಇವರಾ ॥

( ಇಳುವು )

ನನ್ನ ಕಳ್ಸಿಕೊಟ್ಟು ತಿಸ್ನುವ ಬಗಿ ।
ಇವ್ರ ಮನಸಿನ ಬೇತ ಹೀಂಗಾಗಿ " ॥
" ಬೀಗಾ ಹೋಗೊ ನಿನ್ನ ಊರೀಗಿ
ಇಲ್ಲದಿದ್ದರ ಉಪವಾಸ ಮರುಗೀ " ॥

( ಏರು )

" ಹೋಗೂದು ಹೋಗತೀನಿ ತಲಬ ಆಗ್ಯೇದ
ಚುಟ್ಟ ತಂಬಾಕರೆ ಸೇದೋಣುತಾ "
ತುಂಟ ತುಂಟರಿಗೆ ಗಂಟುಬಿದ್ದರ
ಗರದಿ ಆಗತ್ಕದ ಗಮ್ಮತಾ ॥ ೨ ॥

" ಮನೀ ತಂಬಾಕೆಲ್ಲ ಮನ್ನೆ ಮಾರಿದೆವು
ತಂಬಾಕಿಲ್ಲ ಈಗಿನ ಹೊತ್ತಾ ॥
ಅಂಗಡಿಗೆ ಹೋಗಿ ಉದ್ರಿ ತಂದೇನಂದ್ರ
ಅಂಗಡಿಯವರಿಗಿಲ್ಲ ನಮ್ಮ ಪತ್ತಾ ॥

ಎಮ್ಮಿ ಈದ ಮ್ಯಾಲ ಒಮ್ಮೇ ಬಂದಿದಿ ಖರೆ
ನಮ್ಮ ಉಪಾಯವಿಲ್ಲದ ಮಾತಾ।
ಮಜ್ಜಿಗಿ ಆಗ್ಯಾವ ಸುಚ್ಚ ಇದ್ದರ
ಉಣುಸುದಿತ್ತು ಹೀಂಗ ನಮ್ಮ ಬೇತಾ " ॥
ಇಷ್ಟುಕೇಳಿ ಬೀಗಹೊಂಟು ಹೋಗ್ಯಾನೊ
" ಏಳೇಳು ಪೀಡಾ ಹೋಯ್ತುಂತ ॥
" ಹಸುವಾದ ಕೈಲೆ ಬಿಸಿಲಿಡಿಗಿ ತಾರ
ಲಗು ನೀಡಬಾರ ಪಂಚಾಮೃತ " ॥

( ಇಳುವು )

ಗಂಡಂತಾನ " ಹೀಂಗಲ್ಲ ಠೀಕ ।
ಇಬ್ಬರು ಕಣ್ಣ ಕಟ್ಟಿ ಉಣಬೇಕ ॥

ನೀ ಬಾಯಾಗ ತುತ್ತು ಮಾಡಿ ಹಾಕ ।
ನಿನಗುಣಸ್ತೀನು ನುಂಗ ಸಾಕ್ಸಾಕ " ॥

ತೋಡಿಮಾಡಿ ಕುಂತಾರ ಉಣಲಾಕ।
ಕಣ್ಕಟಿಗೊಂಡು ಆಕ್ಷಣಕ ॥

( ಏರು )

ಹೊಳ್ಳಿ ಬೀಗ ಬಂದು ಮಾಳೀಗಿ ಏರಿದ್ದಾ
ಹೋಗಿದ್ದಿಲ್ಲ ಬೆಂಡಲು ಮತ್ತಾ ।
ತುಂಟ ತುಂಟರಿಗೆ ಗಂಟುಬಿದ್ದರ
ಗರದಿ ಆಗತ್ಕದ ಗಮ್ಮತಾ ॥ ೩ ॥

ಮೊದಲಿಗೆ ತುತ್ತ್ಯ ಮಾಡಿ ಹೇಣತಿ
ಒಯ್ದಾಳ ಗಂಡನ ಬಾಯಿಕಡೆ।
ಹಗರ ಇಳಿದು ಬಂದು ಆ ತುತ್ತತಗೊಂಡಾನ
ಮಾಳಿಗಿ ಬೀಗ ಇವನಕಡೆ ॥

ಹೇಣತಿ ಅಂತಾಳ ಮನದಾಗ " ನನಗಂಡ
ಹಸಿದು ಭಾಳ ನುಂಗತೈತಿ ಖೋಡಿ।
ಯಾವಾಗಿನ ತುಟ್ಟು ನಾ ಅವಗ ಹಾಕ್ತೇನಿ
ನನಗೊಂದು ತುತ್ತ ಹಾಕಲಿಲ್ಲ ಮಾಡಿ" ॥

ಗಂಡ ತಿಳಿದಾನ ತನ್ನ ಮನಸಿಗೆ
'ಎಲ್ಲಾ ತಾನೆ ತಿಂತಾಳ ರಂಡಿ' ।
ಅಡ್ಡ ಬಾಯಿಹಾಕಿ ಎಡ್ಡು ಕಡಿ ಹೊಡದಾನ
ಗಡ್ಡವಿೀಸಿ ಎಲ್ಲಾ ಸೋರ್‍ಯಾಡಿ ॥

( ಇಳುವು )

ಉಂಡು ತಿಂದು ಬಿಟ್ಟಾನ ಥರಿ ।
'ಏನೋಗಾತಾಯ್ತು ಲಗು ಕಣ್ತೆರಿ'॥

ಬೀಗಂತಾನ ಗುಲಾಮು ಭಾರಿ।
" ಹೋಗಿ ಬರ್ತೀನು ಕುಶಾಲ ಇರಿ " ॥

( ಏರು )

ಸಂಕದ ಊರಾಗ ಬಲಭೀಮನ ದಯದಿಂದ
ಹೋಳಿಗಿ ಉಂಡಾರ ನಗನಗತಾ।
ತುಂಟ ತುಂಟರಿಗೆ ಗಂಟು ಬಿದ್ದರ
ಗರದಿ ಆಗತ್ಕದ ಗಮ್ಮತಾ ॥ ೪ ॥

CC-0. Jangamwadi Math Collection. Digitized by eGangotri




**ಅಲರು**:—( ಕವಿತೆಗಳ ಸಂಗ್ರಹ ) ಮಂಗಳೂರಿನ ಮಿತ್ರಮಂಡಲಿಯವರು ಪ್ರಕಟಿಸಿದುದು. ಸಂಪಾದಕರು ಶ್ರೀ. ಪೇಜಾವರ ಸದಾಶಿವರಾಯರು. ಕ್ರೌನ್ ಅ.' ೪೬ ಪುಟ, ಬೆಲೆ ನಾಲ್ಕಾಣೆ.

ಹೊಸದಾರಿಯ ಕವಿತೆಗಳ ಸಂಗ್ರಹವಿದೊಂದು. ಬೇರೆ ಬೇರೆ ಹದಿನೈದು ಜನರು ಬರೆದ ಇಪ್ಪತ್ತಾರು ಕವಿತೆಗಳುಂಟು. ಹೊಸಹಾದಿಯ ಕವಿತಾಕ್ಷೇತ್ರದಲ್ಲಿ ಮಂಗಳೂರು ಕಡೆಯವರಾದ ಶ್ರೀ. ಪಂಜೆ ಮಂಗೇಶರಾಯರೂ ಶ್ರೀ. ಗೋವಿಂದ ಪೈ ಅವರೂ ಶ್ರೀ. ಕೆ. ಶಂಕರಭಟ್ಟ ಅವರೂ ಇಷ್ಟರಲ್ಲಿಯೆ ತಮ್ಮ ತಮ್ಮದೊಂದೊಂದು ಸ್ಥಾನವನ್ನು ನಿರ್ಮಾಣ ಮಾಡಿಕೊಂಡಿದ್ದಾರೆ. ಈಗ ಅವರ ಪರಂಪರೆಯನ್ನು ಮುಂದೆ ಸಾಗಿಸಲು ಈ ಎಳೆವರೆಯದ ಕವಿಗಳ ಬಳಗ — ಮಿತ್ರಮಂಡಲಿ — ಮುಂದುವರಿದಿದೆ. "ವಿವಿಧ ಭೇದಗಳಿಂದ ಭಿನ್ನವಾಗಿರುವ ಕರ್ನಾಟಕದೊಡನೆ ಸಾಹಿತ್ಯಸಂಬಂಧವನ್ನು ಬೆಳೆಯಿಸಿ ಕರ್ನಾಟಕತ್ವವನ್ನು ಪ್ರಚಾರ ಗೊಳಿಸಬೇಕು." ಎಂಬುದು ಈ ಮಿತ್ರಮಂಡಲಿಯ ಮನದ ಬಯಕೆ. "ಜೀವನಕ್ಕೂ ಕಾವ್ಯಕ್ಕೂ ಅನ್ಯಾದೃಶವಾದ ಸಾದೃಶ್ಯವಿದೆ. ಜೀವನದ ಭವ್ಯತೆ ದಿವ್ಯತೆಗಳನ್ನು ತೋರಿಸಿ ಕೊಡಲು ಕಾವ್ಯವೇ ಕೈಗನ್ನಡಿ" ಎಂಬುದನ್ನರಿತು ಕಾರ್ಯೋನ್ಮುಖರಾದವರೀ ಕವಿಗಳು. ಹೆಚ್ಚಾಗಿ ಪ್ರಕೃತಿಪೂಜಕರು. ಪ್ರಕೃತಿರಹಸ್ಯವನ್ನು ಕಂಡುಕೊಂಡು ತಮ್ಮ ಬಾಳಿಗೆ ಹೊಸ ಹೊಸ ಪಾಠಗಳನ್ನು ಕಲಿಸಿಕೊಡಲು ಹೆಣಗುವವರು. ಈ ಸಂಗ್ರಹದಲ್ಲಿಯ "**ಮರದೆದುರಲ್ಲಿ**" ಎಂಬ ಕವಿತೆಯೊಳಗಿನ

"ಮುಂಬರಿವ ತಂಗಾಳಿ ಬಳಿಯಲ್ಲಿ ಸುಳಿಸುಳಿಯೆ
ತರಗೆಲೆಯನುದುರಿಸಲು ನೀ ಕಂಪಿಸೊಮ್ಮೆ.
ಅಲ್ಲೊಂದು ಇಲ್ಲೊಂದು ಮುದಿಯೆಲೆಯು ಕೆಡಿಸುವುದು
ಮೆಲ್ಲನಿರ ಗೊಂಚಲಿನ ಓರಗೆಯ ಚೆಲುವು"

ಎಂಬ ಮಾತನ್ನೂ, **ತೊರೆ** ಎಂಬ ಪದ್ಯದೊಳಗಿನ

"ಎಂದೂ ನೋಡದ ಮಾರ್ಗದಿ ಸಾಹಸ-
ದಿಂದಡಿಯಿಡುವಾ ಕಾಂಕ್ಷೆಯಲಿ
ಹುಡುಕುತ ಹಾದಿಯ ಸುಳಿಯುತ ಕಾಡೊಳು
ಮೊರೆಯುತ ಹರಿವೆನು ಭೋರ್ಗರೆದು"

ಎಂಬಮಾತನ್ನೂ ನೋಡಿದರೆ ಇವರು ಹೊಸ ಹಾದಿ ಯಾವುದೆಂಬುದರ ಕಲ್ಪನೆ ಹೊಳೆಯದಿರದು.

ಈಪುಸ್ತಕದಲ್ಲಿರುವ ಕವಿತೆಗಳಲ್ಲಿ ಕೆಲವು ಬೇಡಿಕೆ ಗಳು, ಕೆಲವು ಅಳಲಾವಾಡು (ಕರುಣಗೀತೆಗಳು) ಕೆಲವು ಕೆಳೆವಾಡು (ಪ್ರೇಮಗೀತೆ)ಗಳು. ಮತ್ತೆ ಬಣ್ಣನೆವಾಡು ( ವರ್ಣಕಗೀತೆ ) ಗಳು. ಸತ್ಯದರ್ಶನ ಹಂಬಲಿಸುವ ಹಂಬಲಿಕೆಯನ್ನೂ ಎರಡು ಮೂರು ಗಳಲ್ಲಿ ಕಾಣಬಹುದು. ಎಲ್ಲ ಕವಿತೆಗಳೂ ಕವಿತೆಯ ಭವ್ಯಭವಿಷ್ಯತ್ತನ್ನು ಸೂಚಿಸುವುವು ಕ. ರಾಘವಾಚಾರ್ಯರ **ವಿಯೋಗ**, ಚಿನ್ನ ಬಾಲಮಿತ್ರನ **ಆರಿದ ದೀಪ**, ಕರೆಗಳೂ ಸ್ವ ಕೇ. ಟಿ. ಆಚಾರ್ಯರ **ಬೇಡಿಕೆ**ಯೂ, **ಮರದೆದುರಲ್ಲಿ**ಯ ಮಾತೂ, ಶ್ರೀಧರ ಕಕ್ಕಿಲ್ಲಾಯ **ಅನಂಗ**ವೂ, ಪೇಜಾವರ ಸದಾಶಿವರಾಯರ ನೆ ಕವಿತೆಯೂ, ಕೆಮ್ಮಂಜೆ ಸುಬ್ಬರಾಯರ ನೈವೇದ್ಯ ಎಸ್ ವೆಂಕಟರಾಜನ **ನೇಹ**ವೂ, ಉದ್ಯಾವರ ರಾಯರ **ನೆನಹೂ**, ಬಜ್ಪಾಲು ವೆಂಕಟಶೆಟ್ಟರ

CC-0. Jangamwadi Math Collection. Digitized by eGangotri

ಯೂ ಈಗಲೂ ನಮ್ಮ ಹಸಿವಿಗೆ ಅದೆಷ್ಟೊ ಸವಿಯುಣಿ ಸನ್ನು ಒದವಿಸಿ ಕೊಟ್ಟಿರುವುವು.

" ವಿಯೋಗ " ದಲ್ಲಿಯ

" ಕಾರ್ಮುಗಿಲು ನಭವನಾಕ್ರಮಿಸಿಹುದು ಕತ್ತಲೆಯ
ಊರ್ಮಿಗಳು ಜಗದಿ ತಾಂಡವನೃತ್ಯವೆಸಗುತಿವೆ
ಘೂರ್ಣಿಪುದು ಕಡಲು ಝುಂಝಾವಾತ ಝಾಡಿಪುದು
ಭೂತಲವ, ಮಿಂಚಿನಲಗು—
ಕಾರಿರುಳ ಗರ್ಭವನು ಸೀಳುವುದು, ಗುಡುಗುಗಳು
ಭೋರಿಗುಂಡಿನ ಮಳೆಯ ಸುರಿಸುವುವು, ಭೋರ್ಗರೆದು
ಘೋರದುಃಖದ ತರಂಗದಲಿ ಮುಳುಗೇಳುವುದು
ಜರ್ಜರಿತ ಹೃದಯನೌಕೆ "

ಎಂಬ ಕವಿತೆಯಲ್ಲಿಯ ಚಿತ್ರವು ಓದುವವರೆದೆಯನ್ನು ನಡುಗಿಸಿ ಬೆರಗುವಡಿಸುತ್ತದೆ.

" ಆರಿದ ದೀಪ " ದಲ್ಲಿಯ

" ರವಿಯು ಹೊನ್ನ ಸರಿಗೆಯನ್ನ ಎಸೆಯುತಿರುವ ವೇಳೆಗೆ
ಮನೆಯಮುಂದೆ ಕಾಂಬ ಮರದ ರೆಂಬೆ ಬಾಗಿ ತಮ್ಮಗೆ
ಸಾನುಭೂತಿಯೀವುದೂ ;
ಕೂಗಿ ಕೂಗಿ ಕರೆವುದೂ,
ಗೂಡಿನಲ್ಲಿ ಗಿಳಿಯದು
ಒಡೆಯನೆಂದು ಪ್ರೇಮದಿ
ಕವಿಲೆದನದ ಕರುವು ಬಿನದಗೊಳ್ಳದಿಂದು ಮರುಕದಿ "

ಎಂಬುದನ್ನೋದಿ ತಾನೆ ತಾನಾಗಿ ನಿಟ್ಟುಸಿರು ಹೊರ ಬೀಳದಿರದು.

" ಬೇಡಿಕೆ " ಯಲ್ಲಿಯ

" ಮುಗುಳೊಂದ ಬಿರಿವ ಮೊದಲೇಕೆ ಕೊಯ್ಯುವೆ ಎರೆಯ
ಆವ ನೋಡಿಹನದರ ಸೌರಭದ ಸಿರಿಯ
" ಅವಾಕೆ ಮುಡಿಯ ಬಯಸಿಹಳೊ ಮುಂದೀಮುಗುಳ
ಆವ ಅಳಿಯದರ ಮಧುವಂ ಸವಿಯಲಿಹುದೊ ? "

ಎಂಬ ಮರುಕದ ಮಾತು ಮನವನ್ನು ಮರುಗಿಸು ವುದು,

" ನೇಹ " ಕವಿತೆಯಲ್ಲಿಯ ಸಹಜವಾದ ಭಾವ ನಾಲಹರಿಯೂ

" ಸಂಜೆವೆಣ್ಣಿನ ಮೊಗದ ಕೆಂದೇಸಿ ತರುಕುಲದ
ಕೆಂದಳಿರ್ಗಳ ಮೇಲೆ ಬಿಂಬಿಸಿತ್ತು - ಉರೆ - ರಂಜಿಸಿತ್ತು
" ತಂಗಾಳಿಯದು ಸೀಕೆರಂಗಳನು ತಳೆದು ತಾ—
ನಂಗಾಂಗಗಳ ಮೇಲೆ ಸೂಸುತಿತ್ತು - ನೆರೆ - ಬೀಸುತಿತ್ತು "

ಎಂಬ ಭಾವೋಚಿತವಾದ ಛಂದೋನೃತ್ಯವೂ ಉಲ್ಲಾಸ ದಾಯಕವಾಗಿದೆ.

" ಕರೆ " ಯಲ್ಲಿಯ

" ವಾಮ ಹಸ್ತವ ಕಳಯೊಳಿಟ್ಟು
" ಬಲದ ಕೈಯನು ಸಡಿಲು ಬಿಟ್ಟು
" ಉಂಗುಟದಿ ನೆಲನೌಂಕಿ ಗೀರಿ
" ಲಜ್ಜೆಯಲ್ಲೂ ಬಿಂಕದೋರಿ
ಕರೆಯುತಿರುವಳು ಹರುಷವಿ "

ಎಂಬುದನ್ನೋದುವಾದ ಚಿತ್ರವೊಂದು ಕಣ್ಣೆದುರು ಕಟ್ಟುತ್ತದೆ. ಆರಿಸಿದರೆ ಇಂತಹ ಸಾಣೆಯೊಂದಿದ ರನ್ನ ಗಳು ಇನ್ನೂ ಸಿಕ್ಕುವುವು.

ಬಂಧದಲ್ಲಿ ಅಲ್ಲಲ್ಲಿ ವಿಷಮತೆ ಕಂಡು ಬರುತಿರುವುದು. ಇದಕ್ಕೆ ಕಾರಣವೆಂದರೆ ಹೊಸಗನ್ನಡ ಮಾತುಗಳೊಡನೆ ಪ್ರಚಾರದಲ್ಲಿಲ್ಲದ ಹಳಗನ್ನಡ ಸಂಸ್ಕೃತ ಮಾತುಗಳನ್ನು ಕೂಡಿಸಿರುವುದು. ಅನುಸ್ವಾರವನ್ನೂ ಮೇಣ್, ದಲ್, ಉರೆ, ನೆರೆ, ಸಲೆಗಳನ್ನೂ ನಾವೀಗ ತೆಗೆದುಹಾಕಿ ಬಿಡ ಬೇಕಾಗಿದೆ. " ಸಲುಗುಂ " ( ಪುಟ ೮ ] " ಭೀಕರಂ" "ಭಯಂಕರಂ" ( ಪುಟ ೭ ) " ಬಿರಿಪುವ್ವು (ಪುಟ ೧೪ ) " ಅಲುಗಿಸಲ್ " " ದ್ಯೋತಿಸಲ್ " ( ಪುಟ ೧೮ ) ಈ ಬಗೆಯ ಶಬ್ದಪ್ರಯೋಗಗಳು ತಾವಿದ್ದಸ್ಥಾನಗಳಲ್ಲಿ ಉಚಿತವಾಗಿಲ್ಲವಾದುದರಿಂದ ಕಿವಿಗೆ ಹಿತವೆನಿಸವು. "ಲೀಲೆರಸ" (ಪು. ೧) " ಮೃತ್ಯುಗಾಳಿ " (ಪು. ೮) ಫಲಿತಹಳದಿತೆನೆ ( ಪು. ೧೯ ) ಶಾಂತಿನಾಡು (ಪು. ೨೨) ಮೊದಲಾದ ಅರಿಸಮಾಸಗಳು ಮಾತಿನ ಚೆಲುವಿಗೆ ಕುಂದನ್ನು ತರುತ್ತವೆ. " ಕಾರಿರುಳು ದುಂಬೆ " (ಪು.೪) "ಈಗವಳಿಯಿತು " ( ಪು. ೮) " ಮನದೊಗೆವ "(ಪು.೧೧) " ಪ್ರಕೃತೀಗಾನ " ( ಪು. ೨೬ ) ಇಂತಹ ಸಂಧಿಗಳು ಭಾಷೆಯ ಸೌಂದರ್ಯವನ್ನು ಕೆಡಿಸುವವು.

ಪದ್ಯಪೂರ್ತಿಗಾಗಿಯೂ ಪ್ರಾಸದ ಸಲುವಾಗಿಯೂ ಮಾತುಗಳನ್ನು ತುಂಬುವುದು ಅಷ್ಟೊಂದು ಸರಿಯೆನಿ ಸದು. ಇದಕ್ಕೆ ಒಂದೆರಡು ಉದಾಹರಣೆಗಳೆಂದರೆ:— ಮೊದಲನೆಯ ಕವಿತೆಯ ಕೊನೆಯ ಪದ್ಯದಲ್ಲಿಯ' ಅಮಿತ ಗುಣನೆ' ಎಂಬ ಮಾತೊಂದು. ಇದು ಅಲ್ಲಿ ಏನೋ ವಿಜಾತೀಯವಾಗಿ ಕಂಡುಬರುವುದು. "ಅನಂಗ" ಎಂಬ ಪದ್ಯದಲ್ಲಿಯಂತೂ ಇಂತಹ ಅನವಶ್ಯಕ ಶಬ್ದಗಳು ಹಿಂಡು ಹಿಂಡಾಗಿವೆ. ಪ್ರಾಸದ ಅನುಕೂಲತೆಗಾಗಿ ಅನಂಗನು " ಕಮನೀಯತರಕಾಯ " ನಾಗಿ ಬಿಟ್ಟಿದ್ದಾನೆ.



CC-0. Jangamwadi Math Collection. Digitized by eGangotri

ಭಾವಗಳಿಗೆ ಉಚಿತವಾದ ಧಾಟಿಯ ವೃತ್ತಗಳನ್ನಾರಿಸಬೇಕು. ಮೂರು ಮಾತ್ರೆಯ, ನಾಲ್ಕುಮಾತ್ರೆಯ ಗಣದ ಛಂದಸ್ಸು ಕುಣಿಯುತ್ತ ಸಾಗುವುದರಿಂದ ಶೋಕ ಭಾವಕ್ಕೆ ಅವು ಉಚಿತವಾಗಲಾರವು. "ಆರಿದ ದೀಪ" "ನೆನಹು" ಗಳನ್ನು ಬರೆದವರು ಭಾವೋಚಿತ ವೃತ್ತವನ್ನು ಆರಿಸಿದ್ದರೆ ಅವರ ಕೃತಿಗಳು ಇನ್ನೂ ಕಳೆಗಟ್ಟುತ್ತಿದ್ದುವು.

ಈ ಕೆಲವು ಸಣ್ಣ ಪುಟ್ಟ ದೋಷಗಳನ್ನು ಎತ್ತಿತೋರಿಸಿದುದಕ್ಕಾಗಿ ಈ ತರುಣ ಕವಿಗಳು ಕಳವಳಗೊಳಬಾರದಾಗಿ ಬಿನ್ನಹ. ಇವು ಮಹತ್ವದ ದೋಷಗಳಲ್ಲ. ಸವಿಯನ್ನದಲ್ಲಿ ಬಂದ ಸಣ್ಣ ಹರಳಿನಂತಹವು. ಕನ್ನಡಿಗರು ಅವಶ್ಯವಾಗಿ ಈ 'ಅಲರ' ಕಂಪನ್ನು ಕೊಳಬೇಕೆಂದು ನಮ್ಮ ಕೋರಿಕೆ.

ಆನಂದಕಂದ

**ವೀರವಲ್ಲಭಭಾಯಿ :—** (ಚರಿತ್ರೆ) ಬೆಳಗಾಂವಿಯ ಒಂದಾಣೆಮಾಲೆಯ ಕಾಣಿಕೆಯ ಗ್ರಂಥ. ಸಂಗ್ರಾಹಕರು ಶ್ರೀ. ಅನಂತ ಅಣ್ಣಾಜಿ ಚಿಕ್ಕೋಡಿ ಅವರು. ಪ್ರಕಾಶಕರು ತುಂಟರತಂಡದ ಶ್ರೀ. ಕುಲಕರ್ಣಿ ಕೃಷ್ಣರಾಯರು ಮತ್ತು ಶ್ರೀ. ಪ್ಯಾಟಿ ಶ್ಯಾಮರಾಯರು ಕ್ರೌನ್ ೧. ೧೨೨-೩ ಪುಟಗಳು ಬೆಲೆ ಹತ್ತಾಣೆ.

ಈ ಗ್ರಂಥದಲ್ಲಿಯ ವಿಶೇಷಭಾಗವೊಂದೆಂದರೆ ದೆ. ಭ. ದೇಶಪಾಂಡೆ ಗಂಗಾಧರರಾಯರ ಮುನ್ನುಡಿಯು.ಅವರು ಸರದಾರ ವಲ್ಲಭಭಾಯಿಯವರ ಚರಿತ್ರದ ಗುಟ್ಟನ್ನು ತಿಳಿಸಿರುವರಲ್ಲದೆ ಕರ್ನಾಟಕದ ವಿಚಾರದಲ್ಲಿರುವ ತಮ್ಮ ಅಂತರಂಗವನ್ನೂ ಬಿಚ್ಚಿ ಇಟ್ಟಿರುವರು. "ಪ್ರಾಂತೀಯ ಉನ್ನತಿಯನ್ನು ರಾಷ್ಟ್ರೀಯಉನ್ನತಿಯೊಡನೆಸಮನ್ವಯಗೊಳಿಸಿ ಪ್ರಾಂತದ ಉನ್ನತಿಯನ್ನು ಹೇಗೆ ಸಾಧಿಸಿಕೊಳ್ಳಬೇಕು?" ಎಂಬುದಕ್ಕೆ ದೇ. ಭ. ಗಂಗಾಧರರಾಯರು ಸರದಾರರನ್ನು ಆದರ್ಶರನ್ನಾಗಿ ಭಾವಿಸಿದುದು ಸಂತೋಷ ಪಡಬೇಕಾದ ಸಂಗತಿ. ವಲ್ಲಭಭಾಯಿಯವರಷ್ಟು ಪ್ರಾಂತಾಭಿಮಾನವುಳ್ಳ ನಾಯಕರು ನಮ್ಮ ನಾಡಿಗಿದ್ದರೆ ಕನ್ನಡಿಗರಿಗೆ ಅತೃಪ್ತಿಯುಂಟಾಗಲು ಕಾರಣವೇ ಇಲ್ಲವೆಂದು ನಮ್ಮ ಭಾವನೆ.

ಇನ್ನು ಸಂಗ್ರಾಹಕರು ಹುರುಪಿನತರುಣರು. ಕನ್ನಡ ನಾಡು ನುಡಿಗಳ ಉನ್ನತಿಗಾಗಿ ಮನಮುಟ್ಟಿ ಹೆಣಗುವವರು. ತಮ್ಮ ಹೃದಯಕ್ಕೆ ಒಪ್ಪಿಗೆಯಾಗುವಂತಹ ನನ್ನೇ ಚರಿತ್ರನಾಯಕನನ್ನಾಗಿ ಆಯ್ದುಕೊಂಡಿದ್ದಾರೆ. ಈ ಪುಸ್ತಕದಲ್ಲಿಯ ಮೊದಲಿನ ಅರುವತ್ತೈದು ಪುಟಗಳಲ್ಲಿಯ ವಿಷಯವು, ಶ್ರೀ. ಮಹದೇವಭಾಯಿ ದೇಸಾಯಿಯವರು ಇಂಗ್ಲೀಷಿನಲ್ಲಿ ಬರೆದುದರ ಅನುವಾದವು. ಇನ್ನುಳಿದುದನ್ನು ಸ್ವಂತವಾಗಿ ಸಂಗ್ರಹಿಸಿರುವರು. ಭಾಷೆ ಈಗಿನ ಉತ್ತರ ಕರ್ನಾಟಕದ ವೃತ್ತಪತ್ರಿಕೆಗಳ ಭಾಷೆಗಳಿಗಿಂತ ಹೆಚ್ಚು ಒಪ್ಪನ್ನು ಪಡೆದುದು. ವೀರ ಚರಿತಕ್ಕೆ ಉಚಿತವಾದುದು. ಅಲ್ಲಲ್ಲಿ ಒಂದೆರಡು ಶಬ್ದ ದೋಷಗಳೂ ಪ್ರಯೋಗ ದೋಷಗಳೂ ಕಂಡುಬರಬಹುದು. ವೀರ ವಲ್ಲಭಭಾಯಿಯವರ ಚರಿತ್ರ, ಹುರುಪಿನ ಬರೆಹಗಾರರ ಲೆಕ್ಕಣಿಕೆಯಿಂದಿಳಿದು ಬಾದಿದೆ. ನಮ್ಮವರು ಇದನ್ನೋದಿ ವಲ್ಲಭಭಾಯಿಯವರ ಚಾರಿತ್ರ್ಯ ರಹಸ್ಯವನ್ನು ಅರಿತುಕೊಂಡು ತಮ್ಮ ಬಾಳಿನದಾರಿಯಲ್ಲಿ ನಡೆಯುತಿರಲೆಂದು ನಮ್ಮ ಬಯಕೆ.

**ಶ್ರೀ ಸ್ವಾಮೀರಾಮ ತೀರ್ಥ ಚರಿತ್ರೆ :—** (ರಾಮತೀರ್ಥಬೋಧಾಮೃತ ಸಹಿತ) ಧಾರವಾಡದ ವಾಗ್ದೇವಿ ಗ್ರಂಥಮಾಲೆಯ ಲನೆಯ ಪುಷ್ಪವಿದು. ಬರೆದವರು ಶ್ರೀ. ಗ. ಹು. ಹೊನ್ನಾಪುರಮಠ ವಕೀಲರು. ಕ್ರೌನ್ ೧. ೧೧೨ ಪುಟಗಳು ಬೆಲೆ ಹತ್ತಾಣೆ.

ಈ ಗ್ರಂಥದ ಲೇಖಕರು ಕನ್ನಡನಾಡಿಗೆಲ್ಲ ಈ ಮೊದಲೆ ಪರಿಚಿತರಾದವರು. ತಮ್ಮ ಬೇರೆ ಬೇರೆ ಬಗೆಯ ಗ್ರಂಥಗಳನ್ನು ಕನ್ನಡಿಗರ ಕೈಯ್ಯಲ್ಲಿ ಕೊಟ್ಟು ಕೊಟ್ಟು ಹಳಬರಾದವರು. ಈಗ ಭಾರತೀಯರೆಲ್ಲರಿಗೆ ಆದರ್ಶಪುರುಷರಾದ ಸ್ವಾಮೀರಾಮತೀರ್ಥರ ಪರಿಚಯವನ್ನು ಕನ್ನಡಿಗರಿಗೆ ಮಾಡಿಕೊಡುತಿರುವರು. ಸ್ವಾಮಿಗಳ ಜೀವನ ಚರಿತ್ರೆಯನ್ನು ಮೊದಲಿನ ಇಪ್ಪತ್ತು ಭಾಗಗಳಲ್ಲಿ ಬರೆಸಿದ್ದು, ಅವರ ಬೋಧಾಮೃತವನ್ನು ಮುಂದಿನ ಹದಿ ಭಾಗಗಳಲ್ಲಿ ಸಂಕ್ಷೇಪವಾಗಿ ಹೇಳಿರುವರು. ಶ್ರೀ ಹೊನ್ನಾಪುರಮಠ ಅವರ ಭಾಷೆಯ ಬಗೆಗೆ ನಾವೇನೂ ಬೇರೆಯಾಗಿ ಹೇಳಬೇಕಾಗಿಲ್ಲ. ಆದರೆ ಒಂದು ಮಾತು ಚರಿತ್ರವನ್ನು ಬರೆಯಬೇಕಾಗಿದ್ದರೂ ಕೊಂಚ ಬಿಗಿಯಾದ ಭಾಷೆಯಿದ್ದರೆ ಸೊಗಸಾಗುವುದು. ಇಲ್ಲದಿದ್ದರೆ ಹಾಗೆ ಪಾಠಶಾಲೆಯಲ್ಲಿ ಕಲಿಸುತಿರುವ ಇತಿಹಾಸಪುಸ್ತಕಗಳಂತೆ ವಿಷಯವು ನೀರಸವೆನಿಸುವುದು. ಆದಷ್ಟು ಕಟ್ಟು

CC-0. Jangamwadi Math Collection. Digitized by eGangotri

ಅಚ್ಚುಕಟ್ಟಾಗಿವೆ. ರಾಮತೀರ್ಥರ ಚರಿತ್ರವನ್ನು ಕನ್ನಡಿಗರು ಓದಬೇಕಾದುದು ಆವಶ್ಯಕ.

**ಶಿಶುಚಂದ್ರಿಕೆ :—** (ಪದ್ಯಪುಸ್ತಕ) ಬರೆದವರು ಶ್ರೀ. ಬಿ. ಶ್ರೀಕಂಠಯ್ಯನವರು "ಎಕ್ಸೈಜ್ ಹೆಡ್ ಕ್ಲಾರ್ಕ್" ಹಾಸನ, ಕ್ರೌನ. ಅ. ೧೦+೫೮ ಪುಟಗಳು. ಬೆಲೆ ೫ ಆಣೆ.

ಮುನ್ನುಡಿಯಲ್ಲಿ "ಕರ್ಣಾಟಕ ಕವಿಕೇಸರಿ" ಬೆಳ್ಳಾವೆ ನರಹರಿ ಶಾಸ್ತ್ರಿಗಳು "ಈ ಗ್ರಂಥದಲ್ಲಿ ಬಾಲಲೀಲಾ ವಿಚಾರಗಳೂ ಬಾಲಪಾಲನಲಾಲನಾದಿ ವಿಚಾರಗಳೂ ವರ್ಣಿತವಾಗಿರುವವು" ಎಂದು ಹೇಳಿರುವರು. ಮಂಗಲಾಚರಣ–ಮಂಗಲಗಳ ಪದ್ಯಗಳನ್ನು ಬಿಟ್ಟು ನೂರಾಮೂವತ್ತು ಕಂದಪದ್ಯಗಳಲ್ಲಿ ಈ ಗ್ರಂಥವು ಕೊನೆಗಂಡಿದೆ. ಸಂತಾನಪ್ರಕರಣ, ಪಾಲನಪ್ರಕರಣ, ಲೀಲಾಪ್ರಕರಣ ಎಂದು ಮೂರು ಭಾಗಗಳಿದರಲ್ಲಿವೆ. ಅಡಿಟಿಪ್ಪಣಿಯಲ್ಲಿ ಪದ್ಯಗಳೊಳಗಿನ ಕಠಿನ ಪದಗಳ ಅರ್ಥವನ್ನು ಕೊಡಲಾಗಿದೆ. ಹಳೆಯರೀತಿಯ ಪದ್ಯಗಳನ್ನು ಓದಲು ಬಯಸುವವರು ಇದನ್ನು ತರಿಸಿಕೊಳ್ಳಬಹುದು.

**ವೀರಭೂಮಿ :—** (ಕಥೆ) ಬರೆದವರು ಶ್ರೀ. ಎಸ್. ವೆಂಕಟರಾಜ ಅವರು. ಉಡುಪಿಯ ಶ್ರೀ. ಎಸ್. ಯು ಪಣಿಯಾಡಿಯವರು ಪ್ರಕಟಿಸಿದುದು. "ಭಾವತರಂಗ ಮಾಲೆ"ಯ ಪ್ರಥಮತರಂಗ. ಕ್ರೌನ್ ೨೨ ಪುಟಗಳು ಬೆಲೆ ೧ ಆ. ೬ ಪೈಗಳು.

ಇದೊಂದು ಐತಿಹಾಸಿಕಕತೆ. ಅಮರಸಿಂಹನ ಕಾಲದಲ್ಲಿ ರಜಪೂತರು ಜಹಾಂಗೀರ ಬಾದಶಹನಿಂದ ತಮ್ಮ ರಾಜ್ಯವನ್ನು ಉಳಿಸಿಕೊಂಡುದು ಇಲ್ಲಿ ಹೇಳಿದೆ. ವಿಜಯಸಿಂಹನೆಂಬ ವೀರತರುಣನು ಶಾಂತಾಕುಮಾರಿಯ ಮೋಹದಲ್ಲಿ ಬಿದ್ದು ಕಡೆಗೆ ಅವಳಿಂದಲೇ ಉತ್ತೇಜಿತನಾಗಿ ಸಮರಾಂಗಣದಲ್ಲಿ ವಿಜಯಶಾಲಿಯಾಗಿ ಮಡಿದ ಶೋಕಾಂತದ ಕತೆಯು, ಮನವನ್ನು ಸೆಳೆದೊಯ್ಯುವ ಭಾವಭರ ಮತ್ತು ಉಜ್ವಲವಾಕ್ಯಸರಣಿಗಳಿಂದ ಅಲಂಕೃತವಾಗಿದೆ. ವಿಜಯಸಿಂಹನ ಉಕ್ಕುತಿಹ ಧಮನಿಯ ಬಿಸಿಯೂ, ದೇಶಕ್ಕಾಗಿ ತನ್ನ ದೇಹವನ್ನು ಅರ್ಪಿಸಿದ ಶಾಂತಾಕುಮಾರಿಯ ಸ್ವಾರ್ಥತ್ಯಾಗವೂ ಇಲ್ಲಿ ಅಂದವಾಗಿ ಚಿತ್ರಿಸಿವೆ. ಮುಂದೆ ಬರಬಹುದಾದ ಈ ಮಾಲೆಯ ದ್ವಿತೀಯ ತರಂಗವು ಇದಕ್ಕೂ ಒಂದು ಮೆಟ್ಟು ಮೇಲಿನದಿರಬಹುದೆಂದು ನಾವು ಆಶಿಸುವೆವು.

**ಶ್ರೀ ಕೃಷ್ಣಲೀಲಾಮೃತ :—** ಲೇಖಕರು ಭೀಮಾಚಾರ್ಯ ಒಡವಿ (ಕಾವ್ಯರತ್ನ) ಶಾಲಾಗುರು. ಕದರಮಂಡಲಗಿ ಪ್ರಕಾಶಕರು :–ಶ್ರೀ. ಗ. ಮು, ಶಿವಪೂಜಿ ದೇವಗಿರಿ. ಕ್ರೌನ್ ೧೫೫ ಪುಟಗಳು, ಬೆಲೆ ಎಂಟಾಣೆ.

ಕನ್ನಡಕವಿ ರುದ್ರಭಟ್ಟನ 'ಜಗನ್ನಾಥವಿಜಯ'ದ ಸಂಕ್ಷಿಪ್ತ ಗದ್ಯಾನುವಾದವಿದು. ಹೊಸ ಶೈಲಿಯಿಂದ ಕಾದಂಬರೀರೂಪವಾಗಿ ಬರೆದಿರುವರು. ಕಾದಂಬರಿಯೆಂದರೆ ಜನರಲ್ಲಿ ಒಳ್ಳೆಯ ಆದರ. ಓದುವ ಇಚ್ಛೆ ಬಹಳ. ಲೌಕಿಕರಿಗೆ ಬೇಕಾಗುವ ಇಹಲೋಕದ ಸುಖ-ದುಃಖದ ವಿಚಾರವು ಕಾದಂಬರಿಯಲ್ಲಿ ತುಂಬಿರುವುದರಿಂದ ಜನರು ಕಾದಂಬರಿಪ್ರಿಯರಾಗುವುದು ಆಶ್ಚರ್ಯವಲ್ಲ. ಎಂತಲೇ ಲೇಖಕರು ಶ್ರೀ ಕೃಷ್ಣಲೀಲಾ-ಎಂಬಿಷ್ಟೆ ಹೆಸರಿಟ್ಟು ಇದಿಷ್ಟೆ ವಿಷಯವನ್ನು ಕಾದಂಬರಿಯ ಶೈಲಿಯಲ್ಲಿ ಇದನ್ನು ಬರೆದಿದ್ದಾರೆ. ಸ್ವಲ್ಪ ಓದುಬರೆಹಬಲ್ಲವರೂ ಓದುವಷ್ಟು ಸುಲಭಭಾಷೆ. ಶ್ರೀ ಕೃಷ್ಣಲೀಲಾಮೃತವನ್ನು ಎಲ್ಲರೂ ಸವಿದು ಸವಿನೋಡಬೇಕು. ಸಮಗ್ರ ಶ್ರೀ ಕೃಷ್ಣಚರಿತ್ರೆಯು ವಿರಳವಾಗಿ ೧೮ ಪರಿಚ್ಛೇದಗಳಲ್ಲಿ ವರ್ಣಿತವಾಗಿದೆ.

ಕೆಲವು ಭಾಷಾದೋಷಗಳು ಅಲ್ಲಲ್ಲಿ ಕಾಣುತ್ತಿವೆ. ಮುಂದಿನ ಆವೃತ್ತಿಯಲ್ಲಿ ತಿದ್ದಿಕೊಳ್ಳುವರೆಂದು ನಂಬುಗೆ.

**ಸಾಹಿತ್ಯದ ಹುರುಳು :—** (ಚಿಕ್ಕ ಉಪನ್ಯಾಸ) ಉಪನ್ಯಾಸಕರು ಶ್ರೀ. ಪು. ತಿ. ನರಸಿಂಹಾಚಾರ್ಯರು ಗೋರೂರು ಕರ್ಣಾಟಕ ಸಂಘದಿಂದ ಪ್ರಕಟವಾದುದು.

ನಮ್ಮ ನಾಡು ಮೈಮುರಿದೇಳಲಿಕ್ಕಿದೆಯೆನ್ನಲು ಹಳ್ಳಿ ಹಳ್ಳಿಗಳಲ್ಲಿಯೂ ಹುಟ್ಟುತಿರುವ ಕರ್ಣಾಟಕಸಂಘಗಳೇ ಸಾಕ್ಷಿ. ನಾವು ಅಸಂಸ್ಕೃತರು, ನಮಗೇಕೆ ಸಾಹಿತ್ಯವೆಂದು ತಮ್ಮನ್ನು ತಾವೆ ಅಣಕಿಸಿಕೊಳ್ಳುವ ಹಳ್ಳಿಗರಿಗೆ ಶ್ರೀ ನರಸಿಂಹಾಚಾರ್ಯರು "ಇಂಗ್ಲಿಷ್ ಸಂಸ್ಕೃತಿಯ ಕನ್ನಡಕವನ್ನು ಹಾಕಿಕೊಂಡು ನಮ್ಮ ಕಾವ್ಯಗಳನ್ನು ಬರೆಯುತ್ತಿದ್ದೇವೆ" ಎಂದು ಪಟ್ಟಣಿಗರನ್ನು ವಿಮರ್ಶಿಸಿ "ಪಾಶ್ಚಾತ್ಯ ಸಾಹಿತ್ಯದಿಂದ ನಿಮ್ಮ ಕಣ್ಣು ಮಂಕಾಗಿಲ್ಲ" ವೆಂದು ಹಳ್ಳಿಗರಿಗೆ ಅವರ ನೈಜಸ್ವರೂಪ

CC-0. Jangamwadi Math Collection. Digitized by eGangotri

ವನ್ನು ನೆನಪಿಗೆ ತರಲು ಪ್ರಸಂಗೋಚಿತವಾಗಿ ಮಾತನಾಡಿದ್ದಾರೆ. ಮಾತು ಚಿಕ್ಕದಾದರೂ ಕನ್ನಡದ ಕಳವಳದಿಂದ ಹೊರಹೊಮ್ಮಿದೆ. ಹಳ್ಳಿಗರಿಗೂ ಪಟ್ಟಣಿಗರಿಗೂ ಇದೊಂದು ಕನ್ನಡಿ: ನೋಡಿ ನಿಜಸ್ವರೂಪ ಕಾಣಬಹುದು.

**ಲಕ್ಷ್ಮೀಬಾಯಿ :—** (ಪದ್ಯಪುಸ್ತಕ) ಲೇಖಿಕೆ- "ಜೈನಮಹಿಳೆ." ಪ್ರಕಾಶಕರು-ಪಣಪಿಲ ಅರಮನೆ ದೇಜಮ್ಮನವರು. ಪುಟ್ಟಪುಟಗಳು ೪—೨೬. ಪುಸ್ತಕವನ್ನ ಪೇಕ್ಷಿಸುವವರು ಒಂದಾಣೆಯ ಅಂಚೆಯ ತಲೆಚೀಟಿಯನ್ನು "ಶ್ರೀ. ಎನ್. ಎಸ್. ಜೈನಿ ಪೋ. ನೆಲ್ಲಿಕಾರು, ಕಾರ್ಕಳ. ದ. ಕ." ಈ ವಿಳಾಸಕ್ಕೆ ಕಳುಹಿಸಿ ತರಿಸಿಕೊಳ್ಳಬಹುದು.

ಕಾಶಿಯಲ್ಲಿ ಒಬ್ಬ ಚೆಲುವೆಯಾದ ವೇಶ್ಯೆ. ವೇಶ್ಯೆಯಾದರೂ ನೀತಿಯ ನಡೆಯ ಕಡೆಗೆ ಅನಲೊಲವು. ಅದೇ ಊರಲ್ಲಿ ಬೇನೆಗೊಳಕನಾದ ಒಬ್ಬ ಬ್ರಾಹ್ಮಣ. ಆತನ ಹೆಂಡತಿ ಮಹಾಪತಿವ್ರತೆ. ಬ್ರಾಹ್ಮಣನು ವೇಶ್ಯೆಯ ಚೆಲುವಿಗೆ ಮನಸೋತು ಆಕೆಯನ್ನು ಆಶಿಸುವನು. ಹೆಂಡತಿಯು ತನ್ನ ಗಂಡನನ್ನು ಆ ವೇಶ್ಯೆ ಸಂಧಿಸುವಂತೆ ಪ್ರಯತ್ನ ಮಾಡುವಳು. ಆಗ ಆ ವೇಶ್ಯೆ ವೇಶ್ಯೆಯರ ಮತ್ತು ಕುಲೀನೆಯರ ಯೋಗ್ಯತೆಯನ್ನು ತೂಕಮಾಡಿ ತೋರಿಸಿ, ಬ್ರಾಹ್ಮಣನಿಗೆ ತನ್ನ ವಿಷಯದಲ್ಲಿ ಉಪರತಿಯುಂಟಾಗುವಂತೆ ಮಾಡುವಳು. ಇದೇ ಕತೆಯನ್ನು ಶ್ರೀ. ಜೈನಮಹಿಳೆಯವರು ಸುಲಭವಾದ ಪದ್ಯದಲ್ಲಿ ಹೆಣೆದಿರುವರು. ಶ್ರೀ. ಗೋವಿಂದ ಪೈಗಳವರ ಮುನ್ನುಡಿಯಿದೆ. ಅಕ್ಕರಿಗರಾದ ಹೆಣ್ಣುಮಕ್ಕಳು ಅವಶ್ಯವಾಗಿ ಇದನ್ನು ಓದಬೇಕು.

**ನೀತಿಮುಕ್ತಾವಲಿ :—** (ಪದ್ಯಪುಸ್ತಕ) ಶ್ರೀ. ಲ. ಅ. ಶಿರಹಟ್ಟಿ (ತೊರವಿ) ಕನ್ನಡ ಶಾಲಾಧ್ಯಾಪಕ ವಿಜಾಪುರ ಇವರು ರಚಿಸಿ ಪ್ರಕಟಿಸಿದುದು. ಶ್ರೀ ಶಾರದಾ ವಿಲಾಸಮಂದಿರದ ತೃತೀಯ ಪುಷ್ಪವಿದು. ಫುಲ್ಸ್ಕೇಪ್ ೮. ೪—೪೪ ಪುಟಗಳು ಬೆಲೆ ೦—೨—೬

ಹಿಂದಣಕಾಲದ ಸಾಹಿತ್ಯದಲ್ಲಿ ನೀತಿಯ ಪದ್ಯಗಳನ್ನು ರಚಿಸಿದ ಕವಿಗಳಿಗೇನೂ ಕೊರತೆಯಿಲ್ಲ. ಇದೂ ಹಿಂದಿನ ನೀತಿಕಾರರ ಶೈಲಿಯಲ್ಲಿಯೆ ಬರೆದ ಇಂದಿನ ನೀತಿಯ ಪದ್ಯಗಳ ಸಂಗ್ರಹ. ಎಲ್ಲವೂ ಕಂಡಪದ್ಯಗಳು. "ಮಹಾತ್ಮರ ಪ್ರವಚನಗಳಲ್ಲಿ ಹೊರಹೊಮ್ಮಿದ ಸೂಕ್ತಿಮುಕ್ತಾಫಲಗಳನ್ನಾಯ್ದು ಅಂತಃಸ್ಫೂರ್ತಿಗೆ ತಿಕ್ಕಿ ಕಂಡಪದ್ಯದಲ್ಲಿ ಪೋಣಿಸಿದುದೇ ಈ ಮುಕ್ತಾವಲಿಯು" ಎಂದು ಈ ಗ್ರಂಥಕರ್ತರು ಆತ್ಮನಿವೇದನೆಯಲ್ಲಿ ಹೇಳಿರುವರು. ಶ್ರೀಯುತರಾದ ಪಂಡಿತ ಪೂಜಾರ ಅವರು ಇದಕ್ಕೆ ಬರೆದ ಮುನ್ನುಡಿಯಲ್ಲಿ ಗ್ರಂಥದ ವಿಷಯ ಭಾಷೆಗಳಲ್ಲಿಯ ಹುರುಳನ್ನು ಹೊಗಳಿರುವರು. ಒಟ್ಟು ಪದ್ಯಗಳು ೧೭೭. ಕೊನೆಗೆ ಕಠಿನ ಶಬ್ದಗಳ ಅರ್ಥವನ್ನು ಕೊಡಲಾಗಿದೆ. ಕಂದಪದ್ಯಗಳಲ್ಲಿಯೆ ಬರೆದ ನಮ್ಮ ಹಿಂದಣ ಕೃತಿಗಳ—ಸಿದ್ಧನೀತಿ, ವಿರೂಪಾಕ್ಷನೀತಿ, ರನ್ನನಕಂದ ಮೊದಲಾದುವುಗಳಲ್ಲಿಯ ಪದ್ಯಗಳೊಡನೆ ಈ ಗ್ರಂಥದಲ್ಲಿಯ ಪದ್ಯಗಳನ್ನು ತುಲನೆಮಾಡಿ ನೋಡಿದಲ್ಲಿ ಎರಡರ ಭಾಷೆಗಳಲ್ಲಿಯ ವ್ಯತ್ಯಾಸವು ಕಂಡುಬರುವುದು. ವಿಷಯದ್ದೇನು? ಅಂದಿನ ನೀತಿಯೆ ಇಂದಿನ ನೀತಿ. ಇಂದಿನ ನೀತಿಯೇ ಅಂದಿನ ನೀತಿ. ಆದರೆ ಅಂದಿನ ಮಾತು ತಾನಾಗಿ ಬಂದುದು. ಈ ಕವಿತೆಗಳಲ್ಲಿಯ ಮಾತು ಎಳೆದೆಳೆದು ತಂದುದು. ಸಕ್ಕರಿಲಿಂಬೆಯರಸದ ಸವಿ ಹೇಗೆ! ಹುಳಿಲಿಂಬೆಯ ರಸದಲ್ಲಿ ಸಕ್ಕರೆ ಸೇರಿಸಿದರೆ ಹೇಗೆ! ಇನ್ನೂ ಹೆಚ್ಚಾಗಿ ಕಾಲೋಚಿತವಾದ ಗ್ರಂಥಗಳು ಈ ಗ್ರಂಥಕರ್ತರಿಂದ ಹೊರಡಬೇಕೆಂದು ನಮ್ಮ ಆಶೆ. ಕನ್ನಡಿಗರು ಇವರ ಉಚಿತವಾದ ಸೇವೆಗೆ ಪ್ರೋತ್ಸಾಹವನ್ನು ಕೊಡಲಿ!

**ರಾಣೀ ಅಹಲ್ಯಾಬಾಯಿ ಹೋಳಕರ :—** ಇದೊಂದು ನಾಟಿಕೆ. ಬರೆದವರು:—ಶ್ರೀ. ಶಿವರಾವ ವೆಂಕಟರಾವ ಗುಲವಾಡಿ ಬಿ. ಎ. ಎಲ್ ಎಲ್. ಬಿ. "ದೇವಿ ಅಹಲ್ಯಾಬಾಯಿ ಎಂಬ ಹೆಸರಿನ ಮರಾಠಿ ನಾಟಕದ ಆಧಾರದಿಂದ ಬರೆದುದು" ಎಂದು ಮುನ್ನುಡಿಯಲ್ಲಿ ಹೇಳಲಾಗಿದೆ. ಭಾಷೆಯದೃಷ್ಟಿಯಿಂದ ಅದರಲ್ಲಿ ದೋಷಗಳಿದ್ದರೂ ಒಟ್ಟಿನಮೇಲೆ ಪರಿಣಾಮಕಾರಿ ವಾಗಿದೆ. ಗುಲವಾಡಿಯವರು ಮರಾಠಿ ಹೆಚ್ಚು ಬಲ್ಲವರು. ಇಂಥವರು ಕನ್ನಡದಲ್ಲಿ ಬರೆಯಲು ಸಾಹಸಮಾಡಿದ್ದಕ್ಕಾಗಿ ಅವರಿಗೆ ನಮ್ಮ ವಂದನೆಗಳು. ಇದೇ ರೀತಿಯಿಂದ ಇನ್ನೂ ಅನೇಕ ಗ್ರಂಥಗಳನ್ನು ಒಳ್ಳೆಯ ಭಾಷೆಯಲ್ಲಿ ಒಳ್ಳೆಯ ರೀತಿಯಿಂದ ಬರೆಯಲೆಂದು ನಾವು ಕೋರುತ್ತೇವೆ.

CC-0. Jangamwadi Math Collection. Digitized by eGangotri

**ಋತಂಭರ:**— ( ಪೌರಾಣಿಕ ಕಥೆ ) ಶ್ರೀ. ಎ. ಸೀತಾರಾಮಯ್ಯ ಮಿಡಲ್‌ಸ್ಕೂಲ್ ತಿಪಟೂರ, ಅವರು ಬರೆದುದು. ಬೆಲೆ ಒಂದಾಣೆ.

ಹಿಂದೀಯರಿಗೆ ಆಕಳೆಂದರೆ ತಾಯಿ. ಆಕೆಯಿಂದಲೇ ನಮ್ಮ ಶಾರೀರಕ, ಬೌದ್ಧಿಕ ಮಾನಸಿಕ ಸಂಪತ್ತು ಬೆಳೆವು ದೆಂದರೆ ಗೌರವದ ಮಾತೇನಲ್ಲ. ಗೋಮಾತೆಯ ರಕ್ಷಣೆ ಯನ್ನುದ್ದೇಶಿಸಿ ಬರೆದ ಈ ಚಿಕ್ಕಕತೆ ಎಲ್ಲರಿಗೂ ಓದಲರ್ಹವಾಗಿದೆ, ಕೇಳಲರ್ಹವಾಗಿದೆ. ಭಾಷೆ ಗಡು ಚಿಲ್ಲ. ಪುರಾಣದ ಕತೆಯೆಂದು ಕತೆಗಾರರು ಪುರಾಣಿ ಕರೂ ಆಗಿಲ್ಲ; ಈಗಿನ ಜನಸಾಮಾನ್ಯಕ್ಕೆ ಒಪ್ಪುವ ತೆರ ಬರೆಯಲುಯತ್ನಿಸಿರುವರು.

**ರೈತರ ಭಾಗ್ಯೋದಯ :**— ( ಚಿಕ್ಕ ನಾಟಕ ) ಲೇಖಕ ಭಾಲಚಂದ್ರ ಘಾಣೇಕರ ಮಿಶ್ರೀಕೋಟಿ: ಕೌ. ಅ. ೩೧ ಪುಟಗಳು ಬೆಲೆ ೨ ಆಣೆ.

ಇಂತಹ ನಾಟಕಗಳು ಸದ್ಯಕ್ಕೆ ಬರೆದಷ್ಟೂ ಬೇಕು. ಹಿಂದಿನ ಸತ್ಯಾಗ್ರಹದ ಸಮಯದಲ್ಲಿದ್ದ ಚಿತ್ರವನ್ನು ಇದ್ದಕ್ಕಿದ್ದಂತೆ ಬರೆಯಲು ಚೆನ್ನಾಗಿ ಹವಣಿಸಿರುವರು. ಲನೆಯ ಪ್ರವೇಶದವರೆಗೆ ಬರೆಹವೂ, ಚಿತ್ರವೂ ಒಂದು ತೆರದಿಂದ ಬಗೆಯನ್ನು ಸೆಳೆಯುವುವು. ಮುಂದೆ ಅಷ್ಟು ಚೆನ್ನಾಗಿ ಸಾಧಿಸಿಲ್ಲ. ಅಂತೂ ಲೇಖಕರು, ಹೆಚ್ಚಿನ ಸ್ಫೂರ್ತಿಯಿಂದ ತಮ್ಮ ಕಲ್ಪನೆಯ ಸಾಮ್ರಾಜ್ಯ ಬೆಳೆಯಿಸಿ ಆನಂದಪಡಲುವಾಚಕರಿಗೆ ಸರ್ವತಂತ್ರಸ್ವಾತಂತ್ರ್ಯವನ್ನು ಕೊಟ್ಟಿರುವರು. ರಾ. ಹೇ.

**ಅರುಣೋದಯ:**— ( ಹೊಸ ಮಾಸಪತ್ರಿಕೆ ) ಸಂಪಾದಕರು ಶ್ರೀ. ವೆಂಕಟೇಶ ಶ್ರೀನಿವಾಸ ಪಂಡಿತ ಬಿ. ಎ. ಎಲ್. ಎಲ್. ಬಿ. ಅವರು. ಬೆಳಗಾಂವಿಯ ಸೀತಾ ರಾಮ ಮುದ್ರಣಾಲಯದಲ್ಲಿ ಮುದ್ರಿತವಾಗಿ ಅಲ್ಲಿಯೇ ಪ್ರಕಟವಾಗುವುದು. ಮೊದಲನೆಯ ಸಂಚಿಕೆಯಲ್ಲಿ ಜಯ ಕರ್ಣಾಟಕದಳತೆಯ ೪೨ ಪುಟಗಳು. ವಾ. ವ. ಅ. ವೆ. ಸೇರಿ ೩ ರೂಪಾಯಿಗಳು. ಬಿಡಿಸಂಚಿಕೆಗೆ ಐದಾಣೆ.

“ ರಾಷ್ಟ್ರದ ಜೀವನವು ರಾಜಕಾರಣದ ಮೇಲೆಯೆ ಅವಲಂಬಿಸಿರದೆ ರಾಷ್ಟ್ರದ ಸಂಸ್ಕೃತಿಯ ಪೋಷಣೆ, ಕೃಷಿ ಕೈಗಾರಿಕೆಗಳ ಉತ್ಕರ್ಷ, ಸಾಹಿತ್ಯದ ಬೆಳೆವಣಿಗೆ, ಕಲೆಗಳ ಅಭಿವೃದ್ಧಿ, ಉದ್ಯಮಗಳಸಮೃದ್ಧಿ ಇವೆಲ್ಲವುಗಳಮೇಲೆಯೆ ಅವಲಂಬಿಸಿರುವುದು .... .... .... ಅದರಿಂದ ಎಲ್ಲವಿಷಯ ಗಳ ಮೇಲೆಯೂ ವಿಚಾರಪರಿಪ್ಲುತವಾದ ಹಾಗೂ ಉದ್‌ಬೋಧಪರವಾದ ಲೇಖಗಳನ್ನು ನಮ್ಮ ಮಾಸ ಪುಸ್ತಕದಲ್ಲಿ ಪ್ರಸಿದ್ಧಿಸುವ ಏರ್ಪಾಡು ಮಾಡಿರುವೆವು.” ಎಂಬುದಾಗಿ ಸಂಪಾದಕರು ತಮ್ಮ “ ಅಭಿಲಾಷೆ ”ಯಲ್ಲಿ ಹೇಳಿರುವರು. ಅವರ ಅಭಿಲಾಷೆಯು ಪೂರ್ಣವಾಗು ವಂತೆ ಕನ್ನಡಿಗರು ನೆರವೀಯಲಿ. ಈ ಮೊದಲನೆಯ ಸಂಚಿ ಕೆಯಲ್ಲಿ ನಾಲ್ಕು ಸಣ್ಣ ಕವಿತೆಗಳಿವೆ. “ ಅಧಃಪಾತ ” ಎಂಬುದೊಂದು ಟಾಲ್‌ಸ್ಟಾಯರ ಚಿಕ್ಕಕತೆಯ ಅನುವಾ ದವಿದೆ. “ಕರ್ಮವೀರ” ಎಂಬ ಹೆಸರಿನದೊಂದು ಮುಂದೆ ಸಾಗಿಸಿರುವ ಕಾದಂಬರಿಯಿದೆ. ಶ್ರೀ. ಆಲೂರ ವೆಂಕಟ ರಾಯರ ಕರ್ನಾಟಕದ ಅರುಣೋದಯವೂ ಶ್ರೀ. ವರ್ಟಿ ಕಾಶೀನಾಥರಾಯರ ‘ ಹಿಂದೀ ರಾಷ್ಟ್ರದ ಸಾಲವು ’ಎಂಬ ಬರೆಹವೂ ಚೆನ್ನಾಗಿವೆ. ಎಳೆಯರಿಗಾಗಿ ೩-೪ ಪುಟಗಳನ್ನು ಕಾದಿಟ್ಟಿರುವುದೊಂದು ವಿಶೇಷ. ಅಲ್ಲದೆ ‘ ಅರುಣನ ಕಿರಣ ’ ಎಂಬ ಹೆಸರಿನಿಂದ ಸಂಪಾದಕೀಯ ಸ್ಫುಟ ಲೇಖ ಗಳೂ ಇವೆ. ಬೆಳಗಾಂವಿಯಲ್ಲಿ ಕನ್ನಡದ ಸಲುವಾಗಿ ಯಾರು ಯಾರು—ಎಷ್ಟೆಷ್ಟು—ಹೇಗೆ ಹೇಗೆ ಕೆಲಸ ಮಾಡಿ ದರೂ ಅದು ಈಗ ಬೇಕಾದಮಾತು. ಮೊದಮೊದಲಿನ ಕಾರ್ಯಗಳಲ್ಲಿ ತಪ್ಪುತಡೆಗಳಾಗುವುದು ಸ್ವಾಭಾವಿಕ. ಅನುಭವದಿಂದ ತಮ್ಮ ತಪ್ಪು ತಮಗೇ ಕಂಡುಬರುವುವು. ಆದರೂ ನಮ್ಮದೊಂದು ಮಾತನ್ನು ಸಂಪಾದಕರು ಆತ್ಮೀಯ ಭಾವನೆಯಿಂದ ಕೇಳಿಕೊಳಲೆಂದು ಕೋರು ವೆವು. ಸಾಮಾನ್ಯವಾಗಿ ಕನ್ನಡನಾಡಿನ ಅನೇಕ ಪತ್ರಿಕೆ ಗಳಲ್ಲಿ ವಿಚಿತ್ರವಾದ ವಿಷಮತೆಯೊಂದು ಕಂಡುಬರು ತ್ತದೆ. ಇದರಿಂದ ಅವು ಸಾಮಾನ್ಯ ಜನರಿಗೆ ಹೆಚ್ಚು, ಪಂಡಿತರಾದವರಿಗೆ ಕಡಿಮೆ— ಹೀಗಾಗಿ ಸಾಕಷ್ಟು ಲೋಕಾದರಕ್ಕೆ ಪಾತ್ರವಾಗದಿರುವುವು. ಇದರ ಕಡೆಗೆ ಸಂಪಾದಕರು ಹೆಚ್ಚು ಗಮನಕೊಡಬೇಕಾದುದು ಅವಶ್ಯ ಕವಾಗಿದೆ. ಇನ್ನೊಂದು ಮಾತೆಂದರೆ ಭಾಷೆಯ ಏಕೀ ಕರಣದ ಕಡೆಯದೃಷ್ಟಿ. ಇದನ್ನೂ ಮರೆತು ನಡೆದರೆ ನಮ್ಮ ಕೆಲಸ ಅಷ್ಟೊಂದು ಯಶಸ್ವಿಯಾಗಲಾರದು.



CC-0. Jangamwadi Math Collection. Digitized by eGangotri

# ನಗೆ ಬಂದರೆ ನಕ್ಕುಬಿಡಿ

## ವಿದೂಷಕ ಪರಿಹಾಸಭಾಷೆ

ಸಂಪಾದಕ:— W. P. B.

[ ಇಲ್ಲಿಯ ಅಭಿಪ್ರಾಯಗಳಿಗೆ ನಾವಾರೂ ಜವಾಬ್ದಾರರಿಲ್ಲ. ]

### ೧ನೆಯ ಪತ್ರ

'ತಮಗೆ ನಾನು ಒಂದು ಕವಿತೆಯನ್ನು ಕಳಿಸಿದ್ದೇನೆ. ಅದು ನನ್ನ ಪ್ರಥಮಪ್ರಯತ್ನ. ತಾವು ಕನ್ನಡ ಭಾಷಾಭಿಮಾನಿಗಳಾಗಿರುವದರಿಂದ ನನ್ನ ಕವಿತೆಯನ್ನು ಪ್ರಕಾಶಗೊಳಿಸಲೇಬೇಕು. ಹಾಗೆ ಮಾಡಿದರೆ ನಾನು ಮತ್ತೆ ಕವಿತೆಗಳನ್ನು ಕಳಿಸುವೆನು.'

—ಬಾಲಕವಿ

**ಉತ್ತರ:**— ಬಾಲಕವಿಗಳೇ! ಸ್ವಲ್ಪ ಬೆಳೆದು ದೊಡ್ಡವರಾಗುವವರೆಗೆ ತಾಳ್ಮೆಯಿರಲಿ. ನಮ್ಮ ಗೆಳೆಯರೊಬ್ಬರು 'ಪ್ರಥಮಪ್ರಯತ್ನ' ಎಂಬ ಮಾಸಪತ್ರಿಕೆಯನ್ನೇ ಹೊರಡಿಸತಕ್ಕವರಿದ್ದಾರೆ. ಅದಕ್ಕೆ ತಾವು ಸಹಾಯ್ಯಮಾಡಿರಿ. ಈಗ ಕಳುಹಿದ ಕವಿತೆಯನ್ನು ತಿದ್ದಿಗಿದ್ದಿ ಮುದ್ರಿಸಬಹುದಾಗಿತ್ತು. ಆದರೆ ಮತ್ತೆ ಕವಿತೆಗಳನ್ನು ಕಳುಹುವದಾಗಿ ತಾವು ಹೆದರಿಕೆ ಹಾಕಿದ್ದರಿಂದ ಹಿಂಜರಿಯಬೇಕಾಯಿತು.

### ೨ನೆಯ ಪತ್ರ

'ಗೀತೆಯಲ್ಲಿ ಕಾಲಜ್ಞಾನ' ಎಂಬ ವಿಷಯವನ್ನು ಕುರಿತು ನಮ್ಮ ಇತಿಹಾಸಸಂಶೋಧಕ ಮಿತ್ರರೊಬ್ಬರು ಮೊನ್ನೆ ಗೀತಾಜಯಂತಿಯ ದಿವಸ ಭಾಷಣಮಾಡಿದ್ದರು. ಅದರೊಳಗಿನ ಮೂರು ಮಾತುಗಳನ್ನು ಬರೆದು ಕಳುಹಿದ್ದೇನೆ. (೧.) ಲೋಕಮಾನ್ಯ ಬಾಲಗಂಗಾಧರ ಟಿಳಕರು ಗೀತೆಯ ಬಗ್ಗೆ ಕರ್ಮಯೋಗಪರವಾಗಿ ಭಾಷ್ಯವನ್ನು ಬರೆಯುವರು.

॥ ಸಾಂಖ್ಯಯೋಗೌ ಪೃಥಕ್‌ಬಾಲಾಃ
ಪ್ರವದಂತಿ ನಪಂಡಿತಾಃ ॥

ಸಾಂಖ್ಯದ ಅಂದರೆ ಜ್ಞಾನದ, ಸಂನ್ಯಾಸದ, ಹಾದಿ ಬೇರೆ; ಯೋಗದ ಅಂದರೆ ಕರ್ಮಯೋಗದ, ಸಂಸಾರದ ಹಾದಿ ಬೇರೆ-ಎಂದು ಪ್ರತಿಪಾದಿಸುವರು. 'ಬಾಲಾಃ' ಎಂದು ಬಹುವಚನವು ಸನ್ಮಾನಾರ್ಥಕವಾಗಿದೆ.

(೨) ಮಹಾತ್ಮಾ ಗಾಂಧಿಯವರು ಯಜ್ಞೇ[illegible] ಅವತಾರವಾಗಿದ್ದಾರೆಂದು ಗೀತೆಯು ಸೂಚಿಸು[illegible]

' ಯಜ್ಞಃ ಕರ್ಮೋದ್ಭವಂ ವಿದ್ಧಿ '

ಯಜ್ಞವು 'ಕರ್ಮ'ದ ಮಗುವೆಂದು ತಿಳಿ. ಗಾಂ[illegible] ಯವರು ಕರ್ಮಚಂದರ ಮಕ್ಕಳು. ಅವರು ಬಟ್ಟೆ[illegible] ಸುಡಿಸಿದ್ದೂ, ಎಲ್ಲವನ್ನು ತ್ಯಾಗಮಾಡಿದ್ದೂ, ಮಾ[illegible] ಯಜ್ಞೇಶ್ವರನ ಅವತಾರಲಕ್ಷಣ. ಯಜ್ಞಕ್ಕಾದರೂ [illegible] ಹಿಂಸೆಯಲ್ಲವೆಂದು ಕೆಲವು ಧರ್ಮಶಾಸ್ತ್ರಗಳು [illegible] ವವು. ಕಲಿಯುಗದಲ್ಲಿ ಯಜ್ಞದಲ್ಲಿಯೂ ಹಿಂಸೆ [illegible] ವೆಂದು ಮತ್ತೆ ಕೆಲವು ಧರ್ಮಶಾಸ್ತ್ರಗಳು ಹೇಳು[illegible] ಈಗ ಯಜ್ಞೇಶ್ವರನೇ ಹಿಂಸೆ ಬೇಡವೆಂದು ಹೇಳಿದ್ದಾ[illegible] (೩) ಅರವಿಂದಘೋಷರ ವಿಷಯವಾಗಿಯೂ [illegible] ಮಾತು ಇದೆ. "ಸಘೋಷೋ ಧಾರ್ತರಾಷ್ಟ್ರಾ[illegible] ಹೃದಯಾನಿ ವ್ಯದಾರಯತ್" ರಾಷ್ಟ್ರವನ್ನು [illegible] ಕುರುಡುಕುನ್ನಿಗಳ ಎದೆಯನ್ನು ಬಿರಿಯು[illegible] ಘೋಷನು ಮಾಡಿದನು. ಹಿಂದಿನ ಚಳವಳಿ[illegible] ಅವರು ಮಾಡಿದ ಕೆಲಸದ ಬಗ್ಗೆ ಇದು ಇರಬೇಕು.

—ಗೀತಾ[illegible]

**ಉತ್ತರ:**— ಗೀತೆ, ಸಂಶೋಧನ, ಕಾಲಜ್ಞಾನ[illegible] ಮೂರು ಬಹಳ ಬಿಗಿಯಾದ ವಿಷಯಗಳು. ಆದರೆ ಈ [illegible] ಜ್ಞಾನವು ಸಂಗತಿಗಳಾದ ಮೇಲೆ ಪ್ರಕಟವಾಗುವ[illegible] ಉತ್ತರ ನೋಡಿಕೊಂಡು ಲೆಕ್ಕಬಿಡಿಸಿದವರಂತೆ [illegible] ಯಕ್ಕೆ ಕಾರಣವಾಗುವದು. ಅದೊಂದುಮಾತು [illegible] ನಿಮ್ಮ ಮಿತ್ರರು ಒಳ್ಳೇ ಪಂಡಿತರಾಗಿ ತೋರುವರು.

### ೩ನೆಯ ಪತ್ರ

ಇತ್ತೀಚೆ ಸಂತತಿನಿರೋಧದ ಬಗ್ಗೆ (ಮಕ್ಕ[illegible] ಬಾರದೆಂಬ ಬಗ್ಗೆ) ಬಹಳ ಪ್ರಯತ್ನಗಳು ನಡೆ[illegible] ನಾನೊಂದು ಉಪಾಯವನ್ನು ಕಂಡುಹಿಡಿದಿದ್ದೇನೆ. [illegible]

CC-0. Jangamwadi Math Collection. Digitized by eGangotri

ಪತ್ರಿಕೆಯ ಮುಖಾಂತರ ಅದನ್ನು ವಿಜ್ಞಾನಶಾಸ್ತ್ರಜ್ಞರಿಗೆ ತಿಳಿಯಪಡಿಸಬೇಕು. ವಿಶೇಷವಾಗಿ ಇದನ್ನು ಡಾಕ್ಟರರು ವೈದ್ಯರು ವಿಚಾರಮಾಡಬೇಕಾಗಿದೆ. ಬಯಲು ಸೀಮೆಯಿಂದ ತಂದ ಆಕಳುಎಮ್ಮೆಗಳು ಮಲೆನಾಡಿಗೆ ಬಂದ ಮೇಲೆ ಸ್ವಲ್ಪ ದಿವಸಗಳಲ್ಲಿಯೇ ಹಿಂಡುವದು ಕಡಮೆಯಾಗಿ ಕಟ್ಟುವದೇ ಇಲ್ಲ. ಅವುಗಳಿಗೆ ಇಲ್ಲಿಯ ಒಂದು ಬಗೆಯ ನೊಣಗಳು ಕಡಿಯುವದರಿಂದ ಹೀಗಾಗುವದೆಂದು ಜನರ ನಂಬಿಗೆಯಿದೆ. ಆದಕಾರಣ ಈ ನೊಣಗಳ ರಸಿಕೆಯನ್ನಾಗಲಿ, ಈಯುವುದು ಕಟ್ಟಾದ ಆಕಳು ಎಮ್ಮೆಗಳ ರಸಿಕೆಯನ್ನಾಗಲಿ ಸಂತತಿ ಪ್ರತಿಬಂಧಕ್ಕಾಗಿ ಜನರಿಗೆ Injection ಇಂಜಕ್ಶನ್ ಮಾಡಿದರೆ ಗುಣವಾಗಬಹುದು. ಅಲ್ಲವೇ ?

—ಮಲೆನಾಡಿಗ

**ಉತ್ತರ:**— ತಮ್ಮ ಸೂಚನೆಯು ಜನೋಪಕಾರಿಯಾಗಿದೆ. ಆದರೆ ನಮ್ಮ ದೇಶದಲ್ಲಿ ಮಕ್ಕಳು ಬೇಕೆಂಬುವರು ಹೆಚ್ಚೇ ಹೊರತು ಬೇಡವೆಂಬುವರಿಲ್ಲ. ಈಗಿನ ಬಡತನದ ಸಂಸಾರದಲ್ಲಿ ಕೆಲವರಿಗೆ ಹೀಗೆನಿಸುತ್ತಿರಬಹುದು. ಆದರೆ 'ಪಾಶ್ಚಿಮಾತ್ಯರಲ್ಲಿ'ತಿನ್ನುಣ್ಣಲಿಕ್ಕಿದ್ದೂ ಮಕ್ಕಳು ಬೇಡಾಗಿವೆಯಂತೆ. ಆದಕಾರಣ ನಿಮ್ಮ ಸೂಚನೆಯನ್ನು ಯಾರಿಂದಲಾದರೂ ಇಂಗ್ಲೀಷ್, ಫ್ರೆಂಚ್, ಜರ್ಮನ್ ಮೊದಲಾದ ಭಾಷೆಗಳಲ್ಲಿ ಭಾಷಾಂತರಿಸಿ ಪರದೇಶಗಳಿಗೆ ಕಳಿಸಿರಿ. ಇಲ್ಲಿಯ ಜನರಿಗೆ ವಿಚಾರಹೊಳೆಯುವದು ಬೇಗ. ಆದರೆ ಸತ್ಯಾಸತ್ಯಾನ್ವೇಷಣೆ ಬೇಡಾಗಿದೆ.

## ಕಾವ್ಯಶಾಸ್ತ್ರವಿನೋದ

ನಮ್ಮಲ್ಲಿ ಕವಿತಾ ವಿಮರ್ಶಕರು ಬಲುಮಂದಿ. ಆದರೆ ಅವರ ವಿಮರ್ಶೆ ಬಾಯ ಉಸಿರಿನೊಡನೆ ಹೊರಟು, ಗಾಳಿಯಕೂಡ ಗಾಳಿಯಾಗಿ ಬಿಡುತ್ತಲಿದೆ. ಬರೆದರೆ ಎಲ್ಲಿ ಮಾತಿನಲ್ಲಿ ಸಿಕ್ಕುಬಿದ್ದೇವೆಂದೋ ಏನೋ ! ವಿಮರ್ಶೆ ಬರೆಯುವವರು ಅಪರೂಪ! ಬಾಯಮಾತಿನ ವಿಮರ್ಶೆಗೇನು? ಹಿಡಿಯಿಲ್ಲ ತಡೆಯಿಲ್ಲ! ತಮಗೆ ಬೇಕೆನಿಸಿದ ಒಂದೇ ಒಂದು ಗುಣವು ಕವಿತೆಯಲ್ಲಿದ್ದರೂ ಸರ್ವಾಂಗ ಸಂಪನ್ನವೆಂದು ಕೊಂಡಾಡುವುದು; ಬೇಡವೆನಿಸಿದ ಒಂದೇ ಒಂದು ಮಾತು ಇದ್ದರೂ ಇಡಿ ಕವಿತೆಯನ್ನು ಬೀಳುಗಳೆದು ಕೆಳಕ್ಕೆ ಸೆಯುವುದು; ಈರೀತಿ ಎಲ್ಲೆಲ್ಲಿಯೂ ಕಂಡುಬರುತ್ತಲಿದೆ. ನಮ್ಮ ವಿಮರ್ಶೆಯ ಹಾದಿ ಸರಿಯಾದುದಾಗಬೇಕು; ಎಂಬ ಹಿರಿಯ ಗುರಿಯಿಂದ ನಾವು ಈ ಕಾವ್ಯಶಾಸ್ತ್ರವಿನೋದವನ್ನು ಆರಂಭಿಸಿದ್ದೇವೆ. ಕಳೆದ ವರ್ಷದ ಹನ್ನೊಂದನೆಯ ಸಂಚಿಕೆಯಲ್ಲಿ ಬರೆದ ಕವಿತೆಗೆ, ಸಮಗ್ರ ಕರ್ಣಾಟಕದಲ್ಲಿ ವಿಮರ್ಶೆ ಬರೆದವರೆಂದರೆ ಒಬ್ಬರೇ ಒಬ್ಬರು. ಇದೊಂದು ಆಶ್ಚರ್ಯದ ಸಂಗತಿ. ಸರಿಯಾಗಿಲ್ಲವೆಂದು ಹೇಳಲು ಹೆದರಿಕೆಯೇ ? ಸರಿಯಾಗಿದೆಯೆಂದು ಹೇಳಲೂ ನಾಚಿಕೆಯೆ ? ಅಡಿಯಲ್ಲಿ ಕೊಟ್ಟ ಈ ಸಲದ ಕವಿತೆಯ ವಿಮರ್ಶೆಗಳಾದರೂ ಹೆಚ್ಚಾಗಿ ಬಂದಾವೆಂದು ನಮ್ಮ ಆಶೆ. ವಿಮರ್ಶಕರು ತಮ್ಮ ವಿಮರ್ಶೆಯನ್ನು ಗಾಳಿಯಲ್ಲಿ ತೂರಿಬಿಡದೆ, ಅದನ್ನು ಬರೆಹದ ಕಟ್ಟಿನಲ್ಲಿ ಹಾಕಿಡಲಿ ಎಂದು ಪ್ರಾರ್ಥನೆ.

ಸಂ. ಜ. ಕ.

### ಪ್ರತಿಜೀವ

ಪ್ರತಿಜೀವವು ತಾ ಭೀಕರ ಶಂಕರ  
ಭವ್ಯ ಭಯಾನಕ ರೂಪವ ತಾಳಿಹುದು।  
ಪೃಥಿವಿಯ ಹೆಸರಿನ ಮಸಣದ ಮಧ್ಯದಿ  
ಮುಸುಗುಟ್ಟುತ ವಿಸುಕಾಡುತ ಬಾಳಿಹುದು॥

ಹಗಲಿರುಳೆಂಬೊಂದೊಂದೇ ಇರುಳಲಿ  
ಜೀವನ್ಮರಣದ ಪ್ರೇತಾವಸ್ಥೆಯಲಿ।  
ಜಗದೊಳಗಿನ ನಗೆಸೊಗ ಸಂತಾನವ  
ಹುಗಿದದರಾಶಾಭೂತಗಳೊಡಗೂಡಿ॥

ತೊಡಕಿನ ಹಿಡಿಗಳ ಗೂಡೆಂಬುವ ತಲೆ-  
ಗೂಡಲ ಜಡೆಗಳು ಭೂಮಿಯ ಸೀಳುತಿವೆ।  
ಕೆಡಕಿನ ಬಾಯಿಂದೂದುವುಸಿರ್ಗಳು  
ಬೆಳಕಿನ ಬಳಗವ ಕಪ್ಪಿಸಿ ಕೀಳುತಿವೆ॥

ತಾನುರಿಗಣ್ಣಿಲಿ ಭಸ್ಮವ ಮಾಡಿದ  
ಪ್ರೇಮಕಾಮಗಳ ಬೂದಿಯ ಮೈಗೆರೆದು।  
ಧ್ಯೇಯಶ್ರೇಯಗಳ ತುಂಡರಿಸವುಗಳ  
ರುಂಡಮಾಲೆಗಳ ಕೊರಳಲಿ ತೂರಿಹುದು॥

ವೈಷಮ್ಯದ ನಿಷ್ಕಾರುಣ್ಯದ ವಿಷ-  
ಹಲ್ಲೆರಡಾಡುವ ಹಾವಿನ ಮೋಹರವ।  
ಭೀಷಣ ರಕ್ತಾಲೇಪಿತ ದೇಹದಿ  
ಸುಳಿದಾಡಲು ಸುತ್ತಾಡಲು ಬಿಟ್ಟಿಹುದು॥

ಬಾಳುವೆ ಸುಡುವೆಸು ಬಾಳುವೆ ಒಲ್ಲೆಂ-  
ದೊದರುವ ಡಮರುವಿನಾರ್ತಸ್ವರಗಳಲಿ।  
ಕಾಳನ ನುಂಗುವ ಹಾಸ್ಯದ ಲಾಸ್ಯದಿ  
ಕುಣಿಯುವದೆತ್ತೆತ್ತಲೊ ಕಾಲೊಗೆಯುತಲಿ॥

ಹಿಂಸಾನಂದದಿ ಲಯಸಂತೋಷದಿ  
ತಾಮಸ ಜಗಮೃಗ ಜೀವವ ಕೊಳ್ಳುತಿದೆ।  
ಹಿಂಸೆಯಕುರುಹಿನ ಚರ್ಮವ ಸೊಂಟಕೆ  
ಸುತ್ತುತ ಸುಡುಗಾಡೊಡೆಯನ ಹೋಲುತಿದೆ॥

CC-0. Jangamwadi Math Collection. Digitized by eGangotri

# ಈ ಸಲದ ಸಾಹಿತ್ಯಸಮ್ಮೇಲನವು

ಶ್ರೀ. ಬೆಟಗೇರಿ ಕೃಷ್ಣಶರ್ಮ.

ಉತ್ತರಕನ್ನಡ ಜಿಲ್ಲೆಯ ಉತ್ಸಾಹಶಾಲಿಗಳಾದ ಕನ್ನಡಿಗರ ಯಾಜಮಾನ್ಯದಲ್ಲಿ, ಈ ಸಲದ ಸಾಹಿತ್ಯಸಮ್ಮೇಲನ ಸತ್ರವು, ಕಾರವಾರದಲ್ಲಿ ಯಶಸ್ವಿಯಾಗಿ ನೆರವೇರಿದುದು ಸಂತೋಷಕರವಾದ ಸಂಗತಿ. "ಎಲ್ಲ ಮಾತಿನಲ್ಲಿಯೂ ತಮ್ಮ ಜಿಲ್ಲೆ ಹಿಂದುಳಿದುದು" [illegible] ಮರುಕದಿಂದಾಡುತಿರುವ ಅಲ್ಲಿಯವರ ಮಾತು [illegible] ಕಿವಿಗೆ ಬೀಳುತಿದ್ದಿತು. ಆದರೆ ಮುಂದುವರಿದು[illegible] ಕೊಳುವ ಮಿಕ್ಕ ಯಾವ ಜಿಲ್ಲೆಯವರಿಗಿಂತಲೂ [illegible]



೨ನೆಯ ಸಾಲಿನಲ್ಲಿ ನಿಂತವರು ಎಡದಿಂದ ಬಲಕ್ಕೆ (೧) ಗ. ರಾ. ಯಾಜಿ (೨) ಭೀ. ಶ. ಬೆಟಗೇರಿ (೩) ಎಸ್. ಕೃಷ್ಣಭಟ್ಟ[illegible] (೪) ಪೋತದಾರ ರಂಗಪ್ಪ (೫) ಕೆ. ಶಂಕರನಾರಾಯಣ (೬) ಕೆ. ಶಂಕರಭಟ್ಟರು (೭) ಮಾಂಜರೇಕರ ಹನುಮಂತರಾಯರು (೮) [illegible] ಅವರು (೯) ಶೆಟ್ಟಿ ವಕೀಲರು (೧೦) ಅಡ್ಕೋಳಿ ವೆಂಕಟರಾಯರು.

ಕುರ್ಚಿಯ ಮೇಲೆ ಕುಳಿತವರು: (೧) ಶಾಸ್ತ್ರಿ ಶಿವರಾಯರು. (೨) ಸಿ. ಕೆ. ವೆಂಕಟರಾಮಯ್ಯನವರು. (೩) ವಿ. ಸೀತಾರಾಮಯ್ಯನವರು. (೪) ಮುಳಿಯ ತಿಮ್ಮಪ್ಪಯ್ಯನವರು. (೫) ಸಾಲ್ದಾನಾ ಅವರು. (೬) ಬಿ. ಎಮ್. ಶ್ರೀಕಂಠಯ್ಯನವರು. (೭) ತೇಲಂಗ ಮಂ[illegible]ರಾಯರು.

ಕೆಳಕ್ಕೆ ಕುಳಿತವರು: (೧) ಕುರಡಿ ನಾರಾಯಣರಾಯರು. (೨) ದಿನಕರ ದೇಸಾಯಿ. (೩) ಬೇಂದ್ರೆ ದತ್ತರಾಯರು. (೪) [illegible] ಕೃಷ್ಣಶರ್ಮ. (೫) ಮು. ಪು. ಲಕ್ಷ್ಮೀ ನರಸಿಂಹಶಾಸ್ತ್ರಿ. (೬) ಅನಂತ ಮಂಗೇಶ ಭಟ್ಟ.

CC-0. Jangamwadi Math Collection. Digitized by eGangotri

ಯಲ್ಲದಂತೆ ಉ. ಕ. ಜಿಲ್ಲೆಯವರು ಸಮ್ಮೇಲನದ ಕೆಲಸವನ್ನು ಸಾಗಿಸಿದರು. ಅಲ್ಲಿಯ ಎಲ್ಲರ ಮುಖದಲ್ಲಿಯೂ ಉತ್ಸಾಹದ ಮಂದಹಾಸ್ಯ. ವಿನಯದ ಮೆಲುನುಡಿಗಳು. ಕನ್ನಡಿಗರೆಲ್ಲರೂ ಒಂದಾಗಬೇಕೆಂಬ ಆತುರವು ಅವರಲ್ಲಿ ತುಂಬಿತುಳುಕುತ್ತಿದೆ. ಹೊರಗಣ ಅತಿಥಿಗಳನ್ನು ಆದರಿಸುವ—ಅವರೊಡನೆ ಕೆಳೆಯನ್ನು ಬಳೆಯಿಸಲು ಹಾತೊರೆಯುವ ಅಲ್ಲಿಯವರ ಸ್ವಭಾವವು ಅಭಿನಂದನೀಯವಾದುದು.

ಪ್ರಕೃತಿಯೆ ಅಲ್ಲಿಯ ಜನರನ್ನು ಅಷ್ಟೊಂದು ಒಳ್ಳೆಯವರನ್ನಾಗಿ ಮಾಡಿದೆಯೆಂದು ತೋರುವುದು. ಮುಳ್ಳು-ಗಂಟುಗಳಿಲ್ಲದೆ ನೇರವಾಗಿ ಬೆಳೆದು ಮುಗಿಲನ್ನು ಮುತ್ತಿಡಲು ಹೊರಟ ಮರಗಳ ಮಲೆಗಳೆ ಎಲ್ಲಿ ನೋಡಿದಲ್ಲಿ. ಹಸುರಿಲ್ಲದ ನೆಲವನ್ನು ಕಾಣುವುದು ಮನೆಗಳ ಬಳಬದಿಗಳಲ್ಲಿಯೆ ಮಾತ್ರ. ಬಗೆಬಗೆಯ ಚೆಲುವನ್ನು ತಳೆದು ತೆರತೆರದ ಕಂಪನ್ನು ಹರಡುವ ಹೂಗಳು ಅರಳಿ ನೋಡಿದವರೆದೆಯನ್ನು ನಲಿಸುತಿರುವವಲ್ಲಿ. ಇನ್ನೊಂಡೆಡೆಗೆ ನೋಡಿದರೆ ಗಭೀರವಾದ ಸಾಗರರಾಶಿ. ನಸುಕಿನಲ್ಲಿ ಒಂದು ಬಗೆಯ ಚೆಂದ, ಬೆಳಗಿನಲ್ಲಿ ಇನ್ನೊಂದುಬಗೆಯ ಅಂದ. ಮಧ್ಯಾಹ್ನದಲ್ಲಿ ಅದೊಂದು ಬಗೆಯ ಸೊಬಗು. ಸಾಯಾಹ್ನದಲ್ಲಿ ಇನ್ನೊಂದು ವಿಧದ ಬೆಡಗು. ಕಗ್ಗತ್ತಲಲ್ಲಿ ಒಂದು ತೆರದ ಚೆಲ್ವಾದರೆ, ಬೆಳದಿಂಗಳಲ್ಲಿ ಇನ್ನೊಂದುತೆರದ ಚೆಲ್ವು. ನೆಲವಿದ್ದಲ್ಲಿ ನೀರಿದ್ದಲ್ಲಿ ಚೆಲುವು ನೆಲೆಮಾಡಿಕೊಂಡಿದೆ. ಉಣ್ಣುವ ಊಟದಂತೆ—ಕುಡಿಯುವ ನೀರಿನಂತೆ ಹಗಲಿರುಳೂ ಚೆಲುವು ರಕ್ತಗತವಾಗುತ್ತಿರಲು ಅಲ್ಲಿಯವರ ಮನಸ್ಸೂ ಹೃದಯವೂ ಚೆಲುವಾಗಿರುವುದು ಆಶ್ಚರ್ಯವೆ! ತಮ್ಮಲ್ಲಿಯ ಸೃಷ್ಟಿಯ ಚೆಲುವನ್ನು—ಸಮ್ಮೇಲನದ ಸ್ವಾಗತಗೀತೆಯನ್ನು ಬರೆದ—ಶ್ರೀ. ಪ್ರಭು ವೆಂಕಟರಾಯರು ಅನುಭವಿಸಿದ ಎದೆಯಿಂದ ಒಡೆನುಡಿದಿರುವರು. ಅದನ್ನು ಎಲ್ಲರೂ ನೋಡಬೇಕು.

"ಪಡುವಲಿಗೆ ಬಲುಗಡಲು ಮಲೆಗಳ ಸಾಲು ಬಳಸಿದೆ ಮೂಡಲು,
ಗಿಡಮರದ ಹಸುರನ್ನು ಮುಗಿಲಿನ ನೀಲದೊಂದಿಗೆ ಬೆಸೆವೊಲು;
ಬಾಳೆ ಹಲಸಿನಿಮಾವು ತೆಂಗಡಕೆಗಳ ಮೇಳಿಲೆವಳ್ಳಿಯು,
ಈಳೆ ಮಾದಳ ಕಂಚಿ ಲಿಂಬೆಗಳಿಹವು ಮೆಣಸೇಲಕ್ಕಿಯು;
ಸೂಜಿಮಲ್ಲಿಗೆ ದುಂಡುಮಲ್ಲಿಗೆಯೊಡನೆ ಕಸ್ತುರಿ ಮಲ್ಲಿಗೆ
ಜಾಜಿ ಸಂಪಗೆ ನಾಗಸಂಪಗೆ ಹೊನ್ನೆಸಳ ಸೇವಂತಿಗೆ;
ಹಳ್ಳಕೆರೆ ಹೊಳೆತುಂಬಿ ಹರಿವುದು ಕೊರತೆ ಕಾಣದು ನೀರಿಗೆ
ನೆಲ್ಲು ಕಬ್ಬಿನ ಗದ್ದೆ ತೋಟಗಳಿಹವು ದುಡಿತದ ಬಾಳ್ವೆಗೆ"

ಇದಿಷ್ಟೇ ಅಲ್ಲ; ಇಡಿಯ ಪದ್ಯವೇ ನೋಡುವಂತಿದೆ. "ಆರಂಕುಸವಿಟ್ಟೊಡಂ ನೆನೆವುದೆನ್ನಮನಂ ಬನವಾಸಿ ದೇಶಮಂ" ಎಂದೂ "ಮರಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ಬನವಾಸಿ ದೇಶದೊಳ್" ಎಂದೂ ಹಂಬಲಿಸಿದ ಪಂಪನ ಮಾತುಗಳ ಸತ್ಯತೆಯು ಅಲ್ಲಿ ಹೋದವರ ಅನುಭವಕ್ಕೆ ಬಾರದಿರದು.

ಉತ್ತರಕನ್ನಡ ಜಿಲ್ಲೆಯಲ್ಲಿ ನೋಡಿದಲ್ಲೆಲ್ಲ ಕಣ್ಣಿಗೆ ಬೀಳುತ್ತಲಿರುವ ವೀರಗಲ್ಲು ಮಾಸತಿಕಲ್ಲುಗಳು ಅಲ್ಲಿಯ ಬಂಟರ ಬಂಟತನಕ್ಕೆ ಸಾಕ್ಷಿಯಾಗಿರುವವು. ಕಣ್ಣಿಟ್ಟು ಹುಡುಕಿದರೆ ಎಣಿಕೆಯಿಲ್ಲದಷ್ಟು ಸಿಕ್ಕುವ ತಾಳೆಗರಿಯ ಗ್ರಂಥಸಂಗ್ರಹವು ಅಲ್ಲಿಯ ಹವ್ಯಕಬ್ರಾಹ್ಮಣರ ಉಚ್ಚ ಸಂಸ್ಕೃತಿಗೆ ಸಾಕ್ಷಿಯಾಗಿರುವವು. ಕಾಲವೈಪರೀತ್ಯದಿಂದ ಈಗ ಹೀನಸ್ಥಿತಿಗೆ ಬಂದಿದ್ದ ಈ ಸಮಾಜಗಳೆರಡೂ ಚೇತರಿಸುತ್ತಲಿರುವ ಕರ್ನಾಟಕದೊಂದಿಗೆ ಮೇಲಕ್ಕೆದ್ದು ಮತ್ತೆ ತಮ್ಮ ಮೊದಲಿನ ಸ್ಥಾನವನ್ನೂ ಮಾನವನ್ನೂ ಪಡೆಯುವುವೆಂದು ನಾವು ಆಶೆಪಟ್ಟರೆ ಅದರಲ್ಲಿ ಅಚ್ಚರಿಪಡಬೇಕಾದುದೇನೂ ಇಲ್ಲ. ಈ ಸಲದ ಸಾಹಿತ್ಯಸಮ್ಮೇಲನದ ಕಾರ್ಯನಿರ್ವಹಣದಿಂದ ನಮ್ಮ ಆಶೆಗೆ ಇನ್ನಿಷ್ಟು ಹೆಚ್ಚಾಗಿ ಕೊನರು ಬಿಡುತ್ತಲಿದೆ.

ಡಿಸೆಂಬರು ೨೮ನೆಯ ತಾರೀಕಿನ ಬೆಳಗಿನ ಎಂಟು ಗಂಟೆಗೆ ಸಮ್ಮೇಲನದ ಕಾರ್ಯಕ್ಕೆ ಮೊದಲಾಯಿತು. ಎಳವರಯದ ಹೆಣ್ಣುಮಕ್ಕಳೂ ನಾಟಕಾಲಂಕಾರ ಗರುಡ ಸದಾಶಿವರಾಯರೂ ಸ್ವಾಗತಗೀತೆಯನ್ನಂದು, ಅದಱಿಂದ ಹೊಱಹೊಱಟ ಸವಿಯು ಸಮ್ಮೇಲನದ ಕೆಲಸವೆಲ್ಲವೂ ಕೊನೆಗೊಳ್ಳುವವರೆಗೆ, ಸಭಾಮಂಟಪದಲ್ಲಿ ನಲಿಯುತಿರುವಂತೆ ಮಾಡಿದರು. ಸ್ವಾಗತಾಧ್ಯಕ್ಷರಾದ ಶ್ರೀ. ಶಾಸ್ತ್ರಿ ಶಿವರಾಯರ ಮಾತು ಕೊಂಚ ಉದ್ದವಾಗಿದ್ದರೂ ಉದ್‌ಬೋಧಕವಾಗಿದ್ದಿತು. ಅವರು ತಮ್ಮ ಜಿಲ್ಲೆಯ ಪರಿಸ್ಥಿತಿಯನ್ನು ಹೇಳುವಾಗ "ಬಹುವರ್ಷಗಳಿಂದ ಈಗಿನ ಉತ್ತರಕನ್ನಡ ಜಿಲ್ಲೆಯಲ್ಲಿ ಅನೇಕ ಸಂಸ್ಕೃತಿಗಳ—ಅಂದರೆ ಆರ್ಯ ಆರ್ಯೇತರ ಸಂಸ್ಕೃತಿಗಳ ಮಿಶ್ರಣವಾಗಿರುವುದಱಿಂದ, ಹಾಗೂ ರಾಜಕೀಯ ಆರ್ಥಿಕ ವಿಚಾರಗಳಲ್ಲಿ ಕನ್ನಡೇತರ ಜನಗಳು ಮೂಲಕನ್ನಡಿಗರಗಿಂತ ಮುಂದೆ ಸಾಗಿಹೋದದ್ದಱಿಂದ ಬೇರೆ ಬೇರೆ ಸ್ವಭಾವಗಳ ಮತ್ತು ಸಂಸ್ಕೃತಿಗಳ



CC-0. Jangamwadi Math Collection. Digitized by eGangotri

ಈ ಜನರಲ್ಲಿ ಮೂಲನಿವಾಸಿಗಳಾದ ಕನ್ನಡಿಗರ ಬಗ್ಗೆ ಸಹಾನುಭೂತಿ ಇಲ್ಲದೆ ಇದ್ದುದರಿಂದ ಕನ್ನಡಿಗರ ಸ್ಥಿತಿಯು ಈಗ ದೃಗ್ಗೋಚರವಾಗುವಂತೆ ಆಗಿರುವುದು. ಮತ್ತು ಕನ್ನಡ ಸಾಹಿತ್ಯದ ಏಳಿಗೆಯ ದೃಷ್ಟಿಯಿಂದ ವಿಚಾರಮಾಡಿದರೆ ಉತ್ತರಕನ್ನಡಿಗರು ಕರ್ಣಾಟಕದ ಉಳಿದ ಭಾಗಗಳಿಗಿಂತ ಈ ವಿಷಯದಲ್ಲಿ ಯಾಕೆ ಹಿಂದುಳಿದಿರುವರೆಂಬ ಪ್ರಶ್ನೆಗೆ. ಇದೇ ಮುಖ್ಯ ಕಾರಣವೆಂದು ತಿಳಿದು ಬರುವುದು.'' ಎಂದಿರುವರು. ಈ ಮಾತಿನ ಸತ್ಯತೆಯು ಕಾರವಾರ ಜಿಲ್ಲೆಯನ್ನು ಕಂಡವರಿಗೆ



ಶ್ರೀ. ಶಾಸ್ತ್ರೀ ಶಿವರಾಯರು ಸಾ. ಸಮ್ಮೇಲನದ ಸ್ವಾಗತಾಧ್ಯಕ್ಷರು.

ತಟ್ಟನೆ ಕಂಡುಬರುವುದು. ಅಲ್ಲಿ ವಿಶೇಷವಾಗಿ ಮುಂದುವರಿದ ಸಮಾಜಗಳೆಂದರೆ, ಸಾರಸ್ವತ–ಗೌಡಸಾರಸ್ವತರವು. ಹವ್ಯಕಬ್ರಾಹ್ಮಣರಲ್ಲಿ ಪ್ರಾಚೀನ ಸಂಸ್ಕೃತಿಯ ನೆರಳು ಉಳಿದಿದ್ದರೂ ನವೀನ ನಾಗರಿಕತೆಯು ಅವರನ್ನು ಸೋಂಕಿಲ್ಲ. ಸಾರಸ್ವತ ಗೌಡಸಾರಸ್ವತ ಸಮಾಜಗಳ ಮುಖವು ವ್ಯಾಪಾರಕ್ಕಾಗಿಯೋ ಬೇರೆ ಉದ್ಯೋಗಗಳ ಸಲುವಾಗಿಯೊ ಬೇರೆ ಕಡೆಗೆ ತಿರುಗಿ[illegible]ವುದು. ತಮ್ಮ ಜಿಲ್ಲೆಯ ಹಿಂದುಳಿದ ಸಮಾಜಗಳ[illegible] ಮುಂದುವರಿಯಿಸಲು ಹೆಣಗುವವರು ಸಾವಿರಕ್ಕೆ[illegible]ರಾದರೂ ಅವರಲ್ಲಿ ಸಿಕ್ಕುವರೋ ಇಲ್ಲವೊ ಸಂಶ[illegible] ಬೇರೆ ಕಡೆಯಿಂದ ಅಲ್ಲಿ ನಾಗರಿಕತೆಯ ಹೊ[illegible] ಹರಿದುಹೋಗಬೇಕೆಂದರೆ ಪ್ರಕೃತಿದೇವಿ ಬಗೆ ಬ[illegible] ತಡೆಗಟ್ಟುಹಾಕಿ ಬಿಟ್ಟಿದ್ದಾಳೆ. ಅಲ್ಲಿಯ ಸಾಮಾ[illegible] ಜೀವನದ ವಿಷಮತೆಯನ್ನು ಕಂಡು ಯಾ[illegible] ಕಳವಳವೆನಿಸದಿರದು.

ಸ್ವಾಗತಾಧ್ಯಕ್ಷರು ಸಾಹಿತ್ಯದ ಸರ್ವಾಂಗಗಳ[illegible] ಎತ್ತಿ ಚರ್ಚೆ ಮಾಡಿದ್ದಾರೆ. '' ಸಾಹಿತ್ಯ ಮತ್ತು ರಾ[illegible] ಕಾರಣ '' ಎಂಬ ಮಾತಿನ ವಿವೇಚನೆಯನ್ನು ವಿಸ್ತಾ[illegible]ವಾಗಿ ಮಾಡಿ '' ರಾಜಕಾರಣದಲ್ಲಿ ಕನ್ನಡಿಗರು ಹಿ[illegible]ಳಿಯುವುದಕ್ಕೆ ಸಾಹಿತ್ಯಪ್ರಚಾರದಲ್ಲಿ ತೋರಿಸಿದ [illegible]ಸ್ಥೆಯೇ ಕಾರಣವೆಂದು ನನ್ನ ತಿಳುವಳಿಕೆಯಿದೆ'' [illegible] ಮುತ್ತಿನಂತಹ ಮಾತನ್ನು ಹೇಳಿರುವರು. [illegible] ' ಸಾಹಿತ್ಯದಲ್ಲಿ ಸ್ವಾತಂತ್ರ್ಯವು ಬೇಕು ' ಎನ್ನು[illegible] '' ಕನ್ನಡ ಸಾಹಿತ್ಯವು ಹಿಂದುಳಿಯುತ್ತಿರುವ [illegible] ಕೀರ್ತಿಯು ವಿಶ್ವವಿದ್ಯಾಲಯದ ಪದವೀಧರರ [illegible] ಮೇಲೆ'' ಎಂಬ ಮಾತನ್ನು ಸಾರಿ ಹೇಳಿ, ಬಳಿಕ ಕನ್ನ[illegible] ಅಭಿವೃದ್ಧಿಯ ಬಗೆಗೆ ಬೇಕಾದ ವಿಧಾಯಕ ಕಾ[illegible]ಗಳನ್ನು ಹೇಳಿರುವರು. ಕೊನೆಕೊನೆಗೆ ಹೇಳಿದ '' [illegible]ಟಕದ ಪಶ್ಚಿಮಸೀಮೆಯಲ್ಲಿಯೂ ತಮ್ಮ [illegible] ಹೇಗೋ ಜೀವವನ್ನಿಟ್ಟುಕೊಂಡು ಕನ್ನಡ ಸಂಸ್ಕೃ[illegible] ಕನ್ನಡನಾಡಿನ ಅಭಿಮಾನವನ್ನು ಇದುವರೆಗೆ [illegible] ಕೊಂಡಿರುತ್ತಾರೆಂಬುದರ ಪ್ರತ್ಯಕ್ಷಜ್ಞಾನವು ತ[illegible]ರಿಗೂ ಆಗಬೇಕೆಂಬ ಉದ್ದೇಶದಿಂದಲೆ ಎಲ್ಲ [illegible] ಹೀನಾವಸ್ಥೆಯಲ್ಲಿರುವ ನಮ್ಮ ಈ ಬಡ ಜಿಲ್ಲೆಗ[illegible]ನ್ನೆಲ್ಲ ಇಷ್ಟು ದೂರದಿಂದ ಬರಮಾಡಿಕೊಂಡಿರುತ್ತೇ[illegible] ಈ ಮಾತು ಕಳವಳವನ್ನೂ ಆನಂದವನ್ನೂ [illegible] ಉಂಟುಮಾಡುವುವು.

ಅಧ್ಯಕ್ಷರನ್ನು ಗುರುತು ಮಾಡಿಕೊಡುವ[illegible] ಕನ್ನಡನಾಡಿನ ಬೇರೆಬೇರೆ ಕಡೆಯ ಜನರು ಮಾ[illegible]ದರು. ಶ್ರೀ. ಸೌ. ಪಂಜೆ ಕೃಷ್ಣಾಬಾಯಿಯ[illegible] ಆಡಿದ ಮಾತುಗಳು ತುಂಬ ಸಮಯೋಚಿತವಾಗಿ[illegible]

CC-0. Jangamwadi Math Collection. Digitized by eGangotri

ಶ್ರೀಮತಿಯವರು ಸಾರಸ್ವತಸಮಾಜದವರಾದರೂ ಅಚ್ಚಗನ್ನಡಿಗರ ಅಭಿಮಾನವಿದೆಯವರಲ್ಲಿ. ಇವರು ಹಿಂದುಳಿದ ಜನರ ಕಡೆಗೆ ಬೆನ್ನು ತಿರುಗಿಸಿ ನಿಂತವರಲ್ಲ. ತೆರೆದ ಕಣ್ಣಿನ ಮುಖತಿರುಗಿಸಿನಿಂತವರು. ಅವರ ಕಲ್ಯಾಣಕ್ಕಾಗಿ ಹೆಣಗುವವರು. ಉತ್ತರಕನ್ನಡಜಿಲ್ಲೆಯ ಸುಶಿಕ್ಷಿತಮಹಿಲೆಯರು ಇವರ ಕಾರ್ಯಪದ್ಧತಿಯನ್ನು ಆದರ್ಶವಾಗಿಟ್ಟುಕೊಂಡಲ್ಲಿ ತಮಗೂ ಗೌರವ. ತಾವಿರುವ ದೇಶಕ್ಕೂ ಗೌರವ.

ಈ ಸಲ ಅಧ್ಯಕ್ಷರಾಗಿದ್ದ ಶ್ರೀ. ಮುಳಿಯ ತಿಮ್ಮಪ್ಪಯ್ಯನವರು ಕನ್ನಡನುಡಿಯ ನೆಲೆಯನ್ನು ಚೆನ್ನಾಗಿ



ಶ್ರೀ. ಮುಳಿಯ ತಿಮ್ಮಪ್ಪಯ್ಯನವರು. ಸಾ. ಸಮ್ಮೇಲನದ ಅಧ್ಯಕ್ಷರು

ಅರಿತವರು. ಹೊಸಸಾಹಿತ್ಯ, ಹಳೆಯಸಾಹಿತ್ಯ ಇವೆರಡರ ತಿರುಳನ್ನೂ ತಿಳಿದವರು. ಅವರ 'ಚಂದ್ರಾವಳೀವಿಲಾಸ' ಸೊಬಗಿನ ಬಳ್ಳಿ, ನಡತೆಯ ನಾಡು, ಹಗಲಿರುಳು" ಎಂಬ ಗ್ರಂಥಗಳೂ, ಅಲ್ಲಲ್ಲಿ ಬರೆದ ವಿಚಾರಪರಿಪ್ಲುತವಾದ ಬರೆಹಗಳೂ ಅವರ ಯೋಗ್ಯತೆಯನ್ನು ಪ್ರದರ್ಶಿಸಲಿಕ್ಕೆ ಸಾಕು. ಅಧ್ಯಕ್ಷಸ್ಥಾನದಿಂದ ಅವರು ಆಡಿದ ಮಾತುಗಳಾದರೂ ಬೆಲೆ ಬಾಳುವುವಾಗಿವೆ. ಇವರು ತಮ್ಮ ಮಾತಿನಲ್ಲಿ ಬೇರೆ ಬೇರೆ ಆರು ವಿಭಾಗಗಳನ್ನು ಮಾಡಿರುವರು. ಮೊದಲನೆಯ ಭಾಗದಲ್ಲಿ ಉತ್ತರಕನ್ನಡ ಜಿಲ್ಲೆಯ—ಬನವಾಸಿ ನಾಡಿನ ಐತಿಹಾಸಿಕ ಮಹತಿಯನ್ನು ಕೊಂಡಾಡಿರುವರು. ಗಿಳಿಗೆ ಪಂಡಿತವಕ್ಕಿಯೆಂದು ಹೆಸರು ಬರಲು ಕಾರಣವಾಗಿರಬಹುದಾದ ಅತ್ತಕಡೆಗೆ ಪ್ರಚಾರದಲ್ಲಿರುವ ಪೌರಾಣಿಕ–ಜಾನಪದ ಕಥೆಯೊಂದನ್ನು ಹೇಳಿರುವರು. ಎರಡನೆಯ ಭಾಗದಲ್ಲಿ "ಸಾಹಿತ್ಯವೆಂದರೇನು? ದೇಶ ಭಾಷೆಯ ಸಾಹಿತ್ಯದ ಮಹತ್ವವೇನು?" ಎಂಬುದನ್ನು ತಲೆದೂಗುವಂತೆ ವಿವೇಚಿಸಿರುವರು. "ಮನುಷ್ಯನಲ್ಲಿ ಸಂಸ್ಕೃತಿಯನ್ನೊದಗಿಸಲು ತಯಾರಾದ ಶಬ್ದಾರ್ಥಗಳ ಸಾಹಿತ್ಯವನ್ನೇ ಸಾಹಿತ್ಯಶಾಸ್ತ್ರವೆಂದು ಹೇಳುವುದು" ಇದೀಗ ಶ್ರೀ. ತಿಮ್ಮಪ್ಪಯ್ಯನವರ ಸಾಹಿತ್ಯದ ವ್ಯಾಖ್ಯೆ. "ಲೋಕಹಿತವಾಗಬೇಕಾದರೆ ಆಯಾವ್ಯಕ್ತಿಗಳಲ್ಲಿ ಸಂಸ್ಕೃತಿ ನೆಲೆಗೊಂಡಿರಬೇಕು. ಆ ಸಂಸ್ಕೃತಿಯುಂಟಾಗಬೇಕಾದರೆ ಮೊದಲಿನ ಸಾಹಿತ್ಯಗಳನ್ನಭ್ಯಾಸ ಮಾಡುವುದಷ್ಟೇ ಅಲ್ಲ; ಕಾರ್ಯಗಳಾಗುವಂತೆ ನಮ್ಮ ಕರಣಗಳಲ್ಲಿ ಅವುಗಳ ಸಾಮರಸ್ಯವನ್ನು ಒದಗಿಸಬೇಕು. ಪೂರ್ವಾಚಾರ್ಯರ ಸಂಸ್ಕೃತಿಪಡೆದ ತ್ರಿಕರಣಗಳೊಳಗಿನ ವಾಕ್ಕೇವಿಸ್ತರಿಸಿ ಪೂರ್ವಸಾಹಿತ್ಯವಾದಂತೆ, ಈಗಿನವರ ವಾಕ್ಕೇ ವಿಸ್ತರಿಸಿ ಆಧುನಿಕ ಸಾಹಿತ್ಯವಾಗುತ್ತದೆ. ಆ ಪೂರ್ವಸಾಹಿತ್ಯವು ಆಧುನಿಕರ ಸಂಸ್ಕೃತಿಗೆ ಆಧಾರವಾದಂತೆ ಆಧುನಿಕಸಾಹಿತ್ಯವು ಭಾವಿಜನಾಂಗದ ಸಂಸ್ಕೃತಿಗೆ ಅಡಿಗಟ್ಟಾಗುವುದು. ಆಯಾ ದೇಶೀಯರ ತ್ರಿಕರಣಗಳೊಳಗಿನ ಸಾಹಿತ್ಯವಾಗಬೇಕಾದ ವಾಕ್ಕೆಂಬುದು ಆಯಾದೇಶದ ಭಾಷಾತ್ಮಕವೇ ಆಗಿರತಕ್ಕುದೆಂಬುದನ್ನು ಹೇಳಬೇಕಾಗಿಲ್ಲ. ಹಾಗಿಲ್ಲದೆ ಪರಭಾಷಾತ್ಮಕವಾದರೆ ಅದರ ಪರಿಣಾಮವು ಮನಸಿನಲ್ಲಿಯೂ ಕಾರ್ಯದಲ್ಲಿಯೂ ಪರಿಣಮಿಸುವುದು. ಅದರಿಂದ ಸಂಸ್ಕೃತಿ ಕೆಟ್ಟುಹೋಗುವುದು. ಅದರಿಂದಲೆ ಕೆಲಗಾಲದಿಂದಿತ್ತ ನಮ್ಮ ಕನ್ನಡಿಗರ ಹುರುಪು ಮಾಸಿಹೋಗಿರುವುದು. ಎಚ್ಚರಗೊಂಡ ಕನ್ನಡಿಗರಲ್ಲಿ ಆ ಸಂಸ್ಕೃತಿ ಇತ್ತೀಚೆಗೆ ತಲೆದೋರತೊಡಗಿರುವುದು ಆನಂದಾಸ್ಪದವು." ಎಂದು ಹೇಳಿರುವ ಮಾತು, ಅದೆಷ್ಟು ಚಮತ್ಕೃತಿಯದಾಗಿಯೂ ಯುಕ್ತಿ ಯುಕ್ತವಾಗಿಯೂ ಇದೆಯೆಂಬುದನ್ನು—ಕನ್ನಡದ ಕಡೆಗೆ ಉಪೇಕ್ಷೆಯುಳ್ಳ ಕನ್ನಡಿಗರು—ವಿಚಾರಮಾಡಿ ತಿಳಿದುಕೊಳ್ಳುವಂತಹದು.

ಮೂರನೆಯ ಭಾಗದಲ್ಲಿ ಅಂದಿನ ಇಂದಿನ "ಕನ್ನಡ ಸಾಹಿತ್ಯಸಾಮ್ರಾಜ್ಯದ ಸಿಂಹಾವಲೋಕನ" ವಿದೆ. ಅಂದಿನ

CC-0. Jangamwadi Math Collection. Digitized by eGangotri

ಜೈನರ–ವೀರಶೈವರ–ವೈಷ್ಣವರ ಸಾಹಿತ್ಯದ ಒಳಗನ್ನು ತಮ್ಮ ಹೊಸ ನೋಟದಿಂದ ನೋಡಿ, ಕಂಡುಂಡ ಮಾತನ್ನು ವಿವರಿಸುವರು. "ಸಾಹಿತ್ಯವು ಲಕ್ಷಣಬದ್ಧವಾಗಿರ ಬೇಕೆಂದು ಹೋರಾಡಿದ ಮನ್ನಣೆ ಜೈನರಿಗೆ. 'ಸಾಹಿತ್ಯವು ಒಬ್ಬಿಬ್ಬರಸೊತ್ತಲ್ಲ; ಜನಸಾಮಾನ್ಯರ ಹಕ್ಕಿನದು. ಲಕ್ಷಣ ಗಳಲ್ಲೇ ಕಣ್ಣಿಡುತ್ತಾ ಹೋದರೆ ಅರ್ಥವಾಗದ ನಾಡವ ರಿಗೆ ಅದೊಂದು ಅವಲಕ್ಷಣವೇ ಆದೀತು.' ಎಂದು ಅದನ್ನು ಊರಲ್ಲೆಲ್ಲ ಹಾಸುಹೊಕ್ಕಾಗಿ ಹೆಣೆದ ಹೆಗ್ಗಳಿಕೆ ವೀರಶೈವರಿಗೆ. ಒಂದು ತಣ್ಣೀರು. ಮತ್ತೊಂದು ಬೆನ್ನೀರು ಎಂದೆಣಿಸಿ ಎರಡನ್ನೂ ಸೇರಿಸಿದ ಜಾಣ್ಮೆ ವೈಷ್ಣವರಿಗೆ." ಇದೇ ಕಂಡುಂಡಮಾತು. ಮತ್ತೊಂಡೆದೆಯಲ್ಲಿ "ಸಾಹಿತ್ಯ ಸಾಮ್ರಾಜ್ಯದಲ್ಲಿ ವೀರಶೈವರೆಂದರೆ ಸರ್ವಸಮತಾವಾದಿ ಗಳು" ಎಂದೂ "ಎರಡು ಪಂಗಡಗಳಲ್ಲಿರುವ ಉದಾತ್ತ ವಿಷಯುಗಳನ್ನೆತ್ತಿಕೊಂಡ ಉದಾರ ಪಕ್ಷದವರು ವೈಷ್ಣವ ಕವಿಗಳು" ಎಂದೂ ಹೇಳಿದ ಮಾತು ಯಥೋಚಿತ ವಾಗಿವೆ. ಕೊನೆಗೆ ಇಂದಿನ ಸಾಹಿತ್ಯದ ಕಡೆಗೆ ತಿರುಗಿ, "ಈಗಳಿನ್ನು ಅಧಿಕಾರಾರೂಢವಾಗುತ್ತಿರುವುದು ವಿಶಿಷ್ಟ ವಾದ ಹೊಸಗನ್ನಡ ಸಾಹಿತ್ಯವು. ಇದರಲ್ಲಿ ಜೈನಶೈವಾದಿ ಮತಸಂಬಂಧ ಮುದ್ರೆಯಿಲ್ಲ. ಪಾಶ್ಚಾತ್ಯ ಪೌರ್ವಾತ್ಯ ಸಂಸ್ಕೃತಿ, ಈಗಿನ ವಾತಾವರಣದಿಂದೊದಗಿದ ರಾಷ್ಟ್ರೀಯ ಭಾವನೆ, ಆತ್ಮವಿಶ್ವಾಸ ಈ ಮುಪ್ಪುರಿಗಳಿಂದ ಬಲಿದಿರುವ ಸಾಹಿತ್ಯವಿದು. ಈ ನೂತನ ಸಾಹಿತ್ಯ ಸುಧಾರಕರೇ ಸ್ವಾತಂತ್ರ್ಯವಾದಿಗಳು" ಎಂಬ ಸವಿಮರ್ಶಕವಾದ ಮಾತನ್ನು ಹೇಳಿರುವರು.

ನಾಲ್ಕನೆಯ ಭಾಗದಲ್ಲಿ "ಪೂರ್ವದ ಹಳಗನ್ನಡ"ದ ವಿಷಯದಲ್ಲಿ ವಿಚಾರಾತ್ಮಕವಾದ ಚರ್ಚೆಯಿದೆ. ಐದನೆಯ ಭಾಗದಲ್ಲಿ "ದಕ್ಷಿಣೋತ್ತರ ಮಾರ್ಗ"ಗಳ "ಸಯ್ಯುತ್ತ ಕೊಂಕು"ಗಳ ಬಗೆಗಿರುವ ತಮ್ಮ ವಿಚಾರಗಳನ್ನು ಹೇಳಿ, ಬಳಿಕ ಧಾರವಾಡ ಮಂಗಳೂರು ಮೈಸೂರುಗಳ ಕಡೆ ಯಿಂದ ಸದ್ಯಕ್ಕೆ ಹರಿದು ಹರಿದುಬರುತಿರುವ ಕಾವ್ಯ ಪ್ರವಾಹಗಳಲ್ಲಿಯ ಮರ್ಮವನ್ನು, ಒಂದೆರಡು ಉದಾ ಹರಣೆಗಳಿಂದ ಎತ್ತಿ ತೋರಿಸಿರುವರು. "ನೃಪತುಂಗ ನಂತೆ ಈಗಿನವರು "ಕನ್ನಡಂಗಳ"ನ್ನೆಲ್ಲ ಒಟ್ಟುಗೂಡಿಸಿ ದೇಸಿಯನ್ನಾಗಿ ಮಾಡತೊಡಗಿರುವುದು ಧೈರ್ಯವನ್ನೂ ಆನಂದವನ್ನೂ ಒದಗಿಸುತ್ತದೆ" ಎಂದಿರುವ ಇವರ ಮಾತು ನೂತನಸಾಹಿತ್ಯದ ವಿಷಯದಲ್ಲಿರುವ ಪ್ರೀತಿ ಯನ್ನು ಸೂಚಿಸುವುದು.

ಆರನೆಯ ಭಾಗದಲ್ಲಿ ಗದ್ಯವಾಙ್ಮಯದ ಸಿಂಹಾವ ಲೋಕನವಿದ್ದು ಕೊನೆಗೆ ಸಾಹಿತ್ಯಪ್ರಚಾರದ ವಿಷಯ ದಲ್ಲಿ ಕೆಲವು ಸಲಹೆಗಳಿರುವುವು. ಇದುವರೆಗಿನ ಕ. ಸಾ. ಸಮ್ಮೇಲನದ ಎಲ್ಲ ಅಧ್ಯಕ್ಷರ ಭಾಷಣಗಳನ್ನು ತ[illegible] ನೋಡಿದರೆ, ಶ್ರೀ. ತಿಮ್ಮಪ್ಪಯ್ಯನವರಭಾಷಣವು ಒಳ್ಳೆ[illegible] ವೆನಿಸಿಕೊಳ್ಳುವ ನಾಲ್ಕಾರು ಭಾಷಣಗಳಲ್ಲಿ ಒಂದು[illegible] ನಿಃಸಂಶಯವಾಗಿ ಹೇಳಬಹುದು.

ಮರುದಿನ ಬೆಳಗಿನ ಎಂಟು ಗಂಟೆಗೆ ಕವಿಸಮ್ಮೇ[illegible] ನಕ್ಕೆ ಮೊದಲಾಯಿತು. ಉತ್ತರಕನ್ನಡ ಜಿಲ್ಲೆಯ ತರು[illegible] ಕವಿಗಳಾದ ಶ್ರೀ. ದಿನಕರ ದೇಸಾಯಿ ಬಿ. ಎ. ಎ[illegible] ಸ್ವಾಗತಾಧ್ಯಕ್ಷರು. ಬೆಂಗಳೂರಿನ ಕಾಲೇಜೊಂದ[illegible] ಕನ್ನಡ ಮಹೋಪಾಧ್ಯಾಯರಾಗಿದ್ದ – ಹೆಸರಾದ ಕ[illegible] ಗಳೆನಿಸಿಕೊಂಡ ಶ್ರೀ. ವಿ. ಸೀತಾರಾಮಯ್ಯ ಎಮ್. ಎ. ಅವರು ಅಧ್ಯಕ್ಷರು. ಇವರ ಆಳವಾದ ವಿಚಾರಗಳ[illegible] ವಿಚಾರವನ್ನು ಸರಿಯಾಗಿ ಪ್ರತಿಬಿಂಬಿಸಿ ತೋರಿಸು[illegible] ನುಡಿಯ ಜಾಣ್ಮೆ, ನುಡಿಯ ಜಾಣ್ಮೆಗೆ ಕಳೆಯೇ[illegible] ವಂತಹ ಮಾತುಗಾರಿಕೆ, ಇವೆಲ್ಲ ಪಂಡಿತ ಪಾಮರರನ್ನು ಮೆಚ್ಚಿಕೆಯಿಂದ ತಲೆದೂಗಿಸಿದುವು. ಬರೆದು ಓದಿ ಮೆಚ್ಚಿ ಸುವವರು ಬಲುಮಂದಿ; ಮಾತನಾಡಿ ಮೆಚ್ಚಿಸುವ[illegible] ಅಪರೂಪ.

ಸಾಹಿತ್ಯಸಮ್ಮೇಲನ ಕವಿಸಮ್ಮೇಲನಗಳ ಕಾರ್ಯಗ[illegible] ಜೊತೆಗೊಂಡೇ ಸಾಗಿದುವು. ಕನ್ನಡನಾಡಿನ ಬೇರೆ ಬೇ[illegible] ಭಾಗದ ಕವಿಗಳು ತಮ್ಮ ಕವಿತೆಗಳನ್ನೋದಿ ತೋ[illegible] ದರು. ಯಕ್ಷಗಾನ, ಜನಪದಸಾಹಿತ್ಯಗಳೂ ಮು[illegible] ಒಂದುವು. ಉತ್ತರಕನ್ನಡ ಜಿಲ್ಲೆಯಲ್ಲಿ ಬಳಕೆಯಲ್ಲಿ[illegible] ಬೇರೆ ಬೇರೆ ಜಾತಿಯವರ ಕನ್ನಡನುಡಿಗಳಲ್ಲಿರುವ [illegible] ಗಳ ಪರಿಚಯವನ್ನೂ ಒಬ್ಬರು ಮಾಡಿಕೊಟ್ಟರು. ಮಹ[illegible] ತ್ವದ ವಿಷಯವದು. ಅಲ್ಲಿಯ ಸುಶಿಕ್ಷಿತರು ಅಲ್ಲಿ[illegible] ಭಾಷಾಭೇದಗಳನ್ನು ತುಲನಾತ್ಮಕರೀತಿಯಿಂದ ಅಭ್ಯ[illegible] ಸಿಸಿ ಬರೆಹಗಳನ್ನು ಬರೆದರೆ, ಕನ್ನಡಭಾಷೆಯ ಚರಿತ್ರೆ[illegible] ಗೆಷ್ಟೋ ಸಹಾಯವಾಗಬಹುದು. ಅಚ್ಚಗನ್ನಡ ಪರಂಪ[illegible] ರೆಯು ಉತ್ತರಕನ್ನಡ ಜಿಲ್ಲೆಯಲ್ಲಿ ಉಳಿದುಕೊಂಡಷ್ಟು ಮಿಕ್ಕ ಕಡೆಗಳಲ್ಲಿ ಉಳಿದಿಲ್ಲವೆಂದು ಹೇಳಬಹುದು. ಅ[illegible]

CC-0. Jangamwadi Math Collection. Digitized by eGangotri

ಕ್ಕಾಗಿ ಅಲ್ಲಿಯ ಸಾಹಿತ್ಯಪ್ರೇಮಿಗಳು ಪ್ರಚಾರದಲ್ಲಿರುವ ಗಾದೆಯ ಮಾತು, ಹಳ್ಳಿಗರ ಹಾಡು, ಅಜ್ಜಿಯ ಕತೆ, ಮಾಸತಿಯರ ಕತೆ, ಇವುಗಳನ್ನೆಲ್ಲ ಸಂಗ್ರಹಿಸಬೇಕಾದುದು ಅವಶ್ಯವೆಂದು ನಡುವೇ ಸಮ್ಮದೊಂದು ಸೂಚನೆ.

ಸಮ್ಮೇಲನದಲ್ಲಿ ಶ್ರೀ. ಬೇಂದ್ರೆಯವರು ಓದಿದ "ನಾದಲೋಲ ಲಕ್ಷ್ಮೀಶ, ಅಥವಾ ಗಮಕಿಗಳಿಗೊಂದು ಬಿನ್ನಹ" ಎಂಬ ಪ್ರಬಂಧವನ್ನು ಇದೇ ಸಂಚಿಕೆಯಲ್ಲಿಯೆ ಪ್ರಕಟಿಸಲಾಗಿದೆ. ಕ. ಸಾ. ಪರಿಷತ್ತಿನ ಗೌರವಕಾರ್ಯದರ್ಶಿಗಳಾದ– ತಮ್ಮ ಕೃತಿಗಳಿಂದ ಕನ್ನಡಿಗರಿಗೆ ಚಿರಪರಿಚಿತರಾದ ಶ್ರೀ. ಸಿ. ಕೆ. ವೆಂಕಟರಾಮಯ್ಯನವರು "ಲಕ್ಷ್ಮೀಶನ ಸ್ತ್ರೀ ಪಾತ್ರ ನಿರ್ಮಾಣ" ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು. ಜ್ವಾಲೆಯ ವಿಷಯದಲ್ಲಿ ಹೇಳಿದ ಅವರ ವಿಚಾರಗಳು ತುಂಬ ಹೊಸವು. ಹೆಸರು, ಜ್ವಾಲೆ, ನೀಲಧ್ವಜನ ಹೆಂಡತಿ, ಸ್ವಾಹಾದೇವಿಗೆ ತಾಯಿ, ಅಗ್ನಿಯ ಅತ್ತೆ, ಇದುವರೆಗೆ ಅವಳೊಬ್ಬ ದುಷ್ಟಸ್ತ್ರೀ ಯೆಂದು ಹೆಸರು ಪಡೆದವಳು. ಅವಳನ್ನು 'ಶೂರಳಾದ – ಧೀರಳಾದ – ಉದಾರಳಾದ ಕ್ಷತ್ರಿಯ ರಮಣಿ' ಎಂದು ಅವರು ಹೇಳಿದುದು ಅದೆಷ್ಟೋ ಜನರಿಗೆ ಆಶ್ಚರ್ಯವನ್ನುಂಟು ಮಾಡಿತು. ವಿಚಾರಗಳ ತಾಕಲಾಟಕ್ಕೆ ಸಿಲುಕಿತೆಂದರೆ ಚಿನ್ನವು ಕಬ್ಬಿಣವಾಗಲಿಕ್ಕೆ ತಡೆಯಿಲ್ಲ. ಕಬ್ಬಿಣವು ಚಿನ್ನವಾಗಲಿಕ್ಕೆ ತಡೆಯಿಲ್ಲ. ಶ್ರೀ. ಕಡೆಂಗೋಡ್ಲು ಶಂಕರಭಟ್ಟರು ಮಂಗಳೂರು ಜಿಲ್ಲೆಯ ಕವಿಗಳನ್ನು ಕುರಿತು ಮಾತನಾಡಿದರು. ಶ್ರೀಮಾನ್ ಕೀರ್ತನಕೇಸರಿ ಶಿವಮೂರ್ತಿ ಸ್ವಾಮಿಗಳು ತಮ್ಮ ಕೀರ್ತನ ಕಾಲಕ್ಷೇಪದಿಂದ ಜನರಿಗೆ ಹುಚ್ಚುಹಿಡಿಸಿಬಿಟ್ಟರು.

ಈ ಸಲದ ಸಮ್ಮೇಲನದಲ್ಲಿ ಶ್ರೀಮಾನ್ ಬಿ. ಎಮ್. ಶ್ರೀಕಂಠಯ್ಯನವರು ಮಾಡಿದ ಕೆಲಸವು ಅನ್ಯಾದೃಶವಾದುದು. ಮಲಗಿದ್ದ ಉತ್ತರಕನ್ನಡಿಗರನ್ನು ಎಚ್ಚರಿಸುವ ವೈತಾಳಿಕರಾಗಿ ಅವರು ಸಮ್ಮೇಳನಕ್ಕೆ ಎಂಟು ದಿನ ಮೊದಲೆ ಕಾರವಾರಕ್ಕೆ ಬಂದಿದ್ದರು. ವೈತಾಳಿಕನ ಕೆಲಸವನ್ನು ಸಮಂಜಸವಾಗಿ ನೆರವೇರಿಸಿದರೆಂದು ಬೇರೆ ಹೇಳುವದೇ ಬೇಡ; ಸಮ್ಮೇಳನವು ಬಾರಿಸಿದ ವಿಜಯದುಂದುಭಿಯೆ ಆ ಮಾತನ್ನು ಸಾರಿ ಹೇಳುವುದು. ಸಮ್ಮೇಲನವು ನಡೆದ ಕಾಲಕ್ಕೆ ಪಂಪನ ಆದಿಪುರಾಣದ ವಿಮರ್ಶೆಯನ್ನೊಳಗೊಂಡ ಅವರ ಭಾಷಣದ ಮಹತಿಯನ್ನು ಎಷ್ಟು ಹೊಗಳಿದರೂ ಕಡಿಮೆ. ಆದಿಪುರಾಣದಂತಹ ಜೈನ ತತ್ವಜ್ಞಾನದಿಂದ ತುಂಬಿದ ಗ್ರಂಥ. ೩ ಗಂಟೆಯನರಗೂ ಭಾಷಣ ಸಾಗಿದ್ದಿತು. ಇರುವೆಸರಿದಾಡಿದರೂ ಸಪ್ಪುಳವಾಗುವಷ್ಟು ನಿಶ್ಶಬ್ದತೆ ಸಭೆಯಲ್ಲಿ. ಮರುದಿನದ "ಜಗತ್ತಿನಲ್ಲಿಯ ಪ್ರವಾದಿಗಳ ಪಲ್ಲವಿ" ಎಂಬ ಇಂಗ್ಲಿಷ್ ಉಪನ್ಯಾಸವೂ ಅಷ್ಟೇ ಚನ್ನಾಗಿದ್ದಿತು. ಅವರ ಈ ಸಲದ ಕಾರ್ಯಕ್ಕಾಗಿ ಕನ್ನಡಿಗರೆಲ್ಲರೂ ಅವರನ್ನು ಅಭಿನಂದಿಸದಿದ್ದರೆ ಕರ್ತವ್ಯಚ್ಯುತರಾದಂತೆ ಎನಬಹುದು.



ಶ್ರೀ. ಬಿ. ಎಮ್. ಶ್ರೀಕಂಠಯ್ಯನವರು.

೩ನೆಯ ತಾರೀಖಿನ ಹಗಲು ಎಂಟು ಗಂಟೆಗೆ ಏಕೀಕರಣ ಸಭೆಯ ಕೆಲಸಕ್ಕೆ ಆರಂಭವಾಯಿತು. ಸ್ವಾಗತಾ



CC-0. Jangamwadi Math Collection. Digitized by eGangotri

ಧ್ಯಕ್ಷರಾದ, ಎಂ. ಸಿವ್ವರಿನ್ ಸಿಲ್ವಾ ಅವರು ಕರ್ನಾಟಕ ಏಕೀಕರಣದ ವಿಷಯದಲ್ಲಿ ತಮಗಿದ್ದ ಆತುರವನ್ನೂ ಅಭಿಮಾನವನ್ನೂ ತಮ್ಮ ಮಾತಿನಲ್ಲಿ ಹೊರಪೊಮ್ಮಿ ಸಿರುವರು. ಕರ್ನಾಟಕಕ್ಕೆ ಪರಿಚಿತರಾದ ಮಂಗಳೂರಿನ ಎಂ. ಸಾಲ್ಡಾಣಾ ಅವರು ಅಧ್ಯಕ್ಷರಾಗಿದ್ದರು. ನಾಡಿನ ಏಳಿಗೆಯ ಬಗ್ಗೆ ಕನಿಕರದಿಂದ ಕೆಲಸ ಮಾಡುತಿರುವ ಇವ ರಲ್ಲಿ ಕನ್ನಡನಾಡಿನ ಪ್ರೀತಿಯು ಉಕ್ಕಿ ಹರಿಯುತ್ತ



ಶ್ರೀ ಸ್ವಾದಿ ಗಜಾನನರಾಯರು. ಶ್ರೀ. ನಾಡಕರ್ಣಿ ಸುಬ್ಬರಾಯರು.
( ಕರ್ನಾಟಕ ಏಕೀಕರಣ ಪರಿಷತ್ತಿನ ಕಾರ್ಯದರ್ಶಿಗಳು )

ಲಿದೆ. ಅಲ್ಲಲ್ಲಿ ಒಂದೆರಡು ಜೀರುಂಡೆಗಳು ಅಪಸ್ವರದಿಂದ ಕಿರುಚಿಕೊಂಡುವು. ಆದರಿಂದ ಕರ್ನಾಟಕ ಏಕೀಕರಣದ ಗೊತ್ತುವಳಿಗೆ ಎಡರು ಒದಗಲಿಲ್ಲವಿಷ್ಟೇ ಅಲ್ಲ! ಸರ್ವ ಜನರಿಗೂ ಸಂತೋಷವಾಗುವಂತೆ ಅದು ಮನ್ನಣೆ ಪಡೆ ಯಿತು. ಈ ಸಂದರ್ಭದಲ್ಲಿ ಕಾರವಾರದ ಪ್ರಸಿದ್ಧ ವಕೀಲರೂ ವಯೋವೃದ್ಧ ಮುಂದಾಳುಗಳೂ ಆದ ಶ್ರೀ. ನಾಡಕರ್ಣಿ ದತ್ತರಾಯರು ತೋರಿಸಿದ ಸಮಂಜಸತೆಯು ಪ್ರಶಂಸಾರ್ಹವಾದುದು.

ಸಾಹಿತ್ಯಸಮ್ಮೇಲನದಲ್ಲಿ ಮನ್ನಣೆಪಡೆದ ಗೊತ್ತುವ ಳಿಗಳೆಲ್ಲವೂ ಮಹತ್ವದುವುಗಳಾದರೂ "ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಸ್ಥಾಪಿಸಲ್ಪಟ್ಟಿರುವ ಹಾಗು ಸ್ಥಾಪಿತವಾಗಲಿರುವ ಸಾಹಿತ್ಯಸಂಘಗಳನ್ನು ಕರ್ನಾಟಕ ಸಾಹಿತ್ಯಪರಿಷತ್ತಿಗೆ ಜೋಡಿಸಲು ಅನುಕೂಲವಾಗು ವಂತೆ ಯೋಗ್ಯವಾದ ಉಪನಿಯಮಗಳನ್ನು ಕಾರ್ಯ ನಿರ್ವಾಹಕ ಮಂಡಲದವರು ಏರ್ಪಡಿಸಿ ಪ್ರಕಟಿಸಬೇಕು" ಎಂದಿರುವ ಗೊತ್ತುವಳಿಯು ವಿಶೇಷಗುಣವುಳ್ಳ... ಸಾಹಿತ್ಯಕಾರ್ಯವು ಹುರುಪಿನಿಂದ ಮುಂದರಿಯ... ಹೆಚ್ಚು ಅನುಕೂಲವಾದುದು. ನಮ್ಮ ಜಯಕರ್ನಾಟಕ ಕಂಡ ಕನಸು ಮೂರ್ತಿಗೊಂಡುದಕ್ಕಾಗಿ ನಮಗೆ ಬಹು ಬಗೆಯ ಹೆಮ್ಮೆ. ವಿಜಯನಗರದ ಷಟ್‌ಶತತಮ ಸಾಂ ತ್ಸರಿಕೋತ್ಸವದ ಕಾರ್ಯಕ್ಕೆ ಸಹಾನುಭೂತಿಯನ್ನು ತೋರಿಸಿರುವುದೂ ಆನಂದದ ಸಂಗತಿ.

ಇನ್ನೊಂದು ಮಹತ್ವದ ಮಾತೆಂದರೆ ಶ್ರೀ. ಶ್ರೀನಿವಾ... ಯ್ಯನವರ ಅಧ್ಯಕ್ಷತೆಯಲ್ಲಿ ಸಭೆಸೇರಿ ಉತ್ತರಕನ್ನಡ ಜಿಲ್ಲೆಯ ಸಾಹಿತ್ಯಸಂಘವು ಸ್ಥಾಪನೆಯಾದುದು. ... ಸಂಘದ ಸ್ಥಾಪನೆಗಾಗಿ ಪಡುತ್ತಿದ್ದ ಅಲ್ಲಿಯವರ ಆತುರ... ತೋರಿಸುತಲಿದ್ದ ಉತ್ಸಾಹ, ಇವುಗಳನ್ನು ನೋಡಿದ ಕನ್ನಡದ ಅಭಿಮಾನಿಗಳು ಹಿಗ್ಗಿ ಹಿಗ್ಗಿ ಕುಣಿದಾಡಬೇಕು. ಇದೇ ಆತುರ ಉತ್ಸಾಹಗಳು ಆ ಸಂಘದ ಜನರಲ್ಲಿ ಹಿಂಗದೆ ಉಳಿದಲ್ಲಿ ನಿಜವಾಗಿಯೂ ಅವರಿಂದ ದೊಡ್ಡ ದೊಡ್ಡ ಕೆಲಸಗಳು ಆಗುವುವೆಂದು ನಮ್ಮ ಭರವಸೆ.

ಸಮ್ಮೇಲನಗಳ ಕಾರ್ಯಕರ್ತೃಗಳ ಸೌಜನ್ಯವನ್ನೂ ಕಾರ್ಯೋತ್ಸಾಹವನ್ನೂ ಕರ್ನಾಟಕಾಭಿಮಾನವನ್ನೂ ಹೊಗಳದೆ ಇರುವುದು ನಮ್ಮಿಂದಾಗದು. ಸಾಹಿತ್ಯ ಸಮ್ಮೇಳನದ ಕಾರ್ಯದರ್ಶಿಗಳಾದ ಶ್ರೀ. ಪ್ರೋತರ್ಾ... ರಂಗಪ್ಪನವರು, ಶ್ರೀ. ಅಡಕೋಳಿ ವೆಂಕಟರಾವ್ ... ಎ. ಎಲ್. ಎಲ್. ಬಿ. ಅವರು, ಶ್ರೀ. ಮಾಂಜರೇಕರ ಹನುಮಂತರಾವ್ "ವಾಙ್ಮಯವಿಶಾರದ" ಅವರು... ಏಕೀಕರಣ ಸಮ್ಮೇಲನದ ಕಾರ್ಯದರ್ಶಿಗಳಾದ ಶ್ರೀ. ನಾಡಕರ್ಣಿ ಸುಬ್ಬರಾವ್ (ಸಮಾಜಸೇವಕರು. ಗಾಂಧಿ... ಯವರಿಂದ ಪ್ರಶಂಶೆಯೊಂದಿದವರು) ಅವರು, ಶ್ರೀ.

CC-0. Jangamwadi Math Collection. Digitized by eGangotri

ಸ್ವಾದೀ ಗಜಾನನರಾಯರು; ಕರ್ಣಾಟಕ ಧುರೀಣ ಪತ್ರಿಕೆಯ ಸಂಪಾದಕರಾದ ಶ್ರೀ. ಯಾಜಿ ಅವರು, ಮುಖ್ಯಕಾರ್ಯದರ್ಶಿಗಳಾದ ಶ್ರೀ. ತೇಲಂಗ ಮಂಗೇಶ ರಾಯರು, ಅಲ್ಲಿಯ ಸರಕಾರೀ ವಕೀಲರಾದ ಶ್ರೀ. ಸೆಟ್ಟಿ ಅವರು, ಇವರೆಲ್ಲಪಟ್ಟ ಕಾಯಕಷ್ಟದ ಮಧುರ ವಾದ ಫಲವು **ಈ ಸಲದ ಸಾಹಿತ್ಯಸಮ್ಮೇಲನ.** ಸಮ್ಮೇಲನದ ಕೊನೆಯಲ್ಲಿ ಎಲ್ಲರೂ ಎಂದಂತೆ "ಶ್ರೀ. ಪೋತದಾರ ರಂಗಪ್ಪನವರೇ ಮುಖ್ಯ ಸೂತ್ರಧಾರಿಗಳು" ಎಂದು ನಾವೂ ಹೇಳಿದರೆ ತಪ್ಪೇನೂ ಕಾಣದು; ಆದರೆ ನಾವು ಶ್ರೀ. ರಂಗಪ್ಪನವರನ್ನು ಪ್ರತ್ಯಕ್ಷವಾಗಿ ಕಂಡಾಗೆಲ್ಲ, ಅವರು "ಸಮ್ಮೇಲನದ ಪ್ರತಿಯೊಂದು ಚಿಕ್ಕ ಪುಟ್ಟ ಕೆಲಸಗಳಿಗೂ ಇಲ್ಲಿಯ ಸ್ಥಳೀಯ ಜನರು ಶಕ್ತಿ ಮೀರಿ ಸಹಾಯಮಾಡಿರುತ್ತಾರೆ. ಇಲ್ಲದಿದ್ದರೆ ನನ್ನೊಬ್ಬ ನಿಂದ ಏನು ಆಗುತ್ತಿದ್ದಿತು! ಇದರ ಶ್ರೇಯಸ್ಸಿನಲ್ಲಿ ನಾನೊಬ್ಬ ತೀರ ಚಿಕ್ಕ ಪಾಲುಗಾರ" ಎಂದು ಹೇಳುತ್ತಿದ್ದರು.

**ಶಾಂತಿಃ ಪುಷ್ಟಿಸ್ತುಷ್ಟಿಶ್ಚಾಸ್ತು**

# ನಮ್ಮ ಮಾತು

ಜಯಕರ್ನಾಟಕವು ಮಾಡುತಿರುವ ಕೆಲಸದಲ್ಲಿ ನಮಗೆ ತುಂಬ ಅತೃಪ್ತಿ. ಓದುಗರಿಗಾದರೂ ಅತೃಪ್ತಿಯಾಗು ತಿರಬಹುದೆಂದು ನಮ್ಮೆಣಿಕೆ. ಬೇರೆ ಬೇರೆ ಭಾಷೆಯ ಮಾಸಪತ್ರಿಕೆಗಳು ಕೈಮೈತುಂಬಿದುವುಗಳಾಗಿ ಬರುತ್ತಿರಲು ಅವುಗಳೆದುರು ನನ್ನು ಸೊರಗಿದ ಮೆಯ್ಯ ಜಯ ಕರ್ನಾಟಕವು ನೋಟಕ್ಕೆ ತುಂಬಿ ತೋರುವುದು ಹೇಗೆ? ಈಗಿರುವುದರ ಒಂದುವರೆಯಷ್ಟು ಪುಟಗಳನ್ನಾದರೂ ಪ್ರತಿತಿಂಗಳಿಗೆ ಕೊಡಬೇಕೆಂಬುದು ನಮ್ಮೆಣಿಕೆ. ವಾಚಕರು ಹೀಗಾಗುವುದಕ್ಕೆ ಅಪೇಕ್ಷಿಸುವವರಾದರೂ ಕೊಡುಗೈ ಯಿಂದ ಮುಂದೆ ಬರುವವರ ಅಭಾವವು ಎಲ್ಲೆಲ್ಲಿಯೂ ಕಂಡುಬರುತ್ತದೆ. ಈಗ ಇಡಿ ಭರತಖಂಡವೇ ಆರ್ಥಿಕ ಅಡಚಣೆಯಲ್ಲಿದೆ. ಅದರ ಶಕೆಯು ಜಯಕರ್ನಾಟಕಕ್ಕೂ ತಾಗಿದೆಯೆಂದು ಹೇಳುವುದು ದೊಡ್ಡಮಾತಲ್ಲ. ಮಧ್ಯಮ ಸ್ಥಿತಿಯವರ ಕೈಯಲ್ಲಿ ದುಡ್ಡಿಲ್ಲ. ಹಣಗಾರರು ದೇಶದ ಆರ್ಥಿಕ ಪರಿಸ್ಥಿತಿಗೆ ಬೆದರಿ, ಕೊಡಲಿರುವ ಕೈಯನ್ನು ಬಿಗಿ ಹಿಡಿದಿರುವರು. ದುಡ್ಡಿಲ್ಲದವರ ಬಾಳಿನಂತೆ ತಮ್ಮ ಬಾಳೂ ಆದರೆ ಹೇಗೆಂಬ ಅಂಜಿಕೆಯು ನಿಮಿಷ ನಿಮಿಷಕ್ಕೂ ಹಣ ಗಾರರ ಎದೆಯನ್ನು ಅಳುಕಿಸುತ್ತಲಿದೆ. ಇಂತಹ ಪರಿ- ಸ್ಥಿತಿಯಲ್ಲಿ ಜಯಕರ್ನಾಟಕವು ಪುಷ್ಟವಾಗುವುದು ಹೇಗೆ? ಅರೆಹೊಟ್ಟೆಯಿಂದು ಸೊರಗಿದ ದೇಹದಿಂದಾದರೂ ಬದುಕಿಕೊಂಡಿರಬೇಕೆಂದದು ಅಪೇಕ್ಷಿಸುತ್ತದೆ. ಕನ್ನಡಿಗರ ಔದಾರ್ಯ ಎಲ್ಲೆಲ್ಲಿಯೂ ಹೊಗಳಿಕೆ ಹೊಂದುತ್ತಲಿದೆ. ಆ ಔದಾರ್ಯವನ್ನು ಜಯಕರ್ನಾಟಕವೂ ಹಾಡಿ ಹಾಡಿಹರಸುವಂತೆ ಅವರು ಕೃತಿಮಾಡಿ ತೋರಿಸುವರೋ?

ನಮ್ಮ ಬರೆಹಗಾರರೊಡನೆ ಒಂದು ಮಾತು; ತಮ್ಮ ಬರೆಹ ಬೇಗನೆ ಅಚ್ಚಾಗಲಿಲ್ಲವೆಂದು ಯಾರೂ ಜುಗುಪ್ಸೆ ಪಟ್ಟುಕೊಳ್ಳಬೇಡಿ. ನಾವಾದರೂ ಏನು ಮಾಡುವೆವು? ಜಯಕರ್ನಾಟಕದ ಮನಸ್ಸು ದೊಡ್ಡದಿದ್ದರೂ ಮನೆ ಚಿಕ್ಕದಿದೆ. ಎಲ್ಲರನ್ನೂ ಒಮ್ಮೆಲೆ ಬರಮಾಡಿಕೊಂಡು ಆದ ರಿಸುವಂತಹ ಯೋಗ್ಯತೆಯು, ಅದಕ್ಕೆ ಬರಲೆಂದು ನಾವು ಹಾರಯಿಸುತ್ತಲಿದ್ದೇವೆ. ತಮ್ಮ ಹರಕೆಯೂ ನಮ್ಮ ಹಾರಯಿಕೆಯನ್ನು ಹಿಂಬಾಲಿಸಿರಲಿ!

ಸದ್ಯದ ರಾಜಕೀಯ ಪರಿಸ್ಥಿತಿಯ ಸೂಕ್ಷ್ಮತೆಯು ಯಾರಿಗೂ ಗೊತ್ತಿಲ್ಲದ ಮಾತಲ್ಲ. ಇದ್ದುದನ್ನು ಇದ್ದಂತೆ ಮಾತನಾಡಬೇಕಾದರೂ ತಂತಿಯ ಮೇಲೆ ನಡೆಯುವ ವರಂತೆ ಮೈತುಂಬ ಕಣ್ಣುಳ್ಳವರಾಗಬೇಕಾಗಿದೆ. ಕೊಂಚ ಜೋಲಿಹೋದರೆ ಕೆಲಸವೆ ಮುಗಿದಂತೆ. ಜಯಕರ್ಣಾಟಕದ ಮುಖ್ಯ ಧ್ಯೇಯವಾದ ಸಂಸ್ಕೃತಿಪ್ರಸಾರದ ಕೆಲಸ ವಾದರೂ ಸುಸೂತ್ರವಾಗಿ ಸಾಗಲೆಂಬ ಆಶಯದಿಂದ ಬಿಡಿನುಡಿಗಳನ್ನು ನಿಲ್ಲಿಸಲಾಗಿದೆ. ಅದರ ಕೊರತೆಯನ್ನು ಇನ್ನಾವಬಗೆಯಿಂದಲಾದರೂ ತುಂಬಿಕೊಡಬೇಕೆಂದಿದ್ದೇವೆ. ಅದಕ್ಕಾಗಿ ದೇಶವಿದೇಶಗಳ ರಾಜಕಾರಣವನ್ನು ಅಭ್ಯಾಸಿಸಿದ ಬರೆಹಗಾರರ ನೆರವು ನಮಗೆ ಬೇಕಾಗಿದೆ. ಅಂತವರು ನೆರವಿತ್ತು ಕನ್ನಡನಾಡಿನ ಸೇವೆಗೆ ಸಹಕಾರಿ ಗಳಾಗಬೇಕೆಂದು ಬಿನ್ನಹ.

ನಮ್ಮ ಕಡೆಗೆ ಅನೇಕ ಬರೆಹಗಳು ಬರುತ್ತಲಿವೆ. ಪ್ರತಿಯೊಂದು ಬರೆಹವೂ ತಪ್ಪಿತೆಂಬುದನ್ನೂ, ಅದನ್ನು ಪ್ರಕ

CC-0. Jangamwadi Math Collection. Digitized by eGangotri

ಟಿಸಲಾಗುವುದೊ ಇಲ್ಲವೊ ಎಂಬುದನ್ನೂ ತಿಳುಹಿಸುವುದು ನಮ್ಮ ಕರ್ತವ್ಯವಾದರೂ, ಅಂಚೆಯ ಬೆಲೆಯು ಏರಿದುದರಿಂದಲೂ ಜಯಕರ್ನಾಟಕವು ಹಣದ ಅಡಚಣೆಯಲ್ಲಿರುವುದರಿಂದಲೂ ಪ್ರತಿಯೊಂದಕ್ಕೂ ಉತ್ತರ ಬರೆದು ತಿಳುಹಿಸುವುದು ಅಶಕ್ಯವಾಗಿದೆ. ಆದುದರಿಂದ ಪ್ರಕಟಿಸಲಿರುವ ಲೇಖಗಳಿಗಷ್ಟು ಕಾಗದ ಬರೆದು ತಿಳುಹಿಸುತ್ತೇವೆ. ಪ್ರಕಟಿಸಲಾಗದುವುಗಳ ವಿಷಯವನ್ನು ಬರೆದು ತಿಳಿಸಲಿಕ್ಕೆ ಆಗದೆಂದು ವ್ಯಸನದಿಂದ ಹೇಳಬೇಕಾಗಿದೆ. ಇದಕ್ಕಾಗಿ ಲೇಖಕವರ್ಗವು ದಯಾರ್ದ್ರದೃಷ್ಟಿಯಿಂದ ನಮ್ಮನ್ನು ಕ್ಷಮಿಸುವುದೆಂದು ಕೋರುತ್ತೇವೆ.

ಕರ್ನಾಟಕದಲ್ಲಿ ಸಂಸ್ಕೃತಿ ಸಂವರ್ಧಕಗಳಾದ ಅನೇಕ ಚಟುವಟಿಕೆಗಳು ನಡೆಯುತ್ತಲಿವೆ. ಕಾರವಾರದ ಸಮ್ಮೇಲನಗಳ ಸತ್ರವಲ್ಲದೆ ಕಳೆದ ಡಿಸೆಂಬರು ೧೭ರಿಂದ ೨೫ನೆಯ ತಾರೀಕಿನವರೆಗೆ ದಕ್ಷಿಣಕನ್ನಡಜಿಲ್ಲೆಯ ಉಪ್ಪಿನಂಗಡಿಯಲ್ಲಿ, ಪುತ್ತೂರು ತಾಲ್ಲೂಕುಬೋರ್ಡಿನವರ ಸಹಾಯದಿಂದ ಮಕ್ಕಳ ಪರಿಷತ್ತೊಂದು ಜರುಗಿತು. ಶ್ರೀ. ಕೋಟ ಶಿವರಾಮಕಾರಂತರೇ ಇದಕ್ಕೆ ಸೂತ್ರಧಾರಿಗಳಾಗಿದ್ದರು. ನಮ್ಮ ಗೆಳೆಯರಾದ ಹಲಸಂಗಿಯ ಧೂಲಾಸಾಹೇಬರು ತಮ್ಮೂರಿನ ಲಾವಣಿಕಾರರನ್ನು ಅಲ್ಲಿಗೆ ಕರೆದುಕೊಂಡು ಹೋಗಿದ್ದರು, ಅಲ್ಲಿ ನಡೆದ ಕಾರ್ಯಕ್ರಮವು ತೀರ ಹೊಸಹಾದಿಯದು. ಅದೇ ಜಿಲ್ಲೆಯ ಕುಂದಾಪುರದಲ್ಲಿ ತಾ|| ೫-೧-೩೬ನೆಯ ದಿನ ಧನ್ವಂತರಿಯ ಉತ್ಸವವನ್ನು ವಿಜೃಂಭಣೆಯಿಂದ ನೆರವೇರಿಸಲಾಯಿತು. ಬೆಂಗಳೂರಲ್ಲಿ ಅಖಿಲಭಾರತ ಶೈಕ್ಷಣಿಕ ಸಮ್ಮೇಲನವೂ ವೈಜ್ಞಾನಿಕ ಸಮ್ಮೇಲನವೂ ಸೇರಿ ಯಶಸ್ವಿಗಳಾಗಿ ಕೊನೆಗಂಡುವು. ಸಾಂಗಲಿ ಸಂಸ್ಥಾನದ ತೇರದಾಳದಲ್ಲಿ ದೇ. ಭ. ವಿಠ್ಠಲ ರಾಮಜಿ ಸಿಂಧೆಯವರ ಅಧ್ಯಕ್ಷತೆಯಲ್ಲಿ ಉತ್ತರಕರ್ನಾಟಕದ ಸಂಸ್ಥಾನಗಳ ರೈತರ ಪರಿಷತ್ತು ಜರುಗಿತು. ಅಧ್ಯಕ್ಷರಭಾಷಣವು ತುಂಬ ಮನನೀಯವಾದುದಾಗಿದೆ. ಇದೆಲ್ಲವೂ ಕನ್ನಡನಾಡಿನ ನವಚೇತನದ ಕುರುಹೆಂದು, ನಾವು ಕ್ಷಣಕ್ಷಣಕ್ಕೆ ಹಿಗ್ಗಿ ಹೆಮ್ಮೆಪಡುತ್ತಲಿದ್ದೇವೆ.

## ಚಿತ್ರಪರಿಚಯ

ಈ ಚಿತ್ರವು ಕಲಾನೈಪುಣ್ಯವನ್ನಪೇಕ್ಷಿಸುವವರಿಗೆ ಅಷ್ಟೊಂದು ತೃಪ್ತಿಯನ್ನುಂಟುಮಾಡದಿರಬಹುದು. ಐತಿಹಾಸಿಕ ದೃಷ್ಟಿಯಿಂದ ಇದಕ್ಕೊಂದು ಬೆಲೆಯುಂಟು. ಶ್ರೀಮದ್ವ್ಯಾಸರಾಯ ಸ್ವಾಮಿಗಳು ವಿಜಯನಗರದ ಅರಸನೊಬ್ಬನ ಕುಯೋಗ ನಿವಾರಣೆಯಾಗುವವರೆಗೆ ತಾವು ಆ ಸಿಂಹಾಸನದಲ್ಲಿ ಕುಳಿತು ರಾಜ್ಯಭಾರ ನಡೆಯಿಸಿದುದು ಅದೆಷ್ಟೊ ಜನರಿಗೆ ಗೊತ್ತಿದ್ದ ಮಾತು. ಆ ಸಂದರ್ಭವನ್ನನುಲಕ್ಷಿಸಿ ಈ ಚಿತ್ರವು ಚಿತ್ರಿತವಾಗಿದೆ. ಕರ್ನಾಟಕ ಇತಿಹಾಸವನ್ನು ಕಣ್ಣೆದುರಿಗೆ ಕಟ್ಟುವ ಚಿತ್ರಗಳನ್ನು ಬರೆಯುವ ಚಿತ್ರಕಾರರು ಅಪರೂಪ. ಶ್ರೀ. ಭಟ್ಟ ಶ್ರೀನಿವಾಸರಾಯರು ಅದಕ್ಕೆ ಮುಂದುವರಿದು ಬರುವುದು ಸಂತೋಷದ ಮಾತು.

## ತಿದ್ದುಪಡೆ

ಇದೇ ಸಲದ ಸಂಚಿಕೆಯಲ್ಲಿಯೆ ಅಚ್ಚಾಗಿರುವ "ಸಾಮುದ್ರಿಕ ಪರಿಚಯ" ಎಂಬ ಬರೆಹದ ೨೫ನೆಯ ಪುಟದಲ್ಲಿ ಅಚ್ಚಾಗಿರುವ ಮೊದಲನೆಯ ಕೈಯಬೆರಳುಗಳ ಕ್ರಮಾಂಕಗಳನ್ನು ಕೊಡುವುದು ಚಿತ್ರಕಾರರ ದುರ್ಲಕ್ಷ್ಯದ ಮೂಲಕವಾಗಿ ತಪ್ಪಿ ಹೋಗಿದೆ. ಹೆಬ್ಬೆರಳನ್ನು ಒಂದನೆಯದನ್ನಾಗಿ ಎಣಿಸುವುದನ್ನು ಬಿಟ್ಟು ಕಿರುಬೆರಳಿನಿಂದ ಎಣಿಸುವಂತೆ ಕ್ರಮಾಂಕಗಳನ್ನು ಹಾಕಿದ್ದಾರೆ. ವಾಚಕರು ದಯೆಯಿಟ್ಟು ಈ ತಪ್ಪನ್ನು ಕ್ಷಮಿಸಿ, ಹೆಬ್ಬೆರಳನ್ನು ಮೊದಲನೆಯದಾಗಿ ಭಾವಿಸಿ ಕಿರುಬೆರಳಿಗೆ ಐದನೆಯ ಕ್ರಮಾಂಕವು ಬರುವಂತೆ ತಿದ್ದಿಕೊಂಡು ಓದಬೇಕಾಗಿ ವಿಜ್ಞಾಪನೆ.

ಮೊದಲನೆಯ ಲೇಖನವಾದ 'ನಾದಲೋಲಲಕ್ಷ್ಮೀಶ' ಎಂಬ ಬರೆಹದ ೧೯೬ನೆಯ ಪುಟದಲ್ಲಿ ಎರಡು ದೋಷಗಳಾಗಿವೆ. ಮೊದಲನೆಯ ಅಂಕಣದ ೧೮ನೆಯ ಸಾಲಿನಲ್ಲಿದ್ದ ಸಂಸ್ಕೃತವಾಕ್ಯದ ಕೊನೆಗೆ **ಎಂದು** ಹೇಳುವನು. ಎಂಬ ಕ್ರಿಯಾಪದವು ಬೇಕು. ಎರಡನೆಯ ಅಂಕಣದ ೪ನೆಯ ಸಾಲಿನಲ್ಲಿ **ತಾಳಾಲಯ** ಎಂದಿದ್ದಲ್ಲಿ **ತಾಳ-ಲಯ** ಎಂದಿರಬೇಕು. ಓದುಗರು ಸರಿಪಡಿಸಿಕೊಂಡು ಓದಬೇಕು.

CC-0. Jangamwadi Math Collection. Digitized by eGangotri




## ಜೈನ ತತ್ವಜ್ಞಾನದಂತೆ ಆತ್ಮನ ಗುಣಧರ್ಮಗಳು

ಆತ್ಮನು ಪ್ರತಿಯೊಂದು ದೇಹದೊಳಗೂ ಶರೀರಪರಿಮಾಣದಷ್ಟು ಇರುವನು. ಅಂದರೆ ಇರುವೆಯಲ್ಲಿ ಇರುವೆಯಷ್ಟು; ಆನೆಯಲ್ಲಿ ಆನೆಯಷ್ಟು. ಇದರಿಂದ ಆತ್ಮನು ಸಣ್ಣ ದೊಡ್ಡ ಆಕಾರವುಳ್ಳವನಿರುವನೆಂಬರ್ಥವಲ್ಲ. ಶರೀರಮಾನದಿಂದ ಆತನು ಸಂಕೋಚ ಅಥವಾ ವಿಕಾಸವನ್ನು ಹೊಂದುವದಿಲ್ಲ. ಯಾವ ದೇಹದಲ್ಲಿ ಆತ್ಮನು ಪ್ರವೇಶ ಮಾಡಿರುವನೊ ಆ ದೇಹದಲ್ಲೆಲ್ಲ ಆತನು ಗುಣತಃ ವ್ಯಾಪಿಸಿಕೊಂಡಿರುವನು; ಅಂಗೋಪಾಂಗಗಳನ್ನೆಲ್ಲ ತನ್ನ ಪ್ರಕಾಶದಿಂದ ಬೆಳಗುತ್ತಿರುವನು; ಶರೀರದ ಯಾವುದೇ ಭಾಗಕ್ಕೆ ಆಗುವ ಸುಖದುಃಖಗಳ ಜ್ಞಾನವು ಆತನಿಗೆ ಆಗುವುದು. ಆತ್ಮನು ಕರ್ತೃವೂ, ಭೋಕ್ತೃವೂ, ನಿತ್ಯನೂ ಸಾವಧಿಕನೂ, ಇಂದ್ರಿಯಗೋಚರನೂ ಆಗಿದ್ದಾನೆ. ಆತ್ಮನು ವಿಕಾಸಗೊಂಡಪ್ರಕಾರ ಆತನಿಗೆ ನಾಲ್ಕರಿಂದ ಎಂಟರವರೆಗೆ ಕೆಲವು ಶಕ್ತಿಗಳು ಉಂಟಾಗುವುವು. ಇವಕ್ಕೆ ಪ್ರಾಣವೆಂಬ ಹೆಸರೂ ಉಂಟು. (೧) ಸ್ಪರ್ಶೇಂದ್ರಿಯ ಪ್ರಾಣ, (೨) ರಸೇಂದ್ರಿಯ ಪ್ರಾಣ, (೩) ಘ್ರಾಣೇಂದ್ರಿಯ ಪ್ರಾಣ, (೪) ಚಕ್ಷುರಿಂದ್ರಿಯ ಪ್ರಾಣ, (೫) ಶ್ರವಣೇಂದ್ರಿಯ ಪ್ರಾಣ, (೬) ಕಾಯಬಲಪ್ರಾಣ, (೭) ವಚನಬಲಪ್ರಾಣ, (೮) ಮನಬಲಪ್ರಾಣ, (೯) ಶ್ವಾಸೋಚ್ಛ್ವಾಸ ಪ್ರಾಣ, (೧೦) ಆಯುಃ ಪ್ರಾಣ.

ಆತ್ಮಗಳಲ್ಲಿ ಎರಡು ಬಗೆಗಳು: (೧) ಸಿದ್ಧ; (೨) ಸಂಸಾರಿ; ಸಿದ್ಧರು ಮುಕ್ತರು. ಈ ಆತ್ಮಗಳು ಈಷತ್ಪ್ರಾಗ್ಭಾರವೆಂಬ ಶುದ್ಧ ಸುವರ್ಣಮಯ ಪ್ರದೇಶದಲ್ಲಿ ವಾಸಮಾಡುತ್ತವೆ. ಅವುಗಳಿಗೆ ದೃಶ್ಯರೂಪವಿಲ್ಲ. ಆದರೂ ಅವುಗಳಿಗೆ ಪೂರ್ಣಾನಂದವುಂಟು. ಸಂಸಾರಿ ಆತ್ಮಗಳಲ್ಲಿ ನಾಲ್ಕು ಪ್ರಕಾರ: (೧) ನರಕದಲ್ಲಿ ಹುಟ್ಟಿದಂತಹವುಗಳು – ನಾರಕಿ; (೨) ಮನುಷ್ಯೇತರ ಪ್ರಾಣಿ–ತಿರ್ಯಂಚ; (೩) ಮನುಷ್ಯರು; (೪) ಮನುಷ್ಯರಿಗಿಂತ ಶ್ರೇಷ್ಠರು-ದೇವತೆಗಳು. ಸಂಸಾರಿ ಆತ್ಮಗಳನ್ನು ಏಕೇಂದ್ರಿಯ, ದ್ವೀಂದ್ರಿಯಗಳೆಂದೂ ವಿಂಗಡಿಸುವುದುಂಟು. ಏಕೇಂದ್ರಿಯಗಳಲ್ಲಿ ಪೃಥ್ವೀಕಾಯ, ಅಪ್‌ಕಾಯ ಎಂದು ಮುಂತಾಗಿ ಮತ್ತೆ ೫ ಬಗೆಗಳನ್ನು ಕಲ್ಪಿಸುವರು. ಕಲ್ಲು, ಉಪ್ಪು ಮೊದಲಾದುವು ಪೃಥ್ವೀಕಾಯ; ಮಂಜು ಮಳೆ ಅಪ್‌ಕಾಯ; ದೀಪಪ್ರಕಾಶವು ತೇಜೋಕಾಯ; ಗಾಳಿ, ಬಿರುಗಾಳಿಗಳು ವಾಯುಕಾಯ; ಮಾವು ಬಾಳೆ-ವನಸ್ಪತಿಕಾಯ. ವನಸ್ಪತಿಕಾಯದಲ್ಲಿ, ಬಟಾಟಿ (ಆಲೂ), ಬೆಳ್ಳುಳ್ಳಿ, ಉಳ್ಳೀಗಡ್ಡಿ, ಅಂಜೀರ ಮೊದಲಾದುವುಗಳಲ್ಲಿ ಒಂದಕ್ಕಿಂತ ಹೆಚ್ಚು ಜೀವಗಳಿರುವುದರಿಂದ ಅವುಗಳನ್ನು ಜೈನರು ನಿಷಿದ್ಧವೆಂದು ತಿಳಿಯುತ್ತಾರೆ. ದ್ವೀಂದ್ರಿಯ ಜೀವಿಗಳಲ್ಲಿ ಸ್ಪರ್ಶೇಂದ್ರಿಯ ಮತ್ತು ರಸನೇಂದ್ರಿಯಗಳಿರುತ್ತವೆ. ಎಲ್ಲ ಕ್ರಿಮಿಕೀಟಕಗಳು ಈ ವರ್ಗದಲ್ಲಿ ಬರುತ್ತವೆ. ಗೃಹಸ್ಥಾಶ್ರಮಿಗಳು ದ್ವೀಂದ್ರಿಯದಿಂದ ಮೇಲಣವರ್ಗದ ಪ್ರಾಣಿಗಳನ್ನು ಹಿಂಸಿಸಲಾಗದು. ಯತಿಗಳು ಏಕೇಂದ್ರಿಯ ಜೀವಿಗಳಿಗೂ ಕೈ ಹಚ್ಚಲಾಗದೆಂಬ ನಿರ್ಬಂಧವುಂಟು. ತ್ರೀಂದ್ರಿಯ ಜೀವಿಗಳು ಇರುವೆ ತಗಣಿ ಮುಂತಾದುವು. ಇವಕ್ಕೆ ಸ್ಪರ್ಶ, ರಸ, ಘ್ರಾಣಗಳೆಂದು ಮೂರು ಇಂದ್ರಿಯಗಳುಂಟು. ಚತುರಿಂದ್ರಿಯಗಳಿಗೆ ಚಕ್ಷುಸ್ ಶಕ್ತಿಯೊಂದು ಹೆಚ್ಚು; ಚೇಳು ನೊಣ ಮೊದಲಾದುವು ಈ ವರ್ಗದುವು.

—ಜಿ. ಜಗತ್


CC-0. Jangamwadi Math Collection. Digitized by eGangotri

## ಓಡಾಡುವ ವಸ್ತುಪ್ರದರ್ಶನ ಶಾಲೆ.

ನವರಾತ್ರಿಯ ಕಾಲದಲ್ಲಿ ಮೈಸೂರಿನಲ್ಲಿ ನಡೆಯುವ 'ಎಗ್ಜಿಬಿಷನ್' ಅನ್ನೂ, ಕ್ರಿಸ್‌ಮಸ್‌ನಲ್ಲಿ ಮದರಾಸಿನಲ್ಲಿ ನಡೆಯುವ 'ಪಾರ್ಕ್‌ಫೇರ' ನ್ನೂ ನೋಡಲು ಜನರು ಮೈಸೂರಿಗೂ, ಮದರಾಸಿಗೂ ಬಹುದೂರದಿಂದ ಬರುವರು. ಜನರು ತಮಾಷೆನೋಡಲು ಈ ಪ್ರದರ್ಶನಗಳಿಗೆ ಬರುವರಾದರೂ, ಈ ಪ್ರದರ್ಶನದ ಉದ್ದಿಶ್ಯವೇ ಬೇರೆ. ವಿವಿಧ ವಸ್ತುಗಳನ್ನು ಪ್ರದರ್ಶಿಸಿ ಅವುಗಳಿಗೆ ಗಿರಾಕಿಗಳನ್ನು ಹೆಚ್ಚಿಸುವುದೇ ಈ ಪ್ರದರ್ಶನಗಳ ಉದ್ದಿಶ್ಯ.

ಈ ಉದ್ದಿಶ್ಯ ಸಾಧನೆಗಾಗಿ ಇಂಡಿಯನ್ ಟ್ರೇಡ್ ಎಗ್ಜಿಬಿಷನ್ ಕಂಪನಿಯವರು ಒಂದು ಹೊಸ ಏರ್ಪಾಡನ್ನು ಮಾಡಿದ್ದಾರೆ. ಒಂದು ದೊಡ್ಡ ರೈಲನ್ನೇ ಬಾಡಿಗೆಗೆ ತೆಗೆದುಕೊಂಡು ಅದರಲ್ಲಿ ಪ್ರದರ್ಶನವನ್ನೇರ್ಪಡಿಸಿದ್ದಾರೆ. ಈ ಓಡಾಡುವ ಪ್ರದರ್ಶನ ಶಾಲೆಗಳಲ್ಲಿ ಪ್ರದರ್ಶಿಸಲ್ಪಟ್ಟಿರುವ ಪದಾರ್ಥಗಳೆಲ್ಲವೂ, ತಯಾರಾಗುವ ಕಡೆಗಳಲ್ಲಿ ಯಾವ ಬೆಲೆಗೆ ಮಾರಲ್ಪಡುವವೋ ಅದೇ ಬೆಲೆಗೆ ಇಲ್ಲೂ ಮಾರಲ್ಪಡುವುವು.

ಈ ಓಡಾಡುವ ವಸ್ತು ಪ್ರದರ್ಶನಶಾಲೆಯು ಈ ತಿಂಗಳು ಎಂಟನೇಯ ತಾರೀಖಿನದಿನ ಬೊಂಬಾಯಿ ಬಿಟ್ಟು ಸಂಚಾರ ಹೊರಟಿತು. ಒಟ್ಟು ೬೦೦೦ ಮೈಲಿಗಳನ್ನು ತಿರುಗಿಕೊಂಡು ಎಪ್ರಿಲ್ ೨೭ಕ್ಕೆ ಬೊಂಬಾಯಿಗೆ ಹಿಂದಿರುಗುವುದು. ಈ ಪ್ರದರ್ಶನದ ರೈಲು ಒಟ್ಟು ೬೬ ಸ್ಥಳಗಳಲ್ಲಿ ನಿಲ್ಲುವುದೆಂದೂ, ಒಂದೊಂದುಕಡೆಯೂ ಎರಡು ಮೂರುದಿನಗಳ ಪ್ರದರ್ಶನಗಳು ನಡೆಯುವುವೆಂದೂ ತಿಳಿದುಬಂದಿದೆ.

ಈ ರೈಲಿನ ಪ್ರದರ್ಶನಶಾಲೆಗಳು ಬಹು ಅಂದವಾಗಿ ಅಲಂಕರಿಸಲ್ಪಟ್ಟಿರುವವಲ್ಲದೆ ಯಾರು ಬೇಕಾದರೂ ಟಿಕೀಟಿಲ್ಲದೆ ಈ ಪ್ರದರ್ಶನಗಳನ್ನು ನೋಡಬಹುದಾಗಿದೆ. ರೈಲು ನಿಂತ ಕಡೆಗಳಲ್ಲೆಲ್ಲಾ ಪ್ರದರ್ಶಕರ ಕಡೆಯವರು ತಮ್ಮ ತಮ್ಮ ಪದಾರ್ಥಗಳ ವಿಚಾರವಾಗಿ ಜಾಹೀರಾತುಕೊಡಲಿರುವರು.

ಪ್ರದರ್ಶನವು ಹೊಸರೀತಿಯಾದದ್ದು; ಇದರ ಫಲವು ಯಾವರೀತಿ ಇರುವುದೆಂಬುದನ್ನು ಕಾದು ನೋಡಬೇಕಾಗಿದೆ.

ಪ್ರಜಾಮತ ತಾ॥ ೧೭–೧–೩೭.

## ಭೂಕಂಪವನ್ನು ಮೊದಲೇ ತಿಳಿಸುವ ಜೇಬಿನ ಗಡಿಯಾರ!

"ಭೂಕಂಪಗಳು ಅವಶ್ಯವಾಗಿ ಆಗಬೇಕಾದ ಕೆ[illegible] ಗಳು. ಅವು ಇಲ್ಲದೆ ಹೋದರೆ, ಪರ್ವತಗಳು ಹ[illegible] ಈ ಪೃಥ್ವಿಯೆಲ್ಲ ನೀರಿನಿಂದ ತುಂಬಿಹೋಗುತ್ತಿತ್ತು" ಎಂದು A. Tondrof ರ ಅಭಿಪ್ರಾಯವು. ಈ ಅಪಾ[illegible] ವನ್ನು ಮೊದಲೇ ಕಂಡುಹಿಡಿಯುವುದಕ್ಕಾಗಿ Albe[illegible] Nodon, ಎಂಬೊಬ್ಬ ಫ್ರೆಂಚ ಮನುಷ್ಯನು ಮೊನ್ನೆ [illegible] ಒಂದು ಯಂತ್ರವನ್ನು ತಯಾರಿಸಿದ್ದಾನೆ. ಅದನ್ನು [illegible] ಯಲ್ಲಿ ಇಟ್ಟುಕೊಳ್ಳಬಹುದು. ಭೂಕಂಪವು ಸಮೀ[illegible] ತೆಂದರೆ ಆ ಯಂತ್ರದಲ್ಲಿಯ ಮುಳ್ಳು ಕುಣಿಯಹ[illegible] ಸುತ್ತದೆ. ಯಾಕಂದರೆ ಭೂಮಿಯ ಆಕರ್ಷಣಶಕ್ತಿ[illegible] ಆ ಮುಳ್ಳಿನ ಆಕರ್ಷಣ ಶಕ್ತಿಗೂ ಒಂದು ಸಂಬಂಧ[illegible] ತ್ತದೆ. ಆ ಮುಳ್ಳನ್ನೇ ಆ ತೆರದ ಒಂದು ಧಾತು[illegible] ತಯಾರಿಸಿರುತ್ತಾರೆ.

## ಪುಕ್ಕತನವೊಂದು

### ರೋಗ; ಗುಣಮಾಡಬಹು[illegible]

'ರಣಹೇಡಿಯಾಗಿ ರಣರಂಗದಿಂದ ಮರ[illegible] ಬರುವುದು ಪುಕ್ಕತನವಲ್ಲ. ಅದೊಂದು ರೋಗ. [illegible] ದರೆ ನಿಜವಾದ ಆರೋಗ್ಯಶಾಲಿಯು ಶೂರನಿದ್ದ[illegible] ತ್ತಾನೆ.' ಎಂದು ಮಾನಸಶಾಸ್ತ್ರಜ್ಞರಾದ ಡಾ[illegible] **ಅರ್ನೆಸ್ಟ ಜೋನ್ಸರ** ನಿಜವಾದ ಅಭಿಪ್ರಾಯ. [illegible] ತನವು ಒಂದು ಬಗೆಯ ರೋಗ. ಅದನ್ನು ಹೋಗ[illegible] ಬಹುದು ವೈದ್ಯರಿಂದ. ಅಂಜಿಕೆ, ಆತುರತೆಯ [illegible] ಪಚನಕ್ಕೆ ಅಡ್ಡಿಮಾಡಿ ವಿಪರೀತ ಬೆವರನ್ನು [illegible] ತ್ತವೆ. ಇಂಥವರಿಗೆ ಸರಿಯಾದ ಔಷಧಕೊಟ್ಟು [illegible] ಮಾಡಬಹುದು. ಈ ರೋಗವು ನಿಶ್ಚಯವಾಗಿ [illegible] ತ್ತದೆಂದು ಮಾನಸಶಾಸ್ತ್ರಜ್ಞರು ಹೇಳುತ್ತಾರೆ.

## ಕಾಗದ ನಾಣ್ಯಗಳು.

ಹಿಂದುಸ್ಥಾನಸರಕಾರದ ಮುಖ್ಯ ಕಾರ್ಯ[illegible] ಗಳವರ ಕಾರ್ಯಾಲಯದವರು ಹೊರಡಿಸಿದ ಪ[illegible] ಯೊಂದರಿಂದ ಸರಕಾರವು ಇಂಪೀರಿಯಲ್ ಬ್ಯಾ[illegible] ಎರಡು ಕೋಟಿ ರೂಪಾಯಿಗಳನ್ನು ಸಾಲವಾಗಿ [illegible] ರುವುದೆಂದು ಗೊತ್ತಾಗುವುದು. ವ್ಯಾಪಾರಿಗಳಿಗೆ [illegible]

CC-0. Jangamwadi Math Collection. Digitized by eGangotri

ವ್ಯವಹಾರದಲ್ಲಿ ಉಂಟಾಗುತ್ತಿರುವ ತೊಂದರೆಗಳ ನಿವಾರಣೆಗಾಗಿ ಈ ಸಾಲವನ್ನು ಕೊಡಲಾಗುವುದೆಂದು ಆ ಪ್ರಕಟನೆಯ ಹೇಳಿಕೆ. ಈಗ ಇಂಪೀರಿಯಲ್ ಬ್ಯಾಂಕಿನವರ ಬಳಿಯಲ್ಲಿರುವ ಸರಕಾರದ ಸಾಲದ ಪತ್ರಗಳನ್ನು ಈ ಸಾಲಕ್ಕೆ ಅಡವಾಗಿ ಸರಕಾರವು ಇಟ್ಟುಕೊಳ್ಳಲಿರುವುದು.

ಈಗ ಸರಕಾರವು ತಾನೇ ಹಣದ ಅಡಚಣೆಯಲ್ಲಿದೆ ಯೆಂಬುದು ವಾರವಾರಕ್ಕೆ ಹೊರಡುವ 'ಟ್ರೆಝುರಿ ಬಿಲ್' ಗಳಿಂದ ಕಂಡುಬರುತ್ತಲಿದೆ. ಅಲ್ಲದೆ ಸರಕಾರವು ಕಳೆದ ವಾರದಲ್ಲಿಯೇ ಈ ಇಂಪೀರಿಯಲ್ ಬ್ಯಾಂಕಿನಿಂದ ಒಂದು ಕೋಟಿ ರೂಪಾಯಿಗಳನ್ನು ಸಾಲವಾಗಿ ಪಡೆದುಕೊಂಡಿದೆ. ಇಂತಹ ಸಂದರ್ಭದಲ್ಲಿ ಸರಕಾರವು ಹೇಗೆ ಸಾಲವನ್ನು ಕೊಡುತ್ತದೆ? ಎಂಬುದೊಂದು ಪ್ರಶ್ನೆಯು ಸ್ವಾಭಾವಿಕವಾಗಿ ಉಂಟಾಗುವುದು. ಅದಕ್ಕೆ ಉತ್ತರವು ಇಲ್ಲವೆ ಇಲ್ಲ. ಸರಕಾರವು ನಾಶಿಕದಲ್ಲಿ ನಡೆಯಿಸಿದ ಕಾಗದ ನಾಣ್ಯಗಳ ಟಂಕಸಾಲೆಯು ಈ ಸಾಲದ ಹಣವನ್ನು ಕೊಡಲಿರುವುದು. ಸರಕಾರದ ಈ ಕೆಲಸದಿಂದ ರೂಪಾಯಿಯ ಬೆಲೆಯು ಕಡಿಮೆಯಾಗಿ ಕಾಳುಕಡಿಗಳ ದರವು ಕೊಂಚ ಹೆಚ್ಚಾಗಬಹುದು. ಆದರೆ ಈ ಹೆಚ್ಚಿನ ದರವು ಸ್ವಾಭಾವಿಕವಾದುದಲ್ಲ; ಕೃತಕವು.

ನವಾಕಾಳ ತಾ|| ೨೦-೧-೩೨.

### ಕರವಸ್ತ್ರದಿಂದ ತತ್ತಿಯನ್ನು ಮಾಡುವದು

ಇದನ್ನು ಮಾಡಬೇಕಾದರೆ, ಒಂದು ತತ್ತಿಯನ್ನು ತೆಗೆದುಕೊಂಡು, ಅದಕ್ಕೆ ಚಾಕುವಿನಿಂದ ಒಂದು ತೂತನ್ನು ಮಾಡಿ, ಒಳಗಿನದೆಲ್ಲಾ ಚೆಲ್ಲಿಕೊಟ್ಟು ಒಂದು ಚಮಚೆ 'ಪ್ಲಾಸ್ಟರ ಆಫ್ ಪ್ಯಾರಿಸ್'ನ್ನು ನೀರಲ್ಲಿ ಕೂಡಿಸಿ, ಈ ತತ್ತಿಯಲ್ಲಿ ಹಾಕಿ, ಅದು ಗಟ್ಟಿಯಾಗುವ ವರೆಗೆ ಕಲಕುತ್ತಾ ಇರಬೇಕು. ಅಂದರೆ ಒಳಗಿನ ಸೊಟ್ಟಿಗೆಲ್ಲಾ ಅದು ಅಂಟಿಕೊಂಡು ತತ್ತಿಯು ಗಟ್ಟಿಯಾಗುತ್ತದೆ. ಈ ತತ್ತಿಯನ್ನೂ ಕರವಸ್ತ್ರವನ್ನೂ ಮೊದಲು ಕಿಸೆಯಲ್ಲಿ ಟ್ಟಿರಬೇಕು. ಕಾಲವು ಬಂದೊಡನೆ ಎರಡನ್ನೂ ಕೂಡಿಯೇ ತೆಗೆದು ಎರಡೂ ಕೈಗಳ ಮಧ್ಯದಲ್ಲಿ ಹಿಡಿಯಬೇಕು. ಅಲ್ಲಿಂದ ಸಾವಕಾಶವಾಗಿ ನಡುವಿನ ಬೆರಳಿನಿಂದ ಕರವಸ್ತ್ರವನ್ನು ತತ್ತಿಯಲ್ಲಿ ನೂಕಬೇಕು. ಇದೇ ಕೈಚಲಾಕು. ಅಲ್ಲಿಂದ ತೂತನ್ನು ಒಂದು ಬೆರಳಿನಿಂದ ಮುಚ್ಚಿ ಎಲ್ಲರಿಗೂ ತೋರಿಸಬೇಕು.

## ಸಾದರ ಸ್ವೀಕಾರ

೩೭ ಕವಿರಾಜಮಾರ್ಗ: (ಹಳೆಯ ಗ್ರಂಥ) ನೃಪತುಂಗ ವಿರಚಿತ. ಸಂಪಾದಕರು: ಶ್ರೀ. ಎ. ವೆಂಕಟರಾವ್ ಬಿ. ಎ. ಎಲ್. ಟಿ. ಮತ್ತು ಪಂಡಿತ ಶೇಷಯ್ಯಂಗಾರ್, ಅವರು. ಮದ್ರಾಸಿನ ಆನಂದಮುದ್ರಣಾಲಯದಲ್ಲಿ ಮುದ್ರಿತವಾಗಿದೆ. ಡೇಮಿ ಅ. ೧೮+೩೪+೧೮೭ ಪುಟಗಳು ಬೆಲೆ ೧-೮-೦

೩೮ ಚೆಲುವು (ಕವಿತಾಸಂಗ್ರಹ) ಶ್ರೀ. 'ಶ್ರೀನಿವಾಸ'ರು ಬರೆದುದು. ಕ್ರೌನ್. ಅ. ೭೪ ಪುಟಗಳು ದಪ್ಪ ಹಾಳೆ. ಬಟ್ಟೆಯಕಟ್ಟು. ಬೆಲೆ ೦-೧೪-೦ ಬೆಂಗಳೂರು ಪ್ರೆಸ್ಸಿನ ಅಚ್ಚು.

೩೯ ಆಗ್ರಹ (ಪೌರಾಣಿಕ ನಾಟಕ) ಶ್ರೀ. 'ವಿ. ಸಿ.' ಅವರು ಬರೆದುದು. ಬೆಂಗಳೂರಿನ ರಾಮಮೋಹನ ಕಂಪನಿಯವರು ಪ್ರಕಟಿಸಿದುದು. ಕ್ರೌನ್ ಅ. ೭೭ ಪುಟ; ದಪ್ಪಗಿನ ಹಾಳೆ, ಬೆಲೆ ಹನ್ನೆರಡು ಆಣೆ.

೪೦ ಹಿಂದುಸ್ಥಾನದ ಪ್ರಾಚೀನ ರಾಜ್ಯಪದ್ಧತಿಗಳು:— (ನವಜೀವನ ಗ್ರಂಥಮಾಲೆಯ ಮೂರನೆಯ ಗ್ರಂಥ) ಲೇಖಕರು:— ಶ್ರೀ. ವಿಷ್ಣುಹರಿ ಒಡೆಯರ ಎಂ. ಎ. ಎಲ್. ಎಲ್. ಬಿ. ಚಿಕ್ಕೋಡಿ, ಅವರು. ಸಂಪಾದಕರು ಶ್ರೀ ಆಲೂರ ವೆಂಕಟರಾಯರು. ಕ್ರೌನ್. ಅ. ೧೧೮ ಪುಟಗಳು. ಬೆಲೆ ೧-೨-೦

೪೧ ಹೊಸ ಹುಟ್ಟು (೧೬ ಪ್ರಬಂಧಗಳು) ಬರೆದವರು ಶ್ರೀ. ಅ. ನ. ಕೃಷ್ಣರಾಯರು. ಪ್ರಕಾಶಕರು ಎ. ಜಿ. ಟಿ. ಜನರಲ್ ಏಜನ್ಸಿ ಬಳೆಪೇಟೆ ಬೆಂಗಳೂರು. ಕ್ರೌನ್. ಅ. ೮+೧೨೬ ಪುಟಗಳು ಬೆಲೆ ಬರೆದಿಲ್ಲ.

೪೨ ಸೊಬಗಿನ ಬಳ್ಳಿ (ಒಂದು ಕಾವ್ಯ) ಶ್ರೀ. ಮುಳಿಯ ತಿಮ್ಮಪ್ಪಯ್ಯನವರು ಬರೆದುದು. ಮಂಗಳೂರಿನ ಸೈಂಟ್ ಎಲೋಸಿಯಸ್ ಕಾಲೇಜಿನ ಕರ್ನಾಟಕ ಸಂಘದವರ ಪ್ರಕಟನೆ. ಕ್ರೌ. ಅ. ೩೨+೫೮ ಪುಟ, ಬೆಲೆ ೦-೮-೦

೪೩ ಶ್ರೀರಾಮಕೃಷ್ಣಚರಿತಾಮೃತವು:— (ಅವರ ಆಧ್ಯಾತ್ಮಿಕಸಾಧನ, ಸಿದ್ಧಿ, ಉಪದೇಶ) ಲೇಖಕರು ಶ್ರೀ. ರಂ. ರಾ. ದಿವಾಕರ ಅವರು. ಧಾರವಾಡ ಆಧ್ಯಾತ್ಮ ಕಾರ್ಯಾಲಯದ ಪ್ರಕಟನೆಯು. ಕ್ರೌ. ಅ. ೨೮+೨೩೪ ಪುಟ. ಬೆಲೆ ೧ ರೂಪಾಯಿ.

CC-0. Jangamwadi Math Collection. Digitized by eGangotri

೪೪ ಭಾರತೀಯರ ಮೇಲ್ಮೆ:— ಲೇಖಕರು ಶ್ರೀ. ನಾರಾಯಣ ಶರ್ಮರು. ಧಾರವಾಡ ಕ. ರಾಷ್ಟ್ರೀಯ ಶಿಕ್ಷಣಸಮಿತಿಯ ಎಂಟನೆಯ ಪ್ರಕಟನೆ. ಕ್ರೌ. ಅ. ೮+೧೩೮ ಪುಟಗಳು. ಬೆಲೆ ೧ ರೂಪಾಯಿ.

೪೫ ಅರುವತ್ತು ಮೂವರು ಪುರಾತನರು:—( ವೀರ ಶೈವಗ್ರಂಥ ) ಲೇಖಕರು ಶ್ರೀ. ಮ. ಮ. ಮಿರ್ಜಿ. ಹುಬ್ಬಳ್ಳಿ ಅವರು. ಪ್ರಕಾಶಕರು ಶ್ರೀ. ಗು. ಮ. ಮಿರ್ಜಿ ಬಿ. ಎ, ಎಲ್. ಎಲ್. ಬಿ. ಅಡ್ವೋಕೇಟ್ ಹುಬ್ಬಳ್ಳಿ. ಡೆಮಿ. ಅ. ಸುಮಾರು ೬೨೦ ಪುಟಗಳು. ಬೆಲೆ ೨–೦–೦

೪೬ ಶ್ರೀ. ಗುರುಚರಿತ್ರ ( ಧಾರ್ಮಿಕ ಗ್ರಂಥ )ಶ್ರೀ. ಗಣಪತಿಶಂಕರಭಟ್ಟ ಸರ್ಪಕರ್ಣೇಶ್ವರ ಇವರು ಬರೆದು ಪ್ರಕಟಿಸಿದುದು. "ಸಾಧನೋದ್ಯಾನ ಗ್ರಂಥಮಾಲಾ ಪೋ. ಕರ್ಕಿ ಜಿಲ್ಲಾ ಕಾರವಾರ" ಇವರಲ್ಲಿ ದೊರೆಯುವುದು. ಕ್ರೌ. ಅ. ೨೮೨ ಪುಟ. ಬೆಲೆ ೧–೧೨–೦

೪೭ ಹಿಂದೀ ಕನ್ನಡ ಸ್ವಬೋಧಿನಿ:— ಭಾಷಾಂತರ ಕರ್ತರು ಪಂಡಿತ ಸಿದ್ಧನಾಥ ಪಂತರು; ಪ್ರಕಾಶಕರು ದಕ್ಷಿಣಭಾರತ ಹಿಂದೀ ಪ್ರಚಾರಸಭಾ ಟ್ರಿಪ್ಲಿಕೇನ ಮದ್ರಾಸ್. ಕ್ರೌ. ಅ. ೧೬+೨೧೦ ಪುಟ. ಬೆಲೆ ೦–೧೨–೦

೪೮ ಗೃಹವೈದ್ಯ:— ( ಪೂರ್ವಾರ್ಧ ) ಗೋಕರ್ಣದ ನಂದಿನೀ ಗ್ರಂಥಮಾಲೆಯ ೨ನೆಯ ಕುಸುಮ. ಲೇಖಕರು ಡಾ॥ ಸೀತಾರಾಮ ವಿಘ್ನೇಶ್ವರಭಟ್ಟ ಭಡತಿ ಗೋಕರ್ಣ ಅವರು. ಡೇಮಿ ಅ. ೧೦೬ ಪುಟ. ಬೆಲೆ ಹತ್ತು ಆಣೆ.

೪೯ ಭಗವಾನ್ ಶ್ರೀ. ಶಂಕರಾರ್ಯ:—( ಚರಿತ್ರೆ, ಇದು ನಂದಿನೀ ಗ್ರಂಥಮಾಲೆಯ ೩ನೆಯ ಕುಸುಮ. ಲೇಖಕರು ಶ್ರೀ. ಸೂರ್ಯ ನಾರಾಯಣ ಹೆಗಡೆ ಕಡತೋಕಾ. ಡೆಮಿ.ಅ. ೧೦೬ ಪುಟ ಬೆಲೆ ಹತ್ತು ಆಣೆ.

೫೦ ಮಾಸ ಮಹಾತ್ಮ್ಯ ( ಧಾರ್ಮಿಕ ಗ್ರಂಥ )ನಂ. ಗ್ರಂ. ಮಾಲೆಯ ೪ನೆಯ ಕುಸುಮ. ಲೇಖಕರು ಶ್ರೀ. ಗಣಪತಿ ಶಿವಭಟ್ಟ ಭಡತಿ ಗೋಕರ್ಣ, ಶಾಲಾಮಾಸ್ತರ ಕುಮಟಾ. ಡೆ. ಅ. ೧೫೦ ಪುಟ. ಬೆಲೆ ೧–೦–೦

೫೧ ರಾಷ್ಟ್ರೋನ್ನತಿ ಲೇಖಮಾಲಾ:— ( ಮರಾಠಿ ನಿಬಂಧದ ಅನುವಾದ ) ಮೂಲ ಲೇಖಕರು ಶ್ರೀ. ವಿದ್ಯಾಭೂಷಣ ತಾಂಬೇ ಶಾಸ್ತ್ರಿಗಳು. ಅನುವಾದಕರು ಶ್ರೀ. ಗ. ಶಿವಭಟ್ಟ ಭಡತಿ ಗೋಕರ್ಣ. ಇದು ನಂ. ಗ್ರ. ಮಾಲೆಯ ಆರನೆಯ ಕುಸುಮ. ಡೇ. ಅ. ೯೦ ಪುಟ ಬೆಲೆ ೦–೮–೦

೫೨ ಮುಕುಂದಮಾಲಾ ಸ್ತೋತ್ರರತ್ನಂ:—(ಕು... ಶೇಖರಾಳ್ವಾರರ ಸಂಸ್ಕೃತಮೂಲ ಕನ್ನಡ ತಾತ್ಪರ್ಯ ಸಹಿತ ) ಮೈಸೂರಿನ ಶ್ರೀಕೃಷ್ಣಪತ್ರಿಕೆಯ ಸಂಪಾದಕರಾದ ಶ್ರೀ. ಪಿ. ರಾಜಗೋಪಾಲ ಚಕ್ರವರ್ತಿಯವರು ರಚಿಸಿ ಪ್ರಕಾಶಿಸಲ್ಪಟ್ಟುದು. ಡೇ. ಅ. ೮+೩೩ ಪುಟಗಳು. ಬೆಲೆ ೦–೮–೦

೫೩ ಆಯುರ್ವೇದಚಿಕಿತ್ಸಾಸಂಗ್ರಹ. (ವೈದ್ಯಗ್ರಂಥ) ಪ್ರಕಾಶಕರು:- ಪಂಡಿತ್ ಮತ್ತು ಕಂಪನಿ. ತೀರ್ಥಹಳ್ಳಿ ಡೆಮಿ. ೧೧೧೨-೩೪೬ ಪುಟಗಳು. ಬೆಲೆ ೦-೧೬-೦

೫೪ ಕಾಂಗ್ರೆಸ್ಸಿನ ಸಂಕ್ಷಿಪ್ತ ಇತಿಹಾಸ. ಬರೆದವರು ರಾ. ಶ್ರೀ, ಹುಕ್ಕೇರಿಕರ. ಧಾರವಾಡ. ಡೆಮಿ ೧೬ ೧೧೮ ಪುಟಗಳು. ಬೆಲೆ ೦ ೫–೦

೫೫ ಕೀರ್ತನಾಂಜಲಿ. ( ಪ್ರಥಮಭಾಗ ) ಕವನ ಸಂಗ್ರಹ. ಬರೆದವರು: ಜಿ. ಎನ್. ಲಕ್ಷ್ಮಣ ಪೈ. ಕ್ರೌ. ಅ. ೪೯ ಪುಟ. ಬೆಲೆ ೦–೩–೦ ಹರಿಹರ ಛಾಪಖಾನೆ.

೫೬ ಪದ್ಯಾವಳಿ. ( ಹುಡುಗರಿಗಾಗಿ, ಚರಿತ್ರೆ ಮತ್ತು ಕಥೆಗಳ ಸಚಿತ್ರ ಪದ್ಯಾವಳಿ ) ಬರೆದವರು:-ಕೋಡಿಕಲ್ ಶ್ರೀನಿವಾಸರಾವ ಉಡುಪಿ. ಕ್ರೌ. ಅ. ೪೪ ಪುಟಗಳು. ಬೆಲೆ ೦–೨–೦

೫೭ ಪರದೇಶಿ. ( ಚಿಕ್ಕಕಥೆ ) ಬರೆದವರು:- ಕೃ. ಕುಲಕರ್ಣಿ, ಧಾರವಾಡ ಡೇ. ಅ. ೧೬ ಪುಟ.

೫೮ ಪ್ರೇಮಪಾಶ. ( ಸಣ್ಣಕಥೆ ) ಬರೆದವರು ... ಕ್ರೌ. ಅ. ೨೪ ಪುಟ ಬೆಲೆ ೦–೨–೦ ಎಸ್. ಟಿ. ಲಕ್ಷ್ಮಣ ಗೌಡರು ಪ್ರಕಾಶಕರು. ಬೆಂಗಳೂರು.

೫೯ ಉದಯ [ನೂತನ ವಾರಪತ್ರಿಕೆ] ಪ್ರಕಾಶವಾಗಿ ಪ್ರತಿರವಿವಾರ ಹೊರಡುತ್ತಿದೆ. ಸಂಪಾದಕರು ಶ್ರೀ ಸ. ಚ. ಮಿರ್ಜಿಯವರು. ವಾ. ಚ. ೨–೧೨–೦ ನವತರ ಬಂಧುವಿಗೆ ಸುಸ್ವಾಗತ. ಒಲುದಿನ ಬಾಳಲೆಂಬ ಹಾರೈಕೆ

೬೦ ಬೆಳಗಾಂವಿಯ ತುಂಟರ ತಂಡದ ದ್ವಿತೀಯ ವಾರ್ಷಿಕೋತ್ಸವದ ವರದಿಯು.

೬೧ ಧಾರವಾಡ ಮಹಾಸನವಮೀ ಉತ್ಸವದ ವರದಿ [೧೯೩೧]

೬೨ ಎಮ್. ಎಸ್. ಸಿದ್ದಪ್ಪಾ ಬ್ರದರ್ಸರವರ ೧೯೩೨ನೆಯ ಇಸ್ವಿಯ ಪಾಕೆಟ್ ಕ್ಯಾಲೆಂಡರ್, ಬೆಲೆ ೦–... ಮತ್ತು ಸಾದಾ ಕ್ಯಾಲೆಂಡರ್.

CC-0. Jangamwadi Math Collection. Digitized by eGangotri

# ಪರಿವಿಡಿ

[ಎಲ್ಲ ಬರೆಹಗಾರರ ಹೆಸರಿನ ಹಿಂದೆ ಶ್ರೀ. ಎಂದು ಸೇರಿಸಿ ಓದಿಕೊಳ್ಳಬೇಕು. ಸಂ. ಜ. ಕ.]





CC-0. Jangamwadi Math Collection. Digitized by eGangotri

೭೨ ಶರೀರಸಂಬಂಧ (ಕಲ್ಪಿತ ಕಥೆ) ಮಂಗಳೂರು ಜಿಲ್ಲೆಯ ಪೋ. ಮುಂಡಾಜೆನಲ್ಲಿ ಪ್ರಕಟವಾಗುತ್ತಿರುವ "ಸುಧಾರಧಾರೆ"ಯ ದ್ವಿತೀಯ ಬಿಂದುವಿದು "ಸುಧಾರಕ"ರು ಬರೆದುದು. ಶ್ರೀ. ಎಸ್. ಎನ್. ಭಿಡೆ ಮುಂಡಾಜೆ ಅವರು ಪ್ರಕಟಿಸಿದುದು. ಫುಲ್‌ಸ್ಕೇಪ್ ಅ. ೨೭ ಪುಟ ಬೆಲೆ ೦-೧-೩.

೭೩ ಮೋಹನವಾಣಿ (ಕಥೆ) "ಸುಧಾರಧಾರೆ"ಯ ತೃತೀಯ ಬಿಂದುವಿದು. "ಸಾರಸ್ವತ"ರು ಬರೆದುದು. ಕ್ರೌ. ಅ. ೩೫ ಪುಟ ೦-೪-೦ ಪ್ರಕಾಶಕರಲ್ಲಿ ದೊರೆಯುವುವು.

೭೪. ಶ್ರೀರಂಗನಗರದ ಕೊನೆದಿವಸ [ಐತಿಹಾಸಿಕ ಕವನ] ಶ್ರೀ. "ಕ್ಷೀರಸಾಗರ"ರು ರಚಿಸಿದುದು. ಬೆಂಗಳೂರಿನ ಸತ್ಯಶೋಧನ ಪುಸ್ತಕ ಭಾಂಡಾರದ ಪ್ರಕಟನೆ. ಕ್ರೌ. ಅ. ೧೬ ಪುಟ ಬೆಲೆ ೦-೩-೦.

೭೫ ಸುಶೀಲೆ ಅಥವಾ ಸಂಸ್ಕೃತಿಯ ಫಲ: [ಕಥೆ] ಬರೆದವರು ಶ್ರೀ. ಟಿ. ಎ. ವಾಸ ಅವರು. ರಾಯಚೂರಿನ ಕರ್ನಾಟಕ ಸಂಘದವರು ಹೊಸತಾಗಿ ಹೊರಡಿಸುತ್ತಿರುವ "ಕನ್ನಡ ಕುಸುಮಮಾಲೆ"ಯ ಮೊದಲನೆಯ ವರುಷದ ಮೊದಲನೆಯ ಕುಸುಮ. ಡೇಮಿ ೧೬ ದ ೨೭ ಪುಟ. ಬೆಲೆ ೩-೩-೦.

೭೬ ಬಲಭೀಮ ಹನುಮಾನ್‌ಜೀ (ಹನುಮಂತನು ಮನುಷ್ಯನೋ ಕಪಿಯೋ? ಎಂಬ ವಿಷಯದ ವಿಮರ್ಶೆ) ಔಂಧ ಸಂಸ್ಥಾನದ ಸ್ವಾಧ್ಯಾಯಮಂಡಲದ ಪ್ರವರ್ತಕರಾದ ಪಂಡಿತ ದಾಮೋದರ ಸಾತವಳೇಕರರು ಹಿಂದಿಯಲ್ಲಿ ಬರೆದುದರ ಕನ್ನಡ ಅನುವಾದ. ಮೈಸೂರಿನ ಆರ್ಯ ಸಮಾಜದ ಮಂತ್ರಿ ಶ್ರೀ. "ವಿಶ್ವಾಮಿತ್ರ" ಅವರು ಅನುವಾದಕರು. ಕ್ರೌ. ಅ. ೧೯ ಪುಟ ಬೆಲೆ ೦-೧-೬.

೭೭ ಶ್ರೀರಾಮ ಹೃದಯ (ಅರ್ಥಸಹಿತ) ಅರ್ಥ ಲೇಖಕರು ಶ್ರೀ. ವೈ. ಸುಬ್ಬರಾಯರು. ಬೆಂಗಳೂರು ನಗರದ "ಅಧ್ಯಾತ್ಮ ಗ್ರಂಥಾವಳಿ"ಯ ಪ್ರಕಟನೆ. ಪುಟ್ಟ ಪುಟ ೩೨. ಬೆಲೆ ೦-೧-೦

೭೮ ಶ್ರೀಮಂತನ ದುರವಸ್ಥೆ [ಸಣ್ಣ ಕಥೆ] ಮೈಸೂರು "ಶ್ರೀಕೃಷ್ಣ" ಮಾಸಪತ್ರಿಕೆಯ ಸಂಪಾದಕರಾದ ಶ್ರೀ. ಬಿ. ಆರ್. ಚಕ್ರವರ್ತಿಯವರಿಂದ ರಚಿಸಿ ಪ್ರಕಟಿಸಲ್ಪಟ್ಟದು. ಡೇ. ಅ. ೧೫ ಪುಟ. ಬೆಲೆ ೦-೧-೬

೭೯ ಬಡವನ ಭಾಗ್ಯೋದಯ ಅಥವಾ ಸುವರ್ಣವೃಷ್ಟಿ. ಇದನ್ನೂ ಮೇಲಣ ಲೇಖಕರೇ ಬರೆದು ಪ್ರಕಟಿಸಿದ್ದಾರೆ. ಡೇ. ಅ. ೧೭ ಪುಟ. ಬೆಲೆ ೦-೧-೬

೮೦ ಮಕ್ಕಳ ಪುಸ್ತಕದ "ಕ್ರಿಸ್‌ಮಸ್ ಸಂಚಿಕೆ" ಸಂಪಾದಕರು: ಶ್ರೀ. ಸಿ. ಅಶ್ವತ್ಥನಾರಾಯಣರಾವ ಬಿ. ಎ. ಪ್ರಕಾಶಕರು "ಕೃಷ್ಣ ಕಂಪೆನಿ ಬೆಂಗಳೂರು ನಗರ" ತುಂಬ ಚಿತ್ರಗಳಿವೆ. ಬಣ್ಣ ಬಣ್ಣದ ಪುಂಡಿನ ಹಾಳೆಗಳಲ್ಲಿ ಬಣ್ಣಬಣ್ಣದ ಮಸಿಯಲ್ಲಿ ಅಚ್ಚಾಗಿದೆ. ಅಂದವಾದ ಮೂರು ಬಣ್ಣದ ಎರಡು ಚಿತ್ರಗಳುಂಟು. ಬೆಲೆ ೨-೦-೦.

೮೧ ತ್ರಿಶೂಲ [ಮಾಸಪತ್ರಿಕೆ] ಸಂಪಾದಕರು ಶ್ರೀ. ಎಂ. ಸಿ. ಲಿಂಗೇಗೌಡರು. ಎಂ. ಎಲ್. ಸಿ. ಜಯಕರ್ನಾಟಕದಳತೆಯ ೧೨ ಪುಟ. ವಾ. ವ. ಅ, ಮೆ. ಸೇರಿ ಒಂದು ರೂಪಾಯಿ. ಬಿಡಿಪತ್ರಿಕೆ ೦-೧-೬. ವಿಳಾಸ: ಮ್ಯಾನೆಜರು. ತ್ರಿಶೂಲ ೧೦೦ ಅಡಿ ರಸ್ತೆ ಮೈಸೂರು.

೮೨ ಕರ್ನಾಟಕ ಇತಿಹಾಸ ಸಂಶೋಧಕ ಮಂಡಲದ ವರದಿಯು [ಕ್ರಿ. ವ. ೧೯೧೪ ದಿಂದ ೧೯೩೧ರ ವರೆಗೆ] ಪ್ರಕಾಶಕರು: ಶ್ರೀ. ಸ. ಶ್ರೀ. ಕಮಲಾಪೂರ ಬಿ. ಎ. ಎಲ್. ಎಲ್. ಬಿ. (ಗೌ. ಕೌ. ದ) ಡೆ. ಅ. ೫೩ ಪುಟಗಳು. ಅಂದವಾದ ಅಚ್ಚು.

೮೩ ಅಂಗಿರಸ್ಸಂವತ್ಸರದ ಪಂಚಾಂಗವ: ಶ್ರೀ. ಚಿಕ್ಕೋಡಿ ವಿಷ್ಣು-ಶಾಸ್ತ್ರಿಗಳ ಮಗ ಸುಬ್ಬಣ್ಣಶಾಸ್ತ್ರಿಗಳು ಗುಣಿಸಿ, ಶಿಕಂಕಲ್ಲು ಸುಬ್ರಾಯ ಜೋಯಿಸರಿಂದ ಪರಿಶೋಧಿತವಾಗಿ ಭಾರತೀ ಮಂದಿರದಲ್ಲಿ ಪ್ರಕಾಶಿತವಾದುದು. ಹರಿಹರ ಛಾಪಖಾನೆ ಪುತ್ತೂರು ದ. ಕ. ಇವರಲ್ಲಿ ದೊರೆಯುವುದು. ಬೆಲೆ ೦-೩-೦

೮೪ भक्त भारती. (ಹಿಂದೀಭಾಷೆಯ ಪದ್ಯಗ್ರಂಥ) ಶ್ರೀ. ತುಲಸೀರಾಮ ಶರ್ಮಾ "ದಿನೇಶ" ಎಂಬವರು ಪುರಾಣಪ್ರಸಿದ್ಧರಾದ ಏಳು ಜನ ವಿಷ್ಣುಭಕ್ತರ ಚರಿತ್ರೆಗಳನ್ನು ಪದ್ಯದಲ್ಲಿ ಹೆಣೆದಿದ್ದಾರೆ. ಪುಸ್ತಕದಲ್ಲಿ ನಾಲ್ಕು ತ್ರಿವರ್ಣ ಚಿತ್ರಗಳೂ ಮೂರು ಏಕವರ್ಣ ಚಿತ್ರಗಳೂ ಉಂಟು. ಮುದ್ರಕರು ಮತ್ತು ಪ್ರಕಾಶಕರು ಶ್ರೀ. ಘನಶ್ಯಾಮದಾಸ ಗೀತಾಪ್ರೆಸ್ ಗೋರಖಪೂರ. ಕ್ರೌ. ಅ. ೧೧೨ ಪುಟ ಸಾದಾಪತ್ರಿಕೆ ಏಳಾಣೆ ಬಟ್ಟೆಯ ಕಟ್ಟು ಸದಕ್ಕೆ ಹತ್ತಾಣೆ.

CC-0. Jangamwadi Math Collection. Digitized by eGangotri




ಸಂಪುಟ ೧೦ | ಪ್ರಜೋತ್ಪತ್ತಿ ಸಂವತ್ಸರ, ಭಾರತ ಹುಣ್ಣಿವೆ | ಸಂಚಿಕೆ ೪

ಚಾಲುಕ್ಯ ವಿಕ್ರಮ ವರ್ಷ ೮೫೬

# ಕರುಳಿನ ವಚನಗಳು

ಶ್ರೀ ಅಂಬಿಕಾತನಯದತ್ತ

## ಕಂಡೆ

ನನ್ನ ಬಯಕೆಗಳ ಬಸಿರಲ್ಲಿ ಮೊಳೆದ,
ನನ್ನ ಬಸಿರಿನ ಬಯಕೆಯಲ್ಲಿ ಹೊಳೆದ
ಮುದ್ದು ಮೊಗವೆ !
ಬಂದೆಯಾ ಇಂದು ಕಂದನಾಗಿ ನನ್ನೊಡಲಲಿ ?
ನನ್ನ ಕೂಟದ ಕೋಣೆಯನ್ನು ತೆರೆದು,
ನನ್ನ ನೋಟದ ಬಯಲಿನಲ್ಲಿ ಮೆರೆದು
ನಿಂದೆಯಾ ಮುಂದೆ–ಮುದ್ದಿನ ತಿದ್ದಿದ ಮೂರುತಿಯಾಗಿ?
ಪಾತನ್ನಾಡದ ಮುಗುದಯ್ಯಾ !
ಮಿಕಿಮಿಕಿ ನೋಡುವ ಮರಿಯೆ !
ಪರದೇಶಿಯಾಗಿ ಬಂದೆನ್ನ ಕೂಸೆ !

ಮಾಸದ ಮುಸುಕನ್ನು ಹೊತ್ತುಬಂದಿದ್ದ
ಪೂಸದ ಸೌಸವವೆ !
ಮಣ್ಣಿನ ಮನೆಯನ್ನು ಸೇರಿಬಂದ
ಮಾಸದ ಸೊಬಗೆ!
ನನ್ನ ಮನಸಿನ ಚಂದರದಲಿದ್ದ ಒಲವಿನ ಮಿಡಿಯೆ !
ನನ್ನ ಕನಸಿನ ಗುಡಿಯಲಿದ್ದ ನಲಿವಿನ ಕುಡಿಯೆ !
ನನ್ನ ನನಸಿನ ಬಸಿರಲಿದ್ದ ಚೆಲುವಿನ ಕೈಪಿಡಿಯೆ !
ಕೈಗೆ ಬಂದು “ ಕಂಡೆನು ” ಎನ್ನಿಸಿದ ಕಂದಯ್ಯಾ !
“ ಉಂಡೆನು ” ಎನ್ನಿಸುವೆಯಾ–ಬಾಯಿಗೆ ಬಂದು–
ಮುದ್ದೆ !

CC-0. Jangamwadi Math Collection. Digitized by eGangotri

## ಹಂಗು

ಹಂಗ ಹಿಂಗಿಸಲು ಬಂದೆಯೊ ?
ಭವವ ಭಂಗಿಸಲು ಬಂದೆಯೊ ?
ಜಗದಿ ಏತಕ್ಕೆ ಬಂದೆನ್ನ ರಂಗನಾಥಾ !
ಮಂಗಲಕೆ ಮಂಗಲವೆ !
ತಂಗಲು ಬಂದೆಯೊ–ನನ್ನ ತೊಡೆಯ ಮೇಲೆ ?
ನನ್ನೊಡಿಯ ತೊಟ್ಟಿಲಲಿ ಕಾಲಿಟ್ಟ ಕಾರಣವೇನು ?
ನನ್ನ ನನಸಿನ ನನೆಯೇ !
ನನ್ನ ಕನಸಿನ ಕೆನೆಯೆ !
ಹಣ್ಣಾಗುವೆಯಾ–ಬಳಗದ ಬನದಲ್ಲಿ ?
ಬೆಣ್ಣೆಯಾಗುವೆಯಾ–ಜಗದ ಹುಳಿತಿಳಿಯಲ್ಲಿ ?
ಸಂಸಾರವೆಂಬ ಕಡಲ ಉಕ್ಕಿನ
ತೆರೆಗಳ ತಕ್ಕೆಯಲ್ಲಿ ಕೂಡಿಬಂದ
ಮರದ ತುಂಡುಗಳಂತಿರಬಹುದೇ–
ನೀನು ನನ್ನ ಪಡೆದುದು, ನಾನು ನಿನ್ನ ಹಡೆದುದು ?

## ಆಶೆ-ನಿರಾಶೆ

ಬಗೆಬಗೆಯ ಬಗೆಗಳ ಹಗೆಯಲ್ಲಿ
ಬಗೆಹರಿಯದಾಗಲು
ನಿನ್ನ ನಗೆಮೊಗದ ಮುಖಾಂತರ
ನಿನ್ನೆದೆಯ ಗೂಡಸೇರುವುದು–ನನ್ನ ಆಶೆ.
ಎಂತೆಂತಹ ಚಿಂತೆಗಳ ಸಂತೆಯಲ್ಲಿ
ಹಾದಿ ದೊರೆಯದಾಗಲು
ನಿನ್ನ ಭವ್ಯ ಮುಖದ ಮುಖಾಂತರ
ನಿನ್ನ ಭವಿಷ್ಯದ ಮುಗಿಲಲ್ಲಿ ಹಾರುವುದು ನನ್ನ ನಿರಾಶೆ.
ಭವಸಾಗರದ ಸುಳಿಗೆ ಸಿಕ್ಕಿ
ಬಂಡೆಗೆ ಬಡಿಬಡಿದು ಸುಗ್ಗಾಗಿ,
ಬಿರುಗಾಳಿಯಲ್ಲಿ ನಿನ್ನ ಧ್ರುವದೃಷ್ಟಿಯ ನಂಬಿ
ಸಾಗುವುದು--ನನ್ನ ಆಶೆ.
ತಿರೆಯಂತೆ ತಿರ್ರನೆ ತಿರುತಿರುಗಿ ತಿರುಗಿ ಬರುವುದು
ನಿನ್ನ ಸುತ್ತು ಮುತ್ತು ಸುತ್ತುವರಿಯಲು
ಎಳನೇಸಪನೇ !- ನನ್ನ ನಿರಾಶೆ.
ನನ್ನ ಹಂಬಲಿನ ಹಂಬಿಗೆ ಹಂದರ ನೀನು;
ನನ್ನ ಬೆಂಬಲದ ನಂಬಿಗೆಯ ಮಂದಿರ ನೀನು;
ನೀನೇ ನನ್ನ ಆಶೆನಿರಾಶೆಗಳ ಗಾಳಿಗೋಪುರ !

## ಅವರೇನು ಬಲ್ಲರು !

ಮಕ್ಕಳಿಲ್ಲದಿದ್ದರೆ ಒಂದು ಚಿಂತೆಯಂತೆ,
ಇದ್ದರೆ ನೂರೊಂದು ಚಿಂತೆಯಂತೆ;
ಅನ್ನುವವರೇನು ಬಲ್ಲರು ?
ನನ್ನ ಚಿಂತಾಪಹಾರಕ ಚಿಂತಾಮಣಿ !
ಚಿಂತೆಯ ಪಂಚಾಗ್ನಿಯಲ್ಲಿ ತಪಮಾಡಿಸಿ
ತಪಸ್ವಿನಿಯ ಮಾಡಿಸಿದೆ;
ಮಕ್ಕಳೆಂದರೆ ನೊಣದ ಪಾಯಸವೆಂತೆ,
ಕೊರಳಿಗುರುಲೆಂತೆ;
ಅನ್ನುವವರೇನು ಬಲ್ಲರು ?
ನನ್ನ ಅಮೃತದ ಝರಿಯೇ !
ನಿನ್ನ ವಿಷವುಂಡು ನೀಲಕಂಠಾಭರಣಳಾದೆ.
ಸುಖದುಃಖಸಮನೆಂಬ ಯೋಗಿಯ ಮಾಡಿದೆ.

## ಮೊಲೆ

ನನ್ನ ಬಾಲಗೋಪಾಲನ ಗೋದಲೆಗಳವ್ವಾ ಇವು-
ಕಪಿಲೆಕಾಮಧೇನುಗಳು ಕಟ್ಟಿಹವಲ್ಲಿ.
ಅವನಿಗೇನು ಕಡಿಮೆ ?
ಗಂಗೆಗೆ ಉಣಿಸುವ ಹಿಮಪತಿಯ
ತುಂಗಶಿಖರದ ಮಾಡರಿಗಳಿವು–
ಅವನಿಗೇನು ಕಡಿಮೆ ?
ವಾತ್ಸಲ್ಯದ ವಿಜಯಯಾತ್ರೆಯಲ್ಲಿ
ನನ್ನ ಕಂದನೂದುವ ಅವಳಿಶಂಖಗಳಿವು–
ಅವನಿಗೇನು ಕಡಿಮೆ ?
ಎಲ್ಲರ ತಾಯಿಯಾದ ನಲ್ಲಮ್ಮನ ಗುಡಿಯ
ಜೋಡು ಕಳಸಗಳಿವು....
ಅವನಿಗೇನು ಕಡಿಮೆ ?
ಹಾಲಿನ ಬಟ್ಟಲುಗಳಲ್ಲ ಮಾಂಸದ ಒಟ್ಟಲುಗಳಲ್ಲ !
ಜಗದಂಬೆಯು ಜೀವ ಶಿಶುವನ್ನು ಮಲಗಿಸಿ ತೂಗುವ
ತೊಟ್ಟಿಲ ಕಾಲುಗಳಿವು–
ಅವನಿಗೇನು ಕಡಿಮೆ ?

## ಆಡು !

ನನ್ನ ಮದ್ದಾನೆಯೆ ! ನಿನ್ನ ತೋಳ ಸೊಂಡಿಲಾಡಿಸಲ್ಲ
ಮಗುವೆ ! ಆಡು–ಆಡು.
ನನ್ನ ಪಾರಿವಾಳವೆ ! ನಿನ್ನ ಗೋಣನ್ನಾಡಿಸಲ್ಲ
ಮಗುವೆ ! ಆಡು–ಆಡು.

CC-0. Jangamwadi Math Collection. Digitized by eGangotri

ನನ್ನ ಅರಸಂಚೆಯೆ ! ಅಡಿಯಿಡು, ನಡೆ ನಡೆ-
ಮಗುವೆ ! ಆಡು-ಆಡು.
ನನ್ನ ಅರಗಿಳಿಯೆ ! ತುಟಿ ಬಿಚ್ಚು, ನುಡಿ ನುಡಿ-
ಮಗುವೆ ! ಆಡು-ಆಡು.
ನನ್ನ ಬೆಳ್ಳಕ್ಕಿಯೆ ಸಾರು ಸಾರು ಮುಗಿಲಿನ ಕೂಡ
-ಮಗುವೆ ! ಆಡು-ಆಡು.
ನನ್ನ ಬೆಳುವವೆ ! ಹಾರು ಹಾರು ಹಗಲಿನ ಕೂಡ-
ಮಗುವೆ ! ಆಡು-ಆಡು.
ನನ್ನ ನವಿಲೆ ಕುಣಿ ಕುಣಿ ! ನನ್ನ ನವಿಲೆ ಮಣಿ ಮಣಿ !
ನನ್ನ ಚದುರ ಚಂದ್ರಮಾ ! ಆಡು-ಆಡು.

## ಲಲ್ಲೆ.

ನನ್ನ ರನ್ನಾ ಚೆನ್ನಾ ! ನನ್ನ ಮಂಗಲಗೌರೀ !
ನೋಡವ್ವಾ-ನೋಡು ನಿನ್ನ ಸೊಬಗಿನ ಕಣ್ಣಿನಿಂದೆ.
ನನ್ನ ತಾಳಿಯ ಮಣಿಯೊಳಗಿನ ತೇಜವಲ್ಲವೆ ನೀನು !
ನನ್ನ ಪ್ರಾಣದ ಪದಕವೆ ! ನನ್ನ ಮಹಾಲಕ್ಷ್ಮೀ !
ನೀಡವ್ವಾ-ನೀಡು ನಿನ್ನ ವರದಹಸ್ತದಿಂದೆ.
ನನ್ನ ಬೇಳೆಯ ಮಣಿಯೊಳಗಿನ ಬಂಗಾರವಲ್ಲವೆ ನೀನು !
ನನ್ನ ಜೀವದ ಜ್ಯೋತಿಯೆ ! ನನ್ನ ಸರಸತೀ !
ಆಡವ್ವಾ ಆಡು-ನಿನ್ನ ಸವಿನಾಲಗೆಯಿಂದೆ.
ನನ್ನ ಕೈಯ ಕಂಕಣಗಳ ಕಣಕಣವಲ್ಲವೆ ನೀನು !
ನಮ್ಮ ಬನದ ಶಂಕರಿ ! ನಮ್ಮ ಭುವನೇಶ್ವರಿ !
ಗುಡ್ಡದ ಎಲ್ಲಮ್ಮ ! ಬೆಟ್ಟದ ಚಾಮುಂಡಿ !
ನನ್ನ ಬಾಲಮೋಹನ ನಮ್ಮ ನಾಡ ದೇವತೆ.

## ನಗು—ಅಳು

ನನ್ನ ಬೆಲ್ಲದಚ್ಚಿನ ಬೊಂಬೆಯೆ !
ನೀನು ನಕ್ಕರೊಂದು ರುಚಿ, ನೀನು ಅತ್ತರೊಂದು ರುಚಿ.
ನೀನು ನಗುತ್ತಲೆ ನಾನು ನಿನ್ನವಳೆಂದೆನಿಸುವುದು.
ನೀನು ಅಳುತ್ತಲೆ ನೀನು ನನ್ನವನೆಂದೆನಿಸುವುದು.
ನೀನು ನಕ್ಕರೊಂದು ರುಚಿ, ನೀನು ಅತ್ತರೊಂದು ರುಚಿ.
ನಿನ್ನ ಬಾಡಿದ ಮೊಗನೋಡಿ
ನನ್ನ ಕಣ್ಣಲ್ಲಿ ನೀರು ನಿಲ್ಲುವುದು.
ನನ್ನ ಅರಳಿದ ಮುಖನೋಡಿ
ನಿನ್ನ ತುಟಿಯಲ್ಲಿ ನಗೆಯೂರುವುದು.
ನೀನು ನಕ್ಕರೊಂದು ರುಚಿ, ನೀನು ಅತ್ತರೊಂದು ರುಚಿ.
ನೀನು ನಕ್ಕರೆ ಬೆಳಕಿನ ಬೆಳೆ
ನೀನು ಅತ್ತರೆ ಮುತ್ತಿನ ಮಳೆ;
ನೀನು ನಕ್ಕರೊಂದು ರುಚಿ, ನೀನು ಅತ್ತರೊಂದು ರುಚಿ.

## ಮುದ್ದು

ಅವ್ವಾ ನೋಡಿರೆ ! ಮಲ್ಲಾರಿ ಮಾರ್ತಾಂಡನ,
ಎಲ್ಲರನು ಗೆಲ್ಲಲು ನಿಂತ ಜಗಜಟ್ಟಿಯ.
ಅವ್ವಾ ನೋಡಿರೆ ! ಗುಡ್ಡದ ಕುಮಾರಸ್ವಾಮಿಯ,
ದೇವರ ದಣ್ಣಾಯಕನ-
ಶಾಂತ ಸುಕುಮಾರ ಸುಬ್ಬಯ್ಯನ.
ಅವ್ವಾ ನೋಡಿರೆ ! ಕುಳಿತಿರುವ ರತಿಯಿಲ್ಲದ ಕಾಮಣ್ಣನ
ನನ್ನ ತನುಜನಾಗಿಬಂದ ಅನಂಗನ.
ಅವ್ವಾ ನೋಡಿರೆ ! ಜೋಕುಮಾರನ,
ಬಡವರ ಬೆಂಬಲದವನ,
ಸಡಗರದ ಸೆಟ್ಟಿಯ.
ಅವ್ವಾ ನೋಡಿರೆ ! ಸಿಂಗಾರದ ರಂಗನಾಯಕನ,
ಚೆಲುವಚೆನ್ನಕೇಶವನ,
ಮಲಗಿದ ಅನಂತಶಯನನ.
ಅವ್ವಾ ನೋಡಿರೆ ! ಭೂವೈಕುಂಠನಿವಾಸಿ-
ವೆಂಕಟರಮಣನ,
ತೆರೆಗೈ ತಿರುಕನ.
ಅವ್ವಾ ನೋಡಿರೆ ! ಮುದ್ದು ವಿಠ್ಠಲನ
ದಾಸರ ದಾಸನ,ಟೊಂಕದ ಮೇಲೆ ಕೈಯಿಟ್ಟವನ.

## ರಹಸ್ಯ

ಎಳಬಾಳೆಯ ಸುಳಿಯೆಲೆಗಿಂತಲೂ
ತೆಳುವಾದ ನಿನ್ನ ಮೈದೊಗಲ ನೋಡುತ್ತಲೆ
ಕಾಣುವುದು-ನೇಕಾರರ ನಯದ ಕಣ್-ನೆಲೆ.
ಮಳೆಗಾಲದ ಮುಗಿಲುಗಳಿಗಿಂತಲೂ
ಬಣ್ಣದಲ್ಲಿ ಮಿಗಿಲಾದ ನಿನ್ನ ಕಣ್ಣ ನೋಡುತ್ತಲೆ
ಕಾಣುವುದು-ಜೀನುಗಾರರ ಜಿನುಗಿನ ಗೊತ್ತು.
ಉತ್ತಮಾಶ್ವದ ಗತ್ತಿನ ನಡಿಗೆಯ
ಹತ್ತುಗಡೆಯ ಬಲ್ಲ ನಿನ್ನ
ಸ್ವಚ್ಛಂದದುಸುರ ಕೇಳುತ್ತಲೆ
ತಿಳಿಯುವುದು ಹಾಡುಗಾರರ ತಾಳಗತ್ತಿನ ಮೇಳ.
ಗಾಡಿಗಾರ ತಾವರೆಯ ಎಸಳಿನ
ಮೋಡಿಯ ಮಾಟಕ್ಕಿಂತಲೂ
ನಿನ್ನ ಕೈಕಾಲ್‌ಬೆರಳುಗಳ ಮಾಟವ ನೋಡಿ

CC-0. Jangamwadi Math Collection. Digitized by eGangotri

ಹೊಳೆಯುವುದು–
ಕೈವಾಡದವರ ಕೈಚಳಕದ ಕುಸುರಿನ ಮೆಲುಪಂಜ್ತಿ.

## ದಶಾವತಾರ

ನೆಲದಮೇಲೆ ಈಸುವುದು, ನೋಡಿದಿರಾ ಮೀನಾವತಾರ!
ಮನುಕುಲೋದ್ಧಾರಕ ನನ್ನ ಕುವರ!
ಬಯಲನ್ನೆಲ್ಲ ಬೆನ್ನಲಿ ಹೊತ್ತಿರುವುದು,
ನೋಡಿದಿರಾ ಕೂರ್ಮಾವತಾರ!
ವಂಶಾಧಾರಸ್ತಂಭ ನನ್ನ ಕುವರ!
ಮುಗಿಲನ್ನೆ ಮೊಗದಿಂದೆತ್ತಲುಹವಣಿಸುವುದು
ನೋಡಿದಿರಾ ವರಾಹಸ್ವಾಮಿ!
ಹೂಂಕರಿಸುವ ನನ್ನ ಕುವರ!
ತನ್ನ ತಾಯ ಬಸಿರನ್ನೆ ಬಗೆದು ಅವಳ ಕರುಳಮಾಲೆಯನ್ನೆ
ಧರಿಸುವ ವಿಚಿತ್ರ ನೃಶಿಂಹಸ್ವಾಮಿ!
ನೋಡಿದಿರಾ ಬಾಲ ಪ್ರಲ್ಹಾದ ನನ್ನ ಕುವರ!
ಅಂಗೈತೆರೆದ ಅಂಗಾಲೆತ್ತಿದ ಪುಟ್ಟ ವಾಮನಮೂರ್ತಿಯು
ನೋಡಿದಿರಾ ಹುಟ್ಟು ತಿರುಕ ನನ್ನ ಕುವರ!
ತಾಯಿಯ ಮೇಲೆ ಕೈಯೆತ್ತಲುಬಂದ
ಧಿಟ್ಟ ಪರಶುರಾಮನ ಕಂಡಿರಾ!
ಶಾಪಚಾಪ ಸವ್ಯಸಾಚಿ ನನ್ನ ಕುವರ!
ಬೈರಾಗಿಗಳಲ್ಲಿ ರಾಗ ಹುಟ್ಟಿಸುವ!
ಭೋಗಿಗಳಿಗೆ ತ್ಯಾಗಬೋಧಿಸುವ!
ಕಂಡಿರಾ ನವೋನವ ಸುಂದರ ನನ್ನ ಕುವರ!
ತಾಯಿತಂದೆಗಳ ಸೆರೆಬಿಡಿಸಿ ಗೀತೆಯು ಹಾಡುವ
ಶ್ರೀಕೃಷ್ಣನ ಕಂಡಿರಾ!
ಲೀಲಾವತಾರಿ ನನ್ನ ಕುವರ!
ಕಂಡಿರಾ ದಿಗಂಬರ ಮೂರ್ತಿ! ಬಾಲ ಬುದ್ಧದೇವ!
ಕೋಲಕುದುರೆಯನೇರುವ ಕಲಂಕಿ!
ಮ್ಲೇಂಛ ಮೋಹವ ಕೊಂದು ಪ್ರೇಮಧರ್ಮವ
ಪ್ರತಿಷ್ಠಾಪಿಸುವ ನನ್ನ ಕುವರ!

## ಅರ್ಧನಾರಿ-ನಟೇಶ್ವರ

ಕಂದಾ! ನಿನ್ನ ಮುಖದ ಮುದ್ರಾಕೃತಿಯು ನನ್ನಂತಿದೆ;
ಆದರೆ ದೇಹದ ಭದ್ರಾಕೃತಿಯು ಅವರಂತಿದೆ.
ಕಂದಾ! ನಿನ್ನ ಕಣ್ಣೊಳಗಿನ ಕರುಣೆ ನನ್ನಂತಿದೆ;
ಆದರೆ ನೋಟದೊಳಗಿನ ಸರಣಿ ಅವರಂತಿದೆ.
ಕಂದಾ! ನಿನ್ನ ಗದ್ದದ ಮೇಲಣ ಕುಣಿಯು ನನ್ನಂತಿದೆ;
ಆದರೆ ಮೂಗಿನ ಕೆಳಗಣ ಮಣಿಯು ಅವರಂತಿದೆ.
ಕಂದಾ! ನಿನ್ನ ಹುಬ್ಬಿನ ಕೊನೆಯು ನನ್ನಂತಿದೆ.
ಆದರೆ ಮೂಗಿನ ತೆನೆಯು ಅವರಂತಿದೆ.
ಅಹಹಾ! ಹುಟ್ಟಾಗೆಲ್ಲ ಬಲ್ಲ ಸೋಲದ ಸೊಬಗುಗಾರ!
ಗಂಡುಗಾಡಿಯಲ್ಲಿ ಹೆಣ್ಣವೋಡಿ ಬೆರೆತು
ಅರ್ಧನಾರಿನಟೇಶ್ವರನ ಅಭಿನವಸೃಷ್ಟಿಯಾದೆಯಲ್ಲ.

## ದೃಷ್ಟಿ.

ಯಾರ ದೃಷ್ಟಿ ತಾಕಿತು ನನ್ನ ಕಂದವ್ವಗೆ-ಯಾರದೃಷ್ಟಿ!
ಮುಂಜಾವಿನ ಮಂಜು ತಾಕಿತೊ?
ಮುಚ್ಚಂಜೆಯ ಸಂಜು ತಾಕಿತೊ?
ಯಾರ ದೃಷ್ಟಿ ತಾಕಿತು ನನ್ನ ಕಂದವ್ವಗೆ ಯಾರದೃಷ್ಟಿ!
ಹೂಗಳು ಕಣ್ಣು ಬಿಟ್ಟುವೊ?
ಚಂದ್ರನ ಕಿರಣ ನೆಟ್ಟುವೊ?
ಯಾರ ದೃಷ್ಟಿ ತಾಕಿತು ನನ್ನ ಕಂದವ್ವಗೆ-ಯಾರದೃಷ್ಟಿ!
ತಾಯಿಯ ದೃಷ್ಟಿ ನಾಯಿಯ ದೃಷ್ಟಿ
ಸೀಸು ಕುಸುಮ ಸುಕುಮಾರ ಸೃಷ್ಟಿ.
ಎಲ್ಲಿ ಬಚ್ಚಿಡಲಿ–ಎಲ್ಲಿ ಮುಚ್ಚಿಡಲಿ– ನನ್ನ ಕಂದವ್ವನ!
ತಾಯಿ ಕಾಡಿದಮೇಲೆ ಕಾಯುವರದಾರು!
ಈ ಪಾಪಿದೃಷ್ಟಿ ಮುಚ್ಚಿ ಕಂದನು ಕಣ್ತೆರೆಯಲವ್ವಾ

## ಅಂಗೈ.

ನನ್ನ ಮಗುವಿನ ಮುಚ್ಚಿದ ಮುಟ್ಟಿಗೆಯಲ್ಲಿ
ಮೂಲೋಕದೊಡೆತನವಿರಬಹುದು.
ತೆರೆದು ನೋಡಲೆ....? ಬೇಡ!
ಭಾಗ್ಯ ತೆರೆದ ಮೇಲೆ ಕೈ ತೆರೆವುದೇನು ತಡ?
ನನ್ನ ಮಗುವಿನ ಮುಚ್ಚಿದ ಮುಟ್ಟಿಗೆಯಲ್ಲಿ
ಧ್ರುವನ ಚಿಕ್ಕೆಯಿರಬಹುದು!
ತೆರೆದು ನೋಡಲೆ....? ಬೇಡ!
ದೈವ ನೆರೆತ ಮೇಲೆ ಕೈ ತೆರೆವುದೇನು ತಡ?
ನನ್ನ ಮಗುವಿನ ಮುಚ್ಚಿದ ಮುಟ್ಟಿಗೆಯಲ್ಲಿ
ಕುಬೇರನ ಸಂಪತ್ತಿಯಿರಬಹುದು.
ತೆರೆದು ನೋಡಲೆ....? ಬೇಡ!
ಕೊಡುಗೈ-ದೊರೆಯಾದ ಮೇಲೆ ಕೈತೆರೆವುದೇನು ತಡ!
ನನ್ನ ಮಗುವಿನ ಮುಚ್ಚಿದ ಮುಟ್ಟಿಗೆಯಲ್ಲಿ
ನವಶಕ್ತಿಗಳಿರಬಹುದು.
ತೆರೆದು ನೋಡಲೆ....? ಬೇಡ!
ಅಂಗೈಯಲ್ಲಿರದಿದ್ದರೂ ಮುಂಗೈಯಲ್ಲಾದರೂ
ಇರಬಹುದು.

CC-0. Jangamwadi Math Collection. Digitized by eGangotri

## ಹುಚ್ಚು ಖೋಡಿ

ನಕ್ಕರೆ ನಕ್ಕೇ ನಗುವುದು,
ಅತ್ತರೆ ಅತ್ತೇ ಅಳುವುದು—ಒಮ್ಮೊಮ್ಮೆ—
ಆಡಿದರೆ ಆಡಿಯೆ ಆಡುವುದು,
ನೋಡಿದರೆ ನೋಡಿಯೆ ನೋಡುವುದು ಒಮ್ಮೊಮ್ಮೆ—
ಹುಚ್ಚು ಖೋಡಿ !
ಮುದ್ದಿಡ ಹೋದರೆ ಬಿಕ್ಕಿಸಿ ಅಳುವುದು.
ಗುದ್ದಲು ಹೋದರೆ ಫಕ್ಕನೆ ನಗುವುದು
ಹುಚ್ಚು ಖೋಡಿ !
ತನ್ನವರು ಕೈಮಾಡಿ ಕರೆದರೂ
ಸುಮ್ಮನಿರುವುದು—ಒಮ್ಮೊಮ್ಮೆ—
ಕಂಡವರು ಕಣ್ಣಿಂದ ಕರೆದರೂ
ಗಮ್ಮನೆ ಹೋಗುವುದು—ಒಮ್ಮೊಮ್ಮೆ
ಹುಚ್ಚು ಖೋಡಿ !
ಗಾಳಿ !.... ಮನಸುಖರಾಯ !
ಹೊರಳಿದತ್ತ ಹೊರಳಿತು, ತೆರಳಿದತ್ತ ತೆರಳಿತು.
ಹುಚ್ಚು ಖೋಡಿ !

## ಬಂತು.

ಸುಖದ ಸೆರೆಯಾಗಿ ಬಂತು,
ದುಃಖದ ಮರೆಯಾಗಿ ಬಂತು
ನನ್ನ ಮಗುವಿನ ಮಮತೆ.
ಹಿಗ್ಗಿನ ತೊರೆಯಾಗಿ ಬಂತು,
ನಗೆಯ ತೆರೆಯಾಗಿ ಬಂತು,
ನನ್ನ ಮಗುವಿನ ಮಮತೆ.
ತಳಮಳದ ನೆರೆಯಾಗಿ ಬಂತು
ಕಳವಳದ ನೊರೆಯಾಗಿ ಬಂತು
ನನ್ನ ಮಗುವಿನ ಮಮತೆ.
ಮುಗಿಲನ ಸೆರೆಯಾಗಿ ಬಂತು
ಜಗದ ದೊರೆಯಾಗಿ ಬಂತು
ನನ್ನ ಮಗುವಿನ ಮಮತೆ.

## ಸ್ವಾಮೀ ನಮ್ಮಪ್ಪಾ !

ಸ್ವಾಮೀ ನಮ್ಮಪ್ಪಾ— ಮಾಡಪ್ಪಾ !
ಮೂಡಣಕೆ ಮೂಡಿದ ಹೊತ್ತಿಗೆ—ಹಗಲಿನ ಬೆಳಕಿಗೆ.
ಸ್ವಾಮೀ ನಮ್ಮಪ್ಪಾ— ಮಾಡಪ್ಪಾ !
ಮುಗಿಲಲ್ಲಿ ನೆರೆದ ಚಿಕ್ಕೆಯ ಜಾತ್ರೆಗೆ—ಇರುಳ ತಳಕಿಗೆ.
ಸ್ವಾಮೀ ನಮ್ಮಪ್ಪಾ— ಮಾಡಪ್ಪಾ !
ಬೆಳತಿಗೆಯ ತಿಂಗಳನಿಗೆ— ಹಾಲಗೋಪಾಲನಿಗೆ.
ಸ್ವಾಮೀ ನಮ್ಮಪ್ಪಾ—ಮಾಡಪ್ಪಾ !
ಮನೆಯ ದೀವಿಗೆಗೆ— ಬಡವರ ಭಾಗ್ಯಕ್ಕೆ.
ಸ್ವಾಮೀ ನಮ್ಮಪ್ಪಾ— ಮಾಡಪ್ಪಾ !
ಒಳಗಿನ ಜೀವರತ್ನಕ್ಕೆ— ಮೂರೋಕದ ಕುಡಿವೆಳಗಿಗೆ.

## ಆಕಾಂಕ್ಷೆ

ರೆಕ್ಕೆಯ ಕುದುರೆಯನೇರಿ,
ಹಕ್ಕಿಯ ಹಾದಿಯ ಹಿಡಿದು,
ದಿಕ್ಕಿನ ತುದಿಗಿದ್ದ ಚಿಕ್ಕೆಗಳ ನಾಡಿನಲ್ಲಿ—
ಮಾತಿನಗಿಳಿಯ ದೂತಿಯ ಮಾಡಿ,
ಪ್ರೀತಿಯ ರಸದ ಗೀತಿಯ ಹಾಡಿ,
ವೇತಾಳ ರಾಯನಾ ಕೋಟೆಯ ನೋಡಿ—
ರಕ್ಕಸರನ್ನು ಕಾದಿಕೊಂಡು
ಬೊಕ್ಕಸವನ್ನು ಸೂರೆಗೊಂಡು
"ಬೆಕ್ಕಸ" ಎನೆ ಮೆರೆದು ಬಂದು—
ಮೂಮಲ್ಲಿಗೆಯ ತೂಕದ ಹೆಣ್ಣು
ವಾಲಿಯ ಭಾಂಡಾರದ ಆ ಹೊನ್ನು
ಏಳು ಕಡಲು ಸುತ್ತಿದ ನೆಲವನ್ನು
ಆಳುವನಪ್ಪಾ ನನ್ನ ಕುಮಾರ !
ನರಲೋಕ ವೀರ ! ದೇಶಕೋಶರಕ್ಷಕ ಶೂರ !
ಧರ್ಮದ ಅರಸನಾಗಿ—ದೇವರ ಊಳಿಗದವನಾಗಿ—
ಕಂಟಕರಿಗೆ ಕಾಳನಾಗಿ
ಆಳುವನಪ್ಪಾ ! ಆಳುವನು !!

## ಮುಖರಸ

ಮೋಹಿನಿಯ ಕೈಯೊಳಗಿನ ಮೋಹಪಾತ್ರ—
ಈ ನನ್ನ ಮಗನ ಮೊಗ,
ಅಂಗಾಂಗದೊಳಗಿನ ದೇವದೇವತೆಗಳು
ತಣಿದರು— ಇದರೊಳಗಿನ ರಸವ ಸವಿದು.
ನಕ್ಕು ನಕ್ಕು ನಲಿವಾಗ ಬಿಕ್ಕಿ ಬಿಕ್ಕಿ ಅಳುವಾಗ
ಮಿಗುವ ಸೊಲ್ಲು ಒಗುವ ಜೊಲ್ಲು
ವಾತ್ಸಲ್ಯದ ಸೆಲೆಯ ನೆಲೆದೋರಿತು.
ನಿದ್ದೆಯೊಳಗಿಂದ ಎಚ್ಚರಿಸಿತ್ತು—
ಬಂಜೆಗೆ ತೊರೆಗರೆಯಿಸಿತ್ತು—ಈ ಮುಖರಸ.
ಮೊಳೆವಲ್ಲ ಮಿಂಚಿನೊಡನೆ
ಚೀರುತೊದಲ ಗುಡುಗಿನೊಡನೆ


CC-0. Jangamwadi Math Collection. Digitized by eGangotri

ಸೋನೆಗರೆವ ಹಿಗ್ಗಿನ ಮುಖರಸವು,
ಮೆಯ್ಯಹೊಲದಲ್ಲಿ ರಸಪುಲಕದ ಬೆಳೆ ತಂದಿತು.
ಒಕ್ಕಲಿಗನಾದ ಜೀವರಾಯನಿಗೆ ಅದೆಹಬ್ಬ !

## ನಗೆ

ಅಹಾ! ನಿನ್ನ ಎಸಲು ಮುರಿಯದ ನಗೆಯೆ
ಸೂಸಲವಾಗಿಹ ನಗೆಯೆ !
ಅಂತರಗಂಗೆಯರಿಯದ ಗಂಗೆ—ನಿನ್ನ ನಗೆ.
ಅದೆ ನಿದ್ದೆಯಿಂದೆಚ್ಚತ್ತಾಗಿನ
ಇನ್ನೂ ಅರಳದಿದ್ದ ನಿನ್ನ ನಗೆಯು
ಎಳನೇಸರಿನ ಹೊಂಬಿಸಿಲ ಕಂದಿಸಿತು
ನೀನು ಅಳುತಿರುವಾಗಲೆ
ತಲೆದೋರುವ ಮುಗುಳುನಗೆಯು
ಮಳೆಗಾಲ ಸಂಜೆಯ ಹೂಬಿಸಿಲ ಬಾಡಿಸಿತು.
ಮೆಚ್ಚುಮಾಡಿ ಮೈಮರೆಯಿಸುವ
ನಿನ್ನ ಹುಚ್ಚುನಗೆಯು
ಮಾಗಿಯಿರುಳ ಬೆಳುದಿಂಗಳ ಮರೆಯಿಸಿತು.
ನನ್ನ ಕಂಡು ಕುಣಿಕುಣಿದು
ಕೆಲೆಕೆಲೆವ ನಿನ್ನ ಅಟ್ಟಹಾಸವು
ಗಗನಕ್ಕೇರಿ ಗಲ್ಲಿಸಿ ತಾರೆಗಳನು ತುಳುಕಾಡಿಸಿತು.
ಅಹಾ ! ವಾತ್ಸಲ್ಯದ ಮಸ್ತಕಮಣಿಯಾದ ನಗೆಯೆ !
ವ್ಯಸ್ತವ ಕರಗಿಸುವ ನಗೆಯೆ !
ಅಸ್ತವನರಿಯದ ಬೆಳ್ಳಿ—ನಿನ್ನ ನಗೆ.

## ತಿಲ್ಲಾಣ

ಇದಾವ ಹಾಡು ?
ಇದಾವ ತಾಲ ?
ಇದಾವ ರಾಗ ?
ನನ್ನ ಪುಟ್ಟ ಪುರಂದರ ವಿಠಲಾ!
ಕೈಯ ತಾರಮ್ಮಯ್ಯಕ್ಕೆ ತೊದಲು ನುಡಿಯ ತಿಲ್ಲಾಣ;
ಬಾಯ ಬೆಲ್ಲವ ಚಪ್ಪರಿಸಿ ಕಾಯಪರವಶನಾದೆ;
ಇದಾವ ರಸ ?
ಇದಾವ ಭಾವ?
ಇದಾವ ಹಾವ?
ನನ್ನ ಪುಟ್ಟ ಪುರಂದರ ವಿಠಲಾ!
ಮಾತಿನ ಸೂತಕವಿಲ್ಲದ ನಾದವ ನಾದುವ ಸೊಲ್ಲು,
ಅರ್ಥದ ಪಾತಕವಿಲ್ಲದ ಜೀವದ ಭಾವದ ಸೊಲ್ಲು,
ಇದಾವ ರೀತಿ ?
ಇದಾವ ಗಮಕ ?
ಇದಾವ ಯಮಕ ?
ನನ್ನ ಪುಟ್ಟ ಪುರಂದರ ವಿಠಲಾ !
ತಿಲ್ಲಾಣದಲ್ಲಿ ಪಲ್ಲವಿಸಿ, ಮುಂದೆ ಪಾಡಿಗೆ ಬರುವ ನಿನ್ನ
ಪಾಡು ವಾಚಾಮಗೋಚರವೇ-ಈ ನಿನ್ನ ಧ್ವನಿಕಾವ್ಯ...
ಹಿಂದಿನ ನೆನಸೋ
ಇಂದಿನ ಮನಸೊ
ಮುಂದಿನ ಕನಸೊ
ನನ್ನ ಪುಟ್ಟ ಪುರಂದರ ವಿಠಲಾ !

## ಕಂದಾ

ಅಹಾ ನನ್ನ ಚೆಂದದ ! ಚಂದಿರೆಯೆ !
ಕುಂದದ ಕುಡಿಮಲರೆ !
ಅಹಾ! ನಾನು ಕೈಕೊಂಡ ಜಿದ್ದೇ!
ನನ್ನ ಮೈಗೊಂಡ ಮುದ್ದೆ !
ಅಧರದಲ್ಲಿ ಮುದ್ದಾಗಿ ಉದರದಲ್ಲಿ ಮುತ್ತಾಗಿ
ಇದಿರು ಮೂರ್ತಿಗೊಂಡು ನಿಂತ ಜೀವದ ಹೂವೇ!
ಬ್ರಹ್ಮಾಂಡವನೊಳಗೊಂಡ—
ನಾಸುಹೊತ್ತು ಹೆತ್ತ-ಪಿಂಡವೆ!
ನನ್ನ ಬಸಿರಿನ ತಾವರೆಯಲ್ಲಿ ಬೆಳೆದ ಬಾಲಬ್ರಹ್ಮಾ!
ಹೆಸರಿನ ಅಪ್ಪಿಗೆಗೆ ಒಪ್ಪದ ಆನಂದಕಂದಾ!
ಏನೆಂದು ಕರೆಯಲಿ, ಏನೆಂದು ಕರೆಯದಿರಲಿ ನಿನ್ನ!
ಅನಂತನ ಅನಂತನಾಮದಲ್ಲಿಯಾದರೂ ಇಂಬುಂಟೆ!

CC-0. Jangamwadi Math Collection. Digitized by eGangotri

# ಭವಿಷ್ಯಹಿತದ ಸಾಧನೆ

ಶ್ರೀ. ಎಂ. ಎ. ದೊರೆಸ್ವಾಮಿ ಐಯಂಗಾರ್, ಎಂ. ಎ. ಬಿ. ಎಲ್. ಮೈಸೂರು

೧

ಮೃಗಗಳಲ್ಲಿ ಸಾಧಾರಣವಾಗಿ ದೂರಾಲೋಚನೆ ಇಲ್ಲ. ಮುಂದಣ ಯೋಚನೆ ಇದ್ದರೆ ಸಂಗ್ರಹಬುದ್ಧಿ (Parsimony) ಹುಟ್ಟುವುದು. ಸಂಗ್ರಹಬುದ್ಧಿ ಎಂದರೆ ಮುಂದೆ ಉಪಯೋಗಕ್ಕೆ ಬೇಕಾದ ಸಾಮಗ್ರಿಗಳನ್ನು ಪೂರ್ವಭಾವಿಯಾಗಿ ಶೇಖರಿಸಿಡುವ ಸ್ವಭಾವವೆಂದು ಅರ್ಥ. ಕೀಳು ದರ್ಜೆಯ ಮೃಗಗಳು ಹಸಿವು ಬಾಯಾರಿಕೆ ಹುಟ್ಟಿದ ಕಾಲದಲ್ಲಿ ಅದರ ಉಪಶಮನಕ್ಕೆ ಆಯತ್ನವಾಗಿ ಪ್ರಯತ್ನಿಸುವುವು. ಇವು ಅಡಗಿದುವೆಂದರೆ ಉತ್ತರಕ್ಷಣದಲ್ಲಿ ಇವುಗಳ ಚಿಂತೆಯೇ ಇರದು. ಸಂಜೆಗೆ ಪುನಃ ಹಸಿವಾದಾಗ ಆ ಗಳಿಗೆಯಲ್ಲಿ ಮಾತ್ರ ಹಿಂದಣಂತೆಯೇ ಪ್ರಯತ್ನವು ನಡೆಯುವುದು. ನಾಳೆಯ ಅನ್ನವನ್ನು ಈ ದಿವಸವೇ ಸಂಗ್ರಹಿಸಿಟ್ಟುಕೊಳ್ಳುವ ಬುದ್ಧಿಯೇ ಇವುಗಳಲ್ಲಿಲ್ಲ. ಮೃಗಗಳು ಅಂತಃಕರಣಬುದ್ಧಿ (Instinent) ಯಿಂದ ಕೆಲಸ ಮಾಡುವುವು. ಮನುಷ್ಯಜಾತಿಯಲ್ಲಿ ಮಾತ್ರವೇ ವಿಮರ್ಶಾ ಬುದ್ಧಿಯು (Reason) ಪ್ರಕಾಶಕ್ಕೆ ಬರುವುದು. ಸಂಗ್ರಹಬುದ್ಧಿ, ಪೂರ್ವಾಲೋಚನೆ ಇವು ಈ ವಿಮರ್ಶಾ ಬುದ್ಧಿಯಿಂದ ಹುಟ್ಟುವುವು. ಈ ಪ್ರವೃತ್ತಿಯಿಂದ ಮನುಷ್ಯಜಾತಿಯು ಶೇಖರಿಸಿ ಇಟ್ಟುಕೊಳ್ಳುವ ಸಾಮಗ್ರಿಗಳ ಸಮಷ್ಟಿಯೇ ನಾಗರಿಕತೆ ಎನ್ನಿಸುವುದು. ಕಾಡು ಮನುಷ್ಯರಲ್ಲಿ ಸಂಗ್ರಹಬುದ್ಧಿ, ದೂರಾಲೋಚನೆ ಇವು ಅತಿಕಡಿಮೆ. ನಾಗರಿಕತೆಯು ಹೆಚ್ಚಿದ ಹಾಗೆ ಇವೂ ಹೆಚ್ಚುವುವು. ಹೀಗೆ ವರ್ತಮಾನಕಾಲದ ಹಿತವನ್ನು ಮಾತ್ರ ನೋಡಿ ನಿಲ್ಲದೆ ಭವಿಷ್ಯದ ಹಿತವನ್ನು ಸಾಧಿಸಲು ಪ್ರಯತ್ನಿಸುವ ಬುದ್ಧಿಯು ಮನುಷ್ಯರ ಸಮಸ್ತ ಆಗುಹೋಗುಗಳಿಗೂ ಕಲ್ಯಾಣಕ್ಕೂ ಮೂಲ ಕಾರಣವಾಗಿದೆ.

ಮನುಷ್ಯರು ಅನವರತವೂ ದುಡಿಯುವುದೇತಕ್ಕೆ? ಮುಂದಣ ಹಿತಕ್ಕಾಗಿ. ಬಾಲಕರು ಇರುಳೂ ಹಗಲೂ ಶ್ರಮಪಟ್ಟು ವ್ಯಾಸಂಗ ಮಾಡುವುದೇತಕ್ಕೆ? ಮುಂದಣ ಸುಖಕ್ಕಾಗಿ. ಜನರು ಸಂಪಾದನೆಯಲ್ಲಿ ಸ್ವಲ್ಪ ಭಾಗವನ್ನು ಮಿಗಿಸಿ ಸಂರಕ್ಷಿಸುವುದೇತಕ್ಕೆ? ಮುಂದಣ ಪ್ರಯೋಜನಕ್ಕಾಗಿ. ಈ ಬಗೆಯಿಂದ ಭವಿಷ್ಯಹಿತ ಸಾಧನಾಬುದ್ಧಿ ಇಲ್ಲದಿದ್ದರೆ, ಸಮಾಜ, ಸರಕಾರ, ವಿದ್ಯೆ, ಕೃಷಿ, ಕೈಗಾರಿಕೆ, ಹಣಕಾಸು, ಆಸ್ತಿಪಾಸ್ತಿ ನೀತಿಮತ ಇವಾವುವೂ ಇರಲಾಗುವುದಿಲ್ಲ. ವೇಶ್ಯಾಸುಖ, ಸುರಾಪಾನ, ದ್ಯೂತ ಇವು ಅನುಭವದ ಗಳಿಗೆಯಲ್ಲಿ ಹಿತಕರವಾಗಿ ಕಾಣುವುವು; ಮುಂದೆ ಮಹಾ ಅನರ್ಥಗಳನ್ನು ತಂದೊಡ್ಡುವುವು. ತಿನ್ನುವಾಗ ಮಿಠಾಯಿ ಚೆನ್ನಾಗಿ ತೋರುವುದು; ಮುಂದೆ ರೋಗವುಂಟಾದಾಗ ತಿನ್ನಬಾರದಾಗಿತ್ತು ಎಂಬ ಬುದ್ಧಿ ಹುಟ್ಟುವುದು. ಆಹಾರ ವಿಹಾರ ವ್ಯವಹಾರಗಳಲ್ಲಿ ಮಿತವೂ ವಿವೇಚನೆಯೂ ನಿಗ್ರಹವೂ ಇರಬೇಕೆಂಬ ನಿಯಮಕ್ಕೆ ಭಾವಿಹಿತಸಾಧನವೇ ಕಾರಣವಾಗಿದೆ. ಮಾನವರ ಸಮಸ್ತ ಶಾಸ್ತ್ರಗಳೂ ಭಾವಿಹಿತಸಾಧನೆಯನ್ನೇ ಬೋಧಿಸುತ್ತವೆ.

ಎಲ್ಲಕ್ಕಿಂತಲೂ ಮತಧರ್ಮವು ಈ ತತ್ವವನ್ನು ಅತ್ಯಂತ ಅಧಿಕವಾಗಿ ಬೋಧಿಸಿ ತನ್ನದಾಗಿ ಮಾಡಿಕೊಂಡಿರುವುದು. ಈ ಲೋಕವು ನಶ್ವರವಾದುದು, ಇದರ ಸುಖಗಳು ನೀರಗುಳ್ಳೆಯಂತೆ ಕ್ಷಣ ಭಂಗುರವಾದುವುಗಳು, ಸಂಸಾರವು ಅನಿತ್ಯವಾದುದು, ಮನುಷ್ಯನು ನಿತ್ಯವಾದ ಎಂದೆಂದಿಗೂ ಅಳಿಯದ ಬ್ರಹ್ಮಾನಂದವನ್ನು ಸಂಪಾದಿಸಬೇಕಾದರೆ, ಐಹಿಕ ಸುಖಗಳಲ್ಲಿ ವಿರಕ್ತನಾಗಿ ಪ್ರಯತ್ನಪಡಬೇಕು; ಎಂದು ಮತಧರ್ಮವು ಬೋಧಿಸುವುದು. ಮತಧರ್ಮದ ದೃಷ್ಟಿಯಲ್ಲಿ, ವಿಜ್ಞಾನವೇ ಮೊದಲಾದ ಸಕಲ ಶಾಸ್ತ್ರಗಳೂ ವಿದ್ಯೆಗಳೂ ಸಾಧನಮಾರ್ಗಗಳೂ ನಶ್ವರವಾದ ಐಹಿಕಸುಖ

CC-0. Jangamwadi Math Collection. Digitized by eGangotri

ಗಳನ್ನು ಮಾತ್ರವೇ ಉಪಲಕ್ಷಿಸುತ್ತಿರುವುವೆಂದೂ ತಾನು ಮಾತ್ರ ಭಾವಿಹಿತಸಾಧನೆಯನ್ನು ಏಕಾಯತ್ತವಾಗಿ ಗೌರವಿಸುತ್ತಿದ್ದೇನೆಂದೂ ಭಾವಿಸಿರುವುದು.

ಮತಧರ್ಮದವರು ವಿಜ್ಞಾನ ಶಾಸ್ತ್ರವನ್ನು ಖಂಡಿಸುವಾಗಲೂ ಸುಧಾರಣೆಯನ್ನು ವಿರೋಧಿಸುವಾಗಲೂ ಈ ಮೇಲಿನ ವಾದವನ್ನೇ ಮುಖ್ಯವಾಗಿ ಆಶ್ರಯಿಸಿ ನಿಲ್ಲುವರು. ವಿಜ್ಞಾನ ಶಾಸ್ತ್ರವು ಕಂಡುಹಿಡಿದು ಒದಗಿಸತಕ್ಕ ಸುಖಸಾಧನೆಗಳೆಲ್ಲವೂ ಕ್ಷಣಿಕವಾದ ಐಹಿಕವಾದ ವರ್ತಮಾನಕಾಲಿಕವಾದ ಸುಖಗಳನ್ನು ಮಾತ್ರ ಕೊಡಬಲ್ಲುವು. ಯಂತ್ರಗಳು, ರೈಲು, ವಿಮಾನ, ಮೋಟಾರು ತಂತಿ, ಮೊದಲಾದ ಸಾಧನೆಗಳೆಲ್ಲವೂ ಈ ಬಗೆಯ ಭೋಗವನ್ನು ಮಾತ್ರ ದೊರಕಿಸಬಲ್ಲುವು. ಈ ಭೋಗವು ಆಧಿಭೌತಿಕ(Materialistic)ವಾದುದು. ಬಾವಿಯಿಂದ ನೀರು ಸೇದುವುದಕ್ಕಿಂತಲೂ ನಲ್ಲಿಯಿಂದ ನೀರು ತೆಗೆದುಕೊಳ್ಳುವುದು ಹೆಚ್ಚು ಸುಖಕರವಾಗಿದೆ. ಆದರೆ ಈ ಕೆಲಸದಿಂದ ವರ್ತಮಾನಕಾಲದ ಹಿತವನ್ನು ಮಾತ್ರ ಸಾಧಿಸಿದಂತೆ ಆಗುವುದು. ಇದರಿಂದ ಪ್ರಾಪ್ತವಾಗುವ ಅನಾಚಾರದಿಂದ ಮುಂದಣ ಆತ್ಮಮಂಗಳವು ನಷ್ಟವಾದರೆ ಈ ಅಲ್ಪವಾದ ವರ್ತಮಾನಹಿತವು ವಿಪತ್ಕರವಾಗುವುದು. ವಿಧವೆಯು ಮದುವೆ ಮಾಡಿಕೊಂಡರೆ ವರ್ತಮಾನದಲ್ಲಿ ಸುಖಪಡಬಹುದು. ಆದರೆ ಮುಂದೆ ಪರಲೋಕದಲ್ಲಿಯೂ ಪರಜನ್ಮದಲ್ಲಿಯೂ ಹಿಂಸೆಪಡಬೇಕಾದರೆ ಹೀಗೆ ಮಾಡುವುದು ತಪ್ಪು. ಪ್ರೌಢವಿವಾಹದಿಂದಲೂ ಜಾತಿವ್ಯವಸ್ಥೆಯ ನಾಶದಿಂದಲೂ ವರ್ತಮಾನಕಾಲದಲ್ಲಿ ಸಮಾಜದ ಕಾರ್ಯದಕ್ಷತೆಯೂ ಬಲವೂ ಹೆಚ್ಚಿ ಸ್ವಲ್ಪ ಸುಖವುಂಟಾದರೂ ಮುಂದಣ ಮಂಗಳಕ್ಕೆ ನ್ಯೂನತೆಯುಂಟಾದರೆ ಈ ಸುಖವನ್ನು ಬಿಡಬೇಕು.

ಭವಿಷ್ಯಹಿತವು ಮುಖ್ಯವಾದರೆ ವ್ಯಕ್ತಿಯ ಹಿತಕ್ಕಿಂತಲೂ ಸಮುದಾಯದ ಹಿತವು ದೊಡ್ಡದಾಗುವುದು; ವ್ಯಕ್ತಿಯು ಶಾಶ್ವತಸಲ್ಲ; ಸಮಾಜವು ಹೆಚ್ಚು ಶಾಶ್ವತವಾದುದು. ವ್ಯಕ್ತಿಯ ಬಾಳಿಕೆಯು ವರ್ತಮಾನ ಕಾಲಕ್ಕೆ ಸೇರಿದ್ದು. ಸಮಾಜವು ಉತ್ತರೋತ್ತರವಾಗಿ ಭವಿಷ್ಯತ್ತಿನಲ್ಲಿ ದೃಷ್ಟಿಯಿಡತಕ್ಕದ್ದು. ವ್ಯಕ್ತಿಯ ತ್ಯಾಗವು ಸಮಾಜದ ಹಿತಸಾಧನೆಗಾಗಿಯೇ ನಡೆಯುವುದು. ಈ ತ್ಯಾಗದ ಫಲವೆಲ್ಲವೂ ಏತತ್ಕ್ಷಣದಲ್ಲಿಯೇ ಸಮಾಜಕ್ಕೆ ಕೈಸೇರುವುದಿಲ್ಲ. ವ್ಯಕ್ತಿಯು ಮಾಡತಕ್ಕ ಸಮಾಜ ಸೇವೆಯಲ್ಲಿ ಸಹ ಸದ್ಯಃಫಲಪ್ರದವಾದ ಸೇವಾಕಾರ್ಯಕ್ಕಿಂತಲೂ ಭವಿಷ್ಯತ್ತಿನ ಹಿತವನ್ನು ಸಾಧಿಸತಕ್ಕ ಸೇವಾಕಾರ್ಯವನ್ನು ದೊಡ್ಡದೆನ್ನಿಸಿಕೊಳ್ಳುವುದು. ಹಿಂದುಮುಂದು ಯೋಚಿಸದೆ ಭಿಕ್ಷುಕರಿಗೆ ಅನ್ನವಿಕ್ಕುವುದರಿಂದ, ಅವರಿಗೆ ಆಗಳಿಗೆಯಲ್ಲಿ ಸಂತೋಷವಾದರೂ ಅವರಿಗಾಗಲಿ ಸಮಾಜಕ್ಕಾಗಲಿ ವಿಶೇಷ ಪ್ರಯೋಜನವಾಗುವುದಿಲ್ಲ. ಅದಕ್ಕೆ ಪ್ರತಿಯಾಗಿ ಅವರಿಗೆ ಸದ್ಯದಲ್ಲಿ ಕಷ್ಟಬೋಧೆಯಾದರೂ ಅವರನ್ನು ಸ್ವಾವಲಂಬಕವಾದ ಉದ್ಯೋಗವನ್ನು ಕೈಕೊಳ್ಳುವಂತೆ ಏರ್ಪಡಿಸಿದರೆ ಅವರಿಗೂ ಸಮಾಜಕ್ಕೂ ತುಂಬಾ ಹಿತವಾಗುವುದು. ಸಾವಿರಾರು ರೂಪಾಯಿ ಮುಟ್ಟಿಸಿ ದೇವರಿಗೆ ಒಂದು ದಿವಸ ಉತ್ಸವವನ್ನೋ ಬ್ರಾಹ್ಮಣರಿಗೆ ಸಂತರ್ಪಣೆಯನ್ನೋ ಮಾಡಿಸುವುದಕ್ಕಿಂತಲೂ ಅದೇ ಹಣವನ್ನು ವಿದ್ಯಾಶಾಲೆ ವೈದ್ಯಾಲಯ ಮುಂತಾದ ಶಾಶ್ವತ ಫಲಪ್ರದಗಳಾದ ಕಾರ್ಯಗಳಿಗೆ ವಿನಿಯೋಗಿಸುವುದು ಮೇಲು.

೨

ಭವಿಷ್ಯಹಿತದ ಸಾಧನೆಯು ಬರಿಯ ನೀತಿಧರ್ಮಸ ನಿಯಮಮಾತ್ರವಾಗಿದೆ– ಎಂದು ಭಾವಿಸಕೂಡದು. ಪ್ರಕೃತಿಯ ಪರಿಣಾಮವೆಲ್ಲವೂ ಬಹುವಾಗಿ ಈ ನಿಯಮವನ್ನೇ ಅವಲಂಬಿಸಿ ನಡೆದಿರುವುದು. ಅಚೇತನ ವಿಶ್ವದಲ್ಲಿ ಚೈತನ್ಯಪದಾರ್ಥವು ಹುಟ್ಟಿದಮೇಲೆ ಸಂಭವಿಸಿರುವ ಪರಿಣಾಮವೆಲ್ಲವೂ ಈ ನಿಯಮದಿಂದಲೇ ಆಗಿದೆ. ಚೈತನ್ಯ ಎಂಬುದಕ್ಕೆ ಇದನ್ನು ಆಧಾರನಿಯಮವೆಂದು ಕರೆಯಬಹುದು. ಈ ನಿಯಮದ ಆಧಾರವಿಲ್ಲದೆ ಚೇತನ ಪರಿಣಾಮದ ಇತಿಹಾಸದಲ್ಲಿ ಗೋಚರಿಸುವ ಸಂತಾನ, ಲಿಂಗಭೇದ, ಪ್ರಭೇದತ್ವ, ವಂಶಾನುಗತಿ, ಮರಣ ಇವೇ ಮೊದಲಾದ ಸಂಗತಿಗಳ ಉತ್ಪತ್ತಿಗೆ ಕಾರಣವನ್ನು ಹೇಳುವುದಕ್ಕಾಗುವುದಿಲ್ಲ.

ಅಚೇತನದ್ರವ್ಯಗಳ ವಿವಿಧಸಂಯೋಗದಿಂದ ಕಾಲಕ್ರಮದಲ್ಲಿ ಸಚೇತನ ಪದಾರ್ಥವು ಉತ್ಪನ್ನವಾಯಿತು. ಈ ಪದಾರ್ಥವು, ಮುಂದಣ ಏಳಿಗೆಯ ದೃಷ್ಟಿಯಿಂದ ಎಷ್ಟೇ ಶ್ರೇಷ್ಠವಾಗಿದ್ದರೂ, ತಾತ್ಕಾಲಿಕವಾದ ಆತ್ಮಸಂರಕ್ಷಣೆಯ ದೃಷ್ಟಿಯಿಂದ ಅತಿ ದುರ್ಬಲವಾದುದಾಗಿತ್ತು. ಇದು ಶುದ್ಧವಾಗಿ ಖಿಲವಾಗಿ ಹೋಗದೆ ಇರಲೋಸುಗ ಪ್ರಕೃತಿಯು ಸಚೇತನ ವಸ್ತುಗಳ ಸಂಖ್ಯೆಯನ್ನು

CC-0. Jangamwadi Math Collection. Digitized by eGangotri

ಅದಷ್ಟು ಹೆಚ್ಚಿಸಲು ಪ್ರಯತ್ನಿಸಿತು. ಪ್ರಾಣಿಗಳ ಸಂಖ್ಯೆಯು ಹೆಚ್ಚಾಗಿದ್ದರೆ ಅವು ಲಕ್ಷಗಟ್ಟಲೆಯಾಗಿ ನಾಶವಾದರೂ ಅವುಗಳ ಜಾತಿಯಾದರೂ ಉಳಿದುಳಿಯುವ ಸಂಭವವುಂಟು. ಭಾವಿಹಿತಸಾಧನೆಗಾಗಿ ಪ್ರಕೃತಿಯು ವ್ಯಕ್ತಿಗಿಂತಲೂ ಸಮುದಾಯವನ್ನು ಮುಖ್ಯವೆಂದು ಭಾವಿಸಬೇಕಾಯಿತು.

ಪ್ರಾಣವು ಪ್ರಥಮತಃ 'ಮಾನೆರಾ' ಎಂಬ ಅತ್ಯಲ್ಪ ಕ್ರಿಮಿ ರೂಪದಲ್ಲಿ ಒಡಲನ್ನು ಧರಿಸಿತು. ವರ್ತಮಾನ ಹಿತವೇ ಮುಖ್ಯ ಪುರುಷಾರ್ಥವಾಗಿದ್ದರೆ ಈ ಕ್ರಿಮಿಗಳು ಸನಾತನವಾಗಿ ಬದುಕುತ್ತಾ ಬರುವುದು ಧ್ಯೇಯವಾಗುತ್ತಿತ್ತು. ಎಂದರೆ ಇವುಗಳಲ್ಲಿ ಯಾವ ವ್ಯಕ್ತಿಯೂ ಸಂತಾನ ಮರಣಾದಿ ವಿಕಾರಗಳನ್ನು ಪಡೆದು ಶ್ರಮಪಡುವ ಅಗತ್ಯ ವಿರಲಿಲ್ಲ. ವಿಕಾರವನ್ನು ಪಡೆಯುತ್ತಾ ಬರುವುದು ಸಾಮುದಾಯಿಕವಾಗಿ ಅಪೇಕ್ಷಣೀಯವಾದರೂ ವೈಯಕ್ತಿಕವಾಗಿ ದುಃಖಪ್ರದವಾಗಿರುವುದು. ಆದ್ದರಿಂದಲೇ ವ್ಯಕ್ತಿಯ ಮೋಕ್ಷವನ್ನು ಮುಖ್ಯವಾಗಿ ನಿರೂಪಿಸತಕ್ಕ ಹಿಂದೂದರ್ಶನ ಶಾಸ್ತ್ರಗಳು ಮೋಕ್ಷವೆಂಬುದು ನಿರ್ವಿಕಾರಸ್ಥಿತಿ ಎಂದು ನಿರೂಪಿಸುವುವು.

ಈ ರೀತಿ ಮಾನೆರಾಜೀವಿಯು ಸಂತತಿ, ಮುಪ್ಪು, ಮರಣ ಮೊದಲಾದ ವಿಕಾರಗಳನ್ನು ಪಡೆಯಲು ಅದರ ವಾರ್ತಮಾನಿಕ ಹಿತದ ದೃಷ್ಟಿಯಿಂದ ಯಾವ ಅಗತ್ಯವೂ ಇರಲಿಲ್ಲ. ಈ ಜೀವಿಯ ವ್ಯಕ್ತಿಯು ಹೊರಗಣ ಗಂಡಕ್ಕೆ ಸಿಕ್ಕಿ ಸತ್ತು ಹೋದರೆ ಅದಕ್ಕೇನು ನಷ್ಟ? ಅದು ಪ್ರಸವಾದಿ ಗಂಡಕ್ಕೆ ಸಿಕ್ಕಿ ಏಕೆ ಪ್ರಜಾಭಿವೃದ್ಧಿ ಮಾಡಬೇಕು? ಆದರೆ ಪ್ರಕೃತಿಯು ಬಹಳ ಕಷ್ಟದಿಂದ ಹುಟ್ಟಿಸಿದ್ದ ಈ ಸಚೇತನಗಳು ಹೀಗೆ ಸಾಯುತ್ತಾ ಬಂದರೆ ಈ ಜಾತಿಯ ಪದಾರ್ಥಗಳನ್ನು ಸಂರಕ್ಷಿಸಬೇಕಾದಾಗ, ಅವು ಒಂದು ಕಡೆಗೆ ನಾಶವಾಗುತ್ತಿದ್ದರೆ ಮತ್ತೊಂದು ಕಡೆಗೆ ತಾನು ಹೊಸದಾಗಿ ಸೃಷ್ಟಿಸುತ್ತಾ ಬರಬೇಕಾಗುವುದು. ಆದರೆ ಇಂತಹ ಸೃಷ್ಟಿಯು ಅತಿದುರ್ಘಟ ಕಾರ್ಯವಾದದ್ದರಿಂದ ಕಾಲಸಂಯೋಗದಿಂದ ಒಂದು ಸಲ ಹುಟ್ಟಿರುವ ಪ್ರಾಣಿಗಳು ವೈಯಕ್ತಿಕವಾದ ನಾಶದ ನಷ್ಟಪರಿಹಾರಾರ್ಥವಾಗಿ, ತಾವೇ ಸಂತತವಾಗಿ ವೃದ್ಧಿಯಾಗುತ್ತ ಬರುವಂತೆ ಏರ್ಪಡಿಸಿತು. ಎಂದರೆ ಪ್ರಾಣಿಗಳ ಪ್ರಜಾಭಿವೃದ್ಧಿಯು ಪೊಸ ಹೊಸ ಸೃಷ್ಟಿಯಿಂದಲ್ಲದೆ ಪರಂಪರೆಯಾದ ಸಂತಾನ ಕ್ರಮದಿಂದ ನಡೆಯುವುದು.

ಆದಿ ಜೀವಿಗಳು ಏಕಕಣ ಶರೀರಿ ( Monocelludar) ಗಳಾಗಿದ್ದುವು. ಇವುಗಳ ಶರೀರವೆಲ್ಲವೂ ಒಂದೇ ಒಂದು "ಕಣ" (Cell) ಮಾತ್ರವಾಗಿತ್ತು. ಇವುಗಳಿಗಿಂತಲೂ ಬಹುಕಣಗಳನ್ನು ಪಂಜರದಂತೆ ಬಿಗಿದು ಬಲಿಷ್ಠವಾದ ಶರೀರವನ್ನು ಕಲ್ಪಿಸಿಕೊಡುವುದರಿಂದ,ಪ್ರಾಣಿಗಳ ಜೀವನ ಸಾಮರ್ಥ್ಯವು ಹೆಚ್ಚುವುದರಿಂದ ಪ್ರಕೃತಿಯಲ್ಲಿ ಕ್ರಮವಾಗಿ ಬಹುಕಣಶರೀರಿಗಳು ಹುಟ್ಟಿದುವು.

ಏಕಕಣಶರೀರಿಗಳು ಅಯೋನಿಜವಾಗಿ ಆತ್ಮವಿಭಾಗ (Self-division) ಕ್ರಮದಿಂದ ಸಂತಾನ ವೃದ್ಧಿಮಾಡುವುವು. ಪಾದರಸದ ಬಿಂದುವಿನಂತೆ ಇರತಕ್ಕ ಈ ಜೀವಿಯು ಸಮವಿಭಾಗವಾಗಿ ಒಡೆದು ಎರಡು ಜೀವಿಗಳಾಗಿ ಬಿಡುವುದು. ಬಹುಕಣಶರೀರಿಯು ಹೀಗೆ ಇಬ್ಭಾಗವಾಗಿ ಒಡೆಯಲಿಕ್ಕೆ ಆಗುವುದಿಲ್ಲ. ಜೀವಿಯು ಎಷ್ಟೇ ಮಹತ್ತರವಾದ ಶರೀರರಚನೆಯನ್ನು ಪಡೆದಿದ್ದರೂ ಅದು ಉತ್ಪನ್ನವಾಗುವಾಗ ಮಾನೆರಾ ಕ್ರಿಮಿಯಂತೆ ಏಕಕಣ ಶರೀರಿಯಾಗಿಯೇ ಜನ್ಮಧಾರಣೆ ಮಾಡಬೇಕು. ಬಹುಕಣಾತ್ಮಕವಾದ ಶರೀರವು ಇಬ್ಭಾಗವಾಗುವುದು ಒಂದು ಪಕ್ಷ ಸಾಧ್ಯವಾಗಿದ್ದರೂ ಅದರ ಸಂತತಿಯು ಏಕಕಣಾವಸ್ಥೆಯಲ್ಲಿ ಜನಿಸಲಾರದು. ಆದ್ದರಿಂದ ಬಹುಕಣ ಶರೀರಿಯ ಸಂತತಿಯು ತನ್ನ 'ಮಾತೃ' ವಿನ ವಿಶಾಲವಾದ ಶರೀರದಲ್ಲಿ ಯಾವುದಾದರೂ ಒಂದು ಕ್ಲಪ್ತವಾದ ಕಡೆ ಏಕಕಣಾವಸ್ಥೆಯಲ್ಲಿ ಜನಿಸಿ, ಕ್ರಮವಾಗಿ ತನ್ನ ಮಾತೃಜಾತಿಯ ಸ್ವರೂಪಕ್ಕೆ ಬೆಳೆಯಬೇಕು. ಈ ಸನ್ನಿವೇಶದಿಂದ "ಯೋನಿ" "ಗರ್ಭಧಾರಣೆ" "ಪ್ರಸವ" ಮೊದಲಾದುವು ಏರ್ಪಡುವುವು; ಸಂತಾನವು ಯೋನಿಜಕ್ರಮಕ್ಕೆ ತಿರುಗುವುದು.

ಯೋನಿಜಸಂತಾನಕ್ರಮವು ಕ್ರಮವಾಗಿ ಲಿಂಗಭೇದವನ್ನು ಕಲ್ಪಿಸಿತು. ಮೊದಲು ಮೊದಲು ಜೀವಿಗಳು ತಂತಮ್ಮ ಶರೀರವೊಂದರಿಂದಲೇ ಸಂತತಿಯನ್ನು ಕಲ್ಪಿಸುತ್ತಿದ್ದುವು. "ಶುಕ್ಲ"ದ ಒಂದು ಕಣವು "ಶೋಣಿತ"ದ ಒಂದು ಕಣದೊಡನೆ ಸಂಯೋಗವಾಗಿ "ಉಬ್ಬ" ಅಥವಾ "ಕಲಲ" (Germ-cell) ಎನ್ನಿಸಿಕೊಳ್ಳುವ ಬಾದೇ ಒಂದು ಹೊಸ ಕಣವಾದರೆ ಸಂತಾನಜೀವಿಯು ಜನ್ಮವನ್ನು ಧರಿಸಿದಂತೆ ಆಗುವುದು. ಪ್ರಾರಂಭದಲ್ಲಿ ಈ ಶುಕ್ಲ-ಶೋಣಿತ ದ್ರವ್ಯಗಳೆರಡೂ ಜೀವಿಯ "ಯೋನಿ


CC-0. Jangamwadi Math Collection. Digitized by eGangotri

ಪಾತ್ರ" ದಲ್ಲಿ ಅಕ್ಕಪಕ್ಕದಲ್ಲಿಯೆ ಇರುತ್ತಿದ್ದುವು. ಬಳಿಕ ಶೋಣಿತದ್ರವ್ಯವು ಆ ಸ್ಥಳದಲ್ಲಿಯೂ ಶುಕ್ಲವು ಅದೇ ಜೀವಿಯ ಶರೀರದ ಮತ್ತೊಂದು ಭಾಗದಲ್ಲಿಯೂ ಇರುತ್ತಿದ್ದುವು. ವೃಕ್ಷಗಳಲ್ಲಿ ಇದು ವಿಶೇಷವಾಗಿ ಕಂಡುಬರುವುದು. ಗಾಳಿ, ಮಳೆ, ಪಕ್ಷಿ, ದುಂಬಿ ಮೊದಲಾದುವು ಈ ಉಭಯದ್ರವ್ಯಗಳನ್ನೂ ಒಂದುಗೂಡಿಸುವುದರಿಂದ ವೃಕ್ಷಸಂತತಿ ನಡೆದುಬರುವುದು. ಪಕ್ಷಿ, ದುಂಬಿ, ಜೇನು, ನೊಣ ಮೊದಲಾದುವನ್ನು ಆಕರ್ಷಿಸುವುದಕ್ಕಾಗಿ ಪ್ರಕೃತಿಯು ಗಿಡಗಳ ಹಣ್ಣು ಹೂವು ಎಲೆಗಳಲ್ಲಿ ಬಣ್ಣವನ್ನೂ ಮಾಧುರ್ಯವನ್ನೂ ವಾಸನೆಯನ್ನೂ ಸೊಬಗನ್ನೂ ಕಲ್ಪಿಸಬೇಕಾಯಿತು.

ಈ ಅಮೈಥುನ ಸಂತಾನಕ್ರಮವು ಅಸಮರ್ಪಕವಾಗಿದ್ದುದರಿಂದ ಪ್ರಕೃತಿಯು ಪ್ರಶಸ್ತವಾದ ಮತ್ತೊಂದು ಮಾರ್ಗವನ್ನು ಹುಟ್ಟಿಸಿತು. ಶುಕ್ಲಶೋಣಿತದ್ರವ್ಯಗಳನ್ನು ಬೇರೆ ಬೇರೆ ಜೀವಿಯ ವಶಕ್ಕೆ ಒಪ್ಪಿಸಿ ಅವುಗಳಲ್ಲಿ ಪರಸ್ಪರ ಉತ್ಕಟವಾದ ಕಾಮವನ್ನು ಹುಟ್ಟಿಸುವುದರಿಂದ ಅವು ತಪ್ಪದೆ ಮೈಥುನಮಾರ್ಗದಿಂದ ಸಂತತಿಯನ್ನು ಕಲ್ಪಿಸುವುವು. ಸಂತಾನವು ನಿಂತುಹೋಗುವ ಗಂಡವು ಈ ಕ್ರಮದಲ್ಲಿ ನಿಶ್ಶೇಷವಾಗಿ ಪರಿಹಾರವಾಗುವುದು. ಸ್ತ್ರೀ ಪುಂ ಜಾತಿಯ ಜೀವಿಗಳು ಪರಸ್ಪರವಾಗಿ ಆಕರ್ಷಿಸಲ್ಪಡುವುದಕ್ಕಾಗಿ ಪ್ರಕೃತಿಯು ಸೌಂದರ್ಯಾಟ ವಿಶೇಷಗಳನ್ನು ಕಲ್ಪಿಸಿತು. ಈ ಏರ್ಪಾಡಿಗೆ "ಲಿಂಗ ವರಣ" ( Sexual Selection ) ಎಂದು ಹೆಸರು.

ಲಿಂಗಭೇದವು ಬೇರೆ ಬೇರೆಯ ಶರೀರಾನುವರ್ತಿಯಾಗಿ ವ್ಯವಸ್ಥೆಪಡುವುದರಿಂದ ಭವಿಷ್ಯಹಿತಕ್ಕೆ ಮತ್ತೊಂದು ಪ್ರಕಾರವಾಗಿಯೂ ಉತ್ತೇಜನ ದೊರೆಯಿತು. ಸಂತತಿಯು ಬಹುವಾಗಿ ತನ್ನ ಜನಕರನ್ನು ಹೋಲುವುದು. ಏಕೆಂದರೆ, ಒಂದುಜೀವಿಯ ಗುಣರೂಪಗಳು ಅದರ ಸಂತತಿಗೆ ಅನುಗತವಾಗಿ ಸೇರುವುವು. ಇವು ಪರಂಪರೆಯಾಗಿ ಆ ಜೀವಿಯವಂಶದಲ್ಲಿ ಪ್ರವಹಿಸುತ್ತಾ ಹೋಗುವುವು. ಇದಕ್ಕೆ " ವಂಶಾನುಗತಿ ನಿಯಮ " ಎಂದು ಹೆಸರು. "ಉಲ್ಬಕಣ"ದ ಉತ್ಪತ್ತಿಗೆ ಕಾರಣಗಳಾದ "ಶುಕ್ಲಕಣ" (Sperm-cell) ವೂ "ಶೋಣಿತಕಣ" ( Egg cell) ವೂ ಒಂದೇ ಜೀವಿಯ ಶರೀರದಲ್ಲಿರುವುದಕ್ಕಿಂತ ಎರಡು ಜೀವಿಗಳ ಭಿನ್ನ ಶರೀರದಲ್ಲಿದ್ದರೆ ಆಗ ಅವು ಎರಡು ಜೀವಿಗಳ " ವಂಶಗುಣ " ಗಳನ್ನು ಸಂತತಿಗೆ ತಂದು ಸೇರಿಸುವುವು. ಇದರಿಂದ ಸಂತಾನಜೀವಿಗೆ ತನ್ನ ಮಾತಾಪಿತೃಗಳ ವಂಶಗುಣಗಳಿಗೆ ಉಭಯಮಧ್ಯಸ್ಥವಾದ ಜಾತಿಯ ಗುಣಗಳು ಪ್ರಾಪ್ತವಾಗುವುವು. ಆಗ ಇದು ತನ್ನ ಯಾರೊಬ್ಬ ಜನಕರನ್ನೂ ಸಂಪೂರ್ಣವಾಗಿ ಹೋಲದೆ ಸ್ವಲ್ಪ ಭಿನ್ನತೆ ಹೊಂದುವುದು. ಈ ವ್ಯತ್ಯಾಸಗಳು ಪರಂಪರೆಯಾಗಿ ಬಹುಕಾಲ ಉಂಟಾಗುತ್ತ ಬಂದಲ್ಲಿ ಪ್ರಾಣಿಗಳಲ್ಲಿ "ಪ್ರಭೇದ ( Variation ) ಗಳು ಹುಟ್ಟುವುವು. ಇದರಿಂದ ಪ್ರಕೃತಿಗೆ ಶ್ರೇಷ್ಠಜಾತಿಯ ಪ್ರಾಣಿಗಳನ್ನು ಕಲ್ಪಿಸಲು ಅವಕಾಶವಾಗುವುದು. ಹೀಗೆ ಉತ್ತರೋತ್ತರವಾಗಿ ಭವಿಷ್ಯಹಿತವನ್ನು ಸಾಧಿಸುವ ಪ್ರಕೃತಿಯ ಉದ್ದೇಶವು ಈ ಏರ್ಪಾಡುಗಳಿಗೆಲ್ಲಕ್ಕೂ ಕಾರಣವಾಗಿರುವುದು.

ಪ್ರಾಣಿಗಳಲ್ಲಿ ಮರಣವೆಂಬುದೂ ಇದೇ ಕಾರಣದಿಂದ ಹುಟ್ಟಿದೆ. ಸಂತತವಾಗಿ ವಿಭಾಗವಾಗುತ್ತಿರುವ ಏಕಕಣ ಶರೀರಿಗೆ ಸಹಜಮರಣವೆಂಬುದೇ ಇಲ್ಲ. ಬಹುಕಣ ಶರೀರಿಗಳಲ್ಲಿ ಸಮುದಾಯದ ಹಿತಾರ್ಥವಾಗಿ, ವ್ಯಕ್ತಿಗಳು ಪರರಿಗೆ ಯಾವ ಪ್ರಯೋಜನವನ್ನೂ ಸಲ್ಲಿಸದೆ, ಸಮರ್ಥರಾದ ಹೊಸಬರ ಸ್ಥಾನವನ್ನಾಕ್ರಮಿಸಿ ಪ್ರತಿಕೂಲವನ್ನು ಮಾಡುವುವು. ಇಂತಹವುಗಳು ನಾಶವಾಗುವುದರಿಂದ ಸಮುದಾಯಕ್ಕೆ ಲಾಭವುಂಟು. ಜೀವರಾಶಿಗಳ ಸಂಖ್ಯೆ ಹೆಚ್ಚಾಗಬೇಕಾದರೆ ವ್ಯಕ್ತಿಗಳ ಆಯುಃಪ್ರಮಾಣವು ಕಡಮೆಯಾಗಬೇಕು. ವ್ಯಕ್ತಿಗಳು ಅಲ್ಪವಯಸ್ಕರಾಗಿ ಸತ್ತರೆ ತಲೆಮಾರುಗಳು ಬೇಗ ಬೇಗ ಮಗುಚಿ ಬರಲು ಅವಕಾಶವಾಗುವುದು. ಇದರಿಂದ ಪ್ರಭೇದತ್ವದ ಉತ್ಪತ್ತಿಗೆ ಹೆಚ್ಚು ಅನುಕೂಲವಾಗುವುದು.

ಹೀಗೆ ಜೀವಜಾತಿಗಳ ಚರಿತ್ರೆಯೆಲ್ಲವೂ ಭವಿಷ್ಯಹಿತಸಾಧನೆ ಎಂಬ ಮೂಲ ನಿಯಮದ ಆಧಾರದಿಂದಲೇ ನಡೆದಿದೆ ಎಂದು ಗೊತ್ತಾಗುವುದು.

(ಮುಂದುವರಿಯುವುದು)

CC-0. Jangamwadi Math Collection. Digitized by eGangotri

# " ಶಿಶು ವಿಹಾರ "

## ಮೈಸೂರಿನ ಮಾದರಿಯ ಪ್ರಾಥಮಿಕ ಶಾಲೆ*

" ಮನುಜನಿಗೆ ಮಗು ತಂದೆ "

ನಮ್ಮ ಶಿಶುಗಳಿಗೆ ಈಗ ಹಳೆಯ ಪಾಠಶಾಲೆಗಳಲ್ಲಿ ನಡೆಯುತ್ತಿರುವ ವಿದ್ಯಾಭ್ಯಾಸಕ್ರಮವು ಸರಿಯಾಗಿ ದೆಯೇ? ಸಮರ್ಪಕವಾಗಿದೆಯೇ? ಎಂದು ಯಾರಾದರೂ ಕೇಳಿದರೆ, ಅದಕ್ಕೆ ಉತ್ತರಕೊಡುವುದು ಅಷ್ಟೇನೂ ಸುಲಭವಾದುದಲ್ಲ. ದೊಡ್ಡ ದೊಡ್ಡ ತರಗತಿಗಳಲ್ಲಿ ಓದುತ್ತಿರುವ ನಮ್ಮ ಯುವಕಯುವತಿಯರಿಗೆ, ದೊರೆಯುತ್ತಿರುವ ವಿದ್ಯಾಭ್ಯಾಸದ ಕ್ರಮವು ಸರಿಯೇ – ಎಂಬುದನ್ನೇ ನಿರ್ವಿವಾದವಾಗಿ ನಿರ್ಧರಿಸಲಾಗದಿರುವ ನಮ್ಮ ನಾಡಿನಲ್ಲಿ ತಮ್ಮ ಮಕ್ಕಳು ಹೈಸ್ಕೂಲು ತರಗತಿಗಳನ್ನು ಕಳೆದು ಮುಂದಕ್ಕೆ ಓದಲು ಹೋದರೆ " ಏನು ಓದಬೇಕು " ಎಂಬುದೇ ಒಂದು ದೊಡ್ಡ ಸಮಸ್ಯೆಯಾಗಿ ಪರಿಣಮಿಸಿರುವ ನಮ್ಮ ದೇಶದಲ್ಲಿ—ಅದರಲ್ಲಿಯೂ " ನಮ್ಮ ಯುವಕರು ಏನು ಓದಿದರೇನು ?" ಎಂಬುದರ ವಿಚಾರವಾಗಿ ಸಾಮಾನ್ಯರಲ್ಲಿ ಕಂಡುಬರುತ್ತಿರುವ ಈ ಶೋಚನೀಯವಾದ ಉದಾಸೀನತ್ವದಲ್ಲಿ, ಕೇವಲ ಶಿಶುಗಳವಿದ್ಯಾಭ್ಯಾಸ ವಿಚಾರವನ್ನು ಮನಸ್ಸಿಗೆ ಹಚ್ಚಿಕೊಳ್ಳುವವರು ಅತಿ ವಿರಳರು. ಅದೂ ಅಲ್ಲದೆ ಇಂತಹ ಕಷ್ಟಕರವೂ ಮಹತ್ತರವೂ ಆದ ಪ್ರಶ್ನೆಗಳಿಗೆ ಉತ್ತರ ಹೇಳುವುದೆಂದರೆ ಮಕ್ಕಳ ವಿದ್ಯಾಭ್ಯಾಸದ ವಿಷಯದಲ್ಲಿ ಅತಿಶಯವಾದ ಉತ್ಸಾಹವನ್ನು ತೋರುತ್ತಿರುವಂತಹ ಮಹನೀಯರುಗಳಿಗೂ ಬಹು ಕಷ್ಟಕರವಾಗಿ ಕಾಣಬಹುದು. ಇಂತಹ ಸನ್ನಿವೇಶದಲ್ಲಿ ಮುಂದೆ ಬಂದು ಈಗ ನಾವು ನಡೆಯಿಸುತ್ತಿರುವ ವಿದ್ಯಾಭ್ಯಾಸ ಕ್ರಮವು ಕೇವಲ ಅಸಮರ್ಪಕವಾಗಿಯೂ, ಕೆಲವು ವಿಷಯಗಳಲ್ಲಿ, — ಹಾನಿಕರವಾಗಿಯೂ ಇದೆ ಎಂದೂ, ಮತ್ತು ನಮ್ಮ ಶಿಶುಗಳು ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದಿ ದೊಡ್ಡವರಾದ ಮೇಲೆ ಅವರ ವಿದ್ವತ್ತೂ, ಶೀಲಸ್ವಭಾವಗಳೂ, ಅವರ ಮನೋವೃತ್ತಿಯೂ, ಶರೀರಧಾರ್ಢ್ಯ ಮುಂತಾದುವುಗಳೂ ನಮ್ಮ ದೇಶಕ್ಕೆ ಕೀರ್ತಿತರುವಂತಹವಾಗಿರಬೇಕೆಂಬ ಆಶಯವು ಸರಿಯಾದುದಾದರೆ, ಕೇವಲ ಹೊಸ ಮಾರ್ಗದಲ್ಲಿ ಅವರಿಗೆ ಶಿಕ್ಷಣವನ್ನು ಕೊಡಬೇಕೆಂದೂ ಘಂಟಾಘೋಷವಾಗಿ ಹೇಳುವವರು ಸಿಕ್ಕಿರುವುದು ನಮ್ಮ ಪುಣ್ಯವೆಂದೇ ಹೇಳಬೇಕು. ನಾವು ಹೋಗುತ್ತಿರುವ ಮಾರ್ಗವುಕಷ್ಟ, ಎಂಬುದಕ್ಕೆ ನಿದರ್ಶನಬೇಕಾಗಿದ್ದ ಸಂದರ್ಭದಲ್ಲಿ ಇಂಗ್ಲಂಡ್ ಅಮೆರಿಕಾ ದೇಶದ ಉದಾಹರಣೆಗಳನ್ನು ಕೊಡಬಹುದು. ಅಮೆರಿಕಾ ದೇಶದಲ್ಲಿ ಮೊದಲು ಕಂಡುಹಿಡಿದು ಈಗ ಎಲ್ಲೆಲ್ಲಿಯೂ ಬಹಳ ಪ್ರಬಲ ದೆಶೆಗೆ ಬರುತ್ತಿರುವ 'ಮಾಂಟೆಸ್ಸೂರಿ'ಕ್ರಮದ ವಿದ್ಯಾಭ್ಯಾಸವೂ, ಜರ್ಮನಿಯ "ಕಿಂಡರಗಾರ್ಟನ್" (Children's garden) " ಶಿಶುವಿಹಾರ " ಎಂಬರ್ಥ ಕೊಡುವ ವಿದ್ಯಾಭ್ಯಾಸ ಕ್ರಮವೂ, ಇಂಗ್ಲಾಂಡಿನಲ್ಲಿ ಮಿಸ್. ಮ್ಯಾಕ್ಮಿಲ್ಲನ್ ಮುಂತಾದವರು ಸ್ಥಾಪಿಸಿರುವ ನೂತನ ಪಾಠಶಾಲೆಗಳ ಬಗ್ಗೆ ಬರ್ಟ್ರಾಂಡ್ ರಸ್ಸೆಲ್ ಮುಂತಾದವರಿಗಿರುವ ಉಚ್ಚಾಭಿಪ್ರಾಯಗಳೂ ಹಳೆಯ ಪದ್ಧತಿಯ ಅಸಮರ್ಪಕತೆಯನ್ನೂ ಹೊಸ ಪದ್ಧತಿಯ

[ * ಈ ಪಾಠಶಾಲೆಯು ಇತ್ತೀಚೆಗೆ ಬಹಳ ಪ್ರಾಮುಖ್ಯತೆಗೆ ಬಂದಿರುವ ಮನಶ್ಶಾಸ್ತ್ರದ (Psychology) ತತ್ವಗಳ ಫಲವೆಂದು ಹೇಳಬಹುದು. ಈ ಮನಶ್ಶಾಸ್ತ್ರದ ತತ್ವಗಳ, ಅದರಲ್ಲಿಯೂ ಶಿಶುಗಳಿಗೆ ಸಂಬಂಧಪಟ್ಟ ತತ್ವಗಳ, ಫಲವಾಗಿ ಇಂಗ್ಲಾಂಡ್ ಮತ್ತು ಅಮೇರಿಕಾ ದೇಶಗಳಲ್ಲಿ ಶಿಶುಗಳ ವಿದ್ಯಾಭ್ಯಾಸಕ್ರಮದಲ್ಲಿ ಒಂದು ವಿಪ್ಲವ ( Revolution ) ವಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಈ ವಿಪ್ಲವಕ್ಕೆ ಮನಶ್ಶಾಸ್ತ್ರ ತತ್ವಶೋಧಕರೇ ಕಾರಣೀಭೂತರೆಂಬುದರಲ್ಲಿ ಏನೂ ಸಂಶಯವಿಲ್ಲ. ಪ್ರಕೃತದಲ್ಲಿ ನಾವು ಯಾವ ಪಾಠಶಾಲೆಯನ್ನು ಕುರಿತು ವಿಚಾರ ಮಾಡುತ್ತಿರುವೆವೊ ಅದು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಮನಶ್ಶಾಸ್ತ್ರದ ಪ್ರೊಫೆಸರರಾಗಿರುವ ಡಾ|| ಗೋಪಾಲ ಸ್ವಾಮಿಯವರಂತಹ ಪ್ರಸಿದ್ಧ ತತ್ವಶೋಧಕರ ನೇತೃತ್ವದಲ್ಲಿ ಕೆಲಸ ಮಾಡುತ್ತಿದೆ. ಅಂದರೆ ಅದು ಸರ್ವರ ಮನಸ್ಸಿನಲ್ಲಿಯೂ ಒಂದು ತೆರದ ಕುತೂಹಲವನ್ನು ಹುಟ್ಟಿಸದಿರಲಾರದು. ಆದುದರಿಂದ ಇದರಲ್ಲಿ ಕಂಡುಬರುವ ಸಾರವತ್ತಾದ ಕೆಲವು ಅಂಶಗಳನ್ನು " ಜಯಕರ್ಣಾಟಕ " ದ ವಾಚಕರ ಅವಗಾಹನೆಗೆ ತಂದುಕೊಡಬೇಕೆಂದು ಈ ಲೇಖನವನ್ನು ಬರೆಯಲಾಗಿದೆ. ]

CC-0. Jangamwadi Math Collection. Digitized by eGangotri

ಪ್ರಯೋಜನಗಳನ್ನೂ ತೋರಿಸಲು ಸಾಕಾದ ನಿದರ್ಶನಗಳಾಗಿವೆ.

ಹೊಸ ಮಾದರಿಯ ಪಾಠಶಾಲೆಗಳು ಬೇಕೆಂದರೆ ಹಳೆಯದರಲ್ಲಿರುವ ತಪ್ಪೇನು? ಆ ತಪ್ಪುಗಳನ್ನೆಲ್ಲಾ ಹೊಸ ಮಾದರಿಯ ಪಾಠಶಾಲೆಗಳಲ್ಲಿ ಹೇಗೆ ನಿವಾರಣೆ ಮಾಡಿದ್ದಾರೆ? ಎಂದು ಯಾರಾದರೂ ಕೇಳಬಹುದು. ಇದಕ್ಕೆ ಉತ್ತರ ಕೊಡುವುದರಲ್ಲಿ ಪ್ರಾಸಂಗಿಕವಾಗಿ ಹೊಸ ಮಾದರಿಯ ಪಾಠಶಾಲೆಗಳ ಗುಣಾವಗುಣಗಳೂ ಬರಬೇಕಾಗಿರುವುದರಿಂದ ಇದನ್ನು ಸ್ವಲ್ಪ ಲಂಬಿಸಿ ಬರೆಯುತ್ತೇನೆ. ನಮ್ಮ ಪೂರ್ವಿಕರು ಮಕ್ಕಳ ವಿದ್ಯಾಭ್ಯಾಸದ ವಿಷಯದಲ್ಲಿ ಒಂದು ದೊಡ್ಡ ತಪ್ಪು ಮಾಡಿದ್ದರು. ಇದಕ್ಕೆ ಅವರ ಅಜ್ಞತೆಯೇ ಮುಖ್ಯ ಕಾರಣವೆಂದುಹೇಳಬಹುದು. ಇಲ್ಲಿಯವರೆಗೂ ಅವರು, "ಶಿಶುಗಳಿಗೆ (ಶಿಶು ಅಂದರೆ ಈ ಪ್ರಬಂಧದಲ್ಲಿ ಸು. ೨ ರಿಂದ ೮ರ ವರೆಗೆ ವಯಸ್ಸುಳ್ಳ ಮಕ್ಕಳೆಂದು ಅಭಿಪ್ರಾಯ) ವಿವೇಚನಾಶಕ್ತಿ (Reasoning power) ಎಳ್ಳಷ್ಟೂ ಇರುವುದಿಲ್ಲ" ಎಂತಲೂ, "ಆದುದರಿಂದಲೆ ಇದು ಸರಿ, ಇದು ತಪ್ಪು ಎಂಬ ವಿವೇಕಾವಿವೇಕ ಜ್ಞಾನವಾಗಲಿ, ಸರಿಯಾದ ಊಹಾಪೋಹ ಜ್ಞಾನವಾಗಲಿ, ವಸ್ತುಗಳ ಪರಸ್ಪರ ಸಂಬಂಧಗಳನ್ನು ಗ್ರಹಿಸುವ ಶಕ್ತಿಯಾಗಲಿ ಕಿಂಚಿತ್ತಾದರೂ ಇರುವುದಿಲ್ಲ" ಎಂತಲೂ ತಿಳಿದುಕೊಂಡಿದ್ದರು. ಆದರೆ ಮಕ್ಕಳಿಗೆ ಅಸಾಧಾರಣವಾದ ಧಾರಣಾಶಕ್ತಿ (Memorising power) ಇರುವುದಲ್ಲದೆ ಎಳೆಯ ವಯಸ್ಸಿನಲ್ಲಿ ಗ್ರಹಿಸಿದ ವಿಷಯಗಳನ್ನು ಅವರು ಬಹುದಿನಗಳವರೆಗೂ ನೆನಪಿನಲ್ಲಿಟ್ಟುಕೊಂಡಿರುವರೆಂಬಂಶವನ್ನು ಅವರು ಚೆನ್ನಾಗಿ ಬಲ್ಲವರಾಗಿದ್ದರು. ಆದುದರಿಂದ ಅವರು ಈ ತಿಳಿವಳಿಕೆಗಳಿಗನುಸಾರವಾಗಿ ಶಿಶುಗಳಿಗೆ ವಿದ್ಯಾಭ್ಯಾಸವನ್ನು ಮಾಡಿಸಬೇಕಾದ [illegible] ಇರುವುದು ಒಂದೇ ಒಂದು ಕ್ರಮವೆಂದು ನಿರ್ಧರಿಸಿದ್ದರು. ಅದಾವುದೆಂದರೆ: ಮಕ್ಕಳಿಗೆ ಗಳಿಗೆ ಪಾಠ [illegible]



ಬಯಲಲ್ಲಿ ನಡೆಯುತ್ತಿರುವ ಪಾಠ

ಕೊಡುವಂತೆ ಹೇಳಿ ಕೊಡುವುದು, ಅದರ ಅರ್ಥ [illegible] ಹತ್ತಲಿ, ಹತ್ತದಿರಲಿ, ಪಾಠ ಮಾತ್ರ ಮನಸ್ಸಿಗೆ "ಹಿಡಿದರೆ" ಸಾಕು; ಹಾಗೆ ಪಾಠ ಮನಸ್ಸಿಗೆ ಹಿಡಿಯದೆ ಹೋದರೆ ಮೃಗಗಳಿಗೆ ಸರ್ಕಸ್ಸು ಕಲಿಸುವಾಗ ಮಾಡುವಂತೆ ದಂಡಪ್ರಯೋಗ ಮಾಡುವುದು - ಇದೇ ಇಲ್ಲಿಯವರೆಗೂ ನಮ್ಮ ಪ್ರಾಥಮಿಕ ಪಾಠಶಾಲೆಗಳಲ್ಲಿ ನಡೆಯುತ್ತಿರುವ ವಿದ್ಯಾಭ್ಯಾಸಕ್ರಮದ ಸಾರಾಂಶವು. ಮಕ್ಕಳಿಗೆ ವಿವೇಚನಾಶಕ್ತಿ ಇಲ್ಲವೇ ಇಲ್ಲ—ಎಂದು ಹೇಳುವುದು ತಪ್ಪು, ಅವರು ಬಾಲಕರಾದ ಮಾತ್ರಕ್ಕೇನು? ಮನಸ್ಸು

CC-0. Jangamwadi Math Collection. Digitized by eGangotri

ವರ್ಗಕ್ಕೆ ಸೇರಿದವರೇ ಹೊರತು ಪಶುಪಕ್ಷಿಗಳ ಹಾಗಲ್ಲ; ಆದುದರಿಂದ ಪಶುಪಕ್ಷಿಗಳ ಹಾಗೆ ಅವರನ್ನು ಭಾವಿಸುವುದು ಶುದ್ಧ ತಪ್ಪೆಂಬುದು ನೂತನ ಸಿದ್ಧಾಂತ. ಸಾಧ್ಯವಾದಮಟ್ಟಿಗೆ ಈ ವಿವೇಚನಾಶಕ್ತಿಯ ಮೂಲಕವೇ ಮಕ್ಕಳ ವಿದ್ಯಾಭ್ಯಾಸಕ್ರಮವು ಜರುಗಬೇಕೆಂದು ಅವರು ಅಭಿಪ್ರಾಯ ಪಡುವರು. ಮಕ್ಕಳ ಮನಸ್ಸಿಗೆ ಹಿಡಿಯದ ವಿಷಯಗಳನ್ನು, ಎಂದರೆ ಅವುಗಳ ಆದರಣೆಗೆ ಪಾತ್ರವಲ್ಲದ ವಿಷಯಗಳನ್ನು ಬಲವಂತ ಮಾಡಿ ಅವುಗಳ ಮನಸ್ಸಿಗೆ "ಹತ್ತು" ವಂತೆ ಮಾಡುವುದರಿಂದ ಏನೂ ಪ್ರಯೋಜನವಿಲ್ಲವೆಂದೂ, ಒಂದು ವಿಷಯುವನ್ನು 'ಕಲಿ' ಎಂದು ಬರೀ ಮಾತಿನಿಂದ ಹೇಳುವುದಕ್ಕೆ ಬದಲಾಗಿ ಆ ವಿಷಯದಲ್ಲಿ ಮಕ್ಕಳಿಗೆ ಒಂದು ವಿಧವಾದ ಕುತುಹಲವನ್ನೂ, ಆದರಣೆಯನ್ನೂ ಹುಟ್ಟಿಸಿದರೆ ಆ ವಸ್ತುಜ್ಞಾನವನ್ನು ಅವರೇ ಸ್ವಂತವಾಗಿ ವಿವೇಚನೆಮಾಡಿ ಗ್ರಹಿಸುತ್ತಾರೆಂದೂ ಇವರ ನಂಬಿಕೆ. ಈ ತತ್ವಗಳಿಗನುಸಾರವಾಗಿ ಈ ಹೊಸ ಮಾದರಿಯ ಪಾಠಶಾಲೆಯಲ್ಲಿ ಮಕ್ಕಳಿಗೆ ಪ್ರೀತ್ಯಾಸ್ಪದವಾದ ಅನೇಕ ವಿಧವಾದ ಸಾಧನಸಂಪತ್ತುಗಳನ್ನು ಶೇಖರಿಸಿಟ್ಟಿದ್ದಾರೆ. ಈ ಪಾಠಶಾಲೆಯನ್ನು ಹೊಕ್ಕರೆ ಮೊದಲು ನಮಗೆ ಆಶ್ಚರ್ಯವನ್ನುಂಟುಮಾಡುವ ವಿಚಾರವೆಂದರೆ ಆ ಪುಟ್ಟ ಪುಟ್ಟ ಮಕ್ಕಳು ಅಲ್ಲಿರುವ ಅನೇಕ ವಿಧವಾದ ಆಟದ ಸಾಮಗ್ರಿಗಳನ್ನು ಪಯೋಗಿಸಿಕೊಂಡು ವಿಹಾರ ಮಾಡುವುದರಿಂದುಂಟಾಗುವ ಕೋಲಾಹಲ ಧ್ವನಿ. ಇದು ಬಹಳ ಹರ್ಷದಾಯಕವಾದದ್ದೆಂದು ಎಲ್ಲರೂ ಒಪ್ಪುವರು ಇದಕ್ಕೆ ಬದಲಾಗಿ ನಾವು ಹಳೆಯ ಮಾದರಿಯ ಪಾಠಶಾಲೆಗಳನ್ನು ಪ್ರವೇಶಿಸಿದರೆ ಅಲ್ಲಿ ನಾವು ಗಮನಿಸುವುದೇನು? ಪ್ರಶಾಂತವಾದ ಮೌನ—ಆ ಮಕ್ಕಳು ಶೈಶವವನ್ನೂ, ಬಾಲ್ಯವನ್ನೂ, ಯೌವ್ವನವನ್ನೂ ಎಲ್ಲಾ ಕಳೆದು ಆಗಲೇ ವಾನಪ್ರಸ್ಥಾಶ್ರಮವನ್ನು ಕೈಕೊಂಡಿರುವರೊ ಎಂದು ಬೇಕಾದರೆ ಅದನ್ನು ವರ್ಣಿಸಬಹುದು. ಅವರು ಮನಸ್ಸಿಗೆ ಗೋಚರವಾಗದ ಯಾವುದೊ ಒಂದು ವಿಷಯವನ್ನು ಕುರಿತು ಹಲಗೆಗಳನ್ನು ಹಿಡಿದೊ ಪುಸ್ತಕಗಳನ್ನು ನಿರೀಕ್ಷಿಸುತ್ತಲೊ ಕುಳಿತು ಬಗೆಹರಿಯದೆ ಚಿಂತಿಸುತ್ತಿರುವುದನ್ನು ನೀವು ನೋಡಿದ್ದರೆ ಈ ವರ್ಣನೆಯು ಬರಿ ಉತ್ಪ್ರೇಕ್ಷೆಯಲ್ಲ, ಇದರಲ್ಲಿ ಸತ್ಯಾಂಶವು ಬಹಳವಾಗಿದೆ; ಎಂಬುದನ್ನು ನೀವು ಗ್ರಹಿಸುವಿರಿ. ಮತ್ತು ಆ ಮಕ್ಕಳುಗಳೆಲ್ಲಾ ವಿದ್ಯಾಭ್ಯಾಸ ಮಾಡುತ್ತಿರುವ ಕಾಲದಲ್ಲಿ ತಮ್ಮ ಇಂದ್ರಿಯವ್ಯಾಪಾರಗಳನ್ನೆಲ್ಲಾ ಮರೆತಿರುವಂತೆಯೂ ಕಾಣುತ್ತದೆ. ಅವುಗಳಿಗೆ ಕಣ್ಣು, ಕಿವಿ, ಕೈಕಾಲುಗಳು ಇದ್ದೂ ಇಲ್ಲದ ಹಾಗೆಯೆ ಸರಿ. ಏಕೆಂದರೆ ವಿದ್ಯಾಭ್ಯಾಸಕ್ಕೆ ಅವೊಂದೂ ಸಹಾಯಕಗಳಲ್ಲ ಮನಸ್ಸೊಂದೇ ಮುಖ್ಯವಾದುದು. ಆದರೂ ಮಕ್ಕಳಿಗೆ ಮನಶ್ಶಕ್ತಿಯು ಅವರಿಗಿಂತಲೂ ಬಹಳ ತೀವ್ರವಾಗಿರುತ್ತೆಂಬುದೂ ಎಲ್ಲರಿಗೂ ತಿಳಿದ ವಿಷಯ. ಈ ಹೊಸ ಮಾದರಿಯ ಪಾಠಶಾಲೆಗಳಲ್ಲಿ ಇಂದ್ರಿಯ ಶಕ್ತಿಯಿಂದ ಎಷ್ಟು ಪ್ರಯೋಜನ



ಮಕ್ಕಳ ಬೈಸಿಕಲ್ಲಿನ ವಿರಾಟ



CC-0. Jangamwadi Math Collection. Digitized by eGangotri

ವನ್ನು ಹೊಂದಬಹುದೊ ಅಷ್ಟನ್ನೂ ಹೊಂದಲು ಅನು ಕೂಲವಾಗುವಂತಹ ಸಲಕರಣೆಗಳನ್ನೆಲ್ಲಾ ಒದಗಿಸಿಟ್ಟಿದ್ದಾರೆ. ಆದುದರಿಂದ ಇಲ್ಲಿ, ಮಕ್ಕಳ ಕಣ್ಣುಗಳನ್ನು ಮೋಹಿಸತಕ್ಕಂತಹ ಬಣ್ಣ ಬಣ್ಣದ ಚಿತ್ರಗಳೂ, ಚಿತ್ರ ಪಟಗಳೂ; ಕಿವಿಗೆ ಇಂಪುಗೊಡುವ ಅನೇಕ ವಿಧವಾದ ವಾದ್ಯಸಾಮಗ್ರಿಗಳೂ, ಕೈಯಿಂದ ಮುಟ್ಟಿ ನೋಡಿ ರೂಪುರೇಖೆಗಳನ್ನು ತಿಳಿಯಬಹುದಾದಂತಹ ಬೊಂಬೆಗಳೂ, ಸುದ್ದೇಮಣ್ಣಿನಿಂದ ತಯಾರಾದಂತಹ ಮೃಗ ಪಕ್ಷಿ ಮುಂತಾದುವುಗಳೂ, ಕೈಕಾಲುಗಳಿಂದ ನಡೆಯಿಸಿ ಚಲನ ಸುಖವನ್ನನುಭವಿಸಲು ಸಾಧಕಗಳಾದ ಬಗೆ ಬಗೆಯ ಯಾನಗಳೂ ತುಂಬಿವೆ. ಇವುಗಳನ್ನೆಲ್ಲಾ ಇಲ್ಲಿ, ನವರಾತ್ರಿಯ ಹಬ್ಬದಲ್ಲಿ ಗೊಂಬೆ ಕೂರಿಸುವಂತೆ, ಕ್ರಮ ವರಿಯದೆ, ಉದ್ದೇಶವಿಲ್ಲದೆ ಯದ್ವಾ ತದ್ವಾ ಇಟ್ಟಿಲ್ಲ. ಪ್ರದರ್ಶನ ಶಾಲೆ ( Exhibitions ) ಗಳಲ್ಲಿಟ್ಟಿರುವಂತೆ ಕ್ರಮವರಿತೂ, ಉದ್ದೇಶಪೂರ್ವಕವಾಗಿಯೂ ಇಟ್ಟಿವೆ ಎಂದು ಹೇಳಬಹುದು. ವಸ್ತುವಿಜ್ಞಾನದ ವಿಷಯದಲ್ಲಿ ಈ ನೂತನ ವಿದ್ಯಾಭ್ಯಾಸಕ್ರಮಕ್ಕೂ ಹಳೆಯ ತೆರದ ವಿದ್ಯಾಭ್ಯಾಸಕ್ರಮಕ್ಕೂ ಇರುವ ವ್ಯತ್ಯಾಸಗಳನ್ನು ತೆಗೆದುಕೊಂಡರೆ ಈ ಹೊಸ ಮಾದರಿಯ ಮಹತ್ತರವಾದ ಉಪಕಾರವು ಥಟಕ್ಕನೆ ಹೊಳೆಯುವುದು. ಪುಸ್ತಕದಲ್ಲಿ, ಹಸುವಿಗೆ ಎರಡು ಕೊಂಬಿದೆ; ಕುದುರೆಗೆ ಗೊರಸು ಸೀಳದೆ ಉಂಡೆಯಾಗಿರುತ್ತದೆ; ನಾಯಿಯ ಬಾಲ ಡೊಂಕು; ಕೆಂಪು ಕಾಗದ; ಎಂದು ಓದಿ ನೋಡಿದರೆ ಉಂಟಾಗುವ ಪದಾರ್ಥಜ್ಞಾನಕ್ಕಿಂತಲೂ ಹಸು, ಕುದುರೆ, ನಾಯಿ ಇವುಗಳ ಸುಡ್ಡೇಮಣ್ಣಿನ ಮಾದರಿಗಳನ್ನೂ, ಕೆಂಪು, ಹಸುರು ಇತ್ಯಾದಿ ಬಣ್ಣಬಣ್ಣದ ಕಾಗದಗಳನ್ನೂ ಮುಂದೆ ಇಟ್ಟುಕೊಂಡು, ಅವುಗಳ ವಿಷಯದಲ್ಲಿ ಮಕ್ಕಳನ್ನು ಪ್ರಶ್ನೆಮಾಡಿ ಅವರಿಂದಲೇ ಆಯಾ ಪದಾರ್ಥಗಳ ವಿಷಯದಲ್ಲಿ ತಿಳಿದುಕೊಳ್ಳಬಹುದಾದ ಅಂಶಗಳನ್ನು– ಹೇಳಿಸುವುದರಿಂದ, ಮಕ್ಕಳಿಗೆ ಪದಾರ್ಥಜ್ಞಾನವಾಗುವುದಲ್ಲದೆ, ಎರಡು ಅಂದರೇನು ? ಕೆಂಪು ಬಣ್ಣ ಹೇಗಿರುತ್ತದೆ ? ಬಾಲ ಯಾವುದು ? ಮುಂತಾದ ಅನೇಕ ವಿಷಯಗಳು ಪ್ರಾಸಂಗಿಕವಾಗಿಯೂ ಹೇಳಿಕೊಡದೆ ತಾನೇ ತಾನಾಗಿಯೂ ಆ ಮಕ್ಕಳಿಗೆ ಗೋಚರವಾಗುತ್ತವೆ. ಚಿತ್ರಪಟಗಳ ಉಪಯೋಗವಂತೂ ಹೇಳಿ ತೀರದು.

ಇವುಗಳನ್ನು ಸರಿಯಾಗಿ ಉಪಯೋಗಿಸುವುದರಿಂದ ಮಕ್ಕಳಿಗೆ ಅನೇಕ ಹೊಸ ಹೊಸ ವಿಷಯಗಳನ್ನೂ ಹೊಸ ಹೊಸ ಪದಗಳನ್ನೂ ಬಲು ಸುಲಭವಾಗಿ ಕಲಿಸಬಹುದು. ಭೂಗೋಲ ಮತ್ತು ಚರಿತ್ರೆಗೆ ಸಂಬಂಧವಾದ ಅನೇಕ ವಿಷಯಗಳನ್ನು ಆಯಾನಕ್ಷೆಗಳ ಸಹಾಯದಿಂದ ತಿಳಿದು ಹೇಳಬಹುದು. ಅದರಲ್ಲಿಯೂ ಮಕ್ಕಳಿಗೆ ಭೂಗೋಳ ವನ್ನೋದುತ್ತಿದ್ದೇವಲ್ಲಾ ಎಂದು ತಿಳಿವಳಿಕೆಯಾದರೂ ಬೇಜಾರಾಗಲಿ ಇರುವುದಿಲ್ಲ. ಮಕ್ಕಳು ಗೋಡೆಯ ಮೇಲೆ ತಗಲು ಹಾಕಿರುವ ಆ ಪಟಗಳನ್ನು ನೋಡಿ, ಆ ಸಂಬಂಧವಾಗಿ ಹುಟ್ಟಿದ ಸಹಜವಾದ ಕುತೂಹಲದಿಂದ ತಾನೇ "ಅದೇನು ? ಇದೇನು ?" ಎಂದು ಪ್ರಶ್ನೆ ಮಾಡುವುವು. ಆಗ ಉಪಾಧ್ಯಾಯರೊ, ಅಥವಾ ಉಪಾಧ್ಯಾಯರಿಂದ ಆ ವಿಷಯಗಳನ್ನು ತಿಳಿದಿರುವ



ವರ್ಣಸಂಯೋಜನೆಯನ್ನು ಕಲಿಸುವ ಆಟ

ಬಾಲಕರೊ ಅದಕ್ಕೆ ಉತ್ತರ ಹೇಳುವರು. ವರ್ಣಸಂಯೋಜನೆಯನ್ನು ಕಲಿಯಲೂ ಮತ್ತೂ ಮಕ್ಕಳ ಶಬ್ದಕೋಶವನ್ನು ( Vocabulary ) ಹೆಚ್ಚಿಸಲೂ ಈ ಪಟಗಳು ಬಹಳ ಸಹಾಯ ಮಾಡುವುವು. ವರ್ಣಮಾಲೆಯನ್ನು ಕಲಿಸಲು ಇವರು ಮಾಡಿರುವ ಇನ್ನೊಂದು ಯುಕ್ತಿಯು ಬಹಳ ಚೆನ್ನಾಗಿದೆ. ಮಕ್ಕಳಿಗೆ ಆಟದಲ್ಲಿ ಬಹಳ ಇಷ್ಟ ಎಂಬುದು ಎಲ್ಲರಿಗೂ ಗೊತ್ತು. ವರ್ಣಮಾಲೆಯನ್ನು ಇಸ್ಪೀಟ್ ಆಟದ ( Cards playing ) ಚಿತ್ರಗಳಂತೆ ಉಪಯೋಗಿಸಲು ಅನುಕೂಲವಾಗಿ ಬೇರೆ ಬೇರೆ ಅಕ್ಷರಗಳನ್ನು ಬೇರೆ ಬೇರೆ ರಟ್ಟುಕಾಗದಗಳ ಮೇಲೆ ದಪ್ಪನಾಗಿ ಬರೆ ದಿರುವರು. ಅದನ್ನು ಉಪಯೋಗಿಸುವ ವಿಧಾನವನ್ನು

CC-0. Jangamwadi Math Collection. Digitized by eGangotri

ಉಪಾಧ್ಯಾಯರಿಂದಲೊ ಹಿರಿಯ ಬಾಲಕರಿಂದಲೊ ತಿಳಿದುಕೊಂಡು ಶಿಶುಗಳು ಆಟವೆಂದೇ ಭಾವಿಸಿ ವರ್ಣಮಾಲೆಯ ಅನೇಕ ಅಕ್ಷರಗಳನ್ನು ಕಲಿಯುವುವು.

ಮಕ್ಕಳ ವಿದ್ಯಾಭ್ಯಾಸದಲ್ಲಿ ಇನ್ನೊಂದು ಮುಖ್ಯ ವಿಷಯವಾದ ಶೀಲ–ಸ್ವಭಾವಗಳ ಶಿಕ್ಷಣಕ್ಕೆ (Training of character and conduct) ಈ ನೂತನ ಪಾಠಶಾಲೆಯು ಬಹಳ ಗಮನ ಕೊಡುತ್ತದೆ. ಈ ವಿಷಯಕ್ಕೆ ಹಳೆಯ ಪಾಠಶಾಲೆಗಳಲ್ಲಿ ಸ್ಥಾನವೇ ಇರಲಿಲ್ಲವೆಂಬುದು ಎಲ್ಲರಿಗೂ ತಿಳಿದ ವಿಷಯ. 'ಶೀಲಸ್ವಭಾವಗಳ ಶಿಕ್ಷಣ' ಎಂದರೆ ಶುಷ್ಕವಾದ ನೀತಿಯ ಬೋಧೆ ಮಾಡುವುದೆಂದಲ್ಲ. ಇದರ ಉದ್ದೇಶವು ಇಷ್ಟೇ; ಶೀಲದ ಮುಖ್ಯಾಂಶಗಳಾದ (Basic elements of character) ಕುತೂಹಲ, ಚಿತ್ತೈಕಾಗ್ರತೆ, ಧೈರ್ಯ, ಸಾಹಸಾದಿ ಒಳ್ಳೆಯ ಹೃದ್ಭಾವಗಳನ್ನು (Good emotions) ಉತ್ತೇಜನಗೊಳಿಸುವುದು; ಮತ್ತು ಹೆದರಿಕೆ, ದ್ವೇಷ, ಅಸೂಯೆ, ಅಸಹನೆ ಮುಂತಾದ ಕೆಟ್ಟ ಭಾವಗಳು (Bad emotions) ಸಾಧ್ಯವಾದಷ್ಟು ಮಕ್ಕಳ ಹೃದಯದಲ್ಲಿ ಬೇರೂರದಂತೆ ಮಾಡುವುದು. ಕುತೂಹಲವು ಮಕ್ಕಳಲ್ಲಿ ಬಹಳ ಪ್ರಬಲವಾಗಿರುತ್ತದೆ. ಈ ಪ್ರಪಂಚದಲ್ಲಿ ಮಕ್ಕಳಿಗೆ ಹೊಸಹೊಸದಾಗಿ ಕಣ್ಣಿಗೆ ಕಾಣಿಸುವ ಅನೇಕ ವಸ್ತುಗಳ ಸ್ವಭಾವವನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವು ಅವರ ಸಹಜ ಗುಣ. ಈ ಬಗೆಯಾದ ಕುತೂಹಲವನ್ನು ಉತ್ತೇಜನಗೊಳಿಸಲು ಈ ಹೊಸಮಾರ್ಗದ ಪಾಠಶಾಲೆಗಳು ಎಷ್ಟು ಸಹಾಯ ಮಾಡುತ್ತವೆ ಎಂಬುದನ್ನು ಮೊದಲೇ ತಿಳಿಸಿದೆ. ಹೆದರಿಕೆಯು (Fear) ಮನುಷ್ಯನಿಗೆ ಅನೇಕ ವಿಧದಲ್ಲಿ ಅನರ್ಥಗಳನ್ನುಂಟುಮಾಡುತ್ತೆಂಬುದು ಎಲ್ಲರಿಗೂ ತಿಳಿದ ವಿಷಯ. ಮುಖ್ಯವಾಗಿ ಕುತೂಹಲವು ಎಷ್ಟು ಒಳ್ಳೆಯ ಗುಣವೊ ಹೆದರಿಕೆಯು ಅಷ್ಟು ಕೆಟ್ಟ ಗುಣವೆಂದು ಹೇಳಬಹುದು. ಇವನ್ನರಿಯದೆ ನಮ್ಮ ಪೂರ್ವಿಕರು ಮಕ್ಕಳನ್ನು "ಹೆದರಿಕೆ"ಯಲ್ಲಿಟ್ಟಿರುವುದು ಬಹಳ ಒಳ್ಳೆಯದೆಂದು ತಿಳಿದುಕೊಂಡಿದ್ದರು. ಈಗಲೂ ಇದೊಂದು ಪ್ರಬಲವಾದ ನಂಬಿಕೆಯಾಗಿರುವುದು ಬಹಳ ಶೋಚನೀಯವಾಗಿದೆ. ಮಕ್ಕಳ ತುಂಟತನವನ್ನು ನಿಲ್ಲಿಸಬೇಕಾದರೆ ಅವರಲ್ಲಿ ಕೇವಲ ಮೌಢ್ಯವಾದ (Irrational fears) ಹೆದರಿಕೆಗಳನ್ನು ಹುಟ್ಟಿಸುವುದೇ ಸರಿಯಾದ ಉಪಾಯವೆಂದು ನಮ್ಮವರು ಈಗಲೂ ತಿಳಿದುಕೊಂಡಿದ್ದಾರೆ. "ಗುಮ್ಮಾ ಬರುತ್ತಾನೆ" "ಕವಳಾತಾಯಿ ಹಿಡಿದುಕೊಂಡು ಹೋಗುತ್ತಾಳೆ" ಮುಂತಾದ ಮಾತುಗಳು ನಮ್ಮ ವಾಚಕರ ನೆನಪಿಗೆ ಬರಬಹುದು. ಹೀಗೆ ನಿಷ್ಕಾರಣವಾಗಿ ಮಕ್ಕಳ ಎದೆಯಲ್ಲಿ ಹೆದರಿಕೆಯನ್ನು ಹುಟ್ಟಿಸುವುದು ಕೇವಲ ಅನರ್ಥಕ್ಕೆ ಕಾರಣವಾಗುತ್ತದೆಂದು ಈಗಿನ ಮನಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಇದನ್ನರಿಯದೆ ಹಳೆಯ ಪಾಠಶಾಲೆಗಳಲ್ಲಿ ಹೆದರಿಕೆಯನ್ನೇ ವಿದ್ಯಾವ್ಯಾಸಂಗಕ್ಕೆ ಮೂಲಾಧಾರವನ್ನಾಗಿಟ್ಟುಕೊಂಡಿದ್ದಾರೆ. ಈಗ ಈ ನೂತನ ವಿದ್ಯಾಭ್ಯಾಸ ಕ್ರಮದಲ್ಲಿ ಈ ಹೆದರಿಕೆಗೆ ಬದಲಾಗಿ ಪ್ರೀತಿಯನ್ನು



ಭೂತದಯೆಯನ್ನು ಕಲಿಸುವ ಬಗೆ

ಮೂಲಮಂತ್ರವಾಗಿ ಉಪಯೋಗಿಸುತ್ತಾರೆ. ಉಪಾಧ್ಯಾಯರುಗಳಿಗೂ ವಿದ್ಯಾರ್ಥಿಗಳಿಗೂ ಇಲ್ಲಿ ತಾಯಿ–ಮಕ್ಕಳ ಸಂಬಂಧವಿರುತ್ತದೆಂದು ಹೇಳಬಹುದು. ಈ ಸಂದರ್ಭದಲ್ಲಿ ಇನ್ನೊಂದು ವಿಷಯವು ಜ್ಞಾಪಕಕ್ಕೆ ಬರುತ್ತದೆ. ಈ ನೂತನ ಪಾಠಶಾಲೆಯಲ್ಲಿ ಬಹುಮಟ್ಟಿಗೆ ಉಪಾಧ್ಯಾಯಿನಿಯರುಗಳೇ ಇರುತ್ತಾರೆ. ಡಾ. ಗೋಪಾಲಸ್ವಾಮಿಯವರ ಧರ್ಮಪತ್ನಿಯವರು ಈ ಪಾಠಶಾಲೆಯ ಮೇಲ್ವಿಚಾರಕರು. ನಿಸ್ವಾರ್ಥತೆಯಿಂದಲೂ, ಕೇವಲ ಶಿಶುಗಳ ಅಭಿವೃದ್ಧಿಯಲ್ಲಿಯೇ ಮನಸ್ಸುಳ್ಳವರಾಗಿಯೂ

CC-0. Jangamwadi Math Collection. Digitized by eGangotri

ಇಷ್ಟೊಂದು ಸಮರ್ಪಕವಾಗಿಯೂ ಶಾಲೆಯ ಕೆಲಸಗಳನ್ನೆಲ್ಲಾ ನಡಿಸಿಕೊಂಡು ಬರುತ್ತಿರುವುದು ಬಹಳ ಸ್ತುತ್ಯಾರ್ಹವಾಗಿದೆ. ಮಕ್ಕಳ ಪ್ರೀತಿಯನ್ನೂ ಸಲಿಗೆಯನ್ನೂ ಸಂಪಾದನೆ ಮಾಡುವುದರಲ್ಲಿ ಹೆಂಗಸರಿಗೆ ಸ್ವಭಾವಸಿದ್ಧವಾದ ಅನೇಕ ಗುಣಗಳಿರುವುದರಿಂದ ಅವರು ಈ ಕೆಲಸಕ್ಕೆ ಗಂಡಸರಿಗಿಂತಲೂ ಹೆಚ್ಚಿಗೆ ಅರ್ಹರೆಂದೂ, ಆದ್ದರಿಂದ ಪ್ರಾಥಮಿಕವಿದ್ಯಾಭ್ಯಾಸ ಮಾಡಿಸುವುದಕ್ಕೆ ಹೆಂಗಸರೇ ಉತ್ತಮರೆಂದೂ ಪಾಶ್ಚಾತ್ಯರು ಅರಿತು ಅವರ ಪ್ರಾಥಮಿಕವಿದ್ಯಾಶಾಲೆಗಳಿಗೆಲ್ಲಾ ಸಾಧ್ಯವಾದಷ್ಟು ಉಪಾಧ್ಯಾಯಿನಿಯರುಗಳನ್ನೇ ನಿಯಮಿಸುತ್ತಿದ್ದಾರೆ. ಈ ವಿಷಯದಲ್ಲಿ ನಾವೂ ಅವರಂತೆ ಮಾಡಲು ನಮ್ಮಲ್ಲಿ ವಿದ್ಯಾವಂತರಾದ ಸ್ತ್ರೀಯರ ಜನಸಂಖ್ಯೆ ಬಹಳ ಕಮ್ಮಿಯಾಗಿರುವುದರಿಂದ ಅಶಕ್ಯವಾಗಿದೆ. ಎಂತಲೆ ಉಪಾಧ್ಯಾಯನಿರಿಗೆ ಗಂಡಸರಿಗಿಂತಲೂ ಹೆಚ್ಚಿಗೆ ಸಂಬಳ ಕೊಡಬೇಕಾಗುವುದು. ಈ ಎರಡು ಅಡಚಣೆಗಳನ್ನೂ ಲೆಕ್ಕಿಸದೆ ಮಕ್ಕಳ ಅಭಿವೃದ್ಧಿಯನ್ನೇ ಲಕ್ಷ್ಯದಲ್ಲಿಟ್ಟು ಇದನ್ನು "ಮಾದರಿ" ಶಾಲೆಯನ್ನಾಗಿ ಮಾಡಿರುವುದು ಡಾ. ರವರ ಉಚ್ಚಾಭಿಪ್ರಾಯಗಳ ಪ್ರತಿಫಲವೆಂದೇ ಹೇಳಬೇಕು.

ಹೀಗೆ ನಿಷ್ಕಾರಣವಾದ ಹೆದರಿಕೆಗೆ ಅವಕಾಶ ಕೊಡದಿರುವುದು ಮಾತ್ರವಲ್ಲದೆ ಈ ನೂತನಪಾಠಶಾಲೆಯಲ್ಲಿ ಧೈರ್ಯವನ್ನು ಉತ್ತೇಜನಗೊಳಿಸುವ ಅನೇಕ ವಿಧವಾದ ಆಟದ ಸಾಮಗ್ರಿಗಳನ್ನಿಟ್ಟಿದ್ದಾರೆ. ಇದರಲ್ಲಿ ಜಾರುವ ಕುಪ್ಪೆಯು ಒಂದು. ಕೆಲವು ಮಕ್ಕಳು ಮೊದಮೊದಲು ಇದನ್ನು ಕಂಡರೆ ಭೀತಿಯಿಂದ ಹಿಂಜರಿಯುವರು. ಆದರೆ ಕ್ರಮೇಣ ಅದರಲ್ಲಿ ಹೆದರಿಕೊಳ್ಳತಕ್ಕದ್ದೇನೂ ಇಲ್ಲವೆಂಬುದನ್ನು ಅರಿತು ತಾವೇ ಒಬ್ಬರ ಸಹಾಯವೂ ಇಲ್ಲದೇ ಜಾರುವುದಕ್ಕಾರಂಭಿಸಿ ಈ ಆಟದಲ್ಲಿ ಬಹಳ ಉತ್ಸಾಹವನ್ನು ತೋರುವರು. ಹೀಗೆ ಮಾಡುವುದರಿಂದ ನಮ್ಮ ಶಿಶುಗಳು ಹೆದರಿಕೆಗಳನ್ನು ಬಿಟ್ಟು ಧೈರ್ಯಸ್ಥರಾಗುತ್ತಾರೆ. ಹಳೆಯ ಪಾಠಶಾಲೆಗಳಲ್ಲಿಯ ಮಕ್ಕಳು ಪುಸ್ತಕದ ಮುಂದೆ ಕುಳಿತಿದ್ದರೂ ಅವರ ಮನಸ್ಸು ಬೇರೆ ಕಡೆಗೆ ಹರಿದು ಹೋಗುವುದು ಅಸಂಭವವಾದ ವಿಷಯವಲ್ಲ. ಇದೆಂತಹ ಚಿತ್ತೈಕಾಗ್ರತೆಯೋ ನೀವೇ ಊಹಿಸಿ ನೋಡಿ. ಆದರೆ ಈ ನೂತನ ಮಾದರಿಯ ಪಾಠಶಾಲೆಯಲ್ಲಿ ಕೆಲವು ಶಿಶುಗಳು ತಮ್ಮ ದೃಷ್ಟಿಪಥಕ್ಕೆ ಬಿದ್ದಂತಹ, ತಮ್ಮ ಮನಸ್ಸನ್ನು ಸೆಳೆ ಹಿಡಿದಂತಹ ಯಾವುದಾದರೂ ಒಂದು ವಸ್ತುವನ್ನು ಕೋಲಾಹಲದ ಮಧ್ಯದಲ್ಲಿ ನೆಟ್ಟಮನಸ್ಸಿನಿಂದ ಪರೀಕ್ಷಿಸುತ್ತಿರುವುದನ್ನು ನೀವು ಕಾಣುವಿರಿ. ಆಗ ನಿಜವಾದ ಚಿತ್ತೈಕಾಗ್ರತೆಯು ಹೀಗಿರಬೇಕೆಂಬುದು ನಮಗೆ ಹೊಳೆಯುವುದು. ಈ ಶಾಲೆಗೆ ಬಹು ಚಿಕ್ಕ ವಯಸ್ಸಿನ ಮಕ್ಕಳು ಬರಲು ಅನುಕೂಲಗಳನ್ನು ಕಲ್ಪಿಸಿದ್ದಾರೆಂದು ಮೇಲೆ ಹೇಳಿದೆ. ಬೆಳಗು, ಮಧ್ಯಾಹ್ನ, ಎರಡು ಹೊತ್ತು ಶಾಲೆಯು ನಡೆಯುತ್ತದೆ. ಬೆಳಗಿನಲ್ಲಿ ೭॥ ಘಂಟೆಗೆ ಮನೆ ಬಿಟ್ಟ ಹುಡುಗರು ೧೦॥ ಘಂಟೆಯತನಕ ಇಲ್ಲಿ ಇರಬೇಕಾಗಿರುವುದರಿಂದ ಮಧ್ಯೆ ಅವುಗಳಿಗೆ ಹಸಿವಾಗಬಹುದೆಂದು ಇಲ್ಲಿ ಸುಮಾರು ೯ ಘಂಟೆಯ ಹೊತ್ತಿಗೆ ಮಕ್ಕಳಿಗೆಲ್ಲ ಒಂದು ಲೋಟಾ ಹಾಲನ್ನೂ, ಒಂದು ಬಾಳೆಹಣ್ಣು, ಅಥವಾ ಇನ್ನು ಯಾವದಾದರೂ ಒಂದು ಒಳ್ಳೆಯ ಹಣ್ಣನ್ನೂ ಕೊಡುವರು. ಈ ತಿಂಡಿಯ ಕೊಡಿಯಲ್ಲಿ ಪಾಶ್ಚಿಮಾತ್ಯರಂತೆ ತಟ್ಟೆಬಟ್ಟಲಗಳನ್ನು ಮೇಜಿನ ಮೇಲೆ ಜೋಡಿಸಿಟ್ಟು, ಅದರ ಸುತ್ತಲೂ ಕುರ್ಚಿಗಳನ್ನು ಹಾಕಿಕೊಂಡು ಕುಳಿತುಕೊಳ್ಳಬೇಕಾಗಿರುವುದು. ಈ ಕೆಲಸಗಳನ್ನೆಲ್ಲಾ ಬಾಲಕರಿಂದಲೇ ಮಾಡಿಸುತ್ತಾರೆ. ಹೀಗೆ ಮಾಡುವಾಗ ಹಾಲನ್ನು ಮೇಲೆ ಚಲ್ಲಿಕೊಳ್ಳದಂತೆಯೂ, ಗಾಜಿನ ತಟ್ಟೆಬಟ್ಟಲುಗಳನ್ನು ಒಡೆದುಹಾಕದಂತೆಯೂ ನಾಜೂಕಾಗಿಯೂ ಜಾಗರೂಕತೆಯಿಂದಲೂ ನಡೆದುಕೊಳ್ಳಬೇಕಾಗುವುದು. ಇದರಿಂದ ಮಕ್ಕಳು ನಾಲ್ಕು ಜನ ಸೇರಿದಾಗ ಹೇಗೆ ನಡೆದುಕೊಳ್ಳಬೇಕು (Social life) ಎಂಬುದನ್ನು ಕಲಿಯುವರು. ಮತ್ತು ಉಡುಪು ಮೊದಲಾದವುಗಳನ್ನೂ ತಮ್ಮ ಅಂಗಿಗಳನ್ನೂ ಹೇಗೆ ಶುಚಿಯಾಗಿಟ್ಟುಕೊಳ್ಳಬೇಕೆಂಬುದನ್ನೂ ಅವರಿಗೆ ತಿಳಿಯಹೇಳಲು ಸರಿಯಾದ ಸಂದರ್ಭವೊದಗಿದಂತಾಗುವುದು. ಇದಲ್ಲದೆ ಒಬ್ಬೊಬ್ಬರು ಒಂದೊಂದು ತಟ್ಟೆಯಲ್ಲಿರುವ ಪದಾರ್ಥಗಳನ್ನು ಮಾತ್ರ ತಿನ್ನಬೇಕೆಂಬ ನಿಯಮವಿರುವುದರಿಂದ ಮಕ್ಕಳ ಘಾತಕತನಕ್ಕೂ, ದ್ವೇಷ ಅಸೂಯೆಗಳಿಗೂ ಅವಕಾಶವಿರುವದಿಲ್ಲ. ಹೀಗೆ ಇದೊಂದು ನವೀನವೂ ಬಹು ಉಪಯುಕ್ತವೂ ಆದ ಏರ್ಪಾಡಾಗಿರುವುದೆಂಬುದರಲ್ಲಿ ಏನೂ ಸಂಶಯವಿಲ್ಲ.

CC-0. Jangamwadi Math Collection. Digitized by eGangotri

ಇದು ವರೆಗೂ "ಶಿಶುವಿಹಾರದ" ಗುಣಕಥನ ವಾಯ್ತು. ಇದನ್ನು ನಾನು ಸಮರ್ಪಕವಾಗಿ ಮಾಡಿರುವೆನೆಂದು ಸರ್ವಥಾ ಊಹಿಸಕೂಡದು. ಇದರ ಗುಣಗಳ ಸಹಸ್ರಾಂಶವನ್ನಾದರೂ ವಾಚಕರ ಮುಂದಿಟ್ಟಿರುವೆನಾದರೆ ನಾನು ಧನ್ಯನೆಂದು ಭಾವಿಸುತ್ತೇನೆ. ಆದರೆ ದೋಷಗಳನ್ನೂ ಕಂಡುಹಿಡಿಯುವುದು ಬಹಳ ಸುಲಭವಾದ ಕೆಲಸವಾದ್ದರಿಂದ ಇದರಲ್ಲಿ ಕಂಡುಬರುವ ೧-೨ ದೋಷಗಳನ್ನು ಇಲ್ಲಿ ವಿವರಿಸಬೇಕೆಂದಿದ್ದೇನೆ. ಬರೀ "ಶಿಶುವಿಹಾರದ" ವಿಷಯನಿರೂಪಣೆಗೆ ಈ ಲೇಖನವು ಬರೆಯಲ್ಪಟ್ಟಿದ್ದರೆ ಈ ದೋಷಗಳನ್ನು ನಾವು ಲಕ್ಷ್ಯಕ್ಕೆ ತಂದುಕೊಳ್ಳಲವಶ್ಯಕವಿರಲಿಲ್ಲ. ಏಕೆಂದರೆ ಡಾ. ರವರು ಬಹಳ ಸಾಹಸಪಟ್ಟು ಇದರಲ್ಲಿ ದೋಷಗಳನ್ನು ಎಷ್ಟು ಕಡಿಮೆಮಾಡಬಹುದೊ ಅಷ್ಟೂ ಮಾಡಿರುವರೆಂದು ಎಲ್ಲರೂ ಒಪ್ಪತಕ್ಕ ವಿಷಯವಾಗಿದೆ. ಆದರೆ ಈ ಲೇಖವು "ಶಿಶುವಿಹಾರ" ದ ವಿಧಾನವನ್ನು ತಿಳಿಯುವುದರಿಂದ ಅಖಿಲಕರ್ಣಾಟಕಕ್ಕೆ ಏನು ಉಪಯೋಗವಾಗಬಹುದೆಂಬ ಒಂದು ದೃಷ್ಟಿಯಿಂದಲೂ ಬರೆಯಲ್ಪಟ್ಟಿರುವುದರಿಂದ ಈ ಮಾದರಿಯಲ್ಲಿರುವ ದೋಷಗಳನ್ನು ಸೂಚಿಸುವುದರಲ್ಲಿ ಛಿದ್ರಾನ್ವೇಷಣವೆಂದು ಯಾರೂ ಊಹಿಸಬಾರದು. ಈ ಶಾಲೆಗೆ ಬರುವ ಶಿಶುಗಳಲ್ಲಿ ಒಂದು ಬಗೆಯ ವೈಶಿಷ್ಟ್ಯವನ್ನು ನಾವು ಕಾಣುತ್ತೇವೆ. ಇವರುಗಳೆಲ್ಲಾ ಶ್ರೀಮಂತರ ಪುತ್ರ-ಪುತ್ರಿಯರು. ಇತರ ಪಾಠಶಾಲೆಗಳಂತೆ ಇಲ್ಲಿ ಉಚಿತವಾಗಿ ವಿದ್ಯಾಭ್ಯಾಸ ಮಾಡಿಸಲಾಗುವುದಿಲ್ಲ. ಇಲ್ಲಿ ವಿಧಿಸಿರುವ ಫೀಸನ್ನು ನಾಡಾಡಿಗರಿಗೆ ಕೊಡಲು ಸಾಧ್ಯವಿಲ್ಲದ್ದರಿಂದ ಇವರು ಆದರ ಫಲವನ್ನು ಅನುಭವಿಸಲೂ ಸಾಧ್ಯವಿಲ್ಲ. ಈ ಶಾಲೆಯಲ್ಲಿ ಇಂಗ್ಲೀಷ್ ಭಾಷೆಗೂ, ಸ್ವಲ್ಪ ಮಟ್ಟಿಗೆ ಇಂಗ್ಲಿಷ್ ನಡತೆಗಳಿಗೂ ಕೊಟ್ಟಿರುವ ಪ್ರಾಮುಖ್ಯತೆಯು ಅನೇಕರಿಗೆ ಆಶ್ಚರ್ಯವನ್ನುಂಟುಮಾಡುವಂತಹದಾಗಿದೆ. ಈ ವಿಷಯದಲ್ಲಿ ನಾವು ಈ ಶಾಲೆಯನ್ನು ಇಂಗ್ಲೀಷ್ Convent ಗಳಿಗೆ ಹೋಲಿಸಬಹುದು. ಇಲ್ಲಿರುವ ಶಿಶುಗಳೆಲ್ಲಾ ಇಂಗ್ಲಂಡಿನವರಂತೆ ಕಾಣಿಸುವರು. ಕರ್ಣಾಟಕದ ಕುರುಹು ಅಷ್ಟಾಗಿ ಕಂಡು ಬರುವುದಿಲ್ಲ. ಈ ಸಂದರ್ಭದಲ್ಲಿ ಜರ್ಮನಿಯ ಚಕ್ರಾಧಿಪತಿಯಾಗಿದ್ದ ಕೈಸರಿನ ಮಾತುಗಳು ಜ್ಞಾಪಕಕ್ಕೆ ಬರುತ್ತವೆ. ಅವನು "ನಮ್ಮ ದೇಶದ ಬಾಲಕನು ಚಿಕ್ಕ ಇಂಗ್ಲಿಷ್‌ನವನಂತಾಗಲೀ, ಚಿಕ್ಕ ಫ್ರೆಂಚ್ ಬಾಲಕನಂತಾಗಲೀ, ಚಿಕ್ಕ ಇಟಾಲಿ ದೇಶದವನಂತಾಗಲೀ ಆಗಬೇಕೆಂಬುದು ನನ್ನ ಇಷ್ಟವಲ್ಲ. ಅವನು ಜರ್ಮನ್‌ದೇಶದ ಬಾಲಕನಂತೆಯೆ ಆಗಬೇಕು," ಎಂದು, ಮಕ್ಕಳ ವಿದ್ಯಾಭ್ಯಾಸದ ವಿಷಯದಲ್ಲಿ ನುಡಿದಿದ್ದಾನೆ. ಈಗ ನಮ್ಮ ದೇಶದ ಸ್ಥಿತಿಯು ಹೇಗಿದೆ? ನಮ್ಮ ವಿದ್ಯಾಭ್ಯಾಸವು ನಮ್ಮನ್ನು ಕನ್ನಡಿಗರನ್ನಾಗಿ ಮಾಡಲು ಎಷ್ಟರಮಟ್ಟಿಗೆ ಸಹಾಯವನ್ನು ಮಾಡುತ್ತಿದೆ? "ಅಬ್ಸೀನಿಯಾದ ಆಭರಣಗಳು, ಸೈಬೀರಿಯಾದ ಸಸ್ಯಾದಿಗಳು, ಜಾರ್ಜಿಯಾದ ಜನಸಂಖ್ಯೆ ಮುಂತಾದ ಮುಖ್ಯ ವಿಷಯಗಳ" ನ್ನೇನೋ ನಮ್ಮ ಪಾಠಶಾಲೆಗಳಲ್ಲಿ ಹೇಳಿಕೊಡುವರು. ಆದರೆ ಕರ್ಣಾಟಕದ ಇತಿಹಾಸವನ್ನು ಕಲಿಯುವುದಕ್ಕಾಗಲೀ, ಕರ್ಣಾಟಕದ ಸಾಹಿತ್ಯಪ್ರೇಮಕ್ಕಾಗಲೀ ನಮ್ಮ ವಿದ್ಯಾಭ್ಯಾಸವು ಲೇಶವೂ ಸಹಾಯಮಾಡುವುದಿಲ್ಲ. ಈ ದೂಷಣೆಗೆ ನಮ್ಮ ನೂತನಪಾಠಶಾಲೆಯೂ ಒಳಗಾಗಿದೆ-ಎಂದು ಹೇಳಬೇಕಾಗಿದೆ. ಆದರೆ ಎಲ್ಲಿಯವರೆಗೆ ಇಂಗ್ಲಿಷಿಗೆ ನಮ್ಮ ಹೈಸ್ಕೂಲುಗಳಲ್ಲಿಯೂ, ವಿಶ್ವವಿದ್ಯಾನಿಲಯಗಳಲ್ಲಿಯೂ ಪ್ರಾಮುಖ್ಯತೆಯು ಇರುತ್ತದೆಯೋ ಅಂದಿನವರೆಗೂ ಈ ದೋಷನಿವಾರಣೆಯಾಗುವುದಿಲ್ಲ. ಏಕೆಂದರೆ ವಿಶ್ವವಿದ್ಯಾನಿಲಯದಲ್ಲಿಯೂ, ಹೈಸ್ಕೂಲುಗಳಲ್ಲಿಯೂ ಎಲ್ಲಾ ಪಾಠಪ್ರವಚನಗಳೂ ಇಂಗ್ಲಿಷ್ ಭಾಷೆಯಲ್ಲಿಯೆ ಜರುಗುತ್ತಿವೆ. ನಮ್ಮ ವಿದ್ಯಾರ್ಥಿಗಳು ಪ್ರೌಢವಿದ್ಯಾಭ್ಯಾಸ ಮಾಡಬೇಕಾದರೆ ಅವರಿಗೆ ಇಂಗ್ಲಿಷ್ ಭಾಷಾಜ್ಞಾನವು ಬಹಳ ಚೆನ್ನಾಗಿ ಇದ್ದೇ ಇರಬೇಕು. ಆದುದರಿಂದ ನಮ್ಮ ವಿದ್ಯಾರ್ಥಿಗಳು ತಮ್ಮ ಕಾಲದಲ್ಲಿಯ ಬಹುಭಾಗವನ್ನು ಈ ಅನ್ಯಭಾಷೆಯನ್ನು ಕಲಿಯುವುದಕ್ಕೆ ಉಪಯೋಗಿಸಬೇಕಾಗಿರುವುದು. ಈ ನೂತನ ಪಾಠಶಾಲೆಯು ಕನ್ನಡಸಂಸ್ಕೃತಿಯ ಅಭಿವೃದ್ಧಿಗಾಗಿ ಕೆಲಸಮಾಡಿದರೆ ದೇಶಕ್ಕೆ ಹೆಚ್ಚು ಉಪಕಾರವಾದೀತೆಂದು ನಮ್ಮ ಭಾವನೆ.

ಎನ್. ಎಸ್. ರಾಮಚಂದ್ರಯ್ಯ, ಎಂ. ಎ.

[ಈ ಪ್ರಬಂಧಕ್ಕೆ ಸಂಬಂಧಪಟ್ಟ ಚಿತ್ರಗಳನ್ನೆಲ್ಲಾ ದಯವಿಟ್ಟು ಒದಗಿಸಿಕೊಟ್ಟದ್ದಕ್ಕಾಗಿಯೂ, ಮತ್ತು ಇದರವಿಷಯದಲ್ಲಿ ಬಹು ಅಮೂಲ್ಯವಾದ ಅನೇಕ ಸಲಹೆಗಳನ್ನು ಕೊಟ್ಟದ್ದಕ್ಕಾಗಿಯೂ ನಾನು ಡಾಕ್ಟರ ಎಂ. ವಿ. ಗೋಪಾಲಸ್ವಾಮಿ, ಬಿ. ಎ., ಬಿ. ಎಸ್‌ಸಿ. ಪಿ. ಹೆಚ್. ಡಿ. ಯವರಿಗೆ ಬಹಳ ಕೃತಜ್ಞನಾಗಿರುತ್ತೇನೆ. ಲೇಖಕ]

CC-0. Jangamwadi Math Collection. Digitized by eGangotri

# "ಕ....ಚ್ಚು....!"

(ಸಣ್ಣ ಕತೆಯೊಂದು*)

ಬರೆದವರು— ಶ್ರೀ. ಮುಗುಳಿ ರಂಗನಾಥ, ಎಮ್. ಎ.,

ಸಣ್ಣ ಕೋಣೆಯೊಂದು. ಎರಡೇ ಅಂಕಣಗಳು. ಎಲ್ಲವೂ ಹೊಲಸಿನಿಂದ ತುಂಬಿದೆ. ಮಸಮಸಕು ಬೆಳಕು; ಅದರ ಗೋಡೆಗಳನ್ನು ಅಪ್ಪಿಕೊಂಡಿರುವ ಬಡತನದ ಹಾಗೆ. ತೊಲೆಯಿಲ್ಲದ ಮನೆ. ಇಲ್ಲಣದ ಪರದೆ ಇಳಿಬಿದ್ದ ಕಪ್ಪುಕರಿಯ ಜಂತಿಗಳ ಛಾವಣಿ, ಅದೂ ಈಗ ಬೀಳು ವುದೋ ಇನ್ನೊಂದು ಕ್ಷಣಕ್ಕೆ ಬೀಳುವುದೋ ಎನ್ನುವ ಹಾಗೆ. ಅದರ ನಡುವಿಗೆ ಕೂಡಿಸಿದ ಒಂದು ಕಬ್ಬಿಣದ ಬಳೆ-ಎಂದೋ ಗತಿಸಿಹೋದ ತೂಗುದೀವಿಗೆಯ ಗುರುತು. ಹಳೇಯ ಹಾಲುಕಾಸುವ ಒಲೆಯೊಂದು ಅಡಿಗೆಯೊಲೆಯ ಹತ್ತಿರ ಮೂಲೆಯಲ್ಲಿ ಬೂದಿಯ ತುಂಬಿಕೊಂಡು ಕುಳಿತಿದೆ. ಅಡಿಗೆಯೊಲೆಯಲ್ಲಿ ಸುಟ್ಟಕಟ್ಟಿಗೆ ಒಂದೆರಡು, ಒಲೆಯಮೇಲೆ ಒಂದು ಸುಟ್ಟು ಕರಕಾದ ತಪ್ಪೇಲಿ. ಅದರ ಹತ್ತಿರ ಒಡಕ ಸವುಟೊಂದು-ಉಳಿದ ಪಾತ್ರೆಗಳೊಡನೆ ಆಡಿದ ಉರಿಯುದ್ಧದಲ್ಲಿ ಮೈಸೋತು ಹಣ್ಣಾದ ಕಾಲಾಳು !

ಇರುವುದೊಂದೇ ಕೋಣೆ. ಅದರ ತುಂಬೆಲ್ಲ ಉಸಿರು-ಗಟ್ಟುವ ಹಾಗೆ ಸಾಮಾನುಗಳು; ಹಗ್ಗಹರಿದ ಹೊರಸು, ಮೇಲೆ ಹಾಸಿದ ಬುನಾದಿಕಾಲದ ಕಂಬಳಿ, ಅದರ ಮೇಲೆ ಹಳೆಯರಳೆ ತುಂಬಿದ-ಎಣ್ಣೆ ಬಿಡಿದು ಬಣ್ಣಗೆಟ್ಟ ತಲೆಗಿಂಬು. ಒಂದು ತೊಟ್ಟಿಲೂ ಇದ್ದಿತು. ಅದರ ಕಂಡಿಗಳೊಳಗಿಂದ ಹರಕು ದುಬಟಿಯನ್ನು ಹೊತ್ತು ಮಲಗಿರುವ ಕೂಸಿನ ತಲೆ ಮಾತ್ರ ಕಾಣುತ್ತಿತ್ತು. ಹೊರಸಿನ ಬುಡದಲ್ಲಿ ಎರಡು ದೊಡ್ಡಪೆಟ್ಟಿಗೆಗಳು-ಒಂದರ ಕೀಲಿ; ಇನ್ನೊಂದರ ಕೈ ಇಷ್ಟೇ ಉಳಿದಿವೆ. ಆ ಪೆಟ್ಟಿಗೆಗಳಲ್ಲಿ ಅಂತಹ ಬೆಲೆಯುಳ್ಳದೇನೂ ಇರಲಿಲ್ಲ. ಸಿರಿವಂತರ ಮನೆಯಿಂದ ಹೊರದೂಡಿಸಿಕೊಂಡು ಬಂದ ಇಲಿಗಳು ಮಾತ್ರ ಓಡಾಡುವವು. ಮುಂದೆ ಕಾಳಿನ ಡಬ್ಬಿಗಳು, ಒಂದು ಬೀಸುವ ಕಲ್ಲು, ಒಂದು ಒರಳು, ಬಚ್ಚಲು, ಕಟ್ಟ ಕಡೆಗೆ ದೇವರ ಮಂಟಪ. ನೀರೊಲೆಯೊಂದು ಬೇರೆಯಾಗಿ ಇರಲಿಲ್ಲ. ಸೀರಿಸ ಪಾತ್ರೆಗಳೇ ಅಡಿಗೆಯ ಪಾತ್ರೆಗಳು, ಅಡಿಗೆಯ ಪಾತ್ರೆಗಳೇ ಸೀರಿಸ ಪಾತ್ರೆಗಳು; ಈ ಕೋಣೆಯಲ್ಲಿ ಮೇಲಿನಿಂದ ಒಂದು ಸೂಜಿ ಬಿದ್ದರೂ ಅದು ಸಪ್ಪಳವನ್ನು ಕಾಣಾವಂತಿರಲಿಲ್ಲ.

ಹೀಗಿದ್ದರೂ ಆ ಕೋಣೆಯಲ್ಲಿ, ಅವನು-ಅವಳು ಇವರೂ ಮಗುವಿನೊಂದಿಗೆ ಇದ್ದಾರೆ. ಆಕೆ, ನಡುಹರೆಯದವುತ್ತೈದೆ; ಹೊರಸಿನ ಬದಿಯಲ್ಲಿ ತೊಟ್ಟಿಲ ಕೆಳಗೆ ಕುಳಿತಿದ್ದಾಳೆ. ಅವಳ ಎದುರಲ್ಲಿ ಕಿಟಕಿಯೊಂದು; ತೀರ ಸಣ್ಣದು. ಅವಳ ಮಗ್ಗಲಿಗೆ ಬಾಗಿಲು. ಎಡಗೈಯಿಂದ ನಡುನಡುವೆ ತೊಟ್ಟಿಲನ್ನು ತೂಗುತ್ತ ಒಂದು ಕುಂಚಿಗೆ ಹೊಲಿಯುತ್ತ ಕುಳಿತಿದ್ದಳು. ಎದುರ ಮೂಲೆಯಲ್ಲಿ ದೇವರಮಂಟಪದ ಮುಂದೆ ಮಡಿಯಿಂದ ಕುಳಿತ ಆತನು ಆದೇ ಪೂಜೆ ತೀರಿಸಿ ಮಹಾಭಾರತದ ಪಾರಾಯಣವನ್ನು ಆರಂಭಿಸಿದ್ದನು. ಒಳ್ಳೆ ದನಿತೆಗೆದು ಹಿಂದೆ ಮುಂದೆ ಜೋಲಿ ಹೊಡೆಯುತ್ತ ಅಳುವ ಆರ್ತಸ್ವರದಲ್ಲಿ ಆತನು ಓದುವ ಶ್ಲೋಕಗಳನ್ನು ಆಕೆಯು ಕೇಳುತ್ತಿದ್ದಳು. ಆತ ಕೆಲವು ಅಕ್ಷರಗಳನ್ನು ನುಂಗುತ್ತಿದ್ದ. ಪಾರಾಯಣ ಮಾಡಬೇಕಾಗಿದ್ದ ಶ್ಲೋಕಗಳ ಸಂಖ್ಯೆ ಮುಗಿಯಬೇಕಷ್ಟೇ ? ಉಸಿರು ಸಾಲದೆ ಕೆಲವನ್ನು ಎಳೆದೆಳೆದು ರಾಗ ತೆಗೆದು ಹೇಳುತ್ತಿದ್ದ. ಆಗಲೆ ಆವನು ಕೊಂಚ ವಿಶ್ರಾಂತಿ ಪಡೆಯುತ್ತಿದ್ದುದು. ಆದರೆ ನಿಲ್ಲುವುದೆಂದರೆ ಸುಳ್ಳು, ವೇಗದಲ್ಲಿ ಅಂತರವು ಇಷ್ಟೆ. ಒಮ್ಮೊಮ್ಮೆ ತನ್ನ ಬಾಯಿನೊಂದ ತಪ್ಪನ್ನು ಶಬ್ದದ ಮೇಲೆ ಹಾಕಿದಂತೆ ಅದನ್ನು ಹೊತ

* ಪೆರೆಝ್ ಎಂಬ ಯಿಡಿಶ್ ಕತೆಗಾರನ 'The womar's wrath' ಎಂಬ ಕತೆಯ ಆಧಾರದಿಂದ.

CC-0. Jangamwadi Math Collection. Digitized by eGangotri

ಯುವವರ ಹಾಗೆ ಒತ್ತಿ ಕೂಗುತ್ತಿದ್ದ. ಮತ್ತೊಮ್ಮೆ, ಮನಸ್ಸಿನಲ್ಲಿಯೇ ಪತನಮಾಡಿ ಮುಂದೆಮುಂದೆ ಹಾರುತ್ತಿದ್ದ. ಕಟ್ಟಾ ಹಾರುವ ! ಕೇಳಬೇಕೆ ! ಇನ್ನೊಮ್ಮೆ, ಜೀವ ಬೇಸತ್ತು ಬಾಳುವೆ ಮಾಡುವವರ ಹಾಗೆ ಉಂಯ್ ಉಂಯ್ ಎನ್ನುತ್ತ ತಪ್ಪು ತಪ್ಪು ಉಚ್ಚರಿಸುತ್ತ ಸಾಗುತ್ತಿದ್ದ. ಸುಮ್ಮನಿರುವಂತಿಲ್ಲ–ಇದು ಅವನ ಪಾರಾಯಣದ ಮುಖ್ಯ ಲಕ್ಷಣ. ಬಾಯಿಯಂತೆ ಕೈಗಳೂ ಸುಮ್ಮನಿರಲ್ಲ. ಬೆವರೊರಸುವುದಕ್ಕೆ ಮೈಮೇಲಿನ ಪಂಚೆಯನ್ನೊಂದು ಕೈ ಜಗ್ಗುವುದು, ಇನ್ನೊಂದು ಹಾಳೆ ತಿರುವಿ ಹಾಕುವುದು. ಕೂಡಲೆ ಒಂದು ಕೈ ತಲೆಯ ಮೇಲೆ, ಇನ್ನೊಂದು ತೊಡೆಯ ಮೇಲೆ. ಯಾವ ಕ್ಷಣದಲ್ಲಿ ಯಾವ ಕೈಯು ಎಲ್ಲಿದೆ ಎಂಬುದನ್ನು ಹೇಳುವುದು ಕಷ್ಟ.

ಇದೆಲ್ಲ ನಡೆವಾಗ ಹಣೆಯೂ ಅಷ್ಟೇ ಚಪಲವಾಗಿತ್ತು. ಒಮ್ಮೆ ಉದ್ದ ಮಡಿಕೆ, ಒಮ್ಮೆ ಅಡ್ಡ ಮಡಿಕೆ, ಈ ಆಟದಲ್ಲಿ ಹುಬ್ಬುಗಳು ಹಿಗ್ಗಿ ಸೊರಗಿ 'ನಮ್ಮ ಹಣೆಯಬರೆಹ !' ಎನ್ನುತ್ತಿದ್ದುವು. ಕೂಡಲೆ–ಎದೆಯಲ್ಲಿ ನೋವೊಂದು–ನೋಟವು ಅಲ್ಲಿ ನೆಟ್ಟಿತು. ಆದರೆ ಪಾರಾಯಣವು ನಡೆದೇ ಇದ್ದಿತು. ಇದಾದೊಡನೆ ಎಡಕ್ಕೆ ತಲೆಬಾಗಿಸಿ ಮೂಗಿನ ಎಡದ ಸೊಳ್ಳೆಯ ಮೇಲೆ ಕೈಯಿಟ್ಟು ಬೇಕುಬೇಕಾಗಿ ಸೀನುವುದು ಬೇರೆ. ನಡುನಡುವೆ ಒಂದು ಚಿಮುಟಿಗೆ ನಸ್ಯ ಸೇವಿಸಿ ಮೈಯಲುಗಿಸಿ ಅನುನಾಸಿಕಮಯವಾದ ದನಿಯಿಂದ ಜೋರಾದ ಪಾರಾಯಣಕ್ಕೆ ಮತ್ತೆ ಮೊದಲು. ಆ ದನಿಗೆ ಹೊರಸು ಚಿರ್ ಎನ್ನುತ್ತಿತ್ತು, ತೊಟ್ಟಿಲು ಕಿರ್ ಎನ್ನುತ್ತಿತ್ತು.

ಕೂಸು ಮಾತ್ರ ಏಳಲೊಲ್ಲದು. ಇವೆಲ್ಲ ಸ್ವರಗಳು ಅದಕ್ಕೆ ತೀರ ಪರಿಚಿತವಾಗಿದ್ದುವು. ಆಕೆ ಅಷ್ಟೊಂದು ವಯಸ್ಸಾಗಿರದಿದ್ದರೂ ಮೆಯ್ಸೋತು ಮುದುಡಿ ಮುಪ್ಪಿನವಳಾಗಿ ಹೋದವಳು – ಕುಳಿತಲ್ಲಿಯೇ ಪಾರಾಯಣ ಪೀಯೂಷವನ್ನು ಹಾಗೇ ಕುಡಿಯುತ್ತಿದ್ದಳು. ಗಂಡನಲ್ಲಿ ನೆಟ್ಟ ನೋಟವನ್ನು ಆಕೆ ಕಿತ್ತಲಿಲ್ಲ. ಅವನ ಪ್ರತಿಯೊಂದು ಉಚ್ಚಾರವನ್ನೂ ಕಿವಿಯಿಂದ ಹಿಡಿಯುವಳು; ಆಗಾಗ ಉಸಿರು ಬಿಡುತ್ತಿದ್ದಳು – ಎಂಬುದೇನೋ ನಿಜ. ಅವನು ಆ ಲೋಕಕ್ಕೆ ಯೋಗ್ಯನಾದಷ್ಟೇ ಈ ಲೋಕಕ್ಕೂ ಯೋಗ್ಯನಾಗಿದ್ದರೆ, ಇಲ್ಲಿ – ಇಲ್ಲಿಯೂ– ಇಲ್ಲಿಯೂ ಸಹ–ಆಕೆ ಸುಖಪಡುತ್ತಿದ್ದಳು.

'ಹೋಗಲಿ ತಾಯೀ !' ಆಕೆ ತನ್ನನ್ನು ತಾನೇ ಸಮಾಧಾನ ಮಾಡಿಕೊಳ್ಳುತ್ತಿದ್ದಳು. 'ಮರ್ಯಾದೆಯ ಮಾತು ಯಾರಿಗೆ ಬೇಕಾಗಿದೆ ? ಪ್ರತಿಯೊಬ್ಬರು ಎರಡೂ ಸುಖವನ್ನು ಹೊಂದುವುದಿಲ್ಲ !'

ಆಕೆ ಕೇಳುತ್ತಲೇ ಇದ್ದಾಳೆ; ಆಕೆಯ ಮುದುಡಿದ ಮೋರೆಯು ನಿಮಿಷಕ್ಕೊಮ್ಮೆ ಬದಲಾಗುತ್ತಿದೆ; ಆಕೆ ಗಾಬರಿಯೂ ಆಗಿದ್ದಾಳೆ; ಒಂದು ಕ್ಷಣದ ಹಿಂದೆ ಅದೇ ಮೋರೆ ಹಿಗ್ಗಿನಿಂದ ಹೊಳೆಯುತ್ತಿತ್ತು. ಈಗ ಇಂದು ಗುರುವಾರ ಎಂದು ನೆನಪಾಯಿತು; ಶುಕ್ರವಾರದ ಹಬ್ಬಕ್ಕೆ ಹೋಳಿಗೆ ಮಾಡಲು ಒಂದು ಕಾಳು ಗೋದಿಯೂ ಮನೆಯಲ್ಲಿರಲಿಲ್ಲ. ಅವಳ ಮೋರೆಯ ಮೇಲಿನ ಬೆಳಕು ಸ್ವಲ್ಪಸ್ವಲ್ಪವಾಗಿ ಅಡಗತೊಡಗಿತು. ಮುಗುಳು ನಗೆಯು ಬಾಡಿತು, ಕಾಡಿಗೆ ಮುಸುಕಿದ ಕಿಟಕಿಯೊಳಗಿಂದ ಹೊರಗೆ ನೇರವಾಗಿ ನೋಡಿದಳು, ಸೂರ್ಯನು ಕಂಡನು. ಹೊತ್ತು ಏರ ತೊಡಗಿದ್ದಿತು. ಮನೆಯಲ್ಲಿ ಒಂದು ಬಟ್ಟಲ ತುಂಬ ಬಿಸಿನೀರು ಕೂಡ ಇಲ್ಲ. ಅವಳಕೈಯೊಳಗಿನ ಸೂಜಿಯು ತಡೆಯುತ್ತಲಿದ್ದಿತು. ಒಂದು ಬಗೆಯ ನೆರಳು ಅವಳ ಮೋರೆಯ ತುಂಬ ಹಬ್ಬುತ್ತಲಿದ್ದಿತು. ಕೂಸಿನ ಕಡೆಗೆ ಕಣ್ಣಿಕ್ಕಿದಳು, ಅದೇನು ಅಷ್ಟು ಗಡದ್ದಾಗಿ ಮಲಗಿರಲಿಲ್ಲ, ಬೇಗನೆ ಏಳುವಂತಿದ್ದಿತು. ಕೂಸು ಬೇನೆಗೊಳಕ, ಆದರೆ ಅದಕ್ಕೆ ಕುಡಿಯಲು ಒಂದು ತೊಟಕು ಹಾಲೂ ಇರಲಿಲ್ಲ. ಅವಳ ಮೋರೆಯ ನೆರಳು ಕತ್ತಲೆಯ ಸ್ವರೂಪ ತಾಳಿತು. ಸೂಜಿದಾರಗಳು ನಡುಗಿದುವು. ಹೇಗೇ ಹೇಗೋ ಹೊಲಿಗೆ ಬೀಳತೊಡಗಿತು.

ಇದರಲ್ಲಿಯೆ ಎಡವಿ ಬಿದ್ದರೆ ಕೃಷ್ಣಾಷ್ಟಮಿಯೆಂದು ಅವಳ ಧ್ಯಾಸಕ್ಕೆ ಬಂದಿತು. ನೆನಪು ಮುಂದೆ ಸಾಗಿ, ಆಕೆಗೆ ಒತ್ತೆ ಬಿದ್ದಿರುವ ಮೂಗಬೊಟ್ಟು ಬೆಂಡೋಲೆಗಳು ಮನದ ಮುಂದೆ ಬಂದುವು. ಮಾರಿಹೋದ ಪಟ್ಟೆಯ ನೆನಪಾಯಿತು. ಈಗಂತೂ ಸೂಜಿಯು ಹಾದಿ ತಪ್ಪಿದ ಹುಚ್ಚನಂತೆ ಎತ್ತೆತ್ತಲೋ ಹೊಲಿಯತೊಡಗಿತು. ಹಣೆಯು ಮಬ್ಬು ಗುಡುಗುಮಳೆಯ ಮೋಡದಂತಾಯಿತು. ಒಳನೆಟ್ಟ ಕಿರಿಯಕಂಗಳಲ್ಲಿ ಮಿಂಚುಗಳು ಮಿಸುಕಾಡುತ್ತಿದ್ದುವು.

ಆತನು ! ಪ್ರಭು ಕುಳಿತಿದ್ದಾನೆ, ಆ ಗುಡುಗು ಮಳೆಯ ಪರಿವೆಯಿಲ್ಲದೆ ಪತನವನ್ನು ನಡೆಯಿಸಿಯೇ

CC-0. Jangamwadi Math Collection. Digitized by eGangotri

ಇದ್ದಾನೆ. ಅವಳು ಕೈಯೊಳಗಿನ ಕುಂಚಿಗೆಯನ್ನು ನೆಲಕ್ಕೆ ಚೆಲ್ಲಿದುದನ್ನೂ ಎರಡು ಕೈಗಳಿಂದ ಲಟಕುಮುರಿಯುವುದನ್ನೂ ಅವನೇನು ನೋಡಲಿಲ್ಲ. ಆಕೆಯ ಹಣೆ ಮಿಗಿಲಾದ ದುಃಖದಿಂದ ಮುದುಡಿತು; ಒಂದು ಕಣ್ಣು ಮುಚ್ಚಿದಳು, ಒಂದರಿಂದ ಆ ಪಂಡಿತ ಗಂಡನನ್ನು ನೋಡತೊಡಗಿದಳು. ಆ ನೋಟವು ಅವನ ಮೈನರಗಳಲ್ಲಿ ನಡುಗು ಹುಟ್ಟಿಸುವಂತಹದು ! ಆದರೆ ಅದಾವುದನ್ನೂ ಅವನು ನೋಡಲಿಲ್ಲ. ಆಕೆಯ ಒಣಗಿದ ತುಟಿಗಳು ನಡುಗುವುದನ್ನೂ ಹಲ್ಲುಗಳು ಕರಕರಿಸುವುದನ್ನೂ ಅವನು ನೋಡಲೇ ಇಲ್ಲ. ತನ್ನೆಲ್ಲ ಶಕ್ತಿಯಿಂದ ಆಕೆ ತಡೆಯಬೇಕೆಂದಳು. ಆದರೆ ಬಿರುಗಾಳಿಯು ಒಳವೊಳಗೆ ಕುದಿಯನ್ನು ಹೆಚ್ಚಿಸುತ್ತಿದೆ. ಮೋಡಗಳು ಕೂಡಿಕೊಳ್ಳುತ್ತಿವೆ. ಸ್ವಲ್ಪ ತಡೆದರೆ ಸಾಕು, ಅದು ಸ್ಫೋಟವಾಗುವುದು.

ಆ ಸ್ವಲ್ಪ ಸಂಗತಿಯೂ ಆಗಿ ಬಿಟ್ಟಿತು.

ಅವನು ಅದೇ ಭಾರತದ ಒಂದು ಶ್ಲೋಕವನ್ನು ಹೆಂಡತಿಗೆ ತಿಳಿಸಬೇಕೆಂದು ಭಾಷಾಂತರ ಮಾಡುತ್ತಿದ್ದನು. "ಅದರಿಂದ ನಾವು ಕಲ್ಪಿಸುವುದೇನೆಂದರೆ...." ಅವನು ಮುಂದೇನೋ ಅನ್ನುವಷ್ಟರಲ್ಲಿ 'ಕಲ್ಪಿಸು' ಶಬ್ದವು ಅವಳಿಗೆ ಸಾಕಾಯಿತು, ಅವಳೆದೆಯ ಮದ್ದಿಗೆ ಅದು ಹೊತ್ತಿಸಿದ ಕೊಳ್ಳಿಯಾಯಿತು. ಒಂದು ಕ್ಷಣದಲ್ಲಿ ಅದು ಉರಿಗೊಂಡಿತು. ಅವಳ ಗಟ್ಟಿತನವು ಕೈಬಿಟ್ಟಿತು. ಆ ಖೋಡಿ ಶಬ್ದವು ಬಿರುಕು ಬಿಡಲು ಕೆರೆಯೊಡೆದು ಎಲ್ಲವನ್ನೂ ಕೊಚ್ಚಿಕೊಂಡು ಹೋಯಿತು.

'ಕಲ್ಪಿಸು—ಅಲ್ಲವೇ ? ನೀವೆನ್ನುವದು ಕಲ್ಪನೆ ! ಹೌದು, ಜಗತ್ತಿನ ತಂದೆಯೆ ನೀನೂ ! ಕಲ್ಪಿಸಲ್ಪಟ್ಟವನು.' ಸಿಟ್ಟಿನಿಂದ ದನಿಯು ಗಡುಸಾಗಿ ಆಕೆ ಕೂಗಿದಳು. 'ನಿನ್ನನ್ನು ಕಲ್ಪಿಸಿರಬಹುದು ! ಹೌದು ! ನಿನ್ನನ್ನು !' ಹಾವಿನಂತೆ ಆಕೆ ಬುಸುಗುಟ್ಟಿದಳು. 'ಕೃಷ್ಣಜಯಂತಿ ಬಂದಿತು – ಗುರುವಾರ – ಕೂಸಿಗೆ ಬೇನೆ—ಒಂದು ಹನಿ ಹಾಲಿಲ್ಲ ಅಯ್ಯೋ !'

ಅವಳ ಬಿಸಿಯುಸಿರು ಹೊರಚಾರಿತು. ಸೊರಗಿ ಹೋದ ಅಂಗಾಂಗಗಳೂ ಸುಯ್ದುಗ್ಗರೆದುವು. ಕಣ್ಣು ಮಿಂಚಿದುವು.

ಕಲ್ಲಾದವನಂತೆ ಅವನು ಕುಳಿತಿರುವ; ತಟ್ಟನೆ ಎದ್ದು ಬೆದರಿ ಕಂಗೆಟ್ಟು, ಬಾಗಿಲ ಕಡೆಗೆ ಸಾಗಿದನು. ಬಾಗಿಲದ ಬಳಿಯಲ್ಲಿ ಆಗ ಅವಳನ್ನು ಎದುರಿಸಿ ನಿಂತು, ತಾಪದಿಂದ ಕೈ ನಾಲಗೆ ಎಲ್ಲಾ ಅಷ್ಟೇ ನಿರ್ಬಲವಾಗಿರುವುದನ್ನು ನೋಡಿದನು. ಅವನ ಕಣ್ಣು ಸಣ್ಣಾದುವು, ತನ್ನ ಪಂಜೆಯ ತುದಿಯನ್ನು ಮುಂದಿನ ಹಲ್ಲುಗಳ ನಡುವೆ ಸೇರಿಸಿ, ಸ್ವಲ್ಪ ಹಿಂಜರಿದು ನಿಡುಸುಯ್ದು ಆತ ಗುಣುಗುಣು ಆಡಿದನು.

'ಕೇಳು, ಹೆಂಗಸೇ, ಪರಮಾರ್ಥವೆಂದರೆ ನಿನಗೆ ಗೊತ್ತೇ? ಇದೇನು ನಿನ್ನದು ?—ಗಂಡನನ್ನು ಶಾಂತವಾಗಿ ಪಾರಾಯಣ ಮಾಡಲಿಕ್ಕೆ ಬಿಡದಿರುವುದು? ಯಾವಾಗಲೂ ಹೊಟ್ಟೆಪಾಡಿನ ಮಾತನ್ನೇ ಆಡುತ್ತ ತೊಂದರೆಕೊಡುವುದು? ಹೇಳು, ಹಕ್ಕಿಗಳಿಗೆ ಯಾರು ಹೊಟ್ಟೆಗೆ ಹಾಕುತ್ತಾರೆ ? ಯಾವಾಗ ನೋಡಿದರೂ ದೇವರಲ್ಲಿ ಈ ಅಸಂಪಿಕೆ; ಈ ಮೋಹದ ಬಲೆಯಲ್ಲಿ ಬೀಳುವಿಕೆ; ಈ ಜಾಪಸಲುವಾಗಿ ಆಲೋಚನೆ........ಹುಚ್ಚಿ! ದುಷ್ಟಸ್ವಭಾವದ ಹೆಣ್ಣೇ ! ಗಂಡನಿಗೆ ಒದಗೊಡುವಂತಿಲ್ಲ ! ನೀನು ಹೀಗೆ ತಾಳತಪ್ಪಿದರೆ ನರಕಕ್ಕೆ ಹೋಗುವೆ........!

ಉತ್ತರದೊರೆಯದೆ ಅವನು ಇನ್ನಿಷ್ಟು ಹುಮ್ಮಸ್ಸು ಹೊಂದಿದನು. ಆಕೆಯ ಮುಖವು ಹೆಚ್ಚೆಚ್ಚು ಬಾಡತೊಡಗಿತು. ಆಕೆ ಹೆಚ್ಚೆಚ್ಚು ನಡುಗಿದಳು. ಆಕೆ ಬಾಡಿದಂತೆ ನಡುಗಿದಂತೆ ಇವನ ಧ್ವನಿಯು ಸಮನಾಗಿ ಸಾಗಿದ್ದಿತು.

'ನರಕ ! ಬೆಂಕಿ ! ನಾಲಗೆಯಿಂದ ಶೂಲಕ್ಕೇರಿಸುವರು ! ಯಮನ ಸಭೆಯಿಂದ ನಾಲ್ಕು ಮರಣ ದಂಡನೆಗಳು !'

ಅವಳು ತೆಪ್ಪಗೆ. ಅವಳ ಮೊಗವು ತರಗೆಲೆಯಂತೆ ಸಪ್ಪಗೆ.

ತಾನು ತಪ್ಪುಮಾಡುತ್ತಿರುವೆನೆಂದು ಅವನಿಗೆ ಹೊಳೆಸಿತು. ಇಷ್ಟು ನಿಷ್ಠುರನಾಗಲು ಕಾರಣವಿಲ್ಲ, ಆಕೆಯ ದುಃಸ್ಥಿತಿಯ ದುರುಪಯೋಗವನ್ನು ನಾನು ಮಾಡುತ್ತಿರುವೆನೆಂದು ಅವನು ತಿಳಿದುಕೊಂಡನು. ಆದರೆ ಅವನು ಶಿಖರಕ್ಕೆ ಮುಟ್ಟಿದ್ದ. ಎಸರುಎಸರಾಗಿ ಕುದಿಯುತ್ತಿದ್ದ ಕುದಿ ಹಿಂದೆಗೆಯುವುದೆಂದರೆ ಅಸಾಧ್ಯ.

CC-0. Jangamwadi Math Collection. Digitized by eGangotri

'ನಿನಗೆ ಅರಿವುಂಟೇ ?' ಅವನು ಜಬರಿಸಿದನು. ಶಿಲಾದಂಡವೆಂದರೇನು ? ಶಿಲಾದಂಡವೆಂದರೆ ಕಲ್ಲೆಸೆದಾಟ, ತಗ್ಗಿನಲ್ಲಿ ನೂಕಿ ಕಲ್ಲುಗಳಿಂದ ಮುಚ್ಚುವುದು ! ದೇಹದಾಹ – ಸುಡುವುದು; ಒಡಲಲ್ಲಿ ಕಾದಸೀಸ ಹಾಕಿ ಸುಡುವುದು ! ತಲೆದಂಡ– ತಲೆಹಾರಿಸುವುದು, ಕತ್ತಿಯ ಒಂದು ಜೀಸಾಟದಿಂದ ರುಂಡವನ್ನು ಬೇರೆ ಮಾಡುವುದು ! (ಹಾಗೆ ಅವನು ಕುತ್ತಿಗೆಗೆ ಕೈಯಿಕ್ಕಿ ತೋರಿಸುವವನು) ಆ ಮೇಲೆ ಉರುಲು ! ಉರುಲು ! ಕೇಳಿಸಿತೇ ? ತಿಳಿಯಿತೇ ? ಈ ಎಲ್ಲ ನಾಲ್ಕು ಶಿಕ್ಷೆಗಳು ಪರಮಾರ್ಥವನ್ನು ಕಡೆಗಣ್ಣಿನಿಂದ ನೋಡಿದುದಕ್ಕೆ ! ಪರಮಾರ್ಥವನ್ನು !'

ತನ್ನ ಬಲಿಹೆಣ್ಣಿಗೆ ಕೊಡುವ ವೇದನೆಗಾಗಿ ಅವನಿಗೆ ಮರುಕವುಂಟಾಯಿತು. ಆದರೆ ಅವಳ ಮೇಲೆ ತನ್ನ ಅಧಿಕಾರವನ್ನು ನಡೆಯಿಸಲಿಕ್ಕೆ ಬಂದಿರುವುದು ಇದೇ ಸಲ. ಅದು ತಲೆಗೇರಿತು. ಹುಚ್ಚು ಹೆಂಗಸು ! ಅವಳನ್ನು ಹೆದರಿಸುವುದೆಂದರೆ ಇಷ್ಟು ಸುಲಭವೆಂದು ಅವನಿಗೆ ತಿಳಿದಿರಲಿಲ್ಲ.

ಅವನು ಮತ್ತೆ ಕೂಗಿದನು 'ಪರಮಾರ್ಥವನ್ನು ಕಡೆಗಣ್ಣಿನಿಂದ ನೋಡುವುದರಿಂದ ಅದು ಬರುತ್ತದೆ.' ಇಲ್ಲಿಗೆ ಮುಗಿಯಿತು. ಏನು ನೇಮ ! ತನ್ನ ಪ್ರಜ್ಞೆ ತಿರುಗಿ, ಕಸಬರಿಗೆಯನ್ನೆತ್ತಿ ತಂದು ಆಕೆ ಹೊಡೆದರೆ ! ಅವನು ದೇವರ ಮಂಟಪಕ್ಕೆ ತಿರುಗಿ ಹೋಗಿ ಭಾರತವನ್ನು ಮುಚ್ಚಿಟ್ಟು ಕೋಣೆಬಿಟ್ಟು ತೆರಳಿದನು.

'ನಾನು ಅಭ್ಯಾಸದ ಮನೆಗೆ ಹೋಗುತ್ತೇನೆ !' ಎಷ್ಟೋ ತಗ್ಗಿದ ದನಿಯಲ್ಲಿ ಹಿನ್ನೋಡಿ ಹೇಳಿ, ಬಾಗಿಲ ಮುಚ್ಚುತ್ತ ಹೊರಬಿದ್ದನು.

ಆ ಎತ್ತರದ ದನಿ, ಬಾಗಿಲಕಡಕಡಾಟ, ಕೂಸನ್ನು ಎಬ್ಬಿಸಿದುವು. ಭಾರವಾದ ರೆಪ್ಪೆಗಣ್ಣು ತೆರೆದುವು, ಅರಗಿನ ಮೋರೆ ಹಿಸುಕಿತು, ಕೂಸು ಒಂದಿಷ್ಟು ಅತ್ತಿತು. ಆದರೆ ತನ್ನದೇ ತನಗೆ ಮಿಕ್ಕಿದ ಆಕೆ, ನೆಲಕ್ಕೆ ಹೊಲಿದುಕೊಂಡು ಕುಳಿತವಳು ಅದನ್ನು ಕೇಳಲಿಲ್ಲ.

ಕಡೆಗೆ ದಪ್ಪದನಿಯಲ್ಲಿ ಅವಳೆದೆಯಿಂದ ನುಡಿಗಳು ಬಂದುವು 'ಹು, ಹೀಗೇ ? ಹೀಗಿದೆಯೇ ? ಸರಿ. ಈ ಲೋಕವೂ ಇಲ್ಲ, ಆ ಲೋಕವೂ ಇಲ್ಲ. ಅವನೇನೆನ್ನುವ? ಉರುಲು, ಕಲ್ಲೆಸೆದಾಟ, ಸುಡುವುದು, ಕುತ್ತಿಗೆ ಹಿಸುಕುವುದು, ನಾಲಗೆಯಿಂದ ತೂಗಬಿಡುವುದು, ಸೀಸದಿಂದ ಸುಡುವುದು-ಯಾಕೆ ?-ಪರಮಾರ್ಥವನ್ನು ಅಲಕ್ಷಿಸಿದ್ದಕ್ಕೆ ಅಲ್ಲವೇ ?- ಉರುಲು, ಹಾ ! ಹಾ ! ಹಾ !' (ನಿರಾಶೆಯಿಂದ) 'ಹೌದು, ನನಗೆ.... ಉರುಲು.... ಬೇಕಾಗಿದೆ. ಆದರೆ ಅದು ಅಲ್ಲಿಯ ಉರುಲಲ್ಲ, ಇಲ್ಲಿಯ ಉರುಲು ಬೇಗನೆ ಬೇಕಾಗಿದೆ! ಯಾತಕ್ಕೆಂದು ತಡೆಯಬೇಕು?'

ಕೂಸು ಗಟ್ಟಿಯಾಗಿ ಅಳತೊಡಗಿತು. ಆದರೆ ಆಕೆಗೆ ಅದು ಕೇಳಿಸಲೆ ಇಲ್ಲವೇನೊ !

'ಹಗ್ಗ! ಹಗ್ಗ!' ಆಕೆ ಕೂಗುತ್ತ ಮೂಲೆ ಮೂಲೆಗೆ ದಿಟ್ಟಿಸಿ ನೋಡಿದಳು.

'ಹಗ್ಗವೆಲ್ಲಿದೆ ? ನನ್ನೊಂದು ಎಲುಬಿನ ಚೂರನ್ನು ಸಹ ಅವನು ಕಾಣಬಾರದು ! ಈ **ಒಂದು** ನರಕದಿಂದಂತೂ ನಾನು ಪಾರಾಗುವೆನು. ಅವನೂ ಮಾಡಿ ನೋಡಲಿ, ಒಮ್ಮೆ ತಾಯಿಯಾಗಿ ನೋಡಲಿ, ಅದು ಹೇಗೆ ಇರುತ್ತದೆ ನೋಡಲಿ ! ನನಗೆ ಸಾಕಾಯ್ತು ! ಹೊಟ್ಟೆ ತುಂಬಿತು ! ಇನ್ನು ನನಗೆ ಪ್ರಾಯಶ್ಚಿತ್ತ! ಕೊನೆ ! ಕೊನೆ ! ಒಂದು ಹಗ್ಗ, ಹಗ್ಗ !'

ಅವಳ ಕೊನೆಯ ಕೂಗು ಕಿಚ್ಚಿನಲ್ಲಿ ಬಿದ್ದವರು ಬಿಡಿಸಲಿಕ್ಕೆ ಕೂಗಿದಂತಿದ್ದಿತು. ಎಲ್ಲಿಯೋ ಒಂದು ನೇಣು ಇರಬೇಕೆಂದು ಅವಳಿಗೆ ಜ್ಞಾಪಕಕ್ಕೆ ಬಂದಿತು. ಹೌದು, ಹೊರಸಿನ ಸೀಳಿದ ಕಾಲೊಂದನ್ನು ಕಟ್ಟಲಿಕ್ಕೆ ಬಳಸಿದ ಹಗ್ಗವಿತ್ತು. ಆದಿನ್ನೂ ಅಲ್ಲೇ ಬಿದ್ದಿದ್ದಿತು. ಅವಳು ಓಡಿ ಹೋಗಿ ಆ ಹಗ್ಗವನ್ನು – ತನ್ನ ಪ್ರಾಣರಕ್ಷಕನನ್ನು ಕಂಡು, ಮೇಲೆ ಬಿರುಬಿರುನೆ ನೋಡಿದಳು. ತೂಗು ದೀವಿಗೆಯನ್ನು ಜೋತುಬಿಡುತ್ತಿದ್ದ ಆ ಕಬ್ಬಿಣದ ಬಳೆಯಿದ್ದಿತು. ಪೆಟ್ಟಿಗೆಯ ಮೇಲೆ ಪೆಟ್ಟಿಗೆಯಿಟ್ಟು ಏರಿ ನಿಲ್ಲಬಹುದಾಗಿದ್ದಿತು.

ಆಕೆ ಏರಿ ನಿಂತಳು.

ಆದರೆ ಎದ್ದು ಕಕ್ಕಾಬಿಕ್ಕಿಯಾದ ಕೂಸು – ಅಶಕ್ತವಿದ್ದರೂ–ತೊಟ್ಟಿಲ ತುದಿಗೆ ಮೊಳಕಾಲ ಮೇಲೆ ಕುಳಿತು ಹೊರಕ್ಕೆ ಬರಲಿಕ್ಕೆ ಹವಣಿಸುವಂತೆ ಕಂಡಿತು.

'ಅಮ್ಮಾ, ಅಮ್ಮಾ' ಅದು ಸಣ್ಣಾಗಿ ಅಳುತ್ತಿದ್ದಿತು.

ಹೊಸದೊಂದು ಸಿಟ್ಟಿನ ಭರವು ಅವಳ ಮೈತುಂಬಿತು.

CC-0. Jangamwadi Math Collection. Digitized by eGangotri

ನೇಣನ್ನು ಅವಳು ಬೀಸಿ ಒಗೆದಳು. ಪೆಟ್ಟಿಗೆಯಿಂದ ಕೆಳಕ್ಕೆ ಹಾರಿದಳು. ಓಡುತ್ತ ಕೂಸಿನ ಬಳಿಗೆ ಹೋಗಿ, ದುಬಟಿ ಹೊದಿಸಿ ಬಲವಂತದಿಂದ ಅದನ್ನು ಮತ್ತೆ ಒರಗಿಸಿ, ಒದರಿದಳು.

' ಶೋಡೀ ! ಉರಲುಹಾಕಿಕೊಳ್ಳಲೂ ನನ್ನನ್ನು ಬಿಡುವದಿಲ್ಲ ! ನೆಮ್ಮದಿಯಿಂದ ನಾನು ಉರಲುಹಾಕಿಕೊಳ್ಳುವಂತಿಲ್ಲ ! ಮೊಲೆ ತಿನ್ನಬೇಕೆನ್ನುತ್ತದೆ ! ಅದರಿಂದೇನು ಹಿತ ? ಅದರಲ್ಲೇನಿದೆ ? ವಿಷ, ವಿಷ, ಬರೀ ವಿಷವನ್ನು ನೀನು ಕುಡಿಯುವೆ-ನಾನು ಹೇಳುತ್ತೇನೆ.'

' ತಗೋ ಹಾಗಾದರೆ ಆಸೆಬುರಕ ! ' ಅದೇ ಉಸಿರಿನಲ್ಲಿ ಕೂಗಿ ಆಕೆ ತನ್ನ ಒಣಗಿಹೋದ ಮೊಲೆಯನ್ನು ಅದರ ಬಾಯಲ್ಲಿ ತುರುಕಿ ಅಂದಳು.

' ತಗೋ ಹಾಗಾದರೆ, ಹೀರಿಬಿಡು-ಕ....ಚ್ಚ....!'

## ಸಾವೆ !

ಶ್ರೀ. ಈಶ್ವರ ಸಣಕಲ್ಲ ರಬಕವಿ

೧

ಮುಚ್ಚಿದಚ್ಚಿಗಳನ್ನು ಬಿಚ್ಚಿ ನಾ ನಿರುಕಿಸುವೆ-
ನಿಚ್ಚವೂ ದುಡಿದುಡಿದು ದಣಿದು ಸೋತಿಹ ಜಗವು
ಇಚ್ಛೆಯೊಲು ಮೆಚ್ಚುವಡೆದೊರಗಿರಲು ತಣಿವಿನೊಳು
ಒಚ್ಚನೆಯದರ ಮೇಲೆ ಪಡಿನೆಳಲ ಕೆಡಹುತಲಿ

ಮಿಂಟುತಲಿ ಬಳಲಿಕೆಯು-
ನಂಟಿಸುತ ದಿಕ್ತಟವ,
ಗೆಂಟುಗೆಂಟುಗಳನ್ನು
ಈಂಟಿ, ಬಿಡುಗಣ್ಣಳಲಿ

ಮುಗಿಲೊಳಗೆ ನೋಡುತಲಿ, ಜಗದೊಳಗೆ ನಡೆಯುತಲಿ
ಬಗೆಬಗೆಯ ಬಗೆಗಳಲಿ ಬರುವೆ ಜೀವಿಗಳ ಬಳಿ;

೨

ನಟ್ಟಿರುಳಿನೊಳು ಸಾವೆ, ನಿನ್ನ ರೂಪವ ಕಂಡೆ;
ನಿಟ್ಟಿಸುತ ಸುತ್ತಲೂ ನಿನ್ನ ಸವಿಯನು ಉಂಡೆ;
ಹುಟ್ಟಿನೊಳಗಿಹ ಹುಟ್ಟೆ, ನಿನ್ನಿಂದ ಹುಟ್ಟಿಸಿಡೆ
ಮುಟ್ಟಿಸುವ ಬಟ್ಟೆಯನು ಮರೆಮಾಡಿರುವ ಗುಟ್ಟೆ,

" ಕಟ್ಟುಕಟ್ಟಳೆಗಳನು
ಮೆಟ್ಟುತೀ ಬದುಗೆಯು
ಕೆಟ್ಟ ಚೆಲುವೆಲ್ಲವನು
ಒಟ್ಟುತಲಿ ಸಮತೆಯಲಿ

ಕುಟ್ಟುವುದು ನಿರ್ದಯದೊಳೆ " ನುತ ಜನ ಜಂಕಿಪುದು,
ತಟ್ಟಿ ಕರುಳನು ಸಾವೆ, ಕಂಬನಿಯ ಪುಟ್ಟಿಪುದು;

೩

ಸಿಶಿಯು ತನ್ನೊಳು ಹಗಲ, ದಣಿವು ತನ್ನೊಳು ಸೊಗಸ
ಬೆಸನ ತನ್ನೊಳು ಸೊಗಸನಿರಿಸಿ ಕೊಂಡೊಗೆಯುವೊಲ್
ಹೊಸ ಹುಟ್ಟ, ಹೊಸ ಬೆಳೆಯು, ಹೊಸ ಕಳೆಯ, ಹೊಸ ಮುದವ,
ಹೊಸ ಹೊಸದನೆಲ್ಲವನು ಹುದುಗಿಸುತೆ ನಿನ್ನೊಳಗೆ,

ಹಣೆಯ ಹೊತ್ತಿಗೆಯನ್ನು
ಕೊನೆವರೆಗೆ ಪರಿಪರಿಸಿ
ದಣಿದ ಬಾಳನು ನೀನು
ಗುಣವಡಿಸಲಾಗಮಿಸೆ,

ಆವ ಹೊತ್ತಿರಲೇನು ? ಆವ ಗೊತ್ತಿರಲೇನು ?
ಆವ ಹಾಡಿರಲೇನು ? ಆವ ಗುರಿಯಿರಲೇನು ?

CC-0. Jangamwadi Math Collection. Digitized by eGangotri

# ಯೌವನದ ಕನಸು

ಲೇಖಕ— 'ವಿನೀತ' ಶಿರಸಿ

ಜಗತ್ತಿನಲ್ಲೆಲ್ಲೆಲ್ಲಿಯೂ ತರುಣರ ಪುರೋಗಾಮಿ ವೃತ್ತಿಯು ಕಂಡುಬರುತ್ತಲಿದೆ. ಎಲ್ಲ ಕ್ರಾಂತಿಗಳಿಗೂ ತರುಣರೇ ಕಾರಣರು. ಭರದಿಂದ ಸಾಗಿದ ತರುಣರ ಆಕಾಂಕ್ಷೆಗಳಿಗೆ ಅಡ್ಡಿಯನ್ನೊಡ್ಡಲು ಯಾರಿಗೂ ಸಾಧ್ಯವಾಗಲಿಲ್ಲ. ಇತ್ತೀಚಿನ ತರುಣರಂತೂ ತೀರ ಹೊಸಬಗೆಯ ಸ್ವಪ್ನವೊಂದನ್ನೆ ಕಾಣುತ್ತಿದ್ದಾರೆ. ಜಗತ್ತಿನಲ್ಲಿ ಪ್ರತಿಕ್ಷಣಕ್ಕೂ ಗೊತ್ತಿಲ್ಲದೆ ಅನೇಕ ಸ್ಥಿತ್ಯಂತರಗಳಾಗುತ್ತವೆ. ಹಳೆಯದು ನಾಶವಾಗಿ ಹೊಸದರ ಉದ್ಭವವಾಗುತ್ತದೆ. ಮಾನವನಿಗೆ ಪ್ರತಿಕ್ಷಣ ಅನೇಕ ತೊಂದರೆಗಳು ಗಂಟುಬೀಳುತ್ತಿವೆ. ಅವುಗಳನ್ನು ಹರಿದೊಗೆಯುವ ಪ್ರಶ್ನೆಯು ಉಭಯತರಿಗೂ ಸಾಮಾನ್ಯವಾಗಿದ್ದರೂ ಪದ್ಧತಿಯ ವಿಷಯವಾಗಿ ವೃದ್ಧ ಯುವಕರಲ್ಲಿ ಯುದ್ಧವು ನಡೆಯುತ್ತಲಿದೆ. ವೃದ್ಧರು ನಿರಾಶೆಯಿಂದ ಜಗತ್ತನ್ನು ನಿರೀಕ್ಷಿಸಿದರೆ ತರುಣರು ಮಹತ್ವಾಕಾಂಕ್ಷೆಯಿಂದ ನೋಡುತ್ತಿದ್ದಾರೆ. ಹಳೆಯ ಪದ್ಧತಿಗಳೆಲ್ಲವೂ ತರುಣರಿಗೆ ಬಂಧನ. ಹೊಸ ಕಲ್ಪನೆಗಳು ವೃದ್ಧರಿಗೆ ಭಾರ. ಸುಧಾರಣೆಗೆ ತರುಣರು ಕಾರಣ. ದೋಷಾವಿಷ್ಕರಣಕ್ಕೆ ವೃದ್ದರ ಉಪಯೋಗ; ಈ ರೀತಿ ನಡೆದ ತಿಕ್ಕಾಟವು ಈ ಶತಮಾನದಲ್ಲಿ ಭಯಂಕರ ರೂಪವನ್ನು ತಾಳಿದೆ. ಯುವಕರು ಅತ್ಯಂತ ಆತುರರಾಗಿರುವುದರಿಂದ ಬಹಿರಂಗವಾಗಿ ಬಂಡಾಯವನ್ನೆಬ್ಬಿಸಲು ಯತ್ನಿಸುವುದರಲ್ಲಿ ಆಶ್ಚರ್ಯವೇನಿದೆ? ಈ ಕಾಲ ಚಕ್ರದ ತಿರುಗುಮುರುಗದಿಂದ ಯಾವ ಸಮಾಜವೂ ನಿರ್ಬಂಧನೆಗಳೂ ಧರ್ಮಗಳೂ ಬದುಕಿ ಉಳಿಯಲಾರವು. ಇಷ್ಟು ರಭಸದಿಂದ ನಡೆದ ಈ ಯುವಕರ ಉತ್ಸಾಹವೇಗಕ್ಕೆ ತಡೆಹಾಕಲು ಯಾರಿಗೆ ಸಾಧ್ಯ?

ಯುವಕರ ಮನಸ್ಸಿನ ಓಘವು ನಿರುಪಯೋಗಿಯೆಂದು ವೃದ್ಧರ ನಂಬಿಗೆ. ಈ "ನಂಬಿಗೆ" ಯೇ ಜಗತ್ತನ್ನು ಹಾಳು ಮಾಡಿದೆಯೆಂದು ತರುಣರ ಉತ್ತರ. "ಸನಾತನ" ಪದ್ಧತಿಯು "ಪರಿಪೂರ್ಣ" ವಿದ್ದರೆ ನವೀನ ಆಕಾಂಕ್ಷೆಗಳು ಹೇಗೆ ಹುಟ್ಟುತ್ತಿದ್ದುವು? ಅದರಲ್ಲಿ ದೋಷವಿರಲಿಕ್ಕೆ ಬೇಕು. "ಅಪ್ಪಾ ಇದು ಕಲಿಕಾಲ" ಎಂದರೆ ತರುಣರು ನಂಬುವುದಿಲ್ಲ. ಅವರಿಗೆ ಪ್ರತಿಕ್ಷಣವೂ ಕೃತಯುಗವೇ! ಹಿಂದಿನದು ಕೃತಯುಗವಿದ್ದರೆ ಕಲಿಯ ಪ್ರವೇಶವಾದರೂ ಯಾಕಾಯಿತು? ನಮ್ಮ ಸಂಸ್ಕೃತಿಯು ಪರಿಪೂರ್ಣವಿದ್ದರೆ ಈಗಿನ ಅವನತಿಯಾದರೂ ಹೇಗೆ ಒದಗಿತು? "ಸನಾತನಧರ್ಮ" ವು ಚಿತ್ತಶಾಂತಿಯನ್ನೀಯುವುದಾದರೆ ಮತ್ತೆ ಸಂಶಯಗಳು ಯಾಕೆ ಹುಟ್ಟಿದುವು? ಸಮಾಜ ಬಂಧನವು ನಿಶ್ಚಿತವಿದ್ದರೆ ಅನೀತಿಗೆ ಆಸ್ಪದ ಹೇಗೆ ಸಿಕ್ಕಿತು? "ವೇದ" ವು ಪರಿಪೂರ್ಣಧರ್ಮಗ್ರಂಥವಿದ್ದರೆ ಉಳಿದುವುಗಳ ಅವಶ್ಯಕತೆ ಹೇಗೆ ಉಂಟಾಯಿತು? ಇವು ತರುಣರ ಸರಳ ಪ್ರಶ್ನೆಗಳು. ವೃದ್ಧರ ಉತ್ತರವೇ ಇದಕ್ಕೆ ಇಲ್ಲ.*ಅಯ್ಯೋ ಕಲಿಕಾಲಬಂತು; ನಮ್ಮ ಪೂರ್ವಜರು ದಡ್ಡರಲ್ಲ ಅವರು ಬರದಿಟ್ಟದ್ದು ಸುಳ್ಳಾದೀತೇ? ಎಂಬ ಅಡ್ಡತಿಡ್ಡ ಮಾತಿಗೆ ತರುಣರು ಕಿವಿಗೊಡುವುದೇ ಇಲ್ಲ. ಪೂರ್ಣಪ್ರಜ್ಞರಾದ ಪೂರ್ವಜರ ಹೊಟ್ಟೆಯಲ್ಲಿ ಅಪರಿಪೂರ್ಣರಾದ ಈಗಿನ ತರುಣರು ಹೇಗೆ ಹುಟ್ಟಿದರು? ಪೂರ್ಣದಿಂದ ಪೂರ್ಣವೇ ಉಂಟಾಗುತ್ತಿದೆಯಲ್ಲವೇ? ಕಾಲಚಕ್ರವು ತಿರುಗಿದಂತೆ ತಕ್ಕ ಬದಲಾವಣೆಗಳಾಗಲೇ ಬೇಕು. ಹಳೆಯದು "ಚಿನ್ನ" ವೆಂದು ಹಿತ್ತಾಳಿಗೆ ಅಪ್ಪಿಕೊಂಡರೆ ಹೇಗೆ ತಾನೇ ಒಪ್ಪೀತು? ಮುಂದಿನ ಕಾಲ

---

* ವೃದ್ಧರ ಉತ್ತರವಿದ್ದರೆ ಸ್ಪಷ್ಟವಾಗಿ--ಸಮಾಧಾನಕರವಾಗಿ ಬರೆಯಬೇಕೆಂದೇ ನಾವು ಈ ಲೇಖನಕ್ಕೆ ಎಡೆಕೊಟ್ಟಿದ್ದೇವೆ. ಇದಕ್ಕೆ ಉತ್ತರವಾಗಿ ಬರೆದ ಯುಕ್ತವಾದ ಬರೆಹವನ್ನು ಇನ್ನಾರಾದರೂ ಕಳುಹಿಸಿದಲ್ಲಿ ಅದಕ್ಕೆ ಎಡೆಯೀಯಲು ಜಯಕರ್ನಾಟಕವು ಸಿದ್ಧವಿದೆ.

ಸಂ. ಜ. ಕ.

CC-0. Jangamwadi Math Collection. Digitized by eGangotri

ವನ್ನು ಎದುರಿಸಲು ಶಕ್ತವಾಗದ ಹಿಂದಿನ ಕಾಲದ ಪರಿಸ್ಥಿತಿಯು ನಾಶವಾಗಲೇಬೇಕೆಂದು ತರುಣರ ಹಂಬಲ. ಯಾವುದೂ ಪರಿಪೂರ್ಣವಾಗಿಲ್ಲವೆಂದು ತಿಳಿದು ಪ್ರಗತಿ ಮಾರ್ಗ ಹಿಡಿಯಬೇಕೆಂಬುವುದೇ ಅವರ ಇಚ್ಛೆ.

ಮನುಷ್ಯನು ಸ್ವತಂತ್ರ ವೃತ್ತಿಯಲ್ಲಿಯೇ ಹುಟ್ಟಿ ಬೆಳೆಯುತ್ತಾನೆ. ಆದರೂ ಅವನ ಬೆಳೆವಣಿಗೆಯ ಭಾರವನ್ನು ವಹಿಸಿದ ಹಿರಿಯರು ಬಂಧನದ ಬೀಜಗಳನ್ನು ಅವನ ಸುತ್ತಲೂ ಪ್ರತಿಕ್ಷಣಕ್ಕೆ ಬಿತ್ತುತ್ತಾರೆ. ಕಾರಣ ಅದೇ ರೀತಿಯಲ್ಲಿ ಬೆಳೆದ ಅವನು ಅವನ್ನೇ ಪ್ರೀತಿಸಿ ಅವುಗಳಲ್ಲಿಯೇ ತಾದಾತ್ಮ್ಯನಾಗಿ ಹೋಗುತ್ತಾನೆ. ಇದೇ ಜಗತ್ತಿನ ದುಃಖಕ್ಕೆ ಕಾರಣ. ಇಲ್ಲಿಯವರೆಗೆ ಯುವಕರು ಇದನ್ನು ಸಹಿಸಿದರೂ ಈಗ ವಿಶಾಲ ವಿಶ್ವದೃಷ್ಟಿಯುಳ್ಳವರಾದುದರಿಂದ ಇನ್ನು ಮುಂದೆ ಸಹಿಸಲಾರದವರಾಗಿದ್ದಾರೆ. ಎಲ್ಲೆಲ್ಲಿಯೂ ತರುಣರು ಎಚ್ಚತ್ತು ಬಂಧನಗಳನ್ನು ಹರಿದೊಗೆದು "ಮುಕ್ತ" ರಾಗಬೇಕಾಗಿ ಯತ್ನಿಸುತ್ತಲಿದ್ದಾರೆ. ಈ ಯುದ್ಧದಲ್ಲಿ ವೃದ್ಧರು ಸೋಲಬೇಕು, ಇದೇ ಸಿಶ್ಚಿತವೆಂದು ತರುಣರ ಭಾವನೆ.

ಧರ್ಮಬಂಧನಗಳಿಂದ ಬಿಡುಗಡೆಯೊಂದುವುದೇ ಅವರ ಗುರಿ. ಯಾವ ಧರ್ಮವೂ ಪೂರ್ಣವಲ್ಲವೆಂದು ಅವರ ಮತ. ಅಸ್ತಿತ್ವದಲ್ಲಿದ್ದ ಯಾವ ಮತವೂ ವಿಶ್ವದ ಗೂಢವನ್ನು ಬಿಡಿಸಿಲ್ಲ. ಎಲ್ಲ ಧರ್ಮಗಳ ಗುಣಗಳನ್ನೊಳಗೊಂಡ "ವಿಶ್ವಧರ್ಮ" ವನ್ನು ಸ್ಥಾಪಿಸಬೇಕೆಂದು ಅವರ ಕಾಮನೆ. ಯುವಕರು ಯಾವ ವೇದ 'ಶಾಸ್ತ್ರಪ್ರಮಾಣ' ಗ್ರಂಥಗಳನ್ನೂ ಮನ್ನಿಸುವುದಿಲ್ಲ. ಅವೆಲ್ಲವೂ ವಿಶ್ವಗೂಢವನ್ನು ಬಿಡಿಸಲು ಆದ ಪ್ರಯತ್ನಗಳೆಂದೇ ಅವರು ತಿಳಿದಿರುವುದರಿಂದ ಆ ದೃಷ್ಟಿಯಿಂದ ನಮ್ಮ ಮುಂದಿನ ಧ್ಯೇಯ ಸಾಧನೆಗಾಗಿ ಅವುಗಳನ್ನು ಭಾವಿಸಲು ಅಡ್ಡಿ ಇಲ್ಲ. ಆದರೆ ಅವುಗಳಲ್ಲಿಯೇ ನಮ್ಮ ಜೀವನದ ಧ್ಯೇಯದ ಇತಿಶ್ರೀಯಾಯಿತೆಂದು ತಿಳಿಯುವುದು ಶುದ್ಧ ಅಜ್ಞಾನವು. ಈಗ ಪ್ರಚಾರದಲ್ಲಿದ್ದ ಎಲ್ಲ ವಿಧಿಗಳೂ ಸಂಸ್ಕಾರಗಳೂ ಸ್ವಾರ್ಥಕ್ಕಾಗಿ ಕಲ್ಪಿಸಲ್ಪಟ್ಟಿವೆ. ದೇವರ ವಿಷಯಕ ನಮ್ಮ ಎಲ್ಲ ಕಲ್ಪನೆಗಳೂ ತಪ್ಪುತ್ತವೆ. ತರುಣರು ಯಾವ "ಅವತಾರ" ಗಳನ್ನೂ ನಂಬುವುದಿಲ್ಲ. ಅವರೆಲ್ಲರೂ ಆಯಾಕಾಲದ ಮಹಾಪುರುಷರೇ ಇದ್ದುದರಿಂದ ಅವರುಸುರಿದ ವಾಕ್ಯಗಳೂ ಗ್ರಂಥಗಳೂ ಮಾರ್ಗದರ್ಶಿಗಳೇ ಹೊರತು ಸಿದ್ಧಗ್ರಂಥಗಳಲ್ಲ. ಹಿಂದಿನ "ಶಾಸ್ತ್ರೀಯ" "ಅಪೌರುಷೇಯ" ಗ್ರಂಥಗಳ ಸಹಾ[ಯ]ದಿಂದ ವಿಶ್ವದ ಗೂಢವನ್ನು ಬಿಡಿಸಿ ತಿಳಿಸಲಿಕ್ಕೆಂದು [...]ರನ್ನು ಯುವಕರು ಆಹ್ವಾನಿಸುತ್ತಾರೆ. ಗೂಢವು ಇ[...] ಅಜ್ಞಾನತವಿದೆಯೆಂದೇ ತರುಣರು ಅದರ ಶೋಧ[...]ದ್ದಾರೆ. ಹಿಂದಿನ ಎಲ್ಲ ಆಚಾರ ಬಂಧನಗಳಲ್ಲಿ ತರು[...] ತಥ್ಯ ಕಾಣುವುದಿಲ್ಲ. ಮೇಲಾಗಿ "ವೈಷಮ್ಯ" [...]ಣೆಗೆ ಪುನರ್ಜನ್ಮವನ್ನೂ "ಆತ್ಮ" ದ ಸ್ಥಿರ ಅಸ್ತಿತ್ವ[...]ವನ್ನೂ ಮುಂದೊಡ್ಡುವುದನ್ನು ಅವರೆಂದಿಗೂ ಸ[...]ದಿಲ್ಲ. ನಂಬಿಗೆ- ವಿಶ್ವಾಸವೆಂಬ ಭ್ರಾಮಕವಿಕಾರ (ಮಾ[...]ಸಿಕ) ದಿಂದ ಹಾಕಲ್ಪಟ್ಟ ಎಲ್ಲ ಬಂಧನಗಳನ್ನೂ [...]ಗೆದು ಸರ್ವತಂತ್ರ ಸ್ವತಂತ್ರವಾದ "ವಿಶ್ವಧರ್ಮ" [...] ಶೋಧಿಸಿ ಜಗತ್ತಿನಲ್ಲಿ ಸುಖಶಾಂತಿಯನ್ನು ನೆಲೆ[...] ಬೇಕೆಂದು ಅವರು ಹಂಬಲಿಸುತ್ತಿದ್ದಾರೆ.

ಆದರೆ ಯುವಕರಿಗೆ ರೂಢಿಯ ಬಂಧನಗಳು [...]ಲ್ಲಿಯೂ ಅಡ್ಡ ಬರುತ್ತವೆ. ಜಾತಿಭೇದವು ಕಲಹದ [...]ವೆಂದೂ ಅನಾಗರಿಕತನದ ದ್ಯೋತಕವೆಂದೂ [...] ಭಾವಿಸಿದ್ದಾರೆ. ತರುಣರಿಗೆ ಸ್ವತಂತ್ರ-ಸ್ವೈರ ಸಂ[...] ಬೇಕು. ಕುಟುಂಬವು ಆಕಾಂಕ್ಷೆಗಳನ್ನು ಮುರಿ[...] ಕೋಲು- ಎಂದು ಅವರು ತಿಳಿಯುತ್ತಾರೆ. ಜಾತಿ[...] ಮತಿಹೀನತೆಯನ್ನು ತೋರಿಸುತ್ತದೆ. ನಿಜವಾದ [...]ದಲ್ಲಿ ಇವೆಲ್ಲಕ್ಕೆಡೆಯಿಲ್ಲ. ಯಾವ ವರ್ಗವೂ ಪ್ರ[...] ಪಡೆದು ಬಂದಿಲ್ಲ. ಪರಿಸ್ಥಿತಿಯ ಮೂಲಕವಾಗಿ ಈ [...]ಕರಣವು ಉಂಟಾಗಿದ್ದರೂ ಮುಂದೆ ಜಗತ್ತಿನಲ್ಲಿ [...]ಸ್ಥಳ ಸಿಗುವಂತಿಲ್ಲ. ನಿಜವಾದ ಸುಧಾರಣೆಯು [...] ಜಾತಿಯ ಕಲಹದಿಂದ ಆಗುವಂತೆ ಇಲ್ಲ. ಸಮಾಜ[...]ಗಳು ಸುಖಲಾಲಸೆಯ ಚಿನ್ಹ. ಜಾತಿಯ ಬಂಧ[...] ಅಹಂಕಾರಪ್ರತಿಷ್ಠೆಗಳ ಅಂಕಿತ; ಕುಟುಂಬ[...] ಹುಚ್ಚುನಂಬಿಗೆ ಹುಟ್ಟಿಸಿ ತನ್ನ ಜವಾಬ್ದಾರಿ[...] ತನ್ನ ಮಕ್ಕಳ ಮೇಲೆ ಹಾಕಿ "ನಿಶ್ಚಿಂತ" ನಾ[...]ದಾರಿ; ಎಂದು ತರುಣರು ತಿಳಿದಿದ್ದಾರೆ. ಈ ಬಂಧ[...] ಇದಕ್ಕೂ ಹೆಚ್ಚಿನ ಬೆಲೆ ಇಲ್ಲ. ಆದರೂ ಮಾನವ[...]ದಲ್ಲಿಯೇ ಜಾಗತಿಕಕ್ರಾಂತಿಯಾಗದ ಹೊರತು [...] ಮೇಲೆ ಹಾಕಲ್ಪಟ್ಟ ಜವಾಬ್ದಾರಿಯನ್ನು [...] ತರುಣರು ಮನಸ್ಸು ಮಾಡುವದಿಲ್ಲ, ಇದು ಅವ[...]

CC-0. Jangamwadi Math Collection. Digitized by eGangotri

ರತೆಯನ್ನು ತೋರಿಸುವುದಿಲ್ಲವೇ? ವೇದ-ಪುರಾಣ-ಧರ್ಮ ಗ್ರಂಥಗಳಲ್ಲಿ ಜಾತಿಯ ಬಂಧನಗಳು ಹೇಳಿವೆ; "ಭಗವಂತನೇ" ಈ ವರ್ಣಪದ್ಧತಿಯನ್ನು ನಿರ್ಮಿಸಿದ್ದಾನೆ ಎಂದು ವೃದ್ಧರು ಜೊಬ್ಬಿರಿದರೂ ಈ ಪ್ರಾಮಾಣ್ಯವನ್ನೇ ನಂಬದ ತರುಣರ ಮನಸ್ಸು ಹೇಗೆ ಶಾಂತವಾದೀತು ! ಯಾವ ಶಾಸ್ತ್ರೀಯಬುದ್ಧಿಯೂ ಇದನ್ನು ಸಿದ್ಧಗೊಳಿಸಲಿಕ್ಕಿಲ್ಲ. ಪಿತಾಪುತ್ರ, ಬಂಧುಬಳಗ, ಗಂಡಹೆಂಡತಿ, ಅಕ್ಕತಂಗಿ, ಜಾತಿಪಾತಿ, ಧರ್ಮಗಿರ್ಮ-ಈ ತರದ ಎಲ್ಲ ಬಂಧನಗಳೂ ಆ ಕಾಲಕ್ಕೆ ಸರಿ ಇದ್ದರೂ ಈಗ ಈ ಪದ್ಧತಿಗಳಲ್ಲಿ ಭಯಂಕರವಾದ ಸುಧಾರಣೆಯಾಗಿ ತರುಣರ ಮನಸ್ಸಿನ ಬಲವು ಬಿಡಿಯಾಗದಿದ್ದರೆ ಸಹಿಸಲಾರದ ಯುವಕರು ಬಂಡಾಯವೆಬ್ಬಿಸುವುದರಲ್ಲಿ ಆಶ್ಚರ್ಯವಿಲ್ಲ. ಇಷ್ಟು ಆತುರರಾದ ತರುಣರು ಬಂಧನಗಳನ್ನು ಕಡಿದುಹಾಕದೇ ಇರುವರೇ ?

ನೀತಿ-ಅನೀತಿ ಪಾಪ-ಪುಣ್ಯವೆಂಬ ಭೇದಗಳ ಈಗಿದ್ದ ರೀತಿಗಳನ್ನು ತರುಣರು ಮನ್ನಿಸುವುದಿಲ್ಲ. ಈ ಕಾಯ್ದೆಯಲ್ಲಿ ವಿಶಾಲವಾದ ಸ್ಥಿತ್ಯಂತರವಾಗಿದೆ. ಈ ಭೇದಗಳು ಸ್ವಾರ್ಥಾಂಧತೆ ತೋರಿಸುತ್ತವೆ. ಎಲ್ಲ ಅಥವಾ ವಿಶಿಷ್ಟವಾದ ವಸ್ತು ತನಗೇ ಉಪಭೋಗ್ಯವಿರಬೇಕೆಂದು ಪಾಪ-ಪುಣ್ಯ ನೀತಿ-ಅನೀತಿಯನ್ನು ಕಲ್ಪಿಸಲಾಗಿದೆ. ಒಂದು ಧಾತುವಿಗೆ "ಕ್ರಯ" ಕಟ್ಟಿ ಅದನ್ನು ಸಂಗ್ರಹಿಸಿ ಉಪಯೋಗಕ್ಕಾಗಿ ಇತರರು ತೆಗೆದುಕೊಂಡರೆ ಕಳವು, ಬಲದಿಂದ ತೆಗೆದುಕೊಂಡರೆ ದರೋಡೆ, ಹಿಂಸೆಗೆ ಪ್ರತಿಹಿಂಸೆಯನ್ನು ಮಾಡಿದರೆ ಖೂನಿ, ಈ ರೀತಿ ಸ್ವಾರ್ಥಸಾಧಿಸುವ ಜನರು ವಿಶಿಷ್ಟಬುದ್ಧಿಕೌಶಲ್ಯದಿಂದ ಈ ಭೇದಗಳನ್ನು ರಚಿಸಿದ್ದರು. ಆದರೆ ಸಮಾಜವು ಈ ಬಂಧನಗಳನ್ನು ಸಂಪೂರ್ಣವಾಗಿ ಸ್ವೀಕರಿಸಿಲ್ಲ. ಸ್ವಾಭಾವಿಕ ಬುದ್ಧಿಯು ಇದನ್ನು ತಡೆಯುದ್ದರಿಂದ ಬಹುಜನಸಮಾಜವು ತನ್ನ ಸುತ್ತಲೂ ಬೇಲಿಹಾಕಿದರೂ ಭದ್ರವಾಗಿ ಮಾಡಿಲ್ಲ. ಪಾಪದ ಭಯವಿದ್ದರೂ ಪಾಪ ಹೆಚ್ಚಿದೆ. ಇದಕ್ಕೆ ಕಾರಣವೇನು? ಕಳವೂ ಖೂನಿಯೂ ಅನೀತಿಯೂ ಹಬ್ಬಿದೆ. ಇದು ಯಾಕೆ ? ಇವೆಲ್ಲವೂ ಜಗತ್ತಿನದು ಯಾವಾಗಲೂ "ಸಮದೃಷ್ಟಿ" ( Even ) ಇರುವುದರಿಂದ ಸ್ವಾರ್ಥಸಾಧನೆಯ ಕೃತಿಯ ವಿರುದ್ಧ ಪ್ರತಿಕ್ರಿಯೆ ಎಂದೂ, ಕಾರಣದಂಡ್ಯವಲ್ಲವೆಂದೂ ಅವರು ವಾದಿಸುತ್ತಾರೆ. ಹೀಗಾದರೆ ನೀತಿ ಅನೀತಿ, ಪಾಪ-ಪುಣ್ಯ, ಸಂಗ್ರಹ ಕಳವು ಹಿಂಸೆ ಅಹಿಂಸೆ ಇವೆರಡಕ್ಕೂ ಕಾರಣಗಳಾದ ವಸ್ತುವನ್ನೇ ಕಿತ್ತೊಗೆಯಿರಿ; ಇದನ್ನೆಲ್ಲ ಬಿಟ್ಟು ಒಂದಕ್ಕೆ "ಕಾಯಿದೆ" ಎಂಬ ಮೋಹರಕ್ಷಣೆ ಹಾಕಿ, ಸಹಜವಾದ ಅದರ ಪ್ರತಿಕ್ರಿಯೆಯನ್ನು ತಡೆಯುವುದು ಹೇಗೆ ತಾನೇ ಸಾಧ್ಯ! ಸಂಗ್ರಹ ಕಳವು, ಹಿಂಸೆ ಅಹಿಂಸೆ ನೀತಿ ಅನೀತಿ, ಪಾತಿವ್ರತ್ಯ ಸೂಳೆತನ, ಏಕಪತ್ನಿವ್ರತ, ವ್ಯಭಿಚಾರ ಇವೆಲ್ಲವೂ ಮನಸ್ಸಿನ ವಿಕಾರಗಳೇ. ಇವೆರಡೂ ತ್ಯಾಜ್ಯ. ಸ್ವಾಭಾವಿಕ ವ್ಯಕ್ತಿಸ್ವಾತಂತ್ರ್ಯವನ್ನು ಬದಿಗಿರಿಸುವ ಈ ಎರಡೂ ಪದ್ಧತಿಗಳನ್ನು ಕಿತ್ತೊಗೆದು ವಿಶಾಲಸ್ವಾತಂತ್ರ್ಯ ಕೊಡುವ ಹಾದಿಯೇ ನಿಜ ಹಾದಿಯೆಂದು ತರುಣರ ಮತ. ಸಂಗ್ರಹವು ಸರಿಯಲ್ಲ, ಬದ್ಧನಿಯಮಗುಣವು ಗುಣವಲ್ಲ. ಅದರಂತೆ ಮೋಹ ಗೊಂಡು ಆಚರಿಸಿದ ಪಾಪವು ಪುಣ್ಯವಾಗವಂತಿಲ್ಲ. ಸಂಪೂರ್ಣಸ್ವಾತಂತ್ರ್ಯ ಕೊಟ್ಟಮೇಲೆ ಒಬ್ಬರ ಮನಸ್ಸಿನವಿರುದ್ಧ ಮತ್ತೊಬ್ಬರು ಬಂಧನ ಹಾಕುವುದೆ ಪಾಪ. ಅನೀತಿ, ಬಂಧನಗಳಿಂದ ಒಳಗೊಂಡ ಗುಣವು ಗುಣವಲ್ಲವೆಂದೂ ಅವುಗಳಿಂದ ಮುಕ್ತನಾದ ಮೇಲೆ ಆಚರಿಸಲ್ಪಡಬಹುದಾದ ನಿಯಮಗಳೇ ಗುಣಗಳೆಂದೂ ತರುಣರು ತಿಳಿದಿದ್ದಾರೆ.

ಮನುಷ್ಯಪ್ರಾಣಿಯೇ ಶ್ರೇಷ್ಠವೆನ್ನುವುದು ಹೇಗೆ ? ಹೊಸಶೋಧಗಳನ್ನು ಶೋಧಿಸಿದನೆಂದೇ? ಅಥವಾ ದೊಡ್ಡದೊಡ್ಡ ಪುಸ್ತಕಗಳನ್ನು ಬರೆದನೆಂದೋ? ಇವಾವುದರಿಂದಲೂ ಅವನ ಶ್ರೇಷ್ಠತೆಯು ಗೊತ್ತಾಗುವುದರಬದಲು ಕನಿಷ್ಠತೆಯೇ ತಿಳಿದುಬರುತ್ತದೆ. ಇತರ ಪ್ರಾಣಿಗಳಿಗೆ ಇವುಗಳ ಅವಶ್ಯಕತೆಯೇ ಇರುವುದಿಲ್ಲ. ನಿಜವಾಗಿ ನಾವು "ಸ್ಥಿತಪ್ರಜ್ಞ"ಎನ್ನುವ ಸ್ಥಿತಿಗೆ ಅವು ಬಹುತರವಾಗಿ ಮುಟ್ಟಿಬಿಟ್ಟಿವೆ. ನಾವುಮಾತ್ರ ನಮ್ಮ ಮೂರ್ಖಬುದ್ಧಿಯ ಕೌಶಲ್ಯದಿಂದ ಬಹುದೂರ ಉಳಿದಿದ್ದೇವೆ. ನಾವೆಷ್ಟು ಪ್ರಯತ್ನಿಸಿ ದೊಡ್ಡ ವಾದಗಳನ್ನು ಹೂಡಿದರೂ ಸಂಪೂರ್ಣ ಸ್ವತಂತ್ರರಾಗಿ ಬಂಧನಗಳಿಲ್ಲದೇ ಇತರ ಪಶುಪಕ್ಷಿಪ್ರಾಣಿಗಳಂತೆ ಜೀವನದಲ್ಲಿ ತೊಂದರೆ ಇಲ್ಲದೇ ವಿಶ್ವದಲ್ಲಿ ಲೀನವಾಗುವವರೆಗೆ ನಾವು ಚಿರಶಾಂತಿಯನ್ನು ಪಡೆಯಲಾರೆವು-ಎಂದೇ ತರುಣರ ಮತ. ನಮಗಿರುವ ಕೃತ್ರಿಮ ಬಂಧನಗಳೇ ನಮ್ಮ ದುಃಖಕ್ಕೆ ಕಾರಣವೆಂದು ಅವರು ತರ್ಕಿಸುತ್ತಾರೆ. ಸ್ವಾರ್ಥಕ್ಕಾಗಿ ಅಲ್ಪರಿಂದ ಮೋಹಗೊಳಿಸಲ್ಪಟ್ಟ

CC-0. Jangamwadi Math Collection. Digitized by eGangotri

ಬಂಧನೆಗಳೆಂದು ಎಲ್ಲ ರಾಜಕೀಯ ಬಂಧನಗಳನ್ನೂ ತರುಣರು ಒಪ್ಪುವುದಿಲ್ಲ. ರಶಿಯದ ಸಮಾಜಸತ್ತಾವಾದಿ ಸರಕಾರವನ್ನು ಮೊದಲುಗೊಂಡು—ಇಂಗ್ಲಂಡಿನ ಪ್ರಜಾಪ್ರತಿನಿಧಿ ಸರಕಾರದಿಂದ-ಇಂಡಿಯಾದ ಆರ್ಡಿನನ್ಸ್ ರಾಜ್ಯದವರೆಗೆ ಎಲ್ಲವೂ ಸ್ವಾರ್ಥತೆಯ ವಿಕಾರಗಳು. ಬಲಾತ್ಕಾರದಿಂದ ಹೊರಿಸಲ್ಪಟ್ಟ ಯಾವ ಬಂಧನಗಳನ್ನೂ ತರುಣರು ಮನ್ನಿಸಲಿಕ್ಕಿಲ್ಲ. ಯಾವ ರಾಜಕೀಯ ಬಂಧನಗಳಿಲ್ಲದೆ ವಿಶಾಲವಾದ "ವಿಶ್ವರಾಷ್ಟ್ರ" ವನ್ನು ಸಿದ್ಧಗೊಳಿಸುವ ಧ್ಯೇಯಸಾಧನೆಗಾಗಿಯೇ ಈಗಿನ ತರುಣರು ಹೆಣಗಾಡುತ್ತಿದ್ದಾರೆ.

ಈಗಿದ್ದ ಎಲ್ಲವನ್ನೂ ಅಲ್ಲಗಳೆಯುವುದಾದರೆ, ತರುಣರು ಇಚ್ಛಿಸುವುದಾದರೂ ಏನು? ವ್ಯಕ್ತಿಸ್ವಾತಂತ್ರ್ಯವನ್ನೊಳಗೊಂಡ ಮಾನವ "ಸಮಾಜ" ನಿರ್ಮಿತಿಯೇ ಅವರ ಆಕಾಂಕ್ಷೆ. ಇಡೀ ಸಮಾಜದ ಹಿತದ ಸ್ವಯಂಸ್ಫೂರಿತ ನಿಯಮಗಳೇ ಅವರ ಸರಕಾರ. ಪ್ರೇಮಬಂಧನವಿದ್ದರೂ ಬದ್ಧಪ್ರೇಮವಿರಲಿಕ್ಕಿಲ್ಲ. ಕುಟುಂಬವಿದ್ದರೂ ಬದ್ಧಕುಟುಂಬವಿರಲಿಕ್ಕಿಲ್ಲ. ಹಣವಿದ್ದರೂ ಸಂಗ್ರಹ, ಕಳವು ಇರಲಿಕ್ಕಿಲ್ಲ. ನಿಯಮಗಳಿದ್ದರೂ ಪಾಪಪುಣ್ಯದಿಂದ ಕಟ್ಟುವಡೆದು ಇರಲಿಕ್ಕಿಲ್ಲ. ಭೋಗವಿದ್ದರೂ ಈಗಿನ ನೀತಿ ಅನೀತಿಯ ನಿರ್ಬಂಧಗಳುಳಿಯಲಿಕ್ಕಿಲ್ಲ. ಸಂಪೂರ್ಣ ಜ್ಞಾನವುಳ್ಳ ವ್ಯಕ್ತಿಸ್ವಾತಂತ್ರ್ಯವೇ ಅದಕ್ಕೆ ದಾರಿ. ಇಂತು ಕೂಡಿದ "ವಿಶ್ವಸಮಾಜವೇ" ಅವರ ಹೇತು. 'ಜೀವನ' ವಲ್ಲದೇ ಮನಶ್ಶಾಂತಿಯೇ ಅವರ ಸುಖ. ಇತರ ಸುಖಬಂಧನವಿರಲಿಕ್ಕಿಲ್ಲ. "ವಿಶ್ವಪ್ರೇಮ" ವೇ ಅವರ ನಿಯಮ. ಇತರ ಕಾನೂನುಗಳಿರಲಿಕ್ಕಿಲ್ಲ. ಆಂತರಿಕವಿರಲಿ ಬಾಹ್ಯವಿರಲಿ, ಸತ್ಯಾನ್ವೇಷಣೆಯೇ ಅವರ ಧರ್ಮ. ಇತರ ಧರ್ಮಬಂಧನಗಳಿರಲಿಕ್ಕಿಲ್ಲ. ಇನಿತು ತಿಂದುಂಡು ಸುಖಿಯಾಗುವಂತೆ ತಾತ್ವಿಕ ಮನಶ್ಶಾಂತಿಪಡೆಯುವ 'ವಿಶ್ವಧರ್ಮ' ವನ್ನು ಸ್ಥಾಪಿಸಿ, 'ವಿಶ್ವರಾಷ್ಟ್ರ' ವನ್ನು ಸ್ಥಾಪಿಸಬೇಕಾಗಿಯೂ – ಈ ಅನಂತ ವಿಶ್ವದ ಗೂಢವನ್ನು ಬಯಲಿಗೆಳೆದು ಚಿರಶಾಂತಿ ಪಡೆಯಬೇಕಾಗಿಯೂ ಅವರ ಯತ್ನ. ಇದು ವಿಶ್ವಕ್ರಾಂತಿಗಾಗಿಯೇ ಅವರು ಹೆಣಗುತ್ತಿದ್ದಾರೆ. ಇಚ್ಛಿತ ವ್ಯವಸಾಯಕ್ಕೆ ಕುಟುಂಬವು ಬಂಧನಕಾರಕ. ಪ್ರೇಮಲಾಭಕ್ಕೆ ಜಾತಿಯು ಬಂಧನಕಾರಕ. ಮನಃಪ್ರವರ್ತನೆಗೆ ಧರ್ಮಾಚರಣೆ ಬಂಧನಕಾರಕ. ಮತಪ್ರಚಾರಕ್ಕೆ ಸರಕಾರದ ಶಾಸನವು ಬಂಧನಕಾರಕ. ಈ ಎಲ್ಲ ಬಂಧನಗಳನ್ನೂ ಕಡಿದೊಗೆದು ಧ್ಯೇಯಸಾಧಿಸಬೇಕೆಂಬ ಧೈರ್ಯದಿಂದ ಮುಂದೆ ಸಾಗಿದ್ದಾರೆ.

ಇಂತಹ ಕನಸನ್ನು ತರುಣರು ಕಾಣುತ್ತಿದ್ದಾರೆ. ಎಲ್ಲ ಯುವಕರೂ ಇದೇ ಧ್ಯೇಯವಿಲ್ಲದವರಾಗಿದ್ದರೂ ವೃದ್ಧರ ಕೈಯ್ಯಲ್ಲಿದ್ದ ಆಚಾರಸೂತ್ರಗಳಿಂದ ಬಿಗಿಯಲ್ಪಟ್ಟ ಭಾವನೆಗಳ ದೋಷವೇ ಹೊರತು ಅವರದಲ್ಲ. ಸುಶಿಕ್ಷಿತರಿರಲಿ ಅಶಿಕ್ಷಿತರಿರಲಿ ಅವರಿಗೆ ಬಂಧನಮುಕ್ತ (ಅವರ ದೃಷ್ಟಿಯಂತೆ) ರಾಗಬೇಕೆನ್ನುವ ಸಹಜಬುದ್ಧಿಯಿರುವುದರಿಂದ ಯುವಕರು ಪ್ರತಿಭಟಿಸಿ ಎದ್ದ ಉದಾಹರಣೆಗಳು ಬಹಳವಿವೆ. ವೃದ್ಧರ ಕಾರಸ್ಥಾನವನ್ನು ಕಿತ್ತೊಗೆಯಲಿಕ್ಕೆ ಅವರ ಆಚಾರಶಾಸ್ತ್ರಗಳ ಕೋಟೆಗಳ ಮೇಲೆ ಮುತ್ತಿಗೆ ಹಾಕಿ ರಣಾಂಗಣದಲ್ಲಿ ತಮಗೆ ಎದುರಾಗಲಿಕ್ಕೆ ಸಿದ್ಧರಾದ ವೃದ್ಧರಿದ್ದಾರೆಯೇ ಎಂದು ಯುವಕರು ನಿರೀಕ್ಷಿಸುತ್ತಲಿದ್ದಾರೆ. ಈ ವೃದ್ಧರ ಯುವಕರ ಯುದ್ಧ ಸಮಾಪ್ತಿಫಲವೇ ಜಗತ್ತಿಗೂ ಮಾನವ ಸಮಾಜಕ್ಕೂ ಕಲ್ಯಾಣಕಾರಿಯಾದುದರಿಂದ ವೃದ್ಧಮಹಾಶಯರು ಯಾರಾದರೂ ಇವರನ್ನು ಎದುರಿಸಬೇಕೆಂದೂ ಈ ಲೇಖಕನ ವಿಜ್ಞಪ್ತಿ.

CC-0. Jangamwadi Math Collection. Digitized by eGangotri

# ಕ್ಯಾಲೆಂಡರಿನಲ್ಲಿ ಸುಧಾರಣೆಗಳು

ಲೇಖಕರು— ಶ್ರೀ. ಎನ್. ಕೆ. ನರಸಿಂಹಮೂರ್ತಿ ಎಂ. ಎಸ್‌ಸಿ.

'ದಿನವಹಿ' ಅಥವಾ 'ತಾರೀಖುಪಟ್ಟಿ' ಎಂದು ಕರೆಯಬಹುದಾದ ಕ್ಯಾಲೆಂಡರು ನಮ್ಮ ದೇಶದಲ್ಲಿ ಬಹುಮಟ್ಟಿಗೆ ಪ್ರಚಾರದಲ್ಲಿದೆ. ಕಾಲಗಣನೆಗಾಗಿ ನಮ್ಮ ಪೂರ್ವಿಕರು ಪಂಚಾಂಗವನ್ನಿಟ್ಟುಕೊಂಡಿದ್ದರು. ಈಗಲೂ ನಮ್ಮ ದೇಶದ ಹಳ್ಳಿಗಳಲ್ಲಿ ವಿಶೇಷವಾಗಿ ವಾಡಿಕೆಯಲ್ಲಿರುವುದು ನಮ್ಮ ಹಿಂದೂಪಂಚಾಂಗವೇ. ಶುಭಾಶುಭ ಕರ್ಮಗಳನ್ನು ಮಾಡಲು ಉಪಯುಕ್ತವಾದುದೂ ಪಂಚಾಂಗವೇ. ಆದರೆ ಪಂಚಾಂಗವು ಇಡೀ ಹಿಂದುಸ್ತಾನಕ್ಕೆ ಒಂದೇ ಇಲ್ಲ. ಅನೇಕಕಡೆಗೆ ಅನೇಕಪಂಚಾಂಗಗಳುಂಟು. ಸೌರಮಾನಗಣನೆಯೇ ಬೇರೆ, ಚಾಂದ್ರಮಾನಗಣನೆಯೇ ಬೇರೆ. ಇವುಗಳ ಸಂವತ್ಸರಾದಿಯೇ ಬೇರೆಬೇರೆಯಾಗುವುವು. ಈ ಕಾರಣದಿಂದಲೂ ಕೋರ್ಟು ಕಛೇರಿ ಮುಂತಾದುವುಗಳ ನಿಯಮಗಳಿಂದಲೂ ನಮ್ಮಲ್ಲಿ ಕ್ಯಾಲೆಂಡರು ದಿನೇದಿನೇ ಹೆಚ್ಚು ಪ್ರಚಾರವಾಗುತ್ತಲಿದೆ. ಪೌಷ್ಯ ಶುದ್ಧ ಪಂಚಮಿ ಎಂದರೆ ಅನೇಕರು ಅನೇಕದಿನಗಳನ್ನು ಗೊತ್ತುಮಾಡುವಂತೆ ಮಾರ್ಚಿ ೧೫ನೆಯ ತಾರೀಖೆಂದರೆ ಬೇರೆ ಅರ್ಥ ಮಾಡಿಕೊಳ್ಳಲು ಸಾಧ್ಯವಿಲ್ಲ. ಈಗ ಈ ಕ್ಯಾಲೆಂಡರು ನಮಗೆ ಬಂದ ರೀತಿಯನ್ನೂ ಅದರಲ್ಲಿ ಆಗಬೇಕಾದ ಕೆಲವು ಸುಧಾರಣೆಗಳನ್ನೂ ಕುರಿತು ವಿಚಾರಮಾಡೋಣ.

ಕ್ಯಾಲೆಂಡರೆಂದರೆ ವರ್ಷವನ್ನು ೧೨ ತಿಂಗಳುಗಳಾಗಿ ವಿಭಾಗಿಸಿ, ಆಯಾ ತಿಂಗಳಲ್ಲಿಯ ದಿನಗಳನ್ನೂ ಆ ದಿನಗಳ ವಾರಗಳನ್ನೂ ಗುರುತಿಸುವ ಪಟ್ಟಿ. ಒಂದುವರ್ಷದಲ್ಲಿ (ಭೂಮಿಯು ಸೂರ್ಯನ ಸುತ್ತಲೂ ಒಂದು ಬಾರಿ ಪ್ರದಕ್ಷಿಣೆ ಮಾಡುವ ಕಾಲದಲ್ಲಿ) ೩೬೫.೨೪೨೨ದಿನಗಳಿರುವುವು. ಚಿಲ್ಲರೆದಿನಗಳನ್ನು ಎಣಿಸಲಾಗುವುದಿಲ್ಲವಾದುದರಿಂದ ವರ್ಷಕ್ಕೆ ೩೬೫ ದಿನಗಳನ್ನು ಮೊದಲು ಎಣಿಸಲಾರಂಭಿಸಿದರು. ಕೆಲವು ತಿಂಗಳಲ್ಲಿ ೩೦ದಿನಗಳೂ ಕೆಲವಲ್ಲಿ ೩೧ದಿನಗಳೂ ಫೆಬ್ರುವರಿಯಲ್ಲಿ ೨೮ದಿನಗಳೂ ಆದುವು. ಆದರೆ ವರ್ಷಕ್ಕೆ ಕಾಲುದಿವಸದಂತೆ ಕಡಿಮೆ ಹಾಕಿಕೊಳ್ಳುವುದರಿಂದ ನಾಲ್ಕುವರ್ಷಗಳಿಗೊಮ್ಮೆ ಒಂದು ದಿನವೇ ಕಡಿಮೆ ಬರುವಂತಾಯಿತು. ಇದರಿಂದ ನಾಲ್ಕು ವರ್ಷಗಳಿಗೊಂದುಬಾರಿ ಫೆಬ್ರುವರಿಯಲ್ಲಿ ೨೯ ದಿನಗಳನ್ನು ಹಾಕಲು ಪ್ರಾರಂಭಿಸಿದರು. ಆ ವರ್ಷಕ್ಕೆ 'ಲೀಪ್ ಈಯರ್' ಎಂದು ಹೆಸರು ಬಂದಿತು. ಈ ಪರಿಸ್ಥಿತಿಯು **ಜೂಲಿಯಸ್ ಸೀಸರನ** ಕಾಲದಲ್ಲಿ ಸುಧಾರಿಸಲ್ಪಟ್ಟ ಕ್ಯಾಲೆಂಡರಿನಲ್ಲಿ ಇತ್ತು. ಆತನ ಹೆಸರಿನಿಂದಲೇ '**ಜುಲೈ**' ಎಂಬ ತಿಂಗಳು ಪ್ರಸಿದ್ಧವಾಯಿತು. ಆತನ ಅನಂತರ ಬಂದ ಚಕ್ರವರ್ತಿ **ಅಗಸ್ಟಸ್ ಸೀಸರನ** ಹೆಸರಿನ ಮೇಲೆ '**ಆಗಸ್ಟ್**' ಎಂಬ ತಿಂಗಳಾಯಿತು. ಈರೀತಿಯಿಂದ ಕ್ಯಾಲೆಂಡರು ಸುಮಾರು ೧೬೦೦ ವರ್ಷಗಳ ವರೆಗೆ ನಿರ್ವಿಘ್ನವಾಗಿ ಬಂದಿತು. ಆದರೆ ವರ್ಷಕ್ಕೆ ೩೬೫ ದಿನಗಳಂತೆ ಗಣನೆ ಮಾಡುವುದರಿಂದ .೦೦೭೮ ದಿನಗಳು ಹೆಚ್ಚಿದುವು. ಇದರಿಂದ ೪೦೦ ವರ್ಷಗಳಲ್ಲಿ ೩ ದಿನಗಳು ಹೆಚ್ಚುವಂತಾದುವು. ಇಂಗ್ಲೀಷ್ ಕ್ಯಾಲೆಂಡರಿನ ವಿಶೇಷವೇನೆಂದರೆ ಸೂರ್ಯನು ಸಮಭಾಜಕವೃತ್ತದ ಮೇಲಿರುವ ದಿನವು—ಸರ್ವತ್ರ ಸಮಾಹೋರಾತ್ರಿಗಳಾಗುವ ದಿನವು—ಮಾರ್ಚಿ ೨೧ನೆಯ ತಾರೀಖು ಬೀಳುವುದು. ಮೇಲೆ ತಿಳಿಸಿರುವಂತೆ ದಿನಗಳು ತಪ್ಪು ಬಿದ್ದು ೧೩ನೆಯ ಪೋಪನಾದ ಗ್ರಿಗರಿ ಎಂಬಾತನ ಕಾಲದಲ್ಲಿ ಆ ದಿನವು ಮಾರ್ಚಿ ೧೧ಕ್ಕೆ ಬಂದುಬಿಟ್ಟಿತು. ೧೫೮೨ನೆಯ ಇಸವಿಯಲ್ಲಿ ಆತನು ಅಕ್ಟೋಬರು ತಿಂಗಳಿನ ೪ನೆಯ ತಾರೀಖಿನ ಮರುದಿನವನ್ನು ೧೫ನೆಯ ತಾರೀಖನ್ನಾಗಿ ಎಣಿಸಬೇಕೆಂದು ಕ್ರೈಸ್ತಮತೀಯರಾದ ತನ್ನ

CC-0. Jangamwadi Math Collection. Digitized by eGangotri

ಶಿಷ್ಯರಿಗೆ ಅಪ್ಪಣೆಮಾಡಿದನು. ಸುಧಾರಿಸಿದ ಈ ಕ್ಯಾಲೆಂಡ ರಿಗೆ '**ಗ್ರಿಗರಿಯನ್ ಕ್ಯಾಲೆಂಡರ್**' ಎಂಬ ಹೆಸರಾಯಿತು. ಕೆಲವು ದೇಶದವರು ಇದನ್ನು ಅಂಗೀಕರಿಸಿದರು. ಮತ್ತೆ ಕೆಲವರು ತಿರಸ್ಕರಿಸಿದರು. ಮುಂದೆ ತಪ್ಪುಗಣನೆಯಾಗದಂತೆ ಆಗ ೪೦೦ ವರ್ಷಗಳಿಗೊಮ್ಮೆ ೩ ದಿನಗಳನ್ನು ಬಿಡಬೇಕೆಂದು ಗೊತ್ತಾಯಿತು. ಅಂದಿನಿಂದ ೪ರಿಂದ ಭಾಗವಾಗುವ ಸಂಖ್ಯೆಯುಳ್ಳ ವರ್ಷದಲ್ಲಿ ೩೬೬ ದಿನಗಳಿರಬೇಕೆಂದೂ ಉಳಿದ ವರ್ಷಗಳಲ್ಲಿ ೩೬೫ ಇರಬೇಕೆಂದೂ ಇತ್ಯರ್ಥವಾಯಿತು. ಆದರೆ ೪ರಿಂದ ಭಾಗವಾಗದ ಶತಮಾನಗಳಲ್ಲಿಯೂ ೩೬೫ ಇರಬೇಕೆಂದು ಸಿದ್ಧವಾಯಿತು. ಎಂದರೆ ೧೬೩೨ರಲ್ಲಿ ೩೬೬ ದಿನಗಳೂ ೧೬೫೩ರಲ್ಲಿ ೩೬೫ ದಿನಗಳೂ ೧೭೦೦ರಲ್ಲಿ ೩೬೫ ದಿನಗಳೂ ೧೬೦೦ರಲ್ಲಿ ೩೬೬ ದಿನಗಳೂ ಬರುವಂತಾಯಿತು. ಇಂಗ್ಲಂಡಿನಲ್ಲಿ ಈ ಸುಧಾರಣೆಯು ೧೭೫೨ರಲ್ಲಿ ಜಾರಿಗೆ ಬಂದಿತು. ಪಾರ್ಲಿಮೆಂಟಿನ ಆಕ್ಟಿನ ಪ್ರಕಾರ ಸೆಪ್ಟಂಬರ್ ೨ನೆಯ ತಾರೀಖಿನ ಮರುದಿನವನ್ನು ೧೪ನೆಯ ದಿನವೆಂದು ಗಣನೆ ಮಾಡಲಾರಂಭಿಸಿದರು. ಇದಲ್ಲದೆ ಮಾರ್ಚ್ ೨೫ರಲ್ಲಿ ಇದ್ದ ವರ್ಷಾರಂಭವನ್ನು ಒಮ್ಮಿಂದೊಮ್ಮೆ ಜನವರಿ ೧ನೆಯ ತಾರೀಖಿಗೆ ತಂದರು. ಇದರಿಂದ ೧೭೫೧ನೆಯ ಇಸವಿಯಲ್ಲಿ ೨೮೨ದಿನಗಳೇ ಆದುವು. ರಶಿಯಾ ದೇಶದವರು ಬಹು ಕಾಲ ತಮ್ಮ ಕ್ಯಾಲೆಂಡರನ್ನು ಬದಲಾಯಿಸಿಕೊಳ್ಳಲಿಲ್ಲ. ೧೯೨೦ರಲ್ಲಿ ಇಂಗ್ಲಿಷ್ ತಾರೀಖುಗಳಿಗೂ ರಶಿಯಾದವರ ತಾರೀಖಿಗೂ ೧೩ದಿನಗಳ ವ್ಯತ್ಯಾಸವಿತ್ತು. ಈಗ ರಶಿಯಾದವರೂ ಹಳೆಯ ಕ್ಯಾಲೆಂಡರನ್ನು ತೆಗೆದು ಬಿಟ್ಟಿದ್ದಾರೆ.

ಕ್ಯಾಲೆಂಡರಿನ ಸುಧಾರಣೆಯು ಖಗೋಳಶಾಸ್ತ್ರಜ್ಞರ ದೃಷ್ಟಿಯಿಂದ ನೆಟ್ಟಗಿದ್ದರೂ ಜನರು ಅದನ್ನು ಸ್ವೀಕರಿಸುತ್ತಿರಲಿಲ್ಲ. ಸರಕಾರದ ಕಾನೂನಾಗದ ಹೊರತು ಜನರು ಸುಧಾರಣೆಯನ್ನು ಅಂಗೀಕರಿಸುತ್ತಿರಲಿಲ್ಲ. ಕೂಲಿಕಾರರು ತಮಗೆ ಕೆಲದಿನಗಳ ಕೂಲಿ ಹೋಯಿತೆಂದು ಕೂಗಿದರು. ಕೆಲವು ಮಹಿಳೆಯರು ತಾವು ವೃಥಾ ಮುದುಕಿಯರಾದೆವು-ಎಂದು ಗೊಣಗಿದರು. ಆದರೆ ಆ ಕಾಲವೆಲ್ಲ ಕಳೆದು ಹೋಯಿತು. ಈಗ ಪುನಃ ಕ್ಯಾಲೆಂಡರಿನಲ್ಲಿ ಸುಧಾರಣೆಯಾಗುವ ಪ್ರಸಂಗ ಬಂದಿದೆ. ಇದಕ್ಕೆ ಕಾರಣವೇ ಬೇರೆ.

ಈಗ ಜಾರಿಯಲ್ಲಿರುವ ಕ್ಯಾಲೆಂಡರಿನಲ್ಲಿ ೧೪ವಿಧಗಳಾಗುವುವು. ಎಂದರೆ ಒಂದು ವರ್ಷದಂತೆ ಮತ್ತೊಂದು ವರ್ಷದಲ್ಲಿ ಆಯಾ ತಿಂಗಳು ತಾರೀಖುಗಳಿಗೆ ಅನುಸಾ ವಾಗಿ ಅದೇ ವಾರಗಳು ಬರುವುದಿಲ್ಲ. ೨೮ವರ್ಷಗಳಿಗೊಮ್ಮೆ ಕ್ಯಾಲೆಂಡರು ಪುನರಾವೃತ್ತಿಯಾಗಿ ಬರುವುದು. ಎಂದರೆ ೧೯೦೨ರಲ್ಲಿದ್ದಂತೆ ೧೯೩೦ರಲ್ಲಿಯೂ, ೧೯೦೩ರಲ್ಲಿದ್ದಂತೆ ೧೯೩೧ರಲ್ಲಿಯೂ ಇರುವುದು. ವರ್ಷಾರಂಭವು ಸಾಮಾನ್ಯ ವರ್ಷ (Common year) ಗಳಲ್ಲಿ ಒಂದು ವಾರ ಮುಂದೆಯೂ ಅಧಿಕ ವರ್ಷ (Leap year) ದಲ್ಲಿ ೨ ವಾರ ಮುಂದೆಯೂ ಹೋಗುವುದು. ಉದಾ:- ೧೯೩೨ನೆಯ ಜನವರಿಯು ಶುಕ್ರವಾರ ಪ್ರಾರಂಭವಾ ೧೯೩೩ನೆಯದು ಭಾನುವಾರದಿಂದಲೂ ೧೯೩೪ನೆಯದು ಸೋಮವಾರದಿಂದಲೂ ಪ್ರಾರಂಭವಾಗುವುವು. ಇಷ್ಟೇ ಅಲ್ಲದೆ ಪ್ರತಿ ತಿಂಗಳ ಪ್ರಾರಂಭದ ವಾರವೂ ಬೇರೆ ಯಾಗಿರುವುದು. ಇದು ಅನೇಕ ವಿಧದ ತೊಂದರೆಗಳಿಗೆ ಕಾರಣವಾಗುವುದು.

ಈಗಿನ ವಾಣಿಜ್ಯ ಮುಂತಾದುವುಗಳನ್ನು ನೋಡಿದರೆ ತಿಂಗಳು, ವಾರ ಇವೆರಡೂ ಕಾಲಮಾನಗಳಲ್ಲಿ ಮುಖ್ಯ ವಾಗಿವೆ. ಕೃಷಿಯೇ ಪ್ರಧಾನವಾಗಿದ್ದ ಕಾಲದಲ್ಲಿ ವರ್ಷವೇ ಕಾಲಮಾನವಾಗಿ ಉಪಯೋಗಿಸಲ್ಪಡುತ್ತಿತ್ತು. ಕಾಲವ್ಯತ್ಯಾಸಗಳನ್ನು ಸೂಚಿಸಲು ಋತುಗಳೇ ಸಾಕಾ ದ್ದುವು. ಆಗಿನ ಸಂಪಾದನೆಯು ವರ್ಷಕ್ಕೆ ಇಷ್ಟು ನಿರ್ಣೀತವಾಗುತ್ತಿತ್ತು. ಈಗ ಅನೇಕರಿಗೆ ತಿಂಗ ಗೊಮ್ಮೆ ಸಂಬಳ ಬರುವುದು. ಎಷ್ಟೋ ಕಚೇರಿಗಳ ತಿಂಗಳನ್ನನುಸರಿಸಿದ (Monthly return) ಲೆಕ್ಕ ಬೇಕಾಗಿರುವುವು. ಕೂಲಿಕಾರರಿಗೆಲ್ಲ ವಾರಕ್ಕೊಮ್ಮೆ ಸಂಬಳವನ್ನು ಹಂಚಬೇಕಾಗುವುದು. ಯುರೋಪ್ ದೇಶಗಳಲ್ಲಿ ಮನೆಯ ಬಾಡಿಗೆಗಳನ್ನು ಸಹ ವಾ ಕ್ಕೊಮ್ಮೆ ಕೊಡುವ ಪದ್ಧತಿಯಿದೆ. ರೈಲುಗಳ ಟೈಮ್ ಪಟ್ಟಿಗಳು ಕೂಡ ವಾರಕ್ಕೊಮ್ಮೆ ಪ್ರಕಟವಾಗುವುದನ್ನು ನಾವು ನೋಡುತ್ತೇವೆ. ಹೀಗಿರುವುದರಿಂದ ವಾಣಿಜ್ಯಕ್ಕೆ ತಿಂಗ ವಾರಕ್ಕೂ ಬಹಳ ನಿಕಟಸಂಬಂಧವಿದೆ. ಗೊತ್ತಾದಷ್ಟು ವಾರಗಳಿಲ್ಲದಿರುವುದರಿಂದಲೂ ಪ್ರತಿ ಆರಂಭವು ಬೇರೆಬೇರೆ ವಾರಗಳಿಂದಾಗುವುದರಿಂ ವ್ಯಾಪಾರಸ್ಥರಿಗೆ ಬಹಳತೊಂದರೆಯಾಗುವುದು. ಯಂತ್ರ ಗಳ ಯುಗ'ವಾಗಿರುವ ಈ ಕಾಲದಲ್ಲಿ ದೊಡ್ಡ ದೊಡ್ಡ ಕಾರಖಾನೆಗಳನ್ನಿಟ್ಟು ಭಾರಿ ವ್ಯಾಪಾರ ಮಾಡುತ್ತಿ

CC-0. ... Collection. Digitized by eGangotri

ಪಾಶ್ಚಿಮಾತ್ಯರಿಗೆ ಕ್ಯಾಲೆಂಡರಿನಲ್ಲಿ ಈ ಮೂಲಕ ಆಗ ಬೇಕಾದ ಸುಧಾರಣೆಯ ಆವಶ್ಯಕತೆಯು ಬಹುವಾಗಿ ತೋರಿದೆ. ಈ ಕಾರಣದಿಂದ 'ಜಿನೀವಾ' ಪಟ್ಟಣದಲ್ಲಿ ನಡೆಯುವ 'ಲೀಗ್ ಆಫ್ ನೇಷನ್ಸ್' ಎಂಬ ಸಮಿತಿಯ ಸಭೆಯಲ್ಲಿ ಈ ವಿಷಯವು ಚರ್ಚೆಗೆ ಬಂದಿದೆ. ಅನೇಕರು ಅನೇಕ ವಿಧದ ಸಲಹೆಗಳನ್ನೂ ಕೊಟ್ಟಿದ್ದಾರೆ. ಅವುಗಳಲ್ಲಿ ವರ್ಷಕ್ಕೆ ೧೩ ತಿಂಗಳುಗಳಿರಬೇಕೆಂಬುದೇ ಮುಖ್ಯವಾದ ಸಲಹೆ.

ತಿಂಗಳಿಗೆ ನಾಲ್ಕು ವಾರಗಳಂತೆ ಎಣಿಕೆಮಾಡಿದರೆ, ವರ್ಷಕ್ಕೆ ೧೩ ತಿಂಗಳಾಗಿ ೩೬೫ ದಿವಸಗಳಲ್ಲಿಯ ಒಂದು ದಿನ ಉಳಿದು ಹೋಗುವುದು. (ಅಧಿಕ ವರ್ಷದಲ್ಲಿ ಎರಡು ದಿನಗಳು ಉಳಿಯುವುವು.) ಈ ವಿಚಾರವು ೧೭೪೫ ನೆಯ ಇಸವಿಯಲ್ಲಿ ಅರ್ಬನ್ (Urban) ಎಂಬೊಬ್ಬ ಅಮೇರಿಕಾ ದೇಶೀಯನಿಂದ ಮೊದಲು ವೃತ್ತಪತ್ರಿಕೆಯಲ್ಲಿ (Gentleman's magazine) ಪ್ರಕಟಿಸಲ್ಪಟ್ಟಿತು. ಈತನ ಉದ್ದೇಶವು ಕ್ಯಾಲೆಂಡರನ್ನು ಸಮವಾಗಿ ವಿಭಾಗ ಮಾಡಿಡುವುದೇ ಹೊರತು ಈಗಿನಂತೆ ತೊಂದರೆಗಳನ್ನು ನಿವಾರಿಸುವಂತಹದಲ್ಲ. ಆಗ ಜನಗಳಿಗೆ ಇದ್ದ ಕ್ಯಾಲೆಂಡರಿನಿಂದ ಅನನುಕೂಲಗಳೇನೂ ಇರದಿದ್ದುದರಿಂದ ಈತನ ಸೂಚನೆಯು ಫಲಕಾರಿಯಾಗಲಿಲ್ಲ. ಮುಂದೆ ೧೭೫೧ರಲ್ಲಿ ಪಾರ್ಲಿಮೆಂಟಿನವರು ಕೆಲವು ತಾರೀಖುಗಳನ್ನು ಬಿಡುವಷ್ಟು ಮಾತ್ರವೇ ಸುಧಾರಣೆ ಮಾಡಿಕೊಂಡರು.

ಈಗ ಮೇಲೆ ಹೇಳಿದ ಸುಧಾರಣೆಯನ್ನು ಬಲಪಡಿಸಿ ಕೋಟ್ಸವರ್ತ್ (Moses B. Cotsworth) ಎಂಬಾತನು ೧೩ ತಿಂಗಳ ಕ್ಯಾಲೆಂಡರಿನ ಸಲಹೆಯನ್ನೇ ಸಮಿತಿಯವರು ಅಂಗೀಕರಿಸಬೇಕೆಂದು ಜನರಿಗೆ ಅದರ ಉಪಯೋಗಗಳನ್ನು ವಿಸ್ತಾರವಾಗಿ ತಿಳಿಸುತ್ತಿರುವನು. ಈ ಸುಧಾರಣೆಯನ್ನು ವಿಶದವಾಗಿ ಪರೀಕ್ಷಿಸೋಣ. ಈ ಸಲಹೆಯು ಅಂಗೀಕೃತವಾದರೆ ಪ್ರತಿತಿಂಗಳಲ್ಲಿಯೂ ೨೮ ದಿನಗಳು ಅಂದರೆ ೪ ವಾರಗಳು ಆಗುವುವು. ವರ್ಷದಲ್ಲಿ ೧೩ ತಿಂಗಳು ಬರುವುವು. ಈಗಿರುವ ತಿಂಗಳಿಗಿಂತ ಒಂದು ಹೆಚ್ಚಾದಂತೆ ಆಯಿತು. ಇದಕ್ಕೆ 'ಸಾಲ್' (Sol) ಎಂಬ ಹೆಸರು ಬರುವುದು. ಇದು ವರ್ಷದ ಮಧ್ಯದಲ್ಲಿ ಎಂದರೆ ಜೂನ್ ಜುಲೈಗಳಿಗೆ ಮಧ್ಯದಲ್ಲಿ ಬರುವುದು. ವರ್ಷದ ಮಧ್ಯದಲ್ಲಿ ಈ ತಿಂಗಳ ಬರುವುದರಿಂದ ಋತುಭೇದಗಳಿಗೂ ತಿಂಗಳಿಗೂ ಈಗಿರುವ ಸಂಬಂಧವು ಬದಲಾಯಿಸುವುದಿಲ್ಲ. ಎಂದರೆ ಮಾರ್ಚಿಯಲ್ಲಿ ವಸಂತಋತುವೂ ಡಿಸೆಂಬರಿನಲ್ಲಿ ಹೇಮಂತಋತುವೂ ಇದ್ದೇ ಇರುವುವು. ವರ್ಷವೂ ಸಮವಾಗಿ ವಿಭಾಗವಾಗುವುದು.

ವಾರಗಳನ್ನು ಹಂಚುವ ಕೆಲಸವೂ ಆಗ ಸುಲಭವಾಗುವುದು. ಪ್ರತಿ ಮಾಸಾರಂಭವೂ ವರ್ಷಾರಂಭವೂ ಒಂದೇ ವಾರವಾಗಿದ್ದರೆ ಬಹಳ ಅನುಕೂಲ. ಜನವರಿಯ ಮೊದಲ ತಾರೀಖು ಯಾವಾಗಲೂ ಭಾನುವಾರವೇ ಆಗಿದ್ದರೆ ವಾರ ಮಾಸಗಳಿಗೆ ನಿಕಟ ಸಂಬಂಧವು ಬರುವುದು. ಇದಕ್ಕಾಗಿ ಒಂದು ಜನವರಿ ಮೊದಲ ತಾರೀಖು ಭಾನುವಾರವಾದರೆ ೨೮ ದಿನಗಳ ತಿಂಗಳಿರುವುದರಿಂದ ಪ್ರತಿ ತಿಂಗಳ ಮೊದಲ ತಾರೀಖೂ ಭಾನುವಾರವಾಗುವುದಲ್ಲದೆ ಪ್ರತಿ ಜನವರಿಯ ಮೊದಲ ತಾರೀಖೂ ಭಾನುವಾರವೇ ಆಗುವುದು. ಆದರೆ ಖಗೋಳಶಾಸ್ತ್ರದ ರೀತಿಯಿಂದ ವರ್ಷಕ್ಕೆ ೩೬೫ ಅಥವಾ ೩೬೬ ದಿನಗಳಿರಬೇಕಾಗುವುದರಿಂದ ಮಿಕ್ಕ ಒಂದು ಅಥವಾ ಎರಡು ದಿನಗಳಿಗೆ ಬೇರೆ ಹೆಸರು ಕೊಡಬೇಕಾಗುವುದು. ಮೇಲಿನ ಸಲಹೆಯಂತೆ ೩೬೫ ನೆಯ ದಿನವನ್ನು ಡಿಸೆಂಬರ್ ೨೯ ನೆಯ ತಾರೀಖನ್ನಾಗಿ ಭಾವಿಸಿ ಅದಕ್ಕೆ ಯಾವ ವಾರದ ಹೆಸರನ್ನೂ ಇಡದೆ 'ಈಯರ್‌ಡೆ' (Year day) ಅಂದರೆ 'ವಾರ್ಷಿಕ ದಿನ' ಎಂದು ಕರೆಯಬೇಕಾಗುವುದು. ಅಧಿಕವರ್ಷದಲ್ಲಿ (Leap year) ಬರುವ ೩೬೬ನೆಯ ದಿನವನ್ನು ಜೂನ ೨೯ನೆಯ ದಿನವನ್ನಾಗಿ ಭಾವಿಸಿ ಅದನ್ನು 'ಲೀಪ್ ಡೇ' (Leap day) ಎಂದರೆ 'ಅಧಿಕದಿನ' ಎಂದು ಕರೆಯಬೇಕು. ವಾರ್ಷಿಕದಿನವು ಪ್ರತಿವರ್ಷದ ಕೊನೆಯಲ್ಲಿಯೂ ಬರುವುದು. ಈ ದಿನಗಳು ಬಂದ ವಾರದಲ್ಲಿ ೮ದಿನಗಳು ಬಂದಂತಾಗುವುದು. ಈ ದಿನಗಳು ರಜಾದಿನಗಳಾಗಿರಬೇಕೆಂದು ಕೋಟ್ಸವರ್ತ್ ಎಂಬಾತನು ಸೂಚಿಸಿದ್ದಾನೆ.

ರಜಾದಿನಗಳು ಸೋಮವಾರವೇ ಆಗುವಂತೆ ಹಾಕುವುದೂ ಪಾದ್ರಿಗಳು ಒಪ್ಪಿದರೆ ಅವರ ಮತಸಂಬಂಧವಾದ ಈಸ್ಟರ್ ರಜಾದಿನಗಳನ್ನು ನಿಯಮಿಸುವುದೂ ಈ ಹೊಸ ಕ್ಯಾಲೆಂಡರಿನ ಕೆಲಸವಾಗಿದೆ. ಇದೇ ರೀತಿ ಕ್ಯಾಲೆಂಡರಿನ ಸುಧಾರಣೆಗಾಗಿ ಇತರ ಸಲಹೆಗಳೂ ಬಂದಿವೆ. ಇವು ಈಗಿನ ಒಂದೆರಡು ಕುಂದು ಕೊರತೆ


CG-0. Jangamwadi Math Collection. Digitized by eGangotri

ಗಳನ್ನು ಹೋಗಲಾಡಿಸಿದರೂ ಮೇಲಿನ ಸಲಹೆಯಂತೆ ಎಲ್ಲ ದೋಷಗಳನ್ನೂ ದೂರಮಾಡಿಲ್ಲ. ಕ್ಯಾಲೆಂಡರು ಸರ್ವಜನಾದರಣೀಯವಾಗಬೇಕಾದರೆ ಅದು ಕೆಲವು ನಿಯಮಗಳನ್ನು ಅನುಸರಿಸಬೇಕಾಗುವುದು. (೧) ಸೌರ-ಮಾನವತ್ಸರದೊಡನೆ ಇರುವ ಸಂಬಂಧವನ್ನು ಬಿಡಲಾಗದು, ಅಂದರೆ ವರ್ಷಕ್ಕೆ ಸರಾಸರಿ ೩೬೫¼ ದಿನಗಳು ಇರಬೇಕು. (೨) ಕಾಲಮಾನಕ್ಕಾಗಿ ೭ ದಿನಗಳಿಗೊಂದು ವಾರದಂತೆ ವಾರಗಳನ್ನಿಟ್ಟಿರಬೇಕು. (೩) ಆಯಾ ವಾರಗಳಿಗೂ ತಾರೀಖುಗಳಿಗೂ ನಿತ್ಯಸಂಬಂಧವನ್ನು ಕಲ್ಪಿಸಬೇಕು. (ಅಂದರೆ ಒಂದು ತಿಂಗಳ ೧೬ನೆಯ ತಾರೀಖು ಸೋಮವಾರವಾದರೆ ಯಾವಾಗಲೂ ೧೬ನೆಯ ತಾರೀಖುಗಳೆಲ್ಲ ಸೋಮವಾರವೇ ಆಗಬೇಕು.) (೪) ಗೊತ್ತಾದಷ್ಟು ವಾರಗಳನ್ನೊಳಗೊಂಡ ಸಮಾಂತರವುಳ್ಳ ತಿಂಗಳುಗಳಿರಬೇಕು. ಅಂದರೆ ಪ್ರತಿತಿಂಗಳಲ್ಲಿಯೂ ಸಮವಾದ ವಾರಗಳಿರಬೇಕು. ಇಷ್ಟು ನಿಯಮಗಳನ್ನು ಅನುಸರಿಸಿದ್ದರೆ ಕ್ಯಾಲೆಂಡರನ್ನು ಸುಧಾರಿಸಲು ಸಲಹೆಗಳು ಯುಕ್ತವಾದುವುಗಳಾಗುವುವು.

ಈಗ ಸಮಿತಿಯಮುಂದೆ ಬಂದಿರುವ ಮತ್ತೂ ಒಂದೆರಡು ಸಲಹೆಗಳನ್ನೂ ನೋಡೋಣ. ಬಹುಕಾಲದಿಂದ ವರ್ಷಕ್ಕೆ ೧೨ ತಿಂಗಳಂತೆ ಎಣಿಸುವ ಪದ್ಧತಿಯು ಬಂದಿರುವುದು. ಈಗ ಇದನ್ನೂ ಬದಲಾಯಿಸಿ ೧೩ ತಿಂಗಳನ್ನಾಗಿ ಮಾಡಿದರೆ ಅನೇಕರಿಗೆ ಅಗ್ರಾಹ್ಯವಾಗಿ ತೋರುವುದು. ಆದುದರಿಂದ ೧೨ ತಿಂಗಳುಗಳನ್ನೇ ಇಟ್ಟುಕೊಂಡು ಕ್ಯಾಲೆಂಡರನ್ನು ಸುಧಾರಿಸುವ ಮತ್ತೊಂದು ಸಲಹೆಯು ಬಂದಿರುವುದು. ಇದನ್ನು ಅನುಸರಿಸಿದರೆ, ವರ್ಷವು ೯೧ ದಿವಸವುಳ್ಳ ನಾಲ್ಕು ಸಮಭಾಗಗಳಾಗಿ ಭಾಗಿಸಲ್ಪಡುವುದು. ಒಂದೊಂದು ಭಾಗದಲ್ಲಿಯೂ ೩೧, ೩೦, ೩೦ ದಿವಸಗಳುಳ್ಳ ಮೂರು ಮೂರು ತಿಂಗಳುಗಳು ಬರುವುವು. ಮಿಕ್ಕ ದಿನಗಳು 'ವಾರ್ಷಿಕ ದಿನ' 'ಅಧಿಕ ದಿನ' ಗಳಾಗುವುವು. ಇದರಲ್ಲಿ ನಾಲ್ಕನೆಯ ನಿಯಮವೊಂದನ್ನು ಬಿಟ್ಟು ಉಳಿದುವೆಲ್ಲ ಅನುಸರಿಸಲ್ಪಡುವುವು.

ಮತ್ತೆ ಕೆಲವು ಸಲಹೆಗಳ ಪ್ರಕಾರ ವರ್ಷಗಳಿಗೆ ೧೨ ತಿಂಗಳುಗಳೂ, ತಿಂಗಳುಗಳಿಗೆ ೩೦ ದಿನಗಳೂ ಇರುವುವು. ಮೇಲುಳಿದ ೫ ಅಥವಾ ೬ ದಿನಗಳನ್ನು ಇಲ್ಲಿ ಅಲ್ಲಿ ಎಲ್ಲಿಯಾದರೂ ಸೇರಿಸಿಬಿಡುವುದು. ವಾರಕ್ಕೆ ೫ ಅಥವಾ ೬ ದಿವಸಗಳನ್ನಿಡುವುದರಿಂದ ತಿಂಗಳಿಗೆ ೬ ಅಥವಾ ೫ ವಾರಗಳಾಗುವುವು. ಇದು ರಷ್ಯ ದೇಶದವರ ಸಲಹೆ. ಇದುವರೆಗೆ ನಡೆದುಕೊಂಡು ಬಂದಿರುವ ೭ ದಿವಸಗಳ ವಾರಗಳನ್ನು ಬಿಡುವುದು ಜನಸಮ್ಮತವಲ್ಲವಾದುದರಿಂದ ಇದು ಅಂಗೀಕೃತವಾಗಲಾರದು.

ಮತ್ತೆ ಕೆಲವರು ವಾರ್ಷಿಕ ದಿನ ಮತ್ತು ಅಧಿಕದಿನಗಳನ್ನಿಡಬಾರದೆಂದು ಹೇಳುವರು. ಏಕೆಂದರೆ ಇವುಗಳಿಂದ ವಾರಗಳು ಅಖಂಡವಾಗಿ ಬರುವುದಿಲ್ಲ. ಡಿಸೆಂಬರು ತಿಂಗಳ ೩೧ನೆಯ ದಿನ ಶನಿವಾರವಾದರೆ ಮರುದಿನ ಭಾನುವಾರವಾಗದೆ ವಾರ್ಷಿಕ ದಿನ ಬರುವುದು. ಅದರ ಮರುದಿನ ಭಾನುವಾರವಾಗುವುದು. ಇದು ಭಾನುವಾರವನ್ನು ಮುಖ್ಯವೆಂದು ಎಣಿಸುವ ಪಾದ್ರಿಗಳಿಗೆ ಅಸಮ್ಮತವಾದ ವಿಷಯ. ಆದುದರಿಂದ ತಿಂಗಳಿಗೆ ನಾಲ್ಕು ವಾರಗಳಂತೆ ೧೩ ತಿಂಗಳುಗಳಿರಬೇಕೆಂದೂ ಮಿಕ್ಕ ಒಂದು ಅಥವಾ ಎರಡು ದಿನಗಳನ್ನು ಎಣಿಸದೆ ೫ ಅಥವಾ ೬ ವರ್ಷಗಳಲ್ಲಿ ಈ ಹೆಚ್ಚಿಗೆ ದಿನಗಳು ಒಟ್ಟುಗೂಡಿ ಒಂದು ವಾರವಾದರೆ, ಆಗಯೆ ಒಂದೇ ವರ್ಷದಲ್ಲಿ ಈ ಅಧಿಕವಾರವನ್ನು ೫೩ನೆಯದಾಗಿ ಎಣಿಸಬಹುದೆಂಬೂ ಇನ್ನೊಂದು ಸಲಹೆ.

ಆದರೆ ಇದಕ್ಕೆ ಅನೇಕ ಆಕ್ಷೇಪಣೆಗಳು ಬರುವುವು. ಇದು ಮೊದಲನೆಯ ನಿಯಮವನ್ನೇ ಅನುಸರಿಸುವುದಿಲ್ಲ. ವಸ್ತುತಃ ವರ್ಷದಲ್ಲಿ ೩೬೫¼ ದಿನಗಳಿರಲು ಸಮ್ಮತ... ವರ್ಷದಲ್ಲಿ ೩೬೪ ದಿನಗಳು ಬರುವುವು. ಅಧಿಕವಾರ... ಸೇರಿದಾಗ ೩೭೧ ದಿನಗಳಾಗುವುವು. ಇದರ ಜೊತೆ... ಭಾನುವಾರವೇ ವರ್ಷಾದಿಯಾಗಬೇಕಾದರೆ ಕೆಲವು... ಎರಡು ವಾರಗಳಾಗುವತನಕ ಕಾಯಬೇಕು. ಆ... ಒಮ್ಮೊಮ್ಮೆ ವರ್ಷದಲ್ಲಿ ೩೭೮ ದಿನಗಳೂ ಬಂದಂತಾ... ವುವು. ಇದರಿಂದ ಋತುಗಳ ಸ್ಥಾನವೂ ವಸಂತಾದಿ... ಬಹುಮಟ್ಟಿಗೆ ಬದಲಾಯಿಸುವುವು. ಖಗೋಳಶಾಸ್ತ್ರ... ರಿಗೆ ತೀರ ಅಸಮ್ಮತವಾದ ಈ ಸಲಹೆಯನ್ನು ... ಕರಿಸಿದರೆ ಬಹಳ ಅನರ್ಥಗಳು ಒದಗುವುವೆಂದು ... ಕರ ಅಭಿಪ್ರಾಯ. ವಿಶೇಷವಾಗಿ ಖಗೋಳಶಾಸ್ತ್ರಜ್ಞ... ರಚಿತವಾಗುವ ಪಂಚಾಂಗ (Nautical Almanac) ... ನಮ್ಮ ಕ್ಯಾಲೆಂಡರಿಗೂ ತಾಳೆ ಬೀಳದೆ ಸಮುದ್ರಯಾ... ಮಾಡುವ ನಾವಿಕರಿಗೆ ಭ್ರಾಂತಿಯುಂಟಾಗಿ ತನ್ನ...

CC-0. Jangamwadi Math Collection. Digitized by eGangotri

ಅಪಾಯವಾಗಬಹುದು. ವರ್ಷವು ಈ ರೀತಿ ವ್ಯತ್ಯಸ್ತವಾಗುತ್ತಿದ್ದರೆ ಜನರ ವಯಸ್ಸು ನಿಶ್ಚಿತವಾಗಿ ತಿಳಿಯುವುದಿಲ್ಲವೆಂದೂ ಹುಟ್ಟಿದಹಬ್ಬ, ಜ್ಞಾಪಕದ ದಿನಗಳನ್ನು ಆಚರಿಸಲು ತೊಂದರೆಯಾಗುವುದೆಂದೂ ಕೆಲವರ ಅಭಿಪ್ರಾಯ. ಆದುದರಿಂದ ಈ ಸಲಹೆಯು ಅಗ್ರಾಹ್ಯವಾಗಿ ಕಾಣುವುದು.

ಇನ್ನು ಕೆಲವರು ಸಾಮಾನ್ಯವ್ಯವಹಾರಕ್ಕೆ ಈಗಿರುವಂತೆಯೇ ಕ್ಯಾಲೆಂಡರನ್ನಿಟ್ಟುಕೊಂಡು ವ್ಯಾಪಾರ ಕಾರ್ಯಗಳಿಗೆಮಾತ್ರ ಅಧಿಕವಾರಗಳನ್ನಿಟ್ಟುಕೊಳ್ಳಬೇಕೆಂದು ಅಭಿಪ್ರಾಯಪಡುವರು. ಇದರಿಂದಲೂ ಭ್ರಾಂತಿಗೆ ಕಾರಣವಾಗುವುದು. ಈ ವರ್ಷದ ೩೬ನೆಯ ವಾರವೆಂದರೆ ಅದು ಯಾವ ತಿಂಗಳಿನ ಯಾವ ಭಾಗದಲ್ಲಿ ಬರಬಹುದೆಂಬುದೇ ತಿಳಿಯಲು ಕಷ್ಟವಾಗಿರುವುದು. ಇದರಿಂದ ಒಂದನೆಯ ಮತ್ತು ಮೂರನೆಯ ನಿಯಮಗಳಿಗೆ ಭಂಗಬರುವುದು. ಕೆಲವು ವರ್ಷಗಳಲ್ಲಿ ೫೩ವಾರಗಳೂ ಬರಬೇಕಾಗುವುದು. ಸಾಮಾನ್ಯಜನರಿಗೆ ಒಂದು ವರ್ಷವಾದರೆ ವರ್ತಕರ ಎಣಿಕೆಯಲ್ಲಿ ಬೇರೊಂದು ವರ್ಷವಾಗಿ ವ್ಯವಹಾರದಲ್ಲಿ ತೊಂದರೆಬರುವುದು.

ವಾರ್ಷಿಕದಿನ, ಅಧಿಕದಿನಗಳೆಂಬ ಹೊಸವಾರಗಳನ್ನಿಡದೆ ಮಾಸಗಳನ್ನು ಸಮವಾಗಿ ಮಾಡಲು ಇತರ ಸಲಹೆಗಳೂ ಬಂದಿರುವುವು. ಆದರೆ ಇವುಗಳಿಂದ ಮೂರನೆಯ ನಿಯಮಕ್ಕೆ ಭಂಗಬರುವುದು.

ಡಾಕ್ಟರ್ ಮಾರ್ವಿನ್ ಎಂಬಾತನ ಸಲಹೆಯು ಈ ರೀತಿ ಇರುವುದು. 'ಹೊಸ ಕ್ಯಾಲೆಂಡರನ್ನು ೧೯೩೬ನೆಯ ಇಸವಿಯಿಂದ ಜಾರಿಗೆ ತರಬೇಕು. ೧೯೩೫ನೆಯ ಡಿಸೆಂಬರಿನ ೩೦-೩೧ನೆಯ ತಾರೀಖುಗಳನ್ನು ಬಿಟ್ಟು ೨ನ್ನು ವಾರ್ಷಿಕದಿನವೆಂದು ಕರೆದು ಮರುದಿನವೇ ೧೯೩೬ನೆಯ ಜನವರಿ ೧ನೆಯ ತಾರೀಖೆಂದು ಎಣಿಸಿದರೆ ಮುಂದೆ ವರ್ಷಗಳೆಲ್ಲ ಭಾನುವಾರದಿಂದ ಪ್ರಾರಂಭವಾಗುವುವು? ಮತ್ತು ಪ್ರತಿವರ್ಷವೂ ಏಸುಕ್ರಿಸ್ತನ ಜೀವಿತದ ಅಂತಿಮವರ್ಷವಾದ ಕ್ರಿ. ಶ. ೩೦ ರಂತೆಯೇ ಇರುವುದು. ಈಸ್ಟರ್ ಹಬ್ಬವು ವರ್ಷವರ್ಷಕ್ಕೆ ಬದಲಾಯಿಸದೆ ಸ್ಥಿರವಾಗುವುದು.

ಈ ೧೩ತಿಂಗಳಿನ ಸ್ಥಿರ (fixed) ವಾದ ಕ್ಯಾಲೆಂಡರು ಜಾರಿಗೆ ಬಂದರೆ ಸರಕಾರಿನೌಕರರ ಸಂಬಳಗಳು ಹೇಗೆ ಮಾರ್ಪಾಡು ಹೊಂದಬಹುದು, ಮನೆಬಾಡಿಗೆಗಳ ಬಡಲಾವಣೆಗಳು ಹೇಗಾಗುವುವು, ಜೀವವಿಮೆಯ ಕಂತಗಳು ಹೇಗೆ ವ್ಯತ್ಯಾಸವಾಗುವುವು ಮುಂತಾದ ಅನೇಕ ಪ್ರಶ್ನೆಗಳು ಮನೋಹರವಾಗಿ ಕಂಡು ಬರುವುವು.

ಕಳೆದ ಅಕ್ಟೋಬರಿನಲ್ಲಿ ನಡೆದ 'ಲೀಗ್ ಆಫ್ ನೇಷನ್ಸ್' ಸಭೆಯಲ್ಲಿ ಮೇಲ್ಕಂಡ ಸಲಹೆಗಳೆಲ್ಲ ಚೆನ್ನಾಗಿ ಶೋಧಿಸಲ್ಪಟ್ಟು ೧೩ತಿಂಗಳಿನ ಕ್ಯಾಲೆಂಡರು ಸಮಪಾದ (Equal quarters) ಗಳುಳ್ಳ ವರ್ಷದ ಕ್ಯಾಲೆಂಡರು ಇವುಗಳ ವಿಷಯಚರ್ಚೆಯಾಗಿ ಸಮಿತಿಯವರು ತಮ್ಮ ಅಭಿಪ್ರಾಯಗಳನ್ನೂ ಈ ಪರಿಷ್ಕೃತವಾದ ಹೊಸ ಕ್ಯಾಲೆಂಡರುಗಳ ಗುಣದೋಷಗಳನ್ನೂ ಬೇರೆ ಬೇರೆ ಸರಕಾರಗಳಿಗೆ ತಿಳಿಸಿದ್ದಾರೆ. ಇನ್ನು ಆಯಾ ಮತಸ್ಥರ ಅಭಿಪ್ರಾಯಗಳನ್ನು ಕ್ರೋಡೀಕರಿಸಿ ಪ್ರಜಾಭಿಪ್ರಾಯವನ್ನರಿತು ನ್ಯಾಯವಿಧಾಯಕಸಭೆಗಳಲ್ಲಿ ಕಾನೂನಿನ ಮೂಲಕ ಕ್ಯಾಲೆಂಡರನ್ನು ನಡೆವಳಿಕೆಯಲ್ಲಿ ತರುವ ಕೆಲಸವು ಸರಕಾರಗಳಿಗೆ ಸೇರಿದೆ. ವಿಶೇಷವಾಗಿ ಪ್ರಖ್ಯಾತರಾದ ಪಾದ್ರಿಗಳೆಲ್ಲ ತಮ್ಮ ತಮ್ಮ ಅಭಿಪ್ರಾಯಗಳನ್ನು ಈಗ ಕೊಡಬೇಕಾಗಿದೆ. ಒಂದು ಹೊಸ ವಾರವನ್ನು ಕಲ್ಪಿಸುವುದು ಜನರ ಮನಸ್ಸಿಗೆ ಸುಲಭವಾಗಿ ಒಪ್ಪುವುದಿಲ್ಲವಾದುದರಿಂದ ಪ್ರಜಾಮತವು ಈ ವಿಷಯದಲ್ಲಿ ಹೇಗೆ ಬರುವುದೊ ಹೇಳಲಾಗುವುದಿಲ್ಲ. ಎಲ್ಲ ಸರಕಾರದವರೂ ಒಪ್ಪಿಗೆ ಕೊಟ್ಟ ಮೇಲೆ ಪರಿಷ್ಕೃತವಾದ ಕ್ಯಾಲೆಂಡರನ್ನು ನಡೆವಳಿಕೆಯಲ್ಲಿ ತರುವ ದಿನವನ್ನು ಸಮಿತಿಯವರು ನಿಶ್ಚಯ ಮಾಡುವರು.

CC-0. Jangamwadi Math Collection. Digitized by eGangotri

# ಜೈನಸಮ್ರಾಟ್
# ಶ್ರೇಣಿಕಬಿಂಬಸಾರ

ಶ್ರೀ. ಎನ್. ಎಸ್. ಜೈನಿ, ನೆಲ್ಲಿಕಾರು ದ. ಕ.

ಆಧುನಿಕ ಶೃಂಖಲಾಬದ್ಧ ಇತಿಹಾಸವು ಜೈನ ಸಮ್ರಾಟ್ ಶ್ರೇಣಿಕನಿಂದ ಪ್ರಾರಂಭವಾಗುತ್ತದೆಂಬುದು ಇತಿಹಾಸಜ್ಞರಿಗೆ ಗೊತ್ತಿಲ್ಲದ ವಿಷಯವಲ್ಲ. ಅವನಿಂದ ಪೂರ್ವದ ಇತಿಹಾಸಕಾಲವನ್ನು ಐತಿಹಾಸಿಕ ವಿದ್ವಾಂಸರೆಲ್ಲರೂ ಇತಿಹಾಸಪೂರ್ವಕಾಲ (Pre-historic age) ವೆನ್ನುವರು. ಅರ್ಥಾತ್ ಜೈನಸಮ್ರಾಟ್ ಶ್ರೇಣಿಕನೇ ಪ್ರಥಮನಿಶ್ಚಿತವಾದ ಭಾರತೀಯ ಸತ್ತಾಸಂಪನ್ನ ಶಾಸಕನೆಂದು ಅವರ ಸಮ್ಮತಿ ಇದೆ. ಇವನು ಭಗವಾನ್ ಮಹಾವೀರನ ಶಿಷ್ಯನಾಗಿದ್ದನು. ಮಹಾವೀರನ ಸಮಕಾಲೀನನಾದ್ದುದರಿಂದ ಇವನ ಸಮಯವು ಕ್ರಿಸ್ತಪೂರ್ವ ೬೫೧ ರಿಂದ ೫೫೩ ರ ವರೆಗೆ ಎಂಬುದು ಸರಿಯಾಗಿದೆ. ಶ್ರೇಣಿಕನು ತನ್ನ ರಾಜ್ಯಕಾಲದಲ್ಲಿ ರಾಜಗೃಹವೆಂಬ ಹೆಸರಿನ ತನ್ನ ರಾಜಧಾನಿಯನ್ನು ಪುನಃ ನಿರ್ಮಾಣಮಾಡಿದ್ದನು; ಮತ್ತು ವಂಶಪರಂಪರೆಯಿಂದ ಪ್ರಾಪ್ತವಾದ ರಾಜ್ಯವನ್ನು ವೃದ್ಧಿಮಾಡಿದ್ದನು. *

ಶ್ರೇಣಿಕನು ತನ್ನ ಪ್ರಾರಂಭಿಕ ಜೀವನದಲ್ಲಿ ಅಂದರೆ ಯೌವನಾವಸ್ಥೆಯನಂತರದವರೆಗೂ ಬೌದ್ಧಧರ್ಮಾವಲಂಬಿಯಾಗಿದ್ದನೆಂದು ಜೈನರ ಶಾಸ್ತ್ರಗಳಿಂದ ಸ್ವಯಂ ವ್ಯಕ್ತವಾಗುತ್ತದೆ. ಪರಂತು ಉಳಿದ ಜೀವನವೆಲ್ಲಾ ತನ್ನ ರಾಣಿ ಚೇಲನೆಯ ಪ್ರಯತ್ನದಿಂದ ಜೈನನಾಗಿದ್ದನು. ಈ ಕಾರಣದಿಂದ ಬೌದ್ಧಶಾಸ್ತ್ರಗಳಲ್ಲಿ ಇವನ ಕೊನೆಯ ಜೀವನದ ಯಾವುದೊಂದು ನಿಶ್ಚಿತವರ್ಣನೆ ಇರುವುದಿಲ್ಲ. ಹಾಗೆ ಇಲ್ಲದಿರುವುದೂ ಸರಿಯೇ ಆಗಿದೆ-ಏಕೆಂದರೆ, ಬೌದ್ಧಧರ್ಮಾವಲಂಬಿಯಾಗಿದ್ದ ಶ್ರೇಣಿಕನು ಜೈನನಾದುದು ಜೈನಧರ್ಮದ ವಿಜಯವಾಗಿದ್ದಿತು. ಹೀಗಿರುವಾಗ ಯಾವನೇ ಇರಲಿ, ತನ್ನ ಎದುರುಪಕ್ಷದ ವಿಜಯದ ವರ್ಣನೆಯನ್ನು ಮಾಡುವನೇ? ಆದುದರಿಂದಲೇ ಬೌದ್ಧರು 'ತನ್ನ ತಂದೆಯಂತೆ ಪ್ರಾರಂಭಿಕಜೀವನದಲ್ಲಿ ಜೈನ ಧರ್ಮಾವಲಂಬಿಯಾಗಿದ್ದ, ಶ್ರೇಣಿಕಪುತ್ರ ಕುಣಿಕನು ಸರ್ವದುಷ್ಕೃತ್ಯಗಳ ಸಮರ್ಥಕನೆಂದೂ ಪೋಷಕನೆಂದೂ ಬರೆದಿದ್ದಾರೆ. ನಾವು ಈ ಲೇಖನಗಲ್ಲಿ ಇತಿಹಾಸಕಾಲದ ಪ್ರಥಮದ ರಾಜನನ್ನೇ ಕೊಂದು, ಇತಿಹಾಸದಲ್ಲಿ 'ಪ್ರಥಮಗ್ರಾಸೇ ಮಕ್ಷಿಕಾಪಾತಃ' ಎಂಬ ನೀತಿಯು ಚರಿತಾರ್ಥಮಾಡಲ್ಪಟ್ಟಿದೆ ಎಂಬುದನ್ನು ತೋರಿಸಿಕೊಡುವೆವು.

ಜೈನಶಾಸ್ತ್ರಗಳಲ್ಲಿ ಮಹಾರಾಜ ಶ್ರೇಣಿಕನ ತಂದೆಯು ಉಪಶ್ರೇಣಿಕನೆಂದಿದೆ. ಅವನು ರಾಜಗೃಹದಲ್ಲಿದ್ದು ಕೊಂಡು ಮಗಧ ದೇಶವನ್ನು ಆಳುತ್ತಿದ್ದನು. ಮಗಧ ದೇಶವಲ್ಲದೆ ಇನ್ನೂ ಕೆಲವು ದೇಶಗಳು ಅವನ ಆಳ್ವಿಕೆಯಲ್ಲಿದ್ದುವು. ಚಂದ್ರಪುರದ ಪ್ರತಾಪಶಾಲಿಯಾದ ರಾಜಾ ಸೋಮಶರ್ಮನು ಕೂಡ ಅವನ ಆಧೀನತೆಯನ್ನು ಸ್ವೀಕಾರ ಮಾಡಿದ್ದನು. ಅವನ ಈ ವೀರತ್ವದಿಂದಲೇ ಹಿಂದುಗಳ ವಿಷ್ಣುಪುರಾಣದಲ್ಲಿ ಶಿಶುನಾಗವಂಶದ ಆನೆಯ ರಾಜನ ಹೆಸರು ಕ್ಷತ್ರೋಜಸ್ ಎಂದು ಬರೆದಿದ್ದರೆಂದು ತೋರುತ್ತದೆ. ಶ್ರೇಣಿಕನು ಅದೇ ವಂಶದ ಐದನೆಯ ರಾಜನು. ಆದುದರಿಂದ ಕ್ಷತ್ರೋಜಸನ್ನು ಜೈನಶಾಸ್ತ್ರಗಳ ಉಪಶ್ರೇಣಿಕನೆಂಬುದೇ ನಿಶ್ಚಯವಾಗುವುದು.

ಮಹಾರಾಜ ಉಪಶ್ರೇಣಿಕನ ರಾಣಿ-ಇಂದ್ರಾಣಿಯ ಗರ್ಭದಿಂದ ಶ್ರೇಣಿಕನು ಜನ್ಮವೆತ್ತಿದ್ದನು. ಕುಮಾರ ಶ್ರೇಣಿಕನು ಕ್ರಮಶಃ ದೊಡ್ಡವನಾದನು. ಅವನು ತನ್ನ ಬಾಲ್ಯದಲ್ಲಿಯೇ ಒಳ್ಳೆಯ ಬುದ್ಧಿಯುಳ್ಳವನಾದುದರಿಂದ ಸಜ್ಜನರಿಗೆ ಪೂಜ್ಯನಾಗಿದ್ದನು.

ಒಂದು ದಿನ ಮಹಾರಾಜ ಉಪಶ್ರೇಣಿಕನು ಒಂದು ಹೊಸ ಕುದುರೆಯನ್ನು ಪರೀಕ್ಷೆಮಾಡುತ್ತಿದ್ದಾಗ, ಆ

* Oxford History of India by V. Smith. page 56.

CC-0. Jangamwadi Math Collection. Digitized by eGangotri

ಅವನನ್ನು ಅಜ್ಞಾತಸ್ಥಾನಕ್ಕೆ ಎತ್ತಿಕೊಂಡು ಓಡಿ, ಒಂದು ಗಹನವಾದ ವನದಲ್ಲಿ ಬೀಳಿಸಿತು. ಅಲ್ಲಿ ಭಿಲ್ಲರ ಅಧಿಪತಿಯಾದ ಯಮದಂಡನೆಂಬವನು ಅವನಿಗೆ ಆಶ್ರಯ ವನ್ನಿತ್ತನು. ಆ ಯಮದಂಡನು ಒಬ್ಬ ಕ್ಷತ್ರಿಯ ರಾಜ ನಾಗಿದ್ದನು. ಅವನು ರಾಜ್ಯಭ್ರಷ್ಟನಾಗಿ ಅಲ್ಲಿ ಇರುತ್ತಿ ದ್ದನು. ಮಹಾರಾಜ ಉಪಶ್ರೇಣಿಕನು ಅವನ ಸುಂದರ ಕನ್ಯೆ ತಿಲಕವತಿಯ ರೂಪ–ಲಾವಣ್ಯಕ್ಕೆ ಮುಗ್ಧನಾಗಿ ಯಮದಂಡನ ಹತ್ತಿರ ಅವಳನ್ನು ಯಾಚನೆ ಮಾಡಿದನು. ಅವನು ಆ ಕನ್ಯೆಯಲ್ಲಿ ಹುಟ್ಟಿದ ಪುತ್ರನು ಮುಂದಕ್ಕೆ ರಾಜ್ಯಾಧಿಕಾರಿಯಾಗಬೇಕೆಂಬ ಪ್ರತಿಜ್ಞೆಯ ಮೇಲೆ ಅವ ನಿಗೆ ತಿಲಕವತಿಯನ್ನು ಕೊಟ್ಟನು. ಆ ಪ್ರತಿಜ್ಞೆಗನುಸಾರ ವಾಗಿ ತಿಲಕವತಿಯ ಪುತ್ರ 'ಚಲಾತಿ'ಗೆ ಮುಂದಕ್ಕೆ ರಾಜ್ಯಾಧಿಕಾರವು ಕೊಡಲ್ಪಟ್ಟಿತ್ತು. ಕುಮಾರ ಶ್ರೇಣಿ ಕನ ಮೇಲೆ ಕೆಲವು ದೋಷಗಳನ್ನು ಆರೋಪಣೆ ಮಾಡಿ, ಅವನು ದೇಶದಿಂದ ಹೊರಟುಹೋಗಬೇಕೆಂದು ಕಠಿನ ಆಜ್ಞೆಯಾಗಿತ್ತು. ಅವನು ಮಂತ್ರಿ ಮೊದಲಾದವರು ಹೇಳಿದುದರಿಂದ ತಂದೆಯ ಆಜ್ಞೆಯನ್ನು ಪಾಲನೆ ಮಾಡಿದ ನೆಂದು ಸರ್. ರಮೇಶಚಂದ್ರದತ್ತರು ತಮ್ಮ 'ಭಾರತ ವರ್ಷದ ಸಭ್ಯತೆಯ ಇತಿಹಾಸ'ದಲ್ಲಿ ಉಲ್ಲೇಖ ಮಾಡಿ ದ್ದಾರೆ—"....ಮಗಧೆಯ ಒಬ್ಬ ರಾಜಕುಮಾರನನು.... ಕ್ರಿಸ್ತಪೂರ್ವ ಐದನೆಯ ಶತಮಾನದಲ್ಲಿ ಅವನ ತಂದೆಯು ದೇಶದಿಂದ ಹೊರಪಡಿಸಿದ್ದನು." ಅವನೇ ಈ ರಾಜ ಕುಮಾರಶ್ರೇಣಿಕನಾಗಿರಬೇಕು. ರಾಜಗೃಹದಿಂದ ಹೊರಟು ಅವನು ನಂದಿಗ್ರಾಮಕ್ಕೆ ಹೋದನು; ಆದರೆ ಅಲ್ಲಿಯ ಬ್ರಾಹ್ಮಣರು ಅವನಿಗೆ ಆಶ್ರಯವನ್ನು ಕೊಡ ಲಿಲ್ಲ; ಆದುದರಿಂದ ಅವನು ಮುಂದೆ ನಡೆದು ಬೌದ್ಧ ಸನ್ಯಾಸಿಗಳ ಆಶ್ರಯಕ್ಕೆ ಹೋದನು, ಅಲ್ಲಿ ಅವರ ಆತಿಥ್ಯ ವನ್ನು ಸ್ವೀಕರಿಸಿ ಬೌದ್ಧಧರ್ಮದ ಅನುಯಾಯಿ ಯಾದನು. ಗೌತಮ ಬುದ್ಧನು ಇವನ ಸಮಕಾಲೀನ ನಾಗಿದ್ದರೂ ಆ ಬೌದ್ಧಾಚಾರ್ಯನು ಗೌತಮ ಬುದ್ಧನೇ ಆಗಿದ್ದನೆಂದಾಗಲಿ ಅಥವಾ ಬೇರೊಬ್ಬ ವ್ಯಕ್ತಿಯೆಂದಾ ಗಲಿ ಗೊತ್ತಾಗುವುದಿಲ್ಲ. ಹೇಗೂ ಇರಲಿ, ಕುಮಾರ ಶ್ರೇಣಿಕನು ಕೆಲವು ದಿನಗಳವರೆಗೆ ಅಲ್ಲಿಯೇ ಇದ್ದನು.

ಕೆಲವು ದಿನಗಳ ನಂತರ ಅವನು ಬೌದ್ಧಾಶ್ರಮದಿಂದ ಇಂದ್ರದತ್ತ ಶ್ರೇಷ್ಠಿಯೊಂದಿಗೆ ಆತನ ವೇಣಪ್ಪದ್ಮ ನಗರಕ್ಕೆ ಹೋದನು. ಇಂದ್ರದತ್ತನಿಗೆ ನಂದಿಶ್ರೀ ಎಂಬ ಸರ್ವ ಗುಣಸಂಪನ್ನೆಯಾದ ಒಬ್ಬ ಮಗಳಿದ್ದಳು. ಅವಳು ಕುಮಾರಶ್ರೇಣಿಕನ ಗುಣಗಳಿಗೆ ಸೋತು ಅವನಲ್ಲಿ ಆಸಕ್ತೆ ಯಾದಳು. ಇಂದ್ರದತ್ತನು ಅವಳನ್ನು ಕುಮಾರಶ್ರೇಣಿ ಕನಿಗೆ ಮದುವೆ ಮಾಡಿಕೊಟ್ಟನು. ಕುಮಾರಶ್ರೇಣಿಕನು ಅಲ್ಲಿ ಸುಖವಾಗಿದ್ದನು. ಇತ್ತ ಮಹಾರಾಜ ಉಪಶ್ರೇಣಿ ಕನು ಮರಣಪಟ್ಟನು. ಚಲಾತಿಯು ಪ್ರಜೆಗಳಿಗೆ ಅನ್ಯಾಯ ಮಾಡಿದನು. ಅದರಿಂದ ಪ್ರಜೆಗಳು ದುಃಖಿತ ರಾಗಿ ಕುಮಾರಶ್ರೇಣಿಕನನ್ನು ಕರೆಯಿಸಿದರು. ಕುಮಾರನ ಆಗಮನವನ್ನು ಕೇಳಿ ಚಲಾತಿಯು ಭಯದಿಂದ ಓಡಿ ಹೋದನು. ಶ್ರೇಣಿಕನು ರಾಜ್ಯಾರೂಢನಾಗಿ ನೀತಿ ಪೂರ್ವಕ ಪ್ರಜೆಗಳನ್ನು ಪಾಲನೆಮಾಡುತ್ತಿದ್ದನು.

ಇದೇ ಸಮಯದಲ್ಲಿ ಶ್ರೇಣಿಕನಿಗೆ 'ನಂದಿಶ್ರೀ'ಯ ಗರ್ಭದಿಂದ, ಅಭಯಕುಮಾರನೆಂಬ ಪುತ್ರನು ಜನ್ಮವೆತ್ತಿ ದ್ದನು. ಅವನು ಧಾರ್ಮಿಕನೂ, ನ್ಯಾಯಪರನೂ, ಬುದ್ಧಿ ವಂತನೂ ಆಗಿದ್ದನು. ಭಗವಾನ್ ಮಹಾವೀರನ ದರ್ಶನ ವಾಗುತ್ತಲೇ ಅವನು ಯುವರಾಜನಾಗಿದ್ದರೂ ರಾಜ ಸಂಪತ್ತನ್ನು ತ್ಯಾಗಮಾಡಿ ಪರಮ–ಪ್ರಶಂಸನೀಯ ವಾದ ಮುನಿಮಾರ್ಗವನ್ನು ಆಶ್ರಯಿಸಿದನು.

ಬೌದ್ಧಗ್ರಂಥಗಳಲ್ಲಿಯೂ ಅಭಯಕುಮಾರನ ಉಲ್ಲೇಖವಿದೆ. ಅವುಗಳಲ್ಲಿ ಅಭಯಕುಮಾರನು ಮಹಾ ರಾಜ ಶ್ರೇಣಿಕ ಬಿಂಬಸಾರನ ಪತ್ನಿ ಲಿಚ್ಛವಿಯ ಗರ್ಭ ದಿಂದ ಹುಟ್ಟಿದನೆಂದು ಬರೆದಿದೆ. ಬೌದ್ಧರ ತಿಬೇತಿನ 'ದುಲ್ವ' ಎಂಬ ಗ್ರಂಥದಲ್ಲಿ ಅವನ ವರ್ಣನೆಯು ಹೀಗಿದೆ— "ವೈಶಾಲಿಯಲ್ಲಿ 'ಲಿಚ್ಛವೀ ಮಹಾನಾಮನ' ಎಂಬ ಹೆಸರಿನವನೊಬ್ಬನಿದ್ದನು. ಅವನ ತೋಟದ ಆಮ್ರಕುಂಜ ದಲ್ಲಿ ಒಂದು ಕದಳಿಯ ವೃಕ್ಷದಿಂದ ಸುಂದರ ಕನ್ಯೆಯು ಉತ್ಪನ್ನಳಾದಳು. ಅವಳ ಸಂಪೂರ್ಣಅಂಗಗಳು ಪುಷ್ಟಿ ಯಾಗಿದ್ದುವು. ಅವಳನ್ನು ಮಹಾನಾಮನನು ಆಮ್ರ ಪಾಲಿ'ಯೆಂದು ಕರೆದು ಪ್ರಸಿದ್ಧ ಮಾಡಿದನು. ಅವಳು ಯೌವನಾವಸ್ಥೆಯನ್ನು ಹೊಂದಿದಾಗ ವೈಶಾಲಿಯ ನಿಯ ಮಾನುಸಾರ (ಸುಂದರ ಸ್ತ್ರೀಗೆ ಮದುವೆ ಮಾಡಬಾರದು, ಅವಳನ್ನು ಜನತೆಗೋಸ್ಕರ ಬಿಟ್ಟುಬಿಡುವುದು.) ಅವಳು ವೇಶ್ಯೆ (Courtezan) ಯಾದಳು. ಗೋಪಾಲನ ಮೂಲಕ ಶ್ರೇಣಿಕಬಿಂಬಸಾರನು ಈ ಸಂಗತಿಯನ್ನು ತಿಳಿದು,


CC-0. Jangamwadi Math Collection. Digitized by eGangotri

ಅವನು ಅವಳ ಸಮೀಪ ವೈಶಾಲಿಗೆ ಹೋದನು. ಆಗ ಅವನು ವೈಶಾಲಿಯೊಡನೆ ಯುದ್ಧಮಾಡುತ್ತಿದ್ದರೂ, ಏಳು ದಿನಗಳವರೆಗೆ ಆಮ್ರಪಾಲಿಯೊಂದಿಗೆ ಇದ್ದನು. ಅವಳಿಗೆ ಗರ್ಭೋತ್ಪತ್ತಿಯಾಗಿ ಒಬ್ಬ ಪುತ್ರನು ಹುಟ್ಟಿದನು. ಅವಳು ಅವನನ್ನು ಅವನ ತಂದೆಯಬಳಿಗೆ ಕಳುಹಿಸಿದಳು. ಆ ಬಾಲಕನು ರಾಜನ ಬಳಿಗೆ ನಿರಾತಂಕವಾಗಿ ಮುಟ್ಟಿ ಅವನ ಹೆಗಲಮೇಲೆ ಏರಿದನು. ಆಗ ಅವರೆಲ್ಲರೂ 'ಈ ಬಾಲಕನಿಗೆ ಸ್ವಲ್ಪವೂ ಭಯವಿಲ್ಲ' ಎಂದರು. ಆದುದರಿಂದ ಅವನು 'ಅಭಯ' ಎಂಬ ಹೆಸರಿನಿಂದ ವಿಖ್ಯಾತನಾದನು.''

ಉಕ್ತಕಥೆಯನ್ನು ಶ್ರೀ ವಿಮಲಚರಣ ಲಾ ಎಮ್. ಎ. ಬಿ. ಎಲ್ ಅವರ ಪುಸ್ತಕ (The Kshatriya Clans in Buddhist India; ಪುಟ ೧೨೭ ೧೨೮) ದಲ್ಲಿ ಕೊಡಲಾಗಿದೆ. ಆದರ ಮೇಲೆ ಶ್ರೀ.ಲಾ ಅವರು 'ಜೈನಶಾಸ್ತ್ರಾನುಸಾರವಾಗಿ ಅಭಯ ಅಥವಾ ಅಭಯಕುಮಾರನು ವೈಶಾಲಿಯ ವೇಶ್ಯೆ ಆಮ್ರಪಾಲಿಯ ಪುತ್ರನೆಂದು ವ್ಯಕ್ತಮಾಡುವ ಈ ಕಥೆಯು ಪಾಲೀ (ಬೌದ್ಧ) ಗ್ರಂಥಗಳಿಗೆ ವಿರುದ್ಧವಾಗಿದೆ' ಎಂದು ಹೇಳುತ್ತಾರೆ. ಅಭಯಕುಮಾರನು ಪೂರ್ಣ ಜೈನನಾಗಿದ್ದ ಕಾರಣ ಜೈನರೊಡನಿರುವ ದ್ವೇಷದಿಂದ ಬೌದ್ಧರು ಈ ಕಥೆಗೆ ಈ ರೂಪವನ್ನು ಕೊಟ್ಟಿರಬಹುದೆಂದು ತೋರುತ್ತದೆ.

ಅಭಯಕುಮಾರನು ಜೈನನಾಗಿದ್ದ ಸಂಗತಿ ಬೌದ್ಧ ಗ್ರಂಥಗಳ ಕೆಳಗೆ ಬರೆದ ವರ್ಣನೆಯಿಂದ ಪ್ರಕಟವಾಗುತ್ತದೆ—

''ಆನಂದನು (ಬುದ್ಧನ ಮುಖ್ಯ ಶಿಷ್ಯ) ವೈಶಾಲಿಯಲ್ಲಿದ್ದಾಗ ಅಭಯನೆಂಬ ಲಿಚ್ಛಾವಿಯೂ ಬೇರೊಬ್ಬ ಪಂಡಿತಕುಮಾರನೆಂಬ ಲಿಚ್ಛಾವಿಯೂ ಆನಂದನ ಸಮೀಪಕ್ಕೆ ಬಂದರು. ಅಭಯನು ಆನಂದನೊಡನೆ ಹೇಳಿದನು. ''ನಿಗ್ರಂಥನಾತ್ತಪುತ್ತ (ಭಗವಾನ್ ಮಹಾವೀರ) ನು ಸರ್ವಜ್ಞನೂ ಸರ್ವದರ್ಶಿಯೂ ಆಗಿದ್ದಾನೆ. ಅವನು ಜ್ಞಾನದ ಪ್ರಕಾಶವನ್ನು ತಿಳಿದಿದ್ದಾನೆ. ಅವನು ಧ್ಯಾನದ ಮೂಲಕ ಪೂರ್ವಕರ್ಮಗಳನ್ನು ನಷ್ಟ ಮಾಡಬಹುದೆಂದು ತಿಳಿದಿದ್ದಾನೆ. ಕರ್ಮಗಳು ನಷ್ಟವಾಗುವುದರಿ[illegible] ದುಃಖಕ್ಕೆ ತಡೆಯುಂಟಾಗುತ್ತದೆ; ದುಃಖಕ್ಕೆ ತಡೆಯು[illegible]ಟಾಗುವುದರಿಂದ ಸಮ್ಮ ವಿಷಯವಾಸನೆಗಳು ನ[illegible]ವಾಗುತ್ತವೆ; ಅಷ್ಟಾದ ಮೇಲೆ ಸಂಸಾರದಲ್ಲಿ ಮು[illegible] ದುಃಖವುಂಟಾಗುವುದಿಲ್ಲ. ಈ ವರ್ತಮಾನಜೀವನ[illegible] ಶುದ್ಧತೆಯಮೂಲಕ ದುಃಖದ ನಿವೃತ್ತಿಯಾಗುತ್ತದೆ.''*

ರಾಜಕುಮಾರ ಶ್ರೇಣಿಕನು ಪಟ್ಟಕ್ಕೆ ಬರುತ್ತ[illegible] ದಕ್ಷಿಣದ ಕೇಟಲಾ ನಗರಿಯ ರಾಜಾ ಮೃಗಾಂ[illegible] ತನ್ನ ಪುತ್ರಿ ವಿಲಾಸವತಿಯನ್ನು ಮಹಾರಾಜನಿಗೆ ಕಾ[illegible]ಯಾಗಿ ಕಳುಹಿಸಿದನು. ಬೌದ್ಧರ ತಿಬೇತಿನ 'ದು[illegible] ದಲ್ಲಿ ವಾಸವೀ ಎಂಬ ಹೆಸರಿನಿಂಗ ಬಹುಶಃ [illegible] ಉಲ್ಲೇಖವಿರಬಹುದು. ಇವಳ ಗರ್ಭದಿಂದ ಕು[illegible] ಅಜಾತಶತ್ರು ಹುಟ್ಟಿದನೆಂದು ಬರೆದಿದೆ. ಕುಣಿ[illegible] ಮಹಾರಾಜಚೇಟಕನ ಪುತ್ರಿ ಚೇಲನೆಯಿಂದುತ್ಪ[illegible] ನಾದನೆಂದು ಹೇಳದೆ ವಾಸವಿಯಿಂದುತ್ಪನ್ನನಾದನೆ[illegible] ಹೇಳಲಿಕ್ಕೆ ಅವನು ಪ್ರಾರಂಭದಲ್ಲಿ ಜೈನಧರ್ಮದ ಪ[illegible]ಪಾತಿಯಾಗಿದ್ದುದೇ ಕಾರಣವಿರಬಹುದು. ಆದುದರಿ[illegible] ಲಿಚ್ಛಾವಿಜಾತಿಯ ಕನ್ಯೆಯು ಚೇಟಕ ರಾಜನ ಪು[illegible] ಶ್ರೇಣಿಕನ ರಾಣಿ ಚೇಲನೆಯಾಗಿದ್ದರೂ ಬೌದ್ಧಗ್ರ[illegible] ಗಳಲ್ಲಿ ವಾಸವಿಯು ಒಬ್ಬ ಸಾಧಾರಣ ವಿಚ್ಛಾವಿನ[illegible] ಕನ ಪುತ್ರಿ ಎಂದು ಬರೆದಿದೆ. ಬೌದ್ಧಗ್ರಂಥಗಳಲ್ಲಿ ಶ್ರೇಣಿ[illegible] ಇನ್ನೊಬ್ಬ ರಾಣಿಯು ಕೌಶಲದ ರಾಜನ [illegible] ಎಂದು ಹೇಳಿದೆ. ಜೈನಶಾಸ್ತ್ರಗಳಲ್ಲಿ ಇವಳ ಉಲ್ಲೇ[illegible] ವಿಲ್ಲ. ಈ ರಾಣಿಯು ಬೌದ್ಧಳಾಗಿದ್ದ ಕ್ಷೇಮಾ [illegible]ಳಾಗಿರಬಹುದು.‡

ರಾಜ್ಯಾಧಿರೂಢನಾಗುತ್ತಲೇ ಶ್ರೇಣಿಕನು ವೇ[illegible] ನಂದಿಗ್ರಾಮದ ಬ್ರಾಹ್ಮಣರನ್ನು ಶಿಕ್ಷಿಸಬೇಕೆಂದಿ[illegible] ಆದರೆ ಅಭಯಕುಮಾರನ ಬುದ್ಧಿವಂತಿಕೆಯಿಂದ [illegible] ಬದುಕಿಕೊಂಡರು.

ಆ ಸಮಯದಲ್ಲಿ ಮಗಧೆ, ಕೌಶಲ, ಕಾಶಿ, [illegible] ಇಲ್ಲಿಯೆಲ್ಲ ರಾಜತಂತ್ರಶಾಸನವಿತ್ತು. [illegible] ಇನ್ನೊಂದುಕಡೆ ಶಾಕ್ಯ, ಕಾಲಾಪ, ಕೋಳಿ[illegible]

* ಅಂಗುತ್ತರ ನಿಕಾಯ; Vol, I (P. T. S.). P. P. 220-221

‡ Goutam Buddna, by K. J. Saunders: Page 53

CC-0. Jangamwadi Math Collection. Digitized by eGangotri

ವೋದೀಯ, ಮಲ್ಲ, ಲಿಚ್ಛವಿ, ವಿದೇಹ ಮೊದಲಾದುವುಗಳಲ್ಲಿ ಲೋಕತಂತ್ರಶಾಸನವಿತ್ತು.

ವಿದೇಹದೇಶದ ವೈಶಾಲಿನಗರದ ರಾಜಾ ಚೇಟಕನಿಗೆ ಏಳುಮಂದಿ ಕನ್ಯೆಯರಿದ್ದರು. ಇವರಲ್ಲಿ ಮೊದಲನೆಯವಳ ಹೆಸರು ಪ್ರಿಯಕಾರಿಣಿ. ಕುಂಡಲಪುರದ ಮಹಾರಾಜ ಸಿದ್ಧಾರ್ಥನೊಂದಿಗೆ ಅವಳ ವಿವಾಹವಾಗಿತ್ತು. ಇವಳೇ ಭಗವಾನ್ ಮಹಾವೀರನ ಮಾತೆ. ಎರಡನೆಯ ಕನ್ಯೆಯನ್ನು ವತ್ಸದೇಶದ ಕೌಶಂಬಿಪುರದ ದೊರೆಯಾದ ಮಹಾರಾಜನಾಥ ಅಥವಾ ಸಾರನಿಗೂ ಮೂರನೆಯ ಕನ್ಯೆ ವಸುಪ್ರಭೆಯನ್ನು ದಶಾರ್ಣ (ದಶಾಸನ) ದೇಶದಲ್ಲಿ ಹೇರಕಚ್ಛಪುರ (ಕವ್ಯೈತಪುರ) ದ ಸೂರ್ಯವಂಶದ ರಾಜಾ ದಶರಥನಿಗೂ, ನಾಲ್ಕನೆಯಕನ್ಯೆ ಪ್ರಭಾವತಿಯನ್ನು ಕಚ್ಛದೇಶದ ರೋಸಕಪುರದ ರಾಜಾ ಮಹಾತುರನಿಗೂ ಕೊಟ್ಟಿದ್ದಿತು. ಜೈನ ಉತ್ತರಪುರಾಣಗ್ರಂಥದಲ್ಲಿ ಕಚ್ಛದೇಶದ ಸ್ವಾಮಿಯು ಉದ್ದಾಯನನೆಂದೂ ಶ್ರೇಣಿಕಚರಿತ್ರದಲ್ಲಿ ಮಹಾಹುರನೆಂದೂ ಹೇಳಿದೆ. ಇತ್ತ ಡಾಕ್ಟರ್, ಡಿ. ಆರ್. ಭಾಂಡಾರಕಾರರು ಸ್ವಪ್ನವಾಸವದತ್ತೆ ಮತ್ತು ಪ್ರತಿಜ್ಞಾಯೌಗಂಧರಾಯಣವೆಂಬ ಎರಡು ಮುಖ್ಯಗ್ರಂಥಗಳಿಂದ "ಸಹನೀಕನ ಪುತ್ರ ಮತ್ತು ಸಹ ಶ್ರೇಣಿಕನ ಪೌತ್ರ-ಉದ್ದಾಯನನು ಭಾರತವಂಶದಲ್ಲಿ ಆಗಿಹೋದನೆಂದು ಗೊತ್ತಾಗುತ್ತದೆ. ಮತ್ತು ಅವನ ತಾಯಿ ವಿದೇಹದ ರಾಜನ ಪುತ್ರಿಯಾಗಿದ್ದುದರಿಂದಲೇ ಅವನು 'ವಿದೇಹ ಪುತ್ರ' ನೆನಿಸಿಕೊಂಡನು" ಎಂದು ಪ್ರಕಟಮಾಡಿದ್ದಾರೆ. ಶತನೀಕನು ಕೌಶಂಬಿಯ ರಾಜನಾಗಿದ್ದನೆಂದು ನಾವು ತಿಳಿದಿರುವೆವಾದರೂ, ಶ್ರೇಣಿಕಚರಿತ್ರ ಮತ್ತು ಉತ್ತರಪುರಾಣ ಇವುಗಳಲ್ಲಿ ಅಲ್ಲಿಯ ರಾಜನ ಹೆಸರು ಕ್ರಮವಾಗಿ ನಾಥ ಮತ್ತು ಸಾರ ಎಂದು ಬರೆದಿದೆ. ಇದರಿಂದ ವಿದೇಹಪುತ್ರ ಉದ್ದಾಯನನ ತಂದೆ ಕೌಶಂಬಿಯ ರಾಜನ ಮೂರನೆಯ ಹೆಸರು ಅಥವಾ ಯಥಾರ್ಥವಾದ ಹೆಸರು ಶತನೀಕನೆಂದಿರುವ ಸಂಭವವಿದೆ. ಡಾಕ್ಟರ್ ಭಾಂಡಾರಕರರ ಸಹಶ್ರೇಣಿಕ, ಹಾಗೂ ಶ್ರೇಣಿಕ ಚರಿತ್ರದ ಉಪಶ್ರೇಣಿಕ, ಇವೆರಡೂ ಒಂದೇ ವ್ಯಕ್ತಿಯಾಗಿದ್ದರೆ ಉದ್ದಾಯನನು ಸಮ್ರಾಟ್ ಶ್ರೇಣಿಕನ ತಂದೆ. ಉಪಶ್ರೇಣಿಕ ಪೌತ್ರನಾಗುತ್ತಾನೆ; ಏಕೆಂದರೆ ರಾಜಾ ಶ್ರೇಣಿಕನ ರಾಣಿ ಚೇಲನೆಯು ಇವನ ತಾಯಿಯ ತಂಗಿಯಾಗಿದ್ದಳು. ಹೀಗೆ ಶ್ರೇಣಿಕಚರಿತ್ರದಲ್ಲಿ ರೋಹಕಪುರದ ರಾಜನ ಹೆಸರು ಮಹಾಹುರನೆಂದು ಬರೆದುದೂ, ಉದ್ದಾಯನನು ಕೌಶಂಬಿಯ ರಾಜಕುಮಾರನೆಂಬುದೂ ನಿಜವಾಗಿದೆ.

ಇನ್ನು ಕೌಶಾಂಬಿ ಮತ್ತು ಕಚ್ಛದೇಶದ ಸಂಬಂಧವನ್ನು ಪ್ರಕಟಮಾಡುವುದು ಮಾತ್ರ ಉಳಿದಿದೆ; ಏಕೆಂದರೆ ರಾಜಾಚೇಟಕನ, ವಿದೇಹದಲ್ಲಿದ್ದ ರಾಜಧಾನಿ ವಿಶಾಲಾ ಅಥವಾ ವೈಶಾಲಿಯು ಶ್ರೇಣಿಕಚರಿತ್ರದಲ್ಲಿ ಕಚ್ಛ ದೇಶದಲ್ಲಿದ್ದಿತೆಂದು ಬರೆದಿದೆ. ಜೈನಾಚಾರ್ಯರು ವಿಶಾಲಾ ಕೌಶಾಂಬಿ ಮತ್ತು ರೋಹಕಪುರ ಇವುಗಳಿಂದ ಕೂಡಿದ ದೇಶವನ್ನು ಕಚ್ಛದೇಶವೆಂಬ ಹೆಸರಿನಿಂದ ಬರೆದರೆಂದು ಕಾಣುತ್ತದೆ.

ಮಹಾರಾಜ ಚೇಟಕನ ಉಳಿದ ಮೂವರು ಕನ್ಯೆಯರು ಇನ್ನೂ ಕುಮಾರಿಯರಾಗಿಯೇ ಇದ್ದರು. ಇದರಲ್ಲಿ ಒಬ್ಬಳನ್ನು ಗಾಂಧಾರದೇಶದ ಮಹಾಪುರದ ರಾಜಾ ಮಹೀಪಾಲನ ಪುತ್ರ ಸಾತ್ಯಕಿಯು ಮದುವೆಯಾಗಬೇಕೆಂದು ಅಪೇಕ್ಷೆಮಾಡಿದ್ದನು. ಬೌದ್ಧರ ಜಾತಕ ಕಥಾನಕದ ರಾಜಾ ಬೋಧಿಸತ್ತನೇ ಈ ಸಾತ್ಯಕಿಯಾಗಿರಬಹುದು. ಬೌದ್ಧಲೇಖಕರು ಬೋಧಿಶಬ್ದವನ್ನು ಸತ್ತದೊಂದಿಗೆ ಸೇರಿಸುವ ಸಂಭವವಿದೆ. ಈ ಕಥಾನಕದಲ್ಲಿ ಈ ಬೋಧಿಸತ್ತನು ಪಂಚವ್ರತಗಳನ್ನು ಧಾರಣೆಮಾಡಿದನೆಂದೂ ಬರೆದಿದೆ.* ಇದರಿಂದ ಸಾತ್ಯಕಿ ಮತ್ತು ಬೋಧಿಸತ್ತ ಒಬ್ಬನೇ ವ್ಯಕ್ತಿಯೆಂದು ನಿಶ್ಚಯವಾಗುತ್ತದೆ. ಇರಲಿ, ಈ ಸಾತ್ಯಕಿಯ ಯಾಚನೆಯನ್ನು ಚೇಟಕನು ಸ್ವೀಕಾರಮಾಡಲಿಲ್ಲ. ಅದರಿಂದ ಅವನು ದೀಕ್ಷೆಯನ್ನು ತೆಗೆದುಕೊಂಡನು.

ಉತ್ತರಪುರಾಣದ ಛಂದೋಬದ್ಧ ಹಿಂದೀಆವೃತ್ತಿಯಲ್ಲಿ ರಾಜಾ ಚೇಟಕನು ಮಗಧೆಯಮೇಲೆ ಆಕ್ರಮಣದ ಸಮಯದಲ್ಲಿ ರಾಜಗೃಹದ ಸಮೀಪದಲ್ಲಿ ಇಳಿದಿದ್ದನೆಂದೂ, ಅಲ್ಲಿ ಯಾವನೋ ಒಬ್ಬ ಚಿತ್ರಕಾರನು ಚೇಟಕನ ಪುತ್ರಿಯರ ಚಿತ್ರವನ್ನು ಅವನಿಗೆ ತಂದು ಕೊಟ್ಟಿದ್ದನೆಂದೂ ಉಲ್ಲೇಖವಿದೆ. ಡಾಕ್ಟರ್ ಭಾಂಡಾರ

* The Kshatriya Clans in Buddhist India; P. 152.

CC-0. Jangamwadi Math Collection. Digitized by eGangotri

ಕಾರರೂ ಈ ಯುದ್ಧದ ಉಲ್ಲೇಖಮಾಡುತ್ತ, ರಾಜಾ ಶ್ರೇಣಿಕನ ವೈದೇಹಿ (ಚೇಲನೆ) ಯೊಡನೆ ಪಾಣಿಗ್ರಹಣವು ಈ ಯುದ್ಧದ ಪರಸ್ಪರ ಒಪ್ಪಂದದ ನಂತರವೇ ಆಗಿದ್ದಿತೆಂದು ಹೇಳುವರು. ಶ್ರೇಣಿಕಚರಿತ್ರದಂತೆ ಉತ್ತರಪುರಾಣದ ವರ್ಣನೆಯಿಂದಲೂ ಈ ಯುದ್ಧದನಂತರವೇ ರಾಜಾ ಶ್ರೇಣಿಕನಿಗೆ ಚೇಲನೆಯೊಡನೆ ವಿವಾಹವಾಯಿತೆಂದು ಪ್ರಕಟವಾಗುತ್ತದೆ. ರಾಜಾ ಚೇಟಕನಿಗೆ ಬೇರೊಂದು ಯುದ್ಧವು ಅಂಗದೇಶದ ರಾಜಾ ಕುಣಿಕನೊಡನೆಯೂ ಆಗಿದ್ದಿತು. ಈ ಸಂಬಂಧದಲ್ಲಿ ಶ್ರೇಣಿಕಚರಿತ್ರೆಯಲ್ಲಿ 'ಚಿತ್ರಕಾರನು ಅಲ್ಲಿಗೇ ಪಟವನ್ನು ಕೊಂಡುಹೋಗಿ ಮಹಾರಾಜ ಶ್ರೇಣಿಕನಿಗೆ ಕೊಟ್ಟು ಎಲ್ಲಾ ವೃತ್ತಾಂತವನ್ನು ಹೇಳಿದನು ಮಾತ್ರವಲ್ಲ, ಮಹಾರಾಜ ಚೇಟಕನು ತನ್ನ ಪುತ್ರಿಯರನ್ನು ಜೈನರಲ್ಲದೆ ಇತರರಿಗೆ ಕೊಡಲಾರನೆಂದೂ ಹೇಳಿದನು. ಶ್ರೇಣಿಕನು ಅವರ ಮೇಲೆ ಆಸಕ್ತನಾಗಿದ್ದನು. ಅಭಯಕುಮಾರನು ವೈಶಾಲಿಯಿಂದ ಆ ಕನ್ಯೆಯರನ್ನು ಕಪಟದಿಂದ ತರಲಿಕ್ಕೆ ಹೋದನು. ಅಲ್ಲಿ ತಾನು ಜೈನನೆಂದು ಹೇಳಿ ಅನೇಕ ಉಪಾಯಗಳಿಂದ ಆ ಕನ್ಯೆಯರು ಮಹಾರಾಜ ಶ್ರೇಣಿಕನ ಕಡೆಗೆ ಆಕರ್ಷಿತರಾಗುವಂತೆ ಮಾಡಿದನು. ಕೊನೆಗೆ ಅವರು ಅವನೊಂದಿಗೆ ಬರಲಿಕ್ಕೆ ಸಮ್ಮತಿಸಿದರು; ಪರಂತು ದೊಡ್ಡವರಿಬ್ಬರು ತಂದೆಯ ಭಯದಿಂದ ಹಿಂದೆ ಹೋಗಿಬಿಟ್ಟರು. ಚೇಲನೆಯು ಒಬ್ಬಳೇ ಆದುದರಿಂದ ಹೋಗಲಿಕ್ಕೆ ಸಿದ್ಧಳಾಗಿರದಿದ್ದರೂ, ಅಭಯಕುಮಾರನು ಅವಳನ್ನು ಕರೆದುಕೊಂಡೇಹೋದನು. ರಾಜಗೃಹಕ್ಕೆ ಹೋಗಿ ಅಲ್ಲಿ ರಾಜಾ ಶ್ರೇಣಿಕನಿಗೆ ವಿವಾಹಮಾಡಿಸಿದನು. ಆದರೆ ಶ್ರೇಣಿಕನು ಬೌದ್ಧಧರ್ಮಾವಲಂಬಿಯೆಂದು ಚೇಲನೆಗೆ ಗೊತ್ತಾಗುತ್ತಲೇ ಅವಳಿಗೆ ಅತ್ಯಂತ ದುಃಖವಾಯಿತು. ಅವಳು ಮಲಿನಚಿತ್ತಳಾಗಿಯೇ ಇದ್ದಳು. ಶ್ರೇಣಿಕನು ಆದರ ಕಾರಣವನ್ನು ಕೇಳಿದಾಗ ಅವಳು 'ಪ್ರಾಣಕ್ಕೆ ಹಿತಕರವಾದ ಸತ್ಯಧರ್ಮವನ್ನು ಪಾಲನೆಮಾಡದಿರುವಾಗ ಈ ರಾಜ್ಯಾದಿ ಭೋಗೋಪಭೋಗದ ಸಾಮಗ್ರಿಯಾದರೂ ಏಕೆ?' ಎಂದು ಹೇಳಿದಳು. ಆ ಮೇಲೆ ಶ್ರೇಣಿಕನು ಅವಳಿಗೆ ತನ್ನ ಗುರುಗಳಿಗೆ 'ವಿನಯಾದಿಗಳನ್ನು ಮಾಡಲಿಕ್ಕೆ ಅಪ್ಪಣೆ ಕೊಟ್ಟನು.' ಎಂದಿದೆ.

ಬೌದ್ಧಗ್ರಂಥಗಳಲ್ಲಿ ಚೇಲನೆಯ ಉಲ್ಲೇಖವಿದೆ. ಶ್ವೇತಾಂಬರಸಂಪ್ರದಾಯದ ನಿರ್ಯಾವಲೀಸೂತ್ರನೆಂಬ ಪ್ರಖ್ಯಾತಗ್ರಂಥದಲ್ಲಿಯೂ ಚೇಲನೆಯು ವೈಶಾಲಿಯ ರಾಜರಲ್ಲೊಬ್ಬನಾದ ರಾಜಾ ಚೇಟಕನ ಪುತ್ರಿ ಎಂದೂ, ಅವಳ ಅಕ್ಕನು ಕ್ಷತ್ರಾಣಿ ತ್ರಿಶಲಾ ರಾಣಿಯು ಮಹಾವೀರಸ್ವಾಮಿಯ ಮಾತೆ ಎಂದೂ ಬರೆದಿದೆ. ಬುದ್ಧನ ಒಂದು ತಿಬೇತಿನ ಜೀವನಚರಿತ್ರದಲ್ಲಿ ಚೇಲನೆಯ ಹೆಸರು ಶ್ರೀ ಭದ್ರಾ ಮತ್ತು ಕೆಲವು ಕಡೆಗಳಲ್ಲಿ ಮದ್ರಾ ಎಂದು ಬರೆದಿದೆ. ರಾಜಾ ಶ್ರೇಣಿಕನ ಮೊದಲನೆಯ ರಾಣಿ ನಂದಶ್ರೀಗೆ ಹೀಗೆ ಬರೆದಿರಬಹುದು. ಹೀಗೆ ಸಾಧಾರಣರೀತಿಯಿಂದ ಬೌದ್ಧಗ್ರಂಥಗಳಲ್ಲಿ ಚೇಲನೆಯ ಉಲ್ಲೇಖವು ವೈದೇಹಿಯ ಹೆಸರಿನಿಂದ ಬಂದಿದೆ. ಅವಳ ಪುತ್ರ ಅಜಾತಶತ್ರು ಕುಣಿಕನ ಹೆಸರು ವಿದೇಹಪುತ್ರನೆಂಬ ಹೆಸರಿನಿಂದ ವ್ಯವಹೃತವಾಗಿದೆ. ದಿವ್ಯಾವದಾನವೆಂಬ ಬೌದ್ಧಗ್ರಂಥದ ಒಂದು ಅವದಾನದಲ್ಲಿ ರಾಜಗೃಹದಲ್ಲಿ ರಾಜಾ ಬಿಂಬಸಾರನು ರಾಜ್ಯಭಾರ ಮಾಡುತ್ತಿರುವನೆಂದೂ, ವೈದೇಹಿಯು ಅವನ ಮಹಾದೇವಿ (ಪಟ್ಟರಾಣಿ) ಎಂದೂ, ಅಜಾತಶತ್ರುವು ಅವನ ಪುತ್ರ ಹಾಗೂ ಯುವರಾಜನೆಂದೂ ಸ್ಪಷ್ಟವಾಗಿ ವರ್ಣನೆ ಇದೆ.* ಇದರಿಂದ ಅಜಾತಶತ್ರುವು ರಾಜಾ ಚೇಟಕನ ಪುತ್ರಿ ವೈದೇಹಿ (ಚೇಲನೆ) ಯ ಗರ್ಭದಿಂದ ಜನ್ಮವೆತ್ತಿದ್ದನೆಂದು ಪ್ರಕಟವಾಗುತ್ತದೆ.

ರಾಜಾ ಶ್ರೇಣಿಕನು, ಚೇಲನೆಗೆ ತನ್ನ ಗುರುಗಳ ವಿನಯ ಪೂಜೆ ಮತ್ತು ಜೈನಧರ್ಮಪಾಲನೆಮಾಡುವಂತೆ ಅನುಮತಿ ಕೊಟ್ಟಿದ್ದನೆಂದು ಮೇಲೆ ಹೇಳಿದೆ. ಈ ಮಾತನ್ನು ಕೇಳಿ ಬೌದ್ಧಗುರುವು ರಾಜಾ ಶ್ರೇಣಿಕನ ಬಳಿಗೆ ಬಂದಿದ್ದನು, ಮತ್ತು ರಾಣಿ ಚೇಲನೆಯು ಬೌದ್ಧಧರ್ಮವನ್ನು ಸ್ವೀಕಾರಮಾಡುವಂತೆ ಪ್ರಯತ್ನದಲ್ಲಿದ್ದನು. ಅವನು ತಾನು ಸರ್ವಜ್ಞನೆಂದು ಹೇಳಿದನು. ಚೇಲನೆಯು ಅವನನ್ನು ಪರೀಕ್ಷೆ ಮಾಡಿದಳು. ಪರೀಕ್ಷೆಯಲ್ಲಿ ಅವನು ಅನುತ್ತೀರ್ಣನಾದನು ಮಾತ್ರವಲ್ಲ, ಈ ಪರೀಕ್ಷೆಯ ಕಾರ್ಯದಿಂದ ಅವನಿಗೆ ತಿರಸ್ಕಾರವು ಕೂಡ ಆಯಿತು. ಇದರಿಂದ ಶ್ರೇಣಿಕನ ಹೃದಯದಲ್ಲಿ ಜೈನಮುನಿಗಳ ಮೇಲೆ ದ್ವೇಷವುಂಟಾಯಿತು.

* The Kshtriya Clans in Buddhist India: p.125.

CC-0. Jangamwadi Math Collection. Digitized by eGangotri

ಒಂದುದಿನ ಮಹಾರಾಜನು ಬೇಟೆಗೆ ಹೋಗಿದ್ದಾಗ ಮಾರ್ಗದಲ್ಲಿ ಧ್ಯಾನಾರೂಢನಾಗಿದ್ದ ಒಬ್ಬ ಜೈನಮುನಿಯನ್ನು ಕಂಡನು. ನೋಡುತ್ತಲೇ ತನ್ನ ಗುರುವಿನ ಅಪಮಾನಕ್ಕೆ ಪ್ರತಿಯಾಗಿ ಅಪಮಾನವನ್ನು ಮಾಡಬೇಕೆಂದು ಶ್ರೇಣಿಕನು ಮುನಿಯ ಕುತ್ತಿಗೆಗೆ ಸತ್ತುಬಿದ್ದಿದ್ದ ಒಂದು ಸರ್ಪವನ್ನು ಹಾಕಿಬಿಟ್ಟು ರಾಜಗೃಹಕ್ಕೆ ಮರಳಿ ಬಂದುಬಿಟ್ಟನು. ದಿಗಂಬರಮುನಿಯು ತನ್ನ ಮೇಲೆ ಉಪಸರ್ಗ ಬಂದಿದೆಯೆಂದು ತಿಳಿದು [1]ಸಲ್ಲೇಖನವನ್ನು ಧಾರಣೆಮಾಡಿಬಿಟ್ಟನು. ಶ್ರೇಣಿಕನು ಎಲ್ಲಾ ಸಂಗತಿಗಳನ್ನು ಬೌದ್ಧ ಗುರುಗಳಿಗೆ ಹೇಳಿದನು. ಅವರು ಬಹಳ ಪ್ರಸನ್ನರಾದರು. ಆದರೆ ರಾಣಿ ಚೇಲನೆಗೆ ಬಹಳ ದುಃಖವಾಯಿತು. ಅವಳ ಕಣ್ಣುಗಳಿಂದ ಅಪಾರ ಅಶ್ರುಧಾರೆ ಸುರಿಯಿತು. ಶ್ರೇಣಿಕನು ತನ್ನ ಪ್ರಿಯೆಯ ರೋದನವನ್ನು ನೋಡಿ, ಅವಳನ್ನು ಸಮಾಧಾನಪಡಿಸಲಿಕ್ಕಾಗಿ—" ಪ್ರಿಯೆ, ನೀನು ಆ ವಿಚಾರಕ್ಕಾಗಿ ಸ್ವಲ್ಪವೂ ಶೋಕಮಾಡಬೇಡ; ಇಷ್ಟರಲ್ಲಿ ಆ ಮುನಿಯು ಕುತ್ತಿಗೆಯಿಂದ ಸರ್ಪವನ್ನು ತೆಗೆದು ಬಿಸಾಡಿ, ಎಲ್ಲಿಯೋ ಹೊರಟುಹೋಗಿರಬಹುದು. " ಎಂದು ಹೇಳಿದನು. ಅದನ್ನು ಕೇಳಿ ರಾಣಿಯು—"ನಾಥ! ನಿಮ್ಮ ಈ ಮಾತು ಭ್ರಮೆಮಾತ್ರವಾಗಿದೆ. ಏಕೆಂದರೆ ಅವನು ನನ್ನ ನಿಜವಾದ ಗುರುವಾಗಿದ್ದರೆ, ಎಂದಿಗೂ ತನ್ನ ಕುತ್ತಿಗೆಯಿಂದ ಸರ್ಪವನ್ನು ತೆಗೆದು ಹಾಕಿರಲಾರನೆಂದು ನನಗೆ ವಿಶ್ವಾಸವಿದೆ." ಎಂದು ಹೇಳಿದಳು. ಅನಂತರ ಶ್ರೇಣಿಕನು ರಾಣಿಯೊಂದಿಗೆ ಆ ಮುನಿಯಿದ್ದ ಸ್ಥಳಕ್ಕೆ ಹೋದನು. ಹೋಗಿ ನೋಡಿದಾಗ ಅವನ ಆಶ್ಚರ್ಯಕ್ಕೆ ಮಿತಿಯಿಲ್ಲ; ಅವಿಚಲಧ್ಯಾನಮಗ್ನನಾದ ಮುನಿಯು ತನ್ನ ಧ್ಯಾನದಿಂದ ಸ್ವಲ್ಪವೂ ವಿಚಲಿತನಾಗಿರಲಿಲ್ಲ. ಆ ಮೃತಸರ್ಪವು ಅವನ ಕುತ್ತಿಗೆಯಲ್ಲಿ ಹಾಗೆಯೇ ಇದೆ; ಅದರಲ್ಲಿ ಈಗ ಹುಳುಗಳಾಗಿವೆ.

ರಾಜನೂ ರಾಣಿಯೂ ಮುನಿಯ ಕುತ್ತಿಗೆಯಿಂದ ಸರ್ಪವನ್ನು ತೆಗೆದು ಶರೀರದ ತಾಪವನ್ನು ಹೋಗಲಾಡಿಸಲಿಕ್ಕೆ ಅವನಿಗೆ ಚಂದನದಿಂದ ಅಭಿಷೇಕವನ್ನು ಮಾಡಿದರು. ಉಪಸರ್ಗವು ಪರಿಹಾರವಾಗುತ್ತಲೇ ಮುನಿರಾಜನು ಧ್ಯಾನದಿಂದ ಎದ್ದಾಗ ರಾಜನೂ ರಾಣಿಯೂ ಅವನಿಗೆ ವಂದನೆಯನ್ನು ಮಾಡಿದರು. ಆಗ ಮುನಿರಾಜನು ' ನಿಮಗೆ ಇಬ್ಬರಿಗೂ ಧರ್ಮವೃದ್ಧಿಯಾಗಲಿ' ಎಂದು ಹರಸಿದನು. ಮುನಿರಾಜನ ಈ ಆಶೀರ್ವಾದದಿಂದಲೂ ಶತ್ರುಮಿತ್ರರಲ್ಲಿಯ ಸಮಾನವರ್ತನೆಯಿಂದಲೂ ಶ್ರೇಣಿಕನಿಗೆ ಅವನ ಮೇಲೆ ಬಹಳ ಭಕ್ತಿಯುಂಟಾಯಿತು. ರಾಜನು ಮುನಿಯೊಡನೆ ಧರ್ಮದ ಸ್ವರೂಪವನ್ನು ಕೇಳಿದನು. ಮುನಿರಾಜನ ಉಪದೇಶದಿಂದ ಶ್ರೇಣಿಕನಿಗೆ ಜೈನಧರ್ಮದಲ್ಲಿ ಶ್ರದ್ಧೆಯುಂಟಾಯಿತು.

ಇದಾದ ಕೆಲವುದಿನಗಳ ನಂತರ ಭಗವಾನ್ ಮಹಾವೀರಸ್ವಾಮಿಯ ಸಮವಶರಣ ( ಜೈನತೀರ್ಥಂಕರರು ಧರ್ಮೋಪದೇಶಕೊಡುವ ಸಂಘಟಿತಸಂಘ ) ವು ರಾಜಗೃಹದ ಸಮೀಪ ವಿಪುಲಾಚಲದ ಮೇಲೆ ಬಂದಿತ್ತು. ಶ್ರೇಣಿಕನು ಸಮವಶರಣಕ್ಕೆ ಹೋಗಿ, ಅಲ್ಲಿ ಭಗವಂತನ ವಂದನಾ ಪೂಜೆಗಳನ್ನು ಮಾಡಿ, ಜೈನಧರ್ಮದ ವಾಸ್ತವಿಕ ಸ್ವರೂಪವನ್ನು ತಿಳಿದು ಜೈನಧರ್ಮದಲ್ಲಿ ಪೂರ್ಣ ಶ್ರದ್ಧೆಯುಳ್ಳವನಾದನು. ಕೊನೆಗೆ ಅವನು ಭಗವಾನ್ ಮಹಾವೀರಸ್ವಾಮಿಯ ಪ್ರಧಾನಗೃಹಸ್ಥಶಿಷ್ಯನಾಗಿ ಪರಮೋಚ್ಚಶ್ರಾವಕನಾದನು. ಹಾಗೂ ಸದಾ ಜೈನಧರ್ಮದ ಪ್ರಭಾವನೆಯಲ್ಲಿಯೇ ಲೀನನಾಗಿದ್ದನು. ಹಜಾರೀಬಾಗಿನ ಪಾರಸನಾಥ ( ಜೈನರ ಸಮ್ಮೇದ ಶಿಖರ ) ಪರ್ವತದ ಮೇಲೆ ತೀರ್ಥಂಕರರು ಮೋಕ್ಷವನ್ನು ಪಡೆದ ಸ್ಥಳಗಳಲ್ಲಿ ಶ್ರೇಣಿಕನೇ ಮಂಟಪಗಳನ್ನು ( Shrines ) ಮಾಡಿಸಿದನೆಂದು ಇತಿಹಾಸಜ್ಞರ ವಿಚಾರವಿದೆ. ಹಾಗೆಯೇ ಪಾಟ್ನಾ ಹೈಕೋರ್ಟಿನ ಸಬ್ ಜಡ್ಜರಾದ ಟಿ. ಡಿ. ಬೆನರ್ಜಿಯವರು ಪರ್ವತಸಂಬಂಧವಾದ ವ್ಯಾಜ್ಯದ ನಿರ್ಣಯದಲ್ಲಿ ಹೀಗೆ ಬರೆಯುತ್ತಾರೆ—"ಜನವರಿ ೧೯೨೪ ನೆಯ ಏಶಿಯಾಟಿಕ್ ಸೊಸಾಯಿಟಿ ಪತ್ರದಲ್ಲಿ ಹಿಂದೂಯಾತ್ರಿಯ ಯಾತ್ರಾವರದಿಯಿಂದ ಶ್ರೀ ಮಹಾವೀರಸ್ವಾಮಿಯ ಸಮಕಾಲೀನನಾದ ಮಗಧದೇಶದ ರಾಜಾ ಶ್ರೇಣಿಕನು ತೀರ್ಥಂಕರರ ಮೋಕ್ಷಸ್ಥಾನಗಳನ್ನು ಗೊತ್ತುಹಚ್ಚಿ, ಅಲ್ಲಿ ಚರಣಗಳನ್ನು ಸ್ಥಾಪಿಸಿದನೆಂದು ಗೊತ್ತಾಗುತ್ತದೆ."

ಅದೇ ಸಮಯದಲ್ಲಿ ಮಹಾರಾಜನಿಗೆ ಕುಣಿಕನೆಂಬ

---

1 ಉಪಸರ್ಗೇ ದುರ್ಭಿಕ್ಷೇ ಜರಸಿ ರುಜಾಯಾಂ ಚ ನಿಃಪ್ರತೀಕಾರೇ | ಧರ್ಮಾಯ ತನುವಿಮೋಚನಮಾಹುಃ ಸಲ್ಲೇಖನಾಮಾರ್ಯಾಃ ||
(ಶ್ರೀಸಮಂತಭದ್ರಾಚಾರ್ಯ)

CC-0. Jangamwadi Math Collection. Digitized by eGangotri

ಪುತ್ರನು ಉತ್ಪನ್ನನಾದನು. ಆ ಪುತ್ರನ ಗರ್ಭ ಮತ್ತು ಜನ್ಮದಿಂದಲೇ ಅವನು ಮಹಾರಾಜ ಶ್ರೇಣಿಕನಿಗೆ ವೈರಿಯಾಗುವನೆಂಬ ಅನೇಕ ಲಕ್ಷಣಗಳು ಕಂಡುಬಂದಿದ್ದುವು. ಶ್ರೇಣಿಕನು ಜೈನಮುನಿಗಳನ್ನು ಪರೀಕ್ಷೆ ಮಾಡಿದನಂತರ ಭಗವಾನ್ ಮಹಾವೀರಸ್ವಾಮಿಯ ಸಮವಶರಣಕ್ಕೆ ಬರುವ ಮೊದಲೇ ಕುಣಿಕನು ಜನ್ಮವೆತ್ತಿದ್ದನು. ರಾಣಿ ಚೇಲನೆಯು ಅವನನ್ನು ತನ್ನ ಪತಿಯ ಶತ್ರುವೆಂದು ತಿಳಿದು ಬೇರೆಕಡೆಗೆ ಕಳುಹಿಸಿಕೊಟ್ಟಿದ್ದಳು. ಪರಂತು ರಾಜನು ಪುತ್ರಮೋಹದಿಂದ ಅವನನ್ನು ಕರೆಯಿಸಿದನು. ರಾಜಕುಮಾರ–ಕುಣಿಕನು ಕ್ರಮೇಣ ಯೌವನಾವಸ್ಥೆಯನ್ನು ಹೊಂದಿದನು. ಮಹಾರಾಣಿ ಚೇಲನೆಯು ಕುಣಿಕನನಂತರ ವಾರಿಷೇಣ, ಹಲ್ಲ, ವಿದಲ, ಜಿತಶತ್ರು ಮತ್ತು ಗಜಕುಮಾರ, ಈ ಪುತ್ರರನ್ನೂ ಪಡೆದಿದ್ದಳು. ಆದರೆ ಅವರೆಲ್ಲರೂ ಅಭಯಕುಮಾರನಂತೆ ಗೃಹಸ್ಥಬಂಧನವನ್ನು ಮುರಿದು ಮುನಿಗಳಾಗಿದ್ದರು. ಆದುದರಿಂದ ಕುಣಿಕನಿಗೆ ಯುವರಾಜ ಪಟ್ಟವು ಸಿಕ್ಕಿತು.

ಇದಾದ ಕೆಲವು ವರ್ಷಗಳನಂತರ ಮಹಾರಾಜ ಶ್ರೇಣಿಕನು ತನ್ನ ಸಮಯವನ್ನು ಧರ್ಮಧ್ಯಾನ ಪೂರ್ವಕವಾಗಿ ಕಳೆಯಬೇಕೆಂಬ ವಿಚಾರದಿಂದ ಸಮಸ್ತ ರಾಜರನ್ನು ಒಟ್ಟುಗೂಡಿಸಿ, ದೊಡ್ಡ ಸಮಾರೋಹದಿಂದ ತನ್ನ ವಿಶಾಲರಾಜ್ಯವನ್ನು ಯುವರಾಜ ಕುಣಿಕನಿಗೆ ಕೊಟ್ಟನು. ಯುವರಾಜ ಕುಣಿಕನು ಅಜಾತಶತ್ರುವೆಂಬ ಹೆಸರಿನಿಂದ ಮಗಧೆಯ ಸಿಂಹಾಸನದ ಮೇಲೆ ಕುಳಿತನು.

ಕುಣಿಕನು ಬಾಲ್ಯಾವಸ್ಥೆಯಲ್ಲಿ ಜೈನನಾಗಿದ್ದರೂ ಅವನು ಬೌದ್ಧಜನರೊಂದಿಗೆ ಸೇರಿಕೊಂಡಿರುತ್ತಿದ್ದನು. ಗೌತಮಬುದ್ಧನ ಪ್ರತಿಸ್ಪರ್ಧಿಯಾದ ದೇವದತ್ತನೊಡನೆ ಇವನಿಗೆ ಸಮೀಪ ಸಂಬಂಧವಿದ್ದಿತು. ಅದು ದಿನಂಪ್ರತಿ ವೃದ್ಧಿಯಾಗುತ್ತಿತ್ತು. ಆಗ ಕುಣಿಕನು ತಂದೆತಾಯಿಗಳೆದುರಿಗೆ ಮಾತ್ರ ಜೈನನಾಗಿದ್ದರೂ ಅಂತರಂಗದಲ್ಲಿ ಪೂರ್ಣಬೌದ್ಧನಾಗಿದ್ದನು. ದೇವದತ್ತನು ಅವನ ಮನಸ್ಸಿನ ಪರಿಸ್ಥಿತಿಯನ್ನು ತಿಳಿದು, ಅಜಾತಶತ್ರುವಿನ ಬುದ್ಧಿಯು ತನ್ನ ತಂದೆಗೆ ವಿರುದ್ಧವಾಗುವಂತೆ ಮಾಡಿಬಿಟ್ಟನು. ತಂದೆಯೊಡನೆ ಅವನ ದ್ವೇಷವು ದಿನಂಪ್ರತಿ ವೃದ್ಧಿಯಾಗುತ್ತ ಬಂದಿತು. ಕೊನೆಗೆ ಅವನು ತನ್ನ ತಂದೆಯನ್ನು ಕಾರಾಗೃಹದಲ್ಲಿಟ್ಟುಬಿಟ್ಟನು. ಮಹಾರಾಜ ಶ್ರೇಣಿಕನೊಡನೆ ಪುತ್ರನ ಇಂತಹ ವ್ಯವಹಾರವನ್ನು ಕಂಡು ಚೇಲನೆಯು ಅವನನ್ನು ತಡೆದರೂ ಏನೂ ಪ್ರಯೋಜನವಾಗಲಿಲ್ಲ. ಅವನು ತನ್ನ ತಾಯಿಗೆ ಕೂಡ ಮರ್ಮಭೇದಿಯಾದ ದುರ್ವಚನಗಳನ್ನು ಹೇಳುತ್ತಿದ್ದನು. ಪ್ರಾರಂಭದಲ್ಲಿ ಮಹಾರಾಜನಿಗೆ ದಿನಕ್ಕೊಮ್ಮೆ ಊಟಕ್ಕೆ ಬರಿಯೆ ಅನ್ನ ಸಿಕ್ಕುತ್ತಿತ್ತು. ಊಟದ ಹೊತ್ತಿನಲ್ಲಿ ಅಜಾತಶತ್ರುವು ಅನೇಕ ಕೆಟ್ಟಮಾತುಗಳನ್ನು ಹೇಳುತ್ತಿದ್ದನು. ಮಹಾರಾಜ ಶ್ರೇಣಿಕನು ಬಂಧನದಲ್ಲಿ ಸುಮ್ಮನೆ ಬಿದ್ದುಕೊಂಡು, ಕರ್ಮದ ವಾಸ್ತವಿಕಸ್ವರೂಪವನ್ನೂ ಪಾಪದಫಲವನ್ನೂ ವಿಚಾರಮಾಡುತ್ತಿದ್ದನು. ಈ ಘಟನೆಯು ಭಗವಾನ್ ಮಹಾವೀರಸ್ವಾಮಿಯ ನಿರ್ವಾಣಾನಂತರವೆಂದು ತಿಳಿಯುತ್ತದೆ. ಕೆಲವು ದಿನಗಳನಂತರ ಬರಿಯ ಅನ್ನವು ಕೂಡ ಸಿಕ್ಕದೆ ಹೋಯಿತು. ಈ ಘಟನೆಯ ಸಂಬಂಧದಲ್ಲಿ ಅಮಿತಪುರಧ್ಯಾನಸೂತ್ರವೆಂಬ ಬೌದ್ಧಗ್ರಂಥದಲ್ಲಿ ಹೀಗಿದೆ — "ದೇವದತ್ತನ ಮಾತಿನ ಮೇರೆಗೆ ಅಜಾತಶತ್ರುವು ತನ್ನ ತಂದೆ ಬಿಂಬಿಸಾರನನ್ನು ಹಿಡಿದು ಏಳು ಕೋಟೆಗಳುಳ್ಳ ಕಾರಾಗೃಹದಲ್ಲಿರಿಸಿದನು. ಬಿಂಬಸಾರನ ಪರಮಹಿತೈಷಿ ಮಹಾದೇವಿ ವೈದೇಹಿ (ಚೇಲನೆ)ಯು ಸ್ನಾನಾದಿ ಕ್ರಿಯೆಗಳನ್ನು ಮಾಡಿ ತನ್ನ ಹಾರದಲ್ಲಿ ಅಂಜೂರದ ರಸವನ್ನು ಅಡಗಿಸಿ ಅವನ ದರ್ಶನಮಾಡಿ ರಸವನ್ನು ಕೊಟ್ಟು ಅವನ ಪ್ರಾಣವನ್ನುಳಿಸಿದಳು. ಈ ಸಂಗತಿಯು ಕಾವಲುಗಾರರಿಂದ ಅಜಾತಶತ್ರುವಿಗೆ ತಿಳಿದು, ಅವನು ಕೋಪದಿಂದ ತನ್ನ ತಾಯಿಯನ್ನು ಹೊಡೆಯಲನುವಾದನು. ಆದರೆ ಮಂತ್ರಿಗಳು ಅವನನ್ನು ತಡೆದರು ಅವನು ಆ ವಿಚಾರವನ್ನು ಬಿಟ್ಟನು. ವೈದೇಹಿಯನ್ನು ಕೂಡ ಏಕಾಂತ ಸ್ಥಾನದಲ್ಲಿರಿಸಿಬಿಟ್ಟನು."

ಕುಣಿಕನಿಗೆ ಬಾಲ್ಯಾವಸ್ಥೆಯಲ್ಲಿಯೇ ಬೌದ್ಧರೊಡನೆ ಸಂಬಂಧವಿದ್ದ ವಿಚಾರದಲ್ಲಿ ಕೆ. ಜೆ. ಸಾಂಡರ್ಸರು ತಮ್ಮ 'ಗೌತಮಬುದ್ಧ' ಎಂಬ ಇಂಗ್ಲಿಷ್ ಪುಸ್ತಕದ ೭೦ನೆ ಪುಟದಲ್ಲಿ ಬರೆಯುತ್ತಾರೆ — "ಈ ಸಮಯದಲ್ಲಿ ಅಜಾತಶತ್ರು ಅವನು (ಗೌತಮಬುದ್ಧ ಮತ್ತು ಮೊದಲಾದ) ಕಂಡರೂ, ಸಂಘದ ಕೆಲವು ವ್ಯಕ್ತಿ

CC-0. Jangamwadi Math Collection. Digitized by eGangotri

ಅಜಾತಶತ್ರುವಿನೊಡನೆ ಸಂಬಂಧವು ಅವನ ರಾಜಕುಮಾರಾವಸ್ಥೆಯಿಂದಲೇ ಇದ್ದಿತು."

ಇದರಿಂದ ಬೌದ್ಧರು ಹುರಿದುಂಬಿಸಿದುದರಿಂದಲೇ ಅಜಾತಶತ್ರುವು ತನ್ನ ತಂದೆ - ಜೈನಧರ್ಮಾನುಯಾಯಿಯಾಗಿದ್ದ ಶ್ರೇಣಿಕ ಬಿಂಬಸಾರನಿಗೆ ತೊಂದರೆಕೊಟ್ಟಿದ್ದನೆಂದು ಗೊತ್ತಾಗುತ್ತದೆ. ಆದುದರಿಂದಲೇ ಬೌದ್ಧಗ್ರಂಥಗಳಲ್ಲಿ ಅವನ ಕೊನೆಯಪರಿಣಾಮದ ನಿಶ್ಚಿತವಾದ ಉಲ್ಲೇಖವು ಸ್ವಲ್ಪವೂ ಕಂಡುಬರುವುದಿಲ್ಲ. *

ಶ್ರೇಣಿಕಚರಿತ್ರೆಯಲ್ಲಿ ಹೀಗೆ ಬರೆದಿದೆ— "ಕೊನೆಗೆ ರಾಣಿ ಚೇಲನೆಯು ಕುಣಿಕನಿಗೆ ಎಷ್ಟೋ ಹೇಳಿದಳು; ಕುಮಾರ ಕುಣಿಕನ ಮೇಲೆ ರಾಜಾಶ್ರೇಣಿಕನಿಗೆ ಎಷ್ಟು ಮೋಹವಿತ್ತೆಂದು ತೋರಿಸಿದಳು. ಇದರಿಂದ ಕುಣಿಕನಿಗೆ ದಯೆಯುಂಟಾಯಿತು. ಕುಣಿಕನು ಶ್ರೇಣಿಕನನ್ನು ಕಾರಾವಾಸದಿಂದ ಬಿಡುಗಡೆ ಮಾಡುವೆನೆಂದು ಬಹುದಿನಗಳನಂತರ ಅವನ ಬಳಿಗೆ ಹೋದನು. ಅವನು ಬರುವುದನ್ನು ಕಂಡು ಶ್ರೇಣಿಕನು 'ಈ ದಿನ ಇವನು ಇನ್ನೇನು ಅನರ್ಥಮಾಡಲಿಕ್ಕಿದ್ದಾನೋ, ಎಂದು ಹೆದರಿ, ಅಥವಾ ಪುತ್ರನು ಮಾಡಿದ ಅಪಮಾನವನ್ನು ಸಹಿಸಲಾರದೆ, ಅವನು ತನ್ನ ತಲೆಯನ್ನು ಗೋಡೆಗೆ ಹೊಡೆದುಬಿಟ್ಟನು. ಎಷ್ಟೋದಿನಗಳ ಉಪವಾಸದಿಂದಲೇ ಪ್ರಾಣವು ಹಾರಿಹೋಗುವಂತಿತ್ತು. ಗೋಡೆಗೆ ತಲೆಯನ್ನು ಬಡೆಯುತ್ತಲೇ ಅವನ ಪ್ರಾಣವು ಹೋಗಿಬಿಟ್ಟಿತು!"

ಈ ಘಟನೆಯಿಂದ ಕುಣಿಕನೂ ಚೇಲನೆಯೂ ಬಹಳ ದುಃಖಿತರಾದರು. ಚೇಲನೆಯು ಚಂದನೆಯೆಂಬ ಆರ್ಯಿಕೆಯರ ಸಮೀಪದಲ್ಲಿ ದೀಕ್ಷೆಯನ್ನು ತೆಗೆದುಕೊಂಡು ತಪಸ್ಸುಮಾಡಿ ದೇವಗತಿಯನ್ನು ಪಡೆದಳು.

ಕುಣಿಕನು ತಂದೆಯ ಸತ್ತದ್ದಕ್ಕಾಗಿ ಮೊದಲು ಬ್ರಾಹ್ಮಣರಿಗೆ ದಾನಕೊಟ್ಟರೂ ಅನಂತರ ಕೂಡಲೇ ಅವನು ಬೌದ್ಧನಾದನು. ಈ ಕುಣಿಕ ಅಜಾತಶತ್ರುವಿನ ಪುತ್ರನಾದ 'ಉದಾಯಿಯ'ಯು ಪಾಟಲೀಪುತ್ರ (ಪಾಟ್ನಾ) ವನ್ನು ಕಟ್ಟಿಸಿ ಅದನ್ನೇ ಮಗಧೆಯ ರಾಜಧಾನಿಯನ್ನಾಗಿ ಮಾಡಿದನು. †

## ಅಲೌಕಿಕ

( ಇದೂ "ಕರುಳಿನ ವಚನಗಳು" ಎಂಬುವುಗಳಲ್ಲಿಯದೇ ಒಂದು )

ನನ್ನ ಪಂಕದಲ್ಲಿ ಹುಟ್ಟಿ ಲೇಪವಿಲ್ಲದಿರುವೆ–
ನನ್ನ ಪಂಕಜವೆ!
ನನ್ನ ನೀರಲ್ಲಿ ಬೆಳೆದು ನಿರಾಳದಲ್ಲಿರುವೆ–
ನನ್ನ ನೀರಜವೆ!
ಒಡೆಯಲು ಬಾರದ ಒಡಪಿನಂತಿರುವೆ,
ಬಿಡಿಸಲು ಬಾರದ ತೊಡಕಿನಂತಿರುವೆ,
ನನ್ನ ಮಾನಸದ ಮುದಗವೆ.
ಮುಳುಗಿ ನೋಡಿದೆ. ಮುದ್ದಿಸಿ ನೋಡಿದೆ.
ಮೂಸಿನೋಡಿದೆ.
ಮುಟ್ಟಿ ನೋಡಿದೆ; ದಿಟ್ಟಿಸಿ ನೋಡಿದೆ.
ನಿನ್ನಳವು ಅಸದಳವು.

ನಿನ್ನ ತಿಳಿಗೊಳದ ತಳವು ಕಾಣದು
ಗೋಚರಾ ಗೋಚರವೆ
ಗಾಳಿಯಂತೆ ಹತ್ತಿ ಹತ್ತಿರವಿದ್ದರೂ
ಮುಗಿಲಂತೆ ಮುತ್ತಿ ಸುತ್ತರಿದಿದ್ದರೂ
ಕೈಕಣ್ಣುಗಳಿಗೆ ಬಯಲಾಗಿಹೆ.
ಆದರೆ ಮೃಗಜಲವಾಗಿಯೂ ತಣಿಸುವೆ,
ಸಮೀಪದಲಿದ್ದೂ ದಣಿಸುವೆ.
ಯಕ್ಷಾಂಗುಲಿಕೆಯಂತೆ ನಿನ್ನ ತೊಟ್ಟೂ
ನಿನ್ನೆಲ್ಲ ಗುಟ್ಟರಿಯೆ–ನಾನು.
ನವೋನವ ಚಮತ್ಕಾರವೆ ನೀನಾವ ಲೋಕದಜೀವಿ?

* Saunder's Gotama Buddha, P. 71. † ಪ್ರೊಫೆಸರ್ ಚಂದ್ರಶೇಖರ ಶಾಸ್ತ್ರಿಗಳ ಲೇಖನದ ಸಾರಾಂಶ.

CC-0. Jangamwadi Math Collection. Digitized by eGangotri

# ಪುನರ್ಜನ್ಮ

## ( ಚಿಕ್ಕಕತೆಯೊಂದು )

ಕತೆಗಾರರು:—"ಕ್ಷೀರಸಾಗರ" ಬೆಂಗಳೂರು

"ಪುನರ್ಜನ್ಮ" ಎಂಬ ಈ ಕಥೆಯು ನನ್ನ ಹಳೆಯ ಸ್ನೇಹಿತ ರಾಜುವಿನ ಜೀವನಚರಿತೆ. ರಾಜು ಅಪರಾಧಿ ಎಂಬುದೇನೊ ನಿಜ, ಆದರೂ ಅವನ ಜೀವನದ ಕಥೆಯಲ್ಲಿ ಒಂದು ಔನ್ನತ್ಯವಿದೆ. ತಪ್ಪು ಮಾಡದವರೆಷ್ಟು ಮಂದಿ? ಮಾಡಿದ ಮೇಲೆ ರಾಜುವಿನಂತೆ ವರ್ತಿಸುವವರು ತಾನೆ ಎಷ್ಟು ಮಂದಿ? ಅವನಂತಹವರು ವಿರಳ; ಅವನ ಜೀವನದಲ್ಲಿ ನಮಗೊಂದು ಆದರ್ಶವಿದೆ........ಈ ಕಥೆಯನ್ನು ನಾನು ಬರೆದು ಒಂದು ವರ್ಷವಾಗುತ್ತ ಬಂತು. ಈಚೆಗೆ ರಾಜು ಇದನ್ನು ಓದಿ, ಪ್ರಕಟಿಸಲು ಅನುಮತಿಯನ್ನು ಕೊಟ್ಟುದಕ್ಕಾಗಿ ಮೊದಲು ನಾನು ರಾಜುವಿಗೆ ಕೃತಜ್ಞತೆಯನ್ನು ಸೂಚಿಸಬಯಸುವೆನು.

ಹೋದಸಾರಿ ನಾನು ರಜಾದಲ್ಲಿ ಕಣಿವೆಗೆ ಹೋಗಿದ್ದಾಗ ಎಂದಿನಂತೆ "ಹಿಲ್ಲಕ್‌ವ್ಯೂ" ಎಂಬ ಹೊಟೇಲಿನಲ್ಲಿ ಇಳಿದುಕೊಂಡಿದ್ದೆ. ಅಲ್ಲಿಗೆ ಹೋದ ಮೂರನೆಯ ದಿನ ಪ್ರಾತಃಕಾಲ "ಹಿಲ್ಲಕ್‌ವ್ಯೂ"ನ ಮಹಡಿಯ ಮೇಲೆ 'ಹಾಲ್' ನಲ್ಲಿ ಕಾಫಿ ತೆಗೆದುಕೊಳ್ಳುತ್ತ ಕುಳಿತಿದ್ದೆ. ಹುಡುಗನೊಬ್ಬನು 'ನ್ಯೂಸ್ ಪೇಪರ'ನ್ನು ನನ್ನ ಮುಂದೆ ಮೇಜಿನ ಮೇಲಿಟ್ಟು ಹೋದನು. ನಾನು ಬೇಗ ಕಾಫಿ ಮುಗಿಸಿ ಸಿಗಾರು ಹೊತ್ತಿಸಿಕೊಂಡು ಪೇಪರನ್ನು ತೆಗೆಯುತ್ತಿದ್ದೆ. ಆಗ ನನ್ನ ಇದಿರಿನಲ್ಲಿದ್ದ ಕೊಠಡಿಯ ಬಾಗಿಲು ತೆರೆಯಿತು. ಸುಮಾರು ನನ್ನ ವಯಸ್ಸಿನ—ನಲವತ್ತೆಂಟುವಯಸ್ಸಿನಾತನೊಬ್ಬನು ಕೊಠಡಿಯಿಂದ ಹೊರಕ್ಕೆ ಬಂದನು. ಪಾಶ್ಚಾತ್ಯರೀತಿಯಲ್ಲಿ ಉಡುಪು ಧರಿಸಿದ್ದ, ಎತ್ತರವಾದ ಆಳು; ಆತನನ್ನು ಎಲ್ಲಿಯೋ ನೋಡಿದ್ದಂತೆ ನನಗೆ ನೆನಪು. ನೋಡಿದ್ದೇನೋ ಇಲ್ಲವೋ—ಹೊಸಬರನ್ನು ಸಂಧಿಸಿದಾಗ ಅವರನ್ನು ಹಿಂದೆ ನೋಡಿಲ್ಲದಿದ್ದರೂ ಎಲ್ಲಿಯೋ ನೋಡಿದ್ದಂತೆ ಒಂದೊಂದು ವೇಳೆ ಮನಸ್ಸಿಗೆ ಭಾಸವಾಗುವುದೂ ಉಂಟು. ಈಗ ಹೊಸಬನಕಡೆಗೆ ಉತ್ಸುಕತೆಯಿಂದ ನೋಡುವುದು ಅವಿವೇಕವೆಂದುಕೊಂಡು, ನ... ಕೈಯಲ್ಲಿದ್ದ ವೃತ್ತಾಂತಪತ್ರಿಕೆಯ ಕಡೆಗೆ ತೀವ್ರ... ದೃಷ್ಟಿಯನ್ನು ತಿರುಗಿಸಿದೆನು. ಆತನೂ ಮೇಜಿನ ಆ... ಅಂಚಿನಲ್ಲಿ ನನ್ನ ಇದಿರಾಗಿ ಕುಳಿತುಕೊಂಡು 'ನ್ಯೂ... ಪೇಪರ'ನ್ನು ಬಿಚ್ಚಿದನು. ಆತನು ನನ್ನ ಕಡೆಗೆ ಒಂ... ಬಾರಿ ನೋಡಿದಂತೆ ತೋರಿತು. ನಾನು ಪೇಪರಿನ ... ತಿರುವಿ ಹಾಕುವ ನೆಪದಿಂದ ತಲೆಯನ್ನು ತಿರುಗಿ... ಇಬ್ಬರ ದೃಷ್ಟಿಗಳೂ ಕಲೆತುವು. ಉತ್ತರಕ್ಷಣ... ಮತ್ತೆ ಇಬ್ಬರೂ ಪೇಪರುಗಳಿಂದ ಮುಖಗಳನ್ನು ... ಮಾಡಿಕೊಂಡೆವು. ಪೇಪರಿನಲ್ಲಿ ಆತನ ತಸ್ವೀರು! ಅ... ಆತನದೇ! "ಷಾಂಘೈ ನಗರದ ಒಂದು ಫ್ಯಾಕ್ಟ... ಡೈರೆಕ್ಟರು-ಮಿಸ್ಟರ್ ರಾವ್ ಅವರು; ಈ ದೇಶದಲ್ಲಿ ಸ... ರಕ್ಕೆ ಬಂದಿದ್ದಾರೆ, ಈ ವಾರ "ಹಿಲ್ಲಕ್‌ವ್ಯೂ" ... ತ್ತಾರೆ" ಎಂದು ಬರೆದಿತ್ತು. ಇವರನ್ನೇನು ನಾ... ಎಲ್ಲಿಯೋ ನೋಡಿದ್ದೆನೆಂದುಕೊಂಡದ್ದು? ಚೆನ್ನಾ... ಚೆನ್ನಾಗಿ ಭ್ರಾಂತಿಗೊಳಿಸಿತ್ತು, ನನ್ನ ಮನಸ್ಸು... ಕೊಂಡು ನಾನು ಅಲ್ಲಿಂದ ಹೊರಟು ಹೋದೆನು.

ಮೂರನೆಯ ದಿನ—ಮಧ್ಯಾಹ್ನ ನಾಲ್ಕುಗಂಟೆ... ಸಮಯ; "ಹಿಲ್ಲಕ್‌ವ್ಯೂ"ನ ಮಹಡಿಯ ಮೇಲೆ... ಕೊಠಡಿಯಲ್ಲಿ "ಗೀತಾಂಜಲಿ"ಯನ್ನು ನೋ... ಕುಳಿತಿದ್ದೆ; ನೋಡುತ್ತಿದ್ದುದೊಂದೇ; ನನ್ನ ಮನ... "ಎಲ್ಲಿಯೋ ನೋಡಿದ್ದೆ, ಎಲ್ಲಿಯೋ ನೋಡಿದ್ದೆ," ... ಹೇಳುತ್ತಿತ್ತು. ಆ ದಿನ ಆತನನ್ನು ಎರಡುಸಲ ... ಸಿದ್ದೆ. ಒಂದೊಂದು ಸಲವೂ ನನ್ನ ಅನುಮಾನ... ವಾಗುತ್ತ ಬಂದಿತು. ಆತನೂ ನನ್ನ ಕಡೆಗೆ ನೋಡಿ... ....ಆ ಮುಖದ ಹೋಲಿಕೆ.... ಆದರೆ ಈಗ ಆತನ... ಡಿಗೆ ಹೋಗಿ "ನಿಮ್ಮನ್ನು ಎಲ್ಲಿಯೋ ನೋ... ... ಎಂದು ಪ್ರಾರಂಭಿಸಲೇ? ಹಾಗೆ ...

CC-0. Jangamwadi Math Collection. Digitized by eGangotri

ಮೇಲೆ ಅವಿವೇಕವಾದರೆ ?—ಕೊಠಡಿಯ ಕದವನ್ನು ಯಾರೋ ತಟ್ಟಿದರು. ನನ್ನ ಮನಸ್ಸಿನ ಪ್ರಶ್ನೋತ್ತರಗಳು ನಿಂತುಹೋದುವು. ಹೋಗಿ ಬಾಗಿಲು ತೆಗೆದೆ. ತೆಗೆದರೆ, ಆತನೇ ! ನಾನು ಸ್ವಲ್ಪ ಹೊತ್ತು ಏನೂ ಮಾತನಾಡಲಿಲ್ಲ, ಆ ಮೇಲೆ

"ದಯವಿಟ್ಟು ಒಳಕ್ಕೆ ಬನ್ನಿ"

ಎಂದೆ – ಇಂಗ್ಲಿಷಿನಲ್ಲಿ. ಆತನು ಬಂದು, ಬಂದು ಕುರ್ಚಿಯಮೇಲೆ ಕುಳಿತುಕೊಂಡು ಮುಗುಳುನಗೆಯಿಂದ ನನ್ನ ಮುಖವನ್ನು ನೋಡಿದನು. ನಾನು ಕೂಡಲೆ ಆತನ ಹಸ್ತವನ್ನು ಹಿಡಿದು

"ರಾ....ಜೂ...."

ಎಂದೆ; ಆತನು

"ಸ್ಸರಿ...."

ಎಂದನು. ಬಾಷ್ಪಪೂರಿತರಾಗಿ ಇಬ್ಬರೂ ಹಸ್ತಲಾಘವ ಮಾಡಿದೆವು. ಅಂದಿಗೆ ರಾಜುವನ್ನು ನೋಡಿ ಇಪ್ಪತ್ತೈದು ವರ್ಷಗಳಾಗಿದ್ದುವು.

"ರಾಜು, ನೀನು ಜೀವಂತನಾಗಿರುವೆಯೆಂದು ನಾನು ತಿಳಿದಿರಲಿಲ್ಲ."

"ಕೆಲವು ಕಾಲ ನಾನು ಸತ್ತು ಹೋಗಿದ್ದೆ. ಇದು ನನ್ನ ಎರಡನೆಯ ಜನ್ಮ....ನನ್ನ ವಿಷಯಕ್ಕೆ ಹೇಳಬೇಕಾದುದು ಬಹಳವಿದೆ."

ಎಂದು ಹೇಳಿ, ರಾಜು ಮೊದಲು ನನ್ನ ಕ್ಷೇಮ ಸಮಾಚಾರವನ್ನು ವಿಚಾರಿಸಿದಬಳಿಕ ಏನೇನೋ ಮಾತಾಡುತ್ತ ಸಾಗರದ ಕಡೆ 'ವಾಕ್' ಹೋದೆವು.

ಹಿಂದೆ ರಾಜು ನಾನು ಇಬ್ಬರೂ ಮಯಿಸೂರಿನಲ್ಲಿ ಒಂದೇ ರೂಮಿನಲ್ಲಿದ್ದವರು. ರಾಜುಗೆ ಬಿ. ಎ. ಆಗಿ ಆಗ ತಾನೆ ನೌಕರಿಯಾಗಿತ್ತು; ಕೈತುಂಬ ಸಂಬಳ. ಅವನ ಮನಸ್ಸೇ ಒಂದು ಜಾತಿಯದು; ಇದ್ದಕ್ಕಿದ್ದ ಹಾಗೆ ರಾಜು ಪತ್ತೆ ಇಲ್ಲದೆ ಹೊರಟು ಹೋಗಿಬಿಟ್ಟನು. ಮತ್ತೆ ಅವನನ್ನು ನಾನು ಅಂದು "ಹಿಲ್ಲಕ್‌ವ್ಯೂ" ನಲ್ಲಿ ನೋಡಿದಾಗಲೇ ಅವನು ಇನ್ನೂ ಜೀವಿಸಿದಾನೆ ಎಂದು ಗೊತ್ತಾದದ್ದು. ತಾನು ಮಯಿಸೂರಿನಿಂದ ಹೋದಾಗಿನ ತನ್ನ ಅನುಭವವನ್ನು ರಾಜು ಆ ದಿನ ಸಾಯಂಕಾಲ ಸಾಗರದ ದಡದಲ್ಲಿ ಬೆಂಚಿನ ಮೇಲೆ ಕುಳಿತು ನನಗೆ ವಿಶದವಾಗಿ ಹೇಳಿದನು.—

"ಇಪ್ಪತ್ತೈದು ವರ್ಷಗಳ ಹಿಂದಿನ ಮಾತು"—

"ಅಂದು ರಾತ್ರಿ ಏಳೂಮುಕ್ಕಾಲುಗಂಟೆ; ನಾಟಕದ ವಿರಾಮಕಾಲ; ರಾಜು ನಾಟಕಮಂದಿರದಿಂದ ಹೊರಕ್ಕೆ ಬಂದನು. ಮನಮೋಹಕಯುವಕ; ಎತ್ತರವಾದ ಆಳು. ಸ್ಫುರದ್ರೂಪಿ. ನಾಟಕ ಮಂದಿರದ ಮುಂದೆ ದೀಪಗಳ ಪ್ರಭೆಯಲ್ಲಿ ರಾಜು ಯೋಚನೆಯಲ್ಲಿ ಮಗ್ನನಾಗಿ ನಿಂತಿದ್ದನು. ಮುಖವು ಕಳೆಗುಂದಿತ್ತು. ಸುತ್ತುಮುತ್ತಿನ ಕಲಕಲವೊಂದೂ ಅವನ ಪಾಲಿಗೆ ಆಗ ಇರಲಿಲ್ಲ. ವಿರಾಮಕಾಲವು ಮುಗಿಯಿತು. ಆದರೆ ರಾಜು ಷರಾಯಿ ಜೇಬಿನಲ್ಲಿ ಕೈಹಾಕಿಕೊಂಡು ಬಾಗಿದ ಶಿರಸ್ಸುಳ್ಳವನಾಗಿ ನಾಟಕಮಂದಿರವನ್ನು ಬಿಟ್ಟು ಹೊರಟುಹೋದನು. ನಾಟಕ ಎಂದರೆ ಅವನಿಗೆ ಬಲು ಪ್ರೀತಿ. ಅಂದು ನಾಟಕದ ಕಥಾವಿಷಯವು ಕರ್ಣನದು. ತನ್ನ ಜೀವನದ ಕಟ್ಟಡವನ್ನು ಕರ್ಣನು ಒಂದು ಸುಳ್ಳಿನ ಮೇಲೆ ಕಟ್ಟಿದನು; ವಿದ್ಯಾಭ್ಯಾಸ ಮಾಡುವಾಗಲೇ ಗುರುವಿನ ಬಳಿ ಸುಳ್ಳು ಹೇಳಿದನು. ಅದರ ಫಲವಾಗಿ ಅವನು ಮುಂದೆ ಪಶ್ಚಾತ್ತಾಪಪಟ್ಟುದೆಷ್ಟು ? ಶೂರನಾದ ಅವನ ಜೀವನವು ಹೇಗೆ ಮಾರ್ಪಾಡಾಗಿ ಹೋಯಿತು! ಎಷ್ಟು ನಿಷ್ಕಲಂಕ! ಎಷ್ಟು ಪವಿತ್ರ ? ಈ ವಿಷಯವು ನಮ್ಮ ರಾಜುವಿನ ಮನಸ್ಸಿನಲ್ಲಿ ಅಲೆಯೆಬ್ಬಿಸಿ ಸಾಗರವನ್ನು ಕುದಿಸಿತು. ರಾಜು ಚಿಂತಾಕ್ರಾಂತನಾಗಿ ನಾಟಕದ ಅರ್ಧದಲ್ಲಿ ಹೊರಟುಹೋದನು.

"ಹೊರಟು ಹೋದ ರಾಜೂಗೆ ಎಲ್ಲಿಗೆ ಹೋಗಬೇಕೆಂಬ ಧ್ಯೇಯವಿರಲಿಲ್ಲ. ನಾಟಕಪ್ರಪಂಚದಲ್ಲಿ ಲೋಲನಾಗಿದ್ದ ರಾಜೂಗೆ ಅಂದು ಮತ್ತಾವುದೋ ಒಂದು ಭೀಕರಪ್ರಪಂಚವು ಗೋಚರವಾಗಿತ್ತು. ಬೀದಿಯ ದೀಪಗಳೂ ಅಂದಿನ ಎಳೆಯ ಬೆಳದಿಂಗಳೂ ಸೇರಿ ವಾತಾವರಣವು ಒಂದು ರೀತಿಯಲ್ಲಿ ಮಂಕಾಗಿತ್ತು. ಎಲ್ಲೆಲ್ಲಿ ಅಲೆದನೋ ರಾಜು, ಒಂದುಕಡೆ ನಿಂತು ಸುತ್ತಲೂ ನೋಡಿದನು. ಲಾಲ್ಬಾಗಿನ ಮಧ್ಯಕ್ಕೆ ಬಂದಿದ್ದನು. ಅಲ್ಲಿ ಗಿಡಗಳ ಕೆಳಗೆ ಇಂಗ್ಲೀಷಿನವರು ಯಾರೋ ಯುವಕಯುವತಿಯರು ಗ್ರಾಮೋಫೋನು ಇಟ್ಟುಕೊಂಡು ಡಾನ್ಸ್ ಮಾಡುತ್ತಿದ್ದರು. ರಾಜು ಅವರನ್ನು ನೋಡುತ್ತ ನಿಂತನು. ಐದುನಿಮಿಷಗಳ ಮೇಲೆ ಅವರು ಹೊರಟು ಹೋದರು. ದೂರದಲ್ಲಿ 'ಟಾನ್ ಟಾನ್' ಎಂದು ಎರಡು



CC-0. Jangamwadi Math Collection. Digitized by eGangotri

ಗಂಟೆ ಹೊಡೆದದ್ದು ಕೇಳಿಸಿತು. ಆದರೆ ಅದರ ಅರ್ಥ ಅವನಿಗೆ ಬೇಕಿರಲಿಲ್ಲ. ಎರಡಾದರೇನು, ಇಪ್ಪತೆಂಟಾದರೇನು, ವ್ಯತ್ಯಾಸವಿನ್ನೆಲ್ಲಿ? "ನೊಂದ ಮನಸ್ಸು, ಸೋತದೇಹ" ರಾಜು ಒಂದು ಬೆಂಚಿನ ಮೇಲೆ ಕುಳಿತುಕೊಂಡನು. ಇವನ ಇದುರಿಗೆ ಆಗಸದಲ್ಲಿ ಮೇಘವೊಂದು ವಿಧವಿಧವಾದ ಆಕಾರಗಳನ್ನುತಾಳುತ್ತ ಕೋತಿಚೇಷ್ಟೆಮಾಡುತ್ತಿತ್ತು. ರಾಜುವಿಗೆ ಮನಸ್ಸಿನ ಉದ್ವೇಗವು ಒಂದು ಕ್ಷಣಕಾಲ ಕಡಿಮೆಯಾಯಿತು. ಒಂದು ಕ್ಷಣಕಾಲ.... ಅನಂತವಾದ ವಿಶ್ವದ ಆನಂದವು ತನಗೊಬ್ಬನಿಗಿಲ್ಲವಾಯಿತು. ತಾನೊಬ್ಬನು ಆ ಆನಂದದಲ್ಲಿ ಕಳಂಕವಾದನು. ಜೊತೆಯಿಲ್ಲದ ನಿರ್ಗತಿಕನಾದನು. ಹೀನಾಯವಾದ ಅಣುವಾದನು........ ಬೆಳದಿಂಗಳು ಮಾಯವಾಗುತ್ತಬಂತು. ತಂಗಾಳಿಯು ಸುಯ್ ಎಂದು ಬೀಸಿತು. ಸುತ್ತುಮುತ್ತಿನ ಗಿಡದಪೊದರುಗಳೆಲ್ಲ ಗುಸಗುಸನೆ ಮಾತಾಡಿಕೊಂಡುವು. ರಾಜುವಿನ ಇದಿರಿನಲ್ಲಿ ಎತ್ತರವಾಗಿ ನಿಂತಿದ್ದ ಮರಗಳೆರಡು ಇವನ ಮೇಲಿನ ದೂರನ್ನು ಗಗನಕ್ಕೆ ಮುಟ್ಟಿಸುವ ಸಲುವಾಗಿಯೇ ಬೆಳೆದಿರುವಂತೆ ತೋರಿತು. ರಾಜು ಬಂದ ಸ್ವಲ್ಪ ಹೊತ್ತಿನಲ್ಲಿ ಬೆಳದಿಂಗಳು ಮುಳುಗಿ, ಆ ಪ್ರದೇಶವನ್ನೆಲ್ಲ ಕತ್ತಲೆಯು ಆವರಿಸಿತು.

ಅಯ್ಯೋ! ಆ ಪವಿತ್ರವಾದ ಸ್ಥಳವು ತನ್ನಿಂದ ಕಲುಷಿತವಾಯಿತೇ ?.... ರಾಜು ಬಾಷ್ಪಪೂರಿತನಾಗಿ ಎದ್ದು ಬಾಹುಗಳನ್ನು ಚಾಚಿ ಗದ್ಗದಕಂಠದಿಂದ "ಇರಲು ಸ್ಥಳವಿಲ್ಲ, ಇರಲು ಸಾಧ್ಯವಿಲ್ಲ, ಭೂಮಿಯೊಡೆದು ನನ್ನನ್ನು ನುಂಗಿಕೊಳ್ಳಬಾರದೇಕೆ ?" ಎಂದು ಕೂಗಿ, ಕೈಗಳಿಂದ ಮುಖವನ್ನು ಮುಚ್ಚಿಕೊಂಡು, ಮತ್ತೆ ಕುಳಿತುಕೊಂಡು ನರಕವನ್ನನುಭವಿಸಿದನು. ಆ ಯುವಕನ ಆಗಿನ ಸ್ಥಿತಿಯನ್ನು ಚಿತ್ರಿಸಲು ನನಗೆ ಕನಿಕರವಾಗುತ್ತದೆ....ಬಹಳ ಹೊತ್ತು ಯೋಚಿಸಿದನು. ಆಗ ಹುಡುಗತನ. ಆಗ ಮಾಡಿದ ಕೆಲಸವು ಇಷ್ಟು ಭಯಂಕರಪರಿಣಾಮವುಳ್ಳದೆಂದು ಗೊತ್ತಾಗಲಿಲ್ಲ — ಗೊತ್ತಾಗಲಿಲ್ಲವೆಂದೂ ಹೇಳುವ ಹಾಗಿರಲಿಲ್ಲ; ಒಂದುರೀತಿಯಲ್ಲಿ ಗೊತ್ತಿತ್ತು. ಮನಸ್ಸಿನ ಸ್ವರೂಪವು ಚೆನ್ನಾಗಿ ಗೊತ್ತಿರಲಿಲ್ಲ. ಕೆಲಸವು ಕೆಟ್ಟದ್ದೆಂದು ಗೊತ್ತಿತ್ತು. ವಿಷಮಯವಾದದ್ದೆಂದು ಗೊತ್ತಿರಲಿಲ್ಲ. ಏನು ಗೊತ್ತಿತ್ತೋ, ಏನು ಗೊತ್ತಿರಲಿಲ್ಲವೋ, ಆಗಿ ಹೋಯಿತು. ಈಗೇನು? ಏನು. ರಾಜುವಿನ ಮೈ ನಡುಗಿತ್ತು; ಏಕೆಂದರೆ ಏನು? ಎಂಬ ಪ್ರಶ್ನೆಗೆ "ಆತ್ಮಹತ್ಯವು—ಆತ್ಮವಂಚನೆಗೆ ಆತ್ಮಹತ್ಯೆ" ಎಂಬ ಉತ್ತರವು ಅವನಿಗೆ ತೋರಿತು. ಆತ್ಮಹತ್ಯೆ! ಅಬ್ಬಬ್ಬಾ, ಹುಡುಗತನದ ತಪ್ಪಿಗೆ ? ಅಲ್ಲದೆ ಯಾವ ಅಧಿಕಾರವಿದೆ ಆತ್ಮಹತ್ಯಕ್ಕೆ ? ತನ್ನ ಬಂಧು ಮಿತ್ರ— ಆದರೆ ಯಾರ ಪಾಡು ಕಟ್ಟಿಕೊಂಡು ತನಗೇನು? ಯಾರು ಇದ್ದರೆ ಏನು — ಯಾರು ಇಲ್ಲದಿದ್ದರೆ ಏನು ? ತಾನು ಜೀವಿಸಿರುವುದು ಅಸಾಧ್ಯವಾಗಿರುವಾಗ?....ಹೀಗೆ ಯೋಚನೆಗಳು ರಾಜುವಿನ ಮನಸ್ಸಿನಲ್ಲಿ ತರಂಗತರಂಗವಾಗಿ ಹೊರಳಿದುವು.

"ಉಷೆಯು ಶಂಖವನ್ನೂದುತ್ತ ಮೂಡಲ ಮನೆಯಲ್ಲಿ ಹೊಸಬೆಳಕನ್ನು ಕಂಡಳು. ರಾಜು ಗಾಳಿಯಲ್ಲಿ ನೆಟ್ಟದೃಷ್ಟಿಯುಳ್ಳವನಾಗಿ ಹುಬ್ಬುಗಂಟಿಕ್ಕಿ ಕುಳಿತಿದ್ದನು. ನಿದ್ರೆಯಿಲ್ಲದ್ದರಿಂದಲೂ, ಅಗಾಧವಾದ ಯೋಚನೆಯಿಂದಲೂ ಮುಖವು ಕಾಂತಿಗುಂದಿತ್ತು; ಆದರೆ ಮನಸ್ಸು ಯಾವುದೋ ಒಂದು ದೃಢಸಂಕಲ್ಪಕ್ಕೆ ಬಂದಿದ್ದುದರಿಂದ ಮುಖದಲ್ಲಿ ಸ್ಥೈರ್ಯವೂ ಧೈರ್ಯವೂ ಕಂಡುಬರುತ್ತಿದ್ದುವು. ಸ್ವಲ್ಪ ಬೆಳಕಾದಮೇಲೆ ರಾಜು ಜೇಬಿನಿಂದ ಕಾಗದವನ್ನೂ ಫೌಂಟೆನ್‌ಪೆನ್ನನ್ನೂ ತೆಗೆದು ದೊಡ್ಡದಾಗಿ ಒಂದು ಕಾಗದವನ್ನು ಬರೆದನು. ಬರೆದ ಮೇಲೆ ಮತ್ತೆ ಅನುಮಾನಕ್ಕೆ ಸುರುವಾಯಿತು. ಅದನ್ನು ಪೋಸ್ಟಿಗೆ ಹಾಕುವುದೆ, ಬೇಡವೆ—ಎಂದು.

"ದಿನಮಣಿಯು ಕೆಂಡದಂತೆ ಕೆಂಪಾಗಿ ಮೂಡಣ ಅಂಚಿನಿಂದ ಮೇಲಕ್ಕೆದ್ದನು. ಕರ್ಮಸಾಕ್ಷಿಯ ಕೋಪವನ್ನು ನೋಡಿ ರಾಜು ಯೋಚಿಸುವುದನ್ನು ನಿಲ್ಲಿಸಿ, ಥಟ್ಟನೆ ಎದ್ದುಹೋಗಿ ಕಾಗದವನ್ನು ಪತ್ರ... ಲ್ಲಿದ್ದ ಅಂಚೆಗೆ ಹಾಕಿಬಿಟ್ಟನು. ಅಲ್ಲಿಗೆ ಅವನ ಉದ್ವೇಗವು ಹಗುರಾಯಿತು. ಇಷ್ಟು ಮಟ್ಟಿಗಾದರೂ ... ಧಾರಣಮಾರ್ಗವು ತೋರುವುದೆಂದು ಅವನು ... ಲಿಲ್ಲ. ಬಳಿಕ ಮುಖವನ್ನು ತೊಳೆದುಕೊಂಡು ಲಾ... ಕ್ಲಬ್ಬಿನಲ್ಲಿ ಕಾಫಿ ತೆಗೆದುಕೊಂಡು ನಿದಾನವಾಗಿ ... ಸಿಗರೇಟು ಹಚ್ಚಿದನು. ಆದರೆ ತಾನು ಬರೆದ ಕಾಗದ... ದಿಂದ ಏನು ಪರಿಣಾಮವಾಗುವುದೋ ಎಂಬ ಯೋಚನೆ ... ಅವನನ್ನು ಬಿಟ್ಟಿರಲಿಲ್ಲ. ಆಗುವುದೇನು ? ತನ್ನ ... ಕೆಟ್ಟು, ಎಲ್ಲೆಲ್ಲಿಯೂ ಹಬ್ಬುವುದು; ಅದಕ್ಕಿಂತ ...

CC-0. Jangamwadi Math Collection. Digitized by eGangotri

ನಾದೀತು ? ನಾಗೆ ಹಬ್ಬಿದರೆ ಯಾವುದಾದರೂ ದೂರ ದೇಶಕ್ಕೆ—ತಾನು ಯಾರು ಎಂಬುದು ಯಾರಿಗೂ ಗೊತ್ತಿಲ್ಲದ ದೇಶಕ್ಕೆ, ನೆಂಟರಿಷ್ಟರು ಯಾರೂ ಇಲ್ಲದ ದೇಶಕ್ಕೆ, ಚೀನಾಕ್ಕೋ, ಸೈಬೀರಿಯಾಕ್ಕೋ,—ಹೋಗಿ, ಹಿಂದಿನದೆಲ್ಲವನ್ನೂ ಮರೆತು, ಹೊಸದಾಗಿ, ಸ್ವತಂತ್ರವಾಗಿ, ಸ್ಪಷ್ಟವಾಗಿ, ನಿಷ್ಕಲಂಕವಾಗಿ ಜೀವನಮಾಡುವುದು. ಬಡತನವಾದರೂ ಚಿಂತೆಯಿಲ್ಲ. ಇನ್ನೇನು ಮಾಡುವುದಕ್ಕಾಗುತ್ತದೆ ?

" ಒಂದು ದಿನವಾಯಿತು, ಎರಡು ದಿನವಾಯಿತು..... ಒಂದು ವಾರ ಕಳೆಯಿತು. ಕಾಗದಕ್ಕೆ ಉತ್ತರ ಬರಲಿಲ್ಲ. ಮನಸ್ಸಿನ ಕಳವಳವು ಹೆಚ್ಚಿತು. ಉತ್ತರ ಬಂದರೆ ತಾನೆ ಏನು, ವೃತ್ತಾಂತಪತ್ರಿಕೆಗಳಲ್ಲಿ ಬಂದರೆ ತಾನೆ ಏನು ! ಮನಸ್ಸಿನ ಅಶಾಂತಿಯು ತಗ್ಗುವುದೆಂದು ರಾಜೂಗೆ ತೋರಲಿಲ್ಲ. ತಾನು ಹುಟ್ಟಿದ ದೇಶವನ್ನು ಬಿಟ್ಟು ನಿರ್ಗತಿಕನಂತೆ ಹೋಗಿಬಿಟ್ಟನು. ಇನ್ನೆಲ್ಲಾದರೂ ಸರಿಯೆ, ಹೇಗಾದರೂ ಸರಿಯೆ, ತನ್ನ ದೇಶದಲ್ಲಿರಲಾರದವನಾದನು, ಕಲ್ಲುಮನಸ್ಸಿನವನಾದನು. "

ಇಷ್ಟು ವಿಷಯವನ್ನು ರಾಜು ನನಗೆ ಹೇಳುವ ಹೊತ್ತಿಗೆ ಸೂರ್ಯಾಸ್ತಮಯವಾಗಿತ್ತು. ನಾನು ಮೌನವಾಗಿ ಎಲ್ಲವನ್ನೂ ಕೇಳಿದೆನು. ನಮ್ಮ ಇದಿರಿನಲ್ಲಿ ಸಾಗರದ ಅಲೆಗಳು ಒಂದು ಮರದ ತುಂಡನ್ನು ಇಲ್ಲಿಂದಲ್ಲಿಗೆ ಅಲ್ಲಿಂದಿಲ್ಲಿಗೆ ಹೊರಳಿಸುತ್ತಿದ್ದುವು. ವಿಶ್ವದ ಅಲೆಗಳಲ್ಲಿ ನಮ್ಮ ಜೀವನವು ಹೊರಳುವಂತೆ ಆ ಮರದ ತುಂಡು ಹೊರಳುತ್ತಿತ್ತು. ತನ್ನ ಕೆಲಸವನ್ನು ಮುಗಿಸಿಕೊಂಡು ಮೀನುಹಿಡಿಯುವ ಬೆಸ್ತನೊಬ್ಬನು ಊರ ಕಡೆ ಹೊರಟನು. ನಮ್ಮ ಹಿಂದೆ ಬೆಟ್ಟದಲ್ಲಿ ಕತ್ತಲೆಯು ಹೆಚ್ಚಾಗಿತ್ತು. ಪಕ್ಷಿಗಳು ತಮ್ಮಗೂಡು ಸೇರಿಕೊಂಡುವು. ಗಾಳಿಯ ಉಸಿರು, ಅಲೆಗಳ ಗರ್ಜನೆ, ಕತ್ತಲೆ, ಇವು ಆ ಪ್ರದೇಶವನ್ನೆಲ್ಲ ತುಂಬಿದುವು.

" ನಾನು ಹೊರಟುಹೋದ ಮೇಲೆ ಏನಾಯಿತು ?"

" ನಾವೆಲ್ಲರೂ ಕೆಲವು ಕಾಲ ನಿರೀಕ್ಷಿಸಿ ಆಮೇಲೆ ನಿರಾಶರಾದೆವು. ನಿಮ್ಮ ಸೋದರಮಾವನ ಕಡೆಯವರು 'ಏನೋ ತಂದೆತಾಯಿ ಇಲ್ಲದೆ ಅಶಿಕ್ಷೆಯಿಂದ ಬೆಳೆದಿದ್ದ, ಮುಂತಾಗಿ ಅಂದುಕೊಂಡರು. ನನಗೆ ಮಾತ್ರ ನೀನು ಹೊರಟುಹೋದ ಕಾರಣವು ಗೊತ್ತಿತ್ತು. "

" ಅದು ಹೇಗೆ ? ವೃತ್ತಾಂತ ಪತ್ರಿಕೆಗಳಲ್ಲಿ ?...."

" ಅಲ್ಲ. ನಿನ್ನ ಕಾಗದಕ್ಕೆ ಉತ್ತರ ಬಂತು. ನಮ್ಮ ರೂಮಿನ ಅಡ್ರೆಸ್ಸನ್ನು ಕೊಟ್ಟಿದ್ದೆಯಷ್ಟೆ ? "

" ಏನೆಂದು ಬಂತು ? "

" ನಿನ್ನ ಅಪರಾಧವು ಮನ್ನಿಸಲ್ಪಟ್ಟಿತ್ತು. ಕಾಗದವು ನೀನು ಹೊರಟುಹೋದ ಮಾರನೆಯ ದಿನವೇ ಬಂದಿತು. ಸ್ವಲ್ಪ ಆಶ್ಚರ್ಯವಾಯಿತು — ನೀನು ಮುಂಚೆ ಹೋದದ್ದು. "

" ನಾನು ಹಾಗೆ ಎಣಿಸುವುದಿಲ್ಲ "

" ಆಯಿತು. ನೀನು ಹೊರಟುಹೋದಮೇಲೆ ? "

" ಆಮೇಲೆ ಐದಾರುವರ್ಷಕಾಲ ಬಹಳ ತಿರುಗಿದೆ, ಅವಸ್ಥೆಪಟ್ಟೆ. ಆಗಿನ ಅವಸ್ಥೆಯನ್ನು ನನ್ನ ಬಾಯಿಂದ ಹೇಳಿಸಬೇಡ. ಏನು ಶ್ರಮವಾದರೂ ಅಂತರಂಗವು ಹಗುರಾಯಿತು..... ಆಮೇಲೆ ನಾನೀಗ ಡೈರೆಕ್ಟರಾಗಿರುವ ಕಂಪೆನಿಯಲ್ಲಿ ಚಾಕರಿಗೆ ಸೇರಿಕೊಂಡು ಏರಿಬಂದೆ. ಇದು ನನ್ನ ಪುನರ್ಜನ್ಮವೆಂದುಕೊಂಡು ಹಿಂದಿನದನ್ನೆಲ್ಲ ಮರೆತುಬಿಟ್ಟೆ.... ನಾನು ಯಾರು? ಎಂತು? ಎಂಬುದನ್ನು ಯಾರ ಮುಂದೆಯೂ ಹೇಳಲಿಲ್ಲ. ನಾನು ಮಯಿಳೂರು ವಿಶ್ವವಿದ್ಯಾಲಯದ ಗ್ರಾಜುಯೇಟ್ ಎಂಬುದನ್ನಂತೂ ನನ್ನ ಜೀವನದಿಂದ ಸಂಪೂರ್ಣವಾಗಿ ಅಳಿಸಿಬಿಟ್ಟೆ. ನಾನು ಮಯಿಳೂರಿನಲ್ಲಿದ್ದಾಗ ಆ " ಗ್ರಾಜುಯೇಟ್ " ಎಂಬ ನನ್ನ ಸುಳ್ಳುಬಿರುದು ನನ್ನ ಹೃದಯಕ್ಕೆ ಗರಗಸವಾಗಿತ್ತು. ಬಿ. ಏ ಎಂಬ ಅಂಕಿತದಿಂದ ವಿಳಾಸವುಳ್ಳ ಕಾಗದಗಳನ್ನು ನೋಡುವುದು ಸಹ ನನಗೆ ಅಸಾಧ್ಯವಾಯಿತು. ನನಗೆ ಕೆಲಸವಾದದ್ದೂ ಸಹ ಆ ಅಂಕಿತದಿಂದಲೇ ತಾನೆ; ನಾನು ತಿನ್ನುತ್ತಿದ್ದ ಅನ್ನವು ಆ ಅಂಕಿತದಿಂದ ಬಂದದ್ದು. ಮಯಿಳೂರು ದೇಶದಲ್ಲಿ ನಾನು ಎಂದರೆ ಒಬ್ಬ ಗ್ರಾಜುಯೇಟ್ ಎಂದು ಎಲ್ಲರೂ ಅಂದುಕೊಂಡಿದ್ದರು. ನನ್ನ ವ್ಯಕ್ತಿತ್ವದಲ್ಲಿ ಆ ಅಂಕಿತವು ಹಾಲಿನಲ್ಲಿ ಬಿಳುಪಿನಂತೆ ಲೀನವಾಗಿತ್ತು. ನನ್ನ ವ್ಯಕ್ತಿತ್ವದಿಂದ ಆ ಅಮೋಘವಾದ ಅಂಕಿತಕ್ಕೆ ಕುಂದಕ—ಹೀಗಾಗಿ ಆ ಅಂಕಿತವನ್ನು ತೊಡೆದುಹಾಕಿ ವ್ಯಕ್ತಿತ್ವವನ್ನುಳಿಸಿಕೊಂಡೆ, ನಾನು ಹೊರಟುಹೋದದ್ದರಿಂದ! "

" ಆದರೆ ನಿನ್ನ ಕಾಗದಕ್ಕೆ ಬಂದ ಉತ್ತರವನ್ನು ವಿಶದವಾಗಿ ಹೇಳುತ್ತೇನೆ ಕೇಳು. ವಿಶ್ವವಿದ್ಯಾಲಯದ ಅಧಿ

CC-0. Jangamwadi Math Collection. Digitized by eGangotri

ಕಾರಿಗಳು 'ನಿಮ್ಮ ಕಾಗದ ತಲುಪಿತು. ಆತ್ಮವಂಚನೆಯು ಕಾಲಕ್ರಮದಲ್ಲಿ ಜೀವನದ ಬೇರಿಗೇ ಕೊಡಲಿಯಾಗುತ್ತೆಂದು ಈಗ ನಿಮಗೆ ಮನವರಿಕೆಯಾಗಿದೆ. ನಿಷ್ಕಲಂಕವಾದ ಅಂತರಂಗದಿಂದ ಜೀವಿಸುವುದರ ಮಹತ್ವವು ನಿಮಗೀಗಚೆನ್ನಾಗಿ ಗೋಚರವಾಗಿದೆ. ಗ್ರ್ಯಾಜುಯೇಟ್ ಎಂದು ಕರೆಯಿಸಿಕೊಳ್ಳುತ್ತ ನೀವು ಜೀವಿಸಿರುವುದು ಸಾಧ್ಯವಿಲ್ಲವೆಂದು ಬರೆದಿದ್ದೀರಿ. ನೀವು ಹಿಂದೆ ಡಿಗ್ರಿ ಪರೀಕ್ಷೆಯಲ್ಲಿ ಗುಟ್ಟಾಗಿ **ಕಾಪಿಮಾಡಿದ** ತಪ್ಪಿತಕ್ಕೆ ಈಗ ನಿಮ್ಮ ಡಿಗ್ರಿಯನ್ನು ರದ್ದುಪಡಿಸಿ- ಪ್ರಸಿದ್ಧಪಡಿಸಿ ನಿಮ್ಮನ್ನು ಶಿಕ್ಷಿಸುವ ಅಧಿಕಾರವು ನಮಗಿದ್ದಾಗಲೂ ನಿಮ್ಮ ಮನಸ್ಸು ಈಗ ವಿಕಸಿತವಾಗಿ ಅಂತರಂಗದ ಪಾರಿಶುದ್ಧತೆಯೊಂದು ವಿನಃ ಮತ್ತೇನೂ ಬೇಡವೆನ್ನುವಷ್ಟು ಪರಿಪಕ್ವವಾಗಿರುವುದರಿಂದ ನಿಮಗೆ ನಾವು ಯಾವ ಶಿಕ್ಷೆಯನ್ನೂ ಕೊಡಬಯಸುವುದಿಲ್ಲ. ವಿಶ್ವವಿದ್ಯಾಲಯಗಳಲ್ಲಿ ಪರೀಕ್ಷೆಯೊಂದೇ ಮುಖ್ಯವಲ್ಲ; ಡಿಗ್ರಿ ಪಡೆಯುವವನು ಶುದ್ಧಾತ್ಮನಾಗಿರಬೇಕು. ನೀವು ಈಗ ತಪ್ಪು ಒಪ್ಪಿಕೊಂಡು ಪಶ್ಚಾತ್ತಾಪ ಪಟ್ಟಿದ್ದೀರಿ. ನಿಮ್ಮಂತಹ ವಿಶಾಲ ಮನಸ್ಕರನ್ನು ನಮ್ಮ ವಿಶ್ವವಿದ್ಯಾಲಯದ ಗ್ರ್ಯಾಜುಯೇಟ್ ಎಂದು ಕರೆಯಲು ನಮಗೆ ಸಂತೋಷವಾಗುತ್ತದೆ. ನೀವು ಇನ್ನು ಮುಂದೆ ನಿಮ್ಮ ಅಂತರಂಗವನ್ನು ಶುದ್ಧವಾಗಿಟ್ಟುಕೊಂಡಿರುತ್ತೀರಿ— ಎಂಬ ಭರವಸೆ ನಮಗಿದೆ' ಎಂಬ ಅರ್ಥ ಬರುವಂತೆ ಉತ್ತರ ಬರೆದಿದ್ದರು."

ರಾಜು ಸ್ವಲ್ಪ ಹೊತ್ತು ಸುಮ್ಮನಿದ್ದು ಅನಂತರ "ಉತ್ತರವು ನಾನು ಹೋಗುವುದಕ್ಕೆ ಮುಂಚೆ ಬಂದಿದ್ದರೂ ನನ್ನ ಮನಸ್ಸಿನ ಆಗಿನ ಸ್ಥಿತಿಯಲ್ಲಿ ನಾನು ಹೋಗದೆ ನಿಲ್ಲುತ್ತಿರಲಿಲ್ಲ.... ಕನ್ನಡಿ ಒಡೆದಮೇಲೆ ಅದನ್ನು ಏನು ಮಾಡುವುದಕ್ಕೂ ಆಗುವುದಿಲ್ಲ; ಅದನ್ನು ಬಿಸುಟಿ ಹೊಸದನ್ನು ತರಬೇಕು. ಆಗಿನ ನನ್ನ ಜೀವನವು ಒಡೆದ ಕನ್ನಡಿ; ಈಗಿನದು ಹೊಸದು; ನಾಜೋಕಾಗಿಟ್ಟು ಕೊಂಡಿದ್ದೇನೆ" ಎಂದನು.

ಅಷ್ಟು ಹೊತ್ತಿಗೆ "ಹಿಲ್ಲಕ್ ವ್ಯೂ" ನ ಬಾಗಿಲಿಗೆ ಬಂದಿದ್ದೆವು.

# ಸುಖ-ದುಃಖ

ಶ್ರೀ. ಎಸ್. ವೆಂಕಟರಾಜ ಮಂಗಳೂರು

೧

ನಲಿವಿಂದಲೆಲ್ಲಿ ಮೊಗದಾವರೆಯು ತಾನರಳಿ-
ನಗು ಸೊದೆಯನೊಗೆಯುತಲಿ ಮೆರೆಯುತಿಹುದೊ॥
ಗೆಳೆಯ ನೋಡಲ್ಲಿ! ದುಗುಡದ ಬಗೆಯ ಕಣ್ಣೀರ-
ಕಾಲುವೆಯ ಕಲಕಲತೆ ಕೇಳುತಿಹುದು.॥

೨

ಎಲ್ಲಿ ತೆಂಗಾಳಿ ಭವದುಬ್ಬಟೆಗೆ ಸೆರೆಸಿಲುಕಿ-
ಬೆಂದೊಡಲನಿರದೆ ಸಂತಯಿಸುತಿಹುದೊ॥
ಅಲ್ಲಿ ತಡಿಯನು ಪೊಯ್ದು ಘೂರ್ಣಿಸುವ ಕಡಲ ತೆರೆ-
ಯಬ್ಬರಕೆ ಕಿವಿಯು ಕಿವುಡೆನಿಸುತಿಹುದು.॥

೩

ಕಿರುದೆರೆಗಳಲ್ಲಿ ನಲಿನಲಿದು ಸಂತಸದಿಂದೆ-
ಕರೆಕರೆದು ನೀರಲರ ಮಧುವನೂಡಿ॥
ಅರಲುಣಿಗಳಾ ಬಗೆಯ ನೊಲಿಸುತಿರುವುವೊ ಮೆರೆವ-
ನಲ್ಲೊಗ್ಗಳದೆ ಕೆಸರದೇನಿರದಿರುವುದೇ?॥

೪

ಜೋಡೆಯರ ನಸುನಗೆಯ ದೇಸಿಮಿಗೆ ಮಿಸುಗುತಿಹ-
ಕಡೆಗಣ್ಣ ಕುಡಿನೋಟವೆಸೆವುದೆಲ್ಲಿ॥
ನೋಡದಕೊ ಪಾಪಂಗಳಿರದೆ ಪಲ್ಮೊರೆದು ನೆರೆ-
ಗರ್ಜಿಸುತೆ ತರ್ಜಿಸುತಲಿರುವುವಲ್ಲಿ.॥

೫

ಎಲ್ಲಿ ಕೋಲ್ಮಿಂಚು ಬಲ್ಪೊಗರ ಬಲೆಯನು ಬೀಸಿ-
ರಸಿಕ ಜನರೊಡಲನೇ ಸೆರೆವಿಡಿವುದೋ॥
ಅಲ್ಲಿ ಎಣ್ದೆಸೆಗಳನು ಬಿರಿವ ಭೀಷಣರವದ-
ಗುಡುಗು ತಾನದೊ ಬಗೆಯನಳ್ಕಿಸುವುದು.॥

೬

"ಅಚ್ಚರಿಯಿದೈಸೆ! ಎಲೆದೇವ; ನುಣ್ಗದಿರುಗಳ-
ನುಚ್ಚಳಿಪ ಸುಖವೆಂಬ ಮುತ್ತುಗಳನು॥
ದುಗುಡದಾ ದಾರದೊಳೆ ಕೋದು ಸುಖದುಃಖಗಳ
ಸಮತೆಯನು ಸಾರುತಿಹ ಪರಿಯಿದೇನು?"

CC-0. Jangamwadi Math Collection. Digitized by eGangotri

# ಚಲಚ್ಚಿತ್ರ

ಲೇಖಕ:— ಶ್ರೀ. ಕೋಟ ಶಿವರಾಮ ಕಾರಂತ, ಪುತ್ತೂರು.

೧ನೆಯ ಬರಹ

## ಚಲಚ್ಚಿತ್ರವು ಒಂದು ಕಲೆಯೇ ?

ನಾವು ಬಯಸಿರಲಿ-ಬಯಸದಿರಲಿ, ಚಲಚ್ಚಿತ್ರವು ಈಗ ನಮ್ಮಲ್ಲಿ ಒಂದು ನೆಲೆಯಾಗಿ ನಿಂತುಬಿಟ್ಟಿದೆ. ಪೂರ್ವದಿಂದ ನಮ್ಮ ಸಂಸ್ಕೃತಿಯೊಡನೆ ಬೆರೆತು ಬೆಳೆದು ಬಂದಂತಹ ಹಲವು ಲಲಿತಕಲೆಗಳಂತೆ, ಎಷ್ಟೋ ಬಾರಿ ಅದಕ್ಕೂ ಅಧಿಕವಾಗಿ, ಇದು ನಮ್ಮ ಮನಸ್ಸನ್ನು ಅಪಹರಿಸಿಬಿಟ್ಟಿದೆ. ನಗರವಾಸಿಗಳ ಪಾಲಿಗೆ ಚಲಚ್ಚಿತ್ರಗಳನ್ನು ಆಗಾಗ ನೋಡುತ್ತಿರುವುದೊಂದು ಅವರ ಜೀವನದ ಒಂದು ಅಂಗವಾಗಿದೆ. ನಿತ್ಯವರ್ತಮಾನಪತ್ರಗಳನ್ನು ಓದುವ ಚಾಳಿಯುಂಟಾದಂತೆ, ಈಗಣ ನಾಗರಿಕತೆಯಲ್ಲಿ ಚಲಚ್ಚಿತ್ರವು ಒಂದು ಚಾಳಿಯಾಗಿ ನಿಂತಿದೆ. ಪಾಶ್ಚಾತ್ಯ ದೇಶಗಳಲ್ಲಿ ಹಳ್ಳಿಗಳಲ್ಲಿಯೂ ಇದು ತುಂಬಿಬಿಟ್ಟಿದೆ. ರುಸ್ಯಾ ದೇಶದ ಹಳ್ಳಿಗಳಲ್ಲಿ ಇದರ ಪ್ರಯೋಗವು ಕಂಡುಬಂದಷ್ಟು ಇನ್ನೆಲ್ಲಿಯೂ ಕಂಡುಬರುವುದಿಲ್ಲ. ಊಟವು ಶರೀರದ ಆಹಾರವೆನಿಸಿದ್ದಾದರೆ, ವಿದ್ಯಾವಂತರೆನಿಸುವವರ ಪಾಲಿಗೆ ಇದು ಮಾನಸಿಕ ಆಹಾರವಾಗಿದೆ. ಅವರು ಓದುತ್ತಿರುವ ಕಾವ್ಯಕಾದಂಬರಿಗಳ ಪ್ರಾಮುಖ್ಯಸ್ಥಾನವನ್ನು ಇದು ವಹಿಸಿದೆ. ಕಾವ್ಯಕಾದಂಬರಿಗಳಲ್ಲಿ ಅನೇಕ ಅಯುಕ್ತ ವಿಷಯಗಳಿರುವವು. ಈ ಕಾರಣಗಳಿಂದ ಕಾವ್ಯವನ್ನು ಹೇಗೆ ದೂರಲುಬಾರದೋ ಹಾಗೆಯೇ ಚಲಚ್ಚಿತ್ರಗಳಲ್ಲಿ ಈಗ ನಮ್ಮ ಮುಂದೆ ಕಂಡುಬರುವ ಹಲವು ಅಯುಕ್ತ, ಅಸಭ್ಯವಿಚಾರಗಳ ದೆಸೆಯಿಂದಲೇ ಅದನ್ನು ಹಳಿಯಲಿಕ್ಕೆ ಬರುವಂತಿಲ್ಲ. ವೇಶ್ಯೆಯರಕೈಯಲ್ಲಿ ನರ್ತನ-ಗಾನಕಲೆಗಳು ಕಾಮಸಾಧನೆಗಾಗಿ ಉಪಯೋಗಿಸಲ್ಪಡುವುವೆಂದು ನಾವು ಗಾನ-ನರ್ತನಗಳನ್ನೇ ದೂರಬಹುದೋ? ಕಲೆಯು ಮನುಷ್ಯನಿಗೆ ಅತಿ ಅವಶ್ಯವಾದುದು; ಅದೊಂದು ಶ್ರೇಷ್ಠ ವಸ್ತು. ಶ್ರೇಷ್ಠಸಂಸ್ಕೃತಿಯು ಶ್ರೇಷ್ಠಕಲೆಯಲ್ಲದೆ ಬದುಕಿರಲಾರದು.

ಹೀಗೆಂದಲ್ಲಿ – ಈ ಮಾತು ಗಾನ-ನರ್ತನಗಳಂತಹ ಲಲಿತಕಲೆಗಳಿಗೆ ಅನ್ವಯಿಸಬಲ್ಲುದೇ ಹೊರತು ಚಲಚ್ಚಿತ್ರದಂತಹ ಮಾನಸಿಕ-ಮದ್ಯಪಾನಕ್ಕೆ ಅನ್ವಯಿಸಲಾರದು ಎಂದು ತಟ್ಟನೆ ಉತ್ತರವು ಬರಬಹುದು. ಈ ಚಿತ್ರಗಳ ಕಡೆಗೆ ಜನರು ತೋರುವ ಆತುರವು ಹೆಂಡದ ಕಡೆಗೆ ಮದ್ಯಪ್ರೇಮಿಯು ತೋರುವ ಆಸಕ್ತಿಯಂತಿದೆ – ಎಂಬ ಮಾತನ್ನು ಅಲ್ಲಗಳೆಯಲುಬಾರದು. ಆ ಒಂದೇ ಕಾರಣದಿಂದ ಇದನ್ನು ತಳ್ಳುವುದಾದರೆ, ಗಾನ, ನರ್ತನ, ಕಾವ್ಯ ಕಾದಂಬರಿಗಳೆಲ್ಲ ನಿಂದನೀಯವೆನಿಸಬಹುದಷ್ಟೆ! ಅದಕ್ಕಾಗಿ ಚಲಚ್ಚಿತ್ರವೂ ಸಹ ಪೂಜ್ಯವೆನಿಸಲು, ಇದೂ ಒಂದು ಕಲೆಯೇ- ಎಂಬ ವಿಚಾರವನ್ನು ಮಾಡುವುದು ಅವಶ್ಯ. ತೀರ ನವೀನವೆಂಬುದರಿಂದ ಇದನ್ನು ಅಲ್ಲಗಳೆಯಲಿಕ್ಕಾಗದು. ಪ್ರತಿಯೊಂದು ಕಲೆಯೂ ಒಂದೊಂದು ಕಾಲದಲ್ಲಿ ನವೀನವಾಗಿದ್ದಿರಲಿಲ್ಲವೇ ? ಕಾಡುಜನರ ಜೀವನದಲ್ಲಿ ಮೊದಲು ಉದ್ಭವಿಸಿದ ಕಲೆಯು ನರ್ತನ; ಆಗ ಅದು ನವೀನವಾಗಿತ್ತು. ಬಳಿಕ ಗಾನ ಕಲೆಯು ಬಂದಿತು; ಆಗ ಅದೂ ನವೀನವಾಗಿತ್ತು. ತರುವಾಯ ಶಿಲ್ಪ, ಚಿತ್ರಕಲೆಗಳು ಬಂದುವು; ಆಗ ಅವೂ ನವೀನವೆನಿಸಿದುವು. ಮಾನವನ ಸಂಸ್ಕೃತಿಯು ಇನ್ನೂ ಮುಂದರಿಯಲು ವಾಸ್ತುಶಿಲ್ಪವು ಬಂದಿತು. ಅದೂ ಆ ಕಾಲಕ್ಕೆ ನವೀನವೆ. ಈ ಕಾಲಕ್ಕೆ ಅವೆಲ್ಲ ಪ್ರಾಚೀನವಾದುವುಗಳು. ಹಾಗೆಯೇ ಚಲಚ್ಚಿತ್ರವು ಈಗ ನಮಗೆ ನವೀನವೆಂಬುದರಿಂದ ಇವನ್ನು ಹಳಿಯದೆ ಇದರಲ್ಲಿ ಕಲಾಲಕ್ಷಣಗಳಿವೆಯೇನು ಎಂಬುದನ್ನು ಪರಿಶೀಲಿಸುವುದು ನಮ್ಮ ಕರ್ತವ್ಯ.



CC-0. Jangamwadi Math Collection. Digitized by eGangotri

ಕಲೆಯೆಂದರೇನೆಂದು ವಿಚಾರ ಮಾಡುವ. ತನಗುಂಟಾದ ಭಾವವಿಕಾರಗಳನ್ನು, ಇನ್ನೊಂದು ವಾಹಕದ ಮೂಲಕ ಪರರಿಗೆ ಉಂಟುಮಾಡುವ ಸಾಧನೆಯೇ ಕಲೆ. ಆದರೆ ಪೆಟ್ಟುತಿಂದಾಗ ಮಗುವು ಅತ್ತು, ಇತರರಿಂದ ಕಣ್ಣೀರನ್ನು ಕರೆಯಿಸುವುದು; ಇದೆಂದೂ ಕಲೆಯಲ್ಲ. ಇದು ಅದರ ಸ್ವಾಭಾವವು. ಕಲೆಯು ನಮ್ಮ ಜೀವನದ ಸ್ವಭಾವವಲ್ಲ. ದುಃಖಬಂದಾಗ ಅಳುವುದು, ಹರುಷವಾದಾಗ ನಗುವುದು, ಸಿಟ್ಟುಬಂದಾಗ ಉದ್ರೇಕಗೊಳ್ಳುವುದು – ಈ ಕ್ರಿಯೆಗಳು ಪರರನ್ನು ಯಥಾವತ್ತಾಗಿ ದುಃಖ, ಹರುಷ, ಉದ್ರೇಕಗಳಲ್ಲಿ ಮುಳುಗಿಸಬಹುದಾದರೂ ಅವನ್ನು ಕಲೆಯೆಂದು ಕರೆಯಲು ಸಾಧ್ಯವಿಲ್ಲ. ಕಲೆಯಲ್ಲಿ ಇಂತಹ ಲಕ್ಷಣಗಳಿರಬಹುದು. ಆದರೆ ಕಲೆಯು ಈ ರೀತಿಯ ಸ್ವಾಭಾವಿಕ ಗುಣವೂ ಅಲ್ಲ; ಇಲ್ಲವೆ ಅದರ ತಾದ್ರೂಪಿಕ (Realistic) ಅನುಕರಣೆಯೂ ಅಲ್ಲ. ಬೇರೊಬ್ಬನು ಅತ್ತಂತೆ ಅನುಕರಿಸುವುದು ಕಲೆಯಲ್ಲ. ಅದು ಕೆಲವು ಭಾಗದಲ್ಲಿ ಯಥಾತ್ಮಿಕವಾಗಿಯೂ, ಅಂದರೆ ಇದ್ದಕ್ಕಿದ್ದಂತೆ ಅನುಕರಿಸುವ ಸ್ವಭಾವದ್ದಾಗಿಯೂ, ಕೆಲವು ಭಾಗದಲ್ಲಿ ಅಮೂರ್ತ (Abstract) ವಾಗಿಯೂ ಇರುವುದು. ಅಮೂರ್ತವಿಚಾರವು ಊಹಾರಾಜ್ಯದ ಒಂದು ಉತ್ಪತ್ತಿ; ಮೂರ್ತಿಮಂತವಾಗಿ ಕಾಣಸಿಗದ ವಸ್ತುವು. ಇವೆರಡನ್ನು ಕೂಡಿಕೊಂಡು ಉಂಟಾಗುವ ಒಂದು ಸೃಷ್ಟಿಯೇ ಕಲೆ. ಏನು ಸೃಷ್ಟಿಯನ್ನು ಮಾಡಬೇಕಾದರೂ ಮೂರ್ತಿಮಂತ ವಸ್ತುಗಳು ನಮಗೆ ಬೇಕು. ಹಾಗೆಯೇ, ಎಷ್ಟೋ ಮೂರ್ತಿಮಂತ ಕ್ರಿಯೆಗಳೂ ಬೇಕು. ಆದರಿಂದಲೆ ಕಲಾಸೃಷ್ಟಿಯು ಅನುಕರಣೆಯೆಂದೆನಿಸಬೇಕೆಂದಿಲ್ಲ. ಅನುಕರಣೆಯು ಎಂದಿಗೂ ಕಲೆಯೆನಿಸಲಾರದು "ಒಂದು ವಸ್ತುವಿನ ನಕಲು, ಅದರ ಆಳತೆ, ಸೂಕ್ಷ್ಮತೆ ಮೊದಲಾದ ಪ್ರಮಾಣಗಳಿಂದ ಎಷ್ಟು ಯಥಾವತ್ತಾಗಿದ್ದರೂ, ಅದು ನಿಜ (ಮೂಲ) ವಸ್ತುವು ಕೊಡಬಲ್ಲ ಭಾವಾನಂದಗಳನ್ನು ಕೊಡಲಾರದು. ಒಬ್ಬನ ರೂಪಚಿತ್ರವು ಆ ಮನುಷ್ಯನ ಸ್ಥಾನವನ್ನು ಎಂದಾದರೂ ವಹಿಸಬಲ್ಲುದೇ?" ಎಂದೂ ಇಲ್ಲ.

ಈಗ ನಾವು ಗಾನಸೃಷ್ಟಿಯ ಒಂದು ಚಿಕ್ಕ ಪ್ರಬಂಧ (ಹಾಡು, Composition) ವನ್ನು ಕುರಿತು ವಿಚಾರಿಸುವ. ಸಪ್ತಸ್ವರಗಳಿಂದ ಆ ರಚನೆಯು ಉಂಟಾಯಿತು. ಸಪ್ತಸ್ವರಗಳು ನಿಸರ್ಗಸ್ವರಗಳ ನಕಲು. ಸ್ವರಗ[ಳು] ಹಾಡಿನ ವಾಹಕವು. ಸ್ವರವಂತೂ ನಿಸರ್ಗದ ನಕ[ಲು]. ಇನ್ನು ಆ ರಚನೆಯಲ್ಲಿ, ಎಷ್ಟೋ ಸ್ವರಗಳನ್ನು ಕೂ[ಡಿಸಿದ] ಒಂದೊಂದು ಅಂಶವೂ ಸಹ, ನಿಸರ್ಗದಲ್ಲಿ ಕಂಡುಬ[ರುವ] ಸ್ವರಕುಂಜದ ಅನುಕರಣೆಯಿರಬಹುದು. ಉದಾ[ಹರಣೆಗೆ] ಒಂದು ಚರಣದ ಒಂದು ತುಂಡು, ಕೋಗಿಲೆಯ ಕೂಗ[ನ್ನು] ಅನುಕರಿಸಬಹುದು. ಹಾಗೆಯೇ ಇನ್ನೆಲ್ಲ ತುಂಡುಗಳ[ು] ಸಹ ಬೇರೆ ಬೇರೆ ಪ್ರಾಣಿಗಳ ಕೂಗುಗಳ ಅನುಕರಣೆ[ಯಾಗಿರ]ಬಹುದು. ಆದರೆ ಅವುಗಳಿಂದ ಕೂಡಿದ ಈ ಸೃಷ್ಟಿ[ಯು] ಅಮೂರ್ತವಾದ ಭಾವನೆಯನ್ನು ಪ್ರೇರಿಸುವ ಅತ್ಯ[ುತ್ತಮ] ಸೃಷ್ಟಿಯಾಗಿರಲು ಸಾಧ್ಯವಿದೆ.

ಒಂದು ಭಾವಚಿತ್ರದ ಉದಾಹರಣೆಯನ್ನು [ತೆಗೆದು] ಕೊಳ್ಳುವ. ಅದರ ವಾಹಕವಾದ ಬಣ್ಣಗಳು ನಿಸರ್ಗ[ದಲ್ಲಿ] ಕಾಣಸಿಗುವ ಬಣ್ಣಗಳೇ; ಅಲ್ಲಿರುವ ಮನುಷ್ಯ, ಪ್ರಾ[ಣಿ] ಮೊದಲಾದ ಒಡವೆಗಳ ಅಂಗೋಪಾಂಗಗಳೂ [ಒಂದು] ಮಟ್ಟಿಗೆ ತಾದ್ರೂಪಿಕವಾಗಿರಬಹುದು. ಆದರೆ ಆ [ಚಿತ್ರ]ಸೃಷ್ಟಿಯ ಭಾವವು ತೀರ ನವೀನವೂ, ಪ್ರಕೃತಿಯ[ಲ್ಲಿ] ಲ್ಲಿಯೂ ಕಾಣಸಿಗದ ಅಮೂರ್ತರೂಪವೂ [ಆಗಿರಲು] ಸಾಧ್ಯವಿದೆ. ಹೀಗೆಯೇ ನರ್ತನದ ಉದಾಹರಣೆಯ[ನ್ನು] ಸಹ ಕೊಡಬಹುದು.

ಈರೀತಿ, ಮೂರ್ತ ಇಲ್ಲವೆ ತಾದ್ರೂಪಿಕ (Realis[tic]) ಒಡವೆಗಳಿಂದ, ಭಾವಾತ್ಮಿಕವಾದ ಅಮೂರ್ತಸ್ವ[ರೂಪ]ಯೊಂದರ ಸೃಷ್ಟಿಯನ್ನುಂಟುಮಾಡುವುದೇ ಕಲೆ[ಯ] ಲಕ್ಷಣವು. ಇಲ್ಲಿ ಯಥಾತ್ಮಿಕತೆಯೂ, ಅಮೂರ್ತತೆಯ[ೂ] ಯಾವ ಪ್ರಮಾಣದಲ್ಲಿರಬೇಕೆಂಬುದು– ಆಯಾಯ ಕ[ಲೆಯ] ವಾಹಕ ವಸ್ತುಗಳನ್ನು ಹೊಂದಿದೆ. 'ಚಾರ್ಲ್ಸ್ [ಮೊರ್]ಯಟ್' ಎಂಬುವನು ಈವಿಷಯವಾಗಿ ಹೀಗೆ ನುಡಿ[ದಿದ್ದಾ]ವನು: "ಕಲೆಯ ಸ್ವರೂಪವು ಅದರ ವಾಹಕವ[ನ್ನು] ಹೊಂದಿದೆ. ನಿಸರ್ಗದ ಯಥಾತ್ಮಿಕ ಅನುಕರಣೆ[ಗೂ] ಅಮೂರ್ತಸ್ವರೂಪಕ್ಕೂ ಇರುವ ಒಂದು [ಸೇತು]ವೆ (ಕಲೆಯು) ವದು. ಇದರಲ್ಲಿ ಅಮೂರ್ತ ಸ್ವರೂಪವು [ಇರ]ಬೇಕು, ತಾದ್ರೂಪ್ಯತೆಯೆಷ್ಟಿರಬೇಕು–ಎಂಬುದು [ಉಪ]ಯೋಗಿಸತಕ್ಕ ವಾಹಕವನ್ನು ಹೊಂದಿಕೊಂ[ಡಿರು]ವುದು."[೧]

---

[೧] Quoted by Paul rotha p. 40.

CC-0. Jangamwadi Math Collection. Digitized by eGangotri

ಉದಾಹರಣೆಗಾಗಿ ನರ್ತನವನ್ನು ತೆಗೆದುಕೊಳ್ಳುವ. ಇದರಲ್ಲಿ ನಿಸರ್ಗದ ಅನುಕರಣೆಯು ತೀರ ಕಡಿಮೆ. ನರ್ತನಕಾಲದಲ್ಲಿ ತೋರಿಸುವ ಹಾವ (Gesture) ಗಳೂ, ಕುಣಿತದ ಭಿನ್ನ ವಿಕಾರಗಳೂ ಬಹುಮಟ್ಟಿಗೆ ನಿಸರ್ಗದಲ್ಲಿ ಕಂಡುಬರುವುದಿಲ್ಲ. ಆದುದರಿಂದ ಅದರಲ್ಲಿ ಹೆಚ್ಚಿನ ಅಮೂರ್ತತೆಯಿದೆ. ಶಿಲ್ಪದಲ್ಲಿಯೂ, ಚಿತ್ರಕಲೆಯಲ್ಲಿಯೂ ಅನುಕರಣೆಯ ಅಂಶವು ಅಧಿಕಪ್ರಮಾಣದಲ್ಲಿರುವುದು.

ಇಂಥ ಯೋಗ್ಯತೆಯು ಚಲಚ್ಚಿತ್ರದಲ್ಲಿರುವುದೇ? ಎಂದು ವಿಚಾರ ಮಾಡಿದಲ್ಲಿ ಅಹುದೆಂದು ನಮಗೆ ಹೊಳೆಯದಿರಲಾರದು. ಈಗ ನಮ್ಮ ಮುಂದೆ ಬರುವ ಚಿತ್ರಗಳಲ್ಲಿ ಅಧಿಕಾಂಶವಾದುವು ಯಥಾತ್ಮಿಕವಾಗಿದ್ದರೂ, ನಿಜವಾದ ಚಲಚ್ಚಿತ್ರಕ್ಕೆ ಇದಕ್ಕೂ ಹೆಚ್ಚಿನ ಅಮೂರ್ತತೆಯನ್ನು ಕೊಟ್ಟು ನವಸೃಷ್ಟಿಯನ್ನುಂಟು ಮಾಡಲು ಸಾಧ್ಯವಿದೆ. "ಚಲಚ್ಚಿತ್ರವು ಯಥಾರೂಪಕವಾಗಿರುವುದರ ಬದಲು, ಊಹಾಬಲಿ, ಸೃಷ್ಟನೆಗಳಿಂದ ಕೂಡಿ ಸತ್ಯಾತ್ಮಿಕವಾಗಿರಬಹುದು." ೧ ಇದಕ್ಕಿರುವಂತಹ ಪ್ರಬಲವಾದ ಕ್ರಿಯಾತ್ಮಿಕ ಶಕ್ತಿಯೂ, ಭಾವಪ್ರೇರಣೆಯ ಬಲವೂ ಇನ್ನಾವ ಕಲೆಗೂ ಇಲ್ಲವೆನ್ನುವಷ್ಟಿದೆ. ಚಾರ್ಲಿ ಚೆಪಲೀನನೆನ್ನುವಂತೆ–"ನಮ್ಮ ಊಹಾಬಲವನ್ನೂ, ತಾಲವರ್ಣವನ್ನು ತಿಳಿಯುವ ಇಂದ್ರಿಯಗಳನ್ನೂ ಸದಾ ಉದ್ರೇಕಗೊಳಿಸುವ ಶಕ್ತಿಯು ಪಟಲ (Film)ಕ್ಕಿದೆ. ಇದರಿಂದಲೇ ಚಲಚ್ಚಿತ್ರದ ಕೈಗಾರಿಕೆಯು ಅಷ್ಟೊಂದು ಭವ್ಯವಾದ, ಬಲವಾದ ಸ್ಥಾನವನ್ನು ಗಳಿಸಿತು. ಅನಂತಶಕ್ತಿಯುಳ್ಳ ರಾಕ್ಷಸನನ್ನು ನಾವು ಸಾಕುತ್ತಿರುವೆವು. ಯಾರಿಗೂ ಅದನ್ನು ತೆಗೆದುಕೊಂಡು ಏನು ಮಾಡಬೇಕೆಂಬುದರ ತಿಳಿವೇ ಇಲ್ಲ...."

ಯಾವುದಾದರೊಂದು ಕಲೆಯ ಸೃಷ್ಟಿಯಾಗಲು, ಕಲಾವಂತನ ಭಾವಸೃಷ್ಟಿಗೆ ಅನುಕೂಲವಾದ ವಾಹಕವು ಬೇಕಷ್ಟೆ! ಆ ವಾಹಕಗಳಿಗೆ ನಮ್ಮ ವಿಚಾರಶಕ್ತಿಯನ್ನು ಎಚ್ಚರಗೊಳಿಸಿ, ಭಾವನೆಯನ್ನು ಉದ್ರೇಕಿಸುವ ಶಕ್ತಿಯಿರಬೇಕಷ್ಟೆ! ಚಲಚ್ಚಿತ್ರದಲ್ಲಿ ವಾಹಕವು ಯಾವುದು? ಅದರಲ್ಲಿ ಅಂತಹ ಶಕ್ತಿಯಿದೆಯೇ? ನಿಜವಾಗಿಯೂ ಅದರಲ್ಲಿ ಆ ಶಕ್ತಿ ತುಂಬಾ ಇದೆ. ಅದರ ವಾಹಕವು ಪಟಲದ (Film) ತುಂಡುಗಳು. ಈ ತುಂಡುಗಳ ಮೇಲೆ ಚಲ ಇಲ್ಲವೆ ಅಚಲ ವಸ್ತುಗಳ ಯಥಾತ್ಮಿಕ ಅಂಕಿತ (ಬಿಂಬ) ಗಳಿರಬಹುದು. ಆದರೆ ಇವುಗಳನ್ನು ಜೋಡಿಸಿದಲ್ಲಿ, ಭಾವಸೃಷ್ಟಿಗೆ ಬೇಕಾದ ಸಾಮಗ್ರಿಯು ಸುಲಭದಲ್ಲಿ ದೊರೆಯುವುದು. ರುಸ್ಯಾ ದೇಶದ ಕುಶಲೆವ್ ಎಂಬ ಚಲಚ್ಚಿತ್ರ ನಿರ್ದೇಶಕ (Director) ನ ಮಾತುಗಳನ್ನು ಕೇಳಿರಿ— "ಪ್ರತಿಯೊಂದು ಕಲೆಯೂ ಮೂಲತಃ ವಸ್ತು (Material) ವಿನಿಂದ ಕೂಡಿಯೂ, ಬಳಿಕ, ಆ ವಸ್ತುವಿನ ಸ್ವಭಾವಕ್ಕೆ ಅನುಗುಣವಾಗಿ ಅದನ್ನು ಪ್ರಬಂಧಗೊಳಿಸುವುದಾಗಿಯೂ ಇರುತ್ತದೆ. ಚಲಚ್ಚಿತ್ರದಲ್ಲಿ– ಪ್ರಭಾಲಿಖಿತಬಿಂಬವನ್ನು ಹೊತ್ತಿರುವ ಪಟಲವೇ ವಸ್ತುವಾಗಿಯೂ, ಭಿನ್ನ ಭಿನ್ನ ಪಟಲದ ತುಂಡುಗಳನ್ನು ಸಂಪಾದನೆ ಗೊಳಿಸುವ (Editing) ಕ್ರಿಯೆಯೇ ಪ್ರಬಂಧವಾಗಿಯೂ ಇದೆ...." ಆದರೆ ಪಾಲ್‌ರೋತನೆನ್ನುವಂತೆ "ಈ ಚಲಚ್ಚಿತ್ರಕ್ಕೆ ಬೇಕಾಗುವಷ್ಟು ವಿವಿಧಶಾಸ್ತ್ರಗಳ ಪರಿಜ್ಞಾನವು ಇನ್ನಾವ ಭಾವವಾಹಕಕ್ಕೂ ಬೇಕಾಗುವುದಿಲ್ಲ." ೧ ಅದೇಕೆಂಬುದನ್ನು ಮುಂದೆ ವಿವರಿಸುವೆವು. "ಚಲಚ್ಚಿತ್ರವು, ಮೂಲತಃ, ನಿಸರ್ಗದ ಮೇಲೆ ಹೊರಿಸಲ್ಪಟ್ಟ ಉನ್ಮೇಷಕ ಪ್ರತಿರೂಪವು (Pattern) ಇಲ್ಲವೆ ತಾಲ (Rythm) ಎನ್ನಬಹುದು. (ಇದಕ್ಕಾಗಿ ಉಪಯೋಗಿಸದ ವಸ್ತುಗಳೆಲ್ಲ ನೈಸರ್ಗಿಕವಾಗಿರಬಹುದು.) ಈ ಚಿತ್ರ ದೃಷ್ಟಿಯಿಂದ ವಿಚಾರಿಸಲು ಬೆಳಕಿನ ಉಪಯೋಗದಿಂದಲೂ, ಚಲನ ದೃಷ್ಟಿಯಿಂದೆಣಿಸುವಾಗ ದೃಶ್ಯಬಿಂಬಗಳ ಮೂಲಕವೂ, ಮಾನಸಿಕಶಾಸ್ತ್ರದ ದೃಷ್ಟಿಯಿಂದೆಣಿಸುವಾಗ ಊಹಾಬಿಂಬಗಳನ್ನು ಸೃಷ್ಟಿಮಾಡುವುದರಿಂದಲೂ, ಈ ಪ್ರತಿರೂಪದ ನಿರ್ಮಾಣವಾಗುವುದು.

ಈಗ ನಾವು ನಮ್ಮೀ ನವವಾಹಕವಾದ ಪಟಲದ ಸ್ವಭಾವವನ್ನು ಪರಿಶೀಲಿಸುವ. ಅದಕ್ಕೂ ಮೊದಲು ನಮಗೆ ಈಗಾಗಲೇ ಪರಿಚಿತವೆನಿಸಿರುವ, ಚಿತ್ರ, ಶಿಲ್ಪ, ವಾಸ್ತುಶಿಲ್ಪ, ಸಂಗೀತ, ನರ್ತನ ಮೊದಲಾದುವುಗಳಲ್ಲಿ ವಾಹಕವು ಯಾವತೆರನಲ್ಲಿ ಸೃಷ್ಟಿಗೆ ಸಹಾಯಕವಾಗುವುದು ಯಾವರೀತಿಯಲ್ಲಿ ಮಾನಸಿಕಬಿಂಬಗಳನ್ನು ಉಂಟುಮಾಡುವುದು; ಎಂಬದನ್ನು ವಿಚಾರಿಸುವ. ಇವುಗಳಲ್ಲಿ ಚಿತ್ರಕಲೆ, ಶಿಲ್ಪ, ವಾಸ್ತುಗಳು ಸ್ಥಿತವಾದುವು; ಅವುಗಳ ಬಾಳ್ವೆಯೂ ದೀರ್ಘ ಕಾಲ. ಕವಿತೆ, ಸಂಗೀತ, ನಾಟಕ

೧. I bid p. 45.

೧ I bid p. 241.

CC-0. Jangamwadi Math Collection. Digitized by eGangotri

ಗಳು ಚಲನೆಯುಳ್ಳುವು, ಆದರೆ ತಾತ್ಕಾಲಿಕವಾದುವು.[೧] ಮೊದಲಿನ ಸ್ಥಿತವಾದ ಕಲೆಗಳಲ್ಲಿ ಅಮೂರ್ತವಿಷಯಕ್ಕೆ ಜೀವವನ್ನು ಕೊಡುವ ವಸ್ತುಗಳು, ರೇಖೆಗಳ ವಿವಿಧ ತೆರನ ಪ್ರವಾಹಗಳು. ಸೌರಸ್ಯದಿಂದ ಬರೆಯಲ್ಪಡುವ ಇಲ್ಲವೆ ಇರಿಸಲ್ಪಡುವ ಆಕಾರಗಳು, ಮತ್ತು ರಚನೆಯಲ್ಲಿ ಕಂಡುಬರುವ ಚಲನೆಗಳು. ಉದಾ:- ಒಂದು ಚಿತ್ರದಲ್ಲಿ ಸಮವಿತಾನ ( Horizantal ) ರೇಖೆಗಳು, ನಮ್ಮಲ್ಲಿ ಶಾಂತಿ ವಿಶ್ರಾಂತಿ ಮೊದಲಾದ ಭಾವಗಳನ್ನು ಪ್ರೇರಿಸುವುವು.ಲಂಬ ರೇಖೆಗಳು ಗೌರವ, ಬಲ ಮೊದಲಾದುವನ್ನು ತೋರಿಸುವುವು. ವಕ್ರರೇಖೆಗಳು ಲಾಲಿತ್ಯ, ಮೃದುಲತೆ, ಆನಂದ, ಮೊದಲಾದ ಲಕ್ಷಣವನ್ನು ತೋರಿಸುವುವು. ಹಾಗೆಯೇ ಚಿತ್ರದಲ್ಲಿ ಛಾಯೆಯು ಅಧಿಕವಾಗಿ ತೇಜವು ಕಡಿಮೆಯಾಗಲು ದುಃಖವೂ, ತೇಜವು ಅಧಿಕವಾಗಲು ಹರುಷವೂ ಕಾಣಿಸುವುವು. ( ಛಾಯೆ ತೇಜಗಳ ವಿಚಾರ ವಾಗಿ ಮುಂದಿನ ಅಧ್ಯಾಯದಲ್ಲಿ ವಿವರಿಸಿದೆ.)ಇತ್ತ ತಾತ್ಕಾಲಿಕವಾದ ಸಂಗೀತ, ನರ್ತನಾದಿಗಳು, ತಾಳ, ಲಯ, ಗತಿ, ಮೊದಲಾದುವುಗಳ ಬಲದಿಂದ ಹರುಷ, ದುಃಖ, ಶಾಂತಿ, ಕೋಪ ಮೊದಲಾದ ಭಾವಗಳನ್ನು ಪ್ರೇರಿಸಬಲ್ಲುವು.

ಚಲಚ್ಚಿತ್ರದಲ್ಲಿ, ಈ ಎರಡುವರ್ಗದ ಕಲೆಗಳಿಗಿರುವ ಶಕ್ತಿಯೂ ಇದೆ. ಪ್ರತಿಯೊಂದು ಚಿತ್ರರೇಖೆಗಳ ಸಹಾಯದಿಂದ ಭಾವಗಳನ್ನು ಪ್ರೇರಿಸಬಲ್ಲುದು. ಅವುಗಳ ಛಾಯಾ ತೇಜ ಮೊದಲಾದುವುಗಳ ಪ್ರಬಂಧ ( Composition ) ವೂ ಈ ಕೆಲಸವನ್ನು ಮಾಡಬಲ್ಲುದು. ಇತ್ತ ಕಾಲ, ಗತಿ, ಗಳ ಸಹಾಯದಿಂದ ನರ್ತನವು ಕೊಡಬಲ್ಲುದಾದ ಭಾವೋದ್ರೇಕವನ್ನೂ ಇದು ಕೊಡಬಲ್ಲುದು. ಇದು ಭಿನ್ನ ರೀತಿಯ ಚಿತ್ರಗತ ವ್ಯಕ್ತಿ ಮತ್ತು ಒಡವೆಗಳ ಭಿನ್ನ ಭಿನ್ನ ರೀತಿಯ ಚಲನೆಯೂ, ನಾನಾದೃಷ್ಟಿಯಿಂದ ಪ್ರಘ ಲೇಖಕವೇ (Camara) ಒಡವೆಗಳ ಕಡೆಗೆ ಚಲಿಸಿ ಅದ ದುಂಟಾಗುವ ಚಲನೆಗಳೂ, ವಸ್ತುಗಳನ್ನು ಭಿನ್ನ ಭಿನ್ನ ಕೋಣಗಳಿಂದ ಕಾಣುವಾಗ ಉಂಟಾಗುವ ವಿಕಾರಗಳೂ -ಭಾವವನ್ನು ಪ್ರೇರಿಸಬಲ್ಲುವು. ಇದಲ್ಲದೆ ಪಟಲದ ಜ ನೆಯ ಶಕ್ತಿಯು ಸಹ ಇದೆ. ಸ್ಥಿರವಸ್ತುಗಳ ಚಿತ್ರವನ್ನು ಸರಿಯಾದ ರೀತಿಯಲ್ಲಿ ಕತ್ತರಿಸಿ ತಾಲಬದ್ಧವಾಗಿ ಅವನ್ನು ಒಂದರ ಮೇಲೆ ಇನ್ನೊಂದನ್ನು ಪ್ರದರ್ಶಿಸುವುದರಿ ಸಹ ಭಾವೋದ್ರೇಕಗೊಳಿಸಬಹುದು. (ಈ ರೀತಿ ಭಾವೋದ್ರೇಕಗೊಳಿಸುವ ವಿಚಾರವಾಗಿ ಮುಂದಿನ ಬರಹಗಳಲ್ಲಿ ಹೇಳುವೆವು. ) ಇಷ್ಟೆಲ್ಲ ಅದ್ಭುತ ಸಾಮರ್ಥ್ಯವುಳ್ಳ ಶಕ್ತಿಯನ್ನು ಚಾರ್ಲಿಚೇಪಲಿನನು- "ವೀರ ಶಕ್ತಿಯ ರಾಕ್ಷಸನು " ಎಂದು ಕರೆದುದರಲ್ಲಿ ಆಶ್ಚರ್ಯವೇನು!

ಈ ಅಪಾರವಾದ ಸಾಧನೆಯ ಬಲವನ್ನು ಅರಿತವು ಮಾತ್ರ ಬೇಕು. ಆಗ ಅದರಿಂದ ಜನಜೀವನದಲ್ಲಿ ಅದ್ಭುತವಾದ ಕ್ರಾಂತಿಯನ್ನು ಉಂಟುಮಾಡಲು ಸಾಧ್ಯ ವಿದೆ. ಕಲೆಯ ಶಕ್ತಿಯೂ ಶ್ರೇಷ್ಠತೆಯೂ ಇರುವುದೇ ಅಂಥ ವಿಚಿತ್ರಸಾಮರ್ಥ್ಯ ಹೊಂದಿ! ಅದರಿಂದಲೇ ಕಲೆಯ ಪ್ರವಾಹವನ್ನು ತಡೆಯುವುದು ತೀರ ಕಠಿಣ. ನಮ್ಮ ಎಚ್ಚರವನ್ನೇ ನಮ್ಮಿಂದ ತಪ್ಪಿಸಿ ಅದು ನಮ್ಮಲ್ಲಿ ನವಭಾವನೆಗಳನ್ನು ಪ್ರೇರಿಸಬಲ್ಲುದರಿಂದ, ಚಲಚ್ಚಿತ್ರದಂತಹ ಅಪೂರ್ವಸಾಧನೆಯನ್ನು ಈ ಸಮಯದಲ್ಲಿ ದುರ್ಲಕ್ಷಿಸುವುದು ಉಚಿತವೇನು ?

## ಕಮ್ಮಾರ

( ಶ್ರೀ. ಪೇಜಾವರ ಸದಾಶಿವರಾವ್ ಮಿತ್ರಮಂಡಲಿ ಮಂಗಳೂರು )

ನೀನಾರು ಕಮ್ಮಾರ ? ಮೌನಿಯಾಗೇಕಿರುವೆ ?
  ಕುದಿಯುತಿಹ ಕುಲಿಮೆಯಲಿ ಏನ ಕಾಸುತಿಹೆ ?
ಕಾದಿರುವ ಕಬ್ಬಿಣವ ಅಡಿಗಲ್ಲ ಮೇಲಟ್ಟು
  ಸುತ್ತಿಗೆಯ ಹೊಡೆತದಿಂದೇನ ಮಾಡುತಿಹೆ ?
" ಧನಿಯಂತೆ ತಲೆಯೆತ್ತಲಸುವಾದ ದಾಸನನು
  ಬಂಧಿಸಲು ಶೃಂಖಲೆಯ ಮಾಡತೊಡಗಿಹೆನು. "

ಕುಲಿಮೆಯಲಿ ಈಗೇನ ಕಾಸುತಿಹೆ ಕಮ್ಮಾರ ?
  ನಿನ್ನ ಚಮ್ಮಟಿ ದನಿಯು ಕೇಳುತಿದೆ ದೂರ !
ಚಿಲುಮೆಯುಗ್ನಿಯ ಪ್ರಭೆಯು ಕಣ್ಣ ಕುಕ್ಕುತಿಹುದು
  ಮೊದಲ ಸಂಕಲೆಗಿಂತ ಈಗಿನದು ಭಾರ !
" ಬಡತನದ ಸೋದರಗೆ ಆಳ್ತನದ ಬೇಡಿಯನು
  ತೊಡಿಸಿರುವ ಯಜಮಾನಗಿದ ಮಾಡುತಿಹೆನು."

೧. Stavovor to pitch with Cmemalographic annual 19 0.

CC-0. Jangamwadi Math Collection. Digitized by eGangotri

# ಕೆಲವು ಅಜ್ಞಾತ ಕವಿಗಳೂ ಕಾವ್ಯಗಳೂ

ಶ್ರೀ. ಡಿ. ಎಲ್. ನರಸಿಂಹಾಚಾರ್ ಎಂ. ಎ. ಮೈಸೂರು

## ಆದಿದೇವ (ಕಾಲ ಸು. ೧೫೦೦)

ಇವನು ಜೈನಕವಿ. 'ಸುಕುಮಾರಚರಿತೆ' ಎಂಬ ಗ್ರಂಥವನ್ನು ಬರೆದಿದ್ದಾನೆ. ಇವನ ತಂದೆ 'ಯಕ್ಷ ಪುರೋಪಮ ರತ್ನತ್ರಯ ಪುರ' ನಿವಾಸಿಯೂ 'ಧನಕನಕಾದಿಸಮೃದ್ಧನೂ ನಾನಾಜನಪರಿತೋಷತತ್ಪರನೂ ಜಿನಮುನಿ ಜನಕಾಹಾರಭೈಷಜ್ಯದ ವಿನುತದಾನಾದಿನಿವಹನೂ,' 'ಜೈನದ್ವಿಜಾಂಬರಸೂರ್ಯಸಮಾನನೂ' ಆಗಿದ್ದ ವಿಜಯಪ್ಪಶರ್ಮ. ತಾಯಿ ಬ್ರಹ್ಮಾಂಬಿಕೆ. ಇವನ ಅಣ್ಣನು 'ಭೂಪಸಭಾಪೂಜಿತ' ನಾದ ಬ್ರಹ್ಮದೇವ. ಇವನು ಆಯುರ್ವೇದಶಾಸ್ತ್ರದಲ್ಲಿ ಪಂಡಿತನು. 'ಭವ್ಯೋತ್ತಮರು' ಸುಕುಮಾರಚರಿತ್ರೆಯನ್ನು ಹೇಳೆನಲು ಹೇಳಿದನು.

ಇವನ ಗ್ರಂಥದ ಒಂದು ಪ್ರತಿಯು ೧೫೨೬ರಲ್ಲಿ ಹುಟ್ಟಿದಂತೆ ತಿಳಿದುಬರುವುದರಿಂದ[1] ಇವನ ಕಾಲ ಸು. ೧೫೦೦ ಆಗಬಹುದು.

ಇವನು ಪೂರ್ವಕವಿಗಳನ್ನು ಹೀಗೆ ಸ್ತುತಿಸಿದ್ದಾನೆ:—

ಸಿದ್ಧಸೇನಮುನಿ ಮೊದಲಾದ ಕವಿಗಳ
ಪದ್ಧತಿಯಕ್ಕಿಂದು ನಮಗೆ.
ಉಭಯಕವಿತಾಗಮವಾರಾಸಿಪಾರಗ-
ರಭಿಹಿತ ಸಕಲವಾದಗಳು
ಅಭಯಚಂದ್ರಸೂರತಾರ್ಕಿಕಚಕ್ರೇಶ-
ರಭಿಹಿತವನು ನಮಗೀಗೆ.

ಇವನು 'ನೇಮಿವರ್ಣಿಗುರು ಕೋಮಲಪಾದತಳತಾಮರಸಗಳೆಮಗೀಗೆ' ಎಂದು ಹೇಳುವುದರಿಂದ ಇವನ ಗುರು ನೇಮಿವರ್ಣಿಯಾಗಿರಬಹುದೆಂದು ತೋರುತ್ತದೆ.

ಆದಿದೇವನು ತನ್ನ ಗ್ರಂಥವನ್ನು 'ಬಾಲಿಕಾ ಗಾಯನ ಕರಣಕ್ಕೆ ರಚಿಸಿದೆ' ಎಂದು ಹೇಳುವುದರಿಂದ ಹೆಣ್ಣುಮಕ್ಕಳ ಹಾಡುಗಾರಿಕೆಗಾಗಿ ಬರೆದಂತೆ ಗೊತ್ತಾಗುತ್ತದೆ. ಅಲ್ಲದೆ ಗ್ರಂಥದ ಕೊನೆಯಲ್ಲಿರುವ,—

ಅಮರೇಂದ್ರವಂದಿತ ಶ್ರೀಸುಕುಮಾರನ
ಚಾರುಚರಿತದ ಪ್ರತಿಯನು
ಜಿನಚಂದ್ರನು ತನ್ನ ಪುತ್ರೀತ್ರಯಗಳ-
ನೋದಿಸಲೆಂದು ಬರೆದನು

ಎಂಬ ಪದ್ಯದಿಂದ ಇದೇ ಅಭಿಪ್ರಾಯವೇ ವ್ಯಕ್ತವಾಗುತ್ತಿದೆ.

ಇವನು ತನ್ನ ಕಾವ್ಯದ ವಿಚಾರವಾಗಿ ಹೀಗೆ ಹೇಳಿಕೊಂಡಿದ್ದಾನೆ:—

ಚಂದ್ರನು ಬೆಳಗಿದಾಕಾಶಭಾಗದೊಳು
ಮಂದತಾರಗೆ ಪೊಳೆವಂತೆ
ಸಂದ ಕವೀಂದ್ರರುಸಿರಿದೀ ಕಾವ್ಯವನತಿ
ಕುಂದನು ನಾನು ಹೇಳುವೆನು.

ಆದಿಕಾವ್ಯ ರಚನೆಯ ನೋಡಿ ರಚಿಸುವ
ಚೋದಿಸಿಯಿದೇತಕೆನ್ನದಿರಿ.
ಶ್ರಾವ್ಯವಲ್ಲದಡೇನು ಪದಸಂದರ್ಭವು
ನವ್ಯ ಕಥೆಯ ಲಾಲಿಸಿರಿ.

ಇದರಿಂದ ಈ ಕವಿಗಿಂತ ಹಿಂದೆ ಸುಕುಮಾರನ ಕಥೆಯನ್ನು ಕೆಲವು ಕವಿಗಳು[2] ಬರೆದಿದ್ದಂತೆ ಗೊತ್ತಾಗುತ್ತದೆ.

---

1 ಸ್ವಸ್ತಿ ಶ್ರೀ ಶಕವರ್ಷ ೧೪೪೮ನೆಯ ಪರಾಭವಸಂವತ್ಸರದ ವೈಶಾಖ ಶುದ್ಧ ೧೬ (?) ಶುಕ್ರವಾರದಲ್ಲಿ ಯೇದಲಾಪುರದ ಚೆನ್ನಪಾರ್ಶ್ವನಾಥನ ಶ್ರೀಪಾದಸನ್ನಿಧಾನದಲ್ಲಿ ಅಕ್ಕನೂರ ಸಿಂಗಪನು ಮಂಡಿಗೆಯ ಪಾಯಣನ ಮಗಳು ಪದುಮಾಯಿಗೆ ಬರೆದುಕೊಟ್ಟ ಸುಕುಮಾರಚರಿತೆಯ ಪುಸ್ತಕಕ್ಕೆ ಮಂಗಳ ಮಹಾಶ್ರೀ—

2 (೧) ಶಾಂತಿನಾಥನ (ಕಾಲ ೧೦೬೮) 'ಸುಕುಮಾರ ಚರಿತೆ' ಎಂಬ ಚಂಪೂಗ್ರಂಥ. (೨) ರೇವಾ ಕೋಟ್ಯಾಚಾರ್ಯನ (ಕಾಲ ಸು. ೯೮೦) 'ವೊಡ್ಡಾರಾಧಣ' ದಲ್ಲಿನ 'ಅವಂತಿ ಸುಕುಮಾರನ ಕಥೆ' ಎಂಬ ಗದ್ಯ ಕಥೆ.



CC-0. Jangamwadi Math Collection. Digitized by eGangotri

## ಸುಕುಮಾರಚರಿತೆ

ಇದು ಸಾಂಗತ್ಯಗ್ರಂಥ. ಸಂಧಿವಿಭಾಗವಿಲ್ಲ. ಒಟ್ಟು ಪದ್ಯಸಂಖ್ಯೆ ೧೯೯೫. ನಮಗೆ ದೊರೆತ ಪ್ರತಿಯಲ್ಲಿ[3] ೩೨೨–೩೬೬ರ ವರೆಗೆ ಪದ್ಯಗಳು ಲುಪ್ತವಾಗಿವೆ. ಗ್ರಂಥದ ಕೊನೆಯ ಭಾಗದಲ್ಲಿ 'ಶೋಕರಗಳೆ' ಎಂಬ ಒಂದು ಮಂದಾನಿಲರಗಳೆ ಇದೆ. ಇದರ ಕಥೆಯನ್ನು ಸಂಕ್ಷೇಪ. ವಾಗಿ ಇಲ್ಲಿ ಬರೆಯಬಹುದು.

ಕೌಶಾಂಬಿನಗರದ ರಾಜ ಅತಿಬಲನ ಮಂತ್ರಿ ಸೋಮ ಶರ್ಮ. ಇವನಿಗೆ ಅಗ್ನಿಭೂತಿ, ವಾಯುಭೂತಿ ಎಂಬಿಬ್ಬರು ಮಕ್ಕಳು. ಇವರ ಸೋದರಮಾವ ಸೂರ್ಯಮಿತ್ರ. ತಂದೆಯು ಸತ್ತಮೇಲೆ ಅಗ್ನಿಭೂತಿಯೂ ವಾಯುಭೂತಿಯೂ ಸೋದರಮಾವನಲ್ಲಿ ವಿದ್ಯಾಭ್ಯಾಸ ಮಾಡುತ್ತಾರೆ. ವಾಯುಭೂತಿಗೆ ತನ್ನ ಗುರುವಿನಮೇಲೆ ಮನಸ್ತಾಪಹುಟ್ಟಿ ಒಂದು ದಿನ ತನ್ನ ಮನೆಗೆಬಂದ ಅವನನ್ನು ಗೌರವಿಸದೆ ಆದರಿಸದೆ ತಿರಸ್ಕರಿಸುತ್ತಾನೆ. ಸರ್ವರನ್ನು ನಿಂದಿಸಿದ ಈ ಪಾಪದ ಫಲವಾಗಿ ಕತ್ತೆ ಮೊದಲಾದ ಜನ್ಮಗಳನ್ನು ಧರಿಸಿ ಹೀನಯೋನಿಯಲ್ಲಿ ಹುಟ್ಟು ಕುರುಡಿಯಾಗಿ ಜನಿಸಿ, ವಾಯುಭೂತಿ ಮುನಿಯ ಉಪದೇಶದಿಂದ ನಾಗಶ್ರೀಯಾಗಿ ಜನಿಸುತ್ತಾನೆ. ನಾಗಶ್ರೀಯು ಜೈನವ್ರತವನ್ನು ಕೈಕೊಂಡು ಧರ್ಮಮಾರ್ಗದಲ್ಲಿ ನಡೆದು ಅಚ್ಯುತಕಲ್ಪದಲ್ಲಿ ಪದ್ಮನಾಭನೆಂಬ ದೇವನಾಗಿ ಹುಟ್ಟಿ ಆಮೇಲೆ ಅವಂತೀದೇಶದ ರಾಜನಾದ ವೃಷಭಾಂಕನ ಸೆಟ್ಟಿ ಇಂದ್ರದತ್ತನ ಮೊಮ್ಮಗನಾಗಿ ಹುಟ್ಟುತ್ತಾನೆ. ಇವನಿಗೆ 'ಅವಂತಿ ಸುಕುಮಾರ' ಎಂಬ ಹೆಸರನ್ನಿಡುತ್ತಾರೆ. ಕೆಲವು ಕಾಲ ಸುಖದಲ್ಲಿ ಮಗ್ನನಾಗಿದ್ದು ತನ್ನ ಆಯುರಂತ್ಯದಲ್ಲಿ ಪ್ರತಿಬೋಧಿತನಾಗಿ ಜೈನದೀಕ್ಷೆಯನ್ನು ಕೈಕೊಂಡು ಅಡವಿಯಲ್ಲಿ ತಪಸ್ಸು ಮಾಡುತ್ತಿದ್ದನು. ತಾನು ವಾಯುಭೂತಿಯಾಗಿದ್ದ ಜನ್ಮದಲ್ಲಿ ತನ್ನ ಅಣ್ಣನ ಹೆಂಡತಿಯನ್ನು ಕಾಲಲ್ಲಿ ಒದೆದು ಮನೆಯಿಂದ ಹೊರಗೆ ಅಟ್ಟಿದ್ದನು. ಅವಳು ಈಗ ನರಿಯ ಜನ್ಮವನ್ನು ಧರಿಸಿದ್ದಳು. ಬದ್ಧವೈರದಿಂದ ಈ ನರಿಯು ತನ್ನ ಮರಿಗಳೊಡನೆ ಬಂದು ತಪಸ್ಸು ಮಾಡುತ್ತಿದ್ದ ಸುಕುಮಾರನನ್ನು ಹಲ್ಲುಗಳಿಂದ ಸೀಳಿ ಕೊಂದುಹಾಕಿತು. ಇವನ ಪರಿಜನರೆಲ್ಲರೂ ಈ ವಾರ್ತೆಯನ್ನು ಕೇಳಿ ಶೋಕಾಕುಲಿತರಾಗಿ ಜೈನದೀಕ್ಷೆಯನ್ನು ಧರಿಸಿ ಉತ್ತಮ[...] ಗಳನ್ನು ಪಡೆದರು. ಇಷ್ಟೇ ಕಥಾಸಾರಾಂಶ.

ಗ್ರಂಥದ ಆದಿಯಲ್ಲಿ ಚಂದ್ರನಾಥ, ಶಾಂತಿನಾ[...] ಮಹಾವೀರ, ಸಿದ್ಧರು, ಆಚಾರ್ಯರು, ಸಾಧುಗ[...] ಯಕ್ಷಿಣಿಯಕ್ಷರು, ಮುನಿಗಳು—ಇವರ ಸ್ತುತಿ [...] ಆಮೇಲೆ ಲೋಕಕಾಲವರ್ಣನೆಯಿಂದ ಕಥೆಯು [...] ಲಾಗುತ್ತದೆ. ಈ ಗ್ರಂಥದಿಂದ ಸ್ವಲ್ಪ ಭಾಗವನ್ನು [...] ಬರೆಯಬಹುದು.

ಸುಕುಮಾರನು ಸತ್ತಮೇಲೆ ಅವನ ಪತ್ನಿಯರ ಶೋ[...]

ಎಲೆ ಸುಕುಮಾರ ಕುಲಾಂಗನೆಯರನಿಂತು
ಮಲಮಲ ಮರುಗಿಸಿ ನೀನು
ಬಲುಹಿಂದ ಬಂದು ತಪಕೆನಿಂದ ತಪವಿದು
ಫಲಿಸಿ ನಿನ್ನಂಗವಿಂತಾಯ್ತು.
ಏನನಿಂತು ನೀ ನೆನೆದೈ ಬುಧಸಾರ
ಮಾನವರೂಪಿನ ಸುಖದವತಾರ
ನಡುನೀರೊಳು ಕಡುಕಿರ್ಚೆರ್ದಂತೆ
ಸಿಡಿಲು ಹಂಸೆಗಪಣದೊಳು ಪೊಡೆವಂತ
ವರಮುನಿಜನಭವನಕೆ ಬರಲೇಕೆ
ಪರಮಾಗಮವನು ಪಠಿಸಲಿದೇಕೆ
ಕರೆಯಲೇಕೆ ಸದ್ಧರ್ಮಾವೃತವನು
ಜರೆಯಲೇಕೆ ಸಂಸೃತಿ ಭೋಗಗಳನು ?
ತಳುವದೆ ಸನ್ಯಸನವ ಕೈಕೊಂಡು
ಚಲಿಸದೆ ಗುರುವನ್ನು ಬೀಳ್ಕೊಂಡು
ನಡೆದು ಬಂದೆ ತಳಿರಡಿಯೊಡೆವಂತೆ
ಅಡಿಯಿನ್ನೆತ್ತರು ಬಿಸದೊಗುವಂತೆ
ಮೂರು ದಿನದ ಘೋರವೇದನೆಯೊಳಗೆ
ಆರಿಸಿದವರಾರು ದುಃಖವ ನಿನಗೆ
ಚರ್ವಿಸುತಿರೆ ತನುವನು ಗೋಮಾಯು
ಕೊರ್ವಿ ಬೀಸುತಿರೆ ವನದೊಳ್ ವಾಯು
ಹಿಮದಿಂದಂಗವು ಕೊಕ್ಕೆಸುತಿರಲು
ಕ್ರಮದಿಂ ಬಿಸಿಲಸುವನು ಸುಡುತಿರಲು
ಹಸಿವು ತೃಷೆಗಳಡಿಗಡಿಗುದಯಿಸಲು
ಮಸಕಂಗಳು ಬಂದೂರುತ್ತಿರಲು
ಅಳಲದೆ ಬಳಲದೆ ಸೈರಿಸುತಿರ್ದೈ
ಕಳವಳಿಸದೆ ಮರವಟ್ಟಂತಿರ್ದೈ
ಇರಲೀಸದೆ ವಿಧಿಯಿಲ್ಲಿಗೆ ತಂದು
ಮರಳಿ ಬಾರದಂತಿಲ್ಲಿಯೆ ಕೊಂದು
ಮುಗ್ಧೆಯರೆಮ್ಮನು ಕೆಡಿಸಿತು ನೋಡೈ
ಶುದ್ಧೆಯರೆಮ್ಮನು ಕೊಂದುದು ಕಂಡೈ.

---

3 ಮೈಸೂರು ಸರಕಾರಿ ಓರಿಯಂಟಲ್ ಲೈಬ್ರೇರಿ K. A. 267

CC-0. Jangamwadi Math Collection. Digitized by eGangotri

# ಹರಿದು ಹೋಗುತಿರುವ
# ನಮ್ಮ ಹಣದ ಹೊಳೆಯು

ಲೇಖಕರು—ಶ್ರೀ. ವಾಳವೇಕರ ಗುರುರಾಯರು, ಬಿ. ಎ. ಎಲ್. ಎಲ್. ಬಿ.

## ಬರಮಾ ಆಯಿಲ್ ಕಂಪನಿ.

ಹಿಂದುಸ್ಥಾನದಲ್ಲಿ ಪರಕೀಯ ಕಂಪನಿಗಳು ಎಷ್ಟು ದೊಡ್ಡ ಪ್ರಮಾಣದಿಂದ ವ್ಯಾಪಾರಮಾಡುತ್ತವೆಂಬುದು ಬರಮಾ ಆಯಿಲ್ ಕಂಪನಿಯ ಸಂಕ್ಷಿಪ್ತ ವರ್ತಮಾನದ ಮೇಲಿಂದ ತಿಳಿದು ಬರುತ್ತದೆ.

ನಲವತ್ತುವರ್ಷದ ಕೆಳಗೆ ಈ ಕಂಪನಿಯು ಸಣ್ಣ ಯಂತ್ರಗಳಿಂದ ತಿಂಗಳೊಂದಕ್ಕೆ ಎರಡುಲಕ್ಷ ಗ್ಯಾಲನ್ ಎಣ್ಣೆಯನ್ನು ಶುದ್ಧಮಾಡುತ್ತಿದ್ದಿತು. ಆ ಕಾಲಕ್ಕೆ ಈ ಕಂಪನಿಯಲ್ಲಿ ೪-೬ ಜನ ಯುರೋಪಿಯ ಹಾಗೂ ಅಮೇರಿಕನ್ ಜನರಿದ್ದರು. ಈಗಿನ ಚೇರಮನ್ ಸರ್ ಜಾನ್ ಕಾರಜಿಲ್ ( Sir John Carjil) ಇವರ ಹಿರಿಯರು ಹಾಗೂ ಫಿನ್ಲೆ ( Finlay ) ಇವರು ಕಂಪನಿಯ ಧೋರಣವೇನಿರಬೇಕೆಂಬುದನ್ನು ನಿರ್ಣಯಿಸಿ ಭದ್ರವಾದ ತಳಹದಿಯನ್ನು ಹಾಕಿದರು. ಅವರ ಫಲವನ್ನು ಕಂಪನಿಯು ಈಗ ಸವಿಯುತ್ತಿದೆಯೆಂಬುದು ಕೆಳಗಿನ ಅಂಕೆಗಳಿಂದ ಒಡೆದು ಕಾಣುತ್ತದೆ.

| | ೧೯೨೮ ಪೌಂಡು | ೧೯೩೦ ಪೌಂಡು |
|---|---|---|
| ವ್ಯಾಪಾರದ ಲಾಭ | ೧೫,೫೮,೯೭೪ | ೨೦,೩೩,೩೮೮ |
| ಬೇರೆ ಉತ್ಪನ್ನ | ೫,೬೨,೩೪೭ | ೧೪,೩೦,೮೧೫ |

ಕಂಪನಿಯ ಬಂಡವಾಳವು ಒಂದುಕೋಟಿ ಪೌಂಡಿಗಿಂತ ಹೆಚ್ಚು ಇದೆ. ಈ ಕಂಪನಿಯ ೪೨, ೯೨, ೯೮೫ ಪೌಂಡು ಬೆಲೆಯುಳ್ಳ ಪಾಲುಗಳು ಪರಸಿಯನ್ ಆಯಿಲ್ ಕಂಪನಿಯಲ್ಲಿ ಇವೆ. ಇದಲ್ಲದೆ ಬರಮಾ ಶೆಲ್‌ಆಯಿಲ್ ಸ್ಟೋರೇಜ ಕಂಪನಿ; ಆಸಾಮಆಯಿಲ್ ಕಂಪನಿ ಮುಂತಾದ ಕಂಪನಿಗಳಲ್ಲಿ ಶೇರುಗಳಿವೆ.

ಇಂಥ ದೊಡ್ಡ ಕಂಪನಿಗೆ ಕೂಡ ರಶಿಯನ್ ಹಾಗೂ ಅಮೇರಿಕನ್ ಎಣ್ಣೆಯ ಜೊತೆಗೆ ಸ್ಪರ್ಧೆಮಾಡುವುದು ಸಹಜವಾದ ಮಾತಲ್ಲೆಂಬುದು ತಿಳಿಯತೊಡಗಿದೆ. ಇದರಿಂದ ಈ ಕಂಪನಿಗೆ ಸ್ವದೇಶೀವ್ರತದ ಆಚರಣೆಯ ನೆನಪಾಗಿದೆ. ಹೊರಗಿಂದ ಬರುವ ಎಣ್ಣೆಯ ಮೇಲೆ ಜಕಾತಿಯನ್ನು ಹೇರಬೇಕೆಂದು ಈ ಕಂಪನಿಯ ಮತ. ಹಿಂದುಸ್ಥಾನದ ಆರ್ಥಿಕ ಜೀವನದಲ್ಲಿ ಈ ಕಂಪನಿಗೆ ಉಚ್ಚಸ್ಥಾನ ದೊರೆತಿದೆ. ವರಿಷ್ಠಕಾಯಿದೆಮಂಡಳದಲ್ಲಿ ( Legislative Assembly) ಈ ಕಂಪನಿಯು ಪ್ರಾಪ್ತಿಯ ಮೇಲೆ ಕರ ಕೊಡುವದಿಲ್ಲೆಂದು ಒಬ್ಬ ಸಭಾಸದರು ಹೇಳಿದರು. ಆದರೆ ಈ ವಿಧಾನವನ್ನು ಖಂಡಿಸುವ ಯತ್ನವನ್ನು ಚೇರಮನರು ಮಾಡಿದ್ದಾರೆ. ಆದರೆ ಈ ಕಂಪನಿಯು ಎಷ್ಟು ಕರ ಕೊಡುತ್ತದೆಂಬುದನ್ನು ಸ್ಪಷ್ಟವಾಗಿ ಹೇಳಿಲ್ಲ. ಹಿಂದುಸ್ಥಾನದಲ್ಲಿಯೂ ಬ್ರಹ್ಮದೇಶದಲ್ಲಿಯೂ ಕೂಡಿ ೩೮ ಸಾವಿರ ಜನರು ಕೆಲಸ ಮಾಡುತ್ತಾರೆ. ಮತ್ತು ಕಂಪನಿಯಿಂದ ಸಂಬಳ ಹಾಗು ಕೂಲಿಗಾಗಿ ೨ ಕೋಟಿ ೪೩ ಲಕ್ಷ ರೂಪಾಯಿ ಪ್ರತಿ ವರ್ಷ ಅವರಿಗೆ ಸಂದಾಯವಾಗುತ್ತದೆ. ಟಿನ್‌ಪ್ಲೇಟ್ ಕಂಪನಿಯಲ್ಲಿ ೩ ಸಾವಿರ ಜನರಿದ್ದು ಅವರ ಕೂಲಿ ಸಂಬಳಗಳಿಗಾಗಿ ೨೧ ಲಕ್ಷ ರೂಪಾಯಿಗಳು ವೆಚ್ಚವಾಗುತ್ತವೆ. ಬರಮಾ ಶೆಲ್ ಆಯಿಲ್ ಸ್ಟೋರೇಜ ಕಂಪನಿಯಲ್ಲಿ ೧೧೫೦೩ ಜನರಿದ್ದು ಅವರ ಸಂಬಳ ಹಾಗೂ ಕೂಲಿಗಾಗಿ ಆ ಕಂಪನಿಯವರು ೯೨ ಲಕ್ಷ ೧೪ ಸಾವಿರ ರೂಪಾಯಿಗಳನ್ನು ವೆಚ್ಚಮಾಡುತ್ತಾರೆ. ಈ ಕಂಪನಿಯೂ ಇದರ ಶಾಖೆಗಳೂ ಕೂಡಿ ೫೬೫೦೩ ಜನರಿಗೆ ಕೆಲಸ ಕೊಡುತ್ತವೆ. ಮತ್ತು ಅವರಿಗೆ ಪ್ರತಿವರ್ಷ ೩ ಕೋಟಿ ೫೬ ಲಕ್ಷ ೧೪ ಸಾವಿರ ರೂಪಾಯಿಗಳು ಸಂಬಳ ಹಾಗೂ ಕೂಲಿಗಳಾಗಿ ದೊರೆಯುತ್ತವೆ.

ಈ ಕಂಪನಿಯ ಬಗ್ಗೆ ಹೀಗೆ ಹೇಳುವದರಲ್ಲಿ ಬರುತ್ತದೆ:— " It is highly important that here we have an organisation which must be protected from the

CC-0. Jangamwadi Math Collection. Digitized by eGangotri

imports from Russia & America which have been even if anything greater than before."

ಆದರೆ 'ಈ ಕಂಪನಿಯು ಹಿಂದೀ ಜನರ ಕಂಪನಿಯು' ಎಂಬ ಭಾವನೆ ಭಾರತಿಯರಲ್ಲಿ ಬರಲಾರದು. ಈ ಕಂಪನಿಯ ಬಂಡವಾಳದಲ್ಲಿ ಭಾರತೀಯರ ಪಾಲುಗಳು ಎಷ್ಟಿವೆ? ಈ ಕಂಪನಿಯ ಡಾಯರೆಕ್ಟರರಲ್ಲಿ ಎಷ್ಟು ಜನರು ಭಾರತೀಯರಿದ್ದಾರೆ? ಈ ಕಂಪನಿಯ ಮೇಲಧಿಕಾರಿಗಳಲ್ಲಿ ಎಷ್ಟು ಜನರು ಭಾರತೀಯರಿದ್ದಾರೆ—ಈ ಕಂಪನಿಯು ಎಷ್ಟು ಜನ ಭಾರತೀಯ ಶಾಸ್ತ್ರಜ್ಞರಿಗೆ ಕೆಲಸ ಕೊಟ್ಟಿದೆ? ಈ ಕಂಪನಿಯಲ್ಲಿ ಎಷ್ಟು ಜನ ಭಾರತೀಯರಿಗೆ ಎಣ್ಣೆಯ ಉದ್ಯೋಗದ ಇಂಗಿತವನ್ನು ಕಲಿತುಕೊಳ್ಳುವ ಅವಸರ ದೊರೆತಿದೆ. ಈ ಕಂಪನಿಯಲ್ಲಿ ಹಿಂದೀ ಹಾಗೂ ಯುರೋಪಿಯರಿಗೆ ಇರುವ ಸಂಬಳದಲ್ಲಿಯ ಅಭ್ಯಂತ್ರರವೆಷ್ಟು? ಈ ಕಂಪನಿಯ ಆಡಳಿತದಲ್ಲಿ ಹಿಂದೀಯರಿಗೆ ಸ್ವಲ್ಪಾದರೂ ಕೈಹಾಕಲು ಅನುವು ಇದೆಯೇ? ಈ ಮೊದಲಾದ ಪ್ರಶ್ನೆಗಳಿಗೆ ಸಮರ್ಪಕ ಉತ್ತರದೊರೆಯುವವರೆಗೆ ಈ ಕಂಪನಿಯು ನಮ್ಮದೆಂಬ ಭಾವನೆಯು ಭಾರತೀಯರಲ್ಲಿ ಬರದು. ಇಷ್ಟೆ ಅಲ್ಲ; ಅನೇಕರು ಈ ಕಂಪನಿಯು ನಮ್ಮ ಖನಿಜ ಸಂಪತ್ತಿಯಿಂದ ಆಗುವ ಲಾಭವನ್ನು ಪರದೇಶಕ್ಕೆ ಹೊತ್ತುಕೊಂಡು ಹೋಗುತ್ತದೆ. ಅಷ್ಟು ಲಾಭವು ಹಿಂದುಸ್ಥಾನದಲ್ಲಿ ಉಳಿದಿದ್ದರೆ ಅನೇಕ ಉದ್ಯೋಗಗಳಿಗೆ ಅದು ಬಂಡವಾಳವಾಗಿ ಪರಿಣಮಿಸುತ್ತಿತ್ತೆಂದು ತಿಳಿಯುತ್ತಾರೆ.

There is a definite set-back in India in the demand for Kerosene. Conditions show a gravely depressed economic position in India. ಎಂದು ಹೇಳುವುದರಲ್ಲಿ ಬರುತ್ತದೆ. ನಿತ್ಯ ಉಪಯೋಗಕ್ಕೆ ಬರುವ ಕಲ್ಲೆಣ್ಣೆಯಂತಹ ಪದಾರ್ಥವನ್ನು ಕೊಳ್ಳದಷ್ಟು ಬಡತನದಿಂದ ಭಾರತೀಯರು ಬೆಂದು ಬೆಂಡಾಗಿದ್ದಾರೆ ಆದರೂ ನಾನಾತರದ ಜಕಾತಿ ಕರಗಳ ಹೊರೆಗಳನ್ನು ಅವರ ಹೆಗಲ ಮೇಲೆ ಆಳರಸರು ಹೇರುತ್ತಲೇ ಇದ್ದಾರೆ.

## ಮೋಟರ ಗಾಡಿಗಳ ಲೆಕ್ಕ

ಮೋಟರಗಾಡಿಗಳ ಇತಿಹಾಸ, ಅದರ ರಚನೆ ಅದನ್ನು ಸಿದ್ಧಪಡಿಸುವ ಕಚ್ಚಾಣ, ಉಕ್ಕು ರಬ್ಬರು ಮೊದಲಾದುವುಗಳನ್ನು ದೊರೆಕಿಸುವುದಕ್ಕಾಗಿ ನಡೆದ ಯತ್ನ, ಮೋಟರಗಾಡಿಗಳಿಗೆ ಬೇಕಾಗುವ ಪೆಟ್ರೋಲಿಗಾಗಿ ನಡೆದ ಕಾರಸ್ಥಾನ ಮೊದಲಾದ ಸಂಗತಿಗಳನ್ನು ಮೇಲಿಂದ ಮೇಲೆ ಮೋಟರಗಳನ್ನು ಉಪಯೋಗಿಸುವ-ಅವುಗಳನ್ನು ನೋಡುವ-ಅವುಗಳು ತಮ್ಮ ಹಿಂದೆ ಎಬ್ಬಿಸುವ ಧೂಳನ್ನು ತಿನ್ನುವ—ಅವುಗಳ ಕೀಸರವನ್ನು ಕೇಳುವ ನಾವು ತಿಳಿದು ಕೊಳ್ಳುವುದು ಅವಶ್ಯವಿದೆ. ಆದರೆ ಈ ಟಿಪ್ಪಣಿಯಲ್ಲಿ ಕೆಲವು ಸಂಗತಿಗಳನ್ನು ಮಾತ್ರ ಕೊಡುತ್ತೇನೆ.

ಬ್ರಿಟಿಶ್ ಸಾಮ್ರಾಜ್ಯದಲ್ಲಿ ಮೋಟಾರುಗಳ ಒಟ್ಟು ಸಂಖ್ಯೆಯಲ್ಲಿ ೧೦೦ ಕ್ಕೆ ೧೧.೩ ರಷ್ಟು ಮೋಟಾರುಗಳು ಇವೆ. ೧೯೨೪ ಕ್ಕಿಂತ ೧೯೩೦ ರಲ್ಲಿ ೧೦೦ ಕ್ಕೆ ೬೧ ರಷ್ಟು ಹೆಚ್ಚು ಮೋಟಾರುಗಳು ಕಟ್ಟಲ್ಪಟ್ಟಿವೆ.

ಹಿಂದುಸ್ಥಾನದಲ್ಲಿ ಬಂದ ಮೋಟರುಗಳ ಸಂಖ್ಯೆಯನ್ನು ನೋಡುವಾ! ೧೯೩೧ ರ ಮಾರ್ಚ ತಿಂಗಳ ಕೊನೆಯುವರೆಗೆ ಹಿಂದುಸ್ಥಾನದಲ್ಲಿ ೧,೩೫,೫೩೬ ಮೋಟರಕಾರುಗಳು, ೨೪,೯_೪ ಮೋಟರ್ ಸಾಯಕಲ್ ಮೊದಲಾದುವುಗಳು, ೪೪,೬೬೬ ಮೋಟರ್ ಬಸ್ ಹಾಗೂ ಲಾರಿಗಳು, ಹೀಗೆ ಒಟ್ಟು ೨,೦೫,೧೬೬ ಮೋಟಾರುಗಳು ರಜಿಸ್ಟರ್ ಆದುವು. ಈ ಅಂಕೆಗಳಲ್ಲಿ ಕೆಲವು ಪ್ರಾಂತ್ಯದ ಅಂಕೆಗಳು ೧೯೩೦ ರ ಕೊನೆಯುವರೆಗಿನವು ಮಾತ್ರ ಇವೆ. ಎಂದರೆ ಮೇಲಿನ ಅಂಕೆಗಳಿಗಿಂತ ಹೆಚ್ಚು ಮೋಟಾರುಗಳು ರಜಿಸ್ಟರ್ ಆಗಿರಬೇಕು.

ಹಿಂದುಸ್ಥಾನದ ಬೇರೆ ಬೇರೆ ಪ್ರಾಂತ್ಯಗಳಿಗೆ ಎಷ್ಟು ಮೋಟಾರ ಕಾರುಗಳು (ಟ್ಯಾಕ್ಸಿಗಳು ಸಹಿತ) ಬಂದುವು ನೋಡೋಣ

ಎಪ್ರಿಲ್ ೧ ರಿಂದ ಮಾರ್ಚ ೩೧ ರ ವರೆಗೆ

| ಪ್ರಾಂತ | ೧೯೨೮-೨೯ | ೧೯೨೯-೩೦ | ೧೯೩೦-೩೧ |
|---|---|---|---|
| ಬಂಗಾಲ | ೫೫೭೭ | ೩೨೪೭ | ೩೮೦೧ |
| ಮುಂಬಯಿ | ೬೭೦೫ | ೮೭೨೮ | ೧೩೮೭ |
| ಸಿಂಧ | ೨೧೭೮ | ೧೬೩೩ | ೧೭೮೮ |
| ಮದ್ರಾಸ | ೩೩೯೯ | ೨೬೫೫ | ೧೮೯೯ |
| ಬರ್ಮಾ | ೧೭೦೮ | ೧೧೩೬ | |

ಬೇರೆ ಬೇರೆ ದೇಶಗಳಿಂದ ಯಾವ ವರ್ಷ ಎಷ್ಟು ಮೋಟಾರುಗಳು ಬಂದುವೆಂಬುದನ್ನು ನೋಡುವಾ. ಮಹಾಯುದ್ಧದ ಮೊದಲು, ಮಹಾಯುದ್ಧ ನಿಂತಕೂಡಲೆ, ತದನಂತರ ಬಂದ ಮೋಟಾರುಗಳ ಸಂಖ್ಯೆಯನ್ನು ಹೋಲಿಸಿ ನೋಡಿದರೆ ಅದರಿಂದ ಹೆಚ್ಚು ಬೋಧವಾಗುತ್ತದೆ.

CC-0. Jangamwadi Math Collection. Digitized by eGangotri

### ಹಿಂದುಸ್ಥಾನದಲ್ಲಿಯ ಮೋಟಾರುಗಳ ಆಯಾತ

| ವರ್ಷ | ಯುನಾಯಟೆಡ್ ಕಿಂಗಡಮ್ | ಅಮೇರಿಕಾ | ಕಾನಡಾ | ಇಟಲಿ | ಬೇರೆ ದೇಶಗಳು | ಒಟ್ಟು |
|---|---|---|---|---|---|---|
| ೧೯೧೩–೧೪ | ೧೬೬೯ | ೮೬೮ | | ೭ | ೩೩೬ | ೨೮೮೦ |
| ೧೯೧೪–೧೫ ರಿಂದ ೧೯೧೮ ೧೯ ರ ವರೆಗಿನ ಸರಾಸರಿ (average) | ೫೩೭ | ೧೬೮೧ | | ೨೮ | ೭೧ | ೨೩೧೭ |
| ೧೯೧೯–೨೦ | ೪೪೮ | ೯೩೫೩ | ೨೦ | ೧೭ | ೮೭ | ೯೯೨೫ |
| ೧೯೨೦–೨೧ | ೨೫೪೧ | ೧೦೧೨೦ | ೧೯೧೮ | ೨೧೮ | ೬೧೫ | ೧೫೪೧೨ |
| ೧೯೨೧–೨೨ | ೭೯೦ | ೮೦೨ | ೫೭೬ | ೨೨೨ | ೫೦೫ | ೨೮೯೫ |
| ೧೯೨೩ ೨೪ | ೧೦೦೫ | ೨೮೬೫ | ೩೨೯೦ | ೩೭೦ | ೪೫೩ | ೭೯೮೪ |
| ೧೯೨೬–೨೭ | ೨೫೪೬ | ೪೦೩೦ | ೪೪೭೬ | ೧೪೧೬ | ೭೨೯ | ೧೩೧೯೭ |
| ೧೯೨೯–೩೦ | ೩೭೮೮ | ೯೬೨೦ | ೨೩೧೮ | ೧೧೫೦ | ೫೫೩ | ೧೭೩೯೯ |

### ಹೊಸ ಉದ್ಯೋಗ

'ಸರಕಾರದ ನೌಕರಿ ಇಲ್ಲ. ದುಡಿದರೂ ದುಡ್ಡು ಕಾಣೆ' ಎಂದು ಅನೇಕರು ಹಲುಬುತ್ತಾರೆ. ಸುಶಿಕ್ಷಿತರ, ಮಧ್ಯಮಸ್ಥಿತಿಯವರ ಹಾಡನ್ನು ದೇವರೇ ಬಲ್ಲ. ಈಗ ಸಕ್ಕರೆಯಂತಹ ಸವಿಯಾದ ಉದ್ಯೋಗದಲ್ಲಿ ತೊಡಗ ಲಿಕ್ಕೆ ಹಿಂದೀಯರು ಹಿಂದೆಮುಂದೆ ನೋಡಬಾರದು.

ಸುಮಾರು ಹತ್ತುಲಕ್ಷ ಟನ್ ಸಕ್ಕರೆಯು ಪರದೇಶ ಗಳಿಂದ ಹಿಂದುಸ್ಥಾನಕ್ಕೆ ಪ್ರತಿವರ್ಷ ಬರುತ್ತದೆ. ಈಗ ಹಿಂದುಸ್ಥಾನದಲ್ಲಿ ಸುಮಾರು ಒಂದುಲಕ್ಷ ಮಣ ಬಿಳಿ ಸಕ್ಕರೆ ಸಿದ್ಧವಾಗುತ್ತಲಿದೆ. ಹಿಂದುಸ್ಥಾನದ ಮಧ್ಯವರ್ತಿ ಫ್ಯಾಕ್ಟರಿಗಳು ೧೯೨೯–೩೦ ರಲ್ಲಿ ೮೯,೯೦೦ ಟನ್ ಬಿಳಿ ಸಕ್ಕರೆಯನ್ನು ಸಿದ್ಧಮಾಡಿದುವು. ಹೊರಗಿನಿಂದ ಬರುವ ಪರದೇಶದ ಸಕ್ಕರೆಯನ್ನು ನಿಲ್ಲಿಸಬೇಕಾದರೆ ೯೦ ಹೊಸ ಕಾರಖಾನೆಗಳಾಗಬೇಕು. ಅವುಗಳಲ್ಲಿ ಪ್ರತಿ ವರ್ಷ ೪೦೦೦ ಟನ್ ಸಕ್ಕರೆ ತಯಾರಾಗಬೇಕು. ಒಂದು ಕಾರಖಾನೆಯಲ್ಲಿ ಸುಮಾರು ಒಂದು ಸಾವಿರ ಜನರು ಸುಗ್ಗಿಯಕಾಲದಲ್ಲಿ ಕೆಲಸಮಾಡುತ್ತಾರೆಂದು ತಜ್ಞರ ಮತ. ಎಂದರೆ ೨ಲಕ್ಷ ೯೦ಸಾವಿರ ಜನರಿಗೆ ಕೆಲವು ಕಾಲದ ಉದ್ಯೋಗವಾಯಿತು. ಇದಲ್ಲದೆ ಮೇಲ್ವಿಚಾರ ಕರ, ಕಾರ್ಯದರ್ಶಿಗಳ, ಎಂಜನಿಯರರ ಶಾಸ್ತ್ರಜ್ಞರ ಅವಶ್ಯಕತೆಯಿದೆ. ಇದರ ಹೊರತು ಕಾರಕೂನರು, ಲೆಕ್ಕಬರೆಯುವವರು, ಸಹಾಯಕರು ಬೇರೆ–ಏಜಂಟರ ಲೆಕ್ಕ ಬಿಟ್ಟುಬಿಡುವ–ಒಂದು ಟನ್ನಿಗೆ ೨೦ರೂ. ಧಾರಣೆ ಯಾದರೆ ಒಂದುಲಕ್ಷ ಟನ್ನಿಗೆ ೨೦ ಕೋಟಿ ರೂಪಾಯಿ ಕ್ರಯವಾಯಿತು. ಈ ೨೦ಕೋಟಿ ರೂಪಾಯಿಗಳ ವ್ಯವಹಾರವು ಈದೇಶದಲ್ಲಿಯೇ ಆಗಬೇಕಾಗುತ್ತದೆ. ಪರಕೀಯ ಬ್ಯಾಂಕುಗಳ ಸಂಪರ್ಕವೇ ಇಲ್ಲ. ಇಷ್ಟು ಕೆಲಸವು ದೇಶದಲ್ಲಿಯ ಬ್ಯಾಂಕುಗಳಿಗೆ ದೊರೆಯುತ್ತದೆ. "ಇದೆಲ್ಲ ಆಲಮಟ್ಟಿ ಜಂಗಮರ ಲೆಖ್ಖವಾಯಿತು. ಬಂಡ ವಾಳವೆಲ್ಲಿದೆ" ಎಂದು ವಾಚಕರು ಕೇಳಬಹುದು. ಬಿತ್ತದೆ ಬೆಳೆಬರದು. ಬಂಡವಾಳವನ್ನು ನಾವು ಕಲ್ಪಿಸಿ ಕೊಡದಹೊರತು ಕಾರಖಾನೆಗಳು ಹೇಗೆ ನಡೆಯಬೇಕು? ಈಗಿನಕಾಲದಲ್ಲಿ ಬಂಡವಾಳ ಕೂಡುವುದಿಲ್ಲೆಂದು ಗ್ರಹಿಸಿ ಮುಂದೆ ವಿಚಾರಿಸುವ. ಒಂದು ಕಾರಖಾನೆಗೆ ೧೩ತ್ತಿ ಲಕ್ಷ ರೂ. ಬಂಡವಾಳಹತ್ತುತ್ತದೆಂಬುದನ್ನು ಅಂದಾಜು ಮಾಡಲಾಗಿದೆ. ಈ ದರದಿಂದ ೯೦ಂಕಾರಖಾನೆಗಳಿಗೆ ೨೧ಕೋಟಿ೯೫ಲಕ್ಷದ ಬಂಡವಾಳವು ಬೇಕಾಗುತ್ತದೆ. ಸರ ಕಾರದವರು ನಿಯಮಿಸಿದ ಜಕಾತಿಯ ಮಂಡಳದವರು ( Tariff Board ) ಮೊದಲಿನ ೭ವರ್ಷ ಪ್ರತಿ ಮಣಕ್ಕೆ ಒಂದು ರೂಪಾಯಿ ಜಕಾತಿಯನ್ನು ಕಟ್ಟಬೇಕೆಂದು ನಿರ್ಣಯಮಾಡಿದರು. ಹೀಗೆ ಜಕಾತಿಯಿಂದ ಬಂದ ಹಣ ವನ್ನು ಸಕ್ಕರೆಯ ಕಾರಖಾನೆಗಾಗಿ ಕಾದಿಟ್ಟರೆ ಪ್ರತಿ ವರ್ಷಕ್ಕೆ೨೦ ಹೊಸಕಾರಖಾನೆಗಳಿಗೆ ಬೇಕಾಗುವ ಬಂಡ ವಾಳವು ಸಹಜವಾಗಿ ದೊರೆಯುವುದು. ಈ ಕ್ರಮವನ್ನು

CC-0. Jangamwadi Math Collection. Digitized by eGangotri

ಹದಿನೈದು ವರ್ಷಗಳವರೆಗೆ ನಡಿಸಿದರೆ ತಮಗೆ ಬೇಕಾದ ಸಕ್ಕರೆಯನ್ನು ಪೂರೈಸುವ ೫೧ ಕಾರಖಾನೆಗಳು ಹೊರಡುವುವು. ನಾವು ಸಕ್ಕರೆಯ ಸಂಬಂಧದಲ್ಲಿ ಸ್ವಾವಲಂಬಿಗಳಾಗುವುದಲ್ಲದೆ ಕೆಲಸವಿಲ್ಲದೆ ಕುಳಿತ ಸಮಾಜದ ಬೇರೆಬೇರೆ ತರಗತಿಯೊಳಗಿನ ಅನೇಕರಿಗೆ ಉದ್ಯೋಗವನ್ನು ದೊರೆಕಿಸಿಕೊಟ್ಟಂತಾಗುವುದು.

ಯಾವ ದೇಶದಲ್ಲಿ ಕಬ್ಬಿನ ಬೆಳೆಗೆ ಬೇಕಾದಂತಹ ಬೆಲೆಯುಳ್ಳ ಭೂಮಿ, ಅನುಕೂಲವಾದ ಹವೆ, ವಿಪುಲವಾಗಿ ನೀರು ಇವಲ್ಲದೆ ಬೇರೆ ಸೌಕರ್ಯಗಳು ಇವೆಯೋ ಮತ್ತು ಯಾವ ದೇಶವು ಒಂದು ಕಾಲಕ್ಕೆ ಇಂಗ್ಲಂಡಿಗೆ ಸಹ ಸಕ್ಕರೆಯನ್ನು ಪೂರೈಸುತ್ತಿದ್ದಿತೋ, ಆ ದೇಶದ ಜನರು ಸಕ್ಕರೆಯ ಕಾರಖಾನೆಗಳನ್ನು ತೆಗೆಯಲು ಉತ್ಸುಕರಿಲ್ಲೆಂದು ಹೇಳಲಿಕ್ಕಾಗುವುದಿಲ್ಲ. ಆಳರಸರು ಅವುಗಳನ್ನು ತೆಗೆಯಲು ಬೇಕಾದ ಅನುಕೂಲತೆಗಳನ್ನು ಕಲ್ಪಿಸಿಕೊಡುವುದಿಲ್ಲೆಂದು ಅನೇಕರು ಗುಣುಗುಟ್ಟುತ್ತಾರೆ. ಕಬ್ಬು ಬೆಳೆಯದ ದೇಶಗಳು ಸಹ ಸ್ವಾವಲಂಬಿಗಳಾಗಬೇಕೆಂದು ಶಾಸ್ತ್ರೀಯಶೋಧದಿಂದ ಬೀಟ್ ಎಂಬ ಗಡ್ಡೆಯಿಂದ ಸಕ್ಕರೆಯನ್ನು ಸಿದ್ಧಪಡಿಸಿ ತಮ್ಮ ಕೊರತೆಯನ್ನು ಪೂರೈಸಿಕೊಳ್ಳುವುದಲ್ಲದೆ ಬೇರೆ ದೇಶಗಳಿಗೆ ಸಹ ಅದರಿಂದಾದ ಸಕ್ಕರೆಯನ್ನು ಕಳಿಸುತ್ತಾರೆ—

In 1844 the imports of Bengal & Madras suger into the port of London alone amounted to 31 thousand tons, in 1846 to 44 thousand tons and in 1851 to 43 thousand tons of which 30 thousand were from Bengal and 13 thousand from Madras " ಎಂದು John Copper ಸಾಹೇಬರು ಹೇಳಿದ್ದಾರೆ. ೧೮೭೪ರಲ್ಲಿ ಹಿಂದುಸ್ಥಾನದಲ್ಲಿ ೩೪ ಸಕ್ಕರೆಯ ಕಾರಖಾನೆಗಳಿದ್ದುವೆಂದು ಒಬ್ಬ ಅರ್ಥಶಾಸ್ತ್ರಜ್ಞರು ಹೇಳುತ್ತಾರೆ. ಇತ್ತೀಚೆಗಿನ ೭-೮ ವರ್ಷಗಳ ಜಗತ್ತಿನಲ್ಲಿಯ ಸಕ್ಕರೆಯ ಉತ್ಪತ್ತಿಯು ಅಥವಾ ಪುರವಣಿಯು ಜಗತ್ತಿನ ಬೇಡಿಕೆಗಿಂತ ಹೆಚ್ಚಿದೆ. ಕಳೆದ ೭ ವರ್ಷಗಳಲ್ಲಿ ಪ್ರಪಂಚದಲ್ಲಿಯ ಜನಾಂಗಗಳಿಗೆ ಬೇಕಾದುದಕ್ಕಿಂತ ೫೪ಲಕ್ಷ ೯೭ಸಾವಿರ ಮೆಟ್ರಿಕ್ ಟನ್ ಹೆಚ್ಚು ಸಕ್ಕರೆಯು ಸಿದ್ಧವಾಯಿತು. ಆದರೆ ಹಿಂದುಸ್ಥಾನಕ್ಕೆ ತನಗೆ ಬೇಕಾದಷ್ಟು ಸಕ್ಕರೆಯನ್ನು ಪೂರೈಸಿಕೊಳ್ಳುವಂತಹ ಬಲವು ಇಲ್ಲವಾಗಿದೆ, ಈ ಶೋಚನೀಯಸ್ಥಿತಿಯು ನಮ್ಮ ಆರ್ಥಿಕ ಅವನತಿಯನ್ನು ತೋರಿಸುವುದಿಲ್ಲವೇ ?

## ನಾವು ಎತ್ತ ನಡೆದಿರುವೆವು?

ಹಿಂದುಸ್ಥಾನ ಸರಕಾರದ ಹಾಗೂ ಪ್ರಾಂತಿಕ ಸ- ಕಾರಗಳ ವ್ಯಯವು ಆದಾಯಕ್ಕಿಂತ ಹೆಚ್ಚಿದೆ. ... ವ್ಯಯವನ್ನು ಬಾಯಿಗೂಡಿಸುವುದಕ್ಕಾಗಿ ವೆಚ್ಚ ಕಡಿಮೆ ಮಾಡುವ, ಮತ್ತು ಆದಾಯ ಬೆಳೆಯಿಸುವ ಕ್ರಮವು ಎಲ್ಲ ಕಡೆಗೆ ನಡೆದಿದೆ. ಆದರೆ ವೆಚ್ಚ ಕಡಿಮೆಮಾಡು... ಸೋಗು; ಆದಾಯ ಬೆಳೆಯಿಸುವುದು ನಿಜ. ಮುಂದೆ ಬರುವ ಆರ್ಥಿಕ ಅವನತಿಯು ಕಲ್ಪನೆಯಿಂದ ಹೌಹಾರುವಂತಿದೆ. 'ಟಾಯಿಮ್ಸ್ ಆಫ್ ಇಂಡಿಯಾ' ಪತ್ರಿಕೆಯಲ್ಲಿ ಪ್ರಕಟಿತವಾದ ಉದಾಹರಣೆಯನ್ನು ಕೊಟ್ಟು ನಾವು ಎತ್ತ ಕಡೆಗೆ ನಡೆದಿರುತ್ತೇವೆಂಬುದನ್ನು ವಿಚಾರಿಸುವ ಕೆಲಸವನ್ನು ವಾಚಕರಿಗೆ ಒಪ್ಪಿಸುತ್ತೇನೆ.

ಈಗಿನ ಅಗ್ಗಳತೆಯ ಕಾಲವು ಬರುವ ಮೊದಲು ಪಂಜಾಬದಲ್ಲಿಯ ಒಂದು ವರ್ಷದ ಬೆಳೆಯ ಕ್ರಯವು ೯೯ ಕೋಟಿ ರೂಪಾಯಿಯದಾಗಿತ್ತು. ಒಕ್ಕಲಿಗರ ಸಾಲವಾದರೂ ಅಷ್ಟೇ ಇತ್ತು. ಆದರೆ ಈಗ ಬೆಳೆಯ ಕ್ರಯವು ೩೩ ಕೋಟಿ ರೂಪಾಯಿಯದಾಗಿದೆ; ಮತ್ತು ಸರಕಾರದವರು ನಿಯಮಿಸಿದ "ಬ್ಯಾಂಕಿಂಗ್ ಇನ್‌ಕ್ವಾಯರಿ ಕಮೀಟಿ" ಯ ಅಭಿಪ್ರಾಯದ ಪ್ರಕಾರ ಒಕ್ಕಲಿಗರ ಸಾಲವು ೧೩೫ ಕೋಟಿ ರೂಪಾಯಿಯದಾಗಿದೆ. ಎಲ್ಲಕ್ಕೂ ಕಡಿಮೆ ಎಂದರೆ ಅರ್ಧದಷ್ಟು ಬೆಳೆಯು ಅಥವಾ ಕ- ಕ್ರಯವಾದ ೧೬½ ಕೋಟಿ ರೂಪಾಯಿಗಳು ಒಕ್ಕಲಿಗರ ಹೊಟ್ಟೆಗೆ ಒಕ್ಕಲತನದ ವೆಚ್ಚಕ್ಕೆ ಬೇಕಾಗುತ್ತವೆ. ... ರಿಂದ ಆಗುವದಿಲ್ಲ; ಆದರೂ ಕನಿಷ್ಠ ಸಂಖ್ಯೆಯನ್ನು ತಕ್ಕೊಂಡು ಲೆಕ್ಕ ಮಾಡಲಾಗಿದೆ. ಉಳಿದ ೧೬½ ಕೋಟಿ... ಯಲ್ಲಿ ೧೦½ ಕೋಟಿ ರೂಪಾಯಿ ಭೂಕಂದಾಯ ಮೊ... ಲಾದುವುಗಳಿಗೆ ಮೀಸಲಾಗಿಡಬೇಕಾಗುತ್ತಿದ್ದು ೧... ಕೋಟಿ ರೂಪಾಯಿಯ ಸಾಲಕ್ಕೆ ೧೦೦ ಕ್ಕೆ ೧... ಬಡ್ಡಿ-ಎಂದು ಹಿಡಿದರೂ ಸುಮಾರು ೧೬½ ಕೋಟಿ ... ಯಾಗುತ್ತದೆ. ಒಕ್ಕಲಿಗರ ಸಾಲದ ಬಡ್ಡಿ ಇದಕ್ಕೂ ಹೆಚ್ಚು ಇರುತ್ತದೆ— ಸುಮಾರು ಹತ್ತು ಕೋಟಿ ರೂಪಾಯಿ ... ಬಡ್ಡಿಯನ್ನು ಕೊಡಲಿಕ್ಕೆ ಕಡಿಮೆ ಬೀಳುತ್ತವೆ. ... ಒತ್ತಟ್ಟಿಗೆ ಉಳಿಯಿತು. ಇನ್ನು ಕರಗಳು ಬೆಳೆಯುತ್ತ...

CC-0. Jangamwadi Math Collection. Digitized by eGangotri

ನಡೆದಿವೆ. ಸಾವುಕಾರನು ಏನು ಮಾಡಬೇಕು? ರೈತರು ಎಲ್ಲಿ ಹೋಗಬೇಕು? -ಪರಕೀಯರು ಮಾತ್ರ ಹೊಳಿಟ್ಟ ಹೊನ್ನನ್ನು ಹೊರಗೆ ತೆಗೆಯಿರಿ,- ಎಂದು ಹೇಳುತ್ತಾರೆ. ಸ್ವಲ್ಪ ಹೆಚ್ಚು ಕಡಿಮೆ ಪ್ರಮಾಣದಿಂದ ಪಂಜಾಬನಂತಹ ಪರಿಸ್ಥಿತಿಯೆ ಎಲ್ಲ ಪ್ರಾಂತ್ಯಗಳಲ್ಲಿಯೂ ಇರುತ್ತದೆ. ನಿರಾಶೆಹೊಂದುವ ಕಾರಣವಿಲ್ಲ. ನಾವು ಆಳುವುದು ನಮ್ಮ ದೇಶವೆಂಬ ಭಾವನೆಯು ಆಳರಸರಲ್ಲಿ-ಅಧಿಕಾರಿಗಳಲ್ಲಿ ಬಂದರೆ ಬಡಕಾದ ಭರತಭೂಮಾತೆಯು ನಮ್ಮನ್ನು ಈ ಸಂಕಟದೊಳಗಿಂದ ಪಾರುಗಾಣಿಸುವುದಲ್ಲದೆ ಪುತ್ರವಾತ್ಸಲ್ಯದಿಂದ ನಮ್ಮನ್ನು ಉನ್ನತಿಯ ಶಿಖರಕ್ಕೆ ಏರಿಸದೆ ಬಿಡಳು. ಈ ಶ್ರೇಯಸ್ಸನ್ನು ಆಳರಸರು ಪಡೆಯಲಿ.

# ಶ್ರೀ. ಸಹಜಾನಂದ ಸರಸ್ವತಿಗಳವರು

यत्पादांबु धुनीप्रवाहनिवहा नम्रान् पुनंतिक्षणाद् ।
यश्चाऽष्टांगसुसाधनेऽतिकुशलः सच्चित्स्वरूपो विभुः ॥
यः कामादि कुशत्रुकुंजरकुलध्वंसैककंठीरवो ।
यः प्रज्ञान मणिप्रदो हि सहजानंदं गुरुं तं भजे ॥ १ ॥

ಇವರು ಸುರಪುರದವರು; ಇವರ ಮೊದಲನೆಯ ಊರು ಸರ್ವಣಿ (ನಿಜಾಮು) ತಾಲೂಕಿನ "ಹೆಬ್ಬಾಳ" ಎಂಬ ಚಿಕ್ಕ ಗ್ರಾಮವು; ಇವರ ತಂದೆಯವರು ಸುರಪುರದ ಪ್ರಸಿದ್ಧ ರಾಜಜ್ಯೋತಿಷಿಗಳಾದ ವೇ॥ ಶಾ॥ ಸಂ॥ ಪಂಡಿತ ರಾಮಶಾಸ್ತ್ರಿಗಳು; ಇವರು ನಾಲ್ಕುಶಾಸ್ತ್ರಗಳಲ್ಲಿ ಪಾರಂಗತರಲ್ಲದೆ ಜ್ಯೋತಿಃಶಾಸ್ತ್ರದಲ್ಲಿ ಅಸಾಧಾರಣ ನೈಪುಣ್ಯವನ್ನು ಪಡೆದು ಪಾಶ್ಚಿಮಾತ್ಯ ಪಂಡಿತರನ್ನು ಸಹ ಬೆರಗುಮಾಡಿದವರು. ಕರ್ನಲ್ ಮೆಡೋಜ್ ಟೇಲರ್ ನೆಂಬ ಸುರಪುರಸಂಸ್ಥಾನದಲ್ಲಿದ್ದ ಇಂಗ್ಲೀಷ್ ಕಾರಭಾರಿಯು (Story of my life) ಸ್ಟೋರಿ ಆಫ ಮಾಯ್ ಲಾಯಿಫ್ (ಆತ್ಮಚರಿತ್ರ) ಎಂಬ ಗ್ರಂಥದಲ್ಲಿ ಇವರನ್ನು ಬಹಳೇ ಶ್ಲಾಘಿಸಿರುವನು. ಮತ್ತು ಇವರು ಬರೆದ ರಾಜನ ಜಾತಕವೂ, ತನ್ನ ಹಾಗೂ ರಾಜನ ವಿಷಯದಲ್ಲಿ ಹೇಳಿದ ಭವಿಷ್ಯವೂ ಅಕ್ಷರಶಃ ನಿಜವಾಯಿತೆಂದು ಆಶ್ಚರ್ಯಪಟ್ಟಿನ್ನಾನೆ. ಈ ಶಾಸ್ತ್ರಿಗಳಿಗೆ ನಾಲ್ವರು ಮಕ್ಕಳು; ಶ್ರೀ ಸ್ವಾಮಿಗಳವರು ಕಡೆಯವರು. ಸುರಪುರದ ಸುಪ್ರಸಿದ್ಧ ಪಂಚಾಂಗಕಾರರಾಗಿಹೋದ ವೇ॥ ಶಾ॥ ಸಂ॥ ಶಂಕರ ಶಾಸ್ತ್ರಿಗಳು ಇವರ ಅಣ್ಣಂದಿರು. ಶಾ. ಶ. ೧೭೩೧ ನೆಯ ಸೌಮ್ಯಸಂವತ್ಸರದ ಶ್ರಾವಣ ಶುದ್ಧ ಪಂಚಮೀ ದಿವಸ ಪತಿವ್ರತಾ ಶಿರೋಮಣಿಗಳಾದ ಜಾನಕೀಬಾಯಿಯವರ ಉದರದಲ್ಲಿ ಶ್ರೀಸ್ವಾಮಿಗಳವರು ಜನಿಸಿದರು. ಸ್ವಾಮಿಗಳವರ ಪೂರ್ವಾಶ್ರಮದ ಹೆಸರು ಗೋಪಾಲಭಟ್ಟರೆಂದು. ಇವರು ಪೂರ್ವಾಶ್ರಮದಲ್ಲಿದ್ದಾಗ ಗೃಹಸ್ಥಧರ್ಮಗಳನ್ನು ಶಾಸ್ತ್ರದ ಅಪ್ಪಣೆಯಂತೆ ಆಚರಿಸುತ್ತ ಅಮೋಘವಾದ ತಮ್ಮ ತಪಸ್ಸಿನಿಂದ ಪರಮೇಶ್ವರನ ಪ್ರಸನ್ನತೆಯನ್ನು ಸಂಪಾದಿಸಿದರು. ಇವರ ಪತ್ನಿಯವರಾದ ರುಕ್ಮಿಣೀಬಾಯಿಯವರು ಪತಿಯನ್ನು ನೆರಳಿನಂತೆ ಅನುಸರಿಸಿ ಆದರ್ಶಸತೀಮಣಿಗಳಾದರೆಂದು ಹೇಳಿದರೆ ಅತಿಶಯೋಕ್ತಿಯಾಗದು. ಒಟ್ಟಿನಲ್ಲಿ ಶ್ರೀ ಸ್ವಾಮಿಗಳವರು ಗೃಹಸ್ಥಾಶ್ರಮದಲ್ಲಿ ಆದರ್ಶ ಕುಟುಂಬಿಗಳು. ಈಗಿನ ಕೊನೆಯ ಆಶ್ರಮದಲ್ಲಿ ಆದರ್ಶ ಯತಿಗಳು. ಇವರು ಜ್ಞಾನಮಾರ್ಗದ ತಿರುಳನ್ನು ತಿಳಿದವರು, ಯೋಗ ಸಾಧನೆಯಲ್ಲಿ ನುರಿತವರು, ಕಾಮಾದಿ ಶತ್ರುಗಳ ಬಲಿಗೆ ಬೀಳದವರು "पंडिताः समदर्शिनः" ಎಂಬ ಗೀತೆಯ ತತ್ತ್ವವನ್ನು ತಾವು ಆಚರಿಸಿ ಜನತೆಯ ಮುಂದೆ ತಂದು ನಿಲ್ಲಿಸಿದ ಮಹಾತ್ಮರಿವರು. ಇಲ್ಲದ ಸಲ್ಲದ ನುಡಿಗಳಿಂದ ಜನರನ್ನು ಮರುಳುಗೊಳಿಸುವ ದುರುಳ ನೀತಿಯ ಗಂಧವು ಸಹ ಶ್ರೀಗಳವರಿಗೆ ಗೊತ್ತಿಲ್ಲ. ಸ್ವಾಮಿಗಳವರು ತಮ್ಮ ಪವಿತ್ರವಾದ ನಡತೆಯಿಂದ ಜನತೆಯ ಪ್ರೀತಿಯನ್ನು ಗಳಿಸಿದವರು, ಈ ಮುಪ್ಪಿನ ವಯಸ್ಸಿನಲ್ಲಿ ಆಕಸ್ಮಿಕ ಜ್ವರಬಾಧೆಯಿಂದ ವಿಸ್ಮೃತಿಯುಂಟಾದರೂ ಭಗವದ್ಗೀತೆಯನ್ನೇ ಪಠಿಸುತ್ತ ತಮ್ಮ ಧ್ಯಾನ ಸಮಾಧಿಲೀನತೆಯನ್ನು ಜನಸಮಾಜಕ್ಕೆ ತೋರಿಸಿ ದಂಗುಗೊಳಿಸಿ ವಿಶ್ವಾಸಕ್ಕೆ ಪಾತ್ರರಾದವರು. ಶ್ರೀ ಸ್ವಾಮಿಗಳವರ ಈಗಿನ ವಾಸಸ್ಥಲವು ಸುರಪುರದ ಬಳಿಯಲ್ಲಿದ್ದ 'ರಂಗಂಪೇಟ' ಎಂಬ ಊರು. ಇಲ್ಲಿ ಇವರು ಒಂದು ಆಶ್ರಮದಲ್ಲಿದ್ದು ಶಿಷ್ಯಮಂಡಳಿಯನ್ನು ಅನುಗ್ರಹಿಸುತ್ತಲಿದ್ದಾರೆ. ಇಂತಹ ತಪಸ್ವೀರತ್ನಗಳಿಂದ ನಿಜಾಮುಕರ್ನಾಟವು ಎಂದಿನಂತೆ ವಿರಾಜಿಸಲೆಂದು ಹಾರೈಸುತ್ತೇವೆ.

CC-0. Jangamwadi Math Collection. Digitized by eGangotri



ಶ್ರೀ ೧೦೮ ಶ್ರೀ. ಸಹಜಾನಂದ ಸರಸ್ವತೀ ಸ್ವಾಮಿಗಳವರು
ಸುರಪುರ (ರಂಗಂಪೇಟ) ನಿಜಾಮುಕರ್ನಾಟಕ.

CC-0. Jangamwadi Math Collection. Digitized by eGangotri

# ಜಿಜ್ಞಾಸೆ

## ವಿಮರ್ಶೆಯ ಶಬ್ದಸಂಗ್ರಹ

ಶ್ರೀ. ವಿನಾಯಕ ಗೋಕಾಕ ಎಂ. ಎ. ಪುಣೆ

ಶ್ರೀ. ಬೇಂದ್ರೆಯವರು 'ಶಬ್ದದೈವತ' ಗಳನ್ನು ಕುರಿತು ಮಾಡಿದ ಸಮರ್ಥನೆಯು ಸರ್ವಥಾ ಮನನೀಯವಾಗಿದೆ. ನಮ್ಮಲ್ಲಿ ವಿಜ್ಞಾನದ ಶಾಖೆಗಳಲ್ಲಿಯಂತೆ ವಿಮರ್ಶೆಯಲ್ಲಿಯಾದರೂ ಶಬ್ದಗಳ ಅರ್ಥವ್ಯಾಪ್ತಿಯನ್ನು ನಿರ್ಣಯಿಸುವುದು ಅತ್ಯವಶ್ಯವಾದ ಮಾತಾಗಿದೆ. ಇಲ್ಲದಿದ್ದರೆ ವಿಜ್ಞಾನವೂ ಅಭಿಪ್ರಾಯವೂ ಸರ್ವಸಾಮಾನ್ಯರಿಗೆ ವಿದಿತವಾಗುವುದೆಂತು ?

ಹೀಗೆ ಪಾರಿಭಾಷಿಕಶಬ್ದಗಳ ಅನ್ವಯಕ್ಕೆ ಸರಿಹೋಗುವ ಹಾಗೆ ನಾವು ಕೆಲವು ಶಬ್ದಗಳನ್ನು ಸ್ವೀಕರಿಸುವ ಪೂರ್ವದಲ್ಲಿ ನಮ್ಮ ದೃಷ್ಟಿಯು ಯಾವ ಬಗೆಯದಾಗಿರಬೇಕೆಂಬುದನ್ನು ಇಲ್ಲಿ ಸ್ವಲ್ಪ ಯೋಚಿಸಬೇಕಾಗಿದೆ. ಉದಾಹರಣೆಗಾಗಿ ಕೆಲವು ಶಬ್ದಗಳನ್ನು ಪರಿಕಿಸುವ. Classicism ಹಾಗು Romanticism ಎಂಬ ಶಬ್ದಗಳ ಅರ್ಥವನ್ನು 'ಮಾರ್ಗ' ಹಾಗು 'ದೇಸಿ' ಎಂಬ ದೇಶೀಯ ಶಬ್ದಗಳು (ವಿದ್ವಾಂಸರೊಬ್ಬರು ತೋರಿಸಿದಂತೆ) ಚೆನ್ನಾಗಿ ವ್ಯಕ್ತಪಡಿಸುತ್ತವೆ. ಇಲ್ಲಿ 'Classicism' ಎಂದರೆ ಸಂಪ್ರದಾಯದ ಮಾರ್ಗದಲ್ಲಿಯ ಅತ್ಯುತ್ತಮ ಗುಣಗಳ ಪ್ರತಿಷ್ಠಾಪನೆ ಎಂಬರ್ಥ. ಅದರಂತೆ 'Romanticism' ಎಂದರೆ ಹೃದಯದ ಪ್ರೇರಣೆಯಂತೆ ಸಾಹಿತ್ಯವನ್ನು ಪರಿಪಾಕಕ್ಕೆ ತಂದು ಅದರ ಲಕ್ಷಣಗಳನ್ನು ಆಯ್ದುಕೊಳ್ಳುವಾಗ ಸಂಪ್ರದಾಯಕ್ಕೆ ಅಗ್ರಸ್ಥಾನವನ್ನು ಕೊಡದೆ ನಿಸರ್ಗವನ್ನೂ ಜನಸಾಮಾನ್ಯಜೀವನವನ್ನೂ ಹೆಚ್ಚಾಗಿ ಮಾಸಿಸುವಿಕೆ, ಎಂದರ್ಥ. ಆದರೆ '*Romanticism*' ಎಂಬ ಶಬ್ದಕ್ಕೆ "ಅಸಾಮಾನ್ಯವಾದ, ಅದ್ಭುತವಾದ ಪ್ರಸಂಗಗಳ (incidents in life) ಇಲ್ಲವೆ ಸನ್ನಿವೇಶಗಳ (situations as presented in literature) ತಿರುಳು" ಎಂದು ಇಂಗ್ಲಿಷಿನಲ್ಲಿ ಇನ್ನೊಂದು ಅರ್ಥವು ರೂಢವಾಗಿದೆ. ಈ ಅರ್ಥದಲ್ಲಿ '*R*omanticism' ಎಂಬ ಶಬ್ದವನ್ನು ಉಪಯೋಗಿಸುವಾಗ ನಾವು 'ಅದ್ಭುತ ರಮಣೀಯತೆ' ಎಂದು, ಇಲ್ಲವೆ ಶ್ರೀ. ಬೇಂದ್ರೆಯವರು ಒಮ್ಮೆ ಸೂಚಿಸಿದಂತೆ "ರೋಮಾಂಚನೀಯತೆ" ಎಂದೂ ಹೇಳಬಹುದಲ್ಲವೆ ? ಈ ಮಾತನ್ನು ಸೋದಾಹರಣವಾಗಿ ಹೇಳುವುದಾದರೆ ಶೆಲ್ಲಿ, ಕೀಟ್ಸ್, ವರ್ಡ್ಸ್‌ವರ್ಥ ಮೊದಲಾದವರು "ದೇಸಿ" ಯ ಅರ್ಥದಲ್ಲಿಯ 'ರೊಮ್ಯಾಂಟಿಕ್' ಕವಿಗಳು. ಸ್ಕಾಟ್, ಡ್ಯೂಮಾ ಮುಂತಾದವರು "ಅದ್ಭುತ ರಮಣೀಯತೆ"ಯ ಅರ್ಥದಲ್ಲಿಯ "ರೊಮ್ಯಾಂಟಿಕ್" ಕಾದಂಬರಿಕಾರರು. ಷಟ್ಪದಿಯ ಪ್ರಯೋಗವನ್ನು ಸಮರ್ಥಿಸಿದ ರಾಘವಾಂಕ, ಅಚ್ಚಗನ್ನಡ ಶಬ್ದಗಳ ಪ್ರತಿನಿಧಿಯಾದ ಆಂಡಯ್ಯ ಹಾಗು ರೂಢಗ್ರಾಂಥಿಕ- (Classical) ಶೈಲಿಯ ಶತ್ರುವಾದ ರತ್ನಾಕರವರ್ಣಿ, ಇವರೆಲ್ಲ 'ದೇಸಿ'ಯ ಪಂಥದ "ರೊಮ್ಯಾಂಟಿಕ್" ಕವಿಗಳಹುದು. 'ಕಾದಂಬರಿಯ' ಕರ್ತೃವಾದ ಬಾಣನೂ ಅದರ ಅನುವಾದಕನಾದ ನಾಗವರ್ಮನೂ "ಅದ್ಭುತ ರಮಣೀಯತೆ"ಯ ಅರ್ಥದಲ್ಲಿ 'ರೊಮ್ಯಾಂಟಿಕ್' ಕಾದಂಬರಿಕಾರರೆಂದು ಹೇಳಬಹುದು.

ಇದರಂತೆಯೆ ಸುಕುಮಾರ — ಆವಿದ್ಧ ಶಬ್ದಗಳ ಪ್ರಯೋಗ. ಸಂಸ್ಕೃತದಲ್ಲಿ ಹಾಗು ಇಂಗ್ಲಿಷಿನಲ್ಲಿ ಬಲ್ಲಿದರಾದ ಪಂಡಿತರು ಇವು ಯೋಗ್ಯವಾಗಿವೆಯೆಂದು ಒಪ್ಪಿಕೊಂಡಲ್ಲಿ ಕರ್ನಾಟಕದ ಎಲ್ಲ ಸಾಹಿತಿಗಳೂ ಈ ಶಬ್ದಗಳನ್ನು ಮಾತ್ರ ಬಳಸುವದು ಅತ್ಯವಶ್ಯವಾಗಿದೆ. 'ಕಾಮೆಡಿ' ಗೆ ಪ್ರತಿಯಾಗಿ 'ಸುಕುಮಾರ' ಶಬ್ದವು ಮನೋಹರವಾಗಿದೆಯೆಂದು ನನಗೆನಿಸುತ್ತದೆ. ಆದರೆ ಸಂಸ್ಕೃತದಲ್ಲಿ ಹೆಚ್ಚು ನಿಷ್ಣಾತರಾದವರು ಈ ಎರಡು ಶಬ್ದಗಳ ಔಚಿತ್ಯವನ್ನೂ ನಿರ್ಣಯಿಸಬೇಕು.



CC-0. Jangamwadi Math Collection. Digitized by eGangotri

ಇನ್ನೊಂದು ಮಾತು. ಮೇಲೆ ಉಲ್ಲೇಖಿಸಿದ ಕೆಲವು ಶಬ್ದಗಳಂತೆ ಪಾರಿಭಾಷಿಕಶಬ್ದಗಳಿಗೆ ಪ್ರತಿಯಾಗಿ ಯಥಾರ್ಥವಾದುವು ದೊರೆತಲ್ಲಿ ಒಳಿತಾಯಿತು. ಇಲ್ಲದಿದ್ದರೆ ಆಂಗ್ಲಭಾಷೆಯ ಕೆಲವು ಶಬ್ದಗಳನ್ನೇ ಸ್ವೀಕರಿಸಲು ನಾವೇಕೆ ಹಿಂಜರಿಯಬೇಕು ? ಆಂಗ್ಲಭಾಷೆಯೂ ಕೂಡ ಎಲ್ಲ ಸೌಕರ್ಯಗಳ ತವರುಮನೆಯಲ್ಲ. '*Romance*' ಎಂಬ ಶಬ್ದವನ್ನು ಆಂಗ್ಲರು ಫ್ರೆಂಚ್ ಭಾಷೆಯಿಂದ ತೆಗೆದುಕೊಂಡರು. ಅದರಂತೆ 'Quixotic' ಎಂಬ ಶಬ್ದವು ಸ್ಪ್ಯಾನಿಶ್ ಭಾಷೆಯ ಒಂದು ಉಜ್ವಲವಾದ ಗ್ರಂಥದ ಆಧಾರದಿಂದ ಬಂದಿತು. ಆದರೆ ಆಂಗ್ಲಭಾಷೆಯ ಶಬ್ದಗಳಿಗೆ ನಾವು ಆಶ್ರಯವನ್ನೀಯುವಾಗ ಎರಡು ನಿಯಮಗಳನ್ನು ಪಾಲಿಸಬೇಕು. (೧) ಪಾರಿಭಾಷಿಕ ಶಬ್ದಗಳಿಗೆ ಪ್ರತಿಯಾಗಿ ಸಂಪೂರ್ಣವಾಗಿ ಯೋಗ್ಯವಾದ ಶಬ್ದಗಳು ನಮಗೆ ಸಿಗದ ಪಕ್ಷದಲ್ಲಿ ಮಾತ್ರ ನಾವು ಪಾರಿಭಾಷಿಕ ಶಬ್ದಗಳನ್ನು ಉಪಯೋಗಿಸಬೇಕು. (೨) ಹಾಗು ನಾವು ಉಳಿದ ಭಾಷೆಗಳಿಂದ ಎತ್ತುವ ಶಬ್ದಗಳು ಶ್ರುತಿದುಷ್ಟವಾಗಿರಬಾರದು. ಈನಿಯಮಗಳಿಗನುಸರಿಸಿ'ಸುಕುಮಾರ-ಆವಿದ್ದ' ಶಬ್ದಗಳು ನಿಲ್ಲದ ಪಕ್ಷದಲ್ಲಿ 'ಟ್ರ್ಯಾ... ಹಾಗು 'ಕಾಮೆಡಿ' ಎಂದು ಹೇಳಲು ನನಗೆ ... ಅಭ್ಯಂತರವೂ ಕಾಣುವದಿಲ್ಲ.

ಇನ್ನು ವಿಜ್ಞಾನದ ಶಾಖೆಗಳನ್ನು ಕುರಿತು ... ವಿಷಯವಾಗಿ ಆಂಗ್ಲಭಾಷೆಯಲ್ಲಿದ್ದ ಶಬ್ದಗಳ ... ಬಹುತರವಾಗಿ 'ಶೂನ್ಯ ಸಂಪಾದನೆ'ಯ ಮಾರ್ಗ... ಹಿಡಿದಂತೆ ತೋರುತ್ತವೆ. ಸರ್ವಸಾಮಾನ್ಯರಿಗೆ ಅವು... ಅರ್ಥವು ಎಂದಿಗೂ ಆಗಲಾರದು. ವಿಶೇಷತಃ ... ಶಾಸ್ತ್ರದ ಕೋಶವನ್ನು ನೋಡಿದಲ್ಲಿ ಇದು ಗೋ... ವಾಗುವದು. ಇಂಥ ಶಬ್ದಗಳಿಗೆ ಪ್ರತಿಯಾಗಿ ... ಕೋಶವನ್ನು ರಚಿಸಿ ಸಾಹಿತ್ಯಪರಿಷತ್ತಿನ ದ್ವಾರ... ಈ 'ಶಬ್ದದೈವತ' ಗಳ ಪೂಜೆಯ ಕಟ್ಟಳೆಗಳನ್ನು ... ವಾಗಿ ಮಾಡಿಬಿಡುವುದು ಉಚಿತವೆಂದೆನಿಸುತ್ತದೆ. ... ಸಂಸ್ಕೃತದ ಉಪಯೋಗವು ಹೆಚ್ಚಾಗಿ ಆಗಬಹುದು.

ಅಂತೂ ಕರ್ಣಾಟಕದ ಎಲ್ಲ ಭಾಗಗಳಲ್ಲಿಯ ಸಾ... ಗಳೂ ವಿಮರ್ಶೆಯಲ್ಲಿ ಒಂದು ನಿಶ್ಚಿತವಾದ ಶಬ್ದಕೋ... ವನ್ನು ಉಪಯೋಗಿಸಿದರೆ ಉತ್ತಮವಾಗುವದು.

ಬುದ್ಧಿಯು ಮಾನವಜೀವನದ ಶ್ರೇಷ್ಠ ತತ್ತ್ವವಾಗಿದೆ. ಬುದ್ಧಿಯಿಂದಲೇ ಮೆಟ್ಟು ಮೆಟ್ಟಲಾಗಿಳಿದು ... ರಾಜ್ಯದ ನಿರ್ಮಾಣವಾಗಿದೆ. ಬುದ್ಧಿಯು ತನ್ನ ಹಿರಣ್ಮಯಪಾತ್ರದಿಂದ ಕೋಟಿಸೂರ್ಯಸಮವಾದ ಅಂತರಾ... ವನ್ನು ಮುಚ್ಚಿಬಿಟ್ಟಿದೆ. ಅದನ್ನು ದೂರಗೊಳಿಸಬೇಕು. ಆಗಲೇ ಜ್ಞಾನಸೂರ್ಯನ ನಿರ್ಮಲಕಿರಣಗಳಿಂದ ... ರಾಜ್ಯವು ಹೊಸದಾಗುವದು. ಬುದ್ಧಿಯು ಯೋಗಸಿದ್ಧಿಗೆ ಪರಮ ಪ್ರತಿಬಂಧಕವು. ಆದರೆ ಬುದ್ಧಿಯ ಸಹಾ... ವಿಲ್ಲದೆ ಯೋಗಗ್ರಹಣವೂ ಸಾಧ್ಯವಿಲ್ಲ. ಯಾರಲ್ಲಿ ಬುದ್ಧಿಯ ಉನ್ಮೇಷವಾಗಿದೆಯೋ ಅವರಿಂದಲೇ ಈ ... ಸಿದ್ಧಿಯು ಕೊನೆಗಾಣುವ ಆಶೆ ಹೆಚ್ಚಾಗಿದೆ. ಯಾಕೆಂದರೆ ಅಂಥ ಭಕ್ತರಿಗೆ ಯೋಗವನ್ನು ಗ್ರಹಿಸುವದಕ್ಕೆ ಎಷ್ಟು ಹೆಚ್ಚು ವಿಲಂಬವಾಗುವದೋ ಅಷ್ಟೇ ಬೇಗನೆ ಇಂಥವರು ಯೋಗಭ್ರಷ್ಟರಾಗುವ ಸಂಭವವೂ ಹೆಚ್ಚು. ಬುದ್ಧಿ... ಪುರಾತನಸಂಸ್ಕಾರವು ನೂತನವಿಷಯಗಳನ್ನು ಗ್ರಹಣಮಾಡುವದಕ್ಕೆ ವಿಲಂಬವಾಗುವದಾದರೂ 'ಒಂದು... ಅದು ಗ್ರಹಿಸಿಕೊಂಡುಬಿಟ್ಟರೆ ಎಂದೆಂದಿಗೂ ಪತನದ ಸಂಭವವು ಉಳಿಯಲಾರದು.

— ಶ್ರೀ ಅರವಿಂದ



CC-0. Jangamwadi Math Collection. Digitized by eGangotri




## ಒಂದು ಹಾಡು

ಸಂಗ್ರಹಕಾರ—ಪೇಜಾವರ ಸದಾಶಿವರಾವ ಮಂಗಳೂರ

ನಾಗಭೂಷಣ ತಾನು ನಗುತ ಗೌರಿಯ ಕಂಡು ।
' ಪೋಗಿ ಬಂದಿಹೆ ನೀನು ತೌರೂರಿಗೇ ॥
ಈಗೇನ ಕೊಟ್ಟರೂ ಇನ್ನೇನ ಕೊಡುವರೂ ।
ಬೇಗ ಹೇಳೆಂ ' ದ ಹರನೂ ॥ ೧ ॥

' ಕರೆವ ಹಸು ಹದಿನಾಲ್ಕು ಕಾಲಾಳು ನೂರು ।
ಕರೆವೆಮ್ಮೆಗಳು ಎಂಟು ಕರುಗಳೆಂಟು ॥
ಕರೆಸಿ ಕೊಡುವರೆ ದಾಸದಾಸಿಯರನಿತ್ತರೂ ।
ನಮ್ಮವರು ಒಡವರೂ ಇನ್ನೇನ ಕೊಡುವರೂ. ॥ ೨ ॥

' ಐದು ಹರಿವಾಣ ಐದು ದೀವಿಗೆ ಕಂಬ ।
ಐದು ತಪ್ಪೇಲಿ ಹದಿನಾಲ್ಕು ಕಂಚು ॥
ಐದು ಹೊನ್ನಿನ ಪಾತ್ರೆ ಐದು ಚೊಂಬಿತ್ತರೂ ।
ನಮ್ಮವರು ಬಡವರೂ ಇನ್ನೇನ ಕೊಡುವರೂ. ॥ ೩ ॥

' ಐದು ಪಟ್ಟೆಯ ಸೀರೆ ಐದು ಬಣ್ಣದ ಸೀರೆ ।
ಐದು ಸಕಲಾದಿ ಮತ್ತೈದು ಶಾಲೂ ॥
ಐದು ರತ್ನಗಂಬಳಿ ಹಚ್ಚಡವ ನಿತ್ತರೂ
ನಮ್ಮವರು ಬಡವರೂ ಇನ್ನೇನ ಕೊಡುವರೂ. ' ॥ ೪ ॥

' ಇಷ್ಟದಾ ಮಗಳೆಂದು ಅಷ್ಟೆಲ್ಲ ನಿನಗಿತ್ತು ।
ಇಷ್ಟಾದರೂ ನನಗೆ ಕೊಡಲಿಲ್ಲವು ' ॥
' ಅಷ್ಟೆಲ್ಲ ನನಗಿತ್ತು ಎನ್ನನ್ನೆ ನಿನಗಿತ್ತರು— ।
ಸೃಷ್ಟಿಗೊಡೆಯನೆ ಶಿವನೆ ಕೇಳೆಂ ' ದಳು. ॥ ೫ ॥

## ಜೋಗುಳ ಹಾಡು

ಸಂಗ್ರಾಹಕರು ಶ್ರೀ ಕೆ. ರಾಮಸ್ವಾಮಯ್ಯ ಮೈಸೂರು

ಕಾರ್‌ಹಬ್ಬ ಕರುವಿಗೆ ನೂಲ್‌ಹಬ್ಬ ಜಾಡ್ಯಗೆ
ಮಾನವಮಿ ಹಬ್ಬ ಮಗನೀಗೆ ಮುಂದಿರುವ
ದೀವಳಿಗೆಹಬ್ಬ ಅಳಿಯಾಗೆ ॥ ೧ ॥

ಅಚ್ಚಕ್ಕಿ ಅಳಿಯಾಗೆ ನುಚ್ಚಕ್ಕಿ ಮಗನೀಗೆ
ಪೆಟ್ಟಿಗೆಯ ಹೊನ್ನು ಮಗಳೀಗೆ ಮುಂದಿರುವ
ಪತ್ರಽದ ಸಾಲ ಮಗನೀಗೆ ॥ ೨ ॥

ಕಾಲುಂಗರ ತಂಗೀಯು ಕರೆಯಬಂದೀದಾರೆ
ಕಾರೊಡ್ಡಿ ಹೊಯ್ಯೊ ಮಳೆರಾಯ ! ತಂಗೆಮ್ಮನ
ಇಂದೀನ ಪಯಣ ಉಳಿಯಾಲಿ ॥ ೩ ॥

ಹೋಗಿಬಾರಮ್ಮ ನೀ ಹೊನ್ನೋಲೆ ಕಿವಿಯವಳೆ ।
ಕೆನ್ನೇಲಿ ಸೂರ್ಯ ಹೊಳೆಯೋಳೆ ಸೊಸೆ ಮುದ್ದೆ
ಬ್ಯಾಗ ಬಾರಮ್ಮ ಮಗನೆತ್ತಿ ॥ ೪ ॥

## ಬೀಸುವ ಹಾಡುಗಳು

ಸಂಗ್ರಹಕಾರ ಶ್ರೀ ಬೆಟಗೇರಿ ಕೃಷ್ಣಶರ್ಮ

ಹಸುವು ಕೊಟ್ಟಿಗೆಯೊಳಗ ಶಿಸುವು ತೊಟ್ಟಿಲದೊಳಗ ।
ವಾರೀಗಿ ರಾಯ ಒಳಹೊರಗ, ಇದ್ದಽರ ।
ಹಸಿವಿ ನೀರಡಿಕಿ ನನಗಿಲ್ಲಽ ॥ ೧ ॥

ಅತ್ತೆಮಾವನ ಪಾದ ತಪ್ಪದಲೆ ತೊಳೆದೇನು ।
ಮತ್ತೆ ನಾದಿನಿಯ ಸಿರಿಪಾದ, ತೊಳೆದಽರ ।
ತೊಟ್ಟಿಲಿಗೆ ಹರಕಿ ಕೊಟ್ಟಾರು ॥ ೨ ॥

ಇದ್ದ ಹೆಂಡತಿ ಬಿಟ್ಟು ಕದ್ದು ಸೂಳೆಯ ಮಾಡಿ ।
ಬಿದ್ದು ಮೊಳಕಾಲು ಒಡಕೊಂಡ, ಮನೆರಾಯ ।
ಇದ್ದಷ್ಟು ಮಾನ ಕಳಕೊಂಡ ॥ ೩ ॥

ದೇವಽರ ಮನಿಯೊಳಗ ದೇವೇಂದ್ರ ಮಲಿಗ್ಯಾನ ।
ಏನೆಂತ ಅವನ ಎಬ್ಬಿಸಲಿ ? ತಮ್ಮಯ್ಯ ! ।
ಮಾದೇವ ಏಳೊ ಮಗಳರಸಾ ! ॥ ೪ ॥

ನಾ ನನ್ನ ಮನೆಯಾಗ ತಾ ನೀರ ಹೊಳೆಯಾಗ ।
ನನ್ನ ಸುದ್ದ್ಯಾಕ ಆವಳೀಗೆ ? ನನ್ನಂತಾ ।
ಹೆಣ್ಣು ಇಲ್ಲೇನ ಹುರುಮೀಗೆ ! ॥ ೫ ॥

CC-0. Jangamwadi Math Collection. Digitized by eGangotri

# ಕನ್ನಡಿಗರೊಬ್ಬರ ಪರಿಚಯ

ಮೈಸೂರು ವಿಶ್ವವಿದ್ಯಾಲಯದ ಗಣಿತಶಾಸ್ತ್ರ-ಶಾಖೆಯ ಹೆಮ್ಮೆಯ ಹೆಸರೆಂದರೆ ಡಾ. ಸಿ. ಎನ್ ಶ್ರೀನಿವಾಸ ಅಯ್ಯಂಗಾರ‍್ಯರದು.



ಕಳೆದ ತಿಂಗಳು ಕಲಕತ್ತಾ ವಿಶ್ವವಿದ್ಯಾಲಯದವರು ಇವರಿಗೆ ಗಣಿತಶಾಸ್ತ್ರದಲ್ಲಿ ಡಿ. ಎಸ್. ಸಿ. ಪ್ರಶಸ್ತಿಯನ್ನು ಕೊಟ್ಟರು. ಇಡಿ ಕರ್ನಾಟಕದಲ್ಲಿ ಶ್ರೀ. ಶ್ರೀನಿವಾಸ ಅಯ್ಯಂಗಾರ‍್ಯರೇ ಗಣಿತಶಾಸ್ತ್ರದಲ್ಲಿ ಮೊದಲನೆಯ ಡಿ. ಎಸ್. ಸಿ.

ಶ್ರೀ. ಶ್ರೀನಿವಾಸ ಅಯ್ಯಂಗಾರ‍್ಯರು ಬೆಂಗಳೂರು ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳಾಗಿದ್ದು ೧೯೨೦ ರಲ್ಲಿ ಗಣಿತಶಾಸ್ತ್ರದ ಬಿ. ಎಸ್. ಸಿ. ಪರೀಕ್ಷೆಯಲ್ಲಿ ಮೊದಲನೆಯ ತರಗತಿಯಲ್ಲಿ ಮೊದಲನೆಯವರಾಗಿ ಉತ್ತೀರ್ಣರಾದರು. ಬಳಿಕ ಮೈಸೂರು ಸರಕಾರದವರು ಇವರಿಗೆ ವೇತನವನ್ನು ಕೊಟ್ಟು ಪ್ರೌಢವ್ಯಾಸಂಗಕ್ಕೆ ಕಲಕತ್ತೆಗೆ ಕಳುಹಿಸಿದರು. ಕಲಕತ್ತೆಯಲ್ಲಿ ಎರಡುವರ್ಷ ಉಗ್ರೋಪಾಸನೆ ಮಾಡಿ ೧೯೨೨ರಲ್ಲಿ ಎಂ. ಎಸ್ ಸಿ. ಪರೀಕ್ಷೆಯಲ್ಲಿ ಅಸದೃಶವಾದ ರೀತಿಯಲ್ಲಿ ಜಯಶಾಲಿಗಳಾದರು. ೮೦೦ ಕ್ಕೆ ೭೧೧ ನಂಬರು ಬಂದಿತು; ಇಷ್ಟು ನಂಬರು ಆ ವಿಶ್ವವಿದ್ಯಾಲಯದಲ್ಲಿ ಯಾರಿಗೂ ಯಾವ ವರ್ಷವೂ ಬಂದಿಲ್ಲ. ಅದಕ್ಕೆ ಮೂವತ್ತುವರ್ಷದ ಹಿಂದೆ ಸರ್ ಆಶುತೋಷ ಮುಖ್ಯೋಪಾಧ್ಯಾಯರಿಗೆ ೭೦೮ ನಂಬರು ಬಂದಿತ್ತು. ೧೯೨೨ರಲ್ಲಿ ಕಲಕತ್ತಾ ವಿಶ್ವವಿದ್ಯಾಲಯದ ವೈಸ್‌ಚಾನ್ಸಲರಾಗಿದ್ದ ಆಶುತೋಷ ಮುಖ್ಯೋಪಾಧ್ಯಾಯರೇ ಸಿ. ಎಸ್. ಶ್ರೀನಿವಾಸ ಅಯ್ಯಂಗಾರ‍್ಯರಿಗೆ ಎಂ. ಎಸ್ ಸಿ. ಯಲ್ಲಿ 'ವೆಕ್ಟರ್ ಅನಾಲಿಸಿಸ್, ಎಂಬ ಅಸಾಧಾರಣ ಭಾಗದಲ್ಲಿ ಪರೀಕ್ಷರಾಗಿದ್ದು ಅವರ ಪಾಂಡಿತ್ಯಕ್ಕೆ ಬೆರಗಾದರು. ಶ್ರೀ. ಶ್ರೀನಿವಾಸ ಅಯ್ಯಂಗಾರ‍್ಯರು ಕಲಕತ್ತಾ ವಿಶ್ವವಿದ್ಯಾಲಯದಿಂದ ಎಂ. ಎಸ್ ಸಿ. ಪ್ರಶಸ್ತಿಯ ಜೊತೆಗೆ ಸುವರ್ಣ ಪದಕವನ್ನೂ, ೫೦೦ ರೂಪಾಯಿ ಸಂಭಾವನೆಯನ್ನೂ ಒಂದು ಗಣಿತಶಾಸ್ತ್ರ ಪುಸ್ತಕಭಾಂಡಾರವನ್ನೂ ಬಹುಮಾನವಾಗಿ ಪಡೆದು ಮೈಸೂರಿಗೆ ಹಿಂದಿ... ಇಷ್ಟರಲ್ಲಿ ಇವರು ಇಂಡಿಯಾ ಸರಕಾರದ ಎಫ್.... ಪರೀಕ್ಷೆಯಲ್ಲಿ ಮೇಲ್ತರಗತಿಯ ಸ್ಥಾನವನ್ನು ... ರಿಂದ ಮಿಲಿಟರಿ ಅಕೌಂಟ್ಸಿನಲ್ಲಿ ಸರಕಾರಿ ... ಸ್ಥಾನವು ಸಿಕ್ಕಲು ಅದನ್ನು ಯಾವುದೋ ಕಾ... ಬಿಟ್ಟುಬಿಟ್ಟರು. ಕೂಡಲೆ ಮೈಸೂರು ವಿಶ್ವ...ಲಯದವರು ಇವರಿಗೆ ವೇತನವನ್ನು ಕೊಟ್ಟು ... ಕಾರ್ಯಕ್ಕೆ ನಿಯಮಿಸಿದರು; ಬಳಿಕ ಬೆಂ... ಸೆಂಟ್ರಲ್ ಕಾಲೇಜಿನಲ್ಲಿ ಅಸಿಸ್ಟೆಂಟ ಪ್ರೊಫೆ... ತೆಗೆದುಕೊಂಡರು. ಶಾಸ್ತ್ರಾಧ್ಯಯನ ಮಾಡಿ...ಲ್ಲಿಯೂ ಶ್ರೀ. ಶ್ರೀನಿವಾಸ ಅಯ್ಯಂಗಾರ‍್ಯರು ... ವಂತರಾದುದಲ್ಲದೆ ಸ್ವತಃ ಶೋಧನಕಾರ್ಯದಲ್ಲಿ ಮುಂದುವರಿಯುತ್ತ ಬಂದರು. ಇಂಡಿಯನ್ ಸೈ... ಕಾಂಗ್ರೆಸ್, ಮ್ಯಾಥೆಮ್ಯಾಟಿಕಲ್ ಕಾನ್ಫ... ಮುಂತಾದ ಸಮ್ಮೇಳನಗಳಲ್ಲಿ ಇವರ ಶೋಧ...ಗಳು ಬರತೊಡಗಿದುವು. ಈ ಶೋಧನೆಯ ಫ... ಹೋದ ವರ್ಷ ಇವರು Singular solutions (Di...rential Equations) ಎಂಬ ಭಾಗದಲ್ಲಿ ಒಂದು ... ಮಹಾಪತ್ರ (Thesis) ವನ್ನು ಕಲಕತ್ತಾ ವಿಶ್ವ...ಯಕ್ಕೆ ಕಳುಹಿಸಿದರು. ಆ ವಿಶ್ವವಿದ್ಯಾಲಯ... ಯೋಗ್ಯತಾವಿಮರ್ಶೆಗಾಗಿ ಅದನ್ನು ಇಂಗ್ಲಂಡಿನ ... ರಾಷ್ಟ್ರೀಯ ಯಶಸ್ವಿಗಳಾದ ವಿಟಕರ್, ಫಾ... ಲಿಟ್ಲೆವುಡ್ ಎಂಬ ಗಣಿತಶಾಸ್ತ್ರಜ್ಞರಿಗೆ ಕಳುಹಿ... ಇವರೆಲ್ಲರೂ ಪರೀಕ್ಷಿಸಿ ಶ್ರೀ. ಅಯ್ಯಂಗಾರ‍್ಯರ ಶೋ...ಯನ್ನು ಮೆಚ್ಚಿ ಇವರಿಗೆ ಡಿ. ಎಸ್. ಸಿ. ಪ್ರಶಸ್ತಿ... ಕೊಡಬಹುದೆಂದು ಒಪ್ಪಲು ಅದರಂತೆ ಕಲಕತ್ತಾ ... ವಿದ್ಯಾಲಯದವರು ಕಳೆದ ತಿಂಗಳು ಶ್ರೀ. ಅಯ್ಯಂ...ರ‍್ಯರಿಗೆ ಡಿ. ಎಸ್‌ಸಿ. ಪ್ರಶಸ್ತಿಯನ್ನು ಕೊಟ್ಟ...

ಶ್ರೀ. ಶ್ರೀನಿವಾಸ ಅಯ್ಯಂಗಾರ‍್ಯರು ಇನ್ನೂ ... ಣರು. ನಿಗರ್ವಿ ಶಿರೋಮಣಿಗಳು. ಇವರು ... ಕಾರ್ಯದಲ್ಲಿ ಇನ್ನೂ ಹೆಚ್ಚು ಜಯಶಾ... ಕರ್ನಾಟಕಕ್ಕೆ ಇನ್ನೂ ಹೆಚ್ಚು ಕೀರ್ತಿತರುವ... ಸಂಶಯವಿಲ್ಲ. ಇವರಿಗೆ ಆಯುರಾರೋಗ್ಯಾಭಿವೃ...ಗಲೆಂದು ಹಾರೈಸುತ್ತೇವೆ.

CC-0. Jangamwadi Math Collection. Digitized by eGangotri



**ಶ್ರೀ. ಹನುಮದ್ವಿಲಾಸವು:** ( ಯಕ್ಷಗಾನ ) ಶ್ರೀ. ತಿಪ್ಪಣಾರ್ಯಕವಿಶೇಖರ ವಿರಚಿತ. ಬೆಂಗಳೂರಿನಲ್ಲಿ ಹೊರ ಡುತಿರುವ "ಹರಿದಾಸಕೀರ್ತನ ತರಂಗಿಣಿ"ಯ ಆನೆಯ ಸಂಪುಟ ೧-೬-೩ ಸಂಚಿಕೆಯಾಗಿ ಹೊರಟಿದೆ. ಸಂಗ್ರಹ ಕಾರರು:- ಶ್ರೀ. ದಾಸರ ಲಕ್ಷ್ಮೀನಾರಾಯಣರಾವ್. ವಿಮರ್ಶಕಕಾರರು 'ಹರಿದಾಸ ಸೇವಾಸಮಿತಿ'. ಸಂಪಾದಕರು:- ಯು. ರಾಮರಾವ್ ಸುಭೋಧಪ್ರಕಟನಾಲಯ ಬೆಂಗಳೂರು ನಗರ.

"ಕಪಿಕುಲ ಸಾರ್ವಭೌಮನಾದ ಆಂಜನೇಯನ ಜನನದಿಂದ ಆರಂಭಿಸಿ, ಆ ಮಹಾಮಹಿಮನು ಈ ಲೋಕದಲ್ಲಿ ದೃಗ್ಗೋಚರನಾಗಿ ಶ್ರೀರಾಮಸೇನೆಯಲ್ಲಿ ತೊಡಗಿದ್ದು ಕಿಂಪುರುಷಖಂಡದಲ್ಲಿ ಆದ್ಯಾಪಿ ಶ್ರೀರಾಮಧ್ಯಾನ ಪರಾಯಣನಾಗಿರುವನೆಂಬುವರೆಗಿನ ಸಮಸ್ತವೃತ್ತಾಂತಗಳೂ ಲೇಶವೂ ಲೋಪಗೊಳ್ಳದೆ ಈ ಗ್ರಂಥರಾಜದಲ್ಲಿ ಯುಕ್ತ ಸ್ಥಳಗಳಲ್ಲಿ ಯುಕ್ತರೀತಿಯಲ್ಲಿ ಅಳವಡಿಸಲ್ಪಟ್ಟಿವೆ." ಎಂದು ಸಂಪಾದಕರು ಹೇಳಿರುವರು. ತಮಗೆ ತಿಳಿದಿರುವ ಮಟ್ಟಿಗೆ ಕವಿಯ ಜೀವನದ ಪರಿಚಯವನ್ನೂ ಓದುಗರಿಗೆ ಮಾಡಿಕೊಟ್ಟಿರುವರು.

ದಾಸಕೂಟದಲ್ಲಿ ಪುರಂದರದಾಸ, ಕನಕದಾಸ, ವಿಜಯದಾಸ, ಜಗನ್ನಾಥರಾಯ, ಮೊದಲಾದ ಕೆಲವು ಜನರ ಕೃತಿಗಳುಮಾತ್ರ ವಿಚಾರಪ್ರಚೋದಕಗಳು. ಉಳಿದ ಅವರ ಅನುಯಾಯಿಗಳ ಕೃತಿಯಲ್ಲಿ ನಾವು ಕಾಣುವುದೆಂದರೆ ಸಾಮಾನ್ಯಭಾವದ ಆರ್ತಭಕ್ತಿಗೀತೆಗಳು, ಪೌರಾಣಿಕ ಕಥೆಗಳನ್ನೊಳಗೊಂಡ ಯಕ್ಷಗಾನ, ಕೀರ್ತನ, ಸುಳಾದಿಗಳು. ಇವು ಓದಿ ಓದಿಸಿ ಆನಂದ ಹೊಂದುವಂತಹವಲ್ಲ. ಹಾಡಿ ಹಾಡಿಸಿ ಆನಂದ ಹೊಂದುವಂತಹವು. ಒಂದು ವ್ಯಕ್ತಿಯ ಮನವನ್ನು ಅಷ್ಟೊಂದು ಬೇಗನೆ ಮೆಚ್ಚಿಸವು. ವ್ಯಕ್ತಿಯು ಸಮೂಹದಲ್ಲಿ ಸೇರಿಕೊಂಡಿದ್ದಾಗ ಆತನಲ್ಲಿ ರಸವನ್ನುಂಟುಮಾಡುವಂತಹವು. ಕವಿಯು ಕಳೆದ ಶತಮಾನದ ಮೊದಲಭಾಗದಲ್ಲಿದ್ದವನು. ಪ್ರಾಸ-ಛಂದಾದಿಗಳಲ್ಲಿ ಮೊದಲಿನ ದಾಸರ ಅನುಕರಣೆಯಿದೆ, ಆದರೆ ಭಾಷೆ ಮಾತ್ರ ಅವರನ್ನು ಅನುಸರಿಸುದುದಲ್ಲ. ಮೊದಲಿನವರ ಭಾಷೆಯ ಜೀವಾಳವೆಂದರೆ 'ದೇಸಿ'ಯ ಪ್ರಾಶಸ್ತ್ಯ. ಇದರಲ್ಲಿ ಆ 'ದೇಸಿ'ಗೆ ಆಸ್ಪದವೇ ದೊರೆತಿಲ್ಲ. ಕವಿಗೆ ಸಂಸ್ಕೃತಭಾಷೆಯ ಜ್ಞಾನವೆ ಹೆಚ್ಚಾಗಿದ್ದಿತೆಂಬುದನ್ನು ನಾವು ಕಾಣಬಹುದು. ಸಂಪ್ರದಾಯಾನುಸಾರವಾಗಿ ಹಾಡುವವರ ಬಾಯಿಂದ ಇದರಲ್ಲಿಯ ಬೇರೆ ಬೇರೆ ರಾಗ ತಾಳಗಳ ಮಟ್ಟುಗಳನ್ನು ಕೇಳಿದರೆ ಸಾಂಗತ್ಯಛಂದದಲ್ಲಿರುವ ವಿವಿಧ ಮಾದರಿಗಳನ್ನು ನಾವುಕಂಡುಕೊಳಬಹುದು. ಹರಿದಾಸಸಾಹಿತ್ಯಪ್ರೇಮಿಗಳಿಗೆ ಸಂಪಾದಕರೂ ಪ್ರಕಾಶಕರೂ ಮಾಡಿಕೊಟ್ಟ ಅನುಕೂಲತೆಯು ಅಭಿನಂದನೀಯವಾದುದು. ಅಚ್ಚು ಮುದ್ದಾಗಿದೆ. ಈ ಮೊದಲೆ ಬೇರೆ ಕಡೆಗೆ ಪ್ರಕಟವಾಗಿರುವ ಇದೇ ಈ 'ಹನುಮದ್ವಿಲಾಸ' ಗ್ರಂಥದಲ್ಲಿಯೇ ಉಳಿದಿರುವಂತೆ ಅಚ್ಚಿನ ದೋಷಗಳು ಇದರಲ್ಲಿ ಇಲ್ಲ. ಕನ್ನಡಿಗರು ನೆರವೀಯಲಿ ಪ್ರಕಾಶಕರಿಗೆ.

**ಸತೀಶಿರೋಮಣಿ:** ( ಪೌರಾಣಿಕಪಂಚಾಂಕ ಗದ್ಯ ನಾಟಕ ) ಲೇಖಕರು: ಶ್ರೀ ಶಂಕರ ಅಣ್ಣಾಜಿ ಕುಲಕರ್ಣಿ. ಪ್ರಕಾಶಕರು: ಶ್ರೀ ಗಣೇಶ ಮುರಹರ ಶಿವಪೂಜಿ ದೇವಗಿರಿ, ಕ್ರೌನ್. ೮ ೧೮೮ ಪುಟಗಳು ಬೆಲೆ ೦-೩-೦

ಲೇಖಕರು ಇದನ್ನು ಪೌರಾಣಿಕ ನಾಟಕವೆಂದು



CC-0. Jangamwadi Math Collection. Digitized by eGangotri

ಹೇಳಿರುತ್ತಾರೆ. ಮನಸಾ, ಆಸ್ತೀಕ, ಮಹಾದೇವ, ಪಾರ್ವತಿ ಈ ನಾಲ್ಕು ಪಾತ್ರಗಳನ್ನು ಬಿಟ್ಟರೆ ಉಳಿದುವೆಲ್ಲವೂ ಕಲ್ಪಿತಪಾತ್ರಗಳೆ. ಆ ಪಾತ್ರಗಳಿಗೂ ಪುರಾಣಕ್ಕೂ ಯಾವ ಸಂಬಂಧವೂ ಇದ್ದಂತೆ ಕಾಣುವುದಿಲ್ಲ. "ಚಾಂದ ಸವದಾಗರ" ಸು ನಾಟಕದ ನಾಯಕ, ಇವನು ಮಹಾ ಶಿವಭಕ್ತ. ಶಿವನ ಮಾನಸ ಪುತ್ರಿಯಾದ ಮನಸಾದೇವಿ ಸರ್ಪಗಳ ಆಧಿದೇವತೆ. ಅವಳು ಚಾಂದ ಸವದಾಗರನಿಂದ ತನ್ನ ಪೂಜೆಯನ್ನು ಬಯಸುವಳು. ಶಿವನ ಹೊರತು ಇನ್ನಾರನ್ನೂ ಪೂಜಿಸಲಾರೆನೆಂದೂ ಮನಸೆಯು ದೇವತೆಗಳ ಲೆಕ್ಕಕ್ಕೆ ಸೇರಿದವಳೇ ಅಲ್ಲವೆಂದೂ ಚಾಂದ ಸವದಾಗರನು ಅಭಿಪ್ರಾಯಪಡುವನು. ಮನಸಾದೇವಿ ಆತನಿಂದ ಪೂಜೆಯನ್ನು ಮಾಡಿಸಿಕೊಂಡೇ ತೀರುವೆನೆಂದು ಹಟಹಿಡಿದು–ಹರಿಶ್ಚಂದ್ರನನ್ನು ವಿಶ್ವಾಮಿತ್ರನು ಪೀಡಿಸಿದಂತೆ–ಚಾಂದನನ್ನು ಬಗೆ ಬಗೆಯಾಗಿ ಪೀಡಿಸತೊಡಗುವಳು. ಆತನ ಬಳಿಯಲ್ಲಿರುವ ಮಹಾಜ್ಞಾನವೆಂಬ ಸಂಜೀವಿನೀರತ್ನವನ್ನು ಮೋಸದಿಂದ ಅಪಹರಿಸುವಳು. ಸಂಜೀವಿನೀವಿದ್ಯೆಯನ್ನು ಬಲ್ಲ ಆತನ ಗುರು ಧನ್ವಂತರಿಯನ್ನು ಕೊಲ್ಲುವಳು. ಚಾಂದನ ಆರು ಜನ ಮಕ್ಕಳನ್ನು ಸರ್ಪಗಳಿಂದ ಕಚ್ಚಿಸಿ ಕೊಲ್ಲಿಸುವಳು. ಆದರೂ ಚಾಂದನು ತನ್ನ ಹಟವನ್ನು ಬಿಡಲಿಲ್ಲ. ಚಾಂದನ ಹೆಂಡತಿ ಮಾತ್ರ ಮನಸಾದೇವಿಯನ್ನು ಪೂಜಿಸತೊಡಗುವಳು. ಚಾಂದನಿಗೆ ಅದು ವಿಪರೀತವಾಗಿ ತೋರಿ ಮನೆಬಿಟ್ಟು ಹಡಗಿನಮೇಲೆ ವ್ಯಾಪಾರಕ್ಕೆಂದು ಹೊರಡುವನು. ಹೋಗುವಾಗ ಆತನ ಹೆಂಡತಿ ಬಸಿರಿ. ಆಕೆ ಗಂಡು ಮಗುವನ್ನು ಹೆತ್ತು ಇಪ್ಪತ್ತು ವರುಷವಾದರೂ ಚಾಂದನು ಮನೆಗೆ ಬರಲಿಲ್ಲ. ತಂದೆಯನ್ನು ಹುಡುಕಲೆಂದು ಹೊರಟ ಲಕ್ಷ್ಮೀಂದರನು ಸಾಯಸವದಾಗರನೆಂಬ ನಿಥನಿ ನಗರದ ವರ್ತಕನಿಂದ ತಂದೆಯು ಇರುವನ್ನು ತಿಳಿದುಕೊಂಡಸಲ್ಲದೆ ಸಾಯುಸೌದಾಗರನ ಮಗಳಾದ ಬೇಹುಳೆಯ ಮನವನ್ನು ಅಪಹರಿಸಿಕೊಂಡು ಮರಳಿ ಬರುವನು. ಸಾಯುಸೌದಾಗರನೂ ಆತನ ಜನರೂ ಮನಸೆಯ ಉಪಾಸಕರು. ಲಕ್ಷ್ಮೀಂದರನಿಗೂ ಬೇಹುಳೆಗೂ ಮದುವೆಯಾಗುವುದು. ಮನಸೆಯು ಚಾಂದನ ಮೇಲಿನ ಕೋಪದಿಂದ ಹಾವಿನಿಂದ ಕಚ್ಚಿಸಿ ಸತಿಪತಿಗಳ ಪ್ರಥಮಸಮಾಗಮದ ದಿನವೆ ಲಕ್ಷ್ಮೀಂದರನನ್ನು ಕೊಲ್ಲಿಸಿಬಿಡುವಳು. ಮತ್ತೆ ಬೇಹುಳೆಯ ಕಷ್ಟನಷ್ಟಗಳನ್ನು ನೋಡಿ ಮನಸೆಯ ಮನಸ್ಸು ಕರಗಿ ಮಹಾದೇವನಿಂದ ಮತ್ತೆ ಬದುಕಿಸುವಳು. ಬ್ರಾಹ್ಮಣನ ವೇಷದಿಂದ ಬಂದ ಮಹಾದೇವನ ಉಪದೇಶದಿಂದ ಚಾಂದನು ಮನಸೆಯ ಪೂಜೆಗೆ ಸಮ್ಮತಿಸುವನು. ನಾಟಕವು ಮುಗಿಯುವುದು.

ಕತೆಯು ಯಾವ ಪುರಾಣಾಂತರ್ಗತವಾದುದೋ ದೇವರಿಗೇ ಗೊತ್ತು. ಕತೆಯ ರೀತಿಯನ್ನು ನೋಡಿದರೆ ಪ್ರಶ್ಶೀಯವಾಗಿ ಕಂಡುಬರುವುದು. ಅಲ್ಲದೆ ಚಾಂದ ಸೌದಾಗರ, ಸಾಯು ಸೌದಾಗರ, ಕಾಳೂಸರ್ದಾರ್ ಲಕ್ಷ್ಮೀಂದರ್ ಮೊದಲಾದ ಹೆಸರುಗಳನ್ನು ನೋಡಿದರೆ ಈ ನಾಟಕವು ಹಿಂದೀ ಭಾಷೆಯಿಂದಲೊ ಬಂಗಾಲಿಭಾಷೆಯಿಂದಲೊ ಭಾಷಾಂತರಿಸಿದುದಿರಬೇಕೆಂದು ನಮ್ಮ ಊಹೆ. ಲೇಖಕರು ಇದನ್ನು ಭಾಷಾಂತರವೆಂದಾಗಲಿ ರೂಪಾಂತರವೆಂದಾಗಲಿ ಎಲ್ಲಿಯೂ ಹೇಳಿಲ್ಲ. ಈ ನಾಟಕದಲ್ಲಿ ಬರುವ ಆ... ಅರಸರೂ ಅಹುದು. ಸಮುದ್ರವರ್ತಕರೂ ಅಹುದು. ಇವರ ಬಳಿಯಲ್ಲಿ ತೋಫು ಇವೆ. ಮದ್ದುಗುಂಡು ... ಇದೆಲ್ಲವನ್ನೂ ನೋಡಿದರೆ ಇದರ ಮೂಲನಾಟಕ ಪಾಶ್ಚಾತ್ಯ ಭಾಷೆಯಲ್ಲಿಯದಾವುದೋ ಇರಬೇಕೆಂದು ನಮಗೆ ಕಾಣುವುದು. ಯಾವುದನ್ನೂ ವಿವರಿಸಿ ಹೇಳದೆ ಬರೀ "ಪೌರಾಣಿಕ ಪಂಚಾಂಕನಾಟಕ" ಎಂದು ಹೇಳಿದುದು ಅಷ್ಟೊಂದು ಉಚಿತವಾಗಿ ತೋರದು. ಈ ನಾಟಕದ ವಸ್ತುವಿನಿಂದ ಯಾವುದನ್ನು ಕಂಡುಹಿಡಿಯಬೇಕೆಂದು ತಿಳಿಯದಾಗಿದೆ. ಕಲಾನೈಪುಣ್ಯವನ್ನು ನೋಡಬೇಕೆಂದರೆ ಅದೂ ಕಂಡುಬರುವುದಿಲ್ಲ. ಯಾವುದಾದರೂ ಸಾಮಾಜಿಕ ಮಾನಸಿಕ ಸಮಸ್ಯೆಯ ಚಿತ್ರವೆನ್ನಬೇಕೆಂದರೆ ಅದೂ ಅಲ್ಲ. ಏನೋ ದೈವಿಕವಾಯೆಯು ಅದ್ಭುತ ಸನ್ನಿವೇಶಗಳು. ಒಬ್ಬನ ಮೇಲೆ ಅನೇಕ ಕಷ್ಟಪರಂಪರೆಗಳು. ... ಗಳಿಂದ ಆತನ ಬಿಡುಗಡೆ ಆಯಿತು.

ಭಾಷೆಯು ಸರಳವಾಗಿದೆ. ಪರಭಾಷಾ ಪದ್ಧತಿಯ ನೆರಳು ತುಂಬಾ ಬಿದ್ದುಬಿಟ್ಟಿದೆ. ಅಚ್ಚಿನ ದೋಷಗಳು ಹೆಚ್ಚಾಗಿ ಉಳಿದಿವೆ 'ಸತೀಶಿರೋಮಣಿ' ಎಂದು ಹೆಸರಿಟ್ಟುದು ಅಷ್ಟೊಂದು ಯುಕ್ತಿ ಯುಕ್ತವಾದುದಲ್ಲವೆಂದು ನಮ್ಮ ಎಣಿಕೆ. "ಮನಸೆ" ಎಂತಲೊ "ಚಾಂದ ಸೌದಾಗರ" ಎಂತಲೊ ಅಥವಾ ಇನ್ನಾವುದಾದರೂ ಈ ನಾಟಕದ ಪಾತ್ರಗಳ ಕಾರ್ಯಪ್ರಧಾನವಾಗಿದ್ದ ಹೆಸರನ್ನಿಡಬಹುದಾಗಿದ್ದಿತು. ಓದುಗರು ಯೋಗ್ಯವಾದ ನೆರವು

CC-0. Jangamwadi Math Collection. Digitized by eGangotri

ಕೊಟ್ಟಲ್ಲಿ ಈ ಲೇಖಕರಿಂದ ಇನ್ನೂ ಇಂತಹ ಅನೇಕ ಪುಸ್ತಕಗಳು ಹೊರಕ್ಕೆ ಬರಬಹುದು.

**ಭಾರತೀಯರ ಮೇಲ್ಮೆ:** ಧಾರವಾಡದ ಕರ್ಣಾಟಕ ಶಿಕ್ಷಣಸಮಿತಿಯ ಏಳನೆಯ ಪುಸ್ತಕವು. ಬರೆದವರು ಶ್ರೀ. ನಾರಾಯಣ ಶರ್ಮರು. ಕ್ರೌನ್. ೧೬. ೮+೧೫೮ ಪುಟಗಳು. ಬೆಲೆ ಒಂದು ರೂಪಾಯಿ.

ನಮ್ಮ ನಾಡಿನಲ್ಲಿಯ ಮಧ್ಯಮವರ್ಗದವರಿಗೆ ಓದುವುದಕ್ಕೆ ತಕ್ಕುವಾದ ಪುಸ್ತಕಗಳನ್ನು ಪ್ರಕಟಿಸುವ ಕೆಲಸವನ್ನು ಕ. ಶಿ. ಸಮಿತಿಯು ಆಗಾಗ ಮಾಡುತ್ತಲಿರುವುದು ಸಂತೋಷದ ಸಂಗತಿ. ಇದುವರೆಗಿನ ಅವರ ಪ್ರಕಟನೆಗಳನ್ನು ನೋಡಿದಲ್ಲಿ ತಮ್ಮದನ್ನು ಮರೆತ ಭಾರತೀಯರಿಗೆ ಅದರ ಅರಿವನ್ನು ಒದವಿಸಿಕೊಡಬೇಕೆಂಬ ಉದ್ದೇಶವನ್ನೇ ಎಲ್ಲವೂ ಒಳಗೊಂಡುವುಗಳು. "ಭಾರತೀಯರ ಮೇಲ್ಮೆ" ಎಂಬ ಹೆಸರಿನ ಈ ಗ್ರಂಥವೂ ಅದೇ ಉದ್ದೇಶದಿಂದ ಹೊರಟುದು. ವಿವೇಕಿಗಳಾದ ಜನರು ನಮ್ಮನ್ನು ತೆಗಳಿದರೂ ಒಳ್ಳೆಯದು; ಹೊಗಳಿದರೂ ಒಳ್ಳೆಯದು. ತೆಗಳಿದಾಗ ನಾವು ನಮ್ಮನ್ನು ನೋಡಿಕೊಂಡು ನಮ್ಮಲ್ಲಿ ನೆಲೆಮಾಡಿದ್ದ ಅವಗುಣಗಳನ್ನು ಬಿಟ್ಟುಬಿಡಲಿಕ್ಕಾಗುವುದು. ಹೊಗಳಿದಾಗ-ನಮ್ಮಲ್ಲಿದ್ದ ಒಳ್ಳೆಯ ಗುಣಗಳನ್ನು ವೃದ್ಧಿಗೊಳಿಸುವುದು ಒಂದೆಡೆಗೆ ಇರಲಿ–ಇದ್ದ ಗುಣಗಳನ್ನಾದರೂ ಕಳೆದುಕೊಳ್ಳಬಾರದೆಂಬ ಬುದ್ಧಿಯು ನಮ್ಮಲ್ಲಿ ಉದಯಿಸುವುದು. ಈ ಪುಸ್ತಕವು ಬೇರೆ ಬೇರೆ ದೇಶದ ಹೆಸರುವಾಸಿಗಳಾದ ಹಲವರು, ಭಾರತೀಯರ ವಿಶಿಷ್ಟ ಸಂಸ್ಕೃತಿಗಳನ್ನು ಕೊಂಡಾಡಿ ಕೊನೆದ ಮಾತುಗಳ ಸಂಗ್ರಹದಿಂದಲೇ ತುಂಬಿದೆ. ಆದುದರಿಂದ ಇದು ಹಿಂದಿನ ಕಾಲದ ನಮ್ಮ ಸಂಸ್ಕೃತಿಯ ದಿವ್ಯಚಿತ್ರವನ್ನು ಎದುರಿಗಿಟ್ಟು ಆ ದಿನಗಳನ್ನು ಮತ್ತೊಮ್ಮೆ ಕಾಣಬೇಕೆಂಬ ಆತುರವನ್ನು ಹುಟ್ಟಿಸುವುದು; ಆ ಬಗೆಯ ಕಾರ್ಯದ ಕಡೆಗೆ ಮನಸ್ಸು ನಮ್ಮನ್ನು ಸೆಳೆಯುವುದು. ಮೊದಲಿನ ಕಾಲದಲ್ಲಿ, ನಮ್ಮ ಐತಿಹಾಸಿಕ ಮಹತಿಯನ್ನು ಎತ್ತಿ ಹಾಡಿ ಚಾರಣರು ಭಾಟರು ವಂದಿಗಳು ನಮ್ಮ ದೇಶ–ಧರ್ಮಾಭಿಮಾನಕ್ಕೆ ಉಕ್ಕನ್ನು ತರುತ್ತಿದ್ದರು. ಅನೇಕ ಪರಂಪರೆಗಳೊಡನೆ ಇದೂ ನಷ್ಟಪರಂಪರೆಯಾಗಿ ಹೋಯಿತು. ನಾವು ಯಾರು? ನಮ್ಮ ಹಿರಿಯರು ಮಾಡಿದ ಹೆಮ್ಮೆಗೊಂದುವಂತಹ ಕಾರ್ಯಗಳೇನು? ಎಂಬುದಾವುದೂ ತಿಳಿಯದೆ ಅಂಗವಿಕಲರಂತೆ ಮುಂದಡಿಯನ್ನಿಡಲು ನಾವು ಅಸಮರ್ಥರಾಗಿ ನಿಂತೆವು. ಹೊಸ ಕಾಲಕ್ಕೆ ಸರಿಯಾಗಿ ಹೊಸ ಹೊಸ ಬಗೆಯ ಹೊಗಳು ಭಟರು ಬೇಕಾದರು. ಈಗ ನಮ್ಮವರೇ ನಮ್ಮಲ್ಲಿದ್ದ ಗುಣಗಳನ್ನೆತ್ತಿ ತೋರಿಸಿದರೆ ಬೆಲೆಯಾಗದದಕ್ಕೆ. ಪಾಶ್ಚಾತ್ಯಪಂಡಿತರು ಎತ್ತಿ ತೋರಿಸಿ ಹೊಗಳಿದಾಗಲೆ ಬಹುಜನರಿಗೆ ಒಪ್ಪಿಗೆಯಾಗುವ ಕಾಲವಿದು. ಆದುದರಿಂದಲೆ ಶ್ರೀ. ನಾರಾಯಣ ಶರ್ಮರು ಅನೇಕ ವಿದೇಶಿಯ ಪಂಡಿತರ–ಬೇರೆ ಬೇರೆ ವಿಷಯಗಳನ್ನೆತ್ತಿ ಹೊಗಳಿದ–ಮಾತುಗಳನ್ನು ಒಂದೆಡೆಗೆ ಕೂಡಿಸಿಕೊಟ್ಟಿದ್ದಾರೆ. ಮಾಡಬೇಕಾಗಿದ್ದ ಕೆಲಸವಿದು. ಸಮರ್ಪಕವಾಗಿ ಮಾಡಿ ಮುಗಿಸಿ ಜನರೆದುರಿಗೆ ಇಟ್ಟುದಕ್ಕಾಗಿ ಲೇಖಕರೂ ಪ್ರಕಾಶಕರೂ ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಓದನ್ನು ಬಲ್ಲ ಪ್ರತಿಯೊಬ್ಬರ ಮನೆಯಲ್ಲಿಯೂ ಇರಬೇಕಾದ ಪುಸ್ತಕವಿದು.

**ಶ್ರೀಮದ್ ಭಗವದ್ಗೀತೆಯು:**—(ಶ್ರೀ ಶಾಂಕರ ಭಾಷ್ಯಸಮೇತ) ಅನುವಾದಕರು ಶ್ರೀ ವೈ. ಸುಬ್ಬರಾಯರು. ಬೆಂಗಳೂರುನಗರದ ಅಧ್ಯಾತ್ಮಪ್ರಕಾಶ ಕಾರ್ಯಾಲಯದವರಿಂದ ಪ್ರಕಟವಾದುದು. ಡೇಮಿ ೮. ೧೫೬. ಪುಟ ಬೆಲೆ ೧–೪–೦.

ಶಾಂಕರಭಾಷ್ಯಸಮೇತವಾದ ಶ್ರೀಭಗವದ್ಗೀತೆಯನ್ನು ಅನುವಾದಿಸಿ ಶ್ರೀಮಾನ್ ವೈ. ಸುಬ್ಬರಾಯರು ಸಂಪುಟ ಸಂಪುಟವಾಗಿ ಪ್ರಕಟಿಸುತಲಿದ್ದಾರೆ. ಪ್ರಸ್ತುತ ಪುಸ್ತಕವು ಎರಡನೆಯ ಸಂಪುಟ. ನಾಲ್ಕನೆಯ ಅಧ್ಯಾಯದಿಂದ ಮೊದಲುಗೊಂಡು ಏಳನೆಯ ಅಧ್ಯಾಯದ ವರೆಗಿನ ಭಾಗವು ಇದರಲ್ಲಿ ಬಂದಿದೆ. ಅನುವಾದಕರು ಕನ್ನಡ ವಾಚಕ ಸಮೂಹಕ್ಕೆ ಹೊಸಬರಲ್ಲ. ವೇದಾಂತ ವಿಚಾರಗಳನ್ನು ಚರ್ಚಿಸುವ—ಉಪನಿಷದಾದಿ ಹಲವು ಗ್ರಂಥಗಳನ್ನು ಕನ್ನಡವಾಙ್ಮಯರಂಗದಲ್ಲಿ ತಂದಿಳಿಸಿದ್ದಾರೆ. ಅಲ್ಲದೆ 'ಅಧ್ಯಾತ್ಮಪ್ರಕಾಶ'ವೆಂಬ ಹೆಸರಿನ ಮಾಸಪತ್ರಿಕೆಯೊಂದನ್ನು ಪ್ರಕಟಿಸುತಲಿದ್ದಾರೆ. ಗೀತೆಯ ಮೂಲ ಶ್ಲೋಕ, ಅದರ ಕೆಳಗೆ ಸರಳ ಭಾವಾನುವಾದ, ಬಳಿಕ ಆ ಶ್ಲೋಕದ ವಿಚಾರದಲ್ಲಿ ಶ್ರೀಮತ್ ಶಂಕರಾಚಾರ್ಯರುಮಾಡಿದ ಸಂಸ್ಕೃತಭಾಷ್ಯದ ಕನ್ನಡಅನುವಾದ, ಅಲ್ಲಲ್ಲಿ ಸಂಶಯಬರುವಂತಿರುವಲ್ಲಿ ಅನುವಾದಕರ ಸ್ಪಷ್ಟಿ

CC-0. Jangamwadi Math Collection. Digitized by eGangotri

ಕರಣ, ಇಷ್ಟುವಿಷಯ ಈ ಗ್ರಂಥದಲ್ಲಿವೆ. ಅನುವಾದಕರು ಸಂಸ್ಕೃತ-ಕನ್ನಡ ಭಾಷೆಗಳ ಮೇಲೆಯೂ ವೇದಾಂತ ವಿಚಾರಚರ್ಚೆಯಲ್ಲಿಯೂ ಅಧಿಕೃತರಾದವರು. ಸಂಸ್ಕೃತ ವನ್ನರಿಯದ ಗೀತಾಭಕ್ತರು ಅವಶ್ಯವಾಗಿ ಸಂಗ್ರಹಿಸಿಯೆ ತೀರಬೇಕಾದ ಗ್ರಂಥವಿದು. ಮೊದಲನೆಯ ಭಾಗವು ಪ್ರಕಟವಾಗಿ ಅದೆಷ್ಟೋ ದಿನಗಳಾಗಿವೆ. ಡೇಮಿ ಅ. ಗಳಲ ಪುಟಗಳುಳ್ಳ ಆ ಸಂಪುಟದ ಬೆಲೆಯೂ ಇದರಷ್ಟೇ ಇದೆ.

**ಅರುವತ್ತು ಮೂವರು ಪುರಾತನರು**:- (ಗದ್ಯ ಗ್ರಂಥ) ಲೇಖಕರು ಶ್ರೀ. ಮ. ಮ. ವಿರ್ಜೆ. ಪ್ರಕಾಶಕರು ಶ್ರೀ ಗು. ಮ. ವಿರ್ಜೆ ಅಡ್ವೋಕೇಟರು. ಹುಬ್ಬಳ್ಳಿ. ಡೇಮಿ. ಅ. ಸುಮಾರು ೩೦೦ ಪುಟಗಳು. ಬೆಲೆ ೨-೦-೦.

ವೀರಶೈವ ಮತದ—ವಾಙ್ಮಯದ ಅಭ್ಯಾಸಿಗಳಿಗೆ ಅರುವತ್ತು ಮೂರುಜನಪುರಾತನರು ಅಪರಿಚಿತರಾದವರಲ್ಲ. ಆದರೆ ವೀರಶೈವರ ಮೊದಲಿನ ವಾಙ್ಮಯವು ವಿಶೇಷವಾಗಿ ಪದ್ಯಮಯವಾಗಿ ಇಲ್ಲವೆ ಹಿಂದಣ ಕನ್ನಡ ಭಾಷೆಯಲ್ಲಿ ಇದ್ದುದರಿಂದ-ಸುಲಿದ ಬಾಳೆಯ ಹಣ್ಣನ್ನೇ ಅಪೇಕ್ಷಿಸುತ್ತಿರುವ ಇಂದಿನ ಬಹು ಜನರಿಗೆ ಅದು ದುರ್ಬೋಧವಾಗಿರುವುದು. ಶ್ರೀ ವಿರ್ಜೆಯವರು ಆ ಬಾಳೆಯ ಹಣ್ಣನ್ನು ಸುಲಿಯುವ ಕೆಲಸಮಾಡಿ ಕನ್ನಡಿಗರ ಮನ್ನಣೆಗೆ ಪಾತ್ರರಾಗಿದ್ದಾರೆ. **ತ್ರಿಷಷ್ಠಿ ಪುರಾತನ ವಿಲಾಸ**ವೆಂಬ ಹೆಸರಿನ ಚಂಪೂಗ್ರಂಥವನ್ನು ಬರೆದ ಸುರಂಗಕವಿಯನ್ನೂ **ಪುರಾತನರ ತ್ರಿವಿಧಿ** ಎಂಬ ಹೆಸರಿನ ಕೃತಿಯನ್ನು ರಚಿಸಿದ ನಿಜಗುಣ ಶಿವಯೋಗಿಗಳನ್ನೂ ತಾವು ಅನುಸರಿಸಿರುವುದಾಗಿ ಲೇಖಕರು ಹೇಳಿರುವರಲ್ಲದೆ, ತಮಿಳಿನ **ಪೆರಿಯ ಪುರಾಣ**ವೆಂಬ ಹೆಸರಿನ ಪುರಾತನರ ಕಥೆಗೂ ತಾವು ಅನುಸರಿಸಿದ ಕೃತಿಗಳಿಗೂ ಇದ್ದ ಅಲ್ಪಸ್ವಲ್ಪ ವ್ಯತ್ಯಾಸವನ್ನೂ ಉಪೋದ್‌ಘಾತದಲ್ಲಿ ಹೇಳಿರುವರು. ಗ್ರಂಥದ ಕೊನೆಗೆ ವಾಚಕರ ಸೌಕರ್ಯಕ್ಕಾಗಿ ವಿಷಯ ಸೂಚಿಕೆಯೊಂದನ್ನೂ ಕೊಡಲಾಗಿದೆ.

ಹಳೆಯ ಬೀಜಗಳನ್ನು ನೆಟ್ಟು ಹೊಸ ಹೊಸ ಗಿಡಮರಬಳ್ಳಿಗಳನ್ನು ಪಡೆಯುವೆವು. ಅದರಂತೆಯೆ ಈ ಪುರಾತನರ ಕಥಾವಸ್ತುವಿನಿಂದ ಎಷ್ಟೆಷ್ಟೋ ಹೊಸ ಮಾದರಿಯ ಕತೆಕಾದಂಬರಿಗಳನ್ನೂ ನಾಟಕ ಪ್ರಹಸನಗಳನ್ನು ನಿರ್ಮಾಣಮಾಡಿಕೊಳ್ಳಬಹುದು. ಶ್ರೀ ವಿರ್ಜೆಯವರ ಈ ಪ್ರಯತ್ನವು ಹೊಸ ಬರೆಹಗಾರರಿಗೂ ಪ್ರಯೋಜ[illegible] ಕಾರಿಯಾದೀತೆಂದು ನಮ್ಮ ಭಾವನೆ. ಭಾಷೆ ಪ್ರೌ[illegible] ಗಿದೆ. ಅಲ್ಲಲ್ಲಿ ಕೆಲವು ಮಾತುಗಳನ್ನು ಬಿಟ್ಟರೆ ಕ[illegible] ನಾಡಿನ ಎಲ್ಲ ಕಡೆಯವರಿಗೂ ತಿಳಿಯಬಹುದಾ[illegible] ಮುದ್ರಣವೂ ಬಂಧನವೂ ಅಂದವಾಗಿವೆ. ಅಚ್ಚಿನ ತಪ್ಪು[illegible] ಗಳೂ ಹೆಚ್ಚಾಗಿಲ್ಲ. ಸಂಗ್ರಹಕ್ಕೆ ಯೋಗ್ಯವಾದ ಪುಸ್ತ[illegible]

**ತ್ರಿಶಂಕು ಸ್ವರ್ಗ**:-(ಒಂದು ಸಾಮಾಜಿಕ ನಾಟ[illegible] ಬರೆದವರು-ಶಿವಾಜಿರಾವ ಚಿಂತಾಮಣಿ. ಬೆಲೆ, [illegible]

ಸಮಾಜದ ಹೊಯ್ದಾಟವನ್ನೇ ತೋರಿಸಲು ಪ್ರಯ[illegible] ಮಾಡಿದ ಒಂದು ಸಾಮಾಜಿಕ ನಾಟಕವಿದು. ಲೇಖಕ[illegible] ಒಂದೇ ಸಮಾಜವನ್ನು ಕಣ್ಣೆದುರು ಇಟ್ಟುಕೊಂಡು ಈ ನಾಟಕವನ್ನು ಬರೆದಿದ್ದರೆ ಚೆನ್ನಾಗಿತ್ತು. [illegible] ಸಮಾಜಗಳನ್ನೇ ಸುತ್ತಲಿಕ್ಕೆ ಪ್ರಯತ್ನಮಾಡಿದ್ದ[illegible] ಸಮಾಜದ ಅಂಗಗಳಿಗೆ ಚೆನ್ನಾಗಿ ಪರಿಪೂರ್ಣತೆ ಬಂ[illegible] ದೊಡ್ಡದಕ್ಕೆ ಗಂಟು ಬಿದ್ದದರಿಂದ ಚಿಕ್ಕದನ್ನು ಲಕ್ಷಿಸ[illegible] ಹಾಗಿಲ್ಲ; ಚಿಕ್ಕದನ್ನು ಬಿಡದೆ ದೊಡ್ಡದಕ್ಕೆ ಪರಿಪೂರ್ಣ[illegible] ಬರುವಂತಿಲ್ಲ! ಹೀಗಾಗಿದೆ ಇದನ್ನು ಬರೆದವರ ಗ[illegible] ಇದೊಂದು ಸಮಾಜದ ಸಮಸ್ಯೆ ಎನಬೇಕೇ? ಸ[illegible] ಸ್ಯೆಯೂ ಅಲ್ಲ. ಸಮಸ್ಯೆಯನ್ನು ಬಿಡಿಸುವ ಪ್ರಯ[illegible] ಮಾಡಿದ್ದಾರೆ ಎನಬೇಕೆ, ಅದೂ ಸಂಪೂರ್ಣವಾ[illegible] 'ಅದೇಕೆ? ಸಮಾಜವನ್ನು ಇದ್ದಕ್ಕಿದ್ದ ಹಾಗೆ ಚಿತ್ರಿಸಿದ್ದೇ[illegible] ಇದು ಒಂದು ಬಗೆಯ ಕಲೆ; ಎನ್ನುವಿರಾ! [illegible] ದನ್ನೇ ಆಗಲಿ, ಇದ್ದಕ್ಕಿದ್ದ ಹಾಗೆ ತಮ್ಮದೆನ್ನುವ ಹ[illegible] ಬೆಳಕನ್ನು ಬೆರೆಯಿಸದೆ ಚಿತ್ರಿಸಿದರೆ, ಅದು ಕಲೆಯಲ್ಲ. [illegible] ರಲಿ, ತ್ರಿಶಂಕು ಸ್ವರ್ಗದಲ್ಲಿಯೂ ಒಬ್ಬ ಆದರ್ಶಪುರು[illegible] ದ್ದಾನೆ! ಇದೇ ಹೆಚ್ಚಿನದು!

ಇನ್ನೊಂದು ಮಾತು. ನಾಟಕಕ್ಕೆ ಭಾಷೆ ಇರಬೇ[illegible] ಎಂಬ ಸಂಶಯವು ಈ ನಾಟಕವನ್ನು ಓದುವುದರಿಂ[illegible] ಬರುತ್ತದೆ. ಸಮಾಜದಲ್ಲಿ ಅನೇಕ ಭಾಷೆಗಳಿವೆ. ನಾಟಕ[illegible] ಸಮಾಜವನ್ನು ಚಿತ್ರಿಸುವಂಥಾದ್ದು. [illegible] ಅದಕ್ಕೆ ಒಂದೇ ಭಾಷೆಯು ಅನವಶ್ಯಕ. ಹೀಗೆ ತಿಳಿ[illegible] ಅಥವಾ ಏನೋ ಈ ನಾಟಕದಲ್ಲಿ ೪-೫ ಭಾಷೆಗಳು ಕಾ[illegible] ಕೊಂಡಿವೆ. ಇದ್ದ ಅಂಥ ಭಾಷೆಯಲ್ಲಿಯೂ ಬಿಗು[illegible] ಕಡಿಮೆ.

ನಾಟಕವನ್ನು ಓದಿ ಮುಗಿಸಿದ ಮೇಲೆ, ಒಂದು[illegible] ಸಂಶಯವು ಮಾತ್ರ ಉಳಿಯುತ್ತದೆ. ಅದೇನೆಂದರೆ—

CC-0. Jangamwadi Math Collection. Digitized by eGangotri

ಜಯೂಠನ ಸ್ವಭಾವವು ಪರಿವರ್ತನವಾಯಿತು. ಅವನು ನೂಲುವದಕ್ಕೆ ಸುರುವುಮಾಡಿದ. ಆದರೆ ಹಿಂದಿನ ಸಾಲವನ್ನು ಹೇಗೆ ತೀರಿಸಿದ ? ಸಾಲಗಾರರು ಹಾಗೇ ಬಿಟ್ಟಿರಬೇಕು ಒಂದು–ಇಲ್ಲವೆ ಜಯೂಠನ ಹತ್ತರ ಅಷ್ಟು ದುಡ್ಡು ಇದ್ದು, ಅವನೇ ತೀರಿಸಿರಬೇಕು ಒಂದು; ಇದಾವುದಕ್ಕೂ ನಾಟಕದಲ್ಲಿ ಸೂಚಿತಉತ್ತರವು ದೊರೆತಿಲ್ಲ.

ಒಟ್ಟಿನ ಮೇಲೆ ನಾಟಕವನ್ನು ಓದಿ ನೋಡುವದಕ್ಕಿಂತ ಆಡಿನೋಡಿದರೆ ಅದರ ನಿಜವಾದ ರೂಪವು ಕಂಡು ಬಂದು ಮನರಂಜನೆಯಾಗಬಹುದು. ಲೇಖಕರು ಇದಕ್ಕೂ ಚೆನ್ನಾದ ನಾಟಕಗಳನ್ನು ಬರೆಯಲೆಂದು ಕನ್ನಡಿಗರೆಲ್ಲರೂ ಇದಕ್ಕೆ ಪ್ರೋತ್ಸಾಹಿಸಬೇಕೆಂದು ನಮ್ಮ ಕೋರಿಕೆ.

**ಬಡವರಭಾಗ್ಯ ಅರ್ಥಾತ್ ರಾಟಿ:—**(ಸಚಿತ್ರ) ಲೇಖಕರು: ರಾಮಚಂದ್ರ ವೆಂಕಟೇಶ ಒಡವಿ. ಪ್ರಕಾಶಕರು: ನಾರಾಯಣ ತಮ್ಮಾಜಿ ಕಾತಗಡೆ (ಪುಂಡಲಿಕ) ಪುಸ್ತಕ ಸಿಕ್ಕುವ ವಿಳಾಸ 'ಕುಮರೀಖಾದಿ ಮಂದಿರ, ಹುದ್ಲಿ. ಜಿಲ್ಲಾ ಬೆಳಗಾಂವಿ.' ಕ್ರೌ. ಅ. ೭೫ ಪುಟ. ಬೆಲೆ ೦–೪–೦

ತುಂಬ ಉಪಯುಕ್ತವಾದ ಪುಸ್ತಕ. ಲೇಖಕರು ಮ. ಗಾಂಧಿಯವರ ಸತ್ಯಾಗ್ರಹಾಶ್ರಮದಲ್ಲಿ ನೂಲುವ ನೇಯುವ ಕಲೆಯನ್ನು ಕಲಿತಿದ್ದು ಎಳೆಂಟು ವರ್ಷ ಕರ್ನಾಟಕದ ಬೇರೆ ಬೇರೆ ಹಳ್ಳಿಗಳಲ್ಲಿದ್ದು ನೂಲುವ ನೇಯುವ ಕಲೆಯಲ್ಲಿ ಅರಿತುನುರಿತವರಾಗಿದ್ದಾರೆ. ಈ ಪುಸ್ತಕದಲ್ಲಿ ೧ ಹತ್ತಿ ೨ ಅರೆಯುವುದು ೩ ಹಿಂಜುವುದು ೪ ನೂಲುವುದು ಎಂದು ನಾಲ್ಕು ಭಾಗಗಳಿರುತ್ತವೆ. ಮೊದಲನೆಯಭಾಗದಲ್ಲಿ ಹತ್ತಿಯಲ್ಲಿಯ ಬೇರೆ ಬೇರೆ ಜಾತಿಗಳನ್ನು ಹೇಳಿದ್ದು ಒಳ್ಳೆಯ ಹತ್ತಿ ಕೆಟ್ಟ ಹತ್ತಿಗಳನ್ನು ಪರೀಕ್ಷಿಸುವುದರ ಬಗೆಯನ್ನು ಕೂಲಂಕಷವಾಗಿ ಬರೆದಿದ್ದಾರೆ. ಹತ್ತಿಯನ್ನು ಅರೆಯುವುದಕ್ಕೆ ಹಿಂಜುವುದಕ್ಕೆ ನೂಲುವುದಕ್ಕೆ ಬೇಕಾಗುವ ಉಪಕರಣಗಳ ವಿವರಣೆಯೂ ಬಲು ಚೆನ್ನಾಗಿದೆ. ಆಯಾ ಉಪಕರಣಗಳನ್ನು ಕಣ್ಣಿಗೆ ಎರಿಗಿಟ್ಟು ತೋರಿಸುವಂತಹ ಅಂದವಾದ 'ಹಾಫ್ ಟೋನ್' ಚಿತ್ರಗಳೂ ಗೆರೆಯ (ಲೈನ್) ಚಿತ್ರಗಳೂ ಹಲವು ಉಂಟು. ಕೊನೆಯಲ್ಲಿ ವಿವರಿಸಿರುವ 'ಹಾಸನ್ನು ಹೊಯ್ಯುವರೀತಿ, ನೂಲಿಗೆ ತಂಪು ಮಾಡುವ ಉದ್ದೇಶ, ನೂಲಿನ ನಂಬರ್ ತೆಗೆಯುವ ರೀತಿ, ಶಕ್ತಿಯನ್ನು ತೆಗೆಯುವ ರೀತಿ, ಸಮಾನತೆಯನ್ನು ತಿಳಿದುಕೊಳ್ಳುವ ಬಗೆ, ಉತ್ತಮನೂಲಿನ ಲಕ್ಷಣ, ನೂಲಿನ ಗಡುತರವನ್ನು ತೆಗೆಯುವ ರೀತಿ, ಇದೆಲ್ಲವೂ ಬಲು ಪ್ರಯೋಜನಕಾರಿಯಾದುದಾಗಿದೆ. ಪ್ರತಿಯೊಬ್ಬರ ಮನೆಯಲ್ಲಿಯೂ ಇರಬೇಕಾದ ಪುಸ್ತಕ.

**ಸದ್ಗುಣಿಯಾದ ವಿಮಲೆ:—**(ಸಾಮಾಜಿಕ ಕಾದಂಬರಿ) ಲೇಖಕರು: ಶ್ರೀ ಎಲ್. ಬಿ. ಜಿಗಳಿ ಕುಪ್ಪೆಲೂರು. ಪ್ರಕಾಶಕರು: ಶ್ರೀ ಗ. ಮು. ಶಿವಪೂಜಿ. ಪೋ. ದೇವಗಿರಿ ಜಿ. ಧಾರವಾಡ ಕ್ರೌ. ಅ. ೬೦ ಪುಟ. ಬೆಲೆ ೦–೪–೦

ಕಾದಂಬರಿಯ ಪ್ರಾರಂಭವು ಚೆನ್ನಾಗಿದೆ. ಸ್ವಾಭಾವಿಕವರ್ಣನೆಗಳು ಒಂದೆರಡೇ ಇದ್ದರೂ ಚಿತ್ತಾಕರ್ಷಕವಾಗಿವೆ. ಮುಂದಿನ ಕಥಾಭಾಗವನ್ನು ಮಾತ್ರ ಚೆನ್ನಾಗಿ ಹೆಣೆದಿಲ್ಲ. ಕಥಾವಸ್ತುವು ಸ್ವಾಭಾವಿಕವೆಂದು ಕಾಣುವಂತಹ ರಚನಾ ಕೌಶಲ್ಯವು ಕಂಡುಬರುವುದಿಲ್ಲ. ಮಾನವ ಜೀವನವನ್ನು ಪರಿಶೀಲಿಸಿ, ಔಚಿತ್ಯಾನೌಚಿತ್ಯಗಳನ್ನು ವಿಮರ್ಶಿಸಿ, ಸುಲಭ, ಶುದ್ಧ, ಗಂಭೀರ, ಭಾಷೆಯಲ್ಲಿ ಚರಿತ್ರೆಬರೆವುದು ಬರೆಹಗಾರನ ಗುರಿಯಾಗಿರಬೇಕು. ಬರಿ ಓದಿದ್ದನ್ನು ಕಾರಿದರೆ ಆಗದು. ಪಾರ್ವತಿ ವಿಮಲೆಯರ ಸ್ವಭಾವದ ಔಚಿತ್ಯಾನೌಚಿತ್ಯಗಳಿಗೆ ಹೆಚ್ಚು ಲಕ್ಷ್ಯ ಕೊಡಬೇಕಾಗಿತ್ತು. ಪ್ರತಿಜೀವಿಯಲ್ಲಿಯೂ ಸದ್ಗುಣ ದುರ್ಗುಣಗಳೆರಡೂ ಸಮ್ಮಿಲಿತವಾಗಿವೆ. ಒಂದಿದ್ದಲ್ಲಿ ಮತ್ತೊಂದಿರಲೇಬೇಕು. ಇದು ಮಾನವನಲ್ಲಿ ನೈಜವಾದುದು. ಸ್ವಭಾವಚಿತ್ರವು ನೈಜವಾದುದಿರಬೇಕಲ್ಲದೆ ಗಾಳಿಗೋಪುರವಾಗಿರಬಾರದು. ಇದರಲ್ಲಿ ಬರುವ ಜಗನ್ನಾಥನ ಭಾಷೆ ಚಿಕ್ಕಮಗುವಿನ ಭಾಷೆಯೇ ?

ಗ್ರಂಥಕರ್ತರು ಕನ್ನಡನಾಡನ್ನು ಬಿಟ್ಟು ಮಹಾರಾಷ್ಟ್ರದಲ್ಲಿ ಕಾಲು ಹಾಕಿದುದೇಕೆ ? ಮರಾಠಿ ಕಾದಂಬರಿಗಳ ನೆರಳು ಬಿದ್ದಿರಲಿಕ್ಕಿಲ್ಲವಷ್ಟೆ ? ಅಪರಿಚಿತ ದೇಶದ ನಡೆನುಡಿ ಕಾದಂಬರಿಯಲ್ಲಿ ವಿಪರೀತವಾಗುವವು. ಕತೆಯಲ್ಲಿ ನಡೆದ ಸನ್ನಿವೇಶಗಳು ಓದುಗರಿಗೆ ಪರಿಚಿತವಿದ್ದರೆ ಕತೆಯು ಹೆಚ್ಚು ರಸವತ್ತಾಗುವುದು. ಭಾಷೆಯು ತುಂಬಾ ದೋಷವುಳ್ಳುದಾಗಿದೆ. ಶೈಲಿಯು ಈಗಿನ ಕ್ರಮಿಕಪುಸ್ತಕದ ಶೈಲಿಯ ಗೆಳೆತನ ಮಾಡಿದುದು. ಲೇಖಕರಲ್ಲಿ ಬರೆಯಬೇಕೆಂಬ ಹಂಬಲವಿದೆ. ಹವಣಿಕೆ ನಡೆ


CC-0. Jangamwadi Math Collection. Digitized by eGangotri

ಯಿಸಿದ್ದಾರೆ. ಹೀಗೆಯೆ ಕೊಂಚ ಲಕ್ಷ್ಯಗೊಟ್ಟು ಬರೆಯುತ್ತ ಹೋದರೆ ಕಾದಂಬರಿಗಳು ಇನ್ನೂ ಹೆಚ್ಚಾಗಿ ಒಳ್ಳೆಯ ರೂಪ ತಾಳುವವು.

**ಶ್ರೀ ಗುರುಚರಿತ್ರ:—** ಬರೆದವರು ಶ್ರೀ ಗಣಪತಿ ಶಂಕರಭಟ್ಟ ಸರ್ಪಕರ್ಣೇಶ್ವರ. ಕ್ರಾ. ಅ. ೪+೫೨ ಬೆಲೆ ೧-೧೨-೦ ದೊರೆಯುವ ವಿಳಾಸ:–'ಸಾಧನೋಪಾಸ್ಯಾನ ಗ್ರಂಥಮಾಲೆ ಪೋ. ಕರ್ಕಿ ಜಿಲ್ಹಾ ಕಾರವಾರ'

ಉತ್ತರಕರ್ನಾಟಕದಲ್ಲಿಯೂ ದಕ್ಷಿಣಮಹಾರಾಷ್ಟ್ರದಲ್ಲಿಯೂ, ದತ್ತಾತ್ರೇಯನ ಅವತಾರವೆಂದು ಹೆಸರುಗೊಂಡ 'ಶ್ರೀ ನರಸಿಂಹ ಸರಸ್ವತಿ' ಸ್ವಾಮಿಗಳ ಉಪಾಸಕರು ಬಹುಜನರು. ಈ ಸ್ವಾಮಿಗಳ ಪವಾಡವನ್ನು ಹೊಗಳುವ 'ಗುರುಚರಿತ್ರ' ಎಂಬ ಗ್ರಂಥವು ಮಹಾರಾಷ್ಟ್ರ ಭಾಷೆಯಲ್ಲಿದೆ. ಬಹುಜನ ದತ್ತಾತ್ರೇಯೋಪಾಸಕರ ನಿತ್ಯದ ಪಾರಾಯಣಪುಸ್ತಕವಿದು. ಮಹಾರಾಷ್ಟ್ರಭಾಷೆಯಲ್ಲಿ 'ಓವಿ' ಎಂಬ ಹೆಸರಿನಿಂದಿರುವ ವೃತ್ತದಲ್ಲಿ ಗುರುಚರಿತ್ರವು ರಚಿತವಾಗಿದೆ. ಶ್ರೀಮಾನ್ ಮೂಡಗಟ್ಟೆ ರಾಘವೇಂದ್ರರಾಯರು ಈ ಗ್ರಂಥವನ್ನು ಕನ್ನಡದಲ್ಲಿ ಭಾಮಿನಿಷಟ್ಪದಿಯಲ್ಲಿ ಅನುವಾದಿಸಿರುವರು. ಈಗ ಅದೇ ಗ್ರಂಥವನ್ನೇ ಶ್ರೀ ಗಣಪತಿಭಟ್ಟರು ಸುಲಭವಾದ ಕನ್ನಡ ಗದ್ಯದಲ್ಲಿ ಅನುವಾದಿಸಿರುವರು. ದತ್ತಾತ್ರೇಯ ಗುರುವಿನ ಮಹಾತ್ಮ್ಯವನ್ನು ಅರಿತುಕೊಳ್ಳಬೇಕೆಂಬ ಕನ್ನಡಿಗರಿಗೆ ಹೆಚ್ಚು ಅನುಕೂಲತೆ ಮಾಡಿಕೊಟ್ಟಿರುವರು. ಶ್ರೀ ಗುರುಗಳ ಉಪಾಸಕರು ಅವಶ್ಯವಾಗಿ ಸಂಗ್ರಹದಲ್ಲಿಡಬೇಕಾದ ಪುಸ್ತಕ.

**ಹಿಂದೀ–ಕನ್ನಡ ಸ್ವಬೋಧಿನಿ:—** ಭಾಷಾಂತರ ಕರ್ತರು. ಪಂಡಿತ ಸಿದ್ಧನಾಥಪಂತ್ ಹಿಂದೀಪ್ರಚಾರಕ. ಪ್ರಕಾಶಕರು: 'ದಕ್ಷಿಣಭಾರತ ಹಿಂದೀಪ್ರಚಾರಸಭಾ ಟ್ರಿಪ್ಲಿಕೇನ್ ಮದ್ರಾಸ' ಕ್ರೌನ್. ಅ. ೧೬+೨೧೦ ಪುಟ ಬೆಲೆ ೦-೧೨-೦

ಈ ಪುಸ್ತಕಕ್ಕೆ ದೇ. ಭ. ಸಿ. ರಾಜಗೋಪಾಲಾಚಾರ್ಯರು ಉಪೋದ್ಘಾತವನ್ನು ಬರೆದಿದ್ದು ಭಾರತೀಯರೆಲ್ಲರೂ ಹಿಂದೀಭಾಷೆಯನ್ನು ಕಲಿಯಬೇಕೇತಕ್ಕೆ? ಎಂಬ ಮಾತನ್ನು ವಿವರಿಸಿ ಹೇಳಿರುವರು. 'ಹಿಂದುಸ್ತಾನದ ಭವಿಷ್ಯತ್ ಸರಕಾರದಲ್ಲಿ ಭಾಗಿಯಾಗದೆ ದೂರವಿರುವುದು ದಕ್ಷಿಣಹಿಂದುಸ್ತಾನಕ್ಕೆ ಇಷ್ಟವಿಲ್ಲದಿದ್ದಲ್ಲಿ, ಅಖಿಲಭಾರತೀಯ ವ್ಯವಹಾರಗಳಲ್ಲಿ ಭಾಗತೆಗೆದುಕೊಳ್ಳ[illegible]ಲ್ಲಾಗಲಿ ಅಥವಾ ಇಂತಹ ವಿಚಾರನಿರ್ಣಯಗಳ[illegible] ಪ್ರೇರೇಪಿಸುವುದರಲ್ಲಾಗಲಿ ಅಸಮರ್ಥತೆಯ[illegible] ಹೋಗಲಾಡಿಸಿಕೊಳ್ಳಲು ಇಚ್ಛೆಯಿದ್ದಲ್ಲಿ ದಕ್ಷಿಣದೇ[illegible] ವಿದ್ಯಾವಂತರು ಹಿಂದೀಯನ್ನು ಕಲಿಯುವುದು ಅ[illegible]ವಶ್ಯಕ.' ಎಂದು ಬರೆದಿದ್ದ ಆಚಾರ್ಯರ ಮ[illegible] ಬಹುಜನ ಸಮ್ಮತವಾದುದು. ಹಿಂದೀಭಾಷೆಯ[illegible] ಕಲಿಯಬೇಕೆಂಬ ಕನ್ನಡಿಗರಿಗೆ ಉಪಯುಕ್ತವಾಗು[illegible] ಇಷ್ಟೊಂದು ವಿಶದವಿಷಯಗಳುಳ್ಳ ಪುಸ್ತಕವು [illegible] ವರೆಗೆ ಇರಲಿಲ್ಲ. ದೇವನಾಗರೀ ಲಿಪಿಯನ್ನು ಬರೆಯ[illegible] ಓದಲು ಕಲಿಸುವುದರ ಮೊದಲುಗೊಂಡು ಬೇಕೆ[illegible] ವ್ಯಾಕರಣಪ್ರಯೋಗಾನುಸಾರವಾಗಿ ಬರೆದ ಬೇಕೆ[illegible] ಮೂವತ್ತಾರು ಪಾಠಗಳುಂಟು. ಕೊನೆಗೆ ಧಾತುಕಾ[illegible] ರೂಪನಿಷ್ಪತ್ತಿಯನ್ನೂ ಚಿಕ್ಕದೊಂದು ಹಿಂದೀ–ಕನ್ನ[illegible] ಶಬ್ದಕೋಶವನ್ನೂ ಪರಿಶಿಷ್ಟರೂಪವಾಗಿ ಕೊಡಲಾ[illegible] ಹಿಂದೀ ಕಲಿಯಬೇಕೆಂಬ ಪ್ರತಿಯೊಬ್ಬ ಕನ್ನಡಿಗನೂ ಇ[illegible] ಸಹಾಯತೆಗೆದುಕೊಂಡಲ್ಲಿ ಪ್ರಯೋಜನವನ್ನು ಪಡೆ[illegible]ದಿರನೆಂದು ನಮ್ಮ ಖಂಡಿತವಾದ ನಂಬುಗೆ.

**ಶ್ರೀ ಶಂಕರಾಚಾರ್ಯ:—**(ಚರಿತ್ರೆ) ಬರೆದ[illegible] ಶ್ರೀ ಸೂರ್ಯನಾರಾಯಣ ನಾರಾಯಣ ಹೆಗಡೆ [illegible] ತೋಕಾ. ಪ್ರಕಾಶಕರು, ಸಂದಿನೀ ಪುಸ್ತಕಾಲ[illegible] ಗೋಕರ್ಣ ಡೆ. ಅ. ೧೦೬ ಪುಟಗಳು ಬೆಲೆ ೦-೧೦-೦

'ಈ ಚರಿತ್ರೆಗೆ ಬ್ರಹ್ಮೀಭೂತ ಶ್ರೀ ಮಾಧವಾ[illegible]ರ್ಯವಿರಚಿತ ಸಂಕ್ಷೇಪ ಶಂಕರವಿಜಯವೆಂಬ ಸಂಸ್ಕೃ[illegible] ಕಾವ್ಯವೇ ಮೂಲಾಧಾರವು. ಇದಲ್ಲದೆ ಹಿಂದುಸ್ತಾ[illegible] ಕನ್ನಡ ಭಾಷೆಗಳಲ್ಲಿಯ ಆಚಾರ್ಯರ ಸಂಬಂಧ[illegible] ಹಲಕೆಲವು ಲೇಖಗಳಿಂದಲೂ ಇದಕ್ಕೆ ಸಹಾಯವಾ[illegible] ಎಂದು ಲೇಖಕರು ತಮ್ಮ ಮುನ್ನುಡಿಯಲ್ಲಿ ಹೇ[illegible]ವರು. ಎಲ್ಲದರಂತೆ ಮಹಾಪುರುಷರ ಚರಿತ್ರೆಗ[illegible]ಗಳನ್ನೂ ಈಗ ಹೊಸರೀತಿಯಲ್ಲಿ ಬರೆಯಬೇಕಾ[illegible] ಈ ವೈಜ್ಞಾನಿಕಯುಗದಲ್ಲಿ ಬರಿ ಮಹಾಪುರು[illegible] ಪವಾಡಗಳನ್ನು ಬಣ್ಣಿಸುತ್ತ ಕುಳಿತರೆ ಅ[illegible] ಅಷ್ಟೊಂದು ಉಪಯೋಗವಾಗದು. ಅವರು [illegible] ಹೋಗಿದ್ದ ಜೀವನಪಥವನ್ನೂ ಇಟ್ಟ [illegible] ಕಂಡುಹಿಡಿದು, ಈಗಿನ ಮನಶ್ಶಾಸ್ತ್ರವು [illegible] ರೀತಿಯಲ್ಲಿ ಅವರ ಸತ್ಯದರ್ಶನದ ಬಗೆಯನ್ನು [illegible]

CC-0. Jangamwadi Math Collection. Digitized by eGangotri

ಬೇಕು. ಇಂತಹ ವಿವರಣೆಯಿಲ್ಲದಿದ್ದರೆ ಆ ಚರಿತ್ರ ಗ್ರಂಥಗಳು ಬಹುಜನಸಮ್ಮತವಾಗದೆ ಕೇವಲ ಆ ಮಹಾ ಪುರುಷರ ಸಂಪ್ರದಾಯಗಳನನುಸರಿಸುವ ಭಾವಿಕಜನರಿಗೆ ಮಾತ್ರ ಉಪಯೋಗವಾಗುವುವು. ಪ್ರಸ್ತುತ ಪುಸ್ತಕವೂ ಶಾಂಕರಾನುಯಾಯಿಗಳಾದ ಭಾವಿಕರ ಸಂಗ್ರಹಕ್ಕೆ ತಕ್ಕುದಾಗಿದೆ. ಭಾಷೆ ಎಲ್ಲರಿಗೂ ತಿಳಿಯುವಂತೆ ಸರಳವೂ ಸುಲಭವೂ ಆಗಿದೆ.

**ಗೃಹವೈದ್ಯ:**—( ಪೂರ್ವಾರ್ಧ ) ಲೇಖಕರು ಡಾ. ಸೀತಾರಾಮ ವಿಘ್ನೇಶ್ವರ ಭಟ್ಟ ಭಡತಿ, ಗೋಕರ್ಣ. ಪುಸ್ತಕ ದೊರೆಯುವ ಸ್ಥಳ: ‘ ನಂದಿನೀ ಪುಸ್ತಕಾಲಯ’ ಗೋಕರ್ಣ ಡೆ. ಅ. ೧೦೬ ಪುಟ ಬೆಲೆ ೦–೧೦–೦

ಎಲ್ಲ ಜನರಿಗೂ ಉಪಯುಕ್ತವಾದ ಪುಸ್ತಕ. ಕೊಂಚ ನೆಗಡಿಬಂದರೆ ಡಾಕ್ಟರ್ ಬಳಿಗೆ ಓಡಿಹೋಗುತಿರುವ ನಾವು ನಮ್ಮ ಬಳಕೆಯಲ್ಲಿರುವ ದಿನಾಲು ಕಣ್ಣಿಗೆ ಬೀಳುತ್ತಿರುವ ವನಸ್ಪತಿಗಳ ಅಂಗಾಂಗಗಳಲ್ಲಿ ಎಂತೆಂತಹ ಔಷಧೀಗುಣವಿರುವುದೆಂಬುದನ್ನು ಮರೆತು ಬಿಟ್ಟಿದ್ದೇವೆ. ಹಿಂದುಸ್ತಾನದಲ್ಲಿ ಹಳ್ಳಿಗಳು ಮೊದಲಿನಿಂದಲೂ ಇವೆ. ಇಂದಿನವರಿಗಿಂತ ಹಿಂದಿನಕಾಲದ ಹಳ್ಳಿಗರು ಹೆಚ್ಚು ಆರೋಗ್ಯಶಾಲಿಗಳಾಗಿರುತ್ತಿದ್ದರೆಂಬುದು ಇತಿಹಾಸಸಿದ್ಧವಾದ ವಿಷಯ. ಆಗ ಅವರಿಗೆ ರೋಗಗಳನ್ನು ಗುಣಪಡಿಸಲಿಕ್ಕೆ ಪಾಶ್ಚಿಮಾತ್ಯ ಡಾಕ್ಟರ್ ಅವರ ಔಷಧಿಗಳು ಇವೇನೂ ಇರಲಿಲ್ಲ. ತಮ್ಮ ಸುತ್ತುಮುತ್ತು ಬೆಳೆಯುತ್ತಲಿದ್ದ ಗಿಡಮೂಲಿಕೆಗಳನ್ನೇ ಗುಣವರಿತು ಬೇನೆಗೆ ತಕ್ಕ ಮದ್ದನ್ನಾಗಿ ಉಪಯೋಗಿಸುತ್ತಿದ್ದರು. ಈ ನಷ್ಟಪರಂಪರೆಯನ್ನು ಮತ್ತೆ ಪ್ರಚಾರಕ್ಕೆತರುವುದಕ್ಕಾಗಿ ಈ ಗ್ರಂಥವು ತುಂಬ ನೆರವೀಯುವುದು. ಈ ಪೂರ್ವಾರ್ಧದಲ್ಲಿ ಬೇರೆಬೇರೆ ತೊಂಬತ್ತು ವನೌಷಧಿಗಳ ಗುಣಗಳನ್ನು ವಿವರಿಸಿದ್ದಾಗಿದೆ. ಸಂಗ್ರಹದಲ್ಲಿರಬೇಕಾದ ಪುಸ್ತಕ.

**ರಾಷ್ಟ್ರೋನ್ನತಿ ಲೇಖಮಾಲಾ:**—(ಮರಾಟಿಯ ಅನುವಾದ) ಇದೂ ಸಂದಿನೀಪುಸ್ತಕಾಲಯದಲ್ಲಿಯೆ ದೊರೆಯುವುದು..ಡೆ. ಅ. ೯೦ ಪುಟ, ಬೆಲೆ ೦–೮–೦

ಮಹಾರಾಷ್ಟ್ರದೇಶದಲ್ಲಿ ಪ್ರಸಿದ್ಧಲೇಖಕರೆಂದು ಹೆಸರುಗೊಂಡ ವಿದ್ಯಾಭೂಷಣ ತಾಂಬೇ ಶಾಸ್ತ್ರಿಗಳವರು ಬರೆದ ಹದಿನೈದು ನಿಬಂಧಗಳನ್ನು ಶ್ರೀ. ಗಣಪತಿ ಶಿವಭಟ್ಟ ಭಡತಿ ಗೋಕರ್ಣ, ಇವರು ಸರಳವಾದ ತಿಳಿಗನ್ನಡದಲ್ಲಿ ಅನುವಾದಿಸಿರುವರು. ಪ್ರತಿಯೊಂದು ಪ್ರಬಂಧವೂ ವಿಚಾರ ಪರಿಪ್ಲುತವಾಗಿದ್ದು ಎಲ್ಲರೂ ಓದಿ ತಿಳಿದುಕೊಳಬೇಕಾದಂತಹವಾಗಿವೆ. ಅನುವಾದಕರ ಕನ್ನಡಬಾಷೆ ಅಲ್ಲಲ್ಲಿ ಮರಾಟಿಯ ನೆರಳಲ್ಲಿ ಹರಿದುದಾಗಿದೆ.

**ಪ್ರೇಮಪಾಶ:**—(ಸಣ್ಣ ಕಥೆ) ಬರೆದವರು: ‘ ವಿ ’ ಪ್ರಕಾಶಕರು: ಶ್ರೀ ಎನ್. ಟಿ. ಲಕ್ಷ್ಮಣಗೌಡ ಬಿ. ಎ. ಕ್ರೌ. ಅ. ೨೪ ಪುಟ ಬೆಲೆ ೦–೨-೦

ಇದೊಂದು ಪ್ರಣಯದ ಕಥೆ. ಕರುಣದಲ್ಲಿ ಕೊನೆಗಂಡಿದೆ. ನಳಿನಿ-ಶಶಿಧರ ಒಡನಾಡಿಗಳು. ಒಡನಾಟ ಪ್ರೇಮವಾಗಿ ಪರಿಣಮಿಸುವುದು. ಇವರಿಬ್ಬರ ಮದುವೆಗೆ ಏನೋನೋ ವಿಘ್ನ. ಹಣದಾಶೆಯಿಂದ ನಳಿನಿಯ ತಂದೆ ಮಗಳನ್ನು ಒಬ್ಬ ಮುದುಕನಿಗೆ ಕೊಡಲಿರುತ್ತಾನೆ. ಮದುವೆಯ ದಿನವೆ ನಳಿನಿ, ಮನೆಯಿಂದ ಮಾಯವಾಗುವಳು. ಶಶಿಧರನು ಆಕೆಯನ್ನು ಹುಡುಕುತ್ತ ತಿರುಗಾಡುತಿರುವಾಗ ಒಂದು ನದಿಯ ದಂಡೆಯ ಮೇಲೆ ಕುಳಿತ ಹುಚ್ಚುಹಿಡಿದ ನಳಿನಿಯನ್ನು ಕಾಣುವನು. ಮನೆಗೆ ಕರೆದುಕೊಂಡು ಬರಬೇಕೆಂದಿರಲು ಆಕೆ ತಪ್ಪಿಸಿ ಹೋಗುವಳು. ಮತ್ತೊಮ್ಮೆ ಒಂದು ಹಳ್ಳಿಯಲ್ಲಿ ಜ್ವರದಿಂದ ಅರಿವು ತಪ್ಪಿ ಬಿದ್ದಿದ್ದ ನಳಿನಿಯು ಶಶಿಧರನ ಕಣ್ಣಿಗೆ ಬೀಳುವಳು. ಅವಳನ್ನು ರುಗ್ಣಾಲಯಕ್ಕೆ ಕರೆದುಕೊಂಡು ಹೋಗಿ ಉಪಚರಿಸುತ್ತಿರಲು ಅಲ್ಲಿಯೆ ಆಕೆಯ ಬದುಕಿನ ಕೊನೆಯಾಗುವುದು. ಇದರಿಂದ ಕಂಗೆಟ್ಟವನಾದ ಶಶಿಧರನೂ ತೀರಿಹೋಗುವನು. ಇದೇ ಕಥೆ. ಕಥೆಯು ಹೀಗೆ ನಡೆದಿರಲಿಕ್ಕಿಲ್ಲವೆಂದು ಹೇಳಲಾರೆವು. ಆದರೆ ನಡೆದ ಸಂಗತಿಯನು ಸ್ವಾಭಾವಿಕವೆಂದು ಎನಿಸುವಂತೆ ಹೇಳುವ ಕೌಶಲ್ಯವಿರದಿದ್ದಲ್ಲಿ ಕಥೆಯನ್ನು ಬರೆದವರಿಗೆ ಯೋಗ್ಯಫಲವು ದೊರೆಯಲಾರದು. ಇದ್ದ ಸಂಗತಿಯನ್ನು ಒಂದರ ಮುಂದೆ ಒಂದರಂತೆ ಹಾಗೆಯೇ ಹೇಳುತ್ತ ನಡೆದರೆ ಕಥೆಯಾಗದು. ವರ್ತಮಾನಪತ್ರದ ಸುದ್ದಿಯೋಲೆಯಂತಾಗುವುದು. ಕತೆಯು ಓದುಗರ ಎದೆಯಲ್ಲಿ ಕಲಕಲವೆಬ್ಬಿಸಿ ಅವರನ್ನು ನಗಿಸಬೇಕು. ಅಳಿಸಬೇಕು, ಬೆರಗುಗೊಳಿಸಬೇಕು, ಮರುಗುವಡಿಸಬೇಕು, ಕುಣಿದಾಡಿಸಬೇಕು, ಮೈಮರೆಯಿಸಬೇಕು.

CC-0. Jangamwadi Math Collection. Digitized by eGangotri

# ಈ ಸಲದ ಸಾಹಿತ್ಯ ಸಮ್ಮೇಲನ

ಶ್ರೀ. ಬೆಟಗೇರಿ ಕೃಷ್ಣಶರ್ಮ

(ಎರಡನೆಯ ಬರೆಹ)

ಕಳೆದ ಸಂಚಿಕೆಯಲ್ಲಿ ಸಾಹಿತ್ಯಸಮ್ಮೇಲನದ ವಿಷಯದ ಬಗ್ಗೆ ವಿಸ್ತಾರವಾಗಿ ಬರೆದಿದ್ದರೂ ಹೇಳಬೇಕಾದ ಮಾತುಗಳು ಇನ್ನೂ ಹಲವು ಇವೆ. ಸಮ್ಮೇಲನದ ಕಾರ್ಯಕಲಾಪಗಳನ್ನೂ ಅಧ್ಯಕ್ಷ ಸ್ವಾಗತಾಧ್ಯಕ್ಷರ ಭಾಷಣಗಳನ್ನೂ ಕುರಿತು ವಿಮರ್ಶಿಸಿ ಬರೆದುದೇ ಹೋದ ಲೇಖನದಲ್ಲಿ ಪ್ರಧಾನವಿಷಯವಾಗಿದೆ. ಸಮ್ಮೇಲನವನ್ನು ಇಷ್ಟೊಂದು ಯಶಸ್ವಿಯಾಗಿ ಜರುಗಿಸಿದವರ ಪರಿಚಯವನ್ನು ಸಾಕಷ್ಟು ಮಾಡಿಕೊಡುವುದಕ್ಕೆ ಅಲ್ಲಿ ಸಾಧ್ಯವಾಗದುದರಿಂದ ಅದನ್ನು ಈ ಲೇಖನದ ಮುಖಾಂತರ ಮಾಡಬೇಕೆಂದು ಆಶೆಪಟ್ಟುಕೊಂಡಿದ್ದೇನೆ.

ಶ್ರೀ. ಹಳದೀಪೂರ ಸುಬ್ಬರಾಯರು ಕಾರವಾರದಲ್ಲಿಯ ಪ್ರತಿಷ್ಠಿತ ಗೃಹಸ್ಥರು. ತುಂಬ ಸಿರಿವಂತರು. ಜನತೆಯ ಸೇವೆಯಲ್ಲಿ ಬಹುವಾಗಿ ಆಸಕ್ತಿಯುಳ್ಳವರು. ಮಹಾತ್ಮಾ ಗಾಂಧಿಯವರಲ್ಲಿ ತುಂಬ ನಂಬುಗೆಯಿಟ್ಟುಕೊಂಡವರು. ದೇಶಸೇವೆಗಾಗಿ ಸೆರೆಮನೆಯ ವಾಸವನ್ನು ಅನುಭವಿಸಿದವರು. ಸದ್ಯ ಸೆರೆಮನೆಯಲ್ಲಿಯೇ ಇರುವರು. ಇವರು ಕಾರವಾರಪಟ್ಟಣದ ನಿವಾಸಿಗಳೇ ಆದುದರಿಂದ ಸ್ವಾಗತಾಧ್ಯಕ್ಷರಮಾಲೆ ಇವರ ಕೊರಳಲ್ಲಿಯೇ ಬೀಳತಕ್ಕುದು. ಆದರೆ ಏನೇನೋ ಸಂಸಾರಿಕ ಆಪತ್ತಿಗಳಿಂದದು ಸಾಧ್ಯವಾಗಲಿಲ್ಲ. ಸಮ್ಮೇಲನದ ಕಾರ್ಯಕ್ಕಾಗಿ ಕೈಕಟ್ಟಿ ನಿಂತುಕೊಂಡಿದ್ದರಿವರು. ಇವರ ತಮ್ಮಂದಿರಾದ ಶ್ರೀ. ಹಳದೀಪೂರ ಕೃಷ್ಣರಾಯರೂ ಇವರಂತೆಯೆ ಜನಸೇವೆಯಲ್ಲಿ ಪ್ರೀತಿಯುಳ್ಳವರು. ಕೊನೆಯದಿನ ಸಮ್ಮೇಲನಕ್ಕೆ ಬಂದಿದ್ದ ಎಲ್ಲ ಪ್ರತಿನಿಧಿಗಳನ್ನೂ ಮನೆಗೆ ಕರೆಯಿಸಿಕೊಂಡು ರಾಜಾತಿಥ್ಯಮಾಡಿಸಿ ಕನ್ನಡಿಗರ–ಕರ್ಣಾಟಕದ ವಿಷಯವಾಗಿ ತಮ್ಮಲ್ಲಿದ್ದ ಅತಿಶಯವಾದ ಪ್ರೀತಿ ವಿಶ್ವಾಸಗಳನ್ನು ವ್ಯಕ್ತಪಡಿಸಿದರು. ಕರ್ಣಾಟಕಏಕೀಕರಣದ ಗೊತ್ತುವಳಿಯನ್ನು ಕುರಿತು ಶ್ರೀ. ಸುಬ್ಬರಾಯರು ಸಭೆಯಲ್ಲಿ ಆಡಿದ ಮಾತುಗಳು ಕರ್ಣಾಟಕದ ಅಭಿಮಾನದಿಂದ ತುಂಬಿತುಳುಕುತ್ತಿದ್ದುವು. ಸಮ್ಮೇಲನದ ಕಾರ್ಯಕ್ಕೆ ಈ ಬಂಧುದ್ವಯರಿಂದಾದ ನೆರವು ಹೇಳಲಿಕ್ಕೆ ಬಾರದಷ್ಟಾಗಿದೆಯೆಂದು ಸಮ್ಮೇಲನದ ಕಾರ್ಯಕರ್ತೃಗಳ ಹೇಳಿಕೆ. ನಮ್ಮ ಅನುಭವಕ್ಕೂ ಬಂದ ಮಾತು.

ಮುಖ್ಯಕಾರ್ಯದರ್ಶಿಗಳಾದ ಶ್ರೀ. ತೇಲಂಗ ಮಂಗೇಶರಾಯರು ಪಟ್ಟ ಶ್ರಮಕ್ಕಂತೂ ಆಳತೆಯೇ ಇಲ್ಲ. ಇವರು ಸರಕಾರದ ಸೇವೆಯಿಂದ ನಿವೃತ್ತರಾಗಿರುವರು. ಮುದುಕರಾಗಿದ್ದರೂ ಹರಯದವರನ್ನು ನಾಚಿಸುವಂತಹುದು ಇವರ ಚಟುವಟಿಕೆ. ಕನ್ನಡದ ವಿಷಯದಲ್ಲಿದ್ದ ಇವರ ಅಭಿಮಾನ[illegible]ರವು ಅನ್ಯಾದೃಶವಾದುದು. ಈ ಸಮ್ಮೇಲನದ ಕಾರ್ಯ ಮಾಡುವಾಗ ಆಗಾಗ ತಮ್ಮ ಆಪ್ತಮಿತ್ರರ ನಿಂದೆಗೆ ಗುರಿಯಾಗಬೇಕಾಯಿತೆಂತೆ. ಅದನ್ನೆಲ್ಲ ಸಹಿಸಿಯೂ ಸಮ್ಮೇಲನದ ಕಾರ್ಯಕ್ಕಾಗಿ ತನುಮನಧನದಿಂದ ನೆರವಿತ್ತು ಸಮ್ಮೇಲನದ ಯಶಸ್ಸಿನಿಂದ ಹಿರಿಹಿರಿ ಹಿಗ್ಗಿದವರಿವರು.

ಶ್ರೀ. ನಾಡಕರ್ಣಿ ಸುಬ್ಬರಾಯರಂತೂ ಕರ್ಮವೀರರು. ಜನರು ಹೊಗಳಲಿ ತೆಗಳಲಿ ತಮಗೆ ಸತ್ಯವೆನಿಸಿದ ದಾರಿಯಲ್ಲಿ ನಡೆಯುವವರು. ಕನ್ನಡಿಗರ ಉನ್ನತಿಯೂ [illegible] ಕರ್ನಾಟಕಏಕೀಕರಣದ ಹೊರತು ಶಕ್ಯವಿಲ್ಲ, ಎಂದು [illegible]ರಿಗೆ ಪೂರ್ಣವಾಗಿ ಒಂಬಿಸಿಬಿಟ್ಟಿದೆ. ಕಾರವಾರದಲ್ಲಿ ಹೊರಡುತ್ತಿರುವ 'ವಿಚಾರಿ' ಎಂಬ ಪಕ್ಷಪತ್ರಿಕೆಯಲ್ಲಿ ಪ್ರಕಟವಾಗಿದ್ದ ಅವರ ಬರೆಹಗಳೆರಡು ಕರ್ಣಾಟಕ ಏಕೀಕರಣ ವಿಚಾರವನ್ನು ಆದೆಷ್ಟು ಸಮಂಜಸ ರೀತಿಯಿಂದ [illegible]ಸುತ್ತಿವೆಯೆಂಬುದನ್ನು ನೋಡಬಹುದು. ಹಿಂದುಳಿ[illegible] ಸಮಾಜವನ್ನು ಮೇಲಕ್ಕೆತ್ತಬೇಕೆಂದು ಪಡುತ್ತಿರುವ ಇವರ ಹವಣಿಕೆಯು ಪ್ರಶಂಸನೀಯವಾಗಿದೆ. ಸಮಾಜಶಾಸ್ತ್ರವನ್ನೂ ರಾಜಕಾರಣವನ್ನೂ ಚೆನ್ನಾಗಿ ಅಭ್ಯಾಸಿಸಿದವರಿವರು. ಇವರು ಇಂಗ್ಲೀಷಿನಲ್ಲಿ ತಮ್ಮ ವಿಚಾರಗಳನ್ನು ಬರೆದು ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟಿಸುತ್ತಿರುವರು. ಕನ್ನಡಿಗರಿಗೂ ತಮ್ಮ ವಿಚಾರಗಳು ತಿಳಿ[illegible]

CC-0. Jangamwadi Math Collection. Digitized by eGangotri

ವಂತೆ ಇವರು ಕನ್ನಡದಲ್ಲಿಯೇ ಲೇಖನಗಳನ್ನು ಬರೆಯ ಬೇಕೆಂದು ನಮ್ಮಾಶೆ.

ಸಮ್ಮೇಲನಕ್ಕೆ ನೆರವಾಗಲು ಕಾರವಾರದ ಮಹಿಳಾ ವರ್ಗದಲ್ಲಿ ಮೊದಲು ಮುಂದುವರಿದು ಬಂದವರೆಂದರೆ ಶ್ರೀ. ಸೌ. ಚಿಕ್ಕಅರಮನೆ ಮುಕ್ತಾದೇವಿಯವರು. ಇವರ ತಂದೆ ಶ್ರೀ. ಎನ್ನೆಮಡಿ ದತ್ತರಾಯರು ಸುರತ ನಗರದಲ್ಲಿ ನ್ಯಾಯಾಧೀಶರಾಗಿದ್ದಾರೆ. ಇವರ ಪತಿಗಳಾದ ಗೋಕರ್ಣದ ಶ್ರೀ. ಚಿಕ್ಕಅರಮನೆ ಶ್ರೀಪಾದರಾಯರು ಎಲ್. ಎಲ್. ಬಿ. ಪರೀಕ್ಷೆಗಾಗಿ ಓದುತ್ತಿದ್ದಾರೆ. ಶ್ರೀಮತಿಯವರೂ ಕಾರವಾರ ಹೈಸ್ಕೂಲಿನಲ್ಲಿ ಪ್ರವೇಶ ಪರೀಕ್ಷೆಯ ವರ್ಗದಲ್ಲಿ ಓದುತ್ತಿದ್ದಾರೆ. ಇವರು "ನಾನು ಕನ್ನಡನಾಡಿನ ಅನ್ನ ಉಣ್ಣುತ್ತಿದ್ದೇನೆ ನನಗೆ ಕನ್ನಡ ಭಾಷೆ ಬರದಿದ್ದರೆ ನಾಚಿಕೆಗೇಡು" ಎಂದು ಅಭಿಮಾನದಿಂದ ಸಮ್ಮೇಲನದ ಕಾರ್ಯಕ್ಕೆ ಮುಂದುವರಿದುಬಂದು ಅನೇಕ ಮಹಿಳೆಯರನ್ನು ಸಮ್ಮೇಲನಕ್ಕೆಂದು ಕರೆದು ತಂದರು. ಇವರ ಕಾರ್ಯವೂ ಹೊಗಳಿಸಿಕೊಳುವಂತಹದು.

ಸಮ್ಮೇಲನದ ಪ್ರಾರಂಭದ ಸಂಗೀತದಲ್ಲಿ ಭಾಗಿಗಳಾಗಿದ್ದ ಹೆಣ್ಣುಮಕ್ಕಳ ಹೆಸರನ್ನೂ ಮರೆಯುವಂತಿಲ್ಲ. ಕು. ಶಕುಂತಲಾ ಕು. ವತ್ಸಲಾ ಇವರಿಬ್ಬರೂ ಗರುಡ ಸದಾಶಿವರಾಯರ ಮಕ್ಕಳು. ಕು. ಮಥುರಾ ಕು. ಇಂದುಮತಿ ಇವರಿಬ್ಬರೂ ಕಾರವಾರದ ನಿವಾಸಿಗಳಾದ ಶ್ರೀ. ಹತ್ತಂಗಡಿ ರಾಘವೇಂದ್ರರಾಯರ ಮಕ್ಕಳು. ಇವರೆಲ್ಲರ ಮಂಜುಲ ಕಂಠದಿಂದ ಹೊರಟ ಅಂದಿನ ಹಾಡಿನ ಇಂಪು ಎಂದೆಂದೂ ಮರೆಯದಂತಹದು.

ವೈಣಿಕವಿದ್ಯಾವಿಶಾರದರಾದ ಶ್ರೀ. ತೇಲಂಗ ಮಂಗೇಶರಾಯರು ಸಾ. ಸಮ್ಮೇಲನದ ಕಾಲದಲ್ಲಿ ಸಭಾಮಂಟಪದಲ್ಲಿರದಿದ್ದುದು ಒಂದು ದೊಡ್ಡ ಕೊರತೆಯಾಗಿ ಅನೇಕರಿಗೆ ಕಂಡುಬರುತ್ತಿದ್ದಿತು. ಅದೇತಕ್ಕೆಂದರೆ ಅವರು ವೀಣಾವಾದನನಿಪುಣರಿರುವಂತೆ ಕನ್ನಡ ಪ್ರಾಚೀನಸಾಹಿತ್ಯದಲ್ಲಿಯೂ ಪರಿಚಯವುಳ್ಳವರು. ಚಿತ್ರಕಲೆಯನ್ನೂ ಚೆನ್ನಾಗಿ ಬಲ್ಲರು. ಕರ್ಣಾಟಕಏಕೀಕರಣ ಸಮ್ಮೇಲನದ ದಿನ ಇವರು ಸಭೆಗೆ ದಯಮಾಡಿಸಿದ್ದರು. ಕನ್ನಡಸಂಸ್ಕೃತಿಯ ಪ್ರಸಾರಣೆಗಾಗಿ ಇವರಿಂದ ಅನೇಕ ಬಗೆಯ ಕಾರ್ಯಗಳಾಗುವಂತಿವೆ. ಆ ಬಗೆಯಾಗಿ ಇವರ



(ಎಡದಿಂದ) (೧) ಕು. ಶಕುಂತಲೆ, (೨) ಕು. ಮಥುರಾ, (೩) ಶ್ರೀಮತಿ ಮುಕ್ತಾಬಾಯಿ, (೪) ಕು. ವತ್ಸಲಾ, (೫) ಕು. ಇಂದುಮತಿ.



CC-0. Jangamwadi Math Collection. Digitized by eGangotri

ಕಾರ್ಯಕಲಾಪಗಳೂ ಇರಬೇಕೆಂದು ನಮ್ಮ ಅಪೇಕ್ಷೆ.

ಬಂಟರ ಸಮಾಜದ ಮುಂದಾಳುಗಳಾದ, ವಿದ್ಯಾಖಾತೆಯಲ್ಲಿ ಕೆಲಸಮಾಡುತಿದ್ದು ಗಟ್ಟಿಗರೆಂದು ಹೆಸರುಪಡೆದಿದ್ದ ಶ್ರೀ. ಆರ್. ಕೆ. ನಾಯಕರ ಬಿ. ಎ. ಶ್ರೀ. ಗಾಂವಕರ ಬಿ. ಎ. ಶ್ರೀ. ಕಸಬೇಕರ ಬಿ. ಎ. ಇವರೆಲ್ಲರು ಸಮ್ಮೇಲನದಕಾರ್ಯದಲ್ಲಿಯೂ ಕರ್ಣಾಟಕಸಂಘವನ್ನು ಸ್ಥಾಪಿಸುವ ಕಾರ್ಯದಲ್ಲಿಯೂ ಪಟ್ಟ ಶ್ರಮವೂ ತೋರಿಸಿದ ಉತ್ಸಾಹವೂ ಹೇಳಲಸದಳವು. ಇಂತಹ ಮುಂದಾಳುಗಳುಳ್ಳ ಬಂಟರ ಸಮಾಜವು ಕನ್ನಡನಾಡಿನ ಉನ್ನತಿಗೆ ಪೋಷಕವಾದ ಕೆಲಸವನ್ನು ಮಾಡದೆ ಬಿಡದೆಂಬುದರಲ್ಲಿ ಸಂಶಯವಿಲ್ಲ.

ಇನ್ನು ಶ್ರೀ. ಗರುಡ ಸದಾಶಿವರಾಯರು ಸಮ್ಮೇಲನಕ್ಕಿತ್ತ ನೆರವು ಬಗೆಬಗೆಯದು. ಅವರು ಕನ್ನಡ ಭಾಷಾ ಸೇವೆಯ ನೊಗವನ್ನು ಹೊತ್ತು ಬಲುದಿನವಾಯಿತು. ಅದಕ್ಕಾಗಿ ಯಾವ ವಿಧದ ತ್ಯಾಗವನ್ನೂ ಮಾಡಲಿಕ್ಕೆ ಸಿದ್ಧರೇ ಇರುವರು. ಕಾರವಾರದಲ್ಲಿಯೂ ಅಷ್ಟೆ! ಸಭಾಮಂಟಪ ಅವರದು. ಬೆಳಕು ಅವರದು. ಸಂಗೀತ ಸಾಮುಗ್ರಿ ಅವರವು. ಒಮ್ಮೆ ಸಂಗೀತಗಾರರಾಗಿಯೂ ಕೆಲಸಮಾಡಿದರು. ಇದಕ್ಕಾಗಿ ಸಮ್ಮೇಲನದ ಕಾರ್ಯಕರ್ತೃಗಳು ಅವರನ್ನು ತುಂಬ ಅಭಿನಂದಿಸಿದುದು ಸರಿ. ಕನ್ನಡಿಗರೆಲ್ಲರ ಅಭಿನಂದನಕ್ಕೂ ಶ್ರೀ. ಸದಾಶಿವರಾಯರು ಪಾತ್ರರಾಗಿದ್ದಾರೆ.

ಶ್ರೀ. ಶಿಲ್ಪಾ, ಶ್ರೀ. ಸೆಟ್ಟಿ, ಶ್ರೀ. ಮಾಂಜರೇಕರ, ಶ್ರೀ. ಅಡಕೋಳಿ ಶ್ರೀ. ಪೋತದಾರ ಶ್ರೀ. ಸ್ವಾದಿ ಗಜಾನನರಾವ್, ಶ್ರೀ. ಯಾಜಿ (ಕ. ಧುರೀಣದ ಸಂಪಾದಕರು) ಶ್ರೀ. ಪ್ರಭು ವೆಂಕಟರಾಯರು ಇವರೆಲ್ಲರೂ ಪಟ್ಟ ಶ್ರಮೆಯನ್ನು ಕಳೆದಸಂಚಿಕೆಯಲ್ಲಿ ಹೇಳಲಾಗಿದೆ. ಇನ್ನೊಮ್ಮೆ ಅವರ ಹೆಸರನ್ನೆತ್ತಿ ಹೇಳಿದರೂ ಅಪ್ರಸಂಗಿಕವೇನೂ ಆಗದು.

ಸಮ್ಮೇಲನದ ಕಾಲಕ್ಕೆ ಕಾರವಾರದಲ್ಲಿ ಎಲ್ಲೆಲ್ಲಿಯೂ ಹರಿಯುತ್ತಿದ್ದ ಕನ್ನಡದ ಪ್ರೀತಿಯು ಇನ್ನು ಕೊನೆಯವರೆಗೂ ಉಳಿದು ಕೆಲಸಮಾಡುತಿರಬೇಕೆಂದು ನಮ್ಮ ಅಪೇಕ್ಷೆ.

# ನಮ್ಮ ಮಾತು

## (ಕನ್ನಡಿಗರಿಗೆ)

ಜಯಕರ್ನಾಟಕದ ವಾಚಕವರ್ಗದಲ್ಲಿ ಮಧ್ಯಮಸ್ಥಿತಿಯ ಜನರೇ ಬಹುಸಂಖ್ಯಾಕರಾಗಿದ್ದಾರೆ. ಅವರು ಈಗ ಸಾಂಪತ್ತಿಕ ಆಪತ್ತಿಯಲ್ಲಿರುವುದರಿಂದ, ಜಯಕರ್ನಾಟಕವೂ ಅಂತಹ ಆಪತ್ತಿಗೆ ಗುರಿಯಾಗಿದೆ. ಜಯಕರ್ನಾಟಕದ ಪ್ರಗತಿಪಥವನ್ನು ಸದ್ಯಕ್ಕೆ ನಾವು ಅಪೇಕ್ಷಿಸದಿದ್ದರೂ ಈಗಿದ್ದಂತೆಯಾದರೂ ಸುಸೂತ್ರವಾಗಿ ಸಾಗಿಸಲಿಕ್ಕೆ ಬಾರದಂತಾಗಿದೆ. ಕನ್ನಡನಾಡಿನಲ್ಲಿ ಈಗಲೂ ವ್ಯರ್ಥವಾಗಿಯೋ ಸಾರ್ಥವಾಗಿಯೊ ಹಣವನ್ನು ಸೂರೆಮಾಡುವ ಜನರಿಗೇನು ಕಡಿಮೆಯಿಲ್ಲ. ಅಂತವರು ಜಯಕರ್ನಾಟಕದ ಕಡೆಗೆ ಕೊಂಚ ಕಣ್ಣು ಬಿಟ್ಟು ನೋಡಿದರೆ ಎಷ್ಟೋ ಚೆನ್ನಾಗುವುದು. ಜಯಕರ್ನಾಟಕವು ಅಖಿಲ ಕರ್ನಾಟಕದಲ್ಲಿ ದೊಡ್ಡದಾದ ಪತ್ರಿಕೆ. ಒಳ್ಳೆಯಪತ್ರಿಕೆಯೆಂದು ಅದೆಷ್ಟೊ ಜನರಿಂದ ಪ್ರಶಂಶೆಯನ್ನೂ ಪಡೆದಿದೆ. ಎಂಟೊಂಬತ್ತು ವರ್ಷಗಳಿಂದ ವ್ಯವಸ್ಥಿತವಾಗಿ-ಕೈಲಾಗದ ಮಟ್ಟಿಗೆ-ಕನ್ನಡಿಗರ ಸೇವೆಮಾಡುತ್ತಲಿರುವ ಇದನ್ನು ಚೆನ್ನಾಗಿ ಬದುಕಿಕೊಂಡಿರುವಂತೆ ಪ್ರಯತ್ನಿಸುವುದು ಎಲ್ಲರ ಕರ್ತವ್ಯ. ಓದುವ ಆಶೆಯುಳ್ಳ-ಕೊಳ್ಳಲಾರದ ಸಿರಿವಂತರು ಜಯಕರ್ನಾಟಕವನ್ನು ತರಿಸಿಕೊಳ್ಳದೆ ಇದ್ದಾರೆ. ಓದುವ ಅಭಿರುಚಿಯಿಲ್ಲದ ಸಿರಿವಂತರು ಒಳ್ಳೆ ಕೆಲಸಕ್ಕಾಗಿ ಭಾಷೆಗಾಗಿ ದಾನವೆಂದು ತಿಳಿದಾದರೂ ಜಯಕರ್ನಾಟಕಕ್ಕೆ ನೆರವೀಯಬೇಕೆಂದು ವಿನಯದ ಕೋರಿಕೆ.

### ಬರೆಹಗಾರರಿಗೆ

ತಮ್ಮ ಬರೆಹಗಳು ಬೇಗ ಬೇಗನೆ ಪ್ರಕಟವಾಗುವುದಿಲ್ಲವೆಂದು ಜಯಕರ್ನಾಟಕದ ಮೇಲೆದಯೆಯಿಟ್ಟುಕೊಳ್ಳಬೇಡಿ. ಯೋಗ್ಯವಾದ ಲೇಖನಗಳಿಗೆಲ್ಲ ಬೇಗನೆ ಎಡೆಯೀಯಬೇಕೆಂದು ನಮ್ಮದೇನೊ ತುಂಬ ಆಶೆ. ಆದರೆ ಅವಕಾಶ ಸಾಕಷ್ಟು ಇಲ್ಲದುದರಿಂದ ನಿರುಪಾಯ

CC-0. Jangamwadi Math Collection. Digitized by eGangotri

ರಾಗಿ ತಮ್ಮ ರೋಷಕ್ಕೋ ಅಸಮಾಧಾನಕ್ಕೋ ಆಗಾಗ ನಾವು ಗುರಿಯಾಗಬೇಕಾಗುತ್ತದೆ. ನಾವಾದರೂ ಏನು ಮಾಡೋಣ? ತಾವೇ ಯೋಚಿಸಿ ನೋಡಿ.

### ಜಯಕರ್ನಾಟಕ ಗ್ರಂಥಮಾಲೆ

ಇನ್ನು ಒಂದು ಪುಸ್ತಕ ಕೊಟ್ಟರೆ ವರ್ಗಣಿದಾರರ ಮೊದಲನೆಯ ವರ್ಷದ ಋಣದಿಂದ ನಾವು ಮುಕ್ತರಾಗುವೆವು. "ಹೊನ್ನ ಕನ್ನಡನಾಡು" ಎಂಬ ಪುಸ್ತಕ ಕೊಡಬೇಕೆಂದಿದ್ದೆವು. ಆದರೆ ಬೇರೆ ಬೇರೆ ಕಾರಣಗಳಿಂದ ಈಗ ಅದಕ್ಕೆ ಪ್ರತಿಯಾಗಿ ಶ್ರೀ. ಬೇಂದ್ರೆಯವರು ಬರೆದ "ಉದ್ಧಾರ" ಎಂಬ ಸಾಮಾಜಿಕ ನಾಟಕವನ್ನು ಕೊಡಬೇಕೆಂದಿದ್ದೇವೆ. ನಾಟಕದ ಅಚ್ಚಿನ ಕೆಲಸವೆಲ್ಲ ಮುಗಿದಿದೆ. ಹೊಲಿಗೆ ಕಟ್ಟುಗಳ ಕೆಲಸವಷ್ಟು ಉಳಿದಿದೆ. ಅದನ್ನು ತೀರಿಸಿ ಬೇಗನೆ ಅವುಗಳನ್ನು ಕಳುಹಿಸುವ ಏರ್ಪಾಡು ಮಾಡುವೆವು. ನಮ್ಮ ಮೇಲೆ ದಯೆಯಿಟ್ಟು ನಮ್ಮ ಆಲಸ್ಯದ ತಪ್ಪನ್ನು ಇದುವರೆಗೆ ತಾಳಿದುದಕ್ಕಾಗಿ ಮಾಲೆಯ ಚಂದಾದಾರರಿಗೆಲ್ಲ ನಮ್ಮ ಕೃತಜ್ಞತೆಯ ವಂದನೆಗಳು.

### ಅಗಲಿಹೋದವರಿಗಾಗಿ ಕಂಬನಿಗಳು

ಕನ್ನಡಿಗರೆಲ್ಲರಿಗೆ ಚಿರಪರಿಚಿತರಾದ ಶ್ರೀ. ಬಿ. ಎಂ. ಶ್ರೀಕಂಠಯ್ಯನವರ ಅಳಿಯಂದಿರಾದ ಶ್ರೀ. ಗುಂಡಪ್ಪನವರು ದಿವಂಗತರಾದುದು ನಮ್ಮ ನಾಡಿಗೆ ದೊಡ್ಡದೊಂದು ಹಾನಿ. ಕೈ. ವಾ. ಗುಂಡಪ್ಪನವರು ಬೆಂಗಳೂರಿನ ಇಂಟರ್ ಕಾಲೇಜಿನಲ್ಲಿ 'ಇಂಗ್ಲಿಷ್ ಲೆಕ್ಚರರ್' ಆಗಿದ್ದರು. ಇನ್ನೂ ತರುಣರು. ನಾಡಿನ ಸೇವೆ ಇವರಿಂದ ಬಹಳವಾಗಿ ಆಗಬೇಕಾಗಿದ್ದಿತು. ಅಷ್ಟರಲ್ಲಿಯೆ ಕಾಲನು ಅವರನ್ನು ಕಟ್ಟಿಕೊಂಡು ಹೋಗಿ ಶ್ರೀ. ಶ್ರೀಕಂಠಯ್ಯನವರನ್ನೂ ಹೆಂಡತಿಮಕ್ಕಳನ್ನೂ ಆಪ್ತಮಿತ್ರರನ್ನೂ ದುಃಖದ ಕಡಲಲ್ಲಿ ಮುಳುಗಿಸಿಬಿಟ್ಟನು. ಭಗವಂತನು ಕೈ. ವಾ. ಗುಂಡಪ್ಪನವರ ಆತ್ಮಕ್ಕೆ ಶಾಂತಿಯನ್ನೀಯಲಿ. ಅವರಿಗಾಗಿ ದುಃಖಿತರಾದವರ ಹೃದಯಕ್ಕೆ ಸಮಾಧಾನವನ್ನುಂಟು ಮಾಡಲಿ.

ಧಾರವಾಡದ ಸುಪ್ರಸಿದ್ಧ ವಕೀಲರಾದ ಶ್ರೀ. ವಿಶ್ವನಾಥರಾವ ಹೇರಲೇಕರ್ ಅವರು ಇದೇ ಫೆಬ್ರುವರಿ ತಿಂಗಳ ಒಂದನೆಯ ತಾರೀಖಿನ ದಿನ ಕೈಲಾಸವಾಸಿಗಳಾದರು. ಶ್ರೀಯುತರು ಜನಸೇವೆಯಲ್ಲಿಯೆ ತಮ್ಮ ಆಯುಷ್ಯವನ್ನು ಸವೆಯಿಸಿದರು. ಧಾರವಾಡದ ಮ್ಯುನಸೀಪಾಲಿಟಿಯಲ್ಲಿ ಅದೆಷ್ಟೋದಿನ ಅಧ್ಯಕ್ಷರಾಗಿ ಕೆಲಸಮಾಡಿ ಹೆಸರು ಹೊಂದಿದವರು.

ಬೆಂಗಳೂರಿನ ಕ. ಸಾ. ಪರಿಷತ್ತಿನಲ್ಲಿ ಕನ್ನಡ ಪಂಡಿತರಾಗಿ ಕೆಲಸಮಾಡಿದ ಶ್ರೀ. ಕಡಬದ ನಂಜುಂಡಶಾಸ್ತ್ರಿಗಳೂ ನಮ್ಮನ್ನಗಲಿ ಹೋದುದು ತುಂಬಾ ವಿಷಾದದ ಸಂಗತಿ. ಪಂಡಿತರು ಕನ್ನಡದ ಪ್ರಾಚೀನಸಾಹಿತ್ಯದಲ್ಲಿ ಅನ್ಯಾದೃಶವಾದ ಪಾಂಡಿತ್ಯವನ್ನು ಪಡೆದವರು. ಕನ್ನಡದಲ್ಲಿ ಇವರು ಬರೆದ ಲೇಖಗಳು ಪರಿಷತ್‌ಪತ್ರಿಕೆಯಲ್ಲಿ ಆಗಾಗ ಪ್ರಕಟವಾಗುತ್ತಲಿದ್ದುವು. ಪರಮಾತ್ಮನು ಈ ಇಬ್ಬರು ಮಹನೀಯರ ಆತ್ಮಕ್ಕೂ ಶಾಂತಿಯನ್ನೀಯಲೆಂದು ನಿರಂತರವಾದ ನಮ್ಮ ಹಾರಯ್ಕೆ.

### ಚಿತ್ರಪರಿಚಯ

ಈ ಸಲದ "ಜಲಾಸಯನ" ಎಂಬ ಚಿತ್ರವನ್ನು ಬರೆದ ಶ್ರೀಮಾನ್ ಬಿ. ಸಿ. ಪೊನ್ನಪ್ಪ ಅವರು ಜಯಕರ್ನಾಟಕದ ವಾಚಕರಿಗೆ ಈಗಾಗಲೇ ಪರಿಚಿತರಾಗಿದ್ದಾರೆ ಇಂತಹ ಶೈಲಿಯ ಎರಡು ಚಿತ್ರಗಳೂ ಈ ಮೊದಲೇ ಜಯಕರ್ನಾಟಕದಲ್ಲಿ ಬಂದಿವೆ. ಈ ಚಿತ್ರದಲ್ಲಿ ತಲೆಯ ಮೇಲಣ ಪಾತ್ರೆ, ಕೈಯೊಳಗಿನ ಬಳೆಗಳು, ಮುಂಗುರಳು, ಬೆಂಬದಿಗಿದ್ದ ಗಿಡದಟೊಂಗೆ, ಜಲಾಶಯದ ಹತ್ತಿರದ ಕಂಟಿ, ನೀರಿನಲ್ಲಿ ಪಡಿಮೂಡಿದ ಹೆಣ್ಣುಮಗಳ ನೆರಳು ಇವೆಲ್ಲವುಗಳ ಸೂಕ್ಷ್ಮಸೂಚನೆಯನ್ನು ಸಿಟ್ಟಿಸಿನೋಡುವಂತಿದೆ.

### ತಿದ್ದುಪಡೆ

(೧) "ಕರುಳಿನ ವಚನಗಳು" ಎಂಬ ಬರೆಹದಲ್ಲಿ ಎರಡನೆಯ ವಚನವಾದ "ಹಂಗು" ಎಂಬುದರ ಆರನೆಯ ಸಾಲಿನಲ್ಲಿ "ಸನ್ನಡಿಯ" ಎಂಬ ಶಬ್ದವನ್ನು "ನಸ್ನುಡಿಯ" ಎಂದು ತಿದ್ದಿಕೊಳ್ಳಬೇಕಾಗಿ ಬಿನ್ನಹ.

(೨) "ಚಲಚ್ಚಿತ್ರ" ಎಂಬ ಲೇಖನದಲ್ಲಿಯ ಕೆಲವು ಇಂಗ್ಲಿಷ್ ಶಬ್ದಗಳಲ್ಲಿ ತಪ್ಪುಗಳು ಉಳಿದಿವೆ. ಅವುಗಳನ್ನು ಕೆಳಗೆ ಕೊಟ್ಟಂತೆ ಸರಿಪಡಿಸಿ ಓದಿಕೊಳ್ಳಬೇಕು.

| ಪುಟ, | ಅಂಕಣ, | ಸಾಲು, | ತಿದ್ದುಪಡೆ. |
|---|---|---|---|
| ೩೦೯ | ೨ | ೧೯ | Rhythm |
| ೩೧೦ | ೧ | ೭ | Horizontal |
| ,, | ೨ | ೪ | Camera |
| ,, | ಟಿಪ್ಪಣಿ | | Stavovorkpitch in the "Cinematographic Annual 1930" |

CC-0. Jangamwadi Math Collection. Digitized by eGangotri

# ಪರಿವಿಡಿ

ವಿ. ಸೂ:— ಬರೆಹಗಾರರೆಲ್ಲರ ಹೆಸರುಗಳ ಹಿಂದೆ "ಶ್ರೀಯುತ" ಎಂದು ಸೇರಿಸಿ ಓದಿಕೊಳ್ಳಬೇಕು.





CC-0. Jangamwadi Math Collection. Digitized by eGangotri



ಲಂಬಾಣಿಗಿತಿ

ಚಿತ್ರಕಾರ—ಶ್ರೀ. ಎ. ಕಮಡೋಳಿ (ಹುಬ್ಬಳ್ಳಿ)

CC-0. Jangamwadi Math Collection. Digitized by eGangotri




ಸಂಪುಟ ೧೦ | ಪ್ರಜೋತ್ಪತ್ತಿ ಸಂವತ್ಸರ, ಹೋಳಿಯ ಹುಣ್ಣಿವೆ
ಚಾಲುಕ್ಯ ವಿಕ್ರಮ ವರ್ಷ ೮೬೧ | ಸಂಚಿಕೆ ೫

# ಗೋರಿ

ವಿದ್ವಾನ್ ಕಡೆಂಗೋಡ್ಲು ಶಂಕರಭಟ್ಟರು ಮಂಗಳೂರು

ಹಾಸಸುಗಿದ ಗಬ್ಬಿನಾಯ
ವೇಷ, ತಳೆವರೇತಕೆ ?
ರೋಷದಿಂದ ಬಿಟ್ಟುಬಾಯ
ಹಲ್ಲ ಮಸೆವರೇತಕೆ ?
ಹೇಸಿಹೋಯ್ತೆ ಮನುಜಜನ್ಮ ?
ಜಂತುಜೀವನಕ್ಕೆ ಮೆಚ್ಚಿ ?
ದೇವರೊಲವ ಸುಡುವ ಕರ್ಮ—
ಇದುವೆ ಧರ್ಮವೆಂಬ ಹುಚ್ಚೆ ?

ಮಿಂಚುಗಳನು ಕಾರುತಿಹುದು
ಹುಬ್ಬಿನೆಡೆಯ ರೋಷವು;
ದೆಸೆದೆಸೆಯ ವಿದಾರಿಸುವುದು
ಜಯದ ಭಯದ ಘೋಷವು ;
ನೀಲ ಕಾಲಮೇಘದಂತೆ
ಕವಚದೊಟ್ಟು ಹಾರಿಮುಂದೆ—
ಪ್ರಲಯವೃಷ್ಟಿ ಸುರಿಯಲೆಂದು
ಮರುಳುಗುಣಿತ ಕುಣಿವರಿಂದು.

ಆವುದೊಂದು ಕಿರಿಯ ಕಿಡಿಯ
ಊದಿ ಕನಲಿಸುತ್ತಲಿ
ಧಗಧಗಿಸುವ ಕಾಡುಗಿಚ್ಚ
ಉರಿಪ ಮಂದಿಯಿದಿರಲಿ
ಪಂದಲೆಗಳ ಧಕ್ಕೆಹೊಡೆದು
ನೆತ್ತರೋಕುಳಿಯಲಿ ನಲಿದು
ಕರುಳ ಮಾಲೆ ಕೊರಳಿಗಿಟ್ಟು
ಮೃತ್ಯುನಾಟ್ಯಕಲಿವರೊಟ್ಟು.

ಗುಡುಗುಡಿಸುವ ಸುಡುವ ಗುಂಡು
ತಾರಗೆಗಳ ಕೆಡಹಿತು.
ವಿಷದ ಗಾಳಿ ಸುಟ್ಟುರೆಯಲಿ
ವಿಶ್ವಜೀವವುಡುಗಿತು.
ನೇಸರೆವೆಯ ತೆರೆಯಲಿಲ್ಲ—
ಚಂದ್ರ ಮುಖವ ತೋರಲಿಲ್ಲ—
ಹೊಗೆಯ ಮಬ್ಬು ಸೃಷ್ಟಿಗೆಲ್ಲ
ವಿಲಯರಾತ್ರಿಯಾದುದಲ್ಲ !

CC-0. Jangamwadi Math Collection. Digitized by eGangotri

ಬೆಳ್ಳಗೆಡೆದ ನೆತ್ತರದಕೊ
ಧರೆಯ ಸುತ್ತುಹರಿವುದು !
ಕಡಿದುಬಿದ್ದ ತಲೆಗಳೋಡು
ಕಮಠನಂತೆ ತೇಲ್ವುದು.

ಅಟ್ಟೆಗಳನು ದೋಣಿಮಾಡಿ–
ಎಲುಬ ಕೂವೆ ಕಂಬಹೂಡಿ–
ಮಸಣದೆಡೆಗೆ ತೇಲಿಬರಲು
ಗೆಲ್ಲವೆಣ್ಣು ಕಾತರಿಪಳು.

ಸೋಲವಾರ್ಗೆ ? ಗೆಲ್ಲವಾರ್ಗೆ ?
ದೈವಗುಣಕೆ ಸೋಲವು.
ಪಾಪದೆರಡು ತೋಳೊಳಿರುವ
ಭೂತಬಲಕೆ ವಿಜಯವು.

ದಿಬ್ಬಣಗಳು ನರಕದೆಡೆಗೆ–
ಶಾಕಿನಿಯರ ಹಬ್ಬದೊಸಗೆ–
ಮಸಣದೊಡೆಯು ಮಾಳ್ಪ ಮದುವೆ;
ಅಲ್ಲಿ ವಿಜಯವನಿತೆ ವಧುವೆ.

ವೀರರೆಂದು ಶೂರರೆಂದು
ಹಾರಿ ಭೇರಿಹೊಡೆಯಿಸಿ;
ಕುಸಿವ ಮನಕೆ ಕೀರ್ತಿಮದವ
ಕುಡಿಸಿ ಕೆಡಿಸಿ ಕುಣಿಯಿಸಿ,

ಧರ್ಮವೆಂದು ನೀತಿಯೆಂದು
ಇಲ್ಲದೊಂದು ನೆವವ ತಂದು
ಜವನಬಾಯ್ಗೆ ತುತ್ತ ತುತ್ತಿ
ಕುಣಿವುದಿದುವೆ ದೇಶಭಕ್ತಿ !

ಹಸುಳೆಹೆಂಗಳಾರನೆರೆಯ–
ರೆಂದು ಕೂಗಿ ಕರೆದರೊ,
ಆರತೋಳತೊಂಗಲೊಳಗೆ
ಸಾವನೋವ ಮರೆದರೊ!

ಅವರಿಗಿತ್ತು ಹೆಣದ ಹೆಸರ,
ಹೆಣ್ಣುಬಾಳ್ಗೆ ಚೆಲ್ಲಿ ಕೆಸರ–
'ಪರದಸುಖ' ವನವರಿಗಿತ್ತು
ನಮಗೆ ಬದುಕುವಾಸೆಯಾಯ್ತು.

ಸುರಿದ ನೆತ್ತರಿಳೆಯ ಹೃದಯ–
ದೊಳಗೆ ಹೆಪ್ಪುಗಟ್ಟಿತು.
ಮುರಿದುಬಿದ್ದ ಎಲುಬಿನೊಪ್ಪು
ದಿನದ ನೆಲೆಯ ಮುಟ್ಟಿತು.

ಆರ ಕರುಣೆ ತೊಳೆವುದಿದನು?
ಆರ ತಪವು ಸುಡುವುದಿದನು?
ಜೀವಗೊಲೆಯ ಹೊಲೆಯಬುದ್ಧಿ
ಆವಯುಗದೊಳಹುದು ಶುದ್ಧಿ ?

ಮಡಿದುಬಿದ್ದ ಕೋಟಿಕೋಟಿ
ವೀರಜನರನೆಬ್ಬಿಸಿ
ಕಣ್ಣನೀರ ತೊಡೆಯಲೆಂದು
ಬರುವರಾರು ಭಾವಿಸಿ ?

ಹಾಡಹೊಸೆದು ನಗೆಯಸೂಸಿ–
ಜಸದ ಸೆರಗ ಬೀಸಿ ಬೀಸಿ–
ವಿಜಯವನಿತೆಯೊಬ್ಬನೆಡೆಗೆ
ಹಾರಿಸೇರ್ವಳವನ ತೊಡೆಗೆ

ಬಡಿಗೆಯಿಂದೆ ಹೊಡೆಯೆ ಬೀಳ್ವ
ಹಣ್ಣಿನಂತೆ ಕೆಡೆದರು;
ಹಣ್ಣಿನೊಳಗೆ ನವೆವ ಹುಳುಗ–
ಳಂತೆ ಬಿದ್ದು ಸತ್ತರು;

ಇಳೆಯ ಕಳೆದು– ಅವರದಾರಿ
ಸಗ್ಗದೆಡೆಗೆ ಹೋಯ್ತು ಸೇರಿ;
ಇರಲಿ ಕೀರ್ತಿಗೊಂದು ಗೋರಿ!
ಅವರಿಗಿನಿತೆ ಜಸದ ಬಾರಿ.

ಬಾಳ್ವೆಯಿರಲು ಸಾವ ಕರೆದು
ನಮ್ಮ ನಾವೆ ಕೊಲುವೆವು;
ಕೊಂದಮೇಲೆ ಹುಡುಕಿ ಹುಡುಕಿ
ಮಸಣದೆಡೆಗೆ ನಡೆವೆವು.

ಸತ್ತಜನಕೆ ಗೋರಿಯೇಕೆ?
ಕೊಲ್ವಜನರ ನೆನಹಿಗಲ್ತೆ ?
ನಮ್ಮ ಕೆಡುಕ ಗೋರಿ ಗೋರಿ
ಗೋರಿಯೊಳಗೆ ಹೇರ್ವವಲ್ತೆ ?

CC-0. Jangamwadi Math Collection. Digitized by eGangotri

# ಭವಿಷ್ಯಹಿತದ ಸಾಧನೆ

ಬರೆದವರು—ಶ್ರೀ ದೊರೆಸ್ವಾಮಿ ಅಯ್ಯಂಗಾರ್ಯರು ಎಂ. ಎ. ಬಿ. ಎಲ್. ಮೈಸೂರು
(ಕಳೆದ ಸಂಚಿಕೆಯಿಂದ ಮುಂದುವರಿದುದು)

ಹಾಗಾದರೆ ಮನುಷ್ಯಸಮಾಜದ ಚರಿತ್ರೆಯೂ ಇದೇ ನಿಯಮದ ಅವಲಂಬನೆಯಿಂದಲೇ ನಡೆದಿರುವುದೇ ? ಮನುಷ್ಯಚರಿತ್ರೆಯ ಉದ್ದೇಶವನ್ನು ಪಂಡಿತರು ಹಲವು ವಿಧವಾಗಿ ಕಲ್ಪನೆ ಮಾಡಿಕೊಂಡಿರುವರು. ಈ ಭಿನ್ನಾಭಿಪ್ರಾಯಗಳನ್ನು ಎರಡು ದೊಡ್ಡ ತರಗತಿಗಳನ್ನಾಗಿ ವಿಂಗಡಿಸಬಹುದು. 'ಮನುಷ್ಯಚರಿತ್ರೆಯಲ್ಲಿ ಪರಂಪರೆಯಾದ ಉತ್ತರೋತ್ತರವಾದ ಅಭಿವೃದ್ಧಿಯು ಕಂಡು ಬರುವುದು' ಎಂಬುದು ಒಂದು ಪಕ್ಷ. ಇವರನ್ನು "ಅಭಿವೃದ್ಧಿವಾದಿ" ಗಳು-ಎಂದು ಕರೆಯಬಹುದು. ತದ್ವಿರುದ್ಧವಾದ ಅಭಿಪ್ರಾಯವುಳ್ಳುದು ಮತ್ತೊಂದು ಪಕ್ಷವು. ಆ ಪಕ್ಷದವರನ್ನು "ಅನಭಿವೃದ್ಧಿವಾದಿ" ಗಳು ಎಂದು ಕರೆಯಬಹುದು. ಉಭಯಪಕ್ಷದಲ್ಲಿಯೂ ಹಲವು ಅಂತಃಪ್ರಭೇದಗಳುಂಟು. ಉದಾಹರಣೆಗಾಗಿ ಇತಿಹಾಸದಲ್ಲಿ ಅಭಿವೃದ್ಧಿಯ ಕ್ಷೀಣತೆಯಾವುದೂ ಕಂಡುಬರುವುದಿಲ್ಲವೆಂದೂ, ಸೃಷ್ಟಿ ಪ್ರಳಯಾದಿ ವಿಕಲ್ಪಗಳು ಸಂಭವಿಸುವುದಿಲ್ಲವೆಂದೂ ಅನಂತಕಾಲಕ್ಕೂ ಏಕಪ್ರಕಾರವಾದ ಸ್ಥಿತಿಯೇ ನಡೆದುಬರುವುದೆಂದೂ ಹೇಳತಕ್ಕ ನಮ್ಮ ಮೀಮಾಂಸಕರ ಮತವು ಅನಭಿವೃದ್ಧಿವಾದದ ಒಂದು ಪ್ರಭೇದವೆನ್ನಬಹುದು. ಇನ್ನು ಕೆಲವರು - ಮುಖ್ಯವಾಗಿ ಮತಧರ್ಮೀಯರು – ಚರಿತ್ರೆಯಲ್ಲಿ ಉತ್ತರೋತ್ತರವಾದ ಕ್ಷೀಣತೆಯು ಮಾತ್ರ ಗೋಚರಿಸುವುದೆಂದು ನಿರೂಪಿಸುವರು. ಇವರ ಅಭಿಪ್ರಾಯದ ಪ್ರಕಾರ ಮನುಷ್ಯರ ಪರಮಾರ್ಥಸ್ಥಿತಿಯು ಭೂತಕಾಲಕ್ಕೆ ಸೇರಿದುದಾಗಿದೆ; ಸದ್ಯದಲ್ಲಿ ಕ್ಷೀಣಪ್ರವಾಹದ ಸೆಳೆತಕ್ಕೆ ಸಿಕ್ಕದೆ ಮಂಗಳವನ್ನು ಪಡೆಯಬೇಕೆನ್ನುವವರು ಪ್ರಾಚೀನ ಕಾಲದ ನಡೆನುಡಿಗಳನ್ನು ಅನುಸರಿಸಬೇಕು. ಮತ್ತೊಂದು ಶಾಖೆಯವರು 'ಕ್ಷೀಣವೃದ್ಧಿಗಳು ಚಕ್ರಾಕಾರವಾಗಿ ಇಳಿಯುತ್ತ ಏರುತ್ತ ಇವೆ' ಎಂದು ಹೇಳುವರು. ಇದು ನಮ್ಮ ಚತುರ್ಯುಗದ ಭಾವನೆಯಲ್ಲಿ ಕಂಡು ಬರುವುದು. ಒಂದು ಪ್ರಕಾರವಾಗಿ ನೋಡಿದರೆ ಮತಧರ್ಮಗಳು ಅಭಿವೃದ್ಧಿವಾದವನ್ನು ಅಂಗೀಕರಿಸುವುದು ಅಸಾಧ್ಯವೆಂದೇ ಹೇಳಬೇಕು: ಇವು ಲೋಕದ ಸೃಷ್ಟಿ-ಸ್ಥಿತಿ-ಪ್ರಳಯಗಳಿಗೆ ದೇವರೇ ಸಾಕ್ಷಾತ್ತಾಗಿ ಕರ್ತನೆಂದು ಹೇಳುವುವು. ಲೋಕಸೂತ್ರವು ದೇವರ ಕೈಯಲ್ಲಿ ಇರುವುದಾದರೆ ದೇವರು ಭವಿಷ್ಯಹಿತಸಾಧನೆಗಾಗಿ ಭೂತ-ವರ್ತಮಾನಗಳ ಹಿತವನ್ನು ಬಲಿಕೊಡುವ ಪ್ರಮೇಯವಾವುದೂ ಇರದು. ಅವನು ಆ ರೀತಿ ಪಕ್ಷಪಾತಮಾಡಲು ಯಾವ ಕಾರಣವನ್ನೂ ಯೋಚಿಸಲಾಗುವುದಿಲ್ಲ. ಲೋಕತಂತ್ರಕ್ಕೂ ದೇವರಿಗೂ ಸಾಕ್ಷಾತ್ತಾಗಿ ಸಂಬಂಧವನ್ನು ನಿರೂಪಿಸದೆ ಇರುವ ಮತಧರ್ಮಗಳಲ್ಲಿ ಈ ಆಕ್ಷೇಪವು ಇರಲಾರದು.

ಅನಭಿವೃದ್ಧಿವಾದವು ಬಹುದೂರ ಪಾಪಧರ್ಮದ ಆಶ್ರಯದಿಂದ ಹುಟ್ಟಿ ಜೀವಿಸುತ್ತಿದೆ- ಎಂದು ಮೇಲಿನ ವಿವರಣೆಯಿಂದ ತಿಳಿದು ಬರುವುದು. ಅಭಿವೃದ್ಧಿವಾದವು ವಿವಿಧಮೂಲದಿಂದ ಹುಟ್ಟಿದ್ದರೂ ಪರಿಣಾಮವಾದದ ನಿರೂಪಣೆಯ ಕಾಲದಿಂದೀಚೆಗೆ ದೃಢಮೂಲವಾಗಿ ಮಹಾಪ್ರಾಬಲ್ಯವನ್ನು ಪಡೆದಿರುವುದು. ಈ ವಾದವನ್ನು ಪ್ರತಿಪಾದಿಸತಕ್ಕವರು ಪ್ರಾಯಶವಾಗಿ ವಿಜ್ಞಾನ (Science) ವನ್ನು ಭೂಷಿಸಿ ಮತಧರ್ಮವನ್ನು ದೂಷಿಸುವರು.

'ಈ ವಿಚಾರವಾಗಿ ನಡೆದಿರುವ ವಾದವು ಏಕಪ್ರಕಾರ

CC-0. Jangamwadi Math Collection. Digitized by eGangotri

ನಡೆದಿಲ್ಲ; ಅದು ಎರಡು ಘಟ್ಟಗಳಾಗಿ ನಡೆದಿದೆ ' ಎಂದು ಬೆಂಜಮಿನ್ ಕಿಡ್ ಎಂಬ ಪಂಡಿತನು ಹೇಳುವನು. ಮೊದಲನೆಯ ಘಟ್ಟದಲ್ಲಿ ಸುಮಾರು ೧೯೦೦ನೆಯ ವರ್ಷದವರೆಗೂ, ಅಭಿವೃದ್ಧಿವಾದಿಗಳು 'ಮನುಷ್ಯ ಇತಿಹಾಸವು ಭೂತ–ವರ್ತಮಾನ ಕಾಲಗಳ ಕಾಳೆಗದ ಕಳ, ಎಂದು ನಿರೂಪಿಸಿದರೇ ಹೊರತು ' ಭವಿಷ್ಯ – ವರ್ತಮಾನಕಾಲಗಳ ಕಲಹಕ್ಷೇತ್ರ'ವೆಂದು ನಿರೂಪಿಸಲಿಲ್ಲ. ಈ ಎರಡನೆಯ ಅಭಿಪ್ರಾಯವು ಮುಂದಲ ಘಟ್ಟಕ್ಕೆ ಸೇರಿದುದು. ಮೊದಲನೆಯ ಘಟ್ಟದಲ್ಲಿ ರಾಷ್ಟ್ರೀಯಶಾಸ್ತ್ರ, ಅರ್ಥಶಾಸ್ತ್ರ, ನೀತಿಧರ್ಮಶಾಸ್ತ್ರ, ಕಲಾಶಾಸ್ತ್ರ ಮುಂತಾದ ಯಾವ ಜಿಜ್ಞಾಸಾಭಾಗವನ್ನು ನೋಡಿದರೂ ವರ್ತಮಾನದ ಮೇಲ್ಮೆಯೇ ಅಭಿವೃದ್ಧಿಯ ಮುಖ್ಯ ಪುರುಷಾರ್ಥವೆಂಬ ಅಭಿಪ್ರಾಯವು ತಲೆಯೆತ್ತಿಕೊಂಡಿರುವುದು. **ಹರ್ಬರ್ಟ್‌ಸ್ಪೆನ್ಸರ್, ಮಿಲ್, ಮಾರ್ಕ್ಸ್, ಕಾಬ್ಡೆನ್** ಮೊದಲಾದವರ ದರ್ಶನಗಳೆಲ್ಲವೂ ಈ ಅಭಿಪ್ರಾಯವನ್ನು ಪುರಸ್ಕರಿಸುತ್ತಿರುವುವು.

ಉದಾಹರಣೆಗಾಗಿ, ಹರ್ಬರ್ಟ್ ಸ್ಪೆನ್ಸರಿನ ದರ್ಶನದ ಕೆಲವು ಮುಖ್ಯ ಸಾರಾಂಶಗಳನ್ನು ಪರೀಕ್ಷಿಸಬಹುದು: (೧) ಪ್ರತಿಯೊಬ್ಬ ವ್ಯಕ್ತಿಯೂ ಪಡೆಯಬಹುದಾದ ಜ್ಞಾನವು ಅವನ ಮತ್ತು ಅವನ ಕುಲ (Race) ದ ವಂಶಾನುಗತವಾದ ಅಭಿಪ್ರಾಯರಾಶಿ ಮಾತ್ರವಾಗಿದೆ, ಇಷ್ಟು ಹೊರತು ಮತ್ತಾವುದೂ ಜ್ಞಾನವಾಗಲಾರದು; ಮನಸ್ಸು ಮತ್ತಾವುದನ್ನೂ ತಿಳಿಯಲಾರದು. ಮನಸ್ಸು ಭೂತ ಮತ್ತು ವರ್ತಮಾನಗಳ ಪ್ರಾಕಾರವನ್ನು ದಾಟಿ ಭವಿಷ್ಯತ್ತಿನಲ್ಲಿ ವಿಹರಿಸಲಾರದು. (೨) ಸಮಾಜಾಭಿವೃದ್ಧಿಯ ಪರಾಕಾಷ್ಠಸ್ಥಿತಿಯು ಯಾವುದೆಂದರೆ–"ಪ್ರತಿಯೊಬ್ಬ ವ್ಯಕ್ತಿಯ ಮತ್ತು ಸಮೂಹದ ಬಾಳೂ ಉದ್ದದಲ್ಲಿಯೂ ಅಗಲದಲ್ಲಿಯೂ ಅತ್ಯಂತ ಪ್ರಶಸ್ಥವಾಗಿರಬಹುದಾದ ಸಾಮಾಜಿಕ ಸ್ಥಿತಿಯು " (ನೀತಿಧರ್ಮ,‡ ೬೮) ಸಮಾಜದಲ್ಲಿ ಸಮುದಾಯದ ಹಿತವು ವ್ಯಕ್ತಿಹಿತಕ್ಕೆ ವಿರುದ್ಧವಾಗಿರಕೂಡದು. ಸ್ಪೆನ್ಸರನು ವ್ಯಕ್ತಿಯ ಅಭ್ಯುದಯವನ್ನು ಮುಖ್ಯವೆಂದು ಭಾವಿಸುತ್ತಾನಲ್ಲದೆ ಸಮುದಾಯವು ಅದಕ್ಕೆ ಸಹಕಾರಿಯಾಗಿ ಅಭಿವೃದ್ಧಿಹೊಂದಬೇಕೆಂದು ನಿರೂಪಿಸುವನು. ಇದು ಪ್ರಕೃತಿಯ ನಿಯಮಕ್ಕೆ ವಿರುದ್ಧವಾದ ಮತವಾಗಿದೆ. (೩) ವ್ಯಕ್ತಿಯ ಕಲ್ಯಾಣಕ್ಕೆ ಬಹುವಾಗಿ ವ್ಯಕ್ತಿಯೇ ಕಾರಣನಾಗಿರುವನು. ಅದನ್ನು ಸರಕಾರವೇ ಮುಂತಾದ ಸಂಸ್ಥೆಗಳು ಅಡ್ಡಿಪಡಿಸದಿರಬೇಕಾದರೆ ವ್ಯಕ್ತಿಸ್ವಾತಂತ್ರ್ಯವೇ ರಾಷ್ಟ್ರದ ಮುಖ್ಯಧರ್ಮವಾಗುವುದು. ಹೀಗೆ ಸ್ಪೆನ್ಸರನ ರಾಷ್ಟ್ರಶಾಸ್ತ್ರವೆಲ್ಲವೂ ವರ್ತಮಾನ ಕಾಲದ ವ್ಯಕ್ತಿಗಳ ಹಿತವನ್ನೇ ಮುಖ್ಯವಾಗಿ ಸಮರ್ಥನೆ ಮಾಡುತ್ತಿದೆ. (೪) ಇವನ ಅರ್ಥಶಾಸ್ತ್ರವೂ ಹಾಗೆಯೇ ಮಾಡುವುದು. ಕೈಗಾರಿಕೆಯೇ ಸಮಾಜಕ್ಕೆ ಮುಖ್ಯ ಪುರುಷಾರ್ಥವೆಂದೂ, ಅದು ಏಕಾಯತ್ತವಾಗಿ ಸ್ಥಾಪಿತವಾದರೆ ಯುದ್ಧಗಳು ನಿಲ್ಲುವುವೆಂದೂ, ಪ್ರಜಾಪ್ರಭುತ್ವವು ನಿಶ್ಚಿಂತವಾಗಿ ಇರಬಹುದೆಂದೂ ಇವನು ನಿರೂಪಿಸುವನು. ಯುದ್ಧವು ಮುಖ್ಯವಾಗಿ ವರ್ತಮಾನಕಾಲದವರಿಗೆ ಅಹಿತಕರವಾಗಿರುವುದು. ಕೈಗಾರಿಕೆಯಿಂದ ಈಗಿನವರಿಗೆ ಹಣ-ಕಾಸು ಚೆನ್ನಾಗಿ ಓಡಾಡಲು ಸಾಧ್ಯ. (೫) 'ಮತಧರ್ಮವು ಪ್ರಾಚೀನ ಮೂಢಾಭಿಪ್ರಾಯಗಳ ಶೇಷ' ಎಂದು ಸ್ಪೆನ್ಸರನು ಹೇಳುವನು. ಆದಿಕಾಲದಲ್ಲಿ ಕನಸಿನ ಭ್ರಮೆಯಿಂದಲೂ ಪ್ರೇತಪೂಜೆಯಿಂದಲೂ ಹುಟ್ಟಿದ ಮತಧರ್ಮವು ಅದ್ಯಾಪಿ ಉಳಿದುಕೊಂಡಿದೆ. ಮತಸಂಸ್ಥೆಗಳ ದ್ವಾರ ಭೂತಕಾಲದ ಆಧಿಪತ್ಯವು ಸಾಗುತ್ತಿದೆ. ರಾಜಕೀಯ ಸಂಸ್ಥೆಗಳಿಗೂ ಮತಸಂಸ್ಥೆಗಳಿಗೂ ನಿತ್ಯ ದ್ವೇಷವಿರಲು ಕಾರಣವೇನು ? ರಾಷ್ಟ್ರವೆಂಬುದು ವರ್ತಮಾನಕಾಲದಲ್ಲಿ ಜೀವಿಸತಕ್ಕ ರಾಜನೆಂಬ ಪ್ರಭುವಿನ ಆಧಿಪತ್ಯಸ್ಥಾನವು. ಮತವೇ ಮೊದಲಾದ ಮತಸಂಸ್ಥೆಗಳು ಬುದ್ಧ, ವ್ಯಾಸ, ವಸಿಷ್ಠ, ಮನು, ಕ್ರಿಸ್ತ, ಮಹಮ್ಮದ ಮೊದಲಾದ ಪ್ರಾಚೀನ ಮೃತಪ್ರಭುಗಳು ಈಗಿನ ಗುರುಗಳೆಂಬ ಪ್ರತಿನಿಧಿಗಳ ಮೂಲಕ ಅಧಿಕಾರಮಾಡತಕ್ಕ ಸ್ಥಾನಗಳಾಗಿವೆ. ಹೀಗೆ, ಸ್ಪೆನ್ಸರನ ಅಭಿಪ್ರಾಯದ ಪ್ರಕಾರ, ಭೂತಕಾಲವೆಂಬ ಭೂತದ ಕೈಯಿಂದ ಪಾರಾಗಿ ವರ್ತಮಾನ ಹಿತವನ್ನು ಸಾಧಿಸುವುದೇ ಪ್ರಗತಿಯ ಲಕ್ಷ್ಯವಾಗಿರುವುದು.

" **ಪ್ರಯೋಜನವಾದ** " (Utilitarianism) ಎಂಬ ತತ್ವವಾದವು ಫ್ರಾನ್ಸು ಇಂಗ್ಲೆಂಡು ದೇಶಗಳಲ್ಲಿ ಒಂದು ವರೆ ಶತಮಾನಕಾಲ (ಸುಮಾರು ೧೯೦೦ರ ವರೆಗೂ) ದರ್ಶನಶಾಸ್ತ್ರ, ರಾಷ್ಟ್ರಶಾಸ್ತ್ರ, ನೀತಿಧರ್ಮಶಾಸ್ತ್ರ, ಅರ್ಥಶಾಸ್ತ್ರ ಇವೆಲ್ಲವನ್ನೂ ಆವರಿಸಿ ಪ್ರಚಾರದಲ್ಲಿತ್ತು.

CC-0. Jangamwadi Math Collection. Digitized by eGangotri

ಇಂಗ್ಲೆಂಡಿನಲ್ಲಿ ಇದಕ್ಕೆ ಮಿಲ್ಲನು ಪ್ರಧಾನ ದರ್ಶನಕಾರನಾಗಿದ್ದನು. ಈ ವಾದದ ಪ್ರಕಾರ, ಸಕಲರಿಗೂ ಸುಖವೇ ಪುರುಷಾರ್ಥವು. ಈ ಸುಖವೆಂಬ ಪ್ರಯೋಜನವು ದೊರೆಯದ ಕೆಲಸದಲ್ಲಿ ಯಾರೂ ಪ್ರವರ್ತಿಸರು. ಸ್ವಪ್ರಯೋಜನಾಪೇಕ್ಷೆಯೇ ಕರ್ಮಪ್ರವೃತ್ತಿಗೆ ಕಾರಣವು. ನೀತಿ ಧರ್ಮವು ಸಹ ಇಂತಹ ಸ್ವಪ್ರಯೋಜನಾಪೇಕ್ಷೆಯಿಂದಲೇ ಹುಟ್ಟುವುದು. "ಬಹುಮಂದಿಯ ಬಹುಸುಖ" ವೇ ನೀತಿಧರ್ಮದ ಧ್ಯೇಯವು. ವ್ಯಕ್ತಿಗಳು ತಮ್ಮ ಪ್ರಯೋಜನವನ್ನು ಸಾಧಿಸಿಕೊಳ್ಳುವುದಕ್ಕಾಗಿ ಸಮಾಜವೂ ರಾಷ್ಟ್ರವೂ ಅವರಿಗೆ ಸಂಪೂರ್ಣಸ್ವಾತಂತ್ರ್ಯವನ್ನು ವಹಿಸಿಕೊಡಬೇಕು. ಹೀಗೆ ಈ ವಾದವು ವ್ಯಕ್ತಿಪ್ರಾಧಾನ್ಯ, ವರ್ತಮಾನಹಿತ ಇವುಗಳನ್ನೇ ಪುರಸ್ಕರಿಸುತ್ತಿರುವುದು. ಬಹುಮಂದಿಯ ಬಹುಪ್ರಯೋಜನದ ಸಾಧನೆಯು ಸಾಧುವೆಂದು ಒಪ್ಪಿದರೂ, ಬಹುಮಂದಿಯು ಮುಂದಕ್ಕೆ ಹುಟ್ಟುವವರಾಗಿರುವುದರಿಂದ ಈ ವಾದವುಸಹ ಭವಿಷ್ಯಹಿತದ ಪ್ರಾಧಾನ್ಯವನ್ನೇ ಪುರಸ್ಕರಿಸಬೇಕಾಗುವುದು.

ಯುರೋಪಿನಲ್ಲಿ ೧೯ನೆಯ ಶತಮಾನವಾದ್ಯಂತವೂ ಅರ್ಥಶಾಸ್ತ್ರವಿದರಲ್ಲಿ ಎರಡು ಪ್ರಬಲಪಕ್ಷಗಳುಂಟಾಗಿದ್ದುವು. ಒಂದು ಪಕ್ಷದವರು ಆರ್ಥಿಕಸ್ವಾತಂತ್ರ್ಯವನ್ನು ವ್ಯಕ್ತಿಗಳಿಗೆ ವ್ಯಾಪಾರ, ಕೈಗಾರಿಕೆ ಮೊದಲಾದ ಸಕಲ ಉದ್ಯೋಗಗಳಲ್ಲಿಯೂ ಸಂಪೂರ್ಣವಾಗಿ ಕಲ್ಪಿಸಿದರೆ ಭೂಮಿಯು ಸ್ವರ್ಗತುಲ್ಯವಾಗಿ ಪರಿಣಮಿಸುವುದೆಂದು ವಾದಿಸುತ್ತಿದ್ದರು. ಭೂತಕಾಲದ ಆರ್ಥಿಕ ಸಂಸ್ಥೆಗಳೆಲ್ಲವೂ ಯುರೋಪಿನಲ್ಲಿ ವ್ಯಕ್ತಿಸ್ವಾತಂತ್ರ್ಯವನ್ನು ನಾಶಪಡಿಸಿ, ಸಮಾಜದ ಅರ್ಥವನ್ನು ಕೆಲಮಂದಿಯ ಮಾನ್ಯವಾಗಿ ಮಾಡಿಬಿಟ್ಟಿದ್ದುದರಿಂದ, ಆರ್ಥಿಕಾಭಿವೃದ್ಧಿಯಾಗಬೇಕಾದರೆ ಈ ಪ್ರಾಚೀನಸಂಸ್ಥೆಗಳೆಲ್ಲವೂ ನಾಶವಾಗಿ ವ್ಯಕ್ತಿಗೆ ಕೈಕಾಲು ಆಡಿಸಲು ಅವಕಾಶವೇರ್ಪಡಬೇಕಾಗಿದ್ದಿತು, ಆದುದರಿಂದ ಈ ಶತಮಾನದ ಪಂಡಿತರು ವ್ಯಕ್ತಿಸ್ವಾತಂತ್ರ್ಯವನ್ನು ಅತಿಶಯೋಕ್ತಿಯಿಂದ ಕೊಂಡಾಡಿ ಭೂತಕಾಲದ ಆಧಿಪತ್ಯವನ್ನು ವರ್ತಮಾನದ ಹಿತಾರ್ಥವಾಗಿ ಕೊನೆಗಾಣಿಸಲು ಹೆಣಗಾಡಿದರು. ಇವರಿಗೆ ವರ್ತಮಾನ—ಭವಿಷ್ಯತ್‌ಕಾಲಗಳ ಹೋರಾಟವು ಗೋಚರವಾಗಲು ಅವಕಾಶವು ಇರಲಿಲ್ಲ. ಈ ವ್ಯಕ್ತಿಸ್ವಾತಂತ್ರ್ಯ ಪಕ್ಷದವರು ಜಯಶೀಲರಾದರೂ ಸಮಾಜದ ಹಿತವನ್ನು ಸರಿಯಾಗಿ ಸಾಧಿಸಲಾಗಲಿಲ್ಲ. ಹಿಂದೆ ಸಮಾಜದ ಅರ್ಥವು ಶ್ರೀಮಂತಕುಲವೆಂಬ ಸಣ್ಣಗುಂಪಿನವರ ಮಾನ್ಯವಾಗಿದ್ದರೆ ಈಗ ಅದು ಮಧ್ಯಮಶ್ರೇಣಿಯ ಒಂದು ಶಾಖೆಯವರ ಕೈಸೇರಿ ಸಕಲ ಸಮಾಜವೂ ಕೆಲವು ದುರಾಶಾಪರರಾದ ವ್ಯಕ್ತಿಗಳ ದಾಸರಾಗುವ ದುಸ್ಥಿತಿ ಬಂದೊದಗಿತು. ಆದುದರಿಂದ ಆರ್ಥಿಕಾಭ್ಯುದಯವು ವ್ಯಕ್ತಿಸ್ವಾತಂತ್ರ್ಯದಿಂದ ಭಂಗಪಡುವುದೇ ಹೊರತು ಪರಿಪೂರ್ಣವಾಗುವುದಿಲ್ಲವೆಂದೂ, ಸಮಾಜದ ಹಿತಾರ್ಥ ವ್ಯಕ್ತಿಗಳ ಸ್ವಾತಂತ್ರ್ಯಾದಿಗಳನ್ನು ಧಾರಾಳವಾಗಿ ಕಸಿದುಕೊಳ್ಳಬೇಕೆಂದೂ, ಅರ್ಥದಲ್ಲಿ ಸ್ವಾಮ್ಯವನ್ನು ವ್ಯಕ್ತಿಗಳಿಗೆ ತಪ್ಪಿಸಿ ಸಮಾಜಕ್ಕೆ ವಹಿಸಿಕೊಡಬೇಕೆಂದೂ, ಅರ್ಥಕಲ್ಪನೆಯನ್ನು ಸಮಾಜವೇ ನಿರ್ವಹಿಸಬೇಕಲ್ಲದೆ ವ್ಯಕ್ತಿಗಳಿಗೆ ಬಿಡಕೂಡದೆಂದೂ, ಸಮಾಜದಲ್ಲಿ ಸಕಲರಿಗೂ ಸಮತುಲ್ಯವಾದ ಅರ್ಥಭೋಗಭಾಗ್ಯವು ದೊರೆಯಬೇಕೆಂದೂ ಮತ್ತೊಂದು ಪಕ್ಷದವರು ವಾದಿಸತೊಡಗಿದರು. ಇವರಿಗೆ "**ಸಮಾಜಸತ್ತಾತ್ಮಕವಾದಿ**" ( Socialists or Communists ) ಗಳು ಎಂದು ಹೆಸರು. ಈ ವಾದಕ್ಕೆ **ಕಾರಲ್ ಮಾರ್ಕ್ಸ್** ( Karl Marx ) ಎಂಬುವವನು ಪೀಠಾಚಾರ್ಯನಾಗಿರುವನು. ಈತನು, ಸಮಾಜದಲ್ಲಿ ವಿದ್ಯೆ, ಮತ, ನೀತಿ, ರಾಜಕೀಯವಿಚಾರ ಮೊದಲಾದ ಅಂಶಗಳೆಲ್ಲಕ್ಕಿಂತಲೂ ಆರ್ಥಿಕಾಂಶವೇ ಪ್ರಧಾನವಾದುದೆಂದೂ, ನಿರ್ಗತಿಕರಾಗಿರುವ ನಿಮ್ನಶ್ರೇಣಿಯವರಿಗೆ ಸಮಾಜದಲ್ಲಿ ಸರ್ವಾಧಿಕಾರ ದೊರೆಯುವುದೇ ಪ್ರಗತಿಯ ಗುರಿ—ಎಂದೂ ನಿರೂಪಿಸುವನು. ಅರ್ಥಕ್ಕೆ ಸರ್ವಪ್ರಾಧಾನ್ಯ ದೊರೆತರೆ ವರ್ತಮಾನಹಿತವೇ ಮುಖ್ಯೋಪಾದೇಯವಾಗುವುದು. ಸಮಾಜಸತ್ತಾತ್ಮಕ ವಾದಿಗಳು ವರ್ತಮಾನಕಾಲದಲ್ಲಿ ಕಷ್ಟಪಡುತ್ತಿರುವ ಕೂಲಿಕಾರರನ್ನೂ ಬಡವರನ್ನೂ ಉದ್ಧರಿಸುವುದೇ ತಮ್ಮ ಮುಖ್ಯ ಲಕ್ಷ್ಯವೆಂದು ಭಾವಿಸಿರುವರು. ಧನಿಕಶ್ರೇಣಿಗೂ ನಿರ್ಗತಿಕವಾದ ನಿಮ್ನಶ್ರೇಣಿಗೂ ಅನಾದಿಯಾಗಿ ಕಲಹವು ನಡೆಯುತ್ತಿರುವುದೆಂದೂ, ನಿಮ್ನರು ಧನಿಕರನ್ನು ಸದೆಬಡಿದು ಸರ್ವಾಧಿಕಾರಿಗಳಾಗಬೇಕೆಂದೂ ಇವರು ಹೇಳುತ್ತಿರುವರು. ಇದು ಭೂತ— ವರ್ತಮಾನ ಕಾಲಗಳ ಹೋರಾಟವನ್ನು ಮಾತ್ರ ಗಮನಿಸುತ್ತಿರುವುದೇ ಹೊರತು ವರ್ತಮಾನ—ಭವಿಷ್ಯತ್ತುಗಳ ಕಲಹವನ್ನು ಅವಗಾಹಿಸುತ್ತಿಲ್ಲ.



CC-0. Jangamwadi Math Collection. Digitized by eGangotri

ಕಾವ್ಯ, ಶಿಲ್ಪ, ಚಿತ್ರ ಮೊದಲಾದ ಕಲೆಗಳಿಗೆ ಸೌಂದರ್ಯವೇ ಲಕ್ಷ್ಯವಷ್ಟೆ. ಕಲೆಯು ಸೌಂದರ್ಯದ ಜತೆಗೆ ನೀತಿಧರ್ಮವನ್ನೂ ಉಪಾಸಿಸುವುದು ಸೂಕ್ತವೇ? ಎಂದು ಯೂರೋಪಿನಲ್ಲಿ ೧೯ ನೆಯ ಶತಮಾನದ ಅಂತ್ಯಭಾಗದಲ್ಲಿ ಒಂದು ದೊಡ್ಡ ಚರ್ಚೆಹುಟ್ಟಿತು. ಕಲೆಗೆ ಸೌಂದರ್ಯವೊಂದೇ ಧ್ಯೇಯವಾಗಿರಬೇಕೆಂದೂ, ನೀತಿಧರ್ಮಬೋಧೆಯನ್ನದು ಬಹಿಷ್ಕರಿಸಬೇಕೆಂದೂ ಹೇಳುವ ಪಕ್ಷವು ಕ್ರಿ. ಶ. ೧೯೦೦ ರ ವರೆಗೂ ಯೂರೋಪಿನಲ್ಲಿ ಪ್ರಾಧಾನ್ಯವನ್ನು ಪಡೆದಿತ್ತು. ಈ ಪಕ್ಷದವರು ಭವಿಷ್ಯಹಿತವನ್ನೇ ಮುಖ್ಯವಾಗಿ ಉಪಲಕ್ಷಿಸತಕ್ಕ ನೀತಿಧರ್ಮವನ್ನು ನಿರಾಕರಿಸಿ ವ್ಯಕ್ತಿಗಳ ತಾತ್ಕಾಲಿಕ ಸಂತೋಷವೇ ಕಲೆಗೆ ಪುರುಷಾರ್ಥವೆಂದು ವಾದಿಸಿದರು.

ಇದುವರೆಗೂ ಹೇಳಿದುದೇನಾಯಿತೆಂದರೆ—ಭವಿಷ್ಯಹಿತಸಾಧನೆ ಎಂಬ ನಿಯಮವು ವ್ಯಾವಹಾರಿಕ ಮತ್ತು ನೀತಿಧರ್ಮದ ನಿಯಮವಾಗಿರುವುದರ ಜತೆಗೆ ಪ್ರಕೃತಿಯ ಚೇತನ ಪರಿಣಾಮಕ್ಕೆ ಮೂಲಾಧಾರಪ್ರಾಯವಾಗಿರುವುದು. ಅಭಿವೃದ್ಧಿವಾದಕ್ಕೆ ಈ ನಿಯಮವೇ ತಳಗಲ್ಲೆಂದು ಹೇಳಬೇಕು. ಸ್ಪೆನ್ಸರ್, ಮಿಲ್ ಮೊದಲಾದ ೧೯ನೆಯ ಶತಮಾನದ ಅಭಿವೃದ್ಧಿವಾದಿಗಳು ಭವಿಷ್ಯಹಿತಪ್ರಾಧಾನ್ಯವನ್ನು-ಪರೋಕ್ಷವಾಗಿ-ಕೊಂಡಾಡಿರುವರೇ ಹೊರತು ಎಷ್ಟುಮಾತ್ರವೂ ವಿರೋಧಿಸುತ್ತಿಲ್ಲ. ಏಕೆಂದರೆ, ಭೂತಹಿತವನ್ನು ವರ್ತಮಾನಹಿತವು ಮೆಟ್ಟಿ ತಲೆಯೆತ್ತಿಕೊಂಡರೆ ಭವಿಷ್ಯಹಿತದ ಪ್ರಾಧಾನ್ಯಕ್ಕೆ ಅರ್ಧದೂರ ಸಹಾಯವಾದಂತಾಗುವುದು. ವಸ್ತುಸ್ಥಿತಿಯಲ್ಲಿ ಲೋಕದ ಸಮಸ್ತದೇಶಗಳಲ್ಲಿಯೂ ವರ್ತಮಾನ ಕಾಲವು ಭೂತಕಾಲದ ಅಡಿಯಾಳಾಗಿರುವುದು; ಸ್ಥೂಲವಾಗಿ ನೋಡಿದರೆ ವರ್ತಮಾನಕಾಲವು ಭೂತಕಾಲದ ಅಂಗವೆಂದೇ ಕಾಣಿಸುವುದು. ಈ ಭೂತ- ಪ್ರಾಧಾನ್ಯವು ಕೊನೆಗಾಣುವವರೆಗೂ ಭವಿಷ್ಯದ ಚಿಂತೆ ಸಹ ಹುಟ್ಟಲಾರದು. ಆದುದರಿಂದ ಭವಿಷ್ಯಹಿತಸಾಧನೆಗೆ ಭೂತಕಾಲದ ಆಧಿಪತ್ಯ ನಿವಾರಣೆಯೇ ಪ್ರಥಮ ಮಾರ್ಗವಾಗಿರುವುದು. ಹಿಂದುಳಿದಿರುವ ದೇಶಗಳಲ್ಲಿಯಂತೂ ಭವಿಷ್ಯಹಿತಸಾಧನೆಯ ಆದ್ಯಂತ ಪ್ರಯತ್ನವೂ ಭೂತಕಾಲದೊಡನೆ ಹೋರಾಡುವುದು ಮಾತ್ರವೇ ಆಗಿದೆ.

ತಾತ್ಕಾಲಿಕವಾದ ಸುಖವನ್ನು ಮುಖ್ಯವಾಗಿ ನೋಡುವುದು ಶರೀರ ಸ್ವಭಾವವು. ಬುದ್ಧಿಜನ್ಯವಾದ ವಿವೇಕದ ಸಹಾಯವಿಲ್ಲದಿದ್ದರೆ ಈ ಇಂದ್ರಿಯ ಸ್ವಭಾವವನ್ನು ನಿಗ್ರಹಿಸಿ ವರ್ತಮಾನಸುಖವನ್ನು ಪರಿತ್ಯಾಗ ಮಾಡಲಾಗುವುದಿಲ್ಲ. ವರ್ತಮಾನ ಹಿತತ್ಯಾಗವು ಭವಿಷ್ಯಹಿತಸಾಧನೆಗೆ ಮಾತ್ರವಲ್ಲದೆ ಭೂತಪ್ರಾಧಾನ್ಯಕ್ಕಾಗಿ ಸಹ ಸಂಭವಿಸಬಹುದು. ಜನರು ಕುರುಡುಬುದ್ಧಿಯ ರೂಢಿಪ್ರಿಯರಾದುದರಿಂದ ಭೂತ-ವರ್ತಮಾನಗಳಿಗೆ ಅವರು ಅಭೇದವನ್ನು ಕಲ್ಪಿಸಿಕೊಂಡು ಜೀವಿಸುವರು. ಈ ಸನ್ನಿವೇಶದಲ್ಲಿ ಭೂತಕಾಲದ ಆಧಿಪತ್ಯ ನಿವಾರಣೆಯೇ ಭವಿಷ್ಯ ಹಿತಸಾಧನೆಯ ಮುಖ್ಯೋಪಾಯವಾಗಿರುವುದು.

೪

ಭವಿಷ್ಯಹಿತಸಾಧನೆಯು ಸಕಲರಿಗೂ ಸತತವಾದ ಧ್ಯೇಯವಾಗುವಂತೆ ಮಾಡುವುದು ಹೇಗೆ? ಇದಕ್ಕೆ ವಿಮರ್ಶಾಬುದ್ಧಿಯ ವ್ಯವಸಾಯವೂ ಆತ್ಮತ್ಯಾಗವೂ ಬೇಕು; ಎಂದು ಹೇಳಿ ಸುಮ್ಮನಾದರೆ ಸಾಲದು. ಈ ವಿಮರ್ಶಾಬುದ್ಧಿಯ ಕೃಷಿಯೂ ಆತ್ಮತ್ಯಾಗವೂ, ಭವಿಷ್ಯಹಿತವನ್ನು ಸಾಧಿಸಬೇಕಾದರೆ, ಯಾವ ಮುಖವಾಗಿ ಪ್ರವಹಿಸಬೇಕು? ಯಾವ ಪ್ರಕಾರವಾಗಿ ಕಾರ್ಯಕ್ಷೇತ್ರದಲ್ಲಿ ವ್ಯವಸ್ಥೆ ಪಡೆಯಬೇಕು? ಯಾವ ಬಗೆಯಾಗಿ ರೂಪುಗೊಳ್ಳಬೇಕು? ಯಾವ ನಿಯಮವನ್ನು ಅನುಸರಿಸಿ ನಡೆಯಬೇಕು? ಈ ಬುದ್ಧಿಕೃಷಿ ಮತ್ತು ತ್ಯಾಗಕಾರ್ಯಗಳು 'ಸಂಸ್ಥಾ ವಿರುದ್ಧ ನಿಯಮ' (Law of Antinomy) ಎಂಬ ನಿಯಮವನ್ನು ಅನುಸರಿಸಿ ನಡೆದರೆ ಭವಿಷ್ಯಹಿತ ಸಾಧನೆಯು ಬಹಳ ಸುಲಲಿತವಾಗಿ ನಡೆಯುವುದು. 'ಸಂಸ್ಥಾ ವಿರೋಧ' ಎಂದರೆ, ಸ್ಥಾಪಿತವಾಗಿರುವ ಸಂಸ್ಥೆಗಳಿಗೆ ಸರ್ವದಾ ವಿಧೇಯತೆಯನ್ನು ಸಲ್ಲಿಸುತ್ತಾ ಬರದೆ, ಎದುರುಬಿದ್ದು ವಿರೋಧಿಸುವುದು ಎಂದರ್ಥ. ಒಂದು ಸಂಸ್ಥೆಗೆ ಸೇರಿದವರು ಅದರ ಕಟ್ಟುಪಾಡುಗಳನ್ನು ಮರ್ಯಾದಿಸದೆ ಹೋದರೆ, ಆ ಸಂಸ್ಥೆಯು ನಷ್ಟವಾಗುವುದು. ಆದರೆ ಇವರು ಯಾವಾಗಲೂ ವಿಧೇಯತೆಯನ್ನು ಸಲ್ಲಿಸಿಬಿಟ್ಟರೆ ಆ ಸಂಸ್ಥೆಯು ನಿತ್ಯಸ್ಥಾಯಿಯಾಗಿ ಬಿಡುವುದು. ಆಗ ಪ್ರಗತಿಯೆಂಬುದು ಸಮಾಜದಲ್ಲಿ ಅದೃಶ್ಯವಾಗುವುದು. ಪ್ರತಿಸಂಸ್ಥೆಯೂ ಒಂದು ಕ್ಲಪ್ತ ಕಾಲಪರಿಸ್ಥಿತಿಯಲ್ಲಿ ಹುಟ್ಟಿ ಪ್ರಯೋಜನಕ್ಕೆ

CC-0. Jangamwadi Math Collection. Digitized by eGangotri

ವಾಗಿ ಕೆಲಸ ಮಾಡುವುದು; ಅಂತಹ ಕಾಲವೂ ಪರಿಸ್ಥಿತಿಯೂ ಭಿನ್ನವಾದ ಮೇಲೆ ಈ ಸಂಸ್ಥೆಯು ಉಪಕಾರಕ್ಕೆ ಪ್ರತಿಯಾಗಿ ಅಪಕಾರವನ್ನೇ ಮಾಡಬಹುದು. ಆದರೆ ಬೇರು ಬಿಟ್ಟುಕೊಂಡ ಸಂಸ್ಥೆಗಳು ಪ್ರಯತ್ನಪಟ್ಟಲ್ಲದೆ ಖಿಲವಾಗುವುದಿಲ್ಲ. ಸಮಾಜದಲ್ಲಿ ಪಿತೃಪ್ರಧಾನಕ ಕುಟುಂಬ (Patriarchal Family) ವೇ ಅಚ್ಚುಕಟ್ಟಾದ ಆದಿ ಸಂಸ್ಥೆಯಾಗಿತ್ತು. ಈ ಕುಟುಂಬಕ್ಕೆ ಸೇರಿದವರು ಈ ಸಂಸ್ಥೆಯ ಏಕಾಧಿಪತ್ಯವನ್ನು ವಿರೋಧಿಸದೆ ಹೋಗಿದ್ದ ಪಕ್ಷಕ್ಕೆ ಸಮಾಜದಲ್ಲಿ ಅದಕ್ಕಿಂತಲೂ ದೊಡ್ಡದಾದ ಬೃಂದ, ಗಣ, ನಗರರಾಜ್ಯ, ದೇಶರಾಜ್ಯ ಮೊದಲಾದ ಸಂಸ್ಥೆಗಳು ಹುಟ್ಟಲಾಗುತ್ತಿರಲಿಲ್ಲ.

ಸ್ಥಾಪಿತವಾಗಿರುವ ಸಂಸ್ಥೆಗಳ ಸಂರಕ್ಷಣೆಯು ಮಾತ್ರ ತನ್ನ ಕರ್ತವ್ಯವೇ ? ಅಥವಾ ಆ ಸಂಸ್ಥೆಗಳನ್ನು ದಾಟಿ ಹೋಗಿ ಭವಿಷ್ಯಹಿತದ ಪ್ರಾಧಾನ್ಯವನ್ನು ಪರಿಪಾಲಿಸುವುದು ತನ್ನ ಕರ್ತವ್ಯವೇ ? ಎಂದು ವ್ಯಕ್ತಿಯು ಯೋಚಿಸಬೇಕು. ಮೊದಲನೆಯದಕ್ಕಿಂತಲೂ ಎರಡನೆಯದು ದೊಡ್ಡ ಧರ್ಮವೆಂದು ಹೇಳಲು ಅಡ್ಡಿ ಇಲ್ಲ. ಏಕೆಂದರೆ, ಭವಿಷ್ಯಹಿತ ಸಾಧನೆಯನ್ನು ವಿಶ್ವಪ್ರಕೃತಿಯೇ ಉಪದೇಶಿಸುತ್ತಿದೆ. ಈ ವಿಶ್ವನಿಯಮವನ್ನು ಅನುವರ್ತಿಸತಕ್ಕ ವ್ಯಕ್ತಿಗೆ, ತಾನು ಸೇರಿರುವ ಸಂಸ್ಥೆಯನ್ನು ವಿರೋಧಿಸುವುದು, ದೊಡ್ಡ ಧರ್ಮವಾಗುವುದು. ಈ ಸಂಸ್ಥೆಗಿಂತಲೂ ಹೆಚ್ಚಾಗಿ ಭವಿಷ್ಯಹಿತವನ್ನು ಸಾಧಿಸತಕ್ಕ ಮತ್ತೊಂದು ದೊಡ್ಡ ಸಂಸ್ಥೆಯನ್ನು ಇದರ ಸ್ಥಾನದಲ್ಲಿ ಸ್ಥಾಪಿಸಬೇಕೆಂಬುದೇ ಇಂತಹ ಸಂಸ್ಥಾವಿರೋಧಕ್ಕೆ ಉದ್ದೇಶವಾಗಿರುವುದು. ಕೆಲಕಾಲ ಜನರು ಪಿತೃಪ್ರಧಾನಕ ಕುಟುಂಬ ಸಂಸ್ಥೆಯು ಖಿಲವಾದರೆ ಲೋಕವೇ ಮುಳ್ಳಾಗಿ ಹೋಗುವುದೆಂದು ಎಣಿಸಿದ್ದರು; ಅದನ್ನು ಹೇಗಾದರೂ ರಕ್ಷಿಸುವುದೇ ತಮ್ಮ ಪರಮ ಕರ್ತವ್ಯವೆಂದು ತಿಳಿದಿದ್ದರು. ಆ ಬಳಿಕ ಜನರು ತಮ್ಮ ರಕ್ಷಣಾರೂಪವಾದ ಕರ್ತವ್ಯವನ್ನು ಈ ಸಂಸ್ಥೆಗಿಂತಲೂ ಶ್ರೇಷ್ಠವಾದ ಗಣ (Tribe) ವ್ಯವಸ್ಥೆಗೆ ಒಯ್ದರು. ಕ್ರಮವಾಗಿ ಇದು ನಗರರಾಜ್ಯ ಎಂಬ ವ್ಯವಸ್ಥೆಗೂ ಅನಂತರ ದೇಶರಾಜ್ಯ ಎಂಬ ಸಂಸ್ಥೆಗೂ ಏರಿತು. ಈಗ ಬಹು ಜನರು ತಮ್ಮ ಜನಾಂಗ (Nation) ಅಥವಾ ರಾಷ್ಟ್ರ (State) ಎಂಬ ಸಂಸ್ಥೆಯನ್ನು ಸಂರಕ್ಷಿಸುವುದು ತಮ್ಮ ಪರಮಾರ್ಥವೆಂದು ತಿಳಿದಿರುವರು.

ದೇಶದ್ರೋಹ, ಶಾಸನೋಲ್ಲಂಘನೆ ಇವುಗಳಿಗಿಂತಲೂ ತುಚ್ಛವಾದ ಪಾಪವೂ ಅಕೃತ್ಯವೂ ಮತ್ತೊಂದಿಲ್ಲವೆಂದು ಇವರು ಹೇಳುವರು. ಸ್ವದೇಶ, ಸ್ವರಾಜ್ಯ, ಸ್ವಧರ್ಮ ಮೊದಲಾದ ಸಂಸ್ಥೆಗಳ ಕ್ಷೇಮಕ್ಕಿಂತಲೂ ಅಖಿಲ ಪ್ರಪಂಚದ ಕ್ಷೇಮವು ಭವಿಷ್ಯಹಿತದ ದೃಷ್ಟ್ಯಾ ದೊಡ್ಡದೆಂದು ಎಲ್ಲಿಯೋ ಕೆಲವು ವಿಶಾಲಮತಿಗಳೂ ಉದಾರ ಹೃದಯರೂ ಮಾತ್ರ ತಿಳಿದಿರುವರು. ಅಖಿಲಪ್ರಪಂಚವನ್ನು ಒಂದೇ ಸಮಷ್ಟಿ ಸಂಸ್ಥೆಯಲ್ಲಿ ಅಡಗಿಸಬೇಕೆಂದು ಹಾರೈಸತಕ್ಕವರು ತದ್ವಿರುದ್ಧವಾಗಿರಬಹುದಾದ ತಮ್ಮ ರಾಜ್ಯದ ಕಟ್ಟುಪಾಡುಗಳಿಗೆ ವಿಧೇಯತೆಯನ್ನು ಸಲ್ಲಿಸದೆ ವಿರೋಧಿಸುವುದು ನ್ಯಾಯವೇ ಆಗಿರುವುದು. ಮತ್ತೆ ಕೆಲವರು ಇಂತಹ ಸಂಸ್ಥೆಯಿಂದಲೂ ಮುಂದೆ ಸಾಗಿ ಚೈತನ್ಯವರ್ಗವನ್ನೆಲ್ಲಾ ಒಂದೇ ಸಂಸ್ಥೆಯನ್ನಾಗಿ ಭಾವಿಸಿ ತಮ್ಮ ಕರ್ತವ್ಯವನ್ನು ನಿರ್ಧರಿಸಿಕೊಳ್ಳಬಹುದು. ಇನ್ನು ಕೆಲವರು ಮತ್ತೂ ಮುಂದುವರಿದು ಸಂಪೂರ್ಣ ವಿಶ್ವವನ್ನೇ ಒಂದೆಂದು ಎಣಿಸಿ ಅದರ ಮಹಾನಿಯಮಗಳನ್ನೇ ತಮ್ಮ ಸಾಕ್ಷಾತ್ತಾದ ಧರ್ಮವೆಂದು ಕಲ್ಪಿಸಿಕೊಳ್ಳಬಹುದು. ಈ ವಿಶ್ವವನ್ನೇ ಕೆಲವರು ದೇವರೆಂದು ಕರೆಯುವುದುಂಟು; ಮತ್ತೆ ಕೆಲವರು ದೇವರು ಇದರ ಪ್ರಭು ಎನ್ನುವುದುಂಟು. ಆ ವಿಚಾರ ಇಲ್ಲಿ ಅಪ್ರಕೃತ. ನಮ್ಮ ಭಾವನೆಗೆ ಸಾಧ್ಯವಾಗುವ ಕಟ್ಟಕಡೆಯ ಮಹಾಸಂಸ್ಥೆಯನ್ನು ಬಹುಮಂದಿ ದೇವರು ಎಂಬ ಹೆಸರಿನಿಂದ ಸಂಬೋಧಿಸುವರು. ಇಂತಹ ದೇವರೊಬ್ಬನನ್ನು ಹೊರತು ಮತ್ತಾರನ್ನೂ ವಿಧೇಯಿಸುವುದಿಲ್ಲವೆಂದೂ ಮನಸ್ಸಾಕ್ಷಿಯಾದ ಆತನಿಂದ ಪ್ರೇರಿತವಾದ ಧರ್ಮಕ್ಕೆ ವಿರುದ್ಧವಾದ ಯಾವ ಕಾಯಿದೆಯನ್ನೂ ಅಂಗೀಕರಿಸುವುದಿಲ್ಲವೆಂದೂ, ಹಾಗೆ ದೇವರೂ ಆತ್ಮನೂ ಒಪ್ಪದಂತಹ ಕಾಯಿದೆಗಳನ್ನು ವ್ರತಸಂಕಲ್ಪದಿಂದ ವಿರೋಧಿಸಿ ಉಲ್ಲಂಘಿಸುವುದೇ ತಮ್ಮ ಕರ್ತವ್ಯವೆಂದೂ ಭಾವಿಸತಕ್ಕ ಸಮರ್ಥರನ್ನು ಲೋಕದಲ್ಲಿ ಯಾವ ಸಂಸ್ಥೆಯೂ ಯಾವ ವಿಧಿಯೂ ಕಟ್ಟಿ ಹಾಕಲಾರದು. ಇಂಥವರನ್ನು ಅವಧೂತರು, ಜೀವನ್ಮುಕ್ತರು, ಯೋಗಸಿದ್ಧರು ಎಂದು ಮುಂತಾಗಿ ಮತಧರ್ಮಗಳು ಕರೆಯುವುವು; ಮಹಾತ್ಮಾ ಗಾಂಧಿಯವರು ಅವರಿಗೆ ಸತ್ಯಾಗ್ರಹಿಗಳು ಎಂದು ನಾಮಕರಣ ಮಾಡಿರುವರು.

CC-0. Jangamwadi Math Collection. Digitized by eGangotri

ಆದರೆ ಸಕಲ ಸಂಸ್ಥೆಗಳನ್ನೂ ವಿರೋಧಿಸಿ ಮುರಿದು ಹಾಕಿ ಮನುಷ್ಯಜಾತಿಗೆ ವ್ಯವಸ್ಥೆಯನ್ನೇ ತಪ್ಪಿಸಿ ಮೃಗಾವಸ್ಥೆಯನ್ನು ಕಲ್ಪಿಸುವುದಾಗಲಿ, ಸಮರ್ಥರಾದ ವ್ಯಕ್ತಿಗಳು ವ್ಯವಸ್ಥೆಗೆ ಮೀರಿ ಹೊರಟು ಹೋಗಿ ಮನುಷ್ಯರೊಡನೆ ಸೇರದೆ ಕಾಡಿಗೆ ಹೋಗಿ ಬಿಡುವುದಾಗಲಿ, ಸ್ವಾರ್ಥಪರರಾದವರು ಅನಾಯಕತೆಯ ಹುಚ್ಚಾಟದಲ್ಲಿ ದಾಂಧಲೆ ನಡೆಯಿಸುವುದಾಗಲಿ ಈ ಸಂಸ್ಥಾವಿರೋಧ ನಿಯಮಕ್ಕೆ ಉದ್ದೇಶವಾಗಿಲ್ಲ. ವ್ಯಕ್ತಿಗಳು ತಾವು ಇರತಕ್ಕ ಸಂಸ್ಥೆಗಿಂತಲೂ ವಿಸ್ತಾರವಾಗಿ ಭವಿಷ್ಯಹಿತವನ್ನು ಸಾಧಿಸತಕ್ಕ ಮತ್ತೊಂದು ದೊಡ್ಡ ಸಂಸ್ಥೆಯನ್ನು ಕಟ್ಟುವುದಕ್ಕೆ ಮಾತ್ರವೇ ತಮ್ಮ ಹಳೆಯ ಸಂಸ್ಥೆಯನ್ನು ವಿರೋಧಿಸಬೇಕು. ಇಂತಹ ಉದ್ದೇಶವೂ ಶಕ್ತಿಯೂ ಇರತಕ್ಕವರು ಮಾತ್ರವೇ ಈ ನಿಯಮವನ್ನು ಅನುಷ್ಠಿಸಲು ಅಧಿಕಾರಿಗಳಾಗಿರುವರು.

ಈ ನಿಯಮವು ಉಪಾದೇಯವಾದರೆ ಲೋಕ[illegible] ಯಾವ ಸಂಸ್ಥೆಯೂ, ಯಾವ ಅಭಿಪ್ರಾಯವೂ, [illegible] ಆಚಾರವೂ ಸ್ಥಿರವಾಗಿ ಇದ್ದು ಬರಕೂಡದು. [illegible] ಅಭಿಪ್ರಾಯವನ್ನೂ ಪೂರ್ಣಸತ್ಯವೆನ್ನಲಾಗು[illegible] "ಸತ್ಯೆಯ ಚಕ್ರವು ಇದ್ದ ಸ್ಥಳದಲ್ಲಿಯೇ ತಿರುಗು[illegible] ಮುಂದಮುಂದಕ್ಕೆ ಉರುಳುತ್ತಾ ಹರಿಯುತ್ತ[illegible] ಎಂದು ಬೆಂಜಮಿನ್ನ ಕಿಡ್ಡನು ಹೇಳುತ್ತಾನೆ. [illegible] ಧ್ಯೇಯವು ಅವಿಚ್ಛಿನ್ನವಾದ ಪರಿಣಾಮ ಅಥವಾ [illegible] (Becoming) ವೇ ಹೊರತು ಕೇವಲ ಸತ್ತೆ (Be[illegible] ಮಾತ್ರವಲ್ಲ. ವೈಯಕ್ತಿಕ ದೃಷ್ಟಿಯಿಂದ ಸನ್ಯಾ[illegible] 'ಭವ' ವು ಬಂಧನವೆಂದು ಹೇಳುತ್ತ ಸ್ಥಾಣ[illegible] ಅಭವನೆಂದು ಕರೆಯುತ್ತಿದ್ದರು. ಸಾಮುದಾ[illegible] ದೃಷ್ಟಿಯಿಂದ 'ಭವ'ವೇ ವಿಮೋಚನೆ-ಅಥವಾ [illegible] ಎನ್ನಿಸುವುದು.

## ಕವಿಗಳು ಜಗತ್ತಿಗೆ ಹೇಳುವ ಮಾತು

ಶ್ರೀ. ರಂಗನಾಥ ಮುಗುಳಿ ಎಂ. ಎ.

ದೇವನಾದೇಶವಿಲ್ಲದಿರೆ
ನಾವು ನಡೆಯೆವು ಸವಿನುಡಿಯ ಹಾದಿಯಲ್ಲಿ ।
ಭಾವನೆಯು ದೇವದೂತನಿರೆ
ನಾವು ನಡೆವೆವು ಸವಿನುಡಿಯ ಹೆಜ್ಜೆಯಲ್ಲಿ ॥ ೧ ॥

ಜಸವೆಂಬ ನಾಡರಸಿ ತನ್ನ
ಒಸಗೆ ಬೀರುವ ಹೊಸತು ಆಳುಗಳ ಕಳುಹಿ ।
ಹಸನಾದ ಮುಕುಟವನು ಕೊಡೆಯು
ವಶವಾಗದಾವು ನಡೆವೆವು ನಮ್ಮ ಪಥದಿ ॥ ೨ ॥

ಅವಳು ತಾನೆಯೆ ಬಂದು ನಮ್ಮ
ಕವನಗಳ ಕಾಲರಥದಲ್ಲಿ ಸಾಲಿರಿಸಿ ।
ಅವ ಮೆರಸಿದರೆ ಮೆರಸಬಹುದು
ನಾವು ನಡೆವೆವು ನಮ್ಮ ನಿಜದಾರಿಯಲ್ಲಿ ॥ ೩ ॥

ಸತ್ಯ ಸೌಂದರ್ಯ ಆನಂದ
ಪ್ರೀತೆಂಬ ಕಲೆಯ ಗಾರುಡಿಯೆಂಬ ಕನ್ನೆ ।
ಈ ತೆರದಿ ಐವರೂ ಕೂಡಿ
ನಿತ್ಯ ನಡೆಸುವರೆಮ್ಮ ಕೈಜೋಲಿಯಲ್ಲಿ [illegible]

ನಾವು ನಡೆವುದು ದೇವನಾಜ್ಞೆ
ನಾವು ಪಡೆವುದು ದೇವನಾನಂದಲಹರಿ ।
ನಾವೆಂಬುವುದು ಬರಿಯ ಮಾತು ।
ದೇವನೇ ಈ ಎಲ್ಲ ಕವನಗಳ ಬರೆವ [illegible]

CC-0. Jangamwadi Math Collection. Digitized by eGangotri

# ನರನ ಸ್ಥಾನವು
# ನಕ್ಷತ್ರಗಳಿಗಿಂತ ಮೇಲೆಯೇ ?

ಶ್ರೀಯುತ ಪ್ರಾ. ತಿ. ನಾರಾಯಣಯ್ಯಂಗಾರ್ಯರು ಎಂ. ಎ.

'ರಾಬರ್ಟ್ ಲೂಯಿ ಸ್ಟೀವನ್‌ಸನ್ನ'ಸು ಒಂದು ಬಾರಿ ನಕ್ಷತ್ರಗಳು ಕಣ್ಣಿಗೆ ಸಣ್ಣಗೂ ಬುದ್ಧಿಗೆ ವಿಸ್ತಾರವಾಗಿಯೂ ತೋರಿಬರುವುದನ್ನು ಕಂಡು ಅವು ಮನುಷ್ಯನ ಅದೃಷ್ಟಸ್ವಭಾವಗಳ ಇಬ್ಬಗೆಯಾದ ಸ್ವರೂಪವನ್ನು ಸೂಚಿಸುತ್ತವೆ ಎಂದು ಹೇಳಿರುವನು.

ನಕ್ಷತ್ರಗಳ ಹೋಲಿಕೆಗೆ ನರನು ಈಡಲ್ಲ; ಇವನು ಅಣುವಿಗಿಂತ ಅಲ್ಪ. ಅವು ಅಪಾರವಾದುವು. ಅಂತೆಯೇ ವಿಶ್ವವನ್ನಳೆದ ಗಜಗಡ್ಡಿಯಿಂದಲೇ ಅಳೆದು ನೋಡುವಲ್ಲಿ ಭೂಮಿಯು ಕೂಡ ಇದಕ್ಕಿಂತ ಹೆಚ್ಚು ಪ್ರಧಾನವಾಗಿ ತೋರುವುದಿಲ್ಲ. ಮನುಷ್ಯನ ಜೀವಮಾನದಲ್ಲಿ ಕಳೆದು ಹೋಗುತ್ತಿರುವ ಪ್ರತಿಕ್ಷಣದಲ್ಲಿಯೂ ಒಂದೊಂದು ಜ್ಯೋತಿರ್ಮಂಡಲದಿಂದಲೂ ಮನುಷ್ಯಕೋಟಿಯು ಊಹಿಸಲೂ ಆಗದಷ್ಟು ಜ್ವಾಲಾರೂಪವಾದ ಶಕ್ತಿಯು ಹೊರಜಿದ್ದು ಆಕಾಶವನ್ನು ಸೇರುತ್ತದೆ. ನಮ್ಮ ಸೂರ್ಯನಂತಹ ಕೇವಲ ಸಾಧಾರಣ ನಕ್ಷತ್ರವು ನಿಮಿಷ ಒಂದಕ್ಕೆ ೨೫ ಕೋಟಿ ಟನ್ನುಗಳಷ್ಟು ಪದಾರ್ಥ ( Matter ) ವನ್ನು ಹೊರಚೆಲ್ಲುತ್ತಿದೆ; ಇದನ್ನು ಹೊರದೂಡುವ ಜ್ವಾಲಾಮಯ ಶಕ್ತಿಯು ಒಳಗಡಗಿರುವ ಅಗಾಧವಾದ ಅಗ್ನಿ ಕುಂಡಗಳಿಂದ ಪೋಷಿತವಾಗುತ್ತಿದೆ. ಈ ಅಂತರಾಗ್ನಿಯ ಉಷ್ಣವು ಅಷ್ಟಿಷ್ಟಲ್ಲ—ಕೋಟ್ಯಂತರ ಡಿಗ್ರಿಗಳವರೆಗೂ ಹೋಗುತ್ತದೆ. ನಕ್ಷತ್ರಗಳೆಂಬ ಈ ಶಕ್ತಿಕೇಂದ್ರ ( Power house ) ಗಳಿಂದ ಎಲ್ಲವನ್ನೂ ಆಹುತಿ ತೆಗೆದುಕೊಳ್ಳುವದಕ್ಕೋ ಎಂಬಂತೆ ಒಂದೇಸವನೆ ಸುರಿಯುತ್ತಿರುವ ಈ 'ಜಲಪಾತ' ಗಳ ಬಳಿಯಲ್ಲಿ ಮನುಷ್ಯನು ನಿಂತಿದ್ದೇ ಆದರೆ ಎಷ್ಟು ಪೀಚಾಗಿ ತೋರುವನು! ಅಸಂಖ್ಯಾತವಾದ ಈ ಹಗ್ಗುಲುಮೆಗಳ ಚಿತ್ರವನ್ನೂಹಿಸಲಾದರೂ ಅವನಿಂದ ಸಾಧ್ಯವೆ! ನರನು ಅವುಗಳನ್ನು ಎಣಿಸಿ ನೋಡಲು ಪ್ರಯತ್ನಪಟ್ಟಿರುವನು; ಆದರೆ ಇವನ ಸಾಧನಸಾಮಗ್ರಿಗಳ ಕೌಶಲ್ಯವು ಹೆಚ್ಚಿದಂತೆ ಅವುಗಳ ಸಂಖ್ಯೆಯೂ ಹೆಚ್ಚುತ್ತಿದೆ. ಹೀಗಿರುವಲ್ಲಿ ಭೂಮಿಯ ಮೇಲೆ ಎಷ್ಟು ಮಂದಿ ಇರುವರೋ ಅಷ್ಟು ಜನಕ್ಕೂ ತಲೆಗೆ ಒಂದೊಂದು ನಕ್ಷತ್ರಗಳಿರುವುವು ಎಂಬ ತಿಳಿವುಂಟಾಗಲು ಬಹಳ ಕಾಲ ಹಿಡಿಯಲಾರದು.

ಮನುಜನು ಈ ತೇಜೋರಾಶಿಗಳೊಡನೆ ಸರಿಸಾಟಿಯಾಗಿ ಹೋಲಿಸಲ್ಪಡಲು ಎಷ್ಟು ಮಾತ್ರದವನು? ಒಂದು ವೇಳೆ ಅವನಿಗೆ ಎಷ್ಟು ಶಕ್ತಿಯಿದ್ದರೂ ಅವುಗಳನ್ನು ಸಮೀಪಿಸುವ ಕೆಚ್ಚೆದೆಯು ತಾನೆ ಎಲ್ಲಿ? ಏಕೆಂದರೆ, ಅವುಗಳಿಗೆ ೧೦ ಲಕ್ಷ ಮೈಲುಗಳಷ್ಟು ದೂರದಲ್ಲಿರುವಾಗಲೇ ಜೀವಿಯು ಅವುಗಳ ಪ್ರಚಂಡ ಬೇಗೆಗೆ ಸಿಲುಕಿ ಸೀದು ಸೀಕರಿಯಾಗುವುದು. ಸೃಷ್ಟಿಯ ಮಹದದ್ಭುತ ವಸ್ತುಗಳಾದ ಈ ನಕ್ಷತ್ರಗಳು ಒಂದುದೃಷ್ಟಿಯಿಂದ ವಿಶ್ವಕ್ಕೆ ತಾಯ್ಕುಲುಮೆಗಳಾಗಿವೆ- ಎನ್ನಬಹುದು. ಅವುಗಳ ಚಟುವಟಿಕೆಯೇ ವಿಶ್ವದ ಜೀವನಾಧಾರ, ಅವುಗಳ ವ್ಯಾಪಾರವೇ ವಿಶ್ವಪ್ರಗತಿಗೆ ಮೂಲ. ಆದರೆ ನಮಗೆ ತಿಳಿದಂತೆ ಜೀವನವು – ಮಾನವನ ಮತ್ತು ಇತರ ಜೀವಿಗಳ ಜೀವನವು – ನಕ್ಷತ್ರಗಳ ದುರ್ಭರತೇಜಸ್ಸಿನಿಂದ ದೂರವಾಗಿದ್ದಲ್ಲದೆ ಸಾಧ್ಯವಿಲ್ಲ. ಜೀವಿಗಳು ಅವುಗಳ ಅತಿ ದಾರುಣವಾದ ಬೇಗೆಯನ್ನು ತಾಳಲಾರವು.

ಜ್ಯೋತಿಶ್ಶಾಸ್ತ್ರಜ್ಞನು 'ಟೆಲಿಸ್ಕೋಪ್' ಎಂಬ ದೂರದರ್ಶಕ ಯಂತ್ರದಲ್ಲಿ ಕಣ್ಣಿಟ್ಟು 'ಇಷ್ಟು ದೂರದಲ್ಲಿರುವುದೇನು? ಇನ್ನಷ್ಟು ದೂರದಲ್ಲಿ ಯಾವ ಗೋಳವಿದ್ದೀತು? ಮತ್ತಷ್ಟು ದೂರದಲ್ಲಿ ಕಾಣುವುದೇನು?' ಎಂಬುದಾಗಿ ವಿಶ್ವವನ್ನು ಪರೀಕ್ಷಿಸುತ್ತಲೇ ಇರುವನು. ಒಂದೊಂದು ವೇಳೆ ಅನಂತಾಕಾಶದ ಅಂತರಾಳದಲ್ಲಿ ಬಹುದೂರ ನೋಡಿ


CC-0. Jangamwadi Math Collection. Digitized by eGangotri

ದರೂ ಆತನಿಗೆ ಏನೂ ಕಾಣದೆ ಎಲ್ಲವೂ ಬರಿದಾಗಿ ನಿಶ್ಯಬ್ದ ವಾಗಿರುವಾಗ ತದೇಕಧ್ಯಾನಪರನಾದ ಆತನಿಗೆ ಈ ಪ್ರಪಂಚವು ಅಪಾರವಾದುದೆಂದೂ, ನಿರ್ಜನವಾದ ಈ ವಿಶ್ವದಲ್ಲಿ ತಾನೊಬ್ಬನೇ ಒಂಟಿಯಾಗಿರುವೆನೆಂದೂ ಯೋಚನೆಯುಂಟಾಗುತ್ತದೆ. ಈ ಭಾವಗಳು ಅವನ ಕಣ್ಣೆದುರಿಗೆ ಭಯಂಕರ ಚಿತ್ರಗಳನ್ನು ತಂದೊಡ್ಡುತ್ತವೆ. ಅವನ ದೃಷ್ಟಿಯು ಎಲ್ಲರ ಕಣ್ಣಿಗೂ ಬೆಳಗುತ್ತಿರುವ ಚುಕ್ಕಿಗಳನ್ನು ವಿಾರಿ ಮುಂದೆ ಹೋಗುವುದು. ಆಗ ಅವನಿಗೆ ಕ್ಷೀರಪಥ (Milkyway) ವೆಂದೆನಿಸುವ ಮಂಜಿನ ಮುಸುಕು ನಿರಾವರಣವಾಗಿ ಅಲ್ಲಿಯ ನಕ್ಷತ್ರಜಾಲವು ದೃಗ್ಗೋಚರವಾಗುತ್ತದೆ. ಇದರಿಂದ ಅವನು ಲಕ್ಷೋಪಲಕ್ಷ ಹೊಸ ನಕ್ಷತ್ರಗಳನ್ನು ಕಂಡಂತಾಯಿತೇ ವಿನಾ ದುರ್ಬೀನಿನಲ್ಲಿ ಕಣ್ಣಿಟ್ಟು ಹುಡುಕಾಡುವುದು ಮಾತ್ರ ಕೊನೆಮುಟ್ಟಿದಂತಾಗಲಿಲ್ಲ. ಮುಂದೆ ಹೋಗುತ್ತಾ ಹೋಗುತ್ತಾ ಆತನಿಗೆ ಆಕಾಶವೆಂಬ ಅನಂತಸಾಗರದಲ್ಲಿ ನಕ್ಷತ್ರರೂಪ ಜ್ಯೋತಿರ್ಮೇಘಗಳೂ, ಅಲ್ಲಲ್ಲಿಯೇ ದ್ವೀಪಗಳಂತಿರುವ ವಿಶ್ವಗಳೂ ಕಾಣುತ್ತಲೇ ಇರುತ್ತವೆ. ಅನೇಕ ವೇಳೆ ಆತನ ಕಣ್ಣಿಗೆ ಅನೇಕ ಜ್ವಾಲಾಮುಖಿಗಳ ಮಹಾಬಿಲ (Crater) ಗಳೂ ಕಾಣುವುವು — ಒಂದೊಂದು ಬಿಲವೂ ಪ್ರಪಂಚವನ್ನೇ ನುಂಗಿಕೊಳ್ಳುವಷ್ಟು ವಿಸ್ತಾರವುಳ್ಳದು! ಅವುಗಳಿಂದ ಆಚೆಗೆ ಇರುವುದಾದರೂ ಏನು? ಇಂತಹ ಅನಂತತೆಯನ್ನು ನೆನಸಿಕೊಳ್ಳುವುದೇ ಸಾಕು, ದಿಗ್ಭ್ರಮೆ ಹಿಡಿದುಬಿಡುತ್ತದೆ. ಇದರ ಜತೆಗೆ ಪ್ರತಿಯೊಂದು ಗೋಳದಿಂದಲೂ ಕೊನೆಯೇ ಕಾಣದಷ್ಟು ಶಕ್ತಿಯು ತಡೆಯಿಲ್ಲದೆ ಹೊರಸೂಸುತ್ತಿದೆಯೆಂಬ ಭಾವನೆ ಸೇರಿದರಂತು ಸರಿಯೇ ಸರಿ, ಮನುಜನು ಶುದ್ಧಾಂಗನಾಗಿ ಬೆಪ್ಪಾಗುವನು.

ಇದಿಷ್ಟು, ತೃಣಪ್ರಾಯನಾದ ಮನುಷ್ಯನು ಘನ ವೈಶಾಲ್ಯವನ್ನೂ ಅನಂತವೈಭವಯುಕ್ತವಾದ ಗೋಳಯಂತ್ರಗಳನ್ನೂ ಬೆಕ್ಕಸಬೆರಗನೆ ನೋಡುತ್ತಿರುವುದು—ನರನಕ್ಷತ್ರಗಳ ಸಾಮ್ಯದ ಒಂದು ದೃಷ್ಟಿಯಾಯಿತು. ಅವುಗಳ ಸ್ವರೂಪವನ್ನು ಊಹಿಸಿಕೊಳ್ಳಲೂ ಇವನಿಗೆ ಸಾಧ್ಯವಲ್ಲ ಎಂದು ತೋರಬಹುದು. ಆದರೆ ವಸ್ತುತಃ ಇರುವುದು ಹಾಗಲ್ಲ; ಅವನ ಧೈರ್ಯಕ್ಕೆ ಕುಂದಿಲ್ಲ, ಅವನ ಊಹೆಗೆ ತಡೆಯಿಲ್ಲ, ಅವನ ಶಕ್ತಿಗೆ ಮಿತಿಯಿಲ್ಲ! ಅವನು ಅವುಗಳ ಅನಂತತೆಯನ್ನು ಒಪ್ಪನು. ಅದರ ಬದಲು ಅವುಗಳನ್ನು ಅಳೆದುನೋಡುವ ಕಾರ್ಯಭಾರಕ್ಕೆ ಕೈಹಾಕ್ಕುವನು. ಅವನ ನಕ್ಷತ್ರಶಾಲೆಯೇ ಅವನ ರಾಜ್ಯ. ಅಲ್ಲಿ ಕುಳಿತು ಅವನು ತನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ ಹೊಸವಿಷಯಗಳನ್ನು ಹುಡುಕಲು ಯತ್ನಿಸುವ... ನಕ್ಷತ್ರಗಳು ಎಣಿಸಲಾರದಷ್ಟಿರಬಹುದು, ಆದರೆ ತಾ... ಮಾತ್ರ ಅವುಗಳನ್ನೆಣಿಸದೆ ಬಿಡನು. ಅವುಗಳ ಕ್ಷೇ... ಶಾಖವೂ ಅಳತೆ ವಿಾರಿರಬಹುದು, ಆದರೆ ಅವುಗಳನ್ನು... ಅಳತೆಮಾಡಿಯೇ ಸಿದ್ಧ. ಇವನ ಅಲ್ಪಾಯುಸ್ಸನ್ನೇ... ಹೋಲಿಸಿ ನೋಡುವಲ್ಲಿ ಅವುಗಳ ಬದುಕು ಶಾಶ್ವತ... ಬಹುದು. ಆದರೆ ಅವನ ಬಾಳು ಅವನಿಗೆ ಜ್ಞಾನವನ್ನು... ಬುದ್ಧಿಯನ್ನೂ ಇತ್ತಿದೆ. ಇದರಿಂದ ಮನುಷ್ಯನು... ನಕ್ಷತ್ರಗಳೆರಡರ ಜೀವನವನ್ನು ಕುರಿತು ಧ್ಯಾನಿಸಿ... ನಕ್ಷತ್ರವು ಹುಟ್ಟಿ, ಬೆಳೆದು, ಪ್ರಾಯಶಃ ತನ್ನ ಗತಿ... ನೆಂಬ ಪರಿಜ್ಞಾನವೂ ಇಲ್ಲದೆ ಕೊನೆಮುಟ್ಟ... ಮಾನವನಾದರೋ ಪರಸ್ಪರ ತಮ್ಮಿಬ್ಬರ ಪರಿಮಿತಿ... ಬಲ್ಲನಲ್ಲದೆ ನಕ್ಷತ್ರದ ಅಸ್ತಿತ್ವವು ಕೂಡ ತನ್ನ ಜ್ಞಾ... ಶಕ್ತಿಯ ಮೂಲಕವಾಗಿಯೇ-ಎಂದು ಗರ್ವವಾಣಿ... ಸ್ಥಾಪಿಸಿಕೊಳ್ಳಬಹುದು. ನರನು ತನ್ನ ಬಾಳ್ವೆ... ನಕ್ಷತ್ರಜೀವನಕ್ಕೆ ಮೇಲೆಂದು ನಿಸ್ಸಂಕೋಚ... ಭಾವಿಸಬಹುದು. ಅದು ಅವನಿಗೆ ತಕ್ಕ ಗೌರವ... ಹೊರತು ಗರ್ವವನ್ನು ಸೂಚಿಸುವುದಲ್ಲ. ಇಷ್ಟು... ಹಕ್ಕುದಾರಿಯನ್ನು ಕೇಳುವುದು ಅವನ ಯೋಗ್ಯ... ವಿಾರಿದುದೇ?

'ಜೀವನವೆಂದರೇನು' ಎಂಬ ಪ್ರಶ್ನೆಯನ್ನಿತ್ತಿರು... ರನೇಕರು; ಆದರೆ ಯಾವುದು ಜೀವನವಲ್ಲವೋ ಅ... ಎಲ್ಲರೂ ಹೇಳುವರೇ ವಿನಾ ಅದರಿಂದ ಮುಂದಕ್ಕೆ ... ಹೋದಂತೆ ಕಾಣಲಿಲ್ಲ. ಆಧುನಿಕ ನಕ್ಷತ್ರಶಾಸ್ತ್ರಜ್ಞ... ಲ್ಲೊಬ್ಬನಾದ 'ಸರ್ ಜೇಮ್ಸ್ ಜೀನ್ಸ್' ಎಂಬವನು ... ಈಗ ಚರ್ಚಿಸುತ್ತಿರುವ ನಕ್ಷತ್ರಶಕ್ತಿ ಮತ್ತು ಮನು... ಬುದ್ಧಿಶಕ್ತಿ ಇವೆರಡರ ತಾರತಮ್ಯವನ್ನು ಕುರಿತು ಪ್ರ... ಮಾಡಿರುವನು. ಅವನ ವಿಚಾರಸರಣಿಯು ಹೀಗಿರುತ್ತ... ಸೃಷ್ಟಿಕಾರ್ಯವು ಯಾವುದೋ ಒಂದು ಗುರಿಯನ್ನಿ... ಕೊಂಡೇ ಮುಂದೆ ಸಾಗುತ್ತಿರಬೇಕು; ಸೃಷ್ಟಿ... ಸಮಸ್ತವಸ್ತುಗಳ ಆ ಪರಮಾವಧಿಯಾವುದು-... ನವೇ? ಸೃಷ್ಟ್ಯಾದಿಯಿಂದ ಈ ವರೆಗೆ ನಡೆದು...

CC-0. Jangamwadi Math Collection. Digitized by eGangotri

ಕೋಟ್ಯಂತರ ವರುಷಕಾಲದಲ್ಲಿ ಜೀವರಾಶಿ ಶೂನ್ಯವಾದ ಅನೇಕ ನಕ್ಷತ್ರುಗೋಳಗಳಲ್ಲಿ ಜರುಗುತ್ತಿರುವ ನಿತ್ಯ ಪರಿವರ್ತನವೂ, ಅವುಗಳಿಂದ ಹೊರಚೆಲ್ಲಿ ವಂಧ್ಯಾಕಾಶ (Desert Space) ವನ್ನು ಸೇರಿ ವ್ಯರ್ಥವಾಗುತ್ತಿರುವ ಅಪಾರಶಕ್ತಿಯೂ 'ಜೀವನ'ಕ್ಕೆ ಅವಕಾಶವನ್ನುಂಟು ಮಾಡಿಕೊಡಲು ನಡೆದ ಬರೀ ಪ್ರಯತ್ನಗಳೇನು? ಅಥವಾ ಈ ಎಲ್ಲ ವ್ಯಾಪಾರಗಳಿಗೂ ಪರಮೋತ್ಕೃಷ್ಟವಾದ ಬೇರೊಂದು ಅದ್ಭುತ ಧ್ಯೇಯವಿದ್ದು 'ಜೀವನ'ವೆಂಬುದು ಉಪಫಲ( Bye-product )ಮಾತ್ರವೋ? ಇಲ್ಲವೆ ವಿಶ್ವವು ಅಗ್ನಿಸಮಶಕ್ತಿಯಿಂದ ಕೂಡಿ, ಹೊಸಹುರುಪಿನ ಯೌವನದಲ್ಲಿರುವಾಗ ಜೀವರಾಶಿಗಳನ್ನು ಧರಿಸುವ ಸಹನೆಯಿಲ್ಲದೆ,ವೃದ್ಧಾಪ್ಯದಲ್ಲಿ ತಾನು ಶಕ್ತಿಗುಂದಿರಲು ಮೇಲೆ ಹಾಯ್ದು ಬರುವ ಜೀವಿಗಳನ್ನು ತಡೆಯುವ ಸಾಮರ್ಥ್ಯವಿಲ್ಲದ ಕಾರಣ ಅವುಗಳಿಗೆ ನಿರ್ವಾಹವಿಲ್ಲದೆ ಎಡೆಗೊಟ್ಟಿರುವುದೋ? ಅಥವಾ ನಮ್ಮ ನಮ್ರತೆಯನ್ನೆಲ್ಲಾ ಮೂಲೆಗೊತ್ತಿಟ್ಟು "ಬುದ್ಧಿಯು ತನ್ನ ಪರಿಶೀಲನಶಕ್ತಿಯಿಂದ ಮಹಾಗಾತ್ರವುಳ್ಳ ನಕ್ಷತ್ರರಾಶಿಗಳನ್ನು ಜ್ಯೋತಿರ್ಮೇಘಗಳನ್ನೂ ಅನಂತವ್ಯಾಪ್ತಿಯುಳ್ಳ ಕಾಲಮಾನಗಳನ್ನೂ ನಿರ್ಮಾಣಮಾಡಿರುವುದೇ ಹೊರತು ಇವಾವುವೂ ಅದರ (ಬುದ್ಧಿಯ) ಅಸ್ತಿತ್ವಕ್ಕೆ ಕಾರಣವಾಗಿಲ್ಲ. ಇಂತಹ ಬಲಿಷ್ಠವಾದ ಬುದ್ಧಿಶಕ್ತಿಗೆ ಜನ್ಮಸ್ಥಾನವಾದ ಜೀವನವೊಂದೇ ಸತ್ಯವಾಗುದು" ಎಂದು ಹೇಳಿ ಬಿಡಬಹುದೋ? ಅಂತು ಇದೊಂದು ಭಾರೀ ಸಮಸ್ಯೆ.

ವಸ್ತುತಃ, ಜಗತ್ತಿನಲ್ಲಿ ಜೀವಿಗಳಿಗೆ ಆವಾಸಯೋಗ್ಯವಾದ ಪ್ರದೇಶವು ಅತಿಸ್ವಲ್ಪವಾಗಿರುತ್ತದೆ. ಮೇಲೆ ಹೇಳಿದ ದೊಡ್ಡ ಸಮಸ್ಯೆಯನ್ನು ಕೂಡಿದಮಟ್ಟಿಗೂ ಬಿಡಿಸಬೇಕಾದರೆ ನಮಗೆ ಈ ವಿದ್ಯಮಾನವೇ ಶರಣು. ನಕ್ಷತ್ರಗಳು ಯಾವ ಮೂಲವಸ್ತುಗಳಿಂದ ನಿರ್ಮಿತವಾಗಿವೆಯೋ ಆ ವಸ್ತುಗಳು ಕಾಲಕ್ರಮದಲ್ಲಿ ಮಾರ್ಪಾಡು ಹೊಂದಿ ಉಷ್ಣ, ಪ್ರಕಾಶವೇ ಮುಂತಾದ ಯಾವುದಾದರೊಂದು ರೂಪದಲ್ಲಿ ಶಕ್ತಿಯನ್ನು ತಮ್ಮ ಸುತ್ತುಮುತ್ತಿನ ಪ್ರದೇಶಗಳಿಗೆ ಹಂಚುತ್ತಾ ಬಂದಿವೆ. ಈ ಹಂಚೋಣವು ಕೋಟಿಕೋಟಿ ವರ್ಷಗಳ ಪರ್ಯಂತ ನಡೆದನಂತರವೇ ನಿವಾಸಯೋಗ್ಯವಾದ ಒಂದು ಹಿಡಿ ತಣ್ಣನೆಯ ಬೂದಿಯುಂಟಾಗಲು ಸಾಧ್ಯವಾದೀತು. ಆಗಲೂ ಈ ಭಸ್ಮಾವಶೇಷವು ತೀರ ತಣ್ಣಗಾಗಲಿ ಅತ್ಯುಷ್ಣವಾಗಲಿ ಆಗಿರಬಾರದು. ಇಲ್ಲದಿದ್ದರೆ ಅದರ ಮೇಲೆ ಜೀವಿಸುವುದಸಾಧ್ಯ. ಮನುಷ್ಯನದು ಯಾವಾಗಲೂ ಸಂಶಯಪ್ರಕೃತಿ, ಕೆದಕುತ್ತಿರುವುದೇ ಅವನ ಸ್ವಭಾವ. ಅದರಲ್ಲೂ ೨೦ನೆಯ ಶತಮಾನದ ಮಾನವನೆಂದರೆ ಈ ವಿಷಯಗಳಲ್ಲಿ ಹಿಂದಿನವರನ್ನು ಮೀರಿಸಿರುತ್ತಾನೆ. ಇಂಥವನ ಪರೀಕ್ಷೆಗೆ ಸಿಲುಕಿ ಬ್ರಹ್ಮಾಂಡದಲ್ಲಿ ನಮ್ಮ ಭೂಮಿಯೊಂದು ಹೊರತು ಮಿಕ್ಕ ಗ್ರಹ-ನಕ್ಷತ್ರಾದಿಗಳಲ್ಲಿಯ ಆವಾಸಯೋಗ್ಯ ಪ್ರದೇಶಗಳು ಕಡಿಮೆಯಾಗಿಬಿಟ್ಟಿವೆ.

"ಪ್ರತಿ ನಕ್ಷತ್ರವೂ ಒಂದು ವಿಪರೀತ ವಿಶಾಲವಾದ ವಾಯುರೂಪಿನ ಮಂಡಲ. ಇದು ಮಹತ್ತರವಾದ ಶಾಖವನ್ನುಳ್ಳುದು. ಈ ಮಂಡಲಕ್ಕೆ ಬುಗುರಿಯಂತೆ ತನ್ನನ್ನು ತಾನೇ ತೀವ್ರವೇಗದಿಂದ ಸುತ್ತುವ ಶಕ್ತಿಯುಂಟು. ಶಾಖವಾದ ವಸ್ತುವು ತನ್ನಲ್ಲಿಯ ಉಷ್ಣಾಂಶವನ್ನು ತನ್ನ ಸುತ್ತಮುತ್ತಲಿನ ಪ್ರದೇಶಗಳಿಗೆ ಕೊಟ್ಟು ತಾನು ಕಡಿಮೆ ಶಾಖವುಳ್ಳುದಾಗುತ್ತಾ ಕ್ರಮೇಣ ತನ್ನ ನೆರೆಹೊರೆಯ ಪ್ರದೇಶದ ಉಷ್ಣಕ್ಕೂ ತನ್ನಲ್ಲಿಯ ಉಷ್ಣಕ್ಕೂ ಯಾವ ವ್ಯತ್ಯಾಸವೂ ಇಲ್ಲದಂತೆ ಸಮಧಾತುವಾಗುವುದು ಸ್ವಭಾವ. ಇದರಂತೆ ನಕ್ಷತ್ರವು ಕೂಡ ತನ್ನಲ್ಲಿಯ ಉಷ್ಣಾಂಶವನ್ನು ಕಾಲಕ್ರಮದಲ್ಲಿ ಕಳೆದುಕೊಳ್ಳುತ್ತದೆ. ಇದು ತಣ್ಣಗಾದಂತೆಲ್ಲಾ ಗಾತ್ರದಲ್ಲಿ ಕುಗ್ಗುತ್ತದೆ, ಕುಗ್ಗಿದಂತೆಲ್ಲಾ ಅದರ ವೇಗವು ಹೆಚ್ಚುತ್ತದೆ. ಈ ವ್ಯಾಪಾರಗಳು ಆಗುತ್ತಿರುವಾಗಲೇ ತಣ್ಣಗಾದ ನಕ್ಷತ್ರದ ಮೇಲ್ಮೊಗಟೆಯು ಸಿಪ್ಪೆಸುಲಿಯುವಂತೆ ಸುಲಿದು, ನಕ್ಷತ್ರವು ವೇಗವಾಗಿ ತಿರುಗುತ್ತಿರಲು, ದೂರಕ್ಕೆ ಎಸೆಯಲ್ಪಡುವುದು. ಹೀಗೆ ನಕ್ಷತ್ರದಿಂದ ಬೇರ್ಪಟ್ಟ ಪದಾರ್ಥವೇ ಆರಿ, ಕುಗ್ಗಿ, ಗ್ರಹವಾಗಿ ಪರಿಣಮಿಸುತ್ತದೆ. ಗ್ರಹವು ನಕ್ಷತ್ರದ ಮರಿ." ಗ್ರಹಗಳು ಉಂಟಾದ ಬಗೆಯನ್ನು 'ಲ್ಯಾಪ್ಲೇಸ್'ಎಂಬುವನು ಈ ಪರಿಯಾಗಿ ಪ್ರತಿಪಾದಿಸಿರುವನು. ೧೯ನೆಯ ಶತಮಾನದ ವೈಜ್ಞಾನಿಕರು ಈ ಅಭಿಪ್ರಾಯಕ್ಕೆ ಸ್ವಲ್ಪ ಹೆಚ್ಚು ಕಡಿಮೆ ಸಮ್ಮತಿಸಿ ಅಷ್ಟರಲ್ಲಿ ತೃಪ್ತರಾಗಿದ್ದರು. ಈ ಪ್ರಕಾರವಾಗಿ ಭೂಮಿ, ಬುಧ, ಶುಕ್ರ, ಅಂಗಾರಕ, ಶನಿ, ಗುರು, ಯುರೆನಸ್, ನೆಪ್ಚೂನ್ ಎಂಬೀ ಗ್ರಹಗಳೆಲ್ಲವೂ, ಸಂಕೋಚ ಹೊಂದುತ್ತಲೇ ಇರುವ ಸೂರ್ಯನು ತನ್ನ ಹೊರವಲಯಗಳನ್ನು ಸುಲಿದೆಸೆಯುವುದರಿಂದಲೆ ಉಂಟಾ-

CC-0. Jangamwadi Math Collection. Digitized by eGangotri

ದುವು. ಶನಿಗ್ರಹದ ಸುತ್ತಲೂ ಉಂಗುರಗಳಂತಿರುವ ವಲಯಗಳು ಇದಕ್ಕೆ ನಿದರ್ಶನವಾಗಿವೆ.

“ ಸೂರ್ಯನಿಗೆ ಹೇಗೋ ಹಾಗೆಯೇ ಮಿಕ್ಕ ನಕ್ಷತ್ರಗಳಿಗೂ ಗ್ರಹಗಳನ್ನು ಉದುರಿಸುತ್ತಿರುವುದೇ ತಮ್ಮ ಜೀವಮಾನದ ನಿತ್ಯಕರ್ಮ; ಸೂರ್ಯನಂತೆಯೇ ಪ್ರತಿಯೊಂದು ನಕ್ಷತ್ರವೂ ತನ್ನನ್ನು ಸುತ್ತಿಕೊಂಡಿರುವ ಜಗತ್ಸಂಸಾರಕ್ಕೆ ಶಾಖವನ್ನೂ ಬೆಳಕನ್ನೂ ಈಯುತ್ತಲಿದೆ.” ಎಂಬುದು ೧೯ನೆಯ ಶತಮಾನದವರ ಮತ. ವಸ್ತುತಃ ಇದು ನಿಜವೇ ಆಗಿದ್ದ ಪಕ್ಷದಲ್ಲಿ ಆಗ ಗಣನಾತೀತವಾದ ಪ್ರಪಂಚಗಳಲ್ಲಿಯ ಅನೇಕ ಗ್ರಹಗಳು ನಮ್ಮ ಪುಟ್ಟ ಭೂಗೋಳದಲ್ಲಿರುವಂತೆಯೇ ಜಲ, ಉಷ್ಣ ಮೊದಲಾದ ಜೀವನಾಧಾರವಸ್ತುಗಳನ್ನು ಆವಾಸಕ್ಕೆ ಅನುಕೂಲವಾದ ಪರಿಮಾಣದಿಂದ ಕೂಡಿರುತ್ತಿದ್ದುವು- ಎಂದ ಹಾಗೆ. ಭೂಮಿಯ ಮೇಲೆ ‘ಜೀವನ’ವು ಹೇಗೆ ಮೊದಲಾಯಿತು– ಎಂಬ ವಿಷಯದಲ್ಲಿ ಅನೇಕ ಒಣವಾದಗಳು ಹುಟ್ಟಿಕೊಂಡಿವೆ. ನಕ್ಷತ್ರಗಳೂ ಇತರ ಗ್ರಹಗಳೂ ಆಕಾಶದಲ್ಲಿ ವೇಗವಾಗಿ ಸುತ್ತುತ್ತಿರುವಾಗ ಅವುಗಳ ಶರೀರದಿಂದ ಸಣ್ಣ ಸಣ್ಣ ಚೂರುಗಳು ಬೇರ್ಪಟ್ಟು ವಾಯುಮಾರ್ಗವಾಗಿ ಬಂದು ನಮ್ಮ ಭೂಮಿಯ ಮೇಲೆ ಬೀಳುತ್ತವೆಂದೂ, ಅವುಗಳೇ ಧೂಮಕೇತು, ಉಲ್ಕಾಪಾತ, ಶಿಲಾಪಾತ ಮುಂತಾದ ಹೆಸರಿನಿಂದ ಪ್ರಸಿದ್ಧಿಹೊಂದಿವೆಯೆಂದೂ ಎಲ್ಲರೂ ಬಲ್ಲರು. ಹೀಗೆಯೇ ಪ್ರಾಣಿಗಳು ವಾಸಮಾಡುತ್ತಿರುವ ಯಾವುದೋ ಒಂದು ಗೋಳದಿಂದ ಹೊರಟ ಧೂಮಕೇತುವಿನೊಡನೆ ಅಲ್ಲಿಯ ಒಂದು ಜೀವರೇಣುವು ಸಾಗಿ ಬಂದು ನಮ್ಮ ಭೂಮಿಯನ್ನು ಸೇರಿ ಇಲ್ಲಿಯ ಜೀವರಾಶಿಗಳಿಗೆ ಆದಿಬೀಜವಾಗಿ ಪರಿಣಮಿಸಿರಬಹುದು– ಎಂಬುದೂ ಒಂದು ಮತ. ಆದರೆ ಇದೆಲ್ಲವೂ ಹುರುಳಿಲ್ಲದ ಬರೀ ಮಾತು.

ಈ ತೆರನಾದ ನಂಬುಗೆಗಳು ೧೯ನೆಯ ಶತಮಾನದಲ್ಲಿಯೇ ಮಾಸಿಹೋಗಲು ಆರಂಭವಾಯಿತು. ೨೦ನೆಯ ಶತಮಾನದಲ್ಲಿಯಾದರೋ ಇವಕ್ಕೆಎಡೆಯೇ ಇಲ್ಲ,ಅಥವಾ ಇದ್ದರೂ ಬಹು ಕೊಂಚ. ಗ್ರಹನಿರ್ಮಾಣಕಾರ್ಯವು ನಕ್ಷತ್ರಗಳ ಬಾಳಿನಲ್ಲಿ ಕೇವಲ ಆಕಸ್ಮಿಕವೂ ಅಪೂರ್ವವೂ ಆದ ಸಂಗತಿ ಎಂಬುದು ಆಧುನಿಕ ವೈಜ್ಞಾನಿಕರಸಿದ್ಧಾಂತ. ಇದು ಎಷ್ಟು ಅಪೂರ್ವವೆಂದರೆ:– ನಕ್ಷತ್ರಗಳು ಉಂಟಾಗಿ ಕೋಟಿಗಟ್ಟಲೆ ವರುಷಗಳಾಗಿದ್ದರೂ, ಅವುಗಳಲ್ಲಿ ... ಸಂಖ್ಯೆಯ ನಕ್ಷತ್ರಗಳು ಮಾತ್ರ ಗ್ರಹಗಳಿಂದ ಕೂ... ಈಗ ಆ ಗಳಿಗಾಗಿರುವ ವಯಸ್ಸು ಅಷ್ಟಿಷ್ಟಲ್ಲ-ಎಷ್ಟೋ ಯುಗಗಳಾಗಿವೆ, ಆದಕ್ಕೆ ಇನ್ನು ಸೂಪರಷ್ಟು ದೀ... ಕಾಲ ಬದುಕಿದರೂ ಅವು ಬಂಜೆಯಾಗಿರುವುದೇ ... ಜೀವನಕ್ಕೆ ಅಯೋಗ್ಯವಾದ ಬೆಂಗಾಡುಗಳಾಗಿರುವ... ಸರಿ. ಅನೇಕ ನಕ್ಷತ್ರಗಳು ಒಂದು ಗ್ರಹಕ್ಕಾದರೂ ... ಮೀಯದೆ ಬದುಕಿ ಸಾಯಬೇಕು; ಅಥವಾ ಗ್ರಹ... ಜನಿಸಿದುವು ಎಂದಿಟ್ಟುಕೊಳ್ಳೋಣ-ಅವುಗಳು ಹುಟ್ಟು... ಮುಂಚೆಯೇ ನಕ್ಷತ್ರಗಳು ತಣ್ಣಗೆ ಆರಿ ಗೇಳ... ಹೋಗಿರುವುದರಿಂದ ಅವುಗಳ ಮಕ್ಕಳೆನಿಸಿದ ಗ್ರಹ... ಜೀವಿಗಳಿಗೆ ಆಶ್ರಯವನ್ನೀಯುವಷ್ಟು ಶಕ್ತವಾ... ದಿಲ್ಲ. ಇಂತಹ ಗ್ರಹಗಳ ಮೇಲೆ ಯಾವ ಪ್ರಾಣಿ... ಬದುಕಲಾರದು.

ಪ್ರತಿಭಾಸಂಪನ್ನರಾದ ಪೂರ್ವಿಕರು ಜಗತ್ತು ... ಜೀವರಾಶಿಗಳಿಂದ ತುಂಬಿ ಜಗಿಯುತ್ತಿದೆ... ಆಧುನಿಕರು ಚಿತ್ರಿಸುವ ಜಗದ್ರೂಪವೇ ಬೇರೆ. ... ಬುದ್ಧಿಗೆ ಪ್ರಪಂಚವು ಕೊನೆಯೇ ಇಲ್ಲದ, ಅಮಾ... ಗೋಚರವಾದ ಯಾವುದೋ ಒಂದು ದಾ... ಮುಂದಾಗುತ್ತಿದೆಯೆಂದೂ, ಆದಕ್ಕೆ ತನ್ನ ಪ್ರ... ಣದ ಮೇಲೆ ದೃಷ್ಟಿಯೇ ಹೊರತು ಜೀವರಾಶಿಗಳ ... ಗಮನವೇ ಇಲ್ಲವೆಂದೂ ತೋರುವುದು. ಒಂದು ... ಪ್ರಪಂಚದಲ್ಲಿ ಬಾಳಿನ ಕುರುಹು ಅಲ್ಲಲ್ಲಿಯೇ ... ಬಂದರೂ “ ಅದು ಕೇವಲ ಆಕಸ್ಮಿಕವಾಗಿ ... ಯಾವಾಗಲೋ ಅಭುಕ್ತ ಮೂಲೆಗಳಲ್ಲಿ ‘ ... ಕೇರಿಗೊಂದು ’ ಎಂಬಂತೆ ಉಂಟಾಗುವ ವಿಚಿತ್ರ ... ನೆಯ ಫಲಮಾತ್ರವಾಗಿರುತ್ತದೆ ” ಆಗಲೇ ... ಹಠಾತ್ತಾಗಿ ಸಂಭವಿಸುವುದು.

ಮೇಲೆ ಆವರಣಚಿಹ್ನೆಗಳಲ್ಲಿ ಹಾಕಿರುವ ಮಾತು... ‘ಸರ್ ಜೇಮ್ಸ್ ಜೀನ್ಸ್’ರವರವು. ಅವರು ಹೇಳುವ ... **ಸ್ಮಿಕವಿಚಿತ್ರಸಂಘಟನೆಯ** ಪರಿಯಿಂತು:-ಕಲ್ಪ... ಯಾವುದಾದರೊಂದು ನಕ್ಷತ್ರವು ನಮ್ಮ ಸೂರ್ಯನ... ಮತ್ತೊಂದು ನಕ್ಷತ್ರದ ಸಮೀಪಕ್ಕೆ ಬಂದುಬಿಡುತ್ತ... ಹೀಗೆ ಎರಡು ನಕ್ಷತ್ರಗಳು ಅತಿಸಮೀಪಕ್ಕೆ ಬಂ... ಅವು ಒಂದನ್ನೊಂದು ಎಳೆದಾಡಿ ಪರಸ್ಪರ ರೂಪ...

CC-0. Jangamwadi Math Collection. Digitized by eGangotri

ದಲ್ಲಿ ವ್ಯತ್ಯಾಸಹೊಂದುವುವು. ಇದರ ಪರಿಣಾಮವಾಗಿ ಸೂರ್ಯನ ನೆರೆಹೊರೆಯ ಪ್ರದೇಶದಲ್ಲಿ, ಜೀವಿಗಳಿಗೆ ಆಶ್ರಯವನ್ನೀಯಬಲ್ಲ ಗ್ರಹಗಳು ಉಂಟಾಗುವುವು.

ಎರಡು ನಕ್ಷತ್ರಗಳು ಒಂದನ್ನೊಂದು ಸಮೀಪಿಸಿದರೂ ಸ್ವಲ್ಪ ದೂರದಲ್ಲಿಯೇ ಸ್ಥಿರವಾಗಿ ನಿಂತು ತಮಗೆ ಕ್ಲಪ್ತವಾದ ಪಥದಲ್ಲಿ ತಾವು ತಿರುಗುತ್ತಾ ಇರುವುದೂ ಉಂಟು. ಇಂತಹ ಸಂದರ್ಭಗಳಲ್ಲಿ, ಚಂದ್ರನ ಪ್ರಭಾವದಿಂದ ಭೂಮಿಯ ಮೇಲೆ ಅಲೆಗಳುಏಳುವಂತೆ ಇವುಗಳಮೇಲೂ ಪರಸ್ಪರಪ್ರಭಾವದಿಂದ ತರಂಗಗಳು ಏಳುತ್ತವೆ. ಈ ಪರಿಸ್ಥಿತಿಯಲ್ಲಿ ಮತ್ತಾವ ಕ್ರಿಯೆಯುಂಟಾಗಲೂ ಆಸ್ಪದವಿಲ್ಲ. ಇವೆರಡರ ಮಧ್ಯೆ ಏರ್ಪಟ್ಟಿರುವ ಸ್ಥಳವು ಕಡಿಮೆಯಾದಂತೆಲ್ಲಾ ಈ ಅಲೆಗಳು ಎತ್ತರವಾಗುತ್ತಾ ಬರುತ್ತವೆ;ದೂರವು ಹೆಚ್ಚಿದಂತೆಲ್ಲಾ ಅಲೆಗಳು ಕಿರಿದಾಗುವುವು. ರಾತ್ರಿಯ ವೇಳೆಯಲ್ಲಿ ಜಹಜುಗಳು ಒಂದನ್ನೊಂದು ಹಾಯ್ದು ಹೋಗುವಂತೆ ನಕ್ಷತ್ರಗಳೂ ಸುಮ್ಮನೆ ಹಾಯ್ದು ಹೋದರೆ ಅವುಗಳಲ್ಲಿ ಸ್ಥಿರವಾದ ಯಾವ ಮಾರ್ಪಾಡುಗಳೂ ಉಂಟಾಗದೆ ಎಂದಿನಂತೆ ಇರುವುವು. ಆದರೆ ಸಮೀಪವನ್ನೈದುವ ನಕ್ಷತ್ರಗಳೆರಡು ಒಂದಾನೊಂದು ಹದಮೀರಿದ ದೂರವನ್ನು ದಾಟಿ ಅತಿಸಮೀಪಕ್ಕೆ ಬಂದರೆ ಆಗ ಅವುಗಳ ಮೇಲ್ಭಾಗದಲ್ಲಿ ಉಂಟಾಗುವ ತೆರೆಗಳ ಸ್ವರೂಪವೇ ಬೇರೆ. ಒಂದೊಂದು ನಕ್ಷತ್ರದ ಮೇಲೂ ಒಂದೊಂದು 'ಡುಬ್ಬ' ಎದ್ದು ಆದರ ಸುತ್ತಲೂ ತಿರುಗುವ ಬದಲು, ಆ ಅಲೆಯು ಪರ್ವತದಷ್ಟು ಗಾತ್ರವಾಗುವುದಲ್ಲದೆ ಒಂದೇಸವನೆ ದೊಡ್ಡದಾಗಿ ಬೆಳೆದು ಕಟ್ಟಕಡೆಗೆ ದೀರ್ಘಶಾಖೆಯೊಂದು ಬಹು ದೂರದವರೆಗೂ ಚಾಚಿಕೊಳ್ಳುತ್ತದೆ. ಕೆಲವು ವೇಳೆ ಒಂದರಿಂದ ಹೊರಟ ಶಾಖೆಯು ಮತ್ತೊಂದು ನಕ್ಷತ್ರ ಶಾಖೆಯೊಡನೆ ಸೇರಿ ಹೋಗಿ ಎರಡು ಗೋಳಗಳಿಗೂ ಗಂಟು ಹಾಕಬಹುದು. ಗರುಡಿಯವರು ಕೈಯ ಮಾಂಸಖಂಡಗಳ ವ್ಯಾಯಾಮಕ್ಕಾಗಿ 'ಡಂಬೆಲ್' ಎಂಬ ಸಾಧನವನ್ನು ಉಪಯೋಗಿಸುವರಲ್ಲವೆ? ಇದು ಮಧ್ಯದಲ್ಲಿ ಹಿಡಿಯಲು ಅನುಕೂಲವಾಗಿ ಸಣ್ಣಗೂ ಎರಡು ತುದಿಗಳಲ್ಲಿ ದುಂಡಗೂ ದಪ್ಪವಾಗಿಯೂ ಇರುತ್ತದೆ. ನಕ್ಷತ್ರವೆರಡಕ್ಕೆ ಹೀಗೆ ಸಂಬಂಧವುಂಟಾದಾಗ ಅವುಗಳನ್ನು ಇಂತಹುದೊಂದು ಡಂಬೆಲ್ಲಿಗೆ ಹೋಲಿಸಬಹುದು. ನಕ್ಷತ್ರಗಳೇ ಡಂಬೆಲ್ಲಿನ ಇರ್ಕೆಡೆಯ ಗುಂಡುಗಳು, ಗೋಳಗಳ ಮಧ್ಯೆ ಅವುಗಳನ್ನು ಸೇರಿಸಿದಂತೆ ಇರುವ ಶಾಖೆಯೇ ಡಂಬೆಲ್ಲಿನ ಹಿಡಿ. ಈ ಶಾಖೆಯು ಜ್ವಲಿಸುತ್ತಿರುವ ವಾಯುಮಯವಾದದ್ದು. ಹಿಡಿಯಂತಿರುವ ಈ ಶಾಖೆಯೇ ಆರಿ, ಕುಗ್ಗಿ ಗ್ರಹಗಳಾಗಿ ಪರಿಣಮಿಸುತ್ತದೆ. ನಕ್ಷತ್ರಗಳ ಮಧ್ಯೆ ಇಂತಹುದೊಂದು ಉರಿಯ ಸೇತುವೆ ಸಂಭವಿಸಿದಾಗಲೇ ಗ್ರಹಗಳು ಉತ್ಪತ್ತಿಯಾಗುವುವು.

ಗ್ರಹಗಳು, ಅದ್ಭುತವಾದ ಮರದ ದಿಮ್ಮಿಯಂತಿರುವ ವಾಯುರೂಪಿನ ಈ ಸೇತುವೆಯು ಆರಿ, ಕುಗ್ಗಿ, ಗಟ್ಟಿಯಾಗುವುದರಿಂದ ಉಂಟಾಗುತ್ತವೆಯೇ ವಿನಾ ಇನ್ನಾವ ವಿಧದಿಂದಲೂ ಆಗಲಾರವು. 'ಸರ್ ಜೇಮ್ಸ್ ಜೀನ್ಸ್'ರವರು ಹೂಡಿ ಮುಂದಕ್ಕೆ ತಂದಿರುವ ಈ ವಾದವನ್ನು ನಾವು ಅಂಗೀಕರಿಸುವುದಾದರೆ, ಒಡನೆಯೇ, ಅದರ ಫಲವಾಗಿ " ಪ್ರಪಂಚದಲ್ಲಿ ಇಂತಹ ಸಂಘಟನೆಗಳು ಪ್ರಾಪ್ತವಾಗುವುದು ಕೇವಲ ಅಪೂರ್ವ " ಎಂಬುದನ್ನೂ ಅಂಗೀಕರಿಸಬೇಕು. ನಮ್ಮ ಕಣ್ಣಿಗೆ ಕಂಡಂತೆ ಲಕ್ಷೋಪಲಕ್ಷ ನಕ್ಷತ್ರಗಳಿದ್ದರೂ, ಊಹೆಯ ಅಳತೆಗೂ ಮೀರಿದ ಘನ ವೈಶಾಲ್ಯವನ್ನುಳ್ಳ ಆಕಾಶದಲ್ಲಿ ಅಷ್ಟು ನಕ್ಷತ್ರಗಳೂ ಅಲ್ಲಿ ಇಲ್ಲಿ ಒಂದೊಂದರಂತೆ ವಿರಳವಾಗಿರುತ್ತವೆ. ಆದುದರಿಂದ ಪ್ರಪಂಚದಲ್ಲಿ ನಕ್ಷತ್ರಗಳೇ ಬಹು ಅಪೂರ್ವವಸ್ತುಗಳೆಂದು ಹೇಳಬೇಕು. ಅವು ಜಗತ್ತಿನಲ್ಲಿ ಎಷ್ಟು ವಿರಳವಾಗಿವೆಯೆಂಬುದನ್ನು ಚಿತ್ರಿಸಿಕೊಳ್ಳುವುದು ಕಷ್ಟ. ಆದರೂ ಒಂದು ಉಪಾಯ ತೋರುತ್ತದೆ; ನಮ್ಮ ಭೂಮಂಡಲದ ಮೇಲೆ ಮೂರೇ ಮೂರು ಪ್ರಾಣಿಗಳಿದ್ದುವೆಂದು ಭಾವಿಸೋಣ. ಆಗಲೂ ಭೂಮಿಯ ಮೇಲಿನ ಪ್ರಾಣಿಸಾಂದ್ರತೆ ಹೆಚ್ಚೇವಿನಾ ಆಕಾಶದಲ್ಲಿನ ನಕ್ಷತ್ರ ಸಾಂದ್ರತೆ ಹೆಚ್ಚಿರದು!

ನಕ್ಷತ್ರಗಳು ಒಂದನ್ನೊಂದು ಸಮೀಪಿಸುವುದು ವಾಸ್ತವಿಕವೆಂದೇ ಇಟ್ಟುಕೊಂಡರೂ ಜಗತ್ತಿನಲ್ಲಿ ಅವುಗಳ ಸಂಖ್ಯೆಯೇ ಅತ್ಯಲ್ಪವಾಗಿರುವುದರಿಂದ ತತ್ಫಲವಾಗಿ ಅವುಗಳ ಪರಸ್ಪರ ಹತ್ತಿರವಾಗುವ ಸಂಭವವು ಮತ್ತೂ ಕಡಿಮೆ. ಸಮೀಪಿಸಿದರೂ ಎರಡರ ಮಧ್ಯೆ ಒಂದು ವಾಯುರೂಪಿನ ಸೇತುವೆಯು ಆವಿರ್ಭವಿಸುವಷ್ಟು ಬಳಿಗೆ ಬರುವುದು ಇನ್ನೂ ಅಪೂರ್ವ. ಇದರ ಅಪೂರ್ವತೆಯನ್ನು ಊಹಿಸಲೂ ಅಸಾಧ್ಯ. ಪ್ರಪಂಚದಲ್ಲಿ ಗ್ರಹಗಳೇ



CC-0. Jangamwadi Math Collection. Digitized by eGangotri

ಅತಿ ವಿರಳ, ಗ್ರಹಗಳು ಅಪೂರ್ವವಾದರೆ ಜೀವಸವು ಮತ್ತೂ ಅಪೂರ್ವ. ಹಾಗೆಯೇ ವಿಚಾರಿಸಿ ನೋಡುವಲ್ಲಿ, ಸಮಸ್ತಪ್ರಪಂಚದಲ್ಲಿರುವ ಜೀವರಾಶಿಗಳ ಒಟ್ಟು ಸಂಖ್ಯೆಯ ಬಹುಭಾಗವು ಭೂಮಿಯ ಮೇಲೆಯೇ ಇದೆ ಎಂದೂ ಹೇಳಬಹುದು.

ಜೀವದ ಬೀಜವು 'ಪ್ರೋಟೋಪ್ಲಾಸಮ್' ಎಂಬ ವಿಚಿತ್ರವಸ್ತುವಿನಲ್ಲಿದೆ. ಪ್ರೋಟೋಪ್ಲಾಸಮ್ ವಸ್ತು ಮಾತ್ರದಲ್ಲಿ ವಿಶೇಷವೇನೂ ಇಲ್ಲ; ರಾಸಾಯನಿಕ ಪ್ರಯೋಗದಿಂದ ಅದರ ಸ್ವರೂಪವನ್ನು ಸುಲಭವಾಗಿ ಗ್ರಹಿಸಬಹುದು. ಅದರಲ್ಲಿ ಇಂಗಾಲ, ಆಮ್ಲಜನಕ, ಸಾರಜನಕ, ಜಲಜನಕ, ಗಂಧಕವೆಂಬ ಮೂಲವಸ್ತುಗಳು ಹೆಚ್ಚು ಪರಿಮಾಣದಲ್ಲಿಯೂ, ಸುಣ್ಣ, ರಂಜಕ, ಕಬ್ಬಿಣ, ಪೊಟಾಸಿಯಮ್ ಮತ್ತು ಮ್ಯಾಗ್ನೀಸಿಯಮ್ ಎಂಬುವು ಕೊಂಚವಾಗಿಯೂ ಸೇರಿವೆ; ಇವೇನೂ ಅಪೂರ್ವವಸ್ತುಗಳಲ್ಲ–ಬೀದಿಯಲ್ಲಿ ಬಿದ್ದಿರತಕ್ಕವು. ಪ್ರತಿಯೊಂದು ನಕ್ಷತ್ರದಲ್ಲಿಯೂ ಈ ಪದಾರ್ಥಗಳಿದ್ದೇ ಇರುತ್ತವೆ. ಆದರೆ ಅವುಗಳೆಲ್ಲವೂ ಹೇಗೆ ಮಿಳನಹೊಂದಿದುವು? ಅವು ಒಂದರೊಡನೊಂದು ಹಾಗೆಯೇ ಸಮರಸಭಾವದಿಂದ ಕೂಡಿರಬೇಕಾದರೆ ಉಷ್ಣ, ಪ್ರಕಾಶ, ಜಲ, ಇವೇ ಮುಂತಾದ ಪ್ರಕೃತ್ಯಂಶಗಳು ಅನುಕೂಲವಾದ ಯಾವ ಪರಿಸ್ಥಿತಿಯಲ್ಲಿರಬೇಕು? ಮೇಲಾಗಿ, ಪ್ರೋಟೋಪ್ಲಾಸಮ್ ಮೊದಲು ಉತ್ಪತ್ತಿಯಾದಾಗ ಮೂಲವಸ್ತುಗಳು ಬೆರೆಯಲು ಅನುಕೂಲವಾಗಿ ಇದ್ದ ಪ್ರಕೃತಿಯ ಸನ್ನಿವೇಶವೇನು? ಎಂಬುದಾಗಿ ಅರೈಯಲು–ಇದೆಲ್ಲವೂ ಪ್ರಕೃತಿಯ ಸಾಮಾನ್ಯಸಿಯಮಕ್ಕೆ ಅಪವಾದಸ್ವರೂಪವಾದ ಸಂದರ್ಭಗಳೇ ಆಗಿರಬೇಕು – ಎಂದು ತೋರುತ್ತದೆ. ಎರಡು ನಕ್ಷತ್ರಗಳಾದರೂ ಜೊತೆಗೂಡಬಹುದು, ಈ ಸನ್ನಿವೇಶಗಳೊದಗುವದಂತು ತೀರ ಅಸಂಭವ.

ಆದುದರಿಂದ ಜೀವಸವನ್ನು ಪರಿಶೀಲಿಸುವಾಗ ನಮ್ಮ ಪರಿಸ್ಥಿತಿಯು ಎರಡರಲ್ಲಿ ಯಾವುದಾದರೊಂದಾಗಿರುತ್ತದೆ; ಒಂದು, ಅಸಂತಾಕಾಶದ ಮಹತ್ವ ಮತ್ತು ಶಕ್ತಿಗಳ ಬಾಹುಳ್ಯದ ಮಧ್ಯೆ ನಾವು ನಮ್ಮ ಈ ಸಣ್ಣ ಪ್ರಪಂಚದಲ್ಲಿ ಏಕಾಂಗಿಗಳಾಗಿರುವೆವೆಂದೂ, ಅದರ ಒಡೆತನವೆಲ್ಲಾ ನಿಸ್ಸಹಾಯರಾದ ನಮ್ಮೊಬ್ಬರ ತಲೆಯಮೇಲೆಯೇ ಬಿದ್ದಿರುವುದೆಂದೂ ಯೋಚನೆಗಳು ತಲೆದೋರ... ಈಗ ನಮ್ಮಲ್ಲಿ ಉಂಟಾಗುವುದು ಭಯಂಕರ... ಏಕಾಂಗಿಭಾವ; ಈ ಸ್ಥಿತಿಯಲ್ಲಿ ನಾವು ಕೇವಲ ಸಿಡುಕ... ಗಳು, ಚಿಂತಾಸಮುದ್ರದಲ್ಲಿ ಮುಳುಗಿರುತ್ತೇವೆ. ನ... ಎರಡನೆಯ ದೃಷ್ಟಿಯ ಪರಿಯು ಬೇರೊಂದು – ಧ... ಯಿಂದ ಪುಟನೆಗೆದೆದ್ದು ಅಂಬರದ ಮಧ್ಯೆ ತೇಲಾಡು... ನಾವು ಜಗತ್ತನ್ನು ಉದಾರದೃಷ್ಟಿಯಿಂದ ಪ್ರತೀಕ್ಷ... ತ್ತೇವೆಂದು ಇಟ್ಟುಕೊಳ್ಳೋಣ. ಆಗ್ಗ ಜಗತ್ತಿನ ... ಗಾಂಭೀರ್ಯ, ಅದ್ಭುತವೈಭವ, ಅಗಮ್ಯರಹಸ್ಯ... ಗಳನ್ನು ಮನಗಾಣಬಹುದು. ಇದರ ಫಲವಾಗಿ ನ... ಉಂಟಾಗುವುದು ಮೇರೆವಿಾರಿದ ಗರ್ವಭಾವ. ... ನಮ್ಮಲ್ಲಿ ಉತ್ಸಾಹವನ್ನೂ ಆತ್ಮಗೌರವವನ್ನೂ ಹ... ತಕ್ಕದ್ದು. ಈ ದೃಷ್ಟಿಯಿಂದ ನೋಡಿದರೆ "ನಮ್ಮ ... ಕೇವಲ ಕ್ಷಣಿಕ, ಅದು ಅನನುಕೂಲವಾದ ಇಲ್ಲವೆ ... ಪ್ರಾಯವಾದ ವಾತಾವರಣದಲ್ಲಿ ಸಿಲುಕಿ ದಿಗ್ಭ್ರಾ... ವಾದ ವ್ಯಕ್ತಿ," "ಕಾಕಸಂಘಾತದೊಳು ಸಿಲ್ಕಿರ್ದ ಕೋ... ಲೆಯ ಮರಿಯಿದು" ಎಂದೆನಿಸುವುದಿಲ್ಲ. ಆದರ... "ನಮ್ಮ ಜೀವನವು ನಕ್ಷತ್ರಗಳೆಲ್ಲವೂ ಯಾವ ಉತ್ಕ... ಒಂದು ಫಲಸಾಧನೆಗಾಗಿ ತಮ್ಮ ಸರ್ವಶಕ್ತಿಯನ್ನ... ವ್ಯಯಮಾಡುತ್ತಿವೆಯೋ ಆ ಫಲಪ್ರಾಪ್ತಿಗೆ ಪೂರ್ವ... ಯಾದ ಸುಂದರ ಕುಸುಮ" ವೆಂದು ಮು... ತೋರುತ್ತದೆ.

ಇಷ್ಟು ಮಟ್ಟಿನ ಮೆಚ್ಚಿಕೆಯು ಮಾನವನ ದ... ವಿಾರಿದುದೇ? "ನಾವು ಮಾತ್ರವೇ ಮನುಷ್... ಜ್ಞಾನವು ನಮ್ಮೊಡನೆಯೇ ಲಯವಾಗುವುದು" ... ಧೈರ್ಯಮಾಡಿ ಹೇಳಬಹುದೇ? ಎಂದರೆ ... ಎರಡುಬಗೆಯ ಉತ್ತರವಿದೆ. ಪ್ರಪಂಚವನ್ನು ... ನಮ್ಮ ಅರಿವೆಲ್ಲವೂ ನಮ್ಮ ಭುದ್ಧಿಶಕ್ತಿಯ ಫಲ. ... ಮನಸ್ಸಿನಲ್ಲಿ ಮೇಲಿಂದ ಮೇಲೆ ಚರ್ಚಿಸುವಾ... ವಾಯ – ಜೀವನವೂ ಅದರ ಉತ್ತಮಭಾಗ... ಬುದ್ಧಿಶಕ್ತಿಯೂ ಭೂಮಿಯೆಂಬ ಸವಿಾಪ್ತ ಸಣ್ಣ ... ಬೂದಿಯ ಉಂಡೆಯಮೇಲಲ್ಲದೆ ಮತ್ತೆಲ್ಲಿಯೂ ... ವಿಲ್ಲ, ಅಸಂಭವ– ಎಂದು ಉದ್ಘೋಷಿಸುವುದಾದ... ತರ್ಕವು ತಪ್ಪಾದೀತು. ನಮ್ಮ ತಿಳುವಳಿಕೆಯ... ಗಂತಿಲ್ಲಾ ಈ ತಪ್ಪನ್ನು ತಿದ್ದಿಕೊಳ್ಳೋಣ. ಒಂದು...

CC-0. Jangamwadi Math Collection. Digitized by eGangotri

ಭೂಮಿಯಲ್ಲದೆ ಮತ್ತೆಲ್ಲಿಯಾದರೂ ಎಂದರೆ–ನಾವು ಇದುವರೆಗೆ ಕಂಡರಿಯದ ಅಥವಾ ಮುಂದೆಯೂ ಕಾಣಲಾಗದ ಮತ್ತಾವ ಗೋಳದ ಮೇಲಾಗಲಿ–ನಮ್ಮೊಡನೆ ಸರಿದೂಗಬಲ್ಲ ಜೀವನವೂ ಬುದ್ಧಿಕೌಶಲ್ಯವೂ ಇದ್ದೇ ಇರಬೇಕು ಎಂದು ಸ್ಥಾಪಿಸುವುದಾದರೆ, ಆಗಲೂ ಯಾರೂ ಕಂಡು ಕೇಳದ ಆ ಪ್ರಪಂಚವು ನಿವಾಸಿತವಾದುದು, ಅಲ್ಲಿ ಜೀವಿಗಳುಂಟು ಎಂದು ಹೇಳಿದುದು ನಮ್ಮ ಬುದ್ಧಿಯೇ ಹೊರತು ಮತ್ತಾವುದೂ ಅಲ್ಲವೆಂಬುದನ್ನು ನೆನಪಿನಲ್ಲಿಡಬೇಕು.

ಇದಿಷ್ಟು ನಮ್ಮ ಉತ್ತರದ ಒಂದು ಭಾಗವಾಯ್ತು; ಈಗ ನಾವು ಕೊಡಲೆಳಸುವ ಉತ್ತರದ ದ್ವಿತೀಯಭಾಗವು ನಮ್ಮ ಬುದ್ಧಿಯ ಸ್ವರೂಪ-ಸ್ವಭಾವದ ಮೇಲೆ ಹೋಗುತ್ತದೆ. ವ್ಯಕ್ತಿದೃಷ್ಟಿಯಿಂದ ನೋಡಿದರೆ ನಮ್ಮಲ್ಲಿ ಒಬ್ಬೊಬ್ಬನ ಆಯುಸ್ಸೂ ಕೇವಲ ಛಾಯಾಸ್ವರೂಪವಾದುದು, ಈಗ ಇದ್ದುದು ಇನ್ನೊಂದು ಘಳಿಗೆಗೆ ಇಲ್ಲ. ಭೂಮಿಯ ಮೇಲೆ ಯಾವನದೂ ಸ್ಥಿರವಲ್ಲ. ಮನುಷ್ಯನ ಮನೋನೇತ್ರಗಳಿಂದ ನಾವು ಬೇಗನೆ ಮರೆಯಾಗುವೆವು. ಮಾನವಕೋಟಿಯ ಹಣೆಯಬರಹವೆಲ್ಲವೂ ಹೆಚ್ಚು ಕಡಿಮೆ ಒಂದೇ ಆಗಿರುವುದರಿಂದ, ಮನುಷ್ಯನು ಹಾಗೆಯೇ ಬಹುದೂರ ಯೋಚಿಸಿ ನೋಡುವಲ್ಲಿ ಕಿಂಚಿತ್ ಶೋಚನೀಯವೇ ಆದ ತನ್ನ ಅಂತ್ಯಾವಸ್ಥೆಯನ್ನು ಎದುರಿಸಲು ಎದೆಗುಂದಲಾರನು.

ಅವನ ಸಮಾಧಾನಕ್ಕೆ ಕಾರಣವೇನೋ ನೋಡುವ: ಪ್ರಪಂಚದಲ್ಲಿ ಸರ್ವದಾ ಆಗುತ್ತಿರುವ ಪರಿವರ್ತನ ಆರ್ಭಟಗಳ ಸಂದಣಿಯಲ್ಲಿ, ತಡೆಬಡೆಯಿಲ್ಲದೆ ಜರುಗುತ್ತಿರುವ ಶಕ್ತಿಗಳ ವ್ಯಾಪಾರದ ಮಧ್ಯೆ, ತಾರಾಸಂಕುಲವು ಉಷ್ಣ ತೇಜೋವಿಶಿಷ್ಟವಾದ ಅನಂತಶಕ್ತಿಯನ್ನು ಪುಂಖಾನುಪುಂಖವಾಗಿ ನಿಷ್ಪ್ರಯೋಜನವಾಗಿ ಹೊರಕ್ಕೆ ಸುರಿಯುತ್ತಿರಲು, ಮನುಷ್ಯನು ಮಾತ್ರ ಇವೆಲ್ಲವುಗಳನ್ನೂ ವಿಚಾರಿಸಲ್ಲಬಲ್ಲ ಒಂದು ಅದ್ಭುತವನ್ನು ಕಂಡೆನೆಂದು ದೃಢವಾಗಿ ನಂಬಿರುವನು. ಆ ಅದ್ಭುತವಸ್ತುವು ಮತ್ತಾವುದೂ ಅಲ್ಲ, ಅದು ಅವನ ಆತ್ಮ. ಅವನ ಜ್ಞಾನದ ಗುರಿಯೂ, ಕುಶಾಗ್ರಬುದ್ಧಿಯೂ, ಯಾವುದನ್ನೂ ಒಳಹೊಕ್ಕು ನೋಡಬಲ್ಲ ಅವನ ಸಹಜಗುಣವೂ, ಪ್ರಪಂಚದ ಸಮಸ್ತ ವಸ್ತುಗಳ ಮರ್ಮವನ್ನೂ ಅರಿಯಬೇಕು ಎಂಬ ಆತನ ದುರ್ದಮನೀಯವಾದ ಕುತೂಹಲವೂ–ಜಗದ್ಯಂತ್ರವು ಹೇಗೆ ಒಂದು ಸಮಸ್ಯೆಯಾಗಿರುವುದೋ ಹಾಗೆಯೇ-ಇವೆಲ್ಲವೂ ಒಂದು ದೊಡ್ಡ ಸಮಸ್ಯೆಯಾಗಿವೆ. ಆದರೆ ಅವನ ಹೃದಯಾಂತರಾಳದಿಂದ ಯಾವುದೋ ಒಂದು ಧ್ವನಿಯ ಕೂಗು ಸರ್ವದಾ ಕೇಳಬರುತ್ತದೆ-ಅದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಅದು ಸತ್ಯ,ನೈಪುಣ್ಯ,ಸೌಂದರ್ಯ ಇವುಗಳನ್ನು ನಂಬು ನಂಬೆಂದು ಅವನನ್ನು ಆಜ್ಞಾಪಿಸುತ್ತಾ ಅಡಗಿ ಕುಳಿತಿರುವ ಆತ್ಮದ ಒಳದನಿ. ಮನುಜನು ದಾರಿತಪ್ಪಿನಡೆಯದಂತೆ ನೋಡಿಕೊಂಡು ಸದಾ ಅವನ ಶ್ರೇಯಸ್ಸನ್ನೇ ಕೋರುತ್ತಾ ವಿವೇಕವನ್ನು ಬೋಧಿಸುತ್ತಿರುವ ಈ ಧ್ವನಿಯು ಆ ದೇವದೇವನದೇ ಎಂದು ಧಾರಾಳವಾಗಿ ಹೇಳಬಹುದು.

ಜ್ಞಾನವು ಒಡಮೂಡಿ ವೃದ್ಧಿಹೊಂದಿರುವ ಈ ಕಾಲದಲ್ಲಿ ಯಾವಾಗಲೂ ಒಳದನಿಯು ಇವನ ಕೈಬಿಟ್ಟಿಲ್ಲ. ಅದರ ಪ್ರಭಾವವು ಆಫ್ರಿಕಾದಲ್ಲಿರುವ ಕೇವಲ ಅನಾಗರಿಕ ಜನರ ವಿಚಿತ್ರ ಆಚಾರ ವ್ಯವಹಾರಗಳಲ್ಲಿಯೂ, ಆಸ್ಟ್ರೇಲಿಯಾದ ಕಗ್ಗನೆಯ ಕಾಡುಜನರ ಕುಣಿತ-ಕೇಳಿಗಳಲ್ಲಿಯೂ, ಅಮೇರಿಕದ ಕೆಂಪುಜನರು ಭಗವಂತನಿಗೆ ಸಲ್ಲಿಸುವ ಪೂಜೆಪುರಸ್ಕಾರಗಳಲ್ಲಿಯೂ ವ್ಯಾಪಿಸಿದೆ. ಯವನರು ಆಚರಿಸುತ್ತಿದ್ದ ಅನೇಕ ಮೂಢಾಚಾರಗಳ ಮರ್ಮವನ್ನು ಯಾರೂ ಕಂಡರಿಯರು; ಅವರು ತಾವು ನಂಬಿದ್ದ ವಿಚಿತ್ರ ದೇವತೆಗಳಿಗೆ ಬಾಯುಪಚಾರವನ್ನು ಬೇಕಾದಷ್ಟು ನಡೆಸುತ್ತಿದ್ದರು. ಇಷ್ಟಾದರೂ ಅವರ ಅಂಧಶ್ರದ್ಧೆಯ ಮರೆಯಲ್ಲಿ ಎಲ್ಲಕ್ಕಿಂತ ಮೇಲಾದ, ಆರಿಗೂ ಗೋಚರವಿಲ್ಲದ ಯಾವುದೋ ಒಂದು ದೈವದಲ್ಲಿ ಅಚಲವಾದ ಭಕ್ತಿಯಿದ್ದೇ ಇದ್ದಿತು.

ಅಜ್ಞಾನಾಂಧಕಾರದಲ್ಲಿ ಮುಳುಗಿ ದಾರಿಗಾಣದೆ ಇರುವ ಜನರನ್ನು ಉದ್ಧರಿಸುವುದಕ್ಕಾಗಿ ಆಗಿಂದಾಗ್ಗೆ ಮಹರ್ಷಿಗಳು ಜನ್ಮವೆತ್ತಿ ಜ್ಞಾನೋಪದೇಶಮಾಡಿರುತ್ತಾರೆ. ಮನುಷ್ಯನು ಭೂಮಿಯ ಮೇಲೆ ಬಂದಿಳಿದಾಗಿನಿಂದ ಅವಾಙ್ಮಾನಸಗೋಚರನಾದ ದೇವದೇವನನ್ನು ಪೂಜಿಸುತ್ತಲೇ ಇದ್ದಾನೆ. ತಾನಿರುವುದು ಅವನಲ್ಲಿ ಎಂದೂ, ತನ್ನ ಒಂದೊಂದು ವ್ಯಾಪಾರವೂ ಅವನ ಆಜ್ಞೆಯಮೇರೆ ನಡೆಯುತ್ತಿದೆಯೆಂದೂ, ಅವನ ಕೃಪೆ ತಪ್ಪಿದರೆ ತನಗೆ ಉಳಿಗಾಲವಿಲ್ಲವೆಂದೂ ಮನುಷ್ಯನು

CC-0. Jangamwadi Math Collection. Digitized by eGangotri

ಬಲ್ಲನು. ಒಣಬಂಟಿಯಾದ ಈ ಮಾನವನ ಸಂತತಿಯ ಉತ್ತರೋತ್ತರವೇನೇ ಇರಲಿ, ಇಹದ ಜೀವನದಲ್ಲಿಯೂ ಪರದ ಮುಕ್ತಿಯಲ್ಲಿಯೂ ಅವನಿಗಿರುವ ನಂಬುಗೆಯು ಎಂದಿಗೂ ತಪ್ಪದು. ಅದು ಅವನ ಆಜನ್ಮಸಿದ್ಧವಾದ ಹಕ್ಕು, ಅದೇ ಅವನ ಬಿರುದು.

ಜಗತ್ತೆಂಬ ತೊಡಕಿನಿಂದ ಬಿಡುಗಡೆ ಹೊಂದಲು ಇದೇ ಸುಲಭಮಾರ್ಗ. ಪ್ರಕೃತಿಯಿಂದ ಹೊರಗೆ ... ದಿವ್ಯಶಕ್ತಿಯುಂಟೆಂದೂ, ಆ ಶಕ್ತಿಯನ್ನು ಎದುರಿಸ... ನಮ್ಮಿಂದ ಸಾಧ್ಯವಿಲ್ಲವೆಂದೂ ನಮ್ಮ ಆತ್ಮವು ತಿಳಿ... ತ್ತದೆ. ಬಾಳಿನಲ್ಲಿ ನಮಗೆ ದಾರಿತೋರುವುದೂ, ನಮ್ಮ ಜೀವನದ ಪರಮಾರ್ಥವನ್ನು ನಿರ್ಣಯಿಸುವುದೂ ಆ... ಶಕ್ತಿಯೇ ಎಂದು ಬೋಧಿಸುವುದೂ ನಮ್ಮ ಆತ್ಮ.*

---

## ಸಿಡಿಲು

ಶ್ರೀ ಮಧುರಚೆನ್ನ

ಹಣ್ಣು ಬಿತ್ತು ಹಣ್ಣು ಬಿತ್ತು,
ಇಂದ್ರುವನದ ಹಣ್ಣು ಬಿತ್ತು;
ಅಲ್ಲಿ ಬಿತ್ತು ಇಲ್ಲಿ ಬಿತ್ತು,
ಎಲ್ಲಿ ಬಿತ್ತು? ಇಲ್ಲೆ ಬಿತ್ತು.
ಆಚೆ ಗಿಡದ ಕೆಳಗೆ ಕೆಲರು
ಈಚೆ ಗಿಡದ ಬುಡಕೆ ಕೆಲರು
ಅಲ್ಲಿ ಕೆಲರು ಇಲ್ಲಿ ಕೆಲರು
ಅಲ್ಲಿಯಿಲ್ಲಿ ಎಲ್ಲೊ ಕೆಲರು,
ಗಾಳಿ ಉಕ್ಕಿ ಒದರಿತಾಗ,
ಗಿಡದ ಸಾಲು ಅದುರಿತಾಗ,
ಅತ್ತಯಿತ್ತ ಅಂಧಕಾರ
ನೋಡಿದತ್ತ ದುಂದಕಾರ
ಲೋಕವೆಲ್ಲ ವೊಬ್ಬುವರಿದು
ಸರುವಜನದ ಮಬ್ಬು ಹರಿದು
ದೊಡ್ಡದೊಂದು ಸಪ್ಪಳಾಗಿ
ಜಗದ ಮೋರೆ ಸಪ್ಪಗಾಗಿ
ಗಗನ ಪೃಥ್ವಿ ಏಕವಾಗಿ
ಲೋಕ ಕಕ್ಕವಿಕ್ಕಿಯಾಗಿ
ಹಣ್ಣು ಬಿತ್ತು ಹಣ್ಣು ಬಿತ್ತು,
ಇಂದ್ರುವನದ ಹಣ್ಣು ಬಿತ್ತು.

ಬಿತ್ತು ಬಿತ್ತು ಇಲ್ಲೆ ಬಿತ್ತು
ಲೋಕಕೆಲ್ಲ ದಿಗಿಲು ಬಿತ್ತು
"ಇಲ್ಲೆ ಬಿತ್ತು" "ಇಲ್ಲೆ ಬಿತ್ತು!"
ಎಲ್ಲರಂದ— "ರಿಲ್ಲೆ ಬಿತ್ತು!!!"
ಬೇಡದವರ ಮೇಲೆ ಬಿತ್ತು
ಬೇಡಿದವಗೆ ಇಲ್ಲ ತುತ್ತು
ಹಸಿಯದವರು ಹಲವು ಮಂದಿ
ಹಸಿದ ಜನರು ಕೆಲವು ಮಂದಿ
ಹಸಿಯದವಗೆ ಅಮೃತ ವಿಷವು
ಹಸಿಯೆ ವಿಷವೆ ಅಮೃತರಸವು
ಬಯಸಿದವಗೆ ಬೇವೆ ಬೆಲ್ಲ
ಬಯಸದವಗೆ ಮೊದಲೆ ಹೊಲ್ಲ
ಬೇಡದವರ ಮಗ್ಗಿಲಲ್ಲೆ
ಬೇಡಿಬಯಸುವವರು ಅಲ್ಲೆ
ಬೇಡಿದಲ್ಲಿ ಬೀಳಲಿಲ್ಲ
ಬೇಡದಲ್ಲಿ ಬಿದ್ದಿತಲ್ಲ!
ಎಲ್ಲೊ ಬಿದ್ದು ಹೋಗಲಿಲ್ಲ
ಇಲ್ಲೆ ಬಿದ್ದು ತನಗೆ ಇಲ್ಲ!!!
ಹಣ್ಣು ಬಿತ್ತು ಹಣ್ಣು ಬಿತ್ತು
ಇಂದ್ರುವನದ ಹಣ್ಣು ಬಿತ್ತು!

---

* Man above stars ಎಂಬ ಇಂಗ್ಲಿಷ ಲೇಖನದ ಸರಳಾನುವಾದ.

CC-0. Jangamwadi Math Collection. Digitized by eGangotri

# ಕಾಗದ

ಶ್ರೀ. ಹ. ವೆಂಕಟಸುಬ್ಬಯ್ಯನವರು, ಮೈಸೂರು

೧

ಮೂರ್ತಿ, ಆಗ ತಾನೆ ಹೊಟೇಲಿಗೆ ಹೋಗಿಬಂದು, ಆಫೀಸಿನಲ್ಲಿ ಕಾಗದ ಪತ್ರಗಳನ್ನು ನೋಡುತ್ತಾ ಕುಳಿತಿದ್ದನು. ಅಷ್ಟರಲ್ಲಿಯೆ ಅಂಚೆಯವನು ಒಂದು ಕಾಗದವನ್ನು ತಂದುಕೊಟ್ಟನು. ಸಾಧಾರಣವಾಗಿ, ಗೃಹಕೃತ್ಯ ಸಂಬಂಧವಾದ ಕಾಗದಗಳೆಲ್ಲವೂ, ಮೂರ್ತಿಗೆ ಮನೆಯ ವಿಳಾಸಕ್ಕೇ ಬರುವುವು. ಆದರೆ ಈ ಕಾಗದ ಮಾತ್ರ ಆಫೀಸಿಗೆ ಬಂದಿತು. ಮೂರ್ತಿಯು ಚಕಿತನಾಗಿ ಒಡೆದು ನೋಡಿದನು ಒಳಗೆ ಹೀಗೆ ಬರೆದಿದ್ದಿತು:—

'ನಾಡಿದ್ದು ರಾತ್ರಿ............ಎಚ್ಚರಿಕೆ!!' ಕಾಗದದಲ್ಲಿ ಹೆಸರು, ಊರು, ತಾರೀಖು ಒಂದೂ ಇರಲಿಲ್ಲ. ಸ್ವಲ್ಪ ಕೆಂಪುಬಣ್ಣದ ಕಾಗದ. ಮೇಲ್ಗಡೆ ಕವರಿನ ಮೇಲೆ, ಎಲ್ಲಿಂದ ಬಂದಿದೆಯೆಂದು ಮುದ್ರೆ ನೋಡಿದನು. 'ಶಿವಮೊಗ್ಗ' ಎಂದಿದ್ದಿತು. ಸರಿ! ಇದೆಲ್ಲಿಯೊ ಬೆದರಿಕೆಯ ಕಾಗದವೆಂದು ತಿಳಿದು ಜೇಬಿನಲ್ಲಿ ತುರುಕಿದನು. ಸ್ವಲ್ಪ ಹೊತ್ತು ಅದರ ಯೋಚನೆಬಿಟ್ಟು ಕೆಲಸವನ್ನು ಮಾಡುತ್ತಿದ್ದನು. ಆದರೆ ಪುನಃ ಏನೇನೋ ಯೋಚನೆಯನ್ನು ಮಾಡುತ್ತ 'ಆಗಲಿ ನಾಡಿದ್ದು ರಾತ್ರಿ ಏನು ಆಗುವುದೋ ನೋಡೋಣ' ಎಂದು ಒಂದು ಬಾರಿ ಅಂದುಕೊಂಡನು. ಪುನಃ 'ಅನರ್ಥವಾದರೆ ಏನು ಮಾಡೋದು? ನಾಡಿದ್ದು ರಾತ್ರಿ............' ಎಂದಿದೆ. ನಾಡಿದ್ದು ರಾತ್ರಿ ಏನು? ದರೋಡೆಯೇ? ಕಳ್ಳತನವೇ? ಖೂನಿಯೇ? ಅಥವಾ ಯಾರಾದರೂ ನೆಂಟರು ಬರುತ್ತಾರೆಯೇ? ಇಲ್ಲವೆ ಯಾರೋ ಪೋಲಿ ಹುಡುಗರು ಸುಮ್ಮನೆ ಬೆದರಿಕೆಗೆ, ಲೇವಡಿ ಎಬ್ಬಿಸಲೋಸುಗ ಹೀಗೆ ಬರೆದಿದ್ದಾರೋ?' ಎಂಬೀ ಯೋಚನೆಗಳಿಗೆ ಗುರಿಯಾಗಿ, ಕಡೆಗೆ ಯಾವುದೂ ಬಗೆಹರಿಯದೆ, ಕಾಗದವನ್ನು ಪೋಲೀಸಿನವರ ವಶಕ್ಕೆ ಕೊಡಬೇಕೆಂದು ನಿಶ್ಚಯಿಸಿ, ಹಾಗೆಯೇ ಮಾಡಿದನು. ಪೋಲೀಸು ಇನಸ್ಪೆಕ್ಟರು ಇವನ ವಶಕ್ಕೆ ಇಬ್ಬರು ಕಾನಸ್ಟೆಬಲ್ಲುಗಳನ್ನು ವಹಿಸಿ, 'ನಾಡಿದ್ದಿನವರೆಗೂ, ನೀವು ಇವರನ್ನು ನಿಮ್ಮ ಬಳಿ ಇಟ್ಟುಕೊಂಡಿರಬಹುದು' ಎಂದು ಹೇಳಿದರು. ಅದರಂತೆಯೇ ಮೂರ್ತಿ, ಅವರಿರ್ವರನ್ನೂ ಮನೆಯ ಬಳಿ ಕಾವಲು ಇರಿಸಿದ್ದನು.

ಮೂರನೆಯ ದಿನ ಮೂರ್ತಿಗಳ ಆಫೀಸಿಗೆ ಒಬ್ಬ ಅಪರಿಚಿತರು ಬಂದು, ಕೊಂಚಹಣ ಇಡಬೇಕಾಗಿತ್ತೆಂದು ಮಾತನಾಡುತ್ತ ಕುಳಿತರು. ಹಾಗೆಯೇ 'ಏನು ನಿಮ್ಮ ಮನೆಮುಂದೆ ಇಬ್ಬರು ಪೋಲೀಸಿನವರನ್ನು ಕಂಡೆನಲ್ಲಾ?' ಎಂದರು.

'ಏನೋ ಗ್ರಹಚಾರ ಏನು ಮಾಡುವುದು!'

'ಇದೇನು ಹೀಗೆ ಹೇಳುತ್ತೀರಿ! ಏನು ಗ್ರಹಚಾರ? ಏನು ಕತೆ?'

"ನಿನ್ನೆಯ ದಿವಸ ಇದ್ದಕ್ಕಿದ್ದ ಹಾಗೆಯೇ ಯಾವುದೊ ಒಂದು ಮೂಗುಕಾಗದ ಬಂದಿತು. ಪೋಲೀಸರ ವಶಕ್ಕೆ ಕೊಟ್ಟೆ. ಸಹಾಯಕ್ಕೆ ಅವರು ಆ ಇಬ್ಬರನ್ನು ಕೊಟ್ಟಿದ್ದಾರೆ"

"ಸಹಾಯವೇತಕ್ಕೆ? ಅದರಲ್ಲಿ ಏನು ಬರೆದಿತ್ತು?"

'ಏನೂ ಇಲ್ಲ ಸ್ವಾಮೀ 'ನಾಡಿದ್ದು ರಾತ್ರಿ' ಎಂದಿತ್ತು ಅಷ್ಟೆ! ಮುಂದಕ್ಕೆ ಏನೂ ಇಲ್ಲ. ಏನು ದರೋಡೆಯೋ ಕಳ್ಳತನವೋ ಎಂದು ರಕ್ಷಣೆ ಬೇಡಿದೆ.'

"ಅಯ್ಯೋ! ದರೋಡೆಯೂ ಇಲ್ಲ, ಕಳ್ಳತನವೂ ಇಲ್ಲ! ಯಾರೋ ತಮಾಷೆಗೆ ಮಾಡಿದ್ದಾರೆ ಸುಮ್ಮನಿರ್ರಿ. ಯಾತಕ್ಕೆ ಯೋಚಿಸುತ್ತೀರಿ? ಪೋಲಿಸಿನವರೂ ಬೇಡ, ಯಾರೂ ಬೇಡ, ಮರಳಿ ಕಳುಹಿಸಿ!" ಎಂದು ಹೇಳಿ ಅಪರಿಚಿತ ವ್ಯಕ್ತಿ, ತನ್ನ ಕೆಲಸವನ್ನು ಮುಗಿಸಿಕೊಂಡು



CC-0. Jangamwadi Math Collection. Digitized by eGangotri

ಹೊರಟುಹೋದನು. ಅವನು ಯಾರೆಂಬುದನ್ನು ಮೂರ್ತಿ ಯೋಚಿಸಲಿಲ್ಲ. ಮಾರನೆಯ ದಿವಸ ಮತ್ತಾರೂ ಅಪ ರಿಚಿತರು ಬರಲಿಲ್ಲ. ಸರಿ! ಆದಿನ ರಾತ್ರಿ ಬಂದೊದಗಿತು. ಮೂರ್ತಿ, "ಏನಾಗುವುದೋ ಎಂಬ ಕುತೂಹಲ ದಿಂದಲೂ, ತನ್ನ ಗತಿ ಏನಾಗುವುದೆಂಬ ಭೀತಿಯಿಂದಲೂ, ರಾತ್ರಿಯೆಲ್ಲಾ ಎಚ್ಚರವಾಗಿರಬೇಕೆಂದೇ ಯೋಚಿಸಿದನು. ರಾತ್ರಿ ಒಂಬತ್ತು ಘಂಟೆಯಾಯಿತು. ಪೋಲೀಸಿನವರಿಗೆ ಬಂದೂಕುಗಳನ್ನು ಸಿದ್ಧಪಡಿಸಿಕೊಂಡಿರಬೇಕೆಂದು ತಿಳಿಸಿ ದನು. ತಾನೂ ತನ್ನ ಹತ್ತಿರದಲ್ಲಿದ್ದ ಕೋವಿಯನ್ನು ಸರಿಮಾಡಿ, ಇಟ್ಟುಕೊಂಡನು. ರಾತ್ರಿಯೆಲ್ಲಾ ಮನೆಯ ಸುತ್ತಲೂ, ಗಸ್ತುಹೊಡೆಯುತ್ತಲೇ ಇದ್ದನು. ಹನ್ನೆ ರಡು ಘಂಟೆಯಾಯಿತು, ಒಂದು ಘಂಟೆಯಾಯಿತು, ಮೂರು ಘಂಟೆಯಾಯಿತು, ಐದುಘಂಟೆಯೂ ಆಯಿತು. ಕತ್ತಲೆ ಹೋಗುತ್ತ ಹೋಗುತ್ತ ಬೆಳಗಾಗುತ್ತಲೂ ಬಂತು. ಯಾರ ಸುಳಿವೂ ಇಲ್ಲ! ಏನೂ ವಿಶೇಷವೂ ಇಲ್ಲ! ಸುಮ್ಮನೆ ಮೂರ್ತಿಗೆ ನಿದ್ರೆ ಇಲ್ಲದಂತಾಯಿತು. ಕಾಗದದಲ್ಲಿ ಹೇಳಿದ್ದಂತೆ 'ಎಚ್ಚರ' ದಿಂದಿದ್ದುದಾಯಿತು.

ಮಾರನೆಯ ದಿವಸ ಬೆಳಗಿನಲ್ಲಿ ಪೋಲೀಸು ಇನ್ ಸ್ಪೆಕ್ಟರು ಬಂದು "ನಿನ್ನೆ ರಾತ್ರಿ ಏನು ವಿಶೇಷ?" ಎಂದು ಕೇಳಿದರು. ಮೂರ್ತಿ "ಏನೂ ಇಲ್ಲ. ನೀವು ಹೇಳಿ ದಂತೆ, ಯಾರೋ ಹುಡುಗರು, ಲೇವಡಿಗೆಂದು, ಹಾಗೆ ಕಾಗದಬರೆದಿರಬೇಕು" ಎಂದನು. ಪೋಲೀಸು ಕಾನ್ ಸ್ಟೆಬಲ್‌ಗಳೂ, ಅಧಿಕಾರಿಯೂ, ಹೊರಟುಹೋದರು.

೨

ಒಂದೆರಡುವಾರಗಳು ಕಳೆದುವು. ಏನೂ ವಿಶೇಷ ವಿಲ್ಲ. ಅದಾದ ಮೇಲೆ ಒಂದಾನೊಂದು ದಿವಸ ಮೂರ್ತಿಗೆ ಆಫೀಸಿಗೇ ಮತ್ತೊಂದು ಕಾಗದ ಬಂದಿತು. ಅದರಲ್ಲಿ "ಹಿಂದಿನ ಕಾಗದದಂತೆ ಆದಿನ ಆಗಲಿಲ್ಲ. ನಾಳೆ ರಾತ್ರಿ.... ಎಚ್ಚರಿಕೆ" ಎಂದಿತ್ತು. ಈ ಸಾರಿ ಮೇಲಿನ ಮುದ್ರೆ ಯನ್ನು ನೋಡಿದಲ್ಲಿ 'ಕಡೂರು' ಎಂದಿತ್ತು. ಮೂರ್ತಿಯು ಅದನ್ನು ಓದುತ್ತಾ 'ಸರಿ! ಹೋದಬಾರಿ, ಶಿವಮೊಗ್ಗ, ಈಬಾರಿ, ಕಡೂರು, ಮುಂದಿನ ಬಾರಿ, ಹಾಸನಹಾಕಿ! ಹುಚ್ಚುಮುಂಡೆ ಗಂಡ್ರನ್ನ ತಂದು!!" ಎಂದು ಬೇಸರ ದಿಂದ ಜೇಬಿನೊಳಕ್ಕೆ ಹಾಕಿದನು. ಸ್ವಲ್ಪ ಹೊತ್ತಾದ ಮೇಲೆ, ಆದಿನ ಬಂದಿದ್ದ ಅಪರಿಚಿತವ್ಯಕ್ತಿಗಳೇ ಈ ದಿವ

ಸವೂ ಬಂದು, ಹಾಕಿದ್ದ ಹಣದಲ್ಲಿ ಕೊಂಚಭಾಗ... ತೆಗೆದುಕೊಂಡು ಮಾತಾಡುತ್ತ ಕುಳಿತರು. ಹಾಗೆ... ಆಶ್ಚರ್ಯದಿಂದ

"ಅದೆಲ್ಲ ಸರಿ! ಆದಿನ ಏನು ಆಯಿತು ಸ್ವಾಮಿ" ಎಂದು ಕೇಳಿದರು.

"ಏನು ಆಗುವುದೇನು! ನೀವು ಹೇಳಿದ... ಯಾರೋ ಹುಡುಗರು ಲೇವಡಿಗೆ ಬರೆದಿದ್ದರೆಂದು ತೋ... ತ್ತದೆ; ಏನೂ ಆಗಲಿಲ್ಲ!"

"ಅದೆ ಸ್ವಾಮೀ! ನಾನು ಹೇಳಲಿಲ್ಲವೇ! ಇದಕ್ಕೆ... ಹೆದರಿಕೊಂಡರೆ—"

"ಅವತ್ತಿನದೇನೋ ಆಯಿತಲ್ಲ. ಈ ದಿವಸ ... ಅಂತಹದೇ ಒಂದು ಕಾಗದ ಬಂದಿದೆ ನೋಡಿ"

ಎಂದು ಜೇಬಿನಲ್ಲಿದ್ದ ಕಾಗದವನ್ನು ಅವರ... ಹಾಕಿದನು.

ಅವರು ಅದನ್ನು ಓದುತ್ತಾ "ಕಳ್ಳಮುಂಡೇಗ... ತಂದು! ಇವರನ್ನು ಬಿಡಬಾರದು. ನಿಮ್ಮ ಹತ್ತಿ... ಪೋಲಿಗಳಿಗೆ ಲೇವಡಿಯೇ! ಸುಮ್ಮನಿರ್ರಿ, ನಾನು, ... ಕಡೂರಿಗೆ ಹೋಗಬೇಕು, ಕೊಂಚ ಕೆಲಸವಿದೆ. ... ಹಿಡೀತೇನೆ! ಬೊಡ್ಡಿಹೈದಗಳನ್ನ. ನನಗೆ, ಈ ಕಾ... ಕೊಟ್ಬಿರಿ."

"ತೆಗೆದುಕೊಂಡು ಹೋಗಿ"

"ಎಲ್ಲಿ! ಆ ಹಿಂದಿನ ಕಾಗದವೇನಾಯಿತು!"

"ಅದು ಪೋಲೀಸರ ವಶದಲ್ಲಿದೆ"

"ಹೋಗಲಿ ಬಿಡಿ! ಇದೊಂದೇ ಸಾಕು. ... ಯೋಚನೆಮಾಡಬೇಡಿ ಸ್ವಾಮೀ! ಪೋಲೀಸನ... ಬೇಡ, ಯಾರೂ, ಬೇಡ" ಎಂದು ಹೇಳಿ ಹೊ... ಹೋದರು.

ಮೂರ್ತಿಗೆ ದಿಗಿಲು ಮಾತ್ರ ತಪ್ಪಲಿಲ್ಲ. ಹೇಗಾ... ಆಗಲಿ, ಪೋಲೀಸಿನವರನ್ನು ಇಟ್ಟಿರಬೇಕೆಂದು ... ಳನ್ನು ಮುಗಿಸಿಕೊಂಡು ಪುನಃ ಇನ್‌ಸ್ಪೆಕ್ಟರ ಹತ್ತಿ... ಹೋಗಿ ಕೇಳಿದನು; ಅದಕ್ಕವರು,

"ಸುಮ್ಮನೆ ಬೆದರಿಕೆ ಕಣ್ರೀ! ನೀವ್ಯಾಕೆ ... ತೀರಿ. ಯಾರು ಏನು ಮಾಡುತ್ತಾರೋ ನೋಡ... ಕೋರ್ಟಿಲ್ಲವೆ? ಲಾ ಇಲ್ಲವೆ? ಅದರಂತೆ, ಮಾಡಿ... ಪ್ರಾಯಶ್ಚಿತ್ತವಾಗುತ್ತೆ. ನಾವು ಪೋಲೀಸನ...

CC-0. Jangamwadi Math Collection. Digitized by eGangotri

ಇಟ್ಟರೆ, ಬರುವವರಿಗೆ ಅಡ್ಡಿಯಾಗುತ್ತೆ. ಅವರು ಬಂದ ಮೇಲೆ ಹಿಡಿಯಬೇಕು. '' ಎಂದು ಬೇಸರದಿಂದ ನುಡಿದು ಬಿಟ್ಟರು.

ಮೂರ್ತಿ ನಿರಾಶನಾಗಿ ಹಿಂತಿರುಗಿದನು.

ಆದಿನ ರಾತ್ರಿ ಯಾರೂ ಬರಲಿಲ್ಲವಾದುದರಿಂದ, ಅವನು ಧೈರ್ಯವಾಗಿ ನಿದ್ದೆಮಾಡಿದನು. ಆದರೂ, ಆಡಿಗಡಿಗೆ ಕಿಟಕಿಯಲ್ಲಿ ಎದ್ದು ನೋಡುತ್ತಿದ್ದನು. ರಾತ್ರಿಯೆಲ್ಲಾ ಪೂರೈಸಿತು. ಏನೂ ವಿಶೇಷವಿಲ್ಲ. ಈ ಮೂರ್ತಿಗೆ ಕಾಗದದಮೇಲೆ ಪೂರ್ಣನಂಬಿಕೆ ತಪ್ಪಿ, ಧೈರ್ಯಹೊಂದಿದವನಾದನು.

೩

ಮತ್ತೆ ಕೆಲವು ದಿನಗಳು ಕಳೆದುವು. ಕಾಗದ ತೆಗೆದುಕೊಂಡು ಹೋದ ಅಪರಿಚಿತ ವ್ಯಕ್ತಿಯ ಸುಳಿವೇ ಇಲ್ಲ. ಆಮೇಲೆ ಒಂದಾನೊಂದು ದಿವಸ ಮೂರ್ತಿ ಆಫೀಸನ್ನು ಮುಗಿಸಿಕೊಂಡು ಮನೆಗೆ ಬಂದು, ತನ್ನ ಕೋಣೆಯ ಮೇಜಿನಮೇಲೆ ನೋಡಿದನು. ಎರಡು ಕಾಗದಗಳು ಇದ್ದುವು. ಒಂದನ್ನು ಒಡೆದುನೋಡಿದನು. ಅದರಲ್ಲಿ:-

'' ಪೋಲಿಗಳು ಇನ್ನೂ ಸಿಕ್ಕಿಲ್ಲ. ಹುಡುಕುತಿದ್ದೇನೆ. ಸುಳಿವು ತಿಳಿದುಬಂದಿದೆ. ಯೋಚನೆಗೆ ಕಾರಣವಿಲ್ಲ. ''

'' ಕಾಶೀನಾಥ ''

ಎಂದಿತ್ತು.

ಮತ್ತೊಂದನ್ನು ಒಡೆದು ನೋಡಿದನು. ಅದರಲ್ಲಿ '' ಹಿಂದೆರಡುದಿನಗಳೂ ಸಾಧ್ಯವಾಗಲಿಲ್ಲ. ಆಚೆ ನಾಡಿದ್ದು ರಾತ್ರಿ........ ...ಖಂಡಿತ. ಎಚ್ಚರಿಕೆ '' ಎಂದು ಬರೆದಿತ್ತು. '' ಓ ಹೋ ! ಈ ಬಾರಿ ಏನು ಹಾಸನವೋ ? ತುಮಕೂರೋ ? '' ಎಂದು ಮೇಲೆ ಮುದ್ರೆ ನೋಡಿದನು. ಎರಡೂ ಅಲ್ಲ '' ಮದರಾಸು. ''

ಮತ್ತೊಂದರ ಮೇಲೇನೋ '' ಕಡೂರು '' ಎಂದಿತ್ತು. ಮೂರ್ತಿಗೆ ಕೋಪ ಹೆಚ್ಚಾಗಿ ಎರಡು ಕಾಗದಗಳನ್ನೂ ತುಂಡು ತುಂಡಾಗಿ, ಹರಿದು, ಕಸದ ಬುಟ್ಟಿಗೆ ಎಸೆದು ಬಿಟ್ಟನು. ಅದರ ಯೋಚನೆಯನ್ನೇ ಬಿಟ್ಟು ತನ್ನ ಕೆಲಸದಲ್ಲಿ ನಿರತನಾಗಿದ್ದನು. ಮೂರನೆಯ ದಿವಸ ಯಾರೋ ಆಫೀಸಿನ ಗುಮಾಸ್ತರ ಜೊತೆಗೆ ಮಾತನಾಡುತ್ತಿದ್ದನು. ಹಾಗೆಯೆ ಅವರು ' ನಿಮ್ಮ ಕಾಗದಗಳ ವಿಚಾರ ಏನು ? ' ಎಂದರು.

' ಅದೇನು. ಮೂರು ದಿನಕ್ಕೆ ಒಂದು ಬರುತ್ತಿರುತ್ತದೆ. '

' ಅದನ್ನು ಹಾಗೆಯೆ ಬಿಡಬಾರದು ಸ್ವಾಮಿ; ಹೇಗಾದರೂ ಮಾಡಿ ಕಳ್ಳರನ್ನು ಹಿಡಿಯಬೇಕು. ಈ ದಿನ ನಿಮ್ಮ ಮನೆ ಹಾಳುಮಾಡುವವರು. ನಾಳೆ ಮತ್ತೊಬ್ಬರ ಮನೆ ಹಾಳುಮಾಡುತ್ತಾರೆ. '

' ಕಾಗದದ ಮೇಲೆ ' ಕಡೂರು ' ಎಂದಿತ್ತು. ನನಗೆ ಗುರುತು ಕಂಡವರ ಕೈಯಲ್ಲಿ ಕಾಗದವನ್ನು ಕೊಟ್ಟು ಕಡೂರಿಗೆ ಕಳುಹಿಸಿದ್ದೇನೆ. ಏನೋ ನೋಡಿ ನಮಗೂ ಗ್ರಹಚಾರ ಕಾಲ. '

' ಅಯ್ಯೋ ! ಬಿಡೀಂದ್ರೇ ಈ ಟೋಳ್ಳು ಬೆದರಿಕೆಯೆಲ್ಲಾ ಏನು ಮಾಡುತ್ತೇ. (ಸ್ವಲ್ಪ ಹೊತ್ತು ಸುಮ್ಮನಿದ್ದು) ಸರಿ. ನೀವು ಯಾರ ಕೈಯಲ್ಲಿ ಕಾಗದಕೊಟ್ಟು ಕಳುಹಿಸಿದ್ದೀರಿ ? '

' ಯಾರೋ ಒಬ್ಬರು ಕೆಲವು ದಿನಗಳ ಹಿಂದೆ ಇಲ್ಲಿ ದುಡ್ಡನ್ನು ಠೇವಣಿ ಇಡಲು ಬಂದಿದ್ದರು. ಅವರು ಕಡೂರಿಗೆ ಹೋಗಬೇಕಾಗಿತ್ತಂತೆ ಏನೋ ಕೆಲಸದ ಮೇಲೆ. ಹಾಗೆಯೆ ನನ್ನ ಕಾಗದವನ್ನೂ ತೆಗೆದುಕೊಂಡು ಹೋದರು. ನಿನ್ನೆಯ ದಿವಸ ಒಂದು ಕಾಗದ ಬರೆದಿದ್ದಾರೆ. '

' ಏನೆಂದು ? '

' ಅದೇ, ಸುಳಿವು ತಿಳಿದು ಬಂದಿದೆ. ಪತ್ತೆ ಮಾಡುತ್ತೇನೆ ಹೆದರಬೇಕಾದದ್ದಿಲ್ಲ– ಅಂತ. '

' ಸಾ....ರಿ ' ಎಂದು ಗುಮಾಸ್ತರು ಹೇಳಿ ಎದ್ದು ಹೋದರು.

ಮಾರನೆಯ ದಿನದಿಂದ ಮೂರ್ತಿಗೆ ಸರಿಯಾಗಿ ನಿದ್ದೆಯೇ ಬರುತ್ತಿದ್ದಿಲ್ಲ. ಸದಾ ಕಾಗದದ ಯೋಚನೆಯನ್ನೇ ಮಾಡುತ್ತಿದ್ದನು. ' ಇರಲಿ ! ನಮ್ಮ ಗ್ರಹಚಾರ ಪರೀಕ್ಷಿಸಿ ಬಿಡೋಣ ' ಎಂದು ಒಂದು ಬಾರಿ ಎಂದುಕೊಳ್ಳುವನು. ಹಾಗೆಯೇ ಮತ್ತೊಂದು ಬಾರಿ ' ಕಾಗದಗಳು ಇದ್ದಿದ್ದರೆ ಚೆನ್ನಾಗಿತ್ತು. ' ಎಂದುಕೊಳ್ಳುವನು. ಕಡೆಗೆಲ್ಲಾ ಬಿಟ್ಟು, ' ಆದುದಾಗಲಿ ' ಈ ಪೋಲಿಗಳಿಗೆಲ್ಲಾ ಹೆದರುವುದೇ ? ಏನು ಮಾಡುತ್ತಾರೋ ಮಾಡಲಿ; ಅಂತೂ ಪೋಲೀಸಿನವರ ಕಿವಿಯಲ್ಲಿ ಒಂದು ಮಾತು ಹಾಕಿದ್ದರಾಯ್ತು. ' ಎಂದು ಸಮಾಧಾನ ಮಾಡಿಕೊಳ್ಳುವನು. ಹೀಗೆಯೆ ಎರಡು ಮೂರು ದಿನಗಳನ್ನು

CC-0. Jangamwadi Math Collection. Digitized by eGangotri

ಕಳೆದನು. ಕಡೆಗೊಂದು ದಿನ ಕಡೂರಿಗೆ ಹೋಗಿದ್ದ ಆ ವ್ಯಕ್ತಿ ಬಂದು, ಮೂರ್ತಿಯ ಮುಂದೆ ಕುಳಿತನು. ಮೂರ್ತಿಯು ' ತಾವು ಹೋದ ಕೆಲಸವೇನಾಯಿತು? ' ಎಂದು ಕೇಳಿದನು.

ಪತ್ತೇದಾರಿ ಮುಂದುವರಿಯುತ್ತಿದೆ. ಕಳ್ಳರ ಸುಳಿವು ತಿಳಿದು ಬಂದಿದೆ. '

' ಯಾರು ಕಳ್ಳರು; ದೊಡ್ಡವರೋ, ಹುಡುಗರೋ ? '

' ನಾನು ಇದು ವರೆಗೂ ವಿಚಾರಿಸಿದ್ದರಲ್ಲಿ ಅವರು ದೊಡ್ಡವರೆಂದೇ ತಿಳಿದು ಬಂದಿದೆ. '

' ಸರಿ ಹಾಗಾದರೆ, ಕೆಲಸ ಕೊಂಚ ಕಷ್ಟವಾಗ ಬಹುದು. '

' ಕಷ್ಟವೇನೂ, ಇಲ್ಲ. ಆದರೆ ನಿಮ್ಮ ಸಹಾಯ ಕೊಂಚ ಬೇಕಾದೀತು. '

' ಏನು ಬೇಕು ಹೇಳಿ, ಮಾಡಿಕೊಡಲು ಸಿದ್ಧನಾಗಿ ದ್ದೇನೆ. '

' ಏನೂ ಇಲ್ಲ. ಪೋಲೀಸಿನವರಿಗೆ ತಿಳಿಸಿದ್ದೇನೆ. ಅವರು, ನಿರ್ಧಾರ ಮಾಡಿಕೊಂಡು ಇನ್ನೆರಡು ಮೂರು ದಿನಗಳಲ್ಲಿ, ಆ ಗ್ಯಾಂಗನ್ನು ಅರೆಸ್ಟು ಮಾಡುತ್ತಾರೆ. ಆಗ ನಿಮ್ಮ ಕೈಫಿಯತ್ತು ಬೇಕಾಗಬಹುದು. ಆದುದ ರಿಂದ ನಾನು ಟೆಲಿಗ್ರಾಂ ಕೊಡುತ್ತೇನೆ; ತಕ್ಷಣ ಹೊರಟು ಬರಬೇಕು. '

' ಓಹೋ! ಆಗಲಿ ಅದಕ್ಕೇನು ಬರುತ್ತೇನೆ '

' ಸರಿ ! ನಾನು ನಿಮಗೊಂದು ಉತ್ತರ ಬರೆದಿದ್ದೆ. ಅದು ತಲುಪಿತೋ ? '

' ಅದೂ ತಲುಪಿತು. ಅದರಕೂಡ ಮತ್ತೊಂದು ಕಾಗ ದವೂ ತಲ್ಪಿತು. '

' ಮತ್ತೊಂದು ಕಾಗದವಾವುದು? ನಾನು ಬರೆದದ್ದು ಒಂದೇ ಕಾಗದವಲ್ಲಾ ! '

' ನೀವು ಬರೆದದ್ದೇನೋ ಒಂದೇ ಕಾಗದ. ಆದರೆ, ಈ ಬಾರಿ ಮದರಾಸಿನಿಂದ, ಮತ್ತೊಂದು ಮೂಗುಕಾಗದ ಬಂದಿತ್ತು. '

'ಆದರೆ ! ಅದೆಲ್ಲಿ ? '

' ನನಗೆ ರೇಗಿತು, ಹರಿದು ಬೀಸಾಡಿದೆ '

ಆಯ್ಯೋ ! ಹೋಗಲೀ ಬಿಡಿ, ಇದ್ದಿದ್ದರೆ ಚೆನ್ನಾ ಗಿತ್ತು '

' ನೀವು ಕಡೂರಿಗೆ ಹೊರಡುವುದು ಯಾವಾಗ ? '

' ಇಗೋ ! ಈ ಮಧ್ಯಾನ್ಹ '

'ಸರಿ, ನೀವು ಅವಶ್ಯಬಿದ್ದರೆ ಟೆಲಿಗ್ರಾಂ ಕೊಡಿ, ನಾನು ಬರುತ್ತೇನೆ '

' ಆಗಲಿ ! ಆದರೆ ನನ್ನದೊಂದು ಮಾತು '

' ಏನು '

'ನಿಮ್ಮ ಕೆಲಸಕ್ಕಾಗಿ ಹೆಣಗುತ್ತಿದ್ದೇನೆ. ಖರ್ಚಿಗೆ ಸ್ವಲ್ಪ ಹಣವಿದ್ದರೆ ಕೊಟ್ಟಿರಬೇಕು ! ಬಹಳ ಉಪಕಾರ ವಾಗುತ್ತದೆ. '

' ಆಗಲಿ ಅದಕ್ಕೇನು ! ತೆಗೆದುಕೊಳ್ಳಿ' ಎಂದು ಒಂದು ಹತ್ತುರೂಪಾಯಿಯ ನೋಟನ್ನು ಅವರಿಗೆ ಕೊಟ್ಟನು. ಅವರು ಹೊರಟುಹೋದರು.

ಅಪರಿಚಿತ ವ್ಯಕ್ತಿಯು ಕಡೂರಿಗೆ ಹೋದನೋ, ಇನ್ನೆ ಲ್ಲಿಗೆ ಹೋದನೋ, ಗೊತ್ತಿಲ್ಲ. ಅಂತೂ ಮಾರನೆಯ ದಿವಸ ಬೆಳಿಗ್ಗೆ 'ತಕ್ಷಣ ಹೊರಡಬೇಕು'ಎಂದು ಮೂರ್ತಿಗೆ ಟೆಲಿಗ್ರಾಂ ಬಂದೇ ಬಂತು. ಅದರಂತೆಯೇ ಮೂರ್ತಿಯು ಖರ್ಚಿಗೆ ಕೆಲವು ರೂಪಾಯಿಗಳನ್ನು ತೆಗೆದುಕೊಂಡು, ಮಧ್ಯಾನ್ಹದ ರೈಲಿಗೆ ಕಡೂರಿಗೆ ಪ್ರಯಾಣ ಮಾಡಿದನು. ಅವನಿಗೆ ಬಂದಿದ್ದ ಮೂರನೆಯ ಮೂಗುಕಾಗದದ ಪ್ರಕಾರ, ಆ ರಾತ್ರಿಯೇ....ಆಗಬೇಕಾಗಿತ್ತು. ಮೂರ್ತಿ ಹೊರಡುವಾಗ ಆದರ ಯೋಚನೆಯನ್ನೇ ಮಾಡಲಿಲ್ಲ. ' ಕಳ್ಳರು ಸಿಕ್ಕುತ್ತಾರೆ. ಅವರನ್ನು ಗ್ರುಹಚಾರ ಬಿಡಿಸು ತ್ತೇನೆ' ಎಂದು ಕೋಪವನ್ನು ಸವಿಯುತ್ತಾ ಹೊರಟನು.

ಕಡೂರನ್ನು ತಲುಪಿದ ಕ್ಷಣವೇ ಮೂರ್ತಿ ಒಂದು ಹೋಟೇಲಿನಲ್ಲಿ ಇಳಿದುಕೊಂಡು, ಅಲ್ಲಿದ್ದವರನ್ನು 'ಸ್ವಾಮಿ! ಇಲ್ಲಿ ಕಾಶೀನಾಥರೆಂಬುವರಾರಾದರೂ ಇದ್ದಾರೆಯೇ ?' ಎಂದು ಕೇಳಿದನು. ಅದಕ್ಕವರು

" ಕಾಶೀನಾಥರೂ ಇಲ್ಲ ! ರಾಮೇಶ್ವರನಾಥರೂ ಇಲ್ಲ!" ಎಂದು ಹೇಳಿಬಿಟ್ಟರು. " ಇರಲಿ ನಾನೇ ಹುಡುಕು ತ್ತೇನೆ." ಎಂದುಕೊಂಡು, ಹುಡುಕಲು ಹೊರಟನು. ಯಾರು ಯಾರನ್ನೋ ಕೇಳಿದನು. ಒಬ್ಬರೂ ತಿಳಿಸಲಿಲ್ಲ. ಎಲ್ಲಾ ಹೋಟೇಲುಗಳನ್ನೂ ಹುಡುಕಿದನು.ಅವರ ಸುಳಿವೇ ಇಲ್ಲ. ಇವರನ್ನು ಹುಡುಕುವುದು ಇನ್ನು ಪ್ರಯೋಜನ ವಿಲ್ಲವೆಂದು ತಿಳಿದು ಯಾರೋ ಒಬ್ಬರನ್ನು " ಸ್ವಾಮಿ! ಇಲ್ಲಿ ಕೆಲವು ದಿನಗಳಿಂದ ಯಾರಾದರೂ ಕಳ್ಳರ ವಿಚಾರ

CC-0. Jangamwadi Math Collection. Digitized by eGangotri

ನಿಮ್ಮ ಕಿವಿಗೆ ಬೀಳುತ್ತಿದೆಯೇ ?'' ಎಂದು ವಿಚಾರಿಸಿದನು. ಅದಕ್ಕವರು "ನಮ್ಮೂರಿಗೆ ಇಲ್ಲದ್ದೆಲ್ಲಾ ಯಾತಕ್ಕೆ ತರುತ್ತೀರಿ ಸ್ವಾಮಿ ! ನಮ್ಮೂರಿನವರೆಲ್ಲರೂ ಸೌಖ್ಯವಾಗಿದ್ದಾರೆ; ಸದ್ಯ ನಮಗೆ, ಕಳ್ಳರೂ ಬೇಡ, ಯಾರೂ ಬೇಡ. ಸುಮ್ಮನೆ ಹೋಗಿ !'' ಎಂದು ಅಲಕ್ಷ್ಯದಿಂದ ನುಡಿದುಬಿಟ್ಟನು.

ಮೂರ್ತಿಯು ಆ ಅಪರಿಚಿತನೆ ಎಲ್ಲಿಯೋ ಮೋಸ ಮಾಡಿದ್ದಾನೆಂದು ತಿಳಿದು, ನಿರಾಶನಾಗಿ, ಹೊಟೇಲಿಗೆ ಹಿಂತಿರುಗಿ, ಯೋಚನೆ ಮಾಡುತ್ತಾ ಮಲಗಿದನು. ರಾತ್ರಿಯೆಲ್ಲಾ ಸರಿಯಾಗಿ ನಿದ್ರೆಯೇ ಬರಲಿಲ್ಲ. ಏನೇನೋ ಕೆಟ್ಟ ಕನಸುಗಳು ಬಿದ್ದುವು. ಮಾರನೆಯ ದಿವಸ ಬೆಳಗಿನಲ್ಲಿ ಎದ್ದು, ಸ್ನಾನ ಮಾಡಿ, ಕಾಫಿ ಕುಡಿಯುತ್ತ ಕುಳಿತಿರಲು, ಸುಮಾರು ಒಂಬತ್ತು ಘಂಟೆಯ ಹೊತ್ತಿಗೆ ತಂತಿಯವನು ಬಾಗಿಲಬಳಿ ಬಂದು ನಿಂತು "ಸಾರ್, "ಮೂರ್ತಿಗಳು'' "ಟೆಲಿಗ್ರಾಮ್'' ಎಂದು ಕೂಗಿದನು. ಮೂರ್ತಿ "ಸರಿ, ಕಾಗದ ಬರೆದದ್ದೆಲ್ಲಾ ಆಯಿತು. ಇನ್ನು ಟೆಲಿಗ್ರಾಮ್ ಗಳಿಗೆ ಆರಂಭವಾಯಿತೋ ? ಇರಲಿ ಆ ವ್ಯಕ್ತಿ ನನ್ನ ಆಫೀಸಿನಲ್ಲಿ ಠೇವಣಿ ಇಟ್ಟಿದ್ದಾನೆ. ಹೇಗಿದ್ದರೂ, ಹಣ ತೆಗೆದುಕೊಳ್ಳುವುದಕ್ಕೆ ಅಲ್ಲಿಗೇ ಪುನಃ ಬರಬೇಕು ಆಗ ಅವನಿಗೆ ಗತಿ ಕಾಣಿಸುತ್ತೇನೆ'' ಎಂದುಕೊಂಡು, ಹೊರಗೆ ಬಂದು, ಟೆಲಿಗ್ರಾಮ್ ತೆಗೆದುಕೊಂಡು ಒಡೆದು ನೋಡಿದನು. ಒಳಗೆ ಹೀಗಿತ್ತು—

"Theft in your house. Shooting outrage. Start immediately''

"**Police Inspector**''

ಎಂದು ಬರೆದಿತ್ತು. ಮೂರ್ತಿ ನೋಡಿದೊಡನೆಯೇ ಅದನ್ನು ನಂಬಲಿಲ್ಲ. ಎಲ್ಲಿಯೊ ಆ ಕಳ್ಳರೇ ಬೇಕೆಂದು ಪೋಲೀಸು ಇನ್ಸ್ಪೆಕ್ಟರ ಹೆಸರಿನಲ್ಲಿ ತಂತಿಕೊಟ್ಟಿರಬೇಕೆಂದು ತಿಳಿದು ಬೆಂಗಳೂರಿಗೆ ಹೊರಡಬೇಕೆಂದು ನಿಶ್ಚಯಿಸಿದನು. ಅದರಂತೆಯೇ ಹೊಟೇಲಿನವರಿಗೆ ಕೊಡಬೇಕಾಗಿದ್ದ ದುಡ್ಡನ್ನು ಕೊಟ್ಟು, ಸಾಮಾನುಗಳನ್ನು ತೆಗೆದುಕೊಂಡು ರೈಲ್ವೆ ಸ್ಟೇಷನ್ನಿಗೆ ಬಂದನು. ಅಲ್ಲಿ ಅಂಚೆಯವನು ಯಾವುದೋ ಒಂದು 'ನಾಟ್ ಪೇಡ್' ಕಾಗದವನ್ನು ಮೂರ್ತಿಯ ಕೈಗೆ ಕೊಟ್ಟನು. ಅದನ್ನು ಮೂರ್ತಿ ಒಡೆದು ನೋಡಿಕೊಂಡು, ರೇಗಿ, ಹುಚ್ಚನಂತೆ ಕೂಗಾಡುತ್ತ ಅಂಚೆಯವನಿಗೂ ಎರಡಾಣೆ ಕೊಡದೆ, ರೈಲಿಗೂ ಟಿಕೇಟು ಕೊಳ್ಳದೆ, ಹತ್ತಿ ಬೆಂಗಳೂರಿಗೆ ಹೊರಟು ಬಂದೇ ಬಿಟ್ಟನು.

ದಾರಿಯಲ್ಲಿ ಬರುತ್ತ 'ಮನೆಯಲ್ಲಿ ಏನಾಗಿದೆಯೋ' ಎಂದುಕೊಳ್ಳುತ್ತಿದ್ದನು. ಅಷ್ಟರಲ್ಲಿಯೆ ಗಾಡಿ, ಕಣ್ಣಾಸ್ಪತ್ರೆ ಹತ್ತಿರಕ್ಕೆ ಬಂತು. ಅಲ್ಲಿ ಒಬ್ಬ ಅಂಚೆಯವನು ಹೋಗುತ್ತಿದ್ದುದನ್ನು ಕಂಡನು. ಇದಕ್ಕಿದ್ದ ಹಾಗೆಯೇ ಆ ಮೂರನೆಯ ಮೂಗುಕಾಗದವನ್ನು ಜ್ಞಾಪಿಸಿಕೊಂಡನು. ಅಲ್ಲಿ ಮೂರ್ಛೆಹೋದಂತವನಾಗಿ, ಯೋಚಿಸುತ್ತಿರಲು ಗಾಡಿ ಅವನ ಮನೆಬಾಗಿಲಿಗೇ ಬಂದು ನಿಂತಿತು.

ಅಲ್ಲೇನು! ಗದ್ದಲವೋ ಗದ್ದಲ ! ಸುಮಾರು ೨೦೦–೩೦೦ಜನ ನೆರೆದುಬಿಟ್ಟಿದ್ದಾರೆ! ಮಗನ ಶವವನ್ನು ಹೊರಕ್ಕೆ ತಂದಿಟ್ಟಿದ್ದಾರೆ. ಅದರಲ್ಲಿ ಗಾಯಗಳಾಗಿ ರಕ್ತ ಹರಿಯುತ್ತಿದೆ. ಮೂರ್ತಿಯ ಹೆಂಡತಿ ಮುಂದೆ ನಿಂತು ಗೋಳಿಡುತ್ತಿದ್ದಾಳೆ. ಹಂಡುಗಳೆಲ್ಲಾ ಒಗೆಯಲ್ಪಟ್ಟಿವೆ. ಆ ದೃಶ್ಯವನ್ನು ನೋಡಿ ಮೂರ್ತಿಯ ಎದೆ ತಣ್ಣಗಾಯಿತು.

ಮುಂದೆ ನಡೆಯಬೇಕಾದುದೆಲ್ಲಾ ನಡೆಯಿತು. ಖೂನಿ, ಕಳ್ಳತನಗಳು ನಡೆದ ಒಂದೆರಡು ತಿಂಗಳಿನವರೆಗೂ ಪೋಲೀಸಿನವರು ಹಗಲೂ ರಾತ್ರಿ ಮೂರ್ತಿಯ ಮನೆಯ ಹತ್ತಿರ ಇರುತ್ತಲಿದ್ದರು. ಅಂದಿನಿಂದ ಜನರ ಬಾಯಲ್ಲೆಲ್ಲಾ ಇದೊಂದುಮಾತು. ಮೂರ್ತಿಯ ಮನೆಯಲ್ಲಾದರೋ ಎಂದಿನಂತೆ ಕಳೆಯೆ ಇಲ್ಲ. ಎಂದು ನೋಡಿದರೂ ಸಂತೋಷದ ಚಿಹ್ನೆಯೇ ತೋರಿಬರುತ್ತಿರಲಿಲ್ಲ.

ಇತ್ತಕಡೆ, ಕಳ್ಳರನ್ನು ಹಿಡಿಯಬೇಕೆಂದು ಬಲವಾದ ಪತ್ತೆದರದೂದು ನಡೆಯುತ್ತಿತ್ತು. ಆ ಅಪರಿಚಿತವ್ಯಕ್ತಿಯ ವಿಳಾಸವನ್ನು ಮೂರ್ತಿ ಆಫೀಸಿನಿಂದ ತಿಳಿದು ಹುಡುಕಿದರು. ಆಸಾಮಿಪತ್ತೆಯೇ ಇಲ್ಲ. ಆರುತಿಂಗಳಾಯಿತು. ಆ ಅಪರಿಚಿತವ್ಯಕ್ತಿಯೇ ಒಂದಾನೊಂದು ದಿನ ಮೂರ್ತಿಯ ಆಫೀಸಿಗೆ ಬಂದು ಹಣ ವಾಪ್ಸು ಕೇಳಿದನು. ಮೂರ್ತಿಯು ಮುಖವನ್ನು ದೃಷ್ಟಿಸಿನೋಡಲು ಗುರುತೇ ಕಾಣಲಿಲ್ಲ. ಮೂರ್ತಿ ಸಂಶಯದಿಂದ 'ಇರಿ ಸ್ವಲ್ಪಬಂದೆ' ಎಂದು ಹೇಳಿ ಪೋಲೀಸು ಸ್ಟೇಷನ್ನಿನ ಕಡೆಗೆ ಹೊರಟನು. ಪೋಲೀಸು ಇನ್ಸ್ಪೆಕ್ಟರೂ, ಇತರರೂ ಬಂದು, ಆ ಮನುಷ್ಯನನ್ನು ಹಿಡಿದರು.

ಸರಿ, ಇನ್ನೇನು ! ವಿಚಾರಣೆ ! ಎಲ್ಲ ಹೊರಗೆಬಿತ್ತು. ಆ ಅಪರಿಚಿತವ್ಯಕ್ತಿ ಯಾರು ಗೊತ್ತೇ ? ಸುಮಾರು ಹತ್ತು ವರ್ಷಗಳ ಹಿಂದೆ ದೇಶಾಂತರಕ್ಕೆ ಓಡಿಹೋಗಿದ್ದ ಮೂರ್ತಿಯ ದಾಯಾದಿಯೊಬ್ಬ !! ಮತ್ತಾರೂ ಅಲ್ಲ !



CC-0. Jangamwadi Math Collection. Digitized by eGangotri

# ಮನೆಯ ಸೊಬಗನ್ನು ಹೆಚ್ಚಿಸುವಿಕೆ

ಶ್ರೀ. ವಿ. ಆರ್. ಅಣ್ಣಾಸ್ವಾಮಿರಾವ್. ಕಸಬಿನ ಚಿತ್ರಕಾರ. ಮುಂಬಯಿ

ಸುಂದರವಾದ ಗೃಹವು ಶ್ರೀಮಂತರಿಗೆ ಮಾತ್ರ ಯೋಗ್ಯವೆಂಬ ಭಾವನೆಯು ಶುದ್ಧ ತಪ್ಪು. ಹುಲ್ಲಿನ ಜೋಪಡಿಯನ್ನು ಅಂದವಾಗಿಡುವುದೂ, ಗಾರೆಯ ಮನೆಯನ್ನು ಅಸಹ್ಯಕರವಾಗಿಡುವುದೂ ನಮ್ಮನ್ನಲ್ಲವೇ ಅವಲಂಬಿಸಿರುವುದು ? ಪ್ರತಿಯೊಬ್ಬರಿಗೂ ಸುಂದರವಾದ ವಸ್ತುಗಳನ್ನು-ಸುಂದರವಾದ ಉಡುಪುಗಳನ್ನು-ಸುಂದರವಾದ ಮನೆಗಳನ್ನು ಪಡೆಯಬೇಕೆಂಬ ಕುತೂಹಲವಿರುವುದು ಸ್ವಭಾವಿಕವಾದದ್ದು.

ಈ ಆಶೆಯನ್ನು ಅನುಸರಿಸಿ ಚಿತ್ರಕಾರರು ಅನೇಕ ತೆರದ ನಕ್ಷೆಗಳನ್ನು ಆಯಾ ವಸ್ತುವಿನ ಸೊಬಗನ್ನು ಹೆಚ್ಚಿಸುವಂತೆ ತಯಾರಿಸಿದ್ದಾರೆ. ಈ ವಿಷಯದಲ್ಲಿ ಮಾತ್ರ ನಮ್ಮ ಜನಗಳು ಪಾಶ್ಚಿಮಾತ್ಯರಿಗಿಂತ ಬಹಳ ಮುಂದರಿದಿದ್ದಾರೆ. ಕಲೆಯಲ್ಲಿ ಕೈಸೆ-ರಿತವರಾದ ನಮ್ಮ ದೇಶದವರು ಊಟಮಾಡುವ ತಟ್ಟೆ ಮೊದಲು - ಅಡಿಗೆಯ ಪಾತ್ರೆಗಳು-ತಲೆಬಾಚಿಕೊಳ್ಳುವ ಹಣಿಗೆ-ಬೆತ್ತ-ಉಡಿಗೆಗಳು - ನೀರಿನತಂಬಿಗೆ - ಕುರ್ಜಿ - ಮೇಜು - ಮನೆಯ ಬಾಗಿಲು - ಕಿಟಿಕೆ - ಗಾಡಿಯ ಚಕ್ರ - ಸಾಲುದುದಕ್ಕೆ ಮಣ್ಣಿನ ಮಡಿಕೆ ಕುಡಿಕೆಗಳು ಏನೆಲ್ಲವನ್ನೂ ನಕ್ಷೆಗಳಿಂದ ತುಂಬಿಸಿರುತ್ತಾರೆ.

ನಮ್ಮ ಸ್ತ್ರೀಯರಾದರೋ ಹಬ್ಬ ಹರಿದಿನಗಳಲ್ಲಿಯೂ ಮದುವೆ ಮುಂಜಿಗಳಲ್ಲಿಯೂ ನಾ ಹೆಚ್ಚು-ನೀ ಹೆಚ್ಚು ಎಂಬ ಮೇಲಾಟದಿಂದ ನೆಲಗಳ ಮೇಲೆ, ಬಣ್ಣಗಳ ಪುಡಿಯಿಂದಲೂ-ಅಕ್ಕಿಯ ಹಿಟ್ಟು, ಕೆಂಮಣ್ಣು ಮತ್ತು ರಂಗವಲ್ಲಿಗಳಿಂದಲೂ ಲೆಕ್ಕವಿಲ್ಲದಷ್ಟು ವಿಧವಿಧದ ನಕಾಶೆಗಳನ್ನು ಬರಿಯುವುದು ವಾಡಿಕೆಯಾಗಿದೆ. ಇವುಗಳನ್ನೆಲ್ಲ ನೋಡಿದರೆ ಹಿಂದುಸ್ಥಾನದಲ್ಲಿ ಕಲೆಯು ಕ್ಷೀಣತೆ ಹೊಂದಿದ್ದರೂ ಇನ್ನೂ ರೂಪಾಂತರದಿಂದ ಚಿರಾಯುವಾಗಿಯೇ ಇದೆಯೆಂದು ಧಾರಳವಾಗಿ ಹೇಳಬಹುದು. ಅನೇಕ ವೇಳೆಗಳಲ್ಲಿ ಈ ನಕಾಶೆಗಳು ಶಾಸ್ತ್ರವಿರುದ್ಧವಾಗಿ ಬರಿ ಪೂರ್ವಾಚಾರವನ್ನೇ ಅವಲಂಬಿಸಿರುತ್ತವೆ. ಜನಗಳಿಗೆ ತಮ್ಮ ಹಿರಿಯರು ಮಾಡಿದ್ದರಲ್ಲಿರುವ ಸಂಪ್ರದಾಯ ಶರಣತೆಯೇ ಈ ಸ್ಥಿತಿಗೆ ಕಾರಣ.

ಉದ್ಯೋಗ ಮತ್ತು ಕೈಗಾರಿಕೆಯಲ್ಲಿ ಸಂಪ್ರದಾಯ ಶರಣತೆ ಬಂದಲ್ಲಿ ಅದು ನಿಶ್ಚಯವಾಗಿ ಕ್ಷೀಣತೆ ಹೊಂದುತ್ತದೆ. ಕಲಾ ಮತ್ತು ಕೈಗಾರಿಕೆಯು ದಿನೇ ದಿನೇ ಅಭಿವೃದ್ಧಿಯಾಗುತ್ತಿರುವ ಈ ಪ್ರಪಂಚದಲ್ಲಿ, ಮುಂದುವರಿಯದ ವಸ್ತುಗಳಿಗೆ ಸ್ಥಳವೇ ಇಲ್ಲ. ಆದುದರಿಂದ ನಕಾಶೆ-ಚಿತ್ರಗಳನ್ನು ಈಗಿನ ಜನರ ರುಚಿ- ಅಭಿಲಾಷೆಯನ್ನನುಸರಿಸಿ ತಯಾರಿಸಬೇಕು. ಶಿಲ್ಪಶಾಸ್ತ್ರಕ್ಕೆ ವ್ಯತಿರಿಕ್ತವಾಗಿ ರಚಿಸಿದ ಮೂರ್ತಿಗಳು ನೋಟಕ್ಕೆ ಎಷ್ಟು ಅಸಹ್ಯವೋ ಹಾಗೆಯೇ ನಕಾಶೆಗಳಿಗೆ ಇರಬೇಕಾದ ಗುಣಗಳನ್ನು ಬಿಟ್ಟು ಬರೆದ ಚಿತ್ರವೂ ದೋಷಗಳಿಂದ ಕೂಡಿ ನೋಟಕರಿಗೆ ಅಸಹ್ಯವನ್ನುಂಟುಮಾಡುತ್ತದೆ.

ನಕಾಶೆಗಳನ್ನು ಯಾವ ತೆರದಲ್ಲಿ ಬರೆಯಬೇಕು ? ಅವುಗಳನ್ನು ಹೇಗೆ ಸುಲಭವಾಗಿ ಕಲಾಜ್ಞಾನವಿಲ್ಲದವರೂ ಸಹ ಉಪಯೋಗಿಸಿಕೊಳ್ಳಬಹುದು ? ಎಂಬ ಅಂಶವನ್ನು ತಿಳಿಸುವುದೇ ಈ ನನ್ನ ಲೇಖನದ ಉದ್ದೇಶ. ಪ್ರಕೃತದಲ್ಲಿ ಚಿತ್ರಗಳಿಂದ ಮನೆಯ ಸೊಬಗನ್ನು ಹೇಗೆ ಹೆಚ್ಚಿಸಬಹುದೆಂಬ ಅಂಶವನ್ನು ಸ್ವಲ್ಪ ಚರ್ಚಿಸೋಣ. ಶಾಸ್ತ್ರಪ್ರಕಾರ ನೋಡಿದರೆ, ಮನಸ್ಸಿಗೆ ಬಂದ ನಕಾಶೆ - ಚಿತ್ರಗಳನ್ನು ಮನಸ್ಸಿಗೆ ಬಂದ ಎಡೆಗಳಲ್ಲಿ ತೆಗೆಯಲು ಆಗುವುದಿಲ್ಲ. ಕಟ್ಟಡದ ಭಾವವನ್ನರಿತು ಅದಕ್ಕೆ - ಅನುಗುಣವಾದ

CC-0. Jangamwadi Math Collection. Digitized by eGangotri

ಪಟ್ಟಿ – ಮೂಲೆಯ ತ್ರಿಕೋಣ – ಚೌಕ – ಅಷ್ಟಮೂಲೆ ಚೌಷಷ್ಟ ಇವೇ ಮುಂತಾದ ಆಕಾರ ಉಳ್ಳ ನಕ್ಷೆಗಳನ್ನು ತೆಗೆಯಬೇಕು.

ಒಂದೇ ಬಣ್ಣದ ಗೋಡೆಯು ನೋಟಕ್ಕೆ ಬೇಸರವನ್ನುಂಟುಮಾಡುತ್ತದೆ. ಅದರ ಮೇಲೆ ಹಕ್ಕಿ – ಹೂವು ಹಣ್ಣುಹಂಪಲುಗಳೇ ಉಳ್ಳ ಚಿತ್ರಗಳನ್ನು ರೇಖಿಸಿದುದೇ ಆದರೆ ಗೋಡೆಯ ಸೊಬಗು ಹೆಚ್ಚಾಗುವುದಲ್ಲದೆ, ಆ ಕೊಠಡಿಯಲ್ಲಿರುವ ಎಿಕ್ಕ ಪದಾರ್ಥ ಮತ್ತು ಚಿತ್ರಗಳಿಗೂ ಕಾಂತಿಯನ್ನು ಕೊಡುತ್ತದೆ. ಐಶ್ವರ್ಯವಂತರ ಮನೆಯ ಗೋಡೆಗಳಿಗೆ, ಸುಣ್ಣಕ್ಕೆ ಬದಲಾಗಿ ಎಣ್ಣೆಯ ಬಣ್ಣವನ್ನು ಹಚ್ಚಿಸುತ್ತಾರೆ. ಇದರಿಂದ ಗೋಡೆಯು ಮಿಂಚುವುದಲ್ಲದೆ, ಅದರ ಬಾಳಿಕೆಯೂ ಹೆಚ್ಚುವುದು. ಎಣ್ಣೆಯ ಗೋಡೆ–ಮತ್ತು ಸುಣ್ಣದ ಗೋಡೆಗಳನ್ನರಿತು ಅಲ್ಲಲ್ಲಿ ಯುಕ್ತವಾದ ಬಣ್ಣದಿಂದಲೇ ಚಿತ್ರಗಳನ್ನು ಬರೆಯಬೇಕು.

ಕುಳಿತುಕೊಳ್ಳುವ–ಮಲಗುವ ಕೊಠಡಿಗಳಿಗೆ ಉಪಯೋಗಿಸುವ ನಕಾಶೆ, ಅಡಿಗೆ–ಬಚ್ಚಲುಮನೆಗಳಿಗೆ ಉಪಯೋಗಿಸುವ ನಕಾಶೆ, ರಾಜರುಗಳ ಸಭಾಮಂಟಪಕ್ಕೆ ಚಿತ್ರಿಸುವ ನಕಾಶೆ, ಹೀಗೆ ನಕಾಶೆಗಳಲ್ಲಿ ಹಲವು ಬಗೆಗಳುಂಟು. ಸಿದ್ಧಗೊಳಿಸಿದ ಎಲ್ಲ ಬಗೆಯ ನಕ್ಷೆಗಳನ್ನೂ ಬೊಂಬಾಯಲ್ಲಿರುವ "ಬಾಂಬೆ ಸ್ಟೇಷನರಿ ಮಾರ್ಟ್" (Bombay Stationary Mart) ಮತ್ತು "ಜೆ. ವಿ. ನವಲಾಖಿ" (J. V. Navalakhi) ಈ ಕಂಪನಿಯವರಲ್ಲಿ ಬಹಳ ಸುಲಭ ಬೆಲೆಗೆ ಪಡೆಯಬಹುದು. ಯಾವ ಯಾವ ಕೋಣೆಗೆ ಯಾವ ಯಾವ ನಕ್ಷೆಗಳನ್ನು ಉಪಯೋಗಿಸಬೇಕೆಂಬ ವಿವೇಕವು ಅಭ್ಯಾಸದಿಂದ ಬರತಕ್ಕುದಾದ್ದರಿಂದ ಅಲ್ಲಿಯತನಕ ನಕಾಶೆಗಳನ್ನು ಕಾಗದದ ಮೇಲೆ ರೇಖಿಸಿ ನೋಡಿ ಬಳಿಕ ಗೋಡೆಗಳ ಮೇಲೆ ಪ್ರಯೋಗಿಸುವುದು ಒಳ್ಳೆಯದು.

"ಸ್ಟೆನ್‌ಸಿಲ್" ಗಳನ್ನಾದರೋ ಉಪಯೋಗಿಸುವುದು ಬಹಳ ಸುಲಭ. ಅಭ್ಯಾಸವಿಲ್ಲದವರೂ ಬಹಳ ಸುಲಭವಾದ ಈ ಕೆಳಗಿನ ನಿಯಮಗಳನ್ನನುಸರಿಸಿದಲ್ಲಿ ಸೊಬಗಿನ ನಕಾಶೆಗಳನ್ನು ರಂಗಿಸಬಹುದು. ಈ ಸ್ಟೆನ್‌ಸಿಲ್‌ಗಳನ್ನು ಬಹಳ ತೆಳುವಾ ಯೂ–ಬಾಳಿಕೆ ಬರುವಂತಹದೂ ಆದ ಎಣ್ಣೆಯ ಕಾಗದದಲ್ಲಿ ತಯಾರಿಸಿರುತ್ತಾರೆ. ಈ ಕಾಗದಕ್ಕೆ ಮಣಿಲಾ (Manila) ಅಥವಾ ಟ್ಯಾಗ್ ಬೋರ್ಡ್ (Tag Board) ಎಂದು ಕರೆಯುತ್ತಾರೆ. ಇದನ್ನು ಹರಳೆಣ್ಣೆಯ ಸಂಯೋಗದಿಂದ ಅನುಗೊಳಿಸಿರುವುದರಿಂದ ಈ ಕಾಗದದ ಮೇಲೆ ನಾವು ಎಣ್ಣೆಯ ಅಥವಾ ಸಾಧಾರಣ ಬಣ್ಣಗಳನ್ನು ಉಪಯೋಗಿಸಿದರೂ ಈ ಕಾಗದ ಬಣ್ಣವನ್ನು ಹೀರಿಕೊಳ್ಳುವುದಿಲ್ಲ.

'ಸ್ಟೆನ್‌ಸಿಲ್' ಗಳ ಉಪಯೋಗದ ಸಲುವಾಗಿಯೇ ಎಣ್ಣೆ–ಬಣ್ಣ ಗಿಡ್ಡವಿದ್ದ ಒರಟದ ಕೂದಲುಗಳುಳ್ಳ ಕುಂಚು ಇವುಗಳನ್ನು ತಯಾರಿಸಿದ್ದಾರೆ. ಇದಲ್ಲದೆ ಬಣ್ಣಗಳು ಸುಮ್ಮನೆ ಹಾಳಾಗಿಹೋಗದಿರುವಂತೆಯೂ ನಮಗೆ ಎಷ್ಟು ಬೇಕೋ ಅಷ್ಟೇ ಬಣ್ಣಗಳನ್ನು ಉಪಯೋಗಿಸುವಂತೆಯೂ ಹಾಗೆ ಅನುಕೂಲವಾದ ಸಣ್ಣ ಸಣ್ಣ ಕೊಳವೆಗಳಲ್ಲಿ ಹಾಕಿದ್ದ ಬಣ್ಣಗಳು ಮಾರಲಿಕ್ಕೆ ಸಿಕ್ಕುತ್ತವೆ. ಕೆಲವು ಸಂದರ್ಭಗಳಲ್ಲಿ ಬಣ್ಣಗಳು ಗಟ್ಟಿಯಾಗುವುದುಂಟು. ಆವಾಗ ಅವುಗಳನ್ನು 'ಸ್ಟೆನ್‌ಸಿಲ್ ಮಿೂಡಿಯಮ್' (Stencil Medium) ಸಹಾಯದಿಂದ ಎಷ್ಟು ತೆಳ್ಳಗೆ ಬೇಕಾದರೂ ಮಾಡಿಕೊಳ್ಳಬಹುದು.

ಸ್ಟೆನ್‌ಸಿಲ್—ಬಣ್ಣ ಮತ್ತು ಕುಂಚುಗಳನ್ನು ಅಣಿಮಾಡಿಕೊಂಡನಂತರ ಗೋಡೆಯ ಯಾವ ಭಾಗದಲ್ಲಿ ಇವುಗಳನ್ನು ಉಪಯೋಗಿಸಬೇಕೆಂಬುದನ್ನು ನಿರ್ಧರಿಸಬೇಕು. ನಕಾಶೆಯ ಪಟ್ಟಿಗಳನ್ನು ಸರಿಯಾದ ಸ್ಥಳದಿಂದ ಅರ್ಧಅಂಗುಲ ತಪ್ಪಿ ರೇಖಿಸಿದರೆಯೂ ಬಹಳಅಸಹ್ಯವಾಗಿ ಕಣ್ಣಿಗೆ ಭಾರವಾಗಿ ಕಾಣುತ್ತದೆ. ಅಭ್ಯಾಸದಿಂದ ಎಷ್ಟು ಜಾಗ ಬಿಡಬೇಕೆಂಬುದು ತಿಳಿಯುವತನಕ, ನಕಾಶೆಗಳನ್ನು ಇದ್ದಿಲುಪುಡಿಯಿಂದ (Charcoal powder) ಗೋಡೆಯ ಮೇಲೆ ಗುರುತಿಸುವುದು ಉತ್ತಮ. ಒಂದು ವೇಳೆ ತಪ್ಪುಮಾಡಿದರೂ ಸುಲಭವಾಗಿ ತೊಡೆದು ಬಿಡಬಹುದು. ಸರಿಯಾದ ಸ್ಥಾನವನ್ನು ಕಂಡು ಹಿಡಿದ ಕೂಡಲೆ ಬಣ್ಣದಿಂದ ಸ್ಟೆನ್‌ಸಿಲ್ ಮಾಡಬೇಕು. ಬಣ್ಣಗಳನ್ನು ತೆಳ್ಳಗೆ ಮಾಡಿದಲ್ಲಿ ಅದು ಕಾಗದದ ಸಂದಿಯಲ್ಲಿ ನುಗ್ಗಿ ಗೋಡೆಗಳನ್ನು ಹಾಳುಮಾಡುತ್ತದೆ.

ಮೊದಲು ನಕಾಶೆಗಳನ್ನು ಮನೆಯ ಗೋಡೆಯ ಮೇಲೆ ರೇಖಿಸುವಾಗ ಬಾಗಿಲ ಹಿಂದಿನಿಂದ ಮಾಡುವುದು ಉತ್ತಮ. ಯಾತಕ್ಕೆಂದರೆ, ಮೊದಲು ಮಾಡಿದ ಸ್ಥಳದಲ್ಲಿಯೇ ಸ್ಟೆನ್‌ಸಿಲ್ ಮುಗಿಯುವುದರಿಂದ, ಆವಾಗ

CC-0. Jangamwadi Math Collection. Digitized by eGangotri

ಉಂಟಾಗುವ ಸ್ಥಳಗಳ ಸಂಕೋಚದಿಂದಲೂ ನಕಾಶೆಗಳಲ್ಲಿ ಕೆಲವು ಭಾಗ ಮಾತ್ರವೇ ಬರುವುದರಿಂದಲೂ ನೋಡಲು ಬಹಳ ಅಸಹ್ಯವಾಗಿ ಕಾಣುತ್ತದೆ. ಈ ಭಾಗವು ಬಾಗಿಲು ಹಿಂದೆ ಇದ್ದದ್ದೇ ಆದರೆ ಸಹಜವಾಗಿ ಪ್ರೇಕ್ಷಕರ ಕಣ್ಣಿಗೆ ಬೀಳುತಿರುವುದಿಲ್ಲ.

ಅವುಗಳನ್ನು ಸಹ 'ಟರಪೆನ್‌ಟೈನ್' ದಿಂದಲೇ ತೆಗೆದು ಹಾಕಿ ಬಿಡಬಹುದು.

ಹೂವು—ಹಕ್ಕಿ ಮುಂತಾದ ಹಲವು ಬಣ್ಣದ ನಕಾಶೆಗಳನ್ನು ರೇಖಿಸುವಾಗ ಪ್ರತಿಯೊಂದು ಬಣ್ಣಕ್ಕೂ ಬೇರೆ ಬೇರೆ ಕುಂಚಗಳನ್ನು ಉಪಯೋಗಿಸಬೇಕು. ಇಲ್ಲಿ



ಸ್ಟೆನ್‌ಸಿಲ್‌ಗಳನ್ನು ಅಚ್ಚು ಹಾಕುವುದು

ಬಹಳ ಬಣ್ಣಗಳನ್ನು ಬ್ರಷ್‌ಗಳಲ್ಲಿ ತೆಗೆದುಕೊಂಡರೆ ಬಣ್ಣವು ಕಾಗದದಲ್ಲಿಳಿದು ಗೋಡೆಯನ್ನು ಹಾಳು ಮಾಡುವುದು. ಆದುದರಿಂದ ಅಗಲವಾದ ಮತ್ತು ಆಳವಿಲ್ಲದ ತಟ್ಟೆಯಲ್ಲಿ ಬಣ್ಣಗಳನ್ನು ತೆಗೆದುಕೊಳ್ಳಬೇಕು. ಇದರಿಂದ ಬಣ್ಣವು ಬ್ರಷ್‌ಗಳಿಗೆ ಸ್ವಲ್ಪವೇ ಅಂಟುವುದಲ್ಲದೆ ಸ್ಟೆನ್‌ಸಿಲ್ಲಿಂದ ಅಚ್ಚು ಹಾಕಿದ ನಕಾಶೆಗಳು ಬಹಳ ತೀವ್ರವಾಗಿಯೂ ಸ್ಪಷ್ಟವಾಗಿಯೂ ಕಾಣುತ್ತವೆ. ಒಂದು ಕೊಠಡಿಯ ನಕಾಶೆಯನ್ನು ಒಂದೇದಿವಸದಲ್ಲಿ ಪೂರಯಿಸುವುದೇ ಉತ್ತಮ. ಸ್ಟೆನ್‌ಸಿಲ್ಲನ್ನು ಉಪಯೋಗಿಸಿದ ಪ್ರತಿಯೊಂದುಸಲಕ್ಕೂ ಅವುಗಳನ್ನು 'ಟರಪೆನ್‌ಟೈನ್' (Turpentine). ಅಥವಾ ಗ್ಯಾಸೋಲಿನ್ (Gasolin) ಗಳಿಂದ ಸ್ವಚ್ಛವಾಗಿ ತೊಳೆಯಬೇಕು. ಗೋಡೆಗಳ ಮೇಲೆ ಚಿತ್ರಿಸಿದ ನಕಾಶೆಗಳಲ್ಲಿ ಏನಾದರೂ ತಪ್ಪಿದ್ದಲ್ಲಿ

ವಿಶೇಷವಾಗಿ ನೆನೆಪಿಸಲ್ಲಿಡಬೇಕಾದುದೇನೆಂದರೆ, ಒಂದು ಬಣ್ಣವನ್ನು ಪೂರ್ತಿಯಾಗಿ ಕೊಠಡಿಯ ಸುತ್ತಲೂ ಹಚ್ಚಿದನಂತರ ಮತ್ತೊಂದು ಬಣ್ಣವನ್ನು ತೆಗೆದುಕೊಳ್ಳಬೇಕು. ಹೀಗೆ ಮಾಡುವುದರಿಂದ ಒಂದು ಬಣ್ಣದ ಮೇಲೆ ಮತ್ತೊಂದು ಬಣ್ಣ ಲೇಪಿಸುವಾಗ ಅದು ಪೂರ್ತಿಯಾಗಿ ಒಣಗಿರುತ್ತದೆ. ಸ್ಟೆನ್‌ಸಿಲ್‌ಗಳ ನಕಾಶೆ ಎಷ್ಟು ಸಾದಾ ಇದ್ದರೆ ಅಷ್ಟು ಉತ್ತಮ. ಹೆಚ್ಚಾಗಿ ಕುಸುರುಗಳುಳ್ಳ ಸ್ಟೆನ್‌ಸಿಲ್‌ಗಳನ್ನು ಉಪಯೋಗಿಸುವುದು ಬಹಳ ಅಪರೂಪ. ಯಾತಕ್ಕೆಂದರೆ ಈ ತೆರದ ಹೆಚ್ಚಿನ ತರಗತಿಯ ನಕಾಶೆಗಳು ರಾಜರ ಭುವನಗಳಿಗೆ, ಸರಕಾರಿ ಕಟ್ಟಡಗಳಿಗೆ ಮಾತ್ರವೇ ಬೇಕಾಗುತ್ತವೆ. ಸಾಧಾರಣ ಮನೆಗಳಿಗೆ ಸಣ್ಣ ಅಂಚಿನ ಸ್ಟೆನ್‌ಸಿಲ್‌ಗಳೇ ಬಹಳ ಉತ್ತಮ. ಇವನ್ನು ಬಿಟ್ಟು ಹೆಚ್ಚಿನ ತರಗತಿಯ ನಕಾಶೆಗಳ

CC-0. Jangamwadi Math Collection. Digitized by eGangotri

ಸ್ಟೆನ್‌ಸಿಲ್‌ಗಳನ್ನು ಉಪಯೋಗಿಸಿದಲ್ಲಿ ಅವು ಗೋಡೆಗಳ ಅಂದವನ್ನು ಹೆಚ್ಚಿಸುವುದಕ್ಕೆ ಬದಲಾಗಿ, ಅವುಗಳನ್ನು ವಿಕಾರವಾಗಿ ಮಾಡಿಬಿಡುತ್ತವೆ.

ನಮಗೆ ಬೇಕಾದ ಯಾವ ತೆರದ ನಕಾಶೆಯ ಸ್ಟೆನ್ ಸಿಲ್‌ಗಳನ್ನಾದರೂ ಈ ಕೆಳಗೆ ಹೇಳುವ ರೀತಿಯಿಂದ ಬೇಕು. ಬಳಿಕ ಅವೆರಡನ್ನೂ ಒಂದು ದಪ್ಪವಾದ ಗಾಜಿನ ಮೇಲಿಟ್ಟು ಪಿನ್ನುಗಳಿಂದ ಬಿಗಿಮಾಡಿ, ಸ್ಟೆನ್‌ಸಿಲ್ ಚೂರಿಯಿಂದ ಚಿಕ್ಕಭಾಗವನ್ನು ಮೊದಲು, ನಂತರ ದೊಡ್ಡ ಭಾಗಗಳನ್ನು ಕತ್ತರಿಸಬೇಕು. ಗಾಜಿನ ಮೇಲೆ ಕತ್ತರಿಸುವುದರಿಂದ ಕತ್ತರಿಸಿದ ಭಾಗವು ಚುಂಗುಚುಂಗಾ



ಸ್ಟೆನ್‌ಸಿಲ್‌ಗಳನ್ನು ತಯಾರಿಸುವ ಬಗೆ

ಮನೆಯಲ್ಲಿಯೆ ತಯಾರಿಸಬಹುದು. ಮೊಟ್ಟಮೊದಲು ನಮಗೆ ಯಾವ ತೆರದ ನಕಾಶೆ ಬೇಕೋ ಅದನ್ನು ಕಾಗದದ ಮೇಲೆ ಬರೆದು ಆ ಕಾಗದವನ್ನು ಮೇಲಿನ ಚಿತ್ರಪಟದಲ್ಲಿರುವಂತೆ ಮನಿಲಾ (Manila) ಪೇಪರಿನ ಮೇಲಿಡ ಗದೆ ಒಂದೇಸಮನಾಗಿ ಬರುವುದು. ಸ್ಟೆನ್‌ಸಿಲ್ ಚುಂಗು ಚುಂಗಾದರೆ ಇದರಿಂದ ಅಚ್ಚು ಹಾಕಿದ ನಕಾಶೆಯು ಚುಂಗು ಚುಂಗಾಗುತ್ತದೆ. ಒಳ್ಳೆಯ ಕೆಲಸ ಬೇಕಾದರೆ ಯಾವಾಗಲೂ ಸ್ಟೆನ್‌ಸಿಲ್ ಚೂರಿಯು ಹರಿತವಿರಬೇಕು.



CC-0. Jangamwadi Math Collection. Digitized by eGangotri

# ನಿದ್ರೆ ಮತ್ತು ಕನಸು

ಬರೆದವರು– ಪ್ರೊ. ಕೆ. ವಿ. ಗಜೇಂದ್ರಗಡಕರ್ ಎಂ. ಎ. ನಾಸಿಕ

ಮನುಷ್ಯನ ನಿತ್ಯ ವ್ಯವಹಾರವಾಗಿದ್ದರೂ, ನಿತ್ಯ ನಿತ್ಯ ಅನುಭವಿಸುತ್ತಿದ್ದರೂ ಯಾವುದರ ಗುಟ್ಟು ತಿಳಿದಿಲ್ಲವೋ, ಮತ್ತು ಯಾವುದರ ನಿಜವಾದ ರೂಪದಬಗ್ಗೆ ಜಗತ್ತಿನಲ್ಲಿ ಮನುಷ್ಯಪ್ರಾಣಿಯ ನಿರ್ಮಾಣಕಾಲದಿಂದಲೂ ಅನೇಕ ಪ್ರಕಾರದ ವಿಚಾರ-ಚರ್ಚೆಗಳು ನಡೆದೂ ಪೂರ್ಣಸಮಾಧಾನವಾಗದೆ ಇರುವುದೋ, ಅಂತಹ ಕೆಲವು– ಅತ್ಯಂತ ಕಠಿಣವಾದರೂ ನಿತಾಂತ ಮನೋರಂಜಕವಾದ-ವಿಷಯಗಳಲ್ಲಿಯೇ ಈ ನಿದ್ರೆ ಮತ್ತು ಕನಸುಗಳೆಂಬುದರಲ್ಲಿ ಸಂಶಯವೇನೂ ಇಲ್ಲ. ಪಾಶ್ಚಿಮಾತ್ಯ ಶಾರೀರ ಮತ್ತು ಮಾನಸ ಶಾಸ್ತ್ರಜ್ಞರು ಈ ವಿಷಯದಲ್ಲಿ ಬಹಳ ಸಂಶೋಧನೆಮಾಡಿ ಅನೇಕ ಪ್ರಬಂಧಗಳನ್ನೂ ಗ್ರಂಥಗಳನ್ನೂ ಬರೆದಿರುತ್ತಾರೆ. ನಮ್ಮ ಭಾರತದೇಶದಲ್ಲಿಯಾದರೂ ಈ ವಿಷಯದಮೇಲೆ ವೇದಕಾಲೀನ–ಉಪನಿಷತ್‌ಕಾಲೀನ ತತ್ತ್ವಜ್ಞರು ಉದ್ಬೋಧಕವಾಗಿದ್ದ ಕೆಲವು ಸ್ವತಂತ್ರ ವಿಚಾರಗಳನ್ನು ಪ್ರಕಟಿಸಿರುವರು.* "ನಿದ್ರೆಯಲ್ಲಿ ಜೀವಾತ್ಮನು ಬ್ರಹ್ಮನನ್ನು ಕೂಡಿಹೋಗುವನಾದಕಾರಣ ಬ್ರಹ್ಮಾನಂದಪ್ರಾಪ್ತಿಯಾಗುವುದು." ಎಂಬ ತಪ್ಪು ಕಲ್ಪನೆಯು ಕೆಲವು ಪ್ರಾಚೀನ ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿದ್ದರೂ ಅದು ತಪ್ಪು ಇರುವುದೆಂಬುದನ್ನು ಅರ್ವಾಚೀನ ಉಪನಿಷತ್ತುಗಳಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ನಿದ್ರೆಯು ಜಾಗ್ರತಿರಹಿತವಾಗಿರುವುದು. ಆದರೆ ಬ್ರಹ್ಮಾನಂದವನ್ನನುಭವಿಸುವ ಸಮಾಧಿಸ್ಥಿತಿಯು ಪೂರ್ಣಜಾಗ್ರತವೂ ಮತ್ತು ಸ್ವಯಂಪ್ರಜ್ಞವೂ (Self conscious) ಆಗಿರುವುದು. ಆದುದರಿಂದ ಇವೆರಡು ಸ್ಥಿತಿಗಳಲ್ಲಿ ಆಕಾಶ ಮತ್ತು ಪೃಥ್ವಿಯಷ್ಟು ಅಂತರ ವಿರುವುದೆಂಬ ವಿಚಾರವು ಅರ್ವಾಚೀನ ಉಪನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವುದು.

ಉಪನಿಷತ್ತುಗಳಲ್ಲಿಯ ಸ್ವಪ್ನವಿಚಾರವಾದರೂ ಬಹಳ ಸ್ವತಂತ್ರ (Original) ವಾದುದಾಗಿರುವುದು. ಸ್ವಪ್ನದಲ್ಲಿ ಸ್ವತಂತ್ರನಿರ್ಮಾಣಶಕ್ತಿ ಇರುವುದೆಂಬ ವಿಚಾರದ ಮಹತ್ವವು ಅಭಿನವ ಮಾನಸಶಾಸ್ತ್ರದ (New Psychology) ಅಭ್ಯಾಸಕರಿಗೆ ಸರಿಯಾಗಿ ತಿಳಿಯಬಹುದು. ಮನುಷ್ಯಪ್ರಾಣಿ ಪ್ರಥಮತಃ ನಿರ್ಮಾಣವಾದಕೂಡಲೆ ಅವನಿಗೆ ಮೊದಲು ನಿದ್ರೆಹತ್ತಿದಾಗ ಅಥವಾ ಕನಸುಬಿದ್ದಾಗ ಅವನ ಮನಸ್ಸಿನಲ್ಲಿ ಯಾವಪ್ರಕಾರದ ವಿಚಾರಗಳು ಭಾವನೆಗಳು ಬರುತ್ತಿರುವುವೋ- ಎಂಬುದನ್ನು ತಿಳಿದುಕೊಳಲಿಕ್ಕೆ ಮಾರ್ಗವಿಲ್ಲ. ಅರಣ್ಯದಲ್ಲಿರುವ ಕೆಲವು ಮಾನವ ಜಾತಿಯ ಇತಿಹಾಸವನ್ನು ನೋಡುತ್ತಿರಲಾಗಿ ಮೊದಲು ಮನುಷ್ಯನಿಗೆ ಸ್ವಪ್ನ ಮತ್ತು ಸತ್ಯಸೃಷ್ಟಿ ಇವೆರಡರಲ್ಲಿ ಏನೂ ಭೇದವು ಕಂಡುಬಾರದೆ ಇದ್ದುದರಿಂದ ಅನೇಕ ತಪ್ಪುತಿಳುವಳಿಕೆ ಮತ್ತು ಲೋಕಭ್ರಮೆಗಳು ಉಂಟಾಗಿರಬಹುದೆಂದು ಮಾನವಶಾಸ್ತ್ರಜ್ಞರ ಅಭಿಪ್ರಾಯವಿರುವುದು. ಈಗ ಹೊಸ ಶಾಸ್ತ್ರೀಯ ಸಾಧನ ಮತ್ತು ಯಂತ್ರಗಳ ಸಹಾಯದಿಂದ ಸಂಶೋಧನವನ್ನು ಚಿಕಿತ್ಸಾಪೂರ್ವಕವಾಗಿ ಈ ವಿಷಯದ ಅಭ್ಯಾಸವನ್ನು ಅನೇಕ ಯುರೋಪೀಯ ಶಾಸ್ತ್ರಜ್ಞರು ಮಾಡತೊಡಗಿರುವರು. ಆದರೆ ಈ ವಿಷಯದಬಗ್ಗೆ ಪ್ರಸ್ತುತ ಶಾಸ್ತ್ರೀಯ ಮತವೇನಿರುವುದೆಂಬದನ್ನು ಸ್ವಲ್ಪದರಲ್ಲಿ ವಿವರಿಸಬೇಕೆಂದು ನಮ್ಮ ವಿಚಾರವಿರುವುದು.

## ನಿದ್ರಾವಿಚಾರ

ನಿದ್ರೆ ಮತ್ತು ಸ್ವಪ್ನ ಇವುಗಳ ಪರಸ್ಪರ ಸಂಬಂಧವು ಬಹಳ ನಿಕಟವಿದ್ದಕಾರಣ ಎರಡೂ ವಿಷಯಗಳನ್ನು ವಿವರಿಸಿ ಹೇಳದಿದ್ದಲ್ಲಿ ಯಾವುದೇ ಒಂದು ವಿಷಯದ ಬಗೆಗೆ ಪೂರ್ಣವಾಗಿ ತಿಳುವಳಿಕೆಯುಂಟಾಗಲಾರದು. ಆದುದ

* ಉಪನಿಷದ್ರಹಸ್ಯ (ಕನ್ನಡ) ಮಾನಸಶಾಸ್ತ್ರದ ಪ್ರಕರಣ ನೋಡಬೇಕು.

CC-0. Jangamwadi Math Collection. Digitized by eGangotri

ರಿಂದ ಮೊದಲು ನಿದ್ರೆಯಬಗ್ಗೆ ವಿಚಾರಮಾಡುವುದು ಅವಶ್ಯಕವಿರುವುದು. ನಿದ್ರೆಯ ಮಹತ್ವವು ಪ್ರತಿಯೊಬ್ಬರಿಗೆ ಗೊತ್ತಿರುವುದು. ವಿಶೇಷತಃ ರೋಗ ಅಥವಾ ಚಿಂತೆಯಿಂದ ನಿದ್ರೆಹತ್ತದೆ ಇದ್ದಾಗ ಆ ನಿದ್ರೆಯ ಮಹತ್ವವು ವಿಶೇಷವಾಗಿ ಕಂಡುಬರುವುದು. ಯಾವುದಾದರೂ ವಸ್ತುವಿನ ಮಹತ್ವವು ಅದರ ಅಭಾವದಿಂದ ಕಂಡುಬರುವುದೆಂಬ ಕಂಡುಂಡಮಾತು ನಿದ್ರೆಯಬಗೆಗೂ ಸತ್ಯವಿರುವುದು. ಈ ಸಂಸಾರಸಾಗರದಲ್ಲಿ ಶ್ರಮ, ಸಂಕಟ, ನಿರಾಶೆ ಮುಂತಾದ ದೊಡ್ಡ ದೊಡ್ಡ ತೆರೆಗಳಕೂಡ ಕಾದಾಡಿ ಯಶಃಸಂಪಾದನೆ ಮಾಡುವುದರಲ್ಲಿ ತೊಡಗಿರುವ ಪ್ರತಿಯೊಬ್ಬ ಮನುಷ್ಯನಿಗೆ ನಿದ್ರೆಯೆಂದರೆ ಸ್ವರ್ಗದಂತೆ ಸುಖಕಾರಕವೆನಿಸುವುದು. ಈ ನಿದ್ರೆಯ ಸುಖವನ್ನನುಭವಿಸಿದಮೇಲೆ ನಿತ್ಯದ ಕೆಲಸವನ್ನು ಮನುಷ್ಯನು ಹೆಚ್ಚು ಉತ್ಸಾಹದಿಂದ ಜರುಗಿಸಲಿಕ್ಕೆ ಸಮರ್ಥನಾಗುವನು. ಶಾರೀರಿಕ ಶ್ರಮಮಾಡುವ ಜನರಿಗೆ ನಿದ್ರೆಯ ಸುಖದ ವರ್ಣನೆಯನ್ನು ಹೇಳುವ ಕಾರಣವೇ ಇಲ್ಲ. ಮಾನಸಿಕ ಶ್ರಮಮಾಡುವ ಜನರೂ ಯಾವುದಾದರೊಂದು ಪಾಪವನ್ನು ಮಾಡಿದಕಾರಣ ಮನಃಶಾಂತಿಯನ್ನು ಕಳಕೊಂಡ ದುರ್ದೈವ ಪ್ರಾಣಿಗಳೂ ನಿದ್ರಾದೇವಿಯನ್ನು ಎಷ್ಟು ಪ್ರಾರ್ಥಿಸುವರೆಂಬುದರ ಯೋಗ್ಯ ಕಲ್ಪನೆಯು ಕವಿಶ್ರೇಷ್ಠ ಶೆಕ್ಸಪಿಯರಿನ ಸುಪ್ರಸಿದ್ಧ ನಾಟಕದಲ್ಲಿಯ 'ರಿಚರ್ಡ'ನ ಭಾಷಣವನ್ನು ಓದಿದವರಿಗೆ ಚೆನ್ನಾಗಿ ತಿಳಿದುಬರುವುದು. ಇಂತಹ ಮಹತ್ವದ ವಿಷಯದ ವಿಚಾರವಾಗಿಯೂ ನಮ್ಮ ಜ್ಞಾನವು ಅಪೂರ್ಣವೇ ಇರುವುದು. ಇದೊಂದು ದುಃಖದ ಸಂಗತಿಯೇ ಸರಿ.

ನಿದ್ರೆಯಲ್ಲಿ ಶಾರೀರಿಕ ಕ್ರಿಯೆಯು, ವಿಶೇಷತಃ ಮಿದುಳು, ಮತ್ತು ಜ್ಞಾನತಂತು ಇವುಗಳ ಕ್ರಿಯೆಗಳು ಮಂದವಾಗುವುವು. ಶ್ವಾಸೋಚ್ಛ್ವಾಸವು ಮಂದವೂ ಹೆಚ್ಚು ದೀರ್ಘವೂ ಆಗುವುದು. ಕಣ್ಣಗುಡ್ಡೆಗಳು ತೇಲುಮೇಲು ಆಗುವುವು, ಸಂಕುಚಿತವಾಗುವುವು. ಕೈಕಾಲುಗಳು ವಿಶೇಷತಃ ಮೊಣಕಾಲುಗಳ ಕ್ರಿಯೆಯು ಮಂದವಾಗುವುದು. ಶರೀರದಲ್ಲಿಯ ಗ್ರಂಥಿಗಳ ( Glands ) ರಸೋತ್ಪಾದನ ಕ್ರಿಯೆಯೂ ಮಂದವಾಗುವುದು. ರಕ್ತದ ಹರಿದಾಟವೂ ಮೆಲ್ಲಗೆ ನಡೆಯುವುದು. ಇಂದ್ರಿಯಗಳ ಸಂಸ್ಕಾರಗ್ರಹಣಶಕ್ತಿಯು ವಿಪರೀತವಾಗಿ ಕಡಿಮೆಯಾಗುವುದು. ಯಾವುದಾದರೂ ಇಂದ್ರಿಯದಿಂದ ಕೆಲಸ ತಕ್ಕೊಳ್ಳುವುದಾದರೆ ಬಹಳ ತೀವ್ರಸಂವೇದನೆಯ ಅವಶ್ಯಕತೆಯುಂಟಾಗುವುದು. ಮನುಷ್ಯನಿಗೆ ಎಷ್ಟರಮಟ್ಟಿಗೆ ಗಾಢನಿದ್ರೆಯು ಹತ್ತಿರುವುದೆಂಬುದನ್ನು ನಿರ್ಣಯಿಸಬೇಕೆಂದು ಮಾನಸಶಾಸ್ತ್ರಜ್ಞರು ಅನೇಕ ಪ್ರಯೋಗಗಳನ್ನು ಮಾಡಿರುವರು. ನಿದ್ರಿತಮನುಷ್ಯನನ್ನು ಜಾಗ್ರತಾವಸ್ಥೆಗೆ ತರಬೇಕಾದರೆ ಎಷ್ಟು ಗಟ್ಟಿಯಾಗಿ ಕೂಗಬೇಕಾಗುವುದೆಂಬುದರ ಮೇಲಿಂದ ಆ ಮನುಷ್ಯನ ನಿದ್ರೆಯು ಎಷ್ಟು ಗಾಢವಿರುವುದೆಂಬುದನ್ನು ಹೇಳಬಹುದು. ಈ ಪ್ರಕಾರ ಅನೇಕ ಬಗೆಯ ಪ್ರಯೋಗಗಳನ್ನು ಮಾಡಿ ನೋಡಲಾಗಿ 'ಮೊದಲನೆಯ ತಾಸಿನಲ್ಲಿ ಮನುಷ್ಯನಿಗೆ ಬಹಳ ಗಾಢನಿದ್ರೆಯು ಹತ್ತುವುದು. ಮುಂದೆ ಅಷ್ಟು ಗಾಢನಿದ್ರೆಯು ಹತ್ತುವುದಿಲ್ಲ' ಎಂದು ಶಾಸ್ತ್ರಜ್ಞರು ನಿರ್ಣಯಿಸಿರುತ್ತಾರೆ. ನಿದ್ರೆಯಲ್ಲಿ ಮನುಷ್ಯನು ಎಷ್ಟರಮಟ್ಟಿಗೆ ಒಂದೇಸ್ಥಿತಿಯಲ್ಲಿ ಮಲಗಿಕೊಳ್ಳುವನೋ ಮತ್ತು ಎಷ್ಟರಮಟ್ಟಿಗೆ ಹೊರಳಾಡುವನೋ ಇದರ ಮೇಲಿಂದ ಸಹ ಅವನ ಗಾಢನಿದ್ರೆಯನ್ನು ತಿಳಿದುಕೊಳ್ಳಬಹುದು. ಗಾಢನಿದ್ರೆಯಲ್ಲಿ ಮನುಷ್ಯನು ಬಹಳ ಕಡಿಮೆ ಹೊರಳಾಡುವನು. ಆದರೆ ಶರೀರವು ನಿಶ್ಚೇಷ್ಟವಾಗಿರುವಷ್ಟರಿಂದಲೆ ಮನುಷ್ಯನಿಗೆ ಗಾಢನಿದ್ರೆಯು ಹತ್ತಿರುವುದೆಂಬುದು ಸಿದ್ಧವಾಗಲಾರದು. ಏಕೆಂದರೆ ಅತ್ಯಂತ ಗಾಢನಿದ್ರೆಯಲ್ಲಿ ಸಹ ಮನುಷ್ಯನು ಎದ್ದು ಬಾಹ್ಯಜಗತ್ತಿನ ಎಚ್ಚರಿಕೆ ತಿಲಮಾತ್ರವೂ ಇಲ್ಲದೆ ಬಹಳ ಶ್ರಮಸಾಧ್ಯವಾದ ಕೆಲಸವನ್ನು ಮಾಡಬಹುದು. ಈ ಮಾತು ನಿದ್ರೆಯ ಭ್ರಮದ ಅನೇಕ ಉದಾಹರಣೆಗಳ ಮೇಲಿಂದ ಸಿದ್ಧವಾಗುವುದು. ಮನುಷ್ಯನಿಗೆ ನಿದ್ರೆ ಹತ್ತಿದರೂ ಅವನ ಮಿದುಳು ಮತ್ತು ಮಜ್ಜಾತಂತುಗಳ ಕ್ರಿಯೆಗಳು ನಿರಂತರವೂ ಅಖಂಡವಾಗಿ ನಡೆದಿರುವುವು. ಆದಕಾರಣ ಕೆಲವು ಪ್ರೇರಕಜ್ಞಾನತಂತುಗಳಿಗೆ (Motor nerves ) ಚಲನೆಯು ಸಿಕ್ಕು ಮೇಲೆಹೇಳಿದಂತೆ ನಿದ್ರೆಯಲ್ಲಿಯೇ ಎಚ್ಚರಿಲ್ಲದೆ ಕೆಲವು ಕಾರ್ಯಗಳಾಗುವುವು. ಈ ಮಿದುಳಿನ ಇಂತಹ ಸಹಜಕ್ರಿಯೆಯಿಂದಲೇ ಸ್ವಪ್ನಗಳು ಸಂಭವಿಸುವುವು.

ನಿದ್ರೆಯಲ್ಲಿ ಅನೇಕ ಪ್ರಕಾರಗಳಿರುವವು. ಕೆಲವು ಔಷಧಗಳ ಸೇವನೆಯಿಂದ ನಿದ್ರೆಯು ಬರುವುದು ಉದಾ:

CC-0. Jangamwadi Math Collection. Digitized by eGangotri

'ಈಥರ್' 'ಕ್ಲೋರೋಫಾರ್ಮ' ಅಫೀಮು ಇವುಗಳನ್ನು ಸ್ವಲ್ಪಪ್ರಮಾಣದಿಂದ ತಕ್ಕೊಳ್ಳುವುದರಿಂದ ಬರುವ ನಿದ್ರೆಯು ಸ್ವಭಾವಿಕರೀತಿಯಿಂದ ಬರುವ ನಿದ್ರೆಯಂತೆಯೆ ಇರುವುದು. ಈ ಔಷಧಗಳನ್ನು ಹೆಚ್ಚೆಚ್ಚು ಪ್ರಮಾಣದಿಂದ ಕೊಟ್ಟರೆ ಜಾಗ್ರತಿಯು ಪೂರ್ಣ ನಷ್ಟವಾಗಿ ಬಾಹ್ಯೇಂದ್ರಿಯಗಳು ಎಷ್ಟು ಚಲಿಸಿದರೂ ಜಾಗ್ರುತಿಯುಂಟಾಗುವುದಿಲ್ಲ. ಕೆಲವು ರೋಗಗಳಲ್ಲಿ ಸಹ ಜಾಗ್ರತಿಯು ನಷ್ಟವಾಗಿ ರೋಗಿಯು ಯಾವಾಗಲೂ ನಿದ್ರೆಯಲ್ಲಿರುವನು. ಈ ನಿದ್ರೆಯಾದರೂ ಸ್ವಾಭಾವಿಕ ನಿದ್ರೆಯಂತಿರುವುದು. ಈ ಪ್ರಕಾರದ ನಿದ್ರೆಯು ಕೆಲವು ತಿಂಗಳು ಅಥವಾ ಕೆಲವು ವರ್ಷಗಳ ವರೆಗೂ ಅನುಭವಿಸಿದ ಕಾರಣ ಕಾಲಜ್ಞಾನದ ಬಗ್ಗೆ ಭ್ರಮೆಯುಂಟಾದ ಅನೇಕ ಉದಾಹರಣೆಗಳನ್ನು ಗ್ರಂಥಗಳಲ್ಲಿ ಕೊಟ್ಟಿರುವರು. ಕೆಲವು ರೋಗಗಳಲ್ಲಿ ಶರೀರದೊಳಗೆ ವಿಷದ್ರವ್ಯಗಳು ಸಂಭವಿಸಿ ಅನೇಕ ಪ್ರಕಾರದ ಸುಷುಪ್ತಾವಸ್ಥೆಯು ಪ್ರಾಪ್ತವಾಗುವುದು.

ಮಿದುಳಿಗೆ ಒಮ್ಮೆಲೆ ಕಠಿಣವಾದ ಧಕ್ಕೆಯು ಹತ್ತಿದರೂ ಎಚ್ಚರುತಪ್ಪಿ ಮನುಷ್ಯನು ನಿದ್ರಿತಾವಸ್ಥೆಯನ್ನು ಹೊಂದುವನು. ಕೆಲವು ಮಾನಸಿಕಪ್ರಯೋಗ(Hypnosis) ಗಳಿಂದಲೂ ನಿದ್ರೆಯನ್ನು ತರಿಸಬಹುದು.

ಈ ನಿದ್ರೆಯು ಮನುಷ್ಯನ ಸ್ವಭಾವದ ಮೇಲೆ ಅವಲಂಬಿಸಿರುವುದು. ಮನಸ್ಸು ಮತ್ತು ಇಂದ್ರಿಯ ಇವುಗಳ ಬಿಡುಗಡೆಯಾದೊಡನೆಯೆ ನಿದ್ರೆಯು ಬರುವುದು. ಈ ಬಿಡುಗಡೆಯು ಕೆಲವು ತರಲಪ್ರಕೃತಿಯ ಜನರಲ್ಲಿ ಕೇವಲ ಸೂಚನೆಯಿಂದ ಶೀಘ್ರವಾಗಿ ಆಗುವುದು. ಸ್ವಾಭಾವಿಕ ನಿದ್ರೆಗೆ ಮಾನಸಿಕ ಶ್ರಮದಷ್ಟೆ ಶಾರೀರಿಕ-ಶ್ರಮವಾದರೂ ಕಾರಣವಿರುವುದು. ಶರೀರವು ದಣಿದರೆ ನಿದ್ರೆಯು ಬರುವುದು. ಆದರೂ ಮನಸ್ಸು ವ್ಯಗ್ರವಾಗಿದ್ದುಬಿಟ್ಟರೆ ನಿದ್ರೆಯು ಹೋಗುವುದು. ಸ್ವಾಭಾವಿಕ ನಿದ್ರೆಯು ಜೀವನ ಸಂರಕ್ಷಣಕ್ಕೆ ಮತ್ತು ಸಂವರ್ಧನಕ್ಕೆ ಆವಶ್ಯಕವಿರುವುದು. ಆದರೂ ಇಂತಹ ನಿದ್ರೆಯು ಎಷ್ಟರ ಮಟ್ಟಿಗೆ ನಮ್ಮ ಸಂವರ್ಧನಕ್ಕೆ ಉಪಯುಕ್ತವಾಗುವುದೋ ಎಂಬುದು ನಮ್ಮ ನಡೆವಳಿಕೆಯ ಮೇಲೆ ಬಹಳವಾಗಿ ಅವಲಂಬಿಸಿರುವುದು.

ಸ್ವಾಭಾವಿಕವಾಗಿ ನಿದ್ರೆಯು ಎಷ್ಟು ತಾಸು ಆವಶ್ಯಕವಿರುವುದೆಂಬುದರ ಬಗ್ಗೆ ಅನೇಕ ಶಾಸ್ತ್ರಜ್ಞರು ಅನೇಕ ಪ್ರಯೋಗಗಳನ್ನು ಮಾಡಿರುವರು. ಒಬ್ಬ ಫ್ರೆಂಚ್ ಶಾಸ್ತ್ರಜ್ಞನು ಕೆಲವು ನಾಯಿಯಕುನ್ನಿಗಳ ಮೇಲೆ ನಿದ್ರಾನಾಶದ ಪ್ರಯೋಗವನ್ನು ಮಾಡಿ ಆ ಕುನ್ನಿಗಳು ನಾಲ್ಕಾರು ದಿವಸಗಳಲ್ಲಿಯೇ ಸತ್ತದ್ದನ್ನು ತನ್ನ ಗ್ರಂಥದಲ್ಲಿ ಬರೆದಿಟ್ಟಿರುವನು. ಮನುಷ್ಯನಿಗೆ ಮೂರು ನಾಲ್ಕು ದಿವಸ ನಿದ್ರೆ ಇಲ್ಲದಿದ್ದರೆ ವಿಶೇಷವೇನೂ ತೊಂದರೆಯಾಗುವುದಿಲ್ಲ. ಇದಕ್ಕಿಂತಲೂ ಹೆಚ್ಚು ಕಾಲ ನಿದ್ರೆಯನ್ನು ಬಿಟ್ಟು ಇದ್ದರೆ ಬಹಳ ತೊಂದರೆಯಾಗಿ ಶಾರೀರಿಕ ಮತ್ತು ಮಾನಸಿಕ ವ್ಯವಹಾರಗಳು ಚೆನ್ನಾಗಿ ನಡೆಯುವುದಿಲ್ಲ. ಕೆಲವು ಅಪರಾಧಿ ಜನರ ಕಡೆಯಿಂದ ಅಪರಾಧದ ಒಪ್ಪಿಗೆಯ ಜವಾಬನ್ನು ತಕ್ಕೊಳ್ಳುವುದಾದರೆ ನಿದ್ರಾಭಂಗವೊಂದನ್ನು ಸಾಧನವೆಂದು ಪೋಲೀಸಖಾತೆಯವರು ಉಪಯೋಗ ಮಾಡಿಕೊಳ್ಳುವರು. ಈ ಮಾತು ಎಲ್ಲರಿಗೂ ಗೊತ್ತು. ನಿದ್ರೆ ಕೊಂಚವೂ ಇಲ್ಲದೆ ಮನುಷ್ಯನು ಜೀವಿಸಿರಲಾರನು. ಕೆಲವು ರೋಗದಲ್ಲಿ ನಿದ್ರಾನಾಶವಾದರೂ ನಡುನಡುವೆ ಸ್ವಲ್ಪ ಜಂಪು ಹತ್ತುತ್ತಿರುವುದು. ಗಾಢನಿದ್ರೆ ಹತ್ತದೆ ಇದ್ದ ಕಾರಣ ತನಗೆ ಕೊಂಚವೂ ನಿದ್ರೆಯೆ ಹತ್ತಿಲ್ಲವೆಂದು ಆ ರೋಗಿಗೆ ತಪ್ಪುತಿಳುವಳಿಕೆಯಾಗುವುದು. ಮಾನಸಶಾಸ್ತ್ರದೃಷ್ಟಿಯಿಂದ ನಿದ್ರೆಯೆಂದರೆ ಬಾಹ್ಯಜಗತ್ತಿನ ವ್ಯವಹಾರದಿಂದ ನಿವೃತ್ತನಾಗಿಸುವುದೆಂದು ಹೇಳಬಹುದು. ಜಗತ್ತಿನ ಸಂಬಂಧವು ಕಡಿದು ಆ ಜಗತ್ತಿನ ವ್ಯವಹಾರದಲ್ಲಿಯ ಆಸಕ್ತಿಯನ್ನು ಕಳೆದು ಬಿಡುವುದೆಂದರೆ ನಿದ್ರೆಯು. ಮನಸ್ಸು ರಮಿಸುವಂತಹ ಸಂಗತಿಯಿದ್ದರೆ ಮನುಷ್ಯನು ದೀರ್ಘಕಾಲ ಎಚ್ಚತ್ತಿರುವನು. ಅದೇ ರಮಿಸದಂತೆ ಆದಕ್ಷಣವೆ ಅವನಿಗೆ ನಿದ್ರೆಬರಲು ತೊಡಗುವುದು. ಜನ್ಮಕ್ಕೆ ಬಂದ ಮೇಲೆ ಕೆಲವು ತಿಂಗಳು ಕೂಸುಗಳಿಗೆ ಜಗತ್ತಿನಲ್ಲಿ ಏನೂ ಆನಂದವೆನಿಸದಿದ್ದ ಕಾರಣ ಹೊಟ್ಟೆ ಹಸಿದ ವೇಳೆಯಲ್ಲಿಯಷ್ಟೇ ಕಣ್ಣು ತೆರೆದು ಆ ಮೇಲೆ ಯಾವಾಗಲೂ ನಿದ್ರೆಯಲ್ಲಿರುವುವು. ಮುಂದೆ ಸ್ವಲ್ಪ ದೊಡ್ಡವಾದನಂತರ ಅವುಗಳಿಗೆ ಪ್ರತಿಯೊಂದು ವಸ್ತುವು ಆಶ್ಚರ್ಯಪೂರ್ಣವಾಗಿ ತೋರಲು ತೊಡಗುವುದು. ಆದಕಾರಣ ನಿದ್ರೆಯು ಬಂದರೂ ಕೂಸುಗಳು ಆಡುತ್ತಲಿರುವುವು. ಮಲಗಿಕೊಳ್ಳುವ ಕೋಣೆಯ ಎಲ್ಲ ವಾತಾವರಣವನ್ನು ಚಿತ್ತಾಕರ್ಷಕ

CC-0. Jangamwadi Math Collection. Digitized by eGangotri

ಇಲ್ಲದ ಹಾಗೆ ಮಾಡಿದರೆ ತತ್‌ಕ್ಷಣಕ್ಕೆ ಕೂಸುಗಳು ಮಲಗಿಬಿಡುವುವು. ತಾರುಣ್ಯದಲ್ಲಿ ವಿಷಯೋಪಭೋಗದಲ್ಲಿ, ಅಥವಾ ಬೌದ್ಧಿಕ ಆನಂದದಲ್ಲಿ ಮನಸ್ಸು ತೊಡಗಿದರೆ ನಿದ್ರೆಯ ನೆನಪು ಸಹ ಆಗಲಾರದು. ಯಾವುದಾದರೂ ಒಂದು ಭಾವನೆಯು ಮನಸ್ಸಿನಲ್ಲಿ ನೆಟ್ಟಿದ್ದರೆ ನಿದ್ರೆಯು ದೀರ್ಘಕಾಲ ಬರಲಾರದು. ಮಹತ್ವಾಕಾಂಕ್ಷೆ ಮುತ್ಸದ್ದಿತನ, ರಾಜಕಾರಣ ಅಥವಾ ಇನ್ನಾವುದೊಂದು ಮಹತ್ವದ ಕಾರ್ಯ ಇವುಗಳಲ್ಲಿ ತೊಡಗಿದ್ದ ಜನರಿಗೆ ನಿದ್ರೆಯು ಬಹಳ ಕಡಿಮೆ ಇರುವ ಕಾರಣವಾದರೂ ಇದೇ ಇರುವುದು. ವಾರ್ಧಕ್ಯದಲ್ಲಿ ಸಹ ಬೌದ್ಧಿಕವ್ಯಾಸಂಗಗಳನ್ನು ನಿರಂತರವಾಗಿಟ್ಟ ಜನರ ನಿದ್ರೆಯು ಕಡಿಮೆಯಾಗುವುದು. ಇದಲ್ಲದೆ ಇನ್ನು ಮೇಲೆ ನಮ್ಮ ಆಯುಷ್ಯವು ಬಹಳ ಸ್ವಲ್ಪ ಇರುವ ಕಾರಣ ನಮ್ಮ ಮುಂದಿನ ಸಾಧ್ಯವನ್ನು ಆದಷ್ಟು ತೀವ್ರವಾಗಿ ಸಾಧಿಸಿಕೊಳ್ಳಬೇಕೆಂಬುವ ಇಚ್ಛೆಯೂ ನಿದ್ರೆಯನ್ನು ಕಡಿಮೆ ಮಾಡಲಿಕ್ಕೆ ಒಂದು ಕಾರಣವಿರುವುದು. ಕೇವಲ ಬೇಸರಬರುವಂತಹ ಪರಿಸ್ಥಿತಿಯಷ್ಟೇ ನಿದ್ರೆಗೆ ಕಾರಣವಾಗದು. ಎಂತೆಂತಹ ಭಯಂಕರ ಪ್ರಸಂಗಗಳು ಬಂದಾಗಲೂ ಕೆಲವು ಜನರಿಗೆ ನಿದ್ರೇ ಬಂದೇ ಬರುವುದು ಸಹರಾ ಅರಣ್ಯದಲ್ಲಿ ಭಯಂಕರ ಸುಟ್ಟುರೆಗಾಳಿ ಬೀಸಿ ದಶದಿಕ್ಕುಗಳು ವಾಲುಕಾಮಯವಾದ ಕಾಲಕ್ಕೆ ಏನು ಮಾಡಬೇಕೆಂಬುದು ತಿಳಿಯದೆ ಶಹಾಮೃಗ ಪಕ್ಷಿಯು ಉಸುಕಿನಲ್ಲಿ ಮೋರೆಯನ್ನು ಮುಚ್ಚಿಕೊಂಡು ಆದದ್ದಾಗಲಿ ಎಂದು ನಿಂತು ಬಿಡುವಂತೆ, ಎಷ್ಟೋ ಜನರು ಭಯಜನಕವಾದ ಅಥವಾ ಸಂಕಟಕಾರಕವಾದ ಪ್ರಸಂಗ ಬಂದಾಗ ಅದನ್ನು ಮರೆಯುವುದರ ಸಲುವಾಗಿ ನಿದ್ರಾವಶರಾಗಲಿಕ್ಕೆ ಪ್ರಯತ್ನಮಾಡುವರು. ಮತ್ತು ಅವರಿಗೆ ಗಾಢನಿದ್ರೆಯು ಹತ್ತುವುದು. ಯಾವುದಾದರೂ ಸಂಗತಿಯು ತಮ್ಮ ಮನಸ್ಸಿನಂತೆ ಆಗದಿದ್ದರೆ ನಿದ್ರೆಯಲ್ಲಿ ಮನಸ್ಸನ್ನು ತೊಡಗಿಸಿ ಆ ಬೇಡವಾದ ಪ್ರಸಂಗವನ್ನು ಅಥವಾ ಪರಿಸ್ಥಿತಿಯನ್ನು ತಪ್ಪಿಸುವುದು ಮನಸ್ಸಿನ ಸ್ವಾಭಾವಿಕ ಪ್ರವೃತ್ತಿಯಾಗಿರುವುದು. ಉದಾ: ಒಬ್ಬ ಹುಡುಗನು ಒಂದು ಕಾಜಿನ ಚೂರನ್ನು ಮತ್ತೊಬ್ಬ ಹುಡುಗನಿಗೆ ಒಗೆದನು. ಆ ಹುಡುಗನಿಗೆ ಅದು ತಾಕಿ ರಕ್ತವು ಸುರಿಯತೊಡಗಿತು. ಅದನ್ನು ನೋಡಿ ಒಗೆದ ಹುಡುಗನು ಬಹಳವಾಗಿ ಹೆದರಿದನು. ಮನೆಗೆ ಹೋಗಿ ಅವನು ಊಟ ಉಡಿಗೆ ಏನನ್ನೂ ಮಾಡದೆ ಮಲಗಿಬಿಟ್ಟನು. ಕೂಡಲೇ ಅವನಿಗೆ ನಿದ್ರೆಯು ಹತ್ತಿತು. ಆ ಹುಡುಗನಿಗೆ ಯಾವುದಾದರೂ ತನ್ನಿಂದ ತಪ್ಪು ಕೆಲಸವಾದ ಕೂಡಲೆ ನಿದ್ರೆಯು ಬಂದುಬಿಡುವುದು. ಮತ್ತು ಅವನು ತನ್ನ ಮೈಮೇಲಿನ ಬಟ್ಟೆಯ ಪರಿವೆಯಿಲ್ಲದೆ ನಿದ್ರೆ ಮಾಡುವನು. ಮನಸ್ಸಿನಲ್ಲಿ ಪರಸ್ಪರ ವಿರೋಧ ಭಾವನೆಗಳ ಹೊಡೆದಾಟವು ಆರಂಭವಾಗಿ ಏನೂ ನಿರ್ಣಯವಾಗದೆ ಅದು ಅಸಹ್ಯವಾದರೆ ಕೆಲವು ಜನರು ಆ ತಾಪವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ನಿದ್ರೆಯ ಆಶ್ರಯ ಮಾಡುವರು, ಕೆಲವು ಜನರಿಗೆ ತಮ್ಮ ಮೇಲೆ ಬಂದ ಕೆಟ್ಟ ಪ್ರಸಂಗದ ವರ್ಣನೆಯನ್ನು ಮಾಡುವ ಮುಂದೆ ಆ ದೃಶ್ಯದ ನೆನಪು ಸಹ ಸಹನವಾಗಲಾರದೆ ಅವರು ಮೂರ್ಛೆ ಹೊಂದುವರು. ನಿದ್ರೆಯೆಂದರೆ ಕೇವಲ ಮನಸ್ಸಿನ ನಿವೃತ್ತಿಯಲ್ಲ. ಶಾರೀರಿಕಶ್ರಮಪರಿಹಾರಕ್ಕೆ ಅವಶ್ಯವಾದ ವಿಶ್ರಾಂತಿಯೂ ನಿದ್ರೆಯಿಂದಲೇ ಸಿಕ್ಕುವುದು. ಆದರೂ ಮಾನಸಶಾಸ್ತ್ರದ ದೃಷ್ಟಿಯಿಂದ ಮನಸ್ಸಿನ ನಿವೃತ್ತಿಗೇ ಮಹತ್ವವಿರುವುದು.

## ಸ್ವಪ್ನವಿಚಾರ

ನಿದ್ರೆಯಲ್ಲಿ ಸಂಭವಿಸುವ ಸ್ವಪ್ನದ ಬಗ್ಗೆ ಅನೇಕ ತಜ್ಞರು ಅನೇಕ ಮತಗಳನ್ನು ಪ್ರತಿಪಾದಿಸಿರುವರು. ಈ ವಿಷಯದಲ್ಲಿ ಇದ್ದಷ್ಟು ಮತಭೇದಗಳು ಮತ್ತು ವಿಮರ್ಶೆಗಳು ಇನ್ನಾವ ವಿಷಯಗಳಲ್ಲಿಯೂ ಕಂಡು ಬರುವುದಿಲ್ಲೆಂದು ಹೇಳಬಹುದು. ಕೆಲವರು ಸ್ವಪ್ನವೆಂದರೆ ದೈವೀದೃಷ್ಟಾಂತವೆಂದೂ ಈಶ್ವರೀಸಂದೇಶವೆಂದೂ ಪ್ರತಿಪಾದಿಸುವರು. ಆದರೆ ಕೆಲವರು ಅದೊಂದು ಕೆಲವು ಕಾಲ ಸಂಭವಿಸುವ ಹುಚ್ಚು—ಎನ್ನುವರು. ಸ್ವಪ್ನದ ನಿಜವಾದ ರೂಪದ ಬಗ್ಗೆ ಪ್ರತಿಪಾದಿಸಲ್ಪಟ್ಟ ಅನೇಕ ಮತಗಳ ವಿವೇಚನೆ ಮಾಡುವುದಕ್ಕಿಂತ ಮೊದಲು ಅದರ ಕೆಲವು ವಿಶೇಷ ಲಕ್ಷಣಗಳನ್ನು ಸಂಕ್ಷೇಪವಾಗಿ ವಿಚಾರ ಮಾಡುವ !

(ಅ) ಸ್ವಪ್ನವು ಯಾವುದಾದರೊಂದು ಇಂದ್ರಿಯದ ವ್ಯಾಪಾರಕ್ಕೆ ಸಂಬಂಧಿಸಿರುವುದು. ನಾವು ಅನುಭವಿಸುವ ಸ್ವಪ್ನದಲ್ಲಿಯ ಅರ್ಧಕ್ಕಿಂತ ಹೆಚ್ಚು ಸ್ವಪ್ನಗಳು ಕಣ್ಣಿನಿಂದ ಕಂಡ ವಸ್ತುಗಳ ಸಮ್ಮಂಧಿಯಾಗಿಯೆ



CC-0. Jangamwadi Math Collection. Digitized by eGangotri

ಇರುವುವು. ಇದಕ್ಕಿಂತ ಸ್ವಲ್ಪಕಡಿಮೆ ಸ್ವಪ್ನಗಳು ಶ್ರಾವ್ಯ ವಸ್ತುಗಳ ಸಮ್ಮಂಧಿಗಳಾಗಿರುವುವು. ಇನ್ನುಳಿದ ಇಂದ್ರಿಯಗಳ ವ್ಯಾಪಾರದ ಬಗ್ಗೆ ಅಂದರೆ ಗತಿ, ಸ್ಪರ್ಶ, ವಾಸನೆ ಮತ್ತು ರುಚಿ ಮೊದಲಾದವುಗಳ ವಿಷಯವಾಗಿ ಬೀಳುವ ಸ್ವಪ್ನಗಳ ಪ್ರಮಾಣವು ತೀರ ಕಡಿಮೆಯಾಗಿರುವುದು. ಸ್ವಪ್ನವಿದೊಂದು ಆಭಾಸವಿದ್ದ ಕಾರಣ ಅದು ಇಂದ್ರಿಯಜನ್ಯ ಅನುಭವದ ಹೊರತು, ಸಂಭವಿಸುವುದಿಲ್ಲ. ಕನಸಿನಲ್ಲಿ ಕಂಡ ಕೆಲವು ವಸ್ತುಗಳು ಪ್ರತ್ಯಕ್ಷ ಸೃಷ್ಟಿಯಲ್ಲಿ ತೋರಿಬರುವುದಿಲ್ಲವೆಂಬುದು ನಿಜವು. ಆದರೂ ಕನಸಿನಲ್ಲಿ ಕಂಡುಬರುವ ಅದ್ಭುತ ಮತ್ತು ಅಪೂರ್ವ ವಸ್ತುಗಳು ಪ್ರತ್ಯಕ್ಷ ಸೃಷ್ಟಿಯಲ್ಲಿ ನೋಡಿದ ವಸ್ತುಗಳ ಸಂಸ್ಕಾರದ ಪರಿಣಾಮವಾಗಿರುವುವು. ಪ್ರತ್ಯಕ್ಷ ಸೃಷ್ಟಿಯಲ್ಲಿ ಭಂಗಾರ ಮತ್ತು ಪರ್ವತ ಇವುಗಳನ್ನು ಬೇರೆ ಬೇರೆ ಕಂಡ ಮೇಲೆ ಪ್ರತ್ಯಕ್ಷ ಸೃಷ್ಟಿಯಲ್ಲಿ ಕಾಣದಂತಹ ಸುವರ್ಣಪರ್ವತವು ಸ್ವಪ್ನದಲ್ಲಿ ತೋರಿಬರುವುದು. ಈ ಎರಡು ವಸ್ತುಗಳನ್ನು ನೋಡದಿದ್ದವನಿಗೆ ಇಂತಹ ಸ್ವಪ್ನಗಳು ಎಂದಿಗೂ ಬೀಳಲಾರವು. ಇದರಂತೆಯೆ ಪ್ರಕಾಶದ ಅನುಭವವೇನೂ ಇಲ್ಲದ ಕುರುಡನಿಗೆ ಪ್ರಕಾಶದ ಸ್ವಪ್ನವು ಎಂದೂ ಬೀಳಲಾರದು.

(ಬ) ಸ್ವಪ್ನದಲ್ಲಿ ಕಂಡುಬರುವ ಸಂಗತಿಗಳಲ್ಲಿ ಯಾವ ಪ್ರಕಾರದ ಸುಸಂಬದ್ಧತೆಯು ಅಥವಾ ಸುವ್ಯವಸ್ಥೆಯು ಇರುವುದಿಲ್ಲ. ಜಾಗ್ರತಿಯಲ್ಲಿ ನಮ್ಮ ವಿಚಾರಗಳು ನಮ್ಮ ಸ್ವಾಧೀನವಾಗಿರುವ ಕಾರಣ ಅವುಗಳಲ್ಲಿ ಒಂದು ಪ್ರಕಾರದ ಸುವ್ಯವಸ್ಥೆಯಿರುವುದು. ಮತ್ತು ನಮ್ಮ ವಿಚಾರಗಳ ಮಾಲಿಕೆಗಳು ಅತ್ರುಟಿತವಾಗಿ ಉಳಿಯುವುವು. ನಮ್ಮ ವಿಚಾರದಲ್ಲಿ ಒಂದೇ ಸುಸಂಗತತೆಯು ಕಂಡುಬರದೆ ಇದ್ದರೆ ನಾವು ಎಲ್ಲಿಯಾದರೂ ತಪ್ಪುತ್ತಿರುವೆವು ಎಂದು ಎನಿಸುವುದು. ಸ್ವಪ್ನದಲ್ಲಿ ಈ ನಿರ್ಬಂಧವು ಇಲ್ಲದೆ ಇದ್ದ ಕಾರಣ ಯಾವುದಾದರೊಂದು ವಿಚಾರವು ಮತ್ತೊಂದು ಯಾವ ಬೇಕಾದ ವಿಚಾರಕ್ಕೂ ಸಂಬಂಧಿಸುವುದು. ಸ್ವಪ್ನದಲ್ಲಿ ಅಸಂಬದ್ಧತೆಯೂ ಹುಚ್ಚುತನವೂ ಸಹಜವಾಗಿರುವುವು. ನಾವು ನಮ್ಮ ಸ್ವಪ್ನಗಳನ್ನು ಹೇಳುವುದಾದರೆ ಅದರೊಳಗೆ ಒಂದು ಪ್ರಕಾರದ ಸುಸಂಗತತೆಯನ್ನು ಉಂಟುಮಾಡಿಕೊಂಡು ಹೇಳುವೆವು. ಸ್ವಪ್ನವನ್ನು ಕಂಡಂತೆಯೆ ಹೇಳಿದರೆ ಅಥವಾ ಬರೆದಿಟ್ಟರೆ ಅದರಲ್ಲಿ ಏನೂ ಸುಸಂಗತತೆಯು ಕಂಡುಬರಲಾರದು. ಸ್ವಪ್ನದಲ್ಲಿ ನಿರ್ಜೀವ ವಸ್ತುಗಳು ಅನೇಕ ರೂಪಗಳನ್ನು ಧರಿಸಿದ್ದನ್ನೂ ಅಥವಾ ತಾನೇ ತನ್ನ ಹೆಗಲಮೇಲೆ ಕುಳಿತಿದ್ದನ್ನೂ ಮನುಷ್ಯನು ನೋಡ[illegible] ಪನು. ಇದರಲ್ಲಿ ಪರಸ್ಪರ ಸಂಬಂಧವೇನೂ ಇರುವುದಿಲ್ಲ.

(ಕ) ಸ್ವಪ್ನದಲ್ಲಿ ನೈತಿಕ ಮತ್ತು ಧಾರ್ಮಿಕ ನಿ[illegible]ಮಗಳ ಉಲ್ಲಂಘನೆಯು ಸಜ್ಜನರ ಕಡೆಯಿಂದಲೂ ಆ[illegible]ತ್ತಿರುವುದು ಕಂಡುಬರುವುದು. ಯಾವ ಕೃತ್ಯ[illegible] ಜಾಗ್ರತಿಯಲ್ಲಿ ನಮ್ಮಿಂದ ಆದರೆ ನಾವು ಪಶ್ಚಾತ್ತಾ[illegible]ದಿಂದ ಪ್ರಾಣವನ್ನು ಕೂಡ ಕೊಡುವೆವೋ ಅಂತಹ ಕೃ[illegible]ಗಳನ್ನು ಏನೂ ಹೆದರಿಕೆಯಿಲ್ಲದೆ ಸ್ವಪ್ನದಲ್ಲಿ ಮಾ[illegible]ವೆಂಬುದರ ಅನುಭವವು ಪ್ರತಿಯೊಬ್ಬರಿಗೆ ಇರಬಹು[illegible] ಮನಸ್ಸಿನಲ್ಲಿ ಬಂದ ಯಾವ ವಿಚಾರಗಳಿಗೂ ಬಂಧ[illegible]ದಿದ್ದ ಕಾರಣ ಮನಸ್ಸಿನಲ್ಲಿ ಹುಟ್ಟಿದ ಪ್ರತಿಯೊ[illegible] ವಿಚಾರ ಮತ್ತು ಇಚ್ಛೆಗಳು ಸ್ವಪ್ನದಲ್ಲಿ ಪೂರ್ಣವಾ[illegible]ವುವು. ಅತಿ ನಿಸ್ಪೃಹಿಗಳೂ ನ್ಯಾಯನಿಷ್ಠುರ[illegible] ನ್ಯಾಯಾಧೀಶರಿಗೆ ಸಹ ಸ್ವಪ್ನದಲ್ಲಿ ಅನೇಕ ಸಲ ಸ[illegible] ಸಹಿಮಾಡುವಾಗ ಏನೂ ವಿಷಾದವೆನಿಸುವುದಿಲ್ಲ. ಕ[illegible]ರಾಧಗಳ ಸಲುವಾಗಿ ದೇಹಾಂತಶಿಕ್ಷೆಯಾದ[illegible] ಮಾತ್ರ ಮಾಡಿದ ಕೃತ್ಯದ ಬಗ್ಗೆ ದುಃಖವೆನಿಸುವು[illegible] ಬಡಹುಡುಗರಿಗೆ ನಿಃಸ್ವಾರ್ಥದಿಂದ ಶಿಕ್ಷಣ ಕೊಡು[illegible]ರಲ್ಲಿ ತನ್ನ ಪೂರ್ಣ ಆಯುಷ್ಯವನ್ನು ಅರ್ಪಣ ಮಾ[illegible] ಒಬ್ಬ ಮಹನೀಯನು ಕಾದ ಸ್ತ್ರೀಯಳಿಗೆ ಒಬ್ಬ ಹುಡು[illegible] ಅಣಕಿಸಿದ್ದನ್ನು ನೋಡಿ, ಅವನನ್ನು ಮಡಿಸಿ ಕಬ್ಬಿ[illegible] ಸಲಾಕೆಯ ಸಿಂಹದ ಪಂಜರದಲ್ಲಿ ನೂಕಿದಂತೆ ಸ್ವ[illegible]ವನ್ನು ಕಂಡದ್ದನ್ನು ಕಾರ್ಪೆಂಟರ್ ಸಾಹೇಬರು ತ[illegible] ಗ್ರಂಥದಲ್ಲಿ ಬರೆದಿರುವರು.

( ಡ ) ಸ್ವಪ್ನದಲ್ಲಿ ಯಾವ ಪ್ರಮಾಣದ ಕಲ್ಪನೆಯು [illegible] ಇರುವುದಿಲ್ಲ. ಏನಾದರೂ ಅಸಂಬದ್ಧವಾದ ಚಮತ್ಕಾ[illegible]ರಿಕವಾದ ಹಾಸ್ಯಾಸ್ಪದವಾದ ಮನಸ್ಸು ಗೊಂದಲ[illegible]ಡಾಗುವಂತಹ ಸಂಗತಿಗಳು ಸ್ವಪ್ನದಲ್ಲಿ ಕಂಡುಬ[illegible]ವುವು. ಅದೇ ಮದುವೆಯಾದ ಒಬ್ಬ ತರುಣನ ಮ[illegible]ಸ್ಸಿನಲ್ಲಿ ತನ್ನ ತರುಣ ಹೆಂಡತಿಯಸಂಗಡ ಸಮುದ್ರ[illegible]ದಲ್ಲಿರುವ ಒಂದು ಸುಂದರವಾದ ಬಂಗಲೆಯಲ್ಲಿ ವಿ[illegible] ಮಾಡಬೇಕೆಂದು ಉತ್ಕಟವಾದ ಇಚ್ಛೆ ಇತ್ತು.

CC-0. Jangamwadi Math Collection. Digitized by eGangotri

ದಿವಸ ಅವನು ಕನಸಿನಲ್ಲಿ ಇಂತಹ ಸಮುದ್ರದ ಅತಿ ಸಮೀಪವಿರುವ ಒಂದು ಸುಂದರವಾದ ಬಂಗಲೆಯಲ್ಲಿ ತಾನು ವಾಸವಾಗಿದ್ದಂತೆ ಕಂಡನು. ಮತ್ತು ಆ ಬಂಗಲೆಯ ಯಜಮಾನಿಯಾದ ಒಬ್ಬ ಮುದುಕಿ ಹೆಂಗಸು ಆ ಬಂಗಲೆಯಲ್ಲಿ ಅವನಿಗೆ ಸುಖೋಪಭೋಗದ ವಸ್ತುಗಳನ್ನು ಒದಗಿಸಿಕೊಡುವ ಹೊಣೆಯನ್ನು ಹೊತ್ತುದನ್ನು ನೋಡಿದನು. ಈ ಪ್ರಕಾರ ಎಲ್ಲ ಸಂಗತಿಗಳು ಅವನ ಮನಸ್ಸಿನಂತೆ ಆಗುವುದರೊಳಗೆ ಅವನ ಮದುವೆಯು ಆ ಯಜಮಾನಿಯಾದ ಮುದುಕಿಯ ಸಂಗಡ ಆದುದನ್ನು ಕಂಡು ಹೆದರಿ ಎಚ್ಚರಾದನು. ಇಂತಹ ಏನಾದರೂ ವಿಲಕ್ಷಣ ಸಂಗತಿಯು ಸ್ವಪ್ನದಲ್ಲಿ ಕಂಡು ಬರುವುದು.

( ಇ) ಸ್ವಪ್ನದಲ್ಲಿ ವೇಳೆಯ ಕಲ್ಪನೆಯು ವಿಪರೀತವಾಗುವುದು. ಅತಿ ಸ್ವಲ್ಪಕಾಲದಲ್ಲಿ ಬಿದ್ದ ಸ್ವಪ್ನದಲ್ಲಿ ಅತಿ ದೀರ್ಘಕಾಲ ನಡೆಯುವ ಸಂಗತಿಗಳು ಕಂಡು ಬರುವುವು. ಅಥವಾ ಸ್ವಪ್ನದ ಕಾಲವು ಬಹು ದೀರ್ಘವಾದರೆ ನಿಜವಾದ ಕಾಲವು ಅತ್ಯಲ್ಪವಾಗಿರುತ್ತದೆ. ಹೀಗೆ ಪರಸ್ಪರ ವಿರೋಧವು ಕಂಡು ಬರುವುದು. ಉದಾ: ಗಡಿಯಾರದಲ್ಲಿ ಹನ್ನೆರಡನೆಯ ಮೊದಲಿನ ಘಂಟೆಯು ಬಾರಿಸಿದುದನ್ನು ಕೇಳಿದ ಕೂಡಲೆ ಒಬ್ಬನಿಗೆ ಒಂದು ಸ್ವಪ್ನವು ಬಿದ್ದಿತು. ಆ ಸ್ವಪ್ನದಲ್ಲಿ ಅವನು ತನ್ನ ಮನೆಯಿಂದ ಓಡಿಹೋಗಿ ಒಂದು ಹಡಗಿನ ಮಾಲಕನ ಕೈಕೆಳಗೆ ಚಾಕರಿಯನ್ನು ಹಿಡಿದನು. ಅಲ್ಲಿ ದೀರ್ಘಕಾಲ ಚಾಕರಿ ಮಾಡುತಿರುವಾಗ ಒಂದು ದಿವಸ ಆ ಹಡಗು ಕಲ್ಲು ಬಂಡೆಗೆ ತಾಕಿ ಒಡೆದು ಚೂರುಚೂರಾಯಿತು. ಆ ಕಾಲಕ್ಕೆ ಅವನು ಒಂದು ಅರಣ್ಯಮಯವಾದ ದ್ವೀಪಕ್ಕೆ ಹೋದನು. ಅಲ್ಲಿ ಕೆಲವು ದಿವಸ ಆ ಮಾರ್ಗದಿಂದ ಯಾವುದಾದರೂ ಹಡಗವು ಬರುವುದೋ ಹೇಗೆಂಬುದನ್ನು ಕಾದು ಕಾದು ತೀರ ನಿರಾಶನಾಗಿರುವಾಗ ಒಂದು ಹಡಗು ಅವನ ದೃಷ್ಟಿಗೆ ಬಿದ್ದಿತು. ಆ ಹಡಗಿನಲ್ಲಿ ಚಾಕರಿ ಹಿಡಿದು ಕಪ್ತಾನನ ವಿರುದ್ಧ ದಂಗೆ ಎಬ್ಬಿಸಿದ ಜನರ ಮುಂದಾಳಾಗಿ ಹಡಗನ್ನು ತನ್ನ ಕೈಯಲ್ಲಿ ತಕ್ಕೊಂಡು ಅವನು ಬಹು ದೂರಪ್ರದೇಶಕ್ಕೆ ಹೋದನು. ಬಹಳ ದಿವಸವಾದುದರಿಂದ ಸಮುದ್ರಪ್ರವಾಸವು ಬೇಡವಾಗಿ ತನ್ನ ಸ್ವದೇಶಕ್ಕೆ ಬಂದು ಹಡಗನ್ನು ಮಾರಿ ಒಂದು ನಗರದಲ್ಲಿ ಅವನು ವ್ಯಾಪಾರದ ಉದ್ಯೋಗವನ್ನು ಮಾಡತೊಡಗಿದನು. ಒಂದು ದಿವಸ ಒಬ್ಬ ಮನುಷ್ಯನು ಇವನು ಹಡಗಿನಮೇಲಿದ್ದ ಬಂಡುಗಾರನೆಂದು ಗುರುತು ಹಿಡಿದು ಇವನನ್ನು ಪೋಲೀಸರ ಕೈಯಲ್ಲಿಕೊಟ್ಟು ನ್ಯಾಯಾಸನದ ಎದುರಿಗೆ ನಿಲ್ಲಿಸಿದನು. ಆ ವಿಚಾರಣೆಯಲ್ಲಿ ಇವನಿಗೆ ನೇಣಿನ ಶಿಕ್ಷೆಯಾಗಿ ಇವನನ್ನು ನೇಣು ಹಾಕುವ ಸ್ಥಳಕ್ಕೆ ತಕ್ಕೊಂಡುನಡೆದರು. ಕೊರಳಿಗೆ ಹಗ್ಗವನ್ನು ಕಟ್ಟಿದಕೂಡಲೆ ಅವನು ಹೆದರಿ ಎಚ್ಚತ್ತನು. ಆಗ ಹನ್ನೆರಡು ಹೊಡೆಯುತ್ತಿರುವಾಗಿನ ಕೊನೆಯ ಗಂಟೆಯನ್ನು ಕೇಳಿದನು. ಈ ಎಲ್ಲ ಸಂಗತಿಗಳೂ ಇಷ್ಟು ಸ್ವಲ್ಪ ಅವಕಾಶದಲ್ಲಿ ಆದುವು. ಆದುದರಿಂದ ಸ್ವಪ್ನಕಾಲ ಮತ್ತು ಸತ್ಯಕಾಲ ಇವುಗಳಲ್ಲಿರುವ ಅಸಮಂಜಸತನವು ಸಹಜವಾಗಿ ತಿಳಿದುಬರುವುದು.

( ಫ ) ಸ್ವಪ್ನಗಳು ಸಹಜವಾಗಿ ಮರೆತು ಹೋಗುವುವು. ಯಾವುವಾದರೂ ವಿಶೇಷ ಸಂಗತಿಗಳು ಜಾಗ್ರತಾವಸ್ಥೆಯಲ್ಲಿ ಒದಗಿದ್ದರೆ ಅವುಗಳ ಸ್ಮರಣವು ಉಳಿಯುವುದು. ಆದರೆ ಸ್ವಪ್ನದಲ್ಲಿ ಬೇಕಾದಷ್ಟು ವಿಲಕ್ಷಣ ಅಥವಾ ಮನೋವೇಧಕ ಸಂಗತಿಗಳನ್ನು ಕಂಡರೂ ಅವುಗಳ ವಿಸ್ಮೃತಿ ಆಗಿಂದಾಗಕೂಡ ಆಗಬಹುದು. ಸುಖಕಾರಕವೇ ಇರಲಿ, ದುಃಖಕಾರಕವೇ ಇರಲಿ, ಎಂತಹ ಸ್ವಪ್ನಗಳೂ ಮೇಲೆಹೇಳಿದಂತೆ ಮರೆತು ಹೋಗುವುವು.

ಮುಂದುವರಿಯುವುದು.

CC-0. Jangamwadi Math Collection. Digitized by eGangotri

# ಷಾಜಹಾನ್

(ಸಣ್ಣದೊಂದು ಭಾವರೂಪಕ)

ಶ್ರೀ. ಜಿ. ವಾಸುದೇವರಾವ ಬೆಂಗಳೂರು

## ಮೊದಲನೆಯ ದೃಶ್ಯ

(ಅರಮನೆಯ ವಿಹಾರವನದಲ್ಲಿ, ಮುಂಜಾವದ ಸಮಯ;)

**ಜಹನಾರಾ**

(ಹಾಡುತ್ತ ಬರುವಳು)

ಕಿರುನಗೆ ನಗಲು ಮೂಡಲ ಮುಗಿಲು
ತಿಳಿಯಾಕಾಶದ ಚೆಲುವೋ, ಮಿಗಿಲು !
ಉದಯದ ತಾರೆ ಹಿಡಿಯುತ ನೀರೇ,
ಚೆಲುವಿನ ಉಷೆಯೇ, ನೀನೈತಾರೇ !
ಸೆರಗನು ಬೀಸಿ ಬೆಳಗಿನ ರಾಶಿ
ಹರಡುತ ಬಾರೇ ! ತಣುಪನು ಸೂಸಿ
ಬೆಳಕದು ಕೂಡುತಿದೆ—ತಣ್ಣೆಲ-
ರೊಯ್ಯನೆ ತೀಡುತಿದೆ !

**ರೋಷನಾರಾ**

(ಮತ್ತೊಂದೆಡೆಯಿಂದ ಹಾಡುತ್ತ ಬರುವಳು)

ಹೂವನಾಯ್ದು ತಳಿರಕೊಯ್ದು
ಅದರ ಸವಿಯ ಹೃದಯಕೊಯ್ದು
ಎಳೆಯ ಬಳ್ಳಿಗಿಡಗಳಿಂದ
ಪ್ರೇಮದಂಜಲಿಗಳ ಕೊಯ್ದು
ತೆರಳಲಂತು, ತಿರುಗಲಿಂತು
ಆಗ ಬರುವನು ಜಗದ ಕಂತು !

**ಜಹನಾರಾ**

ಯಾರವರು ಈ ನಸುಕಿನಲಿ ಹಾಡ ಹಾಡುತ್ತ
ಸಾರುತಿರುವರು ?........ರೋಷನಾರಾ !

**ರೋಷನಾರಾ**

ಜಹನಾರಾ,
ಏನಿನಿತು ಬೇಗ ನೀನಿಲ್ಲಿಗೈತಂದಿರುವೆ ?

**ಜಹನಾರಾ**

ಯಾವುದೋ ಚಿಂತೆಯಲಿ ಏತಕೋ ನಡುಗುತಿ-
ದೆನ್ನ ಎದೆ, ತಂಗಿ ! ಇರುಳೆಲ್ಲವೂ ನಿದ್ದೆ ಬರ-
ಲಿಲ್ಲ. ಇರುಳಿನ ಕಡೆಯ ಪ್ರಹರದಲಿ ಕಣ್ಮುಚ್ಚಿ-
ದಾಗಲೇ ಕನವರಿಸಿ, ಕಣ್ತೆರೆದು ನೋಡಿದೆನು.
ಬೆಳಗುಜಾವದ ಮೊದಲ ಹಕ್ಕಿ ಹಾಡಿತು ಎಚ್ಚ.
ಆಗ ನಾನೂ ಎದ್ದೆ. ಅದು ಇರಲಿ, ನೋಡದೋ!
ಹೂವನಾರಿಸಿಕೊಂಡು ಹೋಗುವಾ, ಬಾ!

(ಇಬ್ಬರೂ ಹಾಡುತ್ತ ಹೂವಾರಿಸುವರು)

(ಹಾಡು)

ಚೆಲುವಿನುದಯ ನಾಡಿನೊಡೆಯ
ಜನಿಸೆ ನಡುಗಲೇಕೆ ಹೃದಯ ?
ನದಿಯ ಮಳಲು ನೆನಸಿಕೊಳಲು
ಎದೆಯು ಬಿರಿವುದೇಕೆ ಅಳಲು ?
ಅರುಣ ತಾರೆ ಸಭವ ಸಾರೆ
ಕವಿಯಲೇಕೆ ಅಶ್ರುಧಾರೆ ?
ಸೆರಗಿನಿಂದ ಚೆಲುವಿನುಷೆಯು
ಕಾಂತಿ ಬೀರಿ ಬರುವಳು
ಹಾಡುತಿರುವ ಖಗಗಳೊಡನೆ
ಶಾಂತಿ ಸಾರಿ ಬರುವಳು !

## ಎರಡನೆಯ ದೃಶ್ಯ

(ಅಂತಃಪುರದಲ್ಲಿ, ಸಂಜೆಯ ಸಮಯ;)

**ಸೆಲೀಮಾ**

ಸಾಕು, ನಿಲ್ಲಿಸು ಇನ್ನು, ದೂರದಿಂದೈತರುವ
ಸಂಗೀತವಾಹಿನಿಯ, ಮಗುವೆ ! ಬಾಗಿಲನು ತೆರೆ!
ಪಡುಗಡಲಿನೆದೆಯಲ್ಲಿ ಬೀಳುತಿಹ ನೇಸರಿನ
ಕಿರಣರಾಶಿಯು ಸರಿಯುತಿಲ್ಲಿಗೂ ಬರಲಿ !

CC-0. Jangamwadi Math Collection. Digitized by eGangotri

....ತಲೆಯೇಕೊ, ಬಿರಿಯುವಂದದಿ ಬಹಳ ನೋಯುತಿದೆ,
ಜಹನಾರ ! ಈ ನನ್ನ ದೃಷ್ಟಿಪಥವೇ ದೂರ,
ಬಹುದೂರ, ಅವುದೋ ಮಂಜಿನಲಿ ಮರೆಯಾಗಿ
ಕಾಣದಿರುವುದು, ಸಂಜೆ ಕೆಂಜಾಯೆಯಲಿ ಎಳೆಯ
ಕೆಂಬಣ್ಣವಾಂತು, ಅದೊ, ಯಮುನೆಯ ತರಂಗಗಳು
ತಿಳಿಯ ನೊರೆನೊರೆಯಾಗಿ ಹರಿಯುತಿವೆ. ಜಹನಾರಾ !
ಏನೋ, ಇವೆಲ್ಲವೂ ಬೇಡವೆಂದೆನಿಸುವುದು.
....ಈಗಲೇ ನಿನ್ನ ತಂದೆಯನಿಲ್ಲಿ ಕಳುಹುವೆಯ ?

### ಜಹನಾರಾ

ಶಾಂತವಾಗಿರು, ಅಮ್ಮ! ತಂದೆಯ ಸಮಾಗಮದಿ
ಅದುರುತಿಹ ನಿನ್ನ ಎದೆ ಶಾಂತವಾಗಲಿ. ಇದೋ,
ಈಗಲೇ ಹೊರಟಿರುವೆನವನೆಡೆಗೆ ನಾನು.

(ತೆರಳುವಳು)

### ಸೆಲೀಮಾ

ಅದುರುತಿಹ ಎದೆ ಶಾಂತವಾಗುವುದದೆಂದಿಗೋ !
ಎಲೆ ದೇವ, ಪರಮಾತ್ಮ, ನಿನ್ನ ನಾನೆಂದೂ
ಈ ಪರಿಯ ದಿವ್ಯ ಭಕ್ತ್ಯುತ್ಸಾಹದಿಂದ
ಬೇಡಿಲ್ಲ ! ಸೂರ್ಯಚಂದ್ರರ ಮೊಗದಿ ನಗುತಿರುವ
ಜಗದೀಶ, ನಿನ್ನ ಕಿರುನಗೆಯ ಬೆಳುದಿಂಗಳಲಿ
ಕಾರಿರುಳು ಕವಿದಿರುವ ನನ್ನ ಹೃದಯವು ಬೇಗ
ಜ್ಯೋತಿಯಿಂ ತುಂಬಿತುಳುಕಾಡುವಂತೆಸಗು........
ಅದಾರು ?

(ಷಾಜಹಾನನು ಪ್ರವೇಶಿಸುವನು)

ಕಡೆಗೆ ಬಂದೆಯ, ನನ್ನ ಹೃದಯನಾಥ !

### ಷಾಜಹಾನ್

ಏನಿದೇನಿದು, ನಲ್ಲೆ ? ಏಕಿನಿತು ಜ್ವರತಪ್ತ
ಳಾಗಿ ಕಾಣುವೆ ನೀನು ? ತುಟಿಯೇಕೆ ಅದುರುತಿದೆ
ಇಂತು? ಮೇಣ್ ನಿನ್ನ ಮೊಗವಿಂತೇಕೆ ಬಾಡಿಹುದು,
ಬಿರುಗಾಳಿ ಹೊಡೆತದಲಿ ಸಿಲುಕಿ ಸೊರಗಿದ ಎಳೆಯ
ಅಲರಿನಂದದಿ ? ನಿನ್ನ ಕಂಗಳಿಂದೀ ಬಗೆಯ
ಕಡು ವಿವರ್ಣತೆಯೇಕೆ ಎದ್ದು ಬರುವಂತಿಹುದು ?

### ಸೆಲೀಮಾ

ಏತಕೋ ಅಸ್ವಸ್ಥವಾಗಿಹುವು ನನ್ನ
ತನುಮನಗಳೆಲ್ಲವೂ. ಆದರೂ, ಎದೆಯಾಣ್ಮ !
ನಿನ್ನ ನೋಡಿದಮೇಲೆ ನನಗೆ ಬೇಗುದಿಯೇ ?
ಅದೊ, ಅಲ್ಲಿ ಯಮುನೆಯಾ ಚಂಚಲತರಂಗಗಳ
ಸರದ ಮಧ್ಯದಿ ದೋಣಿಯಲ್ಲ ಕುಳಿತೆಲ್ಲಿಗೋ
ತೆರಳುತಿಹ ನಾವಿಕನ ತೆರದಿ ನಾನಿಹೆನು !
ಯಾವುದೋ ದೂರಯಾತ್ರೆಗೆ ಹೊರಟ ಯಾತ್ರಿಕನ
ಹೃದಯದಂತಿಹುದೆನ್ನ ಹೃದಯ. ಎಲ್ಲಿಂದಲೋ
ಅಸ್ಪಷ್ಟಸಂದೇಶಗಳು ಬಂದು ನನ್ನನ್ನು
ಕರೆಯುವಂತಿಹುವು. ನಾ ತೆರಳಿ ಹೋದರೆ, ಇನಿಯ!
ನಾನೆಲ್ಲಿಗಾದರೂ ತೆರಳಿ ಹೋದರೆ, ನೀನು
ಬಾಳುವೆಯದೆಂತು ?

### ಷಾಜಹಾನ್

(ಗಾಢಾಲೋಚನೆಯಿಂದ)

ನಾ ಬಾಳ್ವೆನೆಂತು !
....ಇರಲಿ ಆ ಚಿಂತೆಯೇತಕೆ ನಿನಗೆ ಅರಸಿ ?
ಈ ಪರಿಯ ಚಿಂತನೆಗಳೆಂಬ ಕರಿನೆಳಲುಗಳು
ಸುಳಿಯಲೇತಕೆ ನಿನ್ನ ಬೆಳಗಿನೆದೆಯಲ್ಲಿ ?
....ಅಗೋ, ನೋಡು, ದೂರದಾ ಪಡುಮುಗಿಲ
ರಾಶಿಯಲಿ
ನೇಸರನಿತು ಪ್ರಶಾಂತನಾಗಿ ಮುಳುಗುತ್ತಿಹನು !
ದೂರದಲಿ ಗಂಧವಾಹಿನಿಯಾದ ತೆಂಗಾಳಿ
ತೀಡುತಿದೆ. ಪ್ರಕೃತಿದೇವಿಯು ರವಿಗೆ ನೀಡುವಾ
ಕಡೆಯ ಪ್ರೇಮಾಂಜಲಿಯಿದೆನುವಂತೆ ಅರಳುಗಳು
ಸೊಬಗಿಂದ ತಲೆವಾಗಿ ಬಾಡಿ ದೂಳಿಯಲಿ
ಉದುರುತಿವೆ....ಅದೊ ನೋಡು, ಆ ಎಡೆ, ಸೆಲೀಮಾ !
ಯಾರಿವನು ಏಕಾಂಗಿ ? ಇಂತುಹಾಡುತ ಎಲ್ಲಿ
ಹೋಗುತಿರುವನು ? ಕೇಳು, ಅದೊ ಕೇಳ್, ಸೆಲೀಮಾ,
ಅವನ ದೂರದ ಸರಸ ಸಂಗೀತವನು !

(ದೂರದಿಂದ ಹಾಡು ಕೇಳಿಬರುವುದು)

ಸುಗ್ಗಿಯರಸ ಕರೆಯುತಿಹನು,
ಬಾ—ಬೇಗ ಬಾ !

ಪಚ್ಚೆಪಯಿರ ವಸನವುಟ್ಟು
ಪೊಡವಿತಾಯಿ ಮೆರೆವಳು.

ಮಡಿಲಮೇಲೆ ಹೂವ ಹಾಸಿ
ಮಲಗಲೆನ್ನ ಕರೆವಳು.



CC-0. Jangamwadi Math Collection. Digitized by eGangotri

ಮಲಗೆ ತಾಯ ಮಡಿಲಮೇಲೆ
ಕನಸ ಸೋನೆ ಸುರಿವಳು–
ಮಗುವ ಮೇಲಿನೊಲುಮೆಯಿಂದ
ಕಂಬನಿಗಳ ಕರೆವಳು !

**ಸೆಲೀಮಾ**

ಮಧುರವಾಹಿನಿಯಾದ ಗಾನವಿದನುಲಿಯುತಿಹು-
ದಾವುದೀ ದಿವ್ಯ ಕವಿಕೋಗಿಲೆಯಿದು ?

**ಷಾಜಹಾನ್**

ತಡೆ, ಕೇಳು, ಸೆಲೀಮಾ ! ಮತ್ತೆ ಹಾಡುತ್ತಿಹಸು !

(ಹಾಡು)

ಸಂಜೆ ಬರಲು ಬನದ ದೇವಿ
ಕರೆಯುತಿಹಳು, ಬಾ !
ಚೈತ್ರದ ಹರಿಕಾರನಿಂದ
ಅಮರಗಾನ ಬರುತಿದೆ.
ಅರಳಿದೆಸಳ ಹೂವ ಕಿತ್ತು
ಹೂವ ಬುಟ್ಟಿ ತುಂಬಿದೆ.
ಜ್ಯೋತಿ ತಳೆದ ಗಗನದಲ್ಲಿ
ಸೊಬಗು ಸೇರಿಬರುತಿದೆ.
ಹೃದಯವೀಣೆ ಗಾನವುಲಿಯೆ
ಲೋಕವೆಲ್ಲ ನಗುತಿದೆ !

**ಷಾಜಹಾನ್**

ಎನಿತು ನವ ಮಧುರ ರಸಭರಿತವೀ ಸಂಗೀತ !
ಸಂಜೆಯ ಪ್ರಶಾಂತನೀರವತೆಯುಲಿ ಈ ಅಮರ
ಗೀತವನು ಕೇಳಿ ನನ್ನೆದೆಯುರಳಿದಂತಾಯ್ತು !
....ಸ್ವಲ್ಪ ವಿಶ್ರಾಂತಿಯುಲಿ ಮಲಗು, ಹೃದಯೇಶ್ವರೀ !
ಇರುಳ ಮೊದಲನೆಯ ಪ್ರಹರದಲಿ ಮರಳಿ
ನಿನ್ನೆಡೆಗೆ ಸಾರುವೆನು....ಅದೊ, ಕೇಳು, ಕೇಳು,
ಮರಳಿಯೂ ಅದೆ ಗಾನ ಕೇಳಿ ಬರುತಿಹುದು !

(ಹಾಡು)

ಸುಗ್ಗಿಯರಸ ಕರೆಯುತಿಹನು
ಬಾ—ಬೇಗ ಬಾ !
ಅರಳಿನೆಸಳ ಸೋನೆ ಸೂಸಿ
ಸುರಭಿಮಯ ಸಮೀರ ಬೀಸಿ
ಕರೆಯುತಿಹನು ಬಾ !
ಸಗ್ಗಸೊಗವ ತಳೆದು ಮೆರೆವ !
ಬಾ—ಬೇಗ ಬಾ !

(ಸಂಗೀತವು ಮೆಲ್ಲಗೆ ಸಂಜೆಯ ಶಾಂತಿಯಲ್ಲಿ ಲೀನವಾಗುವುದು)

* * * *

(ಸೆಲೀಮಳು ಕಾಲವಶಳಾಗಿ ಬಹಳ ವರುಷಗಳು ಉರುಳಿಹೋಗಿದ್ದುವು. ಷಾಜಹಾನನ ಮೋಸಗಾರ ಮಗನಾದ ಅವರಂಗ್‌ಜೇಬು ಯುಕ್ತಿತಂತ್ರಗಳಿಂದ ತನ್ನ ಅಣ್ಣಂದಿರನ್ನೂ ಸೋಲಿಸಿ, ಮೊಘಲ ಸಿಂಹಾಸನವನ್ನು ಆಕ್ರಮಿಸಿದುದು ಮಾತ್ರವಲ್ಲದೆ, ವಯೋವೃದ್ಧನೂ ಸತೀವಿಯೋಗದಿಂದ ಶೋಕತಪ್ತನೂ ಆಗಿದ್ದ ತನ್ನ ಮುದಿತಂದೆಯನ್ನು ಸೆರೆ ಹಿಡಿದಿಟ್ಟನು. ಆಗ ಷಾಜಹಾನನು, ಸೆಲೀಮಳ ಸಮಾಧಿಯಾಗಿ ಕಟ್ಟಿದ್ದ, ಶಿಲ್ಪಕಲಾವೈಭವವೇ ಮೂರ್ತಿವೆತ್ತಂತಿದ್ದ 'ತಾಜ ಮಹಲ್' ಭವನದ ಎದುರಿಗೇ ಒಂದು ಕಾರಾಗೃಹದಲ್ಲಿ ತನ್ನನ್ನು ಇಡಬೇಕೆಂದು ಬೇಡಿಕೊಂಡನು. ಏಕೆಂದರೆ, ನಿರಂತರವೂ ಅದರೊಂದು ಕಿಟಕಿಯ ಮೂಲಕ ತನ್ನ ಪ್ರಿಯೆಯ ಸಮಾಧಿಸೌಧವನ್ನು ನೋಡುತ್ತಿರಬಹುದೆಂಬ ಬಯಕೆ ಷಾಜಹಾನನಿಗೆ ಬಲವಾಗಿತ್ತು. ಆತನ ಶರೀರವು ಹೇಗೆ ಆ ಕಾರಾಗೃಹದಿಂದ ಪಾರಿಹೋಗಿ, ವಿಸ್ತಾರವಾದ ನೀಲಾಕಾಶದ ಕೆಳಗೆ ತನ್ನ ಪ್ರಿಯೆಯ ಸಮಾಧಿಯ ಬಳಿ ಹೋಗಲೆಂದು ಕಾತರಿಸುತ್ತಿದ್ದಿತೋ ಹಾಗೆಯೇ ಆವನ ಆತ್ಮವೂ ಶರೀರ ಶೃಂಖಲೆಯನ್ನು ಕಳಚಿ, ವಿರಹಶೋಕಾತೀತವಾದ ಪ್ರೇಮಸ್ವರ್ಗವನ್ನೈದಿ, ತನ್ನ ಪ್ರಿಯೆಯೊಡನೆ ಪುನಸ್ಸಮಾಗಮ ಹೊಂದಲು ಆತುರ ಕಾತರ ಪಡುತ್ತಿತ್ತು.

ಆತನ ಕಷ್ಟಕಾಲದಲ್ಲಿ ಆತನ ಜ್ಯೇಷ್ಠಪುತ್ರಿಯಾದ ಜಹನಾರು ಆತನನ್ನು ಕೈಬಿಡದೆ, ಆತನಿಗಾಗಿ ತಾನೂ ಅವಿವಾಹಿತಳಾಗಿ, ಪಿತೃಸೇವೆಯ ಕಂಕಣವನ್ನು ಕಟ್ಟಿಕೊಂಡು, ಆತನ ಛಾಯಾನುವರ್ತಿಯೋ ಎಂಬುವಂತಿದ್ದಳು)

* * * *

## ಮೂರನೆಯ ದೃಶ್ಯ

(ಷಾಜಹಾನನ ಕಾರಾಗೃಹದಲ್ಲಿ, ಬೆಳುದಿಂಗಳ ರಾತ್ರಿ)

**ಜಹನಾರಾ**

ಆವ ದುರ್ವಿಧಿಯ ಬಿರುನೋಟವಿದು, ತಂದೆ?
ಅಂದೆ ನಂದಿತು ಮೊಗಲ ಕುಲದ ಜೀವಜ್ಯೋತಿ !
ನೆತ್ತರಿನ ನಾಲೆಯುಲಿ ಹಾದುಬಂದರು ಕಠಿಣ
ಪಾಷಾಣ ಹೃದಯರಾ ದಿವ್ಯ ಸಿಂಹಾಸನಕೆ !
ಅಂದೆ ಉರುಳಿದುದು ಭೂತಳಕೆ ಶಾಂತಿಪತಾಕೆ !
ತೆರಳಿದುದು ಅಂದಿನ ಅಮೋಘವೈಭವವೆಲ್ಲ !
ಇದನೆಲ್ಲ ಸಹಿಸುವುದು, ತಂದೆ,— ಅಯ್ಯೋ ! ತಂದೆ
ಬಹು ಕಷ್ಟ ! ಬಹು ಕಷ್ಟ !

CC-0. Jangamwadi Math Collection. Digitized by eGangotri

**ಷಾಜಹಾನ್**

ಕಷ್ಟವೆಸ್ನುವೆಯ, ಮಗು? ಅದೆ, ನನ್ನ ಜೀವನವ
ಸುಡುತಿರುವ ಕಾಳ್ಕಿಚ್ಚು ಎಂದು ನೀನರಿಯೆಯೇ?
ಕಠಿಸಹೃದಯದಿನವಳು ಕೈಬಿಟ್ಟು ತೆರಳಿದಳು-
ಕಡೆಯಿರದ ಕಡಲಿನಾ ತಡಿಯಲ್ಲಿ ಎಲ್ಲಿಯೋ;
ತೇಲುತಿದೆ ಅವಳು ಹಾಯಿಸುತಿರುವ ಕಿರುದೋಣಿ!
ನಮ್ಮ ನಿಟ್ಟುಸಿರುಗಳು, ಕಣ್ಣೀರಧಾರೆಗಳು,
ತಾಕುವುವೆ ಆಕೆಯಾ ಮುಕ್ತವಾದಾತ್ಮವನು?
ಈಪರಿಯ ಶೋಕರಾಶಿಯ ನಡುವೆ, ಜಹನಾರ,
ನನ್ನ ಚೆಲುವಿನ ಮಗುವೆ, ನೀನೊಂದು ದೀಪದೊಲು
ಬೆಳಗುತ್ತ ಎಷ್ಟು ಶಾಂತಿಯ ನೀಡುತಿರುವೆ!
ಕೊಳೆಯ ಕೆಸರಿನ ನಡುವೆ ಕೋಮಲತೆಯಿಂದೆದ್ದ
ಕಮಲಿನಿಯ ತೆರದಿ, ಜಹನಾರ, ನೀನೆನಗೆ
ಈ ನನ್ನ ಅಂತ್ಯದಿನಗಳಲೆಂತು ಶಾಂತಿದೇ-
ವಿಯವೊಲೆಸೆಯುತ್ತಿರುವೆ! ಹತ್ತಿರಕೆ ಬಾ, ಮಗುವೆ!
ನಿನ್ನ ಕಂಬನಿದುಂಬಿದೀ ಕಂಗಳನು ನೋಡಿ
ಬೇಯುತಿಹ ಈ ಎದೆಗೆ ಸ್ವಲ್ಪ ಸುಖವಾಗುವುದು!
ನಿನ್ನ ಈ ತೆರದಮಲ ಕೋಮಲದ ಹೃದಯವನು
ಸೃಷ್ಟಿಸಿದ ಬ್ರಹ್ಮನೇ ನಿನ್ನ ಘಾತುಕರಾದ
ಸೋದರರ ಹೃದಯವನು ಸೃಷ್ಟಿಸಿದನೇನು?
ನನಗಾಗಿ ನಿಜಸೌಖ್ಯವೆಲ್ಲವನು ಕೈಬಿಟ್ಟು
ಇನಿತು ಸೇವೆಯ ಮಾಡುತಿರುವ ನೀನಿಲ್ಲದಿರೆ
ಆವ ಮರಣದ ಕೋರೆದಾಡೆಗಳ ಬಾಯಿಯಲಿ
ಜಾರಿ ನರಕದ ತಟಕೆ ಹೋಗುತಿದ್ದೆನೋ!
ಆರು ಬಲ್ಲವರಾರು ಅರಿತವರು? ಜಹನಾರ,
ಆದರೊಂದನು ಮಾತ್ರ ಮರೆಯದಿರು ನೀನು-
ಯಾವ ಜಗದೀಶ್ವರನು ನಗುತಿಹನೊ ಹೂಗಳಲಿ,
ಯಾವ ಪರಮೇಶ್ವರನು ತಾರೆಗಳ ನಗುವಿನಲಿ
ಆನಂದದಲಿ ನಿರುತ ತೇಲಾಡುತಿಹನೋ
— ಆದೇವ, ಜಗದೀಶ, ಮರೆವನೇ ನಮ್ಮನ್ನು?
....ಬಿಡು, ಸಾಕು, ಜಹನಾರ! ನನ್ನಾಸೆ ಬಿಟ್ಟುಬಿಡು.
ಹೊಸಕಂಪನೊಗೆವ ಎಳವೊಗ್ಗಿನಂತಿಹೆ ನೀನು.
ಈ ವಿರಹಿವೃದ್ಧನಾ ಸೇವೆಯಲಿ ಬಾಡಿಸುವೆ-
ಯೇಕೆ ನಿನ್ನಯ ಕನಕಕಮನೀಯ ಕಾಯವನು?
ಸಾಕು, ಬಿಡು, ಹೋಗುವೆನು, ನನ್ನ ಯಾತ್ರೆಗೆ ನಾನು;
ಕೊನೆಯಿರದ ಪಯಣಿಗನು ನಾನು, ಜಹನಾರಾ!

**ಜಹನಾರಾ**

ಏನು ಬಿರುನುಡಿಗಳಿವು, ತಂದೆಯೆ? ಏನಿದು?
ನಿನ್ನ ಬಿಡುವೊಡೆ ನಾನು ಇನಿತು ದಿನವೇಕಿಂತು
ನಿನ್ನ ಬಳಿ ನಿಂತು ಸೇವೆಯ ಮಾಡುತಿದ್ದೆ?
ಆತ್ಮವಿಸ್ಮೃತಿಯಲ್ಲಿ ಈ ತೆರದ ನುಡಿಗಳನು
ನುಡಿವೆಯೇತಕೆ ತಂದೆ? ಸಾಕು, ಮಲಗಿಲ್ಲಿ!
ಕಾರಿರುಳ ನಡುವಿನಲಿ ಎದ್ದು ಕನವರಿಸದಿರು!
ವಿಶ್ರಾಂತಿಯಿಲ್ಲದೆಯೆ ನಿನ್ನ ತನು ಕುಂದಿಹುದು.
ಮಲಗು ಮಲಗೆಲೆ, ತಂದೆ! ನಿನಗೆ ಬರದಿರೆ ನಿದ್ದೆ,
ಇದೊ, ನಾನು ಸಿದ್ಧಳಾಗಿಹೆನಿಲ್ಲಿ! ಮೃದುಡವಿ
ಸವಿಸರದ ಹಾಡೊಂದ ಹಾಡಿ ಮಲಗಿಸುವೆ!
ಶಾಂತಿಯಲಿ ಮಲಗು, ಪಿತೃದೇವ, ನನಗಾಗಿ!

**ಷಾಜಹಾನ್**

ನನ್ನ ಬಾಳಿನ ಬೆಳಕೆ, ನನ್ನ ಉಸುರಿನ ಉಸುರೆ,
ನನ್ನ ಜೀವನಮುಕುಟರತ್ನ, ಚಿಂತಾಮಣಿಯೆ!
ಅಳುತಿರುವ ಮಗುವ ಮೃದುಡವಿ ಸವಿಮಾತಿನಲಿ
ಸಂತಯಿಸಿ ಮಲಗಿಸುವ ತಾಯಿಯಂತಿಹೆ ನೀನು.
ಪಾಪ, ನೀನೂ ಹೋಗಿ ಮಲಗು, ಜಹನಾರಾ!
ನನಗಾಗಿ ನೀನಿಂತು ನಿದ್ದೆಗೆಡಬೇಡ.
ಹೋಗು, ಮಲಗಲು ಹೋಗು; ಹೊತ್ತಾಯಿತೀಗ.

## ನಾಲ್ಕನೆಯ ದೃಶ್ಯ

**ಷಾಜಹಾನ್**

ಬಿತ್ತರದ ಪ್ರಕೃತಿಯಲಿ ಹಾಲುಸೂಸಿದ ತೆರದಿ
ತಿಳಿಯ ತಿಂಗಳು ಹರಿದು ಸೂಸುತಿದೆ. ತಾರುಣ್ಯ-
ದೆದೆಯಲ್ಲಿ ಕಂಪಿಸುವ ಪ್ರೇಮದುಷೆಯಂದದಲಿ
ಚಂದಿರನು ಗಗನದಲಿ ಕಂಪಿಸುವ ತೆರನಿಹನು.
.... ಅದೊ, ಗಗನದುತ್ತರಾಗ್ರದಿ ನೋಡು, ಜಹನಾರ!
ಅಲ್ಲಿ ದಿವ್ಯಜ್ಯೋತಿಯಲಿ ಬೆಳಗುತಿಹ ತಾರೆ
ಅವಳೆಯೊ ಏನೊ! ಈ ಕಿರಿಯ ಲೋಕದೊಳಿರುವ
ನಮ್ಮನೀಕ್ಷಿಸಿ ತನಗೆ ತಾನೆ ನಗುತಿರಬಹುದು!

**ಜಹನಾರಾ**

ಏಕವಳ ನೆನೆನೆನೆದು ಇಂತು ಚಿರವಿರಹದಾ
ಬೇಗೆಯಲಿ ಬೇಯಿಸುವೆ ಮುತ್ತೆದೆಯ ತಂದೆ?
ಅದೊ, ದೂರದಲಿ ನೋಡು! ತಿಂಗಳಿನ ಸೋನೆಯಲಿ

CC-0. Jangamwadi Math Collection. Digitized by eGangotri

ನೆನೆದು ನಿಂತಿಹ ದೂರದಾ ಸ್ಫಟಿಕ ಮಂದಿರದಿ
ಮುಗಿಲನೇ ಮೀರಿರುವ ಶಾಂತಿಯಲಿ ಮಲಗಿಹಳು
ನಿನ್ನ ಹೃದಯದ ರಾಣಿ—ಮೊಗಲಕುಲಚಿಂತಾಮಣಿ!
ತಣುಪಾದ ಅವಳೆದೆಯ ಮೇಲೆ ಬಾಡುತಿದೆ ನೀ
ನಿತ್ತ ಪ್ರೇಮದ ವರಪವಿತ್ರಪುಷ್ಪಾಂಜಲಿಯು !
ಈ ಜಗದ ಕಷ್ಟಸುಖದೇರಿಳಿತಗಳು ಅವಳ
ಶಾಂತಿಸುಖದಡಿಯಲ್ಲಿ ತಲೆಬಾಗಿ ನಿಂತಿಹುವು.
ದಿವ್ಯಕಾಂತಿಯೊಳೆಸೆವ ಪ್ರಕೃತಿದೇವಿಯ ಪರಮ
ನೈವೇದ್ಯವುಂಡು ನಿನ್ನರಸಿಯಾ ಲಾವಣ್ಯ
ದೇವನೆಡೆ ಸಾರಿಹುದು. ಮರುಗಿ ಕೊರಗಲದೇಕೆ ?
ತಂದೆ ! ಕೇಳೆಲ್ಲವೂ ವ್ಯರ್ಥ– ಹಗಲಿರುಳೆಲ್ಲ
ನೀನು ಸುರಿಸುವ ಬಿಸಿಯ ಕಂಬನಿಗಳೆಲ್ಲವೂ
ವ್ಯರ್ಥ ! ಈ ಜಗಕವಳು ಪರಮಪಾವನೆಯೆನಿಸಿ
ದೇವಸಾನ್ನಿಧ್ಯಕತಿ ಅರ್ಹಳೆನಿಸಿದಳು !
ಅದಕಾಗಿ ಕೊರಗದಿರು, ತಂದೆ !

**ಷಾಜಹಾನ್**

ಜಹನಾರಾ,
ಬರಿಯನುಡಿಗಳ ಘೋರಶರಘಾತದಿಂದೆನ್ನ
ನೊಂದ ಹೃದಯಕೆ ಖತಿಯ ಮಾಡದಿರು, ಕೇಳು !
ಈ ನನ್ನ ಒಲವು ತನುವಿರುವನಕ ಮಾತ್ರವೇ
ಎಂದು ನೀನರಿಯದಿರು. ಅವಳ ತನುಲಾವಣ್ಯ
ಮಾತ್ರವೇ ನನ್ನೊಳೀ ತೆರದ ಪ್ರೇಮವ ಕೊಡದು !
ಅವಳ ತಣುಪಾದ ತನು ಸುಂದರಾನನವು,
ಪ್ರೇಮದಾಲಿಂಗನದಿ ಕಂಪಿಸುತ್ತಿದ್ದ ಎದೆ,
ಎಲ್ಲವೂ ಪ್ರಕೃತಿದೇವಿಯ ಮಡಲಿನಲಿ ಶಾಂತಿ
ನಿದ್ರೆಯನು ಮಾಡುತಿರಬಹುದು. ಆದರೆ ಅವಳ
ಪ್ರೇಮವೆಂದೆಂದು ನನ್ನೆಡೆಬಿಡದೆ ಸಾರುತಿದೆ!
ಅದೊ, ಅವಳ ಹೃದಯದಾ ವಿರಹನಿಶ್ವಾಸವನು
ಈಗ ನನ್ನಯ ಹಣೆಯಮೇಲೆ ಅನುಭವಿಸುವೆನು !
ನಡುಗುತಿಹ ಎದೆಕೂಡುವಾಗ ಅವಳೆನಗಾಗಿ
ಸುರಿಸಿದಾ ಕಂಬನಿಗಳಕಟ, ನೋಡಿಲ್ಲಿಹುವು !

**ಜಹನಾರಾ**

ಅರಿವೆ ನಾ ನಿನ್ನ ಪ್ರೇಮದ ಪವಿತ್ರತೆಯ !
ಅರಿವೆ ನಿನ್ನಯ ಪ್ರೇಮದತುಲದಿವ್ಯತೆಯ !
ನವಚೈತ್ರವನದಲ್ಲಿ ಗರಿಗೆದರಿ ನಲಿವಿಂದ
ಕುಣಿಯುವ ಮಯೂರದಂತಿಹುದು ನಿನ್ನೀ ಹೃದಯ
ನೆನೆಯಲವಳಾನಂದ ಮೂರ್ತಿಯನ್ನು !
ಮೊಗಲಸಮ್ರಾಟಕುಲಮುಕುಟಮಣಿಯವಳು
ಪ್ರೇಮದೇವಿಯ ಕೈಯ ಕಲಶದಮೃತದ ಸವಿಯ-
ನುಂಡ ಪಾವನೆಯವಳು. ಆದರೂ ಅವಳ
ಚಿಂತೆಯಲಿ ಉರಿಯುತಿಹ ಎಡೆಗೆ ಬೇಗುದಿಗೊಳದೆ;
ನಿನ್ನ ಜೀವನದ ಸಂಜೆಯಲಿ ಸುಖಶಾಂತಿಯನು
ತಳೆಯುವುದು ನಿನ್ನ ನಿಜಧರ್ಮ ! ಮರೆಯದೆ ಇದನು
ಶಾಂತಿತಳೆ............

**ಷಾಜಹಾನ್**

ತಡೆ, ಕೇಳು, ಜಹನಾರಾ!
ಅದೊ ! ಅವಳು ಮಲಗಿರುವ ಸ್ಫಟಿಕಮಂದಿರದಿಂದ
ಕೇಳಬರುತಿದೆ ಯಾವುದೋ ದಿವ್ಯಸಂಗೀತ !

**ಜಹನಾರಾ**

ಸಂಗೀತವಾವುದಿದೆ ? ಯಮುನೆಯ ತರಂಗಗಳು
ದಡದ ಕಲ್ಗಳಮೇಲೆ ಬಡಿವ ಸಪ್ಪುಳವಿದು
ಜಗವೆಲ್ಲ ಶಾಂತಿಯಾಗಿದೆಯಲ್ಲ, ತಂದೆ ?

**ಷಾಜಹಾನ್**

ಕೇಳು, ಅದೊ ! ಮರಳಿ ಅದೊ ! ಕೇಳು ಇಂದಾದರೂ!
.... ಆಹ ! ಏನಿದು ಮಧುರಗೀತ ! ಜಹನಾರಾ,
ಅದು....ಅಹುದು....ಅದು ಅವಳ ದನಿಯಂತೆ ಇಹುದಲ್ತೆ!

**ಜಹನಾರಾ**

ಸಂಗೀತವಾವುದಿದೆ, ತಂದೆ ? ಎಲ್ಲವು ನಿನ್ನ
ಮನದ ಬರಿಕನಸು, ಇದು ನಿನಗೆ ಬರಿಭ್ರಾಂತಿ !
ಲೋಕವೇ ಶಾಂತಿಯಲಿ ಮಲಗಿರಲು ನಡುರಾತ್ರಿ
ಯಾಳದಿಂ ಸಂಗೀತವೆತ್ತಣಿಂದೈತಹುದು ?
ಮಲಗು ಎಲೆ ತಂದೆ ! ನಡುರಾತ್ರಿ ಮೀರುತಿದೆ
ಗಾಢನಿದ್ರೆಯ ಶಾಂತಿಯಲಿ ನಿನ್ನ ಬೆಂದೆದೆಯು
ಶಾಂತವಾಗಲಿ ! ಮಲಗು !

( ತೆರಳುವಳು )

**ಷಾಜಹಾನ್**

ಆಹ, ಹೃದಯದ ಪರಮವಲ್ಲಕಿಯ ಮೇಲೆ
ಯಾವುದೋ ಅವ್ಯಕ್ತವಾದ ಬೆರಳುಗಳಿಂದ

CC-0. Jangamwadi Math Collection. Digitized by eGangotri

ಸಂಗೀತವುಲಿವಂತೆ ತೋರುತಿದೆ ! ಯಾವುದೀ
ಚಪಲ ಮಾಯಾಜಾಲ ?( ಕಿಟಕಿಯಿಂದ ಹೊರಗೆ ದಿಟ್ಟಿಸಿ)
ಓಹೊ, ಯಾರಲ್ಲಿ ?
ಯಾರಲ್ಲಿ ಅವಳ ಪಾವನ ಸಮಾಧಿಯಮೇಲೆ
ಕುಳಿತಿಹರು ? ( ಉನ್ಮತ್ತನಂತೆ ಸಮಾಧಿಯ ಬಳಿಗೆ ಓಡಿಹೋಗಿ )
ನಿಲ್ಲು, ನಿಲ್ಲೆಲೆ ಕಳ್ಳ ! ಬಂದೆನಿರು !
ಯಾರಿವನು ? ಇನಿತು ಧೈರ್ಯದಿ ಇಲ್ಲಿ ಬಂದಿಹನು ?
ಈ ಮಧ್ಯರಾತ್ರಿಯಲಿ ! ಜಹನಾರಾ ! ಜಹನಾರಾ !!
( ಜಹನಾರಾ ಪ್ರವೇಶಿಸುವಳು )

**ಜಹನಾರಾ**

ಮರಳಿಲ್ಲಿಗೇಕೆ ನೀನೈತಂದೆ, ತಂದೆ ?
ಮಲಗಬಾರದೆ ಸ್ವಲ್ಪಹೊತ್ತಾದರೂ ಇರುಳಿನಲಿ ?

**ಷಾಜಹಾನ್**

ಇಲ್ಲ, ಜಹನಾರ ! ಅದೊ, ಅವಳು ಮಲಗಿರುವ
ಸ್ಫಟಿಕದ ಸಮಾಧಿಗೈತಂದು ಯಾರೋ ಮೇಲೆ
ಕುಳಿತು ಮುರಲಿಯ ಹಿಡಿದು ಹಾಡುತಿದ್ದುದ ಕಂಡೆ !
ಯಾವುದೋ ಪರಪುರುಷರೂಪು ! ನಾ ಬರಲಿಲ್ಲಿ
ಮಾಯವಾಯಿತು, ಎಲ್ಲಿಯೋ ಕಾಣೆ ನಾನು !

**ಜಹನಾರಾ**

ಯಾವಾವುವೋ ಚಿಂತೆಯಲೆಗಳಲಿ ನಿನ್ನ ಮನ
ಬೆಂದಿಹುದು. ಬಾ, ತಂದೆ ! ಯಮುನೆಯಾ ದಡದಲ್ಲಿ
ಮಳಲಿನಲಿ ಕುಳಿತು ಹೋಗೋಣ ಬಾ !
(ಇಬ್ಬರೂ ನದಿಯದಡದ ಮೇಲೆ ಹೋಗುವರು)

**ಷಾಜಹಾನ್**

(ಇದ್ದಕ್ಕಿದ್ದ ಹಾಗೆಯೇ)
ಅಗೊ ನೋಡು ! ಅಲ್ಲಿ, ನೀ ನೋಡು ! ಜಹನಾರಾ,
ಕಿರಿಯ ದೋಣಿಯ ಮೇಲೆ ಕುಳಿತು ಆ ವ್ಯಕ್ತಿಯೇ
ವೇಗದಿಂ ಹೋಗುತಿಹುದಲ್ಲಿ !

**ಜಹನಾರಾ**

ಯಾರೂ ಇಲ್ಲ !
ಏಕಿಂತು ಭ್ರಾಂತಿಯಲಿ ಬೆದರುತಿಹೆ ತಂದೆ ?

**ಷಾಜಹಾನ್**

ಭ್ರಾಂತಿ ! ಇದನೂ ನೀನು ಕಾಣೆಯಾ ಈಗಲೂ ?
ಅದೊ ವೇಗದಿಂದಲ್ಲಿ ಓಡುತಿಹ ದೋಣಿಯಾ
ಮಾರ್ಗದಲ್ಲೆಲ್ಲ ಮುಕ್ತಾಫಲದ ಸರದಂತೆ
ಯಮುನೆಯ ತರಂಗಗಳ ನೊರೆಯು ಆವರಿಸುತಿದೆ !
ಅವನಲ್ಲದಿನ್ನಾರು ಇಲ್ಲ ದೋಣಿಯಲಿ.
ಬಿಳಿಯುಡೆಯನುಟ್ಟಿಹನು. ಕೇಶರಾಶಿಯು ನೀಳ-
ವಾಗಿ ಕಾಣುವುದು. ತನುವೆಲ್ಲ ತಾರುಣ್ಯದಲಿ
ಮಿಂದು ದೃಢವಾಗಿಹುದು ! ಚೆಲುವನೇನೋ ಅಹುದು!
ಆದರವಳ ಸಮಾಧಿಗೇಕೆ ಬರಬೇಕು ?

**ಜಹನಾರಾ**

ಅಲ್ಲಿ ಯಾರೂ ಇಲ್ಲ, ತಂದೆ ! ಎದೆ ಬೇಯುತಿದೆ
ನಿನಗೆ. ಆದರಿಂ ನಿನಗೆ ಈ ಬಗೆಯ ಭ್ರಾಂತಿಗಳು
ಹೊಳೆಯುತಿವೆ ಮನಸಿನಲಿ. ಸಾರು ಬಾ, ಹೋಗೋಣ!
ತೆಂಗಾಳಿ ಬಹಳ ತಣುಪಾಗಿಹುದು. ಚಂದಿರನು
ನಡುಗಗನದಿಂದ ಪಶ್ಚಿಮದೆಡೆಗೆ ವೇಗದಲಿ
ಓಡುತಿರುವನು. ಸ್ವಲ್ಪ ಹೊತ್ತಾದರೂ ಕಣ್ಮುಚ್ಚಿ
ವಿಶ್ರಾಂತಿ ಹೊಂದು ಬಾ ! ಇಲ್ಲದಿರೆ ನಿನಗೆ.
ಎಂದೆಂದು ವಿಶ್ರಾಂತಿಯೇ ಇಲ್ಲದಾಗುವುದು.
ಬಾ, ತಂದೆ ! ಚಿಂತೆಯೆಲ್ಲವ ನೀಗಿ ಬಾ ! ಹೋಗೋಣ!
(ಒಳಗೆ ಹೋಗುವರು)


CC-0. Jangamwadi Math Collection. Digitized by eGangotri

# ಸಂಬಂಧ ಚಿಹ್ನ

## (Correlation coefficient)

### ೧ ವಿಭಜನಾರೇಖೆ

ಬರೆದವರು ಶ್ರೀ. ಎಸ್. ಎಲ್. ಮಾಲೂರ್‌ಕರ್ ಪುಣೆ

ಯಾವ ವಿಜ್ಞಾನ ಶಾಸ್ತ್ರದಲ್ಲಿಯೇ ( science )ಆಗಲಿ ವಸ್ತುಗಳಿಗೆ ಸಂಬಂಧಪಟ್ಟ ವಿವಿಧ ಪ್ರಮಾಣಗಳನ್ನು ( Magnitudes ) ನಾವು ಕಂಡುಹಿಡಿಯುತ್ತೇವೆ. ಪ್ರಮಾಣಗಳ ಉದಾಹರಣೆ: ಜ್ಯೋತಿಷದಲ್ಲಿ ಸೂರ್ಯಾದಿ ಮಂಡಲಗಳ ದೂರ, ಜನಗಣನಾಶಾಸ್ತ್ರದಲ್ಲಿ ( Census ) ಮನುಷ್ಯರ ವಯಸ್ಸು, ಅವರ ಕಸಬು ಮತ್ತು ಅವರ ವರಮಾನ ಇತ್ಯಾದಿ...., ಈ ಪ್ರಮಾಣಗಳನ್ನೂ ಕಂಡುಹಿಡಿದು ಇವುಗಳಿಂದ ಯಾವಉಪಯೋಗವನ್ನೂ ಹೊಂದದಿದ್ದರೆ ನಮ್ಮ ಕಷ್ಟವೆಲ್ಲ ನಿಷ್ಫಲವಾಗುವುದು. ಈ ಪ್ರಮಾಣಗಳೆಲ್ಲವನ್ನೂ ನೆನಪಿಸಲ್ಲಿ ಇಡಬೇಕೆಂದರೆ ಮತ್ತೂ ಅಸಾಧ್ಯ. ಇವುಗಳಿಂದ ಯಾವುದಾದರೂ ಒಂದು ಫಲಿತಾಂಶ (Result) ವನ್ನು ಕಂಡುಕೊಂಡರೆ ಜ್ಞಾನಾಭಿವೃದ್ಧಿಗೆ ಮಾರ್ಗವಾಗುವುದು. ಭೌತಿಕ ( Physics ), ರಸಾಯನ (Chemistry) ಮುಂತಾದ ಸಿದ್ಧವಿಜ್ಞಾನಗಳಲ್ಲಿ ( Exact Sciences ) ಇಂದೊ ನಾಳೆಯೊ ಪ್ರಮಾಣಗಳ ಸಂಬಂಧವನ್ನು ಕಟ್ಟಳೆಗಳಿಂದ ( Laws) ನಿರ್ಧರಿಸಬಹುದು. ಆದರೆ ವನಸ್ಪತಿಶಾಸ್ತ್ರವೇ ( Botany ) ಮುಂತಾದ ಪ್ರಾಣಶಾಸ್ತ್ರಗಳಲ್ಲಿ ( Biology ) ಈ ಕಟ್ಟಳೆಗಳನ್ನು ಕಂಡುಹಿಡಿಯುವುದು ಅಸಾಧ್ಯವು. ಅಂದರೆ ಭೌತಿಕಶಾಸ್ತ್ರದಲ್ಲಿ ಯಾವುದಾದರೂ ಒಂದು ಪ್ರಯೋಗವನ್ನು ( Experiment ) ಸಮಾನ ಸ್ಥಿತಿಯಲ್ಲಿ ( Similar Conditions ) ಮಾಡಿದರೆ ಒಂದೇ ಫಲಿತಾಂಶವು ಸಿಕ್ಕುವುದು. ಸಸ್ಯಶಾಸ್ತ್ರದಲ್ಲಿ ( Plant Biology ) ಈ ಸಮಾನಸ್ಥಿತಿಯು ಸಿಕ್ಕುವುದು ದುರ್ಲಭ. ಉದಾಹರಣೆ: ಒಂದು ಸೇರು ನೀರನ್ನು ಕಾಯಿಸಿ ಹಬೆ ಮಾಡಿದರೆ ಇಷ್ಟು ವಾಯುಘನತೆಯ ( Pressure ) ಕಾವಿನಲ್ಲಿ ( Temperature ) ಇಷ್ಟೇ ಆವಿ ಬರುವುದೆಂದು ಹೇಳಲು ಸ್ವಲ್ಪವೂ ಸಂದೇಹವಿರುವುದಿಲ್ಲ. ಆದರೆ ಎರಡು ಗಿಡಗಳನ್ನು ಅಕ್ಕಪಕ್ಕದಲ್ಲಿ ಬೆಳೆಯಿಸಿ ಅವನ್ನು ಒಂದೇ ರೀತಿಯಲ್ಲಿ ಪೋಷಿಸಿದರೂ ಒಂದೇ ಬಗೆಯ ಫಲವು ಬರುವುದಿಲ್ಲ. ಆದರೂ ಜನಗಳು ಒಂದು ತೆಂಗಿನ ಗಿಡದಲ್ಲಿ ಇಷ್ಟು ಫಲ ಬರಬಹುದು; ಒಂದು ಎಕರೆ ಜಮೀನನ್ನು ಉತ್ತು ಬೇಸಾಯಮಾಡಿದರೆ ಸಾಧಾರಣವಾಗಿ ಇಷ್ಟು ಖಂಡಗ ಬೆಳೆ ಬರಬಹುದು, ಎಂದು ಹೇಳುವರು. ಈ " ಸಾಧಾರಣ" ಮತ್ತು "ಬಹುದು" ಎಂಬ ಪದಗಳಿಗೆ ಯಾವ ತಳಹದಿಯಿದೆ? ಮತ್ತು ಆ ಪದಗಳು ಟೊಳ್ಳು ಮಾತೇ ? ಎಂದು ವಿಚಾರಿಸಬಹುದು. ಇದರ ಪರವಾಗಿ ಗಣಿತಶಾಸ್ತ್ರಜ್ಞರು ಸುಮಾರು ಒಂದು ಶತಮಾನದಿಂದ ಬಹಳವಾಗಿ ತರ್ಕಿಸಿ ಉಪಯುಕ್ತವಾದ ಲಬ್ಧಗಳನ್ನು ನಮ್ಮ ದೃಷ್ಟಿಗೆ ತಂದಿರುವರು. ಈ ಲೇಖನದಲ್ಲಿ ಸರಳವಾದ ಕೆಲವು ಲಬ್ಧಗಳನ್ನು ತಿಳಿಸುವೆವು.

ಮೊದಲು, ಒಂದೇ ತೆರದ ವಸ್ತುಗಳಿದ್ದರೆ ಏನು ವಿಷಯಗಳನ್ನು ತಿಳಿಯಬಹುದು-ಎಂಬುದನ್ನು ಪರೀಕ್ಷಿಸುವೆವು. ವಸ್ತುಗಳನ್ನು ಮೊದಲೇ ಆರಿಸಿಟ್ಟಿರಬಾರದು. ಹಾಗೆ ಮಾಡಿದರೆ ಈ ಕೆಳಗೆ ಕೊಟ್ಟಿರುವ ಅಂಶಗಳು ನಿಜವಾಗುವುವೆಂದು ಹೇಳಲು ಆಗುವುದಿಲ್ಲ. ಗುಂಪು ಕೂಡಿದ ವಸ್ತುಗಳಿಗೆ ಮಾತ್ರ ನಮ್ಮ ತರ್ಕವು ಅನ್ವಯಿಸುತ್ತದೆ.

ಸುಗ್ಗಿಯ ಕಾಲದಲ್ಲಿ ಒಂದು ಚೀಲದತುಂಬ ಅಡಿಕೆಯ ಕಾಯಿಗಳನ್ನು ತುಂಬಿರುವರೆಂದು ತಿಳಿಯೋಣ. ವ್ಯಾಪಾರಸ್ಥನು ಬಂದು ಆ ಚೀಲದ ಬೆಲೆಯನ್ನು ನಿರ್ಧರಿಸುವಾಗ ಒಂದು ನಾಲ್ಕು ಕಾಯಿಗಳನ್ನು ತೆಗೆದು ನೋಡು

CC-0. Jangamwadi Math Collection. Digitized by eGangotri

ವನು. ಹಾಗೆಯೆ ನಾವು ಸುಮಾರು ಸಾವಿರ ಕಾಯಿಗಳನ್ನು ಕೈಗೆ ಸಿಕ್ಕಿದಂತೆ ತೆಗೆದು ಪರೀಕ್ಷಿಸುವೆವು. ಈ ಕಾಯಿಗಳಲ್ಲಿ ಕೆಲವು ದೊಡ್ಡವು, ಕೆಲವ ಚಿಕ್ಕವು ಆಗಿರುತ್ತವೆ. ಅಡಿಕೆಯ ಕಾಯಿಯ ಪ್ರಮಾಣವನ್ನು ಒಂದೇ ಮಾತಿನಲ್ಲಿ ಹೇಳಲು ಸಾಧ್ಯವಿರುವುದಿಲ್ಲ. ವಿಶದ ವರ್ಣನೆಯನ್ನು ರೀತಿ ರೀತಿಯಾಗಿ ಮಾಡಬಹುದು.

ಪ್ರತಿಯೊಂದು ಅಡಿಕೆಯ ಕಾಯಿಯನ್ನೂ ನಾವು ತೂಕಮಾಡುವೆವು. ಸಾವಿರ ಕಾಯಿಗಳು ಸಾವಿರ ಘನಪ್ರಮಾಣವನ್ನು ( Mass ) ಕೊಡುವುವು. ವರ್ತಕನಿಗೆ ಪ್ರತಿಯೊಂದು ಕಾಯಿಯ ತೂಕವನ್ನು ಹೇಳಿದರೆ ವ್ಯಾಪಾರಕ್ಕೆ ಅನನುಕೂಲವಾಗುವುದು. ಚಿಲ್ಲರೆ ವ್ಯಾಪಾರಕ್ಕೆ ಕಾಯಿಗಳನ್ನು ತೂಕಮಾಡಲು ಅವನು ಇಚ್ಛಿಸುವುದಿಲ್ಲ. ಒಂದು ಕಾಯಿಯ ಸಾಧಾರಣ ತೂಕವನ್ನು ತಿಳಿದುಕೊಂಡು ಮಾರುವನು. ಅವನು ತನ್ನಲ್ಲಿರುವ ಕಾಯಿಗಳನ್ನೆಲ್ಲ ( ಅಂದರೆ ಇಲ್ಲಿ ಸಾವಿರ ) ತೂಕಮಾಡಿ, ಅಂದರೆ ಸಾವಿರ ಕಾಯಿಗಳ ಘನಪ್ರಮಾಣಗಳನ್ನು ಕೂಡಿಸಿ, ಒಟ್ಟು ಘನತೆಯನ್ನು ಸಾವಿರದಿಂದ ಭಾಗಿಸಿ, ಬಂದ ಲಬ್ಧವು ಒಂದು ಕಾಯಿಯ ಸಾಧಾರಣ ತೂಕವೆಂದು ನಿರ್ಧರಿಸುವನು.

ಹೀಗೆ ಹಲವು ಸಮಾನವಸ್ತುಗಳ (Similar Things) ಅಥವಾ ಒಂದೇ ತೆರದ ವಸ್ತುಗಳ ಯಾವುದಾದರೊಂದು ಪ್ರಮಾಣವನ್ನು ಕಂಡುಹಿಡಿದು, ಆ ಪ್ರಮಾಣಗಳನ್ನೆಲ್ಲ ಒಟ್ಟುಗೂಡಿಸಿ ವಸ್ತುಗಳ ಸಂಖ್ಯೆಯಿಂದ ಭಾಗಿಸಿ, ಬಂದ ಲಬ್ಧಕ್ಕೆ **ಮಧ್ಯಮಪ್ರಮಾಣ** (Mean Value) ಎಂದು ಹೇಳಬಹುದು.

ಸಾವಿರ ಕಾಯಿಗಳನ್ನೂ ನಾವು ವಿಕ್ರಯಮಾಡಲು ಹೋದರೆ, ಕಾಯಿಯ ಮಧ್ಯಮಪ್ರಮಾಣವನ್ನು ಮಾತ್ರ ತಿಳಿಸಿದರೆ ಅವುಗಳ ಬೆಲೆಯನ್ನು ನಿರ್ಧರಿಸಲು ಸಾಧ್ಯವಾಗುವುದಿಲ್ಲ. ಏತಕ್ಕೆಂದರೆ ಸಾವಿರಕಾಯಿಗಳಲ್ಲಿ ಎಲ್ಲ ಕಾಯಿಗಳು ಒಂದೇ ಘನತೆಯುಳ್ಳವಾಗಿರಬಹುದು. ಅಥವಾ ಕೆಲವು ಕಾಯಿಗಳು ಬಹಳ ದೊಡ್ಡವಾಗಿದ್ದು ಮಿಕ್ಕುವು ಚಿಕ್ಕಕಾಯಿಗಳಾಗಿರಬಹುದು. ವರ್ತಕನು ಮಾರಾಟಕ್ಕೆ ಅನುಕೂಲವಾಗುವಂತೆ ದೊಡ್ಡಕಾಯಿಗಳಿಷ್ಟು, ಸಣ್ಣ ಕಾಯಿಗಳಿಷ್ಟು ಎಂದು ವಿಂಗಡಿಸುವನು. ಈ ಒಂದೊಂದು ಪಂಗಡದಲ್ಲಿಯೂ ಕಾಯಿಯ ಘನತೆಯ ವ್ಯತ್ಯಾಸವು ಹೆಚ್ಚಾಗಿದ್ದರೆ ಬಹಳ ಚಿಕ್ಕುವು, ಚಿಕ್ಕುವು, ಸಾಧಾರಣ, ದೊಡ್ಡವು ಮತ್ತು ಅತಿದೊಡ್ಡವು ಎಂಬುದಾಗಿ ಮರಳಿ ವಿಂಗಡಿಸಿ ಪ್ರತಿ ಪಂಗಡದಲ್ಲಿ ಎಷ್ಟು ಕಾಯಿಗಳಿವೆ ?—ಎಂದು ಕಂಡುಹಿಡಿಯುವನು.

ಗಣಿತಶಾಸ್ತ್ರದಲ್ಲಿ ಇದನ್ನೇ ಬೇರೆ ಮಾತಿನಲ್ಲಿ ಹೇಳುವೆವು. ಪಂಗಡಕ್ಕೂ ಪಂಗಡಕ್ಕೂ ಪರಿಷ್ಕಾರವಾದ ( Definite ) ಎಲ್ಲೆಯನ್ನು ಸೂಚಿಸುತ್ತೇವೆ. ಉದಾಹರಣೆ: " ಹತ್ತು ಕಾಯಿಗಳು ಎರಡಾಣೆಯ ತೂಕ ಮೀರಿರಲಿಲ್ಲ. ಇಪ್ಪತ್ತು ಕಾಯಿಗಳು ಎರಡಾಣೆಯ ತೂಕ ಮೀರಿದ್ದರೂ ನಾಲ್ಕಾಣೆಯ ತೂಕವನ್ನು ಮೀರಿರಲಿಲ್ಲ. ಇತ್ಯಾದಿ. " ಅಂದರೆ ನಾವು ಕಾಯಿಗಳ ತೂಕವನ್ನು ವಿವಿಧ ತುಲನೆಯ ಅಂತರದಲ್ಲಿ ( Intervals ) ವಿಭಜನೆ ಮಾಡಿರುವೆವು ( Distributed ). ಈ ಅಂತರಗಳನ್ನು ಬೇಕಾದಷ್ಟು ಚಿಕ್ಕದಾಗಿ ಮಾಡಬಹುದು. ಉದಾಹರಣೆ:- ಗಾಡಿ ಗಾಡಿ ಕಟ್ಟಿಗೆಯನ್ನು ತೂಕಮಾಡುವಾಗ ಒಂದು ಸೇರು ಹೆಚ್ಚುಕಡಿಮೆ ತೂಕವನ್ನು ನಾವು ಲೆಕ್ಕಿಸುವುದಿಲ್ಲ. ಅಂದರೆ ನಮ್ಮ ತೂಕವು ಒಂದು ಸೇರಿನ ಅಂತರವನ್ನು ಅತ್ಯಲ್ಪವೆಂದು ದುರ್ಲಕ್ಷಿಸುತ್ತದೆ. ಆದರೆ ಭಂಗಾರವನ್ನು ತೂಕಮಾಡುವಾಗ ಒಂದು ಗುಲಗಂಜಿಯ ತೂಕವೂ ಲೆಕ್ಕಕ್ಕೆ ಬರುತ್ತದೆ. ಸಾರಾಂಶ:— ಘನತೆಯ ವ್ಯತ್ಯಾಸವು ದೊಡ್ಡದಾಗಿದ್ದರೆ ಅಂತರವೂ ದೊಡ್ಡದಾಗಿರಬಹುದು. ಆ ವ್ಯತ್ಯಾಸವು ಚಿಕ್ಕದಾಗಿದ್ದರೆ ಅಂತರವೂ ಸಣ್ಣದಾಗಿರಬೇಕು. ಈ ಅಂತರದಲ್ಲಿಯ ಪ್ರಮಾಣದ ಭೇದಗಳ ಕಡೆಗೆ ನಾವು ಅಷ್ಟೊಂದು ಲಕ್ಷ್ಯ ಕೊಡುವುದಿಲ್ಲ.

ಹೀಗೆ ಗುಂಪಿಸಿ ವಸ್ತುಗಳ ಘನತೆಯನ್ನು ವಿಭಜಿಸಿದರೆ ಚೆನ್ನಾಗಿ ಮನವರಿಕೆಯಾಗುವಂತೆ ಲಬ್ಧವನ್ನು ( Result or Conclusion) ಚಿತ್ರರೂಪವಾಗಿ ತೋರಿಸುತ್ತೇವೆ. ಚಿತ್ರರೂಪದಿಂದ ನಮ್ಮ ತಿಳುವಳಿಕೆಗೆ ಸಹಾಯವಾಗುವುದು. ವಸ್ತುವಿಗೆ ಯಾವ ಹೊಸ ಸ್ಥಿತಿತ್ವವೂ ( Property ) ಬರುವುದಿಲ್ಲ.

ನಾವು ಕಾಯಿಗಳನ್ನು ವಿಭಜಿಸಿದಾಗ ಬಂದ ಸಂಖ್ಯೆಗಳ ವಿವರಣೆಯನ್ನಿಲ್ಲಿ ಕೊಡುವೆವು.

CC-0. Jangamwadi Math Collection. Digitized by eGangotri

## ವಿವರಣೆ

| ಅಂತರ ತೂಕ ಏರಿ | ತೂಕಕ್ಕೆ ಕಮ್ಮಿ | ಸಂಖ್ಯೆ |
|---|---|---|
| ೦ | ೨ ಆಣೆ | ೧೦ |
| ೨ ಆಣೆ | ೪ ,, | ೨೦ |
| ೪ ,, | ೬ ,, | ೫೦ |
| ೬ ,, | ೮ ,, | ೭೦ |
| ೮ ,, | ೧೦ ,, | ೯೦ |
| ೧೦,, | ೧೨,, | ೧೫೦ |
| ೧೨,, | ೧೪,, | ೧೮೦ |
| ೧೪,, | ೧೬,, | ೧೯೦ |
| ೧೬,, | ೧೮,, | ೧೪೦ |
| ೧೮,, | ೨೦,, | ೮೦ |
| ೨೦,, | ೨೨,, | ೨೦ |
| ೨೨,, | ೨೪,, | ೦ |
| | ಒಟ್ಟು | ೧೦೦೦ |

ಇದೇ ಅಂಶವನ್ನು ಚಿತ್ರರೂಪದಲ್ಲಿ ತೋರಿಸಬೇಕಾದರೆ ಒಂದೇ ಅಗಲವುಳ್ಳ (ಸುಮಾರು ½ ಅಂಗುಲ) ಒಂದು ಉದ್ದವಾದ ಕಾಗದಪಟ್ಟಿಯನ್ನು ತೆಗೆದುಕೊಳ್ಳಬೇಕು. ಅದರಿಂದ ನಮ್ಮ ಸಂಖ್ಯೆಗೆ ತಕ್ಕ (Proportional) ಉದ್ದವನ್ನು ಕತ್ತರಿಸಬೇಕು. ಅಂದರೆ

೧೦ ಸಂಖ್ಯೆಯಿದ್ದರೆ ೧ ಅಂಗುಲ ಉದ್ದವನ್ನೂ
೨೦ ,, ೨ ,,

ಹೀಗೆಯೇ ಪ್ರಮಾಣಾನುಸಾರವಾಗಿ ಕತ್ತರಿಸುತ್ತ ಹೋಗಬೇಕು.

ಹೀಗೆ ಕತ್ತರಿಸಿಬಂದ ಪಟ್ಟಿಗಳ ಉದ್ದವು ಯಾವ ಘನತೆಯ ಅಂತರದಲ್ಲಿರುವ ಅಡಿಕೆಕಾಯಿಯ ಸಂಖ್ಯೆಯನ್ನೂ ಸುಲಭದಿಂದ ತೋರಿಸುತ್ತದೆ. ಪ್ರತಿಯೊಂದು ಪಟ್ಟಿಯ ಮೇಲೂ ಅದರ ಅಂತರವನ್ನು ಬರೆದರೆ ನಮ್ಮ ಅಂಶಗಳು ಮಿಶ್ರವಾಗುವುದಿಲ್ಲ. ಈ ಪಟ್ಟಿಗಳನ್ನೆಲ್ಲ ಒಂದರ ಪಕ್ಕದಲ್ಲಿ ಮತ್ತೊಂದನ್ನು ಅಂತರದಿಂದ ಅಂತರಕ್ಕೆ ಇಡಬೇಕು. ಅಂದರೆ "೦" ಯಿಂದ ೨ ಆಣೆ ಅಂತರದ ಪಟ್ಟಿಯ ಬಲಪಾರ್ಶ್ವದಲ್ಲಿ, ೨ ಆಣೆಯಿಂದ ೪ ಆಣೆ ಅಂತರದ ಪಟ್ಟಿಯನ್ನು ಜೋಡಿಸಬೇಕು. ಅದರ ಬಲಪಾರ್ಶ್ವದಲ್ಲಿ ೪ ಆಣೆಯಿಂದ ೬ ಆಣೆ ಅಂತರದ ಪಟ್ಟಿಯನ್ನು ಜೋಡಿಸಬೇಕು. ಹೀಗೆಯೇ ಎಷ್ಟನ್ನೂ ಜೋಡಿಸಬಹುದು. ಈ ಪಟ್ಟಿಗಳ ಕೆಳಗಿನ ಎಲ್ಲೆಯು ಒಂದೇ ಸರಳ ರೇಖೆಯುದ್ದಕ್ಕೆ ಇರಬೇಕು. ಪಟ್ಟಿಗಳ ಮೇಲಿನ ಎಲ್ಲೆಯು ಮೆಟ್ಟಲುಗಳಾಗಿ ತೋರುವುದು. ಈ ಪಟ್ಟಿಗಳನ್ನೆಲ್ಲ ಜೋಡಿಸಿದಂತೆ ಒಂದು ಕಾಗದದಮೇಲೆ ಅಂಟಿಸಿ ಕೆಳಗಿನ ಎಲ್ಲೆಯಾದ ಸರಳರೇಖೆಯನ್ನು ಮಸಿಯಿಂದ ಬರೆಯಬೇಕು. ಈ ಸರಳರೇಖೆಗೆ **ಮೂಲರೇಖೆ** (Base line) ಎನ್ನಬಹುದು. ಈ ಪಟ್ಟಿಗಳ ಮೇಲಿನ ಎಲ್ಲೆಯನ್ನೂ ಮಸಿಯಿಂದ ಎಳೆಯಬಹುದು. ಪಟ್ಟಿಗಳ ಮೇಲಿನ ಎಲ್ಲೆಯು ಕೆಳಗಿನ ಮೂಲರೇಖೆಗೆ ಸಾಮ್ಯವಾಗಿರುವುದರಿಂದ ಒಂದೊಂದು ಪಟ್ಟಿಯ ಮೇಲಿನ ಎಲ್ಲೆಯನ್ನು ಅಕ್ಕಪಕ್ಕದ ಎಲ್ಲೆಗಳಿಗೆ ಸಮಕೋಣದಲ್ಲಿರುವ (Perapandicular) ಸರಳರೇಖೆಗಳಿಂದ ಸೇರಿಸಬೇಕು. ಆದರೆ ಪಟ್ಟಿಗಳ್ನ್ನು ಸೇರಿದಚಿತ್ರಕ್ಕೆ ಮೇಲಿನ ಎಲ್ಲೆಯು ಒಂದು ಸಂಬಂಧಿಸಿದ ರೇಖೆ (Correlated line) ಆಗುವುದು. ಮೂಲರೇಖೆಯ ಮೇಲೆ ನಾವು ಅಂತರಗಳ ಪ್ರಮಾಣವನ್ನು ಬರೆದಿರುವುದರಿಂದ ಈ ಸಂಬಂಧಿಸಿದ ರೇಖೆಯನ್ನು ಎಳೆದ ಕೂಡಲೆ ಯಾವ ಯಾವ ಅಂತರದಲ್ಲಿ ಎಷ್ಟು ಸಂಖ್ಯೆ ವಸ್ತುಗಳು ಇರುವುವೆಂಬುದನ್ನು ಕಂಡು ಹಿಡಿಯಬಹುದು. ಹೀಗೆ ಪಟ್ಟಿಗಳನ್ನು ಕತ್ತರಿಸಿ ಜೋಡಿಸುವುದು ಪ್ರಯಾಸವಾದ ಕೆಲಸ. ಅದಕ್ಕಾಗಿ ಒಂದು ಬಿಳಿಯ ಕಾಗದವನ್ನು ತೆಗೆದು ಅದರ ಮೇಲೆ ನಮ್ಮ ಮೂಲರೇಖೆಯೆಂದು ಒಂದು ಸರಳರೇಖೆಯನ್ನು ಎಳೆಯಬೇಕು.

ಮೂಲರೇಖೆಯ ಮೇಲೆ ಯಾವುದಾದರೂ ಒಂದು ಬಿಂದುವನ್ನು '೦' ಮೂಲವನ್ನಾಗಿ ತೆಗೆದುಕೊಳ್ಳಬೇಕು. ನಮ್ಮ ಅಳತೆಗಳನ್ನೆಲ್ಲ '೦' ದಿಂದ ಮೊದಲು ಮಾಡಬೇಕು. ನಮ್ಮ ಅನುಕೂಲಕ್ಕೆ ತಕ್ಕಂತೆ ಮೂಲರೇಖೆಯಮೇಲೆ ಅಂತರದ ಉದ್ದವನ್ನು ನಿಷ್ಕರ್ಷಿಸಬೇಕು. ೨ ಆಣೆಯ ಅಂತರಕ್ಕೆ ಮೊದಲಿನಂತೆ ಅರ್ಧ ಅಂಗುಲ ಉದ್ದವು ಅನುಕೂಲವಾಗಿದೆ. ಅಂತರಗಳ ಪರಿಣಾಮಗಳನ್ನು ಆ ಉದ್ದದ ಮೇಲೆ ಬರೆಯುವುದು ಉತ್ತಮ. ಮೊದಲಿನಂತೆಯೇ ಹೆಚ್ಚು ಘನತೆಯ ಪ್ರಮಾಣವು ಸ್ವಲ್ಪ ಘನತೆಯ ಪ್ರಮಾಣಕ್ಕೆ ಬಲಪಾರ್ಶ್ವದಲ್ಲಿರಬೇಕು. ಪ್ರತಿ ಅಂತರದ ಮೇಲೆ (ಅಂದರೆ ಮೂಲರೇಖೆಯ

CC-0. Jangamwadi Math Collection. Digitized by eGangotri

ತುಂಡುಗಳ ಮೇಲೆ ) ಅಂತರದಲ್ಲಿರುವ ವಸ್ತುಸಂಖ್ಯೆಗೆ ತಕ್ಕಷ್ಟು ಉದ್ದವುಳ್ಳ ಒಂದು ಚೌಕಟ್ಟು (Rectangle) ಎಳೆಯಬೇಕು. ಹೀಗೆ ಚೌಕಟ್ಟು ಎಳೆದು ಬಂದ ಚಿತ್ರವೂ ಕತ್ತರಿಸಿ ಅಂಟಿಸಿದ ಚಿತ್ರವೂ ಒಂದೇ ಆಗಿರುವುದು. ನಮ್ಮ ಅನುಕೂಲತೆಗಾಗಿ ಬರಿಯ ಹಾಳೆಗಿಂತ ಚೌಕು (Square) ಗಳನ್ನು ಎಳೆದಿರುವ ಕಾಗದವನ್ನು ಉಪಯೋಗಿಸಬೇಕು. ಚಿತ್ರ '೧' ರಲ್ಲಿ ಈ ಚೌಕಟ್ಟಿನ ಚಿತ್ರವನ್ನು ಕೊಟ್ಟಿದೆ.



ಹೀಗೆ ಬಂದ ಚಿತ್ರದಲ್ಲಿ ಸಂಬಂಧಿಸಿದ ರೇಖೆಯು ತೋರುವುದೆಂದು ಹೇಳಿದೆವಷ್ಟೆ. ಇದಕ್ಕೆ **ವಿಭಜನಾ ರೇಖೆ** (Distribution Curve) ಎಂದು ಹೇಳಬಹುದು. ಈ ವಿಭಜನಾರೇಖೆಯು ಚೌಕು ಅಥವಾ ಮೆಟ್ಟಲುಗಳಂತೆಯೇ ಯಾವಾಗಲೂ ತೋರುವದೆ ? ಎನ್ನಬಹುದು. ನಮ್ಮ ವಿಭಜನಾರೇಖೆಯನ್ನು ಸ್ವಲ್ಪ ಭೇದಮಾಡಿಯೂ ಬರೆಯಬಹುದು. ಮೇಲಿನ ಎಲ್ಲೆಯಾದ ಮೆಟ್ಟಲುಗಳಿಗೆ ಬದಲು ಪ್ರತಿ ಮೆಟ್ಟಲಿನ ಮಧ್ಯಭಾಗವನ್ನು ಆಕ್ಕಪಕ್ಕದ (Next) ಮೆಟ್ಟಲಿನ ಮಧ್ಯಭಾಗಕ್ಕೆ ಸೇರಿಸಿ ಬಂದ ರೇಖೆಗೂ ವಿಭಜನಾರೇಖೆ ಎನ್ನಬಹುದು. ಎರಡು ರೇಖೆಗಳಿಗೂ ಭೇದವಿಲ್ಲವೇ ? ಎಂದರೆ, ನಾವು ಯಾವುದೊಂದು ಅಂತರದಲ್ಲಿರುವ ವಸ್ತುಗಳ ವ್ಯತ್ಯಾಸವನ್ನು ನಿರಾಕರಿಸುವುದರಿಂದ ಎರಡು ರೇಖೆಗಳೂ ಒಂದೇ ಅರ್ಥವನ್ನು ಕೊಡುವುವು. ಹಾಗು ಅಂತರಗಳನ್ನು ೧ಳ ಆಣೆಯಿಂದ ೧೩ ಆಣೆ ಎಂಬುದಾಗಿ ಹೇಳುವ ಬದಲು ೧೫ ಆಣೆ ಅಂತರ, ಅಂತರದ ವಿಸ್ತಾರ (extent) ಎರಡು ಆಣೆ ಎಂದರೆ ಸುಲಭವಾಗುವುದು. ಎರಡನೆಯ ಸಾರಿ ಬಂದ ವಿಭಜನಾರೇಖೆಗೆ ಅಂತರಗಳು, ೧ ಆಣೆ. ೩ ಆಣೆ ೫ ಆಣೆ ......ಇರುವುವು. ಮುಂದೆ ಯಾವ ವಿಭಜನಾರೇಖೆಯೆಂದರೂ ಈ ಎರಡನೆಯ ತೆರದ ರೇಖೆಗೆ ಒಪ್ಪುವುದು.

ವಿಭಜನಾರೇಖೆಯು ಸಂಬಂಧಿಸಿದ ರೇಖೆಯಾದರೂ **ಅವಿರತ ರೇಖೆ** (Continuous line) ಯಿರಬೇಕೆಂದು ನಿಯಮವಿಲ್ಲ. ಪ್ರಕೃತಿಯಲ್ಲಿ ನಮ್ಮ ವಸ್ತುಗಳ ಸಂಖ್ಯೆಯನ್ನು ಸಾವಿರಕ್ಕೆ ಬದಲು ಅಧಿಕ ಮಾಡುತ್ತ ನಮ್ಮ ಅಂತರ ಪ್ರಮಾಣಗಳನ್ನು ಕಡಿಮೆ ಮಾಡುತ್ತ ಹೋದರೆ ವಿಭಜನಾರೇಖೆಯು ಅನೇಕ ವೇಳೆ ಹೆಚ್ಚು ಹೆಚ್ಚಾಗಿ ಅವಿರತರೇಷೆಯಾಗಿ ತೋರಿಬರುವುದು.

ಅಂತಸ್ತನ್ನುಳ್ಳ ವಿಭಜನಾರೇಷೆಯಲ್ಲಿ ಪ್ರತಿ ಅಂತಸ್ತಿನ ಎತ್ತರವೂ ಆ ಅಂತರದ ವಸ್ತು ಸಂಖ್ಯೆಯನ್ನು ತೋರಿಸುವುದೆಂದು ಹೇಳಿದೆವಷ್ಟೆ. ಪ್ರತಿ ಅಂತಸ್ತಿನ ಚದರಳತೆಯು ಆ ಅಂತರದ ವಸ್ತು ಸಂಖ್ಯೆ ಮತ್ತು ಅಂತರದ ಅಗಲದ ಗುಣ್ಯ (Product) ವಾಗಿರುವುದು. ಅಂತರದ ಅಗಲವನ್ನು ಬೇರೆ ಮಾಡದಿದ್ದರೆ ಅಂತರದ ವಸ್ತು ಸಂಖ್ಯೆಯು ಅಂತಸ್ತಿನ ಚದರಳತೆಯು ಸಾಮ್ಯ (Proportional) ವಾಗಿರುವುವು. ಆದುದರಿಂದ ಮೂಲರೇಷೆಗೂ ಅಂತಸ್ತಿನ ವಿಭಜನಾರೇಷೆಗೂ ಮಧ್ಯದಲ್ಲಿರುವ ಪ್ರದೇಶದ ಚದರಳತೆಯು ನಮ್ಮ ಒಟ್ಟು ವಸ್ತುವಿನ ಸಂಖ್ಯೆಗೆ ಸಾಮ್ಯ (Proportional) ವಾಗಿರುವುದು ಹೀಗೆಯೇ ಅವಿರತ ಅಥವಾ ಅನವರತ ( Continuous and discontinuous) ವಿಭಜನಾರೇಷೆಗೂ ಮೂಲರೇಷೆಗೂ ಇರುವ ಮಧ್ಯ ಪ್ರದೇಶದ ಚದರಳತೆಯು ನಮ್ಮ ವಸ್ತು ಸಂಖ್ಯೆಗೆ ಸಾಮ್ಯ (Proportional) ವಾಗಿರುವುದು.

ಅಂತಸ್ತುಳ್ಳ ವಿಭಜನಾರೇಖೆಯಲ್ಲಿ ಒಂದು ಅಂತಸ್ತು ಎಲ್ಲ ಅಂತಸ್ತುಗಳಿಗಿಂತ ಎತ್ತರವಾಗಿರುವುದು. ಈ ಅಂತಸ್ತಿಗೆ ಸರಿಯಾದ ಸಂಖ್ಯೆಗೆ ( Magnitude ) **ಪರಮಾಧಿಕ್ಯ ಸಂಖ್ಯೆ** ಎಂದು ಹೇಳುವರು. ಈ ಪರಮಾಧಿಕ್ಯ ಸಂಖ್ಯೆಗೆ ತಕ್ಕ ಅಂತರವನ್ನು ಚಿತ್ರದಿಂದ ಸುಲಭವಾಗಿ ಕಂಡುಹಿಡಿಯಬಹುದು. ಎರಡನೆಯ ತೆರದ ವಿಭಜನಾರೇಖೆಯಲ್ಲಿ ಈ ಪರಮಾಧಿಕ್ಯ ಸಂಖ್ಯೆಯು **ಶಿಖರ** (Peak) ರೂಪದಿಂದ ತೋರಿಬರುವುದು. ಈ ಶಿಖರಕ್ಕೆ ತಕ್ಕ ಅಂತರವು **ಬಹುಸಂಖ್ಯಾ ಅಂತರವು** ( Interval-of manimum frequency or number ). ಈ ಅಂತರವು ಸಾಕಾದಷ್ಟು ಚಿಕ್ಕದಾಗಿದ್ದರೆ, ಅಂತರದ ಮಧ್ಯಭಾಗಕ್ಕೆ (ಅಂದರೆ ಹೊಸಹಾಗಿ ಅಂತರವನ್ನು ವರ್ಣಿಸಿದಂತೆ ಬಂದ



CC-0. Jangamwadi Math Collection. Digitized by eGangotri

ಸಂಖ್ಯೆಗೆ ) ಸಮಹೊಂದುವ ( Corresponding ) ಪ್ರಮಾಣಕ್ಕೆ **ಬಹುಸಂಖ್ಯಾಪ್ರಮಾಣ** ( Magnitude of greatest frequency ) ಎಂದು ಹೇಳಬಹುದು. ನಮ್ಮ ಅಡಿಕೆಯ ಕಾಯಿಯ ಉದಾಹರಣೆಯಲ್ಲಿ ಬಹು ಸಂಖ್ಯಾ ಅಂತರವು ೧೪ ಆಣೆಗೆ ಏರಿದ್ದು ೧೬ ಆಣೆಯನ್ನು ಏರಿಲ್ಲ. ಅಥವಾ ೧೫ ಆಣೆ ಅಂತರ. ೧೫ ಆಣೆ ಬಹು ಸಂಖ್ಯಾ ಪ್ರಮಾಣ. ಸಾರಾಂಶ: ಬಹುಸಂಖ್ಯಾಪ್ರಮಾಣದಿಂದ ನಮ್ಮ ವಸ್ತುಗಳಲ್ಲಿ ಹೆಚ್ಚಾಗಿ ಯಾವ ಮಾದರಿಯವು? ಎಂಬುದನ್ನು ಹೇಳಬಹುದು.

ಈ ಬಹುಸಂಖ್ಯಾಪ್ರಮಾಣವೂ, ನಮ್ಮ ಹಿಂದಿನ ಮಧ್ಯಮಪ್ರಮಾಣವೂ ( Mean Value ) ಒಂದೇ ಆಗಿರಬೇಕೆಂದು ಹೇಳುವುದಕ್ಕಾಗುವುದಿಲ್ಲ. ಅಡಿಕೆಕಾಯಿಯಲ್ಲಿ ಮಧ್ಯಮಪ್ರಮಾಣವು ೧೨೬; ಬಹುಸಂಖ್ಯಾಪ್ರಮಾಣವು ೧೫. ಬಹುಸಂಖ್ಯಾಪ್ರಮಾಣದ ಬಿಂದುಸ್ಥಳದಲ್ಲಿ ಮೂಲ ರೇಖೆಗೆ ಸಮಕೋಣವಾಗುವಂತೆ ( Perpendicular ) ಒಂದು ರೇಖೆಯನ್ನು ಎಳೆಯಬಹುದು. ಈ ರೇಖೆಗೆ **ಬಹುಸಂಖ್ಯಾರೇಖೆ**( Ordinate of maximum frequency ) ಎನ್ನಬಹುದು. ಈ ಬಹುಸಂಖ್ಯಾರೇಖೆಯು ವಿಭಜನಾರೇಖೆಯನ್ನು ಎರಡಾಗಿ ಭಾಗಿಸುವುದು. ಎರಡು ಭಾಗಗಳಿಗೂ ಬಿಂಬ ಪ್ರತಿಬಿಂಬಗಳಂತೆ ಹೋಲಿಕೆಯಿದ್ದರೆ ಬಹುಸಂಖ್ಯಾಪ್ರಮಾಣವೂ ಮಧ್ಯಮಪ್ರಮಾಣವೂ ಒಂದೇ ಆಗಿರುವುದು. ಇಲ್ಲದಿದ್ದರೆ ಇಲ್ಲ. ಬಹುಸಂಖ್ಯಾಪ್ರಮಾಣಕ್ಕೆ "**ಭಾವ**" ( mode ) ಎಂಬ ಚಿಕ್ಕ ಹೆಸರನ್ನೂ ಕೊಡಬಹುದು.

ಒಂದು ವಿಭಜನಾರೇಖೆಗೆ ಒಂದೇ ಭಾವವಿದೆಯೇ? ಎಂದು ಕೇಳಬಹುದು. ಇದಕ್ಕೆ ಯಾವ ರಿಯಾಯಿತಿಯೂ ಇಲ್ಲ. ಅಂದರೆ ವಿಭಜನಾರೇಖೆಗೆ ಒಂದೇ ಶಿಖರವಿರಬೇಕೆಂದು ನಿಯಮವಿಲ್ಲ. ಉದಾಹರಣೆ:—೯ ಆಣೆ ಅಂತರದಲ್ಲಿ ಹೆಚ್ಚು ಅಡಿಕೆಯ ಕಾಯಿಗಳಿದ್ದು ೧೧ ಮತ್ತು ೧೨ ಆಣೆ ಅಂತರದಲ್ಲಿ ಕಡಿಮೆ ಕಾಯಿಗಳಿದ್ದು ೧೫ ಆಣೆ ಅಂತರದಲ್ಲಿ ಹೆಚ್ಚು ಕಾಯಿಗಳಿದ್ದರೆ ವಿಭನಾರೇಖೆಗೆ ೯ ಆಣೆ ಮತ್ತು ೧೫ ಆಣೆಯ ಶಿಖರಗಳಿರುವುವು. ಈ ಎರಡು ಪ್ರಮಾಣಗಳೂ ಬಹುಸಂಖ್ಯಾ ಪ್ರಮಾಣಗಳು. ವಸ್ತುಗಳ ಸಂಖ್ಯೆಯು ಒಂದೇ ಆಗಿರಬೇಕಾದುದಿಲ್ಲ. ಇಂತಹ ಸಮಯದಲ್ಲಿ ವಿಭಜನಾರೇಖೆಗೆ ಎರಡು 'ಭಾವ' (modes) ಗಳಿವೆಯೆಂದು ಹೇಳುತ್ತೇವೆ. ವಿಭಜನಾರೇಖೆಗೆ ಒಂದೇ ಭಾವವಿದ್ದರೆ **ಏಕಭಾವ** (unimodal) ರೇಖೆಯೆಂತಲೂ, ಎರಡು ಭಾವಗಳಿದ್ದರೆ **ದ್ವಿಭಾವ**(Bimodal) ರೇಖೆಯೆಂತಲೂ ಹೇಳುತ್ತೇವೆ. ಹೀಗೆಯೇ ತ್ರಿಭಾವ ಚತುರ್ಭಾವ....ಇತ್ಯಾದಿಯಾಗಿ ಹೇಳಬಹುದು. ವಿಜ್ಞಾನಶಾಸ್ತ್ರದಲ್ಲಿ ಬರುವ ವಿಭಜನಾರೇಖೆಗಳಿಗೆ ಬಹುಭಾವ ( multimodal) ಗಳಿದ್ದರೆ ಪ್ರತಿಭಾವಕ್ಕೂ ಬೇರೆ ಬೇರೆ ಕಾರಣಗಳಿವೆ ಎಂದು ಹೇಳಬಹುದು. ಆದುದರಿಂದ ಯಾವ ವಿಷಯವನ್ನೂ ಸುಲಭವಾಗಿ ಚರ್ಚಿಸಬೇಕಾದರೆ ಏಕಭಾವರೇಖೆಯು ಸಾಕಾಗಿರುವುದು.

ಏಕಭಾವರೇಖೆಗಳಲ್ಲಿ ಕೂಡ ಅನೇಕ ವಿಧಗಳಿರಬಹುದು. ನಮ್ಮ ಪ್ರಯೋಜನಕ್ಕೆ ಬರುವ ರೇಷೆಗಳು ಬಹಳ ಸ್ವಲ್ಪ; ಇಂತಹ ರೇಖೆಗಳಲ್ಲಿ ಅತ್ಯಂತ ಸುಲಭವಾದುದಕ್ಕೆ **ಸಾಧಾರಣರೇಖೆ**(normal curve) ಅಥವಾ **ಪ್ರಮಾದರೇಖೆ** (error curve) ಎಂಬುದಾಗಿ ಹೇಳುವರು. ನಾವು ಯಾವುದಾದರೂ ಒಂದು ವಸ್ತುವಿನ ಅಳತೆಯನ್ನು ಬಹಳ ಕಟ್ಟಿನಿಂದ (accuracy) ಅನೇಕ ವೇಳೆ ಮಾಡಿದರೆ ಬಂದ ಸಂಖ್ಯೆಗಳು ಒಂದೇ ಇರುವುದಿಲ್ಲ. ನಾವು ಅಳತೆ ಮಾಡಿ ಬಂದ ಯಾವುದೂ ಒಂದೊಂದು ಪ್ರಮಾಣವು ಎಷ್ಟು ಸಲ ಮರಳಿ ಬಂತೆಂದು ಪಟ್ಟಿಮಾಡಬಹುದು. ಅಳತೆ ಮಾಡಿ ಬಂದ ಪ್ರಮಾಣ ಮತ್ತು ಈ ಸಂಖ್ಯೆಗಳ ಸಹಾಯದಿಂದ ವಿಭಜನಾರೇಷೆಯನ್ನು ಎಳೆಯಬಹುದು. ಅಳತೆಗಳನ್ನೆಲ್ಲ ಸಮಾನಸ್ಥಿತಿಯಲ್ಲಿ ಮಾಡಿದ್ದರೆ, ಮತ್ತು ಅಳತೆ ಮಾಡಿದ ಸಂಖ್ಯೆಗಳು ಹೆಚ್ಚಾದಷ್ಟೂ ಈ ವಿಭಜನಾರೇಷೆಯು ನಮ್ಮ ಸಾಧಾರಣ ರೇಷೆಯಂತಾಗುವುದೆಂದು ಶಾಸ್ತ್ರಜ್ಞರು ನಿಶ್ಚಯಿಸಿದ್ದಾರೆ. ನಾವು ಪ್ರತಿ ಸಲ ಅಳತೆ ಮಾಡುವಾಗಲೂ ಹೇಗೋ ಸ್ವಲ್ಪ ತಪ್ಪು ಆಗುವುದು. ಹಲವು ಸಾರಿ ಸ್ವಲ್ಪ ಹೆಚ್ಚು ಅಳತೆ ಬರುವುದು. ಕೆಲವು ಸಾರಿ ಕಮ್ಮಿ ಅಳತೆ ಬರುವುದು. ಆದಷ್ಟು ಸಮಾನಸ್ಥಿತಿಯಲ್ಲಿ ಅಳತೆ ಮಾಡಿದರೆ ಎಷ್ಟು ಸಾರಿ ಹೆಚ್ಚು ಅಳತೆ ಬಂದೀತೋ ಅಷ್ಟೇ ಸಾರಿ ಅಷ್ಟೇ ಕಮ್ಮಿ ಅಳತೆ ಬರುವುದು. ಅಳತೆಯಲ್ಲಿ ಬಹಳ ತಪ್ಪಾಗುವುದು ಸ್ವಲ್ಪ ಸಾರಿ. ಸ್ವಲ್ಪತಪ್ಪಾಗುವುದು ಬಹಳ ವೇಳೆ. ಈ ಕಾರಣದಿಂದ ಸಾಧಾರಣ ರೇಷೆಯನ್ನು ಪ್ರಮಾದರೇಖೆ (error curve) ಎನ್ನಬಹುದು.

CC-0. Jangamwadi Math Collection. Digitized by eGangotri

ಪ್ರಮಾದರೇಷೆಯಲ್ಲಿ, ಮಧ್ಯಮ ಪ್ರಮಾಣವೂ ಭಾವವೂ ಒಂದೇ ಆಗಿರುವುದು. ಅಂದರೆ ರೇಷೆಯನ್ನು ಬಿಂಬ ಪ್ರತಿಬಿಂಬಗಳಾಗಿ ಎರಡು ಭಾಗ ಮಾಡಬಹುದು. ಆ ರೇಷೆಯನ್ನು ನಾವು ಇಲ್ಲಿ ಚಿತ್ರಿಸಿದ್ದೇವೆ.



ಈ ಪ್ರಮಾದ ರೇಷೆಯನ್ನು ಎಳೆಯಬೇಕಾದರೆ ಯಾವ ಯಾವ ಪ್ರಮಾಣಗಳು ( items ) ಗೊತ್ತಿರಬೇಕೆಂದು ಕೇಳಬಹುದು. ಮಧ್ಯಮಪ್ರಮಾಣದ ಸಂಖ್ಯೆಯು ಗೊತ್ತಿರಬೇಕು. ಮೂಲರೇಷೆಗೂ ಪುತ್ತು ಪ್ರಮಾದ ರೇಷೆಗೂ ಮಧ್ಯೆ ಇರುವ ಪ್ರದೇಶದ ಚದರಳತೆ ಗೊತ್ತಿರಬೇಕು. ಈ ಚದರಳತೆಯು ವಸ್ತುಸಂಖ್ಯೆಗೆ ಸಾಮ್ಯ (proportional ) ವಾಗಿರುವುದೆಂದು ಹೇಳಿದ್ದೇವೆ. ಆ ಕಾರಣ ಒಟ್ಟು ವಸ್ತುಸಂಖ್ಯೆಯು ಒಂದೇ ಆಗಿದ್ದರೆ ಚದರಳತೆ ಒಂದೇ ಇದೆಯೆಂದು ಭಾವಿಸುತ್ತೇವೆ. ಅಂದ ಮೇಲೆಯೂ ಮಧ್ಯಮಪ್ರಮಾಣ ಸಂಖ್ಯೆಯು ಗೊತ್ತಾಗಬೇಕು. ನಮ್ಮ 'ಚಿತ್ರ ೩'ರಲ್ಲಿ ಒಂದೇ ಚದರಳತೆಯುಳ್ಳ ಎರಡು ಪ್ರಮಾದರೇಷೆಗಳನ್ನು ಎಳೆದಿದ್ದೇವೆ. ಒಂದಕ್ಕೆ ಮಧ್ಯಮಪ್ರಮಾಣ ಸಂಖ್ಯೆಯು ಹೆಚ್ಚಿದೆ. ಅಂದರೆ ಅನೇಕ ವಸ್ತುಗಳು ಮಧ್ಯಮಪ್ರಮಾಣದ ಘನತೆಯ ಅಳತೆಯನ್ನೂ ಹೊಂದಿವೆ. ಇನ್ನೊಂದು ರೇಷೆಯಲ್ಲಿ ಮಧ್ಯಮಪ್ರಮಾಣದ ಘನತೆಯನ್ನು ಹೊಂದಿದ ವಸ್ತು ಸಂಖ್ಯೆಯು ಕಡಿಮೆ ಇದೆ.ಮತ್ತು ಮಧ್ಯಮಪ್ರಮಾಣದ ಉಭಯ ಪಾರ್ಶ್ವದಲ್ಲಿರುವ ಪ್ರಮಾಣಗಳನ್ನುಳ್ಳ ವಸ್ತು ಸಂಖ್ಯೆಯು ಮಧ್ಯಮ ಪ್ರಮಾಣ ಸಂಖ್ಯೆಗಿಂತ ಬಹಳ ಕಡಿಮೆ ಇಲ್ಲ. ಮೊದಲಿನ ರೇಷೆಯಲ್ಲಿಯಾದರೊ ಮಧ್ಯಮ ಪ್ರಮಾಣ ಬಿಟ್ಟರೆ ಮಿಕ್ಕ ಪ್ರಮಾಣಗಳನ್ನುಳ್ಳ ವಸ್ತು ಸಂಖ್ಯೆಯು ಬಹಳ ಕಡಿಮೆ. ಈ ವಿಚಾರವನ್ನು ಅಥವಾ ಉಭಯಪಕ್ಷದ (two branches) ಪ್ರಸರಿಕೆ ( spread ) ಗೆ ಪರಿಷ್ಕಾರವಾದ (definite) ಅಳತೆಯು (Criterion) ಯಾವುದೆಂಬುದನ್ನು ಕೇಳಬಹುದು; ಪ್ರತಿ ಪ್ರಮಾಣವೂ ಮಧ್ಯಮ ಪ್ರಮಾಣದಿಂದ ಎಷ್ಟು ವ್ಯತ್ಯಾಸ ಹೊಂದಿದೆ ಎಂದು ಹೇಳಲು ವಸ್ತುಸಂಖ್ಯೆಯು ಹೆಚ್ಚಾದಷ್ಟು ಅಸನುಕೂಲವಾಗುವುದು.

ಕೆಲವು ಪ್ರಮಾಣಗಳು ಮಧ್ಯಮ ಪ್ರಮಾಣಕ್ಕಿಂತ ದೊಡ್ಡವಾಗಿರಬೇಕು, ಮತ್ತೆ ಕೆಲವು ಸಣ್ಣವಾಗಿರಬೇಕು. ಮಧ್ಯಮಪ್ರಮಾಣದಿಂದ ಇರುವ ವ್ಯತ್ಯಾಸಗಳು ( Difference) ಬಿಂದುಪ್ರಮಾಣದ ( Zero Value )ಉಭಯ ಪಕ್ಷದಲ್ಲಿಯೂ ಇರುವುವು.ಯಾವ ಒಂದು ಪಕ್ಷದಲ್ಲಿಯೂ ವ್ಯತ್ಯಾಸಗಳನ್ನು ಒಟ್ಟುಕೂಡಿದರೆ ಬಂದಸಂಖ್ಯೆಯ **ಪರಮಪ್ರಮಾಣವು** (Absolute Value) ಇನ್ನೊಂದು ಪಕ್ಷದಿಂದ ಬಂದ ಪರಮಪ್ರಮಾಣಕ್ಕೆ ಸಮಹೊಂದುವುದು.ಆದುದರಿಂದಬೀಜಗಣಿತದಮೇರೆಗೆನಾವು ವ್ಯತ್ಯಾಸಗಳನ್ನು ಒಟ್ಟುಕೂಡಿಸಿ ಬಂದ ಸಂಖ್ಯೆಯು ಬಿಂದುವಾಗುವುದು. ಆದಕ್ಕೊಸ್ಕರ ಈ ವ್ಯತ್ಯಾಸಗಳಿಂದ ಬೇರೆತೆರದ ಅಳತೆ ( Criterion) ಗಳನ್ನು ಕಂಡುಹಿಡಿಯ ಬೇಕು. ಮಧ್ಯಮಪ್ರಮಾಣದಿಂದ ಬಂದ ವ್ಯತ್ಯಾಸಗಳನ್ನು ಚೌಕು ಮಾಡಿದರೆ ( Square ) [ ಅಥವಾ ವ್ಯತ್ಯಾಸವನ್ನು ಅದೇ ಸಂಖ್ಯೆಯಿಂದ ಗುಣಿಸಿ ಬಂದ ಗುಣ್ಯ] ಬಂದ ಸಂಖ್ಯೆಗೆ ವ್ಯತ್ಯಾಸ ಚೌಕ ( Square difference ) ಎನ್ನಬಹುದು. ಈ ವ್ಯತ್ಯಾಸ ಚೌಕಗಳು ಎಲ್ಲವೂ ಬಿಂದು ಪ್ರಮಾಣದ ಒಂದೇ ಪಕ್ಷದಲ್ಲಿ ಇರುವುವು. ಮತ್ತು ಅವುಗಳ ಒಟ್ಟು- ಬಿಂದುವಾಗುವುದಿಲ್ಲ. ಈ ವ್ಯತ್ಯಾಸ ಚೌಕಗಳ ಮಧ್ಯಮಪ್ರಮಾಣಕ್ಕೆ ಅಂದರೆ ವ್ಯತ್ಯಾಸ ಚೌಕಗಳನ್ನೆಲ್ಲ ಒಟ್ಟುಕೂಡಿಸಿ ಬಂದ ಮೊತ್ತವನ್ನು ವಸ್ತುಸಂಖ್ಯೆಯಿಂದ ಭಾಗಿಸಿ ಬಂದ ಲಬ್ಧಕ್ಕೆ **"ವ್ಯತ್ಯಾಸ ಚೌಕದ ಮಧ್ಯಮ"** ( Meansquare difference ) ಎನ್ನಬಹುದು. ಈ ವ್ಯತ್ಯಾಸ ಚೌಕದ ಮಧ್ಯಮವು

CC-0. Jangamwadi Math Collection. Digitized by eGangotri

ಯಾವಸಂಖ್ಯೆಯು ಚೌಕವೊ ಆ ಸಂಖ್ಯೆಗೆ ವಕ್ರತೆ (Direction) ಎನ್ನಬಹುದು. ಸುಮಾರು ವಕ್ರತೆಯ ಕ್ಷೆನೆಯ ಭಾಗಕ್ಕೆ ಗಣಿತದಲ್ಲಿ **ನಿಖರವಾದ ವಕ್ರತೆ** ( Standard deviation ) ಎನ್ನುತ್ತಾರೆ. ಈ ವಕ್ರತೆಯ ಉಪಯೋಗವನ್ನು ಹೀಗೆ ಹೇಳಬಹುದು:—

ಯಾವುದೇ ಸಂಖ್ಯೆಯ ಪ್ರಮಾಣವನ್ನು ಪೂರ್ವಾಲೋಚನೆಯಿಲ್ಲದೆ ಪರೀಕ್ಷಿಸಿದರೆ ಮಧ್ಯಮಪ್ರಮಾಣದಿಂದ ಆ ಪ್ರಮಾಣಕ್ಕೆ ಇರುವ ವ್ಯತ್ಯಾಸವು ಮುಕ್ಕಾಲು ಪಾಲು ನಿಖರ ವಕ್ರತೆಗಿಂತ ಕಡಿಮೆ ಇರುವುದು. ಅಂದರೆ ನಾಲ್ಕು ಪ್ರಮಾಣಗಳನ್ನು ಮನಸ್ಸಿಗೆ ಒಂದಹಾಗೆ ( at random) ಪರೀಕ್ಷಿಸಿದರೆ ಅವುಗಳ ಮಧ್ಯಮ ಪ್ರಮಾಣದಿಂದ ಇರುವ ವ್ಯತ್ಯಾಸಗಳಲ್ಲಿ ಮೂರು ನಿಖರ ವಕ್ರತೆಗಿಂತ ಕಡಿಮೆ ಇರುವದು. ಮತ್ತು ಒಂದು ನಿಖರ ವಕ್ರತೆಗಿಂತ ದೊಡ್ಡದಾಗಿರುವುದು. ಸುಮಾರು ೨೨ ಪ್ರಮಾಣಗಳನ್ನು ಮನಸ್ಸಿಗೆ ಒಂದಹಾಗೆ ( at random ) ಪರೀಕ್ಷಿಸಿದರೆ ಒಂದುಸಲ ಮಾತ್ರ ಮಧ್ಯಮ ಪ್ರಮಾಣದಿಂದ ಇರುವ ವ್ಯತ್ಯಾಸವು ವಕ್ರತೆಗೆ ನಾಲ್ಕರಷ್ಟು ಇರಬಹುದು—ಎಂಬುದಾಗಿ ಶಾಸ್ತ್ರಜ್ಞರು ನಿರ್ಧರಿಸಿದ್ದಾರೆ.

ಅಂದಮೇಲೆ ಈ ನಿಖರ ವಕ್ರತೆಯ ಪ್ರಮಾಣವು ನಮ್ಮ ವಿಭಜನಾರೇಖೆಯ ಪ್ರಸರಿಕೆಯನ್ನು ತೋರ್ಪಡಿಸುವುದೆನ್ನಲು ಸಂದೇಹವಿಲ್ಲ. ವಿಭಜನಾರೇಖೆಗಳು ಪ್ರಮಾದ ರೇಖೆಯಂತೆ ಇರದಿದ್ದರೂ ಮೇಲೆ ಹೇಳಿದ ರೀತಿಯಲ್ಲಿ ನಿಖರ ವಕ್ರತೆಯನ್ನು ಕಂಡುಹಿಡಿಯಬಹುದು. ಬಂದ ವಕ್ರತೆಯ ಪ್ರಮಾಣವು ವಿಭಜನಾರೇಖೆಯ ಪ್ರಸರಿಕೆಯನ್ನು ಸುಮಾರಾಗಿ ( approximately ) ಕೊಡುವುದು.*

# ಹೆಂಣ ಬಿನ್ನಾಣ

ನಾರಾಯಣ, ಶಾಂತಿನಿಕೇತನ

ಅರಳುಗಣ್ಣುಗಳ ಹೊರಳಿಸಿನೋಡುವೆ
ಮರುಳುಗೊಳಿಸಲೆಂದು;
ಮರುಗಿ ಪಾಪವೆಂದೊರೆಯಲೆರಕವನು
ಮುರುಕ ಮಾತನಿಂದು
ಸೆರಗ ಬೀಸಿ ಮತ್ತರೆನಗೆ ಸೂಸಿ
ಕರೆವ ಸರಸವೇಕೊ
ಸಾರದಿರಲು ಅಭಿಸಾರದಲ್ಲಿ ಈ
ಕೂರುನೋಟವೇಕೊ!

ಪುರುಷಹೃದಯ - ಸುಮ ಪಾರಿಜಾತಸಮ
ಅರಳುತರಳುತಿರಲು
ಧರೆಯಲೊರಗುವದು ಧರಿಸಿ ನಾರಿಯರ
ಕರಣಕಿರಣಗಳನು.
ಅರಿತಿರು ಅರಿತಿರು ಬರಿಯ ಆಟವಿದು
ಅಲ್ಲವಲ್ಲವೆಂದು!
ಪ್ರಣಯಕೇಲಿಯಲಿ ಪ್ರಾಣಮರಣಗಳ
ಪ್ರಲಯಲೀಲೆಯೆಂದು.

*( ಇದೊಂದು ಗಣಿತಶಾಸ್ತ್ರವಿಷಯಕವಾದ ಬರಹ. ಅನೇಕ ವಾಚಕರಿಗೆ ಇದರಲ್ಲಿಯ ವಿಷಯವು ತೀರ ಹೊಸದು; ಆದುದರಿಂದ ಒಂದೇ ಸಲ ಓದಿದರೆ ಇದು ಅರ್ಥವಾಗದೆಯೂ ಹೋಗಬಹುದು. ಆದರೇನು! ಎಲ್ಲರೂ ತಿಳಿದುಕೊಳಬೇಕಾದ ವಿಷಯವಿದು. ಕಾರಣ ಒಂದುಸಲವಲ್ಲ ನಾಲ್ಕುಸಲ, ಐದುಸಲ ಓದಿ ಇದನ್ನು ತಿಳಿದುಕೊಳ್ಳಲು ಪ್ರಯತ್ನಪಡಬೇಕು. ಎಡೆಬಿಡದೆ ಮುಂದೋಡುತ್ತಿರುವ ಈಗಿನ ಲೋಕದಲ್ಲಿ ಗಾಬರಿಗೊಂಡು ನಮಗೇನೂ ತಿಳಿಯದೆಂದು ಕಂಗೆಟ್ಟು ಕುಳಿತರೆ ನಡೆಯುವಂತಿಲ್ಲ. ಮುಂದುವರಿಯುವವರನ್ನು ಹಿಡಿಯುವುದಕ್ಕೆ ನಾವೂ ಹವಣಿಸಬೇಕು. ಸಂ. ಜ. ಕ. )

CC-0. Jangamwadi Math Collection. Digitized by eGangotri

# ದೇವಪ್ಪಕವಿ

ಶ್ರೀ. ಡಿ. ಕೆ. ಭೀಮಸೇನರಾವ್ ಎಂ. ಎ. ಉಸ್ಮಾನಿಯಾಕಾಲೇಜ್, ಹೈದ್ರಾಬಾದ್

( ರಾಯಚೂರಿನಲ್ಲಿರುವ ಆದಿತೀರ್ಥಂಕರ ಜಿನಾಲಯದ ಪೂಜಾರಿಗಳಲ್ಲಿ ಎರಡು ತಾಳೆಯೋಲೆಯ ಕನ್ನಡಗ್ರಂಥಗಳಿವೆ. ಒಂದು ನಯಸೇನಕೃತಧರ್ಮಾಮೃತವು. ಇದು ಅಚ್ಚಾಗಿದೆ. ಇನ್ನೊಂದು ದೇವಪ್ಪಕವಿಯ " ರಾಮವಿಜಯ " ವೆಂಬ ಗ್ರಂಥವು. ಪೂಜಾರಿಗಳು ದಯವಿಟ್ಟು ನಮಗೆ ಈ ಗ್ರಂಥವನ್ನು ನೋಡಲು ಅನುಮತಿ ಕೊಟ್ಟಿರುವುದರಿಂದ ಅವರಿಗೆ ನಮ್ಮ ಕೃತಜ್ಞತೆಯನ್ನು ಸಲ್ಲಿಸುತ್ತೇವೆ. )

ನಮಗೆ ದೊರೆತಿರುವ ಈ ಪ್ರತಿಯಿಂದ ದೇವಪ್ಪ ಕವಿಯ ವಿಚಾರವಾಗಿ ಕೆಳಗೆ ಬರೆದ ಅಂಶಗಳು ತಿಳಿದುಬರುತ್ತವೆ.

ಕವಿಯು ಕೆಲವು ಕಡೆಗೆ ತನ್ನನ್ನು ವಿಶೇಷಿಸಿ ' ಸಚಿವ ದೇವಪ್ಪ ' ' ದೇವಪ್ಪರಸ ' ' ಕೋವಿದಮಾತ್ಯ ' ಎಂದು ಹೇಳಿಕೊಂಡಿದ್ದಾನೆ. ' ಅಭಿನವಮದನಂ, ' ' ವಾಣೀ ಮುಖ ಮುಕುರಂ ' ಎಂಬಿವು ಇವನ ಬಿರುದುಗಳು. ಹೊಯ್ಸಳ ದೇಶದ ಚೆಂಗನಾಡಿನಲ್ಲಿರುವ ದಂಡೂರು ಇವನ ವಾಸಸ್ಥಳವು.

ಆಗಿನ ಕಾಲದ ' ಭವ್ಯರು ' ಯಾವುದಾದರೊಂದು ಜೈನ ಕಥೆಯನ್ನು ನಿರೂಪಿಸಬೇಕೆಂದು ತನ್ನ ಕವಿತಾಶಕ್ತಿಯನ್ನು ಪ್ರಶಂಶಿಮಾಡಿದ್ದರಿಂದ ಸ್ಫೂರ್ತಿಹೊಂದಿ ಕೃತಿಯನ್ನು ರಚಿಸಿದ್ದೇನೆಂದು ಕವಿಯು ಹೇಳಿಕೊಂಡಿದ್ದಾನೆ. ಇದರಿಂದ ತನ್ನ ಕಾಲದಲ್ಲಿವನು ಬಹುಮಾನ್ಯನಾದ ಕವಿಯಾಗಿರಬೇಕೆಂದು ತೋರುತ್ತದೆ.

ಪೂರ್ವಕವಿಗಳ ಸ್ತವನಾವಸರದಲ್ಲಿ ಪಂಪ, ನೇಮಿಚಂದ್ರ, ನಾಗಚಂದ್ರರನ್ನು ಒಂದೊಂದು ಪದ್ಯದಲ್ಲಿಯೂ, ಗಜಗ, ಗುಣವರ್ಮ, ಶಾಂತಿವರ್ಮ, ವಿಜಯ, ಪೊನ್ನ, ಅಗ್ಗಳ, ಸುಜನೋತ್ತಂಸ, ರನ್ನ, ಮಧುರ, ಮನಸಿಜ ಇವರನ್ನು ಒಂದು ಪದ್ಯದಲ್ಲಿಯೂ ಸ್ತುತಿಸಿದ್ದಾನೆ. ಈ ಕವಿಗಳೆಲ್ಲರೂ ಇದುವರೆಗೆ ಅನೇಕರಿಂದ ಕೀರ್ತಿತರಾಗಿದ್ದಾರೆ.

ಕವಿಯು ಗ್ರಂಥರಚನೆಯ ಕಾಲವನ್ನಾಗಲಿ, ತಾನು ಜೀವಿಸಿದ್ದ ಕಾಲವನ್ನಾಗಲಿ ತನ್ನ ಕಾವ್ಯದಲ್ಲಿ ಹೇಳಿಲ್ಲ. ವಿಜಯಣ್ಣನು ಈ ಕಾವ್ಯದಲ್ಲಿ ಸ್ತುತನಾಗಿದ್ದಾನೆ. ಆದುದರಿಂದ ಕ್ರಿ. ಶ. ೧೪೪೮ ರಿಂದೀಚೆಗೆ ಇವನು ಇದ್ದಿರಬೇಕೆಂಬುದಿಷ್ಟು ಖಂಡಿತ. ಮುನಿವೃಂದದಲ್ಲಿ ಪೂಜ್ಯಪಾದ, ಅಕಲಂಕ, ಸಮಂತಭದ್ರ, ಅಮಲಕೀರ್ತಿ ವರವರ್ಣಿ, ಕೊಂಡಕುಂದಾಚಾರ್ಯ, ಚಾರುಕೀರ್ತಿ ಪಂಡಿತರಾಯ, ಪ್ರಭೇಂದು. ಶ್ರುತಮುನಿ, ವಿಮಲಕೀರ್ತಿ ಇವರನ್ನು ಸ್ತುತಿಸಿ, ಕೊನೆಗೆ ಭಟ್ಟಾಕಳಂಕನನ್ನು ಕೆಳಗಿನ ಪದ್ಯದಲ್ಲಿರುವಂತೆ ಸ್ತುತಿಸಿದ್ದಾನೆ.

> ಅವರಿವರೆನ್ನದೆ ಜಿನಮುದ್ರೆಯನು ಪೊತ್ತು ।
> ಭುವನದೊಳಗೆ ಕೀರ್ತಿವಡೆದೂ ॥
> ತವೆರಾರಾಜಿಪ ಭಟ್ಟಾಕಲಂಕನ ।
> ತವ ( ಕ ) ದಿಂ ನಾನೆರಗುವೆನೂ ॥

ಕರ್ನಾಟಕ ಶಬ್ದಾನುಶಾಸನದ ಕರ್ತೃವೇ ಮೇಲೆ ಸ್ತುತನಾದ ಭಟ್ಟಾಕಳಂಕನಾದರೆ ಇವನ ಕಾಲವು ೧೬೦೪ ( ಕ್ರಿ. ಶ. ) ರಿಂದ ಸುಮಾರು ಒಂದು ನೂರುವರ್ಷ ಈಚೆಗೆ ಎಂದು ಹೇಳಬೇಕಾಗುತ್ತದೆ. ಕ್ರಿ. ಶ. ೧೭ನೆಯ ಶತಮಾನದ ಪ್ರಥಮಪಾದವು ಇವನ ಕಾಲವೆಂದು ಹೇಳಬಹುದು.

## ಇವನ ಗ್ರಂಥ ರಾಮವಿಜಯ

ಕವಿಯು ತನ್ನ ಗ್ರಂಥದ ಹೆಸರನ್ನು , ರಾಮವಿಜಯ' ಎಂದು ಹೇಳಿದ್ದಾನೆ. ನಮಗೆ ದೊರೆತ ಪ್ರತಿಯಲ್ಲಿ ಗ್ರಂಥವು ಸಂಪೂರ್ಣವಾಗಿ ಇದೆ. ಸಂಧಿಗಳು ೨೦, ಪದ್ಯಗಳು ೩೦೦೦ ಇವೆ. ಕವಿ ತನ್ನ ಕೃತಿಯು ಪಂಡಿತಮಾನ್ಯವಾದುದೆಂಬ ಅಂಶವನ್ನು ಕೆಳಗಿನ ಪದ್ಯಗಳಲ್ಲಿ ವ್ಯಕ್ತಪಡಿಸಿದ್ದಾನೆ.

> ಶಿರವನೊಲಿದು ಸಂತಸದೊಳೊಲಿದು ಭಾ- ।
> ಪುರೆಯೆಂದು ಸಕಲ ಕೋವಿದರೂ ॥

† ಈ ದೇವಪ್ಪಕವಿಯ ವಿಚಾರವಾಗಿ ಕವಿಚರಿತೆ ಭಾಗ ೩ ಪರಿಶಿಷ್ಟ VII ಪುಟ ೪೪೭ ನೋಡುವುದು.



CC-0. Jangamwadi Math Collection. Digitized by eGangotri

ಇರದೆ ಕೊಂಡಾಡೆನ್ನಯ ಕೃತಿಫಲವವ ।
ಧರಿಸುವುದಲ್ಲದೊಡಲ್ಲಾ ॥
ಬಲ್ಲವರೊಲಿದಾಲಿಸಿ ಕೇಳಿ ಕವಿತೆಯ ।
ಸೊಲ್ಲಿನೊಳೆರಡಿಲ್ಲವೆಂದೂ ॥
ಸೊಲ್ಲಿನೆಬಳಿಕ ಯೆನ್ನಯ ಕೃತಿ ಜಗನೊಳ– ।
ಗೆಲ್ಲಿಯು ಸಲುವುದಚ್ಚರಿಯೆ ॥

ದಶರಥನ ಸುತ ರಾಮಚಂದ್ರನ ಸತಿ ಸೀತೆಯನ್ನು ದಶಕಂಠನು ಕೊಂಡುಹೋಗಲು, ಬಲವನ್ನು ಕೂಡಿಸಿಕೊಂಡು ಲಕ್ಷ್ಮಣನೊಡನೆ ಲಂಕೆಗೆ ಹೋಗಿ ರಾವಣನನ್ನು ಯುದ್ಧದಲ್ಲಿ ಕೊಂದು ವಿಭೀಷಣಗೆ ಪಟ್ಟಗಟ್ಟಿ ಸೀತೆಯೊಡಗೂಡಿ ತನ್ನ ಪಟ್ಟಣಕ್ಕೆ ಬಂದು ಸುಖವಾಗಿ ರಾಜ್ಯವಾಳುತ್ತಿದ್ದು ಕೊನೆಗೆ ಕಿರಿಯ ಮಗನಿಗೆ ರಾಜ್ಯವನ್ನು ಕೊಟ್ಟು, ಜಿನದೀಕ್ಷೆ ವಹಿಸಿ ಉಗ್ರತಪಸ್ಸಿನಲ್ಲಿ ಅನುರಕ್ತನಾದನೆಂಬ ಕಥೆಯನ್ನು ಅಲಂಕಾರಯುಕ್ತವಾಗಿ ಬರೆದಿದ್ದೇನೆಂದು ಕವಿ ಹೇಳುತ್ತಾನೆ.

ಮಗಧದೇಶದ ರಾಜಗೃಹವನ್ನಾಳುತ್ತಿದ್ದ ಶ್ರೇಣಿಕನು ಗೌತಮಗಣಧರರಿಂದ ಕೇಳಿದ ಕಥೆಯನ್ನು ತನ್ನ ಪತ್ನಿ ಚೇಳಿನೀ ದೇವಿಗೆ ನಿರೂಪಿಸಿದಂತೆ ಕವಿಯು ಕೃತಿಯನ್ನು ರಚಿಸಿದ್ದಾನೆ. ಪ್ರತಿಸಂಧಿಯ ಆದಿಯಲ್ಲಿ ಕವಿಯು ಸುವ್ರತಮುನಿಯನ್ನು ವಂದಿಸಿದಮೇಲೆ ಅವನ ಪತ್ನಿಯು ಮುಂದಿನ ಕಥೆಯನ್ನು ನಿರವಿಸಬೇಕೆಂದು ಕೇಳುತ್ತಾಳೆ. ಆಮೇಲೆ ಕವಿಯು ಕಥೆಯನ್ನು ಮುಂದುವರಿಸುತ್ತಾನೆ. ಪತ್ನಿಯು ತನ್ನ ಗಂಡನನ್ನು ಕೇಳುವುದೂ, ಅದಕ್ಕೆ ಅವನು ಪ್ರತಿಹೇಳುವುದೂ ಕೆಳಗಿನಂತೆ ಇದೆ.

ಮುಂದಣಕಥೆ ಯಾವುದದರ ವೃತ್ತಾಂತವ ।
ಕಂದರ್ಪರೂಪ ನೀವೆನಗೆ ॥
ಒಂದಿನಿಸುಳಿಯದೆ ನಿರವಿಸೆನಲು ಪೇಳ್ವೆ
ನಿಂದೀವರಾಕ್ಷಿ ಲಾಲಿಪುದೂ ।
ಅಂಗನೆಯುರವಿಂದ ಲೋಚನೆಕಂಗಳ
ಮಂಗಳೆ ಮಾವನ ಮಗಳೆ ।
ಸಿಂಗರ ವೊಲೆಯಳೆ ಸಿರಿಮುಡಿಯಳೆ ಕೇಳು
ಹಿಂಗದೆ ಮುಂದಣ ಕಥೆಯಾ ॥
ಗುಣಿಯೆ ಪೆಣ್ಗಳತಲೆವಣಿಯೆ ಲಾವಣ್ಯದ
ಕಣಿಯೆ ಕಾವನಕೈಯೊಳಿಸೆವಾ ।
ಮಣಿಮುಕುರವೆ ರತಿದೇವಿಯನಾಸಾ
ಮಣಿಯೇ ಲಾಲಿಪುದು ಈ ಕಥೆಯಾ ।

ಪ್ರತಿಸಂಧಿಯ ಕೊನೆಯಲ್ಲಿ ಆ ಸಂಧಿಯು ಮುಗಿದಿತೆಂಬುದನ್ನು ಕವಿಯು ಒಂದು ಷಟ್ಪದಿಯಲ್ಲಿ ಹೇಳುತ್ತಾನೆ.

ಇದು ಭೂಸುರವಂಶೋದ್ಭವನಭಿನವ ।
ಮದನಸಮಲಗುಣ ಜಿನಪಾದಾಂಬುಜ
ಮದಮಧುಕರಸತ್ಕೃತ್ರಮವಾಣೀಮುಖ
ಮುಕುರಂ ।
ಸದಮಲಚರಿತ ಸಚಿವದೇವಪ್ಪಂ ।
ಮುದದಿಂ ಪೇಳಿದ ರಾಮವಿಜಯದೊಳ್‌ ।
ಗೊದವಿ ರಚನೆಯಂ ಪಡೆದತಿ ಚಸವೆತ್ತುದು ಪ...
ಸಂಧಿ ।

ಇಪ್ಪತ್ತನೆಯ ಸಂಧಿಯಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ.

**ಜೈನಮುನಿಗಳ ತಪಸ್ಸು ಬಾಹ್ಯಾಡಂಬರದ ತಪಸ್ಸಿನಂತೆ ಅಲ್ಲ**

ಮಾತಿನೊಳೊಂದು ಮನದೊಳೊಂದು ವರ್ತನ
ರೀತಿಯೊಳೊಂದು ಲೋಕದೊಳು ।
ಖ್ಯಾತಿಪೂಜೆಗೆ ಮೆಯ್ಯೊಡ್ಡಿಮಾಡುವ ವಿ-
ಖ್ಯಾತತಪಸಿನ ತೆರನಲ್ಲಾ ॥
ಮನವ ಮಾನಿನಿಗಿತ್ತು ತನುವ ತಪಸಿಗಿತ್ತು
ವನಧಿಪಂಚಾಗ್ನಿಮಧ್ಯದಲಿ ।
ಜನರಂಜನೆಗೆ ವ್ಯೈಯಿಕ್ಕಿಮಾಡುವರನ್ಯ
ಮುನಿಗಳತಪಸಿನಂತಲ್ಲಾ ॥

**ಆತ್ಮಸಾಕ್ಷಾತ್ಕಾರ**

ಬಲುದೀವಿಗೆಯ ತುದಿಮೊದಲ ಸವರಲು-
ಜ್ವಲಿಪಮಧ್ಯದ ಕಾಂತಿಯಂತೆ ।
ನೆಲಸಿನಿಲುವುದು ಜ್ಞಾನಿಯ ಚಿತ್ತದಲಿ ಕರ್ಮ
ತೊಲಗಿದ ಶುದ್ಧಾತ್ಮನಬಲೆ ॥
ಹಲವುವರ್ಣ ಪಶುಗಳ ಪಾಲೆಂತಂತೆ
ಹಲವುನದಿಯ ಸಂಗಮದಾ ।
ಜಲನಿಧಿಯಂತೆ ದು(ರಿ)ತವರೆ(ಳೆ)ದಾತ್ಮನು
ತೊಲಗಿಸಿಲಲು ಬೊಮ್ಮದಲೀ ॥

* ಇದು ಪರಿವರ್ಧಿನಿ ಷಟ್ಪದಿಯು. ಮೂರನೆಯ ಪಾದದಲ್ಲಿ ನಾಲ್ಕು ಮಾತ್ರೆಯ ೬ ಗಣಗಳು ಒಂದು ಗುರುವು ಇರಬೇಕು. ಇಲ್ಲಿ ... ಗಳೂ, ಒಂದು ಗುರುವೂ ಇವೆ. ಇದರಂತೆ ಎಲ್ಲಾ ಸಂಧಿಗಳ ಕೊನೆಯ ಷಟ್ಪದಿಯಲ್ಲಿಯೂ ಇದೆ. ಆರನೆಯ ಚರಣವು ಸರಿಯಾಗಿದೆ.

CC-0. Jangamwadi Math Collection. Digitized by eGangotri

# ಮೈಸೂರು ಶಾಸನ ಶಾಖೆಯ
# ೧೯೨೯ನೆಯ ವರ್ಷದ ವರದಿಯು
## ( ಪುಸ್ತಕಾವಲೋಕನ )

ಶ್ರೀ. ತಿ. ತಾ. ಶರ್ಮರು ಸಂಪಾದಕ "ವಿಶ್ವಕರ್ಣಾಟಕ" ಬೆಂಗಳೂರು.

ಡಾ. ಕೃಷ್ಣರವರು ಒಪ್ಪಿಸಿರುವ ೧೯೨೯ನೆಯ ವರ್ಷದ ಪ್ರಾಚೀನ ಲಿಪ್ಯನ್ವೇಷಣ ಶಾಖೆಯ ವರದಿಯು ಆಕರ್ಷಣಯುತವೂ ಅಧ್ಯಯನ ಯೋಗ್ಯವೂ ಆಗಿದೆ. ವಾಸ್ತುಶಿಲ್ಪ ವಿಶೇಷಗಳುಳ್ಳ ದೇವಾಲಯ ಮತ್ತು ಇತರ ಕಟ್ಟಡಗಳ ವಿಚಾರ; ಪರೀಕ್ಷೆ ಮಾಡಿ ನಕಲುಮಾಡಿದ ಶಾಸನಗಳು, ಅವುಗಳ ಮೇಲಿನ ಟೀಕೆಟಿಪ್ಪಣಿಗಳು; ನಾಣ್ಯಗಳ ಸಂಗ್ರಹ ಮತ್ತು ಅವುಗಳ ಪರೀಕ್ಷೆ; ಹಸ್ತಲಿಖಿತ ಗ್ರಂಥಗಳ ಶೋಧನೆ ಮತ್ತು ಅವಲೋಕನ; ಪ್ರಾಚೀನ ವಸತಿಗಳ ಭೂಪರಿಶೋಧನಾಕಾರ್ಯಕಲಾಪಗಳು; ಮುಂತಾದ ವಿವಿಧ ವಿಚಾರಗಳನ್ನು ಕ್ರಮವಾಗಿ ಬರೆದು, ಸಾಧ್ಯವಾದ ಕಡೆಗಳಲ್ಲೆಲ್ಲ ಒಳ್ಳೆಯ ಚಿತ್ರಗಳನ್ನು ಕೊಟ್ಟು, ವಾಚಕರಿಗೂ ವಿದ್ಯಾರ್ಥಿಗಳಿಗೂ ದೊಡ್ಡ ಉಪಕಾರಮಾಡಿದ್ದಾರೆ. ಇತರ ಆಡಳಿತ ಶಾಖೆಗಳ ವರದಿಗಳಂತೆ ಇದು ನೀರಸವಾದ ಅಂಕಿ ಅಂಶಗಳ ರಾಶಿಯಲ್ಲ. ಇದು ಪ್ರತಿವರ್ಷವೂ ನಮ್ಮ ಕೈಗೆ ಬರುವ ಸಂಸ್ಕೃತಿಯ ದರ್ಪಣ. ಈ ದರ್ಪಣದಲ್ಲಿ ನಮ್ಮನ್ನು ನಾವು ನೋಡಿಕೊಳ್ಳುವ ವಿದ್ಯೆಯಲ್ಲಿ ನಾವು ನಿಮಗ್ನರಾದರೆ ನಮಗೆ ಆತ್ಮಸಾಕ್ಷಾತ್ಕಾರವಾಗುವುದರಲ್ಲಿ ಸಂದೇಹವೇ ಇಲ್ಲ.

### ವಾಸ್ತುಶಿಲ್ಪ ವಿಭಾಗ

ಈ ಸಾರೆ ಹೊಸದಾಗಿ ೯ ಸ್ಥಳಗಳಲ್ಲಿ – ೨೦ಕ್ಕೆ ಮೇಲಾಗಿ ಪ್ರಾಚೀನ ಅವಶೇಷಗಳನ್ನು ನೋಡಿ, ವಿರಾಮವಾಗಿ ಪರೀಕ್ಷಿಸಲಾಯಿತು. ಅವುಗಳ ಸಂಕ್ಷೇಪ ವಿವರವಿದು:

೧. ತೀರ್ಥಹಳ್ಳಿ ತಾಲ್ಲೂಕು ಮೇಳಿಗೆ ಗ್ರಾಮದ ಜೈನ ಬಸ್ತಿ. ದ್ರಾವಿಡ ಶೈಲಿ. ಮಾನಸ್ತಂಭವು ಶಿಲ್ಪದೃಷ್ಟಿಯಿಂದ ಪರಮೋತ್ತಮವಾಗಿದೆ. ಲಾಂಟಾನಾ ಇದನ್ನು ನುಂಗುತ್ತಿದೆ.

೨. ನಗರ ತಾಲ್ಲೂಕು ಹುಂಚ. ಪ್ರಾಚೀನ ಸಾಂತರರ ಮುಖ್ಯ ನಗರ. ಚಾಳುಕ್ಯ, ಹೊಯ್ಸಳ, ವಿಜಯನಗರ ಸಾಮ್ರಾಜ್ಯಗಳ ಕಾಲದಲ್ಲೂ ಕೆಳದಿಯರಸರ ಕಾಲದಲ್ಲೂ ಪ್ರಖ್ಯಾತಿ ಹೊಂದಿದ್ದುದು. ಜೈನಮತವೂ, ಅದರಲ್ಲಿ ಪಾರ್ಶ್ವನಾಥ, ಪದ್ಮಾವತಿ ಬಸದಿಗಳೂ ಇವೆ. ಭರತಖಂಡದಲ್ಲೆಲ್ಲ ಜೈನರಿಗಿದು ಪವಿತ್ರ ಕ್ಷೇತ್ರ. ಪಂಚಕೂಟ ಬಸ್ತಿಯು, ಇದಕ್ಕೆ 'ಉರ್ವೀತಿಲಕ' ವೆಂದು ಹೆಸರು. ಅನೇಕ ಬಸ್ತಿಗಳಿವೆ. ಎಲ್ಲ ದ್ರಾವಿಡ ಮಾರ್ಗದವೆಂದೇ ಹೇಳಬೇಕು.

೩. ಚಿಕ್ಕ ಮಗಳೂರು ತಾಲ್ಲೂಕು ಖಾಂಡ್ಯ ಗ್ರಾಮದಲ್ಲಿ ಅರಣ್ಯಮಧ್ಯದಲ್ಲಿ, ಭದ್ರಾತೀರದಲ್ಲಿ ಮಾರ್ಕಂಡೇಶ್ವರ ದೇವಾಲಯವಿದೆ. ದೇವಾಲಯ ಬಹಳ ಬೀಳಾಗಿದೆ.

೪. ಗೋಣೀಬೀಡು. ಮೂಡಿಗೆರೆ ತಾಲ್ಲೂಕಿನಲ್ಲಿದೆ. ಸುಬ್ರಹ್ಮಣ್ಯಸ್ವಾಮಿಯ ದೇವಾಲಯವಿದೆ.

೫. ಮೂಡಿಗೆರೆ ತಾಲ್ಲೂಕು ಅಂಗಡಿ. ಹೊಯ್ಸಳರ ಮೂಲ ಸ್ಥಳವಾದ ಶಶಕಪುರಿಯೇ ಇದೆಂದು ಒಂದು ಮತ. ಸಳನು ಹುಲಿಕೊಂದ ವಾಸಂತಿಕಾದೇವಿಯ ಗುಡಿ ಇದೆ. ವಾಸ್ತುಶಿಲ್ಪ ವಿಶೇಷವೆಳ್ಳಷ್ಟೂ ಇಲ್ಲ. ಎರಡು ಬಸ್ತಿಗಳೂ, ಮೂರು ಗುಡಿಗಳೂ ಹಾಳು ಬಿದ್ದಿವೆ. ಇಲ್ಲೊಂದು ಮುದ್ದಾದ ವಿಷ್ಣುವಿಗ್ರಹವು ಬಿದ್ದಿದೆ. ಅದರ ರಕ್ಷಣೆಯು ಆಗತ್ಯವಾಗಿದೆ.

೬. ಚನ್ನರಾಯ ಪಟ್ಟಣದ ತಾಲ್ಲೂಕು ಅಗ್ರಹಾರ ಬೆಳುಗುಳಿ. ಈ ಸಾರೆ ಕಂಡುಹಿಡಿದ ಅತ್ಯಮೂಲ್ಯ ವಾಸ್ತುಶಿಲ್ಪ ವಿಶೇಷವೆಂದರೆ ಇಲ್ಲಿಯ ಬೆಟ್ಟೇಶ್ವರ ದೇವಾಲಯ. ಕ್ರಿ. ಶ. ೧೩ನೆಯ ಶತಮಾನದ್ದು. ಹೊಯ್ಸಳಮಾರ್ಗದ್ದು. ಕೇಶವೇಶ್ವರ ದೇವಾಲಯವೆಂದೂ ಹೆಸರು. ಎರಡು ಮೂರ್ತಿಗಳಿಗೂ ಗುಡಿಗಳಿವೆ. ಎರಡೂ ದೇವಾಲಯಗಳೂ ಅಂದವಾಗಿ ಕಂಡರಿಸಿದ ಕಂಬಗಳಿಂದಲೂ, ಭಿತ್ತಿಚಿತ್ರಗಳಿಂದಲೂ, ಆಕರ್ಷಣಯುತ ಭುವನೇಶ್ವರಿಗ

CC-0. Jangamwadi Math Collection. Digitized by eGangotri

ಳಿಂದಲೂ, ರಂಜಿಸುತ್ತಿವೆ. ಇನ್ನು ಹೊಯ್ಸಳ ಮಾರ್ಗದ ಗುಡಿಗಳ ನವರಂಗ,ಸುಖನಾಸಿ, ಮುಖಮಂಟಪ,ಜಗತಿ, ಪ್ರಾಂಗಣ, ರಾಜಾಂಗಣ ಇವುಗಳ ವಿಶೇಷವನ್ನು ವರ್ಣಿಸಬೇಕೆ ? ಕೇಶವಮೂರ್ತಿಯು ೨ ಅಡಿ ಎತ್ತರದ ಪೀಠದ ಮೇಲೆ ೫ಅಡಿ ನಿಂತಿದೆ. ಇದಲ್ಲದೆ ಭೈರವ, ದುರ್ಗಾ, ಷಣ್ಮುಖ, ಸರಸ್ವತಿ, ವಿಘ್ನೇಶ್ವರ ಮೂರ್ತಿಗಳು ಮಾಯವಾಗಿವೆ.

೭. ದೇವನೂರು. ಇದು ಕಡೂರು ತಾಲ್ಲೂಕಿನಲ್ಲಿದೆ. **ಕವಿ ಲಕ್ಷ್ಮೀಶನಿಂದ** ಪ್ರಖ್ಯಾತವಾದ ಊರು. ರಾಮೇಶ್ವರ, ಸಿದ್ಧೇಶ್ವರ ದೇವಾಲಯಗಳ ಅವಶೇಷಗಳಿವೆ. ಇದು **ಜಗನ್ನಾಥ ವಿಜಯದ ರುದ್ರಭಟ್ಟನಿಂದ** ಹೆಸರಾಗಿದೆ. **ಅರ್ಚಕರು ಅವನ ವಂಶೀಯರಂತೆ.** ಶ್ರೀ. ಲಕ್ಷ್ಮೀಕಾಂತ ಸ್ವಾಮಿಯ ದೇವಾಲಯ, ಕವಿ ಲಕ್ಷ್ಮೀಶನ ಮನೆಯ ನಿವೇಶನ, ಅವನ ಸ್ಮಾರಕಸ್ತಂಭ ಇವುಗಳನ್ನು ಸೂಚಿಸಲಾಗಿದೆ. ಕವಿ ಲಕ್ಷ್ಮೀಶನನ್ನು ಕುರಿತು ವಿಚಾರಗಳನ್ನೆಲ್ಲ ಸಂಗ್ರಹಿಸಿದ್ದಾರೆ.

೮. ಐಮಂಗಲವು ಹಿರಿಯೂರು ತಾಲ್ಲೂಕಿನಲ್ಲಿದೆ. ಪ್ರಾಚೀನ ಅವಶೇಷಗಳೇನೂ ಇಲ್ಲ. ನೊಳಂಬರ ವೀರಗಲ್ಲೊಂದಿದೆ. ಉಳಿದುವೆಲ್ಲ ನಾಯಕರ ಕಾಲದ ಗುಡಿಗಳು ಮತ್ತು ಕೋಟೆ.

೯. ಚಿತ್ರದುರ್ಗದ ಆನುಪೂರ್ವಿಯನ್ನೆಲ್ಲ ಕೊಡಲಾಗಿದೆ. ಕೋಟೆಯ ವರ್ಣನೆ, ಏಕನಾಥೇಶ್ವರಿ,ಹಿಡಿಂಬೇಶ್ವರ, ಸಿದ್ಧೇಶ್ವರ, ಗೋಪಾಲಕೃಷ್ಣ, ವಿಶ್ವನಾಥೇಶ್ವರ, ಫಲ್ಗುಣೇಶ್ವರ ಇವೆಲ್ಲ ದೇವಾಲಯಗಳ ವಿಚಾರಗಳನ್ನೆಲ್ಲ ವಿಸ್ತಾರವಾಗಿ ಹೇಳಿದ್ದಾರೆ.

ಕರ್ಣಾಟಕದ ವಾಸ್ತುಶಿಲ್ಪಭಂಡಾರಕ್ಕೆ ಅಗ್ರಹಾರ ಬೆಳುಗುಳಿಯ ಬಿಟ್ಟೇಶ್ವರ ದೇವಾಲಯವು ಈ ವರ್ಷದ ಅಮೂಲ್ಯವಸ್ತುವೆಂದು ನಿಸ್ಸಂಶಯವಾಗಿ ಹೇಳಬಹುದು. ಎರಡು ಚಿತ್ರಗಳೂ, ಒಂದು ನಕ್ಷೆಯೂ ಆ ಭವ್ಯ ದೇವಾಗಾರದ ರೂಪುರೇಷೆಗಳನ್ನು ವಾಚಕರ ಹೃತ್ಪಟಲದಲ್ಲಿ ಊರುವಂತೆ ಮಾಡುತ್ತವೆ. ಬೇಲೂರು ಹಳೇಬೀಡು ದೇವಾಲಯಗಳಮೇಲೊಂದೊಂದು ಸಚಿತ್ರ ಕೈಪಿಡಿಗಳಿದ್ದಂತೆ ಬಿಟ್ಟೇಶ್ವರ ದೇವಾಲಯಕ್ಕೂ ಒಂದು ಕೈಪಿಡಿಯು ಕಲಾಪ್ರೇಮಿಗಳ ಕೈಗೆ ಸಿಕ್ಕೀತೆಂದು ಹಾರಯಿಸೋಣ.

ಚಿತ್ರದುರ್ಗದಲ್ಲಿ ಹಿಡಿಂಬೇಶ್ವರ ದೇವಾಲಯದಮುಂದಿನ ಕಂಬದ ಪಡಸಾಲೆಯೂ, ಮೂರು ಅಂತಸ್ತಿನ ಕಲ್ಲು ಗೋಪುರವೂ, ಸಿದ್ಧೇಶ್ವರ ದೇವಾಲಯದ ದಾರಿಯಲ್ಲಿರುವ ಅಂತಹುದೇ ಇನ್ನೊಂದು ಗೋಪುರವೂ ಇವೆ. ಇವೆರಡೂ ಸ್ಥಳದ ಐತಿಹ್ಯದಂತೆ ಭೀಮ ಹಿಡಿಂಬರ ರಥಗಳು. ಅವರು ಇವುಗಳಲ್ಲಿ ಕೂತು ಯುದ್ಧ ಮಾಡುತ್ತಿದ್ದರಂತೆ !

" ಇವುಗಳನ್ನು ನೋಡಿದರೆ ಪಲ್ಲವಮಾರ್ಗದ ವಾಸ್ತು ಇದ್ದಂತೆ ಕಾಣಬರುವ ಚಿಹ್ನೆಗಳಿವೆ "

ಎಂಬುದಾಗಿ ಡಾಕ್ಟರ್ ಎಂ. ಎಚ್. ಕೃಷ್ಣರವರು ಹೇಳಿದ್ದಾರೆ. ಇವೆರಡೂ ಗೋಪುರಗಳ ವಾಸ್ತುಲಕ್ಷಣಗಳನ್ನು ಕೊಂಚ ಶಾಸ್ತ್ರೀಯವಾಗಿ ಪರೀಕ್ಷೆ ಮಾಡಬೇಕಾಗಿದೆ. ಕರ್ಣಾಟಕದಲ್ಲಿ ಪಲ್ಲವಮಾರ್ಗದ ಕಟ್ಟಡಗಳು ಕಡಿಮೆ.

ಪ್ರಾಚೀನ ಅವಶೇಷ (ದೇವಾಗಾರಗಳು,ಭವನಗಳು, ವಾಸ್ತುಶಿಲ್ಪವಿಶೇಷಗಳು ಇತ್ಯಾದಿ ) ಗಳ ಪಾಲನೆ ಮತ್ತು ಅವುಗಳನ್ನು ಆಗಾಗ ಹೋಗಿನೋಡಿ ಜೀರ್ಣೋದ್ಧಾರ ಮಾಡುವಿಕೆ, ಈ ಕರ್ತವ್ಯವು ಪ್ರಾಚೀನ ಲಿಪ್ಯನ್ವೇಷಣಾಧಿಕಾರಿಗಳಿಂದ ಪ್ರಭುತ್ವ ವಿಶ್ವಕರ್ಮ ( ಕನ್‌ಸಲ್ಟಿಂಗ್ ಆರ್ಕಿಟೆಕ್ಟ ) ರಿಗೆ ಹೋಗಿ ಸೇರಿತಂತೆ. ' ಹಲವು ಅಧಿಕಾರಿಗಳು ಪ್ರಾಚೀನ ಲಿಪ್ಯನ್ವೇಷ ಶಾಖೆಗೆ ಉಳಿಸಿ ಕೊಡಲಾಗಿದೆ ' ಎಂದು ಹೇಳಿದ್ದರೂ ಈ ಬದಲಾವಣೆಯ ಅರ್ಥವೇನೆಂಬುದೇ ನಮಗೆ ಗೊತ್ತಾಗಿಲ್ಲ. ಸಂಸ್ಕೃತಿಯ ಪರಂಪರೆಯ ಗುಪ್ತಗಾಮಿನಿಯೊಂದುಂಟೆಂದು ಒಪ್ಪುವುದಾದರೆ ಪ್ರಾಚೀನ ಅವಶೇಷಗಳ ಜೀರ್ಣೋದ್ಧಾರ,-ಕ್ಷೇಮಲಾಭಗಳಕರ್ತವ್ಯಸರ್ವಸ್ವವೂ ಆ ' ಅಧಿಕಾರ ' ವುಳ್ಳವರಲ್ಲೇ ಉಳಿಯಬೇಕು.

ದೇವನೂರಿನ ಲಕ್ಷ್ಮೀಶ ರುದ್ರಭಟ್ಟರನ್ನು ಕುರಿತು ಆ ಊರ ಐತಿಹ್ಯ, ದಂತಕಥೆಗಳನ್ನೂ, ಶಾಸನಗಳನ್ನೂ ಇತರ ಸಾಧನಸಂಪತ್ತುಗಳೊಂದಿಗೆ ತುಲನೆ ಮಾಡುವವರೆಗೆ ಲಕ್ಷ್ಮೀಕಾಂತ ಸ್ವಾಮಿಗೂ ಲಕ್ಷ್ಮೀಶನಿಗೂ, ಸಿದ್ಧೇಶ್ವರ ಸ್ವಾಮಿಯ ದೇವಾಲಯಕ್ಕೂ ರುದ್ರಭಟ್ಟನಿಗೂ ಇರುವ ಸಂಬಂಧವಾಗಿ ಇದು ಹೀಗೆಯೇ ಎಂದು ಸಾಧಿಸುವುದು ಕಷ್ಟ.

CC-0. Jangamwadi Math Collection. Digitized by eGangotri

## ನಾಣ್ಯ ಪರೀಕ್ಷೆ

ಡಾಕ್ಟರ್ ಎಂ. ಎಚ್. ಕೃಷ್ಣರವರು ಈ ಶಾಸ್ತ್ರ ವಿಚಾರದಲ್ಲಿ ಮಾತ್ರ ಪೂರ್ಣಪಾಂಡಿತ್ಯ ಸಂಪಾದನೆ ಮಾಡಿದ್ದಾರೆ. ಇವರು ವಿಲಾಯತಿಗೆ ಹೋಗುವ ಮೊದಲೇ ನಾಣ್ಯಗಳ ಪರೀಕ್ಷೆಯ ಕಾರ್ಯವನ್ನಿವರಿಗೆ ಸರಕಾರದವರು ಒಪ್ಪಿಸಿದ್ದರು. ಲಂಡನ್ ವಿಶ್ವವಿದ್ಯಾಲಯದಲ್ಲಿ ಇವರಿಗೆ 'ಡಾಕ್ಟರ್ ಆಫ್ ಲಿಟರೇಚರ್' ಎಂಬ ಪ್ರಶಸ್ತಿಯು ಸಿಕ್ಕಿದ್ದು ಸಹ ಇವರು ಒರೆದ "ದಕ್ಷಿಣಾಪಥದ ನಾಣ್ಯಗಳು" ಎಂಬ ನಿಬಂಧಗೌರವಕ್ಕಾಗಿಯೇ.

ಈ ವರದಿಯಲ್ಲಿ ಡಾಕ್ಟರವರು ಹೊಯ್ಸಳನಾಣ್ಯಗಳನ್ನು ಕುರಿತು ಅಮೂಲ್ಯವಾದುದೊಂದು ಟಿಪ್ಪಣಿ ಬರೆದಿದ್ದಾರೆ. ಹೊಯ್ಸಳ ನಾಣ್ಯಗಳ ಅನುಪೂರ್ವಿಯನ್ನು ಕೊಂಚ ತಿಳಿಸಿದ್ದಾರೆ. ಎಲ್ಲಕ್ಕಿಂತ ಅತಿಶಯವಿಚಾರವೆಂದರೆ ಕೊಯಿಮುತ್ತೂರು, ಉತ್ತರಕನ್ನಡ, ಕೃಷ್ಣಾ, ಚಂಗಲ್ಪಟ್ಟು, ಕಡಪ, ತಂಜಾವೂರು, ಗೋದಾವರಿ, ಮಧುರ, ಉತ್ತರಆರ್ಕಾಟು, ದಕ್ಷಿಣಆರ್ಕಾಟು, ಮಲಬಾರ್, ಸೇಲಂ, ನೆಲ್ಲೂರು, ಕೊಡಗು, ಜಿಲ್ಲೆಗಳಲ್ಲೂ, ಕೊಚಿನ್ ಸಂಸ್ಥಾನದಲ್ಲೂ ಸಿಗುವ ವೀರರಾಯಿ ಹಣದ ಸಮಸ್ಯೆಯನ್ನು ಬಿಡಿಸಿದ್ದು.

"ವರಾಹಲಾಂಛನವುಳ್ಳ ವೀರರಾಯಿ ಹಣವು ಹೊಯ್ಸಳ ನಾಣ್ಯ. ದಕ್ಷಿಣ ದೇಶದಲ್ಲಿ (ಕಷ್ಣಾನದಿಯ ಕೆಳಗೆ) ಸುಮಾರು ಅರ್ಧ ಶತಮಾನ ರಾಜ್ಯಭಾರ ಮಾಡಿದ ಮುಮ್ಮಡಿ ವೀರ ಬಲ್ಲಾಳನೇ ಈ ವೀರರಾಯಿ ಹಣವನ್ನು ಅಚ್ಚು ಮಾಡಿಸಿರಬೇಕು. ಬಹುಶಃ ಮುಮ್ಮಡಿ ವೀರಬಲ್ಲಾಳನಿಗೆ ವೀರರಾಯನೆಂಬ ನನ್ನಿಯ ಹೆಸರಿದ್ದಿರಬೇಕು." ಎಂಬುದಾಗಿ ಡಾ. ಕೃಷ್ಣರವರು ಹೇಳಿದ್ದಾರೆ.

ಇದಲ್ಲದೆ ಹಲವು ವಿಜಯನಗರದ ಮಾಂಡಲಿಕರ ನಾಣ್ಯಗಳನ್ನೂ, ಮೈಸೂರೊಡೆಯರ ನಾಣ್ಯಗಳನ್ನೂ ಪರೀಕ್ಷೆ ಮಾಡಿದ್ದಾರೆ. ಕನ್ನಡ ಅಂಕಿಗಳನ್ನು ಕುರಿತು ವಿಚಾರ ಮಾಡಲಿಕ್ಕೆ ಕಾರಣವಾದ ಹಲವು ನಾಣ್ಯಗಳನ್ನು ಪರೀಕ್ಷಿಸಿ (ಅವುಗಳೊಂದೊಂದರಲ್ಲೂ ಅಂಕಿಗಳಿವೆ.) ೩೧ನೆಯ ಅಂಕಿಯ ನಾಣ್ಯವೇ ಇವರ ಸಂಗ್ರಹದಲ್ಲ ಕಡೆಯದಾದ ಕಾರಣ ಚಿಕ್ಕದೇವರಾಜ ಒಡೆಯರೆ (ಅವರು ೩೨ ವರ್ಷ ಗಳಾಳಿದರು) ಈ ನಾಣ್ಯಗೋತ್ರು ಪಿತಾಮಹರೆಂದೂ ಅವರ ರಾಜ್ಯಭಾರದ ಒಂದೊಂದು ವರ್ಷಕ್ಕೊಂದೊಂದು ಸಂಕೇತವಾಗಿ ಆ ನಾಣ್ಯಗಳನ್ನು ಅಚ್ಚು ಮಾಡಿಸಿದರೆಂದೂ, ಅವರ ಮುಂದಿನವರು (೩೨, ೩೩ನೆಯ ಅಂಕಿಯ ನಾಣ್ಯಗಳೂ ಇವೆ) ಆ ಪದ್ಧತಿಯನ್ನೇ ಅನುಸರಿಸಿರಬೇಕೆಂದೂ ಅಭಿಪ್ರಾಯ ಪಟ್ಟಿರುವರು.

"ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಮೈಸೂರಿನಲ್ಲಿ ಮೊಘಲಸಾಮ್ರಾಜ್ಯದ ಪ್ರಭಾವವು ಪ್ರಬಲವಾಗಿಯೇ ಇತ್ತು. ಔರಂಗಜೇಬನಿಗೂ ಚಿಕ್ಕದೇವರಾಜರಿಗೂ ರಾಜಕೀಯ ಸಂಬಂಧವೂ ಉಂಟಾಯಿತು. ಮೈಸೂರಿನಲ್ಲಿ ಮೊಘಲ ಆಡಳಿತ ಕ್ರಮವನ್ನು ಅನುಸರಿಸಲಾಯಿತು. ಆ ಕಾಲದ ಸುಪ್ರಸಿದ್ಧ ಮಹಾಪ್ರಧಾನನಾದ ಜೈನ ವಿಶಾಲಾಕ್ಷ ಪಂಡಿತನು ತನ್ನ ಮಿತ್ರನೂ, ಶಿಷ್ಯನೂ ಆದ ಚಿಕ್ಕದೇವರಾಯನು ಸಿಂಹಾಸನವನ್ನೇರಿದ ಉತ್ಸವಕೀರ್ತಿಯನ್ನು ಸ್ಥಿರಗೊಳಿಸಲು ನಾಣ್ಯಗಳ ಮೇಲೆ ರಾಜ್ಯಭಾರ ಸಂವತ್ಸರದ ಅಂಕಿಗಳನ್ನು ಹಾಕುವ ಪದ್ಧತಿಯನ್ನು ಅನುಸರಿಸಿರಬೇಕು."

ಎಂಬುದಾಗಿ ಹೇಳಿ ಆ ವಿಚಾರಚರ್ಚೆಯನ್ನು ಮುಗಿಸಿರುವರು. 'ಮೈಸೂರು ಗೆಜೆಟಿಯರ್' ಸಂಪುಟಗಳನ್ನು ಹೊಸದಾಗಿ ತಿದ್ದಿ ಬರೆದ ಶ್ರೀಮಾನ್ ಸಿ. ಹಯವದನ ರಾಯರು ಈ ಎರಡೂರು ಪಂಡಿತ ಅಥವಾ ವಿಶಾಲಾಕ್ಷ ಪಂಡಿತನಿದ್ದುದೇ ಅಸಂಭವವೆಂದು (vol. 2, part 4 P. 2463) ತಮ್ಮ ಸಂಶಯವನ್ನು ಸ್ಪಷ್ಟಪಡಿಸಿದ್ದಾರೆ. ಇದು ಅಲಕ್ಷ್ಯಮಾಡಿ, ತೆಪ್ಪಗೆ ಕೂಡಬಹುದಾದ ಸಣ್ಣ ವಿಷಯವಲ್ಲ.

ನಾಣ್ಯಗಳ ಅವಲೋಕನಕ್ಕಾಗಿಯೇ ೧೯೩೪ರಲ್ಲಿ ಸರಕಾರದವರು ಒಬ್ಬ ಪ್ರತ್ಯೇಕ ಅಧಿಕಾರಿಯನ್ನು ನೇಮಿಸಿ ಅವರ ವಶಕ್ಕೆ ಈ ಪ್ರಾಕ್ತನ ಶಾಖೆಯ ನಾಣ್ಯಸಂಗ್ರಹವನ್ನೆಲ್ಲ ಕೊಟ್ಟರಲ್ಲ! ಅವುಗಳ ಗತಿಯೇನಾಯಿತು? ಆ ಅಧಿಕಾರಿಗಳು ಏನು ಮಾಡುತ್ತಿದ್ದಾರೆ? ಎಂಬ ಪ್ರಶ್ನೆಯು ಮಾತ್ರ ನಮ್ಮನ್ನು ಬಾಧಿಸುತ್ತಿದೆ.

## ಗ್ರಂಥಶೋಧನೆ

ಈ ಸಾರೆ ಧನವಾಸ್ತು, ಮೈಸೂರುಚರಿತ್ರೆ, ಪರದಾರ ಸೋದರರಾಮನಕತೆ ಎಂಬ ಮೂರು ಗ್ರಂಥಗಳನ್ನು ಶಾಖೆಯವರು ಶೋಧನೆ ಮಾಡಿದ್ದಾರೆ. ಅವುಗಳಲ್ಲಿ:-

೧. ಧನವಾಸ್ತು (ತಾಡವಾಲೆ ಗ್ರಂಥ, ೧೬೭ ಗರಿ



CC-0. Jangamwadi Math Collection. Digitized by eGangotri

ಗಳಿವೆ. ಬರೆಹ ಮುದ್ದಾಗಿದೆ) ವೆಂಬ ಕನ್ನಡಗ್ರಂಥ: ಮಧ್ಯೆ ಮಧ್ಯೆ ಸಂಸ್ಕೃತ ಶ್ಲೋಕಗಳಿವೆ. ಶುದ್ಧ ತಪ್ಪು ತಪ್ಪು ಭಾಷೆ. ದಕ್ಷಿಣದೇಶದಲ್ಲಿ ಧನವು ಎಲ್ಲೆಲ್ಲಿ ಹೂತು ಕೂತಿದೆ, ಎಂಬುದನ್ನು ತಿಳಿಸುವುದೇ ಲೇಖಕನ ಉದ್ದಿಶ್ಯ.

೨ ಮೈಸೂರು ಚರಿತ್ರೆ. ಕಾಗದದ ಪ್ರತಿ. ನಲ್ಲಪ್ಪನ ಮನೆತನದ್ದು. ಹೈದರನ ವಿಚಾರವಾಗಿ ಅಮೂಲ್ಯವಾದ ಹೊಸ ಅಂಶಗಳಿವೆಯೆಂದು ತಿಳಿದುಬರುತ್ತದೆ.

೩. ಪರದಾರ ಸೋದರರಾಮನಕಥೆ 'ಪ್ರಾಚ್ಯ ಪುಸ್ತಕ ಭಂಡಾರ' ದಲ್ಲಿದ್ದ ತಾಡವಾಲೆ ಪ್ರತಿ (೨೫ ಎಲೆಗಳಿವೆ. ೪,೪೮೭ ಪದ್ಯಗಳು) ಯನ್ನು ಮಾತ್ರ ಓದಿ, ಸಂಗ್ರಹ ವಾಗಿ ಅದರ ವಿಚಾರವನ್ನು ತಿಳಿಸಿದ್ದಾರೆ. ವಿಜಯನಗರ ಸಾಮ್ರಾಜ್ಯವು ಹೇಗೆ ಹುಟ್ಟಿತು; ಆಗಿನ ಕರ್ಣಾಟಕದ ರಾಜಕೀಯ ಸ್ಥಿತಿಗಳು ಹೇಗಿದ್ದುವು ಎಂಬುದನ್ನರಿಯಲು ಇದೊಂದು ಅಮೂಲ್ಯ ಐತಿಹಾಸಿಕಸಾಹಿತ್ಯ. ಅದೇ ಪುಸ್ತಕಭಂಡಾರದಲ್ಲಿ ಈ ಗ್ರಂಥದ ಎರಡು ಮೂರು ಪ್ರತಿ ಗಳಿವೆ. "ಕುಮಾರರಾಮನ ಕಥೆ," ಯೆಂಬ ಹೆಸರಿನಲ್ಲೂ ಈ ವಿಚಾರವಿದೆ. ಈ ಗ್ರಂಥದ ೧೪ ಪ್ರತಿಗಳು ಮದರಾಸು ಪ್ರಾಚ್ಯ ಪುಸ್ತಕಭಂಡಾರದಲ್ಲಿವೆ. ಅಲ್ಲದೆ ಶ್ರೀ ಎಂ. ಎಚ್. ರಾಮಶರ್ಮರು ಈ ವಿಚಾರದಲ್ಲಿ ಬಹಳ ವರ್ಷಗಳಿಂದ ವ್ಯವಸಾಯ ಮಾಡುತ್ತಿದ್ದಾರೆ. 'Mythic Society Journal' ಗೆ ಈ ಐತಿಹಾಸಿಕಸಾಹಿತ್ಯದಮೇಲೊಂದೆರಡು ಲೇಖಗಳನ್ನು ಬರೆದು ಪ್ರಕಟಿಸಿದ್ದಾರೆ.

ವಿಜಯನಗರ ಸಾಮ್ರಾಜ್ಯದ ಜನನ, ಹೊಯ್ಸಳ ಸಾಮ್ರಾಜ್ಯದ ಪತನ, ದಕ್ಷಿಣದೇಶಕ್ಕೆ ಮುಸಲ್ಮಾನರ ಆಗಮನ ಈ ವಿಚಾರಗಳಲ್ಲಿರುವ ಅನೇಕ ಸಮಸ್ಯೆಗಳನ್ನು ಬಿಡಿಸಲು ಈ ಗ್ರಂಥವು ಬಹಳ ಸಹಾಯಕವಾದುದು. ಆದಕಾರಣ ಈ ಗ್ರಂಥದ ಪ್ರತಿಗಳನ್ನೆಲ್ಲ ಸಂಗ್ರಹಿಸಿ, ನಿರ್ದುಷ್ಟವಾದ ಪಾಠವನ್ನು ಪ್ರಕಟಿಸುವ ಆಗತ್ಯ ಬಹಳ ವಾಗಿದೆ.

## ರತ್ನಾಜಿ, ಚಿತ್ರಾಂಗಿ.

ಈ ಸಂದರ್ಭದಲ್ಲಿ 'ಪರದಾರ ಸೋದರರಾಮನ ಕಥೆ' ಗೂ 'ಸಾರಂಗಧರ' (ತೆಲುಗು) ನ ಕಥೆಗೂ ಇರುವ ಹೋಲಿಕೆಯನ್ನು ಸೂಚಿಸಲು ಬಯಸುವೆನು. ಪರದಾರ ಸೋದರರಾಮನ ಕಥೆಯ 'ರತ್ನಾಜಿ' ಯೂ ಸಾರಂಗ ಧರನ ಕಥೆಯ 'ಚಿತ್ರಾಂಗಿ' ಯೂ ಇಬ್ಬರೂ ಒಂದೇ ಎಂದು ಕಾಣುತ್ತದೆ. ಸಂಗ್ರಹವಾಗಿ ಆ ಎರಡು ಕಥೆ ಗಳನ್ನು ಕೊಡುತ್ತೇನೆ.

## ಚಿತ್ರಾಂಗಿ

ರಾಜನರೇಂದ್ರನೆಂಬೊಬ್ಬ ರಾಜ. ಅವನಿಗೆ ರತ್ನಾಂ[ಗಿ] ಚಿತ್ರಾಂಗಿಗಳೆಂಬ ಇಬ್ಬರು ಹೆಂಡಿರು. ರತ್ನಾಂಗಿಯ ಹೊಟ್ಟೆಯಲ್ಲಿ ಸಾರಂಗಧರನೆಂಬೊಬ್ಬ ಮಗನು ಹುಟ್ಟಿ ದನು. ಅವನು ಸ್ಫುರದ್ರೂಪಿ, ಶೂರ, ಶೀಲವಂತ. ಕಿರಿಯ ಹೆಂಡತಿ ಚಿತ್ರಾಂಗಿಯ ಮೇಲೆ ರಾಜನರೇಂದ್ರನಿಗೆ ವಿಶ್ವಾಸ ಹೆಚ್ಚು. ವೃದ್ಧರಾಜನು ಅವಳನ್ನು ಕೈ ಹಿಡಿ[ದಾ] ವಾಗ ಆಕೆಗೆ ೧೬ ವಯಸ್ಸು. ಈ ನವಮೋಹನಾಂ[ಗಿ] ಯನ್ನು ಸಾರಂಗಧರನಿಗೇ ಕೊಟ್ಟು ಮದುವೆ ಮಾ[ಡ] ಬೇಕೆಂದು ಉದ್ದಿಶ್ಯವಾಗಿದ್ದರೂ, ಅವಳ ರೂಪಿಗೆ ಮ[ರು] ಳಾಗಿ ರಾಜನರೇಂದ್ರನೇ ಅವಳನ್ನು ಮದುವೆಯಾದನು. ಆದರೇನು! ಚಿತ್ರಾಂಗಿಯು ರಹಸ್ಯವಾಗಿ ಸಾರಂಗಧ[ರ] ನನ್ನೇ ಮೋಹಿಸಿದಳು. ಅರಮನೆಯಲ್ಲಿದ್ದರೇನು! ಅಂತ ರಂಗದಲ್ಲಿ ಸಾರಂಗಧರನ ಸ್ಮರಣೆಯೇ ಆಕೆಗೆ. ಒಮ್ಮೆ ರಾಜನರೇಂದ್ರನು ಬೇಟೆಗಾಗಿ ಹೊರಟನು. ಹತ್ತು ದಿ[ನ] ಗಳು ಹಿಂತಿರುಗುವಂತಿರಲಿಲ್ಲ. ಸಾರಂಗಧರನಿಗೆ ೨[೦] ವಯಸ್ಸು; ವೃದ್ಧರಾಜನು ಅರಸುಪಟ್ಟವನ್ನವನಿಗೆ ಕಟ್ಟಿ ತಾನು ತಟಸ್ಥನಾಗುವ ಆಲೋಚನೆಯಲ್ಲಿದ್ದನು.

ಹೀಗಿರುವಾಗ ಸಾರಂಗಧರನ ಪಾರಿವಾಳವು ಹಾರಿ ಹೋಗಿ ಚಿತ್ರಾಂಗಿಯ ರಾಣಿವಾಸವನ್ನು ಸೇರಿತು. ಚಂದ್ರಶಾಲೆಯಲ್ಲಿ ನಿಂತು ನೋಡುತ್ತಿದ್ದ ಚಿತ್ರಾಂಗಿಯು ಆ ಪಾರಿವಾಳವನ್ನು ಬಂಧಿಸಿದಳು. ಸಾರಂಗಧರನು ಸ್ವಯಂ ಮಲತಾಯಿಯ ಬಳಿಗೆಹೋಗಿ ಪಾರಿವಾಳವನ್ನು ಬೇಡುವನು. ಅದೇ ಸಮಯವೆಂದು ಚಿತ್ರಾಂಗಿಯು ತನ್ನ ಅಂತರಂಗವನ್ನು ಬಿಚ್ಚಿ, ಸಾರಂಗಧರನನ್ನು 'ನನ್ನ ಕೈ ಹಿಡಿದು ಕಾಪಾಡು' ಎಂದು ಕಾಲಿಗೆ ಬೀಳುವಳು. ಶೀಲವಂತನಾದ ಸಾರಂಗಧರನು ಸಕ್ಕು, ಬುದ್ಧಿ ಹೇಳಿ ಹಿಂತಿರುಗಿದನು. ಚಿತ್ರಾಂಗಿಯು 'ಆಗಲಿ ನಿಮ್ಮ ತಂದೆ ಬರಲಿ' ಎಂದಳು. ವೃದ್ಧರಾಜನು ಹಿಂತಿರುಗುತ್ತಲೆ ಸಾರಂಗಧರನು ಬಂದು ತನ್ನ ಮೇಲೆ ನಡೆಯಿಸಲು ಬಂದ ಅತ್ಯಾಚಾರ ಹೇಳಿದಳು. ವೃದ್ಧರಾಜನು ಸಾರಂಗಧರ ನನ್ನು ವಿಚಾರಣೆಗೆ ಗುರಿ ಮಾಡಿದನು. ಸಾರಂಗಧರನು ಅಪರಾಧಿಯಾದನು. ತಾಯಿಯ ಮೇಲಿನ ಅತ್ಯಾಚಾರ ಪ್ರಯತ್ನಕ್ಕಾಗಿ ಅವನ ಕೈಕಾಲುಗಳನ್ನು ಕತ್ತರಿಸಿ ಹಾಕಿದರು. ತನ್ನ ತಪ್ಪಿಗಾಗಿ ಚಿತ್ರಾಂಗಿಯು ಮರುಗಿ ಸಾಯುವಳು.

CC-0. Jangamwadi Math Collection. Digitized by eGangotri

## ರತ್ನಾಜಿ

ಹಂಪೆಗೆ ದಕ್ಷಿಣದಲ್ಲಿ ಕುಮ್ಮಟವೆಂಬ ದುರ್ಗ. ಅದೇ ಕಂಪಿಲರಾಜನ ರಾಜಧಾನಿ. ಆ ರಾಜನಿಗೆ ಕುಮಾರ ರಾಮನಾಥನೆಂಬೊಬ್ಬ ಮಗ. ಕಂಪಿಲ ರಾಜನಿಗೆ ರತ್ನಾಜಿಯೆಂಬೊಬ್ಬ ಕಿರಿಯ, ಸನ್ನಿಯ ಹೆಂಡತಿ.

ವಸಂತಋತು;ರಾಜನಗರಿಯೆಲ್ಲ ಅಲಂಕೃತವಾಯಿತು. ಶೂಲೋತ್ಸವ. ದೇಶದ ಸಾಮಂತರೆಲ್ಲ ನೆರೆದಿದ್ದಾರೆ. ಆನಂದೋತ್ಸವದ ಕೋಲಾಹಲವು ಚಿತ್ತಾಕರ್ಷಕವಾಗಿದೆ. ಅರಮನೆಯ ಉಪ್ಪರಿಗೆಯ ಮೇಲೆ, ಸಖಿ ಸಂಗಿಯೊಂದಿಗೆ ರಾಣಿ ರತ್ನಾಜಿಯು ನಿಂತು ಈ ಉತ್ಸವವೈಭವವನ್ನು ನೋಡುತ್ತಿರುವಾಗ ಮಂತ್ರಿ ಸಾಮಂತರ ಸಾಲು ಶೋಭೆಯೊಳಗೆ 'ಯಾರು ಯಾರು?' ಎಂದು ಕೇಳಿದ ರತ್ನಾಜಿಗೆ ಸಂಗಿಯು 'ಇವನು ರಾಯದುರ್ಗದ ರಾಮ, ಇವನು ಉದಯಗಿರಿಯ ಸಂಗಮ, ಪೆನುಗೊಂಡೆಯ ಪಂಪರಾಜನಿವ, ಕೊಪಣದ ತಿಮ್ಮನಿದೊ, ಭಂಡಾರದ ಹರಿಹರ ಬುಕ್ಕರಿವರು' ಎಂದು ಉತ್ತರವಿಡುತ್ತ ಬಂದಳು. ಯುವರಾಜ ರಾಮನಾಥನಾಗಮನವಾಯಿತು. ರತ್ನಾಜಿಯು ಮೈಮರೆತಳು. ಮನಸೋತಳು. ಸಂಗಿಗೆ ಎಲ್ಲ ಹೇಳಿದಳು. ಸಖಿಯು 'ಆ ಕೆಲಸವೆನಗಿರಲಿ' ಎಂದು ಸಂತೈಸಿದಳು.

ಕೆಲಂಚಕಾಲ ಕಳೆಯಿತು. ಕಂಪಿಲರಾಯನು ಬೇಟೆಗಾಗಿ ಹೊರಹೊರಟನು. ಜಲಕ್ರೀಡಾವಿನೋದಿ ರಾಮನಾಥನು ನಗರದಲ್ಲೇ ಉಳಿದು ಆಪ್ತಸಖರೊಂದಿಗೆ ತುಂಗಭದ್ರೆಯಲ್ಲಿ ಈಜುತ್ತಿದ್ದನು. ಒಂದುದಿನ ಕಂದುಕ ಖೇಲನದಲ್ಲಿ ಅವನಿಗೆ ಅಭಿರುಚಿ ಹುಟ್ಟಿತು. ಅವನ ಅಜ್ಜ ಮುಮ್ಮಡಿಸಿಂಗನಾಡುತ್ತಿದ್ದ ಮುತ್ತಿನ ಚೆಂಡು ತಾಯಿ ಹರಿಹರದೇವಿಯ ವಶದಲ್ಲಿತ್ತು. ಅದನ್ನು ತಂದು ಸರಸಾಲಾಪದಿಂದ ಗೆಳೆಯರೊಂದಿಗೆ ರಾಮನಾಥನು ಆಡುತ್ತಿದ್ದನು. ರತ್ನಾಜಿಯು ತನ್ನರಮನೆಯ ಮೇಲುಪ್ಪರಿಗೆಯಿಂದ ಈ ಆಟದ ನೋಟದಿಂದ ಕಣ್ಮನಗಳನ್ನು ತೃಪ್ತಿಗೊಳಿಸುತ್ತಿದ್ದಳು. ಆಡುತ್ತ ಆಡುತ್ತ ಆಟಗಾರರು ಚೆಂಡನ್ನು ಬಲವಾಗಿ ಹೊಡೆದರು. ಅದು ಬಂದು ರತ್ನಾಜಿಯ ಬಳಿಬಿತ್ತು. ಆ ಚೆಂಡನ್ನು ತರಲು ರಾಮನಾಥನೇ ಮಲತಾಯಿಯ ಅರಮನೆಯಲ್ಲಿ ಪ್ರವೇಶ ಮಾಡಿದನು. ಮೋಹಪರವಶಳಾದ ರತ್ನಾಜಿಯು ರಾಮನಾಥನಿಗೆ ತನ್ನ ಹೃದಯವೇದನೆ ತಿಳಿಸಿದಳು ಪರದಾರ ಸೋದರ ರಾಮನಾಥನು ಅವಳ ಬಲೆಗೆ ಬೀಳದೆ ತಪ್ಪಿಸಿಕೊಂಡು ಬಂದನು.

ವೃದ್ಧ ಕಂಪಿಲನು ಹಿಂತಿರುಗಿದಕೂಡಲೇ ಗಂಡನಿಗೆ ರತ್ನಾಜಿಯು ರಾಮನಾಥನ ಅತ್ಯಾಚಾರಪುರಾಣ ಹೇಳಿದಳು. 'ಅವನು ಸಾಯುವವರೆಗೆ ನನಗೆ ಸುಖವಿಲ್ಲ' ಎಂದಳು. 'ಕೋಪವಬಿಡು ಕೋಮಲಾಂಗಿ ಕೊಲಿಸುವೆನು ಪಾತಕನ' ಎಂದನು ಕಂಪಿಲ; ಕೊಟ್ಟ ಸಂತೆಯೇ ಆಜ್ಞೆ. ರಾಜಾಜ್ಞೆ ಮೀರಲಹುದೆ? ಆದರೆ ಪ್ರಧಾನ ಬೈಚಪ್ಪನು (ದೆಹಲಿಯ ಸುಲ್ತಾನನಿಂದ ದೇಶವನ್ನು ಕಾಪಾಡಲು ರಾಮನಾಥನೊಬ್ಬನೇ, ಎಂದು ತಿಳಿದು) ರಾಮನಾಥನನ್ನೂ ಅವನ ಸತಿಯರನ್ನೂ ಕಾಪಾಡಿ, ರಾಮನಾಥನ ಕೃತಕತಲೆಯನ್ನು ತಂದು ಕಂಪಿಲನಿಗೆ ತೋರಿಸಿದನು. ಅದನ್ನು ಕೇಳಿ ಕಂಪಿಲನಿಗೆ ಬಹಳ ದುಃಖವಾಗಿ ಬೈಚನನ್ನು ಕಂಡು 'ಅಯ್ಯೋ ನೀನು ದುಡುಕಿದೆ, ಅವಸರಪಟ್ಟೆ' ಎಂದು ಮರುಗಿದನು. ತಾಯಿ ಹರಿಹರದೇವಿಗೆ ಹುಚ್ಚು ಹಿಡಿಯಿತು. ನಾಡೆಲ್ಲ ರಾಮನಾಥನ ಸಾವಿಗಾಗಿ ಕೊರಗಿತು.

ಇತಿಹಾಸ ಸಂಶೋಧಕರೂ ಮತ್ತು ಸಾಹಿತ್ಯ ವಿಮರ್ಶಕರೂ ಇವೆರಡು ವಸ್ತುಗಳನ್ನೂ ಶಾಸ್ತ್ರೀಯವಾಗಿ ಪರೀಕ್ಷಿಸಬೇಕಾದ ಅಗತ್ಯವಿದೆ. ಯಾವುದಕ್ಕೆ ಯಾವುದು ಮೂಲ; ಎರಡಕ್ಕೂ ಮೂಲವಿನ್ನಾವುದಾದರೂ ಇವೆರಡರಿಂದ ಭಿನ್ನವಾದುದೊಂದುಂಟೊ?

## ಶಾಸನಗಳು

ಈ ವರ್ಷ ಹೊಸದಾಗಿ ೧೧೮ ಶಾಸನಗಳನ್ನು ಕಂಡುಹಿಡಿದು, ಅವುಗಳ ಪಾಠಗಳನ್ನು ಸಿದ್ಧಗೊಳಿಸಿರುವರು. ಅವುಗಳನ್ನು ರಾಜವಂಶ ಕ್ರಮದಿಂದ ಹೀಗೆ ವಿಂಗಡಿಸಬಹುದು:

| | |
|---|---|
| ಕದಂಬ | ೨ |
| ರಾಷ್ಟ್ರಕೂಟ | ೪ |
| ಗಂಗ | ೩ |
| ನೊಳಂಬ | ೧ |
| ಕಲ್ಯಾಣಿ ಚಾಳುಕ್ಯ | ೬ |
| ಕಲಚುರ್ಯ | ೨ |
| ಹೊಯ್ಸಳ | ೧೦ |
| ವಿಜಯನಗರ | ೧೩ |
| ಚಿಲ್ಲರೆ ಮನೆತನಗಳು | ೨೩ |

CC-0. Jangamwadi Math Collection. Digitized by eGangotri

ಉಳಿದುವೆಲ್ಲ ಯಾವಕಾಲಕ್ಕೆ ಯಾವ ರಾಜವಂಶಕ್ಕೆ ಸೇರಿದುವೋ ಗೊತ್ತಿಲ್ಲ.

ಶಾಸನ ಶಾಖಾಧಿಕಾರಿಗಳೇ ಹೇಳುವಂತೆ:—

( ೧ ) ಪ್ರಾಕೃತಭಾಷೆಯಲ್ಲಿರುವ, ಚಂದ್ರವಳ್ಳಿಯಲ್ಲಿ ದೊರೆತ ಕದಂಬ ಮಯೂರಶರ್ಮನ ಶಿಲಾಶಾಸನ;

( ೨ ) ಕೊಲ್ಲಾಪುರದ ರಾಜಾರಾಮ ಕಾಲೇಜಿನ ಶ್ರೀ. ಕುಂದಣಗಾರರಿಂದ ಪಡೆದ ರೆವರೆಂಡ್ ಹೆರಾಸರು ಕಳುಹಿಸಿದ ಪಾಂಡುರಂಗಪಲ್ಲಿಯ ರಾಷ್ಟ್ರಕೂಟ ಅವಿಧೇಯನ ತಾಮ್ರಶಾಸನ;

ಇವೆರಡೇ ಅಮೂಲ್ಯವಾದ, ಮತ್ತು ಕ್ರಿ. ಶ. ೬ನೆಯ ಶತಮಾನದ ರಾಷ್ಟ್ರಕೂಟಸಾಮ್ರಾಜ್ಯ, ಕ್ರಿ. ಶ. ೩ನೆಯ ಶತಮಾನದ ದಕ್ಷಿಣಾಪಥದ ರಾಜಕೀಯ ಸ್ಥಿತಿ ಇವುಗಳ ಪರಿಚಯವನ್ನು ತಕ್ಕಮಟ್ಟಿಗೆ ಮಾಡಿಕೊಡಬಲ್ಲ ಐತಿಹಾಸಿಕ ವಸ್ತುಗಳು. ಇವುಗಳನ್ನು ಬೆಳಕಿಗೆ ತಂದ ಶ್ರೀ ಕುಂದಣಗಾರರೂ, ಡಾ॥ ಕೃಷ್ಣರವರೂ ಕರ್ನಾಟಕಕ್ಕೆ ಮಾತ್ರವಲ್ಲ, ದಕ್ಷಿಣದೇಶದ ಇತಿಹಾಸಲೋಕಕ್ಕೇ ಪರಮೋಪಕಾರ ಮಾಡಿದ್ದಾರೆ. ಇಲ್ಲಿ ವಿಪುಲವಾಗಿ ಈ ಶಾಸನಗಳ ವಿಚಾರಮಾಡುವುದು ಸಾಧ್ಯವೂ ಅಲ್ಲ; ಉಚಿತವೂ ಅಲ್ಲ. ಆದಕಾರಣ ನನಗೆ ಉಂಟಾದ ಸಂಶಯಗಳನ್ನು ಮಾತ್ರ ಸೂಚಿಸುವೆನು:

( ೧ ) " ಕದಂಬಶಾಸನದ ಮೊದಲೆರಡು ಪಾದಗಳು ಸುಮಾರು ಕ್ರಿಸ್ತಶಕ ೨೦೦ಕ್ಕೆ ಸಂಬಂಧಿಸಿದ್ದೆಂದು ಹೇಳಬಹುದು. ಆದರೆ ಮೂರನೆಯ ಪಾದದ ಕೆಲವು ಅಕ್ಷರಗಳು ಅಕ್ಷರಶಾಸ್ತ್ರರೀತ್ಯಾ ಅರ್ಧಶತಮಾನ ಈಚಿನವೆಂದು ಕಾಣಬರುತ್ತವೆ. "

" ಅಕ್ಷರಶಾಸ್ತ್ರವನ್ನೇ ಹಿಡಿದು ನೋಡಿದರೆ ಚಂದ್ರವಳ್ಳಿ ಶಾಸನವು ಮ್ಯಾಕದೋಣಿಯ ಇಮ್ಮಡಿ ಪುಳುಮಾವಿ ( ಕ್ರಿ. ಶ. ೧೪೫–೧೬೩ ) ಯ ಶಿಲಾಶಾಸನವನ್ನು ಚೆನ್ನಾಗಿ ಹೋಲುತ್ತದೆ. "

" ಈ ಶಾಸನದ ಕಾಲವನ್ನು ಕ್ರಿಸ್ತಶಕ ೨೫೮ಎಂದೂ, ಇದಾದ ಅಲ್ಪಕಾಲದಲ್ಲಿಯೇ ಮಯೂರಶರ್ಮನ ಪಟ್ಟಬಂಧೋತ್ಸವವಾಯಿತೆಂದೂ ಹೇಳಬಹುದು. "

ಎಂಬೀ ಮೂರು ವಚನಗಳನ್ನೂ ಸಮರ್ಪಕವಾಗಿ ಸಮನ್ವಯ ಮಾಡಿದಹಾಗೆ ಕಾಣುವುದಿಲ್ಲ.

( ೨ ) ಕ್ರಿಸ್ತಶಕ ಮೂರನೆಯ ಶತಮಾನದ ವೇಳೆಗೆ ಜನಸಾಮಾನ್ಯದ ಪ್ರಬಲಭಾಷೆ, ಸಾಹಿತಿಗಳ ಕವಿಕರ್ಮಭಾಷೆಯಾಗಿದ್ದ ಪ್ರಾಕೃತವು ನಾಲ್ಕನೆಯ ಶತಮಾನದ ಉದಯವಾಗುತ್ತಲೇ ಮಾಯವಾಗಿ ಅದರ ಸ್ಥಾನವನ್ನು ಸಂಸ್ಕೃತವು ಆಕ್ರಮಿಸಿತೆಂಬ ಅಭಿಪ್ರಾಯವನ್ನು ವರದಿಯ ಕರ್ತರು ವ್ಯಕ್ತಪಡಿಸಿರುವಂತೆ ಕಾಣಬರುತ್ತದೆ. ಇದು ಕೊಂಚ ವಿಚಾರಕ್ಕೆ ಅರ್ಹವಾದ ಅಂಶ.

( ೩ ) ಶಾಸನದ ಪಾಠವು ನಿರ್ದುಷ್ಟವಾದುದೆಂದು ಯಾರೂ ಭಾವಿಸಬಾರದು; ಕೆಲವು ಅಕ್ಷರಗಳು ಸಂದೇಹಾಸ್ಪದವಾಗಿವೆಯೆಂದು ಹೇಳಿದ್ದಾರೆ. ಆದರೂ ಸಂದೇಹಕ್ಕೆ ಆಸ್ಪದವೇ ಇಲ್ಲದ ಎರಡನೆಯ ಪಾದದ ೧೫ನೆಯ ಅಕ್ಷರವನ್ನು ' ಪಾ ' ಎಂದೂ, ಮೂರನೆಯ ಪಾದದ ೧೨ನೆಯ ಅಕ್ಷರವನ್ನು ' ಪು ' ಎಂದೂ ಏಕೆ ಓದಿಸಿದರೋ ಗೊತ್ತಿಲ್ಲ.

( ೪ ) ಮೊದಲನೆಯ ಪಾದದ ಆರನೆಯಕ್ಷರ 'ಯು' ವನ್ನೂ, ಮೂರನೆಯಪಾದದ ಮೊದಲನೆಯ 'ಯಾ' ಒಂಬತ್ತನೆಯ ' ಯಿ ' ಎಂಬಕ್ಷರಗಳನ್ನೂ ಈ ಮೂರರೊಳಗಿನ ಮೂಲಭೂತವಾದ ' ಯ ' ಎಂಬಕ್ಷರದ ರೂಪರೇಖೆಗಳನ್ನೂ ಗುರುತಿಸಬೇಕಾಗಿದೆ. ಮೂರನೆಯ ಪಾದದ ಆದ್ಯಕ್ಷರವು ' ಯಾ ' ಹೌದೆ ಎಂಬ ಸಂಶಯವು ಸಹಜವಾಗಿ ಹುಟ್ಟುತ್ತದೆ. ಎರಡನೆಯ ಪಾದದ (೬ನೆಯ ಅಕ್ಷರ ) ' ತ್ರೇ ', ಮೂರನೆಯ ಪಾದದ ( ೨ನೆಯ ಅಕ್ಷರ ) ' ತ್ರಿ ' ಇವೂ ಸಂದೇಹಾಸ್ಪದವಾದ ಪಾಠಗಳು.

( ೫ ) ' ಪಾರಿಯಾತ್ರಿಕ ' ' ದ ' ' ಭ ' ಎಂಬ ಪಾಠಗಳನ್ನೇ ಪುನರಾಲೋಚಿಸಬೇಕಾಗಿರುವಂತೆ ಕಾಣುತ್ತದೆ.

( ೬ ) ಅಕ್ಷರರಮ್ಯತೆ ( ಪಾಂಡುರಂಗಪಲ್ಲಿಶಾಸನ) ಲೇಖನ ವೈಖರಿಯನ್ನು ಲೆಕ್ಕಿಸಿದರೆ, ಈ ಶಾಸನವು 'ಸೃಷ್ಟ'ವೋ; ಇಲ್ಲವೆ 'ನಿಜ' ವಾದದ್ದೋ ಎಂಬ ಸಂದೇಹವು ಹುಟ್ಟುವುದಾದರೂ ಲಿಪಿಶಾಸ್ತ್ರ ದೃಷ್ಟಿಯಿಂದಲೂ, ಇತಿಹಾಸಾಂಶಗಳ ದೃಷ್ಟಿಯಿಂದಲೂ ಇದು 'ನಿಜ' ವಾದುದೇ ಎಂದು ಡಾ॥ ಕೃಷ್ಣರವರು ಹೇಳುತ್ತಾರೆ. ಆದರೆ ಸಮಾಧಾನವು ಸಮರ್ಪಕವಾಗಿಯೂ ಇಲ್ಲ; ಸಂಪೂರ್ಣವಾಗಿಯೂ ಇಲ್ಲ.

( ೭ ) ಪ್ರಾಚೀನ ರಾಷ್ಟ್ರಕೂಟ ವಂಶವೃಕ್ಷದಲ್ಲಿ ಅವಿಧೇಯನ ಮಗನೇ ಎಂದಾಗಲಿ ಇಲ್ಲಿ ಅವನ ವಂಶಜ

CC-0. Jangamwadi Math Collection. Digitized by eGangotri

ಅಪ್ಪಾಯಿರ ಗೋವಿಂದನಿಗೂ ಮಾಣಾಂಕಮನೆತನಕ್ಕೂ ಸಂಬಂಧವು ಹೀಗೇ ಇತ್ತೆಂದಾಗಲಿ ಸಾಧಿಸುವುದು ಕಷ್ಟ.

೮ ಐಹೊಳೆ ಶಾಸನದ 'ಅಗಮದಧಿಪತಿತ್ವಂ ಯೋ ಮಹಾರಾಷ್ಟ್ರಕಾಣಾಂ ತ್ರಯಾಣಾಂ' ಎಂಬ ವಾಕ್ಯಕ್ಕೆ ಅರ್ಥಮಾಡಿ, ಆ ಮೂವರು ಮಹಾರಾಷ್ಟ್ರಕರು ಭವಿಷ್ಯ, ಅವಿಧೇಯ, ಜಯರಾಜರೆಂದು ಹೇಳಿರುವುದು ಯುಕ್ತಿಯುಕ್ತವಾಗಿದೆ.

ಈ ವಿಚಾರ ಮುಗಿಸುವ ಮೊದಲು ಪಾಂಡುರಂಗ ಪಲ್ಲಿಯ ಕನ್ನಡ ಶಾಸನದ ಕಡೆಗೆ ವಾಚಕರ ಲಕ್ಷ್ಯವ ನ್ನೆಳೆಯಲೇಬೇಕು. ಈ ಮೂರು ಪಂಥಗಳ ಶಾಸನದಲ್ಲಿ ಉಕ್ತವಾಗಿರುವ ಸಾಮಿ ಸರ್ಬರಸನು ನೃಪತುಂಗ ಅಮೋಘ ವರ್ಷನೆಂದೂ, 'ಕೊಟ್ಟೋರ್' 'ಗೆಯ್ದೋದಂ' ಈ ರೂಪಗಳಲ್ಲಿ ಮೊದಲನೆಯದು 'ಪೂರ್ವದ ಹಳೆ ಗನ್ನಡ' ರೂಪವೆಂದೂ, ಎರಡನೆಯದು ಪೂರ್ವದ ಹಳೆ ಗನ್ನಡ, ಹಳೆಗನ್ನಡಗಳ ಮಿಶ್ರರೂಪವೆಂದೂ ಮೂರು ಶತಮಾನಗಳ ಹಿಂದೆ ಪಾಂಡುರಂಗನಿಗೆ ಅವಿಧೇಯನಿತ್ತ ಪತ್ತಿಯನ್ನೇ ಅಮೋಘವರ್ಷನು ಮತ್ತೆ ಕೊಡುವುದ ರಿಂದ ಅವನು ಅವಿಧೇಯನ ವಂಶೀಯನೇ ಆಗಿರಬೇ ಕೆಂದೂ ('ಸಿಂಹಲಾಂಛನ' ದ ಅವಿಧೇಯನಿಗೂ ಗರುಡ ಲಾಂಛನ' ದ ನೃಪತುಂಗನಿಗೂ ಗಂಟು ಹಾಕುವುದು ಹೇಗೆ ?) ಡಾ. ಕೃಷ್ಣರವರು ಅಭಿಪ್ರಾಯಪಡುತ್ತಾರೆ.

## ಇನ್ನುಳಿದ ಶಾಸನಗಳಲ್ಲಿ

೧ ಕುಮಾರ ಮಾರಪ್ಪನ ( ಮೊದಲನೆಯ ಹರಿಹರನ ಕಿರಿಯ ತಮ್ಮ ) ತಾಮ್ರ ಶಾಸನ ( ಸಂ. ೯೦),

೨ ಬನವಾಸಿಯ ವೀರ ಬುಕ್ಕರಾಯನ (ಸಂ. ೧೧೩) ಶಿಲಾಶಾಸನ;

೩ ಬನವಾಸಿಯ ಇಮ್ಮಡಿ ಹರಿಹರರಾಯನ (ಸಂ. ೧೧೫) ಶಿಲಾಶಾಸನ;

೪ ಬನವಾಸಿಯ ಮೊದಲನೆಯ ಬುಕ್ಕರಾಯನ (ಸಂ ೧೧೭) ಶಿಲಾಶಾಸನ;

ಈ ನಾಲ್ಕು ವಿಜಯನಗರ ಶಾಸನಗಳ ಕಡೆಗೆ ವಾಚ ಕರ ಗಮನವನ್ನು ಎಳೆಯದೆ ವಿಧಿಯಿಲ್ಲ. ಈ ನಾಲ್ಕ ರಲ್ಲಿಯೂ ಒಬ್ಬ 'ಮಾಧವ ಮಂತ್ರಿ' 'ಮಾಧವಾಂಕ' 'ಮಹಾಪ್ರಧಾನ ಮಾಧವಾಂಕ'ನು ಉಕ್ತನಾಗಿದ್ದಾನೆ. ಮಾಧವ-ವಿದ್ಯಾರಣ್ಯ ಸಮಸ್ಯೆ ಬಿಡಿಸಲು ಈ ಶಾಸನ ಗಳಿಂದೇನಾದರೂ ಸಹಾಯವಾದೀತೇನೋ, ಎಂದು ನೋಡಿದರೆ ಅವು ಸಮಸ್ಯೆಯನ್ನು ಮತ್ತಿಷ್ಟು ಕಠಿನ ಮಾಡುತ್ತವೆ. ಇದರ ಮೇಲೆ ತಾಮ್ರಶಾಸನ (ಸಂ. ೯೦) ವು ಕೊಂಚ ಸಂದೇಹಾಸ್ಪದವಾಗಿಯೇ ಕಾಣಬರು ತ್ತದೆ.

'ಗರಡಿ ಉಂಬಳಿ' ( ಸಂ. ೨ )— ವ್ಯಾಯಾಮಕ್ಕೆ ಸಮಾಜ ಕೊಟ್ಟ ಸ್ಥಾನವಿದರಿಂದ ಗೊತ್ತಾಗುತ್ತದೆ. 'ದಂಡಿಗೆ ಉಂಬಳಿ' (ಸಂ. ೩೨);

'ಆಕುವಡೆ' (ಸಂ. ೧೦೫); 'ಹಿಟ್ಟು' (ಸಂ. ೧೧೫); 'ಕೋಲ್' (ನಂ. ೬೦); ಈ ಶಬ್ದಗಳಿಗೆ ಸರಿಯಾದ ಅರ್ಥ ವನ್ನು ಹುಡುಕಬೇಕಾಗಿದೆ. 'ಸಮಸ್ತ ಪ್ರಜೆಬಸವ' ( ಸಂ. ೫೭ ) ಅಂದರೆ ಪ್ರಜಾಪ್ರಮುಖರೆಂದು ಅರ್ಥವೆ? 'ಮಣ್ಡಲಿಕ ಬೋವ' (ಸಂ. ೪೦) ನೆಂಬುದೊಂದು ಪದವಿ, ಅಧಿಕಾರ; ಇದರಿಂದ 'ಸೇನಬೋವ' ಎಂಬುದಕ್ಕೆ ಕೊಂಚ ಮಟ್ಟಿಗೆ ಅರ್ಥ ಮಾಡಲು ಅನುಕೂಲವಾದೀತೆ ? 'ಮಣ್ಡಲಿಕ' ಅಂದರೆಯೇ ಒಂದು ಅಧಿಕಾರವಾಯಿತು; ಅದರ ಮೇಲೆ 'ಬೋವ' ಅಂದರೇನು ?

## ಹಲವು ಸೂಚನೆಗಳು

೧. ಸಂಚಾರ ಮಾಡಿದಂತೆಲ್ಲ ಹಳ್ಳಿಹಳ್ಳಿಯ ದೇವಾಲ ಯಗಳನ್ನೂ ಉದ್ದಕ್ಕೂ ವರ್ಣಿಸುವ ಪದ್ಧತಿಯನ್ನು ಬಿಟ್ಟು, ವಾಸ್ತುಶಿಲ್ಪ ವಿಭಾಗದಲ್ಲಿ ಪರೀಕ್ಷೆ ಮಾಡಿದ ಕಟ್ಟಡಗಳನ್ನೆಲ್ಲ ಪಲ್ಲವ, ದ್ರಾವಿಡ, ಚಾಳುಕ್ಯ, ಹೊಯ್ಸಳ ವಿಜಯನಗರ ಮಾರ್ಗಗಳೆಂದು ನಿರ್ದಿಷ್ಟವಾದ ಗುಂಪಿನ ಕೆಳಗೆ ತಂದು ಅವುಗಳನ್ನು ವರ್ಣಿಸಬಹುದು.

೨ ವರ್ಷದ ಶಾಸನಸಂಗ್ರಹದ ಪಟ್ಟಿಯನ್ನು ಮಾಡಿ, ಆಯಾ ರಾಜವಂಶಾವಳಿಗಳ ಕೆಳಗೆ ಅವುಗಳನ್ನು ಹಂಚಿ ಸಂಕ್ಷೇಪವಾಗಿ ಶಾಸನದ ಮುಖ್ಯಾಂಶವನ್ನು ತಿಳಿಸುವ (ಮದರಾಸು ಶಾಸನ ಶಾಖೆಯ ಮಾರ್ಗ) ಹಾದಿಹಿಡಿ ದದ್ದು ವಾಚಕರಿಗೆ ಬಹಳ ಉಪಕಾರ ಮಾಡಿದಂತಾ ಯಿತು. ಆದರೆ ಮದರಾಸು ಶಾಸನಶಾಖೆಯ ವರದಿಯ ಪದ್ಧತಿಯಂತೆ ಆಯಾ ವರ್ಷದ ಶಾಸನಗಳಿಂದ ಬೇರೆ ಬೇರೆ ರಾಜವಂಶಗಳ ಸಂಬಂಧವಾಗಿ ತಿಳಿದು ಬಂದ ಹೊಸ ಅಂಶಗಳನ್ನೆಲ್ಲ ಕೂಡಿಸಿ, ಒಂದು ಐತಿಹಾಸಿಕ ಸಂಗ್ರಹವನ್ನೂ ಕೊಡಬಹುದು.



CC-0. Jangamwadi Math Collection. Digitized by eGangotri

೩. ಈಗ ಶಾಸನಪಾಠಗಳ ರೋಮನ್ ಲಿಪಿಯ ಭಾಗ ದಡಿಯಲ್ಲಿ ಅಲ್ಲಲ್ಲಿ ಕಾಣಬರುವ 'ನೋಟ್' (Note) ನ್ನು ಬಿಟ್ಟು ಬಿಡಬಹುದು.

೪. ವಿದೇಶೀಯ ಪಂಡಿತರ ಉಪಯೋಗಕ್ಕಾಗಿ ಶಾಸನ ಪಾಠಗಳನ್ನು ರೋಮನ್ ಲಿಪಿಯಲ್ಲಿ ಕೊಡುವುದು ಸರಿಯೆ. ಆದರೆ ಮುಖ್ಯ, ಅಮುಖ್ಯವೆನ್ನದೆ ಎಲ್ಲ ಶಾಸನ ಪಾಠಗಳನ್ನೂ ಕೊಡುವುದು ಸರಿಯಲ್ಲ. ಅಮೂಲ್ಯವೆನಿಸಿದುವುಗಳನ್ನು ಮಾತ್ರ ಕೊಡಬಹುದು.

೫. ಪ್ರಾಚೀನ ಲಿಪ್ಯನ್ವೇಷಣ ಶಾಖೆಯಿಂದಲೇ ಎಲ್ಲ ಕೆಲಸಗಳೂ ಆಗಬೇಕೆಂದರೆ ಸಾಧ್ಯವಿಲ್ಲ. ಅದು ಹಾಗೆ ಆಗಲೂ ಬಾರದು. ಅದಕ್ಕೆ ಆಯಾ ಶಾಸ್ತ್ರನಿಪುಣರ (ಉದ್ಯೋಗಿಗಳಲ್ಲ) ಬೆಂಬಲವು ಆವಶ್ಯಕ. ಹಾಗೆ ಅವರ ಸಹಾಯ ಪಡೆಯಬೇಕಾದರೆ, ಅವರಿಗೂ ಈ ಶಾಖೆಯ ಕೆಲಸಕ್ಕೂ ನಿಕಟಬಾಂಧವ್ಯವುಂಟಾಗಬೇಕಾದರೆ, ಇಂಡಿಯಾ ಸರಕಾರದ ಪ್ರಾಚ್ಯಲಿಪ್ಯನ್ವೇಷಣ ಶಾಖೆಯವರು ಆರಂಭಿಸಿ, ಆಗಾಗ ಪ್ರಕಟಿಸುತ್ತಿರುವ "Imperial Archæological memories" ನಂತೆ ಈ ಶಾಖೆಯವರೂ ಬೇರೆ ಬೇರೆ ವಿಷಯಗಳ ಮೇಲೆ ಆಯಾ ವಿಷಯದಲ್ಲಿ ಆಸಕ್ತರಾಗಿರುವವರ ಕಡೆಯಿಂದ ಪ್ರಬಂಧಗಳನ್ನು ಬರೆಯಿಸಿ, ಪ್ರಕಟಿಸಬೇಕು. ಇದರಿಂದ ಶಾಖೆಗೆ ಜವಾಬ್ದಾರಿಯ ಭಾರವು ಕಡಿಮೆ ಬೀಳುವುದಲ್ಲದೆ ಸಾರ್ವಜನಿಕರಿಗೆ ಈ ಶಾಖೆಯವರೇನು ಮಾಡುತ್ತಿರುವರೆಂಬುದರ ಜ್ಞಾನವುಂಟಾಗುತ್ತದೆ. ವಿವೇಕಯುತವಾದ ಶ್ರದ್ಧೆಯಿಂದ ಜನರು ಶಾಖೆಯು ಸಂಗ್ರಹ ಮಾಡುವ ಸಂಸ್ಕೃತಿಸಾಧನಸಂಪತ್ತಿಯನ್ನು ಸದುಪಯೋಗಪಡಿಸಿಕೊಳ್ಳುತ್ತಾರೆ.

ಚಂದ್ರವಳ್ಳಿಯ ಭೂಪರಿಶೋಧನೆಗಳ ವಿಚಾರವಾಗಿ ಡಾಕ್ಟರವರು ಪ್ರತ್ಯೇಕ ವರದಿಯೊಂದನ್ನು ಕೊಟ್ಟಿದ್ದಾರೆ. ಆ ವರದಿಯನ್ನು ಕುರಿತು ಮುಂದಿನ ಲೇಖನದಲ್ಲಿ ಬರೆಯಲಾಗುತ್ತದೆ.



ದಿವಂಗತರಾದ ಹೇರ್ಲೇಕರ್ ವಿಶ್ವನಾಥರಾಯರು
( ಇವರ ವಿಷಯವಾಗಿ ಕಳೆದಸಂಚಿಕೆಯಲ್ಲಿ ಕೆಲವು ಮಾತುಗಳನ್ನು ಹೇಳಲಾಗಿದೆ )

CC-0. Jangamwadi Math Collection. Digitized by eGangotri

# ನಾಣ್ಯದ ಇತಿಹಾಸ

ಶ್ರೀ. ಗುಂಜಿ ಧೀರೇಂದ್ರರಾಯರು, ಬಿ. ಕಾಮ್, ಧಾರವಾಡ

ಸಂಸ್ಕೃತಿಯು ಬೆಳೆದಂತೆ ಮನುಷ್ಯನ ಜೀವನಕ್ಕೆ ಬೇಕಾಗುವ ವಸ್ತುಗಳೂ ಬೆಳೆದಿವೆ. ಮುಂದಾದರೂ ಬೆಳೆಯುತ್ತ ಹೋಗುವವು. ಮೊತ್ತಮೊದಲು ಪ್ರತಿಯೊಬ್ಬನೂ ತನಗೆ ಬೇಕಾಗುವ ಕೆಲಕೆಲವು ವಸ್ತುಗಳನ್ನು ತಾನೇ ಬೆಳಸಿ ತನ್ನ ಜೀವನವನ್ನು ಸಾಗಿಸುತ್ತಿದ್ದನು. ಸದ್ಯದ ಸ್ಥಿತಿಯಲ್ಲಿ ಇದು ಶಕ್ಯವಿಲ್ಲ. ತಮ್ಮ ಕುಲ ಪರಂಪರಾಗತ ಕೆಲಸದಲ್ಲಿ ಒಲವು ಇರಲಿ, ಇಲ್ಲದಿರಲಿ. ಹಿಂದಿನ ಕಾಲದಲ್ಲಿ ಪ್ರತಿಯೊಬ್ಬನಿಗೂ ಅದನ್ನು ಮಾಡಲೇ ಬೇಕಾಗುತ್ತಿತ್ತು. ಇಂದು ಹಾಗೆ ಮಾಡುವ ಕಾರಣವಿಲ್ಲ. ಯಾರಿಗೆ ಯಾವುದನ್ನು ಮಾಡಲು ಹೆಚ್ಚು ಸುಲಭವಿದೆಯೊ, ಇಲ್ಲವೆ ಯಾರಲ್ಲಿ ಯಾವುದನ್ನು ಮಾಡಿಸುವ ಶಕ್ತಿ ಇದೆಯೋ ಅದನ್ನು ಮಾಡಿಸಿ, ಅದನ್ನು ಮಾಡಲಿಕ್ಕಾಗದವರಿಗೆ ಬೇಕಾದವರಿಗೆ ಹಂಚುವರು. ಇದರಿಂದ ಮನುಷ್ಯನು ತನ್ನ ಜೀವನದ ಸ್ವಾತಂತ್ರ್ಯವನ್ನು ಕಳೆದುಕೊಂಡನು. ಜಗಜ್ಜೀವನದ ಚಕ್ರದಲ್ಲಿ ತಾನೂ ಒಬ್ಬನಾದನು ಪ್ರತಿಯೊಂದು ಜೀವನದ ಹೊಂದಿಕೆಯಾಯಿತು. ಪರ್ಯಾಯದಿಂದ ಪ್ರತಿಯೊಂದು ಜೀವನದ ಸಂಬಂಧವು ಅವನಿಗೆ ಅಂಟಿಕೊಂಡಿತು—ಇದರಿಂದ ಅವನ ಹಿತವಾಯಿತೋ ಇಲ್ಲವೋ ಎಂಬುದು ಈಗ ನನ್ನ ಮುಂದೆ ಇಲ್ಲ—ಹೀಗಿದೆ. ಹೀಗಾಗಲಿಕ್ಕೆ ಎಷ್ಟೊ ಕಾರಣಗಳಿವೆ. ಅವುಗಳಲ್ಲಿ 'ದುಡ್ಡು' ಮಹತ್ವವಾದದ್ದು. 'ದುಡ್ಡು' ಎಂದರೆ ನಾಣ್ಯ. ನಾಣ್ಯವೆಂದರೆ ಎಲ್ಲರೂ ಒಪ್ಪಿಕೊಂಡು, ಮನ್ನಿಸುವ ಒಂದು ಯೋಜನೆ. ಎಲ್ಲರೂ ತಮಗೆ ಬೇಕಾಗುವ ಎಲ್ಲ ವಸ್ತುಗಳನ್ನು ತಾವೇ ಹುಟ್ಟಿಸುವಾಗ, ಇಲ್ಲವೆ ತಾವು ಹುಟ್ಟಿಸುವ ವಸ್ತುಗಳನ್ನು ತಮಗೆ ಬೇಕಾದ ಬೇರೆ ವಸ್ತುಗಳಿಗೆ ಬದಲು ಮಾಡುವಾಗ ಈ ಯೋಜನೆಯ ಅವಶ್ಯಕತೆಯು ಇರಲಿಲ್ಲ. ಆದರೆ ಮೊದಲು ಹೇಳಿದಂತೆ ಮನುಷ್ಯನು ತನಗೆ ಹುಟ್ಟಿಸಲು ಸುಲಭವಿದ್ದ ವಸ್ತುಗಳನ್ನು ಹುಟ್ಟಿಸಿ, ಅವುಗಳಿಂದ ತನಗೆ ಬೇಕಾಗುವ ಬೇರೆ ವಸ್ತುಗಳನ್ನು ಇಚ್ಛಿಸಿದಂದಿನಿಂದ ಈ ಯೋಜನೆಯು ಮನುಷ್ಯನಿಗೆ ತೋರಿರಬೇಕು. ಇದು ಒಮ್ಮೆಲೆ ಯಾವನೇ ದೊರೆಯೊಬ್ಬನ ಶಾಸನದಿಂದ ಆದದ್ದಲ್ಲ. ಮನುಷ್ಯನ ವ್ಯವಹಾರದ ಆವಶ್ಯಕತೆ ಅನುಕೂಲತೆಗಳಿಗನುಸರಿಸಿ ರೂಪುಗೊಂಡಿದೆ. ಮೊತ್ತಮೊದಲು ದನಕರುಗಳನ್ನು ನಾಣ್ಯದಂತೆ ಉಪಯೋಗಿಸುತ್ತಿದ್ದರು. ಮುಂದೆ ಅವುಗಳ ಚರ್ಮವನ್ನು ಉಪಯೋಗಿಸಿದರು. ಕಡೆಗೆ ಖನಿಜ ಪದಾರ್ಥಗಳಾದ ಬೇರೆ ಬೇರೆ ಧಾತುಗಳನ್ನು ಉಪಯೋಗಿಸುತ್ತ ಬಂದರು. ಅನೇಕ ದಿನಗಳ ಅನುಭವದಿಂದ ಬಂಗಾರವು ಈ ಕೆಲಸಕ್ಕೆ ಹೆಚ್ಚು ಅನುಕೂಲವೆಂದು ಅದೇ ಈಗ ಉಪಯೋಗದಲ್ಲಿದೆ. ಸದ್ಯಕ್ಕೆ ಅನೇಕ ಕಾರಣಗಳಿಂದ ಅನೇಕ ಜನಾಂಗಗಳು ಇದನ್ನೂ ಬಿಟ್ಟು ಬಿಟ್ಟಿದ್ದಾರೆ. ತಮ್ಮ ವ್ಯವಹಾರಕ್ಕನುಸರಿಸಿ ಮತ್ತೇನನ್ನಾದರೂ ನಿರ್ಮಿಸಬಹುದು. ಇಲ್ಲವೆ ಈಗಿದ್ದ ಕಾರಣಗಳು ಇಲ್ಲವಾದರೆ ಮತ್ತೆ ಬಂಗಾರಕ್ಕೇ ಮರಳಿ ಬರಬಹುದು. ಮನುಷ್ಯನ ಅನುಕೂಲತೆಗೆ ಅಂತವಿಲ್ಲ; ಅನುಭವಕ್ಕೆ ಆಳವಿಲ್ಲ.

ಒಂದು ವಸ್ತುವಿನಿಂದ ಇನ್ನೊಂದನ್ನು ಇಚ್ಛಿಸಿದರೆ ಎರಡೂ ವಸ್ತುಗಳ ಕ್ರಯ ಕಟ್ಟಬೇಕಾಗುವುದು. ಆ ಮೇಲೆ ಅವುಗಳ ವಿನಿಮಯವು ಸುಲಭವಾಗುವುದು. ಕ್ರಯವೆಂದರೆ ಮನುಷ್ಯನು ಯಾವುದೇ ವಸ್ತುವಿಗೆ ಕೊಡುವ ಮಹತ್ವವನ್ನು ನಾಣ್ಯರೂಪವಾಗಿ ಹೇಳುವುದು. ನಾಣ್ಯವೆಂದರೂ ವಿಶಿಷ್ಟ ಜನಾಂಗಗಳು ವಸ್ತುಗಳ ವಿನಿಮಯದ ಅನುಕೂಲತೆಗಾಗಿ ಗೊತ್ತು ಮಾಡಿದ

CC-0. Jangamwadi Math Collection. Digitized by eGangotri

ವಿಶಿಷ್ಟ ವಸ್ತುವಿನ ಒಂದು ಸಾಂಕೇತಿಕಸ್ವರೂಪ.

ಇಂದಿನ ನಮ್ಮ ಜೀವನವು ಈ ಸಾಂಕೇತಿಕಸ್ವರೂಪದ ತಳಹದಿಯ ಮೇಲೆಯೆ ನಿಂತಿದೆ. ಮನುಷ್ಯನ ಪ್ರತಿಯೊಂದು ವ್ಯವಸಾಯಕ್ಕೂ ಅದರ ಸಂಬಂಧವಿದೆ. ಅದಕ್ಕೇನಾದರೂ ಅಪಾಯವಾದರೆ ಜೀವನಕ್ರಮವೇ ದುಸ್ತರವಾಗುವುದು. ನಮ್ಮ ಜೀವನಕ್ಕೆ ಇಷ್ಟು ನಿಕಟ ಸಂಬಂಧವಿರುವ ವಸ್ತುವಿನ ಸಾಂಕೇತಿಕ ಸ್ವರೂಪವನ್ನು ಎಲ್ಲ ರೀತಿಯಿಂದಲೂ ಪರಿಶೋಧಿಸಿ ಅದರ ಹಿತಾಹಿತಗಳನ್ನು ತಿಳಿದುಕೊಳ್ಳಲು ಯತ್ನ ಮಾಡುವುದು ಪ್ರತಿಯೊಬ್ಬನ ಕರ್ತವ್ಯವಿದೆ. ಒಮ್ಮೆ ಅದರ ಹಿತಾಹಿತಗಳನ್ನು ಅರಿತ ಮೇಲೆ ಅದರಿಂದಾಗುವ ಅಹಿತಗಳನ್ನು ಹೋಗಿಸಿ, ಅದರಿಂದ ತನ್ನ ಜೀವನಕ್ಕೆ ಶಕ್ಯವಿದ್ದಷ್ಟು ಅನುಕೂಲತೆಗಳನ್ನೂ, ಸೌಕರ್ಯಗಳನ್ನೂ ಮಾರ್ಪಡಿಸಿಕೊಳ್ಳುವುದು ಮನುಷ್ಯನ ಬುದ್ಧಿಗೂ, ಯತ್ನಕ್ಕೂ ಮೀರಿದ್ದಲ್ಲ. ಇಂದು ಜಗತ್ತಿನೊಳಗಿನ ಎಲ್ಲ ಜನಾಂಗಗಳ ಜೀವನಕ್ರಮವೂ ಒಂದಾಗಿದೆ. ಒಂದರೊಳಗಿನ ಬೇನೆಯು ಮತ್ತೊಂದನ್ನು ಬಾಧಿಸುತ್ತದೆ. ಎಲ್ಲರೂ ಒಟ್ಟಾಗಿ ವಿಚಾರಿಸಿ ಎಲ್ಲರಿಗೂ ಹಿತವಾಗುವಂತೆ ಮಾಡುವುದು ನಮ್ಮೆಲ್ಲರ ಕರ್ತವ್ಯವಾಗಿದೆ. "ನನ್ನದಷ್ಟೇ ಬಾಳು. ಹೆರವರದು ಹಾಳು" ಎನ್ನುವುದು ಹೆಮ್ಮೆಯ ಹಂಬಲವಲ್ಲದೆ ಬುದ್ಧಿಯ ಲಕ್ಷಣವಲ್ಲ. ಜಗತ್ತನ್ನೇ ಬದಿಗಿಟ್ಟು, ನನ್ನದನ್ನು ಸಾಧಿಸುವುದು ಇಂದಿಗೆ ಸಾಧ್ಯವಿಲ್ಲ. ಕೆಲವು ವೇಳೆ ಅದು ಲಾಭದಾಯಕವಾಗಿ ತೋರಬಹುದು. ಕಡೆಗೆ ಎಲ್ಲರನ್ನೂ ಮತ್ತೆ ಸೇರಲೇಬೇಕಾಗುವುದು. ಈ ಎಲ್ಲ ವಿಷಯಗಳನ್ನು ಚರ್ಚಿಸುವುದರ ಮೊದಲು ಈ ಸಾಂಕೇತಿಕ ಸ್ವರೂಪವಾದ ನಾಣ್ಯವನ್ನು ಕುರಿತು ಕೆಲವು ಸಂಗತಿಗಳನ್ನು ಹೇಳುವೆನು.

ಮೊದಲು ತಮ್ಮ ಜೀವನವನ್ನೂ, ವ್ಯವಹಾರವನ್ನೂ ಅನುಸರಿಸಿ, ನಾಣ್ಯದ ಏರ್ಪಾಡು ಮಾಡಿಕೊಂಡಿದ್ದರು. ಆರಂಭದಲ್ಲಿ ಮನುಷ್ಯನು ಗುಂಪುಗಟ್ಟಿ ಒತ್ತಟ್ಟಿಗೆ ನಿಂತು, ಬೇಟೆಯಾಡಿ ಇಲ್ಲವೆ ಮೀನಹಿಡಿದು ತನ್ನ ಚರಿತಾರ್ಥವನ್ನು ಸಾಗಿಸುತ್ತಿದ್ದನು. ಅಲ್ಲಲ್ಲಿ ದಟ್ಟಡವಿ ಇದ್ದಲ್ಲಿ ನದಿ ಸಮುದ್ರಗಳ ಪ್ರಚಂಡ ಜಲಸಂಚಯದ ತೀರದಲ್ಲಿ ಇಂತಹ ಗುಂಪುಗಳು ನೆಲೆಗೊಂಡಿದ್ದುವು. ಅವುಗಳಲ್ಲಿ ಸಹಕಾರವಿರಲಿಲ್ಲ. ವೈರವು ತುಂಬಿತ್ತು. ಪ್ರತಿಗುಂಪು ತನಗೆ ಬೇಕಾದದ್ದನ್ನು ತಾನೇ ದೊರಕಿ... ಬಲ್ಲದ್ದರಲ್ಲಿಯೇ ಸುಖಿಯಿಸುತ್ತು. ತನ್ನಲ್ಲಿಲ್ಲದುದು ಬೇಕಾದರೆ ಮಾಡುವುದೇನು ? ಅವರಿಗೆ ಒಂದೇ ಉಪಾಯವಿದ್ದಿತು. ನೆರೆಯ ಗುಂಪಿನವರ ಮೇಲೆ ಮುಗಿಬಿದ್ದು—ಸಾಧ್ಯವಿದ್ದರೆ ಹೆಣ್ಣು ಮೊದಲು ಮಾಡಿಕೊಂಡು—ತಮಗೆ ಬೇಕಾದದ್ದನ್ನು ಸುಲಿಗೆ ಮಾಡುವುದು. ಮುಂದೆ ಸಂಸ್ಕೃತಿಯು ಬೆಳೆದಂತೆ, ಈ ಗುಂಪುಗಳ ನಡುವಿನ ವೈರವು ಕಡಿಮೆಯಾಗಿ, ಸ್ನೇಹಭಾವವು ಬೆಳೆದಂತೆ, ಒಪ್ಪಿಗೆಯಿಂದ ಬೇಡವಾದುದನ್ನು ಕೊಟ್ಟು ಬೇಕಾದುದನ್ನು ಬೇಡಿಕೊಳ್ಳುವ ವ್ಯವಹಾರವು ಬೆಳೆಯಿತು. ಇದು ಆಫ್ರಿಕೆಯ ಹಿಂದುಳಿದ ಎಷ್ಟೋ ಜನಾಂಗಗಳಲ್ಲಿ ಇನ್ನೂ ರೂಢಿಯಲ್ಲಿದೆ. ವಸ್ತುಗಳ ವಿನಿಮಯದಿಂದಲೆ ವ್ಯವಹಾರವು ಸಾಗಿದ್ದಿತು. ಪ್ರತಿಯೊಬ್ಬನೂ ಕೊಡುವವ, ತೆಗೆದುಕೊಳ್ಳುವವ. ತನಗೆ ಬೇಕಾದುದನ್ನು ತೆಗೆದುಕೊಳ್ಳುವುದು, ಬೇಡವಾದುದನ್ನು ಎರಡನೆಯವರಿಗೆ ಕೊಡುವುದು. ಈ ಎರಡು ಕಾರ್ಯಗಳನ್ನು ಒಮ್ಮೆಲೆ ಮಾಡುವುದು ತೊಂದರೆಯಾಗಲು ತೊಡಗಿತು. ಇಂದಿನಂತೆ ಹಣದ ಯೋಜನೆಯಿರಲಿಲ್ಲ. ಆದರೆ ತೊಂದರೆಯು ಹೆಚ್ಚಾದಂತೆ ಅದನ್ನು ಹೋಗಿಸಲು ಯಾವುದಾದರೊಂದು, ಸ್ವಾಭಾವಿಕವಾದುದಾಗಿಯೂ ಸರ್ವರಿಗೂ ಉಪಯೋಗವುಳ್ಳದಾಗಿಯೂ ಬಹುಕಾಲ ಬಾಳುವುದಾಗಿಯೂ ಇರುವ ವಸ್ತುವಿನ ಯೋಜನೆಯನ್ನು ಮಾಡಬೇಕಾಯಿತು. ಇದರ ಮೂಲಕ ಅಂದಿನ ವ್ಯವಹಾರವು ಸಾಗಿತು. ಹೀಗಾಗಿ ಬೇಟೆಯಾಡುವ ಜನಾಂಗಗಳಲ್ಲಿ, ವ್ಯವಹಾರಕ್ಕೆ ಪ್ರಾಣಿಗಳ ಚರ್ಮದ ಉಪಯೋಗ ಮಾಡುವ ರೂಢಿಯಿತ್ತು. ರಶಿಯಾದಲ್ಲಿ 'ಪೀಟರ್ ದಿ ಗ್ರೇಟ್'ನ ವರೆಗೂ ತೊಗಲಿನ ನಾಣ್ಯವಿತ್ತು. ರೋಮದಲ್ಲಿಯೂ ಕಾರ್ಥೇಜದಲ್ಲಿಯೂ ತೊಗಲಿನ ನಾಣ್ಯದ ಪ್ರಸ್ತಾಪವೆತ್ತೊಂದು ಉಲ್ಲೇಖವಿದೆ. ಹಿಂದುಸ್ತಾನದಲ್ಲಿ ಮೊಗಲ ಬಾದಶಹನಾದ ಹುಮಾಯೂನನು ಯುದ್ಧದಲ್ಲಿ ಸೋತು ಓಡಿ ಹೋಗುತ್ತಿರುವಾಗ ಗಂಗೆಯ ಪ್ರಚಂಡ ಪ್ರವಾಹವನ್ನು ದಾಟುವುದಕ್ಕೆ ಅವನಿಗೆ ಒಬ್ಬ ಪಕಾಲಿಯವನು ಸಹಾಯ ಮಾಡಿ ಅವನ ಜೀವ ಉಳಿಸಿದನಂತಲೂ, ಮುಂದೆ ಹುಮಾಯೂನನು ಮತ್ತೆ ಯುದ್ಧದಲ್ಲಿ ಗೆದ್ದು ತನ್ನ ರಾಜ್ಯವನ್ನು ಕೈವಶ ಮಾಡಿಕೊಂಡ ಮೇಲೆ ತನ್ನ ಜೀವ ಉಳಿಸಿದ ಪಕಾಲಿಯವನನ್ನು ಮೂರು ಗಳಿಗೆ ... ಅವರ ಸ್ಮರಣೆಗೆಂದು ಅವನನ್ನು

CC-0. Jangamwadi Math Collection. Digitized by eGangotri

ಸಿಂಹಾಸನದ ಮೇಲೆ ಕೂಡ್ರಿಸಲು, ಆ ಪಕಾಲಿಯವನು ಆಷ್ಟೇ ತನ್ನ ರಾಜ್ಯಾಡಳಿತದಲ್ಲಿ ತನ್ನ ತೊಗಲಿನ ಪಕಾಲಿಯನ್ನು ಕತ್ತರಿಸಿ ನಾಣ್ಯದಂತೆ ಅದರ ಉಪಯೋಗ ಮಾಡಿದನೆಂತಲೂ ಇದ್ದ ಸಂಗತಿಯು ಇತಿಹಾಸ ಪ್ರಸಿದ್ಧವಿದೆ. ದನಕರುಗಳನ್ನು ಸಾಕಿ ಅದರಿಂದ ತಮ್ಮ ಚರಿತಾರ್ಥ ಸಾಗಿಸುವ ಜನಾಂಗದಲ್ಲಿ ಅವುಗಳನ್ನು ಧನ ಸಂಚಯವೆಂದೂ, ವ್ಯವಹಾರಕ್ಕನುಕೂಲವೆಂದೂ ಉಪಯೋಗಿಸುವ ರೂಢಿಯುತ್ತು. ರೋಮ್, ಗ್ರೀಸ್, ಮತ್ತು ಇರಾಣದಲ್ಲಿ ಕುರಿ, ಆಕಳು ಮೊದಲಾದುವುಗಳನ್ನು ಈ ರೀತಿಯಾಗಿ ಉಪಯೋಗಿಸುತ್ತಿದ್ದರೆಂದು ಅಲ್ಲಲ್ಲಿ ಆಧಾರವು ಸಿಕ್ಕುತ್ತದೆ. ಹಿಂದುಸ್ತಾನದಲ್ಲಿ ಆರ್ಯರೂ ಕೂಡ ಇದೇ ರೀತಿಯಾಗಿ ತಮ್ಮ ವ್ಯವಹಾರವನ್ನು ಸಾಗಿಸುತ್ತಿದ್ದರೆಂದು ನಮ್ಮಲ್ಲಿಯ ಗ್ರಂಥಗಳಿಂದ ಕಂಡು ಬರುತ್ತದೆ. ಕೃಷಿಕರಲ್ಲಿ ತಾವು ಬೆಳೆಯುವ ಧಾನ್ಯಗಳನ್ನೇ ಹೀಗೆ ಉಪಯೋಗಿಸುತ್ತಿದ್ದರು. ಬೇರೆ ಬೇರೆ ಪರಿಸ್ಥಿತಿಗಳನ್ನು ಅನುಸರಿಸಿ ವ್ಯವಹಾರಕ್ಕನುಕೂಲವಾಗುವ, ಆದರೆ ಎಲ್ಲದರಲ್ಲಿಯೂ ಕೆಲವುವಿಶಿಷ್ಟ ಸಾಮಾನ್ಯ ಲಕ್ಷಣಗಳುಳ್ಳ ವಸ್ತುಗಳ ಶೋಧವೇ ನಾಣ್ಯದ ಪೂರ್ವೇತಿಹಾಸವೆಂದು ಧೈರ್ಯದಿಂದ ಹೇಳಬಹುದು. ಇಂತಹ ವಸ್ತುಗಳ ಸ್ವಾಭಾವಿಕ ಮಹತ್ವವೇ ಈ ಲಕ್ಷಣಗಳಲ್ಲಿ ಮೊದಲನೆಯದು. ಕೃಷಿಕರು ಯಾವುದೆ ಧಾನ್ಯವನ್ನಾಗಲಿ, ಬೇಟೆಗಾರರು ಚರ್ಮಗಳನ್ನಾಗಲಿ, ದನಗಾಹಿಗಳು ದನಗಳನ್ನಾಗಲಿ ವ್ಯವಹಾರದ ಅನುಕೂಲತೆಗಾಗಿ ಕಾದಿಡುತ್ತಿದ್ದರು. ತಮಗೆ ಸಾಕಾಗಿ ಉಳಿದ ವಸ್ತುಗಳನ್ನು ಕೊಟ್ಟು, ತಮಗೆ ಬೇಕಾದಾಗ ಬೇಕಾದ ವಸ್ತುಗಳನ್ನು ತೆಗೆದುಕೊಳ್ಳಲು ಸುಲಭವಾಗಬೇಕೆಂದು ಈ ರೂಪವಾಗಿ ಧನ ಸ್ವರೂಪವನ್ನು ಕಾದಿಡುತ್ತಿದ್ದರು. ನಾಣ್ಯವೆಂದರೆ ಜನರಿಗೆ ಬೇಕಾದಾಗ ಬೇರೆ ಬೇರೆ ವಸ್ತುಗಳನ್ನಾಗಲಿ ಇಲ್ಲವೆ ಕೆಲಸವನ್ನಾಗಲಿ ಕೊಡು ತೆಗೆದುಕೊಳ್ಳುವದಕ್ಕೆ ಅನುಕೂಲ ಮಾಡಿಕೊಡುವ ಧನದ ಸ್ವರೂಪವು. ಇದರಿಂದ ಮನುಷ್ಯನಿಗೆ ತನ್ನಲ್ಲಿಲ್ಲದ ವಸ್ತುಗಳನ್ನು ಕೊಂಡುಕೊಳ್ಳುವ ಬಾಧ್ಯತೆ ಬಂದದ್ದರಿಂದ ನಾಣ್ಯವು ವಿನಿಮಯದ ಸಾಧನವೂ, ಬೇರೆ ಬೇರೆ ವಸ್ತುಗಳನ್ನು ಅದಲುಬದಲು ಮಾಡುವ ಪ್ರಸ್ಥಾಪಿತ ಪ್ರಮಾಣವೂ ಆಯಿತು. ಈ ಪ್ರಾಣಿ ಅಕ್ಷ... ಗಳು ಪ್ರತಿಯೊಂದು ನಾಣ್ಯ ವಸ್ತುವಿನಲ್ಲಿ ಇರಲೇಬೇಕು. ಅಂದರೆ ಅದರ ಉಪಯೋಗ.

ಬೆಳ್ಳಿ ಬಂಗಾರಗಳ ಕುಲಗೋತ್ರಗಳನ್ನು ಶೋಧಿಸುವುದು ನಮಗೆ ಬೇಕಿಲ್ಲ. ಮೊದಲು ಮನುಷ್ಯನಿಗೆ ಅವು ಸಿಕ್ಕಕೂಡಲೆ ಅವುಗಳ ಬಣ್ಣದಿಂದಲೂ ಹೊಳಪಿನಿಂದಲೂ ಅವನ ಮೇಲೆ ಒಂದು ತೆರದ ಪ್ರಭಾವವು ಬಿದ್ದಿತು. ಅವನು ಅವುಗಳನ್ನು ಕಾದಿಡತೊಡಗಿದನು. ಕ್ರಮೇಣವಾಗಿ ಅವುಗಳನ್ನು ನಾಣ್ಯವಸ್ತುವಿನಂತೆ ಉಪಯೋಗಿಸಲು, ಅವುಗಳಲ್ಲಿ ಕೆಲವು ವಿಶಿಷ್ಟ ಲಕ್ಷಣಗಳಿವೆಯೆಂದು ಅವನಿಗೆ ಕಂಡುಬಂದಿತು. ಅವುಗಳಿಗೆ ನಾಣ್ಯಸ್ವರೂಪ ಬರುವುದರ ಮೊದಲು ಅವುಗಳನ್ನು ವ್ಯವಹಾರದ ಅನುಕೂಲತೆಗಾಗಿ ಪ್ರತಿವ್ಯವಹಾರಕ್ಕೂ ಪ್ರಮಾಣದಿಂದ ತೂಗಿ ಕೊಡುತ್ತಿದ್ದರು. ಮುಂದೆ ಅನುಭವವು ಬೆಳೆದಂತೆ ಅವುಗಳಿಗೆ ಬೇರೆ ಬೇರೆ ನಿಶ್ಚಿತ ಸ್ವರೂಪಗಳನ್ನು ಕೊಟ್ಟು ಉಪಯೋಗಿಸತೊಡಗಿದರು. ನಾಣ್ಯವು ಮೊದಲು ಗ್ರೀಸದಲ್ಲಿ ಉಪಯೋಗದಲ್ಲಿತ್ತೆಂದು ತಜ್ಞರು ಹೇಳುವರು. ಕ್ರಿ. ಪೂ. ೮೯೫ರಲ್ಲಿ ಎಜಿನಾ ದ್ವೀಪದಲ್ಲಿ ಆರ್ಗೋಸದ ಅರಸನು ಬೆಳ್ಳಿಯ ನಾಣ್ಯಗಳನ್ನು ಮಾಡಿದನೆಂದು ದಂತಕಥೆಯಿದೆ. ಹಿಂದುಸ್ಥಾನದಲ್ಲಿ ಕ್ರಿ. ಪೂ. ೭೮೦ರಲ್ಲಿ ನಾಣ್ಯವಿತ್ತೆಂದು ಉಲ್ಲೇಖವಿದೆ.

ಅನುಭವವು ಬೆಳೆದಂತೆ ಮನುಷ್ಯನು ಇವುಗಳನ್ನು ತೆಗೆದು ವ್ಯವಹಾರಕ್ಕೆ ಹೆಚ್ಚು ಅನುಕೂಲತೆಯಾಗಬೇಕೆಂದೂ, ಒಂದು ಊರಿಂದ ಮತ್ತೊಂದು ಊರಿಗೆ ಕಳುಹಿಸಲಿಕ್ಕೆ ಶ್ರಮವಾಗಬಾರದೆಂದೂ, ಅಪಾರಧನಸಂಚಯವನ್ನು ಸ್ವಲ್ಪದರಲ್ಲಿಯೆ ಉಪಯೋಗಿಸಲು ಶಕ್ಯವಾಗಬೇಕೆಂದೂ ಮುಂದೆ ಇಂತಹ ನಾಣ್ಯಗಳು ಬದಲು ನಾಣ್ಯಸ್ವರೂಪಗಳನ್ನು ತೆಗೆದನು. ಇಂತಹ ಸ್ವರೂಪಗಳ ಪೂರ್ವಪ್ರಕಾರವೆಂದರೆ ನಮ್ಮಲ್ಲಿ ವ್ಯವಹಾರದಲ್ಲಿದ್ದ ಹುಂಡಿಗಳೆಂದು ಹೇಳಬಹುದು. ಮುಂದೆ ರಾಷ್ಟ್ರಗಳು ಬಲಿತು, ರಾಜ್ಯಪದ್ಧತಿಯು ಬೆಳೆದು, ಸಂಸ್ಕೃತಿಯು ಬೆಳೆದಂತೆ ವ್ಯವಹಾರವು ಹೆಚ್ಚು ಹೆಚ್ಚು ವಿಸ್ತೀರ್ಣವಾಗಲು ತಮ್ಮ ಅನುಕೂಲತೆಗಳಿಗನುಸರಿಸಿ ಆಯಾರಾಷ್ಟ್ರಗಳು ತಮ್ಮ ತಮ್ಮ ಸರಕಾರಗಳಮೂಲಕ ತಮ್ಮ ಅಧಿಕಾರದೊಳಗೆ ಕಾಗದವನ್ನು ನಾಣ್ಯಸ್ವರೂಪವೆಂದು ಉಪಯೋಗಿಸತೊಡಗಿದುವು. ಇಂದಿನ ಸರಕಾರದ ನೋಟುಗಳೇ ನಾಣ್ಯ– ವಸ್ತುವಿನ ಇತಿಹಾಸದ ಇಂದಿನ ನಾಣ್ಯಸ್ವರೂಪವೆಂದು ಹೇಳಬಹುದು.

CC-0. Jangamwadi Math Collection. Digitized by eGangotri




ಸಂಗ್ರಾಹಕರು:— ಸಿಂಪೀ ಲಿಂಗಣ್ಣ

## ಬಸರಿದ್ದೀನ್ಹೆಸರಿನ್ನ ಏನಿಡೂನು ?

ಸತಿಪತಿ ಕೂಡಿ ಜೋಡಿ ಹಿತದಿಂದ ಮಲಗಿದಾಗs
'ಗೊತ್ತ ಮಾಡಿ ಹೇಳ್ಗಂಡಾ ಹ್ಯಾಂಗ್ಮಾಡೂನು ।
ನಿನ್ಮುಂದs ಮಾತೊಂದುs ಬಿಚ್ಮುಚ್ಚೀ ಹೇಳ್ತೀನು
ಬಸರಿದ್ದೀನ್ಹೆಸರಿನ್ನ ಏನಿಡೂನು' ॥ ಪಲ್ಲ ॥
ಗಂಡ ಹಿಗ್ಗಿ ನಕ್ಕ ನಗಿ 'ಸುಳ್ಳ ತಗಿ ಗಾಳಮಾತ
ನನ್ಮುಂದ ಹೇಳಬ್ಯಾಡ ಇಂಥಾ ಹೊಯ್ಕಾ'।
'ಓಶಿವನೆ ಎಂತಾ ಮಾತು ತಿಂಗಳ ಮ್ಯಾಲಬಂದಿನಾಯ್ತ
ಮಂದೀಹಾಂಗ ಹೇಳಾಕೆಲ್ಲಾ ನಾ ಸುಮ್ಮಕ' ॥
'ಕುರುಬರಂಥ ಅರಬರಂಡೀ ಜರ್ಬದಿಂದ ಬೇದ್ಹೇಳ್ತೀನು
ಅರ್ಜಿ ಸಾಹಿತ್ಮಾಡ ಕೂಸಿಗಿ ಮೆತ್ತಗ್ಹಾಸುದಕ ।
ಕೆಟ್ಟ ತೊಟ್ಲಾ ಕಟ್ಟಾವಲ್ಲಾ ನಿತ್ತ ತೂಗು ಆಳುವಾಗ
ಬಿಟ್ಟುಹೊರಗಹೋದರೊದ್ದು ಮುರ್ದಿನ ಸೊಣಕಾ'॥
ಖುಷಿಯಿಂದಕೂತುಕೊಂಡು ಹೇಣ್ತೀಮುಂದ
ಹೇಳ್ತಾನ
'ಮಕ್ಕಳ ಮಾರಿ ಇದ್ದಿದ್ದಿಲ್ಲ ಇಂದಿನತನಕಾ ।
ಇನ್ನ ಮಾತ್ರ ದೇವ್ರು ಕೊಟ್ಟ ಸಂಶಯಿಲ್ಲ ಎಳ್ಳಷ್ಟು
ನೆಂಟತಾನ ಮಾಡಬೇಕ ನಮ್ಮ ತಕ್ಕಾ' ॥

(ಇಳುವು)

ಹೆಣತ್ಹೇಳತಾಳ 'ಓಡ್ಯಾಡಿ ।
ಹೆಣ್ಣ ನೋಡಿ ಬಾರೊ ತಿರುಗಾಡಿ ॥
ಮುಚ್ಚಿ ಹುಚ್ಚನಂಥವ ನೀ ಖೋಡಿ ।
ಕೋರಿ ಹರಕರ ನೆಂಟತನ ಮಾಡಿಗೀಡಿ ॥
ಅಳಿಯಗ ಹಾಕಬೇಕು ಕಡಿತೋಡಿ ।
ಸೀರಿ ಕುಬಸ ನಿನಗ ಧೋತ್ರ ಜೋಡಿ ॥

(ಏರು)

ಯಾತರಾಗೇನೂ ಇಲ್ಲ ಖಾತ್ರೀ ಮಾತ್ರ ಬೀಗರುಬೇಕು
ರಾತ್ರೀಹಗಲು ಕೂಡಿ ನಾವ್ರ ಮದವೀ ಮಾಡೂನು
ನಿನ್ಮುಂದ ಮಾತೊಂದು ಬಿಚ್ಮುಚ್ಚಿ ಹೇಳ್ತೀನು
ಬಸರಿದ್ದೀನ್ಹೆಸರಿನ್ನ ಏನಿಡೂನು ॥ ೧ ॥
'ಅಬ್ರುಗೇಡಿ ರಂಡಿ ನೀನು ಖಬರ್ಹಾರಿ ಮಾತಾಡಬೇಡ
ಇಬ್ರು ಕಾರಭಾರ ಮಾಡಿದ್ರ ಮನಿ ಸಾಗಿತಹ್ಯಾಂಗ'।
'ಒಂದುಬೇಕು ಒಂದಿಲ್ಲ ! ಇಂದ ಹಡದ್ರ ಮನಿಯಾಗ
ಸೂಲಗಿತ್ತಿ ಶೋಧ ಮಾಡs ಮುಂಚೆ ಹೋಗ'॥
'ಚೊಚ್ಚಿಲ ಮಗ ಹುಟ್ಟಿದರ ಗಚ್ಚಿಲೆ ಒಚ್ಚಲ ಮುಚ್ಚ
ಬೇಕs
ಹುಚ್ಚಿಯೇನು ! ಕೂಸೀಗ್ನೀರಾ ಹನ್ನೂಸ್ಥ್ಯಾಂಗ'।
'ಕೊಡ ಹರವಿ ಇಡೂ ಜಾಗ ಸನಿದಾಗ ಮಾಡಬೇಕ
ಉಳ್ಳದ್ಹಾಂಗs ಸುರಕೀಸುತ್ತಿ ಸಿಂಪೀ ಇಡಬೇಕ'।
'ಸಣ್ಣ ಸೂಳಿನ ಎಣ್ಣೀಆರಬಿ ತಣ್ಣಗಾದರ ಕಡದಾಡೀನು
ಸುಣ್ಣಗೊಲಿಸಿ ಕೂಸಿನ ಪ್ಯೈಯು ಚೊಕ್ಕ ಇಡಬೇಕ
ಖುಷಿಯಿಂದ ಕೂತುಕೊಂಡು ಆಕ್ಕರ್ತಿ ಒಂದು ಎತ್ತಿ
ಕೊಂಡು
ಹೌಸದಿಂದಮುದ್ದುಕೊಟ್ಟು ಜೋಗುಳ ಪಾಡಬೇಕ'।

(ಇಳುವು)

'ತೊಟ್ಲ ಕಟ್ಟುವ ಜಾಗ ವೈನಿಲ್ಲಾ ।
ಪಡಸಲಿಗೆ ಕುಲಾಬಿ ವಂಕಿಲ್ಲಾ' ॥
'ರೊಕ್ಕ ಕೊಟ್ಟsದ ಕಂಬಾರ್ಗ ಹಾಸಿಲಾ ।
ವ್ಯಾಳ್ಯಾಕ ಮಾಡಿ ಕುಡವೊಲ್ಲಾ ॥
ರೊಕ್ಕ ಹೋದ್ರು ಹರಕತ್ತ ಇಲ್ಲಾ ।
ಸಂತಿಗ್ಹೋಗಿ ತರ್ತೀನು ನಿವಾರ್ಹಿಲ್ಲಾ' ॥

CC-0. Jangamwadi Math Collection. Digitized by eGangotri

(ಏರು)

ತಿಂಗಳ ಬಸರಾ ಕೇಳಿಕೊಂಡು ಗುಂಗ ಭಾಳ ಸೇರೇದವ್ವ
ಮುಂಗಸ್ವಾಂಗ ಮಾಡತ್ತಾನ ಮಾಡಲಿನ್ನೇನು ॥
ನಿಮ್ಮುಂದ ಮಾತೊಂದು ಬಿಚ್ಚುಬಿಚ್ಚಿ ಹೇಳ್ತೇನು
ಬಸರಿದ್ದೀನ್ನೆಸರಿನ್ನ ಏನಿಷೂನು ॥ ೨ ॥
'ಏಸ್ಟಿನಾ ನೋಡಿದರ ಧ್ಯಾಸಽದಾನ ಕೂಸಿನ ಮ್ಯಾಲ
ಆಶಾ ಇಲ್ಲ ನನ್ನ ಮ್ಯಾಽ ಪುನಃ ಪುರುಷಾ ।
ನೆರಿಹೊರಿ ಓಣಿಓಣಿ ಫೇರಿ ಹಾಕಿ ನೋಡಿಬಾರ
ಧೀರೆ ಆಗ್ತಾದ ತಂದು ಇಡು ಹೊರಸಾ ॥
ಇಂದು ನಿಂತು ಸಂತಿಗ್ಹೋಗಿ ಮಾಹಿತ್ಮಾಡಿ ಸಾಹಿ-
ತ್ತೋಗೋ
ಬೆಲ್ಲ ಆಕ್ಕಿ ಲಕ್ಕಚಕ್ಕ ಎಲಿಕಾಚಾ ।
ಕಾಶೀಬ್ಕೊಬ್ರಿ ಆರಿಸಿ ತಗೋ ಘೋರಾದ್ರ ಪೂರೈಸೀತು
ಬ್ಯಾರೇ ಒಂದು ಪುಡಿ ಕಟ್ಟಬೇಕು ಬತ್ತಾಸಾ ॥
ಅಡಕಲಗಡಿಗಿ ಎಲ್ಲಾ ಇಳುವಿ ಹುಡ್ಕಿ ತಗಿ ಒಡಕಗಡಿಗಿ
ಬುಡಕಿಷೂ ಆಗಟಗೀಗಿ ಆದೀತಾಯಾಸಾ ।
ಕುಳ್ಳ ನೋಡಿಕೊಂಡು ತಗೊ ಪಳ್ಳಾದ್ರ ಪಾಡಲ್ಲ
ಮಳ್ಳನಾಂಗ ಮಾಡಬೇಡ ಎಂಥಾ ಗಂಡಸಾ ॥

(ಇಳುವು)

ಕಣ್ಣಿನೊಳಗ ಹಚ್ಚುವ ಕಾಡಿಗಿ
ಹಿಡದಿಡಬೇಕಂತ ಮುಂಚಾಗಿ ॥
ನೆರೆ ಮನಿಗೆ ಹೋಗಿದ್ದ ಸಿಂಪೀಗಿ ।
ಕಾಡಿಗಿ ಹಿಡಿದು ಕಟ್ಲಾಕ ಹೊರಸಿಗಿ ॥
ಅವಸರಕ ಬರಬೇಕ ಶಾಂವಿಗಿ ।
ತುಪ್ಪಽದರ ಮ್ಯಾಗ ಒಂದು ಮಗಿ ॥

(ಏರು)

'ಹಿಂದ್ಮುಂದ ಅಣ್ತಮ್ಮರು ಬಂದುಬಳಗ ಯಾರಿಲ್ಲ
ಹೇಳಬೇಕ ನನ್ನ ಗೆಣತೀಗಿ ಬಾಣ್ತೀ ಸಾಮಾನು ।
ನಿಮ್ಮುಂದ ಮಾತೊಂದು ಬಿಚ್ಚುಬಿಚ್ಚಿ ಹೇಳ್ತೇನು
ಬಸರಿದ್ದೀನ್ನೆಸರಿನ್ನ ಏನಿಷೂನು ॥ ೩ ॥
'ಮತ್ತ ಬೇಕ ಸುತ್ತಗೆಜ್ಜಿ ಹತ್ತು ಕೊಟ್ಟರಾಗತಾವ
ಅತ್ತಿ ಹತ್ತರಿಟ್ಟಿದೇನ ಇಪ್ಪತ್ತ ।
ಉಡದಾರ ಉಣ್ಣೀಕಡಿ ಬಂಗಾರ ಪುತಳಿ ಸರ
ಮತ್ತೇನು ಬೇಕ್ಕೇಳಽ ಇದರೊಟ್ಟಿರ್ತ' ॥
'ಅಡದಂಡಿಗಳ್ಳೊಳ್ಳಿ ಜುಲುಪಿಹುವ್ವಾ ಹಲಪಿಗುಳ್ಳಾ
ಸ್ವಲ್ಪ ಕಡಿಮ್ಯಾದರಿಲ್ಲ ಸನ್ಮತ್ತಾ ।
ಮಣಿಗಾರ ಮನಿಘೋಗಿ ಎಣಿಮಣಿ ತಗೊಂಬಾ
ಸರಗಿ ಮುರಗಿ ಸಣ್ಣ ತಾಯಿತಾ' ॥

(ಇಳುವು)

'ಕೂಸಿಗ್ಹಾಲ ಹಾಕುವ ಥಾಲಿ ಮಳ್ಳಿ
ಸಣ್ಣಬಟ್ಟಲದಾಗ ಮಗಾ ಉಳ್ಳಿ' ॥
'ತವರ ಮನಿದು ತರಹೋಗ ಮಳ್ಳಿ ।
ಆಯಿ ಮುತ್ಯಾಂದು ಮಗ. ಹೆಸರ್ಹೇಳ್ಳಿ' ॥
ಆಕೀ ಸುತ್ತ ನಡಿಸಿದಾನ ಹೋಳಿ ।
ಅಂದಿಗಿಂದಿಗಿ ಲಗೂ ಹೋಗಽನಾಳಿ

(ಏರು)

ಹಡಿಯಂ ದಿನಾ ಸನಿ ಬಂತು ಎಂಟಽ ತಿಂಗಳ ಮುಂದು
ಳೀತು
'ಕೆಟ್ಟಗಿಟ್ಟ ಹಡೆದೀ ನಿನ್ನ ಚಟ್ಟಾ ಎತ್ತೀನು' ।
'ನಿಮ್ಮುಂದ ಮಾತೊಂದು ಬಿಚ್ಚುಬಿಚ್ಚಿ ಹೇಳ್ತೇನು
ಬಸರಿದ್ದೀನ್ನೆಸರಿನ್ನ ಏನಿಷೂನು' ॥ ೪ ॥
ಜೋಡ್ಣಿ ಎಲ್ಲಾ ಕೂಡ್ಸೂದ್ರೊಳಗ ದೀಡ್ತಿಂಗಳಾಯಿ
ತಪ್ಪಾ
ತಡದು ಹೊರಗ ಆದಳಲ್ಲಿಂದ ।
ಗಂಡನ ಮುಂದ ಹೇಳ್ತಾಳ ಸನಿಯಾಕ ಬರಗೊಡವೊಳ್ಳು
'ಇದು ಇಲ್ಲಿ ಕೇಳು ನನ್ನ ಮಾತೊಂದ' ॥
ಹೆಣ್ಣ ಮಗಳು ಹುಟ್ಟಿದರ ಬಣ್ಣದ ಬನಿಕಿ ಸಣ್ಣದು ಬೇಕು
ಗುಳ್ಳಪಿಲ್ಲೆ ಹೇಳಿಬಾರಽಹೋಗಿ ಇಂದ'।
'ಹೆಣ್ಣ ಒಯ್ದುಕ್ಯಾರ ಮಣ್ಣಾಗ್ಹಾಕು ನೀನೂ ಹೋದರ
ಹರಕತ್ತಿಲ್ಲ, ಉಳ್ಳಾಸ್ಯಡಿ ಹೊಡ್ದಾನ ಅಲ್ಲಿಂದ ।
ಕಡದಾಡಿ ಬಡದಾಡಿ ಗಂಡ ಹರ್ಯಾಗೆದ್ದು
ಅಡವಿಗೆ ಹೋಗ್ಯಾನ ಹೋರೇಕ ।
ಹೋರೆ ಮಾಡಿ ಬರೂದರೊಳಗ ನೀರ್‌ಬೂದಿ ತೊಯ್ಸಿಟ್ಟು
ಹೊಲಿಯ ತಗ್ಯಾಳಪ್ಪಾ ಎಲ್ಲಾ ಪಾಕ ॥

(ಇಳುವು)

'ನೀ ನನ್ನ ಬಡಿಯ ಬಾರದಿತ್ತು ।
ಕೂಸಿಗೆ ಪೆಟ್ಟು ಪೂರೈಸ್ತು ॥
ಹೆಣ್ಣಲ್ಲ ಗಂಡು ಹುಟ್ಟಿತ್ತು ।
ಥೇಟ ಹೋಲಿಕಿ ನಿನ್ಹಾಂಗ ಇತ್ತು ॥
ಗಂಡ ಅಳ್ತಾನ ಭೋರಾಡಿ ಕುಂತು ।
'ಮೊದಲೆ ದೇವರು ಕುಡಬಾರದಿತ್ತು' ॥

(ಏರು)

ಜನವಾಡದೂರಾ ನೆನೆದಾನ ಪೀರಾ
ನಾನಾಸಾಬ ಮಾಡ್ಯಾನ ಕವಿ ಇದನು ॥
ನಿಮ್ಮುಂದ ಮಾತೊಂದು ಬಿಚ್ಚುಬಿಚ್ಚಿ ಹೇಳ್ತೇನು
ಬಸರಿದ್ದೀನ್ನೆಸರಿನ್ನ ಏನಿಷೂನು ॥ ೫ ॥

CC-0. Jangamwadi Math Collection. Digitized by eGangotri




'ಧರ್ಮಸಂಭವ'*(೭):— ಶ್ರೀನಿವಾಸ್ ತಾರಾನಾಥರಾಯರ ಅನೇಕಾನೇಕ ಉಪನ್ಯಾಸಗಳನ್ನು ಕೇಳಿದವರಿಗೆ ಅವರ ಹಲಕೆಲವು ಬಿಡಿ ಬರೆಹಗಳನ್ನು ಓದಿದವರಿಗೆ ಅವರ ವಿಚಾರಗಳನ್ನು ಗ್ರಂಥರೂಪವಾಗಿ ಕಾಣುವ ಕುತೂಹಲವಿತ್ತು. ಅದು ಅಂಶಮಾತ್ರವಾಗಿ ಈ ಪುಸ್ತಕದಿಂದ ಸಫಲವಾಗಿದೆ. ಅವರ ವ್ಯಕ್ತಿತ್ವದಂತೆ ಅವರ ವಿಚಾರದಲ್ಲಿಯೂ, ಅಸಾಧಾರಣವಾದ ಆಕರ್ಷಕದಂತೆ ವಿಕರ್ಷಕ ಶಕ್ತಿಯೂ ಇದೆ. ಕೆಲವರಿಗೆ ಅವರು ಬರೆದುದೆಲ್ಲ ಬಂಗಾರ; ಆಡಿದುದೆಲ್ಲ ಆಣಿಮುತ್ತು. ಬೇರೆ ಕೆಲವರಿಗೆ ಅವರು ಬರೆದುದೆಲ್ಲ ಬರಷಣ, ಆಡಿದುದೆಲ್ಲ ಆಗದು. ಇದಕ್ಕೆ ಅವರ ವಿಚಾರದ ಜಾತಿ ಮತ್ತು ವ್ಯಕ್ತಿತ್ವವೇ ಕಾರಣವೆಂದು ಹೇಳಬಹುದಾದರೂ ಜನರ ಅವಿವೇಕವೂ ಎಷ್ಟೋ ಮಟ್ಟಿಗೆ ಕಾರಣವಿದೆ. 'ಧರ್ಮಸಂಭವ'ವೂ ಅಂತಹ ಅಭಿಪ್ರಾಯಗಳಿಗೆ ಈಡಾಗುವಂತಿದೆ. ಈ ಪುಸ್ತಕದಲ್ಲಿ ಅಲ್ಲಲ್ಲಿ ಬರುವ ಅರೆಗಡಕ ವಾಕ್ಯರಚನೆಯು, ದುರ್ಬೋಧ ಪಾರಿಭಾಷಿಕ ಶಬ್ದಗಳು, ಅಸಾಧುಶಬ್ದಪ್ರಯೋಗಗಳು, ಕೆಳಟಿಪ್ಪಣಿ (Foot notes) ಗಳ ತಿರುಗುಮುರುಗು, ಅರ್ಥಸಂಶಯವನ್ನುಂಟು ಮಾಡುವ ಹತ್ತೆಂಟು ಅಚ್ಚಿನ ದೋಷಗಳು, ವೃತ್ತಗಂಧಿಯಾದ ಪ್ರಾಸಬದ್ಧ ವಚನಗಳ ಸುಳಿದಾಟವು– ವಿಮರ್ಶೆಯ ವಿಷಯಗಳಾಗಲಾರವು. ಪುಸ್ತಕವು ವಿಚಾರಪ್ರಚೋದಕವಾಗಿರುವದರಿಂದ ವಿಚಾರದ ರೀತಿ ಜಾತಿಗಳ ವಿಮರ್ಶೆಯೆ ಇಲ್ಲಿ ಅಗತ್ಯ.

'ನವಜೀವನ ಗ್ರಂಥಭಾಂಡಾರ'ದ ಸಂಪಾದಕರು ಶ್ರೀನಿವಾಸ ಆಲೂರರವರು ಶ್ರೀ. ತಾರಾನಾಥರಾಯ... 'ಹೊಸ ವಿಚಾರಗಳ ಸಮರ್ಥವಂತ (?) ಪ್ರತಿನಿಧಿಗ...' ಎಂದೂ ಅವರ ಈ ಪುಸ್ತಕದಲ್ಲಿ 'ಹಳೆಯ ಧರ್ಮಾ... ಮಾನಿಗಳ....... ಮೇಲಿನ ಪರಮಾವಧಿ ಆಕ್ಷೇಪಗಳ... ವೆಂಬುದನ್ನು' ಹೇಳಲಾಗಿದೆಯೆಂದೂ ತಿಳಿಸಿರುವರು. ಶ್ರೀ ತಾರಾನಾಥರಾಯರು ತಮ್ಮ ಪ್ರಸ್ತಾವನೆಯಲ್ಲಿ 'ವ್ಯಕ್ತಿಗಳ ವಿಷಯವಲ್ಲವಿದು. ಇದು ವೃತ್ತಿಗಳ ವಿಷಯ.' 'ಧ್ಯೇಯವು ಮಾತ್ರ ವಿಷಯವನ್ನು ಚರ್ಚಿಸುವದೆ ಹೊರತು ವ್ಯಕ್ತಿಗಳನ್ನು ತಕ್ಕಡಿಗೇರಿಸುವದಲ್ಲ' ಎಂದೂ 'ಪುಸ್ತಕದ ಉದ್ದೇಶವು ಪ್ರಬೋಧಕವಲ್ಲ, ಪ್ರಚೋದಕ ಮಾತ್ರವೇ' ಎಂದೂ ಹೇಳಿದ್ದಾರೆ. ಪುಸ್ತಕದಲ್ಲಿ ಎರಡು ಭಾಗಗಳನ್ನು ಮಾಡಬಹುದು. ಮೊದಲಿನ ನೂರಾಹತ್ತು (೧೧೦) ಪುಟಗಳಲ್ಲಿ ಹಳೆಯ ಧರ್ಮದ ದೋಷಾವಿಷ್ಕರಣ. ಕೊನೆಯ ಹತ್ತು ಪುಟಗಳಲ್ಲಿ ಹೊಸ ಧರ್ಮದ ಹೊಳವು. ಮೊದಲಿನ ಪುಟಗಳಲ್ಲಿಯೂ ಅಲ್ಲಲ್ಲಿ ಅಲ್ಪಸ್ವಲ್ಪವಾಗಿ ಕೊನೆಯ ಮಾತಿನ ಸೂಚನೆಗಳೂ ಬಂದಿವೆ. ಆದರೂ ಈ ಪ್ರಮಾಣದ ವಿಪರೀತತೆಯು ಒಂದಿಷ್ಟು ವಿಪರೀತವಾಗಿದೆ. ಹಳೆಯ ಧರ್ಮವು ಶತಕಾನುಶತಕ ವಾಗಿಯೂ, ಶಾಖೋಪಶಾಖೆಯಾಗಿಯೂ, ಬಹುರೂಪ ವಾಗಿಯೂ ಒಂದಿರುವದರಿಂದ ಅದರ ನಿರಾಕರಣಕ್ಕೆ ನೂರಾಹತ್ತು ಪುಟಗಳೂ ಕಡಿಮೆ; ಹೊಸದು ತಲೆಯೆತ್ತಿ...

* ಇದು ನಮ್ಮ ಸಾದರ ಸ್ವೀಕಾರದ ಕ್ರಮಾಂಕವು. ಅನೇಕ ಜನರು 'ಸಾಹಿತ್ಯಲೋಕದಲ್ಲಿ ನೀವು ಪರಿಚಯ ಮಾಡಿಕೊಡುತ್ತಿರುವ ಗ್ರಂಥಗಳು ಎಲ್ಲಿ ಸಿಕ್ಕುತ್ತವೆಂಬುದನ್ನೂ ಅವುಗಳ ಪುಟಸಂಖ್ಯೆ ಬೆಲೆಗಳನ್ನೂ ಸ್ಪಷ್ಟವಾಗಿ ತಿಳಿಸಬೇಕು.' ಎಂದು ಆಗಾಗ ಕಾಗದ ಬರೆಯುತ್ತಿರುವರು. ಅದಕ್ಕಾಗಿಯೆ ನಾವು ಸಾದರ ಸ್ವೀಕಾರದಲ್ಲಿ ಆಯಾ ಪುಸ್ತಕಗಳ ಬಾಹ್ಯಾಂಗ ವಿಚಾರವನ್ನು ಸ್ಪಷ್ಟೀಕರಿಸುತ್ತಿರುತ್ತೇವೆ. ಅಗತ್ಯವಿದ್ದವರು ಅಲ್ಲಿ ನೋಡಿಕೊಳ್ಳಬೇಕು.

CC-0. Jangamwadi Math Collection. Digitized by eGangotri

ಎತ್ತಿಲ್ಲ, ಇದಕ್ಕೆ ಹತ್ತು ಪುಟಗಳೂ ಸಾಕು; ಎಂದೆನ್ನಬಹುದಾದರೂ 'ಧರ್ಮಸಂಭವ' ಅಥವಾ 'ಧರ್ಮದ ಮೂಲ ತತ್ತ್ವಗಳು' ಎಂಬ ಪುಸ್ತಕದಲ್ಲಿ ನಿಜವಾದ ಧರ್ಮದ ವರ್ಣನೆಗೆ ಹೆಚ್ಚು ಅವಕಾಶವಿರಬೇಕು, ಅದರ ಆಭಾಸದ ಭಾರತವು ಅದಾಗಬಾರದು. ಹಳೆಯದು ಧರ್ಮದ ಆಭಾಸವಾಗಿರುವದರಿಂದ ಅದರ ಖಂಡನೆಯನ್ನು ಉತ್ತರ ಕ್ರಿಯೆಯಂತೆ ಪ್ರಥಮಾಧ್ಯಾಯದಲ್ಲಿ ಮುಗಿಸಿಬಿಡಬಹುದಾಗಿತ್ತು. ನಿಜವಾದ ಧರ್ಮದ ಮೂಲ ತತ್ತ್ವಗಳು, ಸಮಗ್ರ ಜೀವನವನ್ನು ಅವುಗಳಿಗೆ ಸರಿಯಾಗಿ ನಡೆಯಿಸಿದ ಧರ್ಮಾವತಾರಿಗಳ ಚಾರಿತ್ರ್ಯವಿವರಣೆ, ಇಂತಹ ಸಮಾಜ, ಜನಾಂಗ, ರಾಷ್ಟ್ರಗಳು ಇದ್ದರೆ ಅವುಗಳ ರೀತಿನೀತಿಗಳು, ಎಲ್ಲರನ್ನೂ ಈ ನಿಜವಾದ ಧರ್ಮಮಾರ್ಗಕ್ಕೆ ಒಲಿಸಿ ತರುವ ಹಿತವಾದ ಮಾರ್ಗಗಳು, ಇವೇ ಮೊದಲಾದ ವಿಷಯಗಳನ್ನು ಕುರಿತು ಇಲ್ಲಿ ಬರೆಯಬಹುದಾಗಿತ್ತು. ಆದರೇನು?

ರಾಯರು ಧರ್ಮದಲ್ಲಿ ವಿಶ್ವಾಸವುಳ್ಳವರು, ದೇವನಲ್ಲಿ ನಂಬಿಗೆಯುಳ್ಳವರು. ಅವರು ಟೀಕಿಸುವದು ಧರ್ಮಗಳನ್ನು-ಮತಪಂಥಗಳನ್ನು; ಅವರು ಹಿಂದುಗಳಾಗಿದ್ದುದರಿಂದ ಮಾದರಿಗಾಗಿ ಹಿಂದೂ ಧರ್ಮವನ್ನು ಟೀಕಿಸಿದ್ದಾರೆ. ಇದೇ ಪಡಿಯಚ್ಚನ್ನಿಟ್ಟು ಉದಾಹರಣೆಗಳನ್ನಷ್ಟೆ ಬದಲಾಯಿಸಿ ಬೇಕಾದ ಮತದ ಟೀಕೆಯೆಂದು ಈ ಪುಸ್ತಕವನ್ನು ಪ್ರಕಟಿಸಬಹುದು. ಈ ಅಭಿಪ್ರಾಯವನ್ನು ಅವರೇ ಅಲ್ಲಲ್ಲಿ ಸೂಚಿಸಿದ್ದಾರೆ. ರಾಯರು ಸನಾತನ ಧರ್ಮಾಭಿಮಾನಿಗಳಾಗಿದ್ದಾರೆ. (ಪುಟ ೩೨-೩೩, ೧೧೨, ೧೨೦). 'ಆಯಾಯುಗಕ್ಕೆ ಆಯಾ ನೀತಿ ರೀತಿಗಳು ಯೋಗ್ಯವಾಗಿರಬಹುದು' 'ಅವರ (ಹಿಂದಿನ ಹಿರಿಯರ) ಸಮುದ್ದಿಶ್ಯದ ವಿಷಯವಾಗಿ ಪ್ರಶ್ನೆಯೇ ಇಲ್ಲ.' 'ಇಹಪರಗಳನ್ನು ಬಿಚ್ಚಿಟ್ಟ ಸಜ್ಞಾನ ಧರ್ಮವೂ ನಮ್ಮಲ್ಲೇ ಹುಟ್ಟಿ ಅನುಯಾಯಿಗಳನ್ನು (?) ಕಾದಿದೆ' ಈ ರೀತಿಯಾಗಿ ಹೇಳುವವರು ಧರ್ಮಲಂಡರೇನೂ ಅಲ್ಲ. ತತ್ತ್ವಕ್ಕೆ ಸರಿಯಾದ ಆಚಾರಕ್ಕಿಂತ, ಆಚಾರಕ್ಕೆ ಸರಿಯಾದ ತತ್ತ್ವಗಳನ್ನು ಹುಡುಕಾಡುವ ಅನುಕೂಲ ಸಿಂಧುವಿನ ಸುಧಾರಕರಲ್ಲ. ಹಾಗಾದರೆ ಅವರ ಅಸಮಾಧಾನವೆಲ್ಲಿದೆ!

ಈಗಿನ ಮತಪಂಥಗಳು ಇದ್ದಂತೆಯೆ ಉಳಿಯಲು ಪ್ರಯತ್ನಿಸಿ, ಬೆಳೆಯದಿದ್ದುದರಿಂದ ಹಾಳಾಗುತ್ತಲಿವೆ. 'ಬೆಳೆಯುವದೇ ಉಳಿಯುವ ಉಪಾಯ' ಬೆಳೆಯುವದೆಂದರೆ ಬದಲಾಗುವದು. ಕಾರಣ ಗೊತ್ತಿಲ್ಲದೆ ಬದಲಾಗುವದು ಸರಿಯಲ್ಲ. ಧರ್ಮಾಜ್ಞೆಗಳ ಕಾರಣ ಮೀಮಾಂಸೆಯನ್ನು ಮಾಡುವದು ಮತಪಂಥದವರಿಗೆ ಬೇಡವಾಗಿದೆ. ಕಾರಣವಾದಿಗಳು, ಹೇತುವಾದಿಗಳು, ವ್ಯುತ್ಪತ್ತಿವಾದಿಗಳು, ಇವರೇ ನಿಜವಾದ ಧರ್ಮಶೋಧಕರು. ಮತಪಂಥದವರ ಅಭಿಪ್ರಾಯದಲ್ಲಿ ಅವರು ಧರ್ಮವಣಿಕ್ಕರು, ಫಲಾಪೇಕ್ಷೆಯಿಂದ ಧರ್ಮ ಮಾಡತಕ್ಕವರು. ಕಾರಣ ಮೀಮಾಂಸೆಯನ್ನು ಮಾಡಿದ್ದೇ ಆದರೆ ಪೂರ್ವದ ವಿಧಿನಿಷೇಧಗಳನ್ನು ಎತ್ತಿ ಹಿಡಿಯಲು ಮಾಡಬೇಕು. ಈ ಮಾರ್ಗದಿಂದ ಎಷ್ಟೋ ಸಲ ಅವಿವೇಕವೇ ವಿವೇಕದಂತೆ ಮೆರೆಯಬಹುದೆಂದು ಹೇತುವಾದಿಗಳಿಗೆ ತೋರುವದು. ಹೇತುವಾದಿಗಳ ಮಾರ್ಗದಿಂದ ತಲೆಗೊಂದು ಬುದ್ಧಿಯಾಗಿ ಸಮಾಜಕ್ಕೆ ಸ್ಥಾನವೇ ಉಳಿಯದೆ ಹೋಗಬಹುದೆಂದು ಮತಪಂಥಗಳ ಹೆದರಿಕೆ. ಅಂತೂ ಪ್ರಪಂಚದ ಪರಿಚಯವು ದಿನೇ ದಿನೇ ಹೆಚ್ಚು ಪರಿಪಾಕಗೊಳ್ಳುತ್ತಿರುವೀ ಕಾಲದಲ್ಲಿ ಮತಪಂಥಗಳಿಂದುಂಟಾದ ಅನ್ಯಾಯ, ದುಃಖಗಳು ಏಕೀಭವಿಸಿ ಪರ್ವತಪ್ರಾಯವಾಗಿ ಕಾಣುತ್ತಿವೆ. ಮತಪಂಥಗಳಿಗೆ ಸ್ವಯಂಪ್ರಮಾಣ ವ್ಯಕ್ತಿಗಳಿಂದ ಮಾನವಸಮಾಜವು ಹೋಳುಹೋಳಾಗುವದೆಂದು ಅಪೂರ್ವ ಭಯವುಂಟಾಗುತ್ತಿದೆ. ಈ ಸಂಘರ್ಷಣವು ದೇಶದೇಶಗಳಲ್ಲಿ ಕಿಡಿ - ಬೆಂಕಿ - ಉರಿ - ಬೇಗೆಗಳನ್ನು ಹಬ್ಬಿಸುತ್ತಲಿದೆ. ಶ್ರೀಮಾನ್ ತಾರಾನಾಥರಾಯರು ಅದಕ್ಕೆ ಉಪಾಯವೆಂದು ಸಹಜಸಮರಸಮಾರ್ಗವನ್ನು ತೋರಿಸಿದ್ದಾರೆ. 'ಸಂಯಮ-ಸಂಧಾನ-ಸಮನ್ವಯಗಳ ಧರ್ಮ' ವದು. ಆದರೆ ಈ ಮಾರ್ಗವು ಹೊಸದಲ್ಲ ಹಳೆಯದು. 'ಉಣ್ಣೆ ಕೆಚ್ಚಲೊಳಿದ್ದು ಉಣ್ಣದದು ನೊರೆಹಾಲ' ಎಂಬಂತೆ ಜನರು ಮಾತ್ರ ಈ ಮಾರ್ಗವನ್ನನುಸರಿಸಿಲ್ಲ ಎಂದು ಅವರೇ ಹೇಳುವರು. ಹಾಗಾದರೆ ಜನರು ಆ ಮಾರ್ಗಕ್ಕೆ ಬರುವ ಉಪಾಯಗಳನ್ನು ಸೂಚಿಸುವದೇ ಹೇತುವಾದಿಗಳ ಕಾರ್ಯವಾಗಬೇಕು. ಹಳೆಯ ಮತಪಂಥಗಳ ದೋಷದ ತವುಡನ್ನು ಕುಟ್ಟುವದು ವ್ಯರ್ಥ ಆಯಾಸ.

ಇಷ್ಟಲ್ಲದೆ, ಈ ದೋಷಾವಿಷ್ಕರಣದಲ್ಲಿಯೂ ಅನೌಚಿತ್ಯವು ತಲೆಯೆತ್ತಿದೆ. ಬ್ರಹ್ಮಚಾರಿಯ ವಿಷಯವಾಗಿ



CC-0. Jangamwadi Math Collection. Digitized by eGangotri

ಅಪಾರ್ಥಕಲ್ಪಿಸಿದ ಚಾತುರ್ಯವು ( ಪುಟ ೧೭ ) ಬೆರಗುಗೊಳಿಸುವದು. ಮಾರ್ಸಡೆನ್ ಇತಿಹಾಸದ ಕಣಿಯೊಳಗಿಂದ ಒಂದ ಸ್ತ್ರೀಯರ-ಗುಲಾಮರ ವಿಷಯವಾದ (ಪುಟ-೬೪-೬೫) ಸ್ತುತಿನಿಂದೆಯು ಜೊಳ್ಳಾಗಿ ತೋರುವದು. ನಮ್ಮ ಇತಿಹಾಸದಲ್ಲಿಯೂ ವೈಶ್ಯರು,ಶೂದ್ರರು,ಬೇಡರೂ ರಾಜರಾಗಿದ್ದಾರೆ. ದ್ರಾವಿಡರಲ್ಲಿ ಸ್ತ್ರೀಯರಿಗಿದ್ದ ಸ್ವಾತಂತ್ರ್ಯವು ಇಸ್ಲಾಮಿನಿಂದ ಬಂದುದಲ್ಲ. ಶಂಕರಾಚಾರ್ಯರ (೯೭) ಮತ್ತು ಸಾಮವೇದದ (೯೬) ವಿಷಯವಾದ ಮಾತುಗಳನ್ನು ರಾಯರೇ ಮನಸ್ಸು ಮಾಡಿದ್ದರೆ ತಮ್ಮ ಬೇರೆ ಉಪನ್ಯಾಸಗಳಲ್ಲಿ ಬೇರೆ ವಿಧವಾಗಿ ಅರ್ಥ ಹಚ್ಚಬಲ್ಲರು. ಗ್ರಂಥ ಎಂದರೆ ೩೨ ಅಕ್ಷರಗಳ ಸಮೂಹವೆಂಬ ಪರಿಭಾಷೆಯನ್ನು ನೆನಸಿದ್ದರೆ ಪುರಂದರದಾಸರ ಬಗ್ಗೆ ಅತಿಶಯೋಕ್ತಿಯ ಆರೋಪವನ್ನು (೧೦೦) ಮಾಡುವ ಕಾರಣ ಉಂಟಾಗುತ್ತಿರಲಿಲ್ಲ. ಶೇಷನ ಕಥೆಯಂತೂ ಗ್ಯಾಲಿಲಿಯೋನ ಕಥೆಗೆ ಸರಿಯಾಗಲೆಂದು ಸೇರಿಸಿದ ಅಡ್ಡ ಕಥೆ (೨೨). ಒಂದನೆಯ ಪುಟದ ಮೇಲಿನ ಬೀಜವೃಕ್ಷ ನ್ಯಾಯವು ದೃಷ್ಟಾಂತವಾಗದೆ ದೃಷ್ಟಿಬಂಧಕವಾಗಿದೆ. ನೂರು ೧೫ನೆಯ ಪುಟದಮೇಲಿನ ಲಾವಣ್ಯವತಿ ಸ್ತ್ರೀಯ ಉದಾಹರಣೆಯು ತೀರ ವಿಪರೀತವಾಗಿದೆ. ಅಲ್ಲಿ ತ್ಯಾಗ, ಧರ್ಮ, ಔಚಿತ್ಯಗಳನ್ನು ಹೇಗೆ ಅನ್ವಯಿಸಬೇಕೊ ತಿಳಿಯದ ಮಾತು. ಪೀಠಿಕೆಯಲ್ಲಿ ಪ್ರತಿಜ್ಞೆಯು ಒಳ್ಳೆಯದಾಗಿದ್ದರೂ 'ಈ ಕಲ್ಪನಾ ಪಟುಗಳಷ್ಟು ಜಘನ್ಯಜಂತುಗಳು, (೬೨-೬೩) ಎಂಬೀ ಬಗೆಯ ಮಾತುಗಳು 'ಹೈತುಕರು ಸತ್ಯಪ್ರಿಯರು' ಎಂಬುದು ನಿಜವಿದ್ದರೆ ಅವರು ವಾಕ್ಪಾರುಷ್ಯವಿಲ್ಲದವರೂ ಇರಬೇಕೆಂಬುದನ್ನು ಮರೆತು ಬರೆದಂತಿದೆ. ಈ ಬಗೆಯ ರೊಚ್ಚು ಅಲ್ಲಲ್ಲಿ ಹುದುಗಿಕೊಂಡಿದೆ. ಸತ್ಯ ಮಾರ್ಗಕ್ಕೆ ಅದು ಸರಿಯಲ್ಲ. ೧೧೭ನೆಯ ಪುಟದ ಮೇಲೆ ಪಾತಂಜಲ ಯೋಗಸೂತ್ರದೊಳಗಿನ 'ಮೈತ್ರೀಕರುಣಾಮುದಿತೋಪೇಕ್ಷಾಣಾಂ ಸುಖದುಃಖ ಪುಣ್ಯಾಪುಣ್ಯ ವಿಷಯಾಣಾಂ ಭಾವನಾತಶ್ಚಿತ್ತ ಪ್ರಸಾದನಮ್' ಎಂಬ ಸೂತ್ರಕ್ಕೆ "ಮೈತ್ರಿ, ಕರುಣಾಮುದಿತಾ ಇವುಗಳವ್ಯವಸಾಯ;ಮತ್ತು ಪುಣ್ಯ, ಅಪುಣ್ಯ ಸುಖದುಃಖ ವಿಷಯಗಳಿಗೆ ಉಪೇಕ್ಷೆ" ಎಂದು ಅಪಾರ್ಥವನ್ನು ಮಾಡಲಾಗಿದೆ. ಅದು ತಪ್ಪು ತಿಳುವಳಿಕೆಯಿಂದಾಗಿದ್ದರೆ ತಿದ್ದಿಕೊಳ್ಳಬಹುದು. ಆದರೆ 'ಸುಖದುಃಖೇ ಸಮೇಕೃತ್ವಾ' ಗೀತೆಯಲ್ಲಿಯೇ ಬಂದಿದೆ; ಇತ್ತೀಚಿನ ಸ್ವತಂತ್ರ ವೃತ್ತಿಯು ಹಿಗ್ಗುತ್ತ ಹಿಗ್ಗುತ್ತ ಸ್ವೇಚ್ಛೆ, ಸ್ವೈರ ಎಂದಾಗುತ್ತ ಪಾಪಪುಣ್ಯಗಳ ಉಪೇಕ್ಷೆಯನ್ನು ಮಾಡಲು ಅಪೇಕ್ಷಿಸುವಂತೆ ಈ ಸೂತ್ರದ ಅಭಿಪ್ರಾಯವು ಇರಬೇಕೆಂದು ಭ್ರಮಿಸಿದ್ದರೆ, ಸಹಜ ಸಮರಸ ಸಾಧನೆಯನ್ನು ಸ್ವಲ್ಪ ಎಚ್ಚರದಿಂದ ವಿಮರ್ಶಿಸಬೇಕಾಗಬಹುದು. ಆದರೆ ಸಂಯಮ – ತ್ಯಾಗ ಲಕ್ಷಣವಾದ ಈ ಮಾರ್ಗವು ಹಾಗಿರಲಾರದೆಂಬ ಅಪೇಕ್ಷೆಯಿದೆ. ಅದಿರಲಿ.

ಪಾಶ್ಚಿಮಾತ್ಯ ಹೇತುವಾದಿಗಳ ವಿಚಾರಸರಣಿಯ ಪರಿಚಯವನ್ನು 'ಈ ರೂಪದಲ್ಲಿ ಮಾಡಿಕೊಟ್ಟುದು ಕನ್ನಡ ವಾಚಕರಿಗೊಂದು ಉಪಕಾರವಾಗಿದ್ದರೂ 'ಸಹಜ ಸಮರಸ' ಮಾರ್ಗದ ಸಾಂಗವಿವರಣೆಯು, ಅದು ಸಾಮೂಹಿಕ ಧರ್ಮದ ಮಾರ್ಗವು ಹೇಗೆ? ಮೊದಲಾದ ಮಾತುಗಳ ಜ್ಞಾನವನ್ನು ಇನ್ನೊಂದು ಗ್ರಂಥದಲ್ಲಿ ರಾಯರು ಮಾಡಿಕೊಡಬೇಕೆಂದು ಬಿನ್ನಹ. ಶ್ರೀಮಾನ ಆಲೂರವರು ಇಂತಹ ಗ್ರಂಥಗಳನ್ನು ಪ್ರಕಟಿಸುವ ಸಾಹಸವನ್ನು ಕೈಕೊಂಡಿರುವಾಗ ವಾಚಕರು ಆಸಕ್ತರಾಗಿ ಅವುಗಳನ್ನು ಕೊಂಡುಕೊಂಡು ಓದಿ,ಪ್ರಪಂಚದಲ್ಲಿ ಏನು ನಡೆದಿದೆ? ಎಂಬುದರ ಬಗ್ಗೆ ತಮ್ಮ ಜ್ಞಾನವನ್ನು ಬೆಳೆಯಿಸಿಕೊಳ್ಳಬೇಕೆಂದು ಕನ್ನಡಿಗರನ್ನು ಬೇಡಿಕೊಳ್ಳುತ್ತೇವೆ.

ದ. ರಾ. ಬೇಂದ್ರೆ

**ಆಗ್ರಹ (೩೯)**:—ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ "ಅಶ್ವತ್ಥಾಮನ್" ನಾಟಕದಲ್ಲಿ ಆತ್ಮತೃಪ್ತಿಗಾಗಿ ಆತ್ಮಹತ್ಯ ಮಾಡಿಕೊಂಡ ಅಶ್ವತ್ಥಾಮನನ್ನು ಶ್ರೀ ಸೀತಾರಾಮಯ್ಯನವರು ಪುರಾಣ ಮತಾಭಿಮಾನಿಗಳಾದ ಜನರ ಆಗ್ರಹಕ್ಕಾಗಿ (ಉತ್ತರಕರ್ನಾಟಕದಲ್ಲಿ 'ದಾಕ್ಷಿಣ್ಯ' ಎಂಬರ್ಥದಲ್ಲಿ) ಚಿರಂಜೀವಿಯನ್ನಾಗಿ ಮಾಡಿ ಚಿರದುಃಖಭಾಗಿಯನ್ನಾಗಿ ಮಾಡಿದ್ದಾರೆ. ನಾಟಕದ 'ಕಥೆಯು ಮಹಾಭಾರತವನ್ನು ಬಹಳ ಹತ್ತಿರದಲ್ಲಿ ಹಿಂಬಾಲಿಸುತ್ತದೆ. ಅಲ್ಲಿನ ಮಾತುಗಳನ್ನೆ ಸಾಧ್ಯವಾದಲ್ಲೆಲ್ಲ ನಾನು ಕನ್ನಡಕ್ಕೆ ಇಳಿಸಿಕೊಂಡಿದ್ದೇನೆ' ಎಂದು ನಾಟಕಕಾರರು ಹೇಳುವರು. ನಿಜವಾಗಿಯೂ ಹಾಗೆ ಉಪಯೋಗಿಸಿಕೊಳ್ಳುವದರಲ್ಲಿ ಶ್ರೀ. ಸೀತಾರಾಮಯ್ಯನವರು ರಚನಾ ಕೌಶಲ್ಯವನ್ನೂ, ಔಚಿತ್ಯ ಜ್ಞಾನವನ್ನೂ ಚೆನ್ನಾಗಿ ಪ್ರಕಟಿಸಿದ್ದಾರೆ. ಬೇರೆ ಸಂದರ್ಭದೊ

CC-0. Jangamwadi Math Collection. Digitized by eGangotri

ಳಗಿನ ಮಾತುಗಳನ್ನೂ ತಮಗೆ ಯುಕ್ತವಾಗಿ ತೋರಿ
ದಲ್ಲಿ ಮಾರ್ಮಿಕತೆಯಿಂದ ಉಪಯೋಗಿಸಿದ್ದಾರೆ. ಮಹಾ
ಭಾರತದೊಳಗಿನ ಮಾತುಗಳ ಓಜಸ್ಸು ತೇಜಸ್ಸು
'ಆಗ್ರಹ' ಸರಸವಾಗಿ ಪ್ರತಿಬಿಂಬಿತವಾಗಿದೆ. ನಾಲ್ಕ
ನೆಯ ನೋಟದಲ್ಲಿ ಗಾಂಧಾರಿಯ ಕೂಡ ಮಾತನಾಡುವ
ಕೃಷ್ಣ, ಕೊನೆಯ ಹತ್ತನೆಯ ನೋಟದಲ್ಲಿ ಅಶ್ವತ್ಥಾಮನ
ದುರಾಚಾರವನ್ನು ಕಂಡು ಆಗ್ರಹಗೊಂಡ ಕೃಷ್ಣ, ಈ
ಎರಡೇ ಪ್ರವೇಶಗಳನ್ನೋದಿದರೂ ಕೃಷ್ಣನ ಪಾತ್ರವನ್ನು
ಹೇಗೆ ಚಮತ್ಕಾರವಾಗಿ ನಾಟಕಕಾರರು ರೇಖಿಸಿರುವ
ರೆಂಬುದು ಅನುಭವಕ್ಕೆ ಬರುವದು. ದ್ರೌಪದಿಯ ರೌದ್ರ
ರೂಪವು ಗಾಂಧಾರಿಯ ಕರುಣರೂಪವು ಸೊಗಸಾಗಿ
ಚಿತ್ರಿಸಲ್ಪಟ್ಟಿದೆ. ಇಡೀ ನಾಟಕವು 'ಸಾಹಿತ್ಯದ ಆತ್ಮವು
ಔಚಿತ್ಯ' ಎಂಬ ಸೂತ್ರಕ್ಕೆ ಉದಾಹರಣೆಯಂತಿದೆ.
ಆದರೆ ದೃಶ್ಯದ ಪ್ರಾರಂಭದಲ್ಲಿ ಬರೆದ 'ತ್ಯಜೇತ್ ಕುಲಾ
ರ್ಥೇ ಪುರುಷಂ' ಈ ಶ್ಲೋಕದ ಔಚಿತ್ಯವು ಸ್ಫುಟವಾ
ಗುವಂತಿಲ್ಲ. ಯಾರ ನಡತೆಯ ಮರ್ಮವನ್ನು ಹೇಳಿದೆ
ಇದರಲ್ಲಿ? ಏನು ಧರ್ಮ ತಾರತಮ್ಯವೋ? ಹಾಗಿ
ದ್ದಲ್ಲಿ ಈ ಸಂದರ್ಭದಲ್ಲಿ ಅದು ಅನ್ವಯಿಸುವದು ಹೇಗೆ?
ಇನ್ನೊಂದು ಮಾತು; ಗ್ರಂಥಕರ್ತರು ಮುನ್ನುಡಿಯಲ್ಲಿ
"ಕೃಷ್ಣನ ಕೋಪವನ್ನು ಹೊತ್ತಿಸಿ ಮೂರು ಸಾವಿರ
ವರ್ಷಗಳ ಕಾಲ ಅನುಭವಿಸಬೇಕಾದ ಶಾಪವನ್ನು ಹೊತ್ತ
ಅಶ್ವತ್ಥಾಮನ ಗತಿಯನ್ನು ಕಂಡು ಕನಿಕರಪಟ್ಟು
ನಾನಂತೂ ಭಯದಿಂದ ನಡುಗಿದ್ದೇನೆ. ಹಾಗೆಯೇ
ಅದನ್ನು ನೋಡನೋಡುತ್ತ ಯಾವ ದೇವರ ದಯದಿಂದ
ಲಾದರೂ ಮಾನವನ ಮನೋದೌರ್ಬಲ್ಯಗಳು ಅವನನ್ನು
ಮುಳುಗಿಸಿದಂತೆ ಅವನ ಬದುಕು ನೇರವಾಗಿ ಮಂಗಳಕ್ಕೆ
ತಿರುಗಲಿ–ಎಂದು ಬಯಸಿದ್ದೇನೆ. ಆದರೆ ಯಾರು ಎಷ್ಟು
ಬಯಸಿದರೇನು? ರಾಗ ದ್ವೇಷಗಳ ದಾಳಿಯಲ್ಲಿ ಸಾತ್ವಿಕಕ್ಕೆ
ತಿರುಗಬೇಕಾದ ಪ್ರವೃತ್ತಿಗಳೆಲ್ಲಾ ತಾಮಸಕ್ಕೆ ಸೆಳೆಯು
ವುವು; ಬುದ್ಧಿಯ ಹದ ಕೆಡುವುದು; ದುರ್ಬಲ ಮನುಷ್ಯನ
ಆತ್ಮ–ನಾಶವು ಆಗುತ್ತಲೇ ಇರುವುದು. ಅಂತಹ
ದೃಶ್ಯವೊಂದು ಈ ನಾಟಕದಲ್ಲಿ ಕಣ್ಣಿಗೆ ಕಾಣಿಸಬಹು
ದೆಂದು ನನ್ನ ನಂಬಿಕೆ" (ಪುಟ ೩–೪) ಎಂದು ಬರೆ
ದಿದ್ದಾರೆ. ಈ ನಾಟಕದ ವಸ್ತುವು ಆವಿದ್ಧಪ್ರಯೋಗ
ದಿಂದ ಒಳ್ಳೆ ರೌದ್ರ–ಕರುಣವನ್ನು ಹೊತ್ತಿಸುವದೆಂಬು
ವಲ್ಲಿ ಸಂಶಯವಿರದಿದ್ದರೂ ದೈವದುರ್ವಿಪಾಕದ ದುರ್ವಿ-
ಲಾಸವನ್ನು ಕುರಿತು ಮನನಕ್ಕೆ ತಕ್ಕಷ್ಟು ವಿಚಾರ
ಗಳನ್ನು ಕೊಡುವದಿಲ್ಲವಲ್ಲ–ಎಂದು ಸಂಶಯ. ಏನಿದ್ದರೂ
ಆಗ್ರಹವು ಓದಬೇಕಾದ, ಆಡಬೇಕಾದ, ನೋಡಬೇಕಾದ
ನಾಟಕವೆಂಬುವಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಅದನ್ನು
ಓದಿಯೇ ವಾಚಕರು ಅದರ ಪರಿಚಯಹೊಂದಬೇಕು.

**ಸಚಿತ್ರ ಪದ್ಯಾವಳಿ:**—(೮ನೆಯ ಮುದ್ರಣ) (೫೬)
ರಚಿಸಿದವರು; ಕೊರ್ಡಕಲ್ ಶ್ರೀನಿವಾಸರಾಯರು
ಉಡುಪಿ.

ಇದರಲ್ಲಿ ಬೇರೆ ಬೇರೆ ಮೂರು ಭಾಗಗಳಿರುವುವು.
ಮೊದಲನೆಯ ಭಾಗದಲ್ಲಿ ಪದ್ಯದಲ್ಲಿ ಹೆಣೆದ ಹನ್ನೆರಡು
ನೀತಿಯ ಕಥೆಗಳಿವೆ. ಎರಡನೆಯ ಭಾಗದಲ್ಲಿ ಪದ್ಮಿನಿ,
ಭೀಮಸಿಂಗ, ಪನ್ನೆ, ಅರ್ಗಳದ ರಾಣಿ, ಪೃಥ್ವೀರಾಜ,
ಜಯಚಂದ, ನಾದಿರಷಹ, ಅಕಬರ, ಮೊದಲಾದ ಐತಿ
ಹಾಸಿಕ, ವ್ಯಕ್ತಿಗಳ ಕತೆಯನ್ನು ಒಳಗೊಂಡ ಹತ್ತು ಪದ್ಯ
ಪಾಠಗಳಿವೆ. ಇಷ್ಟರಲ್ಲಿಯೇ ಇದು ಎಂಟನೆಯ ಮುದ್ರ
ಣವನ್ನು ಪಡೆದಿದೆಯೆಂದ ಮೇಲೆ ಸಾಮಾನ್ಯಜನತೆಗೆ-
ಮಕ್ಕಳಿಗೆ ಇದು ಎಷ್ಟೊಂದು ಮೆಚ್ಚಿಕೆಯಾಗಿರಬಹು
ದೆಂಬುದನ್ನು ಕಾಣಬಹುದು. ಮಕ್ಕಳಿಗಾಗಿ ಬರೆದರೇ
ನಾಯಿತು? ಮಾತಿನ ಹೆಣಿಕೆ ಸಡಿಲಾಗಿದ್ದರೆ ಹುರುಕು
ಬರಕಾಗಿದ್ದರೆ ಅಷ್ಟೊಂದು ಮೆಚ್ಚಿಕೆಯಾಗಲಾರದು.
ಇದ್ದ ಮಾತನ್ನು ಇದ್ದಂತೆಯೆ ಪದ್ಯದಲ್ಲಿ ಪೋಣಿಸುವು
ದಕ್ಕಿಂತ ಮಕ್ಕಳ ಮನವನ್ನು ಮುಟ್ಟುವಂತೆ ಕೊಂಚ
ಬಣ್ಣ ಹಚ್ಚಿಯೊ ಕುಸುರನ್ನು ಹಚ್ಚಿಯೊ ಹೇಳಿದರೆ
ಚೆನ್ನಾಗಿರುವುದು.

CC-0. Jangamwadi Math Collection. Digitized by eGangotri

# ಕಾಲಚಕ್ರ

## ನೀಚೈರ್ಗಚ್ಛತ್ಯುಪರಿ ಚ ದಶಾ ಚಕ್ರನೇಮಿಕ್ರಮೇಣ ||

[ಈ ಶೀರ್ಷಕದ ಕೆಳಗೆ ಲೋಕದಲ್ಲಿ ಅಲ್ಲಲ್ಲಿ ನಡೆದ ಸಾಮಾಜಿಕ, ರಾಜಕೀಯ, ಚಟುವಟಿಕೆಗಳ ದಿಗ್ದರ್ಶನೆಯನ್ನು ಮಾಡಬೇಕೆಂದಿದೆ. ಮಹಾಕಾಲನು ಎತ್ತ ಅಡಿಯಿಡುತ್ತಲಿದ್ದಾನೆ? ಮಾನವಜಾತಿಯ ಭವಿತವ್ಯವೇನು? ಪ್ರಪಂಚದಲ್ಲಿ ನಡೆದ ಸ್ಥಿತ್ಯಂತರಗಳು ಚೆನ್ನಾಗಿ ಮನವರಿಕೆಯಾಗಲಿಕ್ಕೆ ಆಧಾರಭೂತವಾದ ಸಂಗತಿಗಳು ಯಾವುವು?—ಈ ಮೊದಲಾದ ಮಾತುಗಳ ಬಗ್ಗೆ ಸಾಕಷ್ಟು ವಿಚಾರಕ್ಕೆ ಸಾಮಗ್ರಿಯನ್ನು ಕೊಡುವುದಲ್ಲದೆ, ಮಾನವಜಾತಿಯ ಸಾಮುದಾಯಿಕ ಕಲ್ಯಾಣಕ್ಕಾಗಿ ವಿಚಾರಿಗಳು, ಮುಖಂಡರು ಯಾವ ಪ್ರಯತ್ನವನ್ನು ಮಾಡುತ್ತಿದ್ದಾರೆ? ರಾಷ್ಟ್ರ ರಾಷ್ಟ್ರಗಳು ಒಂದನ್ನೊಂದು ಅವಲಂಬಿಸಿರುವುದು ಹೇಗೆ ಕ್ರಮಪ್ರಾಪ್ತವಾಗಿದೆ?—ಎಂಬುದನ್ನು ಕುರಿತು ಉಲ್ಲೇಖವನ್ನೂ ಇಲ್ಲಿ ಮಾಡಬೇಕೆಂದಿದ್ದೇವೆ.

### ಶಸ್ತ್ರಸಂನ್ಯಾಸಪರಿಷತ್ತಿನ ಮಹತ್ತ್ವ

ಜಿನೀವಾದಲ್ಲಿನ 'ರಾಷ್ಟ್ರಸಂಘ' (League of Nations) ದ ನೇತೃತ್ವದಲ್ಲಿ 'ಶಸ್ತ್ರಸಂನ್ಯಾಸಪರಿಷತ್ತು' (Disarmament Conference) ಕಳೆದ ಫೆಬ್ರುವರಿ ೨ನೆಯ ದಿನ ಪ್ರಾರಂಭವಾಯಿತು. ಅದರ ಒಂದು ಅಧಿವೇಶನವು ಕೊನೆಗೊಂಡು, ಅದೀಗ ಮತ್ತೆ ಕೆಲದಿನಗಳ ತರುವಾಯ ಮೊದಲಾಗಲಿದೆ. ರಾಷ್ಟ್ರಸಂಘಕ್ಕೆ ಸೇರಿದ ೬೪ ರಾಷ್ಟ್ರಗಳಲ್ಲದೆ ಅಫಗಾನಿಸ್ತಾನ, ಬ್ರಾಝಿಲ್, ಇಜಿಪ್ತ, ಹೆಜಾಝ್, ತುರ್ಕಸ್ತಾನ, ಸೋವಿಯೆಟ್ ರಶಿಯಾ, ಅಮೇರಿಕಾ— ಈ ಮೊದಲಾದ ಇತರ ಪ್ರಮುಖ ಸರಕಾರಗಳೂ ಆಮಂತ್ರಿಸಲ್ಪಟ್ಟಿವೆ.

ಮಹಾಯುದ್ಧವು ಪ್ರಾರಂಭವಾದಾಗ ಅನೇಕರು— ಪ್ರಪಂಚದ ಚರಿತ್ರೆಯ ಗಂಧವೂ ಇಲ್ಲದ ಪಾಮರರು ಮಾತ್ರವಲ್ಲ, ಪಂಡಿತರೂಕೂಡ—'ಈ ಯುದ್ಧವು ಮಾನವಜಾತಿಯ ಸಮಸ್ತ ಸಂಕಟಗಳನ್ನು ಪರಿಹರಿಸಬಲ್ಲುದು, ಕೃತಯುಗವನ್ನೇ ಬರಮಾಡಬಲ್ಲುದು' ಎಂಬ ಹುಚ್ಚು ನಂಬಿಕೆಯುಳ್ಳವರಾಗಿದ್ದರು. ಆ ನಂಬಿಕೆಯು ಪೂರಾ ನಿರಾಧಾರವಾಗಿತ್ತೆಂಬುದು ಮಹಾಯುದ್ಧದ ತರುವಾಯ ತಿಳಿದುಬಂದಿತು. ದ್ವೇಷಾಸೂಯೆಗಳಿಂದ ಪ್ರಬಲತರವಾದ ದ್ವೇಷಾಸೂಯೆಗಳೇ ಹುಟ್ಟಬಲ್ಲುವಲ್ಲದೆ, ಶಾಂತಿಸೌಖ್ಯ ಪ್ರೇಮಗಳಲ್ಲ. ಜರ್ಮನ್ ಕೈಸರನನ್ನು ರಾವಣನನ್ನಾಗಿ ವರ್ಣಿಸಿ, ಜಗತ್ತಿನಲ್ಲಿ ರಾಮರಾಜ್ಯವನ್ನು ಪ್ರಸ್ಥಾಪಿಸಲು ಹೊರಟವರಂತೆ ಮಿತ್ರರಾಷ್ಟ್ರಗಳು (Allies) ನಟಿಸಿದರೂ, ಅವರ 'ಗೋಮುಖವ್ಯಾಘ್ರವೃತ್ತಿಯು' ಇದೀಗ ಎಲ್ಲರಿಗೂ ಚೆನ್ನಾಗಿ ಸ್ಪಷ್ಟವಾಗಿದೆ. ಜರ್ಮನಿಯೇನೋ ಹಣ್ಣಾಯಿತು. ಆದರೆ ಇಂಗ್ಲಂಡು, ಫ್ರಾನ್ಸು, ಇಟಲಿ, ಅಮೇರಿಕಾ ಮೊದಲಾದ 'ಬಂಧುರಾಷ್ಟ್ರ'ಗಳು ಕೂಡ ಪರಸ್ಪರ ವಿಷಯಕ ಸಂಶಯವನ್ನು ತೋರೆಯಲಾರದೆ, ಆಪಾದಮಸ್ತಕವಾಗಿ ಶಸ್ತ್ರಾಸ್ತ್ರಸುಸಜ್ಜಿತವಾಗಿವೆ, ಆಗುತ್ತಲಿವೆ. ಮಹಾಯುದ್ಧದ ಮೂಲಕ ಅಪಾರ ದ್ರವ್ಯಹಾನಿ, ಜೀವಹಾನಿಗಳುಂಟಾದುದರಿಂದ 'ಆರ್ಥಿಕ ಪ್ರಳಯ' ವು (Economic crisis) ಜಗತ್ತಿನ ಪಡಿಮೂಲೆಗಳಲ್ಲಿಯಷ್ಟೇ ಅಲ್ಲ—ಮೂಲೆಮೂಲೆಗಳಲ್ಲಿಯೂ ತಾಂಡವವಾಡುತ್ತಲಿದೆ. ಈ ರಾಕ್ಷಸನ ತಕ್ಕೆ

CC-0. Jangamwadi Math Collection. Digitized by eGangotri

ಯೊಳಗಿಂದ ಬಿಡಿಸಿಕೊಳ್ಳಲಿಕ್ಕೆ ಜರ್ಮನಿ ಮೊದಲಾದ ಚಿತರಾಷ್ಟ್ರಗಳಷ್ಟೇ ಅಲ್ಲ, ವಿಜಯಿ-ರಾಷ್ಟ್ರಗಳಲ್ಲಿನ ಜನರೂ ವಿಶ್ವಸಾಹಸವನ್ನು ಎಸಗುತ್ತಲಿದ್ದಾರೆ. ಇಂಥ ಸಂದರ್ಭದಲ್ಲಿ ಯುದ್ಧವಿಮಾನಗಳು, ಸಮುದ್ರದಲ್ಲಿ ಮುಳುಗಿ ಸಂಚಾರಮಾಡಬಲ್ಲ ಯುದ್ಧನೌಕೆಗಳು (Submarines), ಕವಚಸಹಿತವಾದ ಮೋಟಾರುಗಳು, ಘೋರಹಿಂಸೆಯನ್ನು ಮಾಡಬಲ್ಲ ಬಾಂಬುಗಳು, ಅತಿ ದೂರದವರೆಗೆ ಗುಂಡುಗಳನ್ನು ಒಗೆಯಬಲ್ಲ ತೋಫು ಗಳು, ವಿಷವಾಯುಗಳು, ಅಲ್ಲದೆ ಯಾವಕಾಲಕ್ಕೂ ತುದಿ ಗಾಲಮೇಲೆ ನಿಲ್ಲಬಲ್ಲ ಸೇನಾಸಮೂಹಗಳು—ಇವೆಲ್ಲವು ಗಳ ಸಲಕರಣೆಗಾಗಿ ಜಗತ್ತಿನೊಳಗಿನ ಸರಕಾರಗಳು ಹೊನ್ನಿನ ಹೊಳೆಯನ್ನು ಹರಿಸುತ್ತಿರುವುದು ಲೋಕ ಸಂಕಟಕ್ಕೆ ಮತ್ತಿಷ್ಟು ಕಾರಣವಾಗಿದೆ.(ಯುದ್ಧಸಾಮುಗ್ರಿ ಗಾಗಿ ಪ್ರತಿವರ್ಷ ೯೫ ಕೋಟಿ ಪೌಂಡುಗಳು ವೆಚ್ಚವಾಗು ತ್ತಿವೆಯಂತೆ.)ಮತ್ತೊಂದು ಮಹಾಯುದ್ಧದ ಭೀತಿಯೂ ಎಲ್ಲರನ್ನು ಬಾಧಿಸುತ್ತಲಿದೆ. ಯುದ್ಧತಂತ್ರವಿಶಾರದ ರಲ್ಲಿ ಅಗ್ರಣಿಯಾದ Marshal Foch ನೇ 'ಬರುವ ಯುದ್ಧವು ಪ್ರಪಂಚವನ್ನೇ ವ್ಯಾಪಿಸುವುದು; ಪ್ರತಿ ಯೊಂದು ರಾಷ್ಟ್ರವೂ ಭಾಗಿಯಾಗುವುದು; ಗಂಡಸ ರಷ್ಟೇ ಅಲ್ಲ, ಹೆಂಗಸರೂ, ಹುಡುಗರೂ, ತುತ್ತಾಗು ವರು' ಎಂದು ಕಾಲಜ್ಞಾನವನ್ನು ಹೇಳಿರುವನು. ಈ ಹೊತ್ತು ಯುದ್ಧವು ಪ್ರಾರಂಭವಾದರೆ, ಕೆಳಗಿನ ಹಾನಿ ಗಳಾಗುವುದು ಕಟ್ಟಿಟ್ಟದೆಂದು ನಿರೀಕ್ಷಕರು ಹೇಳು ತ್ತಾರೆ: ವಿಷವಾಯುಗಳಮೂಲಕ ಒಂದು ರಾತ್ರಿಯಲ್ಲಿ ಲಕ್ಷಾವಧಿಜನರ ಮರಣ, ಬಾಂಬುಗಳಿಂದ ಮುಂಚಿಗಿಂತ ನೂರಾರುಪಾಲು ಮಿಗಿಲು ಹಿಂಸೆ, ಸಹಸ್ರಾವಧಿಮೈಲು ಗಳ ಸುತ್ತಳತೆಯಲ್ಲಿ ಬರಗಾಲ, ಕವಚದ ರಥಗಳು ಬೇಕಾ ದಲ್ಲಿ ಬೇಕಾದಹಾಗೆ ಓಡಿಯಾಡಿ ಊರುಕೇರಿ-ಹೊಲಮನೆ ಗಳನ್ನು ಹಾಳುಗೆಡಹುವುದು, ಸೈನಿಕರಷ್ಟೇ ಅಲ್ಲ—ನಿರಪ ರಾಧಿಗಳಾದ ಪ್ರಜೆಗಳೂ ವ್ಯರ್ಥಪ್ರಾಣಗಳಿಗೆ ಎರವಾಗು ವುದು....ಇತ್ಯಾದಿ. (ಮೊನ್ನೆನಡೆದ ಚೀನ ಜಪಾನ ಸಂಗ್ರಾಮದಲ್ಲಿ ಈಮಾತಿನ ಸತ್ಯತೆಯು ಕಂಡುಬಂದಿತು.) ಇವೆಲ್ಲ ಕಾರಣಗಳಮೂಲಕ ಯುದ್ಧನಿರೋಧನದ ಪ್ರಶ್ನೆಗೆ ಅತ್ಯಂತ ಮಹತ್ವವು ಬಂದಿರುವುದರಲ್ಲಿ ಸೋಜಿಗವಿಲ್ಲ.

## ಶಾಂತಿಪ್ರಸ್ಥಾಪನೆಯ ವಿಷಯದಲ್ಲಿ ವಿವಿಧ ಪಕ್ಷಗಳು

ಶಾಂತಿಯು ನೆಲೆಗೊಳ್ಳಬೇಕೆಂಬ ಬಗೆಗೆ ಮತಭೇದ ವಿರದಿದ್ದರೂ, ಮಾರ್ಗಾಚರಣೆಯ ವಿಷಯದಲ್ಲಿ ೪ ತೆರ ನಾದ ಅಭಿಪ್ರಾಯಗಳು ಕಂಡುಬರುತ್ತಿವೆ.

೧. ರಾಷ್ಟ್ರಗಳು ಶಸ್ತ್ರಸಾಮುಗ್ರಿಯನ್ನು ಪೂರ್ಣ ವಾಗಿ ಬಿಟ್ಟುಬಿಡಬೇಕೆಂದು ಹಲವು ವಿಚಾರಿಗಳು (ಐನ್ ಸ್ಟೈನ್‌ರಂಥವರು) ಮತ್ತು ಧ್ಯೇಯವಾದಿಗಳು ಅಭಿ ಪ್ರಾಯಪಡುತ್ತಾರೆ.

೨. ಸಂಪೂರ್ಣ ಶಸ್ತ್ರಸಂನ್ಯಾಸವು ಸದ್ಯಃಸಾಧ್ಯವಲ್ಲ, ಅದನ್ನು ಕ್ರಮವಾಗಿಯೇ ಸಾಧಿಸತಕ್ಕುದು, ಶಸ್ತ್ರ ಸನ್ಯಾಸವಲ್ಲ-ಶಸ್ತ್ರನಿಯಮನವು (Reduction and limitation) ಪ್ರಕೃತದ ವಿಚಾರವಿಷಯವೆಂದು ಇನ್ನೊಂದು ಮತ.

೩. ಶಸ್ತ್ರನಿರೋಧನವಲ್ಲ— ರಾಷ್ಟ್ರರಾಷ್ಟ್ರಗಳಲ್ಲಿನ ರಾಜಕೀಯ ಧೋರಣೆಗಳು (Policies) ಒಂದು ಸಮ ತ್ವಕ್ಕೆ ಬರುವುದು ಅಗತ್ಯ-ಆದು ಕ್ಷಿಪ್ರಸಾಧ್ಯವಲ್ಲ-ಆದುದ ರಿಂದ ರಾಷ್ಟ್ರಗಳು ಸ್ವಹಿತದ ದೃಷ್ಟಿಯಿಂದ ಶಸ್ತ್ರಸಾಮುಗ್ರಿ ಯನ್ನು ಸುಸಜ್ಜಿತವಾಗಿಟ್ಟುಕೊಳ್ಳುವುದೇ ಉಚಿತ ವ್ಯವಹಾರ್ಯ ಮಾರ್ಗವೆಂದು 'ತೃತೀಯಃಪಂಥಾಃ'

೪. ಬರಿ ಶಸ್ತ್ರಸಂನ್ಯಾಸವು ವಿಫಲ—ನಿಃಶಸ್ತ್ರ ಪ್ರತಿ ಕಾರದ ಜಾಜ್ವಲ್ಯವಾದ ಅಸ್ತ್ರವನ್ನು ಧರಿಸಿಯೇ ಶಸ್ತ್ರ ಧಾರಿಗಳನ್ನು ಹಿಂದಕ್ಕಟ್ಟಬೇಕು (Not mere Pacifism but Active Nonviolence), ಎಂದು ಮಹಾತ್ಮಾ ಗಾಂಧಿಯವರು ಹೊಸಹಾದಿಯನ್ನು ತೋರುತ್ತಿದ್ದಾರೆ.

## ಸನ್ನಿವೇಶ

ಪರಿಷತ್ತಿನ ಕೆಲಸದಲ್ಲಿ ಭಾಗವನ್ನು ವಹಿಸಿದ ರಾಷ್ಟ್ರ ಗಳೆಲ್ಲವೂ 'ಶಸ್ತ್ರತ್ಯಾಗ' ದ ಧ್ಯೇಯವನ್ನೇ ಸಾರಿಸಾರಿ ಹೇಳುತ್ತಿದ್ದರೂ, ಒಂದು ಪ್ರಮುಖರಾಷ್ಟ್ರವು ಕೂಡ ಆ ಧ್ಯೇಯಸಾಧನಕ್ಕೆ ನಿಜವಾಗಿ ಅನುಕೂಲವಿಲ್ಲವೆಂಬು ದನ್ನು ನೋಡುವಂತಿದೆ. ೧. ಫ್ರೆಂಚರ ಆಲೋಚನೆ: ರಾಷ್ಟ್ರಸಂಘದ್ದೇ ಒಂದು ಅಂತರರಾಷ್ಟ್ರೀಯ ಪೋಲೀಸ ದಲವಿರಬೇಕು. ಅದು ಪರಾಕ್ರಾಂತ ರಾಷ್ಟ್ರಕ್ಕೆ ನೆರ ವಾಗಬೇಕು. ವಿಶೇಷ ವಿಧ್ವಂಸಕವಾದ ಯುದ್ಧ ಸಾಮು ಗ್ರಿಯು (ದೂರ ಗುಂಡುಗಳನ್ನು ಒಗೆಯಬಲ್ಲ ತೋಫು



CC-0. Jangamwadi Math Collection. Digitized by eGangotri

ಗಳು, ಒಂದು ವಿಶಿಷ್ಟಪ್ರಮಾಣಕ್ಕಿಂತ ಭಾರವುಳ್ಳ ಅಂತ ರ್ನೌಕೆಗಳು ( Submarines ) ಇ. ) ರಾಷ್ಟ್ರಸಂಘದ ವಶದಲ್ಲಿಯೇ ಇರಬೇಕು. ಕಡ್ಡಾಯದ ಪಂಚಾಯತಿ ಯೊಂದನ್ನು ಏರ್ಪಡಿಸಬೇಕು. ಯುದ್ಧಸಂಬಂಧಿ ಯಲ್ಲದ ವಿಮಾನಗಳು ರಾಷ್ಟ್ರಸಂಘಕ್ಕೆ ಒಳಪಡಬೇಕು. ಯುದ್ಧಸಂಬಂಧಿಯಾದವುಗಳಲ್ಲಿ ಬಾಂಬುಗಳ ವಿಶೇಷ ಸಿದ್ಧತೆಯುಳ್ಳವುಗಳೂ ರಾಷ್ಟ್ರಸಂಘದ ಅಂಕಿತದಲ್ಲಿರ ಬೇಕು........ ಇ. ೨. ಬ್ರಿಟಿಶರಿಗೆ ಶಸ್ತ್ರಗಳ ನಿಯಮನವು ಒಪ್ಪಿಗೆ. ಇಂತಿಷ್ಟು ಸಂಖ್ಯೆಯನ್ನು-ಅಳತೆಯನ್ನು-ಯುದ್ಧಪ್ರಯೋಗದ ಪ್ರಮಾಣವನ್ನು ಮೀರಿ ಯುದ್ಧ ಸನ್ನಾಹವನ್ನು ಮಾಡಬಾರದೆಂದೂ, ರಾಸಾಯನಿಕ ಸಮರಸಾಮಗ್ರಿ, ಅಂತರ್ನೌಕೆ, ವಿಷವಾಯುಗಳನ್ನು ಪೂರಾ ಬಿಟ್ಟುಬಿಡಬೇಕೆಂದೂ ಅವರು ಅಭಿಪ್ರಾಯಪಡು ವರು. ೩. ಅಮೇರಿಕೆಯೂ, ಜಪಾನೂ ಸಾಮಾನ್ಯವಾಗಿ ಇದೇ ಮತವನ್ನಂಗೀಕರಿಸುತ್ತಿವೆ. ೪. ಇಟಲಿಯು ಹೆಚ್ಚುಕಡಿಮೆ ಮೇಲಣ ಮತವನ್ನೇ ಬೆಂಬಲಿಸುವು ದಲ್ಲದೆ, ಜರ್ಮನಿಯೂ ಇಟಲಿಯೂ ಸಮರಸಿದ್ಧತೆಯುಳ್ಳ ರಾಷ್ಟ್ರಗಳಲ್ಲಿ ತಮಗಿರುವ ಕೆಳತರಗತಿಯು ಹೋಗ ಬೇಕೆಂದೂ, ಬೇರೆ ಬೇರೆ ರಾಷ್ಟ್ರಗಳಲ್ಲಿನ ಶಸ್ತ್ರಸಾಮ ಗ್ರಿಯ ವೈಷಮ್ಯವು ದೂರವಾಗಬೇಕೆಂದೂ, ಅದಕ್ಕಾಗಿ ದೈವಬಲದಿಂದ ಹೆಚ್ಚುಸಮರ್ಥರಾಗಿರುವ ರಾಷ್ಟ್ರಗಳು ತಂತಮ್ಮ ಸಮರ ಸಾಮಗ್ರಿಯನ್ನು ದೊಡ್ಡ ಪ್ರಮಾಣ ದಲ್ಲಿ ಕಡಿಮೆಮಾಡುವುದು ಅಗತ್ಯವೆಂದೂ ವಾದಿಸುವವು.

ಫ್ರೆಂಚರ ಆಲೋಚನೆಗೆ ಪರಿಷತ್ತಿನಲ್ಲಿ ವಿಶೇಷಮನ್ನಣೆ ದೊರೆತಂತಿಲ್ಲ. ಇಟಲಿಯ ಸಿನರ್ ಗ್ರಾಂಡಿಯು 'ನ್ಯಾಯ ಪಕ್ಷವಿದ್ದೂ ಅನ್ಯಾಯಕ್ಕೀಡಾದವರ ಪರಿತ್ರಾಣವನ್ನು ಮಾಡುವುದೇ ಪರಿಷತ್ತಿನ ವಿಚಾರವಿಷಯವಾಗಬೇಕಲ್ಲದೆ ಬಲಾಢ್ಯರಾದವರನ್ನು ಇನ್ನಿಷ್ಟು ಪ್ರಬಲರನ್ನಾಗಿ ಮಾಡು ವುದಲ್ಲ (To fortify justice, not to justify force )' ಎಂದು ಹೇಳಿದಾಗ ಸಭಿಕರನೇಕರು ತಲೆದೂಗಿದರಂತೆ.

## ಹೃದಯದೊಳಗಿನ ಹಲಾಹಲ

ಶಸ್ತ್ರ ಸಂನ್ಯಾಸಪರಿಷತ್ತಿನೆದುರಿಗಿದ್ದ ಮಹತ್ತ್ವದ ಪ್ರಶ್ನೆಗಳಲ್ಲಿ ' ವಿಷವಾಯುಗಳ ಉಚ್ಚಾಟನ ' ವೂ ಒಂದಿದೆ. ಆದರೆ ಅಲ್ಲಿ ನೆರೆದ ರಾಷ್ಟ್ರೀಯರ ಹೊಟ್ಟೆಯೊಳ ಗಿಂದ ವಿಷಮಯ ಘೂತ್ಕಾರಗಳು ಬರುತ್ತಿದ್ದು, ಅವು ಅಲ್ಲಿನ ವಾತಾವರಣದಲ್ಲಿಯೇ ಮೃತ್ಯುಮಂತ್ರ[illegible] ಊದುತ್ತಿರುವುದನ್ನು ಕಂಡೂ ಕಾಣದವರು [illegible] ದ್ದಾರೆ. ಮಹಾಯುದ್ಧದ ತರುವಾಯ [illegible] ಒಪ್ಪಂದವಾಗಿ, ಕೆಳಗಿನ ನಿರ್ಬಂಧನೆಗಳು ಜರ್ಮ[illegible] ಮೇಲೆ ಹೇರಲ್ಪಟ್ಟುವು:- ಜರ್ಮನ್ ಸೈನ್ಯವು ೧೦೦,[illegible] ಮಾತ್ರ ಇರಬೇಕು. ಕಡ್ಡಾಯದ ಸೈನಿಕಶಿಕ್ಷಣ[illegible] ಇರಕೂಡದು. ಕವಚರಥಗಳು, ಮೇಲ್ತರಗತಿಯ ತೋ[illegible] ಗಳು, ಕೋಟಿಕೊತ್ತಲಗಳು ನಿಷಿದ್ಧ. ನೌಕಾಸೈನ್[illegible] ಸಂಖ್ಯೆ ೧೫೦೦೦ ಮಾತ್ರ. ಯುದ್ಧ ನೌಕೆಗಳು [illegible] ಜಾತಿಯವೂ ಕೂಡಿ ೩೬ಕ್ಕೆ ಮಿಕ್ಕಕೂಡದು. ಅಂತರ್ನೌ[illegible] ಗಳು ಇರಲೇ ಕೂಡದು. ಯುದ್ಧವಿಮಾನಗಳೂ ನಿಷಿ[illegible]. ಇವುಗಳಿಗೆ ಪ್ರತಿಯಾಗಿ ಮಿತ್ರರಾಷ್ಟ್ರಗಳ ಮತ್ತು [illegible] ಮೇಳದ ರಾಷ್ಟ್ರಗಳ ಪರವಾಗಿ ( Allied and Associ- ated Powers ) ' ಶಸ್ತ್ರನಿಯಮನವನ್ನು ಕ್ರಮೇಣ ಖಂಡಿತವಾಗಿ ಮಾಡುವುದಾ ' ಗಿ ಅಭಿವಚನವೂ [illegible] ಲ್ಪಟ್ಟಿತು. ಆದದ್ದು ಮಾತ್ರ ವಿಪರೀತ. ಇಗ್ಲಂಡು, ಅಮೇರಿಕೆ, ಫ್ರಾನ್ಸು, ಇಟಲಿ ಮೊದಲಾದುವುಗ[illegible] ತಂತಮ್ಮ ಶಸ್ತ್ರಬಲವನ್ನು ಮಿತಿಮೀರಿ ಬೆಳೆಸಿಕೊಂಡು[illegible] ಹೊರತು ಕಡಿಮೆ ಮಾಡಲಿಲ್ಲ. ಜರ್ಮನಿ ಈ ಮ[illegible] ಏಕೆ ಒಳಗೊಳಗೆ ಕುದಿಯುತ್ತಿರಬಾರದು?

ಫ್ರಾನ್ಸು ತನ್ನ ಸಮರಸಾಮಗ್ರಿಯನ್ನು ಪರಾಕಾಷ್ಠೆ[illegible] ಯಿಂದ ಅಣಿಮಾಡಿಕೊಂಡಿದೆಯಲ್ಲದೆ ಜರ್ಮನಿಯ ಮೇ[illegible] ಗುಂಟ ಉಕ್ಕಿನ ವಿಶಾಲ ಕೋಟೆಗಳ ಮಾಲಿಕೆಯನ್ನೇ ನಿರ್ಮಿಸುತ್ತಲಿದೆ; ವಿಚಿತ್ರಸ್ಫೋಟಕಶಕ್ತಿಯುಳ್ಳ ಮ[illegible] ನಿಂದ ತುಂಬಿದ ಸುರಂಗಗಳನ್ನು ಸಿದ್ಧಪಡಿಸುತ್ತಲಿ[illegible] ಪಾರಿಸ್‌ನಗರದ ಸಂರಕ್ಷಣಾರ್ಥವಾಗಿ ಆಕಾಶನೌಕೆಗ[illegible] ಪಡೆಯನ್ನೇ ಏರ್ಪಡಿಸುತ್ತಲಿದೆ. ಇದಕ್ಕೆ ಎರಡು ಕಾರ[illegible] ಗಳನ್ನು ಫ್ರೆಂಚರು ಹೇಳುತ್ತಾರೆ. ಒಂದು ಶತಮಾನ ದಲ್ಲಿ ಎರಡು ಸಲ ಪರಕೀಯರು ನಾಡನ್ನೊಳನುಗ್ಗಿ ಬಂದು ಕೊಲೆಸುಲಿಗೆಯನ್ನು ಮಾಡಿದುದರಿಂದ ಶಸ್ತ್ರಸನ್ನಾಹ[illegible] ಅಗತ್ಯವಾಗಿಯೇ ಇದೆ. ಅಲ್ಲದೆ, ಹೊರಹೊರಗೆ ಜರ್ಮ ನಿಯ ಸಮರಸಿದ್ಧತೆಯು ನಿರ್ಬಂಧಿತವಾಗಿದ್ದರೂ, ಗುಪ್ತ ವಾಗಿ ವಿವಿಧ ಸಾಮಗ್ರಿಯನ್ನು ಸಿದ್ಧಪಡಿಸುವ ಹಲವ[illegible] ಜರ್ಮನ್ ಕಾರಖಾನೆಗಳು ಹಾಲಂಡ್ ಸ್ವಿಟ್ಸರ್ಲಂಡ್ ಗಳಲ್ಲಿ ಇದ್ದುದು ಬೈಲಿಗೆ ಬಂದಿದೆಯೆಂದು ಫ್ರೆಂಚ[illegible] ದೋಷಾರೋಪಣೆಯಿದೆ.

CC-0. Jangamwadi Math Collection. Digitized by eGangotri

ಬ್ರಿಟಿಶರಿಗೆ ಅಂತರ್ನೌಕೆಗಳು ಬೇಡ— ಏಕೆಂದರೆ ತಮ್ಮ ಯುದ್ಧನೌಕೆಗಳಿಗೆ ವಿಪತ್ತು ಬಂದೀತು. ಅಮೇರಿಕನರಿಗೆ ಆ ಕವಚರಥಗಳ ಸುದ್ದಿ ಬೇಡ— ಏಕೆಂದರೆ ತಮ್ಮ ಹತ್ತಿರ ಅಷ್ಟು ಒಳ್ಳೆಯವು ಇಲ್ಲ. ಅಲ್ಲದೆ ತಮ್ಮಷ್ಟಕ್ಕೆ ತಾವು ಸ್ವತಂತ್ರರಾಗಿರುವುದರಿಂದ, ಈ ಶಾಂತಿಪರಿಷತ್ತಿನ ಶಾಂತಿಪಾಠದಲ್ಲಿ ಅವರಿಗಷ್ಟು ಆಸ್ಥೆಯೂ ಇಲ್ಲ.

**' ತೃತೀಯಃ ಪಂಥಾಃ '**

ಶಸ್ತ್ರನಿರೋಧನವು ಕೃತ್ರಿಮಮಾರ್ಗವೆಂದೂ, ಈಗಿನ ಪರಿಸ್ಥಿತಿಗನುಸಾರವಾಗಿ ತಂತಮ್ಮ ರಾಷ್ಟ್ರವನ್ನು ಯುದ್ಧಕ್ಕೆ ಸಿದ್ಧವಾಗಿಡುವುದೇ ಒಳ್ಳೆಯದೆಂದೂ, ಅಂತರರಾಷ್ಟ್ರೀಯ ರಾಜಕೀಯ ಧೋರಣೆಗಳಲ್ಲಿನ ವೈಷಮ್ಯವನ್ನು ದೂರಮಾಡುವುದೇ ಉಪಾಯವೆಂದೂ ನಂಬುವವರಿದ್ದಾರೆಂಬುದನ್ನು ಮೇಲೆಯೇ ಹೇಳಿದೆ. ಇವರೊಂದು ಬಗೆಯಿಂದ ಸಾಮ್ರಾಜ್ಯವಾದಿಗಳು. ವಿಶ್ವಕ್ರಾಂತಿಗಾಗಿ ರಶಿಯವು ತನ್ನ ಯುದ್ಧಬಲವನ್ನು ಮಿತಿಮೀರಿ ಸಜ್ಜುಗೊಳಿಸುತ್ತಿರುವ ಭೀತಿಯು ಭೂತವಾಗಿ ಇವರನ್ನು ಬಾಧಿಸುತ್ತಿದೆ. ಫ್ರೆಂಚರ ಆಪಾದಮಸ್ತಕವಾದ ಯುದ್ಧಸಿದ್ಧತೆ ಇವರಿಗೆ ತಪ್ಪೆನಿಸುವುದಿಲ್ಲ. ಇಂಥವರಲ್ಲೊಬ್ಬರು Basil P. Howell ಎಂಬವರು. ಅವರು ತಮಗೆ ಮಾನ್ಯರಾದವರೊಬ್ಬರ ಅಭಿಪ್ರಾಯವನ್ನು ಈ ರೀತಿಯಾಗಿ ಉದಾಹರಿಸುತ್ತಾರೆ: ' ಶಸ್ತ್ರಗಳ ಅಗತ್ಯವನ್ನು ಕಡಿಮೆ ಮಾಡುವುದೇ ಶಸ್ತ್ರನಿಯಮನದ ದಾರಿ. ಶಾಂತಿಗೆ ಪಟ್ಟಗಟ್ಟುವುದಾದರೆ, ರಾಷ್ಟ್ರ ರಾಷ್ಟ್ರಗಳಲ್ಲಿನ ವೈಮನಸ್ಯಗಳ ಮೂಲವನ್ನು ಕಂಡುಹಿಡಿದು, ಅವುಗಳ ನಿವಾರಣೋಪಾಯವನ್ನು ಯೋಚಿಸಬೇಕು. ಇದೇ ಯುದ್ಧಬಹಿಷ್ಕಾರದ ಬೀಜಮಂತ್ರ. ಯುದ್ಧದ ಭೀತಿಯು ತೊಲಗಿದೊಡನೆ, ಹೊರಗಣ ( ಅಂತರರಾಷ್ಟ್ರೀಯ ) ಯಾವ ಒತ್ತಾಯವೂ ಇಲ್ಲದೆ ರಾಷ್ಟ್ರಗಳು ತಂತಮ್ಮ ಯುದ್ಧಸಾಮಗ್ರಿಯನ್ನು ಕಡಿಮೆ ಮಾಡಿಯೇ ಮಾಡುವವು.'

ಮೇಲಿನದೆಲ್ಲ ಸರಿಯೇ. ಇದೇ ಯುಕ್ತಿವಾದವನ್ನು ಕೊನೆಮುಟ್ಟಿಸಿ,ಹಿಂದುಸ್ಥಾನದವಿಷಯದಲ್ಲೂ ಉಪಾಯಯೋಜನೆಯನ್ನು ಮಾಡಲು ಈ ಸಾಮ್ರಾಜ್ಯವಾದಿಗಳು ಸಿದ್ಧರಿರುವರೇ ? ಬ್ರಿಟನಿನ ಊಳಿಗದಾಳಾಗಿ ಉಳಿಯುವುದರಲ್ಲಿ ಹಿಂದುಸ್ಥಾನಕ್ಕೆ ಶಾಂತಿಯಿಲ್ಲವೆಂಬುದನ್ನು ಇವರು ಅರಿಯರೇ ? ಹಿಂದುಸ್ಥಾನ– ಬ್ರಿಟನುಗಳ ನಡುವಿನ ವೈಷಮ್ಯ-ವೈಮನಸ್ಯಗಳನ್ನು ದೂರಮಾಡಲು ಯಾವ ಪ್ರಯತ್ನಗಳನ್ನು ಇವರು ಮಾಡುತ್ತಿದ್ದಾರೆ ? ಅಥವಾ ಇವರ ಶಾಂತಿಸನ್ನಾಹಪಿಚಾರದಲ್ಲಿ ಹಿಂದುಸ್ಥಾನಕ್ಕೆ ಅಸ್ತಿತ್ವವೇ ಇಲ್ಲವೋ ?

**ಅಸ್ತಾಭಿಮುಖಸಾಮ್ರಾಜ್ಯ**

ಈ ತಲೆಬರೆಹದಲ್ಲಿ Quincey E. Doyle ಎಂಬವರು ಅಮೇರಿಕೆಯ 'Negro World,' ಪತ್ರಿಕೆಯಲ್ಲಿ ಒಂದು ಲೇಖವನ್ನು ಬರೆದಿರುವರು. ಅವರ ಅಭಿಪ್ರಾಯವು ಸ್ವಲ್ಪದರಲ್ಲಿ ಹೀಗಿದೆ:— Bank of England ( ಇಂಗ್ಲಂಡಿನ ಪ್ರಸಿದ್ಧ ಬ್ಯಾಂಕಿದು ) ಮತ್ತು ಇಂಗ್ಲಿಷ ನೌಕಾಬಲ ( Navy ) ಇವೆರಡು ಜಗತ್ತಿನಲ್ಲಿ ಸ್ಥಿರಸ್ಥಾವರತೆಯ ಸಂಕೇತಗಳಾಗಿದ್ದುವು. ಆದೀಗ ಹುಸಿಯಾಯಿತು. ಆ ಬ್ಯಾಂಕು ಫ್ರೆಂಚ ಮತ್ತು ಅಮೇರಿಕನ್ ಬ್ಯಾಂಕುಗಳಿಂದ ಕಡ ತೆಗೆದುಕೊಳ್ಳುವ ಹೊತ್ತು ಬಂದಿದೆ; ಮತ್ತು 'ನೇವಿ' ಯಲ್ಲಿ ಬಂಡುಗಾರಿಕೆಯೆದ್ದು ಅದರ ಕೀರ್ತಿ ಹುಡಿಗೂಡತೊಡಗಿದೆ.

ಜರ್ಮನಿಯು ಜಗತ್ತಿನ ವ್ಯಾಪಾರವನ್ನು ಆಕ್ರಮಿಸಬಹುದೆಂಬ ಭೀತಿಯಿಂದ ಬ್ರಿಟಿಶರು ಅವರೊಡನೆ ಯುದ್ಧಮಾಡಿ ಪಡೆದುದು ಟೊಳ್ಳು ಗೆಲುವನ್ನೇ, ಏಕೆಂದರೆ ಯುದ್ಧಾನಂತರದಲ್ಲಿ ಬ್ರಿಟಿಶರು ಜರ್ಮನಿಯಲ್ಲಿ ತೊಡಗಿಸಿದ ಬಂಡವಾಳವು ತೀರಾ ಅಸುರಕ್ಷಿತವಾಗಿದೆ. ಜರ್ಮನಿಯು ತತ್ತರಿಸಿದರೆ ಇಂಗ್ಲಂಡಿಗೆ ದೊಡ್ಡ ಸಂಕಟವೇ.

ಇತ್ತಕಡೆ ಒಂದು ಕಾಲಕ್ಕೆ ಮಿತ್ರರಾಷ್ಟ್ರಗಳೆಂದೆನಿಸಿಕೊಂಡ ಫ್ರಾನ್ಸು ಮತ್ತು ಅಮೇರಿಕೆಯು ಇಂಗ್ಲಂಡಿನ ಕೈ ಬಿಟ್ಟರೆ, ಅದರ ಗತಿಯೇನೋ ?

ಮಹಾ ಯುದ್ಧಕಾಲದಲ್ಲಿ ಇಂಗ್ಲಂಡಿನ ಸ್ವಾಭಾವಿಕ ಮತ್ತು ಸ್ವಜೀವನಕ್ಕೆ ಅಗತ್ಯವಾದ ನೇಯ್ಗೆ ಮತ್ತು ಕಲ್ಲಿದ್ದಲಿಯ ಉದ್ಯಮಗಳು ನಿಂತುಹೋಗಿ ಸ್ಫೋಟಕ ದ್ರವ್ಯಗಳ ಮತ್ತು ಲೋಹಾದಿಗಳ ವಸ್ತುಗಳನ್ನು ತಯಾರಿಸುವುದಕ್ಕೆ ಅತಿ ಪ್ರಾಧಾನ್ಯವು ಬಂದಿತು. ಒಮ್ಮೆ ತಪ್ಪಿದುದು ತಪ್ಪಿಯೇ ಹೋಯಿತು. ನೇಯ್ಗೆ ಮತ್ತು ಕಲ್ಲಿದ್ದಲಿಗಳ ಉದ್ಯೋಗಗಳಲ್ಲಿ 'ಮಿತ್ರರಾಷ್ಟ್ರ'ಗಳಿಗಿಂತ ಇಂಗ್ಲಂಡು ಈಗ ತೀರಾ ಹಿಂದು. ಜರ್ಮನಿಯ ವ್ಯಾಪಾರ

CC-0. Jangamwadi Math Collection. Digitized by eGangotri

ಸಂಘಟನೆಯು ಇಂಗ್ಲಂಡಿಗಿಂತ ಮೇಲ್ತರಗತಿಯದು. ಇತ್ತ ಹಿಂದುಸ್ಥಾನವೂ ಇಂಗ್ಲಿಷರ ನೇಯ್ಗೆಯ ವ್ಯವಸಾಯಕ್ಕೆ ಬಲವಾದ ಪೆಟ್ಟನ್ನು ಕೊಟ್ಟಿದೆ.

ನೌಕಾಸಾರ್ವಭೌಮತ್ವಕ್ಕಾಗಿ ಜರ್ಮನರೊಡನೆ ಯುದ್ಧ ಮಾಡಿದ ಇಂಗ್ಲಿಷರಿಂದು ನೌಕಾಬಲದ ದೃಷ್ಟಿಯಿಂದ (ಉಳಿದ ಮಿತ್ರರಾಷ್ಟ್ರಗಳೊಡನೆ ಹೋಲಿಸಿ ನೋಡಿದರೆ) ಸಾಮಾನ್ಯ ಜನಾಂಗದವರಾಗಿದ್ದಾರೆ.

## ಐರ್ಲಂಡಿನ ಚುನಾವಣೆ

ಡಿ. ವೆಲೆರಾನ ಸ್ವಾತಂತ್ರ್ಯಪಕ್ಷವು ವಿಜಯಿಯಾಗಿದ್ದು ಇಂಗ್ಲಂಡಿಗೆ ಪ್ರತಿವರ್ಷ ಸಲ್ಲುವ ೩೦ ಲಕ್ಷ ಪೌಂಡಿನ ಕರವನ್ನು ಇನ್ನು ಮೇಲೆ ನಿಲ್ಲಿಸಲಾಗುವುದೆಂದೂ, 'ಡೇಲಿ'ನ ಸಭಾಸದರು ಮಾಡಬೇಕಾದ ರಾಜನಿಷ್ಠೆಯ ಪ್ರತಿಜ್ಞೆಯನ್ನು ತೆಗೆದುಬಿಡಲಾಗುವುದೆಂದೂ ಆತ ತಿಳಿಸಿದ್ದಾನೆ. ಬ್ರಿಟಿಶ ಸರಕಾರವು ಇವೆರಡೂ ಸಂಗತಿಗಳು ಇಂಗ್ಲಂಡು ಐರ್ಲಂಡುಗಳ ನಡುವಿನ ಒಪ್ಪಂದದ ಮೂಲಭೂತ ಅಂಶಗಳೆಂದೂ, ಅವುಗಳನ್ನು ಮುಟ್ಟಲಾಗದೆಂದೂ, ಹಾಗೆ ಮಾಡುವುದು ಎರಡೂ ರಾಷ್ಟ್ರಗಳಲ್ಲಿನ ಸಖ್ಯಭಾವಕ್ಕೆ ಬಾಧಕವೆಂದೂ ತಿಳಿಸಿದ್ದಾರೆ. ಡಿ. ವೆಲೆರಾನ ಅಭಿಪ್ರಾಯದಲ್ಲಿ 'ಪ್ರತಿಜ್ಞೆ'ಯು ಒತ್ತಾಯದ್ದಾಗಿರದೆ, ಐಚ್ಛಿಕ (Optional) ವಾಗಿದೆ; ಉತ್ತರ ಐರಿಷ್ ಸರಕಾರವು ಕರವನ್ನು ಕೊಡುತ್ತಿಲ್ಲ, ದಕ್ಷಿಣವಷ್ಟೇ ಏಕೆ ಕೊಡಬೇಕು? ಅಲ್ಲದೆ ಐರ್ಲಂಡಿನ ಸುರಾಜ್ಯಕ್ಕೂ ಸ್ವರಾಜ್ಯಕ್ಕೂ ಅದನ್ನು ಕೊಡದಿರುವುದು ಅಗತ್ಯವೇ ಇದೆ; ಇನ್ನು ಸಖ್ಯದ ಮಾತೋ–ಇಬ್ಬರಲ್ಲಿಯೂ ಸಮಾನಸ್ಕಂಧತೆಯುಂಟಾದ ಮೇಲೆಯೆ ಅಲ್ಲವೆ ಶಾಂತಿ-ಸೌಖ್ಯ-ಸಖ್ಯಗಳು ನೆಲೆಗೊಳ್ಳುವುದು? ವೆಲೆರಾನ ಧ್ಯೇಯವಾದವು ಎಷ್ಟು ಮಟ್ಟಿಗೆ ವ್ಯವಹಾರ ಸೃಷ್ಟಿಯಲ್ಲಿಳಿಯುತ್ತದೆಯೋ–ಭಾರತೀಯರಾದ ನಾವು ಕೌತುಕದಿಂದ ನೋಡಬೇಕಾಗಿದೆ.

## ಮುಸಲ್ಮಾನರ ರಾಜಕೀಯ ಮಹತ್ವಾಕಾಂಕ್ಷೆ

ಫ್ರೆಂಚರಲ್ಲೊಬ್ಬರಾದ Raymond Lacoste ಎಂಬವರು L'Europe Nouvelle ಎಂಬ ಅಂತರರಾಷ್ಟ್ರೀಯ ಪ್ರಶ್ನೆಗಳನ್ನು ಚರ್ಚಿಸುವ ಸಾಪ್ತಾಹಿಕದಲ್ಲಿ ಬರೆದ ಲೇಖನವೊಂದು New India ಪತ್ರಿಕೆಯಲ್ಲಿ ಪ್ರಕಟವಾಗಿದೆ. ಅದರ ಸಾರಾಂಶವನ್ನು ಎಲ್ಲರೂ ತಿಳಿದುಕೊಳ್ಳುವುದು ಅಗತ್ಯ.

೧೯೩೧ ನವೆಂಬರಿನ ೧೧ನೆಯ ದಿನ ಅಸ್ತಂಗತ ಖಲೀಫನ ಕುಮಾರಿಯಾದ ದುರ್–ಐ–ಶೆವಾರ್ ಎಂಬಾಕೆಯೊಡನೆ ಹೈದ್ರಾಬಾದದ ನಿಜಾಂ ದೊರೆಗಳ ಜ್ಯೇಷ್ಠಪುತ್ರರಾದ ನವಾಬ್ ಅಜಂ ಜಹಾ ಅವರ ವಿವಾಹವಾಯಿತು.... ಈ ವಿವಾಹದ ಸಂಧಾನವನ್ನು ಮಾಡಿದವರು ಮೌ. ಶೌಕತಲ್ಲಿಯವರು. ಮಹಮ್ಮದಲ್ಲಿಯವರ ನಿಧನದ ತರುವಾಯ ಇವರು ತಮ್ಮ ಬಂಧುಗಳ ಪ್ರೇತಸಂಸ್ಕಾರವನ್ನು ಜೆರುಸಲೇಮಿನ ಓಮರನ ಮಸೀದಿಯಲ್ಲಿ ಮಾಡಿಸಿದರಲ್ಲದೆ, ಅಲ್ಲಿಯ ಧರ್ಮಾಧಿಕಾರಿ (Grand Mufti) ಯಾದ ಹಾಜ್ – ಅಮಿನ್ – ಅಲ್ – ಹುಸೇನಿ ಎಂಬ ಮಹತ್ವಾಕಾಂಕ್ಷಿಯೂ ಚತುರನೂ ಆದ ತರುಣನೊಡನೆ ಮುಸಲ್ಮಾನರ ಸಂಘಟನೆಯ ಬಗ್ಗೆ ಒಂದು ಯೋಜನೆಯನ್ನು ಸಿದ್ಧಪಡಿಸಿದರು.

ಕೈರೊದಲ್ಲಿನ ಮುಸಲ್ಮಾನ ವಿಶ್ವವಿದ್ಯಾಲಯವು ಬಹಳ ಸಂಸ್ಕಾರಪ್ರಿಯವಾದುದರಿಂದ ಜೆರುಸಲೇಮಿನಲ್ಲಿ ಇನ್ನೊಂದು ಅತಿ ವಿಸ್ತಾರವಾದುದು ಪ್ರಸ್ಥಾಪಿತವಾಗಬೇಕೆಂದು ಆ ಯೋಜನೆಯ ಭಾಗವೊಂದು.... ಕಾಂಜರ್ವೇಟಿವ್ ಪಕ್ಷವು ಪ್ರಬಲವಾಗಿರುವುದರಿಂದ ಇಂಗ್ಲಿಷ್ ರಾಜನೀತಿಯು ಇನ್ನು ಮೇಲೆ ಹಿಂದುಗಳಿಗೆ ಪ್ರತಿಯಾಗಿ ಮುಸಲ್ಮಾನರನ್ನೇ ಬೆಂಬಲಿಸಿದರೆ ಆಶ್ಚರ್ಯವಿಲ್ಲ... ಅಂತೂ ಈ ಮದುವೆಯಿಂದುಂಟಾದ ಆಪ್ತತ್ವಕ್ಕೆ ಬ್ರಿಟಿಶ್ ಸರಕಾರವು ಅಭೀಷ್ಟ ಚಿಂತನವನ್ನೇ ಸಲ್ಲಿಸಿದೆಯೆಂಬುದರಲ್ಲಿ ಸಂದೇಹವಿಲ್ಲ. ಯಾರು ಬಲ್ಲರು? ಖಲೀಫನ ಜಗದ್ಗುರುತ್ವವು ಮತ್ತೆ ಜೀರ್ಣೋದ್ಧಾರವಾದರೆ, ಈಗಿನ (ನಿಷ್ಕ್ರಾಂತ) ಖಲೀಫನ ನಿಧನದ ತರುವಾಯ ಅಸಫ್ ಜಹಾ ಅವರ ವಂಶದಲ್ಲಿ ಮತ್ತೆ ಆ ಮಹಮ್ಮದೀಯ ಜಗದ್ಗುರುತ್ವವು ಬರಬಹುದು. ಈ ಮೂಲಕ ಬ್ರಿಟಿಶರ ಏಶಿಯಾಖಂಡಗಲ್ಲಿನ ರಾಜನೀತಿಗೆ ಎಂತಹ ಬೆಂಬಲವು ದೊರೆತೀತೆಂಬುದನ್ನು ಎಲ್ಲರೂ ಊಹಿಸಬಲ್ಲರು.... ಹಿಂದೀ ಸಂಸ್ಥಾನಗಳಲ್ಲಿ ಬಹುಸಂಖ್ಯಾಕವಾದುವು ಹಿಂದೂ ರಾಜರಿಂದಲೇ ಆಳಲ್ಪಡುವುದರಿಂದ ಜಿನ್ನಾ ಅವರಂತಹ ಕೆಲವು ಮುಸಲ್ಮಾನ ಮುಖಂಡರು ಅಖಿಲ ಭಾರತೀಯ ಸಂಯುಕ್ತ ರಾಜ್ಯಪದ್ಧತಿಯ ಕಲ್ಪನೆಯನ್ನು ವಿರೋಧಿಸಿದರು....... ಕಾಶ್ಮೀರ ಸಂಸ್ಥಾನದಲ್ಲಿ ಮಹಮ್ಮದೀಯರು ಬಹುಸಂಖ್ಯಾಕರಾಗಿದ್ದು ಅರಸನು ಹಿಂದುವಾಗಿರುವುದರಿಂದ

CC-0. Jangamwadi Math Collection. Digitized by eGangotri

ವಹಾಬಿಗಳ ಉತ್ತೇಜನದ ಮೂಲಕ ಮಹಮ್ಮದೀಯರು ಆತನನ್ನು ತಳ್ಳಿ, ಅಫಗಾನಿಸ್ತಾನದ ಸಿಷ್ಹಾಸನಕ್ಕೆಂತ ರಾಜನಾದ ಅಮಾನುಲ್ಲಾನ ಬಂಧುವಾದ ಹಬೀಬುಲ್ಲಾನಿಗೆ ಪಟ್ಟಗಟ್ಟಲು ಪ್ರಯತ್ನಿಸಿದರೆಂದು ಊಹಿಸಲು ಅವಕಾಶವಿದೆ.

## ಮಾರ್ಜಾರ ಮೂಷಿಕ ನೀತಿ

ಸಿ. ಜಿನರಾಜದಾಸರು ಪ್ರಸಿದ್ಧ ಥಿಆಸೊಫಿಸ್ಟರು. ಉದಾರ ಪಕ್ಷೀಯರು. ಅವರು New India ಪತ್ರಿಕೆಯಲ್ಲಿ ಬರೆದ ಲೇಖನವೊಂದರ ಅಭಿಪ್ರಾಯವನ್ನು ಕೆಳಗೆ ಕೊಟ್ಟಿದೆ:- ಇಂಗ್ಲಂಡಿನಲ್ಲಿ ಸ್ತ್ರೀ ಸ್ವಾತಂತ್ರ್ಯವಾದಿಗಳು ಒಂದು ಚಳವಳಿಯನ್ನೆಬ್ಬಿಸಿದರು ( Suffragette Agitation ). ಶಾಸನಭಂಗದ ಆರೋಪದ ಮೇಲೆ ಅವರು ಸೆರೆಮನೆಗಟ್ಟಲ್ಪಟ್ಟರು. ಹಲವರು ಅಲ್ಲಿ ಪ್ರಾಯೋಪವೇಶನ ( Hunger- strike) ವನ್ನಂಗೀಕರಿಸಿದರು. ಎಷ್ಟು ತಪ್ಪುಗಳನ್ನು ಮಾಡಿದರೂ ಉಳಿದ ಬಂದಿಗಳಿಗೂ ಇವರಿಗೂ ಅಂತರವಿತ್ತೆಂಬುದನ್ನು ಅಲ್ಲಿಯವರು ಅರಿತವರಾಗಿದ್ದರು. ಉಳಿದವರು ಸಮಾಜಶತ್ರುಗಳು, ಇವರು ಧ್ಯೇಯ ಪ್ರೇರಿತರು. ಸರಕಾರವು ಈ ವಿಷಯದಲ್ಲಿನ ಜನಜಾಗೃತಿಯನ್ನು ಗಮನಕ್ಕೆ ತಂದುಕೊಂಡು ಅವರನ್ನು 'ವಚನ (Parole)' ದ ಮೇಲೆ ಬಿಡಬೇಕಾಯಿತು. ಅವರು ಆರೋಗ್ಯವುಳ್ಳವರಾದಕೂಡಲೆ ಅವರನ್ನು ಮತ್ತೆ ಬಂಧಿಸುತ್ತಲಿದ್ದಿತು. ಇದಕ್ಕೆ ಅಲ್ಲಿಯ ಜನರು Cat and Mouse Policy ( ಮಾರ್ಜಾರ ಮೂಷಿಕ ನೀತಿ ) ಯೆಂದು ಹೆಸರಿಟ್ಟರು. ಬೆಕ್ಕು ಇಲಿಯು ಜರ್ಜರವಾದ ಮೇಲೆ ಅದನ್ನು ಬಿಡುತ್ತದೆ, ಅದು ಚೇತನಗೊಂಡು ಸರಿದಾಡಹತ್ತಿದೊಡನೆ ಮತ್ತೆ ಹಿಡಿಯುತ್ತದೆ.... ಅಂತೂ ಇಂತಹ ಶಾಸನಭಂಗ ಪ್ರವೃತ್ತರಿಗೂ ಉಳಿದ ಬಂದಿಗಳಿಗೂ ಅಲ್ಲಿನ ಸರಕಾರವು ಒಂದು ನೈತಿಕ ಭೇದವನ್ನು ಕಲ್ಪಿಸಿತು. ಅದೇ ಮಾತು ಹಿಂದುಸ್ಥಾನಕ್ಕೂ ಏಕೆ ಅನ್ವಯಿಸಬಾರದೆಂದು ಜಿನರಾಜದಾಸರು ಕೇಳುತ್ತಾರೆ. ಸೆರೆಮನೆ ಸೇರುವವರು ಹಿಂಸಾಪಕ್ಷದವರೇನೂ ಅಲ್ಲ, ಸಮಾಜ ಹಿತಶತ್ರುಗಳೂ ಅಲ್ಲ. ಅವರ ಧೋರಣೆಯಲ್ಲಿ ತಪ್ಪಿರಬಹುದು, ಆದರೂ ಅವರು ಉದಾತ್ತವಿಚಾರಪ್ರೇರಿತರು. ಬಿಡುಗಡೆಯಾದಕೂಡಲೆ ಪೋಲೀಸ ಚಾವಡಿಗೆ ಹೋಗಿ 'ಪ್ರೆಜೆಂಟ್ ಸರ್' ಎನ್ನುವ ಅಪಮಾನವನ್ನು ಅವರು ಸಹಿಸಬೇಕೇಕೆ? ಅವರ ಮೇಲೆ ಅಂತಹ ನಿರ್ಬಂಧನೆಗಳನ್ನು ಅವರ ಮೇಲೆ ಏಕೆ ಹೇರಬೇಕು? ಅಲ್ಲದೆ ಭಾವೀ ಸ್ವರಾಜ್ಯದಲ್ಲಿ ಸರಕಾರವು ಇವರೊಡನೆಯೇ ವ್ಯವಹರಿಸಬೇಕಾಗಿ ಬರುವುದು ಕಟ್ಟಿಟ್ಟ ಮಾತು.

## ಚೀನ ಜಪಾನ ಸಂಗ್ರಾಮ

ಮಂಚೂರಿಯಾ ಪ್ರಾಂತವು ಚೀನದ ಈಶಾನ್ಯಮೂಲೆಯಲ್ಲಿದ್ದು ಉತ್ತರಕ್ಕೆ ಸೈಬಿರಿಯಾ, ಆಗ್ನೇಯಕ್ಕೆ ಜಪಾನಿ ಸಮುದ್ರಗಳು ಇವೆ. ಅದರ ವಿಸ್ತಾರವು ಇಂಗ್ಲಂಡು ಮತ್ತು ವೇಲ್ಸಗಳ ೬ ಮಡಿ ಇದೆ, ಅಥವಾ ಮುಂಬೈ ಪ್ರಾಂತಕ್ಕಿಂತ ದೊಡ್ಡದು ಬಿಹಾರ-ಓರಿಸಾ ಪ್ರಾಂತಕ್ಕಿಂತ ಚಿಕ್ಕದು ಇದೆ. ಅಲ್ಲಿ ಸುಮಾರು ೩ ಕೋಟಿ ಚೀನೀ ಜನರಿದ್ದು, ಜಪಾನಿಗಳು ೧ಗಿಂದ ೩ ಲಕ್ಷದವರೆಗೂ ಕೋರಿಯನರು ೭ ಲಕ್ಷದವರೆಗೂ ಇರುವರು. ಇದು ಅತಿ ಸಮೃದ್ಧ ದೇಶವಾದುದರಿಂದ ರಶಿಯಾ ಜಪಾನಗಳೆರಡೂ ಅದರ ಮೇಲೆ ಕಣ್ಣಿಟ್ಟಿದ್ದುವು. ೧೯೦೫ರ ರಶಿಯಾ ಜಪಾನ ಸಂಗ್ರಾಮದಲ್ಲಿ ರಶಿಯನರು ಪರಾಭೂತರಾಗಿ, ಜಪಾನರಿಗೆ ಮಂಚೂರಿಯದ ದಕ್ಷಿಣಭಾಗದಲ್ಲಿ ಅಧಿಕಾರವು ದೊರೆತು, ಅಲ್ಲಿಯೊಂದು ರೇಲ್ವೆಮಾರ್ಗವನ್ನು ಕಟ್ಟಲು ಚೀನದಿಂದಲೂ ಅವರು ಸಮ್ಮತಿಯನ್ನು ಪಡೆದುಕೊಂಡರು. ಈ ರೇಲ್ವೆಯ ಬೆಳವಣಿಗೆಯೂ ಹಾಗೇ ಸಾಗುತ್ತ ಹೋಗಿ, ೧೯೧೭ರ ಸುಮಾರಿಗೆ ಜಪಾನು ಮಂಚೂರಿಯದ ದಕ್ಷಿಣದಲ್ಲಿ ತನ್ನ ಕಾಲನ್ನು ಭದ್ರವಾಗಿ ಊರಿಕೊಂಡಿತು. ರೇಲ್ವೆಮಾರ್ಗದ ಎರಡೂ ಬದಿಯಲ್ಲಿ ೧೦ ಮೈಲುಗಳಷ್ಟು ಪ್ರಾಂತವನ್ನು ಸ್ವಾಧೀನ ಪಡಿಸಿಕೊಂಡು ಸುಮಾರು ೧೫೦೦೦ ಜಪಾನಿ ಸೈನಿಕರನ್ನು ಕಾವಲಕ್ಕೆಂದಿಟ್ಟಿತು. ಜಪಾನಿಗಳಿಗೆ ಅಲ್ಲಿ ತಮ್ಮ ಬೆಳೆಯುವ ಜನಸಂಖ್ಯೆಗೆ ಎಡೆಮಾಡಿ ಕೊಡಬೇಕೆಂಬ ಅಪೇಕ್ಷೆಯಿಲ್ಲ. ಅಲ್ಲಿಯ ಹವೆ ಅವರಿಗೆ ಅನುಕೂಲವಿಲ್ಲ. ಅವರ ಕಣ್ಣಿದ್ದುದು ಅಲ್ಲಿಯ ಅಪಾರವಾದ ಖನಿಜ ಮತ್ತು ಸಸ್ಯ ಸಂಪತ್ತಿಯ ಮೇಲೆ. ಮಂಚೂರಿಯದಲ್ಲಿ ಕಲ್ಲಿದ್ದಲಿ, ಕಬ್ಬಿಣ, ಪೆಟ್ರೋಲಗಳ ಖನಿಗಳು ವಿಪುಲವಾಗಿದ್ದು, ವಿವಿಧ ಪ್ರಕಾರದ ಧಾನ್ಯಗಳೂ ಬೆಳೆಯುತ್ತಿವೆ. ಆ ಖನಿಗಳನ್ನು ವಶಪಡಿಸಿಕೊಂಡುದಲ್ಲದೆ, ಎಲ್ಲ ಆರ್ಥಿಕ ವ್ಯವಹಾರದಲ್ಲಿ ಜಪಾನು ಒಟ್ಟಾರೆ ೩ ಅಬ್ಜ ರೂಪಾಯಿಗಳಷ್ಟು ಬಂಡವಾಳವನ್ನು ಹಾಕಿದೆ. ರಶಿಯವು ಸಮಾಜ



CC-0. Jangamwadi Math Collection. Digitized by eGangotri

ವಾದಿಯಾದುದರಿಂದ ಸದ್ಯಕ್ಕಂತೂ ಪರಾಕ್ರಮಣವು ಅದರ ಉದ್ದಿಶ್ಯವಾಗಿಲ್ಲ. ರಶಿಯದ ಪ್ರಭಾವವು ಚೀನದ ಮೇಲೆ ಬೀಳುವ ಸಂಭವವಿದೆಯಾದ್ದರಿಂದ, ಜಪಾನಿನ ಮೈತ್ರಿಯು ಇಂಗ್ಲಂಡಿಗೆ ಅಗತ್ಯ. ಅಲ್ಲದೆ ಆರ್ಥಿಕ ವಿಪ್ಲವದ ಮೂಲಕ ಯುರೋಪಿಯ ರಾಷ್ಟ್ರಗಳಾವುವೂ (ಮನಸ್ಸಿದ್ದರೂ) ಪೂರ್ವ ದಿಕ್ಕಿನ ಈ ತೊಡಕಿನಲ್ಲಿ ತಮ್ಮ ಕೈಯನ್ನು ಸಿಕ್ಕಿಸಿಕೊಳ್ಳಲಾರವು. ಎಂತಲೇ ಜಪಾನಿಗೆ ಕ್ರಮೇಣ ತನ್ನ ಆಕ್ರಮಣ ನೀತಿಯನ್ನು ಸಾಧಿಸಲು ಅನುವು ದೊರೆಯಿತು. ಮಹಾಯುದ್ಧಕಾಲದಲ್ಲಿ ಅದು 'ಮಿತ್ರರಾಷ್ಟ್ರ' ವಾಗಿದ್ದರೂ ಪೂರ್ವ ದಿಕ್ಕಿನಲ್ಲಿನ ಜರ್ಮನ ಒಕ್ಕಲುನಾಡನ್ನು ವಶಪಡಿಸಿಕೊಂಡು ಬಿಟ್ಟಿತಲ್ಲದೆ ಇನ್ನಾವ ನೆರವನ್ನೂ ಅದು ನೀಡಲಿಲ್ಲ. ಚೀನವು ಅಂತಃಕಲಹಗಳಿಂದ ಜರ್ಜರಿತ. ತೀರ ಮೊನ್ನೆ ಪ್ರಜಾಪ್ರಭುತ್ವವನ್ನು ಪ್ರಸ್ಥಾಪಿಸಿದ ಮೇಲೆ ಆದಕ್ಕೆ ಜಪಾನಿನ ಅತಿಕ್ರಮಣವನ್ನು ಲಕ್ಷಿಸಲು ಸಾಧ್ಯವಾಯಿತು. ಅಂದಿನಿಂದ ಅದು ಜಪಾನಿಗೆ ಈ ವಿಷಯದಲ್ಲಿ ವಿರೋಧವನ್ನು ಮಾಡುತ್ತಲಿದೆ. ಜಪಾನರ ಪ್ರತ್ಯಾರೋಪವೇನಂದರೆ, ಚೀನವು ಒಂದು ರಾಷ್ಟ್ರವಲ್ಲವೇ ಅಲ್ಲ – ಆದುದರಿಂದ ಮಂಚೂರಿಯದಲ್ಲಿ ಅದಕ್ಕೆ ಸ್ವಾಮಿತ್ವವು ಇಲ್ಲವೇ ಇಲ್ಲ -ಅಲ್ಲಿಯ ಅರಾಜಕ ಪರಿಸ್ಥಿತಿಯ ಮೂಲಕ ತಾವು ತಮ್ಮ ಹಿತಸಂಬಂಧವನ್ನು ಸಂರಕ್ಷಿಸಲೇಬೇಕು—ಚೀನೀ ದೊಂಬಿಗಾರರಿಂದ ಪಾಳೆಯಗಾರರಿಂದ ತಮ್ಮ ಆಸ್ತಿಪಾಸ್ತಿಗೆ ಧಕ್ಕೆ ತಗಲುತ್ತಿದೆ—ಅವರನ್ನು ಮಂಚೂರಿಯದಿಂದ ಹೊರಕ್ಕಟ್ಟಬೇಕಷ್ಟೆ ಅಲ್ಲ, ಪಶ್ಚಿಮದ ಕೋಟೆಕೊತ್ತಲಗಳನ್ನೂ ಆಧೀನಪಡಿಸಿಕೊಂಡು ತಮ್ಮವರ ಸಂರಕ್ಷಣೆಯನ್ನು ಮಾಡಲೇಬೇಕು. ಮೊನ್ನಿನ ಸಂಗ್ರಾಮದಲ್ಲಿ ಇದೆಲ್ಲ ಕಂಡುಬಂದಿತು. ಜರ್ಮನರು ಮಹಾಯುದ್ಧಕ್ಕಾಗಿ ಹಲವು ವರ್ಷಗಳಿಂದ ಶ್ರಮಿಸುತ್ತಿದ್ದರೆಂಬ ವರ್ತಮಾನದಂತೆಯೆ ಜಪಾನರ ೫೦ ವರ್ಷದ ಸಿದ್ಧತೆಯ ಕಥೆಯೂ ಉಂಟು.

ಮೊನ್ನಿನ ಶಸ್ತ್ರಸಂನ್ಯಾಸ ಪರಿಷತ್ತು ನೆರೆಯಲಿರುವ ಸಮಯದಲ್ಲಿಯೇ ರಾಷ್ಟ್ರಸಂಘದ ಸದಸ್ಯರಾದ ಚೀನ ಜಪಾನುಗಳಲ್ಲಿ ಇಂತಹ ಘೋರ ಸಂಗ್ರಾಮವು ಸಾಗಿದುದು ಮತ್ತದನ್ನು ನಿರೋಧಿಸಲು ರಾಷ್ಟ್ರಸಂಘದಲ್ಲಿ ಶಕ್ತಿಯಿಲ್ಲದಿರುವುದು ಅನೇಕ ಶಾಂತಿ ಭಕ್ತರಿಗೆ ಅಸಹ್ಯ ವಿಷಾದವನ್ನುಂಟು ಮಾಡಿತು. ಇದರ ಕಾರಣವು ರಾಷ್ಟ್ರಸಂಘದ ಪ್ರಮುಖ ಸದಸ್ಯರಾದ ಇಂಗ್ಲಂಡು, ಅಮೇರಿಕೆ, ಫ್ರಾನ್ಸು, ಇಟಲಿ ಮೊದಲಾದ ದೇಶಗಳು ಜಪಾನಿಗೆ ಪ್ರತಿಕಾರ ಮಾಡಲು ಸಿದ್ಧರಿಲ್ಲದುದೇ. ಮೊನ್ನೆ ಮೊನ್ನೆ ರಾಷ್ಟ್ರಸಂಘದ ಅಧಿವೇಶನವೊಂದು ನೆರೆದು, ಒಂದು ಐಕಮತ್ಯವುಳ್ಳ ನಿರ್ಣಯವು ಜಪಾನಿನ ಕಡೆ ಕಳಿಸಲ್ಪಟ್ಟಿತು. ಆ ನಿರ್ಣಯದ ಮೇರೆಗೆ ಜಪಾನು ತಾನು ಆಕ್ರಮಿಸಿದ ಭಾಗವನ್ನು ತೆರವು ಮಾಡುತ್ತಲಿದೆಯೆಂದು ಪ್ರಕಟವಾಗಿದೆ. ಈ ನಿರ್ಣಯಕ್ಕೆ ಬಹ್ವಂಶದಿಂದ ಯುರೋಪ್ಪಖಂಡದ ಚಿಕ್ಕಪುಟ್ಟ ರಾಷ್ಟ್ರಗಳೇ ಕಾರಣವೆಂತಲೂ ಪ್ರಕಟವಾಗಿದೆ. ಅಂತೂ ಒಮ್ಮೆಯಾದರೂ ಜಾಗ್ರತ ಜನಮತವು ಆಪ್ತ ಸರಕಾರಗಳ ಗುಪ್ತ ಕೂಟವನ್ನು ಭೇದಿಸಲು ಸಮರ್ಥವಾಯಿತೆಂದು ತೋರುತ್ತಿದೆ.

## ಯುರೋಪಿನಲ್ಲಿ ಹೊಸದೊಂದು ಚಳವಳಿ

ಇಂಗ್ಲಂಡು ರಶಿಯಗಳನ್ನು ಬಿಟ್ಟು ಉಳಿದ ಯುರೋಪೀಯ ರಾಷ್ಟ್ರಗಳು ದಿನದಿನಕ್ಕೆ ಒಂದು ಆರ್ಥಿಕ ಸಂಘದಲ್ಲಿ ಸೇರಿಕೊಳ್ಳುವುದರ ಕಡೆಗೆ ಒಲಿಯುತ್ತಲಿವೆ ಮಾತ್ರವಲ್ಲ, ಆ ರಾಷ್ಟ್ರಗಳಲ್ಲಿನ ವಿಶಿಷ್ಟ ಕ್ಷೇತ್ರಸಮೂಹಗಳು ಆರ್ಥಿಕ ವಿಚಾರದಲ್ಲಿ ಏಕೀಕರಣವನ್ನು ಬಯಸುತ್ತಲಿವೆ (Regional Grouping). ಇಂತಹದೊಂದು ಸಮೂಹವು ಉತ್ತರ ಬಾಲ್ಟಿಕ್ಕಿನಲ್ಲಿದೆ. ಡೆನ್ಮಾರ್ಕ್, ಆಯಿಸ್ಲಂಡ್, ನಾರ್ವೆ, ಸ್ವೀಡನ್, ಫಿನ್ಲಂಡಗಳು ಇದರಲ್ಲಿವೆ. ಸ್ಪರ್ಧೆಯಲ್ಲ ಸಹಕಾರವೆಂಬ ತತ್ತ್ವವು ಅವುಗಳಿಗೆ ಒಪ್ಪಿಗೆಯಾಗಿದೆ. ಕಳೆದ ವರ್ಷದ ಡಿಸೆಂಬರ ೧ನೆಯ ದಿನ ಸ್ಟಾಕಹೋಮಿನಲ್ಲಿ ನೆರೆದ ಆ ಪ್ರದೇಶಗಳ ಪರಿಷತ್ತಿನಲ್ಲಿ ನಿರುದ್ಯೋಗಿಗಳ ಪ್ರಶ್ನೆಯನ್ನು ಹೇಗೆ ಬಿಡಿಸಬೇಕು? ಸಾಮಾಜಿಕ ಸಂಬಂಧಗಳು ಹೇಗೆ ಇರತಕ್ಕವು? ಮೊದಲಾದ ವಿಷಯಗಳ ವಿಚಾರವಾಯಿತು. ಈ ದೇಶಗಳ ಸಂಸ್ಕೃತಿ ಒಂದಿದೆ. ಈ ಸ್ಕಾಂಡಿನೇವಿಯನ್ ದೇಶಗಳ ಪರವಾಗಿ ಒಂದು ವಿಶ್ವಕೋಶವು ಮೊನ್ನೆ ಮೊನ್ನೆ ಪ್ರಕಟವಾಗಿದ್ದು, ಹೆಸರುವಾಸಿಯಾದ ಲೇಖಕರು ಅದನ್ನು ರಚಿಸಿದ್ದಾರೆ.

ಇದೇ ಮಾದರಿಯ ಇನ್ನೊಂದು ಸಮ್ಮೇಲನವು (ಬಾಲ್ಕನ್ ರಾಷ್ಟ್ರಗಳದು) ೧೯೩೦ರ ಆಕ್ಟೋಬರದಲ್ಲಿ ನೆರೆಯಿತು. ಆಲ್ಬಾನಿಯಾ, ಬಲ್ಗೇರಿಯಾ, ಗ್ರೀಸ್, ರೂಮಾನಿಯಾ, ತುರ್ಕಸ್ತಾನ, ಯುಗೊಸ್ಲಾವಿಯಾ ಈ

CC-0. Jangamwadi Math Collection. Digitized by eGangotri

ರಾಷ್ಟ್ರಗಳು ಅದರಲ್ಲಿ ಸಮಾವಿಷ್ಟವಾಗಿದ್ದುವು. ಆರ್ಥಿಕ ವಿಷಯಗಳಷ್ಟೆ ಅಲ್ಲ, ಬೌದ್ಧಿಕ ವಿನಿಮಯದ ವಿಚಾರವೂ ಚರ್ಚಿಸಲ್ಪಟ್ಟಿತು. ಈ ಪರಿಷತ್ತೊಂದು ಸ್ಥಾಯಿ ಸಂಸ್ಥೆಯಾಗಿಯೂ ಮಾಡಲ್ಪಟ್ಟಿತು. ೧೯೩೩ರಲ್ಲಿ ಇಸ್ತಂಬೂಲದಲ್ಲಿ ಮತ್ತೊಂದು ಅಧಿವೇಶನವಾಯಿತು. ಪ್ರಬಲ ರಾಷ್ಟ್ರಗಳ ಪ್ರಭಾವಲಯದಲ್ಲಿ ನಡೆಯುವ ದೊಡ್ಡ ದೊಡ್ಡ ಉದ್ಯಮಗಳಿಗಿಂತ ಇಂತಹ ಚಿಕ್ಕಪುಟ್ಟ ರಾಷ್ಟ್ರಗಳ ಚಟುವಟಿಕೆಗಳು ಒಮ್ಮೊಮ್ಮೆ ಹೆಚ್ಚು ಮಹತ್ತ್ವವುಳ್ಳವುಗಳಾಗುವ ಸಂಭವವಿದೆ.

### ಆರ್ಥಿಕಕ್ರಾಂತಿಯು ಅನಿವಾರ್ಯ

ಈವೊತ್ತು ಸಾಮಾಜಿಕಕ್ರಾಂತಿ, ಆರ್ಥಿಕಕ್ರಾಂತಿ ಎಂಬ ಶಬ್ದಗಳನ್ನುಚ್ಚರಿಸುವವರನ್ನು ನಮ್ಮಲ್ಲಿನ ರಾಜಕೀಯ ಪರಿಸ್ಥಿತಿಯ ಮೂಲಕ ಸಮಾಜವಾದಿ, ಸಾಮ್ಯವಾದಿ, ಕ್ರಾಂತಿಕಾರ (Socialist, Communist, Revolutionary) ಎಂದು ಕರೆದುಬಿಡುವ ವಾಡಿಕೆಯಿದೆ. ಆದರೆ ವಿಶ್ವವನ್ನೇ ತುತ್ತುಮಾಡಲು ಹವಣಿಸುತ್ತಿರುವ ಆರ್ಥಿಕಸಂಕಷ್ಟದ ಬುಡಬೇರುಗಳನ್ನು ಎಲ್ಲರು ನಿಷ್ಕಲ್ಮಷ ಬುದ್ಧಿಯಿಂದ ಪರಿಶೋಧಿಸುವುದು ಅತ್ಯಗತ್ಯವಾಗಿದೆ. ಕೆಳಗಿನ ಅಭಿಪ್ರಾಯಗಳು ದುಡುಕಿಬಿಡುವ ಕ್ರಾಂತಿಕಾರರದಾಗಿರದೆ ಸಾವಧಾನತೆಯಿಂದ, ಅನಾಸಕ್ತಿಯಿಂದ ಯೋಚನೆಮಾಡುವ ಒಬ್ಬ ಬೆಲ್ಜಿಯನ್ ಸಮಾಜವಿಜ್ಞಾನಿಗಳೂ, ಪ್ರಗಲ್ಭವಿಚಾರಿಗಳೂ ಆದ ಇಸ್ಮಾಯಿಲ್ ವ್ಹೆಂಡರವೆಲ್ಡ್ ಎಂಬವರವು ಇವೆ.

'ಬಂಡವಾಳ' (Capitalism) ದ ಉತ್ಪಾದನ ಸಾಮರ್ಥ್ಯವೇನೂ ಕಡಿಮೆಯಾಗಿಲ್ಲ. ಮುಂಚಿಗಿಂತ ನೂರಾರುಪಾಲು ಮಿಗಿಲು ಸಂಪತ್ತಿಯಿದೀಗ ನಿರ್ಮಾಣವಾಗುತ್ತಲಿದೆ. ಉಗ್ರಾಣಗಳಲ್ಲಿ ಗೋದಿ, ಕಲ್ಲಿದ್ದಲಿ, ಬಟ್ಟೆಬರೆ ಮೊದಲಾದ ಚರಿತಾರ್ಥಕ್ಕೆ ಆಗತ್ಯವಾದ ವಸ್ತುಗಳು ಬೇಕಾದಷ್ಟಿವೆ. 'ಕಿಕ್ಕಿರಿ ತುಂಬಿದೆ ಭೂಮಿಯ ಕಣಜ'.... ಆದರೆ 'ಬರಿದೋ ಬರಿದೂ ತೆರವೋ ತೆರವೂ ಬಡವರ ಬಗ್ಗರ ತುತ್ತಿನ ಚೀಲಾ!' ನಿರುದ್ಯೋಗಿಗಳ ಸಂಖ್ಯೆ ಹಾರುತ್ತ ಜಿಗಿಯುತ್ತ ಸಾಗಿದೆ. ಬಿಳಿಛಾಯೆಯವರಿಗೂ ಜೀವಿತವು ಜಲತರಂಗದಂತೆ ಅಶಾಶ್ವತವಾಗಿದೆ. ರಶಿಯಾ, ಕಾನಡಾ, ಅರ್ಜಂಟಾಯಿನ ದೇಶಗಳಿಂದ ಅತಿ ಅಗ್ಗವಾಗಿ ಬರುವ ಆಹಾರಪದಾರ್ಥಗಳು ಉಳಿದ ರಾಷ್ಟ್ರಗಳ ಒಕ್ಕಲಿಗರ ಜೀವವನ್ನು ಗಾಸಿಗೊಳಿಸುತ್ತಲಿವೆ. ಗಿರಣಿಯೊಡೆಯರು, ಬ್ಯಾಂಕಿನವರು ಎಲ್ಲರೂ 'ನಾಳೆಯೇನು ಗತಿ?' ಎನ್ನುವರು. ಇಷ್ಟುಮಾತ್ರವಲ್ಲ- ವ್ಯಕ್ತಿಗಳು ಮತ್ತು ವೈಯಕ್ತಿಕ ಬ್ಯಾಂಕುಗಳು ದಿವಾಳಿ ತೆಗೆಯುತ್ತಿರುವಷ್ಟರಲ್ಲಿ ರಾಜ್ಯಕರ್ತೃಗಳೂ ಅದೇ ಮಾರ್ಗವನ್ನು ಹಿಡಿಯುವರೇ ?- ಎಂತಲೂ ಶಂಕೆ ಬಾಧಿಸುತ್ತಲಿದೆ. ಒಂದುಬದಿಗೆ ಎಷ್ಟು ಸಮೃದ್ಧಿಯೊ ಇನ್ನೊಂದು ಬದಿಗೆ ಅಷ್ಟೇ ದಾರಿದ್ರ್ಯ- ಇವುಗಳ ಅರ್ಥವೇನು ?

ಬಂಡವಾಳದ ಉತ್ಪಾದನಶಕ್ತಿ ಮೊದಲಿನಷ್ಟೆ ಇದ್ದರೂ ಅದರ ಉತ್ಪಾದನ ಸ್ವಾತಂತ್ರ್ಯವು ಕಡಿಮೆಯಾಗುತ್ತಲಿದೆ. ಬಂಡವಾಳದವರು ವೈಯಕ್ತಿಕ ಸಾಹಸವನ್ನು ತಾವಾಗಿಯೂ ಬಿಟ್ಟಿದ್ದಾರೆ. ಇದೀಗ ಲಿಮಿಟೆಡ್ ಕಂಪನಿಗಳ ಕಾಲ. ರಾಜಕೀಯ ಕ್ಷೇತ್ರದಲ್ಲಿ ಪ್ರಜಾಪ್ರಭುತ್ವವು ಪ್ರಸ್ಥಾಪಿತವಾಗಿದ್ದರೆ, ಆರ್ಥಿಕ ಕ್ಷೇತ್ರದಲ್ಲಿ 'ಬ್ಯಾಂಕರ್ಸ' ಎಂಬ ಹೊಸ ಸರದಾರರ ದೊರೆತನವು ಕಾಲೂರಿಕೊಂಡಿದೆ. ಸರಕಾರಗಳ ರಾಜನೀತಿಯನ್ನು ನಿರ್ಣಯಿಸುವವರು ಅವರೇ. ಅಲ್ಲದೆ ಕೂಲಿಕಾರರ ಸಂಘಗಳು, ಕೂಲಿಯವರ ವಿಷಯವಾಗಿ ಕಾಯಿದೆಗಳು, ಸರಕಾರಿ ನಿಯಮಗಳು, ಮೇಲ್ವಿಚಾರಕರ ಮಂಡಲಗಳು- ಇವೆಲ್ಲವುಗಳಿಂದ ಬಂಡವಾಳದ ಸಂಘಟನಾಸ್ವಾತಂತ್ರ್ಯವೂ,ಕರ್ತೃತ್ವಶಕ್ತಿಯೂ ಸುತ್ತೂ ಕಡೆಯಿಂದ ನಿಯಂತ್ರಿತವಾಗಿವೆ. ಯಾಂತ್ರಿಕಪ್ರಗತಿ ಮತ್ತು ಅಚ್ಚುಕಟ್ಟುಗಳ ಮೂಲಕ ಎಲ್ಲರ ಅಗತ್ಯಗಳು ಪೂರೈಕೆಯಾಗುವಷ್ಟು ಸಂಪತ್ತಿಯು ಉತ್ಪನ್ನವಾಗುತ್ತಿದ್ದರೂ, ಆರ್ಥಿಕ ಅರಾಜಕತೆಯ ಮೂಲಕ ಅದೆಲ್ಲ ಉಪಯೋಗಕ್ಕೆ ಬಾರದಾಗಿದೆ.

ಸರಕಾರಿ ಆಯವ್ಯಯಗಳಿಗೆ ಕೊಡಲಿಯ ಪೆಟ್ಟು ಹಾಕುವುದರಿಂದ ಎಲ್ಲವೂ ತಾನೇ ಸರಿಯಾಗುವುದೆಂದು ನಂಬುವುದು ಹುಚ್ಚುತನ. ರಾಷ್ಟ್ರೀಯಸಾಲ, ಸೈನ್ಯಸಿದ್ಧತೆಯ ಬಗ್ಗೆ ವೆಚ್ಚ - ಇವುಗಳನ್ನು ತೀರಾ ಕಡಿಮೆಮಾಡುವುದರಿಂದ ಸ್ವಲ್ಪ ಪ್ರಯೋಜನವಿದ್ದರೂ, ಕೂಲಿಕಾರರು ನೂರುವರ್ಷಕಾಲ ಕಾದಾಡಿ ಪಡೆದ ಸ್ವಾತಂತ್ರ್ಯ ಸೌಕರ್ಯಗಳನ್ನು ನಾಶಪಡಿಸಿ ಇವೊತ್ತಿನ ಸಂಕಟವನ್ನು ತಪ್ಪಿಸಿಕೊಳ್ಳಲೆತ್ನಿಸುವುದು ತಿಳಿಗೇಡಿತನ. ಕೂಲಿಕಾರ

CC-0. Jangamwadi Math Collection. Digitized by eGangotri

ರಾದರೂ ದೇಹದಲ್ಲಿ ಜೀವವಿರುವವರೆಗೆ ಕಾದಿಯಾರು, ಆದರೆ ತಮ್ಮ ಹಕ್ಕುಗಳನ್ನು ಬಿಡಲೊಪ್ಪಲಿಕ್ಕಿಲ್ಲ.

ದೊಡ್ಡದೊಡ್ಡ ಬಂಡವಾಳಗಾರರಲ್ಲಿ ಬುದ್ಧಿವಂತರಾದವರಿಗೆ ತಿಳಿದುಹೋಗಿದೆ— ಇದೊಂದು ದೊಡ್ಡ ಆರ್ಥಿಕ ಕ್ರಾಂತಿ ನಡೆದಿದೆ. ಬಂಡವಾಳದ ಯುಗಾರಂಭಕಾಲಕ್ಕೆ ಜರುಗಿದ ಕ್ರಾಂತಿಗಿಂತಲೂ ಪ್ರಬಲತರವಾದ ಇನ್ನೊಂದು ಔದ್ಯೋಗಿಕ ಕ್ರಾಂತಿಯು ಹೆಜ್ಜೆಯಿಕ್ಕುತ್ತಲಿದೆ.

ಈವೊತ್ತಿನ ವಿಶ್ವಸಂಕಟವನ್ನು ಒಂದು ಅಥವಾ ಹಲವು ವ್ಯಕ್ತಿಗಳು ಪರಿಹರಿಸಲಾರವು. ಇತಿಹಾಸದಲ್ಲಿನ ದೊಡ್ಡದೊಡ್ಡ ಸ್ಥಿತ್ಯಂತರಗಳು ಮೇಲಿನಿಂದ ಕೆಳಕ್ಕೆ ಇಳಿದುಕೊಂಡಿರದೆ, ಕೆಳಗಿಂದ ಮೇಲಕ್ಕೆ ಹಬ್ಬಿಕೊಂಡಿರುತ್ತವೆ. ಇತ್ತ ಪಕ್ಷಪಕ್ಷಗಳಲ್ಲಿನ ತಿಕ್ಕಾಟಗಳು ಸಾಗಿರುತ್ತವೆ, ಅತ್ತ ಔದ್ಯೋಗಿಕ ಕ್ರಾಂತಿಯಿಂದುದ್ಭೂತವಾದ ಅದೃಶ್ಯ ಶಕ್ತಿಗಳು ಸಕಲ ಸಮಾಜ ವ್ಯವಸ್ಥೆಯನ್ನೇ ದೊಡ್ಡದೊಂದು ಪಲ್ಲಟದ ಕಡೆಗೆ ಸೆಳೆದೊಯ್ಯುತ್ತಲಿವೆ. ಇನ್ನು ಮೇಲೆ ಸಂಪತ್ತಿಯು ಒಬ್ಬರ ಲಾಭಕ್ಕಾಗಿ ನಿರ್ಮಿಸಲ್ಪಡದೆ, ಎಲ್ಲರ ಸೌಖ್ಯಕ್ಕಾಗಿ ನಿರ್ಮಿಸಲ್ಪಟ್ಟೀತು. ಬಂಡವಾಳದವರ ಸರದಾರಿಕೆ ಹೋಗಿ, ಔದ್ಯೋಗಿಕ ಪ್ರಜಾಪ್ರಭುತ್ವವು ಬಂದೀತು. ಅಂತರರಾಷ್ಟ್ರೀಯ ಸಹಕಾರ್ಯದ ಮಹತ್ತ್ವವು ಬೇಗ ಪ್ರತೀತವಾದೀತು. ಬಹುಜನ ಸಮಾಜವೇ ಈ ಕದನವನ್ನು ಕೊನೆ ಮುಟ್ಟಿಸೀತು.

### ತಿದ್ದುಪಡೆ

ಕಳೆದ ಸಂಚಿಕೆಯಲ್ಲಿ ಪ್ರಕಟವಾದ "ಈ ಸಲದ ಸಾಹಿತ್ಯ ಸಮ್ಮೇಲನ" ಎಂಬ ಬರೆಹದಲ್ಲಿ ಶ್ರೀ. ಕಸಬೇಕರರನ್ನು ಗೊತ್ತಿಲ್ಲದೆ ಬಂಟರ ಸಮಾಜದವರೆಂದು ಹೇಳಲಾಗಿದೆ. ಆದರೆ ಅವರು ಬಂಟರ ಸಮಾಜದವರಲ್ಲ ಸಾರಸ್ವತ ಸಮಾಜದವರು. ತಪ್ಪಿ ನಡೆದ ಸಂಗತಿಯನ್ನು ಶ್ರೀ. ಕಸಬೇಕರರು ಕ್ಷಮಿಸಬೇಕಾಗಿ ಬೇಡಿಕೆ.

### ಚಿತ್ರಪರಿಚಯ

ಲಂಬಾಣಿಗಿತಿ:— ಇದನ್ನು ಬರೆದ ಶ್ರೀ. ಕಮಡೋಳಿಯವರ ಇನ್ನೊಂದು ಚಿತ್ರವು ('ಉದ್ಯೋಗ' ವೆಂಬುದು) ಈ ಮೊದಲೇ ಜಯಕರ್ನಾಟಕದಲ್ಲಿ ಪ್ರಕಟವಾಗಿದೆ. ಇವರ ಚಿತ್ರಗಳಿಗೆ ಇಂಗ್ಲಂಡಿನ ಪ್ರದರ್ಶನಗಳಲ್ಲಿ ಮನ್ನಣೆ ದೊರೆತುದರ ವಿಷಯವೂ ಅಲ್ಲಿ ಉಲ್ಲೇಖಿಸಲ್ಪಟ್ಟಿದೆ.

ಲಂಬಾಣಿ ಹೆಣ್ಣುಮಕ್ಕಳನ್ನು ಕಂಡಾಗೆಲ್ಲ ನಾವು ಮೂಗುಮುರಿಯುವುದುಂಟು. ಅವರ ಕೌದಿಯ ಕೊಳಕು ಬಟ್ಟೆಗಳು, ಕೋಡಿನ ಬಳೆಗಳು, ಹೊರಲಸಾಧ್ಯವಾದ ಆಭರಣಗಳು —ಇವುಗಳನ್ನೆಲ್ಲ ನೋಡಿ ಅಸಡ್ಡೆ ಪಟ್ಟುಕೊಳ್ಳುವುದುಂಟು. ಆದರೆ ಚಿತ್ರಕಾರನು ಇಂತಹ ವ್ಯಕ್ತಿಯನ್ನೇ ಎಷ್ಟು ಮುದ್ದುಬರುವಂತೆ ಬರೆದಿದ್ದಾನೆ ನೋಡಿ! ನುರಿತ ಕಲಾವಿದನ ಕೈಯಲ್ಲಿ ಮಣ್ಣು ಕೂಡ ಹೊನ್ನಾಗಬಲ್ಲುದು! ಲಂಬಾಣಿಗಿತಿಯು ನಿಂತಿರುವ ಅದೊಂದು ಬಗೆ, ಸೆರಗನ್ನು ಓರೆಯಾಗಿ ಹಿಡಿದಿರುವ [illegible] ದಲ್ಲಿನ ಮುಗ್ಧತೆ ಇವನ್ನೆಲ್ಲ ನೋಡುವಂತಿದೆ. ಅವ... ವೇಷಭೂಷಣಗಳು ಕೂಡ ಹುಡುಗಿಯ ಆಕೃತಿಗೆ ಒಪ್ಪವನ್ನು ಕೊಡುತ್ತಿವೆ! ಜನಜೀವನವು ಕನ್ನಡ ಚಿತ್ರಕಲೆಯಲ್ಲಿ ಹೆಜ್ಜೆಯಿಕ್ಕುತ್ತಲಿದ್ದುದು ಆನಂದದ ವಿಷಯ.

## ಸಾದರಸ್ವೀಕಾರ

೮೫ ಸತ್ಕಥಾ ಕುಸುಮ ಮಂಜರಿ (ಶ್ರೀರಾಮಕೃಷ್ಣ ಪರಮಹಂಸರವು) ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಯ ೮ನೆಯ ಗ್ರಂಥ. ಬರೆದವರು ಶ್ರೀ. ನಾ. ಮ. ಕುರಡಿ. ವ್ಯವಸ್ಥಾಪಕ ಸರಸ್ವತೀ ಮಂದಿರಮ್, ಧಾರವಾಡ ಇವರಲ್ಲಿ ಸಿಕ್ಕುವುದು. ಡೆ. ಅ. ೯೦ ಪುಟ, ಬೆಲೆ ೦—೧೦—೦

೮೬ ಶ್ರೀಹರ್ಷನ ನಾಟಕಗಳು: ಇದೂ ಮೇಲೆ ಹೇಳಿದ ಗ್ರಂಥಮಾಲೆಯ ೧೨ನೆಯಗ್ರಂಥ ಶ್ರೀ. ಕುರಡಿಯವರು ಬರೆದಿದ್ದಾರೆ, ಡೇ. ಅ. ೯೦ ಪುಟ, ಬೆಲೆ ೦—೧೦-೦

೮೭ ಹೂಗೊಂಚಲು (ಕವಿತಾಸಂಗ್ರಹ) ಕೊಲ್ಲಾಪುರದ ಕರ್ನಾಟಕ ಸಂಘದವರು ಪ್ರಕಟಿಸಿದುದು. 'ಗೆಳೆಯರ ಬಳಗದ ಮುದ್ದಣ' ಪ್ರೊ. ಕುಂದಣಗಾರರು ಮುನ್ನುಡಿ ಬರೆದಿದ್ದಾರೆ. ಕ್ರೌನ್ ಅ. ೫೦ ಪುಟ, ಬೆಲೆ ೦—೮—೨

೮೮ ಪ್ರಭುಲಿಂಗದ ಕಂದ: ಶ್ರೀಮನ್ನಿರಂಜನ ... ದ್ದುಗ್ಗರು ಗ್ರಂಥಮಾಲೆಯ ೧೨ನೆಯ ಪುಷ್ಪ. ಮುಂಗೇ... [illegible] ಚಿತ. ಶೋಧಕರು ಮತ್ತು ಪ್ರಕಾ...

CC-0. Jangamwadi Math Collection. Digitized by eGangotri

ಕರು ಶ್ರೀ ಬುದ್ಧಯ್ಯಾ ಮಗೆಯ್ಯಾ ಪುರಾಣಿಕ, ತೇರದಾಳ; ಕ್ರಾ. ಅ. ೩೪ ಪುಟ, ಬೆಲೆ ೦-೬-೦.

೮೯ ಶ್ರೀ. ದತ್ತಗತಬಾಲಬೋಧ ಅಥವಾ ಪ್ರೇಮ ತರಂಗ: ( ಶ್ರೀ. ದತ್ತಪ್ರೇಮಲಹರಿ ಪುಷ್ಪ, ) ಅನುವಾದ ಕರು ( ಮರಾಠಿಯಿಂದ ) ಶ್ರೀ ಎಸ್. ವಿ. ಅಡ್ಡಣಗಿ ಬಿ. ಎ. ಎಲ್ ಎಲ್. ಬಿ. ವಕೀಲ ಬೆಳಗಾಂವಿ. ಪ್ರಕಾಶ ಕರು ರಾ. ಬ. ಗೋಪಾಳ ರಾಮಚಂದ್ರ ಬಾಳೇಕುಂದ್ರಿ. ಪಿ. ಡಿ. ಡೆ. ಕಲೆಕ್ಟರ ಬೆಳಗಾಂವಿ, ಕ್ರಾ. ಅ. ೨೭ ಪುಟ, ಬೆಲೆ ೦-೪-೦.

೯೦ ವೀರಶೈವ ಸಿದ್ಧಾಂತ ಪ್ರಕಾಶಿಕಾ: ಶ್ರೀ. ಚಂದ್ರ ಶೇಖರ ಶಾಸ್ತ್ರಿ ಛತ್ರದ ಹಳ್ಳಿ ಅವರು ಬರೆದು, ಶ್ರೀ. ಶಿವ ಯೋಗೀಶ್ವರ ಸಂಸ್ಥೆಯವರಿಂದ ಪ್ರಕಟಹೊಂದಿದುದು. 'ಶ್ರೀ ರಾಜಶೇಖರ ಶಾಸ್ತ್ರಿಗಳು ಮಲ್ಲಾಪೂರ. ಶ್ರೀ ಮುರುಘಾ ರಾಜೇಂದ್ರ ಫ್ರೀ ಬೋರ್ಡಿಂಗ ಧಾರವಾಡ' ಇವರಲ್ಲಿ ಸಿಕ್ಕುವುದು. ಕ್ರಾ. ಅ. ೩೫ ಪುಟ, ಬೆಲೆ ೦-೨-೦

೯೧ ಅಥಣೀ ಶಿವಯೋಗಿಶ್ವರಾಷ್ಟಕವು (ಪದ್ಯ) ವೇ॥ ಸದಾಶಿವ ಶಾಸ್ತ್ರಿಗಳು ಹುಕ್ಕೇರಿ, ಹಿಟ್ಟಣಿಗಿ ಮಠ. ಮೇಲಿನ ಸಂಸ್ಥೆಯುವರೇ ಪ್ರಕಟಿಸಿರುವರು. ಸಣ್ಣ ಪುಟ ಏಳು.

೯೨ ನಾರಿಸುಲ್ಲ ! ಮಾರಿ ! (ಕಥೆ) ಚೆನ್ನಪಟ್ಟಣದ ಕರ್ತವ್ಯ ಗ್ರಂಥಮಾಲೆಯ ೨ನೆಯ ಗ್ರಂಥ. ಬರೆದವರು ಹೊಮ್ಮರಡಿ ಮಲ್ಲನಗೌಡರು. ಡೆ. ಅ, ೨೪ ಪುಟ, ಬೆಲೆ ೦-೪-೦.

೯೩ ತುಳುವ್ಯಾಕರಣ: ತುಳುವ ಸಾಹಿತ್ಯಮಾಲೆಯ ೪ ನೆಯ ಗ್ರಂಥ. ಬರೆದವರು: ಶ್ರೀ. ಎಸ್. ಯು. ಫಣಿ ಾಡಿ. ಉಡುಪಿಯ 'ತುಳುನಾಡು ಛಾಪಖಾನೆ'ಯಲ್ಲಿ ಅಚ್ಚಾಗಿದೆ. ಕ್ರಾ. ಅ. ೧೨೮ ಪುಟ, ಬೆಲೆ ೦-೮-೦.

೯೪ **श्रीकृष्ण विज्ञान अर्थात्** श्रीमद्भगवद्गीतामूल सहित हिन्दी अनुवाद: ಅನುವಾದಕರು ಪುರೋಹಿತ ರಾಮಪ್ರತಾಪ. ಮುದ್ರಕರು-ಪ್ರಕಾಶಕರು, ಶ್ರೀ. ಘನ ಶ್ಯಾಮದಾಸ, ಗೀತಾ ಪ್ರೆಸ್ ಗೋರಖಪೂರ. ಕ್ರಾ. ಅ. ೩೩೩ ಪುಟ, ಬೆಲೆ ೧ ೦-೦.

೯೫ **देवर्षि नारद** (ಹಿಂದೀ ಭಾಷೆಯ ಚರಿತ್ರಗ್ರಂಥ) ಲೇಖಕರು ಶ್ರೀ. ಚತುರ್ವೇದೀ ದ್ವಾರಕಾಪ್ರಸಾದ ಶರ್ಮಾ, ಸಾಹಿತ್ಯಭೂಷಣ, ಎಂ. ಆರ್. ಎ. ಎಸ್. ಮತ್ತು ಶ್ರೀ. ಇಂದ್ರನಾರಾಯಣ ದ್ವಿವೇದೀ. ಮು. ಪ್ರ. ಗೀತಾ ಪ್ರೆಸ್ ಗೋರಖಪೂರ. ಕ್ರಾ. ೨೩೦ ಪುಟ, ಬೆಲೆ೦-೧೨-೦

೯೬ **माता** (ಅರವಿಂದ ಘೋಷರ 'ಮದರ್' ಎಂಬ ಇಂಗ್ಲಿಷ್ ಗ್ರಂಥದ ಹಿಂದೀ ಅನುವಾದ) ಅನುವಾದಕರು ಶ್ರೀ ಲಕ್ಷ್ಮಣ ನಾರಾಯಣ ಗರ್ದೇ. ಪರಮಾರ್ಥ ಗ್ರಂಥಮಾಲೆಯ ಐದನೆಯ ಪುಷ್ಪವಿದು. ಮು. ಪ್ರ. ಗೀತಾ ಪ್ರೆಸ್ ಗೋರಖಪುರ ಕ್ರಾ. ಅ. ೬೧ ಪುಟ, ಬೆಲೆ ೦-೪-೦.

೯೭ **परमार्थ पत्रावली** ( ಶ್ರಿ ಜಯದಯಾಲ ಗೋವಿಂದರ ಪತ್ರಗಳು ) ಇದು ಮೇಲಿನ ಗ್ರಂಥಮಾಲೆಯ ೭ ನೆಯ ಪುಷ್ಪ ಕ್ರಾ. ಅ. ೧೪೦ ಪುಟ. ಬೆಲೆ ೦-೪-೦.

೯೮ **श्री. आद्यशंकराचार्य विराचित अपरोक्षानुभूति** (ಹಿಂದೀ ಅನುವಾದ ಸಹಿತ) ಅನುವಾದಕ ಶ್ರೀ ಮುನಿಲಾಲ್. ಮು. ಪ್ರ. ಗೀತಾ ಪ್ರೆಸ್ ಗೋರಖಪೂರ. ಕ್ರಾ. ಅ. ೪೧ ಪುಟ. ಬೆಲೆ ೦ ೨-೬.

೯೯ **नवभारताचे नवजवान नेहरू** ( ಮರಾಠಿ ಭಾಷೆಯಲ್ಲಿ ಬರೆದಚರಿತ್ರ) ಲೇಖಕ ನಾರಾಯಣ ಸಂದನ ಪ್ರಕಾಶಕರು ಶ್ರೀ. ಡಿ ಎನ್. ಘಾಟಕ ಕಾ. ದ. ನಾರಾಯಣ ವ್ಯಾಯಾಮ ಶಾಲಾ ಹುಬ್ಬಳ್ಳಿ, ಕ್ರಾ. ಅ. ೨೧ ಪುಟ, ಬೆಲೆ ೦-೧-೬.

೧೦೦ The life of lord Basawa. ( A dramatic Presentation ) By N. K. Sangaualmath. Raja ram College, Kolhapur. published by the Karnatak Association Kolhapur. Demy. 1/16. pages 19.

೧೦೧ ಅಹಿಂಸೆ (ತ್ರೈಮಾಸಿಕ ಪತ್ರಿಕೆ) ಸಂಪಾದಕರು ಕರ್ಲಮಂಗಲಂ ಶ್ರೀಕಂಠಯ್ಯ, ಅಹಿಂಸಾ ಕಾರ್ಯಾಲಯ ಮಾಗಡಿ. ಡಿ. ಬೆಂಗಳೂರು (೧) ದಾವಣಗೆರೆಯ 'ಪ್ರಾಣಿದಯಾ ಜ್ಞಾನ ಪ್ರಸಾರಕ ಸಂಘ' (೨) ಬೆಂಗಳೂರಿನ 'ಗೋರಕ್ಷಕ ಮಂಡಲಿ' (೩) ತುಮಕೂರಿನ 'ಪ್ರಾಣಿದಯಾ ಪ್ರಚಾರಕ ಸಂಘ' (೪) ಬೆಂಗಳೂರಿನ 'ಜೀವದಯಾ ಜ್ಞಾನ ಪ್ರಚಾರಕ ಸಂಘ' ಇವುಗಳ ಆಶ್ರಯದಲ್ಲಿ ಹೊರಡುವುದು. ಇದೇ ಫಾಲ್ಗುಣ ಶುದ್ಧ ಪಂಚಮಿಯ ದಿನವೆ ಮೊದಲನೆಯ ಸಂಚಿಕೆ ಹೊರಕ್ಕೆ ಬಂದಿದೆ. ಡೆ. ಅ. ೪೮ ಪುಟಗಳಿವೆ. ವಾ. ಚ. ಅ. ವೆಚ್ಚ ಸೇರಿ ೧-೦-೦.

CC-0. Jangamwadi Math Collection. Digitized by eGangotri

# ೧೦೦೦ ರೂಪಾಯಿ ಇನಾಮು

## ಮಿರಜಿಯಲ್ಲಿಯ ಪ್ರಸಿದ್ಧ ವೈದ್ಯ ಕಾಪಶೆ ಇವರ ೪೦ ವರ್ಷ ವಾಪರಿಸಿದ

ಅಲ್ಪವ್ಯಯಕ್ಕಾಗಿ ಕ್ಷೀಣರಾಗ ಬೇಡಿರಿ] **ಧಾತುಪೌಷ್ಟಿಕ ಮತ್ತು ಶಕ್ತಿವರ್ಧಕ** [ಧಿಕ್ಕರಿಸಿದರೆ ಕ್ಷೀಣತೆ ಕಾಯ್ದು ಕೊಳ್ಳುವಿರಿ

## ರಜಿ) ವಜ್ರಾಂಗ ಸುಂದರಪಾಕ (ಸ್ಟರ

ಮೂತ್ರದ್ವಾರದಿಂದ, ಸ್ವಪ್ನಾವಸ್ಥೆಯಿಂದ ಹೋಗುವ ಧಾತು, ಮುಷ್ಟಿಮೈಥುನದಿಂದ ಜಾಸ್ತಿ ಸ್ತ್ರೀ ಸಂಭೋಗದಿಂದ, ಇಂದ್ರಿಯ ಸಣ್ಣ, ವಕ್ರತಾ, ನಾಮರ್ದತನ, ಸ್ತ್ರೀಗೆ ಸ್ಪರ್ಶ ಮಾಡಿದ ಕೂಡಲೆ ತ್ವರಿತ ವೀರ್ಯ ಸ್ಖಲನ, ಪರಮಾ, ಗರ್ಮಿಯದೋಷ, ಉಷ್ಣತೆ, ಪಿತ್ತಾಂಶ ಸಹ ಬೆನ್ನು ನೋವು, ಸಿದ್ದೆ ಕಡಿಮೆ ಬರೋಣ, ಯಾವ ತರದ ರೋಗದಿಂದ ಎದ್ದಮೇಲಿನ ಕ್ಷೀಣತಾ, ಇವೆಲ್ಲ ರೋಗಗಳು ನಷ್ಟವಾಗಿ, ಗಟ್ಟಿತನ, ಸ್ತಂಭನ, ತರತರ ತರುಣರಂತೆ ಕಾಮೇಚ್ಛಾ ಆಗುತ್ತದೆ. ಶೌಚಕ್ಕೆ ಸಾಫವಾಗಿ ಹಸಿವೆ ಸ್ಮರಣಶಕ್ತಿ ಮತ್ತು ತಮ್ಮ ತೂಕ ಬೆಳೆ ತ್ತದೆ. ಇದರಿಂದ ಪುರುಷರ ವೀರ್ಯಶುದ್ಧಿಯಾಗುತ್ತದೆ. ಮತ್ತು ಸ್ತ್ರೀಯರು ನಮ್ಮ ಸ್ತ್ರೀರೋಗನಿವಾರಣ ಚೂರ್ಣವನ್ನು ತಕ್ಕೊಂಡರೆ, ಸ್ತ್ರೀಯರ ಎಲ್ಲ ರೋಗಗಳು ಹೋಗಿ, ಗರ್ಭಾಶಯವು ಶುದ್ಧಿಯಾಗುತ್ತದೆ. ಇಷ್ಟಾದ ಮೇಲೆ ಸ್ತ್ರೀಯರಿಗೆ ಸಂತತಿಯಾಗಲಿಕ್ಕೆ ತಡವೇನು ? ೨೧ ದಿವಸ ಸಾಲುವ ಪೂರ್ಣ ಗುಣವುಳ್ಳ ೪೮ ತೊಲೆ ೧ ಡಬ್ಬಿಗೆ ೫। ರೂ. ಟ. ಖ. ೧೫ ಆಣೆ ಸರ್ಟೀಫಿಕೇಟುಗಳನ್ನು ಕೊಟ್ಟವರ ಹೆಸರು, ೩೨ ವನಸ್ಪತಿಗಳ ಹೆಸರು, ಮತ್ತು ಬಕ್ಷೀಸು ಪಾಕದ ಕೂಡ ಕಳಿಸುವ ಅನುಪಾನ ಪತ್ರಿಕೆಯಲ್ಲಿ ಖುಲಾಸಾ ಆದೆ; ಓದಿಕೊಳ್ಳಿರಿ.

## ಸ್ತ್ರೀರೋಗ ನಿವಾರಣೆ ಚೂರ್ಣ

ಎಲ್ಲ ಬಣ್ಣದ ಸೆರಗು, ಮುಡಿಚೆಟ್ಟು ಆಗುವದು ಅನಿಯಮಿತತನ, ಹೆಚ್ಚುಕಡಿಮೆ, ಗಂಟು ಗಂಟು ಮುಡಿ ಚೆಟ್ಟು ಆಗೋಣ, ಮುಡಿಚೆಟ್ಟು ಆಗುವ ಕಾಲಕ್ಕೆ, ಮೊದಲು, ಹಿಂದುಗಡೆ ಕಿಪ್ಪಟ್ಟಿಯಲ್ಲಿ ನಡಿನಲ್ಲಿ, ಬೆನ್ನಿನಲ್ಲಿ ತಲೆ ಯಲ್ಲಿ ಶೂಲಿ, ಮನಸ್ಸು ಗಾಬರಿಯಾಗೋಣ, ಎದೆ ಹಾರೋಣ, ಉಷ್ಣತಾ, ಜೀರ್ಣಜ್ವರ, ಮಲಾವರೋಧ ಗರ್ಭಾಶಯದೋಷ, ಗರ್ಭ–ಧಾರಣೆ ಆಗದೇ ಇರೋಣ, ಗರ್ಭಪಾತವಾಗೋಣ, ಇವೆಲ್ಲ ಸ್ತ್ರೀರೋಗಗಳು ಹೋಗು ತ್ತವೆ. ಮಕ್ಕಳಾಗುವದಿಲ್ಲೆಂದು ಎರಡನೇ ಲಗ್ನವಾಗುವದಕ್ಕಿಂತ ಮುಂಚೆ ಇದ್ದ ಗೃಹದೇವತೆಗೆ ಇದೇ ಔಷಧ ಅವಶ್ಯ ಕೊಡಿರಿ. ೪೦ ವರ್ಷದ ಸ್ತ್ರೀಯರಿಗಾದರೂ ಖಾತ್ರಿಯಿಂದ ಸಂತತಿಗಳಾಗುತ್ತವೆ. ೨೧ ದಿವಸ ಸಾಲುವ ಪೂರ್ಣಗುಣವುಳ್ಳ ೨೧ ತೊಲಿಯ ೧ ಡಬ್ಬಿಗೆ ೪ ರೂ. ಟ. ಖ. ೮ ಆಣೆ.

## ಸಂತತಿ ಪ್ರತಿಬಂಧಕ ಗುಳಿಗೆಗಳು

ಯಾರ ಮೈಕಟ್ಟು ನಾಜೂಕ ಆದೆ ಮತ್ತು ಯಾವ ಸ್ತ್ರೀಯರಿಗೆ ಗರ್ಭಧಾರಣೆ ಮಾಡುವ ಶಕ್ತಿ ಅತಿ ಕಡಿಮೆ ಆದೆ, ಮತ್ತು ಪ್ರಸೂತೀ ಕಷ್ಟವನ್ನು ಸೋಸೋಣವಾಗುವದಿಲ್ಲ, ಮತ್ತು ಬಡತನಸ್ಥಿತಿಯಲ್ಲಿ ಹೆಚ್ಚು ಸಂತತಿಗಳಾಗಿ ದುಃಖವಾಗುತ್ತದೋ–ಮತ್ತು ಯಾವ ಸ್ತ್ರೀಯರಿಗೆ ಭಯಂಕರ ಬಯಿಕಿ ಹತ್ತುತ್ತವೋ, ಇಂಥ ಬೇರೇ ಕಾರಣದಿಂದ ಸಂತತೀ ಇಚ್ಛಾ ಯಾರಿಗೆ ತೀರಿರುತ್ತದೋ ಅವರಿಗೆ ಈ ಉಪಾಯವು ಬಹಳೇ ಹಿತಕರ ಅದೆ. ಶರೀರದಲ್ಲಿಯೂ ಸಂಸಾರಸುಖದಲ್ಲಿಯೂ ಏನೂ ಹಾನಿಯಾಗದೇ ವೇಳೆವೇಳೆಗೆ ಮುಡಿಚೆಟ್ಟು ಆಗುವದು ಸುರು ಇದ್ದು, ಗರ್ಭಧಾರಣೆ ಬಂದು ಬೀಳುವದು. ಹಿಂದಿನಿಂದ ಏನು ಮಾಡಿದರೂ ಸುರು ಆಗುವದಿಲ್ಲ ಹೀಗೆ ಸಶಾಸ್ತ್ರ ಅದೆ. ಪೂರ್ಣ ವಿಚಾರ ಮಾಡಿ ತರಿಸಿಕೊಳ್ಳಿರಿ. ಪೂರ್ಣ ಗುಣಕಾರೀ ೧ ಡಬ್ಬಿಗೆ ೬ ರೂ. ಟ. ಖ. ೮ ಆಣೆ.

ಕಡೆಗಾದ ನಾಲ್ಕನೇ ದಿವಸ ಪುಡಿಯನ್ನು ತಣ್ಣೀರಿನಲ್ಲಿ ನುಂಗಬೇಕು. ೫ ನೇ ದಿವಸದಿಂದ ಮುಂಜಾನೆ ೧ ಮಧ್ಯಾನ್ಹಕ್ಕೆ ೧ ರಾತ್ರೀ ಊಟವಾದ ನಂತರ ೧ ಗುಳಿಗೆ ನೀರಿನ ಕೂಡ ನುಂಗಬೇಕು. ಪಥ್ಯ ಸಾದಾ.

**ವೈದ್ಯ—ವಿರುಪಾಕ್ಷಪ್ಪಾ ಸಿದ್ದಪ್ಪಾ ಕಾಪಸೆ,**
ಮು. ಪೋ. ಮಿರಜ

CC-0. Jangamwadi Math Collection. Digitized by eGangotri

M. S. M. R.

ಹೊಸಬಗೆ ! ಹೊಸಹಾದಿ !! ಹೊಸಮಾದರಿ !!!

ಕನ್ನಡ ಸಾಹಿತ್ಯಸಾಗರದ ನೂತನ ರತ್ನಗಳು ಬೇಕಿದ್ದರೆ

## ಕರ್ನಾಟಕ ಸಾಹಿತ್ಯ ಮಂದಿರ

ವನ್ನು ಮರೆಯ ಬೇಡಿರಿ !

ಅಭಿನವ ಕನ್ನಡ ಸಾಹಿತ್ಯಮಾರ್ಗಕ್ಕೆ ಕೈಗಂಬದಂತಿರುವ ಕೆಲವು ಹೊಚ್ಚ ಹೊಸ ಪುಸ್ತಕಗಳು.

**ನಾಟಕಗಳು**

೧ ಉದ್ಧಾರ ... ಶ್ರೀ. ದತ್ತರಾಮ ಬಿ. ಎ. ... ೦-೮-೦
೨ ಆಗ್ರಹ ... ವೀ. ಸಿ. ... ೦-೧೨-೦
೩ ಮೂರು ನಾಟಕಗಳು ಕೆ. ವಿ. ಪುಟ್ಟಪ್ಪ ... ೧-೮-೦

**ಕಾವ್ಯಗಳು**

೧ ಚೆಲುವು ... ಶ್ರೀನಿವಾಸ ... ೦-೮-೦
೨ ಶ್ರೀರಂಗನಗರದ ಕೊನೆಯದಿನ ... ೦-೩-೦

**ಕಥೆಕಾದಂಬರಿಗಳು**

೧ ರಾಮಾಚಾರಿಯ ನೆನಪು. ... ೦-೮-೦
೨ ಪತಿ ... ೦-೮-೦

**ಬೇರೆ ಪುಸ್ತಕಗಳು**

೧ ಸ್ವಾಮೀ ವಿವೇಕಾನಂದ ... ೧-೮-೦
೨ ಜನತೆಯ ಸಂಸ್ಕೃತಿ ... ೦-೬-೦

ಇತ್ಯಾದಿ ಇತ್ಯಾದಿ

ಇವುಗಳಲ್ಲದೆ ಇನ್ನಾವ ಹಳಗನ್ನಡ ಹೊಸಗನ್ನಡ ಗ್ರಂಥಗಳು ಬೇಕಿದ್ದರೂ ತಪ್ಪದೆ ನಮ್ಮನ್ನೇ ಕೇಳಿರಿ ಧಾರವಾಡದ ಕರ್ನಾಟಕ ಶಿಕ್ಷಣ ಸಮಿತಿ ಹಾಗು ಕರ್ನಾಟಕ ಸಂಘದ ಪುಸ್ತಕಗಳಿಗೆ ನಾವು ಸೋಲ್ ಏಜಂಟರು

ವಿಳಾಸ:— ಕರ್ನಾಟಕ ಸಾಹಿತ್ಯಮಂದಿರ, ಮಾರ್ಕೀಟುಬೀದಿ ಧಾರವಾಡ.

ಸ್ಯಾಂಪಲ್ ] [ ಪ್ರಕಟಿ

## ಉತ್ತಮ ಮಶಿ ಚೀಟುಗಳು

ನೀಲಿ, ಕಪ್ಪು, ಕೆಂಪು, ಜಾಂಬಳಿ, ಚೀಟುಗಳು

**ದರಗಳು**

೫೦೦ ಚೀಟುಗಳಿಗೆ ೧-೧೪-೦
೧೦೦೦ ,, ೩-೦-೦
೧೦೦೦೦ ,, ೩೦-೦-೦

ಹೆಚ್ಚಿನ ಮಾಹಿತಿ ಬಗ್ಗೆ ಪತ್ರವ್ಯವಹಾರ ಮಾಡಿರಿ.

**ಕರ್ನಾಟಕ ಇಂಕ್ ಕಂಪನಿ**

ಬಾಗಲಕೋಟೆ

ಉತ್ತಮವಾದ ಹಾರ್ಮೋನಿಯಮ್ ಮತ್ತು ಪ್ರಸಿದ್ಧ ಓಡಿಯನ್ ಕಂಪನಿಯ ಗ್ರಾಮೋಫೋನ್ ರಿಕಾರ್ಡುಗಳು ಅಲ್ಲದೆ ಎಲ್ಲಮಾದರಿಯ ಗಡಿಯಾರುಗಳು ಯೋಗ್ಯ ಬೆಲೆಗೆ ದೊರೆಯುವ ಸ್ಥಳ:—

## ದಿ ನ್ಯಾಶನಲ್ ಮ್ಯುಜಿಕಲ್ ಹಾಲ್

ಧಾರವಾಡ

ಶಿವಾನುಭವ ಗ್ರಂಥಮಾಲೆಯ

**ವಚನ ಗ್ರಂಥಗಳು**

**ವಚನಶಾಸ್ತ್ರಸಾರ**

**ಭಾಗ ೧ ( ಪೂರ್ವಾರ್ಧ )**

ವಚನ ವಾಙ್ಮಯದ ಮಹತ್ವವನ್ನು ಮೊದಲು ಕನ್ನಡಿಗರಿಗೆ ಅರಿಕೆ ಮಾಡಿಕೊಟ್ಟ ಗ್ರಂಥವಿದು. ವೀರ ಶೈವ ಮತ ತತ್ವಗಳನ್ನು ತಿಳಿಯಲು ಬಹು ಅನುಕೂಲ ವಾದದ್ದು ಡೇಮಿ ಪುಟ ೪೩೨. ಬೆಲೆ:— ೩ ರೂಪಾಯಿ-

**ಪ್ರಭುದೇವರ ವಚನಗಳು**

ಅಲ್ಲಮ ಪ್ರಭುವಿನ ಅಧ್ಯಾತ್ಮಿಕ ವಿಚಾರಗಳನ್ನು ಬಹು ಚನ್ನಾಗಿ ಅರಿಯಬಹುದು. ಚಕ್ಕಣಾರ್ಯ ಮಂತ್ರಿಯ ವ್ಯಾಖ್ಯಾನವು ಇದರಲ್ಲಿ ಇದೆ. ಡೇಮಿ ೩೪೪ ಪುಟಗಳು. ಬೆಲೆ:—( ೨-೮-೦ )

**ಶೂನ್ಯ ಸಂಪಾದನೆಯು**

ಇದು ಅತ್ಯುಚ್ಚವಾದ ಧಾರ್ಮಿಕ ಗ್ರಂಥವು ಸಂಗ್ರಾಹ್ಯಗ್ರಂಥ. ಪುಟಗಳು. ೪೧೨. ಬೆಲೆ:-(೩-೨-೦)

**ನೈತಿಕ ಮತ್ತು ಭಕ್ತಿಯವಚನಗಳು**

ಇದು ಮುಂಬಯಿ ಮತ್ತು ಮೈಸೂರು ಸರಕಾರ ಗಳಿಂದ ಮಂಜೂರವಾಗಿದೆ. ಪುಟ. ೧೧೧ ಬೆಲೆ:-೧೦ ಆಣೆ

ಶಿವಾನುಭವ ಆಫೀಸು ವಿಜಾಪುರ.


CC-0. Jangamwadi Math Collection. Digitized by eGangotri

# ಪರಿವಿಡಿ

**ವಿ. ಸೂ:—** ಬರೆಹಗಾರರ ಹೆಸರುಗಳ ಹಿಂದೆ 'ಶ್ರೀಯುತ' ಎಂದು ಸೇರಿಸಿ ಓದಿಕೊಳ್ಳಬೇಕು.



## ತಿದ್ದುಪಡೆ

| ಪುಟ:— | ೪೨೦ | ೪೨೪ | ೪೪೪ (ಅಂಕಣ ೧) | ೪೬೩ | ೪೬೪ (ಅಂ. ೧) | ೪೬೪ (ಅಂ. ೨) |
| --- | --- | --- | --- | --- | --- | --- |
| ಸಾಲು:-(ಕವಿತೆ) ೭ | ೧ | ೧೭ | | ೯ | ೧೮ |
| ತಪ್ಪು:- ಬೇಕೆಂದನು | ಜವಾಸ | ಜೀವ | ಮೇಘಸಂದೇಶದ | ಔಡನ್ನು | ದಾರಿಯವಲ್ಲಿ |
| ಒಪ್ಪು:- ಬೇಕೆಂದೆನು | ಜವಸಾ | ಜೀವನ | ಕ್ರಮಾಂಕವು ೧೦ | ಜಾಡನ್ನು | ದಾರಿಯನಲ್ಲಿ |

CC-0. Jangamwadi Math Collection. Digitized by eGangotri



ವಸಂತಾಗಮ

ಚಿತ್ರಶಿಲ್ಪಿ:— ಶ್ರೀ. ನಾರಾಯಣ, ಶಾಂತಿನಿಕೇತನ

CC-0. Jangamwadi Math Collection. Digitized by eGangotri




ಸಂಪುಟ ೧೦ | ಆಂಗಿರಸ ಸಂವತ್ಸರ, ದವನದ ಹುಣ್ಣಿವೆ | ಸಂಚಿಕೆ ೬
ಚಾಲುಕ್ಯ ವಿಕ್ರಮ ವರ್ಷ ೮೫೭

# ಯುಗಾದಿ

( ಅಂಬಿಕಾತನಯ ದತ್ತ )

ಯುಗಯುಗಾದಿ ಕಳೆದರೂ
ಯುಗಾದಿ ಮರಳಿ ಬರುತಿದೆ.
ಹೊಸವರುಷಕೆ ಹೊಸಹರುಷವ
ಹೊಸತು ಹೊಸತು ತರುತಿದೆ.

ಹೊಂಗೆಹೂವ ತೊಂಗಲಲ್ಲಿ
ಭೃಂಗದ ಸಂಗೀತಕೇಲಿ
ಮತ್ತೆ ಕೇಳಬರುತಿದೆ.
ಬೇವಿನ ಕಹಿಬಾಳಿನಲ್ಲಿ
ಹೂವಿನ ನಸುಗಂಪು ಸೂಸಿ
ಜೀವಕಳೆಯ ತರುತಿದೆ.

ಕಮ್ಮನೆ ಬಾಣಕ್ಕೆ ಸೋತು
ಜುಮ್ಮನೆ ಮಾಮರವು ಹೂತು
ಕಾಮಗಾಗಿ ಕಾದಿದೆ.
ಸುಗ್ಗಿ ಸುಗ್ಗಿ ಸುಗ್ಗಿ ಎಂದು
ಹಿಗ್ಗಿ ಗಿಳಿಯ ಸಾಲು ಸಾಲು
ತೋರಣದೊಲು ಕೋದಿದೆ.

ವರುಷಕೊಂದು ಹೊಸತು ಜನ್ಮ
ಹರುಷಕೊಂದು ಹೊಸತು ನೆಲೆಯು
ಅಖಿಲ ಜೀವಜಾತಕೆ!
ಒಂದೆ ಒಂದು ಜನ್ಮದಲ್ಲಿ
ಒಂದೆ ಬಾಲ್ಯ ಒಂದೆ ಹರಯ
ನಮಗದಷ್ಟೆ ಏತಕೆ ?

ನಿದ್ದೆಗೊಮ್ಮೆ ನಿತ್ಯಮರಣ
ಎದ್ದ ಸಲ ನವೀನ ಜನನ
ನಮಗೆ ಏಕೆ ಬಾರದೋ ?
ಎಲೆ ಸನತ್ಕುಮಾರ ದೇವ !
ಎಲೆ ಸಾಹಸಿ ಚಿರಂಜೀವ !
ನಿನಗೆ ಲೀಲೆ ಸೇರದೋ ?

ಯುಗಯುಗಾದಿ ಕಳೆದರೂ
ಯುಗಾದಿ ಮರಳಿ ಬರುತಿದೆ
ಹೊಸವರುಷಕೆ ಹೊಸಹರುಷವ
ಹೊಸತು ಹೊಸತು ತರುತಿದೆ
ನಮ್ಮನಷ್ಟೆ ಮರೆತಿದೆ !

CC-0. Jangamwadi Math Collection. Digitized by eGangotri

# " ಮೇಘಸಂದೇಶ "

ಉಪನ್ಯಾಸಕರು:— ಶ್ರೀ. ಸಿ. ಕೆ. ವೆಂಕಟರಾಮಯ್ಯನವರು, ಎಂ. ಎ. ಎಲ್ ಎಲ್. ಬಿ., ಬೆಂಗಳೂರು.

* " ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ "

ಎಂಬ ಭಗವಂತನ ದಿವ್ಯ ವಾಣಿಯು ಸಾಹಿತ್ಯ ಕ್ಷೇತ್ರಕ್ಕೂ ಸೇರಿದುದು. ಸಾಹಿತ್ಯ ಕ್ಷೇತ್ರದಲ್ಲಿ ತೇಜಸ್ಸಿಗೆ ಗ್ಲಾನಿಯುಂಟಾದಾಗಲೆಲ್ಲಾ ಭಗವಂತನು ತನ್ನ ಕಡೆಯ ಮಹಾಪುರುಷರನ್ನು ಕಳುಹಿಸಿಯೇ ಕಳುಹಿಸುವನು. ಅವರು ಈ ಲೋಕದಲ್ಲಿ ಅವತರಿಸಿ ತಮ್ಮ ಲೇಖನಗಳಿಂದ ಮತ್ತೆ ಸಾಹಿತ್ಯದ ತೇಜಸ್ಸನ್ನು ಸಂಸ್ಥಾಪಿಸುವರು. ಇದು ಒಟ್ಟು ಪ್ರಪಂಚದಲ್ಲಿ ಎಲ್ಲ ದೇಶಗಳಲ್ಲಿಯೂ ಕಂಡುಬಂದಿರುವ ಅನುಭವವಾಗಿದೆ. ಕಾಳಿದಾಸ ಮಹಾಕವಿಯು ಸಹ ಇಂತಹ ಒಂದು ಸಂಧಿಸಮಯದಲ್ಲಿ ಅವತರಿಸಿದವನು. ಇದೇ ರೀತಿಯಲ್ಲಿ ಗ್ರೀಕರ ಯೂರಿಪಿಡಿಸ್ ಮುಂತಾದ ಕವಿಗಳೂ ಆಂಗ್ಲೇಯರಲ್ಲಿ ಷೇಕ್ಸ್‌ಪಿಯರ್ ಮುಂತಾದ ಅನೇಕ ಕವಿಗಳೂ ಅವತರಿಸಿದ್ದಾರೆ.

ಕಾಳಿದಾಸನು ಅವತರಿಸಿದಾಗ ಭಾಷೆಯ ಧೋರಣೆಗೇ ಭಂಗವುಂಟಾಗಿ ಶೈಥಿಲ್ಯವು ಕಂಡುಬಂದಿದ್ದಿತು. ಅಂತಹ ಕಾಲದಲ್ಲಿ ಅದನ್ನು ನಿವಾರಣೆಗೊಳಿಸಿ ದೇವನಾಗರಿ ಭಾಷೆಯನ್ನು ದೇವಭಾಷೆಯನ್ನಾಗಿ ಪರಿಣಾಮಗೊಳಿಸಿದ ಕೀರ್ತಿಯು ಕಾಳಿದಾಸನಿಗೆ ಸಲ್ಲಬೇಕು.

ಪ್ರಪಂಚದಲ್ಲಿ ಗಗನಚುಂಬಿಗಳಾದ ಎಷ್ಟೇ ಕಟ್ಟಡಗಳು ನಿರ್ಮಿತವಾಗಿದ್ದರೂ ನಿರ್ಮಿತವಾಗುವುವಾಗಿದ್ದರೂ ಭರತಖಂಡದ ತಾಜ್‌ಮಹಾಲ್ ಕಟ್ಟಡವು ಎಂದೆಂದಿಗೂ ಪ್ರಪಂಚದಲ್ಲೇ ಅತ್ಯದ್ಭುತವಾದ ಕಟ್ಟಡಗಳ ಗುಂಪಿಗೆ ಸೇರಿ ಪ್ರಸಿದ್ಧವಾಗಿರುತ್ತದೆ. ಅದೇ ರೀತಿಯಲ್ಲಿ ಕಾಳಿದಾಸನ ಕಾವ್ಯಗಳು ಎಂದೆಂದಿಗೂ ಒಟ್ಟು ಪ್ರಪಂಚವನ್ನೇ ಆಶ್ಚರ್ಯದಿಂದ ಮುಗ್ಧಗೊಳಿಸುವುವಾಗಿವೆ. ಅಂತಹ ಕಾವ್ಯಗಳಲ್ಲಿ ಮೇಘಸಂದೇಶವೂ ಒಂದಾಗಿದೆ. ಈ ಕಾವ್ಯವನ್ನು ೫ ಮಾರ್ಗಗಳಲ್ಲಿ ವಿಮರ್ಶೆಮಾಡಬಹುದು. ಮೊದಲನೆಯದು, ವಾಚಕರಿಗೆ ಇರಬೇಕಾದ ಮನೋಧರ್ಮ; ಎರಡನೆಯದು, ವೃತ್ತರಚನೆ ಮತ್ತು ಶಬ್ದಮಾಧುರ್ಯ; ಮೂರನೆಯದು, ವರ್ಣನಾಸಾಮರ್ಥ್ಯ ಮತ್ತು ಪರಿಶೀಲನಾಸಾಮರ್ಥ್ಯ; ನಾಲ್ಕನೆಯದು, ವಸ್ತುವೈಶಿಷ್ಟ್ಯ; ಐದನೆಯದು, ಪ್ರಕೃತಿಲೀಲೆಗೂ ಮಾನವವ್ಯಾಪಾರಕ್ಕೂ ಇರುವ ಸ್ನಿಗ್ಧಸಂಬಂಧ.

ಮೇಘಸಂದೇಶವನ್ನು ಓದುವಾಗ ಪ್ರತಿಯೊಬ್ಬರೂ ತಾವು ರಸಿಕಶ್ರೇಷ್ಠರೆಂಬುದಾಗಿ ಭಾವಿಸಿ ಭೋಗಪ್ರಧಾನವಾದ ಮನೋವೃತ್ತಿಯ ಕಡೆಗೆ ಗಮನಕೊಟ್ಟು ವ್ಯಾಸಂಗಮಾಡಬೇಕು. ಕಾಳಿದಾಸನು ಶೃಂಗಾರವನ್ನು ಚಿತ್ರಿಸಿದ್ದರೂ ಸಾತ್ವಿಕ ಶೃಂಗಾರವನ್ನು ಚಿತ್ರಿಸಿದ್ದಾನೆಂಬುದನ್ನು ಮನಸ್ಸಿನಲ್ಲಿಟ್ಟುಕೊಂಡು ವ್ಯಾಸಂಗಮಾಡಬೇಕು. ಶೃಂಗಾರದ ಸೌಖ್ಯವು ಜೀವನದ ಮುಖ್ಯಭಾಗವೇ ಆಗಿರುವಲ್ಲಿ ಅದರಕಡೆಗೆ ಮನಸ್ಸು ಕೊಡುವುದೇ ಕಲುಷಿತ ವೃತ್ತಿಯೆಂಬ ಭಾವನೆಯನ್ನು ದೂರವಾಗಿಡಬೇಕು. ಪ್ರತ್ಯಹದಲ್ಲಿಯೂ ಮಾಡುತ್ತಿರುವ ದನ್ನು ಬಾಯಲ್ಲಿ ಆಡುವುದರಲ್ಲಿ ದೋಷವಿಲ್ಲವೆಂಬು

*[ ಜನವರಿ ೨ನೆಯ ದಿನ ಬೆಂಗಳೂರು ಸೆಂಟ್ರಲ್ ಕಾಲೇಜಿನ ಗಣಿತಭವನದಲ್ಲಿ ಶ್ರೀ. ಮಾಸ್ತಿ ವೆಂಕಟೇಶ ಅಯಂಗಾರ್ರವರ ಅಧ್ಯಕ್ಷತೆಯಲ್ಲಿ ಶ್ರೀ. ಸಿ. ಕೆ. ವೆಂಕಟರಾಮಯ್ಯನವರು ಕಾಳಿದಾಸ ಮಹಾಕವಿಯ " ಮೇಘಸಂದೇಶ " ವನ್ನು ಕುರಿತು ಉಪನ್ಯಾಸಮಾಡಿದರು. ಕೇಳುವುದಕ್ಕಾಗಿ ಬಹುಮಂದಿ ದಯಮಾಡಿಸಿ ಆನಂದಪಟ್ಟರು. ಇಂತಹ ಉಪನ್ಯಾಸಗಳನ್ನು ಸಂಕ್ಷಿಪ್ತ ಲಿಪಿಯಲ್ಲಿ ಬರೆದುಕೊಂಡು, ಜನಸಾಮಾನ್ಯಕ್ಕೊದಗಿಸಿಕೊಟ್ಟು ಸುಖಸಂತೋಷಗಳನ್ನುಂಟುಮಾಡುವವರಿಲ್ಲವಲ್ಲಾ -ಎಂದು ಕೆಲವರು ವ್ಯಸನಪಟ್ಟರು; ಸ್ವಲ್ಪಮಟ್ಟಿಗೆ ಬರೆದುಕೊಂಡಿದ್ದ ಈ ಲೇಖಕನಿಗೆ ಉತ್ಸಾಹವುಂಟಾಯಿತು, ಉಪನ್ಯಾಸದ ಈ ಸಾರಾಂಶವು ಸಿದ್ಧವಾಯಿತು. ಇದರಲ್ಲಿ ಸಾಧ್ಯವಾದಮಟ್ಟಿಗೂ ಉಪನ್ಯಾಸಕರ ಶೈಲಿಯನ್ನೇ ಅನುಸರಿಸಿ ಅವರು ಪ್ರಯೋಗಿಸಿದ ಪದಗಳನ್ನೇ ಉಪಯೋಗಿಸಲಾಗಿದೆ. ಎಸ್. ಜಿ. ನರಸಿಂಹಯ್ಯ ]

Jangamwadi Math Collection. Digitized by eGangotri

ಭಾವನೆಯನ್ನು ಇಟ್ಟುಕೊಳ್ಳಬೇಕು. ಎಲ್ಲಕ್ಕಿಂತಲೂ ಹೆಚ್ಚಾಗಿ ಕಾಳಿದಾಸ ಮಹಾಕವಿಯು ಘನತೆ ಗಾಂಭೀರ್ಯಗಳಿಗೆ ಲೇಶಮಾತ್ರವೂ ಭಂಗವನ್ನುಂಟುಮಾಡದೆ ಶೃಂಗಾರವನ್ನು ಚಿತ್ರಿಸಿ ಸೊಬಗಿನಸೋನೆಯನ್ನೇ ತುಂಬಿದ್ದಾನೆಂಬುದನ್ನು ಗಮನಿಸಬೇಕು. ಅಲ್ಲದೆ, ಅಹಲ್ಯೆಯು ಇಂದ್ರನಿಂದ ಮೋಸಹೋದ ಬಗೆಯನ್ನು ವರ್ಣಿಸಬೇಕಾಗಿ ಬಂದಾಗ 'ವಾಸವಕ್ಷಣ ಕಲತ್ರತಾಂ ಯಯೌ' ಎಂದು ಹೇಳಿ ಗಾಂಭೀರ್ಯದ ಸೊಂಪಿನಿಂದ ವಿಷಯವನ್ನು ಸೂಚಿಸುವಾಗಲೇ ಹಾರಿಸಿಕೊಂಡು ಹೋಗಿರುವ ಕಾಳಿದಾಸನು ತುಚ್ಛ ಶೃಂಗಾರದಕಡೆಗೆ ಖಂಡಿತವಾಗಿಯೂ ಮನಸ್ಸು ಕೊಡುವವನಲ್ಲವೆಂಬುದನ್ನು ಲಕ್ಷ್ಯದಲ್ಲಿಡಬೇಕು. ಮತ್ತು ಮೇಘಸಂದೇಶವು ಶ್ರಾವ್ಯಕಾವ್ಯವಾದುದರಿಂದ ಧರ್ಮವಿರುದ್ಧವಲ್ಲದ ಪ್ರೇಮಾಲಾಪವನ್ನು ವರ್ಣಿಸುವುದು ಎಂದಿಗೂ ಹೇಯವಲ್ಲವೆಂಬುದನ್ನು ಮನಸ್ಸಿನಲ್ಲಿಡಬೇಕು. ಇದಲ್ಲದೆ ನಮ್ಮ ಮನಸ್ಸು ನೀಚ ಶೃಂಗಾರ (ಕಾಮ) ದ ಕಡೆಗೆ ಹೋಗದೆ ಶುದ್ಧ ಪ್ರೇಮವು ಭಕ್ತಿಗೆ ಅತಿ ಸಮೀಪದಲ್ಲಿರುವ ಭಾವವಿಶೇಷವೆಂಬುದನ್ನು ಮನಸ್ಸಿನಲ್ಲಿ ಖಚಿತಗೊಳಿಸುವುದಕ್ಕಾಗಿ ಕಾಳಿದಾಸನು ಪದೇ ಪದೇ ಸೀತಾದೇವಿಯನ್ನೂ, ರಾಮಚಂದ್ರನನ್ನೂ, ಶಿವಪಾರ್ವತಿಯರನ್ನೂ, ಉಜ್ಜಯಿನಿಯ ಮಹಾಕಾಳನನ್ನೂ ನಮ್ಮ ನೆನಪಿಗೆ ತರುವುದನ್ನು ಗಮನಿಸಬೇಕು.

ಕಾಳಿದಾಸ ಮಹಾಕವಿಯು ಉದ್ದೇಶಪೂರ್ವಕವಾಗಿ ಮಂದಾಕ್ರಾಂತ ವೃತ್ತವನ್ನು ಆರಿಸಿದ್ದಾನೆ. ಮೇಘಸಂದೇಶದಲ್ಲಿ ಬರುವುದು–ತನ್ನ ಕರ್ತವ್ಯವನ್ನು ನೆರವೇರಿಸದೆ ಕುಬೇರನ ಶಾಪಕ್ಕೆ ಗುರಿಯಾಗಿ ತನ್ನ ಮಹಿಮೆಯನ್ನು ಕಳೆದುಕೊಂಡು ಒಂದು ವರುಷಕಾಲ ತನ್ನ ಪ್ರಿಯ ಪತ್ನಿಯಿಂದ ಅಗಲಿರಬೇಕಾಗಿ ಬಂದಿರುವ ಕಾಮಾರ್ತನಾದ ಯಕ್ಷನೊಬ್ಬನು ರಾಮಗಿರಿಯಲ್ಲಿ ಏಕಾಕಿಯಾಗಿ ವಾಸವಾಗಿರುವ ಕಥೆ. ಅವನ ವಿರಹವೇದನೆಯನ್ನು ಸೂಚಿಸುವುದಕ್ಕೆ ತಕ್ಕ ವೃತ್ತವೆಂದರೆ ಮಂದಾಕ್ರಾಂತವೃತ್ತವೇ ಸರಿ. ಇಲ್ಲಿ "ಅಜನ ಪ್ರಲಾಪ"ದಲ್ಲಿರುವಂತೆ ಹೆಚ್ಚಿನ ಶೋಕವಿಲ್ಲ. ರಾಮಲಕ್ಷ್ಮಣರು ವಿಶ್ವಾಮಿತ್ರನ ಹಿಂದೆ ಹೊರಟಾಗಿನ ಉತ್ಸಾಹಸಂತೋಷಪೂರಿತವಾದ ಹೃದಯಗತಿಯಿಲ್ಲ. ಆದಕಾರಣ ವಿರಹಕಾತರತೆಯನ್ನು ವರ್ಣಿಸುವುದಕ್ಕಾಗಿ ಸರಿಯಾದ ವೃತ್ತವನ್ನು ಕಾಳಿದಾಸ ಮಹಾಕವಿಯು ಆರಿಸಿದ್ದಾನೆ. ಶಬ್ದಮಾಧುರ್ಯದ ವಿಚಾರದಲ್ಲೂ ಪದಗುಂಫನ ವಿಚಾರದಲ್ಲೂ ಕಾಳಿದಾಸ ಮಹಾಕವಿಯು ಪ್ರಪಂಚದಲ್ಲೇ ಪ್ರಖ್ಯಾತನಾಗಿದ್ದಾನೆ. ಮೇಘಸಂದೇಶದ ಒಂದೊಂದು ಶ್ಲೋಕವೂ ಒಂದೊಂದು ಮಧುರತಾನ; ಹೃದಯವನ್ನೇ ಆನಂದ ಸಾಗರದಲ್ಲಿ ತೇಲಿಸಿ ಮುಳುಗಿಸಿ ಸಂತುಷ್ಟಗೊಳಿಸುವ ದಿವ್ಯಗೀತೆ. ಕವಿಯು ಆಯಾ ಭಾವಕ್ಕೆ ತಕ್ಕ ಶಬ್ದವಿತಾನಗಳು ಬರುವಂತೆ ಪದಗುಂಫನ ಮಾಡಿರುವುದು ಮತ್ತೊಂದು ವಿಶೇಷ. ಮೇಘಸಂದೇಶದ ಒಂದೊಂದು ಸನ್ನಿವೇಶವೂ ಒಂದೊಂದು ಕಲಾಪ್ರಪಂಚ.

ವರ್ಣನಾಸಾಮರ್ಥ್ಯದಲ್ಲಿಯೂ ಪರಿಶೀಲನಾ ಸಾಮರ್ಥ್ಯದಲ್ಲಿಯೂ ಕಾಳಿದಾಸನಿಗೆ ಸರಿದೂಗುವ ಕವಿಗಳು ಪ್ರಪಂಚದಲ್ಲೇ ಅತಿ ವಿರಳ. ಆಸೇತುಹಿಮಾಚಲ ಪರ್ಯಂತವಾಗಿ ಸಮಸ್ತ ಪ್ರಾಂತಗಳನ್ನೂ ಕಾಳಿದಾಸ ಮಹಾಕವಿಯು ನೋಡಿ ಪ್ರಕೃತಿ ಸೌಂದರ್ಯವನ್ನು ಹೀರಿ ಪ್ರಕೃತಿಹೃದಯವನ್ನೂ ಮಾನವ ಹೃದಯವನ್ನೂ ಸಮಶ್ರುತಿಯಲ್ಲಿ ಒಟ್ಟುಗೂಡಿಸಿ ಆನಂದಗೀತೆಯ ಕೋಲಾಹಲವನ್ನು ಎಬ್ಬಿಸಿರತಕ್ಕವನು. ಯಕ್ಷನ ಹೃದಯವರ್ಣನೆಯೂ ಯಕ್ಷನ ಪತ್ನಿಯ ಕರ್ತವ್ಯಪರಾಯಣತೆಯಿಂದ ತುಂಬಿರುವ ವಿರಹವರ್ಣನೆಯೂ, ಉಜ್ಜಯನಿಯ ವೈಭವದ ವರ್ಣನೆಯೂ ವಾಚಕರನ್ನು ಮುಗ್ಧಗೊಳಿಸತಕ್ಕುವಾಗಿವೆ. ಜನಪದ ವಧುಗಳು "ಭ್ರೂವಿಕಾರಾನಭಿಜ್ಞ"ರೆಂದು ವರ್ಣಿಸಿರುವುದು, ಹಿಮವತ್ಪರ್ವತದ ಸಾನು ಪ್ರದೇಶದಲ್ಲಿ ಗಾಳಿಯು ಕಿರುಬಿದುರಕೊಳವೆಗಳಲ್ಲಿ ನುಗ್ಗಿ ಮಧುರಧ್ವನಿಯನ್ನು ಮಾಡುತ್ತಿದ್ದುದನ್ನು ವರ್ಣಿಸಿರುವುದು, ಉಜ್ಜಯಿನೀ ನಗರದ ಸ್ತ್ರೀಯರ ವಿಲಾಸಗಳನ್ನು ವರ್ಣಿಸಿರುವುದು, ಕೆಲವು ಜಾತಿಯ ಹಕ್ಕಿಗಳು ತಮ್ಮ ಗರ್ಭಾಧಾನ ಸಮಯದಲ್ಲಿ ಗಂಡು ಹಕ್ಕಿಗಳ ಮನಸ್ಸನ್ನು ಉಲ್ಲಾಸ ಪಡಿಸಲು ಕೊಕ್ಕುಗಳಿಂದ ಗುಟುಕನ್ನು ಕೊಡುತ್ತಿರುವುದನ್ನು ವರ್ಣಿಸಿರುವುದು, ಮಳೆಯ ಮೊದಲು ಹನಿಗಳು ಬಿದ್ದಾಗ ಬೆಟ್ಟದಿಂದ ಉರುಳುವ ಉಷ್ಣೋದಕವನ್ನೂ ಸ್ನೇಹಿತನಾದ ಮೇಘವನ್ನೂ ಕಂಡು ಪರ್ವತರಾಜನು ಸುರಿಸುವ ಉಷ್ಣಬಾಷ್ಪವೆಂದು ವರ್ಣಿಸಿರುವುದು– ಇವೇ ಮುಂತಾದುವುಗಳಿಂದ ಕವಿಯ ಪರಿ

CC-0. Jangamwadi Math Collection. Digitized by eGangotri

ಶೀಲನೆಯು ಎಷ್ಟುಮಟ್ಟಿನದೆಂಬುದು ಸ್ಪಷ್ಟವಾಗುತ್ತದೆ. ಇನ್ನೂ ಕೆಲವು ವರ್ಣನಾಭಾಗಗಳು ಪ್ರಪಂಚದ ಯಾವ ದೇಶಕ್ಕಾದರೂ ಯಾವ ಜನಾಂಗಕ್ಕಾದರೂ ಹೆಮ್ಮೆಯನ್ನುಂಟುಮಾಡತಕ್ಕವುಗಳಾಗಿವೆ.

ಇನ್ನು ವಸ್ತುವೈಶಿಷ್ಟ್ಯದ ವಿಚಾರ. ಯಕ್ಷನು ಪತ್ನಿಯನ್ನಗಲಿದ ವಿರಹಿ. ಆದರೆ ಅವನು ಕುಬೇರನ ಅನುಚರನಾಗಿದ್ದು ವೈಭವದ ಮಧ್ಯದಲ್ಲಿದ್ದವನು. ಯಕ್ಷರು ಭೋಗಪರಾಯಣರು. ಆದುದರಿಂದಲೇ ಯಕ್ಷನನ್ನು ಕಾಳಿದಾಸನು ಈ ಕಾವ್ಯಕ್ಕೆ ನಾಯಕನಾಗಿ ಆರಿಸಿರುವುದು. ಮೇಘಸಂದೇಶವು ಸ್ವತಂತ್ರ ಕಾವ್ಯ. ಯಕ್ಷನು ವೈಭವವಿಲಾಸಗಳ ಮಧ್ಯದಲ್ಲಿದ್ದು ಅನುಕೂಲದಾಂಪತ್ಯದ ಚರಮ ಸೀಮೆಯಲ್ಲಿ ತೇಲಿ ಓಡಾಡಿ ಸುಖದ ಪಾರವಶ್ಯದಿಂದ ಕೂಡಿದ್ದವನು. ಅಂತಹವನು ಒಂಟಿಯಾಗಿ ರಾಮಗಿರಿಯಲ್ಲಿ ನೆಲಸಿರುವನು. ಇದರಿಂದ ಅವನ ಮನಸ್ಸಿನ ಕಾತರವೂ, ವಿರಹದುಃಖವೂ—ಎಷ್ಟು ಹೆಚ್ಚಿನದೆಂಬುದು ಸ್ಪಷ್ಟವಾಗುತ್ತದೆ. ಯಕ್ಷನು ಉನ್ಮತ್ತಾವಸ್ಥೆಗೆ ತೀರ ಸಮೀಪದಲ್ಲಿರುವ ಕಾತರತೆಯಿಂದ ಕೂಡಿದ್ದಾನೆ. ಅಷ್ಟಾದರೂ ಅವನದು ಸ್ವಾರ್ಥಪರತೆಯಿಂದ ಕೂಡಿದ ಕಾಮವಿಕಾರವಲ್ಲ. ಅವನು "ದಯಿತಾಜೀವಿತಾಲಂಬನಾರ್ಥಿ"; ಪತ್ನಿಯು ಏನಾಗಿರುವಳೋ ಅವಳು ಎಷ್ಟು ಕಷ್ಟಪಡುತ್ತಿರುವಳೋ, ಎಂದು ಕೊರಗಿ ಸೊರಗುತ್ತಿರುವ ಸಾತ್ವಿಕ ಪ್ರೇಮಮಯನಾದ ಕಮನೀಯಮೂರ್ತಿ, ಅವನ ಮನಸ್ಸಿನಲ್ಲಿರುವುದು ಶುದ್ಧ ಪ್ರೇಮಲಹರಿ, ಎಂಬುದನ್ನು ಸೂಚಿಸುವುದಕ್ಕಾಗಿಯೇ ಕಾಳಿದಾಸನು "ಜನಕತನಯಾಸ್ನಾನಪುಣ್ಯೋದಕೇಷು" ಎಂದು ಹೇಳಿದ್ದಾನೆ. ಯಾವ ದೇವಿಗೆ ಸಮಾನವಾದ ಮತ್ತೊಬ್ಬ ಸ್ತ್ರೀವ್ಯಕ್ತಿಯು ಪ್ರಪಂಚದ ಇತಿಹಾಸದಲ್ಲೇ ಇಲ್ಲವೋ ಆ ಸೀತಾದೇವಿಯು ಸ್ನಾನ ಮಾಡಿದ ಪುಣ್ಯೋದಕವು ಹರಿಯುತ್ತಿರುವುದು ಆ ರಾಮಗಿರಿ. ಯಕ್ಷನು ಅದರಲ್ಲಿ ಸ್ನಾನಮಾಡಿ ಶುದ್ಧನಾಗಿದ್ದಾನೆ. ಅವನ ಮನಸ್ಸು ಸಂಯಮಬದ್ಧವಾಗಿದೆ. ಆದುದರಿಂದಲೇ ತನಗೆ ಶಿಕ್ಷೆಯನ್ನು ವಿಧಿಸಿದ ಕುಬೇರನ ವಿಷಯವಾಗಿ ಅವನು ಒಂದು ಬಿರುನುಡಿಯನ್ನೂ ಆಡುವುದಿಲ್ಲ. ಕವಿಯು ವರ್ಣಿಸುವುದು ಕೇವಲ ಕಾಮವಿಕಾರವಲ್ಲವೆಂಬುದನ್ನು ಸೂಚಿಸುವುದಕ್ಕೋಸ್ಕರವೇ ಸೀತಾದೇವಿಯು ಮಿಂದ ಪುಣ್ಯೋದಕದ ಸುದ್ದಿಯನ್ನು ತಂದಿರುವುದು. ಯಕ್ಷನು ಶುದ್ಧಹೃದಯನಾಗಿ ಶಾಪದ ಅವಧಿಯಲ್ಲಿ ಉಳಿದಿರುವ ನಾಲ್ಕು ತಿಂಗಳನ್ನು ಕಷ್ಟ ಹಿಡಿದು ಕಳೆಯಬೇಕೆಂದೂ, ಆ ಬಳಿಕ "ವಿರಹಗುಣಿತ" ವಾದ ಸುಖವನ್ನು ಅನುಭವಿಸಬಹುದೆಂದೂ, ಮೇಘದ ಮೂಲಕ ತನ್ನ ಪತ್ನಿಗೆ ಸಂದೇಶವನ್ನು ಕಳುಹಿಸುವನು. ಉನ್ಮತ್ತಾವಸ್ಥೆಯಲ್ಲಿರುವ ಯಕ್ಷನು ಆಷಾಢದ ಪ್ರಥಮ ದಿವಸದಲ್ಲಿ ಮೇಘವನ್ನು ಕಂಡು ಕಂಬನಿದುಂಬಿ "ಧೂಮ ಜ್ಯೋತಿಸ್ಸಲಿಲ" ಮಯವಾದ ಮೇಘನೊಡನೆ ಚೇತನಾಚೇತನಪರಿಜ್ಞಾನವಿಲ್ಲದೆ ಸಂದೇಶವನ್ನು ಕಳುಹಿ ಉಚ್ಚರಿಸುತ್ತಾನೆ. ಇದನ್ನು ಕವಿಯೇ ಹಾಸ್ಯಮಾಡಿ ಅದ ರೊಡನೆ ಮರುಕಸಂತಾಪಗಳಿಂದ ವಿರಹಿಯ ಕಾತರಾವಸ್ಥೆಯ ಮನೋಹರವಾದ ಚಿತ್ರವನ್ನು ನಮ್ಮ ಮುಂದೆ ಇಟ್ಟಿರುತ್ತಾನೆ. ಯಕ್ಷನದು ಪ್ರಾಕೃತಿಕಪ್ರೇಮ, ಸ್ವಂತ ಸುಖದ ವಿಚಾರಕ್ಕೆ ಅಷ್ಟಾಗಿ ಗಮನಕೊಡದೆ ಪತ್ನಿಯ ಸುಖವನ್ನೇ ಬಯಸುತ್ತಿರುವ ಸ್ವಾರ್ಥತ್ಯಾಗದ ಮನೋವೃತ್ತಿ. ಅವನ ಸಂದೇಶವನ್ನು ತೆಗೆದುಕೊಂಡು ಹೋಗುವುದೆಂದರೆ ಅದೂ ಒಂದು ಯಾತ್ರೆ. ಅದು ರಿಂದಲೇ ಅಲಕಾನಗರಕ್ಕೆ ಹೋಗುವುದಕ್ಕೆ ಮುಂಚೆ ಶಿವ ಪಾರ್ವತಿಯರ ದರ್ಶನಮಾಡಿ ಮಣಿಕೂಟಾರೋಹಣಕ್ಕೆ ಸೋಪಾನವಾಗಿ ಪವಿತ್ರವಾಗಿ ಮೇಘವು ಮುಂದುವ ರಿಯಬೇಕೆಂದು ಸೂಚಿಸಿರುವುದು. ಯಕ್ಷನ ಪತ್ನಿಯು ಸಾತ್ವಿಕಶಿರೋಮಣಿಯಾಗಿರುವ ಮೋಹದ ಮಡದಿ ಪತಿಗೋಸ್ಕರವೇ ಹೃದಯಸರ್ವಸ್ವವನ್ನೂ ಅರ್ಪಿಸಿ ರುವ ಸಾಧ್ವೀಮಣಿ. ವಿರಹಕಾತರೆಯಾದರೂ ಕರ್ತವ್ಯ ವಿಮುಖಳಾಗದೆ ಯಕ್ಷನ ಮನೆವಾರ್ತೆಯನ್ನು ನೋಡಿ ಕೊಂಡು ಧಾರ್ಮಿಕಳಾಗಿ ವ್ರತೋಪವಾಸನಿಯಮಗಳ ನ್ನಾಚರಿಸುತ್ತ ಹಗಲನ್ನು ಕಳೆದು ರಾತ್ರಿಯಲ್ಲಿ (ವಿರಹ ಕಾತರೆಯಾಗಿ) ಕೊರಗಿ ಸೊರಗುತ್ತಿರುವ ನವಯುವತಿ ಯಾದ ಸುಂದರೀಮಣಿ. ಅವಳು ಸುಸಂಸ್ಕೃತೆ ಹೌದು. ತನ್ನ ಪತಿಯಮೇಲೆ ಸೊಗಸಾದ ಕವನವನ್ನು ಕಟ್ಟಿ ತಾನೇ ರಚಿಸಿದ ಮೂರ್ಛನಸ್ಥಾನವನ್ನು ಮರೆತು (ಕಂಬನಿಯಿಂದ ತೊಯ್ದುಹೋಗಿರುವ ವೀಣೆಯನ್ನು ಕಷ್ಟ ದಿಂದ ಶ್ರುತಿಮಾಡಿದುದೂ ಸಾರ್ಥಕವಾಗದೆ ಹೋದು ದನ್ನು ಕಂಡು). ಮತ್ತೆಷ್ಟು ದುಃಖವನ್ನನುಭವಿಸು

CC-0. Jangamwadi Math Collection. Digitized by eGangotri

ತ್ರಿಪ್ಪ ಯಕ್ಷನ ಪ್ರೇಮವಲ್ಲಭೆ. ತಾನು ವೈಭವದ ಪರಾ
ಕಾಷ್ಠೆಯದೆಸೆಯಲ್ಲಿದ್ದರೂ ಪ್ರಾಣಿಮಾತ್ರದಲ್ಲಿ ಸ್ನೇಹಮ
ಮತೆಗಳುಳ್ಳವಳಾಗಿ, ಪಂಜರದಲ್ಲಿರುವ ಶಾರಿಕೆಯನ್ನೂ
ಕೂಡ " ರಸಿಕೇ ! " ಎಂದು ಸಂಬೋಧಿಸುವ ಸಂಯಮ
ಶೀಲಳಾದ ಪಾವನಸ್ವರೂಪಳು. ಆದುದರಿಂದ ಯಕ್ಷ
ನದೂ ಯಕ್ಷಪತ್ನಿಯದೂ ಆದರ್ಶದಾಂಪತ್ಯ. ಆದುದ
ರಿಂದ ಶೃಂಗಾರದ ದೃಷ್ಟಿಯಿಂದಲೂ ಕಾವ್ಯದೃಷ್ಟಿಯಿಂ
ದಲೂ ಪರಿಗಣಿಸಿ ನೋಡಿದರೆ ಕಲಾವೈಭವದ ಸೌಧವನ್ನೇ
ಕಾಳಿದಾಸನು ನಮ್ಮ ಮುಂದೆ ಇಟ್ಟಿದ್ದಾನೆ. ಅಲ್ಲದೆ,
ವೇದಾಂತ ದೃಷ್ಟಿಯಿಂದ, ತತ್ತ್ವನಿರ್ಣಯ ದೃಷ್ಟಿಯಿಂದ
ನೋಡಿದರೂ ಕಾಳಿದಾಸನು ಸೊಗಸನ್ನು ತುಂಬಿದ್ದಾನೆ.
ಶ್ರೀಮಚ್ಛಂಕರಭಗವತ್ಪಾದಾಚಾರ್ಯರವರು ಅಪ್ಪಣೆ
ಕೊಡಿಸಿರುವಂತೆ ಜೀವನಿಗೆ ಮಾಯೆಯ ದೆಸೆಯಿಂದ ಅವಿ
ದ್ಯೆಯ ಮರೆಯು ಏಕೆ ಒಂದಿತೆಂಬುದು ಅನಿರ್ವಚನೀಯ
ವಾದುದು; ಆದರೆ ಜೀವವು ತನ್ನ ಪೂರ್ವದ ಅಖಂಡ
ವೈಭವವನ್ನು ಪಡೆಯಬೇಕೆಂದು ಕಾತರಿಸಬೇಕಾದುದು
ಪ್ರಪಂಚದ ದೃಷ್ಟಿಯಿಂದ ಉನ್ಮತ್ತವಾಗಿ ತೋರಿದರೂ
ಜೀವನ್ಮುಕ್ತದಶೆಯನ್ನು ಪಡೆದು ಅಖಂಡಸುಖವನ್ನು
ಮತ್ತೊಮ್ಮೆ ಅನುಭವಿಸಲು ಪ್ರಯತ್ನಪಡಬೇಕಾದುದು
ಅವಶ್ಯ ಕರ್ತವ್ಯ. ಆಧ್ಯಾತ್ಮಿಕದೃಷ್ಟಿಯಿಂದ ಈ ತತ್ತ್ವ
ವನ್ನೇ ಕಾಳಿದಾಸನು ಮೇಘಸಂದೇಶದಲ್ಲಿ ಸೂಚಿಸಿ
ದ್ದಾನೆ. ಅದಕ್ಕೋಸ್ಕರವೇ ಶಾಪಬಂದುದಕ್ಕೆ ಕಾರಣ
ವನ್ನು ಕಾಳಿದಾಸನು ಹೇಳಿಲ್ಲ. ಯಕ್ಷನು ಜೀವದ
ಸ್ಥಾನದಲ್ಲಿದ್ದಾನೆ. ಕಾತರನಾಗಿ, ಉನ್ಮತ್ತನಾಗಿ, ಸಾಧಕ
ಶ್ರೇಷ್ಠನಾಗಿ, ಮೊದಲಿನೆಯ ಅಖಂಡವೈಭವವನ್ನು ಪಡೆ
ಯಲು ಬಯಸುತ್ತಿದ್ದಾನೆ. ಈ ರೀತಿ ಕಲಾಪರಿಪೂರ್ಣ
ತೆಗೆ ಭಂಗಬಾರದಂತೆ ಆಧ್ಯಾತ್ಮಿಕ ತತ್ತ್ವವನ್ನು ಜೋಡಿಸು
ವುದನ್ನು ಕಾಳಿದಾಸನನ್ನು ಬಿಟ್ಟು ಪ್ರಪಂಚದ ಇತರ
ದೇಶಗಳ ಮತ್ತಾವ ಕವಿಗಳಲ್ಲಿಯೂ ನಾವು ಕಾಣು
ವಂತಿಲ್ಲ.

ಇನ್ನು ಪ್ರಕೃತಿಲೀಲೆಗೂ ಮಾನವವ್ಯಾಪಾರಕ್ಕೂ
ಇರುವ ಸಂಬಂಧ. " ಯೋ ಮಾಂ ಪಶ್ಯತಿ ಸರ್ವತ್ರ
ಸರ್ವಂಚ ಮಯಿ ಪಶ್ಯತಿ " ಎಂಬ ಗೀತೋಕ್ತ ತತ್ತ್ವ
ವನ್ನೇ " ಕಾಂತಾಸಮ್ಮಿತ " ಯಲ್ಲಿ ಕಾಳಿದಾಸನು
ಚಿತ್ರಿಸಿದ್ದಾನೆ. ಕಾಳಿದಾಸನು ಕವಿಪುಂಗವನೂ ಹೌದು,
ಯೋಗಿಯೂ ಹೌದು, ಸಾಧಕನೂ ಹೌದು, ವೇದಾಂ
ತಿಯೂ ಹೌದು. ಆದುದರಿಂದಲೇ ಅವನಿಗೆ ಹಿಮವತ್ಪ
ರ್ವತದಿಂದ ಹಿಡಿದು ಕಾಡುಮಲ್ಲಿಗೆಯವರೆಗೂ ಇರುವ
ಸಮಸ್ತ ಪ್ರಾಕೃತಿಕ ವಸ್ತುಗಳೂ ಸಚೇತನವೆಂಬ
ಭಾವನೆಯುಂಟು. ಒಂದೇ ಸತ್ವವಿಶೇಷವು, ಒಂದೇ ಪರ
ಮಾತ್ಮನ ದೀಧಿತಿಮಾಲೆಯು, ಮನುಷ್ಯನ ಹೃದಯ
ದಲ್ಲಿಯೂ ಪ್ರಾಣಿಗಳ ಹೃದಯದಲ್ಲಿಯೂ ಕ್ರಿಮಿಕೀಟಗಳ
ಹೃದಯದಲ್ಲಿಯೂ ಸ್ಥಾವರ ಸೃಷ್ಟಿಯಲ್ಲಿಯೂ ಪ್ರವಹಿ
ಸುತ್ತ ಸ್ನೇಹಬಾಂಧವ್ಯಗಳ ಏಕತಾನದಲ್ಲಿ, ಸೃಷ್ಟಿಯ
ಯಶೋಗೀತೆಯಲ್ಲಿ, ಸಮಸ್ತವನ್ನೂ ಲೀನಗೊಳಿಸುತ್ತಿ
ರುವ ದಿವ್ಯರಹಸ್ಯವನ್ನು ಕಾಳಿದಾಸನು ಮನಗಂಡು
ಅನಿರ್ವಚನೀಯವಾದ ಆನಂದವನ್ನನುಭವಿಸಿದವನು.
ಆದುದರಿಂದಲೇ ಮೇಘವನ್ನು ಯಕ್ಷನು ಸಂಬೋಧಿಸು
ವಂತೆಯೂ, ಪರ್ವತವು ಮೇಘವನ್ನಾಲಂಗಿಸಿ ಸ್ನೇಹಾ
ರ್ದ್ರತೆಯಿಂದ ಕಂಬನಿಸುರಿಸುವಂತೆಯೂ, ಕೊಕ್ಕರೆಗಳೂ
ನವಿಲುಗಳೂ ಸ್ನೇಹಭಾವನೆಯಿಂದ ಮೇಘವನ್ನು ಸೇವಿ
ಸುವಂತೆಯೂ, ಯಕ್ಷನ ಪತ್ನಿಯು ಪಂಜರಬದ್ಧವಾದ
ಶಾರಿಕೆಯನ್ನು ಆತ್ಮೀಯತೆಯಿಂದ " ರಸಿಕೇ " ಎಂದು
ಸಂಬೋಧಿಸುವಂತೆಯೂ, ಕುಮಾರಸ್ವಾಮಿಯ ವಾಹನ
ವಾದ ನವಿಲಿನ ಗರಿಯು ಕೆಳಗೆ ಬಿದ್ದಿದ್ದರೆ ಪಾರ್ವತೀ
ದೇವಿಯು ಮಗನನ್ನು ಮಾತ್ರವೇ ಮುದ್ದಿಸುವುದಲ್ಲದೆ
ಆ ನವಿಲನ್ನು ಕೂಡ ಮುದ್ದಿಸಿ ಕಾರುಣ್ಯವಿಶೇಷದಿಂದ
ಆ ನವಿಲುಗರಿಯನ್ನು ಕಿವಿಯಮೇಲಕ್ಕೆ ಸೇರಿಸಿ ಅನಿರ್ವ
ಚನೀಯವಾದ ಕೃಪಾವಶೇಷವನ್ನು ಸೂಚಿಸಿರುವುದನ್ನೂ
ಕಾಳಿದಾಸನು ವರ್ಣಿಸಿರುವನು. ಪೂರ್ವಮೇಘದಲ್ಲಿ
ಪ್ರಕೃತಿಲೀಲೆಯ ಭವ್ಯದೃಶ್ಯಗಳ ಚಿತ್ರ; ಅದಕ್ಕೆ ಮಾನವ
ವ್ಯಾಪಾರವು ಚೌಕಟ್ಟು. ಉತ್ತರ ಮೇಘದಲ್ಲಿ ಮಾನವ
ವ್ಯಾಪಾರವು ಚಿತ್ರಪಟ, ಅದಕ್ಕೆ ಪ್ರಕೃತಿಲೀಲೆಯು
ಚೌಕಟ್ಟು. ಪೂರ್ವಮೇಘದಲ್ಲಿ ಗಿಳಿಯಾದುದು ಉತ್ತರ
ಮೇಘದಲ್ಲಿ ಪಂಜರ; ಪೂರ್ವಮೇಘದಲ್ಲಿ ಪಂಜರವಾಗಿ
ದ್ದುದು ಉತ್ತರಮೇಘದಲ್ಲಿ ತಾಂಡವನೃತ್ಯಗೈಯುವ
ಲೀಲಾಶುಕ. ಈ ರೀತಿಯಲ್ಲಿ ಪ್ರಕೃತಿಹೃದಯವನ್ನೂ
ಮಾನವವ್ಯಾಪಾರವನ್ನೂ ಓತಪ್ರೋತವಾಗಿ ಒಟ್ಟು
ಗೂಡಿಸಿ ಆನಂದಲಹರಿಯ ಮಧುರತಾನವನ್ನೆಬ್ಬಿಸಿ
ಒಟ್ಟು ಸೃಷ್ಟಿಯೇ ಪರಮಾತ್ಮನ ಸ್ತುತಿಗೀತೆಯ ಸುಖಾ
ನುಭವದ ಪಾರವಶ್ಯದಲ್ಲಿ ಮಗ್ನತೆಯನ್ನೈದಿ ತನ್ನ ವೈಶಿಷ್ಟ್ಯ



CC-0. Jangamwadi Math Collection. Digitized by eGangotri

ವನ್ನೇ ಮರೆಯುವಂತೆ ಕಲೆಯ ತಿಳಿರಸದ ಸೊಬಗಿನ ದೃಶ್ಯವನ್ನು "ಮೇಘದೂತ" ವೆಂಬ ಖಂಡಕಾವ್ಯದ ರೂಪದಲ್ಲಿ ಕಾಳಿದಾಸನು ಜನತೆಗೆ ಕೊಟ್ಟು ಮಹೋಪಕಾರವನ್ನು ಮಾಡಿದ್ದಾನೆ.

"ವಾಚಕರ ಹೃದಯವನ್ನು ಮುಗ್ಧಗೊಳಿಸಿದ ಸ್ವರ್ಗಲೋಕದ ಸುವರ್ಣ ಕೋಕಿಲವೇ! ಪಾಮರರಾದ ನಾವು ನಿನ್ನನ್ನೇ ಸ್ವಂತವಾಗಿ ಕಂಡು ನಿನ್ನ ಮಧುರಾಲಾಪವನ್ನು ಪ್ರತ್ಯಕ್ಷವಾಗಿ ಕೇಳುವ ಸುಯೋಗವು ದೊರೆಯುವುದಾದರೆ, ಮುಂದಿನ ಜನ್ಮಜನ್ಮಾಂತರಗಳ ಧರ್ಮಕಾರ್ಯಗಳ ಪುಣ್ಯಕೋಟಿಯನ್ನೇ ಆಧಾರವಾಗಿ ವೀಸಲಾಗಿ ಸಮರ್ಪಿಸಿ ಬಿಡುವೆವು; ಒಮ್ಮೆ ಗಾನ ಮಾಡಲಾರೆಯಾ? ಒಮ್ಮೆ ಆನಂದಗೊಳಿಸಲಾರೆಯಾ? ನಮ್ಮ ಎದುರಿಗೆ ಸ್ವಪ್ನಲೋಕದಲ್ಲಾದರೂ ನಿನ್ನ ಪ್ರೇಮಾಲಾಪದ ಪಂಚಮಸ್ವರವನ್ನು ನಮ್ಮ ಕರ್ಣಕುಹರದಲ್ಲಿ ಪ್ರತಿಧ್ವನಿಗೊಳಿಸಲಾರೆಯಾ?" ಎಂಬುದಾಗಿ ದೈನ್ಯಾಲಾಪದ ಆರ್ತಸ್ವರದಿಂದ, ಕಂಬನಿತುಂಬಿದ ಗದ್ಗದ ಕಂಠದಿಂದ, ಪರಮಾತ್ಮನಿಗೆ ವೇದ್ಯವಾಗುವ ಪ್ರೇಮವೈಖರಿಯಿಂದ ಸರಸ್ವತಿಯ ಎದುರಿಗೆ ಪಾಡಗಾಣಿಕೆಯಾಗಿರುವ ಭಕ್ತಿಸಮ್ಮಿಶ್ರ ಮಧುರತಾನದಿಂದ ಸಹೃದಯರ ಅಂತರಾತ್ಮವೇ ಆರ್ತನಿನಾದ ಮಾಡುವುದರಲ್ಲಿ ಆಶ್ಚರ್ಯವೇನು?

# ಸಮಾಧಾನ

(ಜಿ. ಪಿ. ರಾಜರತ್ನಂ ಎಂ. ಎ.)

"ಕವಿವೃಷರ ಸಮ್ಮುಖದಿ
ಪೋಗಿ ನಿಲಲು
ನಾ ನುಡಿಯಲು
ಅವರೆಲ್ಲಿ ನಾನೆಲ್ಲಿ"
ಎಂದು ನೀ ಹಿಂಜರಿವೆ–
ಹೆದರಬೇಡ.
ಹಿಂದೆಗೆಯದೆದೆಮಾಡಿ
ಹೋಗು ಮುಂದೆ.

* * *

ಸುಮದಳೆದು ಫಲವಾಂತ
ಹಿರಿ ಲತೆಗಳು
ಹೆಮ್ಮರಗಳು
ಮೆರೆವುವೆಂದೆದೆಗುಂದಿ
ಚಿಗುರೊಡೆಯದೆಳಲತೆಯು
ಹಿಗ್ಗದಿಹುದೆ?
ಪುಡಿಯೊಳಿಹ ಕೀರುಬೀಜ
ಮೊಳೆಯದಿಹುದೆ?

ಹೆಮ್ಮರವು ಹಿರಿ ಲತೆಯು
ಫಲ ಸುರಿಸಲಿ
ಕುಸುಮವಿಡಲಿ.
ಚಿಗುರೊಡೆದು ನೀನು ಬೆಳೆ–
ಬೀಜದಿಂದಂಕುರಿಸಿ
ಹೊರಗೆ ಬರದೆ
ಒಳಗೊಳಗೆ ಅಡಗಿರಲು
ಏನು ಚೆಲುವು?

* * *

"ಎಳವೊಳಕೆ ನಾನಾಗೆ
ಚೆಲುವಿರುವುದೊ
ಚೆಲುವು ಇರದೊ"
ಎಂದು ಶಂಕಿಸುತಿಹೆಯ?
ಹಿರಿದರಾ ಸೊಬಗೊಂದು
ಬಗೆಯಲಿಹುದು.
ಕಿರಿದರೀ ಸೊಬಗೊಂದು
ಬಗೆಯಲಿಹುದು.

CC-0. Jangamwadi Math Collection. Digitized by eGangotri

# ಜರ್ಮನಿಯ ಮಕ್ಕಳ ತೋಟದಲ್ಲಿ ಆಟವೇ ಪಾಠ

ಲೇಖಕರು:— ಪ್ರೊ. ಕೆ. ಎ. ಭಟ್ಟ, ಜರ್ಮನಿ

ಜರ್ಮನಿಯಲ್ಲಿ ಮಕ್ಕಳಿಗೆ ವಿದ್ಯಾಭ್ಯಾಸವು ೩ ವರ್ಷ ಪ್ರಾಯದ ಮಗುವಾಗಿರುವಾಗಲೇ ಆರಂಭವಾಗುವುದು. ನಮ್ಮಲ್ಲಿಯಂತೆ ಇಲ್ಲಿ ಎಂದೂ ಮಕ್ಕಳನ್ನು ೮-೧೦ ವರುಷದವರೆಗೂ ಮನೆಯಲ್ಲಿ ಕೂಡಿಸಿ ಮುದ್ದಾಡುವುದಿಲ್ಲ. ಇಲ್ಲಿ ( Kindergarten ) ಮಕ್ಕಳ ತೋಟದಲ್ಲಿ ೩ ವರ್ಷ



ಪ್ರೊ. ಕೆ. ಎ. ಭಟ್ಟ,

ದಿಂದ ೫ ವರ್ಷದ ವರೆಗಿನ ಮಕ್ಕಳು ಆಟವಾಡುವರು. ಇವರ ಆಟವೇ ಉತ್ತಮವಾದ ಪಾಠ. ದೊಡ್ಡವರು ಪಾಠದಿಂದ ಕಲಿಯುವುದಕ್ಕಿಂತಲೂ ಹೆಚ್ಚಾಗಿ ಇವರು ಆಟದಿಂದಲೇ ಕಲಿಯುವರು. ಇಂತಹ ಒಂದೊಂದು ಶಾಲೆಯಲ್ಲಿ, ೧೨ ಯಾ ೧೫ ಮಕ್ಕಳಿಗಿಂತ ಹೆಚ್ಚಾಗಿರುವುದಿಲ್ಲ. ಒಬ್ಬ ಉಪಾಧ್ಯಾಯಿನಿಯು ಈ ಮಕ್ಕಳಿಗೆ ಕಲಿಸುವಳು; ಅಥವಾ ಈ ಮಕ್ಕಳನ್ನು ಲಾಲಿಸುವಳು. ಈ ಬಾಲಕರಿಗೆ ಪುಸ್ತಕ, ಕಾಗದ, ಸ್ಲೇಟು, ಪೆನ್ಸಿಲು ಇತ್ಯಾದಿಯಾವುದೂ ಇರುವುದಿಲ್ಲ.

ಈ ಶಾಲೆಯಲ್ಲಿ ಚಿಕ್ಕಮಕ್ಕಳಿಗೆ ಯೋಗ್ಯವಾದ ೩ ಯಾ ೪ ದುಂಡು ಮೇಜುಗಳಿರುವುವು. ಪ್ರತಿಯೊಂದು ಮೇಜಿನ ಸುತ್ತಲೂ ೪ ಚಿಕ್ಕ ಪುಟ್ಟ ಕುರ್ಚಿಗಳಿರುವುವು. ಈ ಮೇಜಿನ ಮೇಲೆ ಹೆಚ್ಚಾಗಿ ಮರದಿಂದ ತಯಾರಿಸಿದ ಅನೇಕ ತರದ ಆಟದ ಸಾಮಾನುಗಳಿರುವುವು. ಈ ಚಿಕ್ಕ ಆಟದ ಸಾಮಗ್ರಿಗಳಿಂದ ನೂರಾರು ತರದ ಚಿತ್ರವಿಚಿತ್ರವಾದ ಪುಟ್ಟ ಯಂತ್ರದ ಆಕಾರವನ್ನು ಮಾಡಲು ಸಾಧ್ಯವು. ಮೊನ್ನೆ ಒಂದು ಮಕ್ಕಳ ತೋಟವನ್ನು ಹೊಕ್ಕು ನೋಡಿದೆನು. ಅಲ್ಲಿ Mis. R. Henning ಎಂಬ ಒಬ್ಬ ಯುವತಿಯು ಮಕ್ಕಳಿಗೆ ಕಲಿಸುತ್ತಿದ್ದಳು, ಅಥವಾ ಅವುಗಳನ್ನು ಲಾಲಿಸುತ್ತಿದ್ದಳು. ಪ್ರತಿಯೊಂದು ಮೇಜಿನ ಮೇಲೂ ಮರದ ಆಟದ ಸಾಮಾನುಗಳಿಂದ ತಯಾರುಮಾಡಬಹುದಾದ ಯಂತ್ರ ಇ. ಗಳ ಗೊಂಬೆಗಳನ್ನು ತೋರಿಸುವ ಒಂದು ಚಿಕ್ಕ ಪುಸ್ತಕವೂ ಬಿದ್ದಿತ್ತು. ಒಂದೊಂದು ಪುಸ್ತಕದಲ್ಲಿಯೂ ೧-೫ ಗೊಂಬೆಗಳಿದ್ದುವು. ಈ ಮಕ್ಕಳೊಂದಿಗೆ ಆಟವನ್ನು ಆಡಬೇಕೆಂಬ ಆಶೆಯು ನನಗೂ ಉಂಟಾಯಿತು. ಪ್ರಯತ್ನಪಟ್ಟೆನು. ಇನ್ನೂ ಯಾವುದೂ ಚೆನ್ನಾಗಿ ಬರುವುದಿಲ್ಲ. ನಿನ್ನಿನ ದಿವಸ ಸಾಯಂಕಾಲವೆಲ್ಲಾ ಈ ಶಾಲೆಯಲ್ಲಿ ಕಾಲವನ್ನು ಕಳೆದೆನು. ಎಲ್ಲಾ ತರದ ಯಂತ್ರ ಇ. ಗೊಂಬೆಗಳನ್ನು ಮರದ ತುಂಡುಗಳಿಂದ ಜೋಡಿಸಿ ೩-೪ ವರ್ಷದ ಎಳೆ ಮಕ್ಕಳು ಮಾಡುವುದನ್ನು ನೋಡಿದರೆ ನನಗೆ ಆಶ್ಚರ್ಯವಾಗುವುದು. ಇಂತಹ ಕೆಲಸವನ್ನು ಮಗುವು ಮಾಡಲಿಕ್ಕೆ ಸಮರ್ಥವಾದಾಗ ೨೪ ವರ್ಷದ ಯುವಕನು ತನ್ನ ವಿದ್ಯೆಯಲ್ಲಿ ಯಾವ ತರದ ಪಾಂಡಿತ್ಯವನ್ನು ಹೊಂದಬಹುದು ಎಂಬುದನ್ನು ಹೇಳಬೇಕಾಗಿಲ್ಲ.

ದಿವಸವೆಲ್ಲಾ ಈ ಮಕ್ಕಳು ಶಾಲೆಯಲ್ಲಿಯೇ ಇರು

CC-0. Jangamwadi Math Collection. Digitized by eGangotri

ವುವು. ಉಪಾಧ್ಯಾಯಿನಿಗೆ ಶಾಲೆಯೇ ಮನೆಯಾಗಿದೆ. ಕೆಲವರು ಈ ಮಕ್ಕಳಿಗೆ ಆಹಾರವನ್ನು ಅಲ್ಲಿಯೇ ಕೊಡುವ ಏರ್ಪಾಟ ಮಾಡಿರುವರು. ಇನ್ನೂ ಕೆಲವರು ಹತ್ತಿರದಲ್ಲಿಯೇ ಇರುವ ತಮ್ಮ ಮನೆಗೆ ಮಕ್ಕಳನ್ನು ಕರೆದುಕೊಂಡು ಹೋಗಿ ಮರಳಿ ಕಳುಹಿಸುವರು. ಈ ಉಪಾಧ್ಯಾಯಿನಿಯು ಮಕ್ಕಳನ್ನು ಆಗಿಂದಾಗ್ಗೆ ಎತ್ತಿಕೊಂಡು ಅಪ್ಪಿ ಮುದ್ದಾಡುವಳು. ಮಕ್ಕಳನ್ನು ಲಾಲಿಸುವ ಕ್ರಮವನ್ನು ನಾವು ಇವರಿಂದಲೇ ಕಲಿಯ ಬೇಕಾಗಿದೆ. ಹೆತ್ತ ತಾಯಿತಂದೆಗಳು ಈ ಶಾಲೆಯ ಚಿಕ್ಕ ಮಕ್ಕಳಿಗೆ ತಾಯಿತಂದೆಗಳಲ್ಲ. ಈ ಉಪಾಧ್ಯಾಯಿನಿಯು ಅವುಗಳಿಗೆ ನಿಜವಾದ ತಾಯಿಯೂ ಮತ್ತು ತಂದೆಯೂ ಆಗಿರುತ್ತಾಳೆ. ಇಲ್ಲಿ ಉಪಾಧ್ಯಾಯಿನಿಯು ಮಕ್ಕಳಿಗೆ ಹೊಡೆಯುವುದರ ಬದಲಾಗಿ ಮಕ್ಕಳೇ ಒಂದು ಪದೇ ಪದೇ ಮಾಸ್ತರಿಗೆ ಒಂದೊಂದಾಗಿ ಏಟನ್ನು ಕೊಡುವರು. ಇವಳು ಮಾತ್ರ ಒಡನೆಯೇ ಅವುಗಳನ್ನು ತಬ್ಬಿ ಮುದ್ದಾಡುವಳು. ನಮ್ಮ ದೇಶದಲ್ಲಿಯೂ ಈ ತರದ ಮಕ್ಕಳ ತೋಟವನ್ನು ಅಲ್ಲಲ್ಲಿ ಸ್ಥಾಪಿಸುವುದು ಮತ್ತು ಅದಕ್ಕೆ ಪ್ರೋತ್ಸಾಹವನ್ನು ಕೊಡುವುದು ವಿದ್ಯಾಭಿವೃದ್ಧಿಗೆ ಕಾರಣವೆಂದು ಭಾವಿಸುತ್ತೇನೆ.

## ಆಟವೇ ಪಾಠ

ಜರ್ಮನಿಯಲ್ಲಿ ಚಿಕ್ಕಮಕ್ಕಳಿಗೆ ಎಲ್ಲಾ ತರದ ಆಟಗಳನ್ನೂ ತಾಯಿತಂದೆಗಳು ಕಲಿಸುವರು. ಮಕ್ಕಳು ಸುಮಾರು ೧೨ ವರ್ಷದ ವರೆಗೂ ಹೆಚ್ಚಾಗಿ ಆಟಗಳಲ್ಲಿಯೆ ಆಸಕ್ತರಾಗಿರುವರು. ಮತ್ತು ದೊಡ್ಡವರು ಆಡುತ್ತಿರುವ ಆಟಗಳನ್ನು ಆಡುವುದಕ್ಕೆ ಅವರಿಗೆ ಬಹಳ ಆಸಕ್ತಿ ಇರುವುದು. ತಾನು ದೊಡ್ಡವನಾದಾಗ ಅಂಥ ಆಟಗಳನ್ನಾಡುವೆನು ಎಂತ ಆಲೋಚಿಸುವರು. ಪುಸ್ತಕದಲ್ಲಿರುವ ಪಾಠಗಳನ್ನು ಓದಬೇಕೆಂದರೆ ಅವರಿಗೆ ಅದರಲ್ಲಿ ಉಲ್ಲಾಸವಿರುವುದಿಲ್ಲ. ಇದನ್ನು ಪರಿಶೀಲಿಸಿ ಜರ್ಮನಿಯಲ್ಲಿ ೬ ರಿಂದ ೧೦–೧೨ ವರ್ಷದ ಮಕ್ಕಳಿಗಾಗಿ ಮಾಡಿರುವ ಪಾಠದ ಕ್ರಮವು ಆಟವೇ ಆಗಿದೆ. ಇವರ ಆಟವೇ ಪಾಠವೆಂತ ಧಾರಾಳವಾಗಿ ಹೇಳಬಹುದು. ಇದು ಇಲ್ಲಿಯ ಬಾಲಕರಿಗೆ ತುಂಬಾ ಉಲ್ಲಾಸವನ್ನು ಕೊಡತಕ್ಕದ್ದಾಗಿದೆ.

ಮನೆಯಲ್ಲಿ ಹೆಚ್ಚಾಗಿ ಇಲ್ಲಿಯ ಮಕ್ಕಳು ಆಟವನ್ನೇ ಆಡುವರು. ಹಿರಿಯರು ಅವರನ್ನು ಎಂದೂ ಓದುವುದಕ್ಕೆ ನಿರ್ಬಂಧಿಸುವುದಿಲ್ಲ. ಆಟಗಳನ್ನೇ ಆಡುವುದಕ್ಕೆ ಪ್ರೋತ್ಸಾಹಿಸುವರು. ಆದರೆ ಈ ಆಟಗಳಿಂದ ಯಾವ ತರದ ಜ್ಞಾನವು ಮಕ್ಕಳಿಗೆ ಉಂಟಾಗುವುದು, ಎಂಬುದನ್ನು ಕೆಳಗಿನ ಉದಾಹರಣೆಗಳಿಂದ ತಿಳಿಯಲು ಸಾಧ್ಯವು. ಕೆಲವು ಆಟಗಳಿಂದ



ಭೂಗೋಲ ಜ್ಞಾನವೂ ಮತ್ತು ಕೆಲವು ಆಟಗಳಿಂದ ಗಣಿತ ಜ್ಞಾನವೂ, ಕೆಲವುಗಳಿಂದ ಪದಾರ್ಥಪರಿಚಯವೂ ಆನಾಯಾಸವಾಗಿ ಉಂಟಾಗುವುದು.

## ಭೂಗೋಲ

ದಪ್ಪವಾದ ರಟ್ಟಿನ ಮೇಲೆ ಪ್ರಸಿದ್ಧವಾದ ಊರಿನ ಹೆಸರುಗಳನ್ನು ಬರೆದು, ಅದರ ಮೇಲ್ಗಡೆ ಆ ಊರು ಯಾವ ಪ್ರಾವಿನ್ಸಿಗೆ ಸೇರಿದ್ದು, ಎಂಬುದನ್ನು ಕಾಣಿಸಿ, ನಂತರ ಅಲ್ಲಿ ಕೈಗಾರಿಕೆಯು ಪ್ರಸಿದ್ಧವಿದ್ದರೆ ಆಯಾ ಕೈಗಾರಿಕೆಯ ಕಟ್ಟಡವನ್ನು ಅಥವಾ ಆ ಸ್ಥಳವು ವಿದ್ಯಾಭ್ಯಾಸಕ್ಕೆ ಪ್ರಸಿದ್ಧವಾಗಿದ್ದರೆ ಒಂದು ಶಾಲೆಯ ಕಟ್ಟಡವನ್ನು ವಿವಿಧ ಬಣ್ಣಗಳಿಂದ ಅಚ್ಚು ಹಾಕಿರುವರು. ಇದರ ಮಧ್ಯ ಭಾಗವನ್ನು ಒಂದು ಹಾಳೆಯಾಗಿ ಕತ್ತರಿಸಿರುವರು. ಇದನ್ನು ದೊಡ್ಡ ಕಾರ್ಡುಬೋರ್ಡಿನ

CC-0. Jangamwadi Math Collection. Digitized by eGangotri

ಎಬ್ಬಿಸುವುದಕ್ಕೂ ಪುನಃ ಅಲ್ಲಿಯೇ ಇಡುವುದಕ್ಕೂ ಅನುಕೂಲವಾಗಿದೆ. ಒಂದು ಕಾರ್ಡುಬೋರ್ಡಿನಲ್ಲಿ ಇಂಥಾ ಚಿತ್ರಗಳು ೧೦ ಯಾ ೧೨ ಇರುವುವು; ಮತ್ತು ಮಧ್ಯೆ ಆ ದೇಶಗಳ ಹೆಸರನ್ನೂ ಕಾಣಿಸುವ ಒಂದು ಭೂಪಟವೂ ಇರುವುದು. ಇಬ್ಬರು ಹುಡುಗರು ಇಂಥ ನಾಲ್ಕಾರು ಕಾರ್ಡುಬೋರ್ಡುಗಳಲ್ಲಿರುವ ಎಲ್ಲಾ ಚಿತ್ರಗಳನ್ನು ಎಬ್ಬಿಸಿ ಒಂದು ಕಡೆ ರಾಶಿ ಹಾಕುವರು. ಆ ಮೇಲೆ ಇವರಿಬ್ಬರಲ್ಲಿ ಯಾರು ಎಬ್ಬಿಸಿದ ಕಾರ್ಡನ್ನು ಮೊದಲು ಶೀಘ್ರವಾಗಿ ತಪ್ಪದೆ ಜೋಡಿಸುವರೋ ಅವರು ಗೆಲ್ಲುವರು. ಹೀಗೆ ಅನೇಕ ಸಾರಿ ಜೋಡಿಸುವುದರಿಂದ ಇಲ್ಲಿ ೬ ಯಾ ೭ ವರ್ಷದ ಮಕ್ಕಳು ತಮ್ಮ ದೇಶದ ಎಲ್ಲಾ ಮುಖ್ಯ ಪಟ್ಟಣಗಳ ಹೆಸರುಗಳನ್ನೂ ಮತ್ತು ಆ ದೇಶವು ಯಾವುದಕ್ಕೆ ಪ್ರಸಿದ್ಧವೆಂಬುದನ್ನೂ ಯಾವ ಭೂಗೋಲಪುಸ್ತಕವನ್ನೂ ಓದದೆ ಹೇಳಬಲ್ಲರು. ಈ ರೀತಿ ಆಟದಿಂದ ಇಲ್ಲಿ ಚಿಕ್ಕಮಕ್ಕಳು ಭೂಗೋಲದಲ್ಲಿ ಅಧಿಕವಾದ ಜ್ಞಾನವನ್ನು ಸಂಪಾದಿಸುವರು.

### ಗಣಿತ

ಇನ್ನು ಗಣಿತ ಜ್ಞಾನವನ್ನು ಹೆಚ್ಚಿಸುವುದಕ್ಕೆ ಇಸ್ಪೀಟು (ಕಾರ್ಡು) ಆಟಗಳನ್ನಾಡುವ ಕಾರ್ಡುಗಳಲ್ಲಿ ಹಾಸು, ರಾಜ, ರಾಣಿ, ಜಾಕಿ, ಮೊದಲಾದವುಗಳ ಬದಲಾಗಿ ಕೇವಲ ಸಂಖ್ಯೆಗಳ ಗಣಿತಾದಿಗಳನ್ನು ಮಾಡುವ ಕ್ರಮದಿಂದ ಒಂದು ತರದ ಆಟವಿರುವುದು. ಒಬ್ಬನ ಕೈಯ್ಯಲ್ಲಿ ಕಾರ್ಡುಗಳಿರುವುವು. ಇನ್ನೊಬ್ಬನು ಸಂಖ್ಯೆಯನ್ನು ಹೇಳುವನು. ಅವನು ಹೇಳಿದ ಸಂಖ್ಯೆಯು ಆ ಕಾರ್ಡಿನಲ್ಲಿ ಇದ್ದರೆ, ಅದರ ಮೊದಲನೆ ಕಾಲವಿನ ಕೊನೆಯ ಸಂಖ್ಯೆಯು ಮುಂದಿನ ಕಾರ್ಡಿನಲ್ಲಿ ಆತನಿಗೆ ಸಿಗುವ ಸಂಖ್ಯೆಯೊಡನೆ ಕೂಡಿಸಲ್ಪಡುವುದು. ಈ ರೀತಿ ಅನೇಕ ಬಾರಿ ಆಟದಿಂದ, ಕೂಡಿಸುವ ಅಭ್ಯಾಸವನ್ನು ಅನಾಯಾಸವಾಗಿ ಆಟದ ಮೂಲಕವೇ ಕಲಿತುಕೊಳ್ಳುವುದು ಸ್ವಲ್ಪಮಟ್ಟಿಗೆ ಸಾಧ್ಯವು. ಇದೇ ರೀತಿ ಗುಣಿಸುವುದಕ್ಕೂ ಭಾಗಿಸುವುದಕ್ಕೂ ಕೂಡ ಏರ್ಪಾಡುಗಳಿವೆ.

### ಪದಾರ್ಥಪರಿಚಯ

ಪದಾರ್ಥಪರಿಚಯವನ್ನು ಉಂಟು ಮಾಡುವುದಕ್ಕೂ ಶಬ್ದಕೋಶವನ್ನು ಹೆಚ್ಚಿಸುವುದಕ್ಕೂ ಇನ್ನೊಂದು ತರದ ಕಾರ್ಡುಗಳಿರುವುವು. ಈ ಕಾರ್ಡುಗಳಲ್ಲಿ ರಾಜ, ರಾಣಿ, ಮೊದಲಾದುವುಗಳ ಬದಲಾಗಿ ಒಂದೊಂದು ಸ್ತ್ರೀ, ಯಾ ಪುರುಷನ ಗೊಂಬೆ ಇರುವುದು. ಇವರ ಕೈಯಲ್ಲಿ ಹಣ್ಣು ಯಾ ಇತರ ಯಾವುದಾದರೂ ಪದಾರ್ಥದ ಚಿತ್ರವಿರುವುದು. ಇವುಗಳಲ್ಲಿ ಪ್ರತಿಯೊಂದಕ್ಕೂ ಜೊತೆಯೂ ಇರುವುದು. ಮೊದಲು ಈ ಗೊಂಬೆಗಳನ್ನು ನೋಡದೆ ಎಲ್ಲಾ ಕಾರ್ಡುಗಳನ್ನು ಇಬ್ಬರು ಸಮವಾಗಿ ಹಂಚಿಕೊಳ್ಳುವರು. ಆಟವನ್ನು ಆಡುವಾಗ ಪ್ರತಿಯೊಬ್ಬನೂ ಮತ್ತೊಬ್ಬನ ಕೈಯಿಂದ ಕಾರ್ಡುಗಳಲ್ಲಿ ಒಂದೊಂದಾಗಿ ಪರಸ್ಪರ ತೆಗೆದುಕೊಳ್ಳುವನು. ಯಾರು ಹೆಚ್ಚಾದ ಜೋಡಿಯನ್ನು ಹೊಂದುವರೋ ಅವರು ಗೆಲ್ಲುವರು. ಅದೂ ಅಲ್ಲದೆ ಸೋತವರ ಕೈಯಲ್ಲಿ ಒಂದು ಕರೀ ಬಣ್ಣದ ನೀಗ್ರೋ ಮನುಷ್ಯನ ಗೊಂಬೆಯು ಉಳಿಯುವುದು. ಇದು ಸೋತವನಿಗೆ ನಿಂದೆ. ಈ ಆಟದಿಂದ ಆಯಾಯ ಗೊಂಬೆಗಳ ಕೈಯಲ್ಲಿರುವ ಪದಾರ್ಥಗಳ ಪರಿಚಯವೂ ಶಬ್ದಸಂಗ್ರಹವೂ ಆಗುವುದು.

### ಅಂಚೆಮನೆ ಆಟ (Post Office Game)

ಅನೇಕರು ನಮ್ಮಲ್ಲಿ ೮–೧೦ ವರ್ಷಗಳವರೆಗೆ ಶಾಲೆಗೆ ಹೋದರೂ ಅಂಚೆಮನೆಯ ವಿಚಾರವಾಗಿ ತಿಳಿದುಕೊಳ್ಳಬೇಕಾದ ಅನೇಕ ವಿಚಾರಗಳನ್ನು ತಿಳಿದಿರುವುದಿಲ್ಲ. ಆದರೆ ಇಲ್ಲಿ ಚಿಕ್ಕ ೬ ವರ್ಷದ ಮಗುವೂ ಅಲ್ಲಿಯ ಸಮಾಚಾರಗಳನ್ನೆಲ್ಲಾ ಚೆನ್ನಾಗಿ ತಿಳಿದಿರುವುದು. ಇಲ್ಲಿ ಮಕ್ಕಳ ಅಂಚೆಮನೆ ಎಂಬ ಒಂದು ತರದ ಆಟವಿರುವುದು. ಇದರಲ್ಲಿ ಕಾಗದ ಭಂಗಿ ಮೊದಲಾದುವುಗಳನ್ನು ಕಳುಹಿಸುವ ವಿಧಾನಗಳನ್ನು ಕೂಡ ಕಲಿಯಬಹುದು. ಈ ಆಟಕ್ಕಾಗಿ ಅನೇಕ ತರದ ಚಿಕ್ಕ ಅಂಚೆಚೀಟಿಗಳೂ ಮತ್ತು ಮೊಹರುಗಳೂ ದೊರೆಯುವುವು. ಮಕ್ಕಳು ತಮ್ಮ ಸ್ವಂತ ಚೀಟಿಯನ್ನು ಹಚ್ಚಿ ಮೊಹರು ಹಾಕಿ ಕಾಗದಗಳನ್ನು ತಮ್ಮ ಗೆಳೆಯರಿಗೆ ಕಳುಹಿಸುವರು. ಆದರೆ ರಾಜಕೀಯ ಅಂಚೆಯ ಮೂಲಕವಾಗಿ ಕಳುಹಿಸುವುದಿಲ್ಲ. ಪರಂತು ಜವಾನನ ದ್ವಾರಾ ಕಳುಹಿಸುವರು. ಈ ಆಟದಿಂದ ಅಂಚೆಯ ಜ್ಞಾನವು ಬಹಳವಾಗಿ ಉಂಟಾಗುವುದು.

ಇದು ಅಲ್ಲದೆ ಇನ್ನೂ ಅನೇಕ ತರದ ಆಟಗಳು ಜರ್ಮನಿಯ ಚಿಕ್ಕ ಮಕ್ಕಳಿಗೆ ತಿಳಿಯುವುವು. ಈ ಆಟಗಳೆಲ್ಲಾ ಇವರಿಗೆ ಶ್ರೇಷ್ಠವಾದ ಪಾಠವೇ ಆಗಿದೆ. ನಾನೂ ಈ ಆಟಗಳನ್ನೆಲ್ಲಾ ಚಿಕ್ಕ ಮಕ್ಕಳಿಂದ ಕಲಿಯುವುದಕ್ಕೆ ಆಗಿಂದಾಗ್ಗೆ ಮಕ್ಕಳ ತೋಟಕ್ಕೆ (Kindergarten) ಹೋಗುವುದುಂಟು. ಇಂಥ ಆಟಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ನಮ್ಮ ದೇಶೀಯ ಪ್ರಾಥಮಿಕ ಶಿಕ್ಷಣದಲ್ಲಿಯೂ ಉಪಯೋಗಿಸುವುದು ನಮ್ಮ ದೇಶದ ವಿದ್ಯಾಭಿವೃದ್ಧಿಗೆ ಮೂಲ ಹೇತುವೆಂದು ನಾನು ನಂಬುತ್ತೇನೆ.



CC-0. Jangamwadi Math Collection. Digitized by eGangotri

# ಭರಣೀ ನಕ್ಷತ್ರ

ಕತೆಗಾರರು:—ಶ್ರೀ. ಕೆ. ಗೋಪಾಲಕೃಷ್ಣರಾಯರು, ಬಿ. ಎ. ಬೆಂಗಳೂರು

ರಂಗಸಾಮಿ ಒಂದಾಗುತಲೊಂದು ಕಾಗದಗಳನ್ನು ತಿರುವುಹಾಕುತ್ತಿದ್ದ. ಅವು ಎಲ್ಲಾ ಅವನು ಬೊಂಬಾಯಿಗೆ ಬಂದ ಮೇಲೆ ಬಂದ ಪತ್ರಗಳು. ಪ್ರತಿಯೊಂದನ್ನೂ ಆಯಾ ತಾರೀಖುವಾರು ಜೋಡಿಸಿಟ್ಟಿದ್ದ. ಅವುಗಳನ್ನೂ ಮೊದಲಿನಿಂದ ಕೊನೆಯವರೆಗೆ ಓದಲು ಅವಕಾಶವಿಲ್ಲ. ಯಾವುದಕ್ಕೂ ಮನಸ್ಸಿನಲ್ಲಿ ಸ್ಥಿಮಿತವಿರಲಿಲ್ಲ. ಸುಮ್ಮನೆ ಕೂಡುವುದಕ್ಕೂ ಆಗದು. ದೀಪದ ಬಳಿ ಇರುವ ಚಿಟ್ಟೆ ಹುಳುವಿನ ಹಾಗೆ ಜೀವ ತಟಗುಟ್ಟುತ್ತಿತ್ತು. ಅವನ ಸ್ನೇಹಿತ ಗಾಡಿಯನ್ನು ತರಲು ಹೋಗಿದ್ದ. ರೈಲಿಗೋಸ್ಕರ. ಇನ್ನೂ ಬರಲಿಲ್ಲ. ಅವನು ಹಾಗೇ ಆ ಕಾಗದಗಳನ್ನು ಅಲ್ಲಲ್ಲಿ ತೆಗೆದು ಓದತೊಡಗಿದ.

### ಮೊದಲನೆಯ ಕಾಗದ.

ಪ್ರಿಯರವರ ಪಾದಪದ್ಮಗಳಿಗೆ .... .... .... .... ....
.... .... .... .... .... .... .... .... ....

........ಅವತ್ತು ನಿಮ್ಮ ಜೊತೇಲಿ ನಾನೂ ಬಂದು ಬಿಡುತ್ತೇನೆಂದು ಹಟಮಾಡಿದಾಗ ನೀವು 'ಇನ್ನೂ ಎರಡು ದಿನ ಇರು ಅದು, ' ನೀವು ಆಗ ಏನೋ ಹೇಳಿದಿರಿ. ನನಗೇನೋ ಈಗ ಅದು ಬರೆಯೋಕೆ ನಾಚಿಕೆ ಆಗುತ್ತೆ. ' ಅದು ಆದ ಮೇಲೆ ತಿಳಿದೇ ಇದೆ. ನಾನು ಎಲ್ಲಿ ಹೋದರೆ ಅಲ್ಲಿ ನಿನ್ನೂ ಕರಕೊಂಡೇ ಹೋಗುತೀನಿ ' ಅಂತ ಸಮಾಧಾನ ಮಾಡಿ ಹೋಗಿಬಿಟ್ಟಿರಿ. ಈಗ ನೀವು ಹೋಗಿ ಇನ್ನೂ ಒಂದು ತಿಂಗಳು ಕೂಡ ಆಗಿಲ್ಲ ಅಂಬೋದು ನನಗೆ ಗೊತ್ತು. ಆ ಒಂದು ತಿಂಗಳೂ ನನಗೆ ಒಂದು ಯುಗವೇ ಆಯಿತು. ಇನ್ನೂ ಇವತ್ತಿನಿಂದ ಈ ಬೆಳಗ್ಗಿನಿಂದ ಇನ್ನೂ ಒಂದು ವರ್ಷ, ನಿಮ್ಮಿಷ್ಟದಂತೆ ಒಂದು ವರ್ಷ ಕಳೀಬೇಕಾ ? ಹೇಗೆ ಕಳೀಲಿ ಒಂದು ವರ್ಷಾನ ? ಬೆಳಗ್ಗಿನಿಂದ ನನ್ನ ಮನಸ್ಸು ನನ್ನ ಜೀವ ನಿಮ್ಮನ್ನ, ನಿಮ್ಮ ಮುಖಪದ್ಮವಾನ ಒಂದಸಲ, ಒಂದೇ ಸಲ ನಾನು ನೋಡಬೇಕು.... ನೋಡಬೇಕೂ ಅಂತ ತಲ್ಲಣಿಸುತಾ ಇದೆ. ನೀವು ಯಾವಾಗ ಈ ಕಡೆ .... .... .... ....
.... .... .... .... .... .... .... .... ....

### ಎರಡನೆಯ ಕಾಗದ.

........ಇವತ್ತು ಬೆಳಿಗ್ಗೆ ನೀರಾಯಿತು. ಏಕೋ ಬೆಳಗಿನಿಂದ ಅಮ್ಮ ನೆನಪಿಗೆ ಬರುತಾ ಇದಾಳೆ. ಅಮ್ಮ ಈಗ ಇದ್ದಿದ್ದರೆ ಎಷ್ಟು ಸಂಭ್ರಮಪಡುತ್ತಿದ್ದಳು ಅಂತೀನಿ. ಅಮ್ಮಾ, ಯಾಕೆ ಅತ್ತೆಯವರೂ ಅಮ್ಮನಿಗಿಂತ ಹೆಚ್ಚಾಗಿ ಸಾಕುತ್ತಿದ್ದಾರೆ. ಅಮ್ಮ ಸತ್ತಾಗ ನಾನಿನ್ನೂ ಚಿಕ್ಕ ಹುಡುಗಿ, ಚೆನ್ನಾಗಿ ಜ್ಞಾಪಕ ಇದೆ. ನಮ್ಮ ಪುಟ್ಟ ಇದ್ದಾಳಲ್ಲಾ ಅಷ್ಟಿದ್ದೆ. ಆಗ ನನ್ನ ಅಮ್ಮ ಅತ್ತೆ ಅವರ ಮಡಲಲ್ಲಿ ಹಾಕಿ ಅವತ್ತೇ ನಿಮ್ಮ ಕೈ ಸೇರಿಸಿಬಿಟ್ಟಳು. ಆಗಿನಿಂದಲೂ ಅತ್ತೆಯವರೇ ನಂಗೂ ತಾಯಿತಂದೆ ಎಲ್ಲಾ ಆಗಿದ್ದಾರೆ. ಆದರೂ ಇವತ್ತು ಏಕೋ ಅಮ್ಮನ ಜ್ಞಾಪಕ ಒಂದೇ ಸಮನೆ ಬರುತ್ತಿದೆ. ಕಣ್ಣುಗಳೇಕೋ ನೀರಿನಿಂದ ಸುಮ್ಮನೆ ತುಂಬುತ್ತಿದೆ. ಆಗಿನಿಂದಲೂ ಹಿತ್ತಲಿನಲ್ಲಿ ತುಳಸಿಕಟ್ಟೇ ಹತ್ತಿರ ತಲೆಬಾಗಿಸಿಕೊಂಡು ಕೂತೋಳು ಅಮ್ಮನನ್ನೇ ಜ್ಞಾಪಿಸಿಕೊಳ್ಳುತ್ತಿದ್ದೀನಿ.....

........ನೀವೂ ಕಾಗದ ಬರೀಲಿಲ್ಲ. ಯಾಕೆ ! ಇಷ್ಟು ಇದಾಗದು. ಈ ಕೂಡಲೆ ನೀವು ಬಾಲಕಿ ಮೇಲೆ ಕರುಣೆ ಇಟ್ಟು ಬರೀಲೇಬೇಕು........

### ಮೂರನೆಯ ಕಾಗದ.

........ಈಚೀಚೆಗೆ ಮನೇಲಿ ಯಾಕೋ ಬಲು ಬೇಸರ ಲಾಯಿಸುತ್ತಿದೆ. ನಾನು ಹೇಳೋದಕ್ಕೆ ನೀವು ನಕ್ಕು ಬಿಡಬಹುದು. ಆದರೂ ಮೊದಲು ನಾವು ಅಂದರೆ ನಾನು ಸೀತಕ್ಕ, ವೆಂಕು, ನರಸು, ಎಲ್ಲಾ ಹೇಗೆ ಹಾಸ್ಯ ಮಾಡಿ

CC-0. Jangamwadi Math Collection. Digitized by eGangotri

ಕೊಂಡಿರುತ್ತಿದ್ದೆವೋ ಈಗ ಅದು ಯಾವುದೂ ಇಲ್ಲ. ನಿನ್ನೆ ದಿನ ಒಂದು ತಮಾಷೆ ಆಯಿತು. ಸಾಯಂಕಾಲ ನಾವೆಲ್ಲಾ ಜಡೆಹಾಕಿಕೊಳ್ಳುತ್ತಾ ಇದ್ದೆವು. ವೆಂಕು ಏನೋ ಸಡಿಲವಾಗಿ ಹೆಣಿ ಎಂದಳು. ನರಸೂಗೂ ಸೀತಕ್ಕನಿಗೂ ನಾನೇ ಬೊಂಬಾಯಿಗಂಟು ಹಾಕಿದೆ. ಆ ಮೇಲೆ ನನಗೂ ಬೊಂಬಾಯಿಗಂಟೇ ಹಾಕು ಎಂದೆ. ಎಲ್ಲರೂ ಮುಖ ಮುಖ ನೋಡಿಕೊಂಡರು. ಯಾಕೆ ಅದು ? ನಾನು ಬಲು ದೊಡ್ಡವಳಾಗಿ ಬಿಟ್ಟೆ ಅಂತಲೇ.... ಅಲ್ಲದೆ ಮೊನ್ನೆ ಇನ್ನೊಂದು ಸಮಾಚಾರ.... .... ....

.... .... .... .... .... .... .... .... ....

.... .... .... ....' ನೀವಿದ್ದ ಕಂಪನಿ ಏನೋ ಮುಳುಗಿ ಹೋಯಿತು, ಬೇರೆ ಕಡೆ ಕೆಲಸ ನೋಡುತ್ತಿದ್ದೀನಿ, ಆದಕ್ಕೇ ಬರೆಯೋದು ತಡವಾಯಿತು' ಅಂತ ಬರದಿದ್ದೀರಿ. ಬೇರೆಕಡೆ ಕೆಲಸ ಸಿಕ್ಕಿತೇ ? ಯಾವುದಕ್ಕೂ ಒಡನೆಯೇ ಬರೆಯುವುದು. ಮೂರು ದಿನಕ್ಕೆ ಒಂದಾವರ್ತಿ ಆದರೂ ಮರೀದೀರ ಬರೀತಿರೋದು.....

## ನಾಲ್ಕನೆಯ ಕಾಗದ.

.... .... .... .... .... .... .... ........

.... ....ಮೊನ್ನೆ ಏನೋ ಅಲ್ಲಿ ಹಿಂದೂಗಳಿಗೂ ಮುಸಲಮಾನರಿಗೂ ಜಗಳ ಆಯಿತಂತೆ. ನಮ್ಮ ಜನಗಳ ಎಳೇಮಕ್ಕಳನ್ನ ಎತ್ತಿಕೊಂಡು ಹೋದರಂತೆ ನಿಜವೇ ? ಯಾಕೆ ಹಾಗೆ ಮಾಡುತಾರೆ ! ಯಾವುದು ಎಲ್ಲಾದರೂ ಹೋಗಲಿ, ನೀವಿರುವ ಕಡೆ ಏನೂ ಗಲಾಟೆ ಇಲ್ಲವಲ್ಲ. ನೀವಂತೂ—ನನ್ನ ಮೇಲೆ ಆಣೆ ಇದೆ, ಗಲಾಟೆ ಆಗೋ ಕಡೆ ಖಂಡಿತ ಹೋಗಕೂಡದು. ಹೆಚ್ಚಿಗೆ ತಿಳಿದೋರಿಗೆ ಬಾಲಕಿ ಬರೆಯೋದೇನಿದೆ. ಆದರೂ ನಾನು ಬೇಡಿಕೊಳ್ಳುತ್ತೀನಿ. ನಿಮ್ಮದಂತೂ ಬಲು ಹಟ. ಕೋಪ ಹೆಚ್ಚು.... ನೀವು ಹುಡುಗರಾಗಿಂದಲೂ ನಿಮ್ಮೊಡನೆ ಬೆಳೆದೋಳು ನನಗೆ ತಿಳೀದೇ....ಆದರೂ ನೀವು........

## ಐದನೆಯ ಕಾಗದ.

.... .... .... .... .... .... .... ........

.... ....' ಏನೋ ಮೈಲಿ ಸರೀಗಿಲ್ಲ ತಲೇ ನೋವು' ಅಂತ ಬರೆದಿದ್ದೀರಿ. ಈಗ ಹೇಗಿದೆ ನಿಮಗೆ ? ಯಾತಕ್ಕೆ ಕೂಡಲೆ ಇಲ್ಲಿಗೆ ಬಂದು ಬಿಡಬಾರದು. 'ಎರಡು ದಿನ ಮಟ್ಟಿಗೆ ನೋಯುತ್ತಿತ್ತು' ಅಂತ ಬರೆದಿದ್ದೀರಿ. ಆದರೂ ಈಗಾಗಲೇ ನೀವು ಎಷ್ಟು ಬಡವಾಗಿ ಬಿಟ್ಟಿದ್ದೀರೋ. ಒಂದು ತಿಂಗಳಾದರೂ ಕೊನೇ ಪಕ್ಷ ಒಂದು ಪಕ್ಷವಾದರೂಇಲ್ಲಿ ಇದ್ದು ಹೋಗೀವಿರಂತೆ. ಏನೇ ಆಗಲಿ ಇಲ್ಲಿಗೆ ಬಂದು ಬಿಡಬೇಕು ನೀವು. ಕಾಗದ ಬಂದಾಗಿನಿಂದ ಏನೋ ಕಳಚಿಕೊಂಡು ಬಿದ್ದ ಹಾಗಿದೆ ನನಗೆ. ಎಲ್ಲಿ ರೋಕೂ ಮನಸ್ಸಿಲ್ಲ. ಮಾವನವರಿಗೂ ಈ ವಿಚಾರ ಬರೆದಿದ್ದೀರಾ. ನೀವು ಖಂಡಿತ ಹೊರಟು ಬಂದು ಬಿಡೋದು .... .... .... .... .... .... ....

.... .... .... .... .... .... .... .... ....

## ಆರನೆಯ ಕಾಗದ

.... .... .... .... .... .... .... ....

ಸದ್ಯಕ್ಕೆ ಸೌಖ್ಯವಾಗಿದ್ದಿರಲ್ಲಾ. ಕೆಲಸ ಸಿಕ್ಕಿತು. ಆದರೂ ಬಿಡಲಿಲ್ಲ ಅಂತ ಬರೆದಿದ್ದೀರಿ. ಕೆಲಸ ಸಿಕ್ಕಿದ್ದು ಒಳ್ಳೆಯದೇ ಆಯಿತು. ಆದರೆ ನಿಮ್ಮ ದೇಹಸ್ಥಿತಿ ನೀವು ಮೊದಲು ನೋಡಿಕೊಳ್ಳಬೇಕು. ನಾನೇನುಮಾಡಲಿ ನಿಮ್ಮ ಹತ್ತಿರ ಈಗಲೂ ಇದ್ದುಕೊಂಡು ನಿಮ್ಮನ್ನ ನೋಡಿಕೊಳ್ಳೋಕೆ ಅದೃಷ್ಟ ಇಲ್ಲ, ಆ ಪುಣ್ಯ ಕೇಳಿಕೊಂಡು ಬಂದಿಲ್ಲ. ಇನ್ನೂ ಹಾಳು ಎಂಟು ತಿಂಗಳು ಕಳೀಬೇಕೇನು ? ನಾನು ದೇವರನ್ನ ನಿಮ್ಮನ್ನ ಸೌಖ್ಯವಾಗಿಟ್ಟಿರೆಂದು ಸದಾ ಪ್ರಾರ್ಥಿಸುತ್ತಿರುತ್ತೇನೆ ಅಷ್ಟು ನಾನು ಮಾಡಬಹುದಾದ ಕೆಲಸ. ಈಗಲೂ ನಿಮ್ಮ ಸ್ನೇಹಿತನೂ ನೀವೂ ಒಟ್ಟಿಗೇ ಇದ್ದೀರಷ್ಟೇ........

.... .... .... .... .... .... .... .... ....

## ಏಳನೆಯ ಕಾಗದ.

.... .... .... .... .... .... .... ....

.... ....ಯಾವಾಗಲೂ ಬುದುವಾರ, ಬುದುವಾರ ಹಾಗೆ ನಿಮ್ಮ ಕಾಗದ ಬರೋದು. ನಿನ್ನೆ ರಾಮು, ಮಾವ ಅವರಿಗೆ ಮಾತ್ರ ಒಂದು ಕಾಗದ ಬಂದಿದೆ ನಿಮಗೆ ಯಾವುದೂ ಇಲ್ಲ ಅಂದ. ರಾತ್ರಿ ಊಟ ಮಾಡತ ಮಾವ ಅವರು ಕಂದಾಯ ವಸೂಲಿ ಎಲ್ಲಾ ಇಷ್ಟು ಹೊತ್ತಿಗೆ ಮುಗಿದಿದ್ರೆ ಚೆನ್ನಾಗಿತ್ತು. ನಾನೂ ಬೊಂಬಾಯಿಗೆ ಹೋಗಿ ಬಂದಿದ್ರೆ ಆಗಿತ್ತು ಅಂತಿದ್ರು. ನನಗೆ ಯಾಕೋ ರಾತ್ರಿ ಮಲಗಿಕೊಂಡೆ ರಾತ್ರಿಯೆಲ್ಲಾ ಏನೇನೋ ಕನಸುಗಳು. ನಿದ್ರೆ ಇಲ್ಲ. ಒಂದ ಸಲ ನಾವಿಬ್ಬರೂ ಯಾವುದೊ ಉದ್ಯಾನವನದಲ್ಲಿ ನಲೀತಾ ಹೋಗುತಿದ್ದ ಹಾಗೆ. ಮಧ್ಯದಲ್ಲಿ ನೀವು ನನ್ನ ಬಿಟ್ಟು ಬಿಟ್ಟು ಎಲ್ಲೋ ಹೊರಟು

CC-0. Jangamwadi Math Collection. Digitized by eGangotri

ಹೋದ ಹಾಗೆ. ನನಗೆ ಗಾಬರಿಯಾಗಿ ನಿಮ್ಮನ್ನು ಕೂಗಿಕೊಂಡೆ. ಸುತ್ತಲು ಹುಡಿಕಿದರೆ ನಾನು ಒಂದು ದೊಡ್ಡ ಅರಣ್ಯದಲ್ಲಿ ಸೇರಿಕೊಂಡಿದ್ದೇನೆ. ಹೊರಗೆ ಬರುವ ಹಾಗಿಲ್ಲ. ನಿಮ್ಮನ್ನು ಕೂಗುತಾ ಎಚ್ಚರವಾಗಿ ಬಿಟ್ಟಿತು. ಇನ್ನೊಂದು ಸಲ ನೀವು ಒಂದು ದೊಡ್ಡ ಬಂಡೆ ಮೇಲೆ ನಿಂತಿದ್ದ ಹಾಗೆ. ನಾನು ಹತ್ತಿ ಬರಲು ಯತ್ನಿಸಿದರೆ, ಮೊದಲೇ ಸುತ್ತಲು ಕುರುಚಲು ಗಿಡ. ಅದು ದಾಟಿ ಬಂಡೆಯನ್ನು ಸೇರಿ ಹತ್ತತೊಡಗಿದರೆ, ಸ್ವಲ್ಪ ಹತ್ತಿದೆ ಮೇಲ್ಕೆ ಹತ್ತಲಾರೆ; ಕೆಳಗಡೆ ಹುಲಿ ಚಿರತೆ ಒಂದು ಗರ್ಜಿಸುತ್ತಿವೆ. ದಿಗಲಿನಿಂದ ಮೆಟ್ಟು ಬಿದ್ದು ಬಿಟ್ಟೆ. ಇನ್ನೂ ಏನೋನೋ....ನಿದ್ರೆಯಂತೂ ಬರದೇ ಬರದು. ನಾನು ಇದನ್ನು ಯಾರಲ್ಲಿ ಹೇಳಿಕೊಳ್ಳಬೇಕು. ನೀವು ನನ್ನ ಹತ್ತಿರ ಯಾವುದೂ ಮರೆಮಾಜೋರಲ್ಲ ಅಂತೋದರಲ್ಲಿ ನೀವು ಯಾಕೆ ಈ ಸಲ ಬರೀಲಿಲ್ಲ. ಮಾವ ಅವರು ಯಾಕೆ 'ಹೋಗಿ ಬಂದಿದ್ರೆ ಆಗಿತ್ತು' ಅಂದರು. ರಾತ್ರಿಯೆಲ್ಲಾ ಹೇಗೆ ಕಳೆದನೋ! ಬೆಳಿಗ್ಗೆ ಯಾವಾಗ ಪೋಷ್ಟು ಬಾದೀತು ಎಂದು ಕಾದಿದ್ದೆ. ಇವತ್ತೂ ಕಾಗದ ಇಲ್ಲ. ರಾಮೂಗೆ ಏನೇನೋ ಒಳ್ಳೇ ಮಾತು ಹೇಳಿ ಉಪಾಯ ಮಾಡಿ ಮಾವ ಅವರಿಗೆ ಬಂದಿದ್ದ ಕಾಗದ ತರಿಸಿ ನೋಡಿದೆ. ಆದರೆ ನಿಮ್ಮ ಅಕ್ಷರ ಅಲ್ಲ. ಕೊನೆಯಲ್ಲಿ ನನ್ನ ಸ್ನೇಹಿತ ಕಾಗದ ಬರೀತಿದ್ದ. ಅವನನ್ನೇ ಬರೀ ಅಂತ ಬರೆಸಿ ಬಿಟ್ಟೆ—ಬಿಡುವಿರಲಿಲ್ಲ ನನಗೆ' ಅಂತ ಬರೆಸಿದ್ದೀರಿ. ಆದರೂ ನನಗಂತೂ ಒಂದೂ ಗೊತ್ತಾಗೋದಿಲ್ಲ. ಮೊದ್ದು ಅಂತ ಬೇಕಾದರೂ ಅನ್ನಿ ಈ ಕೂಡ್ಲೆ ನನಗೆ ಕಾಗದ ಬರೆಯೋದು .... .... .... .... .... .... ....

.... .... .... .... .... .... .... .... ....

## ಎಂಟನೆಯ ಕಾಗದ.

.... .... .... .... .... .... .... ....

........ಈಗೆಲ್ಲಾ ತಿಳೀತು ಪ್ರಾಣೇಶ, ಈಗ ಈ ಕಾಗದಾನ ಬರೆಯೋವಾಗ ನಿಮ್ಮ ಮೂರ್ತಿಯನ್ನೇ ಎದುರಲ್ಲಿ ನಿಲಿಸಿಕೊಂಡು ಬರೀತ್ತಿದೀನಿ. ನೀವು....ಅಯ್ಯೋ ನಿಮ್ಮನ್ನ ಇನ್ನು ನೋಡೋಕೆ ಪುಣ್ಯ ಇಲ್ಲ. ನೀವು ಕಳುಹಿಸಿದ್ದ ನಿಮ್ಮ ಪಟವನ್ನೇ ಎದೆಗೆ ಅಪ್ಪಿಕೊಳ್ಳುತ್ತೀನಿ ಆದರೂ ನಾನು ಪಾಪಿ. ನಿಮ್ಮನ್ನು ಎದೆಗೆ ಅಪ್ಪಿಕೊಳ್ಳೋ.... ಇಲ್ಲ ನಾನು ಕೇಳಿ ಬರಲಿಲ್ಲ ಅಷ್ಟೆ....ನಾನು ನಿನ್ನಿಂದಲೇ ನಿಮಗೆ ಅಲ್ಲಿ ಅಷ್ಟು ಕಷ್ಟ ಬರುತ್ತಿರೋದು. ನನಗೆ ಈಗ ಗೊತ್ತಾಯಿತು. ಅಷ್ಟೆ ಅಲ್ಲದೇ ಅಯ್ಯೋ, ನಾನದನ್ನ ಬರೆಲಾರೆ. ನೀವು ಬಿಡತು ಅನ್ನಿ. ನಿನ್ನೆ ನಮ್ಮ ಚಿಕ್ಕತ್ತೆ ಎಲ್ಲಾ ಊರಿಂದ ಬಂದಿದ್ದರು. ನಾನು ದೇವರಕೋಣೇಲಿ ಹೂಬತ್ತಿ ಹೊಸೀತಿದ್ದೆ. ಇತರರೆಲ್ಲಾ ನಿದ್ದೆಗೆ ಹೋಗಿದ್ದರು. ಇಷ್ಟು ದಿವಸಾನು ತಡಕೊಂಡಿದ್ದ ಅತ್ತೆ ಅವರು ಚಿಕ್ಕತ್ತೆ ಸಂಗಡ ಮಾತನಾಡುತ್ತಿದ್ದರು. ನಮ್ಮ ವಿಷಯ, ಅದರಲ್ಲೂ ನಿಮ್ಮ ಹೆಸರು ಕೇಳಿಸುತ್ತಿತ್ತು. ಅದರಿಂದ ಬಾಗಿಲ ಹತ್ತಿರ ನಿಂತುಕೊಂಡು ಕೇಳಿದೆ; ಪ್ರಾಣೇಶ, ನಾನು....ದೊಡ್ಡವಳಾಗಿದ್ದು ಭರಣಿ ನಕ್ಷತ್ರ ಅಂತೆ. ಎರಡನೆಯೋ ಮೂರನೆಯೋ ಪಾದ ಅಂತೆ. ಅದು ನಿಮಗೆ....ಇಲ್ಲ. ನಾನದನ್ನ ಖಂಡಿತ ಬರೆಲಾರೆ ಅಯ್ಯೋ ಪಾಪ ನಮ್ಮ ಕರು ಆ ಬುಡ್ಡ ಹಸುವಿಂದು ಎಷ್ಟು ಮುದ್ದಾಗಿತ್ತು. ನಿಮಗೂ ಅದನ್ನ ಕಂಡರೆ ಬಲು ಪ್ರೀತಿ; ಯಾರಿಗೆ ತಾನೆ ಇರೋದಿಲ್ಲ. ವೊನ್ನೆ ಹೋಗಿಬಿಡ್ತು. ನಿಮ್ಮನ್ನ ತಿರಗ ನೋಡೋ ಋಣಾನುಬಂಧ ಇಲ್ಲ. ಅದರಿಂದ ಒಬ್ಬರಿಗೂ ತೊಂದರೆ ಇರುತ್ತಿರಲಿಲ್ಲ. ಅದರ ಬದಲು ನಾನೇ ಹೋಗಿದ್ದರೆ.... ನಾನು ಬದುಕಿರಬಾರದು. ಹೋದರೆ ನಿಮಗೆ ತೊಂದರೆ ಇಲ್ಲ. ಹೌದು .... .... .... .... .... ....

.... .... ....ನೀವು ಮನಸ್ಸಿಗೆ ಏನೂ ತಿಳಿದುಕೊಳ್ಳಕೂಡದು; ತಪ್ಪುಗಳು ಏನಿದ್ದರೂ ಕ್ಷಮಿಸಬೇಕು.

ತಮ್ಮ ಪಾದ ಸೇವಕಿ

ರಾಣಿ

ರಂಗಸ್ವಾಮಿ ಒಂದು ದೊಡ್ಡ ನಿಟ್ಟುಸಿರನ್ನ ಬಿಟ್ಟ. ಮಾತ್ರಕ್ಕೆ ನಾನು ಹೋದ ಸಲ ಕಿಟ್ಟೀಗೇ ಕಾಗದ ಬರೆ ಬಿಡು ಅಂದೆನೋ ಅಂದುಕೊಂಡ. ಎದ್ದು ಸುಮ್ಮನೆ ಕೊಠಡಿಯಲ್ಲಿ ಅಲ್ಲಿಂದಿಲ್ಲಿಗೆ ಅಲೆದಾಡುತ್ತಿದ್ದ. ಗಾಡಿ ಬಂತು. ಮ್ಯಾನೇಜರಿಗೆ ತಿಳಿಸುವುದಕ್ಕೆ ಕಿಟ್ಟೀಗೆ ಹೇಳಿಬಿಟ್ಟು ಗಾಡಿ ಹತ್ತಿ ಬಿಟ್ಟ.

§ § § §

ರೈಲಿನಿಂದ ರಂಗಸ್ವಾಮಿ ಇಳಿದಾಗ ಆರು ಗಂಟೆಯಿರಬಹುದು. ಸೂರ್ಯ ಆಗ ತಾನೆ ಮುಳುಗುತ್ತಿದ್ದ; ತಂಗಾಳಿ! ಅವನು ಒಬ್ಬ ಆಳಿನ ಕೈಯಲ್ಲಿ ತನ್ನ ಸೂಟ್‌ಕೇಸನ್ನು ಹೊರಿಸಿಕೊಂಡು ಊರಿನ ಕಡೆ ಹೊರಟ

CC-0. Jangamwadi Math Collection. Digitized by eGangotri

ಊರಿಗೂ ಸ್ಟೇಷನ್ನಿಗೂ ಅರ್ಧಮೈಲಿ ಆಗುತ್ತೆ. ಊರೇನೂ ಅಂಥ ಭಾರಿ ಊರಲ್ಲ. ಆದರೂ ಸುತ್ತ ಮುತ್ತಲೂ ಇರುವ ಊರುಗಳ ಪೈಕಿ ಇದೇ ಪರವಾಗಿಲ್ಲ. ಇದಕ್ಕೆ ಬ್ರಾಂಚು ಪೋಸ್ಟಾಫೀಸೂ ರೈಲ್ವೆ ಸ್ಟೇಷನ್ನೂ ಇದೆ. ಈಚೆಗೆ ಇದೇ ಹೋಬಳಿಯೂ ಆಯಿತು. ರಂಗಸ್ವಾಮಿ ತಂದೇನೇ ಈ ಊರಲ್ಲೆಲ್ಲಾ ದೊಡ್ಡ ಕುಳ. ಇನ್ನೂರು ರೂಪಾಯಿ ಕಂದಾಯ ಕಟ್ಟುತ್ತಿದ್ದರು. ಭಾರೀ ಶಾನುಭೋಗರು; ಆದರೂ ಯಾವ ಪೋಲೀಸಿನವನ್ನಾಗಲಿ ಸರಕಾರಿ ಆಫೀಸರನ್ನಾಗಲಿ ಹತ್ತಿರ ಸುಳಿಸುತ್ತಿರಲಿಲ್ಲ.

ಆ ಊರಿಗೆಲ್ಲಾ ಕಳೆ ಕಟ್ಟೋದು ಅಂದರೆ ಆ ಊರು ಮುಂದಿನ ತೋಪು. ಮೊನ್ನೆ ಜೂಬಲೀಲಿ ನೆಟ್ಟಿದ್ದಲ್ಲ. ಬಹಳ ಹಿಂದಿನದು. ಒಳ್ಳೊಳ್ಳೆ ಆಲ, ಬಸರಿ. ಅಶ್ವತ್ಥ ಮರಗಳು. ನಡುವೆ ಇವರ ಪೂರ್ವಿಕರು ಯಾರೋ ಕಟ್ಟಿಸಿದ ಕಲ್ಲು ಕಟ್ಟಿದ ಭಾವಿ. ಇಳಿಯುವುದಕ್ಕೆ ಅಚ್ಚುಕಟ್ಟಾದ ಸೋಪಾನ. ಊರಿನವರಿಗೆಲ್ಲಾ ಮಡೀಗೆ ಅದೇ ಸ್ಥಳ. ಹುಡುಗರಿಗೆಲ್ಲಾ ಈಜಲು ಅದೇ ಜಾಗ. ರಂಗಸ್ವಾಮಿ ಕೂಡ ಈಜುವುದನ್ನು ಇದರಲ್ಲೇ ಕಲಿತಿದ್ದ. ಅವನು ಎಷ್ಟು ದಿನಗಳನ್ನು ಕಷ್ಟ ಇಲ್ಲಿ ಕಳೆದಿದ್ದಾನೆಯೋ! ಈಚೆಗೆ ಕೆಲವು ಕಲ್ಲುಗಳು ಸಡಿಲ ಆಗಿ ಯಾರೂ ನೀರಿಗೆ ಅಲ್ಲಿಗೆ ಹೋಗುತ್ತಿರಲಿಲ್ಲ.

ರಂಗಸ್ವಾಮಿ ರೈಲ್ವೆ ಸ್ಟೇಷನ್ನು ಬಿಟ್ಟು ಎರಡು ಹೆಜ್ಜೆ ಮುಂದಕ್ಕೆ ಬಂದೊಡನೆಯೇ ಊರ ತೋಪಿನ ಅರಳಿ ಮರಗಳು ಕಂಡುಬಂದವು. ಆದಾದ ಮೇಲೆ ತುಂಬಿದ ಬಸರಿಮರಗಳು. ಇನ್ನೂ ನಾಲ್ಕು ಹೆಜ್ಜೆ ಬರಲು ಆ ಮರಗಳ ಸಂದಿಯಲ್ಲಿ ಊರ ಬಾಗಿಲನಲ್ಲೇ ತೋಪಿಗೆ ಸಮೀಪದಲ್ಲಿರುವ ಇವರ ಎತ್ತರದ ಮನೆ. ಇವನೂ ಜಾಗ್ರತೆ ಕಾಲುಹಾಕಿದ. ಅಶ್ವತ್ಥಕಟ್ಟೆ, ತೋಪು ಒಂದೊಂದಾಗಿ ಕಂಡುಬಂದವು. ಆ ತೋಪಿನಲ್ಲಿ ಜನಗಳು ಕಿಕ್ಕಿರಿದಂತಿತ್ತು. ಅದನ್ನು ನೋಡುತ್ತಲೇ ಇವನ ಎದೆಯಲ್ಲಿ ಡಗ್ ಎಂದಿತು. ಹೃದಯದಲ್ಲಿ ಏನೋ ತಿಳಿಯದ ಒಂದು ಯಾತನೆಗೆ ಮೊದಲಾಯಿತು.

ಊರಿಗೆ ಹೋಗುವಾಗ ತೋಪನ್ನು ಹಾಯ್ದೇ ಹೋಗಬೇಕು. ಅಲ್ಲಿ ಆ ಜನಗಳ ಸಂದಣಿಯಲ್ಲಿ ನಾಲ್ಕೈದು ಜನ ಪೋಲೀಸಿನವರ ರುಮಾಲುಗಳು ಕಂಡುಬಂದವು. ಇವನ ಚಿತ್ತ ಭಿತ್ತಿಯಲ್ಲಿ ಯಾವುದೋ ಬುಡಮಟ್ಟ ಕಳಚಿಕೊಂಡು ಬಿದ್ದ ಹಾಗಾಯಿತು.

ಇವನು ಬರುತ್ತಲೆ ಅಲ್ಲಿನ ಜನರು ಇವನಿಗೆ ದಾರಿ ಬಿಟ್ಟರು. 'ಅಯ್ಯೋ ರಂಗೂ' ಎಂದೊಮ್ಮೆಯೇ ದನಿಯೆದ್ದಿತು. ಇವನ ತಾಯಿ ಅಕ್ಕ ಎಲ್ಲರ ಬೆರೆತ ದನಿ. ಇವನ ತಂದೆ ಅಲ್ಲಿ ಮೊಣಕಾಲುಗಳನ್ನು ಊರಿ ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತಿದ್ದಾರೆ. ತಲೆಯೆತ್ತಲಾರರು. ಅವರ ಹಿಂದೆ ಇಬ್ಬರು ಪೋಲೀಸಿನವರು. ಇವನ ತಾಯಿಯವರು ಕುಳಿತಿದ್ದ ಬಳಿ ಯಾರನ್ನೊ ಮಲಗಿಸಿದ್ದರು. 'ರಂಗೂ, ನಿನಗೆ ಈಗ ನಾನು ಹೇಗೆ ಮುಖ ಕೊಟ್ಟು ಹೇಳಲೋ! ನೀನು ಹೊರಗಿನಿಂದ ಬರೋ ಹೊತ್ತಿಗೆ ಎಲ್ಲಿದ್ದರೂ ರಾಜಿ ಬೇಗ ಬಂದು ಬಾಗಿಲು ಓರೆ ಮಾಡಿ ನಿನಗೆ ಕಾಯುತಾ ನಿಂತಿರುತ್ತಿದ್ದಳಲ್ಲೋ' ಎಂದು ಅಳು. ತಾಯಿಯ ಆಲಾಪ.

ಅಲ್ಲಿ ಕೈಫಿಯತು ತೆಗೆದುಕೊಳ್ಳುತಿದ್ದ ಪೋಲೀಸು ಇನಸ್ಪೆಕ್ಟರು ಪಕ್ಕದಲ್ಲಿದ್ದವರನ್ನು ವಿಚಾರಿಸಿ ಇವನು ಯಾರೆಂದು ತಿಳಿದಮೇಲೆ ಇವನ ಹತ್ತಿರಕ್ಕೆ ಬಂದು, "ಓಹೋ ನೀವೂ ಇವರಲ್ಲೊಬ್ಬರೋ" ಎಂದರು.

ಇವನು ಮಾತನಾಡಲಿಲ್ಲ.

'ಇರಬೇಕು ಅದಕ್ಕೇ....ಸಂಗತಿ ಗೊತ್ತೋ ನಿಮಗೆ' ಎಂದರು.

ಅಲ್ಲಿ ಮಲಗಿಸಿದ್ದ ಕಡೆ ಇವನ ದೃಷ್ಟಿ ಇತ್ತು. ಅವನ ತಾಯಿ ಅದರ ಮುಖದ ಮೇಲೆ ಎಳೆದಿದ್ದ ಬಟ್ಟೆಯನ್ನು ತೆಗೆಯುತ್ತಿದ್ದರು.

'ನೀರಿನಲ್ಲಿ ಇವತ್ತು ಬೆಳಿಗ್ಗೆ ಸಿಕ್ಕಿದರೂ ಇದು ಕೊಲೆ ಇದು. ಖೂನಿ ಕೇಸು ಸಾರ್ ಇದು.'

ಇವನು ತಲೆಯನ್ನೆತ್ತಿ ಅವರ ಮುಖವನ್ನು ದಿಟ್ಟಿಸಿ ನೋಡಿದನು.

'ಯಾರು ಮಾಡಿದೋರು ಗೊತ್ತೋ ?'

'ಏ ಧಫೇದಾರ ಶಂಕರರಾವ ಎಲ್ಲಿ ನೋಡುತ್ತಿದ್ದಿ. ಎವಿಡೆನ್ಸು ಬರೆಕೊಳ್ಳಿರಿ ಬೇಗ' ಎಂದು ಹೇಳಿ ಇವನ ತಂದೆ ಕಡೆ ಕೈತೋರಿಸುತ್ತಾ 'ಅತ್ತೆ ಮಾವಂದರು ಸೇರಿ ಹುಡಗೀನ ಹೊಡೆದು....'



CC-0. Jangamwadi Math Collection. Digitized by eGangotri

'ಎಲ್ಲಾ ಗೊತ್ತಿದೆ ಸ್ವಾಮಿ.'

'ಇನ್ನೇನು ಆಧಾರಬೇಕು ಎಲ್ಲಾ ಬರೆಕೊಂಡಿರಾ. ಸಾರ್ ಇದಕ್ಕೆ ಸ್ವಲ್ಪ ತಮ್ಮ ರುಜು ಹಾಕಿ ಬಿಡಿ.'

'ಆಧಾರಬೇಕೇ' ಎಂದೊಡನೆ ಆಳಿನ ಕೈಲಿದ್ದ ಸೂಟು ಕೇಸನ್ನು ಕಿತ್ತುಕೊಂಡು ಅದರಲ್ಲಿದ್ದ ಆವನ ಹೆಂಡತಿಯ ಆ ಕೊನೆಯ ಕಾಗದವನ್ನು ತೆಗೆದು ಅವರ ಕೈಗೆ ಕೊಟ್ಟು 'ಯಾರು ಕೊಂದರು ಎನ್ನುವುದಕ್ಕೆ ಇದು ಆಧಾರ ತಕ್ಕೊಳ್ಳಿ' ಎಂದು ಹೇಳಿ ಅರಕ್ಷಣದೊಳಗಾಗಿ ಅವರ ತಾಯಿ ಆಗ ತಾನೆ ಮುಸಕು ತೆಗೆದಿದ್ದ ರಾಜಿಯ ಮುಖ ವನ್ನು ತನ್ನ ಮುಖದಿಂದ ಮುಚ್ಚಿದನು.

ಪೋಲೀಸು ಇನಸ್ಪೆಕ್ಟರು 'ಇಲ್ಲಿ ಈ ಊರ ಭಟ್ಟರು ಬಂದಿದ್ದಾರೆಯೋ. ಭರಣೀ ನಕ್ಷತ್ರ ಅಂದರೆ ಏನ್ರಿ' ಎಂದು ಕರೆದು ಕೇಳಿದರು.

ಭರಣಿ ನಕ್ಷತ್ರದ ಸಲುವಾಗಿ ತನ್ನ ಗಂಡನ ಎದು ತನ್ನ ಕೈಯಿಂದ ತನ್ನನ್ನೆ ಆಹುತಿ ಕೊಟ್ಟು ಕೊಂಡಿದ್ದಳು ಆ ಹಿಂದೂ ತರುಣಿ, ರಂಗುವಿನ ಮಡದಿ, ರಾಜಿ.

## ಗೀತೆ

(ವಿನಾಯಕ)

ಕಾರಿರುಳಿನ ಗವಿಯಲಿ ನಾ ಕುಳಿತೆನು
ಪ್ರಭೆಯಾಗುತ ಬಳಿ ಸುಳಿದಿತು ಗೀತೆ !

ಬೆಳಕಿನಲೋಲಾಡುವ ಕ್ರಿಮಿಯಾದೆನು
ರಜನಿಯ ರೂಪವ ತಳೆದಿತು ಗೀತೆ !

ಆಂಜನೇಯ ನಾ ರವಿಯೆಡೆ ನೆಗೆದೆನು
ಚಂದ್ರನಾಗಿ ಮನವೊಲಿಸಿತು ಗೀತೆ !

ರಾಮನಾಗಿ ಚಂದ್ರನು ಬೇಕೆಂದನು
ದಿನಮಣಿಯಾಗುತ ಕರೆದಿತು ಗೀತೆ !

ಬೆಳದಿಂಗಳಿನಲಿ ರಮಿಸುವೆನೆಂದೆನು
ಬೆಳಗಾಯಿತು ಏಳೆಂದಿತು ಗೀತೆ !

ಬಿಸಿಲಿನ ತಾಪದಿ ಬೆಳೆಯುವೆನೆಂದೆನು
ಬಿಡುಬಿಡು ಏನಿದು ಎಂದಿತು ಗೀತೆ !

ತಿರೆಯನೆಲ್ಲ ನಾ ತಿರುಗುವೆನೆಂದೆನು
ಸರಿಸರಿ ನಾನಿರೆ ಎಂದಿತು ಗೀತೆ !

ವಿಶ್ವದ ಗೂಢವ ತಿಳಿಯುವೆನೆಂದೆನು
ನನ್ನ ನುಡಿಯುಲಿಹುದೆಂದಿತು ಗೀತೆ !

ಬೆಸನವನೊಂದನು ಕೊಡು ನನಗೆಂದೆನು
ವಸನವ ಹೊಸೆ ನನಗೆಂದಿತು ಗೀತೆ !

ನುಡಿಯೊಂದೆರಡರ ಹಾಡನು ಹಾಡಿದೆ
ಕವಿತೆಯ ಬರೆಯೊಂದೆಂದಿತು ಗೀತೆ !

ಅರಸುತ ನಿನ್ನನು ಬಾಳುವೆನೆಂದೆನು
ನಿನ್ನರಸಿಯು ನಾನೆಂದಿತು ಗೀತೆ !

ಸರಸವನಾಡುತ ಮುದ್ದಿಡ ಹೋದೆನು
ಮೆಲ್ಲನೆ ಮುಂದಡಿಯಿಟ್ಟಿತು ಗೀತೆ!

CC-0. Jangamwadi Math Collection. Digitized by eGangotri

# ಪ್ರಲಯಕಾಲವು ಸಮೀಪಿಸಿದೆಯೇ?

## [ಶಕ್ತಿಯೂ ವಸ್ತುನಾಶವೂ: Energy and Annihilation of Matter]

ಲೇ:— ಶ್ರೀ. ಎಸ್. ರಾಮಕೃಷ್ಣನ್, M. Sc., B. T., ಬೆಂಗಳೂರು

ಸೂರ್ಯನೂ ಮತ್ತು ಇತರ ನಕ್ಷತ್ರಗಳೂ ಆಕಸ್ಮಿಕವಾಗಿ ಶೈತ್ಯ ದಶೆಯನ್ನು ಹೊಂದಿ ಭೂಮಿಯ ಮೇಲೆ ಉಷ್ಣ ಮತ್ತು ಪ್ರಕಾಶ ಕಿರಣಗಳನ್ನು ಕೆಲವು ವರ್ಷಗಳ ಕಾಲ ಬೀರದಿದ್ದರೆ, ಸಸ್ಯ ಮತ್ತು ಮೃಗಗಳು ಜೀವಿಸುವವೇ? ಈ ಪ್ರಶ್ನೆಗೆ ಸಾಮಾನ್ಯವಾಗಿ, ಇಲ್ಲವೆಂದೇ ಉತ್ತರವು. ಆದರೂ ಕೆಲವರು ಸೂರ್ಯನ ಸಹಾಯವು ಅನಾವಶ್ಯಕವೆಂದೂ, ವಿದ್ಯುಚ್ಛಕ್ತಿ ಮತ್ತು ಕಲ್ಲಿದ್ದಲುಗಳನ್ನು ಉಪಯೋಗಿಸಿ ಸಾಕಾಗುವಷ್ಟು ಶಾಖ ಮತ್ತು ಬೆಳಕನ್ನು ತಯಾರಿಸಿ ಜೀವಿಸಬಹುದೆಂದೂ ಊಹಿಸುವರು. ಹೆಚ್ಚು ಯೋಚಿಸಿದ್ದಾದರೆ ಆ ಊಹೆಗೆ ಬುಡವಿಲ್ಲದಿರುವುದು ವಿಶದವಾಗುವುದು. ಸಾವಿರಾರು ವರ್ಷಗಳ ಹಿಂದೆ ನಿಬಿಡವಾಗಿ ಬೆಳೆದಿದ್ದ ಕಾಡುಮರಗಳು ಯಥೇಚ್ಛವಾಗಿ ಸೂರ್ಯನ ಬೆಳಕನ್ನೂ ಮತ್ತು ಉಷ್ಣವನ್ನು ಹೀರಿ, ಭೂಭಾಗ ವ್ಯತ್ಯಾಸದ ದೆಸೆಯಿಂದ ನೆಲದೊಳಗೆ ಹೂಳಲ್ಪಟ್ಟು, ಕೊನೆಗೆ ಕಲ್ಲಿದ್ದಲುಗಟ್ಟಿಗಳಾಗಿ ಪರಿಣಮಿಸಿದುವು. ಕಲ್ಲಿದ್ದಲನ್ನುರಿಸುವಾಗ ಉತ್ಪತ್ತಿಯಾಗುವ ಉಷ್ಣವು ಹಿಂದೆ ಹೀರಲ್ಪಟ್ಟ ಸೂರ್ಯನ ಉಷ್ಣಭಾಗವೇ ಹೊರತು ಬೇರಲ್ಲ. ಜಲಪಾತವನ್ನುಪಯೊಗಿಸಿ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡೋಣವೆಂದರೆ, ಸೂರ್ಯನು ಶೈತ್ಯಸ್ಥಿತಿಯನ್ನು ಹೊಂದಿದ ಮೇಲೆ ಮೇಘವಾಗುವುದು ಹೇಗೆ? ನದಿಯಾಗುವದು ಹೇಗೆ? ನದೀಪಾತ್ರದಲ್ಲಿ ಜಲವಿಲ್ಲದಿದ್ದಾಗ ಜಲಪಾತವುಂಟಾಗುವುದೇ?

ಈ ಯೋಚನಾತರಂಗಗಳು ಸೂರ್ಯನೇ ಮೊದಲಾದ ನಕ್ಷತ್ರಗಳಿಂದ ಹೊರಹೊರಡುವ ಉಷ್ಣಪ್ರವಾಹದ ಅವಶ್ಯಕತೆಯನ್ನು ಸರ್ವರಿಗೂ ಮನದಟ್ಟು ಮಾಡುವುವು. ಸೂರ್ಯನು ಸೃಷ್ಟಿಯಲ್ಲಿ ಬೇರ್ಪಟ್ಟಂದಿನಿಂದ, ಇದುವರೆಗೂ ಅಂದರೆ ಡಾಕ್ಟರ್ ಜೀನ್ಸ್‌ರೆಂಬ ಪ್ರಸಿದ್ಧ ಭೌತಿಕಶಾಸ್ತ್ರಜ್ಞರ ಎಣಿಕೆಯಪ್ರಕಾರ ಎಂಟುನೂರು ಲಕ್ಷಾನುಲಕ್ಷ ವರ್ಷಗಳಿಂದ (8 Million Million Years). ಹೊರಬಿದ್ದಿರುವ ಉಷ್ಣ ಮತ್ತು ಬೆಳಕಿನ ಶಕ್ತಿಯ ಮೂಲದ ಗುಟ್ಟನ್ನು ರಟ್ಟುಮಾಡಲು ಇತ್ತೀಚಿನ ಜ್ಯೋತಿಷ ಮತ್ತು ಭೌತಿಕಶಾಸ್ತ್ರಜ್ಞರೂ ಮಾಡಿರುವ ಅನೇಕಾನೇಕ ಪ್ರಯತ್ನಗಳ ಸಾರಾಂಶವನ್ನು ಈ ಲೇಖನದಲ್ಲಿ ಕೊಟ್ಟಿದೆ. ಮುಖ್ಯವಾಗಿ ಸೂರ್ಯನ ಬೆಳಕಿಗೆ ಕಾರಣವು ಆತನಲ್ಲಿರುವ ಪದಾರ್ಥಗಳ ರೂಪಾಂತರವೆಂದೂ, ಅಂದರೆ ವಸ್ತುವು ಸರ್ವನಾಶವಾಗಿ (Annihilation of Matter) ಶಕ್ತಿಯ ರೂಪವನ್ನು ಹೊಂದಿ ಹೊರಬೀಳುವುದೆಂದೂ ನಿರ್ಧರಿಸಲ್ಪಟ್ಟಿದೆ. ಈ ಮುಖ್ಯಾಂಶವನ್ನು ಸಕಾರಣವಾಗಿ ಸ್ವಲ್ಪ ವಿವರಿಸುವುದೇ ಈ ಲೇಖನದ ಗುರಿ.

ಸೂರ್ಯನ ಮತ್ತು ಇವನಂತಿರುವ ಇತರ ನಕ್ಷತ್ರಗಳ ಭಾರವು ವರ್ಷವರ್ಷಕ್ಕೂ ಕಡಿಮೆಯಾಗುತ್ತಿದೆಯೆಂದೂ, ಮತ್ತು ನಕ್ಷತ್ರಗಳ ಪ್ರಕಾಶಪರಿಮಾಣವು ಅವುಗಳ ಭಾರವನ್ನೇ ಅನುಸರಿಸಿದೆಯೆಂದೂ, ಭೌತಿಕ ಮತ್ತು ಜ್ಯೋತಿಷಶಾಸ್ತ್ರಗಳೆರಡರಲ್ಲೂ ಪ್ರಸಿದ್ಧಿಪಡೆದಿರುವ ಎಡಿಂಗ್‌ಟನ್‌ರವರು ೧೯೨೪ನೆಯ ಇಸವಿಯಲ್ಲಿ, ದೃಷ್ಟಾಂತರಗಳ ಮೂಲಕ ಸಿದ್ಧಾಂತಮಾಡಿರುವರು. ರಶ್ಮಿಪ್ರವಾಹದ ಸ್ವಭಾವವನ್ನು ಹೊರಗೆಡಹುವ ಯಾವ ಊಹೆಯಾದರೂ (Hypothesis) ಮೇಲೆ ಹೇಳಿದ ಸಿದ್ಧಾಂತವನ್ನೊಳಗೊಂಡಿರಬೇಕು.

೧೮೪೨ನೆಯ ಇಸವಿಯಲ್ಲಿ ರಾಬರ್ಟ್ ಮೇಯರ್

CC-0. Jangamwadi Math Collection. Digitized by eGangotri

ಎಂಬವರು – ಸೂರ್ಯಮಂಡಲದೊಳಕ್ಕೆ ಎಡೆಬಿಡದೆ ಒಂದೇ ಸಮನಾಗಿ ಅನೇಕಾನೇಕ ಉಲ್ಕೆ ( Shooting Stars ) ಗಳು ರಭಸದಿಂದ ಬಂದುಬಿದ್ದು ಅದರಿಂದುಂಟಾದ ಉಷ್ಣದಿಂದ ಸುಟ್ಟು ಪ್ರಜ್ವಲಿಸುತ್ತಿರುವವೆಂದೂ, ಮತ್ತು ಈ ಜ್ವಾಲೆಯೇ ಸೂರ್ಯನ ರಶ್ಮಿ ಪ್ರಚಾರಕ್ಕೆ ಆಧಾರವೆಂದೂ, ಊಹಿಸಿದರು. ಈ ಊಹೆಗೆ ಶಕ್ತಿಸಂರಕ್ಷಣ ಸಿದ್ಧಾಂತವೇ ( Principle of Conservation of Energy ) ಅವಕಾಶವನ್ನು ಕೊಟ್ಟಿತು. ಈ ಸಿದ್ಧಾಂತದ ಪ್ರಕಾರ ಪ್ರಪಂಚದಲ್ಲಿರುವ ಎಲ್ಲಾ ತರದ ಶಕ್ತಿಗಳ – ಎಂದರೆ ಉಷ್ಣಶಕ್ತಿ, ಪ್ರಕಾಶಶಕ್ತಿ ( Light energy ), ವಿದ್ಯುದಯಸ್ಕಾಂತ ಶಕ್ತಿ ( Electro-magnetic energy ), ಮತ್ತು ಯಾಂತ್ರಿಕ ಶಕ್ತಿ ( Mechanical energy ), ಇವುಗಳ ಪರಿಮಾಣಗಳು ಒಟ್ಟಿನಲ್ಲಿ ಬದಲಾವಣೆಯನ್ನು ಹೊಂದುವದಿಲ್ಲ. ಆದರೆ ಒಂದುಬಗೆಯ ಶಕ್ತಿಯು ಇನ್ನೊಂದು ವಿಧಕ್ಕೆ ರೂಪಾಂತರವನ್ನು ಹೊಂದಬಹುದು. ಉದಾಹರಣೆಗಾಗಿ, ಒಂದು ತಂತಿಯಲ್ಲಿ ಪ್ರವಹಿಸುವ ವಿದ್ಯುಚ್ಛಕ್ತಿಯು ವಿದ್ಯುದ್ದೀಪದ ಸೂಕ್ಷ್ಮವಾದ ಎಳೆಗಳಲ್ಲಿ ಹರಿದರೆ ಉಷ್ಣಶಕ್ತಿಯೂ ಮತ್ತು ಪ್ರಕಾಶಶಕ್ತಿಯೂ, ಉಂಟಾಗುವುವು. ಈ ರೀತಿಯೇ ತರ್ಕಿಸಿ ಸೂರ್ಯನ ಉಷ್ಣವೂ ಮತ್ತು ಪ್ರಕಾಶವೂ ಉಲ್ಕೆಗಳ ಚಲನಶಕ್ತಿಯ ರೂಪಾಂತರವೆಂದು ಮೇಯರವರು ಊಹಿಸಿರಬಹುದು. ಒಂದು ಪಕ್ಷ ಇದೇ ನಿಜವಾಗಿದ್ದಲ್ಲಿ ಸೂರ್ಯನ ತೂಕವು ವರ್ಷವರ್ಷಕ್ಕೂ ಹೆಚ್ಚಬೇಕೇ ಹೊರತು ತಗ್ಗಲಾರದು. ಇದು ಎಡಿಂಗ್‌ಟನ್‌ರವರ ಸಿದ್ಧಾಂತಕ್ಕೆ ವಿರೋಧವಾಗುವುದಾದುದರಿಂದ ಮೇಯರ್‌ರವರ ಕಲ್ಪನಾರ್ಥಕ್ಕೆ ಬುಡವಿಲ್ಲದಂತಾಯಿತು.

ಗ್ರಾಂಶಿಸೆಯ ಇಸವಿಯಲ್ಲಿ ಮೇಡಾಮ್ ಕ್ಯೂರಿ ಎಂಬಾಕೆಯು ರೇಡಿಯಂ ಎಂಬ ಒಂದು ಹೊಸ ಲೋಹವನ್ನು ಕಂಡುಹಿಡಿದಳಷ್ಟೆ. ಈ ಲೋಹದ ಪರಮಾಣು ( Atom ) ಗಳ ಒಳಗಟ್ಟು ಯಾತರ ಸಹಾಯವೂ ಇಲ್ಲದೆ ಶಿಥಿಲವಾಗಿ ( Disintegration ), ಎಂದರೆ ಪರಮಾಣುವು ಒಡೆದು ಅದರಲ್ಲಿ ಸಿಕ್ಕಿಕೊಂಡಿರುವ ವಿದ್ಯುದಣುಗಳ ಪ್ರವಾಹವು ಎರಡು ವಿಧ ಕಿರಣಗಳ ರೂಪದಲ್ಲಿ ಹೊರಬೀಳುವುವು. [ ಒಂದು ಪರಮಾಣುವಿನ ಮಧ್ಯದಲ್ಲಿ ಒಂದು ಧನಾತ್ಮಕ ವಿದ್ಯುದಣುಗಳ ಗುಚ್ಛವುಂಟು, ( Positive nucleus ). ಇದರ ಸುತ್ತಲೂ ಕೆಲವು ಋಣಾತ್ಮಕ ವಿದ್ಯುದಣುಗಳು, (Negative electric charges or elections) ಸೂರ್ಯಮಂಡಲದ ಸುತ್ತಲೂ ಗ್ರಹಗಳು ತಮ್ಮ ತಮ್ಮ ಪಥಗಳಲ್ಲಿ ಸುತ್ತುತ್ತಿರುವಂತೆ, ಸುತ್ತುತ್ತಿರುವುವು. ದ್ರವ್ಯಪರಮಾಣುವಿನ (atoms of matter) ಆಂತರ್ಯ ರಚನೆಯನ್ನು ಹೀಗೆ ಚಿತ್ರಿಸಿದವರು ಬೋರ್ ( Bhor ), ಪ್ಲಾಂಕ್ ( Planck ) ಮತ್ತು ಸಾಮರ್‌ಫೆಲ್ಡ್ ( Sommerfeld ) ಎಂಬ ಭೌತಿಕ ಶಾಸ್ತ್ರಜ್ಞರು. ] ಧನಾತ್ಮಕ ವಿದ್ಯುದಣುಗಳ ಪ್ರವಾಹಕ್ಕೆ ಇಂಗ್ಲೀಷ್ ಭಾಷೆಯಲ್ಲಿ ಆಲ್ಫಾ ( Alpha ) ಕಿರಣಗಳೆಂದೂ, ಋಣಾತ್ಮಕ ವಿದ್ಯುದಣುಗಳ ಪ್ರವಾಹಕ್ಕೆ 'ಬೀಟಾ' ( Beta ) ಕಿರಣಗಳೆಂದೂ ಹೆಸರುಂಟು. ಸದ್ಯದಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ ಅಂಶವೊಂದಿದೆ. ಈ ವಿದ್ಯುದಣುಗಳ ಪ್ರವಾಹದೊಡನೆ ಶಕ್ತಿಪ್ರವಾಹವೂ ಉಂಟು. ಈ ವ ಮೂರನೆಯ ಕಿರಣಕ್ಕೆ 'ಗಾಮಾ' ( Gama ) ಕಿರಣವೆಂದು ಹೆಸರು. ಗಾಮಾ ಕಿರಣಗಳಲ್ಲಿ ವಿದ್ಯುದಣುಗಳಿಲ್ಲ; ಶಕ್ತಿ ( energy ) ಮಾತ್ರವೇ ಉಂಟು. ಹೀಗೆ ರೇಡಿಯಂ ಲೋಹಾಣುಗಳು ಒಡೆದುಬೀಳುವಾಗ, ಲೋಹದ ಭಾರವೂ ಕಡಿಮೆಯಾಗುತ್ತ ಬಂದು, ಇನ್ನೊಂದು ಲೋಹವಾಗಿ ಮಾರ್ಪಡುವುದು. ಆದರೆ ಶಿಥಿಲತೆಯಿಂದ ಉಂಟಾದ ಪರಿವರ್ತನೆಯು ಬಹಳ ಶೀಘ್ರದಲ್ಲಿ. ಸಹಸ್ರಾರು ವರ್ಷಗಳು ಹಿಡಿಯುವವು. ಮುಖ್ಯವಾಗಿ, ಶಿಥಿಲತೆಯಿಂದ ಒಂದು ಮೂಲವಸ್ತುವು ( element ) ಇನ್ನೊಂದು ಮೂಲವಸ್ತುವಾಗಿ ಪರಿಣಮಿಸುವಾಗ ಸ್ವಲ್ಪ ಶಕ್ತಿಯೂ ಹೊರಚೆಲ್ಲಲ್ಪಡುವುದು.

ಸೂರ್ಯಮಂಡಲದಲ್ಲಿರುವ ವಸ್ತುಗಳಿಗೆಲ್ಲಾ ರೇಡಿಯಂನಂತೆಯೆ ಶಿಥಿಲತೆಯನ್ನು ಹೊಂದುವ ಸ್ವಭಾವವಿರಬಾರದಲ್ಲವೇ ? ಅಲ್ಲಿನ ಮೂಲವಸ್ತುಗಳು ಪರಿವರ್ತನೆಯನ್ನು ಹೊಂದುವಾಗ ಚೆಲ್ಲಲ್ಪಟ್ಟ ಶಕ್ತಿಯು ಭೂಮಿಯ ಮೇಲೆ ಉಷ್ಣ ಮತ್ತು ಪ್ರಕಾಶಶಕ್ತಿಗಳ ರೂಪದಲ್ಲಿ ಬೀಳಬಹುದಲ್ಲವೇ ? ಈ ಆಧಾರದ ಮೇಲೆ, ಸೂರ್ಯಮಂಡಲದಲ್ಲಿರುವ ಸರ್ವಸ್ವವೂ ರೇಡಿಯಂ ಜಾತಿಗೆ ಸೇರಿದ್ದ ಪಕ್ಷದಲ್ಲಿ ಎಷ್ಟು ಶಕ್ತಿಯು ಪ್ರಚಾರಿಸಲ್ಪಡಬಹುದೆಂಬುದನ್ನು ಲೆಕ್ಕಹಾಕಿ ನೋಡಿದ ಭೌತಿಕಶಾಸ್ತ್ರಜ್ಞರು ಈಗ ಸೂರ್ಯಮಂಡಲದಿಂದ ದಿನವೂ ಹೊರಬೀಳುವ ಶಕ್ತಿ

CC-0. Jangamwadi Math Collection. Digitized by eGangotri

ಪರಿಮಾಣದಲ್ಲಿ ಮೂರರಲ್ಲಿ ಒಂದು ಭಾಗವೂ ಇರುವ ದಿಲ್ಲವೆನ್ನುವರು. ಆದುದರಿಂದ ಅಪಾರವಾದ ಶಕ್ತಿಪ್ರಚಾರಕ್ಕೆ ಸೂರ್ಯನ ಸರ್ವಸ್ವವೂ ರೇಡಿಯಂನಂತೆ ಇದ್ದರೂ ಸಾಲದಾದುದರಿಂದ ಈ ಕಲ್ಪನಾರ್ಥವನ್ನೂ ಒತ್ತಟ್ಟಿಗಿಡಬೇಕು.

ನಕ್ಷತ್ರಗಳಿಂದ ಹೊರಸೂಸಲ್ಪಡುವ ಅಪಾರವಾದ ಶಕ್ತಿಪ್ರವಾಹದ ಮೂಲವನ್ನು ಕಂಡುಹಿಡಿಯಲು ಆಧುನಿಕ ಶಾಸ್ತ್ರಜ್ಞರು ಇನ್ನೊಂದು ಹೊಸವಿಧದಿಂದ ಪರಿಶೋಧನೆಯನ್ನು ಮಾಡಿರುವರು. ಕ್ರಿ. ಶ. ೧೯೦೧ನೆಯ ಇಸವಿಯಲ್ಲಿ ಲೆಬಿಡ್ಯು ( Lebedew ) ಎಂಬವರು, ವಿದ್ಯುದಯಸ್ಕಾಂತಶಕ್ತಿ ( electro magnetic energy ) ಪ್ರವಾಹವು ಯಾವ ಪದಾರ್ಥದ ಮೇಲ್ಮೈ (Surface) ಮೇಲೆ ಬಿದ್ದರೂ, ಆ ಮೇಲ್ಮೈಯು ಸ್ವಲ್ಪ ಒತ್ತಲ್ಪಡುವುದೆಂದು ಪ್ರಯೋಗಗಳಮೂಲಕ ತೋರಿಸಿದರು. ಪ್ರಕಾಶಶಕ್ತಿಯೂ ಕೂಡ ಒಂದು ವಿಧ ವಿದ್ಯುದಯಸ್ಕಾಂತ ಶಕ್ತಿಯಾದುದರಿಂದ ಇದರ ಪ್ರವಾಹವೂ ಮೇಲ್ಮೈಯನ್ನು ಒತ್ತುವುದೆಂದು ತಿಳಿದುಕೊಳ್ಳಬೇಕು. ಇದರ ಆಧಾರದ ಮೇಲೆ ಶಕ್ತಿ ಪ್ರವಾಹವೂ ಕೂಡ ಭಾರವಾಹಿಯೆಂದೆನ್ನಿಸಿಕೊಳ್ಳುವುದು. ( Energy Stream Carries weight with it ) ಭಾರವು ದ್ರವ್ಯ(matter) ದ ಸ್ವಭಾವ ( Property ) ವೆಂದಣಿಸಲ್ಪಟ್ಟಿದೆ. ಆದುದರಿಂದ ಶಕ್ತಿಯನ್ನು ಹೊರಚೆಲ್ಲುವ ದ್ರವ್ಯವು (Radiating matter) ಕ್ಷಣಕ್ಷಣಕ್ಕೂ ಭಾರವನ್ನು ಕಳೆದುಕೊಳ್ಳುತ್ತಿರಬೇಕು. ( ರೇಡಿಯಂ ಶಿಥಿಲತೆಯಲ್ಲಂತೂ ಇದು ನಿಜವೇ. ) ಜಾಣರಾದ ಲೆಕ್ಕಗಾರರು ಸೂರ್ಯನಿಂದ ಪ್ರಚಾರವಾಗುವ ಶಕ್ತಿಯನ್ನು ಅಳೆದು ಸೆಕೆಂಡ್ ಒಂದಕ್ಕೆ ೪೦ ಲಕ್ಷ ಟನ್ ಗಳ ಮೇರೆಗೆ ಸೂರ್ಯನ ಭಾರವು ಕಡಿಮೆಯಾಗುತ್ತಿದೆಯೆಂದು ಹೇಳಿರುವರು.

ಒಂದೊಂದು ವಸ್ತು ಪರಮಾಣುವೂ(atom of matter) ಶಕ್ತಿಯ ಖನಿಯೆಂದೆಣಿಸಬೇಕು. ಸುತ್ತುತ್ತಿರುವ ಋಣಾತ್ಮಕ ವಿದ್ಯುದಣು ( electron ) ಗಳ ಮತ್ತು ಕೇಂದ್ರದಲ್ಲಿರುವ ಧನಾತ್ಮಕ ವಿದ್ಯುದಣುವಿನ ಮಧ್ಯದಲ್ಲಿ ಶಕ್ತಿಯು ಅಡಕವಾಗಿರುವುದು. ಸುತ್ತುವ ವಿದ್ಯುದಣುಗಳು ತಮ್ಮ ಪಥ ( orbit ) ವನ್ನು ಆಗಾಗ್ಗೆ ಬದಲಾಯಿಸುವಾಗ ಅಡಕವಾಗಿದ್ದ ಶಕ್ತಿಯಲ್ಲಿ ಸ್ವಲ್ಪವು ಪ್ರಚಾರವಾಗುವುದು. ಯಾವುದಾದರೊಂದು ಕಾರಣದಿಂದ ಪರಮಾಣುವಿನ ವಿದ್ಯುದಣುಗಳೆಲ್ಲಾ ಚೆಲ್ಲಾಪಿಲ್ಲಿಯಾದರೆ ಅಣುವಿನಲ್ಲಿ ಅಡಕವಾಗಿದ್ದ ಅಷ್ಟು ಶಕ್ತಿಯು ಹೊರಗೆಡಹಲ್ಪಡುವುದು. ಯಾವಾಗ ವಿದ್ಯುದಣುಗಳು ಚೆಲ್ಲಾಪಿಲ್ಲಿಯಾದುವೋ ಆಗ ವಸ್ತು ಪರಮಾಣುವು ನಾಶವಾದಂತೆಯೇ: ೧೯೦೪ನೆಯ ಇಸವಿಯಲ್ಲಿ ಡಾ. ಜೀನ್ಸ್‌ರವರು ವಸ್ತುಪರಮಾಣುವಿನ ಸರ್ವನಾಶದಿಂದ ಶಕ್ತಿಯು ಸಿಗುವುದೆಂದು ಮೊದಲು ತಿಳಿಸಿದರು. ಈಚೆಗೆ ಐನ್‌ಸ್ಟಿನ್‌ರವರ 'ಸಂಬಂಧವಾದ' (Theory of Relativity ) ದ ಸಹಾಯದಿಂದ ಆ ಶಕ್ತಿಯ ಪರಿಮಾಣ ( measure ) ವನ್ನು ಲೆಕ್ಕಹಾಕಿ ಹೇಳಿದ್ದಾರೆ. ಈ ಲೆಕ್ಕದ ಮೇರೆಗೆ ಸೂರ್ಯನು ಈಗಿನಷ್ಟು ತೂಕವನ್ನು ಪಡೆಯಲು ಎಷ್ಟು ಕಾಲವು ಹಿಡಿದಿದೆಯೆಂದು ಗುಣಿಸಿ ನೋಡಿದರೆ, ಆ ಕಾಲವು ಇತರ ಜ್ಯೋತಿಷಶಾಸ್ತ್ರವಿಧಾನಗಳಿಂದ ಕಂಡುಹಿಡಿದ ವಯಸ್ಸಿಗಿಂತ ಸ್ವಲ್ಪ ಹೆಚ್ಚಾಗುವುದು. ಆದುದರಿಂದ ಬಹುಶಃ ಸೂರ್ಯನ ಮತ್ತು ಇತರ ನಕ್ಷತ್ರಗಳ ಕಾಂತಿಗೆ ವಸ್ತುಪರಮಾಣುಗಳ ಸರ್ವನಾಶ ( annihilation ) ವೇ ಕಾರಣವೆಂದು ಒಪ್ಪಿಕೊಳ್ಳಬೇಕಾಗಿದೆ.

ಒಂದು ವಸ್ತುವು ಚೆನ್ನಾಗಿ ಸುಡಲ್ಪಟ್ಟರೆ ಅದು ನಾಶವಾಗಲಿಲ್ಲವೇ ? ಎಂದು ಪ್ರಶ್ನಿಸಬಹುದು. ಆ ವಸ್ತುವು ಬೇರೆ ವಸ್ತುವಾಗಿ ಪರಿಣಮಿಸಿತೇ ಹೊರತು, ಪುಟ್ಟ ಪೂರಾ ನಾಶವಾಗಲಿಲ್ಲ. ಸುಡುವುದರಿಂದ ವಸ್ತುಪರಮಾಣುಗಳು ನಾಶಹೊಂದುವುದಿಲ್ಲ. ಇದ್ದಿಲನ್ನು ಸುಟ್ಟರೆ ಅದು ಅಂಗಾರಾಮ್ಲವಾಗಿ ಪರಿಣಮಿಸುವುದು. ಇದ್ದಿಲಿನಲ್ಲಿದ್ದ ಪರಮಾಣುವು ಅಂಗಾರಾಮ್ಲ (Carbondioxide) ದಲ್ಲಿರುವುದಲ್ಲದೆ, ಅದರ ಜತೆಗೆ ಆಮ್ಲಜನಕದ ಪರಮಾಣುಗಳು ಸೇರಿವೆ. ಪರಮಾಣುಗಳ ನಿರನ್ವಯನಾಶ (Annihilation) ದಿಂದುಂಟಾಗುವ ಶಕ್ತಿಯು, ಅಷ್ಟೇ ತೂಕದ ವಸ್ತುವನ್ನು ಸುಡುವುದರಿಂದ ಸಿಗಬಹುದಾದ ಶಕ್ತಿಯ ನೂರು ಕೋಟಿ ಪಾಲಿನಷ್ಟು ಹೆಚ್ಚು. ಯಾವನಾದರೊಬ್ಬ ಶಾಸ್ತ್ರಜ್ಞನು ಪರಮಾಣುಗಳ ನಿರನ್ವಯನಾಶವನ್ನು ಮಾಡುವ ಕೃತಕವಿಧಾನವನ್ನು ಕಂಡುಹಿಡಿದರೆ, ಅಂಥವನು ಭೂಲೋಕದ ಹೆಚ್ಚಿನ ಊರ್ಜಿತಾವಸ್ಥೆಗೆ ಕಾರಣನಾಗಿ, ಎಲ್ಲರೂ ಋಣಿಯಾಗಿರಬೇಕಾಗುವುದು.



CC-0. Jangamwadi Math Collection. Digitized by eGangotri

ಅಂಥ ಕಾಲವೊದಗಿದರೆ ಈಗ ಒಂದು 'ಟನ್' ಕಲ್ಲಿದ್ದಲು ಬೇಕಾದ ಕಡೆ ಒಂದು 'ಗ್ರಾಂ' ಕಲ್ಲಿದ್ದಲು ಸಾಕಾಗುವುದು. ಸೀಮೆ ಎಣ್ಣೆ, ಪೆಟ್ರೋಲ್ ಮುಂತಾದುವುಗಳು ಸಿಗುವ ಸ್ಥಳಗಳನ್ನು ಹುಡುಕಬೇಕಾಗುವುದಿಲ್ಲ.

ಹತ್ತೊಂಬತ್ತನೆಯ ಶತಮಾನದ ಅಂತ್ಯದವರೆಗೂ ಶಕ್ತಿಯಲ್ಲಿ ಮುಖ್ಯವಾಗಿ ನಾಲ್ಕು ವಿಧಗಳೆಂದು ಭೌತಿಕ ಶಾಸ್ತ್ರಜ್ಞರು ಭಾವಿಸಿದ್ದರು. ಅವುಗಳು ಯಾಂತ್ರಿಕ ಶಕ್ತಿ, ಉಷ್ಣಶಕ್ತಿ, ಪ್ರಕಾಶಶಕ್ತಿ, ಮತ್ತು ವಿದ್ಯುದಯಸ್ಕಾಂತಶಕ್ತಿ; ಅಲ್ಲದೆ ಶಕ್ತಿಯೂ ಮತ್ತು ದ್ರವ್ಯವೂ ಬೇರೆಯಂದೆಣಿಸಲ್ಪಟ್ಟಿದ್ದವು. ದ್ರವ್ಯದ ನಿರನ್ವಯನಾಶದಿಂದ ಶಕ್ತಿಯುತ್ಪತ್ತಿಯಾಗುವುದೆಂದು ತಿಳಿದುಬಂದ ತರುವಾಯ, ಶಕ್ತಿಯು ದ್ರವ್ಯದ ರೂಪಾಂತರವೆಂದೂ, ಮತ್ತು ದ್ರವ್ಯವು ಹೆಚ್ಚಾಗಿ ಸಾಂದ್ರೀಕೃತವಾದ ( condensed ) ಶಕ್ತಿಯೆಂದೂ ಭಾವಿಸಲ್ಪಡಬೇಕಾಗುವುದು. ಹಿಂದೆ ಹೇಳಿದ ನಾಲ್ಕುವಿಧ ಶಕ್ತಿಗಳ ಜತೆಗೆ ದ್ರವ್ಯವು ಐದನೆಯದಾಗುವುದು.

ಸೂರ್ಯನೂ ಮತ್ತು ಇತರ ತಾರೆಗಳೂ ಕೋಟ್ಯಾವಧಿ ವರ್ಷಗಳಿಂದ ಬೆಳಕನ್ನು ಕೊಟ್ಟು ಕ್ಷೀಣವಾಗಿವೆ. ಇನ್ನು ಮುಂದಕ್ಕೂ ಉಷ್ಣವನ್ನೂ ಮತ್ತು ಬೆಳಕನ್ನೂ ಪ್ರಚಾರ ಮಾಡುವುವಾದುದರಿಂದ, ಎಂದಾದರೊಂದು ದಿನ ನಕ್ಷತ್ರಗಳ ದ್ರವ್ಯವೆಲ್ಲಾ ಶಕ್ತಿರೂಪವನ್ನು ಹೊಂದಬಹುದು. ಆಗ್ಗೆ ಪ್ರಪಂಚವಿಲ್ಲದಂತಾಗುವುದು. ಸೃಷ್ಟಿಗೆ ಈ ಸ್ಥಿತಿಯೆ ನಿಜವಾದ ಪ್ರಳಯವೆಂದು ಹೇಳಬೇಕು. **ಪುರಾಣಗಳಲ್ಲಿ ಹೇಳಿರುವ ಪ್ರಳಯವು ಜಲಪ್ರಳಯವಾದರೆ ಸೃಷ್ಟಿಯ ಅಂತ್ಯದಲ್ಲಿ ಶಕ್ತಿಪ್ರಳಯವುಂಟಾಗುವುದು. ಶಕ್ತಿಪ್ರಳಯವಾದ ಮೇಲೆ ತಿರುಗಿ ಸೃಷ್ಟಿಯಾಗುವುದೇ ? – ಎಂಬುದೊಂದು ಮಹತ್ತ್ವದ ಪ್ರಶ್ನೆ.** ಈ ಪ್ರಶ್ನೆಗೆ ವೈಜ್ಞಾನಿಕಶ್ರೇಷ್ಠ... ವೆಂದು ಉತ್ತರವಿತ್ತಿರುವರು. ...

( Thermodynamic ) ವೆಂಬುದು ಉಷ್ಣ... ಶ್ರೇಷ್ಠತೆ ಹೊಂದಿದ ಭಾಗ. ಈ ಶಾಸ್ತ್ರದ ... ಮದ ಪ್ರಕಾರ ಸೃಷ್ಟಿಯು ರಚನೆಯು ಕಳೆ... ಇರುವುದು. ಕಳಚಿಬಿದ್ದುದು ತಿರುಗಿ ರಚಿಸ... ಎಂಬ ಭಾವನೆಗೆ ಇದುವರೆಗೂ ಶಾಸ್ತ್ರೀಯ... ಸಿಕ್ಕಿಲ್ಲ. ದ್ರವ್ಯ ನಿರನ್ವಯನಾಶದಿಂದ ... ಸೂಕ್ಷ್ಮತಮ ಶಕ್ತಿಯು ಮೆಲ್ಲಮೆಲ್ಲನೆ ... ಗಳನ್ನು ಹೊಂದಿ ಕಟ್ಟಕಡೆಗೆ ಉಷ್ಣಶಕ್ತಿ... ಉಷ್ಣಶಕ್ತಿಯು ತಿರುಗಿ ವಿದ್ಯುಚ್ಛಕ್ತಿಯಾಗಿ... ವಾಗುವುದು ಬಹಳ ಅಪರೂಪ. ಅದು... ವಿದ್ಯುದಣುಗಳ ಸೃಷ್ಟಿಯಾಗಿ ಆಮೇಲೆವಸ್ತು... ಗಳಾಗುವಿಕೆಯೂ ತೀರ ಅಪರೂಪವೆಂದೇ ... ವಸ್ತುಪರಮಾಣುಗಳಿಲ್ಲದೆ ದ್ರವ್ಯವುಂಟಾಗ... ಮೇಲೆ ಪುನಃ ಸೃಷ್ಟಿಯು ಇಲ್ಲವೇ ಇಲ್ಲ.

ಇದುವರೆಗೂ ನಡೆದಿರುವ ಪರಿಶೋಧನೆ... ರದ ಮೇಲೆ ಹಿಂದೆ ಹೇಳಿದ ಮಹತ್ವದ ... ನಿಂತಿವೆ, ಆದರೆ ವೈಜ್ಞಾನಿಕನು ಸೃಷ್ಟಿಯ ... ವನ್ನು ಸಂಪೂರ್ಣವಾಗಿ ಈಗ ತಿಳಿದಿರುವ... ಲಾಗುವುದಿಲ್ಲ. ಇನ್ನೂ ಮುಂದೆ ಏನೇನು ಶ್ರೇಷ್ಠ... ಗಳು ಹೊರಬೀಳುವುವೋ ! ಆದುದರಿಂದ ಪುನ... **ಯಿಲ್ಲವೆಂದು ವ್ಯಸನಪಡಬೇಕಾದುದಿಲ್ಲ.** ... ಜಗದೀಶ್ವರನು ತನ್ನ ಲೀಲೆಯಿಂದ ಶಕ್ತಿಪ್ರ... ಕದಡಿ ಒಂದು ತರದ ನವೀನಶಕ್ತಿಯನ್ನು... ಆದರಿಂದ ಪುನಃ ಸೃಷ್ಟಿಯು ಮುಂದುವ... ಮಾಡುವನೆಂದು ನಂಬುವ.



CC-0. Jangamwadi Math Collection. Digitized by eGangotri

# ವಾಮದೇವ

**ಶತಂ ಮಾ ಪುರಃ ಆಯಸೀಃ ಅರಕ್ಷನ್ ಅಧಃ । ಶ್ಯೇನಃ ಜವಾಸ ನಿರದೀಯಂ**
**ಇತಿ ವಾಮದೇವಃ ಗರ್ಭೇ ಶಯಾನಃ ಅವೋಚತ್ ॥** (ಐತರೇಯ)

ಕಡುಕಟ್ಟಿದ ಕ-
ಬ್ಬಿಣದ ಕೋಟೆಗಳ
ಒಡೆದೆನು ಎನ್ನುತ
ವಾಮದೇವನವ
ತಾಯಿಯ ಬಸಿರಲಿ
ಉಸುರಿದನೆಂತೆ !
ಆ ಬಿಸಿಯುಸಿರು
ಕಸಿವಿಸಿಯೆಸರು
ಹೃದಯ ಹೃದಯದಲಿ
ಕುದಿಯುತ್ತಿಹುದು.

* * *

ಒಡಲಿನ ಉರಿಯಲಿ
ಒಲವಿನ ಜೊತೆಯಲಿ
ಮೊಲೆವಾಲ್ಬತ್ತಲು,
ಮಡಲಿನ ಕೂಸನು
ಹಾದಿಯ ಹುಡಿಯಲಿ
ತಾಯಿಯು ಬಿಸುಡಲು,
ಬೇಸಗೆ ಬಿಸಿಲಲಿ
ಕಮರಿದ ಕುಡಿಯಲಿ
ಕಾಣಿರ ಮಾಣದ ಕುದಿಯನ್ನು ?
ಬೆಂದ ಬಾಳ ಬೇಗುದಿಯನ್ನು ?

* * *

ಕಾಣಿರ ದಿನದಿನ
ಮನೆಮನೆಯಲ್ಲಿ
ನೆರೆವರ ನೋಳ್ಪರ
ಎದುರೆದುರಲ್ಲಿ
ಸೊಗಯಿಪ ಪೆಣ್ಗಳ
ಕಣ್ಗಳಲಿ
ಒತ್ತೊತ್ತಿಕ್ಕಿದ
ಮೂಕ ದುಃಖವನು ?

* * *

ಆಡಲು ಓಡಲು
ಹಾರಾಡಲು ಹಾ-
ತೊರೆಯುವ ಜೀವದ
ಉಸುಲನು ಕಟ್ಟಲು
ನಾಗರಿಕತೆಯದು
ನಾಗರ ಹಾವು !

* * *

ಜಗತಿಯ ಸೊಬಗಿನ
ನಗೆಮೊಗದಲ್ಲಿ
ಮಾನವ ಸಂಸ್ಕೃತಿ–
ಯೊಂದೇ ವಿಕೃತಿಯು !

* * *

ದೂರದ ತೊರೆಯಾ
ಜಿನುಗು ಜಿನುಗಿನೊಲು
ಯುಗಯುಗದಿಂದಲಿ
ಜಗತಿಯ ಮರುಗದು
ತೆರವಿನಿತಿಲ್ಲದೆ
ಮೊರೆಯುತ್ತಿಹುದು.
ಕರುಳು ಕರಗುವೊಲು
ಕರೆಯುತ್ತಿಹುದು.

* * *

CC-0. Jangamwadi Math Collection. Digitized by eGangotri

ಜೀವ ಜೀವಗಳ
ಹಿಂಗದಾಸೆಗಳು
ಮುಗಿಲನ್ನೇರುತ
ಗಾಳಿಯೊಳಲೆಯುತ
ಮರುಳುಗಳಂದದಿ
ಭೋರಿಡುತಿಹವು.
ಇರುಳಿನ ಜೀರುಂ–
ಡಿಗಳ ತಂಡದೊಲು
ಜೀರಿಡುತಿಹವು.

* * *

ನೋವಿನ ವೀಣೆಯು
ಸೊಲ್ಲುತ್ತಿಹುದು:
ಆವನೊಬ್ಬನೂ
ಆಲಿಸಲೊಲ್ಲನು !
ಮಾನವಯೋನಿಯು
ತನ್ನೊಳು ತಾನೇ
ತನ್ನಯ ಸುತ್ತಲು
ಕೋಟೆಯ ಕಟ್ಟಿ
ತಿಳಿವಳಿಕೆಯ ಬೆಳ–
ಕಿಂಡಿಯ ಮುಚ್ಚಿ
ಕತ್ತಲೆಯೊಳಗಿನ
ನೆಲಮನೆಯಲ್ಲಿ
ಕತ್ತನು ಬಗ್ಗಿಸಿ
ಕನವರಿಸುತ್ತಿದೆ !

* * *

ದುರ್ಗವು ದುರ್ಗದ
ಕಾರ್ಗವಿಯೊಳಕೆ
ನೂರು ಹೃದಯುಗಳ
ಗಾರೆಯು ನರೆದಿದೆ !
ತೊಳಗುವ ಮಹಲಿನ
ತಳಹದಿ ಕೆಳಕೆ
ನೂರು ಜೀವಗಳ
ಶಾಪತಾಪಗಳು
–ಕ್ರಂದಿಪ ಮುಖಗಳ
ಜ್ವಾಲಾಮುಖಿಗಳು !

* * *

ವಿಶ್ವರೂಪ ವೈ
ಶ್ವಾನರನೀತನು
ಜೀವಜೀವಗಳ
ಜ್ವಾಲೆಜ್ವಾಲೆಯಿಂ–
ದುರಿವನು ಮೆರೆವನು,
ಕಾಳೆಗಕೇಳ್ವನು !
ಇಟ್ಟಿಗೆ ಕಟ್ಟಿಗೆ–
ಗಳ ಕಟ್ಟಡವನು
ಜಗತಿಯ ಕೊರಲಿಗೆ
ಕಟ್ಟಿದ ಹೊರೆಯನು
ನೂರ್ನಾಲಗೆಯಿಂ
ನೆಕ್ಕುವ ಮುಕ್ಕುವ !

* * *

ವಾಮದೇವನಿವ
ಚಿರಂಜೀವನಿವ
ಪ್ರತಿಮಾನಸದಲಿ
ವೇದನೆ–ಸಂವೇ–
ದನೆಯಲಿ ಹುದುಗಿಹ.
ಬಗೆಬಗೆಯಲಿ ಕ–
ತ್ತಲೆ ಕಿಡಿಸುವ ಕಿಡಿ–
ಮಾನವವಂಶದ
ಕುಲ ದೀಪಕನಿವ.
ಈತನು ರುದ್ರನು
ನಾಳೆಯು ಭದ್ರನು !
ಇಂದಿನ ಜಿಷ್ಣುವು
ಮುಂದಿನ ವಿಷ್ಣುವು !

—ರಾಮಚಂದ್ರ

CC-0. Jangamwadi Math Collection. Digitized by eGangotri

# ಜರ್ಮನಿಯ ಅಧ್ಯಕ್ಷಪದವಿಯ ಚುನಾವಣೆಯು

## (ವ್ಹಾನ್ ಹಿಂಡೆನ್‌ಬುರ್ಗ ಮತ್ತು ಹರ್‌ಹಿಟ್ಲರ್ ಇವರ ಸ್ಪರ್ಧೆಯ ಮಹತ್ತ್ವ)

ಜರ್ಮನ್ ಅಧ್ಯಕ್ಷಪದವಿಯ ಚುನಾವಣೆಯ ಫಲಿತಾಂಶದ ಮೇಲೆ ಜಗತ್ತಿನ ಜನರದೆಲ್ಲಾ ಕಣ್ಣಿತ್ತೆಂದರೆ ಅತಿಶಯೋಕ್ತಿಯಾಗಲಾರದು. ಎಪ್ರಿಲ್ ೧೦ ನೆಯ ದಿನ ಬರ್ಲಿನದಿಂದ ಕಳಿಸಿದ ಸುದ್ದಿಯನ್ನು ರಾಯ್ಟರನು ಕಳಿಸಿದನು:—

| ಪ್ರತಿಸ್ಪರ್ಧಿಗಳು | ಮತಗಳು |
|---|---|
| ವ್ಹಾನ್ ಹಿಂಡೆನ್‌ಬುರ್ಗ | ೧೯,೩೬೭,೬೮೮ |
| ಹರ್ ಹಿಟ್ಲರ್ | ೧೩,೪೧೯,೬೦೩ |
| ಹರ್ ಥೆಲ್‌ಮಾನ್ | ೩,೭೦೫,೮೯೮ |

ಜರ್ಮನ್ ಚುನಾವಣೆಯ ನಿಯಮದಂತೆ ಚುನಾವಣೆಯ ಕಾಲಕ್ಕೆ ಅಧ್ಯಕ್ಷಪದವಿಗಾಗಿ ನಿಂತವನಿಗೆ 'ನಿಃಸಂಶಯವಾದ ಬಹುಮತವು (Absolute Majority)'ದೊರೆಯದಿದ್ದರೆ, ಮತ್ತೊಮ್ಮೆ ಚುನಾವಣೆಯಾಗಬೇಕು, ಮತ್ತದರಲ್ಲಿ ಬಹುಮತವು ಸಿಕ್ಕಿದವನನ್ನು ಅಧ್ಯಕ್ಷನನ್ನಾಗಿ ಆರಿಸುವದುಂಟು. 'ನಿಃಸಂಶಯವಾದ ಬಹುಮತ'ವೆಂದರೆ ಹೀಗೆ: ಮೂವರು ಪ್ರತಿಸ್ಪರ್ಧಿಗಳಲ್ಲಿ ಒಬ್ಬನಿಗೆ (ವ್ಯಕ್ತಿಶಃ ನೋಡಲಾಗಿ) ಎಲ್ಲಕ್ಕೂ ಹೆಚ್ಚು ಮತಗಳು ಬಿದ್ದಿವೆಯೆಂದು ತಿಳಿಯುವ. ಉಳಿದಿಬ್ಬರ ಮತಗಳನ್ನು ಕೂಡಿಸಿದ ಮೇಲೂ, ಆ ಒಟ್ಟು ಮತಗಳಿಗಿಂತ ಈತನ (ವ್ಯಕ್ತಿಶಃ ಬಹುಮತವುಳ್ಳವನ) ಮತಗಳು ಹೆಚ್ಚಾಗಿದ್ದರೆ, ಅವನದು 'ಸಂಶಯಾಸ್ಪದವಾದ ಬಹುಮತ'ವಾಯಿತು. ಆಗ ಮತ್ತೊಮ್ಮೆ ಚುನಾವಣೆಯಾಗಿ ಅದರಲ್ಲಿ ಆತನು ಬಹುಮತವನ್ನು ಪಡೆಯಬೇಕು ಅಂದರೆ ಆ ಹುರಿಯಾಳು ಅಧ್ಯಕ್ಷನಾಗಿ ಆರಿಸಲ್ಪಡುವನು. ಸುಮಾರು ಒಂದು ತಿಂಗಳ ಹಿಂದಿನ ಚುನಾವಣೆಯಲ್ಲಿ ಹೀಗೇ ಆಗಿದ್ದಿತು. ಹಿಂಡೆನ್‌ಬುರ್ಗನದು ನಿಃಸಂಶಯವಾದ ಬಹುಮತವಾಗಿರಲಿಲ್ಲ. ಆದುದರಿಂದ ಮರಳಿ ಚುನಾವಣೆಯಾಗಿ ವ್ಹಾನ್ ಹಿಂಡೆನ್‌ಬುರ್ಗನು ಪ್ರಚಂಡ ಬಹುಮತದಿಂದ ಆರಿಸಿ ಬಂದನು.

### ಈ ಚುನಾವಣೆಯ ಮಹತ್ತ್ವವೇನು ?

ಈ ಚುನಾವಣೆಯು ಮಹತ್ತ್ವದ್ದಲ್ಲವೆ ? ಹಿಂಡೆನ್‌ಬುರ್ಗನ ಬದಲು ಹಿಟ್ಲರನು ಆರಿಸಿ ಬಂದಿದ್ದರೆ ಜಗತ್ತಿಗಾಗುವ ತೊಂದರೆಯೇನು ? ಎಂಬ ಪ್ರಶ್ನೆಗಳು ಇಲ್ಲಿ ಸಹಜವಾಗಿ ಉಂಟಾಗುವವು. ಇದಕ್ಕಾಗಿ ಜರ್ಮನಿಯ ಅಂತಸ್ಥ ಮತ್ತು ಆಂತರರಾಷ್ಟ್ರೀಯ ರಾಜಕೀಯ ಪರಿಸ್ಥಿತಿಯ ಜ್ಞಾನವಿರುವದು ಅಗತ್ಯ. ಮಹಾಯುದ್ಧದಲ್ಲಿ ಜರ್ಮನಿಯು ಪರಾಭೂತವಾಗಿ, ವರ್ಸೇಲ್ಸ ಒಪ್ಪಂದವು ಮಾಡಲ್ಪಟ್ಟು, ಮಿತ್ರರಾಷ್ಟ್ರಗಳಿಗೆ ತಪ್ಪುದಂಡವೆಂದು ಕೋಟ್ಯವಧಿ ರೂಪಾಯಿಗಳನ್ನು ಜರ್ಮನಿಯು ಕೊಡುವದಾಗಿ ತೀರ್ಮಾನಿಸಲ್ಪಟ್ಟಿತು. ಮಹಾಯುದ್ಧವು ನಡೆದಾಗಿನ ೪ವರ್ಷ ಕಾಲದ ದುರ್ಭಿಕ್ಷ, ಇತ್ತೀಚಿನ ೧೩-೧೪ ವರ್ಷ ಹೇಗಾದರೂ ಜೀವಧಾರಣೆಯನ್ನು ಮಾಡಗೊಟ್ಟ ಶಾಂತಿ ಕಾಲದ ದುರವಸ್ಥೆ, ಒತ್ತಾಯದ ಮೂಲಕ ಮಾಡಬೇಕಾದ ಶಸ್ತ್ರಪರಿತ್ಯಾಗ, ರ್‍ಹೂರ್ ಪ್ರಾಂತವು ೧೦ ವರ್ಷಗಳ ವರೆಗೆ ಪರಕೀಯರ ಪ್ರಭುತ್ವದಲ್ಲಿರಬೇಕಾಗಿ ಬರೋಣ, ಸಿಲೇಸಿಯದ ಕಲ್ಲಿದ್ದಲಿಯ ಕಣಿಗಳು ಕಸಿದುಕೊಳ್ಳಲ್ಪಡುವದು, ತನ್ನ ಗಡಿನಾಡಿನ ಗುಂಟ ಪರಕೀಯರಾಷ್ಟ್ರಗಳು ಯುದ್ಧಕ್ಕಾಗಿ ಅಪೂರ್ವಸಿದ್ಧತೆಯನ್ನು ಮಾಡಿರುವದು, ೬೫ ಲಕ್ಷ ಜರ್ಮನ್‌ಜನರು ನಿರುದ್ಯೋಗಿಗಳಾಗಿರುವದು ಇವೆಲ್ಲವುಗಳ ಮೂಲಕ ಜರ್ಮನ್‌ರಾಷ್ಟ್ರದ ಆರ್ಥಿಕ ಯಂತ್ರವು ಮುರುಕುಳಿಯಾಗಿದೆ. ಒಳಗೆ ಹೀಗೆ ವಿಪನ್ನಾವಸ್ಥೆಯಿದ್ದಾಗ ಯುರೋಪಿನ ಉಳಿದ ಪ್ರಧಾನರಾಷ್ಟ್ರಗಳು ತಪ್ಪುದಂಡವನ್ನು ತಕ್ಕೊಳ್ಳುವ ವಿಷಯದಲ್ಲಿ ಯಾವ ಅನುದಾರವೃತ್ತಿಯನ್ನು ತೋರಿಸಿದರೋ—ಅದರ ದೆಸೆಯಿಂದಂತೂ ಜರ್ಮನಿಯು ಪ್ರಾಯಶಃ ದಿವಾಳಿ ತೆಗೆಯುವದರಲ್ಲಿದೆಯೆಂದರೆ ಅತ್ಯುಕ್ತಿಯಾಗದು.

### ಹಿಂಡೆನ್‌ಬುರ್ಗರ ಕರ್ತೃತ್ವಶಕ್ತಿ

ಒಂಟಿಯಾಗಿದ್ದುಕೊಂಡೂ ದುರ್ಧರಪರಿಸ್ಥಿತಿಯೊಳಗಿಂದ ಹಾದಿತೆಗೆಯುವ ಸಾಮರ್ಥ್ಯವೂ ಯುಕ್ತಿಯೂ ಜರ್ಮನ್ ಜನಾಂಗದಲ್ಲಿ ರಕ್ತಗತವಾಗಿದೆಯೆಂದೇ ಮತ್ತೆ ತೋರಿಸಿಕೊಂಡು ಮುಂದೆ ಬಂದಿತು; ರಾಷ್ಟ್ರ



CC-0. Jangamwadi Math Collection. Digitized by eGangotri

ಸಂಘದಲ್ಲಿ ಪ್ರವೇಶವನ್ನು ಪಡೆಯಿತು; ಪರರಾಷ್ಟ್ರಗಳ ಕೂಡ ವ್ಯಾಪಾರದಲ್ಲಿ, ಇಂಗ್ಲಂಡು-ಅಮೇರಿಕೆಗಳೊಡನೆ ಸ್ಪರ್ಧಿಸಲು ಬಲ್ಲುದಾಯಿತು. ಇಷ್ಟನ್ನೇ ಸಾಧಿಸಲಿಕ್ಕೆ ಮತ್ತಾವುದಾದರೂ ರಾಷ್ಟ್ರಕ್ಕೆ ಒಂದು ಶತಮಾನವು ಸಾಲುತ್ತಿದ್ದಿಲ್ಲ.ಆದರೆ ಈ ಯಶಸ್ಸಿನ ಬಹ್ವಂಶಿಕ್ಕೆ ಹಿಂಡೆನ್ ಬುರ್ಗನಂತಹ ಕರ್ಣಧಾರನು ದೊರೆತುದೂ ಕಾರಣವಾಯಿತೆಂದು ಹೇಳಬಹುದು. ಕಳೆದ ೭ ವರ್ಷ ಕಾಲ ಈತನ ನೇತೃತ್ವದಲ್ಲಿ ಸ್ಟ್ರೇಟಸ್‌ಮನ್ ಮತ್ತು ಬ್ರುನಿಂಗ ಎಂಬವರು ವಿಶ್ವಸಾಹಸವನ್ನು ಮಾಡಿ, ಜರ್ಮನಿಯು ತನ್ನ ಕಾಲ ಮೇಲೆ ತಾನು ಎದ್ದು ನಿಲ್ಲುವಂತೆಯೂ, ವರ್ಸೇಲ್ಸ ಒಪ್ಪಂದದ ಅಮಾನುಷವಾದ ನಿರ್ಬಂಧನೆಗಳನ್ನೆಲ್ಲ ಪಾಲಿಸುವಂತೆಯೂ, ಇದಲ್ಲದೆ ರಿಪುರಾಷ್ಟ್ರಗಳ ಗೆಳೆತನವನ್ನು ಸಂಪಾದಿಸುವಂತೆಯೂ ಏರ್ಪಡಿಸಿದರು. ಹಿಂಡೆನ್ ಬುರ್ಗನ ಪ್ರಾಮಾಣಿಕತೆಯೂ, ರಾಷ್ಟ್ರಭಕ್ತಿಯೂ, ನಿಶ್ಚಯ ಸಾಮರ್ಥ್ಯವೂ ನಿಃಸೀಮವಾದುವು. ಜರ್ಮನಿಯಲ್ಲಿನ್ನೂ ರಾಜಪ್ರಭುತ್ವವಿದ್ದಾಗ ೬೦ ವರ್ಷಕಾಲ ಆತನು ದಂಡನಾಯಕನಾಗಿ ರಾಜಸೇವೆಯನ್ನು ಅನನ್ಯ ಭಾವದಿಂದ ಮಾಡಿದನು. ಅದನ್ನಾದರೂ ದೇಶಭಕ್ತಿಯಿಂದ ಪ್ರೇರಿತನಾಗಿಯೇ ಆತನು ಮಾಡಿದುದು. ಮಹಾಯುದ್ಧಾನಂತರದಲ್ಲಿ ಕೈಸರನು ರಾಜದಂಡವನ್ನು ಕೆಳಗಿರಿಸಿ ರಾಜ್ಯಪರಿತ್ಯಾಗವನ್ನು ಮಾಡಿದ ಮೇಲೆ, ರಾಷ್ಟ್ರವು ಮತ್ತೆ ಹಿಂಡೆನ್‌ಬುರ್ಗನಿಗೆ ಆಹ್ವಾನವನ್ನಿತ್ತಿತು. ಪ್ರಜಾಪ್ರಭುತ್ವ ಕಾಲದಲ್ಲಿಯೂ ಅಷ್ಟೇ ಅವ್ಯಭಿಚಾರಿಯಾಗಿ ಆತನು ಮತ್ತೆ ತನ್ನ ಸೇವೆಯನ್ನು ಸಲ್ಲಿಸಿದನು. ಆತನ ಶತ್ರುಗಳೂ ಮಿತ್ರರಾದರು. ಸಮಾಜವಾದಿಗಳು ಕೂಡ (Socialists) ಆತನಿಗೆ ಮೊನ್ನೆಯ ಚುನಾವಣೆಯಲ್ಲಿ ಬೆಂಬಲವನ್ನಿತ್ತರು. ಈವೊತ್ತು ಅಂತರರಾಷ್ಟ್ರೀಯ ರಾಜಕೀಯ ವ್ಯವಹಾರದಲ್ಲಿ ಹಿಂಡೆನ್ ಬುರ್ಗನು ಸ್ಥಿರಸ್ಥಾವರತೆಯ, ಪ್ರಾಮಾಣಿಕತೆಯ, ಶಾಂತಿಮಯ ಸಂಧಾನ ಮಾರ್ಗದ ಸಂಕೇತವಾಗಿದ್ದಾನೆ.

### ಹಿಟ್ಲರನ ಪ್ರಾಬಲ್ಯದ ಮರ್ಮ

೮೫ ವರ್ಷದ ಮುಪ್ಪಿನ ಮುದುಕನೂ,ನಿರತಿಶಯ ರಾಷ್ಟ್ರಸೇವಾಧುರೀಣನೂ ಆದ ಹಿಂಡೆನ್‌ಬುರ್ಗನ ಯಶೋಮಾರ್ಗದಲ್ಲಿ ದೊಡ್ಡ ಗಂಡಾಂತರವು ಹಿಟ್ಲರನೊಬ್ಬನೇ ಆಹುದು. ಇದು ಹೇಗಾಯಿತು ? ಜರ್ಮನಿಯ ಆಂತಸ್ಥ ಪರಿಸ್ಥಿತಿಯೇ ಹಿಟ್ಲರನ ಪ್ರಾಬಲ್ಯಕ್ಕೆ ಜನ್ಮವಿತ್ತಿತು. ಆತನ ಮತಗಳು ಸುಮಸುಮಾರು ಇಟಲಿಯ ಫ್ಯಾಸಿ[illegible] ರಂತಹವು. ತಾನು ಅಧಿಕಾರಾರೂಢನಾದರೆ ತಪ್ಪುದಂ[illegible]ವನ್ನು ತೆತ್ತುವುದನ್ನು ಒಂದು ಪೆಟ್ಟಿಗೆ ನಿಲ್ಲಿಸಿಬಿಡುವೆ[illegible] ದೆನ್ನುವನು. ರಾಷ್ಟ್ರಕ್ಕೆ ಅಪಮಾನಕಾರಕವಾದ ಪರ[illegible]ಯರ ನಿರ್ಬಂಧನೆಗಳನ್ನೆಲ್ಲಾ ಕಿತ್ತೊಗೆಯಬೇಕೆನ್ನುವ[illegible] 'ಪ್ರಜಾಪ್ರಭುತ್ವ' ವನ್ನು ಕಸದ ಪುಟ್ಟಿಯಲ್ಲೊಗೆ[illegible] 'ಸರ್ವಾಧಿಕಾರಿತ್ವ (Dictator ship)' ವನ್ನು ಪ್ರಸ್ತಾ[illegible]ಪಿಸಬೇಕೆನ್ನುವನು. ಮೇಲಣ ಉದ್ದೇಶಗಳು ಸಾಧ್ಯ[illegible]ಗಲಿಕ್ಕೆ ಸೈನ್ಯದ ಸಾಹಾಯ್ಯದಿಂದ ದೇಶವನ್ನಾಳಬೇ[illegible]ನ್ನುವನು. ಬ್ಯಾಂಕುಗಳನ್ನು ರಾಷ್ಟ್ರವಶವಾಗಿ ಮಾ[illegible] ಬೇಕೆನ್ನುವನು. ತರುಣರೆಲ್ಲ ಆತನಿಗೆ ಬೆಂಬಲವಾಗಿದ್ದಾ[illegible] ತಮ್ಮ ಅನರ್ಥಕ್ಕೆಲ್ಲಾ ಫ್ರಾನ್ಸು ಮೂಲವಾದುದೆ[illegible] ಅವರ ನಂಬಿಕೆಯಾಗಿರುವದರಿಂದ, ಮತ್ತು ಹಿಟ್ಲ[illegible] ಆ ದೇಶಕ್ಕೆ ಸಲ್ಲಬೇಕಾದ ದಂಡವನ್ನು ನಿಲ್ಲಿಸಿ [illegible] ಕೆಂಬಾತನಾದ್ದರಿಂದ, ಅವರೆಲ್ಲ ಆತನನ್ನು ಹಿಂಬಾಲಿಸ[illegible] ಸಿದ್ಧರಿದ್ದಾರೆ. ಅವರಿಗೆ ಭವಿಷ್ಯತ್ಕಾಲದ ಪರಿವೆಯಿ[illegible] ಸದ್ಯದ ಸಂಕಟದೊಳಗಿಂದ ಪರಿತ್ರಾಣ ಮಾಡುವಾತ[illegible] ಹಿಟ್ಲರನೊಬ್ಬನೆಂದೇ ಅವರ ದೃಢಶ್ರದ್ಧೆ. ಈತನ [illegible]ಯವು ಯುರೋಪೀಯ ರಾಜಕೀಯ ಆಂದೋಲನ[illegible] ಜ್ವಾಲಾಮುಖಿಯಾಗಿಯೇ ಪರಿಣಮಿಸೀತೆಂಬುದ[illegible] ಸಂದೇಹವಿಲ್ಲ. ಈವೊತ್ತು ೩ ಕೋಟಿ ಪೌಂಡಿನ[illegible] ಬೆಲೆಬಾಳುವ ಸರಕುಗಳನ್ನು ಜರ್ಮನಿಯು ಇಂಗ್ಲ[illegible]ಸಿಂದ ಕೊಳ್ಳುತ್ತಿದೆ. ಅವೆಲ್ಲಕ್ಕೂ ಆರದಾಳ [illegible] ತೆಯೇ. ಅಲ್ಲದೆ ಇಂಗ್ಲಂಡು ಸು. ೨೦ ಕೋಟಿ ಪೌಂ[illegible] ಗಳನ್ನು ಜರ್ಮನಿಯ ವೈಯಕ್ತಿಕ ಸಂಸ್ಥೆಗಳಿಗೆ ಸಾ[illegible] ಕೊಟ್ಟಿದೆ. ಅದೆಲ್ಲವೂ ಮುಳುಗಿದಂತೆಯೇ. ಹಿಟ್ಲರನು[illegible] ಕಾರಾರೂಢನಾದರೆ ಇಟಲಿಗೊಬ್ಬ ಆಪ್ತಮಿತ್ರನು[illegible] ತಂತೆ. ಇಟಲಿಗೂ ಫ್ರಾನ್ಸಿಗೂ ಒಳಗೊಳಗೆ ಧು[illegible] ಮುಸು. ಫ್ರಾನ್ಸಿಗೆ ಗಡಿನಾಡಿನಗುಂಟ ಇಬ್ಬರು [illegible] ಗಳಾದಂತಾಯಿತು. ಹಿಟ್ಲರನ ಪ್ರಾಬಲ್ಯವು ಇಂಗ್ಲಂ[illegible] ಫ್ರಾನ್ಸು ಮೊದಲಾದ ದೇಶಗಳೊಳಗಿನ 'ರಾಷ್ಟ್[illegible] ಸಾರ್ವಭೌಮತ್ವವಾದಿ' ಪಕ್ಷಗಳನ್ನು ಎಬ್ಬಿಸಿ [illegible] ಬಹುದು. ಏಕೆ ? ಹಿಂದುಸ್ಥಾನ ಮೊದಲಾದ ಪರತಂತ್ರ ರಾಷ್ಟ್ರಗಳಲ್ಲಿಯೂ ಸಾಮ್ರಾಜ್ಯ ವಿರೋಧದ [illegible] ಸಂಚಾರವನ್ನು ಮಾಡಿಸಬಹುದು. ಇವೆಲ್ಲ ಕಾರಣ[illegible]

CC-0. Jangamwadi Math Collection. Digitized by eGangotri

ದೆಸೆಯಿಂದ ಹಿಂಡೆನ್‌ಬುರ್ಗನು ಆರಿಸಿಬರುದುದಕ್ಕಾಗಿ ಇಂಗ್ಲಂಡು ಫ್ರಾನ್ಸು ಮೊದಲಾದ ಸಾಮ್ರಾಜ್ಯಗಳ ಎದೆಯ ಮೇಲಿನ ದೊಡ್ಡ ಭಾರವೊಂದು ಕೆಳಗಿಳಿದಂತಾಯಿತು.

**ಮುಂದಣ ಗತಿ ?**

ಇಷ್ಟಾದರೂ ವಿಚಾರಿಗಳಾದವರು 'ವಿಜಯಿ ರಾಷ್ಟ್ರಗಳು 'ತಪ್ಪುದಂಡ (Reparations)' ದ ವಿಷಯವಾಗಿ ತಮ್ಮ ಧೋರಣೆಯನ್ನು ಪುಟ್ಟಪೂರಾ ಬದಲಿಸದೆ ಗತಿಯಿಲ್ಲ; ಏಕೆ ? ತಪ್ಪುದಂಡಕ್ಕೆ ಹಿಡಿ ಮಣ್ಣು ಕೊಡುವವರೆಗೂ ಜಗತ್ತಿಗೆ ಶಾಂತಿಯಿಲ್ಲ' ಎಂದೆನ್ನುತ್ತಾರೆ. ಹಿಂಡೆನ್‌ಬುರ್ಗನು ಅಧ್ಯಕ್ಷನಾದುದರಿಂದ 'ಸಂಧಾನ (Negotiations)' ದ ಮಾರ್ಗವು ಇನ್ನೂ ಕಟ್ಟಾಗಿಲ್ಲವೆಂದಂತಾಯಿತು. ಆದರೆ 'ತಪ್ಪುದಂಡ' ದ ವಿಷಯದಲ್ಲಿ ಮಿತ್ರರಾಷ್ಟ್ರಗಳು ವಿಶಾಲ ಉದಾರತೆಯನ್ನು ತೋರಿಸದಿದ್ದರೆ, ಜರ್ಮನಿಯು ಪರಿಸ್ಥಿತಿಯು ಹಿಂಡೆನ್‌ಬುರ್ಗನ ಕೈಮೀರುವ ಸಂಭವವಿದೆ. ಹಿಟ್ಲರನ ಪಕ್ಷವು ಅಧಿಕಾರಾಪನ್ನವಾಗಿ ವಿಶ್ವವನ್ನು ಇನ್ನೊಂದು ಘೋರ ಸಂಗ್ರಾಮಕ್ಕೆ ತುತ್ತನ್ನಾಗಿ ಮಾಡುವ ಸಂಭವವಿದೆ.

# ನವವೃಷ್ಟಿ

ಶ್ರೀ. ಸಾಲಿ ರಾಮಚಂದ್ರರಾಯರು

-ಬಿಸಿಲುರಿಗೆ ತಿರೆಕಾಯೆ, ಗಾಳಿ ತಲ್ಲಣಿಸಿ ಕಾ-
ಲ್ಗಸಿದು ನೊಂದೊಯ್ಯನೊಯ್ಯನೆ ತಂಪನರಸುತುಂ
ಬಿಸುಸುಯ್ಯುತುಂ ಪರಿಯೆ, ಪಕ್ಷಿಗಳ್ ಮರಗಳೆಲೆ-
ವರೆಗಳೊಳ್ ಮೆಯ್ಗರೆದಿರೆ

ಪೊಸಮುಗಿಲ್ ಕಾಣಿಸಿದುದೆಂತೊ ಒರ್ಮೊದಲೆ ಆ-
ಗಸದಲ್ಲಿ ಜಳಧಿಯೊಳ್ ನೌಕೆವೋಲ್, ಕಾಣುತುಂ
ಕಿಸುಗಣ್ಚಿ ಬಿಸಿಲದೇಂ ಮೆಯ್ವೆರ್ಚೆ ಮುಗಿಲನುಗಿ
ಬಗಿ ಮಾಡಲುರಿವರಿದುದೋ ॥ ೧ ॥

-ಕುಸಿದು ಕಾಲ್ದೆಗೆಯದಾ ಬಿಸಿಲ ಕಾಯ್ಪಿಂ ಮುಗಿಲ್,
ಮುಸುಳದುಪಕಾರಿ ನವಜೀವನಂ, ತನ್ನ ಸಾ-
ಹಸದ ಪೆರ್ಚಿಂ ಪಿರಿದುಗೆಯ್ವು ಜಗಕಚ್ಚರಿಯ
ನೊದವಿಪುದೆ ಸಾಜಮುದಕೆ

ವಸುಧೆಯುಲ್ಲಿರಲೀಯದಾಗಸಕೆ ತನ್ನನೇ-
ರಿಸಿ ಭುವನದಖಿಳ ಜೀವಂಗಳಂ ಬಿಸುಪಿನಿಂ
ದೆಸೆಗೆಡಿಪ ಬಿಸಿಲ ಬಾಳ್ವಾಸೆಯನೆ ಪಿಂಗಿಸಲ್
ಮುಗಿಲದೇಂ ಪಿರಿದಾದುದೋ ! ॥ ೨ ॥

-ಇದೊ ಭೇರಿ ಗಂಭೀರನಿನದದಿಂ ತುಂಬುತಿ-
ರ್ಪುದು ನಿಖಿಳಭುವನಮಂ ಪ್ರಸ್ಫುರಚ್ಛವಿ ಘನಂ
ಮುದವೀಯುತುಂ ಕಣ್ಗೆ ವಿಳಸತ್ತಟಿದ್ಭಾಸುರಂ
ಗಗನಮಂ ವ್ಯಾಪಿಸಿ

ಪದೆಪಳಿದು ಸೋಲ್ಗೆ ತಾನೆಡೆಯಾದೆನೆಂದು ಬೇ-
ಗುದಿಯಿಂದೆ ಬಿಸಿಲದೇಂ ಮಾಸಿ ಮರೆಯಾಯ್ತೊ ! ಸಾ-
ಯದರನಳಿಯಲ್ಬಗೆದು ನಾರುಣಮನೆಸಗಿ ಬೇವಸಕೆ
ಗುರಿಯಾಗರಾರೋ ? ॥ ೩ ॥

- ಬಂದುದೆತ್ತಣದೊ ತಣ್ಗಾಳಿಯಿದು ಬಿಸಿಲಿಂದೆ
ಬೆಂದವರ ಮೆಯ್ಯುರಿಯನಾರಿಸುತೆ ತನ್ನ ಸೋಂ-
ಕಿಂದದೇಂ ಮುಂದೊದವುವೊಳ್ಪಿತಂ ಸೂಚಿಸುತೆ
ತೀಡುವುದೊ ಸೊಗಸಿನಿಂದೇ

ಬಾಂದಳದೊಳಂಬುವಾಹಂ ತುಳುಂಕುವ ವಾರಿ-
ಯಿಂದಂ ಕದಕ್ಕದಿಸಿ ಕಣ್ಗೊಳಿಸುತಿರೆ ರಭಸ-
ದಿಂದೆ ಸುಯ್ಯೆಂದು ಬಲ್ಸರಿಯದೇಂ ಸುರಿಯುತೆ
ಲ್ಲೆಲ್ಲಿಯುಂ ಕಾಲ್ವರಿದುದೋ ! ॥ ೪ ॥

-ಸುರಿವ ಬಲ್ಸರಿಗಳಿಂ ಮಿಳ್ಳಿಸುವ ಮಿಂಚುಗಳಿ-
ನರಿಚುವ ಮುಗಿಲ್ಗಳಿಂ ಕಾಲ್ವರಿವ ನೀರ್ಗಳಿಂ
ಬಿರುವರಿವ ಗಾಳಿಗಳಿನೇಂ ಪೆಂಪೊ ಸೃಷ್ಟಿಯೇಂ
ಪ್ರಾಗಲ್ಭ್ಯವಾಂತೆಸೆವುದೋ !

ವಿರಜಮಿೀತಪುರಾಜಿ ನಾಲ್ಕುನೀರ್ವಿಂದ ನವ-
ತರುಣಿಯಂಗದ ವಿಳಾಸಮ ಬಡೆದು ಕಣ್ಮನಕೆ
ಕರೆವುದುತ್ಸವಮನೀ ನವವೃಷ್ಟಿಯಿಂದದೇಂ
ಪೊಸದೇಸೆಪಸರಿಸಿದುದೋ ! ॥ ೫ ॥

CC-0. Jangamwadi Math Collection. Digitized by eGangotri

# ಶ್ರೀಸಮಂತಭದ್ರರು

ಲೇಖಕರು:— ಶ್ರೀ. ಕೆ. ಭುಜಬಲಿ ಶಾಸ್ತ್ರಿ, ನ್ಯಾಯಭೂಷಣಾಚಾರ್ಯ, ಆರಾ, ಬಿಹಾರ

" ಸಮಂತ ಭದ್ರೋ ಭದ್ರಾರ್ಥೋ ಭಾತು ಭಾರತಭೂಷಣಃ ।
ದೇವಾಗಮೇನ ಯೇನಾತ್ರ ವ್ಯಕ್ತೋ ದೇವಾಗಮಃ ಕೃತಃ ॥ "

(ಶುಭಚಂದ್ರಾಚಾರ್ಯ)

" ನಮಃ ಸಮಂತ ಭದ್ರಾಯ ಮಹತೇಕವಿವೇಧಸೇ ।
ಯದ್ವಚೋ ವಜ್ರಪಾತೇನ ನಿರ್ಭಿನ್ನಾಃ ಕುಮತಾದ್ರಯ: ॥ "

(ಜಿನಸೇನಾಚಾರ್ಯ)

ಆಚಾರ್ಯಪ್ರವರ ಸಮಂತಭದ್ರರು ದಕ್ಷಿಣಭಾರತದ ಯಾವುದೋ ಒಂದು ಪ್ರಸಿದ್ಧವಾದ ರಾಜವಂಶದಲ್ಲಿ ಜನಿಸಿದರೆಂದು ಇತಿಹಾಸಜ್ಞರ ಮತವಾಗಿದೆ. ಅವರ ಪೂಜ್ಯತಂದೆಯವರ ಹೆಸರು ಮತ್ತು ಜನ್ಮತಿಥಿ ಇವು ನಮಗೆ ಗೊತ್ತಿಲ್ಲದಿದ್ದರೂ ಆಚಾರ್ಯರ ತಂದೆಯವರು ಫಣಿಮಂಡಲಾಂತರ್ಗತ 'ಉರಗಪುರ'ದ ರಾಜರಾಗಿದ್ದರೆಂಬುದು ಸ್ಪಷ್ಟವಾಗಿದೆ. (ನೋಡಿ—ಹಿಂದೀ 'ಜೈನಹಿತೈಷೀ' ಭಾಗ, II ಅ. ೭—೮, ಪುಟ, ೪೮೦) 'ರಾಜಾವಳೀ ಕಥೆ'ಯಲ್ಲಿ ಈ ಉರಗಪುರಕ್ಕೆ 'ಉತ್ಕಲಿಕಾ' ಎಂದು ಬರೆದಿದೆ. ಸಮಂತಭದ್ರರ ಬಾಲ್ಯಜೀವನವು ಈ ಉರಗಪುರದಲ್ಲಿಯೇ ವ್ಯತೀತವಾಗಿತ್ತು. ಪೂರ್ವದಲ್ಲಿ ಈ ಉರಗಪುರವು ಕಾವೇರಿಯ ತೀರದಲ್ಲಿ ಒಂದು ಸಮೃದ್ಧಶಾಲಿಯಾದ ನಗರವಾಗಿತ್ತು. ಇದೇ ನಗರಕ್ಕೆ ಆಚಾರ್ಯರ ಬಾಲಲೀಲೆಗಳನ್ನು ನೋಡುವ ಸೌಭಾಗ್ಯವು ಪ್ರಾಪ್ತವಾಗಿತ್ತು. ಆ ಸಮಯದಲ್ಲಿ ಸ್ವಾಮೀ ಸಮಂತಭದ್ರರು ಶಾಂತಿವರ್ಮರೆಂಬ ಹೆಸರಿನಿಂದ ಪ್ರಸಿದ್ಧರಾಗಿದ್ದರು. (ನೋಡಿ—ಸಮಂತಭದ್ರರ 'ಜಿನಶತಕ' ಆದಿ) ಸಂಭವತಃ ಇಲ್ಲಿಯೇ ತಮ್ಮ ಪ್ರಾರಂಭಿಕ ಶಿಕ್ಷಣವೂ ಸಂಪನ್ನವಾಗಿತ್ತು ಶ್ರೀಸಮಂತಭದ್ರರು ಗೃಹಸ್ಥಾಶ್ರಮದಲ್ಲಿ ಪ್ರವೇಶ ಮಾಡಿದ್ದರೇ ಇಲ್ಲವೇ ಎಂಬುದನ್ನೂ ಹೇಳುವುದು ಕಷ್ಟ. ಒಂದು ವೇಳೆ ಅವರು ವಿವಾಹ ಮಾಡಿಕೊಂಡಿದ್ದರೂ ದೀರ್ಘಕಾಲದವರೆಗೆ ಗೃಹಸ್ಥಾಶ್ರಮದಲ್ಲಿ ಇರಲಿಲ್ಲವೆಂಬುದು ನಿರ್ವಿವಾದವಾದ ಮಾತಾಗಿದೆ. ಏತಕ್ಕೆಂದರೆ ಅನ್ಯಥಾ ಅವರು ಮುಂದೆ ಆ ಅಸಾಧಾರಣವಾದ ಯೋಗ್ಯತೆಯನ್ನು ಪಡೆಯುವುದು ಕಷ್ಟವಾಗಿತ್ತು. ಆಚಾರ್ಯರು ಬಾಲ್ಯದಲ್ಲಿಯೇ ತಮ್ಮನ್ನು ಜೈನಧರ್ಮದ ಸೇವೆಗಾಗಿ ಅರ್ಪಿಸಿಬಿಟ್ಟಿದ್ದರು. ಅವರ ಜೈನಧರ್ಮದಲ್ಲಿ ಸ್ವಾಭಾವಿಕವಾದ ಪ್ರೇಮವು ಇತ್ತು. ಅವರ ರೋಮರೋಮಗಳಲ್ಲಿ ಜಿನಭಕ್ತಿಯು ತುಂಬಿತ್ತು. ಅವರ ಧಾರ್ಮಿಕ ಕ್ರಿಯೆಗಳಲ್ಲಿ ಕೃತ್ರಿಮದ ಗಂಧವೇ ಇರಲಿಲ್ಲ. ಅವರು ಸ್ವಭಾವತಃ ಧರ್ಮಾತ್ಮರಾಗಿದ್ದು ತಮ್ಮ ಪವಿತ್ರವಾದ ಅಂತಃಕರಣದ ಪ್ರತಿಧ್ವನಿಯ ಪ್ರೇರಣೆಯಿಂದಲೇ ಜಿನದೀಕ್ಷೆಯನ್ನು ತೆಗೆದುಕೊಂಡಿದ್ದರು. ನಿಜವಾಗಿಯೂ ಸಮಂತಭದ್ರರು ಯುಗಪ್ರಧಾನ ಪುರುಷರು. ಅವರು ಪ್ರತಿಯೊಂದು ಮಾತನ್ನು ಚೆನ್ನಾಗಿ ಪರಿಶೋಧಿಸಿ ಗ್ರಹಣ ಮಾಡುತ್ತಿದ್ದರು. ಇದಕ್ಕೆ 'ಆಪ್ತಮೀಮಾಂಸಾ' ಆದಿ ಅವರ ಅಮೂಲ್ಯವಾದ ಕೃತಿಗಳು ಉಜ್ವಲ ನಿದರ್ಶನಗಳಾಗಿರುವುವು. ಸ್ವಾಮಿಗಳು ಕಾಂಚೀ (ಕಂಚಿ) ಅಥವಾ ಅದರ ಸಮೀಪದಲ್ಲಿನ ಯಾವುದೋ ಒಂದು ಪ್ರದೇಶದಲ್ಲಿ ಜಿನದೀಕ್ಷೆಯನ್ನು ಧಾರಣೆಮಾಡಿರಬೇಕು. ಕಾಂಚಿಯೇ ಅವರ ಧಾರ್ಮಿಕ ಪ್ರಯತ್ನಗಳಿಗೆ ಮುಖ್ಯ ಕೇಂದ್ರವಾಗಿತ್ತು. ಅವರು ಹಲವು ಬಾರಿ ಅಲ್ಲಿಗೆ ಹೋಗಿದ್ದರೆಂಬುದು 'ರಾಜಾವಳೀ ಕಥೆ'ಯಿಂದ ತಿಳಿದುಬರುತ್ತದೆ. ಅದೂ ಅಲ್ಲದೆ ಅವರು ಸ್ವಯಂ 'ನಾನು ಕಾಂಚಿಯ ನಗ್ನ ಸಾಧು' (ಕಾಂಚ್ಯಾಂ ನಗ್ನಾಟಕೋಽಹಂ) ಎಂದು ಹೇಳಿಕೊಂಡಿರುತ್ತಾರೆ. ಅವರ ಗುರುಕುಲದ ಪರಿಚಯವು ಅಲ್ಪಸ್ವಲ್ಪವೂ ಸಿಗದಿರುವುದು ಖೇದ! ಇವರ ದೀಕ್ಷಾಗುರುವಾಗಿದ್ದ ಮಹಾತ್ಮರು

CC-0. Jangamwadi Math Collection. Digitized by eGangotri

ತಿಳಿಯದು. ಆದರೂ ಇವರು 'ಮೂಲಸಂಘ'ದ ಪ್ರಧಾನ ಆಚಾರ್ಯರಲ್ಲಿ ಒಬ್ಬರಾಗಿದ್ದರೆಂಬುದು ತಿಳಿದುಬರುತ್ತದೆ. ವಿಕ್ರಮ ಹದಿನಾಲ್ಕನೆಯ ಶತಾಬ್ದದ ಕವಿಗಳಾದ ಹಸ್ತಿಮಲ್ಲ ಮತ್ತು ಅಯ್ಯಪಾರ್ಯ ಇವರು 'ಶ್ರೀಮೂಲಸಂಘವ್ಯೋಮೇಂದುಃ' ಎಂಬ ವಿಶೇಷಣದ ಮೂಲಕವಾಗಿ ಸಮಂತಭದ್ರರನ್ನು ಮೂಲಸಂಘರೂಪೀ ಆಕಾಶದ ಚಂದ್ರನನ್ನಾಗಿ ಬರೆದಿರುವರು.

ಆಚಾರ್ಯರ ಪ್ರಶಾಂತವಾದ ಮುನಿಜೀವನದಲ್ಲಿ ಒಂದು ಸಾರಿ ಅವರ ಮೇಲೆ ಹಠಾತ್ತಾಗಿ ಕಠಿನವಾದ ವಿಪತ್ತಿಯ ಒಂದು ಪರ್ವತವೇ ಕಳಚಿ ಬಿತ್ತು. ಆಗ ಅವರು 'ಮಣುವಕ ಹಳ್ಳಿ'ಯಲ್ಲಿ ಭ್ರಮಣ ಮಾಡುತ್ತಿದ್ದರು. (ನೋಡಿ—ರಾಜಾವಳೀ ಕಥೆ) ಅಲ್ಲಿಯೇ ಪೂರ್ವಸಂಚಿತವಾದ ಅಸಜಾವೇದನೀಯ ಕರ್ಮದ ತೀವ್ರ ಉದಯದಿಂದ ಅವರ ಶರೀರದಲ್ಲಿ 'ಭಸ್ಮಕ' ಎಂಬ ಒಂದು ಭಯಂಕರವಾದ ರೋಗವು ತಲೆದೋರಿತು. ಇವರು ಪ್ರಾರಂಭದಲ್ಲಿ ಈ ರೋಗವನ್ನು ಸ್ವಲ್ಪವೂ ಗಣನೆಗೆ ತರಲಿಲ್ಲ. ಕ್ಷುಧಾದಿ ಅನ್ಯಪರೀಷಹಗಳಂತೆ ಇದನ್ನೂ ಇವರು ಶಾಂತಭಾವದಿಂದ ಸಹನ ಮಾಡಿದರು. ಆದರೆ ಸಾಮಾನ್ಯ ಕ್ಷುಧೆ ಮತ್ತು ಭಸ್ಮಕ ಕ್ಷುಧೆ, ಇವುಗಳಲ್ಲಿ ಬಹಳ ಅಂತರವಿದೆ. (ನೋಡಿ—'ಚರಕ') ಬರಬರುತ್ತಾ ಶ್ರೀಸಮಂತಭದ್ರರಿಗೆ ಇದರಿಂದ ಬಹಳ ಪೀಡೆಯು ಉಂಟಾಯಿತು. ಆದರೂ ಅವರು ರೋಗಪ್ರತಿಕಾರಕ್ಕಾಗಿ ಕೊಂಚವೂ ಪ್ರಯತ್ನಿಸದೆ, ವಸ್ತುಸ್ಥಿತಿಯನ್ನು ವಿಚಾರ ಮಾಡುತ್ತಾ ಅನಿತ್ಯಾದಿಭಾವನೆಗಳನ್ನು ಚಿಂತಿಸುತ್ತಿದ್ದರು. ಆದರೆ ರೋಗವು ಉತ್ತರೋತ್ತರ ಪ್ರಬಲವಾಗುತ್ತಾ ಕೊನೆಗೆ ಅದು ಅವರಿಗೆ ಅಸಹ್ಯವಾಗಿ ಹೋಯಿತು. ಆಗ ಸಮಂತಭದ್ರರು ಶಾಸ್ತ್ರೋಕ್ತವಾದ ಮುನಿಜೀವನವನ್ನು ಕಳೆಯುವುದು ಅಸಂಭವವೆಂದು ತಿಳಿದು 'ಸಲ್ಲೇಖನಾವ್ರತ'ವನ್ನು ತೆಗೆದುಕೊಳ್ಳುವುದೇ ಲೇಸೆಂದು ಯೋಚಿಸಿದರು. ನಶ್ವರವಾದ ಶರೀರಕ್ಕೋಸ್ಕರ ಪಾವನವಾದ ಧರ್ಮವನ್ನು ಬಿಟ್ಟುಬಿಡುವುದು ಅವರಿಗೆ ಸರ್ವಥಾ ಅಸಹ್ಯವಾಗಿತ್ತು. ಕೂಡಲೇ ಅವರು ತಮ್ಮ ಪೂರ್ವ ನಿಶ್ಚಯದಂತೆ 'ಸಲ್ಲೇಖನಾವ್ರತ'ವನ್ನು ಕೈಕೊಳ್ಳುವುದಕ್ಕೋಸ್ಕರ ತಮ್ಮ ಪೂಜ್ಯ ಗುರುಗಳನ್ನು ವಿಚಾರಿಸಿದರು. ವಯೋವೃದ್ಧರೂ, ಜ್ಞಾನವೃದ್ಧರೂ, ಅನುಭವಿಗಳೂ ಮಹಾ ತಪಸ್ವಿಗಳೂ ಆದ ಅವರ ಗುರುಗಳು ಸ್ವಲ್ಪ ಹೊತ್ತಿನವರೆಗೆ ಮೌನವಾಗಿದ್ದು, ಸ್ವಾಮೀ ಸಮಂತಭದ್ರರನ್ನು ನೋಡಿ "ದೀರ್ಘಜೀವಿಗಳಾದ ನಿಮ್ಮಿಂದ, ಮುಂದಕ್ಕೆ ಈ ಪವಿತ್ರವಾದ ಜೈನಧರ್ಮದ ಅಮೂಲ್ಯವೂ, ಅಪಾರವೂ ಆದ ಧರ್ಮಸೇವೆಯು ಆಗುವುದುಂಟು. ಆದುದರಿಂದ ನೀವು 'ಸಲ್ಲೇಖನಾವ್ರತ'ವನ್ನು ತೆಗೆದುಕೊಳ್ಳದೆ, ಯಾವ ವೇಷದಲ್ಲಿಯೇ ಆಗಲಿ ಹೇಗಾದರೂ 'ಭಸ್ಮಕ' ರೋಗವನ್ನು ಶಾಂತಮಾಡಿಕೊಳ್ಳುವುದಕ್ಕಾಗಿ ಪ್ರಯತ್ನಿಸಿರಿ. ರೋಗವು ಶಾಂತವಾದ ಮೇಲೆ ಪುನಃ ನೀವು ಪ್ರಾಯಶ್ಚಿತ್ತಪೂರ್ವಕವಾಗಿ ಮುನಿಧರ್ಮವನ್ನು ಧಾರಣೆ ಮಾಡಬಹುದು." ಎಂದು ಉತ್ತರ ಕೊಟ್ಟರು. (ನೋಡಿ—ರಾಜಾವಳೀ ಕಥೆ) ಸಮಂತಭದ್ರರು ಸ್ವಹಿತೈಷಿಗಳಾದ ಗುರುಗಳ ಈ ಗಂಭೀರವಾದ ಆದೇಶವನ್ನು ಶಿರಸಾಗ್ರಹಿಸಿದರು. ಅವರು ಪರಮಪುನೀತವಾದ ದಿಗಂಬರ ಮುನಿವೇಷವನ್ನು ತ್ಯಾಗಮಾಡಿ, ತಮ್ಮ ಶರೀರವನ್ನು ಭಸ್ಮದಿಂದ ಅಲಂಕರಿಸಿಕೊಂಡರು. ದಿಗಂಬರ ಮುನಿವೇಷವನ್ನು ತ್ಯಾಗ ಮಾಡುವಾಗ ಸ್ವಾಮಿಗಳಿಗೆ ಅಸಹನೀಯವಾದ ದುಃಖವು ಉಂಟಾಗಿತ್ತು. ಮಾಡುವುದೇನು! ಧರ್ಮಕ್ಕೋಸ್ಕರ ಮಾಡಲರ್ಹವಲ್ಲದ ಕಾರ್ಯಗಳನ್ನೂ ಕೆಲವು ಸಮಯ ಮಾಡಬೇಕಾಗುವುದು. ಆ ಅವಸ್ಥೆಯಲ್ಲಿಯೂ ಆಚಾರ್ಯರಿಗೆ ಜೈನಧರ್ಮದಲ್ಲಿ ದೃಢವಾದ ವಿಶ್ವಾಸವಿತ್ತು. "ನಾನು ನೋಡುವವರಿಗೆ ಭಸ್ಮಧಾರಿಯಾದ ವೈದಿಕಸನ್ಯಾಸಿಯಂತೆ ಕಂಡರೂ ಭಾವದಲ್ಲಿ ಯಥಾರ್ಥವಾಗಿ ದಿಗಂಬರ ಜೈನಸಾಧುವೇ ಆಗಿರುತ್ತೇನೆ." ಎಂದು ಸ್ವಯಂ ಸಮಂತಭದ್ರರು ಹೇಳಿಕೊಂಡಿದ್ದಾರೆ. ಪಶ್ಚಾತ್ ಅವರು ಮಣುವಕಹಳ್ಳಿಯಿಂದ ಕಾಂಚಿಗೆ ಹೊರಟರು. ಆ ಸಮಯದಲ್ಲಿ ಅಲ್ಲಿ ಶಿವಕೋಟಿರಾಜನು ರಾಜ್ಯಭಾರ ಮಾಡುತ್ತಿದ್ದನು. ಕಾಂಚಿಯಲ್ಲಿ ಆತನ "ಭೀಮಲಿಂಗ" ಎಂಬ ಒಂದು ವಿಶಾಲವಾದ ಶಿವಾಲಯವು ಇತ್ತು. ಸ್ವಾಮೀ ಸಮಂತಭದ್ರರು ಪ್ರಥಮತಃ ಈ ಶಿವಾಲಯಕ್ಕೇ ಬಂದು, ದರ್ಶನಾರ್ಥವಾಗಿ ಅಲ್ಲಿಗೆ ಬಂದಿದ್ದ ರಾಜನಿಗೆ ಆಶೀರ್ವಾದವನ್ನು ಕೊಟ್ಟು, ಆತನನ್ನು ಕುರಿತು "ರಾಜನೇ ನಿನ್ನ ಈ ನೈವೇದ್ಯವನ್ನು ಶಿವಾರ್ಪಣೆ ಮಾಡುವೆನು." ಎಂದು ಹೇಳಿದರು. ರಾಜನು ಈ ಮಾತನ್ನು ಕೇಳಿ, ಬಹಳ



CC-0. Jangamwadi Math Collection. Digitized by eGangotri

ಸಂತೋಷಪಟ್ಟನು. ಹನ್ನೆರಡು ಖಂಡುಗ ಪ್ರಸಾದವು ಶಿವಾರ್ಪಣೆಗಾಗಿ ಬಂದಿತು. ಸಮಂತಭದ್ರರು ಒಬ್ಬೊಂಟಿಗರಾಗಿ ಆ ನೈವೇದ್ಯವನ್ನು ಶಿವಾಲಯದ ಒಳಗಿಟ್ಟು, ಅದರ ಬಾಗಿಲನ್ನು ಮುಚ್ಚಿ, ಸಾನಂದರಾಗಿ ತಮ್ಮ ಜಠರಾಗ್ನಿಯನ್ನು ಶಾಂತಮಾಡಿಕೊಂಡರು. ತರುವಾಯ ಅವರು ಬಾಗಿಲನ್ನು ತೆರೆದರು. ಸಂಪೂರ್ಣ ನೈವೇದ್ಯದ ಸಮಾಪ್ತಿಯನ್ನು ಕಂಡು ರಾಜನಿಗೆ ಬಹಳ ಆಶ್ಚರ್ಯವಾಯಿತು. ಅವನು ಪ್ರತಿ ದಿವಸವೂ ವಿಶೇಷ ಭಕ್ತಿಯಿಂದ ಇನ್ನೂ ಉತ್ತಮೋತ್ತಮವಾದ ಭೋಜ್ಯವಸ್ತುಗಳನ್ನು ಶಿವಾರ್ಪಣೆಗಾಗಿ ಕಳುಹಿಸಿಕೊಟ್ಟನು. ಆದರೆ ಆಚಾರ್ಯರ ಜಠರಾಗ್ನಿಯು ಉಪಶಾಂತವಾದ ಹಾಗೆಲ್ಲಾ ನೈವೇದ್ಯವು ಉತ್ತರೋತ್ತರವಾಗಿ ಅಧಿಕಪರಿಮಾಣದಲ್ಲಿ ಉಳಿಯತೊಡಗಿತು. ಸಮಂತಭದ್ರರು ಉಳಿದ ಆ ನೈವೇದ್ಯವನ್ನು ದೇವಪ್ರಸಾದವನ್ನಾಗಿ ರಾಜನಿಗೆ ಹೇಳಿದರು. ಪರಂತು ರಾಜನಿಗೆ ಸಂದೇಹವು ಹುಟ್ಟಿ ಒಂದು ದಿವಸ ಅವನು ಶಿವಾಲಯದ ಸುತ್ತಲೂ ಪಹರೆಯನ್ನಿಟ್ಟು, ಶಿವಾಲಯದ ಬಾಗಿಲನ್ನು ಒಡೆಯುವಂತೆ ಸೇವಕರಿಗೆ ಆಜ್ಞಾಪಿಸಿದನು. ಆ ಶಬ್ದವನ್ನು ಕೇಳಿ, ತತ್‌ಕ್ಷಣವೇ ಸ್ವಾಮಿಗಳು ತಮ್ಮ ಮೇಲೆ ಒಂದು ದೊಡ್ಡ ಉಪಸರ್ಗವು ಬಂದಿತೆಂಬುದನ್ನು ತಿಳಿದುಕೊಂಡು, ಅದರ ನಿವಾರಣೆಯ ಪರ್ಯಂತರ ಅನ್ನ ಜಲಾದಿ ಸಂಪೂರ್ಣ ವಸ್ತುಗಳನ್ನು ತ್ಯಾಗಮಾಡಿ, ಶಾಂತಚಿತ್ತದಲ್ಲಿ ಚತುರ್ವಿಂಶತಿ ತೀರ್ಥಂಕರರ ಸ್ತುತಿಯಲ್ಲಿ ಸರ್ವಥಾ ಮಗ್ನರಾದರು. ಸ್ತುತಿ ಮಾಡುತ್ತಾ ಸಮಂತಭದ್ರರು ಎಂಟನೆಯ ತೀರ್ಥಂಕರರಾದ ಶ್ರೀ ಚಂದ್ರಪ್ರಭ ಸ್ವಾಮಿಗಳ ಸ್ತುತಿಯನ್ನು ಆರಂಭಿಸಿ ಭೀಮಲಿಂಗದ ಕಡೆಗೆ ನೋಡಿದಕೂಡಲೇ ಆ ಲಿಂಗವು ಒಡೆದು ಅದೇ ಸ್ಥಾನದಲ್ಲಿ ಯಾವುದೋ ಒಂದು ದಿವ್ಯಶಕ್ತಿಯ ಪ್ರಭಾವದಿಂದ, ಚಂದ್ರಲಾಂಛನ ಯುಕ್ತವಾದ–ಜಾಜ್ವಲ್ಯಮಯವಾದ ಅರ್ಹತ್ ಪರಮೇಷ್ಠಿಯ ಒಂದು ಸುವರ್ಣಮಯವಾದ ವಿಶಾಲ ಜಿನಬಿಂಬವು ಕಂಡುಬಂತು. ಇಷ್ಟರಲ್ಲಿ ಬಾಗಿಲೂ ತೆರೆಯಲ್ಪಟ್ಟಿತ್ತು. ರಾಜನು ಈ ಚಮತ್ಕಾರವನ್ನು ನೋಡಿ, ಚಕಿತನಾಗಿ ತನ್ನ ತಮ್ಮನಾದ ಶಿವಾಯನನೊಡನೆ ತತ್‌ಕ್ಷಣವೇ ಶ್ರೀಸಮಂತಭದ್ರರ ಚರಣಗಳಲ್ಲಿ ಬಿದ್ದನು. ಆಚಾರ್ಯರು ಚತುರ್ವಿಂಶತಿ ತೀರ್ಥಂಕರರ ಆ ಸ್ತುತಿಯನ್ನು

ಕ್ರಮಶಃ ಪೂರ್ಣಗೊಳಿಸಿ ಬಳಿಕ ಸಹೋದರರಿಬ್ಬರಿಗೂ ಆಶೀರ್ವಾದವನ್ನು ಕೊಟ್ಟು ಧರ್ಮೋಪದೇಶವನ್ನು ಮಾಡಿದರು. ಅವರ ಉಪದೇಶವನ್ನು ಕೇಳಿ ದೊರೆಯು ಕೂಡಲೇ ಸಂಸಾರದಿಂದ ವಿರಕ್ತನಾಗಿ ತನ್ನ ಸುಪುತ್ರನಾದ ಶ್ರೀಕಂಠನಿಗೆ ರಾಜ್ಯವನ್ನು ಕೊಟ್ಟು, ತಮ್ಮನಾದ ಶಿವಾಯನನೊಡನೆ ದಿಗಂಬರಜೈನಮುನಿಯಾದನು. ... ಸಮಯದಲ್ಲಿ ಇನ್ನೂ ಹಲವರು ಜೈನಧರ್ಮವನ್ನು ಸ್ವೀಕರಿಸಿದರು. ಇದೇ ಶಿವಕೋಟಿಯು ... ದೊಡ್ಡ ಆಚಾರ್ಯನಾಗಿ ರತ್ನಮಾಲಾದಿ ಹಲವು ಗ್ರಂಥಗಳನ್ನು ರಚಿಸಿರುತ್ತಾನೆ. ಸ್ವಾಮೀಸಮಂತಭದ್ರರು ತಮ್ಮ ಆಪತ್ಕಾಲದಲ್ಲಿಯೂ ಜಿನಧರ್ಮದ ಸೇವೆಯನ್ನು ತೊರೆಯಲಿಲ್ಲ.

ಈ ಪ್ರಕಾರವಾಗಿ ಶ್ರೀ ಸಮಂತಭದ್ರರ ಆಪತ್ಕಾಲವು ಶೀಘ್ರವೇ ದೂರವಾಯಿತು. ಶರೀರವು ಸ್ವಸ್ಥವಾದ ಕೂಡಲೆಯೇ ಅವರು ಪುನಃ ಜಿನದೀಕ್ಷೆಯನ್ನು ತೆಗೆದುಕೊಂಡರು. ಅನಂತರ ಅವರು ಉತ್ತರೋತ್ತರ ... ವ್ರತೋಪವಾಸಾದಿಗಳನ್ನು ಮಾಡುತ್ತಾ, ಜ್ಞಾನಧ್ಯಾನಾದಿಗಳ ಮೂಲಕವಾಗಿ ಅಪಾರವಾದ ... ಶಕ್ತಿಯನ್ನು ಸಂಪಾದಿಸಿ, ಆಚಾರ್ಯಪದವನ್ನು ಹೊಂದಿ ಜಿನಶಾಸನದ ಪ್ರಣೇತೃಗಳೆಂದು ಹೊಗಳಿಸಿಕೊಂಡರು. ಇಷ್ಟೇ ಅಲ್ಲ, ಒಂದು ಶಿಲಾಲೇಖದಲ್ಲಿ ಅವರು "ಗುಣ... ಗಣೇಶಃ" ಅರ್ಥಾತ್ ಆಚಾರ್ಯರ ಸ್ವಾಮಿಯೆಂದು ಉಲ್ಲೇಖಿಸಲ್ಪಟ್ಟಿರುತ್ತಾರೆ. (ನೋಡಿ ಶ್ರವಣಬೆಳ್ಗೊಳ ಶಿಲಾಲೇಖ ಸಂ. ೪೦–೬೪). ಸಮಂತಭದ್ರರು ... ತರ್ಕ, ವ್ಯಾಕರಣ, ಛಂದಸ್ಸು, ಅಲಂಕಾರ, ಕಾವ್ಯ, ಕೋಶ ಮೊದಲಾದ ಸಂಪೂರ್ಣ ವಿಷಯಗಳಲ್ಲಿ ನಿಷ್ಣಾತರಾಗಿದ್ದರು. ಇವರು ಸಂಸ್ಕೃತ, ಪ್ರಾಕೃತ, ಕನ್ನಡ, ತಮಿಳು, ಮುಂತಾದ ಹಲವು ಭಾಷೆಗಳಲ್ಲಿ ಪಾರಂಗತರಾಗಿದ್ದರು. ಆಚಾರ್ಯರಿಗೆ ಸಂಸ್ಕೃತ ಭಾಷೆಯಲ್ಲಿ ವಿಶೇಷಪ್ರೇಮವಿದ್ದಿತು. ದಕ್ಷಿಣಭಾರತದಲ್ಲಿ ಸಂಸ್ಕೃತ ಜ್ಞಾನವನ್ನು ಪ್ರಚಾರಮಾಡಿದ ದಿಗ್ಗಜವಿದ್ವಾಂಸರಲ್ಲಿ ಇವರೂ ಒಬ್ಬರು. ಸಮಂತಭದ್ರರ ಕಾಲದಿಂದ ... ಸಂಸ್ಕೃತ ಸಾಹಿತ್ಯೇತಿಹಾಸದಲ್ಲಿ ಒಂದು ಹೊಸ ಯುಗವು ಪ್ರಾರಂಭವಾಗುವುದರಿಂದ, ಉಕ್ತ ಸಾಹಿತ್ಯೇತಿಹಾಸದಲ್ಲಿ ಅವರ ಹೆಸರು ಅಮರವಾಗಿರುವುದು.

CC-0. Jangamwadi Math Collection. Digitized by eGangotri

ಲೋಕಸೇವೆಯ ಕಾರ್ಯವು ಕೇವಲ ದಕ್ಷಿಣಭಾರತವನ್ನೇ ಒಳಗೊಂಡಿರಲಿಲ್ಲ. ಆಚಾರ್ಯರ ವಾದಶಕ್ತಿಯು ಅಪ್ರತಿಹತವಾಗಿತ್ತು. ಶ್ರವಣಬೆಳ್ಗೊಳದ ಶಿಳಸೆಯ ಶಿಲಾಲೇಖದಲ್ಲಿ ಕೊಟ್ಟಿರುವ ಆತ್ಮಪರಿಚಯದಿಂದ ಸಮಂತಭದ್ರರು ಪಾಟಲಿಪುತ್ರ (ಪಾಟ್ನಾ) ಮಾಳವ, ಸಿಂಧು, ಪಂಜಾಬ, ಕಾಂಚೀಪುರ, ಭಿಲಸಾ ಮುಂತಾದ ಪ್ರಧಾನ ಪ್ರಧಾನವಾದ ನಗರಗಳಲ್ಲಿ ಹೋಗಿ, ವಾದವನ್ನು ಮಾಡಿ, ಜಯವನ್ನು ಪಡೆದಿದ್ದರೆಂದು ತಿಳಿದುಬರುವುದು. ನಿಜವಾಗಿಯೂ ಅವರು ಅಪ್ರತಿದ್ವಂದಿ ಸಿಂಹದಂತೆ ಧರ್ಮಪ್ರಚಾರಕ್ಕಾಗಿ ಭಾರತ ವರ್ಷದ ಮೂಲೆಮೂಲೆಗಳಲ್ಲಿ ಸಂಚರಿಸಿದ್ದರು. ಆದರೂ ಅವರ ಹೃದಯದಲ್ಲಿ ಅಹಂಕಾರದ ಲೇಶವೂ ಇರಲಿಲ್ಲ.

ಸಮಂತಭದ್ರರು ಹಲವು ಗ್ರಂಥಗಳನ್ನು ಬರೆದಿರಬೇಕು. ಆದರೆ ನಿಮ್ನಲಿಖಿತ ಗ್ರಂಥಗಳು ಮಾತ್ರ ಈಗ ತಿಳಿದುಬಂದಿವೆ. (೧)ಆಪ್ತಮೀಮಾಂಸಾ (೨)ಯುಕ್ತ್ಯನುಶಾಸನ (೩) ಸ್ವಯಂಭೂಸ್ತೋತ್ರ (೪) ಜಿನಸ್ತುತಿಶತಕ (೫) ರತ್ನಕರಂಡಕ (೬) ಜೀವಸಿದ್ಧಿ (೭) ತತ್ವಾನುಶಾಸನ (೮) ಪ್ರಾಕೃತ ವ್ಯಾಕರಣ (೯) ಪ್ರಮಾಣ ಪದಾರ್ಥ (೧೦) ಕರ್ಮಪ್ರಾಭೃತ ಟೀಕಾ (೧೧) ಗಂಧಹಸ್ತಿ ಮಹಾಭಾಷ್ಯ. ಸಮಂತಭದ್ರರ ಜನ್ಮತಿಥಿಯು ಅಜ್ಞಾತವಾಗಿರುವಂತೆ ಅವರ ಸ್ವರ್ಗವಾಸದ ತಿಥಿಯೂ ಅಜ್ಞಾತವಾಗಿಯೇ ಇದೆ. ಅವರು ಯಾವ ಸ್ಥಾನ ಮತ್ತು ಯಾವ ಪವಿತ್ರ ತಿಥಿಯಲ್ಲಿ ಸ್ವರ್ಗಸ್ಥರಾದರೆಂಬುದು ಇನ್ನೂ ತಿಳಿದುಬರಲಿಲ್ಲ. ಶ್ರೀಮಂತಭದ್ರರು ಎರಡನೆಯ ಶತಾಬ್ದದ (ವಿಕ್ರಮ ಸಂ. ೧೬೦, ಸನ್ ೧೦೩ ರಿಂದ ಮೊದಲಿನ) ವಿದ್ವಾಂಸರೆಂದು ವಿದ್ವಾಂಸರ ಅಭಿಪ್ರಾಯವಾಗಿದೆ.

ಇವರನ್ನು ಸಂಸ್ಕೃತ ಕವಿಗಳ ಹೊರತು ಕನ್ನಡದಲ್ಲಿ ಗ್ರಂಥಗಳನ್ನು ಬರೆದಿರುವ ಆದಿಪಂಪ, ಅಭಿನವಪಂಪ, ಅಗ್ಗಳ, ಕಮಲಭವ, ಪೊನ್ನ, ಮಂಗರಸ, ಭಾಸ್ಕರ, ನೇಮಿಚಂದ್ರ, ಜನ್ನ, ಚಾವುಂಡರಾಯ ಮುಂತಾದ ಪ್ರಬಲರಾದ ಜೈನಕವಿಗಳೆಲ್ಲಾ ತಮ್ಮ ತಮ್ಮ ಗ್ರಂಥಗಳ ಆದಿಭಾಗದಲ್ಲಿ ವಿಶೇಷವಾಗಿ ಸ್ತುತಿಸಿದ್ದಾರೆ. ಇವರು ಮಣುವಕ ಹಳ್ಳಿಯಲ್ಲಿ ತಪಸ್ಸು ಮಾಡಿದಂತೆ ರಾಜಾವಳೀ ಕಥೆಯಲ್ಲಿ ಹೇಳಿರುವುದರಿಂದ ಕರ್ಣಾಟಕದಲ್ಲಿಯೂ ಕೆಲವು ಕಾಲ ಇವರು ವಾಸ ಮಾಡಿರಬಹುದು. ಸಮಂತಭದ್ರರು ಕನ್ನಡದಲ್ಲಿ ಗ್ರಂಥಗಳನ್ನು ಬರೆದಿದ್ದಾರೆಯೋ ಇಲ್ಲವೋ ತಿಳಿಯದು. ಕರ್ಣಾಟಕ ಸಾಹಿತ್ಯಪ್ರೇಮಿಗಳು ಆಚಾರ್ಯರ ಕನ್ನಡ ಗ್ರಂಥಗಳನ್ನು ಹುಡುಕುವ ಕಡೆಗೂ ಲಕ್ಷ್ಯವನ್ನು ಕೊಡಬೇಕೆಂದು ಪ್ರಾರ್ಥಿಸಿ, ಈ ಲೇಖವನ್ನು ಸಮಾಪ್ತಿಗೊಳಿಸುವೆನು.

ಮನಸ್ಸನ್ನು ದಾಟಿ ವಿಜ್ಞಾನಕ್ಕೆ ಹೋಗುವ ದಾರಿಯಲ್ಲಿ, ವಿಘ್ನಗಳು ಹೆಚ್ಚಾಗಿಯೇ ಕಾಣುವವು. ಪ್ರಾಣ, ಮನ, ಚಿತ್ತ, ದೇಹ ಇವುಗಳ ಒಳಗಿನ ನೀಚವೃತ್ತಿಗಳು ಸಂಪೂರ್ಣವಾಗಿ ಅಳಿದು ಹೋಗುವುದಿಲ್ಲ. ಸಂಧಿ ಸಾಧಿಸಿದರೆ ಅವು ತಿರುಗಿ ಸಾಧಕನನ್ನು ಮುತ್ತಿಕೊಳ್ಳುವವು. ಮನಸ್ಸನ್ನು ಅತಿಕ್ರಮಿಸಿ ಹೋಗುವ ಹೊತ್ತಿನಲ್ಲಿಯೇ ಇವುಗಳ ಪ್ರಬಲವಾದ ಆಕ್ರಮಣದಿಂದ ಸಾಧಕನು ಬೆಪ್ಪಾಗಿ ಹೋಗುವನು. ಒಂದು ಕಡೆಗೆ ಅಶುದ್ಧ ಪ್ರಾಣಶಕ್ತಿಯ ಎಳೆದಾಟ, ಇನ್ನೊಂದು ಕಡೆಗೆ ಶರೀರಭೋಗದ ಕೆಳಗಿನ ತಿಕ್ಕಾಟ; ಮನುಷ್ಯನು ಈ ಅವಸ್ಥೆಯಲ್ಲಿ ದಿಕ್ಕುಗೇಡಿಯಾಗಿ ನಿಲ್ಲುವನು. ಎಷ್ಟೋ ಜನರು ಆತ್ಮಚೈತನ್ಯವನ್ನೇ ಕಳೆದುಕೊಂಡು ಇವುಗಳಿಗೆ ಬಲಿಬಿದ್ದು ಬಿಡುತ್ತಾರೆ. ಕರ್ಮದ ಸಾಧನೆಯು ಒಳ್ಳೇ ಬಲವಾದದ್ದು. ಎಲ್ಲಕ್ಕಿಂತಲೂ ಬಲವಾದದ್ದು. ಈ ಅವಸ್ಥೆಯಲ್ಲಿ ಒಂದು ಜಡಜೀವನದ ವಿಜಯವನ್ನೇ ಗುರಿಯಾಗಿ ಹಿಡಿದು, ಸಾಧಕನು ಯೋಗದ ಮೂಲತತ್ತ್ವಗಳಿಗೆ ಎರವಾಗಿ ಬಿಟ್ಟರೆ ಯೋಗಭ್ರಷ್ಟನಾಗುವ ಸಂಭವವು ಹೆಚ್ಚು.

—ಶ್ರೀಅರವಿಂದರು

CC-0. Jangamwadi Math Collection. Digitized by eGangotri

# ಸಾಮ್ರಾಜ್ಯ ಕರಪದ್ಧತಿ

## ( Imperial Preference )

ಲೇಖಕರು:— ಧೀರ, ಧಾರವಾಡ

ಬ್ರಿಟಿಶರ ಸುಖಸಂಪತ್ತು ನಿಂತುದು ಅವರ ಸಾಮ್ರಾಜ್ಯದ ಮೇಲೆ. ಅವರ ಸಾಮ್ರಾಜ್ಯದ ತಳಹದಿಯು ಅವರ ವ್ಯಾಪಾರದ ಮೇಲೆ. ಜಗತ್ತಿನಲ್ಲಿ ಅವರಿಗೆ ಅಂಗಡಿಕಾರರ ರಾಷ್ಟ್ರವೆಂದು ಆಡಿಕೊಳ್ಳುವ ಪರಿಪಾಠವುಂಟು. ಸ್ವಭಾವದಿಂದ ಉದ್ಯೋಗ–ಪ್ರಿಯರು, ಸಾಹಸಿಗಳು, ಅಭಿಮಾನಿಗಳು. ತಮ್ಮ ಚಿಕ್ಕ ನಡುಗಡ್ಡೆಯಲ್ಲಿ ಚರಿತಾರ್ಥವು ಸಾಗದಂತಾಗಲು ಪರದೇಶಗಳಿಗೆ ಹೋಗಿ, ವ್ಯಾಪಾರವನ್ನು ಮಾಡಿದರು. ಅದರಲ್ಲಿ ಲಾಭವನ್ನು ಪಡೆದು ಅಪಾರ ಸಂಪತ್ತನ್ನು ಗಳಿಸಿದರು. ಮುಂದೆ ಆಯಾ ದೇಶಗಳಲ್ಲಿ ರಾಜಬಲವು ಕಡಿಮೆಯಾಗಿ ತಮ್ಮ ವ್ಯಾಪಾರಕ್ಕೆ ಹಾನಿ ತಟ್ಟಲು, ಆ ದೇಶಗಳನ್ನೇ ಗೆದ್ದು ತಮ್ಮ ಕೈವಶ ಮಾಡಿಕೊಂಡರು. ತಮ್ಮ ವ್ಯಾಪಾರದ ಕ್ಷೇತ್ರವನ್ನು ಭದ್ರ ಮಾಡಿಕೊಂಡರು. ವ್ಯಾಪಾರಸ್ಥರೇ ಬ್ರಿಟಿಶ್ ಸಾಮ್ರಾಜ್ಯದ ಮೂಲ ಪುರುಷರು. ವ್ಯಾಪಾರವೇ ಅದರ ಮೂಲ ಕಾರಣ. ಅವರಿಗೆ ರಾಜ್ಯಲೋಭವಿಲ್ಲ. ದೊಡ್ಡಸ್ತನದ ಹಂಬಲವಿಲ್ಲ. ಅವರದೊಂದೇ ಹುಚ್ಚು—ವ್ಯಾಪಾರ, ಇದೂ ಸ್ವಾಭಾವಿಕವಿದೆ. ಅವರ ದೇಶದ ಸ್ಥಿತಿಯನ್ನೂ, ಅವರ ಉದ್ಯೋಗ–ಉದ್ಯಮಗಳನ್ನೂ ಸೂಕ್ಷ್ಮವಾಗಿ ನಿರೀಕ್ಷಿಸಿದರೆ ಇದರ ಕಾರಣವನ್ನು ಕಾಣಬಹುದು.

ಇತ್ತೀಚಿಗೆ ಸಾಮ್ರಾಜ್ಯಾಂತರ್ಗತ ದೇಶಗಳಲ್ಲಿ ಸ್ವದೇಶ ಪ್ರೀತಿಯು ಹೆಚ್ಚುತ್ತಲಿದೆ. ಸ್ವದೇಶಾಭಿಮಾನವು ಉಕ್ಕೇರಹತ್ತಿದೆ. ಸಾಮ್ರಾಜ್ಯದ ಸಂಕೋಲೆಯು ಶಿಥಿಲವಾಗಹತ್ತಿದೆ. ಮನುಷ್ಯ ಸ್ವಭಾವದ ನಿಜಸ್ವರೂಪವು ಕಂಡು ಬರಹತ್ತಿದೆ. ಸಾಮ್ರಾಜ್ಯಸೂತ್ರದಲ್ಲಿ ಬೇರೆ ಬೇರೆ ದೇಶಗಳಿಗೆ ಸ್ಥಾನವಿಲ್ಲ, ಮರ್ಯಾದೆ ಇಲ್ಲ. ಎಲ್ಲಿಯೋ ಒಂದು ಮೂಲೆಯಲ್ಲಿದ್ದ ಒಂದು ಚಿಕ್ಕ ನಡುಗಡ್ಡೆಯ ಜನರು ಸಕಲ ಸೂತ್ರಗಳನ್ನು ತಮ್ಮ ಕೈಯಲ್ಲಿ ಇಟ್ಟುಕೊಂಡಿರುವರು. ಹೀಗಾಗಿ ಬೇರೆ ದೇಶಗಳಿಗೆ ಅದರ ಅಭಿಮಾನವು ಕಡಿಮೆಯಾಗಿ, ತಮ್ಮ ತಮ್ಮ ದೇಶಗಳ ಸ್ಥಿತಿಯನ್ನು ಊರ್ಜಿತಾವಸ್ಥೆಗೆ ತರುವ ಹಂಬಲವು ಹತ್ತಿತು. ತಮ್ಮ ದೇಶಗಳ ಉದ್ಯೋಗ, ವ್ಯಾಪಾರ, ಕೃಷಿ ಮೊದಲಾದವು ಗಳನ್ನು ಹೆಚ್ಚಿಸತೊಡಗಿದರು. ಇದರಿಂದ ತಮಗೆ ಲಾಭವೊ ಅಲ್ಲಿ ಸಂಧಾನವನ್ನು ಬೆಳೆಸಿದರು. ವ್ಯಾಪಾರವನ್ನು ಹೂಡಿದರು. ತಮ್ಮ ದೇಶದ ಸಂಪತ್ತನ್ನು ಬೆಳೆಸಿದರು. ಇದರಿಂದ ಸಾಮ್ರಾಜ್ಯದ ಸಂಪತ್ತು ಬೆಳೆಯಿತು. ಆದರೆ ಸಾಮ್ರಾಜ್ಯದ ಕೇಂದ್ರಕ್ಕೆ ಇದರಿಂದ ಹಾನಿಯಾಯಿತು. ಅಲ್ಲಿಯ ವ್ಯಾಪಾರವು ಕಡಿಮೆಯಾಯಿತು. ಅಲ್ಲಿಯ ವ್ಯಾಪಾರಸ್ಥರ ಲಾಭವು ಕಡಿಮೆಯಾಯಿತು. ಅಲ್ಲಿಯ ರಾಜಕಾರಣ ಪಟುಗಳಿಗೆ ದಿಗಿಲು ಬಿದ್ದಿತು. ಕಡೆಗೆ ಅವರು ಸಾಮ್ರಾಜ್ಯದ ಎಲ್ಲ ದೇಶಗಳಿಗೆ, ಆದಷ್ಟು ಸಾಮ್ರಾಜ್ಯದಲ್ಲಿಯೇ ತಮ್ಮ ವ್ಯಾಪಾರವನ್ನು ಮಾಡಬೇಕೆಂದು ತಿಳಿಸಿದರು. ಎಲ್ಲರನ್ನು ಒಟ್ಟುಗೂಡಿಸಿ ಇದರ ಮಹತ್ವವನ್ನು ತಿಳಿಹೇಳಿದರು. ಮಹಾಯುದ್ಧದ ನಂತರ ಇಂಥ ಮೂರು ಸಭೆಗಳಾಗಿವೆ. ಮತ್ತು ಈ ಸಾರೆ ಕಾನಡಾ ದೇಶದಲ್ಲಿದ್ದ 'ಒಟಾವಾ' ನಗರದಲ್ಲಿ ಇಂಥ ಸಭೆ ಸೇರತಕ್ಕದ್ದಿದೆ. ಸಾಮ್ರಾಜ್ಯದ ಎಲ್ಲ ದೇಶಗಳ ಪ್ರತಿನಿಧಿಗಳೂ ಬರುವವರಿದ್ದಾರೆ. ಈ ಸಭೆಯಲ್ಲಿ ಚರ್ಚೆಯಾಗುವ ಮುಖ್ಯ ವಿಷಯವೆಂದರೆ 'ಸಾಮ್ರಾಜ್ಯ ಕರಪದ್ಧತಿ.' ಹಿಂದುಸ್ಥಾನದ ಪ್ರತಿನಿಧಿಗಳೂ ಅಲ್ಲಿಗೆ ಹೋಗತಕ್ಕವರು. ಅವರಿಗೆ ಈಗಾಗಲೇ ಈ ಪದ್ಧತಿಗೆ ಒಪ್ಪಿಗೆಯನ್ನು ಕೊಡಲಿಕ್ಕೆ ನಮ್ಮ ಹಿಂದುಸ್ತಾನ ಸರಕಾರದಿಂದ ಶಾಸನವು ಹೋಗಿರುವದಂತೆ. ನಮ್ಮಲ್ಲಿ ಈ ಪದ್ಧತಿಯ ವಿರೋಧಿಗಳೂ ಇದ್ದಾರೆ. ಒಪ್ಪಿಗೆಯಿದ್ದವರೂ ಉಂಟು. ಇಂತಹ ಸಮ್ಮತಿಯಿಂದ ಹಿಂದುಸ್ತಾನದ ಹಿತವಾಗುವದೆ ? ನಮ್ಮ ವ್ಯಾಪಾರವು ಬೆಳೆಯುವದೆ ? ನಮ್ಮ ಸಂಪತ್ತು ಬೆಳೆದು ಸದೃ

CC-0. Jangamwadi Math Collection. Digitized by eGangotri

ಜೀವನವು ಸುಖಮಯವಾಗುವದೆ? ಹೀಗಿದ್ದಲ್ಲಿ ಇದಕ್ಕೆ ನಮ್ಮ ಬೆಂಬಲವನ್ನೀಯಬೇಕು. ಇಲ್ಲವಾದರೆ ನಮ್ಮ ವಿರೋಧವನ್ನು ವ್ಯಕ್ತಪಡಿಸಬೇಕು.

ಸಾಮ್ರಾಜ್ಯ ಕರಪದ್ಧತಿ ( Imperial Preference ) ಎಂದರೆ—ಸಾಮ್ರಾಜ್ಯಾಂತರ್ಗತ ದೇಶಗಳೊಳಗಿನ ಸರಕಾರದವರು ತಂತಮ್ಮ ಉತ್ಪನ್ನದ ಸಲುವಾಗಿಯಾಗಲಿ ಇಲ್ಲವೆ ತಮ್ಮಲ್ಲಿದ್ದ ಉದ್ಯಮಗಳನ್ನು ಪರರಾಷ್ಟ್ರಗಳಲ್ಲಿದ್ದ ಪ್ರಬುದ್ಧ ಉದ್ಯಮಗಳ ಹೊಡೆತದಿಂದ ತಪ್ಪಿಸಲಿಕ್ಕಾಗಲಿ, ಸಂರಕ್ಷಿಸಲಿಕ್ಕಾಗಲಿ, ತಮ್ಮ ದೇಶಗಳಲ್ಲಿ ಸಾಮ್ರಾಜ್ಯದಿಂದ ಬರುವ ಸರಕುಗಳ ಮೇಲೆ ಕೂಡಿಸಿದ ಕರಗಳನ್ನು ಪರಸ್ಪರಸೌಕರ್ಯಭಾವದಿಂದ ಕಡಿಮೆ ಮಾಡಿ ಸಾಮ್ರಾಜ್ಯಬಾಹಿರವಾದ ಇತರ ರಾಷ್ಟ್ರಗಳ ಸರಕುಗಳ ಮೇಲೆ ಹೆಚ್ಚಿಸುವದು. ಇದರಿಂದ ಸಾಮ್ರಾಜ್ಯದ ವ್ಯಾಪಾರವು ಬೆಳೆದು ಸಾಮ್ರಾಜ್ಯದ ಸಂಪತ್ತೂ ಬೆಳೆಯುವದು. ಸಾಮ್ರಾಜ್ಯದ ಕೇಂದ್ರವು ಔದ್ಯೋಗಿಕವಿದ್ದ ಕಾರಣ ಅದಕ್ಕೂ ಇದರಿಂದ ಅಪಾರ ಲಾಭವಾಗುವದು. ಇದು ಸಾಮ್ರಾಜ್ಯ ಕೇಂದ್ರದ ಗತಿಯಾಯಿತು. ಆದರೆ ನಾವು ಸಂಸಾರೊಂದಿಗರು. ಸನ್ಯಾಸಿಗಳಲ್ಲ. ನಮ್ಮ ಗತಿಯೇನು ?

ನಮ್ಮಲ್ಲಿ ಸರಕುಗಳನ್ನು ರೂಪಾಂತರಿಸಿ ಮಾರಾಟ ಮಾಡುವ ದೊಡ್ಡ ಕಾರಖಾನೆಗಳಿಲ್ಲ. ಇಲ್ಲಿ ಪರದೇಶಗಳಿಂದ ಮಾರಾಟಕ್ಕೆ ಬರುವ ವಸ್ತುಗಳೆಲ್ಲವೂ ತಯಾರಾಗಿ ಬಂದುವು. ಇದಕ್ಕೆ ಬದಲಾಗಿ ನಮ್ಮಲ್ಲಿಂದ ಪರದೇಶಗಳಿಗೆ ಹೋಗುವ ವಸ್ತುಗಳೆಲ್ಲವೂ ಅಲ್ಲಿಯ ಕಾರಖಾನೆಗಳ ಉಪಯೋಗಕ್ಕೆ. ಹೀಗಿರಲು ಈ ಹೊಸ ಕರಪದ್ಧತಿಯು ನಮಗೆ ಹಿತವೊ ಎಂದು ಚರ್ಚಿಸಬೇಕಾದರೆ ನಮ್ಮ ದೇಶದ ವ್ಯಾಪಾರದ ಗತಿಯನ್ನು ಪರಿಶೋಧಿಸಬೇಕಾಗುವದು. ನಮ್ಮಲ್ಲಿಂದ ಪ್ರತಿವರ್ಷ ಪರದೇಶಗಳಿಗೆ ಹೋಗುವ ಮಾಲಿನ ಬೆಲೆಯು ಒಟ್ಟು ಸರಾಸರಿ ೩೦ ಕೋಟಿ ರೂಪಾಯಿ. ನಮ್ಮಲ್ಲಿಗೆ ಬರುವ ಮಾಲಿನ ಬೆಲೆಯು ಸರಾಸರಿ ೧೯೦ ಕೋಟಿ ರೂಪಾಯಿ. ಹೊರಗೆ ಹೋಗುವವಮಾಲಿನಲ್ಲಿ ಮುಖ್ಯವಾದವುಗಳೆಂದರೆ, ಸಣಬು, ಅದರಿಂದ ತಯಾರಿಸಿದ ಅರಿವೆ ಮತ್ತು ಚೀಲಗಳು, ಅರಳೆ, ಧಾನ್ಯ—ಮುಖ್ಯತಃ ಅಕ್ಕಿ ಮತ್ತು ಬೇಳೆ, ಹಿಟ್ಟು, ಎಣ್ಣೆಕಾಳು, ಚಹಾ, ಚರ್ಮ, ಎಣ್ಣೆ, ಅರಿವೆ, ಅರಗು ಮೊದಲಾದವು. ನಮ್ಮಲ್ಲಿ ಬರುವ ಮಾಲಿನಲ್ಲಿ ಮುಖ್ಯವಾದವುಗಳೆಂದರೆ ನೂಲು, ನೂಲಿನ ಅರಿವೆ, ಕಬ್ಬಿಣ, ಅದರಿಂದ ತಯಾರಿಸಿದ ವಸ್ತುಗಳು, ಯಂತ್ರಗಳು, ಸಕ್ಕರೆ, ಎಣ್ಣೆ, ಮೋಟಾರ ಗಾಡಿಗಳು, ಉಣ್ಣೆಯ ಅರಿವೆ ಮೊದಲಾದವುಗಳು.

ಇನ್ನು ಈ ವ್ಯಾಪಾರದಲ್ಲಿ ಸಾಮ್ರಾಜ್ಯಕ್ಕೆ ಸಂಬಂಧಿಸಿದುದು ಎಷ್ಟು ಎಂಬುದನ್ನು ನೋಡಬೇಕು. ೧೯೩೮-೩೯ರಲ್ಲಿ ಹಿಂದುಸ್ಥಾನದಿಂದ ಹೊರಗೆಹೋದ ವಸ್ತುಗಳ ವ್ಯಾಪಾರದಲ್ಲಿ ೧೦೦ಕ್ಕೆ ಸರಾಸರಿ ೩೫ರಷ್ಟು ಸಾಮ್ರಾಜ್ಯಕ್ಕೆ ಸಂಬಂಧಪಟ್ಟಿತ್ತು. ಉಳಿದ ೬೫ ರಷ್ಟು ಪರದೇಶದವರದಿತ್ತು. ಅದೇ ವರ್ಷ ಹಿಂದುಸ್ತಾನದಲ್ಲಿ ಬಂದ ಸರಕುಗಳ ವ್ಯಾಪಾರದಲ್ಲಿ ೧೦೦ ಕ್ಕೆ ೫೪ ರಷ್ಟು ಸಾಮ್ರಾಜ್ಯದ್ದಿತ್ತು. ಉಳಿದ ೪೬ ರಷ್ಟು ಪರದೇಶದವರದಿತ್ತು.

ಸಾಮ್ರಾಜ್ಯದ ಎಲ್ಲ ವ್ಯಾಪಾರವನ್ನು ಶಕ್ಯವಿದ್ದಷ್ಟು ಸಾಮ್ರಾಜ್ಯದಲ್ಲಿಟ್ಟು, ಅದರ ವ್ಯಾಪಾರವನ್ನು ಬೆಳೆಯಿಸುವದೇ ಸಾಮ್ರಾಜ್ಯ ಕರಪದ್ಧತಿಯ ಮೂಲ ಉದ್ದೇಶ. ಈ ಉದ್ದೇಶವು ಸಫಲವಾಗಬೇಕಾದರೆ ಸಾಮ್ರಾಜ್ಯದ ಎಲ್ಲ ರಾಷ್ಟ್ರಗಳ ಉದ್ಯಮ ರಚನೆಯು ಒಂದೇ ಮಾದರಿಯದಿರಬೇಕು. ಹಿಂದುಸ್ತಾನದಲ್ಲಿ ಇನ್ನೂ ಮೂಲ ವಸ್ತುಗಳನ್ನು ರೂಪಾಂತರಿಸುವ ಕಾರಖಾನೆಗಳಿಲ್ಲ. ನಮ್ಮ ಉದ್ಯಮವೆಂದರೆ ಕೃಷಿ. ನಮ್ಮ ವ್ಯಾಪಾರವೆಂದರೆ ಮುಖ್ಯತಃ ಕೃಷಿ. ಪರದೇಶಗಳಲ್ಲಿಯ ಕಾರಖಾನೆಗಳಿಗೆ ಬೇಕಾಗುವ ವಸ್ತುಗಳನ್ನು ಬೆಳೆಯಿಸಿ ಅವರಿಗೆ ಕಳುಹಿಸಿ ಕೊಡುವದು. ಅವರು ಅವುಗಳನ್ನು ರೂಪಾಂತರಿಸಿದ ಮೇಲೆ ಅವನ್ನೇ ಮರಳಿ ತರಿಸಿಕೊಳ್ಳುವದು. ಈ ಸ್ಥಿತಿಯಲ್ಲಿ ಈ ಹೊಸ ಯೋಜನೆಯಿಂದ ನಮಗಾಗುವ ಲಾಭವೇನು ? ಇದರಿಂದ ನಮ್ಮ ವ್ಯಾಪಾರವು ಬೆಳೆಯುವದು ಹೇಗೆ ?

ನಮ್ಮಲ್ಲಿಂದ ಹೊರಗೆ ಹೋಗುವ ವಸ್ತುಗಳಲ್ಲಿ ಸಣಬು ಮೊದಲನೆಯದು. ಇದು ಇನ್ನಾವ ದೇಶದಲ್ಲಿಯೂ ಬೆಳೆಯುವದಿಲ್ಲ ಇದರಿಂದ ಅರಿವೆಯನ್ನು ತಯಾರಿಸುವ ಕಾರಖಾನೆಗಳು ಸಾಮ್ರಾಜ್ಯದ ಹೊರಗೆ ಮತ್ತಾವ ದೇಶಗಳಲ್ಲಿಯೂ ಇಲ್ಲ. ಹೊರಗೆ ಹೋಗುವ ಎಲ್ಲ ಸಣಬು ಸ್ಕಾಟ್ಲಂಡಕ್ಕೇ ಹೋಗಬೇಕು. ಅವರು

CC-0. Jangamwadi Math Collection. Digitized by eGangotri

ಇದರ ಮೇಲಿನ ಕರವನ್ನು ಕಡಿಮೆ ಮಾಡಿದರೆ ನಮ್ಮ ಸಣಬಿನ ವ್ಯಾಪಾರವು ಹೇಗೆ ಹೆಚ್ಚಬೇಕು? ಇಂಗ್ಲಂಡಿನ ಎಲ್ಲ ನೂಲುವ ಕಾರಖಾನೆಗಳಿಗೆ, ನಮ್ಮಲ್ಲಿ ಬೆಳೆಯುವ ಹತ್ತಿಗಿಂತ ಮೇಲ್ತರಗತಿಯದಾದ ಅಮೇರಿಕೆಯ, ಇಜಿಪ್ತದ ಹತ್ತಿ ಬೇಕು. ಹತ್ತಿಯ ಮೇಲಿನ ಕರವನ್ನು ಕಡಿಮೆ ಮಾಡಿದರೆ ಅದರ ವ್ಯಾಪಾರವು ಬೆಳೆಯುವದು ಹೇಗೆ? ಅರಗು, ಎಣ್ಣೆಯ ಕಾಳು, ಅಕ್ಕಿ ಇವು ಹಿಂದುಸ್ತಾನದಲ್ಲಿಯೇ ವಿಶೇಷವಾಗಿ ಬೆಳೆಯುವವು; ಮತ್ತು ಸಾಮ್ರಾಜ್ಯಬಾಹಿರವಾದ ರಾಷ್ಟ್ರಗಳಿಗೆ ಹೋಗುವವು. ಸಾಮ್ರಾಜ್ಯವು ಇವುಗಳ ಮೇಲಿನ ಕರವನ್ನು ಕಡಿಮೆ ಮಾಡಿದರೆ, ಸಾಮ್ರಾಜ್ಯವು ಇವುಗಳನ್ನು ನಮ್ಮಿಂದ ಹೆಚ್ಚು ಒಯ್ಯಬಹುದೆ? ಒಯ್ದು ಮಾಡುವದೇನು? ಅವರಲ್ಲಿ ಅವುಗಳ ಕಾರಖಾನೆಗಳೇ ಇಲ್ಲ. ಇನ್ನು ನಮ್ಮಲ್ಲಿ ಬರುವ ಸರಕುಗಳೆಂದರೆ ಅರಿವೆ, ಕಬ್ಬಿಣ, ಕಬ್ಬಿಣದ ಸಾಮಾನುಗಳು, ಯಂತ್ರ ಮುಂತಾದವುಗಳು. ಇವೆಲ್ಲವುಗಳೂ ಮಾರಾಟಕ್ಕೆಂದು ತಯಾರಿಸಿದ ವಸ್ತುಗಳು. ಮುಖ್ಯವಾಗಿ ಇಂಗ್ಲಂಡಿನಿಂದ ಬರುವವು. ನಾವು ಪರರಾಷ್ಟ್ರಗಳ ಸರಕಿನ ಮೇಲಿನ ಕರಕ್ಕಿಂತ ಇವುಗಳ ಮೇಲಿನ ಕರವನ್ನು ಕಡಿಮೆ ಮಾಡಿದರೆ, ಇಂಗ್ಲಂಡಿನಿಂದಲೇ ಹೆಚ್ಚು ಬರುವವು. ಹೊಸ ಕರಪದ್ಧತಿಯ ಉದ್ದೇಶವೇ ಇದು. ಇಂಗ್ಲಂಡಿನ ವ್ಯಾಪಾರವು ಬೆಳೆದು ಅದರ ಲಾಭವಾದರೆ ನಮಗೆ ದುಃಖವಿಲ್ಲ. ಆದರೆ ಅದರಿಂದ ನಮ್ಮ ಲಾಭವೇನು? ಪರಸ್ಪರ ಲಾಭವೇ ಸಾಮ್ರಾಜ್ಯ ಕರಪದ್ಧತಿಯ ಗುಟ್ಟು. ಹಿಂದುಸ್ತಾನದ ಮತ್ತು ಸಾಮ್ರಾಜ್ಯದ ವ್ಯಾಪಾರವನ್ನು ಪರೀಕ್ಷಿಸಲಾಗಿ, ಇದರ ಉಪಯೋಗದಿಂದ ಹಿಂದುಸ್ತಾನಕ್ಕೆ ಲಾಭವಾಗುವದೆಂದು ಯಾರು ಹೇಳಬಲ್ಲರು?

ಹಿಂದುಸ್ತಾನದಿಂದ ಹೊರಗೆ ಹೋಗುವ ವಸ್ತುಗಳೆಲ್ಲವೂ ಮುಖ್ಯವಾಗಿ ಪೇಟೆಗೆ ತಯಾರಿಲ್ಲದವು. ಅವು ಪರದೇಶೀಯ ಕಾರಖಾನೆಗಳಿಗೆ ಅನ್ನ ಮಾತ್ರ. ಅವುಗಳಲ್ಲಿ ಎಷ್ಟೋ ಹಿಂದುಸ್ತಾನದಿಂದಲೇ ಹೋಗಬೇಕು. ಅವು ಇನ್ನೆಲ್ಲಿಯೂ ಬೆಳೆಯುವದಿಲ್ಲ. ಇವುಗಳ ವ್ಯಾಪಾ[ರದಲ್ಲಿ] ಸಾಮ್ರಾಜ್ಯದವರ ಅಂಶವು ಕಡಿಮೆಯಿದೆ. ಸಾಮ್ರಾ[ಜ್ಯ]ದಲ್ಲಿ ಇವುಗಳನ್ನು ಉಪಯೋಗಿಸುವ ಕಾರಖಾನೆ[ಗಳೇ] ಇಲ್ಲ. ಹೊಸ ಕರಪದ್ಧತಿಯನ್ನು ಒಪ್ಪಿಕೊಂಡರೆ ಸಾಮ್ರಾಜ್ಯದಿಂದ ಬರುವ ವಸ್ತುಗಳ ವ್ಯಾಪಾರವು ಬೆಳೆಯು[ವದು] ಎಂದರೆ ಇತರ ದೇಶಗಳ ವ್ಯಾಪಾರವು ಕಡಿಮೆಯಾ[ಗು]ವದು. ಆದರೆ ಸಾಮ್ರಾಜ್ಯಕ್ಕೆ ಹೋಗುವ ವಸ್ತು[ಗಳ] ವ್ಯಾಪಾರವು ಬೆಳೆಯುವಂತಿಲ್ಲ. ಹೀಗಾಗಿ ಈಗಿನ ಪ[ರ]ಸ್ಪರ ವ್ಯಾಪಾರದ ಸಂಬಂಧವು ಶಿಥಿಲವಾಗಲು, ... ಸಾಮ್ರಾಜ್ಯದಿಂದ ಹೆಚ್ಚಿಗೆ ಬರಮಾಡಿಕೊಳ್ಳುವ ವಸ್ತುಗಳ ಕ್ರಯವನ್ನು ಸಲ್ಲಿಸುವದಕ್ಕಾಗಿ ಸಾಮ್ರಾಜ್ಯ[ಬಾಹಿರ]ವಾದ ಇತರ ದೇಶಗಳಿಗೆ ಈ ಪ್ರಮಾಣವನ್ನು ... ಹೆಚ್ಚಿಗೆ ವಸ್ತುಗಳನ್ನು ಮಾರಬೇಕು. ಅವರಿಂದ ನ[ಮಗೆ] ಬರುವ ವಸ್ತುಗಳ ವ್ಯಾಪಾರವು ಕಡಿಮೆಯಾ[ಗುವದು]. ಇದಕ್ಕೆ ಅವರು ಒಪ್ಪಬಹುದೆ? ಒಂದು ವೇಳೆ ... ಬಹುದೆಂದು ತಿಳಿದರೂ, ಮತ್ತೆ ಅದೇ ಪ್ರಶ್ನೆಯು ... ಯುವದು—ಇದರಿಂದ ಪರಸ್ಪರ ಲಾಭವೆಲ್ಲಿದೆ?

ನಾನು ಇದಕ್ಕೂ ಒಂದು ಹೆಜ್ಜೆ ಮುಂದೆ ಹೋಗು[ತ್ತೇನೆ]. ಈ ಹೊಸ ಕರಪದ್ಧತಿಯಿಂದ ಸಾಮ್ರಾಜ್ಯದೊ[ಡನೆ] ಹಿಂದುಸ್ತಾನದ ವ್ಯಾಪಾರವು ಬೆಳೆಯುವದು. ಹಿಂ[ದು]ಸ್ತಾನದ ಸಾಮ್ರಾಜ್ಯಬಾಹಿರ ವ್ಯಾಪಾರವು ಕಡಿ[ಮೆ]ಯಾಗುವದು: ಸಾಮ್ರಾಜ್ಯವ್ಯಾಪಾರದ ಮೇಲಿನ ಕ[ರ]ವನ್ನು ಕಡಿಮೆ ಮಾಡುವದರಿಂದ ಹಿಂದುಸ್ತಾನದ ... ಉತ್ಪನ್ನವು ಕಡಿಮೆಯಾಗುವದು. ಇದರಿಂದ ನಮ[ಗೆ] ಲಾಭವೆ? ನಮಗೆ ಹಿತವೆ? ನಮ್ಮ ಇಂದಿನ ಸ್ಥಿತಿ[ಯಲ್ಲಿ] ಇದಕ್ಕೆ ಒಪ್ಪುವದು ವಿಹಿತವೇ? ಈ ಮಾಟಗಾ[ರ] ಮಾಯೆಗೆ ಮರುಳಾಗದಂತೆ, ಒಟಾವಾ ಸಭೆಗೆ ಹೋಗು[ವ] ಹಿಂದುಸ್ತಾನದ 'ಪ್ರತಿನಿಧಿಗಳು' ಎಚ್ಚರಿರುವ[ರೆ?] ಇಲ್ಲವೆ ಸಕಲ ಸಾಮ್ರಾಜ್ಯ ಸಾಮಂತರ ಸಂಭಾವ[ನೆಯ] ಸಂಭ್ರಮದಲ್ಲಿ ಮೈಮರೆತು, ಅವರು ಹೇಳಿದು[ದಕ್ಕೆ] ತಲೆದೂಗಿ, ಬರೆದುದಕ್ಕೆ ರುಜು ಹಾಕಿ ಬರುವರೋ?

ಭವಿಷ್ಯವು ನನ್ನ ವಿಷಯವಲ್ಲ.

CC-0. Jangamwadi Math Collection. Digitized by eGangotri

# ಪ್ರೇಮಾಪರಾಧ

ಲೇಖಕರು:—ಶ್ರೀ. ಮಂ. ಅ. ದೊರೆಸ್ವಾಮಿ ಅಯ್ಯಂಗಾರ್ಯರು, ಎಂ. ಎ. ಬಿ. ಎಲ್., ಮೈಸೂರು

ಹಿಂದೂ ಚರಿತ್ರೆಯ ದಿವ್ಯ ಯುಗದಲ್ಲಿ ರಾಜನ ನ್ಯಾಯಶಾಲೆಗಳಲ್ಲಿ ವರ್ಣಾಶ್ರಮ ಧರ್ಮವೂ ಶಾಸ್ತ್ರಾಚಾರವೂ ಕಂದುಕುಂದಿಲ್ಲದಂತೆ ಪರಿಪಾಲಿಸಲ್ಪಡುತ್ತಿದ್ದುವು. ಒಂದು ನ್ಯಾಯಶಾಲೆಯಲ್ಲಿ ವಿಚಾರಣೆಗೆ ಬಂದಿದ್ದ ಎರಡು ವ್ಯಾಜ್ಯಗಳ ವೃತ್ತಾಂತವನ್ನು ಕೆಳಗೆ ನಿರೂಪಿಸಿದೆ.

೧

ರಾಮಮಿಶ್ರನೆಂಬ ಬ್ರಾಹ್ಮಣನಿಗೆ ಅತ್ಯಂತ ಕುರೂಪಿಯಾದ ಮಗಳೊಬ್ಬಳು ಹುಟ್ಟಿದಳು. ಶಾಸ್ತ್ರದಲ್ಲಿ ಹೇಳುವಂತೆ ಅವಳಿಗೆ ಎಂಟನೆಯ ವರ್ಷದಲ್ಲೇ ಮದುವೆ ಮಾಡಿ ತಾನು ಧರ್ಮಋಣಮುಕ್ತನಾಗಬೇಕೆಂದು ಮಿಶ್ರನು ಬಹು ಪ್ರಯತ್ನಗಳನ್ನು ನಡೆಸಿದನು. ಎಲ್ಲೆಲ್ಲೂ ವರಾನ್ವೇಷಣೆ ಮಾಡಿದನು. ಬಹು ಜನರ ಕೈಕಾಲು ಕಟ್ಟಿಕೊಂಡನು. ತನ್ನ ವಿತ್ತಾಪಾರವನ್ನೆಲ್ಲಾ ಸಮರ್ಪಿಸಿ ತಾನು ಅವರ ಮನೆಯಲ್ಲಿ ದಾಸನಾಗಿ ದುಡಿಯುವುದಾಗಿ ಸಹ ಹೇಳಿಕೊಂಡನು. ಇವನ ದುರ್ದೈವದಿಂದಲೂ ಹುಡುಗಿಯ ಕುರೂಪದಿಂದಲೂ ಏನೂ ಸಫಲವಾಗಲಿಲ್ಲ. ಯಾವಾಗಲೋ ಒಂದು ಸಲ ರಾಮಮಿಶ್ರನು ತನ್ನ ಜಾತಿಯ ಯಜಮಾನರಿಗೆ ತಲೆಬಾಗಿಸಲಿಲ್ಲ. ಅವರು ಅದನ್ನು ಮನಸ್ಸಿನಲ್ಲಿಟ್ಟು ಯಾರೂ ಇವನ ಮಗಳನ್ನು ತಂದುಕೊಳ್ಳಕೂಡದೆಂದು ಕಿರುಕುಳ ನಡೆಸಿದ್ದರು. ಹಾಗೂ ಹೀಗೂ ಹುಡುಗಿಗೆ ಹದಿನಾಲ್ಕನೆಯ ವರ್ಷ ಪ್ರಾಪ್ತವಾದರೂ ಗಂಡು ದೊರೆಯಲಿಲ್ಲ. ರಾಮಮಿಶ್ರನಿಗೆ ಮನೆಯಲ್ಲಿ ತಾಯಿ, ಹೆಂಡತಿ ಇವರ ದಿನಂಪ್ರತಿಯ ಹಿಂಸೆ ಒಂದು ಕಡೆ, ತನ್ನ ಮನಸ್ಸಿನ ಧರ್ಮಭೀತಿ ಒಂದು ಕಡೆ, ಊರವರ ತೊಂದರೆ ಒಂದು ಕಡೆ, ಇವುಗಳಿಂದ ಪ್ರತ್ಯಕ್ಷ ನರಕಯಾತನೆಯನ್ನು ಈಗಲೇ ಅನುಭವಿಸುತ್ತಲಿದ್ದನು. ಜಾತಿಯವರು ಇವನಿಗೆ ಬಹಿಷ್ಕಾರವನ್ನೇನೋ ಹಾಕಿದರು. ಆದರೆ ಶಾಸ್ತ್ರದಲ್ಲಿ ಹೇಳಿರುವಂತೆ ಹನ್ನೆರಡು ವರ್ಷಕ್ಕೆ ಮೇಲ್ಪಟ್ಟ ಅವಿವಾಹಿತ ಬಾಲಸ್ತ್ರೀಯನ್ನು ಕಣ್ಣುಕಟ್ಟಿ ಕಾಡಿಗೆ ಹೊರಡಿಸಬೇಕೆಂದು ಅವರು ರಾಮಮಿಶ್ರನಿಗೆ ಆಜ್ಞೆ ಮಾಡಿದರು. ರಾಮಮಿಶ್ರನು ಇದಕ್ಕೆ ಒಪ್ಪಲಿಲ್ಲ. ಇದಕ್ಕಾಗಿ ಇವನನ್ನು ಶಿಕ್ಷಿಸಿ ಇವನ ಮಗಳನ್ನು ಕಾಡಿಗೆ ಹೊರಡಿಸಬೇಕೆಂದು ಇವನ ಜಾತಿಯ ಯಜಮಾನರು ರಾಜನ ನ್ಯಾಯಶಾಲೆಯಲ್ಲಿ ಇವನ ಮೇಲೆ ದೂರನ್ನು ತಂದಿದ್ದರು.

ರಾಮಮಿಶ್ರನು ನ್ಯಾಯಶಾಲೆಯಲ್ಲಿ ತನ್ನ ಕಷ್ಟಗಳನ್ನೆಲ್ಲಾ ಮನಸ್ಸು ಕರಗುವಂತೆ ಎಷ್ಟೋ ವಿಧವಾಗಿ ಹೇಳಿಕೊಂಡನು. ಈತನಲ್ಲಿ ತಪ್ಪಿಲ್ಲವೆಂದು ಇವನ ನಿಯೋಗಿಯು (ವಕೀಲನು) ವಾದಿಸಿದನು. ಅಷ್ಟು ವಾದವನ್ನೂ ನ್ಯಾಯಾಧೀಶನು ಒಂದೇ ಒಂದು ಉತ್ತರದಿಂದ ತಳ್ಳಿಬಿಟ್ಟನು. ರಾಮಮಿಶ್ರನು ಮಗಳಿಗೆ ಮದುವೆ ಮಾಡದಿರುವುದು ಅಪರಾಧ ಎಂಬುದು ನಿರ್ವಿವಾದವಾದ ಮಾತು. ಅಪರಾಧವು ಸಿದ್ಧವಾಯಿತೆಂದರೆ ಶಿಕ್ಷಿಸುವುದು ನ್ಯಾಯಶಾಲೆಯವರ ಧರ್ಮವು. ಈ ಅಪರಾಧವು ಯಾವ ಕಾರಣದಿಂದ ಹುಟ್ಟಿತು ? ಅದು ಬುದ್ಧಿಪೂರ್ವಕವೇ ಅಲ್ಲವೇ ? ಎಂಬ ಅಂಶಗಳು ಶುದ್ಧ ಅಪ್ರಕೃತ. ಇದು ಬುದ್ಧಿಪೂರ್ವಕವಾದ ತಪ್ಪಿತವಲ್ಲವೆಂದು ಹೊರಪಡುತ್ತದೆ. ಆದರೆ ಬುದ್ಧಿಪೂರ್ವಕವಾದ ಅಪರಾಧಕ್ಕೆ ಮಾತ್ರ ಶಿಕ್ಷೆ ಕೊಡಬೇಕೆಂದು ಧರ್ಮಶಾಸ್ತ್ರವು ಹೇಳುವುದಿಲ್ಲ. ಈ ಅಪರಾಧಕ್ಕೆ ರಾಮಮಿಶ್ರನ ಪ್ರಾಚೀನ ಕರ್ಮವು ಮುಖ್ಯ ಕಾರಣವಾಗಿದೆ. ಈ ಕರ್ಮದ ಫಲಾನುಭವವನ್ನು ಧರ್ಮಶಾಸ್ತ್ರವು ಶಿಕ್ಷಾರೂಪವಾಗಿ ಇವನಿಗೆ ಕಲ್ಪಿಸುವುದು. ಈ ಕೆಟ್ಟ ಕರ್ಮದ ಪ್ರಾಬಲ್ಯದಿಂದಲೇ ಇವನ ಮಗಳು ಕುರೂಪಿಯಾಗಿ ಹುಟ್ಟಿದಳು. ಯಾರಿಗೂ ಅವಳನ್ನು ತಂದುಕೊಳ್ಳಲು ಮನಸ್ಸು ಬರಲಿಲ್ಲ; ಜಾತಿಯವರೂ ವಿರೋಧಿಗಳಾದರು. ಇದರಿಂದ ಪರರನ್ನು ದೂರಿ ತನ್ನ ಕರ್ಮಫಲವನ್ನು ರಾಮಮಿಶ್ರನು ತಪ್ಪಿಸಿಕೊಳ್ಳಲಾರನು. ಆದಲ್ಲದೆ ಇವನನ್ನು ಶಿಕ್ಷಿಸದೆ

CC-0. Jangamwadi Math Collection. Digitized by eGangotri

ಸಮಾಜದಲ್ಲಿ ಇರಿಸಿಕೊಂಡರೆ ಸಮಾಜವೆಲ್ಲವೂ ಪತಿತ ವಾಗಿ ಬಿಡುವುದು. ಅದನ್ನು ತಪ್ಪಿಸುವುದು ನ್ಯಾಯ ಶಾಲೆಗೆ ಮುಖ್ಯ ಕರ್ತವ್ಯವಾಗಿರುವುದು. ಆದ್ದರಿಂದ ರಾಮಮಿಶ್ರನ ಹುಡುಗಿಯಾದ ಕರಾಳಿಗೆ ಕಣ್ಣುಕಟ್ಟಿ ಘೋರಾರಣ್ಯದಲ್ಲಿ ಬಿಟ್ಟುಬಿಡಬೇಕು. ಈತನ ಆಸ್ತಿಯ ನ್ನೆಲ್ಲಾ ಮುಟ್ಟುಗೋಲು ಹಾಕಿಸಿ ರಾಜಕೋಶಕ್ಕೆ ತೆಗೆದುಕೊಳ್ಳತಕ್ಕದ್ದು. ರಾಮಮಿಶ್ರನು ಹನ್ನೆರಡು ವರ್ಷ ಕಾಲ ಬಂದಿವಾಸವನ್ನು ಅನುಭವಿಸತಕ್ಕದ್ದು. ಜಾತಿಯವರು ವಿಧಿಸತಕ್ಕ ಪ್ರಾಯಶ್ಚಿತ್ತ ಮಾಡಿಸಿ ಕೊಂಡ ಪಕ್ಷ ಅವನ ಮನೆಯವರನ್ನು ಊರಲ್ಲಿ ಇರಿಸಿ ಕೊಳ್ಳಬಹುದು. ಇಲ್ಲವಾದರೆ ಅವರನ್ನು ಮ್ಲೇಚ್ಛ ದೇಶಕ್ಕೆ ಕಳುಹಿಸಿ ಬಿಡಬೇಕು.

೨

ಮತ್ತೊಂದು ವ್ಯಾಜ್ಯವು ಇದಕ್ಕಿಂತಲೂ ಸ್ವಾರಸ್ಯ ವಾಗಿತ್ತು. ರಾಮಮಿಶ್ರನು ಇದ್ದ ಊರಿನಲ್ಲೇ ಕೇಶವ ನೆಂಬ ಬ್ರಾಹ್ಮಣನಿದ್ದನು. ಅವನಿಗೆ ಎಂಟು ಗಂಡು ಮಕ್ಕಳೂ ಆರು ಹೆಣ್ಣು ಮಕ್ಕಳೂ ಇದ್ದರು. ಇವರೆಲ್ಲ ರಿಗೂ ಮದುವೆಯಾಗಿತ್ತು. ಮೊದಲನೆಯ ಆರು ಗಂಡು ಮಕ್ಕಳಿಗೂ ಐದು ಹೆಣ್ಣು ಮಕ್ಕಳಿಗೂ ಮಕ್ಕಳಾಗಿ ದ್ದುವು. ಕೇಶವನು ಸ್ವಲ್ಪ ಸಂಪನ್ನನಾದುದರಿಂದ ತನ್ನ ಅಳಿಯಂದಿರ ಸಂಸಾರವನ್ನೂ ತಾನೇ ನಡೆಸುತ್ತಿದ್ದನು. ಇವರೆಲ್ಲರ ಸಂತತಿಯಲ್ಲದೆ ಕೇಶವನ ಮೂವರು ಅವಿ ಭಕ್ತ ತಮ್ಮಂದಿರ ವಂಶಗಳೂ ಇಬ್ಬರು ಅಕ್ಕಂದಿರ ವಂಶ ಗಳೂ ಈ ಮನೆಯಲ್ಲೇ ಇರುತ್ತಿದ್ದುವು. ಕೇಶವನ ಮನೆಯಲ್ಲಿ ಒಂದು ಹೊತ್ತಿಗೆ ಇನ್ನೂರು ಎಲೆ ಹಾಕು ತ್ತಿದ್ದರು. ಮನೆಯಲ್ಲಿ ಸೊಳ್ಳೆಯ ಸುಳುವಿಗೂ ಅವ ಕಾಶವಿಲ್ಲದಂತೆ ಜನರು ತುಂಬಿದ್ದರು. ತಲೆತಲಾಂತರ ದಿಂದಲೂ ಈ ಮನೆಯಲ್ಲಿ ಸಂಸಾರವು ಹೀಗೆಯೇ ತುಂಬಿ ನಡೆದುಕೊಂಡು ಬರುತ್ತಿದ್ದಿತೆಂದು ಈ ಮನೆಗೆ ಪ್ರಖ್ಯಾತಿ ಇದ್ದಿತು; ಇಂಥಾ ಪ್ರಚಂಡ ಸಂಸಾರದಲ್ಲಿ ಯಾವಾ ಗಲೂ ಒಡಕು ಹುಟ್ಟಿರಲಿಲ್ಲ. ಆದರೆ ಈ ಪ್ರಶಾಂತ ನಿಶ್ಚಲ ಪರಿಸ್ಥಿತಿಯಲ್ಲಿ ಕೇಶವನ ಏಳನೆಯ ಮಗನಾದ ಮಾಧವನು ಹಠಾತ್ತಾಗಿ ಒಂದು ಬಿರುಗಾಳಿಯನ್ನೆಬ್ಬಿಸಿ ದನು.

ಮಾಧವನು ಮನೋವ್ಯೋಹಕರೂಪಿಯು. ಬಾಲ್ಯ ದಿಂದಲೂ ಮುದ್ದು ಮುದ್ದಾಗಿ ಬೆಳೆದವನು. ಹುಟ್ಟಿದಾ ಗಿನಿಂದಲೂ ಸಂಗೀತವೆಂದರೆ ಪ್ರಾಣ ಬಿಡುತ್ತಿದ್ದನು. ಶಾಸ್ತ್ರ ವ್ಯಾಸಂಗವು ಇವನ ತಲೆಗೆ ಹತ್ತಲಿಲ್ಲ. ಕಾವ್ಯ ಸಾಹಿತ್ಯವನ್ನು ಚೆನ್ನಾಗಿ ಓದಿ ರಸಿಕಶ್ರೇಷ್ಠನಾಗಿದ್ದನು. ಇವನಿಗೆ ತನ್ನ ಕಡೆಯ ಹೆಣ್ಣು ತರಬೇಕೆಂದು ಇವನ ತಾಯಿ ಕಮಲಾವತಿಯು ಪ್ರಯತ್ನಪಟ್ಟಳು. ಅವಳು ಗೊತ್ತು ಮಾಡಿದ್ದ ನಾಲ್ಕು ಹುಡುಗಿಯರನ್ನೂ ಮಾಧ ವನು ಒಪ್ಪಲಿಲ್ಲ. ಅವನ ಮೇಲಿನ ಮೋಹದಿಂದ ಕೇಶ ವನು ಬಲವಂತ ಮಾಡದೆ ಹೆಂಡತಿಯ ಹಠವನ್ನು ಭಂಗ ಪಡಿಸಿದನು. ಅನಂತರ ಇವನ ವಿವಾಹಕಾರ್ಯಕ್ಕಾಗಿ ಕೇಶವನ ಪ್ರಯತ್ನಗಳಿಗೆ ಆರಂಭವಾಯಿತು. ಕೇಶವನು ಒಂದಾದ ಮೇಲೆ ಒಂದರಂತೆ ಹದಿನಾರು ಹೆಣ್ಣುಗಳನ್ನು ಆರಿಸಿದನು. ಹುಡುಗನು ಒಂದನ್ನೂ ಒಪ್ಪಲಿಲ್ಲ. ಇದ ರಿಂದ ತಂದೆಗೆ ಬಹಳ ಕೋಪ ಬಂದಿತು. ಆದರೆ ಅವನ ಹೆಂಡತಿಯು ಈಗ ಹುಡುಗನ ಕಡೆ ವಹಿಸಿಕೊಂಡು ತನ್ನ ಮುಯ್ಯಿ ತೀರಿಸಿಕೊಂಡಳು. ಅಂತೂ ಇಂತೂ ಆ ಊರಿ ನಲ್ಲಿದ್ದ ಯಾವ ಹೆಣ್ಣೂ ಮಾಧವನಿಗೆ ಬೇಡವಾಯಿತು. ಇವನ ಮನೆಯವರಿಗಲ್ಲದೆ ಊರವರಿಗೂ ಇವನ ಮೇಲೆ ಆಕ್ರೋಶವುಂಟಾಯಿತು. ಮಾಧವನು ಎಲ್ಲರ ಇಷ್ಟಕ್ಕೆ ವಿರುದ್ಧವಾಗಿ ನೆರೆಯೂರಲ್ಲಿದ್ದ ಮುರಾರಿ ಶ್ರೀಮಂತನ ಮಗಳಾದ ರಾಧೆಯನ್ನು ವಿವಾಹವಾದನು.

ಸುತ್ತುಮುತ್ತಿಗೆಲ್ಲಾ ಮುರಾರಿಯು ದೊಡ್ಡ ಸಾಹು ಕಾರನಾಗಿದ್ದನು. ರಾಧೆಯು ಅವನ ಏಕಮಾತ್ರ ಸಂತಾನಳು. ಹುಡುಗಿಯು ಪರಮಸುಂದರಿ, ಅತ್ಯಂತ ಸುಶೀಲೆ. ತಂದೆಯು ಇವಳಿಗೆ ಮನೆಯಲ್ಲಿ ಚೆನ್ನಾಗಿ ವಿದ್ಯಾಭ್ಯಾಸ ಮಾಡಿಸಿದ್ದನು. ಆ ಊರಿನ ಜಾತ್ರೆಗಾಗಿ ಆಗಾಗ್ಗೆ ಹೋಗಿ ಬರುತ್ತಿದ್ದ ಮಾಧವನು ಅವಳ ಮೋಹಗೊಂಡು ಅವಳನ್ನು ಹೊರತು ಮತ್ತಾರನ್ನೂ ವಿವಾಹವಾಗುವುದಿಲ್ಲವೆಂದು ಹಠ ಹಿಡಿದು ಜಯಶೀಲ ನಾದನು. ಪರಸ್ಥಳದ ಅಣ್ಣ ತಮ್ಮಂದಿರಿಲ್ಲದ ಹುಡುಗಿ ಯನ್ನು ತರಲು ಮಾಧವನ ತಂದೆತಾಯಿಗಳಿಗೆ ಇಷ್ಟವಿ ರಲಿಲ್ಲ. ಮಾಧವನ ಒಡಹುಟ್ಟಿದವರಿಗೂ ಈ ಹೊಸ ಕಲಿತ ರೂಪವತಿಯನ್ನು ಮನೆಗೆ ಸೇರಿಸಲು ಮನಸ್ಸಿ ಲ್ಲಿಲ್ಲ. ಈ ಸರ್ವತೋಮುಖವಾದ ವಿರೋಧವನ್ನು ಉಪಾಯವನ್ನು ನಿವಾರಿಸಲು ಹುಡುಗನು ಒಂದು

CC-0. Jangamwadi Math Collection. Digitized by eGangotri

ಹೂಡಿದನು. ಈ ಹುಡುಗಿಯನ್ನು ಮದುವೆ ಮಾಡದಿದ್ದರೆ ತಾನು ಸನ್ಯಾಸ ತೆಗೆದುಕೊಳ್ಳುವುದಾಗಿ ಹೆದರಿಸಿ ಬಂದು ಮಠಕ್ಕೆ ಓಡಿ ಹೋದನು. ಆಗ ಹೆತ್ತ ಕರುಳು ಕರಗಿ ತಂದೆತಾಯಿಗಳು ಹುಡುಗನನ್ನು ಕರೆತಂದು ಮದುವೆ ನಡೆಸಿದರು. ಆದರೆ ಅದಕ್ಕೆ ಪೂರ್ವದಲ್ಲಿ ಮಾಧವನಿಂದ ಒಂದು ಪ್ರತಿಜ್ಞೆಯನ್ನು ಮಾಡಿಸಿಕೊಂಡಿದ್ದರು. ಮಾಧವನು ಇತರರಂತೆ ಶಾಸ್ತ್ರವು ಹೇಳತಕ್ಕ ಧರ್ಮಪರಿಪಾಲನೆಗಾಗಿ ವಿವಾಹವಾಗುವುದಾಗಿಯೂ ಪ್ರೇಮಕ್ಕಾಗಿ ವಿವಾಹವಾಗುವುದಿಲ್ಲವೆಂದೂ ತನ್ನ ಮನೆಯವರಿಗೂ ಜಾತಿಯವರಿಗೂ ಪ್ರತಿಜ್ಞೆ ಮಾಡಿ ಕೊಡಬೇಕಾಯಿತು. ಸ್ವಲ್ಪ ಕಾಲದಲ್ಲೇ ನಿಷೇಕವೂ ನಡೆಯಿತು. ಅಳಿಯನನ್ನು ಅವನ ತಂದೆಯು ದೊಂಬಿ ರಾಜ್ಯದಿಂದ ಕರೆತಂದು ತನ್ನ ಮನೆಯಲ್ಲಿರಿಸಿಕೊಳ್ಳಬೇಕೆಂದು ಮುರಾರಿಮಿಶ್ರನು ಸಾಹಸಪಟ್ಟನು. ಅವನು ಆ ಮಾತನ್ನೆತ್ತಿದರೆ ಅವನ ಹುಡುಗಿಯನ್ನು ಪರಿತ್ಯಜಿಸಿ ಹುಡುಗನಿಗೆ ಬೇರೆ ಲಗ್ನ ಮಾಡುವುದಾಗಿ ಮಾಧವನ ಮನೆಯವರು ಹೆದರಿಸಿದ್ದರಿಂದ ಮುರಾರಿಯು ಸುಮ್ಮನಾಗಬೇಕಾಯಿತು.

ಮನೆಗೆ ಬಂದ ಮೇಲೆ ರಾಧೆಗೂ ಅವಳ ಗಂಡನಿಗೂ ಏಕಾಂತಮುಖಾವಲೋಕನಕ್ಕೆ ಅವಕಾಶವನ್ನು ತಪ್ಪಿಸಿ ಉಭಯರಿಗೂ ವಿರಸವನ್ನು ಮಾಡಲು ಮದ್ದಿಕ್ಕುವುದರಿಂದ ಹಿಡಿದು ಮಂತ್ರ ಹಾಕಿಸುವುದರ ವರೆಗೂ ಪ್ರಯತ್ನಗಳು ನಡೆದವು. ಗಂಡಹೆಂಡಿರು ತಾವೇ ಗೃಹಸ್ವಾಮಿಗಳಾಗುವವರೆಗೂ ಇತರ ದೊಡ್ಡವರ ಮುಂದೆ ಸಂಭಾಷಣೆ ಮಾಡುವುದು ಆಚಾರಕ್ಕೆ ವಿರುದ್ಧವೆಂದು ಮಾಧವನಿಗೆ ಧರ್ಮೋಪದೇಶಕ್ಕೆ ಆರಂಭವಾಯಿತು. ಹಗಲಲ್ಲಿ ಗಂಡನನ್ನು ಕಣ್ಣೆತ್ತಿ ನೋಡುವುದು ಧರ್ಮಸಂಪ್ರದಾಯಕ್ಕೆ ವಿರುದ್ಧವೆಂದು ಮನೆಯ ಹೆಂಗಸರೆಲ್ಲರೂ ರಾಧೆಗೆ ಸದಾ ಎಚ್ಚರ ಕೊಡುತ್ತ ಅವಳು ಆ ವಿಚಾರದಲ್ಲಿ ಅನಾಚಾರ ಮಾಡದಂತೆ ಕಾವಲಿರತೊಡಗಿದರು. ನಿಷೇಕವಾದ ಮೂರನೆಯ ದಿವಸದಿಂದ ಮಾಧವನಿಗೆ ಮಲಗುವುದಕ್ಕೆ ಪ್ರತ್ಯೇಕವಾದ ಕೊಠಡಿ ಸಹ ದೊರೆಯಲಿಲ್ಲ.

ಹೀಗೆ ಕೇಶವನ ಮನೆಯವರು ಇಷ್ಟು ಸಮಕಟ್ಟಿನಿಂದ ಧರ್ಮವನ್ನು ಸಂರಕ್ಷಿಸುತ್ತಿದ್ದರೂ ಆ ದುರುಳನಾದ ಮನ್ಮಥನು ಇವರ ಚಕ್ರವ್ಯೂಹವನ್ನು ಕಳ್ಳಕಿಂಡಿಯಿಂದ ಪ್ರವೇಶಿಸಿ ಕೋಲಾಹಲವನ್ನು ನಡೆಸಿದನು. ಇವರ ಪ್ರಯತ್ನಗಳು ಹೆಚ್ಚುತ್ತಾ ಹೋದ ಹಾಗೆ ರಾಧಾ ಮಾಧವರಲ್ಲಿ ಪ್ರೇಮವು ಹುಟ್ಟಿ ಅಪ್ರತಿಹತವಾಗಿ ವೃದ್ಧಿಯನ್ನು ಪಡೆಯುತ್ತಾ ಬಂದಿತು. ಇದನ್ನು ತಡೆಯಲು ಯಾರಿಗೆ ಆದೀತು ? ಸ್ವಲ್ಪ ಕಾಲ ಕಳೆದ ಬಳಿಕ ಮಾಧವನು ಹಳೆಯ ಸಂಪ್ರದಾಯಗಳನ್ನೂ ಲಜ್ಜಾಭಾವವನ್ನೂ ಲೆಕ್ಕಿಸದೆ ಮೇಲ್ವರಿದು ತನ್ನ ಪ್ರಿಯೆಯೊಡನೆ ಸರಸಲ್ಲಾಪಗಳಿಗೆ ತೊಡಗಿದನು. ಇದಕ್ಕೆ ಮನೆಯಲ್ಲಿದ್ದ ಚಿಕ್ಕ ಮಕ್ಕಳ ತಂಡವೆಲ್ಲವೂ ಸಹಾಯಕ್ಕೆ ನಿಂತಿತು. ತಮ್ಮ ಮಕ್ಕಳೆಲ್ಲವೂ ಈ ಕೆಟ್ಟ ಚಾಳಿಯವಳಿಂದ ಕೆಟ್ಟು ನಾಶವಾಗುತ್ತಿವೆ ಎಂದು ಮಾಧವನ ಒಡಹುಟ್ಟಿದವರೆಲ್ಲರೂ ಜಗಳ ತೆಗೆದರು. ಆದರೆ ಮನೆಯವರು ಏನು ಮಾಡಿದರೂ ಮಾಧವನ ಕೈಲಿ ಹೆಂಡತಿಯನ್ನು ಪ್ರೀತಿಸದಂತೆ ಮಾಡಿಸಲು ಆಗಲಿಲ್ಲ.

ಆಗ ಮನೆಯವರು ತಮ್ಮ ಜಾತಿಯವರನ್ನೂ ಮತ್ತು ಊರವರನ್ನೂ ಪಂಚಾಯತಿ ಸೇರಿಸಿ ಮಾಧವನ ಪ್ರತಿಜ್ಞಾಭಂಗವನ್ನು ನಿರೂಪಿಸಿ ಅವನನ್ನು ಅಂಕೆಗೆ ತರುವಂತೆ ಕೇಳಿಕೊಂಡರು. ಇವನು ಪ್ರತಿಜ್ಞಾಹೀನನಾದ್ದರಿಂದ ಇವನಿಗೆ ಬಹಿಷ್ಕಾರ ಹಾಕಬೇಕೆಂದು ಕೆಲವರು ಹೇಳಿದರು. ಗಂಡನಿಗೆ ಹೀಗೆ ಬಹಿಷ್ಕಾರ ಹಾಕಿದರೆ ಹೆಂಡತಿಗೂ ಹಾಕಬೇಕಾಗುತ್ತದೆಂದೂ ಆಗ ಅವರಿಬ್ಬರೂ ಧನಾಢ್ಯನಾದ ಮುರಾರಿಮಿಶ್ರನ ಸಹಾಯದಿಂದ ಒಂದಾಗಿ ಸೇರುವರೆಂದೂ ಇತರರು ತಿಳಿಸಿದರು. ಇದನ್ನು ಕೇಳಿ ಜಾತಿಯವರೂ ಊರವರೂ ಮಂಕಾದರು. ಬಹಿಷ್ಕಾರದಿಂದ ಬಯಸಿದುದೆಲ್ಲವೂ ನೆರವೇರುವುದು ಎಂದು ಇವರು ನಂಬಿದ್ದರು. ಆದರೆ ಈ ರಾಮಬಾಣವು ಈ ದಂಪತಿಗಳ ಮನಸ್ಸನ್ನು ಕದಲಿಸಲಾರದು ಎಂದು ತಿಳಿದು ಇವರಿಗೆ ಹೆದರಿಕೆ ಹುಟ್ಟಿತು. ಒಡನೆಯೇ ಎಲ್ಲರಿಗೂ ಉದಾಹರಣೆಯಾಗುವಂತೆ ಇವರಿಗೆ ತಕ್ಕ ಶಾಸ್ತಿ ಮಾಡದೆ ಹೋದರೆ ತರುಣ ಜನತೆಯು ತಮ್ಮ ಕೈಮೀರುವದೆಂದು ಆ ಸಭೆಯಲ್ಲಿ ನೆರೆದಿದ್ದ ವೃದ್ಧರೆಲ್ಲರೂ ಆತಂಕಪೂರ್ವಕವಾದ ಭಾಷಣಗಳನ್ನು ಮಾಡಿದರು. ಕಡೆಗೆ ಮಾಧವನ ಮೇಲೆ ಅವನ ಮನೆಯವರು ರಾಜನ ನ್ಯಾಯಶಾಲೆಯಲ್ಲಿ ದೂರು ಹೇಳಿ ತಕ್ಕ ಶಿಕ್ಷೆ ಮಾಡಿಸಬೇಕೆಂದು ಅಪ್ಪಣೆಯಾಯಿತು.

ಮನೆಯವರೂ ಜಾತಿಯವರೂ ಊರವರೂ ಸಕಲ ಸಲಕರಣೆಗಳೊಡನೆ ಅದ್ವಿತೀಯ ಪಂಡಿತನಾದ ಬಾದರಾ

CC-0. Jangamwadi Math Collection. Digitized by eGangotri

ಯಣನನ್ನು ನಿಯೋಗಿಯಾಗಿ ಮಾಡಿ ಮುಂದಿಟ್ಟು ಕೊಂಡು ಮಾಧವನ ಮೇಲೆ ನ್ಯಾಯಶಾಲೆಯಲ್ಲಿ ಅಪ ರಾಧಾರೋಪವನ್ನು ಮಾಡಿದರು. ಮಾಧವನ ಸಂಗಾತಿ ಯಾಗಿದ್ದ ಶ್ರೀಧರನು ಮುರಾರಿಮಿಶ್ರನ ಪ್ರಯತ್ನ ದಿಂದ ಮಾಧವನಿಗೆ ನಿಯೋಗಿಯಾಗಿ ನಿಂತನು.

ನ್ಯಾಯಮೂರ್ತಿ—ಈ ಹುಡುಗನ ಮೇಲೆ ತಂದಿ ರುವ ಆಪಾದನೆ ಏನು ?

ಬಾದರಾಯಣ—ಇವನು ತನ್ನ ಪ್ರತಿಜ್ಞೆಗೆ ವಿರೋಧ ವಾಗಿ ತನ್ನ ಹೆಂಡತಿಯನ್ನು ಪ್ರೀತಿಸಲು ಪ್ರಾರಂಭ ಮಾಡಿರುವನು. ಈ ಸಣ್ಣ ವಯಸ್ಸಿನಲ್ಲೇ ಮಾಧವನು ಕುಲಪಾತಕಿಯೂ ಧರ್ಮದ್ರೋಹಿಯೂ ಸಮಾಜಕಂಟ ಕನೂ ಕೃತಘ್ನನೂ ಪಿತೃದ್ರೋಹಿಯೂ ವಚನಭ್ರಷ್ಟನೂ ಆಗಿಬಿಟ್ಟಿರುವನು. ಗಂಡನು ಹೆಂಡತಿಯನ್ನು ಪ್ರೀತಿಸು ವುದಕ್ಕಿಂತಲೂ ಘೋರವಾದ ಅಪರಾಧವು ಮತ್ತಾವು ದುಂಟು ? ಇಂಥಾ ಸಂಗತಿಯನ್ನು ಬ್ರಹ್ಮಸೃಷ್ಟಿಯಲ್ಲಿ ಇದುವರೆಗೂ ಯಾರೂ ಕಂಡು ಕೇಳಿದ್ದಿಲ್ಲ. ಸಕಲ ಶಾಸ್ತ್ರಗಳೂ ಇದನ್ನು ವಿರೋಧಿಸುತ್ತಿವೆ.

ಶ್ರೀಧರ—ನಿಮಗೆಲ್ಲರಿಗೂ ಪ್ರೇಮದ ಪರಿಚಯವೇ ಇಲ್ಲದಿದ್ದರೆ ಈ ಹುಡುಗನ ಕೃತ್ಯವನ್ನು ತಪ್ಪೆಂದು ಹೇಗೆ ಕಂಡು ಹಿಡಿದಿರಿ ? ಶಾಸ್ತ್ರಕಾರರಿಗೆ ಪ್ರೇಮದ ತಿಳುವಳಿಕೆ ಇಲ್ಲದಿದ್ದರೆ ಅದನ್ನು ಅವರು ವಿರೋಧಿಸಿರಲಾರರು. ಅವರು ವಿರೋಧಿಸಿದ್ದಾರೆಂಬುದು ಬಾದರಾಯಣನಂತಹ ಕುಹಕಿಗಳ ಅಪಾರ್ಥವೆನ್ನಬೇಕು. ನಮ್ಮ ಕಾಳಿದಾಸಾದಿ ಕವಿಗಳ ಗ್ರಂಥಗಳಲ್ಲಿಯೂ ಪುರಾಣಗಳಲ್ಲಿಯೂ ಇತಿಹಾಸಗಳಲ್ಲಿಯೂ ಪ್ರೇಮದ ಕಥೆಯೇ ಸರ್ವತ್ರ ತುಂಬಿದೆ. ರಾಮಾಯಣವೆಲ್ಲವೂ ಸೀತಾರಾಮರ ಪ್ರಣಯವೃತ್ತಾಂತವಾಗಿದೆ. ಶ್ರೀ ಕೃಷ್ಣನು ಶುದ್ಧ ಪ್ರೇಮಮೂರ್ತಿಯಾಗಿರುವನು. ರಾಮಕೃಷ್ಣಾದಿಗಳಂತೆ ಆಚರಿಸಲು ಪ್ರಯತ್ನಿಸಿದ ಈ ಮಾಧವನು ಹೇಗೆ ಶಿಕ್ಷಾರ್ಹನಾಗುವನು ?

ಬಾದ—ನಮ್ಮ ದೇಶದ ಸಂಪ್ರದಾಯದಲ್ಲಿ ಪ್ರೇಮ ಚಿತ್ರವು ಕಲ್ಪನಾ ಪ್ರಪಂಚಕ್ಕೆ ಸೇರಿದ್ದು, ಯಥಾರ್ಥ ಜೀವನದಲ್ಲಿ ಅದಕ್ಕೆ ಸ್ಥಳವಿಲ್ಲ. ಈ ಹುಡುಗನು ಬರಿ ಊಹೆಯಲ್ಲೂ ಕನಸಿನಲ್ಲೂ ಹೆಂಡತಿಯನ್ನು ಪ್ರೀತಿಸಲು ನಮ್ಮ ಅಡ್ಡಿ ಇಲ್ಲ. ಕವಿಗಳ ಕಾಲ್ಪನಿಕ ಕಥೆಯಂತೆ ಯಥಾರ್ಥ ಜೀವನದಲ್ಲಿ ನಡೆಯ ತೊಡಗಿದರೆ ಮನುಷ್ಯ ಸಮಾಜವು ಅರಗಳಿಗೆಯಲ್ಲಿ ಧೂಳೀಪಟವಾಗುವುದು. ದೇವಾಂಶಪುರುಷರಾದ ರಾಮಕೃಷ್ಣಾದಿಗಳಲ್ಲಿ ರಾಕ್ಷಸ ನಿಗ್ರಹಾದಿ ಕಾರ್ಯಗಳಂತೆ ಪ್ರೇಮಲೀಲೆಯೂ ಒಂದು ಅತಿಮಾನುಷಕೃತ್ಯವಾಗಿ ಮಾತ್ರ ಗೋಚರಿಸುತ್ತಿದೆ. ಅದನ್ನು ಪ್ರಾಕೃತ ಮನುಷ್ಯನು ಅನುಸರಿಸುವುದು ಅಸಾಧ್ಯ. ಪ್ರಾಕೃತ ಮನುಷ್ಯರ ದಿನಚರಿಯ ಜೀವನ ವನ್ನು ಧರ್ಮಶಾಸ್ತ್ರವು ವಿಧಾಯಕಪಡಿಸುವುದೇ ಹೊರತು ಸಾಹಿತ್ಯವಲ್ಲ. ಈ ಶಾಸ್ತ್ರವಿಧಿಗಳನ್ನು ತರು ಣರು ಪ್ರೇಮದ ಕತ್ತರಿಯಿಂದ ಕಡಿದು ಹಾಕಿದರೆ ನಾವು ಸುಮ್ಮನಿರಲಾದೀತೇ ?

ಶ್ರೀ—ಗಂಡಹೆಂಡಿರು ಪರಸ್ಪರರನ್ನು ಪ್ರೀತಿಸ ಕೂಡದು ಎಂದು ಯಾವುದಾದರೂ ಸ್ಪಷ್ಟವಾದ ಧರ್ಮ ಶಾಸ್ತ್ರ ವಚನವು ಇದೆಯೇ ?

ಬಾದ—ಇಲ್ಲ. ಆದರೆ ಸಕಲ ಶಾಸ್ತ್ರವೂ ದಂಪತಿ ಪ್ರೇಮವಿರೋಧವಾಗಿ ವ್ಯವಸ್ಥೆಗೊಂಡಿದೆ.

ನ್ಯಾಯ—ಅದನ್ನು ವಿವರಿಸಿ ಸ್ಪಷ್ಟಪಡಿಸು.

ಬಾದ—ನಮ್ಮ ಜ್ಞಾನ ಶಾಸ್ತ್ರವು ಸ್ತ್ರೀಸುಖವನ್ನೂ ಸಂಸಾರವನ್ನೂ ನಿಷೇಧಿಸಿರುವುದು. ಭಕ್ತಿಶಾಸ್ತ್ರವು ಸಕಲ ಪ್ರೇಮಕ್ಕೂ ದೇವರೊಬ್ಬನು ಮಾತ್ರವೇ ಗುರಿ ಎಂದು ಸಾರುತ್ತಿರುವುದು.

ನ್ಯಾಯ—ಈ ಶಾಸ್ತ್ರಗಳ ವಿಚಾರವು ನನ್ನ ಸೀಮೆಗೆ ಸಾಕ್ಷಾತ್ತಾಗಿ ಸೇರಿಲ್ಲ. ಕರ್ಮಶಾಸ್ತ್ರದ ಸಂಗತಿಯನ್ನು ಮಾತ್ರ ನೀನು ತಿಳಿಸು.

ಬಾದ—ಹಾಗೆಯೇ ಆಗಲಿ. ವ್ಯಕ್ತಿಯು ಜೀವಿಸಿರುವ ದಿನಗಳಷ್ಟಕ್ಕೂ ಪ್ರತಿದಿವಸದ ಅರವತ್ತು ಗಳಿಗೆಯೂ ಅವನು ಇಂತಿಂತಹ ಕರ್ಮಗಳನ್ನೇ ಮಾಡಬೇಕು, ಹೀಗೆಯೇ ವರ್ತಿಸಬೇಕು ಎಂದು ಧರ್ಮಶಾಸ್ತ್ರವು ವಿಧಾಯಕಪಡಿಸಿದೆ. ಇಷ್ಟೊಂದು ವಿಧಿಗಳನ್ನೂ ಯೌವನ ಮದಾಂಧರು ತಳ್ಳಿಬಿಟ್ಟು ಹೆಂಡತಿಯ ಸರಸಸಂಗದಲ್ಲಿ ವಿಹರಿಸತೊಡಗಿದರೆ ಧರ್ಮಶಾಸ್ತ್ರದ ಗತಿಏನಾಗಬೇಕು? ಧರ್ಮಕ್ಕಿಂತಲೂ ಕಾಮವು ದೊಡ್ಡ ಪುರುಷಾರ್ಥವಾದರೆ ಲೋಕವು ಉಳಿಯುವುದೇ ? ಕಾಮುಕನು ಯಾವ ಪಾಪಕ್ಕೆ ಹೆದರುವನು ? ಯಾವ ಪಾತಕಕ್ಕೆ ಹೇಸು ವನು ? ಸರ್ವದಾ ಹೆಂಡತಿಯ ಮುಂದೆ ನಲಿದಾಡುತ್ತಿ

CC-0. Jangamwadi Math Collection. Digitized by eGangotri

ರುವವನು ಇಂದ್ರಿಯ ನಿಗ್ರಹವನ್ನು ಹೇಗೆ ಕಲಿಯ
ಬಲ್ಲನು ? ನಮ್ಮ ಶಾಸ್ತ್ರವು ವಿವಾಹಕ್ಕೆ ವೈರಿಯಲ್ಲ.
ವಿವಾಹವು ಧರ್ಮಾರ್ಥವಾಗಿ ನಡೆಯತಕ್ಕ ಪವಿತ್ರ
ಸಂಸ್ಕಾರವೇ ಹೊರತು ರತ್ಯರ್ಥವಾದ ಭೋಗಸಾಧನ
ವಲ್ಲ. ವಿವಾಹವು ವ್ಯಕ್ತಿಗಳ ಧರ್ಮಕರ್ತವ್ಯಗಳನ್ನು
ಹೆಚ್ಚಿಸುವ ಮಾರ್ಗವಲ್ಲದೆ ಅಪರ ಇಂದ್ರಿಯ ಸುಖವನ್ನು
ಒದಗಿಸತಕ್ಕ ಉಪಾಯವಲ್ಲ. ನಮ್ಮ ಸನಾತನ ಆರ್ಯ
ಸಮಾಜಕ್ಕೆ ಆಧಾರಸಂಸ್ಥೆಗಳಾಗಿರುವ ವರ್ಣಾಶ್ರಮ
ವ್ಯವಸ್ಥೆ, ಅವಿಭಕ್ತ ಕುಟುಂಬ, ಪುರುಷಾಧಿಪತ್ಯ, ಪಾತಿ
ವ್ರತ್ಯ, ಬ್ರಾಹ್ಮ ವಿವಾಹ ಮೊದಲಾದುವೆಲ್ಲವೂ ಸ್ವಚ್ಛಂದ
ದಂಪತಿ ಪ್ರೇಮದಿಂದ ಅರೆಗಳಿಗೆಯಲ್ಲಿ ನಾಶವನ್ನು ಪಡೆ
ಯುವುವು. ಪ್ರೇಮಾಕಾಂಕ್ಷಿಯು ಗೃಹಸ್ಥಾಶ್ರಮ
ವನ್ನು ಎಂದಿಗೂ ಹಿಡಿವುದಿಲ್ಲ, ರೂಪವನ್ನು ಸವರ್ಣದ
ಕನ್ಯೆಯರಲ್ಲೇ ಅರಸಿ ನಿಲ್ಲುವುದಿಲ್ಲ. ಇದರಿಂದ ವರ್ಣ
ಸಾಂಕರ್ಯವೂ ಆಶ್ರಮಧರ್ಮನಾಶವೂ ಸಂಭವಿಸು
ವುವು. ತುಂಬಿದ ಮನೆಯಲ್ಲಿ ತರುಣ ಹುಡುಗನು ತನ್ನ
ಹೆಂಡತಿಯೊಡನೆ ಸದಾ ಸರಸಸಲ್ಲಾಪಗಳನ್ನು ನಡೆಸುತ್ತ
ಬಹಿರಂಗವಾಗಿ ಮುದ್ದಿಡುತ್ತ, ಚಿತ್ರ ಸಂಗೀತ ಪರಿಮಳ
ಮೊದಲಾದ ಭೋಗಪರಿಕರಗಳಿಂದ ರಂಪ ಹುಟ್ಟಿಸುತ್ತ
ಮೆರೆದರೆ ಮನೆಯಲ್ಲಿ ಸಭ್ಯತೆಯೂ ಶೀಲವೂ ಆಚಾರವೂ
ಹಿರಿಯರ ಅಧಿಕಾರವೂ ನಾಶವಾಗಿ ಕುಟುಂಬದ ವ್ಯವ
ಸ್ಥೆಯೇ ಬೀಳುವುದು. ಹೆಂಡತಿ ಬಂದಳೆಂದರೆ ಮಕ್ಕಳೆ
ಲ್ಲರೂ ತಂದೆಯ ಮನೆಯ ದೊಂಬಿಕೂಟದಲ್ಲಿ ಇರಲು
ಸಹಿಸದೆ ವಿಭಕ್ತರಾಗಿ ಬೇರೆ ಸಂಸಾರಗಳನ್ನು ಕಟ್ಟಲಾ
ರಂಭಿಸುವರು. ಕಡೆಗೆ ಇವರೆಲ್ಲರನ್ನು ಹೆತ್ತು ಹೊತ್ತು
ಸಲಹಿದ ತಂದೆತಾಯಿಗಳು ಸರ್ವರಿಂದಲೂ ತ್ಯಜಿಸಲ್ಪಟ್ಟು
ವಾರ್ಧಕ್ಯದಲ್ಲಿ ಪೋಷಕರಿಲ್ಲದೆ ತೊಳಲಬೇಕಾಗುವುದು.
ಹಲವು ಕಡೆ ತಾಯಿಯು ತಾನು ಸಂಪಾದನೆಗೆ ಹೊರಟು
ತನ್ನ ಅವಿವಾಹಿತರಾದ ಮಕ್ಕಳನ್ನು ಸಲಹಬೇಕಾಗು
ವುದು. ಆಗ ಗಂಡಸರಂತೆ ಹೆಂಗಸರೂ ಸ್ವಾವಲಂಬಿಗಳಾಗಿ
ಉದ್ಯೋಗಗಳಿಗೆ ಸೇರಿ ಸಂಪಾದನೆ ಮಾಡಿ ಜೀವಿಸ
ತೊಡಗುವರು. ಈಗ ಸಮಾಜದಲ್ಲಿ ಕೆಲ ದೊಡ್ಡ ಕುಟುಂ
ಬಗಳು ಮಾತ್ರ ಇರುತ್ತ ಪ್ರತಿ ಕುಟುಂಬದಲ್ಲಿಯೂ
ಯಜಮಾನರು ಮಾತ್ರ ಉದ್ಯೋಗವನ್ನು ನಡೆಸುತ್ತಿರು
ವುದರಿಂದ ಉದ್ಯೋಗಗಳು ಸುಲಲಿತವಾಗಿಯೂ ಶಾಂತಿ
ಕರವಾಗಿಯೂ ವಂಶಾನುಕ್ರಮವಾಗಿಯೂ ನಡೆದು
ಬರುತ್ತಿವೆ. ಇಂತಹ ಸಮಾಜಕ್ಕೆ ಪ್ರೇಮಪಿಶಾಚವು
ಬಾಧಿಸಿದರೆ ಸಂಸಾರಗಳ ಸಂಖ್ಯೆಯು ಅನಂತವಾಗಿ
ಹೆಚ್ಚಿ ಸಮಸ್ತ ಸ್ತ್ರೀಪುರುಷರೂ ಸ್ವತಂತ್ರ ಉದ್ಯೋಗ
ವನ್ನು ಬಯಸಿ ಪ್ರಚಂಡ ಸ್ಪರ್ಧೆಯನ್ನು ಹುಟ್ಟಿಸಿ
ಭಯಂಕರವಾದ ಆರ್ಥಿಕ ಪ್ರಳಯವನ್ನು ಕಲ್ಪಿಸುವರು.
ಹೆಂಗಸು ಅಸ್ವತಂತ್ರಳು, ನಿಕೃಷ್ಟಳು, ಗಂಡಸರಿಗೆ ಅಧೀ
ನಳು, ಪತಿಯಲ್ಲಿ ಭಕ್ತಿಯನ್ನಿಡಬೇಕೇ ಹೊರತು ಪ್ರೀತಿ
ತೋರಿಸಕೂಡದು ಎಂದು ಮೊರೆಯಿಡತಕ್ಕ ಶಾಸ್ತ್ರವಿಧಿ
ಗಳು ಧ್ವಂಸವಾಗುವುವು. ಪ್ರೇಮವು ಸಮಾನಸ್ಕಂಧರ
ಧರ್ಮವು. ಅದರ ಹಾವಳಿಯಲ್ಲಿ ಪಾತಿವ್ರತ್ಯ, ಪುರುಷ
ಸಾಮ್ರಾಜ್ಯ, ಬಹುಪತ್ನೀವಿವಾಹ ಇವೊಂದೂ ಉಳಿ
ಯುವುದಿಲ್ಲ. ಪ್ರೇಮಾರ್ಥಿಗೆ ಗಾಂಧರ್ವ ವಿವಾಹವೂ
ಸ್ವಯಂವರವೂ ಉಪಾದೇಯವಾಗುವುವು. ಬರಬರುತ್ತ
ಜನರು ವಿವಾಹದ ಬಂಧನವನ್ನೇ ಒಪ್ಪದೆ ಮೃಗಧರ್ಮ
ದಿಂದ ಜೀವಿಸುತ್ತ, ಭ್ರಮರದಂತೆ ಪುಷ್ಪದಿಂದ ಪುಷ್ಪಕ್ಕೆ
ಹಾರಾಡುವುದರಿಂದ ಅಧಿಕ ಪ್ರೇಮಮಧುವನ್ನು ಪಾನ
ಮಾಡಬಹುದೆಂದು ಭಾವಿಸುವರು. ಇವರ ಕಾಮಕಲಹ
ದಲ್ಲಿ ಮನುಷ್ಯ ಸಮಾಜವು ನಾಶವಾಗುವುದು ಸಿದ್ಧ.
ಕಾಮೋಪಭೋಗಕ್ಕೆ ಮಕ್ಕಳು ಹುಟ್ಟುವುದು ಕಂಟಕ
ವೆಂದೆಣಿಸಿ ಜನರು ಬಸುರಾಗದೆ ಇರುವುದಕ್ಕೂ ಬಸು
ರನ್ನು ನಾಶಪಡಿಸುವುದಕ್ಕೂ ಹೆತ್ತ ಶಿಶುಗಳನ್ನು ಕೊಲ್ಲಿ
ಸುವುದಕ್ಕೂ ದಾರಿ ಮಾಡಿಕೊಳ್ಳುವರು. ಹೀಗೆ
ಜಗತ್ತನ್ನೇ ನಾಶಗೊಳಿಸುವ ಈ ಪ್ರೇಮಮೃತ್ಯುವನ್ನು
ನಾವು ಹೇಗೆ ಮನ್ನಿಸಲಾದೀತು ?

ನ್ಯಾಯ— ಈ ಆಪಾದನೆಗೆ ಅಪರಾಧಿ ಏನು ಹೇಳು
ವನು ? ಮಾಧವಾ, ನೀನು ನಿನ್ನ ಹೆಂಡತಿಯನ್ನು ಪ್ರೀತಿ
ಸುವುದುಂಟು ಎಂದು ಒಪ್ಪುತ್ತೀಯೋ ?

ಮಾ— ಒಪ್ಪುತ್ತೇನೆ.

ನ್ಯಾಯ— ಬಾದರಾಯಣನು ವಿವರಿಸಿದ ಪ್ರೇಮದ
ಅನರ್ಥಪರಿಣಾಮಗಳನ್ನು ನಿಜವೆಂದು ಅಂಗೀಕರಿಸು
ತ್ತೀಯೋ ?

ಶ್ರೀ—ಈ ಪರಿಣಾಮಗಳು ಹುಟ್ಟುವ ಸಂಭವವೇನೋ
ಉಂಟು. ಆದರೂ ಪತ್ನೀಪ್ರೇಮವು ಅಪರಾಧವಾಗ
ಲಾರದು.

CC-0. Jangamwadi Math Collection. Digitized by eGangotri

ನ್ಯಾಯ— ಅದು ಹೇಗೆ ?

ಶ್ರೀ— ಪ್ರೇಮದ ದುಷ್ಫಲಕ್ಕಿಂತಲೂ ಅದರ ಸತ್ಫಲವು ಶತಾಧಿಕವಾಗಿದೆ.

ನ್ಯಾಯ— ಅದು ನನಗೆ ಅಪ್ರಕೃತ. ಪ್ರೇಮದ ದುಷ್ಫಲವು ಹುಟ್ಟದಂತೆ ತಪ್ಪಿಸುವುದು ಮಾತ್ರ ನನಗೆ ಕರ್ತವ್ಯವಾಗಿದೆ. ಈಗಲೂ ಮಾಧವನು ತನ್ನ ಪತ್ನೀಪ್ರೇಮವನ್ನು ಪರಿತ್ಯಾಗ ಮಾಡುವುದಾದರೆ ಅವನನ್ನು ಮನ್ನಿಸುತ್ತೇನೆ.

ಮಾ— ನನ್ನ ಹೆಂಡತಿಯನ್ನು ಪ್ರೀತಿಸದೆ ಮತ್ತೇನು ಮಾಡಬೇಕು ?

ಬಾದ— ಅವಳನ್ನು ನಿನ್ನ ಪಾದರಕ್ಷೆಯಂತೆ ನೋಡಬೇಕು. ಕೆಲಸ ಬಿದ್ದಾಗ ಉಪಯೋಗಿಸಿ ಅನಂತರ ಒಂದು ಮೂಲೆಯಲ್ಲಿ ದೂರವಾಗಿ ಒತ್ತರಿಸಿ ಇಟ್ಟಿರಬೇಕು.

ಮಾ— ಅದು ನನ್ನ ಕೈಲಿ ಸಾಧ್ಯವಿಲ್ಲ. ಪ್ರೇಮವನ್ನು ಬೇಕಾದಾಗ ಸಂಪಾದಿಸಿ ಬೇಡವಾದಾಗ ಬಿಡಲು ಅದು ಪಾದರಕ್ಷೆಯಲ್ಲ. ರಾಧೆಯಲ್ಲಿ ನನಗೆ ಹುಟ್ಟಿದ ಪ್ರೇಮವನ್ನು ಕಿತ್ತು ಹಾಕಲು ನಾನು ಸಮರ್ಥನಲ್ಲ. ಅದು ದೇವರಿಂದಲೂ ಸಾಧ್ಯವಾಗಲಾರದು.

ನ್ಯಾಯ— ಹಾಗಾದರೆ ನಿನಗೆ ಕ್ಷಮೆ ದೊರೆಯದು.

ಶ್ರೀ— ಪ್ರಯತ್ನಕ್ಕೆ ಬಗ್ಗಲಾರದ ವಿಷಯಕ್ಕಾಗಿ ಶಿಕ್ಷಿಸುವುದು ಧರ್ಮವೇ ? ತನ್ನ ಪತ್ನೀಪ್ರೇಮವನ್ನು ತಾನು ನಿರ್ಮೂಲಿಸಲು ಅಶಕ್ತನೆಂದು ಮಾಧವನು ಹೇಳಿರುವನು. ಹಾಗೆ ಮಾಡುವುದಕ್ಕೆ ಮತ್ತಾವುದಾದರೂ ಉಪಾಯವಿದ್ದರೆ ಅದನ್ನು ಪ್ರಯೋಗಿಸಬೇಕೇ ಹೊರತು ಅವನನ್ನು ಶಿಕ್ಷಿಸುವುದು ಉಚಿತವಲ್ಲ.

ನ್ಯಾಯ— ಅಪರಾಧವು ಸಿದ್ಧವಾದ ಮೇಲೆ ಅದು ಬುದ್ಧಿಪೂರ್ವಕವೇ ಅಲ್ಲವೇ ? ಅದನ್ನು ಬಿಡಲು ವ್ಯಕ್ತಿಯು ಶಕ್ತನೇ ಅಲ್ಲವೇ ?—ಎಂಬ ಅಂಶಗಳು ನ್ಯಾಯಶಾಲೆಗೆ ಅಪ್ರಕೃತ. ಮಾಧವನ ಅಪರಾಧಕೃತ್ಯದ ಪರಿಣಾಮವು ಸಮಾಜಕ್ಕೆ ತಟ್ಟದಿರುವಂತೆ ನೋಡಿಕೊಳ್ಳುವುದು ನನಗೆ ಕರ್ತವ್ಯವೇ ಹೊರತು ಅವನ ಉದ್ಧಾರವಲ್ಲ. ಇವನ ಅಪರಾಧಕೃತ್ಯವು ಇವನ ಪ್ರಯತ್ನಕ್ಕೆ ಮೀರಿದ್ದೆಂದು ತಾನೇ ಹೇಳಿಕೊಳ್ಳುತ್ತಿರುವುದರಿಂದ ಅದನ್ನು ನಿವಾರಿಸಲು ಬೇರಾವ ಉಪಾಯವೂ ಇಲ್ಲವಾದರೆ ಧರ್ಮದ ಸಲುವಾಗಿ ಇವನಿಗೆ ಮರಣದಂಡನೆಯನ್ನು ವಿಧಿಸಬೇಕಾಗುವುದು.

ಮಾ— ಹೆಂಡತಿಯನ್ನು ಪ್ರೀತಿಸಿದ ಮಾತ್ರಕ್ಕೆ ತಲೆ ಹುಯ್ಯಿಸುವುದು ನಿಮ್ಮ ಸನಾತನ ಧರ್ಮವಾದರೆ ನೀವು ಅಗತ್ಯವಾಗಿ ಹಾಗೆಯೇ ಮಾಡಿಸಬಹುದು.

ನ್ಯಾಯಾಧೀಶನ ಮಾತನ್ನು ಕೇಳಿ ಕೇಶವನ ಮನೆಯವರಿಗೆ ಬಹು ಸಂಕಟವುಂಟಾಯಿತು: ಮಾಧವನು ತನ್ನ ಹುಚ್ಚನ್ನು ಬಿಟ್ಟು ದೇಶದಲ್ಲಿರುವ ಇತರರಂತೆ ಇರಬೇಕೆಂದು ಅವನಿಗೆ ಅಂಗಲಾಚಿ ಹೇಳಿದರು. ಇವನ ಹುಚ್ಚನ್ನು ಬಿಡಿಸಲು ಯಾವುದಾದರೂ ಉಪಾಯವನ್ನು ತಿಳಿಸಬೇಕೆಂದು ಸಭೆಯವರಿಗೆ ಮೊರೆಯಿಟ್ಟರು. ಯಾರೂ ಏನೂ ಹೇಳಲಿಲ್ಲ. ಆದರೆ ಸ್ವಲ್ಪ ಹಿಂದೆ ಶಿಕ್ಷೆಗೊಳಗಾಗಿ ಸಭೆಯಲ್ಲಿ ಒಂದು ಕಡೆ ರಾಜಭಟರ ಕಾವಲಿನಲ್ಲಿದ್ದ ರಾಮಮಿಶ್ರನಿಗೆ ಆಕಸ್ಮಾತ್ತಾಗಿ ಒಂದು ಉಪಾಯವು ಹೊಳೆದು ಅವನು ಅದನ್ನು ನ್ಯಾಯಮೂರ್ತಿಗೆ ವಿಜ್ಞಾಪಿಸಿದನು.

ರಾಮ— ಮಹಾಸ್ವಾಮಿ, ಅಭಯವಾದರೆ ನನ್ನದೊಂದು ಅರಿಕೆಯನ್ನು ನಿವೇದಿಸುತ್ತೇನೆ. ಮಾಧವನ ಸ್ತ್ರೀಪ್ರೇಮದ ಜ್ವರವನ್ನು ಪರಿಹರಿಸಲು ಒಂದು ಮದ್ದುಂಟು. ಅತಿ ಕುರೂಪಿಯಾದ ಮತ್ತೊಂದು ಹೆಂಡತಿಯನ್ನು ಅವನಿಗೆ ಕಟ್ಟಿ ಅವಳ ವಶಪಡಿಸಿದರೆ ಮಾಧವನ ಪ್ರೇಮಚೇಷ್ಟೆಯು ಉಡುಗಿಹೋಗುವುದು. ತಾವು ಶಿಕ್ಷೆ ವಿಧಿಸಿರುವ ನನ್ನ ಹುಡುಗಿ ಕರಾಳಿಯನ್ನು ಅವನಿಗೆ ಮದುವೆ ಮಾಡಿಸಿದರೆ ಅವಳೂ ನಾನೂ ಮಾಧವನೂ ಬದುಕಿಕೊಳ್ಳುವೆವು. ಸನಾತನ ಧರ್ಮದ ಮಾನವೂ ಉಳಿಯುವುದು. ಕುರೂಪದಲ್ಲಿ ನನ್ನ ಹುಡುಗಿಯನ್ನು ಸರಿಗಟ್ಟತಕ್ಕವರು ಲೋಕದಲ್ಲಿ ಮತ್ತಾರೂ ದೊರೆಯರು. ರಾಜಭಟರ ವಶದಲ್ಲಿರತಕ್ಕ ನನ್ನ ಹುಡುಗಿಯನ್ನು ತಾವೇ ಪರೀಕ್ಷಿಸಬಹುದು.

ನ್ಯಾಯ— ನಿನ್ನ ಹುಡುಗಿಯ ಕುರೂಪವೇನೋ ಭಯಂಕರವೇ ಸರಿ. ಇಂಥವಳು ಕಲ್ಮರಗಳಲ್ಲೂ ಮೋಹವನ್ನು ಹುಟ್ಟಿಸುವಷ್ಟು ರೂಪವತಿಯಾದ ರಾಧೆಯಿಂದ ಮಾಧವನನ್ನು ಹೇಗೆ ಅಗಲಿಸಿ ಇಟ್ಟುಕೊಳ್ಳಬಲ್ಲಳು ?

ಕರಾಳಿ— ತಾವು ರಾಧೆಯನ್ನು ವಿಕಾರಪಡಿಸಿ ಕುರೂಪಿಯಾಗಿ ಮಾಡಿಸಬಹುದಲ್ಲವೇ ?

ಬಾದ— ಅದು ಸಾಧುವಾದ ಉಪಾಯವು. ಕುರೂ

CC-0. Jangamwadi Math Collection. Digitized by eGangotri

ಪವು ನಮ್ಮ ಸನಾತನಧರ್ಮಸಂರಕ್ಷಣೆಗೆ ಪ್ರಾಣಸಂಜೀವಿನಿಯಾಗಿದೆ. ರೂಪವಿದ್ದರಲ್ಲವೇ ಈ ಪ್ರೇಮಪ್ರಳಯ ಹುಟ್ಟುವುದು ! ಆದ್ದರಿಂದ ನಾವೆಲ್ಲರೂ ಸ್ತ್ರೀಯಲ್ಲಿ ಕುರೂಪವನ್ನೇ ಗೌರವಿಸಬೇಕೆಂದು ಸರ್ವರಿಗೂ ಬಿನ್ನೈಸುತ್ತೇನೆ.

ನ್ಯಾಯ—ತಥಾಸ್ತು. ಮಾಧವನ ಭಯಂಕರವಾದ ಅಪರಾಧಕ್ಕೆ ಮರಣದಂಡನೆಯೇ ಯೋಗ್ಯವಾದರೂ ಸಾಧುವಾದ ಕೇಶವನ ದಾಕ್ಷಿಣ್ಯದಿಂದ ಅವನಿಗೆ ಲಘು ಶಿಕ್ಷೆಯನ್ನು ವಿಧಿಸಿರುತ್ತೇನೆ. ರಾಮಮಿಶ್ರನ ಮಗಳಾದ ಕರಾಳಿಯನ್ನು ಈ ದಿವಸವೇ ಮಾದವನು ಮದುವೆಯಾಗತಕ್ಕದ್ದು. ಶೂರ್ಪಣಖಿಯಂತೆ ರಾಧೆಯ ಮೂಗನ್ನು ಕತ್ತರಿಸಿ ಮುಖದಲ್ಲೆಲ್ಲಾ ಬರೆಗಳನ್ನು ಹಾಕಿಸುವ ಶಿಕ್ಷೆಯನ್ನು ಅವಳಿಗೆ ವಿಧಿಸಿರುತ್ತೇನೆ. ರಾಮಮಿಶ್ರನ ಅಪರಾಧವು ಮನ್ನಿಸಲ್ಪಟ್ಟಿದೆ.

ಈ ತೀರ್ಮಾನದಿಂದ ರಾಧಾಮಾಧವರು ಹೊರತಾಗಿ ಸಕಲರೂ ಆನಂದಪಟ್ಟರು.

# ಆಧುನಿಕಭೌತಿಕ ಶಾಸ್ತ್ರವನ್ನು ಕುರಿತು ಐನ್‌ಸ್ಟೈನ್ನನ ವಿಚಾರಗಳು

ಲೇ:— ಬೆಳಗಾಂವಿ ರಾಮಚಂದ್ರ

[ ಜಗತ್ತಿನ ಆಚಾರ್ಯಪುರುಷರಲ್ಲಿ ಐನ್‌ಸ್ಟೈನ್ನನು ಒಬ್ಬನಾಗಿದ್ದಾನೆ. 'ವಿಜ್ಞಾನ' * ಪ್ರಪಂಚದಲ್ಲಿ ಆತನ ಹೆಸರು ಉಜ್ಜ್ವಲವಾಗಿ ಬೆಳಗುತ್ತಿದೆಯಲ್ಲದೆ, ಮಾನವ ಜಾತಿಯ ಭವಿತವ್ಯವನ್ನು ಕುರಿತು ದೀರ್ಘವಾಗಿ ಪರ್ಯಾಲೋಚಿಸುವವರಲ್ಲಿ ಆತನೊಬ್ಬನಿದ್ದಾನೆ. ಇಂತಹ ಮಹಣೀಯನು ವಿಜ್ಞಾನಿಗಳ ಪ್ರಯತ್ನದ ಮರ್ಮವನ್ನು ಹೇಳಲು ತೊಡಗಿದುದು ನಮಗೆಲ್ಲರಿಗೂ ಉದ್ಬೋಧಕವಾಗಲೇಬೇಕು. -ಲೇಖಕ ]

ಇದೇನು 'ವಿಜ್ಞಾನ'? ಅದು ದೇವರನ್ನು ಅಲ್ಲಗಳೆಯುತ್ತಿದೆ; ವಂಶಪಾರಂಪರ್ಯವಾಗಿ ಬಂದ ನಮ್ಮ ಧಾರ್ಮಿಕ ಭಾವನೆಗಳನ್ನು ನಿರಾಕರಿಸುತ್ತಿದೆ; 'ಚಕ್ಷುರ್ವೈ ಸತ್ಯಂ' ಎಂದು ಸಾಧಿಸುತ್ತ, ಕಾಣುವ ವಸ್ತುವಿನ ಆಚೆಗೇನಾದರೂ ಇರಬಹುದೇ ? ಎಂಬ ನಮ್ಮ ಜಿಜ್ಞಾಸೆಯನ್ನು ಹುಸಿಗೊಳಿಸುತ್ತಿದೆ; ಅದು ಅನಾತ್ಮವಾದಿ, ಜಡವಾದಿ, ನಶ್ವರವಾದಿ, Materialistic ಎಂತ ಸಾಮಾನ್ಯವಾಗಿ 'ವಿಜ್ಞಾನ' ವನ್ನು ನಾವು ದೂರುವುದುಂಟು. ಆದರೆ ಐನ್‌ಸ್ಟೈನ್ನನು 'ವಿಜ್ಞಾನಿಗಳ ಸೂಕ್ಷ್ಮ ಸಿದ್ಧಾಂತಗಳೆಲ್ಲ ಆಳವಾದ ಧಾರ್ಮಿಕ ಭಾವನೆಯಿಂದಲೇ ಪ್ರೇರಿತವಾಗುತ್ತಿವೆ' ಎಂದು ಹೇಳಲು ಧೈರ್ಯಪಡುತ್ತಾನೆ. ( I am of the opinion that all the finer speculations in the realm of Science spring from a deep religious feeling, and that without such feeling they would not be fruitful. ) ಇಷ್ಟೆ ಅಲ್ಲ, 'ಜಗತ್ತಿನ ಚಟುವಟಿಕೆಗಳಲ್ಲಿ ನವಜೀವನವನ್ನೆರೆಯುವ ಧಾರ್ಮಿಕ ಕಾರ್ಯವೆಂದು ಕರೆಸಿಕೊಳ್ಳಲು ಯಾವುದಾದರೂ ಯೋಗ್ಯವಾಗಿದ್ದರೆ, ಅದು ವಿಜ್ಞಾನಿಗಳ ಪರಿಶೋಧನೆಯಲ್ಲಿ ಪ್ರಕಟವಾಗುವ ಧರ್ಮಬುದ್ಧಿಯೊಂದೆ'— ಎಂತಲೂ ಆತ ಸಾಧಿಸುವನು.

ಆದರೆ ಇಲ್ಲಿಯೊಂದು ಸೂಕ್ಷ್ಮಭೇದವನ್ನು ಆತ ಕಲ್ಪಿಸುತ್ತಾನೆ. 'ಧಾರ್ಮಿಕ' ಎಂದ ಮಾತ್ರಕ್ಕೆ 'ಜೀವನು ಹೇಗೆ ಉನ್ಮುಖನಾದಾನು? ಜೀವಿತದ ಬೀವಾಳವು ಹೇಗೆ ತಿಳಿಯಾದೀತು ? ಆ ಬೆಳಕಿನಲ್ಲಿ ತನ್ನ ಚಾರಿತ್ರ್ಯವು ಹೇಗೆ

* 'ವಿಜ್ಞಾನ' ವೆಂಬುದಕ್ಕೆ ವೇದಾಂತಿಕ ಪರಿಭಾಷೆಯಲ್ಲಿ ತೀರಾ ಬೇರೆ ಅರ್ಥವು ಕಲ್ಪಿಸಲ್ಪಟ್ಟಿದ್ದರೂ, ಬಳಕೆಯಲ್ಲಿ 'ವಿಜ್ಞಾನ' ಶಬ್ದಕ್ಕೆ ಬಂದಿರುವ ಅರ್ಥವನ್ನು ಲಕ್ಷ್ಯದಲ್ಲಿ ತಂದುಕೊಂಡು, ಅದನ್ನಿಲ್ಲಿ 'Science' ಎಂಬುದಕ್ಕೆ ಸಮಾನಾರ್ಥದಲ್ಲಿ ಉಪಯೋಗಿಸಿದೆ. ಐನ್‌ಸ್ಟೈನ್ನನೊಡನಾದ ಸಂಭಾಷಣೆಯೊಂದು 'Forum' ಪತ್ರಿಕೆಯಲ್ಲಿ ಬಂದಿದೆ. ಅದು ಈ ಲೇಖನಕ್ಕೆ ಆಧಾರವಾಗಿದೆ.



CC-0. Jangamwadi Math Collection. Digitized by eGangotri

ಮಾರ್ಪಟ್ಟೀತು ?' ಎಂದು ಮುಂತಾದ ಸಾಧನಾಕ್ರಮವನ್ನು ವಿಜ್ಞಾನವು ಹೇಳಬಲ್ಲುದು ಎಂತಲ್ಲ. ಅದು ತೀರಾ ಆಂತರಿಕ ವಿಷಯ. ಪ್ರತಿಯೊಬ್ಬನು ಅದನ್ನು ತನ್ನಷ್ಟಕ್ಕೆ ತಾನೇ ಸಾಧಿಸಿಕೊಳ್ಳಬೇಕು. 'ವಿಜ್ಞಾನ'ದ ಆಧಾರವು 'ಧರ್ಮ' ವಾಗಿದೆ. ವಿಜ್ಞಾನವು ಧರ್ಮಮೂಲವಾಗಿರುವುದರಿಂದ, ವಿಜ್ಞಾನದ 'ಆಶಯ'ವು ಧಾರ್ಮಿಕವಾಗಿದೆ. ಅದರ ಚಟುವಟಿಕೆಗಳೆಲ್ಲಾ ಧರ್ಮಬುದ್ಧಿಯಿಂದಲೇ ಓತಪ್ರೋತವಾಗಿವೆ. ಆದರೆ ವಿಜ್ಞಾನವು ಪ್ರತ್ಯಕ್ಷವಾಗಿ ಧರ್ಮಾಚರಣೆಯನ್ನು ಹೇಳಲಾರದು. ನಾವು ನಮ್ಮ ಆತ್ಮಸಾಧನಾಕ್ರಮವನ್ನು ವಿಜ್ಞಾನದ ಸಿದ್ಧಾಂತಗಳ ಮೇಲೆ ರಚಿಸಲಾರೆವು. ( You are right in speaking of the moral foundations of science; but you cannot turn it round and speak of the scientific foundations of morality. )

ಇದನ್ನೇ ವೇದಾಂತದ ಪರಿಭಾಷೆಯಲ್ಲಿ ಹೇಳುವುದಾದರೆ, Science ಜ್ಞಾನಮಾರ್ಗಿಯಾಗಿದೆ. ಜ್ಞಾನಿಗೆ ಜ್ಞಾನದಲ್ಲಿಯೆ ತೃಪ್ತಿಯುಂಟು. ಆ ಜ್ಞಾನದಿಂದ ಜೀವವನ್ನು ಹೇಗೆ ಸೂತ್ರಿಸಿಕೊಳ್ಳಬೇಕು, ಹೃದಯವನ್ನು ಹೇಗೆ ಪರಿಪಾಕಗೊಳಿಸಿಕೊಳ್ಳಬೇಕು–ಎಂಬುವು ಆತನ ವಿಷಯಗಳಲ್ಲ. ಅವು ಭಕ್ತಿಕರ್ಮಗಳಿಗೆ ಒಳಪಟ್ಟುವು. ಐನ್‌ಸ್ಟೈನ್ನನು ಇದನ್ನೇ ಇನ್ನೊಂದು ಬಗೆಯಿಂದ ಹೇಳುತ್ತಾನೆ. 'ಜ್ಞಾನಾನುಭವದ ಆನಂದದಲ್ಲಿಯೆ ವಿಜ್ಞಾನಕ್ಕೆ ತೃಪ್ತಿಯುಂಟು. ಅದರಿಂದ ಫಲಿಸಬಹುದಾದ ಕಾರ್ಯರಾಶಿಯಲ್ಲಿಲ್ಲ. ಆ ಅನುಭವದಲ್ಲಿಯೆ ವಿಜ್ಞಾನದ ಆಧ್ಯಾತ್ಮಿಕ ಪ್ರಯೋಜನವಿದೆ.' ( For me the personal worth of scientific knowledge lies...in the joy of comprehension and not in the possibilities of action which it opens up. )

ಧರ್ಮ, ಕಲೆ ಮತ್ತು ವಿಜ್ಞಾನ– ಮೂರೂ ಒಂದೇ ಉದ್ದೇಶವನ್ನಿಟ್ಟುಕೊಂಡಿವೆಯೆಂದು ಐನ್‌ಸ್ಟೈನ್ನನು ಹೇಳುತ್ತಾನೆ. 'ನಮ್ಮ ಶುದ್ಧ ಜೀವನದ ಅಪೇಕ್ಷೆ, ಧಾರ್ಮಿಕ ಪ್ರವೃತ್ತಿ, ಸೌಂದರ್ಯಾನುಭವ– ಇವೆಲ್ಲ ಬುದ್ಧಿಯನ್ನು ಪರಾಕಾಷ್ಠೆಗೆ ಒಯ್ಯಬಲ್ಲ ಸಾಧನಗಳು. ಇಲ್ಲಿ ಆತ್ಮಾರ್ಪಣವೊಂದೆ ದಾರಿ.' 'ಬುದ್ಧಿ' ಶಬ್ದವನ್ನು ಆತ ನಮ್ಮವರ ಅರ್ಥದಲ್ಲಿಯೆ ಬಳಸುತ್ತಾನೆಂಬುದನ್ನು ನಾವು ಲಕ್ಷ್ಯದಲ್ಲಿಟ್ಟುಕೊಂಡರೆ, ಮೇಲಣ ಮಾತಿನ ಹುರುಳು ಮನದಟ್ಟಾಗುವುದು. 'ಬುದ್ಧಿ' ಯೆಂದರೆ ಸತ್ಯವನ್ನು ಯಥಾರ್ಥವಾಗಿ ಅರಿತುಕೊಳ್ಳುವ ಶಕ್ತಿ, 'ತಗರು ತಗರಿನಂತೆ ಮಾರ್ಮಲೆತು,' ಶುಷ್ಕ ಯುಕ್ತಿವಾದಕ್ಕೆ ನೆರೆಹೊಕ್ಕು, ತತ್ತ್ವಾರ್ಥಕ್ಕೆ ಎರವಾಗುವ ತರ್ಕಪ್ರೀತಿಯು ಅದಲ್ಲ. ವಿಜ್ಞಾನವಾದರೂ ರೂಕ್ಷ ತರ್ಕದಲ್ಲಿ ಆಸಕ್ತವಾಗಿರದೆ, ಸತ್ಯದ ಯಥಾರ್ಥದರ್ಶನವನ್ನೆ ತನ್ನ ಸಾಧ್ಯವನ್ನಾಗಿಟ್ಟುಕೊಂಡಿದೆಯೆಂದು ಐನ್‌ಸ್ಟೈನ್ನನು ಹೇಳುವನು. ಎಂದರೆ ವಿಜ್ಞಾನವು ಜಡವಾದಿ-ಅನಾತ್ಮವಾದಿಯಲ್ಲವೆಂದಾಯಿತು. ಇದನ್ನು ಐನ್‌ಸ್ಟೈನ್ನನು ಸ್ಪಷ್ಟವಾಣಿಯಿಂದ ಸಾರಿ ಸಾರಿ ಹೇಳುತ್ತಾನೆ. 'ವಿಜ್ಞಾನ ವಿಷಯದಲ್ಲಿ ದಿನೇ ದಿನೇ ಹೆಚ್ಚುತ್ತಿರುವ ಕುತೂಹಲವು ಜನರಿಗೆ ಜಡವಾದದ ಬೇಸರ ಬಂದುದು ಗುರುತಾಗಿದೆ; ತಮ್ಮ ಬಾಳು ಬರಿದು, ವೈಯಕ್ತಿಕ ಜೀವನದ ಆಚೆಗೆ ಏನೋ ಒಂದು ಬೇಕಾಗಿದೆ ಎಂದೆನಿಸುತ್ತಿರುವುದಕ್ಕೆ ಸಾಕ್ಷಿಯಾಗಿದೆ.'.... 'ವೈಯಕ್ತಿಕ ಜೀವನದಾಚೆಗೆ ಏನೋ ಒಂದನ್ನು' ಹುಡುಕುವುದೇ ಧರ್ಮ ಕಲೆಗಳಂತೆ ವಿಜ್ಞಾನದ್ದೂ ಗುರಿಯಾಗಿದೆ. 'ನಮ್ಮ ಬಾಳು ಬರಿದು; ನಮ್ಮ ಗೇಣುಗೂಡಿನ ಹೊರಗೆ ಹಣಕಿ ಹಾಕಲು ಒಪ್ಪಿಕೊಂಡಾಗ ಮಾತ್ರ ಎಲ್ಲವನ್ನೂ ತೆಕ್ಕೆಯಲ್ಲಿಟ್ಟುಕೊಂಡ ಆ ಮುಗಿಯಿಲ್ಲದ ಮುಗಿಲು ನನು ಕಾಣ ಹತ್ತುವುದು' ಎಂದು ಧರ್ಮವು ನಮಗೆ ತಿಳಿಸುತ್ತಿರುವಂತೆ ವಿಜ್ಞಾನವೂ ಹೇಳುತ್ತಿದೆ. ಎಂದ ಮೇಲೆ ನಮ್ಮ ದೈನಂದಿನ ಸಾಮಾನ್ಯ ಜೀವನವು ಅಪೂರ್ಣವೆಂದಂತಾಯಿತು; ನಮಗೆ ಮಿಗಿಲಾದ ನಿರ್ವಿಕಾರವಾದ ಜೀವನವನ್ನು ಆಶ್ರಯಿಸಿದ ವಿನಾ, ನಮ್ಮ ಬುದ್ಧಿಯು ಆತ್ಯಂತಿಕ ಸಿದ್ಧಿಯನ್ನು ಪಡೆಯದೆಂದಂತಾಯಿತು; ಎಂದರೆ ಸಂಪೂರ್ಣ ಸಮರ್ಪಣವಿಲ್ಲದೆ–ಆತ್ಮನಿವೇದನವಿಲ್ಲದೆ ಗತಿಯಿಲ್ಲವೆಂದಂತಾಯಿತು. ಹಾಗೆಂದೇ ಐನ್‌ಸ್ಟೈನ್ನನು ವಿಜ್ಞಾನವು ಅನಾತ್ಮವಾದಿಯಲ್ಲವೆಂದೂ, ಅಬಾಧಿತ ಸತ್ಯದ ಸಂಶೋಧನೆಯೆ ಅದರ ಗುರಿಯೆಂದೂ, ಆ ಸತ್ಯದ ಅನನ್ಯಾಶ್ರಯವಿಲ್ಲದೆ ಅದರ ಗುರುತಾಗದೆಂದೂ ಪ್ರತಿಪಾದಿಸುತ್ತಾನೆ.

ಈವೊತ್ತು ನಮ್ಮ ಕಲಾಪ್ರಪಂಚದಲ್ಲಿ ಏನು ಕಂಡು ಬರುತ್ತಿದೆ ? ನಮ್ಮ ಪ್ರತಿನಿತ್ಯದ ಅನಿಸಿಕೆ ಎಣಿಸಿಕೆಗಳು, ಹವಣಿಕೆ ಹಂಚಿಕೆಗಳು, ನೋವು ನಲಿವುಗಳು–ಅಂತೂ

CC-0. Jangamwadi Math Collection. Digitized by eGangotri

ನಮ್ಮ ಸಂಕುಚಿತ ಅಹಂಕಾರಾತ್ಮಕ ಜೀವನವೆ ಅಂದ ಚೆಂದವಾಗಿ ಬಣ್ಣಿಸಲ್ಪಡುತ್ತಿದೆ. ಎಂತಲೇ ಆಳಿ ಬಾಳಬಹುದಾದ ಸಾಹಿತ್ಯವಾಗಲಿ, ಚಿತ್ರಮೂರ್ತಿವಾಸ್ತುಶಿಲ್ಪವಾಗಲಿ, ಸಂಗೀತವಾಗಲಿ ಹುಟ್ಟುತ್ತಿಲ್ಲ. 'ಧರ್ಮ'ದ್ದೂ ಇದೇ ಗತಿ. ನಿಜವಾದ 'ಧಾರ್ಮಿಕ' ನಿಗೆ ಪ್ರತ್ಯೇಕ ಮತದ ಅಗತ್ಯವೇ ಇಲ್ಲ. ಏಕೆಂದರೆ ಮತಮತಗಳ ಪಡಿಯಚ್ಚಿನಲ್ಲಿ ಸತ್ಯವನ್ನು ಎರಕಹೊಯ್ಯಲೆತ್ನಿಸುವುದು ಅದರ ಸನಾತನ ಸ್ವರೂಪಕ್ಕೆ ಬಾಧೆತಂದಂತೆಂಬುದು ಆತನಿಗೆ ಗೊತ್ತು. ಆದರೂ ಮತದ ಆಸರವಿಲ್ಲದೆ ಸಾಗದು. ಇಷ್ಟೇ ಅಲ್ಲ, ತನ್ನ ಮತವೊಂದೆ ನಿರ್ದುಷ್ಟ ಮತ್ತು ನಿತ್ಯ, ಉಳಿದುವು ಗೌಣವೆಂಬ ಅಸಹನೆ ಬೇರೆ. ಮತ್ತೂ ಅಹಂಕಾರದ ಆಶ್ರಯವೇ. ಎಷ್ಟುಮಟ್ಟಿಗೆ ಧರ್ಮ ಕಲಾ ವಿಜ್ಞಾನಗಳು ಅಹಂಕಾರವನ್ನು ವಿಸರ್ಜಿಸಬಲ್ಲುವೋ, 'ನಾನು– ನನ್ನದೆಂ' ಬುದರ ಆಚೆಗಿನ ನಿಃಸ್ವಾರ್ಥ ಜೀವನವನ್ನು ನಿರ್ದೇಶಿಸಬಲ್ಲುವೋ ಆ ಮಟ್ಟಿಗೆ ಅವು ಚಿರಂಜೀವವಾಗಿ ಉಳಿಯಬಲ್ಲುವು. ಹಾಗೆಂದೇ ಐನ್‌ಸ್ಟೈನ್ನನು ನಮ್ಮ ಸರ್ವಸಾಮಾನ್ಯ ಅನುಭವಗಳನ್ನೆ ಹೇಳುವ – 'ಅಹಂಕಾರವನ್ನೆ ಪ್ರದರ್ಶಿಸುವ (giving outer artistic expression to the internal ego)' ಕಲೆಯನ್ನು ಗೌಣವಾಗಿ ಭಾವಿಸಿ, 'ಪರವಸ್ತು (outer object) ವನ್ನು' ಮುಟ್ಟಬಲ್ಲ-ಸೂಚಿಸಬಲ್ಲ ಕಲೆಯನ್ನು ಗೌರವಿಸುತ್ತಾನೆ. ಮತ್ತು ವಿಜ್ಞಾನವು ಕೂಡ 'ಪರವಸ್ತು' ವಿನ ಕಡೆಗೇ ತನ್ನ ತೋಳುಗಳನ್ನು ಚಾಚಿದೆಯೆಂತ ಆತ ಹೇಳುತ್ತಾನೆ.

ಧರ್ಮಕ್ಕಾಗಲಿ ಕಲೆಗಾಗಲಿ ನಾವು ಬೆಲೆಕೊಡುವುದೇತಕ್ಕೆ? ಅವು ಕ್ಷಣಮಾತ್ರ ನಮ್ಮ ಹುರಳಿಲ್ಲದ ಬಾಳನ್ನು ಮರೆಸಿ, ಅಸಾಮಾನ್ಯ ಜೀವನದ ನೆನಪನ್ನು ಕೊಡುತ್ತಿವೆಯೆಂದು; ನಮ್ಮನ್ನು ಧ್ಯಾನಪರರನ್ನಾಗಿ ಮಾಡಬಲ್ಲುವೆಂದು; ನಮ್ಮನ್ನು ತನ್ಮಯರನ್ನಾಗಿ, ತದಾತ್ಮರನ್ನಾಗಿ ಮಾಡಬಲ್ಲುವೆಂದು. ವಿಜ್ಞಾನವೂ ಹಾಗೆ ಮಾಡಬಲ್ಲುದೆಂದು ಐನ್‌ಸ್ಟೈನ್ನನು ಹೇಳುವನು. 'ಇಂದಿನ ವೈಜ್ಞಾನಿಕ ಸಿದ್ಧಾಂತವು ಸರ್ವಾತ್ಮಕ ಸಮನ್ವಯವೊಂದನ್ನು ಸಾಧಿಸಲೆಸಗುತ್ತಿದೆ.... ಆಧುನಿಕ ವಿಜ್ಞಾನವು ನಮ್ಮೆದುರಿನಲ್ಲಿರಿಸುವ ಭೌತಿಕವಿಶ್ವದ ನಕ್ಷೆಯನ್ನು ನೆನೆದರೆ, ನಾಮಾಂಕಿತ ಚಿತ್ರಕಾರನ ದಿವ್ಯಕೃತಿಯೊಂದನ್ನು ನೋಡಿದಾಗ ಇಲ್ಲವೆ ಶ್ರುತಿಸುಭಗವಾದ ಸಂಗೀತಲಹರಿಯೊಂದನ್ನು ಕೇಳಿದಾಗ ಎಂತಹ ತಲ್ಲೀನತೆಯೂ ಧ್ಯಾನಪರವಶತೆಯೂ (contemplative spirit) ಒದಗುವವೋ, ಅಂತಹ ಆನಂದಾನುಭವವೆ ಉಂಟಾಗುವುದು.'

'ವಿಜ್ಞಾನವೂ ಧ್ಯಾನಕ್ಕೊಂದು ಪ್ರತೀಕವನ್ನು ಕೊಡಬಲ್ಲುದು.' (It is true...that Modern Science does supply the mind with an object for contemplative exaltation.) ನೆಟ್ಟನೆ ಮುಗಿಲನ್ನು ಮುಟ್ಟುವಂತೆನಿಸುವ ದೇವಾಲಯದ ಉತ್ತುಂಗ ಶಿಖರವನ್ನು ದಿಟ್ಟಿಸಿ ನೋಡಿದರೆ ಏನು ಎನಿಸುವುದು? ಎಷ್ಟು ದೂರ, ಎಷ್ಟು ಅಪಾರ ಈ ಆಕಾಶ! ನಮ್ಮ ವಿಶ್ವಪ್ರಯತ್ನಗಳೆಲ್ಲಾ ವಿಫಲ! ಎಂಬ ಮನೋಭಾವನೆಯು ಒಳಗೆ ಉಮ್ಮಳವನ್ನು ಹುಟ್ಟಿಸುವುದು. ಅನಂತದ ಅನುಭವವನ್ನು ಕೊಡಲಿಕ್ಕೆ ಶಿಖರವೊಂದು ಪ್ರತೀಕವಾಯಿತು. ಎಲ್ಲ ಪ್ರತೀಕಗಳು ಸ್ವತಃ ಸೀಮಾಂಕಿತವಾಗಿದ್ದರೂ, ನಿಃಸೀಮದ ಪ್ರತೀತಿಯನ್ನು ಕೊಡಲು ಅವು ಸಾಧಕವಾಗಿವೆ. ಹಾಗೆಯೆ ವಿಮಾನದ ದ್ರುತಗತಿಯನ್ನು ಮನಸ್ಸಿನಿಂದ ಅನುಸರಿಸುವಾಗ, ಇಲ್ಲವೆ ರೇಡಿಯೋಮೂಲಕ ದೂರವು ಸಮೀಪವಾದುದನ್ನು ನೆನೆಯುವಾಗ, ವಸ್ತುಮಾತ್ರಗಳಲ್ಲಿನ ಅಂತರವು ಕೊನೆಗೂ ದುಸ್ತರವೇ ಎಂಬ ಭಾವನೆಯು ಬಲವತ್ತರವಾಗಿ, ಒಳಗಿನ ಕಳವಳವು ಇಮ್ಮಡಿಗೊಳ್ಳುವುದು.

ಅಂತೂ 'ಮಾನವ ಕುಲವು ಪ್ರತಿಕ್ಷಣಕ್ಕೆ ಉನ್ನತೋನ್ನತವಾದ ಅನುಭವವನ್ನು ಪಡೆಯಲುಬೇಕು. ಕೊನೆಬಾಳುವ ಸಾಂಸ್ಕೃತಿಕ ಪ್ರಯತ್ನಗಳೆಲ್ಲಾ (ಅವು ಧಾರ್ಮಿಕವೇ ಇರಲಿ, ವೈಜ್ಞಾನಿಕವೇ ಇರಲಿ) ನಮ್ಮ ಜೀವಜೀವಾಳವನ್ನು ಎಲ್ಲಿಯೊ ಮುಟ್ಟಿ, ಅಹಂಕಾರದ ವೇಷ್ಟನದಿಂದ ನಮ್ಮನ್ನು ಬಿಡಿಸುವವು; ಬರಿ ವೈಯಕ್ತಿಕ ಅಹಂಕಾರವಲ್ಲ, ಮಾನವಜಾತಿಯ ಸಾಮೂಹಿಕ ಅಹಂಕಾರದಿಂದಲೂ ಅವು ನಮ್ಮನ್ನು ಹೊರಬೀಳಿಸುವವು.' (Mankind must exalt itself... Every cultural striving, whether it be religious or scientific, touches the core of the inner psyche and aims at freedom from the ego– not the individual ego alone, but also the mass ego of humanity.)

CC-0. Jangamwadi Math Collection. Digitized by eGangotri

# ಚಲಚ್ಚಿತ್ರ

ಶ್ರೀ. ಕೋಟ ಶಿವರಾಮ ಕಾರಂತ, ಪುತ್ತೂರು

ಎರಡನೆಯ ಬರೆಹ

## ಕಲೆಯೆನಿಸಲಾರದ ಚಲಚ್ಚಿತ್ರಗಳು

ಚಲಚ್ಚಿತ್ರವು ಕಲೆಯೆನಿಸಿಕೊಳ್ಳಲು ಬೇಕಾದ ವಾಹಕವು ಅದರಲ್ಲಿದೆಯೆಂದು ನಿರ್ಧರಿಸಿದ್ದಾಯಿತು. ಅಂತಹ ವಾಹಕ ಶಕ್ತಿಯು ಅತ್ಯಧಿಕವಾಗಿದ್ದರೂ ಕೂಡ ನಮ್ಮ ಮುಂದೆ ತೋರಿಸಲ್ಪಡುವ ಚಿತ್ರಗಳೆಲ್ಲ ಕಲಾಸೃಷ್ಟಿಗಳೆನ್ನಲು ಸಾಧ್ಯವಿಲ್ಲ. ತನಗಿರುವ ಶಕ್ತಿಯ ದೆಸೆಯಿಂದಲೇ ಅದು ಜನತೆಗೆ ಕೇಡನ್ನು ಉಂಟು ಮಾಡಲು ಸಾಧ್ಯವಿದೆ.



ಪ್ರಸಿದ್ಧ ಚಲಚ್ಚಿತ್ರನಟ-ಚಾರ್ಲಿ ಚಾಪ್ಲೀನ್

ಮೋಹಕಳಾದ ನಾರಿಯು ತನ್ನ ಪತಿಗೆ ಆನಂದವನ್ನುಂಟು ಮಾಡಬಹುದು; ಅವನನ್ನು ಕೆಟ್ಟ ಚಾಳಿಗಳಿಂದ ಪರಾಙ್ಮುಖನನ್ನಾಗಿ ಮಾಡಬಹುದು; ಅದೇ ಮೋಹಕತೆಯ ದೆಸೆಯಿಂದ ಪುರುಷನ ಧರ್ಮವನ್ನು ಕಾಲಿಂದ ತುಳಿದು ಹಿಡಿಯಲೂ ಬಹುದು. ಆದುದರಿಂದ ಮೋಹಕ ವಸ್ತುಗಳನ್ನು ಉದ್ದೇಶ ಬಲ್ಲವನು ಮಾತ್ರ ಉಪಯೋಗಿಸಬೇಕು. ಆದರೆ ಇಂದಿನ ಯುಗವು ಅದಲ್ಲ. ನವನಾಗರಿಕತೆಯ ಸೆಳವಿನಲ್ಲಿ ಸಿಲುಕಿದ ಯಾವತ್ತು ಕಲೆಗಳ ಪಾಡೂ ಹೀಗೆಯೇ ಆಗಿದೆ. ಸಾಹಿತ್ಯ, ಸಂಗೀತ, ನರ್ತನ, ಚಿತ್ರಕಲೆ, ಶಿಲ್ಪ – ಇವೆಲ್ಲ ಇಂದು ಮಾನವನ ಕೀಳು ಲಾಲಸೆಗಳ ಪೂರೈಕೆಗಾಗಿ ಉಪಯೋಗಿಸಲ್ಪಡುತ್ತಿವೆ. ಅವುಗಳಿಂದ ಉಚ್ಚ ಧ್ಯೇಯಗಳೇನು ಸಾಧಿತವಾಗಬಹುದೆಂದು ನಾವು ಜಗಕ್ಕೆ ತೋರಿಸಬಲ್ಲೆವಾದರೆ ಮಾತ್ರ–ನಿಜವಾದ ಕಲೆಯ ಉದ್ದೇಶವೇನೆಂದು ಜನತೆಯನ್ನು ಎಚ್ಚರಗೊಳಿಸಿದಂತಾಗಬಹುದು. ರೈನಾಲ್ಡನು ತನ್ನ ಅಪಾರವಾದ ಸಾಹಿತ್ಯ ಬಲವನ್ನು ಯಾವುದಕ್ಕಾಗಿ ಉಪಯೋಗಿಸಿದನು? ಕೇವಲ ಕಾಮದ ಆರಾಧನೆಯ ಸಲುವಾಗಿ ಅಲ್ಲವೇನು? ವಿಕ್ಟರ್ ಹ್ಯೂಗೋ, ರೊಮೇನಾ ರೋಲಾಂಡರಂತಹ ಲೇಖಕರು ತಮ್ಮ ಲಾ ಮಿಸರೆಬಲ್ಸ್, ಜೀನ ಕ್ರಿಸ್ಟೋಫರ ಇತ್ಯಾದಿ ಗ್ರಂಥಗಳನ್ನು ಯಾವುದಕ್ಕಾಗಿ ಅರ್ಪಿಸಿದರು? ರೈನಾಲ್ಡನ ಗ್ರಂಥಗಳಿಂದ ಮನವು ಎಷ್ಟು ಕಲುಷಿತವಾಗಲು ಸಾಧ್ಯವಿದೆಯೋ ರೊಮೇನ್ ರೋಲಾಂಡ್ ಟಾಲಸ್ಟಾಯಿಯಂತಹ ಮಹನೀಯರ ಬರೆಹಗಳಿಂದ ಮನವು ಅಷ್ಟು ಪಾವನವಾಗಲು ಸಾಧ್ಯವಿದೆ. ಮಾನವನನ್ನು ಅವನ ನೀಚಸ್ಥಾನದಿಂದ ಮೇಲಕ್ಕೆತ್ತಲು ಮಾರ್ಗದರ್ಶಿಯಾಗುವುದೇ ಕಲೆಯ ಕೆಲಸ. ಅಂದರೆ ಅದು ಸೊಲ್ಲುಸೊಲ್ಲಿಗೂ ನೀತಿಯನ್ನು ಉಪದೇಶಿಸುತ್ತಿರಬೇಕೆಂದು ಇದರ ಅರ್ಥವಲ್ಲ. ಹಾಗೆ ಮಾಡಿದರೆ ಅದೊಂದು ಧರ್ಮಗ್ರಂಥವಾಗಬಹುದು; ಕಲೆಯೆನಿಸದು. ಸೂರ್ಯನು ತಾನು ಜಗತ್ತಿಗೆ ಬೆಳಗುವವನು ಇಲ್ಲವೆ ಮಾರ್ಗದರ್ಶಕನು ಎಂದು

CC-0. Jangamwadi Math Collection. Digitized by eGangotri

ಬೊಬ್ಬಿಡುವುದಿಲ್ಲ. ಇಲ್ಲವೆ, ಜಗತ್ತಿನ ಉತ್ತಮ ಚಿತ್ರವನ್ನೆ ಬೆಳಗಿಸಿ, ನೀಚ ವಸ್ತುಗಳನ್ನು ಮರೆಮಾಣಿಸುವುದಿಲ್ಲ. ಎರಡನ್ನೂ ಸಮದೃಷ್ಟಿಯಿಂದ ಬೆಳಗುವನು. ಹಾಗೆ ಬೆಳಗುವ ಮೋಹಕತೆಯಿಂದಲೇ ಏರಾವುದು, ತಗ್ಗಾವುದು ಎಂದು ಮಾನವನಿಗೆ ತಿಳಿಯುವುದು. ಅಂತೆಯೇ ಕಲೆಯಿಂದಾಗುವ ನೀತಿಬೋಧೆಯು ನಿರುದ್ದೇಶಿತವಾದುದು.

ಕಲೆಯು ಕೇವಲ ತಾದ್ರೂಪಿಕವಾದ ಚಿತ್ರವನ್ನೆ ಬರೆಯಬಲ್ಲುದೇ? ಈ ಪ್ರಶ್ನೆಗೆ ಇಲ್ಲವೆಂದೇ ಉತ್ತರ. ಯಾವುದೊಂದು ಕಲೆಯ ಉತ್ಪತ್ತಿಯು, ನಿಸರ್ಗದ ಯಾವುದಾದರೊಂದು ವಸ್ತುವಿನ ಪೂರ್ಣ ಅನುಕರಣೆಯಲ್ಲ. ಅದು ತಾದ್ರೂಪಿಕ ವಸ್ತುಗಳನ್ನು ತನ್ನ ಉಪಯೋಗಕ್ಕಾಗಿ ಬಳಸಿಕೊಳ್ಳಬಹುದು. ಆದರೆ ಅನುಕರಣೆಯನ್ನು ಅದು ಮಾಡದು. ಭೂಮಾತೆಯು ಕೊಟ್ಟ ಕಲ್ಲುಗಳಿಂದ ಸೊಗಸಾದ ಮಂದಿರವನ್ನು ಕಟ್ಟಬಲ್ಲುದು, ಅದರ ಬದಲು ನಿಸರ್ಗದ ಗುಹೆಯೊಂದರಲ್ಲಿ ವಾಸಮಾಡುವುದಿಲ್ಲ. ನಿಸರ್ಗದ ಅನುಕರಣೆಯು ಎಷ್ಟೆಷ್ಟು ಕಡಿಮೆಯಾಗುವುದೋ ಅಷ್ಟಷ್ಟು ಕಲೆಯ ಶಕ್ತಿಯು ಹೆಚ್ಚುವುದು. ನಾವು ಇಂದಿನ ಚಲಚ್ಚಿತ್ರಗಳನ್ನು ಕಂಡರೆ ಅವುಗಳಲ್ಲಿ ಹೊಸ ಸೃಷ್ಟಿಯು ಹೆಚ್ಚಾಗಿಲ್ಲವೆಂದೇ ತೋರುವುದು. ಈಗಣ ಚಿತ್ರಗಳು, ಪ್ರಭಾಲೇಖಕದ ಸಹಾಯದಿಂದ, ಏನಾದರೊಂದು ಕಥೆಯನ್ನು ತಾದ್ರೂಪಿಕವಾಗಿ ಅನುಕರಿಸುವುವೆಂದೇ ಕಾಣುವುದು. ಬಹುಮಟ್ಟಿಗೆ ಅವು ನಾಟಕಗಳ ನಿಜವಾದ ನಕಲುಗಳೇ. ಹೀಗೆ ಅನುಕರಿಸುವುದಾದರೆ ಚಲಚ್ಚಿತ್ರವೇ ಏತಕ್ಕೆಬೇಕು? ಎಂದಾದರೂ ಅದು ನಾಟಕದ ಅನುಕರಣೆಯನ್ನು ಮಾಡಿ ಅದನ್ನು ಪೂರೈಸಬಲ್ಲುದೇನು? ಎಂದೂ ಸಾಧ್ಯವಿಲ್ಲ. ತನಗೆ ದೊರಕಿರುವ ವಾಹಕದಿಂದಲೇ ತನಗೆ ವಿಶೇಷವೆನಿಸಿದ ರೀತಿಯಲ್ಲಿ, ಒಂದು ಮೂರ್ತಿಯನ್ನು ಅದು ಕಲ್ಪಿಸಬಲ್ಲುದಾದರೆ ಆಗ ಕಲೆಯೆನಿಸಿಕೊಳ್ಳಬಲ್ಲುದು. "ಎಂದು ಚಲಚ್ಚಿತ್ರವು ಕಾದಂಬರಿಗಳನ್ನು ಚಿತ್ರಿಸಲು ಬಳಸತೊಡಗಿತೋ, ಆಗ ಜನರು ಪ್ರಭಾಲೇಖಕ (Camera)ಕ್ಕೆ ತಾದ್ರೂಪಿಕ ಚಿತ್ರವನ್ನು ತೆಗೆಯಲಿರುವ ಶಕ್ತಿಯನ್ನು ಉಪಯೋಗಿಸಿದರು. ಪ್ರಾಮುಖ್ಯವೆನಿಸಿದ ನಿರ್ದೇಶನ (Direction) ಮತ್ತು ಸೃಷ್ಟನೆಯ ಶಕ್ತಿಗಳನ್ನು ಬಿಟ್ಟರು........ ವಸ್ತುಗಳನ್ನು ಭಿನ್ನಭಿನ್ನ ಕೋಣಗಳಿಂದ ಕಾಣುವಾಗ ಉಂಟಾಗುವ ವಿಕಾರಗಳು, ಚಿತ್ರಲೇಖಕ್ಕಿರುವ ಮಂದಗತಿ (slow motion), ಛದ್ಮೋಪಯೋಗ (Masking),– ಇವುಗಳಿಗಿರುವ ಉತ್ಪಾದಕ ಶಕ್ತಿಯನ್ನು ಮರೆತು ತಾದ್ರೂಪಿಕ ಅನುಕರಣೆಗಾಗಿ ಧಾವಿಸತೊಡಗಿದರು." ೧ ನಮ್ಮಲ್ಲಿ ವಿದ್ವಾಂಸರೂ ಸಹ ಈ ರೀತಿಯ ಅನುಕರಣೆಯೇ ಕಲೆಯೆಂದು ಬೆನ್ನು ಚಪ್ಪರಿಸಲು ತೊಡಗಿದರು. ಈ ರೀತಿಯ ಸುಳ್ಳು ಪ್ರಶಂಸೆಗಳಿಂದ ಜನರಲ್ಲಿನ ನಿಜವಾದ ಕಲಾಪ್ರೇಮವೂ ನಾಶವಾಯಿತು.

ಕಲಾ ಉತ್ಪತ್ತಿಗಳೆನಿಸುವವುಗಳಲ್ಲಿ ಒಂದೆರಡು ಉದಾಹರಣೆಗಳನ್ನು ವಿಮರ್ಶಿಸುವ. ಸಂಸ್ಕೃತ ಸಾಹಿತ್ಯದಲ್ಲಿ ಪಂಚತಂತ್ರಗಳಿವೆ. ಅವುಗಳಲ್ಲಿನ ಕಥಾವಿಷಯಗಳು ನಿಜವೇ? ಕಾಗೆಗಳು, ನರಿಗಳು, ಸಿಂಹಗಳು, ದನಗಳು ಮಾತನಾಡಿದುದುಂಟೇ? ಸಭೆ ಮಾಡಿದುದುಂಟೇ? ಯುದ್ಧ ಮಾಡಿದುದುಂಟೇ? ಈ ಕಥೆಗಳಲ್ಲಿ ತಾದ್ರೂಪಿಕತೆಯು ಏನಿದೆ? ನಿಸರ್ಗದ ಯಾವ ಇತಿಹಾಸವನ್ನು ಈ ಪಂಚತಂತ್ರವು ಅನುಕರಿಸಿತು? ಯಾವುದೂ ಇಲ್ಲ. ಹಾಗಾದರೆ ಇದು ಮಿಥ್ಯಾವಾದಿಯೊಬ್ಬನ ಪೊಳ್ಳು ಹರಟೆಯೇನು? ಹಾಗೂ ಅನ್ನಿರಿ, ಆದರೆ ಅವು ಕೊಡುವ ಆನಂದವು ಅಷ್ಟಿಷ್ಟಲ್ಲ. ಅಸಹಜ ಸಂದರ್ಭಗಳನ್ನು ಉಪಯೋಗಿಸಿ ಆದರಿಂದ ಉಚ್ಚವಾದ ಸತ್ಯದ ಸೃಷ್ಟಿಯಾಗಲಿಲ್ಲವೇ? ಹೀಗೆ ಮಾಡುವುದರ ಬದಲು, ಇದ್ದಕ್ಕಿದ್ದಂತೆ ಪ್ರಾಣಿಗಳ ಜೀವನದ ಕಥೆಯನ್ನು ಬರೆದರೆ ಅದು ಪ್ರಾಣಿಶಾಸ್ತ್ರವಾಗಬಹುದು. ಮನುಷ್ಯರ ಜೀವಮಾನದ ಕಥೆಯನ್ನು ಬರೆದರೆ ಅದು ಚರಿತ್ರೆಯೆನಿಸಬಹುದು – ಈ ಎರಡೂ ಆಗ ಕಲೆಯೆನಿಸಲಾರವು. ಕಾವ್ಯಕ್ಕೂ, ಚರಿತ್ರೆಗೂ ವಾಹಕವು ಒಂದೇ– ಭಾಷೆ; ಆದರೆ ಈ ಎರಡರಲ್ಲಿಯೂ ಭಾಷೆಯು ಸಾಧಿಸುವ ಗುರಿಯು ಮಾತ್ರ ಬೇರೆ. "ಚಲಚ್ಚಿತ್ರವು ತಾದ್ರೂಪಿಕವಾಗಿರುವ ಬದಲು ತಥ್ಯ (Reality) ವಾಗಿರಲು ಸಾಧ್ಯವಿದೆ." ೨

ಈಗೀಗಲಂತೂ ಈ ಚಲಚ್ಚಿತ್ರಗಳ ತಾದ್ರೂಪಿಕ ಅನುಕರಣೆಯು ಪರಾಕಾಷ್ಠೆಯನ್ನು ಹೊಂದಲೆಂದು ಸಸ್ವರ (Talkies) ಚಿತ್ರಗಳ ಸೃಷ್ಟಿಯಾಗಿದೆ. ಇನ್ನು ಮುಂದೆ ತೆರೆಯ ಮೇಲೆ ಬೀಳುವ ವಸ್ತುವಿನ ಉದ್ದ, ಅಗಲಗಳಂತೆ

೧ Paul Rotha in "Film Uptill Now" p. 39

೨ Ibid p. 48



CC-0. Jangamwadi Math Collection. Digitized by eGangotri

ದಪ್ಪವೂ ಸಹ ಕಾಣಿಸುವ ರೀತಿಯಲ್ಲಿ - ಶೋಧನೆಯನ್ನು ನಡೆಯಿಸುತ್ತಿರುವರು. ಆದರೆ ಇವುಗಳಿಂದ ಕಲೆಯ ಮೇಲ್ಮೆಯು ಎಂದೂ ಹೆಚ್ಚುವಂತಿಲ್ಲ. ಕಾರಣ ಅನುಕರಣೆಯು ಕಲೆಯ ಗುರಿಯಲ್ಲ. ಈಗಿನ ಸಸ್ವರ ಚಿತ್ರಗಳನ್ನು ಕಂಡರೆ, ಅವುಗಳಲ್ಲಿ ರಂಗಭೂಮಿಯ ಅತಿ ಹೆಚ್ಚಿನ ಅನುಕರಣೆಯನ್ನು ಕಾಣಬಹುದು. ಒಂದೇ ಮಾತೂ, ದೃಶ್ಯವೂ ಹತ್ತೆಂಟು ನಿಮಿಷಗಳ ತನಕ ಸಾಗುವುದುಂಟು. ಅದರಂತೆಯೇ ಗಾನಯುಕ್ತ ಚಿತ್ರಗಳು. ಇಂಥಾ ಚಿತ್ರಗಳಲ್ಲಿ ನೀವು ಗಾನವನ್ನೇನೋ ಒಳಿತಾಗಿ ಕೇಳಬಹುದು. ಆ ಉದ್ದೇಶವನ್ನು "ಗ್ರಾಮೊಫೋನ್" ಸಹ ಪೂರೈಸುವುದಿಲ್ಲವೆ ? ಆದರೆ ಅದರಲ್ಲಿ ಕಲಾವೈಶಿಷ್ಟ್ಯವೇನಿದೆ ?

ಈಗಣ ಚಲಚ್ಚಿತ್ರಗಳ ವಿಷಯವನ್ನು ಪರಿಶೀಲಿಸುವ. ಅವುಗಳೂ ಸಹ ಎಷ್ಟೋ ಬಾರಿ ಕಲೆಯ ಪುಷ್ಟಿಗೆ ಅನುಕೂಲವಾಗಿರುವುದಿಲ್ಲ. ಅವುಗಳಲ್ಲಿ ಪ್ರಾಮುಖ್ಯವಾದೊಂದು ಉದ್ದೇಶವೂ ಕಾಣಿಸದು. ಚಿತ್ರವು ಯಾವ ಸೃಷ್ಟಿಯನ್ನು ಸುತ್ತುವರಿದಿದೆ—ಎಂಬ ಅಂಶವೇ ಇರುವುದಿಲ್ಲ. ಪ್ರಸಿದ್ಧವಾದ ಇಲ್ಲವೆ ಜನಪ್ರಿಯವಾದ ಕಾದಂಬರಿಗಳನ್ನು ಚಿತ್ರಿಸುವುದೇ ತಮ್ಮ ಆದರ್ಶವೆಂದು ಅವುಗಳು ಸಾರುವಂತಿದೆ. ಸಾಹಿತ್ಯವು ಸಾಧಿಸಬಲ್ಲುದಾದ ಕೆಲಸವನ್ನು ಚಿತ್ರವು ಮಾಡಲಾರದ್ದುಂಟು; ಅದು ಸಾಧಿಸಬಹುದಾದ ಗುರಿಯನ್ನು ಇದು ಸಾಧಿಸಲಾರದ್ದುಂಟು. ಆದುದರಿಂದ ಸಾಹಿತ್ಯದಲ್ಲಿ ಪ್ರಸಿದ್ಧಿಗೆ ಬಂದ ವಸ್ತುವು ಚಿತ್ರದಲ್ಲಿ ಪ್ರಸಿದ್ಧಿಗೆ ಬರುವುದೆಂದು ತಿಳಿಯುವುದು ತಪ್ಪು. ಒಮ್ಮೆ ಅಂತಹ ಒಂದು ಕಲೆಯಲ್ಲಿನ ವಿಷಯವನ್ನು ಇನ್ನೊಂದು ಕಲೆಗೆ ಪರಿವರ್ತಿಸುವುದಾದರೆ ತಾದ್ರೂಪಿಕ ಅನುಕರಣೆಯು ಉಪಯೋಗಕ್ಕೆ ಬಾರದು. ಚಲಚ್ಚಿತ್ರವಾಹಕಕ್ಕಿರುವ ಸ್ವಾಭಾವಿಕವಾದ ಗುಣಗಳಿಂದ ಆ ಕಥಾಭಾವವು ಹೊರಹೊಮ್ಮುವಂತೆ ಪರಿವರ್ತಿಸಿದರೆಯೆ ಸರಿಯಾದ ಫಲವು ಸಿಕ್ಕೀತು.

ಎಂತಹ ಚಲಚ್ಚಿತ್ರವೇ ಇರಲಿ, ಅದನ್ನು ಒಂದು ನಿಶ್ಚಿತವಾದ ಗುರಿಯ ಸಲುವಾಗಿ ಉಪಯೋಗಿಸಬೇಕು. ಹಾಗೆ ಉದ್ದೇಶಿತವಾದ ಪ್ರಸಂಗವು ಚಿತ್ರದ ಸರ್ವಸ್ವವಾಗಿರಬೇಕು. ಆ ಉದ್ದೇಶವನ್ನು ಪುಷ್ಟೀಕರಿಸದ ಒಂದೇ ಒಂದು ಪಟಲದ ಚೂರೂ ಅದರಲ್ಲಿ ಸೇರಿರಬಾರದು. ಜನರನ್ನು ಹೇಗಾದರೂ ರಂಜಿಸಿದರೆ ಸಾಕು ಎನ್ನುವವರು ಈ ಮಾತನ್ನು ಗಮನಿಸಲಾರರು. ಅವರು ಜನರನ್ನು ಸಂತೋಷಗೊಳಿಸಲು ಹೊರಟವರು, ಅದಕ್ಕಾಗಿ ಯತ್ನಿಸುವರು. ಕಥಾಪ್ರಸಂಗವೆಂಬುದು ಅವರಿಗೆ ಒಂದು ನೆಪವಷ್ಟೆ. ಈ ರೀತಿಯ ಹೇಯಮಾರ್ಗವು ಈಗಣ ಚಲಚ್ಚಿತ್ರಗಳಲ್ಲಿ ಅತ್ಯಧಿಕವಾಗಿದೆ. ಗಾನನರ್ತನಗಳ ಮೇಲೆ ಜನರಿಗೆ ತುಂಬಾ ಆಸಕ್ತಿಯುಂಟೆಂದು, ಎಲ್ಲೆಲ್ಲಿಯೂ ಅದನ್ನೇ ತುಂಬಿಸಿ, ಈಗಣ 'ಕಾಲದಲ್ಲಿ ಬಹುತರವಾಗಿ ಎಲ್ಲರೂ ಹಾಡುವ ನರ್ತಿಸುವ' ( Cent percent sing and dancing ) ಚಿತ್ರಗಳನ್ನು ತಯಾರಿಸುತ್ತಿರುವರು. ನಿಜವಾಗಿಯೂ ಅವುಗಳ ಗುರಿಯೇ ಗಾಯನ ನರ್ತನಗಳು. ಹೀಗಿರಲು ಅನಾವಶ್ಯಕವಾಗಿ ಒಂದು ಕಥೆಯನ್ನು ಸೆಳೆದುತಂದು, ಅದರ ಕೊಲೆಯನ್ನು ಮಾಡಲೇಕೋ ತಿಳಿಯದು. **ಅರ್ನೆಸ್ಟ ಲುಬಿಟ್**ನು ನಿರ್ದೇಶಿಸಿದ "**ಲವ್ ಪೆರೇಡ್**" ಆಗಲಿ, **ಪಾಲ್ ಫ್ರೆಜೋಸ್**ನ '**ಬ್ರಾಡ್ವೆ**' ಯಾಗಲಿ, **ರೂಡಿವಾಲಿಯು** ನಟನಾಗಿ ಅಭಿನಯಿಸಿದ "**ವೆಗಬಾಂಡ್ ಕಿಂಗ್**" ಆಗಲಿ, ಇಲ್ಲವೆ ಇದೇ ಮಾದರಿಯ ನೂರಾರು ಚಿತ್ರಗಳಾಗಲಿ, ಕೇವಲ ಸಂಗೀತ, ನರ್ತನ, ಶೃಂಗಾರರಸಕ್ಕಾಗಿ ಜನ್ಮವೆತ್ತಿದುವು. ಆ ಉದ್ದೇಶವನ್ನು ಮರೆಮಾಚಿ ಚಲಚ್ಚಿತ್ರದ ಕಪಟವೇಷಗಳನ್ನು ಅವು ಧರಿಸುವುದೇತಕ್ಕೆ ? ಯಾವುದೊ ಒಂದು ಗುರಿಯಿಲ್ಲದ ಈ ಗೊಂದಲಗಳು ಎಂದಾದರೂ ಕಲೆಯನ್ನು ಪ್ರತಿಪಾದಿಸಬಲ್ಲುವೇ ?

ಇನ್ನೊಂದು ರೀತಿಯಲ್ಲೂ ಚಿತ್ರದ ಏಕಾಗ್ರತೆಯೂ ಕೆಡಲು ಸಾಧ್ಯವಿದೆ. ಇದು ಅಮೇರಿಕದಲ್ಲಿ ಜನ್ಮವೆತ್ತಿ, ಇತರ ದೇಶಗಳನ್ನೆಲ್ಲ ಆವರಿಸಿಕೊಂಡ ತೀವ್ರ ದುಷ್ಟವಾದ 'ಸ್ಟಾರ್' ಪದ್ಧತಿಯಿಂದ. ಕಥಾ ಪ್ರಸಂಗವೊಂದಿದೆ. ಅದರಲ್ಲಿ ಮಿಸ್, ಇಂಥವಳು ನಾಯಕಿಯಾಗುವಳು, ಎಂದು ಸಾರುವರು. ಅದಕ್ಕೆ ಸರಿಯಾಗಿ ಆ ಮಿಸ್ ಇಂಥವಳನ್ನು ಪ್ರೇಕ್ಷಕರೆದುರಿಗೆ ಎಷ್ಟು ಬೆಡಗಿನಿಂದ ತೋರಿಸಬಹುದೋ ಅಷ್ಟು ಬೆಡಗಿನಿಂದ ತೋರಿಸುವರು. ಕಥಾ ಪ್ರಸಂಗದ ಯಾವತ್ತು ಅಂಶಗಳೂ ಮಿಸ್ ಇಂಥವಳ ಸಲುವಾಗಿಯೇ ರೂಪಿತವಾಗುವುವು. ಆ ಚಿತ್ರದ ಬೆಳಕಿನ ಯೋಜನೆಯು ಸಹ, ಅವಳನ್ನು ಮುಂದಿರಿಸಿ, ಇತರರನ್ನು ಮರೆಯಿಸುವ ರೀತಿಯಲ್ಲಿಯೆ ಮಾಡಲ್ಪಡುವುದು. ಚಿತ್ರಾಂತ್ಯದಲ್ಲಿ ಮಿಸ್ ಇಂಥವಳನ್ನು ಬಿಟ್ಟರೆ ಉಳಿಯುವ ಕಥಾಭಾಗವು ಶೂನ್ಯವೆ

CC-0. Jangamwadi Math Collection. Digitized by eGangotri

ಸರಿ. ಎಂತಹ ನಟನೇ ಆಗಲಿ, ನಟಿಯೇ ಆಗಲಿ–ವಾಹಕದ ಒಂದು ಅಣುಮಾತ್ರವೆಂದು ನಾವು ತಿಳಿಯಬೇಕು. ಈ ನಟನಟಿಯರು ಕಥಾಪ್ರಸಂಗಕ್ಕೆ ಅಡಿಯಾಳಾಗುವುದನ್ನು ಬಿಟ್ಟು ನಾಯಕರಾಗತೊಡಗಿದರೆ, ಕುದುರೆಯು ನಮ್ಮನ್ನು ಸವಾರಿ ಮಾಡುವ ರೀತಿಯ ಸೊಬಗೇ ಉಂಟಾಗಬಹುದು. ಹಾಗಾದರೆ ಇಂತಹ ಚಿತ್ರಗಳು ಯಶಸ್ವಿಯಾಗಬಲ್ಲುವೇ ಎಂದು ಕೇಳಬಹುದು. ತುಂಬಾ ಯಶಸ್ವಿಯಾಗಿವೆ. ಆದರೆ ಆ ಯಶಸ್ಸು ಉತ್ಪಾದಕನ ದ್ರವ್ಯಭಂಡಾರದ ದೃಷ್ಟಿಯಿಂದ. ಹಾಗಾದರೆ ಅದರ ಪ್ರತ್ಯುತ್ತರವು ಎರಡು ವಿಷಯಗಳನ್ನು ಹೊಂದಿದೆ. ಮೊದಲನೆಯದು ಕಂಪೆನಿಯವರ ಜಾಹೀರಾತುಗಳ ಪ್ರತಾಪದಿಂದ; ಎರಡನೆಯದು ಆ ಮಿಸ್ ಇಂಥವಳ ಕಾಮಪ್ರೇರಕ ಶಕ್ತಿಯನ್ನು ಹೊಂದಿ. ಅವಳಲ್ಲಿ ಏನೇನೂ ಯೋಗ್ಯತೆಯಿಲ್ಲದಿದ್ದರೂ, ಮೋಹಕಳಾದ ಸುಂದರಿಯು, ಚಿತ್ರಭೂಮಿಗೆ ಕಾಲಿಡುವ ಮೊದಲೇ "ಸ್ಟಾರ್" ಆಗಬಲ್ಲಳು. ಈ "ಸ್ಟಾರ್" ಅಂದರೆ ನಕ್ಷತ್ರಗಳಲ್ಲಿ ಲಜ್ಜೆಯು ಕಡಿಮೆಯಾದಂತೆ ಅವರ ಮಿನುಗುವಿಕೆಯು ಹೆಚ್ಚು. ಅವಳ ಮುಖ, ಕಣ್ಣುಗಳು, ಒಳುಕುವ ಶರೀರ, ಸೊರಗಿದ ನಡು, ಉಬ್ಬಿದ ಎದೆ–ಇವೆಲ್ಲ ಅವಳ ಕೀರ್ತಿಗೆ ಸಹಾಯ್ಯಕವಾದ ವಸ್ತುಗಳು, ಬ್ರಿಟಿಷ್ ಚಲಚ್ಚಿತ್ರದಲ್ಲಿ ಯಾವುದೇ ಭೂಮಿಕೆಗಳಿಗಾಗಿ ಆರಿಸಲ್ಪಡುವ ಪ್ರತಿಯೊಬ್ಬ ಹುಡುಗಿಯೂ ಅವಳ ಬಾಹ್ಯರೂಪು ಎಷ್ಟು ಕಾಮಪ್ರೇರಕವಾಗಿದೆಯೋ ಅದರ ಪರಿಮಾಣವನ್ನು ಹೊಂದಿ ಆರಿಸಲ್ಪಡುವಳು [1] ಈ ಮಾತುಗಳು ಸಾಧಾರಣ ಯಾವತ್ತು ದೇಶಗಳಿಗೂ ಅನ್ವಯಿಸುವುವೆಂದು ಬೇರೆ ಹೇಳಬೇಕಾಗಿಲ್ಲ. ಇಂತಹ ನಟಿಯೊಬ್ಬಳನ್ನು ಪ್ರಕಟನೆಯ ಕಾಲದಲ್ಲಿ–"ತ್ರಿಲೋಕಸುಂದರಿ" ಎಂದು ಸಾರುವರು. ಹೀಗಿರುವಲ್ಲಿ ಇವಳ ಸಲುವಾಗಿ ಚಿತ್ರಾಲಯಗಳಿಗೆ ಜನರು ಧುಮುಕುವುದರಲ್ಲಿ ಆಶ್ಚರ್ಯವೇನು? ಇಂಥವರು ಕಥೆಯೊಂದರಲ್ಲಿ ಭೂಮಿಕೆಯನ್ನು ವಹಿಸಿದರೆ, ಆ ಭೂಮಿಕೆಯ ಯೋಗ್ಯತೆಯು ಏನೇ ಇರಲಿ, ಇವಳ ಉಡುಗೆಯು ಮಾತ್ರ, ಅವಳ ಶರೀರಸೌಂದರ್ಯವನ್ನು ಪ್ರದರ್ಶಿಸುವ ವಿಚಾರದಲ್ಲಿ ಆದಷ್ಟು ಕಡ್ಡಿಮೆ ಆತಂಕವನ್ನು ಮಾಡಬೇಕು. ಅವಳಿಗೆ ಇನ್ನೂ ಹೆಚ್ಚಿನ ಸೌಂದರ್ಯ ಪ್ರದರ್ಶನದ ಅವಕಾಶವು ಸಿಕ್ಕಲು, ವಸ್ತ್ರಾಪಹರಣದ ದೃಶ್ಯಗಳೂ, ಸ್ನಾನದೃಶ್ಯಗಳೂ, ನರ್ತನದಲ್ಲಿನ ಅಸಭ್ಯ ಚಲನೆಗಳೂ ಸಹಾಯಕವಾಗುವುವು. ಹಿಂದಿನ ಚಲಚ್ಚಿತ್ರದ ಪ್ರೇಕ್ಷಕವರ್ಗದ ಸ್ಥಾನದಲ್ಲಿ, ಇನ್ನೊಂದು ಜನಸಮೂಹವು ಬಂದುನಿಂತಿದೆ. ವಿದುಳಿಲ್ಲದ ಈ ಮಹಾಶಯರು, ಇಂದ್ರಿಯ ಮೋಹಕಗಳಾದ ವಸ್ತುಗಳಿಂದ ಭ್ರಮಿತರಾಗುವರು. ವಿಷಯೋತ್ತೇಜಕ ವಸ್ತುಗಳ ಮುಂದೆ ಕುಣಿಯುವರು. ತೀರ ಅಶ್ಲೀಲ ದೃಶ್ಯಗಳು ಇನ್ನಷ್ಟು ಅಸಭ್ಯವಾಗಿ ಎಲ್ಲಿ ತೋರಿಸಲ್ಪಡುವುವೋ, ಅಂತಹ ಸ್ಥಳಗಳು ಎಲ್ಲಿಯೆ ಇರಲಿ, ಪ್ರವೇಶಧನವು ಏನೇ ಇರಲಿ-ಅಲ್ಲಿಗೆ ಧಾವಿಸಿ ಕಿಕ್ಕಿರಿಯುವರು. [2]

ಇಂತಹ ಹೆಣ್ಣು ನಕ್ಷತ್ರಗಳಿರುವಂತೆಯೇ, ಗಂಡು ನಕ್ಷತ್ರಗಳೂ ಇರುವವು. ಶರೀರಸೌಂದರ್ಯವೇ ಇವರ ಜೀವಾಳ. ಕಾಮುಕತೆಯೇ ಇವರ ಸರ್ವಸ್ವ. **ಜೋನ್ ಕ್ರಾಫರ್ಡ, ಗ್ರೀಟಾಬೋರ್, ಜಾನ್ ಗಿಲ್ಬರ್ಟ, ರೊಡಾಲರೊಂಕೆ** ಮೊದಲಾದವರು ಪ್ರಸಿದ್ಧರಲ್ಲಿ ಕೆಲವರು. ಅವರಲ್ಲಿ ಇನ್ನಿತರ ಯೋಗ್ಯತೆಗಳು ಇರಬಹುದಾದರೂ, ಅವೆಲ್ಲ ವಿಷಯೋತ್ತೇಜನಕ್ಕಾಗಿಯೇ ಅರ್ಪಿಸಲ್ಪಡುವುವು. **'ಮೋಡರ್ನ್ ಮೈಡನ್ಸ್,' 'ದಿ ವಾಂಡರರ್,' 'ಶಿ,' 'ಡಿವ್ಯಾನ್ ಲೇಡಿ'** ಮೊದಲಾದ ನೂರಾರು ಚಿತ್ರಗಳು ಈ ವರ್ಗದ ನಟರ ಸೃಷ್ಟಿಗಳು. ಈಗಿನ ಚಿತ್ರಗಳಲ್ಲಿ ಅಧಿಕಾಂಶವಾದುವು ಇಂತಹವೇ.

ಇಂತಹ ಚಿತ್ರಗಳನ್ನು ಮತ್ತಷ್ಟು ಮೋಹಕವನ್ನಾಗಿ ಮಾಡಲೆಂದು ಅವುಗಳಿಗೆ ಮಿತಿಯಿಲ್ಲದಷ್ಟು ಹಣ ವ್ಯಯಿಸಿ ದೊಡ್ಡ ದೊಡ್ಡ ದೃಶ್ಯಗಳನ್ನು ಮಾಡುವರು. ಕಣ್ಣಿಗೆ ರಂಜಿಸುವ ಎಂತಹ ದೃಶ್ಯವನ್ನೂ ಅವುಗಳೆಡೆಯಲ್ಲಿ ಸೇರಿಸುವರು. "ಕಿಂಗ್ ಆಫ ಕಿಂಗ್ಸ್" ಎಂಬ ಚಿತ್ರವು ಕ್ರಿಸ್ತದೇವನ ಸಂದೇಶವನ್ನು ಸಾರುವ ಚಿತ್ರವೆಂದು ಭಾವನೆ. ಆದರೆ ಆ ಚಿತ್ರದ ಅತಿಶಯವಾದ ಬೆಡಗು, ಈ ಉದ್ದೇಶವನ್ನು ಸಂಪೂರ್ಣವಾಗಿ ಮಾಣಿಸಿ, ಕೇವಲ ಪ್ರಾಪಂಚಿಕ ವಾಸನೆಗಳಲ್ಲಿಯೆ ಪ್ರೇಕ್ಷಕರನ್ನು ಮುಳುಗಿಸುವುದು. ಬಹುವರ್ಣ (Multi-coloured) ದ ಪಟಲಾಂಶಗಳಂತೂ, ಆ ಸಂದೇಶವನ್ನು ಪ್ರತಿಪಾದಿಸುವ ಬದಲು ಹೀಯಾಳಿಸುವಂತೆ ಕಾಣುತ್ತವೆ. **ಮಾಡರ್ನ್ ಮೈಡನ್ಸ್**ನಲ್ಲಿನ

1 I bid p. 83

2 I bid p. 92

CC-0. Jangamwadi Math Collection. Digitized by eGangotri

ಬೆಡಗೂ, ರಾತ್ರಿಯ ದೃಶ್ಯಗಳೂ, ವಿಷಯೋತ್ತೇಜನ ಕ್ಕಾಗಿಯೇ ನಿಯೋಜಿಸಲ್ಪಟ್ಟಂತೆ ಕಾಣಿಸುವುವು. **ಪೊರ್ ಪೆದರ್ಸ್** ಚಿತ್ರದಲ್ಲಿನ ನೀರುಕುದುರೆ, ಮಂಗಗಳ ಓಡಾಟವು ಕಥೆಗೆ ಏನೂ ಸಂಬಂಧಿಸಿದುವಲ್ಲ. ಜನರಂಜನೆಗಾಗಿ ಸೇರಿಸಲ್ಪಟ್ಟ ಅಂಶಗಳವು.

" ಈ ಪ್ರಸಂಗಗಳನ್ನೆಲ್ಲ ಎಣಿಸುವಾಗ **ಪಾಲ್ ರೋತನ** ಮಾತುಗಳು ತೀರ ನಿಜವೆನಿಸುವುವು. ಸಾಮಾನ್ಯವಾಗಿ ಪ್ರತಿಯೊಂದು ಚಿತ್ರವೂ, ವಿಷಯೋತ್ತೇಜನೆಯೊಡನೆ ಬೆರೆತುಹೋಗಿದೆ; ಈ ಲಕ್ಷಣವು ಸಸ್ವರ ಲಕ್ಷಣಗಳಲ್ಲಿ ತೀರ ಬೆಳೆದಿದೆ. ಈ ಉದ್ದೇಶವೇ ಹಾಲಿವುಡ್, ಇಂಗ್ಲಾಂಡ ಫ್ರಾನ್ಸ್, ಜರ್ಮನಿಗಳಲ್ಲಿ-ಇತ್ತಿತ್ತ ರುಸ್ಯದಲ್ಲಿಯೂ ಸಹ ಅಲ್ಲಿನ ಚಿತ್ರಮಂಡಲದ ಮಾಲಕರನ್ನೂ ನಿರ್ದೇಶಕರನ್ನೂ ಆವರಿಸಿಕೊಂಡಿದೆ"

ಈ ಬಗೆಯ ನೀಚ ಲಾಲಸೆಗಳನ್ನು, ದೃವ್ಯಕ್ಕಾಗಿ ಹಿಂಬಾಲಿಸುವ ಚಿತ್ರಮಂಡಲಗಳಿಂದ ಕಲೆಯು ಸೃಷ್ಟಿಗೊಳಿಸಲು ಸಾಧ್ಯವಿಲ್ಲ. ವಿಷಯೋತ್ತೇಜನ, ಇಂದ್ರಿಯ ತೃಪ್ತಿಗಳನ್ನು ಕೊಡುವ, ತಾದ್ರೂಪಿಕ ಅನುಕರಣೆಯಿಂದಲೇ ಅವರ ಕೆಲಸವು ಯಶಸ್ವಿಯಾಗುವುದು. ದಂಪತಿಗಳ ಪ್ರೇಮದ ಚಿತ್ರವನ್ನು ಇನ್ನಾವ ರೀತಿಯಿಂದಲೂ ಕೊಡುವ ಕಲ್ಪನಾಬಲವು ಅವರಿಂದ ಲೋಪವಾಗಿ, ಒಂದೊಂದು ಗಳಿಗೆಯ ತನಕ ಸಾಗುವ, ಭ್ರಾಮಕ ಚುಂಬನಗಳಿಂದಲೇ ಅವರು ಅದನ್ನು ತೋರಿಸುವರು. ಅವರ ಸುಖದ ಚಿತ್ರಗಳೆಲ್ಲ ಜೀವನದ ಅನುಕರಣೆಗಳು, ( ಲಿಕಹಾಸಗಳು ! ) ಪಟಲನ ಪ್ರಬಂಧ (Composition) ದಿಂದ ಬೇಕಾದ ಭಾವಗಳನ್ನು ಅವರು ಪ್ರೇರಿಸಲಾರರು. ಇಂತಹ ಇಂದ್ರಿಯದಾಸರಿಂದ ಕಲೆಯ ಪುಷ್ಟಿಯು ಎಂದೆಂದಿಗೂ ಆಗಲಾರದು.

# ನಾಣ್ಯದ ಪ್ರಯೋಜನ

ಲೇಖಕರು:-- ಶ್ರೀ ಗುಂಜಿ ಧೀರೇಂದ್ರರಾಯರು, ಬಿ. ಕಾಮ್., ಧಾರವಾಡ

ಕಳೆದ ಸಂಚಿಕೆಯಲ್ಲಿ ಕೊಟ್ಟ ನಾಣ್ಯದ ಇತಿಹಾಸದ ಮೇಲಿಂದ ನಮ್ಮ ಜೀವಿತದಲ್ಲಿದ್ದ ನಾಣ್ಯದ ಮಹತ್ವವು ಒಡೆದು ಕಾಣುವುದು. ಇಷ್ಟು ಮಹತ್ವವಾದ ನಾಣ್ಯದ ಪ್ರಯೋಜನಗಳೇನು ? ಅದರಿಂದ ನಮಗಾಗುವ ಲಾಭವೇನು ? ಇದೆಲ್ಲವನ್ನೂ ಮೊದಲು ಹೇಳುವೆನು.

ವಿನಿಮಯ ಸಾಧನೆಯು ನಾಣ್ಯದ ಮೊದಲನೆಯ ಪ್ರಯೋಜನವು. ಒಂದು ವಸ್ತುವಿನಿಂದ ಇನ್ನೊಂದನ್ನು ತೆಗೆದುಕೊಳ್ಳುವುದಕ್ಕಾಗುವ,ಕಷ್ಟಗಳು ಅದರಿಂದಾಗುವ ಹಾನಿ, ಇವೆಲ್ಲವುಗಳ ತೊಡಕಿನಿಂದ ಪಾರಾಗುವುದಕ್ಕೆ ಮನುಷ್ಯನು ತನ್ನ ಸಂಸ್ಕೃತಿಯ ಬೆಳವಣಿಗೆಯ ಬೆಳಗಿನಲ್ಲಿಯೆ ಉಪಾಯಗಳನ್ನು ಯೋಜಿಸಲು ಯತ್ನಿಸತೊಡಗಿದನು. ದನಕರು, ಅವುಗಳ ಚರ್ಮ, ಕಾಳುಕಡಿ ಮೊದಲಾದವುಗಳನ್ನು ಮೊದಲು ತನ್ನ ಜೀವಿತಕ್ಕನುಸರಿಸಿ ನಿರ್ಮಿಸಿಕೊಂಡನು. ಬರಬರುತ್ತ ಕಾಳು-ಕಡಿ ಕೆಡಬಹುದು, ದನಕರುಗಳು ಸಾಯಬಹುದೆಂದು, ಅವನಿಗೆ ಕಂಡು ಬಂದಿತು. ಆದರೆ ಬೆಳ್ಳಿ-ಬಂಗಾರಕ್ಕೆ ಇದಾವ ಬಾಧೆಯೂ ಇಲ್ಲ. ಅವು ಎಲ್ಲರಿಗೂ ಬೇಕು. ಎಲ್ಲರೂ ಅವುಗಳನ್ನು ಕಾದಿಡುತ್ತಿದ್ದರು. ಹೀಗಾಗಿ ಅವನು ಅವುಗಳನ್ನೇ ನಾಣ್ಯಸ್ವರೂಪವಾಗಿ ಉಪಯೋಗಿಸತೊಡಗಿದನು. ಇದರಿಂದ ಮೊದಲು ಬೇರೆ ಬೇರೆ ಜನಾಂಗಗಳಿಗೆ ತಮ್ಮಲ್ಲಿ ಅನುಕೂಲವಿದ್ದ ವಸ್ತುಗಳನ್ನು ತಯಾರಿಸಿ ನಾಣ್ಯದ ಮೂಲಕ ಅವುಗಳನ್ನು ಹೆರವರಿಗೆ ಕೊಟ್ಟು ತಮಗೆ ಬೇಕಾದ ವಸ್ತುಗಳನ್ನು ದೊರಕಿಸಲು ಸುಲಭವಾಯಿತು. ಮುಂದೆ ಪ್ರತಿಜನಾಂಗದಲ್ಲಿ ಪ್ರತಿಯೊಬ್ಬನಿಗೂ ಇದರಂತೆಯೆ ತನಗೆ ಅನುಕೂಲವಿದ್ದುದನ್ನು ತಯಾರಿಸಿ ನಾಣ್ಯದ ಮೂಲಕ ಅವುಗಳ ಮಾರಾಟ ಮಾಡಿ ತನ್ನ ಜೀವನವನ್ನು ಸಾಗಿಸಲು ಶಕ್ಯವಾಯಿತು.

ಪ್ರಸ್ಥಾಪಿತ ಪ್ರಮಾಣವು ನಾಣ್ಯದ ಎರಡನೆಯ ಪ್ರಯೋಜನವು. ವಸ್ತುಗಳ ಮಾರಾಟವಾಗಬೇಕಾದರೆ, ತೆಗೆದುಕೊಳ್ಳುವವನು ಕೊಟ್ಟು ಬೇರೆ ಕೆಲವುಗಳನ್ನು

CC-0. Jangamwadi Math Collection. Digitized by eGangotri

ಕೊಳ್ಳಬೇಕಾದರೆ, ಮೊದಲು ಆವುಗಳ ಪ್ರಮಾಣವನ್ನು ಕಟ್ಟಬೇಕಾಗುವುದು. ನನ್ನ ಕಡೆಗಿದ್ದ ವಸ್ತುವಿಗೆ ಇನ್ನೊಬ್ಬನು ತನ್ನ ಕಡೆಗಿದ್ದ ಇನ್ನೊಂದು ವಸ್ತುವನ್ನು ಯಾವ ಪ್ರಮಾಣದಿಂದ ಕೊಡುವನೆಂಬುದು ನಿಶ್ಚಿತವಾದ ಮೇಲೆ ನಮ್ಮಿಬ್ಬರ ವ್ಯವಹಾರವು ಕೂಡುವುದು. ಈ ಪ್ರಮಾಣ ಇಲ್ಲದಿದ್ದರೆ ವಿನಿಮಯವು ದುಸ್ತರವಾಗುವುದು. ಎಷ್ಟೋ ಕಡೆಗೆ ಅಶಕ್ಯವಾಗಬಹುದು. ಪ್ರತಿಯೊಂದು ಸಾರೆ ಪ್ರತಿಯೊಂದು ವಸ್ತುವಿಗೆ ಆದರ ಬದಲು ಆ ಕಾಲಕ್ಕೆ ಬೇಕಾದ ಪ್ರತಿಯೊಂದು ವಸ್ತುವಿನ ಪ್ರಮಾಣವನ್ನು ಕಟ್ಟುವುದೆಂದರೆ ಬಹುದುಸ್ತರ. ವ್ಯವಹಾರಕ್ಕೆ ಅಡ್ಡಿ. ಇಬ್ಬರಿಗೂ ಅಸಮಾಧಾನ. ಇದರಿಂದ ವ್ಯವಹಾರವು ಹೆಚ್ಚುವುದಿಲ್ಲ. ವ್ಯಾಪಾರವು ಬೆಳೆಯುವುದಿಲ್ಲ. ಜನರಿಗೆ ಲಾಭವಿಲ್ಲ. ಆದ್ದರಿಂದ ಪ್ರತಿ ವ್ಯವಹಾರಕ್ಕೂ ಯಾವುದಾದರೊಂದು ಪ್ರಸ್ಥಾಪಿತ ಪ್ರಮಾಣಬೇಕು. ಅಂತಹ ಪ್ರಮಾಣವೆಂದರೆ ನಾಣ್ಯ. ವಿನಿಮಯಸಾಧನೆಯೆಂದು ಉಪಯೋಗಿಸಲ್ಪಡುವ ವಸ್ತುವೇ ಪ್ರಸ್ಥಾಪಿತ ಪ್ರಮಾಣವೆಂದೂ ಉಪಯೋಗಿಸಲ್ಪಡುವುದು. ಒಂದು ವಸ್ತುವನ್ನು ಕೊಡಬೇಕಾದರೆ ನಾವು ಆದರ ಬದಲು ವಿನಿಮಯಸಾಧನೆಯೆಂದು ನಡೆಯುವ ಇನ್ನೊಂದು ವಸ್ತುವನ್ನು ತೆಗೆದುಕೊಳ್ಳುವೆವು. ಆ ಮೇಲೆ ಆದನ್ನು ಕೊಟ್ಟು ಬೇರೆ ವಸ್ತುಗಳನ್ನು ಬೇಡುವೆವು. ಹೀಗಾಗಬೇಕಾದರೆ ವಿನಿಮಯಸಾಧನೆಯ ವಸ್ತುವಿಗೆ ಆ ಎರಡೂ ವಸ್ತುಗಳ ಪ್ರಮಾಣವನ್ನು ಕಟ್ಟಬೇಕಾಗುವುದು. ಇಂದಿಗೆ ಪೇಟೆಯಲ್ಲಿಯ ಮಾರಾಟದ ಪ್ರತಿಯೊಂದು ವಸ್ತುವಿನ ಮಹತ್ವವನ್ನು ನಾಣ್ಯವಸ್ತುವಿನ ಪ್ರಮಾಣದಿಂದ ಹೇಳಬಹುದು. ಇಂತಹ ನಾಣ್ಯವಸ್ತುವಿನಪ್ರಮಾಣವೇ ಆದರ ಬೆಲೆ,ಕ್ರಯ. ಈ ಕ್ರಯದ ಕಟ್ಟುವಿಕೆಯಿಂದ ವ್ಯವಹಾರವು ಸುಲಭವಾಗುವುದು. ವಸ್ತುಗಳ ವಿನಿಮಯವು ವಿಶೇಷವಾಗಿ ಬೆಳೆಯುವುದು.

ನಾಣ್ಯವು ಪ್ರಸ್ಥಾಪಿತ ಪ್ರಮಾಣವೆಂದೂ, ವಿನಿಮಯಸಾಧನೆಯೆಂದೂ ಒಪ್ಪಿಕೊಂಡದ್ದು ನಾಣ್ಯ ವಸ್ತುವಿನ ಸ್ವತಂತ್ರವಾದ ಮಹತ್ವಕ್ಕಾಗಿ. ವ್ಯವಹಾರದಲ್ಲಿ ನಾಣ್ಯವನ್ನು ಉಪಯೋಗಿಸುವುದು ಆ ನಾಣ್ಯದ ಇಲ್ಲವೆ ನಾಣ್ಯ ಸ್ವರೂಪಕ್ಕೆ ಇದ್ದ ನಾಣ್ಯವಸ್ತುವಿನ ಬೆಲೆಗಾಗಿ. ನಾಣ್ಯ ವಸ್ತುವು ಸ್ವತಂತ್ರವಾಗಿ ಯಾವಾಗಲೂ ಜನರಿಗೆ ಬೇರೆ ಉಪಯೋಗಕ್ಕೆ ಬೇಕಾಗುವುದೆಂದು ನಮ್ಮ ನಂಬಿಗೆಯುಂಟು. ಜನರಿಗೆ ತಮ್ಮಲ್ಲಿದ್ದ ವಸ್ತುವನ್ನು ಕೊಟ್ಟು ಬೇರೆ ತೆಗೆದುಕೊಳ್ಳಬೇಕಾದರೆ ಪ್ರತಿಯೊಂದು ಸಾರೆ ತಮಗೆ ಬೇಕಾದ ಪ್ರತಿಯೊಂದು ವಸ್ತುವಿನ ಪ್ರಮಾಣವನ್ನು ಕಟ್ಟುವದು ಕಷ್ಟವಾಗುವುದು. ಇದಲ್ಲದೆ ತಮ್ಮಲ್ಲಿದ್ದ ವಸ್ತುವನ್ನು ಮುಂದೆ ತನಗೆ ಬೇಕಾದ ಯಾವುದೇ ವಸ್ತುವನ್ನು ತೆಗೆದುಕೊಳ್ಳಲಿಕ್ಕೆಂದು ಹಾಗೆಯೆ ಕೂಡಿಸಿಟ್ಟರೆ ಅದು ಕೆಡಬಹುದು. ಹೀಗೆ ಕೆಟ್ಟಿತೆಂದರೆ ಆದರ ಉಪಯೋಗವಿಲ್ಲದಂತಾಗುವುದು. ಕಾಳುಕಡಿ ಬಹಳ ದಿವಸ ಕೂಡಿಸಿಟ್ಟರೆ ಕೆಟ್ಟು ಹೋಗುವವು. ದನಕರುಗಳು ರೋಗ ಬಂದು ಸತ್ತು ಹೋಗಬಹುದು. ಚರ್ಮ ಮೊದಲಾದುವು ಕೊಳೆತು ಹೋಗಬಹುದು. ಕಾರಣ ಮನುಷ್ಯನಿಗೆ ವ್ಯವಹಾರದಲ್ಲಿ ತಾನು ತಯಾರಿಸುವ ವಸ್ತುವು ತಯಾರಾಗಿ ಕೈಗೆ ಬಂದ ಕೂಡಲೆ ಆದನ್ನು ಕೊಟ್ಟು ಎಂದೆಂದಿಗೂ ಕೆಡದಂತಹ, ಯಾವಾಗಲೂ ಜನರಿಗೆ ಬೇಕಾಗುವಂತಹ ಸ್ವತಂತ್ರವಾದ ಇನ್ನೊಂದು ವಸ್ತುವು ಬೇಕು. ಯಾಕೆಂದರೆ ತಾನು ತಯಾರಿಸಿದ ವಸ್ತುವನ್ನು ಕೂಡಲೆ ಕೊಟ್ಟು ತನಗೆ ಬೇಕಾದ ಬೇರೆ ವಸ್ತುಗಳನ್ನು ತಂದು ಸಂಗ್ರಹಿಸಿಕೊಳ್ಳಬೇಕೆಂದರೆ ಆ ವಸ್ತುಗಳು ಮುಂದೆ ತನಗೆ ಉಪಯೋಗಕ್ಕೆ ಬೇಕಾಗುವ ವೇಳೆಗೆ ಕೆಟ್ಟು ಹೋಗಬಹುದು. ಈ ಬೆದರಿಕೆಯೂ ಅವನಿಗೆ ಇದೆ. ಹೀಗಾಗಿ ತನ್ನಲ್ಲಿದ್ದ ವಸ್ತುವನ್ನು ಕೊಟ್ಟು ಮುಂದೆ ತನಗೆ ಬೇಕಾದಾಗ, ಬೇಕಾದಂತೆ, ಬೇಕಾದ ವಸ್ತುವನ್ನು ತಂದುಕೊಳ್ಳಲಿಕ್ಕೆ ಅವನಿಗೆ ಇನ್ನೊಂದು ಸ್ವತಂತ್ರ, ಎಂದಿಗೂ ಕೆಡದಂತಹ, ಯಾವಾಗಲೂ ಜನರಿಗೆ ಬೇಕಾಗುವ, ಎಲ್ಲರೂ ಆದಕ್ಕೆ ಸ್ವತಂತ್ರವಾಗಿ ಮಹತ್ವವನ್ನು ಕೊಡುವ ಇನ್ನೊಂದು ವಸ್ತುವಿನ ಸಹಾಯವುಬೇಕು. ಇದೂ ಅಲ್ಲದೆ ಜನರಲ್ಲಿ ತಮಗೆ ಸಾಕಾಗಿ ತಾವು ಬೆಳೆಯಿಸಿದ ವಸ್ತುಗಳು ಉಳಿಯಬಹುದು. ಅವನ್ನು ಹಾಗೆಯೆ ಕಾದಿಟ್ಟರೆ ಕೆಡುವವು. ಕೆಟ್ಟ ಮೇಲೆ ಅವುಗಳ ಉಪಯೋಗವಿಲ್ಲ. ತನಗೆ ಬೇಕಾದಷ್ಟೆ ಬೆಳೆಯಿಸಬೇಕು, ಬೇಡಾದದುನ್ನು ಬಿಟ್ಟು ಬಿಡಬೇಕು ಎಂದರೆ ಮನುಷ್ಯನ ಪ್ರಗತಿಯೆ ಅಲ್ಲಿಗೆ ನಿಲ್ಲುವುದು. ತನಗೆ ಬೇಕಾದ್ದಕ್ಕಿಂತ ಹೆಚ್ಚಿಗೆ ಗಳಿಸಬೇಕು ಎಂಬ ಮನುಷ್ಯನ ಸ್ವಾರ್ಥ ಬುದ್ಧಿಯೆ ಜಗತ್ತಿನ ಪ್ರಗತಿಯ ಮೂಲಕಾರಣವೆಂದು ನನ್ನ ನಂಬಿಕೆ. ಯಾಕೆಂದರೆ



CC-0. Jangamwadi Math Collection. Digitized by eGangotri

ಆದರಲ್ಲಿ ಅಧಿಕಾರಾಭಿಲಾಷೆಯಿದೆ. ಅಧಿಕಾರದಿಂದ ಅಭಿಮಾನ ತೃಪ್ತಿಯಿಡೆ. ಹೀಗಾಗಿ ಮನುಷ್ಯನಿಗೆ ತನ್ನಲ್ಲಿದ್ದ ಹೆಚ್ಚಿನ ವಸ್ತುಗಳಿಗೆಲ್ಲ ಯಾವುದಾದರೊಂದು ಯಾವಾಗಲೂ ಕೆಡದಂತಹ ಎಲ್ಲರಿಗೂ ಎಂದಿಗೂ ಬೇಕಾಗುವ ಇನ್ನೊಂದು ವಸ್ತುವು ಬೇಕು. ಇಲ್ಲಿಯ ವರೆಗೆ ಮನುಷ್ಯನು ನಾಣ್ಯವನ್ನು ಇದೇ ರೀತಿಯಾಗಿ ಉಪಯೋಗಿಸುತ್ತ ಬಂದಿರುವನು. ಧನಸಿಧಿಯೆ ನಾಣ್ಯದ ಮಹತ್ವವಾದ ಇನ್ನೊಂದು ಪ್ರಯೋಜನವೆಂದು ಹೇಳಬಹುದು. ಧನವೆಂದರೆ ದುಡ್ಡಲ್ಲ, ನಾಣ್ಯವಲ್ಲ. ಧನವೆಂದರೆ ಮನುಷ್ಯನಿಗೆ ಅವನ ವ್ಯವಹಾರದಲ್ಲಿ, ಅವನ ಜೀವಿತದಲ್ಲಿ ಉಪಯೋಗವಾಗುವ ಯಾವುದೇ ವಸ್ತುವಿನ-ಅದಕ್ಕಿದ್ದ ನಾಣ್ಯವಸ್ತುವಿನ ಪ್ರಮಾಣವೆಂದು ಇಲ್ಲಿ ಹೇಳಬೇಕಾಗುವುದು. ನಿಧಿಯೆಂದರೆ ಸಂಚಯು, ಸಾಗರ, ಸಮುದಾಯ, ಕೂಡಿಸಿಡುವದು.

ಹೀಗೆ ನಿಧಿಯೆಂದು ಉಪಯೋಗಿಸಬೇಕಾದರೆ ನಾಣ್ಯ ವಸ್ತುವಿನ ಸ್ವತಂತ್ರ ಮಹತ್ವವು ಯಾವಾಗಲೂ ಒಂದೇ ಇರಬೇಕು. ಅದರ ಕ್ರಯವೂ ಕೂಡ ಬಹುಕಾಲದ ವರೆಗೂ ಹೆಚ್ಚುಕಡಿಮೆಯಾಗಬಾರದು. ಇಲ್ಲವಾದರೆ ನಾಣ್ಯ ವಸ್ತುವಿನ ವಿರಳಿತದ ಕೂಡ ಬೇರೆ ವಸ್ತುಗಳ ವಿರಳಿತವೂ ಆಗಿ ಅನರ್ಥವಾಗುವುದು. ಇಂದಿಗೆ ಅದಕ್ಕಿದ್ದ ಕ್ರಯದ ಮೇಲಿಂದ ವ್ಯವಹಾರ ಮಾಡಿ ಮುಂದೆ ವ್ಯವಹಾರದ ಪೂರ್ತಿಯಾಗುವಾಗ್ಗೆ ಅದರ ಕ್ರಯವು ಬೇರೆಯಾದರೆ ಲೆಕ್ಕ ತಪ್ಪಿ ಯಾರಿಗಾದರೂ ಒಬ್ಬರಿಗೆ ಹಾನಿಯಾಗುವುದು. ಮತ್ತು ಇಂತಹ ವ್ಯವಹಾರಕ್ಕೆ ಏನಾದರೊಂದು ಸಾಧನೆಯೂ ಬೇಕು. ಇಂದಿಗೆ ವ್ಯವಹಾರ ಮಾಡಿ ಅದರ ಪ್ರತಿಫಲವನ್ನು ಇನ್ನು ಒಂದು ವರ್ಷಕ್ಕೆ ಉಣ್ಣಬೇಕಾದರೆ ಎಲ್ಲರಿಗೂ ಮಾನ್ಯವಾದ ಇನ್ನೊಂದು ವಸ್ತುವು ಬೇಕು. ಮನುಷ್ಯ ಸಂಸ್ಕೃತಿಯು ಬೆಳೆದಂತೆ, ಅವನ ಬುದ್ಧಿಯು ವಿಕಾಸವಾದಂತೆ ಅವನ ವ್ಯವಹಾರವೂ ಹೆಚ್ಚು ವಿಸ್ತಾರವಾಗಿದೆ. ಮೊದಲಿನಂತೆ ಇಂದಿಗೆ ಅವನ ವ್ಯವಹಾರದ ಎಲ್ಲ ಕೊಡು-ತೆಗೆದುಕೊಳ್ಳುವದು ಕೂಡಲೆ ಆಗುವದಿಲ್ಲ. ಅವು ಒಂದಕ್ಕೊಂದು ತೊಡಕಿ ಕೊಂಡು ಹಾಗೆಯೆ, ಮುಂದಕ್ಕೆ ಮುಂದಕ್ಕೆ ಸಾಗುವವು. ಹೀಗೆ ಅಬಾಧಿತವಾಗಿ ಸಾಗಿಸಲಿಕ್ಕೆ ನಾಣ್ಯವೇ ಸಾಧನೆ. ಭವಿಷ್ಯಹಿತಸಾಧನೆಯೆ ನಾಣ್ಯದ ಮತ್ತೊಂದು ಪ್ರಯೋಜನವು.

ಇಂದಿನ ಅದ್ಭುತ ವ್ಯಾಪಾರ ರಚನೆಯು ನಾಣ್ಯದ ಮೇಲಿಲ್ಲ. ನಾಣ್ಯ ಸ್ವರೂಪಗಳ ಮೇಲಿದೆ. ಮಾತಿನ ಮೇಲಿದೆ. ಜನರ ಪರಸ್ಪರ ವಿಶ್ವಾಸದ ಮೇಲಿದೆ. ದೊಡ್ಡ ದೊಡ್ಡ ಕಾರಖಾನೆಗಳೂ, ಉಗೆಬಂಡಿಗಳೂ, ಹಡಗಗಳೂ ಆಗಿ ವ್ಯಾಪಾರದ ಗತಿಯು ಹೆಚ್ಚಿದಂತೆ ನಾಣ್ಯ ಸಂಗ್ರಹವು ಕಡಿಮೆಯಾಯಿತು. ಮತ್ತು ಇಂತಹ ಮಹತ್ವವಾದ ಉದ್ಯೋಗಗಳಲ್ಲಿ ನಾಣ್ಯವನ್ನು ಉಪಯೋಗಿಸುವುದೂ ದುಸ್ತರವಾಯಿತು. ಕಾರಣ ಕಾಲಕ್ಕನುಸರಿಸಿ ನಾಣ್ಯದ ಬದಲು ನಾಣ್ಯಸ್ವರೂಪಗಳ ಚಲನವು ಹೆಚ್ಚಿತು. ಜಗತ್ತಿನಲ್ಲಿ ಇಂದಿಗಿದ್ದ ನೂರಕ್ಕೆ ತೊಂಬತ್ತರಷ್ಟು ವ್ಯವಹಾರದಲ್ಲಿ ನಾಣ್ಯದ ಪರಿಚಯುವೇ ಇಲ್ಲ. ಕೇವಲ ನಾಣ್ಯ-ಸ್ವರೂಪದ ಮೇಲಿಂದ ಸಾಗುವದು. ಹೆಚ್ಚು ಗ್ರಾಮ್ಯವಾಗಿ ಹೇಳಬೇಕೆಂದರೆ ಇಂದಿನ ನಮ್ಮ ವ್ಯವಹಾರವು 'ಉದ್ರಿ'ಯ ಮೇಲೆ ನಡೆದಿದೆ; ಉದ್ರಿಯು (Credit) ತಳಹದಿಯು ನಾಣ್ಯಸ್ವರೂಪದ ಮೇಲೆ. ನಾಣ್ಯ-ಸ್ವರೂಪವು ನಾಣ್ಯವೇ. ಹೀಗಾಗಿ 'ಉದ್ರಿ'ಯ ಸಾಧನೆಯು ನಾಣ್ಯದ ಇನ್ನೊಂದು ಮಹತ್ವವಾದ ಪ್ರಯೋಜನವೆಂದು ನಿಃಸಂಶಯವಾಗಿ ಹೇಳಬಹುದು.



CC-0. Jangamwadi Math Collection. Digitized by eGangotri




## ಬೊಬ್ಬೆಯ ಹಬ್ಬ

ಶ್ರೀ. ಎಸ್. ಟಿ. ಬನಸೋಡೆ, ವಿಜಾಪುರ

ಬೊಬ್ಬೆಯ ಕುಟ್ಟೋಣ ಕಲ್ಲಾ
ಉಬ್ಬುಬ್ಬೋಡಿಯೋ ಶಂಖಾ ॥ ಪಲ್ಲವಿ ॥
ಬಂದಪ್ಪ ನಮ್ಮಪ—ಬಂದರೆ ಬರಲವ
ಹಿಂದಿನ ಬಾಕಿಯ—ಇಂದಿನ ಸಾಲವ
ಮುಂದಿನ ಬಡ್ಡಿಯ—ಒಂದೇ ಕಾಲಕೆ ತೀರಿಸುವ ॥
ಬಂದವ ನೋಡಕೊ !—ಒಂದೇ ಸಿಟ್ಟಿಗೆ;
ಹಿಂದಕೆ ಸರಿನೀ—ಸಿಂದಿರು ಮೇಲಕೆ
ಒಂದೇ ಗೆರೆಯಲಿ—ಸಂದಿಯ ಕೋಡಿಸ ವಕ್ರವದು ॥
ಹೌದಪ್ಪ ಹೌದೋ !—ಸದುರಿಗೆ ಬೀಳಸೆ !
ಕದರಿನ ಗಡುತರ—ಎದುರಿಸ ಗಿಡದಲಿ
ಹುದುಗಿಹ ನೋಡೆಲೆ—ಗದರಿಸಿ ಹೊಡೆಯಿರಿ ಲೋ....
ಏಳಿರಿ ಗೆಳೆಯರೆ—ಆಳಿಗೆ ಒಂದರೆ
ಜಾಳಿಗೆ ಜೋಲ್ಗಳ—ಹೋಳಿಯ ಕುಳ್ಳಿಗೆ
ಕೇಳದೆ ತರಬೇಕು—ನಾಳಿಗೆ ತಪ್ಪದೆ ಬರಲೇಬೇಕು ॥

ಒಟ್ಟಿಗೆ ಕೂಡಿರಿ—ಗುಟ್ಟಿನ ಮಾತಿದು
ಹಟ್ಟಿಯ ಕುಳ್ಳಿನ—ಮೊಟ್ಟೆಯ ತುಂಬುತ
ಕಟ್ಟಿಗೆ ಹೊರೆಗಳ—ಕಟ್ಟುತ ಬೊಬ್ಬೆಯ ಕುಟ್ಟೋಣ ॥
ಮತ್ಯಾಕಂಜಿಕಿ—ಹತ್ತಲೆ ಕತ್ತೆಯ
ಸುತ್ತಲು ಇರುವೆವು—ಒತ್ತಿಡಿ ಕಿವಿಗಳ
ಬಿತ್ತಲೊ! ಎಬ್ಬಿಸು !—ಬೆತ್ತದ ಭಡಿ ತಾ ಥಳಿಸುವೆನು ॥
ಭೀತಿಯ ಬಿಡುನೀ—ಕೂತಿರು ಕಲ್ಲನೆ
ಸೋತಿಹುದೀಗದು—ಕಾತರಿಸುವದಕೊ !
ಧೋತರ ಬಿಚ್ಚಲೆ—ಕೊರಳಿಗೆ ಹಚ್ಚಲೆ ಹಗ್ಗದೊಲು ॥
ಕತ್ತೆಯು ಜಾರಿತು—ಹತ್ತರ ಬಾರೆಲೆ
ಸುತ್ತಲು ಕಣ್ಣೀ—ರೊತ್ತಿ ಸುರಿಸಿ ನಾವ್
ಅತ್ತರೆ ಆಳುವೆವು—ಸತ್ತರೆ ಸಾಯ್ ಒಂದರಗಳಿಗೆ ॥
ಹೋಳಿಗಿತುಪ್ಪಾ—ಹೊಡಿ ನಮ್ಮಪ್ಪಾ !
ಲೋ.... ಲೋ.... ಲೋ....

ಆತ:-ಪ್ರೇಯಸೀ, ಪ್ರೇಮದ ಉರಿಯು ನನ್ನ ಎದೆಯನ್ನು ಸುಡುತ್ತದೆ.



ಆಕೆ:- ಅಬ್ಬಾ! ಬಾಯಿಂದ ಬರುವ ಹೊಗೆ ಅದರದೇ ಏನೊ!

CC-0. Jangamwadi Math Collection. Digitized by eGangotri

# ಸ್ವಾತಂತ್ರ್ಯದರ್ಶನ

ಲೇಖಕರು:— ಶ್ರೀ. ದೇವುಡು ನರಸಿಂಹ ಶಾಸ್ತ್ರಿಗಳು, ಎಂ. ಎ., ಬೆಂಗಳೂರು

( ಜಯಕರ್ಣಾಟಕದ ಈ ವರ್ಷದ ಸಂಚಿಕೆಯಲ್ಲಿ ಶ್ರೀ. ವಿನೀತರು ಬರೆದ ಯೌವನದ ಕನಸನ್ನು ಓದಿ ಬರೆದುದು )

ಬಾಳಿಗೆ ಮೊದಲು ಒಂದಿರುವಂತೆ ಕಡೆಯೂ ಒಂದಿದೆ ಯೆಂಬುದನ್ನು ಕಾಣದವರು ಯಾರು? ಆದರೂ ಬಾಳಿನ ಮೊದಲುಕಡೆಗಳ ಎಂತು - ಏಕೆಗಳನ್ನು ಕಂಡವರು ಯಾರು? ಹಾಗೆಂದು ಅವುಗಳನ್ನು ಕುರಿತು ವಿಚಾರಿಸದವರು ಯಾರು? ವಿಚಾರಿಸಿದವರು ಎಲ್ಲರೂ ಇದಿಷ್ಟು ಮಾತ್ರ ಹೇಳುವರು: ಮೊದಲು ಎಂದಲ್ಲಿ ಒಂದರ ಕಡೆ. ಒಂದರ ಕಡೆಯೆಂದಲ್ಲಿ ಇನ್ನೊಂದರ ಮೊದಲು.

ಅಡಿಮುಡಿಗಳ ಈ ಸಾಲನ್ನು ಕಂಡವರು ಅನೇಕರು ಹಿಂದೆ ಇದ್ದರು, ಈಗಲೂ ಇದ್ದಾರೆ. ಎಲ್ಲರಿಗೂ ಒಂದು ಪ್ರಶ್ನೆ ತೋರಿತು. "ಇದು ಏಕೆ? ಇಷ್ಟು ದೊಡ್ಡ ಈ ನಿಚ್ಚಣಿಕೆಯನ್ನು ಕಟ್ಟಿರುವುದು ಏಕೆ? ಏನಾದರೂ ಗುರಿಯುಂಟೇ?" ಎನ್ನಿಸಿತು. ಕೆಲವರು ಗುರಿಯುಂಟು ಎಂದರು. ಕೆಲವರು ಅಡ್ಡಗೋಡೆಯ ದೀಪದ ಹಾಗೆ "ಗುರಿಯಿರಬೇಕು. ಇಲ್ಲದೆ ಉಂಟೆ? ಆದರೆ ಅದು ಏನು ಎಂಬುದು ಮಾತ್ರ ಹೇಳಲಾಗುವುದಿಲ್ಲ" ಎಂದರು. ಗುರಿಯುಂಟು ಎಂದವರು ಗುರಿಯನ್ನು ಕುರಿತು ಹೇಳಿದರು. ಅದನ್ನು ವಿವರಿಸಿದರು. ಅದು ಇಂದಲ್ಲ, ಈ ಕ್ರಿಸ್ತಶಕ ಇಪ್ಪತ್ತನೆಯ ಶತಮಾನದಲ್ಲಿ ಅಲ್ಲ-ಯುಗಯುಗಾಂತರಗಳ ಹಿಂದೆ.

ಗುರಿಯುಂಟು ಎಂದವರು ಗುರಿಯನ್ನು ಸಾಧಿಸುವ ಹಾದಿಯನ್ನೂ ಗುರುತಿಸಿದರು. ಅವರು ಹುಟ್ಟು ಸಾವಿನ ನಡುವಿರುವ ಈ ಸಣ್ಣ ಬಾಳಿನ ಗುರಿಯನ್ನು ಅಷ್ಟೇ ಹೇಳಲಿಲ್ಲ. ಹುಟ್ಟಿನ ಹಿಂದಿರುವ ಸಾವಿನ ಆಚೆಯಿರುವ ಆ ಹಿರಿಯ ಗುರಿಯನ್ನು ಹುಡುಕಿದರು. ಹಾಗೆ ಗುರಿಯನ್ನು ಗುರುತಿಟ್ಟು ತೋರಿದವರು ವೇದದ ಋಷಿಗಳು, ಸತ್ಯಯುಗದವರು.

ಅವರಿಗೆ ತಮ್ಮ ಗುರಿಯು ಎಂಥದು ಅದರ ಆಳ ಅಗಲ ಎತ್ತರವೆಷ್ಟು ಎಂಬುದರ ಅರಿವು ಚೆನ್ನಾಗಿ ಇತ್ತು. ಅವರು ಹೇಳಿದರು: "ಇಲ್ಲಿ ಈ ಹುಟ್ಟು-ಸಾವುಗಳ ನಡುವೆ 'ನಾನಾ' ಆಗಿದೆಯಲ್ಲ-ಇದೆಲ್ಲವೂ ಅಲ್ಲಿನ ದೃಷ್ಟಿಯಿಂದ ನೋಡಿದರೆ ಚೆಲ್ಲಿರುವ ಹಿಡಿಯಗುಳು. ಅಗುಳುಗುಳೂ ಹಾರಾಡುತ್ತಿವೆ. ಆದರೆ ದೀರ್ಘವಾದ ಈ ಹಾರಾಟವೆಲ್ಲವೂ ಅಲ್ಲಿನ ದೃಷ್ಟಿಯಿಂದ ಚೋಟುದ್ದ." ಅಂದಿನವರ ಮಾತನ್ನು ಇಂದಿನವರು ನಾವೇಕೆ ಗಮನಿಸಬೇಕೆನ್ನುವಿರೇನು? ಒಂದು ಹಾಸುಗಲ್ಲು, ಊರಮುಂದಿನ ಆಲದ ಮರ ಇವುಗಳನ್ನು ಕೇಳಿ, ನಮ್ಮ ವರುಷಗಳು ಅವಕ್ಕೊಂದು ದಿನ. ನಮ್ಮ ಶತಮಾನಗಳು ಅದಕ್ಕೊಂದು ಅಯನ. ಕಡಲಿನ ತಡಿಯಲ್ಲಿ ನಿಂತು 'ಏನು ಹೇಳುವೆ:' ಎನ್ನಿ. ಅದರ ವಯಸ್ಸನ್ನು ಕೇಳಿ, ಆಗ ಹೇಳಿ ಹೌದೋ ಅಲ್ಲವೋ. "ಆ ದೃಷ್ಟಿಯಿಂದ ಇದು ಚೋಟುದ್ದ"ವೆಂಬ ದೃಷ್ಟಿಯಿಂದ ಅನಂತಕಾಲವನ್ನು ಕಂಡವರು, ಆಚೆಯಿರುವುದನ್ನು ಕಂಡರೆ ಈ ನಡುವಿರುವುದನ್ನು ತಿಳಿಯುವುದು ಸುಲಭ ಎಂದರು. ಅದು ಬೇಕೆಂದವರು ಇದು ಬೇಡವೆನ್ನಲಿಲ್ಲ. ಐಹಿಕಾಮುಷ್ಮಿಕಗಳೆರಡೂ ಬೇಕೆಂದರು. ಆದರೆ ಇಲ್ಲಿನದು ಎಲ್ಲವೂ ಮೃತ್ಯುವಿನಿಂದ ಪರಿವೇಷ್ಟಿತವಾಗಿದೆ, ಈ ಮೃತ್ಯುವನ್ನು ಏರಿಹೋದರೆ ಅಮೃತದ ಧಾಮವಿದೆ ಎಂದರು. ಅದನ್ನು ಮೋಕ್ಷವೆಂದರು. ಹುಟ್ಟು-ಸಾವುಗಳು ತೀರಿದ ಮೇಲೆ ಅದು ಎಂದರು.

CC-0. Jangamwadi Math Collection. Digitized by eGangotri

ಮೋಕ್ಷವೆಂದರೆ ಕಟ್ಟಿರುವ ಕಟ್ಟುಗಳನ್ನು ಕಿತ್ತೊಗೆಯುವುದು. ಕಟ್ಟುಗಳೆಲ್ಲವೂ ನಿಯತಿಯು, ಎಂದರೆ ಸೃಷ್ಟಿಯು ಮಾಡಿ ತೊಡಿಸಿದುದು. ದೊಡ್ಡದು ಚಿಕ್ಕದಾಗಿ ಒಂದ ದಿವಸವೇ ಈ ನಿಯತಿಯು ಹುಟ್ಟಿತು. ನಿಯತಿಯ ಹುಟ್ಟನ್ನರಿತವರು ಇಲ್ಲ. ಹಾಗೆಯೇ ಅದರ ಸಾವೂ ನಮ್ಮ ಬುದ್ಧಿಗೆ ಎಟಕದ ವಿಷಯ. ಆದರೂ ತನ್ನ ಕೈಯಲ್ಲಿರುವ ಪ್ರತಿಯೊಂದನ್ನು ಹುಟ್ಟು-ಸಾವುಗಳ ಅಚ್ಚಿಗೆ ಹಾಕಿ ತೆಗೆಯುತ್ತಿರುವುದು ಉಂಟು. ನಿಯತಿಯನ್ನು ಮೀರುವುದು ಎಂದರೆ ಅದರ ಕಟ್ಟುಗಳನ್ನು ಕಿತ್ತೆಸೆಯುವುದು; ಎಂದರೆ ಹುಟ್ಟು ಸಾವುಗಳ ಅಚ್ಚಿನ ಹೊರಗೆ ಬೀಳುವುದು; ಅಥವಾ ಚೋಟುದ್ದವನ್ನು ಮಾರುದ್ದ ಮಾಡಿ ಅದನ್ನು ಯೋಜನಾತೀತವಾಗಿ ನೂಡುವುದು.

ಹೀಗೆ ತನ್ನ ಕೈಯಿಂದ ತಪ್ಪಿಸಿಕೊಂಡು ಹೋಗುವುದು ನಿಯತಿಗೂ ಬೇಡವಾಗಿಲ್ಲ. ಮಾನವೇತರ ಪ್ರಪಂಚದಲ್ಲಿ ಕಟ್ಟುಗಳ ಸಂಖ್ಯೆ ಕಡಿಮೆ,ಆದರೆ ಬಿಗಿಯು ಹೆಚ್ಚು. ಅಲ್ಲಿ ಹಾಕಿರುವ ಕಟ್ಟುಗಳನ್ನು ಮೀರುವುದೂ ಇಲ್ಲ ಮೀರುವ ಯೋಚನೆಯೂ ಇಲ್ಲ. ಮುಂದುವರಿದು ಬಂದ ಹಾಗೆಲ್ಲ ಕಟ್ಟುಗಳ ಸಂಖ್ಯೆ ಹೆಚ್ಚು, ಬಿಗಿ ಕಡಿಮೆ. ಮಾನವತ್ವದ ಮೆಟ್ಟಲಿಗೆ ಬಂದರೆ ಕಟ್ಟುಗಳು ಸಾವಿರಾರು, ಆದರ ಬಿಗಿ ಕಡಿಮೆ. ಅದನ್ನು ಒಂದು ಸಲವಾದರೂ ಮುರಿಯಬಲ್ಲ ಚೇತನವುಂಟು ಮಾನವನಿಗೆ. ಅದು ಇವನ ಸ್ವಾತಂತ್ರ್ಯ.

ಆದರೆ ಸ್ವಾತಂತ್ರ್ಯವನ್ನು ಕೊಡುವ ಕಾಲ ಬಂದಾಗ, ನಿಯತಿಯು ಕೊಡುವುದು ನಿಯಮರಾಹಿತ್ಯದ ಸ್ಥಿತಿಯಲ್ಲ. ಅನನ್ಯಪರತಂತ್ರತೆಯನ್ನು ಅಷ್ಟು ಮಟ್ಟಿಗೆ ಕೊಡುವುದೇ ಹೊರತು, ಸ್ವ-ತಂತ್ರತೆಯನ್ನು ಎಂದರೆ ತಾನೇ ತಾನಾಗಿರುವಿಕೆಯನ್ನು ಕೊಡುವುದಿಲ್ಲ. ಹಾಗಾದರೆ ಮೋಕ್ಷವೇನು ? ನಿರ್ವಾಣವೇನು ? ಎಂದರೆ, ಅದು ಇಲ್ಲಿನ ಮಾತಲ್ಲ. ಇಲ್ಲಿಂದಾಚೆಗೆ ಹೋಗಬೇಕೆಂದವರ ಮಾತು. ಇಲ್ಲಿನವರು ಒಂದಲ್ಲ ಒಂದು ಕಟ್ಟಿಗೆ ಒಳಪಟ್ಟಿರಬೇಕು. ಅದು ಮನುಷ್ಯನ ನಿಯಮವಲ್ಲ. ಮನುಷ್ಯನನ್ನು ಮಾಡಿದ ನಿಯತಿಯ ನಿಯಮ.

ನಿಯತಿಯ ನಿಯಮದ ಜೊತೆಗೆ ಬೇರೆಬೇರೆ ಕಾಲಗಳಲ್ಲಿ ಬೇರೆಬೇರೆ ದೇಶಗಳಲ್ಲಿ ಬೇರೆಬೇರೆ ಉದ್ದೇಶಗಳಿಂದ ಮಾನವರಿಂದ ಆದ ನಿಯಮಗಳೂ ಉಂಟು. ಅದು ಕೃತ್ರಿಮವೆನ್ನಿ, ಏನಿ—ಅಂತೂ ಹತ್ತು ಮಂದಿ ಸೇರಿದೆಡೆಯಲ್ಲಿ ಕಟ್ಟುಗಳು ತಲೆಯೆತ್ತುವುದೇ ಸ್ವಭಾವ. ಕಾಡಿನಲ್ಲಿ ಅಂದವಿಲ್ಲವೆ? ಕಾಡಿನಲ್ಲಿ ಸ್ವೇಚ್ಛೆಯಾಗಿ ಬೆಳೆದ ಮರಗಳು ಚೆಂದವಲ್ಲವೆ? ಆದರೆ ನಾವು ಕಾಡಿಗೆ ಹೋಗುವುದಿಲ್ಲ. ಕಾಡು ನಮಗೆ ಬೇಡ,ನಮಗೆ ಉದ್ಯಾನ ಬೇಕು. ಹಾಗೆ ಹುಟ್ಟಿನೊಡನೆ ಕಟ್ಟೂ ಬರುವುದು.

ನಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ॥
ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ॥
ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ
ನಿಯೋಕ್ಷ್ಯತಿ ॥ ೫೯ ॥

—೧೮ನೆಯ ಅಧ್ಯಾಯ, ಗೀತಾ

ಈ ಮಾನವನಿರ್ಮಿತ ನಿಯಮಗಳಲ್ಲಿ ಕೆಲವು ನಿಯತಿಯ ನಿಯಮಕ್ಕೆ ಸಮ್ಮತವಾದುವು. ಕೆಲವು ಅದಕ್ಕೆ ಸಂಬಂಧಿಸದವು. ಈ ನಿಯತಿಯ ನಿಯಮಕ್ಕೆ ಸಂಬಂಧಿಸದ ನಿಯಮಗಳನ್ನು ಕಿತ್ತು ಒಗೆಯುವುದು ಸಾಧ್ಯ, ಸುಲಭ. ಅವುಗಳಿಂದ ನಷ್ಟವೂ ಇಲ್ಲ. ಆದರೆ ನಿಯತಿಯ ನಿಯಮಕ್ಕೆ ಅನುಸಾರವಾದ ನಿಯಮಗಳನ್ನು ಕಿತ್ತೊಗೆಯುವುದು ಹೇಗೆ? ಹಾಗೆಂದು ಮಾನವನು ಸುಮ್ಮನಿರುವುದಿಲ್ಲ. ಅವುಗಳನ್ನು ಕಿತ್ತು ಒಗೆಯಬೇಕೆಂದು ಹಗಲೂ ಇರುಳೂ ಯತ್ನಿಸುತ್ತಾನೆ. ಮೂರುಹೊತ್ತೂ ಅದೇ ಯೋಚನೆ. ಸಾಮಾನ್ಯವಾಗಿ ಮನುಷ್ಯಜೀವನವೆಲ್ಲವೂ ನಿಯತಿಯು ಹೊರಿಸಿದ ಕಟ್ಟುಗಳ ಹೊರೆಯನ್ನು ಇಳಿಸುವುದರಲ್ಲಿ ಮಾಡುವ ಪ್ರಯತ್ನಗಳೇ.

ಕಟ್ಟುಗಳನ್ನು ಕಿತ್ತೊಗೆಯುವ ಬಗೆ ಹೇಗೆ? ಎಂಬುದು ದೊಡ್ಡ ಪ್ರಶ್ನೆ. ಕಿತ್ತೊಗೆಯುವುದರಲ್ಲೂ ಕ್ರಮವಿರಬೇಕೆನ್ನುವವರು ಕೆಲವರು. ಕಿತ್ತೊಗೆಯುವುದರಲ್ಲಿ ಕ್ರಮವೇನು ? ಕಿತ್ತ, ಒಗೆದ, ಅಷ್ಟೇ—ಎನ್ನುವವರು ಕೆಲವರು. ಕ್ರಮವಾಗಿ ಕಿತ್ತೊಗೆಯುವುದರಲ್ಲಿ ಉದ್ದೇಶವಿದೆ. ಎರಡನೆಯದರಲ್ಲಿ ಅದು ಇಲ್ಲ. ಉದ್ದೇಶವಿದ್ದು ಮಾಡುವುದು ನಿಯತಿಯ ಪದ್ಧತಿ. ಸಂಹಾರವು ಅದರ ಆಟದಲ್ಲಿ ಕೊನೆಯಲ್ಲ. ಇದು ಮುಗಿಯಿತು, ಇನ್ನೊಂದು ಬರಬೇಕು, ಬರುವುದರ ಹಾದಿಯಲ್ಲಿ ಇದು ವಿಘ್ನವಾಗಿರಕೂಡದು ಎಂದು ಇದನ್ನು ಆ ಹಾದಿಯಿಂದ ಅತ್ತ ತೆಗೆದಿಡುವುದು—ಅದು ಸಂಹಾರ. ಸಂಹಾರವು ಅಂತಿಮ ಲೀಲೆಯಲ್ಲ. ಇನ್ನೊಂದರ ಆರಂಭವನ್ನು ಸೂಚಿಸುವ ಕೊಂಬಿನ ಕೂಗು.



CC-0. Jangamwadi Math Collection. Digitized by eGangotri

"ಕಿತ್ತು, ಒಗೆದ" ಕ್ರಮದಲ್ಲಿ ಅಂತಹ ಉದ್ದೇಶವಿಲ್ಲ. ಕಟ್ಟು ಬಿಗಿಯುವಷ್ಟು ತಾವು ಬಳೆದರೆಂದೋ, ಬರು ಬರುತ್ತ ಕಟ್ಟು ಕಿರಿದಾಗಿ ಬಿಗಿಯಿತೆಂದೋ-ಅಂತು ಕಟ್ಟು ಕಿತ್ತೊಗೆದರು, ಅಷ್ಟೆ! ಹದಿನೇಳನೆಯ ಶತಮಾನದ ಅಂತ್ಯ ದಲ್ಲಿ ಫ್ರಾನ್ಸಿನಲ್ಲಿ ಇಂತಹ ಕಟ್ಟು ಕಿತ್ತೊಗೆದ ಕೆಲಸ ವೊಂದು ('ಕ್ರಾಂತಿ' ಯೊಂದು) ನಡೆಯಿತು. ಆದರೆ ಕಿತ್ತೊಗೆದ ಕಟ್ಟಿಗೆ ಪ್ರತಿಯಾಗಿ ಇನ್ನೊಂದು ಕಟ್ಟು ಇರ ಲಿಲ್ಲವಾಗಿ, ಅದು ನಿರುದ್ದೇಶಸಂಹಾರವಾಗಿ ಪರಿಣಮಿಸಿ ಭಯಂಕರರೂಪವನ್ನು ಪಡೆದ ರಕ್ಕಸಿಯಾಯಿತು. ನಿರಂಕುಶ ರಾಜಾಧಿಕಾರವನ್ನು ಪ್ರತಿಭಟಿಸಲು ಹೊರಟ ಪ್ರತೀಕಾರಕ್ರಮವು ತಾನೆದುರಿಸಿ ಮೂಲೋತ್ಪಾಟನ ಮಾಡಿದ ರಾಜರ ನಿರಂಕುಶ ಪ್ರಭುತ್ವಕ್ಕಿಂತಲೂ ನಿರಂಕುಶ ವಾಗಿ ಜನರನ್ನು ಗೋಳಿಡಿಸಿತು. ಕೊನೆಗೇನಾಯಿತು ಎಂಬುದು ಚರಿತ್ರೆಯ ವಿಷಯ. ಇಲ್ಲಿಗೆ ಅಪ್ರಸಕ್ತ.

ಹುಟ್ಟು ಸಾವುಗಳು ಬಾಳಿನ ಈ ಕೊನೆ ಆ ಕೊನೆಗಳು. ವ್ಯಕ್ತಿಗಳಂತೆ ಕಟ್ಟುಕಟ್ಟಲೆಗಳೂ ಸಾಯಲೇಬೇಕು ಹುಟ್ಟಲೇಬೇಕು. ಅದು ನಿಯತಿಗೂ ಸಮ್ಮತವಾದ ವಿಷ ಯವೇ! ಆದರೆ ಸಾಯಿಸುವವರು ಮಾತ್ರ ಜಾಗರೂಕ ರಾಗಿರಬೇಕು. ನಿಯಮಗಳನ್ನು ಕ್ರಮವರಿತು ಒಂದು ಉದ್ದೇಶಕ್ಕಾಗಿ ತಕ್ಕಷ್ಟು ಬಲವಿಟ್ಟುಕೊಂಡು ಮುರಿದರೆ ಆ ಸಂಹಾರವು ಮುಂದಿನ ಸೃಷ್ಟಿಯ ನಾಂದಿಯಾಗು ವುದು. ಇಂತಹ ಸಬಲನಿರೋಧವನ್ನು ಲೋಕವು ತನ್ನ ತಲೆಯ ಮೇಲಿಟ್ಟು ಪೂಜಿಸುವುದು.

ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನ
ಸಂಶಯಂ ||
ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ||೪೧||
೪ನೆಯ ಅಧ್ಯಾಯ, ಗೀತಾ

ಪಾಗಿಲ್ಲದೆ ಕ್ರಮವಿಲ್ಲದೆ ಉದ್ದೇಶವಿಲ್ಲದೆ ತಕ್ಕಷ್ಟು ಬಲ ವಿಲ್ಲದೆ ನಿಯಮಗಳನ್ನು ಮೀರುವುದೆಂದರೆ, ಅಜೀರ್ಣದ ವ್ಯಾಧಿಯಲ್ಲಿ ತೊಳಲುತ್ತ ಹಾಸಿಗೆ ಹಿಡಿದು ಮಲಗಿರುವ ವನು "ವಿಶ್ವಂ ಭಕ್ಷಯಾಮಿ" ಎಂದು ಕುಗ್ಗಿದ ದನಿಯಲ್ಲಿ ಕೂಗಿಕೊಂಡಂತೆ!

ಕ್ರಮವರಿತು ನಿಯತಿಯ ನಿಯಮಗಳನ್ನೂ ಮಾನ ವನ ಕಟ್ಟಲೆಗಳನ್ನೂ ಮೀರಲೇಬೇಕು. ಇದನ್ನೇ ವಿವೇಕಾ ನಂದರು "Man is born to conquer Nature" ಎಂಬ ಮಾತಿನಲ್ಲಿ ಹೇಳಿದರು. ಅರವಿಂದರು "we recognise that this is a world of life and action and developing organism; but the life that seeks to guide itself only by vital and material forces is a slow, dark and blundering growth. It is an attempt to approximate man to the method of vegetable and animal existence. The earth is a world of life and matter, but man is not a vegetable nor an animal; he is a spiritual and a thinking being who is set here to shape and use the animal mould for higher purposes, by higher motives, with a more divine instrumentation." ಎಂದರು. ಆ ಕ್ರಮವನ್ನೂ ಉದ್ದೇಶವನ್ನೂ ಸಾಧನವನ್ನೂ ವೇದಗಳು ಹೇಳಿರುವಂತೆ ಇನ್ನು ಎಲ್ಲಿಯೂ ಯಾರೂ ಹೇಳಿಲ್ಲ ಎಂದು ನನ್ನ ನಂಬಿಕೆ. *

---

* ವೇದಗಳಲ್ಲಿ ಹೇಳಿದ ಆ ಕ್ರಮ-ಉದ್ದೇಶ-ಸಾಧನಗಳನ್ನು ಕುರಿತು ಶ್ರೀಮಾನ್ ದೇವುಡು ಅವರು ಇನ್ನೊಂದು ಬರೆಹವನ್ನು ಬರೆ ಯುವರೆಂದು ನಂಬಿದ್ದೇವೆ.

—ಸಂ. ಜ. ಕ.

---

ಇಡಿಯ ವಿಶ್ವವು ನಿಷ್ಠುರನಿಯತಿಗೆ (Absolute Law) ಒಳಪಟ್ಟಿದೆ. ಸ್ವಾತಂತ್ರ್ಯವು ನಿಯತಿಯ ನೇತೃತ್ವದಲ್ಲಿ ಕಾರ್ಯಸ್ವಾಧೀನತೆಯನ್ನೂ ಸ್ವೇಚ್ಛಾವಿಹಾರವನ್ನೂ ಕಲ್ಪಿಸಿಕೊಡುತ್ತಿದೆ....ಬಲ್ಲವರು ಸ್ವಾತಂತ್ರ್ಯ ವನ್ನು ನಿಯತಿಗಳಲ್ಲಿ ಶ್ರೇಷ್ಠನಿಯಮವನ್ನಾಗಿ ಕಾಣುವರು; ವ್ಯಷ್ಟಿಯ ಜಾಗೃತ ಇಚ್ಛಾಶಕ್ತಿ ಮತ್ತು ಸ್ಥಳಕಾಲ ಗಳನ್ನು ಮಿಕ್ಕಿ ಪ್ರವಹಿಸುವ – ನಮ್ಮ ಮಾನವ ಜೀವನಕ್ಕೆ ಜೀವಕಳೆಯನ್ನು ಕೊಡುವ ಸನಾತನ ವಿಶ್ವಶಕ್ತಿಗಳು– ಇವುಗಳ ಸಂಮಿಶ್ರಣವನ್ನು, ಸಂಮೇಳನವನ್ನು 'ಸ್ವಾತಂತ್ರ್ಯ'ದಲ್ಲಿ ಅವರು ಕಾಣುವರು.

—ವಾಲ್ಟ್ ವ್ಹಿಟ್ಮನ್

CC-0. Jangamwadi Math Collection. Digitized by eGangotri

# ಜನಪದ ಸಾಹಿತ್ಯ

## ಉಡಾಳ ಚನ್ನಿ

(ಗಂಡಹೆಂಡಿರ ಮಾತುಕತೆ)

ಸಂಗ್ರಾಹಕರು:—ಶ್ರೀ ಅಂಕಲಗಿ ವಿಠ್ಠಪ್ಪ, ಬಬಲಾದಿ

**ಗಂಡ:**— ನೂಲೊಲ್ಯಾಕs ಚನ್ನೀ !
ನೂಲೊಲ್ಯಾಕs ಚನ್ನೀ !

**ಹೆಂಡತಿ:**— ರಾಟಲಿಲ್ಲಲೊ ಜಾಣ !
ರಾಟಲಿಲ್ಲಲೊ ಜಾಣ !

**ಕಥೆಗಾರ:**—ಮಸಿಯಾನ ಬಂಡಿಯ ಮುರಿಸಿ,
ಮಸಿಯಾನ ಬಂಡಿಯ ಮುರಿಸಿ,
ರಾಟಲ ಮಾಡಿಸಿಕೊಟ್ಟ—
ರಾಟಲ ಮಾಡಿಸಿಕೊಟ್ಟ. ॥ ೧ ॥

**ಗಂ:**— ನೂಲೊಲ್ಯಾಕs ಚನ್ನೀ !
ನೂಲೊಲ್ಯಾಕs ಚನ್ನೀ !

**ಹೆಂ:**— ಕದರು ಇಲ್ಲಲೊ ಜಾಣ !
ಕದರು ಇಲ್ಲಲೊ ಜಾಣ !

**ಕಥೆಗಾರ:**—ಕೈಯಾನ ಗುದ್ದಲಿ ಮುರಿಸಿ,
ಕೈಯಾನ ಗುದ್ದಲಿ ಮುರಿಸಿ,
ಕದರು ಮಾಡಿಸಿಕೊಟ್ಟ—
ಕದರು ಮಾಡಿಸಿಕೊಟ್ಟ. ॥ ೨ ॥

**ಗಂ:** — ನೂಲೊಲ್ಯಾಕs ಚನ್ನೀ !
ನೂಲೊಲ್ಯಾಕs ಚನ್ನೀ !

**ಹೆಂ:**— ಚಿಲ್ಲವಿಲ್ಲಲೊ ಜಾಣ !
ಚಿಲ್ಲವಿಲ್ಲಲೊ ಜಾಣ !

**ಕಥೆಗಾರ:**—ಮನೆಯಾನ ಕೋಣವು ಕಡಿಸಿ,
ಮನೆಯಾನ ಕೋಣವು ಕಡಿಸಿ,
ಚಿಲ್ಲು ಮಾಡಿಸಿಕೊಟ್ಟ—
ಚಿಲ್ಲು ಮಾಡಿಸಿಕೊಟ್ಟ. ॥ ೩ ॥

**ಗಂ:**— ನೂಲೊಲ್ಯಾಕs ಚನ್ನೀ !
ನೂಲೊಲ್ಯಾಕs ಚನ್ನೀ !

**ಹೆಂ:**— ಹವ್ಮಿಗಿ ಇಲ್ಲಲೊ ಜಾಣ !
ಹವ್ಮಿಗಿ ಇಲ್ಲಲೊ ಜಾಣ !

**ಕ:**— ನಡುವೀನ ಉಡುದಾರ ಕಡಿದು,
ನಡುವೀನ ಉಡುದಾರ ಕಡಿದು,
ಹವ್ಮಿಗಿ ಮಾಡಿಸಿಕೊಟ್ಟ—
ಹವ್ಮಿಗಿ ಮಾಡಿಸಿಕೊಟ್ಟ. ॥ ೪ ॥

**ಗಂ:**— ನೂಲೊಲ್ಯಾಕs ಚನ್ನೀ !
ನೂಲೊಲ್ಯಾಕs ಚನ್ನೀ !

**ಹೆಂ:**—ಕಟ್ಟಿ ಇಲ್ಲಲೊ ಜಾಣ !
ಕಟ್ಟಿ ಇಲ್ಲಲೊ ಜಾಣ !

**ಕ:**— ಊರಾನ ವಡ್ಡರ ಕರಿಸಿ,
ಊರಾನ ವಡ್ಡರ ಕರಿಸಿ,
ಕಟ್ಟೀ ಕಟ್ಟಿಸಿಕೊಟ್ಟ—
ಕಟ್ಟೀ ಕಟ್ಟಿಸಿಕೊಟ್ಟ. ॥ ೫ ॥

**ಗಂ:**— ನೂಲೊಲ್ಯಾಕs ಚನ್ನೀ !
ನೂಲೊಲ್ಯಾಕs ಚನ್ನೀ !

**ಹೆಂ:**— ಗೆಳತಿಯರಿಲ್ಲಲೊ ಜಾಣ !
ಗೆಳತಿಯರಿಲ್ಲಲೊ ಜಾಣ !

**ಕ:**— ಓಣ್ಯಾಗಿನವರನ ಕರಿಸಿ,
ಓಣ್ಯಾಗಿನವರನ ಕರಿಸಿ.
ಗೆಳತೇರ ಕೂಡಿಸಿ ಕೊಟ್ಟ
ಗೆಳತೇರ ಕೂಡಿಸಿ ಕೊಟ್ಟ ॥ ೬ ॥

**ಗಂ:**— ನೂಲೊಲ್ಯಾಕs ಚನ್ನೀ !
ನೂಲೊಲ್ಯಾಕs ಚನ್ನೀ !

**ಹೆಂ:**— ಗುಗ್ಗರಿ ಇಲ್ಲಲೊ ಜಾಣ !
ಗುಗ್ಗರಿ ಇಲ್ಲಲೊ ಜಾಣ !

**ಕ:**— ಗೋದಿ ಕಡ್ಲಿಯ ತರಿಸಿ,
ಗೋದಿ ಕಡ್ಲಿಯ ತರಿಸಿ,
ಗುಗ್ಗರಿ ಹಾಕಿಸಿ ಕೊಟ್ಟ—
ಗುಗ್ಗರಿ ಹಾಕಿಸಿಕೊಟ್ಟ. ॥ ೭ ॥

**ಗಂ:**— ನೂಲೊಲ್ಯಾಕs ಚನ್ನೀ !
ನೂಲೊಲ್ಯಾಕs ಚನ್ನೀ !

**ಹೆಂ:**— ನನಗ ಬರುವದಿಲ್ಲೋ ಜಾಣ !
ನನಗ ಬರುವದಿಲ್ಲೋ ಜಾಣ ! ॥ ೮ ॥

CC-0. Jangamwadi Math Collection. Digitized by eGangotri



**ಚೆಲುವು**(೩೮)†:—'ಶ್ರೀನಿವಾಸ' ರಚಿತ ಕವನ ಗುಚ್ಛ. ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾರ್ಯ ರವರು ಈ ವರೆಗೆ ಬರೆದ ಹಲವು ಪುಸ್ತಕಗಳಲ್ಲಿ ಕೆಲವು ಕವಿತೆಯ ಪುಸ್ತಕಗಳುಂಟು. ಇದೂ ಅಂತಹದೊಂದು. ಆದರೆ ಇದುವರೆಗೆ ಪ್ರಕಟವಾದ ಅವರ ಕವಿತಾಸಾಹಿತ್ಯ ದಲ್ಲಿ ಕಂಡುಬರದ ವಿಶೇಷವೊಂದು ಇಲ್ಲಿ ಆಯ್ದ ಕವಿತೆ ಗಳಲ್ಲಿದೆ. ಎಂದರೆ ಅದು ಹಿಂದಣ ಕವಿತೆಗಳಲ್ಲಿ ಕಾಣಿಸಿ ಕೊಳ್ಳುವುದೇ ಇಲ್ಲವೆಂತಲ್ಲ. ಇಲ್ಲಿ ವಿಶೇಷವಾಗಿ ಗೋಚರ ವಾಗಿದೆ- ಇಷ್ಟೇ. 'ಚೆಲುವೆ'ಂದು ಈ ಆಯ್ಕೆಗಿತ್ತ ಹೆಸರಿನಿಂದ ಆ ವೈಶಿಷ್ಟ್ಯವು ಧ್ವನಿತವಾಗುತ್ತಿದೆ. ಸ್ಥೂಲ ದೃಷ್ಟಿಗೆ ಕಾಣದ ಒಂದು ಸಗೆಯು ಒಗೆಯು ಜಗತಿಯ ಮೊಗದಲ್ಲಿ ಕವಿಗೆ ಕಾಣುತ್ತಲಿದೆ. ಅದನ್ನು ಆತ ಕಾವ್ಯ ಮುಖಾಂತರ ಹೊರಹೊಮ್ಮಿಸಲು ತವಕಗೊಳ್ಳುತ್ತಾನೆ. ಈ ಪುಸ್ತಕದಲ್ಲಿನ ೧೪ ಹಾಡುಗಳಲ್ಲಿ ಐದಾರು ಹಾಡು ಗಳು ( ಚೆಲುವ ದೇವಿ, ಕಾಡು ಹೂಗಳು, ಕೆನ್ನೈದಿಲೆ, ಒಂದು ಸಂಜೆ, ಉದ್ಯಾನದಲ್ಲಿ ) ಈ ಸೌಂದರ್ಯ ಪ್ರತೀ ತಿಗೆ ಸಾಕ್ಷಿಯಾಗಿವೆ.

ಯಾವುದರ ಬಗೆಗೆ ನಮ್ಮ ಮನಸ್ಸಿನಲ್ಲಿ ಭಾವನೆಗ ಳುಂಟಾಗುವವೊ, ಅಂತಹುದೆಲ್ಲ ಕಾವ್ಯದ ವಿಷಯವಾಗ ಬಲ್ಲುದು. ಆ ಪದಾರ್ಥವು ಸ್ಥೂಲದಿಂದ ಸೂಕ್ಷ್ಮದ ವರೆಗೆ ಯಾವುದೂ ಇರಬಹುದು. ಕಾವ್ಯದ ಹೆಗ್ಗುರುತು ಎಲ್ಲಿದೆ ಯೆಂದರೆ, ಕವಿಯು ಅದನ್ನು ತನ್ನದೊಂದು ವಿಶೇಷ ದೃಷ್ಟಿಯಿಂದ—'ರಸಾತ್ಮಕ' ವಾಗಿ ಕಾಣುವುದರಲ್ಲಿ. ಈ ರಸದೀಕ್ಷೆಯು ಕಾವ್ಯವನ್ನು ಗದ್ಯದಿಂದ ವಿಂಗಡಿಸ ಬಲ್ಲುದು. ಅಂತು, ಈ ದೀಕ್ಷೆಯೊಂದಿದ್ದರೆ, ಸಾಂತದಿಂದ ಅನಂತದ ವರೆಗೆ, ನಮ್ಮ ದೈನಂದಿನ ಸ್ಥೂಲ ಅನುಭವ ಗಳಿಂದ ನಮಗೆ ಅತಿ ವಿರಳವಾಗಿ ಗೋಚರವಾಗುವ ಸೂಕ್ಷ್ಮ ಆಂತರಿಕ ಆಧ್ಯಾತ್ಮಿಕ ಅನುಭವಗಳ ವರೆಗೆ ಎಲ್ಲವೂ ಕಾವ್ಯವಸ್ತುವಾಗಬಲ್ಲುವು ಎಂದು ಹೇಳ ಬಹುದು.

ಅಂತಹ 'ಆಂತರಿಕ' ಅನುಭವಗಳು ಕೆಲವು ಈ ಕಾವ್ಯ ಗುಚ್ಛದಲ್ಲಿನ ಹಲಹಾಡುಗಳ ವಿಷಯವಾಗಿವೆ. ಒಂದು ಬಗೆಯ 'ಸೌಂದರ್ಯಮೀಮಾಂಸೆ' ಇವುಗಳಲ್ಲಿದೆ. 'ಶ್ರೀನಿವಾಸ'ರ ಸೌಂದರ್ಯವಿಷಯಕ ವಿಚಾರಗಳನ್ನು ಈ ಪುಸ್ತಕದ ಮಟ್ಟಿಗೆ ಒಂದೆಡೆಯಲ್ಲಿ ತರಲು ಪ್ರಯತ್ನಿ ಸುವಾ.

೧. 'ನೀರು ನೆಲ ಮಲೆಸಾಲು ಹೊಂಬಿಸಿಲು ಗಾಳಿ ವನ ನಭಗಳು' ಇವೆಲ್ಲಸೇರಿ ಸಂಜೆಗೆ ಒಂದು ಬಗೆಯ ಮೆರು ಗನ್ನಿತ್ತುದನ್ನು ಕಂಡು, ಕವಿಯ ಮನವು ಒಂದು ಉನ್ನತ ಸ್ಥಿತಿಯನ್ನೇರುತ್ತಿದೆ. ಈ ಸೊಬಗಿಗೆ

ಧನದ ಕನಕದ ಹೊರೆಯು ಚೆಂದ ಎಣೆಯಹುದೆ? ಚಿನ್ನರನ್ನಗಳ ಕೃತಕ ಸೌಂದರ್ಯವು ಮೈಗಷ್ಟೆ ಅಲ್ಲ- ಮನಸ್ಸಿಗೂ ಭಾರ. ನಿರ್ವ್ಯಾಜಮನೋಹರಳಾದ ಪ್ರಕೃತಿದೇವಿಯ ಸಹವಾಸವು ವಿಶುದ್ಧತರವಾದ ಆನಂದ ವನ್ನೀಯುವುದು .... ಈ ಚೆಲುವ ನೋಟಕ್ಕೂ ಮಿಗಿ ಲಾದ ಚೆಲುವು—' ಇನ್ನಿದಕೆ ಮೆರುಗಿಡುವ ಕಲೆ ಬಂದು' ಉಂಟೇ ?— ಎಂದು ಕವಿಗೆ ಕುತೂಹಲವುಂಟಾಗಲು,

† ಇದು ನಮ್ಮ ಸಾದರಸ್ವೀಕಾರದ ಕ್ರಮಾಂಕವು

CC-0. Jangamwadi Math Collection. Digitized by eGangotri

ಮುಂದೆ ಕಂಡುದು ಎಲ್ಲ ಚೆಲುವಿಕೆಯ ಹುರುಳು–
'ನಗೆಮೊಗದ ತಿಳಿಗಣ್ಣ ನಳಿದೋಳ ಚೆಲುವೆ–ಬಳಿಯೂರ
ಬಾಳ ಬೆಳಕು.' ಕವಿಗೆ ತಟ್ಟನೆ ಪ್ರಕಾಶವಾಗುವುದು:–
ಸೃಷ್ಟಿಯಂದಕೆ ಹೆಣ್ಣಿನಂದ ಮಣಿಮುಕುರ.

ಮಗುವಾಗಿ, ಹೆಂಡತಿಯಾಗಿ, ತಾಯಾಗಿ, 'ಜಗದಂಬೆ ಯುಪಕಾರದಂತೆ ಕಳಕಳಿಸಿ' ಸ್ತ್ರೀ ಚಾರಿತ್ರ್ಯವು ವಿಶ್ವ ಸೌಂದರ್ಯದ ಅತ್ಯುದಾತ್ತರೂಪವಾಗಿ, ಪ್ರಕಟವಾಗಿದೆ. 'ಮನುಜನಸು ಗೆಲುವ ಚೆಲುವ ತತ್ತ್ವ' ವಾವುದೆಂದರೆ 'ಜಗದ ಮಾನವತಿ.'

ಇಂತು ಧನಕನಕಾದಿಗಳ ಪ್ರೀತಿಯೆಂಬ ಸ್ಥೂಲ ರೂಪ ವನ್ನಾಂತು, ಪ್ರಕೃತಿಸೌಂದರ್ಯದ ವಿಶುದ್ಧ ಪದವಿ ಯನ್ನೇರಿ, ಸ್ತ್ರೀ ಜೀವನದಲ್ಲಿ ಫಲದ್ರೂಪವಾದ ಚೆಲುವಿನ ತತ್ತ್ವವು ಸೌಂದರ್ಯೋಪಾಸಕನ ನೆನವಿನಲ್ಲಿ ಇನ್ನೂ ಹೊಸಹೊಸದಾಗಿ ಪುಟಗೊಳ್ಳುತ್ತಿದೆಯೆಂದು 'ಶ್ರೀನಿ ವಾಸ'ರು ಹೇಳುತ್ತಾರೆ. ಈ ನೆನವು 'ಚೆಲುವಿನ ವಿಕಾಸ'ದ ನಾಲ್ಕನೆಯ ಸ್ಥಲ.

ಹೊರಗದಾವುದೊ ಚೆಲುವ ಮುಗುಳರಳುತಿಹುದು;
ಒಳಗರಳುತಿಹುದಂತೆ ಅದನರಿವ ಶಕ್ತಿ.
.... .... .... .... ....
ಮನದ ಬಾಂದಳಕಿಂಥ ನೆನವು ನಕ್ಷತ್ರ;
ತಾನೊಂದು ಬೆಳಗುವುದು ದೆಸೆಯೊಂದನೆಲ್ಲ.

(ಚೆಲುವ ದೇವಿ)

೩. ಇನ್ನೊಂದೆಡೆಗೆ 'ಫಲಿಸಿದ ಬಾಳು' ಮಾತ್ರ ನಿತ್ಯ ಸತ್ಯ, ಉಳಿದುದೆಲ್ಲ ಮಿಥ್ಯವೆಂದು ಕವಿಯು ಅಭಿ ಪ್ರಾಯ ಪಡುತ್ತಾನೆ.

"ಹಿರಿದು ಕಿರಿದಲ್ಲ ಫಲಿಸಿದ ಬಾಳಿಗೆ;
.... .... .... .... ....
ಫಲಿಸೆ ಕಣವೇ ವಿಶ್ವ, ಕ್ಷಣ ಬ್ರಹ್ಮಕಲ್ಪ."

ಜೋಗದ ಜಲಪಾತವನ್ನು ನೋಡಲು ಹೊರಟಾಗ, 'ನೀಲ ಜಲದಿಂದೆದ್ದು ನಭದೆದೆಯ ತಿವಿದು ಅಲಗಿಂತೆ ನಿಂತ' ನೈದಿಲೆಯೊಂದ ಕಂಡು,

ಎನ್ನಾತ್ಮವಾಕ್ಷಣದಿ ನಿನ್ನಲ್ಲಿ ಕೆತ್ತು
ತನ್ನ ಮರೆದುದು, ಶೂನ್ಯವಾಯಿತಾ ಸುತ್ತು.

ಹಾಗೆಯೆ ಮುಂದೆ ಸಾಗಲು 'ಮಲೆನಾಡ ನದಿಗಳ ದೇವಿ ಗಂಭೀರ ಹಾಸದಲಿ ನಭವ ತೂರಿದು, ಸಿಡಿಗಿ ಜಗ, ಪಾತಾಳದೆಡೆಗೆ ಹಾರುವ ಝಳವ' ನೋಡಿ ಮತ್ತೆ ಆನಂದಪರವಶನಾಗುವನು. ಇತ್ತ 'ಎನಿತು ಚೆನ್ನ ವಾದರು ಕಿರಿದು' ತೋರುವ ಕೆನ್ನೈದಿಲೆ, ಅತ್ತ 'ಭೀಮ ಸುಂದರ ಬೃಹದ್ರೂಪ ಪಾತ.' ಆದರೂ

.... ಸೋದರ್ಯದಲಿ ನೀವು
ಜೊತೆಯಲ್ಲಿ ಸುಳಿಯುವಿರಿ ನನ್ನ ಮನಕೆ.
ಏಕೆಂದರೆ ನಿಮ್ಮ ಬಾಳು ಫಲಿಸಿದ ಬಾಳು, ನಮ್ಮದು ಹುರುಳಿಲ್ಲದುದು, ಹುಸಿ.

(ಕೆನ್ನೈದಿಲೆ)

೪. ಇನ್ನೆರಡು ಗೀತೆಗಳನ್ನು ಬದಿಬದಿಯಲ್ಲಿ ವಿಮರ್ಶಿ ಸುವ. ಕಾಡಿನಲ್ಲಿ ಸುತ್ತುತ್ತಿರುವಾಗ, ಸಾಮಾನ್ಯವಾಗಿ ನಮ್ಮ ನಾಗರಿಕನೇತ್ರಕ್ಕೆ ಗುರುತಾಗದ, 'ಮುಳ್ಳು, ಮಣ್ಣು ನೊರಜಿನ ನಡುವೆ' ಅರೆಮರೆಯಾದ ಚಿತ್ರ ವಿಚಿತ್ರ ಆಕೃತಿ ವರ್ಣ ಲಾವಣ್ಯವುಳ್ಳ ಹೂಗಳನ್ನು ಸಕೌ ತುಕವಾಗಿ ನೋಡಿ, ಜಗತ್ತಿನಲ್ಲಿ ತುಂಬಿ ಸೂಸುವ ಸೌಂದರ್ಯಲಹರಿಯೊಂದು ಕವಿಗೆ ಭಾಸಮಾನವಾಗು ವುದು.

ತಿರೆಯಲಿ ಮನುಜರು ನೋಡುವ ನೋಡದ
ಎಲ್ಲೆಡೆ ಅರಳಿದೆ ಯಾವುದೊ ಚಂದ;
ಬರಿ ನಗೆಯಾಟದಿ ಸಂತಸವಾಂತು
ಅದು ಯಾವುದೊ ನಲವಿನ ಚಕ್ಕಂದ.

ಆ ಅನಿರ್ವಚನೀಯ ಸೌಂದರ್ಯದ ಪ್ರತಿನಿಧಿಗಳಾಗಿ ಈ ಹೂಗಳು ಮೆರೆಯುತ್ತಿದ್ದರೂ ನಾವು ನೋಡಲೊಲ್ಲೆವು.

ನೋಡರು ಎಂದು ಮುನಿಯುತೆ ನುರೆದಿರೊ
ಉಳಿವುದೇನು ? ಕೊಳೆ ಕಸಗಳ ರೇವು.

ಆ ಅಮರಾನಂದದಲ್ಲಿ ಅಖಂಡವಾಗಿ ಬಾಳುವ ಪುಣ್ಯವು ಫಲಿಸವಿದ್ದರೂ, ಬಾಳಬೇಕೆಂಬ ಹೃದಯದ ಹಂಬಲಿಕೆ ಯೊಂದಿದ್ದರೂ ಎಷ್ಟೋ ಚೆನ್ನ.

ಕಾಣುವ ಸೃಷ್ಟಿಯ ಕಾಣದೆ ಸುತ್ತಿಹ
ಆನಂದಾಬ್ಧಿಯ ಅಮೃತದ ತುಂತುರು
ನೆಲ ಮೊಗ ನಭದಲಿ ಹೂ ನಗೆ ತಾರೆಯ
ರೂಪಾಂತಿಹವು, ಅನಂತ ನಿರಂತರ.
ಆ ಅಬ್ಧಿಯೊಳಾಳ್ವಾತ್ಮದ ಪುಣ್ಯ
ಬದಿಗೆ ಬಹುದೋ ಬಾರದೊ ಕಾಣೆನು !



CC-0. Jangamwadi Math Collection. Digitized by eGangotri

ಬೆಳೆಯಲಿ ನಿಮ್ಮನು ನೋಡುತೆ ನಲಿವೀ
ಕಣ್ಣ ಪುಣ್ಯ, ಇದನೆಂದಿಗು ಮಾಣೆನು.
( ಕಾಡು ಹೂಗಳು )

೪. ಕಾಡು ಹೂಗಳಂತೆಯೆ ಉದ್ಯಾನದ ' ಹೂವ ಮೋಹರ ' ವನ್ನು ನೋಡಿದೊಡನೆಯೂ ' ನ್ಯೂನತೆಯ ಧಿಕ್ಕರಿಸಿ ತೊಳಗುವ ದೇವಲೋಕದ ಬೆಳಕೊಂದು ' ಕವಿಯ ಅನುಭವಕ್ಕೆ ಬರುವುದು.

ಏನು ಚೆಲುವಿದು ಜಗದಲಿ !
ಹಾಸವೆನಿತೀ ಮೊಗದಲಿ !

ಈ ಚೆಲುವಿನ ಮೊದಲು ಎಲ್ಲಿ ?— ಎಂಬ ಕುತೂಹಲಕ್ಕೆ ಕೆಳಗಿನ ಉತ್ತರವನ್ನು ಕವಿ ಹೇಳುವನು.

ಮೊಗದೆ ನಗೆಯಿರೆ ಅರಿವೆ,— ಮರೆಯಲಿ
ನಲಿದ ಬಗೆಯಿದೆ ಎಂಬುದ;
ಜಗದೆ ಹೂವಿಂತರಳೆ ಸೃಷ್ಟಿಯ
ಒಳಗು ನಲಿದುದು ಕಾಂಬುದು.

ಈ ' ಹೂಗಳ ಮೋಹರ ' ವು ತನ್ನಷ್ಟಕ್ಕೆ ತಾನೆ ಚೆಂದ ಎಂತಲ್ಲ. ಇದು ಇನ್ನೊಂದರ—

ಜಗದ ಮೊದಲಲಿ ಒಂದು ಬಗೆಯಿದೆ;
ಮನ್ನೆಯಾತುಮವೊಂದಿದೆ;....

ಆ ' ಮನ್ನೆಯಾತುಮ ' ದ ಸಂಕೇತ ಮಾತ್ರ. ಅದು ಸೂರ್ಯ; ಇದು ಒಂದು ಕಿರಣ. ನಿಜವಾಗಿ— ಸ್ಥಿರವಾಗಿ ಇದ್ದುದು ಅದು; ಇದಲ್ಲ.

ಯಾವುದೋ ಬಗೆ ಯಾವುದೋ ನೊಗ
ಅಲ್ಲಿ ಇರುವುದರಿಂದಲೆ
ಹೂವೆನಗೆ ಸೊಗಯಿಸುವ ನಗೆಯನು
ಇಲ್ಲಿ ಚೆಲ್ಲುತ ನಿಂದಿದೆ.

ಇಷ್ಟೆ ಅಲ್ಲ— ವಿಶ್ವದಲ್ಲಿನ ಈ ಚರಸೌಂದರ್ಯವನ್ನು ನೋಡಿ ನಲಿಯುವ ' ನಾನು ' ಕೂಡ ಸ್ಥಿರನಲ್ಲ. ನೋಟಕನೂ ನೋಟವೂ ಒಂದೆಯಾಗಿರುವ ಇನ್ನೊಂದು ಅತೀತ ಜೀವನವಿದೆ. ನಾವು— ನಮಗೆ ಹಿಗ್ಗನುಂಟುಮಾಡುವ ಈ ಪ್ರಕೃತಿಯ ಮೊಗದ ನಗೆ, ಇವೆಲ್ಲ ಆ ಜೀವನದ ಅಂಶಸ್ಫುರಣಗಳು ಮಾತ್ರ. ಅಂತೂ ಅದು ದಿಟ; ಇದು ನಟಿಯಲ್ಲದಿದ್ದರೂ ಅದರ ಸೂಚನೆಗಳು.

ನಾನು ನನ್ನದು ಎಂಬ ಬದುಕನು
ಮೀರಿದಾವುದೊ ಬದುಕಿದೆ;
ಮಾನವನ ಕುಲವಳಿಯಲಳಿಯದ
ಬೇರೆ ಯಾವುದೊ ಉಳಿವಿದೆ.
ನನ್ನ ಸೋಲಲಿ ಸೋಲದೆ
ಮುನ್ನ ಹರಿಯುವ ಬಾಳಿದೆ.

ಆ ಬದುಕಿನಿಂದ— ಬಾಳಿನಿಂದ, ಆ ಬಗೆಯಿಂದ— ಮನ್ನೆಯಾತುಮದಿಂದ ಒಗೆದು ' ಎನ್ನುಸಿರು, ಬಗೆ, ಎನ್ನ ಆತುಮ ಒಂದಿದೆ. '

ಶರಧಿ ಗಾಳಿಯ ತೀವಿ ಘನಿಸುತ
ಹಿಮಕಣದ ಗಣವಹವೊಲು
ಪರಮ ಆತುಮ ತೀವಿ ಸೃಷ್ಟಿಯ
ನಮಗೆ ಜೀವವನಿತ್ತಿದೆ.

ಆ 'ಪರಾತ್ಮ' ವೆ ಮಾನವನ ಅಂತಃಕರಣದಲ್ಲಿ ತ್ರಿಗುಣಾತ್ಮಕವಾಗಿ, ಸುಖದುಃಖಾದಿ ದ್ವಂದ್ವಾತ್ಮಕವಾಗಿ, ಸಂವೇದನಾತ್ಮಕವಾಗಿ ಕಂಡು ಬರುತ್ತಿದ್ದರೂ, ಮನಸ್ಸಿಗೆ ಆಚೆಗಿರುವ ಕಲ್ಪನೆಗೆ ನಿಲುಕದಿರುವ ಅನಂತವಿಧ ಗುಣಗಳನ್ನೂ ಅದು ಪಡೆದು ಇದೆ.

ಮನುಜನಿಗೆ ಮನುಜತೆಯ ತೋರುತ,
ಮಾನವನ ಮನಕಾಣದ
ಎನಿತು ಗುಣವನೊ ಇನ್ನು ಬೇರೆಯ
ಏನವೇನನೊ ಕೊಳ್ಳುತ,
.... .... ....
ಹಬ್ಬಿಮಾಡುತ ಎತ್ತಲು
ಒಬ್ಬನಿರುವನು ನಿತ್ಯನು.
( ಉದ್ಯಾನದಲ್ಲಿ )

ಮೇಲಣ ೪ ಗೀತಗಳಲ್ಲಿ ಸೌಂದರ್ಯದ ಕಲ್ಪನೆಯನ್ನು ಕುರಿತು ಕ್ರಮಬದ್ಧವಾದ ಕೆಲವು ವಿಚಾರಗಳಿವೆ... ಸೌಂದರ್ಯವೆಂದರೇನೆಂಬ. ಅರಿತುಕೊಳ್ಳಲು ಅವು ಕೆಲವು ಪ್ರಯತ್ನಗಳೆಂದೇ ಭಾವಿಸತಕ್ಕುದು. ಅವೆಲ್ಲವುಗಳನ್ನು ಬಾಯ್ಗೂಡಿಸಲು— ಅವುಗಳಿಂದ ಒಂದು ತತ್ತ್ವಜ್ಞಾನವನ್ನು ( Philosophy ) ಹೆಣೆಯಲು ಅಥವಾ ಅವುಗಳನ್ನು ಪ್ರತ್ಯೇಕಿಸಿ ಅವುಗಳ ಸ್ವರೂಪ ನಿರ್ಣಯವನ್ನು ಮಾಡಲು ಹೆಣಗಾಡುವುದು ಸರಿಯಲ್ಲ. ಆದರೂ— 'ಉದ್ಯಾನದಲ್ಲಿ' ಎಂಬ ಕವನದಲ್ಲಿ ಪ್ಲೇಟೋನ Objective Idealism ಎಂಬ ತತ್ತ್ವವಾದಕ್ಕೆ ಅದ್ಭುತ ಸಾಮ್ಯವುಳ್ಳ ವಿಚಾರ ಸರಣಿಯೊಂದು ಅಡಕವಾಗಿದೆ.

CC-0. Jangamwadi Math Collection. Digitized by eGangotri

ಆತನೊಬ್ಬ ನಿತ್ಯಬುದ್ಧ ಶುದ್ಧ. ಆತನಿಗೆ ಕೆಲವು ದಿವ್ಯ ಕಲ್ಪನೆಗಳು ( Ideas ) ಹೊಳೆಯುತ್ತಿವೆ. ನಾವು,-ನಮಗೆ ವಿಶ್ವದಲ್ಲಿ ಗೋಚರವಾಗುವ ಸೌಂದರ್ಯ-ಜ್ಞಾನಗಳು ಅಪೂರ್ಣ: ನಾವು ಮತ್ತು ಅವು ಆ ಕೇವಲಜ್ಞಾನ ಸೌಂದರ್ಯಗಳ, ಮತ್ತವುಗಳ ನಿಜಧಾಮನಾದ ಆತನ ಮರ್ಯಾದಿತ ಪ್ರಕಟನಗಳು ....ಇತ್ಯಾದಿ. ಎಂದರೆ ನಿಜವಾಗಿ ಇರತಕ್ಕುವು ಆತ ಮತ್ತು ಆತನ ದೈವಿಕ ಭಾಸ. 'ಚೆಲುವ ದೇವಿ' ಯಲ್ಲಿನ ವಿಚಾರಕೋಟಿಯು Subjective ಇದೆ. ಎಂದರೆ ನಮ್ಮ ಮಾನಸಿಕ ಅನುಭವಕ್ಕೆ ಅದರಲ್ಲಿ ಪ್ರಾಶಸ್ತ್ಯವಿದೆ. 'ತಾಯಿ ಪ್ರಕೃತಿಯ ಮೊಗದ' ಶಾಂತಿ ಕಾಂತಿ, ಆ ಚೆಲುವಿಗೆ ರನ್ನಗನ್ನಡಿಯೆಂದು ತೋರುವ 'ಹೆಣ್ಣಿನಂದ'— ಇವೆರಡನ್ನೂ 'ಅರಿವ ಶಕ್ತಿ' ನಮ್ಮೊಳಗೆ ಅರಳುತ್ತಿರದಿದ್ದರೆ, ಅವು ವಿಫಲ. ಆ ನೆನಪಿನ ಮೂಲಕವೆ

ಕೊಳೆ ನೋಕದೊಂದು ಮೆಚ್ಚುಗೆ ಉಕ್ಕಿ ಹರಿದು
ಒಳಗ ಬೆಳಗುವುದು ಬಣ್ಣಿಪ ನುಡಿಯ ಜರೆದು.

ವರ್ಡ್ಸ್‌ವರ್ಥ್ ಕವಿಯು 'Poetry is based upon emotion recollected in tranquillity' ಎಂಬ ಕಾವ್ಯದ ವ್ಯಾಖ್ಯೆಯು ಇಲ್ಲಿ ನೆನಪಿಗೆ ಬರುತ್ತಿದೆ. 'ಮುನ್ನ ಒಮ್ಮೆ ಅನುಭವಿಸಿದ ಭಾವವನ್ನು ಮರಳಿ ಪ್ರಶಾಂತನಿಮಿಷದಲ್ಲಿ ನೆನೆಯಬೇಕು. ಹಾಗೆ ತಿಳಿಯಾಗಿ ಬಂದ ಭಾವವೆ ಕಾವ್ಯದ ಸಾಮಗ್ರಿ'.... ಅಂತು, ಈ ಕವನದಲ್ಲಿ ನಮ್ಮ ಮನಸ್ಸಿನ ಅನುಭವದ ಸಮರ್ಥನೆಯಿದ್ದರೆ, 'ಉದ್ಯಾನದಲ್ಲಿ' ಎಂಬ ಕವನದಲ್ಲಿ ಅದರ ನಿರಾಕರಣೆಯಿದ್ದಂತೆ ತೋರುವುದು. ಆದರೆ ಹೀಗೆ ಭಾವಿಸುವುದು ಅಷ್ಟು ಸಮರ್ಪಕವಲ್ಲ. 'ಕಾಡು ಹೂಗಳು' ಎಂಬಲ್ಲಿ ಆ ಆನಂದದ 'ಅಬ್ಧಿಯೊಳಾಳ್ವಾತ್ಮದ ಪುಣ್ಯ' ಫಲಿಸಬೇಕೆಂಬ ಆಳವಾದ ಹಾರಯಿಕೆಯಿದೆ. ಭಕ್ತನ ಹೃದಯವು ಇಲ್ಲಿ ಪ್ರಕಟವಾಗಿದೆ. 'ಕೆನ್ನೈದಿಲೆ' ಯಲ್ಲಿಯೂ 'ಫಲಿಸಿದ ಬಾಳಿ' ಗಾಗಿ ಕವಿ ಹಾತೊರೆಯುತ್ತಾನೆ. ಕೆನ್ನೈದಿಲೆ ಮತ್ತು ಜಲಪ್ರಪಾತ ಇವೆರಡೂ 'ಸುಂದರ'— ಏಕೆಂದರೆ ಅವುಗಳ ಅಸ್ತಿತ್ವದಲ್ಲಿ ಸಾರ್ಥಕ್ಯವಿದೆ. ಇಲ್ಲಿ ಕೀಟ್ಸ್ ಕವಿಯು

'A thing of beauty is a joy for ever.'

ಮತ್ತು

'Beauty is Truth, Truth Beauty'

ಎಂಬ ಪ್ರಸಿದ್ಧ ವಚನಗಳನ್ನು ಉದಾಹರಿಸಿದರೆ ತಪ್ಪಾಗದು. ಸುಂದರ ಜೀವನವೆ ಸತ್ಯಜೀವನವೆಂಬ ಕೀಟ್ಸನ ಭಾವವೂ, ಸುಫಲ ಜೀವನವೆ ಸತ್ಯಜೀವನವೆಂಬ 'ಶ್ರೀನಿವಾಸ'ರ ಭಾವವೂ ತತ್ತ್ವತಃ ಒಂದೆ. ಸೌಂದರ್ಯೋಪಾಸನೆಯೂ, ದೈವಭಕ್ತಿಯೂ ಅಂತರ್ಯದಲ್ಲಿ ಒಂದೆಂಬುದೆ ಇದರಬೋಧ. ಅಂತು, ನಿರ್ಬಾಧವಾದ ಸೌಂದರ್ಯವೊಂದಿದೆ; ಆದರೆ ನಮಗೆ ಮಹತ್ತ್ವವುಳ್ಳುದಾವುದೆಂದರೆ ನಮ್ಮ ಮಾನಸಿಕ ಅನುಭವಕ್ಕೆ ವೇದ್ಯವಾಗುವಂತಹದು; ಆದರೆ ನಮ್ಮ ಮನಸ್ಸನ್ನು ಆ ಕೇವಲ ಸೌಂದರ್ಯದ ಪದವಿಗೆ ಒಯ್ಯಬಲ್ಲ ಅಂತಃಕರಣದ ಪ್ರಯತ್ನವೊಂದಿದೆ. ಅದು ಎಲ್ಲಕ್ಕೂ ಹಿರಿದು. ಏಕೆಂದರೆ ಅಂತಃಕರಣವು ತಾನು ಅಪೂರ್ಣವೆಂದು ಒಪ್ಪಿಕೊಂಡು ಬಿಡುವುದು.

ಮೇಲಣ ಕವನಗಳಲ್ಲಿ 'ಶ್ರೀನಿವಾಸ'ರು ತಾತ್ತ್ವಿಕರಾಗಿ ಕಾಣುವರು. ತಮ್ಮ ತತ್ತ್ವವಿವರಣೆಯಲ್ಲಿ ಸ್ವಲ್ಪ ಅಸಂಗತರಾಗಿ ತೋರುವರು. ಆದರೀ ಅಸಂಗತಿಯನ್ನು ತಾವೇ ಕೊನೆಯ ಗೀತದಲ್ಲಿ ಒಪ್ಪಿಕೊಳ್ಳುವರು.

ಹಗಲು ಇರುಳಲಿ ಗಳಿಗೆ ಚಣದಲಿ
ಜಗವು ಸಂತತ ಚಲಿಸುತಿರ್ಪುದು;
ಬಗೆಯೊಳೆನ್ನಲಿ ಅಂತೆ ಸಂತತ
ಒಗೆಯುತಿರ್ಪುದು ದೃಷ್ಟಿಭೇದವು. *

ನಾವೂ ಚಂಚಲ, ನಮ್ಮ ಅನುಭವವೂ ಚಂಚಲ. 'ನೋಡಿದಾವುದನು ನಿಜ್ಜವೆಂಬೆನು ? ನೋಡದಾವುದನು ಇಲ್ಲವೆಂಬೆನು ?' ( ಇಲ್ಲಿ 'ಅಜ್ಞೇಯವಾದ'– Agnosticism ಇದೆಯೆಂದು ಒಮ್ಮೆಲೆ ದುಡುಕಬಾರದು. ) ನಮ್ಮ ಅನುಭವ ಬಾಲನ ನಿದ್ರೆಯಂತೆ. ಅವನ ಬಯಕೆಯ ವಸ್ತುವನ್ನು ಆತ ನಿದ್ರೆಯಲ್ಲಿದ್ದಾಗಲೆ ತಾಯಿ ತರುವಳು. ಆತ ಕ್ಷಣಮಾತ್ರ ಎಚ್ಚತ್ತು, ನೋಡಿ, ಮತ್ತೆ ನಿದ್ದೆಯಾಳದಲ್ಲಿ

* ಒಂದು ಆತ್ಮೀಯ ಸಂಭಾಷಣೆಯಲ್ಲಿಯೂ 'ಶ್ರೀನಿವಾಸ'ರು ಇದನ್ನೆ ಹೇಳಿದರು. 'I am always changing. ಆಗಾಗ ಅನಿಸಿದಂತೆ ಬರೆಯುತ್ತೇನೆ.' ಇದರರ್ಥ ಅವರ ಅನುಭವದಲ್ಲಿ ಸ್ಥಿರತೆಯಿಲ್ಲವೆಂದಲ್ಲ. ಒಂದೇ ಸತ್ಯದ ಬಗೆಗೆ ನಮ್ಮಲ್ಲಿ ವಿವಿಧಕಾಲಕ್ಕೆ ವಿವಿಧ ಭಾಸಗಳು ಆಗುವುದುಂಟು. ಅವುಗಳನ್ನೆಲ್ಲ ಯಥಾರ್ಥವಾಗಿ ಚಿತ್ರಿಸುವುದರಲ್ಲಿ ಪ್ರಾಮಾಣಿಕತನವಿದೆ.

Jangamwadi Math Collection. Digitized by eGangotri

ಮುಳುಗುವವನು; 'ಆಟ ಎಂತು ಮೊದಲಾಯಿತು' 'ನೋಟ ಎಂತು ಕೊನೆಯಪ್ಪುದು' ಆತ ಹೇಗೆ ತಿಳಿಯ ಬಲ್ಲನು ?

ನನ್ನ ತಂದು ಈ ಜಗದೊಳಿಟ್ಟವನೆ
ನನ್ನಿ ಯಾವುದೆಂಬುದನು ತೋರಿಸು;
ನಿನ್ನ ದಾರಿಯಲಿ ಬಾಳ ನಿಲ್ಲಿಸು;
ಚೆನ್ನವಪ್ಪವೊಲು ಅದನು ಬೆಳೆಯಿಸು.

(ಅರಿಕೆ)

ಮೇಲಣ ಗೀತಗಳ 'ವಸ್ತು'ವನ್ನು ಸ್ವಲ್ಪ ವಿಸ್ತಾರ ವಾಗಿ ಚರ್ಚಿಸಿದ್ದಾಯಿತು. ಅವುಗಳ 'ಶೈಲಿ'ಯನ್ನು ಕುರಿತೂ ಸ್ವಲ್ಪ ವಿಚಾರಮಾಡಿ ಉಳಿದ ಗೀತಗಳ ಕಡೆಗೆ ಹೊರಳುವೆವು. 'ಅನುಭಾವಪರ ವಿಚಾರಗಳು' (mystical ideas) ಕಾವ್ಯವಿಷಯವಾಗಲು ಅಯೋಗ್ಯವಲ್ಲವೆಂದು ಮೇಲೆ ಹೇಳಿದುದಾಗಿದೆ. ಅವಕ್ಕೆ 'ರಸದೀಕ್ಷೆ'ಯನ್ನು ಮಾತ್ರ ಕೊಡಬೇಕು. ಕಾವ್ಯವು 'a criticism of life' ಇರಬೇಕು-ಜೀವನವಿಷಯವಾಗಿ ಉದ್ಬೋಧಕ ವಿಚಾರ ಗಳನ್ನೊಳಗೊಂಡುದಾಗಬೇಕು: ಎಂಬ Mathew Arnold ನ ವಿಚಾರವು 'ಶ್ರೀನಿವಾಸ'ರಿಗೆ ಸಮ್ಮತವಿರು ವಂತೆ ತೋರುತ್ತಿದೆ. ಎಂದರೆ ಅವರು ಗೊಡ್ಡು 'ನೀತಿ ಪಾಠ' ಪ್ರಿಯರೆಂದಲ್ಲ. ಅವರು ಪ್ರಾಯಿಕವಾಗಿ ವಾಸ್ತವ ಪ್ರಿಯರು. ಯಥಾರ್ಥವಾಗಿ ಕಂಡು ಯಥೋಚಿತವಾಗಿ ನುಡಿಯಬೇಕೆಂದೆ ಅವರ ಪ್ರಯತ್ನ. ಆದುದರಿಂದ ಅವರು ಔಚಿತ್ಯ ಪ್ರಿಯರು. ಉಚಿತ ವಿಚಾರಗಳನ್ನು ಉಚಿತವಾಗಿ ಹೇಳಬೇಕೆಂದು ಅವರ ಅಪೇಕ್ಷೆ. ಕಾವ್ಯಕ್ಕೆ ವಿಚಾರೌಚಿ ತ್ಯವು ಆಗತ್ಯವಿರುವಂತೆ ಆದೊಂದು ಬಗೆಯ 'ಆವೇಶ'ವೂ ಅಗತ್ಯ. ಬರೆಬರೆಯುತ್ತಾ ಎಲ್ಲಿ ಭಾವಪರವಶರಾಗು ತ್ತಾರೋ-ಎಂದು ಶ್ರೀನಿವಾಸರು ಹಿಂಜರಿಯುತ್ತಿರು ವಂತೆ ಎನಿಸುತ್ತಿದೆ. ಇನ್ನೊಂದು ಹೆಜ್ಜೆಯನ್ನು ಮುಂದಿಡ ಬೇಕಿತ್ತೆಂದೆನಿಸುತ್ತಿದೆ. ಆದರೂ ಹಿಂದಣ ಎಷ್ಟೋ ಗೀತ ಗಳಿಗಿಂತ ಈ ಗೀತಗಳಲ್ಲಿ ಶೈಲಿಯು ಹಣ್ಣಿದುದು ಕಂಡು ಬರುತ್ತಿದೆ. ಮುಂಚಿನ ವೈಷಮ್ಯವು ಇಲ್ಲಿ ಇಲ್ಲ. ಕೆಲ ಕಡೆಗೆ ಅರ್ಥವು ತಿಳಿದುಕೊಳ್ಳಲು ಸ್ವಲ್ಪ ಗಡಚಾಗಿದ್ದರೂ, ಒಟ್ಟಾರೆ ಕಥಿತಾಸಂಗ್ರಹದ ವಿಷಯವಾಗಿಯೇ ಹೇಳ ಬಹುದು-ಶೈಲಿಯು 'ಮುಳೆಗಳ ನಡುವೆ ಮಡುಗಳನು ಕೊರೆದು, ತಿಳಿಯ ನೀಲದ ನೀಳ ಹಿರಿದ್ದು ಕೊಳಗಳೊಳು ಕಲ್ಲು ಮಣ್ಣಿನ ಹಾಸಿನಗಲದಲಿ ಹರಹಿ, ಜಲಿಸುವುದ ತಿಳಿಯದೊಲು ಮೆಲುಮೆಲನೆ ಉರುಳಿ' ಹರಿಯುತ್ತಿದ್ದ ಚೆಲುವು ಚೆಲುವಾಗಿದೆ.

**ಒಂದು ಸಂಜೆ:** 'ತಿಳಿಯ ನೀಲದ' ಆಕಾಶ, 'ನೀಲದ ಪಟದಿ ಚಿತ್ರವೆನೆ ಎಲೆಯಲುಗದೊಲು ನಿಂತ ಮರದ ಸಾಲು,' 'ಜೇಯೆಂದು ಚಿಟ್ಟೆಯ ಮೊರೆ', 'ದೇವಾಲಯದ ಓಲಗದ ಪಂಚುಳಾರಾವ', 'ಇನಿಸು ನೀಲಿಮೆಯನಾಂತ ಶರಚ್ಚಂದ್ರಿಕೆ-ಇವುಗಳ ಬಣ್ಣನೆಯಲ್ಲಿ-ಛಂದೋಗತಿ ಯಲ್ಲಿ ಕವಿಗೆ ದೊರೆತ ಅಪಾರ ಶಾಂತಿಯು ಧ್ವನಿತವಾಗು ತ್ತಿದೆ. **ಬೆಳವನ ಹಕ್ಕಿ, ಅಂಗಾಮಿಾ ಪ್ರೇಮಗೀತ**-ಇವೆರಡು ಪ್ರಣಯಗೀತಗಳು. ಬೆಳವನ ಹಕ್ಕಿಯು ಜೊತೆ ಒಂದಕ್ಕೊಂದು ಮಾರ್ದನಿ ಕೊಡುತ್ತಿವೆ. 'ಲೋಹದ ತಂತಿಗೆ ತೊಗಲಿನ ನಾರಿಗೆ ಈ ಸ್ವನ ಬಹು ದುಂಟೆ? ಮೋಹವು ಮಿಡಿಯಲು ಜೀವವು ನುಡಿಯುವ ಭಾಸ್ವರ ನಿನದವಿದು.' ಎರಡನೆಯ ಹಾಡು ಒಂದು ಅನು ವಾದ. 'ದೂರ ದೂರದೊಳಿರುತ ನಡೆದರೂ, ಜನ ನಮ್ಮ ಹಂಗಿಪುದು; ಇನ್ನು ಜೊತೆ ಬಿಡುವುದೇಕೆ?' ಎಂದು ಪ್ರಿಯನು ಕೇಳುವನು. **'ಸಾತ್ತ್ವಿಕ'** ಎಂಬುದು ಬ್ರೌನಿಂಗನ Dramatis Personae ಗಳ ಮಾದರಿಯಲ್ಲಿದೆ. ಮ. ಗಾಂಧಿಯವರಿಗೆ ಕರಾಚಿಯ ಕಾಂಗ್ರೆಸಿನಲ್ಲಿ 'ನವ ಜವಾನರು'ರು ಕರಿಯ ಹೂವುಗಳನ್ನು ಕೊಟ್ಟಾಗ ಅವರು ತೋರಿದ ತಾಳ್ಮೆಯನ್ನು ಎಲ್ಲರೂ ಬಲ್ಲರು. ಆ ಪ್ರಸಂಗವನ್ನೆ ಬಣ್ಣಿಸಿದಂತಿದೆ. ಸಾತ್ತ್ವಿಕನ ಕೆಲ ಮಾತು ಗಳನ್ನು ನೋಡುವ. 'ಜಗದ ಅಗಲಲಿಹಗೆಯೆಂಬುದೊಂದು ಇಲ್ಲ ನನಗೆ.' 'ಕೈಯೊಳೇನು? ಕತ್ತಿಯೇ ಸಾವಿನ ಬುತ್ತಿಯೇ? ಬಾ ತಾ!' 'ಜೀವನವು ಅಮೃತ, ಬೇನೆಯು ಹಿಂಸೆ; ಇದಕೆ ಅದನು ಎರೆಯುವುದು ಮರುಸು.' 'ಹಕ್ಕಿ ವಿದು ಒಂದು ಅಶ್ವತ್ಥವೆಂದ ಮಾತನರಿಯೆಯಾ?' 'ಇದಿ ಲೋಕ ನಂಟು; ಬಿಡಿಸಿದರು ಬಿಡದ ಸಿಕ್ಕು, ಗಂಟು.' 'ಮಾನವನ ಬಾಳು ಕಾಣುವನ ಮನಕೆ ತಾಳೆ ಹೂವು; 'ಅರಿದ ಅರಿತು ಮುಡಿ ಗಂಧ, ಮರೆತು ಹಿಡಿ ಮುಳ್ಳು.' 'ಅರಿದ ಗಾತುಮವೇ ಸುರಗಿ.' ಶೈಲಿ ಸನ್ನಿವೇಶಕ್ಕೆ ತಕ್ಕಂತೆ 'ಮಸೆದಲಗಿನಂತೆ' ಇದೆ. **'ಕೊಂಬು'**-ಈ ಹಾಡಿ ನಲ್ಲಿ ಶ್ರೀಮಾನ್ ಮಾಸ್ತಿಯವರ ಸೆನ್ಸಸ್ ಆಫೀಸಿನ ಚಿಡತವು ಅವರ ಕಾವ್ಯಕ್ಕೆ ಸಹಕಾರಿಯಾಗದೇ ಕಂಟಕ

CC-0. Jangamwadi Math Collection. Digitized by eGangotri

ಬರುತ್ತಿದೆ! 'ಜೇನ ಸರಿಯುವೊಲು ಇನಿದು, ಬಲ್ಲವರ ಹಾಡಿಸವೊಲು ಮೆಲಿತು' ಇರುವ ಕನ್ನಡನಾಡಿನ ಊರ ಹೆಸರುಗಳನ್ನು ಹೇಳಿ, 'ಹೆಸರಿಸ ಚೆಲುವನು ನಾಡಿನ ಬದುಕಿಗೆ ಮರಳಿ ಮೊಳೆಯಿಸಿರಿ' ಎಂದು ನಾಡಿಗರಿಗೆ ಆಹ್ವಾನವನ್ನಿತ್ತಿರುವರು. **'ಮುರಿದು ಬಿದ್ದ ವೀರ ಕಲ್ಲು'**: ಯಾವನ ಸ್ಮರಣಾರ್ಥವಾಗಿ ಈ ವೀರಕಲ್ಲು ನಿಂತಿದ್ದಿತೋ, ಆ ವೀರನು ಏತಕ್ಕಾಗಿ ಮಡಿದಿರಬಹು ದೆಂದು ಹಲವು ಯೋಚನಾತರಂಗಗಳು ಕವಿಗೆ ತೋಚಿವೆ. **'ಚಿಕ್ಕಮಲ್ಲಮ್ಮ'**: ತುರುಕರಿಂದ ಅಪಹರಿಸಲ್ಪಟ್ಟ ಮಲ್ಲಮ್ಮನು ಮರಳಿ ಗಂಡನ ಮನೆಯ ಸೇರಿದ ಮೇಲೆ ಕಲುಷಿತ ಳಾದಳೆಂಬ ಭಾವನೆಯಿಂದ ಎಲ್ಲರ ಮಾತನ್ನೂ ಅಲ್ಲಗಳೆದು ಸತಿಹೋದ ಕರುಣಕಥೆಯು ಸರಲ ಭಾಷೆಯಲ್ಲಿ ಮನ ಮುಟ್ಟುವಂತೆ ಹೇಳಲ್ಪಟ್ಟಿದೆ. **'ಕರಿ'**: 'ಅಣ್ಣ ಮಾಂಬಿ ಯನ್ನು ಕುರಿತು ಅಂದು ಕವಿತೆ ಬರೆದ ತೆರದೆ ನನ್ನ ಕುರಿತು ಒಂದ ಬರಿ' ಎಂದು ಕರಿಯುನು ಹೇಳಿದುದಕ್ಕೆ ಇದನ್ನು ಬರೆದಿದಾರೆ! ಸೂಕ್ಷ್ಮ ಪರಿಹಾಸವಿದೆ. 'ಸತ್ತ ಅಥವ ದೂರ ಇರುವ ಕಿರಿಯ ಬಾಳ ಹೊಗಳಬಹುದು; ಹತ್ತಿರಿದ್ದು ಜೀವಿಸಿಹುದ ಹಿರಿದು ಎಸಲು ಸುಲಭವಲ್ಲ' ವಾದುದರಿಂದ ಈಗಲೆ ಬೇಡ; 'ಪಾರಿವಾಳ ಕೋಳಿ ಬೇಡ, ಆಳಲು ಒಂದ ಹಿಡಿದೊ ತಿಂದೊ ವೀರನೆಂದು ಹೆಸರು ಪಡೆ....' 'ಆಗ ನಿನ್ನ ಕತೆಯ ನುಡಿವ' ಎಂದು ಹೇಳುವರು. 'ಅಲ್ಲದೆ ಆ ಮೊದಲ ಕೃತಿಯ (ಮಾಂಬಿ ಯನ್ನು) ನೋಡಿ.... ಏತರದಿದು ಕಾಡು ಕವಿತೆ'ಯೆಂದ ರಂತೆ. 'ಇಷ್ಟು ಬೇಗ ಮರಳಿ ನಿನ್ನ ಚರಿತೆಯೊರೆದು, ನಾಯಿಮರಿ, ಶಿಷ್ಟರನ್ನು ನೋಯಿಸುವುದು ತರವೆ?' **'ನೀಲಗಾರ ಮಾದ'**: ಲಾವಣಿಯ ರೀತಿಯಲ್ಲಿ ಬರೆ ದುದು. ಹುರಿಗೊಂಡ ವಿನೋದ. ತಕ್ಕ ಭಾಷೆ. ಬಾಬಯ್ಯ ಗಳ ಹಬ್ಬ (ಮೊಹರಂ) ಬಂದಾಗ 'ಯಲ್ಲಾರು ಒಂದಾರು ಯಾಸಗಳು ಹಾಕ್ಯಾರು, ಕಟ್ಟಾಳು ಮಾದ ಒರಲಿಲ್ಲ.' ಆಗ 'ಹೈದ್ರಾಲಿ ಸುಲ್ತಾನ್ರು' ಆತನನ್ನು ಕರೆಸಿ ಕೇಳಿದಾಗ 'ಮಾನಮರುವಾದಿ ಬಿಡದ್ದಂಗೆ' ಮಾದಣ್ಣ ತನ್ನ 'ಅವ್ವ ಮಾರ್‍ಯಮ್ಮ'ನ ಮಹಿಮೆಯನ್ನು ಹೇಳುತ್ತಾನೆ. 'ಸೂಲಕ್ಕೆಯಿಕ್ಕಿದರು ಪೂಜೇಲಿ ಒಪ್ಪಿಸದ ಪೆಂಚ ಕಡಿಯೋಲ್ಲ ನೀಲಗಾರ.' 'ಸಿದ್ಧ್ಯೋರ ದೇವರಿಗೆ ನಾ ಯಾಸ ಹಾಕಿದ್ರೆ ಗಾಶಿ ಮಾಡ್ತ್ಯಾಳು ಮಾರ್‍ಯಮ್ಮ!' ಎಷ್ಟೇ ವಾದಿಸಿದರೂ ನೀಲಗಾರ ಒಪ್ಪದುದನ್ನು ನೋಡಿ

'ನಿನ್ನ ಮಾರ್‍ಯಮ್ಮ ರಂಗಪ್ಪಗಿಂತ ದೊಡ್ಡೋಳೆ' ಎಂದು ಹೈದ್ರಾಲಿ ಕೇಳಲು, 'ಪಟ್ಟಣದ ಅರಸರು (ಆಗಿನ ಮೈಸೂರೊಡೆಯರು) ನಿಮಗೆ ದೊಡ್ಡೋರು.... ಬಲ್ತ ಯಾರಾದರು ಮಾತಾಡಿದರೆ ನಗುತ ಸುಮ್ಮನೆ ಇರತಾರೆ.. ನಿಮ್ಮ ಹತ್ತರ ಮಾತಾಡಿದರೆ.... ಬಿಟ್ಟೀರ?.... ಬಿಮ್ಮಗೆ ಬಿಗಿಶೀರಿ, ಗಲ್ತಾಗ್ಗು ಕೊಡಿಶೀರಿ........ ರಾಗಪ್ಪನ್ನಂಗೆ ಮಾರ್‍ಯಮ್ಮ ನಗನಗತಿದ್ರೆ ಜನ ಅವಳ ನೋಡಿ ನಕ್ಕಾತು... ಮನೆ ಮುಂದೆ ಮೆಟ್ಲು ಮಾಡ್ಯಾತು!' ಈ ಚತುರೋಕ್ತಿ ಯನ್ನು ಕೇಳಿ ಸುಲ್ತಾನ್ರು 'ಗಪ್ಪಾವ ನೀಳ್ಕೋತ ಸರಿ ನಿನ್ನ ಮಾತು ಅಂದಾರು.' 'ಶ್ರೀನಿವಾಸ'ರ ಸ್ವಜ ವಿನೋದವು ನೇರವಾಗಿ ಎದೆಮುಟ್ಟುವಂತೆ ಇಲ್ಲಿ ಕಾಣಿಸಿ ಕೊಂಡಿದೆ.

ಒಟ್ಟಾರೆ 'ಚೆಲುವಿ'ನಲ್ಲಿ ಕನ್ನಡಸಾಹಿತ್ಯದಲ್ಲಿ ಸ್ಥಿರ ವಾಗಿ ಉಳಿಯಬಲ್ಲ ಎಷ್ಟೋ ಮಾತುಗಳಿವೆಯೆಂದು ಧಾರಾಳವಾಗಿ ಹೇಳಬಹುದು.

ಬೆಳಗಾಂವಿ ರಾಮಚಂದ್ರ

**ಕನ್ನಡ ಮೇಘಸಂದೇಶ:**— ಪಂಡಿತ ಕುಕ್ಕೇ ಸುಬ್ರಹ್ಮಣ್ಯ ಶಾಸ್ತ್ರಿಗಳು ವಿರಚಿಸಿದುದು.

ಸಂಸ್ಕೃತ ಮೇಘಸಂದೇಶವನ್ನು ಈ ಮೊದಲೆ, ಸ್ವರ್ಗೀಯ ಶಾಂತಕವಿಗಳೂ, ಶ್ರೀ ರೈನಾಪೂರ ಮಲ್ಲಿಕಾ ರ್ಜುನಪ್ಪನವರೂ ಕನ್ನಡದಲ್ಲಿ ಅನುವಾದಿಸಿದ್ದಾರೆ. ನಮ್ಮ ಎಣಿಕೆಯಲ್ಲಿ ಇದು ಮೂರನೆಯ ಅನುವಾದ. ಶ್ರೀ ಸುಬ್ರಹ್ಮಣ್ಯ ಶಾಸ್ತ್ರಿಗಳ ಕನ್ನಡ ಸಂಸ್ಕೃತ ಭಾಷೆ ಗಳೆರಡರಲ್ಲಿಯೂ ಇದ್ದ ಪ್ರಾವೀಣ್ಯವನ್ನು ಹಲವು ಜನರು ಬಲ್ಲರು. ಅವರ ಕನ್ನಡ ಬರೆಹಕ್ಕೆ ಆದೊಂದು ಬಗೆಯ ಬಿಗುಹು. ಆದೊಂದು ಮಾದರಿಯ ಮೆರುಗು.

ಪ್ರತಿಭಾಶಾಲಿಯಾದವನಿಗೆ ಸ್ವತಂತ್ರವಾಗಿ ಬರೆಯು ವುದು ಭಾಷಾಂತರಕ್ಕಿಂತ ಹೆಚ್ಚು ಸುಲಭ. ಭಾಷಾಂತರ ಕಾರನ ಸುತ್ತುಮುತ್ತಲೂ ಬೇಲಿಗಳು. ಆ ಬೇಲಿಯನ್ನು ದಾಟಿದರೂ ಆಗದು. ಬೇಲಿಯ ಒಳಗೊಳಗೇ ನುಳಿದಾ ಡಿದರೂ ಆಗದು. ಹೀಗೆ ಮಾಡಿದರೆ ಮೂಲಲೇಖಕನ ಭಾವನಾ ಚಿತ್ರಗಳನ್ನು ಇದ್ದಕ್ಕಿದ್ದಂತೆ ಚಿತ್ರಿಸಿ ತೋರಿ ಸಲಿಕ್ಕೆ ಬಾರದಂತಾಗುವುದು. ಮೇಘದೂತದಲ್ಲಿ ಮುಖ್ಯರಸವೆಂದರೆ ಶೃಂಗಾರ. ಈ ಶೃಂಗಾರವು ವಿಪ್ರ ಲಂಭವಾದುದರಿಂದ ಕರುಣಾರಸವನ್ನು ಒಡಗೊಂಡು ಪುಷ್ಟವಾಗಿದೆ. ಈ ರಸವನ್ನು ಪರಿಪೋಷಿಸುವುದಕ್ಕೆ ನಾದ,

CC-0. Jangamwadi Math Collection. Digitized by eGangotri

ಶಬ್ದ, ಅರ್ಥ ಇವು ಮೂರು ಮುಖ್ಯ ಸಾಧನೆಗಳು. ಇವುಗಳ ಉಪಯೋಗವು ಉಚಿತವಾಗಿದ್ದರೆ ರಸವು ಪರಿಪುಷ್ಟವಾಗುವುದು ಇಲ್ಲದಿದ್ದರೆ ಆಭಾಸವನ್ನುಂಟು ಮಾಡುವುದು. ಕಾಲಿದಾಸನು ತನ್ನ ರಸಕ್ಕೆ ಉಚಿತವಾದ ನಾದವು ಹೊರಡುವಂತಹ ಮಂದಾಕ್ರಾಂತವೃತ್ತದಲ್ಲಿ ಕಾವ್ಯವನ್ನು ಹಾಡಿದ್ದಾನೆ. ಆ ನಾದಕ್ಕೆ ಅನುಗುಣವಾದ ಪದಗಳನ್ನು ನೆಯ್ದಿದ್ದಾನೆ. ಇನ್ನು ಅರ್ಥದ ವಿಚಾರ; ಕಾಲಿದಾಸನ ಮಾತು ಅರ್ಥವನ್ನು ಬೆಂಬತ್ತಿ ತಿರುಗುವುದಲ್ಲ; ಅರ್ಥವೇ ಮಾತಿನ ಓಡನ್ನು ಹಿಡಿದುಕೊಂಡು ಹೊರಡುವುದು, ಕಾಲಿದಾಸನನ್ನರಿತವರಿಗಿದು ಹೊಸಮಾತಲ್ಲ.

ಈ ಕನ್ನಡ ಮೇಘಸಂದೇಶದ ವೃತ್ತವು ಕುಸುಮ ಷಟ್ಪದಿ. ಪೂರ್ವಮೇಘದಲ್ಲಿ ೮೫ ಪದ್ಯಗಳುಂಟು. ಉತ್ತರಮೇಘದಲ್ಲಿ—ಗ್ರಂಥಾಂತ್ಯದ ಪ್ರಕ್ಷಿಪ್ತಶ್ಲೋಕಾನುವಾದದ ಮೂರು ಪದ್ಯಗಳನ್ನು ಬಿಟ್ಟು—೭೧ ಪದ್ಯಗಳುಂಟು. ಕಾಲಿದಾಸನ ಒಂದು ಮೂಲಶ್ಲೋಕದ ಭಾವವನ್ನು ಒಂದೇ ಪದ್ಯದಲ್ಲಿ ಹೇಳಲಿಕ್ಕೆ ಹವಣಿಸಿದಂತಹ ಪದ್ಯಗಳೇ ಹೆಚ್ಚಾಗಿರುವುವು. ಒಂದೇ ಪದ್ಯವು ಸಾಕಾಗದೆ ಎರಡು ಮೂರು ಪದ್ಯಗಳಲ್ಲಿ ಒಂದು ಶ್ಲೋಕದ ಭಾವವನ್ನು ಸೇರಿಸಿ ಹೇಳಿದುದೂ ಉಂಟು. ಆದರೆ ಇಲ್ಲಿ ಹೇಳಬೇಕಾದುದೇನೆಂದರೆ—ಕುಸುಮ ಷಟ್ಪದಿ ಚಿಕ್ಕದು. ವೃತ್ತರಚನೆಯ ಪದ್ಧತಿ ಮಂದಾಕ್ರಾಂತಕ್ಕಿಂತ ತೀರ ಭಿನ್ನವಾದುದು. ಆದುದರಿಂದ ಒಂದು ಪದ್ಯದ ಭಾವವನ್ನೊಳಗೊಂಡ ಒಂದೇ ಪದ್ಯದಲ್ಲಿ ಮೂಲ ಶ್ಲೋಕಗಳಲ್ಲಿಯ ಕೆಲವು ಮಾತುಗಳು ಬಿಟ್ಟು ಹೋಗಿವೆ. ಎರಡುಮೂರು ಪದ್ಯಗಳು ಸೇರಿ ಒಂದೇ ಶ್ಲೋಕದ ಭಾವವನ್ನು ಹೇಳುತ್ತಿದ್ದಲ್ಲಿ, ಕೆಲವು ಹೊಸ ಮಾತುಗಳು ಬಂದು ಸೇರಿವೆ. ಅಲ್ಲಲ್ಲಿ ಕೆಲವು ಪದ್ಯಗಳಂತೂ ಕಾಲಿದಾಸನ ಭಾವನಿರ್ಭರತೆಯನ್ನು ಬಣ್ಣಿಸಿ ತೋರಿಸುವುದಕ್ಕೆ ಸಾಮರ್ಥ್ಯಸಾಲದೆ ನಿಂತಿವೆ. ಸಂಸ್ಕೃತ ಮೇಘ ಸಂದೇಶವನ್ನು ಓದಿ ನಲಿದವರನ್ನಿದು ತೃಪ್ತಿಪಡಿಸಲಾರದಾದರೂ ಸಂಸ್ಕೃತವನ್ನರಿಯದ ಕನ್ನಡಿಗರು —ಸುಂದರ ವಸ್ತುವೊಂದನ್ನು ಪ್ರತ್ಯಕ್ಷ ನೋಡಲು ಬಯಸುತ್ತಿರುವಾಗ ಅದು ಸಾಧ್ಯವಾಗದೆ ಛಾಯಾ ಚಿತ್ರದಲ್ಲಿಅದನ್ನು ನೋಡಿ ಒಂದು ಬಗೆಯ ಸಮಾಧಾನ ಹೊಂದುವಂತೆ—ಇದನ್ನೋದಿ ಸಂತೋಷಪಡಬಹುದು.

ಶ್ರೀ. ಶಾಸ್ತ್ರಿಗಳವರ ಪದ್ಯಬಂಧನ ನೈಪುಣ್ಯವು ಪ್ರಶಂಸನೀಯವಾಗಿದೆ. ಕೆಲಕೆಲವು ಪದ್ಯಗಳು ಮೂಲ ಭಾವವನ್ನು ಬಲು ಚೆನ್ನಾಗಿ ಮೂಡಿಸಿ ತೋರಿಸುತ್ತಲಿವೆ. ಮಾದರಿಗಾಗಿ ಇಲ್ಲಿ ಒಂದೆರಡು ಪದ್ಯಗಳನ್ನು ಅವತರಿಸುವೆವು.

ಸಂಸ್ಕೃತ ಉ. ಮೇ. ೧೧

ಗತ್ಯುತ್ಕಂಪಾದಲಕಪತಿತೈರ್ಯತ್ರ ಮಂದಾರಪುಷ್ಪೈಃ ।
ಪತ್ರಚ್ಛೇದೈಃ ಕನಕಕಮಲೈಃ ಕರ್ಣವಿಭ್ರಂಶಿಭಿಶ್ಚ ॥
ಮುಕ್ತಾಜಾಲೈಃ ಸ್ತನಪರಿಸರಚ್ಛಿನ್ನಸೂತ್ರೈಶ್ಚ ಹಾರೈ-।
ರ್ನೈಶೋ ಮಾರ್ಗಸ್ಸವಿತುರುದಯೇ ಸೂಚ್ಯತೇ ಕಾಮಿನೀನಾಮ್ ॥

ಕನ್ನಡ ಉ. ಮೇ. ೧೪

ಜಾರು ಹೆಜ್ಜೆಯನಿಡಲು
ಸೋರುದುರುಬಿಂ ಜರಿದು
ಜೇರಿರುವ ಮಲ್ಲಿಗೆಯು ಕನ್ನವುರದಿಂ ।
ಜಾರಿ ಬೀಳ್ದಂಬುಜವು
ತೋರಿಪುವು ಜಾರೆಯರ
ಚೋರದಾರಿಯವಲ್ಲಿ ಸೂರ್ಯನುದಿಸಲ್ ।

ಸಂಸ್ಕೃತ ಉ. ಮೇ. ೨೦

ಗತ್ವಾ ಸದ್ಯಃ ಕಲಭತನುತಾಂ ಶೀಘ್ರಸಂಪಾತಹೇತೋಃ ।
ಕ್ರೀಡಾಶೈಲೇ ಪ್ರಥಮಕಥಿತೇ ರಮ್ಯಸಾನೌ ನಿಷಣ್ಣಃ ॥
ಅರ್ಹಸ್ಯಂತರ್ಭವನಪತಿತಾಂ ಕರ್ತುಮಲ್ಪಾಲ್ಪಭಾಸಂ !
ಖದ್ಯೋತಾಲೀವಿಲಸಿತನಿಭಾಂ ವಿದ್ಯುದುನ್ಮೇಷದೃಷ್ಟಿಮ್ ॥

ಕನ್ನಡ ಉ. ಮೇ. ೨೪

ಮರಿಯಾನೆಯಂದದಲಿ
ಕುರುರೂಹನಳವಟ್ಟು
ಕರಮೆಸೆವ ಮೊದಲೊರೆದ ಗಿರಿಯನೇರಿ
ಕಿರುಮಿಂಚು ನೋಟದಲಿ
ಸಿರುನಿರುಕಿ ನೋಡುತ್ತ
ಪರಿಕಿಸಂತರ್ಭವನದರವನಲ್ಲಿ

ಮೂಲದಲ್ಲಿಯ ಭಾವವನ್ನು ವಿಸ್ತರಿಸಿ ಹೇಳುವುದಕ್ಕಾಗಿ ತಮ್ಮ ಹೆಚ್ಚಿನ ಮಾತುಗಳನ್ನು ಸೇರಿಸಿ ಹೆಣೆದ ಕೆಳಗಿನ ಪದ್ಯಗಳು ಅದೆಷ್ಟು ಸ್ವಾಭಾವಿಕವಾಗಿರುವವೆಂಬುದನ್ನು ನೋಡಬಹುದು.

ಹಿಡಿಗವಡೆ ಸಡಿಗವಡೆ
ಸಿಡಿಗವಡೆ ಕಣ್ಮುಚ್ಚಿ
ನಿಡುನಿರಿಸು ಪುಳಕಿಸೆಂಡು ಗುತ್ತಿಸೆಂಡು ।

CC-0. Jangamwadi Math Collection. Digitized by eGangotri

ಗುಡುಗು ಗುಮ್ಮನ ಸೋಗು
ಗುಡಿಗಟ್ಟು ಕುಂಟಪಿಲಿ
ಜಡೆಗೋಲಿನಾಟದಲಿ ನಲಿಯುತಿಹರು ॥
ಉ. ಮೇ. ೯
ತಳಿರ ಪಾಸಿನ ಮೇಲೆ
ತಲೆಗೆ ತೋಳಿಂಬಿಟ್ಟು
ಮಲಗಿರುವ ನಳಿನಮುಖಿ ಮೂಡಲಲ್ಲಿ।
ಉಳಿದೊಂದು ಕಳೆಯಿಂದ
ಪೊಳೆಯುತಿಹ ಶಶಿಯಂತೆ
ಕಳೆವೆತ್ತು ಮೈಯೆತ್ತಿ ಕಂಗೊಳಿಸಳು ॥
ಉ. ಮೇ. ೩೫

ಈ ಬಗೆಯ ಪದ್ಯಗಳನ್ನು ಇನ್ನೂ ಆಯ್ದು ತೋರಿಸಬಹುದು. ಷಟ್ಪದಿಗಳೆಂದರೆ ಸಾಮಾನ್ಯವಾಗಿ ಹಾಡುಗಳೇ. ಈ ಷಟ್ಪದಿಗಳ ಅರ್ಧದಂತ್ಯವನ್ನೂ, ಅಂತ್ಯವನ್ನೂ ರಾಗವಾಗಿ ಎಳೆದು ಅನ್ನಬೇಕಾಗುವುದು. ಆದರೆ ಅಲ್ಲಿ ವ್ಯಂಜನಗಳನ್ನೂ ಅನುಸ್ವಾರಗಳನ್ನೂ ಇರಿಸಿದರೆ ಹಾಗೆ ಎಳೆದು ಅನ್ನಲಿಕ್ಕೆ ಸರಿಯಾಗಿರುವುದಿಲ್ಲ. ಈ ಗ್ರಂಥದಲ್ಲಿ ಹಲವು ಪದ್ಯಾಂತ್ಯದಲ್ಲಿ ಅನುಸ್ವಾರ ವ್ಯಂಜನಗಳೇ ಇವೆ. ಇನ್ನೊಂದು ಆವೃತ್ತಿಯನ್ನು ತೆಗೆಯುವಾಗ ಇದನ್ನು ಸರಿಪಡಿಸಿಕೊಂಡರೆ ಆದೀತು. ಶ್ರೀ ಶಾಸ್ತ್ರಿಗಳವರ ಕೃತಿಯನ್ನು ಅಂದವಾಗಿ ಅಚ್ಚುಹಾಕಿ ಕನ್ನಡಿಗರ ಕಣ್ಣೆದುರಿನಲ್ಲಿ ತಂದಿಟ್ಟುದಕ್ಕಾಗಿ ಶಿವಮೊಗ್ಗೆಯ ಕರ್ನಾಟಕ ಸಂಘವನ್ನು ಹಾಡಿಹರಸಲೇಬೇಕು.

—ಆನಂದಕಂದ

# ನಮ್ಮ ಮಾತು

## ಜಯಕರ್ನಾಟಕ ಗ್ರಂಥಮಾಲೆ

ಇದರ ಏರ್ಪಾಡನ್ನು ಕುರಿತು ಬೇರೆಕಡೆ ಪ್ರಕಟನೆ ಬಂದಿದೆ. ಅದನ್ನು ದಯವಿಟ್ಟು ನೋಡಬೇಕು. ಹೊಸ ವರ್ಷದ ಪ್ರಥಮಪುಸ್ತಕವಾಗಿ ಹೆಸರಾದ ಕತೆಗಾರರಾದ ಶ್ರೀ. 'ಆನಂದಕಂದ' ರ ಕಥಾಗುಚ್ಛವೊಂದು **'ಬಡತನದ ಬಾಳು'** ಎಂಬ ಹೆಸರಿನಲ್ಲಿ ಬೇಗನೆ (ಎಂದರೆ ತಾ॥ ೮-೫-೩೨) ಹೊರಬೀಳುವುದಿದೆ. ಚಂದಾಹಣವನ್ನು ಕಡಿಮೆ ಮಾಡಿದುದನ್ನೂ ಜಯಕರ್ನಾಟಕದ ಚಂದಾದಾರರಿಗಿದ್ದ ವಿಶೇಷಸೌಕರ್ಯವನ್ನೂ ಎಲ್ಲರೂ ನೆನೆಯಬೇಕು. ಮತ್ತು ಗ್ರಂಥಮಾಲೆಗೆ ತಾವು ಚಂದಾದಾರರಾಗುವುದಲ್ಲದೆ, ಹೊಸಬರನ್ನು ಆಗಿಸಿ, ನಮ್ಮ ಆರ್ಥಿಕ ಭಾರವನ್ನು ಕಡಿಮೆ ಮಾಡಬೇಕಾಗಿ ಅರಿಕೆ.

## 'ನಾಣ್ಯದ ಚರಿತ್ರೆ'

ಕಳೆದ ಮತ್ತು ಈ ಸಲದ ಸಂಚಿಕೆಗಳಲ್ಲಿ ಧಾರವಾಡದ ಶ್ರೀ. ಗುಂಜೀ ಧೀರೇಂದ್ರರಾಯರ ಲೇಖನಗಳೆರಡು —ನಾಣ್ಯದ ಇತಿವೃತ್ತಕ್ಕೆ ಸಂಬಂಧಿಸಿದುವು ಬಂದಿವೆ. ಈ ಲೇಖಮಾಲೆಯಲ್ಲಿ ಇನ್ನೂ ಆರೇಳು ಲೇಖನಗಳು ಬರತಕ್ಕವಿದ್ದು, ಅವುಗಳಲ್ಲಿ ನಾಣ್ಯದ ಸಮಗ್ರ ವೃತ್ತಾಂತವು ಬರುವುದಲ್ಲದೆ, ನಮ್ಮ ದೇಶದ ಚಲನ (Indian Currency), ಚಲನದ ವಿಷಯದಲ್ಲಿ ಸರಕಾರದ ಹೊಸ ಧೋರಣೆ (The new Currency Policy) ವೊದಲಾದ ವಿಷಯಗಳೂ ಕೊನೆಕೊನೆಗೆ ಬರತಕ್ಕುವಿವೆ. ವಾಚಕರು ಈ ಲೇಖಮಾಲೆಯನ್ನು ಸುಸಂಗತವಾಗಿ ವ್ಯಾಸಂಗಿಸಬೇಕಾಗಿ ಪ್ರಾರ್ಥನೆ.

## ಚಿತ್ರಪರಿಚಯ

ಮೂಲ ಚಿತ್ರವು ತ್ರಿವರ್ಣಗಳಲ್ಲಿರುವುದರಿಂದ, ಆ ವರ್ಣಸೌಷ್ಠವವು ಇಲ್ಲಿ ಇಳಿವುದು ಸಾಧ್ಯವಿಲ್ಲ. ಚಿತ್ರದಲ್ಲಿ ಹಿಂಭಾಗದಲ್ಲಿ ಸಾಲವೃಕ್ಷಗಳ ಸಾಲಿದ್ದು, ಮುಂಭಾಗದಲ್ಲಿ ಮಾವಿನ ಗಿಡಗಳು ತೋರಿಸಲ್ಪಟ್ಟಿವೆ. ಗಿಡಗಳೆಲ್ಲ ಹೊಸ ಚಿಗುರುಗಳನ್ನು ಪಡೆದಿವೆ. ಆ ಚಿಗುರುಗಳು ಗೊಂಚಲುಗೊಂಚಲಾಗಿ ಅಲ್ಲಲ್ಲಿ ತೂಗುತ್ತಿವೆ. ಕಾಡಿನೊಳಗಿಂದ - ಗಿಡಗಳ ದಟ್ಟಣೆಯೊಳಗಿಂದ ಕಾಲುದಾರಿಯೊಂದು ಹೊರಬೀಳಲು ಪ್ರಯತ್ನಿಸುತ್ತಿರುವಂತೆ ಕಾಣುತ್ತಿದೆ. ಇದನ್ನು ಬರೆದವರಾದ ಶ್ರೀ. ನಾರಾಯಣರ ಬೇರೆ ೩-೪ ಚಿತ್ರಗಳು ಜಯಕರ್ನಾಟಕದಲ್ಲಿ ಈ ಮೊದಲೇ ಬಂದ ವಿಷಯವು ವಾಚಕರಿಗೆ ಅರಿದಿಲ್ಲ.

CC-0. Jangamwadi Math Collection. Digitized by eGangotri




ಸಂಗ್ರಾಹಕರು:— ಶ್ರೀ. ದ. ಕೃ. ಭಾರದ್ವಾಜ, ಎಂ. ಬಿ. (ಆಯುರ್ವೇದ)

## ದೂರದರ್ಶನದ ಕಲೆ

ಒಂದಾನೊಂದು ಕಾಲದಲ್ಲಿ ಕಲ್ಪನಾಸೃಷ್ಟಿಯಲ್ಲಿ ಕೂಡ ಅಸಾಧ್ಯವಾಗಿದ್ದುದು ಈಗ ಸತ್ಯಸೃಷ್ಟಿಯಲ್ಲಿ ಪ್ರತ್ಯಕ್ಷವಾಗಿ ಕಾಣಲಾರಂಭಿಸಿರುವುದು. ಮನುಷ್ಯನ ಧ್ವನಿಯನ್ನು ಶಾಶ್ವತಗೊಳಿಸುವುದು. ಸಾವಿರಾರು ಮೈಲು ದೂರದಿಂದ ಒಬ್ಬರಿಗೊಬ್ಬರು ಮಾತಾಡುವುದು. ಇವೇ ಮೊದಲಾದುವು ಒಂದಾನೊಂದು ಕಾಲದಲ್ಲಿ ಅಸಾಧ್ಯ ವಿಚಾರಗಳೆನಿಸಿದ್ದುವು. ಇಂದು ಅವುಗಳ ಪರಿಚಯವಾಗಿರುವುದು. ಸಿನೇಮಾದ ವಿಚಾರವೂ ಹೀಗೆಯೆ. ಅಮೇರಿಕಾದಲ್ಲಿ ಇಂದು ಸಿನೇಮಾದ ಸಮಯದಲ್ಲಿ ಪ್ರತಿ ನಿಮಿಷವೂ ಮೂವತ್ತು ಸಾವಿರ ಮಂದಿ ಟಿಕೀಟು ಕೊಂಡುಕೊಳ್ಳುವರು. ಏಳು ದಿನಗಳಲ್ಲಿ ಪ್ರಪಂಚದ ಜನಸಂಖ್ಯೆಗಿಂತಲೂ ಸಿನೇಮಾ ನೋಟಕರ ಸಂಖ್ಯೆಯು ಹೆಚ್ಚುವುದು. ಮಾತಾಡುವ ಚಿತ್ರಪಟವು ಪ್ರಾರಂಭವಾದಾಗಿನಿಂದ ಈ ವಿಚಾರದಲ್ಲಿ ಕ್ರಾಂತಿಯೆ ಉಂಟಾಗಿದೆ. ಇನ್ನು ಮುಂದೆ ತಂತಿಯಿಲ್ಲದ ರೇಡಿಯೋ ಕಲೆಯು ಲೋಕಪ್ರಿಯವಾಗುವುದರಲ್ಲಿ ಸಂದೇಹವಿಲ್ಲ. ಆದರೆ ಈಗಾಗಲೆ ಆ ಕಲೆಯು ಎಷ್ಟೋ ಯಶಸ್ವಿಯಾಗಿರುವುದರಿಂದ ಇನ್ನು ಮುಂದೆ ಯಾವ ಸುಧಾರಣೆಯನ್ನು ಮಾಡಬೇಕೆಂಬ ವಿಚಾರವು ಶಾಸ್ತ್ರಜ್ಞರಲ್ಲಿ ಹುಟ್ಟಿದೆ. ಆಗಲೆ ಅದಕ್ಕೊಂದು ಯುಕ್ತಿಯು ಹುಟ್ಟಿ ಅದು ಈಗಾಗಲೆ ಸಫಲವಾಗುತ್ತ ಬಂದಿದೆ. ರೇಡಿಯೋದಿಂದ ದೂರದ ಮಾತನ್ನು ಮನೆಯಲ್ಲಿಯೆ ಕೂತು ಕೇಳಬಹುದಾದಂತೆ, ದೂರದ ನೋಟವನ್ನೂ ರೇಡಿಯೋದ ಮೂಲಕ ಮನೆಯಲ್ಲಿಯೆ ಕೂತು ನೋಡುವುದಕ್ಕೆ ಈ ಯುಕ್ತಿಯು ಹುಟ್ಟಿದೆ. ಈ ಶೋಧನೆಯಿಂದ ನಮ್ಮ ಪ್ರಿಯ ಜನರು ದೂರವಾಗಿದ್ದರೂ ಅವರ ಪ್ರತ್ಯಕ್ಷ ದರ್ಶನವು ನಮಗೆ ನಿತ್ಯವೂ ಆಗಬಹುದು. ಅವರ ಮಾತನ್ನು ಕೇಳುವ ಅನುಕೂಲವಂತೂ ಈ ಮೊದಲೇ ಆಗಿದೆ. ಈಗ ಈ ದೂರ ದರ್ಶನದ ಅನುಕೂಲದಿಂದ ಸ್ಪ್ರಿಂಗಿನ ತೊಟ್ಟಿಲಲ್ಲಿ ಮಕ್ಕಳನ್ನು ಮಲಗಿಸಿ ತಾಯಂದಿರು ದೂರವಾಗಿ ಹೋಗಬಹುದು. ಏಕೆಂದರೆ ತಾಯಿಯು ಹಾಡುವ ಜೋಗುಳವನ್ನು ಮಗುವು ಈಗ ಕೇಳಬಹುದಲ್ಲದೆ, ಆಕೆಯ ದರ್ಶನವೂ ಆಗುತ್ತಿದ್ದರೆ, ಅದು ಅಳುವುದೇಕೆ? ಇದು ಭೌತಿಕಶಾಸ್ತ್ರದ ಸಹಾಯದಿಂದಾಗುವ ಸಾಕ್ಷಾತ್ಕಾರವೆನ್ನಬಹುದು. ಒಂದು ಕಡೆಯ ನಾದವನ್ನು ಬೇರೆ ಕಡೆ ಮುಟ್ಟಿಸುವಂತೆ ಒಂದೆಡೆಯಲ್ಲಿ ಕಾಣುವ ದೃಶ್ಯವನ್ನು ಮತ್ತೊಂದೆಡೆಯಲ್ಲಿ ತೋರಿಸುವುದೇ ಈ ಶೋಧನೆಯ ತಂತ್ರವು. ಈ ಶೋಧದಿಂದ ಭೌತಿಕಜಗತ್ತಿನಲ್ಲಿ ವಿಶೇಷ ದೊಡ್ಡ ಕ್ರಾಂತಿಯುಂಟಾಗಬಹುದಲ್ಲವೆ!

—ಸುಧಾ (ಹಿಂದಿ)

## ಜಗತ್ತಿನ ಚಿಕ್ಕ ರಾಜ್ಯ

ಶ್ರೀ. ಶಿವನಾರಾಯಣ ಟಣ್ಡನ ಎಂಬವರು ಯುರೋಪಿನಲ್ಲಿರುವ ಒಂದು ಚಿಕ್ಕ ಪ್ರಜಾಪ್ರಭುತ್ವದ ರಾಜ್ಯವನ್ನು ವರ್ಣಿಸಿರುವರು. ಅದನ್ನು ಕೇಳಿದರೆ ಆಶ್ಚರ್ಯವಾಗದಿರದು. ಆ ರಾಜ್ಯವು ಸ್ಪೇನ್ ಮತ್ತು ಫ್ರಾನ್ಸದ ಗಡಿಯಲ್ಲಿರುವುದು. ಅದಕ್ಕೆ 'ಅಂಡೋರಾ' ರಾಜ್ಯವೆಂಬ ಹೆಸರು. ಅದು ಜಗತ್ತಿನಲ್ಲಿರುವ ರಾಜ್ಯಗಳಲ್ಲೆಲ್ಲ ಅತಿ ಚಿಕ್ಕದಾದ ಪ್ರಜಾಪ್ರಭುತ್ವದ ರಾಜ್ಯವು. ಅಲ್ಲಿಯ ಅಧ್ಯಕ್ಷನ ಸಂಬಳವು ವರ್ಷಕ್ಕೆ ಸುಮಾರು ೩ ಪೌಂಡು ಎಂದರೆ ತಿಂಗಳಿಗೆ ಸುಮಾರು ರೂ. ೩!! ಅವನ ಕೈಕೆಳಗಿನ ಮಂತ್ರಿಗೆ ವರ್ಷಕ್ಕೆ ೧೫ ಶಿಲಿಂಗ್ ಎಂದರೆ ತಿಂಗಳಿಗೆ ರೂ. ೧!!! ಆ ರಾಜ್ಯದಲ್ಲಿ ಒಂದೂ ವರ್ತಮಾನ ಪತ್ರಿಕೆಯಿಲ್ಲ. ಪತ್ರಿಕೆ ಓದುವವರು ಬೇರೆ ದೇಶದ ಪತ್ರಿಕೆಗಳನ್ನೂ ಒಳಗೆ ಬರಗೊಡಿಸುವುದಿಲ್ಲ. ಸಿನೇಮಾ, ನಾಟಕ, ರೇಲ್ವೆ ...

CC-0. Jangamwadi Math Collection. Digitized by eGangotri

ಮೊದಲಾದ ಈಗಿನ ಯುಗದ ಯಾವ ವಿಚಾರವಾಗಲಿ ವಸ್ತುವಾಗಲಿ ಅಲ್ಲಿ ಕಂಡುಬರುವುದಿಲ್ಲ. ಅಂತೆಯೆ ಪೋಲೀಸ್ ಕೋರ್ಟು ಮೊದಲಾದ ರಾಜಕೀಯ ಖಾತೆಗಳೂ ಅಲ್ಲಿ ಇಲ್ಲ. ಆದರೆ ಅಲ್ಲಿನ ನಾಗರಿಕರು ಶಾಂತರಾಗಿಯೂ ಸುಸ್ವಭಾವವುಳ್ಳವರಾಗಿಯೂ ಇರುವುದರಿಂದ ಅಲ್ಲಿ ರಾಜ್ಯಭಾರವು ಸುಸೂತ್ರವಾಗಿ ಸಾಗುತ್ತಿರುವವು. 'ಅಂಡೋರಾ' ರಾಜ್ಯದ ರಾಜಧಾನಿ ಪ್ರಪಂಚದ ರಾಜಧಾನಿಗಳಲ್ಲೆಲ್ಲ ಅತಿ ಚಿಕ್ಕದು. ಅಲ್ಲಿ ಕೇವಲ ೧೬೦ ಮನೆಗಳಿವೆ. ಕ್ರಿ. ಶ. ೭೮೯ನೆಯ ವರುಷದಿಂದ ಆ ಚಿಕ್ಕ ರಾಷ್ಟ್ರವು ತನ್ನ ಸ್ವಾತಂತ್ರ್ಯವನ್ನು ಅಬಾಧಿತವಾಗಿ ಕಾದಿಟ್ಟುಕೊಂಡಿರುವುದು. ತಮ್ಮ ರಾಜ್ಯಕ್ಕೆ ಬೇರೆ ದೇಶದ ಪ್ರವಾಸಿಗಳು ಬಂದರೆ ಅವರಿಗೆ ಬೇಸರವಾಗುವುದು. ಯಾರಾದರೂ ಮಹಾನ್ ಅತಿಥಿಗಳು ಬಂದರೆ, ಅಧ್ಯಕ್ಷನೇ ಅವರನ್ನು ತನ್ನ ಮನೆಯಲ್ಲಿ ಇಳಿಸಿಕೊಳ್ಳುವನು. ಅಧ್ಯಕ್ಷ (ಪ್ರೆಸಿಡೆಂಟ)ನ ಮನೆಯೆಂದರೆ ಎರಡು ಅಂತಸ್ತಿನ ಸಾಮಾನ್ಯ ಮನೆಯಾಗಿರುವುದು. ಅಲ್ಲಿ ನೌಕರರಾರೂ ಇಲ್ಲ, ಮಾಲೀಕರೂ ಇಲ್ಲ. ೧೮ ವರುಷವನ್ನು ಮೀರಿದ ಪ್ರತಿಯೊಬ್ಬನೂ ಬಂದೂಕನ್ನು ಧರಿಸುವನು. ಜೂನ್ ತಿಂಗಳ ೨೪ನೆಯ ತಾರೀಖು ಲಗ್ನದ ಮುಹೂರ್ತವು. ವಧೂವರರು ಚರ್ಚಿಗೆ ಹೋಗಿ ಒಂದು ಕೋಳಿ ಮೊಟ್ಟೆಯನ್ನು ಒಡೆದರೆ, ಅವರು ವಿವಾಹಬದ್ಧರಾದರೆಂದು ತಿಳಿಯಬೇಕು. ಮತ್ತಾವ ದಿನಗಳಲ್ಲಿಯೂ ಲಗ್ನವನ್ನು ಮಾಡಲಿಕ್ಕಾಗದು. ಎಂತಹ ಅದ್ಭುತ ರಾಜ್ಯವದು! ಸ್ವಾತಂತ್ರ್ಯ ಮತ್ತು ಸಮತಾವಾದಗಳ ಆಗರವೆಂದರೆ ಇದಲ್ಲವೆ?

—ಪ್ರತಾಪ (ಹಿಂದೀ)

## ಅದ್ಭುತವಾದ ಬಾಗಿಲು

'ಪ್ರಕಾಶದಿಂದ ಕತ್ತಲೆಯ ಬಾಗಿಲು ತೆರೆದುಕೊಂಡಿತು' ಎಂದು ನಾವು ಕಾವ್ಯದಲ್ಲಿ ಓದುವೆವು. ಆದರೆ ಅದು ಕೇವಲ ಕವಿಕಲ್ಪನೆಯೆಂದು ಭಾವಿಸಿ, ಅದಕ್ಕೆ ಹೆಚ್ಚು ಬೆಲೆಯನ್ನೀಯುವುದಿಲ್ಲ. ಈಗ ನ್ಯೂಯಾರ್ಕ ಪಟ್ಟಣದಲ್ಲಿ ನಿಜವಾಗಿಯೂ ಪ್ರಕಾಶದಿಂದ ತಾವಾಗಿಯೆ ತೆರೆದುಕೊಳ್ಳುವ ಬಾಗಿಲುಗಳು ನಿರ್ಮಿತವಾಗಿವೆ. ಅಲ್ಲಿ 'ಚೈಲ್ಡ್ಸ ರೆಸ್ಟಾರೆಂಟ್ (ಮಕ್ಕಳ ಉಪಹಾರ ಮಂದಿರ)' ವೆಂಬ ಒಂದು ಉಪಹಾರ ಮಂದಿರವಿದೆ. ಅದರಲ್ಲಿ ಅನೇಕ ವಿಭಾಗಗಳಿದ್ದು, ಪ್ರತಿಯೊಂದು ವಿಭಾಗಗಳಲ್ಲಿಯೂ ವಿವಿಧ ಅಭಿರುಚಿಗಳಿಗೆ ತಕ್ಕಂತೆ ಏರ್ಪಾಟಗಳನ್ನು ಮಾಡಿರುವರು. ತಿನ್ನುವ ಪದಾರ್ಥಗಳನ್ನು ತರುವ ಸೇವಕಿಯರು ಅತ್ತಿತ್ತ ಓಡಾಡುವಾಗ, ಆ ಬಾಗಿಲ ಬಳಿಗೆ ಬಂದಕೂಡಲೆ ಒಂದು ಅದೃಶ್ಯವಾದ ಪ್ರಕಾಶವು ಬಾಗಿಲಿನ ಮೇಲೆ ಬೀಳುವುದು. ಆಗ ಬಾಗಿಲು ನಿಧಾನವಾಗಿ ಒಂದು ಪಕ್ಕಕ್ಕೆ ಚಲಿಸುವುದು. ಸೇವಕಿಯರಿಗೆ ದಾರಿ ದೊರೆಯುವುದು. ಮುಂಚೆ ಒಂದು ಕೈಯಲ್ಲಿ ಫಲಾಹಾರ ಪದಾರ್ಥಗಳನ್ನು ಹಿಡಿದುಕೊಂಡು ಎರಡನೆಯ ಕೈಯಿಂದ ಬಾಗಿಲನ್ನು ತೆರೆಯಬೇಕಾಗಿತ್ತು. ಈಗ ಈ ಅನುಕೂಲತೆಯಿಂದ ಆ ಅಡಚಣೆಯು ತಪ್ಪಿದೆ. ಬಾಗಿಲು ತೆರೆದುಕೊಳ್ಳುವಾಗ ಸ್ವಲ್ಪವೂ ಶಬ್ದವಾಗುವುದಿಲ್ಲ. ಮತ್ತೆ ಮುಂಚೆ ಚೀಣದ ಮಣ್ಣಿನ ಪಾತ್ರೆಗಳು ಕೆಳಗೆ ಬಿದ್ದು ಒಡೆದು ಹೋಗುವ ಪ್ರಸಂಗಗಳು ಈಗ ಕಡಿಮೆಯಾಗಿವೆ.

—Literary Digest

## ಜರ್ಮನಿಯ ನವೀನ ರುದ್ರಶಾಸ್ತ್ರ

ಈಗ ವಿವಿಧ ಜನಾಂಗದವರು ನಿರಸ್ತ್ರರಾಗಿ ಯುದ್ಧವನ್ನು ಕೊನೆಗಾಣಿಸಬೇಕೆಂದು ಹಲವು ಪ್ರಯತ್ನಗಳನ್ನು ನಡೆಸುತ್ತಲಿರುವರು. ಇದು ಎಲ್ಲರಿಗೂ ತಿಳಿದ ವಿಚಾರ. ಆದರೆ ಕಾರ್ಯದಲ್ಲಿ ಮಾತ್ರ ಬೇರೆ ವಿಧಾನವು ಕಂಡು ಬರುತ್ತಲಿರುವುದು. ಆದ್ದರಿಂದ ಇತರ ರಾಷ್ಟ್ರಗಳು ಶಸ್ತ್ರಾಸ್ತ್ರ ಸಂಪನ್ನವಾಗಿರುವಾಗ ಕೇವಲ ತಾನು ಮಾತ್ರ ಏಕೆ ನಿಶ್ಯಸ್ತ್ರವಾಗಿರಬೇಕೆಂದು ಜರ್ಮನಿಗೆ ಹೊಟ್ಟೆಕಿಚ್ಚು ಹುಟ್ಟುವುದು ಸಹಜವಾಗಿದೆ. ಈಗ ತನ್ನ ಶಾಸ್ತ್ರೀಯ ಚಾತುರ್ಯದಿಂದ ವಿವಿಧ ಸಂಹಾರಕಾಸ್ತ್ರಗಳನ್ನು ಶೋಧಿಸುವ ಕಡೆಗೆ ಜರ್ಮನಿಯ ಲಕ್ಷ್ಯವು ಹೋಗಿರುವಂತೆ ಕಾಣುವುದು. ಈ ಅಸ್ತ್ರಗಳಲ್ಲಿ 'ಬೆಂಕಿಯನ್ನು ಹಚ್ಚುವ ಅದೃಶ್ಯ ಕಿರಣವು' ಒಂದು ಶೋಧನೆಯಾಗಿರುವುದು. ಇಂದಿನವರೆಗೆ ಅದೃಶ್ಯ ಕಿರಣವನ್ನು ಮೋಟಾರು ನಿಲ್ಲಿಸುವುದು ಮುಂತಾದ ಕೆಲಸಕ್ಕೆ ಉಪಯೋಗಿಸುತ್ತಿದ್ದರು. ಆದರೆ ಈ ನವೀನ ಶೋಧನೆಯಿಂದ ಎರಡು ಗಜ ದೂರದಲ್ಲಿರುವ ವಸ್ತುವಿಗೆ ಅದೃಶ್ಯಕಿರಣದ ಸಹಾಯದಿಂದ ಬೆಂಕಿಯನ್ನು ಹಚ್ಚಬಹುದಾಗಿದೆ. ಮತ್ತೊಂದು ಪಿಸ್ತೂಲಿನಂಥ ಪಿಸ್ತೂಲಿನ ನಿರ್ಮಾಣ. ಈ ಪಿಸ್ತೂಲಿಗೆ



CC-0. Jangamwadi Math Collection. Digitized by eGangotri

ಕ್ಲಿಪ್ಪನ್ನು ಹಾಕಿ ಫೌಂಟಿನ್‌ಪೆನ್ನಿನಂತೆ ಜೇಬಿನಲ್ಲಿಟ್ಟುಕೊಳ್ಳಬಹುದು. ಆದರೆ ಆ ಕ್ಲಿಪ್ಪನ್ನು ನೂಕಿದಕೂಡಲೆ ಡಬ್‌ಡಬ್ ಎಂದು ಗುಂಡುಗಳು ಹಾರಲಾರಂಭಿಸುವವು. ಇದೇ ಬಗೆಯಾಗಿ ಮಿತ್ರರಾಷ್ಟ್ರಗಳು ನಿಶ್ಚಯಿಸಿರುವ ಆಕಾರಕ್ಕೆ ಅನುಸಾರವಾಗಿ ಚಿಕ್ಕದಾದರೂ ವಿಶೇಷ ಸಾಮರ್ಥ್ಯವುಳ್ಳ ಯುದ್ಧದ ಹಡಗುಗಳನ್ನು ತಯಾರಿಸುವ ಪ್ರಯತ್ನವನ್ನು ಜರ್ಮನಿಯು ಮಾಡಲಿರುವುದು!

—ಸರಸ್ವತೀ ( ಹಿಂದೀ )

## ವಿಚಿತ್ರ ಪ್ರೇತಸಂಸ್ಕಾರ ಪದ್ಧತಿ

ಜಾವಾ ಮತ್ತು ಸುಮಾತ್ರಾ ದ್ವೀಪಗಳಲ್ಲಿ ಪ್ರೇತಸಂಸ್ಕಾರ ವಿಚಾರದಲ್ಲಿ ಒಂದು ವಿಚಿತ್ರ ಪದ್ಧತಿಯಿರುವುದು. ಸೃಷ್ಟಿನಿಯಮಾನುಸಾರವಾಗಿ ಕುರುಡನಾಗಿ ಹುಟ್ಟಿದವನು ಕುರುಡನಾಗಿಯೆ ಸಾಯಬೇಕೆಂಬುವುದು ಸರಿಯಾದ ಮಾರ್ಗ; ಆದರೆ ಈ ನಿಯಮವು ಯಾವಾಗಲೂ ಎಲ್ಲಿ ನಡೆಯುವುದು ? ಅಲ್ಪವಯಸ್ಕರಾದ ತರುಣರನ್ನು ಮೃತ್ಯುದೇವತೆಯು ಕೊಂಡೊಯ್ಯುತ್ತಿರುವಾಗ ವಯಸ್ಸಾದಮುದುಕರು ಕಠಿನವಾದ ರೋಗಗಳೊಂದಿಗೆ ಹೋಡೆದಾಡುತ್ತ ಜೀವಂತರಾಗಿರುವುದನ್ನು ನಾವು ನೋಡುತ್ತಿರುವೆವು. ಆದರೆ ಜಾವಾ ಮತ್ತು ಸುಮಾತ್ರಾ ದ್ವೀಪಗಳಲ್ಲಿ ಜನರು ಈ ದೈವಿಕವಿಪರ್ಯಾಸವನ್ನು ಸಾಧ್ಯವಿದ್ದಮಟ್ಟಿಗೆ ನಿವಾರಿಸಲು ಪ್ರಯತ್ನಿಸುತ್ತಿರುವರು. ಒಂದು ಮನೆಯಲ್ಲಿ ಕನಿಷ್ಠಮನುಷ್ಯನು ಮರಣವನ್ನೈದಿದರೆ ಅವನಿಂದ ಜ್ಯೇಷ್ಠನಾದ ಮನುಷ್ಯನನ್ನು ಮರಣವನ್ನೈದುವವರೆಗೆ ಆ ಪ್ರೇತಕ್ಕೆ ಆವ ಸಂಸ್ಕಾರವನ್ನೂ ಮಾಡಿಸುವುದಿಲ್ಲ. ಆ ಪ್ರೇತವನ್ನು ಎಣ್ಣೆ ಅಥವಾ ಮತ್ತಾವುದಾದರೂ ಸ್ನಿಗ್ಧಪದಾರ್ಥದಲ್ಲಿ ಮುಚ್ಚಿಡುವರು. ಅನೇಕಸಂದರ್ಭಗಳಲ್ಲಿ ಆ ಪ್ರೇತಗಳು ಕೊಳೆತು ಮೂಗನ್ನು ಮುಚ್ಚಿಕೊಳ್ಳುವಷ್ಟು ದುರ್ಗಂಧವು ಒರುವುದು. ಆ ಪ್ರೇತವನ್ನು ಮರದ ಪೆಟ್ಟಿಗೆಯಲ್ಲಿ ಹಾಕಿಡುವರು. ಕೊನೆಗೆಜ್ಯೇಷ್ಠ ಮನುಷ್ಯನು ಸತ್ತಾಗ ಆ ಹಳೆಯ ಪ್ರೇತವನ್ನೂ ತೆಗೆದು, ಅವೆರಡಕ್ಕೂ ವಿಜೃಂಭಣೆಯಿಂದ ಸಂಸ್ಕಾರವನ್ನೆಸಗುವರು.

—ಜೋಖಾಖುಕೂ ( ಬಂಗಾಳಿ )

## ಜ್ವರದಿಂದಲೂ ಆರೋಗ್ಯವರ್ಧನೆ!

ವಿಷವು ಕೂಡ ಅಮೃತವಾಗುವುದೆಂದು ಹೇಳುವರು. ಅನೇಕ ಸಮಯಗಳಲ್ಲಿ ಅದರ ಪ್ರತ್ಯಯವು ನಮಗೆ ಉಂಟಾಗಿರುವುದು. ಉತ್ತರಹಿಂದುಸ್ಥಾನದಲ್ಲಿ ಅನೇಕ ಮನೆಗಳಲ್ಲಿ ಮುದುಕರು ಹೀಗೆ ಹೇಳುತ್ತಲಿರುವರು:— "ಜ್ವರವು ಬಂದಾಗ ಮೂರು ದಿನಗಳವರೆಗೆ ಅದಕ್ಕೆ ಪ್ರತಿಕಾರವನ್ನು ಮಾಡಬೇಡಿ. ಅದು ಬಹುಶಃ ನಮ್ಮ ಶರೀರದಲ್ಲಿರುವ ಇತರ ರೋಗಗಳನ್ನು ನಾಶಮಾಡಲು ಬಂದಿರಬಹುದು." ಮುದುಕಮಂದಿಯ ಸರಳ ನುಡಿಯಲ್ಲಿ ವಿಶೇಷ ಸತ್ಯಾಂಶವಿದೆಯೆಂದು ಇತ್ತೀಚೆಗಿನ ಶೋಧನೆಯಿಂದ ಕಂಡುಬಂದಿರುವುದು. ಅಮೇರಿಕದ ಡಾಕ್ಟರ್ ಫಿಡಲ್ಫ್ ಎಂಬಾತನು "ಜ್ವರದಿಂದ ಹಲವು ರೋಗಗಳು ನಮಗೆ ತಿಳಿಯದಂತೆ ತಪ್ಪದೆ ನಾಶವಾಗುವವು" ಎಂದು ಅನೇಕ ಪ್ರಯೋಗಗಳ ಮೂಲಕ ಶೋಧಿಸಿರುವನು. ಜ್ವರದಿಂದ ರಕ್ತವು ಬಿಸಿಯಾಗಿ ಸಂಚರಿಸಲಾರಂಭಿಸಿದಾಗ ಇತರ ರೋಗಗಳ ಜೀವಾಣುಗಳು ಅದರ ಯೋಗದಿಂದ ಪಟಪಟನೆ ಸಾಯಲಾರಂಭಿಸುವವು. ಆಸ್ಟ್ರಿಯಾದ ಡಾಕ್ಟರ್ ವಾಗ್ನರ್ ಜೇರಗ್ ಎಂಬಾತನು ರೋಗಿಗಳ ಶರೀರದಲ್ಲಿ ಕೃತ್ರಿಮಜ್ವರವನ್ನುಂಟುಮಾಡಿ ಅನೇಕ ರೋಗಗಳನ್ನು ನಿವಾರಿಸಿರುವನು. ಈ ಕೃತ್ರಿಮ ಜ್ವರವನ್ನು ವಿದ್ಯುತ್ತಿನ ಸಹಾಯದಿಂದ ತರಿಸುವರು.

—ಪ್ರತಾಪ ( ಹಿಂದೀ )

## ರೆಕ್ಕೆಯ ರೈಲುಗಾಡಿ!

ನಿಸರ್ಗದ ಅನುಕರಣ ಮಾಡುವುದೇ ಕಲೆಯ ಕಾರ್ಯವೆಂದು ನಾವು ತಿಳಿದಿರುವೆವು. ಆಕಾಶದಲ್ಲಿ ಪಕ್ಷಿಗಳು ಹಾರಾಡುವುದನ್ನು ನೋಡಿ ಹಾಗೆಯೆ ತಾನೂ ಮಾಡಬೇಕೆಂದು ಮನುಷ್ಯನಲ್ಲಿ ಈರ್ಷೆಯುಂಟಾಯಿತು. ಅದರಿಂದ ವಿಮಾನನಿರ್ಮಾಣವಾಯಿತು. ನೀರೊಳಗಿನ ಹಡಗು, ಹೊಗೆಹಡಗು ಮೊದಲಾದುವೂ ಅನುಕರಣಪ್ರಿಯತೆಯ ಉದಾಹರಣೆಗಳಾಗಿವೆ. ಈಗ ಕೋಳಿ, ನವಿಲು ಮೊದಲಾದ ನೆಲದ ಮೇಲೆ ಸಂಚರಿಸುವ ಪಕ್ಷಿಗಳನ್ನು ಅನುಕರಿಸುವ ಬುದ್ಧಿಯು ಮನುಷ್ಯನಿಗೆ ಉಂಟಾಗಿರುವಂತೆ ಕಾಣುವುದು. ಜರ್ಮನಿಯಲ್ಲಿ ಫೆಂಟ್ಸ್‌ಕುಕೆನ್‌ಬರ್ಗ್ ಎಂಬ ಶೋಧಕನು ಒಂದು ರೈಲುಗಾಡಿಯನ್ನು ತಯಾರಿಸಿರುವನು. ಆ ಗಾಡಿಗೆ ವಿಮಾನದಂತೆ ರೆಕ್ಕೆಗಳಿವೆ. ಆದರೆ ಅದು ಭೂಮಿಯ ಮೇಲೆ ಕಬ್ಬಿಣ ಕಂಬಗಳ ಮೇಲೆ ಸಂಚರಿಸುವುದು. ಅದರಲ್ಲಿ ೪೦ ಜನರು ಕುಳಿತು

CC-0. Jangamwadi Math Collection. Digitized by eGangotri

ಕ್ಲೋಮೀಟರ ೫ ಪಟ್ಟುಗಳು ಇರುವುವು. ಗಾಡಿಯ ಬಣ್ಣವು ಬಿಳಿಯದು. ಅದನ್ನು ೪೦೦೦ ಕುದುರೆಗಳ ಶಕ್ತಿಯ ಇಂಜನ್‌ಗಾಡಿಯು ನಡೆಸುವುದು. ಅದು ಗಂಟೆಗೆ ೧೧೫ ಮೈಲು ಓಡುವುದು !

—ಬಾಂಸುರೀ ( ಹಿಂದೀ )

## ಆಂಧ್ರಪತ್ರಿಕಾ ಪ್ರಪಂಚ

### ಹಿಂದೂ ಸ್ತ್ರೀಯರೂ ಚಿತ್ರಕಲೆಯೂ

ಈ ಹೆಸರಿಟ್ಟು ಶ್ರೀ. ತಲಿಶೆಟ್ಟಿ ರಾಮಾರಾವು ಅವರು (' ಭಾರತಿ ' ಯ ಸಂ. ೯–ಸಂ. ೨; ಪುಟ ೩೧೫) ಒಂದು ಲೇಖನ ಬರೆದಿದ್ದಾರೆ. ಅದರಲ್ಲಿ ಅವರು ಭಾರತ ಚಿತ್ರಕಾರರು ತಮ್ಮ ಚಿತ್ರಗಳಲ್ಲಿ ಸ್ತ್ರೀಯರಿಗೆ ಎಂತಹ ಸ್ಥಾನವನ್ನು ಕೊಟ್ಟಿದ್ದಾರೆ–ಎಂಬ ವಿಚಾರವಾಗಿ ಹೀಗೆ ಹೇಳುತ್ತಾರೆ.—

' ಭಾರತೀಯಚಿತ್ರಕಾರರು ತಮ್ಮ ಚಿತ್ರಕರ್ಮಗಳಲ್ಲಿ ಭಾರತಸ್ತ್ರೀಯರಿಗೆ ಗೌರವಸ್ಥಾನವನ್ನು ಕೊಟ್ಟರು. ಸ್ತ್ರೀಯರು ಲೋಕವನ್ನು ಅಲಂಕರಿಸುತ್ತಿರುವರೋ–ಎಂಬಂತೆ ಇವರು ಸ್ತ್ರೀಯರನ್ನು ಅಲಂಕಾರವಸ್ತುಗಳಾಗಿ ಉಪಯೋಗಿಸಿದರು. ಅಜಂತಾ ಗುಹಾಂತರ್ದೇವಾಲಯಗಳ ಒಳಗಿನ ಸ್ತ್ರೀವಿಗ್ರಹಗಳೆಲ್ಲವೂ ಸುಂದರರೂಪನಿರ್ಮಾಣರಾಶಿಗಳಾಗಿವೆ. ಇವರ ಅಂಗವಿನ್ಯಾಸವು ಮನೋಜ್ಞ. ಅಂಗಗಳು ಕೃಶವಾದಂತೆ ವಿಕೃತಿ ಹೊಂದಿದಂತೆ ಎಲ್ಲಿಯೂ ಕಾಣಬರುವುದಿಲ್ಲ. ರೋಗಪೀಡಿತರಾದ ಸ್ತ್ರೀಯರಲ್ಲಿ ಸಹ ಬಲಹೀನತೆಯ ಸುಳಿವಿಲ್ಲ. ಅರಸನೊಬ್ಬನು ರಮಣಿಯೊಬ್ಬಳಿಗೆ ಮರಣ ದಂಡನೆ ವಿಧಿಸಿದ್ದಾನೆ. ಇನ್ನೇನು ಆಕೆಯನ್ನು ದೇಹದಿಂದ ಬೇರೆ ಮಾಡಬೇಕು. ಚಿತ್ರಕಾರನು ಆ ಮನೋಹಾರಿಯ ದುಃಖವನ್ನು ತೋರಿಸಲಾರದೆ–ಇಷ್ಟವಿಲ್ಲದೆ–ಆಕೆಯ ಮುಖವನ್ನು ಆಕೆಯ ಕೈಗಳಿಂದ ಮುಚ್ಚಿಬಿಟ್ಟಿದ್ದಾನೆ !

ಬಾಘ್, ಸಿಂಹಗಿರಿ ಚಿತ್ರಗಳಲ್ಲೂ, ಸುಂತಿ, ಅಮರಾವತಿ, ಬಾರ್ಹತ್ ಶಿಲ್ಪರಾಜಸಮುದಾಯದಲ್ಲೂ ಸ್ತ್ರೀಯರಿಗಿರುವ ಸ್ಥಾನವು ನಿರುಪಮಾನವಾಗಿದೆ. ಪುರುಷರೊಂದಿಗವರು ಸರಿಸಮಾನರಂತೆ ಗಣಿಸಲ್ಪಟ್ಟಿರುವರು. ಮೊಘಲ್‌ಮಾರ್ಗದ ಚಿತ್ರಗಳಲ್ಲಿ ಗಂಡಸರ ಕಣ್ಣಿಗೆ ಹೆಂಗಸರು ಬೀಳಬಾರದೆಂಬ ಆಚಾರವನ್ನು ಅನುಸರಿಸಿದ್ದಾರೆ. ಆ ಮಾರ್ಗದ ಚಿತ್ರಗಳಲ್ಲಿ ಸಾಮಾನ್ಯವಾಗಿ ಸ್ತ್ರೀಯರು ಕಾಣಬರುವುದಿಲ್ಲ. ಆದರೆ ಕಾಣಬರುವ ಸ್ತ್ರೀಯರಿಗಂತೂ ಬಹಳ ಉಚ್ಚ ಸ್ಥಾನವಿದೆ; ರಾಜಪುತ್ರ ಚಿತ್ರಕಾರರು ಮೊಘಲ ಮಾರ್ಗವನ್ನೇ ಅನುಸರಿಸಿದರು. ಆಚಾರನಿರ್ಬಂಧವಿರಲಿಲ್ಲವಾಗಿ ರಾಜಪುತ್ರರು ಕೃಷ್ಣ ಗೋಪೀವಿಲಾಸವನ್ನೂ, ಪುರಾಣವ್ಯಕ್ತಿಗಳ ಚಿತ್ರಗಳನ್ನೂ ಬರೆದು, ಸ್ತ್ರೀ ಕುಲದಲ್ಲಿ ತಮಗೆ ಇರುವ ಪ್ರೇಮವನ್ನು ಚೆನ್ನಾಗಿ ವ್ಯಕ್ತಗೊಳಿಸಿದರು. ನಾಯಿಕಾ–ನಾಯಕರ ಚಿತ್ರಗಳನ್ನೂ, ರಾಗರಾಗಿಣಿಯರ ಚಿತ್ರಗಳನ್ನೂ ನಿರ್ಮಿಸುವಾಗ ಸ್ತ್ರೀಯರನ್ನು ಶೃಂಗಾರಾದ್ಯನೇಕರಸಗಳಿಂದ ಸಿಂಗರಗೊಳಿಸಿದರು. ಕಂಗ್ರಾ ಚಿತ್ರಕಾರರು ಬಡಬಗ್ಗರ ದೈನಿಕ ಜೀವನವನ್ನು ಚಿತ್ರಿಸುವಾಗ–ರಾಜಮಂದಿರಗಳಿಂದ, ದರಬಾರುಗಳಿಂದ–ಪ್ರಜಾಸಾಮಾನ್ಯ ಜೀವನವೇ ವಸ್ತುವಾಗಲು ಸ್ತ್ರೀಯರ ಕಷ್ಟ ಸುಖಗಳನ್ನು ರಚಿಸಲು ಅವಕಾಶವುಂಟಾಯಿತು. ಇಂತಹ ಚಿತ್ರಗಳಲ್ಲೂ ಸ್ತ್ರೀಯರಿಗೆ ಅವರು ಕೊಂಚವಾದರೂ ಅಗೌರವವನ್ನು ತೋರಿಸಿಲ್ಲ. ತಂಜಾವೂರು ಚಿತ್ರಗಳೂ ರಾಜಪುತ್ರರ ಚಿತ್ರಗಳನ್ನೇ ಹೋಲುತ್ತವೆ. '

### ವಿಶ್ವಸಾಹಿತ್ಯದಲ್ಲಿ ಪಾರಸೀಕ ವಾಣಿ

' ಪಾರಸೀಕ ವಾಙ್ಮಯ ' ದ ಮೇಲೆ ಶ್ರೀ ಮೊಹಮ್ಮದ ಖಾಸಿಂಖಾನರು (' ಭಾರತಿ ' ಸಂ. ೯–ಸಂ. ೨ ಪು. ೨೫೩ ) ಬರೆಯುತ್ತಾ ಹೀಗೆ ಹೇಳಿರುವರು.—

' ವಿಶ್ವ ಕವಿತಾ ಚರಿತ್ರೆಯಲ್ಲಿ ಪಾರಸೀಕ ಕವಿಗಳಿಗೆ ಒಂದು ಅಮೂಲ್ಯ ಅಧ್ಯಾಯವಿದೆ. ಸಾರಸ್ವತ ಶಾಖೆಗಳೆಲ್ಲೆಲ್ಲ ಪಾರಸೀಕವಾಣಿಯು ತನ್ನ ಸೌರಭವನ್ನು ಸೂಸಿದೆ. ಐತಿಹಾಸಿಕ ಕವಿಕುಲಲಲಾಮರಲ್ಲಿ ಎಂತಹ ಪ್ರಸಿದ್ಧನೊಂದಿಗಾದರೂ ಸಮನಾಗಿ ತೂಗಬಲ್ಲವನು ಫಿರದೂಸಿ. ನೈತಿಕ ಕವಿತೆಯೆಂದ ಕೂಡಲೆ ಸಾದಿಯ ಹೆಸರನ್ನು ಮೊದಲು ಹೇಳಬೇಕು. ಭಾವಕವಿತೆಯ ದಿವ್ಯನಾದವನ್ನು ಹಾಫಿಜ್ ಕವಿಯಲ್ಲಿ ಅಲ್ಲದೆ ಮತ್ತು ಕೇಳುವುದೆಲ್ಲಿ ? ಹಾಸ್ಯರಸಕ್ಕೆ ಆಚಾರ್ಯನು ಉಬೈದಾ ಜಕಾನೀ.

ಪಾರಸೀಕರ ಕವಿತಾ ವೈಶಿಷ್ಟ್ಯವು ಜಗದ್ವಿಖ್ಯಾತವಾಗಿರುವುದು. ಸೂಫೀ ಕವಿತೆಯಿಂದ ಅರಬದೇಶದಲ್ಲಿ ಇಸ್ಲಾಮಿನಿಂದ ಮೊಹಮ್ಮದ್ ಪೈಗಂಬರನು ತನ್ನ ಅಳಿಯ

CC-0. Jangamwadi Math Collection. Digitized by eGangotri

ಅಲೀಗೆ ಸೂಫೀತತ್ವಗಳನ್ನು ಬೋಧಿಸಿದನು. ಆ ತತ್ವ ಬೀಜಗಳೇ ಪರಂಪರಾಗತವಾಗಿ ಪಾರಸೀಕ ವಿದ್ವತ್ಕವಿಗಳ ದೇಹದಿಂದ ಮೊಳಕೆವೆತ್ತು, ಮಹಾವೃಕ್ಷಗಳಾಗಿ ತಮ್ಮ ತಂಪಾದ ನೆಳಲಿನಿಂದ ಬಳಲಿದ ಪಥಿಕರ ಆತ್ಮಗಳಿಗೆ ಶಾಂತ್ಯತಿಥ್ಯಗಳನ್ನು ನೀಡುತ್ತಿವೆ.

ಪಾರಸೀಕ ಕವಿವರೇಣ್ಯರು ಮೂಡಲು ನಾಡುಗಳಲ್ಲಿ ಮಾತ್ರವಲ್ಲದೆ ಪಡುವಲು ನಾಡುಗಳಲ್ಲೂ ಸಹ ತಮ್ಮ ಕಳಾದೀಧಿತಿಗಳನ್ನು ಹರಡಿ ಆ ದೇಶೀಯರ ಕಾವ್ಯಜೀವನದಲ್ಲಿ ಒಂದು ಶಕವನ್ನಾರಂಭಿಸಿದರು. ೧೭ ನೆಯ ಶತಮಾನದ ವೇಳೆಗೆ ಅನೇಕ ಪಾರಸೀಕ ಕಾವ್ಯಗಳು ಲ್ಯಾಟಿನ್ ಭಾಷೆಗೆ ಪರಿವರ್ತನವಾದುವು. ಜರ್ಮನಿಯಲ್ಲಿ ೧೯ ನೆಯ ಶತಮಾನದಲ್ಲಿ ಸವೋದಯವಾಗಿ ಹಲವು ಜಿಜ್ಞಾಸುಗಳವತರಿಸಿದರು. ಪಶ್ಚಿಮ ದೇಶಗಳಲ್ಲಿ ಆಗ ಆಂಗ್ಲೇಯರೂ ಪಾರಸೀಕರೂ ವಾಣಿಜ್ಯ, ರಾಜಕಾರಣಗಳಲ್ಲಿ ಮಗ್ನರಾಗಿ ತಮ್ಮ ಶಕ್ತಿಸಾಮರ್ಥ್ಯಗಳನ್ನೆಲ್ಲ ಸಮರಭೂಮಿಯಲ್ಲಿ ವಿನಿಯೋಗಿಸುತ್ತಿರಲು ಜರ್ಮನರು ಪ್ರಾಚ್ಯವಿಜ್ಞಾನ ದಿಗ್ವಿಜಯಕ್ಕೆ ಅಣಿಯಾದರು. ಹೆರ್ಡರ್, ಗ್ಯಟೆ, ಷಿಲ್ಲರ್, ಷ್ಲೆಗೆಲ್, ಲೇಟೆನ್, ರೂಕರ್ಟ್,ಹೀನ್,ಬೋಡೆನ್‌ಸ್ಟೊಟ್ ಮುಂತಾದ ವಿದ್ವತ್ಕವಿಪುಂಗವರಲ್ಲಿ ಸಹ ಪಾರಸೀಕರ ಪ್ರೋದ್ಬಲವಷ್ಟಿಷ್ಟು ಕಂಡು ಬರುತ್ತಿಲ್ಲ. ಅಮೇರಿಕಾ ಆಂಗ್ಲದೇಶಗಳಲ್ಲೂ ಪಾರಸೀಕರು ತಮ್ಮ ಕಾವ್ಯರಸವನ್ನು ಹರಿಸಿದರು. ಅಮೇರಿಕದ ಪ್ರಸಿದ್ಧ ಜಿಜ್ಞಾಸು ಇಮರ್ಸನ್ನನು ಹಾಫೀಜಿಯನ್ನು ಕುರಿತು ಹೇಳುತ್ತ 'ಪಿಂಡಾರ್' 'ಹೊರೆನ್' ಅಂತಹ ಕವಿಗಳಿಗೆ ಕೂಡ ಇಲ್ಲದ ಸೂಕ್ಷ್ಮವಾದ ಅಂತರ್ದೃಷ್ಟಿಯುಳ್ಳವನೀತ. ಕವಿಗಳಿಗೆ ಕವಿಯೀತ' ನೆಂದು ವರ್ಣಿಸಿರುವನು. ಆಂಗ್ಲಕವಿಗಳಲ್ಲಿ ಫಿಟ್ಜ್ ಜಿರಾಲ್ಡ್, ಮಾಸ್ಲೇ. ಪಿಕ್ನೆಲ್ ಮುಂತಾದವರು ಪಾರಸೀಕ ಕಾವ್ಯಗಳನ್ನು ತಮ್ಮ ಭಾಷೆಗೆ ಪರಿವರ್ತನ ಮಾಡಿದರು. ಆ ಕಾವ್ಯಗಳು ಕಾರ್ಲೈಲ್, ರಸ್ಕಿನ್ ಮುಂತಾದ ಕಲಾವಿದರ, ಬ್ರೌನಿಂಗ್, ಟೆನಿಸನ್ ಮೊದಲಾದ ಕವಿಗಳ ಭಾವವಿಕಾಸಕ್ಕೆ ಸಹಾಯಕವಾದುವು. ಹಾಗೆಯೇ ಭರತಖಂಡದಲ್ಲಿ ಅಮೀರ ಖುಸ್ರುವಿನಂತಹ ಮಹಾಕವಿಗಳಿಗೇ ಅಲ್ಲದೆ ಸಿಂಧೂ ದೇಶದ ಸೂಫೀ ಕವಿಗಳಿಗೂ ಕಬೀರ್ ಚಿಸ್ತಿಯಂತಹ ಯೋಗಿಗಳಿಗೂ ಸಹ ಪಾರಸೀಕರೇ ಗುರುಸ್ವಾಮಿಗಳಾದರು.'

ಭಾರತೀ (ತೆಲುಗು)

## ಸರಸ್ವತಿಯ ಶ್ರೀಮಂತ ಉಪಾಸಕರು

'ಸರಸ್ವತಿಯು ತುಳಿದ ದಾರಿಯನ್ನು ಲಕ್ಷ್ಮಿಯು ನೋಡಳು' ಎಂಬ ತಿಳುವಳಿಕೆಯು ನಮ್ಮಲ್ಲಿ ಪುರಾತನ ಕಾಲದಿಂದಲೂ ಪ್ರಚಾರದಲ್ಲಿರುವುದು. ಆದರೆ ಪಾಶ್ಚಾತ್ಯ ದೇಶದ ಧನಿಕ ಸರಸ್ವತೀ ಉಪಾಸಕರನ್ನು ನೋಡಿದರೆ ನಮ್ಮ ಗಾದೆಯು ಸುಳ್ಳೆಂದು ಕಾಣುವುದು. ಒಂದಾನೊಂದು ಕಾಲದಲ್ಲಿ ಆ ದೇಶದಲ್ಲಿ ಕೂಡ ವಾಙ್ಮಯೋಪಾಸಕರು ಕಂಗಾಲಸ್ಥಿತಿಯಲ್ಲಿರುತ್ತಿದ್ದರು. ಮಿಲ್ಟನ್, ಗೋಲ್ಡ್‌ಸ್ಮಿಥ್, ರೂಸೋ ಇವರೇ ಮೊದಲಾದ ಜಗದ್ವಿಖ್ಯಾತ ಲೇಖಕರು ತಮ್ಮ ಶ್ರೇಷ್ಠವಾದ ಗ್ರಂಥಗಳ ಹಸ್ತಪತ್ರಿಗಳನ್ನು ಕೇವಲ ಒಂಡೆರಡೊಪ್ಪತ್ತಿನ ಆಹಾರಕ್ಕಾಗಿ ಮಾರಿಕೊಂಡರು. ಆದರೆ ಈಗ ಆ ದೇಶದ ಸ್ಥಿತಿಯು ಬದಲಾಯಿಸಿದೆ. ಮೊನ್ನೆ ತಾನೆ ತೀರಿಕೊಂಡ ಸರ್ ಹಾಲ್‌ಕೇನ್ ಎಂಬ ಪ್ರಸಿದ್ಧ ಕಾದಂಬರಿಕಾರನು ಕೇವಲ ತನ್ನ ಲೇಖನಿಯ ಪ್ರಭಾವದಿಂದ ೨,೫೦,೦೦೦ ಪೌಂಡುಗಳ ಆಸ್ತಿಯನ್ನು ಸಂಪಾದಿಸಿದನು. ಅವನಂತೆ ಲೇಖನಿಯ ಪ್ರಭಾವದಿಂದ ಹಣವನ್ನು ಗಳಿಸಿರುವ ಕೆಲವು ಪ್ರಸಿದ್ಧ ಪಾಶ್ಚಾತ್ಯ ಲೇಖಕರ ಆಸ್ತಿಯ ಮೊತ್ತವನ್ನು ಇಲ್ಲಿ ಕೊಡಲಾಗಿದೆ.

| | | | ಪೌಂಡುಗಳು. |
|---|---|---|---|
| ೧ | ವಿಕ್ಟರ್ ಹ್ಯೂಗೊ | ,, | ೨,೦೦,೦೦೦ |
| ೨ | ಸ್ಟ್ಯಾನ್ಲಿ ಬೇಮೆನ್ | ,, | ೧,೦೦,೦೦೦ |
| ೩ | ಟಾಮಸ್ ಹಾರ್ಡಿ | ,, | ೯೧,೦೦೦ |
| ೪ | ಚಾರ್ಲ್ಸ್ ಡಿಕನ್ಸ್ | ,, | ೮೦,೦೦೦ |
| ೫ | ಚಾರ್ಲ್ಸ್ ಗಾರ್ವಿಸ್ | ,, | ೭೧,೦೦೦ |
| ೬ | ಆರ್ನಾಲ್ಡ್ ಬೆನೆಟ್ | ,, | ೪೦,೫೫೧ |
| ೭ | ಜಾರ್ಜ್ ಮೆರಿಡಿತ್ | ,, | ೩೨,೦೦೦ |
| ೮ | ಮೇರಿ ಕಾರೆಲೀ | ,, | ೨೪,೦೭೬ |

—ಗುಜರಾಥಮಿತ್ರ (ಗುಜರಾತಿ).

CC-0. Jangamwadi Math Collection. Digitized by eGangotri



### ಕೇಪ್‌ಟೌನ್ ಒಡಂಬಡಿಕೆ

ನಮ್ಮ ವೃತ್ತಪತ್ರಿಕೆಗಳಲ್ಲಿ ದಕ್ಷಿಣ ಆಫ್ರಿಕೆಯಲ್ಲಿ ಒಕ್ಕಲಾದ ಭಾರತೀಯರ ಸ್ಥಿತಿಗತಿಗಳನ್ನು ಕುರಿತು ಆಗಾಗ ಚರ್ಚೆಬರುತ್ತಿದೆ. ಆಫ್ರಿಕನ ಸರಕಾರವೂ ಹಿಂದುಸ್ಥಾನ ಸರಕಾರವೂ ೧೯೨೭ ರಲ್ಲಿ ಒಂದು ಒಡಂಬಡಿಕೆಯನ್ನು ಮಾಡಿದ್ದುವು. ಅಂತಹದಿನ್ನೊಂದು ಮೊನ್ನೆ ಮೊನ್ನೆ ಮಾಡಲ್ಪಟ್ಟಿದೆ. ಈ ಒಡಂಬಡಿಕೆಯನ್ನು ಪೂರ್ತಿಗೊಳಿಸುವವರಲ್ಲಿ ನಾಮದಾರ ಶ್ರೀನಿವಾಸ ಶಾಸ್ತ್ರಿಗಳವರೂ ಒಬ್ಬರಾಗಿದ್ದರು. ಅವರು ದಕ್ಷಿಣ ಆಫ್ರಿಕೆಯೊಳಗಿನ ಹಿಂದೀಯರ ಪರಿಸ್ಥಿತಿಯನ್ನೂ ಈ ಒಡಂಬಡಿಕೆಯಿಂದ ಆದ ಫಲಿತಾಂಶವನ್ನೂ 'Servant of India' ಪತ್ರಿಕೆಯಲ್ಲಿ ಚರ್ಚಿಸಿದ್ದಾರೆ.

ದಕ್ಷಿಣ ಆಫ್ರಿಕೆಯಲ್ಲಿ ಬಿಳಿ ಜನಾಂಗದವರು ಅತಿ ಪ್ರಬಲರಾಗಿದ್ದುಕೊಂಡು, ಅಲ್ಲಿ ಕಪ್ಪುಬಣ್ಣದವರು ಸ್ವಲ್ಪವಾದರೂ ಕಾಲೂರಬಾರದೆಂದು ಹಟ ತೊಟ್ಟವರಾಗಿದ್ದಾರೆ. ಟ್ರಾನ್ಸವಾಲವೆಂಬ ದಕ್ಷಿಣ ಆಫ್ರಿಕೆಯ ಒಂದು ಭಾಗದಲ್ಲಿ ಬಂಗಾರದ ಕಣಿಗಳ ಶೋಧನಾದಂದಿನಿಂದ, ಅಲ್ಲಿ ಹಿಂದೀಯರು ಮನೆಮಾರು ಮಾಡಿಕೊಂಡು ಬದುಕು ಮಾಡುವ ಹಾಗೆ ಅವರು ಬಹಿಷ್ಕರಿಸುತ್ತಿದ್ದಾರೆ. ಅಲ್ಲಿ ಕಪ್ಪುಬಣ್ಣದವರು (ಅವರು ಹಿಂದೀಯರೇ ಇರಲಿ, ಅಲ್ಲಿಯ ಮೂಲ ನಿವಾಸಿಗಳಾದ ನೀಗ್ರೊ ಜನರೇ ಇರಲಿ) ಸ್ಥಾವರ ಆಸ್ತಿಯನ್ನು ಮಾಡಕೂಡದು; ತಾತ್ಪೂರ್ತಿಕ ವಾಸಕ್ಕೆ ಕೂಡ ತುಂಬಾ ತೊಂದರೆಗಳಿವೆ; ಈ ನಿರ್ಬಂಧನೆಗಳಿಲ್ಲದ ಸ್ಥಾನಗಳು ತೀರಾ ಕಡಿಮೆ ಮತ್ತು ಸಣ್ಣವು; ಇಂಥ ಸ್ಥಾನಗಳಲ್ಲಿ ಮಾತ್ರ ಹಿಂದೀಯರು ನೆಲೆಸಬೇಕು, ಉಳಿದುವುಗಳಲ್ಲಿ ಕಾಲಿಕ್ಕಕೂಡದು. ಈ ಬಂಧನಗಳಿದ್ದರೂ, ಅಲ್ಲಿಯ ಅಧಿಕಾರಿಗಳ ಸಹಾನುಭೂತಿಯಿಂದಲೋ ಏನೋ, ಹಿಂದೀಯರು ಅಲ್ಲಲ್ಲಿ ಸ್ಥಾವರ ಆಸ್ತಿಯನ್ನು ಮಾಡಿಕೊಂಡಿದ್ದಾರಂತೆ. ವರ್ಣದ್ವೇಷವು ಪ್ರಬಲವಾದಾಗೆಲ್ಲಾ ಇಂತಹ ವಸತಿಗಳು ಶಾಸನವಿರುದ್ಧವೆಂದು ಗುಲ್ಲೆಬ್ಬಿಸಿ, ಅವುಗಳನ್ನು ಸರಕಾರದವರು ವಶಪಡಿಸಿಕೊಳ್ಳುವ ಬೆದರಿಕೆಯೂ, ವ್ಯಾಪಾರದ ಅನುಕೂಲತೆಗಳನ್ನು ಕೂಡ ಕಸಿದುಕೊಳ್ಳುವ ಬೆದರಿಕೆಯೂ ಹಾಕಲ್ಪಡುತ್ತಿವೆ. ಇಂತಹದೊಂದು ಸಂದರ್ಭವು ೩ ವರ್ಷಗಳ ಹಿಂದೆ ಬಂದಾಗ, ಕೆಲಕೆಲವು ನಗರ ಸಂಸ್ಥೆಗಳು (ವಿಶೇಷವಾಗಿ ಜೊಹಾನ್ಸ ಬರ್ಗಿನದು) ಅಪ್ಪಣೆಯಿಲ್ಲದೆ ಮನೆಮಾರು ಮಾಡಿದವರಿಗೆ ಕೊಟ್ಟ ವ್ಯಾಪಾರ ವ್ಯವಹಾರದ 'ಅನುಮತಿ ಪತ್ರ (Certificates)' ಗಳನ್ನು ಕಸಿದುಕೊಳ್ಳಲಾರಂಭಿಸಿದುವು. ಅಲ್ಲಿಯ ಹಿಂದೀಯರಿಗೆ ಸ್ಥಾವರ ಆಸ್ತಿಗಿಂತಲೂ ವ್ಯಾಪಾರದ ಸೌಕರ್ಯಗಳು ಹೆಚ್ಚು ಬೆಲೆಯುಳ್ಳವಾಗಿವೆ. ಈ ಕದನದ ಕೊನೆಯು ಒಂದು ಕಾನೂನಿನಲ್ಲಾಗಿ, ಆ ಪ್ರಕಾರ ಕೆಲವೊಂದು ಕ್ಲೃಪ್ತ ಸ್ಥಾನಗಳಲ್ಲಿ ಮಾತ್ರ ಹಿಂದೀಯರು ವಾಸ ಮಾಡಬೇಕೆಂದೂ, ಬೇರೆ ಕಡೆಗೆ

ವಿ. ಸೂ. —ಮೇಲಣ ಶೀರ್ಷಕಕ್ಕೆ ಸಂಬಂಧಿಸಿದ ಇನ್ನೆರಡು ಲೇಖನಗಳು ('ಜರ್ಮನಿಯ ಅಧ್ಯಕ್ಷಪದವಿಯ ಚುನಾವಣೆಯು' ಮತ್ತು 'ಸಾಮ್ರಾಜ್ಯಕರಪದ್ಧತಿ') ಇದೇ ಸಂಚಿಕೆಯಲ್ಲಿ ಬೇರೆ ಕಡೆ ಬಂದಿವೆ.

—ಸಂ. ಜ. ಕ.

CC-0. Jangamwadi Math Collection. Digitized by eGangotri

ಇರುವವರು ೫ ವರ್ಷಗಳಲ್ಲಿ ತಮ್ಮ ಮನೆಮಾರುಗಳನ್ನು ವ್ಯಾಪಾರ ಉದ್ದಿಮೆಗಳನ್ನು ಅಲ್ಲಿ ತರಬೇಕೆಂದೂ ಬಂಧನವು ಹಾಕಲ್ಪಟ್ಟಿತು.

ಟ್ರಾನ್ಸವಾಲದಲ್ಲಿ ಡಚ ಜನಾಂಗವು ಬಹುಸಂಖ್ಯಾಕವಾಗಿದೆ. ಆ ಜನರಿಗೆ ಹಿಂದೀಯರ ಪಕ್ಷವಹಿಸಿ ಹಿಂದುಸ್ಥಾನ ಸರಕಾರವು ಬಡಿದಾಡುವುದು ಬೇಜಾರ ಕೊಡುತ್ತಿದೆ. ತಮ್ಮ ಮನೆಮಾತಿನಲ್ಲಿ ಈ ಪರಕೀಯರ ಕೈಯೇಕೆ ?—ಎಂದವರಿಗೆ ಎನಿಸುತ್ತಿದೆ. ಹಳೆಯ ಒಡಂಬಡಿಕೆಯಲ್ಲಿ 'ಹಿಂದೀಯರ ಉದ್ಧಾರದ ಹೊಣೆಯು ಆಫ್ರಿಕನ ಸರಕಾರದ ಮೇಲೆ ಇದೆ' ಎಂಬ ಮಾತು (Upliftment Clause )ಸೇರಿಸಲ್ಪಟ್ಟಿತ್ತು. ಡಚ ಜನರೆಲ್ಲ ಕೂಡಿ ಅದನ್ನು ನಾಮಮಾತ್ರವನ್ನಾಗಿ ಮಾಡಿಬಿಟ್ಟರು. ವಿಚಿತ್ರ ಕೋಲಾಹಲವನ್ನೆಬ್ಬಿಸಿ ಹಿಂದೀ ಜನರನ್ನು ಆಫ್ರಿಕೆಯ ಹೊಲೆಯರನ್ನಾಗಿ ಮಾಡಿಬಿಟ್ಟರು.

ಮೊನ್ನೆಯ ಒಡಂಬಡಿಕೆಯಲ್ಲಿ ಹಿಂದೀಯರಿಗೆ ಕ್ಷಣಶಃ ಚುಚ್ಚುವ 'ಒಂದೇ ಕಡೆ ವಾಸಮಾಡಬೇಕೆಂ'ಬ ನಿರ್ಬಂಧನೆಯು ಅಲ್ಲಿಯ ಕಾನೂನಿನಿಂದ ತೆಗೆದು ಹಾಕುವ ಅಭಿವಚನವು ಕೊಡಲ್ಪಟ್ಟಿದೆ. ಅದಕ್ಕೆ ಬದಲಾಗಿ, ಮೊದಲಿನ ಕಾನೂನಿನ ಪ್ರಕಾರ ನಿರ್ಬಂಧನೆ ಹಾಕಲ್ಪಟ್ಟ ಸ್ಥಾನಗಳನ್ನು ಸ್ವತಂತ್ರಗೊಳಿಸುವ ಅಧಿಕಾರವು ಅಲ್ಲಿಯ ಸರಕಾರದ ಮಂತ್ರಿಗಳಲ್ಲೊಬ್ಬನಿಗೆ ಕೊಡಲ್ಪಡತಕ್ಕದ್ದಿದೆ. ಕಾನೂನಿಗೆ ವಿರುದ್ಧವಾಗಿ ಮನೆಮಾರು ಮಾಡಿದವರ ಹಕ್ಕುಗಳನ್ನು ಒಂದು ನಿಷ್ಪಕ್ಷಪಾತಿಯಾದ ವಿಚಾರಣಾಸಮಿತಿಯು ಪರೀಕ್ಷಿಸಿದ ಮೇಲೆ, ಆ ಮಂತ್ರಿಯು ಅವುಗಳನ್ನು ಉದಾರಬುದ್ಧಿಯಿಂದ ಸಂರಕ್ಷಿಸುವಂತೆ ಏರ್ಪಾಡು ಮಾಡಿಯಾನೆಂದು ಭರವಸೆಯಿದೆ.

ಇದಲ್ಲದೆ (ಹಿಂದುಸ್ಥಾನವಲ್ಲದ) ಪರದೇಶಗಳಲ್ಲಿ ದಕ್ಷಿಣ ಆಫ್ರಿಕೆ ಮತ್ತು ಹಿಂದುಸ್ಥಾನಗಳೊಳಗಿನ ಹಿಂದೀಯರು ಒಕ್ಕಲಾಗಲು ಶಕ್ಯವಿದೆಯೇ ?– ಎಂಬ ಬಗ್ಗೆ ದಕ್ಷಿಣ ಆಫ್ರಿಕೆಯ ಸರಕಾರವು ಹಿಂದುಸ್ಥಾನ ಸರಕಾರದ ಸಹಕಾರ್ಯದೊಡನೆ ವಿಚಾರಣೆ ಮಾಡಬೇಕೆಂದೂ, ದಕ್ಷಿಣ ಆಫ್ರಿಕೆಯೊಳಗಿನ ಹಿಂದೀ ಜನರು (ಅವರಿಗೆ ಇಷ್ಟವಿದ್ದ ಪಕ್ಷದಲ್ಲಿ) ತಮ್ಮೊಬ್ಬ ಪ್ರತಿನಿಧಿಯನ್ನು ಈ ವಿಚಾರಣೆಯಲ್ಲಿ ಸಹಕರಿಸಲು ಕಳಿಸಿಕೊಡಬಹುದೆಂದೂ ಗೊತ್ತಾಗಿದೆ.

ಈ ಪ್ರದೇಶಗಳು ಬಹುಶಃ ಬ್ರಾಝಿಲ್, ಟಾಂಗಾನ್ಯಿಕಾ ಮೊದಲಾದುವಾಗಿರಬೇಕೆಂದು ವರ್ತಮಾನವಿದೆ. ಆಫ್ರಿಕೆಯಲ್ಲಿನ ತರುಣ ಹಿಂದೀಯರು ಅಲ್ಲಿಯ ಅಸಹ್ಯ ನಿರ್ಬಂಧನೆಗಳ ಮೂಲಕವೂ, ತಾರುಣ್ಯೋಚಿತ ಉತ್ಸಾಹದ ಮೂಲಕವೂ ಪರಸ್ಥಲಗಳಲ್ಲಿ ಒಕ್ಕಲಾಗಲು ಉತ್ಸುಕರಾಗಿದ್ದಾರೆಂದು ವದಂತಿಯಿದೆ. ಡಚ ಜನರ ಅಸಹಿಷ್ಣುತೆಯ ಮೂಲಕ, ಹಿಂದೀಯರನ್ನು ದಿಗ್ಬಂಧಿತರನ್ನಾಗಿ ಮಾಡುವುದಲ್ಲದೆ, ಅವರನ್ನು ಜನ್ಮಭೂಮಿಗೆ (ಹಿಂದುಸ್ಥಾನಕ್ಕೆ) ತಿರುಗಿ ಕಳುಹಿಸುವ ಯೋಜನೆಯೊಂದೂ (Repatriation Scheme) ಅಸ್ತಿತ್ವದಲ್ಲಿ ಬಂದಿತ್ತು. ಆ ಪ್ರಕಾರ ಹಲವರು ಮರಳಿ ಕಳಿಸಲ್ಪಟ್ಟೂ ಇದ್ದರು. ಇದಕ್ಕೆ ಅಲ್ಲಿಯ ಹಿಂದೀ ಜನರ ಉಗ್ರ ವಿರೋಧವುಂಟಾಗಿ, ಇಲ್ಲಿಯವರೂ ತಮ್ಮ ಕ್ಷೋಭೆಯನ್ನು ವ್ಯಕ್ತಪಡಿಸಿದ್ದರು. ಹೊಸ ಒಡಂಬಡಿಕೆಯ ಮೇರೆಗೆ ಅಲ್ಲಿಯ ಹಿಂದೀಯರನ್ನು ಹಿಂದುಸ್ಥಾನಕ್ಕೆ ಅಟ್ಟುವ ವಿಚಾರವು ಬಿಡಲ್ಪಟ್ಟು, ಹೊಸ ನಾಡುಗಳಲ್ಲಿ ಅವರು ನೆಲೆಸಬೇಕೆಂಬ ಮಾತು ತಲೆಯೆತ್ತಿದೆ. ಡಚರ ಮತ್ತು ಳಿದ ಬಿಳಿಬಣ್ಣದವರ ಅಸಹನೆಯು ಸಹಿಸಲಸಾಧ್ಯವೆಂದು ಮನಗಂಡೋ, ಏನೋ, ಬ್ರಾಝಿಲ್ ಮೊದಲಾದ ಕಡೆ ಹಿಂದೀಯರು ನೆಲೆಸುವ ಹಂಚಿಕೆಯು ಒಳ್ಳೆಯದಾಗಿದೆಯೆಂದು ಹಲವರು ಅಭಿಪ್ರಾಯಪಡುತ್ತಿದ್ದಾರೆ. ಈ ಭಾರವು ಆಫ್ರಿಕನ ಸರಕಾರದ ಮೇಲೆ ಇದೆಯೆಂಬುದೂ, ಅದು ಹಿಂದೀ ಸರಕಾರಕ್ಕೆ ಸಮ್ಮತವಾದ ಮೇಲೆಯೇ ಬಳಕೆಯಲ್ಲಿ ಬರತಕ್ಕದೆಂಬುದೂ, ಅಲ್ಲಿಯ ಹಿಂದೀಯರ ಪ್ರತಿನಿಧಿಯೊಬ್ಬನು ಈ ವಿಚಾರಣೆಯಲ್ಲಿ ಭಾಗತೆಗೆದುಕೊಳ್ಳಬಹುದೆಂಬುದೂ ತೃಪ್ತಿದಾಯಕ ವರ್ತಮಾನಗಳೆಂತಲೂ ಹೇಳುತ್ತಿದ್ದಾರೆ.

ಆದರೆ ನಾವು ಈ ಮಾತುಗಳನ್ನು ಇನ್ನಿಷ್ಟು ಸೂಕ್ಷ್ಮತೆವಾಗಿ ಪರ್ಯಾಲೋಚಿಸುವ. ಆಫ್ರಿಕೆಯಲ್ಲಿನ ಹಿಂದೀ ಜನರ ಸ್ವಾಸ್ಥ್ಯದ ಭಾರವು ಆಫ್ರಿಕನ ಸರಕಾರದ ಮೇಲೆ ಎಂಬ ಹಳೆಯ ವಚನದ ಪುನರುಚ್ಚಾರವು ಮತ್ತೆ ಕಸದಲ್ಲಿ ಬಿದ್ದು ಹೋಗುವ ಸಂಭವವಿದೆ. 'ದಿಗ್ಬಂಧನೆ'ಯ ಅಪಮಾನಕಾರಕವಾದ ನಿರ್ಬಂಧನೆಯು ಕಾನೂನಿನಿಂದ ತೆಗೆದು ಹಾಕಲ್ಪಟ್ಟರೂ, ವಿನಿರ್ಮುಕ್ತನಿವಾಸಕ್ಕೆ ಅವಕಾಶವನ್ನು ಕಲ್ಪಿಸಿಕೊಡುವುದು ಮಂತ್ರಿಯ ಸ್ವೇಚ್ಛೆಯ

CC-0. Jangamwadi Math Collection. Digitized by eGangotri

ಮೇಲೆಯೆ ಅವಲಂಬಿಸಿದೆ. ಅದಕ್ಕೆ ಕಾನೂನಿನ ಒತ್ತಾಯ ವಿಲ್ಲ. ಅಲ್ಲದೆ ಆಫ್ರಿಕೆಯಲ್ಲಿನ ಬಿಳಿಜನರು ಹಿಂದೀಯರು ಗುಡಿಚಾಪೆ ಕಟ್ಟಿಕೊಂಡು ಮನೆಯ ಹಾದಿ ಇಲ್ಲವೆ ಮಸಣದ ಹಾದಿ ಹಿಡಿಯಬೇಕೆಂದು ನಿರ್ಧಾರ ಮಾಡಿದ್ದಾರೆಂಬುದು ಎದ್ದು ತೋರುತ್ತಿದೆ. 'ದಿಗ್ಬಂಧನೆ' ಯೂ 'ಜನ್ಮಭೂಮಿ ಪ್ರಯಾಣ' ವೂ ಹೋದುವು; ಏಕೆಂದರೆ ಹಿಂದೀಜನರಿಗೆ ಅವು ಬೇಡವಾಗಿದ್ದುವು. ನಿಗ್ರೋಜನರ ಮಾತೃಭೂಮಿಯಲ್ಲಿ ಬಿಳಿಜನರಿಗೆ ಎಷ್ಟು ಸ್ವಾಸ್ತ್ಯದ ಅಧಿಕಾರವೋ ಅಷ್ಟೇ ತಮಗೂ ಎಂದೂ ಅವರೆಷ್ಟು ಅನಧಿಕೃತರೋ ಅಷ್ಟೇ ತಾವೂ ಎಂದೂ, ಅವರು ನಂಬಿದವರಾಗಿದ್ದರು. ಇದೀಗ 'ಪರದೇಶನಿವಾಸ'ದ ಹೊಸ ಯೋಜನೆಯು ತಲೆಯೆತ್ತಿದೆ. ಅಂತೂ ಆಫ್ರಿಕೆಯು ಬಿಳಿಜನರಿಗೆ ನಿರಾತಂಕವಾದ ವಾಸ (ಗ್ರಾಸ ?) ಸ್ಥಾನವಾಗಬೇಕೆಂಬ ಅವರ ಹಟಕ್ಕೆ ಹಿಂದುಸ್ತಾನ ಸರಕಾರವು ತಲೆಬಾಗಿಸಬೇಕಾಗಿ ಬಂದಿದೆ. ಸತ್ಕಾರದ ಶಬ್ದಗಳಿಗೇನೂ ಕೊರತೆಯಿಲ್ಲ. ಹೊರಹೊಂಗೆ ಎಷ್ಟೆಷ್ಟೋ ಸಾಧಿಸಿದಂತೆ. Repatriation-Segregation ಹೋದುವು ಎಂದು ಡುಬ್ಬ ಚಪ್ಪರಿಸಿಕೊಳ್ಳುತ್ತಾರೆ. ಹಿಂದುಸ್ತಾನದ ರಾಜ್ಯಭಾರಿಯು ಮುಂದೂ ಇರತಕ್ಕವನೆಂಬುದು ವಿಶೇಷವೆಂದು ಹೇಳುತ್ತಾರೆ. ಹಿಂದೀಯರ ಕಲ್ಯಾಣದ ಭಾರವು ಆಫ್ರಿಕನ ಸರಕಾರದ ಮೇಲೆಯೇ ಎಂಬುದೂ ಸಣ್ಣ ಸಂಗತಿಯಲ್ಲವೆಂದು ಹೇಳುತ್ತಾರೆ. ನಿಜವಾಗಿ ನಾಚಿಕೆಪಟ್ಟುಕೊಳ್ಳಬೇಕಾದ ಸಂಗತಿಯಿದು. ದೇಶೀಯ ಸರಕಾರವಲ್ಲವೆಂತಲೇ ಇಂತಹ ಮಾನಹಾನಿಯನ್ನು ಹಿಂದೀಯರು ತಡೆದುಕೊಳ್ಳಬೇಕಾಗಿದೆ. ದೇಶದಲ್ಲಿಯೂ ಗೌರವವಿಲ್ಲ, ದೇಶದ ಹೊರಗೂ ಇಲ್ಲ—ಹೀಗೆ ಸರ್ವತ್ರ ಪ್ರಾಣಹಾನಿಗಿಂತಲೂ ಮಿಗಿಲಾದ ಮಾನಹಾನಿ ಹಿಂದೀಯರ ಹಣೆಬರಹಕ್ಕೆ ! ಶಾಸ್ತ್ರೀಜಿಯಂಥವರು ಕೂಡ ಕೇಪ ಟೌನ್ ಒಡಂಬಡಿಕೆಯು ಸಂತೋಷದಾಯಕವಾದ ಸುದ್ದಿ ' ಯೆಂದು ಹೇಳುವುದು ನಮಗೆ ಖೇದವನ್ನುಂಟು ಮಾಡುತ್ತಿದೆ. ಸರಕಾರದ ಅಂಗವಾಗಿರುವುದರಿಂದ ಅವರು ಹಾಗೆ ಹೇಳುವುದು ಯುಕ್ತವಾಗಿರಬಹುದು. ಹಾಗಿದ್ದ ಪಕ್ಷದಲ್ಲಿ ನಾವು ಹೀಗೆ ಪ್ರತಿಭಟಿಸುವುದೂ ಯುಕ್ತವೆನ್ನಬಹುದು.

## "ಹಿಂದುಸ್ಥಾನದ ಸರಕುಗಳನ್ನೇ ಕೊಳ್ಳಿರಿ"

ಶ್ರೀಮಾನ್ ಬೆನೆಗಲ್ ಶಿವರಾಯರು ದಕ್ಷಿಣ ಕನ್ನಡ ಜಿಲ್ಲೆಯವರು. ಅವರು ವರ್ತುಲಪರಿಷತ್ತಿಗೆ ಕೂಲಿಕಾರರ ಪ್ರತಿನಿಧಿಗಳಾಗಿ ಆಮಂತ್ರಿತರಾಗಿದ್ದರು. ಅವರ ಪರಿಚಯವನ್ನೂ ಅವರ ಲೇಖವೊಂದನ್ನೂ ಹಿಂದೆ ಜಯಕರ್ನಾಟಕದಲ್ಲಿ ಪ್ರಕಟಿಸಿದೆ. ಅವರಿದೀಗ ಇಂತಹ ವಿಷಮ ರಾಜಕೀಯ ಪರಿಸ್ಥಿತಿಯಲ್ಲಿಯೂ ಮುಂದು ಬಂದು ಸ್ವದೇಶೀಯ ವಸ್ತು ಪ್ರಚಾರಕ್ಕಾಗಿ ಒಂದು ಸಂಸ್ಥೆಯನ್ನು ಸ್ಥಾಪಿಸಿ, ತಾವದರ ಕಾರ್ಯದರ್ಶಿಗಳಾಗಿ ಕೆಲಸ ಮಾಡುತ್ತಿರುವರು. ಆ ಸಂಸ್ಥೆಯು ಇಷ್ಟು ಅಲ್ಪ ಕಾಲದಲ್ಲಿ ಮಾಡಿದ ಕೆಲಸವನ್ನು ನೆನೆದರೆ ವಿಸ್ಮಯವಾಗದಿರದು. ಮದ್ರಾಸಿನಲ್ಲಿ ಆ ಸಂಸ್ಥೆಯು ಸ್ಥಾಪಿತವಾಗಿ ೬–೭ ವಾರಗಳು ಮಾತ್ರ ಸಂದುವು. ಪಂಡಿತ ಮದನಮೋಹನ ಮಾಲವೀಯರು ಅಖಿಲ ಭಾರತೀಯ ಸ್ವದೇಶಿ ಸಭೆಯನ್ನು ಸ್ಥಾಪಿಸುವ ಮೊದಲೇ ಶ್ರೀ. ಬಿ. ಶಿವರಾಯರು ಈ ಕೆಲಸವನ್ನು ಕೈಕೊಂಡರೆಂಬುದನ್ನು ನಾವು ನೆನೆಯಬೇಕು. ಈಗ ಮದ್ರಾಸಿನಲ್ಲಿ ಪ್ರತಿ ಜಿಲ್ಲೆಯಲ್ಲಿ ಈ ಸಭೆಯ ಒಂದೊಂದು ಶಾಖೆಯಿದೆಯಂತೆ. ಪಶ್ಚಿಮ ಗೋದಾವರಿ ಜಿಲ್ಲೆಯಲ್ಲಿ ಒಂದು ಜಿಲ್ಲಾ ಸ್ವದೇಶಿ ಪರಿಷತ್ತು ನೆರೆಯಿತಲ್ಲದೆ ಅಖಿಲ ಆಂಧ್ರ ಪ್ರಾಂತೀಯ ಸ್ವದೇಶಿ ಪರಿಷತ್ತೊಂದೂ ಕ್ಷಿಪ್ರದಲ್ಲಿ ಕೂಡಲಿದೆ. ಸ್ಥಳೀಯ ಸಂಸ್ಥೆಗಳು, ನಗರಸಭೆಗಳು ಮತ್ತು ತಾಲೂಕು ಸಂಘಗಳು ಸ್ವದೇಶಿಯನ್ನು ಪುರಸ್ಕರಿಸುವ ನಿರ್ಣಯಗಳನ್ನು ಅಂಗೀಕರಿಸುತ್ತಿವೆ. ಪ್ರಮುಖ ಪಟ್ಟಣಗಳಲ್ಲಿ ಸ್ವದೇಶಿ ವಸ್ತು ಭಾಂಡಾರಗಳು ಉದಯವಾಗುತ್ತಿವೆ. ಶಾಲೆಕಾಲೇಜುಗಳ ಮುಖ್ಯಾಧ್ಯಾಪಕರೂ ವಿದ್ಯಾರ್ಥಿಗಳೂ ಸ್ವದೇಶಿಯನ್ನು ಚೆನ್ನಾಗಿ ಬೆಂಬಲಿಸುತ್ತಿದ್ದಾರಂತೆ. ಇದು ನಿರ್ವಿವಾದವಾಗಿ ಅಭಿಮಾನಾಸ್ಪದವಾದ ಮಾತು.

## ಮಹಾಯುದ್ಧದ ಮರಿ, ಅಥವಾ ಮಹಾಯುದ್ಧದ ಸಾಲ ಮತ್ತು ತಪ್ಪುದಂಡ (War debts and Reparations)

ಇದೇ ಸಂಚಿಕೆಯಲ್ಲಿ ಬೇರೆ ಕಡೆ ಬಂದ ಲೇಖನವೊಂದರಲ್ಲಿ ಜರ್ಮನಿಯು ಮಹಾಯುದ್ಧದ ನಿಮಿತ್ತವಾಗಿ ಮಿತ್ರರಾಷ್ಟ್ರಗಳಿಗೆ ಕೊಡಬೇಕಾದ 'ತಪ್ಪುದಂಡ'ವು

CC-0. Jangamwadi Math Collection. Digitized by eGangotri

ಎಂತಹ ಗಂಭೀರ ಪ್ರಶ್ನೆಯಾಗಿ ಪರಿಣಮಿಸಿದೆಯೆಂಬುದನ್ನು ಉಲ್ಲೇಖಿಸಿದೆ. ಈ ಪ್ರಶ್ನೆಯು ಜರ್ಮನಿಯೊಂದನ್ನೇ ಬಾಧಿಸಿರದೆ ಯುರೋಪೀಯ ರಾಷ್ಟ್ರಕುಟುಂಬವನ್ನೇ ತನ್ನ ಪಾಶದಲ್ಲಿ ಬಂಧಿಸಿದೆ. ಇದರ ಮಹತ್ತ್ವವನ್ನರಿತೇ ಮಹಾಯುದ್ಧಕ್ಕೆ ಸಂಬಂಧಿಸಿದ ಇಡಿಯ ಸಾಲವನ್ನೇ ಚರ್ಚಿಸಲಿಕ್ಕೆ Lausanne ಎಂಬಲ್ಲಿ ಎಲ್ಲ ರಾಷ್ಟ್ರಗಳ ಸಭೆಯೊಂದು ಬೇಗನೆ ಸೇರಲಿದೆ. ಮಹಾಯುದ್ಧದ ಸಾಲದ ವಿಸ್ತಾರವನ್ನರಿಯಲಿಕ್ಕೆ ಕೆಳಗಿನ ಅಂಕಿಗಳು ಸಹಾಯವಾಗಬಹುದೆಂದು ನಂಬಿಗೆಯಿದೆ.*

| | ಮೂಲಧನ ಮತ್ತು ಈವೊತ್ತಿನ ವರೆಗಾದ ಬಡ್ಡಿ | | | ೬೨ ವರ್ಷಗಳಲ್ಲಿ ಒಟ್ಟು ಕೂಡಿಸಿ ಕೊಡತಕ್ಕ ಹಣ | | |
|---|---|---|---|---|---|---|
| ಇಂಗ್ಲಂಡು | ೧೪೧೭⅔ | ಕೋಟಿರೂ. ‡ | | ೩೪೨೩ | ಕೋಟಿರೂ. | |
| ಫ್ರಾನ್ಸು | ೧೨೪೮⅔ | ,, | ,, | ೨೧೧೦⅔ | ,, | ,, |
| ಇಟಲಿ | ೬೩೦ | ,, | ,, | ೭೪೨ | ,, | ,, |

ಬೇರೆ ಚಿಕ್ಕಪುಟ್ಟ ದೇಶಗಳನ್ನೂ ಹಿಡಿದರೆ, ಅಮೇರಿಕೆಯಿಂದ ಎಲ್ಲ ದೇಶಗಳು ಪಡೆದುಕೊಂಡ ಸಾಲವು ೩೫೫೭⅔ ಕೋಟಿ ರೂ. ಇದ್ದು, ಈ ನಿಮಿತ್ತವಾಗಿ ಅಮೇರಿಕೆಗೆ ೬೨ ವರ್ಷಗಳಲ್ಲಿ ಒಟ್ಟು ೬೮೯⅔ ಕೋಟಿ ರೂ. ಗಳು ಸಲ್ಲತಕ್ಕುದು.

ಉಳಿದ ದೇಶಗಳ ಪರವಾಗಿಯೇ ಇಂಗ್ಲಂಡು ಅಮೇರಿಕೆಯಿಂದ ಸಾಲವನ್ನು ತೆಗೆದುಕೊಂಡಿದ್ದರೂ, ತನಗೆ ಸಲ್ಲತಕ್ಕ ಹಣದ ವಿಷಯದಲ್ಲಿ ಅದು ಹೆಚ್ಚು ಉದಾರತೆಯನ್ನು ತೋರಿಸಿದೆ. ಇಂಗ್ಲಂಡಿಗೆ ಉಳಿದ ಯುರೋಪೀಯ ದೇಶಗಳಿಂದ ಸಲ್ಲತಕ್ಕ ಸಾಲದ ಹಣವು ಕೆಳಗೆ ಕಾಣಿಸಿದಂತೆ ಇದೆ.

| | ಮೂಲಧನ ಮತ್ತು ಈವೊತ್ತಿನ ವರೆಗಾದ ಬಡ್ಡಿ | | | ೬೨ ವರ್ಷಗಳಲ್ಲಿ ಒಟ್ಟು ಕೂಡಿಸಿ ಕೊಡತಕ್ಕ ಹಣ | | |
|---|---|---|---|---|---|---|
| ಫ್ರಾನ್ಸು | ೯೭೯⅔ | ಕೋಟಿ ರೂ. | | ೧೯೯೮⅔ | ಕೋಟಿ ರೂ. | |
| ಇಟಲಿ | ೯೧೬⅔ | ,, | ,, | ೪೧೫⅔ | ,, | ,, |

ರಶಿಯಾದೇಶದಿಂದ ಬರಬೇಕಾದ ೧೩೫೦ ಕೋಟಿ ರೂ. ಗಳನ್ನು ಬಿಟ್ಟರೆ ಉಳಿದ ದೇಶಗಳಿಂದ ಇಂಗ್ಲಂಡಿಗೆ ಸಲ್ಲತಕ್ಕ ಸಾಲದ ಹಣವು ೨೦೩೫ ಕೋಟಿ ರೂ. ಗಳಿದ್ದು, ಇದಕ್ಕೆ ಪ್ರತಿಯಾಗಿ ಇಂಗ್ಲಂಡಿಗೆ ೬೨ ವರ್ಷಗಳಲ್ಲಿ ಒಟ್ಟಾರೆ ೧೬೮೨ ಕೋಟಿ ರೂ. ಗಳು—ಎಂದರೆ ತನಗೆ ಸಲ್ಲತಕ್ಕ ಹಣಕ್ಕಿಂತ ಕಡಿಮೆ ಹಣವು ಸಲ್ಲುವದು.

ಇಂಗ್ಲಂಡು ಅಮೇರಿಕೆಗಳಿಗೆ ಸಲ್ಲತಕ್ಕ ಸಾಲವನ್ನು ತೀರಿಸುವ ಯೋಜನೆಗಳ ತುಲನೆಯು ಮನೋರಂಜಕವಿದೆ. ಕೆಳಗಿನ ಕೋಷ್ಟಕದಲ್ಲಿ ಪ್ರತಿದೇಶವು ಅಮೇರಿಕೆಗೆ ಕೊಡುವ ಸಾಲದ ಪ್ರಮಾಣವನ್ನು (ಬಡ್ಡಿಯ ದರವನ್ನು ೧೦೦ ಕ್ಕೆ ೫ರಂತೆ ಹಿಡಿದು) ತೋರಿಸಿದೆ.

| | | | |
|---|---|---|---|
| ಇಂಗ್ಲಂಡು | ೧೦೧ ಕ್ಕೆ | ೮೨ | ರಂತೆ |
| ಫ್ರಾನ್ಸು | ,, | ೪೨ | ,, |
| ಇಟಲಿ | ,, | ೨೧ | ,, |

ಇಂಗ್ಲಂಡಿಗೆ ಸಲ್ಲತಕ್ಕ ಸಾಲದ ಹಣದಲ್ಲಿ

| | | | | | |
|---|---|---|---|---|---|
| ಫ್ರಾನ್ಸು | ತನ್ನ | ಒಟ್ಟು | ಸಾಲದ | ೩೪/೧೦೦ | ರಷ್ಟು |
| ಇಟಲಿ | ,, | ,, | ,, | ೧೪/೧೦೦ | ರಷ್ಟು |

ಕೊಡುವದುಂಟು.

ಅಮೇರಿಕೆಗೆ ಪ್ರಮುಖ ಯುರೋಪಿಯ ರಾಷ್ಟ್ರಗಳಿಂದ ಸಲ್ಲತಕ್ಕ ಸಾಲದ ಮೇಲಿನ ಬಡ್ಡಿಯ ದರ[illegible] ತುಲನೆಯು ಇನ್ನಿಷ್ಟು ಬೋಧಪ್ರದವಾದೀತೆಂಬುದರಲ್ಲಿ ಸಂದೇಹವಿಲ್ಲ.

ಅಮೇರಿಕೆಗೆ ಸಲ್ಲತಕ್ಕ ಸಾಲಗಳ ಮೇಲಿನ ಬಡ್ಡಿಯ ದ[illegible]

| | ಇಂಗ್ಲಂಡು ೧೦೦ ಕ್ಕೆ | ಫ್ರಾನ್ಸು ೧೦೦ ಕ್ಕೆ | ಇಟ[illegible] ೧೦೦ ಕ್ಕೆ |
|---|---|---|---|
| ೧೯೨೩–೩೦ .... .... | ೩ | ,, | ,, |
| ೧೯೩೦–೩೨ .... .... | ೩ | ೧ | ⅛ |
| ೧೯೩೩–೪೧ .... | ೩½ | ೧ | ⅛ |
| ೧೯೪೨–೫೦ .... | ೩½ | ೨ | ¼ |
| ೧೯೫೦–೫೮ .... | ೩½ | ೨½ | ½ |
| ೧೯೫೮–೬೦ .... | ೩½ | ೩ | ¾ |
| ೧೯೬೦–೬೫ .... | ೩½ | ೩ | ¾ |
| ೧೯೬೫–೭೦ ... | ೩½ | ೩½ | ೧ |

೧೯೭೦ ರಿಂದ ೧೯೮೦ರ ವರೆಗೆ ಇಟಲಿಯು ೧೦೦ ಕ್ಕೆ ೧ರಂತೆ, ೧೯೮೦ ರಿಂದ ೧೯೮೭ರ ವರೆಗೆ ೧೦೦ ಕ್ಕೆ ೨ರಂತೆ ಕೊಡಬೇಕು.

ಇಂಗ್ಲಂಡು ೧೯೮೪ರ ವರೆಗೆ ೧೦೦ ಕ್ಕೆ ೩½ ಯಂತೆ, ಫ್ರಾನ್ಸು ೧೯೮೭ರ ವರೆಗೆ ೧೦೦ ಕ್ಕೆ ೩½ ಯಂತೆ ಕೊಡಬೇಕು.

ಮಹಾಯುದ್ಧಕಾಲದಲ್ಲಿ ತೆಗೆದ ಸಾಲದ ಬಗ್ಗೆ ಅಮೇರಿಕೆಗೆ ಇಂಗ್ಲಂಡಿನಿಂದ ಪ್ರತಿ ವರ್ಷ ಇಂತಿಷ್ಟು

* ಈ ಟಿಪ್ಪಣಿಗೆ Mysore Economic Journal ನಲ್ಲಿ ಬಂದ ಒಂದು ಅವಲೋಕನೆಯು ಆಧಾರವಾಗಿದೆ.

‡ ಈ ಲೇಖನದಲ್ಲಿ ಒಂದು ಪೌಂಡಿಗೆ ೧೫ ರೂ. ಯಂತೆ ಲೆಕ್ಕ ಮಾಡಿದೆ.

CC-0. Jangamwadi Math Collection. Digitized by eGangotri

ಹಣವು ಮುಟ್ಟತಕ್ಕುದೆಂದು ಗೊತ್ತು ಮಾಡಲ್ಪಟ್ಟಿದೆ. ಅದರಂತೆಯೇ ಇಂಗ್ಲಂಡಿಗೆ ಉಳಿದ ರಾಷ್ಟ್ರಗಳಿಂದ ಪ್ರತಿ ವರ್ಷ ಇಂತಿಷ್ಟು ಹಣವು ಸಲ್ಲತಕ್ಕುದೆಂದು ಗೊತ್ತು ಮಾಡಲ್ಪಟ್ಟಿದೆ; ಅಲ್ಲದೆ ಇಂಗ್ಲಂಡಿಗೆ ಜರ್ಮನಿಯಿಂದ ಮಹಾಯುದ್ಧದ ಹಾನಿಯ ನಿಮಿತ್ತವಾಗಿ ಕೆಲವೊಂದು ಹಣವು ಬರತಕ್ಕುದಿದೆ. ಅಮೇರಿಕೆಗೆ ತಾನು ಎಷ್ಟು ಹಣವನ್ನು ಕೊಡಬೇಕಾಗಿದೆಯೋ ಅದಕ್ಕೂ ಜರ್ಮನಿಯಿಂದ ತನಗೆ ಸಲ್ಲತಕ್ಕ ಹಣಕ್ಕೂ ಎಷ್ಟು ಕಡಿಮೆ ಬೀಳುವುದೋ ಅಷ್ಟೇ ಹಣವನ್ನು ತನ್ನ ಮಿತ್ರರಾಷ್ಟ್ರಗಳಿಂದ (ಮಹಾಯುದ್ಧದ ಸಾಲದ ಬಗ್ಗೆ) ತಾನು ತೆಗೆದುಕೊಳ್ಳುವುದಾಗಿ 'Balfour note' ನ ಮೂಲಕ ಇಂಗ್ಲಂಡು ಮಿತ್ರರಾಷ್ಟ್ರಗಳಿಗೆ ವಚನವನ್ನಿತ್ತಿತು. ಆದರೆ ಜರ್ಮನಿಯು ತಾನು ಕೊಡಬೇಕಾದ ಮಹಾಯುದ್ಧದ ಹಾನಿಯ ಹಣವನ್ನು (Reparations-ತಪ್ಪುದಂಡವನ್ನು) ಪೂರಾ ನಿರಾಕರಿಸುವುದೇನೋ – ಅಥವಾ ಮಿತ್ರರಾಷ್ಟ್ರಗಳು ತಮ್ಮ ಹಿತಕ್ಕಾಗಿಯೇ ಅದನ್ನು ಪೂರಾ ಬಿಟ್ಟುಬಿಡಬೇಕಾಗುವುದೇನೋ ಎಂಬ ಶಂಕೆಗೆ ಇಂದು ಆಸ್ಪದವಿದೆ. ಆ ಸಂದರ್ಭದಲ್ಲಿ ಇಂಗ್ಲಂಡಿಗೆ ಜರ್ಮನಿಯಿಂದ ಬರತಕ್ಕ ಹಣಕ್ಕೆ ಲೋಪವೊದಗಿದರೆ, ಮಹಾಯುದ್ಧದ ಸಾಲದ ಬಗ್ಗೆ ಮಿತ್ರರಾಷ್ಟ್ರಗಳಿಂದ ತನಗೆ ಸಲ್ಲತಕ್ಕ ಹಣವೇನಾದರೂ ಹೆಚ್ಚಾದೀತೆಂದು ಇಂಗ್ಲಂಡು ಅಪೇಕ್ಷಿಸುವುದು ವಿಫಲ. ಶತ್ರುರಾಷ್ಟ್ರವೇ ಹಾನಿಯ ಹಣವನ್ನು ಕೊಡದಿದ್ದಲ್ಲಿ ಸಾಲದ ಹಣವನ್ನು ತಮಗೂ ಕೊಡಬೇಕಾಗುವುದಿಲ್ಲವೆಂದು ಮಿತ್ರರಾಷ್ಟ್ರಗಳು ಖಂಡಿತವಾಗಿ ಸಾಧಿಸುವವು.

ಜರ್ಮನಿಯು ಮಿತ್ರರಾಷ್ಟ್ರಗಳಿಗೆ ಮಹಾಯುದ್ಧದ ತಪ್ಪುದಂಡವೆಂದು ಕೊಡಬೇಕಾದ ಹಣವನ್ನೂ ಮಿತ್ರರಾಷ್ಟ್ರಗಳು ಇಂಗ್ಲಂಡಿಗೆ ಮತ್ತು ಇವೆರಡೂ ಕೂಡಿ ಅಮೇರಿಕೆಗೆ ಮಹಾಯುದ್ಧದ ಸಾಲದ ಬಗ್ಗೆ ಕೊಡಬೇಕಾದ ಹಣವನ್ನೂ ರದ್ದುಪಡಿಸಿದಲ್ಲಿ, ಅಮೇರಿಕೆಗೆ ಒದಗುವ ಹಾನಿಯನ್ನು 'ಯಂಗ ಪ್ಲಾನಿ'ನಲ್ಲಿ ಮತ್ತು ಹೇಗದಲ್ಲಾದ ಒಪ್ಪಂದದಲ್ಲಿ ವಿವರಿಸಿದೆ. ಈವೊತ್ತಿನ ಮಿತಿಗಿದ್ದ ೭೨ ಕೋಟಿ ರೂ. ಗಳಿಂದ ೧೯೮೭-೮೮ರಲ್ಲಿ ೧೩೭ ಕೋಟಿ ರೂ. ಗಳವರೆಗೆ ಬೆಳೆಯುವ ಪ್ರತಿ ವರ್ಷದ ಸಾಲದ ಕಂತಗಳನ್ನು ಅಮೇರಿಕೆಯು ಬಿಟ್ಟುಬಿಡಬೇಕಾಗುವದು.

ಅಂತೂ ಅಮೇರಿಕೆಯು ಒಟ್ಟಿನಲ್ಲಿ ಎಲ್ಲ ರಾಷ್ಟ್ರಗಳಿಗೆ ಸಾವುಕಾರನ ಸ್ಥಾನದಲ್ಲಿದೆ. ಜಗತ್ತಿನ ಯೋಗಕ್ಷೇಮಕ್ಕಾಗಿ ಅಮೇರಿಕೆಯು ಈ ಹಾನಿಯನ್ನು ಹೊರಲು ಸಿದ್ಧವಾದರೆ, ಶಾಂತಿಯ ಮಾರ್ಗವು ಎಷ್ಟೋ ಮಟ್ಟಿಗೆ ಸುಗಮವಾಗುವುದರಲ್ಲಿ ಸಂದೇಹವಿಲ್ಲ.

ಆದರೆ ಇದರಿಂದ ಹಿಂದೀಯರಾದ ನಾವು ಒಂದು ಬೋಧವನ್ನು ಪಡೆಯುವಂತಿದೆ. ಸುಧಾರಣಾಶಿಖರವನ್ನು ಮುಟ್ಟಿದಂತಹ ಫ್ರಾನ್ಸು, ಜರ್ಮನಿ, ಇಂಗ್ಲಂಡು, ಇಟಲಿ ಮೊದಲಾದ ಬಲಾಢ್ಯ ಪಾಶ್ಚಾತ್ಯ ರಾಷ್ಟ್ರಗಳು ತಮ್ಮ ಸಂಕಟಸಮಯದಲ್ಲಿ ತಾವು ತೆಗೆದ ಸಾಲವನ್ನು ಆ ಸಂಕಟದಿಂದ ಪಾರಾದ ಕೂಡಲೆ "ಕೊಡಲು ಸಾಧ್ಯವಿಲ್ಲ" ವೆಂದು ಧೈರ್ಯದಿಂದ ಹೇಳಬಲ್ಲುವಾದರೆ, ತನ್ನ ಮೇಲೆ ತನ್ನ ಒಪ್ಪಿಗೆಯಿಲ್ಲದೆ ಹೊರಿಸಿದ ಅಲ್ಲಲ್ಲಿನ ಸಾಲವು ಎಷ್ಟುಮಟ್ಟಿಗೆ ನ್ಯಾಯ್ಯವಾಗಿದೆಯೆಂದು ವಿಚಾರಿಸಲು ಹಿಂದುಸ್ಥಾನವು ಒಂದು ಪಂಚರ ಸಭೆಯನ್ನು (Impartial Tribunal) ನೇಮಿಸಲು ಕೇಳಿಕೊಂಡರೆ ಅದರಲ್ಲಿ ತಪ್ಪೇನು?

**ಶಾಂತಿಯು ಸಮೀಪಸಾಧ್ಯವೆ?**

'ಕೆಡುಕನ್ನು ಬಿಂಗಡವಾಗಿ ನೋಡಿದರೆ ಮಾತ್ರ ಅದರ ದೊಡ್ಡ ಗಾತ್ರವು ನಮ್ಮನ್ನು ಹೆದರಿಸುತ್ತಿದೆ. ನಮ್ಮ ಸುತ್ತುಮುತ್ತು ನಡೆದ ಸಾವಿನ ಹಾವಳಿಯ ಕೋಷ್ಟಕವನ್ನು ಸಿದ್ಧಪಡಿಸಿದರೆ, ಅದರ ಕಲ್ಪನೆಯಿಂದಲೂ ನಮ್ಮ ಎದೆಯೊಡೆದೀತು....ಗುಪ್ತ ಪೋಲೀಸನು ಅಪರಾಧಗಳ ವ್ಯವಸ್ಥಿತ ಅಭ್ಯಾಸವನ್ನೆ ಮಾಡಬೇಕಾದುದರಿಂದ ಇಡಿ ಸಾಮಾಜಿಕ ಜೀವನಕ್ರಮದಲ್ಲಿ ಅವುಗಳ ಸ್ಥಾನವೇನೆಂಬುದನ್ನು ಮರೆತು ಬಿಡುತ್ತಾನೆ.' ಎಂದು ಕವಿ ರವೀಂದ್ರರು ಒಂದು ಕಡೆ ಹೇಳಿದ್ದಾರೆ. ಸಮಾಜದ ಚಟುವಟಿಕೆಗಳ ವ್ಯವಸ್ಥಿತ ವ್ಯಾಸಂಗವೆ ಯಾರ ಉದ್ಯೋಗವಾಗಿರುವುದೊ, ಅವರು ಈಗಾಗಲೆ ರೂಢಮೂಲವಾದ ಕೆಲವು ಗ್ರಹಿಕೆಗಳಿಗೆ ಮನಸೋಲುವ ಸಂಭವವಿದೆ. ವಿಶೇಷತಃ ಪರತಂತ್ರರಾಷ್ಟ್ರಗಳಲ್ಲಿನ ಜನರು ಪ್ರಭುರಾಷ್ಟ್ರಗಳ ರಾಜಕೀಯ ವ್ಯವಹಾರವನ್ನು ಕುರಿತು ಸಾಶಂಕರಾಗಿರುವುದು ತೀರ ಸಾಹಜಿಕವಾಗಿದೆ. ಎಂತಲೇ, ಸಾರ್ವಭೌಮ ರಾಷ್ಟ್ರಗಳು ನಡೆಸಿದುದು ಶಾಂತಿಗಾಗಿ ಹೃತ್ಪೂರ್ವಕವಾದ ಪ್ರಯತ್ನ



CC-0. Jangamwadi Math Collection. Digitized by eGangotri

ವಲ್ಲ, ಅದೊಂದು ದೊಡ್ಡ ಪ್ರಹಸನವು ಎಂದವರಿಗೆ ಎನಿಸುವುದು ಸೋಜಿಗವಲ್ಲ. ಆದರೆ ನಾವು ಬುದ್ಧಿಪೂರ್ವಕವಾಗಿ ಇಂತಹ ಪೂರ್ವಗ್ರಹಗಳನ್ನು ಬದಿಗೆ ಸರಿಸಿ, ಸಾಧ್ಯವಿದ್ದಷ್ಟು ನಿರ್ಲಿಪ್ತ ಮನಸ್ಸಿನಿಂದ ಆಲೋಚಿಸಿದರೂ, ಶಾಂತಿಯ ಸ್ವರ್ಗೀಯದೃಶ್ಯವು ಒಂದು ಅಡಿಯಾದರೂ ಸಮೀಪಿಸಿದ ಹಾಗೆ ತೋರಲೊಲ್ಲದು.

ಪೂರ್ವಗೋಲಾರ್ಧದ ಪೂರ್ವತಮಪ್ರದೇಶದಲ್ಲಿ ಏನು ನಡೆದಿದೆ? ಮಂಚೂರಿಯದಿಂದ ಜಪಾನು ಹಿಂದೆಗೆಯಬೇಕೆಂದು 'ರಾಷ್ಟ್ರಸಂಘ'ದವರು ತೀರ್ಮಾನಿಸಿದ ಮೇಲೆ, ಅದನ್ನು ಯಾವ ಬಗೆಯಿಂದ ಕಾರ್ಯರೂಪದಲ್ಲಿ ತರಬೇಕೆಂಬ ಬಗ್ಗೆಯೂ, ಮಂಚೂರಿಯದ ಪರಿಸ್ಥಿತಿಯನ್ನು ಕಣ್ಣಾರೆ ಕಂಡು ತನ್ನ ಸಲಹೆಗಳನ್ನು ಸಲ್ಲಿಸಬೇಕೆಂದೂ ಪ್ರಮುಖ ರಾಷ್ಟ್ರಗಳ ಪ್ರತಿನಿಧಿಗಳ ಮಿಶ್ರಸಮಿತಿಯೊಂದನ್ನು ನಿಯಮಿಸಿದ್ದರಷ್ಟೆ. ಆ ಸಮಿತಿಯಲ್ಲಿ ಚೀನದ ಪ್ರತಿನಿಧಿಯೊಬ್ಬನೂ ಸೇರಿಸಲ್ಪಟ್ಟಿದ್ದನು. ರಾಷ್ಟ್ರಸಂಘದವರ ಏಕಮುಖವಾದ ನಿಷೇಧವನ್ನು ಮನ್ನಿಸಿದಂತೆ ಮಾಡಿ, ಜಪಾನು ಮಂಚೂರಿಯದಿಂದ ಹಿಂದೆಗೆಯಲು ಒಪ್ಪಿಕೊಂಡ ಮೇಲೆ ಚೀನಜಪಾನುಗಳ ನಡುವೆ ಸಂಧಾನದ ಪ್ರಯತ್ನಗಳು ನಡೆದು ಅವು ಹುಸಿಯಾದುವು. ಈ ಸಂದುಕಟ್ಟಿನಲ್ಲಿ ಜಪಾನು ಚೀನದಿಂದ ಹೊರಹಾಕಲ್ಪಟ್ಟ ರಾಜವಂಶದ ಪ್ರತಿನಿಧಿಯೊಬ್ಬನನ್ನು ಮಂಚೂರಿಯದ ಅಧಿಪತಿಯನ್ನಾಗಿ ಮಾಡಿ, ಆತನನ್ನು ತನ್ನ ಕುಟಿಲನೀತಿಯ ಸಾಧನವನ್ನಾಗಿ ಉಪಯೋಗಿಸಿಕೊಂಡಿತು. ಆತನು ಮಿಶ್ರಸಮಿತಿಯ ಚೀನ ಸಭಾಸದನನ್ನು ರಾಜ್ಯದೊಳಗೆ ಕಾಲಿಕ್ಕಲು ಒಪ್ಪಿಗೆ ಕೊಡಲಿಲ್ಲ. ಕೂಡಲೆ ಸಮಿತಿಯ ಅಧ್ಯಕ್ಷರು ಯಾವ ಸಭಾಸದನೂ ಮಂಚೂರಿಯವನ್ನು ಪ್ರವೇಶಿಸಕೂಡದು ಎಂದು ಅಪ್ಪಣೆ ಕೊಟ್ಟರು. ರಾಷ್ಟ್ರಸಂಘವು ಈ ಅಪಮಾನವನ್ನು ಸಹಿಸುವುದೊ ಇಲ್ಲವೊ ಎಂದು ಜನರ ಕುತೂಹಲವು ಕೆರಳುತ್ತಿರುವಷ್ಟರಲ್ಲಿ ಮಂಚೂರಿಯದ ಈಶಾನ್ಯ ದಿಕ್ಕಿನಲ್ಲಿ ರಶಿಯಾಜಪಾನುಗಳ ನಡುವೆ ಯುದ್ಧವು ಸಂಭವಿಸುವ ಭೀತಿಯಿದೆಯೆಂದೂ, 'ಪೂರ್ವ ಚೀನೀ ರೇಲ್ವೆ'ಯ ರಶಿಯನ ಕೆಲಸಗಾರರು ಮುಷ್ಕರವನ್ನು ಮಾಡಿದರೆಂದೂ, ಅದರಿಂದ ಜಪಾನಿ ಸೇನಾಪತಿಗೆ ತನ್ನ ಸೈನ್ಯವನ್ನು ಅಲ್ಲಿಂದ ಹೊರತರಲು ತೊಂದರೆಯಾಯಿತೆಂದೂ ಸುದ್ದಿ ಬಂದಿದೆ. ರಶಿಯದ ಕ್ರಾಂತಿವಾದಿ ವೃತ್ತಪತ್ರಿಕೆಗಳು ಜಪಾನು ಆಕ್ರಮಣನೀತಿಯನ್ನು ಅನುಸರಿಸುತ್ತಿದೆಯೆಂದು ದೂರತೊಡಗಿವೆ, ಮತ್ತು ಜಪಾನುರಶಿಯಗಳ ನಡುವೆ ಯುದ್ಧವು ತೀರಾ ಸಂಭವನೀಯವೆಂದು ಹೇಳತೊಡಗಿವೆ. ಆಮೇರೆಗೆ ರಶಿಯವು ಮಂಚೂರಿಯಕ್ಕೆ ಹತ್ತಿದ ತನ್ನ ಗಡಿನಾಡಿನಲ್ಲಿ ಸೈನ್ಯಬಲವನ್ನೂ ಇತರ ಯುದ್ಧೋಪಕರಣಗಳನ್ನೂ ತುಂಬಾ ಅಣಿಮಾಡುತ್ತಿದೆಯಂತೆ. ಇತ್ತ ಚೀನದಲ್ಲಿನ ಮತ್ತು ಮಂಚೂರಿಯದಲ್ಲಿನ ಚೀನೀ ಕ್ರಾಂತಿಕಾರರು (Chinese 'Reds') ಮಂಚೂರಿಯದಲ್ಲಿ ದಂಗೆಯನ್ನೆಬ್ಬಿಸಿ, ಅಲ್ಲಿಯ ಸರಕಾರಿ ಸೈನ್ಯವು ಚೆಲ್ಲಾಪಿಲ್ಲಿಯಾಗಿ ಓಡಿ ಹೋಗುವಂತೆ ಮಾಡಿ, ಹಲವು ಪ್ರಮುಖ ಪಟ್ಟಣಗಳನ್ನು ವಶಪಡಿಸಿಕೊಂಡು, ರಾಜ್ಯಾಧಿಪತ್ಯಕ್ಕೆ ದೊಡ್ಡ ಆತಂಕವನ್ನುಂಟು ಮಾಡಿದ್ದಾರೆ. ಇದೆಲ್ಲ ಏತರ ಮುಂಗುರುತಾಗಿದೆಯೊ? ಪೂರ್ವದಿಕ್ಕಿನಲ್ಲಿ ಮತ್ತೊಮ್ಮೆ ದಾವಾಗ್ನಿಯು ಹೊತ್ತಲಿಕ್ಕಿದೆಯೇನೊ?

ಅತ್ತ ಯುರೋಪುಖಂಡದ ಪೂರ್ವದಿಕ್ಕಿನ ರಾಷ್ಟ್ರಗಳ (Danubian Nations) ಆರ್ಥಿಕದುರವಸ್ಥೆಯನ್ನು ವಿಚಾರಿಸಲಿಕ್ಕೆಂದು ಒಂದು ಆರಂಭದ ಪರಿಷತ್ತು ಲಂಡನ್ ನಗರದಲ್ಲಿ ಸೇರಿತ್ತು. ಪ್ರಮುಖ ರಾಷ್ಟ್ರಗಳೆಲ್ಲ ಆಮಂತ್ರಿತವಾಗಿದ್ದುವು. ಆ ಸಭೆಯು ಯಾವ ತೀರ್ಮಾನಕ್ಕೂ ಬಾರದೆ ಚದರಿಹೋದುದರಿಂದ ಯುರೋಪೀಯ ವಿಚಾರಗಳಿಗೆ ದೊಡ್ಡ ಭೀತಿಯುಂಟಾಗಿದೆ. ಏಕೆಂದರೆ ಪೂರ್ವದಿಕ್ಕಿನ ಯುರೋಪೀಯ ರಾಷ್ಟ್ರಗಳ ಭದ್ರತೆಯ ಮೇಲೆ ಯುರೋಪಿನ ಶಾಂತಿಯು ಅವಲಂಬಿಸಿದೆ. ಲಂಡನ್ ಪರಿಷತ್ತು ಅಯಶಸ್ವಿಯಾದ ಮೂಲಕ ಒಂದು ರಾಷ್ಟ್ರದವರು ಇನ್ನೊಂದು ರಾಷ್ಟ್ರದವರನ್ನು ಮೂದಲಿಸುತ್ತಿದ್ದಾರೆ. ಫ್ರಾನ್ಸಿಗೆ ತನ್ನ ಅಂಕೆಯಲ್ಲಿಯೇ ಆ ಚಿಕ್ಕಪುಟ್ಟ ರಾಷ್ಟ್ರಗಳೆಲ್ಲ ಇರುವುದು ಬೇಕಾಗಿದೆ. ಜರ್ಮನಿಯು ವಿರೋಧವನ್ನು ತೋರಿಸಿದುದರಿಂದ, ಆ ಪರಿಷತ್ತು ಈ ತೆರನಾಗಿ ಕೊನೆಗಂಡಿತೆಂದು ಫ್ರೆಂಚರ ಆಕ್ಷೇಪ. ಇಟಾಲಿಯ ಫಾಸಿಸ್ಟ ಆಧಿಪತ್ಯದ ಸಭೆಯೊಂದು ಸೇರಿ, 'ಅಂತರರಾಷ್ಟ್ರೀಯ ಪರಿಷತ್ತುಗಳು ಆಗಾಗ ನೆರೆಯುವುದು, ಅವುಗಳು ಸುಳ್ಳು ಆಶೆಯನ್ನು ಹುಟ್ಟಿಸುವುದು, ಕೊನೆಗೆ ಯಾವ ನಿರ್ಣಯಕ್ಕೂ ಬಾರದೆ ಕೊನೆಗಾಣುವುದು-ಇವು

CC-0. Jangamwadi Math Collection. Digitized by eGangotri

ಗಳಿಂದ ಇಟಲಿಗೆ ಬೇಜಾರ ಬಂದಿದೆ, ಮತ್ತು ಇನ್ನು ಮುಂದೆ ರಾಷ್ಟ್ರಸಂಘದಲ್ಲಿ ತಾನು ಇರುವುದರ ಔಚಿತ್ಯವನ್ನು ಕುರಿತು ಅದು ಸಾಶಂಕವಾಗಿದೆ' ಎಂದೂ, 'ಯುದ್ಧ ಸಮಾಪ್ತಿಯ ಒಪ್ಪಂದಗಳಲ್ಲಿಯೆ ಹೊಸ ಕದನದ ಅಂಕುರಗಳಿರುವುದರಿಂದ, ಅವುಗಳನ್ನು ಮಾರ್ಪಡಿಸಲೇಬೇಕು' ಎಂದೂ ಅಸಂತೋಷಪ್ರದರ್ಶಕವಾದ ನಿರ್ಣಯಗಳು ಮಾಡಲ್ಪಟ್ಟುವು. ಇನ್ನೊಂದು ಕಡೆ—ಜರ್ಮನಿಯ ಅಧ್ಯಕ್ಷಪದವಿಯ ಸ್ಪರ್ಧೆಯಲ್ಲಿ ವ್ಹಾನ್ ಹಿಂಡೆನ್‌ಬರ್ಗನಿಗೆ ವಿಜಯಶ್ರೀಯು ಮಾಲೆಯಿಕ್ಕಿದುದರಿಂದ ಸಾರ್ವತ್ರಿಕ ಸಮಾಧಾನವಾಗಿದ್ದರೂ, ಪ್ರಶಿಯದಲ್ಲಿ (ಜರ್ಮನ ರಾಷ್ಟ್ರದ ಇನ್ನೊಂದು ವಿಭಾಗದಲ್ಲಿ) ಹಿಟ್ಲರ ಪಕ್ಷೀಯರಿಗೆ ಪ್ರಚಂಡವಾದ ವಿಜಯವು ದೊರೆತುದರಿಂದ, ಜರ್ಮನಿಯ ರಾಜಕೀಯ ಪರಿಸ್ಥಿತಿಯು ಮತ್ತೆ ಜಗತ್ತಿನ ದೃಷ್ಟಿಯನ್ನು ಆಕರ್ಷಿಸುತ್ತಲಿದೆ.

ಸೂಕ್ಷ್ಮ ವಿಚಾರಿಗೆ ಯುರೋಪಿನ ರಾಜಕೀಯ ಪರಿಸ್ಥಿತಿಯು ಒಬ್ಬ ಕುಶಲ ನಾಟಕಕಾರನು ವಿವಿಧ ಸ್ವಭಾವದ ಪಾತ್ರಗಳನ್ನೂ ವಿವಿಧ ಸಂದರ್ಭ ಸನ್ನಿವೇಶಗಳನ್ನೂ ಕಲ್ಪಿಸಿ, ಒಂದು ಅಕಲ್ಪಿತವಾದ ಅನಾಹುತಪತ್ರ ಕಥಾನಕವನ್ನು ಒಯ್ಯುತ್ತಿರುವಂತೆ ತೋರದಿರದು. ಇಂಗ್ಲಂಡು, ಫ್ರಾನ್ಸು ಮೊದಲಾದ ಪ್ರಮುಖ ರಾಷ್ಟ್ರಗಳೆಲ್ಲ ಪರಸ್ಪರರ ವಿಷಯವಾಗಿ ಸಾಶಂಕರಾಗಿದ್ದುಕೊಂಡು, ತಂತಮ್ಮ ಬಲಾಬಲಗಳನ್ನು ತೂಗುತ್ತ, ಯಾವುದೋ ಒಂದು ಬಗೆಯ ಸ್ಥಿರಸ್ಥಾವರತೆಯ ಕಲ್ಪನಾಸ್ವರ್ಗವನ್ನು ನಿರ್ಮಿಸಿಕೊಂಡಿದ್ದಾರೆ. ಈ ಮಾಯಾಸೃಷ್ಟಿಯು ಎಷ್ಟು ದಿನ ಉಳಿದೀತು? ಇನ್ನು ಈ ರಾಷ್ಟ್ರಗಳು ಪ್ರಾಮಾಣಿಕವಾಗಿಯೇ ಶಾಂತಿಗಾಗಿ ಆತುರವಾಗಿವೆಯೆಂದು ಇಟ್ಟುಕೊಳ್ಳುವ. ಜಿನೀವಾದ ಶಸ್ತ್ರಸಂನ್ಯಾಸ ಪರಿಷತ್ತಿನ ಅಧ್ಯಕ್ಷರಾದ ಇಂಗ್ಲಂಡದೇಶದ ಆರ್ಥರ್ ಹೆಂಡರ್‌ಸನ್ ಅವರು ತಮ್ಮ ಭಾಷಣದಲ್ಲಿ ಈ ವರೆಗೆ ರಾಷ್ಟ್ರಸಂಘವು ಶಸ್ತ್ರಸಂನ್ಯಸನಕ್ಕಾಗಿ ಮಾಡಿದ ಪ್ರಯತ್ನಗಳನ್ನು ವಿವರಿಸಿದರು. ಅವುಗಳನ್ನು ಅಭ್ಯಾಸಿಸಿದವರಿಗೆ ಅದೊಂದು ತೊಡಕುತೊಡಕಿನ ಸುತ್ತುಸುರುಳಿಗಳ ಯಂತ್ರದಂತೆ ಆ ಶಾಂತಿಸನ್ನಾಹವು ಕಾಣುತ್ತದೆ. ಐನ್‌ಸ್ಟೈನ್ನನ ಶಬ್ದಗಳನ್ನು ಪುನರುಚ್ಚರಿಸುವುದಾದರೆ, "ಶಸ್ತ್ರಸಂನ್ಯಾಸವು ಕ್ರಮವಾಗಿ ಸಾಧ್ಯವಾಗಬೇಕಾದ ವಿಷಯವಲ್ಲ. ಅದು ಆಗುವದಿದ್ದಲ್ಲಿ, ಒಮ್ಮೆಲೆ—ಒಂದು ಪೆಟ್ಟಿಗೆ—ಪುಟ್ಟಪೂರಾ ಆಗಬೇಕಾಗಿದೆ." ಅದು ಅಷ್ಟು ಅಗತ್ಯವಾಗಿದೆ. ಒಂದೊಂದು ದಿನವನ್ನು ಕಳೆಯುವುದು ಶಾಂತಿಸ್ಥಾಪನೆಯನ್ನು ಒಂದೊಂದು ಯುಗದಂತೆ ಮುಂದಕ್ಕೆ ದೂಡಿದ ಹಾಗೆ ಇದೆ. ಇಷ್ಟು ಆವಶ್ಯಕವಾದ ಕಾರ್ಯವನ್ನು 'ರಾಷ್ಟ್ರಸಂಘ'ದ ಆ ಶಾಂತಿಯಂತ್ರವು ಕೈಗೊಂಡು ಕೊನೆಮುಟ್ಟಿಸುವುದು ಹೇಗೆ? ಜಾನಾಮಿ ಧರ್ಮಂ ನ ಚ ಮೇ ಪ್ರವೃತ್ತಿಃ। ಜಾನಾಮ್ಯಧರ್ಮಂ ನ ಚ ಮೇ ನಿವೃತ್ತಿಃ॥ ಎಂದು ಉಸುರ್ಗರೆಯುವ ದುರ್ಯೋಧನನಂತೆ ಮಿತ್ರರಾಷ್ಟ್ರಗಳ ಗತಿಯಾಗಿದೆ. ಯಾವುದೋ ಒಂದು ಅದೃಶ್ಯಶಕ್ತಿಯ ಕೈಗೊಂಬೆಗಳಾಗಿ ಒಂದು ಅಜ್ಞಾತಭವಿಷ್ಯದತ್ತ ಅವು ಸಾಗಿವೆ. ಈ ಮಂಥನದಲ್ಲಿಯೆ ಶಾಂತಿಯ ನವನೀತವು ಪ್ರಕಟವಾಗಲಿರಬಹುದು. ಈ ಶಾಂತಿಯಂತ್ರಧಾರರಂತೂ ಶಾಂತಿಯನ್ನು ಐರಮಾಡಲರಿಯರು ಎಂಬುದು ನಿಃಸಂದೇಹ. ಹಾಗಾದರೆ ಇನ್ನಾವ ರಾಷ್ಟ್ರಗಳನ್ನು ಶಾಂತಿಸಂಭವಕ್ಕಾಗಿ ದೇವದೇವನು ನಿಯೋಜಿಸಿದ್ದಾನೆ?....

## ಸಾದರಸ್ವೀಕಾರ

೧೧೨ ಸಾವಿನ ಸಮಸ್ಯೆ (ಪ್ರಹಸನ):—ಬರೆದವರು ಶ್ರೀ. ಬೆಂಬಾರ್ ವೆಂಕಟಾಚಾರ್ಯ ಎಂ. ಎ. ಪ್ರಕಾಶಕರು ಕರ್ನಾಟಕಸಂಘ, ಮಹಾರಾಜಾ ಕಾಲೇಜು, ಮೈಸೂರು. ಪುಟಗಳು ೭೫, ಬೆಲೆ ೧-೦-೦.

೧೧೩ ರಾಮಾಚಾರಿಯ ನೆನಪು (ಭಾವನಾ ಚಿತ್ರಗಳು):—ಬರೆದವರು ಶ್ರೀ. ಪು. ತಿ. ನರಸಿಂಹಾಚಾರ್ಯ ಬೆಂಗಳೂರು. ಪ್ರಕಾಶಕರು ಸತ್ಯಶೋಧನ ಪ್ರಕಟನಾಲಯ, ಬೆಂಗಳೂರು. ಬೆಲೆ ೦-೧೨-೦.

೧೧೪ ಹಳ್ಳಿಯ ಚಿತ್ರಗಳು (ನಗೆಬರೆಹಗಳು) 'ಶ್ರೀನಿವಾಸ'ರ ಮುನ್ನುಡಿಯಿಂದ ಕೂಡಿದೆ. ಬರೆದವರು ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು, ಕೆಂಗೇರಿ ಗುರುಕುಲಾಶ್ರಮ, ಬೆಂಗಳೂರು. ಕ್ರಾ. ೮. ಪುಟಗಳು, ಬೆಲೆ ೧-೦ ೦.

CC-0. Jangamwadi Math Collection. Digitized by eGangotri

೧೦೫ ಇಸಪೆಲಿ ಮತ್ತು ಪದ್ಯಗಳು (ಕವಿತಾಸಂಗ್ರಹ) ಕವಿ 'ನೀಲಕಂಠಂ' ಅವರು.

೧೦೬ ಈಶಾವಾಸ್ಯೋಪನಿಷತ್ (ಶ್ರೀ ಶಾಂಕರಭಾಷ್ಯ ಸಮೇತ ವಾದುದು). ಶ್ರೀ. ಯ. ಸುಬ್ರಹ್ಮಣ್ಯಶರ್ಮರವರಿಂದ ಸಂಶೋಧಿತವಾಗಿ, ಬೆಂಗಳೂರು ನಗರ ಆಧ್ಯಾತ್ಮಪ್ರಕಾಶ ಕಾರ್ಯಾಲಯದಿಂದ ಪ್ರಕಟವಾಗಿದೆ. ಕ್ರೌ. ಅ. ೪೮. ಬೆಲೆ ?

೧೦೭ ಶ್ರೀ. ಜಗನ್ನಾಥಪಂಡಿತರಾಯಚರಿತ್ರೆ:– ಬರೆದವರು ವಿದ್ಯಾನಿಧಿ ಕಾರುಪಲ್ಲಿ ಶಿವರಾಮದಾಸರು, ಪ್ರಕಾಶಕರು ಟಿ. ಆರ್. ವೈದ್ಯೇಶ್ವರಯ್ಯ, ಗುಂಡ್ಲುಪೇಟೆ, ಡೆ. ಅ. ೧೧೨ ಪುಟ. ಬೆಲೆ ೧-೮-೦.

೧೦೮ ಚಾಮರಾಜೇಂದ್ರ ಒಡೆಯರವರು:–ಬರೆದವರು ಶ್ರೀ ಎಂ. ಚಾಮರಾಯರು. ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯ ಪ್ರಕಟನೆ, ಬೆಂಗಳೂರು. ಕ್ರೌ. ಅ. ೪೮ ಪುಟ. ಬೆಲೆ ೦-೨-೦.

೧೦೯ ದೇವಯಾನೀಕಲ್ಯಾಣ (ಯಕ್ಷಗಾನ):–ಬರೆದವರು ಶ್ರೀ. ಗಾಂವಕರ ತಿಮ್ಮಣ್ಣನಾಯಕ, ಮಾಸ್ಕೇರಿ, ಪೋ. ಬಂಕೇಕೊಡ್ಲ, ಜಿ. ಉತ್ತರಕನ್ನಡ. ಕ್ರೌ. ಅ. ೬೬ ಪುಟ. ಬೆಲೆ ೦-೫-೦.

೧೧೦ ಮುರಲಿ (ಕವಿತಾಸಂಗ್ರಹ):— ಬರೆದವರು ಶ್ರೀ. ಕಾಪು ಮಂಜುನಾಥ ಶೆಣೈ, ಮಿತ್ರಮಂಡಲಿ, ಕಾಪು, ದಕ್ಷಿಣಕನ್ನಡ. ಕ್ರೌ. ಅ. ೧೬ ಪುಟಗಳು. ಬೆಲೆ ೦-೨-೦.

೧೧೧ ಅಷ್ಟಾಷ್ಟಕಂಗಳು ಇತ್ಯಾದಿ:— ಐಸಿಲಯ ಕವಿತಾ-ಮಾಲೆಯ ದ್ವಿತೀಯ ಪುಷ್ಪ. ಪ್ರಕಾಶಕರು ಶ್ರೀ. ಬಸವಪ್ಪ ಪಾಟೀಲ ಹೂಡೆದಪಳ್ಳಿಕರ, ಚಿಂಚೋಳಿ. ಹೈದ್ರಾಬಾದ ಸಂಸ್ಥಾನ. ಕ್ರೌ. ಅ. ३೪ ಪುಟ. ಬೆಲೆ ?

೧೧೨ ದೇಶರಂಜನ (ಸಚಿತ್ರ ದ್ವೈಮಾಸಿಕ):–ಸಂಪಾದಕರು ರಾಘವೇಂದ್ರರಾವ್ ಬಾಳ, ಮಂಗಳೂರು. ಮೊದಲನೆಯ ಸಂಚಿಕೆಯಲ್ಲಿ ಜಯಕರ್ನಾಟಕದ ಆಳತೆಯ ೫೨ ಪುಟಗಳಿವೆ. ಮಂಗಳೂರ ಕಡೆಯ ಪ್ರಸಿದ್ಧ ಸಾಹಿತಿಗಳ ಲೇಖನಗಳು ಬಂದಿವೆ. ವಾ. ಚ. ಅ. ವೆ. ಸೇರಿ ३-೦-೦.

೧೧३ ಭಾಗ್ಯೋದಯ (ಮಾಸಪತ್ರಿಕೆ):– ಸಂಪಾದಕರು ಎಂ. ಕೆ. ಶ್ರೀನಿವಾಸನ್, ವಿಜಾಪುರ. ಡೆ. ಅ. ೪೮ ಪುಟಗಳು ವಾ. ಚ. ಅ. ವೆ. ಸೇರಿ ೧-೪-೦.

೧೧೪ London Mission High School Magazine, ಬೆಂಗಳೂರು. ಕನ್ನಡ ಇಂಗ್ಲಿಷ ಲೇಖಗಳಿವೆ.

೧೧೫ ಜನ್ಮಭೂಮಿ (ಕೊಡಗಿನ ಹೊಸ ವಾರಪತ್ರಿಕೆ):– ಸಂಪಾದಕರು ಶ್ರೀ. ಪಿ. ಎ. ಬೆಳ್ಳಿಯಪ್ಪ, ಬಿ. ಎ., ಮಡಿಕೇರಿ. ವಾ. ಚ. ३-೦-೦. ಕೊಡಗಿನವರ ಉನ್ನತಿಗಾಗಿ ಹೋರಾಡುವುದು. ಅಖಂಡ ಕರ್ನಾಟಕ ದೃಷ್ಟಿಯನ್ನು ಮರೆಯದಿರಲಿಯೆಂದು ನಮ್ಮ ಹಾರೈಕೆ. ಸ್ವವಸಾ... ಬಂಧುವಿಗೆ ಸುಸ್ವಾಗತ.

೧೧೬ ಸ್ಥಳೀಯ ಸಂಸ್ಥೆಗಳ ಪತ್ರಿಕೆ (ವಾರಪತ್ರಿಕೆ):– ವಾ. ಚ. ೨-೦-೦. ಸಂಸ್ಥೆಗಳಿಗೆ ೫-೦-೦. ಸಂಪಾದಕರು ಶ್ರೀ. ಟಿ. ಎನ್. ಚನ್ನಪ್ಪನವರು. ಮುನಿಸಿಪಾಲಿಟಿ ಲೋಕಲ್‌ಬೋರ್ಡು ಮುಂತಾದುವುಗಳಿಗೆ ಸಂಬಂಧಿಸಿದ ವಿಷಯಗಳನ್ನು ಚರ್ಚಿಸುವ ಪತ್ರಿಕೆಯು ಇದೊಂದು. ಕನ್ನಡಿಗರು ಇದನ್ನು ಆದರಿಸಲಿ.

೧೧೭ ಗದುಗಿನ ಬಸವಜಯಂತಿಯ ವರದಿ (೧೯೩೧)

೧೧೮ ಜ್ಯೋತಿಷ ವಿಚಾರಸಾಗರ (ಮಾಸಪತ್ರಿಕೆ):– ಸಂಪಾದಕರು ಶ್ರೀ. ಸಿ. ಲಿಂಗಾಜೋಯ್ಸರು, ಶಿವಮೊಗ್ಗ. ವಾ. ಚ. ೨-೦-೦.

೧೧೯ ಕಲಕತ್ತೆಯ ಮೈಸೂರು ಸಂಘದ ದ್ವಿತೀಯ ವಾರ್ಷಿಕ ವರದಿ. (೧೯३೧-३೨).

೧೨೦ ೨, ३, ೪, ೫ನೆಯ ಇಯತ್ತೆಗಳ ಕಾಪಿ ಪುಸ್ತಕಗಳು:– ತಯಾರಿಸಿದವರು ಶ್ರೀ. ಆರ್. ಎನ್. ಕರವಾಡಿ ಚಿತ್ರಕಲಾಶಿಕ್ಷಕರು, ಬ್ಯಾಡಗಿ. ಸಿಕ್ಕುವ ವಿಳಾಸ:– ಕರವಾಡಿ ಅಂಡ್ ಸನ್ಸ್, ಗಾಂಧಿಚೌಕ, ಬ್ಯಾಡಗಿ. ಬೆಲೆ ಪ್ರತಿಯೊಂದಕ್ಕೆ ಅರ್ಧ ಆಣೆ. ಚಿಕ್ಕಮಕ್ಕಳಿಗೆ ಉಪಯುಕ್ತವಾಗಿವೆ. ನಮ್ಮ ಕಡೆಗೆ ಇದು ಸ್ತುತ್ಯ ಉಪಕ್ರಮವಾಗಿದೆ.

೧೨೧ ಪ್ರಾಣಿಶಾಸ್ತ್ರ (ವಿಮಾ ಅಂಕ):– ಜೀವವಿಮೆಯನ್ನು ಕುರಿತು ವಿವಿಧ ವಿಷಯಗಳ ಮೇಲೆತ ಜ್ಞರ ಲೇಖಗಳು ಬಂದಿವೆ. ವಿಮಾ ವಿಷಯವಾಗಿ ಕುತೂಹಲವುಳ್ಳವರಿಗೆ ತುಂಬಾ ಉಪಯೋಗಕಾರಿ. ಬೆಲೆ ೦-೮-೦.

CC-0. Jangamwadi Math Collection. Digitized by eGangotri

೪೦ ವರ್ಷ ಅನುಭವದಿಂದ ಪ್ರಸಿದ್ಧಿಹೊಂದಿದ

# ಸುಗಂಧಿ ಪಿತ್ತನಾಶಕ ಜರ್ದಾ

ಇದು ಶುದ್ಧ ಅಕೋಳದ ತಂಬಾಕದಿಂದ ತಯಾರಿಸಲ್ಪಟ್ಟ ಮೂಲಕ, ತಿನ್ನಲಿಕ್ಕೆ ಕಡಕವಿದ್ದರೂ, ಮಧುರ ವಿರುವದು. ಪಿತ್ತ ವಿಕಾರಾದಿಗಳು ಆಗದಂತೆ ಅನೇಕ ವನಸ್ಪತಿಗಳನ್ನು ಕೂಡಿಸಿ ವೈದ್ಯ ಶಾಸ್ತ್ರಕ್ಕನುಸರಿಸಿ ತಯಾರಿಸಿದೆ. ಈ ಜರ್ದಾ ತಿಂದಲ್ಲಿ ಬಾಯಿಗೆ ರುಚಿಬಂದು ಹಲ್ಲುಗಳು ಗಟ್ಟಿಯಾಗುತ್ತವೆ. ಹಲ್ಲುಗಳೊಳಗಿಂದ ರಕ್ತ ಬರುತ್ತಿದ್ದರೆ ಅದನ್ನು ಬಂದುಮಾಡಲು ಇದೊಂದು ಔಷಧವೇ ಆಗಿದೆ. ಒಮ್ಮೆ ತರಿಸಿ ಅನುಭವಪಡೆಯಿರಿ.

ಬೆಲೆ:—(ಪುಡಿ) ಗ್ರೋಸಕ್ಕೆ ೩-೬-೦. ರತ್ತಲ ಡಬ್ಬಿಗೆ ಟಪಾಲ ಖರ್ಚು ಸಹಿತ ೧-೮-೦ ರೂಪಾಯಿ.

ನಮ್ಮಲ್ಲಿ ಸಾರಂಗಛಾಪ, ಪತಂಗಛಾಪ, ಪತ್ರಿ, ಕಾಚು ತಯಾರಾಗುತ್ತವೆ. ಇದು ಅಲ್ಲದೆ ೩/೪ ೧/೨ ರತ್ತಲ ಡಬ್ಬಿಗಳು ಸಿಗುತ್ತವೆ. ವ್ಯಾಪಾರಸ್ಥರಿಗೆ ಸವಲತ್ತು ಕೊಡುತ್ತವೆ. ಪತ್ರವ್ಯವಹಾರ ಮಾಡಿರಿ.

ವಿಳಾಸ:— **ಲಕ್ಷ್ಮಣ ದುಂಡಪ್ಪ ಪಾಟೀಲ ಊರ್ಫ್ ಪಣದೆ. ನಿಪ್ಪಾಣಿ ಜಿಲ್ಲಾ ಬೆಳಗಾಂವ**

**ಸಂಪೂರ್ಣ ಸ್ವದೇಶಿ**

## 'ರಾಜಾ ಸ್ನೋ'

ಪ್ರತಿ ದಿನದಲ್ಲಿಯೂ '**ರಾಜಾಸ್ನೊ**' ಉಪಯೋಗಿಸಿ ನಿಮ್ಮ ಸೌಂದರ್ಯವನ್ನು ಹೆಚ್ಚಿಸಿರಿ!

'**ರಾಜಾಸ್ನೊ**' ಉಪಯೋಗಿಸುವದರಿಂದ ಮುಖದ ಮೇಲಿನ ಬಕ್ಕೆ, ಕಲೆಗಳು ಇಲ್ಲದಂತಾಗುವವು. ಎಲ್ಲ ಕಡೆಯಲ್ಲಿಯೂ ದೊರೆಯುತ್ತದೆ.

ಭರಣಿ ಬೆಲೆ:—೦-೧೨-೦ ಸ್ಯಾಂಪಲ್ ಬಾಟ್ಲಿ ೦-೩-೦

ಹಿಂದುಸ್ಥಾನಕ್ಕೆಲ್ಲ ಏಜಂಟರು:—**ಮುನಯುಮ್ ಕಂಪನಿ ಬಳ್ಳಾರಿ.**

ಎಲ್ಲ ಕಡೆಗೂ ಕಳಿಸುವರು:—**ವ್ಹಿ. ವ್ಹಿ. ಕಂಪನಿ, ಕೊಲ್ಲಾಪೂರ**

ಧಾರವಾಡದ ಏಜಂಟರು:—**ಹುದ್ದಾರ ಬ್ರದರ್ಸ ಮತ್ತು ಝೆನಿಥ್ ಫಾರ್ಮಸಿ**

**ಲಂಡನ್ ಮೊದಲಾದ ಅನೇಕ ದೇಶಗಳಲ್ಲಿ ಬಹುಮಾನ ಹೊಂದಿರುವ**

**ಅತ್ಯುತ್ತಮವಾದ ಸುಗಂಧ ದ್ರವ್ಯಗಳು**

೪೦ ವರ್ಷದ ಅನುಭವದಿಂದ ತಯಾರಿಸುತ್ತಿರುವ ಅಗರ್ ಬತ್ತಿಗಳು ಮತ್ತು ಇತರ ಎಲ್ಲ ವಿಧವಾದ ಸುಗಂಧ ದ್ರವ್ಯಗಳು ನಮ್ಮಲ್ಲಿ ಸುಲಭ ಕ್ರಯಕ್ಕೆ ದೊರೆಯುತ್ತವೆ. ಕ್ಯಾಟಲಾಗಿಗೆ ಬರೆಯಿರಿ.

**ಟಿ. ಯಲ್. ಉಪಾಧ್ಯಾಯ ಆಂಡ್ ಸನ್ಸ**
**ಸುಗಂಧಕಾರೀ**
**ಮೈಸೂರು**



**ಕಾಫಿಪುಡಿ ಎಂದರೆ ಎಲ್ಲಾ ಕಾಫಿ ಪುಡಿಯೇ? ಕುಡಿದರೆ ಕುಡಿಯಬೇಕು**

## ಶ್ರೀ ದತ್ತಾತ್ರೇಯ ಕಾಫಿ ವರ್ಕ್ಸ್

ಮೈಸೂರು ರೋಡು, ಬೆಂಗಳೂರ ಸಿಟಿ.

ಇವರಲ್ಲಿ ಹಸ್ತ ಸ್ಪರ್ಶವಿಲ್ಲದೇನೆ ತಯಾರಾದ ಉತ್ತಮ ಗಿರಿಕಾಫಿಯಿಂದ ಮಾಡಿದ ಕಾಫಿಯನ್ನು!!
ಒಂದು ಸಾರಿ ಆರ್ಡರ್ ಕೊಟ್ಟು ನೋಡಿದರೆ ಎಲ್ಲಾ ಪ್ರದರ್ಶನಗಳಲ್ಲಿಯೂ ಭಂಗಾರ
ಮತ್ತು ಬೆಳ್ಳಿಯ ಪದಕಗಳನ್ನೂ ಅಭಿನಂದನ ಪತ್ರಗಳನ್ನೂ ಇವರಿಗೆ ಕೊಟ್ಟಿರುವದು ಏಕೆಂಬುದು
ಗೊತ್ತಾಗುತ್ತೆ. **ಹಳೇತರಗುಪೇಟೆಯಲ್ಲಿ** ಇವರ ಬ್ರಾಂಚೊಂದಿದೆ.

CC-0. Jangamwadi Math Collection. Digitized by eGangotri

# ಪರಿವಿಡಿ

ವಿ. ಸೂ:— ಬರೆಹಗಾರರ ಹೆಸರುಗಳ ಹಿಂದೆ 'ಶ್ರೀಯುತ' ಎಂದು ಸೇರಿಸಿ ಓದಿಕೊಳ್ಳಬೇಕು.



CC-0. Jangamwadi ... by eGangotri



ಪ್ರತೀಕ್ಷೆ

(ಜಯಕರ್ನಾಟಕ ಮಂಡಲದ ಸಂಗ್ರಹದೊಳಗಿನ
ಒಂದು ಹಳೆಯ ಚಿತ್ರ)

CC-0. Jangamwadi Math Collection. Digitized by eGangotri

# ಜಯಕರ್ನಾಟಕ

| ಸಂಪುಟ ೧೦ | ಆಂಗಿರಸ ಸಂವತ್ಸರ, ಅಗಿಯ ಹುಣ್ಣಿವೆ<br>ಚಾಲುಕ್ಯ ವಿಕ್ರಮ ವರ್ಷ ೮೫೭ | ಸಂಚಿಕೆ ೭ |
|---|---|---|


## ಮನದ ಮಾತು


( ಆನಂದಕಂದ )


ಎಲ್ಲೆಲ್ಲಿಯೂ ಮನದ ಮಾತುಗಳೆ ಮುಂದರಿದು
ಎದೆಯ ಕೊಳಲುಲಿಯನ್ನು ಕೇಳಗೊಡವು.
ಹಗಲೆಲ್ಲವೂ ಕೆಲೆಯುತಿಹುದೆ ಮನಸಿನ ವಾಯು,
ತೆಗೆವುದೊಂದೊಂದು ಸಲ ಎದೆಯು ಬಾಯ.
ಎಣಿಕೆಯಿಲ್ಲದೆ ಬಣಗುಹಾಡ ಹೆಣೆವುದು ಮನಸು
ಎದೆಯದೊಂದೇ ಒಂದು ಪದವು ಸವಿಗನಸು.

ಕಾಗೆ-ಗೂಗೆಗಳ ಕೂಗಾಟ ಕಿರುಚಾಟದಲಿ
ರಾಗಿಸುವ ವೀಣೆಯುಲಿವಡಗಿರುವುದು.
ನೆರೆಯ ಮಂದಿಯ ಬೀದಿಗಲಹದಾ ಕಲಕಲದಿ
ತಾಯ ಜೋಗುಳುವಾಡು ಮಡಗಿರುವುದು.

ಸೂಳೆಯರ ಸಂಗೀತ ಗಟ್ಟಿಗೊಂಡಿಡಿದಿರಲು
ತಿಂಗಳಿನ ಮೌನಗಾನವು ಹೋಯ್ತು ಹೂತು.
ಢೋಲು ಹರೆ ಕೊಂಬುಗಳ ಬಿರುದನಿಯು ಕಿವಿದುಂಬಿ
ಬಾಲಕನ ತೊದಲುನುಡಿ ಹೋಯ್ತು ಬೀತು.

ಸಿಡಿಲು ಮಿಂಚುಗಳ ಗುಡುಗಾಟ ಮರೆಮಾಡಿಹುದು
ಮುಗುದೆಯಾ ಮೆಲುನುಡಿಯ ಎಲ್ಲಿ[illegible]
ಮೊರೆಯುತಿಹ ಹೊಳೆಯ ಹೊಸಲಲಿ ಹುದುಗಿ
ಕೊಂಡಿಹುದು.
ನೊರೆವಾಲಿನೊಂದು ಕಿರಿಯೊರತೆಯು ಕಟ!

ಒಸದರಳ ಕಂಪ ತೊಂಗಲನು ತಳೆದಿರುವೆಲರು,
ಸುಳಿಯುತಿರೆ ಹವಳಮಲ್ಲಿಗೆಯ ಮೆಲುಗಂಪು
ಸಡುಸಡುವೆ ತಲೆದೋರಿ ತಡೆದು ತಣಿಪತ್ತಂತೆ
ನುಡಿಯು ಒಂದೊಂದು ಸಲ ಕೇಳಿಸುವುದಿಂಪು.

ಕೊಳೆಯ ನೆಲೆಮನೆಯಾದ ಒಡಲಿನೊಳಗನು ಮರೆತು
ಚೆಲುವನೇ ಕಣ್ಣುಗಳು ಮೆಚ್ಚುವಂತೆ—
ಬಲೆಬಲೆಯ ನುಡಿಯುಳಿದು ರಸಿಕ ಶಬ್ದದಜೀವ-
ಕಳೆಯನೇ ಕಂಡುಂಡು ಹೆಚ್ಚುವಂತೆ—
ಮನದ ಮಾತಿನಲಿ ಮರೆಗೊಂಡಿರುವ ಎದೆಯುಲಿಯು
ಅನುದಿನವು ಕೇಳುತಿರುವೊಲು ಕಿವಿಯನು
ಅನುಗೊಳಿಸೆನೆಂತೆನುತ ನೆನೆವೆನಾವಾಗಲೂ
ಮನದ ಮಾತಿಗೆ ಕೊನೆಯೆ ಇಲ್ಲವೇನು?


CC-0. Jangamwadi Math Collection. Digitized by eGangotri

# ಮಕ್ಕಳ ಉತ್ಸವ

ಲೇಖಕ:—ಶ್ರೀ. ಶಿವರಾಮ ಕಾರಂತ

ಮೂರು ವರುಷಗಳಿಂದ ಮಕ್ಕಳದೊಂದು ಕೂಟವನ್ನು ಕೂಡಿಸಬೇಕು; ಅವರ ಆಟ ಉತ್ಸಾಹಗಳನ್ನು ನೋಡಬೇಕು – ಎಂಬುದು ನನ್ನ ಮನಸ್ಸಿನ ಕಾಂಕ್ಷೆಯಾಗಿತ್ತು. ಈ ಕಾಂಕ್ಷೆ ಉದಿಸಿದ ಸಮಯದಲ್ಲಿಯೆ ಪುತ್ತೂರು ತಾಲೂಕು (ದಕ್ಷಿಣ ಕನ್ನಡ) ಬೋರ್ಡಿನ ಅಧ್ಯಕ್ಷರಾದ ಶ್ರೀಯುತ ಮೊಳಹಳ್ಳಿ ಶಿವರಾಯರು, ತಮ್ಮ ತಾಲೂಕಿನ ಉಪಾಧ್ಯಾಯರದೊಂದು ಪರಿಷತ್ತನ್ನು ಕೂಡಿಸಿದರು. ಆಗ ನಾನು ಅವರಿಗೆ ಈ ಸೂಚನೆಯನ್ನು ಮಾಡಿದೆ. ಶ್ರೀಯುತರು ಅದನ್ನು ಒಮ್ಮೆಗೇ ಸ್ವೀಕರಿಸಿದರು. ಅದನ್ನು ಮಾಡುವ ನಿರ್ಣಯವಾಯಿತು. ಆದರೆ ಯಾವ ಸ್ವರೂಪದಲ್ಲಿ ಅದು ಇರತಕ್ಕದ್ದು – ಎಂಬ ನಿಶ್ಚಯವು ಆಗ ಇನ್ನೂ ಉಂಟಾಗಿರಲಿಲ್ಲ. ಅಂತು–ಅದು ಹಿರಿಯರ ಮಾತಿನ ಠರಾವುಗಳ ಸಭೆಯಂತಿರಬಾರದು–ಮಕ್ಕಳ ಪರಿಷತ್ತೆಂಬುದು ಮಕ್ಕಳನೊಂದು ಹಬ್ಬವೆನಿಸಬೇಕು– ಎಂದಿಷ್ಟೇ ನಮಗೆ ಕಂಡಿತ್ತು. ಮುಖ್ಯವಾಗಿ, ಮಕ್ಕಳ ನಗುವನ್ನು ಹೆಚ್ಚಿಸಲು ಏನಾದರೊಂದು ಹಾದಿಯನ್ನು ಕಾಣಬೇಕು; ಇಂದಿನ ಬಾಲ್ಯಜೀವನವು ರಸಹೀನ, ಆನಂದಹೀನವಾಗಿ ಬರುತ್ತಿದೆ – ಎಂಬುದರಿಂದ ಅದನ್ನು ಪ್ರೇರಿಸುವ ಬಗೆಯನ್ನು ನಾವು ಆಶಿಸುತ್ತಿದ್ದೆವು.

ಮಕ್ಕಳೆಂದು ಎಣಿಸುವಾಗ ಹದಿನಾರು ವರ್ಷದ ವಯಸ್ಸಿಗೆ ಒಳಪಟ್ಟವರೆಂದು ನಮ್ಮ ತಿಳಿವು. ಅದೂ, ಶಾಲಾ ಬಾಲಕರ ಚಿತ್ರವು ನಮ್ಮ ಮುಂದಿರುತ್ತಿತ್ತು. ಅವರನ್ನು ಒಂದುಗೂಡಿಸಿ ಕೂಟವನ್ನು ಕರೆಯುವ ಸಾಧ್ಯತೆಯಿತ್ತಲ್ಲದೆ, ಉಳಿದ ಬಾಲಕರ ವಿಷಯದಲ್ಲಿ ಯತ್ನ ಮಾಡುವಷ್ಟು ಶಕ್ತಿ ನಮಗಿಲ್ಲ ಯತ್ನಿಸಿದರೂ ಅವರನ್ನು ಕಲೆಹಾಕುವದು ಸುಲಭವಾದ ಕೆಲಸವಾಗುತ್ತಿರಲಿಲ್ಲ. ಇರಲಿ. ಈಗ ಈ ಉದ್ದೇಶದಿಂದ ಪುತ್ತೂರು ತಾಲೂಕಿನ 'ಹಾಯರ್ ಎಲಿಮೆಂಟರಿ' ಶಾಲೆಗಳಿಂದ ಹಲಕೆಲವು ಬಾಲಕರನ್ನು ಬರುವಂತೆ ಮಾಡಿ, ಈ ಕೂಟವನ್ನು ಜರುಗಿಸಬೇಕೆಂದು ನಿಶ್ಚಯಿಸಿ, ಕೂಟವು ಸೇರತಕ್ಕ ಸ್ಥಳವು ನೇತ್ರಾವತಿ ಕುಮಾರಧಾರಾ ನದಿಗಳ ಸಂಗಮವಾದ ಉಪ್ಪಿನಂಗಡಿಯೆಂದೂ, ಸಮಯವು ದಶಂಬರ (೧೯೩೧) ೧೪ರಿಂದ ೨೧ರ ತನಕವೆಂದೂ ನಿರ್ಣಯಿಸಿದೆವು. ಶ್ರೀಯುತ ಶಿವರಾಯರು ತಮ್ಮ ಬೋರ್ಡಿನ ಏಳು ಶಾಲೆಯವರಿಗೆ, ತಮ್ಮ ತಮ್ಮ ಶಾಲೆಯಿಂದ " ಹಸನ್ಮುಖಿಗಳಾದ, ಚುರುಕಾದ ೬೦ ಹುಡುಗರನ್ನು ಆರಿಸಿ ಪ್ರತಿನಿಧಿಗಳನ್ನಾಗಿ ಕಳುಹಿಸುವುದೆಂದು ತಿಳಿಸಿದರು. ಉಪ್ಪಿನಂಗಡಿಯಲ್ಲಿ ಸ್ಥಳೀಯ ಸದ್ಗೃಹಸ್ಥರ ಸಹಾಯದಿಂದ ಅವರ ವಸತಿ ಭೋಜನಗಳ ವ್ಯವಸ್ಥೆಯೂ ಆಯಿತು.

ಆದರೆ ಕೈಕೊಳ್ಳುವ ಕಾರ್ಯಕ್ರಮವೇನು? ಅವುಗಳು ನಮ್ಮ ಗುರಿಯನ್ನು ಹೇಗೆ ಸಾಧಿಸಬಹುದು.—ಎಂಬುದು ಕಠಿನತರ ವಿಚಾರವಿದೆಯಷ್ಟೆ. ಮಕ್ಕಳ ಆನಂದವು ನಮ್ಮ ಗುರಿ. ಅದನ್ನು ಅವರ ಪರಸ್ಪರ ಮಿಲನ ಪರಿಚಯಗಳು ಉಂಟು ಮಾಡುವುವು ನಿಜ. ಆದರೆ, ಕೂಟದ ಕಾಲದಲ್ಲಿ ಕಲಿತ ಯಾವ ವಿಷಯವು, ಮುಂದೆಯೂ ಅವರ ಜೀವನದಲ್ಲಿ ಚೆಲುವುನಲಿವುಗಳನ್ನು ಕೊಡುವುದು, ಅವರು ಹಳ್ಳಿಯ ಬಾಲಕರು; ನಾಗರಿಕವಾದ ಆಟಪಾಠಗಳು ಅವರಿಗೆ ಮುಂದೆ ಪ್ರಯೋಜನಕಾರಿಯಾಗಲಾರವು. ಆದುದರಿಂದ ಅವರ ಕಾರ್ಯಕ್ರಮವು, ಮುಂದೆ ಅವರ ಜೀವನವನ್ನು ಅನುಸರಿಸಿ ಬರುವ ಗ್ರಾಮವನ್ನು ಹೊಂದಿರಬೇಕು. ಅವರ ಸುತ್ತಲಿನ ನಿಸರ್ಗದ ಗಣಿಯಿಂದಲೇ ಅದನ್ನು ಅವರು ಕೀಳುವಂತಿರಬೇಕು. ಇತ್ತ ಎಂಥ ಆನಂದವೇ ಆಗಲಿ ಅದು ಉತ್ಪಾದಕ ಶಕ್ತಿಯಿಂದ ಬರುವುದು ಅಧಿಕ. ಮಕ್ಕಳಲ್ಲಿ ಆ ಶಕ್ತಿಯು ಬೆಳೆಯಬೇಕು. ಅವರು ಉತ್ಪಾದಕ ಕಲಾಕೋವಿದರಾಗಬೇಕು (Creative artists) ಎಂಬ ಗುರಿಯನ್ನಿರಿಸಿ ಏಳು ದಿನ ಹಬ್ಬದ ಕೆಲಸಗಳನ್ನು ಮುಂಚಿತವಾಗಿ ಗೊತ್ತುಪಡಿಸಿ, ಪ್ರತಿನಿಧಿಗಳಿರುವ ಶಾಲೆಗಳಿಗೆ ತಿಳಿಸಿದುದೂ ಅಲ್ಲದೆ, ಕಾರ್ಯಕ್ರಮದ ಪರಿಚಯವನ್ನೂ ಸ್ವಲ್ಪ ಮಾಡಿಕೊಟ್ಟು ಬಂದೆವು. ಈ ಉದ್ದೇಶವನ್ನು ಓದುಗರು ನೆನಪಿಟ್ಟುಕೊಂಡರೆ ಮಕ್ಕಳ

CC-0. Jangamwadi Math Collection. Digitized by eGangotri

ಕೂಟದ ಈ ಸೂಕ್ಷ್ಮ ವರದಿಯ ಮಹಿಮೆಯು ಹೊಳೆಯಬಹುದು.

ವರದಿಯನ್ನು ದಿನದಿಂದ ದಿನಕ್ಕೆ ಸರಿಯಾಗಿಯೇನು ಇಲ್ಲಿ ಕೊಡುವುದಿಲ್ಲ. ನೆನಪಿಗೆ ಬಂದ ರೀತಿಯಲ್ಲಿ ಅದನ್ನು ಬಣ್ಣಿಸುವೆನು. ಒಂದು ಹೊತ್ತು ಹಾಡಿನ ಹೊತ್ತು ಎಂದು ನಿಶ್ಚಯವಾಗಿತ್ತು. ಆ ದಿನ ಸೇರಿದ ಹುಡುಗರು ತಮಗೆ ಪರಿಚಿತವಾದ ನಾಡಿನಹಾಡುಗಳನ್ನು ಹಾಡಿ ಹಿಗ್ಗಿದರು. ನಮ್ಮೂರಲ್ಲಿ ತುಳು, ಕನ್ನಡ, ಕೊಂಕಣಿ, ಮಳಯಾಳ ಎಲ್ಲ ಭಾಷೆಗಳು ಬೇರೂರಿವೆ. ಆದುದರಿಂದ ಮಕ್ಕಳು ಹಾಡಿದ ಈ ಜಾನಪದ ಸಾಹಿತ್ಯದಲ್ಲಿ ತುಳುವಿನ ಹಾಡುಗಳೇ ಅಧಿಕ. ಕ್ರಿಸ್ತ ಬಾಲಕರು ಕೊಂಕಣಿ ಹಾಡನ್ನು ಹಾಡಿದರು. ಕೆಲವರು ಕನ್ನಡದಲ್ಲಿ ದಾಸರ ಹಾಡುಗಳನ್ನು, ಇನ್ನು ಕೆಲವರು ಮಳೆಯಾಳಿ, ತಮಿಳು ಮೊದಲಾದ ಭಾಷೆಯ ಹಾಡುಗಳನ್ನು. ಹಾಡುಗಳಲ್ಲಿ ಹಲವು Nursery Rhymes ತೆರದುವಿದ್ದುವು. ಕೆಲವು ಹಳ್ಳಿಯ ಜಾತ್ರೆ, ಕೃಷಿ ಮೊದಲಾದವುಗಳನ್ನು ವಿಷಯವನ್ನಾಗಿ ಇರಿಸಿಕೊಂಡು ರಚಿತವಾದುವು.

ಹಾಗೆಯೇ ಒಂದು ಹೊತ್ತು, ಹಳ್ಳಿಯ ಕಥೆಗಳಿಗಾಗಿ ಉಪಯೋಗವಾಯಿತು. ಇಲ್ಲಿ ಅವರವರು ತಮ್ಮ ಮನೆ ಭಾಷೆಯನ್ನೇ ಉಪಯೋಗಿಸಿದರು. ಇನ್ನು ಒಂದು ಹೊತ್ತು ಒಗಟಗಳಿಗಾಗಿ ಕಳೆಯಿತು. ಇನ್ನೊಂದು ಹೊತ್ತು ಗಾದೆಮಾತುಗಳ ಸ್ಪರ್ಧೆಗಾಗಿ ಕಳೆಯಿತು. ಒಂದೊಂದು ಹೊತ್ತೆಂದರೆ ೩ ತಾಸುಗಳ ಅಧಿವೇಶನ. ಈ ಅವಕಾಶವು ಬಾಲಕರು ಸಂಗ್ರಹಿಸಿ ತಂದ ಇಷ್ಟೊಂದು ಗಾದೆ, ಕಥೆ, ಹಾಡುಗಳಿಗೆ ಸಾಕಾಗುತ್ತಿರಲಿಲ್ಲ. ಈ ಎಲ್ಲ ಯತ್ನವು ಹಳ್ಳಿಯ ಜೀವನದ ಸೊಬಗನ್ನು ನಿಜಕ್ಕೂ ಅವರಿಗೆ ಹಂಚಿ ಕೊಡುವಂತಿತ್ತು. ಒಂದು ಹೊತ್ತು ಹಳ್ಳಿಯ ಕುಣಿತದ ಕಾಲವಾಗಿತ್ತು. ನಮ್ಮಲ್ಲಿಯ ಯಕ್ಷಗಾನನೃತ್ಯ, ಸುಗ್ಗಿಕುಣಿತ, ಸಿದ್ಧವೇಷದಕುಣಿತ, ಮಳಯಾಳದ ಕೋಲಾಟದಕುಣಿತ, ಭೂತದಕುಣಿತ—ಇವೇ ಮೊದಲಾದ ಹತ್ತೆಂಟು ಬಗೆಯ ನರ್ತನಗಳನ್ನು ತೋರಿಸಿದರು. ನರ್ತನವು, ಎಷ್ಟೋ ಮಕ್ಕಳನ್ನು ಮೈಮರೆಯುವಂತೆ ಮಾಡಿದುದನ್ನು ಕಂಡರೆ—ಇವರಿಂದ ಅವರ ಜೀವನಕ್ಕೆ ಎಂಥ ಆನಂದವು ದೊರೆಯಬಹುದು ಎಂಬುದು ನಮಗೆ ಅನಿಸುತ್ತಿತ್ತು.

ಮೂರು ಹೊತ್ತುಗಳು ಚಿತ್ರಲೇಖನದಲ್ಲಿ ಕಳೆಯಲ್ಪಟ್ಟುವು. ಒಂದು ಹೊತ್ತು ಬೇರೆ ಬೇರೆ ಬಣ್ಣದ ಮಣ್ಣಿನ ಹುಡಿಗಳನ್ನು ಸಂಗ್ರಹಿಸಿ, ಇನ್ನೊಂದು ದಿನ ಎಲೆಗಳಿಂದ, ಮತ್ತೊಂದು ಬಾರಿ, ಹೂಗಳಿಂದ ಅವರು ತಮಗೆ ಇಷ್ಟ ಕಂಡ ವಸ್ತುಗಳ, ಪಶುಪ್ರಾಣಿಗಳ, ಮನುಷ್ಯರ ಚಿತ್ರವನ್ನು ಸಹ ಬಿಡಿಸಿದರು. ಆಯಾಯ ವಸ್ತು, ಪ್ರಾಣಿಗಳ ರೇಖೆ, ಲಾವಣ್ಯ, ಭಾವಗಳನ್ನು ಮಕ್ಕಳು ಚಿತ್ರಿಸಲು ಮಾಡಿದ ಯತ್ನವು ಸ್ತುತ್ಯವೇ ಸರಿ. ಕೆಲವರು ಗಿಳಿ ಮೊದಲಾದ ಹಕ್ಕಿಗಳನ್ನು ಬಿಡಿಸಿದರು. ಕೆಲವರು ದನ, ಕುದುರೆಗಳನ್ನು ಬಿಡಿಸಿದರು, ಕೆಲವರು ರಂಗವಲ್ಲಿ ಚಿತ್ರಗಳನ್ನು ಬಿಡಿಸಿದರು; ಇನ್ನು ಕೆಲವರು ಗಾಂಧಿ, ಯೇಸು ಕ್ರಿಸ್ತರ ಭಾವಚಿತ್ರಗಳನ್ನು ಬಿಡಿಸಿದರು.

ಒಂದು ಹೊತ್ತನ್ನು ಮಕ್ಕಳು ಹಳ್ಳಿಯ ಹಕ್ಕಿ, ಮೃಗಗಳ ಕೂಗುಗಳನ್ನು ಅನುಕರಿಸಿ ಕಳೆದರು. ೬೦ ಮಕ್ಕಳಿಗೆ ತಮಗೆ ಬಂದ ಕೂಗುಗಳನ್ನು ತೋರಿಸಲು ಎರಡುವರೆ ತಾಸಿನ ಅವಧಿಯು ಸಾಲದಾಯಿತು.—ಎಂದರೆ ಅವರೆಷ್ಟು ಪಶು ಪ್ರಾಣಿಗಳ ಪರಿಚಯವನ್ನು ಮಾಡಿಕೊಂಡಿರುವರೆಂಬುದನ್ನು ಊಹಿಸಿ ನೋಡಿರಿ. ಈ ಪರಿಚಯವನ್ನು ನಾವು ಬೆಳೆಯಗೊಟ್ಟರೆ, ಅವರಿಗೆ ಎಂಥ ಆನಂದವು ದೊರೆಯಲಿಕ್ಕಿಲ್ಲ.

ಒಂದು ಹೊತ್ತು, **ಅಭಿನಯ ಗೀತಗಳು:** ಬೇರೆ ಬೇರೆ ಕವಿಗಳ ಬೇರೆ ಬೇರೆ ಭಾವಗಳ ಹಾಡನ್ನು ಅಭಿನಯಿಸಿ ಹಾಡುವ ಯತ್ನವಿದು. ಇಲ್ಲಂತು ಚಿಕ್ಕಮಕ್ಕಳು—ಕೃತ್ರಿಮ ನಾಚಿಕೆಯ ತಡೆಯಿಲ್ಲದೆ ಹಾಡು ಅಭಿನಯಗಳಲ್ಲಿ ಮಗ್ನರಾದ ಚಿತ್ರವು ಎಂದೂ ಮರೆಯದಂತಹದಾಗಿತ್ತು.

ಮೂರು ಹೊತ್ತುಗಳು ನಾಟಕಗಳಿಗೆ. ಅದರಲ್ಲಿ ಒಂದೂ ಮಾತನಾಡದೆ ಬರೇ ಅಭಿನಯದಿಂದ ತೋರುವ ಮೂರು ಮೂಕ ನಾಟಕಗಳು. ಉಳಿದ ಕಾಲದಲ್ಲಿ ಅಭಿನಯಿಸಿ, ಮಾತನಾಡಿ ತೋರಿಸುವ ಆರು ನಾಟಕಗಳು. ಈ ಯಾವ ನಾಟಕಗಳಲ್ಲಿಯೂ ಹಿರಿಯರ ಕೈ ಇರಲಿಲ್ಲ. ಅವರದೇ ಉಡುಗೆ, ಅವರದೇ ತೊಡಿಗೆ, ಅವರೇ ನಿರ್ಮಿಸುವ ಪರದೆಗಳು— ಅವರೇ ತಯಾರುಮಾಡಿದ ಕಥೆಗಳು. ಬಾಯಿಪಾಠ ಕಲಿಯದೆ ಸ್ವತಂತ್ರವಾಗಿ ಅಲ್ಲೇ ಆಡಿತೋರಿಸುವಂಥವು. ಈ ಕಠಿಣ ಕೆಲಸವನ್ನು ಅವರು ಅತಿ ಉತ್ಕೃಷ್ಟವಾಗಿ ಮಾಡಿತೋರಿಸಿದರು. ಅವರಲ್ಲಿನ ಹಲವು ವಿಧದ ಉತ್ಪಾದಕ ಶಕ್ತಿಗಳು ಇಲ್ಲಿ ಬೆಳಕಿಗೆ ಬಂದುವು. ಅವರ

CC-0. Jangamwadi Math Collection. Digitized by eGangotri

ಮಾತುಗಳಾಗಲಿ, ಅಭಿನಯವಾಗಲೀ, ಮೊದಲೇ ಬಾಯಿಪಾಠಮಾಡಿ ಒಪ್ಪಿಸುವ ಪದ್ಧತಿಗಿಂತಲೂ ಮೇಲಾಗಿತ್ತು.

ಇಷ್ಟೊಂದು ಕಾರ್ಯಕಲಾಪಗಳ ವರ್ಣನೆಯಿಂದಲೇ ಅಳವನ್ನು ತಿಳಿಯಲು ಬರುವಂತಿಲ್ಲ. ಅಂತು ಇಷ್ಟು ಹೇಳುವೆವು– ಅದನ್ನು ಮಾಡಿದವರ ಮನಸ್ಸನ್ನು ತುಂಬ ಆನಂದಗೊಳಿಸುವಷ್ಟು ಯಶಸ್ಸನ್ನು ಅದು ತಂದಿತು. ಮಕ್ಕಳಂತು "ಈ ದಿನಗಳನ್ನು ನಾವು ಮರೆಯಲಾರೆವು" ಎಂದು ಹಂಬಲಿಸಿ ಅಗಲಿದರು.

ಪರಿಷತ್ತಿನ ಹೊಳಪವನ್ನು ಹೆಚ್ಚಿಸಲು, ಶ್ರೀ|| ಹೊಯಿಸಳ, ಮೈಸೂರಿನ ಶ್ರೀ|| ಕೆ. ಯನ್. ಆಚಾರ್ಯ, ಶ್ರೀ. ಪಂಜೇ ಮಂಗೇಶರಾವ ಮೊದಲಾದವರೂ, ಬಿಜಾಪುರದಿಂದ ಲಾವಣಿಕಾರರೂ ಬಂದಿದ್ದರು.



ಹೊಳೆಯಲ್ಲಿ ಬೆಳೆಯುವ ಹುಲ್ಲಿನಿಂದ ಒಬ್ಬ ಬಾಲಕನು ತಯಾರಿಸಿದ ಕರಡಿ.



ಮಕ್ಕಳ ಸಭೆಯ ಸದಸ್ಯರು.

## ಮಳ್ಳಿ

ಸಾಲಿ ರಾಮಚಂದ್ರರಾಯ

ಕುಲುಕುಲು ನಗುವುದು
ಮಲಗಿದ ಕೂಸು
|| ಪಲ್ಲ ||

ಚೆಲುವಿನ ತೋಟದೊ-
ಳಲೆಯುತೆ ಬಂದು
ಚೆಲುವಿನ ಬಳ್ಳಿಯೊ-
ಳಲರನು ಕಂಡು – ಕುಲು ಕುಲು

ಮಿನುಗುವ ಮಂಜಿನ
ಹನಿಯೊಳು ಬಾಗಿ
ಮನದೊಳಸಂಬಾ-
ಸನವನು ನೋಡಿ– ಕುಲುಕುಲು

ತೊಳಗುವ ತಾರಗೆ-
ಗಳನೇ ತರುತೆ
ಸೆಳೆಮಿಂಚಿನ ಸೂ-
ಳೊಳು ಪವಣಿಸುತೆ– ಕುಲುಕುಲು

ಸರಸದೊಳೇರುತೆ-
ಮರಿಯಂಚೆಯನು
ಸರಸಿಯೊಳಲೆಯುತೆ-
ಮರಿದುಂಬಿಯನು–ಕುಲುಕುಲು

CC-0. Jangamwadi Math Collection. Digitized by eGangotri

## ಅಖಿಲಭಾರತೀಯ ಸಂಯುಕ್ತಸರಕಾರದ

# ಆರ್ಥಿಕವಿಚಾರಣಾಸಮಿತಿಯ ವರದಿಯು

## (The Federal Finance Committee's Report)

ಲೇಖಕರು:— ಧೀರ, ಧಾರವಾಡ.

ಈಸಾರೆ ದುಂಡುಮೇಜಿನ ಪರಿಷತ್ತಿನಲ್ಲಿ ಸಂಸ್ಥಾನೀ ಭಾರತವನ್ನೂ, ಬ್ರಿಟಿಷ ಭಾರತವನ್ನೂ ಒಂದುಗೂಡಿಸಿ, ಒಂದೇ ರಾಜ್ಯಸೂತ್ರವನ್ನು ಏರ್ಪಡಿಸಬೇಕೆಂದು ಒಪ್ಪಿಕೊಂಡನಂತರ, ಭಾರತಮಂತ್ರಿಗಳಾದ ಲಾರ್ಡ ಪೀಲರ ಅಧ್ಯಕ್ಷತೆಯಲ್ಲಿ ಅಖಿಲಭಾರತೀಯ ಸಂಯುಕ್ತ ಸರಕಾರದ ಆಯವ್ಯಯವನ್ನು ಅಂದಾಜುಮಾಡಲು ಒಂದು ಉಪಮಂಡಲವನ್ನು ನಿಯಮಿಸಿದರು. ಅವರು ತಮ್ಮ ಸೂಚನೆಗಳನ್ನೊಳಗೊಂಡ ವರದಿಯನ್ನು ಅಲ್ಲಿಯೇ ಒಪ್ಪಿಸಿದರು. ಆದರೆ ಆದರಲ್ಲಿ ಅಂದಾಜುಮಾಡಿದ ಆಯವ್ಯಯವನ್ನು ಬಲ್ಲವರಿಂದ ಪರೀಕ್ಷೆ ಮಾಡಿಸಬೇಕೆಂದು ಮತವನ್ನು ಪ್ರದರ್ಶಿಸಿದರು. ಅದಕ್ಕನುಸರಿಸಿ ಲಾರ್ಡ ಪರ್ಸಿಯವರ ಅಧ್ಯಕ್ಷತೆಯಲ್ಲಿ ಇನ್ನೊಂದು ಉಪಮಂಡಲವು ನಿಯಮಿಸಲ್ಪಟ್ಟಿತು. ಅಖಿಲಭಾರತದ ಆಯವ್ಯಯವನ್ನೂ ಪ್ರಾಂತಿಕ ಸರಕಾರಗಳ ಆಯವ್ಯಯವನ್ನೂ ಅವುಗಳಿಗೆ ಬೇರೆಬೇರೆಯಾಗಿ ಹಂಚಿಕೊಟ್ಟ ಆದಾಯದ ಮಾರ್ಗಗಳನ್ನೂ ಪರೀಕ್ಷಿಸಿ, ಇವೆಲ್ಲವುಗಳ ಆಯವ್ಯಯಗಳನ್ನು ಬಾಯಿಗೂಡಿಸಲಿಕ್ಕೆ ಬೇಕಾದ ಸಾಧನೆಗಳನ್ನು ಸೂಚಿಸಲು ಈ ಉಪಮಂಡಲದವರಿಗೆ ಹೇಳಿತ್ತು. ಇದಲ್ಲದೆ ಸಂಯುಕ್ತಸರಕಾರದ ರಚನೆಯಾಗುವ ಮೊದಲು ಬ್ರಿಟಿಷ ಭಾರತದ ಸಾಲದ ಪ್ರಶ್ನೆಯನ್ನೂ ಕರಕೂಡಿಸುವ ಅಧಿಕಾರವನ್ನೂ ಹೊಸ ಆದಾಯದ ಮಾರ್ಗಗಳನ್ನೂ ಅಖಿಲಭಾರತದ ಆದಾಯವು ಕಡಿಮೆಯಾದಲ್ಲಿ ಪ್ರಾಂತಿಕ ಸರಕಾರಗಳಿಂದ ತೆಗೆದುಕೊಳ್ಳಬಹುದಾದ ಕಾಣಿಕೆಗಳನ್ನೂ ಅಖಿಲಭಾರತದ ಬಿಕ್ಕಟ್ಟಿನ ಪ್ರಸಂಗದಲ್ಲಿ ಬಳಸಬಹುದಾದ ಅಧಿಕಾರಗಳನ್ನೂ ಅಲ್ಲದೆ ಸಾಲತೆಗೆಯುವ ಅಧಿಕಾರವನ್ನೂ ಸಿವಿಲ್ ಸರ್ವಿಸಿನ ಅಧಿಕಾರಿಗಳಿಗೆ ಕೊಡಬೇಕಾದ ಪೆನ್‌ಶನ್ನಿನ ವಿಷಯವನ್ನೂ ಕುರಿತು ವಿಚಾರಿಸಲಿಕ್ಕೆ ಅವರಿಗೆ ಹೇಳಿತ್ತು.

ಈ ಉಪಮಂಡಲದವರು ಹಿಂದುಸ್ಥಾನಸರಕಾರದವರೂ ಪ್ರಾಂತಿಕಸರಕಾರದವರೂ ತಯಾರಿಸಿಕೊಟ್ಟ ಇದೇ ವರ್ಷದ ಫೆಬ್ರುವರಿ ತಾರೀಖು ಒಂದರ ತರುವಾಯದ ಆಯವ್ಯಯಗಳ ಪಟ್ಟಿಯಮೇಲಿಂದಲೂ ಹಿಂದುಸ್ಥಾನಸರಕಾರದಮತ್ತುಪ್ರಾಂತಿಕಸರಕಾರಗಳಪ್ರಮುಖ ಅಧಿಕಾರಸ್ಥರಕೂಡ ಚರ್ಚೆಯ ಸಹಾಯದಿಂದಲೂ ತಮ್ಮ ಕೆಲಸ ನಡೆಯಿಸಿ, ತಮ್ಮ ವರದಿಯನ್ನು ಸಾದರಪಡಿಸಿದರು. ಇದಲ್ಲದೆ ಈ ಕೆಲಸದಲ್ಲಿ ಹಿಂದೀ ಜನತೆಯ ಮತವನ್ನು ತಿಳಿದುಕೊಳ್ಳಲು ಯತ್ನಿಸಿರುವೆವೆಂದು ಅಭಿಪ್ರಾಯವನ್ನು ತೋರ್ಪಡಿಸಿರುವರು. ಈ ಮತವು ಯಾರದಿತ್ತೋ ಎಂತಹದಿತ್ತೋ ಎಷ್ಟುಜನರದಿತ್ತೋ ಅವರೇ ಬಲ್ಲರು.

ಈ ಉಪಮಂಡಲದ ಉದ್ದೇಶವು— ಭಾರತೀಯ ಸಂಯುಕ್ತರಾಜ್ಯರಚನೆಯ ಶೈಶವದಲ್ಲಿ ಆಗಬಹುದಾದ ಅಖಿಲಭಾರತದ ಆಯವ್ಯಯವನ್ನೂ ಪ್ರಾಂತಿಕಸರಕಾರಗಳ ಆಯವ್ಯಯವನ್ನೂ ಲೆಕ್ಕ ಮಾಡಿ, ಆವೆರಡರ ನಡುವಿನ ಸಂಬಂಧವನ್ನು ಮತ್ತು ಅಖಿಲಭಾರತದ ಬೇರೆಬೇರೆ ಭಾಗಗಳ ನಡುವೆಯೂ ಈ ಎಲ್ಲ ಭಾಗಗಳ ಮತ್ತು ಅಖಿಲಭಾರತದ ನಡುವೆಯೂ ಇರಬೇಕಾದ ಸಂಬಂಧವನ್ನು ಸೂಚಿಸುವದಿತ್ತು. ಈ ವಿಷಯದಲ್ಲಿ ಅವರು ಮಾಡಿದ ಮುಖ್ಯ ಸೂಚನೆಗಳ ಮಹತ್ವದ ಭಾಗವನ್ನು ಅವರ ಭಾಷೆಯಲ್ಲಿಯೇ ಇದರಡಿಯಲ್ಲಿ ಕೊಟ್ಟಿದೆ.

"ಅಖಿಲಭಾರತದ ಬಾಲ್ಯದಲ್ಲಿನ ಆಯವ್ಯಯಗಳ ಅಂದಾಜು ಪತ್ರಿಕೆಯನ್ನು ತಯಾರಿಸಲಿಕ್ಕೆ ಇಂದಿನ ಆಯವ್ಯಯಗಳ ಪಟ್ಟಿಯು ಉಪಯೋಗವಾಗುವಂತಿಲ್ಲ. ಬ್ರಿಟಿಷ ಭಾರತದ ಇಂದಿನ ಆದಾಯವು ಕಡಿಮೆಯಾಗಿದೆ; ಹೊಸ ಕರಗಳನ್ನೂ ಕೂಡಿಸಲಾಗಿದೆ. ಸರಕಾರೀ ನೌಕರರ ಸಂಬಳವನ್ನೂ ಕಡಿಮೆ ಮಾಡಲಾಗಿದೆ. ಎಲ್ಲ ಹೆಚ್ಚಿನ

CC-0. Jangamwadi Math Collection. Digitized by eGangotri

ವೆಚ್ಚವನ್ನೂ ನಿಲ್ಲಿಸಲಾಗಿದೆ. ಹೀಗಾಗಿ ಕಳೆದ ಎರಡು ವರ್ಷಗಳ ಅಂಕೆಗಳನ್ನು ಆಧಾರವೆಂದು ಹಿಡಿಯಲು ಬರುವಂತಿಲ್ಲ. ಆದರೆ ಇಂದಿನ ಈ ಅವ್ಯವಸ್ಥೆಯನ್ನೂ ಸರಿಪಡಿಸಲು ಸಾಧ್ಯವಿದೆಯೆಂದೂ ನಮ್ಮ ನಂಬಿಗೆಯಿದೆ. ಆದ್ದರಿಂದ ಇಂಥ ಅಂದಾಜನ್ನು ಮಾಡಲು ನಾವು ೧೯೩೬-೩೭ನೆಯ ಇಸ್ವಿಯನ್ನು ಆಧಾರವಾಗಿ ಇಟ್ಟುಕೊಂಡಿರುವೆವು. ಇದರಿಂದ ನಾವು ಆ ವರ್ಷದ ಆಯವ್ಯಯಗಳ ಅಂದಾಜು ಪತ್ರಿಕೆಯನ್ನು ಇಲ್ಲವೆ ಅಖಿಲಭಾರತೀಯ ರಾಜ್ಯವ್ಯವಸ್ಥೆಯು ಪ್ರಸ್ಥಾಪಿತವಾಗುವ ದಿನವನ್ನು ಸೂಚಿಸಿರುವೆವೆಂದು ಮಾತ್ರ ಯಾರೂ ತಿಳಿಯಬಾರದು.

"ಕೆಳಗೆ ಕೊಟ್ಟ ಅಖಿಲಭಾರತದ ಅಂದಾಜುಪಟ್ಟಿಯನ್ನು ಸಿದ್ಧಪಡಿಸಲು ೧೯೩೬ನೆಯ ಇಸ್ವಿಯಲ್ಲಿ ಮೊದಲಿದ್ದ ಕರಗಳನ್ನೆ ಆಧಾರವೆಂದು ಹಿಡಿದಿರುವೆವು. ಆ ತರುವಾಯ ಹೆಚ್ಚು ಮಾಡಿದ ಕರಗಳನ್ನು ಬಿಟ್ಟುಬಿಟ್ಟಿರುವೆವು. ಅಲ್ಲದೆ ಆ ಆದಾಯದಲ್ಲಿ ಅದಕ್ಕೆ ತಗಲಬಹುದಾದ ವೆಚ್ಚವನ್ನು ಕಳೆದು, ಉಳಿದುದನ್ನು ತೋರಿಸಲಾಗಿದೆ. ಸದ್ಯಕ್ಕೆ ಬ್ರಿಟಿಷ ಭಾರತಕ್ಕೆ ಒಳಪಟ್ಟ ಭಾಗವನ್ನು ಇದರಲ್ಲಿ ಸೇರಿಸಿದೆ. ಬ್ರಹ್ಮದೇಶವು ಭಾರತದಿಂದ ಬೇರೆಯಾಗುವದೆಂದು ಹಿಡಿಯಲ್ಪಟ್ಟಿದೆ. ಆದರೆ ಹೊಸ ರಾಜ್ಯಘಟನೆಯಿಂದಾಗಬಹುದಾದ ಹೆಚ್ಚು ಕಡಿಮೆಗಳನ್ನು ಬಿಡಲಾಗಿದೆ ಎಂದರೆ ಈಗಿನ ಉತ್ಪನ್ನದ ಮೇಲಿನ ಕರವನ್ನೂ ಸಂಸ್ಥಾನೀ ಭಾರತದಿಂದ ಬರುವ ಕಾಣಿಕೆಯನ್ನೂ ಈ ಪಟ್ಟಿಯಲ್ಲಿ ಎಣಿಸಲಾಗಿದೆ. ಅಖಿಲಭಾರತಿಯ ಸಂಯುಕ್ತರಾಜ್ಯ ರಚನೆಗಾಗಿ ಆಗಬಹುದಾದ ವೆಚ್ಚವನ್ನು ಬಿಟ್ಟುಬಿಡಲಾಗಿದೆ.

## ಕೋಷ್ಟಕ ೧.

ಅಖಿಲ ಭಾರತದ ಆದಾಯವು- ರೂ. ಲಕ್ಷಗಳಲ್ಲಿ

| | | |
|---|---|---|
| ಸುಂಕ (Customs) | ೫೧೨೦ | |
| ಇದಕ್ಕೆ ತಗಲುವ ವೆಚ್ಚ | ೯೦ | |
| ಅಂತೂ | ——— | ೫೦, ೩೦ |
| ಉಪ್ಪು | ೬, ೭೦ | |
| ಇದಕ್ಕೆತಗಲುವ ವೆಚ್ಚ | ೧, ೧೫ | |
| ಅಂತೂ | ——— | ೫, ೫೫ |
| ಅಫೀಮು | ೭೮ | |
| ವೆಚ್ಚ | ೭೩ | |
| ಅಂತೂ | ——— | ೫ |
| ರೇಲ್ವೆಯಿಂದ ಲಾಭ | | ೫೦೦ |
| ನೋಟುಗಳು ಮತ್ತು ಟಂಕಸಾಲೆ | | ೩೮೦ |
| ಬೇರೆ | | ೧೯೬ |
| ಸಂಸ್ಥಾನೀ ಭಾರತದಿಂದ ಕಾಣಿಕೆ | | ೭೪ |
| ಉತ್ಪನ್ನದ ಮೇಲಿನ ಕರ | ೧೮,೦೦ | |
| ಇದಕ್ಕೆ ತಗುಲುವ ವೆಚ್ಚ | ೮೦ | |
| ಅಂತೂ | ——— | ೧೭,೨೦ |
| | | ——— |
| ಒಟ್ಟು | | ೮೪, ೬೦ |

ಅಖಿಲ ಭಾರತದ ವೆಚ್ಚವು- ರೂ. ಲಕ್ಷಗಳಲ್ಲಿ

| | | |
|---|---|---|
| ಸಾಲದ ಬಗ್ಗೆ ಕೊಡುವ ಬಡ್ಡಿ ಮತ್ತು ಗಂಗಾಜಲಿ | ೧೧, ೨೫ | |
| | ೬, ೫೦ | |
| ಅಂತೂ | ——— | ೧೭, ೭೫ |
| ಅಂಚೆ ಮತ್ತು ತಂತಿ ಖಾತೆ ಹಾಗೂ ಸೈನ್ಯ ಖಾತೆ | | ೪೭, ೦೦ |
| ಗಡಿನಾಡಿನ ಸಂರಕ್ಷಣೆಗೆ | | ೧, ೮೦ |
| ಆಡಳಿತದ ಬೇರೆ ವೆಚ್ಚ | | ೬, ೭೫ |
| ಪೆನ್‌ಶನ್ | | ೨, ೬೫ |
| ವಾಯವ್ಯಪ್ರಾಂತಕ್ಕೆ ಕೊಡಬೇಕಾದ ಹಣ | | ೧, ೦೦ |
| ಬೇರೆ | | ೩, ೧೫ |
| | | ——— |
| ಒಟ್ಟು | | ೮೦, ೧೦ |
| ಒಟ್ಟು ಆದಾಯ | | ೮೪, ೬೦ |
| ಒಟ್ಟು ವೆಚ್ಚ | | ೮೦, ೧೦ |
| | | ——— |
| ಉಳಿತಾಯ | | ೪, ೫೦ |

ಬೇರೆಬೇರೆ ಪ್ರಾಂತಿಕಸರಕಾರದವರು ಸನ್ ೧೯೩೬-೩೭ರಿಂದ ೧೯೩೭-೩೮ರ ವರೆಗೆ ಪ್ರತಿವರ್ಷದ ಆಯವ್ಯಯಗಳ ಪತ್ರಿಕೆಯನ್ನು ತಯಾರಿಸಿ ಕೊಟ್ಟಿದ್ದರು. ಇವುಗಳ ಆಧಾರದಿಂದ ಆಯಾ ಪ್ರಾಂತಿಕ ಸರಕಾರಗಳ ಪ್ರತಿನಿಧಿಗಳ ಕೂಡ ಚರ್ಚೆಮಾಡಿ ಕೆಳಗೆ ಕಾಣಿಸಿದಂತೆ ಬೇರೆಬೇರೆ ಪ್ರಾಂತಿಕ ಸರಕಾರಗಳ ಆಯವ್ಯಯ ಪತ್ರಿಕೆಯನ್ನು ತಯಾರಿಸಿದೆ.

CC-0. Jangamwadi Math Collection. Digitized by eGangotri

### ಕೋಷ್ಟಕ ೨.

### ಪ್ರಾಂತಿಕ ಸರಕಾರಗಳ ಆಯವ್ಯಯಗಳು

| ಪ್ರಾಂತ. | ಹೆಚ್ಚಿನ ಆದಾಯ ರೂ. (ಲಕ್ಷಗಳಲ್ಲಿ) | ಹೆಚ್ಚಿನವೆಚ್ಚ ರೂ. (ಲಕ್ಷಗಳಲ್ಲಿ |
|---|---|---|
| ಮದ್ರಾಸು | | ೨. |
| ಮುಂಬಯಿ | | ೬೫. |
| ಬಂಗಾಲ | | ೨೧೦. |
| ಸಂಯುಕ್ತಪ್ರಾಂತ | | ೩೫ |
| ಪಂಜಾಬ | | ೪೦ |
| ಬಿಹಾರ ಮತ್ತು ಓರಿಸಾ | | ೭೦. |
| ಮಧ್ಯಪ್ರಾಂತ | | ೧೭. |
| ಆಸಾಮು | | ೬೫. |

"ಅಖಿಲಭಾರತದ ಆಯವ್ಯಯಗಳ ಅಂದಾಜಿನಲ್ಲಿ ವೆಚ್ಚಕ್ಕಿಂತ ಆದಾಯವು ಹೆಚ್ಚಿದುದು ಕಂಡುಬರುತ್ತದೆ. ಪ್ರಾಂತಿಕ ಸರಕಾರಗಳ ಆಯವ್ಯಯಗಳ ಅಂದಾಜಿನಲ್ಲಿ ವೆಚ್ಚವು ಹೆಚ್ಚಿದುದು ಕಂಡುಬರುತ್ತದೆ. ಇದಕ್ಕೆ ಪ್ರಾಂತಿಕ ಸರಕಾರಗಳ ಆದಾಯದ ಮಾರ್ಗಗಳು ಕಟ್ಟಾದುದೇ ಕಾರಣವು. ಈ ಅಂದಾಜನ್ನು ಕಟ್ಟುವಾಗ 'ವ್ಯಾಪಾರೀ ಟಿಕೀಟು'ಗಳ ಆದಾಯವನ್ನು ಪ್ರಾಂತಿಕ ಸರಕಾರಗಳು ಅಖಿಲಭಾರತೀಯ ಸರಕಾರಕ್ಕೆ ಕೊಡುವದಿಲ್ಲವೆಂದೂ ಸಿಂಧಪ್ರಾಂತವು ಮುಂಬಯಿಯಿಂದ ಬೇರ್ಪಡುವದೆಂದೂ ಹೀಗೆ ಬೇರೆಯಾದಮೇಲೆ ಮುಂಬಯಿ ಸರಕಾರವು ಸಿಂಧಕ್ಕೆ ಏನೂ ಕೊಡಬೇಕಾಗುವದಿಲ್ಲವೆಂದೂ ಈ ಬೇರ್ಪಡಿಕೆಯಿಂದ ಮುಂಬಯಿ ಸರಕಾರಕ್ಕೆ ಸುಮಾರು ಒಂದು ಕೋಟಿ ರೂಪಾಯಿಗಳ ಲಾಭವಾಗುವದೆಂದೂ ಏಡನ್ನು ಮುಂಬಯಿ ಸರಕಾರದಿಂದ ಬೇರೆಯಾಗಿದೆಯೆಂದೂ ಹಿಡಿಯಲಾಗಿದೆ. ಹಿಂದುಸ್ತಾನದ ಸರಕಾರದ ಮತ್ತು ಪ್ರಾಂತಿಕ ಸರಕಾರಗಳ ನಡುವೆ ಅನಿರ್ಣೀತವಾಗಿ ಉಳಿದಿರುವ ಎಷ್ಟೋ ಪ್ರಶ್ನೆಗಳನ್ನು ಮತ್ತು ೧೯೨೦ಕ್ಕೆ ಮುಂಚಿತವಾಗಿ ಸೇರಿಸ ಕಾಲುವೆಗಳಬಗ್ಗೆ ತಮಗಾದ ಸಾಲದ ಪ್ರಶ್ನೆಯನ್ನು ಎಷ್ಟೋ ಪ್ರಾಂತಿಕ ಸರಕಾರಗಳು ನಮ್ಮ ಮುಂದೆ ತಂದವು. ಆದರೆ ಅವೆಲ್ಲವುಗಳ ಮೇಲೆ ನಿರ್ಣಯವನ್ನು ಕೊಡಲು ನಮಗೆ ಅಧಿಕಾರವಿಲ್ಲವೆಂದು ನಮ್ಮ ಮತವಿದೆ.

"ಪ್ರಾಂತಿಕ ಸರಕಾರಗಳು ತಮ್ಮ ಆಯವ್ಯಯಗಳ ಪತ್ರಿಕೆಯನ್ನು ತಯಾರಿಸುವಾಗ, ಇಂದಿನ ದುಃಸ್ಥಿತಿಯೇ ಮುಂದೆಯೂ ಇರುವದೆಂದು ಇಟ್ಟುಕೊಂಡು, ತಮ್ಮ ಆದಾಯವನ್ನು ಕಡಿಮೆ ತೋರಿಸಿರುವವು. ಈಗಿನ ಸ್ಥಿತಿಯು ಇನ್ನು ಬಹುಕಾಲ ಉಳಿಯಲಾರದು. ಆದುದರಿಂದ ಅವರು ತೋರಿಸಿದ ಆದಾಯವನ್ನು ನಮ್ಮ ಆದಾಯದ ಅಂದಾಜಿನಲ್ಲಿ ಹೆಚ್ಚು ಮಾಡಿರುವೆವು. ಈ ಸಂದರ್ಭದಲ್ಲಿ ಮದ್ಯದಮೇಲಿನ ಕರವನ್ನು ಉದಾಹರಣೆಯಾಗಿ ಇಟ್ಟುಕೊಳ್ಳುವಂತಿದೆ, ಮದ್ಯಪಾನ ಪ್ರತಿಬಂಧಕ್ಕೆ ಒಪ್ಪಿಕೊಂಡು ಪ್ರಾಂತಿಕ ಸರಕಾರಗಳು ತಮ್ಮ ಉತ್ಪನ್ನವನ್ನು ಕಡಿಮೆ ಮಾಡಿಕೊಂಡದ್ದರಿಂದ ಯಾವ ಸತ್ಪರಿಣಾಮವೂ ಆಗಿಲ್ಲವೆಂದು ನಮ್ಮ ಮತವಿದೆ. ಎಲ್ಲಕಡೆಗೂ ಕದ್ದು ಮದ್ಯವನ್ನು ಸಿದ್ಧಪಡಿಸುವ ಭಟ್ಟಿಗಳು ಪ್ರಚಾರದಲ್ಲಿ ಬಂದಿಲ್ಲ. ಇದರಿಂದ ಮದ್ಯಪಾನ ಪ್ರತಿಬಂಧದ ಔಚಿತ್ಯವೇನೋ ನಮಗೆ ತಿಳಿಯದು. ಹೀಗೆ ತಮ್ಮ ಮದ್ಯದ ಉತ್ಪನ್ನವನ್ನು ಕಳಕೊಂಡ ಪ್ರಾಂತಗಳಿಗೆ ಉಳಿದ ಪ್ರಾಂತಗಳಿಂದ ಬರುವ ಉತ್ಪನ್ನದ ಮೇಲಿನ ಕರವನ್ನು ಹಂಚಿಕೊಡುವದರಿಂದ ಯಾವ ಹೆಚ್ಚಿನ ಮರ್ಯಾದೆಯೂ ಬರಲಾರದೆಂಬುದು ಸ್ಪಷ್ಟವಿದೆ.

"ಪ್ರಾಂತಿಕ ಸರಕಾರಗಳು ತಮ್ಮ ವೆಚ್ಚವನ್ನು ಈಗಲೇ ಎಷ್ಟೋ ಕಡಿಮೆ ಮಾಡಿರುವವು. ಆದರೆ ಹೊಸ ಸುಧಾರಣೆಗಳನ್ನು ಬರಮಾಡುವದರಿಂದ ತಗಲುವ ಹೆಚ್ಚಿನ ವೆಚ್ಚವು ಈ ಮೂಲಕ ಮುಚ್ಚುವಂತಿಲ್ಲ. ಆಡಳಿತದ ಪದ್ಧತಿಯಲ್ಲಿಯೇ ಪುಟ್ಟಪೂರಾ ಬದಲಾವಣೆಯಾಗುವವರೆಗೆ ವೆಚ್ಚವನ್ನು ಒಮ್ಮೆಲೆ ಕಡಿಮೆ ಮಾಡುವದು ಸಾಧ್ಯವಿಲ್ಲ. ಒಂದೆರಡು ಪ್ರಾಂತಿಕ ಸರಕಾರಗಳು ಈಬಗ್ಗೆ ವಿಚಾರವನ್ನು ನಡೆಸಿರುವವು. ಆದರೆ ಇವುಗಳಿಂದಾಗಬಹುದಾದ ಫಲಿತಾಂಶವನ್ನು ನಮ್ಮ ಅಂದಾಜುಪತ್ರಿಕೆಯಲ್ಲಿ ಸಮಾವೇಶಮಾಡಲು ಸಾಧ್ಯವಿಲ್ಲ.

'ಮೇಲಣ ಮಾತು ಬಂಗಾಲಪ್ರಾಂತಕ್ಕೆ ವಿಶೇಷವಾಗಿ ಸಂಬಂಧಿಸಿದೆ. ಬೇರೆ ಪ್ರಾಂತಗಳಿಗೆ ಸಲ್ಲುವಂತೆ ಈ ಪ್ರಾಂತಕ್ಕೂ ಸಲ್ಲಬೇಕಾದ ಉತ್ಪನ್ನದ ಮೇಲಿನ ಕರದ ಭಾಗವನ್ನು ಅದರ ಆದಾಯದಲ್ಲಿ ಸೇರಿಸಿದರೂ, ಅದರ ವೆಚ್ಚವು ಆದಾಯಕ್ಕಿಂತಲೂ ಒಂದು ಕೋಟಿ ಹೆಚ್ಚಾಗುವದು. ಇದನ್ನು ಹೆಚ್ಚಿನ ಕರಗಳನ್ನು ಕೂಡಿಸಿಯೂ, ಒಟ್ಟುವೆಚ್ಚವನ್ನು ಕಡಿಮೆಮಾಡಿಯೂ ಬಾಯಿಗೂಡಿಸುವಂತಿದೆ.

CC-0. Jangamwadi Math Collection. Digitized by eGangotri

"ಹೊಸ ಸುಧಾರಣೆಗಳು ಪ್ರವೇಶಮಾಡುವ ಮೊದಲೇ ಪ್ರಾಂತಿಕ ಸರಕಾರಗಳೂ ಹಿಂದುಸ್ಥಾನ ಸರಕಾರವೂ ತಂತಮ್ಮ ಆಯವ್ಯಯಗಳನ್ನು ಬಾಯ್ಮುಗ್ಗಿಡಿಸಿ, ಹೆಚ್ಚಿನ ಸಾಲವನ್ನು ಮಾಡದಂತೆ ಕೂಡಲೆ ನೋಡಿಕೊಳ್ಳಬೇಕು. ಇದರ ಮೇಲೆಯೆ ನಮ್ಮ ಅಂದಾಜನ್ನು ನಿಲ್ಲಿಸಿರುವದರಿಂದ, ಇದರ ಮಹತ್ವವನ್ನು ಒಡೆದು ಹೇಳಬೇಕಾಗಿಲ್ಲ."

[ಮುಂದೆ ಸಾಗುವದು. ಮುಂದಣ ಲೇಖನದಲ್ಲಿ ವರದಿಯ ಉಳಿದ ಅಂಶಗಳನ್ನು ಸಂಗ್ರಹವಾಗಿ ಹೇಳಿ, ಅವುಗಳನ್ನು ವಿಮರ್ಶಾತ್ಮಕವಾಗಿ ಪರೀಕ್ಷಿಸುವೆನು. —ಲೇಖಕ.]

## ಅಗಲಿದ ಗೆಳೆಯ— ಬಿಂದುಮಾಧವ ಕೊಲ್ಲಾರ

ಆಗಸದ ಹಂದರದಿ ಇಳಿಬಿದ್ದ ಹಣ್ಣನ್ನು ಸಾಗಿ ನೀ ಹರಿಯುತಿರಲು  
ಭೋಗದಾಶೆಯು ಬೇಡ-ಕೈಗೆ ಬಂದಾ ಹಣ್ಣು ಬಾಯೊಳಿಲಿ ಬೀಳದಿರಲು.  
ಭೋಗಪುರದಾಲಯದ ಬಾಗಿಲಿಗೆ ಬೀಗವಿದೆ ಕೂಗು; ಕದ ತೆರೆಯದಿರಲು  
ಯೋಗಪದಗಳ ಹಾಡು; ಬೀಗ ಬಿಚ್ಚುವದು ನೀ ಬಾಯಾರಿ ಬಿದ್ದು ಬಿಡಲು. —ಬಿಂದುಮಾಧವ

ಗೆಳೆಯ ಬಿಂದುಮಾಧವ ಕೊಲ್ಲಾರ ಇವರು ಹೋದ ತಿಂಗಳು ವಿಜಾಪುರದಲ್ಲಿ ಹೊಟ್ಟೆಕಡಿತದ ವಿಕಾರದಿಂದ ತೀರಿಕೊಂಡರು. ಇವರು ಕರ್ನಾಟಕದ ಅಭಿಮಾನಿಗಳೂ ಕನ್ನಡದ ಹುಚ್ಚುಳ್ಳವರೂ ಆಗಿದ್ದರು. ಈಗ ಹತ್ತುಹನ್ನೊಂದು ವರ್ಷಗಳ ಮೊದಲು ಅವರು ಗುಂಪಿನ ಗೆಳೆಯರಾಗುವ ಪೂರ್ವದಲ್ಲಿಯೆ 'ಕನ್ನಡಪದ್ಯರತ್ನಮಾಲೆ' ಯೆಂಬ ಕವಿತಾಗುಚ್ಛವನ್ನು ಪ್ರಕಟಿಸಿದ್ದರು. ಅವರಿಗೆ ಇಂಗ್ಲೀಷ ಕವಿಗಳಾದ ಕೌಪರ, ಗೊಲ್ಡ್‌ಸ್ಮಿತ್ ಮೊದಲಾದವರ ಕವಿತೆಗಳಲ್ಲಿ ಅನುರಾಗವಿತ್ತು. ಬಿಂದುಮಾಧವರ ಕವಿತೆಯೂ ಅವರ ಗುಣಗಳುಳ್ಳದ್ದೆ ಆಗಿತ್ತು. ಓದಿದೊಡನೆ ತಿಳಿಯುವ ಮಾತು, ಅರ್ಥ, ಭಾವ ಇವುಗಳಿಂದ ಸಾಮಾನ್ಯರಿಗೂ ಅವರ ಕವಿತೆ ಪ್ರಿಯವಾಗುತ್ತಿತ್ತು. ಅವರು ಕೆಲವು ದಿವಸ ಅಲ್ಲಲ್ಲಿ ಶಿಕ್ಷಕರಾಗಿಯೂ ವರ್ತಮಾನಪತ್ರದ ಸಹಸಂಪಾದಕರಾಗಿಯೂ, ಕನ್ನಡ ಗ್ರಂಥಸಾಹಿತ್ಯಗಳ ಪ್ರಚಾರಕರಾಗಿಯೂ ಕೆಲಸ ಮಾಡಿದರು. ಅವರ ಸ್ವಭಾವವು ಮಗುವಿನಂತಹದು—ನಿಷ್ಕಲ್ಮಷ ಹೃದಯ, ನಿಷ್ಕಪಟ ನಡತೆ. ಅವರಿಗೆ ಕನ್ನಡಸಾಹಿತ್ಯ ಸೇವೆಯ ಬಗ್ಗೆ ಹಂಬಲವಿತ್ತು, ಹಟವಿತ್ತು. ಮಕ್ಕಳ ಹಟದಂತೆಯೇ ಅವರ ಹಟದ ಅರ್ಥವೂ ಆಗುತ್ತಿರಲಿಲ್ಲ. ಅವರಿಗೆ ಅವರ ಅಣ್ಣಂದಿರ ಬೆಂಬಲವಿತ್ತು. ಆಪ್ತರ ಸಹಾನುಭೂತಿಯಿತ್ತು. ಆದರೆ ಈ ಜೀವಕ್ಕೆ ಅದೆಲ್ಲವೂ ಅರೆಗುಟುಕು. ಅವರೇ 'ವಿಸಾರೆ' ಎಂಬ ಕವಿತೆಯಲ್ಲಿ ಹೇಳಿರುವಂತೆ, ಅವರ ಆಶೆಯ ಭಾಷೆಯೇ ಬೇರೆಯವರಿಗೆ ತಿಳಿಯುತ್ತಿರಲಿಲ್ಲ. ಹಾದಿ ತಪ್ಪಿದ ಹಸುವಿನಂತೆ ಅವರು



ಕೊನೆಕೊನೆಯ ವರುಷಗಳಲ್ಲಿ ಹೇಗೋ ದಿವಸಗಳನ್ನು ಕಳೆದರು. ಸಾಹಿತ್ಯಸೇವೆಯಲ್ಲದೆ ಬೇರೆಯೇನೂ ಮಾಡಬಾರದೆಂಬ ಹಂಬಲವಿತ್ತು; ಅದು ಫಲಿಸಬಹುದೆಂಬ ನಂಬಿಗೆಯೂ ಇತ್ತು. ಆದರೇನು? ಈಗ ಎಲ್ಲವೂ ತೀರಿತು.

ಅವರ ಹೆಂಡತಿ ಗತಿಸಿ ಕೆಲವು ವರ್ಷಗಳಾದುವು. ಈಗ ಅವರು ಹೋಗಿ ಮಕ್ಕಳು ಪರದೇಶಿ, ಮುಪ್ಪಿನ ತಾಯಿಗೆ ತ್ರಾಸ, ಆಪ್ತರಿಗೆ ಇಷ್ಟರಿಗೆ ದುಃಖ. ಇಂಥ ಜೀವನವನ್ನು ನೋಡಿ 'ಹೀಗಾಗಬೇಕೆ' ಎಂದು ಆಕ್ರೋಶವುಂಟಾಗುವದು. 'ಆಗದೆ ಏನು? ಆಗಿದೆ, ಅಷ್ಟೆ' ಎಂದು ನಿಯತಿಯು ಉತ್ತರ ಕೊಡುವದು.

ಇವರು ಬರೆದ 'ಚೆಲ್ಲಿ' ಎಂಬೊಂದು ಕವನವು ಯಥಾವಕಾಶವಾಗಿ ಪ್ರಕಾಶವಾಗಬಹುದು. ಅವರ ಜೀವದ ಆಸೆಯನ್ನು ನಾವು ಅದರಲ್ಲಿ ಕಾಣಬಹುದು. 'ಇಲ್ಲಿ ಆಸೆಗಳನ್ನು ಮುರಿದು ಎಲ್ಲಿಗೋ ಒಯ್ಯುವ ದೈವವೇ, ಅಲ್ಲಿಯಾದರೂ ಆಸೆಯಾರುವಂತೆ ಮಾಡು' ಎಂದು ಬೇಡಿಕೊಳ್ಳುವದಕ್ಕಿಂತ ಈಗ ಹೆಚ್ಚಿನದೇನಿದೆ?

—ದ. ರಾ. ಬೇಂದ್ರೆ

CC-0. Jangamwadi Math Collection. Digitized by eGangotri

# ಕನಸಿನ ಕೆಳದಿ

ಕತೆಗಾರರು
ಶ್ರೀ ಮುಗುಳಿ ರಂಗರಾಯರು, ಎಂ. ಎ.

೧

ನಾನೊಂದು ಕನಸು ಕಂಡೆ.

ಒಂದು ಬೆಟ್ಟದ ಕಾಲ್ದುದಿಗೆ ಒರಗಿಕೊಂಡಿರುವ ಬಿಳಿ ಆನೆಯಂತೆ ತೋರುವ ಯಾವುದೋ ಒಂದು ಊರು. ತುಂಬೆಲ್ಲ ಬೆಳ್ಳಗಿನ ಮನೆಗಳು. ಉಪ್ಪರಿಗೆಯಿಲ್ಲದ ಮನೆಯೇ ಇಲ್ಲ. ಹಸನಾದ, ಹರವಾದ ಬೀದಿಗಳು. ಬೀದಿಗುಂಟ ಬೆಳೆದು ಬಾಗಿ ನಿಂತಿರುವ ಮರಗಳ ಮೇಲೆಲ್ಲ ಬಿಳಿಬಿಳಿ ಹೂಗಳೇ ಹೊಳೆಯುತ್ತಿವೆ. ಹಸರಿಲ್ಲ, ಕೆಂಪಿಲ್ಲ, ಎಲ್ಲಕಡೆಗೂ ಬಿಳಿದು. ಮಳೆ ಬಿಳಿದು, ಮರ ಬಿಳಿದು, ಮಂದಿಯೂ ಬಿಳಿದೇ! ನಿಜವಾಗಿ ಇದು ಬೆಳದಿಂಗಳ ತವರೂರೆಂದು ನಾನು ಬಗೆದೆನು.

ನಾನು ನೋಡುವದರಲ್ಲಿಯೇ ಆ ಊರ ಅರಮನೆಯ ಮುಂಬದಿಗೆ ಒಂದು ಸಿಂತಂತಾಯಿತು. ಬಿಳಿಗಡ್ಡದ ಮುದುಕನು—ಆ ಪಟ್ಟಣದ ದೊರೆಯೆಂದು ತೋರುತ್ತಿದೆ—ತನ್ನ ಪರಿವಾರದೊಡನೆ ನನ್ನನ್ನು ಕರೆಯ ಬಂದನು. ನಾನು ಹೊರಟೆ. ಎಲ್ಲಕಡೆಗೂ ಸಂಗೀತದ ಸುಸ್ವರಗಳು ಸುಳಿದಾಡುತ್ತಿದ್ದವು. ಅರಮನೆಯ ಸುತ್ತಣ ಗಾಳಿಯೇ ಹುಚ್ಚೆದ್ದು ಹಾಡುತ್ತಿರುವಂತೆ ನನಗೆ ಭಾಸವಾಯಿತು. ನನಗೆಷ್ಟು ಜನರು ಮೈ ಬಾಗಿಸಿ ಕೈಮುಗಿದರು! ನನ್ನ ಆನಂದಕ್ಕೆ ಪಾರವೇ ಇಲ್ಲ. ಸಾವಿರಾರು ಕಂಬಗಳುಳ್ಳ ಒಂದು ರಾಜಮಂದಿರ ವನ್ನು ನಾನು ಹೊಕ್ಕೆ. ನನ್ನ ನಡಿಗೆಯಲ್ಲಿ ಒಂದು ಅರಸುಠೀವಿಯೇ ಒಂದಿತು, ಮಾತಿನಲ್ಲಿ ಒಂದು ಮುದ್ದು ತನವೇ ಸೇರಿತು. ಮುದುಕದೊರೆಯು ನನ್ನನೊಯ್ದು ಒಂದು ಎತ್ತರವಾದ ಗದ್ದುಗೆಯಮೇಲೆ ಕುಳ್ಳಿರಿಸಿ ತಾನು ನನ್ನ ಬದಿಗೆ ತಂದೆಯ ಹಾಗೆ ಕುಳಿತನು. ಆಗಂತೂ ನಾನು ನನ್ನನ್ನು ಮರೆತುಹೋದೆ; ನಲಿಗೆಯಿಂದ ಸಾಕಿದ ಅರಸುಗುವರನಾದೆ. ಒಂದು ಕ್ಷಣದಲ್ಲಿ ನನ್ನಿದಿರಿಗೆ ಕುಣಿತವು ಮೊದಲಾಯಿತು, ಹಾಡು ನಡೆಯಿತು. ಸುಗಂಧ ದ್ರವ್ಯಗಳು ನನ್ನ ಮೂಗಿಗೆ ಮುತ್ತಿಗೆ ಹಾಕಿದವು. ಯಾವುದಕ್ಕೂ ನಾನು 'ಇದೇಕೆ?' ಎಂದು ಕೇಳಲಿಲ್ಲ.

ಮನುಷ್ಯಜೀವವು ಯಾವಾಗಲೂ ಬೇಡುವ, ಬಯಸುವ ಸುಖಾಮೃತವು ಒಮ್ಮೆ, ಆಯುಷ್ಯದಲ್ಲಿ ಒಮ್ಮೆ—ದೊರೆತಿರಲು, ಯಾಕೆಂದು ಕೇಳುವೆನೇ? ಅದರಲ್ಲಿ ನಾನು ಬೆಳೆಯುತ್ತಿರುವ ಬಿಸಿನೆತ್ತರದ ತರುಣ. ನಲಿವಿನ ಕಡಲಲ್ಲಿ ತೇಲುವಂತಾಗಿತ್ತು. ಹಾಡುಕುಣಿತಗಳು ಮುಗಿದ ಕೂಡಲೆ ಬೇರೊಂದು ದೃಶ್ಯವು ನನ್ನ ಕಣ್ಣಿದಿರು ಕಡೆ ಹಾಯಿತು. ನನ್ನಿಂದ ನೂರಡಿಯಂತರದ ಮೇಲೆ ಎಳೆ ವಯಸ್ಸಿನ ಮುಗುದೆಯರನೇಕರು ಸಾಲುಸಾಲಾಗಿ ನನ್ನನ್ನೇ ಎವೆಯಿಕ್ಕದೆ ನೋಡುತ್ತ ನಿಂತಿದ್ದರು. 'ಇದೇನು ಚೆಲುವಿನ ಕಣಿ!' ಎಂದು ನಾನು ಕೂಗಿದೆ. ದೊರೆಯು ನನ್ನ ಸನಿಯಕ್ಕೆ ಸರಿದು ಹೇಳಿದನು 'ಮಗೂ, ಈ ಚೆಲುವೆಯರಲ್ಲಿ ನಿನ್ನ ಮನೆಗೆ ದೀಪವಾಗುವ, ನಿನ್ನ ಹೃದಯಕ್ಕೆ ಹಾರವಾಗುವ ಒಬ್ಬಳನ್ನು ಆರಿಸು. ನಿನಗಾಗಿ ಮೂರುಲೋಕದ ಕನ್ಯಾಮಣಿಗಳನ್ನು ನಾನಿಲ್ಲಿ ಕರೆಸಿರುವೆನು. ಯಾವಳು ನಿನ್ನ ನಲ್ಲೆ?' ನಾನು ಬೆರಗಾದೆ, ನನ್ನ ಭಾಗ್ಯವನ್ನು ಕೊಂಡಾಡಿದೆ. ಚಿಕ್ಕೆಗಳಂತೆ ಮಿನುಗುವ ಆ ಕನ್ನಿಕೆಗಳನ್ನು ಒಬ್ಬೊಬ್ಬರನ್ನಾಗಿ ನೋಡಿದೆ; ನನ್ನ 'ಚೆಲ್ವೆ'ಯು ನನಗೆ ಕಂಡಿತು. ನಟ್ಟನಡುವೆ ನಸುಬಾಗಿ ನಿಂತಿರುವ ಆಕೆಯನ್ನು ನೋಡಿ, 'ಆಕೆ, ನನ್ನಾಕೆ' ಎಂದು ಬೊಟ್ಟುಮಾಡಿದೆ. 'ಹೋಗ ವಳನ್ನು ಕೂಡು' ಎಂದು ದೊರೆಯಪ್ಪಣೆಯಿತ್ತನು. ನಾನೆದ್ದು ಹಿಗ್ಗಿನ ಹಿರಿ ಓಟದಲ್ಲಿ ಅರ್ಧಹಾದಿ ನಡೆಯಲು, 'ನನ್ನ ಜೀವದ ಕೆಳೆಯಾ!' ಎಂಬ ಅತ್ಯಾರ್ತವಾದ, ನವಿಯ ತಿರುಳಾದ ದನಿಯು ಕೇಳಿಸಿತು. ನಾನು ಅತ್ತಿತ್ತ ನೋಡಿದೆ. ಎಲ್ಲರೂ ಮಾಯವಾಗಿದ್ದರು. ಆಕೆ, ನನ್ನಾಕೆಯೊಬ್ಬಳೇ ಆ ಭವ್ಯವಾದ ಮಂದಿರದಲ್ಲಿ ಅಕ್ಕರೆಯ ಹೊಳೆಯೇರಿಬಂದಂತೆ ನನ್ನಕಡೆ ತೂರಿ ಹಾರಿ ಬಂದಳು. ಬಿಗಿಯಾಗಿ ನನ್ನನಪ್ಪಿ ಮುದ್ದಿನ ಮಧು ರಸದಲ್ಲಿ ನನ್ನ ಹೃದಯವನ್ನು ಎರೆದಳು. ಅದೆಂಥ ಒಲವು! ಅದೆಂಥ ಸೊಗಸುನೋಟ! 'ಬಾಳುವೆಯ ಕೆಳದೀ!' ಎಂದು ಉಬ್ಬಿನ ಉದ್ರೇಕದಿಂದ ನನ್ನ ಹೃದಯವು ಉತ್ತರಕೊಟ್ಟಿತು. ಮುದುಕದೊರೆ, ಅವನ ಆ

CC-0. Jangamwadi Math Collection. Digitized by eGangotri

ಓಲಗದ ಸಂದಣಿ, ಆ ಕುಣಿತ, ಹಾಡು ಎಲ್ಲವೂ ಕಣ್ಮರೆಯಾಗಿತ್ತು. ನಾವಿಬ್ಬರೇ ಇಬ್ಬರಾಗಿದ್ದೆವು. 'ನನ್ನೊಡನೆ ಬರುವಿಯಾ. ನನ್ನ ಮಡದಿಯಾಗುವಿಯಾ?' ಎಂದು ಕೆಳದಿಯನ್ನು ನಾನು ಕೇಳಿದೆ. ಆಕೆಯೆಂದಳು 'ಹೀಗೆಂದರೇನು, ಒಲವೇ? ನಾನು ನಿನ್ನವಳು. ನಿನಗೆ ನನ್ನ ಇದೆಲ್ಲವೂ ಮುಡುಪು!' ಆಕೆಯ ಕಣ್ಣಿಂದ ಶುದ್ಧಶುದ್ಧವಾದ ಪ್ರೀತಿಬಿಂದುಗಳು ಹೊರಗಂಡವು.

ಒಂದು ನಿಮಿಷದಲ್ಲಿ ಆ ಊರು, ಆ ಅರಮನೆ ಕಾಣದಾದವು. ನಾವಿಬ್ಬರೇ ಹಚ್ಚಹಸಿರಾದ ಬಯಲಲ್ಲಿ ಕೈಗೆ ಕೈಹಾಕಿಕೊಂಡು ತೂಗುತ್ತ ತೊನೆಯುತ್ತ ನಡೆದಿರುವೆವು. ದಾರಿಯಲ್ಲಿ ಎಷ್ಟೆಷ್ಟೋ ಹೂವಿನ ಗಿಡಗಳು ಕಂಗೊಳಿಸಿದವು. ಅವನ್ನು ಕೊಯ್ದು ನನಗೆ ಬಾಸಿಗ ಕಟ್ಟಬೇಕೆಂದು ಕೆಳದಿಯ ಬಯಕೆ. ಆದರೆ ನನ್ನನ್ನಗಲಿ ನಿಂತು ಹರಿಯಲಾರಳು; ನನ್ನ ಮೊಗದಲ್ಲಿ ನಟ್ಟನೋಟವನ್ನು ಕಿತ್ತಲಾರಳು. ನನಗೆ ಅವಳ ಬಯಕೆಯು ಗೊತ್ತಾಯಿತು. ನಾನಂದೆ "ಹೃದಯ ಬೆರೆತಾಗ ತಲೆಯ ಬಾಸಿಗವೇಕೆ, ಕೆಳದೀ?" ಅವಳು ಬಾಯ್ತುಂಬ ನಕ್ಕಳು. ಹೆಜ್ಜೆಹೆಜ್ಜೆಗೆ ನಮ್ಮ ಹೃದಯಗಳು ಹೆಚ್ಚೆಚ್ಚು ಕೂಡಿಕೊಂಡವು. ಹೀಗೆ ಹಾದಿ ಸಾಗಿರುವಾಗ ನಾವೊಂದು ಕೊಳದ ಸಮೀಪಕ್ಕೆ ಬಂದೆವು. ನನಗೆ ಹಸಿವು ಬಾಯಾರಿಕೆಯಾದವು. 'ನಾನೂ ಹಸಿದಿರುವೆ' ಎಂದು ಕೆಳದಿ ಆಡಿದಳು. 'ನಮ್ಮ ನಾಕು ಬೇಕುಗಳಿನ್ನು ಬೇರೆಬೇರೆಯಾಗುವವೇ?' ಎಂದು ನಾನು ಮರುಮಾತು ಆಡಿದೆ. ಆಕೆ ಮುಗುಳ್ನಗೆ ನಕ್ಕು ಹಣ್ಣುಹಂಪಲಗಳನ್ನು ತಂದಳು. ಇಬ್ಬರೂ ಕೂಡಿಯೇ ತಿಂದೆವು. ಕೊಳದ ನೀರು ಕುಡಿದೆವು. ಅದರ ತಟದಲ್ಲಿರುವ ಒಂದು ಕಲ್ಲುಹಾಸಿಗೆಯ ಮೇಲೆ ನಿಯಮನಿರ್ಬಂಧಗಳಿಲ್ಲದೆ ಒಬ್ಬರನ್ನೊಬ್ಬರು ತಕ್ಕೈಸಿ, — ಹೂಮಳೆಯು ಸುರಿಯುತ್ತಿರಲು, ನಮಗೆ ದೊರೆತ ನಲಿವು ತನಗೆ ದೊರೆಯದೆ ಯಾರನ್ನೋ ಕರೆವ ಹಾಗೆ ಕೋಗಿಲೆಯು ಏಕಾಗ್ರವಾಗಿ ಕೂಗುತ್ತಿರಲು, ನಮ್ಮನಣಕಿಸುವ ಆಟಹೂಡಲೆಂದು ಹಂಸಗಳು ತಾವರೆಗಳನ್ನು ಅಪ್ಪಿಸುತ್ತಿರಲು, ನಾವು ಪ್ರೇಮಮಯಮೂರ್ತಿಗಳಾಗಿ ಒರಗಿದೆವು. ಕೆಲಕಾಲ ಸಂದಿತು. ಕೆಳದಿಗೆ ನಾನು ಕೇಳಿದೆ 'ನಾವಿನ್ನು ನಮ್ಮೂರಿಗೆ ತೆರಳೋಣವೇ?' 'ತೆರಳೋಣ, ಕೆಳೆಯ. ಬಾಳುವೆಯನ್ನೂ ಮಾಡೋಣ. ಬಾಳುವೆಯ ಬಿರುಗಾಳಿಯಲ್ಲಿಯೂ ನನ್ನೊಲುಮೆಯ ದೀವಿಗೆ ಆರಬಾರದು, ನಮ್ಮಕ್ಕರೆಯ ಹೂವು ಬಾಡಬಾರದು. ಬಾಳುವೆಯೇ ಒಲವಿನ ಒರೆಯಲ್ಲವೇ?"
ಎಂಥ ಮುತ್ತಿನಂಥ ಮಾತುಗಳಿವು! 'ಕೆಳದೀ, ನಿನ್ನನ್ನು ಪಡೆದ ನಾನು ಕೃತಾರ್ಥ' ಎನ್ನುತ್ತ ನಾನು ಅವಳನ್ನು ಚುಂಬಿಸಿದೆ. ಅವಳ ಮೈ ಕೂದಲೆದ್ದು ತೋರಿದವು.

ಕೂಡಲೊಡನೆ ನನ್ನೂರಿಗೆ ಬಂದೆ. ಹೊಸದಾಗಿ ಕಟ್ಟಿಸಿದ ನನ್ನ ಮನೆ ಹೊಕ್ಕೆ. ತಂದೆತಾಯಿ ಮೊದಲಾದವರಾರೂ ಕಾಣಲಿಲ್ಲ. ನಾನೇ ನಾನು, ಅವಳೇ ಅವಳಾದೆವು. ಕೆಳದಿಯ ಬರವಿಗೆಂದೋ ಮನೆಯ ಪ್ರತಿಯೊಂದು ಕೋಣೆಯೂ ತಾನೆತಾನೆಯೆ ಒಳ್ಳೇ ಸಿಂಗಾರವಾಗಿತ್ತು. ನನ್ನ ಊಟಉಡಿಗೆಗಳಿಗೆ ಯಾವ ಕೊರತೆಯೂ ಅಲ್ಲಿ ಕಂಡುಬರಲಿಲ್ಲ. ಕೆಳದಿಯು ಹುಚ್ಚುಲಜ್ಜೆಯ ಲವಲೇಶವಿಲ್ಲದೆ ನನ್ನನ್ನು ಹೂಸಿ ಎರೆದಳು. ತಾನೂ ಪರಿಪರಿಯ ಅಣ್ಣಾನ್ನು ಬಳೆದು ಮೈತೊಳೆದುಕೊಂಡಳು. ಈರ್ವರೂ ಕೂಡಿ ಒಮ್ಮೆಲೆ ಕುಳಿತು, ವಿಧವಿಧವಾದ ಊಟವನ್ನು ಬಿನದದ ಮಾತುಕತೆಗಳಲ್ಲಿ ಉಂಡೆವು. ಅವಳು ಯಾವಾಗಲೋ ನನಗಾಗಿ ತಾಂಬೂಲವನ್ನು ಸಿದ್ಧಪಡಿಸಿದ್ದಳು. ಅದನ್ನು ಸೇವಿಸುತ್ತ ನನ್ನ ಮಂಚದ ಮೇಲೆ ಅವಳ ಬಳಿಯಲ್ಲಿ ಕುಳಿತೆ. ಅದೆಂತಹ ಆನಂದ ನನ್ನ ಜೀವಕ್ಕೆ! ಇದಕ್ಕೂ ಹೆಚ್ಚೇನು ಬಯಸುವದು ಎನಿಸಿತು. ಜೀವನದ ಸುಖವೆಲ್ಲ ಗಂಡಹೆಂಡಿರ ಜೋಡಿನಲ್ಲಿದೆ! ಆ ಜೋಡು ಇಲ್ಲದ ಜೀವನವು ಎಷ್ಟು ಬೆಯ್ಗುಡುವ ಕಾಡು! ಹೀಗೆ ಹೀಗೆ ನಾನು ಕೆಳದಿಗೆ ನನ್ನ ಹಿಗ್ಗಿನ ಮಚ್ಚುಗದಲ್ಲಿ ಉಸುರಿದೆ. ಅವಳು ನಗೆಯ ಸಾಗರವಾಗಿದ್ದಳು. 'ನಿನ್ನ ಹಾಗೆ ಉಳಿದ ಹೆಂಗಳೆಯರು ಯಾಕೆ ಇರುವದಿಲ್ಲ?' ನಾನು ಕೇಳಿದೆ ಎನ್ನು ಕೇಳಿದೆ.

'ನಾನೇನು ಹೆಚ್ಚಿನಾಕೆ? ಇರುವಿಕೆಯು ಬೇರೆ ಹೇಗೋ ನನಗೆ ಗೊತ್ತೆ ಇಲ್ಲ.'

'ನಿನಗೆ ಗೊತ್ತಿಲ್ಲ? ನಿನ್ನಂಥ ಮುಗುದೆ ನೀನೇ ಸರಿ. ಜಗತ್ತಿನಲ್ಲಿ ಹೆಂಡಂದಿರು ಗಂಡರೊಡನೆ ಮಾತನಾಡುವದಿಲ್ಲ, ಹೆಸರೆತ್ತಿ ಕರೆಯುವದಿಲ್ಲ, ಅವರೊಂದು ಕಡೆ ಇದ್ದರೆ ತಾವೊಂದು ಕಡೆ, ಅವರನ್ನು ಕಣ್ಣೆತ್ತಿ ನೋಡಿದರೆ ಹೆಣ್ಣೊಂದು ಕೆಟ್ಟ ಹೆಸರು ಅವರಿಗೆ. ಬಂದಲ್ಲಿ, ಎಲ್ಲಿ ಅಂಥ ಜೋಡಿಗಳು ಬಹಳವಾಗಿವೆ.'

CC-0. Jangamwadi Math Collection. Digitized by eGangotri

'ಅಂದರೆ ಮದುವೆಯಾದ ಹೆಂಡಂದಿರೋ ಅವರು?' 'ಮತ್ತೆ?' ನಾನು ಬಾಯ್ತೆರೆದು ನಕ್ಕುಬಿಟ್ಟೆನು.

ಕೆಳದಿಯು ಅಚ್ಚರಿಯಿಂದ ಅತ್ತಿತ್ತ ಕಣ್ಣಪಾಪೆಗಳನ್ನು ತಿರುಗಿಸಹತ್ತಿದಳು. ಕೊಂಚ ಮುನಿಸೂ ಬಂದಿತು. 'ಕೇಳು, ಇದಾವ ಬಗೆಯ ಮದುವೆ? ಪ್ರೀತಿಯ ಹೊಳೆ ಯನ್ನು ಬತ್ತಿಸುವ ಬೇಟವೊ?' ಎಂದಳು. 'ಇಲ್ಲ, ಕೆಳದಿ. ಇದು ಲಜ್ಜೆಯ ಆಟ' ಎಂದು ನಾನು ಹೇಳಿದೆ. 'ಲಜ್ಜೆಯ ಆಟ? ಎಂದರೆ ಪ್ರೀತಿಗೂ ಲಜ್ಜೆಗೂ ಕೂಡಿಬರುವದಿಲ್ಲವೇ? ನನಗಂತೂ ಪ್ರೀತಿ,ಲಜ್ಜೆ ಇಬ್ಬರೂ ನನಗೆ ಬೇಕಾದ ಅಕ್ಕ ತಂಗೆಂದಿರು! ಅವರ ನೆರವಿನಿಂದ ನಿಮ್ಮ ನೆಚ್ಚು ನನಗೆ ದೊರೆತಿದೆ.' 'ಜಗತ್ತಿನ ಲಜ್ಜೆ ಬೇರೆ. ಅದು ಪ್ರೀತಿಯ ವೈರಿ. ನಮ್ಮ ಸಮಾಜವು ಪ್ರೀತಿಯನ್ನು ಹೊರದೂಡಿ ಲಜ್ಜೆಯನ್ನು ಒಳತಂದು ನಲ್ಲನಲ್ಲೆಯರ ಬದಲು ದೂರ ದೂರವಿರುವ ಗಂಡಹೆಂಡಿರನ್ನು ಉಂಟುಮಾಡಿದೆ! ಇಷ್ಟೇಕೆ ಲಜ್ಜೆಯ ಮೋಹವೊ ನಾನರಿಯೆ. ಶುದ್ಧವಾದ ಪ್ರೀತಿಯಲ್ಲಿ ಬೇಕಷ್ಟು ವಿನಯವಿದ್ದೇ ಇರುತ್ತದೆಂದು ಜಗತ್ತು ಅರಿಯದಾಗಿದೆ, ಕೆಳದೀ' ನಾನು ದುಃಖ ತುಂಬಿದ ದನಿಯಿಂದ ಮಾತನಾಡಿದೆ. ಕೆಳದಿಯು ಕಣ್ಣೀರುತಂದಳು. 'ನಲ್ಲ, ನಾವು ಜನರಿಗೆ ಹಾಗಾದರೆ ಬೇಡಾದವರೇ?'

'ಬೇಡಾದವರೇ ಸರಿ. ಆಗೋ ನೋಡು, ನಮ್ಮನ್ನು ನೋಡಿ ನಗುತ್ತ ನಿಂದಿಸುತ್ತ ಹೆಂಗಸರು ನಡೆದಿದ್ದಾರೆ' ನಾನು ಹೀಗೆನ್ನುತ್ತ ಕಿಡಿಕಿಯಲ್ಲಿ ತೋರಿಸಲು ಕೆಳದಿಯ ದುಗುಡವು ಮಿಕ್ಕಿತು. ಅವಳ ಕುತ್ತಿಗೆಶಿರ ಉಬ್ಬಿದವು. ಮಿಂಚಿನಂತೆ ನನ್ನ ಬಳಿಸಾರಿ ತೋಳೊಡ್ಡಿ ಅವಳು ಅಪ್ಪಿ ಕೊಂಡಳು. ಇಬ್ಬರೂ ಬೆರೆತೆವು. ಎಲ್ಲಿಕಡೆಗೆ ಹಬ್ಬಿದ ಬೆಳ ದಿಂಗಳು ನಮ್ಮ ಕೋಣೆಯೊಳಹೊಕ್ಕು ನಮ್ಮನ್ನು ಎಚ್ಚ ರಿಸಿತು. ಇಬ್ಬರೂ ಮೇಲಿನಹಟ್ಟಕ್ಕೆ ಹೋದೆವು. ಅಲ್ಲಿಯ ಬಯಲುಮನೆಯಲ್ಲಿ ಹೆಗಲುಮೇಲೆ ಕೈಯಿಕ್ಕಿ ಕುಳಿತೆವು. ಹೇರಳವಾದ ಹೂಗಂಪು ಬೀರುವ ಗಾಳಿಯೂ ಸೂಸಿ ಸೂಸಿ ಇಳಿಯುವ ತಿಂಗಳನ ಬಿಳಿಬೆಳಕೂ ಮೊದಲಿನ ದುಗು ಡವನ್ನು ಮರೆಸಿ ಬಿಟ್ಟವು. 'ಕೆಳೆಯ, ನೀವು ಇಲ್ಲಿ ಪವಡಿಸಿ ದರೆ ನಾನು ಒಂದು ಹಾಡು ಹೇಳಬೇಕೆನ್ನುವೆ. ಒಪ್ಪಿಗೆಯೇ?'

'ಇದೇನು, ಗೆಳತೀ, ಈ ತಿಂಗಳನು ನನ್ನ ಅಪ್ಪಣೆ ಯನ್ನು ಪಡೆದು ಬೆಳಗುತ್ತಿರುವನೇ? ಈ ಹೂಗಳು ನನ್ನ ಅಣತಿಯಿಂದ ಪರುಗಂಪನ್ನು ನೀಡುತ್ತಿರುವವೇ? ಹಾಡು, ಹಾಡು, ಕೆಳದೀ.'

ನಾನು ಹೀಗೆಂದು ಒರಗಿ, ಕೆಳದಿಯ ಹಾಡಪಲ್ಲವಿಯ ನೀಯನ್ನು ಸವಿಯುತ್ತ ಸುಖಮಗ್ನನಾಗಿರಲು ನಾನು ಮಲಗಿರುವ ಬಯಲಲ್ಲಿ ಬಿರುಗಾಳಿ ಬೀಸಿ ನನಗೆ ಎಚ್ಚರ ವಾಗಿ ಬಿಟ್ಟಿತು.

೨

ಕನಸಿನ ಕೆಳದಿಯು ಕರಗಿಹೋದಳು!

ನಾನು ಎಚ್ಚರಾದೆ, ಕಣ್ಣು ತೆರೆದೆ; ಬೆಳದಿಂಗಳಿದೆ, ಬಯಲಿದೆ, ಕನಸಿನಲ್ಲಿ ಕಡೆಗೆ ಕಂಡ ದೃಶ್ಯದಂತೆ ಏನೇನೊ ಇದೆ, ಆದರೆ ಕೆಳದಿ—ಬಾಳುವೆಯ -ಕೆಳದಿ— ಇಲ್ಲ! ನಾನು ನೊಂದೆ, ಆದರೆ ಕೆಳದಿಯು ಮಟಮಾಯವಾಗಿರದೆ ಇಲ್ಲೇ ಮರೆಗಿರಬೇಕೆಂಬ ಭಾವವು ಮನಸ್ಸನ್ನು ಬಿಡಲಿಲ್ಲ. ನಾನು ಕಂಡದ್ದು ಕನಸಿನ ಗೊಂಬೆಯಲ್ಲ, ನಿಜನಿಜವಾದ ನನ್ನ ನೇಹದರಸಿ ಎಂಬ ಹುಚ್ಚು ತಲೆಯಿಂದ ಸರಿಯಲೊಲ್ಲದು, ಕಣ್ಣುಮುಚ್ಚಿದೆ, ಎಲ್ಲ ಕತ್ತಲೆ ಮುಸುಕು; ನೆನೆಸಿದೆ, ಕೆಳದಿಯ ನೆನಪು ಮಾತ್ರ ಇದೆ, ಅವಳು ಇಲ್ಲ. ಜೀವವು ಕುದಿಯತೊಡಗಿತು. ತಟ್ಟನೆ ಕಣ್ಣರಳಿಸಿ ಎದ್ದುಕುಳಿತು, ನಾಲ್ಕೂ ದಿಕ್ಕುಗಳಲ್ಲಿ ಚಾಚಿಚಾಚಿ ನೋಡಿದೆ. ಕುದಿಯು ಮಿಕ್ಕಿತು. ಕನಸು ಕನಸೆಂದು ಗೊತ್ತಾಯಿತು. ದೊಪ್ಪನೆ ಹಾಸಿಗೆಯ ಮೇಲೆ ಬಿದ್ದೆ.

ಅಂದಿನ ದಿನದ ಉಳಿದ ಇರುಳೆಲ್ಲ ಹೊರಳಾಟ ನರಳಾಟಗಳಲ್ಲಿ ಒಂದು ಕಲ್ಪದಂತೆ ಕಳೆಯಿತು. ಬೆಳಗಾ ಯಿತು. ನನಗಂತೂ ಆ ಬೆಳಗು ನನಗಾಗಿ ಬರುತ್ತಲಿರುವ ಒಂದು ಸಂತತರಾತ್ರಿಯ ಸಂಜೆಯಂತೆ ತೋರಿತು. ಕೆಳ ದಿಯು ನನ್ನನ್ನು ಬಿಟ್ಟು ನಕ್ಷತ್ರಗಳ ನಡುವೆ ಓಡುತ್ತಿರು ವಂತೆ ಚಿತ್ರಗಳು ಕಣ್ಣಮುಂದೆ ಸುಳಿದವು.

ಒಂದೆರಡು ದಿನಗಳಾದವು. ಯಾವ ವಾರವೋ ಯಾವ ದಿನವೋ ತಿಳಿಯದೆ ತಲೆಹಿಡಿದ ಮರುಳನಂತೆ ಕಾಲ ಹಾಕಿದೆ. ಕೆಳದಿಯೊಡನೆ ನನ್ನ ಹುರುಪು ಹುರುಡು ಗಳೆಲ್ಲಾ ಕರಗಿಹೋಗಿದ್ದವು. ನನ್ನ ತಂದೆಯವರಿಗೆ ಈ ನನ್ನ ಹೊಸಪರಿಯು ತಿಳಿಯಿತೆಂದು ತೋರುತ್ತದೆ ಅವರಿಗೆ ನಾನೊಬ್ಬನೇ ಗಂಡುಮಗ. ಬಹಳ ಅಚ್ಚು ದಿಂದ ಬೆಳೆಸಿದ್ದರು. ಈಗ ನಾನು ಮೌನವಾಗಿದ್ದುದು ಅವರಿಗೆ ಅವರ ಬಗೆಯಲ್ಲಿ ಬೇರೆ ಅರ್ಥಹೊಂದಿತು. ಆದರೆ ಆ ಅರ್ಥದಿಂದ ನನ್ನ ಪ್ರಕೃತಿಮಾನಕ್ಕೂ ಗುಣವಾಯ ತೆಂದು ನಾನು ಹೇಳದಿರಲಾರೆ.

CC-0. Jangamwadi Math Collection. Digitized by eGangotri

"ಅಲ್ಲ, ಮಗೂ, ನಿನಗೀಗ ಇಪ್ಪತ್ತು ವರುಷ ದಾಟಿದವು. ನಿನ್ನ ಮದುವೆಯನ್ನೇಕೆ ಮಾಡಬಾರದು?' ಅವರು ಕೇಳಿದರು.

ನನ್ನ ಹೃದಯದಲ್ಲಿ ಹೊಸ ಬೆಳಕು ಚಿಮ್ಮಿತು. 'ಹೌದು, ನಾನಿನ್ನೂ ಮದುವೆಯಾಗಿಲ್ಲ! ಕನಸಿನಲ್ಲಿ ಕಂಡ ಕೆಳದಿಯನ್ನು ಜಗತ್ತಿನಲ್ಲಿ ಯಾಕೆ ಪಡೆಯಬಾರದು? ನನ್ನ ಕೆಳದಿ ನನಗೆ ದೊರೆಯುವಳು, ಅಂತೇ ಅಂದು ಕನಸಿನಲ್ಲಿ ಕಂಡಳು; ಕನಸು ಸುಳ್ಳಲ್ಲ, ಕನಸು ನಿಜ, ನಿಜ.' ಎಂದು ವೇಗದಿಂದ ನನ್ನ ಭಾವನಾಚಕ್ರವು ತನ್ನಸುತ್ತು ತಾನೆ ತಿರುಗಹತ್ತಿತು.

'ಯಾಕೆ ಸುಮ್ಮನಾದೆ? ಈಗೆರಡು ದಿನಗಳಿಂದ ನೀನೂ ಅದನ್ನೇ ಯೋಚಿಸುತ್ತಿರುವಿಯಲ್ಲವೇ?' ತಂದೆಯ ಈ ಪ್ರಶ್ನೆಗೆ ನಾನು ಹೌದು ಎನ್ನಲೂ ಬಾರದು, ಅಲ್ಲವೆನ್ನಲೂ ಬಾರದು. ಮುಗುಳ್ನಗೆ ನಕ್ಕು ಸುಮ್ಮನೆ ನಿಂತೆ. ಮದುವೆಯ ಮಾತುಗಳಿಗೆ ಎಳೆಯ ಮಕ್ಕಳೇನು ಬಿಚ್ಚಿ ಹೇಳುತ್ತಾರೆ? ನನಗೆ ಮದುವೆ ಬೇಕಾದುದೇ ಸತ್ಯವೆಂದು ಅವರು ನಿರ್ಧರಿಸಿ ಬಿಟ್ಟರು. ನನಗೆ ಒಂದು ಸಮಾಧಾನ, ಒಂದು ಕೊರತೆ. ಕಳೆದುಹೋದ ಕೆಳದಿಯನ್ನು ಮದುವೆಯಿಂದ ಪಡೆಯಬಹುದೆಂದು ಸಮಾಧಾನ. ಆದರೆ ತಂದೆಯು ನನ್ನ ಮನದನ್ನೆಯನ್ನು ಅರಿಸುವನಾದರೂ ಹೇಗೆ ಎಂದು ಕೊರತೆ. ಅಂತೂ ತಂದೆಗೆ ತಿಳಿಯುವಹಾಗೆ ತಾಯಿಯಿದುರು ಆಡಿದೆ "ನನ್ನ ಮದುವೆಯ ಹೆಂಡತಿಯನ್ನು ನಾನೇ ಅರಿಸುವವನು. ನನಗೆ ಮನಸ್ಸಿಗೆ ಬಾರದ ಹೆಣ್ಣಿನ ಕೈಹಿಡಿಯಲು ನಾನೊಪ್ಪುವದಿಲ್ಲ." ಯಾವದನ್ನೂ ನನಗೆ ಕಡಿಮೆ ಮಾಡದ ತಾಯಿಯು ಇಂಥದರಲ್ಲಿ ಬೇರೆಮಾಡುವಳೇ? 'ನಿನ್ನಂತೆ ಆಗಲೆಪ್ಪ' ಎಂದುಬಿಟ್ಟಳು. ನನ್ನ ಅಂತರಾಳದ ಅಪೇಕ್ಷೆಯೂ ಅದನ್ನೊತ್ತಿ ಹೇಳುವ ಕನಸುವೂ ಅವಳ ಮುಗ್ಧಮನಕ್ಕೆ ತಿಳಿಯದೆ ಉಳಿದವು.

ಮೊಟ್ಟಮೊದಲು ನನ್ನ ತಂದೆಯವರು ಚೆಲುವೆಯರಾದ ಎಷ್ಟೋ ಕನ್ಯೆಯರನ್ನು ತೋರಿಸಿದರು. ಅವರ ರೂಪವೇನೋ ಸರಿಯಾಗಿದ್ದರೂ ನನ್ನ ಕೆಳದಿಯನ್ನು ಅವರಾರೂ ಸರಿಗಟ್ಟಲಿಲ್ಲ. ಮೊಳಕಾಲುಗಳ ನಡುವೆ ಮೋರೆ ಹುದುಗಿಸಿ, ಮೈಮುಟಿಗೆಮಾಡಿ, ಯಾವದೋ ಹಿರಿ ತಪ್ಪುಮಾಡಿದ ಕೈದಿಯಂತೆ ನನ್ನಿದುರಲ್ಲಿ ಕುಳಿತCC-0. Jangamwadi Math Collection. Digitized by eGangotri ತದ್ದು ನೋಡಿಯೇ ನಾನು ಚಕ್ಕನೆ ಜರೆದೆನು. ಕೆಳದಿಯಂತೆ ಒಬ್ಬಳಾದರೂ 'ನನ್ನ ಜೀವದ ಕೆಳೆಯಾ!' ಎಂದು ಕೂಗುತ್ತ ನನಗಾಗಿ ಕೊರಗುತ್ತ ತೂರಿ ಹಾರಿಬಂದಳೇ!

ಎರಡು ವರುಷಗಳಾದವು. ನನ್ನ ಕೆಳದಿಯು ನನಗೆ ತಿರುಗಿ ಕನಸಿನಲ್ಲಿ ಸಹ ಮೋರೆದೋರಲಿಲ್ಲ.

'ಹೀಗಾದರೆ ಹೇಗೆ? ನಿನ್ನ ತಾಯಿಯಣ್ಣನ ಮಗಳಾದ ಆ ಲೀಲೆಯನ್ನು ಮಾಡಿಕೊಳ್ಳುವಿಯಾ?' ತಂದೆಯವರು ನನ್ನ ಸ್ಥಿತಿಗೆ ಮರುಗಿ ಕೇಳಿದರು.

ಲೀಲೆ! ಕೂಸಿದ್ದಾಗ ನಾನು ಎತ್ತಿ ಮುದ್ದಾಡಿಸಿದ ಲೀಲೆ! ಬೆಳೆದಮೇಲೆ ಆಟವಾಡಿ ನಕ್ಕು ಕೆಲೆದು ಪಾಠ ಹೇಳಿದ ಲೀಲೆ! ಅವಳನ್ನು ತುಂಬ ನೆನೆಸಿಕೊಂಡೆ. ಕೆಳದಿಯಂಕುರವು ಅವಳಲ್ಲಿ ಇರಲೆಬೇಕೆಂದು ಎನಿಸಿಹೋಯಿತು. ಅವಳನ್ನು ನಾನು ಹೊಸದಾಗಿ ನೋಡುವ ಕಾರಣವೇ ಇರಲಿಲ್ಲ. ತಂದೆಗೆ ನನ್ನ ಸಂಮತಿಯನ್ನು ಸೂಚಿಸಿದೆ. ಇಷ್ಟುದಿನಗಳವರೆಗೆ ಲೀಲೆಯ ಬಡತನ ಬಾಳಿಗೆ ಮನಸ್ಸೊಪ್ಪದೆ ಸುಮ್ಮನಿದ್ದ ತಂದೆಯವರು ನನ್ನ ಮದುವೆಯಾದರೆ ಸಾಕೆಂದು ಈಗ ಬೇರೊಂದು ಹೂಡಲಿಲ್ಲ.

ಮದುವೆಯು ಗೊತ್ತಾಯಿತು. ನಮ್ಮೂರಲ್ಲೇ ಇರುತ್ತಿರುವ ಲೀಲೆಯನ್ನು ಮೊದಲಿಗಿಂತ ಮಿಗಿಲಾದ ಅಕ್ಕರತೆಯಿಂದ ಮಾತನಾಡಿಸಿ, ನಾನು ಕಂಡ ಕನಸನ್ನು ತಿಳುಹಿ ನಮ್ಮ ಮುಂದಣ ಬಾಳುವೆಯ ಸುಂದರ ಚಿತ್ರವನ್ನು ವರ್ಣಿಸಿ ಬರಲೆಂದು ನಾನು ಹೊರಟೆನು. ಬಾಗಿಲಲ್ಲಿ ನಿಂತ ಲೀಲೆಯು ನನ್ನ ಕಂಡೊಡನೆ ಸೀರೆಯ ಸೆರಗನ್ನು ಸರಿಪಡಿಸಿಕೊಂಡು ಒಳಕೋಣೆಗೆ ಹೋದಳು. ಹೀಗೆಂದೂ ಹಿಂದೆ ಅವಳು ಮಾಡಿರಲಿಲ್ಲ. ನಾನು ಆ ಕೋಣೆಗೆ ಹೋದೆನು. ಲೀಲೆಯು ಬೇರೊಂದು ಬಾಗಿಲದಿಂದ ಪಾರಾಗಿ ಬೇರೊಬ್ಬರ ಮನೆಗೇ ತೆರಳಿ ಬಿಟ್ಟಳು. ಎಲ್ಲಿಲ್ಲದ ನನಗೆ ಸೋಜಿಗದ ಮೊಟ್ಟೆಯಾಯಿತು. ಲೀಲೆಯ ತಾಯಿಯೇನೋ ಅತ್ಯಾದರದಿಂದ ನನ್ನನ್ನು ಕೂಡಿಸಿ ತಿನಿಸು ಕೊಟ್ಟು ಮುದ್ದುಮಾತಾಡಿ ಕಳುಹಿದಳು. ಆದು ಯಾವುದೂ ನನಗೆ ರುಚಿಸದೆ ನಾನು ಹೊರಟು ಬಿಟ್ಟೆ.

ಹಾದಿಯಲ್ಲಿ ಕಸಿವಿಸಿಯು ನನ್ನೆದೆ ತುಂಬಿತು, ಕಂಬನಿಗಳು ಕಣ್ಣೆವೆಯ ದಡತುಂಬಿ ಹರಿದವು. ಗೊತ್ತಾದ ಮದುವೆ! ಓಡಿ ಹೋದಲೀಲೆ! ನನಗೆ ಒಂದಕ್ಕೊಂದು ಸಂಬಂಧ ಹತ್ತಲಿಲ್ಲ. ಜಗತ್ತಿನ ಉಳಿದ ವಧುಗಳೆಲ್ಲ ಹಾಗೆ

ಮಾಡಬಹುದು. ಆದರೆ ನನ್ನ ಲೀಲೆಯೂ ಹೀಗೆ ನಡೆಯ ಬೇಕೆ? ನಾನು ಮದುವೆಯನ್ನೇ ಒಲ್ಲೆ ಎನಿಸಿತು. ಆದರೆ ಕೊಟ್ಟ ಒಪ್ಪಿಗೆಯನ್ನು ಹಿಂತೆಗೆದುಕೊಳ್ಳುವ ಒಳ್ಳೆತನವು ಬೇರೆ ನನ್ನಲ್ಲಿತ್ತು. ಸುಮ್ಮನಾದೆ, ಸಮಾಧಾನವನ್ನು ಹೇಳಿಕೊಂಡೆ. ನನ್ನನ್ನೇ ಏಕತಾನವಾಗಿ ಪ್ರೀತಿಸುವ ಲೀಲೆಯು ಬಹುದಿನಗಳಿಂದ ನನ್ನನ್ನು ನೋಡದೆ, ನಾನು ಬೇರೆಯವನೆಂದು ತಿಳಿದು ಓಡಿ ಹೋಗಿರಬೇಕು! ಹೌದು ಹೀಗೆಯೆ ಇರಬೇಕು!

ಮದುವೆಯ ದಿನ ಬಂದಿತು. ಅದರ ಉತ್ಸವ, ಉದ್ಯಮ ಗಳಲ್ಲಿ ನನ್ನ ಆಸಕ್ತಿಯೇ ಇರಲಿಲ್ಲ. ಆ ಸನಾದಿ, ಆ ಸಪ್ಪಳ, ಎಲ್ಲ ನನಗೆ, ಇದಿರುಗೊಳ್ಳುವ ದಿನದಲ್ಲಿ ಒಂದು ಸಂತೆಯ ಕಲಕಲಾಟದಂತೆ ಕೇಳಿಸಿತು. ಕನಸಿನ ಕೆಳದಿಯನ್ನು ನೆನ ಪಿಗೆ ತಂದುತಂದು ಜೀವವು ಗೋಳಿಡಹತ್ತಿತು. ನಾನೇಕೆ ಮದುವೆಗೆ ಒಪ್ಪಿದೆ? ಎಂಬ ನೀಲಾಂಬರಿಯನ್ನೇ ಅಂತ ರಂಗವು ಹಾಡುತ್ತಿತ್ತು. ಆದರೂ ಒಳಗೊಂದು ಆಸೆ.... ಲೀಲೆಯು ನನ್ನ ಕೆಳದಿಯಾಗಬಾರದೇಕೆ? ಅಕ್ಕೀಕಾಳಿನ ಮುಹೂರ್ತಕ್ಕೆ ನನ್ನನ್ನೂ ಲೀಲೆಯನ್ನೂ ಇದುರು ಬದುರು ನಿಲ್ಲಿಸಿ ಅಂತಃಪಟವೊಂದನ್ನು ಹಿಡಿದರು. ಲೀಲೆಯು ಬಾಗಿ ನಿಂತವಳು ನನ್ನನ್ನು ಕಣ್ಣೆತ್ತಿ ನೋಡ ಲಿಲ್ಲ. ಈ ಅಂತಃಪಟವು ನಮ್ಮ ಬಾಳುವೆಯ ಕಡೆಯ ವರೆಗೆ ನಮ್ಮ ಅಂತಃಕರಣಗಳನ್ನು ಅಗಲಿಸಲಿಕ್ಕೆ ನಿಲ್ಲ ಲೆಂದು ರಚಿಸಿದಂತೆ ನನಗೆ ಭಾಸವಾಯಿತು! ಎದೆಯು ಧಸ್ಸೆಂದಿತು. ಅಕ್ಕೀಕಾಳು ಬಿದ್ದವು, ಮಂತ್ರೋಚ್ಚಾರ ವಾಯ್ತು; ಒಂದರಮೇಲೊಂದು ಲಾಜಾಹೋಮ, ನಾಡೆ, ಸಿಂದೂಪ ಮೊದಲಾದ ಶಾಸ್ತ್ರಸಂಗತಿಗಳು ಜರುಗಿ ದವು. ಅವಾವುಗಳಲ್ಲಿಯೂ ಲೀಲೆಯ ಜೀವವನ್ನು ನನ್ನ ಜೀವಕ್ಕೆ ಬೆಸೆಯುವ ಸಂಗತಿಯು ಹೊರಪಡಲಿಲ್ಲ. ಕೆಳ ದಿಯ ಆ ಪ್ರೇಮಾರ್ತವಾದ ಮೊರೆ, ಆ ಅಕ್ಕರೆಯ ಹೊಳೆಯೋಟ, ಆ ಪ್ರೀತಿಪೂರಿತವಾದ ನೋಟ, ಒಂದು ಕ್ಷಣದಲ್ಲಿ ಎಷ್ಟು ಏಕಜೀವದ ಮದುವೆಯನ್ನು ಜರುಗಿಸಿ ದವೋ ಅಷ್ಟು ಒಂದು ಕಣವನ್ನಾದರೂ ಈ ಮದುವೆಯ ನಾಲ್ಕು ದಿನದ ಊಟಪಾಟಗಳು ಮಾಡಲಿಲ್ಲ.

ಮದುವೆಯು ನಡೆದಾಗ ನಾನೆಷ್ಟು ಪರಿಯಾಗಿ ಲೀಲೆ ಯನ್ನು ಏಕಾಂತದಲ್ಲಿಯಾದರೂ ಮಾತನಾಡಿಸಿ 'ಬಾಳು ವೆಯ ಕೆಳದೀ!' ಎಂದು ಬಿಗಿದಪ್ಪಬೇಕೆಂದೆ. ಆದರೆ ಅದೆಷ್ಟು ಜನರ ಓಡಾಟ. ಏನು ಗೊಂದಲ! ಮದು ವೆಯು ನಮಗಾಗಿಯೋ ಅವರಿಗಾಗಿಯೋ ನನಗೆ ತಿಳಿ ಯದೆ ಹೋಯಿತು. ಮದುವೆ ತೀರಿತು, ಇನ್ನಾದರೂ ಒಮ್ಮೆ ಬೇರೆಯಾಗಿ ಹೋಗಿ ಲೀಲೆಯನ್ನು ಕಂಡು ಹೃದ ಯದ ಮದುವೆಯನ್ನು ಮಾಡಿಬಿಡೋಣ ಎಂದೆ. ಆದರೆ ಲೀಲೆಯ ಬಹಳ ಹತ್ತಿರದ ಆಪ್ತರಂತೆ, ಅವರು ಆಕೆಯನ್ನು ಕರೆದುಕೊಂಡು ದೂರದೇಶಕ್ಕೆ ಹೋಗಿ ಬಿಟ್ಟರು.

ನನ್ನ ಬಾಳುವೆಯ ಗೋಳು ಈಗ ಮಾತ್ರ ಹದಕ್ಕೆ ಬಂದಿತು. ಇದೇ ವರುಷ ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ನೀರು ಸರಿದ ಬಾವಿಯ ಮುಂದೆ ಯಾವಾಗ ತಮ್ಮ ಪಾಳಿಯು ಬಂದೀತೆಂದು ಟಕ್ಕುಹಿಡಿದುಕುಳಿತಿ ರುವ ಹೆಂಗಸರಂತೆ ಚಾಕರಿಯ ಬಿಕ್ಕೆಗಾಗಿ ಬಾಯ್ಬಿಡುವ ಬಂಧುಗಳಲ್ಲಿ ನಾನೊಬ್ಬನಾದೆ. ತಂದೆಯವರು ನಾನು ಇಷ್ಟು ಬೇಗ ಕೆಲಸ ಹಿಡಿಯಬೇಕೆಂದು ಒತ್ತಾಯ ಮಾಡುತ್ತಿರಲಿಲ್ಲ. ಆದರೆ ನನಗೇ ನಿರುದ್ಯೋಗದ ಹೇಸಿಕೆ, ಗುರಿಯಿಲ್ಲದ ತಿರುಗಾಟದ ಬೇಸರವುಂಟಾಯಿತು. ಈ ಸಮಸ್ಯೆಯೊಡನೆ ಲೀಲೆಯೂ ನನಗೆ ಒಂದು ದೊಡ್ಡ ಕೂಟಪ್ರಶ್ನೆಯಾದಳು. ನಾನು ಕೊರಗಿ ಕೊರಗಿ ಹಣ್ಣಾದೆ.

ಊರಿಗೆ ಹೋದ ಲೀಲೆಯ ಸುದ್ದಿಯೇ ಇಲ್ಲ, ನಾಲ್ಕು ತಿಂಗಳವರೆಗೆ. ಕಡೆಗೊಮ್ಮೆ ಅವಳು ಮೈನೆರೆದಳೆಂದೂ ಬೇಗನೆ ನಮ್ಮೂರಿಗೆ ಬರುವಳೆಂದೂ ತಿಳಿಯಿತು. ನನ ಗೆಷ್ಟೋ ಉಬ್ಬು ಬಂದಿತು. ಅವಳು ಬರುವ ದಿನ, ವೇಳೆಯನ್ನು ಅತ್ತೆಮನೆಯಿಂದ ತಿಳಿದುಕೊಂಡು ಸ್ಟೇಶ ನ್ನಿಗೇ ಹೋದೆ. ಅವಳ ಜತೆಯಲ್ಲಿ ಯಾರಿದ್ದರೂ ಸರಿ, ಅವಳನ್ನು ಮಾತಾಡಿಸಿ ಕೈಯಲುಗಿಸಿ ಬಿಡಬೇಕೆಂದು ಗಟ್ಟಿಮಾಡಿದೆ. ಗಾಡಿ ಬಂದಿತು. ತನ್ನೂರು ಬಂದಿತೆಂದು ಹೊರಗೆ ಮೋರೆ ಚಾಚಿದ ಲೀಲೆಯು ನಾನು ಬಂದಿರುವ ದನ್ನು ನೋಡಿ ಒಳಬಳಗೆ ಸರಿದುಬಿಟ್ಟಳು. ನನ್ನ ಉತ್ಸಾಹವೇಕೊ ಕುಗ್ಗಹತ್ತಿತು, ಹೃದಯದೇವತೆಗೆ ಮುನಿಸುಬಂದಿತು. ಆದರೂ ಗಾಡಿ ನಿಂತಕೂಡಲೆ ಹತ್ತಿರ ಹೋದೆ. ಆಕೆಯ ಬಂಧು ಇಳಿದರು, ಅವಳೂ ಇಳಿದಳು. ನನಗೆ ಕೈಹಿಡಿಯುವದಾಗಲಿಲ್ಲ. ಮೈಯೆಲ್ಲ ಬೆವರಿತು. 'ಈಗ ಬಂದಿಯಾ?' ಎಂದಿಷ್ಟು ಕೇಳಿದೆ. ಅವಳು ಉತ್ತರ ಕೊಡದೆ ಬಾಗಿ ಬೆದರಿ, ಜಾರಿಬಿಟ್ಟಳು.



CC-0. Jangamwadi Math Collection. Digitized by eGangotri

ನಾನು ಪೆಚ್ಚನಾದೆ. ಕೆಳದಿಯ ಕೂಡ ನೂರಾರು ಸಲ ಕೈಯೊತ್ತಿ ಸಾವಿರಾರು ಮಾತನಾಡಿದ ನಾನು ಇದ ನ್ನೇನು ಕಾಣುತ್ತಿರುವೆ? ನಾನು ನನ್ನ ಹೆಂಡತಿಯನ್ನು ಪ್ರೀತಿಸುವದೇ ತಪ್ಪೋ? ಇಲ್ಲವೆ ಕೆಳದಿಯು ಮರೆಗೆ ನಿಂತು ನನ್ನನ್ನು ಅಣುಕಿಸುತ್ತಿರಬಹುದೇ? ಕನಸಿನಲ್ಲಿ ಕೆಳದಿಗೆ ನಾನು 'ಇದೆಲ್ಲ ಲಜ್ಜೆಯ ಆಟ!' ಎಂದು ಹೇಳಿದ್ದು ನೆನಪಾಯಿತು. ಆದರೆ ಮನಸ್ಸು ಉಪಾಯ ಗಾಣದೆ ಬೆಪ್ಪಾಯಿತು. ಇಷ್ಟರಲ್ಲೆ ಫಲಶೋಭನವು ಗೊತ್ತಾದ್ದರಿಂದ ನನ್ನ ಪ್ರೀತಿಯ ಫಲವು ಈಗಾದರೂ ದೊರೆಯಬಹುದೆಂದು ಹಾರೈಸಿ ತಡೆದೆ. ಎಂದಿನ ದಿಸ ಈರ್ವರೂ ಕೂಡಿ ಹಿಗ್ಗಿನ ಹೊಳೆಯಲ್ಲಿ ತೇಲುವ ಎರಡು ಹೂಗಳಂತೆ ಇರಬೇಕೆಂದು ಅಂದು ನಾನು ಲೀಲೆಯ ಭಯ, ಲಜ್ಜೆ, ಮೌನಗಳಿಂದ ಕಂಗೆಟ್ಟು ಕಳವಳಗೊಂಡು ಕಣ್ಣೀರುಗರೆದೆ!

ಮುಂದೆ ಮುಂದೆ ಹೊರಗಣ ಬಳಕೆಯಲ್ಲಿ ಯಾವುದೋ ಒಂದು ರೂಢಿಬಲದಿಂದ ನನ್ನ ಸಲುವಾಗಿ ಒಂದೆರಡು ಕೆಲಸಗಳನ್ನು ಮಾಡುತ್ತಿದ್ದರೂ ನನ್ನಿಂದ ದೂರವಿರುವ, ನಾನು ಬಂದರೆ ಯಾವನೊಬ್ಬ ರಕ್ಕಸನು ತಿನ್ನಬಂದಂತೆ ಬೆದರುವ ವೃತ್ತಿಯು ಲೀಲೆಯ ರಕ್ತನಾಳಗಳಲ್ಲಿ ಭೇದಿಸಿ ಕೊಂಡಿತು. ರಹಸ್ಯದಲ್ಲಿಯೂ ಹೀಗೆಯೆ. ಕಾಲವು ಎಷ್ಟೆಷ್ಟು ಸವೆದರೂ ಈ ಲೀಲೆಯ ಲಜ್ಜೆಯನ್ನೂ ಲಜ್ಜೆಯ ಲೀಲೆಯನ್ನೂ ಎಳ್ಳಷ್ಟೂ ಕಡಿಮೆ ಮಾಡಲಿಲ್ಲ.

ಒಂದು ದಿನ ಮಧ್ಯರಾತ್ರಿ. ಎಂದಿನಂತೆ ನನಗೆ ನಿದ್ದೆ ಯಿಲ್ಲ. ನರಳುತ್ತ ಹೊರಳುತ್ತ ಹಾಸಿಗೆಯಮೇಲೆ ಬಿದ್ದಿ ರುವೆ. ಲೀಲೆಯು ನನ್ನಿಂದ ನಾಲ್ಕಡಿ ದೂರದ ಹಾಸಿಗೆಯ ಮೇಲೆ ಮಲಗಿ ಒಳಿತಾಗಿ ನಿದ್ದೆ ಮಾಡುತ್ತಿರುವಳು. ಅವಳಲ್ಲಿ ಸಹಜ ಪ್ರೀತಿಯು ಹುಟ್ಟಲೆಂದು ನಾನು ಮಾಡಿದ ಯತ್ನಗಳು ಯಾಕೋ ಮನದಲ್ಲಿ ಮರೆ ಒಂದವು. ಎಲ್ಲವೂ ವಿಫಲವಾಗಿದ್ದವು. ಇದೆಂಥ ಸಂಸ್ಕಾರ ಬಲ ಎಂದು ಹುಚ್ಚನಂತೆ ಕೂಗಿದೆ. ಪ್ರೀತಿ ಮರೆಸುವ ನಿರ್ಲಜ್ಜತನದ ಲಜ್ಜೆಯನ್ನು ಕಲಿಸಿದ ರೂಢಿರಾಕ್ಷಸ ನನ್ನು ನಿಂದಿಸಿದೆ. ಕಡೆಗೆ ನನ್ನನ್ನು ನಾನೇ ದೂಷಿಸಿದೆ. ನಾನೆಂಥ ಮರುಳ! ಪ್ರೀತಿಯನ್ನು ಕಲಿಸಹೋದೆ! ಪ್ರೀತಿಯು ಹೃದಯದಿಂದ ಉಕ್ಕಿ ಬರಬೇಕು, ತೇಲಿ ಬರಬೇಕು, ಕೊಚ್ಚಿ ಬರಬೇಕು. ಸೆಲೆ ಇಲ್ಲದ ಗುಡ್ಡಕ್ಕೆ ನೀರು ಸುರಿದರೆ ಹೊಳೆಯಾಗಿ ಹರಿಯುವದೇ?

ಸ್ವಲ್ಪ ಕಣ್ಣು ಮುಚ್ಚಿದೆ. ಕೆಳದಿಯು ನೆನಪಾದಳು. ಆ ಕನಸಿನ ಸ್ವರ್ಗವೆಲ್ಲ ಕಣ್ಣಮುಂದೆ ಸುಳಿಯಿತು. ಆ ಅಚ್ಚಬಿಳಿ ಪಟ್ಟಣ, ಭವ್ಯ ಮಂದಿರ, ಆ ಮುದಿ ಯರಸು, ಗಾನನರ್ತನ, ಆ ನನ್ನ ಕೆಳದಿ, 'ನನ್ನ ಜೀವದ ಕೆಳೆಯಾ!' ಎಂಬ ಕೂಗು, ಅವಳೊಡನೆ ಆಲೆದಾಟ, ಆ ಮುದ್ದು ಅಪ್ಪುಗೆ, ಪ್ರೀತಿಪ್ರಪಂಚದ ಒಂದು ರಮ್ಯ ದಿನ, ಕೆಳದಿಯ ಆ ಹಾಡಪಲ್ಲವಿ, ಎಲ್ಲವೂ ಹೃದಯವನ್ನು ಕಲುಕಿದವು. 'ಕೆಳದೀ, ನಿನ್ನ ಕೂಡಿರುವ ಕನಸು ಕಡೆಯ ವರೆಗೂ ಬರಲಿ. ಈ ಇರವು ಬೇಡ!' ಎಂದು ಗಟ್ಟಿಯಾಗಿ ಚೀರಿದೆ.



CC-0. Jangamwadi Math Collection. Digitized by eGangotri

# ಕನ್ನಡದ ಏಕೀಕರಣವೇ ನಮ್ಮ ಗುರಿ

ಲೇಖಕರು—ಶ್ರೀ ಕುರಡಿ ನಾರಾಯಣರಾಯರು, ಧಾರವಾಡ

ಹಿರಿಯರು ಹೇಳುತ್ತಿರುವಂತೆ ಭಾಷೆ ಆವೇಶದ ಶಿಶು. ಹೃದಯದ ಆವೇಶವು ಹೆಚ್ಚುಕಡಿಮೆಯಾದಂತೆ ಭಾಷೆ ಬದಲಾಗುವುದು. ಮನಸ್ಸಿನಂತೆ ಮಾತು ಎಂದರೂ ಅದೇ. "ಮನಸಾ ನಿಶ್ಚಯಂ ಕೃತ್ವಾ ತತೋ ವಾಚಾ ವಿಧೀಯತೇ" ಎಂದರೂ ಅದೇ. ಮನಸ್ಸಿನಲ್ಲಿ ಭಾವನೆ ಹುಟ್ಟಿದ ತರುವಾಯವೇ ಬಾಯಿಯಲ್ಲಿ ಮಾತು ಹೊರಡುವುದು. ಪರಿಸ್ಥಿತಿ ಬದಲಾದಂತೆ ಭಾವನೆ ಬದಲಾಗುವುದೂ ಸಹಜ. ಎಂದರೆ ಮನುಷ್ಯನು ಪರಿಸ್ಥಿತಿಯ ದಾಸನಾಗಿದ್ದುಕೊಂಡು ತನ್ನ ಪರಿಸ್ಥಿತಿಯನ್ನು ಅನುಸರಿಸಿದ ಭಾವನಾಪ್ರವಾಹಕ್ಕೆ ಅನುಗುಣವಾಗಿ ಮಾತನಾಡುವನು;ಆ ಮಾತಿನಿಂದ ಶೈಲಿಯುಂಟಾಗುವುದು; ಆ ಮಾತಿನಲ್ಲಿ ಪ್ರತಿಭೆ ಹುಟ್ಟುವುದು; ಆ ಮಾತಿನಲ್ಲಿ ಶಕ್ತಿ ತೋರುವುದು; ಆ ಮಾತಿನ ಮರ್ಮವನ್ನು ಇನ್ನೊಬ್ಬರು ಹೇಳಿ ಕಲಿಸಿ ಕೊಡಲಾರರು ಎಂದಂತಾಯಿತು. ಹೀಗೆಂದ ಬಳಿಕ ಆ ಭಾಷೆಯ ಏಕೀಕರಣ ಶುದ್ಧೀಕರಣಗಳ ರಹಸ್ಯವೇನೆಂಬ ಶಂಕೆಯುಂಟಾಗುವುದು ಸಹಜ. ತನ್ನ ಮನಸ್ಸಿನಲ್ಲುಂಟಾದ ಭಾವನಾ ವೈಚಿತ್ರ್ಯವನ್ನು ಅನ್ಯರಿಗೆ ತಿಳಿಯಪಡಿಸುವುದು ಭಾಷೆಯ ಉದ್ದೇಶವಾದುದರಿಂದ ಮನಸ್ಸಿನಲ್ಲಿದ್ದುದನ್ನು ಮಾತಿನಲ್ಲಿ ಹೇಳುವಾಗ ಕೇಳುವವನ ವಿಚಾರವನ್ನೂ ಲಕ್ಷ್ಯದಲ್ಲಿಟ್ಟುಕೊಳ್ಳಬೇಕಾಗುವುದು. ಮಾತು ಪ್ರತ್ಯಕ್ಷದಲ್ಲಿರುವಾಗ ಮಾತ್ರ ಪ್ರಯೋಜನವಾಗುವುದು. ಆಗ ಮಾತಿನೊಡನೆ ಧ್ವನಿ, ಮುಖಲಕ್ಷಣ, ಅಂಗಚಲನೆ ಮುಂತಾದುವು ಸಹಾಯವಾಗುವುದರಿಂದ ಹೇಳುವವನು ತನ್ನ ಭಾವನೆಯನ್ನು ಕೇಳುವವನಲ್ಲಿ ಹೆಚ್ಚು ಸ್ಪಷ್ಟವಾಗಿ ಉಂಟುಮಾಡಬಹುದು. ಬರೆಹವು ಮಾತಿನ ಚಿತ್ರವು. ಪ್ರತ್ಯಕ್ಷ ವಸ್ತುವನ್ನು ನೋಡಿದಾಗ ಉಂಟಾಗುವ ಭಾವನೆಯನ್ನು ಚಿತ್ರ ಮೂಲಕವಾಗಿ ಹುಟ್ಟಿಸುವುದು ಎಷ್ಟು ಕಷ್ಟಸಾಧ್ಯವೋ, ಮಾತಿನಿಂದಾಗಬೇಕಾದ ಪರಿಣಾಮವನ್ನು ಬರೆಹದಿಂದ ಮಾಡುವುದೂ ಅಷ್ಟೇ ಕಷ್ಟಸಾಧ್ಯವು. ಮಾತನಾಡುವ ಭಾಷೆಗೂ ಬರೆಹದ ಭಾಷೆಗೂ ಅಂತರವುಂಟಾಗಲು ಇದೂ ಒಂದು ಪ್ರಬಲವಾದ ಕಾರಣ.

ಇನ್ನು ನಮ್ಮ ಕನ್ನಡ ನುಡಿಯ ವಿಚಾರವನ್ನು ನೋಡುವ. ಕದಂಬ ಚಾಲುಕ್ಯಾದಿ ಕರ್ಣಾಟಕ ಚಕ್ರವರ್ತಿಗಳ ಕಾಲದಲ್ಲಿ, ಇಲ್ಲವೆ ವಿಜಯನಗರದ ರಾಜರ ಉತ್ಕರ್ಷದ ಸಮಯದಲ್ಲಿ ಇದ್ದ ಕರ್ಣಾಟಕವು ಈಗ ಉಳಿದಿಲ್ಲ. ಆಗಿನ ಕರ್ಣಾಟಕವೂ ಈಗ ಇಲ್ಲ. ಆಗಿನ ಕನ್ನಡವೂ ಈಗ ಇಲ್ಲ. ಕರ್ಣಾಟಕವು ಮುಂಬಯಿ, ಮದ್ರಾಸ, ಮೈಸೂರು, ಕೊಡಗು, ಮೊಗಲಾಯಿಗಳಲ್ಲಿಯೂ ಅನೇಕ ಚಿಕ್ಕ ಸಂಸ್ಥಾನಗಳಲ್ಲಿಯೂ ಹರಿದು ಹಂಚಿಹೋಗಿದೆ. ಕನ್ನಡದ ಹಾಡೂ ಹಾಗೇ ಆಗಿದೆ. ಮಾತನಾಡುವ ಕನ್ನಡದ ಹಾಡಿನ ಪಲ್ಲವಿಯಂತೂ ಇನ್ನಿಷ್ಟು ಕರುಣಾಜನಕವಾಗಿದೆ. ಇದಕ್ಕೆ ಪರಿಸ್ಥಿತಿಯೇ ಕಾರಣವಲ್ಲದೆ ಬೇರೊಂದಲ್ಲ. ಒಂದು ಕಾಲದಲ್ಲಿ ಉತ್ತರಕರ್ಣಾಟಕವು ಮಹಾರಾಷ್ಟ್ರರ ದಾಳಿಯಿಂದ ದಕ್ಷಿಣಮಹಾರಾಷ್ಟ್ರ [ Southern Maratha Country ] ವಾಯಿತು. ಮೈಸೂರು ಮುಸಲ್ಮಾನರ ರಾಜ್ಯವಾಯಿತು. ಮೊಗಲಾಯಿಯು ಇಂದಿಗೂ ಮುಸಲ್ಮಾನರ ಭಾಷೆಯ ಆಳುಕಿನಲ್ಲಿ ಸಿಲುಕಿ ಕೊಲೆಯಾಗುತ್ತಲೇ ಇದೆ. ಉತ್ತರಕರ್ಣಾಟಕದ ಹಲವು ಹಳ್ಳಿಗಳು ಇಪ್ಪತ್ತನೆಯ ಶತಮಾನದಲ್ಲಿಯೂ ಈ ಮಹಾರಾಷ್ಟ್ರ ಸಂಸ್ಥಾನಿಕರ ಆಧೀನದಲ್ಲಿದ್ದು ಅಚ್ಚ ಕನ್ನಡಿಗರ ಮಕ್ಕಳು ಮರಾಠಿ ಶಾಲೆಗಳಲ್ಲಿ ಓದಬೇಕಾಗಿದೆ. ಇವೆಲ್ಲರ ಮೇಲೆ ನೂರಾರು ವರ್ಷಗಳಿಂದ ಸಾಂಪ್ರತದ ರಾಜ್ಯಕರ್ತರ ಭಾಷೆಯ ಪ್ರಭುತ್ವವು ಇಡಿಯ ಕರ್ಣಾ

CC-0. Jangamwadi Math Collection. Digitized by eGangotri

ಟಕದಲ್ಲಿಯೂ ನಿರಾಪದವಾಗಿ ನಡೆದೇ ಇದೆ. ಮೈಸೂರಿನಲ್ಲಿ ಹೈದರಾಲಿ, ಟೀಪು ಸುಲ್ತಾನರ ಆಳಿಕೆಯಲ್ಲಿದ್ದ ಮಹಮ್ಮದೀಯರ ಭಾಷೆಯ ಪ್ರಾಬಲ್ಯದಿಂದ ಕನ್ನಡಕ್ಕೆ ಒದಗದ ವಿಪತ್ತಿಗಿಂತಲೂ ಹೆಚ್ಚಾಗಿ ಮೈಸೂರು ಕಮಿಶನ್ನಿನವರ ಆಳಿಕೆಯಲ್ಲಿ ಇಂಗ್ಲಿಷಿಗೆ ಉಂಟಾಗಿರುವ ಪ್ರಾಶಸ್ತ್ಯ ಗೌರವಗಳಿಂದ ಇಂದಿಗೂ ಕನ್ನಡದ ಕೊಲೆಯಾಗುತ್ತಿದೆಯೆಂದು ವಿದ್ವಾಂಸರೊಬ್ಬರು ಹೇಳಿದ್ದು ನನಗೆ ನೆನಪಿದೆ.

ಅದೂ ಅಲ್ಲದೆ ಉತ್ತರಕನ್ನಡದ ಮಲೆನಾಡಿನ ಜನರ ಜೀವನಕ್ರಮಕ್ಕೂ ವಿಜಾಪುರ ಬೆಳುವಲ ನಾಡಿನ ಜನರ ಬಾಳುವೆಗೂ ಎಷ್ಟು ಮಾತ್ರವೂ ಸಂಬಂಧವಿಲ್ಲ. ಹೀಗೆ ಪರಿಸ್ಥಿತಿಯ ಮೂಲಕವಾಗಿ ಜನರಾಡುವ ಭಾಷೆಯಲ್ಲಿ ಮಹದಂತರವುಂಟಾಗಿ ಒಂದು ಭಾಗದವರು ತಮ್ಮ ತಮ್ಮೊಳಗೆ ಮಾತನಾಡುತ್ತಿದ್ದಾಗ ಇನ್ನೊಂದು ಭಾಗದವರು ಕೇಳಿದರೆ ಅವರಿಗೆ ಅರ್ಥವಾಗದಂತಹ ಸ್ಥಿತಿಯುಂಟಾಗಿದೆ. 'ಕರ್ನಾಟಕದಲ್ಲಿ ಮನೆಗೊಂದು ಮಾತು, ಜನಕ್ಕೊಂದು ಜಾತಿ' ಎಂದು ಪರಕೀಯರೊಬ್ಬರು ಟೀಕೆಮಾಡಿ ಮಾತಾಡಿದ್ದು ನನ್ನ ಮನಸ್ಸಿನಲ್ಲಿ ಈಗಲೂ ಕಟಿಯುತ್ತಿದೆ. ಮಾದರಿಗಾಗಿ ಒಂದು ವಾಕ್ಯವನ್ನು ಹೇಳುವೆನು. "ಮಕ್ಕಿಗದ್ದೆಯಲ್ಲಿ ಹೊಳೆದಾಸಾಳದ ಹಿಂಡಿನಲ್ಲಿ ಕಂಚುಪ್ಪಡಿ ಕಚ್ಚಿತು." ಎಷ್ಟು ಜನರು ಈ ವಾಕ್ಯದ ಅರ್ಥವನ್ನು ತಿಳಿದುಕೊಂಡರೆಂದು ಹೇಳಲಿ, ನನ್ನೊಬ್ಬನ ಹೊರತು ಇನ್ನಾರಿಗೂ ಈ ಮಾತಿನ ಅರ್ಥವಾಗಿಲ್ಲವೆಂದು ಸ್ವಾಭಾವಿಕವಾಗಿಯೇ ತಿಳಿಯಬಹುದಾಗಿದೆ. "ಯೇನ್ ಸಾರ್! ಟ್ವೆಲ್ವ ಒಕ್ಲೋಕ್ ಟ್ರೆಯೆನಿನಲ್ಲಿ ಬಂದೆ. ಕುಯಿಕ್ಕಾಗಿ ಮನೆಗೆ ಬಂದು ಸೇರಿಬಿಡುವಾ ಅಂತ ಸ್ಟೇಷನ್ನಿನಲ್ಲಿ ನೋಡಿದರೆ ಒಂದೂ ಕೂಡಾ ಬಸ್ಸು ಇರಲಿಲ್ಲ. ಬಡ್ಡಿಮಗ ಝಟಕದವ್ನು ಫೋರ ಆನಾಸು ಕೊಟ್ರೂನೂ ಇಲ್ಲಿಗೆ ಬರೋಕೆ ಟೂ ಅವರ್ಸ ತಕ್ಕೊಂಡ ಕಾಣಿ ಸಾರ್." ಇದೀಗ ಮೈಸೂರಿನ ಸುಶಿಕ್ಷಿತರೆಂಬವರಾಡುವ ಮನೆಮಾತು. ವಿಜಾಪುರದವರ "ಬಾಗಿಲೆಕಸಾ ಅಂತಾನೆ, ರಾಮರಾಯರ ಮನೆಯಾಗ ಹಾರ........" ಮುಂತಾದ ಮಾತುಗಳಿಗೆ ಹೊರಗಿನವರಿಗೆ ಅರ್ಥವಾಗದೆಂದು ಹೇಳಬೇಕೆ? ಅಥಣಿಯ ಕಡೆಯವರ "ಕಾವಳಾಕೂತಾನ, ಪೌಣಿಮೂರು ರೂಪಾಯಾಕ" ಮೊದಲಾದ ಮುಕ್ಕಾಲುಮೂರುವೀಸ ಪಾಲು ಮರಾಠಿ ಮಿಶ್ರಿತ ವಾಕ್ಯಗಳನ್ನು ಅರ್ಥಮಾಡಿಕೊಳ್ಳಲು ಯಾವ ಕನ್ನಡ ಕೋಶದಲ್ಲಿ ಹುಡುಕಬೇಕಾಗುವುದೋ! ಹೀಗೆ ಮಾತಾಡುವ ಭಾಷೆಯಲ್ಲಿ ಬಹು ಅಂತರವಿದ್ದುದು ನಿಜವೇ ಆದರೂ ಅದನ್ನು ಸರಿಪಡಿಸುವುದು ಸುಲಭಸಾಧ್ಯವೂ ಅಲ್ಲ. ಅಂತಹ ಪ್ರಯತ್ನದ ಅವಶ್ಯಕತೆಯೂ ಇಲ್ಲ. ಹಿಂದೆ ಹೇಳಿದಂತೆ ಮಾತಾಡುವವನೂ ಕೇಳುವವನೂ ಸಮಕ್ಷಮವಿರುವುದರಿಂದ ಧ್ವನಿ, ಭಾವಭಂಗಿ ಮುಂತಾದುವುಗಳ ಮೂಲಕ, ಭಾಷಾಭೇದದ ಮೂಲಕ ಉಂಟಾಗಿರುವ ಕೊರತೆಯನ್ನು ಪೂರೈಸಿಕೊಂಡು, ಒಬ್ಬನು ತನ್ನ ಭಾವನೆಯನ್ನು ಇನ್ನೊಬ್ಬನಿಗೆ ತಿಳಿಯಪಡಿಸಬಹುದು. ಆದರೆ ಬರೆಹದ ಭಾಷೆಯಲ್ಲಿ ಇಂತಹ ಭೇದ ಮೂಲಕವಾಗಿ ಹುಟ್ಟುವ ಕೊರತೆಯನ್ನು ಸರಿಪಡಿಸಲು ಸಾಧ್ಯವಿಲ್ಲವಾಗಿರುವುದರಿಂದಲೂ ಬರೆಹಗಾರರು ಸುಶಿಕ್ಷಿತರಾಗಿದ್ದು ಅವರ ಭಾಷೆಯು ಸುಸಂಸ್ಕೃತವಾಗಿರುವುದು ಸಾಧ್ಯವೂ ಆವಶ್ಯಕವೂ ಆಗಿರುವುದರಿಂದಲೂ ಇಲ್ಲಿ ಆ ವಿಷಯವಾಗಿಯೇ ನಾಲ್ಕು ಮಾತುಗಳನ್ನು ಹೇಳುವೆನು.

ಮಾತನಾಡುವ ಮಾತಿನಂತೆಯೇ ಭಿನ್ನ ಭಿನ್ನ ಪ್ರಾಂತಗಳ ಬರೆಹದ ಭಾಷೆಯು ಕೂಡ ಭಿನ್ನ ಭಿನ್ನವಾಗಿರುವುದು ನಿಜವೇ ಹೇಗೆಂಬುದನ್ನು ವಿವರಿಸುವ ಆವಶ್ಯಕತೆಯೇನೂ ತೋರದು ಆದರೂ, ನನ್ನ ಸ್ನೇಹಿತರೊಬ್ಬರು ಹೇಳಿದಂತೆ "........ರಾಯರು ಕನ್ನಡನಾಡಿನ ಭಿನ್ನ ಭಿನ್ನ ಪ್ರಾಂತಗಳ ಭಾಷೆಯ ಸಮೀಕರಣ ದೃಷ್ಟಿಯಿಂದಲೇ ಲೇಖನ ಪ್ರಯತ್ನವನ್ನು ನಡೆಯಿಸುತ್ತಿರುವುದು ಸ್ತುತ್ಯವಾಗಿದೆ. ಅದಕ್ಕಾಗಿ ಅವರು ಬಹಳ ಶ್ರಮವನ್ನೂ ಪಡುತ್ತಿರುವರು. ಇದು ಅನುಕರಣೀಯವಾದ ವಿಷಯವೇ ಸರಿ.... ಭಾಷೆಯಲ್ಲಿ ಪ್ರಾಂತಭೇದವುಂಟಾಗಲು ಎರಡು ಕಾರಣಗಳಿವೆ. ಒಂದು ಆ ಆ ಪ್ರಾಂತದಲ್ಲಿ ಬೀಸಿರುವ ಅನ್ಯಭಾಷೆಗಳ ಗಾಳಿ; ಎರಡನೆಯದು ಆ ಆ ಪ್ರಾಂತಗಳ ವ್ಯಾವಹಾರಿಕ ಭಾಷೆಯ ಸಮಾವೇಶ........" ಭಿನ್ನ ಭಿನ್ನ ಪ್ರಾಂತಗಳ ಬರೆಹದ ಕನ್ನಡದಲ್ಲಿ ಹುಟ್ಟಿರುವ ಒಡಕನ್ನು ಕುಂದನ್ನೂ ಹೀಗೆ ಸಂಗ್ರಹವಾಗಿ ಹೇಳಬಹುದು. ಇದೂ ಅಲ್ಲದೆ ಮೈಸೂರು ಧಾರವಾಡ ಪ್ರಾಂತಗಳ ಶೈಲಿಯ ವಿಷಯದಲ್ಲಿಯೂ ದೊಡ್ಡದೊಂದು ಅಂತರವಿದೆ. ಧಾರ

CC-0. Jangamwadi Math Collection. Digitized by eGangotri

ವಾಡ ಪ್ರಾಂತದ ಜನರ ಜೀವನಕ್ರಮವು ಬಲು ಒರಟು. ಮೊದಲು ಅವರ ಅಂಗಿರುಮಾಲುಗಳನ್ನೂ ಅಂಚಿನ ಧೋತರ ಉಪ್ಪರಣಿಗಳನ್ನೂ ನೋಡಿರಿ. ಮೈಸೂರಿನವರ ರುಮಾಲದ ಕಟ್ಟು ಒಗೆದ ಉಪ್ಪರಣಿಯ ಮಡಿಕೆಗಳನ್ನು ನಿರೀಕ್ಷಿಸಿರಿ. ಹೀಗೆಯೇ ಉಭಯ ಪ್ರಾಂತಗಳ ಬರೆಹದ ಶೈಲಿಯಲ್ಲಿಯೂ ಭೇದವಿದೆ. ಮೈಸೂರಿನವರ ಶೈಲಿ ಮೃದುವಾದುದು. ಅವರ ಮಾತು ಮಿತ್ರನಂತೆ ಮನಸ್ಸು ಮುಟ್ಟಿ ಕಾರ್ಯಸಾಧನೆ ಮಾಡುವುದು. ನೀರು ತನ್ನಲ್ಲಿ ಬೆರೆತಿರುವ ರಾಸಾಯನಿಕ ದ್ರವ್ಯಗಳ ಸಹಾಯದಿಂದ ಒಂಡೆಗಲ್ಲನ್ನು ಸುಖವಾಗಿ ಸೀಳಿ ಒಳಸೇರುವಂತೆ ಮೈಸೂರಿನವರ ಶೈಲಿ ವಿಷಯವನ್ನು ಮನಸ್ಸಿನಲ್ಲಿ ಬಿಂಬಿಸುವಂತೆ ಮಾಡುವುದು. ಧಾರವಾಡ ಪ್ರಾಂತದ ಶೈಲಿ ಅಂತಹದಲ್ಲ. ಅದು ಬಿರುಸಾದುದು. ಪುಂಡುಗಾರನಂತೆ ಬಲಾತ್ಕಾರದಿಂದ ಕೆಲಸ ಮಾಡುವುದು. ಭಾರವಾದ ಹಾರೆ ಸುತ್ತಿಗೆಗಳು ಬಂಡೆಗಲ್ಲನ್ನು ಸೀಳಿ ಪುಡಿ ಪುಡಿ ಮಾಡುವಂತೆ ಓದುಗರ ಮನಸ್ಸನ್ನು ಚಲವಿಚಲ ಮಾಡುವಂತಹ ಶಕ್ತಿಯುಳ್ಳದು.

ನಿಜವಾಗಿ ನೋಡಿದರೆ ನಮಗೆ ಎರಡೂ ಬೇಕು. ಧಾರವಾಡ ಪ್ರಾಂತದವರ ಉಡುತೊಡುಗೆಗಳು ಅಚ್ಚುಕಟ್ಟಾಗಿರದಿದ್ದರೂ ಬೆಲೆಯಲ್ಲಿ ಮೈಸೂರಿನವರ ಬಟ್ಟೆಗಳಿಗಿಂತಲೂ ಕಡಿಮೆ ತರಹದವೆಂದು ಹೇಳಲಾಗುವುದಿಲ್ಲ. ಬಟ್ಟೆಗಳು ಬೆಲೆಯುಳ್ಳವಾಗಿದ್ದರೂ ಅಸ್ತವ್ಯಸ್ತವಾಗಿದ್ದರೆ ಅಂದಗೆಡುವಂತೆ ಬರೆಹದ ಶೈಲಿಯಲ್ಲಿ ನಯವೂ ಬೇಕು; ಬಿರುಸುತನವೂ ಬೇಕು. ಮೈಸೂರಿನವರ ನಯವೂ ಧಾರವಾಡದವರ ಬಿರುಸುತನವೂ ಕೂಡಿದ ಹೊರತು ಶೋಭೆಗುಂಟಾಗಲಾರದೆಂದು ನನ್ನ ಹೇಳಿಕೆ. ಕುಸುಮಕೋಮಲೆಯಾಗಿ ಬಾಗಿ ಬಳುಕುವ ಬಿಂದಿಗೆ ನೀರು ಎತ್ತಲಾರದ, ಅಥವ ಗಂಡುಬೀರಿಯಾಗಿ ಹೊತ್ತಿಗೆ ಹತ್ತು ರೊಟ್ಟಿಬುತ್ತಿಗಳನ್ನುಂಡು ಗಂಡುಗಚ್ಚೆ ಹಾಕಿ ಇಪ್ಪತ್ತು ಚಟ್ಟಿಯ ಚೀಲಗಳನ್ನು ಎತ್ತಿ ಒಗೆಯುವ ರಮಣಿಯು ಸರ್ವಾಂಗ ರಮಣೀಯಳೆನಿಸಲಾರಳು. ಇವರಿಬ್ಬರ ಗುಣವಿಶೇಷಗಳೂ ಸೇರಿದ್ದವಳೇ ಒಳ್ಳೆಯ ಮಾತೆಯಾಗಬಹುದು. ಅಂತಹಳಿಂದಲೇ ದೇಹದಿಂದಲೂ ಮನಸ್ಸಿನಿಂದಲೂ ಸುದೃಢವಾದ ಕನ್ನಡ ಸಂತತಿಯುತ್ಪನ್ನವಾಗಬಹುದು; ನಮ್ಮ ಮುಂದಣ ಪೀಳಿಗೆ ಸುಖಿಯಾಗಬಹುದು. ಅಂತೆಯೇ ಧಾರವಾಡ ಪ್ರಾಂತದವರ ಬಿರುಸು ಶೈಲಿಯು ಮೈಸೂರಿನವರ ನಯವನ್ನು ಸ್ವೀಕರಿಸಿ ವಿನಯಸಂಪನ್ನವಾದಾಗ ಕನ್ನಡಕ್ಕೆ ಒಳ್ಳೆಯದಾದ ಹೊಸ ಶೈಲಿಯುಂಟಾಗಬಹುದು.

ಭಿನ್ನ ಭಿನ್ನ ಪದ ಪ್ರಯೋಗಾದಿಗಳಿಂದಲೂ ಶೈಲಿಯಿಂದಲೂ ಬರೆಹದ ಭಾಷೆಯಲ್ಲಿ ಹುಟ್ಟಿದ ಒಡಕಿನಿಂದ ಭಾಷೆಗೂ ದೇಶಕ್ಕೂ ಉಂಟಾಗಿರುವ ದೈನ್ಯವನ್ನು ನಾವು ಇಲ್ಲಿ ವಿವರಿಸಬೇಕಾಗಿಲ್ಲ. ವೃತ್ತಪತ್ರಿಕೆ, ಪುಸ್ತಕ, ಪತ್ರಿಕೆಗಳ ಪ್ರಕಾಶಕರು ಈ ಮಾತಿನ ಅನುಭವವನ್ನು ಕಂಡು ಉಂಡಿರುವರು.

ಗ್ರಾಂಥಿಕ ಭಾಷೆಯ ಏಕೀಕರಣದ ವಿಷಯದಲ್ಲಿ ನನ್ನ ಸ್ನೇಹಿತರೊಬ್ಬರು ಸೂಚಿಸಿದ ಮಾರ್ಗವು ಈ ರೀತಿಯಾಗಿರುವುದು. "ವ್ಯಾವಹಾರಿಕ ಭಾಷೆಯ ಪದಗಳು ಆದಷ್ಟು ಶುದ್ಧರೂಪದಲ್ಲಿದ್ದ ಹೊರತು ಗ್ರಂಥಸ್ಥ ಭಾಷೆಯಲ್ಲಿ ಬಳಸುವುದಕ್ಕೆ ಯೋಗ್ಯವಲ್ಲವೆಂಬ ತತ್ತ್ವವನ್ನು ಒಪ್ಪಿಕೊಂಡಲ್ಲಿ ಕೇವಲ ಅನ್ಯಭಾಷಾಸಂಪರ್ಕವೊಂದೇ ಉಳಿಯುವುದು. ಒಂದೊಂದು ಪ್ರಾಂತಕ್ಕೆ ಒಂದೊಂದು ಅನ್ಯಭಾಷೆಯ ಸಂಪರ್ಕವಿರಬಹುದು........ ಸರ್ವತೋಮುಖವಾಗಿ ಅಸ್ವಯವಾಗಬಹುದಾದ ಅನ್ಯಭಾಷಾಸಂಸರ್ಗವಿಲ್ಲದೆ,ಸಮೀಪ ಪ್ರಾಂತದ ಅನ್ಯಭಾಷೆಯ ಸಂಪರ್ಕವು ಮಾತ್ರ ಇದ್ದಲ್ಲಿ,ಅದರಿಂದ ಕನ್ನಡಕ್ಕುಂಟಾಗುವ ವಿರೂಪವು ಕಡಿಮೆಯಾಗಲಾರದು."

ಇಷ್ಟರಿಂದಲೇ ಕನ್ನಡದ ಏಕೀಕರಣದ ಮಾರ್ಗವು ಸುಗಮವಾಗಿ ಬಿಟ್ಟಿತೆಂದು ನಾವು ಹೇಳಲಾರೆವು. ನಮ್ಮ ದಾರಿಯಲ್ಲಿ ಇನ್ನೂ ಅನೇಕ ಕವಲುಗಳಿದ್ದು,ಹೊಸಬರು ಹಲವು ಕಡೆಗಳಲ್ಲಿ ಅಡ್ಡದಾರಿಯಲ್ಲಿ ಸಾಗಬಹುದಾದ ಸಂಭವವಿದೆ. ನಮ್ಮ ಬೆಂಗಳೂರಿನ ಸ್ನೇಹಿತರೊಬ್ಬರು ಹೇಳುವಂತೆ "ಮೈಸೂರಿನವರು ಸಂಸ್ಕೃತ ಪದಗಳನ್ನು ಹೆಚ್ಚಾಗಿ ಉಪಯೋಗಿಸುವರೆಂದು ಧಾರವಾಡದವರೂ ಧಾರವಾಡದವರು ಹೆಚ್ಚಾಗಿ ಉಪಯೋಗಿಸುವರೆಂದು ಮೈಸೂರಿನವರೂ ಆಕ್ಷೇಪಣೆ ಮಾಡುವರು. ಇವೆರಡೂ **ನಿಜವೇ!** ನಾವು ಉಪಯೋಗ ಮಾಡುವ ಸಂಸ್ಕೃತ ಪದಗಳಲ್ಲಿ ಅನೇಕ ಪದಗಳು ನಿಮ್ಮ ಕಡೆ ಬಳಕೆಯಲ್ಲಿಲ್ಲ. ಹಾಗೆಯೇ ನಮ್ಮಲ್ಲಿಯೂ ಇರಬಹುದು. ಒಟ್ಟಿಗೆ ನೋಡಿದರೆ ಸಂಸ್ಕೃತ ಪದಗಳನ್ನು ಎಲ್ಲರೂ ಒಂದೇ ಸರಿಯಾಗಿಯೆ



CC-0. Jangamwadi Math Collection. Digitized by eGangotri

ಉಪಯೋಗಿಸುವರು.” ಈ ಮಾತನ್ನು ನಾವು ಸಪ್ರಯೋಗವಾಗಿ ಕಂಡುಕೊಂಡಿರುವೆವು. ಮೈಸೂರಿನ ಮಾನ್ಯರಾದೊಬ್ಬ ಗ್ರಂಥಕರ್ತರ ಒಂದು ಪುಸ್ತಕದ ೪ ಪುಟಗಳನ್ನೂ ಧಾರವಾಡದವರ ಒಂದು ಪುಸ್ತಕದ ೪ ಪುಟಗಳನ್ನೂ ಓದಿ ಸಂಸ್ಕೃತ ಪದಗಳನ್ನು ಗುರುತಿಸಿ ಎಣಿಸಿ ನೋಡಲು ಎರಡರಲ್ಲಿಯೂ ಬಹುಶಃ ಅಷ್ಟೇ ಸಂಸ್ಕೃತ ಪದಗಳು ಇರುವವೆಂದು ಕಂಡುಬಂದಿತು. ಆದರೆ ಆ ಆ ಸಂಸ್ಕೃತ ಪದಗಳು ಮಾತ್ರ ಬೇರೆ ಬೇರೆಯಾಗಿವೆ. ಧಾರವಾಡದವರು ಹೆಚ್ಚಾಗಿ ಉಪಯೋಗಿಸುವ ಧೂರ್ತತೆ (ಚತುರತೆ), ವದ್ಯ ( ಕೃಷ್ಣ ಪಕ್ಷ ), ಲೋಭ ( ದಯೆ ), ನಿಪುತ್ರಿಕ (ಅಪುತ್ರ), ಅಜಿಂಕ್ಯ ( ಅಜೇಯ ) ಮುಂತಾದುವು ಅಪ್ರಸಿದ್ಧಾರ್ಥಪ್ರಯೋಗಗಳೆಂದು ಮೈಸೂರಿನವರು ಹೇಳುವರು; ಹಾಗೆಯೇ ಮೈಸೂರಿನವರು ನಿತ್ಯಶಃ ಉಪಯೋಗಿಸುವ ಹಲವು ಸಂಸ್ಕೃತ ಪದಗಳು ನಮಗೆ ತೀರ ಅಪರಿಚಿತವಾಗಿವೆ. ಉದಾ:— ಆಯುಷ್ಕರ್ಮ ಶಾಲೆ. ಹೀಗೆ ತೊಂದರೆಯುಂಟಾಗುವ ಸಂದರ್ಭವಿರುವಲ್ಲಿ ಆದಷ್ಟುಮಟ್ಟಿಗೆ ಅಚ್ಚ ಕನ್ನಡ ಶಬ್ದಗಳನ್ನೇ ಉಪಯೋಗಿಸುವುದು ಯುಕ್ತವಾಗಿದೆ

ಆಧುನಿಕ ಕನ್ನಡದ ಶೈಲಿಯ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳಿದರೆ ಅದು ಇಲ್ಲಿ ಅಪ್ರಸ್ತುತವಾಗಲಾರದು. ಮೈಸೂರವರು ತಮ್ಮದು ಅಚ್ಚಗನ್ನಡ ಶೈಲಿಯೆಂದು ಹೇಳಿಕೊಳ್ಳುವುದುಂಟು. ಧಾರವಾಡದತ್ತ ಕಡೆಯವರು ‘ ಮನಃಪೂರ್ವಕವಾಗಿ ಶಪಿಸುತ್ತೇನೆ— ಚಿತ್ತೂರು ಹಾಳಾಗಿ ಹೋಗಲಿ ’ ಎಂದು ಹೇಳುವುದನ್ನು ಮೈಸೂರಿನವರು ‘ ಚಿತ್ತೂರು ಹಾಳಾಗಿ ಹೋಗಲಿ ಎಂದು ಮನಃಪೂರ್ವಕವಾಗಿ ಶಪಿಸುತ್ತೇನೆ ’ ಈ ರೀತಿಯಾಗಿ ಬರೆಯುವರು. ಮತ್ತು ಧಾರವಾಡ ಪ್ರಾಂತದವರಿಗೆ ಈ ತರಹದ ಬರೆಹವು ಮರಾಟಿಯ ಸಂಸರ್ಗದಿಂದ ಬಂದಿರುವುದೆಂದು ಹೇಳುವರು. ನಾವು ಯಾರಿಂದಲೇ ಕಲಿತುಕೊಂಡರೂ ಅದು ಒಳ್ಳೆಯದೋ ಕೆಟ್ಟದ್ದೋ ಎಂಬುದನ್ನು ಮೊದಲು ನೋಡಬೇಕು. ಒಳ್ಳೆಯದಾಗಿದ್ದರೆ ಅದನ್ನು ಇಟ್ಟುಕೊಳ್ಳಲು ಅಭ್ಯಂತರವೇನು ? ಬಾಬು ಬಂಕಿಮಚಂದ್ರರು ಬಂಗಾಳಿಯಲ್ಲಿ ಲೋಕವಿಖ್ಯಾತ ಕಾದಂಬರೀಕಾರರು. ಅವರ ನಾವೆಲುಗಳನ್ನು ಮೈಸೂರಿನ ದಿವಂಗತ ಬಿ. ವೆಂಕಟಾಚಾರ್ಯರು ಕನ್ನಡಕ್ಕೆ ಪರಿವರ್ತಿಸಿದರು. ನಮ್ಮ ಸ್ನೇಹಿತರೊಬ್ಬರು ಹೇಳುವಂತೆ ಆ ನಾವೆಲುಗಳನ್ನು ಭಾಷಾಸೌಂದರ್ಯಕ್ಕಾಗಿಯಲ್ಲದೆ ಇದ್ದರೂ ಕಥಾಸ್ವಾರಸ್ಯಕ್ಕಾಗಿ ಈ ಭಾಗದ ಕನ್ನಡಿಗರೆಲ್ಲರೂ ಓದಿದರು. ಅದರ ಪರಿಣಾಮವೇನಾಯಿತೆಂದರೆ ಮೈಸೂರ ಕಡೆಯ ಬಹುಜನ ಆಧುನಿಕ ಕತೆಗಾರರು ಆ ಶೈಲಿಯನ್ನು ಅನುಸರಿಸಲು ಹೊಂದಿರುವರು. ಕ್ರಿಯಾಪದವಿರದ ಒಂದೆರಡೇ ಶಬ್ದಗಳ (ಮಧ್ಯರಾತ್ರಿಯ ಸಮಯ, ಇತ್ಯಾದಿ.) ಸಂಸ್ಕೃತಮಯ ಚಿಕ್ಕ ವಾಕ್ಯಗಳನ್ನು ಮಾಡುವುದು, ಹತ್ತೆಂಟಕ್ಕಿಂತ ಹೆಚ್ಚು ಸಂಸ್ಕೃತ ಪದಗಳಿಗೆ ಕನ್ನಡ ವಿಭಕ್ತಿಗಳನ್ನು ಸೇರಿಸಿ ಕೊನೆಗೊಂದು ಕನ್ನಡ ಕ್ರಿಯಾಪದವನ್ನಿಟ್ಟು ವಾಕ್ಯರಚನೆ ಮಾಡುವುದು ಮುಂತಾದುದನ್ನು ಅನೇಕ ಆಧುನಿಕ ಗ್ರಂಥಗಳಲ್ಲಿ ಕಾಣಬಹುದು. ಹಾಗೆಯೇ ಹಲವು ಮಾತುಗಳು ಮರಾಟಿಯ ಸಂಸರ್ಗದಿಂದ ಉತ್ತರ ಕರ್ನಾಟಕದವರ ಶೈಲಿಯಲ್ಲಿ ಸೇರಿಹೋಗಿವೆ. ನಾವು ಮೇಲೆ ಮಾದರಿಗಾಗಿ ಎತ್ತಿ ತೋರಿಸಿದ ವಾಕ್ಯರಚನೆಯು ಬಂಗಾಳಿಯಲ್ಲಿಯೂ ಇರುವುದು. ಬಂಗಾಳಿಗಳ ಶೈಲಿಯು ೧೫೦ ವರ್ಷಗಳಿಂದೀಚೆಗೆ ಇಂಗ್ಲಿಷಿನವರ ಸಂಸರ್ಗದಿಂದ ಸಂಪೂರ್ಣ ಬದಲಾಯಿತೆಂದೂ, ಆಚಾರ್ಯ ಬಂಕಿಮಚಂದ್ರರು ಜಾನ್ಸನ್ ಸಾಹೇಬರ ಶೈಲಿಯನ್ನು ಅನುಸರಿಸಿರುವರೆಂದೂ ಹೇಳುವುದೂ ಉಂಟು. ಏನಿದ್ದರೂ ಅನ್ಯರಿಂದ ನಾವು ಕಲಿತುದು ಪ್ರಯೋಜನಕಾರಿಯೆಂದು ಕಂಡುಬಂದರೆ ಅದನ್ನೂ ನಾವು ಇಟ್ಟುಕೊಳ್ಳಲು ಅಭ್ಯಂತರವೇನು ? ನಾವು ಪ್ರಾರಂಭದಲ್ಲಿ ಎತ್ತಿ ಬರೆದ ವಾಕ್ಯದಲ್ಲಿ ಧಾರವಾಡದವರ ಕ್ರಮವು ಹೆಚ್ಚು ಪರಿಣಾಮಕಾರಿಯಾದುದೋ ಮೈಸೂರಿನವರ ಕ್ರಮವು ಒಳ್ಳೆಯದೋ ಎಂಬುದನ್ನು ವಾಚಕರು ವಿಚಾರಿಸಿ ನೋಡಲಿ.

ವಿಷಯವಿವರಣೆ ಬೆಳೆಯಿತು. ಸ್ಥಳಾಭಾವದ ಮೂಲಕ ಇಲ್ಲಿ ಕೆಲವು ಸೂತ್ರವಾಕ್ಯಗಳನ್ನು ಹೇಳಿ ವಿರಮಿಸುವೆನು.

೧ ಅನಿವಾರ್ಯ ಸಂದರ್ಭಗಳಲ್ಲಿ ಹೊರತು ಪರಭಾಷಾಪದಗಳನ್ನೂ ವ್ಯಾಕರಣವಿರುದ್ಧ ಪ್ರಯೋಗಗಳನ್ನೂ ವಾಗ್ವ್ಯವಹಾರದಲ್ಲಿದ್ದರೂ ಗ್ರಂಥಗಳಲ್ಲಿ ಉಪಯೋಗಿಸಕೂಡದು.

CC-0. Jangamwadi Math Collection. Digitized by eGangotri

೨ ಶಾಸ್ತ್ರವಿಷಯಗಳಲ್ಲಿಯ ಪಾರಿಭಾಷಿಕ ಪದಗಳ ಪಟ್ಟಿಯೊಂದನ್ನು ಸಿದ್ಧಪಡಿಸಿಕೊಂಡು ಅದನ್ನೇ ಎಲ್ಲರೂ ಉಪಯೋಗಿಸುವುದು. ಮೈಸೂರು ಸರಕಾರದವರು ಈ ಕಾರ್ಯವನ್ನು ಕೈಕೊಂಡಂತೆ ತೋರುವುದು.

೩ ಇಂಗ್ಲಿಷು ಮುಂತಾದ ಪರಭಾಷೆಯ ಹೆಸರುಗಳನ್ನು ಇದೇ ಕ್ರಮದಲ್ಲಿಯೇ ಉಚ್ಚರಿಸಬೇಕೆಂದು ಎಲ್ಲ ಪ್ರಾಂತಗಳವರೂ ಕೂಡಿ ಗೊತ್ತುಪಡಿಸಿಕೊಳ್ಳಬೇಕು. ದೇಶೀಯ ಹೆಸರುಗಳನ್ನೂ ಇಂಗ್ಲಿಷಿನ ಸಂಸರ್ಗದಿಂದ ನಮ್ಮವರು ಇಂಗ್ಲಿಷಿನವರಂತೆಯೇ ಉಚ್ಚರಿಸಬೇಕೆಂದು ಹೇಳುತ್ತಿದ್ದಾರೆ.

ವ್ಯಂಜನಾಂತವಾದವುಗಳಿಗೆ ನಮ್ಮವರು ಅಕಾರವನ್ನೂ ಮೈಸೂರಿನವರು ಉಕಾರವನ್ನೂ ಸೇರಿಸಿ ಪ್ರಯೋಗಿಸುವರು. ಇಂಗ್ಲಿಷು ಉಚ್ಚರಿಸುವಂತೆಯೇ ಕನ್ನಡದಲ್ಲಿಯೂ ಉಚ್ಚರಿಸಬೇಕೆಂದು ಅವರ ಹೇಳಿಕೆಯಿದ್ದರೆ ಅವನ್ನು ಮೃದುವಾಗಿ ಉಚ್ಚಾರ ಸುಲಭವಾಗಿ ಮಾರ್ಪಡಿಸಿಕೊಳ್ಳಬೇಕೆಂದು ನಮ್ಮವರ ಹೇಳಿಕೆ. ಸಾಹಿತ್ಯ ಪರಿಷತ್ತು, ಕ. ವಿ. ವ. ಸಂಘಗಳಂತಹ ಸಭೆಸಮಿತಿಗಳವರು ಈ ವಿಷಯವನ್ನು ಚರ್ಚಿಸಿ ನಿರ್ಣಯಿಸಿಕೊಡಬೇಕು.

೪ ಪುಸ್ತಕದ ಸಂಸ್ಕೃತವನ್ನು ಬಿಟ್ಟುಬಿಡಬೇಕು.

೫ ಒಂದು ಪ್ರಾಂತದವರ ಪುಸ್ತಕಗಳನ್ನೂ ಪತ್ರಿಕೆಗಳನ್ನೂ ಇನ್ನೊಂದು ಪ್ರಾಂತದವರು ಆದರದಿಂದ ಓದಬೇಕು. ಶಾಲೆ ಕಾಲೇಜುಗಳ ವಿದ್ಯಾರ್ಥಿಗಳ ಪಾಠಕ್ಕಾಗಿ ಅನ್ಯಪ್ರಾಂತದವರ ಪುಸ್ತಕಗಳನ್ನು ಆರಿಸಬೇಕು. ಇಂತಹ ಸಂದರ್ಭಗಳಲ್ಲಿ ಆ ಪುಸ್ತಕಗಳನ್ನು ಅನ್ಯ ಪ್ರಾಂತದ ಒಬ್ಬಿಬ್ಬರು ತಜ್ಞರ ನೆರವಿನಿಂದ ಪರಿಷ್ಕರಿಸಿ ಮುದ್ರಿಸುವುದು ಆವಶ್ಯಕವೆನಿಸುವುದು.

ಈ ಸಮಯದಲ್ಲಿ ನಾನೊಂದು ಹೆಚ್ಚಿನ ಮಾತನ್ನು ಹೇಳದಿರಲಾರೆನು. ಧಾರವಾಡದ ಕೆಲವರು ಮೈಸೂರ ಭಾಷೆಗೆ ಮನಸೋತಂತೆ ತೋರುತ್ತಿದೆ. ಅವರು ಮೈಸೂರಿನವರ ಅನುಕರಣ ಮಾಡಹೊರಟು ಕೊಂಚ ಶಾಣೆ ತಾನೆ ಸಲ ಶ್ರೀಮಾನ್ ಮುಂತಾದ ಕೆಲಕೆಲವು ಪದಗಳನ್ನು ಕಂಡ ಕಂಡಲ್ಲಿ ಮನಸ್ಸಿಗೆ ಬಂದ ಹಾಗೆ ಉಪಯೋಗಿಸಿ ತಮ್ಮ ಬರೆಹವು ಮೈಸೂರಿನವರದಂತಾಯಿತೆಂದು ಹೇಳಿಕೊಳ್ಳಲು ಸಾಹಸ ಪಡುತ್ತಿದ್ದಾರೆ. ಇದರಿಂದ ಧಾರವಾಡದವರು ಮೈಸೂರಿನವರ ರುಮಾಲದ ಕಟ್ಟನ್ನು ಅನುಕರಣೆ ಮಾಡ ಹೊರಟಂತಾಗುವುದು. ನಮ್ಮದನ್ನು ಸುಧಾರಿಸಿಕೊಳ್ಳುವುದೆಂದರೆ ಹಿಂದೆ ಹೇಳಿದಂತೆ ನಮ್ಮದನ್ನಿಟ್ಟುಕೊಂಡು ಆವಶ್ಯಕವಿದ್ದಷ್ಟೇ ಅಂಶವನ್ನು ಅನ್ಯರಿಂದ ಸ್ವೀಕರಿಸಬೇಕೆಂದು ಅರ್ಥವಲ್ಲದೆ ನಮ್ಮದನ್ನೆಲ್ಲ ಕಳೆದುಕೊಂಡು ಅನ್ಯರದಕ್ಕೆ ಕೈಯೊಡ್ಡಬೇಕೆಂದು ಮಾತ್ರ ಅಭಿಪ್ರಾಯವಲ್ಲ. ವಿಜಾಪುರದವನಿಗೆ ಮೈಸೂರ ರಾಗಿಯಮುದ್ದೆಯನ್ನು, ಇಲ್ಲವೆ ಮೈಸೂರವನಿಗೆ ನುಚ್ಚು ಮಜ್ಜಿಗೆಗಳನ್ನು ಉಣ್ಣಿಸಿ ಸುದೃಢವಾಗಿ ಮಾಡಬೇಕೆಂದರೆ ಅದು ಆಗದ ಮಾತು; ನೀಗದ ಕೆಲಸ. ಮೈಸೂರಿನವರ ಪ್ರೀತಿಗಾಗಿ ಧಾರವಾಡದವರು ಕೊಂಚ (ಸ್ವಲ್ಪ), ಇದೆ (ಆದೆ), ಮಾಡುವುದು (ಮಾಡುವದು), ಸಂದರ್ಭ (ಪ್ರಸಂಗ)ಮುಂತಾದ ಕೆಲ ಕೆಲವು ರೂಪಗಳನ್ನು ಸೇರಿಸಿ ಬರೆಯ ತೊಡಗಿದ್ದಾರೆ. ಹಾಗೆ ಮಾಡಬಾರದೆಂದು ನಾನು ಹೇಳಲಾರೆನಾದರೂ ಅವನ್ನು ಮನಸ್ಸಿಗೆ ತೋರಿದಂತೆ ಉಪಯೋಗಿಸಿ ಅಪಾರ್ಥವುಂಟಾಗುವ ಸಂದರ್ಭಗಳನ್ನು ತಂದುಕೊಳ್ಳಲಾಗದೆಂದು ನನ್ನ ಎಚ್ಚರಿಕೆ.

ಭಗವಂತನ ಕರುಣೆಯಿಂದ ಅಖಿಲಕರ್ಣಾಟಕವೂ ಒಂದಾಗಿ, ಅಖಿಲ ಕರ್ಣಾಟಕಕ್ಕೂ ಒಂದೇ ವಿಶ್ವವಿದ್ಯಾನಿಲಯದ ಸ್ಥಾಪನೆಯಾಗಿ ಕನ್ನಡನಾಡೆಲ್ಲ ಒಂದಾಗುವ ಸುಯೋಗವು ಬಂದಾಗ ಕನ್ನಡದ ಏಕೀಕರಣದ ಮಾತು ತಾಯಿಯೊಡನೆ ಕರುವು ಬರುವಂತೆ ತಾನಾಗಿ ಸಾಧ್ಯವಾಗಿ ಬಿಡುವುದು. ಅಂದಿನ ವರೆಗೂ ಕನ್ನಡಿಗರು ಅಭಿಮಾನದಿಂದ ಪ್ರಯತ್ನಪಟ್ಟು ಕನ್ನಡನುಡಿಯ ಉದ್ಧಾರ ಮಾಡುವರೆಂದು ಕೋರುವೆನು. ಭಗವತಿ ಕರ್ನಾಟಕಾಂಬೆಯು ವರಪ್ರಸಾದದಿಂದ ಅಖಿಲ ಕರ್ಣಾಟಕಕ್ಕೂ ಒಂದೇ ಒಂದು ಬರೆಹದ ಭಾಷೆಯಾಗಿ ಕನ್ನಡ ವಾಙ್ಮಯದ ಅಭಿವೃದ್ಧಿಯಾಗಲಿ, ಕನ್ನಡ ಜನತೆಯು ತೇಜಸ್ವಿಯಾಗಲಿ ಎಂದು ಪ್ರಾರ್ಥಿಸುವೆನು.

CC-0. Jangamwadi Math Collection. Digitized by eGangotri

# ನನ್ನ ನೇಪಾಳಯಾತ್ರೆ

ಲೇಖಕರು:—ಶ್ರೀ. ಭಾರತಸಂಚಾರಿ ಶ್ರೀ. ಕೃ. ನಾ. ಗೋಸಾವಿ

ಹಿಮಾಲಯದಲ್ಲಿ ಉನ್ನತವಾದ ಗಿರಿಶಿಖರಗಳಿಂದ ಸುತ್ತಲ್ಪಟ್ಟ ನೇಪಾಳವು ಹಿಂದುಸ್ಥಾನದ ಸ್ವತಂತ್ರ ಸಂಸ್ಥಾನವೆಂದು ಎಲ್ಲರಿಗೂ ಗೊತ್ತು. ಆದರೆ ಅದು ಯಾವ ಪ್ರಕಾರದ ಸ್ವಾತಂತ್ರ್ಯವನ್ನು ಪಭೋಗಿಸುವದೆಂಬದನ್ನು ತಿಳಿದುಕೊಳ್ಳುವ ಕುತೂಹಲದಿಂದ ನಾನು ಅನೇಕ ವರ್ಷಗಳಿಂದಲೂ ಅದನ್ನು ಸಂದರ್ಶಿಸಲುತ್ಸುಕನಾಗಿದ್ದೆನು. ಕಡೆಗೆ ಈ ವರ್ಷ ನನ್ನ ವಿಚಾರವು ತಕ್ಕಮಟ್ಟಿಗೆ ಪೂರ್ಣವಾದಂತಾಯಿತು. ಶಿವರಾತ್ರಿಯ ಸುಮುಹೂರ್ತದಲ್ಲಿ ಶ್ರೀಪಶುಪತಿನಾಥನ ದರ್ಶನಾರ್ಥವಾಗಿ ನೇಪಾಳ ಸರಕಾರದವರು ಹಿಂದುಸ್ಥಾನದ ಯಾವತ್ತೂ ಜನರಿಗೆ ತಮ್ಮ ರಾಜ್ಯದಲ್ಲಿ ಪ್ರವೇಶಿಸಲಿಕ್ಕೂ ಮತ್ತು ೧೫ ದಿವಸಗಳವರೆಗೆ ಅಲ್ಲಿರಲಿಕ್ಕೂ ಅಪ್ಪಣೆ ಕೊಡುತ್ತಾರೆ. ಇತರ ವೇಳೆಯಲ್ಲಿ ಯಾರನ್ನೂ ತಮ್ಮ ರಾಜ್ಯದಲ್ಲಿ ಸೇರಗೊಡುವದಿಲ್ಲ (ತಮಗೆ ಬೇಡವಾದವರನ್ನು). ಈ ಸಂಗತಿಯು ನನಗೆ ಗೊತ್ತಾದ್ದುದರಿಂದಲೇ ಶಿವರಾತ್ರಿಯ ವೇಳೆಗೇ ಹೋಗಬೇಕಾಯಿತು. ಆದರಂತೆ ಅಲ್ಲಿ ಹೆಚ್ಚು ದಿವಸವಿರಲು ಅಪ್ಪಣೆ ದೊರೆಯುವುದೂ ಅಶಕ್ಯವೆಂದು ಕಂಡದ್ದರಿಂದ, ಅವಶ್ಯ ಕಂಡ ಕೆಲವು ಸಂಗತಿಗಳನ್ನು ತಿಳಿದುಕೊಂಡದ್ದಲ್ಲದೆ ಮುಖ್ಯವಾದ ಕೆಲವು ಸ್ಥಳಗಳನ್ನೂ ನೋಡಿಕೊಂಡು ಅವರ ಮುದ್ದತಿನೊಳಗಾಗಿಯೆ ಹಿಂದಿರುಗಬೇಕಾಯಿತು. ಅದರ ವರ್ಣನೆಯನ್ನೆ ನನ್ನ ಕರ್ನಾಟಕ ಬಂಧುಗಳಿಗಾಗಿ ಇಲ್ಲಿ ಬರೆದಿರುವೆನು.

ಹುಬ್ಬಳ್ಳಿಯಿಂದ ಹೈದ್ರಾಬಾದ, ಕಾಝಿಪೇಟ, ಬಲಾರಶಾ, ವರ್ಧಾ, ನಾಗಪೂರ, ಜಬಲಪೂರ, ಅಲ್ಹಾಬಾದ, ಕಾಶಿ, ಗೋರಖಪೂರ, ಸೋನಪೂರ, ಮುಝಫರಪೂರ ಸಗೌಲಿ, ರಕ್ಸೂಲ, ಬೀರಗಂಜ ಇವುಗಳಮೇಲಿಂದ ಅಮುಲೇಖಗಂಜದವರೆಗೆ ರೇಲ್ವೆಯಿಂದಲೂ ಮುಂದೆ ಭೀಮಫರಿಯತನಕ ಮೋಟಾರಿನಿಂದಲೂ ಹೋಗಿ, ಆಮೇಲೆ ಕಾಲುನಡಿಗೆಯಿಂದ ಉನ್ನತ ಗಿರಿಶಿಖರಗಳನ್ನೇರಿ ಕಾಟಮಾಂಡೂಕ್ಕೆ ತಲ್ಪಬೇಕಾಗುವದೆಂಬುದನ್ನು ಮೊದಲೇ ತಿಳಕೊಂಡಿದ್ದೆನು. ಅದರಂತೆ ಗುಂತಕಲ್ಲಮಾರ್ಗವಾಗಿ ನಿಜಾಮನ ರಾಜಧಾನಿಯಾದ ಹೈದ್ರಾಬಾದಿಗೆ ತಲ್ಪಿದೆನು. (ರೇಲ್ವೆ ಚಾರ್ಜ ೬-೬-೦.) ಈ ಪಟ್ಟಣವು ಹಿಂದುಸ್ಥಾನದೊಳಗಿನ ನಾಲ್ಕನೆಯ ಪಟ್ಟಣವಾಗಿದ್ದು ೧೨ ಮೈಲು ಉದ್ದವಾಗಿಯೂ ೩ ಮೈಲು ಅಗಲವಾಗಿಯೂ ಹಬ್ಬಿದೆ. ಇಲ್ಲಿ ೧೦೦ಕ್ಕೆ ೮೫ರಷ್ಟು ಹಿಂದೂಜನರಿದ್ದು ಅವರಮೇಲೆ ಯಾವ ಪ್ರಕಾರದ ಅನ್ಯಾಯಗಳಾಗುತ್ತವೆಂಬದನ್ನು ಎಲ್ಲರೂ ಬಲ್ಲರು. ಹಿಂದುಗಳನೇಕರು ತುರ್ಕಿಟೊಪ್ಪಿಗೆ ಹಾಕಿ, ಮುಸಲ್ಮಾನರಂತೆ ವರ್ತಿಸುವದನ್ನು ನೋಡಿ ವ್ಯಸನವಾಯಿತು. ಈ ಗುಲಾಮಗಿರಿಯಿಂದ ದೂರವಾಗಬೇಕೆಂದು ಅವರಿಗೆನಿಸಿದಾಗಲ್ಲವೆ ಇವೆಲ್ಲ ವಿಚಾರ? ಇರಲಿ. ಆಬಗ್ಗೆ ಮತ್ತೆಯಾವಾಗಾದರೂ ಬರೆಯುವೆನು.

ನಾನು ಎರಡು ದಿವಸ ಹೈದ್ರಾಬಾದಿನಲ್ಲಿದ್ದು ಕೆಲವು ಮುಖ್ಯ ಸ್ಥಳಗಳನ್ನೂ ಪರಿಸ್ಥಿತಿಯನ್ನೂ ನೋಡಿಕೊಂಡು ಸಿಕಂದರಾಬಾದಿಗೆ ಹೋಗಿ ಅಲ್ಹಾಬಾದಿಗೆ ಟಿಕೀಟ ತೆಗೆದೆನು. ಕಾಝಿಪೆಟ್ ಬಲಾರಶಾದವರೆಗೆ ಪ್ಯಾಸೆಂಜರಗಾಡಿಯಿಂದಲೂ ಮುಂದೆ ಗ್ರ್ಯಾಂಡ್‌ಟ್ರಕ್ ಎಕ್ಸಪ್ರೆಸ್ಸಿನಿಂದ ವರ್ಧಾ, ನಾಗಪೂರಗಳ ಮೇಲಿಂದ ಇಟಾರಸಿಗೂ ಮುಟ್ಟಿದೆನು. ಆಮೇಲೆ ಮುಂಬಯಿ ಅಲ್ಹಾಬಾದ ಎಕ್ಸಪ್ರೆಸ್ಸಿನಿಂದ ಹೊರಟು ಜಬಲ್‌ಪೂರ ನೈನೀಮಾರ್ಗವಾಗಿ ಅಲ್ಹಾಬಾದಿಗೆ ಬಂದೆನು. ಅಲ್ಲಿ ಒಂದು ಹಗಲಿದ್ದು ಬಿ. ಎನ್.

CC-0. Jangamwadi Math Collection. Digitized by eGangotri



**ಶ್ರೀ ಬುದ್ಧನಾಥ**

(ಒಂದು ಬೌದ್ಧ ದೇವಾಲಯ)

ಇದು ಕಾಟ್ಮಂಡುವಿನ ಪೂರ್ವಕ್ಕೆ ೩ತ್ತಿ ಮೈಲಿನಂತರದಲ್ಲಿ ಇದೆ. ಗುಡಿಯ ಮೇಲಣ ವಿಶಾಲವಾದ ಗುಮ್ಮಟವನ್ನೂ ಆದರ ಮೇಲಣ ಗೋಪುರದ ಕೆಳಭಾಗದಲ್ಲಿ ಕಣ್ಣುಗಳ ಆಕೃತಿಯನ್ನೂ ನಿಟ್ಟಿಸಿ ನೋಡಿರಿ

CC-0. Jangamwadi Math Collection. Digitized by eGangotri



**ಪಾಟಣದ ಒಂದು ದೇವಾಲಯ**

(ಕೆಳಗಡೆಯ ಚಿತ್ರವಿಚಿತ್ರವಾದ ಮೂರ್ತಿಗಳನ್ನೂ ಒಂದರ ಮೇಲೊಂದಿರುವ ಇಳಿಚಪ್ಪರ (ಲೋವೆ) ಗಳನ್ನೂ ಶಿಖರದಿಂದ ಇಳಿಬಿದ್ದ ಚಿತ್ರಪಟ್ಟಿಕೆಯನ್ನೂ ನೋಡುವಂತಿದೆ. ಮಾದರಿಯ ದೇವಾಲಯವಿದು.)



**ಜೋಬಾರ ಸೇತುವೆ**

CC-0. Jangamwadi Math Collection. Digitized by eGangotri

ಪಟ್ಟಲಿ: ರೇಲ್ವೆಯಿಂದ ಕಾಶಿ, ಗೋರಖಪೂರ, ಸೋನಪೂರ, ಮುಜಫರಪೂರ, ಸಗೌಲಿಗಳಲ್ಲಿ ಗಾಡಿಗಳನ್ನು ಬದಲಾಯಿಸುತ್ತ ನೇಪಾಳಸರಹದ್ದಿನ ಕಡೆಯ ಸ್ಟೇಶನ್ನಾದ ರಕ್ಸೂಲಿಗೆ ಮುಟ್ಟಬೇಕಾದರೆ ನಾಲ್ಕುದಿವಸಗಳು ಬೇಕಾದವು. (ಹೈದ್ರಾಬಾದಿನಿಂದ) ಈ ಮಾರ್ಗದಲ್ಲಿ ಬೆಳಗಾಂವ ಜಿಲ್ಹೆಯ ಕೆಲವು ಯಾತ್ರಿಕರು ಭೆಟ್ಟಿಯಾದ್ದರಿಂದ ಮುಂದಿನ ಕಠಿನಯಾತ್ರೆಯಲ್ಲಿ ಪರಸ್ಪರ ಸಹಾಯವಾಗಿ ಮಾರ್ಗವು ಸುಗಮವಾಯಿತು.

ನೇಪಾಳವನ್ನು ಪ್ರವೇಶಿಸಬೇಕಾದರೆ ಇದೊಂದೇ ಮುಖ್ಯ ಮಾರ್ಗವಾಗಿದ್ದು ರಕ್ಸೂಲಿನಲ್ಲಿ ನೇಪಾಳ ಸರಕಾರದ ರೇಲ್ವೆ ಸ್ಟೇಶನ್ನು ಒಂದಿದೆ. ಅಲ್ಲಿ ಟಿಕೀಟು ತಕ್ಕೊಳ್ಳುವಾಗಲೇ ಅದರ ಸಂಗಡ "ಶಿವರಾತ್ರಿಯ ಸಲುವಾಗಿ" ಎಂದು ಬರೆದ (ಕಾಗದದ) ಪಾಸಪೋರ್ಟನ್ನು ಕೊಡುತ್ತಾರೆ. ಇದನ್ನು ಯಾರೂ ಕಳೆಯಕೂಡದು. ಸ್ವತಂತ್ರ ರಾಜ್ಯದ ರೇಲ್ವೆಯಿಂದ **ಬೀಗಂಜ, ಸಿಮರಾ** ಮೊದಲಾದ ಕೆಲವು ಊರುಗಳನ್ನೂ ದಟ್ಟಡವಿಯನ್ನೂ ದಾಟಿ **ಅಮಲೇಖಗಂಜಿಗೆ** ಮುಟ್ಟಿದೆವು. ಇಲ್ಲಿ ಸಂಜೆಯವರೆಗೆ ಸ್ನಾನ ಭೋಜನ ಮೊದಲಾದುವನ್ನು ಮುಗಿಸಿಕೊಂಡು ಪುನಃ ಮೋಟಾರಿನಿಂದ ೨೫ ಮೈಲು ಕ್ರಮಿಸಿ **ಭೀಮಫೇರಿಗೆ** ಬಂದೆವು. ಇಲ್ಲಿಂದಲೇ ಕಠಿಣವಾದ **ಶೀಶಾಗಡಿಯ** ಏರಿಯು ಮೊದಲಾಗುತ್ತದೆ. ಇಲ್ಲಿಂದಲೇ ಜನರನ್ನೂ ಸಾಮಾನುಗಳನ್ನೂ ಹೊತ್ತೊಯ್ಯಲು ಕೆಲವು ಕೂಲಿಯವರನ್ನು ಗೊತ್ತುಮಾಡಿ ಮುಂದೆ ಸಾಗಿದೆವು. ಈ ಮಾರ್ಗವು ಒಂದೇಸವನೆ ೨೫ ಮೈಲು ಏರಿಳಿವುಗಳಿಂದ ಕೂಡಿದ್ದು ಕಾಟಮಾಂಡೂಕ್ಕೆ ತಲ್ಪಲು ನಮಗೆ ಮೂರು ದಿವಸಗಳು ಬೇಕಾದವು. ನೇಪಾಳ ಸರಕಾರದವರು **ಥೋರಸಿಂಗವೆಂಬ** ಸ್ಥಾನದಿಂದ ರಾಜಧಾನಿಯ ವರೆಗೂ ಪರ್ವತಗಳಮೇಲೆ, ಕಬ್ಬಿಣ ಕಂಬಗಳ ಆಧಾರದ ಮೇಲೆ ನಡೆಯುವಂಥ **"ರೋಪ ಲಾಯಿನ್"** (ಹಗ್ಗದ ಮಾರ್ಗ) ಒಂದನ್ನು ನಿರ್ಮಿಸಿದ್ದು, ಅದರ ಮುಖಾಂತರ ಎಲ್ಲ ಸಾಮಾನುಗಳನ್ನೂ ಕಾಟಮಾಂಡೂಕ್ಕೆ ಮುಟ್ಟಿಸುತ್ತಾರೆ. ಆಕಾಶದಲ್ಲಿ ಒಂದು ಶಿಖರದಿಂದ ಮತ್ತೊಂದು ಶಿಖರಕ್ಕೆ ಸಾಮಾನುಗಳ ತೊಟ್ಟಿಲುಗಳು ಹೋಗುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ. (ಮಣಕ್ಕೆ ಎರಡು ರೂಪಾಯಿ ಬಾಡಿಗೆ ಬೀಳುತ್ತದೆ.)

ಆದರೆ ಈ ಮಾರ್ಗವು ವ್ಯಾಪಾರಸ್ಥರಿಗೆ ಹೆಚ್ಚು ಉಪಯೋಗವೇ ಹೊರತು ಯಾತ್ರಿಕರಿಗಲ್ಲ. ನಾವಿಳಿದಲ್ಲಿ ಎಲ್ಲಕಡೆಗೂ ನಮ್ಮ ಸಾಮಾನುಗಳು ಸಂಗಡ ಬೇಕಾಗುತ್ತಿದ್ದು, ಮೂರು ರೂಪಾಯಿಗೊಬ್ಬರಂತೆ ಕೂಲಿಯನ್ನೇ ಒಯ್ಯುವದುತ್ತಮ. ಇಲ್ಲಿಯ ಸರಕಾರದಿಂದ **ದಾಂಡಿ, ಕಾಂಡಿ, ಝಂಪಾನ** ಮೊದಲಾದ ಹೊತ್ತೊಯ್ಯುವ ವಾಹನಗಳ ಕೂಲಿಯು ಗೊತ್ತುಮಾಡಲ್ಪಟ್ಟಿದ್ದರಿಂದ, ಯಾತ್ರಿಕರಿಗೆ ವಿಶೇಷ ತೊಂದರೆಯಾಗುವುದಿಲ್ಲ. ನಮ್ಮ ರೂಪಾಯಿಗೆ 'ಕುಂಪಣಿ' ಅನ್ನುತ್ತಾರೆ. ನೇಪಾಳದಲ್ಲಿ ಸ್ವತಂತ್ರನಾಣ್ಯಗಳಿದ್ದರೂ ನಮ್ಮ ಕಡೆಯವೂ ಯಾತ್ರೆಯ ವೇಳೆಯಲ್ಲಿ ನಡೆಯುತ್ತವೆ. ಆದರೆ ಅವರ ನಾಣ್ಯವನ್ನು ತಕ್ಕೊಳ್ಳುವಾಗ ಅದರ ಬಗ್ಗೆ ಪೂರ್ಣ ಸಂಗತಿಯನ್ನು ಗೊತ್ತುಮಾಡಿಕೊಳ್ಳಬೇಕು. ಆನೆದುಡ್ಡುಗಳೂ ಇಲ್ಲಿ ನಡೆಯುವವು.ಆಣೆಗೆಂಟು ದೀಡಪೈ,ನಾಲ್ಕುಆನೆದುಡ್ಡು; ರೂಪಾಯಿಗೆ ನಾಲ್ಕು ನೇಪಾಳಿ ಪಾವಲಿಗಳು ದೊರೆಯುತ್ತವೆ. ಅಲ್ಲಿಯವರು ನಮ್ಮ ನಾಣ್ಯಗಳನ್ನೇಹೆಚ್ಚಾಗಿ ಬೇಡುತ್ತಾರೆ. ಇದೆಲ್ಲ ಸಂಗತಿಯನ್ನರಿತುಕೊಂಡು, **ಶೀಶಾಗಡಿಯನ್ನೇ**ರುತ್ತ ಶಿಖರದಲ್ಲಿರುವ **ಚೀಶಾಪಾನಿಘಡಿಗೆ** ಮುಟ್ಟಬೇಕಾದರೆ, ೫ ತಾಸು ಬೇಕಾದವು. ಇಲ್ಲಿ ಕೆಲವು ಧರ್ಮಶಾಲೆ ಅಂಗಡಿಗಳೂ ಉತ್ತಮ ನೀರಿನ ವ್ಯವಸ್ಥೆಯೂ ಇದ್ದು ಸಾಮಾನುಗಳನ್ನು ತಪಾಸ ಮಾಡುವ 'ಕಸ್ಟಮ್ ಹೌಸೂ' ಇದೆ. ಅಲ್ಲಿ ನಮ್ಮ ಪಾಸಪೋರ್ಟುಗಳನ್ನೂ ಸಾಮಾನುಗಳನ್ನೂ ತಪಾಸು ಮಾಡಿದ ಮೇಲೆ ಮುಂದೆ ಸಾಗಿದೆವು. ಈ ಶಿಖರದಲ್ಲಿ ನಿಂತು ಹಿಮಶಿಖರಗಳನ್ನು ನೋಡುತ್ತಾ ನನ್ನ ಮನಸ್ಸು ಶಾಂತಿಸಾಗರದಲ್ಲಿ ಮುಳುಗಿ ಹೋಯಿತು. ಮುಂದೆ ಅಷ್ಟೇ ಮಾರ್ಗವನ್ನು ಇಳಿದು ನದಿಯ ದಂಡೆಗಿರುವ **ಕೂಲೀಖಾನಾ** ಎಂಬಲ್ಲಿ ಧರ್ಮಶಾಲೆಯೊಳಗೆ ಆಸನಹಾಕಿದೆವು. ರಾತ್ರಿಯನ್ನು ಅಲ್ಲೇ ಕಳೆದು ಮರುದಿವಸ ದ್ವಾದಶಿಯ ಊಟ ಮುಗಿಸಿಕೊಂಡು, **ಮಾಖರ್ಾದ** ಪೂಲುಗಳನ್ನೂ, **ಏಕದಂತಿ** ಶಿಖರವನ್ನೂ ದಾಟಿ, **ಚಿತಲಾಂಗ** ಎಂಬ ಮತ್ತೊಂದು ದೊಡ್ಡ ಹಳ್ಳಿಗೆ ಬಂದೆವು. ಇಲ್ಲಿ ಬರುವಾಗ ಕೂಲಿಗಳನ್ನೂ ಪಾಸಪೋರ್ಟನ್ನೂ ನೋಡಿ ಬಿಡುತ್ತಾರೆ. ಇಲ್ಲಿಂದ ಈ ಮಾರ್ಗದಲ್ಲಿ ಎಲ್ಲಕ್ಕೂ ಎತ್ತರವಾದ



CC-0. Jangamwadi Math Collection. Digitized by eGangotri

**ಚಂದ್ರಾಗಡಿ** ಎಂಬ ಶಿಖರವು ಸುರುವಾಗುತ್ತಿದ್ದು, ಸೂರ್ಯಾಸ್ತಕ್ಕೆ ಬಹಳೇ ಪರಿಶ್ರಮದಿಂದ ತುದಿಗೆ ಬಂದು ಮುಟ್ಟಿದೆವು. ಇಲ್ಲಿಯಂತೂ ಉದ್ದಕ್ಕೆ ಅನೇಕ ಮೈಲು ಗಳವರೆಗೆ ಹಬ್ಬಿದ ಶುಭ್ರ ಶಿಖರಗಳು ಚಿತ್ತಾಕರ್ಷಕ ವಾಗಿದ್ದು, ಚಳಿಯನ್ನು ಜೀರಿ ಮೈಯಲ್ಲಿ ನಡುಗು ಹುಟ್ಟಿಸಿದವು. ಮುಂದೆ ದಟ್ಟಡವಿಯೊಳಗಿಂದ ಅಷ್ಟೇ ಕಠಿಣ ವಾದ ಇಳುಕಲನ್ನಿಳಿದು **ಪಾಣೀಘಾಟಿ**ದಲ್ಲಿ ರಾತ್ರಿಯ ನ್ನು ಕಳೆದೆವು. ನಮ್ಮಲ್ಲಿಯ ಕೆಲವು ಜನ ಹೆಂಗಸರು ಬಹಳೇ ಪ್ರಯಾಸದಿಂದ ರಾತ್ರಿ ೧೧ರ ಸುಮಾರಿಗೆ ಈ ಸ್ಥಾನಕ್ಕೆ ಬಂದು ತಲ್ಪಿದರು. ಅವರನ್ನು ಕಾಯುತ್ತ ಕೂತ ಇತರ ರಿಗೆ ಅವರ ಬಗ್ಗೆ ಅನೇಕ ವಿಚಾರಗಳು ಬಂದುಹೋದುವು. ಆದರೆ ದೇವರು ಕತ್ತಲೆಯಲ್ಲಿಯೂ ಎಲ್ಲರನ್ನು ಸುರಕ್ಷಿತ ವಾಗಿ ಮುಟ್ಟಿಸಿದನು. ಮರುದಿವಸ ಅರ್ಧ ಮೈಲಿನ ಮೇಲಿರುವ **ಥಂಕೋಟ**ಕ್ಕೆ ಹೋಗಿ, ಮುಂದೆ ಪುನಃ ಮೋಟಾರಿನಿಂದ ೮ ಮೈಲು ಮಾರ್ಗವನ್ನು ಕ್ರಮಿಸಿ, **ಕಾಟಮಾಂಡೂ**ದೊಳಗಿಂದ ಹಾಯ್ದು **ದೇವಪಾರ್ಟಿ**ಕ್ಕೆ ಮುಟ್ಟಿ ಶಿವರಾತ್ರಿಯ ಸುಮುಹೂರ್ತದಲ್ಲಿ ಶ್ರೀ. ಪಶುಪತಿನಾಥನ ದರ್ಶನವನ್ನು ಪಡೆದೆವು. ಕರ್ನಾಟಕ ದವರಾದ ಶ್ರೀ. ಸುಬ್ರಹ್ಮಣ್ಯ ಶಾಸ್ತ್ರಿಗಳೆಂಬವರೆ ಅಲ್ಲಿಯ ಮುಖ್ಯ ಪೂಜಾರಿಗಳಾಗಿದ್ದು ಅವರಲ್ಲಿಯೆ ನಾನು ಉಳಿ ದುದರಿಂದ ಯಾವುದಕ್ಕೂ ತೊಂದರೆಯಾಗಲಿಲ್ಲ.

ನೇಪಾಳದ ರಾಜಧಾನಿಯಾದ **ಕಾಟಮಾಂಡು** ಶಹ ರವೂ ಶ್ರೀನಗರದಂತೆ ಪರ್ವತಗಳಿಂದ ಸುತ್ತಲ್ಪಟ್ಟ ಬಯಲುಪ್ರದೇಶದಲ್ಲಿದ್ದು, ಮುಖ್ಯ ಪ್ರಧಾನರಾದ ಶ್ರೀ. **ಭೀಮಸಂಶೇರಬಹಾದ್ದೂರ್** ಇವರ ಕೈಯ ಲ್ಲಿಯೇ ಎಲ್ಲ ಅಧಿಕಾರಸೂತ್ರಗಳಿವೆ. ಈಗಿನ ರಾಜನ ಹೆಸರು ತ್ರಿಭುವನವೀರವಿಕ್ರಮ. ಇವನ ರಾಜ್ಯದಲ್ಲಿ ಒಂದು ಪ್ರಕಾರದ ಹಳೆಯ ರಾಜ್ಯಪದ್ಧತಿಯಿದ್ದು, ರಾಜ ಸಭೆಯಲ್ಲಿ ಪ್ರಮುಖರೆಲ್ಲರೂ ನೆರೆದು, ಯಾವದೊಂದು ವ್ಯಾಜ್ಯವನ್ನೂ ಪ್ರಧಾನನ ಹೇಳಿಕೆಯಂತೆ ತೀರಿಸುವ ರೂಢಿಯುಂಟು. ಅವನಿಗೆ ಯೋಗ್ಯ ಕಂಡದ್ದೇ ನ್ಯಾಯ, ಅಯೋಗ್ಯ ಕಂಡದ್ದೇ ಅನ್ಯಾಯವಾದುದರಿಂದ ಪ್ರಜೆಗಳೆ ಲ್ಲರೂ ಬಹಳೇ ಹೆದರಿ ನಡೆಯುವರು. ಗಾಂಧೀ ಟೊಪ್ಪಿಗೆ ಹಾಕಿಕೊಳ್ಳುವುದೂ ಒಂದು ಅನ್ಯಾಯವೆಂದಿದ್ದುದನ್ನು ಕೇಳಿ, ಬಹಳೇ ವ್ಯಸನವಾಯಿತು. [illegible] ಕಡೆಗೆ ಅಧಿ ಕಾರಿಗಳು ನಮ್ಮ ಮುಂದಾಳುಗಳ ಫೋಟೋಗಳನ್ನು ಮನೆಯಲ್ಲಿ ಹಾಕಬಾರದೆಂದು ನಿರ್ಬಂಧ ಮಾಡಿರುವರು. ನನಗೂ ಟೊಪ್ಪಿಗೆ ತೆಗೆಯಲು ಅನೇಕರು ಉಪದೇಶ ಮಾಡಿದರು. 'ತೆಗೆಯದಿದ್ದರೆ ಕಠಿನಶಿಕ್ಷೆಗೆ ಗುರಿ ಯಾಗುವೆ' ಎಂದು ಬೆದರಿಕೆಯನ್ನೂ ಹಾಕಿದರು. ಆದರೆ ನಾನು ಯಾತ್ರಿಕನಾದುದರಿಂದ ಈ ಅನ್ಯಾಯದ ಕಾಯಿ ದೆಗೆ ಒಳಗಾಗುವದಿಲ್ಲವೆಂದು ಹಿಂದಿನಿಂದ ತಿಳಿದುಬಂದಿತು. ಇಲ್ಲಿ ಖಾದೀ ಪ್ರಚಾರ ಮಾಡುವ ನನ್ನ (ಗಾಂಧಿ ಆಶ್ರಮದ) ಮಿತ್ರ **ಶ್ರೀ. ತುಲಸೀ ಮೆಹರ್ಜೀ**ಗೂ, ಅವನ ಸಂಗಡಿಗರಿಗೂ ಕೆಲವು ವರ್ಷ ತೊಂದರೆ ಕೊಟ್ಟರು. ಆದರೆ ಈಗ ಅವರೇ ತಿಳಿದೋ ತಿಳಿಯದೆಯೋ ಒಂದು ಪ್ರಕಾರದ ಸಹಾಯ ಮಾಡುತ್ತಾರಂತೆ. ಇಲ್ಲಿ ಒಂದು ಕಾಲೇಜು ಮೂರು ಹಾಯ್‌ಸ್ಕೂಲುಗಳಿದ್ದು ನೂರಕ್ಕೆ ೨ ಇರಷ್ಟು ಜನರು ಮಾತ್ರ ಉಚ್ಚ ಶಿಕ್ಷಣವನ್ನು ಪಡೆದಿದ್ದಾರೆ. ಆದರೆ ಇಡೀ ಪೇಟೆಯಲ್ಲಿ ಹುಡುಕಿದರೂ ಇಲ್ಲಿಯ ಒಂದು ಇತಿಹಾಸ, ಅಥವಾ ಭೂಗೋಲ ವಿಷ ಯಕ ಪುಸ್ತಕವು ದೊರೆಯಲಿಲ್ಲ. ಕಡೆಗೆ ಕೆಲವು ಪ್ರಮುಖ ರನ್ನು ಕೇಳಲು ಅವರು— ಇಲ್ಲಿ ಇಂಥ ಪುಸ್ತಕಗಳನ್ನು ಅಚ್ಚು ಹಾಕಿಸುವ ಅಪ್ಪಣೆಯಿಲ್ಲವೆಂದು ಹೇಳಿದರು. ಇದು ಮೇಲಿಂದ ನೋಡಿದರೆ ಇಲ್ಲಿ ಯಾವ ಪ್ರಕಾರದ ಸ್ವತಂ ತ್ರತೆ ಇರಬಹುದೆಂಬದು ತಿಳಿದುಬರುತ್ತಿದ್ದರೂ ಇನ್ನೂ ಒಂದೆರಡು ಮಹತ್ವದ ಸಂಗತಿಗಳನ್ನು ತಿಳಿಸುವೆನು. ಇವರು ಬೇರೆಯವರಿಗೆ ಕಪ್ಪ ಕೊಡದಿದ್ದರೂ ಹೆದರಿ ನಡೆ ಯುವದನ್ನು ನಾನು ಸ್ವತಃ ನೋಡಿದೆನು. ಇಂಗ್ಲಿಷ ರಿಂದ ತಮ್ಮ ಸೈನ್ಯದ ವೆಚ್ಚಕ್ಕಾಗಿ ಕೆಲವು ಹಣ ತಕ್ಕೊಂಡು ತಮ್ಮ ಶಕ್ತಿಯನ್ನು ಅವರಿಗೆ ಮಾರಿರುವ ರೆಂದೂ ಕೇಳಿದೆನು. ಅದರಂತೆ ಮಹಾಯುದ್ಧದ ವೇಳೆ ಯಿಂದ ಇಲ್ಲೊಂದು ಇಂಗ್ಲೀಷರ ಕ್ಯಾಂಪೂ ಪ್ರಾರಂಭ ವಾಗಿದ್ದು ಅವರದೊಂದು ಆಫೀಸಿದೆ. ಮತ್ತು ಕೆಲವು ಕೆಂಪು ಜನರೂ ವಾಸಿಸುತ್ತಾರೆ. (ಈ ರಾಜ್ಯದಲ್ಲಿ ಮುಸಲ್ಮಾನರೇನೂ ಹೆಚ್ಚಾಗಿಲ್ಲ.) ಇದನ್ನೆಲ್ಲಾ ನೋಡಿ ದರೆ ಸ್ವತಂತ್ರ ರಾಷ್ಟ್ರದ ಯೋಗ್ಯತೆಯು ಎಲ್ಲಿಗಿದೆ ಒಮ್ಮೆಲೇ ತಿಳಿದುಬರುವುದು. ಪರ್ವತಗಳ ಮಧ್ಯದಲ್ಲಿ ಅಶಿಕ್ಷಿತ ಜನರ ಮೇಲೆ ಇಲ್ಲದ ಅಧಿಕಾರ ನಡೆಸುತ್ತ, ಸಾಮ್ರಾಜ್ಯವಾದಿಗಳಿಗೆ ಬಗ್ಗಿ ನಡೆಯುವ ಸಂಸ್ಥಾನಕ್ಕೆ ಸ್ವತಂತ್ರ ಸಂಸ್ಥಾನವೆನ್ನಬಹುದೋ? ವಾಚಕರೇ ವಿಚಾರ ಮಾಡಲಿ!

CC-0. Jangamwadi Math Collection. Digitized by eGangotri

## ನೋಡತಕ್ಕ ಸ್ಥಾನಗಳು

ಶ್ರೀ. ಪಶುಪತಿನಾಥನ ಮಂದಿರವು **ವಾಘಮತಿ** ನದಿ ದಂಡೆಯ ಮೇಲೆ ಅನೇಕ ಮಂದಿರಗಳ ಮಧ್ಯದಲ್ಲಿದೆ. ಇದು ಬಹಳೇ ಪುರಾತನದ್ದು. ಈ ಪಂಚಮುಖ ಲಿಂಗವು ಜ್ಯೋತಿರ್ಲಿಂಗಗಳಲ್ಲೊಂದಾಗಿದ್ದು, ಇಲ್ಲಿಯ ಏಕಮುಖೀ ರುದ್ರಾಕ್ಷಿಯೂ, ಬಲಮುಡಿಶಂಖವೂ, ಲಕ್ಷ್ಮೀನಾರಾಯಣ ಶಾಲಿಗ್ರಾಮವೂ ಅವಶ್ಯವಾಗಿ ನೋಡುವಂಥವು. ಮಂದಿರವೆಲ್ಲಾ ಬೆಳ್ಳಿಬಂಗಾರದ ಮುಲಾಮಿನ ತಗಡುಗಳಿಂದ ಭೂಷಿತವಾಗಿದ್ದು, ಮುಖ್ಯದ್ವಾರದೊಳಗಿನ ಹಿತ್ತಾಳೆಯ ನಂದಿಯೂ ನೋಡಬೇಕಾದದ್ದು. ಇಲ್ಲಿಯ ಪೂಜಾರಿಗಳೆಲ್ಲಾ ಕರ್ನಾಟಕ ಮತ್ತು ಮಹಾರಾಷ್ಟ್ರಗಳಿಂದ ಬಂದವರು. ಪ್ರತಿ ಶಿವರಾತ್ರಿಗೆ ಹಿಂದುಸ್ಥಾನದ ಯಾವತ್ತೂ ಭಾಗದಿಂದ ಸಾವಿರಾರು ಜನರು ಇಲ್ಲಿ ನೆರೆಯುತ್ತಿದ್ದರೂ, ಅವರಲ್ಲಿ ಸಾಧುಸನ್ಯಾಸಿಗಳೇ ವಿಶೇಷವಾಗಿರುತ್ತಾರೆ. ಇವರಿಗೆ ಈ ಕಾಲಕ್ಕೆ ಊಟದ ವ್ಯವಸ್ಥೆಯೂ ಮರಳಿ ಹೋಗಲಿಕ್ಕೆ ರಾಜನಿಂದ ಧನಸಹಾಯವೂ ದೊರೆಯುತ್ತವೆ. ಪಶುಪತಿನಾಥನ ಗುಡಿಯ ಸುತ್ತಲೂ ಅನೇಕ ಸಣ್ಣ ದೊಡ್ಡ ಗುಡಿಗಳಿದ್ದು, **ಗುಹೇಶ್ವರೀ, ವಿಶ್ವರೂಪ** ಮತ್ತು ನದಿಯ ಆಚೆಗೆ **ಬುದ್ಧ ಮಂದಿರ** ಇದೆಲ್ಲ ಅವಶ್ಯ ನೋಡುವಂಥವುಗಳು.

ಕಾಟಮಾಂಡೂ ರಾಜಧಾನಿಯಲ್ಲಿಯೂ, ಪಾಟಣ, ಭಾದಗಾಂವಗಳಲ್ಲಿಯೂ ಅನೇಕ ಮಂದಿರಗಳೂ, ಬುದ್ಧ ವಿಹಾರಗಳೂ ಪ್ರೇಕ್ಷಣೀಯವಾಗಿವೆ. ಅವುಗಳಲ್ಲಿ ಕಟ್ಟಿಗೆಯೊಳಗೆ ಕೊರೆದ ಕಲಾಕೌಶಲ್ಯವು ನೋಡುವಂತಹದು. ಇದರಿಂದಲೇ ಕಾಟಮಾಂಡುವಿಗೆ ಕಾಷ್ಠಮಂಟಪವೆಂಬ ಪುರಾತನ ಹೆಸರಿದೆ. ಇಲ್ಲಿ ಇಂದ್ರಚೌಕ, ದಿಲ್ಲೀಬಜಾರ, ಸಿಂಗದರಬಾರ, ಮಂಗಲಬಜಾರ, ಹನುಮಾನ ಡೋಕಾ, ಮುಂತಾದವು ಮುಖ್ಯವಾಗಿ ನೋಡತಕ್ಕವು.

ಪಾಟಣವು ಬಹಳೇ ಪುರಾತನ ನಗರವಿದ್ದು ಇಲ್ಲಿ ಬುದ್ಧ ವಿಹಾರಗಳೂ ಹಿಂದೂ ಮಂದಿರಗಳೂ ನೋಡುವಂತಹವಾಗಿವೆ. ಅವುಗಳಲ್ಲಿ ಮಹಾಬುದ್ಧ, ಕುಂಭೇಶ್ವರ, ಚಾಂಗೂನಾರಾಯಣ ಮಂದಿರಗಳೂ ಹಳೇ ಅರಮನೆ, ಬುದ್ಧವಿಹಾರದಂಥ ನೂರಾರು ಕಟ್ಟಡಗಳೂ ನಗರದ ತುಂಬೆಲ್ಲ ಕಾಣುತ್ತವೆ. ಇವುಗಳಲ್ಲಿಯೂ ಕಟ್ಟಿಗೆಯ ಕೆಲಸವೇ ಮುಖ್ಯವಾಗಿ ನೋಡುವಂತಹದು.

ಭಾದಗಾಂವದಲ್ಲಿ (ಭಗತಪೂರ) ದತ್ತಾತ್ರೇಯ, ಭೈರವನಾಥ, ಬುದ್ಧಮಂದಿರಗಳೂ, ಹಳೇ ದರಬಾರವೂ ನೋಡುವಂತಹವು. ಇವುಗಳ ಹೊರತು ದೂರದಲ್ಲಿ **ದಕ್ಷಿಣಕಾಲೀ, ಹಾಥೀಬನ, ಮತ್ಸ್ಯೇಂದ್ರನಾಥ** ಮೊದಲಾದ ಸ್ಥಾನಗಳೂ ಪರ್ವತಪ್ರದೇಶದೊಳಗಿನ ನೈಸರ್ಗಿಕ ದೃಶ್ಯಗಳೂ ಅನೇಕವುಂಟು. ಅವನ್ನೆಲ್ಲ ಈ ಸಣ್ಣ ಲೇಖನದಲ್ಲಿ ಕೊಡುವುದು ಅಸಾಧ್ಯವಾದ ಸಂಗತಿಯು.

## ಇಲ್ಲಿಯ ಜನರ ಶೀಲ ಸ್ವಭಾವಗಳು

ಇಲ್ಲಿ **ಪರ್ವತಿ, ನೇವಾರಿ, ಗುರುಭಜೂ, ದೇವಭಜೂ** ಎಂದು ಮುಖ್ಯವಾಗಿ ನಾಲ್ಕು ಜಾತಿಗಳು. (ಅಲ್ಲದೆ ಬೌದ್ಧ ಮತ್ತು ಹಿಂದೂ ಜನರು). ಬೌದ್ಧರೂ ಹಿಂದೂಜನರೂ ಮಾಂಸಾಹಾರಿಗಳು. ಇವರ ಮುಖ್ಯ ಉದ್ಯೋಗವು ಹೊಲ ಮಾಡುವದು, ನೇಯುವದು (ಮಿಲ್ಲಿನನೂಲು), ಬುಟ್ಟಿ ಚಾಪಿ ಹೆಣಿಯುವದು, ಕುರಿಗಳನ್ನು ಸಾಕುವದು ಇವೇ ಮೊದಲಾದವುಗಳಿರುವವು. ಸ್ವಚ್ಛತೆಯೆಂದರೆ ಇವರಿಗೆ ಗೊತ್ತೇ ಇಲ್ಲ. ಮನೆಯ ಒಳಗೂ ಹೊರಗೂ ತುಂಬ ಹೊಲಸು ಬಿದ್ದಿರುತ್ತದೆ. ಮತ್ತು ನಿತ್ಯ ಸ್ನಾನಾದಿಗಳ ಪದ್ಧತಿಯೂ ಇದ್ದಂತೆ ತೋರಲಿಲ್ಲ. ಅದರಂತೆ ಹೊಲಸು ಬಟ್ಟೆಯುವರೂ ಇರುತ್ತಾರೆ.

ಇವರು ತಮ್ಮ ಮದುವೆಗಳಲ್ಲಿ ವರದಕ್ಷಿಣೆಯ ಬದಲು ಲಾಖಾ-ಕನ್ಯಾದಕ್ಷಿಣೆಯನ್ನು ಕೊಡುತ್ತಾರೆ. ಇದರಿಂದ ಅವರು ಎಲ್ಲರೂ ಮಿಠಾಯಿ ಮೊದಲಾದವುಗಳನ್ನು ಹಂಚಬೇಕು. ಇತರ ಯಾವತ್ತೂ ಒಡವೆ ವಸ್ತುಗಳ ವೆಚ್ಚವನ್ನು ಅವರದವರೇ ನೋಡಿಕೊಳ್ಳಬೇಕು. ಹೆಂಗಸರ ಪೋಷಾಕು ಬಹುತರವಾಗಿ ಗಢವಾಲೀ ಜನರಂತೆ ಇದ್ದರೂ ಬುಲಾಕೂ, ಕಿವಿಯೊಳಗಿನ ಆಭರಣಗಳೂ ನೋಡುವಂಥವಿರುತ್ತವೆ. ಇವರ ಹೆಳಲು ಹಾಕುವ ಪದ್ಧತಿಯೂ ಭಿನ್ನವಾಗಿದ್ದು ಮುಂದುಗಡೆಗೆ ಮುಡಿಯನ್ನು (ಹಿಂದುಗಡೆ ಬೈತಲನ್ನು) ಕಟ್ಟುತ್ತಾರೆ. ಭಾಷೆಯು ನೇಪಾಳೀಆಗಿದ್ದು ತಿಬೇಟಿ ಮತ್ತು ಹಿಂದಿಗಳು ಬೆರೆತಿವೆ. ಅನೇಕ ಪಾಲೀ ಶಬ್ದಗಳೂ ಸೇರಿವೆ. ಲಿಪಿಯು ಮಾತ್ರ ದೇವನಾಗರಿಯು. ಬೌದ್ಧರು ಕೂಡ ಮೂರ್ತಿ ಪೂಜಕರಂತೆ ಪೂಜಾದಿಗಳನ್ನು ಮಾಡುತ್ತಾರೆ. ಗುರ್ಖಾ ಮತ್ತು ನೇವಾರಿ ಜನರು ಬಹಳೇ ಶೂರರಾದುದರಿಂದ ಸೇನಾವಿಭಾಗದಲ್ಲೆಲ್ಲ ಇವರು ಹೆಸರಾಗಿದ್ದಾರೆ.

CC-0. Jangamwadi Math Collection. Digitized by eGangotri

# ಹಿಂದೀಯಲ್ಲಿನ ಸಣ್ಣ ಕಥೆಗಳು

ಲೇಖಕರು—ಶ್ರೀ " ಸಾರಸ್ವತರು "

ಹಿಂದೀಯಲ್ಲಿ ಸಣ್ಣಕತೆಗಳನ್ನು ' ಕಹಾನೀ 'ಯೆನ್ನು ವರು. ರಾಷ್ಟ್ರಭಾಷೆಯಾದ ಹಿಂದೀಯಲ್ಲಿಯೂ ಕಹಾನೀ ಸಾಹಿತ್ಯವು ಇನ್ನೂ ವಿಕಸಿತವಾಗಿಲ್ಲದಿರುವುದು ಅಸ ಮಾಧಾನಕರವಾಗಿದ್ದರೂ ಅದರ ಬೆಳವಣಿಗೆಯು ದಿನೇ ದಿನೇ ವೃದ್ಧಿಗೊಳ್ಳುತ್ತಿರುವುದು ಸರ್ವರಿಗೂ ಸಂತೋಷಕರವಾದ ವಿಷಯ. ಹಿಂದೀ ' ಕಹಾನೀ—ಸಾಹಿತ್ಯ ' ದ ದಿಗ್ದರ್ಶನವನ್ನು ಕನ್ನಡಿಗರಿಗೆ ಮಾಡಿಸುವ ಉದ್ದೇಶದಿಂದ ಪ್ರಕೃತ ಲೇಖನವು ಪ್ರಾರಂಭಿಸಲ್ಪಟ್ಟಿದೆ.

ಮಾನವನ ಕಲ್ಪನೆ ಮತ್ತು ಅನುಭವಗಳ ಮಧುರ ಸಮ್ಮೇಲನವೇ ಕತೆಯು. ಸಾಹಿತ್ಯ—ಸಮೀಕ್ಷಕರು ಕತೆಯನ್ನು ಕವಿತೆಯ ತಂಗಿಯೆನ್ನುವರು. ಕಾರಣ ಕವಿತೆ ಯಲ್ಲಿ ಹೃದಯದೊಳಗಣ ಭಾವನೆಗಳ—ವಿಚಾರಗಳ ಕೋಮಲ ಕೂಲಿಕೆಯಿಂದ ಖಚಿತ ಚಿತ್ರಣವಿದೆ. ಕತೆ ಯಲ್ಲಿ ಮಾನವನ ಹೃದಯದೊಳಗಿನ ಉದ್ಗಾರಗಳ ಭಾವಚಿತ್ರವಿದೆ. ಇವೆರಡರ ಭೇದವಾದರೂ ಇಷ್ಟೇ.ಕವಿತೆ ಮತ್ತು ಕತೆಯ ಪ್ರೇರಣಾಸ್ಥಲವೂ ಒಂದೇ. ಪ್ರಭಾವವೂ ಒಂದೇ. ಇವೆರಡೂ ಮನದಲ್ಲಿ ಕೋಲಾಹಲವನ್ನೆಬ್ಬಿಸ ಬಲ್ಲುವು. ಮಾದಕತೆಯನ್ನೇರಿಸಬಲ್ಲುವು. ಅಳಿಸಬಲ್ಲುವು. ನಗಿಸಬಲ್ಲುವು. ಆದರೆ, ಕವಿತೆಯನ್ನು ತಿಳಿಯಲು ಕವಿಯ ಹೃದಯವನ್ನು ಪ್ರವೇಶಿಸಲು ಸಹೃದಯತೆ—ಸರಸತೆಗಳ ಅಗತ್ಯವಿದೆ. ಕತೆಯನ್ನು ತಿಳಿಯದ ಕತೆಯನ್ನೋದಿ ಮನವನ್ನು ಕೊಳ್ಳದ ಪಾಮರನಾಗಲಿ—ಪಂಡಿತನಾಗಲಿ ಯಾರೂ ಇರನು! ಕವಿತೆಯು ಲತೆ. ಕತೆಯು ಕುಸುಮ! ಲತೆಯ ಗುಣವನ್ನು ಅದರ ತೋಟಗಾರನೇ ಬಲ್ಲನು. ಕುಸುಮದ ಸುಗಂಧವನ್ನು ಚೇತನವುಳ್ಳವರೆಲ್ಲರೂ ಅನುಭವಿಸಬಲ್ಲರು! ಇರುವ ಭೇದವಾದರೂ ಇಷ್ಟೆ!

ಕೆಲವು ವಿಮರ್ಶಕರು ಪ್ರಪಂಚದಲ್ಲಿನ ಕತೆಗಳ ಉತ್ಪತ್ತಿನಿರ್ಣಯವನ್ನು ಮಾಡಹೋಗಿ ಸುತ್ತಾರೆ. ಅವುಗಳ ಜಾತಕ ಬರಿಯಲು ಹಗಲು—ರಾತ್ರಿ ಪರಿಶ್ರಮಿಸುತ್ತಾರೆ. ಬ್ರಹ್ಮಸೃಷ್ಟಿಯ ಜಾತಕವೇ ಪ್ರಪಂಚದೊಳಗಿನ ಕಥಾವಾಙ್ಮಯದ ಜನನದಿನವೆಂದು ಅವರ ಭಾವನೆ. ಮನುಷ್ಯನು ಮನುಷ್ಯತ್ವವನ್ನು ಹೊಂದಿ—ಪ್ರೇರಣೆಗಳು ಕೆಲಸ ಮಾಡತೊಡಗುತ್ತಲೇ ಆಖ್ಯಾಯಿಕೆಗಳ ಸಣ್ಣ ಕತೆಗಳ ಉತ್ಪತ್ತಿಯಾಗಲಿಲ್ಲ. ಮೊದಲು ಅನುಭೂತಿಯು ಮಾತ್ರ ಕತೆಗಳಲ್ಲಿ ವಿಶೇಷವಾಗಿದ್ದು, ನಂತರ ನೈತಿಕ ಬೋಧೆಯೂ ಕಂಡುಬರುವುದು. ಕತೆಗಳ ವಿಕಾಸವೇ ಪ್ರತಿಯೊಂದು ವಾಙ್ಮಯದಲ್ಲಿಯೂ ಮುಂದಿನ ಯಿಂದಾಯಿತೆಂದು ನಿರಾತಂಕವಾಗಿ ಒಪ್ಪಬಹುದು.

ಸಾಹಿತ್ಯದ ವಿಕಾಸಕ್ರಮವಾದರೂ (೧) ಕವಿತೆ (೨)ನಾಟಕ (೩)ನಿಬಂಧ (೪)ಕಾದಂಬರಿ (೫)ಸಣ್ಣಕತೆಗಳು ಈ ರೀತಿಯಲ್ಲಿ ಇರುವುದು.

ಪ್ರಾಚೀನ ಭಾರತದಲ್ಲಿ ಮತ್ತು ಇನ್ನಿತರ ಸುಧಾರಿಸಿದ ದೇಶಗಳಲ್ಲಿ ನೈತಿಕಶಿಕ್ಷಣವು ಲಘುಕತೆಗಳ ಮೂಲಕ ವಾಗಿಯೇ ಕೊಡಲ್ಪತ್ತಿದ್ದುದು ಇತಿಹಾಸದಿಂದ ತಿಳಿದು ಬರುವುದು. ಕಥಾಸರಿತ್ಸಾಗರ, ಈಸೋಪನ ನೀತಿಕತೆ ಗಳು, ಗುಲಿಸ್ತಾನ್ ಮೊದಲಾದುವೇ ಇದರ ಜೀವಂತ ಪ್ರಮಾಣಗಳು. ಪ್ರಾಚೀನ ಕಾಲದಲ್ಲಿ ಉಪನಿಷತ್ತುಗಳ ಗೂಢ ತತ್ವಗಳನ್ನು ಪ್ರತಿಪಾದಿಸಲು ಆಖ್ಯಾಯಿಕೆಗಳನ್ನು ಪಯೋಗಿಸುತ್ತಿದ್ದರು.

ಹಿಂದೀಯೊಳಗಿನ ಮೊದಲಿನ 'ಕಹಾನಿ'ಯುಗಲಂಖದಲ್ಲಿ ಉದಯವಾಯಿತು. ಮುನ್ಶೀ ಇನ್ಶಾಅಲ್ಲಾ ಹಖಾನ್‌ನು 'ರಾಣೀಕೇತಕೀಕೀಕಹಾನೀ ' ಯನ್ನು ಬರೆದನು. ಅಗಲೇ ಸದಾಸುಖನೆಂಬುವನೂ ಒಂದು ಕಹಾನೀಯನ್ನು ಬರೆದನು.ಆಗ ಹಿಂದೀಯಲ್ಲಿ ಕತೆಗಳು ಆದೇ ಮೊದಲಾಗಿದ್ದ ಮೂಲಕ ಇವುಗಳ ಯೋಗ್ಯತೆಯು ವಿಶೇಷವಾಗಿದ್ದಿರ ಬಹುದು. ಆದರೆ ಇಂದಿನ ಕತೆಗಾರರ ದೃಷ್ಟಿಯಲ್ಲಿ ಅವು ಕಳೆತರಗತಿಯವೆನ್ನ ಬೇಕಾಗುತ್ತದೆ.

CC-0. Jangamwadi Math Collection. Digitized by eGangotri

ನಂತರ ರಾಜಶಿವಪ್ರಸಾದರು 'ರಾಜಾಭೋಜಕಾ ಸಪನಾ'ವನ್ನು ಬರೆದು ಉಲ್ಲೇಖನೀಯರಾದರು.

ಹಿಂದೀವಾಙ್ಮಯದಲ್ಲಿ ಕಥಾಝರಿಯು ಹರಿಯ ತೊಡಗುತ್ತಲೇ ಸಣ್ಣ—ದೊಡ್ಡ ಲೇಖಕರ ಲೇಖನಿಯೂ ಅತ್ತಕಡೆ ಹರಿದು—ಒಮ್ಮೆಲೆ ಅನುವಾದದ ಬಿರುಮಳೆಗೆ ಪ್ರಾರಂಭವಾಯಿತು!

ಸನ್ ೧೯೦೦ರಲ್ಲಿ ಪ್ರಯಾಗದಿಂದ 'ಸರಸ್ವತೀ' ಯೆಂಬ ಸಾಹಿತ್ಯಿಕ ಮಾಸಿಕ ಪತ್ರಿಕೆಯೊಂದು ಹೊರಟು ಕಥಾ ಝರಿಯನ್ನು ಪ್ರಬಲಗೊಳ್ಳುವಂತೆ ಮಾಡಿತು! 'ಸರಸ್ವತಿ' ಯ ವೀಣಾಝುಂಕಾರವು ಲೇಖಕರ ಲೇಖನಿಗಳಲ್ಲಿ ಕಥಾ ಸ್ಫೂರ್ತಿಯನ್ನು ತುಂಬಿಸಿತು. ಇಂದಿಗೂ ಅನೂದಿತ ಕತೆಗಳೇ ಬೆಳೆಯುತ್ತಿವೆ.ಆದರೆ ಇದಕ್ಕಾಗಿ ನಾವು ಮರುಗ ಬೇಕಾಗಿಲ್ಲ. ಇಂದು ವಿಶ್ವಸಾಹಿತ್ಯಗಳಲ್ಲೊಂದಾದ ಇಂಗ್ಲಿಷಸಾಹಿತ್ಯದೊಳಗಣ ಕಥಾ—ಪ್ರಪಂಚವುವೊದಲು ಮತ್ತು ಹೆಚ್ಚು ಕಮ್ಮಿ ಇಂದಿಗೂ ಇಟಾಲಿಯನ್ ಮತ್ತು ಫ್ರೆಂಚ್ ವಾಙ್ಮಯಗಳನ್ನೇ ಅವಲಂಬಿಸಿದೆ.

ಅಂತೂ ಅನೂದಿತ ಕತೆಗಳಲ್ಲಿ ಹೆಸರುಗೊಂಡ ಲೇಖಕ ರೊಬ್ಬರೆಂದರೆ ಶ್ರೀಗಿರಿರಾಜಕುಮಾರ ಘೋಷರೊಬ್ಬರೇ. 'ವಂಗಮಹಿಲಾ' ಯೆಂಬ ಒರ್ವರು ಬಂಗಾಲೀ—ಗಲ್ಪ' ಗಳನ್ನು ಹಿಂದೀ-ಕಹಾನೀ ಪ್ರಪಂಚಕ್ಕೆ ಪರಿವರ್ತಿಸಿದರು! ಸ್ವಾಮೀ ಸತ್ಯದೇವಜೀಯವರು ಅಮೇರಿಕದಿಂದ ಬರೆದು ಕಳುಹಿಸುತ್ತಿದ್ದ ಸಣ್ಣ—ಪುಟ್ಟ ಕತೆಗಳು ಇಂದಿಗೂ ಅಂದಿನ ಭಾರತೀಯರ ಚಿತ್ರವನ್ನು ಕಣ್ಮುಂದಿಡುವಂತಿವೆ. ಈ ಲೇಖಕರೆಲ್ಲರೂ ತಮ್ಮ ಸೇವೆಯನ್ನು ಪ್ರಯಾಗದ 'ಸರಸ್ವತೀ' ಮಂದಿರದಲ್ಲೇ ಕುಳಿತು ಮಾಡಿದರು.

ಇಂದಿಗೂ ಹಿಂದೀ ಕಹಾನೀ ಸಾಹಿತ್ಯಕ್ಕೆ—ಹಿಂದೀ ವಾಙ್ಮಯದಲ್ಲಿ ಉಚಿತ ಸ್ಥಾನವು ಸಿಕ್ಕಿರುವದಿಲ್ಲವೆನ್ನು ವದು ಆಶ್ಚರಿಯ ಮಾತು. ಚೋಟುದ್ದ ಕವಿತೆಯ ಮೇಲೆ ಅಲಂಕಾರವಿರಲಿ ಇಲ್ಲದಿರಲಿ, ಛಂದಸ್ಸು ಸರಿಯಾಗಿರಲಿ ಕೆಟ್ಟಿರಲಿ,ಪೂರ್ಣಭಾವವಿರಲಿ ಭಾವಶೂನ್ಯವಿರಲಿ, ಹಿಂದೀ ಯ ಉದ್ದಂಡ ವಿಮರ್ಶಕರು ಹತ್ತಾರು ಪುಟಗಳನ್ನು ವಿಮರ್ಶೆಯಿಂದಲೆ ತುಂಬಿಸುತ್ತಾರೆ. ಆದರೆ'ಕಹಾನೀ'ಯ ಮಾತೆತ್ತುವುದೂ ಅವರಿಗೆ ನಾಚಿಕೆಯೇ ಎಂಬಂತೆ ಕಾಣು ತ್ತದೆ. ಇಂದಿನ ತನಕ ೧೯ ಹಿಂದೀ ಸಾಹಿತ್ಯಸಮ್ಮೇಲನ ಗಳು ಜರುಗಿದವು! ಆದರೆ,೧೯ ಸಭಾಪತಿಗಳ ಭಾಷಣಗಳ ಲ್ಲೊಂದರಲ್ಲಾದರೂ ಕಹಾನೀ ಸಾಹಿತ್ಯದ ಸುದ್ದಿಯಿಲ್ಲ ದಿರುವುದೇ ನಮ್ಮ ಮೇಲಿನ ಮಾತಿನ ಸಾಧಾರ ಪ್ರಮಾಣವು!

ಇಂದಿನಿಂದ ಹದಿನಾಲ್ಕುವರ್ಷಗಳ ಮುಂಚೆ ಶ್ರೀ ಪ್ರೇಮಚಂದರು ಉರ್ದೂವಿನ ಪ್ರಸಿದ್ಧ ಲೇಖಕರೆಂದು ಖ್ಯಾತಿಗೊಂಡಿದ್ದರು! ಹೆಚ್ಚೇಕೆ, ಉರ್ದೂವಿನ ಮಹಾ ರಥಿಗಳಲ್ಲಿ ಇವರ ಗಣನೆಯು ಇಲ್ಲದಿಲ್ಲ. ಇವರ 'ಸಪ್ತ-ಸರೋಜ' ವೆಂಬ ಸಣ್ಣಕತೆಗಳ ಗುಚ್ಛವೊಂದು ಹಿಂದೀ ಮಾನಸಸರೋವರದಲ್ಲಿ ಅರಳಿ ತನ್ನ ರೂಪ-ಸೌರಭ ದಿಂದ ಎಲ್ಲರನ್ನೂ ಮೋಹಿಸಿತು. ಆದರದು ಉರ್ದೂವಿ ನಲ್ಲಿಯ ಕೃತಿಯಾಗಿತ್ತು!

ಇದೇ ಸಮಯದಲ್ಲಿ ಈ ವರೆಗಿನ ಕವಿಗಳ ವಾಗ್ಝರಿಯ ದಿಗ್ವಿಪರ್ಯಾಸವಾಯಿತು! ಚುಂಬನದ ಮಧುರವರ್ಣನ ಗಳ ಕಾಲವಳಿದು, ಕ್ರಾಂತಿ—ದೇವಿಯ ಪೂಜೆಗಾರಂಭ ವಾಯಿತು. ಸಮಾಜ—ಸುಧಾರಣೆಯ ನೂತನಧಾರೆಯು ಜನ್ಮಗೊಂಡಿತು. ಹಾಗೆಂದು ಕೆಲವು ರಸಿಕ ಕವಿಗಳು ವಿರಸರಾಗಲಿಲ್ಲವೆನ್ನುವದು ನಿಜ.ಅದೇ ಅವಸ್ಥೆಯು ಹಿಂದೀ ಕಹಾನೀ ಲೇಖಕರದೂ ಆಯಿತು. ಸಮಾಜಸುಧಾರಣೆ ಯನ್ನವಲಂಬಿಸಿ ನೂರಾರು ಕತೆಗಳು ಹೊರಬಿದ್ದುವು. ಪ್ರತ್ಯೇಕವಾದ ಪತ್ರ-ಪತ್ರಿಕೆಗಳ ಜನ್ಮವಾಯಿತು. ಅಂತೂ ಹಿಂದೀ-ಕಹಾನಿಗಳಲ್ಲಿಯೂ ವಿಷಯ-ಪರಿವರ್ತನ ವಾಗಿ ಪ್ರಕೃತೋಪಕಾರವನ್ನು ಮಾಡಿದರು ಕಹಾನೀ ಲೇಖಕರು!

ನಾವು ನಮ್ಮ ವಿಚಾರಧಾರೆಯನ್ನು ಅನುಸರಿಸಿ ಹಿಂದೀ ಕಹಾನೀ—ಲೇಖಕರ ವರ್ಗೀಕರಣವನ್ನು ಮಾಡುವೆವು. ಈ ವರ್ಗೀಕರಣದಿಂದ ಲೇಖಕರ ಯೋಗ್ಯತಾನಿರ್ಧಾರ ವನ್ನು ನಾವು ಮಾಡಿದ್ದೇವೆಂದು ತಿಳಿಯಬಾರದು. ವಿಷಯ —ಸೌಲಭ್ಯದ ಸರಲ ಉಪಾಯವಿದೊಂದು ಮಾತ್ರ!

(೧) 'ಪ್ರೇಮಚಂದ'ರ ವರ್ಗ. (೩) 'ಉಗ್ರ' ವರ್ಗ.
(೨) 'ಪ್ರಸಾದ' ವರ್ಗ (೪) 'ಅನುವಾದಕ'ವರ್ಗ

ಯಾವ ವಾಙ್ಮಯದಲ್ಲಿಯೂ ಅನುವಾದಕರ ಯೋಗ್ಯ ತೆಯು ಕಲಾದೃಷ್ಟ್ಯಾ ವಿಶೇಷವಿಲ್ಲವೆನ್ನಬಹುದು. ಆದರೆ ಮೂಲ ತತ್ವದ ಯೋಗ್ಯತೆಯನುಸಾರವಾಗಿ ಸಾಹಿತ್ಯದ ಗೌರವವು ಬೆಳೆಯಬಹುದಷ್ಟೆ. ಅಲ್ಲದೆ ಅನುವಾದಕರನ್ನು



CC-0. Jangamwadi Math Collection. Digitized by eGangotri

ಹೆಚ್ಚಿನ ಉಲ್ಲೇಖಿಸೇಯರೆಂದು ಭಾವಿಸಲಾಗುವದಿಲ್ಲ. ಭಾಷೆಯೊಳಗಿನ ಶಬ್ದ-ಧ್ವನಿಗಳ ಪಾರದರ್ಶಕರವರಿರ ಬಹುದು! ನಿಘಂಟು-ವ್ಯಾಕರಣಗಳಲ್ಲಿ ದಿಗ್ಗಜಪಂಡಿತ ರಾಗಿರಬಹುದು! ಆದರೆ, ಸ್ವತಂತ್ರ ವೃತ್ತಿ ಮತ್ತು ಪರಾವ ಲಂಬನಗಳಿಗಿರುವಷ್ಟೇ ಅಂತರವು ಸ್ವತಂತ್ರ ಲೇಖಕ ಮತ್ತು ಅನುವಾದಕರೊಳಗಿದೆಯಾದುದರಿಂದ ಆ ವಿಷ ಯದಲ್ಲಿ ಹೆಚ್ಚೇನನ್ನೂ ಉಲ್ಲೇಖಿಸುವುದಿಲ್ಲ.

ವಾಸ್ತವವಾಗಿ ಇನ್ನುಳಿದ ವರ್ಗಗಳ ಸಮಾಲೋಚನೆ ಯನ್ನು ಮಾಡುವುದು ನಮ್ಮ ಕೈಮೀರಿದ ವಿಷಯ ವಾದರೂ ನಮ್ಮ ವಾಚಕರಿಗೊಮ್ಮೆ ಅವರ ಈಷತ್ಪರಿಚಯ ವನ್ನಾದರೂ ಮಾಡಿಸಲು ಮರೆಯೆವು.

ಹಿಂದೀಯಲ್ಲಿನ ಭಿನ್ನ-ಭಿನ್ನ ವಿಷಯಗಳ ಲೇಖಕರು ಹಲವರಿದ್ದಾರೆ. ಖ್ಯಾತಿಗೊಂಡು ಹಿಂದೀಯ ಸೌಭಾಗ್ಯ ವರ್ಧಕರಂತಿರುವ ಅನೇಕ ಕವಿ-ಲೇಖಕರಿದ್ದಾರೆ. ಆದರೆ ಇವರಲ್ಲಿ ಉತ್ತಮರಾರು? ನೀಚರಾರು?-ಎಂದು ಹೇಳು ವುದು ಹೇಗೆ? ನಮ್ಮ ಮನಸ್ಸಿನಲ್ಲಿ ಆದರ ನಿರ್ಧಾರವನ್ನು ಆ ಕವಿಯ ಇಲ್ಲವೆ ಲೇಖಕನ ಶೈಲಿಯನ್ನು ಎಷ್ಟು ಜನರು ಸಾರ್ಥಕ ರೀತಿಯಲ್ಲಿ ಅನುಸರಿಸಿದ್ದಾರೆಂಬುದನ್ನು ನೋಡಿ ಮಾಡುವುದೇ ಒಳಿತೆಂದು ತೋರುತ್ತದೆ.

ಪೂರ್ವೋಕ್ತ ರೀತಿಗನುಸರಿಸಿ ನಾವು ಹಿಂದೀ ಕಹಾನೀ ಲೇಖಕರೊಳಗಿನ ವರ್ಗಗಳಲ್ಲಿ ಪ್ರೇಮಚಂದರ ವರ್ಗವು ಲೋಕಪ್ರಿಯವಾಗಿದೆಯೆಂದು ಹೇಳುತ್ತೇವೆ. ಉರ್ದೂ ಲೇಖಕರು ಹೆಚ್ಚಾಗಿ ಶೃಂಗಾರಪ್ರಿಯರಾದರೂ ಪ್ರೇಮ ಚಂದರ ಹಿಂದೀ ವರ್ಣನೆಗಳೊಂದೂ ಶಿಷ್ಟತೆಯ ಮೇರೆ ಯನ್ನು ಮೀರಿರುವುದಿಲ್ಲ. ಮಧ್ಯಮ ವರ್ಗದ ಭಾರತೀ ಯರ ಮತ್ತು ಗ್ರಾಮೀಣರ ಜೀವನವರ್ಣನವನ್ನು ಮತ್ತ ವರ ಚರಿತ್ರಚಿತ್ರಣವನ್ನು ಪ್ರೇಮಚಂದರು ರಂಜಕವಾಗಿ ಮಾಡುವಷ್ಟು ಇತರರು ಮಾಡಲರಿಯರು. ಕತೆಯೆಂದರೆ 'ಕತೆ' ಮಾತ್ರ ಆಗಿರದೆ ಆದರ್ಶಪ್ರಾಯವಾಗಿರಬೇಕೆಂದು ವಾದಿಸುವವರಲ್ಲಿ ಶ್ರೀ. ಪ್ರೇಮಚಂದರೂ ಒಬ್ಬರು. ಈ ಆದರ್ಶದ ಹುಚ್ಚಿನಿಂದ ಕೆಲವೆಡೆ ಸ್ತ್ರೀಚರಿತ್ರವರ್ಣನದಲ್ಲಿ ಅಸ್ವಾಭಾವಿಕತೆ-ಅತಿಶಯೋಕ್ತಿಗಳು ಮೇರೆಮೀರುವವು. ಆದಕಾರಣ, ಸಮಾಜದಲ್ಲಿ ನಡೆಯುತ್ತಿರುವಂತೆ ಸ್ತ್ರೀಯ ಅಧಃಪತನವನ್ನು ಚಿತ್ರಿಸುವುದು ಆದರ್ಶವಿರುದ್ಧವೆಂದು ಅವರ ತಿಳುವಳಿಕೆ. ಇದರಿಂದ ಕಲೆಯು ಕುಂದಿಯಾಗುವು ದಾದರೂ ವಾಚಕರಿಗೆ 'ಸಾಕೆ' ನಿಸುವುದಿಲ್ಲ. ಮತ್ತಷ್ಟು ತಲ್ಲೀನತೆಯನ್ನು ಹೊಂದುತ್ತಾರೆ. ಇದೇ ಪ್ರೇಮಚಂದರ ಲೇಖನಿಯ ಇಂದ್ರಜಾಲವು. ದೊಡ್ಡ ದೊಡ್ಡ ಕಾದಂಬರಿ ಗಳನ್ನು ಬರೆದು ಉಪನ್ಯಾಸ-ಸಮ್ರಾಟ್ ಎಂಬ ಬಿರುದನ್ನು ಹಿಂದೀ ಸಂಸಾರದಿಂದ ಅವರು ಪಡೆದಿದ್ದಾರೆ, ಮತ್ತು ಅವರ ಕಹಾನಿಗಳು ಕೆಲವು ಇಂಗ್ಲಿಷ್, ಫ್ರೆಂಚ್, ಜರ್ಮನ್ ಭಾಷೆಗಳಿಗೂ ಅನೂದಿತವಾಗಿವೆಯಂತೆ. ಈತನಕ ಶ್ರೀಯುತ ಪ್ರೇಮಚಂದರು ರಚಿಸಿದ ಹಿಂದೀ-ಕಹಾನಿ ಗಳು ಮಾತ್ರ ೩೦೦ ರಷ್ಟಿವೆ. ಇವುಗಳ ಸಂಗ್ರಹಗಳೂ, ಪತ್ರಿಕೆಗಳೂ ಹೊರಟಿವೆ. ಹೊರಡುತ್ತಲೂ ಇವೆ. ಇವರ ಮುಖ್ಯವಿಷಯವು ಸಾಮಾಜಿಕವೆಂದರೆ ತಪ್ಪಾಗದು.

ಶ್ರೀ ಸುದರ್ಶನರೂ ಇದೇ ವರ್ಗದವರಾದರೂ ಮೊದಲಿನಲ್ಲಿ ಉರ್ದೂ-ಲೇಖಕರು. ಇವರು ಹಿಂದೀ ಯೊಳಡಿಯಿಟ್ಟು ಉತ್ತಮತರದ ಸಾಹಿತ್ಯಸೇವೆಯನ್ನು ಮಾಡಿರುತ್ತಾರೆ. ಶೈಲಿಯಲ್ಲಿ ಪ್ರೇಮಚಂದರ ಅನುಗಾ ಮಿಗಳಿವರೆನ್ನಬಹುದು. ಸುಧಾರಕತ್ವದ ಮಾತ್ರೆಯು ಕಡಿಮೆಯಿರುವುದರಿಂದ ಪೌರಾಣಿಕತೆಯ ದರ್ಶನವು ಇವರ ಗಲ್ಪಗಳಲ್ಲಿ ಕಾಣಸಿಕ್ಕುವುದು. ಹಾಗೆಂದು, ಕಥೆಯ ರೋಚಕತೆ ಮತ್ತು ಜೀವಿತವು ಕಳೆಗುಂದುವು ದಿಲ್ಲ. 'ಕೌಶಿಕ'ರ ರಚನೆಗಳು ಸಾಂಸಾರಿಕವಾದುವಲ್ಲದೆ ಗಾರ್ಹಸ್ಥ್ಯ ಜೀವನದ ಪ್ರತಿಬಿಂಬಗಳಂತಿರುತ್ತವೆ. ಇವರ ಕಹಾನಿಗಳು ಇಂದಿನತನಕ ೭೦ ರಷ್ಟಿವೆ.

ಪಂಡಿತ ಜ್ವಾಲಾದತ್ತಶರ್ಮರು ಮೊದಲಿಗರಾಗಿದ್ದರೂ ನಂತರದವರೊಡನಿದ್ದಾರೆ. ಇವರ ಕಹಾನಿಗಳ ಸಂಖ್ಯೆಯು ಅತ್ಯಲ್ಪ. ಆದರೆ ವಾಚಕರೆಂದೂ ಮರೆಯದೆ ವಿಚಿತ್ರತಾ ಪೂರ್ಣವಾದ ವಸ್ತು-ನಿರ್ಮಾಣವು ಇವರ ಕೃತಿಗಳಲ್ಲಿದೆ. ಇವರ ಕಹಾನಿಗಳು ೧೫ರಷ್ಟಿವೆ.

ಪ್ರೇಮಚಂದ-ವರ್ಗದವರಿಷ್ಟೇ ಎಂದು ವಾಚಕರೆಣಿಸ ಬಾರದು. ಸ್ಥಳಾಭಾವದಿಂದ ಅನಿವಾರ್ಯವಾಗಿ ಉಲ್ಲೇಖ ನೀಯರಾದವರನ್ನುಲ್ಲೇಖಿಸಿರುವೆವಷ್ಟೇ. ಅಲ್ಲದೆ ಬೇರೆ ಅಲ್ಲ. ಪ್ರೇಮಚಂದ ವರ್ಗದ ವರ್ತಮಾನ ಹಿಂದೀ ಕಹಾನೀ ಲೇಖಕರ ಸಂಖ್ಯೆಯು ೫೦-೬೦ ಕ್ಕೆ ಕಡಿಮೆಯಿಲ್ಲ.

ಪ್ರಸಾದವರ್ಗದವರೆಂದರೆ ಪಂಡಿತ ಜಯಶಂಕರ ಪ್ರಸಾದರು. ಶ್ರೀ ಪ್ರಸಾದರು ತರುಣ ಕವಿಗಳು. ಭಾವನೆಗಳ ವೈಚಿತ್ರ್ಯ-ವೈವಿಧ್ಯಗಳೇ ಇವರ ವಿಶೇಷ

CC-0. Jangamwadi Math Collection. Digitized by eGangotri

ಇವರು ಕೈಯಿಕ್ಕಿದ ವಿಷಯಗಳಲ್ಲೆಲ್ಲಾ ಕ್ರಾಂತಿಯ ನ್ನುಂಟು ಮಾಡುವುದೇ ಇವರ ಗುಣ. ಕವಿತೆಗಳನ್ನು ಬರೆಯತೊಡಗಿದೊಡನೆ ಕವಿಪಂಥವನ್ನೇ ಉಂಟು ಮಾಡಿ ದರು. ಕಹಾನೀ-ಲೇಖನಕ್ಕೆ ಅಡಿಯಿಡುತ್ತಲೇ ಕಹಾನೀ-ಲೇಖಕರಲ್ಲೊಂದು ತಂಡವನ್ನೇ ಹೊಸ ದಾರಿಗೆಳೆದರು. ಯಾವ ಆದರ್ಶವನ್ನೂ ಇವರು ಧ್ಯೇಯವನ್ನಾಗಿಟ್ಟು ಕೊಂಡಿರುವುದಿಲ್ಲ. ಕಥೆ ಬರೆಯುವುದು ತಾನಾಗಿ ನೀತಿ ಪ್ರದವಾಗಬೇಕಲ್ಲದೆ ಕಥೆಯ ಚೀಲದಲ್ಲಿ ನೈತಿಕ ಶಿಕ್ಷಣದ ಹೊರೆಯನ್ನು ತುಂಬಿ, ಆದರ್ಶದ ಮುದ್ರಿಕೆ ಯನ್ನೊತ್ತುವುದು ತಪ್ಪೆಂದು ಇವರ ಅಭಿಪ್ರಾಯ. ಇದೇ ಕಲೆಯ ಆರಾಧನೆ. ಮಧುರ ಮತ್ತು ಸರಸ ಕಲ್ಪನೆಗಳೇ ಇವರ ಕಹಾನಿಯ ಅಂತಿಮಧ್ಯೇಯ. ಭಾರತೀಯ ಆದರ್ಶಪೋಷಣವೆ ಇವರ ಕಥಾವಿಷಯ. ಕಲ್ಪನಾ ತ್ಮಕ ರಚನೆಯಲ್ಲಿ ಹಿಂದೀಯೊಳಗಾದರೂ ಪ್ರಸಾದರನ್ನು ಸರಿಗಟ್ಟರು.

ಕೆಲವರು ಪ್ರಸಾದರ ರಚನೆಗಳಲ್ಲಿ ಪ್ರಸಾದಗುಣವೇ ಇಲ್ಲವೆಂದು ಟೀಕಿಸುತ್ತಾರೆ. ಆದರೆ ಇದು ವಿಚಾರ ದೋಷವಲ್ಲದೆ ತಥ್ಯವಲ್ಲ. ಸಾಮಾನ್ಯರಿಗೆ ಪ್ರಸಾದರ ಗಲ್ಪಗಳಲ್ಲಿಯೂ ಕವಿತೆಯಲ್ಲಿಯೂ ಸ್ವಾರಸ್ಯ ತೋರದು. ಏಕೆಂದರೆ ಪ್ರಕೃತಿಯ ಆರಾಧನೆ, ಕಲೆಯ ಪೋಷಣಗಳೇ ಅವರ ಗುರಿಯು. 'ಆಕಾಶದೀಪ'ವೆಂಬ 'ಪ್ರಸಾದ'ರ ಕಹಾನೀಸಂಗ್ರಹವೊಂದು ಪ್ರಕಟಗೊಂಡಿದೆ.

ಇವರ ವರ್ಗದ ಉಲ್ಲೇಖನೀಯ ಲೇಖಕರು ಕೆಲವರು ಮಾತ್ರ ಎನ್ನಲು ಸಂಕೋಚವೂ ಅಭಿಮಾನವೂ ಆಗು ತ್ತಿದೆ. ರಾಯಕೃಷ್ಣದಾಸ ಮತ್ತು ಪಂಡಿತ ವಿನೋದ ಶಂಕರ ವ್ಯಾಸರೆಂಬವರೇ ಈ ಉಲ್ಲೇಖನೀಯ ತರುಣರು! ರಾಯದಾಸರ 'ಅನಾಖ್ಯಾ' ಮತ್ತು 'ಪ್ರಾಸರ್ ತೂಲಿಕಾ' 'ಭೂಲೀಬಾತ್' 'ನವಪಲ್ಲವ' ಮೊದಲಾದ ಸಂಗ್ರಹಗಳು ವಾಚನೀಯವಾಗಿವೆ.

'ಉಗ್ರ' ವರ್ಗವೆಂದರೆ ಪಾಂಡೆಯ ಬೇಚನಶರ್ಮಾ ಇವರ ಪಂಗಡ. ಸಾಹಿತ್ಯ-ಸಮಾಲೋಚಕರು ಅಶ್ಲೀಲ ತೆಯ ಉಚ್ಚಾರಣದ ಮೂಲಕವೂ ಮುಚ್ಚಿಕೊಳ್ಳುವ ಆದರ್ಶವಾದಿಗಳು. ಛಂದೋಭಂಗ, ರಸಭಂಗ, ಪ್ರಕ್ರಮ ಭಂಗಗಳಿಂದ ಬೆದರುವ 'ಬಾಬಾ' ಪಂಥೀಯರು 'ಉಗ್ರ'ರ ಲೇಖನಗಳನ್ನು, ಕಹಾನಿಗಳನ್ನು, ಕವಿತೆಗಳನ್ನು ಬೇಕಾ ದಂತೆ ಟೀಕಿಸಲಿ. ಆದರೆ, ಹಿಂದೀ ವಾಙ್ಮಯದಲ್ಲಿ ನೂತನ ಕ್ರಾಂತಿಯನ್ನು ಹುಟ್ಟಿಸಿ, ಒಂದೊಂದರಲ್ಲಿ ಮಾತ್ರವಲ್ಲ, ಅಂಗಾಂಗಗಳಲ್ಲೂ ಪರಿವರ್ತನೆಗಳನ್ನುಂಟುಮಾಡಿ ಸ್ವತಂತ್ರ ಮಾರ್ಗವನ್ನು ತೋರಿಸಿದವರು ಇವರೊಬ್ಬರೇ. ಸಾಮಾ ಜಿಕ, ರಾಜಕೀಯ ಘಟನೆಗಳನ್ನು ಇದ್ದಕ್ಕಿದ್ದಂತೆ ಹೊಸ ಹೊಸದಾಗಿ ತೋರಿಬರುವಂತೆ ರಚಿಸಿ ಖ್ಯಾತರಾದವರು ಉಗ್ರರೊಬ್ಬರೇ. ಫ್ರಾನ್ಸ್, ರಶಿಯಾದೇಶಗಳ ಕ್ರಾಂತಿ ಕಥೆಗಳನ್ನು 'ಹಿಂದೀ ಸಾಹಿತ್ಯ'ಕ್ಕೆ ಕಥಾಂಜಲಿಯಾಗಿ ಅರ್ಪಿಸಿದವರು ಉಗ್ರರೊಬ್ಬರೇ. ಇಂದಿನ ಸುಧಾರಿತ ಸಮಾಜಗಳಲ್ಲಿ ನಡೆಯುತ್ತಿರುವ ಘೋರ ಅತ್ಯಾಚಾರ ಗಳನ್ನು, ಗುಪ್ತ-ಸುಪ್ತ ವ್ಯಭಿಚಾರಗಳನ್ನು ಸಾಹಿತ್ಯ ರೂಪದಲ್ಲಿ ಬಯಲಿಗೆಳೆದವರು ಉಗ್ರರೊಬ್ಬರೇ. ಆದರ್ಶ ವನ್ನು ಗಣಿಸದೆ, ಪರದೆಯೊಳಗಿನ ಕೊಳಕನ್ನು ಮುಂದೆ ಚೆಲ್ಲಿದ ಮೇಲಾದರೂ ಸ್ವಚ್ಛವಾಗಿರಲೆಂಬ ಭಾವನೆಯಿಂದ ಲೇಖನಿಯನ್ನೆತ್ತಿದವರೂ ಉಗ್ರರೊಬ್ಬರೇ. ಅಂತೂ ಉಗ್ರರ ಉದ್ದೇಶ-ಹೇತು, ನ್ಯಾಯಸಿದ್ಧಾಂತ ಇವುಗಳೆಲ್ಲ ಒಂದೇ ಒಂದು-ಕ್ರಾಂತಿ, ಪರಿವರ್ತನೆ. ಅದು ಸಾಮಾ ಜಿಕ-ರಾಜಕೀಯ ಸಾಹಿತ್ಯ ರೂಪಗಳಲ್ಲಿ ವೈವಿಧ್ಯವನ್ನು ಹೊಂದುತ್ತಲಿದೆ. 'ಚಿನಗಾರಿಯಾ' 'ಇಂದ್ರಧನುಷ' 'ನಿರ್ಲಜ್ಜಾ' 'ಚಾರ-ಬೇಚಾರೇ,' 'ಚಂದ್ ಹಸೀ-ನೋಂಕೀ ಕರತೂತ್' ಮೊದಲಾದ ಕಹಾನೀ-ಸಂಗ್ರಹ ಗಳುವಾಚ್ಯಮತ್ತು ಸಂಗ್ರಾಹ್ಯವಾಗಿವೆ. ಆದರೆ ಇವುಗಳಲ್ಲಿ ಕೆಲವು 'ಸರಕಾರ-ಜಮಾ' ಆಗಿರುತ್ತವೆ. ಈಗ 'ಉಗ್ರ' ಪಂಥೀಯರು ಬೆಳೆಯತೊಡಗಿದ್ದಾರೆ. ಆದರೆ ಉಪಕ್ರಮ ದಲ್ಲಿಯೇ ಇದ್ದಾರಲ್ಲದೆ ಸಾರ್ಥಕತೆಯನ್ನು ಹೊಂದಿರುವು ದಿಲ್ಲ. ಈಗ 'ಉಗ್ರ'ರ ವರ್ಗದಲ್ಲಿ ಅವರೇ ಒಬ್ಬರು. ಉಪಾಧ್ಯಾಯರೂ ಅವರೇ, ವಿದ್ಯಾರ್ಥಿಗಳೂ ಅವರೇ. ಇದೇ ಅವರ ವೈಚಿತ್ರ್ಯ. ಇನ್ನುಳಿದ ಲೇಖಕರು ಸರ್ವ ಸಂಗ್ರಾಹಕರು. ಒಬ್ಬೊಬ್ಬರಿಂದ ಇಷ್ಟವಾದ ಗುಣ ಗಳನ್ನು ಸ್ವೀಕರಿಸಿ ಮುಂದೆ ಬಂದವರು.

ಶ್ರೀ ಚತುರಸೇನ ಶಾಸ್ತ್ರಿ, ಜನಾರ್ದನಪ್ರಸಾದ ಝಾ, ರಾಜೇಶ್ವರಪ್ರಸಾದಸಿಂಹ, ರಾಜಾರಾಧಿಕಾರಮಣಸಿಂಹ, ಗೋವಿಂದವಲ್ಲಭ ಪಂತ, ಬಾಬೂ ಶಿವಪೂಜನ ಸಹಾಯ, ಪಂಡಿತ ಬಾಲಕೃಷ್ಣ ಶರ್ಮಾ, ಭಗವತೀಪ್ರಸಾದ ವಾಜಪೇಯಿ, ಪ್ರತಾಪನಾರಾಯಣ ಶ್ರೀ

CC-0. Jangamwadi Math Collection. Digitized by eGangotri

ವಾಸ್ತವ ' ಜಿಜ್ಞಾ, ' ' ನಪೀನ, ' ಜೈನ್, ವಾಚಸ್ಪತಿ ಪಾಠಕ ಮೊದಲಾದವರು ಸಿದ್ಧಹಸ್ತ ಕಹಾನೀಲೇಖಕರು. ರಾಜಾರಾಧಿತಾರಮಣಸಿಂಹರ ಶ್ರೀಮತೀ ಲೇಖಿನಿಯ ಗಂಭೀರಸ್ವರೂಪವು ನೆನಪುಳಿಯುವಂತಹದು. ' ಜನಾರ್ದನಪ್ರಸಾದಝಾ 'ರವರ 'ಮಾಲಿಕಾ' ಎಂಬ ಉತ್ತಮ ಗಲ್ಪ ಸಂಗ್ರಹವು ಪ್ರತಿಯೊಂದು ಪುಸ್ತಕಾಲಯದ ಭೂಷಣವೆಂದರೆ ತಪ್ಪಾಗದು. ಈ ಲೇಖಕರು ಅನ್ಯವ್ಯವಸಾಯಾಸಕ್ತರಾದುದರಿಂದ ಕೆಲವೇ ರಚನೆಗಳನ್ನು ಹೊರಗೆಡಹುವರು. ಇದು ಹಿಂದೀಯ ದುರ್ಭಾಗ್ಯವಾದರೂ, ಇದರ ರಚನೆಗಳು ಹಿಂದೀಯ ಸೌರಭವನ್ನು ಪಸರಿಸದಿರುವುದಿಲ್ಲ.

ಕೇವಲ ಕಹಾನಿಗಳಿಗಾಗಿಯೇ ' ಶಾರದಾ-ವಿನೋದ' ' ಕಥಾಮುಖೀ ' ಮತ್ತು 'ಹಿಂದೀ-ಗಲ್ಪಮಾಲಾ'ಎಂಬ ಪತ್ರಿಕೆಗಳ ನಿರ್ಮಾಣವಾಗಿ ಹಿಂದೀ-ಕಹಾನಿಗಳನ್ನು ಹೆಚ್ಚಿಸಿದುವು. ಈಗ ಶ್ರೀ ಪ್ರೇಮಚಂದರ ಸಂಪಾದಕತ್ವದಲ್ಲಿ ನಡೆಯುತ್ತಿರುವ 'ಹಂಸ' ಪತ್ರಿಕೆ ಮತ್ತು ಅನ್ಯ ಸಂಪಾದಿತ 'ಮಾಧುರಿ'ಯ ಹಿಂದೀ ಸೇವೆಯು ಚಿರಸ್ಮರಣೀಯವು.

ಹಿಂದೀಯಲ್ಲಿ ಹಾಸ್ಯ ಕಹಾನಿಗಳ ನ್ಯೂನತೆಯಿದ್ದೇ ಇದೆ. ಆದರೆ ಕೆಲವಂಶದಲ್ಲಿ ಶ್ರೀ ಜಿ. ಪಿ. ಶ್ರೀವಾಸ್ತವರ ಹಾಸ್ಯರಚನೆಗಳು ಇದನ್ನು ಕಡಿಮೆ ಮಾಡುತ್ತಿದ್ದು ಹಿಂದೀಯ ಗೌರವವನ್ನು ಬೆಳೆಸುತ್ತಲಿವೆಯೆನ್ನುವುದು ನಿಜ. ಆದರೆ ಅವರ ರಚನೆಗಳೆಲ್ಲಾ ಹೆಚ್ಚಾಗಿ ಅನೂದಿತವಾಗಿವೆ. ' ಸಿಖಟ್ಟೂ ' ವಿನ ' ಮೇರೀ ಹಜಾಮತ್ ' ಎಂಬ ಹಾಸ್ಯಗಲ್ಪವು ಹಾಸ್ಯರಸದ ಉತ್ತಮ ಮಾದರಿಯಾಗಿದೆ.

ಪತ್ತೆದಾರಿ ಗಲ್ಪಗಳಿಗೂ ಹಿಂದೀಯಲ್ಲಿ ಕೊರತೆಯಿಲ್ಲ. ಆದರೆ ಬಾಲೋಪಯೋಗಿ ಗಲ್ಪಗಳು ಇನ್ನೂ ಬಾಲ್ಯಾವಸ್ಥೆಯಲ್ಲಿಯೇ ಇವೆ.

ಪತ್ರವ್ಯವಹಾರದ ರೂಪದಲ್ಲಿ ಬರೆಯಲ್ಪಡುವ ' ಕಹಾನಿ 'ಗಳಿಗೂ ಹಿಂದೀಯಲ್ಲಿ ಮೊದಲಾಗಿದೆ. ಆದರೆ ಇದರ ಪ್ರಮಾಣವು ತೀರ ಕಡಿಮೆ.

ನಾವೀ ಲೇಖನದಲ್ಲಿ ಪ್ರಕೃತವಿಷಯವನ್ನನುಸರಿಸಿ ' ಕಹಾನಿ ' ಗಳ ವಿಷಯವನ್ನುಮಾತ್ರ ಬಣ್ಣಿಸಿದೆವು. ಉಕ್ತ ಲೇಖಕರು ಕೇವಲ ' ಕಹಾನೀ ' ಲೇಖಕರಾಗಿರದೆ ಹಿಂದೀಯ ಸಿದ್ಧಹಸ್ತಲೇಖಕರೆಂಬುದನ್ನು ಮರೆಯಬಾರದು. ಹಿಂದೀಯಂತಹ ರಾಷ್ಟ್ರಭಾಷೆಯೊಳಗಿನ ಕಥಾ-ಭಾಂಡಾರವನ್ನು ವಿಹಂಗಮದೃಷ್ಟ್ಯಾ ನೋಡಿದರೆ ಬರಿದಾಗಿಯೇ ನಮಗೆ ತೋರಬಹುದು. ಆದರೆ ಅದರ ವಿಕಾಸ ಕಾಲವನ್ನು ಲಕ್ಷ್ಯದಲ್ಲಿಟ್ಟು ವಿವೇಚಿಸಿದರೆ, ಈಗ ಹಿಂದೀಯಲ್ಲಿರುವ ' ಗಲ್ಪ ಸಂಪತ್ತಿ ' ಯು ೩೦ ವರ್ಷಗಳ ' ಸಂಚಿತ ಧನ ' ಮಾತ್ರವೆಂದು ಗೊತ್ತಾಗದಿರದು. ಹಿಂದೀಯಾಕಾಶದಲ್ಲಿ ಕಥಾನಕ್ಷತ್ರಗಳು ನೂರಾರು ಮಿನುಗುತ್ತಲಿವೆಯಾದರೂ ರಾಷ್ಟ್ರಭಾಷೆಗೊಪ್ಪುವ ವೈಭವದಿಂದಲ್ಲ. ಇದಕ್ಕಾಗಿ ಚಿಂತಿಸುವ ಅಥವಾ ಅಸೂಯೆಪಡುವ ಅಗತ್ಯವೂ ಇಲ್ಲ. 'ಕಹಾನೀ'ಯ ಗತ್ಯೇತಿಹಾಸವನ್ನು ನೋಡಿದರೆ ನಿರಾಶರಾಗುವಕಾರಣವೂ ಇಲ್ಲ. ವರ್ತಮಾನ ಲೇಖಕ ಪರಂಪರೆಯು ಅವಿಚ್ಛಿನ್ನವಾಗಿರುವ ತನಕ ಅಪಶಕುನಗಳಿಗಾಸ್ಪದವೂ ಇಲ್ಲ.



CC-0. Jangamwadi Math Collection. Digitized by eGangotri

# ವಾದಭೂಮಿ

## ಕನ್ನಡವೂ ಸಂಸ್ಕೃತವೂ

ಲೇಖಕರು—ಶ್ರೀ. ಜಿ. ಆರ್. ಜೋಸ್ಯರ್, ಎಂ. ಎ., ಎಫ್. ಆರ್. ಇ. ಎಸ್., ಮೈಸೂರು

ಕಳೆದ ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸಭೆಯ ಅಧಿವೇಶನದಲ್ಲಿ ಸಂಸ್ಕೃತವನ್ನು ಪರೀಕ್ಷೆಗಳಲ್ಲಿ ದ್ವಿತೀಯ ಭಾಷೆಯಾಗಿ ಇಡಕೂಡದೆಂಬ ಅಂಶವನ್ನು ಸಮರ್ಥಿಸುತ್ತ ಇಂಗ್ಲಿಷ ಮತ್ತು ಕನ್ನಡಗಳಲ್ಲಿ ಉಪಪ್ರಾಧ್ಯಾಪಕರೂ ಕರ್ನಾಟಕ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರೂ ಕನ್ನಡ ಗ್ರಂಥಕರ್ತರ ಆಶ್ರಯದಾತರೂ ಆದ ಮ. ರಾ. ಪ್ರೊಫೆಸರ್ ಬಿ. ಎಂ. ಶ್ರೀಕಂಠಯ್ಯನವರು "Sanskrit has crushed us, cramped us, stifled us. Kannada does not want the help of Sanskrit hereafter. It must go to English for help henceforward;" 'ಅಂದರೆ ಸಂಸ್ಕೃತವು ನಮ್ಮ ಕನ್ನಡವನ್ನು ಕುಗ್ಗಿಸಿ ತಗ್ಗಿಸಿ ಮಲಗಿಸಿಬಿಟ್ಟಿದೆ. ಇನ್ನು ಮೇಲೆ ನಮಗೆ ಸಂಸ್ಕೃತದ ಸಹಾಯವು ಬೇಕಿಲ್ಲ. ನಾವು ಇನ್ನುಮುಂದೆ ಇಂಗ್ಲಿಷಿನ ಸಹಾಯದಿಂದ ಮುಂವಕ್ಕೆ ಬರಬೇಕು' ಎಂದು ಹೇಳಿದರು. 'ಇವರ ವಾಗ್ಧೋರಣೆಯನ್ನೂ, ಶ್ರೀಕೃಷ್ಣನಿಗೆ ಶಿಶುಪಾಲನು ಮಾಡಿದಂತೆ ಸಂಸ್ಕೃತಕ್ಕೆ ಇವರು ಮಾಡಿದ ಅವಹೇಳನವನ್ನೂ, ಕನ್ನಡದ ಮುಂದಿನ ಪ್ರಗತಿಯ ವಿಚಾರದಲ್ಲಿ ಇವರು ನಿಯಮಿಸಿದ ಆಶಯವನ್ನೂ ಕೇಳಿ ಸೆನೆಟ್ಟಿನ ಸಭಾಸದರು ಸ್ತಬ್ಧರಾದರು.

ಈ ಮಾತುಗಳನ್ನು ವಿಮರ್ಶಿಸುವದಕ್ಕೆ ಮೊದಲು ಅವುಗಳ ಸಂದರ್ಭ ಮತ್ತು ಪ್ರಮೇಯಗಳನ್ನು ಸ್ವಲ್ಪ ವಿವರಿಸಬೇಕು.

೧೯೩೫-೩೬ರಲ್ಲಿ ಈ ವಿಶ್ವವಿದ್ಯಾಲಯಕ್ಕೆ ಮುಖ್ಯಾಧಿಕಾರಿಗಳಾಗಿದ್ದ ಸರ್ ವ್ರಜೇಂದ್ರನಾಥ ಶೀಲರವರು ಸಂಸ್ಥಾನದ ಕಾಲೇಜ ವಿದ್ಯಾಭ್ಯಾಸದ ಮಾದರಿಗಳನ್ನು ಕೂಲಂಕಷವಾಗಿ ಪರಿಷ್ಕರಿಸುತ್ತೇವೆಂಬ ಭಾವನೆಯಿಂದ ಕಾಲೇಜ್ ತರಗತಿಗಳಲ್ಲಿ ದ್ವಿತೀಯ ಭಾಷೆಯೆ ಬೇಡವೆಂದು ಸೂಚಿಸಿದರು. ಅದನ್ನು ಕರ್ನಾಟಕಧುರೀಣರಲ್ಲಿ ಕೆಲವರು ವಿರೋಧಿಸಲು, ಮುಖ್ಯ ದೇಶಭಾಷೆಯಾದ ಕನ್ನಡವನ್ನು ದ್ವಿತೀಯ ಭಾಷೆಯನ್ನಾಗಿಡಬಹುದೆಂದೂ ಸಂಸ್ಕೃತ ತಮಿಳ ತೆಲುಗು ಮುಂತಾದವು ಬೇಡವೆಂದೂ ನಿರ್ಣಯವಾಯಿತು. ಇದು ಸರಕಾರದ ಸಮ್ಮತಿಗಾಗಿ ಮೇಲಕ್ಕೆ ಹೋಗಲು ಅವರು ಮುಸಲ್ಮಾನರು ಕನ್ನಡಕ್ಕೆ ಬದಲಾಗಿ ಉರ್ದುವನ್ನು ಓದಬಹುದೆಂದು ಅಪ್ಪಣೆ ಮಾಡಿದರು. ಅಂದರೆ ಕಾಲೇಜುಗಳಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಯು ಕನ್ನಡವನ್ನೂ ಸಂಸ್ಕೃತವನ್ನೂ ಅಭ್ಯಾಸಿಸಬೇಕು. ಸಂಸ್ಕೃತಾಭಿಮಾನಿಗಳು ಸಂಸ್ಕೃತವನ್ನಾಗಲಿ ಮಾತೃಭಾಷೆಯಾದವರು ತಮಿಳು ತೆಲುಗುಗಳನ್ನಾಗಲಿ ತೆಗೆದುಕೊಳ್ಳಕೂಡದು. ಇದಕ್ಕೆ ಅನುಸಾರವಾಗಿ ಸಂಸ್ಥಾನದ ಹೈಸ್ಕೂಲುಗಳಲ್ಲಿಯೂ ಬಾಲಶಾಲೆಗಳಲ್ಲಿಯೂ ಕೂಡ ಸಂಸ್ಕೃತದ ಶಿಕ್ಷಣವು ತೆಗೆದು ಹಾಕಲ್ಪಡಬೇಕೆಂದು ವಿದ್ಯಾ ಇಲಾಖಾಧಿಕಾರಿಗಳಿಂದಲೂ ಆಜ್ಞೆಯು ಹೊರಟಿತು.

ಈ ಪರಿಸ್ಥಿತಿಯನ್ನು ನೋಡಿ, ಜಯಚಂದ್ರನು ಮಹಮ್ಮದ್ ಗೋರಿಯೊಡನೆ ಸೇರಿಕೊಂಡು ಪೃಥ್ವೀರಾಜನನ್ನು ಕೊಂದಂತೆ ಕನ್ನಡವು ಉರ್ದುವಿನೊಡನೆ ಸೇರಿಕೊಂಡು ಸಂಸ್ಕೃವನ್ನು ನಾಶಮಾಡುವದು ಸರ್ವಥಾ ಅಧರ್ಮವೆಂದು. ಸಂಸ್ಥಾನದ ಮಹಾಜನಪ್ರಮುಖರೂ ವಿಶ್ವವಿದ್ಯಾನಿಲಯದ ವಿದ್ಯಾರ್ಥಿ ಬೃಂದಗಳೂ ಬೆಂಗಳೂರು ಮೈಸೂರು ನಗರಗಳಲ್ಲಿ ಮಹಾಸಭೆಗಳನ್ನು ನಡೆಸಿ, ಸಂಸ್ಕೃತವನ್ನೂ ಪೂರ್ವದಂತೆ ಇಡಲೇಬೇಕೆಂದು ಏಕವಾಕ್ಯತೆಯಿಂದ ನಿರ್ಧರಿಸಿದರು.

ಈ ವಿಷಯವನ್ನು ಕಳೆದ ಸೆನೆಟ್ ಅಧಿವೇಶನದಲ್ಲಿ ಕೆಲವು ಸದಸ್ಯರುಗಳು ಚರ್ಚೆಗೆ ತರಲು ಮ॥ ರಾ॥ ಬಿ. ಎಂ. ಶ್ರೀಕಂಠಯ್ಯನವರು ಸಂಸ್ಕೃತವನ್ನು ವಿರೋಧಿಸಿ ಮೇಲ್ಕಂಡ ಮಾತುಗಳನ್ನು ಉದ್ಘೋಷಿಸಿದರು. ದೇಶದ [illegible] ತರಗತಿಗಳಲ್ಲಿಯೂ ನೂರಕ್ಕೆ ಮೂವತ್ತು ಜನ

CC-0. Jangamwadi Math Collection. Digitized by eGangotri

ವಿದ್ಯಾರ್ಥಿಗಳು ಸಂಸ್ಕೃತವನ್ನು ಅಭ್ಯಾಸಮಾಡುತ್ತೇವೆಂದು ಕೇಳಲು ಅವರಿಗೆ ವಿದ್ಯಾಲಯಗಳಲ್ಲಿ ಅವಕಾಶವಿಲ್ಲಸಂತೆ ಮಾಡುವದು ರಾಜಧರ್ಮಕ್ಕೇ ವಿರುದ್ಧವಾದುದೆಂದು ಎಲ್ಲರೂ ಒಪ್ಪಿಕೊಳ್ಳಬೇಕು. ಮ॥ ರಾ॥ ಶ್ರೀಕಂಠಯ್ಯನವರು ಈ ಸರ್ವಸಮಂಜಸವಾದ ಅಭಿಪ್ರಾಯವನ್ನು ವಿರೋಧಿಸಿದುದಲ್ಲದೆ ಸಂಸ್ಕೃತವು ಕನ್ನಡಕ್ಕೆ ಶತ್ರುವೆಂದೂ ಕನ್ನಡಿಗರು ಸಂಸ್ಕೃತವನ್ನು ನಿರಾಕರಿಸಿ ಇಂಗ್ಲಿಷಿನ ಸಹಾಯವನ್ನು ಅವಲಂಬಿಸಬೇಕೆಂದೂ ಪ್ರತಿಪಾದಿಸಿದರು.

ಕನ್ನಡಭಾಷಾಭಿಮಾನಿಗಳೂ ಕನ್ನಡಭಾಷಾಪಂಡಿತರೂ ಕನ್ನಡಭಾಷೋದ್ಧಾರಕರೂ ಕನ್ನಡನಾಡಿನಲ್ಲಿ ಮ॥ ರಾ॥ ಶ್ರೀಕಂಠಯ್ಯನವರಂತೆ ಇನ್ನೂ ಅನೇಕರಿರುವರು. ಸಂಸ್ಕೃತವು ಕನ್ನಡವನ್ನು ಇದುವರೆಗೂ ಬಂಧನದಲ್ಲಿಟ್ಟಿದ್ದಿತೆಂಬುದನ್ನು, ಇನ್ನುಮುಂದೆ ಕನ್ನಡವು ಸಂಸ್ಕೃತವನ್ನು ದೂರಮಾಡಿ ಇಂಗ್ಲಿಷಿಗೆ ಋಣಿಯಾಗಬೇಕೆಂಬುದನ್ನು ಅವರುಗಳು ಸಮರ್ಥಿಸಿದ ಹೊರತು ಮ॥ ರಾ॥ ಶ್ರೀಕಂಠಯ್ಯನವರ ದೂಷಣೆಯೂ ಆಶಯವೂ ಆಪ್ತವಾಗಲಾರವು.

ಕನ್ನಡ ವರ್ಣಮಾಲೆಗೇ ಸಂಸ್ಕೃತವು ಮೂಲಾಧಾರವಾಗಿದ್ದು ೧೧ನೆಯ ಶತಮಾನದಿಂದ ೧೯ನೆಯ ಶತಮಾನದ ವರೆಗಿನ ಕನ್ನಡ ಸಾಹಿತ್ಯವೆಲ್ಲವೂ ಸಂಸ್ಕೃತವನ್ನು ಭಾಷೆಯಲ್ಲಿಯೂ ವೃತ್ತಗಳಲ್ಲಿಯೂ ಅಲಂಕಾರಗಳಲ್ಲಿಯೂ ಕಥಾಸಂದರ್ಭಗಳಲ್ಲಿಯೂ ಅನುಸರಿಸಿರುವಲ್ಲಿ, ಈಗ ಸಂಸ್ಕೃತದ ಗಂಧವೆ ಇಲ್ಲದೆ ಆ ಕನ್ನಡ ಸಾಹಿತ್ಯ ಸಮಗ್ರವನ್ನೂ ತಿಳಿದುಕೊಳ್ಳಬಲ್ಲರೆಂದು ಯಾರು ಹೇಳಿದರೂ ಅದು ಆಭಾಸವಾಗದಿರದು.

ಇದೆ ವಿಶ್ವವಿದ್ಯಾನಿಲಯದಲ್ಲಿ ವೇದಾಂತದ ಪ್ರಧಾನ ಪಾಠಕರಾದ ಪ್ರೊಫೆಸರ್ ವಾಡಿಯ ಎಂಬ ಪಾರ್ಶಿಯವರು, ಪರ್ಷಿಯದಲ್ಲಿ ಪಾಶ್ಚಾತ್ಯ ಪಂಡಿತರು ಸಂಸ್ಕೃತದ ಪರಿಚಯವನ್ನು ಹೊಂದಿ, ಆ ಭಾಷೆಯ ಸಹಾಯದಿಂದ ಪಾರ್ಶಿಗಳ ವೇದವಾದ ಜೆಂಡ ಅವೆಸ್ಟ ಎಂಬ ಪೂಜ್ಯ ಗ್ರಂಥಕ್ಕೆ ಅರ್ಥವನ್ನು ತಿಳಿಸಬೇಕಾಯಿತೆಂದೂ, ಈ ಉಪಕಾರಕ್ಕಾಗಿ ಪಾರ್ಶಿಗಳೆಲ್ಲರೂ ಸಂಸ್ಕೃತಕ್ಕೆ ಚಿರಕಾಲ ಋಣಿಗಳಾಗಿರಬೇಕೆಂದೂ ಹೇಳಿದ್ದಾರೆ. ಅಲ್ಲದೆ ಆದೆ ವಾಡಿಯರವರೆ ತಾವು ಬೊಂಬಾಯಿಯಿಂದ ಮೈಸೂರಿಗೆ ಬಂದಮೇಲೆ ಸಂಸ್ಕೃತವನ್ನು ಕಲಿಯಲಾರಂಭಿಸಿದರೆಂದೂ, ಆದರಿಂದ ಸಂಸ್ಕೃತದಲ್ಲಿ ವಿಶೇಷ ಜ್ಞಾನವುಂಟಾಗದಿದ್ದರೂ ಗುಜರಾಥಿ ಗ್ರಂಥಗಳು ಈ ಸಹಾಯದಿಂದ ಹೆಚ್ಚು ಹೆಚ್ಚಾಗಿ ಅರ್ಥವಾಗುತ್ತ ಬಂದವೆಂದೂ ಹೇಳಿರುವರು.

ಹೀಗಿರುವಲ್ಲಿ ಕನ್ನಡದ ಟೆಕ್ಸ್ಟ ಬುಕ್ ಕಮಿಟಿಗಳಿಗೂ ಬೋರ್ಡ್ ಆಫ್ ಸ್ಟಡಿಗಳಿಗೂ ಪಬ್ಲಿಕೇಶನ್ ಕಮಿಟಿಗೂ ಅಧ್ಯಾಪಕವರ್ಗಕ್ಕೂ ಪರೀಕ್ಷಕವರ್ಗಕ್ಕೂ ನಾಯಕರಾದ ಮ॥ ರಾ॥ ಶ್ರೀಕಂಠಯ್ಯನವರು ಸಂಸ್ಕೃತವನ್ನು ಬಹಿಷ್ಕರಿಸಬೇಕಂದರೆ ಅದಕ್ಕೆ ಅರ್ಥವೇನು? ಆದಿಪುರಾಣದಿಂದ ಹಿಡಿದು ಭಾಷಾಭೂಷಣ ಯದುನೃಪವಿಜಯಗಳ ವರೆಗಿನ ಕನ್ನಡ ಸಾಹಿತ್ಯವನ್ನೆಲ್ಲಾ ವಿದ್ಯಾರ್ಥಿಗಳು ಸಂಸ್ಕೃತಜ್ಞಾನವಿಲ್ಲದೆಯೆ ತಿಳಿಯಬಲ್ಲರೆಂದು ಇವರ ಭಾವನೆಯೆ? ಅಥವಾ ಕನ್ನಡ ಸಾಹಿತ್ಯಾಭಿಮಾನಿಗಳು ಆ ಗ್ರಂಥಗಳೆಲ್ಲವನ್ನೂ ಬಿಟ್ಟು ಬಿಟ್ಟು, ಮ॥ ರಾ॥ ಬಿ. ಎಂ. ಶ್ರೀಕಂಠಯ್ಯ, ಟಿ. ಎಸ್. ವೆಂಕಣ್ಣಯ್ಯ ಇವರುಗಳು ಮತ್ತು ಇವರ ಅನುಚರರು ಬರೆಯತಕ್ಕ ಗ್ರಂಥಗಳನ್ನೆ ಓದಿ ತೃಪ್ತರಾಗಬೇಕೆಂದು ಇವರ ಭಾವನೆಯೆ! ಮತ್ತು ಕನ್ನಡಕ್ಕೆ ಪರಿವರ್ತನೆಯಾಗಿ ಕನ್ನಡಿಗರು ತಿಳಿಯಬೇಕಾದ ಸಂಸ್ಕೃತದ ಶ್ಲಾಘ್ಯ ಕಾವ್ಯನಾಟಕಗಳೂ ಕೂಲಂಕಷವಾದ ಭೌತಿಕ ವೈದಿಕ ಶಾಸ್ತ್ರಗಳೂ ಇನ್ನೂ ಸಮುದ್ರದಂತೆ ಅಪಾರವಾಗಿರುವಲ್ಲಿ, ಕನ್ನಡ ಗ್ರಂಥಕಾರರು ಇನ್ನುಮೇಲೆ ಸಂಸ್ಕೃತವನ್ನು ತ್ಯಜಿಸಿ ಇಂಗ್ಲಿಷನ್ನು ಅನುವರ್ತಿಸಬೇಕೆಂದು ವಿಧಿಸಲು ಯಾವ ಒಬ್ಬ ಕನ್ನಡಿಗನಿಗೆ ತಾನೆ ಅಧಿಕಾರವುಂಟು? ಸಮಗ್ರ ಕರ್ನಾಟಕ ದೇಶದಲ್ಲಿ ಪಂಡಿತವರ್ಯರೂ ಸಾಹಿತ್ಯಶೀಲರೂ ಮೇಧಾವಿಗಳೂ ದೇಶಾಭಿಮಾನಿಗಳೂ ಆದ ಮಹನೀಯರನೇಕರಿರುವರು. ಅವರುಗಳೂ ಕರ್ನಾಟಕದ ಪಾಠಕಪ್ರಪಂಚವೂ ಮ॥ ರಾ॥ ಶ್ರೀಕಂಠಯ್ಯನವರ ಪ್ರಚಂಡ ನಿಯಮಗಳನ್ನು ಖಂಡಿಸಲೇಬೇಕು. ಅದಿಲ್ಲದೆ ಮೇಲ್ಕಂಡ ನಿಬಂಧನೆಗಳು ವಿಶ್ವಾಮಿತ್ರ ಸೃಷ್ಟಿಯಂತೆ ಸ್ವತಃ ಮಾನ್ಯವಾಗಲಾರವು. ಆದ್ದರಿಂದ ಯುಕ್ತಾಯುಕ್ತಜ್ಞರಾದ ವಿಮರ್ಶಕರೂ ಭಾಷಾಸಂಘಗಳೂ ಈ ವಿಚಾರವನ್ನು ಪರಿಶೀಲಿಸಿ, ಆತ್ಮಗೌರವಕ್ಕೂ ದೇಶಕ್ಷೇಮಕ್ಕೂ ತಕ್ಕಂತೆ ನಿರ್ಧರಿಸಿ ಕನ್ನಡವನ್ನು ಮುಂದಕ್ಕೆ ತರುವರೆಂದು ನಂಬುತ್ತೇನೆ.

CC-0. Jangamwadi Math Collection. Digitized by eGangotri

# "ಮಳೆಯು ನಾಡ ತೊಯ್ಯುತಿರೆ"

ಶ್ರೀ. ಪು. ತಿ. ನರಸಿಂಹಾಚಾರ್ಯ

೧

ಮಳೆಯು ನಾಡ ತೊಯ್ಯುತಿರೆ,
ಮಿಂಚಿಗಿರುಳು ಬೆದರುತಿರೆ,
ಗೂಢಮುದ್ದುಗೊಲ್ಲನೆಡೆಯೊಳೊಂದು ಹಣತೆಮಿನುಗುತಿರೆ
ಮುದವದೊಂದು ಮೊಳೆವುದು,
ಬಗೆಯ ಕಣ್ಣ ತೆರೆವುದು.

೨

ಹಿಂದೆ ಸೆರೆಗೆ ಸಿಲುಕುತ,
ಕಂಸಭಯಕೆ ನಡುಗುತ,
"ಹಡೆದ ಕೂಸು ಬಾಳ್ವುದೆಂತು" ಎನುತ ಗಾಸಿಯಾಗುತ,
ನೊಂದ ಪಿತರ ಚಿತ್ರವ
ಕಾಂಬೆ, ಕೃಷ್ಣನುದಯವ.

೩

ಒಲುಮೆ ತೊಡರ ಕಳಚಲು,
ತಂದೆ ಶಿಶುವನಪ್ಪಲು,
ತಾಯಿ ಕೊಡುವ ಕೊನೆಯ ಮುತ್ತು ಕಂಬನಿಯೊಳು
ನೆನೆಯಲು,
ಒಯ್ದನಂದು ಶಿಶುವನು,
ಬೆಳಗೆ ಗೋಪ ಗೃಹವನು,

೪

ಸಾಸಿರಹೆಡೆ ಸರ್ಪವು,
ಸೋನೆಗಾಗೆ ಛತ್ರವು,
ಮಾಯೆನಿದ್ರೆಗಂದು ಜಗವೆ ಕೆಡೆಯಲಡಗೆ ಶಬ್ದವು,
ಯಮುನೆ ಬತ್ತಿ ಬಟ್ಟೆಗೊಡೆ,
ಶಿಶುವ ಬಿಟ್ಟ ಗೊಲ್ಲನೆಡೆ.

೫

ಮಾಯೆ ಹರಿಯೆ, ಬಾಲನಳೆ
ಗೋಪಿಹರುಷವುಕ್ಕಿ ಬರೆ
ನಂದಗೋಪ ನೋಡಿನೋಡಿ ಸುತನ ಮುದ್ದ ಸೂರೆಗೊಳೆ,
ಅಂದು ಎಲ್ಲ ಗೋಕುಲ
ಹರುಷಕಾಯ್ತು ದೇಗುಲ.

೬

ಇಂತು ಗೊಲ್ಲನಾಗಿ ಹರಿ,
ಕರದಿ ಕೊಳಲು ನವಿಲುಗರಿ
ಶಿಖೆಯೊಳೆಸೆಯೆ, ಬೃಂದವನದೊಳಾಡಿ ಗೋವ ಕಾದಪಂ,
ಜಗಕೆ ರಮ್ಯವಾದುದು
ಇಂದು ಮೋದಪೀವುದು.

೭

ಕುಳಿರ್ವ ವನದಿ ಸೇರುವ
ಜೊನ್ನಕೂಟ ಕುಣಿತವ,
ಕೊಳಲುಕರೆವ ಮೋಹದಿಂಪಿಗೊಲಿದು ತುಡಿದಹೃದಯವ
ನೆನೆಯಲೆಷ್ಟು ಮೋದವು!
ಅಹಾ, ಏನು ಮೋದವು!

೮

ಕಾಳಿಮಡುವು, ರಾಸದೆಡೆ,
ಸುಖದಿ ಮೇವ ಗೋಗಳೆಡೆ
ತಳಿತ ಹೂತ ವನದೊಳಾಡಿ ಬುತ್ತಿಮೆಲುವ ಗೊಲ್ಲಪಡೆ,
ಇಂದು ಬರಿಯ ನೆನಪದು
ಕವಿಯು ಕಾಂಬ ಕನಸದು.

* * * *

೯

ಸೋನೆ ತಿರೆಯ ತೊಯ್ಯುತಿರೆ,
ಮಿಂಚೆ ತಿಮಿರ ನಡುಗುತಿರೆ,
ಗೂಡಗೊಲ್ಲ ಜೀವಗೊಂಡು ಹಿಂದೆ ನಿಂತು ಮನಕೆ ತರೆ,
ಮುದವು ಮೊಳೆತು ನಮೆವುದು,
ಸುಯ್ಯಲೊಂದ ತರುವುದು,
ಇಂದು ನಮ್ಮ ಬಾಳು ಗೋಳು, ಬಯಲು, ಹುಸಿಯು,
ಎನಿಪುದು.

CC-0. Jangamwadi Math Collection. Digitized by eGangotri

# ಕೆಲವು ನಾಟಕಗಳು

(ಪುಸ್ತಕಾವಲೋಕನ)

ಲೇಖಕರು—ಪ್ರೊ. ವಿ. ಕೃ. ಗೋಕಾಕ ಎಂ. ಎ.

## (೧) ಸರಳ ರಗಳೆ (Blank Verse)

ಸರಳ ರಗಳೆಯನ್ನು ನಮ್ಮ ಭಾಷೆಯಲ್ಲಿ ಬಳಸಹತ್ತಿ ಅನೇಕ ವರ್ಷಗಳಾದವು. ಇಂದಿಗೆ ಅದು ವಿಶೇಷತಃ ಕಾವ್ಯಮಯ ಸನ್ನಿವೇಶಗಳನ್ನು ರಂಗಭೂಮಿಯ ಮೇಲೆ ತರಲು ಸಹಾಯಕವಾಗಿ ಉಪಯೋಗಿಸಲ್ಪಡುತ್ತದೆ. ಮಂಗಳೂರಿನ ಕೆಲವು ಕವಿಗಳು ಅದನ್ನು ತಮ್ಮ ಕಾವ್ಯ ರಚನೆಗಾಗಿ ವಿನಿಯೋಜಿಸುತ್ತ ಬಂದಿದ್ದರು. ಶ್ರೀನಿವಾಸರು ತಮ್ಮ ಹಾಳೂರ ಕತೆಗಳಲ್ಲಿ ಸರಳ ರಗಳೆಯು ಕಥಾತ್ಮಕ ಶೈಲಿಗೂ ಹೇಗೆ ಅನುರೂಪವಾಗಿರುವದೆಂಬುದನ್ನು ತೋರಿಸಿದರು. ಕೆಲವು ತರುಣ ಕವಿಗಳು ಭಾವಗೀತಗಳನ್ನು ಸರಳ ರಗಳೆಯಲ್ಲಿ ಬರೆದು ತೋರಿಸಿದರು. ಇದಲ್ಲದೆ ಶ್ರೀ. ಪುಟ್ಟಪ್ಪನವರು 'ಯಮನ ಸೋಲಿ'ನಲ್ಲಿ ರಂಗಭೂಮಿಯ ಮೇಲೆ ಸರಳ ರಗಳೆಯು ಬಾಳಿಯಿಟ್ಟುದನ್ನು ಪ್ರಕಾಶಕ್ಕೆ ತಂದರು. ಅವರಾದರೂ ಬೆಳಕಿಗೆ ಬಂದುದು ಇದರಿಂದಲೇ. ಹೀಗೆ ಸಾಹಿತ್ಯದ ಅನೇಕ ಶಾಖೆಗಳು ಈಗಾಗಲೆ ಸರಳ ರಗಳೆಗೆ ಒಳಪಟ್ಟಿವೆ.

ವಾಚಕರಿಗಾಗಿ ಸರಳ ರಗಳೆಯ ಸ್ವರೂಪವನ್ನು ಕುರಿತು ಕೆಲವು ಮಾತುಗಳನ್ನು ಇಲ್ಲಿ ಬರೆಯಲಾಗಿದೆ. ಅವುಗಳಿಂದ ಕವಿಯು ಬದ್ಧನಾಗಿರುವನೆಂತಲ್ಲ. **ವಿವಿಧತೆಯನ್ನೂ ಸೌಂದರ್ಯವನ್ನೂ ಹೆಚ್ಚಿಸಲು ಕವಿಯು ಬಗೆಬಗೆಯಾದ ನೂತನ ಪ್ರಯೋಗಗಳನ್ನು ಮಾಡಬಹುದು. ಕವಿಯು ತನಗೆ ತಾನೆ ನಿರ್ಮಿಸಿಕೊಂಡ ಕಟ್ಟಳೆಗಳನ್ನು ಪೂರೈಸುವುದು ಉತ್ತಮ ಕಾವ್ಯದ ಮುಖ್ಯ ಲಕ್ಷಣವಲ್ಲವೆ?**

ಭಾವಗೀತೆಗಳ ಸರಳ ರಗಳೆಗೂ ನಾಟಕಗಳಲ್ಲಿಯ ರಸಮಯ ಸನ್ನಿವೇಶಗಳ ಸರಳ ರಗಳೆಗೂ ಅಷ್ಟೊಂದು ಅಂತರವಿರಲಾರದೆಂದು ನನ್ನ ಕಲ್ಪನೆ. ಏಕೆಂದರೆ ಒಂದಾನೊಂದು ಭಾವನೆಯ ಕುಸುಮವನ್ನರಳಿಸುವದೇ ಇವ್ವಗಳ ಸಾಮಾನ್ಯವಾದ ಉದ್ದೇಶವಾಗಿದೆ. ಸರಳ ರಗಳೆಯ ಮೇರೆಗುಂಟ ಬದಿಬದಿಗೆ ಎರಡು ರಾಜ್ಯಗಳಿವೆ. ಒಂದೆಡೆಗೆ ಪದ್ಯ, ಇನ್ನೊಂದೆಡೆಗೆ ಗದ್ಯ. ಮೇಲೆ ಹೇಳಿದ ಸಂದರ್ಭಗಳಲ್ಲಿ ಉಪಯೋಗಿಸಲ್ಪಟ್ಟ ಸರಳ ರಗಳೆಯು ಪೂರ್ಣವಾಗಿ ಪದ್ಯಮಯವಾಗಿರಬೇಕು: ಎಂದರೆ ಛಂದಸ್ಸಿನ ಬಿಗುವೂ ಭಾಷೆಯ ಗಾಂಭೀರ್ಯವೂ ಕಾವ್ಯಕ್ಕೂ ವ್ಯವಹಾರ ಸೃಷ್ಟಿಗೂ ಇರುವ ಭೇದವನ್ನು ನಿರಂತರವಾಗಿ ಸೂಚಿಸುತ್ತಿರಬೇಕು.

ಕಥಾತ್ಮಕ ಶೈಲಿಯ ಸರಳ ರಗಳೆಯು ಇದಕ್ಕಿಂತ ತುಸು ಭಿನ್ನವಾಗಿದೆ. ಅಲ್ಲಿಯೂ ಕಥನವು ಹಲವೆಡೆ ಕಾವ್ಯಮಯವಾಗಬಹುದು. ಅಲ್ಲಲ್ಲಿ ನಾಟಕದಲ್ಲಿಯ ಸಂಭಾಷಣೆಗಳ ರೀತಿಯೂ ಇಣಿಕಿ ನೋಡಬಹುದು. ಆದರೆ ಈ ಶೈಲಿಯಲ್ಲಿ ಮೂಲತಃ ಎರಡು ಗುಣಗಳಿರಬೇಕು,— ಮನೋಹರವಾದ ನಿರೂಪಣಚಾತುರ್ಯ ಹಾಗು ಅವ್ಯಾಹತವಾಗಿ ಕಥೆಯನ್ನು ನಿರೂಪಿಸುವ ನೀತಿ. ಈ ಉದ್ದೇಶವನ್ನು ಸಾಧಿಸಲು ಸರಳ ರಗಳೆಯು ತೊರೆಯಂತೆ ಹರಿಯಬೇಕಾಗುವದು. ಪ್ರತಿಯೊಂದು ಸಾಲಿನ ಕೊನೆಗೆ ವಿರಾಮವಿದ್ದಲ್ಲಿ ಅದು ವಿಘಾತಕವಾಗಿ ಪರಿಣಮಿಸುವದು.

ಪದ್ಯಗದ್ಯಗಳ ಸಮ್ಮಿಶ್ರಣವೇ ರಂಗಭೂಮಿಯ ಸರಳ ರಗಳೆಯ ರೀತಿಯೆಂದು ಹೇಳಬಹುದು. ಈ ಸಮ್ಮಿಶ್ರಣದ ಜಯಾಪಜಯವು ಕವಿಯ ಚಾತುರ್ಯವನ್ನವಲಂಬಿಸಿರುತ್ತದೆ. ಸಂವಿಧಾನಕವು ಕಾವ್ಯದಪರಿಪೂರ್ಣತೆಯನ್ನು ಬೇಡಲು, ಅಲ್ಲಲ್ಲಿ ಹಾಡುಗಳೂ ಇಲ್ಲವೆ ಹಾಡಿನಂತಹ

CC-0. Jangamwadi Math Collection. Digitized by eGangotri

ಸರಳ ರಗಳೆಯ ಶ್ಲೋಕ ( passages )ಗಳೂ ಬರಬಹುದು. ಯಾವದಾದರೊಂದು ಸಂಗತಿಯನ್ನು ರಂಗಭೂಮಿಯ ಮೇಲೆ ನಿರೂಪಿಸಬೇಕಾಗಲು, ಕಥಾತ್ಮಕ ರಗಳೆಯ ಯೋಜನೆಯಾಗಬಹುದು. ಆದರೆ ನಾಟಕವೆಂದರೆ ಮಾತು ಗಾರಿಕೆಯ ಸಾಧನದಿಂದ ಜೀವನವನ್ನು ಪ್ರತಿಬಿಂಬಿಸುವ ಸಾಹಿತ್ಯದ ಪ್ರಕಾರವೇ ಸರಿ. ಸಂಭಾಷಣೆಯೇ ಅದರ ಜೀವಾಳವಾಗಿದೆ. ವಾದಸಂವಾದಗಳ ಸಂಘರ್ಷಣೆ ಯಲ್ಲಿ ನಾಟಕದಂತಹ ರತ್ನವು ಲಭಿಸುವದು. ಇಲ್ಲಿರುವ ಸಂಭಾಷಣೆಯು ವ್ಯವಹಾರದಲ್ಲಿಯಂತೆ ವಾಸ್ತವಿಕ ವಾದರೂ ಸಾಹಿತ್ಯದಲ್ಲಿಯಂತೆ ಮಾರ್ಮಿಕವಾಗಿರಬೇಕು; ಪ್ರಸಂಗದಲ್ಲಿಯಂತೆ ಸಂಕೀರ್ಣ ವಿಷಯಗಳನ್ನೊಳ ಗೊಂಡುನಾದರೂ ಎಲ್ಲವೂ ಕಲಾಕೋವಿದನ ಮಂತ್ರ ದಿಂದ ಪುನೀತವಾಗಿರಬೇಕು. ಈ ಉದ್ದೇಶದ್ವಂದ್ವವನ್ನು ಸಾಧಿಸಲು ಅದು ಗದ್ಯದ ಹಾಗೆ ನಾವು ಆಡುತ್ತಿರುವ ಭಾಷೆಯಂತೆ ಕಿವಿಯ ಮೇಲೆ ಬೀಳುತ್ತಿರಬೇಕು; ಹಾಗು ಪ್ರಸಂಗ ವಿಶೇಷದಲ್ಲಿ ಪದ್ಯಮಯವಾಗಲು ಸಮರ್ಥವಿರ ಬೇಕು.

ಇಂತಹ ಮಾರ್ಪಾಟವು ವಿಧವಿಧವಾಗಿ ಸಂಭವಿಸ ಬಹುದು. 'ನಾಗರಿಕ' ದಲ್ಲಿ ವಿದಿತವಾದ ಶೈಲಿಯೆಂದರೆ ಸರಳ ರಗಳೆಯೊಂದೆ; ರಗಳೆಯ ರೀತಿಯಲ್ಲಿ ಕವಿಯು ಕೆಲವು ಮಹತ್ವದ ಪರಿವರ್ತನೆಗಳನ್ನು ಮಾಡಿ ಸಂಭಾಷ ಣೆಗೂ ನಾಟಕದ ಜೀವಾಳಕ್ಕೂ ಅದು ಅನುರೂಪವಾಗು ವಂತೆ ಮಾಡಿದ್ದಾನೆ. ಈ ರೀತಿಯಲ್ಲದೆ ಕವಿಯು ವಸ್ತು ವಿನ ಉದಾತ್ತವಾದ ಭಾಗವನ್ನಷ್ಟು ಸರಳ ರಗಳೆಯಲ್ಲಿ ರಚಿಸಿ ಪರಿಹಾಸಪೂರ್ಣ ಸನ್ನಿವೇಶಗಳನ್ನೂ ಸಾಮಾನ್ಯ ಜನಜೀವನವನ್ನು ಪ್ರತಿಬಿಂಬಿಸುವ ವಿಷಯಗಳನ್ನೂ ಗದ್ಯದಲ್ಲಿ ಬರೆಯಬಹುದು. ಶೇಕ್ಸಪಿಯರನ **The Tempest** ಎಂಬ ನಾಟಕದ ಅನುವಾದವಾದ **'ಬಿರುಗಾಳಿ'** ಯಲ್ಲಿಯೂ **'ಶ್ಮಶಾನ ಕುರುಕ್ಷೇತ್ರ'** ದಲ್ಲಿಯೂ ಇದು ಗೋಚರವಾಗುವದು.

ಅಂತೂ ನಾಟಕದಲ್ಲಿ ಬಳಸುವ ಸರಳ ರಗಳೆಯ ಸ್ವರೂಪವು ರಗಳೆಯ ಉಳಿದ ರೀತಿಗಳಿಗಿಂತ ಭಿನ್ನವಾಗಿ ರುವದೆಂದು ಹೇಳಬಹುದು. ಸಂಭಾಷಣೆಗೆ ಅನುರೂಪ ವಾಗುವಂತೆ ರಗಳೆಯ ಬಂಧವು ಮಾರ್ಪಡಬೇಕಾಗು ವದು. ಸಂದರ್ಭಕ್ಕನುಸರಿಸಿ ಅದು ಸ್ವಲ್ಪ ಶಿಥಿಲವಾಗ ಬೇಕು; ಅಲ್ಲದೆ ಮೇಲಿಂದಮೇಲೆ ಉಳಿದ ಬಂಧಾನುಬಂಧ ಗಳಿಗೆ ಆಸ್ಪದ ಕೊಡಬೇಕು. ಇದನ್ನೆಲ್ಲ ಮಾಡಿದರೂ ಮತ್ತೆ ಅದು ಸರಳ ರಗಳೆಯಾಗಿಯೇ ಉಳಿಯಬೇಕು.

ಇನ್ನು ಸರಳ ರಗಳೆಯ ಬಂಧವನ್ನು ಪರೀಕ್ಷಿಸುವಾ. ಇಲ್ಲಿಯ ಒಂದು ಗಣಕ್ಕೆ ೫ ಮಾತ್ರೆಗಳಿರುತ್ತವೆ. ಇಂಥ ನಾಲ್ಕು ಗಣಗಳು ಕೂಡಿ ಸರಳ ರಗಳೆಯ ಒಂದು ಸಾಲಾಗುತ್ತದೆ.

**"ಹುಟ್ಟಿದೊಡೆ ಸದ್ಗುಣವು ದುರ್ಗುಣಕೆ ತಿರುಗುವದು"**

ಈ ಸಾಲಿನಲ್ಲಿ ಒಂದೊಂದು ಶಬ್ದವೂ ಒಂದೊಂದು ಗಣವಾಗಿದೆ. ಆದರೆ ಗಣಗಳು ಹೀಗೆ ಸರಳವಿರುವದು ಅತಿ ವಿರಳ:

"ಸ್ವರ್ಗನರಕಗಳೆಂಬ ತಾ ರ ತ ಮ್ಯ ವ ನೊ ರೆದು"

ಇಲ್ಲಿಯ ಗಣಗಳನ್ನು ಹೀಗೆ ವಿಭಾಗಿಸಬಹುದು:—

ಸ್ವರ್ಗನರ। ಕಗಳೆಂಬ। ತಾರತಮ್। ಯವನೊರೆದು।

ಅಂತೂ ೫ ಮಾತ್ರೆಗಳಿಂದ ಒಂದು ಗಣವು ಉದ್ಭವಿಸಿ ಇಂಥ ನಾಲ್ಕು ಗಣಗಳಿಂದ ಸರಳ ರಗಳೆಯ ಒಂದು ಸಾಲು ಪರಿಪೂರ್ಣವಾಗುತ್ತದೆ.

ಈ ಸರಳ ರಗಳೆಯು ವಾರ್ಧಿಕ ಷಟ್ಪದಿಯ ಮೊದಲ ನೆಯ ಚರಣವನ್ನು ಹೋಲುತ್ತದೆ. ಆದರೆ ಅದು ಕನ್ನಡ ಭಾಷೆಗೆ ಪರಿವರ್ತಿತವಾದ ಇಂಗ್ಲಿಷಿನಲ್ಲಿ Blank Verse (ಬೋಳು ಪದ)ದ ಸ್ವರೂಪವೆಂಬುದು ನಿರ್ವಿವಾದ ವಾಗಿದೆ. ಇಂಗ್ಲಿಷಿನಲ್ಲಿ ಎರಡು ಅವಯವಗಳು (sylla- bles) ಕೂಡಲು ಒಂದು ಪಾದ ಇಲ್ಲವೆ ಗಣವಾಗುತ್ತದೆ. ಈ ಪಾದದ ಎರಡನೆಯ ಅವಯವದ ಮೇಲೆ ಆಘಾತ (accent) ವಿರಬೇಕು. ಇಂಥ ೫ ಪಾದ ಇಲ್ಲವೆ ಗಣಗಳು ಕೂಡಿ ಇಂಗ್ಲಿಷಿನ ಸರಳ ರಗಳೆಯ ಒಂದು ಚರಣವಾಗುತ್ತದೆ. ಕನ್ನಡದ ಹಾಗು ಇಂಗ್ಲಿಷಿನ ಈ ಚರಣಗಳನ್ನು ಉಚ್ಚರಿಸಲಿಕ್ಕೆ ಸುಮಾರು ಅಷ್ಟೇ ವೇಳೆಯು ಬೇಕಾಗುವದರಿಂದ ಪರಿವರ್ತನೆಯು ಯೋಗ್ಯವಾಗಿದೆ ಯೆನ್ನಬಹುದು.

ಆದರೆ ಕಾವ್ಯದಲ್ಲಿಯಾಗಲಿ ನಾಟಕದಲ್ಲಿಯಾಗಲಿ ಈ ಚರಣದನಿಯಮಗಳನ್ನು ಕಡೆತನಕ ಕಾಯ್ದರೆ ವಿಷಯವು ವಿವಿಧವಾದರೂ ಓದುವದು(ಇಲ್ಲವೆ ಕೇಳುವದು) ಒಂದು ಬೇಸರದ ವ್ಯವಸಾಯವಾಗುವದು. ಇದನ್ನು ಹೋಗಲಾ ಡಿಸಲು ಬಂಧದಲ್ಲಿ ವೈವಿಧ್ಯವು ಬೇಕು. ಸರಳ



CC-0. Jangamwadi Math Collection. Digitized by eGangotri

ರಗಳೆಯು ಸರಳವಾಗದೆ ನವೋನವವಾದ ಕೈವಾಡಕ್ಕೆ ಎಡೆಯನ್ನಿತ್ತಿರಬೇಕು. ಎಂದರೆ ಸಾಲು ಸಾಲಿಗೂ ಗ್ರಂಥವು ಚಿತ್ತಾಕರ್ಷಕವಾಗುವದಲ್ಲದೆ ಕವಿಯ ಸ್ವಂತದ ಸ್ಫೂರ್ತಿಯನ್ನೂ ಚಾತುರ್ಯವನ್ನೂ ತೋರಿಸಲು ಅನುಕೂಲವಾಗುವದು. ಈ ವೈವಿಧ್ಯವನ್ನು ಕಾಣಿಸಲು ಉಪಯುಕ್ತವಾದ ಹಂಚಿಕೆಗಳಲ್ಲಿ ಇಂಗ್ಲಿಷಿಗೂ ಕನ್ನಡಕ್ಕೂ ಸಾಮಾನ್ಯವಾದ ಕೆಲವು ರೀತಿಗಳನ್ನು ಇಲ್ಲಿ ಉಲ್ಲೇಖಿಸುತ್ತೇನೆ:—

**(೧) ಗುರು-ಲಘು ಮಾತ್ರೆಗಳ ಯೋಜನೆ:** ಇಂಗ್ಲಿಷಿನ ಪ್ರತಿಯೊಂದು ಚರಣದಲ್ಲಿ ಎರಡನೆಯ ಅವಯವದ ಮೇಲೆ ಆಘಾತವು ಇರಬೇಕೆಂದಿದ್ದರೂ, ಈ ಆಘಾತದ ಸ್ಥಾನಾಂತರವಾಗುವದರಿಂದ ಒಮ್ಮೊಮ್ಮೆ ಕಾವ್ಯಕ್ಕೆ ಲಾಲಿತ್ಯವು ಬರುತ್ತದೆ. ಇದರಂತೆ ಆಘಾತವು ಮೊದಲನೆಯ ಅವಯವದ ಮೇಲಿರಬಹುದು; ಇಲ್ಲವೆ ಒಂದು ಪಾದದ ಎರಡೂ ಅವಯವಗಳ ಮೇಲಿರಬಹುದು; ಇಲ್ಲವೆ ೩ ಅವಯವಗಳು ಕೂಡಿ ಒಂದು ಪಾದವಾಗಬಹುದು. ಇನ್ನು ಕನ್ನಡದಲ್ಲಿ ಒಂದು ಗಣದಲ್ಲಿ ೫ ಮಾತ್ರೆಗಳು ಇರಬೇಕೆಂದಿದ್ದರೂ, ಇಷ್ಟು ಗುರು, ಇಷ್ಟು ಲಘು ಎಂದು ನಿರ್ದಿಷ್ಟವಾಗಿಲ್ಲ. ಲಘು-ಗುರುಗಳನ್ನು ಕೂಡಿಸಿ ಸುರಮ್ಯವಾಗಿ ಉಪಯೋಗಿಸುವದು ಕವಿಯನ್ನೇ ಕೂಡಿದೆ. ಭಾವನೆಯಲ್ಲಿ ಉಂಟಾಗುವ ಮಣಿತಕ್ಕೆ ತಕ್ಕಂತೆ ಲಘು-ಗುರುಗಳ ಬೆರಿಕೆಯೂ ಹೆಚ್ಚು ಕಡಿಮೆಯಾಗಬಹುದು. ಇದನ್ನು ಎರಡು ಉದಾಹರಣೆಗಳಲ್ಲಿ ತೋರಿಸಲಾಗಿದೆ:—

(ಅ) ಮರಗಳಿರ, ತೊರೆಗಳಿರ, ಕೆರೆಗಳಿರ, ಎಲೆಲೆ ಬನ-
ದಭಿಮಾನ ದೇವತೆಗಳಿರ, ಬುವಿಯೊಳಾಗಸದೊಳ್

(ಬ) ಕರ್ಬೊಗೆಯ ಕಾರುವ ಸಿಡಿಲ್ಗಳನೆ ನಿರ್ಮಿಪರ್!
ಗ್ರಹಚಂದ್ರತಾರೆಗಳನಳೆಯುವರ್, ತೂಗುವರ್!

ಆದರೆ ಲಘು-ಗುರುಗಳಲ್ಲಿ ಎಷ್ಟು ಅಂತರವಾದರೂ ೫ ಮಾತ್ರೆಗಳ ೪ ಗಣಗಳಲ್ಲಿ ಯಾವ ಅಭ್ಯಂತರವಾಗಿಲ್ಲವೆಂಬುದನ್ನು ನಾವು ಮರೆಯಕೂಡದು.

(೨) ಇನ್ನು ಈ ನಾಲ್ಕು ಗಣಗಳನ್ನು ಮಾತನಾಡುತ್ತಿರುವ ಪಾತ್ರಗಳ ನಡುವೆ ಒಮ್ಮೊಮ್ಮೆ ಹಂಚಿಕೊಡಬಹುದು.

ಭೈರವ— ಹೋಗು, ನಡೆ; ಶನಿಶಕ್ತಿ, ಬ್ರಹ್ಮಣ,
ತ್ರಿಶಂಕುಗಳ ನೀಯೆಡೆಗೆ ಕರೆದು ತಾ!

ಕಿನ್ನರ— ಎನೆಯಿಕ್ಕುವುದರೊಳೇ
ಅವರನಿಲ್ಲಿಗೆ ತರುಬಿ ಎಳ್ಪುವೆನು!

ಜಯದೇವ—
ಮಾಯೆಗಿದು
ತವರುಮನೆಯಾದಂತೆ ತೋರುತಿದೆ. ಶಿವಶಿವಾ!"

ಇಲ್ಲವೆ ಒಂದು ಪಾತ್ರವು ಮಾಡಿದ ದೀರ್ಘ ಭಾಷಣದ ಕೊನೆಗೆ ೨ ಇಲ್ಲವೆ ೩ ಇಲ್ಲವೆ ೧ ಗಣದ ಚರಣವು ಬರಬಹುದು.

(೩) ಇನ್ನು ನಾಲ್ಕು ಗಣಗಳ ೨೦ ಮಾತ್ರೆಗಳಲ್ಲಿ ಒಂದು ಚರಣದಲ್ಲಿ ಒಂದು ಇಲ್ಲವೆ ೨ ಮಾತ್ರೆಗಳು ಹೆಚ್ಚಿರುವದುಂಟು. ಇದಾದರೂ ವೈವಿಧ್ಯಕ್ಕಾಗಿಯೇ. ಆದರೆ ಈ ಸ್ವಾತಂತ್ರ್ಯವನ್ನು ಕವಿಗಳು ಮೇಲಿಂದಮೇಲೆ ತೆಗೆದುಕೊಂಡರೆ ಬಂಧವು ತೀರ ಶಿಥಿಲವಾಗಿ ಹೋಗುವದು. ಬಿಗುವಿನಿಂದ ಉಪಯೋಗಿಸಿದಲ್ಲಿ ಈ ಶಿಥಿಲಾಂತ್ಯ (weak ending) ಸರಳ ರಗಳೆಯಲ್ಲಿಯೂ ಒಂದು ಮನೋಹರತೆ ಇದೆ:

"ಅಳಿದ ತುಳಿಲಾಳ್ಗಳ ಶವಂಗಳಂ ನಿಸಗಿತ್ತಪೆನೆ!
ಮುರಿದ ಹೊಂದೇರುಗಳ ಮಂದೆಯಂ ತೋರ್ದಪೆನೆ"

ಇಲ್ಲಿ ಮೊದಲನೆಯ ಸಾಲಿನಲ್ಲಿಯ ಕಡೆಯ ಎರಡು ಮಾತ್ರೆಗಳು ಹೆಚ್ಚಿನವೆಂದು ಸಹಜವಾಗಿ ತಿಳಿಯುವದು. ಇದಲ್ಲದೆ ಒಮ್ಮೊಮ್ಮೆ ೧ ಇಲ್ಲವೆ ೨ ಮಾತ್ರೆಗಳು ಕಡಿಮೆಯಾಗಬಹುದು; ಎಂದರೆ ಒಂದು ಚರಣದಲ್ಲಿ ೧೮ ಇಲ್ಲವೆ ೧೯ ಮಾತ್ರೆಗಳು ಇರಬಹುದು. ಈ ನಿಯಮವನ್ನು ಇಂಗ್ಲಿಷಿನಲ್ಲಿ ಪಾಲಿಸಿಲ್ಲ. ಆದರೆ ಕನ್ನಡಕ್ಕೆ ಇದು ಯೋಗ್ಯವಾಗಬಹುದೆಂದು ತೋರುತ್ತದೆ:

"ಸಿದ್ಧಾರ್ಥ! ಸತಿಯ ಗೋಳಿಗೆ ನೂಂಕಿ, ಕಂಬನಿಯ
ಕರೆಯದೆಯೆ ಓಡುತಿಹೆ, ತಸ್ಕರನ ತೆರದಿ!"

ಇಲ್ಲಿಯ ಎರಡನೆಯ ಸಾಲಿನಲ್ಲಿಯ ನಾಲ್ಕನೆಯ ಗಣದಲ್ಲಿ ಎರಡು ಮಾತ್ರೆಗಳು ಕಡಿಮೆಯಾಗಿರುತ್ತವೆ.

(೪) ಪ್ರತಿಯೊಂದು ಚರಣದ ಕಡೆಗೆ ಸಹಜವಾಗಿ ವಿರಾಮ (stop) ವಿರುವದಷ್ಟೆ. ಆದರೆ ಕಾವ್ಯಕ್ಕೆ ಮಧುರವಾಗಿರಬೇಕೆಂದು ಈ ವಿರಾಮವನ್ನು ತೆಗೆದು ಅರ್ಥವು ಪೂರ್ಣವಾಗುವತನಕ ಕೆಲವೆಡೆಗೆ ಕವಿಯು ರಗಳೆಯನ್ನು ಅವ್ಯಾಹತವಾಗಿ ಸಾಗಿಸುತ್ತಾನೆ. ಪ್ರತಿಚರಣದ ಕೊನೆಗೆ ವಿರಾಮವಿರುವದನ್ನು ಇಲ್ಲಿ ತೋರಿಸಲಾಗಿದೆ:—

CC-0. Jangamwadi Math Collection. Digitized by eGangotri

"ಕರ್ಣಸಂ ಎನ್ನೊಡನೆ ಚಿತೆಯಲ್ಲಿ ಬೇಳ್ದಪೆಯಾ?
ನಾವಿರ್ವರೊಂದಾಗಿ ಭೂಮಿಯಲಿ ಬಾಳಿದೆವು.
ಸಾವಿನೊಳಿರ್ವರುಂ ಒಂದಾಗಿ ಸಲಿಯುವೆವು."

ಶೈಲಿಯು ಅವ್ಯಾಹತವಾಗಿ ಪ್ರವಹಿಸುವದು ಇಲ್ಲಿ ಕಂಡುಬರುವದು:—

"ಕಲಿದೇವ, ದ್ವಾಪರಂ ಕಲಿಯುಸೀ ಮಸಣದಲಿ
ಎಸುರುಗೊಳ್ವಂತಾಯ್ತೆ?ಮುಂದೆ ಬಹಯುಗಪುರುಷ
ನಾಗಲಿಹ ನಿನಗೆ ಈ ಸತ್ತ ಸುಡುಗಾಡಿನಲಿ
ಪಟ್ಟಾಭಿಷೇಕಮಪ್ಪಂತುಟಾಯ್ತೆ?"

ದೋಷರಹಿತವಾದರೂ ಶೈಲಿಯು ಅಷ್ಟು ಮನೋಹರವಾಗದೆ ವಿರಾಮವಿಲ್ಲದೆ ಸಾಗುವದು ಇಲ್ಲಿ ಗೋಚರವಾಗುವದು:--

"ಮೂರ್ಖ! ಕೈಯೊಡ್ಡು. ತೀ
ರ್ಥ ಪ್ರಸಾದಗಳ ಪಿಡಿ; ನೋಡು ಗುಡಿಯೆಂಬ ಬು
ದ್ಧಿ ತಾ ಜನಿಸುವದು,ಪುಟ್ಟು ವುದೀಶನಲಿ ಭಕ್ತಿ."

ಈ ತರದ ಅವ್ಯಾಹತ ಪ್ರಯೋಗವು ಉತ್ತಮವಾದ ಸರಳ ರಗಳೆಯ ವಿಶಿಷ್ಟ ಲಕ್ಷಣವಾಗಿದೆ. ಹಾಗು ನಾಟಕದಲ್ಲಿಯ ಮಾತುಗಾರಿಕೆಗೆ ಇದರಿಂದ ಒಮ್ಮೊಮ್ಮೆ ಹೊಂಗಳಸವನ್ನೇರಿಸಿದಂತಾಗುವದು:--

"ಎಲೆ ಪಾಪಿ, ಗದ್ದಲವೆ? ದೇವದೇವನ ಪೂಜೆ
ಗದ್ದಲವೆ? ಎಮ್ಮೊಡೆಯ ಹಂಪೆಯರಸನ, ವಿರೂ
ಪಾಕ್ಷದೇವನ ಪೂಜೆ ಗದ್ದಲವೆ?

(೫) ಒಂದು ಪ್ರವೇಶದ ಆದಿಯಲ್ಲಿ, ಮಧ್ಯದಲ್ಲಿ, ಇಲ್ಲವೆ ಅಂತ್ಯದಲ್ಲಿ ಹಲಕೆಲವು ದ್ವಿಪದಿಗಳನ್ನು ಉಪಯೋಗಿಸಬಹುದು. ಆದರೆ ಅದಕ್ಕೆ ತಕ್ಕ ಕಾರಣವಿರಬೇಕು. ಇದಲ್ಲದೆ ಅವುಗಳ ಸಾಲುಗಳು ಸರಳ ರಗಳೆಯ ಚರಣದ ಅಳತೆಯುಳ್ಳವಿರಬೇಕು.ಉದಾಹರಣೆಗಾಗಿ 'ಮಹಾರಾತ್ರಿ' ಯ ೭ನೆಯ ದೃಶ್ಯದ ಕಡೆಯ ನಾಲ್ಕು ಸಾಲುಗಳನ್ನು ನೋಡಬಹುದು. ಇಲ್ಲವೆ ಈ ದ್ವಿಪದಿ:—

ಹನಿಯಿಂದ ಸಾಗರಕೆ ಹಾರೆಲೈ ಧೀರಾತ್ಮ!
ಛವಿಯಿಂದ ರವಿಯೊಳೊಂದಾಗೆಲೈ ವೀರಾತ್ಮ!"

ಸಿದ್ಧಾರ್ಥನು ಹನಿಯಿಂದ ಸಾಗರಕ್ಕೆ ಹೇಗೆ ಹಾರಿದನೋ ನಮಗೆ ಗೊತ್ತಿಲ್ಲ. ಆದರೆ ಇಲ್ಲಿ ಕವಿಯು ಮಾತ್ರ ಸರಳ ರಗಳೆಯಿಂದ ದ್ವಿಪದಿಗೆ ವಿಜಯಶಾಲಿಯಾಗಿ ಹಾರಿದ್ದಾನೆ.

(೬) ನಾಟಕವು ಅರ್ಧ ಗದ್ಯದಲ್ಲಿಯೂ ಅರ್ಧ ಸರಳ ರಗಳೆಯಲ್ಲಿಯೂ ಇರಬಹುದೆಂದು ಹೇಳಿದ್ದಾಯಿತು. 'ಅಶ್ವತ್ಥಾಮ' ದಲ್ಲಿಯಂತೆ ಬೇಡರ ಮೇಳದ ಸಂಗೀತದ ತಾಲಕ್ಕೆ ನಾಟಕದ ಸರಳ ರಗಳೆಯು ಸಾಗಬಹುದು. 'ಜಲಗಾರ' ದಲ್ಲಿನ ಸರಳ ರಗಳೆಯಂತೆ ಅದು ಒಮ್ಮೊಮ್ಮೆ ಗೀತೆಗಳಿಂದ ತುಂಬಿ ತುಳುಕಬಹುದು.

## (೨) ಪುಟ್ಟಪ್ಪನವರ ಕೆಲವು ಪ್ರಯೋಗಗಳು

ಗತಯುಗದ ಕವಿಗಳಲ್ಲಿ ಕೆಲವರು ಸರಳ ರಗಳೆಯನ್ನು ಉಪಯೋಗಿಸಿರುವದುಂಟು. ಆದರೆ ಇಂದಿನವರ ಕೃತಿಗಳಲ್ಲಿ ಅದಕ್ಕೆ ವಿಶೇಷತಃ ಇಂಗ್ಲಿಷಿನ 'ಬ್ಲ್ಯಾಂಕ್ ವ್ಹರ್ಸ'ದ ಲಕ್ಷಣಗಳನ್ನು ಕೂಡಲಾಗಿದೆ. ಕಾವ್ಯದ ಅನಂತಸ್ವರೂಪವನ್ನು ತಿಳಿದವರು ಇದಕ್ಕಿಂತ ಹೆಚ್ಚಿನ ಮಾರ್ಪಾಟಗಳು ಇಂದು ಸಂಭವಿಸುವವೆಂದರೆ ಎಂದಿಗೂ ಅಸಂತುಷ್ಟರಾಗಲಾರರು. ಶೇಕ್ಸಪಿಯರನು ತನ್ನ ಕೃತಿಗಳಲ್ಲಿ ಹೆಣೆದ ಶಿಥಿಲಾಂತ್ಯದ ( weak ending ) ಸರಳ ರಗಳೆಯು ಪ್ರಸಂಗವಿಶೇಷದಲ್ಲಿ ಅವಶ್ಯವಾದ ಪ್ರಯೋಗವಾಗಿದೆ. ಆದರೆ ಈ ಮಾರ್ಪಾಟಗಳಿಂದ ಸರಳ ರಗಳೆಯ ಅಸ್ತಿತ್ವಕ್ಕೆ ಮಾತ್ರ ಭಂಗ ಬಂದಿರಬಾರದು. ಹಾಗಿದ್ದ ಪಕ್ಷದಲ್ಲಿ ಇಂಥ ಪ್ರಯೋಗಗಳನ್ನು ಕ್ವಚಿತ್ತಾಗಿಯೂ, ಹಾಗು ಯೋಗ್ಯವಾದ ಕಾರಣಗಳಿಂದ ಸಮರ್ಥಿಸಿಯೂ, ಮಾತ್ರ ಉಪಯೋಗಿಸಬಹುದೆಂಬ ಮಾತನ್ನು ಯಾರಾದರೂ ಒಪ್ಪುವಂತಿದೆ. ಇವು ವಿರಳವಾಗಿ ಬಂದಲ್ಲಿ ಗ್ರಂಥಕ್ಕೆ ಭೂಷಣವೇ ಸರಿ.

ಆದರೆ ಗ್ರಂಥರಚನೆಯ ತಳಹದಿಯೇ ಇವುಗಳ ಮೇಲೆ ನಿಂತಂತೆ ಭಾಸವಾದಲ್ಲಿ ಅದು ವಿಷಾದಕರವಾದುದು. ಕೆಲವು ನ್ಯಾಯವಾದ ಕಟ್ಟಳೆಗಳಿಂದ ಕೂಡ ಕವಿಯು ಸ್ವಾತಂತ್ರ್ಯವನ್ನು ಇಚ್ಛಿಸುವನೆಂಬ ಮಾತಿಗೆ ಈ ಪ್ರವೃತ್ತಿಯು ಸಾಕ್ಷಿಯಾಗಿ ನಿಲ್ಲುವದು. ಇದು ಪುಟ್ಟಪ್ಪನವರ 'ಬಿರುಗಾಳಿ 'ಯಲ್ಲಿಯೂ 'ಮೂರು ನಾಟಕಗಳ'ಲ್ಲಿಯೂ ಅಲ್ಲಲ್ಲಿ ಕಂಡುಬರುತ್ತದೆ.

೧) ಮಾತ್ರೆಗಳಿಗೆ ಎರಡು ಮೂರು ಮಾತ್ರೆಗಳು ಹೆಚ್ಚು ಕಡಿಮೆಯಾಗಿ ಬರಬಹುದೆಂದು ನಾವು ಉಲ್ಲೇಖಿಸಿದ್ದೆವು. ಈ ಮಾರ್ಪಾಟವು ಚರಣದ ಕೊನೆಯಲ್ಲಿ ಯಾಗದೆ ಆದಿಯಲ್ಲಿ ಇಲ್ಲವೆ ಮಧ್ಯದಲ್ಲಿ ಆಗಬಹುದು. ಈ ವಿಪರ್ಯಾಸವಾಗುವದೇ ಇದ್ದಲ್ಲಿ, ಅದು ಬಿಗುವಿನಿಂದಾಗಬೇಕು. ಆದಾಗ್ಯೂ ಚತುರ್ಮಾತ್ರೆಯ ನಾಲ್ಕು ಗಣಗಳು

CC-0. Jangamwadi Math Collection. Digitized by eGangotri

ಸಾಧಾರಣ ನಿಯಮ: ಆದರೆ ನಿರ್ವಾಹವಿಲ್ಲದೆ ಇಲ್ಲಿ ನಿಯಮವನ್ನು ಉಲ್ಲಂಘಿಸಲಾಗಿದೆ ' ಎಂಬ ಆಶಯವು ಆ ಚರಣದಿಂದ ಸ್ಪಷ್ಟವಾಗಿ ತೋರಬೇಕು. ಹಾಗಿಲ್ಲದಿದ್ದರೆ ಕವಿಯು ನಿರಂಕುಶನಾದನೆಂದು ವಾಚಕರಿಗೆ ಸಹಜವಾಗಿ ತಿಳಿಯುವದು. ಮಾತ್ರೆಗಳು . ಹೆಚ್ಚುಕಡಿಮೆಯಾಗುವದು ಚರಣದ ಕೊನೆಯಲ್ಲಾದರೆ ಈ ಉದ್ದೇಶವು ಹೆಚ್ಚು ಸ್ಪಷ್ಟವಾಗುವದು. ಆದರೆ ಇದು ಆದಿಯಲ್ಲಿಯಾಗಲಿ ಮಧ್ಯದಲ್ಲಿಯಾಗಲಿ ಸಂಭವಿಸಬಹುದು.

' **ಅವನಿಗಿಲ್ಲ** | ಮೇಣವನ | ಬುದ್ಧಿಯೋ | ಕಂಟಕನ | '
' ತೀರದಲ್ | **ಲೆದುರುಗೊಳ್ಳ** | ಬೇಕಜ್ಜಾ | ಹೊರಡೋಣ |'
' ಸುದ್ದಿಯನು | **ಸಾರಿ** | ಧನ್ಯರಾ | ಗೋಣ ಬಾ | '
' **ನೀತಿ** | ಅನೀತಿ | ಪಾಪಪುಣ್ | ಯಗಳೆಂಬ | '
' ಸಜ್ಜನತೆ | ದುರ್ಜನತೆ | **ಧರ್ಮ೦** | ಅಧರ್ಮ೦ | '
' ಈ ಸುಡುಗಾ | **ಡನೋಟಂ** | ಕಣ್ಗಳಿಲ್ | ಲದ ನೀನೆ | '
' ಸಂಜಯನೊ | **ಡಗೂಡಿ** | ದೇವರುಂ | ದೇವಿಯುಂ |
' **ಹೋಗು** | ಎಲ್ಲಿಯೂ | ನಿಲ್ಲದೆಯೆ | **ಹೋಗು** '

ಚರಣಗಳ ಕೊನೆಗೆ ಮಾತ್ರೆಗಳು ಹೆಚ್ಚುಕಡಿಮೆಯಾಗುವದರಿಂದಾದ ಛಂದೋಭಂಗವು ಶೇಕ್ಸಪಿಯರನ ಕೊನೆಯ ನಾಟಕಗಳಲ್ಲಿ ಆವನ ಉದ್ಯೋಗಶೀಲತೆಯು ಕಡಿಮೆಯಾಯಿತೆಂದು ಹೇಳಲು ಕಾರಣವಾಯಿತು. ಇದೇ ಛಂದೋಭಂಗದ ಪ್ರಯೋಗವು ಅವನ ಮೊದಲಿನ ನಾಟಕಗಳಲ್ಲಿ ಪ್ರಸಂಗೋಚಿತವಾಗಿದ್ದರಿಂದ ಅವುಗಳ ಸೌಂದರ್ಯವನ್ನು ಹೆಚ್ಚಿಸಿತು. ಪುಟ್ಟಪ್ಪನವರಲ್ಲಿ ಶೇಕ್ಸಪಿಯರನ ಚಾತುರ್ಯವಿದೆಯೋ ಇಲ್ಲವೋ ಎಂಬುದು ಇಲ್ಲಿ ಅಪ್ರಸ್ತುತವಾದ ವಿಷಯವಾಗಿದೆ. ಅವರೂ ವಿಶೇಷತಃ ' **ಬಿರುಗಾಳಿ** ' ಯಲ್ಲಿ ಈ ಛಂದೋಭಂಗವನ್ನು ಉಪಯೋಗಿಸಿದ್ದಾರೆ. ಇಷ್ಟಕ್ಕೆ ಸಾಲದೆನ್ನುವ ಹಾಗೆ ಮೇಲೆ ಉದಾಹರಿಸಿರುವ ಚರಣಗಳಲ್ಲಿಯಂತೆ ಈ ಛಂದೋಭಂಗವನ್ನು ಅಂತ್ಯದಲ್ಲಿಯೇ ಪ್ರಯೋಗಿಸದೆ ಆದಿಯಲ್ಲಿಯೂ ಮಧ್ಯದಲ್ಲಿಯೂ ತಂದು ಬಿಟ್ಟಿದ್ದಾರೆ. ಇವು ವಿರಳವಾದಲ್ಲಿ ಬೇಕಾದುವೇ ಎಂದು ಹೇಳಬಹುದು. ಆದರೆ ಅವರು ಇವುಗಳನ್ನು ಉಪಯೋಗಿಸಿದ ರೀತಿಯು ದೋಷಾನ್ವಿತವಾಗಿದೆ. ಇಂಥ ಸಾಲುಗಳು ಪುನಃಪುನಃ ಕಿವಿಯ ಮೇಲೆ ಬೀಳುವದರಿಂದ ಸರಳರಗಳೆಯ ಮೂಲನಿಯಮ ವಾವುದೆಂಬುದೇ ಸಂಶಯಾಸ್ಪದವಾಗುವದು.

ಪಾರಿವಾಳಗಳ ನಡುವೆ ಒಂದು ಬೆಳ್ಳಕ್ಕಿಯು ಒಂದಲ್ಲಿ ಇಲ್ಲಿ ಬರಿಯ ಪಾರಿವಾಳಗಳಿರಬೇಕು; ಆದರೆ ಒಂದು ಬೆಳ್ಳಕ್ಕಿಯನ್ನು ಚಂದಕ್ಕೆಂದು ಬಿಡಲಾಗಿದೆ—ಎಂದು ಸಹಜವಾಗಿ ಹೇಳಬಹುದು. ಪಾರಿವಾಳಗಳ ಹಾಗು ಬೆಳ್ಳಕ್ಕಿಗಳ ಸಂಖ್ಯೆಯು ಬಹುಶಃ ಸರಿಸಮಾನವಾಗಿದ್ದಲ್ಲಿ —ಇದು ಮೂಲತಃ ಬೆಳ್ಳಕ್ಕಿಗಳ ಸ್ಥಾನವೋ? ಇಲ್ಲವೆ ಪಾರಿವಾಳಗಳ ಸ್ಥಾನವೋ ?—ಎಂದು ಪ್ರಶ್ನೆಯೇಳುವದು. ಕೊನೆಗೆ ಪಾರಿವಾಳಗಳ ಸ್ಥಾನವನ್ನು ಬೆಳ್ಳಕ್ಕಿಗಳು ಆಕ್ರಮಿಸಿರುವವೆಂದು ನಿರ್ಣಯವಾಗದೇನು ?

ಇದಕ್ಕಿಂತ ಮಹತ್ತರವಾದ . ದೋಷಕ್ಕೀಡಾದ ಇನ್ನೊಂದು ಪ್ರವೃತ್ತಿಯು ಪುಟ್ಟಪ್ಪನವರ ನಾಟಕಗಳಲ್ಲಿ ಕಂಡುಬರುವದು. ೫ ಮಾತ್ರೆಗಳ ೪ ಗಣಗಳಿಂದ ಕೂಡಿ ಕೊಂಡು ಸರಳ ರಗಳೆಯ ಒಂದು ಚರಣವು ಉದ್ಭವಿಸುವದಷ್ಟೇ. ಆದರೆ ಪುಟ್ಟಪ್ಪನವರ ಅನೇಕ ಪ್ರಯೋಗಗಳಲ್ಲಿ ಇಂಥ ಒಂದು ಚರಣವೆಂದರೆ ೨೦ ಮಾತ್ರೆಗಳ ಸಾಲು ಎಂಬುದಿಷ್ಟೆ ನಿಯಮವಿದ್ದಂತೆ ಕಂಡುಬರುವದು:—

" ಬೆಸಗೊಂಡೊ | **ಡಾನೇನಂ** | **ಪೇಳಲಿ** | ನಿನ್ನನುಜೆ |
" **ಕಡಲಿನ** | **ಕಾಣದ** | **ಪಾತಾಳದಲಿ** | ಮುಳುಗಿಸುವೆ"
" ನಾಯಕರೆ! **ಬರುಗನಸಲ್ಲ** | **ಎನ್ನ** | ದರ್ಶನಂ | "
" **ಮನುಜಂ** | **ದೇವಂ** | **ತಾನದಪಂ** | ಇಲ್ಲದಿರೆ | "
" **ನನ್ನೊಂದಂ** | ಶದ ವಾಣಿ | ನನ್ನ ವಾ ! ಣಿಯಲ್ಲ | "

ಇಲ್ಲಿ ಮೇಲಿನಲ್ಲಿಯಂತೆ ಕೇವಲ ಮಾತ್ರೆಗಳು ಹೆಚ್ಚು ಕಡಿಮೆಯಾಗುವದಿಲ್ಲ. ಎಲ್ಲ ಚರಣಗಳಲ್ಲಿಯೂ ೨೦ ಮಾತ್ರೆಗಳು ಇದ್ದೇ ಇವೆ. ಆದರೆ ೫ ಮಾತ್ರೆಗಳ ನಾಲ್ಕು ಗಣಗಳಿರಬೇಕೆಂಬ ನಿಯಮಕ್ಕೆ ಅಸ್ತಿತ್ವವೇ ಇಲ್ಲದಾಗಿದೆ. ಈ ಸಾಲುಗಳ ಮೇಲಿಂದ ಸರಳ ರಗಳೆಯ ಸ್ವರೂಪವನ್ನು ತಿಳಿದುಕೊಳ್ಳುವವರು, ೨೦ ಮಾತ್ರೆಗಳಿದ್ದರಾಯಿತು; ಅವುಗಳನ್ನು ಯಾವ ಗಣಗಳಾಗಿಯೂ ವಿಭಾಗಿಸಬಹುದೆಂದು ಕಲ್ಪಿಸಬಹುದು.

ಇನ್ನು ಕೆಲವು ಸಾಲುಗಳಲ್ಲಿ ಮಾತ್ರೆಗಳು ಸ್ವಚ್ಛಂದವಾಗಿ ಹೆಚ್ಚುಕಡಿಮೆಯಾಗಿರುವವಲ್ಲದೆ ಗಣಗಳ ಸ್ವರೂಪವನ್ನೇ ಗುರುತಿಸಲು ಅವಕಾಶವಿಲ್ಲವಾಗಿದೆ. ಸರಳ ರಗಳೆಯ ಲಕ್ಷಣಗಳೆರಡೂ ಈ ರೀತಿಯಾಗಿ ಇಲ್ಲದಾಗಲು, ಇವೆಲ್ಲ ಸರಳವಾಗಿ ' ರಗಳೆ ' ಗೆ ಸಂಬಂಧಿಸಿರುವಂತೆ ತೋರಬರಲು ಕಾರಣವೇನು ?—



CC-0. Jangamwadi Math Collection. Digitized by eGangotri

"ಧನಕನ| ಕಾದಿ ಸಕ| ಶ್ಯೆಶ್ವರ್ಯ | **ಸಮೂದಾಯವೂ**|"
"ಉದಯವೆಮ್ | **ಮನು ಆನು** | ಮಾಕರಂ | **ಗಿಣಿಯು** |"
"**ಭೀಷ್ಮಂ** | **ಕರ್ಣಂ** | **ಜ್ರೋಣಂ** | ಅಭಿಮನ್ಯು |
ಮೊದಲಪ್ಪ | "
"ಮನುಷ ವಾ | ಗಿ **ಕಂಡರೂ** | ಅಮಾನುಷ | **ನಾಗಿ** | "
"ಮಾಗಳಾ | **ರತಿಯೊಳಿಲ್ಲ** | ಹೂವುಗಳ | **ಲಿಲ್ಲ** | "
"ಧರೆಯೊಳಿಹ | **ಜಂಗಮ** | ಕಲ್ಪವೃಕ್ | **ಷಗಳು** | "

ಇಂಥ ಸಾಲುಗಳಿಗೆ ಎಂಥ 'ರಗಳೆ' ಯಲ್ಲಿಯೂ ಸ್ಥಾನವಿರಬಾರದೆಂದು ನಮ್ಮ ಅಭಿಪ್ರಾಯ. ಆದರೂ ಈ ತರದ ಪ್ರಯೋಗಗಳನ್ನು ಉಪಯೋಗಿಸಿದಲ್ಲಿ ಲೇಖಕರ ಒಂದು 'ಆಶಯವೂ' ಇದ್ದಂತೆ ತೋರುತ್ತದೆ. ಅದನ್ನು ಶ್ರೀ. ಟಿ. ಎಸ್. ವೆಂಕಣ್ಣಯ್ಯನವರು ಹೀಗೆ ವ್ಯಕ್ತಪಡಿಸಿದ್ದಾರೆ: "ಹೀಗಾಗಿ ಪದ್ಯವನ್ನು ಓದುವ ಹಾಗೆ ಓದುವವರಿಗೆ ಅನೇಕ ವೇಳೆ ಎಡವಿದಂತೆ, ಮುಗ್ಗರಿಸಿದಂತೆ ಭಾಸವಾಗುತ್ತದೆ. ಈ 'ಛಂದೋಭಂಗ'ವು ಅಚಾತುರ್ಯದಿಂದ, ಅಜ್ಞತೆಯಿಂದ ಆಗಿದ್ದಲ್ಲ. ಪದ್ಯರಚನೆಯಲ್ಲಿ ಪಳಗಿದ ಕೈಯುಳ್ಳ ಕವಿ ಉದ್ದೇಶಪೂರ್ವಕವಾಗಿ ನಾಟಕದಲ್ಲಿ ತಂದಿರುವುದು. ಛಂದಸ್ಸಿನ ಸಾಮಾನ್ಯ ನಿಯಮವನ್ನನುಸರಿಸಿದರೂ ಕೆಲವು ಮನೋಭಾವಗಳನ್ನು ಸುಸ್ಪಷ್ಟವಾಗಿ ತರಲಾಗುವದಿಲ್ಲ. ಭಾವವ್ಯಂಜಕತೆಗೆ ಅಪೋಹ ಬಾರದಿರುವದಕ್ಕಾಗಿ ಛಂದೋನಿಯಮವನ್ನು ಮೀರಿದೆ. ಛಂದಸ್ಸಿಗೆ ಕಡಿಮೆಯಾದದ್ದು ಅಥವಾ ಹೆಚ್ಚಾದದ್ದು ನಟರ ಬಾಯಿಂದ ಮಾತು ಹೊರಡುವಾಗ ಒತ್ತಿ ಉಚ್ಚಾರವಾಗುವದರಿಂದಲೋ ತಡೆದು ಅಥವಾ ವೇಗವಾಗಿ ಉಚ್ಚಾರವಾಗುವದರಿಂದಲೋ ಹೊಂದಿಕೆಯಾದದ್ದಾಗಿ ಪರಿಣಮಿಸುತ್ತದೆ, ಎಂಬುದು **ಲೇಖಕರ** ಆಶಯ."

ಇದರ ವಿಷಯವಾಗಿ ನಮಗೆ ಹೇಳುವದಿಷ್ಟೆ; ಪದ್ಯವನ್ನು ಓದುವಾಗ ಎಡವಿದಂತಾಗುವದು ಕೇವಲ ಭಾಸವಲ್ಲ, ಅತಿ ವಿಷಾದಕರವಾದ ಸಂಗತಿಯಾಗಿದೆ. ಈ ಛಂದೋಭಂಗವು ಅಚಾತುರ್ಯದಿಂದ ಜರುಗದಿದ್ದರೂ ಅತಿಚಾತುರ್ಯದ ಪರಿಣಾಮವೆಂದು ತೋರುತ್ತದೆ. ಇನ್ನು ಮಾತ್ರೆಗಳಲ್ಲಿ ಹೆಚ್ಚು ಕಡಿಮೆಯಾಗಿರುವದು ನಟರ ಬಾಯಿಯಲ್ಲಿ ಹೊಂದಿಕೆಯಾಗುವದರಿಂದ ಆಕ್ಷೇಪಣಾರ್ಹವಲ್ಲವೆಂದು ಲೇಖಕರು ತಿಳಿದಿದ್ದಾರೆ. ಇದು ಚಮತ್ಕಾರವಾಗಿದೆ. ನಾಲ್ಕು ಬೆರಳಿನ ತಂದೆಗೆ ಆರು ಬೆರಳಿನ ಪುತ್ರನು ಜನಿಸಿದರೆ ತಂದೆಯು ಐದು ಬೆರಳಿನವನಾಗಬಹುದೆ? ನಾಟಕಕ್ಕೂ ರಂಗಭೂಮಿಗೂ ನಿಕಟವಾದ ಸಂಬಂಧವಿರಬಹುದು. ನಾಟಕದಲ್ಲಿ ಸಿಂಹವು ಗರ್ಜಿಸುತ್ತಿರುವದೆಂದಿದ್ದು, ಸಿಂಹವು ದೊರೆಯದ ಕಾರಣ ಮನುಷ್ಯನು ಸಿಂಹದಂತೆ ಗರ್ಜಿಸಿದರೆ ಸಮಂಜಸವಾಗಬಹುದು. ಆದರೆ ಕೃತಿಯೆಂದಮೇಲೆ ಅದು ಕೆಲವು ನಿಯಮಗಳನ್ನು ಅನುಸರಿಸಬೇಕಾಗುವದು. ನಟರ ಬಾಯಿಯನ್ನು ಹಿಡಿದವರಿಲ್ಲ. ಅವರು ಗದ್ಯವನ್ನು ಪದ್ಯವಾಗಿ ಮಾಡಬಹುದು. ಇಲ್ಲವೆ ಪದ್ಯವನ್ನು ಗದ್ಯವಾಗಿ ಮಾಡಬಹುದು. ಇಂದಿನ ಸಾಗ್ರಸಂಗೀತ ನಾಟಕಗಳಿಂದ ಅವರು ಗದ್ಯವನ್ನು ಹೇಗೆ ಸುರಮ್ಯವಾದ ಪದ್ಯವನ್ನಾಗಿ ಮಾಡುತ್ತಾರೆಂಬುದನ್ನು ತಿಳಿದುಕೊಳ್ಳಬಹುದು.

ಆದರೆ ಸರಳ ರಗಳೆಗೆ ಸಮಂಜಸವಾದ ಒಂದು ರಚನಾ ಪದ್ಧತಿಯಿದೆ. ಈ ರಗಳೆಯಲ್ಲಿ ರಚಿಸಿದ ನಾಟಕವು ಆದರ ಪದ್ಧತಿಯನ್ನು ಅನುಸರಿಸಬೇಕು. ಇದನ್ನು ಉಚಿತವಾಗಿ ಅನುಸರಿಸದ ಪಕ್ಷದಲ್ಲಿ ನಾಟಕವು ದೋಷಗಳ ತವರುಮನೆಯಾಗುವದು. ಈ ಎರಡು ಮಾತುಗಳನ್ನುಳಿದು ನಟರ ಇಲ್ಲವೆ ರಂಗಭೂಮಿಯ ಚರ್ಚೆಯು ಇಲ್ಲಿ ಅಪ್ರಸ್ತುತವಾಗಿದೆ.

ಇನ್ನು ಸರಳ ರಗಳೆಯ ನಿಯಮಗಳನ್ನು ಹೇಗೆ ಹಿಗ್ಗಿಸಬಹುದೆಂಬುದನ್ನು ಈ ಮೊದಲೆ ನೋಡಿದ್ದೇವೆ. ಚರಣದ ಕೊನೆಯಲ್ಲಿ ಒಂದೆರಡು ಮಾತ್ರೆಗಳು ಹೆಚ್ಚು ಕಡಿಮೆಯಾಗಿರಬಹುದು. ಕ್ವಚಿತ್ತಾಗಿ ನಡುವೆ ಮೂರು ಗಣಗಳ ಚರಣಗಳು ಸಹ ಬರಬಹುದು. ಇದರಂತೆ ವಿರಳವಾಗಿ, ಗಣಗಳ ವಿಭಾಗವನ್ನು ಮರೆಸದ ಹಾಗೆ, ಮಾತ್ರೆಗಳು ಚರಣದ ಆದಿ ಇಲ್ಲವೆ ಮಧ್ಯದಲ್ಲಿಯೂ ಸಹ ಹೆಚ್ಚು ಕಡಿಮೆಯಾಗಬಹುದು. 'ಕಡಲಿನ ಕಾಣದ ಪಾತಾಳದಲಿ ಮುಳುಗಿಸುವೆ' – ಇದರಂತಹ ಸಾಲುಗಳು ಏಕಾಕಿಯಾಗಿ ಒಂದಲ್ಲಿ ಯಾವ ಆತಂಕವೂ ಇರಲಾರದು. ಇವೇ ಮೊದಲಾದ ವಿಪರ್ಯಾಸಗಳನ್ನು ಕ್ಷಮಾರ್ಹವಾಗಿ ಮಾಡಲು ಯಾವ ನಟರನ್ನೂ ಮುಂದೆ ಮಾಡುವ ಕಾರಣವಿಲ್ಲ. ಆದರೆ ಸರಳ ರಗಳೆಯ ಲಕ್ಷಣಗಳನ್ನೇ ಮುಳುಗಿಸಿಬಿಡುವ ಸಾಲುಗಳಿಗೆ ಮಾತ್ರ ಎಲ್ಲಿಯೂ ಸ್ಥಾನವಿರಬಾರದು.



CC-0. Jangamwadi Math Collection. Digitized by eGangotri

ಕೆಲವು ಭಾವನೆಗಳನ್ನು ಸುಸ್ಪಷ್ಟವಾಗಿ ತರಲು ಛಂದೋನಿಯಮವನ್ನು ಈ ರೀತಿಯಾಗಿ ಮೀರಲಾಗಿದೆಯೆಂದು ಇನ್ನೊಂದು ವಿಚಾರವನ್ನು ಲೇಖಕರು ಒಡ್ಡಿದ್ದಾರೆ. ಸಾಹಿತ್ಯದಲ್ಲಿ ನಿಯಂತ್ರಿತವಾಗಿ ವ್ಯಕ್ತವಾಗದ ಭಾವಗಳು ತುಸು ಅತಂತ್ರವೆಂದೇ ಹೇಳಬೇಕಾಗುವದು. ಆದರಲ್ಲಿ ಅನೇಕ ಚಲನವಲನಗಳನ್ನೊಳಗೊಂಡ ಸರಳ ರಗಳೆಯ ಸರಣಿಯು ಬೇಕಾಗಿರುವ ಎಲ್ಲ ಸೌಕರ್ಯಗಳನ್ನು ಒದಗಿಸಿ ಕೊಡುವದು. ಇವುಗಳನ್ನು ಮೀರಿ ಹೋಗುವದೆಂದರೆ ಸ್ವಾತಂತ್ರ್ಯದ ಲಾಲಸೆಯು ದುಷ್ಪರಿಣಾಮಕರವಾದಂತೆಯೇ ಸರಿ. ನಿಯಮಾನುಸಾರವಾಗಿಯೇ ಬಂಧವನ್ನು ಹೇಗೆ ಲಲಿತವಾಗಿಯೂ ವಿವಿಧವಾಗಿಯೂ ಮಾಡಬೇಕೆಂಬುದನ್ನು '**ನಾಗರಿಕ**'ದಿಂದ ಕಲಿತುಕೊಳ್ಳುವ ಹಾಗಿದೆ. ಇಲ್ಲಿ ಪುಟ್ಟಪ್ಪನವರ ನಾಟಕಗಳಲ್ಲಿಯಂತೆ ಚರಣದ ಕೊನೆಗೆ ಮಾತ್ರೆಗಳನ್ನು ಹೆಚ್ಚು ಕಡಿಮೆ ಮಾಡುವದು ವಿಶೇಷವಾಗಿ ಕಂಡುಬರುವದಿಲ್ಲ. ಉಳಿದ ಸೀಮೋಲ್ಲಂಘನಗಳು ಇಲ್ಲವೇ ಇಲ್ಲವೆಂದು ಸಹ ಹೇಳಬಹುದು. ಆದರೂ ಇಲ್ಲಿಯ ಸರಳ ರಗಳೆಯು ಎಷ್ಟು ಸಾಮರ್ಥ್ಯವುಳ್ಳದ್ದಾಗಿದೆ! "ನಿಮ್ಮೊಂದು ದಯೆಯಿಂದ ಹಸಾದದ ಫಲದೀದ" "ನಿರಂಕುಶನಾಗಿಹನು ಹುಚ್ಚಾಟ ಮಾಡುವನು,"—ಮೊದಲಾದ ಸಾಲುಗಳಲ್ಲಿ ಲಘು-ಗುರುಗಳ ಸಂಯೋಜನೆಯು ಬಹು ಹೃದಯಂಗಮವಾಗಿದೆ.

'ಕುರುಕ್ಷೇತ್ರ'ದಲ್ಲಿ ೭೨, ೭೪ ಹಾಗು ೮೫ನೆಯ ಪುಟಗಳಲ್ಲಿರುವ ಭಾಷಣಗಳು ಗದ್ಯದಲ್ಲಿ ಬರೆದವುಗಳಾಗಿದ್ದು ನಡುನಡುವೆ ಸರಳ ರಗಳೆಯ ಸಾಲುಗಳು ಬಂದಿವೆಯೆಂದು ಹೇಳಬೇಕಾಗಿದೆ. ಛಂದಸ್ಸಿನ ರೀತಿಯಿಂದ ವಿಪರೀತವಾಗುವ ಈ ಭಾಷಣಗಳು ಈ ದೃಷ್ಟಿಯಿಂದ ಸುರಮ್ಯವಾಗಿ ತೋರುವವು.

ಗದ್ಯದ ಪ್ರಯೋಗದ ವಿಷಯವಾಗಿ ಇಲ್ಲಿ ಇನ್ನೊಂದು ಮಾತನ್ನು ಹೇಳುವದು ಯುಕ್ತವಾಗಿದೆ. ವಿಶೇಷತಃ ನಾಟಕಗಳಲ್ಲಿ ಸನ್ನಿವೇಶಕ್ಕೆ ತಕ್ಕಂತೆ ಗದ್ಯ ಇಲ್ಲವೆ ಸರಳ ರಗಳೆಯ ಪ್ರಯೋಗವಾಗಬೇಕು. ಈ ಮಾತು ದೃಶ್ಯಗಳಿಗೆ ಅನ್ವಯಿಸುವದಲ್ಲದೆ ಲೇಖಕನ ಜಾಣ್ಮೆಗೆ ಸರಿಯಾಗಿ ಪ್ರತಿಶ್ಲೋಕಕ್ಕೂ ಅನ್ವಯಿಸಬಹುದು. ಹೇವುಡ್ ಎಂಬ ಆಂಗ್ಲ ನಾಟಕಕಾರನು ಇರ್ವರು ವ್ಯಾಪಾರಸ್ಥರು ಸಕ್ಕರೆಯ ಮಾರಾಟದ ದರಕಲ್ಕಾಗಿ ಬಡಿದಾಡುವದನ್ನು ಸರಳ ರಗಳೆಯಲ್ಲಿಯೇ ವರ್ಣಿಸಿದ್ದಾನೆ! ಇಲ್ಲಿ ಸ್ವಾಭಾವಿಕ ಪ್ರಯೋಗವು ಗದ್ಯವಾಗಬೇಕಿತ್ತು. ಈ ಸಾಲನ್ನು ನೋಡಿರಿ.

"ಕಡಿವಾಣ ಹಾಕದೇ ಕಂಟಕನ ಕರೆದು ತಾ."

ಪದ್ಯವಿದ್ದರೂ ಗದ್ಯವೆಂಯುವೆನ್ನಿಸುವದಕ್ಕಿಂತ ಗದ್ಯವನ್ನೇ ಇಲ್ಲಿ ಉಪಯೋಗಿಸುವದು ಉಚಿತವಲ್ಲವೆ?

## (೩) ಇನ್ನುಳಿದ ಮಾತುಗಳು

'ನಾಗರಿಕ'ವು ಒಂದು ಉತ್ತಮವಾದ ನಾಟಕವಾಗಿದೆ. ಇಂದಿನ "ನಾಗರಿಕತೆಯೆಂಬ ನಾಗರಹಾವು" ತಂದಿರುವ ಪೌರಸ್ತ್ಯ ಪಾಶ್ಚಾತ್ಯ ಸಂಸ್ಕೃತಿಗಳ ಸಮಸ್ಯೆಯವೇ ಅದರ ವಸ್ತುವಿನ ಸಾರವಾಗಿದೆ. ಇದು ಸಂಭವಿಸುವ ಮೊದಲು ಒದಗುವ ಬಳತೋಟೆಯು ಇಲ್ಲಿ ಮನಸ್ಸೇವೇಧಕವಾಗಿ ಚಿತ್ರಿತವಾಗಿದೆ. ಮೇಲಾಗಿ ಇಲ್ಲಿಯ ಕಾವ್ಯದಲ್ಲಿ ಮಾಧುರ್ಯಕ್ಕಿಂತ ಗಂಡುದನಿಯು ಹೆಚ್ಚು. ಇದು ಕಾಂತೆಯ ಸವಿಯಾದ ಮಾತುಗಾರಿಕೆಯಲ್ಲ ಆದರೆ ವಕ್ತೃತ್ವವಿಶಾರದರ ಅಮೋಘವಾದ ವಾಣಿ.

ಪುಟ್ಟಪ್ಪನವರ ನಾಟಕಗಳಲ್ಲಿ ಅವರ ಉಳಿದ ಕೃತಿಗಳ ಗುಣದೋಷಗಳೆಲ್ಲ ತುಂಬಿಕೊಂಡಿವೆ. ಅವ್ಯಾಹತವಾಗಿ ಹರಿಯುವ ಹೊನಲಿನಂತೆ ಅವರ ಕಾವ್ಯವು ಮನವನ್ನು ಮೆಚ್ಚಿಸುವದು. 'ಜಲಗಾರ'ದಲ್ಲಿಯ ಗೀತೆಗಳು ಮನೋಹರವಾಗಿವೆ. ಅಲ್ಲದೆ ರುದ್ರನೂ ಜಲಗಾರನೆಂಬ ಕೊನೆಯ ಭಾವನೆಯು ಭವ್ಯವಾಗಿದೆ. 'ಕುರುಕ್ಷೇತ್ರ'ದಲ್ಲಿ ಆ ಕಾಳಗದೊಂದಿಗೆ ದ್ವಾಪರಯುಗದ ಸಂಸ್ಕೃತಿಯು ಸಮಾಪ್ತವಾಯಿತೆಂಬ ಕಲ್ಪನೆ; ಸೇವಕರು, ಮರುಳುಗಳ, ಕಂದರ ಹಾಗು ಮುದುಕಿಯರ ಗೋಳಿನಿಂದ ಪ್ರಕಟವಾಗುವ ಯುದ್ಧದ ಅಮಂಗಲ ಸ್ವರೂಪ; ಅಶ್ವತ್ಥಾಮ-ಕೌರವರ ಹಾಗು ಕೌರವ-ಕೃಷ್ಣರ ಸಂಭಾಷಣೆ ಇವೆಲ್ಲ ಅಸಾಮಾನ್ಯವಾದುವು. ದುರ್ಯೋಧನನ ಸುತ್ತಲು ನೆರೆದ ಬಂಧುಗಳ ರೋದನದಿಂದ ಯುದ್ಧದ ಅನಿಷ್ಟತೆಯು ಮತ್ತಿಷ್ಟು ಸ್ಪಷ್ಟವಾಗುವದು. ಕರ್ಣನ ಸಲುವಾಗಿ ಶೋಕಿಸುವ ಪಾಂಡವರ ಮಾತುಗಳು ಜಯದಲ್ಲಿ ಕೂಡ ಆನಂದವಿಲ್ಲವೆಂಬ ಸತ್ಯವನ್ನು ನಿದರ್ಶನಕ್ಕೆ ತರುವವು.

"He that is down need fear no fall" ಎಂದು

CC-0. Jangamwadi Math Collection. Digitized by eGangotri

ಬನಿಯನ್ನನೆಂಬ ಓರ್ವ ಆಂಗ್ಲ ಸಾಹಿತಿಯು ಹೇಳಿದ್ದಾನೆ. ಸಮನಾದ ಪ್ರದೇಶದಲ್ಲಿ ನಡೆಯುವವನಿಗೆ ಬೀಳುವ ಭೀತಿಯಲ್ಲಿ? ಆದರೆ ಹೀಗೆ ಸಾಗುವದರಲ್ಲಿ ಯಾವ ಪೌರುಷವೂ ಇಲ್ಲವೆಂದೂ ಹೇಳಬಹುದು. 'Try again' ಪುನಃ ಯತ್ನಿಸು ಎಂಬ ಮಂತ್ರನೇ ಸಾಹಿತ್ಯಮಾರ್ಗದಲ್ಲಿ ಉಪಯುಕ್ತವಾದುದು. ಪುಟ್ಟಪ್ಪನವರು ಅನೇಕ ಸಲ ನಿಬಿಡಾರಣ್ಯವನ್ನು ಸೇರಿ ಮತ್ತೆ ಹೊರಗೆ ಬರುವರು; ಎತ್ತರವಾದ ಶಿಖರಗಳನ್ನೇರಿ ಮತ್ತೆ ಕೆಳಗಿಳಿಯುವರು. ಆದರೆ ಚಿರಪಥಿಕನಾದ ಸಾಹಿತಿಯು ಪಡೆದ ಮುಂಜಾಗ್ರತೆಯು ಅವರಲ್ಲಿಲ್ಲ. ಅಲ್ಲದೆ ಅವರು ಮೇಲಿಂದಮೇಲೆ ಒಗೆಯುವ ತಪ್ಪು ಹೆಜ್ಜೆಯಿಂದ ವಾಚಕರಿಗೆ ವಿಲಕ್ಷಣವಾದ ಸಂಕಟವಾಗುತ್ತದೆ; ನಿರಾಯಾಸವಾಗಿ ಶಿಖರವನ್ನೇರುವ ಕವಿಯು ಹೀಗೇಕೆ ಕಾಲು ಜಾರಿ ಬೀಳುವನೆಂದು ಅಸಮಾಧಾನವಾಗುತ್ತದೆ. ಪುಟ್ಟಪ್ಪನವರು ತುಸು ಜಾಗರೂಕರಾಗಿದ್ದರೆ ಮುಗ್ಗರಿಸಿ ಬಿದ್ದ ಕಲ್ಪನಾಶಕ್ತಿಯನ್ನು ಮತ್ತೆ ಎಬ್ಬಿಸಿ ನಿಲ್ಲಿಸಬಹುದಾಗಿತ್ತು. ಅವರು ಹಾಗೆ ಮಾಡಲಿಲ್ಲ. ಹೀಗೆ ತಾಳ್ಮೆಯ ಅಭಾವದ ಮೂಲಕ ಜರುಗಿದ ಕಲ್ಪನೆ (Imagination) ಯ ಅಧಃಪಾತದ ಹೆಗ್ಗುರುತುಗಳನ್ನು ನಾವು ಇಲ್ಲಿ ಉಲ್ಲೇಖಿಸುತ್ತೇವೆ:—

(೧) 'ಬಿರುಗಾಳಿ'ಯು ಭಾಷಾಂತರವೂ ಅದ ರೂಪಾಂತರವಾಗಿದೆ. ಇದು ಎಷ್ಟರ ಮಟ್ಟಿಗೆ ಮೂಲದ ವೈಭವವನ್ನು ಕಾಯ್ದುಕೊಂಡಿದೆಂಬ ಪ್ರಶ್ನೆಯನ್ನು ನಾವು ಇಲ್ಲಿ ಚರ್ಚಿಸುವದಿಲ್ಲ. ಆದರೆ ಪುಟ್ಟಪ್ಪನವರು ಸ್ವತಃ ರಚಿಸಿದ ಮೊದಲನೆಯ ಪ್ರವೇಶದ ಆದಿಯಲ್ಲಿರುವ ಈ ಸಾಲುಗಳನ್ನು ನೋಡಿರಿ.

"ಗುಡುಗೇನು! ಪ್ರಳಯಕಾಲದ ವಿಲಯರುದ್ರನಿಗೆ ಮಡವೇರಿ ಬಂದಾಗ. ಚೇಳು ಕಡಿದಂತಿಹುದು." ಪ್ರಳಯಕಾಲದ ರುದ್ರನ ತಾಂಡವನೃತ್ಯಕ್ಕೆ ವಿಶ್ವಗಳು ನುಚ್ಚುನುರಿಯಾಗುವವು, ದಿಕ್ಕುಗಳು ಬೆಚ್ಚಿಬೀಳುವವು. ಅವನ ಕುಣಿತದ ತಾಳಕ್ಕೆ ನಭೋಮಂಡಲವು ಗದಗುಟ್ಟುವವು, ನಕ್ಷತ್ರಗಳು ನಡುಗುವವು. ಕೋಟಿಪದ್ಮ ಚೇಳುಗಳನ್ನು ಹೊತ್ತ ಧರಿತ್ರಿಯು ಪಾದಾಕ್ರಾಂತವಾಗುವವು. ಈ ಎಲ್ಲ ಚೇಳುಗಳನ್ನು ಸಂಹರಿಸಲು ಸರ್ಪಭೂಷಣನಾದ ರುದ್ರನು ಧರಿಸಿದ ಒಂದೇ ಒಂದು ಸರ್ಪವನ್ನು ಬಿಟ್ಟರೆ ಸಾಕು; ಅವು ನಿರ್ನಾಮವಾಗುವವು. ಮನುಷ್ಯರಿಗೆ ಚೇಳು ಕಡಿದರೆ ನೋವನ್ನು ಇಲ್ಲದಾಗಿಸಲು "ಆಸ್ತಿಕ! ಆಸ್ತಿಕ! ಕಾಳಭೈರವ!" ಎಂದು ಮಾಂತ್ರಿಕರು ಮಂತ್ರಹಾಕುತ್ತಾರೆ. ಇಂಥ ರುದ್ರನಿಗೆ ಚೇಳು ಕಡಿಯಬಹುದೆ? ಒಂದು ವೇಳೆ ಕಡಿದರೆ ಹುಚ್ಚನಂತೆ ನರ್ತಿಸಿ ಚೀರಾಡಲು ರುದ್ರನೇನು ಕೋತಿಯೆ?

(೨) 'ಮಹಾರಾತ್ರಿ'ಯಲ್ಲಿ ಔಚಿತ್ಯದ ಅಭಾವವು ಇದಕ್ಕಿಂತ ಹೆಚ್ಚಾಗಿ ಕಂಡುಬರುವದು. 'ಮೂರು ನಾಟಕ'ಗಳಲ್ಲಿ ಇದು ಕನಿಷ್ಠವಾದುದು. ಇಲ್ಲಿಯ ಬುದ್ಧನು ಇನ್ನೂ ಅಪ್ರಬುದ್ಧನಾಗಿದ್ದಾನೆ; ಇಲ್ಲವೆ ಇಂದಿನ ಓರ್ವ ತಾತ್ವಿಕ ತರುಣನಂತೆ ಚಂಚಲಚಿತ್ತನಾಗಿ ವರ್ತಿಸುತ್ತಾನೆ. ವಿಶ್ವದ ಕಲ್ಯಾಣವನ್ನೇ ಬಯಸುವ ಬುದ್ಧನು ಇಂದಿನ ಭರತಖಂಡದಲ್ಲಿರುವ ಕವಿಗಳಂತೆ ಮರುಗುತ್ತಾನೆ.

"ಕಾಡುಪಾಲಾಗಿಹಳು ಭಾರತಾಂಬೆಯು, ಚೆನ್ನ, ಕಾಡುಪಾಲಾಗಿಹಳು."

ಅಲ್ಲದೆ ಪುಟ್ಟಪ್ಪನವರ ಬುದ್ಧನು ಬಲು ಮಾತಾಳಿಯುಹುದು. ಚೆನ್ನನು ಮಲಗಿರುವದನ್ನು ಕಂಡು "ಎಲೆ ನಿದ್ದೆ, ಎನಿತು ಮೃದುಮಧುರಳೌ ನೀನು" ಎಂದು ಒಂದು ಭಾಷಣವನ್ನು ಮಾಡುವನು. ತನ್ನ 'ಕೋಣೆ'ಯೊಳಗಿನ ದೀಪವನ್ನು ಹೀಗೆ ಸಂಬೋಧಿಸುವನು.

"ಬಾ ಬೆಳಕೆ, ಬಾ ಬೇಗ. ನೀನು ಹೊರಗಿನ ಬೆಳಕು, ಜ್ಞಾನ ಒಳಗಿನ ಬೆಳಕು."

"ಕೋಣೆಯೆ,ಕಡೆಯ ವಂದನೆ ನಿನಗೆ" ಎಂದು ಅದಕ್ಕೆ ಮತ್ತೆ ಮತ್ತೆ ಹೇಳುವನು. ಹೀಗೆ ಬೀಳ್ಕೊಂಡು ಹೋದ ವನೆ ಮತ್ತೆ ಬಂದು "ಪತ್ರವನು ಬರೆದಿಟ್ಟು ಹೋಗುವೆನು" ಎಂದು ಒಂದು ಪತ್ರವನ್ನು ಬರೆಯುವನು. ಇಂದಿನ ತರುಣರಲ್ಲಿ ಅನೇಕರು ಕೆಲಸವು ಸಿಕ್ಕದಾಗಲು ಆತ್ಮಹತ್ಯೆಯನ್ನೆಸಗುವರು. ಹಾಗೆ ಮಾಡುವ ಪೂರ್ವದಲ್ಲಿ ಮನೆಯವರು ಕಷ್ಟಕ್ಕೆ ಗುರಿಯಾಗಬಾರದೆಂದು ಸ್ವಸಂತೋಷದಿಂದ ಸತ್ತೆನೆಂದು ಪತ್ರವನ್ನು ಬರೆದಿಡುವರು. ಬುದ್ಧನು ಈ ತರುಣರ ಜಾತಿಗೆ ಸೇರಿದಂತೆ ತೋರುತ್ತದೆ. ಆತನು ಆತ್ಮವಿಮೋಚನೆಗೆ ನಡೆದಿಲ್ಲ, ಆತ್ಮಹತ್ಯೆಗೆ ಹೊರಟಿದ್ದಾನೆ. ಈ ಎರಡು ಕೃತ್ಯಗಳಲ್ಲಿ ವಿಶೇಷಭೇದವಾದರೂ ಇದ್ದಂತೆ ತೋರುವದಿಲ್ಲ.

CC-0. Jangamwadi Math Collection. Digitized by eGangotri

ವಿರಹವ್ಯಥೆಯನ್ನು ತಾಳಲಾರದೆ ಹೆಂಡತಿ-ಮಕ್ಕಳೆಡೆಗೆ ತೆರಳಿದ ಬುದ್ಧನು ಶಿಶುವನ್ನು ಮುದ್ದಿಸುವಾಗ ಆತ್ಮವಂಚನೆಗೆ ಗುರಿಯಾಗುವನು.

"ತಂದೆಯೊಲಿದೀಯುವಾ ಮುತ್ತಲ್ಲವಿದು ಕಂಪ;
ಸನ್ಯಾಸಿಯೀಯುತಿಹ ನಿಷ್ಕಾಮ ಚುಂಬನವು,
ಪರಮಾತ್ಮನೀಯುತಿಹ ಮಂಗಳದ ಮುತ್ತು!"

ಇನ್ನು ಬುದ್ಧನು ಸ್ವಯಂವರ್ಣನೆಗೆ ಸೋತಿದ್ದನೆಂದು ಹೇಳಬೇಕಾಗುವದು. "ಜಗದ ಬೆಳಕನು ಹೊತ್ತು ಜವದಿಂದ ನಡೆ ಮುಂದೆ" ಎಂಬ ಬುದ್ಧನ ಭಾಷಣವು ಒರ್ವ ಕವಿಯು ಬುದ್ಧನ ಸ್ತುತಿಪರವಾಗಿ ಅವನ ಹಯವನ್ನುದ್ದೇಶಿಸಿ ಬರೆದಂತಿದೆ. ಇನ್ನು ಬುದ್ಧನಿಗೆ ಅನ್ವಯಿಸುವಂತಿದ್ದರೂ, ಹಾಗು ಬುದ್ಧನು ಕದುರೆಯಾದರೂ, ಆದಕ್ಕೆ "ವಿಷಯಸುಖಗಳ ಮೆಟ್ಟಿ ಸಿರಿಯ ತರಿದಟ್ಟಿ" ಎಂಬುದಾಗಿ ಹೇಳುವದು ಅಷ್ಟು ಉಚಿತವಾಗಬಹುದೆ? '**ನನ್ನ ಗೋಪಾಲ**' ದಂತಹ ಮುದ್ದು ನಾಟಕವನ್ನು ಬರೆದವರು ಈ ರೂಪಕದ ಕರ್ತೃವೆಂದರೆ ಆಶ್ಚರ್ಯವಾಗದಿರದು.

(೩) ಇನ್ನು '**ಕುರುಕ್ಷೇತ್ರ**'ದ ವಿಚಾರ. ಇಲ್ಲಿ ಶೇಕ್ಸಪಿಯರನಿಂದ ಕರುಣೆಯ ಮೇಲಿನ ಉಪನ್ಯಾಸವನ್ನು ಆಯ್ದುಕೊಂಡು ಅದನ್ನು ಧರ್ಮರಾಯನಿಂದ ಒಡನುಡಿಸುವ ಅವಶ್ಯಕತೆಯೇನಿತ್ತು? ಅದನ್ನು ತಂದು ಕೂಡಿಸಿದರೆ ನಾಟಕದ ಕಾಂತಿಯು ಹೆಚ್ಚಿದಂತಾಯಿತೇ? ಅದನ್ನು ಭಾಷಾಂತರಿಸುವದೇ ಪುಟ್ಟಪ್ಪನವರ ಮನಸ್ಸಿನಲ್ಲಿದ್ದಪಕ್ಷದಲ್ಲಿ ಹಾಗೆ ಬೇರೆಯಾಗಿ ಮಾಡಬಹುದಾಗಿತ್ತು. ಇದನ್ನು ತಿಳಿದೋ ಏನೋ ಭೀಮನು ಸಹ ನಾಟಕದಲ್ಲಿ 'ಮುಂ ಪಲರ್ವೆ ಕೇಳಿರ್ದೆ ನಾನಿದಂ" ಎಂದು ಹೇಳುವನು!

ಕೃಷ್ಣನು ಕೊನೆಯ ಪ್ರವೇಶದಲ್ಲಿ ಕೊಡುವ ಐತಿಹಾಸಿಕ ಟಿಪ್ಪಣಿಗಳ ಪಟ್ಟಿಯು ತುಸು ವಿಚಿತ್ರವಾಗಿದೆ. ತಮಗೆ ಬೇಕಾದ ಹೆಸರುಗಳನ್ನೂ ಸಂಗತಿಗಳನ್ನೂ ಪುಟ್ಟಪ್ಪನವರು ಈ ಯಾದಿಯಲ್ಲಿ ಸೇರಿಸಿದ್ದಾರೆ. "ಕ್ರಿಸ್ತ ರಸ್ಸಿಂ....ಮಹಾರಾಷ್ಟ್ರ ದೇಶಂ"-ಇವುಗಳಿಗೆ ಪರಸ್ಪರ ಸಂಬಂಧವೇನು? ರಸ್ಕಿನು ಕ್ರಿಸ್ತ, ಬುದ್ಧ ಮೊದಲಾದ ಸಂತರ ಮಾಲಿಕೆಯಲ್ಲಿ ಸೇರಲು ಯೋಗ್ಯನೆ? ಅಲ್ಲದೆ ಜಗತ್ತಿನ ಇತಿಹಾಸವು ಈ ಮೂವತ್ತು ನಾಲ್ವತ್ತು ಶಬ್ದಗಳಲ್ಲಿ ಅಡಕವಾಯಿತೆ? ಇದು ಪುಟ್ಟಪ್ಪನವರು ಸ್ವಸಂತೋಷಕ್ಕಾಗಿ ರಚಿಸಿದ ಭವಿಷ್ಯದ ಚಿತ್ರವೇ ಹೊರತು ಕೃಷ್ಣನ ನಿಷ್ಪಕ್ಷಪಾತದ ಭಾಷಣವಾಗಲಾರದು.

ಅಲ್ಲದೆ ಈ ಸನ್ನಿವೇಶಗಳನ್ನು ಚಿತ್ರಿಸಿದವರು ಕೇವಲ ಕವಿಗಳಲ್ಲ, ರಾಮಕೃಷ್ಣಪರಮಹಂಸರ ಸಂಪ್ರದಾಯದವರಾದ ಶ್ರೀ. ಪುಟ್ಟಪ್ಪನವರು ಎಂಬುದನ್ನು ತೋರಿಸಲು ಅವರು ತುಸು ಪ್ರಯಾಸಪಟ್ಟಿದ್ದಾರೆ. ಬುದ್ಧ, ಕ್ರಿಸ್ತ, ಶಂಕರ ಮೊದಲಾದ ಮಹಾನುಭಾವರ ನಾಮೋಚ್ಚರಣೆಯನ್ನು ಮಾಡಿದಾಗ ಸುಮ್ಮನಿದ್ದ ರುದ್ರ-ಕೃಷ್ಣರು ರಾಮಕೃಷ್ಣರ ಹೆಸರು ಬಂದ ಕೂಡಲೆ ಬಾಗಿ ಮುಜರೆ ಮಾಡುವರು. ಕಲಾಕೋವಿದರಿಗೆ ಇಂತಹ ಪಕ್ಷಪಾತವು ತರವಲ್ಲ. ಬೇಕಾದರೆ ಪರಮಹಂಸರ ಮೇಲೆ ಇನ್ನೊಂದು ಗ್ರಂಥವನ್ನು ಅವರು ಬರೆಯಬಹುದು. ಕೃತಿಯೊಂದು ಮೇಲೆ ಅದು ಕಲಾಧರ್ಮಾನುಸಾರಿಯಾಗಬೇಕೆಂದು ನಮಗೆನಿಸುತ್ತದೆ.



CC-0. Jangamwadi Math Collection. Digitized by eGangotri

# ಚಿಂತೆ

ಕತೆಗಾರರು—" ಸೂರಿ "

೧

ಹೆಂಡತಿಯ ಸೌಂದರ್ಯದಿಂದ ಶಾಮಣ್ಣನಿಗೆ ದಿನ ದಿನಕ್ಕೆ ದಿಗಿಲು ಹೆಚ್ಚಾಗುತ್ತಾ ಬಂತು. ಬಡ ಗುಮಾಸ್ತನಾದ ಇವನಿಗೆ ರೂಪವತಿಯಾದ ಲಲಿತೆಯನ್ನು ಮದುವೆಯಾಗುವ ದುರದೃಷ್ಟವು ಪ್ರಾಪ್ತವಾಗಿತ್ತು. ಹೌದು, ದುರದೃಷ್ಟವೇ. ಏಕೆಂದರೆ ಅವನೇ ನನಗೆ ಅನೇಕಾವರ್ತಿ ಹಾಗೆ ಹೇಳಿದ್ದ. ಅವನ ಹೆಂಡತಿಯ ಮೇಲೆ ಆ ಊರಿನವರೆಲ್ಲರದೂ ಕಣ್ಣು. ಕಚೇರಿಯ ಸ್ನೇಹಿತರಂತೂ ಅನೇಕ ವೇಳೆ ಅವನನ್ನು ಪರಿಹಾಸ ಮಾಡುತ್ತಿದ್ದರು

ಒಂದು ದಿನ ಶಾಮಣ್ಣನು ಕಚೇರಿಯಲ್ಲಿ ಏನನ್ನೋ ಬರೆಯುತ್ತ ಕುಳಿತಿದ್ದಾಗ, ಅವನ ಪಕ್ಕದಲ್ಲಿಯೇ ಇದ್ದ ರಾಜಣ್ಣನು ನಗುತ್ತಾ, " ಏನು ಶಾಮಣ್ಣನೋರೆ, ಬಹಳ ಬಹಳ ಬರೀತಿದ್ದೀರಿ. ನಿಮ್ಮಾಕೆಯ ಸೌಂದರ್ಯದ ವರ್ಣನೆಯನ್ನೋ ?" ಎಂದು ಪರಿಹಾಸ ಮಾಡಿದ. ಶಾಮಣ್ಣನಿಗೆ ತುಂಬಾ ಕೋಪ ಬಂತು. ಆಗ ಅವನು ತನ್ನ ಮುಂದಿದ್ದ ಮೇಜನ್ನು ಮುಷ್ಟಿಯಿಂದ ಗುದ್ದುತ್ತಾ ಗಟ್ಟಿಯಾಗಿ, "ತಮ್ಮ ಮೇಲೆ ಕತ್ತೆ ಸತ್ತು ಬಿದ್ದಿದ್ರೂ, ಇನ್ನೊಬ್ರ ಮೇಲ್ಲ ನೊಣಾನ ಹುಡಿಕ್ಕೊಂಡು ಬರ್ತಾರೆ. ಇದೆಲ್ಲ ಹೊಟ್ಟೆಕಿಚ್ಚಿನ ಮಾತು. ನಿಮ್ಮ ಹೆಂಡತಿ ಕುರೂಪಿಯಾದ್ದರಿಂದ ನನ್ನನ್ನು ಹೀಗೆ ಹಾಸ್ಯ ಮಾಡ್ತೀರೋ?" ಅಂದ.

ಶಾಮಣ್ಣನ ಕೂಗಿನಿಂದ ಕಚೇರಿಯ ಕೆಲಸವೆಲ್ಲವೂ ತಟ್ಟನೆ ನಿಂತುಹೋಯಿತು. ಎಲ್ಲರೂ ಕತ್ತುಗಳನ್ನೆತ್ತಿ ಇವನ ಮುಖವನ್ನು ನೋಡಲಾರಂಭಿಸಿದರು. ಪಕ್ಕದ ಕೊಠಡಿಯಲ್ಲಿಯೇ ಇದ್ದ ಮೇಲಿನ ಆಫೀಸರೂ ಎದ್ದು ಬಂದರು.

ಅವರು ಬಂದದ್ದೇ ತಡ, ಎಲ್ಲರೂ ಕತ್ತುಗಳನ್ನು ಬಗ್ಗಿಸಿಕೊಂಡು ತಮ್ಮ ತಮ್ಮ ಕೆಲಸಗಳನ್ನು ಮಾಡತೊಡಗಿದರು. ಶಾಮಣ್ಣನೂ ಹಾಗೆಯೇ. ಆಫೀಸರು "ಇದೇನಿದು! ಇದೇನು ಆಫೀಸು ಅಂತ ತಿಳಿದುಕೊಂಡಿದ್ದೀರೋ ? ಈ ಗಲಾಟೆಗೆ ಏನು ಕಾರಣ ?" ಎಂದು ಕೇಳಿದರು. ಅವರಿಗೆ ಉತ್ತರವನ್ನು ಹೇಳುವ ಧೈರ್ಯವು ಯಾರಿಗೂ ಇರಲಿಲ್ಲ. ಒಬ್ಬರೂ ಕತ್ತನ್ನು ಎತ್ತಲೂ ಇಲ್ಲ. ಆಗ ಅವರು ಇದು ಬಹುಶಃ ಕಚೇರಿಯ ಕೆಲಸಕ್ಕೆ ಸಂಬಂಧಪಟ್ಟಿದ್ದಲ್ಲವೆಂದು ತಿಳಿದು, " ಈ ಸಲಕ್ಕೆನೋ ಹೋಗಲಿ. ಇನ್ನು ಮುಂದೆ ನೀವು ಯಾರಾದರೂ ಜಗಳವಾಡಬೇಕಾದರೆ, ಕಾಂಪೌಂಡ್ ಆಚೆ ಹೋಗಿ ಬೇಕಾದರೆ ತಲೆ ಒಡೆದುಕೊಳ್ಳಿ, ನಾನು ಕೇಳುವುದಿಲ್ಲ. ಆದರೆ ಆಫೀಸಿನಲ್ಲಿ ಏನಾದರೂ ಆದರೆ, ನಾನು 'ಫೈನ್' ಹಾಕಬೇಕಾಗುತ್ತೆ " ಎಂದು ಹೇಳುತ್ತಾ ಹೊರಟುಹೋದರು.

ಶಾಮಣ್ಣನು ಗೊಣಗುಟ್ಟುತ್ತಾ ದೇವರನ್ನು ಬೈದ. ತನ್ನನ್ನೂ ಬೈದುಕೊಂಡ. ಇಷ್ಟಕ್ಕೆಲ್ಲಾ ಕಾರಣವಾದ ತನ್ನ ಹೆಂಡತಿಯನ್ನು ಶಪಿಸಿದ. 'ಬಡವರು ರೂಪವತಿಯಾದ ಹೆಂಡತಿಯನ್ನು ಮದುವೆಯಾಗುವುದು ಪಾಪ' ಅಂದುಕೊಂಡ.

೨

ಮೂರು ವರ್ಷಗಳ ಮುಂಚೆ, ಶಾಮಣ್ಣನು ಲಲಿತೆಯನ್ನು ಮದುವೆಯಾದಾಗ ಅವನ ಸ್ನೇಹಿತರು ಅವನನ್ನು ಬಹಳ ಅದೃಷ್ಟಶಾಲಿಯೆಂದು ಕರೆದರು. ಶಾಮಣ್ಣನೂ ವಿವಾಹವೆಂಬ ಜೂಜಿನಲ್ಲಿ ಇಂತಹ ಬಹುಮಾನವು ತನಗೆ ಬಂತಲ್ಲಾ ಎಂದು ಬಹು ಹೆಮ್ಮೆಪಟ್ಟಿದ್ದ.

ಆದರೆ ತಂದೆಯ ಅಕಾಲಮರಣದಿಂದ ತನ್ನ ವಿದ್ಯಾವ್ಯಾಸಂಗವನ್ನು ಬಿಟ್ಟು, ಈ ಬಡ ಗುಮಾಸ್ತಗಿರಿಗೆ ಅವನು ಸೇರಬೇಕಾಯಿತು. ಈಗ ಇವನ ಸ್ಥಿತಿಯು ಬಹಳ ಶೋಚನೀಯವಾಗಿತ್ತು. ಹೋಗಲಿ. ಆರೋಗ್ಯಭಾಗ್ಯವಾದರೂ ಉಂಟೇ, ಎಂದರೆ ಅವನಿಗೆ ರೋಗವಿಲ್ಲದ ದಿನವೇ ಇಲ್ಲ. ಇವತ್ತೇನು ಅಂದರೆ ಛಳಿ; ಇವತ್ತೇನು ಅಂದರೆ ಜ್ವರ; ಇವತ್ತೇನು ಅಂದರೆ ತಲೆನೋವು; ಇದೇ ಗೋಳು ಸಾಲದ್ದಕ್ಕೆ ಕಚೇರಿಯಲ್ಲಿ ವಿಪರೀತ ಕೆಲಸ. ಕೆಲವು ದಿನಗಳು ರಜವನ್ನಾದರೂ ತೆಗೆದುಕೊಂಡು



CC-0. Jangamwadi Math Collection. Digitized by eGangotri

ಆರೋಗ್ಯವನ್ನು ಸರಿಪಡಿಸಿಕೊಳ್ಳೋಣವೆಂದರೆ, ರಜೆ ತೆಗೆದುಕೊಂಡರೆ ಊಟಕ್ಕೆ ಮಾರ್ಗವಿಲ್ಲ. ಏಕೆಂದರೆ ಅವನಿಗೆ ಬರುವ ಸಂಬಳವು ಅಹನಿಅಹನಿ ಕಾಲಕ್ಷೇಪಕ್ಕೆ ಮಾತ್ರ ಸಾಕಾಗಿತ್ತು. ದ್ರವ್ಯಾರ್ಜನೆಯ ಬೇರೆಯ ಮಾರ್ಗಗಳು ಯಾವವೂ ಇರಲಿಲ್ಲ.

ಅನೇಕ ಸಾರಿ ಆರೋಗ್ಯವಿಷಯದಲ್ಲಿ ಲಲಿತೆ ಅವನನ್ನು ಆಕ್ಷೇಪಿಸಿದ್ದಳು. ಈ ಆಕ್ಷೇಪಣೆಗಳನ್ನು ನೆನೆಸಿಕೊಂಡಾಗ ಲೆಲ್ಲಾ ಅವನಿಗೆ ಹೆಂಡತಿಯ ಮೇಲೆ ಬಹಳ ಗುಮಾನಿಗೆ ಕಾರಣವಾಗುತ್ತಿತ್ತು. ಲಲಿತೆಯಾದರೋ ಆರೋಗ್ಯ ಮತ್ತು ಸೌಂದರ್ಯದಿಂದ ಬಳುಕುತ್ತಿದ್ದಳು. ಆದರೆ ದಿನೇ ದಿನೇ ಶುಕ್ಲಪಕ್ಷದ ಚಂದ್ರನಂತೆ ಅವಳ ರೂಪವು ಹೆಚ್ಚುತ್ತಿದೆಯಲ್ಲಾ, ದೇವರು ಅವಳನ್ನು ಕುರೂಪಿ ಯನ್ನಾಗಿಯಾದರೂ ಮಾಡಬಾರದೇ, ಎನ್ನಿಸುವುದು ಶಾಮಣ್ಣನಿಗೆ. ಒಂದು ದಿನ ಅವನು ಹಾಗೆ ಯೋಚಿಸ ತೊಡಗಿದನು. "ನಾನು ಪುಣ್ಯವಂತನೂ ಅಲ್ಲ; ಆರೋಗ್ಯ ಶಾಲಿಯೂ ಅಲ್ಲ. ನಾನು ಹೀಗೆಯೇ ರೋಗದಿಂದ ಸರ ಳುತ್ತಿದ್ದರೆ ನನ್ನ ಹೆಂಡತಿಯು ಕೆಟ್ಟು ಹೋಗುವುದರಲ್ಲಿ ಸಂದೇಹವಿಲ್ಲ. ಏನಾದರೂ ಮಾಡಿ ಅವಳು ಸರಿಯಾಗಿ ರುವ ಹಾಗೆ ನೋಡಿಕೊಳ್ಳಬೇಕು."

ಶಾಮಣ್ಣನು ಯೋಚಿಸಿದಂತೆ ಲಲಿತೆಯು ಅಂಥ ವಿಷ ಯಗಳಿಗೇ ತನ್ನ ಮನಸ್ಸಿನಲ್ಲಿ ಎಡೆಯನ್ನು ಕೊಟ್ಟಿರಲಿಲ್ಲ. ತನ್ನ ಪತಿಯು ದುಡ್ಡಿನ ಅಭಾವದಿಂದ ಹೀಗೆ ಚಿಂತಾ ಕ್ರಾಂತನಾಗಿರುವನೆಂದೂ, ತಾನಾದರೂ ಹಸನ್ಮುಖದಿಂ ದಿದ್ದು ಆತನನ್ನು ಸಂತೋಷಪಡಿಸಬೇಕೆಂದೂ, ಯಾವಾ ಗಲೂ ನಗುಮುಖದಿಂದಿರುತ್ತಿದ್ದಳು. ಇದರಿಂದ ಶಾಮ ಣ್ಣನಿಗೆ ಇನ್ನೂ ಹೆಚ್ಚು ಗುಮಾನಿಗೆ ಕಾರಣವಾಯಿತು. ಹೆಂಡತಿಯು ಏನು ಹೇಳಿದರೂ ಅವನು ನಂಬುವನಲ್ಲ. "ನಾನು ಇಷ್ಟು ಬಡವನಾಗಿದ್ದರೂ, ಇಷ್ಟೊಂದು ಕಷ್ಟಕ್ಕೆ ಸಿಕ್ಕಿ ಬಿದ್ದಿದ್ದರೂ, ಇವಳು ಸಂತೋಷದಿಂದಿ ರಲು ಕಾರಣವೇನು? ಏನೋ ನಡೆದಿರಬೇಕು" ಎಂದು ಮನಸ್ಸಿನಲ್ಲಿಯೇ ಗುಣಾಕಾರ ಹಾಕುತ್ತಿದ್ದ.

ಈಮಧ್ಯೆ ಶಾಮಣ್ಣನ ಚಿಂತೆಯೆಂಬ ಬೆಂಕಿಗೆ ತುಪ್ಪ ವನ್ನು ಹೊಯ್ದಂತಾಯಿತು. ರಸ್ತೆಯ ಪಕ್ಕದಲ್ಲಿದ್ದ ಇವರ ಮನೆಯ ಎದುರುಮನೆಯು ಬಹಳ ದಿನಗಳಿಂದ ಖಾಲಿಯಿದ್ದು, ಈಗ ಅಲ್ಲಿ ಒಂದು ಹೋಟಲು ಪ್ರಾರಂಭವಾಗಿತ್ತು

ಕಾಫೀಕ್ಲಬ್ಬು ಪ್ರಾರಂಭವಾಗಿತ್ತು. ಇಲ್ಲಿಗೆ ಪ್ರತಿದಿನವೂ ಸಾಯಂಕಾಲದಲ್ಲಿ ಅನೇಕಜನ ಲಕ್ಷಣವಾದ ಯುವ ಕರು, ಅಲಂಕಾರ ಮಾಡಿಕೊಂಡು ಬಂದು, ಆನಂದದಿಂದ ಕಾಲಕಳೆಯುತ್ತಿದ್ದರು. ಅವರ ನಗುವು ಶಾಮಣ್ಣನಿಗೆ ಕೇಳಬಂದಾಗಲೆಲ್ಲಾ ಆತನ ಪ್ರಾಣವೇ ಹಾರಿಹೋದಂತೆ ಭಾಸವಾಗುತ್ತಿತ್ತು. ಇಷ್ಟೇ ಅಲ್ಲ, ಆ ಯುವಕರು ಹೋಟಲಿನ ಜಗುಲಿಯಮೇಲೆ ಕುಳಿತು ಹರಟೆ ಹೊಡೆ ಯುವುದನ್ನು ಶಾಮಣ್ಣನೇ ಅನೇಕದಿನ ಸ್ವತಃ ನೋಡು ತ್ತಿದ್ದ. ಆದುದರಿಂದ ಇವರೇನಾದರೂ ತನ್ನ ಹೆಂಡತಿ ಯನ್ನು ನೋಡಿದರೆ, ಅವ್ಯವಸ್ಥೆಯಾದೀತೆಂದು ಹೆದರಿ ಅವನು ಮನೆಯ ಕಿಟಕಿಯ ಬಾಗಿಲುಗಳನ್ನು ತೆರೆಯ ಕೂಡದೆಂದೂ,ಲಲಿತೆಯು ಹೊಸಲಿನಿಂದಾಚೆಗೆ ಕಾಲಿಡ ಕೂಡದೆಂದೂ ಆಜ್ಞೆಮಾಡಿದ್ದ.

೩

ಯಾವದಿನ ಕಚೇರಿಯಲ್ಲಿ ಆ ಗಲಾಟೆಯಾಯಿತೋ, ಅಂದು ಶಾಮಣ್ಣನು ಸ್ವಲ್ಪ ಮುಂಚಿತವಾಗಿಯೇ ಮನೆಗೆ ಬಂದ. ಆ ದಿನ ಲಲಿತೆ ಹಗಲೆಲ್ಲಾ ಕತ್ತಲೆಯ ಮನೆಯಲ್ಲಿ ಒಂಟಿಯಾಗಿ ಕೂತು ಕೂತು ಬೇಜಾರಾಗಿ, ಪತಿಯ ಆಗ ಮನವನ್ನು ನಿರೀಕ್ಷಿಸುತ್ತಾ, ಬಾಗಿಲಿನಲ್ಲಿ ನಿಂತಿದ್ದಳು. ಇವಳನ್ನು ನೋಡಿದ ಕೂಡಲೇ ಶಾಮಣ್ಣನಿಗೆ ಕೋಪ ವೇರಿತು. ರೋಷದಿಂದ ಒಳಕ್ಕೆನುಗ್ಗಿ, ಕಾಲುಗಳಿಂದ ನೆಲವನ್ನು ಒದೆಯುತ್ತಾ, ಅವಳನ್ನು ಬಿಟ್ಟುಬಿಡುವುದಾಗಿ ಹೆದರಿಸಿದ. ಇದೊಂದೂ ಲಲಿತೆಗೆ ಅರ್ಥವೇ ಆಗಲಿಲ್ಲ. ಕಾರಣವನ್ನು ಕೇಳಲು ಹೆದರಿದಳು. ಶಾಮಣ್ಣನು ಅವ ಳನ್ನು ವಾಚಾಮಗೋಚರವಾಗಿ ಬೈದ. ಅವಳು ಏನೂ ತಿಳಿಯದವಳಂತೆ ಇರುವುದನ್ನು ನೋಡಿ, "ಎಲಾ ಹೆಂಗಸೇ! ಆ ನಿನ್ನ ಕೆಂಪು ತುಟಿಗಳಲ್ಲಿ ಯಾವ ವಿಷವನ್ನು ತುಂಬಿರುವೆ! ಆ ನಿನ್ನ ಎದೆಯಲ್ಲಿ ಯಾವ ದ್ರೋಹವನ್ನು ಬಚ್ಚಿಟ್ಟಿರುವೆ!" ಎಂದುಕೊಂಡ.

ಹೀಗೆಯೇ ಕೆಲವು ದಿನಗಳು ಕಳೆದವು. ಲಲಿತೆಗೆ ತನ್ನ ಪತಿಯ ನಡತೆಯ ವಿಷಯದಲ್ಲಿ ಬಹಳ ಹೆದರಿಕೆ ಯಾಯಿತು. ಆಗ ಅವಳು ಏನು ಮಾಡಬೇಕೆಂದು ಬಹಳ ವಾಗಿ ಯೋಚಿಸಿ, ಬೇರೆ ಊರಿನಲ್ಲಿದ್ದ ತನ್ನ ಅಕ್ಕನಿಗೆ ಒಂದು ಕಾಗದವನ್ನು ಬರೆದಳು.

CC-0. Jangamwadi Math Collection. Digitized by eGangotri

ನಿನ್ನ ಯೋಗಕ್ಷೇಮವು ತಿಳಿದು ಬಹಳ ದಿನಗಳಾದವು. ಇಲ್ಲಿ ನನ್ನ ಯಜಮಾನರು ಪ್ರತಿನಿತ್ಯವೂ ನನ್ನನ್ನು ಬಾಯಿಗೆ ಬಂದ ಹಾಗೆಲ್ಲಾ ಬೈಯುತ್ತಾರೆ. ಮನೆಯ ಕಿಟಕಿ ಬಾಗಿಲುಗಳೊಂದನ್ನೂ ತೆಗೆಯಲು ಅಪ್ಪಣೆಯಿಲ್ಲ. ನಾನು ಈ ಕತ್ತಲಗವಿಯಲ್ಲಿ ಸೆರೆಮನೆಯವಳಂತೆ ಬಂಧನದಲ್ಲಿದ್ದೇನೆ. ಆದುದರಿಂದ ನೀನು ಬಂದು, ಎರಡು ಮೂರು ದಿನಗಳವರೆಗಾದರೂ ನಿರ್ಭಾಗ್ಯಳಾದ ನಿನ್ನ ತಂಗಿಯ ಮನೆಯಲ್ಲಿದ್ದು ಹೋಗಬೇಕೆಂದು ಬಯಸುತ್ತೇನೆ.

ಇತಿ, ನಿನ್ನ ಪ್ರೀತಿಯ ಲಲಿತ.''

ನಾಲ್ಕು ದಿನಗಳ ನಂತರ ಲಲಿತೆಗೆ ಈ ಜವಾಬು ಬಂತು.

"ನನ್ನ ಪ್ರೀತಿಯ ಲಲಿತನಿಗೆ,

ನಿನ್ನ ಕಾಗದವನ್ನು ನೋಡಿ ನನಗೆ ತುಂಬಾ ವ್ಯಸನವಾಗಿದೆ. ನೀನು ಏನೂ ಹೆದರಬೇಡ. ಗಂಡನನ್ನು ಸರಿಯಾಗಿ ನೋಡಿಕೋ. ಯಾವುದೋ ದುಃಖಕ್ಕಾಗಿಯೋ ಅಥವಾ ದುಡ್ಡಿನ ತೊಂದರೆಗಾಗಿಯೋ ಆತನು ಹಾಗಾದಿರಬಹುದು. ನನಗೆ ಈಗ ಬರಲು ಅನುಕೂಲವಿಲ್ಲ. ಏಕೆಂದರೆ ನಮ್ಮ ಕಿಟ್ಟೂಗೆ ಜ್ವರ ಬರುತ್ತಿದೆ.

ಇತಿ,

ನಿನ್ನ ಅಕ್ಕ, ಕಮಲ.''

ಲಲಿತೆ ಪುನಃ ಬರೆದಳು.

"ಅಕ್ಕಾ,

ನಿನ್ನ ಕಾಗದ ಬಂದು ತಲುಪಿತು. ಹಾಗಲ್ಲ. ನಾನು ನಿಜವಾಗಿಯೂ ತೊಂದರೆಯೆಂಬ ಬಲೆಯಲ್ಲಿ ಸಿಕ್ಕಿಬಿದ್ದಿದ್ದೇನೆ. ನನಗೆ ಏನು ಮಾಡುವುದಕ್ಕೂ ತೋರುವುದಿಲ್ಲ. ಕೆಲವು ಸಲ, ವಿಷವನ್ನು ತೆಗೆದುಕೊಂಡು ಪ್ರಾಣವನ್ನು ಬಿಡಬೇಕೆನ್ನಿಸುವುದು. ನೀನು ಇಲ್ಲಿಗೆ ಬರದಿದ್ದರೆ ನಾನು ಹಾಗೆಯೇ ಮಾಡುತ್ತೇನೆ.

ಇತಿ, ನಿನ್ನ ಪ್ರೀತಿಯ ಲಲಿತ.''

ಕಮಲೆಯು ಪುನಃ ಜವಾಬನ್ನು ಕೊಟ್ಟಳು.

"ನನ್ನ ಪ್ರೀತಿಯ ಲಲಿತನಿಗೆ,

ನೀನು ಹೀಗೆಲ್ಲಾ ಆಡಬಾರದು. ಇನ್ನೊಂದು ವಾರದಲ್ಲಿ ನಾನು ನಿಮ್ಮೂರಿಗೆ ಬರುತ್ತೇನೆ. ಆದರೆ ನನ್ನ ಬರುವಿಕೆಯನ್ನು ನಿನ್ನ ಗಂಡನಿಗೆ ತಿಳಿಸಬೇಡ. ನಾನು ಅವನಿಲ್ಲದ ವೇಳೆಯಲ್ಲಿ ನಿಮ್ಮ ಮನೆಗೆ ಬಂದು, ಅವನು ನಿನ್ನೊಂದಿಗೆ ಸರಿಯಾಗಿ ವರ್ತಿಸುವಂತೆ ಮಾಡುತ್ತೇನೆ.

ಇತಿ, ಕಮಲ.''

೪

ಈ ಕಾಗದವು ಬಂದ ಹತ್ತನೆಯ ದಿವಸ, ಶಾಮಣ್ಣನಿಗೆ ಲಲಿತೆಯ ಹಾಸಿಗೆಯ ದಿಂಬಿನ ಕೆಳಗೆ ಅರ್ಧ ಈಚೆಗೆ ಹೊರಟುಕೊಂಡಿದ್ದ ಒಂದು ಕವರು ಕಂಡಿತು. ಆಶ್ಚರ್ಯದಿಂದ ಅದನ್ನು ತೆಗೆದುಕೊಂಡು, ಒಳಗಿನ ಕಾಗದವನ್ನು ಓದುತ್ತಾನೆ!

"ನನ್ನ ನವಮೋಹನಾಂಗಿಗೆ,

ನಿನ್ನ ಸ್ಥಿತಿಯನ್ನು ನೋಡಿ ನನಗೆ ನಿಜವಾಗಿಯೂ ತುಂಬಾ ಮರುಕವುಂಟಾಗಿದೆ. ಯಾವ ಕಣ್ಣಿಲ್ಲದ ದೇವರು ನಿನ್ನನ್ನು ಕುರೂಪಿಯೂ, ರೋಗಿಯೂ ಆದ ಆ ಶಾಮಣ್ಣನಿಗೆ ಕಟ್ಟಿಸಿದನೋ! ಅವನಲ್ಲಿ ನೀನು ಏನು ಸುಖಪಡಬಲ್ಲೆ! ಅವತ್ತು ಹೇಳಿದಂತೆ ನೀನು ನನ್ನ ಹೇಳಿಕೆಗೆ ಒಪ್ಪಿದ್ದೇ ಆದರೆ, ನಿನ್ನನ್ನೇ ನನ್ನ ಆಸ್ತಿಗೆಲ್ಲಾ ಯಜಮಾನಿತಿಯನ್ನಾಗಿ ಮಾಡುತ್ತೇನೆ. ನೋಡು! ಚೆನ್ನಾಗಿ ಯೋಚಿಸು. ಶ್ರೇಷ್ಠವಾದ ಯೌವನವನ್ನು ನಿಷ್ಫಲವಾಗಿ ಕಳೆದುಕೊಳ್ಳಬೇಡ. ಅಯ್ಯೋ, ನೀನಿಲ್ಲದಿರುವುದು ನನಗೆ ಹೇಗಾಗಿದೆ! ನಿನ್ನಲ್ಲಿಗೆ ಹಾರಿಬರಲು ನನಗೆ ರೆಕ್ಕೆಗಳಿಲ್ಲವೆಂದು ಕೊರಗುತ್ತಿದ್ದೇನೆ.

ಇತಿ, ನಿನ್ನ ಪ್ರೀತಿಪಾತ್ರ.''

ಶಾಮಣ್ಣನು ಕಾಗದವನ್ನು ಓದುತ್ತಿದ್ದಹಾಗೆಯೇ ದೀರ್ಘವಾದ ನಿಟ್ಟುಸಿರನ್ನು ಬಿಟ್ಟನು. ಅವನ ಮುಖವು ಕೆಂಪೇರಿತು. ಮೈಯೆಲ್ಲಾ ನಡುಗಿತು. ಎದೆಯು ಬಡಿದುಕೊಳ್ಳಲಾರಂಭಿಸಿತು. 'ನಾನು ಇನ್ನುಮೇಲೆ ಸರ್ಪ ಕಾಪಲು ಕಾದು, ಇದು ಹೇಗೆ ಪರ್ಯವಸಾನವಾಗುವುದೋ ನೋಡಿಯೇ ಬಿಡಬೇಕು'' ಎಂದುಕೊಂಡ.

ಅಂದಿನಿಂದ ಶಾಮಣ್ಣನು ಮನೆಯಲ್ಲಿ ಪತ್ತೇದಾರಿಯ ಕೆಲಸಕ್ಕೆ ಪ್ರಾರಂಭಿಸಿದ, ಮತ್ತು ಲಲಿತೆಗೆ ಗೊತ್ತಾಗದಂತೆ ಅವಳ ಕೊಠಡಿಯ ಸಂದಿಗೊಂದಿಗಳನ್ನೆಲ್ಲಾ ಹುಡುಕುವುದೇ ಅವನ ಕೆಲಸವಾಯಿತು. ಆದರೆ ಅವಳಿಗೆ ಇದು ಗೊತ್ತಿದ್ದರೂ, ಏನೂ ತಿಳಿಯದವಳಂತೆಯೇ ಇದ್ದಳು. ಶಾಮಣ್ಣನೂ ಸಹ ಸಂಶಯಕ್ಕೆ ಆಸ್ಪದವಾಗದಂತೆ ತನ್ನ ಕೆಲಸವನ್ನು ನೆರವೇರಿಸಿಕೊಂಡು ಹೋಗುತ್ತಿದ್ದ.

ಎರಡುದಿನಗಳ ನಂತರ ಲಲಿತೆಯ ಹಾಸಿಗೆಯ ಕೆಳಗೆ ಇನ್ನೊಂದು ಕಾಗದವು ಸಿಕ್ಕಿತು.

"ನನ್ನ ಪ್ರಾಣವಲ್ಲಭೆಗೆ,

CC-0. Jangamwadi Math Collection. Digitized by eGangotri

ನೀನು ಹೇಳಿದ ಒಪ್ಪಿಗೆಗೆ ಸ್ವಲ್ಪ ತೊಂದರೆಯಾದರೂ ನಾನು ಒಪ್ಪಿಕೊಂಡಿದ್ದೇನೆ. ನೀನು ನಿನ್ನ ಗಂಡನು ಸಾಯಂಕಾಲ ಆರು ಘಂಟೆಗೆ ಮುಂಚೆ ಮನೆಗೆ ಬರುವುದಿಲ್ಲವೆಂದು ಬರೆದಿರುವುದನ್ನು ನೋಡಿ ನನಗೆ ತುಂಬಾ ಸಂತೋಷವಾಯಿತು. ನೀನು ಬರೆದಿರುವಂತೆ ನಾನು ಗುರುವಾರ ಮೂರು ಘಂಟೆಗೆ ಸರಿಯಾಗಿ ನಿಮ್ಮ ಮನೆಗೆ ಬರುತ್ತೇನೆ. ದಯವಿಟ್ಟು ನನಗಾಗಿ ಕಾದಿರು. ನಾವು ಸಂಧಿಸುವ ಕಾಲವನ್ನೇ ಎಣಿಸುತ್ತಿದ್ದೇನೆ.

ಇತಿ, ನಿನ್ನ ಪ್ರೀತಿಪಾತ್ರ.''

ಶಾಮಣ್ಣನಿಗೆ ಪ್ರಾಣವೇ ಹಾರಿಹೋಯಿತು. ಕಣ್ಣು ಕಗ್ಗತ್ತಲೆಗೂಡಿತು. ''ನಾಳೆಯೇ ಗುರುವಾರ. ನಾಳೆ ಬಿಟ್ಟರೆ ಹೋಯ್ತು'' ಎಂದುಕೊಂಡನು. ಮಾರನೆಯ ದಿನ ಶಾಮಣ್ಣನು ಏನೂ ತಿಳಿಯದವನಂತೆ ನಟಿಸಿ, ಎಂದಿನಂತೆ ಊಟವನ್ನು ಮಾಡಿಕೊಂಡು ಕಚೇರಿಗೆ ಹೋದ. ಹೋದರೇನು,ಮನಸ್ಸೆಲ್ಲವೂ ಮನೆಯಲ್ಲಿ. ಅಂತು ಇಂತು ಬಹಳ ಪ್ರಯಾಸದಿಂದ ಅಲ್ಲಿ ಕಾಲವನ್ನು ಕಳೆದನು. ಕೇಳಿದವರಿಗೆಲ್ಲಾ ದೇಹದಲ್ಲಿ ಸ್ವಸ್ಥವಿಲ್ಲವೆಂದು ಹೇಳುತ್ತಿದ್ದ. ಗಡಿಯಾರವು ಮೂರುಘಂಟೆಯನ್ನು ಬಾರಿಸಿತು. ಖಾಯಿಲೆಯೆಂಬ ನೆವದಿಂದ ರಜೆಯನ್ನು ಕೇಳಿಕೊಂಡು, ಕಚೇರಿಯಿಂದ ಹೊರಟು, ಮನೆಯ ಬಾಗಿಲಿಗೆ ಬಂದು ನೋಡುತ್ತಾನೆ: ಬೀದಿಯ ಬಾಗಿಲಿಗೆ ಒಳಗಿನಿಂದ ಅಗಣಿ ಹಾಕಿತ್ತು. ಅವನ ಎದೆಯು ಬಡಿದುಕೊಳ್ಳಲಾರಂಭಿಸಿತು. ಸಂದಿನಲ್ಲಿ ಕಿವಿಗೊಟ್ಟುಕೇಳಿದ. ಆಗಾಗ ಕೆಲವು ಮೃದು ಮಾತುಗಳು ಮಾತ್ರ ಕೇಳಬರುತ್ತಿದ್ದುವು. ''ಅಯ್ಯೋ, ದ್ರೋಹಿಯಾದ ಹೆಂಗಸೇ, ಬೇಕಾದಷ್ಟು ಸುಖವನ್ನು ಪಟ್ಟುಬಿಡು. ಏಕೆಂದರೆ ಇದೇ ನಿನ್ನ ಕಡೆಯ ದಿನ. ಆ ನಿನ್ನ 'ಪ್ರೀತಿಪಾತ್ರ'ನನ್ನೂ ನಿನ್ನನ್ನೂ ಇವತ್ತೇ ಪೂರೈಸಿಬಿಡುತ್ತೇನೆ. ಆಮೇಲೆ ಎಲ್ಲವೂ ಸಮಾಪ್ತವಾಗುವುದು.'' ಎಂದು ಮನಸ್ಸಿನಲ್ಲಿಯೇ ಅಂದುಕೊಂಡ.

ಅನಂತರ ಬಾಗಿಲನ್ನು ಬಲವಾಗಿ ಬಡಿದ. ಎರಡು ಅಗಣಿಗಳಲ್ಲಿ ಒಂದೇ ಅಗಣಿಯು ಹಾಕಲ್ಪಟ್ಟಿದ್ದುದರಿಂದ ಬಾಗಿಲು ಅಲ್ಲಾಡಿತು. ಮತ್ತು ಭಯದಿಂದ ಕಂಪಿಸುವ ಒಂದು ಧ್ವನಿಯು ಒಳಗಡೆಯಿಂದ ''ಯಾರದು?'' ಎಂದಿತು.

''ಯಾರಾದರೇನು?''

''ಇಲ್ಲಿ ನಿನ್ನ ಆಗತ್ಯವಿಲ್ಲ, ಹೊರಡು.''

ಶಾಮಣ್ಣನಿಗೆ ಕಣ್ಣುಗಳು ಕೆಂಪೇರಿದವು. ಹುಚ್ಚನಂತಾದ. ಬಹಳ ಕೋಪದಿಂದ ಬಾಗಿಲನ್ನು ಇನ್ನೊಂದಾವರ್ತಿ ಝಾಡಿಸಿ ಒದ್ದ. ಬಾಗಿಲುಗಳು ಧಢಾರನೆ ತೆರೆದವು. ಒಳಕ್ಕೆ ಹೋಗಿ ನೋಡುತ್ತಾನೆ. ''ಅಯ್ಯೋ ದೇವರೆ. ಇದೇನಿದು?'' ಎಂದು ಬಾಯಿ ಬಾಯಿ ಬಡಿಯಲಾರಂಭಿಸಿದ. ಅವನಿಗೆ ದಿಗ್ಭ್ರಮೆಯಾಯಿತು. ಏನೇನೋ ಯೋಚನೆಯನ್ನು ಮಾಡಿಕೊಂಡು ಬಂದರೆ, ಇಲ್ಲಿ ಅಕ್ಕ ತಂಗಿ ಕುಳಿತುಕೊಂಡು ಮಾತನಾಡುತ್ತಿದ್ದಾರೆ.

ಆಗ ಕಮಲೆಯು ''ಭಾವನವರು ಇವತ್ತು ಇಷ್ಟು ಜಾಗ್ರತೆಯಾಗಿ ಬರಲು ಕಾರಣವೇನು? ಪಾಪ! ಆರೋಗ್ಯ ಭಂಗವಾಯಿತಲ್ಲವೆ?'' ಎಂದಳು. ಶಾಮಣ್ಣನು ಅವಮಾನಿತನಾಗಿ, ಕತ್ತನ್ನು ಬಗ್ಗಿಸಿಕೊಂಡು, ''ಅದರೆ ಆ ಕಾಗದಗಳು!'' ಎಂದ. ''ಹೌದು. ಆ ಕಾಗದಗಳನ್ನು ನಾನೇ ಬರೆದವಳು. ಇಲ್ಲದಿದ್ದರೆ ಅವು ನಿಮ್ಮ ಕೈಗೆ ಸಿಕ್ಕುತ್ತಿದ್ದವೇ! ಹೆಂಗಸರು ಕೆಡಬೇಕೆಂದು ಮನಸ್ಸು ಮಾಡಿದರೆ ನಿಮ್ಮಿಂದ ತಡೆಯಲು ಸಾಧ್ಯವೇ? ಆದರೆ ನೀವು ತಿಳಿದಂತೆ ನನ್ನ ತಂಗಿಯೇನು ಕೀಳು ಸ್ವಭಾವದವಳಲ್ಲ. ನೀವು ನಮ್ಮನ್ನು ಗಾಳಿ ಬೆಳಕಿಲ್ಲದ ಕಡೆ ಉಪ್ಪಿನಕಾಯಿಗಳನ್ನು ಜಾಡಿಗಳಲ್ಲಿಟ್ಟಿರುವಂತೆ ಇಟ್ಟಿರಬೇಕೆನ್ನುತ್ತೀರೋ? ಗಾಳಿ ಬೆಳಕಿಗೆ ಬಿಟ್ಟಮಾತ್ರಕ್ಕೇ, ಹೆಂಗಸರ ಗಂಡನ ಮೇಲಣ ಪ್ರೀತಿಯು ಆವಿಯಾಗಿ ಹೋಗುವುದೆಂದು ತಿಳಿದಿರುವಿರೋ?'' ಎಂದಳು.

ಶಾಮಣ್ಣನು ಕತ್ತನ್ನು ಎತ್ತಲೂ ಇಲ್ಲ, ಮಾತನಾಡಲೂ ಇಲ್ಲ. ಕಮಲೆಯು ಲಲಿತೆಯ ಮುಖವನ್ನೂ, ಲಲಿತೆಯು ಕಮಲೆಯ ಮುಖವನ್ನೂ ನೋಡಿ ನಗಲಾರಂಭಿಸಿದರು. ಶಾಮಣ್ಣನು ಬೆಪ್ಪಾದ.

CC-0. Jangamwadi Math Collection. Digitized by eGangotri

# ಸಾಮುದ್ರಿಕ ಪರಿಚಯ

ಲೇಖಕರು—ಶ್ರೀ. ಉಡುಪಿ ಕೆ. ಶ್ರೀನಿವಾಸಾಚಾರ್ಯರು, ಧಾರವಾಡ

जीवितमरणं लाभालाभं सुखदुःखमिह जगत्यखिलम् ।
करेखाभिः प्रायः प्राप्नोति नरोऽथवा नारी ॥

ಪುರುಷನು ಅಥವಾ ಸ್ತ್ರೀಯು ಜೀವನ, ಮರಣ, ಲಾಭ, ಅಲಾಭ, ಸುಖ, ದುಃಖ ಮೊದಲಾದ ಎಲ್ಲ ವಿಷಯಗಳನ್ನೂ ಬಹುತರವಾಗಿ ಹಸ್ತರೇಖೆಗಳಿಂದಲೇ ಹೊಂದುವನು.



ಈ ವಿಷಯವಾಗಿ ಕಳೆದ ಫೆಬ್ರುವರಿ ಸಂಚಿಕೆಯಲ್ಲಿ ಕೆಲವು ಸಂಗತಿಗಳನ್ನು ಕೊಟ್ಟಿರುತ್ತದೆ ಆದರೆ ಮೊದಲು ಆಯುರ್ಭಾಗವನ್ನು ಮಾತ್ರ ಕಂಡುಹಿಡಿಯದೆ ಫಲಗಳನ್ನು ಹೇಳಬಾರದೆಂಬುದರಿಂದ ಆಯುಷ್ಯ ರೇಖೆಯ ಕೆಲವು ಮಾಹಿತಿಗಳನ್ನು ಮೊದಲಿಗೆ ತಿಳಿಯುವುದು ಅತ್ಯಾವಶ್ಯಕವಾಗಿದೆ.

"वामकरे नारीणां दक्षिणकरे नराणांतु" ಎಂಬಂತೆ ಸ್ತ್ರೀಯರ ಎಡಗೈಯನ್ನು, ಪುರುಷರ ಬಲಗೈಯನ್ನು ಮುಖ್ಯವಾಗಿ ನೋಡತಕ್ಕದ್ದಾದರೂ, ಎರಡೂ ಕೈಗಳನ್ನು ನೋಡದೆ ಫಲವನ್ನು ಅಥವಾ ಆಯುಸ್ಸನ್ನು ನಿರ್ಣಯಮಾಡಬಾರದು; ಏತಕ್ಕೆಂದರೆ- ಜೀವಿತರೇಖೆಯ ಭೇದವಾಗಲಿ, ಇಲ್ಲವೆ ಯಾವುದಾದರೂ ಕೆಟ್ಟ ಚಿಹ್ನೆಗಳಾಗಲಿ ಒಂದೇ ಕೈಯಲ್ಲಿ ಮಾತ್ರವಿದ್ದರೆ, ಆ ಸಮಯದಲ್ಲಿ ದೇಹಪೀಡೆ, ಅಥವಾ ಕಷ್ಟಗಳು ಮಾತ್ರ ಒಂದು ಪಾರಾಗಬಹುದು. ಪಾಶ್ಚಿಮಾತ್ಯರು ಅನುಭವದಿಂದ ಅಂಗುಷ್ಟದಿಂದ(೧ನೆಯಬೆರಳು ಹೆಬ್ಬೊಟ್ಟು)ಮಣಿಬಂಧದ ವರೆಗೆ ಸುತ್ತಿ ಬಂದ ರೇಖೆಗೆ ಆಯುಷ್ಯರೇಖೆ(Life line) ಎನ್ನುತ್ತಾರೆ. ಹಿಂದೂಶಾಸ್ತ್ರರೀತ್ಯಾ ಅಂತಃಕರಣ ರೇಖೆಯೇ (Heart line) ಆಯುಷ್ಯರೇಖೆಯು.

रेखाकनिष्ठिकायाः ज्येष्ठमुल्लंघ्य यस्ययातिपरां ।
अच्छिन्नापरिपूर्णा सनरोवत्सरशतायुःस्यात् ॥

ಅಂದರೆ ಕಿರುಬೆರಳಿನ ಕೆಳಗಿರತಕ್ಕ ರೇಖೆಯೇ ಆಯುಷ್ಯ ರೇಖೆಯೆಂತಲೂ ಮತ್ತು, ಆ ರೇಖೆಯು ತುಂಡಾಗದೆ ಮೂರನೆಯ ಬೆರಳನ್ನು ಏರಿದ್ದರೆ ನೂರು ವರ್ಷ ಆಯುಷ್ಯವೆಂತಲೂ—

पुंसामायुर्भागे प्रत्येकं पंचाविंशतिः शरदां ।
कल्प्याः कानिष्ठिकांगुलिमूलादिह तर्जनीपरतः ॥

ಅಂದರೆ ಕಿರುಬೆರಳಿನಿಂದ ತರ್ಜನಿಯ ವರೆಗೆ ಪ್ರತಿ ಬೆರಳಿಗೆ ಇಪ್ಪತ್ತೈದು ವರ್ಷಗಳಂತೆ ಲೆಕ್ಕ ಹಿಡಿಯಬೇಕೆಂತಲೂ ಸ್ಪಷ್ಟೀಕರಿಸುವರು.

ಅನುಭವದಿಂದ ನೋಡಲಾಗಿ ಈ ಎರಡೂ ರೇಖೆಗಳೂ ಆಯುಷ್ಯಕ್ಕೆ ಸಂಬಂಧಪಟ್ಟವುಗಳಾಗಿ ಕಂಡುಬರುತ್ತವೆ.



CC-0. Jangamwadi Math Collection. Digitized by eGangotri

ಹುಟ್ಟಿದ ಕೂಡಲೇ ಮರಣವನ್ನು ಹೊಂದತಕ್ಕ ಕೂಸಿನ ಕೈಯಲ್ಲಿ ಆಯುಷ್ಯಕ್ಕೆ ಸಂಬಂಧಪಟ್ಟ ರೇಖೆಗಳು ಪೂರ್ಣವಿದ್ದರೂ, ಅದು ಸಾಯಲು ಕಾರಣವೇನೆಂದು ಸಂದೇಹ ಬರಬಹುದು. ಆದರೆ—

यावन्मात्रश्छेदाज्जिवितरेखा स्थिरा भवंति नृणां ।
अपमृत्यवोऽपि तावन्मात्रा नियतं परिज्ञेयाः ॥

ಮನುಷ್ಯನ ಆಯುಷ್ಯರೇಖೆಯಲ್ಲಿ ಎಷ್ಟೆಷ್ಟು ಭೇದಗಳಿರುತ್ತವೆಯೋ ಅಷ್ಟಷ್ಟು ಅಪಮೃತ್ಯುಗಳು ತಪ್ಪಿದ್ದಲ್ಲವೆಂದು ತಿಳಿಯಬೇಕು. ಹೀಗೆ ಎರಡೂ ಕೈಗಳಲ್ಲಿಯೂ ಎರಡೂ ರೇಖೆಗಳಲ್ಲಿಯೂ ಒಂದೇ ಸಮಯದಲ್ಲಿ ಭೇದ ಹೊಂದಿದುದು ಕಂಡುಬಂದರೆ ಮರಣವು ತಪ್ಪಿದ್ದಲ್ಲ. ಅಂಥವನಿಗೆ ಯಾವ ಉಪಾಯ ಸಾಧನೆಗಳೂ ಆಯುಷ್ಯವನ್ನು ವೃದ್ಧಿಗೊಳಿಸಲಾರವು. ಬರಿ ಒಂದು ಕೈಯ್ಯಲ್ಲಿಯ



ಆಕೃತಿ ನಂ. 6;

ಆಯುಷ್ಯರೇಖೆಯು ಛಿನ್ನವಾಗಿದ್ದರೆ, ಅದೂ ಅಪಮೃತ್ಯುವೆನಿಸುತ್ತದೆ. ಆ ಭೇದವು ಯಾವ ಗ್ರಹದ ಪರ್ವತದಿಂದ ಬಂದಿರುತ್ತದೋ ಆ ಗ್ರಹಕ್ಕೆ ಹೇಳಿದ ಪ್ರಾಯಶ್ಚಿತ್ತ ಜಪ, ಅನುಷ್ಠಾನಗಳಿಂದ ಅಪಮೃತ್ಯು ತಪ್ಪಬಹುದು. ಅಲ್ಲದೆ, ಆ ಗ್ರಹಕ್ಕೆ ಸರಿಯಾದ ಪೀಡೆಗಳೇ ಬರುವುವು.

ಉದಾ:— ಆಕೃತಿ ೬ರಲ್ಲಿ ೨ನೆಯ ಗುರುತನ್ನು ನೋಡಿರಿ. ಅಂದರೆ ಆ ಭೇದವು ಸೂರ್ಯನ ಪರ್ವತದಿಂದ ಬಂದದ್ದರಿಂದ ಆ ವಯಸ್ಸಿಗೆ ಸರಿಯಾಗಿ ಅಗ್ನಿಭಯವು ಬರುವದೆಂದು ಊಹಿಸಬೇಕು. ಪುರುಷನ ಅಥವಾ ಸ್ತ್ರೀಯ ಆಯುಷ್ಯರೇಖೆಯಲ್ಲಿ ಭೇದವಿದ್ದು ತ್ರಿಕೋಣ ಅಥವಾ ಚತುಷ್ಕೋಣವು ಆ ಭೇದವನ್ನು ಒತ್ತಿದ್ದರೆ ಅದನ್ನಳಿದು, ಆ ವಯಸ್ಸಿನಲ್ಲಿ ಬರತಕ್ಕ ಪೀಡೆಯು ಪಾರಾಗುವದೆಂದು ತಿಳಿಯಬೇಕು. (ಉದಾ:—ಆಕೃತಿ ಸಂ. ೬ರಲ್ಲಿ ೧ನೆಯ ಗುರುತನ್ನು ನೋಡಿರಿ.) ಆಯುಷ್ಯ ರೇಖೆಗಳ ಅಳತೆಗಳನ್ನು (ಆ. ಸಂ. ೭ರಲ್ಲಿ ತೋರಿಸಿದಂತೆ) ಆಳೆದು ತಿಳಿದುಕೊಳ್ಳಬೇಕು.



ಆಕೃತಿ ನಂ - 7;

ಮತ್ತು

बहुरेखापरिकलितं पाणितलं यस्य मनुजस्य।
यदि वा रेखाहीनं सोल्पायुर्दुःखितो नित्यम् ॥

CC-0. Jangamwadi Math Collection. Digitized by eGangotri.

ಹಸ್ತಗಳಲ್ಲಿ ಅತಿ ರೇಖೆಗಳಿದ್ದರೂ, ಅಥವಾ ರೇಖೆಗಳು ಇಲ್ಲದಿದ್ದರೂ ಅಲ್ಪಾಯುಯೋಗವೂ, ದುಃಖವೂ ಬರುವವು. ಇಂತಹ ಕೈಗಳಲ್ಲಿ ಆಯುಷ್ಯಕ್ಕೆ ಸಂಬಂಧಪಟ್ಟ ರೇಖೆಗಳಲ್ಲಿ ಭೇದವಿದ್ದರೆ, ಆ ವೇಳೆಯಲ್ಲಿ ನಿಶ್ಚಯವಾಗಿಯೂ ಮರಣವು ತಪ್ಪಿದ್ದಲ್ಲವೆಂದು ತಿಳಿಯಬೇಕು. ಮತ್ತು ಅಂಥವರು ಅಂತ್ಯದಲ್ಲಿ ಬಹಳ ದುಃಖಪಟ್ಟು, ಸಾಯುವರು. ಇದರ ಉದಾಹರಣೆಗಾಗಿ ಇತ್ತೀಚೆಗಿನ ಒಬ್ಬರ ಹಸ್ತವನ್ನು ನಾನು ನೋಡಿದುದರ ವೃತ್ತಾಂತವನ್ನು ಹೇಳುತ್ತೇನೆ. ಇವರ ಜನ್ಮವು ತಾ॥ ೨೮-೨-೧೯೧೦ನೆಯ ದಿನ ೪-೩೦ಕ್ಕೆ ಆಗಿದ್ದಿತು. ಇವರು ೨೮-೧೨-೩೦ನೆಯ ದಿನ ನನಗೆ ಭೆಟ್ಟಿಯಾಗಿ ಫಲಗಳನ್ನು ಕೇಳಿದರು. ಆಗ ನಾನು ಅವರ ಕೈಯಲ್ಲಿ ಆಯುಷ್ಯರೇಖೆಯು ಸಾಧಾರಣ ೨೫ನೆಯ ವಯಸ್ಸಿನಲ್ಲಿ ಭೇದಹೊಂದಿದ್ದುದನ್ನು ನೋಡಿ, ಸಂಶಯದಿಂದ ಹೆಚ್ಚಿನ ಯಾವ ಫಲಗಳನ್ನೂ ಹೇಳದೆ, ಸಾಧಾರಣ ಐದಾರು ತಿಂಗಳ ಫಲವನ್ನು ಮಾತ್ರ ಹೇಳಿ ಕಳುಹಿದೆನು. ನಾನು ಹೇಳಿದಂತೆಯೇ ಅವರಿಗೆ ಕೆಲವು ನಿದರ್ಶನಗಳು ತೋರಿದುದರಿಂದ ಮರಳಿ ತಾ. ೧-೫-೩೧ನೆಯ ದಿನ ಹಣದ ತೊಂದರೆ, ದೇಹಪೀಡೆ, ಮಾನಸಿಕ ದುಃಖ ಮುಂತಾದುವುಗಳನ್ನು ಸಹಿಸದೆ ನನ್ನಲ್ಲಿಗೆ ಬಂದು ಕೇಳಿದರು. ಆಗ ನಾನು ಅವರ ಕೈಯ ರೇಖೆಗಳನ್ನು ಅಳೆದು, ಮತ್ತು ಕುಂಡಲಿಯನ್ನು ಹಾಕಿ ನೋಡಿ, ನಿಮಗೆ ೧೯೩೧ನೆಯ ನವಂಬರ, ದಿಸೆಂಬರದಲ್ಲಿ ವಿಶೇಷಪೀಡೆಗಳು ಇರಬಹುದೆಂದು ತಿಳುಹಿಸಿದೆನು; ಮತ್ತು ಒಂದೇ ಕೈಯ್ಯಲ್ಲಿ ಆ ಭೇದವು ಇದ್ದುದರಿಂದ ಗಂಡಾಂತರವು ತಪ್ಪಬಹುದೆಂಬ ಭಾವನೆಯಿಂದ ಜಾತಕ ಶಾಸ್ತ್ರಾನುಸಾರ ಕೆಲವು ಪ್ರಾಯಶ್ಚಿತ್ತಗಳನ್ನೂ ಹೇಳಿದೆನು. ಆದರೆ ಅವರು ಹೇಳಿದಂತೆ ಪೂರ್ಣವಾಗಿ ಪ್ರತಿಕಾರೋಪಾಯಗಳನ್ನು ಮಾಡದಿದ್ದರೂ ಕೆಲವು ಜಪಾದಿಗಳನ್ನು ಮಾಡಿಯೂ ಉಪಯೋಗವಾಗದೆ, ಅವರು ತಾ॥ ೭-೧೨-೩೧ನೆಯ ರಾತ್ರಿ ೧೦ ಘಂಟೆಗೆ ದಿವಂಗತರಾದರು. ಅವರ ಕೈಯಲ್ಲಿ ರೇಖೆಗಳು ಬಹಳವಿದ್ದುದರಿಂದ ಆ ಭೇದವೇ ಮಾರಕವಾಯಿತು. ಆದ್ದರಿಂದ ಅತಿರೇಖೆಯು ಸಹ ಅಲ್ಪಾಯುಷ್ಯಕ್ಕೆ ಕಾರಣವಾಗಬಹುದು.

ಆಯುಃಪ್ರಮಾಣವನ್ನು ಹಸ್ತರೇಖೆಗಳಿಂದ ಮಾತ್ರವಲ್ಲದೆ ಮನುಷ್ಯನನ್ನು ನೋಡಿದ ಕೂಡಲೆ ಹಣೆಯ ರೇಖೆಗಳ ಮೇಲಿಂದಲೂ ನಿಶ್ಚಯಿಸಬಹುದು:—

रेखाभिर्वर्षशतं पंचभिरायुर्ललाटसंस्थाभिः ।
पुरुषाणां स्त्रीणांवा कर्मकरत्वं करोति श्रीः ॥
भालस्थलस्थितेन स्फुटेन रेखाचतुष्टयेन नृणां ।
वर्षाण्यशीतिरायुर्वसुधेशत्वं पुनर्भवति ॥

ಪುರುಷನ ಅಥವಾ ಸ್ತ್ರೀಯ ಹಣೆಯಲ್ಲಿ ಸ್ಪಷ್ಟವಾಗಿ ೫ ರೇಖೆಗಳಿದ್ದರೆ, ನೂರುವರ್ಷಗಳ ಆಯುಷ್ಯವೆಂತಲೂ, ನಾಲ್ಕು ರೇಖೆಗಳಿದ್ದರೆ ಎಂಭತ್ತು ವರ್ಷಗಳ ಆಯುಷ್ಯವೆಂತಲೂ ತಿಳಿಯಬೇಕು. ಮತ್ತು ಹೀಗೆ ಇದ್ದವರು ರಾಜಸಮಾನಭೋಗವನ್ನೂ ಅನುಭವಿಸುವರು. ಈ ರೇಖೆಗಳು ಕೂದಲಿನ ವರೆಗೂ ದೀರ್ಘವಾಗಿರಬೇಕು. ದೀರ್ಘವಾಗಿ ಅನೇಕ ರೇಖೆಗಳಿದ್ದರೆ ತೊಂಭತ್ತು ವರುಷದ ಆಯುಷ್ಯವೆಂತಲೂ, ಕೂದಲಿಗೆ ಮುಟ್ಟದೆ ಐದು ರೇಖೆಗಳಿದ್ದರೆ ಎಪ್ಪತ್ತು ವರ್ಷಗಳೆಂತಲೂ, ನಾಲ್ಕು ಇದ್ದರೆ ಅರುವತ್ತು ವರ್ಷಗಳೆಂತಲೂ, ಬಹಳ ರೇಖೆಗಳಿದ್ದರೆ ಐವತ್ತು ವರ್ಷಗಳೆಂತಲೂ ವಕ್ರವಕ್ರವಾಗಿದ್ದರೆ ಅಥವಾ ತುಂಡಾಗಿದ್ದರೆ ನಲವತ್ತು ವರ್ಷಗಳೆಂತಲೂ ತಿಳಿಯಬೇಕು.

भ्रूयुग्मोपागतभिस्त्रिंशद्वर्षाणि जीवति शरीरी ।
विंशत्यब्दानिपुनर्लेखाभिर्वा च वक्राभिः ॥
भाले लेखाहीने पंचाधिक विंशतिसमाः ।
आयुः स्याद्ध्रुवमखिला जायंते संपदः सपदि ॥

ಎರಡೂ ಹುಬ್ಬುಗಳ ನಡುವೆ ಸರಳವಾದ ರೇಖೆಗಳಿದ್ದರೆ ಮೂವತ್ತು ವರ್ಷಗಳೆಂತಲೂ, ವಕ್ರಗಳಾಗಿದ್ದರೆ ಇಪ್ಪತ್ತು ವರ್ಷಗಳೆಂತಲೂ, ಹಣೆಯಲ್ಲಿ ರೇಖೆಗಳೇ ಇಲ್ಲದಿದ್ದರೆ ಇಪ್ಪತ್ತೈದುವರ್ಷದ ಆಯುಷ್ಯವೆಂತಲೂ, ಅಂಥವನಿಗೆ ಭೂಮಿಯಲ್ಲಿಯ ಎಲ್ಲ ಸಂಪತ್ತುಗಳೂ ಕ್ಷಣಿಕಗಳೆಂತಲೂ ಹೇಳುವರು. ಮುಖ್ಯವಾಗಿ ಹಣೆಯ ರೇಖೆಗಳು ತುಂಡುತುಂಡಾಗಿದ್ದರೆ, ಅಗಮ್ಯಸ್ತ್ರೀಗಾಮಿಯಾಗುವನೆಂತಲೂ ಸಣ್ಣದಾಗಿದ್ದರೆ, ಅಲ್ಪಾಯುವಾಗುವನೆಂತಲೂ ನಿಶ್ಚಯಿಸಲು ಬರುವುದು. ಆದರೆ ಇದರ ನಿರ್ಣಯವನ್ನು ಇಪ್ಪತ್ತು ವಯಸ್ಸಿನ ಒಳಗೆ ಕಂಡು ಹಿಡಿಯುವುದು ಬಹಳ ಕಠಿಣವಾದುದರಿಂದ, ಅನುಭವ ತೆಗೆದುಕೊಳ್ಳದೆ ಮನ

CC-0. Jangamwadi Math Collection. Digitized by eGangotri

ವರಿಕೆ ಮಾಡಿಕೊಳ್ಳದೆ ಹೇಳಿ ಅಪಹಾಸ್ಯಕ್ಕೊಳಗಾಗ ಬಾರದು. ಅಷ್ಟು ಮಾತ್ರವಲ್ಲದೆ ಪುರುಷನು ಅಲ್ಪಾಯು ವಾದರೂ ಸಂಪೂರ್ಣಲಕ್ಷಣ ರೇಖೆಗಳಿಂದ ಯುಕ್ತ ಳಾದ ಸ್ತ್ರೀಯನ್ನು ವರಿಸುವುದರಿಂದ, ಆಕೆಯ ಸುಚರಿತ್ರ ಗಳಿಂದ ಪತಿಯು ದೀರ್ಘಾಯುವಾಗಬಹುದು. ಈ ವಿಷಯದಲ್ಲಿ ಸಾವಿತ್ರ್ಯುಪಾಖ್ಯಾನವೇ ದೃಷ್ಟಾಂತ ವಾಗಿರುವುದು.

यतः सुलक्षणीरेखा योषा हीनायुषं पतिं ।
दीर्घायुषं सुचरितैः प्रकरोति सुखास्पदं ।
दीर्घायुषं पतिं हंति कुयोगैश्च कुलक्षणैः ॥

ಅಲ್ಲದೆ ಸ್ತ್ರೀಯು ಕೆಟ್ಟ ರೇಖೆ, ಲಕ್ಷಣ, ಯೋಗಗಳಿಂದ ದೀರ್ಘಾಯು ಪತಿಯು ಕೂಡ ನಾಶ ಹೊಂದಬಹುದು. 'अतःसुलक्षणाकन्या परिणेया विचक्षणैः' ಆದ್ದರಿಂದ ಬುದ್ಧಿವಂತನಾದವನು ಉತ್ತಮ ರೇಖಾಲಕ್ಷಣಗಳಿಂದ ಯುಕ್ತಳಾದ ಸ್ತ್ರೀಯನ್ನು ನೋಡಿಯೇ ಲಗ್ನವನ್ನು ಮಾಡಿಕೊಳ್ಳಬೇಕು.

## ಕುದಿ

( ಗೋವಿಂದ ಚುಳ್ಕಿ )

೧

ತಾಳೆಲೊ ತಾಳು
ಜೀವದ ಗೋಳು
ಬಾಳೆಲೊ ಬಾಳು
ಸಾವಿನ ಬಾಳು.

ಬಂದೆಲೊ ಬಂದಿ
ಬಂದಿಯ ತೆರದಿ!
ಪೊಂದಲು ಏನು
ಇಂದಿನ ಜಗದಿ?

ಏಳದೆ ಬಿದ್ದೆ!
ಇಲ್ಲವೆ ಮದ್ದು?
ಮಾಡುವೆ ಏನು
ಹೀಗೆಯೆ ಇದ್ದು?

ತಂದನು ಆತ
ಎನ್ನನು ತಂದ.
ಮುಂದಣ ಮಾತ
ನೀನೇ ಎಂದ!

'ಅಹುದೋ ಅಹುದು
ಕಾದುವೆ ನಾನು!'
'ಬಹುದೋ ಇನ್ನು
ಬಾಳುವಿ ನೀನು?'

೨

ಮೊದಲು ಏನು
ಎಂತು ಇತ್ತು?
ತುದಿಯು ಏನು
ಎಂತು ಎತ್ತ?

ನಡುವೆ ಎಳೆಯು
ಸಿಕ್ಕಲಿಲ್ಲ!
ತೊಡಕು ಬೆಳೆದು
ಬಿಡುವು ಇಲ್ಲ!

ಮುಂದು ಹಾದಿ
ಗಾಳಿ ಬಯಲು
ಮಾತು ಒಂದು
ಮೂಕ ಹುಯಿಲು.

ಎದೆಯ ನಡುವೆ
ಹುದುಗಿ ಇರುವೆ.
ಅದುವೆ ಬಿರಿಯೆ
ಅದನೆ ತಿಳಿಯೆ.

ಕುದಿಯು ಮೇಳ
ಗೆಟ್ಟಿತೆಂತು!
ತಾಳಲೆಂತು?
ಎಂತು? ಎಂತು?

Jangamwadi Math Collection. Digitized by eGangotri

# ನಾಣ್ಯವಸ್ತುವಿನ ಗುಣದೋಷಗಳು

ಲೇಖಕರು—ಶ್ರೀ ಗುಂಜೀ ಧೀರೇಂದ್ರರಾಯರು, ಬಿ. ಕಾಮ್., ಧಾರವಾಡ

ನಾಣ್ಯದ ಪ್ರಯೋಜನವನ್ನು ಕಳೆದ ಸಂಚಿಕೆಯಲ್ಲಿ ಹೇಳಿದ್ದಾಯಿತು. ಈ ಸಾರೆ ನಾಣ್ಯವಾಗಿ ಉಪಯೋಗಿಸುವ **ವಸ್ತು**ವಿನ ಗುಣದೋಷಗಳನ್ನು ವಿವರಿಸುವೆನು. ವಿನಿಮಯಸಾಧನೆಯೂ, ಧನನಿಧಿಯೂ ನಾಣ್ಯದ ಮುಖ್ಯವಾದ ಪ್ರಯೋಜನಗಳೆಂದು ಒಪ್ಪಿಕೊಂಡಮೇಲೆ ಸ್ವತಂತ್ರವಾದ ಮಹತ್ವವೂ, ಉಪಯೋಗವೂ ಆ ನಾಣ್ಯವಸ್ತುವಿಗೆ ಇರಲೇಬೇಕೆಂದು ಒಪ್ಪಿಕೊಳ್ಳಬೇಕಾಗುವದು. ಬನಾದಿಕಾಲದಿಂದ ಇಂದಿನವರೆಗೆ ಉಪಯೋಗಿಸಲ್ಪಟ್ಟ ಎಲ್ಲ ನಾಣ್ಯ**ವಸ್ತು**ಗಳಲ್ಲಿಯೂ, ಆಂದಿನ ಕಾಲಮಾನಕ್ಕನುಸರಿಸಿ ಈ ಗುಣಗಳು ಇದ್ದೇಇದ್ದವು. ಮಹತ್ವವಿಲ್ಲದ ಯಾವುದೇ **ವಸ್ತುವನ್ನು** ಧನನಿಧಿಯೆಂದು ಜನರು ಉಪಯೋಗಿಸಲಾರರು. ಈ ಗುಣಗಳು ಬೆಳ್ಳಿ ಬಂಗಾರಗಳಲ್ಲಿ-ಉಳಿದ ಎಲ್ಲ **ವಸ್ತು**ಗಳಿಗಿಂತ ಹೆಚ್ಚಿನ ಅಂಶದಲ್ಲಿ ಇವೆ. ಎಲ್ಲ ಕಾಲದಲ್ಲಿಯೂ, ಎಲ್ಲ ದೇಶಗಳಲ್ಲಿಯೂ, ಆಭರಣಗಳಿಗೆಂದು ಅವುಗಳನ್ನು ಉಪಯೋಗಿಸುತ್ತ ಬಂದಿರುವರು. ಅವುಗಳ ಹೊಳಪಿಗೂ ತೇಜಕ್ಕೂ ಮನುಷ್ಯನು ಮೋಹಗೊಂಡು ಅವನ್ನೇ ನಾಣ್ಯವಸ್ತುವೆಂದು ಉಪಯೋಗಿಸುತ್ತ ಬಂದಿರುವನು. ಯಾವುದೇ ನಾಣ್ಯವಾಗಲಿ ಅದು ಬಹಳ ದಿನಗಳವರೆಗೆ ಬಳಕೆಯಲ್ಲಿತ್ತೆಂದರೆ, ರೂಢಿಯ ಬಲದಿಂದ ಅದರ ಸ್ವತಂತ್ರ ಮಹತ್ವವನ್ನು ಮರೆತು ವಿನಿಮಯ ರೂಪದಲ್ಲಿ ಅದನ್ನು ಒಪ್ಪಿಕೊಳ್ಳುವದು ಸ್ವಾಭಾವಿಕವದೆ. ಮತ್ತು ಇತ್ತೀಚಿನ ವ್ಯವಹಾರದಲ್ಲಿ ನಾಣ್ಯಸ್ವರೂಪವಾದ ಕಾಗದ ಚೀಟಿಗಳನ್ನು ಉಪಯೋಗಿಸುವದೇ ಹೆಚ್ಚು. ಆದಕಾರಣ ನಾಣ್ಯವಸ್ತುವಿಗೆ ಸ್ವತಂತ್ರಮಹತ್ವದ ಅವಶ್ಯಕತೆಯಿಲ್ಲವೆಂದೂ, ಇಲ್ಲದಿದ್ದರೆ ನಡೆಯುವದೆಂದೂ ಇತ್ತೀಚಿಗೆ ಪ್ರತಿಪಾದಿಸಹತ್ತಿರುವರು. ರೂಢಿಯ ಬಲದಿಂದ ನಾಣ್ಯಸ್ವರೂಪವಾದ ಕಾಗದವನ್ನು ವ್ಯವಹಾರದಲ್ಲಿ ಒಪ್ಪುವದೇನೋ ನಿಜ. ಆದರೆ ಎಷ್ಟೇ ಬಲವಾದ ಸರಕಾರವಾದರೂ ಮಹತ್ವವಿಲ್ಲದ ಕೇವಲ ಕಾಗದಗಳನ್ನು ನಾಣ್ಯವೆಂದು ಒಪ್ಪಿಕೊಳ್ಳಲು ತನ್ನ ಪ್ರಜೆಗಳನ್ನು ಬಲಾತ್ಕರಿಸಲಿಕ್ಕೆ ಸಾಧ್ಯವಿಲ್ಲ.

ವಿನಿಮಯಸಾಧನೆಯೆಂದೂ, ಪ್ರಸ್ಥಾಪಿತಪ್ರಮಾಣವೆಂದೂ ನಾಣ್ಯದ ಎರಡು ಬೇರೆ ಬೇರೆ ಪ್ರಯೋಜನಗಳೆಂದು ನೆನಪಿನಲ್ಲಿಡಬೇಕು. ನಾಣ್ಯಸ್ವರೂಪಗಳ ಉದ್ದೇಶವು ವಿನಿಮಯಸಾಧನೆಯು. ಇಲ್ಲಿ ನಾಣ್ಯಸ್ವರೂಪವು ಎಂತಹದಿದ್ದರೂ ಸಾಗುವದು. ಆದರೆ ಪ್ರಸ್ಥಾಪಿತಪ್ರಮಾಣವೆಂದೂ, ಧನನಿಧಿಯೆಂದೂ ನಾಣ್ಯದ ಉಪಯೋಗವಾಗಬೇಕಾದರೆ, ನಾಣ್ಯವಸ್ತುವಿಗೆ ಸ್ವತಂತ್ರ ಮಹತ್ವವೂ, ಉಪಯೋಗವೂ ಇರಲೇಬೇಕೆಂಬುದನ್ನು ನಾವು ಮರೆಯಬಾರದು.

ನಾಣ್ಯವಸ್ತುವಿನ ಎರಡನೆಯ ಗುಣವೆಂದರೆ ವಿನಿಮಯಸೌಲಭ್ಯವು. ತುಸು ತೂಕದಲ್ಲಿ ಹೆಚ್ಚು ಮಹತ್ವವಿದ್ದಿರಬೇಕು. ಮೊದಲು ನಾಣ್ಯವಸ್ತುವೆಂದು ಉಪಯೋಗಿಸಲ್ಪಡುತ್ತಿದ್ದ ಯಾವ ವಸ್ತುವಿನಲ್ಲಿಯೂ, ಈ ಗುಣವಿರಲಿಲ್ಲ. ಕಬ್ಬಿಣ ತಾಮ್ರಗಳನ್ನು ಉಪಯೋಗಿಸುತ್ತಿದ್ದಾಗ ಜನರಿಗೆ ವ್ಯವಹಾರದಲ್ಲಿ ನಾಣ್ಯವನ್ನು ಅತ್ತಿಂದಿತ್ತ ಒಯ್ಯಲಿಕ್ಕೆ ಬಂಡಿಗಳು ಬೇಕಾಗುತ್ತಿದ್ದವಂತೆ. ಆದರೆ ಬೆಳ್ಳಿ ಬಂಗಾರಗಳ ಮಾತು ಬೇರೆ. ತುಸು ತೂಕದಲ್ಲಿ ಅವುಗಳಿಗೆ ಹೆಚ್ಚು ಮಹತ್ವವಿದೆ. ಹೀಗಾಗಿ ವಿನಿಮಯಸಾಧನೆಗಾಗಿ ಅವುಗಳನ್ನು ಪರಸ್ಥಳಗಳಿಗೆ ಕಳುಹಿಸಲು ಅವುಗಳ ಮಹತ್ವದ ಮಾನದಿಂದ ಕಡಿಮೆ ವೆಚ್ಚವು ತಗಲುತ್ತದೆ. ಆದರೆ ಪ್ರತಿದೇಶದಲ್ಲಿ ಬೇರೆ ವಸ್ತುವಿನ ನಾಣ್ಯಗಳೂ ಚಲನದಲ್ಲಿವೆ. ಕೇವಲ ವಿನಿಮಯಸಾಧನೆಗಾಗಿ ಚಿಕ್ಕ ಪುಟ್ಟ ವ್ಯವಹಾರಗಳಿಗೆ ಮೂಲ ನಾಣ್ಯವಸ್ತುವಿನ ಅಂಶವನ್ನೇ ಕೊಡುವದು



CC-0. Jangamwadi Math Collection. Digitized by eGangotri

ಸಾಧ್ಯವಿಲ್ಲದ್ದರಿಂದ ಆ ವಸ್ತುವಿನ ಸ್ವರೂಪವೆಂದು ಬೇರೆ ವಸ್ತುವಿನ ನಾಣ್ಯಗಳನ್ನು ಉಪಯೋಗಿಸುವರು. ವಿನಿಮಯಸೌಲಭ್ಯದ ದೃಷ್ಟಿಯಿಂದ ನೋಡಲಾಗಿ ನಾಣ್ಯ ಸ್ವರೂಪವಾದ ಕಾಗದದ ನೋಟುಗಳೇ ಎಲ್ಲ ನಾಣ್ಯಗಳಿಗಿಂತ ವ್ಯವಹಾರದ ದೃಷ್ಟಿಯಿಂದ ಉತ್ತಮ ನಾಣ್ಯವೆಂದು ನಾವು ಒಪ್ಪಬೇಕಾಗುವದು.

ನಾಣ್ಯವಸ್ತುವು ಅವಿನಾಶಿಯಾಗಿರಬೇಕು. ದನಕರುಗಳು, ಕಾಳುಕಡಿ ಮೊದಲಾದ ವಸ್ತುಗಳು ನಾಣ್ಯವೆಂದು ಬಹುದಿನಗಳವರೆಗೆ ಬಳಕೆಯಲ್ಲಿಲ್ಲದಿರಲಿಕ್ಕೆ ಇದೇ ಕಾರಣವು. ಅವು ಬಾಳುವದಿಲ್ಲ. ಕೂಡಲೇ ನಾಶವಾಗುವವು. ಧನಸಿಧಿಯೆಂಬ ನಾಣ್ಯಪ್ರಯೋಜನಕ್ಕೆ ಬೆಳ್ಳಿಬಂಗಾರಗಳ ಅನುಕೂಲವಿದೆ. ಬೇರೆ ವಸ್ತುಗಳಿಗಿಂತ ಅವು ಬಹುಕಾಲ ಬಾಳುವವು.

ಸಮಾನತೆಯು ನಾಣ್ಯವಸ್ತುವಿನ ಇನ್ನೊಂದು ಗುಣವು. ಅದರ ಯಾವದೇ ಭಾಗವು ಬೇರೊಂದು ಅಷ್ಟೇ ತೂಕದ ಯಾವದೇ ಭಾಗಕ್ಕೆ ಸಮಮಹತ್ವದ್ದಿರಬೇಕು. ಪ್ರಸ್ಥಾಪಿತಪ್ರಮಾಣವೆಂದು ನಾಣ್ಯವು ಚಲಿಸಬೇಕಾದಲ್ಲಿ ಪ್ರತಿನಾಣ್ಯದ ಮಹತ್ವವು ಸಮವಾಗಿರಬೇಕು. ಈ ಗುಣವು ಮೊದಲು ನಾಣ್ಯವಸ್ತುವೆಂದು ಉಪಯೋಗದಲ್ಲಿದ್ದ ಬೇರೆ ಯಾವ ವಸ್ತುವಿನಲ್ಲಿಯೂ ಇದ್ದಿಲ್ಲ. ಒಂದು ಮುತ್ತಿನಂತೆ ಇನ್ನೊಂದು ಮುತ್ತಿರುವದಿಲ್ಲ. ಒಂದುದನದಂತೆ ಇನ್ನೊಂದಿರುವದಿಲ್ಲ.ಆದರೆ ಬೆಳ್ಳಿಬಂಗಾರಗಳಲ್ಲಿ ಈ ಗುಣವು ಪೂರ್ಣಾಂಶದಲ್ಲಿದೆ. ಖಣಿಗಳಿಂದ ತೆಗೆದಾಗ ಅವುಗಳಾದರೂ ಹೀಗಿರುವದಿಲ್ಲ. ಆದರೆ ಇತ್ತೀಚಿನ ಶಾಸ್ತ್ರೀಯ ಶೋಧದಿಂದ ಅವುಗಳನ್ನು ಶುದ್ಧ ಮಾಡಿ, ಎಲ್ಲ ಬೆಳ್ಳಿ ಬಂಗಾರವನ್ನು ಒಂದೇ ಒರೆಗಿಳಿಸಿ, ಸಮತೂಕದ ಸಮಮಹತ್ವವುಳ್ಳ ನಾಣ್ಯಗಳನ್ನು ತಯಾರಿಸಲು ಸುಲಭವಾಗಿದೆ.

ನಾಣ್ಯವಸ್ತುವನ್ನು ವಿಭಾಗಿಸಲು ಶಕ್ಯವಿರಬೇಕು. ವಿಭಾಗಿಸುವದೆಂದರೆ ಕೇವಲ ಅದರ ಭಾಗಗಳನ್ನು ಮಾಡುವದಲ್ಲ. ಭಾಗಮಾಡಿದ ಮೇಲೆ ಆ ಭಾಗಗಳ ಒಟ್ಟು ಮಹತ್ವವು,ಭಾಗ ಮಾಡುವದಕ್ಕೆ ಪೂರ್ವದಲ್ಲಿದ್ದ ವಸ್ತುವಿನ ಮಹತ್ವಕ್ಕೆ ಸಮವಿರಬೇಕು. ದನಕರುಗಳನ್ನು ಹೀಗೆ ವಿಭಾಗಿಸಲು ಶಕ್ಯವಿಲ್ಲ. ಚರ್ಮವಾದರೂ ಇದರಂತೆಯೇ. ಇವುಗಳನ್ನು ವಿಭಾಗಿಸಲು ಬರುತ್ತಿದ್ದರೂ ಭಾಗ ಮಾಡಿದ ಮೇಲೆ ಅವುಗಳಿಗೆ ಮೂಲ ಮಹತ್ವವು ಬರುವದಿಲ್ಲ. ಆ ಭಾಗಗಳನ್ನು ಪುನಃ ಒಟ್ಟಾರೆ ಮಾಡಲೂ ಬರುವದಿಲ್ಲ. ಮುತ್ತನ್ನು ಭಾಗ ಮಾಡಿದರೆ ಅದಕ್ಕೆ ಮಹತ್ವವೇ ಇಲ್ಲ. ವಜ್ರವನ್ನು ಭಾಗ ಮಾಡಿದರೆ ಭಾಗಗಳ ಮಹತ್ವವು ಮೂಲ ವಜ್ರದ ಮಹತ್ವಕ್ಕಿಂತ ಕಡಿಮೆಯಾಗುವದು. ಆದರೆ ಬೆಳ್ಳಿಬಂಗಾರಕ್ಕೆ ಈ ದೋಷವಿಲ್ಲ. ಅವುಗಳ ಎಷ್ಟೇ ಸಣ್ಣ ಭಾಗಗಳನ್ನು ಮಾಡಿದರೂ ಆ ಎಲ್ಲ ಭಾಗಗಳ ಒಟ್ಟಾರೆ ಮಹತ್ವವು ಮೂಲ ಭಾಗಕ್ಕೆ ಸಮನಾಗುವದು. ಆ ಭಾಗಗಳನ್ನು ಮತ್ತೆ ಒಟ್ಟುಗೂಡಿಸಲೂ ಬರುವದು. ಅವುಗಳ ಮಹತ್ವವು ಯಾವಾಗಲೂ ತೂಕವನ್ನು ಅನುಸರಿಸುವದು.

ನಾಣ್ಯವಸ್ತುವು ಸುಲಭ ಪರಿಚಯಕ್ಕೆ ಅನುಕೂಲವಾಗಿರಬೇಕು. ನಾಣ್ಯವು ಯಾವಾಗಲೂ ಚಲನದಲ್ಲಿರುವದು. ಆದರೆ ಪ್ರತಿಸಾರೆ ಅದನ್ನು ಪರೀಕ್ಷಿಸಬೇಕಾದರೆ ನಾಣ್ಯದ ಚಲನವೇ ದುಸ್ತರವಾಗುವದು. ನಾಣ್ಯವಸ್ತುವಿನ ನೈಜದ ಬಗ್ಗೆಯೂ, ವಿನಿಮಯದ ಬಗ್ಗೆಯೂ ಜನರಲ್ಲಿ ಸಂಶಯವು ಉತ್ಪನ್ನವಾದಲ್ಲಿ ಅದರ ನಾಣ್ಯವು ಚಲಿಸಲಾರದು. ಮುತ್ತು ವಜ್ರಗಳಲ್ಲಿ ಈ ದೋಷವುಂಟು. ಅವುಗಳನ್ನು ಪರೀಕ್ಷಿಸಲು ಬಲ್ಲವರೇ ಬೇಕು. ಬೆಳ್ಳಿಬಂಗಾರಗಳನ್ನು ಬೇಕಾದವರು ಕೂಡಲೆ ಗುರುತು ಹಿಡಿಯುವರು.

ಇಲ್ಲಿಯ ವರೆಗೆ ಹೇಳಿದ ಎಲ್ಲ ಗುಣಗಳಿಗಿಂತ ನಾಣ್ಯವಸ್ತುವಿನಲ್ಲಿ ಇನ್ನೊಂದು ಮಹತ್ವವಾದ ಗುಣವಿದೆ. ಧನಸಿಧಿಯೆಂದೂ " ಉದ್ಧರಿ " ಯ ಸಾಧನೆಯೆಂದೂ ನಾಣ್ಯ ಪ್ರಯೋಜನವನ್ನು ಒಪ್ಪಿಕೊಂಡಲ್ಲಿ, ನಾಣ್ಯವಸ್ತುವಿನ ಮಹತ್ವವು ಬಹುಕಾಲದ ವರೆಗೆ ಸಮವಾಗಿರಬೇಕಾಗುವದು. ಬೇರೆ ವಸ್ತುಗಳಂತೆ ನಾಣ್ಯವಸ್ತುವೂ ಒಂದು ವಸ್ತುವಾದ್ದರಿಂದ, ಅದರ ಮಹತ್ವವು ಬೇಡಿಕೆ ಪೂರೈಕೆಗಳಿಗನುಸರಿಸಿ ಹೆಚ್ಚುಕಡಿಮೆಯಾಗುವದು. ಮಳೆ ಬೀಳದೆ ಬೆಳೆ ಕಡಿಮೆ ಬಂದಲ್ಲಿ, ಬೇರೆ ವಸ್ತುಗಳಿಗಿಂತ ಕಾಳಿನ ಮಹತ್ವವು ಹೆಚ್ಚುವದು. ಹೊಸದೊಂದು ವಜ್ರದ ಖಣಿಯು ಶೋಧವಾದಲ್ಲಿ, ವಜ್ರದ ಮಹತ್ವವು ಕಡಿಮೆಯಾಗಬಹುದು. ಈ ವಸ್ತುಗಳನ್ನು ನಾಣ್ಯವೆಂದು ಉಪಯೋಗಿಸಿದಲ್ಲಿ ಜನರಿಗೆ ತಿಳಿಯದೆ ಅಪಾರ ಲಾಭವಾಗಬಹುದು; ಇಲ್ಲವೆ ಹಾನಿ ತಟ್ಟಬಹುದು.

CC-0. Jangamwadi Math Collection. Digitized by eGangotri

ಮತ್ತು ನಾಣ್ಯವಸ್ತುವಿನ ಈ ಅನಿಶ್ಚಿತತೆಯಿಂದ ವ್ಯಾಪಾರವೂ ಬೆಳೆಯಲಾರದು. ಆರ್ಥಿಕಪ್ರಗತಿಯೂ ಆಗಲಾರದು. ಬೇರೆ ಎಲ್ಲ ವಸ್ತುಗಳಿಗಿಂತ ಬೆಳ್ಳಿಬಂಗಾರಗಳಲ್ಲಿ ಈ ನಿಶ್ಚಿತಮಹತ್ವವು ಹೆಚ್ಚಿನ ಅಂಶದಲ್ಲಿದೆಯೆಂದು ಬಹಳ ದಿನಗಳ ಅನುಭವದಿಂದ ಕಂಡುಬಂದಿದೆ. ಈ ಮಹತ್ವದಲ್ಲಿ ಹೆಚ್ಚುಕಡಿಮೆಯಾದಲ್ಲಿ ಒದಗುವ ಅನರ್ಥವು ಇಂದು ನಮ್ಮೆಲ್ಲರ ಕಣ್ಣ ಮುಂದೆಯೇ ಇದೆ.

# ಚತುರ್ದಶಿಯ ಚಂದ್ರ

'ವಿಜಯ,' ಬೆಟಗೇರಿ

ಗೊತ್ತಿಲ್ಲವೇ ಚಂದ, ಕುತ್ತ ನಿನಗಿದೆಯೆಂತೆ.
ಗರದ ಬಿರುಬಿನ ಭೀತಿ ನಿನಗಿಲ್ಲವೇ?
ನಾಳೆ ಬಹ ಅಳಲುಗಳ ಅರಿವು ಇಲ್ಲವೆ ನಿನಗೆ?
ಚಿಂತೆಯನ್ನುಳಿದು ಸಂತಸದಿ ನಗುವೆ!
ದುಕ್ಕದಲಿ ಬಿಕ್ಕುವೆಯೊ ನಾಳೆಯಾ ಕಿಡುದಿನದಿ;
ನಕ್ಕುನಲಿಯುತಲಿರುವೆ ಇಂದು; ಅಚ್ಚರಿಯು!
'ಬಾರೆನ್ನ ಮನದನ್ನೆ ಬಾ ತುಂಬು ಒಟ್ಟಿಲನು;
ನಮಗೇಕೆ ನಾಳೆಯಾ ಚಿಂತೆ? ಇಂದು
ಸುರೆಯ ಸೊದೆಯನು ಕುಡಿದು ಮೆರೆಯುವಾ' ಎಂದಿರುವ
ಉಮರಕವಿ ಓದಿದುದು ನಿನ್ನ ಒಳಿ ಏನು?
ಕನಸಿನಲ್ಲಿಯು ಕೂಡ ನೆನೆದುದಿಲ್ಲವೆ ಚಂದ
ನಾಳೆ ಬಹ ಗೋಳನ್ನು? ನಗುನಗುತಲಿರುವೆ,
ನಾಳೆಯಾ ಅಳಲ-ಬೆಂಕಿಯು ನಿನಹ ಮರೆಸಿಹುದೆ
ನಿನ್ನ ಮನದನ್ನೆಯರ ವಿಂಟುಕುನೋಟ?

* * * *

ಬೇಡ ಏಡಿ ಚಿಕ್ಕೆಗಳೆ ನಕ್ಕು ನಲಿಯಲು ಬೇಡಿ!
ಮಾಡುವುದು ಒಳಿತೆ ನಿಮ್ಮಿನಿಯನಿಗೆ ಮಾಟ?
ಇಂದಿರುವ ಸೊಗದ ಸಿರಿಯನ್ನು ಕಂಡುಂಡಿರಲು,
ನಾಳೆ ನಿಮ್ಮಿನಿಯ ಬವಣೆಯ ಬಡುತಲಿರಲು,
ನೀವು ಪಡುವಾ ಗೋಳು ವಿಗಿಲಾಗದೇ? ಪೇಳಿ!
ಓರೆನೋಟದ ಚೆಲ್ವ ಸಾಕು! ಮಾಣಿವುದು!

* * * *

ಮುಗಿಲ ಸೆರಗಲಿ ಮೊಗವ ಮುಚ್ಚುತಲಿ, ತೆರೆಯುತಲಿ,
ಮೊಗದೋರಿ ಮುಗುದೆಯರ ನಗಿಸುತಿರುವೆ;
ಅಯ್ಯ ಚಂದಮರಾಯ! ನಗೆಯಾಟ ಸಾಕಿನ್ನು
ಸರಸಸಲ್ಲಾಪವನು ನಿಲ್ಲಿಸುವುದೀಗ.
ಆನಂದದಿಂದಿರುವೆ, ಆಪ್ತರಾ ಬಳಗದಲಿ;
ನೆಗೆಯುತ್ತೆ ಮುಮ್ಮುಂದೆ ನಡೆಯುತಿರುವೆ;
ಈ ವಿಲಾಸವನಿನ್ನು ಬದಿಗಿಟ್ಟು ಚಿಂತಿಪುದು
ನಾಳೆಯಾ ಗೋಳನ್ನು ತಡೆವ ಹಂಚಿಕೆಯ;
ಹಂಚಿಕೆಯ ಕಂಡುಕೊಳು! ಆಮೇಲೆ ಚಿರಕಾಲ
ಬಳಗದಲಿ ಬೆರೆತು ಇರು ನಕ್ಕು ನಲಿದು.
ನಿನ್ನ ಸವಿನೋಟದಾ ಸೊಗದ ಸೊದೆಯನು ಸುರಿಸಿ,
ನನ್ನ-ನನ್ನವರ ಬಗೆಗಳನು ಸಂತಯಿಸಿ,
"ನಿನ್ನವರ ಕಿರುನಗೆಯ ಕ್ಷೀರಸಾಗರದಲ್ಲಿ;
ಈಜುತಿರು ಕೊನೆತನಕ" ಎಂದು ಕೋರುವೆನು.



CC-0. Jangamwadi Math Collection. Digitized by eGangotri




ಸಂಗ್ರಾಹಕರು—ಶ್ರೀ ದ. ಕೃ. ಭಾರದ್ವಾಜ ಎಂ. ಬಿ. (ಆಯುರ್ವೇದ) ಬೆಂಗಳೂರು

### ಕುಬೇರರ ಮನಸ್ಸಿನ ಸ್ಥಿತಿ

ಬೇಕಾದಷ್ಟು ರೊಕ್ಕವಿದ್ದರೆ ನಾವು ಬೇಕಾದಷ್ಟು ಸುಖವನ್ನು ಅನುಭವಿಸಬಹುದು-ಎಂದು ಅನೇಕರು ಭಾವಿಸುತ್ತಾರೆ. ಆದರೆ ಈ ಯುಗದಲ್ಲಿ ಕುಬೇರನಂತೆ ವೈಭವವುಳ್ಳ ಕೆಲವು ಮಂದಿ ಧನಿಕರ ಸ್ವಂತಜೀವನ ಕ್ರಮನ್ನು ನೋಡಿದರೆ ಐಶ್ವರ್ಯವೊಂದೇ ಸುಖದ ಸಾಧನವಲ್ಲವೆಂಬ ತತ್ವವು ತಿಳಿದುಬರುವುದು. ಅಮೆರಿಕಾದ ಪ್ರಸಿದ್ಧ ನವಕೋಟಿ ನಾರಾಯಣನೆನಿಸಿದ ರಾಕ್‌ಫೆಲರ್ ಎಂಬಾತನು ಹೀಗೆ ಹೇಳಿರುವನು—"ನನ್ನ ಐಶ್ವರ್ಯವೆಷ್ಟಿದೆಯೆಂಬುದು ನನಗೇ ಸರಿಯಾಗಿ ತಿಳಿಯದು. ನನ್ನ ಬಳಿ ಐದುಕೋಟಿ ಪೌಂಡುಗಳಿಗಿಂತ ಹೆಚ್ಚಾಗಿ ಧನವಿರುವದೆಂದು ಜನರು ಹೇಳಿಕೊಳ್ಳುವರು. ಆದರೆ ಒಂದುಸಾರಿ ನಾನು ಸಾಮಾನ್ಯವಾಗಿ ಹೊಟ್ಟೆ ತುಂಬ ಊಟಮಾಡಿದ್ದನ್ನು ಜೀರ್ಣಿಸಿಕೊಳ್ಳುವ ಶಕ್ತಿ ಬಂದರೆ,ಈ ಅಪಾರವಾದ ಸಂಪತ್ತನ್ನು ನಾನು ಸಂತೋಷದಿಂದ ಬಿಟ್ಟುಬಿಡಬಲ್ಲೆನು."- ರಾಕ್‌ಫೆಲರ್‌ನು ಲಾ ವರುಷಕಾಲ ಜೀವಿಸಿದನು. ಆದರೆ ಜೀವಿಸಿರುವವರೆಗೆ ಅಜೀರ್ಣರೋಗದಿಂದ ಪೀಡಿತನಾಗಿದ್ದನು. ಪೌಷ್ಟಿಕವೂ ರುಚಿಕರವೂ ಆದ ಆಹಾರವನ್ನು ತಿನ್ನಬೇಕೆಂದು ಅವನಿಗೆ ಎಷ್ಟೋ ಆಸೆಯಿತ್ತು. ಆದರೆ ಅವನು ಹಾಗೆ ಮಾಡಲಿಲ್ಲ. ಕೇವಲ ಹಾಲು ಮತ್ತು ಭಿಸ್ಕತ್ತು (ಬಿಸ್ಕೀಟು) ಗಳ ಮೇಲೆ ಅವನು ಕಾಲಹರಣ ಮಾಡಬೇಕಾಯಿತು. ಅವನಿಗೆ ದುಡ್ಡಿಗೆ ಕೊರತೆಯೆ? ಬೇಕಾದಷ್ಟು ಜನ ದೊಡ್ಡ ದೊಡ್ಡ ಡಾಕ್ಟರರು ಅವನ ರೋಗನಿವಾರಣೆಗಾಗಿ ಎಷ್ಟೊ ಪ್ರಯತ್ನಮಾಡಿದರು. ಆದರೆ ಎಲ್ಲವೂ ವ್ಯರ್ಥವಾಯಿತು.

ಎ. ಎಡ್ವರ್ಡ್ ಡಬ್ಲ್ಯು ಸ್ಕ್ರಿಪ್ಸ್ ಎಂಬ ಶ್ರೀಮಂತನೊಬ್ಬನು ನಾಲ್ವತ್ತುಲಕ್ಷ ಡಾಲರುಗಳನ್ನು ವೆಚ್ಚಮಾಡಿ ಒಂದು ಹಡಗನ್ನು ಕಟ್ಟಿಸಿದನು. ಆ ಹಡಗಿನಲ್ಲಿ-ಅದು ಪ್ರತಿ ನಂದನವನವೊ ಎಂಬಂತೆ ಎಲ್ಲ ಏರ್ಪಾಟುಗಳನ್ನೂ ಮಾಡಿಸಿದನು. ತನ್ನ ಜೀವನವನ್ನು ಕೇವಲ ಶಾಂತ ವಾತಾವರಣದಲ್ಲಿ ಕಳೆಯಬೇಕೆಂಬ ಅಭಿಲಾಷೆಯಿಂದು ಆತನು ಅದನ್ನು ಮಾಡಿದ್ದು, ತನ್ನ ಮಕ್ಕಳಿಗೆ ಪ್ರಪಂಚ ವ್ಯವಹಾರವನ್ನೆಲ್ಲ ವಹಿಸಿ ತಾನು ಶಾಂತಿಗಾಗಿ ಎರಡು ಬಾರಿ ಭೂಪ್ರದಕ್ಷಿಣೆ ಮಾಡಿದನು. ಆಫ್ರಿಕಾ ಖಂಡದ ತೀರದಲ್ಲಿ ಆತನಿಗೆ ದೇಹಾವಸಾನವಾಯಿತು. ಮರಣಕಾಲದಲ್ಲಿ ಅವನು "ನನ್ನ ಪ್ರೇತವನ್ನು ಸಮುದ್ರಕ್ಕೆ ಅರ್ಪಿಸಿ ಬಿಡಿ" ಎಂದು ತನ್ನ ಇಚ್ಛೆಯನ್ನು ಪ್ರಕಟಿಸಿದನು. ಅದರಂತೆಯೆ ಆತನ ದೇಹದ ವ್ಯವಸ್ಥೆಯನ್ನು ಮಾಡಲಾಯಿತು.

—ಮಾತೃಭೂಮಿ (ಗುಜರಾತಿ)

### ನಿದ್ರೆಯಲ್ಲಿ ಎಚ್ಚರಿಕೆ

ಜೀವನದ ಪೋಷಣೆ ಮತ್ತು ಸಂವರ್ಧನೆಗೆ ಆವಶ್ಯಕವಾದ ವಿಷಯಗಳಲ್ಲಿ ನಿದ್ರೆಯೂ ಒಂದಾಗಿದೆ. ನಿದ್ದೆಯಿಲ್ಲದಿದ್ದರೆ ಮನುಷ್ಯನು ಹುಚ್ಚನಾಗುವನು. ದಿನವೆಲ್ಲ ಕೆಲಸ ಮಾಡಿ ದಣಿದ ದೇಹಕ್ಕೆ ವಿಶ್ರಾಂತಿಯನ್ನಿತ್ತು ಅದಕ್ಕೆ ಮತ್ತೆ ಚೈತನ್ಯವುಂಟಾಗುವಂತೆ ಮಾಡುವ ಕೆಲಸವನ್ನು ನಿದ್ದೆಯು ಮಾಡುವುದು. ಹಲವು ಜನ ಶಾಸ್ತ್ರಜ್ಞರು ನಿದ್ದೆಯ ಸಂಬಂಧವಾಗಿ ಅನೇಕ ಸಂಶೋಧನೆಗಳನ್ನು ನಡೆಸಿರುವರು. ಪಿಟ್ಸ್‌ಬರ್ಗ್ ವಿಶ್ವವಿದ್ಯಾಲಯದ ಅಧ್ಯಾಪಕನೊಬ್ಬನು ೧೫೦ ಜನ ಸ್ತ್ರೀಪುರುಷರು ನಿದ್ರಾವಸ್ಥೆಯಲ್ಲಿದ್ದಾಗ ಪರೀಕ್ಷಿಸಿ, ಕೆಲವು ಅನುಮಾನಗಳನ್ನು ಗ್ರಹಿಸಿರುವನು. ಆತನು ಹೀಗೆ ಬರೆದಿರುವನು.

CC-0. Jangamwadi Math Collection. Digitized by eGangotri

, ಮನುಷ್ಯನಿಗೆ ಎಂಥಾ ಗಾಢ ನಿದ್ರೆ ಬಂದಿದ್ದರೂ ಆವನು ಅಲುಗಾಡದಿರುವುದು ಅಸಾಧ್ಯ ! ಎಂಟುಗಂಟೆಗಳ ಕಾಲದಲ್ಲಿ ಅವನು ಸುಮಾರು ೩೫ ಬಾರಿ ಅತ್ತಿತ್ತ ಹೊರಳಾಡುವನು. ಶರೀರಕ್ಕೆ ವಿಶ್ರಾಂತಿ ಬೇಕಾಗಿದ್ದರೆ ಆವನು ಹೀಗೆ ಹೊರಳಾಡಿ, ಮಗ್ಗಲಾಗುವುದೇತಕ್ಕೆಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರವು ಇಷ್ಟೆ, ದಿನವೆಲ್ಲ ಕೆಲಸ ಮಾಡಿ, ನಮ್ಮ ಶರೀರದಲ್ಲಿರುವ ಸ್ನಾಯುಗಳೂ ಮಾಂಸಖಂಡಗಳೂ ಶ್ರಮದಿಂದ ದಣಿದಿರುವವು. ದೇಹವು ಒಂದು ವಿಶಿಷ್ಟ ಸ್ಥಿತಿಯಲ್ಲಿರುವುದರಿಂದ ಕೇವಲ ಕೆಲವು ಭಾಗಗಳಿಗೆ ಮಾತ್ರ ಅದರಿಂದ ವಿಶ್ರಾಂತಿಗೆ ದೊರೆಯುವುದು ಆದ್ದರಿಂದ ದೇಹವನ್ನು ವಿವಿಧ ಸ್ಥಿತಿಯಲ್ಲಿಟ್ಟು ಎಲ್ಲ ಭಾಗಕ್ಕೂ ಸರಿಯಾದ ವಿಶ್ರಾಂತಿಯು ದೊರೆಯುವಂತೆ ನಿಸರ್ಗವು ಹೂಡಿರುವ ಯೋಜನೆಯಿದು. ಮನಸ್ಸು ಸುಪ್ತವಾಗಿರುವಾಗ ಶರೀರಕ್ಕೆ ಗತಿಯು ಹೇಗೆ ಸಿಕ್ಕುವುದು ? ಮತ್ತೆ ವಿವಿಧಭಾಗಗಳಿಗೆ ಅನುಕ್ರಮವಾಗಿ ವಿಶ್ರಾಂತಿಯನ್ನೀಯುವ ಸೂಚನೆಯನ್ನು ಅದಕ್ಕೆ ಕೊಡುವವರಾರು ? ಮನುಷ್ಯನಲ್ಲಿ ವ್ಯಕ್ತಮನಸ್ಸು ಜಾಗೃತಾವಸ್ಥೆಯಲ್ಲಿ ಕೆಲಸ ಮಾಡುವುದು. ಮತ್ತು ಅವ್ಯಕ್ತಮನಸ್ಸು ಮನುಷ್ಯನು ನಿದ್ರಿಸುವಾಗಲೂ ಎಚ್ಚರಿಕೆಯಿಂದ ಇರುವುದು. ಆ ಮನಸ್ಸೇ ನಿದ್ರೆಯಲ್ಲಿ ಶರೀರಕ್ಕೆ ಗತಿಯನ್ನು ಕೊಡುವುದು. " ಇನ್ನು ವಿಶ್ರಾಂತಿ ಸಾಕು " ಎಂದು ಹೇಳಿ, ಮನುಷ್ಯನನ್ನು ಎಬ್ಬಿಸುವುದೂ ಆ ಅವ್ಯಕ್ತ ಮನಸ್ಸೇ.

—ಸುಧಾ (ಹಿಂದಿ)

## ಧರ್ಮದ ಬದಲಾವಣೆಗಳು

' ಈಗ ಧರ್ಮವು ಸಡಿಲಾಗುತ್ತದೆ. ಕಾಲಾಂತರದಿಂದ ಅದು ಶಾಶ್ವತವಾಗಿ ನಷ್ಟವಾಗುವುದು ' ಎಂದು ಕೂಗೆಬ್ಬಿಸಿರುವವರು ಸ್ವಾಮಿ ನಿಖಿಲಾನಂದರ ವಾಕ್ಯಗಳನ್ನು ಚೆನ್ನಾಗಿ ಗಮನವಿಟ್ಟು ಓದಬೇಕು. ಅವರು ಹೀಗೆ ಬರೆದಿರುವರು—' ಕೇವಲ ಈಗಿನ ಯುಗದಲ್ಲಿ ಮಾತ್ರ ಧರ್ಮಗ್ಲಾನಿಯಾಗಿದೆಯೆಂದು ತಿಳಿಯಬಾರದು. ಇತರ ವಿಚಾರಗಳಂತೆಯೆ ಈ ವಿಚಾರದಲ್ಲಿಯೂ ಇತಿಹಾಸದ ಪುನರಾವರ್ತನೆಯಾಗುತ್ತಿರುವುದು.ನಿಜವಾದ ತತ್ವಜ್ಞಾನವು ಲುಪ್ತವಾದಾಗ ಭ್ರಾಮಕ ವಿಚಾರಗಳು ಮನುಷ್ಯರ ವಿದುಳನ್ನು ಆಕ್ರಮಿಸುವವು. ನಿಜವಾದ ತತ್ವಜ್ಞಾನದ ಪುನರುಜ್ಜೀವನದಿಂದಲೇ ಈ ತಮಸ್ಸು ದೂರವಾಗಬೇಕು. ಬ್ರಾಹ್ಮಣಗಳ ಆಸ್ತಿಕ್ಯವಾದದ ಪರಿಣಾಮವು ಭ್ರಾಮಕತ್ವದಲ್ಲಿ ಪರ್ಯವಸಾನಗೊಳ್ಳಬಾರದೆಂಬುದಕ್ಕಾಗಿಯೆ ಉಪನಿಷತ್ತುಗಳ ತತ್ವಜ್ಞಾನವು ಉದಯಿಸಿತು. ಆ ಸಮಯದಲ್ಲಿ ಶಿಥಿಲವಾಗುತ್ತಿದ್ದ ಹಿಂದೂಧರ್ಮಕ್ಕೆ ಮತ್ತೆ ಸಂಜೀವನವು ದೊರೆತಂತಾಯಿತು. ಆದರೆ ಮತ್ತೆ ತಪ್ಪುತಿಳುವಳಿಕೆಗಳು ಪ್ರಬಲಿಸಿ, ಧರ್ಮದ ರೂಪವು ಮಲಿನವಾಯಿತು. ಆಗ ಪೌರಾಣಿಕ ಕಾಲದಲ್ಲಿ ಶ್ರೀಕೃಷ್ಣನು ಗೀತಾಮೃತವನ್ನಿತ್ತು ಭಕ್ತಿ, ಕರ್ಮ, ಮತ್ತು ಯೋಗಗಳನ್ನು ಜ್ಞಾನದೊಂದಿಗೆ ಹೇಗೆ ಸೇರಿಸಬೇಕೆಂಬುದನ್ನು ತಿಳಿಸಿದನು. ಅನಂತರ ಮತ್ತೊಮ್ಮೆ ಧರ್ಮದ ರೂಪವು ವಿಕೃತವಾದಾಗ,ಅದಕ್ಕೆ ವ್ಯವಸ್ಥಿತ ರೂಪವನ್ನು ಕೊಡಲು ಬುದ್ಧನು ಅವತರಿಸಿದನು. ಬುದ್ಧನ ಉಪದೇಶದಿಂದ ರಾಷ್ಟ್ರೀಯಜೀವನದಲ್ಲಿ ದೊಡ್ಡ ಕ್ರಾಂತಿಯುಂಟಾಯಿತು. ಅದೇ ಕಾರ್ಯವನ್ನು ಕೆಲಕಾಲಾನಂತರ ಶಂಕರಾಚಾರ್ಯರೂ ಮಾಡಿದರು. ಕಳೆದ ಕೆಲವು ಶತಮಾನಗಳಿಂದ ನಾವು ಶಂಕರಾಚಾರ್ಯರ ಬೋಧೆಯನ್ನು ಮರೆಯುತ್ತಿರುವೆವು. ಅದೇ ಈಗ ನಮ್ಮ ಭರತಖಂಡದಲ್ಲಿ ಸಾರ್ವತ್ರಿಕವಾಗಿ – ಮುಖ್ಯವಾಗಿ ಧರ್ಮಕ್ಷೇತ್ರದಲ್ಲಿ– ಉಂಟಾಗಿರುವ ಗ್ಲಾನಿಗೆ ಮುಖ್ಯ ಕಾರಣವಾಗಿದೆ. ನಮ್ಮ ತತ್ವಜ್ಞಾನ ಮತ್ತು ತರ್ಕಶುದ್ಧವಿಚಾರಗಳಿಂದ ಈ ಗ್ಲಾನಿಯನ್ನು ನಿಲ್ಲಿಸಬಹುದು. ಮಾನವೀಯ ಭಾವನೆಗಳಿಗೆ ಚೈತನ್ಯವನ್ನೀಯುವದೇ ಧರ್ಮದ ಮುಖ್ಯಕಾರ್ಯವಾಗಿದೆ. ಈ ಭಾವನೆಗಳು ಅನಿಯಂತ್ರಿತವಾಗಿದ್ದರೆ, ಅವುಗಳ ಸ್ವೇಚ್ಛಾಚಾರದಿಂದ ಮನುಷ್ಯನ ನಾಶವಾಗುವುದು. ಭಕ್ತಿಯೋಗವನ್ನು ಕೂಡ ಜ್ಞಾನದ ಒರೆಗಲ್ಲಿಗೆ ತಿಕ್ಕಿ ಪರೀಕ್ಷಿಸದಿದ್ದರೆ ಅದೂ ಅಹಿತಕಾರಿಯಾಗುವುದು. ಭಕ್ತಿಯೋಗಿಗಳು ತಮ್ಮ ಅನುಭವವನ್ನು ತರ್ಕವಾದಿಗಳೆದುರಿಗೆ ಮಂಡಿಸಲು ಸ್ವಲ್ಪವೂ ಹೆದರಕೂಡದು. ರಾಮಕೃಷ್ಣಪರಮಹಂಸರು ಈ ದೃಷ್ಟಿಯಿಂದ ಆದರ್ಶ ಭಕ್ತಿಯೋಗಿಗಳಾಗಿದ್ದರು.

*—Prabuddha Bharata*

## ಪಾಶ್ಚಾತ್ಯ ಸಂಸ್ಕೃತಿಯ ಭೀಷಣ ಭವಿಷ್ಯ

ಸಂಸ್ಕೃತಿಯೆಂಬುದು ವಿಶೇಷ ವ್ಯಾಪಕಾರ್ಥ ಶಬ್ದವಾಗಿರುವುದು. ಇಂದಿನ ವರೆಗೆ ಹಿಂದುಸ್ಥಾನ, ಮಿಶ್ರ,


Jangamwadi Math Collection. Digitized by eGangotri

ಚೀನ, ಬೆಬಿಲೋನಿಯಾ, ಗ್ರೀಸ್, ರೋಮು ಇವೇ ಮೊದಲಾದ ಅನೇಕ ಸಂಸ್ಕೃತಿಗಳು ಆಗಿ ಹೋದವು. ಇಂದಿನ ಸಂಸ್ಕೃತಿಯು ಪಾಶ್ಚಾತ್ಯಸಂಸ್ಕೃತಿಯೆನಿಸಿರುವುದು. ಸಮಗ್ರ ಜಗತ್ತಿನಲ್ಲಿ ಎಲ್ಲಕ್ಕಿಂತಲೂ ಅಧಿಕವಾಗಿ ಸುಖಶಾಂತಿಗಳನ್ನು ಪ್ರಸ್ಥಾಪಿಸುವುದೇ ಆದರ್ಶಭೂತವಾದ ಸಂಸ್ಕೃತಿಯೆನಿಸುವುದು. ಈ ದೃಷ್ಟಿಯಿಂದ ಪಾಶ್ಚಾತ್ಯ ಸಂಸ್ಕೃತಿಯನ್ನು ಪರೀಕ್ಷಿಸಿದರೆ, ಅದು ಕೇವಲ ನಿಷ್ಪ್ರಯೋಜಕವೆಂದು ಕಂಡುಬರುವುದು. ಕಳೆದ ೧೫೦ವರುಷಗಳಲ್ಲಿ ರೈಲ್ವೆ, ತಂತೀಸಮಾಚಾರ, ದುರ್ಬೀನು, ರೆಡಿಯೊ ಇವೇ ಮೊದಲಾದ ಅದ್ಭುತಶೋಧನೆಗಳಿಂದ ಭೌತಿಕ ಶಾಸ್ತ್ರದಲ್ಲಿ ಆಶ್ಚರ್ಯಕರವಾದ ಪ್ರಗತಿಯುಂಟಾಗಿರುವುದು. ಪರಂತು ಅದರಿಂದ ಒಟ್ಟು ಜಗತ್ತಿನ ಸುಖಶಾಂತಿಗೆ ಸ್ವಲ್ಪವೂ ಸಹಾಯ ದೊರೆತಿಲ್ಲ. ಈ ಭೌತಿಕಸಂಸ್ಕೃತಿಯಿಂದ ಈಗ "ಸಾಮ್ರಾಜ್ಯ ಪ್ರಭುತ್ವ" ಮತ್ತು "ಬಂಡವಾಳಗಾರರ ಪ್ರಭುತ್ವ" ಎಂಬ ಅನಿಷ್ಟಗಳು ಹುಟ್ಟಿವೆ. ಅವುಗಳ ಲೀಲೆಯ ಪರಮಗತಿಯ ಫಲವಾಗಿ ಕಳೆದ ಮಹಾಯುದ್ಧವು ಸಂಭವಿಸಿತು. ಅನಂತರ ರಾಷ್ಟ್ರಸಂಘವು ಹುಟ್ಟಿತು. ಆದರೆ ಅದು ಕೂಡ ಈಗ ನಿಷ್ಪ್ರಯೋಜಕವೆಂದು ನಿಶ್ಚಿತವಾಗುತ್ತಿದೆ. ಭಾರತವರ್ಷ, ಫಿಲಿಫಾಯಿನ್, ಚೀಣ ಇತ್ಯಾದಿ ಬಣ್ಣದ ಜಾತಿಗಳು ಮಾತ್ರವಲ್ಲ; ಇಂಗ್ಲಂಡ, ಫ್ರಾನ್ಸ, ಜರ್ಮನಿ, ಅಮೆರಿಕಾ ಇತ್ಯಾದಿ ಬಿಳಿಯರ ದೇಶಗಳಲ್ಲಿ ಕೂಡ ಅಸಂತೋಷಾಗ್ನಿಯು ಪ್ರಜ್ವಲಿಸಲಾರಂಭಿಸಿದೆ. ಫ್ರಾಯಿಡ್ ಎಂಬ ಪ್ರಸಿದ್ಧ ಮನಶ್ಶಾಸ್ತ್ರಜ್ಞನು ಮಾನವ ಸಮಾಜದ ದುಃಖಕ್ಕೆ ಮೂರು ಕಾರಣಗಳನ್ನು ಹೇಳಿರುವನು. ಮೊದಲನೆಯದು ಆಧಿದೈವಿಕಕೋಪ. ಭೌತಿಕ ಶಾಸ್ತ್ರದ ಸಹಾಯದಿಂದ ನಾವು ಸಂರಕ್ಷಣೆಗಾಗಿ ಎಷ್ಟು ಪ್ರಯತ್ನಿಸಿದರೂ ಆಧಿದೈವಿಕಸಂಕಟಗಳಿಂದ ಶಾಶ್ವತವಾಗಿ ಪಾರಾಗುವುದು ಅಸಾಧ್ಯ. ಎರಡನೆಯ ಕಾರಣವು ಮರಣ. ಇದಕ್ಕಿಂತೂ ಉಪಾಯವಿಲ್ಲವಾಗಿದೆ. ಇನ್ನು ಮೂರನೆಯ ಕಾರಣವೆಂದರೆ ಕುಟುಂಬ, ಸಮಾಜ ಮತ್ತು ರಾಷ್ಟ್ರಗಳ ಪರಸ್ಪರ ಹಿತದ ವಿಚಾರದಲ್ಲಿ ಉಂಟಾಗಿರುವ ಅತ್ಯಂತ ದೋಷಪೂರ್ಣವಾದ ವ್ಯವಸ್ಥೆಯು. ಸಂಸ್ಕೃತಿ ಮತ್ತು ಸಾಮರ್ಥ್ಯಗಳ ವಿಚಾರದಲ್ಲಿ ಕೆಲವು ಭ್ರಾಮಕಕಲ್ಪನೆಗಳಿಂದ ಸುಧಾರಿತ ರಾಷ್ಟ್ರಗಳೆನಿಸಿ... ಹುಚ್ಚು ಹಿಡಿದು ಹೋಗಿದೆ. ಒಬ್ಬ ಖಂಡಿತವಾದಿಯಾದ ಜಪಾನೀ ಲೇಖಕನು ತನ್ನ ದೇಶದ ವಿಚಾರದಲ್ಲಿ ಹೀಗೆ ಬರೆದಿರುವನು.—'ಕಳೆದ ಎರಡು ಸಾವಿರ ವರುಷಗಳಲ್ಲಿ ಯಾರಿಗೂ ತೊಂದರೆ ಕೊಡದೆ, ಸುಖಶಾಂತಿಯಿಂದ ನಾವು ನಮ್ಮ ರಾಜ್ಯದ ಆಡಳಿತವನ್ನು ನಡೆಯಿಸುತ್ತಿದ್ದೆವು. ಆಗ ನಮ್ಮ ರಾಷ್ಟ್ರವು ಹಿಂದುಳಿದ ರಾಷ್ಟ್ರಮಾಲೆಯಲ್ಲಿ ಸೇರಿದ್ದೆನಿಸಿತ್ತು. ಆದರೆ ನಾವು ಬೇರೆ ರಾಷ್ಟ್ರದವರೊಂದಿಗೆ ಯುದ್ಧವನ್ನು ಹೂಡಿ, ನಾವು ಸಾವಿರಾರು ಜನರನ್ನು ಆಹುತಿತೆಗೆದುಕೊಂಡ ಕೂಡಲೆ ನಮ್ಮ ರಾಷ್ಟ್ರವು ಪ್ರಮುಖ ರಾಷ್ಟ್ರಮಾಲೆಯಲ್ಲಿ ಗಣ್ಯವಾಯಿತು."— ಇದರಿಂದ ಯಾವ ರಾಷ್ಟ್ರವು ಜಗಳಗಂಟಿಗನಾಗಿರುವುದೋ ಅದೇ ಸುಧಾರಿಸಿದ ರಾಷ್ಟ್ರವೆಂದು 'ಪ್ರಮುಖರಾಷ್ಟ್ರಗಳ ವ್ಯಾಖ್ಯಾನವಿರುವಂತೆ ತೋರುವುದು. ಈಗಿನ ಅಸಂತೋಷಾತ್ಮಕ ಸಂಸ್ಕೃತಿಯು ಎರಡು ದೋಷಗಳಿಂದ ಕೂಡಿರುವುದು. ಅದು ಭೌತಿಕ ತಳಹದಿಯ ಮೇಲಿರುವುದು. ಎಂದರೆ ಅದಕ್ಕೆ ಆಧ್ಯಾತ್ಮಿಕ ತಳಹದಿಯ ಆಧಾರವಿಲ್ಲ. ಮನಸ್ಸನ್ನು ಉನ್ನತಿಗೊಳಿಸುವುದಕ್ಕಿಂತಲೂ ಶರೀರದ ಭೋಗಗಳನ್ನು ಪೂರೈಸುವುದೆ ತನ್ನ ಮುಖ್ಯ ಕಾರ್ಯವೆಂದು ಈ ಸಂಸ್ಕೃತಿಯು ತಿಳಿಯುವುದು. ಅದರ ಸಂಪತ್ತಿನ ವಿಭಾಗತತ್ವವು ಸುವ್ಯವಸ್ಥೆಗೆ ಮತ್ತು ಬಹುಜನಹಿತಕ್ಕೆ ಪೋಷಕವಾಗಿಲ್ಲದಿರುವುದು ಎರಡನೆಯ ದೋಷವಾಗಿದೆ. ಇವೆರಡು ದೋಷಗಳ ನಿವಾರಣೆಯಾಗದ ವಿನಾ ಈ ಸಂಸ್ಕೃತಿಯು ಚಿರಸ್ಥಾಯಿಯಾಗುವುದು ಅಸಾಧ್ಯ. ಭಗವಾನ್ ಗೌತಮಬುದ್ಧನು ಹೀಗೆ ಹೇಳಿರುವನು. "ಸಾವಿರ ಜನರನ್ನು ಕೊಂದು ಜಯವನ್ನು ಸಂಪಾದಿಸಿದ ವೀರನಿಗಿಂತಲೂ, ಸ್ವಂತ ಮನಸ್ಸನ್ನು ಜಯಿಸುವ ಸಂಯಮಿಯೇ ಶ್ರೇಷ್ಠನು." ಈ ವಿಚಾರವು ಪಾಶ್ಚಾತ್ಯರಿಗೆ ತಿಳಿದ ದಿನವೇ ಸುದಿನ.

—ಸುಧಾ (ಹಿಂದಿ)

## ಬ್ರಹ್ಮ (ಬರ್ಮಾ) ದೇಶದಲ್ಲಿ ಪ್ರೇತ ಸಂಸ್ಕಾರ ಸಮಾರಂಭ

ಬ್ರಹ್ಮ ದೇಶವು ಹಿಂದುಸ್ಥಾನದ ಒಂದು ಭಾಗವೆಂದು ಪರಿಗಣಿತವಾಗಿದೆ. ಆದಾಗ್ಯೂ ಅಲ್ಲಿನ ಜನರ ಆಚಾರವು ನಮ್ಮವರಿಂದ ಭಿನ್ನವಾಗಿದೆ. ಅಲ್ಲಿಗೆ ಮೊನ್ನೆ ಬಿಷ್ಪ ... ಖುಜಿನ್ ತೂ ಎಂಬ ಬೌದ್ಧ ... ಹೋಗಿದ್ದಾಗ ...

CC-0. Jangamwadi Math Collection. Digitized by eGangotri

ಶ್ರೀಮಂತನು ಮರಣವನ್ನೈದಿದನು. ಆತನ ಅಂತ್ಯವಿಧಿ ಸಮಾರಂಭ ಮತ್ತು ಅದಕ್ಕಾದ ವೆಚ್ಚದ ವರ್ಣನೆಯನ್ನು ಓದಿದರೆ ಆಶ್ಚರ್ಯವಾಗದಿರದು. ಆ ದಿನ ಮೃತನ ಪ್ರೇತವನ್ನು ಮೆರವಣಿಗೆಗಾಗಿ ಕೊಂಡು ಹೋದ ಮೋಟಾರನ್ನು ಅಲಂಕರಿಸಲು ಸುಮಾರು ರೂ. ೧,೦೦೦ ವೆಚ್ಚ ! ಆದರಿಂದ ಇತರ ವೆಚ್ಚದ ಕಲ್ಪನೆಯುಂಟಾಗಬಹುದು. ಬ್ರಹ್ಮೀ ಜನರ ಅಂತ್ಯವಿಧಿಯ ಪದ್ಧತಿಯು ವಿಚಿತ್ರವಾಗಿರುವುದು. ಆ ಪ್ರವಾಸಿಯು ಹೀಗೆ ಬರೆದಿರುವನು — "ಆ ಶ್ರೀಮಂತನ ಪ್ರೇತವನ್ನಿಡುವುದಕ್ಕಾಗಿ ತಯಾರಿಸಿದ ಮನೆಯು ೬೫ ಅಡಿ ಎತ್ತರ, ೩೫ ಅಡಿ ಉದ್ದ, ೨೦ ಅಡಿ ಅಗಲವಾಗಿತ್ತು. ಅದರೊಳಗಿನ ಕಂಭಗಳು ಮತ್ತು ತೊಲೆ ( ಜಂತಿ ) ಗಳೆಲ್ಲವು ಬೆಳ್ಳಿಯವಾಗಿದ್ದು, ಅದರ ಗೋಡೆಗಳು ಕಾಗದ ಮತ್ತು ಬಿದಿರುಗಳಿಂದ ನಿರ್ಮಿತವಾಗಿದ್ದವು. ಅದರಲ್ಲಿ ಕಪಾಟು (ಅಲ್ಮೈರಾ) ಗಳೂ ಇದ್ದವು. ಅವುಗಳಲ್ಲಿ ಬಹು ಬೆಲೆ ಬಾಳುವ ಬಟ್ಟೆ, ಪಾತ್ರೆ ಮೊದಲಾದ ಪದಾರ್ಥಗಳನ್ನಿಟ್ಟಿದ್ದರು. ಅಲ್ಲಿ ಒಂದು ಬೆಳ್ಳಿಯ ಗ್ರಾಮೊಫೋನೂ ಇತ್ತು. ಅದರ ಎಂಟು ಮೂಲೆಗಳಲ್ಲಿ ಆ ಜನ ಸ್ತ್ರೀಪುರುಷರ ಮೂರ್ತಿಗಳನ್ನಿಟ್ಟಿದ್ದರು. ಆ ಮೂರ್ತಿಗಳು ಮೃತನ ದಾಸಿಯರ ರೂಪವನ್ನು ಹೋಲುತ್ತಿದ್ದವು. ಮೃತನ ದೇಹವನ್ನು ಮಂಚದಮೇಲೆ ಮಲಗಿಸಿ ಆ ಅಮೌಲ್ಯವಾದ ವಸ್ತು ಮತ್ತು ಮೂರ್ತಿಗಳೊಂದಿಗೆ ಆ ಮನೆಗೆ ಬೆಂಕಿಯನ್ನು ಹೊತ್ತಿಸಿದರು. ಅದಕ್ಕೆ ಮುಂಚೆ ಎರಡು ದಿನಗಳಿಂದ ಉತ್ಸವವು ನಡೆಯುತ್ತಲೆ ಇದ್ದಿತು. ಆ ಕಾರ್ಯದಲ್ಲಿ ಒಟ್ಟು ರೂ. ೨೦,೦೦೦ ವೆಚ್ಚವಾಯಿತು! ಮೃತನು ಮೃತ್ಯುಲೋಕವನ್ನು ತ್ಯಜಿಸಿ, ಪರಲೋಕದ ಮನೆಗೆ (ಪರಂಧಾಮಕ್ಕೆ) ಹೋದನೆಂಬುದನ್ನು ಸೂಚಿಸುವುದಕ್ಕಾಗಿ ಆರೀತಿಯಲ್ಲಿ ಆ ಮನೆಯನ್ನು ಸುಡುವರು."

—ಹಿಂದೀ ಮಿಲಾಪ್(ಹಿಂದಿ)

## ಮುಂದಿನ ಯುಗದ ಮನುಷ್ಯರು

ಪ್ರಾಚೀನ ಕಾಲದಲ್ಲಿ ಮನುಷ್ಯನು ಹೇಗಿದ್ದನು, ಮತ್ತೆ ಈಗ ಹೇಗಿರುವನು ಎಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಮುಂದಿನ ಯುಗದಲ್ಲಿ ಮನುಷ್ಯನು ಹೇಗಾಗುವನು ಎಂಬ ಕಲ್ಪನೆಯನ್ನು ಮಾಡಬಹುದು. ಮಾನವನ ಮಿದುಳು ದಿನದಿನಕ್ಕೂ ಚ[illegible]ವಾಗಿಯೂ ಬೆಳೆಯುತ್ತದೆಂಬುದರಲ್ಲಿ ಸಂದೇಹವೆ ಇಲ್ಲ. ಈ ಕಾರಣದಿಂದ ಮುಂದೆ ಅದರ ಆಕಾರವು ದೊಡ್ಡದಾಗಲೇಬೇಕು. ಹೇಗೆಂದರೆ ಅದು ಇಂದಿನ ಮಿದುಳಿಗಿಂತ ಅಧಿಕ ಪ್ರಮಾಣದಲ್ಲಿ ದೊಡ್ಡದಾಗುವುದೆಂದು ತಿಳಿಯಬಾರದು. ಮಿದುಳಿಗೆ ಸಾಕಾದಷ್ಟು ಒದಗಿ, ಅದರ ಕಾರ್ಯಶಕ್ತಿಯು ಹೆಚ್ಚುವುದು. ಮಿದುಳಿನ ಮೇಲಿರುವ ಬುರುಡೆಯು ತೆಳುವಾಗಿ, ಕೂದಲು ಬೆಳೆಯುವುದು ಕಡಿಮೆಯಾಗಬಹುದು. ಇದುವರೆಗೆ ಮಾನವಕುಲಕ್ಕೆ ವಂಶಪಾರಂಪರ್ಯದಿಂದ ದೊರೆತಿರುವ ಅನುಭವಲಾಭದ ಪರಿಣಾಮವಾಗಿ ಮುಂದಿನ ಯುಗದ ಮನುಷ್ಯನು ಉನ್ನತನೂ ಬಲಿಷ್ಠನೂ ಆಗುವನು. ಪತಿಪತ್ನಿಯರ ಚುನಾವಣೆಯು ಇನ್ನು ಮುಂದೆ ಸೌಂದರ್ಯದ ದೃಷ್ಟಿಯಿಂದ ಆಗಲಿರುವುದರಿಂದ ಆಗಿನ ಮನುಷ್ಯರೂ ಈಗಿನಗಿಂತಲೂ ಅಧಿಕ ಸುಂದರರಾಗುವರು. ಅಗಲವಾದ ಕಣ್ಣು, ಸಣ್ಣಗೆ ನೀಳವಾದ ಮೂಗು, ಕಡಿಮೆ ಹಲ್ಲುಗಳು, ಇವುಗಳಿಂದ ಅವರು ಶೋಭಿಸುವರು. ಅವರ ಹಣೆಯ ಆಕಾರವು ಬದಲಾಗುವುದು. ಅವರ ಶರೀರರಚನೆಯು ಸೊಂಟದಿಂದ ಕೆಳಗೆ ಉದ್ದವಾಗಿರುವುದು, ಅಲ್ಲಿಂದ ಕಣ್ಣಿನವರೆಗೆ ಗಿಡ್ಡಾಗಿರುವುದು. ಆಗಿನ ಮನುಷ್ಯರೆಲ್ಲರೂ ತೆಳುವಾಗಿರುವರು. ಅವರು ಸುಲಭವಾಗಿ ಜೀರ್ಣಿಸುವ ಆಹಾರವನ್ನು ತೆಗೆದುಕೊಳ್ಳುವುದರಿಂದ, ಅವರ ಕರುಳುಗಳು ಈಗಿನಷ್ಟು ವಿಸ್ತಾರವಾಗಿಯೂ ಸಬಲವಾಗಿಯೂ ಇರಲಾರವು, ಆದರೆ ಅವರ ಮನಸ್ಸಿನ ಗತಿಯು ತೀವ್ರವಾಗಿರುವುದು. ಸಾಂಕ್ರಾಮಿಕ ರೋಗಗಳು, ಚರ್ಮ ರೋಗಗಳು, ನೇತ್ರರೋಗ ಇತ್ಯಾದಿ ಸಂಕಟಗಳು ಅಧಿಕವಾಗುವವು. ಶರೀರರಚನೆಯು ಅಧಿಕವಾದ ಬದಲಾವಣೆ ಹೊಂದಬಹುದು, ಭೌತಿಕ ಪರಿಸ್ಥಿತಿಯಲ್ಲಿ ವಿಶೇಷ ದೊಡ್ಡ ಕ್ರಾಂತಿಯುಂಟಾಗಬಹುದು; ಆದರೆ ಅವುಗಳಿಂದ ಮನುಷ್ಯನ ಅವನತಿಯು ಎಂದಿಗೂ ಉಂಟಾಗದು. ಆದಾಗ್ಯೂ ಆಗ ಜ್ಞಾನದೀಪವನ್ನು ಪ್ರಜ್ವಲಿಸುವ ಮಹಾತ್ಮರ ಸಂಖ್ಯೆಯು ಹೆಚ್ಚುವುದೆಂದು ಹೇಳಲಾಗುವುದಿಲ್ಲ. ಅಂತಹ ಮಹಾತ್ಮರ ಸಂಖ್ಯೆಯು ಈಗಲೇ ಎಷ್ಟೋ ತಗ್ಗಿಹೋಗಿರುವುದು.

—Evolution

## ಸಾರ್ವಜನಿಕ ಜೀವನದಲ್ಲಿ ಅಪ್ರಾಮಾಣಿಕತೆ

ಮಹಾತ್ಮಾ ಗಾಂಧಿಯವರ ಪುಣ್ಯಬಲದಿಂದ ಇಂದು ಭಾರತೀಯ ರಾಜಕಾರಣಕ್ಕೆ ಆತ್ಮಿಕತೇಜದ ಪ್ರಕಾಶವು

CC-0. Jangamwadi Math Collection. Digitized by eGangotri

ಲಭಿಸಿದೆ. ವಿಶೇಷದುರ್ಗಮವೂ ಕುಟಿಲತಾಪೂರ್ಣವೂ ಆದ ರಾಜನೀತಿಯು ಈ ಕಾಲದ ತಿಳುವಳಿಕೆಯುಳ್ಳ ತರುಣರಿಗೆ ಸರಿಯಾಗಿ ತಿಳಿಯುವುದೊ ಎಂದು ಸಂದೇಹವುಂಟಾಗುವುದು. ಆದರೆ ರಾಜನೀತಿಯೆಂದಕೂಡಲೆ ಅಲ್ಲಿ ಸುಳ್ಳು, ಮೋಸಗಳು ಇರುವವೆಂದು ಎಲ್ಲರಿಗೂ ತಿಳಿಯುತ್ತಿದೆ. ಅಮೆರಿಕದಲ್ಲಿ ಲಂಚರುಷುವತ್ತುಗಳು ವಿಶೇಷವಾಗಿ ನಡೆಯುವವೆಂದು ಯುರೋಪಿಯನರ ಭಾವನೆ. ಅದಕ್ಕಾಗಿ ಅವರು ಅಮೆರಿಕನರ ಮೇಲೆ ವಿಶೇಷ ಟೀಕೆ ಮಾಡುತ್ತಾರೆ. ಈ ಟೀಕೆಯಿಂದ ಕೋಪಗೊಂಡು, ಒಬ್ಬ ಪ್ರಸಿದ್ಧ ಅಮೆರಿಕನ್ ಲೇಖಕನು—"ಇತರ ಪ್ರಮುಖ ರಾಷ್ಟ್ರಗಳ ಸ್ಥಿತಿಯು ಅದೇ ಬಗೆಯದಾಗಿದೆ" ಎಂದು ತೋರಿಸಿರುವನು. ಅದರಂತೆಯೆ ಅವನು ಪ್ರಜಾಪ್ರಭುತ್ವಗಳ ತುಲನಾತ್ಮಕ ಚರ್ಚೆಯನ್ನೂ ಮಾಡಿರುವನು. ಅದು ಬೋಧನಾತ್ಮಕವಾಗಿರುವುದರಿಂದ ಅದರ ಸಾರಾಂಶವನ್ನು ಇಲ್ಲಿ ಕೊಡಲಾಗಿದೆ. "ರಷ್ಯಾದ ರಾಜನಾಗಿದ್ದ ಪೀಟರ್ ದಿ ಗ್ರೇಟನ ಪ್ರಧಾನಿಯೊಬ್ಬನು ಬಹಳ ಲಂಚವನ್ನು ತಿನ್ನುತ್ತಿದ್ದನು. ಈ ವಿಚಾರವು ರಾಜನಿಗೆ ತಿಳಿದಕೂಡಲೆ, ಅವನು ಪ್ರಧಾನಿಯನ್ನು ಕರೆಯಿಸಿ, ಚೆನ್ನಾಗಿ ದಂಡಿಸಿದನು. ಆಗ ಅವನು ಶಾಂತಭಾವದಿಂದಲೆ–"ಮಹಾರಾಜರೆ! ತಮ್ಮ ರಾಜ್ಯದ ಅಧಿಕಾರಿಗಳೆಲ್ಲರೂ ಲಂಚಖೋರರೆ. ಆದರೆ ಅವರಲ್ಲಿ ಕೆಲವರು ಬಹಿರಂಗವಾಗಿ ಮುಂಗಡ ದಕ್ಷಿಣೆಯನ್ನು ಸ್ವೀಕರಿಸುವರು. ಉಳಿದವರು ಪತ್ತೆಯಿಲ್ಲದಂತೆ ಲಂಚವನ್ನು ಹೊಡೆಯುವರು," ಎಂದು ಹೇಳಿದನು. ಈ ಪ್ರಧಾನಿಯ ಹೇಳಿಕೆಯಲ್ಲಿ ವಿಶೇಷ ರಹಸ್ಯವಡಗಿರುವುದು. ಪೂರ್ವಕಾಲದಲ್ಲಿ ಚೀಣರಾಜ್ಯದಲ್ಲಿ ಕೇವಲ ಶ್ರೇಷ್ಠರಾದ ವಿದ್ವಾಂಸರನ್ನೆ ಪ್ರಧಾನಿಮಂಡಲಕ್ಕೆ ಆರಿಸುತ್ತಿದ್ದರು, ಕಾಲಾನಂತರದಲ್ಲಿ ಅದು ಸುವರ್ಣಪ್ರಭಾವದಿಂದ ಬೇರೆಯವರಿಗೂ ದೊರೆಯಲಾರಂಭಿಸಿತು. ಜಪಾನಿನಲ್ಲಿ ದೊಡ್ಡದೊಡ್ಡ ಪದವಿಗಳು ದೊರೆಯುವುದಕ್ಕೆ ವಿಶೇಷ ಹಣವನ್ನೂ ನಜರಾಣೆಗಳನ್ನೂ ಒಪ್ಪಿಸಬೇಕಾಗಿತ್ತು, ಈಗಲೂ ಒಪ್ಪಿಸಬೇಕಾಗಿದೆ. ಆದರೆ ಆ ಹಿಂದುಳಿದ (!) ರಾಷ್ಟ್ರಗಳ ವಿಚಾರವೇಕೆ? ಇಂಗ್ಲೆಂಡಿನಂಥಾ,–ಪ್ರಜಾಪ್ರಭುತ್ವ, ದೇಶಾಭಿಮಾನ, ಪ್ರಾಮಾಣಿಕತೆ ಇತ್ಯಾದಿ ಸದ್ಗುಣಗಳ ಸಗಾರಿಯನ್ನು ಆಗಾಗ್ಗೆ [illegible] ನಾಗರಿಕ

ವರ್ಗದ ರಾಷ್ಟ್ರದ ಸ್ಥಿತಿಯನ್ನು ನೋಡಿರಿ! ಪದವಿ, ಬಿರುದುಬಾವಲಿಗಳಿಗಾಗಿ ಅಧಿಕಾರಾರೂಢರಾದ ಪಕ್ಷದವರಿಗೆ ಹಣವನ್ನು ಕೊಡುವುದು ಇಂಗ್ಲೆಂಡಿನ ಶ್ರೀಮಂತರ ನಿತ್ಯಪದ್ಧತಿಗಾಗಿದೆ. ಯಾವುದಾದರೊಂದು ಪಕ್ಷದವರು ಅಧಿಕಾರಕ್ಕೆ ಬರುವರೆಂಬ ಭರವಸೆಯುಂಟಾದಕೂಡಲೆ, ಅವರ ಚುನಾವಣೆಗಾಗಿ ಆ ಶ್ರೀಮಂತರು ಬೇಕಾದಷ್ಟು ಆರ್ಥಿಕಸಹಾಯನ್ನು ಕೊಡುವರು. ಈ ಬಗೆಯಿಂದ ಲಾಯಿಡ್‌ಜಾರ್ಜ ಎಂಬಾತನಿಗೆ ಆತನ ಲಿಬರಲ್ ಪಕ್ಷದ ಚುನಾವಣೆಗಾಗಿ ಚುನಾವಣೆಯ ಕಾಲದಲ್ಲಿ ೧೫ ಲಕ್ಷ (!) ಪೌಂಡುಗಳು ದೊರೆತವೆಂದು ವ್ಯಕ್ತವಾಗಿದೆ. ಓಟುಗಳನ್ನು ದೊರಕಿಸಿಕೊಳ್ಳಲು ನಡೆಸುವ ಲಂಚ, ಮೋಸ ಮೊದಲಾದ ಕೆಲವು ಕಾರ್ಯಗಳನ್ನು ಉಚ್ಚರಿಸದಿರುವುದೇ ಮೇಲು. ಆದರೆ ಇಂಗ್ಲೆಂಡಿನ ಈ ದ್ರವ್ಯವೃಷ್ಟಿಯ ವಿಚಾರವು ಹಿಂದೆ ಅನೇಕ ಬಾರಿ ಪ್ರತ್ಯಯಕ್ಕೆ ಬಂದಿದೆ. ಅಮೆರಿಕೆಯ ಸ್ವಾತಂತ್ರ್ಯಯುದ್ಧವಾದನಂತರ, ಕೆಲಜನ ಇಂಗ್ಲಿಷ ಅಧಿಕಾರಿಗಳ ವಿಚಾರದಲ್ಲಿ ಸಂಶಯವು ಹುಟ್ಟಿ, ಆಗ ಸಾರ್ವಜನಿಕ ವಿಚಾರಣೆಯಾಗಬೇಕೆಂದು ಜನರು ಹಠಹಿಡಿದರು. ಆಗ ಸರಕಾರದವರು ಅದಕ್ಕಾಗಿ ಒಂದು ಕಮಿಶನನ್ನು ನೇಮಿಸಿದರು. ಅದರ ಮೂಲಕ ಅನೇಕ ಕುಟಿಲ ಕಾರಸ್ಥಾನಗಳು ಬಯಲಿಗೆ ಬಂದವು. ಅವುಗಳಲ್ಲಿ ಒಂದೆರಡನ್ನು ನಮೂನೆಗಾಗಿ ಇಲ್ಲಿ ಕೊಡುವೆನು. ಲಾರ್ಡ ವಿ. ಫಾಕ್‌ಲೆಂಡನು ೨೭ ಸಾವಿರ ಪೌಂಡುಗಳನ್ನು ಭಕ್ಷಿಸಿದ್ದನು. ಆಗ ಅಮೆರಿಕದಲ್ಲಿ ಹೋರಾಡುತ್ತಿದ್ದ ಸಿಪಾಯಿಗಳಿಗೆ ಒದಗಿಸಿದ ಶಸ್ತ್ರಾಸ್ತ್ರಗಳು ಕೀಳಾಗಿಯೂ ಹಗುರಾಗಿಯೂ ಇದ್ದವೆಂದು ಸೇನಾಪತಿಯಾದ ಲಾರ್ಡ ಕಾರ್ನವಾಲಿಸನು ಗೋಳಿಟ್ಟನು. ಆ ಮಾಲುಗಳನ್ನು ಒದಗಿಸುವ ಕಂಟ್ರಾಕ್ಟರನ ಕಡೆಯಿಂದ ಸಾವಿರಾರು ಪೌಂಡು ಲಂಚವನ್ನು ತಿಂದು ತನ್ನ ಮನಬಂದಂತಹ ಮಾಲುಗಳನ್ನು ರಣರಂಗಕ್ಕೆ ಕಳುಹಲಾಗಿತ್ತೆಂದು ಅನಂತರ ತಿಳಿದುಬಂದಿತು. ಇದು ದೇಶಾಭಿಮಾನಿಗಳಾದ ಇಂಗ್ಲಿಷರ ವಿಚಾರ! ಪ್ರಜಾಪ್ರಭುತ್ವವು ಈ ಲಂಚರುಷುವತ್ತುಗಳಿಂದ ತುಂಬಿರುವದೆಂದು ಹೇಳುವರು. ಆದರೆ ಮುಂಚೆ ರಾಜಪ್ರಭುತ್ವದಲ್ಲಿ ಅಥವಾ ದೊಣ್ಣೆಯ ಪ್ರಭುತ್ವದಲ್ಲಿ ನಮ್ಮ ರಾಷ್ಟ್ರ [illegible] ಹೆಚ್ಚಾಗಿ ಲಂಚರುಷುವತ್ತುಗಳು ನಡೆಯುತ್ತಿ

CC-0. Jangamwadi Math Collection. Digitized by eGangotri

ಷ್ಟವು! ಪ್ರಜಾಪ್ರಭುತ್ವದಲ್ಲಿ ಅನ್ಯಾಯವು ಹೆಚ್ಚಿದರೆ, ವಿಚಾರಣೆಯಿಂದ ನಮಗೆ ಈಗ ನ್ಯಾಯವು ದೊರೆಯ ಬಹುದು. ಆದರೆ ಲಾರೀಪ್ರಭುತ್ವದಲ್ಲಿ ಅನ್ಯಾಯವನ್ನು ಉಸಿರೆತ್ತದೆ ಮುಚ್ಚಿಡಬೇಕಾಗುವುದು. ನ್ಯಾಯನಿಷ್ಠಾವಂತನಾದ ಸರ್ವಾಧಿಕಾರಿಯಾಗಲಿ ರಾಜನಾಗಲಿ ಇದ್ದ ರಂತೂ ಸರಿ. ಇಲ್ಲವಾದರೆ ಸರಕಾರದ ಅನ್ಯಾಯದ ವಿಚಾರದಲ್ಲಿ ಯಾರಾದರೂ ಉಸಿರೆತ್ತಿದರೆ ಅವರ ಆಯು ಷ್ಯವು ಅಂದಿಗೇ ಮುಗಿದಂತೆ. ಈ ದೃಷ್ಟಿಯಿಂದ ನಿಮ್ಮ ರಾಜಪ್ರಭುತ್ವಕ್ಕಿಂತಲೂ ನಮ್ಮ ಪ್ರಜಾಪ್ರಭುತ್ವವೇ ಮೇಲಲ್ಲವೆ ? ”

—Current History

## ಇಂದಿನ ಸಮತಾವಾದದ ವಿಲಾಪ

ವಿ. ಜಾನ್ ಗೌಲ್ಡ್ ಫ್ಲೆಚರ್ ಎಂಬಾತನು ಪ್ರಸಿದ್ಧ ಕವಿಯೂ ತತ್ವವೇತ್ತನೂ ಆಗಿರುವನು. ಜಗತ್ತಿನಲ್ಲಿ ಈಗ ನಡೆಯುತ್ತಿರುವ ಸಮತಾವಾದದ ಆರಾಧನೆಯನ್ನು ಕುರಿತು ಒಂದು ಮಾರ್ಮಿಕ ಲೇಖವನ್ನು ಬರೆದಿರುವನು. ಅದರಲ್ಲಿ ಆತನು ಹೀಗೆ ಹೇಳಿರುವನು— “ ಫ್ರೆಂಚ್ ರಾಜ್ಯಕ್ರಾಂತಿಯಿಂದ ಸ್ವತಂತ್ರತೆ, ಬಂಧುತ್ವ ಮತ್ತು ಸಮತೆಗಳ ಘೋಷವು ಉದಯಿಸಿತು. ಅದರ ಬೇರೆ ತತ್ವಗಳು ಮುಂಚಿನಂತೆ ಈಗ ಪ್ರಭಾವನುಯವಾಗಿ ತೋರುತ್ತಿಲ್ಲ. ಸ್ವತಂತ್ರತೆಯು ಲೋಕಪ್ರಿಯವಾಗಿದೆ. ಬಂಧುತ್ವವು ವಿಶೇಷ ಪ್ರಭಾವಶಾಲಿಯಾಗಿಲ್ಲ. ಸಮತೆಯ ಕೂಗು ಮಾತ್ರ ಸರ್ವತ್ರ ಹಬ್ಬಿದೆ. ಅದರ ಆಚರಣೆಯು ಮುಂಚೆಗಿಂತ ತೀವ್ರವಾಗಲೆತ್ನಿಸಿದೆ. ಆದಾಗ್ಯೂ ಸ್ವತಂತ್ರತೆ ಮತ್ತು ಸಮತೆ ಎಂಬ ಪದಗಳ ಅರ್ಥವೇ ಬಹು ಜನರ ಮನಸ್ಸಿನಲ್ಲಿ ಬಹುತರವಾಗಿದೆ. ಸ್ವತಂತ್ರತೆಯೆಂದರೆ ನಿರ್ಬಂಧ ಸ್ವೈರಾಚಾರವಲ್ಲ. ಸ್ವತಂತ್ರತೆಯಲ್ಲಿಯೂ ಮನುಷ್ಯನು ಕೆಲವು ಹೊಣೆಗಾರಿಕೆಗಳನ್ನು ವಹಿಸಬೇಕಾಗುವುದು. ಹೊಣೆಗಾರಿಕೆಯಿಂದ ಕೂಡಲೆ ಬಂಧನವು ಬರುತ್ತದೆ. ನಾವು ಸ್ವಾತಂತ್ರ್ಯವನ್ನು ಆದರಿಸುವೆವೆಂದರೆ ಯಾವುದಾದರೊಂದು ಬಂಧನವನ್ನು ಪಾಲಿಸುವ ಸ್ವಾತಂತ್ರ್ಯವು ಪ್ರತಿಯೊಬ್ಬ ಮನುಷ್ಯನಿಗೂ ಇರಬೇಕೆಂದು ನಮಗೆ ಭಾಸವಾಗುವುದು. ಪೂರ್ಣಸ್ವಾತಂತ್ರ್ಯವನ್ನು ಹೊಂದಿ ಜನತೆಯು ಸ್ವೈರವಾಗಿ ವರ್ತಿಸಲಾರಂಭಿಸಿದಕೂಡಲೆ ಯಾವನಾದರೊಬ್ಬ ನರಶ್ರೇಷ್ಠ (Superman) ನು ಅವ ತರಿಸಿ, ಅದನ್ನು ಶಿಸ್ತುಗೊಳಿಸುವನು. ಇನ್ನು ಸಮತೆಯ ವಿಚಾರವನ್ನು ಸಂಕ್ಷೇಪವಾಗಿ ಹೀಗೆ ಹೇಳ ಬಹುದು. ಎಲ್ಲ ಮನುಷ್ಯರನ್ನು ಒಂದೇ ಪಂಕ್ತಿಯಲ್ಲಿ ಕೂಡಿಸಿದ ಮಾತ್ರಕ್ಕೆ ಅದು ಸಮತೆಯೆನಿಸಲಾರದು. ನೈಸರ್ಗಿಕವಾಗಿ ಮನುಷ್ಯಮನುಷ್ಯರಲ್ಲಿ ಉಚ್ಚ ನೀಚ ಗುಣಗಳ ಪ್ರಾದುರ್ಭಾವವುಂಟಾಗಿರುವುದು. ಪ್ರತಿಯೊಬ್ಬ ವ್ಯಕ್ತಿಯೂ ರಾಷ್ಟ್ರದ ಘಟಕವಾಗಿರುವನು. ಮತ್ತು ರಾಷ್ಟ್ರದ ಸಾಮುದಾಯಿಕ ದೃಷ್ಟಿಯಿಂದ ತನ್ನ ತನ್ನ ಗುಣಕರ್ಮದಂತೆ ಪ್ರತಿಯೊಬ್ಬನೂ ತನ್ನ ಕರ್ತವ್ಯವನ್ನು ಮಾಡಬೇಕಾದುದು ಉತ್ತಮ ಮಾರ್ಗವು. ಹಿಂದೂಗಳ ಚಾತುರ್ವರ್ಣ್ಯ ಪದ್ಧತಿಯು ಈ ದೃಷ್ಟಿಯಿಂದ ಅತ್ಯಂತ ಶ್ರೇಯಸ್ಕರವಾಗಿರುವುದು. ಪರಕೀಯರ ಸಾವಿರಾರು ಆಘಾತಗಳಿಂದಲೂ ಅದು ಕದಲದೆ ಅಚಲವಾಗಿರುವುದಕ್ಕೆ ಅದರ ಬಲವಾದ ತಳಹದಿಯೆ ಕಾರಣವಾಗಿದೆ. ಇಂದು ರಾಷ್ಟ್ರದಲ್ಲಿ ಪ್ರತಿಯೊಬ್ಬನಿಗೂ ಹೊಟ್ಟೆತುಂಬ ಅನ್ನ, ಮೈತುಂಬ ಬಟ್ಟೆ ಆದ ಕೂಡಲೆ, ಸಮತೆಯ ರಾಜ್ಯವು ಪ್ರಾರಂಭವಾಯಿತೆಂದು ತಿಳಿಯುವದು ! ಆದರೆ ಇಂತಹ ವ್ಯಾಪಾರಿಕ ಆರ್ಥಿಕ ವ್ಯವಸ್ಥೆಯ ತಳಹದಿಯ ಮೇಲೆ ನಿಂತ ಸಮತೆಯು ಬಹುದಿನ ಬಾಳದು. ಸಾಮುದಾಯಿಕ ಹಿತಕ್ಕಾಗಿ ರಾಷ್ಟ್ರದ ಪ್ರತಿಯೊಬ್ಬ ವ್ಯಕ್ತಿಯೂ ಬೇರೆಯವರೊಂದಿಗೆ ವಿಹಿತವಾಗಿ ನಡೆದುಕೊಳ್ಳುವುದೇ ಸಮತೆಯೆಂದು ಹೇಳಬಹುದು. ಇಂಥಾ ಸಮತೆಯು ಸ್ಥಾಪಿತವಾಗಬೇಕಾದರೆ ಆಧ್ಯಾತ್ಮಿಕವೃತ್ತಿಯು ಮೊದಲು ಉದಯಿಸಬೇಕು.

—Aryan Path

## ಕಲಾತತ್ವ

‘ಧೂಮಕೇತು’ ಎಂಬ ಗುಪ್ತನಾಮಧಾರಿಯಾದ ಪ್ರಸಿದ್ಧ ಗುಜರಾತಿ ಲೇಖಕನೊಬ್ಬನು ಕಲಾತತ್ವದ ವಿಚಾರವಾಗಿ ಲೇಖನವೊಂದನ್ನು ಬರೆದಿರುವನು. ಆತನ ವಿಚಾರವು ಇಂತಿರುವುದು— “ ಕಲಾವಂತನ ದೃಷ್ಟಿಯಲ್ಲಿ ಯಾವ ವಸ್ತುವಿದೆ ಎಂಬ ವಿಷಯವು ಮಹತ್ವದ್ದಲ್ಲ. ಒಂದು ವಸ್ತುವನ್ನು ನೋಡಿದಕೂಡಲೆ ಇಬ್ಬರು ಆಹಾ! ಎಷ್ಟು ಸುಂದರವಾಗಿದೆ ಇದು ’ ಎಂದು ಒಟ್ಟಿಗೆ ಉದ್ಗಾರ ವನ್ನು ತೆಗೆಯುವರು. ಆದರೆ ಪ್ರತಿಯೊಬ್ಬನೂ ಆ ವಸ್ತುವಿನ ಕಡೆ ನೋಡುವ ದೃಷ್ಟಿಯು ಬೇರೆಬೇರೆಯಾಗಿರು

CC-0. Jangamwadi Math Collection. Digitized by eGangotri

ವುದು. ನಿಜವಾಗಿ ನೋಡಿದರೆ ಜಗತ್ತಿನಲ್ಲಿ ಸುಂದರವಾದ ವಸ್ತುವೇ ಇಲ್ಲ. ಕಟ್ಟಿಗೆಗೆ ಬೆಂಕಿಯನ್ನು ಹಚ್ಚಿದಕೂಡಲೆ ಅದು ಹತ್ತಿಕೊಳ್ಳುವಂತೆ, ಕಲಾವಂತನ ಭಾವನೆಯ–ಕಲ್ಪಕತೆಯ–ಸ್ಪರ್ಶವಾದಕೂಡಲೆ ಆಯಾ ವಸ್ತುವಿಗೆ ಸೌಂದರ್ಯವು ಲಭಿಸುವುದು. ನಮ್ಮ ಭಾವನೆಗಳನ್ನು ವಿಕಾಸಗೊಳಿಸುವುದು ಪ್ರತಿಯೊಬ್ಬಕಲಾವಂತನ ಕರ್ತವ್ಯವಾಗಿರುವುದು. ಅವನಿಗೆ ಜಗತ್ತಿನಲ್ಲಿ ಯಾವ ಆನಂದವು ಕಂಡುಬರುವುದೊ, ಯಾವ ಸೌಂದರ್ಯವು ಪ್ರತೀತವಾಗುವುದೊ ಆ ಆನಂದ ಮತ್ತು ಸೌಂದರ್ಯ ಪ್ರತ್ಯಯವನ್ನು ಜಗತ್ತಿಗೆ ಅರ್ಪಿಸುವುದೇ ಕಲಾವಂತರ ಧರ್ಮವಾಗಿರುವುದು. ಸ್ಥಿತ್ಯಂತರದಿಂದ ಸೌಂದರ್ಯದ ವಿನಾಶವಾಗದು. ಆದರಿಂದ ಸೌಂದರ್ಯದ ತೇಜಸ್ಸು ಹೆಚ್ಚುವುದು. ತಾರುಣ್ಯದಲ್ಲಿ ರಮಣೀಯವಾಗಿ ಕಾಣುವ ಮುಖಮುದ್ರೆಯು ವೃದ್ಧಾವಸ್ಥೆಯಲ್ಲಿಯೂ ರಮಣೀಯವಾಗಿ ಕಾಣಬೇಕು. ಕೇವಲ ತಾರುಣ್ಯದಲ್ಲಿ ಮಾತ್ರ ಸುಂದರವಾಗಿ ಕಾಣುವುದು ನಿಜವಾಗಿ ಸುಂದರವಾದುದಲ್ಲ. ಪ್ರಸಿದ್ಧ ಚಿತ್ರಕಾರನೆನಿಸಿದ ವ್ಹಿಸ್‌ಲರ್‌ ಎಂಬಾತನು ತನ್ನ ವೃದ್ಧಮಾತೆಯ ಚಿತ್ರವೊಂದನ್ನು ತೆಗೆದಿರುವನು. ಅದು ಅಪ್ರತಿಮವಾಗಿದೆ. ಅದರ ಮುಂದೆ ಮತ್ತಾವ ಚಾಕಚಕ್ಯದಿಂದಿರುವ ಮುಖಮುದ್ರೆಯೂ ಸುಂದರವಾಗಿ ಕಾಣಿಸಲಾರದು. ಇಂದಿನ ಜಗತ್ತಿನಲ್ಲಿ ಕಲೆಯ ನಿಜವಾದ ಸ್ವರೂಪವೇ ತಿಳಿಯದಂತಾಗಿದೆ. ಸಮಾಜದ ವ್ಯವಸ್ಥೆಯು ಸುರಕ್ಷಿತವಾಗಿ ಶಾಂತಿಸುಖಗಳ ಸಾಮ್ರಾಜ್ಯವಿದ್ದಾಗ ಜಗತ್ತಿನಲ್ಲಿ ನಿಜವಾದ ಕಲೆಯು ನರ್ತಿಸುತ್ತಿತ್ತು. ಇಂದು ಕಲೆ ಎಂಬ ಕೂಗು ಮಾತ್ರ ಕೇಳಿಸುತ್ತಿದೆ. ಆದರೆ ಯಂತ್ರಗಳ ಸಹಾಯದಿಂದ ಕಲೆಯನ್ನು ಸಮೂಲವಾಗಿ ನಾಶಗೊಳಿಸುವ ಪ್ರಯತ್ನಗಳು ನಡೆಯುತ್ತಲೇ ಇರುವವು. ವಿದ್ಯುತ್ತಿನ ದೀಪದಿಂದ ದೃಷ್ಟಿಯು ದೀಪ್ತವಾಗಿರುವಾಗ ನಂದಾದೀಪದ ಶಾಂತ ಸೌಂದರ್ಯವು ಹೇಗೆ ರುಚಿಸಬೇಕು? ಸತ್ಯಕ್ಕೆ ಕಾಲ್ಪನಿಕ ಅಲಂಕಾರದ ಉಡುಗೆ ತೊಡಿಗೆಗಳನ್ನು ಹಾಕಿ, ಅದರ ಸ್ವರೂಪವು ಅಧಿಕ ರಮಣೀಯವಾಗಿ ಕಾಣುವಂತೆ ಮಾಡುವುದು ಕಲೆಯ ಕೆಲಸ. ವಾಲ್ಮೀಕಿ, ಕಾಳಿದಾಸ, ಷೇಕ್ಸ್‌ಪಿಯರ್ ಇವರೇ ಮೊದಲಾದ ಅಸಾಧಾರಣ ಕಲಾವಂತರು ಮಾಡಿದ ದೊಡ್ಡ ಕೆಲಸವಿದೆ. ಆದರೆ ಈ ಕಾರ್ಯಸಾಧನೆಗೆ ಸತತ ಚಿಂತನವಿರಬೇಕು. ಚಿಂತನವೇ ಕಲಾವಂತರ ಉತ್ಕರ್ಷದ ರಹಸ್ಯವು.

— ಪ್ರಸನ್ನ (ಗುಜರಾತ)

## ಹೃದಯವು ಏತಕ್ಕಾಗಿ ಬಡಿದುಕೊಳ್ಳುತ್ತದೆ.

(ವಿ. ಆರ್. ಅಣ್ಣಾಸ್ವಾಮಿರಾವ್)

ಈ ವಿಷಯವಾಗಿ ಎಷ್ಟು ಬರೆದರೂ ಕೊಂಚವೇ. ವಿಸ್ತಾರವಾಗಿ ಬರೆದರೆ ಒಂದು ದೊಡ್ಡ ಗ್ರಂಥವೇ ಆಗುತ್ತದೆ. ಹೃದಯವು ಮೆದುಳಿನ ಸಹಾಯವಿಲ್ಲದೆಯೆ ಬಡಿದುಕೊಳ್ಳುತ್ತದೆ–ಎಂಬುದು ಅನೇಕರಿಗೆ ತಿಳಿದ ವಿಷಯ. ಉದಾಹರಣೆಗೆ– ನೀವು ಕಪ್ಪೆ-ಹಕ್ಕಿ ಇಲ್ಲವೇ ಮೊಲದ ಹೃದಯವನ್ನು ಕತ್ತರಿಸಿ, ನಿಮ್ಮ ಅಂಗೈಮೇಲಿಟ್ಟುಕೊಂಡು ಪರಿಕ್ಷಿಸಿದ್ದೇ ಆದರೆ, ಆ ಹೃದಯವು ದೇಹದಿಂದ ದೂರಮಾಡಿದ್ದಾಗಲೂ ತನ್ನ ಸ್ವಶಕ್ತಿಯಿಂದಲೇ ಬಹಳ ಕಾಲದವರೆಗೆ ಬಡಿದುಕೊಳ್ಳುವುದನ್ನು ನೋಡಬಹುದು. ಹೃದಯವೇ ಸ್ವತಂತ್ರವಾಗಿ ಕೆಲಸ ಮಾಡಬಲ್ಲುದೆಂದು ನಿರ್ಧರಿಸಿದಾಗ್ಯೂ, ಮೆದುಳೇ ಈ ಹೃದಯವನ್ನು ಹೆಚ್ಚಾಗಿಯಾಗಲಿ ಅಥವಾ ಕಡಿಮೆಯಾಗಿ ಆಗಲಿ ಬಡಿದುಕೊಳ್ಳುವಂತೆ ಮಾಡುವುದಕ್ಕೂ, ಕೆಲವು ವೇಳೆಗಳಲ್ಲಿ ಪೂರ್ತಿಯಾಗಿ ನಿಲ್ಲಿಸುವುದಕ್ಕೂ ಕಾರಣೀಭೂತವಾಗಿದೆ.

ವಿಚಿತ್ರವಾದ ವಿಷಯವೇನೆಂದರೆ, ಪ್ರಾಣಿಗಳ ಹೃದಯವನ್ನು ಪರೀಕ್ಷಿಸಿದಲ್ಲಿ ಅದರಲ್ಲಿ ನರಗಳಿಗೆ ಸೇರಿದ ಅನೇಕ ಸಣ್ಣ ಸಣ್ಣ ಕಣಗಳು ಕಾಣಬರುತ್ತವೆ. ಈ ಕಣಗಳೇ ಹೃದಯವನ್ನು ಕಾಪಾಡುವುವು. ಹೃದಯವನ್ನು ಹಲವು ಭಾಗಗಳಾಗಿ ಕತ್ತರಿಸಿದಲ್ಲಿ, ಯಾವ ಭಾಗವು ಈ ನರಗಳ ಕಣಗಳಿಂದ ಕತ್ತರಿಸಲ್ಪಡುತ್ತದೆಯೊ ಆ ಭಾಗವು ಕೂಡಲೆ ಬಡಿದುಕೊಳ್ಳುವುದನ್ನು ಬಿಡುತ್ತದೆ. ಮಿಕ್ಕ ಭಾಗಗಳಾದರೋ ಅದರಲ್ಲಿ ರಕ್ತ ಕಡಿಮೆಯಾಗುವವರೆಗೂ ಬಡಿದುಕೊಳ್ಳುತ್ತಾ ಇರುತ್ತವೆ. ನಾವು ಇಡೀ ಹೃದಯಕ್ಕೆ ಸಣ್ಣ ಸಣ್ಣ ಕೊಳವೆಗಳನ್ನು ರಕ್ತನಾಳಗಳಿಗೆ ಬದಲಾಗಿ ಇಟ್ಟು ಈ ಕೊಳವೆಗಳ ಮೂಲಕ ಹೃದಯವನ್ನು ಆರೈಕೆ ಮಾಡುವಂತಹ ಉಪ್ಪೇ ಮೊದಲಾದ ವಸ್ತುಗಳುಳ್ಳ ದ್ರಾವಕಗಳನ್ನು ಕಳುಹಿಸಿದ್ದೇ ಆದರೆ ಹೃದಯವು ಅಂಗಗಳಿಂದ ಕತ್ತರಿಸಲ್ಪಟ್ಟಾಗ್ಯೂ ಅನೇಕ ದಿನಗಳ ವರೆಗೂ ಬಡಿದುಕೊಳ್ಳಬಲ್ಲದು. ಈ ರೀತಿಯಾದ ಪರೀಕ್ಷೆಗಳಿಂದ ಶಾಸ್ತ್ರಜ್ಞರು ಅನೇಕ ದ್ರಾವಕಗಳ ಸಂಯೋಗದಿಂದ ಹೃದಯದಲ್ಲಿ ಆಗುವ ಬದಲಾವಣೆ ಕಂಡುಹಿಡಿದಿದ್ದಾರೆ. ಮತ್ತು ಈ ಕಾರಣಗಳಿಂದಲೇ ಸಕ್ಕರೆಯು ಹೃದಯಕ್ಕೆ ಬಹಳ ಉತ್ತಮವಾದ ಆಹಾರ ವೆಂದು ನಿರ್ಧರಿಸಿದ್ದಾರೆ.

CC-0. Jangamwadi Math Collection. Digitized by eGangotri




## ಹತ್ತಿ ಅರೆಯುವ ಹಾಡು

ಸಂಗ್ರಾಹಕರು—ಶ್ರೀ. ಪದುಮಾವತಿ ಬಾಗಿಲಕೋಟಿ

ಹಾದೀಯ ಉಡುಗಿಸ್ಯಾರ ಹಾಲ್‌ತಳಿ ಕೊಡಿಸ್ಯಾರ ।
ಮುಂಡಕಿವರ ಹತ್ತೀ ಬೆಳೆಯಾಲಿ ಸುವ್ವಿ ॥
ಮುಂಡಕಿವರ ಹತ್ತಿ ಬೆಳೆಯಾಲಿ ಸಮ್ಮಂಥಾ
ರಂಭೇರು ಬಾಂದು ಅರಿಯಾಲಿ ಸುವ್ವಿ ॥ ೧ ॥

ತಿಪ್ಪೀಯ ಉಡುಗಿಸ್ಯಾರ ತುಪ್ಪದತಳಿ ಹಾಕಸ್ಯಾರ ।
ತಪ್ಪದಿವರ ಹತ್ತೀ ಬೆಳೆಯಾಲಿ ಸುವ್ವಿ ॥
ತಪ್ಪದಿವರ ಹತ್ತಿ ಬೆಳೆಯಾಲಿ ನಮ್ಮಂಥಾ
ಮಿತ್ರೇರು ಬಂದು ಅರಿಯಾಲಿ ಸುವ್ವಿ ॥ ೨ ॥

ಹತ್ತೀಯು ಬಡಿವಾಗ ಮುತ್ತೀಸ ತೂರಾಯಿ ।
ಚಿತ್ರದ ಬಡಿಗೀ ಬಲಗೈಯು ಸುವ್ವಿ ॥
ಚಿತ್ರದ ಬಡಿಗೀ ಬಲಗೈಯ್ಯ ಸಮ್ಮಣ್ಣಾ ।
ಮಿತ್ರೇರಿಗೆ ಹತ್ತೀ ಬಡದಾಸ ಸುವ್ವಿ ॥ ೩ ॥

ಹತ್ತೀಯು ಹಾಕುವಾಗ ಮುತ್ತೀನ ಎಳೆದಂಡಿ ।
ಚಿತ್ತಾರದ ಬುಟ್ಟಿ ಒಲಗೈಯು ಸುವ್ವಿ ॥
ಚಿತ್ತಾರದ ಬುಟ್ಟೀ ಬಲಗೈಯ ಸಮ್ಮಕ್ಕಾ
ಮಿತ್ರೇರಗ್ಹತ್ತೀ ಹಾಕ್ಯಾಳs ಸುವ್ವಿ ॥ ೪ ॥

ಚಿಕ್ಕೀ ಸೀರಿ ಉಟ್ಟ್ಯಾಳs ತಿಲ್ಕದಬಟ್ಟಿಟ್ಟ್ಯಾಳs ।
ಚಿತ್ತಾರದ ಗಿಂಡೀ ಬಲಗೈಯ ಸುವ್ವಿ ॥
ಚಿತ್ತಾರದ ಗಿಂಡೀ ಬಲಗೈಯಾಗ್ಹಿಡಕೊಂಡು ।
ಮಿತ್ರೇರ ಕಲ್ಲಾ ತೊಳದಾಳs ಸುವ್ವಿ ॥ ೫ ॥

ಗಂಜೀ ಸೀರ್‍ಯುಟ್ಟ್ಯಾಳs ಗಂಧದ ಬಟ್ಟಿಟ್ಟ್ಯಾಳs ।
ಬಂಗಾರದ ಗಿಂಡೀ ಬಲಗೈಯುs ಸುವ್ವಿ ॥
ಬಂಗಾರದ ಗಿಂಡೀ ಬಲಗೈಯಾಗ್ಹಿಡಕೊಂಡು
ರಂಭೇರ ಕಲ್ಲಾ ತೊಳದಾಳs ಸುವ್ವಿ ॥ ೬ ॥

ಕಲ್ ಪೂಜೀ ಮಾಡಾಕs ಯಾರನ್ನ ಕರಸಲೆ ।
ಕಾಳಂಬರ ಸೀರೀ ಹಿರಿಯಳ ಸುವ್ವಿ ॥
ಕಾಳಂಬರ ಸೀರೀ ಹಿರಿಯಳ ನೀಲಕ್ಕನ
ಕಲ್‌ಪೂಜೀ ಮಾಡಾಕ ಕರಸ್ಯಾರs ಸುವ್ವಿ ॥ ೭ ॥

ಅಲ್ಲೀ ತಾ ಇರುವೋದು ಇಲ್ಲೀಗೆ ನಾರೋದು ।
ಗಂಭೀರಸಂಗಡ್ಯಾಗs ಇರುವದು ಸುವ್ವಿ ॥
ಗಂಭೀರನಂಗಡ್ಯಾಗs ಇರುವಂಥಾ ಲೋಭಾನಾ ।
ತರಿಸೀ ಸಮ ಕಲ್ಲೀಗ್ಹಾಕ್ಯಾರs ಸುವ್ವಿ ॥ ೮ ॥

ಅರಿಸೀನ ಹಚ್ಚೀದ ಬೆರಸಿದ ಗುಗ್ಗರಿ ।
ತರಸ್ಯಾರs ಮಲ್ಲಾಡದs ಹೊಸದುರಡಿ ಸುವ್ವಿ ॥
ತರಸ್ಯಾರs ಮಲ್ಲಾಡದ ಹೊಸದುರಡೀ ಹಿರಿಯಕ್ಕ
ಬೆರಬೆರಸಿ ಗುಗ್ಗರಿ ಕೊಡುತಾಳೆ ಸುವ್ವಿ ॥ ೯ ॥

(ಹತ್ತಿಯನ್ನು ಅರೆಯಿಸುವುದೆಲ್ಲ ಮುಗಿದ ಮೇಲೆ ಕೊನೆಯ ದಿಸ ಹತ್ತಿಯರೆದ ಕಲ್ಲುಗಳನ್ನು ತೊಳೆದು, ಅರಿಸಿಣಕುಂಕುಮಗಳನ್ನು ಏರಿಸಿ, ಧೂಪವಿಕ್ಕಿ ಪೂಜಿಸಿ, ಗೋಧಿಕಡಲೆಗಳನ್ನು ಬೆರಸಿ ಮಾಡಿದ ಗುಗ್ಗರಿಯನ್ನು ಅರೆದ ಹೆಣ್ಣುಮಕ್ಕಳೆಲ್ಲರಿಗೆ ಹಂಚುವ ಸಂಪ್ರದಾಯ ವುಂಟು. ಉಲ್ಲಾಸಗಾರರು ಈ ಪೂಜೆಗಾಗಿ ತಮ್ಮ ತಮ್ಮ ಹೆಣ್ಣುಮಕ್ಕಳನ್ನು ಅತ್ತೆಯಮನೆಯಿಂದ ಕರೆ ಯಿಸಿಕೊಳ್ಳುತ್ತಾರೆ. ಅವರಿಂದ ಈ ಪೂಜಾ ವಿಧಾನ ವನ್ನು ನಡೆಯಿಸುತ್ತಾರೆ. ಆ ಸಂದರ್ಭದಲ್ಲಿ ಹೇಳುವ ಹಾಡಿದು.)

CC-0. Jangamwadi Math Collection. Digitized by eGangotri

## ಹೆಣ್ಣ ಒಪ್ಪಿಸುವ ಹಾಡು.

ಸಂಗ್ರಾಹಕರು—ಶ್ರೀ ಗ. ಸಿ. ಹುರುಳಿ ಮರೇವಾಡ.

ಒಂಭತ್ತು ತಿಂಗಳು ನಿನ್ನ ತುಂಬಿಕೊಂಡು ತಿರುಗೇನಽ।
ಹಂಬಲಿಸೀ ನಿನ್ನಽ ಹಡೆದೇನಽ ಸೋ॥
ಹಂಬಲಿಸೀ ನಿನ್ನಽ ಹಡೆದೇನಽ ಚಿತ್ರದ।
ಗೊಂಬೀ ನಿನ್ನೊಪ್ಪಿಸಿ ಕೊಡಲ್ಹ್ಯಾಂಗ ಸೋ॥ ॥೧॥

ಹತ್ತುತಿಂಗಳು ನಿನ್ನಽ ಹೊತ್ತುಕೊಂಡು ತಿರುಗೇನಽ।
ಮುತ್ತುಽ ಸುರುವಿದರಽ ಬರೀ ಉಡಿಯಽ ಸೋ॥
ಮುತ್ತು ಸುರುವಿದರ ಬರಿ ಉಡಿಯಽ ನನಮಗಳ!।
ಅತ್ತೇರಿಗೊಪ್ಪಿಸಿ ಕೊಡಲ್ಹ್ಯಾಂಗಽಸೋ ॥೨॥

ತೊಟ್ಟೀಲ ತೂಗಂದ್ರು ಸಿಟ್ಟೀಲೆ ಕೂಡೋಳಽ।
ಬಟ್ಟಲ ಬೆಳಗಾಕಽ ಅರೀಯಾಳ ಸೋ॥
ಬಟ್ಟಲ ಬೆಳಗಾಕಽ ಅರಿಯಡಾ ಮಗಳನ್ನಽ।
ಕೊಟ್ಟೇನು ಮಾವನ ಕೈಯೊಳಗಽ ಸೋ ॥೩॥

ಮಸರೂ ಅನ್ನಾ ಕಲಸೀ ತುಸುಸಽ ಉಣ್ಣಂತ್ಹೇಳಿ।
ರಾಶಿಯ ಉಣಿಸೀ ಸಲಹೀದೇ ಸೋ॥
ರಾಶಿಯ ಉಣಿಸಿ ಸಲಹೀಡೆ ನನಮಗಳ।
ಕೂಸಽ! ನನ ಮನಿಗೆ ಎರವಾದೆ ಸೋ ॥೪॥

ಎಕ್ಕೀಯ ಕಿಡದಾಗ ಹಕ್ಕೀ ಬೋರ್ಯಾಡಿದ್ಹಾಂಗಽ।
ಅಕ್ಕ ನೀಲವ್ವನಽ ಬಳಗಾವು ಸೋ॥
ಅಕ್ಕಽ ನೀಲವ್ವನ ಬಳಗಽಡ ಕಣ್ಣೀರು।
ಒಕ್ಕುಂದ್ಹೊಳಿಯಾಗೀ ಹರದಾವಽ ಸೋ ॥೫॥

ಕಣಗೀಲ ಗಿಡದಾಗ, ಗಿಣಿಪಿಂಡು ಕೂತ್ಹಾಂಗಽ।
ಸಣ್ಣ ನೀಲಪ್ಪನಽ ಬಳಗಾವು ಸೋ ॥
ಸಣ್ಣ ನೀಲವ್ವನ ಬಳಗಾದ ಕಣ್ಣೀರು।
ಹನ್ನೊಂದ್ಹೊಳೆಯಾಗೀ ಹರದಾವ ಸೋ ॥೬॥

ಕಪ್ಪರ ಗುಡ್ಡಕ ಬೆಂಕೀ ತಪ್ಪದಲೇ ಕೊಟ್ಹಾಂಗಽ।
ರಪ್ಪನ ಹೊಟ್ಟೀ ತಳಮಳಿಸೀ ಸೋ॥
ಅಪ್ಪನ ಹೊಟ್ಟೀ ತಳಮಳಿಸೆ ಮಗಳ ನಿನ್ನ।
ಒಪ್ಪಿಸಿ ಈಗ ಕೊಡತೇವಽ ಸೋ ॥೭॥

ಸುಡುವ ಬೆಂಕಿಗೆ ಎಣ್ಣೀಕೊಡವ ಸುರುವಿದ್ಹಾಂಗಽ।
ಹಡದವ್ವನ್ಹೊಟ್ಟೀ ತಳಮಳಿಸೀ ಸೋ॥
ಹಡದವ್ವನಾ ಹೊಟ್ಟಿ ತಳಮಳಿಸೆ ಮಗಳೆ ನಿನ್ನಾ।
ಕೊಡತೇವೊಪ್ಪಿಸಿ ಇವರಿಗೆ ಸೋ ॥೮॥

ಸುಣ್ಣಽದಽ ಭಟ್ಟ್ಯಾಗಽ ತಣ್ಣೀರಾ ಹೊಯ್ದ್ಹಾಂಗಽ।
ಅಣ್ಣನ ಹೊಟ್ಟೀ ಹೊಯ್ದಾಡೆ ಸೋ॥
ಅಣ್ಣನ ಹೊಟ್ಟೀ ಹೊಯ್ದಾಡೆ 'ನನತಂಗೀ!।
ನನ್ನ ಮನಿಗಿಂದಽ ಎರವಾದೇ' ಸೋ ॥೯॥

ಸಣ್ಣಽತಮ್ಮಾಗಿದ್ರು ತಣ್ಣಽಗ ಇರುತಿದ್ದೆ।
ಮಾನ್ಯೆದ್ಹೊಲದಾಗಽ ಸರಿಪಾಲು ಸೋ॥
ಮಾನ್ಯೆದ್ಹೊಲದಾಗಽ ಸರಿಪಾಲು ತಕ್ಕೊಂಡು।
ಚೆನ್ನಾ ನನ್ನ ಹಂತೇಲಿರತಿದ್ದೇ ಸೋ ॥೧೦॥

ಒಮ್ಮನ ಮುದ್ದಿಗೆ ಬೆಂಕಿ ಒಮ್ಮೇಲೆ ಕೊಟ್ಹಾಂಗಽ
ತಮ್ಮನಽ ಹೊಟ್ಟೀ ತಳಮಳಿಸೆ ಸೋ॥
ತಮ್ಮನ ಹೊಟ್ಟೀ ತಳಮಳಿಸೆ "ಅಕ್ಕಾ ನನಗ।
ರಮ್ಮೀಸಿ ಹಣ್ಣ ಕೊಡುತಿದ್ದೇ" ಸೋ ॥೧೧॥

ಹಿರಿಯ ಅಣ್ಣಾಗಿದ್ರು ಸರಿಯಾಗಿ ಇರುತಿದ್ದೆ।
ಎರಿಯ ಹೊಲದಾಗಽ ಸರಿಪಾಲು ಸೋ॥
ಎರೆಯ ಹೊಲದಾಗಽ ಸರಿಪಾಲಾ ತಕ್ಕೊಂಡು।
ದೊರೆಯೇ ನನ್ಹಂತೇಲಿರತಿದ್ದೆ ಸೋ ॥೧೨॥

ಹೆಣ್ಣಽ ಇವರಿಗಾದ್ಯಾ? ಹೊನ್ನಽ ಇವರಿಗಾದ್ಯಾ?।
ಎಣ್ಣೊಳಗಿ ತುಪ್ಪಾ ಜನಕಾದ್ಯಾ ಸೋ।
ಎಣ್ಣೊಳಗಿ ತುಪ್ಪಾ ಜನಕಾಗಿ ಗಂಡಿನ ತಂದಿ।
ಸಣ್ಣ ನಗೀನಗತಾ ನಡದಾನಽ ಸೋ ॥
ಸಣ್ಣಽ ನಗೀ ನಗತಾ ನಡದಾನು ಬಂಕನಾಥಾ!।
ಹೆಣ್ಣಲ್ಲಿ ನಿನ್ನ [illegible] ಸೋ ॥೧೩॥

CC-0. Jangamwadi Math Collection. Digitized by eGangotri



**ರಾಮಾಚಾರಿಯ ನೆನಪು(೧೦೩)–ಲೇ. ಶ್ರೀ ಪು ತಿ. ನರಸಿಂಹಾಚಾರ್.**

ಇಂಗ್ಲಿಷಿನಲ್ಲಿ 'Impressions' ಎಂದು ಒಂದು ಸಾಹಿತ್ಯದ ಪ್ರಕಾರವುಂಟು. ಅದನ್ನು ' ಭಾವನಾಚಿತ್ರಗಳು ' ಎಂದು ಕರೆಯಬಹುದು. ' Nineteen Impressions' ಎಂದು ಒರ್ವ ಆಂಗ್ಲಸಾಹಿತಿಯು ಬರೆದ ಗ್ರಂಥದ ಮೇಲಿಂದ ಈ ಪ್ರಕಾರದ ಸ್ವರೂಪವನ್ನು ಅರಿತುಕೊಳ್ಳಬಹುದು. ಹರಟೆಗಳಲ್ಲಿಯಂತೆ ಸ್ವಯಂಸ್ವರೂಪದರ್ಶನದ (self revelation) ಕಾರ್ಯವು ಇಲ್ಲಿ ಮುಖ್ಯವಾಗಿದ್ದೂ ಸಣ್ಣಕತೆಗಳಲ್ಲಿಯಂತೆ ಬಂಧದ ಬಿಗುವೊಂದು ಇಲ್ಲಿ ಗೋಚರವಾಗುವದು. ಆದರೆ ಸಣ್ಣಕತೆಗಳಂತೆ ಕೆಲವು ಸನ್ನಿವೇಶಗಳು ಈ ಚಿತ್ರಗಳ ವಸ್ತುವಿನ ಜೀವಾಳವಾಗಿದ್ದರೂ ಭಾವಗೀತೆಗಳಂತೆ ಅವು ಭಾವನಾಪ್ರಧಾನವಹುದು. ಹೀಗೆ ಭಾವಗೀತೆ–ಸಣ್ಣಕತೆಗಳ ನಡುವೆ ಭಾವನಾಚಿತ್ರಗಳ ಸಾಹಿತ್ಯವು ಪ್ರವಹಿಸುವದು.

ಈ ಗ್ರಂಥದಲ್ಲಿರುವ ಎಂಟು ಭಾವನಾಚಿತ್ರಗಳು ಅತ್ಯುತ್ತಮವಾಗಿವೆ. ಮನಸ್ಸಿನ ಸಂಸ್ಕೃತಿಯನ್ನು ಬೆಳೆಸಲು ದೊರೆಯುವ ಸಾಧನ–ಸಾಮಗ್ರಿಯಲ್ಲಿ ಇವು ಶ್ರೇಷ್ಠತರಗತಿಗೆ ಸೇರಿರುವೆಂಬುದು ನಿಃಸಂಶಯವಾಗಿ ಹೇಳಬಹುದು. ನಿಜವಾಗಿ ನೋಡಿದರೆ ಎಲ್ಲ ಸಾಹಿತ್ಯವೂ ಸಂಸ್ಕೃತಿಯನ್ನು ಬೆಳೆಸುವ ಸಾಧನವಲ್ಲದೆ ಬೇರೆಯಲ್ಲ. ಅದರಲ್ಲಿ ನೇರವಾಗಿ ಈ ಉದ್ದೇಶವನ್ನು ಸಫಲಗೊಳಿಸುವ ಪ್ರಕಾರವೆಂದರೆ ಕಾವ್ಯ. ಈ ಕಾರ್ಯದಲ್ಲಿ ಭಾವನಾಚಿತ್ರಗಳು ಕಾವ್ಯವನ್ನು ಅತೀವವಾಗಿ ಹೋಲುವವು. ಆದರೆ ಈ ಚಿತ್ರಗಳ ಹಾಗು ಸಣ್ಣಕತೆಗಳ ಪ್ರಕಾರಗಳು ಪರಸ್ಪರ ವಿರೋಧಿಯಾಗಿಲ್ಲವೆಂಬುದು ಇಲ್ಲಿ ತಿಳಿದು ಬರುವದು. ' ನನಸಿಗಿಂತಲೂ ನಿಜವಾದ ಒಂದು ಕನಸು, ' ' ಶಿವನ ಕಣಸು ' ಹಾಗು ' ಹಹ್ಹಾ ! ಒಂದು ನಕ್ಷತ್ರ ! '—ಇವು ಮೂರು ಶುದ್ಧವಾಗಿ ಭಾವನಾಚಿತ್ರಗಳಾಗಿವೆ. ಆದರೆ ' ರಾಮಾಚಾರಿಯ ನೆನಪು ' ' ಮೂರ್ತಿಯ ಹುಡುಗಾಟ ' ಹಾಗು ' ವೆಂಕೋಬರಾಯರು '— ಇವುಗಳಲ್ಲಿ ಕಾವ್ಯಕ್ಕಿಂತ ಶೈಶವ, ತಾರುಣ್ಯ ಮತ್ತು ವೃದ್ಧಾಪ್ಯದ ಸ್ವಭಾವ ವೈಚಿತ್ರ್ಯವನ್ನು ಕ್ರಮವಾಗಿ ವ್ಯಕ್ತಗೊಳಿಸುವ ಜಾಣ್ಮೆಯು ಹೆಚ್ಚಾಗಿ ನೆಲಿಸಿದುದರಿಂದ, ವಿಶೇಷವಾಗಿ ಸಣ್ಣಕತೆಯ ಪ್ರಕಾರವನ್ನು ಹೋಲುತ್ತಿವೆಯೆಂದು ಹೇಳಬಹುದು. ' ಕೃಷ್ಣಶಾಸ್ತ್ರಿಯ ತ್ಯಾಗ ' ಹಾಗು 'ಸಂಗೀತವನ್ನು ಕೇಳಿದುದು.' ಎಂಬ ಎರಡು ಚಿತ್ರಗಳಲ್ಲಿ ಮಾತ್ರ ಸಣ್ಣಕತೆಯ ಹಾಗು ಭಾವನಾ ಚಿತ್ರದ ರಚನಾಕ್ರಮದ ಸಮನ್ವಯವು ಅದ್ಭುತವಾಗಿ ಜರುಗಿದೆ. ಏಕೆಂದರೆ ಸಣ್ಣಕತೆಗಳು ಈ ಪ್ರಪಂಚದ ಸಾಮಾನ್ಯ ಜೀವನವನ್ನು ಬಿಂಬಿಸಿ ವಿಮರ್ಶಿಸಿ ತೋರಿಸುತ್ತವೆ. ಆದರೆ ಇವು ಭಾವನಾಮಯ ಜಗತ್ತಿನ ಸಣ್ಣಕತೆಗಳಾಗಿವೆ. ಇಲ್ಲಿ ಸನ್ನಿವೇಶಕ್ಕೆ ಅಷ್ಟು ಮಹತ್ವವಿಲ್ಲ. ಆದರೆ ಅದರ ಸುತ್ತು ಗಮಗಮಿಸುವ ಭಾವನೆಗಳನ್ನು ವಿರಳ ವಿರಳವಾಗಿ ತೋರಿಸುವ ಈ ಕ್ರಮವೇ ಈ ಚಿತ್ರಗಳ ಜೀವಾಳವಾಗಿದೆ.

ಶ್ರೀ. ನರಸಿಂಹಾಚಾರ್ಯರು ಮೈಸೂರಿನ ಬಳಗದಲ್ಲಿ ಹುಟ್ಟಿ ಬೆಳೆದರೂ ಉತ್ತರಕರ್ನಾಟಕದಲ್ಲಿ ಇದೀಗ ಉದ್ಭವಿಸಿರುವ ಸಾಹಿತ್ಯವು ಅವರ ಮನವನ್ನಾಕರ್ಷಿಸಿದೆಯೆನ್ನಬಹುದು. ಈ ಮಾತಿಗೆ ತಕ್ಕ ದೃಷ್ಟಾಂತಗಳು



CC-0. Jangamwadi Math Collection. Digitized by eGangotri

ಅಲ್ಲಲ್ಲಿ ಗೋಚರವಾಗುವವು. ಆ ಸಾಹಿತ್ಯದಲ್ಲಿಯಂತೆ ಇವರ ಚಿತ್ರಗಳಲ್ಲಿಯಾದರೂ ಕೇವಲ ರಸಿಕತೆಗೆ ತಲೆ ದೂಗುವದಕ್ಕಿಂತ ಸಂಸ್ಕೃತಿಯನ್ನು ಜೀವಿತದಲ್ಲಿ ಇಳಿಸಬೇಕೆಂಬ ಪ್ರೀತಿಯು ಹೆಚ್ಚಾಗಿ ಕಂಡುಬರುವದು. ಸ್ನೇಹ, ಪ್ರೇಮ, ಕೋಮಲತೆ–ಇವು ಇವರ ಚಿತ್ರಗಳ ಸೂತ್ರಗಳಾಗಿವೆ. ಲೇಖಕರು ಇಂಥ ಅನೇಕ ಚಿತ್ರಗಳನ್ನು ಬರೆದು ಬಾಳಲೆಂದು ನಾವು ಕೋರುತ್ತೇವೆ.

'ನಿವೇದನ' ದ ಪದ್ಯದ ಕಟ್ಟು ಅಷ್ಟು ಮನೋಹರವಾಗಿಲ್ಲ. ಆದರೆ 'ಬಾಳಿನ ಹಂಬಲು' ಚೆನ್ನಾಗಿದೆ.

**ದಿ ಲಾಯಿಫ್ ಆಫ್ ಲಾರ್ಡ ಬಸವ**—(ಇಂಗ್ಲಿಷು) ಲೇ. ಎನ್. ಕೆ. ಸಂಗನಾಳಮಠ್ ಕರ್ನಾಟಕ ಸಂಘ ಕೊಲ್ಲಾಪುರ.

ತಪ್ಪುತಡೆಗಳಿಂದ ತುಂಬಿದ ಈ ದೃಶ್ಯವನ್ನು ಲೇಖಕರು ವೀರಶೈವ ಮತಾಭಿಮಾನದಿಂದ ಬರೆದೆವೆಂದು ಹೇಳುತ್ತಾರೆ. ಇದರಲ್ಲಿ ಬಸವೇಶ್ವರರ ವಿಷಯಕ್ಕೆ ರೂಢವಾಗಿರುವ ಕೆಲವು ಸಂಗತಿಗಳು ಮಾತ್ರ ಇರುವದರಿಂದ ಅವರ ಪೂರ್ಣ ಪರಿಚಯವಾಗದೆ, ಲೇಖಕರ ಮೂಲೋದ್ದೇಶವು ಸಫಲವಾಗುವದಿಲ್ಲ. ತಿಳಿದಷ್ಟು ತಿಳಿಯಲೆಂದು ಓದುವ ಅನ್ಯಪ್ರಾಂತಗಳ ಬಂಧುಗಳಿಗೆ ಇಲ್ಲಿ ಇಂಗ್ಲಿಷ ಭಾಷೆಯ ಹಾಗು ಛಂದಸ್ಸಿನ ಕೊಲೆಯೊಂದು ಒಡೆದು ಕಾಣುವದು. ಆದಕಾರಣ ಲೇಖಕರು ಇನ್ನೊಂದು ಉದ್ಗ್ರಂಥವನ್ನು ಬರೆಯುವದಾದರೆ ಬಸವೇಶ್ವರರ ವಿಷಯಕ್ಕಿರುವ ಎಲ್ಲ ಸಾಹಿತ್ಯವನ್ನು ಪರಿಶೀಲಿಸಬೇಕೆಂದು ಬೇಡಿಕೊಳ್ಳುವೆವು. ಅದನ್ನು ಇಂಗಿಷ ಭಾಷೆಯಲ್ಲಿಯೇ ಬರೆಯುವ ಸಾಹಸ ಮಾಡಿದರೆ ತಿಳಿದವರಿಂದ ತಿದ್ದಿಸಬೇಕೆಂದು ಸೂಚಿಸುವೆವು.

**ಕನ್ನಡ ಪದ್ಯ ರತ್ನಾವಳಿ**–ಜಿ. ಎನ್. ಲಕ್ಷ್ಮಣ ಪೈ

ಈಗಾಗಲೇ ರೂಢವಾದ ಕೆಲವು ಕಥೆಗಳನ್ನು ಚಿಕ್ಕ ಹುಡುಗರಿಗೆಂದು ಶ್ರೀ. ಪೈಯವರು ಪದ್ಯರೂಪವಾಗಿ ಬರೆದಿದ್ದಾರೆ. ಮದ್ರಾಸು, ಮುಂಬಯಿ ಕಮಿಟಿಯವರು ಹುಡುಗರ ಉಪಯೋಗಕ್ಕಾಗಿ ಇದನ್ನು ಮಂಜೂರು ಮಾಡಿದ್ದಾರೆ. ಆದರೆ ಬಾಲಕರಿಗೆ ಕಾವ್ಯದ ಮಹಿಮೆಯನ್ನು ತಿಳಿಸಬೇಕಾದರೆ ಹೀಗೆ ಕೆಲವು ಕಥೆಗಳನ್ನು ಪದ್ಯದಲ್ಲಿ ಬರೆಯುವದಕ್ಕಿಂತ ಅವರಿಗೆ ತಿಳಿಯಲು ಸುಲಭವಾಗಿದ್ದ ಬೇರೆ ಬೇರೆ ಕವಿಗಳು ಬರೆದ ನಿಜವಾದ ಕವಿತೆಗಳ ಸಂಗ್ರಹವೊಂದನ್ನೇಕೆ ಶ್ರೀ. ಪೈಯವರು ಮಾಡಬಾರದು. ಈ ಕಾರ್ಯವನ್ನು ಶ್ರೀ. ಪೈಯವರು ಅವಶ್ಯವಾಗಿ ಮಾಡಬೇಕೆಂದು ನಮ್ಮ ಆಗ್ರಹದ ಸೂಚನೆಯಿದೆ. ಬಾಲ ಸಾಹಿತ್ಯದಲ್ಲಿ ಸುರಿತನಗಿ[illegible] ಸುಲಭವಾಗುವದು.

**ನಾರಿಯುಲ್ಲಾ ! ಮಾರಿ!**—ಲೇ. ಮಲ್ಲನಗೌಡ[illegible]

ಇದು ಚನ್ನಪಟ್ಟಣದ ಕರ್ತವ್ಯ ಗ್ರಂಥಮಾಲೆಯ [illegible]ಡನೆಯ ಗ್ರಂಥವಾಗಿದೆ. ಒಂದು ಸಣ್ಣ ಕಥೆಯ[illegible] ಇದನ್ನು ಲೇಖಕರು 'ಕಾಲ್ಪನಿಕ ಕಾದಂಬರಿ' [illegible] ಕರೆದಿದ್ದಾರೆ. ಇದು ಕಾದಂಬರಿಯಲ್ಲ. ಅಲ್ಲದೆ ಕಾದಂಬರಿಯೆಂದ ಮೇಲೆ ಅದು 'ಕಾಲ್ಪನಿಕ' ವಿದ್ದೇ [illegible] ಬೇಕಾಗುವದು. ಕಥೆಯು ಕೊನೆಗೆ 'ಗುಜು ಗುಜು[illegible] ಮಾಪುರಿಗೇನೈತೆ' ಎಂಬ ದಾಟಿಯ ಕವಿತೆಯಿದೆ. ಮುಂದೆ[illegible]ಯಲ್ಲಿ ಹೆಚ್ಚಿನ ಕಸರತ್ತಿನ ಕೃತಿಗಳಿರಲೆಂದು ನಮ್ಮ ಆಸೆಯಿದೆ.

**ಯುವಕರ ಶಕ್ತಿ**—ಲೇ. ದೊ. ರೆ. ಚೆನ್ನಿಗರಾಯ[illegible] ಬೆಂಗಳೂರು.

ಇದೊಂದು ಎಲ್ಲರೂ ಓದಬಹುದಾದ ಪುಟ್ಟ ಹೊತ್ತಿಗೆಯಾಗಿದೆ. ವಿವೇಕಾನಂದ, ಗಾಂಧಿ, ಟಾಗೋರ್ ಮೊದಲಾದ ಕಾರಣಿಕ ಪುರುಷರ ಕೆಲವು ಭಾಷಣಗಳ ಸಾರಾಂಶವು ಇಲ್ಲಿರುವದಲ್ಲದೆ ಯುವಕರಿಗೆ ಉಪಯುಕ್ತವಾದ ಕೆಲವು ಸೂಚನೆಗಳಿವೆ. ಮುದ್ರಣವೂ [illegible]ವಾಗಿದೆ.

**ಅಂಚೆ ಮನೆ**—ಎಂ. ಎನ್. ಕಾಮತರು (ಭಾಷಾಂತರಕಾರರು) ಮಂಗಳೂರು.

ಇದು ರವೀಂದ್ರರ 'Post office' ಎಂಬ ಉತ್ಕೃಷ್ಟ ನಾಟಕದ ಪರಿವರ್ತನೆಯಾಗಿದೆ. ಬೆಂಗಾಲಿ ಭಾಷೆಯಲ್ಲಿಯ ಮೂಲಗ್ರಂಥದ ಅನುವಾದವಿರುವದರಿಂದ ರವೀಂದ್ರರ ಕೃತಿಯ ಸೊಬಗನ್ನು ಇದರಲ್ಲಿ ಚೆನ್ನಾಗಿ ಸವಿಯಬಹುದು. ಶ್ರೀ ಕಾಮತರಾದರೂ ನುರಿತ ಲೇಖಕರು, ಮೂಲದ ಗೌರವವನ್ನು ಕಾಯ್ದಿದ್ದಾರೆ.

**ಹೊಸ ಹುಟ್ಟು**:—ಲೇಖಕರು ಶ್ರೀ. ಅ. ನ. ಕೃಷ್ಣರಾಯರು. ಈ ಪುಸ್ತಕದಲ್ಲಿ ೧೩ ಪ್ರಬಂಧಗಳಿವೆ. ಶ್ರೀ ಬೆನೆಗಲ್ ರಾಮರಾಯರ ಮುನ್ನುಡಿಯಿದೆ. ಎಷ್ಟೋ [illegible] ಭಾರತ, ಭಾರತ ಮಹಿಳೆಯರ ಬಂಧವಿಮೋಚನೆ, ನಮ್ಮ

CC-0. Jangamwadi Math Collection. Digitized by eGangotri

ತರುಣರು, ವಿದ್ಯೆಯ ಕೀಲಕ ಮೊದಲಾದ ಗ್ರಂಥಕರ್ತರ ನವಭಾರತ ನಿರ್ಮಾಣ ವಿಷಯವಾದ ವಿಚಾರಗಳನ್ನೊಳಗೊಂಡ ನ್ಯಾಸಗಳಲ್ಲದೆ, ಇಲ್ಲಿ ಶ್ರೀಕೃಷ್ಣದೇವರಾಯ, ಕೋ-ಮಿನ್-ಟಂಗ್, ಸರಸ್ವತಿ ಉತ್ಸವ ಮೊದಲಾದ ಸಂಕೀರ್ಣ ವಿಷಯಗಳ ಮೇಲೆ ವರ್ಣನಾತ್ಮಕ ಪ್ರಬಂಧಗಳೂ ಇವೆ. 'ಹೊಸಹುಟ್ಟು' ಎಂಬುದರಿಂದ ಸೂಚಿತವಾಗುವ ಅರ್ಥವ್ಯಾಪ್ತಿಗೂ, ವಿವಿಧವಿಷಯಾತ್ಮಕ ಈ ಲೇಖನಗಳಿಗೂ ಹೊಂದಿಕೆಯಾಗುವುದಿಲ್ಲ.

ಲೇಖಕರು "ಈ ಕಾಲದಲ್ಲಿ 'ವಿಮರ್ಶೆಗಾಗಿ' ಎಂದು ಪುಸ್ತಕಗಳನ್ನು ಕಳುಹಿಸಿಕೊಡುವುದಾದರೂ 'ಬಾಯಿ ತುಂಬಾ ಹೊಗಳಲಿ' ಎಂಬ ಉದ್ದೇಶದಿಂದಲೇ ಆಗಿದೆ. ನಾನು ಆ ಪದ್ಧತಿಯಿಂದ ಹೊರಗಿರಬೇಕೆಂದು ಸಂಕಲ್ಪಿಸಿದ್ದೇನೆ." ಎಂದು ಹೇಳಿ, "ನಿರ್ದಾಕ್ಷಿಣ್ಯಪೂರ್ವಕವಾದ ವಿಮರ್ಶೆಯನ್ನೇ ಮಾಡಬೇಕಾಗಿ" "ವಿಮರ್ಶಕರಿಗೆ ಒಂದು ಮಾತು" ಹೇಳಿದ್ದಾರೆ. ಆದುದರಿಂದ ವಿಮರ್ಶಕರು ತಮ್ಮ ನಿಜ ಅಭಿಪ್ರಾಯಗಳನ್ನು ಹೇಳುವುದು ಕರ್ತವ್ಯವಾಗಿದೆ.

ಅಲ್ಲಲ್ಲಿ, ಕೆಲವುಕಡೆ, ಲೇಖಕರು ಚೆನ್ನಾದ ವಿಚಾರಗಳನ್ನು ಹೇಳಿದ್ದಾರೆ. 'ಸಂಪೂರ್ಣಜ್ಞಾನದ ಸಾರ್ವತ್ರಿಕ ಸ್ವರೂಪವನ್ನು ನೋಡುವುದಕ್ಕಾಗುವುದೇ? ಇಲ್ಲವೋ? ಇಲ್ಲವೆಂದು ನಿರಾಶೆಪಡೆದರೆ ಮಾನವನ ಜೀವನದ ಆವಶ್ಯಕತೆಯನ್ನೇ ಜರಿದಂತಾಗುತ್ತದೆ. ....ನಮ್ಮ ಅಲ್ಪ ವಯಸ್ಸಿನ ಜೀವಮಾನದಲ್ಲಿ ಆ ಮಹಾದಿನದ ವೈಭವವನ್ನು ಕಾಣುತ್ತೇವೆಯೋ ಇಲ್ಲವೋ ಆದರೂ ಅರಿತರಿತು ಇತರರಿಗಾಗಿ ತೆಂಗಿನ ಸಸಿಗಳನ್ನು ನೆಡುವ ವೃದ್ಧನಂತೆ ನಾವು ದುಡಿಯಬೇಕು.' 'ಮೊದಲು ಪ್ರಾಪಂಚಿಕ ಮುಕ್ತಿ ಅನಂತರ ಪಾರಮಾರ್ಥಿಕ ಮುಕ್ತಿ ಎಂಬ ಮಾತನ್ನು ಒಪ್ಪಿದರೆ, ಇಂದಿನವರ ಮಾರ್ಗವೆಂದಿಗೂ ತಪ್ಪಲ್ಲವೆಂಬುದನ್ನು ಎಲ್ಲರೂ ಒಪ್ಪಲೇಬೇಕು. ಮೊದಲು ದರಿದ್ರ ನಾರಾಯಣನ ಸೇವೆಯಾಗಲಿ ಅನಂತರ ಶ್ರೀಮನ್ನಾರಾಯಣನನ್ನು ನೋಡುವ ಎಂದವರು ತಂದೆತಾಯ್ಗಳ ಸೇವೆಯಲ್ಲಿ ವಿಠಲನನ್ನು ನಿರ್ಲಕ್ಷಿಸಿದ ಪುಂಡರೀಕನನ್ನು ಸರಿಸುತ್ತಿದ್ದಾರೆ.' ಗ್ರಂಥಕರ್ತರ ಮುನ್ನುಡಿಯೊಳಗಿನ ಈ ಅವತರಣಿಕೆಗಳು ಅವುಗಳ ವಿಚಾರಪರಿಪುಷ್ಟತೆಗೆ ಸಾಕ್ಷಿಯಾಗಿವೆ.

ಗ್ರಂಥದ ಒಳಭಾಗವು ಇಲ್ಲಿ ಹೇಳಿದ ವಿಚಾರಗಳನ್ನು ಪರಿಪೋಷಿಸುತ್ತದೇನೆಂದು ನೋಡಲಾಗಿ, ನಮ್ಮ ನಿರಾಶೆಯಾಯಿತು. 'ಎಚ್ಚೆತ್ತ ಭಾರತ' ದಲ್ಲಿ ಲೇಖಕರು, ತರುಣಪಕ್ಷೀಯರನ್ನು ಬೆಂಬಲಿಸುತ್ತಾರೆಯೋ, ಹಳೆಯ ತಲೆಯವರನ್ನು ಎತ್ತಿಹಿಡಿಯುತ್ತಾರೆಯೋ ಸ್ಪಷ್ಟವಾಗಿ ತಿಳಿಯುವುದಿಲ್ಲ. 'ಪ್ರಗತಿ ಪ್ರಳಯಗಳೆರಡೂ ಸಮರಬಂಧುಗಳಂತೆ ಪರಸ್ಪರ ಅನುವರ್ತಿಗಳು. ಪ್ರಳಯವು ಪ್ರಗತಿಗೆ ಹಾದಿಯನ್ನು ಬಿಡಿಸಿಕೊಡಲು ಒಂದ ರಾಜಭಟನಂತೆ ಗೌಣಸ್ಥಾನವನ್ನು ಪಡೆದಿರಬೇಕೆಂಬುದೇ ನನ್ನ ಮತ!' ಎಂದು ಲೇಖಕರು ಒಂದು ಕಡೆ ಉಸುರಿದರೆ, ಇನ್ನೊಂದು ಕಡೆ ಪ್ರಳಯವನ್ನು (ಎಂದರೆ ಶೀಘ್ರ ಕ್ರಾಂತಿಯನ್ನು) ಎತ್ತಿಹಿಡಿಯುವಂತೆ ತೋರುತ್ತಾರೆ. ಹಿಂದಿನದೆಲ್ಲ ಹಾಳು, ಹಿರಿಯರದೆಲ್ಲಾ ಅರಿವುಗೇಡಿತನ ಎಂದು ಸ್ಪಷ್ಟವಾಗಿ ಹೇಳುವುದರಲ್ಲಿ ತಪ್ಪಿಲ್ಲ. ಅದೊಂದು ವಿಚಾರದ ಪಂಥ. ಆದರೆ ಆ ಪಂಥದಲ್ಲಿಯಾದರೂ ಪೂರ್ವಾಪರಸಂಗತಿಯಿರಬೇಕು. ಗ್ರಂಥದ ತುಂಬೆಲ್ಲಾ ಲೇಖಕರ ವಿಚಾರಸಾಂಕರ್ಯವು ಹಣಿಕಿ ಹಾಕುತ್ತಿದೆ. ಕೆಲಕಡೆ ನಮ್ಮ ಹಳೆಯ ಸಂಸ್ಕೃತಿಯ ಹೊಗಳಿಕೆಯಿದೆ, ಕೆಲಕಡೆ ಅದನ್ನು ಕೆಳಗಾಣುವುದಿದೆ. ಅಲ್ಲದೆ, ದೊಡ್ಡ ವಿಷಯಗಳನ್ನು ಬಹು ಶೀಘ್ರವಾಗಿ, ಅಪ್ರಾಯಾಸದಿಂದ ಚರ್ಚಿಸಿ-ನಿರ್ಧರಿಸಿಬಿಡುವ ಅದೊಂದು 'ರಭಸ'ವೂ ಇಲ್ಲಿದೆ. ಈ ಬಗೆಯ ದುಡುಕಿನಿಂದ ಜನಾಂಗಗಳ ಪೂರ್ವಚರಿತ್ರೆಯ ಬೆಲೆಯನ್ನು ಕಟ್ಟುವುದಾಗಲಿ, ಭವಿತವ್ಯದ ಸ್ವರೂಪನಿರ್ಣಯವನ್ನು ಮಾಡುವುದಾಗಲಿ ಸಾಧ್ಯವಿಲ್ಲ. ಅದಕ್ಕೆ ಸುದೀರ್ಘವಾದ, ಸತತವಾದ, ನಿರ್ಲಿಪ್ತವಾದ ವಿಚಾರವಿವೇಚನೆಗಳು ಅಗತ್ಯ. ನಮ್ಮವರಲ್ಲಿ ಇವುಗಳ ಕೊರತೆಯಿರುವುದರಿಂದಲೆ ರಾಷ್ಟ್ರನಿರ್ಮಾಣದ ಕೆಲಸವು ಕುಂಟುತ್ತ ಸಾಗಿದೆ. ಆದುದರಿಂದ ತಮ್ಮ ಕೊನೆಯ ತೀರ್ಮಾನಗಳನ್ನು ಹೇಳುವ ಮೊದಲು ಲೇಖಕರು ಇನ್ನೊಮ್ಮೆ ಸಾವಧಾನವಾಗಿ ಆತ್ಮವಿಮರ್ಶೆಯನ್ನು ಮಾಡಿಕೊಳ್ಳಲಿಯೆಂದು ಅವರಲ್ಲಿ ನಮ್ಮ ಬಿನ್ನಪ.

ಭಾಷೆಯಲ್ಲಿಯೂ ಅಸಾಧು ಪ್ರಯೋಗಗಳು ಹೇರಳವಾಗಿ ತುಂಬಿಕೊಂಡಿವೆ ವಿಶ್ವಜಗತ್ತು, ಸಂವಲಿತ ಪ್ರಪುತ್ತ, ರಾಷ್ಟ್ರಮುಂದಾಳು, ಪುನರಾರ್ಜಿಸು,

CC-0. Jangamwadi Math Collection. Digitized by eGangotri

ಚಿತ್ತದಾಸ ( Intellectual labourer ? ), ಕರ್ಮದಾಸ ( Manual labourer? ), ಸೃಷ್ಟಿ, ಪುಷ್ಟಿ, ರಸವಂತಿಗಳಾದ ಮಹನೀಯರು ಈ ಮೊದಲಾದ ಅನೇಕಾನೇಕ ಪ್ರಯೋಗಗಳಿಗೆ ನಮಗೆ ಯಾವ ಆಧಾರವೂ ಕಾಣುವುದಿಲ್ಲ. ವಾಕ್ಯರಚನೆಯೂ ಹಲವೆಡೆಗಳಲ್ಲಿ ತೀರಾ ತೊಡಕುತೊಡಕಿನದಾಗಿ, ದುರ್ಬೋಧವಾಗಿದೆ. 'ಬಲಯುತ ಪಂಗಡಗಳನ್ನು ತಮ್ಮ ಕಡೆಗಿಟ್ಟುಕೊಂಡು ಅವರೊಂದಿಗೆ ಸಮಭಾವದಿಂದ ವರ್ತಿಸಿ ಏಕತ್ರವೂ ಪರಸ್ಪರ ಹಿತಕಾರಿಯೂ ಆದ ಆದರ್ಶಸಾಧನೆಗೆ, ಅವರ ಶಕ್ತಿಯುತ ಸಹಕಾರದೊಂದಿಗೆ ತೊಡಗಿ, ಎಲ್ಲಿ ಜಯಭೇರಿಯನ್ನು ಮೊಳಗಿಸಬಹುದೋ ಅಂತಹ ರಾಜಮಾರ್ಗದಲ್ಲಿ ಪ್ರವೇಶಿಸಲು ಕೃಪಣತನವು ಜನಾಂಗಗಳನ್ನು ತಡೆಯುತ್ತಿದೆ.' ಇಂತಹ ಉದಾಹರಣೆಗಳು ಇನ್ನೆಷ್ಟೋ ಇವೆ.

ವರ್ಣನಾತ್ಮಕ ಪ್ರಬಂಧಗಳು ಇದ್ದುದರಲ್ಲಿ ಒಳ್ಳೆಯವಾಗಿವೆ. ಪುಸ್ತಕದಲ್ಲಿ ಅವುಗಳೇ ಇದ್ದುಕೊಂಡು, ಪುಸ್ತಕದ ತಲೆಕಟ್ಟು ಬೇರೆ ಏನಾದರೂ ಇದ್ದಿದ್ದರೆ ಚೆನ್ನಾಗುತ್ತಿತ್ತು.

— B. R.

**ದೇಶರಂಜನ ( ೧೧೩ ):—** ಇದು ಮಂಗಳೂರ ಕಡೆ ಹೊಸದಾಗಿ ಹೊರಟ ದ್ವೈಮಾಸಿಕ ಪತ್ರಿಕೆ. ಮೊದಲನೆಯ ಸಂಚಿಕೆಯಲ್ಲಿ ಜಯಕರ್ನಾಟಕದಳತೆಯ ೫೨ ಪುಟಗಳಿವೆ. ಅಲ್ಲಲ್ಲಿ ಚಿತ್ರಗಳೂ ಇವೆ. ಲೇಖಕವರ್ಗದಲ್ಲಿ ಶ್ರೀಯುತರಾದ ಸೇಡಿಯಾಪು ಕೃಷ್ಣಭಟ್ಟ, ಕಡೆಂಗೋಡ್ಲು ಶಂಕರಭಟ್ಟ, ಶಿವರಾಮ ಕಾರಂತ, ಪಾ. ಗಣಪತಿರಾವ್, ಉಗ್ರಾಣ ಮಂಗೇಶರಾವ್, ಐ. ಶಿವರಾಮಯ್ಯ, ದೊರೆಸ್ವಾಮಿ ಅಯ್ಯಂಗಾರ್, ಎಂ. ಎನ್. ಕಾಮತ ಮೊದಲಾದ ಸುರಿತ ಸಾಹಿತಿಗಳಿದ್ದುದರಿಂದ, ಲೇಖನಗಳ ಯೋಗ್ಯತೆಯನ್ನು ಕುರಿತು ಸಂದೇಹವೇ ಬರಲಸಾಧ್ಯವು. ವಿಷಯವೈವಿಧ್ಯವೂ ಚೆನ್ನಾಗಿದೆ. ಮಂಗಳೂರ ಕಡೆಯ ಲೇಖಕರೆಲ್ಲರ ಪರಿಚಯವು ಒತ್ತಟ್ಟಿಗೆ ಆಗುವುದು ಅಖಿಲಕರ್ನಾಟಕ ಸಾಹಿತ್ಯಸಂವರ್ಧನದ ದೃಷ್ಟಿಯಿಂದ ಅಗತ್ಯವಿತ್ತು. ಆ ಕೆಲಸವನ್ನು 'ದೇಶರಂಜನ'ವು ಚೆನ್ನಾಗಿ ನೆರವೇರಿಸುವ ಮುಂಗುರುತು ಈ ಸಂಚಿಕೆಯಲ್ಲಿ ಧಾರಾಳವಾಗಿ ಕಾಣುತ್ತಿದೆ ಯೆಂದು ಹೇಳಬಹುದು.

— B. R.

## ಪ್ರಪಂಚಪರ್ಯಟನಕ್ಕಾಗಿ ಹೊರಟ ಇಬ್ಬರು ಮೈಸೂರುಸೀಮೆಯ ಕನ್ನಡಿಗರು.



ಶ್ರೀ. ಶಾಮಪುರ ರಾಮಚಂದ್ರಯ್ಯನವರು



ಶ್ರೀ. ಟಿ. ಸಿದ್ಧಲಿಂಗಯ್ಯನವರು ಬಿ. ಎ. ಬಿ. ಎಲ್.

CC-0. Jangamwadi Math Collection. Digitized by eGangotri



## ಡಾನ್ಯೂಬಿಯನ್ ಪರಿಷತ್ತು

ಯುರೋಪಿನ ಭವಿತವ್ಯವು ಜೂನ್ ತಿಂಗಳಲ್ಲಿ ಸೇರಲಿರುವ ಲಾಝಾನ್ ( Lausanne ) ಪರಿಷತ್ತಿನಲ್ಲಿ, ಯುರೋಪಿಯ ರಾಷ್ಟ್ರಗಳು ತಂತಮ್ಮಲ್ಲಿ ಕೊಡಬೇಕಾದ ಮತ್ತು ಒಟ್ಟಿನಲ್ಲಿ ಅಮೇರಿಕೆಗೆ ಕೊಡಬೇಕಾದ ಯುದ್ಧಸಂಬಂಧಿ ಸಾಲದ ಹಣೆಬರಹವು ಏನೆಂದು ನಿರ್ಧರವಾಗುವುದೋ, ಅದರ ಮೇಲೆ ಅವಲಂಬಿಸಿದೆಯೆಂದರೆ ಅತ್ಯುಕ್ತಿಯಾಗದು. ಇತ್ತೀಚೆಗಿನ ಅಂತರರಾಷ್ಟ್ರೀಯ ಪರಿಷತ್ತುಗಳಲ್ಲಿ ಅದು ಅತಿಮಹತ್ತ್ವದ್ದಾಗಿದೆ. ಆಕ್ಸ್‌ಫೋರ್ಡ್ ಯುನಿವರ್ಸಿಟಿಯ ಕಾಂಝರ್ವೇಟಿವ್ ಸಭೆಯ ಎದುರಿನಲ್ಲಿ ಕರ್ನಲ್ ಅಮೆರಿ ಎಂಬವರು ಮಾಡಿದ ಭಾಷಣದಲ್ಲಿ, 'ಬರುವ ಕೆಲ ತಿಂಗಳುಗಳಲ್ಲಿ ಯುರೋಪು ಅತಿ ಭಯಂಕರವಾದ ಸಂಕಟಕ್ಕೆ ತುತ್ತಾಗತಕ್ಕುದಿದ್ದು, ಅದರ ಸ್ಥಿತಿಯು ಅಮೇರಿಕೆಯದಕ್ಕಿಂತಲೂ ಕೆಡುಕಾಗತಕ್ಕುದಿದೆ' ಎಂದು ಹೇಳಿದರು. ಅಲ್ಲದೆ 'ಲಾಝಾನ್ ಪರಿಷತ್ತಿನಲ್ಲಿ ಯುದ್ಧದ ಸಾಲಗಳನ್ನೆಲ್ಲಾ ನಿರ್ನಾಮವಾಗಿಸಿದರೂ, ಈ ದುರವಸ್ಥೆಯು ಅಂಶಮಾತ್ರ ಕಡಿಮೆಯಾಗಬಹುದೆಂ'ದು ಅಭಿಪ್ರಾಯಪಟ್ಟರು.

ಇದೀಗ ಕೆಲ ದಿನಗಳ ಹಿಂದೆ ಮಧ್ಯ ಯುರೋಪಿನ ಆರ್ಥಿಕ ದುಃಸ್ಥಿತಿಯನ್ನು ನಿವಾರಣೆ ಮಾಡಲೋಸುಗ, ಮುಖ್ಯ ರಾಷ್ಟ್ರಗಳ ಆಲೋಚನಾಸಭೆಯೊಂದು ಕೂಡಿದ್ದು, ಅದು ಯಾವ ನಿರ್ಣಯಕ್ಕೂ ಬಾರದೆ ಚದರಿ ಹೋದ ಸಂಗತಿಯನ್ನೂ, ಅದರಿಂದ ತೀವ್ರ ಅಸಂತೋಷವುಂಟಾಯಿತೆಂದೂ ಕಳೆದ ಸಂಚಿಕೆಯಲ್ಲಿ ಬರೆದಿದ್ದೆವು.

ಆ ಅಸಂತೋಷದ ಪರಿಣಾಮವು ಜಿನೀವಾದ ಶಸ್ತ್ರಸಂನ್ಯಾಸಪರಿಷತ್ತು ಕೆಲಮಟ್ಟಿಗೆ ಕುಂಟುತ್ತ ಸಾಗುವುದರಲ್ಲಿಯೂ ಆಯಿತು. ತಾರ್ದ್ಯೂ ಎಂಬ ಫ್ರೆಂಚ ಪ್ರಧಾನನು ಅನಾರೋಗ್ಯದ ನೆಪವನ್ನು ಮಾಡಿ ಪರಿಷತ್ತಿಗೆ ಬರಲಿಲ್ಲವೆಂಬ ಕಾರಣದಿಂದ ಉಳಿದ ಪ್ರಮುಖ ರಾಷ್ಟ್ರಗಳ ಪ್ರತಿನಿಧಿಗಳು ಪರಿಷತ್ತಿನ ಕಾರ್ಯವನ್ನೇ ಮುಂದಕ್ಕೆ ದೂಡಿದರು. ಆದುದರಿಂದ ಶಸ್ತ್ರಪರಿತ್ಯಾಗತತ್ತ್ವದ ಅತಿ ಮಹತ್ತ್ವದ ಅಂಶಗಳು ಇನ್ನೂ ಅನಿರ್ಣೀತವಾಗಿಯೇ ಉಳಿದಿವೆ.

ಆಸ್ಟ್ರಿಯಾ, ಹಂಗರಿ, ಝೆಕೊಸ್ಲೊವಾಕಿಯಾ, ಯುಗೊಸ್ಲಾವಿಯಾ, ರೂಮಾನಿಯಾ ಮೊದಲಾದ ದೇಶಗಳೆಲ್ಲಾ ಡಾನ್ಯೂಬ್ ನದಿಯ ದಂಡೆಗುಂಟ ಇವೆ. ಆದುದರಿಂದ ಈ ದೇಶಗಳ ಆರ್ಥಿಕ ದುಃಸ್ಥಿತಿಯನ್ನು ನೀಗಲಾಡುವ ವಿಚಾರವನ್ನು ಮಾಡುವ ಪರಿಷತ್ತಿಗೆ 'ಡಾನ್ಯೂಬಿಯನ್ ಪರಿಷತ್ತೆಂ'ದು ಹೆಸರು ಬಂದಿದೆ. ಈ ಪರಿಷತ್ತಿನ ಪೂರ್ವಚರಿತ್ರೆಯನ್ನು ತುಸು ತಿಳಿದುಕೊಳ್ಳುವುದು ಅಗತ್ಯ.

ಡಾನ್ಯೂಬಿಯನ್ ರಾಷ್ಟ್ರಗಳಿಗೆ ಆರ್ಥಿಕ ಸಹಾಯವನ್ನೀಯದೆ ಹೋದಲ್ಲಿ, ಅವುಗಳ ಆರ್ಥಿಕವಿಪತ್ತು ಅಂತರರಾಷ್ಟ್ರೀಯ ಅನರ್ಥಪರಂಪರೆಗಳಿಗೆ ಕಾರಣವಾಗಬಹುದೆಂದೂ ಆ ರಾಷ್ಟ್ರಗಳು ಸಾಲ ತೀರಿಸಲು ಮತ್ತೆ ಅವಧಿಯನ್ನು ( moratorium ) ಬೇಡುವ ಬದಲು, ಸಾಲದ ನಿರಾಕರಣೆಯನ್ನೇ ( repudiation ) ಮಾಡಬಹುದೆಂದೂ ರಾಷ್ಟ್ರಸಂಘದ ಆರ್ಥಿಕಶಾಖೆಯವರು


CC-0. Jangamwadi Math Collection. Digitized by eGangotri

ಅಭಿಪ್ರಾಯವನ್ನು ಪಟ್ಟಂದಿನಿಂದ, ಈ ವಿಚಾರಕ್ಕೆ ಮಹತ್ವವು ಬಂದಿತು. ಅದಕ್ಕನುಸಾರವಾಗಿ ಲಂಡನ್ನಿನ ಪ್ರಮುಖ ರಾಷ್ಟ್ರಗಳ ಪರಿಷತ್ತು ಸೇರಿತು.

ಯುರೋಪಿನ ಔದ್ಯೋಗಿಕ ಮತ್ತು ಕೃಷಿಪ್ರಧಾನ ದೇಶಗಳ ಪರಸ್ಪರಾವಲಂಬನೆಯಲ್ಲಿ ಗೊಂದಲವೆದ್ದುದೇ ಅಲ್ಲಿನ ಆರ್ಥಿಕಪ್ರಳಯದ ಕಾರಣವು.

ಡಾನ್ಯೂಬಿಯನ್ ರಾಷ್ಟ್ರಗಳ ಆರ್ಥಿಕಸಂಘಟನೆಯಲ್ಲಡಗಿದ ಕಲ್ಪನೆಯು ಈ ಬಗೆಯಾಗಿದೆ: ಆ ರಾಷ್ಟ್ರಗಳು ತಂತಮ್ಮಲ್ಲಿಯೇ ಪ್ರತ್ಯೇಕವಾಗಿ ಒಂದು 'ಸಂರಕ್ಷಕ ಸುಂಕ' ದ ವ್ಯವಸ್ಥೆಯನ್ನು (tariff *entente*) ಮಾಡಿಕೊಳ್ಳಬೇಕು; ತರುವಾಯ ಆ ರಾಷ್ಟ್ರಗಳೊಡನೆ ವ್ಯಾಪಾರದ ಸಂಬಂಧವುಳ್ಳ ಜರ್ಮನಿ, ಇಟಲಿ ಮೊದಲಾದ ದೇಶಗಳು ಅವುಗಳಿಗೆ ಆದಷ್ಟು ಒಳ್ಳೆಯ ವ್ಯಾಪಾರದ ಸೌಕರ್ಯಗಳನ್ನು ಕೊಡಬೇಕು; ಇಂತು ಆ ರಾಷ್ಟ್ರಗಳೊಳಗಿನ ವ್ಯಾಪಾರವಿನಿಮಯಗಳು ಪೂರ್ವವತ್ ತಡೆಯಿಲ್ಲದೆ ನಡೆಯಹತ್ತಿದೊಡನೆ, ಫ್ರಾನ್ಸು ಮತ್ತು ಇಂಗ್ಲಂಡು ಅವುಗಳಿಗೆ ಸಾಲದ ರೂಪದಲ್ಲಿ ಸಾಕಷ್ಟು ಆರ್ಥಿಕ ಸಹಾಯವನ್ನು ಮಾಡಬೇಕು, ಮತ್ತು ಸಾಲದ ನಿರಾಕರಣೆ ಮತ್ತದರ ಅನರ್ಥಸಂತಾನ ಇವುಗಳನ್ನೆಲ್ಲಾ ಪರಿಹಾರಗೊಳಿಸಬೇಕು.

'ಸಾಮೂಹಿಕ ಸಂರಕ್ಷಕ ಸುಂಕದ ವ್ಯವಸ್ಥೆ ('tariff *entente*)'ಯು ಫಲದ್ರೂಪವಾಗಲಿಕ್ಕೆ ಕೆಲವು ಸಂಗತಿಗಳು ಅಗತ್ಯವಾಗಿವೆ. ಆಯಾ ರಾಷ್ಟ್ರಗಳ ಸಂಪೂರ್ಣ ಚರಿತಾರ್ಥವು ಪರಸ್ಪರವ್ಯಾಪಾರದಿಂದಲೆ ಆಗುವಂತಿರಬೇಕು. ಎಂದರೆ, ಪರಸ್ಪರರ ಮೇಲೆ (ಒಬ್ಬರೊಬ್ಬರ ಅನುಕೂಲತೆಗಳನ್ನು ನೋಡಿಕೊಂಡು) ಕರಗಳನ್ನು ಹೇರುವುದರಿಂದ ಪ್ರಯೋಜನವಾಗಿ, ಎಲ್ಲ ರಾಷ್ಟ್ರಗಳ ಒಟ್ಟು ಆರ್ಥಿಕವ್ಯವಸ್ಥೆಯ ಯಂತ್ರವೊಂದು ಅಸ್ತಿತ್ವದಲ್ಲಿ ಬರುವುದು. ಆದರೆ ಮೇಲ್ಕಂಡ ಡಾನ್ಯೂಬಿಯನ್ ರಾಷ್ಟ್ರಗಳ ನಿಜವಾದ ಸ್ಥಿತಿಯು ತೀರ ಬೇರೆಯಿದೆ. ಅವು ಸ್ವಯಂಪೂರ್ಣವಾಗಿಲ್ಲ, ಎಂದರೆ ಪರಸ್ಪರ ವ್ಯಾಪಾರಮಾತ್ರದಿಂದ ಆ ರಾಷ್ಟ್ರಗಳ ಸಂಪೂರ್ಣ ಚರಿತಾರ್ಥವು ಸಾಗುವಂತಿಲ್ಲ. ಜರ್ಮನಿ ಮತ್ತು ಇಟಲಿ ಅವುಗಳ ಬಹುಮಹತ್ತ್ವದ ಗಿರಾಕಿಗಳಾಗಿವೆ. ಅಲ್ಲದೆ ಆ ರಾಷ್ಟ್ರಗಳಲ್ಲಿಯೂ ತಂತಮ್ಮಲ್ಲಿ ತಾಳಮೇಳವಿಲ್ಲ.

'Indian Finance' ದ ಸಂಪಾದಕರ ಶಬ್ದಗಳಲ್ಲಿ ಹೇಳುವುದಾದರೆ, 'ಈ ರಾಷ್ಟ್ರಗಳು ಸಾಮೂಹಿಕ ಸುಂಕ ವ್ಯವಸ್ಥೆಗೆ ಒಪ್ಪಿಕೊಂಡಿಯಾವೆಂದು ಅಪೇಕ್ಷಿಸುವುದು ಸಂತೆಯಲ್ಲಿ ನೆರೆದ ಮಂದಿಯ ಗಜಬಜೆಯಿಂದ ಸುಮಧುರ ಸಂಗೀತವನ್ನು ತೆಗೆಯಲೆತ್ನಿಸುವುದೂ ಒಂದೇ. ಆದುದರಿಂದ ಈ 'ಸುಂಕಗಳ ಒಗ್ಗೂಟ'ವು ಸಂಭವನೀಯವೆಂದು ಕಾಣುವುದಿಲ್ಲ.

ಫ್ರಾನ್ಸು ಇಂತಹ 'ಒಗ್ಗೂಟ'ವು ಈಡೇರಬೇಕೆಂದು ಅಪೇಕ್ಷಿಸುವುದರಲ್ಲಿ ಒಂದು ಹೇತುವಿದೆ. ಅದಕ್ಕೆ ಜರ್ಮನಿಯ ಮರಣಪ್ರಾಯವಾದ ಭೀತಿಯಿದೆ. ಆ ಭೀತಿಯಿಂದಲೇ ಆಸ್ಟ್ರಿಯಾಜರ್ಮನಿಗಳು ತಮ್ಮಲ್ಲಿ 'ಸುಂಕದ ಪರಸ್ಪರ ವ್ಯವಸ್ಥೆ'ಯನ್ನು ಏರ್ಪಡಿಸಬೇಕೆಂದು ಮಾಡಿದ ಯೋಜನೆಯನ್ನು (the Austro-German Customs Union) ಫ್ರಾನ್ಸು ಹೊಸಕಿ ಹಾಕಿತು. ಇದರ ದೆಸೆಯಿಂದ ಜರ್ಮನಿಯನ್ನು ಪುಡಿಗೊಳ್ಳುತ್ತಿದೆ. ಕಳೆದ ಮಹಾಯುದ್ಧದ ತರುವಾಯ ಆಸ್ಟ್ರಿಯದ ಸಾಮ್ರಾಜ್ಯವು ಒತ್ತಾಯದಿಂದ ವಿಭಾಗಿಸಲ್ಪಟ್ಟು–ವಿಚ್ಛೇದಿಸಲ್ಪಟ್ಟು, ಅದರ ಅತಿ ಸಮೃದ್ಧವಾದ ಪ್ರಾಂತಗಳು 'ಝೆಕೊಸ್ಲೊವಾಕಿಯಾ' ಎಂಬ ಹೊಸ ನಾಮಧೇಯದಲ್ಲಿ ಏಕತ್ರ ರಚಿಸಲ್ಪಟ್ಟವು. ಫ್ರಾನ್ಸು (ಆದರ ತರುವಾಯ ಇಂಗ್ಲಂಡು) ಈ ನೂತನ ರಾಷ್ಟ್ರದಲ್ಲಿ ಮತ್ತದರ ಬಳಗದ ನಾಡುಗಳಲ್ಲಿ, ಸಾಲದ ರೂಪದಲ್ಲಿ ತನ್ನ ದುಡ್ಡನ್ನು ವಿಪುಲವಾಗಿ ತೊಡಗಿಸಿಕೊಂಡಿದೆ. ಇದರ ಮೂಲಕ ಫ್ರಾನ್ಸು ಜರ್ಮನಿ‍ಇಟಲಿಗಳ ಹೊರತಾಗಿ ಉಳಿದ ಯುರೋಪಿಯ ದೇಶಗಳಲ್ಲಿ 'ಕರ್ತುಂ ಅಕರ್ತುಂ' ಶಕ್ತಿಯುಳ್ಳುದಾಗಿದೆಯೆಂದು ಹೇಳಬಹುದು. ಈವೊತ್ತು (ಅಮೇರಿಕೆಯೊಂದನ್ನು ಬಿಟ್ಟರೆ) ಫ್ರಾನ್ಸು ಜಗತ್ತಿನ ದೇಶಗಳ ಬಂಗಾರವನ್ನೆಲ್ಲಾ ತನ್ನ ಕಡೆ ಕೊಂಡಿದೆ, ಸೆಳೆಕೊಳ್ಳುತ್ತಿದೆ. ಆ ಸಿಧಿಯನ್ನು ಎಲ್ಲಿಯಾದರೂ ಅದಕ್ಕೆ ತೊಡಗಿಸಲೇಬೇಕಾಗಿದೆ. ಎಂದೇ ತನ್ನ ಆರ್ಥಿಕ ವರ್ಚಸ್ವದ ಬಲದಿಂದ ಡಾನ್ಯೂಬಿಯನ್ ರಾಷ್ಟ್ರಗಳ 'ಸಾಮೂಹಿಕ ಸುಂಕದ ವ್ಯವಸ್ಥೆ'ಯೊಂದನ್ನು (ಆ ವ್ಯವಸ್ಥೆಯು ಆ ರಾಷ್ಟ್ರಗಳಿಗೆ ಉಪಕಾರಿಯಾಗಿರಲಿ, ಇಲ್ಲದಿರಲಿ) ಏರ್ಪಡಿಸಲೇಬೇಕೆಂದು ಫ್ರಾನ್ಸು ಹಟ ತೊಟ್ಟಿದೆ, ಮತ್ತದಕ್ಕೆ ಆದರ ಬೆನ್ನುಬಲವಾದ ಇಂಗ್ಲಂಡು ತನ್ನ ಸಮ್ಮತಿಯನ್ನಿತ್ತಿದೆ.

CC-0. Jangamwadi Math Collection. Digitized by eGangotri

ಇಟಲಿ ಜರ್ಮನಿಗಳು ಈ ಯೋಜನೆಯನ್ನು ಬುಡ ಬೇರು ಸಹಿತವಾಗಿ ವಿರೋಧಿಸುವುದು ಸಾಹಜಿಕ ವಾಗಿದೆ. ಡಾನ್ಯೂಬಿಯನ್ ರಾಷ್ಟ್ರಗಳ ಆರ್ಥಿಕ ವಿಪತ್ತಂತೂ ಬಗೆಹರಿಯಲೇಬೇಕು (– ಇಲ್ಲವಾದರೆ ಸಮಗ್ರ ಯುರೋಪಿನ– ಅದರ ಜೊತೆಗೆ ತನ್ನ– ಆರ್ಥಿಕ ಯಂತ್ರವು ಮುರುಕಳಿಗೆ ಬರುತ್ತಿದೆ;) ಇತ್ತ ತನಗೆ ಲಾಭವೂ ಆಗ ಬೇಕು: ಈ ಬಗೆಯಾಗಿ ಫ್ರಾನ್ಸಿನ ದ್ವಿಮುಖವಾದ ಧೋರಣೆಯಿದೆ. ಆದರೆ ಜರ್ಮನಿ ಇಟಲಿಗಳಿಗೆ ಇದ ರಿಂದ ಲಾಭವೇನು? ಅಲ್ಲದೆ ಆಸ್ಟ್ರೋ–ಜರ್ಮನ್ ಕಸ್ಟಮ್ಸ್‌ಗಳ ವಿಚಾರವನ್ನು ಫ್ರಾನ್ಸು ಚಿವುಟಿ ಕಮರಿಸಿ ಬಿಟ್ಟಿತಾದುದರಿಂದ, ಜರ್ಮನಿ ಈ ಹೊಸ ಏರ್ಪಾಟಕ್ಕೆ ಹೇಗೆ ಸಮ್ಮತಿಸೀತು?

ಜರ್ಮನಿ ಇಟಲಿಗಳು 'ಡಾನ್ಯೂಬಿಯನ್ ರಾಷ್ಟ್ರ ಗಳದಷ್ಟೇ ಪರಸ್ಪರವಾದ ಸುಂಕದ ಸಂಘಟನೆಯಾಗು ವುದು ( Preferential tariffs ) ಬೇಡ. ನಾವೂ ಅವರೂ ಜೊತೆಯಲ್ಲಿ ಒಂದು ವ್ಯವಸ್ಥೆಗೆ ಬರೋಣ. ಅವುಗಳ ಪರಸ್ಪರವ್ಯವಹಾರಾತ್ಮಕ ಸಂಘಟನೆಯಾದ ಮೇಲೆ, ನಾವು ಅವುಗಳಿಗೆ ವ್ಯಾಪಾರದ ಸೌಲಭ್ಯಗಳನ್ನು ಒದಗಿಸಿ ಕೊಡಲು ಒಲ್ಲೆವು. ನಮ್ಮ ಅವರ ಪರಸ್ಪರವ್ಯಾಪಾರವೂ ಆಪ್ಪಿಷ್ಟಲ್ಲ. ಅವರಿಗೆ ಸೌಕರ್ಯಗಳು ದೊರೆಯುವಂತೆ, ನಮಗೂ ಕೆಲ ವಿಶೇಷಸೌಕರ್ಯಗಳು ಬೇಕು. ಇಲ್ಲವಾದರೆ ಈ ಯೋಜನೆಯೇ ನಮಗೆ ಸಮ್ಮತವಿಲ್ಲ' ಎಂದೆನ್ನುತ್ತಿವೆ.

ಫ್ರಾನ್ಸು ಇಂಗ್ಲಂಡುಗಳ ರಾಜನೀತಿಯು 'ಡಾನ್ಯೂಬಿಯನ್ ರಾಷ್ಟ್ರಗಳದೊಂದು ಆರ್ಥಿಕ ಸಂಘಟನೆಯಾಗ ಬೇಕು. ಜರ್ಮನಿ ಇಟಲಿಗಳು ಅವುಗಳಿಗೆ ವ್ಯಾಪಾರದ ಸೌಕರ್ಯಗಳನ್ನು ಕೊಡಲು ಒಪ್ಪಬೇಕು. ತರುವಾಯ ತಾವು ಅವುಗಳಿಗೆ ಸಾಲವನ್ನು ಕೊಡಬೇಕು' ಎಂಬ ತ್ರಿಕೋನದ ಮೇಲೆ ರಚಿತವಾಗಿದೆ.

ಇಂತಹ ವಾತಾವರಣದಲ್ಲಿ ಈ ವಿಷಯವಾಗಿ ಲಂಡನ್ನಿನಲ್ಲಿ ನೆರೆದ ಪ್ರಮುಖ ರಾಷ್ಟ್ರಗಳ ಪರಿಷತ್ತು ಹಸ ಗೆಟ್ಟು ಹೋದುದರಲ್ಲಿ ಸೋಜಿಗವಿಲ್ಲ. ಪೂರ್ವ ಮತ್ತು ಮಧ್ಯ ಯುರೋಪಿನ ಆರ್ಥಿಕ ಅವ್ಯವಸ್ಥೆಯು ಅಖಿಲ ಯುರೋಪಿನ – ಇಡಿಯ ಜಗತ್ತಿನ ಆರ್ಥಿಕ ವಿಪ್ಲವದ ಒಂದು ಚುಂಗು ಮಾತ್ರ. ಇಂತಹ ವಿಷಯದಲ್ಲಿ ಏಕ ಮತ್ಯವಿಲ್ಲದಿರುವುದು 'ಶಸ್ತ್ರಸಂನ್ಯಾಸ' 'ಯುದ್ಧದ ಸಾಲಗಳ ಮತ್ತು ತಪ್ಪು ದಂಡದ ನಿರ್ಮೂಲನ' ಮೊದಲಾದ ಹೆಚ್ಚು ಮಹತ್ತ್ವದ ವಿಷಯಗಳಲ್ಲಿ ಎಷ್ಟು ಏಕವಾಕ್ಯತೆಯುಂಟಾದೀತೆಂಬುದನ್ನು ತೋರಿಸಲು ದೀಪಸ್ತಂಭದಂತಿದೆ.

### 'ಯುದ್ಧದ ಮಾತನ್ನೆತ್ತುವುದೂ ಬೇಡ'

ಕಳೆದ 'ಶಸ್ತ್ರಸಂನ್ಯಾಸಪರಿಷತ್ತಿ' ಗಾಗಿ ರಾಷ್ಟ್ರ ಸಂಘದ ಸದಸ್ಯರಾಷ್ಟ್ರಗಳಷ್ಟೆ ಅಲ್ಲದೆ, ಉಳಿದುವೂ ಕೂಡಿ ಒಟ್ಟಾರೆ ೬೦ ರಾಷ್ಟ್ರಗಳ ಪ್ರತಿನಿಧಿಗಳು ಕಲೆತಿದ್ದರು. ಬೇರೆ ಬೇರೆ ಸರಕಾರಗಳ ಪ್ರತಿನಿಧಿಗಳಷ್ಟೆ ಪರಿಷತ್ತಿನ ಕಾರ್ಯದಲ್ಲಿ ಭಾಗವನ್ನು ವಹಿಸಿದ್ದರೆ, ಪರಿಷತ್ತಿಗೆ ಅಷ್ಟೊಂದು ಮಹತ್ತ್ವವು ಬರುತ್ತಿರಲಿಲ್ಲ. ಏಕೆಂದರೆ 'ಸರಕಾರ' ವೆಂಬ ಸಂಸ್ಥೆಯು ದೊಡ್ಡದೊಂದು ಯಂತ್ರ. ಅದರ ಪಡಿಯಚ್ಚಿನಲ್ಲಿ ಮಾನವೀಯಸಂಬಂಧಕ್ಕೆ ಸ್ಥಾನ ವಿಲ್ಲ. ಎಂತಲೇ, ಪ್ರಜಾಹಿತ ಸಾಧನೆಯನ್ನು, ಸರಕಾರವನ್ನು ಬಿಟ್ಟು ನಿಂತಿರುವ–ಜನಸಾಮಾನ್ಯರಲ್ಲಿ ಒಬ್ಬರಾಗಿ ಅವರ ಯೋಗಕ್ಷೇಮಕ್ಕಾಗಿ ಅವಿರತವಾಗಿ ಸವೆಯುವ ಲೋಕನಾಯಕರೇ ಕೈಕೊಳ್ಳಬೇಕಾಗುತ್ತದೆ. Eternal vigilance is the price of Liberty – ಸ್ವಾತಂತ್ರ್ಯವನ್ನು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕಾಪಾಡಿಕೊಳ್ಳಬೇಕಾಗುತ್ತದೆಯೆಂದು ಒಬ್ಬ ಆಂಗ್ಲ ವಿಚಾರಿಯು ಹೇಳಿದುದು ನಿಜ. ಜಗತ್ತಿನೊಳಗಿನದೆಲ್ಲ ಲೋಕಮತವು ಯುದ್ಧಪ್ರತಿಬಂಧದ ವಿಷಯದಲ್ಲಿ ಜಾಗ್ರತವಾಗಿದ್ದುದೇ ಮೊನ್ನೆಯ ಶಸ್ತ್ರಸಂನ್ಯಾಸ ಪರಿಷತ್ತನ್ನು ತಕ್ಕಮಟ್ಟಿಗೆ ಯಶಸ್ವಿಯನ್ನಾಗಿ ಮಾಡಿತು. ಆ ಪರಿಷತ್ತಿನ ಕಾರ್ಯ ನಿರ್ವಹಣೆಯಲ್ಲಿ ಬೇರೆ ಬೇರೆ ರಾಷ್ಟ್ರಗಳ ಸರಕಾರಗಳ ಪ್ರತಿನಿಧಿಗಳಷ್ಟೇ ಅಲ್ಲದೆ, ಯುದ್ಧನಿರೋಧನವನ್ನು ಜೀವಾಳದ ಪ್ರಶ್ನೆಯನ್ನಾಗಿ ಮಾಡಿಕೊಂಡು, ಅದಕ್ಕಾಗಿ ಅಹೋರಾತ್ರಿ ಹೆಣಗಾಡುತ್ತಿರುವ ದೇಶವಿದೇಶಗಳ ಸಂಸ್ಥೆಗಳು, ವ್ಯಕ್ತಿಗಳು ಭಾಗವನ್ನು ತೆಗೆದುಕೊಂಡಿದ್ದುವು. ಆ ವರ್ತಮಾನವನ್ನು 'ನ್ಯೂ ಇಂಡಿಯಾ' ಪತ್ರಿಕೆಯ ಸುದ್ದಿಗಾರನೊಬ್ಬನು ಮನೋವೇಧಕವಾಗಿ ಹೇಳಿದ್ದಾನೆ.

"ಸರಕಾರಗಳ ಪ್ರತಿನಿಧಿಗಳ ಹೊರತು ಪರಿಷತ್ತಿನ ಕೆಲಸದಲ್ಲಿ ಪಾಲುಗಾರರಾದವರಲ್ಲಿ ದೇಶವಿದೇಶಗಳ

CC-0. Jangamwadi Math Collection. Digitized by eGangotri

ಹೆಣ್ಣುಮಕ್ಕಳನ್ನು ಮೊದಲು ಉಲ್ಲೇಖಿಸಬೇಕು. ಮತ್ತೆ ಜಗತ್ಸಂಗ್ರಾಮವೊಂದು ಆರಂಭವಾದರೆ ಯುದ್ಧದಲ್ಲಿ ಪ್ರತ್ಯಕ್ಷವಾಗಿ ಭಾಗಿಯಾಗುವ ಗಂಡಸುಮಕ್ಕಳಿಗಿಂತ ತಾಯಂದಿರು, ತಂಗಿಯಂದಿರು, ಹೆಂಡತಿಯರು ಹೆಚ್ಚು ಅನರ್ಥಕ್ಕೀಡಾಗುವರು.

"ಜಗತ್ತಿನ ವಿವಿಧ ಚರ್ಚುಗಳ ಪ್ರತಿನಿಧಿಗಳೂ ಯುದ್ಧಕ್ಕೆ ತಮ್ಮ ವಿರೋಧವನ್ನು ವ್ಯಕ್ತಪಡಿಸಿದರು. ಈ ವರೆಗೆ ಯುದ್ಧಕ್ಕೆ ಸಿದ್ಧರಾದವರನ್ನು ಹರಸುವುದಷ್ಟೇ ಅವರ ಕರ್ತವ್ಯವಾಗಿತ್ತು. ಇದೀಗ ಅವರು ಇಂದಿನ ಸಂಗ್ರಾಮಗಳಿಂದಾಗುವ ವಿಚಿತ್ರಸಂಹಾರದ ವಿಶ್ವರೂಪವನ್ನು ಕಂಡುಕೊಂಡಿದ್ದಾರೆ. ಒಂದು ರಾಷ್ಟ್ರವು ಇನ್ನೊಂದು ರಾಷ್ಟ್ರವನ್ನು ಆಹುತಿಯನ್ನಾಗಿ ಮಾಡಿಕೊಂಡು, ಚಿರಕಾಲ ಸುಸ್ಥಿತಿಯಲ್ಲುಳಿಯಲಾರದೆಂದು ಮನಗಂಡಿದ್ದಾರೆ. 'ಶಸ್ತ್ರಸಂನ್ಯಾಸವಷ್ಟೆ ಅಲ್ಲ—ಶಾಂತಿಯ ಜೀವಂತ ಸಾಧನೆ, ಅದೊಂದು ಆಂತರಿಕ ಸಂನ್ಯಾಸ, ಅಂತರರಾಷ್ಟ್ರೀಯ ವ್ಯವಹಾರದಲ್ಲಿ ದ್ವೇಷಾಸೂಯೆಗಳ ಪರಿತ್ಯಾಗ— ಇದರ ಹೊರತು ಗತಿಯಿಲ್ಲವೆ'ಂದು ಜಗತ್ತಿನ ಕ್ರಿಸ್ತಧರ್ಮಸಂಸ್ಥೆಗಳ ಪ್ರತಿನಿಧಿಯು ಸಾರಿ ಹೇಳಿದನು.

"ಹೆಣ್ಣುಮಕ್ಕಳ ಧರ್ಮೋಪದೇಶಕರ ತರುವಾಯ 'ತರುಣ'ರು ಮುಂದುವರಿದು ಮಾತನಾಡಿದರು. ಲಕ್ಷಾವಧಿ ಸದಸ್ಯರನ್ನೊಳಗೊಂಡ ಜಗತ್ತಿನ ವಿವಿಧ ತರುಣ ಸಂಸ್ಥೆಗಳು ತಮ್ಮ ಪ್ರತಿನಿಧಿಗಳನ್ನು ಕಳಿಸಿದ್ದರು. ಹಳೆಯ ತಲೆಗಳ ಕುಟಿಲ ರಾಜನೀತಿಗೆ ತಮ್ಮಲ್ಲಿ ಅವಕಾಶವಿಲ್ಲ— ತಾವು ಜಗತ್ತಿನ ಜೀವನವನ್ನು ತಮ್ಮ ಊರ್ಜಿತ ಆಕಾಂಕ್ಷೆಗಳಿಗೆ ತಕ್ಕಂತೆ ಹೊಸಹೊಸದಾಗಿ ಮಾರ್ಪಡಿಸುವವರು, ಎಂದು ಅವರ ಹೇಳಿಕೆ.

"ಇವರ ತರುವಾಯ ಕೂಲಿಕಾರರ ಪ್ರತಿನಿಧಿಗಳು ಮಾತನಾಡಿದರು. ದೇಶದೇಶದೊಳಗಿನ ಕದನಗಳಲ್ಲಿ ತೋಫು ತುಬಾಕಿಗಳ ಬಾಯಿಗೆ ತುತ್ತಾಗುವವರು ಇವರು, ಆದರೆ ಯುದ್ಧವು ಮುಗಿದ ಮೇಲಿನ ಸುಳಿಗೆಯಲ್ಲಿ ಇವರಿಗೆ ಪಾಲಿಲ್ಲ.

"ಸ್ತ್ರೀ ಪ್ರತಿನಿಧಿಯು 'ಯುದ್ಧನಿರೋಧಕ ಅಂತರರಾಷ್ಟ್ರೀಯ ಸ್ತ್ರೀಸಂಸ್ಥೆ'ಗಳ ಅಧ್ಯಕ್ಷಳಾಗಿದ್ದಳು. ೫೦ ದೇಶಗಳಲ್ಲಿ ಶಾಖೆಗಳುಳ್ಳ ೧೫ ಸಂಸ್ಥೆಗಳ ೪ತ್ತಿ ಲಕ್ಷ ಸದಸ್ಯರು ಆಕೆಯನ್ನು ಆರಿಸಿದ್ದರು. 'ನಾವು ನಮಗಾಗಿ ಯಷ್ಟೆ ಅಲ್ಲ, ಬರುವ ತಲೆತಲಾಂತರಗಳಿಗಾಗಿ ಈ ಯುದ್ಧಭೂತಕ್ಕೆ ಚರಮಶಾಂತಿಯನ್ನೀಯುವುದಾಗಿ ಅಂಗಲಾಚುತ್ತೇವೆ. ತಾಯಂದಿರಾದ ನಮಗೆ ನಮ್ಮ ಮಕ್ಕಳ ಭವಿಷ್ಯತ್ತಿನ ಭೀಕರ ಸ್ವರೂಪವು ಭೂತವಾಗಿ ಕಾಣುತ್ತಿದೆ'... ಎಂದು ಹೇಳಿದಳು.

"ತರುಣರ ಪ್ರತಿನಿಧಿಯು ಹೀಗೆ ಮಾತನಾಡಿದನು: 'ಉಳಿದವರ ಮಾತು ಏನೇ ಇರಲಿ, ಯುದ್ಧನಿರೋಧನವು ನಮ್ಮ ಜೀವಜೀವಾಳದ ಪ್ರಶ್ನೆಯಾಗಿದೆ. ತೀರ ಇತ್ತೀಚಿನ ಶೋಧವಾದ ವಿಷಯವಾಯುಗಳಿಗೆ, ತೋಫುಗಳಿಗೆ ನಮ್ಮ ಪೀಳಿಗೆಯವರೇ ಭಕ್ಷ್ಯವಾಗತಕ್ಕವರಿದ್ದಾರೆ. ಜಗತ್ತಿನ ಸಂಸ್ಕೃತಿಯ ಸಾರವನ್ನು—ಏಕೆ, ಅಖಿಲ ನಾಗರಿಕತೆಯನ್ನೇ ಹಾಳುಗೆಡಹಲು ನಮ್ಮನ್ನು ಪ್ರವೃತ್ತರನ್ನಾಗಿ ಮಾಡತಕ್ಕವರಿದ್ದಾರೆ. ಯುದ್ಧರಾಕ್ಷಸನಿಗೆ ತುತ್ತಾಗುವುದರಲ್ಲಿ ನಮಗೆ ಆಸೆಯುಳಿದಿಲ್ಲ.'

"ಜಗತ್ತಿನ ಕೂಲಿಕಾರರ ಮತ್ತು ಸಮಾಜಪ್ರಭುತ್ವವಾದಿಗಳ ಪ್ರತಿನಿಧಿಯು ಇಂತೆಂದನು: 'ನಾವಿಲ್ಲಿ ಪ್ರಾರ್ಥಿಸಿಕೊಳ್ಳಲು ಬಂದಿಲ್ಲ, ನಮ್ಮ ಆಗತ್ಯಗಳನ್ನು ನಿಮ್ಮೆದುರಿನಲ್ಲಿರಿಸಲು ಬಂದಿದ್ದೇವೆ. ಜೀತ್ಯ ಜಿತವೆಂಬ ಭೇದವನ್ನು ಅಳಿಸಿಬಿಡಿರೆಂದು ಹೇಳಲು ಬಂದಿದ್ದೇವೆ. ನಾವು ಸಾರ್ವತ್ರಿಕ ಶಸ್ತ್ರಸಂನ್ಯಾಸವನ್ನು ಬೇಡುತ್ತೇವೆ. ಅಂತರರಾಷ್ಟ್ರೀಯ ಯುದ್ಧದ ವೆಚ್ಚಕ್ಕೆ ಪ್ರತಿವರ್ಷ ಕೋಟ್ಯವಧಿ ಪೌಂಡುಗಳನ್ನು ಸಾಮುದಾಯಿಕವಾಗಿ ತೆತ್ತುವ ಪ್ರಜೆಗಳ ಪರವಾಗಿ ನಾವಿದನ್ನು ಕೇಳುತ್ತೇವೆ.' "

## ರಶಿಯಾ—ಜಪಾನುಗಳ ನಡುವೆ ಯುದ್ಧಾರಂಭದ ಸಂಭವ

ಕಳೆದ ಸಂಚಿಕೆಯಲ್ಲಿ ರಶಿಯನ್ನರು ಮತ್ತು ಜಪಾನಿಗಳು ಪರಸ್ಪರ ವಿಷಯವಾಗಿ ಸಾಶಂಕರಾಗಿದ್ದುಕೊಂಡು ಯುದ್ಧೋನ್ಮುಖರಾದುದನ್ನು ಉಲ್ಲೇಖಿಸಿದ್ದೆವು. ರಾಯಿಟರನು ಮೇ ೩೦ರ ಸುದ್ದಿಯಲ್ಲಿ, ಆ ಕಿಡಿಗಳು ಆರಿಹೋಗಿರದೆ, ಬೇಗೆಯಾಗಿ ಹಬ್ಬಿಕೊಂಡು, ಪೂರ್ವಗೋಲಾರ್ಧದ ಪೂರ್ವತಮಪ್ರದೇಶವನ್ನು ವ್ಯಾಪಿಸಿಬಿಡುವ ಸಂಭವವನ್ನು ಸೂಚಿಸುತ್ತಾನೆ. ಜಪಾನಿ ಸೈನ್ಯವಿಲ್ಲವು ರಶಿಯನ್ ಗಡಿನಾಡನ್ನು ಮುತ್ತತೊಡಗಿದುದಾಗಿ ಆತ ತಿಳಿಸುತ್ತಾನೆ. ಪಶ್ಚಿಮದ ಸಾಮ್ರಾಜ್ಯವಾದಿ ಸರಕಾರ

CC-0. Jangamwadi Math Collection. Digitized by eGangotri

ಗಳು, ಯುದ್ಧವನ್ನು ಹೂಡುವುದರಿಂದಾಗಬಹುದಾದ ಅನರ್ಥಪರಂಪರೆಯನ್ನು ಮನಗಂಡು, ಸಾಕ್ಷಾತ್ತಾಗಿ ರಣಭೂಮಿಯಲ್ಲಿ ಹಾರಿಕೊಳ್ಳಲು ಹಿಂಜರಿಯುತ್ತಲಾದರೂ ಇವೆ. ಆದರೆ ಜಪಾನು ರಶಿಯವನ್ನು ಕೆಲವರ್ಷಗಳ ಹಿಂದೆ ಸೋಲಿಸಿ, ಮೊನ್ನೆ ಚೀನರಾಷ್ಟ್ರವನ್ನು ಕೋರಿಯದಿಂದ ಹಿಮ್ಮೆಟ್ಟಿಸಿ, ತೋಳತಿಂಡಿಯು ಇನ್ನೂ ತೀರದಿರುವುದರಿಂದ, ತನ್ನ ಕಾಡುವ ಹಸಿವೆಗೆ ಹೊಸ ತುತ್ತುಗಳನ್ನು ಬೇಡುತ್ತಿರುವಂತೆ ಕಾಣುತ್ತದೆ. ಜಪಾನಿನಲ್ಲಿ ಸೇನಾಧಿಕಾರಿಗಳೇ ರಾಜ್ಯದಲ್ಲಿ ಅಧಿಕಾರವಾಣಿಯುಳ್ಳವರಾಗಿದ್ದಾರೆಂಬುದು ಸುಪ್ರಸಿದ್ಧವಿದೆ. ಮತ್ತು ಸೇನಾಧಿಕಾರಿಗಳ ಪ್ರಾಬಲ್ಯವುಳ್ಳ ಸರಕಾರಗಳು ತಮ್ಮ ರಾಷ್ಟ್ರೀಯರ-ಹೊರಗಿನ ಜಗತ್ತಿನ ಕಷ್ಟನಷ್ಟಗಳನ್ನು ಲೆಕ್ಕಿಸದೆ, ತಮ್ಮ ಸಾಮ್ರಾಜ್ಯ ತೃಷ್ಣೆಯನ್ನು ಹಿಂಗಿಸಲು, ಯಾವುದಕ್ಕೂ ಹೇಸದೆ, ಪರರಾಷ್ಟ್ರಗಳನ್ನು ಆಕ್ರಮಿಸಲು ಸದಾಸಿದ್ಧವಾಗಿರುತ್ತವೆಂಬುದೂ ಅಷ್ಟೇ ಪ್ರಸಿದ್ಧವಾಗಿದೆ.

ರಶಿಯಾ – ಜಪಾನ ಸಂಗ್ರಾಮದಲ್ಲಿ ಇನ್ನೊಂದು ವಿಶೇಷವಿದೆ. ಚೀನ – ಜಪಾನ ಸಂಗ್ರಾಮದಂತೆ ಅದು ಎರಡು ರಾಷ್ಟ್ರಗಳಿಗೆ ಮಾತ್ರ ಸಂಬಂಧಿಸಿದ ಕಲಹವಾಗುಳಿಯದೆ, ಜಗತ್ತಿನ ರಾಷ್ಟ್ರಗಳನ್ನೆಲ್ಲ ತನ್ನ ತೆಕ್ಕೆಯಲ್ಲಿ ಇರಿಸಿಕೊಂಡು, ಇನ್ನೊಂದು 'ಮಹಾಯುದ್ಧ'ವಾಗಿ ಪರಿಣಮಿಸುವ ಭೀತಿಯಿದೆ. 'ಕಮ್ಯೂನಿಸಿಝಂ' ಎಂಬ ಕ್ರಾಂತಿಕಾರಿ ತತ್ತ್ವದ ಪುರಸ್ಕರ್ತೃವಾಗಿ ಕೂಲಿಕಾರರ ಪ್ರಭುತ್ವವನ್ನು ಪ್ರಸ್ಥಾಪಿಸಿ ಅಖಿಲಲೋಕವನ್ನು ಸ್ತಿಮಿತವನ್ನಾಗಿ ಮಾಡಿದ ರಶಿಯಾದೇಶವನ್ನು ಇಂದಿಲ್ಲ ನಾಳೆ ರಸಾತಲಕ್ಕೊತ್ತಬೇಕೆಂದು ಪ್ರಮುಖ ಪಾಶ್ಚಾತ್ಯ ಸರಕಾರಗಳು ಹೊಂಚು ಹಾಕಿಕೊಂಡು ಕುಳಿತಿದ್ದುದು ಸರ್ವಶ್ರುತವಿದೆ. ಯಾವುದಾದರೂ ನೆಪವನ್ನು ಮಾಡಿ ಬ್ರಿಟನು ಫ್ರಾನ್ಸು ಮೊದಲಾದ ಸಾಮ್ರಾಜ್ಯವಾದಿ ರಾಷ್ಟ್ರಗಳು ಜಪಾನಿನ ಬೆನ್ನುಕಟ್ಟುವ ಸಂಭವವು ಹೆಚ್ಚಾಗಿದೆ. ಜರ್ಮನಿ ತುರ್ಕಸ್ಥಾನಗಳು ರಶಿಯದ ಕಡೆ ಒಲಿಯುವ ಸಂಭವವಿದೆ. ಏನಾಗುವುದೋ – ಅಂತೂ, ಈ ಬೇಗೆಯು ಬೇಗ ನಂದಿ ಹೋಗದಿದ್ದರೆ, ಬರುವ ಸಂಗ್ರಾಮವು ರಾಷ್ಟ್ರರಾಷ್ಟ್ರಗಳೊಳಗಿನ ವೈಯಕ್ತಿಕ ವ್ಯಾಜ್ಯವಾಗಿ ಉಳಿಯದೆ ಎರಡು ತತ್ತ್ವಗಳ–ಬಂಡವಾಳ ಕೂಲಿಗಳೆಂಬ ಸನಾತನ ಶತ್ರುಗಳ ಘನಘೋರ ದ್ವಂದ್ವಯುದ್ಧವಾಗಿ ಹೋಗುವುದರಲ್ಲಿ ಸಂದೇಹವಿಲ್ಲ. ಇಂಗ್ಲಂಡು, ಅಮೇರಿಕೆ, ಜರ್ಮನಿ ಮೊದಲಾದ ವ್ಯಾಪಾರೋಪಜೀವಿ ರಾಷ್ಟ್ರಗಳಲ್ಲಿ ರಶಿಯದೊಡನೆ ಸಹಾನುಭೂತಿಯುಳ್ಳ ಕೂಲಿಕಾರರ ಪಕ್ಷಗಳು ಸುಸಂಘಟಿತವಾಗಿದ್ದು, ಆಯಾ ಸರಕಾರಗಳು ಅವುಗಳನ್ನು ಸಹಸಾ ದುರ್ಲಕ್ಷಿಸಲಾರವು. ರಶಿಯದೊಡನೆ ಯುದ್ಧವು ಮೊದಲಾದಲ್ಲಿ, ಆ ಪಕ್ಷಗಳು ತಂತಮ್ಮ ಸರಕಾರಗಳನ್ನು ಕಾಡಿಕಾಡಿ ಸಾಕು ಬೇಕಾಗಿ ಮಾಡದಿರಲಾರವು. ರಶಿಯವು ತನ್ನ ರಾಜ್ಯದ ಸೀಮೆಯಲ್ಲಿ ಸಮಾಜಪ್ರಭುತ್ವದ ಅದ್ಭುತಪ್ರಯೋಗವನ್ನು ಹೂಡಿದೆ. ಪ್ರಯೋಗದ ಪರಿಣಾಮವನ್ನು ಕಂಡುಕೊಳ್ಳಬೇಕೆಂಬ ವೈಜ್ಞಾನಿಕ ಬುದ್ಧಿಯಿಂದಲಾದರೂ ರಶಿಯವನ್ನು ಕೆಲಕಾಲ ಸುಮ್ಮನೆ ಬಿಟ್ಟುಬಿಡುವುದು ಲೋಕಾಭ್ಯುದಯದೃಷ್ಟಿಯಿಂದ ಅಗತ್ಯದ ಸಂಗತಿಯಾಗಿದೆ. ಹಾಗೆ ಅದನ್ನು ಒಬ್ಬೊಂಟಿಗವಾಗಿ ಜಗತ್ತಿನ ಸಾಮ್ರಾಜ್ಯ ತೃಷ್ಣಾವಿಹ್ವಲ ರಾಷ್ಟ್ರಗಳು ಉಳಿಯಗೊಡುವವೋ, ಇಲ್ಲವೋ, ನೋಡಬೇಕಾದ ವಿಷಯವಾಗಿದೆ.

### ಆಪ್ತಮಿತ್ರನ ಹಿತವಾದ

ಕಳೆದ ತಿಂಗಳ 'ಮೈಸೂರ್ ಎಕಾನಾಮಿಕ್ ಜರ್ನಲ್'ನಲ್ಲಿ ಹಿಂದೀಜನರ ಆಕಾಂಕ್ಷೆಗಳಿಗಾಗಿ ಸಹಾನುಭೂತಿಯುಳ್ಳ 'ಕ್ರಿಸ್ಟೋಫರ್ ಹೇ' ಎಂಬ ಆಂಗ್ಲ ಸದ್ಗೃಹಸ್ಥರೊಬ್ಬರು, 'ಮ್ಯಾಂಚೆಸ್ಟರ್ ಗಾರ್ಡಿಯನ್' ಪತ್ರಿಕೆಯಲ್ಲಿ ಹಿಂದುಸ್ಥಾನದ ಪರಿಸ್ಥಿತಿಯ ವಿಷಯವಾಗಿ ಒಂದ ಸಂಗತಿಗಳನ್ನು ಸಂಗ್ರಹವಾಗಿ ಹೇಳಿದ್ದಾರೆ. ನಮ್ಮ ವಾಚಕರಿಗೂ ಅವು ಬೋಧಪ್ರದವಾಗದಿರವು. ಅವುಗಳನ್ನು ಓದುವ ಮೊದಲು, ಹಿಂದುಸ್ಥಾನದ ಪರಿಸ್ಥಿತಿಯ ವಿಷಯವಾಗಿ ಆಂಗ್ಲ ಪತ್ರಿಕೆಗಳೆಲ್ಲಾ ಬಾಯಿಗೆ ಬೀಗವನ್ನು ಹಾಕಿಕೊಂಡಿರುವ ವಿಷಯವನ್ನು ನಾವು ನೆನೆಯಬೇಕು. ಅಪವಾದಗಳು ವಿರಲವಾಗಿವೆ.

'ಮ್ಯಾಂಚೆಸ್ಟರ್ ಗಾರ್ಡಿಯನ್' ಪತ್ರಿಕೆಯು—ಹಿಂದೀಆಕಾಂಕ್ಷೆಗಳೆಡೆಯಿಂದ ಅದು ಅತ್ಯಾರ್ದ್ರವಾಗಿರದಿದ್ದರೂ (ಇದು ಕೆಳಗಿನ ಅವತರಣಿಕೆಗಳ ಮೇಲಿಂದ ತಾನೇ ಸ್ಪಷ್ಟವಾಗುತ್ತಿದೆ)–ಇದ್ದುದರಲ್ಲಿ ಹಿಂದೀಯರ ಪಕ್ಷವನ್ನು ಒಮ್ಮೊಮ್ಮೆ ನ್ಯಾಯಬುದ್ಧಿಯಿಂದ ವಿಮರ್ಶಿಸುತ್ತದೆ. ಇನ್ನು 'ಕ್ರಿಸ್ಟೋಫರ ಹೇ' ಅವರ ಭಾಷೆಯಲ್ಲಿಯೇ 'ಮ್ಯಾಂಚೆಸ್ಟರ ಗಾರ್ಡಿಯನ್' ಪತ್ರಿಕೆಯು


CC-0. Jangamwadi Math Collection. Digitized by eGangotri

ಇಲ್ಲಿನ ಪರಿಸ್ಥಿತಿಯನ್ನು ಹೇಗೆ ಸಮಾಲೋಚಿಸುತ್ತಿದೆ ಯೆಂಬುದನ್ನು ನೋಡೋಣ.

'ಹಿಂದುಸ್ಥಾನ ಸರಕಾರದ ಸಾಲವು ಬೆಳೆಯುತ್ತಲಿದೆ; ಆಡಳಿತದ ಗಾತ್ರವು ಅಕಾರಣವಾಗಿ ಸ್ಥೂಲವಾಗಿದೆ; ಶೀಘ್ರವಾಗಿ ಉಪಾಯ–ಯೋಜನೆಗಳನ್ನು ಮಾಡಬೇಕು; ಸರಕಾರವು ಯೋಚಿಸುತ್ತಿರುವಂತೆ ಈಗಿನ ಪದ್ಧತಿಗಳ ಲ್ಲಿಯೇ ಅಲ್ಪಸ್ವಲ್ಪ ಬದಲಾವಣೆಯನ್ನು ಮಾಡಿದರೆ ಸಾಗದು; ತೀವ್ರತರರಾದ ಕಾಂಗ್ರೆಸಪಕ್ಷೀಯರು ಇನ್ನೂ ಹೆಚ್ಚು ಬೇಡುತ್ತಾರೆ; ಸರಕಾರದ ಉತ್ಪನ್ನದ ಜೀವಾಧಾರದಂತಿರುವ ಭೂಕಂದಾಯವು ಬುಡಮೇಲಾ ಗಿದೆ; ರೈತನು ತಾನು ಕೊಡಬೇಕಾದ ತೆರಿಗೆಯನ್ನಾಗಲಿ, ಲಾವಣಿಯ ಹಣವನ್ನಾಗಲಿ ಪೂರ್ಣವಾಗಿ ಕೊಡುವುದು ಅಸಾಧ್ಯವಾಗಿದೆ; ಬಂಗಾಲದಲ್ಲಿಯೂ ಸಂಯುಕ್ತಪ್ರಾಂತ ದಲ್ಲಿಯೂ ಅತಿ ಹೆಚ್ಚು ತೆಗೆದುಕೊಂಡು, ಅತಿ ಕಡಿಮೆ ತಿರುಗಿಕೊಡುವ ಜಮೀನುದಾರರ ಅನ್ಯಾಯದ ಆಳಿಕೆ ಯಲ್ಲಿ ರೈತನು ನುಗ್ಗಾಗುತ್ತಿದ್ದಾನೆ; ಬೆಳೆಯ ಧಾರ ಣೆಯು ಅತಿಯಾಗಿ ಇಳಿದಿದೆ; ಈಗಾಗಲೆ ಕೊಟ್ಟ 'ಸೂಟು' ಗಳು ಇನ್ನು ಕೊನೆತನಕ ಉಳಿಯತಕ್ಕುವೇ; ಸಂಯುಕ್ತ ಪ್ರಾಂತದಂತಹ ಭೂಕಂದಾಯದ ಆಡಳಿತಗಳ ನಿಕಟ ಪರಿಚಯವುಳ್ಳವರು ಅಲ್ಪಸ್ವಲ್ಪ ಉಪಾಯ ಯೋಜನೆ ಯಿಂದ ಬಗೆಹರಿಯದೆಂಬುದನ್ನು ಮನಗಂಡಿದ್ದಾರೆ; ಗವ ರ್ನರರ ಸಂಬಳಗಳು ಅತಿ ದೊಡ್ಡವಾಗಿವೆ; ಕೆಲಸಗಳಿಗೆ ಒಪ್ಪದಷ್ಟು ದೊಡ್ಡ ಸಂಬಳಗಳು ಎಷ್ಟೋ ಕಡೆ ಕೊಡ ಲ್ಪಡುತ್ತಿವೆ; ಸರಕಾರದ ಅತಿವ್ಯಯವೃತ್ತಿಯನ್ನು ನಿರ್ದ ಯವಾಗಿ ನಿರೋಧಿಸಬೇಕು; ಇನ್ನೊಂದು ಮಹಾ ಯುದ್ಧವು ಆದೀತೆಂಬ ಭಯದಿಂದ–ಆ ಪ್ರಮಾಣದಲ್ಲಿ ಹಿಂದೀ ಸೈನ್ಯವನ್ನು ಸಜ್ಜುಗೊಳಿಸುವುದನ್ನು ಬಿಟ್ಟು ಹಿಂದುಸ್ಥಾನದ ನಿಜವಾದ ಅಗತ್ಯಗಳಿಗೆ ಸರಿಹೊಂದು ವಂತೆ ಸೈನ್ಯಸಿದ್ಧತೆಯನ್ನು ಮಾಡಬೇಕು; ಸಂಸ್ಥಾನಿಕರು ದೇಶಪ್ರೇಮಪ್ರೇರಿತರಾಗಿ ನಿರತಿಶಯ ಸ್ವಾರ್ಥತ್ಯಾಗ ವನ್ನು ಮಾಡಲು ಸಜ್ಜಾಗಬೇಕು; ಇವೆಲ್ಲ ಸಾಧ್ಯ ವಾದರೂ, ಹಿಂದುಸ್ಥಾನದ ದುಃಸ್ಥಿತಿಯಲ್ಲಿ ವಿಶೇಷ ಬದ ಲಾದಂತಾಗುವುದಿಲ್ಲ; ಯುದ್ಧಗಳಾಗಲಿ, ಕ್ರಾಂತಿಗಳಾ ಗಲಿ ಮಾತ್ರ ಈ ಪ್ರಾಚೀನವೈಷಮ್ಯಗಳನ್ನು ಪಲ್ಲಟ ಗೊಳಿಸಬಲ್ಲುವೆಂದು ಸೂಚಿಸುತ್ತಿದೆ; ಹಿಂದೀ ಭೂಕಂದಾಯದ ಆಡಳಿತವನ್ನಾಗಲಿ, ರಾಜಪ್ರಜೆಗಳ ಸ್ವಭಾವರೂಢಿಗಳನ್ನಾಗಲಿ ನಿರ್ಮೂಲೋತ್ಪಾಟನಮಾಡು ಇನ್ನೇತರಿಂದ ತಾನೇ ಸಾಧ್ಯ; ಹಿಂದೀ ಜನರು ತಮ್ಮ ಸಾಮಾಜಿಕ ಆರ್ಥಿಕ ಅನರ್ಥಪರಂಪರೆಗಳ ಮೂಲ ಕಾರಣವನ್ನು ನಿರ್ದಯವಾಗಿ ಯೋಚಿಸುತ್ತಿದ್ದಾರೆ. ಆದರವರಿಗೆ ತಮ್ಮ ನಾಡಿನಲ್ಲಿಯೇ ಕರ್ತೃಮಕರ್ತೃ ಶಕ್ತಿಯಿಲ್ಲ; ಒಟ್ಟಾರೆ, ಆಶಾತಂತುವೊಂದೂ ಕಾಣುವು ದಿಲ್ಲ, ಏಕೆಂದರೆ ಸರಕಾರವು ಎಲ್ಲವನ್ನೂ ವಿನಿಮುಕ್ತ ವಾಗಿ ಚರ್ಚಿಸಲು ಅವಕಾಶವನ್ನೀಯುವುದಿಲ್ಲ, ಜನರನ್ನು ಸೆರೆಮನೆಗಾಣಿಸುವ ಹೊರತು ಅದಕ್ಕೆ ಬೇರೆ ಹಾದಿಯೇ ಹೊಳೆಯುವುದಿಲ್ಲ; ವಿಮೋಚನೆಯ ದಿನವು ಸಮೀಪಿಸಿ ಲೆಂದು, ಅರಾಜಕತೆಯಿಂದಲಾದರೂ ದಾಸ್ಯಶೃಂಖಲೆ ಗಳನ್ನು ಮುರಿದೊಗೆಯಬೇಕೆನ್ನುವ ದೇಶಭಕ್ತರನ್ನು ಸೌಮ್ಯಮಾರ್ಗಕ್ಕೆ ತರಲೆಳಸುವುದು ನಿರರ್ಥಕ; ಕಾಂಗ್ರೆಸು ಸಂಧಾನವನ್ನು ತಿರಸ್ಕರಿಸಲಿಲ್ಲ; ಇರ್ವಿನ ಗಾಂಧಿ ಒಪ್ಪಂದವನ್ನು ಹಲವು ಪ್ರಾಂತಗಳಲ್ಲಿ ಬೇಕೆಂತ ತೃಣೀಕರಿಸಲಾಯಿತು; ಮತ್ತೆ ಸಂಧಾನದ ಪ್ರಯತ್ನ ವನ್ನು ಮಾಡುವುದು ಅಪರಿಹಾರ್ಯ; ಈಗ, ಸರಕಾರವು ಪ್ರಬಲವಿದ್ದಾಗ, ಆ ಪ್ರಯತ್ನವನ್ನು ಮಾಡದಿದ್ದರೆ ಮುಂದೆ ಸರಕಾರವು ದುರ್ಬಲವಾದಾಗ ಮಾಡಬೇಕಾಗುವುದು;ಬರಲಿರುವ ಸಂಧಾನವು ಸರಕಾರ ಮತ್ತು ಗಾಂಧಿ, ವಲ್ಲಭಭಾಯಿ, ಜವಾಹರಲಾಲರ ನಡುವೆ ಆಗ ತಕ್ಕುದು; ಹಳೆಯ ಒಡಂಬಡಿಕೆಯು ಒಡಂಬಡಿಕೆಯನ್ನಿ ತಕ್ಕುದು–ಚಿರಸ್ಥಾಯಿಯಾದ ಶಾಂತಿಯಲ್ಲವೆಂದು ಕಾಂಗ್ರೆಸು ಸಮರ್ಥಿಸಿದುದರಲ್ಲಿ ದೋಷವಿಲ್ಲ; ಆ ಹಳೆಯ ಒಡಂಬ ಡಿಕೆಯಲ್ಲಿ ಚಿಲ್ಲರೆ ವಿವರಗಳೆ ಪ್ರಾಧಾನ್ಯವನ್ನು ಪಡೆ ದ್ದುವು; ಈಗ ಬೇಕಾದುದು ನಿಜವಾದ ಶಾಂತಿ, ಮತ್ತ ದನ್ನು ದೊರಕಿಸಲು ಮೂಲತತ್ವಗಳ ವಿಮರ್ಶೆಯು ಬೇಕು; ಈ ಮೂಲತತ್ವಗಳನ್ನು ಎರಡೂ ಪಕ್ಷಗಳು ಒಪ್ಪಿಕೊಳ್ಳಬೇಕು; ಈ ತತ್ವಮಾಲಿಕೆಗೆ ಮ. ಗಾಂಧಿಯ ವರ 'ಯಾವ ಯೋಜನೆಯನ್ನೂ – ಸಂಪೂರ್ಣಸ್ವಾ ತಂತ್ರ್ಯದ ಯೋಜನೆಯನ್ನು ಕೂಡ ಚರ್ಚಿಸಬಲ್ಲಧಿಕಾರ ವಿರಬೇಕೆ'ಂಬ ತತ್ತ್ವವನ್ನೂ ಜೋಡಿಸಬೇಕು; ಹಾಗೆ ಜೋಡಿಸುವುದರಿಂದ ಈಗ ಇಳಿತಾಯಕ್ಕೆ ಬಂದಿರುವ ಕಾಂಗ್ರೆಸಿನ ಗೌರವವು ಇನ್ನಿಷ್ಟು ಇಳಿಯಬಹುದು–

CC-0. Jangamwadi Math Collection. Digitized by eGangotri

ಇಷ್ಟೆ; ಹಿಂದುಸ್ಥಾನದ ಆರ್ಥಿಕ ಪ್ರಶ್ನೆಯು ಅತ್ಯಂತ ಮಹತ್ವದ್ದಾಗಿದೆ, ಆದರೆ ದಿಲ್ಲಿಯವರಿಗೆ ಅದರ ಸರಿಯಾದ ಕಲ್ಪನೆಯೇ ಇಲ್ಲ; ಕಾಂಗ್ರೆಸು ಪ್ರತಿಸರಕಾರವಾಗುವುದರಲ್ಲಿ ತನ್ನ ಹೊತ್ತನ್ನು ಹಾಳುಮಾಡಿದ್ದರೆ, ಸರಕಾರವು ಕಾಂಗ್ರೆಸಿನ ಚಟುವಟಿಕೆಗಳನ್ನೆಲ್ಲ (ಅವು ಚಿಲ್ಲರೆಯಾಗಿರಲಿ, ಅಥವಾ ಹಿತಕಾರಿಯಾಗಿರಲಿ) ಮೂಲೆಗೊತ್ತುವುದರಲ್ಲಿ ತನ್ನ ಕಾಲವನ್ನು ಕಳೆಯುತ್ತಿದೆ; ರಾಜ್ಯಘಟನಾನಿರ್ಮಾಣದಿಂದಾಗಲಿ, ರಾಜಘಟನಾವಿಘಟನದಿಂದಾಗಲಿ ಹಿಂದುಸ್ಥಾನದ ಅತ್ಯಂತಿಕ ಮಹತ್ವದ ಪ್ರಶ್ನೆಗಳನ್ನು ಬಿಡಿಸಿದಂತಾಗುವುದಿಲ್ಲ; ಈವೊತ್ತು ಮ. ಗಾಂಧಿ ಮತ್ತವರ ಸಹಚರರೊಡನೆ ಸಂಧಾನವನ್ನು ಹೂಡಿದರೆ, ಅದು ಯಶಸ್ವಿಯಾಗುವುದು; ಅದು ಯಶಸ್ವಿಯಾದರೆ, ಗಾಂಧಿಯವರು ಹತಪ್ರಭರಾಗಿ, ಕಾಂಗ್ರೆಸು ದುರ್ಬಲವಾಗುವುದು; ಸಂಧಾನವು ಹುಸಿಹೋದರೆ, ಮಹಾತ್ಮರು ಸಹಕಾರೇಚ್ಛೆಯುಳ್ಳವರಿರಲೇ ಇಲ್ಲವೆಂಬುದು ನಮಗೆ ತಿಳಿದುಬಂದು, ಅವರನ್ನು ಸೆರೆಮನೆಯಲ್ಲಿಡುವುದರಿಂದ ಅನ್ಯಾಯವಾಗುವುದಿಲ್ಲವೆಂಬುದು ಎಲ್ಲರಿಗೂ ಮನವರಿಕೆಯಾಗುವುದು; ಹೇಗಾದರೂ ಸರಿ— ಅವರು ಅಸ್ತಂಗತಮಹಿಮರಾಗಿ ಹೋಗುವರು, ಇದೇನೂ ಸಣ್ಣ ಲಾಭವಲ್ಲ."

ನಮ್ಮವರ ಮಾತನ್ನು ಅಲ್ಲಗಳೆದರೂ, ಸರಕಾರವು ತನ್ನ ಆಪ್ತಮಿತ್ರನ ಈ ಹಿತವಾದವನ್ನಾದರೂ ನೆನೆದರೆ, ಅದೆಷ್ಟೋ ಚೆನ್ನು.

## ಕೊಡಗೂ ಕರ್ನಾಟಕವೂ

ಯಾವ ದೃಷ್ಟಿಯಿಂದ ವಿಚಾರಿಸಿದರೂ ಕೊಡಗು ಬಿಟ್ಟು ಕರ್ನಾಟಕಕ್ಕೆ ಗತಿಯಿಲ್ಲ; ಕರ್ನಾಟಕದಿಂದ ಸಿಡಿದು ಹೋಗಿ ಕೊಡಗಿಗೆ ಲಾಭವಿಲ್ಲ. ಸ್ವತಂತ್ರವಾದ ಒಂದು ಪ್ರಾಂತವಾಗಬೇಕಿದ್ದರೆ ಕರ್ನಾಟಕಕ್ಕೆ ಕೊಡಗಿನ ಅವಶ್ಯಕತೆಯು ಇದ್ದೇ ಇದೆ. ಆದರೆ ಕೊಡವರ ಆರ್ಥಿಕ ಮತ್ತು ಸಾಂಸ್ಕೃತಿಕ ಹಿತದ ದೃಷ್ಟಿಯಿಂದ ಸ್ವಲ್ಪ ವಿಶಾಲವಾಗಿ ವಿಚಾರಮಾಡಿದರೆ, ಕೊಡಗು ಕರ್ನಾಟಕಕ್ಕೆ ಕೂಡಿಕೊಳ್ಳುವುದೇ ಉಚಿತವೆಂದು, ಯಾರಿಗೆ ಆಗಲಿ, ಸ್ಪಷ್ಟವಾಗಿ ಕಂಡುಬರುವಂತಿದೆ. ಕೊಡಗು ಈಗಿನಂತೆ ಒಂದು ಕಮಿಶನರನ ಚಿಕ್ಕ ಪ್ರಾಂತವಾಗಿಯೆ ಉಳಿಯುವುದಾದರೆ ಅಲ್ಲಿಯ ಜನಗಳಿಗೆ ಗವರ್ನರನ [illegible] [illegible] ಇರುವ ಯಾವ ಹೆಚ್ಚಿನ ಸ್ವತಂತ್ರ ಅಧಿಕಾರಗಳೂ ದೊರೆಯಲಾರವು. ಕಮಿಶನರನ ಸಿಟ್ಟುಸೆಡವುಗಳಿಗೆ ಅನುಸರಿಸಿ ಅಲ್ಲಿಯ ಆಡಳಿತವು ನಡೆಯುವದು. ಲೋಕಮತಾನುವರ್ತಿಗಳಾದ ಕಾಯಿದೆಕೌನ್ಸಿಲುಗಳು ಅಲ್ಲಿ ಸ್ಥಾಪಿತವಾಗಲಾರವು. ಸ್ವತಂತ್ರ ವಿದ್ಯಾನಿಲಯವು (ಯುನಿವರ್ಸಿಟಿಯು) ಕೊಡಗಿನ ಮಟ್ಟಿಗೆ ಆಗುವದು ದುಸ್ತರ; ಕೊಡಗಿಗೆ ಬಂದರವರಂತೂ ಕನಸಿನ ಗಂಟೆ. ಹೈಕೋರ್ಟಿನ ಆಶೆ ಮಾಡುವುದೆ ಬೇಡ. ಈಗಿನಂತೆ ಒಂದು ಸಣ್ಣ ಪ್ರಾಂತವಾಗಿ ಉಳಿಯುವುದರಿಂದ ಕೊಡಗಿಗೆ ಇರುವ ಹಾನಿಯು ಅಷ್ಟು ಇಷ್ಟಲ್ಲ. ಹಲಕೆಲ ಕೊಡವರಿಗೆ ಈಗ ತಮಗೆ ಸ್ವಲ್ಪ ಹೆಚ್ಚು ನೌಕರಿಗಳು ಸಿಕ್ಕುತ್ತಿವೆಯೆಂಬ ಭ್ರಮೆಯಿದ್ದು, ಅದಕ್ಕಾಗಿ ಕೊಡಗು ಈಗಿನಂತೆಯೆ ಚಿಕ್ಕ ನಾಡಾಗಿಯೆ ಉಳಿಯಬೇಕೆಂದು ಅವರು ಹೆಣಗುತ್ತಿದ್ದಾರೆ. ಆದರೆ ದೂರದೃಷ್ಟಿಯಿಂದ ವಿಚಾರಿಸುವವರಿಗೆ ಕೊಡಗಿನ ಈಗಿನ ಸಂಕುಚಿತಪ್ರಾಂತದಿಂದ ಸ್ವಲ್ಪವೂ ನಿಜವಾದ ಲಾಭವಿಲ್ಲವೆಂದು ಮನವರಿಕೆಯಾಗದೆ ಇರಲಾರದು. ಕೊಡವರಲ್ಲಿ ಅನೇಕರಿಗೆ ದಂಡಿನಲ್ಲಿ ಆಡಳಿತದಲ್ಲಿ ದೊಡ್ಡದೊಡ್ಡ ಅಧಿಕಾರಗಳು ದೊರೆತುದು ಅವರಲ್ಲಿರುವ ಉತ್ತಮೋತ್ತಮ ಗುಣಗಳ ಮೂಲಕ. ಅವರು ಸಣ್ಣ ಪ್ರಾಂತದವರೆಂದು ಅವರಿಗೆ ಆ ಅಧಿಕಾರಗಳು ದೊರೆತಿಲ್ಲ. ಆದಕಾರಣ ಆ ಶ್ರೇಷ್ಠಗುಣಗಳು ಕೊಡವರಲ್ಲಿ ಮನೆಮಾಡಿಕೊಂಡಿರುವವರೆಗೆ ಅಂತಹ ಹೆಚ್ಚಿನ ಪದವಿಗಳು ದೊರೆತೇ ತೀರುವುದರಲ್ಲಿ ಸಂದೇಹವಿಲ್ಲ. ಅಲ್ಲದೆ ಕೊಡಗು ಕರ್ನಾಟಕದ ಒಂದು ಅಂಗವಾಗುವುದರಿಂದಂತೂ ಈಗ ಅವರಿಗೆ ಇರುವ ಕೋವಿ ಮದ್ದುಗುಂಡು ಜಮ್ಮಾ ಮೊದಲಾದುವುಗಳ ವಿಶೇಷ ಹಕ್ಕುಗಳು ಇದ್ದಕಿದ್ದಹಾಗೆ ಉಳಿಯುವುದಲ್ಲದೆ ಅಖಂಡಕರ್ನಾಟಕದೊಳಗಿನ ನೌಕರಿ ಪದವಿಗಳಿಗೂ ಸೇರಿಕೊಳ್ಳುವ ಹೆಚ್ಚಿನ ಅಧಿಕಾರವು ಉಂಟಾಗುವುದು. ಇದೆಲ್ಲ ಆರ್ಥಿಕ ದೃಷ್ಟಿಯಿಂದ ಲಾಭವಾಯಿತು. ಕೊಡಗುನುಡಿಯು ಕನ್ನಡದ ತೀರ ಸಮೀಪದ ಭಾಷೆ. ಕೊಡಗರ ಇತಿಹಾಸಸಂಸ್ಕೃತಿಗಳ ಸಂಬಂಧವು ಕರ್ನಾಟಕದೊಡನೆ ಸಾವಿರಾರು ವರುಷಗಳಿಂದ ಅವ್ಯಾಹತವಾಗಿ ಇದ್ದೇ ಇದೆ. ಕೊಡಗರಿಗೆ ಕನ್ನಡಿಗರಷ್ಟು ಸಮೀಪದವರು ಬೇರೆ ಯಾರೂ ಇಲ್ಲ. [illegible] ಕೊಡಗು ಕರ್ನಾಟಕಪ್ರಾಂತದಲ್ಲಿ ಸೇರಿ

CC-0. Jangamwadi Math Collection. Digitized by eGangotri

ಕೊಳ್ಳುವುದರಲ್ಲಿ ಅದಕ್ಕೆ ಯಾವಬಗೆಯ ಹಾನಿಯೂ ಇರದೆ ಲಾಭವೇ ಉಂಟೆಂಬುದು ಸ್ಪಷ್ಟವಿದೆ.

ಕರ್ನಾಟಕವು ಸ್ವತಂತ್ರ ಪ್ರಾಂತವಾಗದೆ, ಈಗಿನಂತೆಯೆ ಮುಂಬಯಿ ಮದ್ರಾಸ ಇಲಾಖೆಗಳಲ್ಲಿ ಹರಿದು ಹಂಚಲ್ಪಟ್ಟಿರುವಂತೆ ಉಳಿದರೆ, ಕೊಡಗು ಯಾವ ಭಾಗಕ್ಕೆ ಸೇರಿಕೊಳ್ಳಬೇಕು ಎಂಬುದೂ ಒಂದು ವಿಚಾರಾರ್ಹ ಪ್ರಶ್ನೆ. ಕೊಡಗು ಮುಂಬಯಿ ಪ್ರಾಂತಕ್ಕೆ ಸೇರಬೇಕೆಂದು ಮುಂಬಯಿ ಇಲಾಖೆಯ ಕನ್ನಡಿಗರಲ್ಲಿ ಹಲವರಿಗೆ ಆಸೆ. ಮದ್ರಾಸಇಲಾಖೆಗೆ ಬರಬೇಕೆಂದು ಅಲ್ಲಿಯ ಕನ್ನಡಿಗರಲ್ಲಿ ಅನೇಕರಿಗೆ ಇಚ್ಛೆ. ಇವೆರಡರಲ್ಲಿ ಯಾವ ಪ್ರಾಂತಕ್ಕೆ ಸೇರಬೇಕೆಂದು ಕೊಡವರು ಇಚ್ಛಿಸುತ್ತಿರುವರೊ ಇನ್ನೂ ತಿಳಿದಿಲ್ಲ; ಇದರ ಮೇಲೆ ಸರಕಾರದ ಆಂತರಿಕ ಇಚ್ಛೆಯು ಏನಿದೆಯೊ ಗೊತ್ತಾಗಿಲ್ಲ. ಕಮಿಶನರರ ಮೋರೆನೋಡಿ ತಮ್ಮ ಮಾತು ಬದಲಿಸುವ ಬುದ್ಧಿವಂತರು ಕೊಡಗಿನಲ್ಲಿ ಏನು ಅಭಿಪ್ರಾಯಪಡುವರೋ,ಹೇಳುವುದು ಕಷ್ಟ.ಅದೆಲ್ಲ ಏನೆ ಇದ್ದರೂ ನಮ್ಮ ಸ್ಪಷ್ಟ ಅಭಿಪ್ರಾಯವು ಹೀಗಿದೆ, ಮುಂಬಯಿ ಇಲಾಖೆಯಲ್ಲಿಯೆ ಆಗಲಿ, ಮದ್ರಾಸ ಇಲಾಖೆಯಲ್ಲಿಯೆ ಆಗಲಿ ಕರ್ನಾಟಕದ ಭಾಗಗಳನ್ನೆಲ್ಲ ಸೇರಿಸಿ ಒಂದೆಡೆಗೆ ಸೇರಿಸುವುದು ಉಚಿತ. 'ಮುಂಬಯಿ' 'ಮದ್ರಾಸ' ಎಂಬ ಅಭಿಮಾನವು ನಮ್ಮ ಏಳಿಗೆಗೆ ಕಾಲ್ತೊಡಕು. ಆದಕಾರಣ ಆ ಸಡುವಿನ ಆಶೆಗೆ ನಾವು ಬಲೆಬೀಳಲಾಗದು. ಯಾವ ಇಲಾಖೆಯಲ್ಲಿಯಾದರೂ ಸರಿ, ಕರ್ನಾಟಕದ ಭಾಗಗಳೆಲ್ಲ ಒತ್ತಟ್ಟಿಗೆ ಬರುವಂತೆ ಏರ್ಪಾಟವಾಗಬೇಕು. ಅದರಲ್ಲಿಯೆ ಕೊಡಗಿನ ಸಮಾವೇಶವೂ ಆಗಬೇಕು.

ಸ್ವತಂತ್ರ ಪ್ರಾಂತದ ಗುರಿಯು ಕೈಗೂಡದಿದ್ದರೆ ಕನಿಷ್ಠ ಮೇಲ್ಕಾಣಿಸಿದ ರೀತಿಯಲ್ಲಿಯಾದರೂ ಕರ್ನಾಟಕ ಪ್ರಾಂತದ ಏರ್ಪಾಟವಾಗಬೇಕೆಂದು ಅಖಂಡಕರ್ನಾಟಕದಲ್ಲಿ ಆಂದೋಲನವುಂಟಾಗುವುದು ಆವಶ್ಯಕವಿದೆ.

**ವ್ಯಕ್ತಿಗೆ ನೀತಿಯಿರುವಂತೆ ರಾಷ್ಟ್ರಕ್ಕೂ ಒಂದು ನೀತಿಯುಂಟು.**

ಮೈಸೂರ್ ಎಕಾನಮಿಕ್ ಜರ್ನಲ್‌ನಲ್ಲಿ ಜಿ. ಎಚ್. ಕಾಸೆಲ್ಸ್, ಎಂ. ಎ. ಎಂಬ ಆಂಗ್ಲರು ಈತೆರನಾಗಿ ಬರೆಯುತ್ತಾರೆ:—" ಪ್ರಾಚೀನ ರೋಮರಾಜ್ಯದಂತೆ ಬ್ರಿಟನು ಒಂದು ಕಾರ್ಯವನ್ನು ಮಾಡಬೇಕಾಗಿದೆ. ಆತನ ನೈತಿಕ ವರ್ಚಸ್ಸದಲ್ಲಿ ಅಧಃಪತಿತನಾಗತೊಡಗಿದರೆ, ಆ ಕಾರ್ಯವನ್ನು ಅದು ಮಾಡಲಾರದು. ನೀತಿತತ್ವಗಳನ್ನು ಗೌರವಿಸುವುದು ಮಾತ್ರವಲ್ಲ,ಯಾವ ರಾಷ್ಟ್ರದಲ್ಲಿ ಆ ತತ್ವಗಳ ಮಹತ್ತ್ವವನ್ನರಿತು ಅವುಗಳನ್ನು ಆಚರಿಸಲು ಸಿದ್ಧರಾದ ಜನರು ಹೆಚ್ಚು ಹೆಚ್ಚಾಗಿರುವರೋ - ಆ ರಾಷ್ಟ್ರವೆ ಹೆಚ್ಚು ಹೆಚ್ಚುಕಾಲ ಆಳಿ ಬಾಳಬಲ್ಲದು. ರಾಷ್ಟ್ರವು ವಿವೇಕಬುದ್ಧಿಯನ್ನು ಎಂದೂ ನುಸುಳಗೊಡಬಾರದು. ಅದು ಹೆಚ್ಚು ಹೆಚ್ಚು ಕಳೆಗುಂದುವ ಭೀತಿಯೇ ಇಂದು ಇದೆಯಲ್ಲದೆ, ಪುಟಗೊಳ್ಳುವ ಚಿಹ್ನೆಗಳಿಲ್ಲ. ವಿವಿಧವರ್ಣಗಳವರು ಹತ್ತರ ಹತ್ತರ ಬರುವುದರಲ್ಲಿ ಇದು ಹೆಚ್ಚಾಗಿ ಕಂಡುಬರುತ್ತಿದೆ. ಮಿಲ್ಲನು ಇದನ್ನು ಮೊದಲು ಸೂಚಿಸಿದನು; ಆತನ ಶಂಕೆಗಳು ಸಾಧಾರವಾಗಿದ್ದುದು ಇಂದು ಒಡೆದು ಕಾಣುತ್ತದೆ....

" ಹಿಂದುಸ್ಥಾನದೊಡನಿದ್ದ ನಮ್ಮ ವ್ಯವಹಾರದಲ್ಲಿ ಸ್ವಲ್ಪ ನೀತಿಗೆ ಪ್ರವೇಶದೊರೆಯಲೆಂದು ನಾನು ಕೇಳಿಕೊಳ್ಳುತ್ತೇನೆ. ಆಳರಸುತನಕ್ಕೆ (Bureaucracy ಗೆ) ಒಂದು ಮರ್ಯಾದೆಯಿದೆ. ಆದರ ಶಕ್ತಿಯ ಹೊರಗೆ ಅದನ್ನು ಉಪಯೋಗಿಸಲಿಕ್ಕೆ ಪ್ರಯತ್ನಿಸುವುದರಿಂದ ಅದು ಬಿರಿತು ಬಿದ್ದುಹೋಗುವ ಸಂಭವವಿದೆ; ಹಿಂದುಸ್ಥಾನದಲ್ಲಿ ನಡೆದುದರಲ್ಲಿ ಈ ಕೊನೆಯ ಮೆಟ್ಟಿಲು ಕಾಣಿಸಿಕೊಂಡಿದೆ. ಮಾಂಟೆಗ್ಯೂ ಅವರು limits of Individual Liberty ಎಂಬ ಪುಸ್ತಕದಲ್ಲಿ ಬರೆದುದು ಕೇವಲ ಪಠ್ಯಪುಸ್ತಕಗಳಿಗೆ ಮಾತ್ರ ಯೋಗ್ಯವಾಗಿದೆ. ಆದರ ಯಥಾರ್ಥತೆಯು, ಈ ದಿನ ಹಿಂದುಸ್ಥಾನದ ಇತಿಹಾಸದಲ್ಲಿ ಅತಿದೊಡ್ಡದೆಂದು ಹೆಸರಾದ 'ಆಳರಸುತನ' ವು ಕರಗಿಹೋಗುತ್ತಿರುವುದರಲ್ಲಿ ಕಂಡುಬರುತ್ತಿದೆ. ಮಾಂಟೆಗ್ಯೂ ಅವರು ಹೀಗೆ ಹೇಳುತ್ತಾರೆ:—

'ಆಳರಸುತನದಲ್ಲಿ ಸಹಾನುಭೂತಿ, ದೂರದೃಷ್ಟಿಗಳಿಗೆ ಅವಕಾಶವಿಲ್ಲ. ರೂಢಿಶರಣವಾದ ಅದು ಅಧಿಕಾರತೃಷ್ಣೆಯಿಂದ ಸಣ್ಣಪುಟ್ಟ ವಿವರಗಳನ್ನು ವ್ಯವಸ್ಥೆಗೊಳಿಸಲು ಹೋಗಿ, ತಾನೇ ಖಿಲವಾಗುತ್ತಿದೆ.'

" ಒಂದು ಕಾಲಕ್ಕೆ ಹೊಗಳಿಸಿಕೊಂಡ ಈ ಆಳರಸುತನಕೆಯು ಇದೇ ರೀತಿಯಲ್ಲಿಕೊನೆಗಾಣತಕ್ಕುದೇ!...

CC-0. Jangamwadi Math Collection. Digitized by eGangotri

# ನಮ್ಮ ಮಾತು

### ಸಾಂಸ್ಕೃತಿಕ ವರ್ತಮಾನಗಳು

ಬೆಳಗಾಂವಿಯಲ್ಲಿ ಕರ್ನಾಟಕ ಕಲಾಸಂಘವೆಂಬುದೊಂದು ಸ್ಥಾಪಿತವಾಗಿದೆ. ಡಾ. ಸಂದಿಮಠ ಅವರು ಅದರ ಅಧ್ಯಕ್ಷರೂ, ಸುರಿತ ಚಿತ್ರಕಾರರಾದ ಶ್ರೀ. ಬಡಿಗೇರ, ಶ್ರೀ. ಮಿಣಜಗಿಯವರು ಉಪಾಧ್ಯಕ್ಷರೂ ಇದ್ದಾರೆ. ಜೂನ್ ತಿಂಗಳ ಮೊದಲನೆಯ ವಾರದಲ್ಲಿ ಒಂದು ಲಲಿತ ಕಲಾಪ್ರದರ್ಶನವನ್ನು ಏರ್ಪಡಿಸಲಿಕ್ಕಿದ್ದಾರೆ. ಇದು ಸಂತೋಷದ ವಿಷಯ.

ಅಲ್ಲದೆ, ಅದೇ ಊರಿನಲ್ಲಿ ಮಧ್ವಕೂಟವೊಂದು ನಡೆದು, ಅಖಿಲಕರ್ನಾಟಕದ ಮಧ್ವಸಿದ್ಧಾಂತಾಭಿಮಾನಿಗಳು ನೆರೆದು, ದಾಸರ ಪದಗಳು, ಸುಳಾದಿಗಳು, ಉಗಾಭೋಗಗಳು ಮೊದಲಾದ ವೈಷ್ಣವ ಭಕ್ತಿಸಾಹಿತ್ಯದ ಪಠನವೂ ಆಯಿತಂತೆ. ಅಭಿನಂದನೀಯ ಉಪಕ್ರಮ.

ಕೊಡಗಿನಲ್ಲಿ ಕುಮಾರಿ ಯದುಗಿರಿಯಮ್ಮನು ತನ್ನ ಕೀರ್ತನೆಗಳಿಂದ ಕೊಡವರನ್ನು ಮೋಹಿಸಿ, ಅಲ್ಲಿ ಕರ್ನಾಟಕ ಸಂಸ್ಕೃತಿಯ ಸೇವೆಯನ್ನು ನಡೆಯಿಸಿದಳು.

ಕಳೆದ ವರ್ಷ ಮೈಸೂರಿನಲ್ಲಿ ಕಲಾಸಮಿತಿಯೆಂಬ ಸಂಸ್ಥೆಯು ಸ್ಥಾಪಿಸಲ್ಪಟ್ಟಿದ್ದು, ಅದು ಜೂನ್ ೧೨ನೆಯ ತಾ. ಸಿಂದ ಒಂದು ವಾರ ಕಲಾಪ್ರದರ್ಶನವೊಂದನ್ನು ಏರ್ಪಡಿಸುವುದರಲ್ಲಿದೆ.

### ' ಕನ್ನಡವೂ ಸಂಸ್ಕೃತವೂ '

ಶ್ರೀ. ಜೋಸ್ಯರ್ ಅವರು ಈ ವಿಷಯವಾಗಿ ಬರೆದ ಲೇಖನವೊಂದನ್ನು ' ವಾದಭೂಮಿ ' ಯಲ್ಲಿ ಹಾಕಿದೆ. ವಿಷಯವು ನಿಜವಾಗಿಯೂ ವಾದಗ್ರಸ್ತವಾಗಿ ತೋರುವುದರಿಂದ, ಅದಕ್ಕಿಲ್ಲಿ ಎಡೆಯನ್ನು ಕೊಟ್ಟಿದೆ. ಲೇಖಕರು ಒಳ್ಳೆಯ ವಿದ್ಯಾವಂತರಾದುದರಿಂದ, ಅವರ ಬರೆವಣಿಗೆಯಲ್ಲಿ ವಿವೇಕದ ನಿಗ್ರಹವು ಇದೆಯೆಂಬ ಭಾವನೆಯಿಂದ, ಅದರಲ್ಲಿ ಯಾವ ಬದಲಾವಣೆಯನ್ನೂ ಮಾಡದೆ ಇಲ್ಲಿ ಕೊಟ್ಟಿದೆ. ಆದರೆ ಅದರಲ್ಲಿಯ ' ಮ. ರಾ. ಬಿ. ಎಂ. ಶ್ರೀಕಂಠಯ್ಯ, ಟಿ. ಎಸ್. ವೆಂಕಣ್ಣಯ್ಯ ಇವರುಗಳು ಮತ್ತು ಇವರ ಅನುಚರರು ' ಈ ಮೊದಲಾದ ವಾಕ್ಯಗಳಲ್ಲಿ ಇರುವ ಭಾವನೆಯ ರೀತಿ ಸರಿಯಲ್ಲವೆಂದು ನಮಗೆ ತೋರುತ್ತದೆ. ಇನ್ನು ಆ ಕೃಷ್ಣಶಿಶುಪಾಲರ ಉಪಮೆ. ಮ. ರಾ. ಬಿ. ಎಂ. ಶ್ರೀಕಂಠಯ್ಯನವರನ್ನು ಬಲ್ಲವರು ಸಂಸ್ಕೃತದ ವಿಚಾರವಾಗಿ ಈ ಬಗೆಯ ಅಭಿಪ್ರಾಯವು ಅವರ ಅಂತರ್ಯದಲ್ಲಿ ರಲಾರದೆಂಬುದನ್ನು ಬಲ್ಲರು. ಆದರೆ ಮ. ರಾ. ಜೋಸ್ಯರ್ ಅವರು ಅವತರಿಸಿದ ಶಬ್ದಗಳಂತೆಯೇ ಮ. ರಾ. ಶ್ರೀಕಂಠಯ್ಯನವರ ನಿಜವಾದ ಅಭಿಪ್ರಾಯವೂ ಇದ್ದ ಪಕ್ಷದಲ್ಲಿ, ನಾವದನ್ನು ಎತ್ತಿ ಹಿಡಿಯಲಾರೆವು. ಏಕೆಂದರೆ, ಕನ್ನಡಕ್ಕಷ್ಟೇ ಏಕೆ, ಪ್ರಪಂಚಕ್ಕೇ ಸಂಸ್ಕೃತ ವಾಙ್ಮಯದ ವ್ಯಾಸಂಗದಿಂದ ಆಗಬೇಕಾದ ಸಾಹಾಯ್ಯವು ಇನ್ನೂ ಬೇಕಾದಷ್ಟಿದೆ. ಅದರ ಜನ್ಮಭೂಮಿಯಲ್ಲಿಯೇ ಅದು ಇಂತು ಅಗತಿಕವಾಗುವುದು ತರವಲ್ಲ. ಇನ್ನು ಜಯಚಂದ್ರ ಗೋರಿಯವರ ವಿಷಯ. ಸಂಸ್ಕೃತಕ್ಕೆ ವಿರೋಧವಾಗಿ ಕನ್ನಡವು ಉರ್ದುವಿನೊಡನೆ ಭುಜಹಚ್ಚಿ ನಿಂತುದು ದೈವದುರ್ವಿಪಾಕ; ಉರ್ದುವಿಗೆ ಸಿಕ್ಕಿದ ವಿಪರೀತ ಪ್ರಾಶಸ್ತ್ಯವಂತೂ ಶುದ್ಧ ದಾಕ್ಷಿಣ್ಯ; ಈ ಬಡಿದಾಟದಲ್ಲಿ ಸಂಸ್ಕೃತವು ತಲೆ ಕೆಳಗಾಗುವುದು ತೀರಾ ಅನುಚಿತ. ಆದರೆ ಸರ್ವಥಾ ಅನ್ಯಾಯವಾದ ಇನ್ನೊಂದು ವಿಷಯವಿದೆ. ಅದೆಂದರೆ, ಸಂಸ್ಕೃತ ಮತ್ತು ಉರ್ದುಗಳು ಕೂಡಿ ದೇಶಭಾಷೆಯಾದ ಕನ್ನಡಕ್ಕೆ ತನ್ನ ಮನೆಯಲ್ಲಿಯೆ ಕೃಚ್ಛ್ರಚಾಂದ್ರಾಯಣಾದಿ ನಿರಾಹಾರ ವ್ರತಗಳನ್ನು ಮಾಡಲು ಹಚ್ಚಿದುದು. ಈ ಮಾತು ಹಿಂದಾಗಿದೆ. ಹೀಗೆಯೆ ಮುಂದಾಗದಂತೆ, ಸಂಸ್ಕೃತವೂ ಇರಲಿ, ಉರ್ದುವೂ ಉಳಿಯಲಿ. ಮೈಸೂರಿನಲ್ಲಿ ತಲೆಯೆತ್ತಿದ ಈ ಭಾಷಾಸಂಕಟದ ನಿಜವಾದ ಸ್ಥಿತಿಯನ್ನು ಸಮರ್ಪಕವಾಗಿ ಯಾರಾದರೂ ಬರೆದು ಕಳಿಸುವರೇ?

### ಡಾಕ್ಕಾ ಸಾಧನಾ ಔಷಧಾಲಯಕ್ಕೆ ಸರ್ ಪ್ರಫುಲ್ಲ ಚಂದ್ರ ರಾಯರವರ ಚಿಟ್ಟಿ

ಸರ್ ಪಿ. ಸಿ. ರಾಯರವರು ಡಾಕ್ಕಾದ ಡಾ. ಘೋಸ ಡಿ. ಎಸ್. ಸಿ. ಅವರೊಡನೆ ಮೇಲಣ ಸಂಸ್ಥೆಯನ್ನು ಸಂದರ್ಶಿಸಿದರೆಂದೂ ಅಲ್ಲಿಯ ಆಯುರ್ವೇದೀಯ ಔಷಧಗಳನ್ನು ಸಿದ್ಧಪಡಿಸುವ ಕ್ರಮವನ್ನು ಕಂಡು ತಲೆದೂಗಿದರೆಂದೂ ಏಶಿಯಾಖಂಡವಷ್ಟೇ ಅಲ್ಲದೆ ಯುರೋಪು ಅಮೇರಿಕಗಳಲ್ಲಿಯೂ ಈ ಔಷಧಗಳಿಗೆ ಗ್ರಾಹಕರಿದ್ದುದನ್ನು

CC-0. Jangamwadi Math Collection. Digitized by eGangotri

ಕೇಳಿ ಆನಂದ ಪಟ್ಟರೆಂದೂ ಉಲ್ಲೇಖಿಸಲು ಔಷಧಾಲಯದ ಚಾಲಕರು ನಮಗೆ ಬಿನ್ನವಿಸಿಕೊಂಡಿದ್ದಾರೆ.

## ಚಿತ್ರಪರಿಚಯ

### (ಪ್ರತೀಕ್ಷೆ)

ಇದೊಂದು ಮೊಗಲ ಶೈಲಿಯೊಳಗಿನ ತ್ರಿವರ್ಣಚಿತ್ರದ ಛಾಯಾಚಿತ್ರ. ಮೂಲಚಿತ್ರವು ಸುಮಾರು ಒಂದು ನೂರು ವರ್ಷಕ್ಕಿಂತಲೂ ಹಳೆಯದಾಗಿದೆಯೆಂದು ತಜ್ಞರ ಅಭಿಪ್ರಾಯವಿದ್ದು, ಆದರ ವರ್ಣವಿನ್ಯಾಸವು ಅಚ್ಚಳಿಯದೆ ಉಳಿದಿದೆ. ಮೊಗಲ ಬಾದಶಾಹಿಯ ಕಡೆಯ ದಿನಗಳಲ್ಲಿ ಎಷ್ಟೋ ಚಿತ್ರಕಾರರು ಉತ್ತರದಿಂದ ಬಂದು, ನಿಜಾಂ ಪ್ರಾಂತದ ಸುತ್ತುಮುತ್ತಲಿನ ಭಾಗದಲ್ಲಿ ನೆಲಸಿ, ತಮ್ಮ ಕಲಾಪ್ರಣಾಲಿಕೆಯನ್ನು ಮುಂದೆ ಸಾಗಿಸಿದರು. ಅಂಥವರಲ್ಲೊಬ್ಬಾತನು ಈ ಚಿತ್ರವನ್ನು ಬರೆದಿರಬೇಕೆಂಬ ಊಹೆಗೆ ಬಲವಾದ ಆಸ್ಪದವಿದೆ. ಈ ಚಿತ್ರದ ಮುಖ್ಯ ವಿಷಯವಾದ ಆ ತುಂಬುಗಲ್ಲದ, ದುಂಡುಮೋರೆಯ, ಬೊಗಸೆಗಣ್ಣುಗಳ ಯುವತಿಯು ತನ್ನೆಲ್ಲಾ ಸಿಂಗಾರದಿಂದೊಡಗೂಡಿ, ಪ್ರಿಯನ ದಾರಿಯನ್ನು ಕಾಯುತ್ತಿರುವಂತೆ ಕಾಣುತ್ತಿದೆ. ಆಕೆಯ ಮುಖದೊಳಗಿನ ಮುಗ್ಧತೆಯು ಅವರ್ಣನೀಯವಾಗಿದೆ. ಮೂಲಚಿತ್ರದಲ್ಲಿ ಸರದೊಳಗಿನ ಮುತ್ತುಗಳು, ಕೂದಲ ಎಳೆಗಳು, ಬಳೆಗಳು, ಉಟ್ಟ ಬಟ್ಟೆಯ ಮೇಲಣ ಹೂವುಗಳು ಮೊದಲಾದ ಅತಿ ಸೂಕ್ಷ್ಮವಾದ ಅಂಶಗಳೆಲ್ಲಾ ವಿಂಗಡವಾಗಿ, ನಯವಾಗಿ, ಸ್ಪಷ್ಟವಾಗಿ ಬಿಡಿಸಲ್ಪಟ್ಟಿವೆ. ಇದುವೆ ಮೊಗಲಪದ್ಧತಿಯ ವಿಶೇಷ. ವಿವರಗಳ ಕಡೆ ಲಕ್ಷ್ಯ, ಮನಮುಟ್ಟುವಂತೆ ಭಾವದ ಪರಿಪೋಷಣೆ – ಇವೆರಡರ ಸಮಿಯಾದ ಬೆರಕೆಯುಳ್ಳ ಈ ಚಿತ್ರವು ಆ ಪದ್ಧತಿಯ ಉತ್ಕೃಷ್ಟವಾದ ಉದಾಹರಣೆಯಾಗಿದೆಯೆನ್ನಬಹುದು.

### ತಿದ್ದುಪಡಿ

'ಆರ್ಥಿಕ ವಿಚಾರಣಾ ಸಮಿತಿಯ ವರದಿ' ಎಂಬ ಲೇಖನದಲ್ಲಿ 'ಪುಟ ೪೮೪ರಲ್ಲಿ, ೩ನೆಯ ಅಂಕಣದಲ್ಲಿ, ಕೆಳಗಿನಿಂದ ೧೬ನೆಯ ಸಾಲಿನಲ್ಲಿ ಆಡಳಿತದ ಬೇರೆವೆಚ್ಚ ೬,೭೫ಎಂದಿದ್ದುದನ್ನು ೬,೭೫ ಲಕ್ಷ ಎಂದು ಓದಿಕೊಳ್ಳಬೇಕು.

ಪುಟ ೪೮೫ರಲ್ಲಿ, ೧ನೆಯ ಅಂಕಣದಲ್ಲಿ, ಕೋಷ್ಟಕ ೩ರಲ್ಲಿ ಒಂಗಾಲ್, ಸಂ... ತ್ತು ... ಪತ್ರಗಳ ಹೆಚ್ಚಿನ ವೆಚ್ಚ'ವು ೩೫;೩೦ ಎಂದು ಆಚ್ಚಾದ ಅಂಕೆಗಳ... 'ಹೆಚ್ಚಿನ ಆದಾಯ'ದ ಕೆಳಗೆ ಅನುಕ್ರಮ... ಓದಿಕೊಳ್ಳಬೇಕು.

'ಕನ್ನಡವೂ ಸಂಸ್ಕೃತವೂ' ಎಂಬ ಲೇಖನ... ೩ನೆಯ ಅಂಕಣದಲ್ಲಿ, ೮ನೆಯ ಸಾಲಿ... 'ಕನ್ನಡವನ್ನೂ ಸಂಸ್ಕೃತವನ್ನೂ' ಎಂ... ದನ್ನು 'ಕನ್ನಡವನ್ನೂ ಇಂಗ್ಲಿಷನ್ನೂ' ಎಂ... ಓದಿಕೊಳ್ಳಬೇಕು.

---

### ದಿವಂಗತ ಬಿ. ಚಂದ್ರಶೇಖರಶರ್ಮ

ಇವರು ಇದೇ ತಿಂಗಳ ೧೬ನೆಯ ತಾರೀಖಿನ ದಿ... ತೀರಿಕೊಂಡರೆಂದು 'ವಿಶ್ವಕರ್ಣಾಟಕ'ದಿಂದ ತಿ... ಬರುತ್ತದೆ. ಇವರ ವಯಸ್ಸು ಇನ್ನೂ ೩೫... ವಾಗಿದ್ದಿತು. ವಿಷಮಶೀತಜ್ವರದಿಂದ ಮುಂಬಯಿ... ಯ ಜಮುನಾಬಾಯಿ ನಾಯರ್‍ರ ಆಸ್ಪತ್ರಿಯಲ್ಲಿ ಚಿ... ಹೊಂದುತಲಿದ್ದವರು ಆಕಸ್ಮಿಕವಾಗಿ ದೈವಾಧೀ... ರಾದರು. ಇವರ ನಿಧನದಿಂದ ಭವಿಷ್ಯತ್ಕರ್ನಾಟಕ... ದೊಡ್ಡ ಹಾನಿಯಾಗಿದೆಯೆಂಬುದರಲ್ಲಿಸಂದೇಹವಿಲ್ಲ. ಇ... ಮೈಸೂರು ಯುನಿವರ್ಸಿಟಿಯ ಎಂ. ಎ... ಯಾಗಿದ್ದು, ಚರಿತಾರ್ಥದ ದೆಸೆಯಿಂದ ಮುಂಬಯಿನ... ದಲ್ಲಿ ನೆಲಸಿದರು. ಮುಂಬಯಿಯಲ್ಲಿ ಕೂಲಿಕಾ... ಮೊದಲಾದವರ ೪೦–೫೦ ಸಾವಿರ ಜನಸಂಖ್ಯೆಯಲ್ಲಿ... ವಿದ್ಯಾವಂತರಾದ ಕನ್ನಡಿಗರು ೧೫ ಸಾವಿರಕ್ಕೆ ಮಿಕ್ಕಿ... ರೆಂದು ಕೇಳುತ್ತೇವೆ. ಶ್ರೀಯುತ ಶರ್ಮರು ಇವರ... ವನ್ನು ಕನ್ನಡ ಸಂಸ್ಕೃತಿಪ್ರಸಾರಕ್ಕಾಗಿ ... ಕೊಳ್ಳಬೇಕೆಂದು ನಿಶ್ಚಯಿಸಿ, 'ಪ್ರಬೋಧಕ' ... ಮಾಸಪತ್ರಿಕೆಯೊಂದನ್ನು ಹೊರಡಿಸಿದರು. ... ಮೊನ್ನೆ ಮೊನ್ನೆಯವರೆಗೆ ನಡೆದು, ಕನ್ನಡಿಗರಿಗೆ ... ಒಂದೂವರೆ–ಎರಡುವರ್ಷಗಳ ಸೇವೆಯನ್ನು ಸಲ್ಲಿಸಿ... ಆದರಲ್ಲಿನ ಲೇಖನಗಳ ಆಯ್ಕೆಯು ಬಹು ಪರಿಶ್ರಮ... ಮಾಡಲ್ಪಡುತ್ತಿದ್ದಿತು. ಕನ್ನಡಸಾಹಿತ್ಯವಿಷಯದಲ್ಲಿ... ಪ್ರೋತ್ಸಾಹನದ ಅಭಾವವು ಅವರ ಪಾಲಿಗೂ ಇ... ಲ್ಲಿಲ್ಲ. ಇದಕ್ಕಾಗಿ ಅವರು ಸ್ವವಿಷಯಕಥನದಲ್ಲಿ ತ... ಮರುಗನ್ನು ಆಗಾಗ ತೋರ್ಪಡಿಸುತ್ತಿದ್ದರು. ... ರೊಬ್ಬರು ಕರ್ನಾಟಕಪತ್ರಿಕಾಪ್ರಪಂಚದಲ್ಲಿ ಮ...

CC-0. Jangamwadi Math Collection. Digitized by eGangotri

ಕರೂ ಸಹೃದಯರೂ ಆದ ವಿಮರ್ಶಕರಿದ್ದರೆಂದು ಹೇಳಬಹುದು. ಶರ್ಮರು ಕೈಕೊಂಡ ಯಾವ ಕೆಲಸವನ್ನೂ ಉದಾತ್ತಭಾವಪ್ರೇರಿತರಾಗಿ, ಪರಿಶ್ರಮಪೂರ್ವಕವಾಗಿ ಮಾಡುತ್ತಿದ್ದರು. ಕತೆಗಳನ್ನೂ, ಕವಿತೆಗಳನ್ನೂ ಬರೆಯುತ್ತಿದ್ದರು. ಅವರ ವಿಜ್ಞಾನವಿಷಯವಾದ ಲೇಖನಗಳು ಅವರ ಬಹುಶ್ರುತತ್ವಕ್ಕೆ ಸಾಕ್ಷಿಯಾಗಿವೆ ಇತಿಹಾಸಸಂಶೋಧನದಲ್ಲಿಯೂ ಅವರಿಗೆ ಅಭಿರುಚಿಯಿದ್ದು, ರೆ. ಫಾದರ್ ಹೆರಾಸ್ ಅವರ ಕೈಕೆಳಗೆ ಅವರು ಮೈಸೂರ ಚರಿತ್ರೆಯ ಶೋಧನೆಯನ್ನು ನಡೆಸಿದ್ದರು. ಹೀಗೆ ಅವರು ವಿವಿಧವಿಷಯ ವಿಚಕ್ಷಣರಾಗಿದ್ದು ತಮ್ಮ ಬುದ್ಧಿಯ ಉಪಯೋಗವನ್ನು ಕರ್ನಾಟಕಾಂಬೆಯ ಸೇವೆಗಾಗಿ ವಿನಿಯೋಜಿಸಿದರು. ಅವರ ಸ್ವಭಾವವು ಅತಿ ಮೃದುವಾಗಿತ್ತು. ಮಾತುಂಗದಲ್ಲಿದ್ದ ಅವರ ಚಿಕ್ಕಮನೆಯನ್ನು ರಾತ್ರಿಯ ೧೦ಗಂಟೆಗೆ ಹುಡುಕಿಕೊಂಡು ಹೋಗಿ, ಅವರನ್ನು ಕಂಡಾಗ, ಪರಿಪರಿಯ ಸತ್ಕಾರವನ್ನು - ಸೌಜನ್ಯಭರಿತವಾದ ಮಾತುಗಳಿಂದ ಮಾಡಿದುದು ನಮಗೆ ನೆನಪಿದೆ. ಒಂದು ಕುಳಿತುಕೊಳ್ಳುವ ಕೋಣೆ, ಒಂದು ಚಿಕ್ಕ ಅಡಿಗೆಮನೆ- ಇಷ್ಟರಲ್ಲಿಯೇ ಅವರ ಸಂಸಾರವು ಅಡಕವಾಗಿದ್ದಿತು. ಅತ್ತ ತೊಟ್ಟಿಲಲ್ಲಿ ಅಳುವ ಮಗುವನ್ನು ಸಂತವಿಸುತ್ತ, ಇತ್ತ ಹಳೆಯ ಶಿಲಾಶಾಸನಗಳ ವ್ಯಾಸಂಗವನ್ನು ನಡೆಸಿದುದರ ಚಿತ್ರವನ್ನು ಮರೆಯುವಂತಿಲ್ಲ. ಪ್ರೊ. ಹಿರಿಯಣ್ಣಯ್ಯನವರ ಲೇಖನವೊಂದನ್ನು ಪ್ರಕಟಿಸಿದುದಕ್ಕಾಗಿ ಜಯಕರ್ನಾಟಕಮಂಡಲದವರಿಗೆ ಧನ್ಯವಾದಗಳನ್ನಿತ್ತರು. ಮೈಸೂರತ್ತಕಡೆಗೆ ಪ್ರೊ. ಹಿರಿಯಣ್ಣಯ್ಯನವರ ವಿಷಯದಲ್ಲಿದ್ದ ಆದರಭಾವವು ಅವರಲ್ಲಿ ನಿರತಿಶಯತೆಯನ್ನು ಪಡೆದಿದ್ದಿತು. ಕರ್ನಾಟಕಾಂಬೆಯು ಅವರ ಆತ್ಮಕ್ಕೆ ಶಾಂತಿಯನ್ನೀಯಲಿ. ಅವರ ಸತೀಮಣಿಯವರ, ಮತ್ತಿಬ್ಬರು ಮಕ್ಕಳ ಶೋಕದಲ್ಲಿ ಅಖಿಲಕರ್ನಾಟಕವು ಭಾಗಿಯಾಗಿದೆ.

## ಸಾದರಸ್ವೀಕಾರ

೧೨೨ ಆರ್ಯಕ: ( ಇಬ್ಸೆನ್ನಿನ "ವಾರಿಯರ್ಸ್ ಆಫ್ ಹೆಲಿಗೆಲ್ಯಾಂಡ್" ಎಂಬ ನಾಟಕದ ಅನುವಾದ ) ಅನುವಾದಕರು ಶ್ರೀ. ಎಸ್. ಜಿ. ಶಾಸ್ತ್ರಿ M. Sc. ಮೈ. ಗ. ಸೋಪ್ ಫ್ಯಾಕ್ಟರಿಯ ಸುಪರಿಂಟೆಂಡೆಂಟರು. ಕ್ರಾ. ಅ. ೧೨೮ ಪುಟ, ಬೆಲೆ ೧-೦-೦ ಶ್ರೀಮಾನ್ ಬಿ. ಎಮ್. ಶ್ರೀ ಕಂಠಯ್ಯನವರು ಮುನ್ನುಡಿ ಬರೆದಿದ್ದಾರೆ.

೧೨೩ श्रीमद्भागवतांतर्गत एकादश स्कंधः ( ಸಚಿತ್ರ ಸಟೀಕ ) ಸಂಸ್ಕೃತದ ಮೂಲ. ಶ್ಲೋಕಗಳನ್ನೂ ಒಂದೊಂದು ಶ್ಲೋಕದ ಅಡಿಯಲ್ಲಿ ಅದರ ಹಿಂದೀ ಭಾಷೆಯ ಅನುವಾದವನ್ನೂ ಪ್ರಕಟಿಸಲಾಗಿದೆ. ಅನುವಾದಕರು ಶ್ರೀ. ಮುನಿಲಾಲರು. ಪ್ರಕಾಶಕರು: ಶ್ರೀ. ಘನಶ್ಯಾಮದಾಸ ಗೀತಾಪ್ರೆಸ್ ಗೋರಖಪೂರ. ಕ್ರಾ. ಅ. ೪೧೨ ಪುಟಗಳು, ಬೆಲೆ ೦-೧೨-೦.

೧೨೪ नैवेद्य: ( ಹಿಂದೀ ) ಪರಮಾರ್ಥ ಗ್ರಂಥಮಾಲೆಯ ಏಳನೆಯ ಪುಷ್ಪ. ಲೇಖಕರು ಶ್ರೀ. ಹನುಮಾನ್ ಪ್ರಸಾದ ತಿವಾರಿ. ಇದನ್ನೂ ಮೇಲಿನ ಗೀತಾಪ್ರೆಸ್ಸಿನವರೆ ಪ್ರಕಟಿಸಿರುವರು. ಕ್ರಾ. ಅ. ೩೪೨ ಪುಟ ಬೆಲೆ ೦-೧೦-೦

೧೨೫ ಬಡವರ ಬಂಧು ( ಮಾಸ ಪತ್ರಿಕೆ ) ಸಂಪಾದಕರು ಶ್ರೀ. ಮಂಗಳೂರ ಜಾರಪ್ಪ. ಸಹಸಂಪಾದಕರು ಬಿ. ನರಸಪ್ಪ. ಇದೇ ನೋ ಒಂದನೆಯ ತಾರೀಖಿಗೆ ಹೊಸವರ್ಷದ ಮೊದಲನೆಯ ಸಂಚಿಕೆ ಹೊರಟಿದೆ. ಡೇಮಿ ೧/೮ ಅಳತೆಯ ೧೪ ಪುಟಗಳಿವೆ. ವಾ. ವ. ಅಂ. ವೆ. ಸೇರಿ ಒಂದೂಕಾಲು ರೂಪಾಯಿ. ಮನೋರಂಜಕವಾದ ಕತೆ ಕವಿತೆ ನಗೆಬರೆಹಗಳಿಂದ ತುಂಬಿದೆ. ನೂತನಬಂಧುವು ಬಹುಕಾಲ ಬಾಳುವಂತೆ ಕನ್ನಡಿಗರು ಉದಾರಾಶ್ರಯವನ್ನು ಕೊಡಲಿ !

೧೨೬ The Mysore observer. ( ಇಂಗ್ಲಿಷ ವಾರಪತ್ರಿಕೆ ) ಸಂಪಾದಕರು ಶ್ರೀ. ಗೋಪಾಲಸ್ವಾಮಿ ಅಯ್ಯಂಗಾರ್ ಎಂ. ಎ. ಬಿ. ಎಲ್. ಫುಲ್‌ಸ್ಕೇಪ್ ಅಳತೆಯ ಹನ್ನೆರಡು ಪುಟಗಳು. ಬಿಡಿ ಸಂಚಿಕೆಗೆ ಒಂದುಆಣೆ.

CC-0. Jangamwadi Math Collection. Digitized by eGangotri

## ಅತಿ ಅಗ್ಗ! ಅರ್ಧ ಬೆಲೆಗೆ!

'ಜಯಕರ್ನಾಟಕ' ದಲ್ಲಿ ಇಂದಿನ ವರೆಗೆ ಅಚ್ಚಾದ ಎಲ್ಲ ಬ್ಲಾಕುಗಳನ್ನೂ ಅರ್ಧ ಬೆಲೆಗೆ ಮಾರುತ್ತೇವೆ. ಬೇಕಾದವರು ಯಾವ ಸಂಚಿಕೆ ಎಷ್ಟನೆಯ ವರ್ಷ ಎಂಬುದನ್ನು ತಿಳಿಸಿದಲ್ಲಿ ಕಳಿಸಿ ಕೊಡುತ್ತೇವೆ. ಬಾಡಿಗೆಯಿಂದ ಬೇಕಾದರೂ ಕೊಡುವೆವು. ಪತ್ರ ಬರೆಯಬೇಕು—

ಕಾರ್ಯದರ್ಶಿ
ಜಯಕರ್ನಾಟಕ ಕಾರ್ಯಾಲಯ
ಧಾರವಾಡ.

---

ಅಖಿಲ ಕನ್ನಡ ನಾಡಿನಲ್ಲಿ ಒಂದೇ ಒಂದಾದ
ಪಂಡಿತರಿಂದ ಉತ್ತಮ ಕಥೆಗಳೆಂದು ಹೊಗಳಲ್ಪಟ್ಟ

## ಒಂದಾಣೆಮಾಲೆ

ತಿಂಗಳಿಗೊಂದು ಕಥೆ! ವರ್ಷಾಂತ್ಯಕ್ಕೆ ಉತ್ತಮ ಕಥೆ ಉಚಿತ! ವಾ. ಚ. ಒಂದೇ ರೂಪಾಯಿ ಅ. ವೆ. ಸೇರಿ!

ಕನ್ನಡಿಗರಲ್ಲಿ ಇದೀಗ ಬೆಳೆಯುತ್ತಲಿರುವ ಹೊಸ ಬಗೆಯ ವಾಚನಾಭಿಲಾಷೆಯನ್ನು ಪೂರ್ತಿಗೊಳಿಸಲು ಹೊರಟ ಈ ಒಂದಾಣೆಮಾಲೆಗೆ ಎರಡನೆ ವರುಷವು ಆರಂಭವಾಯಿತು. ಇದರಲ್ಲಿ ಆಬಾಲವೃದ್ಧರಿಗೂ ಮನರಂಜನೆಯಾಗುವಂಥ ಕತೆ, ಕಾದಂಬರಿ, ನಾಟಕ ಮೊದಲಾದವುಗಳನ್ನು ಪೋಣಿಸಲಾಗಿದೆ. ಪ್ರತಿ ತಿಂಗಳೂ ಕ್ರೌನ ೧೬ರಿಂದ ೨೦ಪುಟಗಳ ಕಥೆಗಳು. ಕಡೆಗೊಂದು ಕಥೆಯನು ಉಚಿತವಾಗಿ ಚಂದಾದಾರರಿಗೆ ಕೊಡುವ ವ್ಯವಸ್ಥೆ ಮಾಡಿದೆ. ಪ್ರತಿ ಹುಣ್ಣಿಮೆಗೆ ತಪ್ಪದೆ ಹೊರಡುವದು. ಬೇಗನೆ ೧ ರೂ. ಕಳಿಸಿ ಚಂದಾದಾರರಾಗಿ ಲಾಭ ಪಡೆಯಿರಿ! ಹೊಸ ಚಂದಾದಾರರಿಗೆ ಈ ಮೊದಲು ಪ್ರಕಟಿಸಿದ ಪುಸ್ತಕಗಳು ಬೇಕಾಗಿದ್ದರೆ ಅರ್ಧ ಬೆಲೆಗೆ ಕೊಡಲಾಗುವದು.

### ಎರಡನೇ ವರುಷದ ಮೊದಲನೇ ಪುಷ್ಪ ನಿರ್ದೋಷಿ

ಎಂಬ ಸರ್ವಾಂಗ ಸುಂದರವಾದ ಕಥೆಯು ಅಚ್ಚಿನಲ್ಲಿದ್ದು ಆರ ಹುಣ್ಣಿಮೆಗೆ (ಜೂನ ತಿಂಗಳಲ್ಲಿ) ಹೊರಬೀಳುವದು. ಆದುದರಿಂದ ಕನ್ನಡಿಗರೆಲ್ಲರು ಚಂದಾದಾರರಾಗಿಯೂ, ಚಂದಾದಾರರನ್ನು ಕೂಡಿಸಿಕೊಟ್ಟೂ ಸಹಾಯ ಮಾಡಬೇಕು.

೨ನೇ ಪುಷ್ಪ 'ಅದೃಷ್ಟವಲ್ಲ ಅದೃಷ್ಟಿ.' ಲೇಖಕರು:- N. R. Kulkarni. M. A. L. L. B.

### ಮೊದಲನೇ ವರುಷದಲ್ಲಿ ಪ್ರಕಟವಾದ ಪುಸ್ತಕಗಳು.

೧ ಭಾರ್ಗವೀ ೨ ಪುನರುಜ್ಜೀವನ ೩ ಎಚ್ಚರ ೪ ನಿಸರ್ಗಾವಮಾನ ೫ ಸ್ವಾರ್ಥತ್ಯಾಗ ೬ ಸಾವಿತ್ರೀ ಸಾಹಸ ೭ ವೀರ ವಲ್ಲಭಭಾಯಿ, [ಜೀವನಚರಿತ್ರೆ]

ವಿಳಾಸ:— ಆಡಳಿತೆಗಾರ,

ಕರ್ನಾಟಕ ಸಾಹಿತ್ಯಸೇವಾ ಮಂಡಲ, (ರಂಜಕತಾನ)
ಬಸವನಬೀದಿ–ಶಹಾಪೂರ ರೋಡ–ಬೆಳಗಾವಿ.

---

## GAIN YOUR HEALTH AND VIGOUR



### THROUGH YOGIC CULTURE AND PHYSICAL EXERCISES.

The folder will give you a complete idea of my course. Send Three Annas stamps to cover postage. Enrol your name at once. Earlier the better.

**S. J. Bapat**
Health and Physical Culture Expert
Madihal, DHARWAR.

CC-0. Jangamwadi Math Collection. Digitized by eGangotri

# ‘ಜಯಕರ್ನಾಟಕ’

ಅಖಿಲ ಕರ್ನಾಟಕದ ಪುನರುಜ್ಜೀವನವೇ ಗುರಿಯುಳ್ಳ ಅಖಂಡ ಕರ್ನಾಟಕದ ಪ್ರಮುಖ ಮಾಸಪತ್ರಿಕೆ:—

ವಾರ್ಷಿಕ ಚಂದಾ ( ಅಜೇವೆಚ್ಚ ಸೇರಿ ). ೫-೮-೦. ಪರದೇಶ. ೭-೦-೦.

‘ಜಯಕರ್ನಾಟಕ’ ವು ಪ್ರತಿ ತಿಂಗಳ ಮೊದಲನೆಯ ತಾರೀಖಿಗೆ ತಪ್ಪದೆ ಹೊರಡುವದು. ಬೇಕಾದ ಸಂಚಿಕೆಯಿಂದ ಚಂದಾದಾರರಾಗಲು ಬರುವದು. ಚಂದಾ ಹಣವನ್ನು ಯಾವಾಗಲೂ ಮುಂಚಿತವಾಗಿಯೇ ಕಳಿಸಬೇಕು. ಅಥವಾ ವ್ಹಿ. ಪಿ. ಯಿಂದ ಕಳಿಸಲಾಗುವದು. ಜಯಕರ್ನಾಟಕವನ್ನು ಎಲ್ಲ ಚಂದಾದಾರರಿಗೂ ತಪ್ಪದೆ ಸಮ್ಮಲ್ಲಿರುವ ಪೋಷ್ಟಿನಲ್ಲಿಯೇ ಪ್ರತಿ ತಿಂಗಳು ಕಳಿಸಲಾಗುವದು. ಸಂಚಿಕೆ ಬಾರದಿದ್ದವರು ಆ ತಿಂಗಳ ೧೫ ನೇ ತಾರೀಖಿನಲ್ಲಿಯೇ ಬರೆಯಬೇಕು. ಮುಂದಿನ ತಕರಾರುಗಳಿಗೆ ನಾವ ಹೊಣೆಗಾರರಲ್ಲ.

## ಜಾಹೀರಾತುದಾರರಲ್ಲಿ ಬಿನ್ನಹ.

ಎಲ್ಲ ಹಳೆಯ, ಹೊಸ ಜಾಹೀರಾತುದಾರರಿಂದ ಮುಂಗಡವಾಗಿಯೇ ಹಣ ಬರಬೇಕು. ಅವರು ವ್ಹಿ. ಪಿ. ಮಾಡಬೇಕೆಂದು ಬಯಸಿದರೆ ಹಾಗೆ ಮಾಡಲಾಗುವದು. ಮುಂಗಡ ಹಣವಿಲ್ಲದೆ ಯಾವ ಜಾಹೀರಾತನ್ನೂ ಪ್ರಕಟಿಸಲಾಗುವದಿಲ್ಲ. ಹೊಸದಾಗಿ ಜಾಹೀರಾತು ಕೊಡಲಿಚ್ಛಿಸುವವರು ಪ್ರತಿ ತಿಂಗಳ ೨೫ ನೇ ತಾರೀಖಿನಲ್ಲಿಯೇ ತಮ್ಮ ಹಣ ಮತ್ತು ಮಜಕೂರು ಕಳಿಸಬೇಕು.

**ಕಡಿಮೆ ಮಾಡಿದ ಜಾಹೀರಾತಿನ ದರಗಳು:—**

| ಪುಟ. | ೧ ವರ್ಷ. | ೬ ತಿಂಗಳು. | ೩ ತಿಂಗಳು. | ೧ ಸಾರೆ. |
|---|---|---|---|---|
| ೧ | ೧೮೦ ರೂ. | ೯೫ ರೂ. | ೫೦ ರೂ. | ೨೦ ರೂ. |
| ೧/೨ | ೯೫ ,, | ೫೦ ,, | ೩೦ ,, | ೧೨ ,, |
| ೧/೪ | ೫೦ ,, | ೩೦ ,, | ೨೦ ,, | ೭ ,, |
| ೧/೮ | ೩೦ ,, | ೨೦ ,, | ೧೨ ,, | ೪ ,, |

ಹೆಚ್ಚಿನ ಸಂಗತಿಗಾಗಿ ಬರೆದು ತಿಳಿಯಬೇಕು.

ವ್ಯವಸ್ಥಾಪಕ

‘ಜಯಕರ್ನಾಟಕ’ ಧಾರವಾಡ.




“ ರಾಜಾಸ್ನೋ ” ಮುಖಸೌಂದರ್ಯವನ್ನು ಹೆಚ್ಚಿಸುತ್ತೆ. ಹಿಂದುಸ್ಥಾನಕ್ಕೆಲ್ಲ ಎಜಂಟರು:—
ಮನಯಮ್ ಮತ್ತು ಕಂಪೆನಿ. ಬಳ್ಳಾರಿ.

CC-0. Jangamwadi Math Collection. Digitized by eGangotri

# ಪರಿವಿಡಿ

ವಿ. ಸೂ:— ಬರೆಹಗಾರರ ಹೆಸರುಗಳ ಹಿಂದೆ 'ಶ್ರೀಯುತ' ಎಂದು ಸೇರಿಸಿ ಓದಿಕೊಳ್ಳಬೇಕು.




**ದೂರಸ್ಥಳಿಕರ ಅನುಕೂಲಕ್ಕಾಗಿ ಅಸ್ತ್ರಚಿಕಿತ್ಸಾ ಪ್ರವೀಣರಾದ**
**ಪಂಡಿತ ಆರ್. ವಿ. ರಾಜು ಇವರ ಅಮೂಲ್ಯವಾದ ಔಷಧಿಗಳು.**

೧ ರಾಮಾಮೃತ ಅಸ್ಥಿಸಂಜೀವಿನಿ ಕಲ್ಕ:-(ಮೇಲೆ ಕಟ್ಟಲಿಕ್ಕೆ) ಎಲ್ಲ ತರಹದ ಮುರಿದ ಎಲವುಗಳನ್ನೂ ತಪ್ಪಿದ ಕೀಲುಗಳನ್ನೂ ಹಳೇ ನೋವು, ವಾಯು ಗಂಟುಗಳನ್ನೂ ಗುಣಮಾಡುವದರಲ್ಲಿ ರಾಮಬಾಣದಂತಹ ಶ್ರೇಷ್ಠವಾದ ಸಂಜೀವಿನಿ.

೭ ದಿವಸಗಳ ಉಪಯೋಗಕ್ಕಾಗುವ ೪ ತೊಲಾ ಔಷಧಕ್ಕೆ ಕ್ರಯ ೨-೪-೦ ಟಪ್ಪಾಲು ಹಾಸಲು ಬೇರೆ.

೨ ಕೃಷ್ಣಾಮೃತ ಅಸ್ಥಿಸಂಜೀವಿನಿ ತೈಲ:-(ಮೇಲೆ ಸವರಲಿಕ್ಕೆ) ಪೆಟ್ಟು ತಗಲಿದ ಮೂಳೆಗಳಿಗೂ ಮತ್ತು ಕೀಲುಗಳ ನೋವುಗಳಿಗೂ, ಉಳುಕು ಅಥವಾ ಚಳುಕು ಮತ್ತು ಹಳೇ ನೋವುಗಳಿಗೂ ಎಲ್ಲಾ ತರಹದ ವಾಯು ನೋವುಗಳಿಗೂ ಸವರಲು ಮಹತ್ತರವಾದ ವನಸ್ಪತಿತೈಲವು.

೪ ಔನ್ಸು ಬಾಟ್ಲಿಗೆ ೧ಕ್ಕೆ ೧-೮-೦ ಟಪ್ಪಾಲ ಹಾಸಲು ಬೇರೆ.

ಹೆಚ್ಚಿನ ವಿಷಯಗಳಿಗೆ ವಿವರವಾಗಿ ಈ ವಿಳಾಸಕ್ಕೆ ಬರೆಯಿರಿ.:- ಪಂಡಿತ ಆರ್. ವಿ. ರಾಜು.

ಶ್ರೀಲಕ್ಷ್ಮೀವಿಲಾಸ ವೈದ್ಯಶಾಲಾ

೨೨೭ ಸಯಾಜಿರಾವ ರೋಡು ಮೈಸೂರು.


CC-0. Jangamwadi Math Collection. Digitized by eGangotri



**ಬೀದಿಯಲ್ಲಿ**

( ಒಂದು ತೈಲಚಿತ್ರ )

ಚಿತ್ರಶಿಲ್ಪಿ— ಶ್ರೀ. ಕಮಡೋಳಿ (ಹುಬ್ಬಳ್ಳಿ)

CC-0. Jangamwadi Math Collection. Digitized by eGangotri





| ಸಂಪುಟ ೧೦ | ಆಂಗಿರಸ ಸಂವತ್ಸರ, ಕಾರ ಹುಣ್ಣಿವೆ<br>ಚಾಲುಕ್ಯ ವಿಕ್ರಮ ವರ್ಷ ೮೫೭ | ಸಂಚಿಕೆ ೮ |
|---|---|---|


# ಕನ್ನಡವಿಚಾರ


ಲೇಖಕರು:— ಶ್ರೀ ದ. ರಾ. ಬೇಂದ್ರೆ ಮತ್ತು ಶ್ರೀ ಬೆಟಗೇರಿ ಕೃಷ್ಣಶರ್ಮ


## ಕನ್ನಡನುಡಿ

ತಮಿಳು ತೆಲುಗು ನುಡಿಗಳಂತೆಯೆ ಕನ್ನಡವು ನುಡಿಯ ಹೆಸರೇ ಹೊರತು ನಾಡಹೆಸರಲ್ಲ. "ತಮಿಳ್" ಎಂದರೆ ಮಧುರವಾದುದು. ಮಾಧುರ್ಯವನ್ನು ಸೂಸುವ ನುಡಿ ತಮಿಳೆಂದು ತಮಿಳು ಪಂಡಿತರ ಮತ. 'ತೇನ್' ಎಂದರೆ ಜೇನು. ಈ ಮೂಲ ಶಬ್ದದಿಂದಲೆ ತೆನುಗು ತೆಲುಗು ಎಂಬ ರೂಪಸಿದ್ಧಿಯಾಗಿರುವುದೆಂದು ತೆಲುಗು ಪಂಡಿತರ ಅಭಿಪ್ರಾಯ. ತಮಿಳಿನಂತೆಯೆ ತೆಲುಗು ಕೂಡ ಮಾಧುರ್ಯವಾಚಿಯಾದುದೇ ಎಂದು ಹೇಳಬಹುದು. "ಕನ್ನಡ" ಶಬ್ದದ ಮೂಲವನ್ನು ಕಂಡುಹಿಡಿಯುವುದಕ್ಕಾಗಿ ಇದುವರೆಗೆ ಹಲವು ಜನರು ಹವಣಿಸಿರುವರಾದರೂ ಸರ್ವಜನ ಸಮ್ಮತವಾಗುವಂತೆ ನಿರ್ಣಯವನ್ನು ಹೇಳಿದವರಾರೂ ಇಲ್ಲ. ಮುನ್ನಿನ ನಮ್ಮ ಪಂಡಿತರು 'ಕನ್ನಡವು ಭಾಷಾವಾಚಿಯೇ ಹೊರತು ದೇಶವಾಚಿಯಲ್ಲ' ಎಂಬ ಮಾತನ್ನು ಒಪ್ಪಿಕೊಳ್ಳುತಿದ್ದರೂ 'ಕನ್ನಡ' ಎಂಬುದು 'ಕರ್ಣಾಟ' ಎಂಬ ಸಂಸ್ಕೃತದ ಅಪಭ್ರಂಶವೆಂಬುದನ್ನು ಸಿದ್ಧಮಾಡಲು ಪ್ರಯತ್ನಿಸಿದ್ದಾರೆ. "ಕರ್ಣ್ ಎಂಬ ಭೇದನಾರ್ಥಕ ಧಾತುವಿನಿಂದ ಕರ್ಣಾಟ ಶಬ್ದವು ಹುಟ್ಟಿದೆ" ಎಂಬುದಾಗಿ ಕೇಶವವರ್ಣಿ (೧೩೫೯) ಯೆಂಬ ಜೈನ ಪಂಡಿತನು ಹೇಳುತ್ತಾನೆ. ಕನ್ನಡ ವ್ಯಾಕರಣಕಾರರಾದ ಕೇಶಿರಾಜ ಭಟ್ಟಾಕಳಂಕರು ಹೆಚ್ಚಿನದೇನನ್ನೂ ವಿವರಿಸದೆ 'ಕನ್ನಡ'ವು 'ಕರ್ಣಾಟ'ದ ಅಪಭ್ರಂಶವೆಂದು ಹಾಗೆಯೆ ಹೇಳಿಬಿಟ್ಟಿರುವರು. ವಿಶ್ವಗುಣಾದರ್ಶ ಎಂಬ ಸಂಸ್ಕೃತ ಗ್ರಂಥದಲ್ಲಿ "ಕರ್ಣಗಳಲ್ಲಿ ಅಟನ ಮಾಡುವುದು ಕರ್ಣಾಟ" ಎಂದು ಕರ್ಣಾಟ ಶಬ್ದದ ಸಂಸ್ಕೃತ ರೂಪಸಿದ್ಧಿಯನ್ನು ಮಾಡಲಾಗಿದೆ. ಪಾಶ್ಚಾತ್ಯ ಸಂಶೋಧಕರು ನಾಡಿನಿಂದಲೆ ನುಡಿಗೆ ಹೆಸರು ಬಂದಿರಬಹುದೆಂಬ ಕಲ್ಪನೆಯಿಂದ ಹೊರಟಿರುವರು. ಕರ್ಣಾಟ, ಕನ್ನಡ ಇವುಗಳನ್ನು ನಸುವೆ ಪರೀಕ್ಷೆ ಮಾಡಿ ಅವೆರಡರ ನಡುವೆ "ಕರ್‌ನಾಡು" ಎಂಬುದಿನ್ನೊಂದು ಶಬ್ದವನ್ನು ಕಲ್ಪಿಸಿದರು. ಸಂಸ್ಕೃತ ಪಂಡಿತರು "ಕರ್‌ನಾಡ"ನ್ನೇ "ಕರ್ಣಾಟ"ವಾಗಿಸಿಕೊಂಡರೆಂದೂ ಸಾಮಾನ್ಯ ಜನರು 'ಕರ್‌ನಾಡು' ಎಂಬುದನ್ನು ಕೆಡಿಸಿ 'ಕನ್ನಡ'ವೆಂದು ಮಾಡಿದರೆಂದೂ ನಿರ್ಣಯವನ್ನು ಹೇಳಿದರು. ಇವರ


CC-0. Jangamwadi Math Collection. Digitized by eGangotri

ಶ್ರೀನಿವಾಸ, ಶ್ರೀ. ಡಿ. ವ್ಹಿ. ಗುಂಡಪ್ಪ, ಶ್ರೀ. ಬಿ. ಎಂ. ಶ್ರೀಕಂಠಯ್ಯ ಮೊದಲಾದವರು ಅದನ್ನು ಪ್ರೌಢಾವಸ್ಥೆಗೆ ತಂದರು. ಮಂಗಳೂರಿನ ಕಡೆಗೆ ಶ್ರೀ. ಪಂಜೆ ಮಂಗೇಶರಾವ,ಶ್ರೀ. ಗೋವಿಂದ ಪೈ,ಶ್ರೀ ತಿಮ್ಮಪ್ಪಯ್ಯ, ಶ್ರೀ. ಕ. ಶಂಕರಭಟ್ಟರು ಹಾಗು ಇನ್ನುಳಿದವರಿಂದ ಈ ಕಾರ್ಯವು ಕೊನೆಗಂಡಿತು. ಉತ್ತರ ಕರ್ನಾಟಕದಲ್ಲಿ ಶ್ರೀ ಬೇಂದ್ರೆ ಹಾಗು ಇನ್ನುಳಿದ ಕೆಲವರು ಇದನ್ನು ಮೊದಲು ಪೂರೈಸಿದರು.

ಮೈಸೂರಿನಲ್ಲಿ ಹೀಗೆ ಒಂದು ವಿಶಿಷ್ಟ ರೀತಿಯಿಂದ ಪ್ರಾರಂಭವಾದ ಪುನರುಜ್ಜೀವನವು **ಕಿರಿಯ ಕಾಣಿಕೆ, ತಳಿರು, ಕೊಳಲು, ಗೀತಗಳು** ಮುಂತಾದ ಗ್ರಂಥಗಳಲ್ಲಿ ಕೊನರೊಡೆದಿದೆ. ಉತ್ತರ ಕರ್ನಾಟಕದಲ್ಲಿ ವ್ಯಕ್ತವಾದ ಪುನರುಜ್ಜೀವನದ ಮುಂದಿನ ಸ್ವರೂಪವು 'ಗುಂಪಿ' ನಲ್ಲಿಯ ಉಳಿದವರ ಕವಿತೆಗಳಲ್ಲಿಯೂ ಹಾಗು ಗುಂಪಿನ ಹೊಂದಿಕೆಯನ್ನನುಸರಿಸಿ ನಿರ್ಮಿತವಾಗಿರುವ ಕೂಟ - ಬಳಗ - ತಂಡದವರ ಕವಿತೆಗಳಲ್ಲಿಯೂ ವ್ಯಕ್ತವಾಗಿದೆ. ಮಂಗಳೂರಿನಲ್ಲಿಯ ಕಾವ್ಯಲತೆಯಲ್ಲಿ **ಕಾಣಿಕೆ, ಹೂಗೊಂಚಲು, ಮುನವಿ** ಮೊದಲಾದ ನವೀನವಾದ ಕುಸುಮುಗಳು ಅರಳಿರುವವು.

ಇನ್ನು ಮುಂದೆ ಬರಲಿರುವ ಕವಿಗಳಿಗೆ ಹೀಗೆ ಇದೀಗ ನಿರ್ಮಿತವಾದ ರಾಜಮಾರ್ಗದಲ್ಲಿ ನಡೆಯದೆ ಗತ್ಯಂತರವಿಲ್ಲ. ಎಂದರೆ ಇಂದು ಕೀರ್ತಿವಂತರಾಗಿರುವ ಕವಿಗಳ ಪ್ರಭಾವವು ಈ ತರುಣ ಕವಿಗಳ 'ಪ್ರಥಮ ಪ್ರಯತ್ನ' ಗಳಲ್ಲಿ ಸಹಜವಾಗಿ ಗೋಚರವಾಗುವದು. ಅವರು ಮುಂದೆ ಸ್ವತಂತ್ರರಾದ ಕವಿಗಳಾಗಬಹುದು. ತಮ್ಮದೇ ಆದ ಒಂದು ಕಾವ್ಯದ ಶೈಲಿಯನ್ನು ನಿರ್ಮಿಸಬಹುದು. ಈ ಪವಾಡವು ಜರುಗುವವರೆಗೆ ಮಾತ್ರ ಅವರು ರಾಜಮಾರ್ಗವನ್ನು ಹಿಡಿದು ನಡೆಯಬೇಕಾಗುವದು.

ಆಧುನಿಕ ಸಾಹಿತ್ಯವು ಇನ್ನೂ ವಿಕಸಿತವಾಗುವ ಅವಸ್ಥೆಯಲ್ಲಿದ್ದಾಗ ಈ ಕಟ್ಟಳೆಯು ಕಾರಣವೇನೆಂದು ಕೆಲವರು ಕೇಳಬಹುದ . ಮುಂದೆ ಕಾವ್ಯದಲ್ಲಿ ಬರಲಿರುವ ನಾವೀನ್ಯಕ್ಕೂ ವೈವಿಧ್ಯಕ್ಕೂ ಇದು ಅಪಾಯಕರವಾಗುವದೆಂದು ಹಲವರು ಹೇಳಬಹುದು. ಆದರೆ ನವಯುಗವು ಆರಂಭವಾಗಿ ಇಂದಿಗೆ ಕಾಲು ಶತಮಾನದಷ್ಟು ಅವಧಿಯಾದರೂ ವಿಕ್ಕಿದೆ. ಈ ಅವಧಿಯಲ್ಲಿ ಎಷ್ಟೋ ಪ್ರಯೋಗಗಳಾಗಿ ಆಧುನಿಕ ಕಾವ್ಯದಲ್ಲಿ ಉತ್ತಮವಾದ ಭಾಗದ ವಿಶಿಷ್ಟ ಲಕ್ಷಣಗಳು ಸುಪ್ರಶ್ರುತವಾಗಿವೆ. ಈ ಕಾವ್ಯಕ್ಕೆ ತಕ್ಕುದಾದ ಛಂದಸ್ಸು ನಿರ್ಮಿತವಾಗಿದೆ. ಅದಕ್ಕೆ ಯೋಗ್ಯವಾದ ಕಲೆಯೂ ಶೈಲಿಯೂ ರೂಪಗೊಂಡಿವೆ. ಅಂತೂ ಅನೇಕ ಕವಿಗಳು ಕೂಡಿ ಆಧುನಿಕ ಕವಿತೆಯನ್ನು ಸಚೇತನವಾಗಿ ಮಾಡಿದ್ದಲ್ಲದೆ ಅದನ್ನು ಸುಲಕ್ಷಣವಾಗಿಯೂ ಮಾಡಿದ್ದಾರೆ.

ಇನ್ನು ಮುಂದೆ ಬರಲಿರುವ ಕವಿಗಳು ಈ ಮೂರ್ತಿಯನ್ನು ಹೃದಯದಲ್ಲಿಟ್ಟುಕೊಂಡು ಅದನ್ನು ವಿಧವಿಧವಾಗಿ ಅಲಂಕರಿಸಬಹುದು. ಛಂದದಲ್ಲಿಯೂ ಶೈಲಿಯಲ್ಲಿಯೂ ಭಾವದಲ್ಲಿಯೂ ರೀತಿಯಲ್ಲಿಯೂ ಹೊಸದಾದ ಮೆರುಗನ್ನು ತರಲು ಪ್ರಯತ್ನಿಸಬಹುದು. ಆದರೆ ಇಂದಿಗೆ ನಿರ್ದಿಷ್ಟವೆಂದು ಎಲ್ಲರಿಂದ ಗೃಹೀತವಾಗಿರುವ ಲಕ್ಷಣಗಳನ್ನು ಉಲ್ಲಂಘಿಸಿದರೆ ಅವರು ಒಂದು ಹೆಜ್ಜೆಯನ್ನು ಮುಂದಿಡುವದರ ಬದಲು ಹಿಂದಿಟ್ಟಂತಾಗುವದಿಲ್ಲವೆ ? ಆಧುನಿಕ ಕಾವ್ಯದ ವ್ಯಾಸಂಗದಿಂದ ಸಹಜವಾಗಿ ಲಯವಾಗುವ ದೋಷಗಳನ್ನು ಅವರು ಕಾರಣವಿಲ್ಲದೆ ತಮ್ಮ ಕೃತಿಗಳಲ್ಲಿ ತುಂಬಿದಂತಾಗುವದಿಲ್ಲವೆ ? ಇಂಥವರಲ್ಲಿ ಕಾವ್ಯಗುಣವಿರುವದಿಲ್ಲವೆಂತಲ್ಲ. ಆದರೆ ಆ ಗುಣವು ಸ್ಫುಟವಾಗಲು ಬೇಕಾದ ಕಲೆಯು ಇನ್ನೂ ಬೆಳೆದಿರುವದಿಲ್ಲ. ಕೈವಾಡವು ಬರುವವರೆಗೆ ಅವರು ತಮ್ಮ ಕೃತಿಗಳನ್ನು ಗುಪ್ತವಾಗಿ ಪೋಷಿಸುತ್ತಿರಬೇಕು. ಇಲ್ಲವೆ ಬೆಳಕಿಗೆ ತರುವ ಆತುರತೆಯಿದ್ದರೆ ಮಾರ್ಗದಲ್ಲಿದ್ದವರು ಅವುಗಳಿಗೆ ದೀಕ್ಷೆಯನ್ನು ಕೊಡಿಸಬೇಕು.

ಉದಾಹರಣೆಗಾಗಿ ಕೊಲ್ಹಾಪುರದ ಕರ್ನಾಟಕಸಂಘದವರು ಪ್ರಸಿದ್ಧಿಸಿದ ಒಂದು ಕೃತಿಯನ್ನು ವಿಮರ್ಶಿಸುವಾ. ಇಲ್ಲಿಯ **ಗೆಳೆಯರ ಬಳಗ**ದವರಿಗೆ ಕನ್ನಡ ನಾಡು-ನುಡಿಯ ವಿಷಯಕ್ಕಿರುವ ಆದರವು ಅಭಿನಂದನೀಯವಾಗಿದೆ. ಸಾಹಿತ್ಯಮಂದಿರಲ್ಲಿ ಕಾಲಿಡಲು ಅವರು ಮಾಡುತ್ತಿರುವ ಪ್ರಯತ್ನವು ಇದಕ್ಕೂ ಹೆಚ್ಚು ಸ್ತುತ್ಯವಾಗಿದೆ.

ಇತ್ತೀಚೆಗೆ ಅವರು 'ಮುದ್ದಣ' ರೆಂಬವರೊಬ್ಬರು ಬರೆದ 'ಹೂಗೊಂಚಲು' ಎಂಬ ಪದ್ಯಮಾಲೆಯನ್ನು ಪ್ರಸಿದ್ಧಿಸಿದ್ದಾರೆ. ಈ ಕೃತಿಯು ಮುದ್ದಣರ ಪ್ರಥಮ ಪ್ರಯತ್ನವೆಂಬುದು ಸಹಜವಾಗಿ ಗೊತ್ತಾಗುವದು.

CC-0. Jangamwadi Math Collection. Digitized by eGangotri

'ಎಗ್ಗಿಲ್ಲದ ಸಗ್ಗ ಸಹೋದರಿ" ಯಂತಹ ವಾಕ್ಯಗಳು ಅವರ ಅರ್ಪಣ ಪತ್ರಿಕೆಯಲ್ಲಿ ಸುಳಿದಾಡುತ್ತಿವೆ. ಅವರು ಬರೆದ 'ನಚ್ಚಿನೋಲೆ' ಯಲ್ಲಿ ಕನ್ನಡದ ವಿಷಯಕ್ಕಿದ್ದ ಅವರ ಆದರವು ಮಾತ್ರ ವ್ಯಕ್ತವಾಗುತ್ತಿದೆ.

'ಗಡ ಗಡ ದುಡುಗುತ ಲೊಡಲೊಡನೊದರುತ

ಗಡಬಡ ಬಾರೆಲೆ ನೀ ನೋವೆ!' ಎಂದು ಅವರು ಬರೆಯುವದರಿಂದ ಇನ್ನೂ ಅವರಿಗೆ ಕಾವ್ಯವೆಂದರೆ ಕರ್ಣಾಮೃತವೂ ಅಹುದೆಂಬುದು ತಿಳಿಯದೆಂದು ವ್ಯಕ್ತವಾಗುವದು. 'ಕಕ್ಕನ ಕೆಮ್ಮ'ನ ಮೇಲೆ ಬರೆದ ಕವಿತೆಯಿಂದ ಶಬ್ದಸಮುಚ್ಚಯವೆಂದರೆ ಕಾವ್ಯವೆಂದು ತಿಳಿಯುವ ಹಾಗಿದೆ. ಅಲ್ಲದೆ ಅವರ ಉಳಿದ ಕವಿತೆಗಳಲ್ಲೆಲ್ಲ ಕೇವಲ ಅನುಕರಣವೃತ್ತಿಯು ಕಂಡುಬರುವದು. ಇದಾವರೂ ದೋಷರಹಿತವಾಗಿಲ್ಲ. 'ಛಂದೋದೋಷ, ವ್ಯಾಕರಣ ದೋಷ, ಶಬ್ದದೋಷಗಳು' ತುಂಬಿಕೊಂಡಿವೆ. ರವೀಂದ್ರನಾಥ, ಬೇಂದ್ರೆ, ಪುಟ್ಟಪ್ಪ, ಆನಂದಕಂದ ಮೊದಲಾದವರ ಕಾವ್ಯದ ಛಾಯೆಯು ಎಲ್ಲೆಡೆಗೆ ಹರಡಿಕೊಂಡಿದೆ.

ಕೃತಿಯು ನಿಜವಾದ ಕಾವ್ಯಗುಣವಿಲ್ಲದೆ ಇಲ್ಲ. ಆದರೆ ಈ ಗುಣವು ಆಗೀಗ ಮಿಂಚಿನಂತೆ ಕಣ್ಣುಚಿವುಟಿ ಮಾಯವಾಗುವದು. **ನಲುಮೆ, ಝುರಿಗೆ, ಬೀಳಗಿ** ಮುಂತಾದಲ್ಲಿ ಕೆಲವು ಸಾಲುಗಳು ಅಂದವಾಗಿವೆ. ಆದರೆ ದೋಷರಹಿತವಾಗಿ ಒಂದಾದರೂ ಇಡಿಯ ಕವಿತೆಯಿಲ್ಲ. ಇಂಥ ಕವಿತೆಗಳನ್ನು ಬರೆದವರು ಮಾಡಬೇಕಾದುದೇನು? ಆಧುನಿಕ ಕಾವ್ಯವನ್ನು ಚೆನ್ನಾಗಿ ಪರಿಶೀಲಿಸಿ ತಮ್ಮ ಕೃತಿಗಳನ್ನು ಎಲ್ಲ ಬಗೆಯಿಂದ ದೋಷವಿಲ್ಲದಾಗಿ ಮಾಡಲು ಅವರು ಪ್ರಯತ್ನಿಸಬೇಕು; ಅಲ್ಲದೆ ಮಿಂಚಿನಂತೆ ಹೊಳೆದು ಹೋಗುವ ಹೃದಯದ ಸಂಸ್ಕಾರವು ಕತ್ತಲೆಯಲ್ಲಿ ಕಳೆದು ಹೋಗದಂತೆ, ಕೇವಲ ಇಲೆಕ್ಟ್ರಿಕ್ ದೀಪವಾಗಿ ಪರಿಣಮಿಸದಂತೆ ನೋಡಿಕೊಳ್ಳಬೇಕೆಂದು ನಮ್ಮ ಅಭಿಪ್ರಾಯ.

ಆದರೆ ಹಿನ್ನುಡಿಗಾರರಾದ 'ಮಲ್ಲಿನಾಥ'ರು ಬೇರೊಂದು ಸರಣಿಯನ್ನು ಹಿಡಿದಿದ್ದಾರೆ. 'ಮುದ್ದಣನು ಈಗಿನ ಹೊಸ ಸಾಹಿತ್ಯಮಾರ್ಗವನ್ನನುಸರಿಸಿದ ಹೊಸ ಕವಿಯು' ಹೀಗೆ ಆದರಾತಿಥ್ಯವನ್ನು ಮಾಡುತ್ತ ಕುಳಿತರೆ ನಾಳೆ 'ಕವಿ' ಯೆಂಬ ಶಬ್ದವು ಅರ್ಥವಿಲ್ಲದಾಗುವದು. ಈ ಮುದ್ದಣರು ಇಷ್ಟು ಪದ್ಯಗಳನ್ನು ಬರೆದಿದ್ದರೂ ಕವಿಗಳಲ್ಲ. ಇಲ್ಲಿ ಅಸ್ಪಷ್ಟವಾಗಿ ಕಂಡುಬರುವ ಕೆಲವು ಕುರುಹುಗಳನ್ನು ನೋಡಿದರೆ ಸತತ ಪರಿಶ್ರಮದಿಂದ ಹಲಕೆಲವು ವರ್ಷಗಳಲ್ಲಿ ಅವರು ಓರ್ವ ಸಾಧಾರಣ ಕವಿಯಾಗಬಹುದು.

ಇನ್ನು ಈ ಪದ್ಯಗಳಲ್ಲಿ ಅನೇಕ ಬಗೆಯ ದೋಷಗಳಿರುವದನ್ನು ಕಂಡಿದ್ದೇವೆ. ಮಲ್ಲಿನಾಥರು ಮುದ್ದಣರಲ್ಲಿ ಕವಿತಾಚಾತುರ್ಯಕ್ಕಿಂತ ಕವಿತಾಶಕ್ತಿಯು ಹೆಚ್ಚಾಗಿದೆಯೆಂದು ಹೇಳಿ, 'ಯಾರಲ್ಲಿ ಕವಿತಾಶಕ್ತಿಯು ಹೆಚ್ಚಾಗಿದೆಯೋ ಅವರು ಆ ಆವೇಶದಲ್ಲಿ ಗಣನಿಯಮಗಳ ಗೊಡವೆಗೆ ಹೋಗಬಯಸುವದಿಲ್ಲ........ಕವಿತೆಯು ಆವೇಶದಿಂದ ಹೊರಬೀಳುವ ಸಮಯದಲ್ಲಿ ಹೀಗೆ ಹಾಗೆ ಎಂಬ ವಿಚಾರಕ್ಕೆ ಅದು ಒಳಪಡದು.' ಎಂದು ಸಾರಿದ್ದಾರೆ. ವಿಮರ್ಶೆಯಲ್ಲಿಯ ಈ ಚಾರ್ವಾಕಮತವು ಎಷ್ಟು ಲಘುವಾಗುವದೋ ಅದು ಕಾವ್ಯಕ್ಕೆ ಹೆಚ್ಚಳವು ಬರುವದು. ಕವಿತಾಪದ್ಧತಿಯಲ್ಲಿಯ ಈ ಉಚ್ಛೃಂಖಲತಾವೃತ್ತಿಯು ಎಂದು ಮಾಯವಾಗುವದೋ ಅಂದು ವಿಮರ್ಶೆಯು ಸಹಾನುಭೂತಿಪರವಾಗುವದು. ಕವಿತಾಶಕ್ತಿಯ ಆವೇಶವೆಂದರೆ ಬುದ್ಧಿಭ್ರಂಶವಲ್ಲ, ಪಿತ್ತಭ್ರಮಣವಲ್ಲ, ಹೃದ್ರೋಗವಲ್ಲ. ಸೌಂದರ್ಯದ ಪ್ರತೀತಿಯನ್ನು ಪಡೆದ ಮಾನವನು ಸರ್ವಾಂಗಸುಂದರವಾದ ಶಬ್ದಸೃಷ್ಟಿಯ ದ್ವಾರವಾಗಿ ಈ ತನ್ನ ಪ್ರತೀತಿಯನ್ನು ತಿಳಿಯಪಡಿಸಲು ಹವಣಿಸುವನು. ಈ ಹವಣಿಕೆಯೇ 'ಆವೇಶ'ದ ಮೂಲಧನವಾಗಿದೆ. ಕವಿತಾಶಕ್ತಿಯೆಂದರೆ ಈ ಪ್ರತೀತಿಯನ್ನು ಪಡೆಯುವ ಯೋಗ್ಯತೆ. ಕವಿತಾಚಾತುರ್ಯವೆಂದರೆ ಈ ಪ್ರತೀತಿಗೆ ತಕ್ಕುದಾದ ಶಬ್ದಶರೀರವನ್ನು ನಿರ್ಮಿಸುವ ಜಾಣ್ಮೆ. ಈ ಯೋಗ್ಯತೆ ಜಾಣ್ಮೆಗಳಿರದ ಯಾವ ಮಾನವನೂ ಕವಿಯಾಗಿಲ್ಲ, ಆಗಲಾರನು. ಎಂದ ಮೇಲೆ ನಿಜವಾದ ಕವಿತಾಶಕ್ತಿಯಿದ್ದಲ್ಲಿ ಅದು ಈ ಕವಿತಾ ಚಾತುರ್ಯದ ಮಾರ್ಗವಾಗಿಯೇ ಹೊರಹೊಮ್ಮುವದೆಂದು ಸ್ಪಷ್ಟವಾಗುವದು. ಯಾರಲ್ಲಿ ಈ ಶಕ್ತಿಯು ಹೆಚ್ಚಾಗಿದೆಯೋ ಅವರು ಈ 'ಗಣನಿಯಮಗಳ ಗೊಡವೆಗೆ' ಹೆಚ್ಚಾಗಿ ಹೋಗುವರು. ಶ್ರೇಷ್ಠ ತರಗತಿಯ ಕಾವ್ಯವು ಸೌಂದರ್ಯದ ಮೂರ್ತಿಯಾದ ಲಕ್ಷ್ಮಿಯಂತೆ ನಿಷ್ಕಲಂಕವಾಗಿರುವದು. ಇಷ್ಟೇ



CC-0. Jangamwadi Math Collection. Digitized by eGangotri

ಅಲ್ಲ. ಸ್ವಾತಂತ್ರ್ಯವು ಮೇರೆವರಿಯದ ಹಾಗೆ ನೋಡಿ ಕೊಂಡ ಕವಿಯ ಕೃತಿಗಳೇ ಸೂರ್ಯಚಂದ್ರರಂತೆ ಅಜ ರಾಮರವಾಗುವವು. ಕವಿಯಲ್ಲಿ ಪ್ರತಿಭೆಯು ಉಜ್ವಲ ತರವಾದಂತೆ ಆತನು ತನ್ನವೇ ಆದ ಯಮನಿಯಮ ಗಳನ್ನು ನಿರ್ಮಿಸುವನು. ಜಗತ್ತಿನಲ್ಲಿ ಇಂದಿನ ವರೆಗೆ ಶ್ರೇಷ್ಠವಾದ ಕವಿಗಳು 'ಆವೇಶ'. 'ಪ್ರಾಸಾದಿಕ ವಾಣಿ' ಮೊದಲಾದವುಗಳ ಗೊಡವೆಗೆ ಹೋಗದೆ ನದಿಯು ದಂಡೆಗುಂಟ ಹರಿಯುವಂತೆ ತಮ್ಮ ಕಾವ್ಯವನ್ನು ಆವಶ್ಯಕವಾದ ಈ ಲಕ್ಷಣಗಳ ಸೀಮೆಯಲ್ಲಿ ಹರಿಸಿ ಅನುಪ ಮವಾದ ಸೌಂದರ್ಯವನ್ನು ನಿರ್ಮಿಸಿರುವರು. ನದಿಯು ತುಂಬಿ ತುಳುಕಬೇಕಾದರೆ ಅದು ತನ್ನ ಸೀಮೆಗಳನ್ನು ಕಾಯ್ದುಕೊಳ್ಳಬೇಕಾಗುವದು. ಇಲ್ಲದಿದ್ದರೆ ನೆಲದಲ್ಲಿ ಇಳಿದು ಉಸುಕಿನಲ್ಲಿ ಕಳೆದು ಅದು ನಿರ್ನಾಮವಾಗಿ ಹೋಗಬಹುದು.

ಅಂತರಿಕವಾದ ಸೌಂದರ್ಯವು—ಅದು ಯಾವ ಜಾತಿ ಯದೇ ಇರಲಿ—ಬಾಹ್ಯ ಸ್ವರೂಪವನ್ನು ತಾಳಬೇಕಾ ದರೆ ತನ್ನ ಕಟ್ಟುಗಳನ್ನು ತನಗೆ ತಾನೆ ರಚಿಸಿಕೊಳ್ಳು ವದು. ಯಾವ ತಡೆಯಿಲ್ಲದೆ ಧೋಧೋ ಎಂದು ಬೀಳುವ ಜಲಪಾತವು ಕೂಡ ತನ್ನ ಆಳ, ಶಕ್ತಿಗನುಸಾರವಾಗಿ ಬೀಳುವದು. ಅನಂತವಾದ ಸೌಂದರ್ಯವು ಒಮ್ಮೊಮ್ಮೆ ಒರ್ವ ಲಲನೆಯ ಕೋಮಲ ಗಾತ್ರಗಳಲ್ಲಿಯೂ ಎರಡು ಕಣ್ಣುಗಳಲ್ಲಿಯೂ ಕಾಣಿಸಿಕೊಳ್ಳುವದು. ನಿರ್ಗುಣ ನಿರಾಕಾರನಾದ ದೇವದೇವನು ಕೂಡ ಸಾಕಾರನಾಗಿ ತನ್ನ ಲೀಲೆಯನ್ನು ಸಾರ್ಥಕವಾಗಿಸುವನು. ಮುಗಿ ಯದ ಮುಗಿಲು ಒಂದು ಸಣ್ಣ ಸರೋವರದ ಹೃದಯ ದಲ್ಲಿ ಪ್ರತಿಬಿಂಬಿತವಾಗುವದು. ಅದರಂತೆ ಕಾವ್ಯದ ಸ್ವರೂಪವು ಅನಂತವಾದರೂ ಮನವು ಅರಳುವಂತೆ ಹೆಣೆದ ಒಂದು ಸಣ್ಣ ಕವಿತೆಯ ಪಡಿಯಚ್ಚಿನಲ್ಲಿ ಕಾಣಿಸಿಕೊ ಳ್ಳುವದು.

ಸ್ಫೂರ್ತಿಗೆ ಒಂದೆಡೆಗೆ ಮಾತ್ರ ಸ್ಥಾನವಿದೆ. ವೇದ ಗಳಲ್ಲಿ ಕೆಲವೆಡೆಗೆ ಕೇಳಿ ಬರುವ ಅಪೌರುಷೇಯ ವಾಣಿ ಯಲ್ಲಿ ಈ ಸ್ಫೂರ್ತಿಯ ಉಚ್ಚತಮ ಕಾರ್ಯವು ಕಂಡು ಬರುವದು. ಕೋಲ್‌ರಿಜ್ ಕವಿಯು ಬರೆದ 'ಕುಬ್ಲಾ ಖಾನ' ಹಾಗು ಶೆಲ್ಲಿಯು ಬರೆದ 'ಓಡ್ ಟು ದಿ ವೆಸ್ಟ್ ವಿಂಡ್' ಎಂಬ ಕವಿತೆಗಳಲ್ಲಿ ಇದೇ ತೆರದ ಪ್ರೇರಣೆಯು ಗೋಚರವಾಗುವದು. ಆದರೆ ಕಲೆಗಿಂತ ಸ್ಫೂರ್ತಿಯು ಹೆಚ್ಚಾಗಿರುವ ಈ ಕವಿತೆಗಳಲ್ಲಿಯ ಕುಸುರು ಎಂತೆಂತಹ ಕಲಾಕೋವಿದರನ್ನು ಕೂಡ ದಂಗುಬಡಿಸಿರುವದು.

'ಈಗಿನ ನವಸಾಹಿತ್ಯವು ಇನ್ನೂ ಒಂದು ಬಗೆಯ ಕಟ್ಟಿಗೆ ಒಳಗಾಗದ್ದರಿಂದ ಭಾಷೆಯ ಶೈಲಿಯು ಹೀಗಿರ ಬೇಕೆಂದು ವಿಮರ್ಶಿಸುವದು ಕಠಿಣವಾಗಿ ಬಿಟ್ಟಿದೆ' ಎಂದು ಮಲ್ಲಿನಾಥರು ಇನ್ನೊಂದೆಡೆಗೆ ಹೇಳಿದ್ದಾರೆ. ಈ ಗ್ರಂಥದಲ್ಲಿರುವ ದೋಷಗಳನ್ನು ಸಮರ್ಥಿಸಲೆಂದು ಇಂದಿನ ಸಾಹಿತ್ಯವನ್ನೇ ದೂಷಿಸಬಹುದೆ? 'ಒಂದು ಬಗೆಯ ಕಟ್ಟಿಗೆ' ಒಳಗಾಗಿಲ್ಲವೆಂದು ಯಾರು ಹೇಳಿ ದರು? ಇಂದಿನ ಕಾವ್ಯದೊಡನೆ ಆದರ್ಶಕಲೆಯ ಸ್ವರೂ ಪವೂ ಪ್ರಕಟವಾಗಿದೆ. ಇಂದಿನ 'ರಾಜಮಾರ್ಗ'ವನ್ನು ಕಟ್ಟಿದ ಜನರ ಗ್ರಂಥಗಳಿಂದ ಅದನ್ನು ಕಂಡುಕೊಳ್ಳ ಬಹುದು. 'ಪದಗೊನೆ' 'ರವಿಗನ್ನಡಿಗ' 'ಮೊಗಸು' 'ಜಂಬಸು' ಮೊದಲಾದ ಶಬ್ದಗಳಿಗೆ ಇಂದಿನ ವ್ಯಾಕರಣ ದಲ್ಲಿ ಸ್ಥಾನವಿದೆಯೆ? 'ಸಿಂಯ್ ಸಿಂಯ್ ಸಿಂಯ್ ಸಿಂಯ್ ಸಿಸಿಸ್ಸಿಂಯ್' ಎಂಬ ಕವಿತೆಗೆ ಇಂದಿನ ಶೈಲಿ ಯಲ್ಲಿ ಸ್ಥಾನವಿದೆಯೆ?

'ಗೊಂಚಲವೆಂದಲ್ಲಿ ಕರ್ಲವೊಗ್ಗೆಗಳೂ ಇರಬಹುದು; ಅಲರ್ದ ಅಲರುಗಳೂ ಇರಬಹುದು. ಕುಡಿವರೆದ ಸಸಿ ಗಳೆ ಹೆಚ್ಚಾಗಿ' ಮೊದಲಾದ ಸಾಲುಗಳಿಗೆ ಇಂದಿನ ಛಂದಸ್ಸಿನಲ್ಲಿ ಸ್ಥಾನವಿದೆಯೆ? ಇವೇ ಮೊದಲಾದ ಪದ್ಯ ಗಳಿಗೆ ಶ್ರೀ. ಶ್ರೀಕಂಠಯ್ಯನವರ 'ನೂರು ದೋಷಗಳಿ ದ್ದರೂ ಕಾವ್ಯವು ಕಾವ್ಯವೆ' ಎಂಬ ನುಡಿಯು ಅನ್ವಯಿ ಸುವದೆಂದು ಹೇಳಬಹುದೆ? ಪುಟ್ಟಪ್ಪನವರ ಕವಿತೆಗಳಲ್ಲಿ ನೂರು ದೋಷಗಳೂ ಇಲ್ಲ. ಮೇಲಾಗಿ ಅವರಲ್ಲಿ ನಿಜ ವಾದ ಕವಿಯ ಪ್ರತಿಭೆಯಿದೆ. ಅದಕ್ಕಾಗಿ ಶ್ರೀ. ಶ್ರೀಕಂಠ ಯ್ಯನವರು ಹಾಗೆ ಹೇಳಿದರು. ಇಲ್ಲಿ ನೂರು ದೋಷ ಗಳೂ ಇವೆ. ಇವುಗಳಲ್ಲಿ ಈ ಲೇಖಕರಿಗಿದ್ದ ಭಾವನಾ ಲಹರಿಯು ಮೇಲಿಂದ ಮೇಲೆ ಮುಚ್ಚಿ ಹೋಗುವದು. ಅದಕಾರಣ ಮುದ್ದಣರನ್ನು ಕಾವ್ಯದ ರಾಜಮಾರ್ಗಕ್ಕೆ ಕರೆದೊಯ್ದು ನಿಜವಾದ ಕವಿತೆಗಳನ್ನು ಬರೆಯಹಚ್ಚುವ ದರ ಬದಲು ಮುದ್ದಣನೆಂದರೆ ಕನ್ನಡಿಗರಿಗೆ ಪ್ರಿಯನಾದ ಒರ್ವ ಕವಿಯೆಂದು ಮಲ್ಲಿನಾಥರು ಒಂದು ಕಟ್ಟುಕಥೆ

CC-0. Jangamwadi Math Collection. Digitized by eGangotri

ಯನ್ನು ಕಟ್ಟಲು ಪ್ರಾರಂಭಿಸಿರುವದು ವಿಷಾದಕರವೆಂದು ನಮ್ಮ ಅಭಿಪ್ರಾಯ.

ಮುನ್ನುಡಿಗಾರರಾದ ಪ್ರೊ. ಕುಂದಣಗಾರರ ಮಾತು ಗಳಾದರೂ ಅಷ್ಟು ವಿಮರ್ಶಾತ್ಮಕವಾಗಿಲ್ಲ. ಲೇಖಕರ ಭಾಷೆಯು ಇನ್ನೂ ಬಾಲ್ಯಾವಸ್ಥೆಯಲ್ಲಿದೆಯೆಂದು ಅವರು ಹೇಳಿಸ್ಸಾರೆ. ಅಲ್ಲದೆ ಭಾಷಾಭಿಮಾನ, ದೇಶಾಭಿಮಾನ ವೆಂಬ ಎರಡು ಉಚ್ಚಗುಣಗಳು ಅವರಲ್ಲಿವೆಯೆಂದು ತೋರ್ಪಡಿಸಿದ್ದಾರೆ. ಆದರೆ ಲೇಖಕರು "ಪೂರ್ವದ ಮುದ್ದಣನನ್ನು ತುಸು ದಿನಗಳಲ್ಲಿ ಖಂಡಿತವಾಗಿಯೂ ಮಿಕ್ಕುವ" ರೆಂಬ ಅವರ ಹೇಳಿಕೆಯಲ್ಲಿ ಸತ್ಯಕ್ಕಿಂತ ಪ್ರೇಮವು ಹೆಚ್ಚಾಗಿದೆ. ಮುದ್ದಣನ ಯಾವ ಗುಣ ಗಳನ್ನು ಈ ಪದ್ಯಗಳಲ್ಲಿ ನಾವು ಕಾಣಬಹುದು? ಈ ಲೇಖ ಕರ ಕಾವ್ಯವು ಇನ್ನೂ ತತ್ತಿಯನ್ನು ಹೋಲುತ್ತಿದೆ. ಅದು ಒಡೆದ ಮೇಲೆ ಕೋಳಿಯಾಗುವದೋ ರಾಜಹಂಸ ವಾಗುವದೋ ಇಲ್ಲವೆ ಬೇರೊಂದು ಹಕ್ಕಿಯಾಗುವದೋ ಹೇಳುವದು ಬಲು ಕಷ್ಟವಾಗಿದೆ. ಆದರೆ ಅದಕ್ಕೆ ಮುದ್ದ ಣನ ಕಾವ್ಯದ ಕಳೆಯು ಬರುವದಿಲ್ಲವೆಂದು ನಾವು ಹೇಳ ಬಲ್ಲೆವು. ಸಾಧಾರಣವಾದ ಕಾವ್ಯದ ರೂಪರೇಖೆಯು ಇಲ್ಲಿ ಅಸ್ಪಷ್ಟವಾಗಿ ಮೂಡಿದೆ.

ಹೀಗೆ ಹಿನ್ನುಡಿಯಲ್ಲಿ ಬಲವನ್ನೂ ಮುನ್ನುಡಿಯಲ್ಲಿ ಆಶ್ವಾಸನವನ್ನೂ ಪಡೆದ ಲೇಖಕರು ಸ್ಟೀವ್ಹೆನ್ಸನ್, ಗ್ರೇ, ಹಾರ್ಡಿ ಮೊದಲಾದ ಕವಿಗಳಂತೆ ಅನುಕರರಾದೆವೆಂದು ತಿಳಿದು "ಎನ್ನ ಗೋರಿಗಲ್ಲು" ಎಂಬ ಕವಿತೆಯನ್ನು ಬರೆದದ್ದರಲ್ಲಿ ಆಶ್ಚರ್ಯವೇನು ?:—

"ಕನ್ನಡವೆನಿಪೀ ಜನುಮವಿದು
ಕನ್ನಡ, ಕನ್ನಡ, ಕನ್ನಡವು!
ಕನ್ನಡದುಣ್ಮಿ, ಕನ್ನಡದಣ್ಮಿ
ಕನ್ನಡ ಕನ್ನಡ ಸಾವೂ ಕನ್ನಡ!

* * *

ಕನ್ನಡ ಮುದ್ದಣ; ಮುದ್ದಣ ಕನ್ನಡ
ಕನ್ನಡ, ಕನ್ನಡ, ಕನ್ನಡ ಮುದ್ದಣ"

ಇನ್ನು ಮೈಸೂರು ಕರ್ನಾಟಕದಲ್ಲಿ ಅಚ್ಚಾದ ಇನ್ನೊಂದು ಪ್ರಥಮ ಪ್ರಯತ್ನವನ್ನು ವಿಮರ್ಶಿಸುವಾ. 'ಇಸಬೆಲ ಮತ್ತು ಇತರ ಪದ್ಯಗಳು' ಎಂಬ ಚಿಕ್ಕ ಹೊತ್ತಿಗೆಯ ಲೇಖಕರಾದ ನೀಲಕಂಠರು ತಾವೇ ಮುನ್ನುಡಿಯನ್ನು ಬರೆದಿದ್ದಾರೆ. ತಾವು ಇನ್ನೂ ಕವಿಗಳಲ್ಲವೆಂದೂ ತಮ್ಮ ಕೃತಿಯು ದೋಷಾನ್ವಿತವಾಗಿದೆಯೆಂದೂ ಒಪ್ಪಿಕೊಂಡಿದ್ದಾರೆ. ಇಂಥ ಒಪ್ಪಿಗೆಯಿಂದ ವಿಮರ್ಶೆಯಲ್ಲಿದ್ದ ನಿಷ್ಠುರತೆಯು ಲಯವಾಗುವದು. 'ಇಸಬೆಲ್' ಎಂಬ ಇವರ ಕವಿತೆಯು ಕೀಟ್ಸಕವಿಯ "ದಿ ಪಾಟ್ ಆಫ್ ಬೇಸಿಲ್" ಎಂಬ ಕವನದ ಅನುವಾದವಾಗಿದೆ. ಅನುವಾದವೆಂಬ ಕಲ್ಪನೆಯಿಲ್ಲದೆ ಓದಿದಲ್ಲಿ ಕವಿತೆಯು ಸರಸವಾದಂತೆ–ಕಥೆಯನ್ನು ಹೇಳುವ ಸರಣಿಯು ಮೋಹಕವಾದಂತೆ ಕಂಡು ಬರುವದು.

"ದಿನಗಳು ಕಳೆದುವು ತಿಂಗಳು ಕಳೆದುವು!

ಋತುಗಳು,–ಋತುಗಳು–ಋತುಗಳು ಕಳೆದುವು!"

ಮುಂತಾದ ಸಾಲುಗಳಲ್ಲಿ ಅಚ್ಚಳಿಯದ ಕಳೆಯು ಕಣ್ಣಿಗೆ ಬೀಳುವದು. ಆದರೆ ಕೀಟ್ಸ ಕವಿಯ ವಾಕ್ಸಂಪತ್ತು ಇಲ್ಲಿ ಕಳೆದು ಹೋಗಿರುವದಲ್ಲದೆ ಮೂಲದಲ್ಲಿಯ ಶ್ಲೋಕ (stanza) ದ ಕಟ್ಟನ್ನು ಇವರು ತ್ಯಜಿಸಿರುವದರಿಂದ ಬಂಧವು ಅತಿಶಿಥಿಲವಾಗಿದೆ. ಸಾಧಾರಣವಾಗಿ ಕವಿತೆಯು ಮೊದಲಿನ ಶ್ಲೋಕದಲ್ಲಿ ಆಕವಿತೆಯ ಪ್ರಾಸದ,ಮಾತ್ರೆಯ, ಶ್ಲೋಕದ ಸಾಲುಗಳ ಸಂಖ್ಯೆಯು ನಿರ್ಧಾರವಾಗಿ,ಇದರಿಂದ ಜನಿಸಿದ ಬಂಧವನ್ನು ಕವಿಯು ಕಡೆತನಕ ಕಾಯುತ್ತ ಹೋಗುವನು. ಇದಕ್ಕೆ ಭಂಗಬಂದಲ್ಲಿ ಕವಿತೆಯನ್ನು ಓದು ವವರ ಏಕಾಗ್ರಚಿತ್ತಕ್ಕೆ ಭಂಗಬರುವದು.ಅದಕ್ಕಾಗಿ ಇಂಥ ನಿಯಮಿತತನವು ಸಾಧಾರಣವಾಗಿ ಕವಿತೆಯ ಲಕ್ಷಣ ವಾಗಿದೆಯೆನ್ನಬಹುದು. (Irregular ode, free verse ಮೊದಲಾದ ಬೇರೆ ಜಾತಿಗಳಿರಬಹುದು.) ಆದರಲ್ಲಿ ಕೀಟ್ಸ ಕವಿಯು ಅಲುಗದಿರುವ ಚಿತ್ತಭಿತ್ತಿಯ ಮೇಲೆ ನುಡಿಯ ಸಹಾಯದಿಂದ ಚಿತ್ರಗಳನ್ನು ಬರೆಯುವದರಲ್ಲಿ ಹೆಸರಾದ ವನು. ಈ ಚಿತ್ರವನ್ನು ರೂಪಿಸಲು ಆತನು ಶ್ಲೋಕಕ್ಕೆ ಒಂದು ಪಡಿಯಚ್ಚನ್ನೂ ಮಾತ್ರಾಪ್ರಾಸಗಳಿಗೆ ಒಂದು ನಿಶ್ಚಿತವಾದ ಸ್ವರೂಪವನ್ನೂ ಕೊಡುವನು. ಹೀಗೆ ಕವಿ ತೆಯ ಬಾಹ್ಯಸ್ವರೂಪವು ಪೂರ್ಣವಾಗಿ ಅರಿಕೆಯಾಗು ವದರಿಂದ ಅದನ್ನು ಮುಂದಕ್ಕೆ ಓದಿದ ಹಾಗೆ ಚಿತ್ರವು ಮನದಲ್ಲಿ ದೃಢವಾಗುತ್ತ ಹೋಗುವದು. ಆದರೆ ಈ ಅನು ವಾದದಲ್ಲಿ ಶ್ಲೋಕದಲ್ಲಿಯ ಸಾಲುಗಳ ಸಂಖ್ಯೆಯು ಅನಿ ಶ್ಚಿತವಾಗಿದೆ. ಒಂದರಲ್ಲಿ ನಾಲ್ಕು ಸಾಲುಗಳಿದ್ದರೆ, ಇನ್ನೊಂದರಲ್ಲಿ ಏಳು ಇರುವವು. ಸ್ಕಾಟ್ ಕವಿಯ

CC-0. Jangamwadi Math Collection. Digitized by eGangotri

ಮಾರ್ವಿಯನ್ ಕಾವ್ಯದ ಪದ್ಧತಿಯ ಮೇಲಿದೆಯೆಂದು ಇದನ್ನು ಒಂದು ವೇಳೆ ಅಲಕ್ಷಿಸಬಹುದು. ಆದರೆ ಪ್ರಾಸದ ಹಣಿಕೆಯಲ್ಲಿಯೂ ನಿಯಮವಿಲ್ಲದಾಗಿದೆ. ಅಲ್ಲದೆ ಮಾತ್ರೆಗಳ ವ್ಯೂಹದಲ್ಲಿಯೂ ಅಲ್ಲಲ್ಲಿ ಹೆಚ್ಚುಕಡಿಮೆಯಾಗಿರುವುದುಂಟು. ಹೀಗಾಗಿ ನಿಮಿಷಕ್ಕೊಮ್ಮೆ ಬೇರೆಯಾಗುವ ಮೋಡದ ಆಕೃತಿಯಂತೆ ಅನುವಾದದ ಸ್ವರೂಪವು ಚಂಚಲವಾಗಿದೆ. ಇನ್ನುಳಿದ ಕವಿತೆಗಳಲ್ಲಿ ಕೆಲವು ವ್ಯಾಕರಣದೋಷಗಳೂ ಕಂಡುಬರುವವು. 'ಆತ್ಮಜ್ಞಾನದ ಜ್ಯೋತಿ,' 'ಅಶಾಂತತೆ' ಮೊದಲಾದ ಕವಿತೆಗಳ ಭಾವನೆಯಲ್ಲಿಯೂ ಹೊಸತಾದುದೇನೂ ಇಲ್ಲ. ಒಟ್ಟಾರೆ ಈ ಲೇಖಕರಿಗೆ ಶೈಲಿಯಲ್ಲಿ ಸಂಯಮವೂ ಭಾವನೆಯಲ್ಲಿ ಆಳವೂ ಬೇಕಾಗಿವೆಯೆಂದು ಹೇಳಬಹುದು.

ಮಂಗಳೂರಿನ **ಮಿತ್ರಮಂಡಳಿಯ** ಸದಸ್ಯರಾದ ಶ್ರೀನಿವಾಸರಾವ ಕದಿರೆ ಎಂಬವರು '**ಮನವಿ**' ಎಂಬ ಕವಿತಾಸಂಗ್ರಹವನ್ನು ಪ್ರಸಿದ್ಧಿಸಿದ್ದಾರೆ. ಇಲ್ಲಿಯ ಕವಿತೆಗಳು ಮಾತ್ರ ನಿಜವಾದ ಕವಿತೆಗಳು. 'ಮಾಯಕದ' 'ಭವಪಿಸಿಲ' ಮುಂತಾದ ಒಂದೆರಡು ಪ್ರಯೋಗಗಳು ತಪ್ಪಾಗಿವೆ. ಅಲ್ಲದೆ 'ಮಾತೆ'ಯ ಕೊನೆಯ ಶ್ಲೋಕದ ಮೊದಲಿನ ಸಾಲಿನಲ್ಲಿ ಛಂದೋಭಂಗವಾಗಿದೆ. ಆದರೆ ಕವಿಯು ತನ್ನದೇ ಆದ ಶೈಲಿಯನ್ನು ಪರಿಪಾಕಕ್ಕೆ ತಂದಿದ್ದಾನೆ. ಇಲ್ಲಿಯ ಭಾಷೆಯು ತಿಳಿಗನ್ನಡವಿರದಿದ್ದರೂ ಅಚ್ಚಗನ್ನಡವಿದೆ. 'ಮುದ್ದು' 'ಮರುದಿನ' 'ಮಾತೆ' ಮೊದಲಾದ ಕವಿತೆಗಳು ಬಲು ಮುದ್ದಾಗಿವೆ.

'ಭುವಿಯೊಳು ನಿನ್ನಯ ಗತಿಗೆಣೆಯಿಹುದೈ
ಕವಿಗಳ ಕಂಠವು ತಂಗಾಳಿ!' ಎಂದೂ,
'ಬಾಲೆ! ನಿನ್ನಯ ಮನದ ಭಾವವರಳಿಹುದೆನ್ನ
ಬಾಳುವೆಗೆ ಮಣಿಮುಕುಟ ತೊಡಿಸಿರುವದು!
ಬಾಲೆ! ನಿನ್ನೊಳಗೊಂದು ನಿಷ್ಕಳಂಕ ಸುಹಾಸ
ವಾಳ ಕಂಡಿಹುದೆನ್ನ ಹೃದಯದೊಳಗೆ!'

ಎಂದೂ ಹಾಡಿ ಆದರ್ಶಜೀವಿಗಳಾದ ಕವಿಗಳ ಪಂಕ್ತಿಗೆ ಇವರು ಸೇರುತ್ತಾರೆ.

ಆದರೆ ಮೇಲೆ ವಿಮರ್ಶಿಸಿದ ಎರಡು ಕೃತಿಗಳಲ್ಲಿರುವ ದೋಷಗಳನ್ನು ಮೀರಿದ ಶ್ರೀನಿವಾಸರಾಯರು ಪ್ರ ಕುಲದ ಕೊನೆಯ ಕುತ್ತಾದ 'ಅಸ್ಪಷ್ಟತೆ'ಗೆ ಗುರಿಯಾಗಿದ್ದಾರೆ. ಅವರಲ್ಲಿ ಇನ್ನೂ ಕಾಣ್ಕೆಯ ದಿಟ್ಟತನವಿಲ್ಲ. ಅವರ ಕಾವ್ಯವು ಇನ್ನೂ ಮಂಜಾಗಿದೆ. ಅದಕ್ಕಾಗಿಯೇ ತಿರುತಿರುಗಿ ಓದಿದರೂ ಅವರ ಕವಿತೆಗಳು ಮನದಟ್ಟಾಗುವದಿಲ್ಲ. ವಾಕ್ಯಗಳನ್ನು ರಚಿಸುವ ಅವರ ಶ್ರಮವೂ ಇದಕ್ಕೆ ಕಾರಣವಾಗಿರಬಹುದು.

'ದುಃಖದಲಿ ಸುಖವು ಮೂಡಿದ ತೆರದಿ ಸಂಜೆಯಾ-
ಗಸದಲ್ಲಿ ಸಲ್ವೆಳಕನಿತ್ತು ಬಿರಿದಿದೆ ತಾರೆ-
ಯೊಂದುಳಿವುದೇಗಾಲವೋ?'

ಇದು ಮನೋಹರವಾದರೂ ಇದರಲ್ಲಿಯ ಕಾವ್ಯ ಶಕ್ತಿಯು **ಒಡೆದು** ಕಾಣುವದಿಲ್ಲ. ಅರ್ಧ ಕೆತ್ತಿ ಅರ್ಧ ಒಡಮೂಡದಂತಿರುವ ಮೂರ್ತಿಗಳನ್ನು ಬಿಟ್ಟು ಕುಸುರು ಕುಸುರಾಗಿ ನಿರ್ಮಿಸಲ್ಪಟ್ಟ ಪ್ರತಿಮೆಗಳನ್ನು ಮುಂದಿನ ಸಲ ಶ್ರೀನಿವಾಸರಾಯರು ಕೊಡಲೆಂದು ನಾವು ಬಯಸುತ್ತೇವೆ

ಹೀಗೆ ಅನಧಿಕವಾದ ಆತ್ಮವಿಶ್ವಾಸ, ಕಾವ್ಯದ ಬಹಿರಂಗದೊಡನೆ ಅನನ್ಯವಾದ ಸ್ನೇಹ, ಕಾವ್ಯದ ಅಂತರಂಗದ ಪೂರ್ಣಪ್ರತೀತಿ, ಹಾಗು ಸ್ಪಷ್ಟವಾದ ದಿಟ್ಟವಾದ ಕಾಣ್ಕೆ ಈ ನಾಲ್ಕು ದೀವಟಿಗೆಗಳನ್ನು ಹಿಡಿದು ಹಿರಿಯರು ಹಾಕಿಟ್ಟ ರಾಜಮಾರ್ಗದಲ್ಲಿ ಇಂದಿನ ತರುಣ ಕವಿಗಳು ನಡೆದು ಹೋಗಬಹುದಲ್ಲವೆ?

(೧) **ಹೂಗೊಂಚಲು**-ಲೇ. ಗೆಳೆಯರ ಬಳಗದ ಮುದ್ದಣ.

(೨) **ಇಸಬೆಲ ಮತ್ತು ಇತರ ಕವಿತೆಗಳು**-ನೀಲಕಂಠ.

(೩) **ಮನವಿ**- ಶ್ರೀನಿವಾಸರಾವ ಕದಿರೆ.

CC-0. Jangamwadi Math Collection. Digitized by eGangotri

# ಧರ್ಮವ್ಯಾಧನ ಧರ್ಮಸಂಕಟ

ಲೇಖಕರು:—ಶ್ರೀ ಮ. ಅ. ದೊರೆಸ್ವಾಮಿ ಅಯ್ಯಂಗಾರ್ಯರು, ಎಂ. ಎ. ಬಿ. ಎಲ್., ಮೈಸೂರು

ಕೌಶಿಕನೆಂಬ ಬ್ರಾಹ್ಮಣನು ಅರಣ್ಯದಲ್ಲಿ ಒಂದು ಮರದಡಿಯಲ್ಲಿ ತಪಸ್ಸು ಮಾಡುತ್ತ ಕುಳಿತಿದ್ದನು. ಆ ಮರದ ಮೇಲಿದ್ದ ಪಕ್ಷಿಯೊಂದು ತನ್ನ ಪುರೀಷವನ್ನು ಈ ಮುನಿಯ ಮೇಲೆ ವರ್ಷಿಸಿತು. ತಪಸ್ವಿಯು ಚಂಡಕೋಪದಿಂದ ಮೇಲಕ್ಕೆ ತಲೆಯೆತ್ತಿ ನೋಡಿದ ಮಾತ್ರಕ್ಕೆ ಪಕ್ಷಿಯು ಬೆಂದು ಬೂದಿಯಾಗಿ ಹೋಯಿತು. ತನ್ನ ಸಿದ್ಧಿಯ ಪ್ರಭಾವಕ್ಕೆ ಬ್ರಾಹ್ಮಣನಿಗೆ ಆಶ್ಚರ್ಯವೂ ಹೆಮ್ಮೆಯೂ ಉಂಟಾದವು. ತನಗೆ ತಪಸ್ಸೂ ಧರ್ಮವೂ ಅಖಂಡವಾಗಿ ಸಿದ್ಧಿಸಿರುವುವೆಂದು ಬ್ರಾಹ್ಮಣನು ನಂಬಿದನು. ಅತಿ ದೀರ್ಘಕಾಲ ತಪಸ್ಸು ಮಾಡಿ ತಪಸ್ಸಿದ್ಧಿಶಕ್ತಿಯಲ್ಲಿ ಪರಾಕಾಷ್ಠೆಯನ್ನು ಪಡೆದವನೆಂದರೆ ವಿಶ್ವಾಮಿತ್ರನಷ್ಟೆ. ಆದರೆ ಅಂತಹ ತಪಸ್ಸಿದ್ಧನು ಸಹ ಯಾವುದನ್ನು ಸಾಧಿಸಬೇಕಾದರೂ ಬುದ್ಧಿಪೂರ್ವಕವಾಗಿ, ತನ್ನ ಸಂಕಲ್ಪಶಕ್ತಿಯಿಂದ, ತನ್ನ ಅದ್ಭುತ ಶಕ್ತಿಯನ್ನು ಪ್ರಯೋಗಿಸಿ ಪವಾಡಗಳನ್ನು ರಚಿಸಬೇಕಾಗಿತ್ತು. ನಮ್ಮ ಬ್ರಾಹ್ಮಣತಪಸ್ವಿಯಾದರೋ ಪಕ್ಷಿಯನ್ನು ಸಂಕಲ್ಪಶೂನ್ಯನಾಗಿ ದೃಷ್ಟಿಸಿದ ಮಾತ್ರಕ್ಕೆ ಅವನ ಸಿದ್ಧಿಶಕ್ತಿಯು ಆ ಬಡಜೀವಿಯನ್ನು ಸುಟ್ಟು ಸೀಕರಿಮಾಡಿಬಿಟ್ಟಿತು. ದೇವತೆಗಳಿಗೂ ದುರ್ಲಭವಾದ ಈ ಮಹಿಮೆಯು ತನಗೆ ಪ್ರಾಪ್ತಿಸಿದೆ ಎಂದು ಅರಿತ ಮೇಲೆ ಕೌಶಿಕನ ಹೆಮ್ಮೆಗೆ ಅವಧಿಯುಂಟೇ ?

ಧರ್ಮದಿಂದ ಸಕಲ ಕಾಮನೆಗಳೂ ಕೈಸೇರುತ್ತವೆ ಎಂಬ ಸಾರಾಂಶದಲ್ಲಿ ಈ ಕಾಲಕ್ಕಿಂತಲೂ ಆಗಿನ ಕಾಲದಲ್ಲಿ ಅಧಿಕ ನಂಬಿಕೆ ಇದ್ದಿತು. ಈ ಸಾರಾಂಶವು ಸರ್ವದೇಶಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ನಿಜವಾದುದು. ಧರ್ಮಕ್ಕೂ ಧರ್ಮಸಾಧನೆಯ ಮಾರ್ಗಗಳಿಗೂ ಭೇದವುಂಟು. ಧರ್ಮವನ್ನು ಸಾಧಿಸಲು ಅನೇಕ ಮಾರ್ಗಗಳುಂಟು. ದೇಶಕಾಲಾವಸ್ಥೆಗಳಿಗನುಗುಣವಾಗಿ ಈ ಮಾರ್ಗಗಳು ಭಿನ್ನವಾಗಿ ಇರುವುವು. ಇಂಥಾ ಯಾವುದಾದರೂ ಒಂದು ಮಾರ್ಗವನ್ನು ನಾವು ಧರ್ಮಸಾಧನೆಯ ಮಾರ್ಗವೆಂದು ತಿಳಿಯುವುದಕ್ಕೆ ಪ್ರತಿಯಾಗಿ ಸ್ವಯಂ ಧರ್ಮವೆಂದೇ ಭ್ರಮಿಸಿದರೆ ತದ್ಭಿನ್ನಮಾರ್ಗಗಳನ್ನೆಲ್ಲಾ ವಿರೋಧಿಸಿ ಇಲ್ಲದ ಕಲಹಗಳನ್ನು ಕಲ್ಪಿಸುವೆವು. ಉದಾಹರಣೆಗಾಗಿ, ಹೋಮಹವನ, ಯಜ್ಞಯಾಗ, ಸಂಧ್ಯಾವಂದನೆ, ಶ್ರಾದ್ಧ ಮೊದಲಾದುವುಗಳು ಹಿಂದೂ ಜನರು ಒಪ್ಪತಕ್ಕ ಧರ್ಮಸಾಧನೆಯ ಮಾರ್ಗಗಳು. ಆದರೆ ಇವುಗಳನ್ನು ಅನುಷ್ಠಿಸದೆ ಇರತಕ್ಕವರನ್ನು ಧರ್ಮದೂರರು ಎಂದು ಹೇಳಲಾಗುವುದಿಲ್ಲ. ಯಾವುದೊಂದು ಕರ್ಮವು ಸಹ ಸರ್ವದೇಶಕ್ಕೂ ಸರ್ವಕಾಲಕ್ಕೂ ಸರ್ವಾವಸ್ಥೆಗೂ ನಿತ್ಯವಾಗಿ ಧರ್ಮಸಾಧನೆಯ ಮಾರ್ಗವಾಗಿ ಇರಲಾರದು. ವಿಷವು ಸಹ ಕೆಲ ಸಂದರ್ಭಗಳಲ್ಲಿ ಅಮೃತವಾಗಿ ಪರಿಣಮಿಸುವುದು. ನಮಗೆ ದುಷ್ಟವಾಗಿ ಕಂಡುಬರತಕ್ಕ ಕಾರ್ಯವು ಮತ್ತೊಂದು ಪರಿಸ್ಥಿತಿಯಲ್ಲಿರುವವರಿಗೆ ಸಾಧುವಾಗಿ ಕಾಣಿಸಬಹುದು. ಒಂದು ಕರ್ಮವನ್ನು ಒಂದು ಸಂದರ್ಭದಲ್ಲಿ ಪರಿತ್ಯಾಗ ಮಾಡುವುದೂ ಮತ್ತೊಂದು ಸಂದರ್ಭದಲ್ಲಿ ಅನುಷ್ಠಾನ ಮಾಡುವುದೂ ನಮಗೆ ಕರ್ತವ್ಯಗಳಾಗಬಹುದು. ಕರ್ಮಗಳನ್ನು ನಾವು ಧರ್ಮಾಧರ್ಮವೆಂದು ಪಂಗಡವೇನೋ ಮಾಡಬೇಕಾಗಿರುವುದು ನಿಜ. ಆದರೆ ಈ ಭೇದವು ಆ ಕರ್ಮಗಳ ಜಾತಿಯಲ್ಲಿ—ಎಂದರೆ ಹುಟ್ಟುಗುಣದಲ್ಲಿ ಇದೆ ಎಂದು ತಿಳಿದರೆ ಅನರ್ಥಕ್ಕಿಡುವುದು. ಕರ್ಮವು ಯಾವ ಬಗೆಯದಾಗಿದ್ದರೂ ಸರಿಯೆ, ಅದನ್ನು ನಿಜವಾದ ಧರ್ಮದ ಸಾಧನೆಗೆ ವಿನಿಯೋಗಿಸಿ, ಧರ್ಮದೃಷ್ಟಿಯಿಂದ ನಡೆಸಿದರೆ ಅದು ಧರ್ಮಯುಕ್ತವಾದುದಾಗಿ ಪರಿಣಮಿಸುವುದು. ಹೀಗೆ ಉದ್ದೇಶದ ದೃಷ್ಟಿಯಿಂದ ಕರ್ಮಗಳಲ್ಲಿ ಧರ್ಮಾಧರ್ಮವಿಭೇದವನ್ನು ಮಾಡಲು ಸಾಧ್ಯ. ಕರ್ಮಗಳಲ್ಲಿ ಜಾತಿಭೇದವುಂಟೆಂದು ಹೇಳತಕ್ಕ ಪಕ್ಷವು ಜಾತಿಪಂಥವೆನ್ನಿಸುವುದು.



CC-0. Jangamwadi Math Collection. Digitized by eGangotri

ತದ್ಭಿನ್ನವಾದ ಪಕ್ಷವು ಅಧ್ಯಾತ್ಮಪಂಥವೆನ್ನಿಸುವುದು. ಈ ಎರಡು ಪಕ್ಷಗಳಿಗೂ ನಮ್ಮ ದೇಶದಲ್ಲಿ ಬಹಳ ಕಾಲದಿಂದಲೂ ವಾದಯುದ್ಧಗಳು ನಡೆದಿವೆ. ಮೊದಲನೆಯ ಪಂಥದ ಕರ್ಮಠರು–ಕರ್ಮಗಳಲ್ಲಿ ಉಚ್ಚ ನೀಚ ಭೇದಗಳುಂಟು; ಮನುಷ್ಯರಲ್ಲಿಯೂ ಉಚ್ಚ ನೀಚ ಭೇದಗಳುಂಟು; ಈ ಭೇದಗಳು ಹುಟ್ಟಿನಿಂದಲೇ ಪ್ರಾಪ್ತವಾಗುವುವು; ಉತ್ತಮ ಜಾತಿಯವರು ಉತ್ತಮ ಜಾತಿಯ ಕರ್ಮಗಳನ್ನು ಮಾಡಬೇಕು; ನಿಕೃಷ್ಟ ಜಾತಿಯವರು ಉತ್ತಮ ಜಾತಿಯವರ ಕರ್ಮಗಳನ್ನು ಮಾಡಕೂಡದು; ವ್ಯಕ್ತಿಯು ತಾನು ಮಾಡತಕ್ಕ ಕರ್ಮದ ಉದ್ದೇಶವನ್ನು ತಿಳಿದು, ಆ ಕರ್ಮದಿಂದ ಅದು ಸಾಧಿಸಬೇಕಾದ ಉದ್ದೇಶವು ನೆರವೇರುವುದೇ ಇಲ್ಲವೇ ಎಂದು ವಿಚಾರ ಮಾಡುವುದಕ್ಕಾಗಲಿ, ಹಾಗೆ ಉದ್ದೇಶಕ್ಕೆ ಭಂಗ ಬರುವ ಹಾಗಿದ್ದರೆ ಆ ಕರ್ಮದ ಪ್ರಕಾರವನ್ನು ಮಾರ್ಪಡಿಸುವುದಕ್ಕಾಗಿಯಾಗಲಿ ಸ್ವತಂತ್ರನಲ್ಲ–ಎಂದು ಮುಂತಾಗಿ ವಾದಿಸುವರು. ಅಧ್ಯಾತ್ಮಪಕ್ಷದವರು ಕರ್ಮವು ಯಾವ ಬಗೆಯದಾಗಿದ್ದರೂ ಧ್ಯೇಯ ಸಾಧನೆಯ ಬುದ್ಧಿಯಿಂದ ಮಾಡಲ್ಪಟ್ಟರೆ ಸಾಧುವಾಗುವುದೆಂದು ವಾದಿಸುವರು. ಬೀದಿಗುಡಿಸುವ ಕೆಲಸವು ನಿಕೃಷ್ಟವಾದುದಾದರೂ ಅದನ್ನು ನಿಷ್ಕಾಮ ಎಂಬ ಧ್ಯೇಯದಿಂದಾಗಲಿ ಸಮಾಜಸೇವಾಬುದ್ಧಿಯಿಂದಾಗಲಿ ಮಾಡಿದ್ದೇ ಆದರೆ ಅದು ತಪಸ್ಸೇ ಮೊದಲಾದ ಅತ್ಯುತ್ಕೃಷ್ಟ ಜಾತಿಯ ಕರ್ಮಗಳಷ್ಟೇ ಧರ್ಮಯುಕ್ತವಾದುದೆಂದು ಹೇಳಬೇಕು.

ಲೋಕದಲ್ಲಿ ಸಕಲ ಮತಧರ್ಮಗಳಲ್ಲಿಯೂ ಈ ಜಾತಿಕರ್ಮವಾದಿಗಳೇ ಮೊದಲು ತಲೆದೋರುವರು. ಮತ್ತು ಯಾವಾಗಲೂ ಇವರೇ ಸಮಾಜದಲ್ಲಿ ಅತಿಪ್ರಬಲರಾಗಿರುವರು. ಅಧ್ಯಾತ್ಮಕರ್ಮವಾದವು ಒಂಡುಗಾರನಂತೆ ತಲೆದೋರಿ ಅಲ್ಪಜನರಿಂದ ಮಾತ್ರ ಪುರಸ್ಕಾರವನ್ನು ಪಡೆಯುವುದು. ನಮ್ಮ ದೇಶದಲ್ಲಿಯೂ ಹೀಗೆಯೇ ನಡೆದಿರುವುದು. ಮಹಾಭಾರತಕಾಲದ ವೇಳೆಗೆ ಅಧ್ಯಾತ್ಮಕರ್ಮವಾದಿಗಳ ಪಕ್ಷವು ವಿಶೇಷವಾಗಿ ತಲೆಯೆತ್ತಿಕೊಂಡಿದ್ದಿತು. ಶ್ರೀಕೃಷ್ಣನು ಗೀತೆಯಲ್ಲಿ ಇದೇ ವಾದವನ್ನು ಪರಿಗ್ರಹಿಸಿ ಲೋಕಕ್ಕೆ ಸಾರಿದನು. ಈ ಪಕ್ಷವನ್ನು ಅವಲಂಬಿಸಿದವರಲ್ಲಿ ಧರ್ಮವ್ಯಾಧನೂ ಒಬ್ಬನು. ಕರ್ಮಜಾತಿವಾದಿಗಳಲ್ಲಿ ಒಂದು ಶಾಖೆಯವರು ಎಲ್ಲಕ್ಕಿಂತಲೂ ದೊಡ್ಡ ಧರ್ಮಸಾಧನೆ ಮಾರ್ಗವು ತಪಸ್ಸೆಂದು ಹೇಳುತ್ತಿದ್ದರು. ಈ ಶಾಖೆ... ವರಿಗೆ ಧರ್ಮವ್ಯಾಧನ ಕಾಲದಲ್ಲಿ ಅತ್ಯಂತ ಪ್ರಾಬಲ್ಯವುಂಟಾಗಿತ್ತು. ತಪಸ್ಸಿನಿಂದ ಸಮಸ್ತ ಧರ್ಮಫಲ... ಕಾಂಕ್ಷೆಗಳೂ ಕೈಸೇರುವುವು ಎಂದು ಆಗ ಬಹುಮಂದಿ ನಂಬಿದ್ದರು.

ಅಸಮಾನ ತಪೋಬಲವನ್ನು ಸಂಗ್ರಹಿಸಿದ್ದ ಕೌಶಿಕನು ತಾನು ಧರ್ಮದಲ್ಲಿ ಅದ್ವಿತೀಯ ಸಿದ್ಧಿಯನ್ನು ಪಡೆದೆನೆಂದು ಎಣಿಸಿದನು. ಧರ್ಮವು ಅಖಂಡವಾಗಿ ಕೈಸೇರಿದವನಿಗೆ ಕೈಗೂಡದ ಬಯಕೆ ಯಾವುದುಂಟು! ಆದರೆ ಸ್ವಲ್ಪದರಲ್ಲಿಯೇ ನಡೆದ ಘಟನಾವಳಿಗಳು ಇವನ ಭ್ರಮೆಯನ್ನು ಹೋಗಲಾಡಿಸಿದುವು.

ಪಕ್ಷಿಯು ಸತ್ತು ಬಿದ್ದ ಸ್ವಲ್ಪ ಹೊತ್ತಿನಲ್ಲಿಯೇ ಕೌಶಿಕನಿಗೆ ಹಸಿವಿನ ಬಾಧೆಯುಂಟಾಯಿತು. ಹಸಿವಿನ ಮುಂದೆ ಇವನ ತಪೋಬಲದ ಆಟವೇನೂ ಸಾಗಲಿಲ್ಲ. ಧರ್ಮದಿಂದ ಸಕಲ ಇಷ್ಟಾರ್ಥವೂ ನೆರವೇರುವುದು ನಿಜವಾದರೆ ಹಸಿವೂ ಅದರಿಂದ ಅಡಗಬೇಕಷ್ಟೆ. ಆದರೆ ಹಸಿವನ್ನು ತೀರಿಸುವ ಧರ್ಮಮಾರ್ಗವು ಯಾವುದು? ಹಸಿವಿನ ಬಾಧೆಯನ್ನು ಪರಿಹರಿಸಲು ನಾವು ಕೈಕೊಳ್ಳಬೇಕಾದ ಕರ್ತವ್ಯಕರ್ಮವು ಯಾವುದು? ಆರ್ಥಿಕ ಉದ್ಯೋಗವು ಇದನ್ನು ಸಾಧಿಸಬಲ್ಲುದು. ಆದರೆ ಈ ಕರ್ತವ್ಯಕರ್ಮವು ಸಾಧಾರಣ ಧರ್ಮಮಾರ್ಗವಾಗಿರುವುದು. ಪಾಮರರಿಗೆ ಯೋಗ್ಯ ಕರ್ತವ್ಯವಾಗಿರುವ ಈ ಮಾರ್ಗವು ಶ್ರೇಷ್ಠರಿಗೆ ರುಚಿಸುವುದೇ? ಶ್ರೇಷ್ಠತೆಗೆ ಸಾಧಾರಣ ಧರ್ಮಮಾರ್ಗದ ತ್ಯಾಗವೇ ಮುಖ್ಯ ಚಿಹ್ನೆಯಾಗಿರುವುದು. ಶ್ರೇಷ್ಠರು ತಪಸ್ಸೇ ಮೊದಲಾದ ಉತ್ತಮ ಜಾತಿಯ ಕರ್ಮಗಳ ಮೂಲಕ ಧರ್ಮವನ್ನು ಸಾಧಿಸಿ ಇಷ್ಟಾರ್ಥಗಳನ್ನು ಪಡೆಯುವರೇ ಹೊರತು ನೀಚರಿಗೆ ಅರ್ಹವಾದ ಕರ್ಮಗಳನ್ನು ಕೈಗೊಳ್ಳಲಾರರು. ಉದಾಹರಣೆಗಾಗಿ, ಹಸಿವಿನ ಬಾಧೆಯನ್ನು ಶ್ರೇಷ್ಠ ಜಾತಿಯವರಾದ ಮುನಿಗಳು ನಿವಾರಿಸಿಕೊಳ್ಳಬೇಕಾದರೆ ಪಾಮರರಂತೆ ಆರ್ಥಿಕ ಉದ್ಯೋಗಗಳನ್ನು ಅವಲಂಬಿಸುವುದು ಅವರಿಗೆ ಯೋಗ್ಯವಲ್ಲ—ಎಂದರೆ ಅವರ ಭಾಗಕ್ಕೆ ಅದು ಧರ್ಮವೇ ಅಲ್ಲ. ಅವರು ಹಸಿವನ್ನು ತಪಸ್ಸಿನಿಂದ ಜಯಿಸಿ ಬಿಡಬಲ್ಲರು: ಹಠಯೋಗದಿಂದ ಅವರು ನಿವಾ...

CC-0. Jangamwadi Math Collection. Digitized by eGangotri

ವ್ರತಸಿದ್ಧಿಯನ್ನು ಪಡೆಯಬಹುದು; ತಪಶ್ಶಕ್ತಿಯಿಂದ ಹಸಿವೇ ಹುಟ್ಟದಂತೆಯಾಗಲಿ ಹುಟ್ಟಿದ ಹಸಿವು ಮಾಯ ವಾಗುವಂತೆಯಾಗಲಿ ಆಹಾರ ಸಾಮಗ್ರಿಗಳು ಸಂಕಲ್ಪ ಮಾತ್ರದಿಂದ ಬಂದೊದಗುವಂತೆಯಾಗಲಿ ಮಾಡಿಕೊಳ್ಳ ಬಹುದು. ಅಥವಾ ದೇವತಾ ಪ್ರಸಾದ, ಸ್ವರ್ಗಸಾನ್ನಿಧ್ಯ ಮೊದಲಾದ ಮಾರ್ಗಗಳಿಂದ ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿ ಮುಂತಾದ ಯಕ್ಷಿಣೀ ಸಾಮಗ್ರಿಗಳ ಸಹಾಯವನ್ನು ಪಡೆಯಬಹುದು. ಇಲ್ಲವೆ ಸಾಕ್ಷಾ ತ್ತಾದ ಅಮೃತವನ್ನು ಸಂಪಾದಿಸಿ ಅಮರತ್ವವನ್ನೇ ಪಡೆದುಬಿಡಬಹುದು. ಇಂಥಾ ಉತ್ತಮ ಸಾಧನಗಳು ಇರುವಾಗ ನಮ್ಮ ಕೌಶಿಕನಂತಹ ಶ್ರೇಷ್ಠವರ್ಗದವರು ನಿಕೃಷ್ಟವಾದ ಆರ್ಥಿಕ ಉದ್ಯೋಗವನ್ನು ಕೈಕೊಂಡು ಹಸಿವನ್ನು ನೀಗಬೇಕೆಂಬುದು ನಾಚಿಕೆಗೇಡೇ ಸರಿ.

ಆದರೂ ಪಕ್ಷಿಯನ್ನು ಸಾಯಿಸಲು ಶಕ್ತವಾಗಿದ್ದ ಇವನ ತಪಸ್ಸು ಇವನ ಹಸಿವನ್ನು ಅಡಗಿಸಲಾರದೆ ಹೋಯಿತು. ಆ ವೇಳೆಯಲ್ಲಿ ಹಸಿವನ್ನಡಗಿಸಲು ತಪಸ್ಸು ಧರ್ಮವಾಗಲಾರದೆ ಹೋಯಿತು. ಧರ್ಮಸಾಧನೆಗೆ ತಪಸ್ಸೊಂದು ಇದ್ದರೆ ಸಾಕೆಂದು ತಿಳಿದಿದ್ದ ಕೌಶಿಕನ ಭ್ರಮೆಗೆ ಭಂಗವುಂಟಾಯಿತು. ಯತ್ನವಿಲ್ಲದೆ ಕೌಶಿಕನು ಸಾಧಾರಣ ಧರ್ಮಮಾರ್ಗವನ್ನು ಅವಲಂಬಿಸಬೇಕಾ ಯಿತು. ಆಗ ಅವನಿಗೆ ಸಾಧ್ಯವಾಗಿದ್ದ ಆರ್ಥಿಕ ಉದ್ಯೋಗವು ಭಿಕ್ಷೆ. ಅದು ಬ್ರಾಹ್ಮಣರಿಗೆ ಸಾಧುವಾದ ಕರ್ಮವೆಂದು ಗೊತ್ತಾಗಿದ್ದಿತು. ಕೌಶಿಕನು ಅರಣ್ಯ ವನ್ನು ಬಿಟ್ಟು ಭಿಕ್ಷೆಗಾಗಿ ಪಟ್ಟಣಕ್ಕೆ ಹೋದನು. ಅಲ್ಲಿ ಅವನ ಭ್ರಮೆಗೆ ಮತ್ತೊಂದು ಪೆಟ್ಟು ಬಿದ್ದಿತು.

ಕೌಶಿಕನು ಒಂದು ಮನೆಯ ಬಾಗಿಲಿಗೆ ಹೋಗಿ 'ಭವತಿ ಭಿಕ್ಷಾಂ ದೇಹಿ' ಎಂದು ಬೇಡಿದನು. ಅತಿ ಥಿಗೆ ಭಿಕ್ಷವಿಕ್ಕುವ ಕಾರ್ಯವು ಗೃಹಿಣಿಗೆ ಸೇರಿದ್ದಿತು. ಆ ಮನೆಯ ಯಜಮಾನಿಯು ಭಿಕ್ಷವನ್ನು ಕೈಯಲ್ಲೆತ್ತಿ ಕೊಂಡು ಬ್ರಾಹ್ಮಣನಿಗೆ ಹಾಕುವುದಕ್ಕೆ ಬಂದಳು. ಅಷ್ಟ ರಲ್ಲಿಯೇ ಅವಳ ಗಂಡನು ತನಗೆ ಅತ್ಯಂತ ಹಸಿವಾಗಿದೆ ಯೆಂದು ಕೂಗಿಕೊಂಡನು. ಆಕೆಯು ಅತಿಥಿಯನ್ನು ಕಾದಿರುವಂತೆ ಹೇಳಿ ತಟ್ಟನೆ ಒಳಕ್ಕೆ ಹೊರಟು ಹೋದಳು. ಅಲ್ಲಿ ತನ್ನ ಗಂಡನಿಗೆ ಸಕಲೋಪಚಾರಪೂರ್ವಕವಾಗಿ ಊಟಮಾಡಿಸಿ ಮಲಗಿಸಿ ಬಿಟ್ಟು, ಅನಂತರ ಅತಿಥಿಗೆ ಭಿಕ್ಷವನ್ನು ಕೊಡಲು ಬಾಗಿಲಿಗೆ ಬಂದಳು. ಮುಂದಕ್ಕೆ ಹೋಗಿ ಬಾರೆನ್ನದೆ, ಕಾದಿರಲು ಹೇಳಿ ಹೋದುದರಿಂದ ಕೌಶಿಕನು ಮತ್ತೊಂದು ಮನೆಗೆ ಭಿಕ್ಷಕ್ಕೆ ಹೋಗು ವುದು ಅಸಾಧುವಾಗಿತ್ತು. ಆದರೆ ಒಂದು ಜಾವವಾ ದರೂ ಒಳಕ್ಕೆ ಹೋದ ಸ್ತ್ರೀಯು ಬರಲೇ ಇಲ್ಲ. ಬ್ರಾಹ್ಮ ಣನು ಮೊದಲೇ ಕೋಪಿಷ್ಠನು. ಆ ದಿವಸ ಪಕ್ಷಿಯ ನಿಮಿತ್ತ ಅವನ ಕೋಪವು ಶತಾಧಿಕವಾಗಿ ವೃದ್ಧಿಯಾ ಗಿತ್ತು. ಸಾಲದುದಕ್ಕೆ ಹಸಿವಿನ ಬಾಧೆಯೊಂದು ಕಡೆ ಬೆಳಗಿನಿಂದಲೂ ಪೀಡಿಸುತ್ತಿತ್ತು. ಬ್ರಾಹ್ಮಣನು ತನ್ನ ಉಗ್ರತಪಸ್ಸಿನ ಶ್ರಮದಿಂದಲೂ ಕಾಡಿನಿಂದ ನಡೆದು ಬಂದದ್ದರಿಂದಲೂ ಸೊರಗಿ ಸೊಪ್ಪಾಗಿದ್ದನು. ತನ್ನ ತಪಸ್ಸಾಮರ್ಥ್ಯವು ವ್ಯಕ್ತವಾದ ಮೇಲಂತೂ ಅವನ ಅಹಂಭಾವವು ಕೊನೆಮೊದಲೇ ಇಲ್ಲದೆ ಬಳೆದಿದ್ದಿತು.

ಇಂಥಾ ಸ್ಥಿತಿಯಲ್ಲಿ, ಒಬ್ಬ ಕ್ಷುದ್ರ ಸ್ತ್ರೀವ್ಯಕ್ತಿಯು ಪಾಪಮಯ ಸಂಸ್ಕಾರವಿಹೀನ ದ್ವಿಜತ್ವಶೂನ್ಯ ಪ್ರಾಣಿಯು—ತನ್ನನ್ನು ಮತ್ತೊಂದು ಕಡೆಗೂ ಹೋಗ ದಂತೆ ಮಾಡಿಟ್ಟು ಒಂದು ಜಾವದವರೆಗೆ ಬಿಸಿಲಲ್ಲಿ ಕಾದಿ ರುವಂತೆ ಮಾಡಿದರೆ ಕೌಶಿಕನ ಕೋಪಕ್ಕೆ ಅವಧಿ ಇರ ಲಾದೀತೇ? ಅತಿಥಿದೇವನಾದ ತನ್ನನ್ನು ಧರ್ಮವಿರುದ್ಧ ವಾಗಿ ತಿರಸ್ಕರಿಸಿ ಆ ಸ್ತ್ರೀಯು ತನ್ನ ಮುದಿಗಂಡನ ಉಪಚಾರಕ್ಕೆ ತೊಡಗಿದುದನ್ನು ನೋಡಿ ಅವನ ಕ್ರೋಧಾಗ್ನಿಯು ಮೇರೆಯಿಲ್ಲದೆ ವೃದ್ಧಿಯಾಯಿತು. ಕೌಶಿಕನು ಕಟ್ಟುಗ್ರಕೋಪಬಂದ ಆ ಸ್ತ್ರೀಯನ್ನು ಧ್ವಂಸಮಾಡಿ ಬಿಡಬೇಕೆಂದು ಸಂಕಲ್ಪಪೂರ್ವಕವಾಗಿ ನೋಡಲಾರಂಭಿಸಿದನು. ಸಂಕಲ್ಪಶೂನ್ಯವಾದ ಅಲ್ಪ ಕೋಪವು ಪಕ್ಷಿಯನ್ನು ದಹಿಸಿರುವಾಗ ಪ್ರಯತ್ನ ಪೂರ್ವಕವಾದ ಮಹಾಕೋಪವು ಈ ಧರ್ಮಬಾಹ್ಯಳಾದ ಸ್ತ್ರೀಯನ್ನು ನಾಶಮಾಡುವುದರಲ್ಲಿ ಸಂದೇಹವಿಲ್ಲ ವೆಂದು ಕೌಶಿಕನು ಎಣಿಸಿದನು. ಆದರೆ ಇವನ ತಪ ಶ್ಶಕ್ತಿಯು ಆ ಸ್ತ್ರೀಯ ಮೇಲೆ ಏನೂ ಮಾಡಲಾರದೆ ಹೋಯಿತು. ಆ ಸ್ತ್ರೀಯು ಇವನ ಉದ್ಯಮವನ್ನು ಕಂಡು, ನಗುನಗುತ 'ಅಯ್ಯೋ ಹುಚ್ಚು ಬ್ರಾಹ್ಮಣ, ನಿನ್ನ ಕೋಪದಿಂದ ನನ್ನನ್ನು ನಿಗ್ರಹಿಸಲು ಮರದ ಮೇಲಿನ ಪಕ್ಷಿ ಎಂದು ಭಾವಿಸಿದೆಯಾ?' ಎಂದು ಹಾಸ್ಯ ಮಾಡಿಬಿಟ್ಟಳು. ಬ್ರಾಹ್ಮಣನು ಇವಳ ಅದ್ಭುತ

CC-0. Jangamwadi Math Collection. Digitized by eGangotri

ಮಹಿಮೆಯನ್ನು ನೋಡಿ ಅವಾಕ್ಕಾದನು. ಕಾಡಿನಲ್ಲಿ ಪಕ್ಷಿ ಸತ್ತದ್ದನ್ನು ದೂರ ಸ್ಥಳದಲ್ಲಿದ್ದ ಈ ಸ್ತ್ರೀಯು ತಿಳಿಯಬೇಕಾದರೆ ಇವಳು ಇನ್ನೆಂಥಾ ತಪಸ್ಸಿದ್ಧಿಯನ್ನು ಪಡೆದಿರಬೇಕು ! ಸ್ತ್ರೀಗೆ ಧರ್ಮಸಾಧನೆಯ ಉತ್ತಮ ಜಾತಿಯ ಮಾರ್ಗಗಳೆಲ್ಲವೂ ನಿಷಿದ್ಧವಾಗಿವೆ. ತಪಸ್ಸು, ಯಜ್ಞ, ಅಧ್ಯಯನ, ಜಪ, ಮಂತ್ರ, ಸಂಸ್ಕಾರ ಇವೊಂದಕ್ಕೂ ಅವಳು ಅರ್ಹಳಲ್ಲ. ಸ್ವಾತಂತ್ರ್ಯವಿಲ್ಲದೆ, ಗಂಡನ ಗುಲಾಮಳಾಗಿ, ಪರಿಚಾರ ಮಾಡಿಕೊಂಡು ಬಿದ್ದಿರಬೇಕಾದ ಈ ಅಪವಿತ್ರ ಪ್ರಾಣಿಯು ತನ್ನಂತಹ ತಪಸ್ವಿಗಿಂತಲೂ ಅಧಿಕವಾದ ಧರ್ಮಶಕ್ತಿಯನ್ನು ಹೇಗೆ ಸಂಪಾದಿಸಿದಳು ? ಎಂದು ಕೌಶಿಕನಿಗೆ ದಿಗ್ಭ್ರಮೆಯುಂಟಾಯಿತು.

ಕೌಶಿಕನು ನಿರ್ವಾಹವಿಲ್ಲದೆ ಆ ಸ್ತ್ರೀಗೆ ಶರಣಾಗತನಾಗಿ ತನ್ನ ಸಂದೇಹವನ್ನು ಪರಿಹರಿಸಬೇಕೆಂದು ಕೇಳಿಕೊಂಡನು. ಆಕೆಯು ಪತಿಸೇವೆಯ ಹೊರತು ಮತ್ತಾವ ವಿಶೇಷ ಜಾತಿಯ ಸಾಧನೆಗಳನ್ನೂ ತಾನು ಕೈಕೊಂಡಿಲ್ಲವೆಂದು ಹೇಳಲು ಕೌಶಿಕನಿಗೆ ಮತ್ತಷ್ಟು ಆಶ್ಚರ್ಯವಾಯಿತು. ಆಗ ಆಕೆಯು ಕೌಶಿಕನಿಗೆ–ಧರ್ಮಸಿದ್ಧಿಗೆ ಕ್ಲಿಷ್ಟವಾದ ವಿಶೇಷಜಾತಿಯ ತಪಸ್ಸೇ ಮೊದಲಾದ ಮಾರ್ಗಗಳಾವುವೂ ಬೇಕಿಲ್ಲವೆಂದೂ ನಿತ್ಯ ಸಾಧಾರಣವಾದ ದಿನಚರಿ ಜೀವನದ ಕರ್ಮಗಳನ್ನೇ ಧರ್ಮದಿಂದ (ಆಧ್ಯಾತ್ಮಕ್ರಮದಲ್ಲಿ)ಮಾಡುತ್ತ ಬಂದರೆ ಯಥೇಷ್ಟವೆಂದೂ ಕೌಶಿಕನಂತಹ ಮೂಢರು ಸಾಧಾರಣ ಕರ್ಮಗಳ ಮಹಾತ್ಮ್ಯವನ್ನೂ ಅರಿಯದೆ ನಿರರ್ಥಕವಾಗಿ ಶ್ರಮಪಡುತ್ತಿರುವರೆಂದೂ ಮನದಟ್ಟುಮಾಡಿದಳು. ಸ್ತ್ರೀಯು ಉತ್ತಮ ಜಾತಿಯವಳಲ್ಲ; ಉತ್ತಮಜಾತಿಯ ಕರ್ಮಗಳೂ ಅವಳಿಗೆ ನಿಷಿದ್ಧವಾಗಿದ್ದುವು. ಆದರೂ ಅವಳು ತನ್ನ ನಿತ್ಯ ಸಾಧಾರಣವಾದ ಕರ್ತವ್ಯಕರ್ಮವನ್ನು ಆಧ್ಯಾತ್ಮದೃಷ್ಟಿಯಿಂದ ಮಾಡುತ್ತಾ ಬಂದರೆ ಧರ್ಮಸಿದ್ಧಿಯಲ್ಲ ಎಂಥಾ ಋಷಿಯನ್ನಾದರೂ ವಿಚಾರಿಸಬಲ್ಲಳು. ಕೌಶಿಕನು ಈ ಹೊಸಮಾರ್ಗವನ್ನು ಈ ಪತಿವ್ರತೆಯಿಂದ ಅರಿತಮೇಲೆ ಅದನ್ನು ಸಾಂಗೋಪಾಂಗವಾಗಿ ತನಗೆ ಉಪದೇಶಿಸಬೇಕೆಂದು ಬೇಡಿದನು. ಆಗ ಆಕೆಯು ಈ ಧರ್ಮರಹಸ್ಯವನ್ನು ಆತನು ಧರ್ಮವ್ಯಾಧನಿಂದ ಹೋಗಿ ಕಲಿಯಬಹುದೆಂದು ಹೇಳಿ ಕಳುಹಿಸಿಕೊಟ್ಟಳು.

ಸಾಧಾರಣರಾದವರಿಗೆ ಈ ಹೊಸ ಮಾರ್ಗವನ್ನು ತಿಳಿಸಲು ಈ ಪತಿವ್ರತೆಯ ಉಪದೇಶವೇ ಸಾಕಾಗಿತ್ತು. ಆದರೆ ಕೌಶಿಕನು ಸಾಧಾರಣ ಮನುಷ್ಯನಾಗಿರಲಿಲ್ಲ. ಆತನು ಅತಿಶ್ರೇಷ್ಠಜಾತಿಯ ವಿಪ್ರನು; ಅಷ್ಟರ ಮೇಲೆ ಉಗ್ರ ತಪಸ್ವಿಯು. ಜನ್ಮಾರಭ್ಯ ಏತತ್ಕ್ಷಣಾಪರ್ಯಂತ ಜಾತಿವಾದವು ಇವನ ತಲೆಯಲ್ಲಿ ರೂಢಮೂಲವಾಗಿತ್ತು. ಅದನ್ನು ಇವನು ತದ್ವಿರುದ್ಧವಾದ ಒಂದೇ ಒಂದು ದೃಶ್ಯವನ್ನು ಕಂಡಮಾತ್ರದಿಂದ ನಿಶ್ಶೇಷವಾಗಿ ಬಿಟ್ಟು ಬಿಡುವುದು ಅಸಾಧ್ಯ. ಅಲ್ಲದೆ ಈ ಪತಿವ್ರತೆಯು ಬ್ರಾಹ್ಮಣ ಜಾತಿಯವಳು. ಈಕೆಯು ಶ್ರುತಿಸ್ಮೃತಿಪ್ರೋಕ್ತ ಧರ್ಮಕರ್ಮಗಳಿಗೆ ಬಾಹಿರಳಾಗಿದ್ದರೂ ಪುರಾಣಾದಿ ಮಾದಿ ಧರ್ಮಶಾಸ್ತ್ರಗಳಿಂದ ವಿಧಿತವಾಗಿರುವ ಧರ್ಮ ಕರ್ಮಗಳಿಗೆ ಅಧಿಕಾರಿಯಾಗಿದ್ದಳು. ಅವುಗಳನ್ನು ಆಚರಿಸುವವಳು ಏನಾದರೂ ಸಿದ್ಧಿಯನ್ನು ಪಡೆಯಬಹುದು. ಅಥವಾ, ಕುಂತಿಯು ದೂರ್ವಾಸನನ್ನು ಒಲಿಸಿ ಅನುಗ್ರಹವನ್ನು ಪಡೆದ ರೀತಿ. ಇವಳು ಯಾರಾದರೂ ಮುನಿಶ್ರೇಷ್ಠರನ್ನು ಪ್ರಸನ್ನೀಕರಿಸಿ ಅವರಿಂದ ವರವನ್ನು ಪಡೆದಿರಬಹುದು. ಇಲ್ಲವೆ, ಇವಳ ಗಂಡನು ದೊಡ್ಡ ತಪಸ್ವಿಯಾಗಿರಬಹುದು. ಆತನ ಪ್ರಸಾದದಿಂದ ಇವಳಿಗೆ ಈ ಅದ್ಭುತಶಕ್ತಿ ಬಂದಿರಬಹುದು. ಸ್ತ್ರೀಯಾದವಳು ಗುರೂಪದೇಶಕ್ಕೆ ಅನಧಿಕಾರಿ ಎಂಬ ಸಂಪ್ರದಾಯಧರ್ಮವನ್ನು ಅರಿತಿದ್ದ ಈಕೆಯು ಯುಕ್ತಿಯಿಂದ ತನ್ನನ್ನು ಅನ್ಯತ್ರ ಕಳುಹಿಸಿರಬಹುದು. ಈ ವಿಧವಾದ ಸಂದೇಹಗಳೆಲ್ಲಾ ಅಡಗಬೇಕಾದರೆ ಈ ಹೊಸಮಾರ್ಗವನ್ನು ಉದಾಹರಿಸತಕ್ಕ ದೃಶ್ಯವು ಮತ್ತೂ ಪ್ರಬಲವಾದುದಾಗಿರಬೇಕು. ಸಕಲ ಒಂದುಪಕ್ಷ ಚತುರ್ವರ್ಣಗಳಿಗೂ ಹೊರತಾಗಿ, ನಿರ್ವಾಣ ಜಾತಿಯ ಶಾಸ್ತ್ರಧರ್ಮಕ್ಕೂ ಬಾಹ್ಯನಾಗಿ, ನಿರ್ವಾಣವಾಗಿ ಧರ್ಮವಿರುದ್ಧವಾಗಿರುವ ಅತಿ ಹೇಸಿಗೆಯಾದ ವೃತ್ತಿಯಲ್ಲಿ ನಿರತನಾಗಿ ಇರತಕ್ಕ ಪಾಮರ ಮನುಷ್ಯನೊಬ್ಬನು ಈ ಹೊಸಪಂಥದ ಪ್ರಕಾರ ತನ್ನ ನಿತ್ಯಸಾಧಾರಣವಾದ ಧರ್ಮಕರ್ಮಗಳ ಆಚರಣೆಯಿಂದ ಮಾತ್ರವೇ ವಸಿಷ್ಠಾದಿ ಬ್ರಹ್ಮರ್ಷಿಗಳಿಗೆ ಸಮನಾದ ಸಿದ್ಧಿಯನ್ನು ಪಡೆದಿರುವ ದೃಶ್ಯವೇನಾದರೂ ಎಲ್ಲಿಯಾದರೂ ಕಣ್ಣಿಗೆ ಬೀಳುವಂತಿದ್ದರೆ ಕೌಶಿಕನಂಥಾ ಜನರ ಜಾತಿವಾದವೆಂಬ ಹುಟ್ಟುವ್ಯಾಧಿಯು ಗುಣವಾಗಬಹುದು. ಅದ್ದರಿಂದಲೇ

CC-0. Jangamwadi Math Collection. Digitized by eGangotri

ಆ ಪತಿವ್ರತೆಯು ಇವನನ್ನು ಧರ್ಮವ್ಯಾಧನ ಬಳಿಗೆ ಕಳುಹಿಸಿಕೊಟ್ಟಳು.

ಕೌಶಿಕನು ಧರ್ಮವ್ಯಾಧನ ಊರನ್ನು ಒಂದು ಸೇರಿ ಅವನ ಮನೆಯನ್ನು ವಿಚಾರಿಸಿಕೊಂಡು ಹೊರಟನು. ಚತುರ್ವರ್ಣದವರ ವಸತಿಗಳಿಂದ ದೂರವಾಗಿದ್ದ ಹೇಸಿಗೆ ಕೊಂಪೆಯಾದ ಒಂದು ಬೀದಿಯಲ್ಲಿ ಆ ಮನೆಯಿದ್ದಿತು. ಮಾಂಸಾಹಾರಿಗಳೂ ಮಾಂಸಾಹಾರನಿರ್ಮಾಣಕರೂ ಮಾಂಸವಿಕ್ರೇತರೂ ಆದ ಕಟುಕರು ಆ ಬೀದಿಯಲ್ಲಿ ವಾಸಿಸುತ್ತಿದ್ದರು. ಆ ಬೀದಿಗೆ ಹೋದರೆ ತನಗೆ ನಿತ್ಯ ನರಕವೇ ಪ್ರಾಪ್ತವಾಗದಿರದೆಂದು ಕೌಶಿಕನು ಹೆದರಿದನು. ಹೇಗೋ ಬಹಳ ಕಷ್ಟದಿಂದ ಮನಸ್ಸನ್ನು ಬಿಗಿಹಿಡಿದು ಕೌಶಿಕನು ಧರ್ಮವ್ಯಾಧನ ಮನೆಗೆ ಸೇರಿ ಅವನನ್ನು ವಿಚಾರಿಸಿದನು. ಮಾಂಸವಿಕ್ರಯಕಾರ್ಯದಲ್ಲಿ ಆಸಕ್ತನಾಗಿದ್ದ ಧರ್ಮವ್ಯಾಧನು ಕೌಶಿಕನನ್ನು ಕಂಡು ಮರ್ಯಾದೆಯಿಂದ ಒಳಕ್ಕೆ ಕರೆದುಕೊಂಡು ಹೋಗಿ ಕುಳ್ಳಿರಿಸಿ ಆ ಪತಿವ್ರತಾ ಸ್ತ್ರೀಯು ವೃಥಾ ಕೌಶಿಕನನ್ನು ತನ್ನ ಬಳಿಗೆ ಕಳುಹಿಸಿ ಶ್ರಮಕೊಟ್ಟದ್ದಕ್ಕಾಗಿ ಮನ್ನಣೆ ಬೇಡಿದನು. ಕೌಶಿಕನಿಗೆ ನಿರಕ್ಷರಕುಕ್ಷಿಯಾದ ಈ ಬೇಡನ ಸಿದ್ಧಿಯನ್ನು ನೋಡಿ ಪರಮಾಶ್ಚರ್ಯವಾಯಿತು. ಕೌಶಿಕನು ತನಗೆ ಧರ್ಮದ ನಿಜರಹಸ್ಯವನ್ನು ಉಪದೇಶಮಾಡಬೇಕೆಂದು ಧರ್ಮವ್ಯಾಧನನ್ನು ಬೇಡಿದನು.

ದಿನಚರಿಯ ಜೀವನನಿರ್ವಾಹದಲ್ಲಿ ನಾವು ಮಾಡಬೇಕಾಗಿರುವ ಸಾಧಾರಣ ಕರ್ತವ್ಯವನ್ನು ನಾವು ಮಾಡುತ್ತ ಬರುವದು ಯಥೇಷ್ಟವೆಂದು ಧರ್ಮವ್ಯಾಧನು ಕೌಶಿಕನಿಗೆ ನಿರೂಪಿಸಿದನು. ಪ್ರತಿಯೊಬ್ಬನೂ ತನ್ನ ಗೃಹ, ಕುಲ, ವೃತ್ತಿ, ರಾಷ್ಟ್ರ, ಸಮಾಜಗಳಿಗೆ ಸಂಬಂಧಪಟ್ಟಿರುವ ಕರ್ತವ್ಯಕರ್ಮಗಳನ್ನು ಮಾಡುತ್ತ ಬಂದರೆ ಧರ್ಮಸಿದ್ಧಿಯು, ಸಂಪೂರ್ಣವಾಗಿ ದೊರೆಯುವುದು. ಧರ್ಮಸಾಧನೆಗಾಗಿ ಯಾರೂ ಸಂಸಾರವನ್ನೂ ದೇಶವನ್ನೂ ಬಿಟ್ಟು ಪರಪ್ರಯೋಜನವಿಲ್ಲದ ತಪಸ್ಸೇ ಮೊದಲಾದ ಕ್ಲಿಷ್ಟಕಾರ್ಯಗಳನ್ನು ಅವಲಂಬಿಸಬೇಕಾಗಿಲ್ಲ. ಧರ್ಮವ್ಯಾಧನಿಗೆ ಹೆಂಡತಿ ಮಕ್ಕಳೂ ಹಣ್ಣು ಮುದುಕರಾದ ತಂದೆತಾಯಿಗಳೂ ಇದ್ದರು. ಇವರುಗಳ ವಿಷಯದಲ್ಲಿ ಇವನು ಹೇಗೆ ನಡೆದುಕೊಳ್ಳಬೇಕೋ ಹಾಗೆ ನಡೆಯುವದೇ ತನಗೆ ಯಥೇಷ್ಟವೆಂದು ಅರಿತಿದ್ದನು. ವೃದ್ಧರಾದ ತಂದೆತಾಯಿಗಳನ್ನು ಒಂದು ಮಂಚದ ಮೇಲೆ ಇರಿಸಿ ಅವರಿಗೆ ಸ್ವಲ್ಪವೂ ಕೊರತೆಯಿಲ್ಲದಂತೆ ದೇವತೆಗಳಂತೆ ಸಕಲೋಪಚಾರಗಳನ್ನೂ ಭಕ್ತಿಯಿಂದ ಮಾಡುತ್ತಿದ್ದನು. ತನ್ನ ಕುಲವೃತ್ತಿಯಿಂದ ತನ್ನ ಸಂಸಾರವನ್ನು ನಿರ್ವಾಹ ಮಾಡುತ್ತಿದ್ದನು. ಹೀಗೆ ಧರ್ಮವ್ಯಾಧನ ಜೀವನವೆಲ್ಲವೂ ಸಾಧಾರಣಮಾರ್ಗದ ಮಾಹಾತ್ಮ್ಯವನ್ನು ಕೊಂಡಾಡುತ್ತಿತ್ತು. ಉತ್ತಮ ಜಾತಿಯಲ್ಲಿ ಹುಟ್ಟಿ ಉತ್ತಮ ಜಾತಿಯ ಕರ್ಮಗಳಲ್ಲಿ ಮಾತ್ರವೇ ನಂಬಿಕೆ ಇಟ್ಟಿದ್ದ ಕೌಶಿಕನಂತಹ ಜನರಿಗೆ ಧರ್ಮವ್ಯಾಧನು ಸಾಧಾರಣಕರ್ಮಗಳ ಧರ್ಮಸಾಧಕ ಶಕ್ತಿಯನ್ನು ತೋರಿಸಿಕೊಡತಕ್ಕ ದೃಷ್ಟಾಂತಸ್ವರೂಪನಾಗಿದ್ದನು.

ಧರ್ಮವ್ಯಾಧನಿಂದ ಕೌಶಿಕನು ಸಾಧಾರಣ ಕರ್ಮಮಾರ್ಗದ ಪ್ರಭಾವವನ್ನೇನೋ ಅರಿತನು. ಆದರೂ ಅವನಿಗೆ ಒಂದು ದಾರುಣವಾದ ಸಂದೇಹವು ಉಳಿಯಿತು. ಕರ್ಮಗಳು ಆಧ್ಯಾತ್ಮಿಕದೃಷ್ಟಿಯಿಂದ ಒಂದೇ ಸಮವಾಗಿರಬಹುದು. ಆದರೆ ಕರ್ಮಗಳ ಧರ್ಮಾಧರ್ಮತ್ವವನ್ನು ಎಲ್ಲಾ ವೇಳೆಯಲ್ಲಿಯೂ ಅಧ್ಯಾತ್ಮಮಾರ್ಗದಿಂದ ಮಾತ್ರವೇ ಮಾಡುವುದು ಸರಿಹೋಗುವುದಿಲ್ಲ. ಅಧ್ಯಾತ್ಮಮಾರ್ಗವು ಕರ್ಮದ ಉದ್ದೇಶವನ್ನೂ ಧ್ಯೇಯವನ್ನೂ ನೋಡುವುದೇ ಹೊರತು ಅದರ ಜಾತಿಯನ್ನು ನೋಡುವುದಿಲ್ಲ. ಇದರಿಂದ ಕೆಲವೇಳೆ ಅನರ್ಥವುಂಟಾಗುವುದು. ದೇವಾಲಯವನ್ನು ಕಟ್ಟಿಸುವುದಕ್ಕಾಗಿ ಕಳ್ಳತನದಿಂದ ದ್ರವ್ಯವನ್ನು ಸಂಪಾದಿಸುವುದು ಸಾಧುವೇ ? ತಂದೆತಾಯಿಗಳನ್ನು ತೃಪ್ತಿಪಡಿಸುವುದಕ್ಕಾಗಿ ಕೊಲೆಪಾತಕ ಮಾಡುವುದು ನ್ಯಾಯವೇ ? ನರಹತ್ಯೆಯನ್ನೇ ಕುಲವೃತ್ತಿಯೆಂದು ಇಟ್ಟುಕೊಳ್ಳತಕ್ಕವನು ಅದನ್ನು ಎಷ್ಟೇ ಆಧ್ಯಾತ್ಮಿಕವಾಗಿ ನಡೆಸಿದರೂ ಧರ್ಮಿಷ್ಠನೆನ್ನಿಸಿಕೊಳ್ಳಲು ಅರ್ಹನಾಗುವನೇ ? ಸರ್ವದೃಷ್ಟಿಯಿಂದಲೂ ಮಾಂಸವ್ಯಾಪಾರವು ನೀಚ ಕೃತ್ಯವೆನ್ನದೆ ಇರಲಾಗುವುದಿಲ್ಲ. ಅಹಿಂಸಾಧರ್ಮವಿರುದ್ಧವಾದ ಈ ಮಾಂಸವ್ಯಾಪಾರವನ್ನು ಧರ್ಮವ್ಯಾಧನು ನಡೆಸುವುದು ಹೇಗೆ ತಾನೇ ಸಾಧುವಾದೀತೆಂದು ಕೌಶಿಕನು ಸಂದೇಹಪಟ್ಟನು.



CC-0. Jangamwadi Math Collection. Digitized by eGangotri

ಮಾಂಸಾಹಾರನಿಷೇಧವನ್ನೂ ಅಹಿಂಸಾವಾದವನ್ನೂ ಸಕಲ ಮತಗಳೂ ಒಪ್ಪುವುದಿಲ್ಲ. ಜೈನ, ಬೌದ್ಧ, ವೈಷ್ಣವ, ವೀರಶೈವ ಮತಗಳು ಮಾತ್ರ ಈ ಎರಡನ್ನೂ ಸಂಪೂರ್ಣವಾಗಿ ಅಂಗೀಕರಿಸಿ ಪ್ರಚಾರಕ್ಕೆ ತಂದುವು. ಹಿಂದೂಮತಧರ್ಮದ ಆವರಣದಲ್ಲಿಯೇ ಈ ಎರಡನ್ನೂ ತಿರಸ್ಕರಿಸತಕ್ಕ ಮತಗಳು ಅನೇಕವಾಗಿದ್ದುವು. ವೈದಿಕ ಯಜ್ಞಮತವು ಮಾಂಸಾಹಾರಕ್ಕೆ ವೈರಿಯಾಗಿರಲಿಲ್ಲ. ಯಜ್ಞಯಾಗಗಳಲ್ಲಿ ಸಾವಿರಾರು ಪ್ರಾಣಿಗಳನ್ನು ಬ್ರಾಹ್ಮಣರು ಅತಿಕ್ರೂರವಾಗಿ ಕೊಲ್ಲುತ್ತ ಹೆಮ್ಮೆಯಿಂದ ತಿನ್ನುತ್ತಿದ್ದರು. ಆ ಕಾಲದಲ್ಲಿ ಸಕಲ ಜಾತಿಯವರೂ ಮಾಂಸಾಹಾರವನ್ನು ತೆಗೆದುಕೊಳ್ಳುತ್ತಿದ್ದುರು. ಅತಿ ರುಚಿಕರವಾದ ಗೋಮಾಂಸವು ಬ್ರಾಹ್ಮಣರ ಪ್ರಿಯ ಆಹಾರವಾಗಿತ್ತು. ಮಾಂಸಭೋಜನವಿಲ್ಲದೆ ಯಾವ ಶ್ರಾದ್ಧವೂ ನಡೆಯುತ್ತಿರಲಿಲ್ಲ. ಧರ್ಮವ್ಯಾಧನ ಕಾಲ ದಲ್ಲಿ ಈ ಮತವು ಅತ್ಯಂತಪ್ರಾಬಲ್ಯವನ್ನು ಪಡೆದಿದ್ದಿತು. ನಮ್ಮ ಕೌಶಿಕನಂತೆ ಜಾತಿವಾದವನ್ನು ಅಂಗೀಕರಿಸಿ ತಪಸ್ಸೇ ಮೊದಲಾದ ಉತ್ತಮ ಜಾತಿಯ ಸಾಧನೆಗಳಲ್ಲಿ ಪರಮ ನಿಷ್ಣಾತರಾಗಿದ್ದ ವಸಿಷ್ಠ ವ್ಯಾಸಾದಿಗಳಂತಹ ಮುನಿಶ್ರೇಷ್ಠರೆಲ್ಲರೂ ಈ ವೈದಿಕಮತಾವಲಂಬಿಗಳಾಗಿ, ನಾನಾಕಡೆ ಯಜ್ಞಗಳನ್ನು ಮಾಡಿಸುತ್ತ, ಎಲ್ಲೆಲ್ಲಿಯೂ ಮಾಂಸಭೋಜನವನ್ನು ಸ್ವೀಕರಿಸುತ್ತ ಇದ್ದರು. ಈ ಪಕ್ಷದವರಿಗೆ ಮಾಂಸವ್ಯಾಪಾರವು ಯಾವ ಬಗೆಯಿಂದ ಧರ್ಮಸಂಕಟವನ್ನೂ ಕಲ್ಪಿಸಲಾರದು. ಅದನ್ನು ನಿಕೃಷ್ಟ ಜಾತಿಯ ಕರ್ಮವೆಂದು ಇವರು ಹೇಳಬಹುದೇ ಹೊರತು ಧರ್ಮವಿರುದ್ಧವಾದುದೆಂದು ಹೇಳಿ ನಿಷೇಧಿಸಲಾಗುವುದಿಲ್ಲ.

ಮಾಂಸಾಹಾರವನ್ನೂ ಪ್ರಾಣಿವಧೆಯನ್ನೂ ವಿರೋಧಿಸತಕ್ಕ ಮತೀಯರಿಗೆ ಸಹ ಮಾಂಸವ್ಯಾಪಾರದ ವಿಚಾರದಲ್ಲಿ ಯಾವಬಗೆಯಿಂದ ಧರ್ಮಸಂಕಟವೂ ಪ್ರಾಪ್ತವಾಗಲಾರದು. ಅವರು ಒಂದೇ ಮನಸ್ಸಿನಿಂದ ಆ ಕೃತ್ಯವು ಪಾಪಮಯವಾದುದೆಂದು ನಿಷೇಧಿಸಿಬಿಡುವರು.

ಅಂಗೀಕೃತವಾದ ಎರಡು ಧರ್ಮಗಳಿಗೆ ಪರಸ್ಪರ ವಿರೋಧವು ಬಂದು, ಅವೆರಡರಲ್ಲಿ ಯಾವುದಕ್ಕೆ ಪುರಸ್ಕಾರ ಕೊಡಬೇಕು ಎಂದು ಹುಟ್ಟತಕ್ಕ ವಿಕಲ್ಪವು ಧರ್ಮಸಂಕಟವೆನ್ನಿಸುವುದು. ಈ ಸಂದರ್ಭದಲ್ಲಿ ಒಂದು ಧರ್ಮವನ್ನು ಪರಿಪಾಲಿಸಬೇಕಾದರೆ ಮತ್ತೊಂದು ಧರ್ಮವನ್ನು ಉಲ್ಲಂಘಿಸುವ ಸಂಕಟವು ಪ್ರಾಪ್ತಿಸುವುದು. ಪರಶು ರಾಮನು ಪಿತೃವಾಕ್ಯಪರಿಪಾಲನೆ ಎಂಬ ಧರ್ಮವನ್ನು ಸಾಧಿಸುವುದಕ್ಕಾಗಿ ಮಾತೃಹತ್ಯೆ ಎಂಬ ಪಾಪವನ್ನು ಮಾಡಬೇಕಾಯಿತು.

ಇದೇ ರೀತಿ ಮಾಂಸವ್ಯಾಪಾರವು ಯಾರಿಗೆ ಧರ್ಮ ಸಂಕಟಕರವಾಗಬಹುದು? ಯಾರು ವೈದಿಕ ಪಕ್ಷವನ್ನು ನೂತನ ಸಂಪ್ರದಾಯದ ಅಹಿಂಸಾವಾದವನ್ನೂ ಸಮಾ ನವಾಗಿ ಅಂಗೀಕರಿಸಲಿಚ್ಛಿಸುವರೋ ಅವರಿಗೆ ಮಾಂಸ ವ್ಯಾಪಾರದ ವಿಚಾರದಲ್ಲಿ ಧರ್ಮಸಂಕಟವು ಹುಟ್ಟು ವುದು. ಈ ವಿಚಾರದಲ್ಲಿ ಧರ್ಮವ್ಯಾಧನು ಇಂತಹ ಧರ್ಮಸಂಕಟಕ್ಕೆ ಸಿಲುಕಿದ್ದನು. ಹಾಗಿರದಿದ್ದರೆ ಅವನು ಕೌಶಿಕನ ಸಂದೇಹವನ್ನು ಒಂದು ಮಾತಿನಲ್ಲಿ ಪರಿಹರಿಸಿ ಬಿಡಬಹುದಾಗಿತ್ತು. ಅಹಿಂಸಾವಾದವು ಅಸತ್ಯವಾದ ದೆಂದು ಹೇಳಿಬಿಟ್ಟಿದ್ದರೆ ಯಾವ ಸಂದೇಹಕ್ಕೂ ಅವಕಾ ಶವಿರುತ್ತಿರಲಿಲ್ಲ. ಆದರೆ ಧರ್ಮವ್ಯಾಧನು ಅಹಿಂಸಾವಾದ ವನ್ನು ಪುರಸ್ಕರಿಸುತ್ತಿದ್ದನು. ಆದ್ದರಿಂದಲೇ ಪ್ರಾಣಿ ಗಳನ್ನು ತಾನು ಸಂಹರಿಸಿ ತಿನ್ನುವುದಿಲ್ಲವೆಂದೂ ಪರರಿಂದ ವಧಿಸಲ್ಪಟ್ಟ ಪ್ರಾಣಿಗಳ ಮಾಂಸದ ವಿಕ್ರಯವನ್ನು ಮಾತ್ರ ಮಾಡುತ್ತಿರುವೆನೆಂದೂ ಹೇಳಿಕೊಂಡನು. ಅಹಿಂಸಾವಾದವನ್ನೇ ಏಕಾಯತ್ತವಾಗಿ ಅಂಗೀಕರಿಸಿ ದ್ದರೆ ಇವನು ತನ್ನ ಕುಲವೃತ್ತಿಯನ್ನೇ ಪರಿತ್ಯಜಿಸಬೇ ಕಾಗುತ್ತಿತ್ತು. ಮತ್ತೊಂದು ಘನ ಉದ್ದೇಶದಿಂದ ಇವನು ತನ್ನ ವೃತ್ತಿಯನ್ನು ಬಹಿಷ್ಕರಿಸಲು ಇಚ್ಛಿಸಲಿಲ್ಲ ವಾದ್ದರಿಂದ ಇವನಿಗೆ ಆದರ ವಿಚಾರದಲ್ಲಿ ಧರ್ಮ ಸಂಕಟವು ಪ್ರಾಪ್ತವಾಗಿತ್ತು.

ಧರ್ಮಸಂಕಟವೂ ಧರ್ಮಸಮಸ್ಯೆಯೂ ವಿವೇಕಿ ಗಳಿಗೆ ಮಾತ್ರ ಉಂಟಾಗುವುವು. ಬುದ್ಧಿಹೀನರಿಗೆ ಇವು ಗೋಚರಿಸುವುದಿಲ್ಲ. ಹಾಗೆ ಗೋಚರಿಸಿದರೂ ರಾಗ ದ್ವೇಷಗಳು ಎಳೆದಂತೆ ಅವುಗಳನ್ನು ಪರಿಹರಿಸಿಕೊಳ್ಳು ವರು. ಪ್ರಾಜ್ಞರಾದರೋ ಉಭಯಧರ್ಮಗಳನ್ನೂ ಕೂಲಂಕಷವಾಗಿ ತುಲನೆ ಮಾಡಿ ಒಂದಕ್ಕೆ ಅಧಿಕ ಪುರ ಸ್ಕಾರವನ್ನು ಕೊಡುವರು. ಧರ್ಮವ್ಯಾಧನು ತನ್ನ ಧರ್ಮಸಂಕಟವನ್ನು ವಿವೇಕದಿಂದ ಪರಿಹರಿಸಿಕೊಂಡ

CC-0. Jangamwadi Math Collection. Digitized by eGangotri

ಧನು. ಅಹಿಂಸಾಧರ್ಮವನ್ನು ತನ್ನ ವೃತ್ತಿಧರ್ಮದ ದ್ವಾರಾ ಸಾಧಿಸಬೇಕೆಂಬ ತನ್ನ ಪ್ರಯತ್ನದ ಆಧಾರ ಕಾರಣಗಳನ್ನು ಇವನು ಕೌಶಿಕನಿಗೆ ಸವಿಸ್ತಾರವಾಗಿ ನಿವೇದಿಸಿದನು.

ತಾನು ಮಾಡುತ್ತಿರುವ ಮಾಂಸವ್ಯಾಪಾರವು ಧರ್ಮವಿರುದ್ಧವಿಲ್ಲದಂತೆ ನಡೆಯಬಲ್ಲುದೆಂದು ಸಮರ್ಥಿಸಲು ಧರ್ಮವ್ಯಾಧನು ಸುಮಾರು ಏಳು ಕಾರಣಗಳನ್ನು ಹೇಳಿರುವನು. ಅವುಗಳನ್ನು ಅತಿಸಂಗ್ರಹವಾಗಿ ತಿಳಿಸಬಹುದು. (೧) ಈ ಕರ್ಮವು ತನ್ನ ವಂಶಧರ್ಮವಾದುದರಿಂದ ಅದು ತನಗೆ ದೋಷಹೀನವಾದುದು. ಸ್ವಧರ್ಮಾಚರಣೆಯು ಅತ್ಯಾವಶ್ಯಕವಾದ ಧರ್ಮವು. (೨) ತಾನು ಈ ವೃತ್ತಿಯನ್ನು ಮಾತ್ರ ಪಿತೃಸೇವೆಗಾಗಿ ಮಾಡುತ್ತಿರುವುದರಿಂದ ಅದರಲ್ಲಿ ದೋಷವಿಲ್ಲ. ಅದು ಅಸ್ವಾರ್ಥವಾದ ಕರ್ಮವಾಗಿರುವುದು. ಅದನ್ನು ತಾನು ನಿಷ್ಕಾಮವಾಗಿ ಮಾಡುವುದು ಪುಣ್ಯಪ್ರದವು. (೩) ತಾನು ಮಾಂಸಾಹಾರವನ್ನು ಮಾಡುವುದಿಲ್ಲ; ಸ್ವಂತವಾಗಿ ಪ್ರಾಣಿಗಳನ್ನು ಕೊಲ್ಲುವುದಿಲ್ಲ. ಪರರಿಂದ ವಿಧಿಸಲ್ಪಟ್ಟ ಪ್ರಾಣಿಗಳ ಮಾಂಸವನ್ನು ಮಾತ್ರ ಮಾರುತ್ತಿರುವುದರಿಂದ ಹಿಂಸಾದೋಷವು ತನಗೆ ಹತ್ತುವುದಿಲ್ಲ. (೪) ಈ ವೃತ್ತಿಯು ನೀಚವಾದರೂ ಅದು ಜನ್ಮಾಂತರದೋಷದಿಂದ ಪ್ರಾಪ್ತಿಸಿರುವುದರಿಂದ ಅದನ್ನು ತಾನು ಅನುಭವಿಸಿಯೇ ತೀರಬೇಕು. (೫) ಪ್ರಾಣಿವಧೆಯು ವಿಧಿವಿಹಿತವಾದುದು; ಘಾತುಕನು ಕೇವಲ ನಿಮಿತ್ತಕಾರಣನಾಗುವನು. (೬) ಮಾಂಸವು ಶಾಸ್ತ್ರಸಿದ್ಧವಾದ ಆಹಾರವು. ಯಜ್ಞದಲ್ಲಿ ಮಾಂಸಾಹಾರವು ಶಾಸ್ತ್ರಸಮ್ಮತವಾಗಿದೆ. ತಾನು ಮಾಂಸವನ್ನು ಶ್ರಾದ್ಧಾದಿಗಳಿಗೆ ಮಾತ್ರ ವಿಕ್ರಯಿಸುತ್ತಿರುವುದರಿಂದ ದೋಷಿಯಾಗುವುದಿಲ್ಲ. (೭) ಸರ್ವಾಹಾರವೂ ಜೀವಮಯವಾಗಿದೆ. ಸಸ್ಯಾಹಾರವೂ ಪ್ರಾಣಭರಿತವಾದುದು. ಆಹಾರಸಂಗ್ರಹದಲ್ಲಿ ಹಿಂಸೆ ಇದ್ದೇ ಇದೆ. ಇದನ್ನು ಪ್ರಾಯಶ್ಚಿತ್ತದಿಂದ ಪರಿಹರಿಸಿಕೊಳ್ಳಬೇಕೇ ಹೊರತು ಮೂಲತಃ ತಪ್ಪಿಸಲಾಗುವುದಿಲ್ಲ.

ಮಾಂಸಾಹಾರವನ್ನು ಅಂಗೀಕರಿಸತಕ್ಕ ಕ್ರಿಸ್ತ ಮುಸಲ್ಮಾನಾದಿ ಮತೀಯರು ಅದು ಅಸಾಧುವಲ್ಲವೆನ್ನಲು ಮುಖ್ಯವಾಗಿ ಎರಡು ಕಾರಣಗಳನ್ನು ನಿರೂಪಿಸುವರು: (೧) ಮನುಷ್ಯನ ಹೊರತು ಮತ್ತಾವ ಪ್ರಾಣಿಗೂ ಆತ್ಮವಿಲ್ಲ; (೨) ದೇವರು ಈ ಪ್ರಾಣಿಗಳನ್ನು ಮನುಷ್ಯರ ಆಹಾರಾರ್ಥವಾಗಿಯೇ ಸೃಜಿಸಿರುವನು. ಈ ಉಭಯ ಕಾರಣಗಳೂ ಆಧುನಿಕ ವಿಜ್ಞಾನಶಾಸ್ತ್ರದ ಸಾರಾಂಶಗಳಿಗೂ ಆಧ್ಯಾತ್ಮಮತಧರ್ಮದ ತತ್ವಗಳಿಗೂ ವಿರುದ್ಧವಾಗಿವೆ. ಧರ್ಮವ್ಯಾಧನ ಕಾರಣಗಳು ಇವುಗಳಿಗಿಂತಲೂ ಎಷ್ಟೋ ಉತ್ತಮವಾಗಿವೆ.

ಧರ್ಮವ್ಯಾಧನ ಏಳನೆಯ ಕಾರಣವು ಈಗಿನ ಆಧುನಿಕ ವಿಜ್ಞಾನಶಾಸ್ತ್ರಕ್ಕೆ ಅನುಗುಣವಾಗಿದೆ. ಜಗದೀಶಚಂದ್ರ ಬೋಸರವರು ಈಗ ಸಮರ್ಥಿಸುತ್ತಿರುವ ಸಾರಾಂಶವನ್ನು ಧರ್ಮವ್ಯಾಧನು ಆಗಲೇ ತಿಳಿದಿದ್ದನು. ಮರದಿಂದ ಒಂದು ಎಲೆ ಕೆಳಗೆ ಬಿದ್ದರೂ ಎಷ್ಟೋ ಜೀವಿಗಳು ಸಾಯುವುವು. ಮನುಷ್ಯನ ಪ್ರತಿಯೊಂದು ಕಾರ್ಯದಿಂದಲೂ ಜೀವವಧೆಯಾಗುತ್ತಲೇ ಇದೆ. ಇದನ್ನು ಬಹುದೂರ ತಪ್ಪಿಸುವುದಕ್ಕೆ ಆಗುವುದಿಲ್ಲ. ಹಾಗೆ ತಪ್ಪಿಸುವುದೂ ಸೂಕ್ತವಲ್ಲ. ಪ್ರಾಣಿವಧೆಯನ್ನು ವ್ಯರ್ಥವಾಗಿ ಮಾಡುವುದನ್ನು ತಪ್ಪಿಸುವುದು ನಮ್ಮ ಕರ್ತವ್ಯವಾದರೆ ಸಾಕಾಗಿರುವುದು. ಕೆಲ ವೈಷ್ಣವ ಶಾಸ್ತ್ರಕಾರರು ನಮ್ಮ ಆಹಾರಕ್ಕೆ ನಿರ್ಜೀವಧಾನ್ಯವನ್ನು ಮಾತ್ರ ತೆಗೆದುಕೊಂಡರೆ ವಧದೋಷವು ಹತ್ತುವುದಿಲ್ಲವೆಂದು ನಿರೂಪಿಸುವರು. ಧಾನ್ಯವನ್ನು ಮೂರು ನಾಲ್ಕು ವರ್ಷ ಉಪಯೋಗಿಸದೆ ಇಟ್ಟು ಅದರಲ್ಲಿ ಮೊಳಕೆಯಾಗುವ ಶಕ್ತಿಯು ನಾಶವಾದ ಮೇಲೆ ಅವನ್ನು ಉಪಯೋಗಿಸಬೇಕೆಂದು ಅವರು ಹೇಳುವರು. ಯಜ್ಞದಲ್ಲಿ ಅಜವನ್ನು ಬಲಿ ಕೊಡಬೇಕಾಗುವುದಷ್ಟೆ. ಇವರು ಅಜವೆಂದರೆ ಆಡು ಎಂದು ಅರ್ಥ ಮಾಡುವುದಕ್ಕೆ ಪ್ರತಿಯಾಗಿ ನಿರ್ಜೀವ ಧಾನ್ಯವೆಂದು ಅರ್ಥ ಮಾಡುವರು. ಈ ಏರ್ಪಾಡಿನಿಂದ ಪ್ರಾಣಿವಧೆ ಒಂದು ಪಕ್ಷ ತಪ್ಪಿದರೂ ಪ್ರಾಣಿಹಿಂಸೆ ಎಂದಿಗೂ ತಪ್ಪಲಾರದು. ಇನ್ನೂ ಜೀವವಿರುವಾಗಲೇ ಫಲವನ್ನು ನಾವು ಸಸ್ಯದಿಂದ ಛೇದಿಸಿ ಹಿಂಸಿಸಿ ಸಂಗ್ರಹ ಮಾಡಬೇಕು; ಅನಂತರ ಧಾನ್ಯದಲ್ಲಿರುವ ಜೀವವನ್ನು ವಿಕಾಸವಾಗದಂತೆ ಬಂಧಿಸಿ ಕೈಯ್ಯಾರೆ ಸಾಯಿಸಬೇಕು; ನಾವು ಶೇಖರಿಸಿದ ಧಾನ್ಯವನ್ನು ಹುಳುಹುಪ್ಪಟೆಗಳು ಬಯಸಿದರೂ ಅವುಗಳ ಆಹಾರವನ್ನು ತಪ್ಪಿಸಿ ಅವುಗಳಿಗೆ ಮರಣವನ್ನು ಕಲ್ಪಿಸಿ ನಾವು ಇದನ್ನು ಸಂರಕ್ಷಿಸಬೇಕು. ಇಂತಹ ಆಹಾರಸಂಗ್ರಹದಲ್ಲಿ ಹಿಂಸೆ ಇಲ್ಲವೆನ್ನಲಾದೀತೆ?

CC-0. Jangamwadi Math Collection. Digitized by eGangotri

ಧರ್ಮವ್ಯಾಧನ ಐದನೆಯ ಕಾರಣವೂ ಪ್ರಬಲವಾದುದು. ಜೀವವನ್ನು ಯಾರೂ ಸೃಜಿಸಲರಿಯರು;ಅಂತಹ ವಸ್ತುವನ್ನು ತೆಗೆದು ಹಾಕಲು ಯಾರಿಗೂ ಅಧಿಕಾರವಿಲ್ಲವೆಂದು ಅಹಿಂಸಾವಾದಿಗಳು ಹೇಳುವರು. ಹಾಗಾದರೆ ಅದನ್ನು ಸೃಜಿಸಿದವರಿಗೆ ಕೊಲ್ಲುವ ಅಧಿಕಾರವುಂಟೆಂದು ಹೇಳಬಹುದೇ ? ಸೃಷ್ಟಿ ಎಂದರೇನು ಭಾವ ? ಸಾಧಾರಣವಾಗಿ ಅದನ್ನು ಉಪಯೋಗಿಸುವಾಗ,ಮಾತಾಪಿತೃಗಳು ತಂತಮ್ಮ ಸಂತತಿಗೆ ಜನ್ಮದಾತೃಗಳೆಂದು ಹೇಳಬಹುದು. ವಿಶೇಷಾರ್ಥದಲ್ಲಿ ಹೇಳುವಾಗ, ದೇವರೊಬ್ಬನು ಮಾತ್ರ ಸೃಷ್ಟಿಕರ್ತನಾಗುವನು. ಆಗ ಮಾತಾಪಿತೃಗಳು ಸೃಷ್ಟಿಗೆ ನಿಮಿತ್ತಕಾರಣರಾಗುವರು. ಇದೇ ರೀತಿ ಕೊಲೆಗೆ ಸಹ ದೇವರು ಮಾತ್ರವೇ ನಿಜವಾದ ಕರ್ತನಾಗಿಯೂ ಮನುಷ್ಯಾದಿಗಳು ನಿಮಿತ್ತಕಾರಣರಾಗಿಯೂ ಇರುವರು. ಆದ್ದರಿಂದ ಅಹಿಂಸಾವಾದಿಗಳ ವಾದವು ನಿಷ್ಫಲವಾಗುವುದು.

ಇವನ ಮೊದಲನೆಯ ಮತ್ತು ನಾಲ್ಕನೆಯ ಕಾರಣಗಳನ್ನು ಆಧುನಿಕರು ಒಪ್ಪದಿರಬಹುದಾದರೂ ಹಿಂದೂಮತೀಯರಾರೂ ತಿರಸ್ಕರಿಸಲಾಗುವುದಿಲ್ಲ. ಹಿಂದೂಮತವು ಜಾತಿಕ್ರಮವನ್ನೂ ಜನ್ಮಾಂತರವಾದವನ್ನೂ ಸಂಪೂರ್ಣವಾಗಿ ಅಂಗೀಕರಿಸುವುದು. ಪ್ರಾಚೀನ ಕಾಲದಲ್ಲಿ ಸಮಾಜದ ರಚನೆಯು ವಂಶಪಾರಂಪರ್ಯನಿಯಮದಿಂದ ಮಾತ್ರವೇ ರಚಿತವಾಗಲು ಸಾಧ್ಯವಿತ್ತು. ನಾಗರಿಕತೆಯಲ್ಲಿ ಅತ್ಯಂತಾಭಿವೃದ್ಧಿಯನ್ನು ಪಡೆದಿರುವ ದೇಶಗಳಲ್ಲಿ ಸಹ ಜಾತಿಕ್ರಮವು ಶುದ್ಧವಾಗಿ ಖಿಲವಾಗಿಲ್ಲ. ಧರ್ಮವ್ಯಾಧನ ಕಾಲದಲ್ಲಿ ಈ ಕ್ರಮವಲ್ಲದೆ ಬೇರಾವ ಕ್ರಮವೂ ಇರಲಿಲ್ಲ. ಈ ಪರಿಸ್ಥಿತಿಯಲ್ಲಿ ವಂಶವೃತ್ತಿಯ ಪರಿಪಾಲನೆಯು ಮುಖ್ಯ ಧರ್ಮವೆಂದು ಭಾವಿಸಲ್ಪಟ್ಟಿತ್ತು. ವೃತ್ತಿಯು ಜನ್ಮದಿಂದಲೂ ಜನ್ಮವು ಪ್ರಾರಬ್ಧಕರ್ಮದಿಂದಲೂ ಉಂಟಾಗುವುದೆಂದು ನಂಬಿಕೆಯಿದ್ದಿತು. ಇಂತಹ ನಂಬಿಕೆಯನ್ನು ಇಟ್ಟುಕೊಂಡಿರತಕ್ಕವರು ಧರ್ಮವ್ಯಾಧನ ವೃತ್ತಿಯನ್ನು ಅಸಾಧುವೆಂದು ಧಿಕ್ಕರಿಸಲಾಗುವುದಿಲ್ಲ. ಸಮಾಜದಲ್ಲಿ ಅಂತಹ ವೃತ್ತಿಯು ಇರುವವರೆಗೂ ಅದನ್ನು ಅವಲಂಬಿಸತಕ್ಕ ಧರ್ಮವ್ಯಾಧನಿಗೆ ಅಧರ್ಮ ದೋಷವು ಹತ್ತಲಾರದು.

ಆದರೆ ಸಮಾಜದಲ್ಲಿ ಅಂತಹ ನೀಚವೃತ್ತಿಯು ಏತಕ್ಕಾಗಿ ಇರಬೇಕು ? ಆಗಿನ ಕಾಲದಲ್ಲಿ ಅಹಿಂಸಾವಾದ ವಿರೋಧಿಗಳು ಹೇರಳವಾಗಿದ್ದರು. ಬಹುಮಂದಿ ಶಾಸ್ತ್ರಸಮ್ಮತವಾಗಿಯೇ ಮಾಂಸಾಹಾರವನ್ನು ಸ್ವೀಕರಿಸುತ್ತಿದ್ದರು. ಇಂತಹ ಜನರು ಇದ್ದ ಮೇಲೆ ಇವರಿಗೆ ಮಾಂಸವನ್ನು ಒದಗಿಸತಕ್ಕವರು ಇರಬೇಕಾಗುವುದಷ್ಟೆ. ಹೀಗೆ ಧರ್ಮವ್ಯಾಧನ ವೃತ್ತಿಯ ಇರುವಿಕೆಗೆ ಕಾರಣರು ಸಮಾಜದಲ್ಲಿರತಕ್ಕ ಮಾಂಸಾಹಾರಿಗಳಾಗಿರುವರು. ಸಮಾಜದಲ್ಲಿ ಒಬ್ಬ ಮಾಂಸಾಹಾರಿ ಇದ್ದರೂ ಮಾಂಸ ವ್ಯಾಪಾರವು ನಡೆಯಬೇಕಾಗುವುದು. ಆ ಕಾರ್ಯವನ್ನು ಯಾರಾದರೂ ಒಬ್ಬರು ಕೈಕೊಳ್ಳಲೇಬೇಕು. ಅದನ್ನು ಯಾರು ಕೈಕೊಂಡರೂ ಸಾಕು, ಧರ್ಮವ್ಯಾಧನಂತಹ ಧರ್ಮಾರ್ಥಿಯು ಏಕೆ ಕೈಕೊಳ್ಳಬೇಕು ? ಎಂದು ಹೇಳಬಹುದು. ಆತನು ಅಂತಹ ಕುಲದಲ್ಲಿ ಹುಟ್ಟಿದ್ದರೆ, ವಂಶಪಾರಂಪರ್ಯಕ್ರಮವಿರುವವರೆಗೂ, ಅದನ್ನು ಬಿಟ್ಟು ಹೋಗಲು ಸ್ವಾತಂತ್ರ್ಯವುಳ್ಳವನಾಗಿರುವುದಿಲ್ಲ. ಇಂತಹ ಸ್ವಾತಂತ್ರ್ಯವನ್ನು ಸಂಪಾದಿಸಬೇಕಾದರೆ ಅವನು ತನ್ನ ಸಮಾಜದ ಮೇಲೆ ದಂಡು ನಡೆಸಿ ಹೋರಾಡಬೇಕಾಗುವುದು. ಅರ್ಥಕಾಮಾದಿಪುರುಷಾರ್ಥಗಳ ಮೇಲೆ ದೃಷ್ಟಿಯಿಲ್ಲದೆ, ಧರ್ಮಮೋಕ್ಷಗಳಲ್ಲಿ ಆಸಕ್ತನಾದ, ಸಾತ್ವಿಕಗುಣಪ್ರಧಾನನಾದ, ಧರ್ಮವ್ಯಾಧನಂತಹ ಪುರುಷನು ಹೀಗೆ ಮಾಡುವುದಕ್ಕೆ ಪ್ರತಿಯಾಗಿ ತನ್ನ ಶಕ್ತಿಸಾಮರ್ಥ್ಯಗಳನ್ನೆಲ್ಲಾ ವಿನಿಯೋಗಿಸಿ ತನ್ನ ವೃತ್ತಿಯನ್ನು ಆಧ್ಯಾತ್ಮಿಕ ಸ್ವರೂಪಕ್ಕೆ ತಿರುಗಿಸಲು ಪ್ರಯತ್ನಿಸುವನು. ಅಂದರೆ ತನ್ನ ವೃತ್ತಿಯನ್ನು ತನ್ನ ಸ್ವಂತದ ಖ್ಯಾತಿಲಾಭ ಸೌಕರ್ಯಗಳಿಗೋಸ್ಕರವಲ್ಲದೆ ತನ್ನ ಸಂಸಾರ ತನ್ನ ಸಮಾಜಗಳ ಹಿತಾರ್ಥವಾಗಿಯೂ ಉದಾತ್ತ ಧ್ಯೇಯಗಳ ಸಾಧನೆಗಾಗಿಯೂ ತನ್ನ ಆಧ್ಯಾತ್ಮಿಕ ಕಲ್ಯಾಣಕ್ಕಾಗಿಯೂ ನಡೆಸುತ್ತಾ ಬರುವನು. ತನ್ನ ವೃತ್ತಿಯನ್ನು ಬಿಟ್ಟುಬಿಡಲು ಒಂದು ಪಕ್ಷ ಸ್ವಾತಂತ್ರ್ಯವಿದ್ದರೂ ಧರ್ಮವ್ಯಾಧನು ಹಾಗೆ ಮಾಡುತ್ತಿರಲಿಲ್ಲವೆಂದು ಅವನ ಆರನೆಯ ಕಾರಣವು ಸೂಚಿಸುವುದು. ಜಾತಿವಾದಿಗಳಾದ ಬ್ರಾಹ್ಮಣರು ಮಾಂಸಾಹಾರವನ್ನು ಬಯಸಿದರೂ ಅದನ್ನೊದಗಿಸತಕ್ಕ ವೃತ್ತಿಯನ್ನು ಮಾತ್ರ ನೀಚವೆಂದೂ ತಮಗೆ ನಿಷಿದ್ಧವೆಂದೂ ಹೇಳುತ್ತಿರುವರು. ಧರ್ಮವ್ಯಾಧನಂತಹ ಮಹಾತ್ಮನು ಇಂತಹ ಸ್ವಾರ್ಥವರ್ತನವನ್ನು ಎಂದಿಗೂ ಸಹಿಸನು. ಸಮಾಜ ಹಿತಕ್ಕೆ ಅಪೇಕ್ಷಿತವಾಗ

CC-0. Jangamwadi Math Collection. Digitized by eGangotri

ತಕ್ಕ ಯಾವ ಕಾರ್ಯವೂ ನೀಚವಾಗಲಾರದು. ಒಂದು ಪಕ್ಷ ಸಮಾಜವು ಪಾಪಕರವಾದ ವೃತ್ತಿಗಳ ದ್ವಾರಾ ಸೇವೆ ಪಡೆಯಲು ಬಯಸಿ ಅಂತಹ ವೃತ್ತಿಗಳನ್ನು ಇಟ್ಟುಕೊಂಡಿದ್ದರೆ ಅವುಗಳನ್ನವಲಂಬಿಸತಕ್ಕವರ ಉಪಕಾರವು ಖ್ಯಾತಿಲಾಭಪೂಜಾದಿಗಳಿಗಾಗರರಾದ ವೃತ್ತಿವಂತರದಕ್ಕಿಂತ ಶತಾಧಿಕವಾಗಿರುವುದು. ಮಹಾತ್ಮನೆನ್ನಿಸತಕ್ಕವನು ಪಾಪಕರವಾದ ವೃತ್ತಿಗಳು ಇರುವವರೆಗೂ ತಾನು ಅವುಗಳನ್ನು ಕೈಕೊಂಡು ಇತರರನ್ನು ಸುಖಿಗಳಾಗಿ ಮಾಡಲು ಪ್ರಯತ್ನಿಸುವನೇ ಹೊರತು,ಅನ್ಯರನ್ನು ನರಕಕ್ಕೆ ತಳ್ಳಿ ತನ್ನ ಸ್ವರ್ಗವನ್ನು ರಚಿಸಿಕೊಳ್ಳಲು ಹೋಗುವುದಿಲ್ಲ. ಹಾಗೆ ಮಾಡತಕ್ಕವನು ಮಹಾತ್ಮನಾಗಲಾರನು. ಆತನಿದ್ದ ಸಮಾಜದಲ್ಲಿ ಮಾಂಸವ್ಯಾಪಾರವು ಶ್ರಾದ್ಧಾದಿ ಧರ್ಮಕಾರ್ಯಗಳಿಗಾಗಿ ನಡೆಯಬೇಕಾದ ಅವಶ್ಯಕತೆಯಿದ್ದಿತು. ಆದರೆ ಆ ವೃತ್ತಿಯು ನೀಚವಾದುದೆಂದೂ ಪಾಪಮಯವಾದುದೆಂದೂ ಭಾವಿಸಲ್ಪಟ್ಟಿತ್ತು. ಅದನ್ನು ಧರ್ಮವ್ಯಾಧನು ಜಾತಿವಾದಿಗಳಾದ ಬ್ರಾಹ್ಮಣರಂತೆ ಎಂದಿಗೂ ಪರಿತ್ಯಜಿಸಿ ಹೋಗುವುದು ಅಸಂಭವ.

ಹೀಗೆ ಧರ್ಮವ್ಯಾಧನು ತನ್ನ ಸಮಾಜದ ಸೇವಾರೂಪವಾಗಿ ಅಧ್ಯಾತ್ಮಕ್ರಮದಿಂದ ಮಾಂಸವ್ಯಾಪಾರವನ್ನು ಕೈಕೊಂಡಿದ್ದರೂ ತನ್ನ ಅನುಷ್ಠಾನದಲ್ಲಿ ಶುದ್ಧವಾಗಿ ಅಹಿಂಸಾವಾದಿಯಾಗಿದ್ದನು. ಆತನು ತಾನು ಸ್ವಂತವಾಗಿ ಪ್ರಾಣಿವಧೆಯನ್ನೂ ಮಾಂಸಭೋಜನವನ್ನೂ ಮಾಡುತ್ತಿರಲಿಲ್ಲ. ಇವನ ಧ್ಯೇಯವು ಅಹಿಂಸೆಯಾಗಿತ್ತು. ಆದರೂ ಅದನ್ನು ಇವನು ಸರ್ವತ್ರ ತನ್ನ ಸಮಾಜದಲ್ಲಿ ಸಂಸ್ಥಾಪಿಸಲು ಅಶಕ್ತನಾಗಿದ್ದನು. ಇವನ ಧ್ಯೇಯಕ್ಕೆ ವಿರುದ್ಧವಾಗಿ ಇವನ ಸಮಾಜವು ಹಿಂಸಾಮಯವಾಗಿದ್ದಿತು. ಈ ಹಿಂಸಾಮಯ ಸನ್ನಿವೇಶವನ್ನು ದಾಟಿ ಪಾರಾಗಲು ತನಗೆ ಶಕ್ತಿಯಿದ್ದರೂ, ತನಗಿಂತಲೂ ಅಶಕ್ತರಾದವರು ಪಾಪಕರವಾದ ಈ ಅಹಿಂಸಾಕಾರ್ಯವನ್ನು ವಹಿಸಿಕೊಂಡು ದುಃಖಭಾಜನರಾಗುವ ಹಿಂಸೆಯನ್ನು ನೋಡಲಾರದೆ, ಧರ್ಮವ್ಯಾಧನು ತನ್ನ ಧ್ಯೇಯವಾದ ಅಹಿಂಸೆಯ ಪರಿಪಾಲನೆಗಾಗಿ, ತದ್ವೈರಿಯಾದ ಹಿಂಸಾಕಾರ್ಯವನ್ನು ತನ್ನ ಪಾಲಿಗೇ ವಹಿಸಿಕೊಂಡು, ನಿರ್ಲಿಪ್ತನಾಗಿ, ಹಿಂಸೆಯ ಮಧ್ಯೇ ಅಹಿಂಸೆಯನ್ನೂ ಹುಟ್ಟಿಸುತ್ತಾ ಕೆಲಸಮಾಡುತ್ತಿದ್ದನು. ಹಿಂಸೆಯಲ್ಲಿ ಅಹಿಂಸೆಯನ್ನೂ ಅಹಿಂಸೆಯಲ್ಲಿ ಹಿಂಸೆಯನ್ನೂ ಕಾಣುತ್ತ ಹಿಂಸಾಹಿಂಸೆಗಳೆಂಬ ದ್ವಂದ್ವಕ್ಕತೀತವಾದ ಸ್ಥಿತಿಯನ್ನು ಪಡೆದು ಲೋಕಸೇವೆಯನ್ನು ಮಾಡುತ್ತಿದ್ದನು.

ಗೌತಮಬುದ್ಧನು ಲೋಕದಲ್ಲಿ ದುಃಖವನ್ನೂ ರೋಗವನ್ನೂ ಜರೆಯನ್ನೂ ಸಾವನ್ನೂ ನೋಡಿದಾಗ ಅವುಗಳನ್ನು ತಾನೊಬ್ಬನು ಪರಿಹರಿಸಿಕೊಳ್ಳುವುದಕ್ಕಿಂತಲೂ ಲೋಕದವರೆಲ್ಲರೂ ಪರಿಹರಿಸಿಕೊಳ್ಳಬೇಕೆಂದು ಆಶಿಸಿ ಪ್ರಯತ್ನಮಾಡಲಾರಂಭಿಸಿದನು. ಆದ್ದರಿಂದಲೇ ಈತನು ತಾನು ನಿರ್ವಾಣಸಿದ್ಧಿಯನ್ನು ಪಡೆದು ಬುದ್ಧನಾದಮೇಲೆ (ಎಂದರೆ ಮೇಲ್ಕಂಡ ದುಃಖಾದಿಗಳನ್ನು ಜಯಿಸಿದ ಮೇಲೆ) ನಲವತ್ತೈದು ವರ್ಷ ಕಾಲ ಪರರ ಹಿತಕ್ಕಾಗಿ ಲೋಕಸೇವೆ ಮಾಡಿದನು. ಕ್ರಿಸ್ತನು ಲೋಕದ ಜನಸಾಮಾನ್ಯರು ಸ್ವಪ್ರಯತ್ನದಿಂದ ಪಾಪವನ್ನೂ ತತ್ಫಲವಾದ ದುಃಖವನ್ನೂ ಪರಿಹರಿಸಿಕೊಳ್ಳಲಾರರೆಂದು ಅರಿತು ತಾನು ಅವರ ಪಾಪಕೃತ್ಯಗಳ ಫಲವಾದ ದುಃಖದ ಹೊರೆಯನ್ನು ತನ್ನ ಪಾಲಿಗೆ ಹೊತ್ತುಕೊಂಡು ಅವರನ್ನು ಉದ್ಧರಿಸಲು ಪ್ರಯತ್ನಿಸಿದನು. ಧರ್ಮವ್ಯಾಧನೋ—ಪಾಪವು ಜನಗಳ ಪಾಲಿಗೆ ಉಳಿದು, ಅವರಿಗೆ ಅದರ ಭಯಭೀತಿ ಸಹ ತಪ್ಪುವುದರಿಂದ, ಅದನ್ನು ನಿವಾರಿಸುವ ಪ್ರವೃತ್ತಿಯೇ ಇಲ್ಲವಾಗುವುದರಿಂದ, ಲೋಕದಿಂದ ಅದು ನಾಶವಾಗುವ ಸಂಭವವೇ ನಷ್ಟವಾಗಿ ಬಿಡುತ್ತಾದುದರಿಂದ, ಪಾಪಕೃತ್ಯವನ್ನೇ ತನ್ನ ಪಾಲಿಗೆ ವಹಿಸಿಕೊಂಡು, ಅದರಿಂದಲೇ ತನ್ನ ಆಧ್ಯಾತ್ಮಿಕಸಿದ್ಧಿಯನ್ನು ಪಡೆಯುತ್ತ, ಲೋಕದಲ್ಲಿ ಪಾಪಶೇಷವಿರುವವರೆಗೂ ಅದು ಉತ್ತರೋತ್ತರವಾಗಿ ಕ್ಷೀಣವನ್ನು ಪಡೆದು ನಷ್ಟವಾಗುವ ಕ್ರಮದಲ್ಲಿ ನಿರ್ಲಿಪ್ತನಾಗಿ ನಡೆಸುತ್ತ ಬರಲು ಪ್ರಯತ್ನಿಸಿದನು. ಮಹಾತ್ಮನ ಕೈಗೆ ಸಿಕ್ಕಿದರೆ ಪಾಪವೂ ಪುಣ್ಯಸಾಧನವಾಗುವುದು. ಲೋಕದಲ್ಲಿ ಹಿಂಸಾವಾದವೂ ಮಾಂಸಾಹಾರಪದ್ಧತಿಯೂ ಉಳಿದಿರುವಾಗ ಅಹಿಂಸಾವಾದಿಯು ತನ್ನ ಧರ್ಮವನ್ನು ಬಾಯಲ್ಲಿ ಉಪದೇಶಿಸುತ್ತ ತಾನೊಬ್ಬನು ಮಾತ್ರ ತನ್ನ ಅನುಷ್ಠಾನದಲ್ಲಿ ಹಿಂಸಾಪಾಪವನ್ನು ಬಹಿಷ್ಕರಿಸಿಕೊಳ್ಳಬಹುದು. ಧರ್ಮವ್ಯಾಧನು ಪಾಪವನ್ನು ತಾನು ವೈಯ್ಯಕ್ತಿಕವಾಗಿ ಬಹಿಷ್ಕರಿಸಿದ ಮಾತ್ರಕ್ಕೆ ಅದು ಸಮಾಜದಿಂದ ನಷ್ಟವಾಗಲಾರದ್ದರಿಂದ ಅದನ್ನು ತನ್ನ ಪಾಲಿಗೆ ಹೊತ್ತುಕೊಂಡು ಪುಣ್ಯಪ್ರದವಾಗುವಂತೆ ಮಾರ್ಪಡಿಸಿ ನಷ್ಟಪಡಿಸಬೇಕೆಂದು ಪ್ರಯ



CC-0. Jangamwadi Math Collection. Digitized by eGangotri

ತ್ನಿಸಿದನು. ಪಾಪಮಾರ್ಗಾನುಸಂಧಾನದಿಂಡ ಧರ್ಮವನ್ನು ಸಾಧಿಸುವ ಈ ಅತಿಶಯಕ್ರಮವು ಧರ್ಮವ್ಯಾಧನ ಜೀವನದ ತಿರುಳೆನ್ನಬಹುದು.

ಹೀಗೆ ಧರ್ಮವ್ಯಾಧೋಪಾಖ್ಯಾನವು ಸಾಧಾರಣ ಕರ್ಮಮಾರ್ಗದ ಮಾಹಾತ್ಮ್ಯವನ್ನೂ ಆಧ್ಯಾತ್ಮ ಮಾರ್ಗದ ಶ್ರೇಷ್ಠತೆಯನ್ನೂ ಪಾಪದಲ್ಲಿ ಪುಣ್ಯವನ್ನೈಸ್ವ ಹೊಸ ಸಾಧನಾಮಾರ್ಗದ ವೈಭವವನ್ನೂ ಪ್ರಕಾಶಪಡಿಸುವುದು.

# ಮುಸುಕು

( ಮಧುರಚೆನ್ನ )

ನೀನು ನಿನ್ನ ತೋಟದಲ್ಲಿ
ನಾನು ನನ್ನ ಕೊಂಪೆಯಲ್ಲಿ !

ಅತ್ತೆ ಕುಡುವ ಕಾಟ ಬೇರೆ
ಮತ್ತೆ ಅಡ್ಡ ಗುಡ್ಡ ಬೇರೆ

ಜೀವವೆಲ್ಲ ತೋಟದಲ್ಲಿ
ಖೋಡಿ ಕೆಲಸ ಕೊಂಪೆಯಲ್ಲಿ

ತೋಟ ಮನೆಗೆ ದೂರ ಬೇರೆ
ಕಾವಲತ್ತೆ ಕಾಳ ಬೇರೆ

ಕೊಂಪೆ ನನಗೆ ಜನ್ಮಗಂಟು
ತೋಟ ನಿನಗೆ ಗಚ್ಚಿಗಂಟು

ಅತ್ತೆ ಕದನ ಮರೆವಳಲ್ಲ
ಜೀವ ಸುಮ್ಮನಿರುವುದಿಲ್ಲ

ತೂಗದಂಥ ದಗದ ನನಗೆ
ನೀಗದಷ್ಟು ಕೆಲಸ ನಿನಗೆ

ಧೀರಪಿರದ ಬಾಲೆ ನಾನು
ಘೋರ ಗಂಭೀರ ನೀನು

ನಿನಗೆ ನಿನ್ನ ದುಡಿವ ಲಕ್ಕು
ನನಗೆ ಸತತ ನಿನ್ನ ಬಿಕ್ಕು

ನೀನು ನಿನ್ನ ತೋಟದಲ್ಲಿ
ನಾನು ನನ್ನ ಕೊಂಪೆಯಲ್ಲಿ !

ಸುಗ್ಗಿಯಲ್ಲಿ ನಿನಗೆ ತೊಡಕು
ಅಗ್ಗಿಯಲ್ಲಿ ನನಗೆ ಮಿಡುಕು

ನಿನ್ನ ದಗದ ನಿನಗೆ ಹಿರಿದು
ನನ್ನ ಕರುಳು ಬರಿದೊ ಬರಿದು

ಉಂಡು ಹಸಿದ ಘಾಸಿ ತೀರ
ಕೂಡಿ ಅಗಲಿದಿರವು ಘೋರ

ನಿನ್ನ ನೆರೆಯಲಿರುವ ಆಶೆ
ನಿನ್ನನೆಂದು ಅಗಲದಾಶೆ

ನಿನ್ನ ನೋಡಿ ನಲಿಯುವಾಶೆ
ನಿನ್ನ ಕೂಡಿ ಕೆಲೆಯುವಾಶೆ

ಉದಯು ನಿನ್ನ ಸನ್ನಿಧಾನ
ಅಗಲಿದೊಡನೆ ಅಸ್ತಮಾನ

ಚೊಕ್ಕ ಬೆಳಕು ನಿನ್ನ ಕೂಟ
ಚಿಕ್ಕ ಝುಳುಕು ನೆನವಿನಾಟ

ನನಿಹವೆಂಬುದಚ್ಚ ಬೆಳಕು
ನೆನಹು ಮೊದಲೆ ಜಿಣುಕು ಮಿಣುಕು

ಬೀಸಿ ಬಡಿವ ಗಾಳಿ ಬೇರೆ
ಧೂಸು ದುಮ್ಮು ಧೂಳು ಬೇರೆ

ನೀನು ನಿನ್ನ ತೋಟಲ್ಲಿ
ನಾನು ನನ್ನ ಕೊಂಪೆಯಲ್ಲಿ !



CC-0. Jangamwadi Math Collection. Digitized by eGangotri

# ಚಲಚ್ಚಿತ್ರ

ಶ್ರೀ. ಕೋಟ ಶಿವರಾಮ ಕಾರಂತ, ಪುತ್ತೂರು

ಮೂರನೆಯ ಬರೆಹ

## ಚಲಚ್ಚಿತ್ರದ ಬೆಳವಣಿಗೆ

ಚಲಚ್ಚಿತ್ರದ ಇತಿಹಾಸವನ್ನು ಭಿನ್ನಭಿನ್ನ ದೃಷ್ಟಿಗಳಿಂದ ಬರೆಯುವಂತಿದೆ. ಆದರ ವೈಜ್ಞಾನಿಕದೃಷ್ಟಿ ಬೇರೆ ವ್ಯಾಪಾರದೃಷ್ಟಿ ಬೇರೆ, ಹಾಗೆಯೇ ಕಲಾದೃಷ್ಟಿಯೂ ಬೇರೆ. ಈ ಮೂರನ್ನು ಕುರಿತು ಕೆಲವು ಮಾತುಗಳನ್ನು ಹೇಳಿ ಈ ಅಧ್ಯಾಯವನ್ನು ಮುಗಿಸುವೆವು.



ಕಾನ್ರೇಡ್ ವೀಟ್
(ಪ್ರಸಿದ್ಧ ನಟ)

ಚಲಚ್ಚಿತ್ರಕ್ಕೂ ಮೊದಲು ಜನ್ಮವೆತ್ತಿದುದು ಸಾಮಾನ್ಯ ಪ್ರಭಾಲೇಖನ. ೧೮೭೨ರಲ್ಲಿ ಎಡ್ವರ್ಡ್ ಮೇಬ್ರಿಜ್ ಎಂಬವನಿಗೆ, ಆದರ ಬೆಂಬಲದಿಂದ, ಚಲಿಸುವ ಒಡವೆಗಳ ಚಿತ್ರಗಳನ್ನು ಸಂಗ್ರಹಿಸುವ ಮನಸ್ಸಾಯಿತು. ಅವನ ಪ್ರಥಮಚಿತ್ರವು ಅಮೇರಿಕದಲ್ಲಿ ತೆಗೆಯಲ್ಪಟ್ಟಿತು. ಜೂಜಿನ ಕುದುರೆಗಳ ಓಡಾಟವನ್ನು ಪರಿಶೀಲಿಸುವ ನಿಮಿತ್ತ ಅವನು ಫಲಕ ( Plates ) ಗಳನ್ನು ಉಪಯೋಗಿಸಿ ಚಿತ್ರಸಂಗ್ರಹವನ್ನು ಮಾಡತೊಡಗಿದನು. ಆದರೆ ಆ ಕಾಲದಲ್ಲಿ ಪಟಲವಾಗಲಿ ಒಣ ಸಂಸೃಷ್ಟದಿಂದ



ದಿವಂಗತ ಪಾಲ್ ಲೆನಿ
(ಪ್ರಸಿದ್ಧ ನಿರ್ದೇಶಕ)

( Dry emulsion ) ಪ್ರಭಾಲೇಖನವನ್ನು ಸಂಗ್ರಹಿಸುವ ಪದ್ಧತಿಯಾಗಲಿ ಇರಲಿಲ್ಲ. ಇದರಿಂದ ಅತಿಸ್ವಲ್ಪ ಸಮಯದಲ್ಲಿ ಓಡುವ ಚಿತ್ರಗಳನ್ನು ತೆಗೆಯುವುದು ಕಠಿನ

CC-0. Jangamwadi Math Collection. Digitized by eGangotri

ವೆನಿಸಿತು. ಆದರೆ ಸ್ವಲ್ಪ ಕಾಲದಲ್ಲಿ ಇವನು, ಕುದುರೆಗಳು ಓಡುವ ಹಾದಿಗೆ ಸಮೀಪವಾಗಿ ಪ್ರಭಾಲೇಖಕಗಳನ್ನಿರಿಸಿ ಚಿತ್ರಸಂಗ್ರಹ ಮಾಡಲು ಶಕ್ತನಾದನು. ಇದರಿಂದ ಆ ಪ್ರಾಣಿಗಳ ಚಲನೆಯನ್ನು ಪರಿಶೀಲಿಸಲು ಅವನಿಗೆ ಅನುಕೂಲವಾಯಿತು. ಮುಂದವನ ಆತುರವು, ತಾನು ತೆಗೆದ ಚಿತ್ರಗಳನ್ನು ಸೇರಿಸಿ ಅವುಗಳ ಸಹಾಯದಿಂದ ಈ ಚಲನೆಯನ್ನು ಕಾಣುವ ವಿಚಾರವಾಗಿ ಹರಿಯಿತು. ಇದಕ್ಕಾಗಿ ಕಾಜಿನ ಫಲಕಗಳ ಮೇಲೆ ತೆಗೆದ ಚಿತ್ರಗಳನ್ನು ಒಂದು ತೆರೆಯ ಮೇಲೆ ಹಾಯಿಸಲು ಅವನು ಯತ್ನಿಸಿದನು. ಕಾಜಿನಿಂದ ಸಿದ್ಧಮಾಡಿದ, ವರ್ತುಲಾಕಾರದ ಒಂದು ಹಲಿಗೆಯ ಸುತ್ತ ಇಂಥ ಚಿತ್ರಗಳನ್ನಿರಿಸಿ, ಅದರ ಮುಂದೆ ಒಂದು ಬಾಗಿಲನ್ನಿರಿಸಿ, ಬೆಳಕಿನ ಸಹಾಯದಿಂದ ಚಿತ್ರವು ತೆರೆಯ ಮೇಲೆ ಬೀಳುವಂತೆ ಮಾಡಿದನು. ಇಲ್ಲಿ ಕನ್ನಡಿಯು ಸದಾ ಚಲಿಸುತ್ತಿದ್ದುದರಿಂದ ಚಿತ್ರವು ಅಷ್ಟು ಸ್ಪಷ್ಟವಾಗಿ ಕಾಣಿಸುತ್ತಿದ್ದಿರಲಿಲ್ಲ. ೧೮೭೭ರಲ್ಲಿ ಮೆಬ್ರಿಜನು ತನ್ನ ಶೋಧನೆಗಳನ್ನು ಬಹಿರಂಗಪಡಿಸಲಾಗಿ ಹಲವರ ಗಮನವು ಇದರಕಡೆಗೆ ಹರಿಯಿತು. ಮುಂದೆ ಈತನೂ ಸಹ ಪ್ರಭಾಲೇಖನದಲ್ಲಿ ಹಲವು ಶೋಧನೆಗಳನ್ನು ಮಾಡಿದನು.

ಇತ್ತ ಇತರ ದೇಶಗಳಲ್ಲಿಯೂ ಹಲವರು ಶೋಧೆಗೆ ಮುಂದಾದರು. ಇಷ್ಟರಲ್ಲಿ ಇನ್ನೊಂದು ನವೀನಶೋಧನೆಯಾಯಿತು. ಇಷ್ಟರವರೆಗೆ ಪ್ರಭಾಲೇಖನವನ್ನು ಕನ್ನಡಿಯ ಮೇಲೆ ತೆಗೆಯುತ್ತಿದ್ದರು. ಆದರೆ ಈಗ ಅಮೇರಿಕದ ಜಾರ್ಜ ಈಸ್ಟಮೆನ್ ಎಂಬವರು celuloid ಎಂಬ ಇನ್ನೊಂದು ಆಧಾರವನ್ನು ರಚಿಸಿದರು. ಹತ್ತಿಯನ್ನು ಕೆಲವು ಆಮ್ಲಗಳಿಂದ ರೂಪಾಂತರಗೊಳಿಸಿ, ಬಳಿಕ ಅದನ್ನು ಸಾರಾಯಿಯಲ್ಲಿ ಕರಗಿಸಿ, ಇದರಿಂದ ದೊರೆಯುವ ಒಂದು ಮೃದುಪದಾರ್ಥದಿಂದ ಪಟಲವನ್ನು ನಿರ್ಮಾಣಮಾಡತೊಡಗಿದರು. ಈ ಪಟಲದ ಮೇಲೆ ಚಿತ್ರಸಂಗ್ರಹಮಾಡುವ ಯತ್ನವು ನಡೆಯಿತು. ಏಕಕಾಲಕ್ಕೆ ಅಮೇರಿಕಾ, ಯುರೋಪು ಮೊದಲಾದ ಕಡೆ ಈ ಶೋಧನೆಯು ಬಿರುಸಾಗಿ ನಡೆಯಿತು. ಅದೇ ಕಾಲದಲ್ಲಿ ಎಡಿಸನನು ಇಂಥ ಚಿತ್ರಗಳನ್ನು ಪ್ರದರ್ಶಿಸಲು ಒಂದು ಚಿಕ್ಕ ಉಪಕರಣವನ್ನು ನಿರ್ಮಾಣ ಮಾಡಿದನು. ಅದರಲ್ಲಿನ ರಂಧ್ರವೊಂದರಿಂದ ಕಾಣುವವರಿಗೆ ಚಿತ್ರವು ಚಲಿಸುವಂತೆ ಕಾಣುತ್ತಿತ್ತು. ತರುವಾಯ ಒಟ್ಟಿಗೆ ಈ ಚಲಿಸುವ ಚಿತ್ರಗಳನ್ನು ತೆರೆಯ ಮೇಲೆ ಕೆಡವಿ ಪ್ರದರ್ಶಿಸುವ ಮನಸ್ಸಾಯಿತು. ಅಮೇರಿಕಾದೇಶದ ಜೆಂಕಿನ್ಸನೆಂಬವನೊಬ್ಬನು ಈ ಕಾರ್ಯದಲ್ಲಿ ಯಶಸ್ಸನ್ನು ಪಡೆದನು. ಮೊಟ್ಟಮೊದಲು ಅವನು ಇಂಡಿಯಾನಾ ಪ್ರಾಂತದ ರಿಚ್‌ಮಂಡ್ ಪ್ರದರ್ಶಿಸಲು ಸಿದ್ಧತೆಯನ್ನು ಮಾಡಿದಾಗ, ಜನರು ಇದೇನೋ ವಂಚನೆಯಿರಬೇಕೆಂದು, ಪ್ರದರ್ಶನಶಾಲೆಯ ಒಳಕ್ಕೆ ಕಾಲಿಡಲು ಸಹ ಇಲ್ಲ. ಇದರಿಂದ ಹತಾಶನಾದ ಶೋಧಕನು, ಪ್ರೇಕ್ಷಕರಿಂದ ಹಣವನ್ನು ಪಡೆಯದೆ, ಚಿತ್ರಮಾಲೆಯನ್ನು ತೋರಿಸಿದನು. ಅಲ್ಲಿಯ ಮುಂದೆ, ಇದಕ್ಕೆ ಯೋಗ್ಯವಾದ ಭವಿಷ್ಯವಿದೆಯೆಂದು ಅವನಿಗೆ ತೋಚಿತು. ಆದರೆ ಇದೇ ಸಮಯದಲ್ಲಿ ಸಮೀಪ ಪ್ರಾಂತದ ಪ್ರದರ್ಶನಶಾಲೆಯೊಂದಕ್ಕೆ ಬೆಂಕಿ ಬಿದ್ದಿತು. ಬೆಂಕಿಗೆ ಇಂಥ ಪ್ರದರ್ಶನಯಂತ್ರವೇ ಕಾರಣವಾಗಿತ್ತು. ಈ ಎಲ್ಲ ಪ್ರತಿಬಂಧಕಗಳನ್ನು ಸಹಿಸಿ ಜೆಂಕಿನ್ಸನು, ಎಡಿಸನನ ಹೆಸರಿನ ಸಹಾಯವನ್ನು ಪಡೆಯಲು, ಅವನ ಜೊತೆಯಲ್ಲಿ ಸೇರಿಕೊಂಡು ತನ್ನ ಹೊಸ ಯಂತ್ರವನ್ನು ಬಹಿರಂಗಕ್ಕೆ ತರಲು ಯತ್ನಿಸಿದನು. ಅಂದಿನಿಂದ ಇದು ಬೆಳೆಯುತ್ತ ಬಂದರೂ, ಈಗಿರುವಂತೆ ಅದು ರೂಢಿಗೆ ಬರತೊಡಗಿದುದು ಹಲವು ವರುಷಗಳ ನಂತರ. ಅಂದಿನಿಂದ ಇಂದಿನ ತನಕ ನಡೆದ ಶೋಧೆಗಳು ಒಂದೆರಡಲ್ಲ. ಸಾಮಾನ್ಯವಾದ ಪಟಲವು ಬೆಂಕಿಗೆ ತುತ್ತಾಗುವುದೆಂದು ಉರಿಯದ (Safety) ಪಟಲವನ್ನು ಸಿದ್ಧಮಾಡಿದರು. ಮುಂದೆ ಎಲ್ಲ ವರ್ಣಗಳನ್ನು ಸರಿಯಾಗಿ ಪರಿವರ್ತಿಸಬಲ್ಲ ಅಖಿಲವರ್ಣಪಟಲದ ನಿರ್ಮಾಣವಾಯಿತು. ಬಹು ವರ್ಣಪಟಲಗಳ ಶೋಧನೆಯೂ ನಡೆಯಿತು. ಈಗ ದೃಶ್ಯಗಳನ್ನು ನಾಲ್ಕು ಮೈಯಿಂದಲೂ ಸರಿಯಾದ ದೃಶ್ಯೋಪಮಾನ (Perspective) ದಲ್ಲಿ ತೋರಿಸಬಲ್ಲ ಚಿತ್ರಗಳು ಯಶಸ್ವಿಯಾಗಿವೆಯೆಂಬ ಪಿಸುಮಾತಿದೆ; ಅಲ್ಲದೆ ಸಸ್ವರ ಚಿತ್ರಗಳೂ ಬಂದಿವೆ.

ಮೊದಮೊದಲು ಪ್ರದರ್ಶಿಸಲ್ಪಡುತ್ತಿದ್ದ ಪಟಲಗಳು ೫೦ ಅಡಿಗೂ ಮಿಕ್ಕಿ ಉದ್ದವಿರುತ್ತಿರಲಿಲ್ಲ. ಮಲ್ಲಯುದ್ಧ, ಮುಷ್ಟಿಯುದ್ಧ, ನರ್ತನ- ಇವೇ ಚಿತ್ರದ ವಿಷಯಗಳಾಗಿದ್ದವು. ೧೮೯೭ರಲ್ಲಿ ಮೊದಲ ಸಲ, ಇನಾಕ್ ರೆಕ್ಟರ್ ಎಂಬವನು ಅಮೇರಿಕದಲ್ಲಿ ೧೧೦೦೦ ಅಡಿ ಉದ್ದದ ಚಿತ್ರ

CC-0. Jangamwadi Math Collection. Digitized by eGangotri

ಪ್ರೇಂದನ್ನು ಪ್ರದರ್ಶಿಸಿದನು. ಇದೊಂದು ಕಾಳಗದ ಚಿತ್ರವಾಗಿದ್ದು, ಅತಿ ಬೇಸರ ಹುಟ್ಟಿಸುವಂತಹದಾಗಿತ್ತಾದರೂ ಜನರು ಅದನ್ನು ತೀರ ಕೊಂಡಾಡಿದರು. ಅದೇ ವರುಷದಲ್ಲಿ ಒಬೆರಮರಗು ಎಂಬಲ್ಲಿ ಹತ್ತು ವರುಷಗಳಿಗೊಮ್ಮೆ ನಡೆಯುವ ಪ್ರಸಿದ್ಧವಾದ "ಪ್ಯಾಶನ್ ಪ್ಲೇ" ಯನ್ನು (ಯೇಸುವಿನ ಜೀವನಚಿತ್ರನನ್ನು) ಅನುಕರಿಸಿ ೩೦೦೦ ಅಡಿಯುದ್ದ ಪಟಲವನ್ನು ಪ್ರದರ್ಶಿಸಿದರು. ಕಥೆಯನ್ನು ಚಲಚ್ಚಿತ್ರದಲ್ಲಿ ತೋರಿಸಲು ಮಾಡಿದ ಯತ್ನಗಳಲ್ಲಿ ಇದೇ ಪ್ರಾಯಶಃ ಮೊದಲನೆಯದು.



**ಐಮಿಲ್ ಜೇನಿಂಗ್ಸ್**
(ಪ್ರಸಿದ್ಧ ನಟ)

೧೯೦೩ರಲ್ಲಿ ಇದಕ್ಕೂ ಯಶಸ್ವಿಯೆನಿಸಿದ "ಉಗಿಬಂಡಿಯ ದರೋಡೆ" (The great train robbery) ಎಂಬ ಚಿತ್ರವು ಪ್ರಕಾಶಕ್ಕೆ ಬಂದಿತು. ಅದರ ಯಶಸ್ಸನ್ನು ಕಂಡು ಅದರ ಹಿಂದೆಯೇ ಅದೇ ರೀತಿಯ, ಅದ್ಭುತರಸವನ್ನು ತೋರಿಸುವ ಹಲವು ಕಥೆಗಳು ನಿರ್ಮಾಣಗೊಂಡುವು. ಆಗ ಇಂಥ ಚಿತ್ರಗಳಿಗಿದ್ದ ಪ್ರಸಿದ್ಧಿಯು ಹೇಳಿ ತೀರದು. ಇನ್ನು ಹಾಗೆಯೇ, ಇಂಗ್ಲೆಂಡು ಮೊದಲಾದ ದೇಶಗಳಲ್ಲಿ ಮೆಲ್ಲಮೆಲ್ಲನೆ ದೇಶಾಟನೆಗಳ ಚಿತ್ರಗಳನ್ನು ತೋರಿಸುವ ಯತ್ನವು ಸಾಗಿತು. ಆದರೆ ಈ ರೀತಿಯ ಚಿತ್ರಗಳನ್ನು ಪ್ರದರ್ಶಿಸುವ ಪ್ರದರ್ಶನಾಲಯಗಳು ಬೇರೆಯಾಗಿ ಇರುತ್ತಿರಲಿಲ್ಲ.

೧೯೧೧–೧೪ರ ವರೆಗಿನ ಸಮಯದಲ್ಲಿ ಇದರ ಬೆಳವಣಿಗೆಯು ಯುರೋಪು ಅಮೇರಿಕಾ ದೇಶಗಳೆರಡರಲ್ಲಿಯೂ ತೀರ ಭರದಿಂದ ಸಾಗಿತು. ಇಂಗ್ಲೆಂಡು ಫ್ರಾನ್ಸುದೇಶದವರು ಈ ಸಮಯದಲ್ಲಿ ಯತ್ನಪಡಹತೊಡಗಿದರು. ಇಟಲಿ ದೇಶದಲ್ಲಿ ಒಡೆಸ್ಸಿ, ಟ್ರಾಯಿಯ ಪತನ, ಫಾಸ್ಟ್, ಮೊದಲಾದ ಚಿತ್ರಗಳು ಹುಟ್ಟಿದುವು. ಈಗಿನ ಮಹಾಚಿತ್ರಗಳ ( Supers ) ಪೂರ್ವಜನೆಂಬಂತೆ ಅವರ 'ಕೋವಾಡಿಸ್' ( Quo Vadis ) ಎಂಬ ಚಿತ್ರವು ಅಲ್ಲಿ ಜನಿಸಿತು. ಇದನ್ನು ಅಮೇರಿಕಕ್ಕೂ ಒಯ್ದು ಅಲ್ಲಿ ಪ್ರದರ್ಶಿಸಿದರು. ಇದನ್ನು ಕಂಡು ಅಲ್ಲಿಯವರಿಗೂ ಇಂಥ ಮಹಾಚಿತ್ರಗಳನ್ನು ಮಾಡುವ ಹುಚ್ಚು ಹಿಡಿಯಿತು. ಇದರ ಫಲಿತವೆಂಬಂತೆ "ಇಂಡೊಲತಿನ್ಸ್", ಟೆನ್ ಕಮಾಂಡಮೆಂಟ್ಸ್, ರಾಬಿನ್ ಹುಡ್, ಬೆನ್ ಹೂರ್, ನೋವಾಸ್ ಆರ್ಕ್, ಮೆಟ್ರೊಪೊಲಿಸ್, ಸೀಕ್ರೆಟ್ಸ್ ಎಂದು ಮೊದಲಾದ ಚಿತ್ರಗಳು ಉತ್ಪನ್ನವಾದುವು. ಸಸ್ವರ ಚಿತ್ರಗಳಲ್ಲಿನ 'ಬ್ರಾಡ್ವೇ' ಮೊದಲಾದ ಚಿತ್ರಗಳು ಹುಟ್ಟಿದುವು.

೧೯೧೪ರಲ್ಲಿ ಯುರೋಪಿನಲ್ಲಿ ಯುದ್ಧವು ಆರಂಭವಾದುದರಿಂದ ಅಲ್ಲಿನ ಕೈಗಾರಿಕೆಯು ಹಿಮ್ಮೆಟ್ಟಿತು. ಇದರ ಲಾಭವನ್ನು ಪಡೆದವರೆಂದರೆ ಅಮೇರಿಕನರು. ಯುದ್ಧವು ಮುಗಿಯುವಷ್ಟರಲ್ಲಿ ಆ ದೇಶದ ಚಲಚ್ಚಿತ್ರದ ಉದ್ಯೋಗವು ಜಗತ್ತಿನಲ್ಲಿಯೇ ಅತ್ಯುನ್ನತ ಸ್ಥಾನವನ್ನು ಪಡೆಯಿತು. ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ ಮೊದಲಾದೆಲ್ಲೆಲ್ಲಿಯೂ ಅಮೇರಿಕದ ಚಿತ್ರಾವಳಿಗಳೇ ತುಂಬಿಕೊಂಡುವು. ಇಷ್ಟರಿಂದಲೇ ಅವರ ಚಿತ್ರಗಳು ಉತ್ತಮವೆಂದು ಯಾರಾದರೂ ತಿಳಿಯುವ ಕಾರಣವಿಲ್ಲ. ತಮ್ಮಲ್ಲಿನ ಅಧಿಕವಾದ ವ್ಯಾಪಾರೀ ಲಕ್ಷಣದಿಂದ ಅವರು ಜನರ ಹೀನ ಲಾಲಸೆಗಳನ್ನು ಹಿಂಬಾಲಿಸಿಯೇ ತಮ್ಮ ಚಿತ್ರಗಳನ್ನು ನಿರ್ಮಿಸತೊಡಗಿದರು. ಶೃಂಗಾರವಿಲಾಸಗಳ ದೆಸೆಯಿಂದಲೂ, ಸ್ಟಾರ್ ಪದ್ಧತಿಯ ಜಾಹೀರಾತುಗಳ ದೆಸೆಯಿಂದಲೂ ಅವುಗಳ ಪ್ರಾಬಲ್ಯವು ಎಲ್ಲೆಲ್ಲಿಯೂ ಹಬ್ಬಿತು.



CC-0. Jangamwadi Math Collection. Digitized by eGangotri

ಅಮೇರಿಕದ ಈ ಹಿಡಿತದಿಂದ ತಂತಮ್ಮ ದೇಶಗಳನ್ನು ಮುಕ್ತಿಗೊಳಿಸುವ ಯತ್ನವು ಯುರೋಪಿನಲ್ಲಿ ಬಲವಾಗಿ ಸಾಗಿತು. ಜರ್ಮನಿ, ಫ್ರಾನ್ಸು, ಇಂಗ್ಲೆಂಡುಗಳು ಅತಿ ಹೆಚ್ಚಿನ ಹೋರಾಟದಲ್ಲಿ ತೊಡಗಿದುವು. ಆದರೆ ಪೂರ್ಣ ಸಾಫಲ್ಯವು ಅವರಿಗೆ ಇಂದಿಗೂ ದೊರೆತಿಲ್ಲವೆಂದು ಹೇಳಬಹುದು.

ಜರ್ಮನಿಯು ಈ ಸಮಯದಲ್ಲಿ ತೀರ ಬಡತನದಿಂದಿತ್ತು. ಯುರೋಪಿನ ಇತರ ಪ್ರಾಂತಗಳ ಸ್ಥಿತಿಯೂ ಆರ್ಥಿಕ ದೃಷ್ಟಿಯಿಂದ ಚೆನ್ನಾಗಿರಲಿಲ್ಲ. ಜರ್ಮನಿಯು ಸರಕಾರದ ಸಹಾಯದಿಂದ ತನ್ನ ಉದ್ಯೋಗವನ್ನು ಬಲಪಡಿಸಲು ಯತ್ನಿಸಿತು. ೧೯೧೯-೧೯೩೦ರವರೆಗಿನ ಕಾಲವು ಜರ್ಮನಿಯ ಪುನರುಜ್ಜೀವನದ ಕಾಲವೆನ್ನಲುಬಹುದು. ಇದೇ ಸಮಯದಲ್ಲಿ ಸ್ವೀಡನ್ ಮತ್ತು ಫ್ರಾನ್ಸು ದೇಶಗಳು ಹೆಚ್ಚಿನ ಪರಿಶ್ರಮವನ್ನು ವಹಿಸಿದುವು. ಇದರಿಂದ ಅಲ್ಲಿನ ಮೇಧಾವಿಗಳು ಪ್ರಸಿದ್ಧಿಗೆ ಬಂದರು. ಎಷ್ಟೋ ನಿರ್ದೇಶಕರೂ ಪ್ರಖ್ಯಾತಿಗೆ ಬಂದರು. ಅಂಥವರಲ್ಲಿ ಲುಬಿಚ್, ಮರ್‍ನೊ, ಲೆನಿ, ಡುಪಾಂಟ್, ಸ್ಟೀಸೊಮ್ ಮೊದಲಾದವರು ಕೆಲವರು. ಪ್ರಸಿದ್ಧಿಗೆ ಬಂದ ನಟನಟಿಯರಲ್ಲಿ ಜೇನಿಂಗ್ಸ್,ಕಾನ್ರೇಡ್ ವೀಟ್,ಲಾರ್ಸ್ ಹೇನ್ಸನ್, ಪೋಲಾ ನಿಗ್ರಿ,ಲಾಡಿಪುಟಿ,ಗ್ರೀಟಾ ಗಾರ್ಬೋ ಮೊದಲಾದವರು ಕೆಲವರು. ಅವರ ಈ ಉತ್ಕರ್ಷವನ್ನು ಕಂಡ ಅಮೇರಿಕದ ಭಂಡವಲುಗಾರರು ಸುಮ್ಮನಿರುವರೇನು ? ಅವರು ತಮ್ಮ ದ್ರವ್ಯಬಲದಿಂದ ಈ ಕೋವಿದರನ್ನೆಲ್ಲಾ ತಮ್ಮ ದೇಶಕ್ಕೆ ಬರಮಾಡಿಕೊಂಡರು. ಆದರೆ ವಿದೇಶಗಮನದಿಂದ ಕಲಾನೈಪುಣ್ಯವು ಬೆಳೆಯಲಿಲ್ಲ. ಅಮೇರಿಕದವರು ಕಲೆಯ ವಿಚಾರದಲ್ಲಿ ಅಷ್ಟು ಉತ್ಸುಕತೆಯುಳ್ಳವರೂ ಇರುವುದಿಲ್ಲ. ಜನರಂಜನೆಯು ( ಜನವಂಚನೆಯು ? ) ಅವರ ಧ್ಯೇಯ. ಆದಕ್ಕೆ ಅನುಕೂಲವಾಗುವಂತೆ ಇವರನ್ನು ಉಪಯೋಗಿಸಿಕೊಂಡರು. ಇಂಥ ಕಲಾಕೋವಿದರು ವಿದೇಶದಲ್ಲಿದ್ದಾಗ ತೋರಿದ ಯೋಗ್ಯತೆಯು, ಸ್ವದೇಶದಲ್ಲಿ ತೋರಿದ ಕೃತಿಗಳಿಗಿಂತ ಎಷ್ಟೋ ಹೀನವಾಗಿತ್ತೆಂದು, ಎರಡನ್ನೂ ಪರಿಶೀಲಿಸಿದ ಪ್ರಾಜ್ಞರು ಎನ್ನುವರು.

ಹೀಗೆ ತಮ್ಮ ಕಲಾನಿಪುಣರನ್ನು ಕಳೆದುಕೊಂಡ ಐರೋಪ್ಯ ಚಲಚ್ಚಿತ್ರಕಾರರು ತೀರ ತೊಡಕಿಗೆ ಬಿದ್ದರು. ಈ ವ್ಯಾಪಾರಿ ಸ್ಪರ್ಧೆಯಿಂದ ಚೇತರಿಸಿಕೊಂಡು ಮುಂದೆ ಬರುವುದಕ್ಕಾಗಿ, ತಮ್ಮ ತಮ್ಮ ಸರಕಾರಗಳ ರಕ್ಷಣೆಯನ್ನು ಕೇಳಿಕೊಂಡರು. ರಕ್ಷಣೆಯೂ ದೊರೆಯಿತು. ಆದರೂ ಎಷ್ಟೋ ಮಂಡಲಗಳು ಮೂಲೆಗುಂಪಾದುವು. ಕೆಲವೊಂದು ಸಾಹಸಿಗಳು ಮಾತ್ರ ತಲೆಯೆತ್ತಲು ಶಕ್ತರಾದರು. ಆದರೆ ಅಮೇರಿಕದ ಚಿತ್ರಗಳನ್ನು ಕಂಡು ಭ್ರಮಿತರಾದ ತಮ್ಮ ನಾಡಿನ ಜನರನ್ನು ಸಂತೋಷಗೊಳಿಸುವುದು ಅವರಿಗೆ ಕಷ್ಟದ ಕೆಲಸವಾಯಿತು. ಅದಕ್ಕಾಗಿ ಇವರೂ ಸಹ ಪಾಮರರಂಜನೆಯ ಹಾದಿಯನ್ನೇ ಧುಮುಕಿದರು.

ಈಗ ಕಲಾಭಿವೃದ್ಧಿಯನ್ನು ಕುರಿತು ಕೆಲವು ವಿಷಯಗಳನ್ನು ಹೇಳುವೆವು. ಮೊದಲಿನ ಚಿತ್ರಗಳೆಲ್ಲ ನಾಟಕದ ತಾದ್ರೂಪಿಕ ಅನುಕರಣೆಗಳಾದುವಲ್ಲದೆ ಬೇರೆಯಲ್ಲ. ಕಥಾವಿಷಯಗಳಲ್ಲಿ—ಕಳ್ಳರು, ದರೋಡೆಕೋರರು, ಕುದುರೆಸವಾರರು ಇವರೇ ಪ್ರಮುಖರಾಗಿದ್ದು, ಅದ್ಭುತರಸವೇ ಪ್ರಧಾನರಸವಾಗಿತ್ತು. ಜನಸಾಮಾನ್ಯರಿಗೆ ಇಂಥ ಅದ್ಭುತಕಥೆ ( Thrillers ) ಗಳ ಮೇಲಿನ ಪ್ರೇಮವು ಇನ್ನೂ ಮಾಯವಾಗಿಲ್ಲ.

ಇದೇ ಸಮಯದಲ್ಲಿ ಪ್ರಭಾಲೇಖಕದ ತಮೋಭಾವ ( Fade out ) ತೇಜೋಭಾವನ ( Fade in ) ಸಲಕರಣೆಗಳನ್ನು ಉಪಯೋಗಕ್ಕೆ ತರತೊಡಗಿದರು. ಇಲ್ಲಿಯ ತನಕ ಚಿತ್ರದ ಮೇಲೆ ನಟನಟಿಯರ ಪೂರ್ಣಬಿಂಬವನ್ನು ಗ್ರಹಿಸುವುದು ರೂಢಿಯಾಗಿತ್ತು. ಈ ರೂಢಿಯನ್ನು ಅಮೇರಿಕದ ಗ್ರಿಫಿತ್ ಎಂಬ ನಿರ್ದೇಶಕನು ಮುರಿದನು. ಅವನು ಚಿತ್ರಕಥೆಯ ಸಂದಿಗ್ಧ ಸಮಯದಲ್ಲಿ ಆಸಕ್ತಿ ತೀಕ್ಷ್ಣತೆಯನ್ನು ಹೆಚ್ಚಿಸಲು ಬೇರೆ ಉಪಾಯಗಳನ್ನು ಹುಡುಕಿದನು. ಉದಾ: ಒಬ್ಬ ಬಾಲೆಯನ್ನು ಮರಣ ದಂಡನೆಗೆ ಗುರಿಮಾಡಿರುವರೆಂದೂ, ಅವಳನ್ನು ರಕ್ಷಿಸಲು ಧಾವಿಸುತ್ತಿರುವರೆಂದೂ ತಿಳಿಯುವ. ಇಂಥ ಪ್ರಸಂಗದಲ್ಲಿ ಅವನು ಒಮ್ಮೆ ಬಾಲೆಯನ್ನು ವಧಸ್ಥಾನಕ್ಕೆ ಒಯ್ಯುವ ಚಿತ್ರವನ್ನು ತೋರಿಸುವನು; ಕೂಡಲೆ ಅವಳ ರಕ್ಷಕರು ಓಡಿಬರುವ ಚಿತ್ರವನ್ನು ತೋರಿಸುವನು; ಬಳಿಕ ವಧೆಗಾಗಿ ಎತ್ತಿದ ಕತ್ತಿಯನ್ನು ತೋರಿಸುವನು. ಕೊನೆಗೆ ಧಾವಿಸುವ ಕುದುರೆಗಳ ವೇಗವನ್ನು ಸೂಚಿಸಲು ಅವುಗಳ ಕಾಲುಗಳನ್ನಷ್ಟೆ ತೋರಿಸುವನು. ಈ ರೀತಿಯಿಂದ

CC-0. Jangamwadi Math Collection. Digitized by eGangotri

ಪ್ರಸಂಗದ ತೀಕ್ಷ್ಣತೆಯನ್ನು ಪರಾಕಾಷ್ಠೆಗೆ ಮುಟ್ಟಿಸುವುದು ಅವನ ಕ್ರಮ. ಮೊದಲನೆಯ ಬಾರಿಗೆ, ಮನುಷ್ಯರ ಮುಖ ಮಾತ್ರ, ಕುದುರೆಗಳ ಗೊರಸುಗಳು ಮಾತ್ರ, ಖಡ್ಗಮಾತ್ರ ಇತ್ಯಾದಿ ಸಮೀಪ ಪ್ರಹಾರ (Close shot) ಗಳನ್ನು ತೋರಿಸಿ, ಅವುಗಳ ಪ್ರಾಮುಖ್ಯತೆಯು ಚಿತ್ರರಚನೆಯಲ್ಲಿ ಎಷ್ಟಿದೆಯೆಂದು ತೋರಿಸಿದವನು ಅವನು.

ಜರ್ಮನಿಯಲ್ಲಿ ವೈನ್ ಎನ್ನುವವನು ೧೯೨೦ರಲ್ಲಿ "ದಿ ಕೆಬಿನೆಟ್ ಆಫ್ ಡಾಕ್ಟರ್ ಕೆಲಿಗರಿ" ಎಂಬೊಂದು ನವೀನ ಮಾದರಿಯ ಚಿತ್ರವನ್ನು ತೋರಿಸಿದನು. ಈ ಚಿತ್ರದಲ್ಲಿನ ಸಂಯುಕ್ತಗಳೂ (Sets), ವಾಸ್ತು ರಚನೆಯೂ, ಬೆಳಕಿನ ಯೋಜನೆಯೂ ಒಬ್ಬ ಹುಚ್ಚನ ಮನೋಭಾವನೆಯನ್ನು ಜನರಿಗೆ ಮನದಟ್ಟು ಮಾಡುವ ರೀತಿಯಲ್ಲಿ ರಚಿಸಲ್ಪಟ್ಟಿದ್ದುವು. ಚಲಚ್ಚಿತ್ರದಲ್ಲಿನ ಅದ್ಭುತವಾದ ಭಾವವಾಹಕಶಕ್ತಿಯನ್ನು ಮೊದಲಬಾರಿಗೆ ಪ್ರಕಟಿಸಿದ ಚಿತ್ರವೆಂದರೆ ಇದು. ಆ ಕಾಲದಲ್ಲಿ ಈಗಿರುವಷ್ಟು ವೈಜ್ಞಾನಿಕ ಬೆಳವಣಿಗೆಯು ನಡೆದಿರದಿದ್ದರೂ, ಈ ಚಿತ್ರವು ಮಾತ್ರ ಎಂದೂ ಮರೆಯುವಂಥದಲ್ಲವೆಂದು ಪಾಲ್‌ರೋತ್‌ನೆಂಬ ವಿಮರ್ಶಕನು ನುಡಿಯುವನು. ಆ ಚಿತ್ರದಲ್ಲಿನ ಕೊಟಡಿ, ಗೋಡೆ ಮೊದಲಾದುವು ಆಯಾಯ ಭಾಗಗಳನ್ನು ಬಿಂಬಿಸುವಂತೆ ನಿರ್ಮಿತವಾಗಿದ್ದುವಲ್ಲದೆ, ತಾದ್ರೂಪಿಕ ಅನುಕರಣೆಯ ಹಾದಿಯನ್ನು ಹಿಡಿಯಲೇ ಇಲ್ಲ. ೧೯೨೫ರಲ್ಲಿ ಮರ್ನ್ಯೂ ಎಂಬ ಜರ್ಮನ್ ನಿರ್ದೇಶಕನು ಜೆನಿಂಗ್ಸ್ ಮೊದಲಾದವರನ್ನು ಕೂಡಿಕೊಂಡು "ಕೊನೆಯ ನಗು" (The last laugh) ಎಂಬ ಚಿತ್ರವನ್ನು ರಚಿಸಿದನು. ಇದು 'ಕೆಬಿನೆಟ್ ಆಫ್ ಡಾ. ಕೆಲಿಗರಿ' ಎಂಬುದರಲ್ಲಿ ಪ್ರಕಟವಾದ ಭಾವವಾಹಕ ಶಕ್ತಿಯನ್ನು ಇನ್ನಷ್ಟು ಚೆನ್ನಾಗಿ ಪ್ರದರ್ಶಿಸುವಂತಿತ್ತು. ಇದೇ ರೀತಿಯಲ್ಲಿ, ಬೇರೆ ಬೇರೆ ನಿರ್ದೇಶಕರು ಫ್ರಾನ್ಸು ಜರ್ಮನಿಗಳಲ್ಲಿ ಬೇರೆ ಬೇರೆ ರೀತಿಯಿಂದ ಚಿತ್ರಸೃಷ್ಟಿಯ ಯತ್ನವನ್ನು ಮಾಡತೊಡಗಿದರು. ಇಂಥವರಲ್ಲಿ—ಲುಪು ಪಿಕ್, ಕಾರ್ಲ್ ಗ್ರುಣೆ ಮೊದಲಾದವರು ಕೆಲವರು. ಅವರಲ್ಲಿ ಒಬ್ಬೊಬ್ಬರು - ಯಾವುದೊಂದು ವ್ಯಕ್ತಿಗೂ ಮೇಲ್ಮೆಯನ್ನು ಕೊಡದೆ, ಕೇವಲ ಜನತೆಯ ಸಾಮುದಾಯಿಕ ಅನುಭವವನ್ನೇ ಮುಂದಿರಿಸಿಕೊಂಡು, ಕೆಲವು ಚಿತ್ರಗಳನ್ನು ಹೊರಡಿಸಿದರು.

ಇತ್ತ, ಯುದ್ಧದ ದೆಸೆಯಿಂದ, ರುಸ್ಯಾದೇಶದವರ ಯತ್ನವು ಏಕಾಂಗಿಯಾಗಿ ನಡೆಯಬೇಕಾಯಿತು. ಅವರಲ್ಲಿ ಪಟಲದ ಭಂಡವಲು ತುಂಬ ಇದ್ದಿರಲಿಲ್ಲ. ಆದರೆ ಚಲಚ್ಚಿತ್ರವು ಜನತೆಯಲ್ಲಿ ಜಾಗೃತಿಯನ್ನು ಹುಟ್ಟಿಸುವುದಕ್ಕೆ ತೀರ ಉತ್ತಮ ಸಾಧನವೆಂದು ಅವರ ಮುಂದಾಳುಗಳಿಗೆ ಹೊಳೆದುದರಿಂದ ಅವರು ಅದಕ್ಕೆ ಪ್ರೋತ್ಸಾಹವನ್ನಿತ್ತರು. ಇದೇ ಸಮಯದಲ್ಲಿ ಅಲ್ಲಿನ ಕುಶಲೆಟ್ ಎಂಬವನು ಹೊಸ ಸಿದ್ಧಾಂತವೊಂದನ್ನು ಪ್ರತಿಪಾದಿಸತೊಡಗಿದನು. ಚಿತ್ರಕ್ಕೆ ಒಬ್ಬ ಪ್ರಮುಖ ನಟನು ಬೇಕೆಂದಿಲ್ಲ, ನಟನೆಯೂ ಆವಶ್ಯವಿಲ್ಲ, ಬೇಕಾದ ಭಾವಗಳನ್ನು ಬೇರೆ ಬೇರೆ ಬಗೆಯ ಬಿಂಬಗಳುಳ್ಳ ಪಟಲದ ಚೂರುಗಳನ್ನು ಕೂಡಿಸಿ ಹುಟ್ಟಿಸಲು ಸಾಧ್ಯವಿದೆ ಎಂದು. ಅವರೊಡನೆ ಪಿ. ಐ. ಪುಡೋವ್ಕಿನ್ ಎಂಬ ನಿರ್ದೇಶಕನು ಸಹಕರಿಸಿದನು. ಐಸೆನ್‌ಸ್ಟೀನ್ ಎಂಬ ಇನ್ನೊಬ್ಬ ನಿರ್ದೇಶಕನು—ಮನೋಧರ್ಮ (Psychology) ವನ್ನು ಹೊಂದಿಕೊಂಡು ಚಿತ್ರದ ರಚನೆಯನ್ನು ಮಾಡಲು ಯತ್ನಿಸತೊಡಗಿದನು. ಇತರರ ಯಾರ ಸಹಾಯವೂ ಇಲ್ಲದೆ ಕೇವಲ ತಂತಮ್ಮ ಬುದ್ಧಿಶಕ್ತಿಯಿಂದಲೇ ಐಸೆನ್‌ಸ್ಟೀನ್, ಪುಡೋವ್ಕಿನರು ಹೊಸಬಗೆಯ ಚಿತ್ರರಚನಾ ಶಾಸ್ತ್ರವನ್ನು ಕಂಡುಹಿಡಿದರು. ಅವರ ಶ್ರಮದಪ್ರತಿಫಲವೆನಿಸಿ—"ಪೊಟೆಮ್ಕಿನ್ ಯುದ್ಧನಾವೆ," "ಅಕ್ಟೋಬರ," "ತಾಯಿ" ಮೊದಲಾದ ಹೊಸಬಗೆಯ ಉನ್ಮೇಷಕ ಚಿತ್ರಗಳು ಹೊರಟುವು.

ಚಲಚ್ಚಿತ್ರಕಲೆಗೆ ರುಸ್ಯಾ ದೇಶದಲ್ಲಿ ದೊರೆತಷ್ಟು ಪುಷ್ಟಿಯು ಇನ್ನೆಲ್ಲಿಯೂ ದೊರೆಯಲಿಲ್ಲ. ಅಮೇರಿಕ ದೇಶದಲ್ಲಿಯೂ ಈ ವಿಷಯದಲ್ಲಿ ಯತ್ನಮಾಡಿದ ಒಬ್ಬೊಬ್ಬರು ನಿಪುಣರಿರುವರು. ಚಾರ್ಲಿಚಾಪ್‌ಲೀನ್, ಡಗ್ಲಾಸ್ ಫರಬೇಂಕ್ಸ್ ಮೊದಲಾದವರು. ಈ ಎಲ್ಲ ನಿಪುಣರು, ಚಲಚ್ಚಿತ್ರಕ್ಕಿರುವ ವಾಹಕಶಕ್ತಿಯನ್ನು ಹೇಗೆ ಉಪಯೋಗಿಸಿಕೊಂಡರೆಂದು ಮುಂದಿನ ಅಧ್ಯಾಯಗಳಲ್ಲಿ ಕ್ರಮವಾಗಿ ವಿಚಾರಿಸುತ್ತ ಬರುವೆವು. ಅಲ್ಲಿಯ ತನಕ ಇವರ ಹೆಸರುಗಳಿಂದಲೇ ತೃಪ್ತರಾಗಬೇಕು.

CC-0. Jangamwadi Math Collection. Digitized by eGangotri

# ಹಿಂದೀ ಸ್ತ್ರೀಯರ ಮರಣ ಸಂಖ್ಯೆಯ ಭಯಾನಕ ಪ್ರಮಾಣವು

ಲೇಖಕರು—ಶ್ರೀ ರಘುನಾಥರಾವ ಜತಾರ, ಬಿ. ಎ. ಎಲ್ ಎಲ್. ಬಿ.,

ರಾಷ್ಟ್ರದ ರಾಜಕೀಯ, ಸಾಮಾಜಿಕ, ಔದ್ಯೋಗಿಕ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಪ್ರಗತಿಯಾಗಿದೆಯೋ ಇಲ್ಲವೋ ಎಂಬದು ಹತ್ತು ವರ್ಷಕ್ಕೊಮ್ಮೆ ಆಗುವ ಜನಗಣನೆಯ ಮೇಲಿಂದ ಸುಲಭವಾಗಿ ಗೊತ್ತಾಗುವಂತಿದೆ. ಜನಗಣನೆಯ ಕೋಷ್ಟಕಗಳಿಂದ ನಮಗೆ ಅತ್ಯಂತ ಮನೋರಂಜಕವೂ ಬೋಧಪ್ರದವೂ ಆದ ಸಂಗತಿಗಳು ಗೊತ್ತಾಗುವದಲ್ಲದೆ ಮುಂದೆ ಬರಲಿರುವ ಕಡುತರವಾದ ಕಷ್ಟನಷ್ಟಗಳನ್ನು ತಪ್ಪಿಸಿ ಸುಖಸೌಕರ್ಯಗಳನ್ನು ಹೇಗೆ ಕಲ್ಪಿಸಿಕೊಳ್ಳಬಹುದೆಂಬ ಬಗ್ಗೆಯೂ ತಮ್ಮ ರಾಷ್ಟ್ರದ ಅಭಿವೃದ್ಧಿಯನ್ನು ಎಲ್ಲ ಬಗೆಯಿಂದ ಹೇಗೆ ಮಾಡಬಹುದೆಂಬ ಬಗ್ಗೆಯೂ ಎಚ್ಚರಪಡಲಿಕ್ಕೆ ಅನುಕೂಲವಾಗುವದು.

ಹಿಂದುಸ್ಥಾನದಲ್ಲಿ ೧೯೩೧ ನೇ ಇಸ್ವಿಯಲ್ಲಿ ಆದ ಜನಗಣನೆಯ ಸರಕಾರೀ ವರದಿಗಳು ಇನ್ನೂ ಪ್ರಸಿದ್ಧವಾಗಿರುವದಿಲ್ಲ. ಆದರೆ ಈಗಾಗಲೆ ಕಳೆದ ಮೇ ೫ ನೆಯ ತಾರೀಖಿನ ಮುಂಬಯಿ ಗ್ಯಾಝಿಟಿನಲ್ಲಿ ಜನಗಣನೆಯ ನಾಲ್ಕು ಕೋಷ್ಟಕಗಳು ಪ್ರಸಿದ್ಧವಾಗಿವೆ. ಮೊದಲನೆಯ ಕೋಷ್ಟಕದಲ್ಲಿ ಪ್ರಾಂತಾನುಗುಣವಾಗಿ ಸ್ತ್ರೀಪುರುಷರ ಗಣನೆ, ಎರಡನೆಯ ಕೋಷ್ಟಕದಲ್ಲಿ ಜಿಲ್ಲಾನುಗುಣವಾಗಿ, ೩ ನೆಯದರಲ್ಲಿ ಪಟ್ಟಣಗಳ ಪ್ರಕಾರ ಹಾಗೂ ೪ ನೆಯದರಲ್ಲಿ ಜಾತಿಗಳ ಪ್ರಕಾರ ಜನಗಣನೆಯ ಅಂಕಿಗಳು ಇರುವವು. ಈ ಲೇಖದಲ್ಲಿ ಮೊದಲನೇ ಕೋಷ್ಟಕದಲ್ಲಿ ಪ್ರಸಿದ್ಧವಾದ ಅಂಕಿಗಳ ಬಗ್ಗೆಯಷ್ಟೇ ಬರೆಯಬೇಕೆಂದಿದ್ದೇವೆ.

೧೯೦೧ ರಿಂದ ೧೯೩೧ ನೆಯ ಇಸ್ವಿಯ ವರೆಗೆ ಹೆಚ್ಚಾಗುತ್ತ ನಡೆದ ಜನಸಂಖ್ಯೆಯ ಕೋಷ್ಟಕವನ್ನು ಕೆಳಗೆ ಕೊಟ್ಟಿರುತ್ತೇನೆ.

| | ಒಟ್ಟು ಜನಸಂಖ್ಯೆ | ಹೆಚ್ಚಾದ ಜನಸಂಖ್ಯೆ | ನೂರಕ್ಕೆ ಹೆಚ್ಚಾದ ಪ್ರಮಾಣ |
|---|---|---|---|
| ೧೯೦೧ | ೨೯,೪೩,೬೧,೦೫೬ | | |
| ೧೯೧೧ | ೩೧,೫೧,೫೬,೩೯೬ | ೨೦೭೯೩೩೪೦ | ೭.೧ |
| ೧೯೨೧ | ೩೧೮೯೪೨೪೮೦ | ೩೭೮೬೦೮೪ | ೧.೨ |
| ೧೯೩೧ | ೩೫೨೮೩೭೭೭೮ | ೩೩೮೯೫೨೯೮ | ೧೦.೬ |

ಹೀಗೆ ಪ್ರತಿಯೊಂದು ದಶಕದಲ್ಲಿ ಒಟ್ಟು ಜನಸಂಖ್ಯೆಯು ಬೆಳೆಯುತ್ತ ನಡೆದಿದೆ. ಕಳೆದ ೩೦ ವರ್ಷಗಳಲ್ಲಿ ಸುಮಾರು ೬ ಕೋಟಿ ಜನರು ಹೆಚ್ಚಾಗಿರುವರು. ಇದರ ಮೇಲಿಂದ ಸ್ತ್ರೀಪುರುಷರಿಬ್ಬರ ಸಂಖ್ಯೆಯೂ ಬೆಳೆಯುತ್ತಲಿದೆಯೆಂದು ವಾಚಕರ ಗ್ರಹಿಕೆಯಾಗುವ ಸಂಭವವಿದೆ. ಆದರೆ ಅದು ತಪ್ಪು. ಹೀಗೆ ಮಿತಿಮೀರಿ ಬೆಳೆಯುತ್ತಲಿದ್ದ ಜನಸಂಖ್ಯೆಯಲ್ಲಿ ಕೇವಲ ಪುರುಷರ ಸಂಖ್ಯೆಯೇ ಬೆಳೆಯುತ್ತಿದ್ದು ಆ ಪ್ರಮಾಣದಲ್ಲಿ ಸ್ತ್ರೀಯರ ಸಂಖ್ಯೆಯು ಮಾತ್ರ ಬೆಳೆದಿರುವದಿಲ್ಲ. ಹಿಂದುಸ್ಥಾನದಲ್ಲಿ ೧೯೩೧ ನೆಯ ಇಸ್ವಿಯಲ್ಲಿ ೩೫,೨೮,೩೭,೭೭೮ ಎಂದೆಣಿಸಲ್ಪಟ್ಟ ಒಟ್ಟು ಜನಸಂಖ್ಯೆಯಲ್ಲಿ ೧೮,೧೮,೨೮,೯೨೩ ಜನ ಪುರುಷರೂ ೧೭,೧೦,೦೮,೮೫೫ ಜನ ಸ್ತ್ರೀಯರೂ ಇರುವರು. ಎಂದರೆ ಸರಾಸರಿ ೧೦೦೦ ಪುರುಷರಿಗೆ ೯೪೦ ಸ್ತ್ರೀಯರಂತೆ ಪ್ರಮಾಣವು ಕಂಡು ಬರುತ್ತದೆ. ಈ ಪ್ರಮಾಣವನ್ನೂ ಹಿಂದಿನ ದಶಕದೊಳಗಿನ ಪ್ರಮಾಣವನ್ನೂ ಹೊಂದಿಸಿ ನೋಡುವಾ.

| ವರ್ಷ | ಪುರುಷರು | ಸ್ತ್ರೀಯರು |
|---|---|---|
| ೧೯೦೧ | ೧೦೦೦ | ೯೭೨ |
| ೧೯೧೧ | ,, | ೯೬೪ |
| ೧೯೨೧ | ,, | ೯೫೫ |
| ೧೯೩೧ | ,, | ೯೫೦ |

ಈ ಪ್ರಕಾರವಾಗಿ ಪ್ರತಿಯೊಂದು ದಶಕದ ಜನಗಣನೆಯಲ್ಲಿ ಸ್ತ್ರೀಯರ ಸಂಖ್ಯೆಯ ಪ್ರಮಾಣವು ನಿಯಮಿತ

CC-0. Jangamwadi Math Collection. Digitized by eGangotri

ವಾಗಿ ಕಡಿಮೆಯಾಗುತ್ತಲೇ ಹೋಗುತಿದೆ. ಪಾಶ್ಚಾತ್ಯ ರಾಷ್ಟ್ರಗಳೊಳಗಿನ ಸ್ತ್ರೀಪುರುಷರ ಪ್ರಮಾಣವನ್ನು ನೋಡಿದರೆ, ಅದು ಹಿಂದುಸ್ಥಾನದ ಪ್ರಮಾಣಕ್ಕೆ ವಿರುದ್ಧ ವಾಗಿದ್ದುದು ಕಂಡು ಬರುವದು. ಹಿಂದುಸ್ಥಾನದಲ್ಲಿ ಸ್ತ್ರೀಯರ ಸಂಖ್ಯೆಗಿಂತ ಪುರುಷರ ಸಂಖ್ಯೆಯು ಹೆಚ್ಚಾಗಿದ್ದರೆ ಪಾಶ್ಚಾತ್ಯರಾಷ್ಟ್ರಗಳಲ್ಲಿ ಪುರುಷರ ಸಂಖ್ಯೆಗಿಂತ ಸ್ತ್ರೀಯರ ಸಂಖ್ಯೆಯೇ ಹೆಚ್ಚಾಗಿದೆ. ಕೆಲ ರಾಷ್ಟ್ರಗಳೊಳಗಿನ ಸ್ತ್ರೀಪುರುಷರ ಸಂಖ್ಯೆಯ ಪ್ರಮಾಣವು ನಮಗೆ ಸಿಕ್ಕಿರುವದು. ೧೦೦೦ ಪುರುಷರ ಸಂಖ್ಯೆಗೆ ಸ್ತ್ರೀಯರ ಸಂಖ್ಯೆಯ ಪ್ರಮಾಣವು ಪೋರ್ತುಗಾಲ ದೇಶದಲ್ಲಿ ೧೦೯೩, ಇಂಗ್ಲಂಡು ಹಾಗೂ ವೆಲ್ಸಗಳಲ್ಲಿ ೧೦೬೮, ಬೆಲ್ಜಿಯಮ್ಮನಲ್ಲಿ ೧೦೧೪, ಆಯರ್ಲಂಡಿನಲ್ಲಿ ೧೦೧೩—ಹೀಗೆ ಕಂಡು ಬರುತ್ತದೆ. ಅಲ್ಲಿ ಪುರುಷರ ಸಂಖ್ಯೆಯ ಪ್ರಮಾಣವು ಕಡಿಮೆಯಾಗುವ ಕಾರಣಗಳು ಅನೇಕವಾಗಿದ್ದು, ಮೆಯೋ ಸ್ಮಿಥ್ ಎಂಬೊಬ್ಬ ಲೇಖಕನು ಈ ಸಂದರ್ಭದಲ್ಲಿ ಹಿನ್ನುಡಿದೇನೆಂದರೆ—'ಪಾಶ್ಚಾತ್ಯ ರಾಷ್ಟ್ರಗಳೊಳಗಿನ ಪುರುಷರು ಮುಖ್ಯತಃ ಸೈನಿಕರೂ, ನಾವಿಕರೂ, ಕಣಿಗಳಲ್ಲಿ ದುಡಿಯುವಂಥವರೂ, ರೇಲ್ವೆ, ಹಡಗುಪಡೆ, ವಿಮಾನ, ವಿಶಾಲ ಕಾರಖಾನೆಗಳು ಮೊದಲಾದ ಅನೇಕ ವ್ಯವಸಾಯಗಳಲ್ಲಿ ಜೀವದ ಹಂಗು ತೊರೆದು ದುಡಿದು ತಮ್ಮ ಆಯುಷ್ಯವನ್ನು ಗಂಡಾಂತರಗಳಲ್ಲಿ ತೂರಿ ಕೊಳ್ಳುವವರೂ ಆಗಿರುವರು. ಆದ್ದರಿಂದ ಲಕ್ಷಗಟ್ಟಲೆ ಜನರು ಅಲ್ಪಾಯುಷಿಗಳಾಗಿರುವರು. ಮೇಲಾಗಿ ಅನೇಕ ಜನರು ವಿಲಾಸಲೋಲುಪರೂ ವ್ಯಸನಾಧೀನರೂ ಆಗಿ, ತಮ್ಮ ಜೀವನವನ್ನು ಬೇಗನೆ ಹಾಳು ಮಾಡಿಕೊಳ್ಳುವರು. ಆದ್ದರಿಂದ ಅಲ್ಲಿ ಪುರುಷರ ಮೃತ್ಯುವಿನ ಪ್ರಮಾಣವು ಸ್ತ್ರೀಯರಿಗಿಂತ ಹೆಚ್ಚಿರುವದು.'

ಆದರೆ ಹಿಂದುಸ್ಥಾನದಲ್ಲಿ ಸ್ತ್ರೀಯರ ಮೃತ್ಯುವಿನ ಕಾರಣಗಳಂತೂ ತೀರ ಶೋಚನೀಯವೂ ಲಜ್ಜಾಸ್ಪದವೂ ಆಗಿರುವವು. ನಮ್ಮ ದೇಶದ ಎಲ್ಲ ಬಗೆಯ ಉನ್ನತಿಯಾಗ ಬೇಕಾದರೆ ನಾವು ಈ ಕಾರಣಗಳನ್ನು ಇಲ್ಲದಂತಾಗಿ ಮಾಡಿ ಬೇಗನೆ ಯೋಗ್ಯ ಉಪಾಯಗಳನ್ನು ಕೈಕೊಳ್ಳಬೇಕು. ಇಲ್ಲವಾದರೆ ಹಿಂದುಸ್ಥಾನವು ಶೀಘ್ರವಾಗಿ ಅಧೋಗತಿಗೀಡಾಗುವದೆಂಬದನ್ನು ಮರೆಯಕೂಡದು.

ಹಿಂದುಸ್ಥಾನದಲ್ಲಿ ಸಾಮಾಜಿಕ ರೂಢಿಗಳ ಮೂಲಕ ತಾಯಿತಂದೆಗಳು ಹೆಣ್ಣುಮಕ್ಕಳ ಹಾಗೂ ಹೆಣ್ಣು ಕೂಸುಗಳ ಆರೋಗ್ಯದ ಕಡೆಗೂ ಜೀವಿತದ ಕಡೆಗೂ ಸಾಕಷ್ಟು ಲಕ್ಷ್ಯವನ್ನು ಪೂರೈಸುವದಿಲ್ಲೆಂಬದು ಸರ್ವಶ್ರುತವಿದೆ. ಗಂಡುಮಕ್ಕಳು ದುಡಿದು ತಮಗೆ ಆಶ್ರಯ ಕೊಡುವರೆಂದೂ ತಮ್ಮ ಸ್ವರ್ಗಪ್ರಾಪ್ತಿಗಾಗಿಯೂ ವಂಶಾಭಿವೃದ್ಧಿಗಾಗಿಯೂ ಉಪಯೋಗ ಬೀಳುವರೆಂದೂ ಅವರ ಆರೈಕೆಯನ್ನು ತಮಗಿಂತ ಹೆಚ್ಚಾಗಿ ಮಾಡುವರು. ಆದರೆ ಹೆಣ್ಣುಮಕ್ಕಳ ವಿಷಯದಲ್ಲಿ ಮಾತ್ರ ತೀರ ಅಜಾಗರೂಕತೆಯು ಕಂಡುಬರುತ್ತದೆ. ಕೇವಲ ಪುರುಷರೇ ಹೆಣ್ಣುಮಕ್ಕಳ ಕಡೆಗೆ ದುರ್ಲಕ್ಷ್ಯ ಮಾಡುತ್ತಾರೆಂತಲ್ಲ, ಸ್ತ್ರೀಯರು ಸಹ ತಮ್ಮ ದೇಹಾರೋಗ್ಯದಕಡೆಗೆ ಸಾಕಷ್ಟು ಲಕ್ಷ್ಯಕೊಡುವದಿಲ್ಲ. ಹೆಣ್ಣುಕೂಸುಗಳೂ ಮಕ್ಕಳೂ ಬೇನೆಯಿಂದ ಒಳಲುತ್ತಿದ್ದರೂ ವೈದ್ಯಡಾಕ್ಟರುಗಳಿಂದ ಔಷಧೋಪಚಾರವಾಗಲಿ ಆರೈಕೆಯಾಗಲಿ ಹೊಂದದೆ ಮರಣಹೊಂದುವ ಉದಾಹರಣೆಗಳು ಕಡಿಮೆಯಾಗಿಲ್ಲ. ಆದ್ದರಿಂದ ಶಿಶುಸಂಗೋಪನವಿಷಯದಲ್ಲಿ ಜನರಿಗೆ ಸಾಕಷ್ಟು ಶಿಕ್ಷಣವನ್ನು ಕೊಟ್ಟು, ಪಕ್ಷಪಾತವಿಲ್ಲದೆ ಹೆಣ್ಣುಕೂಸುಗಳ ಮತ್ತು ಚಿಕ್ಕಮಕ್ಕಳ ಆರೈಕೆಯಾಗುವಂತೆ ಏರ್ಪಾಡು ಮಾಡುವದು ಈಗಿನ ಪರಿಸ್ಥಿತಿಯಲ್ಲಿ ಎಷ್ಟು ಅತ್ಯಾವಶ್ಯಕವಾಗಿರುವದೆಂಬದು ತಾನೇ ಗೊತ್ತಾಗುವಂತಿದೆ.

ಬಾಲ್ಯವಿವಾಹದ ವಿಷಯವಂತೂ ಎಲ್ಲರಿಗೂ ಚೆನ್ನಾಗಿ ಪರಿಚಿತವಾಗಿದೆ. ಹಿಂದೀ ಹೆಣ್ಣುಮಕ್ಕಳು ಕೋಮಲ ದೇಹ ಸ್ಥಿತಿಯಲ್ಲಿಯೂ ಚಿಕ್ಕವಯಸ್ಸಿನಲ್ಲಿಯೂ ಮಾತೃಪದವನ್ನೇರಿ ತಮ್ಮ ನಾಜೂಕಾದ ಪ್ರಕೃತಿಯ ಮೇಲಾಗುವ ದುಷ್ಪರಿಣಾಮಗಳ ಮೂಲಕ ಅಲ್ಪಾಯುಷಿಗಳಾಗುತ್ತಾರೆ. ವಿಶೇಷತಃ ೧೫ ರಿಂದ ೨೦ ರ ವಯಸ್ಸಿನೊಳಗಿನ ಸ್ತ್ರೀಯರ ಮೃತ್ಯುವಿನ ಪ್ರಮಾಣವನ್ನು ನೋಡಿದರೆ ಎದೆಯೊಡೆಯುವಂತಿದೆ. ಅದೊಂದು ಸ್ವತಂತ್ರ ವಿಷಯವಾಗುತ್ತಿರುವದರಿಂದ ಅದನ್ನು ಸ್ವತಂತ್ರ ಲೇಖದಲ್ಲಿಯೇ ವಿವೇಚಿಸಲಪೇಕ್ಷಿಸುತ್ತೇನೆ.

ಗರ್ಭಿಣೀಸ್ತ್ರೀಯರ ಬಗ್ಗೆಯೂ ಬಾಳಂತಿಯರ ಬಗ್ಗೆಯೂ ಜನರ ಅಲಕ್ಷ್ಯದ ಮೂಲಕ ಲಕ್ಷಾವಧಿ ಸ್ತ್ರೀಯರು ಮರಣಕ್ಕೀಡಾಗುವರೆಂಬದು ನಿಜ. ಗರ್ಭಿಣೀ ಸ್ತ್ರೀಯರು ಪ್ರಸವಸಮಯದ ವರೆಗೆ ದುಡಿಯುವದನ್ನು



CC-0. Jangamwadi Math Collection. Digitized by eGangotri

ನೋಡಿದರೆ ಕೆಡಕೆನಿಸದಿರದು. ಬಾಳಂತಿಯರ ವಿಷಯ ದಲ್ಲಿಯೂ ಇದೇ ಹಾಡು. ಸೂತಿಕಾಶಾಸ್ತ್ರದ ಜ್ಞಾನದ ಅಭಾವದಿಂದ ಲಕ್ಷಾವಧಿ ಹೆಣ್ಣುಮಕ್ಕಳು ಮರಣಕ್ಕೆ ಬಲಿಬೀಳುತ್ತಾರೆ. ಹಾಗೂ ಲಕ್ಷಾವಧಿ ಹೆಣ್ಣುಮಕ್ಕಳು ಬಾಣಂತಿರೋಗ, ಕ್ಷಯರೋಗ, ಪಾಂಡುರೋಗ ಮೊದ ಲಾದ ಗೊತ್ತಿದ್ದಂಥ-ಗೊತ್ತಾಗದಂಥ ರೋಗಗಳಿಂದ ಪೀಡಿತರಾಗಿ ಬಹು ಕಾಲದವರೆಗೆ ಬಳಲಿ, ಮರಣಕ್ಕೆ ತುತ್ತಾಗುತ್ತಿರುವ ಉದಾಹರಣೆಗಳು ಪ್ರತಿನಿತ್ಯ ಕಣ್ಣಿಗೆ ಬೀಳುತ್ತವೆ. ಈ ವಿಷಯದಲ್ಲಿಯೂ ನಾವು ಯೋಗ್ಯ ಉಪಾಯಗಳನ್ನು ಕೈಕೊಳ್ಳುವದು ಅಗತ್ಯವಿದೆ. ಮೊಟ್ಟ ಮೊದಲು ಬಾಲ್ಯವಿವಾಹವನ್ನು ನಿಲ್ಲಿಸಿ, ಹೆಣ್ಣು ಮಕ್ಕಳನ್ನು ಶಕ್ತಿಸಾಮರ್ಥ್ಯವಂತರನ್ನೂ ದೇಹಾ ರೋಗ್ಯವುಳ್ಳವರನ್ನೂ ಮಾಡಿದವಿನಾ ಮಾತೃಪದದ ಹೊರೆಯನ್ನೂ ಹೊಣೆಯನ್ನೂ ಅವರ ಮೇಲೆ ಹೇರ ಬಾರದೆಂಬ ಬಗ್ಗೆ ಎಚ್ಚರಪಡಬೇಕು. ಶಾರದಾಕಾಯಿದೆ ಯಿಂದ ಇದಕ್ಕೆ ತಕ್ಕಮಟ್ಟಿಗೆ ಪ್ರತಿಬಂಧವಾಗಬಹುದು. ಆದರೆ ಜನರು ಆತ್ಮಸ್ಫೂರ್ತಿಯಿಂದಲೂ ರಾಷ್ಟ್ರೋ ದ್ಧಾರದ ಸದಿಚ್ಛೆಯಿಂದಲೂ ಹೆಣ್ಣುಮಕ್ಕಳ ಸುಧಾರಣೆಗಾಗಿ ಮುಂದೆ ಬಂದು ಅವರಿಗೆ ತಕ್ಕ ರಿಕ. ನೈತಿಕ, ಮಾನಸಿಕ ಶಿಕ್ಷಣವನ್ನು ಕೊಟ್ಟು ಸಂಪೂರ್ಣ ಬೆಳವಣಿಗೆಯಾದನಂತರ ಅವರಿಗೆ ಮಾಡಿಕೊಳ್ಳಲಿಕ್ಕೆ ಅನುವುಮಾಡಿಕೊಡಬೇಕು. ರಂತೆ ಅವರಿಗೆ ಶಿಶುಸಂಗೋಪನ, ಸೂತಿಕಾಶಾಸ್ತ್ರ ಹಾಗೂ ಸುಪ್ರಜಾಜನನಶಾಸ್ತ್ರ ಇವುಗಳ ಜ್ಞಾನ ಚೆನ್ನಾಗಿ ಆಗುವಂತೆ ಸಾರ್ವತ್ರಿಕ ಏರ್ಪಾಡುಗಳನ್ನು ಮಾಡಬೇಕು. ಅವರ ವ್ಯಾಯಾಮದ ಕಡೆಗೂ ತಾಯಿ ತಂದೆಗಳು ಎಳ್ಳಷ್ಟೂ ಲಕ್ಷ್ಯವನ್ನು ಪುರೈ ವದಿಲ್ಲ. ಈಗ ಆ ದೃಷ್ಟಿಕೋನವು ಬದಲಾಗ ಬೇಕು. ಹೆಣ್ಣುಮಕ್ಕಳ ವಿಷಯಕ್ಕಿದ್ದ ಯಾವತ್ತೂ ಮೂರ್ಖ ಕಲ್ಪನೆಗಳು ಹೋಗಲೇಬೇ ಎಂದರೇನೇ ಅವರ ಆಯುಷ್ಯವು ಸುಖಕರವಾಗು ಲ್ಲದೆ ರಾಷ್ಟ್ರೋನ್ನತಿಯಾಗುವದು. ಇಲ್ಲವಾದ ಈಗಿದ್ದ ಶೋಚನೀಯ ಲಜ್ಜಾಸ್ಪದ ಹಾಗೂ ಕಷ್ಟ ಆಯುಷ್ಯವನ್ನೇ ಅವರು ಕಳೆಯಬೇಕಾಗುವದು.

" ಅಮೇರಿಕದಲ್ಲಿ, ಯುರೋಪದಲ್ಲಿ ಮದುವೆಯಾಗದ ಬ್ರಹ್ಮಚಾರಿ ಕೂಲಿಗಾರನಿಗೆ ಉಂಡು ತಿಂದು ಮಾತ್ರ ( ಜೀವ ಹಿಡಿದಿರುವಷ್ಟರ ಪೂರ್ತಿ ) ೩೦ ರೂ. ಬೇಕಾಗುತ್ತದೆ. ನ್ಯೂಯಾರ್ಕ ಪಟ್ಟಣದ ಒಂದು ಸಂಸ್ಥೆಯು ಆ ಪಟ್ಟಣದಲ್ಲಿ ೫ ಮಂದಿ ಸಂಸಾರದ ಒಂದು ಕೂಲಿಕಾರಕುಟುಂಬಕ್ಕೆ ತಕ್ಕಮಟ್ಟಿಗೆ ಬದುಕಲು ಕನಿಷ್ಠಪಕ್ಷ ವರ್ಷಕ್ಕೆ ರೂ. ೨೫೨೦ ಬೇಕಾಗುತ್ತವೆಯೆಂದು – ಅಂದರೆ ತಲೆಗೆ ರೂ. ೫೦೪ – ಅಂದಾಜು ಮಾಡಿದೆ. ಹಿಂದುಸ್ತಾನದಲ್ಲಿ ಬ್ರಹ್ಮ ಚಾರಿ ಕೂಲಿಗಾರನಿಗೆ ರೂ. ೫ ಆದರೆ ತೃಪ್ತಿ. ಇಲ್ಲಿನ ೫ ಮಂದಿಯ ಕುಟುಂಬಕ್ಕೆ ೩೦ ರೂಪಾಯಾದರೆ ಮುಗಿಯಿತು. ವಿಧಿಯಿಲ್ಲದೆ ನಾವಿಂದು ಕೀಳು ಜೀವನಕ್ಕೆ—ಈ ಅಲ್ಪಕ್ಕೇ ತೃಪ್ತರಾಗಬೇಕಾಗಿದೆ. "— ಅಭಾವದಿಂದಲೂ ಬರುತ್ತದಷ್ಟೆ.

Visweswarayya: Speeches, p. ೧೧, ೫೨,೧೯೩.

* * * * *

ಹೇಗಾದರೂ ಆಗಲಿ, ಮಳೆಬೆಳೆ ಸರಿಯಾಗಿದ್ದರೆ ಒಂದು ಹೊತ್ತಿನ ಗಂಜಿಯಾದರೂ ಸಿಕ್ಕೀತು. ಅದಕ್ಕೂ ಹಿಂದುಸ್ತಾನದಲ್ಲಿ ಅವಕಾಶವಿಲ್ಲ. ಬೋರೇಗೌಡನ ದೌರ್ಭಾಗ್ಯವೇನೋ!

| ೧೮೦೦–೧೮೨೫. | ೧೮೨೫–೧೮೫೦. | ೧೮೫೦–೧೮೭೫. | ೧೮೭೫–೧೯೦೦ |
| --- | --- | --- | --- |
| ೬ ಸಾರೆ ಬರ | ೨ ಸಾರೆ ಬರ | ೬ ಸಾರೆ ಬರ | ೧೮ ಸಾರೆ ಬರ |

ಈ ಬರಗಳೆಂದರೆ ಬರಗಳಲ್ಲ ಇವು. ಸಿಡಿಲಿದ್ದಂತೆ. ಕೆಂಧೂಳಿ ಬರ, ಮೂರು ವರ್ಷದ ಬರ ಇವುಗಳ ಅವಾಂತರವನ್ನು ಅನುಭವಿಸಿ ಬಲ್ಲ ಮುದುಕರು ಇನ್ನೂ ಇದ್ದಾರೆ. ೧೮೭೬–೭೭ರ ಬರದಲ್ಲಿ ೧೦೦ ಕ್ಕೆ ೨೦ ಜನ ಹೊಟ್ಟೆಗಿಲ್ಲದೆ ಸೊರಗಿ ಸತ್ತು ಹೋದರೆಂದು ಲೆಕ್ಕವಾಗಿದೆ.

೧ Hand Spinning and Hand weaving ೨ Visweswarayya: Speeches

CC-0. Jangamwadi Math Collection. Digitized by eGangotri

# ನಮ್ಮ ಕಾದಂಬರೀಪ್ರಪಂಚ

ಲೇಖಕರು-ಶ್ರೀ ತಿರುಮಲೆ ಶ್ರೀನಿವಾಸಾಚಾರ್ಯರು

ಕನ್ನಡ ಕಾದಂಬರಿಗಳನ್ನೋದಿ ಬಲುದಿನವಾಗಿತ್ತು. ಹಿಂದೆ ಅಂದಿನ ಓದುಬಲ್ಲ ಎಲ್ಲ ಹುಡುಗರಂತೆ, ಕತೆ ಕಾದಂಬರಿಗಳಲ್ಲಿ ಆಸೆಯುಳ್ಳ ಎಲ್ಲ ಓದುಗರಂತೆ ಶ್ರೀ. ವೆಂಕಟಾಚಾರ್ಯರ ಕಾದಂಬರಿಗಳನೆಲ್ಲ-ಕೈಗೆ ಸಿಕ್ಕಿದುವುಗಳನೆಲ್ಲ ಓದಿದ್ದೆ. ಕರ್ನಾಟಕಚಂದ್ರಿಕೆ, ಕರ್ನಾಟಕಗ್ರಂಥಮಾಲೆ ಮುಂತಾದುವುಗಳಲ್ಲಿ ಹೊರಬೀಳುತ್ತಿದ್ದ ಶ್ರೀ, ಎಸ್. ವಿ. ಶಾಸ್ತ್ರಿಗಳು, ಸಂಜನಗೂಡು ಶ್ರೀಕಂಠಶಾಸ್ತ್ರಿಗಳು ಮೊದಲಾದ ಲೇಖಕರ ಕಾದಂಬರಿಗಳನ್ನೂ ಓದಿದ್ದೆ. ಹಾಗೇ ನೋಡಲು ಆ ಕಾಲವು ಒಂದು ಮೆಟ್ಟು, ನಮ್ಮ ಕನ್ನಡಸಾಹಿತ್ಯಚರಿತ್ರೆಯಲ್ಲಿ-ಗದ್ಯಸಾಹಿತ್ಯಚರಿತ್ರೆಯಲ್ಲಿ-ಕನ್ನಡ ಕಾದಂಬರೀ ಗ್ರಂಥಗಳ ಚರಿತ್ರೆಯಲ್ಲಿ.

ಅಲ್ಲಿಂದ ಇಲ್ಲಿನ ವರೆಗೆ ಕನ್ನಡದಲ್ಲಿ ಕಾದಂಬರಿಗಳ ಹೊಳೆ ಹರಿಯುತ್ತಲೇ ಇದೆ. ಐತಿಹಾಸಿಕ, ಕಾಲ್ಪನಿಕ, ಸಾಮಾಜಿಕ ಕಾದಂಬರಿಗಳು, ಹಾಗೂ ಪತ್ತೇದಾರಿ ಕಥೆಗಳು. ಮೊದಮೊದಲು ಎಲ್ಲರರಿತಿರುವಂತೆ ಬಲುಮಟ್ಟಿಗೆ ಎಲ್ಲವೂ ಭಾಷಾಂತರಗಳು, ಅನುವಾದಗಳು-ಬಂಗಾಳಿಯಿಂದ, ಮರಾಠಿಯಿಂದ; ಇಂಗ್ಲಿಷಿನಿಂದಲೂ ಅಲ್ಲೊಂದು ಇಲ್ಲೊಂದು ಉಂಟು. ಸ್ವತಂತ್ರವೆಂದೆನಿಸಿಕೊಳ್ಳುವಂತಹವೂ ಈ ಭಾಷಾಂತರಗಳ ಮಾದರಿಯಲ್ಲೇ-ಪಡಿಯಚ್ಚಿನಲ್ಲೇ-ಬರೆದ ಕತೆಗಳು.

ಈ ಅಂತರದಲ್ಲಿ ಎಷ್ಟೋ ಕನ್ನಡ ಕಾದಂಬರಿಗಳನ್ನು ಓದಿದ್ದೇನೆ. ಇಂಗ್ಲಿಷ್‌ಸಾಹಿತ್ಯದ ಪರಿಚಯವಾದ ಮೇಲೆ, ಸಾಹಿತ್ಯದಲ್ಲಿ ರಸಕಸಗಳನರಿಯಬಲ್ಲ ವಿವೇಚನೆ ಕೊಂಚಮಟ್ಟಿಗೆ ಮೂಡಿದ ಮೇಲೆ, ಕನ್ನಡ ಕಾದಂಬರಿಗಳಲ್ಲಿ ರುಚಿ ತೋರದಾಯಿತು. ಸ್ಕಾಟ್, ಜೇನ್ ಆಸ್ಟಿನ್, ಡಿಕೆನ್ಸ್, ಥ್ಯಾಕರೆ, ಜಾರ್ಜ್ ಇಲಿಯಟ್, ಬ್ರಾಂಟೆ, ಮೆರೆಡಿತ್. ಹಾರ್ಡಿಯಂತಹ ಲೇಖಕರ ಮುಂದೆ ಕನ್ನಡ ಕಾದಂಬರಿಕಾರರು ಕಳೆಯಿಲ್ಲದವರಾದರು; ಆದರೂ ಆಗೊಂದು ಈಗೊಂದು ಓದುತಲೇ ಇದ್ದೆ.

ಎಷ್ಟೋ ಓದಿದೇನೆಂದೆ. ಈಗ ಅವುಗಳಲ್ಲಿ ಬರೇ ಹೆಸರು ನೆನಪಿರುವುದು ಕೂಡ ಬೆರಳೆಣಿಕೆಗೆ ಸಿಕ್ಕುವಷ್ಟು ಮಾತ್ರ. ಕತೆ, ವ್ಯಕ್ತಿಗಳು, ಇನ್ನೆಷ್ಟರಮಟ್ಟಿಗೆ ನೆನಪಿರಬೇಕು! ಹೀಗೇಕೆ?

ಓದಿದ ಆವುದೊಂದು ಕಾದಂಬರಿಯು ಬಗೆಯಲ್ಲಿ ಕೂಡಬೇಕಾದರೆ ಚಮತ್ಕಾರವಾದ, ವಿನೋದವಾದ, ಹುರಿದುಂಬಿಸುವ, ಮೋದಗೊಳಿಸುವ, ಕಣ್ಣೀರಿಡಿಸುವ, ಒಂದಕ್ಕೊಂದು ಹೊಂದಿಕೊಂಡು ಕತೆಯಲ್ಲಿನ ವ್ಯಕ್ತಿಗಳ ಸ್ವಭಾವಕ್ಕೂ ಹೊಂದುವ ಘಟನಾವಳಿಗಳ ಸರಣಿಯಿರಬೇಕು. ಪಾತ್ರಗಳು ಗುಣವಿಶಿಷ್ಟತೆಯಿಂದ ಜೀವಂತವಾಗಿದ್ದು, ನಂಟಿನಿಂದಲೊ, ಕೆಳೆಯಿಂದಲೊ, ಒಡನಾಟದಿಂದಲೊ, ಸ್ಥಾನಬಲದಿಂದಲೊ ಪರಿಚಿತವಾಗಿ. ನಮ್ಮ ಮೇಲೆ ತಮ್ಮ ಪ್ರಭಾವವನ್ನು ಬೀರುವಂತಹ ವ್ಯಕ್ತಿಗಳನ್ನು ಹೋಲಬೇಕು. ಕಂಡಕಂಡ ಬೀದಿಯ ಎಂಕ, ಸೀನ, ನೋಣರನ್ನು ನೆನಪಿಡುವುದಾದರೂ ಎಂತು!

ಈ ಭಾಷಾಂತರಗಳಲ್ಲಿ ಹಲವು ಒಳ್ಳೆಯ ಕಾದಂಬರಿಗಳುಂಟು.-ವೆಂಕಟಾಚಾರ್ಯರ ವಿಷವೃಕ್ಷ, ದೇವಿ ಚೌಧುರಾಣಿ, ದುರ್ಗೇಶನಂದಿನಿ, ನವಾಬನಂದಿನಿ, ರಾಜಸಿಂಹ, ಕೃಷ್ಣಕಾಂತನ ಉಯಿಲು, ಪರಿಮಳಚುಮಲೆ. ಗಳಗನಾಥರ ಗೃಹಕಲಹ, ಧರ್ಮರಹಸ್ಯ, ಕುಮುದಿನಿ, ಇವು ಒಳ್ಳೆಯ ಕಾದಂಬರಿಗಳು. ಕೌಂಟ ಆಫ್ ಮೂಂಟಿ ಕ್ರಿಸ್ಟೋವಿನ ಅನುವಾದ-ರಾಜಾ ಮಲಯಸಿಂಹ ಒಪ್ಪವಾದ ಶೈಲಿಯುಳ್ಳ ಒಳ್ಳೆಯ ಕತೆ. ಸಾಮಾ

CC-0. Jangamwadi Math Collection. Digitized by eGangotri

ಧಿಕ ಕಾದಂಬರಿಗಳಲ್ಲಿ ನೆನಪಲಿರುವುದು ವಲ್ಲಭ ಮಹಾಲಿಂಗ ತಟ್ಟಿಯವರ ಲಕ್ಷ್ಮೀಬಾಯಿ, ಶಂಕರ ಅಣ್ಣಾಜಿ ಕುಲಕರ್ಣಿಯವರ ಜಯಪರಾಜಯ. (ಶ್ರೀನಿವಾಸರ 'ಸುಬ್ಬಣ್ಣ' ಕಾದಂಬರಿಯ ಎಣಿಕೆಗೆ ಬರಲಾರದು. ಸೀಳ್ಕೃತೆಯೆನ್ನಬಹುದು. ಗದ್ಯಗೀತವೆಂದೂ ಒಪ್ಪುವುದು. ರಸಾನುಭವ ಅಷ್ಟು ದಟ್ಟ).

ಈ ಪಟ್ಟಿ ತೀರ ಸಣ್ಣದು. ಭಿನ್ನರುಚಿಗಳನನುಸರಿಸಿ ಕೊಂಚ ಬೆಳೆಯಬಹುದು. ಎಷ್ಟೇ ಬೆಳೆಸಿದರೂ ಸಣ್ಣದೇ, ಕನ್ನಡ ಭಾಷೆಯಲ್ಲಿ ಹೊರಬಿದ್ದಿರುವ ಒಟ್ಟು ಕಾದಂಬರಿಗಳ ಮಾಸದಿಂದ.

ಪ್ರಾಯಶಃ ಓದುಗರೆಲ್ಲರ ಬಗೆಯಲಿರಬಹುದಾದ ಈ ಸಾಮಾನ್ಯ ವಿಚಾರಸರಣಿಯನ್ನು ಬರೆದು ಸಾರುವ ಅಗತ್ಯವೇನೆಂಬ ಪ್ರಶ್ನೆ ಬರುವುದಷ್ಟೆ. ಕನ್ನಡ ಕಾದಂಬರಿ ಓದಿ ಬಲುದಿನವಾಯಿತೆಂದು ಮೊದಲಿಟ್ಟೆ. ಕೆಲವು ದಿನದ ಹಿಂದೆ ಹೊಸ ಕಾದಂಬರಿಯೊಂದು ಓದಬೇಕೆನಿಸಿತು. ಶ್ರೀ. ಬಿ. ಪಿ. ಕಾಳೆಯವರ **'ಎರಡನೆ ಹೆಂಡತಿ'** ಕೈಗೆ ಸಿಕ್ಕಿತು. ಈ ಪುಸ್ತಕ ಹೊರಬಿದ್ದುದು ೧೯೩೬ರಲ್ಲಿ. ಆದರೆ ನನಗೆ ಹೊಸದು. ಓದಿದ ಮೇಲೆ ಅದೂ ಇದೂ ಅನ್ನಿಸಿತು.

ಹೆಸರೇ ಹೇಳುವುದು; ಇದೊಂದು ಸಾಮಾಜಿಕ ಕಾದಂಬರಿಯೆಂದು. ನರಸನಗೌಡನು ಗಡ್ಡಮೀಸೆಗಳಿಗೆ ಕಲಪು ಸವರಿಕೊಂಡು ತಲೆಗೆ ಕಾಪುನಿಯಾ ಎಣ್ಣೆ ಸುರುವಿಕೊಂಡು ವಯಸ್ಸನ್ನು ಮೂವತ್ತರ ಸುಮಾರಿಗೆ ಇಳಿಸಿ ಸರಸಕ್ಕನನ್ನು ಎರಡನೆಯ ಹೆಂಡತಿಯನ್ನಾಗಿ ಮಾಡಿಕೊಂಡನು. ಗೌಡನು ಹಣವಂತನೇ ಹೌದು. ಸರಸಕ್ಕನಿಗೆ ಬೇಕಾದುದು ತಾರುಣ್ಯ, ರಸಿಕತೆ. ಈ ಮುದುಕನಿಗೂ ಆ ಯುವತಿಗೂ ಹೇಗೆ ಹೊಂದಬೇಕು! ಈ ಇರವಿನಲ್ಲಿ ಡಾಕ್ಟರ ರಂಗನಾಥರಾಯನು ಸರಸಕ್ಕನ ಬಾಳಿನಲ್ಲಿ ಕಾಲಿಡುವನು. ಒಳಕೆ ಹೆಚ್ಚಿದಂತೆ ಸರಸಕ್ಕನಿಗೆ ಅನಿಸುವುದು 'ನನ್ನ ಗಂಡನು ಹೀಗೆಯೇ ತರುಣವಯಸಿನವನಿದ್ದು, ಇವನಂತೆಯೇ ಹುರುಪಿನವನಿದ್ದರೆ ನಾನೆಷ್ಟು ಧನ್ಯಳಾಗುತಿದ್ದೆ! ಅಥವಾ ಈ ಡಾಕ್ಟರೇ ನನ್ನ ಗಂಡ-ನಾಗಿ-ದ್ದರೆ?' ನೀತಿಗೇಡಿ ರಂಗನಾಥನು ಆಕೆಯ ಚಂಚಲತೆ ಹೆಚ್ಚಿಸಿ ತನ್ನ ಆಸೆ ಪೂರೈಸಿಕೊಳ್ಳಬೇಕೆಂದು ಹವಣಿಸಿ, ಗೌಡನು ಮನೆಯಲಿಲ್ಲದ ವೇಳೆ ಸರಸಕ್ಕನನ್ನು – ಸರಸತ್ತಿಗೆಯನ್ನು – ವಿಷಮವಿವಾಹ ನಾಟಕಕ್ಕೆ ಒಯ್ಯುವನು. ನಾಟಕದಿಂದ ಹಿಂದಿರುಗುವಾಗ ಬೆಳಗಿನ ಜಾವ ಮೂರುಗಂಟೆಗೆ ರಂಗನಾಥನ ಆಸ್ಪತ್ರೆಯಲ್ಲಿ ಇಟ್ಟರೂ ಸೇರಬೇಕೆಂದು ಸಂಕೇತವಾಗುವುದು. ಮರೆಯಲ್ಲಿ ಇವರ ನಡತೆಯನ್ನು ಹೊಂಚುಹಾಕಿದ್ದು, ರೋಷವನ್ನು ಹೇಗಾದರು ತಡೆದುಕೊಂಡಿದ್ದ ಗೌಡನು ಇವರು ಕೂಡುವ ವೇಳೆ ತಾನೂ ಹೋಗಿ ಮರೆಯಾಗಿರುತ್ತಾನೆ. ಡಾಕ್ಟರು ಸರಸಕ್ಕನ ಕೈಹಿಡಿಯಬೇಕು; ಆ ವೇಳೆಗೆ ಆವಳು ಹಿಂದಕ್ಕೆ ಸರಿದು ಉಪನ್ಯಾಸ ಮೊದಲೆಗಳ ಹೊಳೆ ಹರಿಯಿಸುತ್ತಾಳೆ. ವಿಷಮವಿವಾಹ ನಾಟಕದೊಳಗಿನ ಉಪದೇಶ ಆತ್ಮಸಂಯಮನಸವನ್ನು ನೋಡಿದೊಡನೆಯೇ ಆಕೆ ತನ್ನಲ್ಲಿ ಜಾಗೃತವಾಗಿ ನೆಲೆಗೊಂಡಿತಂತೆ. ಆ ನಾಟಕ ನೋಡಿದಾಗಿನಿಂದ ತನ್ನ ಪತಿ ಪರಮರೂಪ ಸಂಪನ್ನನಾಗಿ ತೋರಹತ್ತಿದನಂತೆ. ಕೆಟ್ಟ ಮುಸುಡಿಯ ಕಡು ಕ್ರೂರಿಯಂತೆ ತೋರುತ್ತಿದ್ದವನು ಪ್ರತಿಮದನನಂತೆ ತೋರಹತ್ತಿದನಂತೆ. ಹೀಗಾಗಿ ಎಲ್ಲವೂ ಸರಿ ಹೋಗುವುದು. ಉಪಸಂಹಾರದಲ್ಲಿ ಡಾಕ್ಟರಿಗೆ ಲಗ್ನದ ಸೂಚನೆ. ಇದೀಗ ಕತೆ. ಪುಸ್ತಕದಲ್ಲಿ ೭೮ ಪುಟಗಳು.

ಎಲ್ಲ ಕಲೆಗಳಂತೆ ಸಾಹಿತ್ಯದ ಸಾಧನೆಯೂ ರಸಾನುಭವದ ಮೂಲಕ ಆನಂದದಾಯಿಯಾಗುವುದು. ಕಾದಂಬರೀಸಾಹಿತ್ಯವಂತೂ ಮನಸ್ಸನ್ನು ಮುಟ್ಟುವಂತಾಗಬೇಕು. ಸಾಮಾಜಿಕ ಕಾದಂಬರಿಯೇನೋ ಬೋಧಪ್ರದವಾಗಬಹುದು. ಅಂದರೆ, ಅವಕಾಶವುಂಟೆಂದು ನೀತಿಬೋಧೆಯನ್ನೇ ಮುಂದು ಮಾಡಿಕೊಂಡು ಬರೆದರೆ ಅದು ಒಳ್ಳೆಯ ಸಾಹಿತ್ಯವಾಗಲಾರದು.

ಈ ಕಾದಂಬರಿಯಲ್ಲೂ ಮೊದಲಿಗೊಂದು ಸುದೀರ್ಘವಾದ ವ್ಯಾಖ್ಯಾನ—ಎರಡನೆಯ ಮದುವೆ ನಡೆದ ಬಗೆ, ಅದರ ಮೋಸದ ಏರ್ಪಾಡು, ಮೋಸದಿಂದ ಮಾಡಿಕೊಂಡ ಮದುವೆಯ ಫಲವಾಗಿ ಮುದಿಗಂಡನು ಚಿಕ್ಕ ಹೆಂಡತಿಯ ಅಡಿಯಾಳಾಗುವುದು, ಎರಡನೆಯ ಹೆಂಡತಿಯ ಆ ಹೆಂಡತಿಯ ಗಂಡನ ನಡತೆ, ಅವರವರ ಬೇರೆ ಬೇರೆ ಗುರಿಗಳು, ಎಲ್ಲವೂ ಸೇರಿ ಸುಖಶಾಂತಿಗಳಿಲ್ಲದಾಗುವುದು, ಇತ್ಯಾದಿ ಇತ್ಯಾದಿಗಳನ್ನು ಕುರಿತು. ನರಸನಗೌಡನೂ ಸರಸಕ್ಕನೂ ಅಲ್ಲೊಂದು ಸಲ ಇಲ್ಲೊಂದು

CC-0. Jangamwadi Math Collection. Digitized by eGangotri

ಸಲ ಇಣುಕುವುದುಂಟು. ಆದರೆ ಕತೆಯಲ್ಲಿ ಮುಂಬರಿವಿಲ್ಲ. ಏನೊಂದೂ ನಡೆವುದಿಲ್ಲ. ಕಾದಂಬರಿಯ ನೆವದಲ್ಲಿ ಎರಡನೆಯ ಮದುವೆಯ ಗಂಡಹೆಂಡಂದಿರ ಸಂಬಂಧದಿಂದ ಹೇಳಬೇಕಾದುದೆಲ್ಲ ಲೇಖಕರೇ ಹೇಳಿದಾರೆ. ಇನ್ನು ಎರಡನೆಯ ವ್ಯಾಖ್ಯಾನ ಸುಮಾರು ೧೫ ಪುಟ. ವಿಷಯ:- ನಾಟಕ ಕಾದಂಬರಿಗಳ ಉಪಯೋಗ, ಸುಶಿಕ್ಷಿತರೆನಿಸಿ ಹೆಣ್ಣುಮಕ್ಕಳ ಬಗ್ಗೆ ಕೀಳ್ಪಗೆವವರ ರೀತಿಗೆಟ್ಟ ನಡೆ, ಆ ನಟತೆಯ ನಿಂದೆ, ಸುಖಲಾಲಸೆಯುಳ್ಳ ಜವ್ವನೆಯರಿಗೆ ಇಂತಹ ನಡೆಗೇಡಿ ಯುವಕರಿಂದ ಒದಗುವ ಇಕ್ಕಟ್ಟು, ಆ ಇಕ್ಕಟ್ಟಿನಲ್ಲಿ ಹಿಡಿತವಿಲ್ಲದ ಮುಗುದೆಯರು ಸಿಕ್ಕಿ ಹೋಗುವುದು, ಈಡಿಲ್ಲದ ಎರಡನೆಯ ಮದುವೆಯ ನಿಷ್ಠುರತೆ, ಎಂತವನೇ ಇರಲಿ ಪತಿಯೇ ದೈವವೆಂದು ತಿಳಿದ ಹೆಂಗುಸಿನ ಆನಂದ, ಇತ್ಯಾದಿ ನೀತಿ ಬೋಧೆ.

ಈ ಎರಡನೆಯ ಉಪನ್ಯಾಸ ಸರಸಕ್ಕನ ಬಾಯಿಂದ. ಈ ಕಾದಂಬರಿಯಲ್ಲಿ ಪಾತ್ರರಚನೆಯ ಎತ್ತುಗಡೆಯಿಲ್ಲ. ನರಸನಗೌಡ, ಸರಸಕ್ಕ, ರಂಗನಾಥರಾಯ ಇವರು ವರಸೆಯಾಗಿ ಎರಡನೆಯ ಹೆಂಡತಿಯ ಮುದಿಗಂಡ, ಮುದಿಗಂಡನ ಎರಡನೆಯ ಹೆಂಡತಿ, ಹೊಂದದಿರುವ ಗಂಡಹೆಂಡಂದಿರ ನಡುವೆ ಕಾಲಿಟ್ಟ ನೀತಿಗೇಡಿ ಯುವಕ ಇಷ್ಟು ಮಾತ್ರವಲ್ಲದೆ ಇವರಲ್ಲಿ ಯಾವ ವಿಶಿಷ್ಟತೆಯೂ ಇಲ್ಲ. ಇರಲಿ. ನಮ್ಮ ಸರಸಕ್ಕನು ಹುಟ್ಟಾ ಹಳ್ಳಿಯವಳು. ಬೊಂಬಾಯಿಗೆ ವಾಸಕ್ಕೆ ಬಂದಳು. ಕಲಿತವಳಲ್ಲ. ಅನುಭವಿಯಲ್ಲ. ಈ ಹುಡುಗಿ ಪ್ರೌಢ ವ್ಯಾಖ್ಯಾನ ಮಾಡಬಲ್ಲಳು ಹೇಗೆ ? ನೀತಿಬೋಧೆಯೇ ಹೆಗ್ಗುರುತಾದ ಲೇಖಕರು ಈ ಅಸಂಬದ್ಧವನ್ನು ಗಮನಿಸುವಂತಿಲ್ಲ.

ನೀತಿಬೋಧೆ ಗುರಿಯಾದ ಮೇಲೆ ಸ್ಪಷ್ಟವಾದ ನಿಲುಕಡೆಯೊಂದು ತೋರಿ ಬರಬೇಕು. ಈಡಿಲ್ಲದ ಮದುವೆಯನ್ನು ಕುರಿತುದಲ್ಲವೆ ಈ ಕಾದಂಬರಿ ? ಈ ರೂಢಿ ನಮ್ಮ ಸಮಾಜದ ಕುಂದುಗಳಲ್ಲೊಂದು ದಿಟ. ಆದರೆ ಕಾದಂಬರಿಯಲ್ಲಿ ಈ ಕುಂದು ಎದ್ದು ಕಾಣಬೇಕಾದರೆ ಅವುದೊಂದು ವಿಷಮವಿವಾಹದ ಅನರ್ಥಗಳು ಕಥಾವಸ್ತುವಾಗಬೇಕು. ಅದು ಬಿಟ್ಟು ಅಂತಹ ಮದುವೆ ಕಟ್ಟದೆಂದು, ಸಾರಿಕೊಂಡು ಒಂದುಕಡೆಗೆ ಕಾರಣಾಂತರದಿಂದ ಚಿಕ್ಕ ವಯಸ್ಸಿನ ಎರಡನೆ ಹೆಂಡತಿ ತನ್ನ ಗಂಡ ಎಷ್ಟೆ ಮುದಿಯನಿರಲಿ ಆತನೇ ತನ್ನ ಸುಖದ ಸಾರಸರ್ವಸ್ವವೆಂದರಿತು ಆತನೊಡನೆ ಸಮಾಧಾನದಿಂದ ಬಾಳುವೆ ಮಾಡಿದಳೆಂದರೆ ಹೇಗೆ ? ಪತಿಯು ಪರದೈವವೇ ಹೌದು. ಇದು ಮೇಲ್ತರದ ಭಾವನೆ. ಮಾತ್ರ ಈ ಭಾವನೆಯೇ ಕಡೆಮಾತಾದ ಕಾದಂಬರಿಯಲ್ಲಿ ಈಡಿಲಿ ಮದುವೆಯ ಅಸಂಗತವನ್ನು ಮುಂದು ಮಾಡಲು ಎಡೆಯಿರದು.

ಸಂಬದ್ಧಾಸಂಬದ್ಧಗಳ ಮಾತು ಬಂದಾಗ ಈ ಕಾದಂಬರಿಯ ಕಟ್ಟಕಡೆಯ ಸನ್ನಿವೇಶವನ್ನು ಗಮನಿಸದಿರಲಾಗದು. ಹೊಸ ಕಾಮದೇವನೊಂದಿಗೆ ಸುಖ ಸಾಮ್ರಾಜ್ಯವನುಭವಿಸಲು ಅನುವಾಗಿ ಸರಸಕ್ಕ ದವಾಖಾನೆಯಿಂದ ಮನೆಯ ಹಾದಿ ಹಿಡಿದಿದಾಳೆ. ಆಗ ಮರೆಯಲಿದ್ದ ಆ ಪತಿದೇವತೆ ಏನು ಮಾಡಿತು ಗೊತ್ತೆ ? 'ಅಷ್ಟರಲ್ಲಿ ಒಂದು ವ್ಯಕ್ತಿಯು ಅವಳನ್ನು ನಡುವೇ ಅಡ್ಡಗಟ್ಟಿ ಅವಳ ಕಾಲುಗಳನ್ನು ಗಟ್ಟಿಯಾಗಿ ಹಿಡಕೊಂಡಿತು. ಅವಳೆದುರಿಗೆ ಸಾಷ್ಟಾಂಗ ನಮಸ್ಕಾರವನ್ನು ಹಾಕಿತು. ಆಗ ಸರಸಕ್ಕನು ಮೆಟ್ಟಿಬಿದ್ದು ತುಸ ಹಿಂದಕ್ಕೆ ಸರಿಯಲು ಆ ವ್ಯಕ್ತಿಯು ಮತ್ತೊಮ್ಮೆ ಅವಳ ಕಾಲಿಗೆರಗುತ್ತ—ಸರಸ್ವತೀ, ವಾಗ್ದೇವತೆಯಾದ ಪ್ರತ್ಯಕ್ಷ ಸರಸ್ವತೀ, ನಿನ್ನ ಪತಿಯಾದ ಈ ನರಸನಗೌಡನು ನಿನಗೆ ನಮಸ್ಕಾರ ಮಾಡುತ್ತಾನೆ ಎಂದನು. (ಎಂದಿತು.)

ಮತ್ತೆ 'ಸರಸ್ವತೀ, ನಾನು ಮತ್ತಾರೂ ಇರದೆ ಅಧಮಾಧಮನಾದ ನಿನ್ನ ಗಂಡನು. ನಿನ್ನಂಥ ಸೂಜ್ಞ ಹಾಗೂ ತರುಣ ಯುವತಿಯನ್ನು ಮೋಸದಿಂದ ಲಗ್ನವಾದ, ಈ ದಿನಹೋದ, ಗಡ್ಡ ಮೀಸೆಗಳಿಗೆ ಕಲಪನ್ನು ತೊಡೆತೊಡೆದು ಹರೆಯದವನಂತೆ ಕಾಣಬೇಕೆಂಬ ಬಯಕೆಯುಳ್ಳ, ಎರಡನೇ ಹೆಂಡತಿಯ ಗಂಡನಾದ ನರಸನಗೌಡನು. ಪ್ರಿಯೇ ನಿನ್ನೊಡನೆ ಲಗ್ನವಾದ ಬಗ್ಗೆ ಈಗ ನನಗೊಳ್ಳೇ ಪಶ್ಚಾತ್ತಾಪವಾಗುತ್ತಲಿದೆ.' ಮುಂದಿನ ಸುಖಸಾಮ್ರಾಜ್ಯಕ್ಕೆ ಬಲು ಯೋಗ್ಯವಾದ ಪಟ್ಟಬಂಧ !

ಇಂತಹ ಪ್ರಸಂಗದಲ್ಲಿ ಪ್ರಾಯಶಃ ಹೇಗೆ ನಡೆಯಬಹುದು ? ಗಂಡ ರಸಿಕನಾದರೆ ಹೆಂಡತಿಯ ಮೇಲೆ ಅಭಿಮಾನ ಉಕ್ಕಿ ಬಂದು ಆ ಭರದಲ್ಲಿ ಹೆಂಡತಿಯನ್ನು ಬಲದಿಂದ ಬಾಚಿ ತಬ್ಬಿಕೊಳ್ಳಬಹುದು. ನಮ್ಮ ಗೌಡನಂತಹ ಇಳಿವಯಸಿನ ಅರಸಿಕನು ಹೆಂಡತಿಯ ಬಗ್ಗೆ ಮನದಲ್ಲೇ ಹೆಮ್ಮೆಗೊಳ್ಳುತ ಬಂದೂ ಕಾಣದವನಂತೆ ಗುಟ್ಟಾಗಿ



CC-0. Jangamwadi Math Collection. Digitized by eGangotri

ಮನೆಗೆ ಹೋಗಿ ಮುಂದಿನ ಸುಖವನ್ನು ಇದಿರು ನೋಡು ತಿರಬಹುದು. ಇದು ಬಿಟ್ಟು ಹೆಂಡತಿಗೆ ಸಾಷ್ಟಾಂಗ ಪ್ರಣಾಮ ಮಾಡುವುದೆಂದರೆ ಎಷ್ಟು ಅನುಚಿತ!

ಈ ಕಾದಂಬರಿಯಲ್ಲಿ ಪಾತ್ರರಚನೆಯ ಪ್ರಯತ್ನವಿಲ್ಲ ವೆಂದೆನಷ್ಟೆ. ಇನ್ನು ಕತೆಯೊ! ಕತೆಯಲ್ಲಿ ರಂಗನಾಥನು ಸರಸಕ್ಕನ ಮನೆಗೆ ಆಗಿಂದಾಗ್ಗೆ ಬಂದು ಕೊಂಚ ಹೊತ್ತಿದ್ದು 'ಟೀ' ಕುಡಿದು ಹೋಗುವುದು, ಅವರಿಬ್ಬರೂ ಮೋಟಾರಲ್ಲಿ ಕೂತು ತಾಜಮಹಾಲ್ ಹೋಟ ಲಿಗೆ ಹೋಗಿ ಅಲ್ಲಿ ಷರಬತ್ತು ಕುಡಿದು ಆ ಮೇಲೆ ನಾಟ ಕಕ್ಕೆ ಹೋಗುವುದು, ಕಡೆಯಲ್ಲಿ ಮೂವರು ರಂಗನಾಥನ ದವಾಖಾನೆಯಲ್ಲಿ ಸೇರುವುದು ಇಷ್ಟೇ ನಡವಳಿಕೆ. ಕತೆ ಹಿತವಾಗಬೇಕಾದರೆ ಮುಂಬರಿವಿರಬೇಕು. ಒಂದಷ್ಟು ಸನ್ನಿವೇಶಗಳೊದಗಬೇಕು. ಒಂದಷ್ಟು ಘಟನೆ ನಡೆಯ ಬೇಕು. ಎಲ್ಲವೂ ಒಂದಕೊಂದು ಹೊಂದಿಕೊಂಡಿರಬೇಕು. ಘಟನೆಗಳಿಗೆ ಪ್ರಧಾನಪಾತ್ರಗಳ ಸ್ವಭಾವ ಮತ್ತು ಅವರ ಸುತ್ತುಮುತ್ತಲ ಆವರಣವು ಕಾರಣವಾಗಬೇಕು. ಅವು ಗಳಿಂದ ಪಾತ್ರಗಳ ವ್ಯಕ್ತಿತ್ವವು ಹೊರಬೀಳಬೇಕು.

ಇಲ್ಲಿ ಇದೊಂದೂ ಇಲ್ಲ. ಕೊಂಚಮಟ್ಟಿಗೆ ಇದಕ್ಕೆ ವಿಪರೀತವಾಗಿಯೇ ಉಂಟು. ದವಾಖಾನೆಯಲ್ಲಿ ರಂಗ ನಾಥನು ಸರಸತ್ತಿಗೆಗೆ ಎದುರಾದಾಗ, ಇನ್ನೇನು ತನ್ನ ಮನದಾಸೆಯನ್ನು ಪೂರೈಸುವನೆಂದೇ ನಮ್ಮ ನಿರೀಕ್ಷೆ. ಇದು ಬಿಟ್ಟು ಸರಸಕ್ಕನಲ್ಲಿ ಬದಲಾವಣೆಯುಂಟಾಗಿದೆ ಯೆಂದೂ, ಆಕೆ ಧರ್ಮೋಪದೇಶ ಮಾಡಿ ಡಾಕ್ಟರನ್ನು ನರಕದ ಹಾದಿಯಿಂದ ಮರಳಿಸುವಳೆಂದೂ ಕನಸಲ್ಲೂ ನಾವು ಎಣಿಸುವಂತಿಲ್ಲ. ಮುದಿಗಂಡನಿಗೆ ಹೇಸಿದ ಚಿತ್ತ ಸಂಯಮವಿಲ್ಲದ ಸರಸಕ್ಕನೂ ಆಕೆಯನ್ನು ತನ್ನ ಅಭಿ ಲಾಷೆಯ ಬಲೆಯಲ್ಲಿ ಸಿಕ್ಕಿಸ ಹವಣಿಸಿದ ರಂಗನಾಥನೂ ಒಂದೇ ಮಟ್ಟದವರೇ. ಇಬ್ಬರೂ ಒಂದೇ ಸಡಿಗೆಯಿಂದ ನರಕದ ಹಾದಿ ಮೆಟ್ಟುತ್ತಿದ್ದರು.

ಕಾದಂಬರಿಯ ವ್ಯಕ್ತಿಗಳ ನಡೆ ಆರೊಬ್ಬರು ನೆನಸಿದು ದಕ್ಕೆ ವಿಪರೀತವಾಗಿ ಸಾಗುವುದಿದ್ದರೆ, ಮಾರ್ಪಾಡಿನ ಕಾರಣದೊಂದಿಗೆ ಓದುಗರನ್ನು ಕೊಂಚಮಟ್ಟಿಗಾದರೂ ಒಯ್ಯಬೇಕು. ಹಾಗಲ್ಲದೆ ಲೇಖಕನು ಉದ್ದೇಶಸಾಧನೆ ಗೆಂದು ಸಹಜವಾಗಿ ನಡೆಯಬಹುದಾದ, ಊಹಿಸಬಹು ದಾದ ರೀತಿಗೆ ವಿರೋಧವಾಗಿ ನಡೆಯಿಸಿದರೆ ಕತೆಯ... ಸಮಂಜಸವೆಲ್ಲಿರಬೇಕು!

ಕಥಾಭಾಗವು ಬಲು ಕೊಂಚವೆಂದು ಕಂಡ... ಜಾಣನಾದ ಕಾದಂಬರಿಕಾರನು ವ್ಯಕ್ತಿಗಳ ಸ್ವಭಾವಕ್ಕೆ ಒಪ್ಪುವಂತೆ, ಪಾತ್ರಪೋಷಣೆಗೆ ಅನುವಾಗುವಂತೆ, ... ಗುರಿಗೆ ಹೊಂದುವಂತೆ ವಸ್ತುವನ್ನು ಹಿಗ್ಗಿಸಿ ಕತೆಗೆ ... ಕೊಡುತಿದ್ದನು. ಈ ಕತೆಯಲ್ಲೊ ಉಪ್ಪಿಲ್ಲ, ಹುಳಿ... ಕಾರವಿಲ್ಲ. ಸಣ್ಣ ಕತೆಗಾರನಾಗಿದ್ದರೆ ಮೊದಲು ... ನ್ಯಾಸವನೆಲ್ಲ ಕತರಾಯಿಸಿ ಬಿಡುತಿದ್ದ. ಆ ಮೇಲೆ ಕೊಂಚ ಅವಕಾಶದಲ್ಲಿಯೇ ಹೆಚ್ಚು ರಸತುಂಬುವ ... ಗಡೆ ಮಾಡುತಿದ್ದ. ಪ್ರಾಯಶಃ ವ್ಯಕ್ತಿಗಳ ಸ್ವಭಾವ ವಿಶೇಷವನ್ನು ಸ್ವಲ್ಪದರಲ್ಲಿಯೇ ಸ್ಪಷ್ಟಪಡಿಸಿ, ... ದಿಂದ ಸರಸಕ್ಕನ ಮನಸು ಬದಲಾಯಿಸುವುದಕೆ ... ರೋಷದಿಂದ ಮುಂದುಗಾಣದ ಗೌಡನಿಂದ ... ರೊಂದು ಅನಾಹುತವನ್ನು ಮಾಡಿಸಿ ಉಪನ್ಯಾಸ... ನೀತಿಬೋಧೆಗೆ ಎಡೆಗೊಡುತಿದ್ದ. ಉದ್ದವಾದ ಕಾದಂ... ಯಲ್ಲೂ ಇದೇ ಸರಣಿ ಹಿಡಿದು ವಿಷಮವಿವಾಹದ ... ಸನ್ನು ಎತ್ತಿ ತೋರಿಸುವುದಕ್ಕೆ ಅವಕಾಶವಿಲ್ಲವೆ...

ಈಗ ಮತ್ತೆ ಹಿಂದಕ್ಕೆ ಹೋಗೋಣ. ಮೇಲೆ ... ತೆಗೆದುವು ಈಗ ಹೊರಬೀಳುತಿರುವ ಕನ್ನಡ ಕಾದಂ... ಗಳ ಸಾಮಾನ್ಯವಾದ ಕೆಲವು ಕೊರತೆಗಳು. ಇವುಗಳ... ಗಮನಿಸಲು "ಎರಡನೆ ಹೆಂಡತಿ" ಬಂದು ನೆನ... ನೀಚ ಇನಾಮದಾರ (ಗೋಪಾಳ ನಾರಾಯಣ ಕ...) ಚಿಮಣಾಜಿ ಆಪ್ಪಾ (ರಾ. ತ್ರ್ಯ. ಕರ್ಪೂರ), ಅಲ್ಲಾ... ಅಕಬರ (ಕರ್ಜಗಿ), ತಾಯಿನಾಡು (ಭಿ. ಪ. ಕಾ...) ಹೀಗೆ ಒಂದೊಂದಾಗಿ ನೋಡಲಾಯಿತು. ಎಲ್ಲದ... ಪಾಡೂ ಇಷ್ಟೆ. ಕೊಂಚ ಎಡಗೈ ಬಲಗೈ. ಈಗಿನ ... ಹುರುಪಿನ ಕನ್ನಡ ಸಾಹಿತ್ಯದಲ್ಲಿ ಒಳ್ಳೊಳ್ಳೆ ಕವ... ಗಳುಂಟು. ಸುಮಾರಾದ ನಾಟಕಗಳುಂಟು. ವಿಶ್ವಸಾಹಿತ್ಯ... ದಲ್ಲಿ ಸ್ಥಾನಪಡೆದು ಕನ್ನಡ ತಾಯಿಗೆ ಕೀರ್ತಿತರು... ಸಣ್ಣ ಕತೆಗಳುಂಟು. ಬೇರೆ ಮಾದರಿಯ ಗದ್ಯವೂ... ಆದರೆ ಕೊನೆಯ ಪಕ್ಷ ಮೂರು ನಾಲ್ಕನೆಯ ದರ್ಜೆಯಲ್ಲಿ ಸೇರಿಸಬಹುದಾದ ಕಾದಂಬರಿಯಿಲ್ಲ. ಎಲ್ಲವೂ ... ಒಂದರಲ್ಲೂ ಆವಬಗೆಯ ಸೊಬಗೂ ಇಲ್ಲ. ಅವುದನ್ನು ... ಓದಬೇಕೆನಿಸುವುದಿಲ್ಲ. ಅಪ್ಪಿತಪ್ಪಿ ಓದಿದಲ್ಲಿ ಮನಸ್ಸಿ...

CC-0. Jangamwadi Math Collection. Digitized by eGangotri

ಬೇಸರವಾಗಿ ಕಾಲ ವ್ಯರ್ಥವಾಯಿತೆನಿಸದಿರುವುದಿಲ್ಲ. ಹೀಗೇಕೆ?

ಕಾದಂಬರಿಯ ಕ್ಷೇತ್ರ ಬಲು ವಿಶಾಲವಾದುದು. ಅದರಲ್ಲಿ ಹಲವುಬಗೆಯ ಸನ್ನಿವೇಶಗಳಿರಬೇಕು. ಹಲವು ಜಾತಿಯ ವ್ಯಕ್ತಿಗಳು ಆಡ್ಡಾಡಬೇಕು. ಅಂತೇ ಕಾದಂಬರೀ ಲೇಖಕನಿಗೆ ಪ್ರಪಂಚದ ಅನುಭವ ತುಂಬ ಬೇಕು. ಕವಿಯ ಮನಸಿನ ಆವುದೊಂದು ಸಿಲುಕಡೆಯೇ ಗೀತೆಯ ವಸ್ತುವಾಗಬಹುದು. ಆವುದೊಂದು ಮನದಟ್ಟುವ ಕಿರಿಯ ಅನುಭವದಿಂದ ಸಣ್ಣ ಕತೆಯನೊಂದ ಬರೆಯಬಹುದು. ಆದರೆ ಕಾದಂಬರಿ ಬರೆಯಬೇಕಾದರೆ ಮೊದಲು ಸುತ್ತುಮುತ್ತಲ ಪ್ರಪಂಚವನ್ನು ಕಣ್ಣರಳಿಸಿ ನೋಡಿರಬೇಕು. ಬಾಳ ಸಂದಿಗೊಂದಿಗಳಲ್ಲಿ ಸುಳಿದಾಡಿರಬೇಕು. ಮಾನವ ಮನೋಧರ್ಮಗಳ ಬಗೆಬಗೆಯ ತಾಕಲಾಟಗಳನ್ನು ಅರಿತಿರಬೇಕು. ಕಾದಂಬರಿಯ ವಸ್ತುವನ್ನು ಹವಣಿಸಿಕೊಳ್ಳುವುದರಲ್ಲಿ ನಯಗಾರಿಕೆ ಇರಬೇಕು. ಈ ಸಾಧನಸಂಪತ್ತಿಲ್ಲದೆ, ಕಾದಂಬರೀಸಾಹಿತ್ಯವು ಜನತೆಗೆ ಪ್ರಿಯವೆಂದು ಓಡಿಸಿದಂತೆ ಲೇಖಣಿ ಓಡುವುದೆಂದು ಬರೆಯುತಹೋದರೆ ದೊರೆಯುವದೇನು ?—ಕಸದ ಕುಪ್ಪೆ—ಬೂದಿಯ ತಿಪ್ಪೆ.

ಕೆಲವರೆನ್ನಬಹುದು—ನಮ್ಮಲ್ಲಿ ತುಂಬ ಜೀವನವಿಲ್ಲ. ನಮ್ಮ ಬಾಳು ಮಂಕು. ನಮ್ಮ ದೃಷ್ಟಿಕೋನವು ಆಶಾಜನಕವಾಗಿಲ್ಲ. ದರಿದ್ರನಾರಾಯಣನು ತಾಂಡವವಾಡುತಿರಲು ಸುಖಶಾಂತಿ ಉತ್ಸಾಹಗಳು ಎಲ್ಲಿ ಬರಬೇಕು ? ಕ್ಷಾತ್ರತೇಜವಿಲ್ಲ. ಸುಖವಿಲಾಸವಿಲ್ಲ. ಧರ್ಮನಿಷ್ಠೆಯವಿಲ್ಲ. ಇನ್ನು ಒಳ್ಳೆಯ ಕಾದಂಬರಿಗೆ ವಸ್ತುವು ಹೇರಳವಾಗಿ ಹೇಗೆ ದೊರೆಯಬೇಕು ?—ಒಂದು ಮಾತಿಗೆ ನಮ್ಮ ಇರವು ಅಷ್ಟು ತೀರ ಕೀಳ್ಮಟ್ಟಲಲ್ಲಿಲ್ಲ. ಈಗ ಎಲ್ಲ ಕಡೆಯೂ ಹೊಸ ಹುರುಪು ತಲೆದೋರುತಿದೆ. ನಮ್ಮ ಇರವಿನ ಬಗ್ಗೆ ಅರಿವು ಮೂಡಿ ಮುಂಬರಿಯಬೇಕೆಂಬ ಆಸೆ ತಲೆಹಾಕುತಿದೆ. ಈ ಆಸೆಯೇ ಸಾಹಿತ್ಯದ ವಸ್ತುವಾಗಬಹುದು. ನಮ್ಮ ಇರವನ್ನು ಮೇಲ್ಗೊಳಿಸುವ ಉಜ್ಜುಗಕೆ, ಮುಂದಾಳುಗಳ ಆಶೋತ್ತರಗಳನ್ನು ಬಿಂಬಿಸುವ ಕಾದಂಬರಿಗಳು ನೆರವಾಗಬಹುದು. ಅಲ್ಲದೆ ನಮ್ಮ ಇರವು ಏನೇ ಇರಲಿ, ಮಾನವಮನೋಧರ್ಮಗಳು ಎಂದೆಂದೂ ಸಾಹಿತ್ಯಕ್ಕೆ ವಸ್ತುವೇ. ಕಣ್ತೆರೆದು ನೋಡಿ ಮರ್ಮಹಿಡಿಯಬಲ್ಲವರಿಗೆ ಕಾದಂಬರಿಗೆ ಬೇಕಾದ ಸಾಧನ ಸಾಮಗ್ರಿಗಳು ದೊರೆತೇ ದೊರೆಯುವವು.

ಇದೆಲ್ಲ ಬಲುಮಟ್ಟಿಗೆ ಕಲಾದೃಷ್ಟಿಯಿಂದ ಆಂದಮಾತು. ಕಾದಂಬರೀ ಸಾಹಿತ್ಯದಲ್ಲಿ ಗೀತೆ ಸಣ್ಣಕತೆಗಳಲ್ಲಿನಂತೆ ದಟ್ಟವಾದ ರಸದೊಸರನ್ನು ಬಯಸುವುದಿಲ್ಲ. ಆದರೂ ಒಳ್ಳೆಯ ಸಾಹಿತ್ಯದ ಪರಿಚಯವಿರುವವನು ಕಾದಂಬರಿಯನ್ನೂ ಕಲಾದೃಷ್ಟಿಯಿಂದ ನೋಡುತ್ತಾನೆ. ಇನ್ನು ಸಾಮಾನ್ಯ ವಾಚಕನೊ ? ಆವುದಾದರೊಂದು ಕತೆಯನ್ನು ಓದುತ್ತಾ ವಿನೋದವಾಗಿ ಕೊಂಚಕಾಲಕಳೆಯಬೇಕೆಂದು ಅವನ ಬಯಕೆ. ಒಬ್ಬನಿಗೆ ಶೃಂಗಾರದಲ್ಲಿ ಇಷ್ಟ. ಒಬ್ಬನಿಗೆ ವೀರರಸದಲ್ಲಿ. ಮತ್ತೊಬ್ಬನಿಗೆ ಪತ್ತೇದಾರಿ ಕತೆ ಬೇಕು. ಅಂತೂ ಇವರೆಲ್ಲರಿಗೂ ಒಳ್ಳೆ ಕತೆ ಬೇಕು. ಓದುತ್ತ ಕುಳಿತರೆ ಕಾಲದ ನಡೆಯ ಪರಿವೆ ಇಲ್ಲದೆ, ಕತೆಯಲ್ಲಿ ಮುಂದೇನು ಮುಂದೇನು ಎಂಬ ಆತುರವುಂಟಾಗಬೇಕು. ಹೀಗೆ ಒಳ್ಳೆಯ ಸನ್ನಿವೇಶಗಳನ್ನು ಹೊಂದಿಸಿಕೊಂಡು ಒಳ್ಳೆಯ ಕತೆ ಬರೆವುದಕ್ಕೂ ಎಷ್ಟೋ ಜಾಣ್ಮೆ ಬೇಕು. ಊಹೆ ಬೇಕು. ಕಲ್ಪನಾಶಕ್ತಿ ಬೇಕು. ಇಂತಹ ಕಾದಂಬರಿಗಳೂ ನಮ್ಮಲ್ಲಿಲ್ಲ. ಓದುಗರು ಇರುವುದನ್ನೇ ಓದಿ ಹೇಗೋ ಕಾಲ ಹಾಕುತಿರುವಂತೆ ಕಾಣುತ್ತದೆ. ಇಂಗ್ಲಿಷಿನಲ್ಲಿ (ನಾನು ಕಲಿತಿರುವ ಪಾಶ್ಚಾತ್ಯ ಭಾಷೆ ಇದೊಂದೆ) ಈ ಬಗೆಯ ಲಘುಕಾದಂಬರಿಗಳು ತಂಡೋಪತಂಡವಾಗಿ ಹೊರಬೀಳುತಿವೆ. ಇವು ಸಾಹಿತ್ಯದ ಮೇಲ್ಮೆಟ್ಟಲಿಗೆ ಏರದಿದ್ದರೂ ಸಾಮಾನ್ಯ ವಾಚಕರ ಬಯಕೆ ತಣಿಸಿ ತಮ್ಮ ಇರವನ್ನು ಸಾರ್ಥಮಾಡಿಕೊಳ್ಳುತ್ತವೆ.

CC-0. Jangamwadi Math Collection. Digitized by eGangotri

# ಸಾವೂ ಸೈನಿಕನೂ*

ಲೇಖಕರು—ಶ್ರೀ ಜಿ. ಪಿ. ರಾಜರತ್ನಂ ಎಂ. ಎ. ಮೈಸೂರು

ಹಿಂದೆ ಇಪ್ಪತ್ತೈದು ವರುಷಗಳು ಅವಿಚ್ಛಿನ್ನವಾಗಿ ಚಾಕರಿ ಮಾಡಿಯೂ ಸೈನ್ಯದಿಂದ ನಿವೃತ್ತನಾಗದ ಸೈನಿಕನೊಬ್ಬನಿದ್ದ.

ಅವನು ಹಾಗೆಯೇ ಎಲ್ಲವನ್ನೂ ಯೋಚಿಸಿ ತನ್ನ ಅದೃಷ್ಟಕ್ಕೆ ಆಶ್ಚರ್ಯಪಡುತ್ತಿದ್ದ.

'ಏನಿದು ಹುಡುಗಾಟ? ದೇವರನ್ನೂ ತಮ್ಮ ಮಹಾ ಝಾರನನ್ನೂ ಇಪ್ಪತ್ತೈದು ವರುಷಗಳು ಓಲಗಿಸಿದ್ದೇನೆ; ನಾನೆಂದೂ ತಪ್ಪುಮಾಡಿಲ್ಲ—ನನ್ನ ಚರಿತ್ರೆಯು ಅಕಲಂಕವಾಗಿದೆ—ಆದರೂ ನನ್ನನ್ನು ನಿವೃತ್ತಿಮಾಡರು. ಕೈಲಾದಷ್ಟು ದೂರ ಓಡಿಹೋಗೋಣ ಎನ್ನಿಸುತ್ತದೆ.'

ಹೀಗೆ ಯೋಚಿಸಿ ಯೋಚಿಸಿ ಕೊನೆಗೆ ಓಡಿಯೇ ಹೋದ. ದಿನವೆಲ್ಲ ನಡೆದು, ಮಾರನೆಯ ದಿನವಲ್ಲ, ಮೂರನೆಯ ದಿನ ದೇವರನ್ನು ಕಂಡ.

ದೇವರು ಅವನನ್ನು ಕೇಳಿದ;

'ಎಲ್ಲಿಗೆ ಹೋಗುತ್ತಿರುವೆ? ಕೆಲಸದ ಮೇಲೆಯೊ?'

'ದೇವರೆ! ನಾನು ಸತ್ಯ ಶ್ರದ್ಧೆಗಳಿಂದ ಇಪ್ಪತ್ತೈದು ವರುಷಗಳು ಕೆಲಸ ಮಾಡಿದ್ದೇನೆ. ಅವರು ನನ್ನನ್ನು ನಿವೃತ್ತಿಮಾಡಲಿಲ್ಲ. ಆದುದರಿಂದ ಕೈಲಾದಷ್ಟು ದೂರ ಓಡಿಹೋಗಬೇಕೆಂದಿದ್ದೇನೆ.'

'ಸರಿ! ನೀನು ಇಪ್ಪತ್ತೈದು ವರುಷಗಳು ಸತ್ಯಶ್ರದ್ಧೆಗಳಿಂದ ಕೆಲಸ ಮಾಡಿರುವ ಸಲುವು, ನೀನು ಸ್ವರ್ಗಕ್ಕೆ ಹೋಗಬಹುದು.'

ಸೈನಿಕನು ಸ್ವರ್ಗಕ್ಕೆ ಹೋಗಿ ಅಲ್ಲಿಯ ಶಾಶ್ವತವಾದ ಸುಖವನ್ನು ಕಂಡು 'ಇದೀಗ ಬದುಕು' ಎಂದುಕೊಂಡನು. ಆದರೆ ಕೊಂಚ ಆ ಸ್ಥಳ ಬಳಕೆಯಾಗಲು ಅಲ್ಲಿಯ ಹಿರಿಯರ ಬಳಿ ಸಾರಿ

'ಇಲ್ಲಿ ತಂಭಾಕನ್ನು ಯಾರೂ ಮಾರುವುದಿಲ್ಲವೆ!' ಎಂದನು.

'ಇಲ್ಲೆಂತಹ ತಂಬಾಕು ಸಿಗುತ್ತೆ? ಇದು ಸ್ವರ್ಗ... ಸ್ವರ್ಗ ಇದು— ಸ್ವರ್ಗ!'

ಸೈನಿಕನು ಸುಮ್ಮನಾದ.

ಸುಮ್ಮನೆ ಸುತ್ತಿಸುತ್ತಿ ಪುನಃ ಅವರ ಹತ್ತಿರ ಬಂ...

'ಇಲ್ಲಿ ಮದ್ಯವನ್ನು ಮಾರುವವರಾರು?' ಎಂದ...

'ಏನು ಇನ್ನೂ ಸೈನ್ಯದಲ್ಲಿ ಇರುವೆಯೆಂದಿ... ಯೇನೊ! ಇಲ್ಲೆಲ್ಲಿ ಬರಬೇಕು ಮದ್ಯ?'

'ತಂಬಾಕು ಮದ್ಯ ಇಲ್ಲದ ಇದೆಂತಹ ಸ್ವರ್ಗ!' ಎಂದು ಬಿಟ್ಟದ್ದು ಬಿಟ್ಟಂತೆ ಸ್ವರ್ಗಕ್ಕೆ ಕೈಮುಗಿದು ಹೊರಟ.

ಭೂಮಿಯಲ್ಲಿ ಸುತ್ತಿ ಸುತ್ತಿ, ಪುನಃ ದೇವರನ್ನು ಕಂಡು 'ಎಂಥಾ ಸ್ವರ್ಗಕ್ಕೆ ಕಳುಹಿಸಿದೆಯೊ ನನ್ನ! ತಂಬಾಕಿಲ್ಲ, ಮದ್ಯವಿಲ್ಲ!' ಎಂದನು.

ದೇವರು 'ಹಾಗಿದ್ದರೆ ಎಡಕ್ಕೆ ತಿರುಗು. ಅಲ್ಲಿ ನಿನಗೆ ಎಲ್ಲಾ ಸಿಕ್ಕುತ್ತೆ' ಎಂದ.

ಸೈನಿಕನು ಎಡಕ್ಕೆ ತಿರುಗಿ ದಾರಿಯುದ್ದಕ್ಕೂ ನಡೆದ. ಅಲ್ಲಿ ಓಡುತ್ತಿದ್ದ ಹೊಲಸು ಪ್ರೇತವೊಂದು 'ಏನು ಹುಡುಕುತ್ತಿರುವೆ, ಸೈನಿಕ?' ಎಂದಿತು.

ಸೈನಿಕನು ಎಲ್ಲಿಯಾದರೂ ಒಂದು ಕಡೆ ಕುಳಿತು ಮಾತಾಡೋಣ' ಎಂದ.

ಸೈನಿಕನು ನರಕಕ್ಕೆ ಒಯ್ಯಲ್ಪಟ್ಟನು.

ಅವನು ಆ ಪ್ರೇತವನ್ನು 'ಇಲ್ಲಿ ತಂಬಾಕಿದೆಯೆ?' ಎಂದ.

'ಒಹೊ! ಇದೆ.'

---

(* ರಷ್ಯಾ ದೇಶದ ಅಫನಾಸಿಯಾಫನ Death and the soldier ಎಂಬ ಕತೆಯ ಸರಳಾನುವಾದ.)

CC-0. Jangamwadi Math Collection. Digitized by eGangotri

'ಮದ್ಯ?'

'ಇದೂವೆ.'

'ಹಾಗಿದ್ದರೆ ಕೊಂಚಕೊಂಚ ಕೊಡು.' ಹೊಲಸು ಪ್ರೇತಗಳು ಅವನಿಗೆ ಒಂದು ಕೊಳಬೆ ತಂಬಾಕು–ಮದ್ಯ ಗಳನ್ನು ಕೊಟ್ಟುವು.

ಸೈನಿಕನು ಕುಡಿದು ಸುತ್ತ ತಿರುಗಾಡಿ, ತಂಬಾಕು ಸೇವಿಸಿ, ಹರ್ಷದಲ್ಲಿ ಮುಳುಗಿದ.

'ಆ! ಸ್ವರ್ಗ ಎಂದರೆ ಇದೀಗ!'

ಆದರೆ ಕೊಂಚ ತಿರುಗಾಡುವ ವೇಳೆಗೆ, ಅವನ ಸುತ್ತ ಮುತ್ತ ಬೇಕಾದಷ್ಟು ಪಿಶಾಚಿಗಳು ಸುತ್ತಿಕೊಂಡು, ಅವನಿಗೆ ಅಸಹ್ಯವಾಯಿತು.

ಆದರೇನು ಮಾಡುವುದು! ಅವನಿಗೊಂದು ತಮಾಷೆ ಯಾದ ಯೋಚನೆ ಬಂದಿತು. ಒಂದು ಗಜಕಡ್ಡಿ ಮಾಡಿ ಕೊಂಡು ಅಳೆಯತೊಡಗಿದನು.

ಆಗ ಒಂದು ಪಿಶಾಚಿಯು ಅವನ ಬಳಿ ಬಂದು

'ಏನು ಮಾಡುತ್ತೀಯೆ, ಸೈನಿಕ?' ಎಂದಿತು.

'ನಿನಗೆ ಕುರುಡೆ? ಕಾಣುವುದಿಲ್ಲ? ದೇವಸ್ಥಾನ ಕಟ್ಟುತ್ತೇನೆ.'

ಪಿಶಾಚಿಯು ತನ್ನ ಅಜ್ಜನ ಬಳಿ ಹೋಗಿ 'ನೋಡಜ್ಜ! ಸೈನಿಕ ದೇವಾಲಯ ಕಟ್ಟುತ್ತಾನಂತೆ' ಎಂದಿತು.

ಅಜ್ಜನಿಗೆ ವಿಪರೀತ ಹೆದರಿಕೆಯಾಗಿ, ತತ್ಕ್ಷಣ ದೇವರ ಬಳಿಗೋಡಿದ.

'ದೇವರೇ, ಎಂತಹ ಸೈನಿಕನನ್ನು ಕಳುಹಿಸಿದೆ? ಅವನು ದೇವಾಲಯವನ್ನು ಕಟ್ಟುತ್ತಾನೆಯಂತೆ.'

'ಅದನ್ನು ಕಟ್ಟಿಕೊಂಡು ನನಗೇನು? ನೀನು ಅಂತಹವ ರನ್ನು ಏಕೆ ಸೇರಿಸುತ್ತೀಯೆ?'

'ಅಯ್ಯೋ! ನಾವು ಬಡಪಾಯಿಗಳು; ಏನು ಮಾಡ ಬೇಕು, ದೇವರೇ?'

'ಹೋಗಿ, ನಿನ್ನ ಮರಿಪಿಶಾಚಿಯೊಂದರ ಚರ್ಮವನ್ನು ಸುಲಿದು, ಅದರಿಂದ ತಂಬಟೆ ಮಾಡಿ ಬಡಿ· ಅವನು ಓಡಿ ಹೋಗುತ್ತಾನೆ.'

ಅಜ್ಜನು ಹಿಂದಿರುಗಿ ಹೋಗಿ, ಮರಿಪಿಶಾಚಿಯೊಂದನ್ನು ಹಿಡಿದು ಅದರ ಚರ್ಮದಿಂದ ತಂಬಟೆ ಮಾಡಿದ.

'ಹುಷಾರಾಗಿ ನೋಡಿಕೊಂಡಿದ್ದು, ಸೈನಿಕ ಹೋದ ಕ್ಷಣ, ಬಾಗಿಲು ಮುಚ್ಚಿ ಭದ್ರವಾಗಿ ಹಾಕಿಬಿಡಿ. ಅವನು ಪುನಃ ಒಳಗೆ ಬಂದಂತೆ ಹಾಕಿಬಿಡಿ' ಎಂದು ಪಿಶಾಚಿಗಳಿಗೆ ಹೇಳಿದ.

ಅಜ್ಜನು ಹೊರಗೆ ಹೋಗಿ ಬಡಿದ ತಂಬಟೆಯ ಟಾಂಟಾ ಮನ್ನು ಕೇಳಿ ಸೈನಿಕನು, ಹುಚ್ಚನಂತೆ ನರಕದಿಂದ ಓಡಿ ದನು. ದಾರಿಯಲ್ಲಿ ಪಿಶಾಚಿಗಳನ್ನು ಹೆದರಿಸುತ್ತ ಓಡಿ ದನು.

ಅವನು ಹೊರಗೆ ಹೋದಕ್ಷಣ, ಬಾಗಿಲನ್ನು ರಾಚಿ ಬಡಿದು ಪಿಶಾಚಿಗಳು ಭದ್ರಪಡಿಸಿದುವು.

ಸೈನಿಕನು ಸುತ್ತಲೂ ನೋಡಿದ. ಯಾರೂ ಕಾಣಿಸ ಲಿಲ್ಲ. ತಂಬಟೆಯು ಕೇಳಿಸಲಿಲ್ಲ. ಪುನಃ ಹೋಗಿ ಬಾಗಿ ಲನ್ನು ತಟ್ಟಿದ.

'ಬೇಗ ತೆಗೆಯಿರಿ. ಇಲ್ಲದಿದ್ದರೆ ಬಾಗಿಲು ಸೀಳುತ್ತೇನೆ' ಎಂದು ಗಟ್ಟಿಯಾಗಿ ಕೂಗಿದನು.

'ಆಗೋದಿಲ್ಲಣ್ಣಯ್ಯ! ಎಲ್ಲಿಗೆ ಬೇಕಾದರೂ ಹೋಗ ಬಹುದು ನೀನು. ಪುನಃ ನಿನ್ನನ್ನು ಒಳಕ್ಕೆ ಬಿಡುವುದಿಲ್ಲ. ನಿನಗಿಂತ ಗಟ್ಟಿ ಈಗ ನಾವು' ಎಂದು ಪಿಶಾಚಿಗಳೆಂದುವು.

ಸೈನಿಕನು ತಲೆ ಬಗ್ಗಿಸಿಕೊಂಡು ಕಣ್ಣು ಹೋದ ಕಡೆ ಹೊರಟ. ಹಾಗೆಯೇ ನಡೆದು ಪುನಃ ದೇವರನ್ನು ಕಂಡ.

'ಎಲ್ಲಿಗೆ ಹೊರಟೆ, ಸೈನಿಕ?'

'ಎಲ್ಲಿಗೋ ನನಗೆಯೆ ಗೊತ್ತಿಲ್ಲ.'

'ನಿನ್ನನ್ನು ಎಲ್ಲಿ ಹಾಕಲಯ್ಯಾ? ಸ್ವರ್ಗಕ್ಕೆ ಕಳುಹಿ ಸಿದೆ–ನಿನಗೆ ಸರಿ ಬೀಳಲಿಲ್ಲ. ನರಕಕ್ಕೆ ಕಳುಹಿಸಿದರೆ ಅಲ್ಲಿ ಏಗಲಿಲ್ಲ.'

'ದೇವರೆ, ನಿನ್ನ ಬಾಗಿಲಲ್ಲಿ ಪಹರೆ ನಿಲ್ಲುತ್ತೇನೆ'

'ಆಗಲಿ, ನಿಂತುಕೊ.'

ಹೀಗೆ ದೇವರು ಸೈನಿಕನನ್ನು ಪಹರೆ ನಿಲಿಸಿ

'ಯಾರನ್ನೂ ಒಳಗೆ ಬಿಡಬೇಡ' ಎಂದನು.

'ಅಪ್ಪಣೆ. ಹಳೆಯ ಸೈನಿಕನಿಗೆ ಏನೂ ಹೇಳಿ ಕೊಡ ಬೇಕಾಗಿಲ್ಲ.'

ಹೀಗೆ ಪಹರೆ ನಿಂತು ಯಾರನ್ನೂ ಒಳಗೆ ಬಿಡಲಿಲ್ಲ.

ಇಷ್ಟರಲ್ಲಿ ಮೃತ್ಯು ಬಂದನು.

'ಯಾರಲ್ಲಿ?'

'ಮೃತ್ಯು.'

'ಎಲ್ಲಿಗೆ?'

'ದೇವರಲ್ಲಿಗೆ'



CC-0. Jangamwadi Math Collection. Digitized by eGangotri

'ಏಕೆ?'

'ನಾನು ಇನ್ನಾರನ್ನು ಕೊಲ್ಲಬೇಕೆಂದು ಕೇಳುವುದಕ್ಕೆ.'

'ಒಂದು ಕ್ಷಣ ತಾಳು. ನಾನೇ ಕೇಳುತ್ತೇನೆ.'

'ದೇವರೇ, ಮೃತ್ಯು ಬಂದಿದ್ದಾನೆ. ಅವನು ಇನ್ನು ಯಾರನ್ನು ಕೊಲ್ಲಬೇಕು?'

'ಮುಂದಿನ ಮೂರು ವರ್ಷ ಬರಿಯ ಮುದುಕರನ್ನು ಕೊಲ್ಲಹೇಳು.' ಸೈನಿಕನು "ಎಂದರೆ ನನ್ನ ತಂದೆತಾಯಿಗಳು ಸಾಯುತ್ತಾರೆ. ಪಾಪ, ಮುದುಕರು" ಎಂದುಕೊಂಡನು.

ಮೃತ್ಯುವಿನ ಬಳಿ ಬಂದು

'ನೀನು ಕಾಡಿಗೆ ಹೋಗಿ, ಮೂರು ವರ್ಷ ಮುದಿ ಬಾಸವೃಕ್ಷಗಳನ್ನು ಕೊಲ್ಲಬೇಕು' ಎಂದನು.

ಮೃತ್ಯುವು 'ದೇವರು ನನ್ನ ಮೇಲೆ ಏಕೆ ಕೋಪಿಸಿ ಬಾಸವೃಕ್ಷವನ್ನು ಕಡಿಯಹೇಳಿದ್ದಾನೆ' ಎಂದು ಗೋಳಾಡಿದನು.

ಮೂರು ವರ್ಷ ಕಾಡಿನಲ್ಲಿ ಅಲೆದು, ಮೂರು ವರ್ಷ ತೀರ ವಯಸ್ಸಾದ ಬಾಸಗಳನ್ನುರುಳಿಸಿ ಕಾಲ ಮುಗಿಯಲು, ಪುನಃ ದೇವರ ಆಜ್ಞೆಗಾಗಿ ಬಂದನು.

ಸೈನಿಕನು 'ಪುನಃ ಬಂದೆಯೇಕೆ?' ಎಂದ.

'ದೇವರು ಇನ್ನು ಯಾರನ್ನು ಕೊಲ್ಲಲು ಆಜ್ಞೆ ಮಾಡುವನೋ ಕೇಳುವುದಕ್ಕೆ.'

'ಕ್ಷಣ ನಿಲ್ಲು. ನಾನು ಕೇಳಿ ಬರುತ್ತೇನೆ.'

ಸೈನಿಕನು ದೇವರ ಬಳಿ ಬಂದು

'ದೇವರೇ! ಮೃತ್ಯುವು ಮರಳಿ ಬಂದಿದ್ದಾನೆ. ಇನ್ನು ಯಾರನ್ನು ಕೊಲ್ಲಬೇಕು-ಎನ್ನುತ್ತಾನೆ' ಎಂದನು.

'ಮೂರು ವರ್ಷ ಪ್ರಾಯದವರನ್ನು ಕೊಲ್ಲುವಂತೆ ಹೇಳು.'

ಸೈನಿಕನು 'ಅಂದರೆ ಅವನು ನನ್ನ ತಮ್ಮಂದಿರನ್ನು ಕೊಲ್ಲುತ್ತಾನೆ' ಎಂದು ಎಣಿಸಿ, ಮೃತ್ಯುವಿನ ಹತ್ತಿರ ಬಂದು

'ಕಾಡಿಗೆ ಹೋಗಿ ಮೂರು ವರ್ಷ ಹರಯದ ಬಾಸವೃಕ್ಷಗಳನ್ನು ಕೊಲ್ಲು. ದೇವರ ಆಜ್ಞೆಯಿದು' ಎಂದನು.

'ದೇವರಿಗೇಕೆ ನನ್ನ ಮೇಲಿಷ್ಟು ಕೋಪ' ಎಂದು ಮೃತ್ಯುವು ಗೋಳಾಡಿ, ಕಾಡಿನಲ್ಲಿ ಮೂರು ವರ್ಷ ಬೆಳೆದ ಬಾಸಗಳನ್ನುರುಳಿಸಿ, ಕಾಲ ಮುಗಿಯಲು, ದೇವರ ಬಳಿಗೆ ಬಂದನು.

ಸೈನಿಕನು 'ಎಲ್ಲಿಗೆ ಹೋಗುತ್ತೀಯೆ?' ಎಂದನು.

'ದೇವರ ಬಳಿಗೆ – ಮುಂದೆ ಯಾರನ್ನು ಕೊಲ್ಲಬೇಕೆಂದು ಆಜ್ಞೆ ಪಡೆಯಲಿಕ್ಕೆ.'

'ಕ್ಷಣ ತಾಳು. ನಾನೇ ಕೇಳಿಬರುತ್ತೇನೆ.'

ಪುನಃ ದೇವರ ಬಳಿಗೆ ಹೋಗಿ 'ದೇವರೆ! ಮೃತ್ಯು ಬಂದಿದ್ದಾನೆ. ಇನ್ನು ಯಾರನ್ನು ಕೊಲ್ಲಬೇಕು?' ಎಂದ.

'ಇನ್ನು ಮೂರು ವರ್ಷ ಚಿಕ್ಕಮಕ್ಕಳನ್ನು ಕೊಲ್ಲುವಂತೆ ಹೇಳು.'

ಸೈನಿಕನು 'ನನ್ನ ಅಣ್ಣತಮ್ಮಂದಿರಿಗೆ ಮಕ್ಕಳು. ಅಂದರೆ ಮೃತ್ಯುವು ಅವರನ್ನು ಕೊಲ್ಲುತ್ತಾನೆ' ಎಂದು ಯೋಚಿಸಿದ.

ಅಲ್ಲಿಂದ ಮೃತ್ಯುವಿನ ಬಳಿಬಂದು 'ಅದೇ ಕಾಡಿಗೆ ಹೋಗಿ ಮೂರು ವರ್ಷ ಸಣ್ಣ ಸಣ್ಣ ಬಾಸವೃಕ್ಷಗಳನ್ನು ಕಡಿದುಹಾಕು' ಎಂದನು.

'ದೇವರೇಕೆ ಹೀಗೆ ಗೋಳುಹುಯ್ಯುತ್ತಾನೆ ನನ್ನ!' ಎಂದು ಮೃತ್ಯುವು ಗೋಳಾಡಿ, ಕಾಡಿನಲ್ಲಿ ಮೂರು ವರ್ಷ ಸಣ್ಣ ಸಣ್ಣ ಬಾಸಗಳನ್ನು ಬೀಳಿಸಿ, ಕಾಲವಾದ ಮೇಲೆ ದೇವರ ಬಳಿಗೆ ಬಂದ. ಕಾಲೆಳೆಯಲೂ ತ್ರಾಣ ವಿರಲಿಲ್ಲ.

'ಈಗ ಅವನ ಹತ್ತಿರ ಜಗಳವಾದರೂ ಸರಿಯೆ, ದೇವರ ಹತ್ತಿರ ನಾನೇ ಹೋಗುತ್ತೇನೆ. ಒಂಭತ್ತು ವರುಷ ನನಗೇಕೆ ಈ ಶಿಕ್ಷೆಯೆಂದು ಕೇಳುತ್ತೇನೆ!'

ಸೈನಿಕನು ಮೃತ್ಯುವಿನ ಒದವನ್ನು ಕಂಡು.

'ಎಲ್ಲಿಗೆ ಹೋಗುತ್ತಿರುವೆ?' ಎಂದ.

ಮೃತ್ಯುವು ನೀರವನಾಗಿ ಮೆಟ್ಟಲು ಹತ್ತುತ್ತಿದ್ದ. ಸೈನಿಕನು ಅವನ ಕತ್ತು ಹಿಡಿದು ಒಳಕ್ಕೆ ಬಿಡದೆ ತಡೆಯುತ್ತಿದ್ದ.

ಇವರು ಮಾಡಿದ ಗಲಾಟೆ ಕೇಳಿ ದೇವರು ಹೊರಬಂದ.

'ಏನಿದು ಗಲಾಟೆ?' ಎಂದ.

ಮೃತ್ಯುವು ಅವನ ಪಾದದಲ್ಲುರುಳಿದ.

'ದೇವರೆ! ನನ್ನ ಮೇಲೆ ನಿನಗೇಕೆ ಕೋಪ? ಒಂಭತ್ತು ವರುಷಗಳು ಕಾಡಿನಲ್ಲಿ ಬಿದ್ದಾಡುತ್ತಿದ್ದೇನೆ. ಮೂರು ವರುಷ ಮುತ್ತ ಬಾಸಗಳನ್ನು ಕಡಿದೆ; ಮೂರು

CC-0. Jangamwadi Math Collection. Digitized by eGangotri

ವರುಷ ಬೆಳೆದುವನ್ನು ಕಡಿದೆ; ಮೂರು ವರುಷ ಚಿಕ್ಕವುಗಳನ್ನು ಕಡಿದೆ........ ಕಾಲೆಳೆಯಲೂ ಶಕ್ತಿಯಿಲ್ಲ.'

ದೇವರು 'ಇದೆಲ್ಲ ನಿನ್ನ ಕೆಲಸ' ಎಂದು ಸೈನಿಕನಿಗೆಂದ.

'ಕ್ಷಮಿಸಬೇಕು ದೇವರೆ' ಎಂದು ಸೈನಿಕನೆಂದ.

'ಹಾಗಿದ್ದರೆ ಇಲ್ಲಿಂದ ಹೊರಟು, ಒಂಭತ್ತು ವರುಷ ಮೃತ್ಯುವನ್ನು ಹೆಗಲ ಮೇಲೆ ಹೊತ್ತುಕೊಂಡಿರು.'

ಮೃತ್ಯುವು ಸೈನಿಕನ ಹೆಗಲೇರಿದನು. ಇಬ್ಬರೂ ಹೊರಟರು.

ಸೈನಿಕನಿಗೆ ಒಪ್ಪದಿದ್ದರೆ ವಿಧಿಯಿಲ್ಲ – ಮೃತ್ಯುವನ್ನು ಹೊರಬೇಕಿತ್ತು. ಹೊತ್ತು ಹೊತ್ತು ಸಾಕಾಯಿತು. ತನ್ನ ನಶ್ಯದ ಡಬ್ಬಿ ತೆಗೆದು ಮೂಸಿನೋಡಿದನು. ಸೈನಿಕನು ಏನನ್ನೋ ಮೂಸುವುದನ್ನು ಕಂಡು ಮೃತ್ಯುವು 'ಸೈನಿಕ! ನನಗೂ ಕೊಂಚ ನಶ್ಯಕೊಡು!' ಎಂದನು.

'ಓ! ಇಲ್ಲಿ ಪೆಟ್ಟಿಗೆಯೊಳಕ್ಕೆ ಬಂದು ಬೇಕಾದಷ್ಟು ತೆಗೆದುಕೊ.'

'ಎಲ್ಲಿ! ಪೆಟ್ಟಿಗೆ ತೆಗೆ!!'

ಸೈನಿಕನು ನಶ್ಯದ ಡಬ್ಬಿ ತೆರೆದ; ಮೃತ್ಯುವು ಅದರೊಳಕ್ಕೆ ನುಸುಳಿದ ತಕ್ಷಣ ಪೆಟ್ಟಿಗೆಯ ಬಾಗಿಲಿಕ್ಕಿ,ಒಳಗೆ ಮೃತ್ಯುವನ್ನು ಸೇರಿಸಿಕೊಂಡು, ಬೂಟ್ಸಿನೊಳಕ್ಕೆ ತುರುಕಿದ.

ಅಲ್ಲಿಂದ ಎಂದಿನಂತೆ ಬಂದು ಬಾಗಿಲಲ್ಲಿ ಪಹರೆ ನಿಂತ. ದೇವರು ಅವನನ್ನು ಕಂಡು "ಮೃತ್ಯುವೆಲ್ಲಿ" ಎಂದು ಕೇಳಿದ.

'ನನ್ನ ಜತೆಯಲ್ಲಿದ್ದಾನೆ.'

'ನಿನ್ನ ಜತೆ! – ಎಲ್ಲಿ?"

'ಇಲ್ಲಿ, ಬೂಟ್ಸಿನ ತುದಿಯಲ್ಲಿ."

'ಎಲ್ಲಿ ತೋರಿಸು.'

'ಇಲ್ಲ, ದೇವರೇ! ನಾನು ತೋರಿಸುವುದಿಲ್ಲ. ಅವನು ಒಂಭತ್ತು ವರುಷ ಹೊರಗೆ ಬರಲಾರನು. ಮೃತುವನ್ನು ಒಂಭತ್ತು ವರುಷ ಹೊರುವುದೇನು ಹುಡುಗಾಟವಲ್ಲ; ಭಾರ ಏನೂ ಕಡಿಮೆಯಿಲ್ಲ!'

'ತೋರಿಸು, ನಿನ್ನನ್ನು ಕ್ಷಮಿಸುತ್ತೇನೆ!'

ಸೈನಿಕನು ಬೂಟ್ಸಿನಿಂದ ನಶ್ಯದ ಡಬ್ಬಿಯೆಳೆದು ತೆರೆದ ಕ್ಷಣ, ಮೃತ್ಯುವು ಛಂಗನೆಗರಿ ಅವನ ಬೆನ್ನೇರಿದನು.

'ಕೇಳಗೀಳಿ. ನಾನು ಇಟ್ಟಲ್ಲಿ ನಿಲ್ಲುವ ಬುದ್ಧಿಯಿರಲಿಲ್ಲ ನಿನಗೆ!' ಎಂದ ದೇವರು.

ಮೃತ್ಯು ಕೆಳಗಿಳಿದ.

'ಈಗ ಸೈನಿಕನನ್ನು ಕೊಲ್ಲು' ಎಂದು ಹೇಳಿ ದೇವರು ಹೊರಟ; ಎಲ್ಲಿಗೆ ಹೋದನೋ ದೇವರೇ ಬಲ್ಲ.

'ಏನು ಸೈನಿಕ! ಕೇಳಿದೆಯೊ! ದೇವರು ನಿನ್ನನ್ನು ಕೊಲ್ಲು ಎಂದಿದ್ದಾನೆ.'

'ಅದಕ್ಕೇನಂತೆ? ಯಾವಾಗಿದ್ದರೂ ಸಾಯಬೇಕು. ಆದರೆ ಕೊಂಚ ತಯಾರಾಗುವುದಕ್ಕೆ ಪುರಸತ್ತು ಕೊಡು.'

'ಆಗಲೇಳು.'

ಸೈನಿಕನು ಹೊಸಬಟ್ಟೆ ಹಾಕಿಕೊಂಡು ಒಂದು ಶವ ಸಂಪುಟವನ್ನು ತಂದ.

"ಸಿದ್ಧವೋ?" ಎಂದ ಮೃತ್ಯು.

'ಓ! ಸಿದ್ಧ.'

'ಹಾಗಿದ್ದರೆ ಅದರಲ್ಲಿ ಮಲಗಿಕೊ.'

ಸೈನಿಕನು ಹೊಟ್ಟೆಡಿಯಾಗಿ ಮಲಗಿಕೊಂಡ.

'ಹಾಗಲ್ಲ' ಎಂದ ಮೃತ್ಯು.

'ಇನ್ನು ಹೇಗೆ?' ಎನ್ನುತ್ತ ಸೈನಿಕನು ಪಕ್ಕಕ್ಕೆ ತಿರುಗಿದ.

'ಹಾಗಲ್ಲವೇ ಅಲ್ಲ. ಹಾಗೆ ಮಲಗಿಕೊಂಡು ಸಾಯಬಾರದು.'

ಸೈನಿಕನು ಇನ್ನೊಂದು ಪಕ್ಕಕ್ಕೆ ಉರುಳಿದ.

'ಏನು ವಿಚಿತ್ರ ಮೃಗ ನೀನು! ಜನ ಹೇಗೆ ಸಾಯುತ್ತಾರೆ ಎನ್ನುವುದೂ ಗೊತ್ತಿಲ್ಲವಲ್ಲ! ಎಂದೂ ನೋಡಿಲ್ಲವೆ? ಏಳು ತೋರಿಸುತ್ತೇನೆ.'

ಸೈನಿಕನು ಹೊರಕ್ಕೆ ನೆಗೆದ. ಮೃತ್ಯುವು ಅದರಲ್ಲಿ ಮಲಗಿದ. ತಟಕ್ಕನೆ ಸೈನಿಕನು ಶವಸಂಪುಟದ ಮುಚ್ಚಳವನ್ನು ಹಿಡಿದು, ಸಂಪುಟಕ್ಕೆ ಮುಚ್ಚಿ ಕಬ್ಬಿಣದ ಮೊಳೆ ಹಾಕಿಬಿಟ್ಟನು. ಇನ್ನೊಂದು ಕ್ಷಣದಲ್ಲಿ ಅದನ್ನು ಹೆಗಲಿಗೇರಿಸಿ, ಹೊಳೆಯ ಕಡೆ ಹೊರಟ.

ಹೊಳೆಗದನ್ನು ಎತ್ತಿಕೊಂಡು ಹೋಗಿ, ಹಾಕಿ, ಹಿಂದಿರುಗಿ ಬಂದು ಎಂದಿನಂತೆ ಪಹರೆ ನಿಂತ.

ದೇವರು ಅವನನ್ನು ಕಂಡು "ಮೃತ್ಯುವೆಲ್ಲಿ?" ಎಂದ.

'ಅವನನ್ನು ಹೊಳೆಗೆ ಹಾಕಿದ್ದೇನೆ."

ದೇವರು ಆ ಕಡೆ ನೋಡಿ, ಬಲು ದೂರದಲ್ಲಿ ಮೃತ್ಯುವು ಈಜುತ್ತಿರುವುದನ್ನು ಕಂಡ.

ದೇವರು ಕೈನೀಡಿ ಅವನನ್ನು ದಡಮುಟ್ಟಿಸಿದ.

CC-0. Jangamwadi Math Collection. Digitized by eGangotri

' ಸೈನಿಕನನ್ನೇಕೆ ಕೊಲ್ಲಲಿಲ್ಲ ? ' ಎಂದ.

' ಅವನು ಬಹಳ ಕಿಲಾಡಿ. ಅವನ ಹತ್ತಿರ ಏನು ಮಾಡಲೂ ಸಾಧ್ಯವಿಲ್ಲ. '

' ಸಾಕು. ಅವನ ಹತ್ತಿರ ಹರಟಬೇಡ; ಸುಮ್ಮನೆ ಹೋಗಿ ಅವನನ್ನು ಕೊಲ್ಲು ! '

ಮೃತ್ಯುವು ಹೋಗಿ ಸೈನಿಕನನ್ನು ಕೊಂದನೆಂದು ಕೆಲವರು ಹೇಳುವರು; ' ಇಲ್ಲ, ಪುನಃ ಮೃತ್ಯುವಿಗೆ ಕೈ ಕೊಟ್ಟು, ಬಹುಕಾಲ ಬಾಳಿ ಬದುಕಿ, ಈಗ ತಾನೆ ಸತ್ತ ' ಎಂದು ಇನ್ನು ಕೆಲವರು ಹೇಳುವರು.

## ಸ್ಪಂದನ

(ಪ್ರಲ್ಹಾದ)

೧

ತಿಳಿಯದಂತೆಯೆ
ಗೆಳೆಯ ಗೆಳೆಯನ
ಒಳಿಗೆ ಬರುವಂತೆ
ಒಳಗೆ ಇರುವಂತೆ
ಜೀವನಿಂದಿಗೆ
ದೇವನಲ್ಲಿಗೆ
ಧಾವಿಸುತಲಿಹುದು
ಭಾವಿಸುತಲಿಹುದು !

೨

ತೆರಳಿ ಪ್ರಾಣವು
ಮರಳಿ ಬಂದಿತು
ಹೊಸತು ಬಾಳುವೆಯು
ಹಸಿತ ಏಳುವೆಯು
ಅಲ್ಲಗಳೆಯುವ-
ದೆಲ್ಲಿಗುಳಿಯಿತೊ
ಸುಹೃದನಿಹುದಹುದು
ಅಹುದು ಇಹುದಹುದು !

೩

ಇಹನು ಇಹನೋ
ಸುಹೃದನಿಹನೋ
ನಲಿವು ಬಾಳುತಿದೆ
ಉಲಿವು ಕೇಳುತಿದೆ
ಗಾಳಿಯಲೆಯಲಿ
ತೇಲಿ ಬರುತಿದೆ
ಕೇಳಿ ನೀಗುವುದೇ ?
ತಾಳಲಾಗುವುದೇ ?

೪

ಎದೆಯು ವಿರಹದಿ
ಕುದಿಯುತಿದೆ ನೀ
ಬಾರದಿರೆ ಬೇಗ
ತೋರದಿರೆ ಈಗ
ಕುರುಹು ಕೊಟ್ಟವ
ವಿರಹವಿತ್ತವ
ಬರದೆ ಹೋಗುವರೇ ?
ಇರದೆ ಸಾಗುವರೇ ?

೫

ಬಂದು ಬಿಡು ಬಾ
ಬಂದೆ ಬಿಡು ಬಾ
ದರ್ಶನವೆ ಬೇಕು
ಸ್ಪರ್ಶನವೆ ಬೇಕು
ಬಂದುದಾದರೆ
ಇಂದಿಗಾಸುವ
ಹರುಷವೇ ಹರುಷಾ!
ಅರಿಕೆಯಿದು ! ಪುರುಷಾ!

CC-0. Jangamwadi Math Collection. Digitized by eGangotri

# ವಾದಭೂಮಿ

## ಕನ್ನಡ-ಸಂಸ್ಕೃತ

ಲೇಖಕರು—ಶ್ರೀ. ತೀ. ನಂ. ಶ್ರೀಕಂಠಯ್ಯ, ಎಂ. ಎ., ಮಹಾರಾಜಾ ಕಾಲೇಜು, ಮೈಸೂರು

ವಾದಕ್ಕೆ ನಿಲ್ಲಬೇಕೆಂದರೆ ಯಾರಿಗೂ ಉತ್ಸಾಹ ಕಡಮೆ. ಒಬ್ಬರು ಹೇಳಿದ್ದು ಸೂಕ್ತವಲ್ಲವೆಂದು ತೋರಿದರೂ ಅದನ್ನು ಎದುರಿಸಿ ಒಂದು ಮಾತನ್ನು ಆಡುವ ಮುಂಚೆ ಎರಡುಸಲ ಯೋಚಿಸುವುದೇ ಮನುಷ್ಯಸ್ವಭಾವ. ಚರ್ಚೆಯ ವಿಷಯವು ಶಾಸ್ತ್ರಸೂತ್ರಗಳಿಗೆ ಸಂಬಂಧಿಸಿದ್ದರೆ ವಾಸಿ. ಅದನ್ನು ಕುರಿತು ಪಕ್ಷ-ಪ್ರತಿಪಕ್ಷದವರಿಬ್ಬರೂ ಮನಃಖೇದವಿಲ್ಲದೆ ವಾದಿಸಬಹುದು. ಆದರೆ ಚರ್ಚೆಯಲ್ಲಿ ಅಭಿಪ್ರಾಯಗಳೇ ಪ್ರಧಾನವಾಗಿ, ವ್ಯಕ್ತಿಗಳ ಮೇಲಿನ ಟೀಕೆಖಂಡನೆಗಳು ತಲೆಹಾಕಿದಲ್ಲಿ ವಾದಮಾರ್ಗವು ಕೆಡಕಾಗುತ್ತದೆ; ಅಹಿತವಾಗುತ್ತದೆ. ಅದರಲ್ಲಿ ಪ್ರವೇಶಮಾಡಲು ಮನಸ್ಸು ತುಂಬ ಹಿಂಜರಿಯುತ್ತದೆ. ಆದರೂ ಕೆಲವು ಸಂದರ್ಭಗಳಲ್ಲಿ, ಹಾಗೆ ತಟಸ್ಥವಾಗಿ ನಿಲ್ಲುವುದು ಸರಿಯಲ್ಲವೆಂದೂ ಎನ್ನಿಸುತ್ತದೆ. ಆಗ ಸಂಕೋಚವನ್ನು ದೂರಮಾಡಿ 'ವಾದಭೂಮಿ'ಗೆ ಇಳಿಯಲೇ ಬೇಕು.

'ಜಯಕರ್ನಾಟಕ'ದ ಜೂನ್ ತಿಂಗಳ ಸಂಚಿಕೆಯಲ್ಲಿ ಶ್ರೀಮಾನ್ ಜಿ. ಆರ್. ಜೋಸ್ಯರ್, ಎಂ. ಎ., ಎಫ್. ಆರ್. ಇ. ಎಸ್. ಅವರು ಬರೆದಿರುವ 'ಕನ್ನಡವೂ ಸಂಸ್ಕೃತವೂ' ಎಂಬ ಲೇಖನವನ್ನು ಓದಿದಾಗ ಈ ಬಗೆಯ ವಿಚಾರಗಳು ಮನಸ್ಸಿನಲ್ಲಿ ಉದಿಸಿದುವು. ಲೇಖನದ ಹೆಸರು ಎಷ್ಟು ಸೌಮ್ಯವೋ ಒಳಗಿನ ವಿಷಯವೂ ಅಷ್ಟು ಸೌಮ್ಯವಲ್ಲ. ಕನ್ನಡ-ಸಂಸ್ಕೃತ ಭಾಷೆಗಳ ಪರಸ್ಪರ ಸಂಬಂಧವನ್ನೂ, ಅವುಗಳಿಗೆ ಮೈಸೂರು ವಿಶ್ವವಿದ್ಯಾಲಯದ ಪಾಠಕ್ರಮದಲ್ಲಿರಬೇಕಾದ ಸ್ಥಾನವನ್ನೂ ಪರಿಷ್ಕಾರಗೊಳಿಸುವುದೇ ಶ್ರೀಮಾನ್ ಜೋಸ್ಯರವರ ತಾತ್ಪರ್ಯವಾಗಿರಬಹುದು. ಆದರೆ ಅದರ ಪರ್ಯವಸಾನವು ಮಾತ್ರ ಭಿನ್ನವಾಗಿದೆ. ಲೇಖನದಲ್ಲಿ ವಿಷಯಪರಿಷ್ಕಾರಕ್ಕಿಂತಲೂ ವ್ಯಕ್ತಿವಿಮರ್ಶೆಯೇ ಪ್ರಮುಖವಾಗಿರುವಂತೆ ತೋರುತ್ತದೆ. ಅಷ್ಟೇ ಅಲ್ಲ; ಸಭ್ಯಚರ್ಚೆಗೆ ಅಪ್ರಕೃತವಾದ ಅವಹೇಳನದ ಧ್ವನಿ–ಲೇಖಕರಿಗೆ ತಿಳಿಯದಂತೆಯೇ ಇರಬಹುದು–ಅಲ್ಲಲ್ಲೇ ಕಿವಿಗೆ ಬೀಳುತ್ತದೆ. 'ಕನ್ನಡ–ಸಂಸ್ಕೃತ ವಾದ'ದ ನಿಜಸ್ವರೂಪವೂ ಶ್ರೀಮಾನ್ ಜೋಸ್ಯರವರ ಲೇಖನದಲ್ಲಿ ಸ್ಪಷ್ಟವಾಗಿ ತಿಳಿಯುವಂತಿಲ್ಲ. ಅವರ ಕೆಲವು ವಾಕ್ಯಗಳು 'ಕನ್ನಡ' ಪಕ್ಷದವರ* ಹೇಳಿಕೆಗಳಿಗೆ ಅಪಾರ್ಥವನ್ನು ಕಲ್ಪಿಸುತ್ತವೆ. ಹೀಗಿರುವುದರಿಂದ, 'ಕನ್ನಡ' ಪಕ್ಷದವರ ಮೇಲೆ ಅವರು ಹೊರಿಸಿರತಕ್ಕ ದೂರನ್ನು ಪರಿಹರಿಸುವ ಪ್ರಯತ್ನವೊಂದು ಅನಿವಾರ್ಯವಾಯಿತು. ಕರ್ಣಾಟಕ ಪಾಠಕ ಪ್ರಪಂಚವು "ಮ॥ ರಾ॥ [ಬಿ. ಎಂ.] ಶ್ರೀಕಂತಯ್ಯನವರ ಪ್ರಚಂಡ ನಿಯಮಗಳನ್ನು ಖಂಡಿಸಲೇಬೇಕು" ಎಂದು ಶ್ರೀಮಾನ್ ಜೋಸ್ಯರವರು ವಿಧಿಸಿದ್ದಾರೆ. ಹಾಗೆ ಕರ್ಣಾಟಕ ಪ್ರಪಂಚವು ಮಾಡುವುದಕ್ಕೆ ಮೊದಲು, ಅದಕ್ಕೆ ಅವರ ಲೇಖನದಲ್ಲಿ ಗೋಚರವಾಗದ ಕೆಲವು ಪ್ರಸಕ್ತ ವಿಚಾರಗಳನ್ನು ನಿವೇದಿಸುವುದು ಅಗತ್ಯವಾಯಿತು. ಇಂತಹ ಪ್ರಯತ್ನವನ್ನು 'ಜಯಕರ್ನಾಟಕ'ದ ಸಂಪಾದಕರೂ ಕೋರಿರುವುದರಿಂದ ಪ್ರಸ್ತುತ ಲೇಖನಕ್ಕೆ ಉದಾರಾಶ್ರಯವು ಸಿಕ್ಕಿತು.

ಈ 'ಕನ್ನಡ–ಸಂಸ್ಕೃತ ವಾದ'ದ ಮೂಲ ತತ್ತ್ವವನ್ನು ಕುರಿತು ಮುಂದೆ ವಿಚಾರ ಮಾಡೋಣ. ಇದು ಹೇಗೆ ಮೊದಲಾಯಿತೆಂಬುದನ್ನು ಶ್ರೀಮಾನ್ ಜೋಸ್ಯರ

* ವಿಶ್ವವಿದ್ಯಾನಿಲಯದಲ್ಲಿ ಕನ್ನಡವೊಂದೇ ದ್ವಿತೀಯ ಭಾಷೆಯಾಗಿರಬೇಕೆನ್ನುವವರನ್ನು 'ಕನ್ನಡ' ಪಕ್ಷದವರೆಂದೂ, ಸಂಸ್ಕೃತವೂ ದ್ವಿತೀಯ ಭಾಷೆಯಾಗಿರಬೇಕೆನ್ನುವವರನ್ನು 'ಸಂಸ್ಕೃತ' ಪಕ್ಷದವರೆಂದೂ ಇಲ್ಲಿ ಲಾಘವಕ್ಕಾಗಿ ಕರೆದಿದೆ.



CC-0. Jangamwadi Math Collection. Digitized by eGangotri

ವರೇ ಸೂಚಿಸಿದ್ದಾರೆ. ಅವರು ಸ್ಫುಟಪಡಿಸದಿರುವ ಅಂಶವೊಂದನ್ನು ಇಲ್ಲಿ ತಿಳಿಸಬೇಕು. ಈಗ ಆರೇಳು ವರ್ಷಗಳ ಹಿಂದೆ ಸರ್ ಬ್ರಜೇಂದ್ರನಾಥ ಶೀಲರೂ ಅವರ ಸಹಾಯಸಮಿತಿಯೂ ಸಿದ್ಧಪಡಿಸಿದ್ದ ಪಾಠಪರಿಷ್ಕರಣದ ವರದಿಯನ್ನು ಅಂದಿನ ಸೆನೆಟ್ ಸಭೆಯವರು ತುಂಬ ವಿಮರ್ಶಿಸಿ, ಕನ್ನಡ ಉರ್ದುಗಳಲ್ಲೇ ಒಂದು ದ್ವಿತೀಯ ಭಾಷೆಯಾಗಿರಬೇಕೆಂದು ಹೆಚ್ಚು ಕಡಿಮೆ ಸರ್ವಾನುಮತಿಯಿಂದ ವಿಧಿಸಿದರು. ಅದೇ ಸಭೆಯಲ್ಲಿ, ಸಂಸ್ಕೃತವನ್ನೂ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳಲು ಅವಕಾಶವಿರಬೇಕೆಂದು ಬಂದ ಸೂಚನೆಗೆ ಸ್ವಲ್ಪವೂ ಪುರಸ್ಕಾರ ದೊರೆಯಲಿಲ್ಲ. ಇದು ನೆನಪಿನಲ್ಲಿಡಬೇಕಾದ ಸಂಗತಿ. ಅಂತೂ ಪರಿಷ್ಕರಣದ ನಿಬಂಧನೆಗಳ ಪ್ರಕಾರ ಕನ್ನಡ (ಅಥವಾ ಉರ್ದು) ಮಾತ್ರ ದ್ವಿತೀಯ ಭಾಷೆಯಾಗಿರಬೇಕೆಂಬ ನಿಯಮವು ೧೯೩೨–೩೩ ನೆಯ ವರ್ಷದಿಂದ ಜಾರಿಗೆ ಬರಬೇಕಾಗಿದ್ದಿತು. ಅಲ್ಲಿಯವರೆಗೆ ಎಂದರೆ ಇದುವರೆಗೂ ಸಂಸ್ಕೃತ, ತೆಲಗು, ತಮಿಳು, ಪಾರ್ಸಿ, ಫ್ರೆಂಚ್ ಮೊದಲಾದ ಭಾಷೆಗಳಿಗೆಲ್ಲಾ ದ್ವಿತೀಯ ಭಾಷಾವರ್ಗದಲ್ಲಿ ಸ್ಥಾನವಿದ್ದೇ ಇತ್ತು. ೧೯೩೨ ನೆಯ ಇಸವಿ ಸಮೀಪಿಸುತ್ತಲೂ ಸಂಸ್ಕೃತ ಮೊದಲಾದ ಭಾಷೆಗಳ ಅಭಿಮಾನಿಗಳಿಗೆ ಆತಂಕವು ಪ್ರಬಲವಾದಂತೆ ತೋರುತ್ತದೆ. ದೇಶದಲ್ಲಿ ಅನೇಕ ಸಭೆಗಳು ನಡೆದುವು. ಸೆನೆಟಿನ ಸದಸ್ಯರಲ್ಲಿ ಹಲವರು ಸಂಸ್ಕೃತದ ರಕ್ಷಣೆಗೆ ನಿಂತರು. ಅವರ ಈ ಪ್ರಯತ್ನಗಳ ಫಲವಾಗಿ, ೧೯೩೧ ನೆಯ ಇಸವಿಯ ಅಂತ್ಯದಲ್ಲಿ ಸೇರಿದ ಸೆನೆಟ್ ಸಭೆಯಲ್ಲಿ, ಇನ್ನೂ ಎರಡು ವರ್ಷಗಳ ಕಾಲ ಸಂಸ್ಕೃತ ಮೊದಲಾದ ಭಾಷೆಗಳಿಗೆ ದ್ವಿತೀಯ ಭಾಷಾವರ್ಗದಲ್ಲಿ ಅವಕಾಶವಿರಬೇಕೆಂದೂ, ಈ ನಡುವೆ ಶೀಲರವರ ನಿಬಂಧನೆಯನ್ನು ಮತ್ತೆ ಚರ್ಚಿಸಿ ಒಂದು ನಿಷ್ಕರ್ಷೆಗೆ ಬರಬೇಕೆಂದೂ ಗೊತ್ತಾಯಿತು. ಅದರ ಮುಂದಿನ ಸಭೆಯಲ್ಲೇ ಎಂದರೆ ಮೊನ್ನೆ ಮಾರ್ಚಿ ತಿಂಗಳಲ್ಲಿ ಸೆನೆಟ್ ಸಭೆ ಸೇರಿದಾಗ, ಸಂಸ್ಕೃತದ ಮತ್ತು ಇತರ ಭಾಷೆಗಳ ಸ್ಥಾನವನ್ನು ಕುರಿತು ಪ್ರಚಂಡವಾದ ಚರ್ಚೆಯಾಯಿತು. ಚರ್ಚೆ ನಡೆದದ್ದು ಮುಖ್ಯವಾಗಿ ಸಂಸ್ಕೃತದ ಸ್ಥಾನವನ್ನು ಕುರಿತೇ ಎಂಬುದರಲ್ಲಿ ಸಂಶಯವಿಲ್ಲ. ಸಂಸ್ಕೃತಕ್ಕೆ ಅವಕಾಶವಿರಬೇಕೆಂದು ನಿರ್ಣಯವಾಗುತ್ತಲೂ ಅದರ ಬೆನ್ನ ಹಿಂದೆ ಉಳಿದ ಭಾಷೆಗಳೂ ಬಂದುವು.

೧೯೩೧–೩೨ ನೆಯ ವರ್ಷದಲ್ಲೆಲ್ಲಾ ಈ ವಾದ ಮೈಸೂರಿನಲ್ಲಿ ಸೆನೆಟ್ ರಂಗವನ್ನು ಮಾತ್ರವಲ್ಲ, ವಿಸ್ತ ವಾದಭೂಮಿಗಳನ್ನೂ ಆವರಿಸಿತ್ತೆಂದು ಹೇಳಬಹುದು. ಆದರೂ ವಿಷಯವನ್ನೂ ವಾದದಶೆಯಲ್ಲಿದ್ದಾಗ ಕರ್ಣಾಟಕದ ಪ್ರಸಿದ್ಧ ಪತ್ರಿಕೆಗಳಲ್ಲಿ ಇದನ್ನು ಕುರಿತು ಹೆಚ್ಚು ಚರ್ಚೆಯಾದಂತೆ ತೋರುವುದಿಲ್ಲ. ಸೆನೆಟಿನ ತೀರ್ಮಾನ ಬರುವ ಕಾಲಕ್ಕೇನೋ 'ವಿಶ್ವಕರ್ಣಾಟಕ'ವೇ ಮೊದಲಾದ ವೃತ್ತಪತ್ರಿಕೆಗಳಲ್ಲಿ ತಕ್ಕಮಟ್ಟಿಗೆ ಇದರ ಮಾತು ಬಂದಿತು. ಆದರೆ ಆಗಲೂ ಪತ್ರಿಕಾಕರ್ತರು ಈ ವಿಷಯವನ್ನು ಕುರಿತು ಬರೆದದ್ದೇ ಹೊರತು 'ಸಂಸ್ಕೃತ' ಪಕ್ಷದವರಾಗಲಿ 'ಕನ್ನಡ' ಪಕ್ಷದವರಾಗಲಿ ತಾವೇ ಈ ಸಾಧನವನ್ನು ಉಪಯೋಗಿಸಿಕೊಂಡಂತೆ ಕಾಣಲಿಲ್ಲ. ಸೆನೆಟ್ ಸಭೆ ಮಾರ್ಚಿಯ ಕೊನೆಯಲ್ಲಿ ನೆರೆದು ಒಂದು ನಿಷ್ಕರ್ಷೆಗೆ ಬಂದಿತು; ಸಂಸ್ಕೃತವೂ ಒಂದು ದ್ವಿತೀಯ ಭಾಷೆಯಾಗಿ ಉಳಿಯಬೇಕೆಂದು ತೀರ್ಮಾನಿಸಿತು. 'ಸಂಸ್ಕೃತ' ಪಕ್ಷದವರು ಜಯಶೀಲರಾದರು. ಅವರು ಚರ್ಚೆಗಾಗಲಿ ವಾದಕ್ಕಾಗಲಿ ಮತ್ತೆ ಕೈಹಾಕುವ ಆವಶ್ಯಕತೆ ಅಷ್ಟು ಉಳಿಯಲಿಲ್ಲವೆನ್ನಬಹುದು. ಅಲ್ಲಿಂದೀಚೆಗೆ ಸಂಸ್ಕೃತದ ಉತ್ಕರ್ಷವನ್ನು ಸ್ಥಾಪಿಸುವ ಲೇಖನಗಳು ಹೊರಬಿದ್ದರೆ, ವಿಜಯದುಂದುಭಿಯ ಅನುರಣನ ಧ್ವನಿಯನ್ನು ಕೇಳಿದಂತಾಗುತ್ತದೆ.

ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಕನ್ನಡವೊಂದೇ ದ್ವಿತೀಯ ಭಾಷೆಯಾಗಿರಬೇಕೆಂದು ಹೇಳುತ್ತಿದ್ದವರಲ್ಲಿ ಪ್ರಮುಖರು; ಕರ್ಣಾಟಕ ವಿದ್ವತ್ಪ್ರಪಂಚದಲ್ಲಿ ಗಣ್ಯಸ್ಥಾನವನ್ನು ಪಡೆದವರು. ಇಂಥವರು ಸಂಸ್ಕೃತ ಕನ್ನಡ ಭಾಷೆಗಳಿಗಿರತಕ್ಕ ಸಂಬಂಧವನ್ನು ಕುರಿತು ಒಂದು ಮಾತನ್ನಾಡಿದರೆ ಅದನ್ನು ಹಲವರು ನಂಬಿಯಾರು, ಅದರಿಂದ ಜನಗಳಲ್ಲಿ ತಪ್ಪು ತಿಳುವಳಿಕೆ ಬೆಳೆದೀತು – ಎಂಬ ಭಾವನೆಯಿಂದ ಶ್ರೀಮಾನ್ ದೀಕ್ಷಿತರವರು ಪ್ರಸ್ತುತ ಖಂಡನೆಗೆ ಕೈಹಾಕಿದರೆಂದು ಊಹಿಸಬಹುದು. ಅವರು ಹಾಗೆ ಮಾಡಿದ್ದು ತಪ್ಪಲ್ಲ. ಸೆನೆಟ್ ಸಭೆಯಲ್ಲಿ ಶ್ರೀಮಾನ್ ಶ್ರೀಕಂಠಯ್ಯನವರಾಗಲಿ ಬೇರೆ ಸದಸ್ಯರಾಗಲಿ ಪಟ್ಟ ಅಭಿಪ್ರಾಯಗಳು ವೃತ್ತಪತ್ರಿಕೆಗಳಲ್ಲಿ ಪ್ರಕಟವಾಗಿಲ್ಲದಿದ್ದರೂ, ಜನಸಮುದಾಯಕ್ಕೆ ಅವು ತಿಳಿಯತಕ್ಕ ಸಂಭವ ಅಲ್ಪವಾಗಿದ್ದರೂ, ಆ ಅಭಿಪ್ರಾಯ

CC-0. Jangamwadi Math Collection. Digitized by eGangotri

ಗಳು ಸಂಗತವಲ್ಲವೆಂದು ತೋರಿದರೆ ಅವನ್ನು ಖಂಡಿಸು ವುದು ತಪ್ಪಲ್ಲ. ಆ ರೀತಿ ಮಾಡುವುದರಿಂದ, ಅವುಗಳ ಬಳಿಗೆ ಹೋಗಬಹುದಾಗಿದ್ದ ಕೆಲವರು ಕೂಡ ಎಚ್ಚರ ಗೊಳ್ಳಲು ಸಹಾಯ ಮಾಡಿದಂತಾಗುತ್ತದೆ. ಆದರೆ ಹಾಗೆ ಮಾಡುವಾಗ ಸೌಜನ್ಯವು ಅವಶ್ಯಕವಲ್ಲವೆಂದು ಹೇಳ ಲಾದೀತೆ? ಶ್ರೀಮಾನ್ ಜೋಸ್ಯರವರ ಲೇಖನವನ್ನು ಓದಿದವರಿಗೆಲ್ಲಾ, 'ಜಯಕರ್ನಾಟಕ' ದ ಸಂಪಾದಕರಿಗೆ ತೋರಿದಂತೆಯೇ ಕೆಲವು "ವಾಕ್ಯಗಳಲ್ಲಿ ಇರುವ ಭಾವ ನೆಯ ರೀತಿ ಸರಿಯಲ್ಲವೆಂದು" ತೋರುತ್ತದೆ. ಶ್ರೀಮಾನ್ ಶ್ರೀಕಂಠಯ್ಯನವರ ಅಧಿಕಾರಪದವಿಗಳನ್ನು ಲೇಖಕರು ಎಷ್ಟು ಕಡೆ ಎಷ್ಟು ಬಗೆಯಾಗಿ ಉದ್ಘೋಷಿಸಿದ್ದಾರೆ: "ಇಂಗ್ಲಿಷ ಮತ್ತು ಕನ್ನಡಗಳಲ್ಲಿ ಉಚ್ಚೋಪಾಧ್ಯಾ ಯರೂ ಕರ್ನಾಟಕ ಸಾಹಿತ್ಯ ಪರಿಷತ್ತಿನ [ಸಮ್ಮೇಳ ನದ] ಮಾಜಿ ಅಧ್ಯಕ್ಷರೂ ಕನ್ನಡ ಗ್ರಂಥಕರ್ತರ ಆಶ್ರಯ ದಾತರೂ ಆದ...." "ಕನ್ನಡದ ಟೆಕ್ಸ್ಟಬುಕ್ ಕಮಿಟಿ ಗಳಿಗೂ ಬೋರ್ಡ್ ಆಫ್ ಸ್ಟಡಿಗಳಿಗೂ ಪಬ್ಲಿಕೇಶನ್ ಕಮಿಟಿಗೂ ಅಧ್ಯಾಪಕ ವರ್ಗಕ್ಕೂ ಪರೀಕ್ಷಕ ವರ್ಗಕ್ಕೂ ನಾಯಕರಾದ ಮ. ರಾ. ಶ್ರೀಕಂಠಯ್ಯನವರು"! ಸರಿಯೆ. ಶ್ರೀಮಾನ್ ಶ್ರೀಕಂಠಯ್ಯನವರ ಸ್ಥಾನಮಾಹಾ ತ್ಮ್ಯವನ್ನು ಅನುಪಮವಾಗಿ ನಿರೂಪಿಸಿದಂತಾಯಿತು. ಆದರೆ ಇಷ್ಟು ವಿವರವೇತಕ್ಕೆ? ಶ್ರೀಮಾನ್ ಶ್ರೀಕಂಠಯ್ಯ ನವರ ಅಭಿಪ್ರಾಯಗಳಲ್ಲಿರುವ ಅನನ್ವಯವನ್ನು ಉತ್ತರ ಕ್ಷಣದಲ್ಲಿಯೇ ಎತ್ತಿಹಿಡಿದು ಅಲ್ಲಗಳೆಯುವುದಕ್ಕೆ. ವಾಗ್ಮಿಯ ತೀಕ್ಷ್ಣ್ಣಯುಧವಾದ ವಿಷಮಾಲಂಕಾರವನ್ನು ಶ್ರೀಮಾನ್ ಜೋಸ್ಯರವರು ಅನಿಯಂತ್ರಿತವಾಗಿ ಉಪ ಯೋಗಿಸಿದ್ದಾರೆ.

ಇದರ ಜೊತೆಗೆ, ಪುರಾಣೇತಿಹಾಸಗಳಿಂದ ತಂದ ಉಪಮಾನಗಳು: ಶ್ರೀಕೃಷ್ಣನಿಗೆ ಶಿಶುಪಾಲನು ಮಾಡಿ ದಂತೆ ಸಂಸ್ಕೃತಕ್ಕೆ ಇವರು [=ಶ್ರೀಮಾನ್ ಶ್ರೀಕಂಠ ಯ್ಯನವರು] ಮಾಡಿದ ಅವಹೇಳನ;" ಚಂದ್ರ ಮುಹಮ್ಮದ ಘೋರಿಗಳ ನೀಚಸಖ್ಯ. ಲೇಖನವೇನೋ ಸರಸವಾಯಿತು; ಆದರೆ ಅದರ ಹೃದಯವು ವಿರಸವಾಗಲಿ ಲ್ಲವೆ?

ಇದೆಲ್ಲವನ್ನೂ ಒಂದು ವೇಳೆ ಅಲಕ್ಷಿಸಬಹುದು. ಆದರೆ ಶ್ರೀಮಾನ್ ಜೋಸ್ಯರವರ ಲೇಖನದಲ್ಲಿ ಒಂದು ವಾಕ್ಯ ಮಾತ್ರ ಸರ್ವಥಾ ಅನರ್ಥಕವೆಂದು ಹೇಳಬೇಕಾಗಿದೆ. "....ಕನ್ನಡ ಸಾಹಿತ್ಯಾಭಿಮಾನಿಗಳು ಆ [=ಹಳಗನ್ನಡದ] ಗ್ರಂಥಗಳೆಲ್ಲವನ್ನೂ ಬಿಟ್ಟು ಬಿಟ್ಟು, ಮ. ರಾ. ಬಿ. ಎಂ. ಶ್ರೀಕಂಠಯ್ಯ, ಟಿ. ಎಸ್. ವೆಂಕಣ್ಣಯ್ಯ ಇವರುಗಳು ಮತ್ತು ಇವರ ಅನುಚರರು ಬರೆಯತಕ್ಕ ಗ್ರಂಥಗಳನ್ನೇ ಓದಿ ತೃಪ್ತರಾಗಬೇಕೆಂದು ಇವರ ಭಾವನೆಯೆ?" ಎಂದು ಶ್ರೀಮಾನ್ ಜೋಸ್ಯರವರು ತರ್ಕಿಸುತ್ತಾರೆ. ನೋಡಿದ ಕೂಡಲೆ ಅಸಮಂಜಸವೆಂದು ಹೊಳೆಯುವ ಇಂಥ ಅಭಿಪ್ರಾಯವನ್ನು ಶ್ರೀಮಾನ್ ಶ್ರೀಕಂಠಯ್ಯನವರಿಗೇ ಏಕೆ, ಯಾವ ವಿದ್ವಾಂಸರಿಗಾದರೂ ಆರೋಪಿಸುವುದು ಅನುಚಿತವೆಂದು ಒತ್ತಿ ಹೇಳಬೇಕಾಗಿದೆ. ಬರಿಯ ಹೊಸ ಸಾಹಿತ್ಯವೇ ಕನ್ನಡಿಗರಿಗೆ ಸಾಕೆಂದು ಯಾರು ತಾನೆ ಹೇಳಬಹುದು? ಅಲ್ಲದೆ ಹೊಸ ಸಾಹಿತ್ಯವನ್ನು ಬೆಳೆಸು ತ್ತಿರುವವರು ಶ್ರೀಮಾನ್ ಶ್ರೀಕಂಠಯ್ಯನವರು, ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರು,* ಇವರ ಅನುಚರರು– ಇಷ್ಟು ಜನ ಮಾತ್ರವೇ ಅಲ್ಲ. ಅಭಿನವ ಚೈತನ್ಯವು ಈ ವರ್ಗದಿಂದ ಹೊರಪಟ್ಟವರನ್ನೂ ಪೂರ್ಣವಾಗಿ ಆವರಿ ಸಿದೆ. ಉದಾಹರಣೆಗೆ, ಶ್ರೀ. ಗಳಾದ ಹ. ವಾಸುದೇವ ಯ್ಯವರನ್ನೂ ಪಂಜೆ ಮಂಗೇಶರಾಯರನ್ನೂ ವೇ. ತಿ. ಗಳಗನಾಥರನ್ನೂ ಮಾಸ್ತಿ ವೆಂಕಟೇಶ ಐಯಂಗಾರ್ಯ ರನ್ನೂ ಡಿ. ವಿ. ಗುಂಡಪ್ಪನವರನ್ನೂ ದ. ರಾ. ಬೇಂದ್ರೆ ಯವರನ್ನೂ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ಅನುಚರರೆಂದು ಯಾರಾದರೂ ಕರೆಯಬಹುದೆ? ಇವ ರೆಲ್ಲರೂ ಆಧುನಿಕ ಮಾರ್ಗದ ಲೇಖಕರಲ್ಲವೆ? ಇವರಿಂದ ಕನ್ನಡ ಸಾಹಿತ್ಯ ಸಂಪತ್ತು ಬೆಳೆದಿಲ್ಲವೆ! ಇವರೆಲ್ಲರೂ ಬರೆಯುತ್ತಿರುವಾಗ ಹೊಸಗನ್ನಡದ ಸಾಹಿತ್ಯವನ್ನು ಅಷ್ಟು ಕೀಳಾಗಿ ಎಣಿಸುವುದಾದರೂ ಸರಿಯೆ?

ಶ್ರೀಮಾನ್ ಜೋಸ್ಯರವರ ಲೇಖನವೆಲ್ಲಾ, ಶ್ರೀಮಾನ್ ಶ್ರೀಕಂಠಯ್ಯನವರು ಸೆನೆಟ್ ಸಭೆಯಲ್ಲಿ ಆಡಿದ ಒಂದೆ ರಡು ಮಾತುಗಳ ಮೇಲಿನ ವ್ಯಾಖ್ಯಾನವೆನ್ನಬಹುದು. ಆ ಮಾತುಗಳನ್ನು ಶ್ರೀಮಾನ್ ಜೋಸ್ಯರವರು ಈ ರೀತಿ ಉದ್ಧರಿಸಿದ್ದಾರೆ:

* ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರು ಹಳಗನ್ನಡದ ಪ್ರಾಚೀನ ಕಾವ್ಯಗಳನ್ನೇ ಹೆಚ್ಚಾಗಿ ಶೋಧಿಸಿ ಪ್ರಕಟಿಸತಕ್ಕವರು; ಸೆನೆಟಿನ 'ಕನ್ನಡ-ಸಂಸ್ಕೃತ ವಾದ' ದಲ್ಲಿ ಭಾಗಿಗಳಾಗದಿರುವವರು. ಇವರ ಹೆಸರು ಉಪಹಾಸಕ್ಕೆ ಪಾತ್ರವಾಗಲು ಏನು ಔಚಿತ್ಯವೋ ತಿಳಿಯು ವುದು ಕಷ್ಟ.

CC-0. Jangamwadi Math Collection. Digitized by eGangotri

"Sanskrit has crushed us, cramped us, stifled us. Kannada does not want the help of Sanskrit hereafter. It must go to English for help henceforward."

ಇದೇ ಪದಗಳನ್ನುಪಯೋಗಿಸಿ ಇದೇ ಆನುಪೂರ್ವಿಯಲ್ಲೇ ಶ್ರೀಮಾನ್ ಶ್ರೀಕಂಠಯ್ಯನವರು ಆಡಿದರೆ, ಇಲ್ಲವೆ ಎಂಬುದನ್ನು ನಿರ್ಣಯಿಸುವುದು ಕಷ್ಟ. ಅವರಾಗಲಿ ಇತರರಾಗಲಿ ಸೆನೆಟ್ ಸಭೆಯಲ್ಲಿ ಮಾಡಿದ ಭಾಷಣಗಳ ಸಮಗ್ರ ವರದಿ ಎಲ್ಲೂ ಒಂದಂತೆ ತಿಳಿದಿಲ್ಲ. ಆದರೂ, ಶ್ರೀಮಾನ್ ಜೋಸ್ಯರವರೇ ಸೆನೆಟಿನ ಸದಸ್ಯರಾದ್ದರಿಂದ ಒಂದು ವೇಳೆ ಲಘುಲಿಪಿಯಲ್ಲಿ ಈ ವಾಕ್ಯಗಳನ್ನು ಮಟ್ಟಿಗಾದರೂ ಅವರು ಗುರುತು ಹಾಕಿಕೊಂಡಿದ್ದಾರು. ಆದ್ದರಿಂದ ಪಾಠಶೋಧನೆಯ ಗೋಜಿಗೆಹೋಗದೆ ಶ್ರೀಮಾನ್ ಶ್ರೀಕಂಠಯ್ಯನವರು ಈ ಮಾತುಗಳನ್ನೇ ಆಡಿದ್ದರೆ ಅವರ ಆಶಯವೇನಿರಬಹುದೆಂದು ವಿಚಾರ ಮಾಡೋಣ.

ಒಂದು ಮಾತನ್ನು ಆಡಿದ ಸನ್ನಿವೇಶ ಯಾವುದು, ಅದರ 'ಪ್ರಕರಣ'ವೇನು ಎಂಬುದನ್ನು ಸರಿಯಾಗಿ ತಿಳಿದ ಹೊರತು ಅದರ ಅಭಿಪ್ರಾಯವನ್ನು ತಪ್ಪಿಲ್ಲದೆ ನಿರ್ಧರಿಸುವುದು ಕಷ್ಟ. ಅಲ್ಲದೆ ಎಷ್ಟೋ ವೇಳೆ ಆ ಮಾತನ್ನು ವಕ್ತೃವಿನ ಮಿಕ್ಕ ನಡೆನುಡಿಗಳಿಗೆ ಅನ್ವಯಿಸಿ ನೋಡಿ ಅವಕ್ಕೆ ಹೊಂದತಕ್ಕ ಅರ್ಥವನ್ನು ಈ ಮಾತಿಗೆ ಕಟ್ಟಬೇಕಾಗುತ್ತದೆ. ಮಾತಿನ ವಾಚ್ಯಾರ್ಥವು ಅಸಾಧಾರಣವಾಗಿಯೂ ವಾದಜನಕವಾಗಿಯೂ ಇದ್ದರಂತೂ ಈ ಬಗೆಯ ವಿವೇಚನೆ ಟೀಕಾಕಾರನ ಪ್ರಥಮಕರ್ತವ್ಯವಾಗುತ್ತದೆ. ಆದ್ದರಿಂದ, ಶ್ರೀಮಾನ್ ಶ್ರೀಕಂಠಯ್ಯನವರು ಮೇಲಿನ ವಾಕ್ಯಗಳನ್ನು ಆಡುವುದರಲ್ಲಿ ಅವರ ಅಭಿಪ್ರಾಯವೇನೆಂದು ತಿಳಿಯಬೇಕಾದರೆ, ಅವರು ಭಾಷಣ ಮಾಡಿದ ಸನ್ನಿವೇಶವೆಂಥದೆಂಬುದನ್ನು ಗ್ರಹಿಸುವುದು ಅಗತ್ಯ.

ಮೊನ್ನೆ ಮಾರ್ಚಿ ತಿಂಗಳಲ್ಲಿ ಸೆನೆಟ್ ಸಭೆ ನೆರೆದಾಗ ಸಂಸ್ಕೃತಾದಿ ಭಾಷೆಗಳ ಸ್ಥಾನನಿರ್ಣಯಕ್ಕೇ ಮೊದಲನೆಯ ದಿನವೆಲ್ಲಾ ಹಿಡಿಯಿತು. ಆದಿಯಲ್ಲಿ, 'ಸಂಸ್ಕೃತ' ಪಕ್ಷದವರ ಭಾಷಣಗಳೂ, ಅವರಿಗೆ ಬೆಂಬಲವಾಗಿ ತಮಿಳು, ತೆಲುಗು ಪಾರ್ಸಿ, ಅರಬ್ಬಿ ಮೊದಲಾದ ಭಾಷೆಗಳ ಪಕ್ಷದವರ ಭಾಷಣಗಳೂ ಜರುಗಿದುವು. 'ಸಂಸ್ಕೃತ' ಪಕ್ಷದವರು ಸಂಸ್ಕೃತದ ಮಹತ್ತ್ವವನ್ನು ವಿವರಿಸಿದ್ದು ಮಾತ್ರವಲ್ಲದೆ, ಕನ್ನಡಕ್ಕೆ ಸಂಸ್ಕೃತದಿಂದ ಹಿಂದೆಲ್ಲ ಅತಿಶಯವಾದ ಉಪಕಾರವಾಗಿದೆ, ಮುಂದೆಯೂ ಆಗತಕ್ಕದ್ದಿದೆ ಎಂದು ನಿರೂಪಿಸಿದರು; ಸಂಸ್ಕೃತವನ್ನು ಬಿಟ್ಟರೆ ಕನ್ನಡಕ್ಕೆ ಮಾರ್ಗವೇ ಇಲ್ಲ—ಎಂದು ಸಾಧಿಸಿದರು. ಇದುವರೆಗೆ ಕನ್ನಡಸಾಹಿತ್ಯದ ಮೇಲೆ ಸಂಸ್ಕೃತಸಾಹಿತ್ಯದ ಪ್ರಭಾವ ಪರಿಣಾಮಗಳೇನೇನಾಗಿರುವುವೆಂಬುದನ್ನು ನಿರ್ಧರಿಸಿ ಸಂಸ್ಕೃತದ ಸಂಪರ್ಕವಿಲ್ಲದ ಕನ್ನಡಸಾಹಿತ್ಯಭಾಗವೇ ಇಲ್ಲವೆಂಬುದನ್ನು ಸೂಚಿಸುವ ದೊಡ್ಡ ಪಟ್ಟಿಯೊಂದನ್ನು ಅಚ್ಚು ಮಾಡಿಸಿ ಸದಸ್ಯರಿಗೆಲ್ಲಾ ಹಂಚಿದರು. ಹೀಗೆ ಆ ದಿವಸದ ಬಹುಭಾಗವು ಸಂಸ್ಕೃತದ ಪ್ರಶಂಸೆಯಲ್ಲೇ ಕಳೆಯಿತು. ಕನ್ನಡವೊಂದೇ ದ್ವಿತೀಯಭಾಷೆಯಾಗಿರಬೇಕೆಂದು ಹೇಳತಕ್ಕವರು ಯಾರೂ ಬೇಗ ಏಳಲಿಲ್ಲ. 'ಕನ್ನಡ' ಪಕ್ಷದವರು ಮೌನವ್ರತವನ್ನು ಹಿಡಿದರೆಂಬ ಧ್ವನಿ ಕೂಡ ಅಲ್ಲಲ್ಲೇ ಹೊರಟಿತು. ಆಗ 'ಕನ್ನಡ' ಪಕ್ಷದ ಅಭಿಪ್ರಾಯಗಳನ್ನು ಅನುವದಿಸಿ ಒಬ್ಬಿಬ್ಬರು ಮಾತಾಡಿದ ಬಳಿಕ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಎದ್ದು ನಿಂತರು. ಅವರು ಮಾತಿಗೆ ಪ್ರಾರಂಭಿಸುತ್ತಿರುವಾಗಲೆ ಒಬ್ಬ ಸದಸ್ಯರು—ಶ್ರೀಮಾನ್ ಜೋಸ್ಯರವರೇ ಎಂದು ತೋರುತ್ತದೆ—"ವಿಷಯವೆಲ್ಲವೂ ಆಗಲೆ ಚರ್ಚೆಯಾಗಿದೆ. ಭಾಷಣಗಳು ಸಾಕು. ಇನ್ನು ಅಭಿಮತಗಳನ್ನು ತೆಗೆದುಕೊಳ್ಳಬಹುದು" ಎಂದು ಕೂಡ ಅಧ್ಯಕ್ಷರಿಗೆ ಸೂಚಿಸಿದರು. ಅಧ್ಯಕ್ಷರು ಈ ಸೂಚನೆಯನ್ನು ಅಂಗೀಕರಿಸಲಿಲ್ಲವಾದ್ದರಿಂದ ಶ್ರೀಮಾನ್ ಶ್ರೀಕಂಠಯ್ಯನವರ ಭಾಷಣವು ಮುಂದೆ ಸಾಗಿತು. ಅವರು ಪ್ರತಿಪಾದಿಸಿದ ಅಂಶಗಳಲ್ಲಿ ಮುಖ್ಯವಾದುವು ಎರಡು: "ಸರ್ ಬ್ರಜೇಂದ್ರನಾಥ ಶೀಲರ ಪರಿಷ್ಕರಣಕಾರ್ಯವು ಆತುರದಲ್ಲೇನೂ ನಡೆಯಲಿಲ್ಲ. ಅದರ ಮೂಲದಲ್ಲಿ ಪರಿಣತವಾದ ಉದ್ದೇಶವುಂಟು. ಕನ್ನಡ ಅಥವಾ ಉರ್ದು ಮಾತ್ರ ದ್ವಿತೀಯ ಭಾಷೆಯಾಗಿರಬೇಕೆಂಬ ತತ್ತ್ವವನ್ನು ಅವರ ಕಾಲದಲ್ಲಿ ಇದೇ ಸೆನೆಟಿನವರೇ ವಿಚಾರಮಾಡಿ ಅಂಗೀಕರಿಸಿದರು. ಆ ವಿಧಿ ಇನ್ನು ಮುಂದೆ ಜಾರಿಗೆ ಬರಬೇಕಾಗಿದೆ. ನಾಲ್ಕುವರ್ಷ ಕಾಲ ಆ ರೀತಿ ನಡೆಯಲಿ. ಅದರಿಂದ ನಮ್ಮ ವಿದ್ಯಾಭ್ಯಾಸಕ್ರಮಕ್ಕೂ ಮಿಕ್ಕ ಭಾಷೆಗಳಿಗೂ ಹಾನಿ ತಟ್ಟುವಂತೆ ತೋರಿದರೆ, ಆ ನಿಯಮವನ್ನು

CC-0. Jangamwadi Math Collection. Digitized by eGangotri

ಬಳಲಾಯಿಸುವ ಅಧಿಕಾರ ಇದೇ ಸೆನೆಟಿನ ಕೈಯಲ್ಲೇ ಇದೆ. ಪ್ರಯೋಗ ಮಾಡಿ ಪರೀಕ್ಷಿಸುವ ಮುಂಚೆಯೇ ಮುದುಕಿ, ನಮ್ಮ ನಿಯಮವನ್ನು ನಾವೇ ತಳ್ಳಿಬಿಡುವುದು ಹಿತವಲ್ಲ." ಎರಡನೆಯದು "ದೇಶಭಾಷೆಯೇ ಎಲ್ಲರಿಗೂ ದ್ವಿತೀಯ ಭಾಷೆಯಾಗಬೇಕೆನ್ನುವುದರಲ್ಲಿ ಬಹು ತತ್ತ್ವವಿದೆ. ನಮ್ಮ ವಿದ್ಯಾವಂತರು ಕಾಲೇಜಿನಲ್ಲಿ ತಾವು ಪಡೆದ ಜ್ಞಾನವನ್ನು ಜನಸಮುದಾಯಕ್ಕೆ ಎರೆದರೆ ತಾನೆ ದೇಶದ ಉದ್ಧಾರವಾಗುವುದು! ಹಾಗೆ ಮಾಡಲು ಸಾಧನ ದೇಶಭಾಷೆಯಲ್ಲದೆ ಮತ್ತೊಂದಿಲ್ಲ. ಆದ್ದರಿಂದ ಪ್ರತಿಯೊಬ್ಬ ಕಾಲೇಜುವಿದ್ಯಾರ್ಥಿಯೂ ದೇಶಭಾಷೆಯಾದ ಕನ್ನಡವನ್ನು ವ್ಯಾಸಂಗಮಾಡುವುದು ಅತ್ಯಗತ್ಯ. ಕನ್ನಡಕ್ಕೆ ಪ್ರತಿಯಾಗಿ ಸಂಸ್ಕೃತವನ್ನೋ ತಮಿಳನ್ನೋ ಫ್ರೆಂಚನ್ನೋ ತೆಗೆದುಕೊಂಡರೆ ಈ ಉದ್ದೇಶ ನೆರವೇರುವುದಿಲ್ಲ. ಆದ್ದರಿಂದ ಈ ಮಿಕ್ಕ ಭಾಷೆಗಳಿಗೆ ದ್ವಿತೀಯ ಭಾಷಾಸ್ಥಾನವನ್ನು ನಿಷೇಧಿಸಬೇಕಾಯಿತು. ಇದು ಸಂಸ್ಕೃತದ್ವೇಷದಿಂದ, ಸಂಸ್ಕೃತವನ್ನು ಕೊಲ್ಲಬೇಕೆಂಬ ಆಶಯದಿಂದ ಮಾಡಿದ ಕೆಲಸವಲ್ಲ. ಕನ್ನಡವನ್ನು ಬದುಕಿಸುವುದಕ್ಕಾಗಿ ಸಂಸ್ಕೃತದ ಕೊಲೆಯಾಗತಕ್ಕ ಸಂದರ್ಭವೊದಗಿದರೆ ಮೊದಲು ಕನ್ನಡವನ್ನೇ ಬಲಿ ಕೊಡೋಣ. ಕನ್ನಡವು ಸಾರ್ವತ್ರಿಕದ್ವಿತೀಯ ಭಾಷೆಯಾದ ಮಾತ್ರದಿಂದ, ಸಂಸ್ಕೃತಕ್ಕೆ ದ್ವಿತೀಯ ಭಾಷಾಪದವಿ ತಪ್ಪಿದ ಮಾತ್ರದಿಂದ ಸಂಸ್ಕೃತಕ್ಕೆ ಖಂಡಿತ ಚ್ಯುತಿ ಬರುವುದಿಲ್ಲ. ಬೇಕಾದವರು ಅದನ್ನು ಮುಂದಕ್ಕೂ ಈಗ ಮಾಡುವಹಾಗೆಯೇ ಐಚ್ಛಿಕ ವಿಷಯವಾಗಿ ತೆಗೆದುಕೊಂಡು ಅದರಲ್ಲಿ ಪ್ರವೀಣರಾಗಬಹುದು. ಕನ್ನಡಿಗರು ಸಂಸ್ಕೃತದ್ವೇಷಿಗಳಲ್ಲ...." ಇದೇ ಶ್ರೀಮಾನ್ ಶ್ರೀಕಂಠಯ್ಯನವರ ವಾದದ ಸರಣಿ. * ಈ ರೀತಿ ಮಾತಾಡುವಾಗ ಅವರು ಸಂಸ್ಕೃತ–ಕನ್ನಡಗಳ ಪರಸ್ಪರ ಸಂಬಂಧವನ್ನು ನಿರ್ದೇಶಿಸುವುದು ಅಗತ್ಯವಾಯಿತು. ಅವರ ಹಿಂದೆ ಭಾಷಣ ಮಾಡಿದ್ದವರಲ್ಲಿ ಅನೇಕ ಮಂದಿ ಸಂಸ್ಕೃತದಿಂದ ಕನ್ನಡಕ್ಕೆ ಅಸಂತೋಪಕಾರವಾಗಿದೆ, ಆಗಬೇಕಾಗಿದೆ ಎಂದು ಸಾರಿ ಹೇಳಿದ್ದರು. ಸಂಸ್ಕೃತವನ್ನು ಬಿಟ್ಟರೆ ಕನ್ನಡದಲ್ಲೇನಿದೆ ಎಂಬ ತಿರಸ್ಕಾರದ ಧ್ವನಿ ಕೂಡ ಅವರ ಮಾತಿನಲ್ಲಿ ಇಣಿಕುತ್ತಿತ್ತು. ಈ ಅಭಿಪ್ರಾಯ ಪೂರ್ಣವಾಗಿ ಸಾಧುವೆ? ಸಂಸ್ಕೃತದಿಂದ ಕನ್ನಡಕ್ಕೆ ಉಪಕಾರವಾಗಿರುವುದು ನಿಜ; ಆದರೆ ಅದು ಮಾತ್ರ ಆಗಿ, ಅಪಕಾರವೇನೂ ಆಗಿಯೇ ಇಲ್ಲವೆ? ಹಿಂದೆ ಹೇಗೆ ಸಂಸ್ಕೃತವನ್ನು ಅವಲಂಬಿಸಿಕೊಂಡು ಕನ್ನಡವು ಬಾಳಿತೋ ಮುಂದೆಯೂ ಅದು ಹಾಗೆಯೇ ಮಾಡುವುದು ಸಾಧ್ಯವೆ, ಯುಕ್ತವೆ? – ಎಂಬುದನ್ನು ವಿವೇಚಿಸುವುದು ಅಗತ್ಯವಾಯಿತು. ಆ ಕಾರ್ಯವನ್ನು ಶ್ರೀಮಾನ್ ಶ್ರೀಕಂಠಯ್ಯನವರು ಮಾಡಿದರು. ಅವರ ಭಾಷಣದ ಈ ಭಾಗದಿಂದ ಮೂರು ವಾಕ್ಯಗಳನ್ನು ಮಾತ್ರ ಪೂರ್ವಾಪರಸಂಬಂಧದಿಂದ ಬಿಡಿಸಿ ಶ್ರೀಮಾನ್ ಜೋಯ್ಸರವರು ಉದ್ಧರಿಸಿದ್ದಾರೆ. ಈ ವಾಕ್ಯಗಳಲ್ಲಿ ಕಟುತ್ವವುಂಟೆಂಬುದು ನಿಜ. ಮಧ್ಯದ ವಾಕ್ಯವಂತೂ ನಿಷ್ಠುರವಾಗಿದೆ. ಅದನ್ನು ಶ್ರೀಮಾನ್ ಶ್ರೀಕಂಠಯ್ಯನವರು ಇದೇ ರೂಪದಲ್ಲೇ ಉಚ್ಚರಿಸಿದರೇ–ಎಂಬ ವಿಷಯದಲ್ಲಿ ಪ್ರಬಲಸಂದೇಹವಿದೆ. ಅದರಲ್ಲಿ ಕೊಂಚ ಶಬ್ದವ್ಯತ್ಯಾಸವಾದರೂ ಸಾಕು; ಅರ್ಥವು ಇಷ್ಟು ಕಠೋರವಾಗುವುದಿಲ್ಲ. ಆದರೆ ವಾಕ್ಯಗಳು ಈಗ ಇರುವ ರೂಪದಲ್ಲಿ ಕೂಡ ಅವುಗಳ ಹೃದಯವೇನೆಂಬುದನ್ನು ಗ್ರಹಿಸುವುದು ಕಷ್ಟವಲ್ಲ.

ಸಂಸ್ಕೃತದಿಂದ ಕನ್ನಡಕ್ಕೆ ವಿಪುಲವಾದ ಶಬ್ದಸಂಪತ್ತು ದೊರೆಯಿತು. ಸಾಹಿತ್ಯಕ್ಷೇತ್ರದಲ್ಲಿ ಚಂಪೂ, ಪದ್ಯಕಾವ್ಯ ಮೊದಲಾದ ಮಾದರಿಗಳು ದೊರೆತುವು. ಸಂಸ್ಕೃತದ ಅಲಂಕಾರಶಾಸ್ತ್ರವೇ ಕನ್ನಡಕ್ಕೂ ಅಲಂಕಾರಶಾಸ್ತ್ರವಾಯಿತು. ಬಾಣ–ಮಾಘಾದಿ ಸಂಸ್ಕೃತಕವಿಗಳ ಕೃತಿಗಳಿಂದ ಕನ್ನಡಕವಿಗಳು ಎಷ್ಟೋ ಕಾವ್ಯಸಾಮಗ್ರಿಯನ್ನು ಒದಗಿಸಿಕೊಂಡರು. ಹೀಗೆ ಸಂಸ್ಕೃತದ ಬೆಂಬಲದಿಂದ ಕನ್ನಡಸಾಹಿತ್ಯದ ಬೆಳೆವಣಿಗೆಗೆ ತುಂಬ ಸಹಾಯವಾಯಿತು. ಆದರೆ ಈ ಬೆಂಬಲವೇ ಹಳಗನ್ನಡದ ಸಾಹಿತ್ಯಕ್ಕೆ ಬಂಧನವೂ ಆಯಿತೆಂಬುದನ್ನು ಕನ್ನಡವಿದ್ವಾಂಸರೆಲ್ಲರೂ ಒಪ್ಪಿಕೊಳ್ಳಬೇಕು. ಸಂಸ್ಕೃತ ಆಲಂಕಾರಿಕರ ಸೂತ್ರಗಳು ಕನ್ನಡಸಾಹಿತ್ಯದ ಸಹಜಗತಿಗೆ ತಡೆಯನ್ನು ಕಟ್ಟಿದುವು. ಕನ್ನಡಕಾವ್ಯಪ್ರಪಂಚದಲ್ಲಿ ಬಹುಭಾಗ ಚರ್ವಿತಚರ್ವಣವಾಯಿತು. ಯಾವ ಕಾವ್ಯದಲ್ಲೂ ಅದೇ

* ಮೇಲೆ ಕೊಟ್ಟಿರುವುದು ಅವರ ಭಾಷಣದ 'ವರದಿ' ಯಲ್ಲ; ಪ್ರಕೃತಕ್ಕೆ ಆವಶ್ಯಕವಾದ ಅವರ ಕೆಲವು ಅಭಿಪ್ರಾಯಗಳನ್ನು ಮಾತ್ರ ಇಲ್ಲಿ ಸೂಚಿಸಲಾಗಿದೆ. ಇದು ಅಕ್ಷರಶಃ ಅನುವಾದವಲ್ಲ.



CC-0. Jangamwadi Math Collection. Digitized by eGangotri

ವರ್ಣನೆ, ಅದೇ ಕವಿಸಮಯ, ಅದೇ ಚಮತ್ಕಾರ. ಹೀಗೆ ಬರೆದರೇ ಮಹಾಕಾವ್ಯವಾಗುವುದೆಂದು ಕನ್ನಡಕವಿಗಳು ಭ್ರಮಿಸಿದರು. ಆದ್ದರಿಂದ, ತಮ್ಮ ಪ್ರತಿಭೆ ಸಹಜ ರೀತಿಯಲ್ಲಿ ನೂತನಗತಿಯಲ್ಲಿ ಉಕ್ಕುವುದಕ್ಕೆ ತೊಡಗಿದರೂ ಅದನ್ನು ಅದುಮಿ, ಪುರಾತನ ಮಾರ್ಗದಲ್ಲೇ ಕಣ್ಣು ಮುಚ್ಚಿಕೊಂಡು ಸಾಗಿದರು. ಹೀಗಾಗಿ ಕನ್ನಡ ಸಾಹಿತ್ಯದಲ್ಲಿ ಜೀವಕಳೆಯೂ ವೈವಿಧ್ಯವೂ ಉಲ್ಲಾಸವೂ ಎಷ್ಟರ ಮಟ್ಟಿಗೆ ಇರಬಹುದಾಗಿತ್ತೋ ಅಷ್ಟು ಇಲ್ಲದೆಹೋಯಿತು. ಆದರೆ ಕೆಲವು ಮಂದಿ ಕವಿಗಳು ಸಂಪ್ರದಾಯದ ಕಟ್ಟನ್ನು ಸಡಿಲಿಸಿಕೊಂಡು ಅದಷ್ಟು ಸಹಜವಾಗಿ ಬರೆದರೆಂದರೆ ಅದು ಕನ್ನಡಿಗರ ಪುಣ್ಯ. ಹೀಗೆ ಸಂಸ್ಕೃತಸಾಹಿತ್ಯವು ಕನ್ನಡಸಾಹಿತ್ಯಕ್ಕೆ ಪ್ರೇರಕವೂ ಪೋಷಕವೂ ಆದಂತೆಯೇ ಬಲುಮಟ್ಟಿಗೆ ಮಾರಕವೂ ಆಯಿತು. ಇದು ಯಾರ ತಪ್ಪು! ಪರಾವಲಂಬಿಗಳಾದ ಕನ್ನಡ ಕವಿಗಳದೇ, ಮೇಲು ಪಂಕ್ತಿಯಾಗಿ ನಿಂತ ಸಂಸ್ಕೃತ ಸಾಹಿತ್ಯದ್ದೇ ಎಂಬ ವಿಷಯದಲ್ಲಿ ಚರ್ಚೆ ಬರಬಹುದು. ಆದರೂ ಸಂಸ್ಕೃತದ ಅನುಕರಣದಿಂದ ಕನ್ನಡಸಾಹಿತ್ಯಕ್ಕೆ ಉಪಕಾರವಾದಂತೆಯೇ ಅಪಕಾರವೂ ಆಯಿತೆಂಬ ಅಂಶ ಮಾತ್ರ ನಿರ್ವಿವಾದವಾಗಿದೆ.

"Sanskrit has crushed us, cramped us, stifled us." ಎಂದು ಶ್ರೀಮಾನ್ ಶ್ರೀಕಂಠಯ್ಯನವರು ಹೇಳಿದಾಗ ಅವರ ಆಶಯವು ಇದೇ. ಸಂಸ್ಕೃತದ ಗುಣಗಾನವನ್ನು ಮೊದಲೇ ಹಲವರು ಮಾಡಿದ್ದರಿಂದ, ಸಂಸ್ಕೃತದ ದುಷ್ಪರಿಣಾಮಗಳನ್ನು ಇವರು ಒತ್ತಿ ಹೇಳಬೇಕಾಯಿತು. ಇನ್ನು ಇಂಗ್ಲಿಷಿನ ಸಹಾಯವೇ ಮುಂದೆ ಕನ್ನಡಕ್ಕೆ ಆವಶ್ಯಕವೆಂದು ಅವರು ಹೇಳಿದ್ದರಲ್ಲಿ ಯಾವ ಚರ್ಚೆಗೂ ಆಸ್ಪದ ಕಾಣಿಸುವುದಿಲ್ಲ. ಇಂಗ್ಲಿಷಿನ ವಿಶಾಲವಾದ ಸಾಹಿತ್ಯಕ್ಷೇತ್ರದಲ್ಲಿ ವಿಹರಿಸಿದವರು ಯಾರು ತಾನೆ ಕನ್ನಡವೂ ಅದೇ ರೀತಿ ಬೆಳೆಯಬೇಕೆಂದು ಹಾರೈಸುವುದಿಲ್ಲ! ಇಂಗ್ಲಿಷಿನಲ್ಲಿರುವ ಸಾಹಿತ್ಯದ ಮಾದರಿಗಳು ನಮ್ಮ ಕನ್ನಡಕ್ಕೆ ಮಾತ್ರ ಏಕೆ, ಹಿಂದೂದೇಶದ ಸಮಸ್ತ ಭಾಷೆಗಳಿಗೂ ಅನುಕರಣೀಯವಾಗಿವೆ. ಕಾದಂಬರಿ, ಸಣ್ಣಕಥೆ, ಪ್ರಬಂಧ, ಲಘುಗೀತ — ಈ ಮೊದಲಾದ ಸಾಹಿತ್ಯರೂಪಗಳೆಲ್ಲವೂ ಇಂಗ್ಲಿಷಿನ ಸಂಪರ್ಕದಿಂದಲೇ ನಮ್ಮಲ್ಲಿ ಪ್ರಚುರವಾದದ್ದು. ಇವುಗಳ ಲೇಖಕರನ್ನು ಇಂದಿಗೂ ಚೋದಿಸುತ್ತಿರುವುವು ಇಂಗ್ಲಿಷಿನ ಮಾದರಿಗಳೇ. ಇಂಗ್ಲಿಷಿನಿಂದ ಕನ್ನಡಿಗರು ಕಲಿಯತಕ್ಕದ್ದು ಇನ್ನೂ ಬಹಳವಿದೆ. ವಿಜ್ಞಾನಾದಿ ಆಧುನಿಕಶಾಸ್ತ್ರಗಳ ಸಾರವೆಲ್ಲಾ ಕನ್ನಡಕ್ಕೆ ಇಂಗ್ಲಿಷಿನಿಂದಲೇ ಇಳಿಯಬೇಕಾಗಿದೆ. ವಸ್ತುಸ್ಥಿತಿಯನ್ನು ಒಪ್ಪಿಕೊಂಡರೆ ತಪ್ಪೇನು!

ಇನ್ನು ಉಳಿದದ್ದು ಮಧ್ಯದ ವಾಕ್ಯ: "Kannada does not want the help of Sanskrit hereafter." ಇದನ್ನು ಶ್ರೀಮಾನ್ ಶ್ರೀಕಂಠಯ್ಯನವರು ಆಡಿದ್ದ ಪಕ್ಷದಲ್ಲಿ ಇದರ ವಾಚ್ಯಾರ್ಥವೆಂದಿಗೂ ಅವರ ಆಶಯವಾಗಲಾರದು. ಅವರು "ಪಬ್ಲಿಕೇಶನ್ ಕಮಿಟಿ"ಗೆ ನಾಯಕರೆಂದು ಶ್ರೀಮಾನ್ ಜೋಸ್ಯರವರು ಸೂಚಿಸಿದ್ದಾರಷ್ಟೆ. ಶ್ರೀಮಾನ್ ಶ್ರೀಕಂಠಯ್ಯನವರಿಗೆ "ಸಂಸ್ಕೃತವನ್ನು ಬಹಿಷ್ಕರಿಸಬೇಕೆ"ಂಬ ಆಶಯವಿದ್ದಲ್ಲಿ, ವಿಶ್ವವಿದ್ಯಾನಿಲಯದ ಕನ್ನಡಪ್ರಕಟನಶಾಖೆಗಾಗಿ 'ವೇದಗಳು' 'ಸಂಸ್ಕೃತ ನಾಟಕಗಳು' ಮೊದಲಾದ ವಿಷಯಗಳ ಮೇಲೆ ಗ್ರಂಥಗಳನ್ನು ಸಮರ್ಥವಿದ್ವಾಂಸರಿಂದ ಬರೆಯಿಸುವ ಏರ್ಪಾಡನ್ನು ಅವರು ಖಂಡಿತ ಮಾಡುತ್ತಿರಲಿಲ್ಲ. ಮೈಸೂರಿನ ಕರ್ಣಾಟಕಸಂಘದಲ್ಲಿ ಭಾಷಣ ಮಾಡಿದಾಗ ಅರ್ಧಘಂಟೆಗಿಂತ ಹೆಚ್ಚು ಕಾಲ ಕಠೋಪನಿಷತ್ತಿನ ಸ್ವಾರಸ್ಯವನ್ನು ವಿವರಿಸಿ, ಅದನ್ನು ಎಲ್ಲರೂ ಓದಬೇಕೆಂದು ಸದಸ್ಯರಿಗೆ ಉಪದೇಶ ಮಾಡುತ್ತಿರಲಿಲ್ಲ. ಇನ್ನು, "೧೧ನೆಯ ಶತಮಾನದಿಂದ ೧೯ನೆಯ ಶತಮಾನದ ವರೆಗಿನ ಕನ್ನಡಸಾಹಿತ್ಯ" ವಷ್ಟನ್ನೇ ಅಲ್ಲ, ಒಂಬತ್ತು ಹತ್ತನೆಯ ಶತಮಾನಗಳಲ್ಲಿ ಹುಟ್ಟಿ, ಕನ್ನಡವನ್ನು ಬೆಳಗಿದ ಗ್ರಂಥರಾಶಿಯನ್ನು ಕೂಡ "ಸಂಸ್ಕೃತದ ಗಂಧವೆ ಇಲ್ಲದೆ" ತಿಳಿದುಕೊಳ್ಳಬಹುದೆಂಬ ಭಾವನೆಯಾದರೂ ಅವರಿಗೆ ಇದ್ದಂತೆ ತೋರುವುದಿಲ್ಲ. ಹಾಗಿದ್ದಲ್ಲಿ, ಮೈಸೂರು ವಿಶ್ವವಿದ್ಯಾನಿಲಯದಲ್ಲಿ, ಕನ್ನಡದ "ಬೋರ್ಡ್ ಆಫ್ ಸ್ಟಡಿ" ಗೂ "ಪರೀಕ್ಷಕವರ್ಗ"ಕ್ಕೂ ಅಧ್ಯಕ್ಷರಾದ ಅವರು ಕನ್ನಡ ಎಂ. ಎ. ಮತ್ತು ಬಿ. ಎ. (ಆನರ್ಸ್) ಪರೀಕ್ಷೆಗಳಿಗೆ ಸಂಸ್ಕೃತದ ವ್ಯಾಸಂಗವು ಆವಶ್ಯಕವೆಂದು ಭಾವಿಸುತ್ತಿರಲಿಲ್ಲ. ಇದೂ ಅಲ್ಲದೆ ಅವರು ಸಂಸ್ಕೃತದ ಶತ್ರುಗಳಾಗಿದ್ದರೆ, ಮೊನ್ನೆ ಸೆನೆಟ್ ಸಭೆಯಲ್ಲಿ ಮಾಡಿದ ಭಾಷಣದಲ್ಲೇ "ಕನ್ನಡವನ್ನು ಬಹುತೆ ಸುವುದಕ್ಕಾಗಿ ಸಂಸ್ಕೃತದ ಕೊಲೆಯಾಗತಕ್ಕ ಸಂದರ್ಭವೊದಗಿದರೆ ಮೊದಲು ಕನ್ನಡವನ್ನೇ ಬಲಿಕೊಡೋಣ" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿರಲಿಲ್ಲ.

CC-0. Jangamwadi Math Collection. Digitized by eGangotri

ಇದೆಲ್ಲದರ ದೃಷ್ಟಿಯಿಂದ ಶ್ರೀಮಾನ್ ಶ್ರೀಕಂಠಯ್ಯನವರ ವಾಕ್ಯವನ್ನು ಪರಿಶೀಲಿಸಿದರೆ, ಅದರ ಅರ್ಥ ಇಷ್ಟಕ್ಕೆ ಇಳಿಯುತ್ತದೆ: "ಸಂಸ್ಕೃತ ಸಾಹಿತ್ಯದ ಮಾದರಿಗಳನ್ನು ಕನ್ನಡವು ಇದುವರೆಗೆ ಅನುಕರಿಸಿದ್ದು ಸಾಕು. ಇನ್ನು ಮುಂದೆ ಹೊಸಗನ್ನಡಕ್ಕೆ ಬೇರೆಯ ಮಾದರಿ ಬೇಕು. ಅದು ಇಂಗ್ಲಿಷ್ ಸಾಹಿತ್ಯವಾಗಲಿ" ಇದೇ ಶ್ರೀಮಾನ್ ಶ್ರೀಕಂಠಯ್ಯನವರ ಆಶಯ. ಇಷ್ಟೇ ಹೊರತು, ಕನ್ನಡಕ್ಕೆ ಇನ್ನೂ ಪರಿವರ್ತನೆಯಾಗದಿರುವ ವೇದ, ಉಪನಿಷತ್ತು, ಶಾಸ್ತ್ರಗಳು ಮೊದಲಾದ ಎಲ್ಲವನ್ನೂ ತ್ಯಜಿಸಬೇಕು; ಅವುಗಳ ಉಪಯೋಗವೇ ಕನ್ನಡಿಗರಿಗೆ ಬೇಡ—ಎಂದು ಅವರು ಖಂಡಿತ ಹೇಳತಕ್ಕವರಲ್ಲ. ಇದಕ್ಕೆ ಅವರ ಕಾರ್ಯಗಳೇ ಸಾಕ್ಷಿ. ಈ ಅಂಶವು ಮುಂದಟ್ಟಿನಲ್ಲಿ ಶ್ರೀಮಾನ್ ಶ್ರೀಕಂಠಯ್ಯನವರ ಅಭಿಪ್ರಾಯಗಳು "ವಿಶ್ವಾಮಿತ್ರಸೃಷ್ಟಿ"ಯಂತೆ ತೋರಲಾರವು.

'ಕನ್ನಡ' ಪಕ್ಷದ ಅಭಿಪ್ರಾಯಗಳನ್ನು ಶ್ರೀಮಾನ್ ಜೋಸ್ಯರವರು ತಮ್ಮ ಲೇಖನದಲ್ಲಿ ಎಲ್ಲೂ ಪಕ್ಷಪಾತವಿಲ್ಲದೆ ನಿರೂಪಿಸಿದಂತಿಲ್ಲ. ಅವು ಗೊತ್ತಾಗದಿದ್ದರೆ, 'ಕನ್ನಡ' ಪಕ್ಷದವರ ನೆಲೆಯೇ ವಾಚಕರಿಗೆ ಹತ್ತುವುದಿಲ್ಲ; ಅವರ ಮಾತುಗಳಿಗೆಲ್ಲಾ ಅಸ್ವಾರ್ಥವನ್ನು ಕಲ್ಪಿಸುವುದು ಸುಲಭವಾಗುತ್ತದೆ. ಆದ್ದರಿಂದ, ಹಿಂದೆ ಪ್ರಸಂಗವಶದಿಂದ ಸೂಚಿಸಿರುವ ಅಂಶಗಳನ್ನೂ ಮತ್ತೆ ಕೆಲವನ್ನೂ ಇಲ್ಲಿ ನಿರೂಪಿಸುವುದು ಅಪ್ರಸಕ್ತವಾಗಲಾರದು.

ಇಲ್ಲಿ ಮೊದಲು ಗ್ರಹಿಸಬೇಕಾದ ವಿಷಯವೊಂದಿದೆ. ಕನ್ನಡವೇ ಸಾರ್ವತ್ರಿಕ ದ್ವಿತೀಯ ಭಾಷೆಯಾಗಬೇಕೆಂದು ಹೇಳತಕ್ಕವರಿಗೆ ಸಂಸ್ಕೃತದ ಮೇಲೆ ಖಂಡಿತ ದ್ವೇಷವಿಲ್ಲ. ಮಿಕ್ಕವರಿಗಿರುವಂತೆಯೇ ಅವರಿಗೂ ಸಂಸ್ಕೃತದಲ್ಲಿ ಮನಃಪೂರ್ವಕವಾದ ಗೌರವವಿದೆ, ಅಭಿಮಾನವಿದೆ: ಅವರಲ್ಲಿ ಕೆಲವರಿಗಾದರೂ ಅದರ ಪರಿಚಯವೂ ತಕ್ಕಮಟ್ಟಿಗಿದೆ. ಸಂಸ್ಕೃತದಿಂದ ಹಿಂದೆ ಕನ್ನಡಕ್ಕೆ ಎಷ್ಟೋ ಉಪಕಾರವಾಯಿತು; ಮುಂದೆಯೂ ವಿಹಿತವಾದ ರೀತಿಯಲ್ಲಿ ಆಗತಕ್ಕದ್ದಿದೆ – ಎಂದು ಅವರು ಒಪ್ಪಿಕೊಳ್ಳುತ್ತಾರೆ. ಸಂಸ್ಕೃತವು ತನ್ನ ನೆಲೆವೀಡಿನಲ್ಲಿಯೇ ಗತಿಸಿಹೋಗಲಿ—ಎಂದು ಸರ್ವಾತ್ಮನಾ ಅವರು ಕೋರುವುದಿಲ್ಲ. ಆದ್ದರಿಂದ ಸಂಸ್ಕೃತವು ದ್ವಿತೀಯ ಭಾಷೆಯಾಗಿರುವುದನ್ನು ಅವರು ವಿರೋಧಿಸುವುದು ಒಂದು ತತ್ತ್ವಕ್ಕಾಗಿಯೇ ಹೊರತು ಸಂಸ್ಕೃತದ ಮೇಲಿನ ದ್ವೇಷದಿಂದಲ್ಲ. ಸಂಸ್ಕೃತವನ್ನು ವಿರೋಧಿಸುವಂತೆಯೇ ತೆಲುಗು, ತಮಿಳು, ಫ್ರೆಂಚ್, ಪಾರ್ಸಿ ಮೊದಲಾದ ಭಾಷೆಗಳನ್ನೂ ಅವರು ವಿರೋಧಿಸುತ್ತಾರೆ. ಹಾಗಾದರೆ ಅವುಗಳ ಮೇಲೆಯೂ ಅವರಿಗೆ ದ್ವೇಷವೆನ್ನಬಹುದೆ?

ದೇಶಭಾಷೆಗೆ ನಮ್ಮ ವಿದ್ಯಾಭ್ಯಾಸಕ್ರಮದಲ್ಲಿ ಯಾವ ಸ್ಥಾನವಿರಬೇಕು—ಎನ್ನುವುದೇ ಅವರ ಸಮಸ್ಯೆ. ಎಲ್ಲ ವಿದ್ಯಾರ್ಥಿಗಳೂ ಅದನ್ನು ದ್ವಿತೀಯಭಾಷೆಯ ರೂಪದಲ್ಲಾದರೂ ಕಲಿಯಬೇಕು; ಸಂಸ್ಕೃತವನ್ನೋ ಮತ್ತೊಂದು ಭಾಷೆಯನ್ನೋ ಅದಕ್ಕೆ ಪ್ರತಿಯಾಗಿ ಓದುತ್ತೇವೆಂದು ಹೇಳಿ, ದೇಶಭಾಷೆಯ ವ್ಯಾಸಂಗದಿಂದ ಯಾರೂ ತಪ್ಪಿಸಿಕೊಳ್ಳಕೂಡದು ಎನ್ನುವುದೇ ಅವರ ತತ್ತ್ವ. ಇಂಗ್ಲಿಷ್ ಭಾಷೆ ಸಾರ್ವತ್ರಿಕವಾಗಿ ಪ್ರಥಮ ಭಾಷೆಯಾಗಿದೆ, ಇನ್ನೂ ಕೆಲವು ಕಾಲ ಅದರ ಪ್ರಾಶಸ್ತ್ಯ ಕಡಿಮೆಯಾಗುವಂತಿಲ್ಲ; ಅದರಿಂದ ನಮಗೆ ಎಷ್ಟೋ ಸೇವೆ ಇನ್ನೂ ಸಲ್ಲಬೇಕಾಗಿರುವಾಗ ಹಾಗಾಗುವುದು ಹಿತವೂ ಅಲ್ಲ. ಇನ್ನು ಉಳಿದದ್ದು ದ್ವಿತೀಯ ಭಾಷೆ. ೧೯೩೫—೩೬ನೆಯ ವರ್ಷದ ಪರಿಷ್ಕರಣದಂತೆ ವಿಶ್ವವಿದ್ಯಾನಿಲಯದಲ್ಲಿ ದ್ವಿತೀಯಭಾಷೆಯೆನ್ನುವುದಕ್ಕೇ ಲೋಪ ಬರುವುದರಲ್ಲಿತ್ತು. ಕನ್ನಡದ ಅಭಿಮಾನಿಗಳು ಅದನ್ನು ತಪ್ಪಿಸಿ, ದೇಶಭಾಷೆಯಾದ ಕನ್ನಡವೊಂದು* ದ್ವಿತೀಯ ಭಾಷೆಯಾಗಿರಲೇಬೇಕೆಂದು ಸ್ಥಾಪಿಸಿದರು. ಮೈಸೂರು ಕನ್ನಡ ದೇಶ. ಇಲ್ಲಿಯ ಪ್ರಜೆಗಳಲ್ಲಿ ತುಂಬ ಮಂದಿ ಕನ್ನಡವನ್ನೇ ಆಡತಕ್ಕವರು; ಮಿಕ್ಕವರೂ ಕನ್ನಡವನ್ನು ಅರ್ಥಮಾಡಿಕೊಳ್ಳಬಲ್ಲವರು. ಇಂಥ ಭಾಷೆಗೆ ವಿದ್ಯಾಭ್ಯಾಸಕ್ರಮದ ಎಲ್ಲಾ ದರ್ಜೆಗಳಲ್ಲೂ ಒಂದು ನಿಯತಸ್ಥಾನವು ಇದ್ದೇ ತೀರಬೇಕಲ್ಲವೆ? ಕನ್ನಡವನ್ನು

---

* ಅದರ ಜೊತೆಗೆ, ಮಹಮ್ಮದೀಯರ ಮಾತೃಭಾಷೆಯಾದ ಉರ್ದುವೂ ಕಾರಣಾಂತರಗಳಿಂದ ಸೇರಿತು. ಮಹಮ್ಮದೀಯರೂ ಕನ್ನಡವನ್ನು ಓದಬೇಕೆಂಬ ಆಶಯವು 'ಕನ್ನಡ' ಪಕ್ಷದವರಿಗೆ ಉಂಟು, ಪ್ರಬಲವಾಗಿಯೇ ಉಂಟು. ಆದರೆ ಭಾಷಾಸಂಸ್ಕೃತಿಗಳಲ್ಲಿ ಹಿಂದುಗಳಿಗಿಂತ ತುಂಬ ಭಿನ್ನರಾದ ಮಹಮ್ಮದೀಯರಿಗೆ ಕನ್ನಡವನ್ನು ಕಲಿಸುವ ಉದ್ದೇಶವು ಫಲಿಸುವುದಕ್ಕೇ ಇನ್ನೂ ಕೆಲವು ಕಾಲ ಬೇಕೆಂದು ತೋರುತ್ತದೆ.

CC-0. Jangamwadi Math Collection. Digitized by eGangotri

ಕಲಿಯದೆಯೇ ವಿಶ್ವವಿದ್ಯಾನಿಲಯದಿಂದ ಒಬ್ಬ ವಿದ್ಯಾರ್ಥಿ ಪಾರಾಗುವುದು ಅನುಚಿತವಲ್ಲವೆ ?

ಕಾಲೇಜಿನ ವಿದ್ಯಾರ್ಥಿಗಳೆಲ್ಲರೂ ಕನ್ನಡವನ್ನು ಓದಲೇಬೇಕೆನ್ನುವುದಕ್ಕೆ ಕನ್ನಡದ ಮೇಲಿನ ಮಮತೆಯೊಂದೇ ಪ್ರೇರಕವಲ್ಲ; ಅದಕ್ಕೆ ಸಂಗತವಾದ ಕಾರಣಗಳೂ ಉಂಟು. ನಮ್ಮಲ್ಲಿ ಪ್ರೌಢವಿದ್ಯಾಭ್ಯಾಸವನ್ನು ಮಾಡತಕ್ಕವರು ಎಲ್ಲೋ ಕೆಲವು ಮಂದಿ ಇವರ ವಿದ್ಯೆಯೆಲ್ಲಾ ಇವರ ಅಂಗದಲ್ಲೇ ಜೀರ್ಣವಾಗಬೇಕೋ, ಅಥವಾ ಅದರಿಂದ ದೇಶದ ಮಿಕ್ಕ ಪ್ರಜೆಗಳಿಗೆ ಉಪಕಾರವಾಗಬೇಕೋ ? ನಮ್ಮ ಪ್ರೌಢವಿದ್ವಾಂಸರು ಜ್ಞಾನಪ್ರಚಾರ ಕಾರ್ಯವನ್ನು ಕೈಕೊಂಡ ಹೊರತು ಜನಜೀವನವು ಸಮರ್ಪಕವಾಗುವುದಿಲ್ಲ. ಇದು ಯಾವ ರೀತಿ ನಡೆಯಬೇಕು ? ನಮ್ಮ ದೇಶದಲ್ಲಿ ಇಂಗ್ಲಿಷನ್ನು ಬಲ್ಲವರು ನೂರಕ್ಕೆ ಒಬ್ಬರಾದರೂ ಇದ್ದಾರೋ ಇಲ್ಲವೋ ತಿಳಿಯದು. ಮಿಕ್ಕವರಿಗೆ ಗೊತ್ತಾಗುವ ಭಾಷೆ ಕನ್ನಡವೊಂದೇ. (ಅದನ್ನೂ ಹಲವರು ಓದಿ ಬರೆಯಲಾರರು). ವಿದ್ವಾಂಸರ ಜ್ಞಾನವು ಇವರಿಗೆ ಮುಟ್ಟಬೇಕಾದರೆ ಕನ್ನಡದ ಮೂಲಕವೇ ಹರಿಯಬೇಕು. ಈ ಜ್ಞಾನಪ್ರದಾನಕ್ಕೆ ದೇಶದಲ್ಲಿರುವ ವಿದ್ಯಾವಂತರೆಲ್ಲರೂ ತೊಡಗಿದರೂ ಸಾಲದಿರುವಾಗ ಇವರಲ್ಲಿ ಅನೇಕರಿಗೆ ಆದರ ಸಾಧನವಾದ ಕನ್ನಡದಲ್ಲಿ ಸಾಕಾದಷ್ಟು ವ್ಯುತ್ಪತ್ತಿಯಿಲ್ಲದಿದ್ದರೆ ದೇಶಕ್ಕೆ ಎಷ್ಟು ನಷ್ಟ !

ಇಲ್ಲಿ ಗಮನಿಸತಕ್ಕ ಅಂಶ ಇನ್ನೂ ಒಂದುಂಟು. ಇಂಗ್ಲಿಷಿನ ಜ್ಞಾನವೇನೋ ಸದ್ಯದಲ್ಲಿ ನಮಗೆ ಅಗತ್ಯವಾಗಿದ್ದರೂ ಇಂಗ್ಲಿಷ ಭಾಷೆಯ ಮೂಲಕವೇ ಹೈಸ್ಕೂಲು ಕಾಲೇಜುಗಳಲ್ಲಿ ಪಾಠಗಳು ನಡೆಯುತ್ತಿರುವುದರಿಂದ ವಿದ್ಯಾರ್ಥಿಗಳ ಕಾಲವೂ ಶಕ್ತಿಯೂ ತುಂಬ ಅಪವ್ಯಯವಾಗುತ್ತಿವೆ. ಸದ್ಯಕ್ಕೆ ಹೈಸ್ಕೂಲುಗಳಲ್ಲಾದರೂ ದೇಶಭಾಷೆಯಾದ ಕನ್ನಡದ ಮೂಲಕ ಶಿಕ್ಷಣವನ್ನು ಕೊಡುವುದು ಅತ್ಯಗತ್ಯ. ಇದನ್ನು ವಿದ್ಯಾವಿಧಾಯಕರೆಲ್ಲರೂ ಒಪ್ಪುತ್ತಾರೆ. ಹೈಸ್ಕೂಲುಗಳಲ್ಲಿ ಪಾಠ ಹೇಳತಕ್ಕ ಉಪಾಧ್ಯಾಯರು ವಿಶ್ವವಿದ್ಯಾನಿಲಯದ ಪದವೀಧರರು. ಕನ್ನಡ ಚೆನ್ನಾಗಿ ಬಾರದಿದ್ದರೆ ಇವರು ಕನ್ನಡದಲ್ಲಿ ಶಾಸ್ತ್ರೀಯ ವಿಷಯಗಳನ್ನು ಹುಡುಗರಿಗೆ ಬೋಧಿಸುವುದು ಹೇಗೆ ? ದೇಶಭಾಷೆಯಲ್ಲೇ ಹೈಸ್ಕೂಲಿನ ಶಿಕ್ಷಣವನ್ನು ಕೊಡಲು ಇನ್ನೂ ಪ್ರಾರಂಭಿಸದಿರುವುದಕ್ಕೆ, ಉಪಾಧ್ಯಾಯರಲ್ಲಿ ಹಲವರು ಕನ್ನಡವನ್ನು ವ್ಯಾಸಂಗ ಮಾಡದಿರುವುದೂ ಒಂದು ಕಾರಣವಾಗಿರಬಹುದು. ಇನ್ನಾದರೂ ಈ ಅಡಚಣೆ ತಪ್ಪುವಂತೆ, ವಿಶ್ವವಿದ್ಯಾನಿಲಯದಲ್ಲಿ ಕನ್ನಡವನ್ನು ಎಲ್ಲ ವಿದ್ಯಾರ್ಥಿಗಳಿಗೂ ದ್ವಿತೀಯ ಭಾಷೆಯಾಗಿ ಕಲಿಸುವುದು ಆವಶ್ಯಕ.

ಈ ಅಂಶಗಳನ್ನು 'ಸಂಸ್ಕೃತ' ಪಕ್ಷದವರಲ್ಲಿ ಅನೇಕರು ಒಪ್ಪಿಕೊಳ್ಳುತ್ತಾರೆ; ಆದರೆ ಮುಂದಕ್ಕೆ ಹೀಗೆ ವಾದಿಸುತ್ತಾರೆ. ಕನ್ನಡದಲ್ಲಿ ಗ್ರಂಥ ಬರೆಯಬೇಕಾದರೆ, ಪಾಠ ಹೇಳಬೇಕಾದರೆ ಕನ್ನಡವನ್ನೇ ಓದಬೇಕಾಗಿಲ್ಲ, ಸಂಸ್ಕೃತವನ್ನು ಓದಿದ್ದರೂ ಸಾಕು. ಸಂಸ್ಕೃತ ಬಂದರೆ ಕನ್ನಡ ಒಂಗಂತೆಯೇ. ಆದ್ದರಿಂದ ಸಂಸ್ಕೃತವನ್ನು ದ್ವಿತೀಯ ಭಾಷೆಯಾಗಿ ತೆಗೆದುಕೊಂಡರೂ ಕನ್ನಡವನ್ನು ತೆಗೆದುಕೊಂಡರೂ ಹೆಚ್ಚುಕಡಮೆ ಒಂದೇ. ಸಂಸ್ಕೃತವನ್ನು ಓದಿದವನಿಗೆ ಸಂಸ್ಕೃತ ಕನ್ನಡಭಾಷೆಗಳೆರಡು ಪರಿಚಯವೂ ಆಗುತ್ತದೆ. ಬರಿಯ ಕನ್ನಡದವನಿಗೆ ಸಂಸ್ಕೃತ ಬರುವುದಿಲ್ಲ. ಇಷ್ಟೇ ವಿಶೇಷ–ಎಂದು ಅವರ ಅಭಿಪ್ರಾಯವಾಗಿರುವಂತೆ ತೋರುತ್ತದೆ. ಆದರೆ ಈ ಭಾವ ಸರಿಯಲ್ಲ: ಸಂಸ್ಕೃತ ತಿಳಿದ ಮಾತ್ರಕ್ಕೇ ಕನ್ನಡವೂ ತಿಳಿದಂತೆ ಎಂದಿಗೂ ಆಗಲಿಲ್ಲ. ಕನ್ನಡ ಭಾಷೆ ಅಷ್ಟರ ಮಟ್ಟಿಗೆ ಸಂಸ್ಕೃತದ ಛಾಯೋಪಜೀವಿಯಲ್ಲ. ಅದಕ್ಕೆ ವ್ಯಕ್ತಿತ್ವವುಂಟು, ವೈಶಿಷ್ಟ್ಯವುಂಟು, ಕನ್ನಡದಲ್ಲಿ ಲೇಖನಶಕ್ತಿ ಕುದುರಬೇಕಾದರೆ, ಭಾಷೆಯ ಮರ್ಮವನ್ನು ತಿಳಿಯಬೇಕಾದರೆ ಕನ್ನಡವನ್ನು ಪ್ರತ್ಯೇಕವಾಗಿ ವ್ಯಾಸಂಗಮಾಡಲೇ ಬೇಕು. ಭಾಷಾಜ್ಞಾನವು ಪೂರ್ಣವಾಗಬೇಕಾದರೆ ಸಾಹಿತ್ಯಪರಿಚಯವು ಚೆನ್ನಾಗಿರಬೇಕಷ್ಟೆ. ಇದು ಸಂಸ್ಕೃತವನ್ನು ಓದಿಕೊಂಡ ಮಾತ್ರದಿಂದ ಬಂದು ಬಿಡುತ್ತದೆಯೆ ? ಆದ್ದರಿಂದಲೇ ವಿದ್ಯಾರ್ಥಿಗಳೆಲ್ಲರೂ ಕನ್ನಡವನ್ನೇ ಪ್ರತ್ಯೇಕವಾಗಿ ಕಲಿಯಬೇಕಾಗಿರುವುದು. ಸಂಸ್ಕೃತದ ಮಹತ್ತ್ವ ಎಷ್ಟೇ ಇರಲಿ, ಅದು ಕನ್ನಡದ ಸ್ಥಾನವನ್ನು ಆಕ್ರಮಿಸುವುದು ಯುಕ್ತವಲ್ಲ; ಕನ್ನಡದ ಕೆಲಸವನ್ನು ಅದು ಮಾಡಲಾರದು.

ಕನ್ನಡವೊಂದನ್ನೇ ದ್ವಿತೀಯಭಾಷೆಯಾಗಿ ಮಾಡಿದರೆ ಸಂಸ್ಕೃತದ ವ್ಯಾಸಂಗಕ್ಕೆ ವಿದ್ಯಾಲಯಗಳಲ್ಲಿ ಅವಕಾಶ ತಪ್ಪಿ ಹೋಗುವುದಾಗಿ ಶ್ರೀಮಾನ್ ಜೋಯ

CC-0. Jangamwadi Math Collection. Digitized by eGangotri

ರವರು ಸೂಚಿಸುತ್ತಾರೆ. ಇದು ದಿಟವಲ್ಲ. ಸಂಸ್ಕೃತಕ್ಕೆ ದ್ವಿತೀಯಭಾಷಾಸ್ಥಾನವು ತಪ್ಪಿದ್ದ ಮಾತ್ರಕ್ಕೆ ಅದು ವಿಶ್ವವಿದ್ಯಾನಿಲಯದಿಂದಲೇ ಲುಪ್ತವಾಗುತ್ತಿರಲಿಲ್ಲ. ವಿದ್ಯಾರ್ಥಿಗಳು ಆಗಲೂ ಅದನ್ನು ಐಚ್ಛಿಕ ವಿಷಯವಾಗಿ ತೆಗೆದುಕೊಂಡು ವ್ಯಾಸಂಗಮಾಡಬಹುದಾಗಿತ್ತು. ಸಂಸ್ಕೃತದಲ್ಲಿ ಎಂ. ಎ., ಬಿ. ಎ. (ಆನರ್ಸ್) ಪರೀಕ್ಷೆಗಳು ಇರುತ್ತಲೇ ಇದ್ದುವು. ಈಗ ಯಾರು ಸಂಸ್ಕೃತ ವಿದ್ಯೆಯನ್ನು ಕಾಪಾಡುತ್ತಾರೋ ಅದರ ಗೌರವವನ್ನು ಬೆಳಸುತ್ತಾರೋ ಆ ವಿದ್ವಾಂಸರನ್ನು ವಿಶ್ವವಿದ್ಯಾನಿಲಯವು ಮುಂದೆಯೂ ತಯಾರು ಮಾಡುತ್ತಲೇ ಇತ್ತು. ಹೆಚ್ಚು ಸಂಖ್ಯೆಯ ಜನಕ್ಕೆ ಕೊಂಚಮಟ್ಟಿನ ಸಂಸ್ಕೃತದ ಪರಿಚಯವಾಗುವುದು ಆಗ ತಪ್ಪುತ್ತಿತ್ತು. ನಿಜ. ಆದರೆ ಅದರಿಂದ ದೇಶಕ್ಕೆ ಆಗುತ್ತಿದ್ದ ಹಾನಿಗಿಂತಲೂ ಅವರಿಗೆ ದೇಶಭಾಷಾಜ್ಞಾನವಿಲ್ಲದೆ ಆಗುತ್ತಿದ್ದ ಹಾನಿಯೇ ಹೆಚ್ಚು.

ಕೊನೆಯಲ್ಲಿ ಒಂದು ಮುಖ್ಯ ವಿಷಯವನ್ನು ಗಮನಿಸಬೇಕು. ಸಂಸ್ಕೃತದಲ್ಲಿ ಭಾರತೀಯರೆಲ್ಲರಿಗೂ ಅಪಾರವಾದ ಅಭಿಮಾನವಿದೆ. ಅದು ನಮ್ಮ ಪ್ರಾಚೀನ ಸಂಸ್ಕೃತಿಯ ನಿಧಿ. ಈ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದಕ್ಕೋಸ್ಕರವೇ ಸಂಸ್ಕೃತವನ್ನು ಇಷ್ಟು ಎಚ್ಚರಿಕೆಯಿಂದ ಪೋಷಿಸಿಕೊಂಡು ಬಂದಿರುವುದು. ಸಂಸ್ಕೃತವು ದಿವ್ಯಭಾಷೆ, ಆದರೆ ಅದು ಕ್ಲಿಷ್ಟಭಾಷೆ, ಜನಸಾಮಾನ್ಯದಲ್ಲಿ ಬಳಕೆಯಿಲ್ಲದ ಭಾಷೆ. ಇದನ್ನು ಚೆನ್ನಾಗಿ ಕಲಿತು, ಆ ಮೂಲಕ ಗೀರ್ವಾಣಸಂಸ್ಕೃತಿಯನ್ನು ಗ್ರಹಿಸತಕ್ಕವರ ಸಂಖ್ಯೆ ಅತ್ಯಲ್ಪ. ಇವರೇ ಎಂ. ಎ., ಬಿ. ಎ. ( ಆನರ್ಸ್ ) ಮೊದಲಾದ ಪರೀಕ್ಷೆಗಳಿಗೆ ಸಂಸ್ಕೃತವನ್ನು ತೆಗೆದುಕೊಂಡು ಓದತಕ್ಕವರು. ಮಿಕ್ಕವರು—ವಿದ್ಯಾವಂತರು ಕೂಡ—ಈ ಸಂಸ್ಕೃತಿಯನ್ನು ಸ್ವಭಾಷೆಯ ಮೂಲಕವೋ ಇಂಗ್ಲಿಷಿನ ಮೂಲಕವೋ ಗ್ರಹಿಸಬೇಕು. ಜನಸಾಮಾನ್ಯಕ್ಕಂತೂ ಅಗತ್ಯವಾದದ್ದು ಈ ಸಂಸ್ಕೃತಿಯೇ ಹೊರತು ಅದರ ಹೊದಿಕೆಯಾದ ಸಂಸ್ಕೃತಭಾಷೆಯಲ್ಲ ಅದನ್ನು ಅವರು ಪಡೆಯಬೇಕಾದರೆ ದೇಶಭಾಷೆಯೊಂದೇ ಗತಿ. ಸಂಸ್ಕೃತಾಭಿಮಾನಿಗಳು ಈ ತತ್ತ್ವವನ್ನರಿತು, ಇನ್ನು ಮುಂದೆ ಕನ್ನಡವನ್ನು ತಿರಸ್ಕಾರದಿಂದ ನೋಡದೆ ಸಂಸ್ಕೃತದ ತಿರುಳನ್ನು ಕನ್ನಡಕ್ಕೆ ಒದಗಿಸಿದರೆ, ಸಂಸ್ಕೃತದ ಸಾರವೂ ಉಳಿಯುತ್ತದೆ; ಕನ್ನಡಭಾಷೆಯೂ ಬೆಳೆಯುತ್ತದೆ. ಇತ್ತಕಡೆಗೆ ಅವರ ಗಮನವಿನ್ನೂ ಹರಿಯದೆ, ಸಂಸ್ಕೃತದ ಉತ್ಕರ್ಷವನ್ನೂ ಕನ್ನಡದ ಋಣವನ್ನೂ ಸ್ಥಾಪಿಸುವ ಸಿದ್ಧಸಾಧನ ಕಾರ್ಯದಲ್ಲೇ ಅವರು ನಿರತರಾಗಿರುವುದು ಶೋಚನೀಯವಾದ ಸಂಗತಿ.

ಮ. ರಾ. ಜೋಯ್ಸರವರು ಕಳೆದ ತಿಂಗಳ ಜಯಕರ್ನಾಟಕದಲ್ಲಿ ಪ್ರಕಟವಾದ ಲೇಖನದಲ್ಲಿ ಕೆಳಗಿನ ತಿದ್ದುಪಡೆಗಳಾಗಬೇಕೆಂದು ಕೋರುತ್ತಾರೆ:—

೫೦೭ ನೇ ಪೇಜಿನ ೨ನೆಯ ಕಾಲಮಿನಲ್ಲಿ "ಅಂದರೆ ಕಾಲೇಜುಗಳಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಯು ಕನ್ನಡವನ್ನೂ ಸಂಸ್ಕೃತವನ್ನೂ ಅಭ್ಯಾಸಿಸಬೇಕು," ಎಂಬ ವಾಕ್ಯವು "ಕಾಲೇಜುಗಳಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಯೂ ಕನ್ನಡವನ್ನಾಗಲಿ ಉರ್ದುವನ್ನಾಗಲಿ ಅಭ್ಯಾಸಿಸಬೇಕು" ಎಂದಿರಬೇಕು.

೫೦೮ ನೆಯ ಪೇಜಿನ ೨ನೆಯ ಕಾಲಮಿನಲ್ಲಿ "ಅವರುಗಳೂ ಕರ್ನಾಟಕದ ಸಾತಕಪ್ರಪಂಚಕವೂ ಮ। ರಾ। ಶ್ರೀಕಂಠಯ್ಯನವರ ಪ್ರಚಂಡನಿಯಮಗಳನ್ನು ಖಂಡಿಸಲೇಬೇಕು," ಎಂಬಕಡೆ "ಖಂಡಿಸಲೊ ಮಂಡಿಸಲೊಬೇಕು" ಎಂದಿರಬೇಕು.



CC-0. Jangamwadi Math Collection. Digitized by eGangotri



**ಹಿಡಿಂಬೆ**—ಲೇ. ಕಡೆಂಗೋಡ್ಲು ಶಂಕರಭಟ್ಟರು.

ಕರ್ತವ್ಯ ದಕ್ಷನಾದ ಸಾಹಿತಿಯ ಕೃತಿಗಳಲ್ಲಿ ಅವನ ಲ್ಲಿಲ್ಲದ ಗುಣಗಳು ಪ್ರಕಟವಾಗುವದಿಲ್ಲವಾದರೂ ಕಣ್ಣು ತಪ್ಪಿ ಬರುವ ದೋಷಗಳು ಮಾಯವಾಗುತ್ತವೆ. 'ಹಿಡಿಂಬೆ'ಯು ಇಂಥದೊಂದು ಕೃತಿಯಾಗಿದೆ. ಪೌರಾಣಿಕ ನಾಟಕದ ಸಾಮಾನ್ಯ ರೂಪ–ರೇಷೆಗಳಾದರೂ ಈ ಕೃತಿಗೆ ಅನ್ವಯಿಸುವವು. ಕಥೆಯ ಅಮಾನುಷ ವ್ಯಕ್ತಿಗಳಿಗೂ ಅಸಂಭವನೀಯಕೃತಿಗಳಿಗೂ ಲೇಖಕರು ಮಾನವೀಯತೆಯನ್ನೂ ಸಂಭವನೀಯತೆಯನ್ನೂ ದಯಪಾಲಿಸಿದ್ದಾರೆ.

ರಂಗಭೂಮಿಯ ದೃಷ್ಟಿಯಿಂದ ಈ ಕೃತಿಯಲ್ಲಿ ಕೆಲವು ವ್ಯತ್ಯಾಸಗಳು ಕಾಣುವವು. ಬಹು ದೀರ್ಘವಾದ 'ಆತ್ಮಗತ' ಭಾಷಣಗಳು ಎಲ್ಲೆಡೆಗೂ ತಲೆದೋರುವವು. ಅಲ್ಲದೆ ಒಂದು ರಾತ್ರಿಯ ಸನ್ನಿವೇಶವನ್ನು ಐದಂಕಗಳಲ್ಲಿ ಅರಳಿಸಿರುವದರಿಂದ ನಾಟಕದಲ್ಲಿ ಕಾರ್ಯಬಾಹುಲ್ಯಕ್ಕಿಂತ ಮಾತುಗಾರಿಕೆಗೆ ಹೆಚ್ಚಾಗಿ ಪ್ರಾಶಸ್ತ್ಯವು ದೊರೆತಿದೆ. ಆದರೆ ಸಾಹಿತ್ಯದ ದೃಷ್ಟಿಯಿಂದ ಇದು ವಿಶೇಷವಾಗಿ ಉಪಯುಕ್ತವಾಗಿದೆ. ಮಾದರಿಯ ನಾಟಕದಲ್ಲಿ ತಾತ್ಕಾಲಿಕವೂ ನಿತ್ಯವೂ ಆದ ಆಕರ್ಷಣೆಗಳು ಅವಿರಳವಾಗಿ ಬೆರೆತುಕೊಂಡಿರುವವು. ಅಂದರೆ ರಂಗಭೂಮಿಯ ಮೇಲೆ ಮನೋರಂಜಕವಾಗುವ ಹಾಗೆ ವಸ್ತುಗೌರವವೂ ಇನ್ನುಳಿದ ವಿಷಯಗಳೂ ಅದರಲ್ಲಿರುವವಲ್ಲದೆ ಪಾತ್ರಗಳ ಸ್ವಭಾವನಿರೂಪಣೆ, ಕಾವ್ಯ ಮೊದಲಾದ ಭಾಗಗಳು ಅವಕ್ಕೆ ಸಾಹಿತ್ಯದಲ್ಲಿ ನಿಶ್ಚಿತವಾದ ಸ್ಥಾನವನ್ನು ಕೊಡುವವು. ಆದರೆ ಕೆಲವು ನಾಟಕಗಳು ಕೇವಲ ತಾತ್ಪೂರ್ತಿಕವಾಗಿರಬಹುದು. ಬೇರೆ ಹಲವು ಕೃತಿಗಳಲ್ಲಿ ಸಾಹಿತ್ಯದ ಅಂಶವು **ತುಸುವೆ** ಹೆಚ್ಚಾಗಿರಬಹುದು. ಹೀಗೆ ಸಾಹಿತ್ಯದ ಕಡೆಗೆ ಹೆಚ್ಚಾಗಿ ಒಲಿಯುವ ಕೃತಿಗಳಲ್ಲಿ 'ಹಿಡಿಂಬೆ'ಯೂ ಒಂದಾಗಿದೆ.

ವಿಶೇಷತಃ ಮೊದಲನೆಯ ಎರಡು ಅಂಕಗಳಲ್ಲಿ ಬರುವ ಉದಾತ್ತಭಾವನೆಗಳೂ ಕಾವ್ಯಮಯ ವಚನಗಳೂ ಇದಕ್ಕೆ ಸಾಕ್ಷಿಯಾಗಿವೆ. ಕೃತಿಯು ಉದ್ಭವಿಸುವದು ಕೇವಲ ನಾಟಕಕಾರನ ಪ್ರಪಂಚಪರೀಕ್ಷೆಯಿಂದಲ್ಲ, ಕವಿಯ ನಿರ್ಮಲಾಂತಃಕರಣದಿಂದೊಡಗೂಡಿದ ಜೀವನ ವಿಮರ್ಶೆಯಿಂದ,–ಎಂಬ ಮಾತು ಇಲ್ಲಿ ಸ್ಪಷ್ಟವಾಗುವದು. ವಿಧಿಯು ದಿಟವೆಂಬುದೇ ಈ ನಾಟಕದ ಮೂಲಮಂತ್ರವಾಗಿದೆ. ತಿರುಳಿಲ್ಲದ ನಾಟಕಕಾರನು ವಿಧಿಯೊಡನೆ ವ್ಯವಹರಿಸುವದೆಂದರೆ 'ವಿಧಿ'ಯನ್ನು ಕಟ್ಟಿಕೊಂಡು ಹಳ್ಳಬಿದ್ದಂತಾಗುವದು. ಆದರೆ ಶ್ರೀ. ಶಂಕರಭಟ್ಟರು ಈ ಸಮಸ್ಯೆಯನ್ನು ಚೆನ್ನಾಗಿ ಬಿಡಿಸಿದ್ದಾರೆ. ನಾಟಕದ ವಿಧಿಯು ನಿಜವೆಂದು ಮನದಟ್ಟಾಗಿಸುವದು.

ಈ ಕೃತಿಯ ಇನ್ನೊಂದು ವಿಶೇಷಗುಣವೆಂದರೆ ಸಂಭಾಷಣೆಗಳಲ್ಲಿ ಒಡೆದು ಕಾಣುವ ವಾಕ್ಚಾತುರ್ಯ. ಲಿಲಿಯು ಇಂಗ್ಲಿಷಿನಲ್ಲಿ ಈ ತೆರದ ಮಾತುಗಾರಿಕೆಯು ನಾಟಕಗಳಲ್ಲಿ ಪ್ರಾರಂಭವಾಗಿ ಶೇಕ್ಸಪಿಯರನ ಪ್ರಸಿದ್ಧ ರೂಪಕಗಳಲ್ಲಿ ರಸವತ್ತಾಗಿ ಬೆಳೆಯಿತು. ರಸದಿಂದ ಬಹು ಗಣೆ ಹೊಂದಿದ ಇದನ್ನು ಇಂದಿನ ಭದ್ರದೃಶ್ಯಗಳಲ್ಲಿ ಯೂ ಕಾಣಬಹುದು. ಚೆಸ್ಟರ್‌ಟನ್ನರ ಗದ್ಯವಾದರೂ ಇದೇ ರೀತಿಯನ್ನು ಅವಲಂಬಿಸಿರುತ್ತದೆ. ವಿರೋಧಾಭಾಸ ಹಾಗು ಕವಿತಾಕಾಮಿನಿಯ ಶ್ಲೋಕ,– ಇವೆರಡು ಗುಣಗಳು ಮಾತುಗಾರಿಕೆಯ ಜೀವಾಳವಾಗಿವೆ.

CC-0. Jangamwadi Math Collection. Digitized by eGangotri

**ಭೀಮ:**– ಹೆಣ್ಣು ಜನ್ಮದಲ್ಲಿ ಹುಟ್ಟಿದವಳೇ! ನಿನಗೆ ಪ್ರಾಣದಲ್ಲಿ ಭಯವಿಲ್ಲ.

**ಹಿಡಿಂಬೆ:**– ಯಾರಿಗಾಗಿ ಪ್ರಾಣವನ್ನು ಕಾಪಾಡಿಕೊಂಡಿದ್ದೆನೊ ಅವನ ಗದೆಯೆ ಪ್ರಾಣಾಪಹಾರ ಮಾಡುವಾಗ ಭಯವೇನು?

ಈ ಶೈಲಿಯು ಭೀಮ–ಹಿಡಿಂಬೆಯರ ಸಂಭಾಷಣೆಯಲ್ಲಿ ರೂಪಗೊಂಡು ನಾಟಕದ ಕೊನೆಯವರೆಗೆ ಹರಿಯುತ್ತಿದೆ. ಅಲ್ಲದೆ ಮೂರನೆಯ ಅಂಕದ ಕೊನೆಯವರೆಗೆ ವಸ್ತುವು ಇದಕ್ಕೆ ಅನುರೂಪವಾಗಿರುವದರಿಂದ ಶೈಲಿಯು ಅಲ್ಲಿಯವರೆಗೆ ಯಶಸ್ವಿಯಾಗಿ ಕಾವ್ಯಮಯ ಭದ್ರರೂಪಕದ (poetic comedy) ಚಿತ್ರವನ್ನು ಕಣ್ಣೆದುರಿಗೆ ಮೂಡಿಸುತ್ತದೆ. ದುರ್ಮುಖ–ಹಿಡಿಂಬೆಯರ ಮಾತಿನ ಚಮತ್ಕಾರವು ಅಷ್ಟು ಉಚ್ಚತರಗತಿಯದಾಗದಿದ್ದರೂ ಅದರಲ್ಲಿ ಈ ಗುಣವು ಇದ್ದೇ ಇರುತ್ತದೆ.

ಭೀಮನು ಹಿಡಿಂಬೆಯನ್ನು ಕಾಣುವವರೆಗೆ ಕಾವ್ಯಮಯವಾದ ಜಿಜ್ಞಾಸೆಯು ನಾಟಕದ ಶೈಲಿಯನ್ನು ಸಜೀವವಾಗಿ ಮಾಡುವದು. ಆ ಮೇಲೆ ಪ್ರಣಯದ ಸನ್ನಿವೇಶಗಳನ್ನು ಚಿತ್ರಿಸಲು ಶೈಲಿಯಲ್ಲಿ ಮಾತಿನ ಚಮತ್ಕಾರವು ಬೆರೆಯುವದು. ಹೀಗೆ ಶೈಲಿಯು ವಸ್ತುವಿಗೆ ತಕ್ಕಂತೆ ಮಾರ್ಪಡುತ್ತ ಹೋಗುವದು ಯಶಸ್ವಿಯಾದ ಕಲೆಯ ಲಕ್ಷಣವಾಗಿದೆ. ಆದರೆ ಭೀಮ–ಹಿಡಿಂಬರ ಮಲ್ಲಯುದ್ಧದ ಪ್ರವೇಶದಲ್ಲಿ ಶೈಲಿಗೆ ಪುಟದೊರೆತಿಲ್ಲ. ಇಲ್ಲಿರಬೇಕಾದ ರೌದ್ರರಸವು ಮಾಯವಾಗಿದೆ. ಭೀಮನು ತನ್ನ ಪರಾಕ್ರಮದಿಂದಲ್ಲ, ಮಾತಿನಿಂದ ಹಿಡಿಂಬನನ್ನು ಕೊಲ್ಲುವನೆಂದೆನಿಸುವದು. ಅಲ್ಲದೆ ಲೇಖಕರು ಹಿಡಿಂಬನ ಮೇಲೆ ಆರೋಪಿಸಿದ ಹೇಡಿತನ,ಪಶ್ಚಾತ್ತಾಪ, ಭೀಮನ ವಿಷಯವಾಗಿ ಕೊನೆಗೆ ಉತ್ಪನ್ನವಾಗುವ ಆದರ,– ಇವು ಅಷ್ಟು ಅಕೃತ್ರಿಮವೆನಿಸುವದಿಲ್ಲ. ಹಿಡಿಂಬೆಯನ್ನು ಪ್ರೀತಿಸುವ ಭೀಮನಲ್ಲಿ ಒಂದು ವೇಳೆ ಕರುಣೆಯು ಉತ್ಪನ್ನವಾಗಬಹುದು. ಆದರೆ ರೊಚ್ಚಿಗೆದ್ದ ಹಿಡಿಂಬನು ಹೀಗೆ ವರ್ತಿಸುವದು ಅಷ್ಟು ಉಚಿತವಾಗಬಹುದೆ?

ಇದರಂತೆ ಕೊನೆಯ ಪ್ರವೇಶದಲ್ಲಿ ಭೀಮ–ಹಿಡಿಂಬೆಯರ ಲಗ್ನವು ತೀರ ಅವಸರದಿಂದ ಜರಗುವದು. ಅನ್ಯೋನ್ಯವಾದ ಪ್ರೇಮವನ್ನು ಕುಂತಿಯು ತಿಳಿಯಬೇಕಾಗಿತ್ತು. ತಿಳಿದ ಮೇಲೆ ಲಗ್ನದ ಪ್ರಸ್ತಾಪವನ್ನು ಎತ್ತಬೇಕಾಗಿತ್ತು. ಆದರೆ ತಿಳಿದಿದೆಯೆಂದು ಓದುಗರಿಗೆ ಅಷ್ಟು ಸ್ಪಷ್ಟವಾಗುವದಿಲ್ಲ. ಅಲ್ಲದೆ ಎಷ್ಟಾದರೂ ಹಿಡಿಂಬೆಯು ಹಿಡಿಂಬನ ತಂಗಿ. ಅಣ್ಣನು ಸತ್ತ ಮರುಕ್ಷಣವೆ ಹೇಗೆ ಲಗ್ನವಾಗುವಳೆ? ಲಗ್ನವಾಗುವದೆಂದು ಸೂಚಿಸಿ ಲೇಖಕರು ಸಾವಕಾಶವಾಗಿ ಲಗ್ನವನ್ನು ಮಾಡಬಹುದಾಗಿತ್ತು.

ನಾಟಕವು ಹೇಗೆ ಕೇವಲ ಸಮಸ್ಯಾತ್ಮಕವಾಗುತ್ತ ನಡೆಯುವದೋ ಹಾಗೆ ರಸವಿಹೀನವೂ ಆಗುವದೆಂದು ತೋರುವದು. ಸಿದ್ಧಾಂತಪ್ರತಿಪಾದನೆಯಲ್ಲಿಯೇ ಲೇಖಕನ ಬುದ್ಧಿಯೆಲ್ಲ ವೆಚ್ಚವಾಗುವದು. ಇಲ್ಲವೆ ಜನತೆಯ ಎದುರಿಗೆ ಸಮಸ್ಯೆಯನ್ನು ಬಿಚ್ಚುವದರಲ್ಲಿಯೇ ಕಲಾಕೌಶಲ್ಯವು ಖರ್ಚಾಗಿ ಹೋಗುವದು. ಇದರಿಂದ ಪಾತ್ರಗಳು ಜೀವನರಂಗದಲ್ಲಿ ಸಹಜವಾಗಿ ವಿಹರಿಸುವ ವ್ಯಕ್ತಿಗಳಾಗದೆ ಸೂತ್ರಧಾರನಂತಿದ್ದ ನಾಟಕಕಾರನ ಬೊಂಬೆಗಳಾಗುವವು. ಆಗ ನಾಟಕದಲ್ಲಿಯ ರಸವು ಬಹುಶಃ ಲಯವಾಗಿ ಹೋಗುವದು. ಇಬ್ಸೆನ್‌ನಂತಹ ಸಾಹಿತಿಗಳಿಗೆ ಮಾತ್ರ ಸಮಸ್ಯೆಯನ್ನು ಜೀವನಮಯವಾಗಿ ಮಾಡಿ ಜೀವನವನ್ನು ಸಮಸ್ಯಾಮಯವಾಗಿ ಮಾಡುವದು ಸಾಧಿಸುವದು. 'ಹಿಡಿಂಬೆ' ಯಲ್ಲಿ ಯಾವ ಬಗೆಯ ಕೃತ್ರಿಮತೆಯೂ ಕಂಡುಬರದಿರುವದು ಸ್ತುತ್ಯವಾದುದೇ ಸರಿ. ಕವಿಯ ಮನಸ್ಸಿನಲ್ಲಿ ಒಂದು ಸಿದ್ಧಾಂತವಿದ್ದರೂ ಕಲಾಕೋವಿದನು ತನ್ನ ಕಾರ್ಯವನ್ನು ಪ್ರಶಂಸನೀಯವಾಗಿ ನೆರವೇರಿಸಿದ್ದಾನೆ. ಆದರೆ ಇಲ್ಲಿ ಇನ್ನೊಂದು ವಿಧದ ತೊಡಕು ಉಂಟಾಗುವದು. ನಾಟಕದ ಉಳಿದ ಕಥಾವಸ್ತುಗಳಂತೆ ಪುರಾಣವೂ ಒಂದು ಕಥಾವಸ್ತುವಾಗಿದೆ. ಅಂದನೇಲೆ ಅದು ನಾಟಕದ ನಿಯಮಗಳಿಗೆ ಒಳಪಟ್ಟಿರುವದು ಸಹಜವಾಗಿದೆ. ಇದು ಏಕಾಂಕ ದೃಶ್ಯದಷ್ಟು ಕಿರಿದಾಗಿದ್ದರೆ ಲೇಖಕರು ಇಲ್ಲಿ ಉಪಯೋಗಿಸಿದ ಸಂಯಮಾನ್ವಿತ ರೀತಿಯು ಒಳ್ಳೆಯದಾಗುತ್ತಿತ್ತು. ಆದರೆ ಈ ನಾಟಕದಲ್ಲಿ ಉಳಿದ ಪಾಂಡವರ ಸ್ಮರಣೆಯೇ ಇಲ್ಲ ಹೀಗೆ ಭೀಮ–ಹಿಡಿಂಬೆಯರ ಸಮಸ್ಯೆಯ ಮೇಲೆ ಎಲ್ಲ ಲಕ್ಷವನ್ನು ಒಟ್ಟುಗೂಡಿಸದಿದ್ದರೆ ನಾಟಕದ ಸೀಮೆಯು ಹೆಚ್ಚು ವಿಶಾಲವಾಗುತ್ತಿತ್ತೆಂದು ಎನ್ನಿಸುವದು. ಅಂದರೆ ಮುಖ್ಯವಾದ ವಸ್ತುವನ್ನು ಬದಿಗಿರಿಸಿ ಸಾಗಬೇಕೆಂದಲ್ಲ; ಆದರೆ ಉಳಿದ ಪಾತ್ರಗಳ

CC-0. Jangamwadi Math Collection. Digitized by eGangotri

ಸಹಾಯದಿಂದ ಅದನ್ನು ಪರಿಪುಷ್ಟಗೊಳಿಸಬಹುದಾಗಿತ್ತು.

ಆದರೆ ಇವೆಲ್ಲ ವಿಮರ್ಶೆಯಲ್ಲಿಯ– ಅಂದರೆ ಒಂದು ಸುಂದರವಾದ ವಸ್ತುವು ಸುಂದರತರವಾಗಬೇಕೆಂಬ ಆಸೆಯ–ತೊಡಕುಗಳು. ನಾಟಕವು ತೇಜಸ್ವಿಯಾಗಿದೆಯೆಂಬುದನ್ನು ಮನಗಾಣಲು ಅದನ್ನು ಒಮ್ಮೆ ಓದಿ ನೋಡಿದರೆ ಸಾಕು.

**ಮೇಳದ ಪದ್ಯಗಳು:–** ಪ್ರ. ಗೀತಾಧರ್ಮಮಂಡಲ, ಅಥಣಿ.

ಇದೀಗ ಅರುಣೋದಯದ ಸಮಯವೆಂದು ಮುನ್ನುಡಿಕಾರರೇ ಹೇಳಿದ್ದಾರೆ. ಕಾವ್ಯಮಾರ್ಗದಲ್ಲಿಯ ನಸುಕಿನ ಬೆಳಕೂ ಇಲ್ಲಿಯ ಕೆಲವು ಗೀತೆಗಳಲ್ಲಿ ಮೂಡಿದೆ. 'ಎನಿತು ಹಾಡಲ್ಕೆ ಹಾಡಿದ ಹಾಡನು' ಮುಂತಾದೆಡೆಗೆ ಹಾಡುಗಾರಿಕೆಯ ಹೊಳಹಿದೆ. ಅಥಣಿಯಲ್ಲಿ ಮೂಡಿದ ಈ ಹೊಸಕಾಲದ ಕುರುಹು ಬೆಳಗಿ ಬಾಳಿ ಹೊಸ ಕುರುಹುಗಳನ್ನು ಕೊಡಲಿ.

**ಸಾಹಿತ್ಯದ ಗುಟ್ಟು:–** ಪ್ರ. ಸಂಘ, ಕರ್ನಾಟಕ ಕಾಲೇಜ, ಧಾರವಾಡ.

ಪ್ರೊ. ಜಾಹಗೀರದಾರ ಅವರು ಕಾಲೇಜಿನಲ್ಲಿ ಬಂದಂದಿನಿಂದ ಅಲ್ಲಿಯ ತರುಣರಿಂದ ಸಾಹಿತ್ಯಮಾರ್ಗದಲ್ಲಿ ಹೆಚ್ಚಾಗಿ ಕೆಲಸವಾಗುತ್ತಲಿದೆ. ಇದಕ್ಕೆ ಪ್ರೊ. ಜಾಹಗೀರದಾರರವರ ಅಭಿನಂದನೀಯವಾದ ಉತ್ಸಾಹವೇ ಕಾರಣ. ಈ ಚಿಕ್ಕ ನಿಬಂಧವು ಈ ಉತ್ಸಾಹದಿಂದ ಪ್ರೇರಿತವಾದ ಉತ್ಸಾಹದ ಪ್ರಥಮಫಲವೆನ್ನಬಹುದು. ಇಲ್ಲಿಯ ವಿಷಯವು ಗಹನವಹುದು. ವಿಷಯವನ್ನು ವಿವೇಚಿಸುವ ರೀತಿಯಾದರೂ ಸಾಕಷ್ಟು ಅರ್ಥಯುತವಾಗಿದೆ. ಆದರೆ ವಿಭಾಗಗಳನ್ನು ಜೋಡಿಸಿರುವ ಸರಣಿಯು ಅಷ್ಟು ಸರಿಯಾಗಿಲ್ಲ. ಕೇವಲ ವಿಷಯದ ದಿಗ್ದರ್ಶನವೇ ಇಲ್ಲಿ ಆಗಿದೆಯೆಂದಮೇಲೆ ಆದು ಚಿತ್ತಾಕರ್ಷಕವಾಗಿರಬೇಕಲ್ಲವೆ? ಸಂಘದವರ ಮುಂದಿನ ಕೃತಿಗಳು ಇದಕ್ಕೂ ಪ್ರೌಢವಾಗಿ ಹೃದಯಂಗಮವಾಗಿರಲೆಂದು ಹಾರೈಸುತ್ತೇವೆ.

**ಸಾವಿನ ಸಮಸ್ಯೆ (ಸಚಿತ್ರ ಪ್ರಹಸನ):—** ಇದೊಂದು ಇಂಗ್ಲಿಷ್ ನಾಟಕದ ರೂಪಾಂತರವು. ಇದರಲ್ಲಿಯ ಕಥಾವಸ್ತುವೇನೂ ಕನ್ನಡಿಗರಿಗೆ ಹೊಸದಲ್ಲ. "ಸಿದ್ದೆಯಲ್ಲಿ ಎಬ್ಬಿಸಲ್ಪಟ್ಟ ಚಂದನದಾಸ" ಎಂದು ಕರ್ನಾಟಕ ವಿದ್ಯಾವರ್ಧಕ ಸಂಘದವರು ಹಿಂದಕ್ಕೆ ಪ್ರಕಟಿಸಿದೊಂದು ಪುಸ್ತಕವು ಇದೇ ಕಥಾವಸ್ತುವನ್ನೇ ಒಳಗೊಂಡಿದೆ. ಅಲ್ಲದೆ ಅಕಬರ ಬೀರಬಲರ ಕಥೆಗಳಲ್ಲಿಯೂ ಇಂತಹದೊಂದು ಸನ್ನಿವೇಶ ನಡೆದಂತೆ ಕಥೆಯುಂಟು. ಆದರೆ ಆ ಕಥಾವಸ್ತುವನ್ನು ಶ್ರೀಮಾನ್ ವೆಂ. ವೆಂಕಟಾಚಾರ್ಯರು ವಿಜಯನಗರದ ಇತಿಹಾಸಕ್ಕೆ ತಿರುಗಿಸಿಕೊಳುವುದರಲ್ಲಿ ತುಂಬ ಜಾಣ್ಮೆಯನ್ನು ತೋರಿಸಿದ್ದಾರೆ.

ಬೇರೆ ಯಾವವಿಕಾರಗಳನ್ನೂ ಎಬ್ಬಿಸದೆ ಬರಿ ಹಾಸ್ಯದ ಬಾಗಿಲನ್ನು ತೆರೆಯುವುದು ಈ ನಾಟಕದ್ದೊಂದು ಹೆಚ್ಚುಗಾರಿಕೆ. ಪಾತ್ರಗಳ ಬಾಯಲ್ಲಿಯ ಮಾತು ಸಹಜವಾಗಿವೆ. ಇನ್ನು ಸಂವಿಧಾನಕವು ಹೀಗಿರದೆ ಹೀಗೆ ಇದ್ದರೆ ಚೆನ್ನಾಗಿತ್ತು– ಎಂದು ಏನಾದರೂ ಹೇಳಬಹುದು. ಆದರೆ ಮತ್ತೊಬ್ಬರ ಕೃತಿಯಲ್ಲಿ ವಿಶೇಷವಾದ ಹೆಚ್ಚು ಕಡಿಮೆಯನ್ನೇಕೆ ಮಾಡಬೇಕೆಂದು ಇದ್ದುದನ್ನು ಇದ್ದಂತೆಯೆ ಇಟ್ಟಿರಬಹುದು. ಏನೇ ಇರಲಿ; ಬಹುಜನ ವಾಚಕರನ್ನಿದು ನಗಿಸದೆ ಬಿಡದು. ಶಾಲೆ ಕಾಲೇಜುಗಳ ವಿದ್ಯಾರ್ಥಿಗಳಿಗೆ ಅಭಿನಯಿಸಿ ತೋರಿಸಲು ತುಂಬ ಉಪಯುಕ್ತವಾಗಿದೆ. ಅಂದವಾದ ಅಚ್ಚು; ದಪ್ಪಗಿನ ಹಾಳೆ. ನಾಟಕದಲ್ಲಿಯ ಬೇರೆಬೇರೆ ನೋಟಗಳ ಮೂರು ಚಿತ್ರಗಳೂ ಇವೆ. ಬೆಲೆ ಹನ್ನೆರಡು ಆಣೆ.

**ಶ್ರೀಹರ್ಷನ ನಾಟಕಗಳು:—** (ವಿಮರ್ಶಾತ್ಮಕ ಗ್ರಂಥ) ಶ್ರೀ. ಕುರಡಿ ನಾರಾಯಣರಾಯರು ಬರೆದ ಈ ಗ್ರಂಥಕ್ಕೆ ಶ್ರೀ. ಸಿ. ಕೇ. ವೇಂಕಟರಾಮಯ್ಯ ಎಂ. ಎ. ಎಲ್ ಎಲ್. ಬಿ. ಅವರು ಮುನ್ನುಡಿ ಬರೆದು ಇದರ ಯೋಗ್ಯತೆಯನ್ನು ಜನರಿಗೆ ತೋರಿಸಿದ್ದಾರೆ. ಮೊದಲನೆಯ ಪ್ರಕರಣದಲ್ಲಿ ಐತಿಹಾಸಿಕರೀತಿಯಿಂದ ಶ್ರೀಹರ್ಷನ ಚರಿತ್ರಾಂಶವನ್ನು ಹೇಳಿದ್ದು, ಮುಂದೆ ಕ್ರಮವಾಗಿ ಒಂದೊಂದು ಪ್ರಕರಣದಲ್ಲಿ ಒಂದೊಂದು ನಾಟಕದ ಗುಣದೋಷಗಳ ಚರ್ಚೆಮಾಡಿ ಕಥಾಸಾರಾಂಶವನ್ನು ವಿವರಿಸಿರುವರು. ಪ್ರಿಯದರ್ಶಿಕಾ, ರತ್ನಾವಳೀ, ನಾಗಾನಂದ ಈ ಮೂರು ನಾಟಕಗಳ ವಿಚಾರದಲ್ಲಿಯೂ ಇದರಲ್ಲಿ ಹೇಳಿದುದರಿಂದ ಈ ಗ್ರಂಥವೊಂದನ್ನು ಚೆನ್ನಾಗಿ ಓದಿದರೆ ತಕ್ಕಮಟ್ಟಿಗೆ ಶ್ರೀಹರ್ಷನ ಪರಿಚಯವು ಕನ್ನಡ ವಾಚಕವರ್ಗಕ್ಕಾಗದಿರದು. ಶ್ರೀ. ಕುರಡಿಯವರ ಈ ಕೃತಿಯು ತುಂಬ ಉಪಯುಕ್ತವಾದುದಾಗಿದೆ.

CC-0. Jangamwadi Math Collection. Digitized by eGangotri

**ಮುರಲಿ:**—(ಕವನ ಸಂಗ್ರಹ) ಮಂಗಳೂರಿನ ಮಿತ್ರ ಮಂಡಲಿಗೆ ಸೇರಿದ ಶ್ರೀ. ಕಾಪು ಮಂಜುನಾಥ ಶೆಣೈ ಅವರು ಇದರಲ್ಲಿಯ ಕವನಗಳನ್ನು ರಚಿಸಿದವರು. ಇದು ಅವರ ಪ್ರಥಮಪ್ರಯತ್ನ. ಭಾಷೆಯ ದೃಷ್ಟಿಯಿಂದ, ಭಾವನೆಗಳ ದೃಷ್ಟಿಯಿಂದ ನೋಡಿದರೆ ಇದರಲ್ಲಿನ ಎಲ್ಲ ಕವನಗಳೂ ಪ್ರಥಮಪ್ರಯತ್ನವೆಂಬುದನ್ನು ಸ್ಪಷ್ಟೀಕರಿಸುತ್ತಿವೆ. ಓದಿ ಪ್ರೋತ್ಸಾಹಿಸಬೇಕೆಂದು ಕವಿಗಳೇ ವಾಚಕರಿಗೆ ಬೇಡಿಕೊಳ್ಳುವದಕ್ಕಿಂತ ತಮ್ಮ ಕವಿತೆ ರಸಿಕರ ಮನವನ್ನು ಸೆಳೆಯದಿರದೆಂದು ಪೂರ್ಣವಾಗಿ ನಂಬುಗೆಯುಂಟಾಗುವ ವರೆಗೆ ಕವಿತಾಪ್ರಕಟನೆಗೆ ಅವಸರಪಡಬಾರದೆಂದು ನಮ್ಮದೊಂದು ಸೂಚನೆ.

**ತಗಡೂರು ಸತ್ಯಾಗ್ರಹಾಶ್ರಮದ ಮತ್ತು ಖಾದೀ ಸಂಸ್ಥೆಯ ವರದಿಗಳು:**— ಶ್ರೀಮಾನ್ ತಗಡೂರು ರಾಮಚಂದ್ರರಾಯರ ಹೆಸರು ಕಣಿಯರ ಸತ್ಯಾಗ್ರಹವು ಮೈಸೂರು ದೇಶದಲ್ಲಿ ಪ್ರಾರಂಭವಾದಂದಿನಿಂದ ಕೇಳಹತ್ತಿತು. ಶ್ರೀ ತಗಡೂರರವರು ಪ್ರಜಾವತ್ಸಲರು; ೬೦-೬೫ ವರ್ಷಗಳ ತರುಣರು; ಅವಿವಾಹಿತರು. ಇಂಗ್ಲಿಷ್ ಶಿಕ್ಷಣವಿಲ್ಲದವರಾದರೂ ಸುಸಂಸ್ಕೃತರು. ಬಡವರ ಬಂಧುಗಳು. ಅನ್ಯಾಯವನ್ನು ಅಹಿಂಸಾಬಲದಿಂದ ಎದುರಿಸುವವರು. ಹೋದ ವರ್ಷದಿಂದ ತಗಡೂರಿನಲ್ಲಿ ತಮ್ಮದೊಂದು ಸ್ಥಿರವಾದ ಆಶ್ರಮವನ್ನು ಏರ್ಪಡಿಸಿಕೊಂಡು ತಮ್ಮ ನಾಲ್ವರು ಜೊತೆಗಾರರೊಡನೆ ಗ್ರಾಮಪುನರುಜ್ಜೀವನದ ಕಾರ್ಯವನ್ನು ಅವಿಶ್ರಾಂತವಾಗಿ ಸಾಗಿಸಿದ್ದಾರೆ. ೨೬-೭-೩೧ ನೆಯ ದಿವಸ ಅವರ ಆಶ್ರಮದ ಪ್ರಾರಂಭೋತ್ಸವವಾದ ಸಂಗತಿಯೂ, ಮುಂದೆ ೨ ತಿಂಗಳಲ್ಲಿ ದುರಾತ್ಮರೊಬ್ಬರು ಅವರ ಆಶ್ರಮದ ೨ ಕಟ್ಟಡಗಳನ್ನು ಸುಟ್ಟ ಸಂಗತಿಯೂ, ಆಗ್ಗೆ ನಿರ್ಮತ್ಸರರಾಗಿ ರಾಯರು ಮತ್ತೆ ಜನಸಹಾಯವನ್ನು ದೊರಕಿಸಿ ಮುಂದೆ ಹೊರಟ ಸಂಗತಿಯೂ, ಹಿಂದುಗಳಲ್ಲಿ ಕೆಲವರನ್ನು ಕ್ರೈಸ್ತರನ್ನಾಗಿ ಮಾಡಿ ಪಾದ್ರಿಗಳು ಅವರಿಗೆ ಕೊಡುತ್ತಿದ್ದ ಕಷ್ಟಗಳನ್ನು ಪರಿಹರಿಸಿ ಅವರ ಶುದ್ಧೀಕರಣದಲ್ಲಿ ಈ ಆಶ್ರಮದವರು ಪಟ್ಟ ಪರಿಶ್ರಮದ ಸಂಗತಿಯೂ ಓದಿ ಮನನಮಾಡತಕ್ಕ ವಿಷಯಗಳಾಗಿವೆ. ಆಶ್ರಮಕ್ಕೆ ಹೊಂದಿಸಿ ಖಾದಿಯ ಕೇಂದ್ರ ಮತ್ತು ಒಂದು ಆಸ್ಪತ್ರೆಗಳ ಕಾರ್ಯವೂ ನಡೆಯುತ್ತಿವೆ. ಖಾದಿಯ ಕೆಲಸದಿಂದ ಬಂದ ಲಾಭವನ್ನೆಲ್ಲಾ ಆಶ್ರಮದ ಇನ್ನುಳಿದ ಕಾರ್ಯಕಲಾಪಗಳಿಗೆ ವೆಚ್ಚಮಾಡಿದ್ದಾರೆ. ಸುಮಾರು ೬೦ ಹಳ್ಳಿಗಳಲ್ಲಿ ತಿರುಗಾಡಿ ದಿನೇ ದಿನೇ ನೂಲುವದನ್ನು ಹೆಚ್ಚಿಸುವದಕ್ಕಾಗಿ ರಾಯರೂ ಪರಿವಾರದವರೂ ಪರಿಶ್ರಮಪಡುತ್ತಿದ್ದಾರೆ. ಶ್ರೀ. ಬಸುಮಯ್ಯನವರೂ ಶ್ರೀ. ರಾಜಾರಾಮಯ್ಯಂಗಾರ್ಯರೂ ಕೆಲವು ಕೋಆಪರೆಟಿವ್ ಸೊಸಾಯಟಿಯವರೂ ರಾಮಚಂದ್ರರಾಯರಿಗೆ ಸಹಾಯವನ್ನಿತ್ತಿದ್ದಾರೆ. ಆದರೆ ಸಾಕಷ್ಟು ಪ್ರೋತ್ಸಾಹವು ಜನರಿಂದ ದೊರೆತಿಲ್ಲವೆಂದು ವರದಿಗಳಿಂದ ಕಂಡುಬರುತ್ತದೆ. ಮೈಸೂರಿನ ಹೊರಗಿನ ಚಟುವಟಿಕೆಗಳಿಗೆ ಸಹಾಯಮಾಡುವ ಮೈಸೂರು ಸೀಮೆಯವರು ತಮ್ಮದೇ ಆದ ಈ ಸಂಸ್ಥೆಯನ್ನು ಹೆಚ್ಚು ಆತ್ಮೀಯಭಾವನೆಯಿಂದ ನೋಡಬೇಕೆಂದು ರಾಯರು ಕೇಳಿಕೊಂಡಿದ್ದಾರೆ. ಅಖಿಲ ಕರ್ನಾಟಕದವರೂ ಇಂಥ ಸಂಸ್ಥೆಗೆ ಸಹಾಯಮಾಡಬೇಕು.

**ನಿಜಾಂ ಕರ್ನಾಟಕ:**— ಲೇಖಕರು ರಾ. ಗು. ಜೋಶಿ, ತರುಣಕರ್ನಾಟಕ ಸಂಘ, ರಾಯಚೂರ. ಬೆಲೆ ೨ಆಣೆ.

ರಾಯಚೂರ ತರುಣಕರ್ನಾಟಕ ಸಂಘದ ತರುಣರ, ಕರ್ನಾಟಕದ ಅಭಿಮಾನಪ್ರೀತಿಗಳು ಅನುಕರಣೀಯವಾಗಿವೆ. ನಿಜಾಂ ಕರ್ನಾಟಕವು ಸಾಹಿತ್ಯ ಕಲಾಕೌಶಲ್ಯ ಮೊದಲಾದವುಗಳಲ್ಲಿ ಪ್ರಾಚೀನ ವೈಭವವನ್ನು ಮತ್ತೆ ಪಡೆದು ದೇಶದಲ್ಲಿ ತಲೆಯೆತ್ತಿ ಮೆರೆಯಬೇಕೆಂದು ಅವರಿಗಿರುವ ಹಂಬಲವು ಹೊಗಳಲು ತಕ್ಕುವಾಗಿದೆ. ಇದರ ಬಗೆಗೆ ಅವರಿಗಿರುವ ಹುರುಪು ಅಷ್ಟಿಷ್ಟಲ್ಲ; ಅದಕ್ಕೆ ತಕ್ಕಂತೆ ಇವರಲ್ಲಿ ಸಾಧನ-ಸಿದ್ಧಿಗಳಿದ್ದರೆ ಕಬ್ಬಿನ ಮೇಲೆ ಜೇನಿಕ್ಕಿದಂತಾಗುತ್ತಿತ್ತು. ವಾಚನಾಲಯ, ಪುಸ್ತಕಗಳ ಪ್ರಕಟನೆಗಳ ಮೂಲಕ ಜನರಲ್ಲಿ ತಿಳಿವಿನ ಬೆಳಕನ್ನು ಹರಡಬೇಕೆಂದು ಇರುಳನ್ನು ಹಗಲು ಮಾಡುತ್ತಲಿದ್ದಾರೆ. ಈ ಬಗೆಯಿಂದ ಕೊಲ್ಹಾಪುರ, ಸಾಂಗಲಿ, ಜಮಖಂಡಿ, ಮಿರಜಿ, ಮೊದಲಾದ ಸಂಸ್ಥಾನಗಳ ಇರುಕಿನಲ್ಲಿ ಸಿಲುಕಿ ಕರ್ನಾಟಕವನ್ನು ಕಳೆದುಕೊಳ್ಳುತ್ತಿರುವ ಕನ್ನಡಿಗರೂ ಏನಾದರೂ ಪ್ರಯತ್ನಗಳನ್ನು ಬೇಗನೆ ಆರಂಭಿಸಿದರೆ ಚೆನ್ನಾಗಿ ಆಗುವಂತಿದೆ.

ಪ್ರಸ್ತುತ ಪುಸ್ತಕವು ನಿಜಾಂ ಕರ್ನಾಟಕದ ಪ್ರಾಚೀನ ವೈಭವವನ್ನು ತೀರ ಸ್ವಲ್ಪದರಲ್ಲಿ ಜನರಿಗೆ ತಿಳಿಯಪಡಿಸ



CC-0. Jangamwadi Math Collection. Digitized by eGangotri

ಬೇಕೆಂದು ಬರೆಯಲ್ಪಟ್ಟುದಾಗಿದೆ. ನಿಜಾಂ ಕರ್ನಾಟಕದ ಹೊರಗಿನ ಕನ್ನಡಿಗರಿಗೆ ಸಹ ಇದು ಉಪಯುಕ್ತವಾಗಿದೆ. ಅಖಿಲ ಕರ್ನಾಟಕಕ್ಕೆ ತನ್ನೆಡೆಗೆ ಎಳೆವ ಅನೇಕ ತೀರ್ಥ, ಕ್ಷೇತ್ರಗಳೂ, ಬಸದಿ ಗುಡಿಗಳೂ, ಶಿಲ್ಪಚಿತ್ರಗಳ ಬೀಡುಗಳೂ ನಿಜಾಂಕರ್ನಾಟಕದಲ್ಲಿ ಎಷ್ಟೊಂದು ಇರುವವೆಂಬುದು ಈ ಪುಸ್ತಕದಿಂದ ಒಮ್ಮೆಲೆ ಗೊತ್ತಾಗುವಂತಿದೆ.




ರಾಯಚೂರ ಕೋಟೆ

ಚಲುಕ್ಯರ ಅಥವಾ ರಾಷ್ಟ್ರಕೂಟರ ಇಲ್ಲವೆ ಬೇರೆ ಯಾವುದೊಂದು ಉತ್ಸವದ ನಿಮಿತ್ತದಿಂದ, ಇಡೇ ಸಣ್ಣ ಪುಸ್ತಕವನ್ನು ನಿಜಾಂಕರ್ನಾಟಕದ ಕೈಪಿಡಿಯಾಗುವಂತೆ ಆಳವಾದ ಅಭ್ಯಾಸಮಾಡಿದ ಅನೇಕ ಲೇಖಕರಿಂದ ನಿಜಾಂ ಕರ್ನಾಟಕದ ಸಾಹಿತ್ಯ, ಕಲೆ ಮೊದಲಾದ ವಿಷಯಗಳನ್ನು ಕುರಿತು ಲೇಖಗಳನ್ನು ಬರೆಯಿಸಿ, ಅನೇಕ ಉಪಯುಕ್ತ ಚಿತ್ರಗಳೊಂದಿಗೆ ಪ್ರಕಟಿಸಿದರೆ ನಮ್ಮ ನಾಡಿನ ಮೇಲೆ ತರುಣಸಂಘವು ಮಹದುಪಕಾರವನ್ನು ಮಾಡಿದಂತಾಗುವದು.

ಮತ್ತು ಇನ್ನೂ ಹೀಚು–ಕಸುಕು–ಕಾಯಿಯಿರುವ ಹೊತ್ತಿಗೆಗಳನ್ನು ತರುಣಸಂಘದ ಹೆಸರಿನಿಂದ ಪ್ರಕಟಿಸದೆ ವೈಯಕ್ತಿಕ ಅಥವಾ ಬೇರೆ ಒಂದು ಸಂಘದಿಂದ ಪ್ರಕಟಿಸಿದರೆ ಹೆಚ್ಚು ಒಳಿತು. ತರುಣ ಸಂಘವು ಅಖಿಲ ಕರ್ನಾಟಕದ ವಿದ್ವನ್ಮಂಡಲಿಗೂ ಉಪಯುಕ್ತವಾಗುವಂತಹ ಮಹತ್ವದ ಗ್ರಂಥಗಳನ್ನೇ ಪ್ರಕಟಿಸಿದರೆ ನಿಜಾಮ

ಸಾಹಿತ್ಯಪ್ರಗತಿಗೆ ಸಹಾಯವಾಗುವದು. ಹಿಂದಿನ ಮಹಾಕವಿಗಳ ಗ್ರಂಥಗಳನ್ನೂ, ಶಿಲಾಲೇಖಗಳ ಸಂಗ್ರಹಗಳನ್ನೂ, ಅಜಂತಾ, ವೇರೂಳಗಳ ಸೊಗಸಾದ ಚಿತ್ರಮಾಲೆಯನ್ನೂ ಪರಿಶ್ರಮಪೂರ್ವಕವಾಗಿ ಪ್ರಕಟಿಸಿದರೆ ಒಂದು ಮಹಾಕಾರ್ಯವು ಅಂಶತಃ ಆದರೂ ಆರಂಭವಾದಂತಾಗಿ, ರಾಯಚೂರ ತರುಣಸಂಘವು ಅಖಿಲ ಕರ್ನಾಟಕದ ಆಶೀರ್ವಾದಪ್ರೀತಿಗಳಿಗೆ ಪಾತ್ರವಾಗುವದರಲ್ಲಿ ಸಂದೇಹವಿಲ್ಲ.

CC-0. Jangamwadi Math Collection. Digitized by eGangotri

# ಕುಕನೂರ ಗುರುಕುಲವು



ಕುಕನೂರ ವಿದ್ಯಾನಂದ ಪಾಠಶಾಲೆಯ ೯ನೆಯ ವಾರ್ಷಿಕಸಮ್ಮೇಲನದ ಭಾವಚಿತ್ರವಿದು. ಧಾರ್ಮಿಕ ಮತ್ತು ರಾಷ್ಟ್ರೀಯ ನೀತಿಗಳನ್ನು ಬಾಲಕರಲ್ಲಿ ಕಳೆದ ಹತ್ತು ವರ್ಷಗಳಿಂದ ಈ ಸಂಸ್ಥೆಯು ಬೀರಿ ಬಿಂಬಿಸುತ್ತ ಬಂದಿದೆ. ಸುಪ್ರಸಿದ್ಧ ಶ್ರೀಮಹಾಮಾಯಾ ದೇವಾಲಯದ ವಿಶಾಲಪ್ರಾಕಾರದಲ್ಲಿರುವ 'ನವಲಿಂಗೇಶ್ವರ' ಮುಂತಾದ ಉಪಮಂದಿರಗಳಲ್ಲಿ ಸಂಸ್ಥೆಯ ಆಶ್ರಮವೂ ಶಿಕ್ಷಣದ ವರ್ಗಗಳೂ ಸಜ್ಜುಗೊಳಿಸಲ್ಪಟ್ಟಿವೆ. ರಾಯಚೂರಿನ ಸುಪ್ರಸಿದ್ಧ ಹಾಯಕೋರ್ಟ್ ವಕೀಲರೂ ಖಾದೀಭಕ್ತರೂ ಆದ ಶ್ರೀ ಗುಡಿಹಾಳ ಹಣಮಂತರಾಯರು ಈ ೯ನೆಯ ಸಮ್ಮೇಲನಕ್ಕೆ ಅಧ್ಯಕ್ಷರಾಗಿದ್ದರು. ಕುಳಿತವರಲ್ಲಿ ಮಧ್ಯದಲ್ಲಿ ಕನ್ನಡಕವುಳ್ಳವರ ಭಾವಚಿತ್ರವು ಅವರದೇ ಆಗಿದೆ. ಈ ಸಂಸ್ಥೆಯಲ್ಲಿ ಕನ್ನಡ ಭಾಷೆಗೆ ಪ್ರಾಧಾನ್ಯವಿದೆ. ಸಂಸ್ಕೃತ ಆಂಗ್ಲ, ಉರ್ದು ಮುಂತಾದ ಭಾಷೆಗಳಲ್ಲಿ ಬೌದ್ಧಿಕ ಶಿಕ್ಷಣದೊಂದಿಗೆ ಶಾರೀರಿಕ ಶಿಕ್ಷಣವೂ ಕೊಡಲ್ಪಡುತ್ತಿದೆ. ಅಲ್ಲದೆ ಶಿಲಾಶಾಸನಪ್ರಕಾಶನದ ಮೂಲಕ ಇತಿಹಾಸ ಸಂಶೋಧನ ಕಾರ್ಯವೂ ಸಂಸ್ಥೆಯ ಚಟುವಟಿಕೆಗಳಲ್ಲಿ ಒಂದಾಗಿದೆ. ನಿಜಾಮ ಕರ್ನಾಟಕದಲ್ಲಿ ಭಾಷಾಸೇವೆಯೊಂದಿಗೆ ಬೇರೆವಿಧವಾದ ಜನತಾಸೇವೆಯನ್ನು ಮಾಡುತ್ತಿದ್ದ ಈ ಮೊದಲನೆಯ ಸಂಸ್ಥೆಯು ಕನ್ನಡಿಗರ ಸಹಾನುಭೂತಿಗೆ ಅರ್ಹವಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ.

CC-0. Jangamwadi Math Collection. Digitized by eGangotri

# ಪ್ರಪಂಚ ಪರಿಚಯ

ಸಂಗ್ರಾಹಕರು:— ಶ್ರೀ. ದ. ಕೃ. ಭಾರದ್ವಾಜ, ಎಂ ಡಿ. ( ಆಯುರ್ವೇದ ), ಬೆಂಗಳೂರು

## ೨೦ ನೆಯ ಶತಮಾನದ ಪ್ರಗತಿ.

ಹಿಂದಿನ ಕಾಲದ ಅನೇಕ ಸುಂದರವಾದ ಪರಂಪರೆಗಳು ಇಂದು ನಾಶವಾಗುತ್ತಿರುವವೆಂದು ಅನೇಕ ವಿಚಾರವಂತರು ಹೇಳುತ್ತಿರುವರು. ಹಾಗಾದರೆ ಆ ಲುಪ್ತ ಪರಂಪರೆಯ ಸ್ಥಳದಲ್ಲಿ ಹೊಸ ಧ್ಯೇಯ, ಹೊಸ ಕಲ್ಪನೆಗಳು ನಿರ್ಮಾಣವಾಗುತ್ತಿರುವವೇನು—ಎಂಬ ಪ್ರಶ್ನೆಯು ಸಹಜವಾಗಿ ಹುಟ್ಟುವುದು. ಇದಕ್ಕೆ ಅನೇಕರು "ಇಲ್ಲ" ವೆಂದೇ ಉತ್ತರ ಹೇಳುವರು. ಈ ವಿಚಾರದಲ್ಲಿ ಒಬ್ಬ ಪಾಶ್ಚಾತ್ಯನು ಬರೆದಿರುವುದನ್ನು ನೋಡಿರಿ.- "ಇಪ್ಪತ್ತನೆಯ ಶತಮಾನದಲ್ಲಿ ಸ್ತ್ರೀ ಪುರುಷರು ಉದ್ಯೋಗಮಗ್ನರಾಗಿರುವಂತೆ ಕಂಡುಬರುತ್ತಿದೆ. ಆದರೆ ಅವರಾ ಪ್ರಯತ್ನವು ಯಾವದಿಕ್ಕಿನಿಂದ ಯಾವ ಧ್ಯೇಯದಕಡೆಗೆ ಹೋಗುತ್ತಿರುವದೆಂಬ ವಿಚಾರದಲ್ಲಿ ಅವರಿಗೆ ಸರಿಯಾದ ಜ್ಞಾನವುಂಟಾಗಿಲ್ಲ. ಅವರಾ ಪ್ರಯತ್ನಗಳಿಂದ ಮಾನವ ಧ್ಯೇಯಕ್ಕೆ ನಿಶ್ಚಿತರೂಪವನ್ನು ಕೊಡುವ ಆದರ್ಶವೇ ನಷ್ಟವಾಗಿರುವದು. 'ಈ ಬಗೆಯ ಜೀವನವು ಉಚಿತವೇ, ಈ ಗಡಿಬಿಡಿಯೆಲ್ಲ ಯಾವ ಧ್ಯೇಯಸಾಧನೆಗಾಗಿ?', ಎಂದು ಎಲ್ಲರೂ ಒಂದೇ ಪ್ರಶ್ನೆಯನ್ನು ಕೇಳುತ್ತಿರುವರು. ಲಿಪ್‌ಮನ್ ಎಂಬಾತನು ಹೀಗೆ ಬರೆದಿರುವನು— 'ಈಗಿನ ಮನುಷ್ಯರು ಹಳೆಯ ಜ್ಞಾನವನ್ನು ನಾಶಮಾಡಿರವರೆಂಬುದು ನಿಜ. ಆದರೆ ಆ ಜ್ಞಾನದ ನಿರ್ಮಾಣಕ್ಕೆ ಮೂಲವಾದ ಪರಿಸ್ಥಿತಿಯ ದೋಷವನ್ನು ನಿವಾರಿಸಿಲ್ಲ.' ಹೊರಗೆ ಹೋಗುವುದಕ್ಕೆ ಸುಂದರವಾದ ಪೋಷಾಕನ್ನು ಹಾಕಿಕೊಂಡದ್ದಾಯಿತು. ಆದರೆ ಎಲ್ಲಿಗೆ ಹೋಗಬೇಕೆಂಬುದೆ ತೋಚುತ್ತಿಲ್ಲ—ಎಂಬಂತೆ ಈಗಿನಸ್ಥಿತಿಯಾಗಿದೆ. ಪ್ರೊ. ಜೆ. ಡಬ್ಲ್ಯೂ. ಹಡ್ಸನ್ ಎಂಬ ವಿದ್ವಾಂಸನು ಈ ರೀತಿಯಾಗಿ ಬರೆದಿರುವನು— "ಇಂದಿನ ಜನರು ಹಳೆಯ ಕಲ್ಪನೆಗಳಿಗೆ ಮೂಲವಾಗಿದ್ದ ಭ್ರಾಮಕ ತರ್ಕವಾದವನ್ನು ಸರಿಯಾಗಿ ಹುಡುಕಿ ತೆಗೆದರು. ಆದರೆ ಆ ಹಳೆಯ ಕಲ್ಪನೆಗಳನ್ನು ಹೊಸಪರಿಸ್ಥಿತಿಯೊಂದಿಗೆ ಹೇಗೆ ಸೇರಿಸಬೇಕೆಂಬುದನ್ನು ಮಾತ್ರ ಅವರು ಕಂಡುಹಿಡಿಯಲಿಲ್ಲ." ಶ್ರದ್ಧೆಯ ತಳಹದಿಯು ಸಡಿಲವಾದ್ದರಿಂದ ಕೇವಲ ಮನೋವೃತ್ತಿಯ ಮೇಲೆ ಮನುಷ್ಯನ ನಡೆನಳಿಕೆಯು ಅವಲಂಬಿಸಿಕೊಂಡಿರಬೇಕಾಗಿದೆ. ಸುಖಶೋಧನೆ ಮತ್ತು ವಿಶ್ರಾಂತಿಸುಖಗಳಕಡೆಗೆ ಮನುಷ್ಯನ ಪ್ರವೃತ್ತಿಯು ಈಗ ವಿಶೇಷವಾಗಿ ಓಡುತ್ತಿದೆ. ನೈತಿಕ ಧ್ಯೇಯದ ವಿಚಾರದಲ್ಲಿ ಅವನು ಸಂಶಯವಾದಿಯಾಗಿರುವನು. ಸೌಂದರ್ಯ ಮತ್ತು ಕಲೆಗಳನ್ನು ನೀತಿಯ ಸ್ಥಾನದಲ್ಲಿಡಬೇಕೆಂದು ಕೆಲವರು ಪ್ರತಿಪಾದಿಸುವರು. ಆದರೆ ಜ್ಞಾನ, ಕಲೆ, ಸೌಂದರ್ಯ ಇವುಗಳೆಲ್ಲಾ ವುನೂ ನೀತಿಯೊಂದಿಗೆ ಸಮತೆಯಿಂದ ನಿಲ್ಲಲಾರವು.

—World Unity Magazine

## ಕಿಚ್ಚಡಿ ತಿನ್ನುವ ಇಂಗ್ಲಿಷರು!

ಈಗ ಹಿಂದುಸ್ಥಾನದಲ್ಲಿರುವ ಇಂಗ್ಲಿಷರ ಊಟವು ಹೇಗಿದೆ! ಚಕಮಕಿಸುವ ಮುಳ್ಳು ಚಮಚೆಗಳು, ಹಲವು ಬಗೆಯ ಮುರಬ್ಬಾ (ಪಾಕ) ಗಳು, ವಿಸ್ಕಿಗಳು, ಈ ಆಹಾರಗಳೊಂದಿಗೆ ಶಿಕಾರಿಯಲ್ಲಿ ಸಿಕ್ಕ ಹೊಸ ಮಾಂಸದ ಜೋಡಣೆ ಬೇರೆ! ಆದರೆ ಇದೇ ಇಂಗ್ಲಿಷ ಜನದ್ದೂರದ ಊಟದ ಬಗೆಯು ಈಸ್ಟ್ ಇಂಡಿಯಾ ಕಂಪನಿಯ ಕಾಲದಲ್ಲಿ ಹೇಗಿತ್ತೆಂಬುದು ಮುಂದಿನ ಹೇಳಿಕೆಯಿಂದ ವ್ಯಕ್ತವಾಗುವುದು:— "ಆಗ ಚಹಾವನ್ನು ಉಪಯೋಗಿಸುತ್ತಿದ್ದರು. ಅವರು ಚಹಾದಲ್ಲಿ ಲಿಂಬೇಹಣ್ಣಿನ ರಸವನ್ನೂ ಮಸಾಲೆ

CC-0. Jangamwadi Math Collection. Digitized by eGangotri

ಯನ್ನೂ ಹಾಕುತ್ತಿದ್ದರು! ಮುಂಬೈಯಲ್ಲಿ ವಾಸಿಸುತ್ತಿದ್ದ ಇಂಗ್ಲಿಷರು ವಾರಕ್ಕೆರಡಾವರ್ತಿ ಕಿಚ್ಚಡಿಯನ್ನು ತಿನ್ನುತ್ತಿದ್ದರು. ಆ ದಿನಗಳನ್ನು 'ಬನಿಯಾ ಡೇ' ಎಂದು ಕರೆಯುತ್ತಿದ್ದರು. ಊಟವಾದ ಮೇಲೆ ಎಲೆ-ಅಡಿಕೆ ಹಾಕುವುದು ಅಷ್ಟು ಮಾತ್ರವಲ್ಲದೆ ದಿನವೆಲ್ಲ ಎಲೆ ಅಡಿಕೆ ಮೆಲ್ಲುವುದು ಅವರಿಗೆ ಅಭ್ಯಾಸವಾಗಿತ್ತು. ರಾಬರ್ಟ್ ಕ್ಲೈವನು ಯಾವಾಗಲೂ ಪಾನದಾನವನ್ನು (ಎಲೆ ಅಡಿಕೆ ಪೆಟ್ಟಿಗೆಯನ್ನು) ಇಟ್ಟುಕೊಂಡಿರುತ್ತಿದ್ದನು. ಹುಕ್ಕಾ ಸೇದುವ ಪದ್ಧತಿಯೂ ಆಗ ಇತ್ತು. ಅಷ್ಟು ಮಾತ್ರವಲ್ಲದೆ ಬೇರೆ ಎಲ್ಲಿಗಾದರೂ ಊಟಕ್ಕೆ ಹೋಗಬೇಕಾದಾಗ "ತಮ್ಮ ಹುಕ್ಕಾವನ್ನೂ ಜತೆಯಲ್ಲಿ ತೆಗೆದುಕೊಂಡು ಬರಬೇಕು" ಎಂದು ಸೂಚನೆಯೂ ಆಮಂತ್ರಣದೊಂದಿಗೆ ಬರುತ್ತಿತ್ತು. ಮದಿರಾದೇವಿಯ ಸೇವೆ ಮತ್ತು ಜೂಜು-ಈ ಎರಡು ವ್ಯಸನಗಳು ವಿಶೇಷ ಪ್ರಬಲವಾಗಿದ್ದುವು!!

—ಮಾತೃಭೂಮಿ (ಗುಜರಾತಿ)

## ಸುಖಕ್ಕಾಗಿ ಶೋಧನೆ

ಚಿಕ್ಕಮಗುವಿನಿಂದ ಮೊದಲುಗೊಂಡು ವೇದಾಂತಿಯವರೆಗೂ ಎಲ್ಲ ಮನುಷ್ಯ ಪ್ರಾಣಿಗಳ ಧ್ಯೇಯವು 'ಸುಖ' ವೆಂಬುದೊಂದೇ ಆಗಿದೆ. ಇಂದಿನವರೆಗೆ ಜಗತ್ತಿನ ದೊಡ್ಡ ತತ್ವವೇತ್ತರೆಲ್ಲರೂ ಸುಖದ ಮೂಲವನ್ನು ಕಂಡುಹಿಡಿಯುವ ಪ್ರಯತ್ನವನ್ನು ಮಾಡಿರುತ್ತಾರೆ. ಆದರೆ ಒಟ್ಟಿನಲ್ಲಿ ನೋಡಿದರೆ,'ಸುಖವು ಎಳ್ಳಿನಷ್ಟು-ದುಃಖವು ಪರ್ವತದಷ್ಟು' ಎಂಬ ಸಂತವಚನವು ಸತ್ಯವೆಂದು ಹೇಳಬಹುದಾಗಿದೆ. ಆದಾಗ್ಯೂ ಸುಖವೆಂಬುದು ಬಹುಮಟ್ಟಿಗೆ ಮನಸ್ಸನ್ನವಲಂಬಿಸಿಕೊಂಡಿರುವುದು. ಈ ವಿಷಯದಲ್ಲಿ ಬಹುಜನರ ಮತವು ಒಂದೇ ರೀತಿಯಾಗಿರುವಂತೆ ಕಂಡು ಬರುವುದು. ಇಂಗ್ಲೆಂಡಿನ ಪ್ರಸಿದ್ಧ ತತ್ವಜ್ಞನಾದ ಮಿ। ಬರ್ಟ್ರ್ಯಾಂಡ್ ರಸೆಲ್ ಎಂಬಾತನು ಮೊನ್ನೆ ತಾನೆ ಸುಖಸಂಪಾದನೆಯ ಸಂಬಂಧವಾಗಿ ಕೆಲವು ಮನನೀಯ ವಿಚಾರಗಳನ್ನು ಪ್ರಕಟಿಸಿರುವನು. ಆತನು ಹೀಗೆ ಹೇಳಿರುವನು-'ಬುದ್ಧಿವಂತರಾದ ತರುಣಗ್ರಂಥಕಾರರು ಯಾವಾಗಲೂ ಅಸ್ವಸ್ಥರಾಗಿರುವರು. ಅಂಥವರು ಲೇಖನ ವ್ಯವಸಾಯವನ್ನು ಬಿಟ್ಟು ಅಂಗಸಾಧನೆಯನ್ನಾರಂಭಿಸುವುದೇ ಮೇಲು. ಸ್ಪರ್ಧೆ ಮತ್ತು ಹಣ- ಇವುಗಳಲ್ಲಿ ಸುಖವಿದೆಯೆಂಬ ಭ್ರಮೆಯು ಈಗಿನ ಜನರ ಮನಸ್ಸಿನಲ್ಲಿ ಬೇರೂರಿರುವುದು. ಆ ಭ್ರಮೆಯು ಬೇಗ ನಿವಾರಣೆಯಾದಷ್ಟೂ ಒಳ್ಳೆಯದು, ಶಾಂತ ಮತ್ತು ಸಮಭಾವನೆಯ ಜೀವನವೇ ಸುಖದ ಸಾರವಾಗಿದೆ. ಏಕಾಂತಿಕ ಅಥವಾ ನಿಶ್ಚಿತ ಜೀವನಕ್ರಮವೂ ಅನೇಕರಿಗೆ ಬೇಸರವನ್ನುಂಟು ಮಾಡುವುದು. ಪ್ರತಿದಿನವೂ ಹೊಸ ಹೊಸ ವಿಷಯದಲ್ಲಿ ಅಥವಾ ಧ್ಯೇಯದಲ್ಲಿ ಮನಸ್ಸನ್ನು ಮಗ್ನಗೊಳಿಸುವುದರಲ್ಲಿ ಅಭಿರುಚಿಯುಂಟಾದರೆ ಏಕಾಂತವಾಸವು ಅಸಹ್ಯವಾಗುವುದು. ಆದರೆ ಏಕಾಂತವಾಸದ ಅಭ್ಯಾಸವೂ ಇರಬೇಕು. ಏಕೆಂದರೆ ಮನಸ್ಸಿನ ಸರಿಯಾದ ಬೆಳವಣಿಗೆಯು ಏಕಾಂತದಲ್ಲಿಯೇ ಆಗುವುದು. ಆಯಾಸವು ದುಃಖಕ್ಕೆ ಕಾರಣವಾಗಿದೆ. ಶಾರೀರಿಕ ಆಯಾಸವು ವಿಶೇಷ ತಾಪದಾಯಕವಾದುದಲ್ಲ. ಆದರೆ ಮನಸ್ಸಿಗೆ ದುರ್ಬಲತೆಯುಂಟಾದರೆ ಸುಖದ ವಿಚಾರವನ್ನು ಬಿಟ್ಟಂತೆಯೆ. ಪ್ರತಿಯೊಂದು ವಿಷಯದ ವಿಚಾರವನ್ನೂ ಯೋಗ್ಯವಾದ ಸಮಯದಲ್ಲಿ ಉಚಿತವಾದ ರೀತಿಯಲ್ಲಿ ಮಾಡುವುದೇ ಮನಸ್ಸಿನ ದೌರ್ಬಲ್ಯನಿವಾರಣೆಗೆ ಶ್ರೇಷ್ಠವಾದ ಉಪಾಯವಾಗಿರುವುದು. ಮತ್ಸರವು ಕೂಡ ಸುಖಕ್ಕೆ ಪರಮಶತ್ರುವಾಗಿರುವುದು. ಈ ಶತ್ರುವು ನಾಶವಾಗಬೇಕಾದರೆ ಇತರರ ಸುಖವನ್ನು ನೋಡಿ ಹೊಟ್ಟೆಕಿಚ್ಚುಪಡುವ ದುರಭ್ಯಾಸವನ್ನು ಬಿಡಬೇಕು. ಇಂದಿನ ಜಗತ್ತಿನಲ್ಲಿ ಸುಖಸಂಪಾದನೆಯು ಅಸಾಧ್ಯವಾಗಿದೆ-ಎಂದು ಹೇಳುವುದರಲ್ಲಿ ಅರ್ಥವಿಲ್ಲ. ಈಗಿನ ಜಗತ್ತಿನಲ್ಲಿ ಶಾಸ್ತ್ರಜ್ಞರು ಸುಖಿಗಳಾಗಿರುವರು. ಅವರ ಭಾವನೆಗಳು ಶುದ್ಧವಾಗಿಯೂ ವಿಕಾರಗೊಳ್ಳದೆಯೂ ಇರುವವು. ಅವರು ಯಾವಾಗಲೂ ತಮ್ಮ ಸಂಶೋಧನೆಯಲ್ಲಿ ಮಗ್ನರಾಗಿರುವುದರಿಂದ ಬೌದ್ಧಿಕ ಆನಂದವು ಅವರ ಉಪಭೋಗಕ್ಕೆ ದೊರೆಯುವುದು. ಈ ರೀತಿಯಾಗಿ ಒಂದು ಕಲೆಯಲ್ಲಿ ಪ್ರಾವೀಣ್ಯವನ್ನು ಪಡೆದು ಕಲಾಕೃತಿಯನ್ನು ನಿರ್ಮಾಣ ಮಾಡುವುದರಲ್ಲಿ ಯಾವನು ಸತತವಾಗಿ ಪ್ರಯತ್ನಿಸುವನೋ ಅವನಿಗೆ ಆನಂದದ ಹೆಬ್ಬಾಗಿಲು ಯಾವಾಗಲೂ ತೆರೆದೇ ಇರುವುದು. ಎಲ್ಲ ಬಗೆಗಳನ್ನೂ ಜೀವನಕ್ಕಾಗಿ ನೇರ್ಪಡಿಸಿಕೊಂಡು ಅಭಿರುಚಿಯಿರುವ ಕಲೆಯಲ್ಲಿ ಅಥವಾ ಕೆಲಸದಲ್ಲಿ ಮನಸ್ಸಿಟ್ಟು ಪ್ರಯತ್ನಿಸುವುದು ಮತ್ತು ನಿತ್ಯವೂ ಜೀವನಕ್ಕಾಗಿ ಕೆಲ ಸಮಯವನ್ನು ವಿನಿಯೋಗಿಸುವುದು ಇವುಗಳಲ್ಲಿಯೆ ಸುಖದ ರಾಜಮಾರ್ಗವಿರುವುದು."

—The Hindu



CC-0. Jangamwadi Math Collection. Digitized by eGangotri

## ವಿಚಿತ್ರವಾದ ಭಾವಚಿತ್ರಯಂತ್ರ

"ಅವನ ಹೊಟ್ಟೆಯೊಳಗಿನದು ನಮಗೆ ಹೇಗೆ ಗೊತ್ತಾಗಬೇಕು ?" ಎಂದು ನಾವು ಲಕ್ಷಣವಾಗಿ ಹೇಳುವೆವು. ಮತ್ತೆ ವಾಚ್ಯಾರ್ಥದಿಂದಲೂ ಅದು ನಿಜವಾಗಿರುವುದು. ಏಕೆಂದರೆ ಹೊಟ್ಟೆಯೊಳಗಿನದು ನಮಗೆ ಯಾವುದೂ ಕಾಣಿಸುವುದಿಲ್ಲ. ಆಸ್ಟ್ರಿಯಾದ ವೈಜ್ಞಾನಿಕನೊಬ್ಬನು ಈಗ ಹೊಟ್ಟೆಯ ಒಳಗಿನ ಭಾಗವನ್ನು ವಿದ್ಯುತ್ತಿನ ಮೂಲಕ ಫೋಟೋ ತೆಗೆಯುವ ಯುಕ್ತಿಯನ್ನು ಕಂಡು ಹಿಡಿದಿರುವನು. ಈ ಯುಕ್ತಿಯಿಂದ ೨೦ ಸೆಕೆಂಡುಗಳಲ್ಲಿ ೧೬ ಫೋಟೋಗಳು ಹೊರಡುವವು. ಹೊಟ್ಟೆಯೊಳಗಿನ ರೋಗಚಿಕಿತ್ಸೆಗೆ ಈ ಶೋಧನೆಯಿಂದ ವಿಶೇಷ ಪ್ರಯೋಜನವಾಗುವುದು. ಕ್ಯಾನ್‌ಸರ್ ( ಹುಣ್ಣು ) ಸಂತಹ ಭಯಂಕರ ರೋಗವನ್ನು ವಾಸಿಮಾಡಲು ಇದರಿಂದ ವಿಶೇಷಸಹಾಯ ದೊರೆಯುವುದು. ಲಂಡನ್‌ನಗರದಲ್ಲಿ ಈ ಚಿತ್ರಯಂತ್ರವನ್ನು ಪ್ರಯೋಗಮಾಡಿ ನೋಡಲು, ಅದು ಯಶಸ್ವಿಯಾಗಿರುವುದು. ಈ ಕ್ಯಾಮೆರಾದ ಬೆಲೆ ೧೬೦ ಪೌಂಡು ಎಂದರೆ ಸುಮಾರು ೨,೦೭೦ ರೂಪಾಯಿಗಳಾಗುವವಂತೆ !

—ಬಾಂಸುರೀ ( ಹಿಂದೀ )

## ಮಹಾಪುರುಷರ ಜೀವನದಲ್ಲಿ ದೊಡ್ಡ ಬದಲಾವಣೆಗಳು

ಅನೇಕವೇಳೆ ಮನುಷ್ಯನು ಒಂದು ಕಾಲದಲ್ಲಿ ನಿಶ್ಚಯಿಸುವ ಧೋರಣೆಯ ಮೇಲೆ ಅವನ ಮುಂದಿನ ಸಮಗ್ರ ಜೀವನದ ಸುಖದುಃಖ, ಕೀರ್ತಿಅಪಕೀರ್ತಿಗಳು ಅವಲಂಬಿಸಿಕೊಂಡಿರುವುದು. ಮರದಒಂದು ಚಿಕ್ಕಕೊಂಬೆಯು ಕೂಡ ನದಿಯ ಪ್ರವಾಹದ ಮಾರ್ಗವನ್ನು ಬದಲಾಯಿಸಬಲ್ಲದು. ಅದರಂತೆಯೆ ಮಹಾಪುರುಷರ ಜೀವನದಲ್ಲಿ ಸಂಭವಿಸುವ ಮಹತ್ವದ ಪ್ರಸಂಗಗಳು ಮನೋರಂಜಕವಾಗಿಯೂ ಆಕರ್ಷಕವಾಗಿಯೂ ಇರಬೇಕೆಂಬುದರಲ್ಲಿ ಸಂದೇಹವಿಲ್ಲ. ಇಂಗ್ಲೆಂಡಿನಲ್ಲಿ ಒಂದು ಪ್ರಸಿದ್ಧವಾದ ಪತ್ರಿಕೆಯು ೧೨ಮಂದಿ ಪ್ರಸಿದ್ಧ ಯುರೋಪೀಯರ ಅಭಿಪ್ರಾಯಗಳನ್ನು ಪ್ರಕಟಿಸಿರುವುದು. ಅವರಲ್ಲಿ ಅವರು ತಮ್ಮ ಜೀವನದ ಸ್ಥಿತ್ಯಂತರಕ್ಕೆ ಕಾರಣವಾದ ಪ್ರಸಂಗಗಳನ್ನು ಹೇಳಿಕೊಂಡಿರುವರು: ಆ ಅಭಿಪ್ರಾಯಗಳು ಈ ರೀತಿಯಾಗಿವೆ: ಮೊನ್ನೆ ತಾನೆ ಸ್ವರ್ಗವಾಸಿಯಾದ ಎಡ್‌ಗರ್ ವ್ಯಾಲೆಸ್ ಎಂಬ ಇಂಗ್ಲಿಷ ಕಾದಂಬರಿಕಾರನು ಈ ರೀತಿಯಾಗಿ ಬರೆದಿರುವನು:—"ಸೈನಿಕ ಕೆಲಸವನ್ನು ಬಿಟ್ಟು ನಾನು ವೃತ್ತಪತ್ರಲೇಖನದ ಉದ್ಯೋಗವನ್ನು ಕೈಕೊಂಡಾಗಲೇ ನನ್ನ ಜೀವನದಲ್ಲಿ ಮಹತ್ವದ ಸ್ಥಿತ್ಯಂತರವುಂಟಾಯಿತು. ನನ್ನ ವಿಚಾರಗಳು ಮುದ್ರಿತವಾದುದನ್ನು ಕಂಡು ನನಗೆ ಸಂತೋಷವಾಗುತ್ತಿತ್ತು. ಆದುದರಿಂದ ನಾನು ಆ ಉದ್ಯೋಗದಲ್ಲಿ ಕೈಯಿಕ್ಕಿದೆನು. ನನ್ನಲ್ಲಿ ಅಹಂಕಾರವು ವಿಶೇಷವಾಗಿತ್ತು. ಮನುಷ್ಯಸ್ವಭಾವದಲ್ಲಿ ಅದರ ಪ್ರಭೆಯು ಕಂಡುಬರುವುದು. ಈ ಬಗೆಯ ನೈಸರ್ಗಿಕ ವೃತ್ತಿಯು ಮನಸ್ಸಿಗೆ ಅಜ್ಞಾತವಾದ ಪ್ರತ್ಯೇಕಭಾಗದಲ್ಲಿರುವುದು. ನಾವು ಜೀವನಕ್ರಮದ ಸಿಂಹಾವಲೋಕನವನ್ನು ಮಾಡಿದಾಗ ಆ ವೃತ್ತಿಯ ವ್ಯಾಪಾರವು ನಮಗೆ ಕಂಡುಬರುವುದು. ಕಂಟಕಮಯವಾದ ನೀತಿನಿಯಮಗಳಿಂದ ಮತ್ತು ಧ್ಯೇಯಗಳಿಂದ ನನ್ನ ಜೀವನದ ಗತಿಯು ಬದಲಾಯಿಸಲಿಲ್ಲ. ನನ್ನ ಅಹಂಕಾರವೇ ನನ್ನ ಉತ್ಕರ್ಷಕ್ಕೆ ಕಾರಣವಾಯಿತು. ಒಂದು ಬಾರಿ ಪತ್ರಿಕೆಯ ಸಂಚಾಲಕರಿಗೆ ನನ್ನ ವಿಚಾರಗಳು ಒಪ್ಪಿಗೆಯಾಗಲಿಲ್ಲವಾದುದರಿಂದ ನಾನು ಸಂಪಾದಕತ್ವಕ್ಕೆ ರಾಜೀನಾಮೆಯನ್ನು ಕೊಡಬೇಕಾಯಿತು. ಆದರೆ ಆಗ ನನ್ನ ಅಹಂಕಾರದ ಪ್ರಭಾವವೇ ಹೆಚ್ಚಾಗಿತ್ತು." ಜರ್ಮನಿಯ ಪ್ರಸಿದ್ಧ ಶಾಸ್ತ್ರಜ್ಞನಾದ ಮಿ. ಮಾರ್ಕ್ಸ್‌ಪ್ಲಂಕ್ ಎಂಬಾತನು ಹೀಗೆ ಹೇಳಿರುವನು– "ಡಾಕ್ಟರ್ ಗಸ್ಟವ್ ಬಾರ್ ಎಂಬಾತನ ಗಣಿತವಿಷಯಕ ವ್ಯಾಖ್ಯಾನವನ್ನು ಕೇಳಿ ನನ್ನ ಮನಸ್ಸು ಗಣಿತದ ಕಡೆ ತಿರುಗಿತು. ಆದರೆ ಸೃಷ್ಟಿಯ ರಚನೆಯನ್ನು ತಿಳಿಯಲು ನನಗೆ ವಿಶೇಷ ಉತ್ಸಾಹವಿದ್ದುದರಿಂದ ಅದಕ್ಕೆ ಕೇವಲ ಗಣಿತದಿಂದ ತೃಪ್ತಿಯುಂಟಾಗಲಿಲ್ಲ. ಆದುದರಿಂದ ನಾನು ವಾಸ್ತುಶಾಸ್ತ್ರಾಭ್ಯಾಸವನ್ನಾರಂಭಿಸಿದೆನು. ಕೇವಲ ತೋರಿಕೆಯ ಕೀರ್ತಿಯಿಂದ ನನಗೆ ಸಂತೋಷವಾಗದು. ನನ್ನ ಕಾರ್ಯವೆಲ್ಲವೂ ಅಂತಃಕರಣಪ್ರವೃತ್ತಿಯೆಂದು ಭಾವಿಸಿ, ನನ್ನ ಕಾರ್ಯಕ್ಕೆ ತೊಡಗುವೆನು." ಜಾನ್ ಗಾಲ್ಸ್‌ವರ್ದಿ ಎಂಬ ನಾಟಕಕಾರನು ಹೀಗೆ ಹೇಳಿರುವನು.–"ಯಾವುದಾದರೊಂದು ಕಾರ್ಯದಿಂದ ಆಕಸ್ಮಾತ್ತಾಗಿ ನನ್ನಲ್ಲಿ ದೊಡ್ಡ ಸ್ಥಿತ್ಯಂತರವಾದುದು ನನಗೆ ಜ್ಞಾಪಕವಿಲ್ಲ. ನನ್ನ ಸ್ವಭಾವಧರ್ಮದಂತೆ ನಾನು ನನ್ನ ಮಾರ್ಗವನ್ನು ನೇರ್ಪ

CC-0. Jangamwadi Math Collection. Digitized by eGangotri

ತಿಸಿಕೊಳ್ಳುತ್ತ, ನನಗೆ ಉನ್ನತಿಯುಂಟಾಗಿದೆ.'' ಭಾರತ ವರ್ಷದ ಹಿತಚಿಂತಕರಲ್ಲೊಬ್ಬನೂ ಪ್ರಸಿದ್ಧಶಾಸ್ತ್ರಜ್ಞನೂ ಆದ ಬರ್ಟ್ರಾಂಡ್ ರಸೆಲ್ ಎಂಬಾತನು ಈ ಬಗೆಯಾಗಿ ಬರೆದಿರುವನು- '' ನನ್ನ ಆಯುಷ್ಯವನ್ನು ಎರಡುಭಾಗವಾಗಿ ವಿಂಗಡಿಸಬಹುದು. ನನ್ನ ಹನ್ನೊಂದನೆಯ ವಯಸ್ಸಿನಲ್ಲಿ ಮೊದಲನೆಯ ಭಾಗವು ಪ್ರಾರಂಭವಾಯಿತು. ನಾನು ಯುಕ್ಲಿಡನ್ನು (ರೇಖಾಗಣಿತವನ್ನು) ಓದುತ್ತಿರುವಾಗ ನಾನು ಕೇಳುವ ಅನೇಕ ಪ್ರಶ್ನೆಗಳಿಗೆ ಉಪಾಧ್ಯಾಯರು ಸರಿಯಾಗಿ ಉತ್ತರವನ್ನು ಕೊಡಲಾಗುತ್ತಿರಲಿಲ್ಲ. ಅದನ್ನು ಸರಿಯಾಗಿ ಕಂಡುಹಿಡಿಯಲು ನಾನು ಗಣಿತವನ್ನಭ್ಯಾಸ ಮಾಡಲಾರಂಭಿಸಿದೆನು. ಅದನ್ನು ೩ವರ್ಷ ಅಭ್ಯಾಸಿಸಿದೆನು. ಕೊನೆಗೆ ಅದರಲ್ಲಿ ಪ್ರಾವಿಣ್ಯವನ್ನು ಪಡೆದೆನು. ಅನಂತರ ಎರಡನೆಯ ಭಾಗವು ಆರಂಭಿಸಿತು. ಯುದ್ಧದ ಕಾಲದಲ್ಲಿ ಸರಕಾರದವರನ್ನು ಪ್ರತಿಯೊಂದು ವಿಚಾರದಲ್ಲಿಯೂ ಟೀಕಿಸಲಾರಂಭಿಸಿದೆನು. ಆ ಟೀಕೆಯು ಆಧಾರಪೂರ್ಣವಾಗಿರಬೇಕೆಂದು ನಾನು ಬೇರೆ ಬೇರೆ ವಿಷಯದ ಗ್ರಂಥಗಳನ್ನು ಓದಲಾರಂಭಿಸಿದೆನು. ಮಹಾಯುದ್ಧದ ಮಾನಸಶಾಸ್ತ್ರವಿಷಯಕ, ರಾಜಕೀಯ ಮತ್ತು ಆರ್ಥಿಕ ಕಾರಣಗಳನ್ನು ಕಂಡುಹಿಡಿಯಲು ಆಯಾ ವಿಷಯಗಳನ್ನು ಚೆನ್ನಾಗಿ ಓದಿದೆನು. ಈ ಎರಡು ಸ್ಥಿತ್ಯಂತರಗಳೊಳಗೆ ಮೊದಲನೆಯದರಲ್ಲಿ ನಾನು ಕೇವಲ ಅಂತಃಸ್ಫೂರ್ತಿಯಿಂದ ಪ್ರವೇಶಿಸಿದೆನು. ಎರಡನೆಯದು ಮಾತ್ರ ಪರಿಸ್ಥಿತಿಯಿಂದ ಸಂಭವಿಸಿದುದಾಗಿರುವುದು.''

—The Hindu. ( Illus. Weekly. )

## ಎಂಟನೆಯ ಆಶ್ಚರ್ಯ !

ಇಂದಿನವರೆಗೆ ಪ್ರಪಂಚದಲ್ಲಿ ಏಳು ಆಶ್ಚರ್ಯಗಳು ಪ್ರಸಿದ್ಧವಾಗಿವೆ. ಅವುಗಳಲ್ಲಿ ಈಜಿಪ್ತದ ಪಿರಮಿಡ್ಡುಗಳ ಗುಂಪು ಒಂದು. ಆದರೆ ಈಜಿಪ್ತದ ಪಿರಮಿಡ್ಡುಗಳಿಗಿಂತಲೂ ದೊಡ್ಡದಾದುದೊಂದು ಪಿರಮಿಡ್ಡನ್ನು ಉತ್ತರ ಅಮೇರಿಕೆಯಲ್ಲಿ ಮಿವಿಲಿಯಂಹಾಪ್ ಹಾರ್ವೆ ಎಂಬಾತನು ನಿರ್ಮಿಸಿರುವನು. ಈ ಪಿರಮಿಡ್ಡಿನ ಒಂದು ಶಿಲೆಯು ೩ ಚಚ್ಚೌಕ ಅಡಿ ಅಗಲವಾಗಿಯೂ ೧೩೦ ಅಡಿ ಎತ್ತರವಾಗಿಯೂ ಇದೆ. ಈ ಪಿರಮಿಡ್ಡಿನಲ್ಲಿ ಅತಿ ಪುಟ್ಟದೂ ಮತ್ತು ಅತಿ ದೊಡ್ಡದೂ ಆದ ಸಭಾಮಂಟಪಗಳನ್ನೂ ಜಹಜುಗಳನ್ನೂ ವಿಮಾನಗಳನ್ನೂ ನಿರ್ಮಿಸಲಾಗಿದೆ. ಇವುಗಳಲ್ಲಿ ಎರಡು ವಾಹನಗಳಲ್ಲಿ ಮುಂಚಿನಿಂದ ಈಗಿನವರೆಗೆ ಆಗಿರುವ ಸುಧಾರಣೆಗಳ ಸ್ಥಿತ್ಯಂತರಗಳ ಮಾದರಿಯನ್ನು ತೋರಲಾಗಿದೆ. ಪಿರಮಿಡ್ಡಿನ ತಳದಿಂದ ೭೫ ಅಡಿ ಎತ್ತರದ ಮೇಲೆ ಒಂದು ದೊಡ್ಡ ಮಹಲು ಇರುವುದು. ಅದರಲ್ಲಿ ಈಗಿನ ಮಾನವ ಸಂಸ್ಕೃತಿಯ ವಿವಿಧ ಭಾಗಗಳ ಸುಂದರವೂ ಮನೋಹರವೂ ಆದ ಚಿತ್ರಗಳನ್ನು ಸಂಗ್ರಹಿಸಲಾಗಿದೆ. ಈ ಮಹಲಿನಲ್ಲಿಯೆ ಮಜಬೂತಾದ ಕಾಗದದ ಮೇಲೆ ಅಚ್ಚು ಮಾಡಿರುವ, ಜಗತ್ತಿನಲ್ಲಿ ಹೆಸರುಪಡೆದಿರುವ ಪ್ರಸಿದ್ಧಗ್ರಂಥಗಳನ್ನು ಗಾಜಿನ ಹೊದ್ದಿಕೆಯಲ್ಲಿ ಸುರಕ್ಷಿತವಾಗಿಡಲಾಗಿದೆ. ಅದರಲ್ಲಿ ಒಂದು ಗ್ರಂಥವು ಇಂದಿನ ಸಂಸ್ಕೃತಿಯ ಗುಣದೋಷ ವರ್ಣನೆಗಳನ್ನೊಳಗೊಂಡಿರುವುದಲ್ಲದೆ. ಅದು ಮುಂದಿನ ಪೀಳಿಗೆಯವರಿಗೆ ಮಾರ್ಗದರ್ಶಕವಾಗುವಂತೆಯೂ ಇದೆ. ಇಂದಿನಿಂದ ಹತ್ತುಸಾವಿರ ವರುಷಗಳನಂತರ ಈ ಪಿರಮಿಡ್ಡನ್ನು ತೆರೆದರೆ ಇದರಲ್ಲಿರುವ ಗ್ರಂಥಗಳ ಭಾಷೆಯು ತಿಳಿಯುವಂತಾಗಬೇಕೆಂದು ಒಂದುಗ್ರಂಥದಲ್ಲಿ ಇಂಗ್ಲಿಷ್ ಲಿಪಿ ಮತ್ತು ಭಾಷೆಯ ಸಚಿತ್ರ ಪರಿಚಯವನ್ನು ಕೊಡಲಾಗಿದೆ. ಅದರಿಂದ ಮುಂದಿನ ಶೋಧಕರಿಗೆ ಲಿಪಿ ಮತ್ತು ಗ್ರಂಥಪರಿಚಯವನ್ನು ಹೊಂದುವುದು ಕಷ್ಟವಾಗಲಾರದು. ವಿವಿಧ ಮಹಲುಗಳ ಬಾಗಿಲುಗಳ ಮೇಲೆ ಹಿತ್ತಾಳೆಯ ಪಟ್ಟಿಗಳನ್ನು ಹೊಡೆದು, ಅದರ ಮೇಲೆ ಯಾವುದು ಎಲ್ಲಿದೆ?—ಎಂಬ ಸೂಚನೆಯನ್ನು ಬರೆಯಲಾಗಿದೆ. ಈ ಪಿರಮಿಡ್ಡಿನ ಕೆಲಸವೆಲ್ಲ ಮುಗಿಯುತ್ತ ಬಂದಿದೆ. ಇದರ ಕೆಲಸವು ಮುಗಿದ ಮೇಲೆ,ಯಂತ್ರದ ಸಹಾಯದಿಂದ ಅದರಲ್ಲಿರುವ ಗಾಳಿಯನ್ನು ತೆಗೆದು, ಅದಕ್ಕೆ ಮೊಹರು ಹಾಕುವರು. ಈ ಬಗೆಯಾಗಿ ಇಂದಿನ ಮಾನವ ಸಂಸ್ಕೃತಿಯ ಒಂದು ಪ್ರತಿಮೆಯು ಭವಿಷ್ಯಕಾಲೀನ ಮನುಷ್ಯರಿಗೆ ನೋಡುವುದಕ್ಕೆ ಸಿಕ್ಕಬೇಕೆಂದು, ಅದರ ರಕ್ಷಣೆಯ ಏರ್ಪಾಟ ನಡೆಯುತ್ತಿದೆ.

—ಪ್ರತಾಪ ( ಹಿಂದೀ )

## ಪೌರ್ವಾತ್ಯ ಮತ್ತು ಪಾಶ್ಚಾತ್ಯ ಸ್ತ್ರೀಯರು

ಶ್ರೀಮತಿ ಸರೋಜಿನಿ ನಾಯಿಡು ಅವರ ಹೆಸರು ಹಿಂದುಸ್ಥಾನದಲ್ಲಿ ಎಲ್ಲರಿಗೂ ಗೊತ್ತಿದೆ. ಎರಡನೆಯ ದುಂಡುಮೇಜಿನ ಪರಿಷತ್ತಿಗೆ ಮಹಾತ್ಮಾಜಿಯವ

CC-0. Jangamwadi Math Collection. Digitized by eGangotri

ರೊಂದಿಗೆ ರಾಷ್ಟ್ರದ ಪರವಾಗಿ ಹೋಗಿದ್ದರು. ಆ ಸಂದರ್ಭ (ಪ್ರಸಂಗ) ದಲ್ಲಿ ಅವರು ಅಮೇರಿಕದ ಒಬ್ಬ ವೃತ್ತಪತ್ರಲೇಖಕನಿಗೆ ಸಂದರ್ಶನವನ್ನಿತ್ತಾಗ ಪೂರ್ವ ಮತ್ತು ಪಶ್ಚಿಮಗೋಳಗಳ ಸ್ತ್ರೀಸಮಾಜದ ವಿಚಾರವಾಗಿ ತಮ್ಮ ಅಭಿಪ್ರಾಯವನ್ನು ಸೂಚಿಸಿರುವರು. ಅದರ ಸಾರಾಂಶವು ಇಂತಿರುವುದು.— "ಪಾಶ್ಚಾತ್ಯ ಸ್ತ್ರೀಯರು ಪೌರ್ವಾತ್ಯಸ್ತ್ರೀಯರಿಗೆ ಎಷ್ಟು ಋಣಿಯಾಗಿರುವರೆಂಬ ವಿಚಾರವನ್ನು ನಾನು ಆಗಾಗ್ಗೆ ಮಾಡುತ್ತಿರುವೆನು. ಈ ವಿಚಾರಕ್ಕೆ ನನ್ನ ಉತ್ತರವು ಹೀಗಿರುವುದು:— ಒಬ್ಬ ಸ್ತ್ರೀಯು ಮತ್ತೊಬ್ಬ ಸ್ತ್ರೀಗೆ ಎಷ್ಟು ಋಣಿಯಾಗಿರುವಳೊ ಅಷ್ಟೇ ಪರಿಮಾಣದ ಋಣವು ನಮ್ಮ ಸಮಾಜದ ಮೇಲಿರುವುದು. ಆದುದರಿಂದ ಜಗತ್ತಿನ ಸ್ತ್ರೀಯರನ್ನು ಪೌರ್ವಾತ್ಯಮತ್ತುಪಾಶ್ಚಾತ್ಯರೆಂದು ವಿಭಾಗಿಸಲಾಗುವುದಿಲ್ಲ. ಸಂಪ್ರದಾಯ, ಜಾತಿವರ್ಣ ಇವುಗಳನ್ನೆಲ್ಲ ದೂರೀಕರಿಸಿ ಸ್ತ್ರೀತ್ವವು ತನ್ನ ಪ್ರಭೆಯನ್ನು ಎಲ್ಲೆಲ್ಲಿಯೂ ಏಕರೂಪವಾಗಿಟ್ಟಿರುವುದೆಂದು ನನಗೆ ತೋರುವುದು. ಈ ಸಿದ್ಧಾಂತವು ಎಲ್ಲರಿಗೂ ಒಪ್ಪಿಗೆಯಿರುವುದಾದರೆ, ವಿಶ್ವ ಶಾಂತಿಯನ್ನು ಸ್ಥಾಪಿಸಲು ಸ್ತ್ರೀಯರಿಂದ ವಿಶೇಷ ಸಹಾಯವಾಗುವುದು. ಪಶ್ಚಿಮದೇಶದ ಸ್ತ್ರೀಯರು ತಮ್ಮ ದೇಶಕ್ಕಾಗಿ ಎಷ್ಟು ಸ್ವಾರ್ಥತ್ಯಾಗ ಮಾಡಲು ಸಿದ್ಧರಾಗಿರುವರೊ, ಅಷ್ಟು ಸ್ವಾರ್ಥತ್ಯಾಗ ಮಾಡಲು, ಪೂರ್ವದೇಶದ ಸ್ತ್ರೀಯರೂ ಸಿದ್ಧರಾಗಿರುವರು. ಇದು ನಮ್ಮ ಶಾಂತಿಮಯ ಕಾನೂನುಭಂಗದ ಚಳವಳಿಯಿಂದ ಎಲ್ಲರಿಗೂ ಗೊತ್ತಾಗಿದೆ. ಇಂಗ್ಲೆಂಡಿನಲ್ಲಿ ಸ್ತ್ರೀಯರಿಗೆ ಸ್ವತಂತ್ರ ರಾಜಕೀಯಸ್ಥಾನವನ್ನು ದೊರಕಿಸುವುದಕ್ಕಾಗಿ ಚಳವಳಿಯು ನಡೆಯುತ್ತಿದೆ. ಆದರೆ ಭಾರತೀಯ ಮಹಿಳೆಯರಿಗೆ ಈ ಚಳವಳಿಯ ಅವಶ್ಯಕತೆಯಿಲ್ಲವೆಂದು ನನಗೆ ತೋರುವುದು. ಭಾರತೀಯ ಸ್ತ್ರೀಯರಿಗೆ ಅವರ ಸ್ವಂತದ ಪೂರ್ಣವಿಕಾಸಕ್ಕಾಗಿ ಕೆಲವು ಅಧಿಕಾರಗಳನ್ನು ಅವರು ಪಡೆಯಬೇಕಾಗಿದೆ. ಈ ಅಧಿಕಾರವು ಮುಂಚೆ ಅವರ ಕಡೆಗೆ ಇತ್ತು. ಆ ಅಧಿಕಾರ ಬಲದಿಂದ ಅವರು ಸಾಮಾಜಿಕ ಮತ್ತು ರಾಷ್ಟ್ರೀಯ ಉನ್ನತಿಯ ಕಾರ್ಯದಲ್ಲಿ ಪುರುಷರೊಂದಿಗೆ ಸಮಭಾಗಿಗಳಾಗಿ ಸಹಾಯ ಮಾಡುತ್ತಿದ್ದರು. ಆ ಪೂರ್ವಕಾಲದ ಅವರ ಅಧಿಕಾರವು ಅವರಿಗೆ ಇಂದು ದೊರೆಯಬೇಕಾಗಿದೆ. ಇಂದುಪಾವಡರ್, ಲಿಪ್‌ಸ್ಟಿಕ್ ಮೊದಲಾದ ಶೃಂಗಾರಸಾಧನೆಗಳನ್ನು ಪಯೋಗಿಸುವುದರಲ್ಲಿ ನಾವು ಪಾಶ್ಚಾತ್ಯ ಸ್ತ್ರೀಯರನ್ನನುಕರಿಸುತ್ತಿರುವುದು ನಿಜ. ಆದರೆ ಈ ಕಲೆಯು ಪಾಶ್ಚಾತ್ಯರದಲ್ಲ. ಈಜಿಪ್ತ, ಮಿಸರ ಮೊದಲಾದ ದೇಶದ ಸ್ತ್ರೀಯರು ಈ ಸಾಧನಗಳನ್ನು ಪಯೋಗಿಸುತ್ತಿರುವರು. ಅದನ್ನೆ ಪಾಶ್ಚಾತ್ಯಸ್ತ್ರೀಯರು ಅನುಕರಿಸಿರುವರು. ಹೀಗಿರುವಾಗ ಪರಸ್ಪರ ಪ್ರಭೆಯ ವಿಚಾರದಲ್ಲಿ ಚರ್ಚೆ ಮಾಡುವುದು ವ್ಯರ್ಥ. ಜಗತ್ತಿನಲ್ಲಿ ಸ್ತ್ರೀಯರೆಲ್ಲ ಒಂದೇ ಬಗೆಯವರು ಎಂಬುದೇ ಮುಖ್ಯ ತಾತ್ಪರ್ಯವಾಗಿದೆ. ಪ್ರೇಮ, ಸಾಹಸ, ಸ್ವಾರ್ಥತ್ಯಾಗ, ಧೈರ್ಯ ಇವೇ ಮೊದಲಾದ ಗುಣಗಳನ್ನು ಯಾವುದಾದರೊಂದು ದೇಶದ ಸ್ತ್ರೀಯರು ಅನ್ಯ ದೇಶದ ಸ್ತ್ರೀಯರಿಗೆ ಕಲಿಸಲಾರರು. ಈ ಗುಣಗಳು ಜಗತ್ತಿನ ಎಲ್ಲ ದೇಶದ ಸ್ತ್ರೀಯರಲ್ಲಿರುವವು. ಈ ದೃಷ್ಟಿಯಿಂದ ಪಾಶ್ಚಾತ್ಯ ಮತ್ತು ಪೌರ್ವಾತ್ಯ ಜಗತ್ತಿನ ಪುರುಷರಿಗಿಂತಲೂ ಸ್ತ್ರೀಯರಲ್ಲಿ ಅಧಿಕ ಸಾಮ್ಯತೆಯಿರುವುದೆಂದು ಹೇಳಬಹುದು. ಈ ಸಾಮ್ಯತೆಯೆಂದರೆ ಮೂಲಭೂತವಾದ ಗುಣಗಳಲ್ಲಿ ಮಾತ್ರ. ಪೌರ್ವಾತ್ಯ ಸ್ತ್ರೀಯರು ಕೆಲವಂಶದಿಂದ ವಿಚಾರ ಶೀಲರಾಗಿಯೂ ಏಕಾಂತ ಪ್ರಿಯರಾಗಿಯೂ ಇರುವರು. ಪಾಶ್ಚಾತ್ಯ ಸ್ತ್ರೀಯರು ವಿಶೇಷ ಉದ್ಯೋಗಿಗಳಾಗಿಯೂ ಚಳವಳಿ ಪ್ರಿಯರಾಗಿಯೂ ಇರುವರು ಎಂದು ಕೆಲವರು ಹೇಳುತ್ತಾರೆ. ಆದರೆ ಈ ಎರಡು ಬಗೆಯ ಪ್ರವೃತ್ತಿಯವನೇಕರನ್ನು, ನಾನು ಎರಡೂ ಸ್ತ್ರೀ ಸಮಾಜದಲ್ಲಿ ನೋಡಿದ್ದೇನೆ.'

—India

## ಆಶ್ಚರ್ಯ ಜನಕ ಪ್ರಯೋಗ

ರಾಮಾಯಣದಲ್ಲಿ ಖರನಂತಹ ರಾಕ್ಷಸನ ವರ್ಣನೆಯನ್ನು ನಾವು ಓದಿರುವೆವು. ಕತ್ತೆಯ ತಲೆ ಮತ್ತು ಮನುಷ್ಯನ ದೇಹವುಳ್ಳ ಗೊಂಬೆಯನ್ನು ನೋಡಿದರೆ ನಮಗೆ ನಗು ಬರುವುದು. ಆದರೆ ಇಂದು ಕೆಲವು ಜನ ಶಾಸ್ತ್ರಜ್ಞರು ಎರಡು ಪ್ರಾಣಿಗಳ ಈ ಬಗೆಯ ಮಿಶ್ರಣವನ್ನು ಮಾಡಿ ನೋಡುತ್ತಿರುವರು. ಎರಡು ಜಾತಿಯ ಕೀಟಗಳನ್ನು ತೆಗೆದುಕೊಂಡು ಅವುಗಳ ತಲೆಯನ್ನು ಕತ್ತರಿಸಿ ಬೇರೆ ಬೇರೆ ಮುಂಡಗಳ ಮೇಲೆ ಇಡುವುದು. ಹೀಗೆ ಮಾಡುವುದರಿಂದ ಎರಡೂ ಕೀಟಗಳು ತಂತಮ್ಮ

CC-0. Jangamwadi Math Collection. Digitized by eGangotri

ಮೂಲಜಾತಿಯ ಗುಣಧರ್ಮವನ್ನು ಬಿಟ್ಟು ಸವೀನವಾಗಿ ದೊರೆತ ಜಾತಿಯ ಗುಣಧರ್ಮವನ್ನವಲಂಬಿಸುವವು. ಎಂದರೆ ಯಾವ ಜಾತಿಯ ತಲೆಯನ್ನು ಯಾವ ಮುಂಡದ ಮೇಲೆ ಕೂಡಿಸಲಾಗಿದೆಯೋ ಆ ನವೀನ ಜಾತಿಯ ಧರ್ಮವನ್ನವಲಂಬಿಸುವವು. ತಲೆಯನ್ನು ಕತ್ತರಿಸುವುದರಿಂದ ಕೀಟವು ಕೂಡಲೆ ಸಾಯುವುದಿಲ್ಲ. ಏಕೆಂದರೆ ಅವರ ಶರೀರದಲ್ಲಿ ಶ್ವಾಸಕ್ರಿಯೆಯು ನಡೆಯುತ್ತಲೇ ಇರುವುದು. ಈ ಪ್ರಯೋಗವನ್ನು ಸಗಣಿಯ ಹುಳು ಮತ್ತು ಗಿಡದ ಮೇಲೆ ಹೋಗಿ ಎಲೆಗಳನ್ನು ತಿನ್ನುವ ಹುಳು ಇವುಗಳ ಮೇಲೆ ಮಾಡಲಾಯಿತು. ಅಷ್ಟು ಮಾಡಿದ ಕೂಡಲೆ ಮರದ ಮೇಲಿರುತ್ತಿದ್ದ ಹುಳುವು ಸಗಣಿಯೊಳಗೆ ಹೊಕ್ಕಿಕೊಂಡಿತು. ಸಗಣಿಯ ಹುಳುವು ಮರದ ಮೇಲೆ ಹತ್ತಿ ಎಲೆಗಳನ್ನು ತಿನ್ನಲಾರಂಭಿಸಿತು. ಇದರಿಂದ ಪ್ರಾಣಿಗಳ ಗುಣಧರ್ಮವು ತಲೆಯನ್ನವಲಂಬಿಸಿರುವುದೆಂಬುದು ಸಿದ್ಧವಾಗುವುದು.

--ಮಾಧುರೀ (ಹಿಂದೀ)

## ಮಕ್ಕಳು ಮತ್ತು ಸಿನೇಮಾ

ಲೀಗ್ ಆಫ್ ನೇಶನ್ಸ್ ಮುಂದೆ ಒಬ್ಬ ಫ್ರೆಂಚ್ ವಿದ್ವಾಂಸನು ಸಿನೇಮಾ ವಿಚಾರದಲ್ಲಿ ಹೀಗೆ ಹೇಳಿರುವನು:— 'ಬೈಬಲ್ ಮತ್ತು ಕುರಾನ್ ಗ್ರಂಥಗಳ ಹೊರತು ಜಗತ್ತಿನಲ್ಲಿ ಸಿನೇಮಾದಷ್ಟು ಲೋಕಪ್ರಿಯವಾದ ಮತ್ತೊಂದು ವಿಷಯವಿಲ್ಲ.' ಇಂದು ಜಗತ್ತಿನಲ್ಲಿ ೬೬,೫೬೫ ಸಿನೇಮಾಗಳಿದ್ದು, ಪ್ರತಿನಿತ್ಯವೂ ಸರಾಸರಿ ಎರಡು ಕೋಟಿ ಜನರು ಅವುಗಳನ್ನು ನೋಡುತ್ತಿರುವರು! ಆದರಿಂದ ಸುಧಾರಿಸಿದ ಜಗತ್ತಿನಲ್ಲಿ ಅದರ ಶಕ್ತಿಯು ಎಷ್ಟರ ಮಟ್ಟಿಗಿರುವುದೆಂಬುದರ ಕಲ್ಪನೆಯಾಗಬಹುದು. ಪ್ರತಿಯೊಂದು ವಿಷಯದಲ್ಲಿಯೂ ಒಳ್ಳೆಯದೂ ಇದೆ, ಕೆಟ್ಟದ್ದೂ ಇದೆ. ಅದರಂತೆಯೆ ಸಿನೆಮಾ ಕೂಡ. ಆದರೆ ಇದು ಕೇವಲ ಕೆಟ್ಟದ್ದು ಎಂದು ಹೇಳಿದ ಮಾತ್ರಕ್ಕೆ ಆಗುವುದಿಲ್ಲ; ಅದನ್ನು ನಾಶಗೊಳಿಸುವುದೂ ಅಸಾಧ್ಯವಾಗಿದೆ. ರಾಯನಿಂದ ರಂಕನವರೆಗೆ ಸರ್ವರಿಗೂ ಸುಸಾಧ್ಯವಾಗಿರುವ ಮನೋರಂಜನವೆಂದರೆ ಸಿನೇಮಾ ಮಾತ್ರ. ಹೀಗಿರುವಾಗ ಅದರಲ್ಲಿ ಯಾವ ಸುಧಾರಣೆಯನ್ನು ಮಾಡಬೇಕೆಂಬುದನ್ನು ನೋಡಿ, ಯಾವುದಾದರೂ ವಿಧಾಯಕ ಯೋಜನೆಯನ್ನು ಮಾಡಬೇಕು. ಅಮೆರಿಕದಲ್ಲಿ ಸಿನೇಮಾ ಕಂಪನಿಗಳ ಸಂಸ್ಥೆಯೊಂದು ಒಂದು ಕಾಯಿದೆಯನ್ನು ಮಾಡಿರುವುದು. ಅದರಲ್ಲಿ ಮುಖ್ಯವಾಗಿ ಮೂರು ತತ್ವಗಳಿರುವವು. (೧) ಹೀನ ವರ್ಗದ ಮತ್ತು ನೀತಿಗೆ ವಿಘಾತಕವಾದ ಚಿತ್ರಪಟಗಳನ್ನು ತಯಾರು ಮಾಡಬಾರದು. ಅತ್ಯಾಚಾರ ಮತ್ತು ಮಹದಪರಾಧಗಳ ಮಂಡನವನ್ನು ಚಿತ್ರಪಟದಲ್ಲಿ ಮಾಡಬಾರದು. (೨) ಉಚಿತವಾದುದನ್ನೇ ಜೀವನದ ಆದರ್ಶವನ್ನಾಗಿಟ್ಟುಕೊಳ್ಳಬೇಕು. (೩) ನೈಸರ್ಗಿಕ ಮತ್ತು ಮಾನವೀಯ ಕಾಯಿದೆಗಳಿಗೆ ವಿರುದ್ಧವಾಗಿ ಆಚರಿಸುವ ಶಿಕ್ಷಣವನ್ನು ಚಿತ್ರಪಟದಲ್ಲಿ ಸೇರಿಸಬಾರದು. ಮಕ್ಕಳ ಭಾವನಾಪ್ರಧಾನವಾದ ಕೋಮಲ ಮನಸ್ಸಿನ ಮೇಲೆ ಸಿನೇಮಾದಿಂದ ಆವ ಪರಿಣಾಮವಾಗುವುದೆಂಬುದನ್ನು ನೋಡಲು ಬಕಿಂಗಹ್ಯಾಮ್ ಯುನಿವರ್ಸಿಟಿಯ ವೈಸ್ ಛಾನ್ಸೆಲರಾದ ಸರ್ ಚಾರ್ಲ್ಸ್ ಗ್ರ್ಯಾಟ್‌ರಾಬರ್ಟಸನ್ ಎಂಬಾತನ ಅಧ್ಯಕ್ಷತೆಯಲ್ಲಿ ಒಂದು ಕಮಿಟಿಯನ್ನು ನೇಮಿಸಲಾಗಿತ್ತು.— 'ನೀವು ವಾರದೊಳಗೆ ಎಷ್ಟುಬಾರಿ ಸಿನೇಮಾಕ್ಕೆ ಹೋಗುವಿರಿ? ನಿಮಗೆ ಯಾವ ಚಿತ್ರಪಟವು ಚೆನ್ನಾಗಿರುವುದು?' ಇತ್ಯಾದಿ ಪ್ರಶ್ನೆಗಳ ಪತ್ರಿಕೆಯನ್ನು ಸಾವಿರಾರು ಮಕ್ಕಳಿಗೆ ಕಳುಹಿಸಿದರು. ಅವರ ಉತ್ತರದಿಂದ ಸಾಮಾನ್ಯವಾಗಿ ಶೃಂಗಾರಪಟಗಳು ಮಕ್ಕಳಿಗೆ ರುಚಿಸುವುದಿಲ್ಲವೆಂದು ಕಂಡುಬರುವುದು. ಗಂಡುಮಕ್ಕಳಿಗೆ ಸಾಹಸಕೃತ್ಯ ಮತ್ತು ಪರ್ಯಟನದ ಚಿತ್ರಪಟಗಳು ಹೆಚ್ಚು ರುಚಿಸುವವು. ಹುಡುಗಿಯರಿಗೆ ಆನಂದ ಪರ್ಯವಸಾಯಿಯಾದ ವಿಚಾರ, ಧೈರ್ಯದ ಕೃತ್ಯಗಳು, ಡಿಟೆಕ್ಟಿವ್ (ಗುಪ್ತ) ಪೋಲೀಸರ ಕಥೆಗಳು— ಇವೇ ಮೊದಲಾದ ವಿಷಯಗಳ ಚಿತ್ರಪಟಗಳು ರುಚಿಸುವವು. ಭೀಕರ ವರ್ಣನೆಯುಳ್ಳ ಚಿತ್ರಪಟಗಳು ಮಕ್ಕಳ ಮನಸ್ಸಿನ ಮೇಲೆ ವಿಶೇಷಪರಿಣಾಮವನ್ನುಂಟುಮಾಡುವವು. ಚಿತ್ರಪಟದ ಭೀಕರ ವ್ಯಕ್ತಿಗಳ ಹೆಸರನ್ನು ಹಿಡಿದು ಕೂಗುತ್ತ ಮಕ್ಕಳು ನಿದ್ರೆಯಿಂದೇಳುವವು; ಹೆದರಿ ಅಸ್ವಸ್ಥವಾಗುವವು. ಒಂದು ಸಮಯದಲ್ಲಿ ಒಬ್ಬ ಕುಬ್ಜನ ಭೀಕರ ರೂಪವನ್ನು ಪ್ರತ್ಯೇಕ (close-up) ವಾಗಿ ಪಟದಲ್ಲಿ ತೋರಲಾಗಿತ್ತು. ಅದು ನಿಧಾನವಾಗಿ ದೊಡ್ಡದಾಗುತ್ತ ಪ್ರೇಕ್ಷಕರಕಡೆ ಬರುತ್ತಿರುವಂತೆ ತೋರುತ್ತಿತ್ತು. ಆ ನೋಟಕ್ಕೆ ಹೆದರಿ ಒಬ್ಬ ಹುಡುಗಿಯು ಗಟ್ಟಿಯಾಗಿ ಅರಚಿಕೊಂಡು



CC-0. Jangamwadi Math Collection. Digitized by eGangotri

ಮೂರ್ಛಿತಳಾದಳು. ಅನಂತರ ಆವಳು ಆಗಾಗ್ಗೆ ಮೂರ್ಛೆಹೊಂದುತ್ತಿದ್ದಳು. ಗಂಡುಮಕ್ಕಳ ಮನಸ್ಸಿನ ಮೇಲೆ, ಅಥವಾ ಅವರ ಶೀಲದಲ್ಲಿ ಸಿನೇಮಾದಿಂದ ವಿಶೇಷಪರಿಣಾಮಃವಾಗುವದೆಂಬ ವಿಚಾರದಲ್ಲಿ ವಿಶೇಷ ಸಾಕ್ಷಿಗಳಿಲ್ಲ. ಏಕೆಂದರೆ ಸಿನೇಮಾ ದೃಶ್ಯವನ್ನು ಅನುಕರಿಸಿ, ದರೋಡೆ ಮಾಡುವ ಮತ್ತು ರೈಲನ್ನು ಉರುಳಿಸಲೆತ್ನಿಸುವ ಯುವಕರು ಅಪರೂಪವಾಗಿರುವರು. ಆದಾಗ್ಯೂ ನೀತಿಮಾರ್ಗಕ್ಕೆ ಪೋಷಕವೂ ಸಾತ್ವಿಕ ಭಾವವನ್ನು ಜಾಗೃತಗೊಳಿಸುವಂತಹವೂ ಆದ ಚಿತ್ರಪಟಗಳನ್ನು ಮಕ್ಕಳಿಗೆ ತೋರಿಸಬೇಕು-ಎಂಬ ವಿಚಾರದಲ್ಲಿ ವಿಚಾರಿಗಳಲ್ಲಿ ಮತ್ತು ಶಾಸ್ತ್ರಜ್ಞರಲ್ಲಿ ಏಕಾಭಿಪ್ರಾಯವಿರುವುದು. ಕೇವಲ ಶಾಬ್ದಿಕ ಶಿಕ್ಷಣದಿಂದ ತಿಳಿಯದುದು ಪ್ರತ್ಯಕ್ಷ ಚಿತ್ರಪಟವನ್ನು ತೋರುವುದರಿಂದ ತಿಳಿಯುವುದು, ಇಂಗ್ಲೆಂಡಿನಲ್ಲಿ, ಪಾಠಶಾಲೆಯಲ್ಲಿ ವಿದ್ಯಾಬುದ್ಧಿಯವರೆಸಿಕೊಂಡ ಮಕ್ಕಳು ಚಿತ್ರಪಟಗಳ ಸಹಾಯದಿಂದ ವಿದ್ಯಾಭ್ಯಾಸಮಾಡಲಾರಂಭಿಸಿ ಬಹು ಶೀಘ್ರವಾಗಿ ಮುಂದರಿದ ಉದಾಹರಣೆಗಳಿವೆ. ಈಗ ಇಂಗ್ಲೆಂಡಿನ ೫೦೦ ಶಾಲೆಗಳಲ್ಲಿ ಚಿತ್ರಪಟಗಳ ಸಹಾಯದಿಂದ ಶಿಕ್ಷಣವನ್ನು ಕೊಡುತ್ತಿರುವರು. ಹೀಗಿರುವಾಗ ಸಿನೇಮಾ ಈ ಶಕ್ತಿಯನ್ನರಿತು, ಅದನ್ನು ಉಚಿತವಾದ ರೀತಿಯಲ್ಲಿ ಉಪಯೋಗಿಸಿಕೊಳ್ಳುವುದರಿಂದ ರಾಷ್ಟ್ರೀಯ ಶಿಕ್ಷಣದಲ್ಲ ಕ್ರಾಂತಿಯನ್ನುಂಟುಮಾಡಿ ತೋರಬಹುದು.

—Fortnightly Review.

# ಸಾದರ ಸ್ವೀಕಾರ

೧೨೭ ನಲ್ಮೆ: ಮೂರು ಕವಿತೆಗಳು:— ಲೇಖಕರು ವಿದ್ವಾನ್ ಕಡೆಂಗೋಡ್ಲು ಶಂಕರಭಟ್ಟರು, ಮಂಗಳೂರು ಪ್ರಕಾಶಕರು:- ಸತ್ಯಶೋಧನ ಪುಸ್ತಕಭಂಡಾರ, ಬೆಂಗಳೂರು. ಕ್ರೌ. ಅ. ೮೭ ಪುಟಗಳು. ಬೆಲೆ ೧೨ ಆಣೆ.

೧೨೮ ಕನ್ನಡದ ಸೇವೆ. ಶ್ರೀ. ಮಾಸ್ತಿ ವೆಂಕಟೇಶಯ್ಯಂಗಾರ್ಯರ ಒಂದು ಭಾಷಣ, ಕ್ರೌ. ಅ. ೫೫ ಪುಟ. ಬೆಲೆ ೪ ಆಣೆ.

೧೨೯ ಕಾಸಿನ ಸರ. ೭ ಕತೆಗಳು :- ಲೇಖಕರು ಎಂ. ಜಿ. ವೆಂಕಟೇಶಯ್ಯ ಎಂ. ಎ. ಸತ್ಯನಾರಾಯಣ ಪೇಟೆ ಬಳ್ಳಾರಿ. ಕ್ರೌ. ಅ. ೫೬ ಪುಟಗಳು. ಬೆಲೆ ೬ ಆಣೆ.

೧೩೦ ಜಯಂತೀಕ್ಷೇತ್ರ ಮಹಿಮೆ:- ಲೇಖಕರು ಮೂಗೂರು ಹನುಮಂತಾಚಾರ್ಯರು, ಮುಖ್ಯೋಪಾಧ್ಯಾಯರು ಕನ್ನಡಶಾಲೆ, ಆನವಟ್ಟಿ. ಕ್ರೌ. ಅ. ೧೧೬ ಪುಟಗಳು ಬೆಲೆ ೧೦ ಆಣೆ.

೧೩೧ ಖಾದೀಮಹಿಮೆ (ಸಚಿತ್ರ):- ಲೇಖಕರು ಎ. ಎನ್. ಸೂರ್ಯನಾರಾಯಣರಾವ್. ಕ್ರೌ. ಅ. ೩೨ ಪುಟಗಳು. ಬೆಲೆ ೧ ಆಣೆ.

೧೩೨ ಹಾಳು ಕಾಗದ. ಕಥೆ :- ಲೇಖಕರು ರುಕ್ಮಿಣೀಕಂದ, ರಾಯಚೂರು ಕರ್ನಾಟಕ ತರುಣಸಂಘದ ಪ್ರಕಟನೆ. ಕ್ರೌ. ಅ. ೧೮ ಪುಟ.

೧೩೩ ಆದನ್ನೇ ಉಂಡೇನು ಕದ ತೆಗಿ! ಕಥೆ:- ಲೇಖಕರು ವಿ. ವೇಂಕಟನಾವಧಾನಿ. ಪ್ರಕಾಶಕರು:- ವಿವೇಕಗ್ರಂಥಮಾಲಾ ಆಫೀಸು, ಹೊಳೆನರಸೀಪುರ. ಕ್ರೌ. ಅ. ೫೬ ಪುಟಗಳು. ಬೆಲೆ ೪ ಆಣೆ.

೧೩೪ ನಿರ್ದೋಷಿ. ಕಥೆ :- ಲೇಖಕರು ಚಿಕ್ಕೋಡಿ ಅನಂತರಾಯರು. ಬೆಳಗಾಂವಿಯ ಒಂದಾಣೆ ಗ್ರಂಥಮಾಲೆಯ ಪ್ರಕಟನೆ. ಕ್ರೌ. ಅ. ೧೫ ಪುಟಗಳು.

೧೩೫ ಹಿಂದುಸ್ಥಾನದ ರಾಜ್ಯದಾಡಳಿತದ ಪಟವು:- ಸಂಗ್ರಾಹಕರು ಶ್ರೀ. ತ.ಸ. ಮುಂಡರಗಿ, ಮಾಸ್ತರ ಹುಬ್ಬಳ್ಳಿ. ಬೆಲೆ ೩ ಆಣೆ.

ಹಿಂದುಸ್ಥಾನದ ಪ್ರಚಲಿತ ರಾಜ್ಯಯಂತ್ರದ ವಿಷಯವು ಪರಿಚಯವನ್ನು ಮಾಡಿಕೊಳ್ಳಲಪೇಕ್ಷಿಸುವವರಿಗೆ ಇದು ಒಳ್ಳೇ ಉಪಯೋಗಕಾರಿಯಿದೆ. ಬ್ರಿಟಿಶ ಪಾರ್ಲಮೆಂಟಿನಿಂದ ತೀರ ಕೆಳಗಿನ ಮಧ್ಯಸರಕಾರದ ಮತ್ತು ಪ್ರಾಂತಿಕಸರಕಾರಗಳ ಖಾತೆಗಳವರೆಗೂ, ಅವುಗಳಲ್ಲಿಯ ಮೇಲಿನ ಅಧಿಕಾರಿಗಳಿಂದ ಕೆಳಗಿನಸಿಪಾಯಿ,ಶಿಪಾಯಿ ವರೆಗೂ ಆಯಾ ಸ್ಥಾನಗಳು, ಅವುಗಳಿಗಿರುವ ಸಂಬಂಧಗಳು ಮೊದಲಾದುವನ್ನು ವ್ಯವಸ್ಥಿತವಾಗಿ ಕೊಟ್ಟಿದೆ. ಹೊಸ ರಾಜ್ಯಯೋಜನೆಯು ಬೇಗ ಪ್ರಸ್ತಾಪಿತವಾಗುವುದರಲ್ಲಿರುವದರಿಂದ ಲೇಖಕರು ಇನ್ನೊಂದು ಪಟವನ್ನು ಆಗ ಪ್ರಕಟಿಸಬೇಕಾಗುವದೆಂದು ತೋರುತ್ತಿದೆ.

CC-0. Jangamwadi Math Collection. Digitized by eGangotri




# ಯೆಂಡತ್ಕೊಂಡ್ರೆ*

(ಜಿ. ಪಿ. ರಾಜರತ್ನಂ)

ಬಿಟ್ಟಿದ್ದೆ ಯೆಂಡ ಅಲ್ಲಿ
  ನೆಟ್ಗೆ ಬಂದೆ ಇಲ್ಲಿ.
ಎಲೇಲೇಲೇ ರಸ್ತೆ!
  ಏಸು ಅವ್ವೆವಸ್ತೆ!
ಮೈಕೈಯೆಲ್ಲ ಮುದ್ರಿ
  ಯಾಕೇ ಕುಣೀತಿ ಕುದ್ರಿ?
ಕೊಟ್ಟೆಯಲ್ಲ ಗಸ್ತು!
  ಕುಡ್ದಿದ್ದೀಯ ರಸ್ತೆ! ॥೧॥

ಚಂದ್ರಸ್ಮುಕವೇಕ್ಕೊಸ್ಟಟ್ಟು?
  ಆದ್ದು! ಬಲಗಣ್ ಛಟ್ಟು!
ಉಳ್ದಿರೋ ಎಡ್ದಾಗಣ್ಣು
  ಯೆಚ್ಚ್ಕಿದ್ದಿಂಬೇ ಅಣ್ಣು!
ಏನೋ ಚಂದ್ರು! ಪೆಂಗೆ!
  ನಾಚ್ಕೆ ಇಲ್ವೇ ಸಿಂಗೆ!
ಕೆಟ್ಟವರ್ಕುಡಿತಾರಂದ್ರೆ
  ಸಿಂಗ್ಯಾಕೆಂಡತ್ಕೊಂಡ್ರೆ? ॥೨॥

ನೋಡಲ್ಬೀದಿ ದೀಪ
  ಗಿರ್ಕೀ ವೊಡೀತ್ತಾಪ!
ತಿರ್ ತಿರ್ ತಿರ್ ತಿರ್ ತಿಗ್ರ್ತಾ
  ತೂರಾಡ್ತಾದೆ ತೂಗ್ತಾ!
ಇಲ್ಲೀರೊ ಒಂದಕ್ಕಾನಾ
  ಸೋದೀಸಿಲ್ಲಾ ಗ್ನಾನಾ!
ಸಾಲಾಗ್ನಿಂತವ್ನಟ್ಟು
  ಯೆಂಡ ಕುಡದ್ಬುಟ್ಟು! ॥೩॥

ದೋಡ್ದು ಚಿಕ್ದು ಎಲ್ಲಾ—
  ನೋಡ್ದ ಅವುಗಳ್ಗೆಲ್ಲಾ!
ಇವ್ರು ಕುಡ್ದೋರ್ಮದ್ದ
  ನನ್ಗೆ ಮಾತ್ರ ಸುದ್ದ!
ಯೆಂಡ ಕುಡ್ದೋರ್ನಡುವೆ
  ನಮ್ಗೆ ಮಾನಕ್ಕಡುವೆ.
ಯೆಂಡದಂಗ್ಡೀಗಾನ
  ಆದ್ರೆ ಯಿಂತಿಗ್ರೋಸ. ॥೪॥



ಆಕೆ—ಅದೇನು! ನನ್ನ ಚಿತ್ರ ಈ ಪತ್ರಿಕೆಯಲ್ಲಿ ಅಚ್ಚಾಗಿಯೇ ಇಲ್ಲವಲ್ಲ!

ಆತ ಅಹುದು! ಪತ್ರಿಕೆಯು ಅಷ್ಟೆ ಚಿಕ್ಕದಲ್ಲವೇ!

* ಇದೊಂದು ಮೈಸೂರು ಕಡೆಯ ಜಾನಪದಭಾಷೆಯಲ್ಲಿ ಬರೆದ ಹಾಸ್ಯಗೀತೆ. ಹೆಂಡಕುಡಿದವನೊಬ್ಬನು ದಾರಿಯಿಂದ ನಡೆದಿದ್ದಾನೆ. ಮೊದಲನೆಯ ಪದ್ಯದಲ್ಲಿ 'ನೀನು ಹೆಂಡ ಕುಡಿದಿದ್ದೀಯೇ?' ಎಂದು ರಸ್ತೆಗೆ ಕೇಳುತ್ತಾನೆ. ಎರಡನೆಯ ಪದ್ಯದಲ್ಲಿ ಚಂದ್ರನನ್ನು ಹೆಂಡ ಕುಡಿದವನೆಂದು ಹೀಯಾಳಿಸುತ್ತಾನೆ. ಮೂರನೆಯ ಪದ್ಯದಲ್ಲಿ ಬೀದಿಯ ದೀಪಗಳೆಲ್ಲ ಹೆಂಡ ಕುಡಿದು ಗಿರಿಗಿರಿ ತಿರುಗುತ್ತವೆಂದು ಹೇಳುತ್ತಾನೆ. ನಾಲ್ಕನೆಯ ಪದ್ಯದಲ್ಲಿ 'ಎಲ್ಲರೂ ಕುಡಿದವರೇ ತಾನು ಮಾತ್ರ ಶುದ್ಧ' ಎಂದುಕೊಂಡು ಇಂತವರ ನಡುವೆ ಇರುವುದು ನಮ್ಮ ಮಾನಕ್ಕೆ ಕಡಿಮೆ. ಆದುದರಿಂದ ಹೆಂಡದ ಅಂಗಡಿಗೇ ಹಿಂತಿರುಗಿ ಹೋಗೋಣ- ಎಂದು ನುಡಿದು ಹೊರಟು ಬಿಡುವನು.

CC-0. Jangamwadi Math Collection. Digitized by eGangotri




## ಸುಗ್ಗಿಯ ಹಾಡು*

ಸಂಗ್ರಾಹಕರು:— ಶ್ರೀ. ಮೇ. ಫಾ. ನಾಯಕ ಅವರ್ಸಾ, ಉ. ಕನ್ನಡ ಜಿಲ್ಲೆ

( ಕೋಲಾಟದ ಉತ್ಪತ್ತಿ )

ಸ್ವಾಮಿಽ ಹುಟ್ಟುವ ಮೊದಲೆ। ಭೂಮಿಽ ಹುಟ್ಟುವ ಮೊದಲೆ। ಸ್ವಾಮಿ ಮಾದೇವರಾಯಾ ಹುಟ್ಟಿ ಬಂದನೋ ಕೋಲೂ ॥ ೧ ॥

ಹಿಡಿವೆನೆಂದರೆ ಹೆಣಿಗಳಿಲ್ಲ। ತಡೆವೆನೆಂದರೆ ಭೂಮಿ ಗಳಿಲ್ಲ। ಅಂತರಳಿಯ ಮೇಲೆ ತಾ ಆಡುತ್ತಿದ್ದನು ಕೋಲೂ ॥ ೨ ॥

ಅಂತರಳಿಯ ಮೇಲೆ ತಾನು ಆಸುತ್ತೈದಾನೂ ಮಾದೇ ವರಾಯ। ಅಂಗೈ ಮೇಲೆ ಹೋಮುಗಳ ತಾ ಸುಟ್ಟೈದಾನು ಕೋಲೂ ॥ ೩ ॥

ಅಂಗೈಗಳ ಮೇಲೆ ಹೋಮುಗಳ ತಾ ಸುಟ್ಟೈದಾನು ಮಾದೇವರಾಯ। ಹಣೆಯ ಮೇಲೆ ವಿಭೂತಿಗಳ ತಾ ಹಚ್ಚಿದಾನೂ ಕೋಲೂ ॥ ೪ ॥

ಹಣೆಯ ಮೇಲೆ ವಿಭೂತಿಗಳ ತಾ ಹಚ್ಚಿದಾನು ಶ್ರೀ ಮಾದೇವರಾಯ। ಸತ್ಯದಲಿ ತಾ ಬಸವೇಶ್ವರನ ಪಡೆ ದಾನು ಕೋಲೂ ॥ ೫ ॥

### ಮಹಾದೇವನ ಅಪ್ಪಣೆ

ನೀ ಕೇಳು ಬಸವೇಶ್ವರರಾಯ। ನೀ ಕೇಳು ಬಸವೇ ಶ್ವರರಾಯ। ಭೂಮಿಽ ಹುಟ್ಟುವ ಹೊಳಲ ತಿಳಿಯಬೇಕೂ ಕೋಲು ॥ ೬ ॥

ಸುತ್ತಲೂ ಸಾಗರವ ನೀ ತಿರುಗಬೇಕೂ ಕೋಲೂ। ಭೂಮಿ ಹುಟ್ಟುವ ಹೊಳಲಽ ತಿಳಿಯಬೇಕೂ ಕೋಲೂ ॥ ೭ ॥

ಸರದ ಗಂಟೆಯಾ ಕೊರಳಿಗೆ ತಡೆದೂ ಭೋಪ್ರು ವಿಶ್ಲನೇ ಹೊಡೆದು। ಬೆನ್ನ ಮೇಲೆ ಜೂಲನೇ ತಡೆದಾನು ಕೋಲು ॥ ೮ ॥

ದಾರೀ ಗುಂಟನೇ ಹಿಡಿದು ನಡೆದೈದಾನು ಕೋಲೂ। ಸುತ್ತಲೂ ಸಾಗರವ ತಾ ತಿರುಗಿದಾನು ಕೋಲೂ ॥ ೯ ॥

ಸುತ್ತಲೂ ಸಾಗರವ ತಾ ತಿರುಗಿದಾ ಬಸವೇಶ್ವರ ರಾಯ। ಭೂಮಿ ಹುಟ್ಟಿದ ಹೊಳಲಾ ತಿಳಿಯಲಿಲ್ಲವೋ ಕೋಲೂ ॥ ೧೦ ॥

ಮೂಡಲೂ ದಿಕ್ಕಿಗೆ ನಡೆದಾನು ಬಸವೇಶ್ವರರಾಯ ಅಲ್ಲೊಂದು ಹೆಣ್ಣು ಕನ್ಯೆ ಪತಿವ್ರತೆಯು ಕೋಲೂ ॥ ೧೧ ॥

ಅಲ್ಲೊಂದು ಹೆಣ್ಣು ಕನ್ಯೆ ಪತಿವ್ರತೆಯು ಕೋಲೂ। ಅರಳೆಲೆಯಷ್ಟು ಭೂಮೀ ಪಡೆದೈದಾಳು ಕೋಲೂ ॥ ೧೨ ॥

ಅರಳೆಲೆಯಷ್ಟು ಭೂಮೀ ಪಡೆದೈದಾಳೂ ಕೋಲೂ। ದಗಲಮಂಟಿಯ ಹೊಡೆದು ಕುಳಿತೈದಾಳು ಕೋಲೂ ॥ ೧೩ ॥

ದಗಲಮಂಡಿಯ ಹೊಡೆದು ಕುಳಿತೈದಾಳೂ ಕೋಲೂ। ಸೂಜೀ ಮೊನೆಯಾ ಮೇಲೆ ತಪವಽ ಮಾಡುತ್ತೈದಾಳು ಕೋಲೂ ॥ ೧೪ ॥

* ಉತ್ತರ ಕನ್ನಡ ಜಿಲ್ಹೆಯಲ್ಲಿ ಸುಗ್ಗಿಯಲ್ಲಿ ರೈತರು ಕೋಲಾಟವಾಡುತ್ತ ಕುಣಿಯುವಾಗ ಹೇಳುವ ಪದನಿದು.

CC-0. Jangamwadi Math Collection. Digitized by eGangotri

ಸೂಜೀ ಮೊನೆಯ ಮೇಲೆ ತಪವಾ ಮಾಡುತ್ತಿದ್ದಾಗ ಅಲ್ಲೀ ಬಸವೇಶ್ವರರಾಯ ಹೋಗಿದ್ದಾನೂ ಕೋಲೂ ॥ ೧೫ ॥

ಅಲ್ಲೀ ಬಸವೇಶ್ವರರಾಯ ಹೋಗಿದ್ದನು ಕೋಲೂ। ಭೋರ್‍ರೆಂಬ ವಿಶ್ಲ ತಾನು ಹೊಡೆದೈವಾನು ಕೋಲೂ ॥ ೧೬ ॥

ಭೋರ್‍ರೆಂಬ ವಿಶ್ಲನೇ ಹೊಡೆದನು ಕೋಲೂ । ಕನ್ನೆ ಕರುಗಿ ಹರ್‍ಯೊಂದು ಜಲವಾಗಿ ಹರಿದೋಯಿತು ಕೋಲೂ ॥ ೧೭ ॥

ಕನ್ಯೆ ಕರುಗಿ ಹರ್‍ಯೊಂದು ಜಲವಾಗಿ ಹರಿದ್ಹೋಯಿತು ಕೋಲೂ। ತಾನು ಹಿಂದಿರುಗಿ ಅಣ್ಣನೆಡೆಗೆ ಬಂದೈವಾನೂ ಕೋಲೂ ॥ ೧೮ ॥

## ಬಸವೇಶ್ವರನ ಬಿನ್ನಹ

ನೀ ಕೇಳು ಮಾದೇವಣ್ಣಾ ನೀ ಕೇಳು ಮಾದೇವಣ್ಣಾ। ಸುತ್ತೆಲ್ಲ ಸಾಗರವ ತಾ ತಿರುಗೀ ಬಂದೆನುಕೋಲೂ॥೧೯॥

ಸುತ್ತೆಲ್ಲ ಸಾಗರವ ತಿರುಗಿಬಂದೆ ಮಹಾದೇವಣ್ಣಾ। ಭೂಮಿ ಹುಟ್ಟುವ ಹೊಳಲು ತಿಳಿಯಲಿಲ್ಲಕೋಲೂ॥೨೦॥

ಮೂಡುವ ದಿಕ್ಕಿಗೆ ತಾ ನಡೆದಿದ್ದೆ ಮಾದೇವಣ್ಣಾ। ಅಲ್ಲೊಂದು ಹೆಣ್ಣು ಕನ್ಯೆ ಪತಿವ್ರತೆಯು ಕೋಲೂ॥೨೧॥

ಅಲ್ಲೊಂದು ಹೆಣ್ಣು ಕನ್ಯೆ ಪತಿವ್ರತೆಯು ಕೋಲೂ। ಅರಳೆಲೆಯಷ್ಟು ಭೂಮೀ ಪಡೆದೈದಾಳೂ ಕೋಲೂ॥೨೨॥

ಅರಳೆಲೆಯಷ್ಟು ಭೂಮೀ ಪಡೆದಿದ್ದಳು ಕೋಲೂ । ದಗಲುಮಂಡಿಯ ಹೊಡೆದು ಕೂತಿದ್ದಳು ಕೋಲೂ॥೨೩॥

ದಗಲಮಂಡಿಯ ಹೊಡೆದು ಕೂತಿದ್ದಾಳು ಕೋಲು । ಸೂಜೀ ಮೊನೆಯಾ ಮೇಲೆ ತಪವ ಮಾಡುತ್ತಿದ್ದಳೂ ಕೋಲೂ ॥ ೨೪ ॥

ಸೂಜೀ ಮೊನೆಯ ಮೇಲೆ ತಪವ ಮಾಡುತ್ತಿದ್ದಾಗ ಕೋಲು। ಭೋರ್‍ರೆಂಬ ವಿಶ್ಲ ತಾನು ಹೊಡೆದಿದ್ದೆ ಕೋಲೂ ॥ ೨೫ ॥

ಭೋರ್‍ರೆಂಬ ವಿಶ್ಲ ತಾನು ಹೊಡೆದಿದ್ದೆ ಕೋಲೂ। ಕನ್ಯೆ ಕರಗಿ ಹರ್‍ಯೊಂದು ಜಲವಾಗಿ ಹರಿದ್ಹೋಯಿತು ಕೋಲು ॥ ೨೬ ॥

## ಮಹಾದೇವನ ನುಡಿ

ಭೋರ್‍ರೆಂಬ ವಿಶ್ಲ ಹೊಡೆದಿದ್ದಿಯೋ ಬಸವೇಶ್ವರ ರಾಯಾ ಕನ್ಯೆಯನ್ನು ಯಾಕೆ ನೀ ಕರುಗಿಸಿದೆಯೋ ಕೋಲೂ ॥ ೨೭ ॥

ನೀ ಕೇಳು ಮರುಳ ತಮ್ಮಾ ನೀ ಕೇಳು ಹೆಡ್ಡ ತಮ್ಮಾ ಭೋರ್‍ರೆಂಬ ವಿಶ್ಲಯಾಕೆ ಹೊಡೆದಿದ್ದೆ ಕೋಲೂ ॥ ೨೮ ॥

## ಬಸವನ ನುಡಿ

ಕನ್ಯೆ ಪಡೆದಂಥಾ ಭೂಮಿ ನಮಗ್ಯಾತಕೆ ಮಾದೇವಣ್ಣಾ! । ನಮ್ಮ ಸತ್ಯಾದಲಿ ಭೂಮೀ ಪಡೆಯಬೇಕೂ ಕೋಲೂ ॥ ೨೯ ॥

ಭೋರ್‍ರೆಂಬ ವಿಶ್ಲ ತಾನು ಹೊಡೆದಿದ್ದ ಬಸವೇಶ್ವರ ರಾಯಾ। ಪಾತಾಳ ಜಡಿದು ಪಾರಿವಾಳಕ್ಕಿ ಬಂದವು ಕೋಲೂ ॥ ೩೦ ॥

ಹಿಡಿವೆನೆಂದರೆ ಹೆಣೆಗಳಿಲ್ಲ ತಡೆವೆನೆಂದರೆ ಭೂಮಿಗಳಿಲ್ಲ। ಅಂತರಳಿಯ ಮೇಲೇ ಆಡುತ್ತೈದವೂ ಕೋಲೂ ॥ ೩೧ ॥

ಸತ್ಯದಲಿ ಚಂದನಗಿಡವ ಪಡೆದನು ಶ್ರೀಮಾದೇವ ರಾಯು । ಬಸವನ ಕೋಡಿನ ಮೇಲೆ ಚಿಗ್ಗಾ ಸಾಕಿದವು. ಕೋಲೂ ॥ ೩೨ ॥

ಬಸವನ ಕೋಡಿನ ಮೇಲೆ ಕಡ್ಡಿ ಏರಿಸಿದವು ಕೋಲೂ। ಅದರ ಮೇಲೆ ಮೂರ್ವೊಟ್ಟೀ ತಾವೂ ಹಾಕಿದವು ಕೋಲು ॥ ೩೩ ॥

ಮೊಟ್ಟೀ ಹಾಕಿದ ಮೇಲೆ ಮೊಟ್ಟೀ ಮೊಟ್ಟಿಗೆ ತಾಗಿ । ಜರಿದುಬಿದ್ದು. ಸ್ವಾಮಿಯ ಮೇಲೆ ಸಂಕಟ ಬಂದಿತು ಕೋಲು ॥ ೩೪ ॥

ಸ್ವಾಮೀ ಏನು ಮಾಡುತ್ತೈದಾನು ಮಾದೇವರಾಯಾ। ಮೂರೆಂಬ ವರವನುತಾ ಕೊಡುವನು ಕೋಲೂ ॥ ೩೫ ॥

ಕರಿಯ ಮಂಡಲ ಭೂಮಿತಾಯಿ ಆಗಲೋ ಬಿಳಿಯ ಮಂಡಲಕ್ಕೆಂಬುದು ಆಕಾಶವಾಗಲೋ । ಹಸರು ಮಂಡಲಕ್ಕೆಂಬದು ಜೀವರಾಶಿಯೋ ಕೋಲೂ ॥ ೩೬ ॥

ಹೆದರೂತೆ ಅಂಜುತೆ ಹುಟ್ಟಿ ಬರುತ್ತಿದ್ದಳೋ ಭೂಮಿ ತಾಯಿ। ಹೆದರದೆ ಅಂಜದೆ ಹುಟ್ಟಿ ಬರಬೇಕೂ ಕೋಲೂ ॥ ೩೭ ॥

ಹೆದರದೆ ಅಂಜದೆ ಹುಟ್ಟಿ ಬರಬೇಕೂ ಭೂಮಿತಾಯಿ । ಕಲ್ಲಕಂಟಕದ ಬಲವ ಕೊಡುತ್ತೇನೋ ಕೋಲೂ ॥ ೩೮ ॥

ಹಗಲಿಗೆ ನರಮನುಷ್ಯರ ಕಾವಲೂ ರಾತ್ರಿಗೆ ಕಾಡು ಮಿಗದ ಕಾವಲೂ। ನಿನಗೆ ಮರವೋಪಿನ ಬಲವಾ ಕೊಡುತೇನು ಕೋಲೂ ॥ ೩೯ ॥

ಹೆದರದೆ ಅಂಜದೆ ಹುಟ್ಟಿ ಬಂತು ಭೂಮಿತಾಯಿ। ಭೂಮಿಯು ಮೇಲೆ ಸ್ವಾಮೀ ತಾ ನಿಂತಿದಾನು ಕೋಲೂ ॥ ೪೦ ॥



CC-0. Jangamwadi Math Collection. Digitized by eGangotri

ಭೂಮಿಯ ಮೇಲೆ ಸ್ವಾಮಿ ತಾನು ನಿಂತಿದಾನು ಮಾದೇವರಾಯ । ನೂರೊಂದು ದೇವತೆಗಳ ಪಡೆದಾನು ಕೋಲೂ ॥ ೪೧ ॥

ನೀವು ಕೇಳಿ ದೇವತೆಗಳಿರಾ । ನೀವು ಕೇಳಿ ದೇವತೆಗಳಿರಾ । ಯಾವಾಟ ನಾವೀಗ ತೊಡಗಬೇಕು ಕೋಲೂ ॥ ೪೨ ॥

ಕೋಲಾಟ ನಾವೀಗ ತೊಡಗಬೇಕು ದೇವತೆಗಳಿರಾ । ಕೋಲಾಟ ನಾವೀಗ ಆಡಬೇಕು ಕೋಲು ॥ ೪೩ ॥

ಮಾದೇವರಾಯಾ ಮದ್ದಲಿ ತಡೆದಾ ದೇವೇಂದ್ರ ರಾಯ ದೇಂಟವಟೇ ತಡೆದಾ । ತಾಳಮಾಣಿ ತಾಳಾs ತಡೆದಾನು ಕೋಲೂ ॥ ೪೪ ॥

ಚಿನ್ನsದ ಕೋಲನ್ನೇ ತಡೆದಾರು ದೇವತೆಗಳು । ಬೆಳ್ಳಿಯ ಕೋಲನ್ನೇ ತಾವು ತಡೆದಾರು ಕೋಲೂ ॥ ೪೫ ॥

ಚಿನ್ನದ ಕೋಲನ್ನು ತಡೆದು ಬೆಳ್ಳಿಯ ಕೋಲನ್ನು ತಡೆದು । ಮುತ್ತಿನ ಕೋಲನ್ನೇ ತಾವು ಹಿಡಿದಾರು ಕೋಲೂ ॥ ೪೬ ॥

ಎಲ್ಲಾ ದೇವತೆಗಳು ನಿಂತಿದ್ದರು ಕೋಲಿಗೆ । ಕೋಲಾಟದ ಆವಿಗೆ ತೊಡಗಿದರೂ ಕೋಲೂ ॥ ೪೭ ॥

ಕೋಲಾಟದ ಆವಿಗೆ ತೊಡಗಿದರು ದೇವತೆಗಳು । ಮಾದೇವರಾಯ ಮದಲೀ ಮೇಲೆ ಕೈಯಾ ಹೊಡೆದಾನು ಕೋಲೂ ॥ ೪೮ ॥

ಮದಲೀ ಮೇಲೆ ಕೈಯಾ ಹೊಡೆದಾ ಶ್ರೀಮಾದೇವ ರಾಯಾ । ತಾಳಾ ಕೂಡಿದರೆ ಮದಲೀ ಕೂಡುವದಿಲ್ಲ ಕೋಲು ॥ ೪೯ ॥

ತಾಳ ಕೂಡಿದರೆ ಮದಲೀ ಕೂಡುವದಿಲ್ಲ ಮಾದೇವ ರಾಯ । ಚಿನ್ನದ ಕೋಲು ಸಿಗುರೊಡೆದಾವು ಕೋಲೂ ॥ ೫೦ ॥

ಚಿನ್ನsದ ಕೋಲು ಸಿಗುರೊಡೆದಾವು ದೇವತಿಗಳಿರಾ । ಬೆಳ್ಳಿಯ ಕೋಲೂ ಚಿಗುರೊಡೆದಾವು ಕೋಲು ॥ ೫೧ ॥

ಬೆಳ್ಳಿsಯ ಕೋಲು ಚಿಗುರೊಡೆದವು ದೇವತೆಗಳಿರಾ । ಮುತ್ತೀನ ಕೋಲು ಮೂರು ತುಂಡಾದವು ಕೋಲೂ ॥ ೫೨ ॥

ನೀವು ಕೇಳಿ ದೇವತೆಗಳಿರಾ ನೀವು ಕೇಳಿ ದೇವತೆಗಳಿರಾ । ಈ ಆಟ ನಮಗೆ ತರವಲ್ಲ ಕೋಲು ॥ ೫೩ ॥

ಈ ಆಟ ನಮಗೆ ತರವಲ್ಲ ದೇವತೆಗಳಿರಾ । ಈ ಆಟ ಮಾನವರ ಮಕ್ಕಳಿಗೆ ಕೋಲೂ ॥ ೫೪ ॥

ಈ ಆಟ ಮಾನವರ ಮಕ್ಕಳಿಗೆ ದೇವತೆಗಳಿರಾ । ಈ ಆಟ ನಮಗೆ ತರವಲ್ಲ ಕೋಲೂ ॥ ೫೫ ॥

ಸತ್ಯದಲಿ ಹಾಲಕೆರೆಯ ಪಡೆದನು ಮಾದೇವರಾಯ । ಹಾಲಕೆರೆಯಿಂದೇ ಮಾನವನ ಪಡೆದನು ಕೋಲೂ ॥ ೫೬ ॥

ನೀ ಕೇಳು ಮಾನವ ಮಗನೇ । ನೀ ಕೇಳು ಮಾನವ ಮಗನೇ । ನಮ್ಮ ಕೋಲಾಟಕ್ಕೆ ನೀ ಬಾಬೇಕು ಕೋಲೂ ॥ ೫೭ ॥

ಎಲ್ಲಾ ದೇವತೆಗಳು ನಿಂತsರು ಕೋಲಿಗೆ । ಮಾನವ ಮಗನು ನಿಲ್ಲುವನು ಕೋಲೂ ॥ ೫೮ ॥

ಮಾದೇವರಾಯ ಮದ್ದಲೀ ತಡೆದಾ ದೇವೇಂದ್ರ ರಾಯ ದೇಂಟವಟೇ ತಡೆದಾ । ತಾಳಮಾಣಿ ತಾಳಾ ತಡೆದಾನು ಕೋಲೂ ॥ ೫೯ ॥

ತಾಳಮಾಣಿ ತಾಳನೇ ತಡೆದನು ದೇವತೆಗಳು । ಕೋಲ ಮೇಲೆ ಕೋಲಾ ಹೊಡೆದಾರು ಕೋಲೂ ॥ ೬೦ ॥

ತಾಳಾವು ಕೂಡಿತು ಮದಲೀಯು ಕೂಡಿತು । ಮಾನವರು ಕೋಲಾಟ ಜಡಿದಾಡ್ಯಾರು ಕೋಲು ॥ ೬೧ ॥

ಕೋಲಾಟ ತಾವಿನ್ನು ಜಡಿದಾಡ್ಯಾರು ದೇವತೆಗಳು । ಸ್ವಾಮಿಾ ಮಾದೇವರಾಯ ಸಂತೋಷವಾಗುವನು ಕೋಲೂ ॥ ೬೨ ॥

ಈ ಆಟ ನಮಗೇ ತರವಲ್ಲ ದೇವತೆಗಳಿರಾ । ಈ ಆಟ ಮಾನವರ ಮಕ್ಕಳಿಗೆ ಕೋಲೂ ॥ ೬೩ ॥

ನೀ ಕೇಳು ಮಾನವ ಮಗನೇ ನೀ ಕೇಳು ಮಾನವ ಮಗನೇ । ಚಿನ್ನದ ಮದ್ದಲಿ ನೀ ಹಿಡಿಯಬೇಕು ಕೋಲೂ ॥ ೬೪ ॥

ಚಿನ್ನದ ಮದ್ದಲಿ ತನಗೆ ಸ್ವಾಮಿಾ ತರವಲ್ಲ ದೇವತೆಗಳಿರಾ । ಹೊನ್ನಿಯ ಮದ್ದಲೀ ತನಗೆ ಕೊಡಬೇಕು ಕೋಲೂ ॥ ೬೫ ॥

ನೀ ಕೇಳು ಮಾನವ ಮಗನೇ ನೀ ಕೇಳು ಮಾನವ ಮಗನೇ । ಚಿನ್ನದ ತಾಳನೇ ನೀ ಹಿಡಿಯಬೇಕು ಕೋಲೂ ॥ ೬೬ ॥

ಚಿನ್ನದ ತಾಳ ತನಗೆ ತರವಲ್ಲ ದೇವತೆಗಳಿರಾ । ಕಂಚಿನ ತಾಳಾ ಕೊಡಬೇಕು ಕೋಲೂ ॥ ೬೭ ॥

CC-0. Jangamwadi Math Collection. Digitized by eGangotri

ನೀ ಕೇಳು ಮಾನವ ಮಗನೇ ನೀ ಕೇಳು ಮಾನವ ಮಗನೇ ಚಿನ್ನದ ಕೋಲನ್ನೇ ಹಿಡಿಯಬೇಕು ಕೋಲೂ ॥ ೬೮ ॥

ಚಿನ್ನದ ಕೋಲೂ ತರವಲ್ಲ ದೇವತೆಗಳಿರಾ। ಕೊಡಸೀನ ಕೋಲು ತನಗೆ ಕೊಡಬೇಕು ಕೋಲೂ ॥ ೬೯ ॥

ನೀ ಕೇಳು ಮಾನವ ಮಗನೇ ನೀ ಕೇಳು ಮಾನವ ಮಗನೇ । ಚಿನ್ನದ ಗುಮಟೇ ಹಿಡಿಯಬೇಕು ಕೋಲೂ ॥ ೭೦ ॥

ಚಿನ್ನದ ಗುಮಟೇ ತನಗೆ ತರವಲ್ಲ ದೇವತೆಗಳಿರಾ। ಮಣ್ಣಿನ ಗುಮಟಿ ತನಗೆ ಕೊಡಬೇಕು ಕೋಲು ॥ ೭೧ ॥

ಎಲ್ಲಾ ಕೋಲಿನ ಬಿರದಾ ಒಪ್ಪಿಸಿ ಕೊಡತ್ತೇನೆ ಮಾನವ ಮಗನೇ । ಕೊಲಿನ ಬಿರದಾ ನಿನಗೊಪ್ಪಿಸಿ ಕೊಟ್ಟೇ ಕೋಲೂ ॥ ೭೨ ॥

ನೀ ಕೇಳು ಮಾನವ ಮಗನೇ ನೀ ಕೇಳು ಮಾನವ ಮಗನೇ । ಸೂರದೊಂದು ಕೋಲಿಗೆ ಮಾದೇವರಾಯನ ಕೋಲು ॥ ೭೩ ॥

ನೂರದೊಂದು ಕೋಲಿಗೆ ಮಾದೇವರಾಯನ ಕೋಲು। ನೂರದೊಂದು ಹಾಡಿಗೆ ಮಾದೇವರಾಯನ ಹಾಡು ॥ ೭೪ ॥

ನೂರದೊಂದು ಹಾಡಿಗೆ ಮಾದೇವರಾಯನ ಹಾಡು। ಮೊದಲಿಗೆ ನನ್ನ ಧ್ಯಾನಾ ಮಾಡಲುಬೇಕು ಕೋಲೂ ॥ ೭೫ ॥

ನೀವು ಕೇಳಿ ದೇವತೆಗಳಿರಾ। ನೀವು ಕೇಳಿ ದೇವತೆಗಳಿರಾ। ನಿಮ್ಮ ನಿಮ್ಮ ಠಾವಿಗೆ ನಡೆಯಬೇಕು ಕೋಲೂ ॥ ೭೬ ॥

ಆಗೇನು ಮಾಡುತ್ತಲೈದಾನು ಶ್ರೀ ಮಾದೇವರಾಯ। ತಮ್ಮನ ಮುಂದೆ ಮಾಡಿ ಕೂತಿದ್ದಾನು ಕೋಲೂ ॥ ೭೭ ॥

## ಮಳೆರಾಜ !

ಸಂಗ್ರಾಹಕರು:— ಶ್ರೀ. ಅಂಕಲಿಗಿ ವಿಠ್ಠಪ್ಪ ಬಬಲಾದಿ

( ಕರಿಯುಬರದಲ್ಲಿಯ ಒಂದು ಭಾವನಾಚಿತ್ರ )

ಬಣ್ಣದ ಗುಬ್ಬ್ಯಾರು ಮಳೆರಾಜ । ಅವರು ।
ಮಣ್ಣಾಗಿ ಹೋದರು ಮಳೆರಾಜ ॥
ಬಣ್ಣದ ಗುಬ್ಬ್ಯಾರು ಮಣ್ಣಾಗಿ ಹೋದರು–
ಅನ್ಯದ ದಿನ ಬಂದು ಮಳೆರಾಜ ॥ ೧ ॥

ಒಕ್ಕಲಗೇರ್ಯಾಗ ಮಳೆರಾಜ । ಅವರು ।
ಮಕ್ಕಳ ಮಾರ್ಯಾರ ಮಳೆರಾಜ ॥
ಮಕ್ಕಳ ಮಾರೀ ರೊಕ್ಕಾ ಹಿಡಕೊಂಡು–।
ಭತ್ತಂತಽ ತಿರುಗ್ಯಾರ ಮಳೆರಾಜ ೨ ॥

ಸೊಲಗಿ ಹಿಟ್ಟಿನಾಗ ಮಳೆರಾಜ । ಅವರು ।
ಸುಣ್ಣನ್ನು ಕೂಡಸ್ಯಾರ ಮಳೆರಾಜ ।
ಹಸ್ತು ಬಂದುಕೇರಿ ಗಪಗಪತಿಂದು–
ಒದ್ದಾಡಿ ಸತ್ತಾರ ಮಳೆರಾಜ ॥ ೩ ॥

ಗಿದ್ದನ ಅಕ್ಕ್ಯಾಗ ಮಳೆರಾಜ । ಅವರು ।
ಅಫುವನ್ನು ಕೂಡಸ್ಯಾರ ಮಳೆರಾಜ ॥
ಸಣ್ಣ ಕೂಸಿಗಿ ಮನ್ನಿಸಿ ಉಣಸ್ಯಾರ–
ಕಣ್ಣನ್ನೆ ಮುಚ್ಯಾವ ಮಳೆರಾಜ ॥ ೪ ॥

ಗಂಡುಳ್ಳ ಬಾಲ್ಯಾರು ಮಳೆರಾಜ । ಅವರು ।
ಬಿಕ್ಷ್ಯಾಕ ಹೊರಟಾರ ಮಳೆರಾಜ ॥
ಗಂಡುಳ್ಳ ಬಾಲ್ಯಾರು ಬಿಕ್ಷ್ಯಾಕ ಹೋದರು–
ಅನ್ಯದ ದಿನ ಬಂದು ಮಳೆರಾಜ ॥ ೫ ॥

ಸ್ವಾತಿಯ ಮಳೆ ಬಂದು ಮಳೆರಾಜ । ಸುತ್ತ ।
ದೇಶಾಕ ಆಗ್ಯಾದ ಮಳೆರಾಜ ॥
ಹಳ್ಳಕೊಳ್ಳ ಹೆಣ ಹರದಾಡಿ ಹೋದವು–
ಯಾವಾಗ ಬಂದೆಪ್ಪಾ ಮಳೆರಾಜ ॥ ೬ ॥



CC-0. Jangamwadi Math Collection. Digitized by eGangotri

# ನಮ್ಮ ಮಾತು

## ಪ್ರಬುದ್ಧಕರ್ಣಾಟಕ.

ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಿಂದ ಪ್ರಕಟವಾಗುತಿರುವ ಪ್ರಬುದ್ಧಕರ್ಣಾಟಕವು ತನ್ನ ಕರ್ತೃತ್ವಶಕ್ತಿಯಿಂದ ಅಖಿಲಕರ್ಣಾಟಕಕ್ಕೂ ಪರಿಚಿತವಾಗಿದೆ.ಅದು ಈಗ ಮೈಸೂರ ವಿಶ್ವವಿದ್ಯಾನಿಲಯದ ಬೆಂಬಲವನ್ನು ಪಡೆದು ತನ್ನ ಕಾರ್ಯಕ್ಷೇತ್ರವನ್ನು ಇನ್ನಿಷ್ಟು ವಿಸ್ತಾರವಾಗಿ ಮಾಡಿಕೊಂಡಿತು. ಇನ್ನುಮೇಲೆ ಅದು ಮೈ. ವಿ. ವಿ. ನಿಲಯದ ಕನ್ನಡಗ್ರಂಥ ಪ್ರಕಟನಾ ಸಮಿತಿಯ ಮೇಲ್ವಿಚಾರಣೆಯಲ್ಲಿ ಹೊರಡಲಿರುವುದು. ಇದರ ಲೇಖನ ಮುದ್ರಣಾದಿ ಕಾರ್ಯವನ್ನು ನೋಡಿಕೊಳ್ಳಲು ಮ. ಗಳಾದ. ಬಿ. ಎಂ. ಶ್ರೀಕಂಠಯ್ಯಎಂ. ಎ. ಬಿ. ಎಲ್. (ಅಧ್ಯಕ್ಷರು) ಟಿ. ಎಸ್. ವೆಂಕಣ್ಣಯ್ಯ ಎಂ. ಎ. (ಸಂಪಾದಕರು) ಎ. ಆರ್. ಕೃಷ್ಣಶಾಸ್ತ್ರಿ ಎಂ. ಎ. (ಉಪಸಂಪಾದಕರು) ಟಿ. ಎನ್. ಶ್ರೀಕಂಠಯ್ಯ ಎಂ. ಎ. ವಿ. ಸೀತಾರಾಮಯ್ಯ ಎಂ. ಎ. ಕೆ. ವಿ. ಪುಟ್ಟಪ್ಪ ಎಂ. ಎ. ಇವರು ಸದಸ್ಯರಾಗಿ ಉಳ್ಳ ಒಂದು ಸಂಪಾದಕ ಸಮಿತಿ ಇರಬೇಕೆಂದೂ ನಿಶ್ಚಿತವಾಗಿದೆ. ಈ ಪಂಡಿತ ಮಂಡಲದ ನಾಯಕತ್ವದಲ್ಲಿ ಕೆಲಸ ಮಾಡಲಿರುವ ಪ್ರಬುದ್ಧ ಕರ್ಣಾಟಕವನ್ನು ನಿರೀಕ್ಷಿಸುತ್ತ ಕನ್ನಡಿಗರು ಆತುರರಾಗಿ ಕುಳಿತುಕೊಂಡರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಪ್ರಬುದ್ಧಕರ್ಣಾಟಕವು ಕನ್ನಡನಾಡಿನಲ್ಲಿ ಬೆಳಗಿ ತೊಳಗುತ್ತ ಚಿರಕಾಲ ಬಾಳಲೆಂದು ನಮ್ಮ ಹಾರಯ್ಕೆ.

## ದಿವಂಗತರಾದ ಶ್ರೀಮಾನ್ ಕರ್ಪೂರ ಶ್ರೀನಿವಾಸರಾಯರು

ಒಳ್ಳೆಯ ಜೀವವು ಎಷ್ಟು ದಿನ ಬಾಳಿ ಬದುಕಿದರೂ ಲೋಕಕ್ಕೆ ಅದು ಬೇಕೇಬೇಕು. ಸಧ್ಯದ ಸಮಯದಲ್ಲಿ ನಮ್ಮ ಕನ್ನಡನಾಡಿನಲ್ಲಿಯಂತೂ ಪ್ರತಿಯೊಂದು ಸಮಾಜವೂ ಪ್ರತಿಯೊಂದು ವ್ಯಕ್ತಿಯೂ ಗಾಬರಿಗೊಂಡು ಮುಂಗಾಣದೆ, ನಾಯಕರ ಕೈನೆರವನ್ನು ನಿರುಕಿಸುತ್ತಲಿದೆ. ಇಂತಹ ಸಮಯದಲ್ಲಿ ಶ್ರೀಮಾನ್ ಕರ್ಪೂರ ಶ್ರೀನಿವಾಸರಾಯರು ಕನ್ನಡಿಗರನ್ನಗಲಿ ಹೋದುದು ತುಂಬ ಹಾನಿಕರವಾದ ಸಂಗತಿಯು. ಸಿವ್ಹಿಲ್ ಎಂಜಿನಿಯರ್ ಕೆಲಸವನ್ನು ಎಷ್ಟು ಜನ ಮಾಡುತ್ತಿಲ್ಲ? ಎಷ್ಟು ಜನಮಾಡಿ ನಿವೃತ್ತಿಯನ್ನು ಪಡೆದಿಲ್ಲ? ಆದರೆ ಅವರ ಹೆಸರು ಅವರ ಮನೆಯ ಮೇರೆಯನ್ನು ಮೀರಿ ಹೊರಕ್ಕೆ ಬಂದುದನ್ನು ಹೆಚ್ಚಾಗಿ ನಾವೇನು ಕಂಡಿಲ್ಲ. ಆದರೆ ಶ್ರೀ. ಕರ್ಪೂರ ಅವರ ಹೆಸರು ಕನ್ನಡನಾಡಿನ ಮೇರೆಯನ್ನು ದಾಟಿ ನೆರೆಯ ನಾಡುಗಳಲ್ಲಿಯೂ ಹಣೆಯಿಕ್ಕಿದೆ. ರಾಯರ ನಿಜವಾದ ಕೆಲಸವು ಅವರು ತಮ್ಮ ಅಧಿಕಾರದಿಂದ ನಿವೃತ್ತರಾದ ಮೇಲೆಯೆ ಹೆಚ್ಚಾಗಿ ಜರುಗಿತೆಂದು ಹೇಳಬಹುದು. ಮುಪ್ಪಿನಿಂದ ಮೂಲೆಹಿಡಿದು ಕುಳಿತುಕೊಳ್ಳಬೇಕಾದ ವಯಸ್ಸಿನಲ್ಲಿ ಹರಯದವರನ್ನೂ ನಾಚಿಸುವ ಹುರುಪಿನಿಂದ ನಡೆಯಿಸುತ್ತಿದ್ದ ರಾಯರ ಕಾರ್ಯಕಲಾಪವು ಎಂತಹವರನ್ನೂ ಬೆರಗುಗೊಳಿಸುವಂತಹದು. ಇವರ ಕಾರ್ಯವು ಒಂದೇ ಒಂದು ವಿಷಯವನ್ನು ಮುಂದಿಟ್ಟುಕೊಂಡು ಹೊರಟಂತಹುದಲ್ಲ. ಮಾಧ್ವರಾಗಿ ಹುಟ್ಟಿದವರಾದುದರಿಂದ ಮಾಧ್ವಮತದ ಉನ್ನತಿಗಾಗಿ ಹೆಣಗಿದರು. ಬ್ರಾಹ್ಮಣರಾದುದರಿಂದ ಬ್ರಾಹ್ಮಣಸಮಾಜದ ಏಳಿಗೆಗಾಗಿ ಹವಣಿಸಿದರು. ಕನ್ನಡಿಗರಾದುದರಿಂದ ಕನ್ನಡನಾಡಿನ–ನುಡಿಯ ಉದ್ಧಾರಕ್ಕಾಗಿ ಹಗಲಿರುಳು ದುಡಿದರು. ಭರತಖಂಡದ ಸ್ವಾತಂತ್ರ್ಯೋದ್ಯಮದ ಕಾರ್ಯಕಲಾಪಗಳಲ್ಲಿಯ ಖಾದಿಪ್ರಚಾರ;ಹಿಂದೀಭಾಷಾಪ್ರಚಾರ ಮೊದಲಾದುವುಗಳ ಬಗೆಗೆ ಕೆಲಸಮಾಡಿದರು. ಹೀಗೆ ರಾಯರು ಎಲ್ಲ ಬಗೆಯ ಸಾಂಸ್ಕೃತಿಕ ರಾಜಕೀಯ ಕಾರ್ಯಕ್ಷೇತ್ರಗಳಲ್ಲಿಯೂ ಕುಣಿದಾಡಿದವರು.

ಸಂಸ್ಕೃತಸಾಹಿತ್ಯದಲ್ಲಿಯೂ ವೇದಾಂತಶಾಸ್ತ್ರದಲ್ಲಿಯೂ ರಾಯರು ಬಹುಕಾಲ ಪಳಗಿದವರು. ಕರ್ಣಾಟಕ ಸಾಹಿತ್ಯಪರಿಷತ್ಪತ್ರಿಕೆಯಲ್ಲಿ ಪ್ರಕಟವಾದ "ಸಾಹಿತ್ಯಶಾಸ್ತ್ರ" ಎಂಬ ಹೆಸರಿನಿಂದ ಬರೆದ ನಾಲ್ಕಾರು

CC-0. Jangamwadi Math Collection. Digitized by eGangotri

ಲೇಖಾಂಕಗಳೂ, ಭಕ್ತಬಂಧುವಿನಲ್ಲಿಯೂ ಇನ್ನು ಬೇರೆ ಪತ್ರಿಕೆಗಳಲ್ಲಿಯೂ ಪ್ರಕಟವಾಗಿದ್ದ ವೇದಾಂತವಿಷಯಕ ಲೇಖನಗಳೂ ಇವರ ಸಾಹಿತ್ಯ–ವೇದಾಂತಶಾಸ್ತ್ರದ ಆಳವಾದ ಅಭ್ಯಾಸಕ್ಕೆ ಸಾಕ್ಷಿಯಾಗಿವೆ. ಕನ್ನಡಸಾಹಿತ್ಯದ ಉದ್ಧಾರಕ್ಕಂತೂ ಸೊಂಟ ಕಟ್ಟಿ ನಿಂತವರು. ಈಗ ಕ. ಸಾ. ಪರಿಷತ್ತು ತನಗೊಂದು ಮಂದಿರವನ್ನು ಮಾಡಿಕೊಳ್ಳಲು ಸಮರ್ಥವಾಗಿದ್ದುದರ ಶ್ರೇಯಸ್ಸಿನ ಬಹುಭಾಗವು ರಾಯರಿಗೇ ಸಲ್ಲಬೇಕಾದುದು.

ಶ್ರೀ. ರಾಯರು ಸಾಂಪ್ರದಾಯಿಕ ಆಚಾರಗಳನ್ನು ಕೊರತೆಯಿಲ್ಲದೆ ನಡೆಯಿಸಿಕೊಂಡು ಬರುತ್ತಿದ್ದರಾದರೂ ಸಾಮಾಜಿಕ ಸುಧಾರಣೆಗೆ ವಿರೋಧವನ್ನು ಕಟ್ಟಿ ನಿಂತವರಲ್ಲ. ಮಡಿವಂತರಾದ ಬ್ರಾಹ್ಮಣಸಂಘದಲ್ಲಿಯೂ ಇವರ ಮುಖವು ಮುಂದೆ ಕಂಡರೆ, ಅಸ್ಪೃಶ್ಯೋದ್ಧಾರಕ ಸಂಸ್ಥೆಯಲ್ಲಿಯೂ ಇವರ ಮುಖವು ಎದ್ದು ಕಾಣುವುದು. ಯಾವುದರಲ್ಲಿಯೂ ರಾಯರು ಒಂದಕ್ಕೇ ಅಂಟಿಕೊಂಡು ನಿಲ್ಲದೆ ಒಪ್ಪಂದದ ಮಧ್ಯಮಾರ್ಗದಿಂದ ನಡೆದು ಎಲ್ಲ ಬಗೆಯ ಜನರಿಗೂ ಬೇಕಾದವರಾಗಿದ್ದರು. ರಾಜಕೀಯ ವಿಚಾರದಲ್ಲಿಯೂ ಹೀಗೆಯೆ. ಜನತೆಯು ಇವರನ್ನು ವಿಶ್ವಾಸದಿಂದ ಕಾಣುತ್ತಿದ್ದಷ್ಟೇ ಮೈಸೂರಿನ ದೊರೆಗಳೂ ಇವರನ್ನು ವಿಶ್ವಾಸದಿಂದ ಕಾಣುತ್ತಿದ್ದರು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಸಮಾಜದ ನೇತೃವಿನಲ್ಲಿರಬೇಕಾದ ಅನೇಕ ಗುಣಗಳು ಇವರಲ್ಲಿ ವಾಸಿಸುತ್ತಿದ್ದುವು. ಉತ್ತರಕರ್ಣಾಟಕದನರಾರಾದರೂ ರಾಯರನ್ನು ಕಾಣಲೆಂದು ಹೋದರೆ ಅವರಿಗೆ ಆದೆಷ್ಟು ಆನಂದ! ಆದೆಷ್ಟು ಉತ್ಸಾಹ! ಉತ್ಸಾಹದ ಭರದಲ್ಲಿ ಎದ್ದು ಕುಣಿದುಬಿಡುವರೇನೋ ಎನ್ನಿಸುತ್ತಿದ್ದಿತು. ಇನ್ನೆಲ್ಲಿಯೂ ಅನುಭವಿಸಲಾಗದಂತಹ ಆದರಸತ್ಕಾರವನ್ನು ಅಲ್ಲಿ ಬಂದವರು ಪಡೆಯುತ್ತಿದ್ದರು. ಊಟಕ್ಕೆ ಕುಳಿತಾಗ ಶ್ಲೋಕವನ್ನು ಹೇಳಿಯೇ ತೀರುವಂತಹ ದುರ್ಧರಪ್ರಸಂಗವು ರಾಯರ ಮನೆಯಲ್ಲಿ ತಮಗೆ ಬಂದಿತೆಂದು ಆದೆಷ್ಟೋ ಜನರು ನಕ್ಕು ನಕ್ಕು ಹೇಳುತಿರುವುದನ್ನು ಇತ್ತಣ ಭಾಗದಲ್ಲಿ ಹಲವರ ಬಾಯಿಂದ ಕೇಳಬಹುದು.

ಒಂದೇ ಒಂದು ಗುಣವಿದ್ದುದು ಕಂಡುಬಂದರಾಯಿತು. ಆತ ಹುಡುಗನಿರಲಿ, ಹರಯದವನಿರಲಿ, ಮುದುಕನಿರಲಿ, ರಾಯರು ಆತನೊಡನೆ ಮರ್ಯಾದೆಯಿಂದ ನಡೆದುಕೊಳ್ಳುತ್ತಿದ್ದರು. ಆತನಿಗೆ ಎಂತಹ ಸಹಾಯವನ್ನೂ ನೀಡಲು ಕೈಯನ್ನು ಮುಂದೆ ಮಾಡುತ್ತಿದ್ದರು. ಅವರಿಂದ ಸಹಾಯವನ್ನು ಪಡೆದು ಮನೆಮಾರು ಮಾಡಿಕೊಂಡು ನಿಂತವರು ಹಲವು ಜನರು.

ಜೀವಿತದ ಕೊನೆಕೊನೆಯ ೨-೩ ವರ್ಷಗಳನ್ನು–ಅರ್ಧಾಂಗವಾಯುವಿನ ವಿಕಾರದ ಮೂಲಕ—ಹಾಸಿಗೆಯ ಮೇಲೆಯೆ ಕಳೆದರು. ಆಗಲೂ ಅವರಿಗೆ ಸಮಾಜಕಾರ್ಯ ಮಾಡಬೇಕೆಂಬ ಹಂಬಲು. ಪರಿಷತ್ತಿನ ಮಂದಿರವು ಸಿದ್ಧವಾದುದನ್ನು ಕಣ್ಣುಮುಟ್ಟ ನೋಡಬೇಕೆಂಬ ಬಯಕೆ ಅವರಿಗೆ ತುಂಬ ಇದ್ದಿತು. ಅವರ ಬಯಕೆ ಆದೆಷ್ಟೋ ಮಟ್ಟಿಗೆ ನೆರವೇರಿತೆಂದೂ ಹೇಳಬಹುದು. ಕಳೆದ ಜೂನ್ ತಿಂಗಳ ೩ನೆಯ ತಾರೀಖಿನ ರಾತ್ರಿ ಹತ್ತುವರೆ ಗಂಟೆಗೆ ರಾಯರು ದಿವಂಗತರಾಗಿ ಕುಟುಂಬದವರನ್ನೂ ಕನ್ನಡಿಗರನ್ನೂ ಅಗಲಿಕೆಯ ಅಳಲಿನ ಕಣ್ಣೀರನ್ನುದುರಿಸಲು ಹಚ್ಚಿದರು. ಇಂತಹ ಮಹನೀಯರು ಇನ್ನು ನಮಗೆಲ್ಲಿ ಸಿಕ್ಕುವರು. ಶ್ರೀ. ರಾಯರ ಆತ್ಮಕ್ಕೆ ಶಾಂತಿಯನ್ನು ನೀಡೆಂದು ನಾವೇನು ಬೇರೆಯಾಗಿ ದೇವರಲ್ಲಿ ಪ್ರಾರ್ಥಿಸಿಕೊಳ್ಳಬೇಕಾಗಿಲ್ಲ. ಆದರೆ ರಾಯರ ಗದ್ದುಗೆಯಲ್ಲಿ ಕುಳಿತುಕೊಳ್ಳಲು ತಕ್ಕಂತಹ ಇನ್ನೊಬ್ಬ ನಾಯಕರನ್ನು ನಮಗೆ ನೀಡೆಂದು ಮಾತ್ರ ಪ್ರಾರ್ಥಿಸಿಕೊಳ್ಳದಿದ್ದರೆ ನಡೆಯುವಂತಿಲ್ಲ.

## ದಿವಂಗತರಾದ ದಾನವೀರ ತವನಪ್ಪನವರ ದೇವೇಂದ್ರಪ್ಪನವರು.

ದಾವಣಗೆರೆಯಲ್ಲಿ ಈ ತಿಂಗಳಿನಲ್ಲಿ ಅಲ್ಲಿಯ ಪ್ರಸಿದ್ಧ ಜೈನ ವರ್ತಕರಾದ ದೇವೇಂದ್ರಪ್ಪನವರು ತೀರಿಕೊಂಡುದು ಬಹಳ ದುಃಖದಾಯಕವಾದ ವಾರ್ತೆಯಾಗಿದೆ. ದಾವಣಗೆರೆಯಂಥ ಕರ್ಣಾಟಕದ ವಾಣಿಜ್ಯಕೇಂದ್ರದ ಪಡಿಮೂಲೆಯ ಪಟ್ಟಣದಲ್ಲಿ ಅವರು ಅನೇಕ ಚಳವಳಿಗಳಿಗೆ ಪ್ರಾಣಸ್ವರೂಪರಾಗಿದ್ದರು. ಪ್ರಾಣಿಪಯಾಸಂಘ, ಖಾದೀಕಾರ್ಯಾಲಯ, ಕರ್ಣಾಟಕ ವಣಿಕ್‌ಸಂಘ ಮೊದಲಾದ ಎಲ್ಲ ಬಗೆಯ ಕರ್ಣಾಟಕದ ಚಟುವಟಿಕೆಗಳಲ್ಲಿ ಅವರು ಭಾಗಿಗತಿಗೆದುಕೊಳ್ಳುತ್ತಿದ್ದರು. ತನುಮನಗಳಲ್ಲದೆ ಧನವನ್ನೂ ಧಾರೆಯಾಗಿ ಎರೆಯುತ್ತಿದ್ದರು. ದಾವಣಗೆರೆಯ ನಗರಸಭೆಗೂ ಅಲ್ಲಿಯ ಸರ್ವ ಸಾರ್ವಜನಿಕ ಸಂಸ್ಥೆಗಳಿಗೂ ಮುಖ್ಯಸದಸ್ಯರಾಗಿ ಆ ಎಲ್ಲ ಸಂಸ್ಥೆಗಳ ದೈವದ



CC-0. Jangamwadi Math Collection. Digitized by eGangotri

ವರಲ್ಲೊಬ್ಬರಾಗಿ ಅವೆಲ್ಲವುಗಳ ದೈವವನ್ನು ಆವರೇ ಬರೆಯುತ್ತಿದ್ದರೆಂದರೆ ಅತಿಯೋಕ್ತಿಯಲ್ಲ. ಮಹಾತ್ಮಾಜಿಯವರು ದಾವಣಗೆರೆಗೆ ಹೋದಾಗ ಅವರನ್ನು ಆ ಊರಿಗೆ ಬರಮಾಡಿಕೊಂಡುದರ ಮುಖ್ಯ ಶ್ರೇಯಸ್ಸು ದೇವೇಂದ್ರಪ್ಪನವರಿಗಿದೆ. ಆ ಕಾಲಕ್ಕೆ ಖಾದಿಯ ಕೆಲಸಕ್ಕೆ ಬಹುವಾಗಿ ದ್ರವ್ಯವನ್ನು ತಾವು ಕೊಟ್ಟುದಲ್ಲದೆ ಉಳಿದವರಿಂದಲೂ ಕೊಡಿಸಿದರು. ಮಹಲಿಂಗರಂಗನ ಅನುಭವಾಮೃತವು ಟೀಕೆ ಟಿಪ್ಪಣಿಗಳೊಂದಿಗೆ ಅಂದವಾಗಿ ಅಚ್ಚಾಗಿ ಹೊರಬಿದ್ದುದು ಈ ದಾನವೀರರ ಪ್ರೇರಣೆಯಿಂದಲೇ. ಇವರು ಪ್ರಜಾಪ್ರಿಯರಾಗಿದ್ದಂತೆಯೆ ರಾಜಮಾನ್ಯರೂ ಆಗಿದ್ದರು. ಅಲ್ಲಿಯ ಪ್ರಾಣಿದಯಾಸಂಘವಂತೂ ಇಂದು ಅವರನ್ನು ಕಳೆದುಕೊಂಡು ಪರದೇಶಿಯಾದಂತಾಯಿತು. ಅಲ್ಲಿಯ ಉಳಿದ ವರ್ತಕರು ಇವರ ಆದರ್ಶವನ್ನಿಟ್ಟುಕೊಳ್ಳಲಿ.

### ಬೆಳಗಾಂವಿಯಲ್ಲಿ ಚಿತ್ರಕಲಾ ಪ್ರದರ್ಶನ

ಕಳೆದ ತಿಂಗಳು ನಾವು ಬರೆದಂತೆ, ಬೆಳಗಾಂವಿಯಲ್ಲಿ ಚಿತ್ರಕಲಾ ಪ್ರದರ್ಶನವು ಜೂನ್ ತಿಂಗಳ ಮೊದಲನೆಯ ವಾರದಲ್ಲಿ ನಡೆಯಿತು. ಅಹಮದಾಬಾದಿನ ಡಿಸ್ಟ್ರಿಕ್ಟ ಜಜ್ಜರಾದ ಶ್ರೀ. ಲೋಕೂರ ಅವರು ಅದರ ಅನಾವರಣ ಸಮಾರಂಭವನ್ನು ಮಾಡಿದರು. ಬೆಳಗಾಂವಿಯು ಕನ್ನಡ ನಾಡು ಅಹುದೋ ಅಲ್ಲವೋ ಎಂಬುದು ಇನ್ನುಮೇಲೆ ವಿವಾದಾಸ್ಪದವಾದ ವಿಷಯವಲ್ಲ—ಅದು ಕನ್ನಡ ನಾಡೇ ಎಂಬುದಕ್ಕೆ ಅಲ್ಲಿನ ತರುಣರು ಎಚ್ಚತ್ತು, ಇಂತಹ ರಾಷ್ಟ್ರವಿಧಾಯಕ ಉದ್ಯಮಗಳನ್ನು ಕೈಕೊಂಡು, ಅವುಗಳನ್ನು ಯಶಸ್ವಿಯಾಗಿ ಮಾಡುತ್ತಿದ್ದುದೇ ಸಾಕ್ಷಿ ಎಂದು ಮುಂತಾಗಿ ತಿಳಿಯಪಡಿಸಿದರು. ಪ್ರದರ್ಶನದಲ್ಲಿ, ಅದನ್ನು ಏರ್ಪಡಿಸಿದವರ ಸ್ತುತ್ಯ ಸಾಹಸದ ಮೂಲಕ, ಉತ್ತರಕರ್ನಾಟಕದ ಸುರಿತ ಚಿತ್ರಕಾರರ ಕೃತಿಗಳು ಪ್ರದರ್ಶಿಸಲ್ಪಟ್ಟಿದ್ದುವು ಶ್ರೀ. ಬಡಿಗೇರ (ಇವರ ವಿಸ್ತೃತ ಪರಿಚಯವು ನಮ್ಮ ಪತ್ರಿಕೆಯಲ್ಲಿ ಹಿಂದೆಯೇ ಒಂದಿದೆ.,) ಶ್ರೀ. ಕಮಡೋಳಿ (ಇವರ ಚಿತ್ರಗಳು ನಮ್ಮ ವಾಚಕರಿಗೆ ಚೆನ್ನಾಗಿ ಪರಿಚಿತವಾಗಿವೆ.) ಶ್ರೀ. ದಂಡಾವತಿಮಠ, ಶ್ರೀ. ಹಾಳಭಾವಿ, ಶ್ರೀ. ಚೆಟ್ಟಿ, ಶ್ರೀ. ಕಾರಡಗಿ, ಶ್ರೀ. ಕಟ್ಟಿ ಮೊದಲಾದ, ಜೆ. ಜೆ. ಆರ್ಟ್ಸ್ ಸ್ಕೂಲಿನಲ್ಲಿ ಉಚ್ಚ ವಿದ್ಯಾಭ್ಯಾಸವನ್ನು ಹೊಂದಿದ ಹಲವು ಚಿತ್ರಕಾರರು ತಮ್ಮ ತಮ್ಮ ಚಿತ್ರಗಳನ್ನು ಕಳಿಸಿದ್ದರು. ಶ್ರೀ. ಬಡಿಗೇರ ಟೈಮ್ ಸ್ಕೆಚ್ಚುಗಳು (ಎದುರಿನಲ್ಲಿ ಕುಳಿತವರ ಚಿತ್ರವನ್ನು ಅತಿ ಸ್ವಲ್ಪ ಕಾಲಾವಧಿಯಲ್ಲಿ ಬರೆಯುವುದು) ಪ್ರದರ್ಶನದ ಜೀವಾಳವಾಗಿದ್ದುವು. ಉಳಿದ ಹಲವು ಕೃತಿಗಳಲ್ಲಿ ಭಾರತೀಯ ಚಿತ್ರಶೈಲಿಯ ಸಂಪರ್ಕವೂ ಕಾಣುತ್ತಿದ್ದಿತು. ಅಂತೂ ಉತ್ತರಕರ್ನಾಟಕದ ಪುನರುಜ್ಜೀವನ ಕಾರ್ಯಕ್ಕೆ ಇದೊಂದು ದೊಡ್ಡ ಸಹಾಯವೆಂದು ಹೇಳಬಹುದು. ಈ ಪ್ರದರ್ಶನದ ಪ್ರವರ್ತಕರು ಪ್ರತಿವರ್ಷ ಉತ್ತರಕರ್ನಾಟಕದ ಪ್ರಮುಖಪಟ್ಟಣಗಳಲ್ಲಿ ಕಲಾಪ್ರದರ್ಶನಗಳನ್ನು ಏರ್ಪಡಿಸುವುದಲ್ಲದೆ, ಬರುತ್ತ ಒಂದು ಕಲಾಶಾಲೆಯನ್ನು ಹೊರಡಿಸಿ, ಮಣ್ಣಿನ ಪ್ರತಿಮೆಗಳನ್ನು ಮಾಡುವುದು ಮೊದಲಾದ ಉಪಜೀವಿಕೆಯ ಸಾಧನಗಳ ಶಿಕ್ಷಣವನ್ನು ಕೊಡುವ ಏರ್ಪಾಡನ್ನೂ ಮಾಡಬೇಕೆಂದಿದ್ದಾರೆ. ಶ್ರೀ. ಬಡಿಗೇರ ಸುರಿತ ಚಿತ್ರಕಾರರು, ಆಂಗ್ಲದೇಶದಲ್ಲಿ ಉಚ್ಚ ಶಿಕ್ಷಣಕ್ರಮವನ್ನು ತೀರಿಸಿಬಂದವರು, ತರುಣರು, ಕರ್ನಾಟಕಾಭಿಮಾನಿಗಳು. ಇಂಥವರು ಈ ಕೆಲಸಕ್ಕೆ ಪ್ರವೃತ್ತರಾದುದು ನಮ್ಮವರ ಸುದೈವ. ಕರ್ನಾಟಕದ ಧನಿಕರು ತುಂಬ ದ್ರವ್ಯಸಾಹಾಯ್ಯವನ್ನು ಮಾಡಿದರೆ, ಈ ಕನಸು ನನಸಾಗದಿರದು.

### ಬೆಳಗಾಂವಿಯಲ್ಲೊಂದು ಕಾಲೇಜು

ಬೆಳಗಾಂವಿಯಲ್ಲೊಂದು ಕಾಲೇಜಾಗಬೇಕೆಂದು ಒಂದೆರಡು ವರ್ಷಗಳಿಂದ ಪ್ರಯತ್ನ ನಡೆದಿದೆ. ಪೂರ್ವಸಿದ್ಧತೆಯೆಲ್ಲ ಮುಗಿದ ಮೇಲೆ ಅದು ಸರಕಾರದ ಎದುರು ಬಂದಾಗ, ಅದನ್ನು ಹೊರಡಿಸಲಿಕ್ಕೆ ಅನುಮತಿಯು ದೊರೆಯಲಿಲ್ಲ. ಅದಕ್ಕಾಗಿ ನಾವು ಮೇಲಿನ ಅಧಿಕಾರಾಪನ್ನ ಪುರುಷರನ್ನು ದೂರುವ ಮೊದಲು ನಮ್ಮ ಸುತ್ತಮುತ್ತಲು ನಾವು ನೋಡಿಕೊಳ್ಳಬೇಕಾಗಿದೆ. ನಮ್ಮಲ್ಲಿಯೇ ಈ ವಿಷಯದಲ್ಲಿ ಅತ್ಯಗತ್ಯವಾದ ಐಕಮತ್ಯವಿಲ್ಲ. ಬೆಳಗಾಂವಿಯಲ್ಲಿ ಕಾಲೇಜನ್ನು ಯಾರು ಹೊರಡಿಸಲಿ, ಅದು ಕನ್ನಡಿಗರಿಂದ ಪ್ರಾರಂಭಿಸಲ್ಪಟ್ಟರೆ ಸಾಕು; ಅದು ಅಖಿಲಕರ್ನಾಟಕದ ಪುರೋಗತಿಗೆ ಸಹಾಯಕವಾಗದೆ ಇರದು. ಈ ವಿಚಾರದ ಮೂಲಪ್ರವರ್ತಕರಿಗೆ ಈ ವಿಷಯದಲ್ಲಿ ಸಾಕಷ್ಟು ಪ್ರೋತ್ಸಾಹವು ಸಿಕ್ಕುತ್ತಿಲ್ಲವೆಂದು ಕೇಳುತ್ತೇವೆ. ಇದು ನಿಜವಿದ್ದರೆ

CC-0. Jangamwadi Math Collection. Digitized by eGangotri

ಅತ್ಯಂತ ವಿಷಾದಾಸ್ಪದವಾದ ಸಂಗತಿ. ಧಾರವಾಡದ ಕಡೆಯ ರಾಷ್ಟ್ರೀಯವೃತ್ತಿಯ ಮುಂದಾಳುಗಳೆಲ್ಲ (ಉ:—ಶ್ರೀ. ದಿವಾಕರರು) ಬೆಳಗಾಂವಿಯವರ ಕಾಲೇಜಿನ ವಿಷಯದಲ್ಲಿನ ಪ್ರಯತ್ನವನ್ನು ಸರ್ವಾತ್ಮನಾ ಬೆಂಬಲಿಸಿದುದು ನಮಗೆ ನೆನಪಿದೆ. ಇದೇ ರಾಷ್ಟ್ರೀಯ ಪ್ರಸ್ಥಾನದಿಂದ ಈ ಪ್ರಶ್ನೆಯನ್ನು ನೋಡಿಕೊಂಡು, ಪಕ್ಷಪಂಗಡಗಳೆನ್ನದೆ—ಜಾತಿಮತಗಳೆನ್ನದೆ ಬೆಳಗಾಂವಿಯಲ್ಲಿ ಕಾಲೇಜೊಂದು ಆಗಿಯೇ ತೀರಬೇಕೆಂಬ ತಮ್ಮ ಸ್ಪಷ್ಟಾಭಿಪ್ರಾಯವನ್ನು ಉತ್ತರಕರ್ನಾಟಕಸ್ಥರೆಲ್ಲರೂ ತೋರ್ಪಡಿಸಿಯೇ ಬಿಡಬೇಕೆಂದು ನಮ್ಮ ಹಾರೈಕೆಯಿದೆ; ಏಕೆಂದರೆ ಏಕೀಕರಣದಷ್ಟೇ ಬೆಲೆಯುಳ್ಳ ಏಕವಿಶ್ವವಿದ್ಯಾನಿಲಯದ ಪ್ರಶ್ನೆಯಲ್ಲಿ ಇಂತಹ ಕಾಲೇಜುಗಳು ಅಲ್ಲಲ್ಲಿ ಸ್ಥಾಪಿತವಾಗುವದು ಮಹತ್ತ್ವದ ಅಂಗವಾಗಿದೆ.

### ಬೆಳಗಾಂವಿ ಜಿಲ್ಲೆಯ ಸಾಹಿತ್ಯಸೇವಕರಲ್ಲಿ ಬಿನ್ನಹ

ತಾ. ೧೪–೧೦–೩೧ ನೆಯ ದಿನ ಕೂಡಿದ ಬೆಳಗಾಂವಿ ಜಿಲ್ಲೆಯ ಸಾಹಿತ್ಯಸಮ್ಮೇಲನದ ಕಾರ್ಯಕಾರಿಮಂಡಲದವರು ಕೈಕೊಳ್ಳಬೇಕೆಂದಿರುವ ಬೆಳಗಾಂವಿ ಜಿಲ್ಲೆಯಲ್ಲಿ ಸಾಹಿತ್ಯಸೇವೆಯನ್ನು ನಡೆಸಿರುವ ಸಂಘ ಸಂಸ್ಥೆಗಳ ಪರಿಚಯವನ್ನು ಮಾಡಿಕೊಡುವ ಕಾರ್ಯವು, ಈ ವರ್ಷದ ರಾಜಕೀಯ ಆಂದೋಲನದ ಮೂಲಕ ಹಾಗೇ ನಿಂತು ಬಿಟ್ಟಿದ್ದಿತು. ಅದನ್ನು ಅವರು ಮತ್ತೆ ಕೈಕೊಳ್ಳಲಿರುವುದರಿಂದ, ಅಂತಹ ಸಂಸ್ಥೆಗಳ ಉದ್ದೇಶ, ಸ್ಥಾಪನಾ ದಿನ,ಮಾಡಿದ ಕಾರ್ಯ ಮೊದಲಾದುವುಗಳನ್ನು

ಕಾರ್ಯದರ್ಶಿ' ೧ನೆಯ ಜಿಲ್ಲಾ ಸಾ·ಸಮ್ಮೇಲನ
C/o ತುಂಟರ ತಂಡ, ಬೆಳಗಾಂವಿ

ಎಂಬ ವಿಳಾಸಕ್ಕೆ ತಿಳಿಸಬೇಕು. ಇದಲ್ಲದೆ ಇವರು ಪ್ರತಿವರ್ಷ ಬೆಳಗಾಂವಿ ಜಿಲ್ಲೆಯಲ್ಲಿ ಪ್ರಸಿದ್ಧವಾಗುವ ಗ್ರಂಥಗಳ ಪ್ರದರ್ಶನವನ್ನು ಏರ್ಪಡಿಸಿ ಗ್ರಂಥಕರ್ತರಿಗೆ ಬಹುಮಾನವನ್ನು ಕೊಡಲಿದ್ದಾರೆ. ಈ ವಿಷಯದಲ್ಲಿಯೂ ಎಲ್ಲ ಸಂಗತಿಗಳನ್ನು ತಮಗೆ ತಿಳಿಸಬೇಕಾಗಿ ಅವರು ಕೋರುತ್ತಾರೆ.

### ಬೆಳಗಾಂವಿಯಲ್ಲಿ ಕರ್ನಾಟಕಸಂಘದ ವಾರ್ಷಿಕೋತ್ಸವವು

ಕರ್ನಾಟಕ ಸಂಘ ಮತ್ತು ವಾಚನಾಲಯದ ವಾರ್ಷಿಕೋತ್ಸವವು ತಾ. ೧೨–೬–೩೨ ನೆಯ ದಿನ ಬೆಳಗಾಂವಿಯಲ್ಲಿ ಆಯಿತಂತೆ. ಎಂ. ರಾಮಬ್ರಹ್ಮ ಅವರು ಅಧ್ಯಕ್ಷರಾಗಿದ್ದರು. ಪ್ರಮುಖ ಕನ್ನಡಿಗರೆಲ್ಲರೂ ಬಂದಿದ್ದರು. ಸಭೆಯ ವಿಶೇಷವೆಂದರೆ, ಪ್ರೇಕ್ಷಕವರ್ಗದಲ್ಲಿ ೩೦೦ಕ್ಕಿಂತ ಹೆಚ್ಚುಮಂದಿ ಕನ್ನಡ ಹೆಣ್ಣುಮಕ್ಕಳಿದ್ದರು. ಚಿಕ್ಕ ಚಿಕ್ಕ ಬಾಲಿಕೆಯರು "ಕಾಲೇಜ ಗರ್ಲ್ಸ್" ಎಂಬ ನಾಟಕವನ್ನೂ, ಬಾಲಕರು "ನಮ್ಮೂರ ನಡತೆ" ಎಂಬ ಬೆಳಗಾಂವಿಯ ಸ್ಥಿತಿಚಿತ್ರವನ್ನೂ ಮಾರ್ಮಿಕವಾಗಿ ಆಡಿ ತೋರಿಸಿದರು.

ಈ ರೀತಿ ಬೆಳಗಾಂವಿಯು ಎಲ್ಲ ಬಗೆಯ ಸಾಂಸ್ಕೃತಿಕ ಚಟುವಟಿಕೆಗಳಗಳಲ್ಲಿ ಮುಂದುವರಿಯುತ್ತಿದ್ದುದು ತುಂಬ ಅಭಿನಂದನೀಯ ವಿಷಯ.

### ಮೈಸೂರಿನ ಲಲಿತಕಲಾಪ್ರದರ್ಶನ

ಮೈಸೂರು ಮಹಾರಾಜರ ವರ್ಧಂತ್ಯುತ್ಸವ ಕಾಲದಲ್ಲಿ (೧೨-೬-೩೨) 'ಲಲಿತಕಲಾ ಸಂಘದವರು ಏರ್ಪಡಿಸಿದ ಈ ಪ್ರದರ್ಶನವು ತೆರೆಯಲ್ಪಟ್ಟಿತು. ಶ್ರೀ ವೀರಪ್ಪನವರ 'ದೇವಾಲಯದಲ್ಲಿ' ಎಂಬ ಚಿತ್ರಕ್ಕೆ ಸಂಘದ ರಜತ ಪದಕವು ಕೊಡಲ್ಪಟ್ಟಿತು. ಇವರಲ್ಲದೆ ಇನ್ನೆಂಟು ಚಿತ್ರಕಾರರಿಗೆ ದ್ರವ್ಯರೂಪ ಬಹುಮಾನವೂ ಕೊಡಲ್ಪಟ್ಟಿತು.

ದೇವಾಲಯದಲ್ಲಿ ಎಂಬ ಚಿತ್ರವನ್ನು ಕುರಿತು 'ವಿಶ್ವಕರ್ನಾಟಕ' ದಲ್ಲಿ ಈ ರೀತಿ ಬರೆದಿದೆ–'ಚಿತ್ರವು ನೋಟಕರನ್ನು ಸಾವಿರಾರು ವರ್ಷಗಳ ಹಿಂದಿನ ಅಜಂತ ಮಾರ್ಗದ ಕಾಲಕ್ಕೆ ಕೊಂಡೊಯ್ಯುತ್ತದೆ. ಭಕ್ತಿಭಾವಪೂರ್ಣವಾದ ಎರಡು ಸ್ತ್ರೀವ್ಯಕ್ತಿಗಳೂ ಅವರಿಬ್ಬರ ನಡುವೆ ನಿಂತಿರುವ ಏನೂ ಅರಿಯದ ಮಗುವೂ ಚಿತ್ತಾಕರ್ಷಕವಾಗಿವೆ. ಈ ಚಿತ್ರವನ್ನು ಆದರ್ಶ ಮತ್ತು ನಿಸರ್ಗ ಮಾರ್ಗಗಳ ಸಂಕಲನಜಾತಿಗೆ ಸೇರಿಸಬಹುದು. ವರ್ಣವಿದಗ್ಧತೆಯು ಪರಿಣಾಮಕಾರಕವಾಗಿದೆ.

### ಹೈದ್ರಾಬಾದಿನಲ್ಲಿ 'ನರಶಾರ್ದೂಲ' ನಾಟಕ

ಜಯಕರ್ನಾಟಕ ಮಂಡಲದ ಸದಸ್ಯರಲ್ಲೊಬ್ಬರಾದ ಶ್ರೀ. ಮನಸಬ್ದಾರ ರಾಘವೇಂದ್ರರಾಯರು ಈ ನಾಟಕವನ್ನು ಬರೆದಿದ್ದಾರೆ. ಅವರೂ 'ಕರ್ನಾಟಕ ಅಮೆಚೂರ್ ಕ್ಲಬ್ಬಿ' ನ ಅವರ ಜೊತೆಗಾರರೂ ಅದನ್ನು ಆಡಿ ತೋರಿಸಿದರು. ಇವರೆಲ್ಲರ ಛಾಯಾಚಿತ್ರವೊಂದು ಮುಂದಿನ ತಿಂಗಳ ಸಂಚಿಕೆಯಲ್ಲಿ ಬರಲಿದೆ.ತರುಣರು ಉತ್ಸಾಹದಿಂದ ಮುಂದೆಬಂದು ಕನ್ನಡ ನಾಡುನುಡಿಗಳ ಸೇವೆಯನ್ನು ಮಾಡಲಿಷ್ಟವುಳ್ಳವರಿದ್ದರೂ, ಹಿರಿಯರು ಉದಾಸೀನರಾಗಿಯೇ ಇರುವರೆಂದು ಕೇಳುತ್ತೇವೆ. ಇದು ವಿಷಾದಕರ.

CC-0. Jangamwadi Math Collection. Digitized by eGangotri



## ಕೂಲಿಕಾರರ ರಾಜ್ಯದ ಸುತ್ತ ಚಕ್ರವ್ಯೂಹರಚನೆ

ಕಳೆದ ಸಂಚಿಕೆಯಲ್ಲಿ ರಶಿಯಾ ಜಪಾನುಗಳ ನಡುವೆ ಯುದ್ಧಾರಂಭದ ಸಂಭವವನ್ನು ಕುರಿತು ಪ್ರಸ್ತಾಪಿಸಿದ್ದೆವು. ಆ ಭೀತಿ ನಿರಾಧಾರವಾಗಿರಲಿಲ್ಲವೆಂಬುದಕ್ಕೆ ಇಂಗ್ಲಂಡಿನ 'ದಿ ನ್ಯೂ ಲೀಡರ್' ಎಂಬ 'ಸ್ವತಂತ್ರ ಕೂಲಿಕಾರ ಪಕ್ಷ'ದ ಮುಖಪತ್ರದಲ್ಲಿ ಪ್ರಕಟವಾದ ಪತ್ರಿಕೆಯೊಂದು ಸಾಕ್ಷಿಯಾಗಿದೆ.

ಅದರಲ್ಲಿನ ಹೇಳಿಕೆಯ ಮೇರೆಗೆ, ರಶಿಯದ ಮೇಲೆ ಜಪಾನು ಏರಿ ಹೋಗುತ್ತಿರುವುದರ ಬುಡಕ್ಕೆ ನಿಬಿಡವಾದ ಪೂರ್ವಸಿದ್ಧತೆಯಿದೆ. ಜಪಾನೊಂದೇಯಲ್ಲ, ಜಗತ್ತಿನ ಸಾಮ್ರಾಜ್ಯವಾದಿ ಸರಕಾರಗಳೆಲ್ಲ ರಶಿಯದ ಸಾಮ್ಯವಾದಿ ಸರಕಾರವನ್ನು ಒಗ್ಗುಬಡಿಯಲು ಗುಪ್ತವ್ಯೂಹವನ್ನು ಮಾಡಿವೆಯಂತೆ. ಅದನ್ನು ನಂಬುವುದಾದರೆ, ರಶಿಯವನ್ನು ಇಮ್ಮಗ್ಗಲಿನಿಂದ ನುಗ್ಗಲು ಪ್ರಯತ್ನಗಳು ನಡೆದಿವೆ; ಒಂದು ಪೂರ್ವದಿಕ್ಕಿನಿಂದ. ಒಂದು ಪಶ್ಚಿಮದಿಂದ. ಈ ಎರಡೂ ಏರಾಟಗಳನ್ನು ಹುಸಿಗೊಳಿಸಲು ಜಗತ್ತಿನ ಎಲ್ಲ ಕೂಲಿಕಾರರ ಏಕಮುಖಪ್ರಯತ್ನವು ಬೇಕೆಂದು ಅದು ಹೇಳುತ್ತಿದೆ.

ಜಪಾನಿನ ಮಟ್ಟಿಗೆ, ಮೂರು ಕಾರಣಗಳು ಅದನ್ನು ಈ ಕದನದಲ್ಲಿ ಪ್ರವೃತ್ತವನ್ನಾಗಿ ಮಾಡುತ್ತಿವೆ. (೧) ಸಾಮ್ರಾಜ್ಯವಾದಿ ರಾಷ್ಟ್ರಗಳಿಗೆ ಸಾಮಾನ್ಯವಾಗಿರುವ ಪರರಾಜ್ಯಾಕ್ರಮಣ ತೃಷ್ಣೆ. (೨) ಜಪಾನಿನ ಅಂತಃಸ್ಥ ಸಂಕಟಗಳು. (೩) 'ತಾನಾಕಾ' ಮಂತ್ರಿಯ ಪ್ರಕಟ ಧೋರಣೆ. ಇವುಗಳನ್ನು ಕ್ರಮವಾಗಿ ಚರ್ಚಿಸುವಾ.

(೧) ಮಂಚೂರಿಯವು ಜಪಾನಿಗೆ ಅಗ್ಗವಾದ ಕ್ಷೇತ್ರಯಾಗಿದ್ದು, ಜಪಾನು ಅಲ್ಲಿ ೨೦೦ ಕೋಟಿ ಪೌಂಡುಗಳಿಗಿಂತ ಹೆಚ್ಚು ಬಂಡವಾಳವನ್ನು ತೊಡಗಿಸಿದೆಯಂತೆ. ಅಲ್ಲದೆ ಮಂಚೂರಿಯದಲ್ಲಿ ವಿಪುಲವಾಗಿ 'ಕಚ್ಚಾ ಮಾಲು' ದೊರಕುತ್ತಿದ್ದು, ಅಲ್ಲಿಯ ಕೂಲಿಯೂ ಬಹು ಅಗ್ಗವಾಗಿದೆ. ಅಲ್ಲಿಯ ಕಬ್ಬಿಣ, ಬಂಗಾರ ಮೊದಲಾದ ವಿವಿಧ ಧಾತುಗಳ ಕಣಿಗಳೂ, ಧನಧಾನ್ಯಗಳೂ ಜಪಾನನ್ನು ತುಂಬ ಆಕರ್ಷಿಸಿವೆ. ಜಪಾನಿನ ಬೆಳೆಯುವ ಜನಸಂಖ್ಯೆಯನ್ನು ಒಕ್ಕಲಾಗಿಸಲೂ ಅದು ಯೋಗ್ಯಸ್ಥಾನವಾಗಿದೆ. ಇದೆಲ್ಲದರಲ್ಲಿ ರಶಿಯದ ಸಂಬಂಧವು ಎಲ್ಲಿ ಬರುವುದೆಂದರೆ, ಉತ್ತರಮಂಚೂರಿಯದಲ್ಲಿ 'ಚೈನೀಜ್ ಈಸ್ಟರ್ನ್ ರೇಲ್ವೆ' ಎಂಬುದು ಚೀನಿ ರಶಿಯನ್ ಸರಕಾರಗಳೆರಡರ ಪಾಲುಗಾರಿಕೆಯಲ್ಲಿದೆ. ಇಂದಿಲ್ಲ ನಾಳೆ ಚೀನ ರಶಿಯಗಳು ಕೈಕೈ ಕುಲುಕಿಸಿಯಾವೆಂಬ ಭೀತಿ ಮುಂಚಿನಿಂದಲೂ ಜಪಾನಿಗಿದೆ. ಆ ರೇಲ್ವೆಯ ಪೂರ್ವತಮ ಭಾಗಕ್ಕೆ ವ್ಲಾಡಿವೊಸ್ತೋಕ ಎಂಬ ಆಯಕಟ್ಟಿನ ಬಂದರವು ರಶಿಯದ ವಶದಲ್ಲಿದ್ದು, ತನ್ನ ವಿಮಾನದಳಕ್ಕೆ ಅದೊಂದು ಒಳ್ಳೆಯ ನಿಲ್ದಾಣವಾದೀತೆಂದು ಜಪಾನಿಗೆ ಆಶೆಯಿದೆ. (೨) ಜಗತ್ತನ್ನೇ ನುಗ್ಗು ಮಾಡುತ್ತಿರುವ ಆರ್ಥಿಕಪ್ರಲಯವು ಜಪಾನನ್ನೂ ಗಾಸಿಗೊಳಿಸದೆ ಇಲ್ಲ. ರೈತರು ಕೂಳಿಲ್ಲದೆ ಇದ್ದಾರೆ, ನಿರುದ್ಯೋಗಿಗಳು ತಂಡತಂಡವಾಗಿ ಅಲೆಯುತ್ತಿದ್ದಾರೆ, ರಾಜಕೀಯ ಕೊಲೆಗಳು ಹೇರಳವಾಗಿವೆ. ಇದಕ್ಕೊಂದೇ ಒಂದು ಉಪಾಯ: ಪರರಾಷ್ಟ್ರದೊಡನೆ ಯುದ್ಧಾರಂಭ. (೩) ಗನೆ

CC-0. Jangamwadi Math Collection. Digitized by eGangotri

ಪಲ್ಲಿಯೇ ಆಗಿನ ಮುಖ್ಯ ಮಂತ್ರಿಯಾದ ತಾನಾಕಾ ಎಂಬವನು 'ಚೀನವನ್ನು ಪಾದಾಕ್ರಾಂತವನ್ನಾಗಿಸಲಿಕ್ಕೆ ನಾವು ಮೊದಲು ಮಂಚೂರಿಯವನ್ನೂ ಮೊಂಗೋಲಿಯ ವನ್ನೂ ವಶಮಾಡಿಕೊಳ್ಳಬೇಕು; ಉತ್ತರ ಮಂಚೂರಿಯ ವನ್ನು ಸಮ್ಮದನ್ನಾಗಿ ಮಾಡಿಕೊಳ್ಳಬೇಕಾದರೆ ರಶಿಯ ದೊಡನೆ ಹೋರಾಡಲೇಬೇಕಾಗುವುದು ' ಎಂದು ರಾಜ ನಿಗೊಂದು ಬಿನ್ನವತ್ತಳಿಯನ್ನು ಸಾದರಪಡಿಸಿದ್ದನಂತೆ. ಆ ಧೋರಣೆಯನ್ನೂ ಈಗಿನ ಜಪಾನೀ ಸೈನ್ಯದ ಅಧಿಕಾ ರಿಗಳಿಂದ ತಿರಸ್ಕೃತವಾಗಿಲ್ಲ. ಆ ಮೇರೆಗೆ, ಚೀನಾದ ತಾತ್ಪೂರ್ತಿಕ ಪರಾಪಭವವಾಗಿದೆ; ಮಂಚೂರಿಯವು ಆಕ್ರಮಿಸಲ್ಪಟ್ಟಿದೆ; ಚೈನೀಜ್ ಈಸ್ಟರ್ನ್ ರೇಲ್ವೆಯ ಮೇಲಣ 'ಹಾರ್ಬಿನ್ ' ಎಂಬ ಆಯಕಟ್ಟಿನ ಪಟ್ಟಣವು ವಶೀಕೃತವಾಗಿದೆ; ರೇಲ್ವೆ ಲೈನನ್ನು ಸರಿಪಡಿಸಲು ಬಂದ ರಶಿಯನ್ ಕೂಲಿಕಾರರು ಕೊಲೆ ಮಾಡಲ್ಪಟ್ಟಿದ್ದಾರೆ. 'ಮಂಚೂರಿಯದಲ್ಲಿ ಜಪಾನಿನ ಆರು ಸೈನಿಕದಲ ಗಳಿದ್ದು, ೧೯೯ ಸಹಸ್ರ ಪೋಲೀಸರೂ, ಮಂಚೂರಾಜ ಮನೆತನದ ವಶದೊಳಗಿನ ೮೦ ಸಹಸ್ರ ಸೈನಿಕರೂ, ಪ್ರತಿ ಕ್ರಾಂತಿಕಾರಿಯಾದ ಸೆಮೆಸೋವ್ಹ್ ಎಂಬಾತನ ೫೦ ಸಹಸ್ರ ಸೈನಿಕರೂ, ೧ ಲಕ್ಷ ಕುದುರೇ ಸವಾರರೂ ರಶಿಯದ ಮೇಲೆ ಏರಿ ಹೋಗಲು ಸಿದ್ಧರಿದ್ದಾರೆ'' ನ್ಯೂಯಾರ್ಕ್ ಟೈಮ್ಸ್ ಎಂಬ ಅಮೇರಿಕನ್ ಪತ್ರದ ಅಭಿಪ್ರಾಯದಲ್ಲಿ 'ರಶಿಯದ ಹೊಸ ಪಂಚವಾರ್ಷಿಕ ಯೋಜನೆಯು ಕೊನೆಗಂಡು, ಅದು ಗಟ್ಟಿಯಾಗುವುದ ರೊಳಗಾಗಿ, ಜಪಾನು ಅದನ್ನು ಸದೆಬಡಿಯಲು ಹವಣಿಸುತ್ತಿದೆ.''

ಅತ್ತ ಪಶ್ಚಿಮಸೀಮೆಯ ರಾಷ್ಟ್ರಗಳಲ್ಲಿಯೂ ಸಿದ್ಧತೆ ನಡೆದಿದೆ. ಫ್ರಾನ್ಸಿನ ಕಣ್ಣರಿಕೆಯಲ್ಲಿ ಡಾನ್ಯೂ ಬಿಯನ್ ರಾಷ್ಟ್ರಗಳ ಆರ್ಥಿಕಸಂಘಟನೆಯು ನಡೆ ದಿರುವುದು, ಅಖಿಲ ಯುರೋಪೀಯ ಆರ್ಥಿಕಸಂಘಟನೆ ಗಾಗಿ ಫ್ರಾನ್ಸು ಹಾತೊರೆಯುತ್ತಿರುವದು ಇದಕ್ಕಾಗಿಯೆ. ೧೯೩೧ ರಲ್ಲಿ ಆಗಿನ ಫ್ರೆಂಚ್ ಮುಖ್ಯಪ್ರಧಾನನಾದ ಬ್ರಿಯಾಂದನು 'ಧಾನ್ಯದ ವಿಪುಲಸಂಗ್ರಹವನ್ನು ಮಾಡಿ ರುವ ಪೋಲಂಡ್ ರೂಮಾನಿಯಾ ದೇಶಗಳ ಮೇಲೆ ಸೊವಿ ಯೆಟ್ ಸರಕಾರದ ಪಂಚ ವಾರ್ಷಿಕಯೋಜನೆಯ ಎಂತಹ ದುಷ್ಪರಿಣಾಮವಾದೀತೆಂಬುದನ್ನು ನೆನೆಯಿರಿ.' ಎಂದು ಜಿನೀವಾದಲ್ಲಿನ ತನ್ನ ಶ್ರೋತೃಗಳಿಗೆ ಎಚ್ಚರಿಕೆಯನ್ನು ಕೊಟ್ಟನು. ಇದೇ ಶ್ರುತಿಯನ್ನು ಹಿಡಿದು, ಒಂದು ರೂಮಾನಿಯನ್ ಪತ್ರಿಕೆಯು ಮಾಸ್ಕೋವನ್ನು ಹಾಳು ಗೆಡಹಲೇ ಬೇಕು. ಬೋಲ್ಶೆವಿಕರು ನಮ್ಮ ಧಾನ್ಯದ ವ್ಯಾಪಾರವನ್ನು ಹಾಳು ಮಾಡಿದ್ದಾರೆ.' ಎಂದು ಕಿರಚಿ ಕೊಂಡಿತು. ಈ ಧೋರಣೆಯನ್ನನುಸರಿಸಿ ಸಮರಸಿದ್ಧ ತೆಯೂ ಸಾಗಿದೆ. 'ಸ್ಕೋಡ ಎಂಬಲ್ಲಿನ ಝೆಕೊಸ್ಲೊ ಲಾಕಿಯನ್ ಮದ್ದಿನ ಕಾರಖಾನೆಗಳು ಫ್ರೆಂಚ್ ಆರ್ಥಿಕ ಆಧಿಪತ್ಯದ ಕೆಳಗೆ, ಪೋಲಂಡ್, ರೂಮಾನಿಯಾ, ಯುಗೊ ಸ್ಲಾವಿಯಾಗಳಲ್ಲೆಲ್ಲ ತಮ್ಮ ಶಾಖಾವಿಶಾಖೆಗಳನ್ನು ಹಬ್ಬಿಸಿವೆ. ೧೯೩೧ ರಲ್ಲಿ ಪ್ರತಿತಿಂಗಳು ೫ ಲಕ್ಷ ತೋಫಿನ ಗುಂಡುಗಳನ್ನು ಅವು ತಯಾರಿಸುತ್ತಿದ್ದುವು. ಫ್ರೆಂಚ್ ಯುದ್ಧಶಾಸ್ತ್ರವಿಶಾರದರು ಪೂರ್ವಯುರೋ ಪೀಯ ರಾಷ್ಟ್ರಗಳನ್ನು ಈ ದೃಷ್ಟಿಯಿಂದ ಆಗಾಗ ಸಂದ ರ್ಶಿಸಿದ್ದಾರೆ. ಮತ್ತು ರೂಮಾನಿಯನ್ ಸೈನ್ಯವು ಫ್ರಾನ್ಸಿನ ಸೇನಾಧಿಕಾರಿಗಳ ನೇತೃತ್ವದಲ್ಲಿ ಶಿಕ್ಷಣವನ್ನು ಪಡೆದಿದೆ.'

ಸೊವಿಯೆಟ್ ಸರಕಾರದ ಪಡುವಲ ಗಡಿನಾಡಿನ ದೇಶ ಗಳು ಫಾಸಿಸ್ಟ ಸರಕಾರಗಳನ್ನು ಪ್ರಸ್ಥಾಪಿಸಿಕೊಂಡು, ರಶಿಯದ ಮೇಲೆ ಹೊಂಚುಹಾಕಿಕೊಂಡು ಕುಳಿತಿವೆ. ಬ್ರಿಟನ್ನೂ ಈ ಪ್ರಯತ್ನದಲ್ಲಿ ಸಹಕಾರಿಯಾಗಿದೆ. 'ಕಪ್ಪು ಸಮುದ್ರದ ತೀರದ ಮೇಲಿರುವ ಕಾನ್ಸ್ಟಾಂಝಾ ಎಂಬ ಬಂದರವು ಹಡಗುಪಡೆಯ ತಳವಾಗಿ ಅಣಿಮಾಡಲ್ಪಡು ತ್ತಿದೆ. 'ಏರೋಪ್ಲೇನ್ ' ಎಂಬ ಆಕಾಶಯಾನ ವಿದ್ಯೆಯ ಮುಖಪತ್ರದಲ್ಲಿ ಒಬ್ಬ ಬ್ರಿಟಿಷ್ ಅಧಿಕಾರಿಯು "ಇರಾಕ ದಲ್ಲಿನ ಬ್ರಿಟಿಷ್ ವಿಮಾನದಲವು ರಶಿಯನ್ ವಿಮಾನ ದಲಕ್ಕೆ ಮೇಲ್ಗೈ ಹೇಗಾದೀತು '' ಎಂಬ ಬಗ್ಗೆ ಒಂದು ಯೋಜನೆಯನ್ನು ಪ್ರಕಟಿಸಿದ್ದಾನೆ. ೧೯೩೦ರಲ್ಲಿ ಹಿಂದುಸ್ಥಾನದಲ್ಲಿ ಯುದ್ಧವಿಮಾನದಲದ ಕವಾಯಿತು ಗಳಲ್ಲಿ ಸೊವಿಯೆಟ್ ಸರಕಾರದ ವಿರುದ್ಧವಾಗಿ ಒಂದು ಕಾಲ್ಪನಿಕ ಏರಾಟವು ಪ್ರದರ್ಶಿಸಲ್ಪಟ್ಟಿತು....' ಇಂತು ಎರಡೂ ಕಡೆಯಿಂದ ರಶಿಯವನ್ನು ಮುತ್ತಬೇಕೆಂಬ ಪ್ರಗಾಢವಾದ ಗುಪ್ತಕೂಟವೊಂದುಂಟೆಂದು 'ದಿ ನ್ಯೂ ಲೀಡರ್ ' ಪತ್ರಿಕೆಯು ಹೇಳುತ್ತಿದೆ. 'ರಶಿಯದಲ್ಲಿ ಹೆಣ್ಣುಮಕ್ಕಳು ರಾಷ್ಟ್ರದ ಆಸ್ತಿಯಾಗಿದ್ದಾರೆ. ಕ್ರಿಸ್ತೀ



CC-0. Jangamwadi Math Collection. Digitized by eGangotri

ಜನರನ್ನು ವಿಚಿತ್ರವಾಗಿ ಹಿಂಸೆಗೊಳಿಸುತ್ತಿದ್ದಾರೆ. ರೂಮಾನಿಯನ್ ಗಡಿನಾಡಿನ ಹತ್ತಿರ ಹಲವು ತೆರದ ಅತ್ಯಾಚಾರಗಳನ್ನು ಮಾಡಿದ್ದಾರೆ.' ಇಂತು ಮುಂತಾಗಿ ಹಲವು ಕಟ್ಟುಕಥೆಗಳನ್ನು ಹುಟ್ಟಿಸಿ, ರಶಿಯದ ವಿರುದ್ಧವಾಗಿ ಲೋಕಮತವನ್ನು ಕಲುಷಿತವನ್ನಾಗಿ ಮಾಡುವ ಪ್ರಯತ್ನವಂತೂ ಹಲವು ದಿನಗಳಿಂದ ನಡೆದಿದೆ. ಇದನ್ನೆಲ್ಲ ನೋಡಲಾಗಿ, ರಶಿಯದ ಪೂರ್ವದ ಗಡಿನಾಡಿನ ಮೇಲೆ ಜಪಾನೀ ಚತುರಂಗಬಲವು ಏರಿ ಹೋಗುತ್ತಿದ್ದುದು ಪೂರ್ವಸಂಕೇತದಿಂದಲೇ ಇರಬೇಕೆಂದು ತೋರುತ್ತಿದೆ.

## ಲಾಝೂಾಂ ಪರಿಷತ್ತು ಮತ್ತು ಶಸ್ತ್ರಸಂನ್ಯಾಸ ಪರಿಷತ್ತು

ಲಾಝೂಾಂ ನಗರದಲ್ಲಿ ಜೂನ್ ೧೬ನೆಯ ದಿನ ಯುದ್ಧದ ಸಾಲಗಳ ಮತ್ತು ಯುದ್ಧನಷ್ಟಕ್ಕಾಗಿ ತಪ್ಪುದಂಡದ ವಿಚಾರಮಾಡಲು ಪ್ರಮುಖರಾಷ್ಟ್ರಗಳ ಪರಿಷತ್ತು ಮೊದಲಾಯಿತು. ಇತ್ತ ಜಿನೀವಾದಲ್ಲಿ ಮುಂದೆ ಹಾಕಲ್ಪಟ್ಟ ಶಸ್ತ್ರಸಂನ್ಯಾಸ ಪರಿಷತ್ತೂ ಮುಂದರಿಯಿತು. ಅವೆರಡಿನ್ನೂ ಕೊನೆಗಾಣದಿರುವುದರಿಂದ, ಅವುಗಳ ಬಗ್ಗೆ ನಿರ್ಣಯಾತ್ಮಕವಾಗಿ ಬರೆಯುವಂತಿಲ್ಲ. ಮೊದಲಿನ ಪರಿಷತ್ತಿಗೆ ಮೆಕ್ಡೊನಾಲ್ಡರು ಅಧ್ಯಕ್ಷರು. ಅವರು, ಜಗತ್ತಿನ ಸಾರ್ವತ್ರಿಕ ಆರ್ಥಿಕವಿಪ್ಲವವನ್ನು ದೂರೀಕರಿಸಲು ಯುದ್ಧದ ಸಾಲಗಳ ಮತ್ತು ಯುದ್ಧವಿಷಯಕ ತಪ್ಪುದಂಡದ ಪ್ರಶ್ನೆಯನ್ನು ಆಮೂಲಾಗ್ರವಾಗಿ ಬಿಡಿಸುವುದು ಎಷ್ಟು ಅಗತ್ಯವಿದೆಯೆಂದು ವಿವೇಚಿಸಿದರು. ಅವರು ಈ ವಿಷಯದಲ್ಲಿ ಮೂರುಮಾರ್ಗಗಳನ್ನು ಸೂಚಿಸಿದರು. (೧) ಯುದ್ಧದ ಸಾಲವನ್ನೂ ತಪ್ಪುದಂಡವನ್ನೂ ಪೂರಾ ನಿರ್ಮೂಲಗೊಳಿಸುವುದು. (೨) ಒಂದು ಕ್ರಮದಲ್ಲಿ ಅವುಗಳನ್ನು ಕಡಿಮೆಮಾಡುತ್ತ ಹೋಗುವುದು. (೩) ಮತ್ತೆ ಕೆಲವು ವರ್ಷ ಕಾಲ 'ಸೂಟು' ಬಿಡುವುದು (Moratarium) ಇವುಗಳನ್ನು ಹೇಳಿದುದಲ್ಲದೆ 'ಆರ್ಥಿಕ ತಜ್ಞಮಂಡಲ'ದ ನಿರ್ಣಯಗಳಿಗೆ ತಮ್ಮ ಒಪ್ಪಿಗೆಯನ್ನಿತ್ತರು. ಆರ್ಥಿಕತಜ್ಞಮಂಡಲದ ಮತವು, ಸದ್ಯದ ಪರಿಸ್ಥಿತಿಯನ್ನು ನೋಡಲಾಗಿ ಯುದ್ಧದ ಸಾಲ ಮೊದಲಾದುವುಗಳ ಕಂತಗಳನ್ನು ಎಲ್ಲರಾಷ್ಟ್ರಗಳು ತಂತಮ್ಮಲ್ಲಿ ಒಂದು ಸಲ ತೀರ್ಮಾನಿಸಿಕೊಂಡು ಬಿಡಬೇಕು ಎಂದಿದೆ. ಎಂದರೆ ಯುದ್ಧದ ಸಾಲ ಮೊದಲಾದುವುಗಳನ್ನು ಪೂರಾ ರದ್ದುಪಡಿಸಬೇಕೆಂಬ ಅಭಿಪ್ರಾಯಕ್ಕೆ ಆ ತಜ್ಞಮಂಡಲವು ಅನುಕೂಲವಿಲ್ಲವೆಂದಂತಾಯಿತು. ಇಂತು ಮೆಕ್ಡೊನಾಲ್ಡರು ತಜ್ಞಮಂಡಲದ ಸೂಚನೆಯನ್ನು ಪುಷ್ಟೀಕರಿಸುವುದರಿಂದ ಯುದ್ಧವಿಷಯಕ ಸಾಲಪಟ್ಟಿಯನ್ನು ಪುಟ್ಟಪೂರಾ ಅಳಿಸಿ ಬಿಡಲು ಸಿದ್ಧರಿಲ್ಲವೆಂದಾಯಿತು! ಆದರೂ ಅವರು ಈ ಪ್ರಶ್ನೆಯನ್ನೊಮ್ಮೆ ನಿರ್ಧರವಾಗಿ ತೀರಿಸಿ ಬಿಡಬೇಕೆನ್ನುವವರಿದ್ದಾರೆ. (Clean Slate Policy)

ಆದರಿದು ಈ ವರೆಗಂತೂ ಫ್ರಾನ್ಸಿಗೆ ಒಪ್ಪಿತವಾಗಿಲ್ಲವೆಂದು ತೋರುತ್ತಿದೆ. ಅತ್ತ ಅಮೇರಿಕೆಯ ಪ್ರೆಸಿಡೆಂಟ ಹೂವರರು, 'ನೀವು ಯುರೋಪೀಯ ರಾಷ್ಟ್ರಗಳವರು ನಮಗೆ ಕೊಡಬೇಕಾದ ಸಾಲವನ್ನು ಪೂರಾ ಬಿಟ್ಟುಬಿಡಲು ಕೇಳಿಕೊಳ್ಳುತ್ತಿದ್ದೀರಿ. ಆದರೆ ಅಮೇರಿಕೆಯು ಈ ನಷ್ಟವನ್ನು ಏಕೆ ಸಹಿಸಬೇಕು? ನಾವು ಕೊಟ್ಟ ಧನಸಾಹಾಯ್ಯದ ಮೂಲಕ ನೀವು ಮಹಾಯುದ್ಧದಲ್ಲಿ ವಿಜಯಿಗಳಾದಿರಿ. ಈಗ ನಮಗೆ ಕೇಡುಗಾಲ ಬಂದಿದೆ, ಆರ್ಥಿಕವಿಪ್ಲವವು ತಾಂಡವವಾಡುತ್ತಲಿದೆ, ನಮ್ಮ ಅಂದಾಜುಪಟ್ಟಿಯನ್ನು (Budjet) ಸರಿಪಡಿಸಲು ಕಠಿನವಾಗಿದೆ. ನಿಮ್ಮಿಂದ ಬರತಕ್ಕುದನ್ನು ಬಿಟ್ಟುಬಿಡಲು ಇದು ಸಮಯವಲ್ಲ. ಇಷ್ಟೂ ಮೀರಿ, ನಿಮಗೆ ಆಸೆಯಿದ್ದರೆ, ನಾವು ನಮಗೆ ಬರಬಹುದಾದ ಅಪಾರಧನರಾಶಿಯನ್ನು ಬಿಟ್ಟುಬಿಡಲು ಒಪ್ಪಿಕೊಳ್ಳುವುದರಿಂದ ನಾಳೆ ನಿಮ್ಮಗಳ ಆರ್ಥಿಕಪರಿಸ್ಥಿತಿಯು ಸುಧಾರಿಸಿತೆಂದರೆ ನೀವು ನಿಮ್ಮ ಯುದ್ಧವಿಷಯಕ ಸಾಧನಸಾಮಗ್ರಿಯನ್ನು ಹೊಸ ಹೊಸ ಸಂಹಾರಕಯಂತ್ರಗಳನ್ನು ನಿರ್ಮಾಡಿಸಲು ನಿಲ್ಲುಕ್ಕ ಉಳಿಯುವ ದುಡ್ಡನ್ನು ಉಪಯೋಗಿಸುವುದಿಲ್ಲವೆಂದು ಏತರ ಮೇಲಿಂದ? ನಮಗೆ ಆ ವಿಷಯದಲ್ಲಿ ಹೊಣೆಯನ್ನು ಕೊಡಿರಿ. ಯುದ್ಧ ಸಾಮಗ್ರಿಯನ್ನು ⅓ ಕ್ಕೆ ಒಮ್ಮೆಲೆ ಇಳಿಸುವಂತೆ ವಚನವನ್ನು ಕೊಡಿರಿ. **ಸಂರಕ್ಷಣೆಗೆ ಮಾತ್ರ** ಬೇಕಾಗಿರುವಷ್ಟು ಸಮರಸಾಮಗ್ರಿಯನ್ನು ಇಟ್ಟುಕೊಂಡು, ವಿಶೇಷ ಹೆರರ ಮೇಲೆ ಏರಿ ಹೋಗಲು ಬೇಕಾಗುವ ವಿಶೇಷ ವಿಧ್ವಂಸಕ ಯುದ್ಧಯಂತ್ರಗಳನ್ನು ನಾಶಗೊಳಿಸಿ ಬಿಡಿರಿ' ಎಂದು ಒಂದು 'ಬಾಂಬು ಗುಂಡ'ನ್ನು ಶಸ್ತ್ರಸಂನ್ಯಾಸ ಪರಿಷತ್ತಿನವರ ಎದುರಿನಲ್ಲಿ ಚೆಲ್ಲಿದ್ದಾರೆ. ಫ್ರಾನ್ಸು ಇದಕ್ಕೆ ತನ್ನ ಸರ್ವಾತ್ಮಕವಿರೋಧವನ್ನು ಪ್ರಕಟಿಸಿ

CC-0. Jangamwadi Math Collection. Digitized by eGangotri

ಸಿದೆ. ಇಟಲಿ ತನ್ನ ಅನನ್ಯ ಅಂಗೀಕಾರವನ್ನು ತೋರಿಸಿದೆ. ಇಂತು 'ಕೇಶಾಕೇಶಿ' ನಡೆದಿದೆ. ಇದೀಗ ಫ್ರಾನ್ಸು ತನ್ನ ಹಟವನ್ನು ತುಸು ಸಡಿಲಿಸಿ, ಜರ್ಮನಿಯೊಡನೆ ಆರ್ಥಿಕವಿಷಯದಲ್ಲಿ ಮಾತನ್ನು ನಡೆಯಿಸಲು ಸಿದ್ಧವಾಗಿದೆಯೆಂದು ಸುದ್ದಿ ಬಂದಿದೆ. ಜರ್ಮನಿಯಲ್ಲಿನ ಹರ್ ಹಿಟ್ಲರನ ನಾಝಿಪಕ್ಷದವರು ಇದೆಲ್ಲದರ ಲಾಭವನ್ನು ಪಡೆದುಕೊಂಡು ತಮ್ಮ ಸಂಘಶಕ್ತಿಯನ್ನು ನೂರ್ಮಡಿಗೊಳಿಸುತ್ತಿದ್ದಾರೆ. ಕೊನೆ ಎಲ್ಲಿ ಮುಟ್ಟುವುದೋ ನೋಡತಕ್ಕ ಮಾತಾಗಿದೆ.

## ತಮಸೋ ಮಾ ಜ್ಯೋತಿರ್ಗಮಯ !

ಜಗತಿಯು ಸಂಕಟಬಡುತ್ತಿರುವುದನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದಷ್ಟು ಮನಸ್ಸು ವಿಕಲವಾಗುತ್ತಿದೆ. ನಿರುದ್ಯೋಗಸಮಸ್ಯೆಯು ವಿಶ್ವರೂಪವನ್ನು ಧರಿಸಿದೆ: ವ್ಯಾಪಾರ ಉದ್ಯಮಗಳು ರಸಾತಲದ ಹಾದಿಯನ್ನು ಹಿಡಿದಿವೆ. ಧಾರಣೆಗಳು ತೀರ ಇಳಿದಿವೆ: ಆರ್ಥಿಕ ಸಂಸ್ಥೆಗಳು ಮಣ್ಣು ಪಾಲಾಗುತ್ತಿವೆ. ಸರಕಾರಗಳ ಅಂದಾಜು ಪತ್ರಿಕೆಗಳಲ್ಲಿ ತುಂಬಲಾಗದ ತಗ್ಗುಗಳು ಬಾಯ್ದೆರೆಯುತ್ತಿವೆ. ಅಂತೂ ನಾವು ಸಾಗುದುದೆತ್ತ ಎಂಬುದು ನಮಗೇ ತಿಳಿಯದಂತಾಗಿದೆ.

ಕಾಲಚಕ್ರದ ಪುಟಗಳನ್ನೋದುತ್ತಿರುವವರು 'ಇದೇನು ಬರಿ ನಿರಾಶೆಯ ಸಂತೆ ? ಹಿಂದಿನವರೆಗೆ ಬರಗಾಲವಿರಲಿಲ್ಲವೇ ?—ನಿರುದ್ಯೋಗ ಸಮಸ್ಯೆಯಿರಲಿಲ್ಲವೆ ? ರಾಷ್ಟ್ರರಾಷ್ಟ್ರಗಳ ನಡುವಿನ ವೈಮನಸ್ಯ ವೈರಗಳಿರಲಿಲ್ಲವೇ ?' ಎಂದು ಶಂಕಿಸುವ ಸಂಭವವಿದೆ. ಇದಕ್ಕೆ ಇದೊಂದೇ ಉತ್ತರ: ಈವೊತ್ತಿನ ಸ್ಥಿತಿಯು ಎಲ್ಲ ಬಗೆಯಿಂದಲೂ ನಿಜವಾಗಿಯೂ ಕೆಡುಕಾಗಿದೆ. ಇಂತಹ ಸಂದುಕಟ್ಟು ಹಿಂದೆ ಇರಲಿಲ್ಲ, ಮುಂದೆ ಬಂದೀತೆಂದು ಎನಿಸುವುದಿಲ್ಲ. ಓರ್ವ ತಜ್ಞರ ಶಬ್ದಗಳಲ್ಲಿ ಹೇಳುವುದಾದರೆ, 'ಎಲ್ಲಾ ಬಗೆಯ ದುರ್ದೈವವು ಈವೊತ್ತು ಭೂಮಿಯ ಭಾಗಗಳಲ್ಲೆಲ್ಲಾ ಸಾರ್ವತ್ರಿಕವಾಗಿ, ಸಮವಾಗಿ ಹಬ್ಬಿಕೊಂಡಿರುವಷ್ಟು, ಈ ಮುಂಚೆ ಐತಿಹಾಸಿಕ ಕಾಲದಲ್ಲಿ ಎಂದಿಗೂ ಆಗಿರಲಿಲ್ಲ. (Never within historical times has there been misfortune so widely diffused over the earth as at present.) ಅವರ ಅಭಿಪ್ರಾಯದಂತೆ, ಆ ಹಳೆಯ 'ಮೂವತ್ತು ವರ್ಷಗಳ ಯುದ್ಧ (Thirty Years' War)' ಫ್ರೆಂಚ್ ರಾಜ್ಯಕ್ರಾಂತಿ, ಅಮೇರಿಕನ್ನರ ಸ್ವಾತಂತ್ರ್ಯ ಯುದ್ಧ—ಇವುಗಳ ದುಷ್ಪರಿಣಾಮವು ಕೆಲಕೆಲವು ಪ್ರದೇಶಗಳನ್ನು ಮಾತ್ರ ಬಾಧಿಸುತ್ತಿದ್ದಿತು; ಅಂತಹ ಸಂಗ್ರಾಮವಾವುದಿರದಿದ್ದರೂ, ಈವೊತ್ತಿನ ಸರ್ವಾತ್ಮಕವಾದ ದುಃಸ್ಥಿತಿಯು ಪ್ರಪಂಚದ ಎಲ್ಲ ಭಾಗಗಳನ್ನೂ—ಮೂಲೆ ಮೂಲೆಗಳನ್ನೂ ಮೂಲೆಗಳನ್ನೂ ವ್ಯಾಪಿಸಿದೆ.

ಒಂದು ಬಗೆಯ ನಿರ್ವಿಣ್ಣತೆಯು—ಹತಬಲತೆಯು ಜಗತ್ತಿನ ರಾಷ್ಟ್ರಸೂತ್ರಧಾರಿಗಳನ್ನು ಆವರಿಸಿದೆ. ಡಾನ್ಯೂಬಿಯನ್ ಪರಿಷತ್ತಿನ ಕಥೆಯನ್ನೂ, ಲಾಝಾಂ ಜಿನೀವಾ ಪರಿಷತ್ತುಗಳ ನಾಟಕವನ್ನೂ ನೋಡುವವರಿಗೆ ಇದು ಹೊಳೆಯದೆ ಇರದು. ಮಹಾಯುದ್ಧದಲ್ಲಿ ಮಡಿದ ಸಹಸ್ರಾವಧಿ ಜನರ ಜೀವಾತ್ಮಗಳು ತಮ್ಮ ಪ್ರಭಾವವನ್ನು ಇನ್ನೂ ನಡೆಸಿರುವವೋ ಎಂಬಂತೆ, ಪರಿಸ್ಥಿತಿಯ ಭೀಕರ ದೃಶ್ಯವನ್ನು ಗಮನಿಸಿಯೂ ರಾಷ್ಟ್ರಗಳ ಕರ್ಣಧಾರರು ಬರಿ ಸವಿಮಾತುಗಳನ್ನು ಆಡುತ್ತಿರುವರೇ ಹೊರತು ಸವಿ ಕೆಲಸಗಳನ್ನು ಮಾಡಲು ಬಲ್ಲರು. ಇತ್ತ ಜಪಾನಿನ ಸಾಮ್ರಾಜ್ಯತೃಷ್ಣೆಯು ಪೂರ್ವಗೋಲಾರ್ಧದಲ್ಲಿ ಧೂಮಕೇತುವಿನಂತೆ ಭಯಸೂಚನೆಯನ್ನು ಮಾಡುತ್ತಿದೆ. ಇದಕ್ಕೆ ಪ್ರತಿಯಾಗಿ ಚಿಲಿ ಮಲಾಯಾ ಮೊದಲಾದ ಚಿಕ್ಕ ಪುಟ್ಟ ಪ್ರದೇಶಗಳಲ್ಲಿ ರಾಜ್ಯಕ್ರಾಂತಿ ಆಗುತ್ತಿವೆ. ಅಮೇರಿಕೆಯಲ್ಲಿ ಬೇರೆ ಕಡೆಯಂತೆಯೆ ಆರ್ಥಿಕ ದುಃಸ್ಥಿತಿಯೊಂದಲ್ಲದೆ, ಕೊಲೆಸುಲಿಗೆಗಾರರ ಗುಪ್ತ ಕೂಟಗಳ ಪುಂಡಾಟಿಕೆಯು ಹೇರಳವಾಗಿದೆ; ಬಿಳಿ ಜನರು ನಿಗ್ರೋ ಜನರಿಗೆ ಮಾಡುತ್ತಿರುವ ಅನ್ಯಾಯ ಹಿಂಸೆಗಳು ಅಪರಿಮಿತವಾಗಿವೆ. ದೊಡ್ಡ ದೊಡ್ಡ ಸಾಮ್ರಾಜ್ಯಗಳೇ ಇರಲಿ, ಚಿಕ್ಕಪುಟ್ಟ ಪ್ರದೇಶಗಳೇ ಇರಲಿ, ಇಂತಹ ಒಂದೂ ಸ್ಥಾನವಿಲ್ಲ—ಎಲ್ಲಿ ದುಃಖವು ಉಮ್ಮಳಿಸಿ ಬರುತ್ತಿಲ್ಲ.

ನಮ್ಮ ಬಡನಾಡಾದ ಹಿಂದುಸ್ಥಾನದಲ್ಲಿಯಂತೂ ಕೆಲಸವಿಲ್ಲದೆ ತಿರುಗುವವರ ದಂಡು, ದಿವಾಳಿ ತೆಗೆಯುವ ಬ್ಯಾಂಕುಗಳು, ಹಾಳಾದ ವ್ಯಾಪಾರ ಉದ್ಯೋಗಗಳು—ಈ ಎಲ್ಲ ದೃಶ್ಯವಲ್ಲದೆ, ವಿಚಿತ್ರವಾದ ರಾಜಕೀಯ ಪರಿಸ್ಥಿತಿಯೊಂದು ಉದ್ಭವಿಸಿ ಸರ್ವರ ಜೀವನವನ್ನು ಕಂಟಕಮಯವನ್ನಾಗಿ ಮಾಡಿದೆ. ಸರಕಾರದ ನಿರ್ದಯತೆಯನ್ನು

CC-0. Jangamwadi Math Collection. Digitized by eGangotri

ಎದುರಿಸಲು ಶಾಸನಭಂಗ ಚಳವಳಿಯು ಜನ್ಮವೆತ್ತಿತೋ, ಶಾಸನಭಂಗ ಚಳವಳಿಯನ್ನು ಹೊಡೆದು ಹಾಕಲು ಸರಕಾರವು ತನ್ನ ವಜ್ರಮುಷ್ಟಿಯನ್ನು ಮೇಲಕ್ಕೆತ್ತಿತೋ, ಅಂತೂ ಅತಿ ಸಾಮಾನ್ಯವಾದ–ದೈನಂದಿನವಾದ ರಾಷ್ಟ್ರವಿಧಾಯಕ ಚಟುವಟಿಕೆಗಳಿಗೂ ಅವಸರವಿಲ್ಲದಂತಾಗಿದೆ. ಒಂದು ಬಗೆಯ ಸ್ಮಶಾನಶಾಂತಿಯು ಎಲ್ಲೆಲ್ಲಿಯೂ ಕಂಡು ಬರುತ್ತಿದೆ. ಸ್ಮಶಾನದಲ್ಲಿ ಶಾಂತಿಯೇನೋ ಇದೆ, ಆದರೆ ಸುತ್ತುಮುತ್ತಲು ನಡೆದಾಡುವವರಿಗೆ ಕಾಲ್ಕೆಳಗೆ ಅದೇ ಹೊತ್ತಿಸಲ್ಪಟ್ಟು ಆರಿದಂತಿರುವ ಚಿತೆಗಳ ಬೂದಿಯಲ್ಲಿ ಮುಚ್ಚಿದ ಕೆಂಡಗಳು ಸುಡುತ್ತಲಿವೆ. ಹಿಂದುಸ್ಥಾನದ ಪ್ರಶ್ನೆಯು ಕೇವಲ ರಾಜಕೀಯವಿರದೆ, ಸಾಮಾಜಿಕವೂ ಸಾಂಸ್ಕೃತಿಕವೂ ಆಧ್ಯಾತ್ಮಿಕವೂ ಆಗಿದೆ. ರಾಷ್ಟ್ರದ ಸಂಪತ್ತಾದ ಯುವಕರ ಓಜಸ್ಸು ತೇಜಸ್ಸುಗಳು ರಾಷ್ಟ್ರ ನಿರ್ಮಾಣದ ಅತಿ ಗಹನವಾದ ಕಾರ್ಯದಲ್ಲಿ ತೊಡಗಬೇಕಾಗಿವೆ. ಆದರೆ ನಮ್ಮ ನಾಡನ್ನು ಮುತ್ತಿರುವ ಈ ಕತ್ತಲೆಯಲ್ಲಿ ಎಲ್ಲಿ ನೋಡಿದಲ್ಲಿ ಭಯಸಂದೇಹಗಳು. ಮಾತಾಡಲೂ ಬಾರದು; ನಡೆದಾಡಲೂ ಬಾರದು, ದಿಟ್ಟತನದಿಂದ ವಿಚಾರ ಮಾಡಲೂ ಬಾರದು. ನಮ್ಮ ರಾಷ್ಟ್ರ ನಿರ್ಮಾಣದ ಕಾರ್ಯವು ಬಹುಮುಖವಾಗಿದೆ. ಅದಕ್ಕೆ ನಿರ್ವಿಕಾರವಾದ ಮನಸ್ಸುಗಳ ಸತತಶೋಧನೆ ಬೇಕು. ನಮ್ಮ ಜನತೆಯ ಸಂಸ್ಕೃತಿಯ ನಿಧಿಯನ್ನಿನ್ನೂ ಹೊರಕ್ಕೆ ತರಬೇಕಾಗಿದೆ. ಇದೀಗ ಬೀಕಲಾಗಿ ಬಿದ್ದಿರುವ ನಮ್ಮ ರಾಷ್ಟ್ರೀಯ ಜೀವನವನ್ನು ಹರಗಿ ಹಸನು ಮಾಡಿ, ಅಲ್ಲಿ ಬೆಳೆದ ಕಳೆಕೊಳೆಗಳನ್ನೆಲ್ಲ ಕಿತ್ತುತೆಗೆದು, ನಮ್ಮ ಸಂಸ್ಕೃತಿಯ ನೈಜ–ನಿತ್ಯ–ಶುದ್ಧ ಸನಾತನ ತತ್ತ್ವಗಳನ್ನು ಮತ್ತೆ ಅಸರಲ್ಲಿ ಬಿತ್ತಿ, ಜೀವಂತವಾಗಿ ಬೆಳೆಯು[ವ] ಪೈರನ್ನು ತರಬೇಕಾಗಿದೆ; ನಮ್ಮ ಮುಂದಿನ ತಲೆಗಳಿಗಾಗಿ, ಸುತ್ತುಮುತ್ತಲಿನ ನಾಡಿನವರಿಗಾಗಿ ಒಂದು ಜೀವನ ಸಂದೇಶವನ್ನು ನಿವೇದಿಸಬೇಕಾಗಿದೆ. ಇದೊಂದು ವಿಶಾಲ ಸಾಹಸಕ್ಷೇತ್ರವು. ಇಲ್ಲಿ ದುಡಿದಷ್ಟು ಕಡಿಮೆ, ಆತ್ಮ ನಿರೀಕ್ಷಣೆ ಮಾಡಿದಷ್ಟು ಕಡಿಮೆ. ಆದರೀ ವಿಷಮ ಪರಿಸ್ಥಿತಿಯಲ್ಲಿ ಇದೆಲ್ಲಕ್ಕೂ ಎಡೆಯಿಲ್ಲದಾಗಿದೆ. ವಿಚಾರಶೀಲ ಯುವಕರ ಶಕ್ತಿಯು, ಒರೆಯಲ್ಲಿ ಜಂಗು ತಿನ್ನುವ ಕತ್ತಿಯಂತೆ, ಕೆಲಸಕ್ಕೆ ಬಾರದಾಗಿದೆ.

ಈ ಅಶಾಂತಿಗೆ ಕೊನೆಯಿಲ್ಲವೆ? ಈ ಕತ್ತಲೆಯಲ್ಲಿ ಬೆಳಕು ಮೂಡಲಾರದೇ? ಕರ್ಮದ ಗತಿಗೆ ತಡೆಯಿಲ್ಲ. ರಾಜಾ ಕಾಲಸ್ಯ ಕಾರಣಂ. ರಾಜನು ನಿರ್ಮಿಸಿದ ಈ ವೈಷಮ್ಯವನ್ನು ರಾಜನೇ ಸಮತ್ವಕ್ಕೆ ತರಬೇಕು. ಇಲ್ಲವಾದರೆ ಅಶಾಂತಿ ಅಸಂತೋಷಗಳು ತಮ್ಮ ಹಾದಿಯನ್ನು ಹುಡುಕಿಕೊಳ್ಳದೆ ಬಿಡವು.

ಪ್ರಕೃತ ರಾಷ್ಟ್ರಸೇವೋತ್ಸುಕರಾದ ತರುಣರು ತಮ್ಮ ನಾಡಿನ ಭವ್ಯಭವಿತವ್ಯದಲ್ಲಿ ತಮಗಿದ್ದ ಶ್ರದ್ಧೆಯನ್ನು ಕಳೆದುಕೊಳ್ಳದೆ, ಅದನ್ನು ಕಳೆಗೊಳಿಸಬೇಕು. ಭಾರತ ಭಾಗ್ಯವಿಧಾತನಲ್ಲಿ 'ತಮಸೋ ಮಾ ಜ್ಯೋತಿರ್ಗಮಯ' ಎಂದು ಅಂಗಲಾಚಿ ಬೇಡಿಕೊಂಡರೆ, ತಮ್ಮ ಗೇಣುದ್ದ-ಮುಳ್ಳುಗಳಿಂದ ತುಂಬಿದ – ಸೆರೆಮನೆಯೋಪಾದಿಯಲ್ಲಿರುವ ಗೂಡಿನಲ್ಲಿಯೂ ಭವಿಷ್ಯದ್ಭಾರತದ ಸಂಸಾರಕ್ಕೆ ಅಂಶರೂಪದಲ್ಲಿಯಾದರೂ ರೂಪಕೊಡುವ ಕಾರ್ಯವು ಅವರಿಗೆ ಸಿಕ್ಕದೆ ಇರಲಾರದು.



CC-0. Jangamwadi Math Collection. Digitized by eGangotri

೩೦ ವರ್ಷಗಳಿಂದಲೂ ಇಡೀ ಹಿಂದುಸ್ತಾನದಲ್ಲೆಲ್ಲ ಪ್ರಚಾರಹೊಂದಿದ ನಮ್ಮ ‘ ಎಗ್ಯೂಮಿಕ್ಚರ ’ ಅತ್ಯಂತ ಪರಿಣಾಮಕಾರಿ ಮತ್ತು ಸಹಾಯಕಾರಿಯುಂದು ಹೆಸರನ್ನೂ, ಮರ್ಯಾದೆಯನ್ನೂ ಗಳಿಸಿದೆ.




ಆದ್ದರಿಂದ ಏನೂ ಬೆಲೆ ಬೀಳದ ಇದನ್ನು ಒಮ್ಮೆ ಉಪಯೋಗಿಸಿ ನೋಡುವದು ಅವಶ್ಯವಾಗಿದೆ.

ಎಲ್ಲ ಔಷಧ ವ್ಯಾಪಾರಿಗಳಲ್ಲಿಯೂ ದೊರೆಯುವದು.

**ಕರ್ಣಿಕ ಬ್ರದರ್ಸ**

**ಮುಂಬಯಿ ೪.**

**ಬೇಕಾದಾಗ್ಗೆ, ಬೇಕಾದಲ್ಲಿ, ಬೇಕಾದಂತಹ,**
ನೆಗಡಿ ನೋವುಗಳಿಗೆ ಇದೊಂದೇ ಗುಣಕಾರಿಯಾದ
‘ ಬಾಮ್ ’




ತಿಕ್ಕಿದ ಐದಾರು ನಿಮಿಷದಲ್ಲಿಯೇ ಪರಿಣಾಮವು ತಿಳಿಯುವದು.
ನೀವು ಇದನ್ನು ಉಪಯೋಗಿಸಿರುವಿರೋ? ಇಲ್ಲದಿದ್ದರೆ ದಯವಿಟ್ಟು ಉಪಯೋಗಿಸಿ ಮನದಟ್ಟು ಮಾಡಿಕೊಳ್ಳಿ.

ಎಲ್ಲಕಡೆಗೂ ದೊರೆಯುತ್ತದೆ.

**ಕರ್ಣಿಕ ಬ್ರದರ್ಸ**

**ಮುಂಬಯಿ ೪.**



**GAIN YOUR HEALTH AND VIGOUR**

**THROUGH YOGIC CULTURE AND PHYSICAL EXERCISES.**

The folderwill give you a complete idea of my course. Send Three Annas stamps to cover postage. Enrol your name at once. Earlier the better.

**S. J. Bapat**

Health and Physical Culture Expert

[illegible]

**SWADESHI — MADE IN INDIA — SWADESHI**

# RAJA SNOW

**REGISTERED**




***Beautifies the Skin***

**ALL INDIA AGENTS**

**MANYAM & Co.**

***BELLARY.***

“ ರಾಜಾಸ್ನೋ ” ಮುಖಸೌಂದರ್ಯವನ್ನು ಹೆಚ್ಚಿಸುತ್ತೆ. ಹಿಂದುಸ್ಥಾನಕ್ಕೆಲ್ಲ ಎಜಂಟರು:—
ಮನಯಮ್ ಮತ್ತು ಕಂಪೆನಿ. ಬಳ್ಳಾರಿ.

CC-0. Jangamwadi Math Collection. Digitized by eGangotri

# ಪರಿವಿಡಿ

ವಿ. ಸೂ:— ಬರೆಹಗಾರರ ಹೆಸರುಗಳ ಹಿಂದೆ 'ಶ್ರೀಯುತ' ಎಂದು ಸೇರಿಸಿ ಓದಿಕೊಳ್ಳಬೇಕು.



## ಬೇಡಿಕೆ

ಕನ್ನಡ ಭಾಷಾಸೇವೆಯನ್ನು ಮಾಡುತ್ತಿರುವ ಮಹಾಶಯರಿಗೆ ಅರಿಕೆ ಮಾಡಿಕೊಳ್ಳುವದೇನಂದರೆ- ಸಪ್ತ ಪೂಜ್ಯ ಕರ್ನಾಟಕ ಭಾಷಾ ಭಾಂಡಾರಕ್ಕೆ ಮೂಲಧನಪ್ರಾಯವಾದ ಸಾಮಗ್ರಿಯನ್ನು ಒದಗಿಸಿಕೊಟ್ಟ ಪ್ರಾಚೀನ ಹರಿದಾಸರ ಚರಿತ್ರೆಗಳು ಇದುವರೆಗೂ ವಿಶದವಾಗಿ ಪ್ರಕಟಿಸಲ್ಪಟ್ಟಿಲ್ಲ. ಕಾಲಾಂತರದಿಂದ ಅವರ ಚರಿತ್ರೆಗಳಲ್ಲಿಯ ಹೆಚ್ಚಿನಾಂಶಗಳು ವಿಸ್ಮರಣವಾಗಿ ಈಗ ಒಂದೊಂದು ಮಹಾತ್ಮೆಯು ಮಾತ್ರ ಕಷ್ಟದಿಂದ ದೊರೆಯಬಹುದು. ಹೀಗೆಯೇ ಇನ್ನೂ ಕೆಲವು ಕಾಲ ಬಿಟ್ಟರೆ ಈಗಿರುವದೂ ಲೋಪವಾಗಿ ಅವರ ಅಸ್ತಿತ್ವದ ವಿಷಯವೇ ಸಂಶಯಾಗ್ರಸ್ತವಾಗಬಹುದು. ಆದ್ದರಿಂದ ಈಗಲಾದರೂ ಕಷ್ಟಬಟ್ಟು, ದೇಶದಲ್ಲಿ ಹರಡಿರುವ ಆ ಮಹನೀಯರ ಚರಿತ್ರೆಗಳನ್ನು ಕೇಳಿದಷ್ಟು ಕೂಡಿಸಿ ಅಚ್ಚು ಹಾಕಿ ಪ್ರಸಿದ್ಧಿಪಡಿಸಿದರೆ ಆಸ್ತಿಕ ಮಹನೀಯರಿಗೆ ಉಪಯೋಗವಾಗುವದು. ಆದ್ದರಿಂದ ಜ್ಞಾನಿಗಳಾದ ಆ ಹರಿದಾಸರ ವಿಷಯವಾದ ಯಾವ ಚರಿತ್ರೆಯನ್ನಾದರೂ ನಮ್ಮ ಕೆಳಗಿನ ವಿಳಾಸಕ್ಕೆ ದಯವಿಟ್ಟು ಕಳುಹಿಸಿ ಆ ಮಹಾತ್ಮರಾದ ದಾಸರ ಸೇವೆಯನ್ನೂ ಕನ್ನಡ ಭಾಷಾ ಸೇವೆಯನ್ನೂ ಮಾಡಿದ ಶ್ರೇಯೋಭಾಗಿಗಳಾಗುವದಲ್ಲದೆ ಮುಂದೆ ಅಚ್ಚಾಗುವ ಅವರ ಸಚ್ಚರಿತ್ರೆಗಳನ್ನೋದಿ ಆನಂದಪಡುವ ಭಾಗ್ಯಕ್ಕೂ ಅರ್ಹರಾಗುವರೆಂದು ನಂಬಿರುವ

ಸತ್ಕಾರ್ಯಾಭಿಲಾಷಿ.

ವಿಳಾಸ:— ಜಯಕರ್ನಾಟಕ ಆಫೀಸ ( ಸಾಧನಕೇರಿ. )

CC-0. Jangamwadi Math Collection. Digitized by ಭಾರವಾಡ



# ದೇವಾಲಯದಲ್ಲಿ

(ಮೈಸೂರಿನ 'ಲಲಿತಕಲಾಸಂಘ'ದವರ ಪ್ರದರ್ಶನದಲ್ಲಿ ಪ್ರಥಮ ಬಹುಮಾನವನ್ನು ಪಡೆದ ತ್ರಿವರ್ಣಚಿತ್ರ)

ಚಿತ್ರಶಿಲ್ಪಿ:— ಶ್ರೀ. ಎಂ. ವೀರಪ್ಪಾ ಮೈಸೂರು

CC-0. Jangamwadi Math Collection. Digitized by eGangotri




ಸಂಪುಟ ೧೦ | ಆಂಗಿರಸ ಸಂವತ್ಸರ, ಕಡಲೆಗಡಬಿನ ಹುಣ್ಣಿವೆ | ಸಂಚಿಕೆ ೯
ಚಾಲುಕ್ಯ ವಿಕ್ರಮ ವರ್ಷ ೮೫೭

# ಲಕ್ಷ್ಮೀಶ ಕವಿಯು ಚಿತ್ರಿಸಿರುವ ಸ್ತ್ರೀಪಾತ್ರಗಳು

ಲೇಖಕರು:—ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರು ಎಂ. ಎ. ಎಲ್ ಎಲ್. ಬಿ. ಬೆಂಗಳೂರು

**ಕವಿಯ ಮಹತ್ತ್ವ**—ಲಕ್ಷ್ಮೀಶನು ದೇವಾಯತ್ತವಾದ ಕವಿತಾಪ್ರೌಢಿಮೆಯನ್ನು ಪಡೆದಿದ್ದ ವರಕವಿ. ಕರ್ಣಾಟಮಾತೆಯ ಕಂಠಹಾರದಲ್ಲಿ ಮಿನುಗುವ ದಿವ್ಯಮಣಿಗಳಲ್ಲಿ ಅವನ ಗ್ರಂಥವೂ ಒಂದೆನ್ನಲು ಅಡ್ಡಿಯಿಲ್ಲ. ಪಂಡಿತರೂ, ಪಾಮರರೂ, ಉಭಯತ್ರರೂ ಪ್ರೀತಿಸಿ ತಲೆದೂಗಿದ ಗ್ರಂಥಗಳೆಂದರೆ ಲಕ್ಷ್ಮೀಶ ಕುಮಾರವ್ಯಾಸರ ಗ್ರಂಥಗಳೇ. ಆದಕಾರಣ ಲಕ್ಷ್ಮೀಶನೂ, ಕುಮಾರವ್ಯಾಸನೂ ಉದ್ದಾಮಕವಿಗಳಾಗಿರುವುದರ ಜತೆಗೆ ಭಾಗ್ಯಶಾಲಿಗಳಾದ ಪುಣ್ಯಪುರುಷರೂ ಅಹುದು. ಹಳ್ಳಿಗಳ ಹುಲ್ಲುಗುಡಿಸಿಲುಗಳಿಂದ ಹಿಡಿದು ಪಟ್ಟಣಗಳ ಸೌಧಮಾಲೆಗಳವರೆಗೂ ಸರ್ವಾದರಣೀಯವಾಗಿ, ಸಾರ್ವತ್ರಿಕವಾಗಿ ಸನ್ಮಾನವನ್ನು ಪಡೆದೂ ಪಡೆಯುತ್ತಲೂ ಇರುವ ಉದ್ಗ್ರಂಥಗಳನ್ನು ಬರೆದ ಕವಿಗಳಾದ ಈ ಇರ್ವರಿಗೂ, ಇತರ ಕವಿಶ್ರೇಷ್ಠರೊಡನೆ ಸಾರಸ್ವತಸಾಮ್ರಾಜ್ಯದಲ್ಲಿ ಚಿರಜೀವಿಪಟ್ಟವು ಸಿದ್ಧವಾಗಿಯೇ ಇದೆ. 'ನಮ್ಮ ಹುಡುಗ ಜೈಮಿನಿ ಓದಿಬಿಟ್ಟರೆ ಸಾಕು' ಎಂಬುದೇ ಹಿಂದೆ ಮನೆಮನೆಯಲ್ಲಿಯೂ ಹಳ್ಳಿಯವರು ಕಾಣುತ್ತಿದ್ದ ಹಗಲುಕನಸು. ಜೈಮಿನಿಭಾರತವನ್ನು ಓದಿಸಿ ಕೇಳಿ, ಆನಂದದಿಂದ ಮೈಮರೆದು ನಲಿದಾಡಿ, ಕಾವ್ಯದ ಕೆಲಕೆಲವು ಘಟ್ಟಗಳು ಸಾಗಿದ ದಿನ 'ಮಂಗಳೋತ್ಸವ'ವನ್ನು ಮಾಡಿಸಿ ಅದರಿಂದ ಧನ್ಯರಾದೆವೆಂದು ಹಿಗ್ಗುತ್ತಿದ್ದುದೇ, ಹಳ್ಳಿಯವರು ಲಕ್ಷ್ಮೀಶನಿಗೆ ಮುಗ್ಧಹೃದಯದಿಂದ ಸಮರ್ಪಿಸುತ್ತಿದ್ದ ಮೆಚ್ಚಿನ ಕಾಣಿಕೆ. ಅದನ್ನು ಪಡೆದ ಕವಿಯೂ ಧನ್ಯನು. ಅದನ್ನು ಸಮರ್ಪಿಸುತ್ತಿದ್ದ ಮಹಾಜನರೂ ಧನ್ಯರು. [*]ಕವಿತಾಧೋರಣೆ, ಶಬ್ದಸೌಷ್ಠವ, ಪ್ರತಿಭೆಯ ಸಂಪತ್ತು, ಕಥೆಯನ್ನು ಹೇಳುವ ಜಾಣ್ಮೆ, ಪಾತ್ರರಚನಾವೈಖರಿ, ಪಾಂಡಿತ್ಯಪ್ರದರ್ಶನದ ವಿನ್ಯಾಸ, ಇವುಗಳೆಲ್ಲದರಲ್ಲಿಯೂ ಲಕ್ಷ್ಮೀಶನ ಜೈಮಿನಿ

ವಿ. ಸೂ. ಈ ಪ್ರಬಂಧವು ಚಿಕ್ಕಮಗಳೂರು ಕರ್ಣಾಟಕಸಂಘದವರು ಪ್ರಕಟಿಸಬೇಕೆಂದಿರುವ ಲಕ್ಷ್ಮೀಶಕವಿಕಂಠಾಭರಣವೆಂಬ ಪುಸ್ತಕದಲ್ಲಿ ಬರುವುದಿದೆ. ಸಂ. ಜ.

CC-0. Jangamwadi Math Collection. Digitized by eGangotri

ಮಾತನಾಡಿದ್ದರೂ ಅವಳ ಮಾತುಗಳು ಕಠಾರಿಯ ಇರಿತಕ್ಕಿಂತಲೂ ತೀಕ್ಷ್ಣವಾಗಿವೆ. ಒಂದು ರೀತಿಯಲ್ಲಿ ನೋಡಿದರೆ, ಅಭಿಮಾನಶಾಲಿನಿಯೂ ಶ್ರೀಕೃಷ್ಣನ ಮಡದಿಯೆಂಬ ದರ್ಪವುಳ್ಳ ಪ್ರೌಢೆಯೂ ಆದ ಸತ್ಯಭಾಮೆಯು, ತನ್ನ ಗಂಡನ ಸೋಲಿನಿಂದ ಮನನೊಂದು ಅವನನ್ನು ಆ ರೀತಿ ಜರಿದುದೇನೂ ತಪ್ಪಲ್ಲ; ಏಕೆಂದರೆ ವೃಷಕೇತುವು ಯುದ್ಧಕ್ಕೆ ಹೊರಟಾಗ ಅವನ ಪ್ರಿಯಕಾಂತೆಯು ಅವನನ್ನು ರಣಭೂಮಿಗೆ ಕಳುಹಿಸಿ ಬೀಳ್ಕೊಡುವಾಗಿನ ಅವಳ ಮಾತುಗಳೇ ಇದಕ್ಕೆ ಕಾರಣವನ್ನು ಹೇಳುತ್ತವೆ. 'ಮುರಹರನ ರಾಣಿಯರ್ಧುರಧೀರ ಕರ್ಣಸುತ । ನರಸಿಯೆಂದೆನ್ನ ಪೊಗಳ್ವಂತೆ ವಿಗೆ ಸಂಗರದೊ । ಳರಿಗಳಂ ಗೆಲ್ವುದೆಂದಾರತಿಯನೆತ್ತಿ ಮುತ್ತಿನ ಸೇಸೆಗಳನೆ ಸೂಸಿ ॥ ಭರದಿಂದ ಬಂದಪ್ಪಿದಂಗನೆಯ ಮೊಗ ನೋಡಿ । ಕುರುಳ್ಗಳನುಗುರ್ಗಳಿಂ ತಿದ್ದಿ ಮುದ್ದಿಸಿ ತನ್ನ । ಬೆರಳುಂಗುರಂಗೊಟ್ಟು ಸಂತೈಸಿ ವೃಷಕೇತು ಕಾಂತೆಯಂ ಬೀಳ್ಕೊಂಡನು ॥' ಅವರಿಬ್ಬರೂ ಚಿಕ್ಕ ವಯಸ್ಸಿನ ದಂಪತಿಗಳು. ವೃಷಕೇತುವಿನ ಪತ್ನಿಯು 'ಬೆರಳುಂಗುರಂಗೊಟ್ಟು' ಸಂತೈಸುವುದಕ್ಕರ್ಹವಾದ–ಇನ್ನೂ ಬಾಲಕೀಯಭಾವವು ಕಳೆದು ಹೋಗಿಲ್ಲದ–ಸ್ಥಿತಿಯಲ್ಲಿದ್ದಾಳೆ. ಹಾಗಿದ್ದೂ 'ಧುರಧೀರ ಕರ್ಣಸುತನರಸಿಯೆಂದು' ಮುರಹರನ ರಾಣಿಯರು ತನ್ನನ್ನು ಹೊಗಳುವಂತೆ ಶತ್ರುಗಳನ್ನು ಗೆದ್ದು ಬರಬೇಕೆಂದು ಈ ಮುಗ್ಧೆಯೇ ಆಶಿಸುವಲ್ಲಿ ಪ್ರೌಢೆಯಾಗಿ ಶ್ರೀಕೃಷ್ಣನ ಪ್ರಿಯ ರಮಣಿಯೆಂಬ ಹೆಮ್ಮೆಯಿಂದ ಸಂತಸಪಡುತ್ತಿದ್ದ ಸತ್ಯಭಾಮಾದೇವಿಯ ಆಶೋತ್ತರಗಳು ಮತ್ತೆಷ್ಟು ಹೆಚ್ಚಿನವಾಗಿರಬೇಕು ! ಹಸುಗೂಸಿನ ಹಾರೈಕೆಯೇ ಅಷ್ಟು ದೊಡ್ಡದಾಗಿರುವಲ್ಲಿ ಮಹಾಮಾನಿನಿಯ ಹಾರೈಕೆಯು ಮತ್ತೆಷ್ಟು ಹೆಚ್ಚಿನದಾಗಿರಬೇಕು ! ತನ್ನ ಆಶೆಗಳೆಲ್ಲಾ ಕನಸಿನಂತೆ ಬಯಲಾದುದನ್ನು ಕಂಡು ಅವಳು ಆ ರೀತಿ ಶ್ರೀಕೃಷ್ಣನನ್ನು ಜರಿದುದರಲ್ಲಿ ಆಶ್ಚರ್ಯವೇನು ? ಶ್ರೀಕೃಷ್ಣನೂ ಅವಳ ಮಾತುಗಳಿಗೆ ಅಪಾರ್ಥ ಮಾಡಿಕೊಳ್ಳುವುದಿಲ್ಲ. ತನ್ನ ಪ್ರಿಯಕಾಂತೆಯ ಇಂಗಿತವನ್ನರಿತು ಅವನು ಒಡನೆಯೇ ಮತ್ತೆ ಯುದ್ಧಕ್ಕೆ ಹೊರಡಲನುವಾಗುವನು. ಲಾವಣ್ಯಮಯಿಯಾಗಿ, ಪ್ರೇಮಮಯಿಯಾಗಿ, ಶೌರ್ಯಪ್ರಿಯೆಯಾಗಿರುವ ಸತ್ಯಭಾಮಾದೇವಿಯಲ್ಲಿ ನಮಗೆ ಹೃತ್ಪೂರ್ವಕವಾದ ಗೌರವವು ಹುಟ್ಟುವುದು.

**ಜ್ವಾಲೆ—** ಜ್ವಾಲೆಯು ಕ್ಷಾತ್ರತೇಜಃಪುಂಜವೆನಿಸಿ ಮೆರೆದ ವೀರವನಿತೆ. ಒಂದೆರಡು ಸನ್ನಿವೇಶಗಳನ್ನು ಚಿತ್ರಿಸುವುದರಿಂದಲೇ ಜ್ವಾಲೆಯ ನಿಜಸ್ವಭಾವವು ನಮಗೆ ಉಜ್ಜ್ವಲವಾಗಿ ಗೋಚರವಾಗುವಂತೆ ಕವಿಯು ತನ್ನ ಕೈಚಳಕವನ್ನು ತೋರಿಸಿದ್ದಾನೆ. 'ಜ್ವಾಲೆ ನಿಜಕಾಂತನಂ ಛಲದಿಂದ ಬಿಟ್ಟು ತ । ನ್ನಾಲಯದೊಳಿರದೆ ಪೊರಮಟ್ಟು ಬಂದರ್ಜುನನ । ಮೇಲೆ ತಂತ್ರವನೆಸಗಿ ಶಾಪಮಂ ಕೊಡಿಸಿದಳ್ದೇವನದಿಯಂ ಕೆರಳ್ಚಿ ॥' ಎಂಬ (ಒಂಬತ್ತನೆಯ ಸಂಧಿಯ) ಪೀಠಿಕಾವಚನವನ್ನೋದಿದಾಗ ಜ್ವಾಲೆಯು ಎಂತಹ ಕೆಟ್ಟ ಹೆಂಗುಸೆಂದು ನಮ್ಮ ಮನಸ್ಸಿಗೆ ಒಂದು ಬಗೆಯ ಅಸಮಾಧಾನವಾಗುವುದು. ಆದರೆ ಕ್ಷಾತ್ರತೇಜದಿಂದ ತುಂಬಿರುವ ಆ ವೀರರಮಣಿಗೆ ಹೇಡಿಯಾದ ನೀಲಧ್ವಜನು ಪತಿಯಾದುದರಿಂದ ಉಂಟಾದ ಅನರ್ಥ ಪರಂಪರೆಗಳನ್ನು ನೋಡಿ ನಮ್ಮ ಅಂತಃಕರಣವೇ ಮರುಕದಿಂದಲೂ, ಅನುತಾಪದಿಂದಲೂ ಕರಗಿ ಹೋಗುವುದು. ಅನಿರ್ವಚನೀಯವಾದೊಂದು ಬಗೆಯ ದೈನ್ಯಭಾವದಿಂದ ಕೂಡಿ, ನಾವು ನಿಟ್ಟುಸಿರಿನ ಕಾಣಿಕೆಯನ್ನರ್ಪಿಸುವಂತಾಗುವುದು. ಜ್ವಾಲೆಗೆ ಅನುರೂಪನಾದ ಪತಿಯು ದೊರೆಯದಂತೆ ಮಾಡಿ, ವಿಧಿಯೂ ಅವಳಿಗೆ ಮೋಸ ಮಾಡಿತು. ಶೌರ್ಯಹೀನನಾದ ಹೇಡಿ ನೀಲಧ್ವಜನು ಅರ್ಜುನನ ಪ್ರತಾಪಕ್ಕೆ ಹೆದರಿ ಯಜ್ಞದ ತುರಗವನ್ನು ಬಿಟ್ಟುಕೊಡಲು ಸಿದ್ಧನಾಗಿ ಆ ಮಹತ್ಕಾರ್ಯನಿರ್ವಹಣೆಗಾಗಿ ಮಂತ್ರಿಗಳನ್ನು ಕರೆಯಿಸುವನು. ಮಾನ ಹೋಗುವುದೆಂಬ ಯೋಚನೆಯೂ ಅವನಿಗಿಲ್ಲ. ಮಂತ್ರಿಗಳೂ ಅವನಿಗೆ ತಕ್ಕವರೆ ! ಹೇಳಿದುದೆಲ್ಲಾ ಹಸಾದವೆನ್ನುವ ಸಚಿವರು. ಆಗ ಜ್ವಾಲೆಯು ಆ ವಾರ್ತೆಯನ್ನು ಕೇಳಿ ಅಲ್ಲಿಗೆ ಬಂದು 'ಸಿತವಾಹನಂಗೀಯದಿರ್ಕುದುರೆಯಂ ಬೆದರದಿರನುತ' ತಡೆಯುವಳು. ನೀಲಧ್ವಜನಿಗೆ ಶತ್ರುವಿನೊಡನೆ ಕಾದಲು ಮನಸ್ಸಿಲ್ಲ. ತೇಜಸ್ವಿನಿಯಾದ ರಾಣಿಯ ಮಾತಿಗೆ ಎದುರು ಹೇಳುವ ಧೈರ್ಯವಿಲ್ಲ. ಆದುದರಿಂದ 'ರಾಣಿಯ ನಿರೂಪಮಂ ತಲೆಗೊಳಾಂತು' ಯುದ್ಧವಿಲ್ಲದೆ ಕುದುರೆಯನ್ನು ಬಿಡಲೊಲ್ಲೆನೆಂದು ಅರ್ಜುನನಿಗೆ ಹೇಳಿಕಳುಹಿಸುವನು. ಆದರೇನು ? ಯುದ್ಧದಲ್ಲಿ ನೀಲಧ್ವಜನು

CC-0. Jangamwadi Math Collection. Digitized by eGangotri

ಸೋತು ಹೋಗುವನು. ಆಗಿನ ಅವನ ಹೀನಗುಣವನ್ನೂ ಹೇಯವರ್ತನೆಯನ್ನೂ ನೋಡಿ: 'ನಿನ್ನೆ ಪಾರ್ಥನ ಹಯವನಾತಂಗೆ ಬಿಡಲೀಯ । ದೆನ್ನ ಕೆಡಿಸಿದೆಯಲಾ ಪಾತಕಿಯೆ ಸುತರಳಿದ ।ರಿನ್ನೇನು ಘಾತಕಿಯೆ ಮತ್ಕುಲ ಕಸಿಸ್ಟೆ ನೀನತಿಕಷ್ಟೆ ಪೋಗು ದುಷ್ಟೇ॥ ಎನ್ನರಮನೆಯೊ ಳಿರದಿರೆಂದಾಗಳಾ ಜ್ವಾಲೆ।ಯಂ ನೀಲಕೇತು ಧಟ್ಟಿಸಿ ಬೈದು ಒಳಿಕಪ್ಪ । ಮಂ ನರನೆಡೆಗೆ ಕಳುಪಿ ತಾನಾಕಿರೀಟಿಯಂ ಕಾಣಲ್ಕೆ ಪೊರಮಟ್ಟನು ॥' ಜ್ವಾಲೆಯ ಆಗಿನ ಅವಸ್ಥೆ ಯನ್ನು ಹೇಳತೀರದು. ಯುದ್ಧದಲ್ಲಿ ಮಕ್ಕಳು ಮೃತರಾ ದುದಕ್ಕಾಗಿ, ಹೆತ್ತ ಹೊಟ್ಟೆಯ ದುಃಖವನ್ನು ಸೈರಿಸ ಬೇಕೆ ? ಶೂರರ ಶೂರತೆಯಿಂದ ರಣಭೂಮಿಯೇ ಮತ್ತ ವಾದಂತೆ ತೋರುತ್ತಿದ್ದ ಆಗಿನ ವೀರಯುಗದ ವರ್ಚಸ್ಸೇ ಇಲ್ಲದೆ ಹೇಡಿಯಾಗಿ ಶತ್ರುವಿಗೆ ಶರಣಾಗತನಾಗಲು ಹವ ಣಿಸಿಕೊಳ್ಳುತ್ತಿದ್ದ ಪತಿಯ ಹೇಯವರ್ತನೆಯ ಯಾತನೆ ಯನ್ನು ಸೈರಿಸಬೇಕೆ ? ಹೇಡಿಯಾದ ನೀಲಧ್ವಜನು ಸವ್ಯ ಸಾಚಿಗೆ ಕಾಣಿಕೆಯಾಗಿ '....... ಅಮಲಮಣಿಮಂಡನಾ ದಿಗಳಂ ವಿವಿಧ ದುಕೂಲಂಗಳಂ ಪಿಂಡಾಕಳಂ ಮಹಿಷಿಗಳ ನುತ್ತಮ ಸ್ತ್ರೀಯರಂ ಗಜಹಯಾದಿಗಳನು ಭಂಡಾರ ದರ್ಥಮಂ ಗುಡತೈಲಧಾನ್ಯಗಳ ಬಂಡಿಗಳ ಮೇಲೆ ತುಂಬಿಸಿ' ಕೊಂಡು ಬಂದು ಪಾರ್ಥನ ಅಡಿದಾವರೆಗಳಿಗೆ ಸಮರ್ಪಿಸಿ ಧನ್ಯನಾದೆನೆಂದು ಹಿಗ್ಗಿ, ಅವನು ತೋರಿಸಿದ ಮನ್ನಣೆಯಿಂದ ಮೈಮರೆತು ಅವನೊಡನೆ ಹೊರಟೇ ಹೋಗುವನು. ಇತ್ತ ಒರಿದಾದ ಅರಮನೆಯಲ್ಲಿರಲಾರದೆ, ಮನದಳಲನ್ನು ತಾಳಲಾರದೆ,ಛಲಗಾತಿಯಾದ ಜ್ವಾಲೆಯು ಅರ್ಜುನನೊಡನೆ ಕಾದುವಂತೆ ತನ್ನ ತಮ್ಮನಾದ ಉನ್ಮು ಖನನ್ನು ಪ್ರೇರಿಸಲು ಹೊರಟು ಹೋಗುವಳು. '.... ಛಲುಗುಣಂ । ಮ ಸ್ಮ ಸೋ ೯ ರ ಥವೆ ಲ್ಲ ಮ ೦ ಕೆಡಿಸಿ ಮಕ್ಕಳಂ ಕೊಂದು ಪತಿಯಂ ಗೆಲ್ದನು ॥ ತನ್ಮರಣ ಕೊಂದುಪಾಯಂವನೆಸಗದಿರಲಿನ್ನ । ಜನ್ಮವೇತಕೆ ನಿನ್ನ ದೆಸೆಯಿಂದ ನರನ ಎಲ । ಸನ್ಮೌಳಿಮಸ್ತಕವನರಿಸದಿರೆ' ನೆಂದು ಹೇಳುವಳು. ಉನ್ಮುಖನು ನೀಲಧ್ವಜನನ್ನು ವಿರೋಸಿದ ಅಂಜುಕುಳಿ. ಅವನು ಕಠಿನಾತ್ಮನಾದ ನಿಷ್ಠುರಹೃದಯನೂ ಅಹುದು. ದೂರದಿಂದ ದಣಿದು ಬಂದ ತಂಗಿಯ ದುರವಸ್ಥೆಗಾಗಿ ಅನುಕಂಪವನ್ನೇ ತೋರಿಸದೆ ಅವಳನ್ನು ಹೊರದೂಡುವ ಬಗೆಯನ್ನಾದರೂ ನೋಡಿ: 'ವಾಯುಕರ್ಜುನನ ತಲೆ ಬಿದ್ದಪುದೆ ಕೃಷ್ಣನ ನ । ಹಾಯುವಿರಲೆಲೆ ಮರುಳೆ ಹರಿಯ ಹಗೆಗೊಂಡು ಕೆಡು । ವಾಯಸಂ ತನಗೇಕೆ ರಾಘವಂ ಮಾಡಿದುಪಹ ತಿಯಿಂ ದಶಾನನಂಗೆ॥ ದಾಯಮಂ ಪೇಳ್ದವನ ವಂಶಮಂ ನವರಿಸಿದ । ಮಾಯಕಾತಿಯ ಪೊಲೆನ್ನಾಲಯಕೆ ಬಂದೆ ನಗ । ಸಾಯುಮಂ ತಾರದಿಲ್ಲಿಂದ ಪೋಗೆಂದವಳನು ಸ್ಮುಖಂ ಕೋಪಿಸಿದನು ॥' ಶೋಕಸಂತಪ್ತಳಾಗಿ ಬಂದ ತನ್ನನ್ನು ಧರ್ಮವಿರುದ್ಧವಾದ ಕಾಮದಿಂದ ಪೀಡಿತ ಳಾಗಿ ಪರಿಭವಕ್ಕೆ ಗುರಿಯಾದ ಶೂರ್ಪನಖಿಗೆ ಹೋಲಿಸಿ, ಮಾಯಕಾತಿಯಾದ ಆ ರಕ್ಕಸಿಯಂತೆ ವಂಶವನ್ನು ಹಾಳುಮಾಡಲುದ್ಯುಕ್ತೆಯಾಗಿದ್ದುದಾಗಿ ನಿಂದಿಸಿದ ತಮ್ಮನ ಮಾತುಗಳನ್ನು ಕೇಳಿ ಜ್ವಾಲೆಗುಂಟಾದ ಹೃದಯವೇದನೆಯನ್ನು ವರ್ಣಿಸಲಳವಲ್ಲ. ಮಕ್ಕಳ ಮರಣದಿಂದಲೂ ಗಂಡನ ಅವಜ್ಞತೆಯಿಂದಲೂ ತಮ್ಮನ ದುರ್ಭಾಷೆಯಿಂದಲೂ ಅವಳಿಗೆ ತನುಮನಗಳೂ ಕೊನೆಗೆ ಬಟ್ಟು ಪ್ರಪಂಚವೂ ಶೂನ್ಯವೆನಿಸಿದುವೆನ್ನಲು ಅಡ್ಡಿಯಿಲ್ಲ. ಆಗ ಅವಳ ಮನಸ್ಸಿನಲ್ಲಿದ್ದುದು ಅರ್ಜುನನ ಮೇಲಣ ದ್ವೇಷಸಾಧನೆಯ ಛಲವೊಂದೇ. ತನ್ನ ಜೀವನವೇ ತನಗೆ ಭಾರವಾಗಿ ತೋರುತ್ತಿರುವ ಆಗಿನ ಸ್ಥಿತಿಯಲ್ಲಿ ಕೂಡ, ಜ್ವಾಲೆಯು ದ್ವೇಷಸಾಧನೆಯ ವಿಚಿತ್ರಮಾರ್ಗವೊಂದನ್ನು ನಿರ್ಧರಿಸುವಳು. ತಮ್ಮನ ಮನೆಯಲ್ಲಿರುವುದಕ್ಕೂ ಸಮ್ಮ ತಿಸದೆ ಅವಳು ಗಂಗಾತೀರಕ್ಕೆ ಒರುವಳು. ಗಂಗೆಯ ನೀರು ತನ್ನ ಮೈಗೆ ಸೋಕದಂತೆ ಗಂಗಾನದಿಯನ್ನು ದಾಟಿಸ ಬೇಕೆಂದು ಅಂಬಿಗರಿಗೆ ಹೇಳುವಳು. 'ಧಾರ್ಮಿಕರದ ರೊಳಂಟೆ ತನ್ನನೆಂತಾದೊಡಂ । ನೀಮುರ್ಮುಟ್ಟದಂತೊಯ್ಯ ನಾ ತಡಿಗೆ ದಾಂಟಿಸುವ । ಕೂರ್ಮೆಯುಳ್ಳವರ್' ಎಂದು ಜ್ವಾಲೆಯು ಕೇಳಿದ ಪ್ರಶ್ನೆಯ ಆಶಯವು 'ಬಿಂದು ಮಾತ್ರಂ ಮೇಲೆ ಬೀಳಲ್ಕೆ ವಿಪ್ರನಂ । ಕೊಂದ ಪಾಪಂ ಪೋಪುದಿಲ್ಲ ವಿಂದವನ ಗತಿ ।ಯಿಂದಮಂ ಬಣ್ಣಿಸುವುದ ಒನ ಪವಣಲ್ಲ'ವೆಂದು ನಂಬಿಕೊಂಡಿರುವ ಆ ಅಂಬಿಗರಿಗೆ ತಿಳಿಯುವಂತಿಲ್ಲ. 'ಗಂಗಾಂಬುವಂ ಮುಟ್ಟದಿರಬಹುದೆ ಪೇಳೆಂದೊಡೆ' ಆ ಮಾತನ್ನು ಕೇಳಿ ಜಾಹ್ನವಿಗೆ ದೋಷ ವೊಂದಿರುವುದೆಂದೂ ಜಾಹ್ನವಿಯೇ ಮೈದೋರಿದರೆ ಅದನ್ನು ತಾನು ತಿಳಿಸುವುದಾಗಿಯೂ ಜ್ವಾಲೆಯು ಉತ್ತರ ಹೇಳುವಳು. 'ಅಜನ ಕರಪಾತ್ರದಗ್ರೋದಕ'



CC-0. Jangamwadi Math Collection. Digitized by eGangotri

ಸ್ಯಗತಿರ್ನಾಸ್ತಿ' ಎಂಬ ಹೇಳಿಕೆಯಲ್ಲಿ ಅಂದಿನವರಿಗೆ ಪೂರ್ಣಶ್ರದ್ಧೆಯಿದ್ದಿತು. ಆದಕಾರಣ, ಪ್ರಭಾವತಿಯು ಸುಧನ್ವನ "ಗಮನಕನುಕೂಲೆಯಾಗದೆ" ಆ ರೀತಿ ಮಾಡಿದಳು. ಇಷ್ಟರಮೇಲೂ ಅವಳ ಮೇಲೆ ವಿಷಯಾತುರೆಯೆಂಬ ಆಕ್ಷೇಪವನ್ನೆ ಹೊರಿಸುವುದಾದರೆ ಅದಕ್ಕೂ ಸಮಾಧಾನವುಂಟು. ಮನುಷ್ಯದೃಷ್ಟಿಯಲ್ಲಿ ಅಂದೇ ಅವರ ಕೊಟ್ಟಕೊನೆಯ ಸಮಾಗಮ. ಪ್ರಭಾವತಿಯು ಅಲ್ಲಿಂದ ಮುಂದೆ-ನಾನು ಪತಿಯನ್ನು ಕಾಣುವುದು ಸ್ವರ್ಗದಲ್ಲೇ ಎಂದು ಶಂಕಿಸಲು ಕಾರಣವುಂಟು. ಸುಧನ್ವನು 'ಹಂಸಧ್ವಜನ ಮೋಹದ ಕುಮಾರ' ನಾಗಿರುವಂತೆಯೇ ಪ್ರಭಾವತಿಯ ನೇಹದ ರಮಣನೂ ಆಗಿದ್ದಾನೆ. ಅಲಂಕಾರ* ಪ್ರಿಯನಾದ ಸುಧನ್ವನು ಯಥೋಚಿತವಾದ ವೇಷಭೂಷಣಗಳಿಂದ ಕೂಡಿಬಂದುನಿಲ್ಲುವ... ಚಿನ್ನದ ಹರಿವಾಣದಲ್ಲಿ ಸಂಪಗೆಯ ಹೂಗಳನ್ನಿಟ್ಟು... ಕೊಂಡು "ಕರಯುಗದೊಳಾಂತ ಪೊಂದಟ್ಟೆಯನವ... ಮೇಲೆ। ಪರಪಿರ್ದ ಸಂಪಗೆಯ ಪೂಗಳಂ ತನ್ನ ಮೈ... ಯೊರೆಗೆ ಸರಿಯಾದಪವೆ ನೋಡೆಂದು ತೋರ್ಪಂತೆ ಕೊಂಡು ಬಂದಿದಿರೆ ನಿಂದ" ತರುಣಿಯನ್ನು ಸುಧನ್ವನು ಕಡೆಗಣ್ಣಿನಿಂದ ಮೆಲ್ಲಗೆ ನೋಡಿ ಮೃದುವಾಗಿ ನಗುವನು... ಶೃಂಗಾರಲೋಲನಾದ ಸುಧನ್ವನ ಆ ಮಂದಸ್ಮಿತಕ್ಕೆ ಪ್ರಭಾವತಿಯ ಚಿತ್ತದ ಬೇನೆಬಲೆಯಾದುದರಲ್ಲಿ ಆಶ್ಚರ್ಯವೇನು? ಅಂತೂ, ಕವಿಯು ಪ್ರಭಾವತಿಯ... ಸಂಸಾರಸುಖದ ಸೊಗಸಿನ ಚಿತ್ರವನ್ನು ಕಪ್ಪು... ಮನೋಜ್ಞವಾಗಿ ಪಾತ್ರರಚನೆಮಾಡಿದ್ದಾನೆ.

(ಮುಂದುವರಿಯುವುದು)

# ಗಾಳಿಯ ಪಟವಾಡುತಲಿಹುದು !

(ರಾಘವ, ಮೈಸೂರು)

ನೀಲಿಯ ಬಣ್ಣದ ಗಾಳಿವಟ್ಟೆಯಲಿ
ರೆಕ್ಕೆಯಿಲ್ಲದಿಹ ಹಕ್ಕಿಯ ತೆರದಲಿ
ಒಕ್ಕಡೆ ಅಲುಗದೆ ನಿಂತ ನಿಲುವಿನಲಿ
ಗಾಳಿಯ ಪಟವಾಡುತಲಿಹುದು ! ॥ ೧ ॥

ಪಟವಲ್ಲವದು ! ಅದು ಪಟವಲ್ಲ !–
ಬಾಲರ ಕನಸಲಿ ಸುಳಿಸುಳಿದಾಡುವ
ಲೀಲೆಯಲಡಗಿಹ ಬಯಕೆಯ ಬಂಬವ್ರ-
ಗಾಳಿಯ ಪಟವದು ಆಡುತಿದೆ! ॥ ೨ ॥

ಎಳೆತನದಲಿ ನಾ ಪಟವಾಡಿಸಿದೆ;
–ಸುಳಿದಾಡುತ್ತಿದೆ ಬಗೆಬಾನಿನಲಿ
ಬೆಳೆಯುವ ಬಾಳಿನ ಬಯಕೆಯ ಬಿಂಬವ್ರ–
ಬಾಳಿನ ಪಟವಾಡುತಲಿಹುದು ! ॥ ೩ ॥

ಗಾಳಿಯ ವೇಗವು ಮಿತಿಮೀರಿತು ಬಲು;
ಬೀಳುತಲಿದೆ ಪಟ ಬಾಂದಳದಲ್ಲಿ;
ಏಳುತ ಬೀಳುತ ತೂಗಾಡುತಲಿದೆ;–
ಪಟದಾಟವು ಮುಗಿದುದು ಏನೋ ! ॥ ೪ ॥

ವಿಧಿಯಾಟವು ಬೀಸುವ ಬಿರುಗಾಳಿ–
ಅದರಲಿ ಬಯಕೆಯ ಪಟ ಸಿಲುಕಿಹುದು;
ಅದು ಮೇಲೇರದೆ ?–ಬೀಳದೆ ಇಹುದೆ ?
ಪಟದಾಟವ ಕಂಡಿಹರಾರು ? ॥ ೫ ॥

ದಾರಕೆ ಸಡಿಲನು ಬಿಟ್ಟೊಡನಲ್ಲಿ
ಭಾರವ ಹಾಕುತ ಗಾಳಿಯ ಮೇಲೆ–
ಹಾರಿತು ಮೇಲಕೆ; ಹಕ್ಕಿಯ ವಿಧಿ–
ಗಾಳಿಯ ಪಟವಾಡುತಲಿಹುದು ! ॥ ೬ ॥

---

* ಪನ್ನೀರ ಮಿಂದು ದಿವ್ಯಾಂಬರವನುಟ್ಟು ಬಾ।
ವನ್ನದಿಗುರಂ ಗೈಯ್ದು ಕಮ್ಮಲರ್ಗಳಂ ಸೂಡಿ।
ಸನ್ನುತ ಸುಯಕ್ಷಕರ್ದಮವನನುಕರಿಸಿ ಕಸ್ತೂರಿ ತಿಲಕವಿಟ್ಟು ಹಣೆಗೆ ॥
ರನ್ನದೊಡವುಗಳನನುಕರಿಸಿ ನೀಳೆಯುಗೊಂಡು
ತನ್ನನುಳುಹಿದ ದೇವಪುರದ ಲಕ್ಷ್ಮೀಪತಿಯ।
ನಿನ್ನು ಕಂಡಪೆನೆಂಬ ಹರುಷದಿಂ ಕಳೆಯೇರಿ ಮೆರೆದಂ ಸುಧನ್ವನಂದು ॥
ಎಂಬ ಪದ್ಯದಿಂದ ಅವನು ಅಲಂಕಾರಪ್ರಿಯನೆಂದು ವ್ಯಕ್ತವಾಗವುದು.

CC-0. Jangamwadi Math Collection. Digitized by eGangotri

# 'ಸೋಶಾಲಿಝಂ' ಅಥವಾ ಸಮತಾವಾದ

ಲೇಖಕರು:— ಶ್ರೀ. ಮುನವಳ್ಳಿ ಶಾಮರಾಯರು ಎಲ್ ಎಲ್. ಬಿ. ಅಥಣಿ

ಭೂಪಟದ ಮೇಲಿನ ಯಾವ ಜನಸಮೂಹವನ್ನು ನಿರೀಕ್ಷಿಸಿದರೂ ಅದು ಒಂದು ಬಗೆಯ ಅಸಂತೋಷವೆಂಬ ತೀಕ್ಷ್ಣವಾದ ಜೇನೆಯಿಂದ ಕೊರಗುತ್ತಿರುವುದಾಗಿ ಕಂಡುಬರುವುದು. ಮಾನವಜಾತಿಯು ಅಸಮಾಧಾನದ ಕಡಲಲ್ಲಿ ಪೂರ್ಣವಾಗಿ ಮುಳುಗಿಹೋಗಿದೆ. ಈ ನೋಟವು ಅಪವಾದವೆಂದು ಒಂದೆರಡು ಭಾಗದಲ್ಲಲ್ಲದೆ, ಇಡಿ ಭೂಮಂಡಲದ ತುಂಬ ಕಾಣುವುದಾಗಿದೆ. ಸಮಾಜದಲ್ಲಿ ಸಿರಿವಂತಿಕೆಯೂ ಬಡತನವೂ ಒಂದೇ ಕಡೆಯಲ್ಲಿ ಬಾಳುವೆ ಮಾಡುವವಲ್ಲವೇ? ಒಂದೇ ಜನಸಮೂಹದಲ್ಲಿ ದೇವತೆಗಳ ಬೊಕ್ಕಸಗಾರನಾದ ಕುಬೇರನಂತಹ ಸಿರಿವಂತರೂ, ದರಿದ್ರಶಿರೋಮಣಿಯಾದ ಸುದಾಮನಂತಹ ಧನಹೀನರೂ ಜೀವನಯಾತ್ರೆ ಮಾಡುತಿರುವರು. ತುತ್ತು ಅನ್ನ ಗೇಣುಬಟ್ಟೆಗಾಗಿ ಹಗಲಿರುಳು ಮೈಬೆವರು ಸೋರುವಂತೆ ದುಡಿಮೆಮಾಡುವ ಕೂಲಿಕಾರರ ಕಣ್ಣಮುಂದೆಯೇ ಹಿರಿಹಿರಿಯರಿಂದ ಕೂಡಿಸಲ್ಪಟ್ಟಿದ್ದ ಸಂಪತ್ತಿನ ಮೇಲೆ ನಿರಾಯಾಸವಾಗಿ ವಿಲಾಸವನ್ನು ಅನುಭವಿಸುವ ಭೋಗಿಗಳಿರುವರು. ಒಂದು ವರ್ಗಕ್ಕೆ ಹುಟ್ಟು ಮೊದಲ್ಗೊಂಡು ಸರ್ವ ಸುಖಾನುಕೂಲತೆಗಳು ಸನ್ನದ್ಧವಾಗಿರುವಾಗ, ಮತ್ತೊಂದಕ್ಕೆ ದಿನದ ಜೀವನಕ್ರಮದಲ್ಲಿ ಅತ್ಯಾವಶ್ಯಕವಾದ ವಸ್ತುಗಳ ಸಲುವಾಗಿ ಸದಾ ಬಾಯಿ ಬಿಡುತ್ತಲೇ ಇರಬೇಕಾಗುವುದು. "It is an evil that nine-tenths of the people should be condemned to toil long hours for bare subsistence in order that a small minority may enjoy all luxuries; It is an evil that the community should be sundered into two classes, the one working without owning and the other owning without working." ಹೀಗೆ ತೋರಿಬರುವ ವ್ಯತ್ಯಾಸವು ಈಶ್ವರೀಸಂಕೇತವೆಂದು ಬಹುಜನಗಳ ಬಗೆಯಾಗಿದೆ; ಅಲ್ಲ; ಎಂದೂ ಅಲ್ಲ. ಈ ತರದ ಸಮಾಜದಲ್ಲಿರುವ ಆರ್ಥಿಕ ಅಸಮಾನತೆಯು ಕೃತ್ರಿಮವಾಗಿದ್ದು ಸೃಷ್ಟಿನಿಯಮಕ್ಕೆ ಪೂರ್ಣವಾಗಿ ಅಸಮ್ಮತವಾದದ್ದು. ಈ ವಿಷಮತೆಯೇ ಸಕಲ ಜನಸಮೂಹದಲ್ಲಿ ಮುಖವೆತ್ತಿದ್ದ ಅಸಂತೋಷದ ತಾಯಿಯು.

ಯುರೋಪದ ಕ್ಷಿತಿಜದ ಮೇಲೆ ಯಂತ್ರಯುಗವು ಉದಯಹೊಂದುವ ಪೂರ್ವದಲ್ಲಿ ಮನೆಮನೆಗಳಲ್ಲಿ ಕೈಕೆಲಸದ ಕಸಬು-ಉದ್ಯಮಗಳು ಸಾಗುತ್ತಿದ್ದುವು. ಅದರಿಂದ ಹುಟ್ಟುವ ಸಂಪತ್ತಿಯಾದರೂ ಅಲ್ಪ. ದೇಶದ ತುಂಬ ಸ್ವಾವಲಂಬಿಗಳಾದ ಹಳ್ಳಿಗಳೇ ಹೆಚ್ಚಾಗಿದ್ದುವು. ಶ್ರೀಮಂತ-ಬಡವರಲ್ಲಿ ಈಗಿನಷ್ಟು ವಿಷಮತೆಯ ಕಂದರವು ವಿಸ್ತೃತವಾಗಿರಲಿಲ್ಲ. ಧನೋತ್ಪಾದನೆಯ ಸಾಧನೆಗಳೆಲ್ಲವೂ ಕಷ್ಟಜೀವಿಗಳ ಒಡೆತನದಲ್ಲಿಯೇ ಇದ್ದುದರಿಂದ, ಆವಶ್ಯಕತೆಯೂ ಪೂರೈಕೆಯೂ ಸಮಾನವಾಗಿದ್ದು ನಿರುದ್ಯೋಗಿಗಳ ಗಣನೆಯು ತೀರ ಕಡಿಮೆಯಾಗಿತ್ತು. ಯಾಂತ್ರಿಕಶೋಧನೆಗಳಿಂದ ಆ ಸ್ಥಿತಿಯು ಬದಲುಗೊಂಡು ಜನಜೀವನದಲ್ಲಿ ಪ್ರಚಂಡಕ್ರಾಂತಿಯು ಒದಗಿಬಂದಿತು. ಬಗೆಬಗೆಯ ಕಾರಖಾನೆಗಳು ಜಾಳಿಗೆಯಂತೆ ದೇಶದ ತುಂಬ ಪಸರಿಸಿ ಅಲ್ಲಲ್ಲಿಗೆ ಹೊಸ ಹೊಸ ಪಟ್ಟಣಗಳು ತಲೆ ಎತ್ತಲಾರಂಭಿಸಿದುವು. ಹಳ್ಳಿಯಲ್ಲಿಯ ಶಾಂತಿಮಯವಾದ ಕೈಕೆಲಸಗಳ ಮೂಲಕ ಸ್ವಾವಲಂಬಿಯಾದ ಜೀವನವು ಕೂಡಲೆ ಮಾಯವಾಗಿ, ನಗರಮಧ್ಯದಲ್ಲಿ ಕಿವಿಗಡಚಿಕ್ಕುವ ಸಪ್ಪಳದಲ್ಲಿ ಯಂತ್ರದ ಹೊಗೆಯ ಕೆಳಗೆ ಗುಲಾಮರಂತೆ ದುಡಿತವು ಬಂದಿತು. ನಿಸರ್ಗದ ಜೊತೆಯಲ್ಲಿ ಪಶುಪಕ್ಷಿಗಳಂತೆ ಸ್ವೇಚ್ಛಾಚಾರಿಗಳಾಗಿ ವಿಹರಿಸುತ್ತಿದ್ದ ಹಳ್ಳಿಗರು, ಕೃತ್ರಿಮ ನಗರಗಳ ಅನಾರೋಗ್ಯಕರವಾದ ಹವೆಯಲ್ಲಿ ಕಾರಖಾನೆದಾರನ ಪಾರತಂತ್ರ್ಯದ ಸರಪಣಿಯಿಂದ ಬಿಗಿಯಾಗಿ ಕಟ್ಟಲ್ಪಟ್ಟರು. ಇದೆಲ್ಲ ಯಂತ್ರಗಳ ಅವತಾರಮಾಹಾತ್ಮ್ಯವು! ಅಂದಿನಿಂದ ಶ್ರೀಮಂತ ಬಂಡವಾಳಿಗನು, ದರಿದ್ರ ಕೂಲಿಕಾರನು ಎಂಬ ಎರಡು ವರ್ಗಗಳು ಸಮಾಜವ್ಯವಸ್ಥೆಯಲ್ಲಿ ಸ್ಪಷ್ಟವಾಗಿ ಕೊರೆಯಲ್ಪಟ್ಟುವು. ಕೊಂಚ ಕಾಲದಲ್ಲಿ ಅಲ್ಪಶ್ರಮದಿಂದ



CC-0. Jangamwadi Math Collection. Digitized by eGangotri

ವಾಗಿಯೂ, 'ವೈಜಯಂತೀಧರನ ಪಾದಾಂಬು' ವಾಗಿಯೂ, ಶಿವನ ಜಟಾಜೂಟವನ್ನು ಆಗಿಯೂ ಇರುವ ಗಂಗೆಯು ಆ ಅಪವಾದವನ್ನು ಕೇಳಿ ಬೆಚ್ಚಿ, ದಿವ್ಯರೂಪವನ್ನು ಧರಿಸಿ ಪ್ರತ್ಯಕ್ಷಳಾಗುವಳು. ಅಲ್ಲದೆ 'ದೋಷಹರೆ ತಾನೆಂದು ವೇದಶಾಸ್ತ್ರಂಗಳುರೆ । ಘೋಷಿಪುವು ಮುಟ್ಟಲಾಗದು ತನ್ನನೆಂದು ನೀಂ । ದೂಷಿಸುವ ಕಾರಣವದಾವುದೋ ಜ್ವಾಲೆ ಹೇಳೆಂದು', ಜಾಹ್ನವಿಯು ಕೇಳುವಳು. ಜ್ವಾಲೆಯು 'ದೂಷಣದ ಮಾತನಾಡುವಳಲ್ಲ ಲೋಕದ ಸುಭಾಷಿತವನುಸುರಬೇಹುದು ಪುತ್ರರಿಲ್ಲದಿಹ ಯೋಷಿದಂಗಸ್ಪರ್ಶನಂ ಪಾಪವೆಂಬರದಕಾಗಿ ಬೆಸಸಿದೆ' ನೆಂದು ಉತ್ತರ ಹೇಳುವಳು. ಅದನ್ನು ಕೇಳಿ ಭಾಗೀರಥಿಯು ಕೋಪಗೊಂಡು ಸ್ವೇಚ್ಛಾಮರಣಿಯಾಗಿಯೂ, ಭಾಗವತ ಮಸ್ತಕಮಣಿಯಾಗಿಯೂ ಇರುವ ತನ್ನ ಮಗ ಭೀಷ್ಮನು ಸತ್ಯಸಂಧನೆಂದು ಮೂರು ಲೋಕಗಳಲ್ಲಿಯೂ ಪ್ರಖ್ಯಾತನಾಗಿರುವಲ್ಲಿ, ಮಂದಮತಿಯಾದ ಜ್ವಾಲೆಯು ತನಗೆ ಪುತ್ರನಿಲ್ಲವೆಂದು ಜರಿಯುವುದು ಸರಿಯಲ್ಲವೆಂದು ಜಾಹ್ನವಿಯು ನುಡಿಯುವಳು. ಆ ಬಳಿಕ ಜ್ವಾಲೆಯು ಅರ್ಜುನನ ದೆಸೆಯಿಂದ ಭೀಷ್ಮನು ಮರಣಹೊಂದಿದುದನ್ನು ಗಂಗೆಗೆ ತಿಳಿಯ ಹೇಳಿ ಅವಳನ್ನು ಕೆರಳಿಸಿ ಆರು ತಿಂಗಳಿಗೆ ಆಹವದಲ್ಲಿ ಅರ್ಜುನನು ತನ್ನ ಪುತ್ರನ ಕೈಯಿಂದಲೇ ಮೃತಿಯನ್ನೈದಲೆಂದು ಶಾಪವನ್ನು ಕೊಡಿಸುವಳು. ಇಲ್ಲಿ ಕವಿಯು ಹೂಡಿರುವ ಸಂವಿಧಾನಕೌಶಲವು ಅತ್ಯಾಶ್ಚರ್ಯಕರವಾಗಿರುವುದು.

ತಾನೇ ಮಕ್ಕಳನ್ನು ಕಳೆದುಕೊಂಡು ದುಃಖಿನಿಯಾಗಿರುವ ಜ್ವಾಲೆಯು ಪುತ್ರಶೋಕದ ಜ್ವಾಲಾಮುಖಿಯನ್ನು ತನ್ನ ಹೃದಯತಲದಲ್ಲಿ ಅದುಮಿ ಹಿಡಿದು ಜಾಹ್ನವಿಯು ಅಪುತ್ರವತಿಯೆಂದು ದೂರಿ ಶಾಪವನ್ನು ಕಲ್ಪಿಸಿ ಕಲೆಯಿಸಿ ತನಿಸೊಬಗನ್ನೇ ಕವಿಯು ನಮಗೆ ತೋರಿಸಿರುವನು. ಇಲ್ಲಿ ಮತ್ತೊಂದು ವಿಶೇಷವೂ ಉಂಟು. ಜ್ವಾಲೆಯು ಕುಶಾಗ್ರಮತಿಯಾದ ಧೀರವನಿತೆಯಾದರೂ ಅವಳಲ್ಲಿ ಹೃತ್ಕಾಠಿಣ್ಯವಿಲ್ಲವೆಂಬುದನ್ನು ಕವಿಯು ಮನೋಜ್ಞವಾಗಿಯೂ ಸೂಕ್ಷ್ಮವಾಗಿಯೂ ಸೂಚಿಸಿರುವನು. ಪುತ್ರರಿಲ್ಲದ ನಾರಿಯ ಅಂಗಸ್ಪರ್ಶನವು ಪಾಪವೆಂದು ಜ್ವಾಲೆಯು ಹೇಳುವುದಿಲ್ಲ. 'ಲೋಕದ ಸುಭಾಷಿತವನುಸುರಬೇಹುದು' ಎಂಬ ಪೀಠಿಕೆಯನ್ನು ಹಾಕಿಕೊಂಡು, ಪುತ್ರದುಃಖವು ಹೃದಯದ ಜೀವನಾಡಿಯ ಗತಿಯನ್ನು ನಿರೋಧಿಸಿ ಹಿಡಿದು ಹಿಡಿದು ತಲ್ಲಣಗೊಳಿಸುತ್ತಿದ್ದರೂ ಕಾರ್ಯಸಾಧನೆಯ ಛಲದ ಆವೇಶಭರದಲ್ಲಿ ಅದನ್ನು ಗಮನಿಸದೆ ಅಥವಾ ಗಮನಿಸದಿರುವಂತೆ ತೋರ್ಪಡಿಸಿಕೊಂಡು — 'ಪುತ್ರರಿಲ್ಲದಿಹ ಯೋಷಿದಂಗಸ್ಪರ್ಶನಂ ಪಾಪವೆಂಬರದಕಾಗಿ ಬೆಸಸಿದೆ' ನೆನ್ನುವಳು. ಲೋಕದ ಸುಭಾಷಿತವನ್ನೂ ಲೋಗರ ಅಭಿಪ್ರಾಯವನ್ನೂ ಸೂಚಿಸಿ ಕಾರ್ಯಸಿದ್ಧಿಯನ್ನು ಕಾಣುವ ಯೋಜನೆಯನ್ನು ಜ್ವಾಲೆಯು ಮಾಡಿರುವಳು. ಅನುಭವದಿಂದ ಮಾತ್ರವೇ ವೇದ್ಯವೆನಿಸುವ ಪುತ್ರಶೋಕದ ದುಸ್ಸಹವಾದ ಯಾತನೆಯನ್ನನುಭವಿಸುತ್ತಲೂ, ಪುತ್ರರಿಲ್ಲದಿರುವ ನಾರಿಯ ಅಂಗಸ್ಪರ್ಶವು ಪಾಪವೆಂದು ಹೇಳುವುದು ಎಷ್ಟು ಅನ್ಯಾಯವೆಂಬುದನ್ನು ಮರ್ಮಭೇದಕವಾದ ರೀತಿಯಲ್ಲಿ ಮನಗಾಣುತ್ತಲೂ ಇದ್ದುಕೊಂಡು ಸಹ ಜ್ವಾಲೆಯು ಅದೇ ಮಾತುಗಳನ್ನು ಉದಾಹರಿಸಿ-ಅದು ಪಾಪವೆಂದು ತನಗೆ ತಿಳಿದಿರುವ ಕಾರಣ, ಮಿಥ್ಯವೆಂದು ಮನಸಾರೆ ಗೋಚರವಾಗಿರುವುದನ್ನು ತಥ್ಯವೆಂದು ಉದಾಹರಿಸಿ—ತಿಳಿಸುವಾಗ್ಗೆ ಸಹಿಸಲಸದಳವಾದ ಸಂಕಟದಿಂದಲೂ, ಅಸಮಾಧಾನದಿಂದಲೂ, ಅವಳ ದೇಹವೂ, ಮನಸ್ಸೂ, ಅಂತರಾತ್ಮವೂ ನಡುಗಿ ಹೋಗಿರಬೇಕೆಂದು ತೋರುವುದು. ಜಾಹ್ನವಿಯಿಂದ ಶಾಪವನ್ನು ಕೊಡಿಸಿದ ಮೇಲಂತೂ, ಜ್ವಾಲೆಗೆ ಇಹಲೋಕವು ದೊಡ್ಡದೊಂದು ಮರುಭೂಮಿ, ಸಾವೇ ಅವಳಿಗೆ ಸುಖಕರ, ಸಾಯುವಾಗಲೂ ಅವಳು ಛಲಗಾತಿಯೇ. ಅರ್ಜುನನ "ತಲೆಯನರಿವ ಕೂರಲಗಿನಸ್ತ್ರವಾದಪೆನೆಂದು" ಗಂಗಾತೀರದಲ್ಲಿ ಅಗ್ನಿಪ್ರವೇಶ ಮಾಡಿ ಜ್ವಾಲೆಯು ಬಭ್ರುವಾಹನನ ಬತ್ತಳಿಕೆಯಲ್ಲಿ ಅಂಬಾಗಿ ಸೇರಿಕೊಳ್ಳುವಳು. ಮರುಕದಿಂದಲೂ ಸಂತಾಪದಿಂದಲೂ, ನಮ್ಮ ಹೃದಯವು ಕರಗಿಹೋಗುವುದು. ಅನುರೂಪರಲ್ಲದ ಪತಿದೇವರನ್ನು ಸೇರಿ ಎಷ್ಟು ಮಂದಿ ಭಾರತರಮಣಿಯರು ಮಸಿಯ ಬಟ್ಟೆಯಲ್ಲಿ ಬಿದ್ದ ಮಾಣಿಕ್ಯಗಳಾದರೋ-ಆಗಿರುವರೋ-ಹೇಳಬಲ್ಲವರಾರು!

**ಪ್ರಭಾವತಿ**— ಜ್ವಾಲೆಯ ವಿಷಾದಾಂತಜೀವನದ ಚಿತ್ರವನ್ನು ನಮಗೆ ತೋರಿಸಿದ ತರುವಾಯ ಕವಿಯು ಪ್ರಾಸಂಗಿಕವಾಗಿ ಚಂಡಿಯ ಕಥೆಯನ್ನು ತಿಳಿಸಿ ಆ ಬಳಿಕ ನಮಗೆ ಪ್ರಭಾವತಿ- ಸುಧನ್ವರನ್ನು ತೋರಿಸುವನು. ಲಕ್ಷ್ಮೀಶನು ಶ್ರೇಷ್ಠನಾದ ಕವಿಯಾಗಿರುವುದರ ಜೊತೆಗೆ

CC-0. Jangamwadi Math Collection. Digitized by eGangotri

ಸೊಬಗಿನ ಕಥೆಗಾರನೂ ಆಗಿದ್ದಾನೆಂಬುದು ಇದರಿಂದ ವ್ಯಕ್ತವಾಗುತ್ತದೆ. ಶೋಕಸಂತಪ್ತಳಾಗಿ ಜ್ವಾಲಾಮುಖಿಯಂತಿರುವ ಜ್ವಾಲೆಯ ರುದ್ರಜೀವನವನ್ನು ಚಿತ್ರಿಸಿದೊಡನೆಯೇ, ರಸಿಕರನ್ನು ತಲೆದೂಗಿಸುವ ಸೊಂಪಿನ ಸಾಗರವನ್ನು ನಮ್ಮೆದುರಿಗಿಟ್ಟಿದ್ದಾರೆ (ಚಂಡಿಯ ಹಟ ಪೂರೈಸದ ಕಡೆಗೆ ನಮ್ಮ ಮನಸ್ಸನ್ನು ಸೆಳೆದು ನಿಟ್ಟುಸಿರನ್ನು ಸಸುಕೋಪವಾಗಿ ರೂಪಾಂತರಗೊಳಿಸಿ "ಸುಡದಿರ್ದ ಪಾವಕನೊಳಿಸಿಮನಾಣ್ಣ ರವಿಯೊ........ ಶಾಂತಿಯ ಸಿಜಾಕಾರದೊಡಲೊ" ಎಂಬಂತಿರುವ ಸೌಭರಿಮುನೀಂದ್ರನ ಪರ್ಣನವಾದಬಳಿಕ ಹಾಗೆ ಮಾಡದೆಹೋಗಿದ್ದಾರೆ) ಕವಿಯಲ್ಲಿ ಔಚಿತ್ಯವೂ ವಿವೇಚನೆಯೂ ಇರುತ್ತಿರಲಿಲ್ಲ. ಪ್ರಭಾವತಿ ಸುಧನ್ವರು ರಸಿಕರಾದ ಪ್ರಿಯ ದಂಪತಿಗಳು. ಸುಧನ್ವನು ಚಕ್ರಿಗಭಿಮುಖವಾಗಿ ಕಾದಲು ಹೊರಡುವನು. ತಾಯಿಯು ಅವನನ್ನು ಹರಸಿ ಬೀಳ್ಕೊಡುವಳು. ಕುವಲೆಯೆಂಬ ಅವನ ತಂಗಿಯು ವೀರವನಿತೆಗೆ ತಕ್ಕ ವೀರವಾಣಿಯ ಆಧಟಿಸಿಂದ "ಶೌರಿಗೆ ವಿಮುಖನಾಗಿ ನೀ ಬಂದೆಯಾದೊಡೆ ಮಾನವನ ಮನೆಯೊಳಾಂ ತಲೆಯೆತ್ತಿ ನಡೆಯೆ"ನೆಂದು ಹೇಳಿ ಕರ್ಪೂರದ ವೀಳಯವನ್ನು ಕೊಟ್ಟು ಕಳುಹಿಸುವಳು. ಆ ಬಳಿಕ ಸುಧನ್ವನು ತನ್ನ ಅಂತಃಪುರಕ್ಕೆ ಬಂದು ಪ್ರಭಾವತಿಯನ್ನು ಕಾಣುವನು. ಅವಳು ಅವನನ್ನು ಬೀಳ್ಕೊಡುವುದು ಅಷ್ಟು ಸುಲಭವಲ್ಲ. ಆಗಿನ ದೃಶ್ಯವು ವರ್ಣನಾತೀತವಾದ ಶೃಂಗಾರ ನಾಟಕವೆನಿಸಿರುವಂಥದು. ಸುಧನ್ವನು ತನ್ನನ್ನು ಬೀಳ್ಕೊಡೆಂದು ಮುದ್ದಿಸಿದಷ್ಟೂ ಮೋಹವೂ ಶೋಕವೂ ಉಕ್ಕಿಬರುವಂತಿಹುದು, ಆಗಿನ ಸನ್ನಿವೇಶ. ಕವಿಯು ಎಂತಹ ರಸಿಕನೆಂಬುದನ್ನೂ ಅವನ ಸಾಮರ್ಥ್ಯವು ಎಷ್ಟು ಹೆಚ್ಚಿನದೆಂಬುದನ್ನೂ ಮೂಲವನ್ನೋದಿಯೇ ಆನಂದಿಸಬೇಕು. ಸುಧನ್ವನ ತಂದೆಯಾದ ಹಂಸಧ್ವಜನು ಯುದ್ಧಭೂಮಿಗೆ ತಡವಾಗಿ ಬಂದವರನ್ನು "ಕಾಯ್ದುದ್ದಕ್ಕುವ" ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿಸುವುದಾಗಿ ಹೇಳಿ ತಾನು ಮುಂದೆ ಹೊರಟುಹೋಗಿರುವನು. ಯುದ್ಧಭೂಮಿಗೆ ಜನರು ಹೊರಡಬೇಕೆಂಬುದನ್ನು ಸೂಚಿಸುವ ಭೇರಿಯು ಮೊಳಗುತ್ತಿರುವುದು. ಪ್ರಭಾವತಿಯು ತನ್ನ ಪ್ರಿಯಕಾಂತನನ್ನು ಬೀಳ್ಕೊಡಲು ಚಿನ್ನದ ಹರಿವಾಣದಲ್ಲಿ ಸಂಪಗೆಯ ಹೂಗಳನ್ನೂ "ಸರಸಪರಿಮಳ ಗಂಧಕರ್ಪೂರ" ವೀಳಯವನ್ನೂ ತೆಗೆದುಕೊಂಡು ಅವನು ಅಂತಃಪುರಕ್ಕೆ ಬರುವವೇಳೆಗೆ ಸರಿಯಾಗಿ ಎದುರಿಗೆ "ಅಂಗಜನ ಜಯಸಿರಿ" ಯು ತಾನೆಂಬಂತೆ ಬರುವಳು. ಋತುಸ್ನಾತೆಯಾಗಿ ಆಭರಣಗಳಿಂದಲಂಕೃತೆಯಾಗಿ ಹಗುರವಾದ ತೆಳ್ಳನೆಯ ಬಿಳಿಯ ದುಕೂಲವನ್ನು ಧರಿಸಿ, ಚಂದ್ರಕಾಂತದ ಪುತ್ಥಳಿಯಂತೆ ಬೆಡಗುನೈಪಾರಗಳಿಂದ ಮೆಲುನಡೆಯಲ್ಲಿ ಬಂದ ಪ್ರಭಾವತಿಯು ಕವಿಯು ಹೇಳುವಂತೆ ಸುಧನ್ವನ ಕಣ್ಣಿಗೆ ನೂತನವೆಂಬ ತೋರುವ ಚೆಲ್ವಿಕೆಯಿಂದ 'ಬೇರೊಂದು ಪರಿಯ' ಅಚ್ಚರಿಯನ್ನು ಬಗೆಗೊಂಡು ಅವನ ಮನಸ್ಸನ್ನು ಸುಪ್ರೇಮಸತರಂಗದಲ್ಲಿ ತೇಲಿಸುವಳು. ಪ್ರಭಾವತಿಯು ರೂಪರಾಶಿಯೆಂಬುದನ್ನೂ ರಸಿಕಳೆಂಬುದನ್ನೂ ಪತಿಗನುಕೂಲೆಯಾದ ಮತ್ತು ಸಮಸ್ತ ವಿಚಾರಗಳಲ್ಲಿಯೂ ಅವನಿಗೆ ಸಮಜೋಡಿಯೆನಿಸಿರುವ ಸಾಧ್ವಿಯೆಂಬುದನ್ನೂ ಮನಮುಟ್ಟಿ ತೋರ್ಪಡಿಸಿಕೊಡಬೇಕೆಂಬುದೇ ಕವಿಯ ಆಶಯವೆಂದು ತೋರುವುದು. ಈ ಗುಣಗಳೇ ಪ್ರಭಾವತಿಯ ವೈಶಿಷ್ಟ್ಯವನ್ನು ತೋರಿಸತಕ್ಕವುಗಳಾಗಿವೆ. ಸತೀಮಣಿಯೆನಿಸಿ ಅನುಕೂಲದಾಂಪತ್ಯದ ಸುಧಾಭಾಂಡಾಗಾರವನ್ನು ಪತಿಗೆ ದೊರೆಯಿಸಲು ಇವಕ್ಕಿಂತ ಹೆಚ್ಚಿನ ಮತ್ತಾವ ಗುಣಗಳು ತಾನೆ ಬೇಕು? ಸುಧನ್ವನು ರಣಭೂಮಿಗೆ ಹೋಗದಂತೆ ತಡೆದು ನಿಲ್ಲಿಸಿ "ಅಂಗವಿಲ್ಲದನ ಸಮರಂಗಮಂ ಪುಗಲಂಜಿ। ತುಂಗವಿಕ್ರಮ ವಿಜಯಸಂಗರಕೆಳಸುವೆನೆಂ। ಒಂಗವಣೆಯೆಂತುಟೆಂದಂಗನೆ" ಪ್ರಶ್ನೆ ಮಾಡಿದುದಕ್ಕೆ ಕೆಲವರು ಅಪಾರ್ಥವನ್ನು ಕಲ್ಪಿಸಿ ಪ್ರಭಾವತಿಯು ವಿಷಯಾತುರೆಯೆಂದು ಮುಂತಾಗಿ ಆಕ್ಷೇಪಿಸುವುದುಂಟು. ಕವಿಹೃದಯವನ್ನರಿಯದೆಯೂ, ಪಾತ್ರಗಳ ಸ್ಥಾನದಲ್ಲಿ ತಾವೇ ಇದ್ದಂತೆ ಊಹಿಸಿಕೊಂಡು ಕಾವ್ಯರಸಾಸ್ವಾದನ ಮಾಡುವ ಸಾಮರ್ಥ್ಯ ಇಲ್ಲದೆಯೂ, ಮನಬಂದಂತೆ ಮಾತನಾಡುವವರಿಗೆ ಯಾರು ಹೊಣೆ? ಎಲ್ಲಕ್ಕೂ ಮಿಗಿಲಾಗಿ ಮತ್ತೊಂದು ಅಂಶವೂ ಉಂಟು. 'ಚಕ್ರಿಗಭಿಮುಖವಾದ ಬಳಿಕಲ್ಲಿ ಮುಕ್ತಿಯಲ್ಲದೆ ಬೇರೆ ಗತಿಯುಂಟೆ..... ತನಗೊಂದಪತ್ಯಮುದಯಿಸದೊಡೆ ವಿರಕ್ತಿಯಿಂ ಕೈವಲ್ಯಮಾದಪುದೆ ಸಮರಕುದ್ಯುಕ್ತನಪ್ಪಾತಂಗೆ ಸಂತಾನವಿರಲಪ್ಪುದೇ ಹೇಳೆಂದು' ಪ್ರಭಾವತಿಯು ಕೇಳುವ ಪ್ರಶ್ನೆಯನ್ನೂ ನಾವು ಗಮನಿಸಬೇಕು. 'ಅಪುತ್ರ

CC-0. Jangamwadi Math Collection. Digitized by eGangotri

ಸ್ಯಗತಿರ್ನಾಸ್ತಿ ' ಎಂಬ ಹೇಳಿಕೆಯಲ್ಲಿ ಅಂದಿನವರಿಗೆ ಪೂರ್ಣಶ್ರದ್ಧೆಯಿದ್ದಿತು. ಆದಕಾರಣ, ಪ್ರಭಾವತಿಯು ಸುಧನ್ವನ "ಗಮನಕನುಕೂಲೆಯಾಗದೆ" ಆ ರೀತಿ ಮಾಡಿದಳು. ಇಷ್ಟರಮೇಲೂ ಅವಳ ಮೇಲೆ ವಿಷಯಾತುರೆಯೆಂಬ ಆಕ್ಷೇಪವನ್ನೆ ಹೊರಿಸುವುದಾದರೆ ಅದಕ್ಕೂ ಸಮಾಧಾನವುಂಟು. ಮನುಷ್ಯದೃಷ್ಟಿಯಲ್ಲಿ ಅಂದೇ ಅವರ ಕೊಟ್ಟಕೊನೆಯ ಸಮಾಗಮ. ಪ್ರಭಾವತಿಯು ಅಲ್ಲಿಂದ ಮುಂದೆ–ನಾಸು ಪತಿಯನ್ನು ಕಾಣುವುದು ಸ್ವರ್ಗದಲ್ಲೇ ಎಂದು ಶಂಕಿಸಲು ಕಾರಣವುಂಟು. ಸುಧನ್ವನು 'ಹಂಸಧ್ವಜನ ಮೋಹದ ಕುಮಾರ' ನಾಗಿರುವಂತೆಯೇ ಪ್ರಭಾವತಿಯ ನೇಹದ ರಮಣನೂ ಆಗಿದ್ದಾನೆ. ಅಲಂಕಾರ* ಪ್ರಿಯನಾದ ಸುಧನ್ವನು ಯಥೋಚಿತವಾದ ವೇಷಭೂಷಣಗಳಿಂದ ಕೂಡಿಬಂದು ನಿಲ್ಲುವನು. ಚಿನ್ನದ ಹರಿವಾಣದಲ್ಲಿ ಸಂಪಗೆಯ ಹೂಗಳನ್ನಿಟ್ಟುಕೊಂಡು "ಕರಯುಗದೊಳಾಂತ ಪೊಂದಟ್ಟೆಯನಿಪ್ಪ ಮೇಲೆ। ಪರಿಪೂರ್ಣ ಸಂಪಗೆಯ ಪೂಗಳಂ ತನ್ನ ಮೈಯ್ಯೊರೆಗೆ ಸರಿಯಾದಪವೆ ನೋಡೆಂದು ತೋರ್ಪಂತೆ ಕೊಂಡು ಬಂದಿದಿರೆ ನಿಂದ" ತರುಣಿಯನ್ನು ಸುಧನ್ವನು ಕಡೆಗಣ್ಣಿನಿಂದ ಮೆಲ್ಲಗೆ ನೋಡಿ ಮೃದುವಾಗಿ ನಗುವನು. ಶೃಂಗಾರಲೋಲನಾದ ಸುಧನ್ವನ ಆ ಮಂದಸ್ಮಿತಕ್ಕೆ ಪ್ರಭಾವತಿಯ ಚಿತ್ತದ ಬೇಸುಬಳೆಯಾದುದರಲ್ಲಿ ಆಶ್ಚರ್ಯವೇನು ? ಅಂತೂ, ಕವಿಯು ಪ್ರಭಾವತಿಯ ಸಂಸಾರಸುಖದ ಸೊಗಸಿನ ಚಿತ್ರವನ್ನು ಕಲ್ಪಿಸಿ ಮನೋಜ್ಞವಾಗಿ ಪಾತ್ರರಚನೆಮಾಡಿದ್ದಾನೆ.

(ಮುಂದುವರಿಯುವುದು)

## ಗಾಳಿಯ ಪಟವಾಡುತಲಿಹುದು !

(ರಾಘವ, ಮೈಸೂರು)

ನೀಲಿಯ ಬಣ್ಣದ ಗಾಳಿವಟ್ಟೆಯಲಿ  
ರೆಕ್ಕೆಯಿಲ್ಲದಿಹ ಹಕ್ಕಿಯ ತೆರದಲಿ  
ಒಕ್ಕಡೆ ಅಲುಗದೆ ನಿಂತ ನಿಲುವಿನಲಿ  
ಗಾಳಿಯ ಪಟವಾಡುತಲಿಹುದು ! ॥ ೧ ॥

ಪಟವಲ್ಲವದು ! ಅದು ಪಟವಲ್ಲ !–  
ಬಾಲರ ಕನಸಲಿ ಸುಳಿಸುಳಿದಾಡುವ  
ಲೀಲೆಯಲಡಗಿಹ ಬಯಕೆಯ ಬಿಂಬವು–  
ಗಾಳಿಯ ಪಟವದು ಆಡುತಿದೆ! ॥ ೨ ॥

ಎಳೆತನದಲಿ ನಾ ಪಟವಾಡಿಸಿದೆ;  
–ಸುಳಿದಾಡುತ್ತಿದೆ ಬಗೆಬಾನಿನಲಿ  
ಬೆಳೆಯುವ ಬಾಳಿನ ಬಯಕೆಯ ಬಿಂಬವು–  
ಬಾಳಿನ ಪಟವಾಡುತಲಿಹುದು ! ॥ ೩ ॥

ಗಾಳಿಯ ವೇಗವು ಮಿತಿಮೀರಿತು ಬಲು;  
ಬೀಳುತಲಿದೆ ಪಟ ಬಾಂದಳದಲ್ಲಿ;  
ಏಳುತ ಬೀಳುತ ತೂಗಾಡುತಲಿದೆ;–  
ಪಟದಾಟವು ಮುಗಿದುದು ಏನೋ ! ॥ ೪ ॥

ವಿಧಿಯಾಟವು ಬೀಸುವ ಬಿರುಗಾಳಿ–  
ಅದರಲಿ ಬಯಕೆಯ ಪಟ ಸಿಲುಕಿಹುದು;  
ಅದು ಮೇಲೇರದೆ ?–ಬೀಳದೆ ಇಹುದೆ ?  
ಪಟದಾಟವ ಕಂಡಿಹರಾರು ? ॥ ೫ ॥

ದಾರಕೆ ಸಡಿಲನು ಬಿಟ್ಟೊಡನಲ್ಲಿ  
ಭಾರವ ಹಾಕುತ ಗಾಳಿಯ ಮೇಲೆ–  
ಹಾರಿತು ಮೇಲಕೆ, ಹಕ್ಕಿಯ ವೋಲಿ–  
ಗಾಳಿಯ ಪಟವಾಡುತಲಿಹುದು ! ॥ ೬ ॥

---

* ಪನ್ನೀರ ಮಿಂದು ದಿವ್ಯಾಂಬರವನುಟ್ಟು ಬಾ ।  
ವನ್ನದಿಗುರಂ ಗೈಯ್ದು ಕವ್ಮಲರ್ಗಳಂ ಸೂಡಿ ।  
ಸನ್ನುತ ಸುಯಕ್ಷಕರ್ದಮವನನುಕರಿಸಿ ಕಸ್ತುರಿ ತಿಲಕವಿಟ್ಟು ಹಣೆಗೆ ॥  
ರನ್ನದೊಡವುಗಳನನುಕರಿಸಿ ವೀಳೆಯಗೊಂಡು  
ತನ್ನನುಳುಹಿದ ದೇವಪುರದ ಲಕ್ಷ್ಮೀಪತಿಯ ।  
ನಿನ್ನು ಕಂಡಪೆನೆಂಬ ಹರುಷದಿಂ ಕಳೆಯೇರಿ ಮೆರೆದಂ ಸುಧನ್ವನಂದು ॥  
ಎಂಬ ಪದ್ಯದಿಂದ ಅವನು ಅಲಂಕಾರಪ್ರಿಯನೆಂದು ವ್ಯಕ್ತವಾಗವುದು.

CC-0. Jangamwadi Math Collection. Digitized by eGangotri

# ‘ಸೋಶಾಲಿಝಂ’ ಅಥವಾ ಸಮತಾವಾದ

ಲೇಖಕರು:— ಶ್ರೀ. ಮುನವಳ್ಳಿ ಶಾಮರಾಯರು ಎಲ್ ಎಲ್. ಬಿ. ಅಥಣಿ

ಭೂಪಟದ ಮೇಲಿನ ಯಾವ ಜನಸಮೂಹವನ್ನು ನಿರೀಕ್ಷಿಸಿದರೂ ಅದು ಒಂದು ಬಗೆಯ ಅಸಂತೋಷವೆಂಬ ತೀಕ್ಷ್ಣವಾದ ಬೇನೆಯಿಂದ ಕೊರಗುತ್ತಿರುವುದಾಗಿ ಕಂಡುಬರುವುದು. ಮಾನವಜಾತಿಯು ಅಸಮಾಧಾನದ ಕಡಲಲ್ಲಿ ಪೂರ್ಣವಾಗಿ ಮುಳುಗಿಹೋಗಿದೆ. ಈ ನೋಟವು ಅಪವಾದವೆಂದು ಒಂದೆರಡು ಭಾಗದಲ್ಲಲ್ಲದೆ, ಇಡಿ ಭೂಮಂಡಲದ ತುಂಬ ಕಾಣುವುದಾಗಿದೆ. ಸಮಾಜದಲ್ಲಿ ಸಿರಿವಂತಿಕೆಯೂ ಬಡತನವೂ ಒಂದೇ ಕಡೆಯಲ್ಲಿ ಬಾಳುವೆ ಮಾಡುವವಲ್ಲವೇ ? ಒಂದೇ ಜನಸಮೂಹದಲ್ಲಿ ದೇವತೆಗಳ ಬೊಕ್ಕಸಗಾರನಾದ ಕುಬೇರನಂತಹ ಸಿರಿವಂತರೂ, ದರಿದ್ರಶಿರೋಮಣಿಯಾದ ಸುದಾಮನಂತಹ ಧನಹೀನರೂ ಜೀವನಯಾತ್ರೆ ಮಾಡುತಿರುವರು. ತುತ್ತು ಅನ್ನ ಗೇಣುಬಟ್ಟೆಗಾಗಿ ಹಗಲಿರುಳು ಮೈಬೆವರು ಸೋರುವಂತೆ ದುಡಿಮೆಮಾಡುವ ಕೂಲಿಕಾರರ ಕಣ್ಣ ಮುಂದೆಯೇ ಹಿರಿಹಿರಿಯರಿಂದ ಕೂಡಿಸಲ್ಪಟ್ಟಿದ್ದ ಸಂಪತ್ತಿನ ಮೇಲೆ ನಿರಾಯಾಸವಾಗಿ ವಿಲಾಸವನ್ನು ಅನುಭವಿಸುವ ಭೋಗಿಗಳಿರುವರು. ಒಂದು ವರ್ಗಕ್ಕೆ ಹುಟ್ಟಿದೊಡಲ್ಗೊಂಡು ಸರ್ವ ಸುಖಾನುಕೂಲತೆಗಳು ಸನ್ನದ್ಧವಾಗಿರುವಾಗ, ಮತ್ತೊಂದಕ್ಕೆ ದಿನದ ಜೀವನಕ್ರಮದಲ್ಲಿ ಅತ್ಯಾವಶ್ಯಕವಾದ ವಸ್ತುಗಳ ಸಲುವಾಗಿ ಸದಾ ಬಾಯಿ ಬಿಡುತ್ತಲೇ ಇರಬೇಕಾಗುವುದು. “It is an evil that nine-tenths of the people should be condemned to toil long hours for bare subsistence in order that a small minority may enjoy all luxuries; It is an evil that the community should be sundered into two classes, the one working without owning and the other owning without working.” ಹೀಗೆ ತೋರಿಬರುವ ವ್ಯತ್ಯಾಸವು ಈಶ್ವರೀ ಸಂಕೇತವೆಂದು ಬಹುಜನಗಳ ಬಗೆಯಾಗಿದೆ. ಅಲ್ಲ; ಎಂದೂ ಅಲ್ಲ. ಈ ತರದ ಸಮಾಜದಲ್ಲಿರುವ ಆರ್ಥಿಕ ಅಸಮಾನತೆಯು ಕೃತ್ರಿಮವಾಗಿದ್ದು ಸೃಷ್ಟಿನಿಯಮಕ್ಕೆ ಪೂರ್ಣವಾಗಿ ಅಸಮ್ಮತವಾದದ್ದು. ಈ ವಿಷಮತೆಯೇ ಸಕಲ ಜನಸಮೂಹದಲ್ಲಿ ಮುಖವೆತ್ತಿದ್ದ ಅಸಂತೋಷದ ತಾಯಿಯು.

ಯುರೋಪದ ಕ್ಷಿತಿಜದ ಮೇಲೆ ಯಂತ್ರಯುಗವು ಉದಯಹೊಂದುವ ಪೂರ್ವದಲ್ಲಿ ಮನೆಮನೆಗಳಲ್ಲಿ ಕೈಕೆಲಸದ ಕಸಬು-ಉದ್ಯಮಗಳು ಸಾಗುತ್ತಿದ್ದುವು. ಅದರಿಂದ ಹುಟ್ಟುವ ಸಂಪತ್ತಿಯಾದರೂ ಅಲ್ಪ. ದೇಶದ ತುಂಬ ಸ್ವಾವಲಂಬಿಗಳಾದ ಹಳ್ಳಿಗಳೇ ಹೆಚ್ಚಾಗಿದ್ದುವು. ಶ್ರೀಮಂತ–ಬಡವರಲ್ಲಿ ಈಗಿನಷ್ಟು ವಿಷಮತೆಯು ಕಂದರವು ವಿಸ್ತೃತವಾಗಿರಲಿಲ್ಲ. ಧನೋತ್ಪಾದನೆಯ ಸಾಧನೆಗಳೆಲ್ಲವೂ ಕಷ್ಟಜೀವಿಗಳ ಒಡೆತನದಲ್ಲಿಯೇ ಇದ್ದುದರಿಂದ, ಆವಶ್ಯಕತೆಯೂ ಪೂರೈಕೆಯೂ ಸಮಾನವಾಗಿದ್ದು ನಿರುದ್ಯೋಗಿಗಳ ಗಣನೆಯು ತೀರ ಕಡಿಮೆಯಾಗಿತ್ತು. ಯಾಂತ್ರಿಕಶೋಧನೆಗಳಿಂದ ಆ ಸ್ಥಿತಿಯು ಬದಲುಗೊಂಡು ಜನಜೀವನದಲ್ಲಿ ಪ್ರಚಂಡಕ್ರಾಂತಿಯು ಒದಗಿಬಂದಿತು. ಬಗೆಬಗೆಯ ಕಾರಖಾನೆಗಳು ಜಾಳಿಗೆಯಂತೆ ದೇಶದ ತುಂಬ ಪಸರಿಸಿ ಅಲ್ಲಲ್ಲಿಗೆ ಹೊಸ ಹೊಸ ಪಟ್ಟಣಗಳು ತಲೆ ಎತ್ತಲಾರಂಭಿಸಿದುವು. ಹಳ್ಳಿಯಲ್ಲಿಯ ಶಾಂತಿಮಯವಾದ ಕೈಕೆಲಸಗಳ ಮೂಲಕ ಸ್ವಾವಲಂಬಿಯಾದ ಜೀವನವು ಕೂಡಲೆ ಮಾಯವಾಗಿ, ನಗರಮಧ್ಯದಲ್ಲಿ ಕಿವಿಗಡಚಿಕ್ಕುವ ಸಪ್ಪಳದಲ್ಲಿ ಯಂತ್ರದ ಹೊಗೆಯ ಕೆಳಗೆ ಗುಲಾಮರುತೆ ದುಡಿತವು ಬಂದಿತು. ನಿಸರ್ಗದ ಜೊತೆಯಲ್ಲಿ ಪಶುಪಕ್ಷಿಗಳಂತೆ ಸ್ವೇಚ್ಛಾಚಾರಿಗಳಾಗಿ ವಿಹರಿಸುತ್ತಿದ್ದ ಹಳ್ಳಿಗರು, ಕೃತ್ರಿಮ ನಗರಗಳ ಅನಾರೋಗ್ಯಕರವಾದ ಹವೆಯಲ್ಲಿ ಕಾರಖಾನೆದಾರನ ಪಾರತಂತ್ರ್ಯದ ಸರಪಣಿಯಿಂದ ಬಿಗಿಯಾಗಿ ಕಟ್ಟಲ್ಪಟ್ಟರು. ಇದೆಲ್ಲ ಯಂತ್ರಗಳ ಅವತಾರಮಾಹಾತ್ಮ್ಯವು ! ಅಂದಿನಿಂದ ಶ್ರೀಮಂತ ಬಂಡವಾಳಿಗನು, ದರಿದ್ರ ಕೂಲಿಕಾರನು ಎಂಬ ಎರಡು ವರ್ಗಗಳು ಸಮಾಜವ್ಯವಸ್ಥೆಯಲ್ಲಿ ಸ್ಪಷ್ಟವಾಗಿ ಕೊರೆಯಲ್ಪಟ್ಟುವು. ಕೊಂಚ ಕಾಲದಲ್ಲಿ ಅಲ್ಪಶ್ರಮದಿಂದ



CC-0. Jangamwadi Math Collection. Digitized by eGangotri

ಪರ್ವತಪ್ರಾಯವಾದ ವಸ್ತುಗಳು ನಿರ್ಮಿತವಾಗಿ ಅಪಾರ ಸಂಪತ್ತಿಯಿಂದ ಕಾರಖಾನೆದಾರರ ಬೊಕ್ಕಸವು ಉಕ್ಕಿ ಹೊರಚೆಲ್ಲತೊಡಗಿತು. ಉದ್ಯೋಗ ದೊರಕಿಸುವ ಸಲುವಾಗಿ ಕೂಲಿಕಾರರಲ್ಲಿ ಸ್ಪರ್ಧೆಯು ಉಂಟಾಗಿ ನಿರುದ್ಯೋಗಿಗಳ ತಂಡವು ಬೆಳೆಗೊಂಡಿತು. ಬಂಡವಾಳಿಗನ ಮುಷ್ಟಿಯಲ್ಲಿ ಕೂಲಿಕಾರನ ಜೀವವು ತಳಮಳಿಸತೊಡಗಿತು. ಹೀಗೆ ಸಂಪತ್‌ಸಂಚಯದಲ್ಲಿ ವ್ಯಸ್ತಪ್ರಮಾಣವು ಬಿದ್ದು, ಸಮಾಜದ ಒಂದು ವರ್ಗವು ಸಿರಿಯ ಶಿಖರದ ಮೆಟ್ಟಲುಗಳನ್ನು ರಭಸದಿಂದ ಏರುವುದಾಗಿ ಇನ್ನೊಂದು ವರ್ಗವು ಅಧೋಮುಖವಾಗಿ ಧೂಲಿಪಂದನೆ ಮಾಡತೊಡಗಿತು. ಈ ವಿಷಮತೆಯ ರೋಗವು ಪಾಶ್ಚಾತ್ಯರಾಷ್ಟ್ರಗಳಲ್ಲಿ ವಿಶೇಷವಾಗಿ ರೂಢಿಗೊಂಡುದರಿಂದ ಸಮಾಜಶಾಸ್ತ್ರಜ್ಞ ವೈದ್ಯರು ಅದನ್ನು ಹೊಗಲಾಡಿಸುವುದಕ್ಕೆ ಒಂದು ರಾಮಬಾಣದಂತಹ ಉಪಾಯಯೋಜನೆಯನ್ನು ಕಂಡುಹಿಡಿದಿದ್ದಾರೆ. ಆ ಯೋಜನೆಗೇ "**ಸೋಶಾಲಿಝಮ್**" ಅಥವಾ "**ಸಮಾಜ ಸಮತಾವಾದ**" ಎಂಬ ಹೆಸರು. ಅದರ ಕೊಂಚ ಪರಿಚಯವು ಈ ಸಮಯದಲ್ಲಿ ಬೋಧಪ್ರದವಾಗದೆ ಇರದು.

"**ಸೋಶಾಲಿಝಮ್**" ಎಂಬ ಸಮಾಜಶಾಸ್ತ್ರದ ವಿಷಯವನ್ನು ಹಲವರು ಹಲವು ಬಗೆಯಿಂದ ವರ್ಣಿಸಿದ್ದಾರೆ. ಆದರೆ ಅವೆಲ್ಲವುಗಳ ಸಾರಭೂತವಾದ ವ್ಯಾಖ್ಯೆಯೆಂದರೆ:— ಸಂಪತ್ತಿಯ ಉತ್ಪಾದನೆಯ ಸರ್ವಸಾಧನೆಗಳ ಒಡೆತನವು 'ಪ್ರಜಾಧಿಪತ್ಯದ' ತತ್ತ್ವಾನುಸಾರವಾಗಿ ಸಾಗಿದ ಸರಕಾರದ ಕೈಸೇರಿ, ಆ ಸಾಧನೆಗಳ ಉಪಯೋಗವನ್ನು ಇಡಿ ಸಮಾಜದ ಪ್ರಯೋಜನಕ್ಕೋಸ್ಕರ ಸಹಕಾರಿತೆಯಿಂದ ಮಾಡುವ ಮೂಲಭೂತ ತತ್ತ್ವದ ಹೆಸರು ಸೋಶಾಲಿಝಮ್. 'Socialism is essentially a doctrine and a movement aiming at the collective organisation of the community in the interest of the mass of the people by means of the common ownership and collective control of the means of production and exchange" G. D. H. Cole in E. B. ಎಂದರೆ, ಸಂಪತ್ತಿಯ ಉತ್ಪತ್ತಿವಿನಿಮಯಗಳ ಸಾಧನೆಗಳನ್ನು ಸಾರ್ವಜನಿಕ ಸಂಘದ ಒಡೆತನಕ್ಕೆ ಸೇರಿಸಿ, ಹಾಗೂ ಸಾಮುದಾಯಿಕ ನಿಯಂತ್ರಣದಿಂದ ಅವುಗಳನ್ನು ಸಾಗಿಸಿ ಸರ್ವಸಮಾಜದ ಹಿತವು ಪ್ರಾಮುಖ್ಯವಾಗಿ ಒದಗುವಂತೆ ಸಾಮುದಾಯಿಕ ತತ್ತ್ವದ ಮೇಲೆ ಸಮಾಜದ ಕಟ್ಟಡವನ್ನು ರಚಿಸುವಗುರಿಯುಳ್ಳ ಮತ ಅಥವಾ ಚಳವಳಿಯೆಂದರೆ ಸಮಾಜಸಮತಾವಾದವೆಂದು ಎನ್ನುವುದುಂಟು.

ಶಾಸನಶಾಸ್ತ್ರವು ಅಸ್ತಿತ್ವದಲ್ಲಿ ಬಂದಾಗಿನಿಂದಲೂ ಈ ಸಮಾಜಸಮತಾವಾದಕ್ಕೆ ಮೊಳಕೆ ಒಡೆದಿರುವುದು. ಸಮಾಜವನ್ನು ಶಾಸನಗೊಳಿಸಲು "ಸರಕಾರ" ವೆಂಬ ಸ್ವತಂತ್ರವಾದ ಸಂಸ್ಥೆಯ ಆವಶ್ಯಕತೆಯು ಬೇಕೆಂಬಂತೆ, ಉತ್ಪಾದನೆಯ ಸಾಧನೆಗಳೆಲ್ಲ ಸಮಾಜದ ಅಥವಾ ಸರಕಾರದ ಸ್ವಾಮಿತ್ವದಲ್ಲಿರಬೇಕೆಂಬಮತವು ಮೂಡಗೊಂಡಿತು. ಇತಿಹಾಸದಲ್ಲಿ 'ಸೋಶಾಲಿಝಮ'ದ ಸಿದ್ಧಾಂತಗಳು ಪ್ರಾಥಮಿಕ ಸ್ಥಿತಿಯಲ್ಲಿ ಗ್ರೀಕ್, ರೋಮನ ಜನರ ಗ್ರಂಥಗಳಲ್ಲಿ ಕೂಡ ತೋರಿಬರುವವು. ಆದರೆ ಅದಕ್ಕೆ ಮೂರ್ತಸ್ವರೂಪವು ಬಂದದ್ದು ೧೮ನೆಯ ಶತಮಾನದ ಯಾಂತ್ರಿಕಯುಗದ ನಂತರದಲ್ಲಿಯೇ. ಯುರೋಪ ಖಂಡದ ಸಮಾಜಶಾಸ್ತ್ರದ ಆದ್ಯಪ್ರವರ್ತಕನೆಂದರೆ ಫ್ರಾನ್ಸ್‌ದೇಶದ "ರೂಸೋ" ಎಂಬಾತನು. ಅವನ Le Contract ಎಂಬ ಗ್ರಂಥದಲ್ಲಿ ಸಮಷ್ಟಿವಾದದ ಉದಾತ್ತ ವಿಚಾರಗಳು ಬಹು ಸುಂದರವಾಗಿ ಬರೆಯಲ್ಪಟ್ಟಿವೆ. ರೂಸೋನಿಂದ 'ಸೋಶಾಲಿಝಮ್'ದ ವಿಕಾಸವು ಆಗುತ್ತ ಆಗುತ್ತ, ಇಂದು ರಶಿಯಾದ ಸೋವ್ಹಿಯಟ್ ರಾಜ್ಯದಲ್ಲಿ ಅದು ಪ್ರತ್ಯಕ್ಷಸೃಷ್ಟಿಯಲ್ಲಿಳಿದು ವ್ಯಾವಹಾರಿಕ ಸ್ವರೂಪವನ್ನು ತಾಳಲು ಯತ್ನಪಡುತ್ತಿದೆ—ನ್ನ ಲಿಕ್ಕೆ ಅಡ್ಡಿಯಿಲ್ಲ. ಆದರೆ ಆಧುನಿಕಸಮಾಜಸಮತಾವಾದದ ಜನಕತ್ವವನ್ನು "ಕಾರ್ಲ್‌ಮಾರ್ಕ್ಸ್" ಎಂಬ ಜರ್ಮನ ಪಂಡಿತನಿಗೆ ಸಲ್ಲಿಸುವುದುಂಟು. ಅವನು ಸುಮಾರು ೧೮೪೦ರಿಂದ ೧೮೮೩ರ ವರೆಗೆ ತನ್ನ ಜೊತೆಗಾರನಾದ "ಫ್ರೆಡ್ರಿಕ್ ಎಂಜೆಲ್ಸ್" ನನ್ನು ಕೂಡಿಕೊಂಡು ಈ ಪಂಥವನ್ನು ಯುರೋಪದ ತುಂಬ ಸಾರಿ ಹೇಳಿದನು. ಮಾರ್ಕ್ಸನಿಗೆ 'ಸೋಶಾಲಿಝಮ್'ದ ಪ್ರಣೇತೃವೆಂದು ತಿಳಿಯುತ್ತಾರೆ. ಅವನ Das Capital (ಬಂಡವಾಳ) ಎಂಬುದು 'ಸೋಶಾಲಿಝಮ್'ದ ಪ್ರಮಾಣಭೂತವಾದ ಇದ್ದು, ಶಾಸ್ತ್ರವಾಗಿದ್ದು, ಅದರಲ್ಲಿ ಈ ನವೀನ ತತ್ತ್ವಜ್ಞಾನವು ಶಾಸ್ತ್ರಶುದ್ಧ, ತರ್ಕಶುದ್ಧ ಹಾಗೂ ಸೋಪಪತ್ತಿಕ ರೀತಿಯಿಂದ ವಿಶದವಾಗಲ್ಪಟ್ಟಿದ್ದರಿಂದ ಅದಕ್ಕೆ "The Bible of

CC-0. Jangamwadi Math Collection. Digitized by eGangotri

Communists" ಎಂಬ ಯಥಾರ್ಥವಾದ ಹೆಸರು ಬಂದಿದೆ.

ಜಗತ್ತಿನೊಳಗಿನ ಎಲ್ಲ ದುಃಖಯಾತನೆಯ ಮೂಲ ಕಾರಣವೆಂದರೆ ಸಂಪತ್ತು. ಈ ಸಂಪತ್ತು ಜನಸಮೂಹದಲ್ಲಿ ಸರಿಸಮಾನವಾಗಿ ಯೋಗ್ಯರೀತಿಯಿಂದ ಹಂಚದೆ ಹೋಗಿರುವುದರಿಂದ, ಎಲ್ಲಬಗೆಯ ವಿಷಮತೆಗಳು ತಲೆಯೆತ್ತಿ ನಿಂತಿವೆ. ಬಹುಜನಸಮಾಜದ ಶ್ರಮದ ಮೇಲೆ ಅಲ್ಪಸಂಖ್ಯಾಕರಾದ ಜನಗಳು ಸಿರಿಯನ್ನು ಸಂಚಯಿಸುವುದರಿಂದ, ನಿಜವಾದ ಕಷ್ಟಜೀವಿಗಳು ಸದಾ ದುಃಖಯಾತನೆಯಿಂದ ತಳಮಳಿಸುವರು. ಆದರಿಂದ ಆ ಅಲ್ಪಸಂಖ್ಯಾಕರಾದ ಹಣವಂತರ ವರ್ಗವನ್ನು ಸಮೂಲವಾಗಿ ನಾಶಮಾಡಿ, ಸಮಾಜದೊಳಗಿನ ಪ್ರತಿಯೊಂದು ಘಟಕವು ಸಂಘಶಕ್ತಿಯ ಸಮಾನಹಕ್ಕುದಾರನಾಗಬೇಕು–ಎಂಬ ಅರ್ಥದ ತಳಹದಿಯ ಮೇಲೆ 'ಮಾರ್ಕ್ಸ್' ನ ಸಿದ್ಧಾಂತವು ನಿಂತಿರುವುದು.

**ಈ ವಿಷಮತೆಯು ಉಂಟಾಗುವ ಬಗೆಯನ್ನಾದರೂ ವಿಚಾರಿಸುವಾ.**

ಬಂಡವಾಳವೆಂದರೆ ಸಂಪತ್ತಿಯನ್ನು ಹುಟ್ಟಿಸುವ ಒಂದು ಸಾಧನೆ. ಉದಾಹರಣಾರ್ಥ ಭೂಮಿಯಿಂದ ಧನವು ಹುಟ್ಟುವುದಾದ್ದರಿಂದ ಭೂಮಿಗೆ ಬಂಡವಾಳವೆನ್ನುವರು. ಆದರೆ ಭೂಮಿಯ ಮೇಲೆ 'ಶ್ರಮ' ಮಾಡಿದ ವಿನಾ ಅರ್ಥವು ನಿರ್ಮಿತವಾಗದ್ದರಿಂದ 'ಶ್ರಮ' ವು ಸಂಪತ್ತಿಯ ಎರಡನೆಯ ಸಾಧನವು. ಕಷ್ಟ ಮಾಡಿ ಭೂಮಾತೆಯ ಉದರದಲ್ಲಿ ನಾವು ಒಂದು ಕಾಳು ಜೋಳವನ್ನು ಬಿತ್ತಿದೆವೆಂದು ಕಲ್ಪಿಸುವಾ. ಮುಂದೆ ಆ ಕಾಳು ಮೊಳಕೆಯೊಡೆದು, ದಂಟಾಗಿ ಬೆಳೆದು, ಮುಷ್ಟಿತುಂಬ ಕಾಳಿನಿಂದ ತುಂಬಿದ ತೆನೆಯೊಂದನ್ನು ಧರಿಸುವುದಲ್ಲವೇ ? ಹೌದು. ಅಂದರೆ ಸೃಷ್ಟಿಶಕ್ತಿಗೆ ಮನುಷ್ಯನ ಶ್ರಮದ ಬೆಂಬಲ ಕೊಟ್ಟು ನಾವು ಧನೋತ್ಪಾದನೆ ಮಾಡಿದಂತಾಯಿತು. ಒಂದೇ ಒಂದು ಕಾಳಿನ ಬಿತ್ತಿಗೆಯಿಂದ ನೂರಾರು ಕಾಳಿನ ಒಕ್ಕುವಿಕೆಯಾಯಿತು. ಹೀಗೆ ನಾವು ವೆಚ್ಚ ಮಾಡಿದುದಕ್ಕಿಂತಲೂ ಅಧಿಕವಾದ ಧನವು ನಮಗೆ ಹೆಚ್ಚಿನದಾಗಿ (Surplus) ದೊರಕಿತು. ಇದೇ ಮೇರೆಗೆ ಯಂತ್ರಬಲ ಹಾಗೂ ಕೂಲಿಕಾರರ ದುಡಿಮೆ ಇವುಗಳ ನಿಯೋಗದಿಂದ ಕಚ್ಚಾಮಾಲು ರೂಪಾಂತರಗೊಂಡು ಸಿದ್ಧವಸ್ತುವಾಗುವುದು. ಆದರಲ್ಲಿ ಮೇಲಿನಂತಹ ಹೆಚ್ಚಿನಲಾಭವು ಕಂಡು ಬರುವುದು. ಈ ಲಾಭವು ಯಾರ ಪಾಲಿನದು ? ಇದೇ ಸೋಶಿಯಾಲಿಸ್ಟರ ಮುಖ್ಯಪೃಚ್ಛೆಯು. ಕೂಲಿಕಾರನಿಗೆ ಅವನ ನಿಯಮಿತವಾದ ಸಂಬಳ (Subsistence wages) ವು ದೊರೆಯುವುದು. ಕಚ್ಚಾಮಾಲಿನ ಬೆಲೆಯನ್ನೂ ಯಂತ್ರದ ಸವಕಳಿಯನ್ನೂ ಉತ್ಪನ್ನವಾದ ಪಕ್ಕಾ ಒಡವೆಯ ಕ್ರಯವೆಂಬ ಸಂಪತ್ತಿನೊಳಗಿಂದ ಕಳೆದು ಬಿಟ್ಟರೆ ಕೊನೆಯಲ್ಲಿ ಉಳಿತಾಯವಾದದ್ದೇ ಹೆಚ್ಚಿನಲಾಭವು (Surplus value). ಜಡವಾದ ಯಂತ್ರವೇನೂ ಈ ಹೆಚ್ಚಳದ ಉಪಯೋಗವನ್ನು ಮಾಡಿಕೊಳ್ಳುವಂತಿಲ್ಲ. ಆದರಿಂದ ಯಂತ್ರದ ಒಡೆಯನಾದ ಕಾರಖಾನೆದಾರನು ಈ ಹೆಚ್ಚಳವನ್ನು 'ಸುಲಿದ ಬಾಳೆಯ ಹಣ್ಣಿನಂದದಿ' ಗಿಳಂಕೃತ ಮಾಡಿ ಬಿಡುತ್ತಾನೆ. ಆದರ ಬಲದಿಂದ ದಿನಕ್ಕೊಂದು ಚೆಂದಾಗಿ ಹೊಸಹೊಸ ಯಂತ್ರಸಾಮಗ್ರಿಯನ್ನು ಬೆಳೆಯಿಸಿ ಬಂಡವಾಳಿಗನು ತನ್ನ ಧನರಾಶಿಯನ್ನು ಕೂಡಹಾಕುವನು.

ಆದರೆ ಸೋಶಿಯಾಲಿಸ್ಟರು ಅನ್ನುವುದೇನೆಂದರೆ:- ಕಾರಖಾನೆದಾರನು ಕೂಲಿಕಾರರ ಶ್ರಮದಿಂದ ವಸ್ತುಗಳನ್ನು ಸಿದ್ಧಗೊಳಿಸುವನು. ಆದರಿಂದ ಉಂಟಾದ ಸಂಪತ್ತು ಕೂಲಿಯವನ ಶ್ರಮದ ಫಲವಾಗಿರುವುದು. ಪದಾರ್ಥಗಳಿಗೆ ಸಂಪತ್ತಿಯ ರೂಪವು ಬರಲು ಮಾನವನ ಶ್ರಮವೇ ಕಾರಣೀಭೂತವಾದ್ದರಿಂದ, ಶ್ರಮವೇ ಪದಾರ್ಥಗಳಿಗೆ ಬೆಲೆಕಟ್ಟುವುದು. ಇದೇ ಸಾಮ್ಯಶಾಸ್ತ್ರದ ಹಿರಿಯಾಧಾರವು; ಆದರೆ ಯಾರ ಶ್ರಮದಿಂದ ಪದಾರ್ಥಗಳಿಗೆ ಬೆಲೆ ಏರುವದೋ ಅವರ ಬಾಯಲ್ಲಿ ಗಡ್ಡೆ ! ಕೂಲಿಯವರಿಗೆ ತಮ್ಮ ಎಲುಬು ಮಾಂಸಗಳ ಚೌಕಟ್ಟನ್ನು ಕಾಯಲು ಬೇಕಾದಷ್ಟು ವೇತನವು ಮಾತ್ರ ದೊರೆತು, ಅವರ ಶ್ರಮದ ಲಾಭಸರ್ವಸ್ವವೂ ಬಂಡವಾಳಿಗರ ಬೊಕ್ಕಸಕ್ಕೆ ಕೂಡುವುದು. ಯಾರು ತಮ್ಮ ರಟ್ಟೆಯ ಬಲದಿಂದ ರಾಜಮಂದಿರವನ್ನು ನಿಲ್ಲಿಸಿದರೋ ಅವರಿಗೆ ಹುಲ್ಲಿನ ಚಪ್ಪರವು ಕೂಡ ದೊರಕುವುದು ಅಸಾಧ್ಯವಾಗಿದೆ. ಸಂಪತ್ತಿಯು ಕೂಲಿಯವರ ದುಡಿಮೆಯಿಂದ ನಿರ್ಮಿತವಾದ್ದರಿಂದ, ನಿಜವಾಗಿ ಅದು ಅವರ ಗಳಿಕೆಯೇ ಸರಿ. ಈಗ ನಡೆವಳಿಕೆಯಲ್ಲಿರುವ ಅನ್ಯಾಯದ ಉದ್ಯೋಗಪದ್ಧತಿಯಿಂದ ಬಂಡವಾಳಿಗನು ಆ ಲಾಭದ ಬಹುಭಾಗವನ್ನು ಅಪಹರಣೆ

CC-0. Jangamwadi Math Collection. Digitized by eGangotri

ಮಾಡಿಬಿಡುತ್ತಾನೆ. ಇದಕ್ಕೆ ಸೋಶಿಯಾಲಿಸ್ಟರು ಒಂದು ತೆರದ ಲೂಟಿ ಅಥವಾ ಕಳವಿನ ಧನವೆಂದು ಕರೆಯು ತ್ತಾರೆ. ಈ ಕಳವಿನ ಗಂಟು ಚಿರಕಾಲ ಬಂಡವಾಳಿಗನ ಜೇಬಿನಲ್ಲಿ ಬಾಳುವುದು ಅಸಾಧ್ಯವೆಂದು ಕೂಲಿಯವರು ಅದನ್ನು ಕಸಿಯಲು ಯತ್ನಿಸುವದು ಸರ್ವಥಾ ಅನ್ಯಾಯವಾಗದು. ಅದರಂತೆ ಕಾರ್ಲ್ ಮಾರ್ಕ್ಸನು ಭೂಮಂಡಲದ ಕೂಲಿಕಾರರನ್ನುದ್ದೇಶಿಸಿ ಕೆಳಗಿನ ಮಹಾಮಂತ್ರವನ್ನು ಜಪಿಸಲು ಸಾರಿ ಹೇಳಿದನು.

" Proletarians of the World ! Unite! You have nothing to loose but your chains. You have worlds to win. " ಈ ಮಂತ್ರಪ್ರಭಾವದಿಂದ ಯುರೋಪದೊಳಗಿನ ಕೂಲಿಕಾರರ ತಂಡವು ಗಡಿಬಡಿಸಿ, ಗಾಢನಿದ್ರೆಯಿಂದ ಎಚ್ಚತ್ತು, ಹೊಸ ಚೈತನ್ಯಜ್ಯೋತಿಯಿಂದ ಉದ್ದೀಪಿತವಾಗಿದೆ.

ಮೇಲೆ ವಿವರಿಸಿದಂತೆ ಯಂತ್ರಜನಿತಧನವನ್ನು ಬಂಡವಾಳಿಗನು ಕಳವು (ಲೂಟಿ) ಮಾಡಿ ತನ್ನ ಸ್ವಾರ್ಥ ಸಾಧಿಸುವುದರಿಂದ, ಕೂಲಿಕಾರರಲ್ಲಿ ಅಸಂತೋಷದ ಬೀಜವು ಬೀಳುವುದು ಸಹಜ. ಅವರಿಬ್ಬರಲ್ಲಿಯೂ ವರ್ಗದ್ವೇಷವು ಹುಟ್ಟಿ ಕಲಹಾಗ್ನಿ ಹೊತ್ತಲು ಆರಂಭವಾಗುವುದು. ಕೂಲಿಕಾರರ ಸಮಾಜದಲ್ಲಿ ವಿಷಮತೆಯ ತಿಳಿವು ಒಡಮೂಡಿ, ತಮ್ಮ ವರ್ಗದ ಅಭಿಮಾನ (Class-consciousness) ದಿಂದ ತುಂಬಿ ತುಳುಕಿದವರಾಗಿ ಒಮ್ಮನದಿಂದ ಎಲ್ಲರೂ ಒಟ್ಟುಗೂಡುವರು. ಅವರ ಪ್ರಚಂಡ ಸಂಘಶಕ್ತಿಯ ಸಿಂಹನೆದುರಿಗೆ ಇಲಿಯಂತಿರುವ ಬಂಡವಾಳಿಗರ ಕೂಟದ ಬಲವು ಕುಂದಿಹೋಗುವುದರಲ್ಲಿ ಸಂದೇಹವೇನು ? ಇಷ್ಟಫಲವು ಕೈಸೇರಿದ ಅನಂತರವೇ ಈ ಕ್ರಾಂತಿಯು ಕೊನೆಗೊಳ್ಳಬಹುದು.

ಸಂಪತ್ತಿಯ ಉತ್ಪಾದನೆ, ಹಂಚುವಿಕೆ, ವಿನಿಮಯ ಇವುಗಳ ಸಾಧನೆಗಳು ವ್ಯಕ್ತಿಗಳ ಒಡೆತನದಲ್ಲಿರದೆ, ಅವುಗಳ ಮೇಲೆ ಇಡೀ ಸಮಾಜದ ಅಧಿಕಾರವು ನಡೆಯಬೇಕು—ಎಂಬುದು ಸೋಶಿಯಾಲಿಸ್ಟರ ಮೊದಲನೆಯ ಬೇಡಿಕೆ. ಸಧ್ಯ ನಡೆವಳಿಕೆಯಲ್ಲಿರುವ ಆರ್ಥಿಕಪರಿಸ್ಥಿತಿಯ ಮೂಲಕ ಸಮಾಜದಲ್ಲಿ ಉಚ್ಚ-ನೀಚವೆಂಬ ವರ್ಗಗಳಾಗಿದ್ದುದು ಇಲ್ಲದಂತಾಗಬೇಕು. ಸ್ಪರ್ಧೆಯ ತತ್ತ್ವವು ಲೋಪಗೊಂಡು ಸಾಮುದಾಯಿಕ ಸಹಕಾರ್ಯದ ತತ್ತ್ವದ ಮೇಲೆ ಸಮಾಜದ ಪುನರ್ಘಟನೆಯಾಗಬೇಕು—ಎಂದು ಸೋಶಿಯಾಲಿಸ್ಟರ ಹವಣಿಕೆಯಿದೆ. ಇಂದಿನ ಸಮಾಜರಚನೆಯಲ್ಲಿ ಸಂಪತ್‌ಸಾಧನೆಗಳ ಮೇಲೆ ಕೊಂಚವಾದರೂ ಸಾಮುದಾಯಿಕ ಅಧಿಕಾರವು ಇಲ್ಲವೆನ್ನುವಂತಿಲ್ಲ. ಅಂಚೆತಂತಿಗಳ ಖಾತೆಗಳು, ದಂಡು, ಹಡಗುಪಡೆ, ನಗರರಚನೆ, ರಹದಾರಿ, ದೀಪ ಹಚ್ಚೋಣ, ನೀರಿನ ಪೂರೈಕೆ, ಆರೋಗ್ಯ ಮುಂತಾದುವುಗಳು ಸರಕಾರ ಇಲ್ಲವೆ ಸ್ಥಾನಿಕಸ್ವರಾಜ್ಯಸಂಸ್ಥೆಗಳ ಸ್ವಾಮಿತ್ವದಲ್ಲಿಯೇ ಉಂಟೆಂಬ ಮಾತು ನಿಜ. ಆದರೆ ಇಷ್ಟರಿಂದ ಸೋಶಿಯಾಲಿಸ್ಟರ ತೃಪ್ತಿಯಾಗುವುದೆಂತು? ಅಲ್ಲದೆ ಅವರ ಹಿರಿದಾದ ಆಕ್ಷೇಪಣೆಯೆಂದರೆ ಮೇಲಿನ ಸಂಪತ್ ಸಾಧನೆಗಳು ಸಾರ್ವಜನಿಕಸೂತ್ರದಿಂದ ನಡೆದಿದ್ದರೂ ಒಟ್ಟು ಸಮಾಜದ ಹಿತವು ಅದರಿಂದಾಗದೆ, ಬಂಡವಾಳಿಗರನ್ನು ಸಮೃದ್ಧರನ್ನಾಗಿಡಲು ಮಾತ್ರ ಹಾಗಿರುವುದು ಅವಶ್ಯವಾಗಿದೆ. ಕಾರಖಾನೆದಾರನು ತನ್ನ ಸಂಪತ್ತನ್ನು ಹೆಚ್ಚಿಸುವುದಕ್ಕೆ ಕೂಲಿಯವರನ್ನು ಹಿಂಡಿ ಒಗೆಯುವುದರಿಂದ ಅವರ ಸ್ವಸ್ಥತೆ, ಸುಖಜೀವನಗಳ ಕಡೆಗೆ ಕಿಂಚಿತ್ತಾದರೂ ಲಕ್ಷ್ಯಕೊಡದೆಯಿರುವುದು ಅಶಕ್ಯವೆಂದು ಬಗೆದು ಅವನು ಮೇಲಿನ ಸಾಧನೆಗಳನ್ನು ಸಾರ್ವಜನಿಕ ಪ್ರಭುತ್ವದಲ್ಲಿ ತರಲು ಯತ್ನಮಾಡಿದ್ದಾನೆ. ಆದರೆ ಅವುಗಳಲ್ಲೂ ಬಂಡವಾಳಿಗನ ವರ್ಚಸ್ಸು ಮಿತಿಮೀರಿ ಸಾಗುವುದು. ಕಾರಣ ಭೂಮಿ, ಹೊಗೆಬಂಡಿ, ಗಣಿಗಳು, ಕಾರಖಾನೆಗಳು ಮೊದಲಾದ ಯಾವತ್ತೂ ಅರ್ಥಸಾಧನೆಗಳು ಸಮಾಜದ ನಿಯಂತ್ರಣದ ಕೆಳಗೆ ಸಾಗಿ ಇಡೀ ಸಮಾಜದ ಹಿತದ ಸಲುವಾಗಿ ಅವುಗಳ ಉಪಯೋಗವಾಗಬೇಕೆಂದು ಸೋಶಿಯಾಲಿಸ್ಟರ ಖಂಡಿತವಾದ ಮತವು. ವ್ಯಕ್ತಿಗಳ ಒಡೆತನವೆಂಬುದು ಸಮಾಜದಲ್ಲಿ ಸಮೂಲ ನಾಶ ಹೊಂದಲು ಬೇಕು. ಎಲ್ಲ ಬಂಡವಾಳಿಗರು ಕೂಲಿಕಾರರಾಗಿ, ಸಮಾಜದಲ್ಲಿ ಒಂದೇ ಒಂದು ಕೂಲಿಕಾರ ವರ್ಗವು ಉಳಿದು, ಭೇದವನ್ನರಿಯದೆ ಸರ್ವರೂ ಶ್ರಮ ಮಾಡಿ ಅದರ ಪ್ರತಿಫಲವನ್ನು ಹೊಂದಬೇಕು. ಸಾರ್ವಜನಿಕ ಜೀವನವು ಉದಯಹೊಂದಿ, ವರ್ಗಕಲಹವು ಕಡಿಮೆಯಾಗಿ ಸಮಾಜದ ಸಂಚಿತಧನವನ್ನು ಸರಿಸಮಾನತೆಯಿಂದ ಸರ್ವರೂ ಉಪಭೋಗಿಸಬಹುದು. ಹೀಗಾದಲ್ಲಿ ವಿಷಮತೆಯ ಕಾಡಡವಿಯು ಹಸನಾಗಿ, ಸೋಶಿ

CC-0. Jangamwadi Math Collection. Digitized by eGangotri

ಯಾಲಿಸ್ಟ' ನಂದನವನದಲ್ಲಿ ಶಾಂತಿಕುಸುಮಗಳು ಅರಳುವುವು; ಸೌಖ್ಯಸುಗಂಧವು ಹರಡುವುದು; ಸ್ವಾತಂತ್ರ್ಯದ ತಂಗಾಳಿಯು ಬೀಸುವುದು; ಸಮತೆಯ ದೇವಾಂಗನೆಯು ವಿಹಾರಮಾಡುವಳು.

ಯಂತ್ರಶೋಧನೆಯಿಂದ ಕೊಂಚವಾದ ಸ್ಥಳದಲ್ಲಿ, ಅಲ್ಪಶ್ರಮದಿಂದ, ನಿಮಿಷಾರ್ಧದಲ್ಲಿ ಪರ್ವತಪ್ರಾಯವಾದ ಸಂಪತ್ತಿಯು ಒಂದೇ ಕೈಯಲ್ಲಿ ಕೇಂದ್ರೀಭೂತವಾಗಹತ್ತಿತೆಂದು ಮೇಲೆ ಹೇಳಿದೆ. ಆದರೆ ಇದಕ್ಕೆ ಸುಲಭವಾದ ವಾಹನಗಳ, ಎಂದರೆ ಉಗಿಬಂಡಿ, ಉಗಿಹಡಗು ವಿಮಾನ ಮೊದಲಾದುವುಗಳ ನೆರವು ಸಿಕ್ಕದ್ದರಿಂದ ದೂರ ದೂರವಾಗಿದ್ದ ಜಗದ ಮೂಲೆಗಳೆಲ್ಲವೂ ಸಮಿಪದಲ್ಲಿ ಬಂದಂತೆ ಆಗಹತ್ತಿದುವು. ಕಾರಖಾನೆಗಳಲ್ಲಿ ಸಿದ್ಧಗೊಂಡ ಬಂಡವಾಳಿಗನ ವಸ್ತುಗಳು ಹೆಚ್ಚು ಪ್ರಮಾಣದಿಂದ ಮಾರಾಟವಾಗಲು ಅವನಿಗೆ 'ಪರಪೇಟೆ' ಗಳನ್ನು ಕೈವಶ ಮಾಡಿಕೊಳ್ಳುವ ಸಾಹಸಮಾಡುವ ಆವಶ್ಯಕತೆ ಉಂಟಾಗುವುದು. ಇದೇ ಸಾಮ್ರಾಜ್ಯತೃಷ್ಣೆಗೆ ಮೂಲಬೀಜವಾಗಿದ್ದು, ರಾಜ್ಯವಿಸ್ತಾರದ ಸಲುವಾಗಿ ಯುದ್ಧ, ಕೊಲೆ ಸುಲಿಗೆಗಳು ಕ್ರಮಪ್ರಾಪ್ತವೇ ಸರಿ. ಯುದ್ಧದ ವೆಚ್ಚವೆಂಬ ಗಾಣದಲ್ಲಿ ರೈತರೂ ಕೂಲಿಕಾರರೂ ಹಿಂದಿ ಬೆಂಡಾಗುತ್ತಿರುವುದನ್ನು ಎಲ್ಲೆಲ್ಲಿಯೂ ಕಾಣಬಹುದು.

ಆದರೆ ಸೋಶಿಯಾಲಿಸ್ಟ ಪಂಗಡದ ಹೊಸ ಸಮಾಜರಚನೆಯಲ್ಲಿ ಪ್ರತಿಯೊಂದು ವ್ಯಕ್ತಿಮಾತ್ರವೂ ಶ್ರಮಬಟ್ಟು ಸಂಪತ್ತಿಯನ್ನು ನಿರ್ಮಿಸಲು ನೆರವಾಗಲೇಬೇಕು. ಹೀಗೆ ಹುಟ್ಟಿಸಿದ ಧನರಾಶಿಯಿಂದ ಸಮಾಜದ ಯಾವತ್ತೂ ಘಟಕಗಳನ್ನು ಯೋಗ್ಯವಾಗಿ ಪೋಷಿಸುವ ಹೊಣೆಯು ಸರಕಾರದ್ದಾಗಿದೆ. ಅಲ್ಲಿ ನಿರುದ್ಯೋಗ(Unemployment) ಅರೆಹೊಟ್ಟೆಯ ಬಾಳು ಮುಂತಾದ ಆಪತ್ತುಗಳು ಹಣಿಕೆ ಹಾಕುವುದು ವಿರಳ. ಚಿಕ್ಕಮಕ್ಕಳು, ರೋಗಗ್ರಸ್ತರು, ಹೆಣ್ಣಂತಿಯರು, ಮುದುಕರು, ಅವಯವಹೀನರು ಮೊದಲು ಕಷ್ಟಮಾಡದಲೆ ಸಮಾಜದಿಂದ ರಕ್ಷಣೆಹೊಂದುವುದು ವಿಹಿತವು. ವ್ಯಕ್ತಿಯ ಒಡೆತನವು ಲೋಪಗೊಂಡದ್ದರಿಂದ ನಿರರ್ಥಕವಾದ ವಿಲಾಸಗಳಲ್ಲಿ ಹಾರಿಹೋಗುವ ದುಡ್ಡು ಸರ್ವಸಮಾಜಹಿತಕ್ಕೆಂದು ಬಳಸಲ್ಪಡುವುದು. ಎಲ್ಲರಿಗೂ ಸುನೀತಿಪೋಷಕವಾತಾವರಣದಲ್ಲಿಯ ಶಿಕ್ಷಣದ ಅನುಕೂಲತೆ, ಆರೋಗ್ಯದ ಬಾಳುವೆಗಳು ಸಮಾನವಾಗಿ ದೊರಕುವುದರಿಂದ ಮನುಷ್ಯನ ಸರ್ವಾಂಗೋನ್ನತಿಗೆ, ಸರ್ವಶಕ್ತಿಯ ವಿಕಾಸಕ್ಕೆ ಪೂರ್ಣ ಅವಕಾಶವು ಸಿಕ್ಕುವುದು.

ಇಂದಿನ ಸಮಾಜವ್ಯವಸ್ಥೆಯಲ್ಲಿ ಆರ್ಥಿಕ ಸ್ಪರ್ಧೆಯೂ (Economic competition) ವ್ಯಕ್ತಿಗಳ ಒಡೆತನದ ವಿಶೇಷ ಹಕ್ಕೂ ( monopoly ) ನೆಲೆಗೊಂಡದ್ದರಿಂದ ವೈಯಕ್ತಿಕವಾದ ಸ್ವತಂತ್ರತೆಯು ಇಲ್ಲದಂತಾಗಿ ಹೋಗಿದೆ. ಒಂದು ವಿಶಿಷ್ಟಪ್ರಕಾರದ ಕೆಲಸದಲ್ಲಿ ಒಂದು ವ್ಯಕ್ತಿಯ ಮನದ ಓಟವು ಇದ್ದರೆ, ಅವನ ಒಲವನ್ನು ಪೂರೈಸಲು ಆಸ್ಪದವು ಸಿಕ್ಕದೆ ಹೋಗುವುದರಿಂದ ಅವನ ಬುದ್ಧಿಯು ಬೆಳೆಯದೆ ಜಂಗುತಿನ್ನಲುತೊಡಗುವದು. ಇಂಥವನಿಗೆ ನಿಜವಾಗಿ ಸ್ವತಂತ್ರನೆನ್ನಬಹುದೇ ? ಧನಿಕರ ದಾಸರಾಗಿ ಬೌದ್ಧಿಕ ಶ್ರಮಮಾಡಿ ದುಡ್ಡು ಗಳಿಸುವವರಾದರೂ ಒಂದು ತರ ಗತಿಯ ಗುಲಾಮರೇ ಸರಿ. ಒಬ್ಬ ಕೋಟ್ಯಾಧೀಶನ ಸೂತ್ರದಲ್ಲಿದ್ದ ವೃತ್ತಪತ್ರದ ಸಂಬಳದ ಸಂಪಾದಕನೂ, ಧನಿಕನ ದಾನದ ಮೇಲಿಂದ ಜೀವನಸಾಗಿಸಿದ ವಿಶ್ವವಿದ್ಯಾನಿಲಯದ ಪ್ರೊಫೇಸರನೂ ಹಾಗೂ ಕ್ರಿಸ್ತೀ ದೇವಾಲಯದಲ್ಲಿ ಸಂಬಳತಿಂದು ಧರ್ಮೋಪದೇಶಮಾಡುವ ಪಾದ್ರಿಯೂ ಒಂದುಬಗೆಯ ಗುಲಾಮರೇ ಆಗಿರುವರು. ಇಂಗ್ಲಂಡಿನ ಮುಖ್ಯಪ್ರಧಾನರಾದ ರಾಮ್ಸೆ ಮೆಕ್ಡೊನಾಲ್ಡರು "ಹಿಂದಿನ ಗುಲಾಮರ ಕಾಲದಲ್ಲಿ ಗುಲಾಮರ ಒಡೆಯನು ಅವರನ್ನು ಪೇಟೆಯಲ್ಲಿ ತಂದು ಮಾರಾಟ ಮಾಡುತ್ತಿದ್ದನು; ಇಂದಿನ ಕೂಲಿಕಾರನು ತನ್ನನ್ನು ವಿಕ್ರಯಮಾಡಿಕೊಳ್ಳಲು ತಾನೇ ಪೇಟೆಯಲ್ಲಿ ಬಂದು ನಿಲ್ಲುವನು. ಇಷ್ಟೇ ಅವರಿಬ್ಬರಲ್ಲಿಯ ವ್ಯತ್ಯಾಸವು." ಎಂದು ನುಡಿದಿದ್ದಾರೆ. ಆದರೆ ಸೋಶಾಲಿಝಮ್‌ದಲ್ಲಿ ವ್ಯಕ್ತಿಗೆ ತುಂಬ ಸ್ವಾತಂತ್ರ್ಯವು ದೊರಕುವುದು ನಿಶ್ಚಯ. ಕೇವಲ ಹೊಟ್ಟೆಹೊರೆಯುವುದರಲ್ಲಿಯೇ ಸರ್ವಶಕ್ತಿಯನ್ನು ವೆಚ್ಚಿಸುವ ಆವಶ್ಯಕತೆಯು ದೂರವಾಗಿ ಪ್ರತಿಯೊಬ್ಬನು ಸ್ವೇಚ್ಛೆಯಿಂದ ಆಲೋಚನೆ ಮಾಡಲಿಕ್ಕೂ, ಸ್ವತಂತ್ರತೆಯಿಂದ ಜೀವನ ನಡೆಯಿಸಲಿಕ್ಕೂ, ತನ್ನ ಹೌಸಿನ ಪ್ರವೃತ್ತಿಯಂತೆ ದುಡಿಮೆಮಾಡಲಿಕ್ಕೂ ತುಂಬ ಆಸ್ಪದವು ದೊರೆಯುವುದು. ಇಂತಹ ಜನಸಮೂಹದಲ್ಲಿಯೇ ಕಲಾ, ಸೌಂದರ್ಯ, ವಾಙ್ಮಯ, ತತ್ವಜ್ಞಾನ ಮೊದಲಾದ ಕಾರ್ಯಕ್ಷೇತ್ರದಲ್ಲಿ ನಿಷ್ಣಾತವಾದ ಜೀವರತ್ನಗಳು ಹುಟ್ಟುವವೆಂಬುದರಲ್ಲಿ ಏನು ಆಶ್ಚರ್ಯ !



CC-0. Jangamwadi Math Collection. Digitized by eGangotri

ಮಹಾಯುದ್ಧವು ಯುರೋಪದಲ್ಲಿ ನಡೆದಾಗ ಸೋಶಾಲಿಝುವ್ ಪಂಥಕ್ಕೆ ಅತ್ಯಂತ ಕಳೆ ಏರಿತು; ಆದರೆ ಕೂಲಿಕಾರರ ಸಂಘವು ಬಂಡವಾಳಿಗರ ರಾಜ್ಯವನ್ನು ಯಾವ ಸಾಧನೆಗಳಿಂದ ಗೆಲ್ಲಬೇಕೆಂಬ ವಿಷಯದಲ್ಲಿ ಮಾತ್ರ ತೀವ್ರವಾದ ಮತಭೇದವು ಒಡೆದು ಕಾಣುವಂತಾಯಿತು. ವಿಶ್ವದ ಮೇಲಿನ ಎಲ್ಲ ಸೋಶಿಯಾಲಿಸ್ಟರಲ್ಲಿ ಅರ್ಥೋತ್ಪಾದನೆಯ ಸಾಧನೆಗಳನ್ನು ಸಮಾಜದ ಪ್ರಭುತ್ವದಲ್ಲಿ ತರಬೇಕೆಂಬ ಹೆಗ್ಗುರಿಯ ವಿಷಯದಲ್ಲಿ ಏಕಮತವು ತೋರಿಬಂದರೂ ಅದನ್ನು ಸಾಧಿಸುವ ಉಪಾಯಯೋಜನೆಯನ್ನು ಕುರಿತು ಭಿನ್ನಮತಗಳು ಅಸ್ತಿತ್ವಗೊಂಡಿವೆ. ಸೋಶಾಲಿಝುವ್ ಎಂಬ ಹಿರಿಮರಕ್ಕೆ "ಕ್ರಾಂತಿವಾದ" ಹಾಗೂ "ವಿಕಾಸವಾದ" ಗಳೆಂಬ ಎರಡು ದೊಡ್ಡ ಕೊಂಬೆಗಳು ಒಡೆದಿವೆ. ಕೂಲಿಕಾರರ ಸುಸಂಘಟನೆ ಮಾಡಿ ಯೋಗ್ಯಸಂಧಿಯು ಬಂದೊಡನೆಯೇ ಪ್ರಚಲಿತ ವ್ಯಂಗಪೂರ್ಣ ರಾಜ್ಯವ್ಯವಸ್ಥೆಯ ಮೇಲೆ ಏರಿ ಹೋಗಿ ಸಶಸ್ತ್ರವಾದ ಬಂಡು, ಕೊಲೆಸುಲಿಗೆಗಳನ್ನು ಮಾಡಿಯಾದರೂ, ಅದನ್ನು ವಶಮಾಡಿಕೊಂಡು ಸೋಶಿಯಾಲಿಸ್ಟ ಸಮಾಜದ ಕಟ್ಟಡವನ್ನು ಕಲ್ಪಿಸಬೇಕೆಂದು ಕ್ರಾಂತಿವಾದಿಗಳು ಹೇಳುತ್ತಾರೆ. ಆದರೆ ವಿಕಾಸವಾದಿಗಳ ದೃಷ್ಟಿಯಿಂದ ಬಂಡವಾಳಿಗರ ಪ್ರಾತಿನಿಧಿಕ ಸಂಸ್ಥೆಗಳಲ್ಲಿ ಶಾಂತರೀತಿಯಿಂದ, ಕಟ್ಟಳೆಗೊಳಗಾದ ದಾರಿಯಿಂದ ಕೂಲಿಕಾರರು ಮೆಲ್ಲಗೆ ಕೈಸೇರಿಸಿ, ಬಹುಮತದ ಬೆಂಬಲದಿಂದ ರಾಜ್ಯಸಂಸ್ಥೆಯನ್ನು ಗೆಲ್ಲುವುದು ಇಷ್ಟವಾಗಿರುವುದು. ಕ್ರಾಂತಿವಾದಿಗಳು ಸ್ವದೇಶ, ಪರದೇಶವೆಂಬ ಭೇದಭಾವನೆಯನ್ನು ತಿಳಿಯದೆ ಆಂತರರಾಷ್ಟ್ರೀಯ ದೃಷ್ಟಿಯಿಂದ ವಿಶ್ವದೊಳಗಿನ ಎಲ್ಲ ಕೂಲಿಕಾರರು ಒಂದೇ ಕುಟುಂಬದ ಸದಸ್ಯರೆಂದು ಭಾವಿಸುವವರಾಗಿದ್ದಾರೆ. ವಿಕಾಸವಾದಿಗಳಿಗೆ ಈ ಮತವು ಸಮ್ಮತವಿಲ್ಲ. ತಮ್ಮ ತಮ್ಮ ದೇಶದ ಗಡಿಯನ್ನು ದಾಟುವುದು ಉಚಿತವಾಗಲಾರದೆಂದು ಅವರು ಅಭಿಪ್ರಾಯಪಡುವರು. ಇದರ ಹೊರತು ಅನೇಕ ಉಪಪಂಥಗಳು ಇದರಲ್ಲಿ ಇವೆ. ಅವೆಲ್ಲವುಗಳನ್ನೂ ಇಲ್ಲಿ ವಿವರಿಸಲು ಸಾಧ್ಯವಿಲ್ಲ.

## ಪಯಣವೆಲ್ಲಿ ಪಯಣಿಗಾ?

( ಗೆಳೆಯರು )

ದಾರಿದೊರೆತು ಬಳಲುತಿರುವ
ಪಯಣವೆಲ್ಲಿ ಪಯಣಿಗಾ ?
ಬಾರಿ ಬಾರಿ ಹಿಂದು ಮುಂದು
ನೋಟವೇಕೆ ಕನಸಿಗಾ ?
ಈಸು ದಾರಿ ಬೀಸು ಇರಲು
ಪಯಣದೊಂದು ಚಿಂತೆಯೆ ?
ಲೇಸು ಯಾವುದೆನುತ ಮನದಿ
ಬಗೆಯುತ ನೀ ನಿಂತೆಯೆ ?
ಹೆಜ್ಜೆ ಮುಂದೆ ಬೀಳುತಿದ್ದು
ಹಿಂಜರಿಯುವುದೇಸದೊ ?
ಬಜ್ಜೆ ಭಾರ ಜೀವಕೆಸಿಸಿ
ಭಾರ ಮಾತ್ರ ಕಾಣದೊ;
ಹೆತ್ತ ಹೊಟ್ಟೆ ಕೊಟ್ಟ ಬುತ್ತಿ
ಹಳಸದ ಹಾಗಿಲ್ಲವೆ ?
ಮತ್ತೆ ಬೇರೆ ಆಸೆ ಇಹುದೆ ?
ಸಾಕು ಇತ್ತುದಲ್ಲವೆ ?
ಅವರ ಇವರ ಒಳ್ಳೆ ಬಯಕೆ
ಹಾದಿ ಸೀರು ಸಾಲದೆ ?

ಬವಣೆ ಬೇರೆ ಏನೊ ಎಂತೊ
ಸಾಗಸಾಡೆ ಸೋಲದೆ
ಹರಕೆ ತಲೆಯು ಕಾಯುತಿರಲು
ಬಿಸಿಲು ಮಳೆಯ ತಾಪವೊ ?
ಮರದ ನೆರಳು ಗೆಳೆಯರಿರಲು
ಭೀತಿ ಯಾವ ಪಾಪವೊ
ನೀಸು ಹಿಡಿದೆ ನಿನ್ನ ಹಾದಿ
ಮಂದಿಯದನು ಹಿಡಿವರೆ ?
ತಾನೆ ತನ್ನ ಹಾದಿ ಬಿಡಲು
ತನ್ನದನ್ನು ಪಡೆವರೆ ?
ಕಾಲಗೆಟ್ಟು ಕೈಯ್ಯನೂರಿ
ಬಳಲಿದಾಗ ಬಯಸಿದೆ;
ಸಾಲುಗಾರ್ತಿ ಕೈಯ ಹಿಡಿಯೆ
ಅವಳ ಸೆರಗ ತೊಯಿಸಿದೆ.
ಜೊತೆಗಾರ್ತಿಯು ಒಂದಳೀಗ
ಗುರಿಯದೇನು ಪಯಣಿಗ ?
ಸತಿಯು ಶಿವನು ಕಂಡನೀಗ
ಪಡೆವುದೇನು ಕನಸಿಗ ?
ದಾರಿ ದೊರೆತು ಬಳಲುತ್ತಿದ್ದೆ
ಪಯಣವೆಲ್ಲಿ ಪಯಣಿಗ !

CC-0. Jangamwadi Math Collection. Digitized by eGangotri

# ನನ್ನ ಮಡದಿ

(ಅಂಬಾದಾಸ)

[ವರ್ಡ್ಸ್‌ವರ್ಥ ಕವಿಯ "She was a phantom of delight" ಎಂಬ ಕವಿತೆಯ ಅನುವಾದ.]

### ಬಾಲೆ

ಮೊದಲು ಅವಳ ಕಂಡ ದಿವಸ
ಪದುಳದಿಂದ ಧರೆಯೊಳಿರಲು
ಮುದದ ದೇವಿ ಬಂದಳೆಂದು ಅಂದುಕೊಂಡೆನು
ಹೃದಯವೆನಿತು ಕದಿಯಲೆಂದು ಬಂದಳೆಂದೆನು.
ನೆರೆದ ಹರೆಯ ತನುವ ಬೆಳಗೆ
ಅರುಣಗೆಂಪು ಕದಪಿನಿಂಪು
ಎರಡು ಕಣ್ಣು—ಎರಡು ತಾರೆ ಹೊಳೆದವವಳಲಿ,
ಇರುಳು ಕಂಡ ಕನಸದೆಂದು ತಿಳಿದೆ ಮನದಲಿ.
ಸಿರಿಯ ಮೊಗವು ಚೆಲುವ ಸುರಿಯೆ
ಕುರುಳ ಸರಲು ಮನವನಿರಿಯೆ
ಕೊರಳ ಸರವು ಕಿವಿಯನೂಡೆ, ಇರವ ಮರೆತೆನು;
ಸುರರ ಧರೆಯ ಸೇರ್ದೆನೆಂದು ಹರುಷವಾಂತೆನು.
ತರುಣಿಯವಳು ಮೋಹನಾಂಗಿ
ಹರಿಣಿಯಂತೆ ಕಣ್ಣ ಮುಚ್ಚಿ
ತೆರೆವ ಮುನ್ನ ಮಾಯವಾಗಿ ಸರಿದು ಹೋಗಲು,
ಸುರೆಯ ಕುಡಿದ ಮನುಜನಂತೆ ಮರುಳನಾದೆನು.

### ಯುವತಿ

ಕರವ ಪಿಡಿದು ಮದುವೆಯಾಗಿ
ಬರಲು ಮನೆಗೆ ಅವಳ ಕೂಡಿ
ಸರಸದಲಿಯೆ ದಿನವ ಕಳೆದೆ ಹರುಷದಿಂದಲಿ
ನರಗೆ ಸುರರ ಸೊಗವ ತರುವ ತರುಣಿಯೆನುತಲಿ.
ಮನೆಯ ಕಾರ್ಯಗಳನು ನಡೆಸಿ
ಜನರು ಮೆಚ್ಚಿ ಗರತಿಯೆನಿಸಿ
ಮನೆಗೆ ತಂದ ಧನವ ನಿಲಿಸಿ, ಮೆರೆಯುತಿರುವಳು;
ವನಿತೆಯಿವಳೆ ಗೃಹಿಣಿಯೆಂದು ಕರೆವರನಿಬರು.
ಅಂದಿನವಳ ಮುಖದ ಕಳೆಯು
ಹಿಂದಿನವಳ ನಡೆಯು ತೋರೆ,
ಹಿಂದಿನಂತೆ ಮುದವ ನನಗೆ ಮುಂದೆ ಕೊಡುವಳು;
ಸುಂದರಾಂಗಿ ಭವನದೊಡತಿಯೆಂದುಕೊಂಡೆನು.
ಒಮ್ಮೆಯಳುತ, ಒಮ್ಮೆ ನಗುತ
ಒಮ್ಮೆಯಗಲಿ, ಒಮ್ಮೆ ಸೇರಿ
ಒಮ್ಮೆ ದೂರಿ, ನಲ್ಮೆ ತೋರಿ ಇನಿಯಳಿರುತಿರೆ
ನಮ್ಮ ಮನೆಯೆ ಜಗದ ಪ್ರತಿಮೆಯೆನಿಸಿ ಮೆರೆದುದು.

### ಪ್ರೌಢೆ

ಭ್ರಾಂತಿಯಳಿಯೆ, ಹರೆಯ ಕಳೆಯೆ
ಕಾಂತೆಯಿವಳ ಮನವನರಿದೆ,
ಶಾಂತಗುಣವು ಭರದಿ ಬಂದು ನೆಲಸಿತವಳಲಿ;
ಚಿಂತೆಯವಳ ಮುಖಕೆ ಪೊಸತು ಕಳೆಯ ತಂದಿತು.
ಇಹದ ಪಯಣದೊಳಗೆ ಸಂದ
ಬಹಳ ತಾಪಗಳನು ಕಳೆದು,
ಸಹನವಾಂತು, ದಿಕ್ಕುದೋರಿ ಪೊರೆವಳೆನ್ನನು;
ಗೃಹದ ಸೊಬಗ ಹುರುಪುಗೊಳಿಸಿ ಮೆರೆವಳನುದಿನ.
ಮಡದಿಯೆನ್ನ ಕೆಳದಿಯಾಗೆ
ಮಡಿದುದೆನ್ನ ಮನದ ದುಗುಡ
ಪೊಡವಿಯರಸ ಪಡೆವ ಮುದವನಾಂತೆ ಮನದಲಿ;
ಬಡವನೆಂಬ ತೊಡಕ ಮರೆತೆ ಶಾಂತಗೃಹದಲಿ.
ದಿನಕೆ ದಿನಕೆ ಬಳೆವುದವಳ
ಮನದ ಸೊಬಗು ವಿಧುವಿನಂತೆ
ಘನಗಭೀರ ಮುದ್ರೆಯಾಂತು ಬೆಳಗುತಿರುವಳು,
ವನಿತೆ ಸುರರ ಬೆಡಗಿನಿಂದ ಬಳಸುತೆನ್ನನು.

CC-0. Jangamwadi Math Collection. Digitized by eGangotri

# "ಕುಂಭಮಾಸ"

( ಸಣ್ಣ ಕತೆ )

ಲೇಖಕ:— ಯಸ್. ವೆಂಕಟರಾಜ

೧

' ಸುಶೀ ! ಸುಶೀ ! '

' ಓ '

' ಇಲ್ಲಿಗೆ ಬಾ. '

' ತಡೆ ಬಂದೆ. '

' ಬೇಗ ಬಾರೇ ! '

' ಯಾಕಮ್ಮಾ ? '

' ನೋಡು; ಅವರು ಬಂದಿರುವರು. '

' ಯಾರವರು ? '

' ಯಾರು ? ನಿನ್ನ ಗಂಡ ! '

' ಬಂದರೆ ಕೂತುಕೊಳ್ಳಲಿ ! '

ಏನು ? ಇದೆಂತಹ ಮಾತು ? ಬಂದರೆ ಕೂತುಕೊಳ್ಳಲಿ ! ದೂರದಿಂದ, ಎಷ್ಟೋ ದೂರದಿಂದ, ಪ್ರಿಯೆಯನ್ನು ಕಾಣಬೇಕು; ಅವಳೊಡನೆ ಮಾತಾಡಬೇಕು; ಒಡನಾಟದಿಂದ ಬೆಂಡೊಡಲನ್ನು ಸಂತೈಸಿಕೊಳ್ಳಬೇಕು ಎಂದು ಮಹದಾಶೆಯಿಂದ ಸಾರಿ ಬಂದ ಪತಿಗೆ, ಇದೀಗ ಸತಿಯ ಉಪಚಾರವೇ ?

ತಾಯಿಯು ಆಶ್ಚರ್ಯಗೊಂಡಳು. ಮಗಳ ಬಿರುನುಡಿಯಿಂದ ಅಳಿಯನೆಲ್ಲಿ ಅಸಮಾಧಾನಪಡುವನೋ ಎಂದು ಹೆದರಿ, ' ಇಲ್ಲ; ನಾಲ್ಕು ದಿನಗಳಿಂದೀಚೆ ಅವಳಿಗೆ ಸ್ವಸ್ಥವೇ ಇಲ್ಲ. ಹುಚ್ಚಿಯಂತೆ ಮಾತಾಡುತ್ತಿರುವಳು ' ಎಂದು ನುಡಿದಳು.

ಆದರೆ ಅಂತಹ ಮಾತುಗಳನ್ನು ಒಮ್ಮಿಂದೊಮ್ಮೆಗೆ ನಂಬುವಷ್ಟು, ಹರನೋಹನನ ತಲೆಯು ಹಗುರಾದುದಾಗಿರಲಿಲ್ಲ. ಅದರಲ್ಲೇನೋ ಗೂಢ ಕಾರಣವಿದ್ದಿರಲೇಬೇಕೆಂದು, ಅವನು ತರ್ಕಿಸಿದನು. ಇಲ್ಲವಾದರೆ, ಮದುವೆಯಾಗಿ ಇನ್ನೂ ವರ್ಷವು ಕಳೆಯಲಿಲ್ಲ; ಅಷ್ಟರೊಳಗಾಗಿ ಇಷ್ಟು ಅನಾದರವೆಂದರೇನರ್ಥ ? ಇಂತಹ ಅನಾದರವನ್ನು, ಒಂದಿಷ್ಟು ಅಭಿಮಾನವುಳ್ಳ, ಒಂದಿಷ್ಟು ಪೌರುಷವುಳ್ಳ ಗಂಡನು ಕೇಳಿ ಸಹಿಸಬಲ್ಲನೇ ?

ಕೊನೆಗೆಂತೋ ಸುಶೀಲೆಯು ಹೊರಕ್ಕೆ ಬಂದಳು. ಬಂದರೇನು ? ಮುಖದಲ್ಲಿ, ಒಂದಿಷ್ಟು ಸಂತೋಷದ ಭಾವವಿದೆಯೇ ? ತಾಯಿಯ ಹಿಂದುಗಡೆ ಹೋಗಿ ಕುಳಿತಳು. ತಾಯಿಯು ' ಬಂದವರಿಗೆ ನಮಸ್ಕಾರ ಮಾಡಿದೆಯಾ? ' ಎಂದು ಕೇಳದಿರುತಿದ್ದರೆ, ಖಂಡಿತವಾಗಿಯೂ ಗಂಡನಿಗೆ ನಮಸ್ಕಾರ ಸೊನ್ನೆ !

ರಾತ್ರಿಯಾಯಿತು. ಕಟ್ಟಳೆಯಂತೆ, ಅತ್ತೆಮನೆಯ ಸುಮ್ಮಾನದೂಟವು, ಒಂದಿಷ್ಟೂ ಕುಂದಿಲ್ಲದೆ ಕೊನೆಗಂಡಿತು. ಇನ್ನುಳಿದುದೇನು ? ಶಯನವೊಂದೇ !

ಚೊಕ್ಕದಾದ ಸಜ್ಜೆವನೆ. ಮಧ್ಯದಲ್ಲಿ ವಿಶಾಲವಾದ ಮಂಚ. ಅದರ ಎದುರುಗಡೆ, ದೊಡ್ಡದಾದ ನಿಲುಗನ್ನಡಿಯೊಂದು. ಶ್ವೇತಶಿಲೆಯ ಮೇಜೊಂದು. ಎರಡು ಕುರ್ಚಿಗಳು. ಒಂದು ದೋಲಾಸನ.

ಹಾಸುಗೆಯು ಹಾಸಿದ್ದಿತು. ಆದರೆ ಹರನೋಹನನು ಮೇಜಿನ ಮೇಲಿದ್ದೊಂದು ಇಂಗ್ಲಿಷ್ ಕಾದಂಬರಿಯನ್ನು ಓದುತ್ತ ಕುಳಿತನು. ಆದರೆ ಅದು, ಓದಬೇಕೆಂಬ ಇಚ್ಛೆಯಿಂದಲ್ಲ ಏನೋ, ಮನಸ್ಸನ್ನು ಸಮಾಧಾನಗೊಳಿಸಬೇಕೆಂದಿಷ್ಟೆ !

ಗಂಟೆಯು ಹತ್ತಾಯಿತು. ಹೊರಗಿನಿಂದಾರೋ ಮಾತಾಡುತಿದ್ದರು. ' ಸುಶೀ ! ಹಾಲನ್ನು ತೆಗೆದುಕೊಂಡು ಬೇಗ ಹೋಗು ' ಎಂದು.

ಸುಶೀಲೆಯು ಪ್ರವೇಶಿಸಿದಳು. ಹಾಲನ್ನು ಪತಿಯ ಕೈಯೊಳಗಿರಿಸಿ, ತನ್ನ ಸವಿಮಾಶಿನ ಸಕ್ಕರೆಯನ್ನು ಅದರೊಳಗೆ ಬೆರಸಿ, ನಸುನಗುತ ಪಾರ್ಶ್ವದಲ್ಲಿ ನಿಂತಳೇ ! ಇಲ್ಲ. ಅನನ್ನು ಅನಾದರದಿಂದ ಮೇಜಿನ ಮೇಲಿರಿಸಿ, ತಾನು ಹಾಸುಗೆಯಲ್ಲಿ ಮಲಗಿಬಿಟ್ಟಳು.

CC-0. Jangamwadi Math Collection. Digitized by eGangotri

ಅಂತಹ ವಿಚಿತ್ರವರ್ತನೆಯ ನೆಲೆಯನ್ನರಿಯಲಾರದೆ, ಹರಮೋಹನನು ಸಂತಾಪಗೊಂಡನು. ಅಹುದು. ಒಂದು ತಡವೆ–ಒಂದೇ ಒಂದು ತಡವೆಯಾದರೂ ಪ್ರಿಯೆಯು ಮಾತಾಡುತಿದ್ದರೆ, ಅದರ ನೆಲೆಯನ್ನು ಅರಿಯಬಹುದಾಗಿದ್ದಿತು. ಆದರೆ ಮೌನವಾಗಿದ್ದು ಬುಸುಗುಟ್ಟುತ್ತಿದ್ದರೆ ಅದರ ಕಾರಣವನ್ನು ತಿಳಿವ ಬಗೆಯೆಂತು? ಹರಮೋಹನನು ಯೋಚಿಸತೊಡಗಿದನು; "ಏನು ಹುಡುಗಿಗೆ ಬಾಯಿಯೇ ಬಾರದೇ? ಮಾತುಗಳೆಲ್ಲಾ ಮರೆತೇ ಹೋದುವೇ?" ಎಂದು.

ಮೋಹನನಿಂದ ಇನ್ನು ಸಹಿಸಲಾಗಲಿಲ್ಲ. ಪುಸ್ತಕವನ್ನು ಬಿಸುಟು, ಪತ್ನಿಯ ಬಳಿ ಹೋಗಿ ಕುಳಿತನು. ಆದರೂ ಅವಳು ಕದಲಲಿಲ್ಲ. "ಸುಶೀ! ಹೀಗೇಕೆ ಚಿಕ್ಕ ಹುಡುಗಿಯಂತೆ ವರ್ತಿಸುತ್ತಿರುವೆ? ಇನ್ನೂ ಬುದ್ಧಿಯಿಲ್ಲವೇ? ಮಾತಾಡಲೊಲ್ಲೆಯೇಕೆ? ಅಷ್ಟು ಕೋಪವೇನು?" ಎಂದವನು ಕೇಳಿದನು. ಆದರೆ ಆದರಿಂದ ಪ್ರಾಪ್ತವಾದ ಫಲವೆಂದರೆ ಕಂಠಶೋಷಣೆಯೊಂದೇ! 'ಇಷ್ಟು ಬೇಗನೆ ನಿದ್ದೆ ಬಂದಿತೇ?' ಎಂದವನು ಅವಳ ಮೈಯನ್ನು ಮುಟ್ಟಿ ಕುಲುಕಾಡಿಸಿದನು. ಸುಶೀಲೆಯು ಕೋಪದಿಂದ, ಅವನ ಕೈಗಳನ್ನು ದೂರಕ್ಕೊಗೆದು 'ನನ್ನನ್ನು ಮುಟ್ಟಬೇಡಿ!' ಎಂದು ಗದರಿಸಿದಳು.

ಹರಮೋಹನನಿಗೆ ಸ್ವಲ್ಪ ಧೈರ್ಯವಾಯಿತು–ಹುಡುಗಿಗೆ ಮಾತು ಬರುವುದೆಂದು.

'ಏಕೆ?' ಎಂದವನು ಕೇಳಿದನು.

'ನನಗೆ ನಿದ್ದೆ ಬರುವುದು.'

'ಹಾಗಾದರೆ ಇದೀಗ ನಿದ್ದೆಯಲ್ಲಿಯೆ ಮಾತಾಡುತಿರುವುದೇ?'

'ಸ್ವಲ್ಪ ಸುಮ್ಮನಿರಿ. ನನಗೆ ತೊಂದರೆ ಕೊಡಬೇಡಿ.'

ಮೋಹನನು ಅಂತಹ ಮಾತುಗಳಿಂದ ಬೇಸರಗೊಂಡು ಸ್ವಲ್ಪ ಸಿಟ್ಟಿನಿಂದ ಪುನಃ ಹೇಳಿದನು; "ಸುಶೀ! ನೀನು ನನ್ನ ಹೆಂಡತಿ! ನಿನ್ನ ಮೇಲಿನ ಅಧಿಕಾರವು ನನಗಿದೆ!' ಹುಡುಗಿಯು ಗರ್ವದಿಂದ "ಇಲ್ಲ" ಎಂದಳು.

'ಏನಿಲ್ಲ? ನಿನ್ನನ್ನು ನಾನು ಮದುವೆಯಾಗಿಲ್ಲವೇ?'

"ಇಲ್ಲ."

ಹಾ! ನಿರ್ಭಾಗ್ಯಪುರುಷ! ಕೊನೆಗೆ ಇಂತಹ ಮಾತುಗಳನ್ನೂ ಪತ್ನಿಯ ಮುಖದಿಂದ ಕೇಳಬೇಕಾಯಿತೇ? ಮೋಹನನು, ಆಶ್ಚರ್ಯಗೊಂಡನು. ಅವನ ಹೃದಯದಲ್ಲಿ, ಸಾವಿರಾರು ಚೇಳುಗಳ ಕಡಿತದ ವೇದನೆ!

"ಸುಶೀ! ಸತ್ಯ ಹೇಳು. ನೀನು ನನ್ನನ್ನು ಪ್ರೀತಿಸಲಾರೆಯಾ?

'ಇಲ್ಲ.'

'ಏಕೆ?'

'ನೀವು ನನ್ನ ಶತ್ರು'

'ಅದೇನು?'

'ನನ್ನ ಸುಖವನ್ನು ಹಾಳು ಮಾಡಿದಿರಿ.'

'ನಾನೆಲ್ಲಿ ಹಾಳು ಮಾಡಿರುವೆನು?'

'ನನ್ನನ್ನು ಮದುವೆಯಾದಿರೇಕೆ?'

'ನಿನ್ನನ್ನು ನಾನು ಮದುವೆಯಾಗದಿರುತಿದ್ದರೆ, ನೀನು ಸುಖವಾಗಿರುತಿದ್ದೆಯಾ?'

'ಹೌದು.'

ಹಾಗಾದರೆ ಇನ್ನು ಮುಂದೆ ನಿನ್ನನ್ನು ಬಿಟ್ಟರೂ ಸುಖಿಯಾಗುವೆಯಾ?'

'ಹೌದು.'

ಮೋಹನನು ಅಲ್ಲಿಂದೆದ್ದು, ಮೇಜಿನ ಬಳಿ ಒಂದು ಕುಳಿತನು. ಅವನ ಹೃದಯವು ಚಿಂತಾಸಾಗರದಲ್ಲಿ ಮುಳುಗಿದ್ದಿತು. ಪ್ರಪಂಚದ ಅರಿವೇ ಅವನಿಗಿರಲಿಲ್ಲ. ಹಲವುಭಾವನಾತರಂಗಗಳೆದ್ದು, ಅವನಚಿತ್ತವನ್ನು ತಳಮಳಗೊಳಿಸುತಿದ್ದುವು. "ಎಷ್ಟು ಹೊತ್ತಿನತನಕ ಹೀಗೆಯೇ ಕುಳಿತಿರುವೆನೋ" ಎಂಬುದು ಅವನಿಗೇ ತಿಳಿಯದು. ಆದರೆ ಬೆಳಗ್ಗೆ, ಸುಶೀಲೆಯು ನಿದ್ದೆಯಿಂದೆದ್ದು ನೋಡುತ್ತಿರಲು, ಅವನು ಅಂತೆಯೇ ಅಳುತ್ತ ಕುಳಿತಿದ್ದನು. ಮೇಜಿನ ಮೇಲಿದ್ದ ಕಾಗದಗಳೆಲ್ಲಾ ಕಣ್ಣೀರಿಂದ ತೋಯ್ದು ಒದ್ದೆಯಾಗಿದ್ದುವು.

೨

ವಿಶ್ವನಾಥರಾಯರು, ಅಲ್ಹಾಬಾದಿನ ಸುಪ್ರಸಿದ್ಧ ವಕೀಲರು. ಅವರ ಹೆಸರನ್ನು ಕೇಳದವರು, ಅಲ್ಲಿ ಬಹಳ ಅಪರೂಪ. ಅವರ ವರ್ಚಸ್ಸು ಅಲ್ಲಿ ಎಷ್ಟರಮಟ್ಟಿಗೆ ಹಬ್ಬಿದ್ದಿತೆಂದರೆ, ಯಾರಾದರೂ ತರ್ಕಸರಣಿಯಿಂದ ಗಂಭೀರವಾಗಿ ಮಾತಾಡತೊಡಗಿದರೆ "ಏನು ವಿಶ್ವನಾಥರಾಯರು ತಲೆಯ ಮೇಲೆ ಕೈಯಿಟ್ಟರೇ" ಎಂದು ಜನರಾಡಿಕೊಳ್ಳುತಿದ್ದರು.



CC-0. Jangamwadi Math Collection. Digitized by eGangotri

ಅವರ ವಿಶಾಲವಾದ ಭವನವನ್ನು ಬೆಳಗುವ ಜ್ಯೋತಿಯೆಂದರೆ, ಅವರ ಮಗಳು ಸುಶೀಲೇ! ರಾಯರಿಗೆ, ಗಂಡು ಮಕ್ಕಳಿಲ್ಲದುದರಿಂದ, ಆ ಸ್ಥಾನದ ಮರ್ಯಾದೆಯನ್ನೂ ಸುಶೀಲೆಯೇ ಹೊಂದಿದ್ದಳು. ಸುಶೀಲೆಯು, ಅದೆಷ್ಟು ರೂಪವತಿಯೋ ಅಷ್ಟೇ ವಿದ್ಯಾವತಿ. ಆದರೆ, ಅವಳ ಆ ವಿದ್ಯೆಯೊಂದಿಗೆ, ಸದ್ಗುಣಗಳೂ ಕೂಡಿದ್ದುವೆಂಬುದನ್ನು ಮಾತ್ರ, ನಾವು ಧಾರಾಳಮನಸ್ಸಿನಿಂದ ಒಪ್ಪಲಾರೆವು. ಕಾರಣ, ನೆರೆಕರೆಯ ಹೆಂಗುಸರು ಹಲವು ಸಲ "ಆ ಹುಡುಗಿಗೆ ಏನು ಚಂಡಿತನವಪ್ಪಾ! ತಾನು ಹೇಳಿದುದೇ ತನಗೆ. ನಮಗೇನು? ದೊಡ್ಡವರ ಹುಡುಗಿ" ಎಂದು ನುಡಿಯುತ್ತಿದ್ದುದು ನಮ್ಮ ಕಿವಿಗಳಿಗೆ ಬೀಳದಿರಲಿಲ್ಲ.

ಶಶಿಕಾಂತನಿಗೂ ವಿಶ್ವನಾಥರಾಯರಿಗೂ, ಬಹಳ ದೂರದ ಸಂಬಂಧ;ಆದರೂ ಅದೇನು ಕಾರಣವೋ, ಅವನು ಅಲ್ಲಿಯೇ ವಾಸಿಸುತಿದ್ದು ಆ ಊರಿನ ಗವರ್ನ್‌ಮೆಂಟ್ ಕೋಲೇಜಿನಲ್ಲಿ ಕಲಿಯುತಿದ್ದನು. ಸುಶೀಲೆಗೆ 'ಶಶಿ' ಎಂದರೆ ಬಹಳ ವಿಶ್ವಾಸ. ಅದಾವ ಸಂದರ್ಭದಲ್ಲಿಯೆ ಆಗಲಿ, ವಿಶೇಷವಾಗಿ ಶೃಂಗರಿಸಕೊಳಬೇಕಾಗಿದ್ದರೆ, ಅವನೇ ಅವಳ ಮಂತ್ರಿ.

ಸುಶೀಲೆಗೆ, ಹದಿನಾಲ್ಕು ವರುಷಗಳು ತುಂಬಿದುವು. ವಿಶ್ವನಾಥರಾಯರು, ಹಳೆಯ ಪದ್ಧತಿಗಳಿಗೆ ಹೇಸುವ ನಾಗರಿಕವೃತ್ತಿಯವರಾಗಿದ್ದುದರಿಂದ, ಅವಳ ವಿವಾಹವು ಇನ್ನೂ ಜರುಗಿದ್ದಿಲ್ಲ. ಅವರ ಪತ್ನಿ ಸರಳಾದೇವಿಯವರು ಮತ್ತು ಸುಮ್ಮನಿರುತಿದ್ದರೆ ಇನ್ನೂ ಕೆಲವು ವರ್ಷಗಳವರೆಗೆ ಜರುಗುವ ಸಂಭವವೂ ಇದ್ದಿರಲಿಲ್ಲ.

ಪತ್ನಿಯು ಬಹಳ ಸಾರೆ ಗದರಿಸಿದ ಮೇಲೆ,ರಾಯರು ಮಗಳ ವಿವಾಹದ ಕಡೆಗೆ ಮನಸ್ಸಿಟ್ಟರು. ದೊಡ್ಡವರ ಮಗಳೆಂದಬಳಿಕ ವರನು ಸಿಗುವುದೇನು ದುರ್ಲಭವೇ? ರಾಯರ ಹಳೆಯ ಸ್ನೇಹಿತರೊಬ್ಬರ ಮಗ ಹರಮೋಹನನೇ ಯೋಗ್ಯವರನೆಂದು ನಿಶ್ಚಿತವಾಯಿತು. ಹುಡುಗನೂ ಸುಂದರ, ಸ್ಥಿತಿವಂತ, ವಿದ್ಯಾವಂತನೆಂದ ಬಳಿಕ ಕೊರತೆಯೇನು?

ವಿವಾಹವು, ಸಂಭ್ರಮದಿಂದ ಕೊನೆಗಂಡಿತು. ಆದರೆ ಆ ಸುಖವನ್ನು ಬಹುಕಾಲದ ತನಕ ಎಣಿಸುತ್ತ, ಅನುಭವಿಸುವ ಚೇತನವು ರಾಯರಿಗಿದ್ದಿಲ್ಲ. ವಿವಾಹವು ಪ..ಗಿದ ಆರು ತಿಂಗಳುಗಳೊಳಗಾಗಿ, ಅಕಸ್ಮಾತ್ತಾಗಿ ಹೃದಯವಿಕಾರದಿಂದ ಅವರು ತೀರಿಕೊಂಡರು. ಅವ[illegible] ರಿಂದ ಗೃಹಕೃತ್ಯದ ಭಾರವು, ಸರಳಾದೇವಿಯವರ ಕೆಲ[illegible] ಮೇಲೆ ಬಿದ್ದಿತು.

ಮದುವೆಯಾದ ಬಳಿಕ ಹೆಂಡತಿಯನ್ನು ತನ್ನ ಮನೆ[illegible] ಕರೆದುಕೊಂಡು ಹೋಗುವ ಪ್ರಸ್ತಾಪವನ್ನು, ಅಳಿಯ[illegible] ಹಲವು ಸಲ ಎತ್ತಿದನು. ಆದರೆ ಮೋಹದ ಮಗಳನ್ನು ಅಗಲಿರಲಿಷ್ಟವಿಲ್ಲದೆ ಅದಕ್ಕೆ ಉತ್ತರವಾಗಿ ಅತ್ತೆಯು ಅನೇಕ ತಡವೆ, "ಮೋಹನಾ! ನೀನಿಲ್ಲಿಯೇ ಇದ್ದು ಬಿಡು. ಇಲ್ಲಿಯೂ ಯಾರೂ ಗಂಡಸರಿಲ್ಲ" ಎಂ[illegible] ನುಡಿಯುತಿದ್ದಳು. ಅನಂತರ ಮೋಹನನೂ, ಆ ಕುರಿ[illegible] ಹೆಚ್ಚು ಒತ್ತಾಯಪಡಿಸಲಿಲ್ಲ.

"ಒಂದು ವರ್ಷದ ತನಕ, ಹುಡುಗಿಯು ಬೇಕಾದ[illegible] ಇಲ್ಲಿಯೆ ಇದ್ದಿರಲಿ" ಎಂದವನು ಸುಮ್ಮನಿದ್ದನು. ಅ[illegible] ವನು ಸುಮ್ಮನಿದ್ದುದರಿಂದಲೇ, ತನ್ನ ನಾಶವನ್ನು ತಾನೇ ಸಾಧಿಸಿಕೊಂಡಂತಾಯಿತು. ಆ ಒಂದು ವರ್ಷದ ಕಾ[illegible] ದಲ್ಲಿ ಸುಶೀಲೆ, ಶಶಿಕಾಂತರ ಪರಸ್ಪರ ವಿಶ್ವಾಸವು ಪ್ರೇಮವಾಗಿ ಪರಿಣಮಿಸಿ, ಬೇರೂರಿ ಬಲವಾಗಿ ಬೆ[illegible] ವೃಕ್ಷವಾಯಿತು. ಆದುದರಿಂದಲೇ ಒಂದು ವರ್ಷದ ಬಳಿಕ ಹರಮೋಹನನು ಅಲ್ಲಿಗೆ ಬಂದಂದು, ಸುಶೀಲೆಯು ಅವನು ತನ್ನ ಪತಿಯೆಂಬುದನ್ನು ಸಂಪೂರ್ಣವಾಗಿ ಮರೆ[illegible] ತಿದ್ದಳು. ಆ ಸಂಬಂಧದ ಪಾಶವನ್ನು ಹರಿದೊಗೆಯ[illegible] ಅವಳು ಉದ್ಯುಕ್ತಳಾಗಿದ್ದಳು.

ಪ್ರಪಂಚವಾದರೊ, ಮೂರು ವಿಧದ ಸ್ವಭಾವದ[illegible] ವರಿಂದ ಕೂಡಿರುವುದು. ಎಂತಹ ಅಸಹನೀಯ ಕಷ್ಟ ಗಳನ್ನೇ ಆಗಲಿ, ಲಘುತರವೆಂದು ಭಾವಿಸಿ, ಮಾನಾಪಮಾನ ಗಳಕಡೆಗೆ ಮನವಿಡದ ಸಾತ್ವಿಕರು ಕೆಲರು. ಅಲ್ಪ[illegible] ಅಪಮಾನವನ್ನೇ ಮಹದೆಂದೆಣಿಸಿ ಉದ್ವಿಗ್ನರಾಗುವ ರಾಜಸರು ಹಲವರು. ಸಂತಾಪದಿಂದ ಎದೆಗುಂದಿ ಕೊರಗು ತಿರುವ ತಾಮಸರು ಇನ್ನೆಷ್ಟೋ ಮಂದಿ! ಪ್ರಕೃತ ನಮ್ಮ ಹರಮೋಹನನಾದರೂ, ಆ ಮೂರನೆಯ ತರಗ[illegible] ಯಲ್ಲಿ ಪರಿಗಣಿಸಲ್ಪಡತಕ್ಕವನೆಂದು, ನಾವು ಹೇಳ[illegible] ಲಾರೆವು. ಆದುದರಿಂದಲೇ ಅವನಿಂದು ಪತ್ನಿಯ ಅನಾ ದರವನ್ನು ಸಹಿಸಲಾರದೆ, ತನ್ನ ಜೀವನವು ನಿಸ್ಸಾರವೆಂದು ಭಾವಿಸಿ ಮರುಗತೊಡಗಿದನು.

CC-0. Jangamwadi Math Collection. Digitized by eGangotri

ಮೋಹನನು ಕುಳಿತಲ್ಲಿಂದೆದ್ದು, ಕಣ್ದೆರೆದು ನೋಡಿದನು. ಕತ್ತಲೆಯು ನಿಶ್ಶೇಷವಾಗಿ ನಾಶಗೊಂಡಿದ್ದು, ಸೂರ್ಯನ ಹೊಂಬಿಸಲು ದಶದಿಕ್ಕುಗಳನ್ನಾವರಿಸಿದ್ದಿತು. ಆದರೆ ಆ ಬಾಲಾತಪನ ಕಿರಣಜಾಲವು, ಅವನ ಹೃದಯದ ಮೇಲೆ ಬಿಂಬಿಸಿರಲಿಲ್ಲ. ಅವನ ಹೃದಯದಲ್ಲಿ ಗಾಢಾಂಧಕಾರದ ಸಂಪೂರ್ಣ ಅಧಿಕಾರ! ಅವನ ಭ್ರೂಲತೆಯಲ್ಲಿ, ವಿಷಾದರೇಖೆಯ ಭೀಕರ ನರ್ತನ!

ಮೋಹನನು ಸಿಟ್ಟುಸಿರಿಡುತ್ತ, ಸಜ್ಜೆವನೆಯಿಂದ ಹೊರಗೆ ಬಂದನು. ಅತ್ತೆಯು ಪ್ರಾತಃಕಾಲದ ಉಪಾಹಾರಗಳನ್ನು ಸಿದ್ಧಗೊಳಿಸಿ, ಅಳಿಯನ ಬಾಡಿದ ಮೊಗವನ್ನೂ, ಕಳೆಗುಂದಿದ ಕಣ್ಣುಗಳನ್ನೂ ನೋಡಿ ಅಚ್ಚರಿಗೊಂಡು, "ಏನು ಮೋಹನಾ! ಮುಖವು ಬಾಡಿರುವುದು? ರಾತ್ರಿ ಸರಿಯಾಗಿ ನಿದ್ದೆ ಬರಲಿಲ್ಲವೇ?" ಎಂದು ಕೇಳಿದಳು.

ಆ ಪ್ರಶ್ನೆಗಳಿಗೆ, ಮೋಹನನು ಏನೆಂದು ಉತ್ತರವಿತ್ತನು? ಸತಿಯ ಅನಾದರದ ಪರಿಯನ್ನು ಅತ್ತೆಯೊಡನೆ ತಿಳುಹಿದನೇ? ಇಲ್ಲ, ಅದೆಂತಹ ಅಪಮಾನದ ವಿಷಯ! ಅವಸದನ್ನು ಮರೆಮಾಚಿ, ನುಡಿದನು, "ವಿಶೇಷವೇನಿಲ್ಲ; ಸ್ವಲ್ಪ ನೆಗಡಿ ಆದುದರಿಂದ ರಾತ್ರಿ ಸರಿಯಾಗಿ ನಿದ್ರೆ ಬಂದಿರಲಿಲ್ಲ. ಅತ್ತೆ! ನಾನು ಈ ಹೊತ್ತು ಮನೆಗೆ ಹೋಗುವೆನು" ಎಂದು.

ಅತ್ತೆಯು ಗಾಬರಿಗೊಂಡು "ಏನವಸರ? ಈ ಹೊತ್ತು ಹೋಗಲೆಂದೇ ನಿನ್ನೆ ಬಂದುದೇ? ಅದಾಗದು. ಅತ್ತೆಯ ಮನೆಯೆಂದು ಬಹಳ ದಾಕ್ಷಿಣ್ಯ!" ಎಂದಳು.

"ಹಾಗಲ್ಲ ಅತ್ತೆ! ಈ ಹೊತ್ತು ನನಗೆ ಹೋಗದೆ ನಿರ್ವಾಹವಿಲ್ಲ. ನಾಳೆ ಕೋರ್ಟಿನಲ್ಲಿ ಆಸ್ತಿಯ ಸಂಬಂಧ ಒಂದು ಮೊಕದ್ದಮೆಯಿದೆ. ಅದಕ್ಕೆ ಹೋಗದೆ, ಉಪಾಯವಿಲ್ಲ." ಎಂದು ಮುಂತಾದ ಎಷ್ಟೋ ಕಾರಣಗಳನ್ನು ಕಲ್ಪಿಸಿ ಹೇಳಿ, ಕೊನೆಗೆ ಅಂತೂ ಇಂತೂ ಅತ್ತೆಯನ್ನೊಪ್ಪಿಸಿದನು. ಅತ್ತೆಯನ್ನೊಪ್ಪಿಸುವುದೆಂದರೆ, ಅದೇನು ಸಾಮಾನ್ಯದ ಕೆಲಸವೇ?

'ಆಗಲಿ; ಮತ್ತೇನು ಹೇಳುವುದು. ಇನ್ನು ಬರುವುದು ಯಾವಾಗ್ಗೆ?'

'ಅದಕ್ಕೇನು? ಬರುವ ಕುಂಭಮಾಸಕ್ಕೆ ಬಂದರೆ ಸರಿ. ಇಲ್ಲಿಯ ಕುಂಭಮೇಳದ ಉತ್ಸವವನ್ನೂ ನೋಡಿದಂತಾಗುವುದು.'

ಅತ್ತೆಯು ಕೈಬೆರಳುಗಳನ್ನು ಮಡಿಸಿ ಎಣಿಸತೊಡಗಿದಳು; 'ವೃಶ್ಚಿಕ, ಧನು, ಮಕರ, ಕುಂಭ' ಎಂದು. 'ಖಂಡಿತವಾಗಿಯೂ ಬರುವೆಯಷ್ಟೆ? ಒಂದು ತಿಂಗಳು ಮುಂಚಿತವಾಗಿಯೇ ಬಂದುಬಿಡು. ಬರದಿರಬೇಡ!'

'ಆಗಲಿ; ಬರುವೆನು.'

ಉಪಾಹಾರವನ್ನು ತೀರಿಸಿ ಮೋಹನನು ಹೊರಟನು. ಅತ್ತೆಯು ಹಲವುಸಲ 'ಊರನ್ನು ತಲ್ಪಿದೊಡನೆಯೇ ಕಾಗದ ಬರೆಯಲು ಮರೆಯಬೇಡ!' ಎಂದು ನುಡಿಯುತ್ತ ಅಳಿಯನನ್ನು ಬೀಳ್ಕೊಟ್ಟಳು.

ತನ್ನ ಆಕಸ್ಮಿಕಗಮನವನ್ನು ಕುರಿತು ಮೋಹನನು, ಅತ್ತೆಯೊಡನೆ ಏನೋ ಒಂದು ಕಾರಣವನ್ನು ಹೇಳಿದ್ದನೇನೋ ನಿಜ. ಆದರೆ ಅದರಿಂದ ಅವಳ ಚಿತ್ತವು, ಸಮಾಧಾನಗೊಂಡಿರಲಿಲ್ಲ. ಇದರಲ್ಲೇನೋ ಗೂಢಕಾರಣವಿದ್ದಿರಬೇಕೆಂದು, ಅವಳ ಹೃದಯವು ಆಶಂಕೆಗೊಳುತಿದ್ದಿತು. ಆ ಆಶಂಕೆಯಾದರೂ, ನಿರಾಧಾರವಾಗಿದ್ದಿರಲಿಲ್ಲ. ಅಲ್ಲವಾದರೆ ಕಳೆದ ರಾತ್ರಿ, ಅವನೇಕೆ ಹಾಲನ್ನು ಕುಡಿಯದೆ ಅಂತೆಯೇ ಬಿಟ್ಟಿದ್ದನು? ಅದರ ನೆಲೆಯು, ಸುಶೀಲೆಗೆ ತಿಳಿದಿರಲೇಬೇಕೆಂದು ಅವಳೆಣಿಸಿ 'ಸುಶೀ, ಸುಶೀ!' ಎಂದು ಕರೆದಳು. ಆದರೆ ಅವಳು ಅಲ್ಲಿದ್ದಿರಲಿಲ್ಲ. ಅವಳು ತನ್ನ ಕೋಣೆಯಲ್ಲಿ ಕುಳಿತು, ಬೆಕ್ಕಿನೊಂದಿಗೆ ಆಡುತ್ತಿದ್ದಳು. 'ಅವರು ಕುಡಿಯದಿದ್ದರೆ ಅಷ್ಟೇ ಹೋಯಿತು. ನೀನು ಕುಡಿ ಪಿಲ್ಲೂ!' ಎಂದವಳು ನುಡಿಯುತ್ತ ಬೆಕ್ಕಿಗೆ ಹಾಲನ್ನು ಕುಡಿಸುತಿದ್ದಳು.

ತಾಯಿ ಮಗಳ ಬಳಿಗೆ ಬಂದು 'ಸುಶೀ! ಅವನೇಕೆ ನಿನ್ನೆ ಹಾಲು ಕುಡಿದಿರಲಿಲ್ಲ?' ಎಂದು ಕೇಳಿದಳು.

'ನನಗೇನು ಗೊತ್ತು!'

'ಅವನು ಅಷ್ಟು ಬೇಗನೇ ಹೊರಟು ಹೋದನೇಕೆ?

'ನನಗೇನು ಗೊತ್ತು.'

'ನಿನ್ನೊಡನೆ ತಿಳಿಸಲಿಲ್ಲವೇ?'

'ಇಲ್ಲ.'

'ಅದೇನು?'

'ನನಗೇನು ಗೊತ್ತು.'

CC-0. Jangamwadi Math Collection. Digitized by eGangotri

ಮಗಳ ಉತ್ತರದಿಂದ ಬೇಸರಗೊಂಡು, ತಾಯಿಯು ಅಲ್ಲಿಂದ ಹೊರಟು ಹೋದಳು.

೩

ಹರಮೋಹನನು ಹೊರಟು ಹೋದ ಬಳಿಕ, ಸುಶೀಲೆಯು ಹಲವು ಬಾರಿ ತನ್ನ ಹೃದಯದೊಂದಿಗೆ 'ನನ್ನದೇನು ತಪ್ಪೇ?' ಎಂದು ಪ್ರಶ್ನಿಸಿಕೊಂಡಳು. ಆದರೆ ಅವಳ ಹೃದಯವು, ಆ ವರ್ತನೆಯನ್ನು ತಪ್ಪೆಂದು ಕೊನೆಗೂ ತಿಳಿದುಕೊಳ್ಳಲೇ ಇಲ್ಲ! 'ನನ್ನದೇನು ತಪ್ಪು?' ಪ್ರೇಮದಿಂದ ಹೃದಯವು ಸಮ್ಮಿಳಿತವಾಗಿದ್ದರೆ ಅದೇ ವಿವಾಹ. ನನ್ನ ಹೃದಯವು, ಅವರನ್ನು ಪ್ರೀತಿಸಲೊಲ್ಲದು; ಅಂದ ಬಳಿಕ ನನ್ನದೇನು ತಪ್ಪು?' ಎಂದವಳು ನಿರ್ಧರಿಸಿ, ತನ್ನ ಅಂದಿನ ವರ್ತನೆಗಾಗಿ, ಸಂತೋಷಪಡುತ್ತಿದ್ದಳು.

ಸುಶೀಲೆಗಿಂದೊಂದು ಕಾಗದ ಬಂದಿರುವುದು. ಅದರ ಚೀಟಿನ ಮೇಲೆ ಬೊಂಬಾಯಿಯ ಮುದ್ರೆ. ಮುಚ್ಚಳವನ್ನೊಡೆದು, ಅವಳದನ್ನು ಓದತೊಡಗಿದಳು.

'ಸುಶೀಲಾ—

ನಿನಗೆ ಕಾಗದ ಬರೆಯಬೇಕೆಂದು, ನನಗೆ ಮನಃಪೂರ್ವಕವಾಗಿ ಇಚ್ಛೆಯಿದ್ದಿರಲಿಲ್ಲ. ಆದರೂ, ಬರೆಯಬೇಕೆಂದು ಕುಳಿತೆನು. ಕೈನಡುಗತೊಡಗಿತು. ಬರೆದ ಅಕ್ಷರಗಳೆಲ್ಲಾ, ಕಂಬನಿಯಿಂದ ಮಾಸ ತೊಡಗಿದುವು. ಕೊನೆಗೆಂತೊ, ಇದನ್ನು ಬರೆದು ಮುಗಿಸಿದೆನು. ನನ್ನ ಮೇಲಿನ ದ್ವೇಷದಿಂದ– ಈ ಕಾಗದವನ್ನು ಓದಿ ಮುಗಿಸದೆ, ಅರ್ಧದಲ್ಲಿ ಹರಿದು ಬಿಸುಡಬೇಡ. ಸಮಾಧಾನದಿಂದ ಓದಿ ನೋಡು.

ಸುಶೀ! ಅದೊಂದು ಕಾಲ, ನಿನಗಾಗಿ ನಾನೆಷ್ಟೋ ಅಭಿಮಾನಪಡುತಿದ್ದೆನು. ನಿನ್ನನ್ನೇ ನನ್ನ ಪಾಲಿನ ದೇವಿಯೆಂದು ಭಾವಿಸಿ, ನಿನ್ನ ಮೂರ್ತಿಯನ್ನು ಸರ್ವದಾ ಹೃದಯದಲ್ಲಿ ಧರಿಸಿದ್ದೆನು. ನಿನ್ನಂತಹ ಪತ್ನಿಯನ್ನು ಒದಗಿಸಿ ಕೊಟ್ಟುದಕ್ಕಾಗಿ ವಿಧಿಗೆ ನಾನೆಷ್ಟೋ ಧನ್ಯವಾದಗಳನ್ನರ್ಪಿಸಿದ್ದೆನು. ಅದೆಲ್ಲಾ ಕಳೆದ ಮಾತು. ಅವುಗಳಿಂದೀಗ ಪ್ರಯೋಜನವೇನು? ನಿನ್ನನ್ನು ಅಂತಹ ಮಹತ್ವದ ಸ್ಥಾನದಲ್ಲಿರಿಸಿದುದರ ..ಸಲುವಾಗಿ ನೀನು ನನ್ನನ್ನು ಒಬ್ಬ ಮನುಷ್ಯನೆಂದು ತಿಳಿದಿದ್ದರೆ, ನಾನೆಷ್ಟೋ ಸುಖಿಯಾಗುತ್ತಿದ್ದೆನು. ನಾನೇ ಚರಿತಾರ್ಥನೆಂದೆಣಿಸಿ, ಹಿರಿ ಹಿರಿ ಹಿಗ್ಗುತಿದ್ದೆನು. ಇಲ್ಲ; ನೀನಂತು ಭಾವಿಸಿಲ್ಲ. ನನ್ನನ್ನು ನಾಯಿಗಿಂತಲೂ ಕಡೆಯೆಂದು ಕಂಡೆ. ಆ ಸಂತಾಪವು ನನ್ನ ಹೃದಯವನ್ನು ಸುಟ್ಟು ಬೂದಿ ಮಾಡಿತು.

ನಾನು ನಿನಗೆ ಅನುರೂಪನಲ್ಲದಿರಬಹುದು. ಅದಕ್ಕಾಗಿ ನೀನು ನನ್ನನ್ನು ಪ್ರೀತಿಸದಿರಬಹುದು. ಆದರೆ ನಾನು ನಿನ್ನ ಪತಿ! ನಿನ್ನನ್ನು ಅಂದು ಅಗ್ನಿ ಸಾಕ್ಷಿಯಾಗಿ ವರಿಸಿದ ಪತಿ! ಅದನ್ನು ನೀನು ಮರೆತಂತೆ ಕಾಣುವುದು.

ಇಂತಹ ಅಪಮಾನವನ್ನು ನಾನು ಈ ಜನ್ಮದಲ್ಲಿ ಇಂದಿನತನಕವೂ ಹೊಂದಿದ್ದಿಲ್ಲ. ಇಂತಹ ಅಪಮಾನವನ್ನು ಹೊಂದಿ, ಈ ಸುಟ್ಟುಮೋರೆಯನ್ನು ತೋರಿಸಿಕೊಂಡು ಬಾಳುತಿರುವುದು, ನನ್ನಿಂದೆಂದಿಗೂ ಆಗದ ಮಾತು. ನೀನಿನ್ನು, ಎಂದೆಂದಿಗೂ ನನ್ನನ್ನು ಕಾಣಲಾರೆ.

ನೀನು ಅಂದೇ ನುಡಿದಿದ್ದೆ; ನಾನು ನಿನ್ನನ್ನು ಬಿಟ್ಟರೆ ಸುಖಿಯಾಗಿರುವೆಯೆಂದು. ಆಗಲಿ; ಅಂತೆಯೇ ಆಗಲಿ. ನೀನು ಸುಖಿಯಾಗಿಯೇ ಇರು. ನನಗಾಗಿ ನೀನು ದುಃಖಿಸುವುದನ್ನು ನಾನು ಕಂಡು ಸಹಿಸಲಾರೆನು.

ಸುಶೀ! ನಾನಿಂದು ತೆರಳುವೆನು. ಎಲ್ಲಿ ಅಪಮಾನದ ಸುಳಿವಿಲ್ಲದೆ, ಎಲ್ಲರೂ ಸುಖಿಗಳಾಗಿರುವರೋ ಅಲ್ಲಿಗೆ! ನಾನೇನಾದರೂ ನಿನ್ನನ್ನು ಅಸುಖಿಯನ್ನಾಗಿ ಮಾಡಿದ್ದರೆ ಆ ನನ್ನ ತಪ್ಪನ್ನು ಕ್ಷಮಿಸು. ಆದರೆ ಇದೊಂದು ಕೊನೆಯ ಮಾತು. ದೇವನೊಬ್ಬನಿರುವನೆಂಬುದನ್ನು ನೀನು ನಂಬಬಹುದು. ಪಾಪ ಪುಣ್ಯಗಳು ಧರಿತ್ರಿಯನ್ನು ಸುತ್ತಿರುವುವೆಂಬುದನ್ನು ನೀನು ಒಪ್ಪಬಹುದು. ಆ ದೇವನು ಜನರ ಪಾಪ ಪುಣ್ಯಗಳ ಕೃತ್ಯಗಳನ್ನು ಸರ್ವದಾ ನೋಡುತ್ತಿರುವನೆಂಬುದನ್ನು ನೀನು ಮರೆಯಬೇಡ!

ನನ್ನನ್ನು ಧಿಃಕರಿಸಿದುದಕ್ಕಾಗಿ ನಾನು ನಿನ್ನನ್ನು ಶಪಿಸಲಾರೆನು; ದೂರಲಾರೆನು. ಆದರೆ, ನೀನು ಜನ್ಮಾಂತರಗಳನ್ನೊಪ್ಪುವೆಯಾದರೆ, ಮುಂದಿನ ಜನ್ಮದಲ್ಲಿ ನಿನಗಿಂತಹ ಬುದ್ಧಿಯು ಬರದಿರಲೆಂದು, ದಯಾಳುವಾದ ದೇವನೊಡನೆ ಬೇಡಿಕೊಳ್ಳುವೆನು. ಇದೇ ನನ್ನ ಕೊನೆಯ ಮಾತು!'

ಇತಿ ನಿನ್ನ ನಿರ್ಭಾಗ್ಯ ಪತಿ-

'ಹರಮೋಹನ'

CC-0. Jangamwadi Math Collection. Digitized by eGangotri

ಸುಶೀಲೆಯು ಪತ್ರದ ಒಂದೇ ಒಂದು ಅಕ್ಷರವನ್ನು ಬಿಡದೆ, ಒಂದು ಬಾರಿಯಲ್ಲಿ ಅನೇಕ ತಡವೆ ಓದಿದಳು. ಪತ್ರವನ್ನೋದಿ ಅವಳು ಸಂತುಷ್ಟಳಾದಳೇ ? ತನ್ನ ಅಂದಿನ ಆಶೆಯು ಇಂದು ಕೈಗೂಡಿ, ತಾನು ಸ್ವತಂತ್ರಳಾದೆನೆಂದು ಹಿರಿಹಿರಿ ಹಿಗ್ಗಿದಳೇ ? ಇಲ್ಲ; ಅಂದವಳು ಪತಿಯನ್ನಗಲಿದರೆ ಸುಖಿಯಾಗುವೆನೆಂದು ಎಣಿಸಿದ್ದಳೇನೋ ನಿಜ. ಆದರೆ ಆ ಎಣಿಕೆಯು ತಪ್ಪನ್ನು ಅವಳೀಗ ಕಂಡುಕೊಂಡಳು. ಅವಳ ವಿವೇಕದೃಷ್ಟಿಯು, ಇಂದು ತೆರೆಯಿತು. ಅಂದಿನ ಆ ಅನಾದರದ ಚಿತ್ರವು ಅವಳ ಕಣ್ಣ ಮುಂದೆ ಬಂದು ನಿಂದಿರುವುದು. ಸುಶೀಲೆಯು ಚಿತ್ರದ ಬೊಂಬೆಯಂತೆ, ನಿಶ್ಚೇಷ್ಟಳಾಗಿ ಕುಳಿತಿರುವಳು;

ತಾಯಿಯು 'ಅದಾರ ಕಾಗದ? ಏನು ವಿಶೇಷ ?' ಎಂದು ಕೇಳಿದಳು; ಆದರೆ ಉತ್ತರವಿಲ್ಲ. ತಾಯಿಯು ಮುಂದೆ ಬಂದು ಕಾಗದವನ್ನು ಮೇಜಿನ ಮೇಲಿಂದ ತೆಗೆಯಲು ಕೈನೀಡುವುದರೊಳಗಾಗಿ, ಸುಶೀಲೆಯು ಅದನ್ನು ಚೂರುಚೂರಾಗಿ ಹರಿದುಬಿಟ್ಟಳು.

ಸುಶೀಲೆಗೆ ಹಲವು ದಿನಗಳಿಂದೀಚೆ ದೇಹದಲ್ಲಿ ಬಹಳ ಆಲಸ್ಯ; ಬಹಳ ನಿತ್ರಾಣ. ದೇಹವು ಸಂಪೂರ್ಣವಾಗಿ ಸೊರಗಿರುವುದು. ಅಂದಿನ ಆ ಸೌಂದರ್ಯದ ಒಂದೇ ಒಂದು ಕುರುಹಾದರೂ ಇಂದಿಲ್ಲ.

ಎಲ್ಲಾ ಡಾಕ್ಟರರಿಗೂ ತೋರಿಸಿದ್ದಾಯಿತು. ಹಲವು ವಿಧ ಸಾಧನಗಳಿಂದ ಪರೀಕ್ಷಿಸಿ ನೋಡಿದರು; ಆದರೆ ರೋಗವೇನೆಂಬುದು ಯಾರಿಗೂ ತಿಳಿಯದು. ಕೊನೆಗಂತೂ ಕೆಲವು ಪ್ರಸಿದ್ಧ ಪಂಡಿತರು 'ಇದು ಮನೋವ್ಯಥೆಯಿಂದ ಉಂಟಾದುದು. ಆದುದರಿಂದ ಮನಸ್ಸಿಗೆ ವಿಶ್ರಾಂತಿ ಅಗತ್ಯ. ಅನುಕೂಲವಿದ್ದರೆ ಹವೆಯನ್ನು ಬದಲಾಯಿಸುವುದು ಉತ್ತಮ' ಎಂದರು.

ಸಂಜೆಯ ಸಮಯ. ಸೂರ್ಯದೇವನು ಪ್ರಕಾಶಗುಂದಿ, ಪಶ್ಚಿಮಾದ್ರಿಯ ತಪ್ಪಲಲ್ಲಿ ಉರುಳಿರುವನು. ಸುಶೀಲೆಯು ಕಾಯಿಲೆಯಿಂದು, ಅತ್ಯಲ್ಪಜ್ಞ ಸ್ಥಿತಿಯಲ್ಲಿರುವುದು. ತಾಯಿಯು ಮಗಳ ಬಳಿ, ಅಳುತ ಕುಳಿತಿರುವಳು.

'ಹೇಳಮ್ಮಾ ಸುಶೀ ! ಮೋಹನನ ವಿಳಾಸವನ್ನು ಹೇಳು. ಅವನಿಗೆ ನಾನು ಕಾಗದ ಬರೆಯಿಸುವೆನು.'

'ನಿನ್ನ ಕಾಗದವು ಅವರನ್ನು ಮುಟ್ಟಲಾರದಮ್ಮಾ. ಅವರು ಬರಲಾರರು, ಈ ಪಾಪಿಯೆಡೆಗೆ ಎಂದಿಗೂ ಬರಲಾರರು.

'ಏಕೆ ಸುಶೀ ! ಅವನಿಗೆ, ನಿನ್ನ ಮೇಲೆ ಸಿಟ್ಟೇ ? ನನ್ನ ಮಾತನ್ನವನು ಮೀರಲಾರನು. ಅವನಂತಹ ಮನುಷ್ಯನಲ್ಲಮ್ಮಾ ! ನೀನು ಮರುಗಬೇಡ.'

ಸುಶೀಲೆಯು ಗದ್ಗದ ಸ್ವರದಿಂದ ನುಡಿದಳು:'ಅಮ್ಮಾ ನಾನು ಪಾಪಿ ! ಅವರಿಗೆ, ನನ್ನ ಮೇಲೆ ಸಿಟ್ಟಿಲ್ಲ; ಎಂದಿಗೂ ಇಲ್ಲ. ಅವರನ್ನು ನಾನಿನ್ನು........!' ಮುಂದೆ ಮಾತು ಹೊರಡದೆ ಅವಳಳತೊಡಗಿದಳು.

'ಏನು ? ಏನು ? ಹೇಳಮ್ಮಾ. ಎಲ್ಲವನ್ನೂ ಬಿಚ್ಚಿ ಹೇಳು.' ಎಂದು ತಾಯಿಯು ಗಾಬರಿಯಿಂದ ಕೇಳಿದಳು.

'ಅಮ್ಮಾ ! ಅದುದೇನು ? ನನ್ನ ಹಣೆಯ ಬರೆಹ! ನನ್ನ ಭಾಗ್ಯವನ್ನು ನಾನೇ ಮಣ್ಣುಗೂಡಿಸಿದೆನು. ನನಗಾಗಿ ಅವರು....! ದೇವಾ ! ಕ್ಷಮಿಸು;ಈ ಅಪರಾಧಿನಿಯನ್ನು ಕ್ಷಮಿಸು. ಇಲ್ಲ ! ಕ್ಷಮೆಯಿಲ್ಲ. ಈ ಪಾಪಿಣಿಗೆ ಕ್ಷಮೆಯೇ ? ಈ ಪಾಪರಾಶಿಯನ್ನು ತುಂಬಲು, ನರಕವೂ ಸಾಲದು ! ನನಗಾಗಿ ಅವರು....' ಸುಶೀಲೆಯು ಬಿಕ್ಕಿ ಬಿಕ್ಕಿ ಅಳತೊಡಗಿದಳು.

ವೃದ್ಧ ಮಾತೆಗೆ ಹಿಂದಿನ ಎಲ್ಲಾ ವಿಚಿತ್ರ ಸಂಘಟನೆಗಳ ಗೂಢಾರ್ಥವು ತಿಳಿಯಿತು. ತಿಳಿದೇನು ಫಲ? ಅಂದು ಅವುಗಳ ನೆಲೆಯನ್ನರಿಯದೆ ಮರುಗುತಿದ್ದವಳು, ಈಗ್ಗೆ ಎಲ್ಲವನ್ನೂ ತಿಳಿದು ಗೋಳಾಡತೊಡಗಿದಳು.

ಸುಶೀಲೆಯು ಕ್ಷೀಣಸ್ವರದಿಂದ ಕೇಳಿದಳು –'ಅವರೆಂದು ಬರುವೆನೆಂದು ನುಡಿದಿದ್ದರಮ್ಮಾ ?' ಎಂದು.

'ಏಕೆ ಮಗೂ ! ಆ ಮಾತು ಇನ್ನೇಕೆ? ಕುಂಭಮಾಸಕ್ಕೆ ಬರುವೆನೆಂದು ನುಡಿದಿದ್ದನು.' ಮಗಳು ಪುನಃ ಕೇಳಿದಳು 'ಕುಂಭಮಾಸವೆಂದಿಗಮ್ಮಾ ?'

ಆಹಾ! ಅದೆಂತಹ ಮರ್ಮಾಂತಿಕ ಧ್ವನಿ! ಆ ಧ್ವನಿಯು ಚಿಕ್ಕ ಕೋಣೆಯ ಮೂಲೆಮೂಲೆಗಳಲ್ಲಿ, ಪ್ರತಿಧ್ವನಿಸಿತು – 'ಕುಂಭಮಾಸವೆಂದಿಗಮ್ಮಾ'........!



CC-0. Jangamwadi Math Collection. Digitized by eGangotri

# ಮೈಸೂರುದೇಶದ ಖನಿಜಸಂಪತ್ತಿ

ಲೇಖಕರು:—ಶ್ರೀ: ಎಸ್. ನಾರಾಯಣರಾಯರು, ಬೆಂಗಳೂರು

## ಚಿನ್ನ

ಮೈಸೂರುದೇಶದ ಖನಿಜೋತ್ಪತ್ತಿಯಲ್ಲಿ ಮೈಸೂರಿನ ಚಿನ್ನವೇ ಮುಖ್ಯವಾದದ್ದು. ಹಿಂದುಸ್ಥಾನದಲ್ಲೆಲ್ಲಾ ಹೆಚ್ಚಾಗಿ ಚಿನ್ನವು ಸಿಕ್ಕುವ ಸ್ಥಳವೆಂದರೆ ಮೈಸೂರು ದೇಶದಲ್ಲಿಯೇ. ೧೯೩೭ ನೆಯ ಇಸವಿಯಲ್ಲಿ ಪ್ರಪಂಚದಲ್ಲಿ ೮೩೦,೦೦೦,೦೦೦ ಪೌಂಡು ಚಿನ್ನವನ್ನು ತೆಗೆದಿರುತ್ತಾರೆ. ಇದರಲ್ಲಿ ಹಿಂದುಸ್ಥಾನವು ೧೬೨೩,೯೧೩ ಪೌಂಡು ಅಥವಾ ನೂರಕ್ಕೆ ೨ ರಷ್ಟು ಚಿನ್ನವನ್ನು ಪೂರೈಸಿದೆ. ಮತ್ತು ಪ್ರಪಂಚದಲ್ಲಿ ೮ ನೆಯ ಸ್ಥಾನವನ್ನು ಪಡೆದಿದೆ. ೧೯೩೭ ಮತ್ತು ೧೯೩೮ನೆಯ ಇಸವಿಗಳಲ್ಲಿ ಮೈಸೂರು ದೇಶವು ಹಿಂದುಸ್ಥಾನದ ಚಿನ್ನದ ಉತ್ಪತ್ತಿಯಲ್ಲಿ ನೂರಕ್ಕೆ ೯೯.೩ ಮತ್ತು ೯೯.೯೮ ನ್ನು ಕೊಟ್ಟಿದೆ; ಆದುದರಿಂದ ಇಂದಿನ ಕವಿಶ್ರೇಷ್ಠರೊಬ್ಬರು "ಚಿನ್ನದ ನಾಡಿದು ಮೈಸೂರು" ಎಂದು ಕರೆದಿರುವುದು ಸಹಜೋಕ್ತಿಯೇ ಹೊರತು ಅತಿಶಯೋಕ್ತಿಯೇನೂ ಅಲ್ಲ.

ಚಿನ್ನವು ಧಾರವಾಡ ಪದರುಶಿಲೆಗಳ ಸಮೂಹ (Dharwar Schist System) ದಲ್ಲಿರುವ ಬೆಣಚುಕಲ್ಲು (Quarty) ಗಳ ಸೆಲೆಗಳಲ್ಲಿ ಮಾತ್ರವೇ ಸಿಕ್ಕುವುದು. ಈ ಪದರುಶಿಲೆಗಳನ್ನು ಮೈಸೂರುದೇಶದಲ್ಲಿ ನಾಲ್ಕು ಪಂಕ್ತಿಗಳಾಗಿ ವಿಂಗಡಿಸಬಹುದು. (೧) ದಕ್ಷಿಣ ಸಹ್ಯಾದ್ರಿ ಪಂಕ್ತಿ (೨) ಶಿವಮೊಗ್ಗೆ ಮತ್ತು ಬಾಬಾ ಬುಡನ್‌ಗಿರಿ ಪಂಕ್ತಿ (೩) ಚಿತ್ರದುರ್ಗದ ಪಂಕ್ತಿ ಮತ್ತು (೪) ಕೋಲಾರದ ಪಂಕ್ತಿ. ಈ ಪಂಕ್ತಿಗಳಲ್ಲೆಲ್ಲಾ ಚಿನ್ನವು ಅಲ್ಪಸ್ವಲ್ಪವಾಗಿ ಕಂಡುಬಂದಿವೆ; ಆದರೆ ವಿಶೇಷವಾಗಿ ಸಿಕ್ಕುವುದು ಕೋಲಾರದ ಪಂಕ್ತಿಯಲ್ಲಿಯೇ. ಈ ಪಂಕ್ತಿಯು ಉತ್ತರ ದಕ್ಷಿಣ ಸುಮಾರು ೪೦ ಮೈಲಿ, ಪೂರ್ವ ಪಶ್ಚಿಮ ಸರಾಸರಿ ೫ ಮೈಲಿ ಇರುವುದು. ಈ ಪಂಕ್ತಿಯ ದಕ್ಷಿಣಭಾಗದ ೪ ಮೈಲಿಗಳಲ್ಲಿ ಮಾತ್ರ ಚ್ಯಾಂಪಿಯನ್ ಲೋಡ್ (Champion lode) ಎಂಬ ಒಂದೇ ಒಂದು ಬೆಣಚುಕಲ್ಲುಸೆಲೆಯಲ್ಲಿ ಲಾಭಕರವಾಗಿ ಕೆಲಸಮಾಡಬಹುದಾದಷ್ಟು ಚಿನ್ನವು ಸಿಕ್ಕುತ್ತದೆ (ಆಧುನಿಕ ಯಂತ್ರದ ಸಹಾಯದಿಂದ ೧ ಟನ್ ಬೆಣಚು ಕಲ್ಲಿನಲ್ಲಿ ೫ ಪೆನಿ ತೂಕ ಚಿನ್ನವಿದ್ದರೂ ಲಾಭಕರವಾಗಿ ಕೆಲಸ ಮಾಡಬಹುದು).

ಈ ಧಾರವಾಡದ ಪದರುಶಿಲೆಗಳಲ್ಲಿನ ಬೆಣಚುಕಲ್ಲು ಬಿಳುಪಾಗಿಯೂ ಮತ್ತು ಮೇಘವರ್ಣದ್ದಾಗಿಯೂ ಇರುವುದುಂಟು. ಕೋಲಾರ ಮತ್ತು ನೈಜಾಮರಾಜ್ಯದಲ್ಲಿನ ಹುತ್ತಿ ಮೊದಲಾದ ಕಡೆಗಳಲ್ಲಿ ಮೇಘವರ್ಣದ ಬೆಣಚು ಕಲ್ಲೂ ಚಿತ್ರದುರ್ಗ, ಗದಗು ಈ ಕಡೆಗಳಲ್ಲಿ ಬಿಳುಪು ಬೆಣಚುಕಲ್ಲೂ ವಿಶೇಷವಾಗಿ ಸಿಕ್ಕುತ್ತವೆ. ಈ ಕಲ್ಲಿನಲ್ಲಿ ಚಿನ್ನವು ಸಣ್ಣ ರೇಖೆಗಳಾಗಿಯೂ, 'ಗಟ್ಟಿ' (nugget) ಯಾಗಿಯೂ ಕಣ್ಣಿಗೆ ಕಾಣಿಸದೆಯೂ ಇರುವುದುಂಟು. ಮತ್ತು ಚಿನ್ನವು ಒಂದೇ ಸಮನಾಗಿ ಸಿಕ್ಕುವುದಿಲ್ಲ. ಹೆಚ್ಚಾಗಿ ಸಿಕ್ಕುವ ಸ್ಥಳಗಳಿಗೆ (chutes) ಷೂಟ್ಸ್ ಎಂದು ಹೆಸರು. ಈ ಕಲ್ಲಿನ ಸೆಲೆಗಳು ಅಲ್ಲಲ್ಲಿ ೩೦-೩೫ ಅಡಿ ಅಗಲವಿರುವುದೂ ಉಂಟು. ಮತ್ತು ಸಣ್ಣ ರೇಖೆಗಳಾಗಿರುವುದೂ ಉಂಟು. ಕೆಲವು ಸಾರಿ ಒಂದೇ ಸೆಲೆಯು ಕವಲುಗಳಾಗಿ ಒಡೆದಿರುತ್ತದೆ. ಅನೇಕ ಕಡೆಗಳಲ್ಲಿ ಸೆಲೆಗಳು ಇಳಿದು ಹೋಗದೆ ಮಡಿಕೆ (Folds) ಗಳಾಗಿರುತ್ತವೆ. ಕೆಲವು ಕಡೆಗಳಲ್ಲಿ ಈ ಪದರುಗಳ ಮೇಲಿನ ಮತ್ತು ಕೆಳಗಿನ ಭಾಗಗಳಲ್ಲಿ ಚಿನ್ನವು ವಿಶೇಷವಾಗಿ ಸಿಕ್ಕುತ್ತದೆ.

ನಮ್ಮ ಪೂರ್ವಜರು ಚಿನ್ನಕ್ಕಾಗಿ ಎಷ್ಟೋ ಕಡೆಗಳಲ್ಲಿ ಕೆಲಸಮಾಡಿದ ಕುರುಹುಗಳು ಕಾಣಬರುತ್ತವೆ. ಕೋಲಾರದ ಗಣಿಗಳಲ್ಲಿ ೨೫೭ ಅಡಿಗಳವರೆಗೆ ಕೆಲಸಮಾಡಿದ್ದ ಹಾಗೆ ಗೊತ್ತಾಗಿದೆ. ಟಿಪ್ಪೂಸುಲ್ತಾನನು ರಾಜರಾಮುಚಂದ್ರನ ಮುಖಾಂತರ ಗಣಿಯ ಕೆಲಸವನ್ನು ಮಾಡಿಸಿದ ಹಾಗೆಯೂ ಲಾಭಕರವಾಗಿ ಕಂಡುಬರಲಿಲ್ಲವಾದ್ದರಿಂದ ಕೆಲಸವನ್ನು

CC-0. Jangamwadi Math Collection. Digitized by eGangotri

ನಿಲ್ಲಿಸಿದ ಹಾಗೆಯೂ ವದಂತಿಯಿದೆ. ಶ್ರೀರಂಗಪಟ್ಟಣವು ಇಂಗ್ಲೀಷರ ಕೈಸೇರಿದ ಮೇಲೆ ಕ್ರಿ. ಶ. ೧೮೦೨ ರಲ್ಲಿ 'ಜಾನ್ ವಾರನ್' ಎಂಬಾತನು ಉರಿಗ ಮತ್ತು ಮಾರಿ ಕೊಪ್ಪಗಳಲ್ಲಿ ಚಿನ್ನವು ಸಿಕ್ಕುವುದೆಂದು ತಿಳಿದು ಅಲ್ಲಿಯ ಪ್ರದೇಶಗಳನ್ನು ಪರೀಕ್ಷೆ ಮಾಡಿದ ಹಾಗೆ ಕಾಣುತ್ತದೆ. ಕ್ರಿ. ಶ. ೧೮೭೩ರಲ್ಲಿ ಲವೆಲ್ ಎಂಬಾತನು ಮೈಸೂರು ದೇಶದ ಚೀಫ್ ಕಮೀಷನರಿಂದ ಮೇಲೆ ಕಂಡ ಸ್ಥಳಗಳಲ್ಲಿ ಗಣಿಯ ಕೆಲಸವನ್ನು ಮೊದಲುಮಾಡುವದಕ್ಕೆ ಅಪ್ಪಣೆ ಪಡೆದನು. ಆದರೆ ಕ್ರಿ. ಶ. ೧೮೭೭ರಲ್ಲಿ ಬಂಡವಾಳವಿಲ್ಲದೆ ತನ್ನ ಹಕ್ಕನ್ನು 'ಮೇಜರ್ – ಜನರಲ್ ಡಿ ಲಾ ಪೋಯರ್ ಬೇರ್ಸ್‌ಫೋರ್ಡ್' ಎಂಬಾತನಿಗೆ ಕೊಟ್ಟು ಬಿಟ್ಟನು. ಈತನು ಇತರರೊಂದಿಗೆ ಸೇರಿ ಒಂದು ಮಂಡಲಿಯನ್ನು ಸ್ಥಾಪನೆಮಾಡಿ ಕ್ರಿ. ಶ. ೧೮೮೦ರಲ್ಲಿ 'ಜಾನ್ ಟೇಲರ್' ಕಂಪನಿಯವರೊಂದಿಗೆ ಗಣಿಯ ಕೆಲಸ ಮಾಡಿಸುವುದಕ್ಕೆ ಪ್ರಾರಂಭಮಾಡಿದನು. ಲಾಭವಿಲ್ಲದೆ ಕೆಲಸ ನಡಿಸುತ್ತಿದ್ದು ಕಡೆಗೆ ೧೮೮೩ರಲ್ಲಿ ಬಂಡವಾಳವೆಲ್ಲ ಮುಗಿಯುತ್ತಾ ಬಂದದ್ದರಿಂದ ಕೆಲಸವನ್ನು ನಿಲ್ಲಿಸಬೇಕಾಗಿ ಬಂದಿತು. ಆದರೆ ಧೈರ್ಯಮಾಡಿ ಅದೇ ವರ್ಷ ಪುನಃ ಕೆಲಸವನ್ನು ಪ್ರಾರಂಭ ಮಾಡುವಲ್ಲಿ ಮೇಲೆಯೇ ತೇಲಿ ಹೋಗಿದ್ದ 'ಚ್ಯಾಂಪಿಯನ್ ಲೋಡು' ಆಳದಲ್ಲಿಯೂ ಇದೆ ಎಂದು ಕಂಡು ಬಂದಿತು. ಕ್ರಿ. ಶ. ೧೮೮೬ರಲ್ಲಿ ಸಂದೀದುರ್ಗದ ಗಣಿಯನ್ನು ಪುನಃ ಪ್ರಾರಂಭ ಮಾಡಿದರು. ಇದರ ಜೊತೆಯಲ್ಲಿಯೇ ಬಾಲಘಟ್ಟ, ಉರಿಗಗಳಲ್ಲಿ ಕೆಲಸಕ್ಕೆ ಮೊದಲು ಮಾಡಿದರು. ಈಗ ಮುಖ್ಯವಾಗಿ (೧) ಮೈಸೂರು ಮೈನ್ಸ್, (೨) ಉರಿಗು ಮೈನ್ಸ (೩) ಚ್ಯಾಂಪಿಯನ್ ರೀಫ್ ಮೈನ್ಸ (೪) ಸಂದೀದುರ್ಗದ ಮೈನ್ಸ್ ಮತ್ತು (೫) ಬಾಲಘಟ್ಟದ ಮೈನ್ಸ್ ಎಂಬ ಐದು ಮಂಡಲಿಗಳು 'ಜಾನ್‌ಟೇಲರ್ ಅಂಡ್ ಸನ್ಸ್'ರ ವ್ಯವಸ್ಥೆಯಲ್ಲಿ ಕೆಲಸ ನಡೆಯಿಸುತ್ತಿವೆ.

ಕೋಲಾರದ ಗಣಿಗಳಲ್ಲದೆ ಇನ್ನೂ ಅನೇಕ ಸ್ಥಳಗಳಲ್ಲಿ ಚಿನ್ನವು ಕಂಡುಬಂದಿದೆ. ಇವುಗಳಲ್ಲಿ ಮುಖ್ಯವಾದುವು ಯಾವುವೆಂದರೆ—

**ಚಿತ್ರದುರ್ಗ** ಡಿಸ್ಟ್ರಿಕ್ಟಿನಲ್ಲಿ:— ಹಳೆಕಲ್ಲು; ಹೊನ್ನೆಮರಡಿ; ಕೋಟೆಮರಡಿ; ಗೋಣೂರು; ಬೋಡಿಮರಡಿ; ಜಾವನಗೊಂಡನ ಹಳ್ಳಿ; ಅನ್ನೆಸಿದ್ರಿ; ದಿಂಡಿವಾರ.

**ತುಮಕೂರು** ಡಿಸ್ಟ್ರಿಕ್ಟಿನಲ್ಲಿ:— ರಾಮಸಹಳ್ಳಿ; ಅಜ್ಜನಹಳ್ಳಿ; ಬೆಳ್ಳಾರ; ಹೊನ್ನೆಬಾಗಿ; ಕಾಳಿಂಗನಹಳ್ಳಿ.

**ಮೈಸೂರು** ಡಿಸ್ಟ್ರಿಕ್ಟಿನಲ್ಲಿ:— ನಾಗಮಂಗಲ; ಹುಂಜನಕೆರೆ; ಬೂದಗಳ್ಳಿ; ಬೆಳ್ಳಿಬೆಟ್ಟ; ಅಂಬ್ಲಿ; ಮೂಲಗಿರಿ.

**ಶಿವಮೊಗ್ಗ** ಡಿಸ್ಟ್ರಿಕ್ಟಿನಲ್ಲಿ:— ಹೊನ್ನಾಳಿ; ಪಾಲವ್ವನಹಳ್ಳಿ; ಚೋರನಡಿಹಳ್ಳಿ; ಹೊನ್ನೆಹಟ್ಟಿ.

**ಕಡೂರು** ಡಿಸ್ಟ್ರಿಕ್ಟಿನಲ್ಲಿ:— ಕೆಂಬಡಿಹಳ್ಳಿ, ಸಿಂಗನಮನೆ; ಜಲಗಾರಗುಂಡಿ; ಸಿದ್ದರಹಳ್ಳಿ; ಸಂದಿಹೊಸಳ್ಳಿ; ದೇವ್ರಕಲ್ಲು; ಅಜ್ಜಂಪುರ; ಬುಕ್ಕಾಂಬುಧಿ.

**ಹಾಸನ** ಡಿಸ್ಟ್ರಿಕ್ಟಿನಲ್ಲಿ:— ಎಲ್ಲಿಪರಿ (ಹಾರೇನಹಳ್ಳಿ ಹತ್ತಿರ); ಕೆಂಪಿನಕೋಟೆ.

ಕೆಂಪಿನಕೋಟೆ, ಬೆಳ್ಳಾರ ಮತ್ತು ಇನ್ನೂ ಕೆಲವು ಸ್ಥಳಗಳಲ್ಲಿ ಬಹಳ ಖರ್ಚುಮಾಡಿ ಕೆಲಸ ನಡೆಯಿಸಿ ನಷ್ಟ ಹೊಂದಿದ್ದರಿಂದ ಕೈಬಿಟ್ಟಿರುತ್ತಾರೆ.

ಪೂರ್ವಕಾಲದಲ್ಲಿ ಆಧುನಿಕಯಂತ್ರಗಳ ಸಹಾಯವಿಲ್ಲದಿದ್ದಾಗ ಬೆಣಚುಕಲ್ಲುಗಳನ್ನು ಗಣಿಯಿಂದ ತೆಗೆದು ಕೆಳಗೆ ವಿವರಿಸಿರುವ ವಿಧಾನದಲ್ಲಿ ಪುಡಿಮಾಡುತ್ತಿದ್ದರು.

೧ ಗಣಿಯಿಂದ ಕಲ್ಲುಗಳನ್ನು ಮೇಲೆ ತೆಗೆದು, ದೊಡ್ಡ ಬಂಡೆಗಳಲ್ಲಿ ಮಾಡಿದ ಒರಳುಗಳಲ್ಲಿ ಗುಂಡುಗಳಿಂದ ಪುಡಿಮಾಡುವುದು.

೨ ಗಟ್ಟಿಕಲ್ಲುಗಳಲ್ಲಿ ತಗ್ಗಾಗಿರುವ ಎಡೆಗಳಲ್ಲಿ ಕಲ್ಲುಗಳನ್ನು ಇಟ್ಟು, ಗುಂಡಾಗಿರುವ ಬಂಡೆಯನ್ನು ಅವುಗಳ ಮೇಲೆ ಉರುಳಾಡಿಸುವುದು.

೩ ಅದರಿನ ಕಲ್ಲುಗಳನ್ನು ಕೈಯಿಂದ ಗಟ್ಟಿಕಲ್ಲಿನಲ್ಲಿ ಕೆತ್ತಿದ ಬಚ್ಚಲುಗಳಲ್ಲಿ ಉಜ್ಜುವದು. ಹೀಗೆ ಮಾಡುವುದರಿಂದ ಅತಿ ನಯವಾದ ಪುಡಿಯಾಗುತ್ತದೆ.

ಈ ಧಾರವಾಡದ ಪದರುಶಿಲೆಗಳ ಮುಖಾಂತರ ಹರಿಯುವ ನದಿಹಳ್ಳಗಳ ಮರಳುಗಳಲ್ಲಿ ಚಿನ್ನವು ಕಣಗಳಾಗಿ ಸಿಗುತ್ತದೆ. ಈ ಮರಳನ್ನು ಕೆಳಗೆ ನಮೂದಿಸಿರುವ ರೀತಿಯಲ್ಲಿ ಜಾಲಿಸಿ ಚಿನ್ನವನ್ನು ತೆಗೆಯುವ ವಾಡಿಕೆ ಈಗಲೂ ಅಲ್ಲಲ್ಲಿ ಉಂಟು.

ಈ ಮರಳನ್ನು, ತೊಳೆಯುವ ಪೆಟ್ಟಿಗೆಗೆ (ತೊಟ್ಟಿಲು) ಸಾಗಿಸುವರು. ಪೆಟ್ಟಿಗೆ ೩–೩½ ಅಡಿ ಉದ್ದ, ೧½ ಅಡಿ ಅಗಲ, ½ ಅಡಿ ಆಳವಿರುತ್ತದೆ. ಇದನ್ನು ನೀರಿನ ಹತ್ತಿರವೇ ಸ್ವಲ್ಪ ಓಟವಾಗಿ ಇಟ್ಟು ಜಾಲಗಾರನು ನೀರಿನ

CC-0. Jangamwadi Math Collection. Digitized by eGangotri

ಲ್ಲಿಯೇ ಪೆಟ್ಟಿಗೆಯ ಹತ್ತಿರ ಕೂಡುವನು. ಇದರ ಮೇಲು ಮತ್ತು ಕೆಳಭಾಗಗಳಲ್ಲಿ ರಂಬಿಗೆಳನ್ನು ಸಿಕ್ಕಿಸಿ, ಜಾಲಗಾರನು ಮರಳಿನ ವೇಲೆ ನೀರನ್ನು ಸುರಿದು ಕೈ ಯಾಡಿಸುವನು. ಇದರಿಂದ ಹಗುರಾದ ಮರಳೂ,ಕಸವೂ ತೇಲಿಹೋಗಿ, ಭಾರವಾದ ಕಣಗಳು ಮಾತ್ರ ಕೆಳಗೆ ನಿಲ್ಲುತ್ತವೆ. ಇವುಗಳನ್ನು ತಟ್ಟೆಗೆ ಬಾಚಿ ಹಾಕಿಕೊಂಡು ನೀರಿನಲ್ಲಿ ಜಾಲಿಸುವನು. ಇದರಿಂದ ಭಾರವಾದ ಮತ್ತು ನುಣುಪಾದ ಕಪ್ಪುಕಣಗಳು ಮಾತ್ರ ತಟ್ಟೆಯಲ್ಲಿ ನಿಲ್ಲುತ್ತವೆ. ತಟ್ಟೆಯನ್ನು ಓರೆಮಾಡಿ ಕೈಯಿಂದ ನೀರನ್ನು ತೊಟ್ಟುತೊಟ್ಟಾಗಿ ಮರಳಿನ ಮೇಲೆ ಹಾಕುವುದರಿಂದ ಲಘುವಾದ ಕಣಗಳು ಚೆದರಿ ಹೋಗಿ ಚಿನ್ನದ ಕಣಗಳು ಮಾತ್ರ ತಟ್ಟೆಯ ಬುಡದಲ್ಲಿ ಕಾಣಿಸಿಕೊಳ್ಳುವವು. ಇವುಗಳನ್ನು ಆರಿಸಿ ತೆಗೆದು ಇಟ್ಟುಕೊಳ್ಳುವನು.

ಮೇಲೆ ಹೇಳಿದ ರೀತಿಯಲ್ಲಿ ಬಂದ ಚಿನ್ನವನ್ನು ಪಾದರಸದೊಂದಿಗೆ ಸೇರಿಸಿ, ಅಪ್ಪಟ ಚಿನ್ನವನ್ನು ತೆಗೆಯುವುದಕ್ಕೆ ಪ್ರಯತ್ನಪಡುವನು. ಚಿನ್ನವನ್ನು ಶುದ್ಧ ಮಾಡುವುದಕ್ಕೆ ಗಟ್ಟಿಯನ್ನು ಪಟ್ಟಿ (plate)ಯಾಗಿ ತಟ್ಟಿ, ಅದನ್ನು ಮೇಲಿಂದ ಮೇಲೆ ಬೆಂಕಿಯಲ್ಲಿ ಕಾಯಿಸಿ ತಟ್ಟುವರು. ಅನಂತರ ಇವುಗಳನ್ನು ಉಪ್ಪು, ಬೆಳಗಾರ, ಬೆರಣಿಗಳ ಜೊತೆಯಲ್ಲಿ ಕಾಯಿಸುವುದರಿಂದ ಚಿನ್ನದ ಜೊತೆಯಲ್ಲಿರುವ ತಾಮ್ರವೂ ಬೆಳ್ಳಿಯೂ ಉಪ್ಪಿನ ಜೊತೆಯಲ್ಲಿ ಕಿಟ್ಟ (slag) ವಾಗಿ ಹರಿದು ಹೋಗುವವು. ಮತ್ತು ಅಪ್ಪಟ ಚಿನ್ನವು ಬೇರೆಯಾಗುವುದು.

ಈಗಿನ ಕಾಲದಲ್ಲಿ ಗಣಿಗಳ ಕೆಲಸಗಳನ್ನು ಅದಷ್ಟು ಯಂತ್ರಗಳ ಸಹಾಯದಿಂದಲೇ ಮಾಡುವರು. ಗಣಿಗಳು ಆಳವಾಗಿ ಹೋದ ಹಾಗೆಲ್ಲಾ ಗಾಳಿ, ಸೆಕೆಗಳ ತೊಂದರೆಗಳೂ ವೆಚ್ಚವೂ ಹೆಚ್ಚು. ಸನ್ ೧೯೩೮ನೆಯ ಇಸವಿ ಡಿಸೆಂಬರ್ ಕೊನೆಯಲ್ಲಿ ಚ್ಯಾಂಪಿಯನ್ ರೀಫ್ ಗಣಿಯಲ್ಲಿ ೬೬೪೯ ಅಡಿ ಮತ್ತು ಉರಿಗದ ಗಣಿಯಲ್ಲಿ ೬೪೫೭ ಅಡಿ ಆಳದವರೆಗೂ ಕೆಲಸ ನಡೆಯಿಸಿದ್ದಾರೆ. ಕೋಲಾರದ ಸೀಮೆಯು ಸಮುದ್ರಮಟ್ಟಕ್ಕಿಂತ ೩೦೦೦ ಅಡಿ ಎತ್ತರದಲ್ಲಿದೆ;ಆದ್ದರಿಂದ ಅಲ್ಲಿಯ ಗಣಿಗಳು ಸಮುದ್ರಮಟ್ಟಕ್ಕಿಂತ ಸುಮಾರು ೩೫೦೦ ಅಡಿ ತಗ್ಗಿನಲ್ಲಿ ಇದ್ದ ಹಾಗಾಯಿತು. ಗಣಿಗಳಲ್ಲಿ ಶಾಖದ ಪ್ರಮಾಣವು ೧೧೮ ರಿಂದ ೧೨೦ರ ವರೆಗೂ ಇದೆ. ಇಂಥ ಗಣಿಗಳಲ್ಲಿ ಒಳ್ಳೆಯ ಹವೆ ಬರುವುದಕ್ಕೆ ಈಚೆಗೆ ಕೆಲವು ಕಡೆ ಹೊಸದಾಗಿ ೧೫ ಅಡಿ ವ್ಯಾಸದ ಇಟ್ಟಿಗೆಯಿಂದ ಕಟ್ಟಿರುವ ಬಾವಿ (shaft) ಗಳನ್ನು ತೋಡಿರುತ್ತಾರೆ. ಇವುಗಳ ಕೆಳಭಾಗಗಳಲ್ಲಿ ವಿದ್ಯುಚ್ಛಕ್ತಿಯ ಪಂಖಗಳನ್ನು ನಡೆಯಿಸುತ್ತಿರುವುದರಿಂದ ಉಷ್ಣವಾಯುವು ಮೇಲೆ ಹೋಗಿ ಸ್ವಚ್ಛವಾದ ಮತ್ತು ಶೀತಲವಾದ ವಾಯುವು ಗಣಿಯೊಳಕ್ಕೆ ಹೋಗುವುದು. ಸುರಂಗಗಳಲ್ಲಿಯೂ ಮತ್ತು ಕೆಲಸ ಮಾಡುವ ಸ್ಥಳಗಳಲ್ಲಿಯೂ ಸ್ವಚ್ಛವಾದ ಗಾಳಿಯನ್ನು ತಳ್ಳುತ್ತಾರೆ. ಗಣಿಗಳಲ್ಲಿ ನೀರು ಹೆಚ್ಚಾಗಿ ಬಂದು ತೊಂದರೆಕೊಡುತ್ತದೆ. ವಿಶೇಷವಾಗಿ ನೀರು ಬಹಳ ಆಳಗಳಲ್ಲಿ ಸಿಕ್ಕುವುದಿಲ್ಲವಾದ್ದರಿಂದ ಆಳವಾದ ಗಣಿಗಳಲ್ಲಿ ಅದರ ತೊಂದರೆ ಹೆಚ್ಚಾಗಿರುವುದು ಅಪರೂಪ. ಈ ನೀರನ್ನು ಯಂತ್ರಗಳ ಸಹಾಯದಿಂದ ಮೇಲಕ್ಕೆ ಎತ್ತುತ್ತಾರೆ. ಗಣಿಗಳಲ್ಲಿ ಮೇಣಬತ್ತಿಯ ಸಹಾಯದಿಂದ ಕೆಲಸ ಮಾಡುತ್ತಾರೆ. ಆದರೆ ಸಾಧ್ಯವಾದ ಜಾಗಗಳಲ್ಲೆಲ್ಲಾ ವಿದ್ಯುಚ್ಛಕ್ತಿಯ ದೀಪವನ್ನೆ ಇಟ್ಟಿರುವರು. ಗಣಿಗಳಲ್ಲಿ ಆಗಾಗ ಕಲ್ಲು ಸಿಡಿದು (rock burst) ಅನಾಹುತಗಳು ಆಗುವುದುಂಟು. ಈಚೆಗೆ ಮರಗಳ ಒತ್ತೆಗಳನ್ನು ಕೊಟ್ಟು, ಅಥವಾ ಕಲ್ಲ ಕಂಬಗಳನ್ನು ಆಸರೆ ಕೊಟ್ಟು, ಇಲ್ಲವೆ ಕಾನ್‌ಕ್ರೀಟು(concrete) ಕಂಬಗಳ ಸಹಾಯದಿಂದ ಗಣಿಗಳ ಗೋಡೆಗಳನ್ನು ಭದ್ರಪಡಿಸುತ್ತಿರುವುದರಿಂದ ಕಲ್ಲು ಸಿಡಿಯುವುದು ಕಡಿಮೆಯಾಗಿದೆ.

ಸಾಮಾನುಗಳನ್ನು ಇಳಿಸುವುದೂ ಎತ್ತುವುದೂ ಜನಗಳು ಹತ್ತಿ ಇಳಿಯುವುದೂ ವಿದ್ಯುಚ್ಛಕ್ತಿಯ ಲಿಫ್ಟ್‌ಗಳ (Electric lifts) ಗಳ ಸಹಾಯದಿಂದಲೆ. ಪ್ರತಿಯೊಂದು ಬಾವಿಯಲ್ಲಿಯೂ (Shaft) ಜನಗಳು ಹತ್ತಿ ಇಳಿಯುವುದಕ್ಕೂ, ಸಾಮಾನುಗಳಿಗೂ ವಿದ್ಯುಚ್ಛಕ್ತಿಯ ತಂತಿಗಳಿಗೂ, ಮತ್ತು ಗಾಳಿ-ನೀರಿನ ಕೊಳವಿಗಳಿಗೂ ಬೇರೆ ಬೇರೆ ಅಂಕಣಗಳನ್ನು ಏರ್ಪಡಿಸಿರುವರು. ಗಣಿಗಳಲ್ಲಿ ಕಿತ್ತ ಕಲ್ಲುಗಳನ್ನು ಕೂಲಿಯ ಜನರು ತಲೆಗಳ ಮೇಲೆ ಹೊತ್ತು ಟ್ರಾಲಿಗಳಿಗೆ ತಂದು ಹಾಕುವರು. ಈ ಟ್ರಾಲಿಗಳನ್ನು ಕಂಬಿಗಳ ಮೇಲೆ ಎಳೆದು ಬಾವಿಗಳಲ್ಲಿರುವ ತೊಟ್ಟಿಗಳಿಗೆ ಉರುಳಿಸುತ್ತಾರೆ. ಅನಂತರ ಈ ತೊಟ್ಟಿಗಳನ್ನು ಸುರಂಗದ ಮಾರ್ಗವಾಗಿ ಕಂಬಿಗಳ

CC-0. Jangamwadi Math Collection. Digitized by eGangotri

ಮೇಲೆಯೂ ಅಥವಾ ಪಂಜರಗಳ ಸಹಾಯದಿಂದ ಬಾವಿ (shaft) ಗಳ ಮುಖಾಂತರವೂ ಮೇಲಕ್ಕೆ ಎಳೆಯುತ್ತಾರೆ.

ಬೆಣಚುಕಲ್ಲುಗಳನ್ನು ಗಣಿಯಿಂದ ಮೇಲೆ ತಂದು, ಜಜ್ಜುವ ಯಂತ್ರಕ್ಕೆ (stamp mill) ಸಾಗಿಸುವರು. ಇಲ್ಲಿಯ ಪ್ರತಿಯೊಂದು ಉಕ್ಕಿನ ಒನಕೆಯೂ ೧೩೫೦ ಪೌಂಡಿನ (lbs)ತೂಕವಿರುತ್ತದೆ. ಮತ್ತು ಒಂದು ನಿಮಿಷಕ್ಕೆ ೯೬ ಸಾರಿ ೭½ ಅಂಗುಲ ಎತ್ತರದಿಂದ ಬೀಳುತ್ತದೆ. ಇಂಥ ೫ ಒನಕೆಗಳನ್ನು ಒಂದು ಪೆಟ್ಟಿಗೆಯಲ್ಲಿ ಸೇರಿಸಿ ಇಂಥ ಪೆಟ್ಟಿಗೆಗಳನ್ನು ಸಾಲುಸಾಲಾಗಿ ಇಟ್ಟಿರುತ್ತಾರೆ. ಈ ಒನಕೆಗಳ ಮುಖಾಂತರ ನೀರು ಹಾದು ಹೋಗುವಾಗ ಕಲ್ಲುಗಳು ನುಣುಪಾಗಿ ಜಜ್ಜಲ್ಪಡುವವು. ಈ ನುಣುಪಾದ ಮರಳು ನೀರು ಓಟವಾಗಿಟ್ಟಿರುವ ಮತ್ತು ಪಾದರಸವನ್ನು ಸವರಿರುವ ತಾಮ್ರದ ತಗಡುಗಳ ಮೇಲೆ ಹರಿದು ಹೋಗುತ್ತವೆ. ಚಿನ್ನದ ಕಣಗಳು ಪಾದರಸದ ಜೊತೆಯಲ್ಲಿ (amalgam) ಮಿಶ್ರವಾಗಿ ಹಿಂದೆ ನಿಲ್ಲುವವು. ಸುಮಾರು ೨ ಘಂಟೆಗೆ ಒಂದು ಸಾರಿ ರಬ್ಬರ್ ತುಂಡುಗಳಿಂದ ಈ ತಗಡನ್ನು ಒರಸುವರು. ಜಾರಿ ಹೋಗುವ ಪಾದರಸಮಿಶ್ರಣವನ್ನು ಶೇಖರಿಸುವುದಕ್ಕೆ ಒಂದು ಆಳವಾದ ಪಾತ್ರೆಯು ತಗಡಿನ ಕೆಳಗಡೆಗೆ ಇಡಲ್ಪಟ್ಟಿರುವುದು. ಈ ಪಾತ್ರೆಯಲ್ಲಿರುವ ಮಿಶ್ರಣವನ್ನು ಚೆನ್ನಾಗಿ ನೀರಿನಲ್ಲಿ ತೊಳೆದು ಷಾಮಾಯಿ (Chamois) ಎಂಬ ಚಿಗರೆಗಳ ಚರ್ಮದಲ್ಲಿ ಹಿಂಡುವುದರಿಂದ ಹೆಚ್ಚಾದ ಪಾದರಸವು ಹೊರಗೆ ಬಂದು, ಪಾದರಸಮಿಶ್ರಣವು ಮಾತ್ರ ಹಿಂದೆಉಳಿಯುವದು. ಅನಂತರ ಈ ಮಿಶ್ರಣವನ್ನು ಭಟ್ಟಿಗೆ ಹಾಕುವುದರಿಂದ ಪಾದರಸವು ಹಬೆಯಾಗಿ ಹೋಗಿ ಚಿನ್ನವು ಸ್ಪಂಜಿ ( Sponge ) ನ ಹಾಗೆ ಹಿಂದೆ ನಿಲ್ಲುವುದು. ಭಟ್ಟಿಗೆ ಹಾಕಿದಾಗ ಹಬೆಯ ರೂಪವಾಗಿ ಹೋಗಿರುವ ಪಾದರಸವನ್ನು ತಣ್ಣಗೆ ಮಾಡಿ ಪುನಃ ಉಪಯೋಗಿಸುವರು. ಸ್ಪಂಜ್‌ಚಿನ್ನವನ್ನು ಮೂಸೆಯಲ್ಲಿ ಕರಗಿಸಿ ( Bullion ) ಗಟ್ಟಿಗಳನ್ನಾಗಿ ಮಾಡುವರು. ಈ ರೀತಿಯಲ್ಲಿ ನೂರಕ್ಕೆ ೮೨ ರಷ್ಟು ಚಿನ್ನವು ಸಿಕ್ಕುತ್ತದೆ. ಜಜ್ಜುವ ಯಂತ್ರಗಳಿಂದ ಹೊರಬೀಳುವ ಮಣ್ಣಿನಲ್ಲಿ ನೂರಕ್ಕೆ ೧೮ರಷ್ಟು ಚಿನ್ನವು ಇನ್ನೂ ಇರುವುದು. ಇದನ್ನು ಹೊಂದುವುದಕ್ಕೆ ಕೆಳಗೆ ತಿಳಿಸುವ ರಾಸಾಯನಿಕ ವಿಧಾನವನ್ನು ಉಪಯೋಗಿಸುತ್ತಿದ್ದಾರೆ.

ಮೇಲೆ ಹೇಳಿದ ಮಣ್ಣನ್ನು ಮರಳು, ಮಣ್ಣುಗಳನ್ನಾಗಿ ವಿಭಾಗಿಸಿ, ಮರಳನ್ನು ಪುನಃ ಚೆನ್ನಾಗಿ ಪುಡಿಮಾಡಿ, ಸುಮಾರು ೧೦೦-೨೦೦ ಟನ್ ಹಿಡಿಸುವ ತೊಟ್ಟಿಗಳಲ್ಲಿ ತುಂಬುವರು. ಈ ತೊಟ್ಟಿಗಳ ಕೆಳಭಾಗಕ್ಕೆ ತಟ್ಟು ( canvas ) ಗಳನ್ನು ಹಾಕಿರುವರು. ಆ ಮೇಲೆ 'ಸಯನೈಡ್' ದ್ರಾವಕವನ್ನು ತೊಟ್ಟಿಗೆ ಹಾಕಿ ಗಾಳಿಗೆ ಬಿಡುವದರಿಂದ ಚಿನ್ನವು ದ್ರಾವಕದಲ್ಲಿ ಕರಗಿ ಹೋಗುವುದು. ಈ ದ್ರಾವಕವನ್ನು ಶೋಧಿಸಿ ಮರಳನ್ನು ನೀರಿನಲ್ಲಿ ತೊಳೆದು, ಈ ನೀರನ್ನೂ ದ್ರಾವಕವನ್ನೂ ಸತುವು ( zinc ) ತುಂಬಿರುವ ಪೆಟ್ಟಿಗೆಗಳಿಗೆ ಸಾಗಿಸುತ್ತಾರೆ. ಇಲ್ಲಿ ಚಿನ್ನವು ಸತುವಿನ ಮೇಲೆ ಕಪ್ಪುಪುಡಿಯಾಗಿ ನಿಲ್ಲುವುದು. ಈ ಕಪ್ಪು ಪುಡಿಯನ್ನೂ ಸತುವನ್ನೂ ದ್ರಾವಕ( acid ) ದಲ್ಲಿ ಹಾಕುವುದರಿಂದ ಸತುವು ಕರಗಿ ಪುಡಿಯೇ ಬೇರೆಯಾಗಿ ನಿಲ್ಲುವುದು. ಈ ಪುಡಿಯನ್ನು ಟಂಕ ( flux ) ದ ಜೊತೆಗೆ ಮಿಶ್ರಮಾಡಿ ಮೂಸೆಗಳಲ್ಲಿ ಕರಗಿಸಿ, ಅಚ್ಚುಗಳಲ್ಲಿ ಹಾಕಿ,ಇಂಗ್ಲೆಂಡಿಗೆ ಶುದ್ಧಿ ಮಾಡುವುದಕ್ಕೆ ಕಳುಹಿಸುವರು.

ಮೇಲೆ ಹೇಳಿದ ರೀತಿಯಲ್ಲಿ ಬಹಳನಯವಾದ ಮಣ್ಣನ್ನು ಶೋಧಿಸುವುದಕ್ಕೆ ಆಗುವುದಿಲ್ಲ. ಈಮಣ್ಣನ್ನು ಸಯನೈಡ್‌ದ್ರಾವಕದಲ್ಲಿ ಹಾಕಿ, ಚೆನ್ನಾಗಿ ಕಡೆದು, ಅನಂತರ ಇವುಗಳನ್ನು ಚೌಕಾದ ದೊಡ್ಡ ಕಬ್ಬಿಣದ ತೊಟ್ಟಿಗಳಿಗೆ ಸಾಗಿಸುವರು. ಇಲ್ಲಿ ಶೋಧಿಸುವುದಕ್ಕೆ ದೊಡ್ಡ ಪಟಗಳನ್ನು ತಗಲು ಹಾಕಿರುವರು. ಈ ಪಟಗಳ ಚೌಕಟ್ಟುಗಳಿಗೆ ಎರಡು ಕಡೆಗಳಲ್ಲಿಯೂ ತಟ್ಟು( Canvas ) ಹಾಕಿ ಮಧ್ಯದಲ್ಲಿ ನಾಳವನ್ನು ಇಟ್ಟು, ಇದನ್ನು ನಿರ್ವಾಯುವಿನ ( vacuum ) ದೊಡ್ಡ ತೊಟ್ಟಿ ( reservoir ) ಗಳಿಗೆ ಸೇರಿಸಿರುವರು. ಕಬ್ಬಿಣದ ತೊಟ್ಟಿಗಳು ಭರತಿಯಾದ ಮೇಲೆ ನಾಳಗಳ ಬಿರಟೆಗಳನ್ನು ತೆಗೆಯುವುದರಿಂದ ಚಿನ್ನಮಿಶ್ರವಾದ ದ್ರಾವಕವು ತಟ್ಟುಗಳ ಮುಖಾಂತರ ನಿರ್ವಾಯುವಿನ ತೊಟ್ಟಿಗಳಿಗೆ ಹೋಗಿ ಸೇರುವುದು. ಮತ್ತು ಮಣ್ಣು ತಟ್ಟುಗಳ ಮೇಲೆ ಹೆಕ್ಕಲೆಯಾಗಿ ನಿಲ್ಲುವುದು. ಈ ದ್ರಾವಕವನ್ನು ಸತುವಿನ ಪೆಟ್ಟಿಗೆಗೆ ಸಾಗಿಸಿ ಮೇಲೆಯೇ ತಿಳಿಸಿದಂತೆ ಚಿನ್ನವನ್ನು ತೆಗೆಯುವರು. ಈ ರೀತಿಯಿಂದ ನೂರಕ್ಕೆ೯೫ ರಷ್ಟು ಚಿನ್ನವನ್ನು ತೆಗೆಯಬಹುದು. ಇನ್ನುಳಿದ ೪.೫ ರಷ್ಟು ಚಿನ್ನವನ್ನು ತೆಗೆಯುವುದಕ್ಕೆ ಆಗುವುದಿಲ್ಲ.

ಕೋಲಾರದ ಗಣಿಗಳಲ್ಲಿ ಎಲ್ಲಾ ಜನಾಂಗದವರೂ



CC-0. Jangamwadi Math Collection. Digitized by eGangotri

ಕೆಲಸಮಾಡುತ್ತಿದ್ದಾರೆ. ಹೆಂಗಸರು, ಹುಡುಗರುಗಳನ್ನು ಮೇಲುಗಡೆಗಳಲ್ಲಿಯೇ ಇಟ್ಟಿರುವರು. ಸನ್ ೧೯೨೮ರಲ್ಲಿ ಒಟ್ಟು ೧೮,೮೨೯ ಜನಗಳು ಕೆಲಸ ಮಾಡಿದರು. ಇವರಲ್ಲಿ ೩೩೪ ಜನ ಐರೋಪ್ಯರು (ಇಟಲಿ ದೇಶದವರೂ ಸೇರಿ); ೩೮೪ ಜನ ಆಂಗ್ಲೋ ಇಂಡಿಯನರು, ೧೮,೧೧೧ ಹಿಂದುಗಳು.

ಈ ಗಣಿಗಳು ಎಷ್ಟು ವರುಷಗಳ ವರೆಗೆ ನಡೆಯಬಹುದೆಂಬುದರ ವಿಷಯವಾಗಿ ಡಾ॥ ಫರ್ಮರ್ ಎಂಬವರು ಈ ರೀತಿಯಲ್ಲಿ ಅಭಿಪ್ರಾಯಪಟ್ಟಿರುತ್ತಾರೆ. 'ಈ ಗಣಿಗಳಲ್ಲಿ ಕೆಲವು ವರುಷಗಳ ವರೆಗೆ ಬೇಕಾಗುವಷ್ಟು ಅದು ಮಾತ್ರವೇ ಶೇಖರಿಸಲ್ಪಟ್ಟಿರುವುದರಿಂದಲೂ ಒಂದು ವರ್ಷದಲ್ಲಿ ಖರ್ಚಾಗುವಷ್ಟೇ ಅದರನ್ನು ತೆಗೆಯುವ ವಾಡಿಕೆ ಇರುವುದರಿಂದಲೂ ಇಷ್ಟೇ ಅದರು ಶೇಖರವಾಗಿದೆಯೆಂದು ಹೇಳುವುದು ಸುಲಭಸಾಧ್ಯವಲ್ಲ. ಇದುವರೆಗು ಗಣಿಗಳ ಆಳವಾದ ಭಾಗಗಳಿಂದ ತಿಳಿದುಬಂದಿರುವುದೇನೆಂದರೆ ಮೇಲಿನ ಭಾಗಗಳಲ್ಲಿ ಸಿಕ್ಕಿದಂತೆಯೇ ಅದು ಕೆಳಗೂ ಸಿಕ್ಕುವುದಿಲ್ಲವೆಂಬುದಕ್ಕೆ ಯಾವ ತೆರದ ಸೂಚನೆಗಳೂ ಕಂಡುಬಂದಿಲ್ಲ.*

## ಪಟ್ಟಿ ೧

ಕೋಲಾರದ ಗಣಿಗಳಲ್ಲಿ ೨೦೦೦ lb ನ ಒಂದು ಟನ್ ಅದರನ್ನು ತೆಗೆದು ಚಿನ್ನವನ್ನು ಹೊಂದುವುದಕ್ಕೆ ಆಗುವ ಖರ್ಚಿನ ಪಟ್ಟಿ. (ಶಿಲಿಂಗ್‌ನಲ್ಲಿ ಕೊಟ್ಟಿದೆ.)

| ವರ್ಷ | ಗಣಿಯ ಕೆಲಸ | ಅದರಿನಿಂದ ಚಿನ್ನವನ್ನು ತೆಗೆಯುವುದಕ್ಕೆ | ಹಿಂದೆ ಇದ್ದ ಮಣ್ಣಿನ ಗುಡ್ಡೆಗಳಿಂದ ಚಿನ್ನವನ್ನು ತೆಗೆಯುವುದಕ್ಕೆ | ಒಟ್ಟು (ಸಿಬ್ಬಂದಿ ಖರ್ಚು ಸೇರಿ) |
|---|---|---|---|---|
| ೧೯೧೫ | ೧೨.೩೭ ೧೬.೯೮ | ೨. ೪೫ | ೧. ೬೫ | ೨೭. ೨೫ |
| ೧೯೨೦ | ೨೦.೪೦ ೨೬.೮೬ | ೪. ೯೪ | ೨. ೧೩ | ೪೧. ೭೮ |
| ೧೯೨೫ | ೧೫.೫೬ ೧೮.೬೧ | ೪. ೩೪ | ೨. ೫೫ | ೩೨. ೨೯ |
| ೧೯೨೮ | ೧೯.೦೩ ೨೨.೧೭ | ೪. ೦೬ | ೨. ೩೨ | ೩೪. ೦೧ |

## ಪಟ್ಟಿ ೨

೧೮೮೨–೧೯೨೮ ವರೆಗೆ ಮೈಸೂರುದೇಶದಲ್ಲಿ ಗಣಿಗಳಿಂದ ಉತ್ಪತ್ತಿಯಾದ ಚಿನ್ನ, ಅದರ ಬೆಲೆ ಮತ್ತು ಮೈಸೂರು ರಾಜರಿಗೆ ಕೊಟ್ಟಿರುವ ರಾಯಲ್ಟಿ ತೋರಿಸುವ ಪಟ್ಟಿ.

| ಗಣಿಯ ಹೆಸರು | ಚಿನ್ನ ಔನ್ಸ್‌ಗಳಲ್ಲಿ | ಖರೀದಿ ಪೌ– ಶಿ– ಪೇ | ರಾಯಲ್ಟಿ | ಷರಾ |
|---|---|---|---|---|
| ಕೋಲಾರದ ಚಿನ್ನದ ಗಣಿಗಳು [ಕೆಲಸ ನಡೆಯುತ್ತಾ ಇದೆ] | | | | |
| ಮೈಸೂರು | ೫,೯೦೮,೬೮೮ ೭೩೭ | ೨೫,೫೧೨,೨೩೪– ೧–೧೧ | ೧,೩೭೯,೫೦೫–೦–೪ | |
| ಚಾಂಪಿಯನ್ ರೀಫ್ | ೩,೭೧೬,೧೯೩.೮೦೧ | ೧೫,೯೭೮,೪೦೭–೧೧– ೭ | ೮೧೯,೭೬೬–೨–೨ | |
| ಉರಿಗಾಂ | ೩,೦೦೧,೪೭೯.೭೨೨ | ೧೩,೦೭೦,೬೦೦– ೪– ೨ | ೬೯೭,೩೮೨–೯–೮ | |
| ಸಂದೀದುರ್ಗ | ೨,೩೧೪,೨೯೬.೨೩೦ | ೧೦,೦೩೩,೨೬೨– ೦– ೩ | ೫೩೦,೪೯೮–೫–೧ | |
| ಬಾಲಘಟ್ಟ | ೭೭೬,೫೯೩.೪೮೩ | ೩,೩೯೩,೨೪೬– ೨– ೬ | ೧೭೨,೪೧೭–೮–೨ | |
| ಕೋಲಾರದ ಚಿನ್ನದ ಗಣಿಗಳು [ಕೆಲಸ ನಿಲ್ಲಿಸಲ್ಪಟ್ಟಿದೆ] | | | | |
| ಎರ್ರಕೊಂಡ | ೧೪೨,೦೦೦ | ೬೦೨– ೦– ೦ | ೨೯–೦–೦ | ೧೮೯೪. ೯೭ ರ ವರೆಗೆ ನಡೆಯುತ್ತಿತ್ತು. |

* ಈ ಕೆಳಗೆ ನಮೂದಿಸಿರುವ ಪುಸ್ತಕಗಳ ಆಧಾರದ ಮೇಲೆ ಈ ಪ್ರಬಂಧವು ಬರೆಯಲ್ಪಟ್ಟಿದೆ.

ಮೈಸೂರು ಜಿಯಲಾಜಿಕಲ್ ಬುಲೆಟಿನ್ ನಂ. ೭. ಮೈಸೂರು ಜಿಯಲಾಜಿಕಲ್ ಬುಲೆಟಿನ್ ನಂ. ೧೧. ರೈಸ್‌ರ ಮೈಸೂರು ಗೆಜೆಟಿಯರ್ ವಾಲ್ಯೂಂ ನಂ. ೧. ಜಿಯಲಾಜಿಕಲ್ ಸರ್ವೆ ಆಫ್ ಇಂಡಿಯದವರ ರೆಕಾರ್ಡ್ಸ್, vol ೩೪ part ೨. ಜಿಯಲಾಜಿಕಲ್ ಸರ್ವೆ ಆಫ್ ಇಂಡಿಯದ ಮೆಮಾಯರ್ಸ್ vol ೩೩ part. ೧. ಗೋಲ್ಡ್ ರಿಸೋರ್ಸಿಸ್ ಆಫ್ ದಿ ವರ್ಲ್ಡ್.

CC-0. Jangamwadi Math Collection. Digitized by eGangotri

| | | | |
|---|---|---|---|
| ಮೈಸೂರು ರೀಫ್ | ೫೮೧.೦೦೦ | ೨,೪೬೮- ೦- ೦ | ೧೨೪- ೦-೦ ೧೮೮೯-೯೧ ಕೆಲಸ ನಡೆಯುತ್ತಿತ್ತು. |
| ಮೈಸೂರು ಸದರ್ನ್ ಎಕ್ಸ್‌ಟೆನ್ಷನ್ ಸಿಂಡಿಕೇಟ್ ಲಿಮಿಟೆಡ್ (ಕೆಂಪಿನ ಕೋಟೆ ಬ್ಲಾಕ್) | ೨೬೬.೦೨೦ | ೧,೦೩೬-೧೯- ೪ | ೫೧-೧೬-೧೧ ೧೯೧೫-೧೬ ಕೆಲಸ ನಡೆಯುತ್ತಿತ್ತು. |
| ಓರಿಯಂಟಲ್ | ೮೩೨.೨೧೭ | ೩,೫೨೬-೧೭- ೨ | ೧೭೪-೧೪-೬ ೧೯೦೧-೦೪ ಕೆಲಸ ನಡೆಯುತ್ತಿತ್ತು. |
| ಟ್ಯಾಂಕ್ ಬ್ಲಾಕ್ | ೯೯,೭೨೦.೬೧೯ | ೪೨೨,೮೭೦-೧೧-೧೧ | ೧೮,೪೪೮-೧೭- ೭ ೧೮೯೩-೧೯೧೦ ಕೆಲಸ ನಡೆಯುತ್ತಿತ್ತು. |
| ಕೋರಮಂಡಲ | ೪೬,೦೬೬.೮೬೮ | ೧೯೫,೭೦೩- ೯-೧೧ | ೯,೬೮೪-೫-೧೧ ೧೮೯೫-೧೯೦೭.. |
| ಗೋಲ್ಡ್‌ಫೀಲ್ಡ್ಸ್ ಆಫ್ ಮೈಸೂರು (ಇತ್ಯಾದಿ) | ೭,೯೧೭.೬೩೦ | ೩೩,೬೪೩-೧೫- ೫ | ೧,೬೬೨-೧೨- ೧ |
| ನೈನ್ ರೀಫ್ಸ್ | ೨೧,೭೩೦.೬೦೦ | ೯೨,೩೫೬- ೧- ೫ | ೪,೫೭೫-೧೨-೧೧ ೧೮೮೭-೯೦ ಮತ್ತು ೧೮೯೪-೧೯೦೨ |
| ರೋಡ್ ಬ್ಲಾಕ್ | ೧,೮೧೫.೬೦೦ | ೭,೭೧೫-೧೪- ೨ | ೩೮೦-೧೭- ೩ ೧೮೯೮-೧೯೦೧ |
| ಜಪ್ತಿ ಮಾಡಿದ್ದು | ೫೬೫.೫೦೪ | ೨,೩೪೬- ೦- ೪ | |
| | ಇತರ ಗಣಿಗಳು (ಕೆಲಸ ನಿಲ್ಲಿಸಲ್ಪಟ್ಟಿದೆ.) | | |
| ಅಜ್ಜನಹಳ್ಳಿ (ಸಿರ ತಾಲೂಕು) | ೧೫.೬೦೨ | ೬೬- ೬- ೨ | ೩- ೦-೦ ೧೯೦೮ರಲ್ಲಿ ಪರೀಕ್ಷೆಗಾಗಿ ಪುಡಿಮಾಡಿದ ಅದರಿನಿಂದ ಬಂದದ್ದು. |
| ಮೈಸೂರು ಹಾರ್ನಹಳ್ಳಿ | ೧೮.೦೦೦ | ೭೭- ೦- ೦ | ೪- ೦-೦ ೧೮೯೦ ರಲ್ಲಿ ,, |
| ಗೋಲ್ಡ್‌ಮೈನ್ ಕೆಂಪಿನಕೋಟೆ (ಹಾಸನ ಡಿಸ್ಟ್ರಿಕ್ಟು) | ೩೯.೦೦೦ | ೧೬೪- ೦- ೦ | ೮- ೦-೦ ೧೮೯೬ ರಲ್ಲಿ ,, |
| ಬಲಿಗಿರಿ ಬ್ಲಾಕ್ ಸಂಜನಗೂಡ ಗೋಲ್ಡ್‌ಫೀಲ್ಡ್ | ೧೬೧.೪೭೫ | ೬೨೧-೧೫- ೦ | ೩೧- ೯-೮ ೧೯೦೬-೧೯೦೯ ಕೆಲಸ ನಡೆಯುತ್ತಿತ್ತು. |
| ಹೊನ್ನಾಳಿ ಗೋಲ್ಡ್ ಮೈನಿಂಗ್ ಕಂಪನಿ | ೩೮೬,೦೦೦ | ೧,೬೪೨- ೦- ೦ | ೮೩- ೦- ೦ ೧೮೮೩-೧೮೮೫ ಕೆಲಸ ನಡೆಯುತ್ತಿತ್ತು. |
| ಹೊನ್ನಾಳಿ ಟ್ರಿಬ್ಯೂಟ್ ಸಿಂಡೀಕೇಟ್ | ೭.೩೦೦೦ | ೩೦೭- ೦- ೦ | ೧೬- ೦-೦ ೧೮೯೬-೯೭ ಕೆಲಸ ನಡೆಯುತ್ತಿತ್ತು. |
| ಒಟ್ಟು | ೧೫,೮೯೯,೨೭೬.೫೦೮ | ೬೮,೭೫೧,೮೦೦-೧೧-೨ | ೩,೬೨೪,೯೧೦-೧೨-೨ |

CC-0. Jangamwadi Math Collection. Digitized by eGangotri

## ಪಟ್ಟಿ ೩

೧೯೩೩-೩೮ರಲ್ಲಿ ಹಿಂದುಸ್ಥಾನದಲ್ಲಿ ಉತ್ಪತ್ತಿಯಾದ ಚಿನ್ನ ಮತ್ತು ಅದರ ಬೆಲೆ ತೋರಿಸುವ ಪಟ್ಟಿ.

| | ೧೯೩೩ | | ೧೯೩೪ | | ೧೯೩೫ | |
|---|---|---|---|---|---|---|
| | ಔನ್ಸು ozs | ಪೌಂಡು (£) | ಔನ್ಸು (ozs) | ಪೌಂಡು (£) | ಔನ್ಸು (ozs) | ಪೌ. (£) |
| ಮೈಸೂರು ದೇಶದಿಂದ— | ೩೮೨,೦೬೦.೪ | ೧,೬೯೫,೩೨೨ | ೩೯೨,೫೭೮.೨ | ೧,೮೧೯,೭೦೮ | ೩೯೩,೫೧೨.೮ | ೧,೮೧[illegible] |
| ಹಿಂದುಸ್ಥಾನದ ಇತರ ಕಡೆಗಳಿಂದ— | ೧,೬೩೭.೫ | ೭ ೩೨೦ | ೩.೭೭೨.೯ | ೧೭ ೭೨೫ | ೩೬೨.೩ | ೧,[illegible] |
| ಒಟ್ಟು— | ೩೮೩,೬೯೭.೯ | ೧,೭೦೨ ೬೪೨ | ೩೯೬,೩೫೧.೧ | ೧,೮೨೭,೪೩೩ | ೩೯೩,೮೭೫.೧ | ೧,೮೭[illegible] |

| | ೧೯೩೬ | | ೧೯೩೭ | | ೧೯೩೮ | |
|---|---|---|---|---|---|---|
| | ಔನ್ಸು (ozs) | ಪೌ. (£) | ಔನ್ಸು (ozs) | ಪೌ. (£) | ಔನ್ಸು (ozs) | ಪೌ. (£) |
| ಮೈಸೂರು ದೇಶದಿಂದ— | ೩೮೨,೮೯೯.೩ | ೧,೬೧೮,೬೨೯ | ೩೮೧,೭೨೩.೦ | ೧,೬೧೫,೯೯೯ | ೩೭೫,೮೫೬ | ೧,೫೭[illegible] |
| ಹಿಂದುಸ್ಥಾನದ ಇತರ ಪಡೆಗಳಿಂದ— | ೧,೨೫೯.೨ | ೫,೬೦೯ | ೨,೩.೪೯.೫ | ೧೦,೯೧೪ | ೧೦೧ | [illegible] |
| ಒಟ್ಟು— | ೩೮೪,೧೫೮.೫ | ೧,೬೨೪,೨೩೮ | ೩೮೪,೦೭೨.೫ | ೧,೬೨೬,೯೧೩ | ೩೭೫,೯೫೭ | ೧,೫೭[illegible] |

ನೈಜಾಂ ಹೈದ್ರಾಬಾದಿನಲ್ಲಿ ನರಶಾರ್ದೂಲ ನಾಟಕವನ್ನು ಆಡಿದ ಕನ್ನಡಿಗರು



CC-0. Jangamwadi Math Collection. Digitized by eGangotri

# ಚಲಚ್ಚಿತ್ರ

ಲೇಖಕರು:—ಶ್ರೀ. ಕೋಟ ಶಿವರಾಮ ಕಾರಂತ, ಪುತ್ತೂರು

ನಾಲ್ಕನೆಯ ಬರೆಹ

## ಚಲಚ್ಚಿತ್ರಸ್ವರೂಪಗಳು

ಹಿಂದಿನ ಅಧ್ಯಾಯಗಳಲ್ಲಿ ಚಲಚ್ಚಿತ್ರದ ಕಲಾವಾಹಕ ಶಕ್ತಿಯನ್ನೂ ಕಲಾಸ್ವರೂಪವನ್ನೂ, ಬೆಳೆವಣಿಗೆಯನ್ನೂ ವಿಮರ್ಶಿಸಿದೆವು. ಈ ಬರೆಹಗಳು ಚಲಚ್ಚಿತ್ರದ ಸಾಮಾನ್ಯ ದಿಗ್ದರ್ಶನವೆನಿಸಬೇಕೆಂಬುದರಿಂದ, ಕೇವಲ ಕಲಾದೃಷ್ಟಿಯಿಂದ ನಿರ್ಮಿತವಾದ ಇತರ ಚಿತ್ರಗಳನ್ನು ಕುರಿತೂ ಚರ್ಚಿಸಬೇಕಾಗಿದೆ. ಬೇರಾವ ರೀತಿಯಿಂದ ಚಲಚ್ಚಿತ್ರವು ಜನತೆಯಲ್ಲಿ ಜಾಗೃತಿಯನ್ನು ಉಂಟುಮಾಡಬಲ್ಲುದೆಂಬುದನ್ನು, ಅರ್ಥಾತ್ ಚಲಚ್ಚಿತ್ರವು ಜನಹಿತಕ್ಕಾಗಿ ಎಷ್ಟೆಷ್ಟು ವಿಧದಿಂದ ಕೆಲಸಮಾಡಬಹುದೆಂಬುದನ್ನು ಚರ್ಚಿಸುವುದೇ ಈ ಬರೆಹದ ಉದ್ದೇಶವು.

**ಅಮೂರ್ತ ಚಿತ್ರಗಳು** (Abstract Films)–ನಮ್ಮ ಮುಂದೆ ಕಂಡುಬರುವ ಚಿತ್ರಗಳು ಏನಾದರೊಂದು ಕಥೆಯನ್ನೋ ವಾರ್ತೆಯನ್ನೋ ಕೈಗಾರಿಕೆಯನ್ನೋ ಕುರಿತು ಹೇಳುವುವು. ಅಮೂರ್ತ ಚಿತ್ರಗಳ ಪರಿಚಯವು ನಮ್ಮ ದೇಶಕ್ಕಿನ್ನೂ ಉಂಟಾಗಿಲ್ಲ. ಏನಾದರೊಂದು ಭಾವನೆಯನ್ನು ಭಿನ್ನ ಭಿನ್ನ ಬಿಂಬಗಳ ಸಹಾಯದಿಂದ ತೆರೆಯ ಮೇಲೆ ಪ್ರಕಟಿಸುವ ಸಾಧನೆಯಿದು. ಇಲ್ಲಿ ಕಥೆಯಿಲ್ಲ, ನಟ–ನಟಿಯರೆಂಬವರು ಬೇರೆಯಿಲ್ಲ.

**ಮಾಯಾ ಚಿತ್ರಗಳು** (Fantasy Films) – ಇವು ಇಂಗ್ಲಭಾಷೆಯಲ್ಲಿನ 'ಫೇರಿ ಟೇಲ್ಸ್'ಗಳ ಮಾದರಿಯವು. ಇವೇನು ಸಾಮಾಜಿಕ ಚಿತ್ರಗಳೂ ಅಲ್ಲ, ಐತಿಹಾಸಿಕ ವಿಷಯಗಳೂ ಅಲ್ಲ. ಇಂದ್ರಜಾಲ, ಮಾಯೆ, ಮಾಟಗಳನ್ನು ತೋರಿಸುತ್ತ ಕಾಲ್ಪನಿಕ ರಾಕ್ಷಸರು, ಭೂತಗಳು, ಪ್ರೇತಗಳು, ದೇವತೆಗಳು ಇವರನ್ನು ಕಥಾವ್ಯಕ್ತಿಗಳನ್ನಾಗಿ ಗ್ರಹಿಸುವುವು. ಈ ಮಾದರಿಯ ಚಿತ್ರಗಳು ತಮ್ಮ ವೈಚಿತ್ರ್ಯದಿಂದ ಚಿಕ್ಕವರ ಮನಸ್ಸನ್ನು ತೀರ ಬೆರಗುಮಾಡಬಲ್ಲುವು. ಸಿಂಡ್ರೆಲ್, ಬಗದಾದಿನ ಚೋರ (Thief of Bagdad), ಫಾಸ್ಟ್ ಮೊದಲಾದ ಪಾಶ್ಚಾತ್ಯ ಚಿತ್ರಗಳು ಈ ವರ್ಗದುವು. ಇವುಗಳಲ್ಲಿ ಕಲಾಸೃಷ್ಟಿಗೆ ಬೇಕೆನ್ನುವಷ್ಟು ಅವಕಾಶವಿದೆ. ಹೊಸ ಬಗೆಯ ಅಭಿನಯಕ್ಕೂ ಅನುಕೂಲತೆಯಿದೆ. ಫಾಸ್ಟ್ ಚಿತ್ರವನ್ನು ಕಂಡವರು ಇದರ ಅನುಭವವನ್ನು ಹೊಂದಿರಬಹುದು. ಗೀತೆಯ (Goethe) ಫಾಸ್ಟ್ ಎಂಬ ಗ್ರಂಥದಿಂದ ಉದ್ಧೃತವಾದ ಈ ಚಿತ್ರವು ಸಹಜಜೀವನವನ್ನು ಚಿತ್ರಿಸುವುದಿಲ್ಲ. ಕೇವಲ ಕಾಲ್ಪನಿಕವಿಷಯವನ್ನು – ಇಲ್ಲಿ ಮನಸ್ಸಿನ ಸುಮತಿ ಕುಮತಿಗಳ ಸೆಣಸಾಟವನ್ನು ತೋರಿಸುವುದು. ಅದರಲ್ಲಿ ಕುಮತಿಯ ಸ್ವರೂಪವನ್ನು ತಾಳಿದ 'ಮೆಫಿಸ್ಟಾ'ನ ಭೂಮಿಕೆಯೂ ತೀರ ಕಾಲ್ಪನಿಕವಾದುದು. ನಟರು ನಿಜವಾದ ಉತ್ಪಾದಕ ಶಕ್ತಿಯುಳ್ಳವರಾದರೆ ಮಾತ್ರ ಅಂಥ ಅಭಿನಯವು ಸಾಧ್ಯವು. ಕಾರಣ, ಈ ಭೂಮಿಕೆಯ ಅಭಿನಯವು, ಮನುಷ್ಯವರ್ಗದ ಯಾವನೊಬ್ಬನ ನಡೆಯನ್ನು ಅನುಕರಿಸುವುದಿಲ್ಲ. 'ಪಾಪ' ಕರ್ಮಗಳಿಗೊಬ್ಬಳು ಅಧಿಷ್ಠಾತ್ರಿಯು ಇರುವಳೆಂದು ತಿಳಿಯುವ. ಅಂಥವಳ ನಡೆನುಡಿಗಳ ಪರಿಚಯವು ನಮಗೆ ಹೇಗಾಗಬೇಕು? ಈ ರೀತಿಯ ಭೂಮಿಕೆಗಳುಳ್ಳ ಕಥೆಗಳು ಕಲಾಸೃಷ್ಟಿಗೆ ತುಂಬಾ ಅವಕಾಶವನ್ನೀಯುವಂಥವು. ಇವುಗಳ ದೃಶ್ಯವ್ಯವಸ್ಥೆಯೂ ಅಂಥದೇ. ಫಾಸ್ಟ್ ಚಿತ್ರದಲ್ಲಿನ ಸ್ವರ್ಗರಾಜ್ಯದ ದೃಶ್ಯಾವಳಿಯು ಎಷ್ಟೂ ಸಾರಭೂತವಾಗಿರಲಿಲ್ಲ. ನಮ್ಮ ದೇಶದ ನೂರಾರು ಪೌರಾಣಿಕಕಥೆಗಳು ಇಂಥ ಯೋಜನೆಗಳಿಗೆ ಬೇಕೆನ್ನುವಷ್ಟು ಅನುಕೂಲತೆಯನ್ನು ಕೊಡುವಂಥವು. ಆದರೆ ಅವುಗಳ ರಚನೆಯು, ನಮ್ಮ ದೇಶೀಯ ಚಲಚ್ಚಿತ್ರಕಾರರು ಎಣಿಸುವಷ್ಟು ಸುಲಭವಾಗಿಲ್ಲ. ಇದಕ್ಕೆ ನಮ್ಮವರು ರಚಿಸಿದ ನೂರಾರು



CC-0. Jangamwadi Math Collection. Digitized by eGangotri

ಮಾಯಾಚಿತ್ರಗಳೂ, ಪೌರಾಣಿಕ ಚಿತ್ರಗಳೂ ಸಾಕ್ಷಿ. ಕೃಷ್ಣಾ ಕಂಪನಿಯವರ- 'ಹತೀಮತಾಯಿ' ಇನ್ನೊಂದು ಮಂಡಲದ 'ಮಾಯಾನಗರಿ' ಮೊದಲಾದ ಚಿತ್ರಗಳು ಈ ಮಾತನ್ನು ದೃಢಪಡಿಸುವುವು. ನಮ್ಮ ದೇಶದ ಮಾಯಾಚಿತ್ರಗಳಲ್ಲಿ ಪ್ರಭಾಲೇಖನದ ಕೌಶಲ್ಯವೇನೋ ಸ್ವಲ್ಪವಾಗಿ ಕಾಣಿಸುವುದು. ಆದರೆ ಅದು ಸರಸವಾಗಿ ಕಾಣಿಸುವಂತಿಲ್ಲ. ಚಿತ್ರರಚನೆ,ನಿರ್ದೇಶನ, ಅಭಿನಯ ಮೊದಲಾದುವುಗಳಲ್ಲಿ ಯಾವ ನಾವಿನ್ಯವೂ, ಸ್ಫೂರ್ತಿಯೂ ಕಾಣಿಸುವುದಿಲ್ಲ. ಈ ಮಾಯಾಚಿತ್ರಗಳ ದೃಶ್ಯಾವಳಿಗಳು, ವಿಷಯಕ್ಕೆ ಮೇಳೈಸುವ ರೀತಿಯಲ್ಲಿದ್ದು, ಆಧುನಿಕ ದೃಶ್ಯಾವಳಿಯ ತಾದ್ರೂಪಿಕ ಅನುಕರಣೆಯಾಗಿರಬಾರದು. ದ್ರವ್ಯಾರ್ಜನೆಯ ದೃಷ್ಟಿಯಿಂದ ಇಂಥ ಚಿತ್ರಗಳು ತುಂಬಾ ಯಶಸ್ವಿಗಳಾಗುವುವು. ಇವುಗಳು ಚಿಕ್ಕಮಕ್ಕಳ ಊಹಾ ಶಕ್ತಿಯನ್ನು ಬೆಳೆಯಿಸುವುದಕ್ಕೆ ತುಂಬಾ ಸಹಾಯಕವಾಗುವುವು.

**ವ್ಯಂಗ್ಯಚಿತ್ರಗಳು** (Cartoon Films) – ಇಂಥ ಚಿತ್ರಗಳು ನಮ್ಮ ದೇಶದಲ್ಲಿ ತಯಾರಾಗುತ್ತಲಿಲ್ಲ. ಪಾಶ್ಚಾತ್ಯರಲ್ಲಿ ಇದು ತುಂಬಾ ಪ್ರಚಾರದಲ್ಲಿದೆ. ಪಶು, ಪಕ್ಷಿ, ಮೃಗ ಮೊದಲಾದ ಯಾವತ್ತು ಪ್ರಾಣಿಗಳ ರೇಖಾ ಚಿತ್ರ (Line drawings) ಗಳ ಸಹಾಯದಿಂದ ಬಹಳ ಹೆಚ್ಚಿನ ಹಾಸ್ಯವು ಹೊರಡುವ ರೀತಿಯಲ್ಲಿ, ಬೇಕಾದ ರೀತಿಯ ಚಲನೆಯನ್ನುಂಟು ಮಾಡಿ ತೋರಿಸುವರು. ಇಂಥ ಚಿತ್ರಗಳು, ತಮ್ಮ ವಿಚಿತ್ರ ರೂಪದ ದೆಸೆಯಿಂದಲೇ ಜನರ ಪ್ರೀತಿಗೆ ಗುರಿಯಾಗಿವೆ. ಬೇಕಾದ ರೀತಿಯಲ್ಲಿ ಪಶುಪಕ್ಷಿಗಳ ಚಲನೆಯನ್ನು ಬಿಡಿಸಬಲ್ಲ ಒಬ್ಬಿಬ್ಬರು ಚಿತ್ರಕಾರರು, ಒಬ್ಬ ಕಥಾಲೇಖಕನೂ, ಇನ್ನೊಬ್ಬ ಪ್ರಭಾಲೇಖಕನೂ ಇದ್ದರೆ ಕೆಲಸ ಸಾಗುವುದು. ಈಗೀಗ ಇಂಥ ಚಿತ್ರಗಳೊಂದಿಗೆ ಸ್ವರವನ್ನು ಸೇರಿಸಿ ಅವುಗಳ ಹಾಸ್ಯಮಯ ಸ್ವರೂಪವನ್ನು ಮತ್ತಷ್ಟು ಹೆಚ್ಚಿಸುತ್ತಿರುವರು.

**ಐತಿಹಾಸಿಕ ಚಿತ್ರಗಳು** (Epic Films)–ಇವುಗಳ ಸ್ವರೂಪಕ್ಕೂ, ಸಾಮಾನ್ಯ ಚಾರಿತ್ರಿಕಚಿತ್ರಗಳಿಗೂ ಅಭ್ಯಂತರವಿದೆ. ಚಾರಿತ್ರಿಕ ಚಿತ್ರಗಳು– ಕೆಲವು ವ್ಯಕ್ತಿಗಳ ಜೀವನಚರಿತ್ರೆಯನ್ನು ತೋರಿಸುವುವು. ಇವು ಹಾಗಲ್ಲ. ಇವುಗಳಲ್ಲಿ ಕಾಣಿಸಿಕೊಳ್ಳುವ ಜನಸಮುದಾಯ ತುಂಬಾ. ಜನಧನಬಾಹುಳ್ಯವು ಇಂಥ ಚಿತ್ರಗಳಿಗೆ ಪ್ರಾಮುಖ್ಯವೆನಿಸುವುದು. ಜನಜೀವನದಲ್ಲಿ ಸಾವಿರಾರು ಜನರು ಕೂಡಿ ಏನಾದರೊಂದು ಕ್ರಾಂತಿಯುಂಟಾದರೆ, ಇಲ್ಲವೆ ಕೇವಲ ಒಂದೆರಡು ವ್ಯಕ್ತಿಗಳ ದೆಸೆಯಿಂದ ಜನತೆಯಲ್ಲಿ ಇಂಥ ಕ್ರಾಂತಿಯುಂಟಾದರೆ– ಅಂಥ ಕ್ರಾಂತಿಯನ್ನು ಅಷ್ಟೇ ವಿಜೃಂಭಣೆಯಿಂದ ತೋರಿಸುವ ಚಿತ್ರವಿದು. ಈ ಬಗೆಯ ಚಿತ್ರಗಳಲ್ಲಿ ಒಬ್ಬಿಬ್ಬರು ಪ್ರಮುಖ ವ್ಯಕ್ತಿಗಳೂ, ಕೆಲವರು ಉಪಪ್ರಮುಖರೂ ಇರಲು ಸಾಧ್ಯವಿದೆ. ಆದರೆ ಚಿತ್ರಕ್ಕೆ ಬರುವ ಭವ್ಯಸ್ವರೂಪವು ಜನಸಮೂಹದಿಂದಲೇ. 'ಕಿಂಗ್ ಆಫ್ ಕಿಂಗ್ಸ್' ಎಂಬುದು ಈ ವರ್ಗದ ಚಿತ್ರವು. ಕ್ರಿಸ್ತನು ಇಲ್ಲಿ ಪ್ರಮುಖ ಮನುಷ್ಯನು. ಆದರೆ ಅವನ ಮುಂದೆ, ವಿಚಾರ ಕ್ರಾಂತಿಯ ಸುಳಿವಿಗೆ ಅನುಕೂಲವಾಗಿಯೂ, ಪ್ರತಿಕೂಲವಾಗಿಯೂ ಕೆಲಸ ಮಾಡುವ ಜನಸಮುದಾಯವಿದೆ. 'ಅಕ್ಟೋಬರ್' ಎಂಬ ಪ್ರಸಿದ್ಧ ಚಿತ್ರವೊಂದಿದೆ. ರುಸ್ಯಾದೇಶದ ಜನರು ಝಾರನನ್ನು ಪದಚ್ಯುತನನ್ನಾಗಿ ಮಾಡಿ, ಜಮೀನುದಾರರನ್ನು ಕುಗ್ಗಿಸಿದ ಕಥೆಯಿದು. 'ಬೆಟಲ್‌ಶಿಪ್ ಪೊಟೆಮ್ಕಿನ್' ಎಂಬ ಅವರ ಇನ್ನೊಂದು ಚಿತ್ರವೂ ಇದೇ ವರ್ಗದ್ದು. ನಮ್ಮ ದೇಶದ ಕಥೆಗಳಾದ ಶ್ರೀಚೈತನ್ಯನ ಜೀವನವನ್ನೋ, ಬುದ್ಧಚರಿತ್ರೆಯನ್ನೋ, ಕುರುಯುದ್ಧವನ್ನೋ ಈ ರೀತಿ ಚಿತ್ರಿಸಲು ಸಾಧ್ಯವಿದೆ.

**ಚಾರಿತ್ರಿಕ ಚಿತ್ರಗಳು** (Documentary Films)– ಇಲ್ಲಿ ಚರಿತ್ರೆಯೆಂಬ ಪದವನ್ನು ಇತಿಹಾಸ ಎಂಬ ಭಾವದಲ್ಲಿ ಗ್ರಹಿಸಬಾರದು. ಇಂಥ ಚಿತ್ರಗಳಲ್ಲಿ ಕಥಾಭಾಗ ಇಲ್ಲವೆ ಮನುಷ್ಯರ ಸುಳಿವೇ ಇಲ್ಲದೆ, ಕೇವಲ ಏನಾದರೊಂದು ವೈಜ್ಞಾನಿಕ ವಿಷಯದ ಇಲ್ಲವೆ ಪ್ರಾಣಿಜೀವನದ ಕಥೆಯಿರಬಹುದು. ತಾಸುಗಳ ಜನ್ಮ (Birth of the Hours) ಎಂಬೊಂದು ಚಿತ್ರವಿದೆ. ಇದು ಗಡಿಯಾರದ ಉತ್ಪತ್ತಿ, ರಚನೆ ಮೊದಲಾದುವನ್ನು ಕುರಿತು ಹೇಳುವುದು. ಎಷ್ಟೋ ಕೈಗಾರಿಕೆಗಳ ಸಂಬಂಧವಾಗಿ ಈ ರೀತಿಯ ಚಿತ್ರಗಳನ್ನು ಮಾಡಬಹುದು. ಉದಾಹರಣೆಗಾಗಿ–'ಉಡುಗೆ'ಯ ಕೈಗಾರಿಕೆಯೆಂದು ತಿಳಿಯುವ ಇವುಗಳ ಅನಾಗರಿಕಕಾಲದ ಎಲೆ, ನಾರು, ಚರ್ಮ ಉಡುಗೆಯಿಂದ ಹಿಡಿದು, ಇಂದಿನ ಹತ್ತಿ, ರೇಷ್ಮೆ, ಕೃತಕ ರೇಷ್ಮೆ ಇವುಗಳ ಜನ್ಮ, ಅವುಗಳಿಂದ ಬಟ್ಟೆ ತಯಾರಿ

CC-0. Jangamwadi Math Collection. Digitized by eGangotri

ಸುವ ವಿಧಾನಗಳು, ವಿವಿಧ ದೇಶಗಳಲ್ಲಿಯ ವಿವಿಧ ಉಡುಗೆಗಳು ಇವನ್ನೆಲ್ಲ ಈ ಚಿತ್ರದಲ್ಲಿ ಕ್ರಮವಾಗಿ ತೋರಿಸಬಹುದು. 'ಸಿಂಬಾ' ಎಂಬ ಒಂದು ಚಿತ್ರವಿದೆ. ಆಫ್ರಿಕದ ಕಾಡುಗಳಿಗೆ ಇಬ್ಬರು ಸಾಹಸಿಗರು ಹೋಗಿ, ಎರಡು ನೂರು ವರುಷಗಳ ತನಕ ಕಾಡು ಜನರ ಎಡೆಯಲ್ಲಿ ವಾಸಮಾಡಿಕೊಂಡಿದ್ದು, ಎಲ್ಲೆಲ್ಲಿ ಕಾಡುಮೃಗಗಳ ವಾಸವಿದೆಯೋ ಅಲ್ಲಿಗೆ ಜೀವದ ಹಂಗುದೊರೆದು ಹೋಗಿ ತಾಳ್ಮೆಯಿಂದ ಕಾದು ಕುಳಿತು, ಅವುಗಳು ನೀರಿಗೆ ಬರುವುದು, ಆಹಾರ ಸಂಗ್ರಹ ಮಾಡುವುದು, ಆತ್ಮರಕ್ಷಣೆ ಮಾಡಿಕೊಳ್ಳುವುದು, ವೈರಿಗಳನ್ನು ಕಂಡರೆ ಓಡಿಹೋಗುವುದು ಇವೇ ಮೊದಲಾದ ವಿಷಯಗಳನ್ನು ಸಂಗ್ರಹಿಸಿದರು. ಇದರಿಂದ ಅವರಿಗೆ ಜಿಂಕೆ, ಜರಾಫೆ, ಜೀಬ್ರಾ, ನೀರ್ಕುದುರೆ, ಮೊಸಳೆ, ಸಿಂಹ, ಖಡ್ಗಮೃಗ ಮೊದಲಾದ ಪ್ರಾಣಿಗಳ ಚರಿತ್ರೆಯು ದೊರೆಯಿತು. ಆದರೆ ಈ ಸಾಹಸದಲ್ಲಿ ಕೆಲವು ಜನ ಸಹಾಯಕರು, ಪ್ರಾಣಿಗಳ ಕೋಪಕ್ಕೆ ತುತ್ತಾಗಬೇಕಾಯಿತು. ಈ ರೀತಿ ಸಂಗ್ರಹಿಸಿದ 'ಸಿಂಬಾ' ಚಿತ್ರದಲ್ಲಿ ಕಥೆಯ ಲೇಶವಿಲ್ಲದಿದ್ದರೂ, ಅದು ತೀರ ಪ್ರೇಕ್ಷಣೀಯವಾಗಿದೆ. ಸಾಹಸಿಗರಿರುವುದಾದರೆ ನಮ್ಮ ನಾಡಿನಲ್ಲಿ ಈ ಬಗೆಯ ಚಿತ್ರಗಳಿಗೆ ತುಂಬಾ ಅವಕಾಶವಿದೆ.

**ಚಾರಿತ್ರಿಕಕಥಾಚಿತ್ರಗಳು** (Documentary Story Films)-ಇವುಗಳು ಮೇಲಿನ ವರ್ಗದ ಚಿತ್ರಗಳೇ. ಆದರೆ ಅವುಗಳೊಡನೆ ಏನಾದರೊಂದು ಕಥೆಯು ಬೆರೆತಿರುವುದು. ಇಂಥ ಚಿತ್ರಗಳೂ ಜನಾದರಕ್ಕೆ ಪಾತ್ರವಾಗುವುವು. ಪೆರವೌಂಟು ಚಿತ್ರಮಂಡಲದವರ 'ಚೇಂಗ' ಎಂಬ ಚಿತ್ರವು ಈ ರೀತಿಯ ಪ್ರಸಿದ್ಧಿಯುಳ್ಳುದು. ಆದರೆ ಇಂಥ ಚಿತ್ರಗಳಲ್ಲಿ ಕಥೆ ಮತ್ತು ಚರಿತ್ರೆಗಿರುವ ಸಂಬಂಧವು ಶಿಥಿಲವಾಗಲಿ, ತೀರ ಕೃತಕವಾಗಲಿ ಕಾಣಿಸಬಾರದು. ಮೇಲೆ ಹೇಳಿದ ಪೆರವೌಂಟ್ ಕಂಪೆನಿಯವರು 'ಫೋರ್ ಫೆದರ್ಸ್' ಎಂಬ ಕಥೆಯನ್ನು ಹೊರಡಿಸಿರುವರು. ಕಥಾವಿಷಯವು- ಒಬ್ಬ ಸೇನಾನಿಯು ಸೂಡಾನ್ ಪ್ರಾಂತ್ಯದಲ್ಲಿ ತೋರಿದ ಸಾಹಸವನ್ನು ಕುರಿತಾಗಿದೆ. ಆದರೆ ನಡುವೆ ಕಥೆಯೊಡನೆ ಮೇಳೈಸಿದ- ನೀರ್ಕುದುರೆಗಳ ಓಡಾಟ, ಮಂಗಗಳ ಹಾರಾಟವನ್ನೆಲ್ಲ ತೋರಿಸಿರುವರು.

ಮೇಲಿನ ಎರಡು ವರ್ಗದ ಚಿತ್ರಗಳಿಂದ ವಿದ್ಯಾಪ್ರಸಾರಕ್ಕೆ ತುಂಬಾ ಅನುಕೂಲತೆಯಿದೆ. ಮಕ್ಕಳಿಗೆ ಪ್ರಾಣಿಜೀವನ ಮೊದಲಾದ ವಿಷಯಗಳನ್ನು ಕುರಿತು ಪ್ರತ್ಯಕ್ಷಶಿಕ್ಷಣವನ್ನು ಕೊಡಲು ಸಾಧ್ಯವಿಲ್ಲದ ಗಳಿಗೆಯಲ್ಲಿ, ನೀರಸವಾದ ಪಠ್ಯಪುಸ್ತಕಗಳಿಂದ ಅವರ ಮನಸ್ಸಿಗೆ ಜುಗುಪ್ಸೆಯನ್ನು ಹುಟ್ಟಿಸುವ ಬದಲು, ಈಬಗೆಯ ಚಿತ್ರಗಳನ್ನು ತೋರಿಸಿದ್ದಾದರೆ, ಅವರಲ್ಲಿನ ಜ್ಞಾನವನ್ನು ಹೆಚ್ಚಿಸಲು ಬಹಳ ಉಪಯುಕ್ತವಾಗಬಹುದು. ಇಂಥ ಚಿತ್ರಗಳಿಗೆ ಕೆಲವು ಕಡೆಗಳಲ್ಲಿ "Educationals" ವಿದ್ಯಾಚಿತ್ರಗಳು- ಎಂದು ಕರೆಯುವುದುಂಟು. ಈ ಹೆಸರಾದರೂ ಅನುಚಿತವಾಗಿಲ್ಲ.

**ವಾರ್ತಾಚಿತ್ರಗಳು** (Cine records)- ಒಂದೂರಿನಲ್ಲಾದ ವಿಶೇಷ ಸಂಗತಿಗಳನ್ನು ಚಿತ್ರಗಳ ಮೂಲಕ ಸಂಗ್ರಹಿಸಿ ಕೊಡುವುದು ಇವುಗಳ ಉದ್ದೇಶ. ಇದರ ಬೆಳವಣಿಗೆಯಿಂದ ಜನರಿಗೆ ದೇಶದಲ್ಲಿ ನಡೆಯುವ ಹಲವು ಪ್ರಮುಖ ಘಟನೆಗಳು ತಿಳಿಯುವುವಲ್ಲದೆ, ಅಲ್ಲಲ್ಲಿನ ಪಂದ್ಯಾಟಗಳು, ಯಾತ್ರೆಗಳು, ಶೋಧಗಳು ಮೊದಲಾದ ವಿಷಯಗಳಲ್ಲಿನ ಅಭಿರುಚಿಯು ಹೆಚ್ಚುವುದು. ಎಷ್ಟೋ ಬಾರಿ ಅವರೂ ಅಂಥ ವಿಚಾರಗಳಲ್ಲಿ ಭಾಗಿಗಳಾಗುವರು. ಈ ರೀತಿ ಕಳೆದ ಘೋರ ಯುದ್ಧದ ಕಾಲದಲ್ಲಿ ಹಲವು ಘಟನಾವಳಿಗಳ ಚಿತ್ರಗಳನ್ನು ಸಂಗ್ರಹಿಸಿ, ತಮ್ಮ ತಮ್ಮ ದೇಶದ ಜನರಿಗೆ ತೋರಿಸಿ ಅವರ ಸಹಾನುಭೂತಿ ಸಹಾಯಗಳನ್ನು ಇಂಗ್ಲೆಂಡ್ ಅಮೇರಿಕಾ ಮೊದಲಾದ ದೇಶದವರು ಪಡೆದರು.

**ಅಲಂಕರಣ ಮತ್ತು ಕಲಾಚಿತ್ರಗಳು** (Decorative and Art Films)-ವಿವಿಧ ಬಗೆಯ ದೃಶ್ಯಾವಳಿಗಳಿಂದ ಚಿತ್ರದ ಪ್ರತಿಷ್ಠೆಯನ್ನು ಸ್ಥಾಪಿಸುವ ಮಾದರಿಯಿದು. ಇವುಗಳಲ್ಲಿ ದೃಶ್ಯಾವಳಿಗಳಿಗೆ ಬಹಳ ಹೆಚ್ಚಿನ ಗಮನವನ್ನೀಯುವರು. 'ಬಗಾದಾದಿನ ಚೋರ' ಎಂಬ ಮಾಯಾಚಿತ್ರವು ಈ ವರ್ಗಕ್ಕೂ ಸೇರುವುದು. ಉಷಾ ಕಂಪೆನಿಯ 'ಸೀಕ್ರೆಟ್ಸ್ ಆಫ್ ದಿ ಈಸ್ಟ್' ಎಂಬ ಚಿತ್ರವು ತೀರ ಪ್ರಸಿದ್ಧವಾದ ಉದಾಹರಣೆಯು. ಅದರಲ್ಲಿ ಕಂಡು ಬರುವ ನರ್ತನಶಾಲೆ, ನಾವೆ, ಮಹಾದ್ವಾರ, ಉದ್ಯಾನ ಇವೆಲ್ಲವೂ 'ಅಮರ'ಲೋಕದ ವೈಭವವನ್ನು ಚಿತ್ರಿಸುವುವು. ತಮ್ಮ ದೃಶ್ಯಾವಳಿಗಳ ವೈಭವದಿಂದಲೇ

CC-0. Jangamwadi Math Collection. Digitized by eGangotri

ಜನರನ್ನು ಮುಗ್ಧರನ್ನಾಗಿ ಮಾಡುವ ಸಾಮರ್ಥ್ಯವು ಅವಕ್ಕಿದೆ. ಇಂಥದೊಂದು ಚಿತ್ರಕಲ್ಪನೆಗೆ ಛಾಯಾತೇಜ ಪ್ರಬಂಧವೂ, ದೃಶ್ಯಯೋಜನೆಯೂ, ಪ್ರಭಾಲೇಖನವೂ ಅತ್ಯುಚ್ಚವಾಗಿರಬೇಕು. ಇಲ್ಲವಾದರೆ ಇವು ಅಪಹಾಸ್ಯಕ್ಕೆ ಗುರಿಯಾಗುವುದೇ ಸರಿ. ಇಂಥ ಒಂದು ಉದಾಹರಣೆಯು ಮುಂಬಯಿಯ ಇಂಪೀರಿಯಲ್ ಚಿತ್ರಮಂಡಲದವರ 'ಮೆಜಿಕ್ ಫ್ಲೂಟ್' ಎಂಬುದು. ಭಾವನಾನಿ ಎಂಬ ನಮ್ಮ ದೇಶದ ನಿರ್ದೇಶಕನು, ಜರ್ಮನಿಯಲ್ಲಿರುವಾಗ ಈ ಮೊದಲು ಹೇಳಿದ 'ಸೀಕ್ರೆಟ್ಸ ಅ ಫದಿ ಈಸ್ಟ' ಎಂಬ ಚಿತ್ರವನ್ನು ಕಂಡು, ಸ್ವದೇಶಕ್ಕೆ ಮರಳಿ ಬರಲು ಅಂಥದೊಂದು ಚಿತ್ರವನ್ನು ಮಾಡಲು ಹೋದನು. ಕೊನೆಗೆ ಅಂಥದನ್ನು ಮಾಡುವ ಗೊಡವೆಗೆ ಹೋಗದೆ ಅದನ್ನೇ ಮಾಡುವುದಕ್ಕೂ ಸಾಹಸ ಮಾಡಿದನು. ಇಂಪೀರಿಯಲ್ ಚಿತ್ರಮಂಡಲದವರ ಸಲುವಾಗಿ ಮಾಡಿದ ಈ ಚಿತ್ರದ ಕಥಾಭಾಗವೂ, ದೃಶ್ಯಲೇಖನವೂ, ಜರ್ಮನ್ ಚಿತ್ರದ ಯಥಾ ನಕಲೇ ಆಗಿತ್ತು. ಅವರ ದೃಶ್ಯಯೋಜನೆಯ ಕೌಶಲ್ಯವಿಲ್ಲ, ವೈಭವವಿಲ್ಲ, ಅಭಿನಯದ ಸ್ವಾರಸ್ಯವಿಲ್ಲ, ಪ್ರಭಾಲೇಖನದ ಚೇತನವಿಲ್ಲ; ಅಧಿಕಪ್ರಸಂಗವು ಮಾತ್ರ ಇದ್ದಿತು. ಇಂಥ ಅನುಕರಣೆ ಮತ್ತು ಕೈಲಾಗದ ಸಾಹಸಗಳಿಂದಲೇ ನಮ್ಮ ದೇಶದ ಕೈಗಾರಿಕೆಯು ನಷ್ಟವಾಗುತ್ತಿರುವುದು.

**ಕಥಾಚಿತ್ರಗಳು** (cine fiction film)– ಈಗ ಬರುವ ಚಿತ್ರಗಳಲ್ಲಿ ನೂರಕ್ಕೆ ನೂರು ಇಂಥ ಚಿತ್ರಗಳೆಂದರೆ ಅತಿಶಯೋಕ್ತಿಯಾಗಲಾರದು. [ಮುಂದಣ ಅಧ್ಯಾಯಗಳಲ್ಲಿ ಇಂಥ ಚಿತ್ರಗಳಿಗೆ ಯಾವ ರೀತಿಯಿಂದ ಪುಷ್ಟಿ ದೊರೆಯಬಹುದು ಎಂಬುದನ್ನು ತರ್ಕಿಸುವೆವು] ಇಂಥ ಚಿತ್ರಗಳು ತಮ್ಮ ಕಥಾಸ್ವಾರಸ್ಯದ ದೆಸೆಯಿಂದ, ಜನರ ಚಿತ್ತವನ್ನು ಆಕರ್ಷಿಸಲಿಕ್ಕೂ, ಸಂಸ್ಕರಿಸಲಿಕ್ಕೂ ಶಕ್ತಿಯುಳ್ಳವಾಗಿವೆ. ಇದೇ ಶಕ್ತಿಯು ಜನತೆಯ ಬುದ್ಧಿ ವಿಕಾರಕ್ಕೂ ಕಾರಣವಾಗಬಹುದು. ಈಗಿನ ಕಾಲದ ಉತ್ತಾನ ಶೃಂಗಾರಮಯ ಚಿತ್ರಗಳಿಂದ ಕೆಡುಕಲ್ಲದೆ ಒಳಿತೇನು ಪ್ರಾಪ್ತಿಸಿದೆ? ಚಲಚ್ಚಿತ್ರವೆಂದರೆ ಕಾಮದ ಪ್ರತಿಬಿಂಬವೆಷ್ಟಾಗಿದೆ. ಇಂಥ ಚಿತ್ರಗಳು ನೀತಿಬೋಧನೆಗೂ ಮತಪ್ರಸಾರಕ್ಕೂ ಕಾರಣವಾಗಬಹುದು. 'ಬೆನ್ ಹೂರ್' 'ಕಿಂಗ್ ಅಫ ಕಿಂಗ್' ಈ ಜಾತಿಯವು. ರುಸ್ಯಾ ದೇಶದವರು ಆರಿಸುವ ಕಥೆಗಳು ಅವರ ರಾಜಕೀಯ ತತ್ತ್ವಪ್ರಸಾರಕ್ಕೆ ಅನುಕೂಲನಾಗುವಂತಿವೆ. 'ಅಕ್ಟೋಬರ್' ಚಿತ್ರವು ಈ ವರ್ಗದ್ದು. ಇಂಥ ಚಿತ್ರ... ಸಾಮಾನ್ಯವಾಗಿ ಶೃಂಗಾರಪೂರಿತ ಚಿತ್ರಗಳಿಗಿಂತ ... ಮವೆನಿಸಬಹುದಾದರೂ ಇವು ಪ್ರತಿಪಾದಿಸುವ ತತ್ತ್ವ... ನಾಗರಿಕತೆಯ ಪಾಲಿಗೆ ವಿಷಪ್ರಾಯವಾಗಬಹುದು. ನೀತಿ ಬೋಧನೆಯು ಕಥೆಯ, ಅರ್ಥಾತ್ ಕಲೆಯ ... ಶವೇನು? ಕಲೆಯು ಮಾಡುವ ನೀತಿಬೋಧನೆಯು ... ರೋಕ್ಷವಾದುದು. ನೀತಿವಂತನಾದ ಕಲಾನಿಪುಣನ ಸೃಷ್ಟಿಯು, ತನ್ನ ಕಲಾಕೌಶಲಕ್ಕೊಂದು ಕಳಂಕ... ತಂದುಕೊಳ್ಳದೆ, ಅಪ್ರತ್ಯಕ್ಷವಾಗಿ ನೀತಿಯನ್ನು ... ಬಹುದು.

ರುಸ್ಯಾ ದೇಶದಲ್ಲಿ ಚಿತ್ರಗಳು, ತಮ್ಮ ಸರಕಾರದ ಅನುಮತಿಯನ್ನು ತಮ್ಮ ಸೃಷ್ಟಿಗೆ ಪೂರ್ವದಲ್ಲಿ ... ಹೊಂದಬೇಕಾಗುತ್ತದೆ. ಅವೆಲ್ಲ 'ಸೋವಿಯಟ' ತತ್ತ್ವಗಳನ್ನನುಸರಿಸಿ, ಕೊನೆಯ ಪಕ್ಷಕ್ಕೆ ವಿರುದ್ಧವಾಗದ ... ಯಲ್ಲಿ, ಸಾಗಬೇಕಾಗುವುದು. ಚಿತ್ರನಿರ್ದೇಶಕರು ಸಹ, ಸ್ವಭಾವತಃ ಈ ತತ್ತ್ವವನ್ನು ಅನುಸರಿಸುವವರಾದರೆ, ಅವರ ಚಿತ್ರರಚನೆಯಲ್ಲಿ ಸ್ಫೂರ್ತಿಯು ಕಾಣಬಹುದು. ಆದರ ಬದಲು ತಮ್ಮ ಸರಕಾರದ ತತ್ತ್ವವನ್ನು ಮನಃಪೂರ್ವವಾಗಿ ಒಪ್ಪದೆ, ಕೇವಲ ಹೊಟ್ಟೆ... ಮಟ್ಟಿಗೆ ಮಾತ್ರ ಸ್ವೀಕರಿಸಿದಲ್ಲಿ, ಅವರ ಚಿತ್ರ... ಅದೇ ರೀತಿಯ ವಂಚನೆಯನ್ನು ತೋರುವವು. ... ಮನಸ್ಸು ಇಂಥ ತತ್ವಗಳಿಗೆ ಪೂರಾ ವಿರುದ್ಧವಾದ ... ಅಂಥವರಿಂದ ಯೋಗ್ಯಸೃಷ್ಟಿಯೇ ಹೊರಡಲಾರದು. ಕಾರಣ– ಯಾವುದೊಂದು ಕಲೆಯೂ, ಅಂತರಂಗದ ಶುದ್ಧಿಯಿಲ್ಲದೆ ಜನ್ಮವೆತ್ತಲಾರದು. ಪ್ರಥಮತಃ ಶ್ರದ್ಧೆ, ಎರಡನೆಯದಾಗಿ ಸತ್ಯ, ಮೂರನೆಯದಾಗಿ ಸೌಂದರ್ಯ, ಇವು ಮೂರು ಸೇರಿದರೆಯೇ ಕಲಾಸೃಷ್ಟಿ. ... ರಿಂದ ವಿಷಯವನ್ನು ಆರಿಸುವಾಗ, ಯಾವುದೇ ಬಗೆಯ ಬಂಧನವು ಕಲಾನಿಪುಣನ ಸ್ವತಂತ್ರ ಕೃತಿಶಕ್ತಿಗೆ ಅಡ್ಡವಾಗಿ ನಿಲ್ಲಬಾರದು. ಹಾಗೆ ನಿಂತರೆ ಎಂದೂ ಉತ್ತಮಸೃಷ್ಟಿಯು ಸಾಧ್ಯವಿಲ್ಲ.

**ಸಂಗೀತ ನರ್ತನ ಚಿತ್ರಗಳು**– (Singing & dancing pictures) ಇತ್ತೀಚೆಗಿನ ಸಸ್ವರಚಿತ್ರಗಳ ಉತ್ಪತ್ತಿ

CC-0. Jangamwadi Math Collection. Digitized by eGangotri

ಬಿದು. ಚಿತ್ರದಲ್ಲಿ ಸಂಗೀತ ನರ್ತನಗಳೆಂಬುವು ಈಗೀಗ ಒಂದು ರೀತಿಯ ಬೇನೆಯೇ ಆಗಿವೆಯೆಂದು ಹೇಳಬಹುದು. ಕಾರಣ, ಇಂಥ ಚಿತ್ರಗಳ ಗುರಿಯೇ ಸಂಗೀತ ನರ್ತನಗಳು. ಗುರಿಯೊಂದನ್ನು ಸೇರುವುದಕ್ಕೆ ಹಾದಿ ಬೇಕಷ್ಟೇ; ಆದರೆ ಇವರಿಗೆ ಹಾದಿಯೇ ಗುರಿಯಾಗಿದೆ. ಈ ಗುರಿಯಲ್ಲದೆ ಇನ್ನಾವ ಗುರಿಯೂ ಇವರಿಗಿರುವುದಿಲ್ಲ ಅನುದಿನದ ಸಂಗೀತದ ಸುರಿಮಳೆಯನ್ನೂ, ಸಭ್ಯಾಸಭ್ಯ ನರ್ತನಗಳ ಜಡಿಮಳೆಯನ್ನೂ ಲ೦೦೦ ಅಡಿಯುದ್ದಕ್ಕೂ ತೋರಿಸುತ್ತ ನಡೆಯುವರು. ಆದರೆ ಅದೇ ರೀತಿ ತಮ್ಮ ಧೋರಣೆಯೆಂದು ಪ್ರತಿಪಾದಿಸಿದಲ್ಲಿ, ಜನರು ಕುಪಿತರಾಗಬಹುದು-ಎಂಬ ಅಂಜಿಕೆಯಿಂದ, ಇವು ಕೂಡ ಕಥಾಚಿತ್ರಗಳ ಸೋಗನ್ನು ಧರಿಸಿ ಪ್ರಕಟವಾಗುವುವು. ಸಂಗೀತ-ನರ್ತನಪ್ರಿಯರೆನಿಸುವವರು ಇಂಥ ಚಿತ್ರಗಳಿಗೆ ಯಥೇಷ್ಟವಾದ ಪ್ರೋತ್ಸಾಹವನ್ನು ಕೊಡುತ್ತಿರುವರು. ನಮ್ಮ ದೇಶದಲ್ಲಿಯೂ ಇವುಗಳ ತಯಾರಿಯ ಯೋಜನೆಯು ನಡೆಯುತ್ತಿದೆ. ಯಾರಿಗಿನ್ನೂ ಶಾಂತ ಚಲಚ್ಚಿತ್ರಗಳ ಬೀಜಾಕ್ಷರವು ಸಹ ತಿಳಿದಿಲ್ಲವೋ, ಅವರೇ ಇದರ ಜನಕರಾಗಲಿರುವರು. ಮುಖ್ಯವಾಗಿ ಈಗಿನ ದಿನಗಳಲ್ಲಿ ದ್ರವ್ಯವನ್ನು ಹೆಚ್ಚಿಸಬಲ್ಲ ಶಕ್ತಿಯೇ 'ಕಲೆ'ಯು.



ಉಷಾ ಕಂಪೆನಿಯ "ಸೀಕ್ರೆಟ್ಸ್ ಆಫ್ ದಿ ಈಸ್ಟ್" ಎಂಬ ಮಾಯಾಚಿತ್ರದೊಳಗಿನ ಒಂದು ದೃಶ್ಯ



CC-0. Jangamwadi Math Collection. Digitized by eGangotri

# ನೆನಹು: ಬೆಳ್ದಿಂಗಳ ರಾತ್ರಿಯಲ್ಲಿ

(ಒಂದು ಹರಟೆ)

ಲೇಖಕರು:— ಶ್ರೀ. ಪೇಜಾವರ ಸದಾಶಿವರಾಯರು, ಮಿತ್ರಮಂಡಲಿ, ಮಂಗಳೂರು

ಬಾವಟೆಗುಡ್ಡೆಯು ರಮಣೀಯವಾಗಿತ್ತು. ತನುಮನಗಳನ್ನು ತಣಿಸುವ ಆಹ್ಲಾದದಾಯಕವಾದ ಬೆಳದಿಂಗಳು ಶುಭ್ರವಾಗಿ ಬಿದ್ದಿತ್ತು. ದೂರದಲ್ಲಿ ಸಮುದ್ರವು ಬೆಳ್ಳಿಯಂತೆ ಮಿರುಗುತ್ತಿತ್ತು. ಪ್ರಕೃತಿಯೆಲ್ಲವೂ ಬೆಳದಿಂಗಳಿನ ಶುಭ್ರವಸನವನ್ನು ಹೊದ್ದುಕೊಂಡು ತಾನೇ ತಾನಾಗಿ ವಿರಾಜಮಾನವಾಗಿತ್ತು.

ಕಲ್ಲುಮಂಚಗಳ ಮೇಲೆ ತಮ್ಮನ್ನು ತಾವೇ ಮರೆತು ಕನಸು ಕಾಣುತಿದ್ದ ಜನರು ಕುಳಿತಿದ್ದರು. ದೂರದಲ್ಲಿ ಪುರದ ದೀಪಗಳು ಬೇಕೋ ಬೇಡವೋ ಎಂಬಂತೆ ಮಿನುಗುತ್ತಿದ್ದುವು. ಎಲ್ಲೆಲ್ಲಿಯೂ ಶಾಂತಿಯೆ ತುಂಬಿಕೊಂಡಿತ್ತು.

ನಾನು ಕುಳಿತಿದ್ದ ಸ್ಥಳವು ಜನಸಮೂಹದಿಂದ ಕೊಂಚ ದೂರವಾಗಿಯೇ ಇತ್ತು. ಇದ್ದಕ್ಕಿದ್ದಂತೆಯೇ ನನ್ನ ಬಳಿಯಲ್ಲಿ ಮನುಷ್ಯನೊಬ್ಬನು ಬಂದು ಕುಳಿತುಕೊಂಡನು. ಹರಿದ ಪಂಚೆಯನ್ನುಟ್ಟು, ಅಗಸನನ್ನು ಕಾಣದೆ ಆರೇಳು ತಿಂಗಳಾದರೂ ಆಗಿರುವ ಕೊಳಕು ಶರಟಿನ ಮೇಲೆ, ಬೆವರಿನಿಂದ ನಾರುತ್ತಿರುವ ನಿಲುವಂಗಿಯನ್ನು ತೊಟ್ಟು, ದಾರಿದ್ರ್ಯವೇ ಮೂರ್ತಿಮತ್ತಾಗಿ ಕುಳಿತಿದ್ದಂತೆ ತೋರುತ್ತಿದ್ದ. ನನಗೆ ಎದ್ದುಹೋಗಿ ಬಿಡಬೇಕೆಂಬ ಇಚ್ಛೆಯಾಯಿತು. ಆದರೆ ಕೂಡಲೇ ಎದ್ದುಹೋಗಲು ಕೊಂಚ ಸಂಕೋಚವಾಯಿತು. ಏಳಲೇ—ಕುಳಿತುಕೊಳ್ಳಲೇ ಎಂದು ಮನಸಿನಲ್ಲಿಯೆ ನಿರ್ಧಾರ ಮಾಡಿ ಏಳುವುದರೊಳಗೆ ಅವನು ನನ್ನೊಡನೆ ಮಾತನಾಡಲು ಮೊದಲು ಮಾಡಿದ. ಹೋಗಲು ಎದ್ದವನು ನಿರ್ವಾಹವಿಲ್ಲದೆ ಕುಳಿತುಕೊಂಡೆ.

"ನಿಮ್ಮ ಪರಿಚಯ ನನಗಿದೆ ಸ್ವಾಮಿ. ನೀವು ಒಬ್ಬ ಕವಿ."

ಇಷ್ಟು ಸಲಿಗೆಯಿಂದ ಮಾತೆತ್ತಿದವನಾರೆಂದು ತಿಳಿಯದೆ ಆಶ್ಚರ್ಯದಿಂದ ಅವನ ಮುಖ ನೋಡಿದೆ. ನಗುತ್ತಿದ್ದ ಬಾಯಲ್ಲಿ ಒಂದೂ ಹಲ್ಲಿರಲಿಲ್ಲ.

"ಅಲ್ಲವಯ್ಯಾ........"

"ನನಗೆ ಗೊತ್ತಿದೆಯಪ್ಪಾ! ನೀವು ಕವಿ!" ಎಂದು ನನ್ನ ಮಾತನ್ನು ಸ್ವಲ್ಪ ಬಲುಮೆಯಿಂದ ತಿದ್ದಿ ಪುನಃ ನಗುತ್ತಾ ಮಧುರವಾಗಿ ನುಡಿದ—

"ನಾನೂ ಒಬ್ಬ ಕವಿ"

"ಹೋ!"

ಇನ್ನೇನು ಬರಲಿದೆ—ಎಂಬುದನ್ನು ಗ್ರಹಿಸಿಕೊಂಡೆ. ಬಡತನದ ಕಷ್ಟ, ಸಂಕಷ್ಟ, ಮನೆಯಲ್ಲಿ ಹೆಂಡತಿಮಕ್ಕಳ ಕಾಟ, ಹಾಳಾಗಿ ಹೋದ ಸ್ವಪ್ರತಿಭೆ, ಇವುಗಳ ಉದ್ದುದ್ದವಾದ ಮಾತಾದ ಮೇಲೆ, ನಾಲ್ಕಾಣೆ ಸಾಲ (!) ಕೊಡಲು ಸಾಧ್ಯವಿಲ್ಲವೇ ಎಂಬ ಪ್ರಶ್ನೆ. ಆದರೂ—ಏಕೋ ಹೇಳಲಾರೆ – ಆಗ ನನಗೆ ಅಲ್ಲಿಂದೆದ್ದು ಹೋಗಬೇಕೆಂಬ ಇಚ್ಛೆಯುಂಟಾಗಲಿಲ್ಲ. ಆ ಆಕರ್ಷಣೆಯ ಕಾರಣವನ್ನು ಹುಡುಕಲು ಯತ್ನಿಸುತ್ತಾ ಅವನನ್ನು ಮೊದಲಿಗಿಂತ ಸೂಕ್ಷ್ಮವಾಗಿ ನೋಡಿದೆ. ಮುಖವು ಸೊರಗಿಹೋಗಿತ್ತು. ಸುಮಾರು ಅರುವತ್ತು ಅರುವತ್ತೈದು ವರುಷ ಪ್ರಾಯವಾಗಿತ್ತು. ಆದರೆ ಕಣ್ಣುಗಳಲ್ಲಿ ಯುವಕನ ಹೊಳಪು ತೀಕ್ಷ್ಣತೆಯೂ ಇದ್ದಿತು. ನಗೆಯು ಎಂತವರನ್ನೂ ಸೆಹಿಡಿಯುವಂತಹುದಾಗಿತ್ತು. ಕೈಗಳು ಕೋಮಲವಾಗಿದ್ದುವು. ಕೂಲಿಕೆಲಸದವನ ಕೈಗಳಂತಿರದೆ, ಮುದುಕ ಕವಿಯೊಬ್ಬನ ಕೈಗಳಂತೆ ಕೋಮಲವಾಗಿದ್ದುವು.

"ನೀವೂ ಬರೆಯುವಿರೇನು?" ಎಂದು ಕೇಳಿದೆ.

ಮುದುಕನು ನಗುತ್ತಾ "ಇಲ್ಲ. ಒಂದೇ ಒಂದು ಪಂಕ್ತಿ ಪದ್ಯವನ್ನಾಗಲೀ, ಗದ್ಯವನ್ನಾಗಲೀ ಇಷ್ಟರವರೆಗೆ ಬರೆದಿಲ್ಲ. ಆದರೂ ನಾನೊಬ್ಬ ಕವಿ. ಕವಿಯೆಂದು ನನಗೆ

CC-0. Jangamwadi Math Collection. Digitized by eGangotri

ತಿಳಿದಿದೆ. ಮನಸ್ಸಿನಲ್ಲಿ ಖಚಿತವಾಗಿ ಹೋಗಿದೆ. ನಾನು....
ನನ್ನ ಭಾವನಾಸಾಮ್ರಾಜ್ಯದಲ್ಲಿ ವಿಹರಿಸುತಲಿದ್ದೇನೆ."

ಇನ್ನೊಮ್ಮೆ ಅವನನ್ನು ನೋಡಿದೆ. ಹುಚ್ಚರನ್ನು ನೋಡಿದರೆ ನನಗೆ ಯಾವಾಗಲೂ ಒಡಲಲ್ಲೊಂದು ದಿಗಿಲು.

"ನಾನು ಭಾವನಾಸಾಮ್ರಾಜ್ಯದಲ್ಲಿ ವಿಹರಿಸುತ ಲಿದ್ದೇನೆ" ಎಂದು ಇನ್ನೊಮ್ಮೆ ಒತ್ತಿ ನುಡಿದ.

ಎದ್ದು ಹೋಗಲೇ ಎನ್ನಿಸಿತು. ಆದರೂ ಏಳಲಾರದೆ ಹೋದೆ. ಬೇರೆ ಕಡೆಯಲ್ಲಿ ಕುಳಿತು ರಾತ್ರಿಯ ರಮಣೀಯತೆಯನ್ನು ಸವಿಯಬೇಕೆಂಬ ಆಕಾಂಕ್ಷೆಯಿದ್ದರೂ ಅಲ್ಲಿಯೇ ಕುಳಿತು ಬಿಟ್ಟೆ, ಮುದುಕನ ಹುಚ್ಚು ಹುಚ್ಚಾದ ಹರಟೆ ಕೇಳುವುದಕ್ಕೆ. ಎದ್ದು ಬಿಟ್ಟರೆ, ಪಾಪ, ಎಷ್ಟು ದುಃಖ ವಾಗುತ್ತದೋ–ಎಂಬ ಕನಿಕರ ಒಂದೆಡೆ.

ಕವಿಯು ಮಾತನಾಡುತ್ತಿದ್ದ. "ಹೋ, ನಿಜವಾದ ಸುಖವೆಂದರೆ ಆ ರಾಜ್ಯದ ಸುಖ ಸ್ವಾಮಿ. ನಾನು ನೋಡಿ, ಅತ್ಯಂತ ಸುಖಿ."

ನನಗೆ ಏನನ್ನು ಹೇಳಲೂ ತೋಚಲಿಲ್ಲ. ಸುಮ್ಮನೆ ಅವನ ಮೋರೆಯನ್ನು ನೋಡುತ್ತಾ ಹುಸಿನಗೆಯನ್ನು ನಗುತ್ತಿದ್ದೆ – ಎಲ್ಲಿ ಅವನಿಗೆ ಸಂಕಟವಾಗಬಹುದೋ ಎಂಬ ಮರುಕದಿಂದ.

"ನಾನು ಅತ್ಯಂತ ಸುಖಿ" ಎಂದು ಕವಿಯು ಇನ್ನೊಮ್ಮೆ ತನ್ನ ದೃಢತೆಯನ್ನು ತೋರುವುದಕ್ಕಾಗಿ ಹೇಳಿದ.

ನಾನು ಇನ್ನೂ ಮೌನವಾಗಿದ್ದೆ.

"ನೋಡಿ ನಿಮಗೆ ಅರ್ಥವಾಗುವುದಿಲ್ಲೆಂದು ತೋರುತ್ತಿದೆ. ನೀವು ನನ್ನ ಬಾಹ್ಯಾಡಂಬರವನ್ನು ನೋಡಿ ಬೆಲೆ ಕಟ್ಟುತ್ತೀರಿ. ಇತರರೂ ಹಾಗೆಯೇ. ನಾನು ನನ್ನನ್ನು ನೋಡಿಕೊಳ್ಳುವಂತೆ ಇತರರಾರೂ ನನ್ನನ್ನು ಕಂಡಿಲ್ಲ. ಚಿತ್ರಬರೆಯಬಲ್ಲೆನಾಗಿದ್ದರೆ ನನ್ನ ಭಾವಚಿತ್ರ ಬರೆದುಕೊಡುತ್ತಿದ್ದೆ. ಆಗ ನಿಮಗೆ ತಿಳಿಯುತ್ತಿತ್ತು: ನಾನು ಎಷ್ಟು ಧನಿಕ, ನನ್ನ ಠೀವಿಯೇನು, ನನ್ನ ಬೆಲೆಯೇನು ಎಂಬುದು. ನೋಡಿ, ಈ ವಜ್ರದುಂಗುರ. ಗೆಳೆಯನೊಬ್ಬನು ನೆನಪಿಗಾಗಿ ಕೊಟ್ಟುದು. ಎಷ್ಟು ಸೊಗಸಾಗಿದೆ!"

ಮುದುಕನು ತನ್ನ ಬೆರಳನ್ನು ಬೆಳದಿಂಗಳಿಗೆ ಹಿಡಿದು ವಜ್ರವನ್ನು ಮಿನುಗುವಂತೆ ಮಾಡಲು ಯತ್ನಿಸುತ್ತಿದ್ದ. ಬೆರಳಿನಲ್ಲಿ ಉಂಗುರವಿದ್ದಿಲ್ಲ. ಕೇವಲ ಭ್ರಾಂತಿ.

"ಪೆಂಟ್‌ಲೆಂಡ್ ಪೇಟೆಯಲ್ಲಿ ಭವ್ಯವಾದೊಂದು ಸ್ವಂತ ಮನೆಯಿದೆ. ಅಲ್ಲಿ ನಾನೂ ನನ್ನ........"

ಎರಡು ನಿಮಿಷಗಳವರೆಗೆ ಮೌನವಾಗಿ ಬೆಳದಿಂಗಳನ್ನು ದಿಟ್ಟಿಸಿದ ಮೇಲೆ ಅರ್ಧ ಮುಗಿಸಿದ್ದ ತನ್ನ ಮಾತನ್ನು ಮುಂದುವರಿಸಿದ—

"........ಅಲ್ಲಿ ನಾನು ಅತ್ಯಂತ ಸುಂದರಿಯಾದ ಹೆಂಗಸೊಂದಿಗೆ ಜೀವನ ನಡೆಯಿಸುತ್ತಿದ್ದೇನೆ."

ನನಗೆ ಅವನ ಮನಸ್ಸು ನೋಯಿಸುವ ಇಚ್ಛೆಯಿದ್ದಿಲ್ಲ. ಆದರೂ ಕೇಳಿದೆ.

"ಆ ಮನೆಯೂ ಹೆಂಗಸರೂ ವಜ್ರದುಂಗುರದ ಹಾಗೆ ಸ್ಥಿರ, ಸೊಗಸು, ಅಲ್ಲವೆ?"

ಸಿಟ್ಟುಗೊಳ್ಳಬಹುದೆಂದು ಯೋಚಿಸಿದ್ದೆ. ಆದರೆ ಮುದುಕನು ಸಿಟ್ಟುಗೊಳ್ಳಲಿಲ್ಲ. ವಿಶ್ವವೇ ತನ್ನ ಅಂಗೈಯೊಳಗೆಂಬ ತೆರದ ನಗೆಯನ್ನು ನಗುತ್ತಾ, "ಸ್ಥಿರ? ಯಾವುದು ಸ್ಥಿರವಲ್ಲ ಈ ವಿಶ್ವದಲ್ಲಿ? ಯಾವುದು ಸೊಗಸಲ್ಲ ಈ ಜಗತ್ತಿನಲ್ಲಿ? ನನ್ನ ಭಾವನೆಯು ಸ್ಥಿರವಲ್ಲ, ಸೊಗಸಲ್ಲವೆಂದು ಹೇಳಿದವರಾರು? ಇನ್ನೊಮ್ಮೆ ಹೇಳುತ್ತೇನೆ, ನಾನು ಕವಿ. ಭಾವನಾ ರಾಜ್ಯದಲ್ಲಿ ಸ್ವೇಚ್ಛೆಯಿಂದ ವಿಹರಿಸುತಲಿದ್ದೇನೆ ನಾನು. ನನ್ನ ಭಾವನೆಗೆ ನೆಲೆಯಿಲ್ಲ. ........ನೋಡಿ, ನಾನು ಹೇಳುವುದನ್ನು ತಿಳಿದುಕೊಳ್ಳಲು ಸ್ವಲ್ಪ ಯತ್ನ ಮಾಡಿ....ನಾನು ಪ್ರಯತ್ನಪೂರ್ವಕವಾಗಿ ಯಾವುದನ್ನೂ ಭಾವಿಸುವುದಿಲ್ಲ. ಅದರ ಬದಲು ಭಾವನೆಯೇ ನನ್ನಲ್ಲಿ ಬಂದುಬಿಟ್ಟು ನಾನು ಭಾವನೆಯಲ್ಲಿಯೇ ವಾಸಿಸಿಬಿಡುತ್ತೇನೆ........ ಅರ್ಥವಾಯಿತೇ ಈಗ?

"ಈ ಲೋಕದಲ್ಲಿ ನನಗೆ ಭಾವನೆಯ ಹೊರತು ಮತ್ತೇನೂ ಇಲ್ಲ ನೋಡಿ........ ಆ ಮನೆ ನನ್ನ ಭಾವನೆಯಲ್ಲಿ ಎಷ್ಟು ಸ್ಥಿರವಾಗಿ ನಿಂತಿದೆ! ನೋಡಿ, ಇಲ್ಲಿ ಕೇಳಿ ನನ್ನ ಭಾವನೆಯು ಇಂದೊಂದು ರೀತಿಯಾಗಿದ್ದು ನಾಳೆ ಬೇರೆ ರೀತಿಯಾಗಿ ಪರಿವರ್ತನ ಹೊಂದುವಂತಹುದಲ್ಲ ಸ್ವಾಮಿ! ಅದು ಅಳಿವಿಲ್ಲದ ಭಾವನೆ. ಹೇಳಿದರೆ ಸುಳ್ಳು ಅನ್ನುವಿರಿ. ಆಗ ಹೇಳಿದೆನಲ್ಲ ಆ ಮನೆ–ಯಾವ ದಿಕ್ಕಿನಲ್ಲಿ, ಎಲ್ಲಿ ಹೇಗೆ ಕಟ್ಟಲ್ಪಟ್ಟಿದೆ? ತೋಟದಲ್ಲಿ ಏನೇನು ಹೂಗಳಿವೆ? ಮುಖಡಿಯ ಮೇಲೆ ಬಾಗಿರುವ ಮಾವಿನ

CC-0. Jangamwadi Math Collection. Digitized by eGangotri

ಮರದ ರೆಂಬೆಯು ಯಾವ ಕಿಟಕಿಯಲ್ಲಿ ಒಳನುಗ್ಗಲು ಯತ್ನಿಸುತ್ತಿದೆ–ಇದನ್ನೆಲ್ಲಾ ಹೇಳಬಲ್ಲೆ. ನನ್ನ ಭಾವನೆಯು ಆ ಮನೆಯನ್ನು ಯಾವಾಗಲೂ ಒಂದೇ ರೀತಿಯಲ್ಲಿ ಚಿತ್ರಿಸಿಕೊಂಡಿದೆ. ಈಗೊಂದು ರೀತಿಯಲ್ಲಿದ್ದರೆ, ನಾಳೆ ಇನ್ನೊಂದು ರೀತಿಯಲ್ಲಿ ಎಂದೂ ಕಾಣಲಾರದು. ನಿಮಗೆ ಅದು ಸ್ಥಿರವಾಗಿ ಕಾಣದೆಹೋದರೆ,ನಂಬಿಕೆ ಹುಟ್ಟದಿದ್ದರೆ, ನನಗೇನಯ್ಯಾ? ನಾನು ಏನು ಮಾಡಬಲ್ಲೆ? ವಜ್ರ ದುಂಗುರ? ನೋಡಿ ಬೆಳದಿಂಗಳಲ್ಲಿ ಹೇಗೆ ಮಿಂಚುತ್ತಿದೆ! ನನ್ನ ಮನೆ? ಬೇಸಿಗೆಯಲ್ಲಿ ಏನು ಗಾಳಿ! ಎಷ್ಟು ತಂಪು, ಮಳೆಗಾಲದಲ್ಲಿ ಎಂತಹ ಭದ್ರತೆ! ಎಷ್ಟು ಬೆಚ್ಚಗೆ! ನನ್ನ ಹೆಂಡತಿ?........"

ಮುದುಕನು ಸರಿದು ಬಂದು ತೀರಾ ಸಮೀಪದಲ್ಲಿ ಕುಳಿತುಕೊಂಡನು.

"ಅವಳ ಸೌಂದರ್ಯಕ್ಕೆ ಎಣೆಯಿಲ್ಲವಯ್ಯಾ! ನಿಮ್ಮ ರಂಭೆ, ಊರ್ವಶಿಯರು ಅವಳೆದುರಿನಲ್ಲಿ ತಲೆತಗ್ಗಿಸಿಯೇ ಬಿಡಬೇಕು. ಆ ಮೇಘವರ್ಣದ ಸೀರೆ,ಚಂದನದ ಬೊಟ್ಟು, ವಜ್ರದ ಬಳೆ, ಓಹೋ ಹೋ! ಹೇಗೆ ಒಪ್ಪುತ್ತದೆ ಅವಳಿಗೆ! ಅವಳ ಕಣ್ಣೋ? ನಿಮ್ಮ ಕವಿಗಳ 'ಕುಡಿಮಿಂಚು' ಇದೆಯಲ್ಲಾ ಅದರ ಹಾಗೆ. ಏನು ಕಟಾಕ್ಷ! ಅವಳ ಹಲ್ಲೋ?........ಆ ನಗೆಯೋ? ಹೂಬಿಸಿಲು ಬಿದ್ದ ಹಾಗೆ. ಎಷ್ಟು ಚೆನ್ನು! ಅವಳು ನನ್ನ ಕೈ ಹಿಡಿದುದು ಪೂರ್ವ ಜನ್ಮದ ಪುಣ್ಯಫಲದಿಂದಲೇ ನೋಡಿ!.... ಆದರೆ ಒಂದು ಭಯಂಕರ ಸ್ಥಿತಿ......."

ಮುದುಕನು ಮಾತನ್ನು ನಿಲ್ಲಿಸಿಬಿಟ್ಟ.

"ಏನು?" ಎಂದು ನಾನು ಕುತೂಹಲದಿಂದ ಕೇಳಿದೆ.

"ಅವಳ ಹೃದಯ........ ಅದರಲ್ಲಿ ಒಂದಿಷ್ಟೂ ಅನುರಾಗವಿಲ್ಲ; ಕೇವಲ ಪಾಷಾಣ."

ನನಗೆ ಆಶ್ಚರ್ಯವಾಯಿತು.

"ಅನುರಾಗವಿಲ್ಲ? ಅವಳಿಗೆ ನಿಮ್ಮ ಮೇಲೆ ಸಂಪೂರ್ಣವಾದ ಅನುರಾಗವಿದೆಯೆಂದು ಭಾವಿಸಿಕೊಳ್ಳಬಾರದೇಕೆ ನೀವು?"

ಮುದುಕನು ಕನಿಕರದಿಂದ ನನ್ನನ್ನು ನೋಡಿದ. "ಸ್ವಾಮಿ, ನಿಮಗೆ ಭಾವನಾಸಾಮ್ರಾಜ್ಯದಲ್ಲಿ ನೆಲಸುವುದೇನೆಂದು ಇನ್ನೂ ಅರ್ಥವಾಗಿಲ್ಲ ಹಾಗಾದರೆ. ಒಬ್ಬನು ತನಗೆ ಬೇಕಾದ ಹಾಗೆ ಭಾವಿಸಿಕೊಳ್ಳಬಹುದೆಂದು ಯೋಚಿಸಿಕೊಂಡಿದ್ದಂತೆ ತೋರುತ್ತದೆ ನಿಮ್ಮ. ಅದು ತಪ್ಪು ಭಾವನೆ. ನೋಡಿ, ಭಾವನೆಗಳೂ ಅನ್ಯರ ಕರ್ಮಗಳಿಗನುಸಾರವಾಗಿ ಮೂಡುತ್ತವೆಯೇ ಹೊರತು ನಮಗೆ ಬೇಕಾದ ರೂಪದಲ್ಲಿ ಎಂದೂ ಮೂಡಲಾರವು. ತಿಳಿಯಿತೇ ಈಗ?

".......ನನ್ನ ಹೆಂಡತಿಯ ವಿಚಾರ. ಅವಳಿಗೆ ಅನುರಾಗದ ಅಭಾವದಿಂದ ನಾನು ಏನು ಅನುಭವಿಸುತ್ತಿದ್ದೇನೆಂದು ನಿಮಗೇನು ಗೊತ್ತು? ಒಮ್ಮೆ ಸ್ವರ್ಗವನ್ನು ಕಂಡೆನಾದರೆ ಮರುಕ್ಷಣ ನರಕವನ್ನು ಕಾಣುತ್ತೇನೆ....ನರಕ! ಆದರೂ ಈ ಜೀವನದ ಹೊರತು ನನಗೆ ಬೇರೆ ಗತ್ಯಂತರವೇ ಇಲ್ಲ. ಅನುರಾಗದಿಂದ ವಂಚಿಸಲ್ಪಟ್ಟೆನಾದರೂ ಸುಖದುಃಖಗಳಿಂದ ವಂಚಿಸಲ್ಪಡಲಿಲ್ಲ. ನಿಮಗೆ ಅವೆಲ್ಲಾ ಈಗ ತಿಳಿಯಲಾರವು. ನೀವು ಕಣ್ಣಿಗೆ ಕಾಣಿಸುವ ಒಂದು ಬಳಗದ ವಿಚಾರವಾಗಿ ಯೋಚಿಸುತ್ತಿದ್ದೀರಿ. ಅದು ಪ್ರತ್ಯಕ್ಷದರ್ಶನದಿಂದ ಸುಖವನ್ನನುಭವಿಸುತ್ತಿದ್ದೀರಿ. ಆದರೆ ನಿಮ್ಮ ಈ ಸುಖ, ಈ ದುಃಖ, ನನ್ನವುಗಳೆದುರಿಗೆ ತೃಣಸಮಾನ, ತೃಣಸಮಾನ!"

ಕವಿಯು ದೀರ್ಘವಾದೊಂದು ನಿಃಶ್ವಾಸವನ್ನೆಸೆದು ಕಣ್ಣೊರಸಿಕೊಂಡುದನ್ನು ಕಂಡೆ. ಬಹಳ ಕನಿಕರವಾಯಿತು. ಭಾವನೆಯಲ್ಲಿ ಅನುಭವಿಸುವ ದುಃಖದ ಪ್ರಗಾಢತೆಯೂ ಇಷ್ಟಿದೆಯೇ? ಭಗವಂತಾ, ಇದೆಂತಹ ಹೊಸ ರೀತಿಯ ಶಿಕ್ಷೆ? ಎಂದುಕೊಂಡೆ.

ಇದಾದ ಬಳಿಕ ಮುದುಕನು ನನ್ನ ಕಿವಿಯ ಬಳಿಯಲ್ಲಿ ಮುಖವನ್ನಿಟ್ಟು ನಡುಗುವ ದನಿಯಿಂದ ಹೇಳಲು ಮೊದಲುಮಾಡಿದ.

"ಇನ್ನು ಒಂದೇ ಉಪಾಯ ನೋಡಿ. ಅವಳ ಮೇಲೆಯೂ ನಾನು ಅನುರಾಗ ತೋರಬಾರದು. ಇಂದು ರಾತ್ರಿ ಒಂದು ಔತಣವನ್ನು ಕೊಡಬೇಕೆಂದಿದ್ದೇನೆ. ಜನರ ಅತಿಥಿಗಳೆದುರಿಗೆ ಅವಳಿಗೆ ನಾಚಿಕೆ ಮಾಡಿಬಿಡುತ್ತೇನೆ ನೋಡಿ. ...ಅವಳ ಪ್ರೇಮನಟನೆಯೋ........ ಎಂತಹ ನಟನೆಯದು....ಎಷ್ಟು ಹೃದಯವನ್ನು ಕಲ್ಲುಮಾಡಿಕೊಂಡರೂ,ಅವಳ ಅನುರಾಗಪ್ರದರ್ಶನವು ನಟನೆಯೆಂದು ತಿಳಿದಿದ್ದರೂ ಅವಳು ನನ್ನನ್ನು ಕಾಲಿನ ಕಸಕ್ಕಿಂತ ಕಡೆಯಾಗಿ ಎಣಿಸಿರುವಳೆಂದು ಅರಿತಿದ್ದರೂ ಹೇಗೆ ಅವಳ

CC-0. Jangamwadi Math Collection. Digitized by eGangotri

ಮಾಟದ ಬಲೆಗೆ ಬಿದ್ದುಬಿಡುತ್ತೇನೆ........ ಇನ್ನು ಬೀಳಲಾರೆ........ಬೀಳಲಾರೆ. ಅವಳಿಲ್ಲದಿದ್ದರೆ, ಇತರ ಸುಂದರಿಯರಿಲ್ಲವೆ ನನಗೆ! ಈ ರಾತ್ರಿ ಮುದ್ದರೆಯುತ್ತೇನೆ ಅವಳಿಗೆ. ನಿಲ್ಲಿ........ಈ............"

ಕವಿಯು ಜೇಬಿನಲ್ಲಿ ಏನನ್ನೋ ಹುಡುಕಲು ಮೊದಲು ಮಾಡಿದ. ಏನೂ ಸಿಕ್ಕಲಿಲ್ಲವೆಂದು ತೊರುತ್ತದೆ. ಖಿನ್ನನಾಗಿ ಆರು ತಿಂಗಳು ಕ್ಷೌರಕತ್ತಿ ಕಾಣದಿದ್ದ ಹೊಲಸು ಗಡ್ಡವನ್ನು ಕೈಯಿಂದ ತೀಡುತ್ತಾ ನುಡಿದ:

"ಇಂದು ರಾತ್ರಿ....ಸಾಧ್ಯವಿಲ್ಲ ಸ್ವಾಮಿ. ಸಾಯಂಕಾಲ ತೆಗೆದುಹಾಕಿದ ಕೋಟಿನ ಜೇಬಿನೊಳಗಿದೆ ರೂಪಾಯಿ-ನಾನೂರು ರೂಪಾಯಿ ಮೂರಾಣೆ. ಮರೆತೇ ಹೋಯಿತು. ಛೆ!"

"ಹೋ!" ಅಂದೆ.

"ಹೌದು. ಸ್ವಾಮಿ. ನಾನೂರು ರೂಪಾಯಿ........ ಮೂರಾಣೆ." ನಾನು ಸ್ವಲ್ಪ ಹಿಂದು ಮುಂದು ಯೋಚನೆ ಮಾಡಿ, "ಅದಕ್ಕೇಕೆ ಇಷ್ಟು ಯೋಚನೆ. ನನ್ನ ಹತ್ತಿರ ಒಂದಿನ್ನೂರಿದೆ. ತೆಗೆದುಕೊಂಡು ಹೋಗಿ. ಇನ್ನೊಮ್ಮೆ ಸಿಕ್ಕಿದಾಗ ಕೊಡುವಿರಂತೆ........ಇಗೊಳ್ಳಿ."

ಜೇಬಿನಲ್ಲಿ ಹುಡುಕಿ ಅರ್ಧಾಣೆಯ ನಾಣ್ಯವೊಂದನ್ನು ತೆಗೆದು ಅವನಿಗೆ ಕೊಟ್ಟುಬಿಟ್ಟೆ. ಬೆಳದಿಂಗಳಿನಲ್ಲಿ ಏನೋ ಹೊಳೆದಂತಾಯಿತು. ಮುದುಕನ ಕಣ್ಣುಗಳಲ್ಲಿ ಅಪೂರ್ವವಾದ ಪ್ರಕಾಶವೊಂದು ಕಂಡುಬಂದು ಮಿನುಗಿ ಮಾಯವಾಯಿತು. ಇದೂ ಒಂದು ಗ್ರಹಚಾರವುಂಟೆ? ಕೊಟ್ಟ ನಾಣ್ಯವು ಅರ್ಧಾಣೆಯಲ್ಲ! ರೂಪಾಯಿ! ಹಿಂದೆ ತೆಗೆದುಕೊಳ್ಳಲೇ? ಹೇಗೆ? ಒಮ್ಮೆ ಕೊಟ್ಟಾಗಿ ಹೋಯಿತು. ಇನ್ನೇನು ಮಾಡ........

"ಬಹಳ ಉಪಕಾರವಾಯಿತು ಮಹಾರಾಯಾ-ಬಹಳ ಉಪಕಾರವಾಯಿತು. ನೀವು ಉಳಿದ ಜನರ ಹಾಗೆ ಬುದ್ಧಿಹೀನರಲ್ಲ. ಸ್ವಲ್ಪ ಪ್ರಯತ್ನಪಟ್ಟರೆ ನಿಮಗೂ ಭಾವನಾ ಸಾಮ್ರಾಜ್ಯದಲ್ಲಿ ನೆಲಸುವ ಸಾಮರ್ಥ್ಯ ಬರಬಹುದು.... ಈಗ ನೋಡಿ ನಿಮ್ಮ ಜೀವನಕ್ಕೂ ನನ್ನ ಜೀವನಕ್ಕೂ ಅಜಗಜಾಂತರವಿದೆ! ನಿಮ್ಮ ಜೀವನವು ಜಡ, ನನ್ನದು ಜಾಗೃತ. ಸ್ವಲ್ಪ ಸ್ವಲ್ಪ ಪ್ರಯತ್ನ ಮಾಡಿ; ನಿಮ್ಮ ಜೀವನವೂ ಜಾಗೃತಿಗೊಳ್ಳುವುದು. ನೀವು ನನ್ನ ಹಾಗೆ ಸುಖಿಯಾಗಬಲ್ಲಿರಿ. ಆ ಜನರಿಗೆ (ದೂರದಲ್ಲಿ ಕುಳಿತಿದ್ದವರನ್ನು ತೋರಿಸಿ) ಜೀವನವೆಂದರೆ ಏನೆಂದು ಗೊತ್ತೇ ಇಲ್ಲ........ಗೊತ್ತೇ ಇಲ್ಲ."

ತಿರಸ್ಕಾರಸೂಚಕವಾದ ನಗುವನ್ನು ನಗುತ್ತಾ ಮುದುಕನು ಎದ್ದ.

"ನಿಜವಾಗಿ ಜೀವಿಸುವವರೆಂದರೆ ನಾವಯ್ಯಾ........ ಕವಿಗಳು." ಅವನ ಮುಖದಲ್ಲಿ ದರ್ಪವು ಹೊರಸೂಸುತಲಿತ್ತು. ಹಲ್ಲಿಲ್ಲದ ಬಾಯಿಯ ಒಂದು ಮೂಲೆಯು ತಿರಸ್ಕಾರದಿಂದ ಕೊಂಕಿ ಹೋಗಿತ್ತು. ಕಣ್ಣುಗಳಲ್ಲಿ ಅಪೂರ್ವವಾದೊಂದು ಶೋಭೆಯು ಪ್ರಕಟವಾಗಿತ್ತು.

ಮುದುಕನು ಎದ್ದು ಹೊರಟುಹೋದ. ಬೆಳದಿಂಗಳಿನಲ್ಲಿ ಅವನ ನರೆತ ಕೂದಲು ಮಿನುಗುತ್ತಿರುವುದನ್ನು ಕಂಡೆ. ರೂಪಾಯಿಯ ಯೋಚನೆಯಾಯಿತು. ಮನಸ್ಸಿನಲ್ಲಿಯೇ "ಎಂತಹ ಪೆಚ್ಚು ಕೆಲಸ ಮಾಡಿಕೊಂಡೆ, ದಾರಿಯಲ್ಲಿ ಹೋಗುವ ಮಾರಿಯನ್ನು ನನ್ನ ಕಡೆಗೆಳೆದುಕೊಂಡೆ" ಎನ್ನಿಸಿತು. ಆದರೆ ಕಟ್ಟಕಡೆಗೆ ನನಗೆ ನಾನೇ ಬುದ್ಧೀ ಹೇಳಿಕೊಂಡೆ. "ಪಾಪ, ಮುದುಕ, ಹೋಗಲಿ. ಊಟಕ್ಕಿಲ್ಲದೆ ಅಲೆಯುತ್ತಿದ್ದಾನೆ. ಅಲ್ಲದೆ........ಕವಿ." ನನ್ನೊಳಗೆ ನಕ್ಕುಬಿಟ್ಟೆ.





CC-0. Jangamwadi Math Collection. Digitized by eGangotri

# ತಿರುಕನ ಎಣಿಕೆ

ಶ್ರೀ. ಡಿ. ಕೆ. ಭೀಮಸೇನರಾವ ಎಂ. ಎ. ಹೈದ್ರಾಬಾದ್

ಸಂಜೆಯಲಿ ತಿಂದುಳಿದ
ಎಂಜಲಿನ ತಂಗೂಳ
ಹಳಸಿಪ್ಪ ಕೈಮುದ್ದೆ
ಎನ್ನ ಭಾಗದ ಭೋಜ್ಯ ಹೇ ದೇವ!

ಅರೆಹೊಟ್ಟೆಯೊಪ್ಪೊತ್ತು
ತಿರಿದುಣಿಸು ಕರಿಕನ್ನ
ತಿರಿಯದಿರೆಯುಪವಾಸ
ಎನ್ನ ಭಾಗದ ಭಾಗ್ಯ ಹೇ ದೇವ!

ಮುರಿದೊಂದು ಹುಲ್ಲುಮನೆ
ಹರಿದ ಕಂಬಳಿಹಾಸು
ಹೊದಿಯೆ ಚಿಂದಿಯ ಪಂಜೆ
ಎನ್ನ ಭಾಗದ ಭೋಗ ಹೇ ದೇವ!

ತಿರಿದುಂಬ ಹರಿವಾಣ
ಜಾಳಂದರದ ಚೆಂಬು
ಕಾದಿಡಲು ಜೋಳಿಗೆಯು
ಎನ್ನ ಭಾಗದ ವಿಭವ ಹೇ ದೇವ!

ಚಳಿಯ ಕೋಳಿಗೆಯೊಡಲು
ಉಪ್ಪೇರಿ ಮೈಯೊಡೆದು
ಬಿಸಿನೆತ್ತರೂರುತಿದೆ
ಎನ್ನ ಭಾಗದ ಭೋಗ ಹೇ ದೇವ!

ಬೇಸಗೆಯು ಬೇಗೆಯಲಿ
ಆಸರವ ಕಾಣದಲೆ
ಬಿಸಿ ಮರಳಲುರುಳುವುದೆ
ಎನ್ನ ಭಾಗದ ಭೋಗ ಹೇ ದೇವ!

ಸುರಿಮಳೆಯು ಬರಸಿಡಿಲ
ಬಿರುಗಾಳಿಯುಬ್ಬರದಿ
ಮರುಗುತ್ತ ಬಾಳುವುದೆ
ಎನ್ನ ಭಾಗದ ಭೋಗ ಹೇ ದೇವ!

ಮನೆಮನೆಯ ತಿರುಗುವುದು
ಮಾನವರ ಬೇಡುವುದು
ಪರಿಭವದಿ ಜೀವಿಪುದು
ಸರಿಯೊಪ್ಪಿಹುದೆ ನಿನಗೆ ಹೇ ದೇವ!

ಸಿಂಗರದ ಕರುಮಾಡ
ಚೆನ್ನೆಯರ ಸವಿಕೂಟ
ಹೊನ್ನ ಹರಿವಾಣದೂಟ
ಕರುಣಿಸೊಮ್ಮೆನಗೆ ದೇವರ ದೇವ!

ಸಣ್ಣಕ್ಕಿ ಬೋನವನು
ಹಸನಾದ ತುಪ್ಪವನು
ಕೆನೆವಾಲ ಕೆನೆಮೊಸರ
ಬಯಸುತಿದೆ ನಾಲಗೆಯು ಹೇ ದೇವ!

ಸಂಗೀತಮೇಳದಲಿ
ಮಿದುವಪ್ಪ ಪಳ್ಕೆಯಲಿ
ಕನ್ನೆಯರ ತಳ್ಕೆಯಲಿ
ಚಳಿಯ ಕಳೆಯುವ ಬಯಕೆ ಹೇ ದೇವ!

ಪನ್ನೀರ ಮಿಾಯುತ್ತ
ಪರಿಮಳವ ಪೂಸುತ್ತ
ತಂಪಾದ ಬೀಡಿನಲಿ
ಬೇಸಗೆಯುಲಿರಿಸೊಮ್ಮೆ ಹೇ ದೇವ!

ಮಳೆಗಾಳಿ-ಸಿಡಿಲಿಂದ
ಬಳಲಿದ್ದ ದೇಹಕ್ಕೆ
ಸುಖವಾಸ ಕೊಟ್ಟೊಮ್ಮೆ
ಕಾಪಾಡು ಕರುಣದಿಂ ಹೇ ದೇವ!

ಎಲ್ಲೆಲ್ಲಿ ನೀನಿರುವೆ
ಎಲ್ಲೆಲ್ಲಿ ಕಣ್ಣುಂಟು
ನಿನಗೆಂದು ಕೇಳಿಹೆನು
ಈ ಸೊಲ್ಲು ನಿಜವುಂಟೆ ಹೇ ದೇವ!

ಎನ್ನಿರವ ನೀನರಿತು
ಎನ್ನ ಬಯಕೆಯ ಸಲಿಸಿ
ಉನ್ನತನ ಮಾಡೆಂದು
ಕೈಯೊಡ್ಡಿ ಬೇಡುವೆನು ಹೇ ದೇವ!

CC-0. Jangamwadi Math Collection. Digitized by eGangotri



### ಶ್ರೀರಂಗನಗರದ ಕೊನೆಯ ದಿವಸ

ಇದನ್ನು ಬರೆದ ಶ್ರೀ. ಕ್ಷೀರಸಾಗರರು ಕನ್ನಡಿಗರಿಗೆ ಪರಿಚಿತರು. 'ಶ್ರೀರಂಗಪಟ್ಟಣದಲ್ಲಿ ಧೀರನಾದ ಟೀಪುವು ಕದನದಲ್ಲಿ ಮಡಿದ ದಿನದ ವಿವರವೇ ಈ ಪದ್ಯದ ವಸ್ತು. ನಡೆದ ಸಂಗತಿಯನ್ನು ಲಾವಣಿಯ ಜಾತಿಯ ಛಂದಸ್ಸಿನಲ್ಲಿ ಪೋಣಿಸಿ ಹೇಳಿದ್ದಾರೆ. ಇದು ಕವನವಲ್ಲ; ಇತಿಹಾಸಾಂಶವನ್ನೊಳಗೊಂಡ ಪದ್ಯ. ಲೇಖಕರು ಮನಸ್ಸು ಮಾಡಿದ್ದರೆ, ಈ ಕಥಾವಸ್ತುವಿನಲ್ಲಿದ್ದ ವೀರ–ಕರುಣರಸಗಳನ್ನು ಹೆಚ್ಚಾಗಿ ಪರಿಪೋಷಿಸಿ, ಪದ್ಯವನ್ನು ಕವನದ ಜಾತಿಗೆ ಇಳಿಸಬಹುದಾಗಿದ್ದಿತು. ಮೊದಲಲ್ಲಿಯೇ ನೋಡೋಣ

> "ಕಾಲಚಕ್ರದಲಿ ಶಾಲಿಯ ಶಕದಲಿ
> ಹದಿನೆಂಟನೆ ಶತಮಾನದಲಿ
> ಮೂರೇಳನೆ ಮಧುಮಾಸದಲಿ
> ಮುತ್ತಿತು ನಗರವ ಹೂಣರ ಸೈನ್ಯ
> ನೈಸಾಮರ ಮಾರಾಟರ ಸೈನ್ಯ
> ಚದುರು ಮೈಲಿ ಹದಿನೆಂಟರ ಸೈನ್ಯ"

ಎಂದು ಹುರುಪಿನ ನಡಿಗೆಯಿಂದ ಹೊರಟ ಛಂದಸ್ಸೂ ಪದಗಳ ಹೆಣಿಕೆಯೂ

> "ಸಿದ್ಧಾರ್ಥಿಯ ಚೈತ್ರದ ಕಡೆ ದಿವಸ
> ವಸಂತ ಋತುವಿನ ಮಧ್ಯದ ದಿವಸ
> ಶ್ರೀರಂಗನಗರದ ಕೊನೆದಿವಸ"

ಎಂಬ–ನಿಟ್ಟುಸಿರು ಹಾಕುತ್ತ ಹೇಳಬೇಕಾಗಿದ್ದ–ಸಂಗತಿಯನ್ನು ಹೇಳುವಾಗಲೂ ಮೊದಲಿನ ಕುಣಿತದಲ್ಲಿಯೇ ಸಾಗುತ್ತವೆ.

ಹಳೆಯ ಕಾಲದ ಐತಿಹಾಸಿಕಲಾವಣಿಗಳಲ್ಲಿಯ ದುಃಖಾಂತದ ಕತೆಯನ್ನು ವಿವರಿಸುವ ಛಂದಸ್ಸು ಮಾತುಗಾರಿಕೆಗಳು ವೀರ ಕರುಣಗಳೆರಡನ್ನೂ ಒಂದೇ ಕಾಲದಲ್ಲಿ ಅದುಹೇಗೆ ಹುಟ್ಟಿಸುತ್ತ ಹೋಗುವುವೆಂಬುದನ್ನು ಕೆಳಗಿನ ಒಂದು ಉದಾಹರಣೆಯಿಂದ ನೋಡಬಹುದು.

> "ಆಳಿದರು ನರಗುಂದ ಸಂಸ್ಥಾನಾ।
> ಫಿತೂರ್ ಮಾಡಿದನೊ ಕಾರಕುನಾ॥
> ಎಂದೆಂದೀಗೂ ಮರೀಯದಂಥಾ।
> ಗಡಾ ತಗೊಂಡ್ರು ಮಂಗಳಾರ ದಿನಾ"॥

ಇದರಲ್ಲಿಯ ಮೊದಲನೆಯ ಚರಣವು ವ್ಯಸನದಿಂದ ಉಸಿರುಗರೆಯುತ್ತ ಹೇಳಿದ ಮಾತಾಗಿದ್ದರೆ, ಎರಡನೆಯ ಚರಣದಲ್ಲಿಯದು ಕ್ರೋಧದಿಂದ ಹೇಳಿದುದು. ಮೂರನೆಯ ಚರಣವನ್ನು ಹೆಮ್ಮೆಯಿಂದ ಹಿಗ್ಗಿದೆದೆಯಿಂದ ಹೇಳುತ್ತ ನಾಲ್ಕನೆಯ ಚರಣದ ಕೊನೆಯಾದ "ಮಂಗಳಾರದಿನಾ" ಎಂಬ ಮಾತನ್ನು ಹೇಳುತಿರುವಾಗಲೆ ಕಂಠವು ಕುಗ್ಗಿ ಕಳವಳದ ನಿಟ್ಟುಸಿರಿಡುವಂತೆ ಮಾಡಿದ್ದಾನೆ ಕವಿ. ಶ್ರೀ. ಕ್ಷೀರಸಾಗರರು ಈ ಮಾತಿನ ಕಡೆಗೆ ಲಕ್ಷ್ಯಕೊಟ್ಟಿದ್ದರೆ ಅವರ ಕೃತಿಯ ಕಳೆಯು ಹೆಚ್ಚುತ್ತಿದ್ದಿತು. ಆದರೂ,

> "ಕೆಂಪು ಕವಚವನು ಕೂಡಲೆ ತೊಟ್ಟು
> ತಲೆಗೆ ಜರಿಯ ಪೇಟವನಿಟ್ಟು
> ಜರತಾರಿಯ ಪಾಜಾಮಿಯ ತೊಟ್ಟು
> ನಡುವಿಗಿಟ್ಟು ಚಿನ್ನದ ನಡುಕಟ್ಟು
> ಬಲತೋಳಿಗೆ ತಾಳಿಯ ಕಟ್ಟು."

ಎಂದಿರುವ ಟಿಪ್ಪುವಿನ ವರ್ಣನೆಯಲ್ಲಿಯೂ,

CC-0. Jangamwadi Math Collection. Digitized by eGangotri

"ಈ ಕಲಹದಲೂ ಸತ್ತವರುಂಟು
ಮುದುಕರು ಮಕ್ಕಳು ಸ್ತ್ರೀಯರು, ಅಂತು
ಅಳಿದರ ಸಂಖ್ಯೆಯು ಸಾಸಿರವೆಂಟು.
ಉಳಿದರು ? ಉಳಿದರಿಗೇನುಂಟು?
ಅಳಿದರ ನೆನಪಿನ ಗೋಳುಂಟು
ಮಧ್ಯಾಹ್ನದ ಬಡತನವುಂಟು."

ಎಂಬ ಕಾಳಗದ ಕೊನೆಯನ್ನು ಹೇಳುವುದರಲ್ಲಿಯೂ, ಇನ್ನೂ ಒಂದೆರಡು ಕಡೆಗಳಲ್ಲಿಯೂ ಮಾತುಗಳು ತುಂಬ ಉಚಿತವಾಗಿ ಬಂದಿದ್ದು, ಭಾವವನ್ನು ಚೆನ್ನಾಗಿ ಪರಿಪೋಷಿಸುತ್ತವೆ. ಕ್ಷೀರಸಾಗರರ ಈ ಕೃತಿಯು ಕನ್ನಡಿಗರೆಲ್ಲರ ಹೃದಯದಲ್ಲಿ ಶೌರ್ಯದ ಬೀಜವನ್ನು ಬಿತ್ತಲಿ, ಸ್ವಾಭಿಮಾನದ ನೀರನ್ನು ಹನಿಸಲಿ, ಒಗ್ಗಟ್ಟಿನ ಬೆಳಸನ್ನು ಬೆಳೆಯಲಿ!

**೧ ಶ್ರೀಮಂತನ ದುರವಸ್ಥೆ**
**೨ ಬಡವನ ಭಾಗ್ಯೋದಯ** } ಎರಡು ಕಥೆಗಳು.

ಇವೆರಡೂ ಪರಂಪರಾಗತವಾದ ಅದ್ಭುತಕಥೆಗಳು. ಮೈಸೂರಿನ ಶ್ರೀ. ಬಿ. ಆರ್. ಚಕ್ರವರ್ತಿಯವರು ಸಂಗ್ರಹಿಸಿ ಬರೆದು ಪ್ರಕಟಿಸಿದ್ದಾರೆ. ಸುಣುಪಾದ ಭಾಷೆಯಿಂದ ಬರೆದು ಅಂದವಾಗಿ ಅಚ್ಚು ಹಾಕಿಸಿದರೆ, ಇಂತಹ ಅದ್ಭುತ ಕಥೆಗಳಿಗೂ ಸಾಹಿತ್ಯಕ್ಷೇತ್ರದಲ್ಲಿ ಒಂದೆಡೆಯು ದೊರೆಯುತ್ತದೆ. "ಬಡವನ ಭಾಗ್ಯೋದಯ" ಎಂಬ ಹೆಸರೇನೋ ಆ ಕಥೆಗೆ ಉಚಿತವಾದುದಾಗಿದೆ. ಆದರೆ "ಶ್ರೀಮಂತನ ದುರವಸ್ಥೆ" ಎಂದು ಹೆಸರಿಟ್ಟುದರಲ್ಲಿ ಏನು ಔಚಿತ್ಯವೋ ನಮಗೆ ತಿಳಿಯದು. ಅಚ್ಚಿನ ದೋಷಗಳೂ ಬರೆವಣಿಗೆಯ ದೋಷಗಳೂ ತುಂಬ ಇವೆ.

**ದೇವಯಾನೆ (?) ಕಲ್ಯಾಣ** (ಯಕ್ಷಗಾನ).

ಯಕ್ಷಗಾನದ ಪೂರ್ವಪರಂಪರೆಯನ್ನು ನಮ್ಮ ಉತ್ತರ ದಕ್ಷಿಣಕನ್ನಡ ಜಿಲ್ಲೆಯವರು ಇದುವರೆಗೆ ಕಾಯ್ದುಕೊಂಡು ಬಂದಿರುವುದು, ಕರ್ಣಾಟಕ ಸಂಸ್ಕೃತಿ ಸಂರಕ್ಷಣೆಯ ದೃಷ್ಟಿಯಿಂದ ಅಭಿನಂದನೀಯವಾದ ಸಂಗತಿ. ಯಾವುದೇ ಒಂದು ಕಲೆಯು ಹುಟ್ಟಿದುದು ಹುಟ್ಟಿದ ಹಾಗೆಯೇ ಕೊನೆತನಕ ಉಳಿದುಬಿಟ್ಟರೆ ರುಚಿವೈಚಿತ್ರ್ಯವನ್ನು ಬಯಸುವ ಜನರ ಬೇಸರಿಕೆಗೆ ಅದು ಕಾರಣವಾಗಬಹುದು. ಸಕ್ಕರೆಯು ಸಿಹಿಯಾದುದೇನೋ ಸರಿ! ಆದರೆ ಬರೀ ಸಕ್ಕರೆಯನ್ನೇ ಅಪೇಕ್ಷಿಸುವವರು ಎಷ್ಟು ಮಂದಿ! ಎಲ್ಲರೂ ಬಯಸುವುದು ಸಕ್ಕರೆಯಿಂದ ಮಾಡಿದ ಬಗೆಬಗೆಯ ಪಕ್ವಾನ್ನಗಳನ್ನು. ಹಾಗೆಯೇ ಕಲೆಯ ಮೂಲತತ್ತ್ವವು ಬಗೆಬಗೆಯ ಕುಸುರುಗಳನ್ನು ಪಡೆಯದಿದ್ದರೆ ಬಹುಜನರ ಮನಸ್ಸನ್ನು ಸೆಳೆಯಲಾರದು. ಈ ಯಕ್ಷಗಾನವು ಹುಟ್ಟಿದಂದಿನಿಂದ ಒಂದೇ ಒಂದು ಸ್ವರವನ್ನು ನುಡಿಯುತ್ತಲಿದ್ದು, ಅದರಲ್ಲಿ ಬೇರೆ ಬೇರೆ ಸ್ವರಗಳ ಉಚ್ಚಾರ–ವರ್ಣಗಳನ್ನು ಸೇರಿಸಿ ಹೊಸ ಹೊಸ ರಾಗಗಳನ್ನು ಹುಟ್ಟಿಸುವಂತಹ ಯಕ್ಷಗಾನವೂ ಅದಕ್ಕೆ ದೊರೆತಿಲ್ಲ. ಕಾಲವು ಬದಲಾದಂತೆ ಕಲೆಯ ಮೂಲತತ್ತ್ವದ ಕುಸುರುಗಳೂ ಬದಲಾಗುವವು. ಈ ನಿಯಮಕ್ಕನುಸಾರವಾಗಿ ಈ 'ಯಕ್ಷಗಾನ'ದಲ್ಲಿಯೂ ಬದಲಾಗಬೇಕಾಗಿದ್ದುದು ಆವಶ್ಯಕ.

ಪುರಾಣದ ಕತೆಗಳನ್ನು ಕೊಂಚ ಪುಟಕ್ಕೆ ಹಾಕಬೇಕಲ್ಲದೆ, ಐತಿಹಾಸಿಕ ಕಥಾವಸ್ತುಗಳನ್ನೂ ಈ ಯಕ್ಷಗಾನ ಸಾಹಿತ್ಯದಲ್ಲಿ ತರಬೇಕು, ಸಾಮಾಜಿಕ ಜೀವನವನ್ನೂ ಸೇರಿಸಲು ಹವಣಿಸಬೇಕು. ಶುದ್ಧಾಶುದ್ಧತೆಗಳನ್ನು ವಿಚಾರಿಸದೆ–ಪ್ರಾಸಕ್ಕಾಗಿ ವ್ಯರ್ಥವಾದ ಸಂಸ್ಕೃತಪದಗಳನ್ನು ಪೋಣಿಸದೆ ಎಲ್ಲರಿಗೂ ತಿಳಿಯುವಂತಹ ಭಾಷೆಯಲ್ಲಿ ಕೃತಿಗಳನ್ನು ರಚಿಸಬೇಕು. ಜಾನಪದಭಾಷೆಯಲ್ಲಿ ರಚಿಸಿದರೂ ಅಡ್ಡಿಯಿಲ್ಲ. ಇಂತಹ ಕತೆಗಳನ್ನು ಪ್ರದರ್ಶಿಸಿ ತೋರಿಸುವ ಸಂಸ್ಥೆಗಳು ನಿಜವಾಗಿಯೂ ಜನಸಾಮಾನ್ಯದ ಸಂಸ್ಕೃತಿಯನ್ನು ಬೆಳೆಯಿಸಲು ಸಹಕಾರಿಗಳಾಗುವವು. ಶ್ರೀ. ತಿಮ್ಮಣ್ಣನಾಯಕರು ಯಕ್ಷಗಾನಕ್ಕೊಂದು ಹೊಸ ಬಗೆಯ ಮೆರುಗನ್ನು ಕೊಡಲು ಹವಣಿಸಬೇಕೆಂದು ನಮ್ಮದೊಂದು ಆತ್ಮೀಯ ಸೂಚನೆ.

ಪ್ರಸ್ತುತ ದೇವಯಾನೀ (ದೇವಯಾನೆ ಏಕಾಯಿತೋ!) ಕಲ್ಯಾಣವು ಹಿಂದಣವರ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ನಡೆದುದು. ಹಿಂದಣವರ ಕೃತಿಗಳಲ್ಲಿ ಕಂಡುಬರುವ ಗುಣದೋಷಗಳೆರಡೂ ಇದರಲ್ಲಿ ಕಂಡುಬರುತ್ತವೆ.

"ನೀರಡಿಸಿ ಮನೆಗೆ ಬಂದಾ। ತಿರುಕನಿಗೆ
ದೂರಿರ್ದ ಕೆರೆಯನೊಂದಾ॥
ತೋರಿಸುವ ತೆರದಿಂದಲಿ। ಮಾಡದರು
ಸಾರಿ ಬೇಡುವೆ ದಯದಲಿ" ॥

ಯಯಾತಿಯಾಡಿದ ಈ ಮಾತೂ ಅಲ್ಲಲ್ಲಿ ಮಿಂಚಿ ಮರೆಯಾಗುತಿರುವ ಬೇರೆ ಕೆಲವು ಮಾತುಗಳೂ ಲೇಖಕರಲ್ಲಿ

CC-0. Jangamwadi Math Collection. Digitized by eGangotri

ಹುದುಗಿರುವ ಕವಿತ್ವಕ್ಕೆ ಕುರುಹಾಗಿವೆ. ಯಕ್ಷಗಾನದ ಅಭಿಮಾನಿಗಳು ಇದನ್ನು ತರಿಸಿಕೊಳ್ಳಬೇಕು.

**ಕವಿಸಾರ್ವಭೌಮ ಶ್ರೀ ಜಗನ್ನಾಥ ಪಂಡಿತ ರಾಯಚರಿತ್ರೆ.**

ಇದನ್ನು ಬರೆದವರು 'ಆನಂದಚಂದ್ರಿಕೆ' ಎಂಬ ಪತ್ರಿಕೆಯ ಅಧಿಪತಿಗಳಾದ, ಕೀರ್ತನರತ್ನಾಕರ, ತತ್ತ್ವಭೂಷಣ ಕಾರುಪಲ್ಲಿ ಶಿವರಾಮದಾಸ (ವಿದ್ಯಾನಿಧಿ) ಇವರು. ಗ್ರಂಥಕರ್ತರು ಶ್ರೀಜಗನ್ನಾಥಪಂಡಿತರ ಚರಿತ್ರೆಯ ಬಗೆಗೆ ದೊರೆಯುವ ಅನೇಕ ಆಧಾರಗಳನ್ನು ಸಂಗ್ರಹಿಸಿ, ಅವನ್ನೆಲ್ಲ ಪರಿಶೀಲಿಸಿ, ತಮ್ಮ ವಿಮರ್ಶನದೊಂದಿಗೆ ನೂರಕ್ಕಿಂತ ಹೆಚ್ಚು ಪುಟಗಳ ಗ್ರಂಥವನ್ನು ರಚಿಸಿದ್ದಾರೆ. ಪಂಡಿತರ ಚರಿತ್ರೆಯನ್ನು ಪಂಡಿತಮಾನ್ಯವಾಗುವಂತೆ ಪಂಡಿತರೇ ಬರೆದಿದ್ದಾರೆ. ಕೇವಲ ಸಾಮಾನ್ಯರ ಸಲುವಾಗಿ ಕಥಾರೂಪದಲ್ಲಿ ಬರೆದ ಚರಿತ್ರೆಯಲ್ಲ ಇದು; ಮೂಲಾಧಾರಗಳಮೇಲಿಂದ ಪ್ರೌಢವಾಗಿ ಬರೆದಗ್ರಂಥವು ಇದರಲ್ಲಿ ವಿಶೇಷವಾಗಿ ಗ್ರಂಥಕರ್ತರು ವಾಚಕವೃಂದಕ್ಕೆ ಮಾಡಿರುವ ಉಪಕಾರವೆಂದರೆ, ಶ್ರೀಜಗನ್ನಾಥ ಪಂಡಿತರ ಒಂದು ಚರಿತ್ರಾಂಶವನ್ನು ಕುರಿತು ಇರುವ ಜನಾಪವಾದದ ದೂರೀಕರಣ.ಅದೆಂದರೆ,ಲವಂಗೀ-ಪಂಡಿತರಾಯ ಸಮಾಗಮ. ಡಿಲ್ಲೀಶ್ವರನ ಅಂತಃಪುರದಲ್ಲಿ ದಾಸಿಯಂತೆ ವಾಸಿಸುವ ಲವಂಗೀಲತಾಂಗಿಯ ಸೌಂದರ್ಯಮುಗ್ಧರಾದ ಪಂಡಿತರು ಪರಜಾತೀಯಳಾದ ಆಕೆಯನ್ನು ವರಿಸಿದರೆಂದಾಗಲಿ, ಕಡೆಗೆ ಬಯಸಿದರೆಂದಾಗಲಿ ಜನದಲ್ಲಿ ತಿಳುವಳಿಕೆಯಿದೆ. ಆದರೆ ಗ್ರಂಥಕರ್ತರು ಈ ತಿಳುವಳಿಕೆಯನ್ನು ಹೋಗಲಾಡಿಸುವದಕ್ಕಾಗಿ ಲವಂಗಿಯ ಪೂರ್ವವೃತ್ತಾಂತವನ್ನು ನಿವೇದಿಸಿ, ಪಂಡಿತರ ಮಾತುಗಳನ್ನು ಉದಾಹರಿಸಿ, ಬಹಳ ಸಮಂಜಸವಾಗಿ ಪಂಡಿತರನ್ನು ಸಮರ್ಥಿಸಿದ್ದಾರೆ. ಪೌರಾಣಿಕರೀತಿಯಲ್ಲಿ ಜಗನ್ನಾಥರಾಯ-ಲವಂಗಿಯರು ಬ್ರಹ್ಮದೇವ-ಶಾರದೆಯರಅವತಾರವೇಎಂಬುದಕ್ಕೆ ಇವರು ಕಥೆಯೊಂದನ್ನು ಹೇಳಿರುವುದು ನಂಬಲಸಾಧ್ಯವಾದರೂ ಅನರವರ ಹೆಚ್ಚಿನ ಯೋಗ್ಯತೆಯನ್ನು ಕುರಿತು ಬಣ್ಣಿಸಿದ ಮಾತುಗಳೆಲ್ಲ ಸತ್ಯವಾಗಿರಲಿಕ್ಕೆ ಬೇಕು. ಈ ಚರಿತ್ರಾಂಶದ ಸ್ಪಷ್ಟೀಕರಣಕ್ಕಾಗಿ ನಾವು ಗ್ರಂಥಕರ್ತರನ್ನು ಅಭಿನಂದಿಸುತ್ತೇವೆ. ಆದರೆ ಒಂದೆರಡು ಸೂಚನೆಗಳನ್ನು ಮಾಡಬಯಸುವೆವು. ಸರ್ ಜದುನಾಥ ಸರಕಾರ ಅವರ ಶಿಷ್ಯಂದಿರಾದ ಶ್ರೀ.ಕ್ವಾನಂಗೋ ಅವರು ತಿಳಿಯಪಡಿಸಿದ ಅಂಶಗಳನ್ನು ಕೆಲವನ್ನು ಕೊಟ್ಟು, ಶ್ರೀಜಗನ್ನಾಥ ಪಂಡಿತರ ಚರಿತ್ರವನ್ನು ಹೇಳುವಲ್ಲಿ, ಪಂಡಿತರು ಕರ್ಣಾಟಕ ಭಾಷೆಯಲ್ಲಿ ಸ್ವಾರಸ್ಯವಾದ ಹಾಡುಗಳನ್ನು ರಚಿಸಿದರೆಂಬರ್ಥದ ಇಂಗ್ಲಿಷಿನ ಅವತರಣಿಕೆಯೊಂದು ಈ ಗ್ರಂಥದಲ್ಲಿದೆ. ಆದರೆ ನಮಗೆ ತೋರುವಮಟ್ಟಿಗೆ ಜಗನ್ನಾಥ ಪಂಡಿತರು ಕನ್ನಡದಲ್ಲಿ ಏನೂ ರಚಿಸಿದಂತೆ ಇಲ್ಲ,ಮಾನವಿಯ ಜಗನ್ನಾಥ ದಾಸರನ್ನೂ ಈ ಜಗನ್ನಾಥ ಪಂಡಿತರನ್ನೂ ಒಂದೇ ಎಂದು ಭಾವಿಸಿ ಈ ವಿಧಾನಗಳನ್ನು ಮಾಡಲಾಗಿದೆಯೇನೊ ಎಂದೆನಿಸುತ್ತದೆ. ಇನ್ನು, ಈ ಗ್ರಂಥದ ೧೯ನೆಯ ಪುಟದಲ್ಲಿ 'ಈಗಿನ ಕಾಲದಲ್ಲಿರುವ 'ಟೆಲಿಸ್ಕೋಪ' ದೂರದರ್ಶಿನಿ ಮುಂತಾದ ಯಂತ್ರಗಳ ಸಹಾಯವು ಲೇಶವೂ ಇಲ್ಲದ ಆ ಕಾಲದಲ್ಲಿ' ಪಂಡಿತರು ಖಗೋಳವೈಚಿತ್ರ್ಯಗಳನ್ನು ಕಂಡರಿತು 'ಸಿದ್ಧಾಂತ ಸಾಮ್ರಾಟ' ಗ್ರಂಥವನ್ನು ಬರೆದರೆಂಬುದಾಗಿದೆ. ಆದರೆ ಆ ಜಯಪುರದ ಜಯಸಿಂಹನಲ್ಲಿ ಆ ಕಾಲದಲ್ಲಿಯೂ ಖಗೋಲಜ್ಞಾನಕ್ಕೆ ಸಹಾಯಕ ಯಂತ್ರನಿಧಿಯು ಇದ್ದಿತೆಂದೂ ಇನ್ನೂ ಅದನ್ನು ನೋಡಬಹುದೆಂದೂ ಕೇಳುತ್ತೇವೆ. ಆದುದರಿಂದ ಆ ಕಾಲದಲ್ಲಿ ದೂರದರ್ಶಿನೀಯಂತ್ರಗಳ ಸಹಾಯವಿರಲಿಲ್ಲವೆಂದು ಎನ್ನುವುದು ಹೇಗೆ?

ಒಟ್ಟಾರೆ, ಗ್ರಂಥಕರ್ತರು ಕೆಲಕೆಲವು ಕಡೆಗಳಲ್ಲಿ ಅಪ್ರಸ್ತುತವೆನಿಸಬಹುದಾದ 'ಕವಿ' ಮುಂತಾದ ವಿಷಯಕ ಚರ್ಚೆಗಳನ್ನು ಸೇರಿಸಿದ್ದರೂ ನಿಜಶ್ರಮದಿಂದಲೂ ಪಂಡಿತರಲ್ಲಿ ಅತ್ಯಾದರದಿಂದಲೂ ಬಹಳ ವಾಚನಾರ್ಹವಾಗಿ ಈ ಗ್ರಂಥವನ್ನು ಬರೆದಿರುವುದರಿಂದ ಜಗನ್ನಾಥ ಪಂಡಿತರ ಭಕ್ತರೆಲ್ಲ ಇದನ್ನು ಓದಿಯೇ ತೀರಬೇಕು.

**ಕಾಸಿನ ಸರ:**—(ಏಳು ಸಣ್ಣ ಕತೆಗಳು) ಬರೆದವರು ಶ್ರೀ. ಎಂ. ಬಿ. ವೆಂಕಟೇಶಯ್ಯಾ ಎಂ. ಎ. ಅವರು.

"ಈ ಸಣ್ಣ ಕತೆಗಳಿಗೆ ಆಂಗ್ಲಭಾಷೆಯಲ್ಲಿರುವ ಕೆಲವು ಕತೆಗಳೇ ಮೂಲ." ಎಂದು ಕತೆಗಾರರು ತಮ್ಮ ಮುನ್ನುಡಿಯಲ್ಲಿ ಹೇಳುತ್ತಾರೆ. ಇಲ್ಲಿರುವ ಏಳು ಕತೆಗಳಲ್ಲಿ ಆರು ಕತೆಗಳನ್ನು ಆಂಗ್ಲೇಯವಾತಾವರಣದಿಂದ ನಮ್ಮದಕ್ಕೆ ರೂಪಾಂತರಿಸಿರುವರು. "ಅದೃಷ್ಟ" ಎಂದಿರುವ ಕತೆಯನ್ನು ಮಾತ್ರ ಇದ್ದುದಿದ್ದ ಹಾಗೆಯೆ ಕನ್ನಡಿಸಿದಂತಿದೆ.

ಕತೆಯೆಂದರೆ ಜನಜೀವನದ ಸ್ವಾಭಾವಿಕ ಪ್ರತಿಬಿಂಬವೆ



CC-0. Jangamwadi Math Collection. Digitized by eGangotri

ಎಂದು ಹೇಳಬಹುದು. ಕಥಾವಸ್ತುವಿಗೆ ಸಂಬಂಧಿಸಿದ ವ್ಯಕ್ತಿಗಳ ಭಾವನೆಗಳನ್ನು ಪೂರ್ತಿ ಚಿತ್ರಿಸಿದ್ದರೇ ಕಳೆಗೆ ಒಪ್ಪು. ಇನ್ನು ಕಥಾಪ್ರಪಂಚದಲ್ಲಿಯದೊಂದು ವಿಚಾರ: ಬೇರೆಬೇರೆ ಕಡೆಯ ಜನಜೀವನದಲ್ಲಿ ವೈವಿಧ್ಯವಿದೆ. ಆದುದರಿಂದ ಜನಜೀವನದ ಪಡಿನೆಳಲೇ ಆದ ಕತೆಗಳಲ್ಲಿಯೂ ವೈವಿಧ್ಯವು ಕಂಡುಬರುವುದು ಸ್ವಾಭಾವಿಕ. ಬೇರೆ ವಾತಾವರಣದಲ್ಲಿನ ಕತೆಗಳನ್ನು ನಮ್ಮದಕ್ಕೆ ರೂಪಾಂತರಿಸುವುದರಲ್ಲಿಯೂ ಒಂದು ವೈಶಿಷ್ಟ್ಯ. ಆ ರೂಪಾಂತರವು ಈ ಕತೆಗಳಲ್ಲಿ ಸಾಧಿಸಿದೆಯೆಂದು ಹೇಳಬಹುದು. ಕಥಾವಸ್ತುವಿನ ವಿಚಾರವಾಗಿ ಮೂರನೆಯ ಮತ್ತು ನಾಲ್ಕನೆಯ ಕತೆಗಳು ನಸು ಹುಡುಗತನದವುಗಳಂತಿವೆ; ಇವು ಹುಡುಗರ ಸಲುವಾಗಿಯೇ ಬರೆದಂತೆ ಕಾಣುತ್ತವೆ. 'ಗೊಣಗುಟ್ಟೋ ಗೋವಿಂದ'ಎಂಬ ಕತೆಯು ಪ್ರಾಥಮಿಕ ತರಗತಿಗಳ ಪುಸ್ತಕದಲ್ಲಿರಿಸಲು ಯೋಗ್ಯವಾದದ್ದೇನೋ! ನಾಲ್ಕನೇಯ ಕತೆಯ ವಸ್ತುವಂತೂ ತೀರ ಅಸ್ವಾಭಾವಿಕತೆಯನ್ನು ತಳೆದು, ನಿಜವಾದ ಕಥಾಮಾಲಿಕೆಯಲ್ಲಿ ವಿಷಮತೆಯನ್ನು ತಂದೊಡ್ಡುವಂತಿದೆ. ಎರಡನೆಯ ಮತ್ತು ಆರನೆಯ ಕತೆಗಳಲ್ಲಿನ ನಗೆಯನ್ನು ಕತೆಗಾರರು ತೀರ ಸ್ವಾಭಾವಿಕವಾಗಿ ರೂಪಾಂತರಿಸಿದ್ದಾರೆ. ಕತೆ ಹೇಳುವ ಸರಣಿ ಸರಳವಾಗಿದೆ.

**ನಿರ್ದೋಷಿ:**– ಬೆಳಗಾಂವಿಯ 'ತುಂಟರತಂಡದಿಂ'ದ ಹೊರಡುತ್ತಿರುವ ಒಂದಾಣೆಮಾಲೆಯಿಂದ ಹೊರಟುದು. ಕರ್ನಾಟಕಸಂಸ್ಕೃತಿಯನ್ನು ಭಾಷೆಯ ಮೂಲಕ ಬೆಳೆಯಿಸಬೇಕೆಂಬ ಧ್ಯೇಯವುಳ್ಳ ಸಂಸ್ಥೆಯಿದೊಂದು. ಹರಿದು ಹೋದ ಕರ್ನಾಟಕವನ್ನು ಒಂದುಗೂಡಿಸಲು ಒಮ್ಮನಸ್ಸಿನಿಂದ ಕೆಲಸ ಮಾಡುವ ಸಂಸ್ಥೆಯಿದೊಂದು. ಒಳ್ಳೆಯ ಕೆಲಸವನ್ನು ನಡೆಯಿಸಿದೆ. ಬೆಳಗಾಂವಿಯಂಥ ಗಡಿನಾಡಿನಲ್ಲಿ ಈ ತೆರದ ಸಂಸ್ಥೆಯನ್ನು ಸ್ಥಾಪಿಸಿ, ಅದರಿಂದ ಈ ಬಗೆಯ ಕನ್ನಡ ಸೇವೆಯನ್ನು ತುಂಟರ ತಂಡದವರು ಮಾಡುತ್ತಿರುವುದು ಎಲ್ಲರಿಗೂ ಅಭಿಮಾನವನ್ನು ಹುಟ್ಟಿಸುವಂತಹದು.

ನಿರ್ದೋಷಿಯು, ರಶಿಯಾದೇಶದ ಸುಪ್ರಸಿದ್ಧ ಕತೆಗಾರರಾದ 'ಕೌಂಟ ಲಿಯೋ ಟಾಲ್‌ಸ್ಟಾಯ'ರ 'God sees but waits' ಎಂಬುದರ ಸರಳಾನುವಾದವು. ಇದೇ ಕತೆಯನ್ನು ಇದೇ ಹೆಸರಿನಿಂದ 'ಪ್ರಬೋಧಕ'ದಲ್ಲಿ ಓದಿದಂತೆ ನೆನಪಿಗೆ ಬರುತ್ತದೆ. ಮತ್ತು ಶ್ರೀ. ಗು... ರಾಜ ಭೀ. ಜೋಶಿ ಎಂಬವರು ಇದೇ ಕತೆಯನ್ನು 'ನಿರಪರಾಧಿಯ ನಿಧನ' ಎಂಬ ಹೆಸರಿನಿಂದ ಪ್ರಸಿದ್ಧ ಮಾಡಿ ೫–೬ ವರುಷಗಳಾದುವು. ಈ ಪುಸ್ತಕದಲ್ಲಿ ಮಾತ್ರ 'ಇಂಥವರಿಂದಲೇ ತೆಗೆದುಕೊಂಡದ್ದು' ಎಂಬು... ದನ್ನು ಎಲ್ಲಿಯೂ ಕಾಣಿಸಿಲ್ಲ. ಅದು ಹೋಗಲಿ. ಒಂದೇ ಕತೆಯನ್ನು ಬೇಕಾದಷ್ಟು ಜನರು ಹೇಳಬಹುದು. ಆದರೆ ಹೇಳುವವನಲ್ಲಿ ವ್ಯಕ್ತಿತ್ವ ಬೇಕು. ಎಂದರೆ ಕತೆಗೆ ... ಬರುತ್ತದೆ. ಇಲ್ಲದಿದ್ದರೆ ಹೇಳಿದ್ದನ್ನೇ ಹೇಳುವುದರಿಂದ ಬೇಸರ ಬರುವುದು ಸಹಜ. ಆ ದೃಷ್ಟಿಯಿಂದ ಈ 'ನಿರ್ದೋಷಿ'ಯಲ್ಲಿ ವ್ಯಕ್ತಿತ್ವವಿಲ್ಲ– ಎಂದರೆ ಭಾಷೆಗೆ ಒಂದು ... ಮೆರುಗು ಇನ್ನೂ ಬಂದಿಲ್ಲ. ಹೊಸ ಕೈ ಎಂದು ... ದೊಡನೆ ಗೊತ್ತಾಗುತ್ತದೆ. ಆದರೂ ರಶಿಯಾದೇಶದ ಸಮಾಜಚಿತ್ರವನ್ನು ನಮ್ಮಲ್ಲಿಗೆ ಇಳಿಸಿಕೊಂಡುದಷ್ಟೆ ಒಂದೆರಡು ಅಸಂಬದ್ಧತೆಗಳನ್ನು ಬಿಟ್ಟರೆ, ಚಾತುರ್ಯವಿದೆ. ಹೀಗೆಯೇ ಇವರು ಮುಂದೆ ಸ್ವತಂತ್ರ ಕತೆಗಳನ್ನು ಬರೆಯಲು ಯತ್ನಿಸುವರೆಂದು ಆಶಿಸುತ್ತೇವೆ.

ಒಂದಾಣೆಮಾಲೆಯಲ್ಲಿ ಒಂದು ಕತೆಯನ್ನು ಕೊಡುವುದಲ್ಲದೆ ಕವಿತೆ ಸುದ್ದಿಗಳನ್ನೂ ಕೊಡುವುದಾಗಿ ಸಂಪಾದಕರು ತಮ್ಮ ಮಾತಿನಲ್ಲಿ ತಿಳಿಸಿದ್ದಾರೆ. ಹಾಗೆ ಮಾಡುವುದರ ಬದಲು ಅಷ್ಟೇ ಪುಟಗಳಲ್ಲಿ ಒಂದು ಸುಂದರವಾದ ಕತೆಯನ್ನೇ ಕೊಟ್ಟರೆ ಒಳ್ಳೆಯದಲ್ಲವೆ? ಇದು ನಮ್ಮ ಸೂಚನೆ. ಶ್ರೀ. ಬೇಂದ್ರೆಯವರ 'ಹಕ್ಕಿ ಹಾರುತಿದೆ' ಇದು ಇದರ ಅಣಕವಾಡು 'ಹೆಣ್ಣು ಹೋಗುತಿದೆ' ಇದು ಅಷ್ಟೊಂದು ಚೆನ್ನಾಗಿ ಸಾಧಿಸಿಲ್ಲ.

## ಸುಶೀಲೆ ಮತ್ತು ಹಾಳುಕಾಗದ

ಬೆಳಗಾವಿಯಲ್ಲಿ ತುಂಟರ ತಂಡದವರು ಮಾಡುತ್ತಿರುವ ಕನ್ನಡಸಾಹಿತ್ಯಸೇವೆಯಂತೆಯೇ ರಾಯಚೂರಲ್ಲಿ ಕರ್ನಾಟಕ ತರುಣಸಂಘದವರು ಮಾಡುತ್ತಿರುವರು. ನಿಜಾಂ ಕರ್ನಾಟಕದಲ್ಲಿ ಕನ್ನಡಸಂಸ್ಕೃತಿ. ಕನ್ನಡಸಾಹಿತ್ಯಕ್ಕಾಗಿ ಸರ್ವರೀತಿಯಿಂದಲೂ ಸಾಹಸಮಾಡುತ್ತಿರುವ ಸಂಘವೆಂದರೆ ಇದೊಂದೆ. ವಾಚನಾಲಯವನ್ನು ನಡೆಯಿಸುವುದಲ್ಲದೆ 'ಕನ್ನಡಕುಸುಮಮಾಲೆ'ಯನ್ನು ತೆಗೆದಿದ್ದಾರೆ. ಮೇಲಿನವೆರಡು ಕತೆಗಳು ಈ ಮಾಲೆಯಲ್ಲಿ ಅರಳಿದ ಕುಸುಮಗಳು. ನಿಜಾಂಕರ್ನಾಟಕದ ತರುಣರು

CC-0. Jangamwadi Math Collection. Digitized by eGangotri

ಈ ರೀತಿಯಾಗಿ ಕರ್ನಾಟಕದ ಸೇವೆಯನ್ನು ಮಾಡು ವುದು ತುಂಬ ಅಭಿನಂದನೀಯವಾಗಿದೆ. ಇದೇ ಮಾದರಿಯಾಗಿ ನಿಜಾಂ ಕರ್ನಾಟಕದಲ್ಲಿ ಅನೇಕವಾಗಿ ಇದಕ್ಕೂ ಸುವಾಸಿತಕುಸುಮಮಾಲೆಗಳನ್ನು ಕಟ್ಟಿ ಕರ್ನಾಟಕಕ್ಕೆ ಅಲ್ಲಿಯವರು ಅರ್ಪಿಸಲೆಂದು ಆಶಿಸು ತ್ತೇವೆ.

'ಸುಶೀಲೆ'ಯು ಒಂದು ಕತೆ. ಇದರಲ್ಲಿ ಸುಶೀ ಲೆಯು ಮಾತಾಡುವುದಕ್ಕಿಂತ ಅದನ್ನು ಬರೆದವರೇ ಮಾತನಾಡುತ್ತಾರೆ. ತಮಗೆ ಹೇಳಬೇಕಾದುದನ್ನೆಲ್ಲ ಸುಶೀಲೆಯ ಬಾಯಿಂದ ಆಡಿಸಿದ್ದಾರೆ. ಆದರೆ ಕತೆಗೆ ಒಂದು ಕಟ್ಟು ಬೇಕು; ರಸ ಬೇಕು. ಅದರಲ್ಲಿಯ ಸೂತ್ರ ಗಳು ಸಮಂಜಸವಾಗಿರಬೇಕು. ಭಾಷೆಯ ಬೆಡಗು ಇದ್ದರೆ ಎಂತಹ ಕಥಾವಸ್ತುವಿಗೂ ಕಳೆಯೇರುವುದು. ಈ ಕತೆಯಲ್ಲಿ ಅದಾವುದೂ ಕಂಡು ಬರುವುದಿಲ್ಲ. ಕತೆಯು ನೀತಿಬೋಧಕವಾಗಿದೆಯೆಂದೂ, ದೋಷಗಳಿವೆಯೆಂದೂ ಮುನ್ನುಡಿಕಾರರು ಮೊದಲೇ ಹೇಳಿದ್ದಾರೆ. ಕತೆಯಲ್ಲಿ ನೀತಿಯು ವ್ಯಂಗ್ಯವಾಗಿ ದೊರೆತರೆ ಒಳ್ಳೆಯದು. ನೀತಿಯ ನ್ನೇ ಪ್ರಧಾನವಾಗಿಟ್ಟುಕೊಂಡು ಕತೆ ಬರೆಯಬೇಕಾದರೆ ಒಂದುತೆರದ ವ್ಯಕ್ತಿತ್ವ ಬೇಕಾಗುತ್ತದೆ. ಹಾಗಿಲ್ಲದಿದ್ದಲ್ಲಿ ಕತೆಯು ನೀರಸವಾಗುವುದು. ಶ್ರೀ. ವ್ಯಾಸರು ಇನ್ನು ಮುಂದೆ ಇದಕ್ಕೂ ಒಳ್ಳೆಯ ಕತೆಗಳನ್ನು ಬರೆಯಲೆಂದು ಹಾರೈಸುತ್ತೇವೆ.

'ಹಾಳು ಕಾಗದ'ವು ಸುಶೀಲೆಗಿಂತಲೂ ಒಳ್ಳೆಯ ಕತೆ. ಕತೆಯನ್ನು ಇದ್ದಕಿದ್ದಹಾಗೆ ತಪ್ಪುತಡೆಗಳಿಲ್ಲದೆ ಮುದ್ರಿಸಿದ್ದರೆ ಅದೆಷ್ಟೋ ರಸ ತುಂಬಿಬರುತ್ತಿತ್ತು. ಗಾಯಕನು ಒಳ್ಳೆಯ ರಂಗಿಗೆ ಬಂದಾಗ ತಂಬೂರಿಯ ತಂತಿಹರಿದಂತೆ ಈ ಕತೆಯಲ್ಲಿ ಮುದ್ರಣದೋಷಗಳು ವಿರಸ ವನ್ನುಂಟುಮಾಡುತ್ತವೆ. ಕತೆಯ ಭಾಷೆಯು ಸರಳವಾ ಗಿದೆ. ಭಾಷೆಯ ದೋಷಗಳೂ ಅಲ್ಲಲ್ಲಿ ಕಂಡುಬರು ತ್ತವೆ. ಕತೆಯಲ್ಲಿಯ ವಸ್ತು ಆಧುನಿಕ ಸಾಹಿತ್ಯಕ್ಕೆ ಹೊಸತೇನೂ ಅಲ್ಲ. ಆದರೆ ಬರೆವಣಿಗೆಯಲ್ಲಿ ಸ್ವಲ್ಪ ಹೊಸತನವಿದೆ. ಅಂತೆಯೆ ಕತೆ ರುಚಿಯಾಗಿದೆ. ಇದಕ್ಕೂ ಒಳ್ಳೆಯ ಕತೆಗಳನ್ನು ಇವರು ಬರೆದು ಕನ್ನಡಿಗರ ಆದರವಿಶ್ವಾಸಗಳನ್ನು ಪಡೆಯಲೆಂದು ಕೋರುತ್ತೇವೆ.

**ಶರೀರಸಂಬಂಧ ಮತ್ತು ಮೋಹನವಾಣಿ**

ಇವೆರಡೂ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಹೊರಡುತ್ತಲಿ ರುವ 'ಸುಧಾರ ಧಾರಾ'ದ ಎರಡನೆಯ ಮತ್ತು ಮೂರ ನೆಯ ಬಿಂದುಗಳು. ಬರೆದವರು ಕ್ರಮವಾಗಿ ಶ್ರೀ. ಎಸ್. ಎಸ್. ಭಿಡೆ, ಮತ್ತು ಶ್ರೀ. 'ಸಾರಸ್ವತರು.'

'ಶರೀರಸಂಬಂಧ'ವು ಒಂದು ಕಾಲ್ಪನಿಕಕಥೆ. ಇದು ಹಿಂದೀಭಾಷೆಯಲ್ಲಿಯ ಯಾವುದೋ ಪುಸ್ತಕದ ಅನುವಾದವಿರಬೇಕೆಂದು ನಮಗೆನಿಸುತ್ತದೆ. ಅದೇನೇ ಇರಲಿ, ಕತೆಯು ಮಾತ್ರ ರುಚಿಯಾಗಿಲ್ಲ; ಕತೆಯಲ್ಲಿಯ ಎಲ್ಲ ವ್ಯಕ್ತಿಗಳೂ ಮಂಜಿನಲ್ಲಿ ಕಂಡಂತಾಗಿ ಮಾಯವಾ ಗುತ್ತವೆ. ಎಲ್ಲವೂ ಮಸುಕುಮಸಕು. ಸ್ವಭಾವಪರಿ ಪೋಷಣೆಯು ಚೆನ್ನಾಗಿ ಆಗದ್ದರಿಂದಲೇ ಹೀಗಾಗಿದೆ. ಮಹೇಶಕುಮಾರನ ಸ್ವಭಾವವು ಪೂರ್ಣವಾಗ ಬೇಕಾಗಿ ದ್ದರೆ ಇನ್ನೂ ಅವಕಾಶ ಬೇಕಿತ್ತು. ಆದರೆ ಇದು ಚಿಕ್ಕ ಕತೆ ಎಂಬ ಭಾವನೆಯಿಂದ ಅದಾವುದಕ್ಕೂ ನಿಲ್ಲದೆ, ಹಾಗೆಯೆ ಮುಂದೆ ಓಡಿದ್ದಾರೆ ಕತೆಗಾರರು. ಆದುದರಿಂದ ಚಲಚ್ಚಿತ್ರದ ಪಟದ ಮೇಲೆ ಮೂಡುವ ವ್ಯಕ್ತಿಗಳಂತೆ ಇವು ಮೂಡುವುದೊಂದೇ ತಡ, ಅಳಿಸಿ ಹೋಗುತ್ತವೆ. 'ಚಂದ್ರ'ನ ಪಾತ್ರವು ಅವಕಾಶ ಸಿಕ್ಕಿದ್ದರೆ ಇನ್ನೂ ಸೊಗ ಸಾಗಬಹುದಾಗಿತ್ತು. ಆದರೇನು? ಈ ಕತೆಯಲ್ಲಿಯ ಭಾಷೆಯು ಅಷ್ಟೊಂದು ಸರಳವಾಗಿಲ್ಲ. ಸ್ವಲ್ಪ ಶೃಂಗಾ ರಿಕಭಾಷೆ. ಕಾದಂಬರಿಯ ವಸ್ತುವನ್ನು ಚಿಕ್ಕಕತೆಯಲ್ಲಿ ತರಲು ಪ್ರಯಾಸಪಟ್ಟದ್ದರಿಂದ ಹೀಗಾಗಿದೆ.

'ಮೋಹನವಾಣಿ'ಯು ಮಾತ್ರ ನಿಜವಾಗಿಯೂ ಬೆಲೆಯುಳ್ಳ ಪುಸ್ತಕವು. ಇದರಲ್ಲಿ 'ಗೀತೆಯು ಐತಿಹಾಸಿ ಕವೆ? ಅನೈತಿಹಾಸಿಕವೆ? ಪ್ರಾರ್ಥನೆಯನ್ನು ಏಕೆ ಮಾಡಬೇಕು? ಮೂರ್ತಿಪೂಜೆಯನ್ನು ಮಾಡಬೇಕೆ? ಸ್ತ್ರೀಯರಿಗೆ ಸ್ವಾತಂತ್ರ್ಯವಿದೆಯೆ? ಇರಬೇಕೇ? ಸ್ಪೃ ಶ್ಯಾಸ್ಪೃಶ್ಯತೆಯು ಶಾಸ್ತ್ರದಲ್ಲಿದೆಯೆ? ದೇಶದ ಉನ್ನತಿಗೆ ಏನು ಮಾಡಬೇಕು?ಜಾತಿಮಾತ್ಸರ್ಯವನ್ನು ಕಳೆಯುವು ದೆಂತು? ವೈವಾಹಿಕ ವಿಧಿನಿಯಮಗಳ ಅರ್ಥವೇನು? ಬಾಲ್ಯವಿವಾಹವನ್ನು ಮಾಡಬೇಕೆ? ಪುನರ್ವಿವಾಹವು ಶಾಸ್ತ್ರಸಮ್ಮತವೇ? ಅಹಿಂಸೆಯೆಂದರೇನು?' ಇವಲ್ಲದೆ ಇನ್ನೂ ಅನೇಕ ಪ್ರಶ್ನೆಗಳಿಗೆ ಸ್ಪಷ್ಟವಾಗಿ, ಸೂಕ್ಷ್ಮವಾಗಿ, ತಿಳಿಯುವಂತೆ ಮನದಟ್ಟಾಗುವಂತೆ ಗುರು-ಶಿಷ್ಯರ ಸಂವಾದರೂಪದಿಂದ ಶ್ರೀ. ಸಾರಸ್ವತರು ತಿಳಿಸಿದ್ದಾರೆ. ಎಲ್ಲರಿಗೂ ಈಗಿನ ಪ್ರಕ್ಷುಬ್ಧವಾತಾವರಣದಲ್ಲಿ ಮುಂದೆ

CC-0. Jangamwadi Math Collection. Digitized by eGangotri

ಬಂದುನಿಲ್ಲುವ ಪ್ರಶ್ನೆಗಳನ್ನೇ ಇವರು ಸಮಂಜಸವಾಗಿ ಬಿಡಿಸಿದ್ದಾರೆ. ಅಲ್ಲಿ- ಇಲ್ಲಿ ಚದರಿದ ಮಹಾತ್ಮರ ವಾಣಿಗಳನ್ನು ಒಂದೆಡೆಗೆ ಸೇರಿಸಿ ನಮ್ಮ ಕೈಯ್ಯಲ್ಲಿ ಕೊಟ್ಟದ್ದರಿಂದ ನಿಜವಾಗಿಯೂ **ಮೋಹನವಾಣಿ**ಯಾಗಿದೆ ಈ ಗ್ರಂಥ. ಎಲ್ಲರೂ ಅವಶ್ಯವಾಗಿ ಓದಬೇಕಾದ ಪುಸ್ತಕವಿದು. ಇಂತಹ ಪುಸ್ತಕವನ್ನು ಹೊರಡಿಸಿದ್ದಕ್ಕಾಗಿ 'ಸುಧಾರ ಧಾರಾ'ದವರಿಗೆ ನಮ್ಮ ಧನ್ಯವಾದಗಳು.

**ಸ್ವತಂತ್ರ ಜೀವನೋಪಾಯ**

ಇದೊಂದು ಪ್ರಹಸನ. ದಕ್ಷಿಣಕನ್ನಡ ಜಿಲ್ಲೆಯ 'ತೊದಲ್ನುಡಿ' ಗ್ರಂಥಮಾಲೆಯ 'ಮೊದಲುನುಡಿ' ಯಿದು. ಕೂಸುಗಳ ತಪ್ಪುಹೆಜ್ಜೆಯಲ್ಲಿಯೂ ತೊದಲ್ನುಡಿಯಲ್ಲಿಯೂ ಒಂದು ತೆರದ ಅಂದವಿದೆ. ಸಾಹಿತ್ಯದಲ್ಲಿ ಕೂಸಾದ ಈ ಚಿಕ್ಕಪ್ರಹಸನವು ತೊದಲು ನುಡಿದರೂ ಅಸಹ್ಯವಲ್ಲ. ಈ ಪ್ರಹಸನದಲ್ಲಿ ಭಾವನಾಸಾಮ್ರಾಜ್ಯದಲ್ಲಿಯ ಒಂದು ಆದರ್ಶಜೀವನದ ಆಕಸ್ಮಿಕ ಸಂಗತಿಗಳನ್ನು ಚಿತ್ರಿಸಿದ್ದಾರೆ. ಕೃಷ್ಣಕುಮಾರನು ಒಬ್ಬ ಆದರ್ಶ ಪುರುಷನು. ಅವನಿಗೆ ಎಲ್ಲವೂ ಅನುಕೂಲವಾಗಿಯೇ ಒದಗುತ್ತದೆ. ಅವನಿರುವ ಊರು ಆದರ್ಶ ಊರು. ಒಳ್ಳೆಯದೆನ್ನುವದೆಲ್ಲಾ ಅಲ್ಲಿ ತುಂಬಿದೆ. ಇದೆಲ್ಲವೂ ಬರೆಹಗಾರರ ಆದರ್ಶರಾಷ್ಟ್ರದಲ್ಲಿಯ ಆದರ್ಶವಾದ ಹಳ್ಳಿಯ ಕನಸು. ಅಂತಹ **ಆನಂದಪುರವು** ನಮ್ಮಲ್ಲಿ ಒಂದಾದರೂ ಇದ್ದರೆ....? ಅಂತೂ ಕನ್ನಡಿಗರು ಇದನ್ನು ಓದಿ ನೋಡಲೆಂದು ಆಶಿಸುತ್ತೇವೆ.

**ಅದನ್ನೇ ಉಂಡೇನು! ಕದತೆಗಿ:-**

ಇದರಲ್ಲಿ ಆರು ಪ್ರಕರಣಗಳಿವೆ. ಒಂದೊಂದು ಪ್ರಕರಣದಲ್ಲಿಯೂ ಒಂದೊಂದು ಸಮಾಜಚಿತ್ರವಿದೆ. 'ಪುರೋಹಿತ ಸುಬ್ಬಾವಧಾನಿ'ಗಳ ಚಿತ್ರವು ಮನೋಹರವಾಗಿದೆ. 'ಅಡಿಗೆಯ ಹನುಮಂತಪ್ಪ'ನನ್ನು ನೋಡಿದರೆ ಕರುಣೆ ಬಾರದಿರದು. 'ತಮ್ಮಣ್ಣರಾಯರ ಹೃದಯದ್ರಾವಕ ಚರಿತ್ರೆ'ಯನ್ನು ಓದುವಾಗ ಮರುಕ ಹುಟ್ಟಿದರೂ ಕಣ್ಣೀರು ಬಾರವು;-ಎಂದರೆ ಒಂದುತೆರದ ಉದಾಸೀನ ಭಾವ ಮಾತ್ರ ಒರುತ್ತದೆ. 'ಸ್ಕೂಲ್' ಚಿತ್ರವನ್ನು ಇವರು ಚೆನ್ನಾಗಿ ಬಣ್ಣಿಸಿದ್ದಾರೆ. ಇದನ್ನು ಓದುವಾಗ- ಅದರಲ್ಲಿ ಸ್ವಾರಸ್ಯಕ್ಕಿಂತಲೂ-'ಪಾಪ ಇವರಿಗೆಷ್ಟು ನೆನಪು! ಒಂದೂ ಬಿಡದೆ ಬರೆದಿದ್ದಾರೆ!' ಎಂದೆನಿಸುತ್ತದೆ.

ಈ ಆರು ಸಮಾಜಚಿತ್ರಗಳಲ್ಲಿಯೂ ವಾಸ್ತವತೆಯು ಅತಿಯಾಗಿದೆ. ಉ:—'ಸ್ಕೂಲ್' ಚಿತ್ರದಲ್ಲಿ, ರಾಮು ಎನ 'ಅದನ್ನೇ ಉಂಡೇನು?' ಎಂಬುದರಲ್ಲಿ ವಾಸ್ತವತೆಯು ಮೇರೆಯನ್ನು ಮೀರಿದಂತೆ ಕಾಣುತ್ತದೆ.

# ಕೋಮಲೆಯ ಕಲೆ

[ Goldsmith ರವರ " When lovely woman stoops to folly " ಎಂಬುದರ ಆಧಾರದಿಂದ ]

(ಶ್ರೀ. ಕ್ಷೀರಸಾಗರ)

ಸಲ್ಲದುದಕಿಳಿದು ಕೋಮಲೆ, ಕಾಲ ಮೀರಿ
ಕಲ್ಲೆದೆಯ ಜನರು ಮಿಟರೆಂದು ಕಂಡಾಗ,-
ಆವ ಸಿರಿಯವಳ ಕೊರಗನು ನಗಿಸಲಹುದು?
ಆವ ಕೃತಿಯವಳ ಕಲೆಯನು ತೊಳೆಯಬಹುದು?

ತನ್ನ ಜೀವನದ ಕಲೆಯನು ಮುಚ್ಚಿಕೊಳಲು
ಜನರ ಕಣ್ಣಿಂದ ಹೇಸಿಗೆಯ ಬಚ್ಚಿಡಲು
ಕಾಮುಕನ ಹೃದಯವನು ಕಿವುಚಿ ಮರುಗಿಸಲು
ಇರುವುದೊಂದೇ ಕೃತ್ಯ—ಆತ್ಮಹತ್ಯೆ.

CC-0. Jangamwadi Math Collection. Digitized by eGangotri

# ದುಡ್ಡಿನ ತೊಡಕು

ಲೇಖಕರು:—ಶ್ರೀ. ಬೆಳಗಾಂವಿ ರಾಮಚಂದ್ರರಾಯರು

## ಪ್ರಜಾಪ್ರಭುತ್ವದ ವಿಡಂಬನ

ಪ್ರಾಯಿಕವಾಗಿ ಜಗತ್ತಿನಲ್ಲೆಲ್ಲ ಪ್ರಜಾಪ್ರಭುತ್ವವೇ (Democracy) ನೆಲೆಗೊಂಡಿದೆಯೆನ್ನಬಹುದು. ಇಂಗ್ಲಂಡು, ಇಟಲಿ, ಇರಾಣ ಮೊದಲಾದ ಕೆಲವು ದೇಶಗಳು ಅಪವಾದರೂಪವಾಗಿ ತೋರಬಹುದಾದರೂ, ಅಲ್ಲಿ ಕೂಡ ರಾಜಸತ್ತೆಯು ನಿಯಂತ್ರಿತವಾಗಿದೆ. (Limited monarchy). ಅಂತೂ ಪ್ರಾತಿನಿಧಿಕಸಂಸ್ಥೆಗಳ ದ್ವಾರಾ ಪ್ರಜಾಸಾಮಾನ್ಯರೇ ಸ್ವತಂತ್ರರಾಷ್ಟ್ರಗಳೆಲ್ಲ ಆಳುತ್ತಿದ್ದಾರೆಂದು ಹೇಳಬಹುದು. ಇಲ್ಲಿ ಒಂದು ಪ್ರಶ್ನೆಯು ಏಳುತ್ತಿದೆ. ಆ ಭೀಷಣವಾದ ಯುದ್ಧಸಿದ್ಧತೆ–ಯುದ್ಧತೃಷಾರ್ತತೆ, ಆ ಸಾಮ್ರಾಜ್ಯದ ಹಸಿವು–ಮೊದಲಾದುವುಗಳಿಗೆಲ್ಲ ಜನಸಾಮಾನ್ಯರ ಸಮ್ಮತಿಯು ಇದ್ದೀತೆ? ಇದೆಯೇ? ಹಾಗೆನ್ನಲಾಗದು. ಜನಸಾಮಾನ್ಯರೆಂದರೆ–ಕೂಲಿಕಾರರು, ಸುಶಿಕ್ಷಿತ ಮಧ್ಯಮವರ್ಗದವರು, ಕೆಲಸವಿಲ್ಲದೆ ಅಲೆದಾಡುವ ಕಲಿತವರ ತಂಡ, ಹೆಣ್ಣುಮಕ್ಕಳು ಮೊದಲಾದವರೆಲ್ಲ ಕೂಡಿ ಆದ ಜನಸಮೂಹ. ಇವರೆಲ್ಲ ಯುದ್ಧ, ಸಾಮ್ರಾಜ್ಯದ ಹಬ್ಬುಗೆಯ ಆಸೆ ಮೊದಲಾದುವುಗಳಿಗೆ ಮನಸಾ ವಿರುದ್ಧರಿದ್ದಾರೆಂಬುದು ಎಲ್ಲರೂ ಬಲ್ಲ ವಿಷಯ. ಏಕೆಂದರೆ ರಾಷ್ಟ್ರರಾಷ್ಟ್ರಗಳಲ್ಲಿ ಕದನದ ಕಿಡಿಯೊಂದು ಹಾರಿತೆಂದರೆ, ಅದರ ಕಟುಪರಿಣಾಮವನ್ನು ಮೊಟ್ಟಮೊದಲು ಸಾಮಾನ್ಯ ಪ್ರಜಾವರ್ಗವೇ ಅನುಭವಿಸುತ್ತದೆ. ಅಂತಹ ಕದನದ ಪೂರ್ವಸಿದ್ಧತೆಗಾಗಿ ಬೇಕಾಗಿರುವ ಪ್ರಚಂಡವಾದ ಯುದ್ಧಸಾಮಗ್ರಿಯ ಗಿರಣಿಗಳೇ ಮೊದಲಾದ ಸಾಹಿತ್ಯವನ್ನು ಸಾಮಾನ್ಯ ಪ್ರಜೆಗಳೇ—ತಮ್ಮ ಹೊಟ್ಟೆಗೆ ಕೇರು ಹಾಕಿಕೊಂಡು—ಸಜ್ಜುಗೊಳಿಸಬೇಕಾಗುತ್ತದೆ. ಎಂದ ಮೇಲೆ, ಯಾವ ಸಿಟ್ಟಿನಿಂದನೋಡಿದರೂ ತಮಗೆ ಅನಿಷ್ಟವೇ ಆದ ಈ ಪರರಾಜ್ಯಾಕ್ರಮಣದ ಸಂಭ್ರಮದಲ್ಲಿ ಅವರಿಗೆ ಆಸಕ್ತಿಯಿರುವುದೆಂತು?

ಆದರೂ ಪ್ರಮುಖರಾಷ್ಟ್ರಗಳೆಲ್ಲ ಆಪಾದಮಸ್ತಕವಾಗಿ ಯುದ್ಧಸಿದ್ಧತೆಯನ್ನು ಮಾಡುವುದರಲ್ಲಿ ತಮ್ಮ ಶಕ್ತಿಸರ್ವಸ್ವವನ್ನು ವೆಚ್ಚಮಾಡುತ್ತಿರುವುದು ಎಲ್ಲರೂ ಎಡೆಬಿಡದೆ ಕಾಣುತ್ತಿರುವ ನೋಟ. ಈ ತೋರಿಕೆಯ ವಿರೋಧದ ಗುಟ್ಟನ್ನು ತಿಳಿದುಕೊಳ್ಳಲು, ಈಗ ಪ್ರಚಲಿತವಾಗಿರುವ ರಾಜ್ಯಯಂತ್ರಗಳ ಒಳಗಿನ ಸುತ್ತು–ಸುರುಳಿಗಳನ್ನು ನೋಡಿಕೊಳ್ಳುವುದು ಅಗತ್ಯ. ಶೋಧನಾಂತದಲ್ಲಿ ನಮಗೆ ಹೊಳೆವುದೇನೆಂದರೆ, ಈ ಪ್ರಜಾಪ್ರಭುತ್ವವೆಂಬುದು ದೊಡ್ಡದೊಂದು ಮೋಸಗಾರಿಕೆ. ನಿಜವಾಗಿ ನಮ್ಮನ್ನಾಳುತ್ತಿರುವುವು ದುಡ್ಡು ಮತ್ತು ದಂಡು (Capitalism and militarism). ಅಥವಾ ದುಡ್ಡು ತನ್ನ ಕಾವಲಿಗಾಗಿ ದಂಡನ್ನು ಪೂರೈಸಿಕೊಳ್ಳುತ್ತಿದೆ. ಬಂಡವಾಳಗಾರರು ಈ ಯುಗದ ಸಾಳೆಯಗಾರರಾಗಿದ್ದಾರೆ. ಬಂಡವಾಳದ ಪುಂಡತನವು ಸಹಸಾ ಎದ್ದು ಕಾಣುವುದಿಲ್ಲ. ಏಕೆಂದರೆ ಅದು ಒಳ್ಳೆಯತನದ ವೇಷವನ್ನು ಧರಿಸಿರುತ್ತದೆ. ಅನಿರ್ಬಂಧವಾದ ಮತದಾನ (Free vote) ಪ್ರಾತಿನಿಧಿಕ ಸಂಸ್ಥೆಗಳು (Representative institutions), ಕಾನೂನುಮಂಡಲಗಳು (Legislative bodies) ಈ ಮೊದಲಾದ ಸೋಗುಗಳ ಮುಖಾಂತರವೇ ಅದು ತನ್ನ ಉದ್ದೇಶವನ್ನು ನೆರವೇರಿಸಿಕೊಳ್ಳುತ್ತಿದೆ. ಆದರೆ ನಿಜವಾಗಿ ನಡೆದುದೆಂದರೆ—ಅನಿರ್ಬಂಧವಾಗಿ ಮತವನ್ನು ಯಾರೂ ಕೊಡುತ್ತಿಲ್ಲ; 'ಪ್ರಾತಿನಿಧಿಕ ಸಂಸ್ಥೆಗಳು,' 'ಕಾನೂನು ಮಂಡಲಗಳು' ಕೆಲವೊಂದು ವಿಶಿಷ್ಟವರ್ಗದವರ ಸೊತ್ತಾಗಿರುತ್ತವೆ; ರಾಷ್ಟ್ರದ ತಾತ್ಪೂರ್ತಿಕ ಒಡೆಯರಾದ 'ಮಂತ್ರಿಮಂಡಲ (Cabinet)' ದವರು ಎರಡು ಶಕ್ತಿಗಳ ಕೈಗೊಂಬೆಗಳಾಗಿರುತ್ತಾರೆ; ಅವೆಂದರೆ, ದುಡ್ಡು ಮತ್ತು ದಂಡು.

ಈವೊತ್ತಿನ ಎಲ್ಲ ರಾಜಕೀಯ ಚಲನಗಳ ಸೂತ್ರವು



CC-0. Jangamwadi Math Collection. Digitized by eGangotri

–ಆ ಚಲನವಲನೆಗಳು ದೇಶಗಳ ಅಂತಃಸ್ಥಪರಿಸ್ಥಿತಿಗೇ ಸಂಬಂಧಿಸಿದುವಿರಲಿ, ಅಥವಾ ಅಂತರರಾಷ್ಟ್ರೀಯ ವಾಗಿರಲಿ–ದುಡ್ಡುಳ್ಳವರ ಕೈಯಲ್ಲಿದೆಯೆಂದರೆ ಅತ್ಯುಕ್ತಿ ಯಾಗದು. ಬ್ಯಾಂಕುಗಳು, ಜಾಯಿಂಟ್ ಸ್ಟಾಕ್ ಕಂಪನಿ ಗಳು, ಸಹಕಾರಸಂಘಗಳು ಮೊದಲಾದ ಪರಸ್ಪರಲಾಭ ಕ್ಕಾಗಿ ಏರ್ಪಟ್ಟ ಆರ್ಥಿಕಸಂಸ್ಥೆಗಳೆಲ್ಲಾ ಸ್ವಾರ್ಥದ ಶಾಸ್ತ್ರವೊಂದನ್ನು ಮಾಡಿಕೊಂಡು, ವ್ಯವಸ್ಥಿತವಾಗಿ ದುಡ್ಡನ್ನು ಯಾವುದೇ ಉಪಾಯದಿಂದ ಬಹುಜನ ಸಮಾಜದಿಂದ ಸೆಳೆಕೊಳ್ಳುವ ಹೋರೆಯಲ್ಲಿಯೇ ತೊಡ ಗಿರುತ್ತವೆ. ಇವುಗಳ ಕೈಯಲ್ಲಿ ಕೈಕೂಡಿಸುವವರು ಗಿರಣಿಗಳೊಡೆಯರು, ದೊಡ್ಡ ದೊಡ್ಡ ಉದ್ಯೋಗಗಳ ಅಧಿಪತಿಗಳು. ಈ ರೀತಿ 'ದುಡ್ಡಿನ' ನ ಅಧಿದೇವತೆ ಗಳೆಲ್ಲಾ ದೊಡ್ಡದಾದೊಂದು ಗುಪ್ತವ್ಯೂಹವನ್ನು ಮಾಡಿ ಕೊಂಡು, ಎಲ್ಲ ಬಗೆಯ ಸಾಮಾಜಿಕ ವ್ಯವಹಾರದ ಗೊಂಬೆಯಾಟವನ್ನು-ತೆರೆಯ ಮರೆಯಲ್ಲಿ ಕುಳಿತು–ಆಡಿ ಸುತ್ತಿವೆ. ಈ ತೊಡಕುತೊಡಕಿನ ಆರ್ಥಿಕಯಂತ್ರ ವನ್ನು ಮಾನವನೇ–ತನ್ನ ಬುದ್ಧಿಸರ್ವಸ್ವವನ್ನು ಉಪ ಯೋಗಿಸಿ–ನಿರ್ಮಿಸಿದ್ದರೂ, ಇಂದು ಆತನು ಅದರ ದಾಸಾನುದಾಸನಾಗಿದ್ದಾನೆ. ಅದರ ಆಧಿಪತ್ಯದಿಂದ ಆತನು ಹೊರಬೀಳಲಾರನು — ಹೊರಬೀಳಲೊಲ್ಲನು. ಮಾನವನ ಬುದ್ಧಿಯೇ ಆತನನ್ನಿಂದು ಬಂಧನದಲ್ಲಿರಿಸಿದೆ. ಮಾನವಕುಟುಂಬವು ತಿಳಿದೂ ತಿಳಿದೂ, ಕಂಡೂ ಕಂಡೂ ಅಜ್ಞಾತವಾದ ಸಂಕಟದಲ್ಲಿ ದುಮ್ಮಿಕ್ಕಿಕೊಳ್ಳಲು ರಭಸ ದಿಂದ ಸಾಗಿದೆ.

### ಸಂಪತ್ತಿನ ಸಾರ್ವಭೌಮತ್ವ

ಸಂಪತ್ತೇ ಇಂದು ಸಾರ್ವಭೌಮವಾಗಿದೆಯೆಂದು ತೋರಿಸಲಿಕ್ಕೆ ಹಲವು ದೃಷ್ಟಾಂತಗಳನ್ನು ಕೊಡಬಹುದು; ಆದರೆ ತೀರ ಇತ್ತೀಚೆಗಿನ ಕೆಲವನ್ನೇ ಉದಾಹರಿಸಿದರೆ ಸಾಕು. ಸೆಸಿಲ್ ದೊರೆಗಳು (Lord Cecil) ಇಂಗ್ಲಿಷ ಶಾಂತಿವಾದಿ (Pacifists) ಗಳಲ್ಲಿ ಪ್ರಸಿದ್ಧರೊಬ್ಬರು. ಅವರು ಮೊನ್ನೆ ಮೊನ್ನೆ ಒಂದು ಕಡೆ ಯುದ್ಧದ ಸಾಲ ಗಳನ್ನು ಅಳಿಸಿ ಬಿಡುವ ಪ್ರಯತ್ನಗಳನ್ನು ಕುರಿತು ಮಾತಾಡುವಾಗ ಈ ತೆರನಾಗಿ ಉಸುರ್ಗರೆದರು:

'ನಮಗೆ ಕೆಲವರು ಗುಪ್ತವೈರಿಗಳಿದ್ದಾರೆ. ಎಲ್ಲ ಶಸ್ತ್ರನಿಯಮನವಿಷಯಕವಾದ ಚರ್ಚೆಗಳಿಗೆ ಇದೊಂದು ದೊಡ್ಡ ಗಂಡಾಂತರ. ಯುದ್ಧಸಾಮಗ್ರಿಯನ್ನು ಸ[illegible] ಗೊಳಿಸುವ ಗಿರಣಿಯೊಡೆಯರನ್ನು ಕುರಿತು ನಾ[illegible] ಮಾತನಾಡುತ್ತಿದ್ದೇನೆ. ಕಳೆದ ಕೆಲವು ತಿಂಗಳ[illegible] ಪ್ಯಾರೀಸಿನ ವೃತ್ತಪತ್ರಕಾರರು ಕೋಲಾಹಲವನ್ನೆಬ್ಬಿ[illegible] ದರು. ಕಬ್ಬಿಣದ ಮತ್ತು ಉಕ್ಕಿನ ಗಿರಣಿಗಳೊಡೆಯರ[illegible] ಅವರು ತಮ್ಮನ್ನು ಮಾರಿಕೊಂಡು ಬಿಟ್ಟ ವಿಷಯವ[illegible] ಬೀದಿಮಾತಾಗಿದೆ. ಅವರು ಲಾರ್ಘೂಂ ಪರಿಷತ್ತು [illegible] ಸ್ವಿಯಾಗಬಾರದೆಂದು ವಿಶ್ವಸಾಹಸವನ್ನೆಸಗಿದ[illegible] ಇಂತಹ ಮಾತುಗಳು ನಮ್ಮ ದೇಶದಲ್ಲಿಯೂ ನಡೆ[illegible] ವೆಂದು ಹೇಳಲು ಧೈರ್ಯಸಾಲದು.'

ದೊರೆಗಳವರ ಈ ಆಧೈರ್ಯಕ್ಕೆ ಸಬಲಕಾರಣ[illegible] ಇದೆ. ರಾಷ್ಟ್ರಸಂಘದ ವಾರ್ಷಿಕ ಪ್ರಕಟನೆಯೊ[illegible] (League of Nations' Year Book) ವಿಧ್ವಂಸಕ ಸಾಮ ಗ್ರಿಯ ಆಯಾತನಿರ್ಯಾತದ ವರ್ತಮಾನವೆಲ್ಲಾ ಪ್ರಕ[illegible] ಸುತ್ತಿರುವುದುಂಟು. ಈ ವರ್ಷದ ಪ್ರಕಟನೆಯು ಹೊ[illegible] ಬರುವುದಕ್ಕೂ, ಬಾಲ್ಡ್‌ವಿನ್ನರು ಪಾರ್ಲಿಮೆಂಟಿನಲ್ಲಿ ಈ ವರ್ಷದ ತಮ್ಮ ಶಸ್ತ್ರನಿಯಮನದ ಕಾರ್ಯಕ್ರಮವನ್ನು ಪ್ರಸ್ತಾಪಿಸುವುದಕ್ಕೂ ಮೇಳ ಬಿದ್ದಿತು. ಆದರಿಂದ ಕೆ[illegible] ಗಿನ ಮಾತುಗಳು ವಿಶದವಾಗುತ್ತವೆ.

೧೮೩೫ರ ತರುವಾಯ ಬ್ರಿಟನು ಜಗತ್ತಿನ ಶಸ್ತ್ರ ಸಾಮಗ್ರಿಯಲ್ಲಿ ೧/೩ ದಷ್ಟು ಒದಗಿಸುತ್ತದೆ. ೧೯೩೦ರಲ್ಲಿ ಜಗ ತ್ತಿನ ರಾಷ್ಟ್ರಗಳ ಒಟ್ಟು ಶಸ್ತ್ರಸಾಮಗ್ರಿಯ ನಿರ್ಯಾತವು (Exports) ೧೧,೩೪೩,೦೦೦ ಪೌಂಡು ಬೆಲೆಯುಳ್ಳದಾ ಗಿತ್ತು. ಆದರಲ್ಲಿ ಇಂಗ್ಲಂಡಿನದು ೩,೪೯೩,೬೪೪ ಪೌಂಡು ಬೆಲೆಯುದು, ಅಥವಾ ನೂರರಲ್ಲಿ ೩೦.೮ ದಷ್ಟು ಇದೆ. ಅಂತೂ **ಇಂಗ್ಲಂಡು ಜಗತ್ತಿನ ಯುದ್ಧಸಾಮ ಗ್ರಿಯ ನಿರ್ಯಾತವ್ಯಾಪಾರದಲ್ಲಿ ಅಗ್ರಸ್ಥಾನ ವನ್ನು ಪಡೆದಿರುತ್ತದೆ.** ಇದರ ತರುವಾಯವಲ್ಲಿ ಫ್ರಾನ್ಸು ಬರುತ್ತಿದೆ. ೧೯೩೦ರಲ್ಲಿ ಫ್ರಾನ್ಸು ೧೦೦ರಲ್ಲಿ ೧೨.೯ ದಷ್ಟು ವ್ಯಾಪಾರವನ್ನು ಮಾಡಿತು. ಇದರ ಕೆ[illegible] ಗಡೆ ಅಮೇರಿಕೆ. ೧೯೩೦ ರಲ್ಲಿ ಅದು ೧೦೦ ರಲ್ಲಿ ೧೧.[illegible] ದಷ್ಟು ಯುದ್ಧಸಾಮಗ್ರಿಯನ್ನು ಪರರಾಷ್ಟ್ರಗಳಿಗೆ ಮಾರಿತು..... ಮೊನ್ನೆಯ ಚೀನಜಪಾನ್ ಸಂಗ್ರಾಮ[illegible] ವ್ಯಾಪಾರ[illegible] ದಲ್ಲಿ ಇಂಗ್ಲಂಡಿನ ವಿಧ್ವಂಸಕಸಾಮಗ್ರಿಯ ವ್ಯಾಪಾ ರವು ಒಮ್ಮೆಲೆ ಬೆಳೆಯಿತು. ಕಳೆದ ವರ್ಷ ಪ್ರತಿ ತಿಂಗಳು

CC-0. Jangamwadi Math Collection. Digitized by eGangotri

೧೭,೦೦೦ ಪೌಂಡಿನ ವ್ಯಾಪಾರವನ್ನು ಅದು ಮಾಡು ತ್ತಿದ್ದರೆ, ಈ ವರ್ಷದ ಎಪ್ರಿಲ್ ತಿಂಗಳಲ್ಲಿ ಅದು ೪೦,೦೦೦ ಪೌಂಡಿಗೆ ನೆಗೆಯಿತು. ಇದು ಆಧುನಿಕ ಸುಭಾಷಿತ ವೊಂದನ್ನು ನೆನಪಿಗೆ ತರುತ್ತಿದೆ. 'World War-a sure remedy to World Depression '. ಜಾಗತಿಕ ಆರ್ಥಿಕ ವಿಪ್ಲವಕ್ಕೆ ಜಾಗತಿಕಸಂಗ್ರಾಮವೊಂದು ಸಿದ್ಧೌಷಧಿ! ಕೆಲಸವಿಲ್ಲದವರಿಗಾಗಿ ರಿಲೀಫ್‌ವರ್ಕ್ಸ್‌ಗಳನ್ನು ತೆರೆಯು ವುದುಂಟು. ಅದಕ್ಕೂ ಇದು ಬಹಳ ಚೆನ್ನಾದ ಉಪಾಯ. ಜಗತ್ತಿನಲ್ಲಿ ನಿರುದ್ಯೋಗವು ಏಕೆ ಹೆಚ್ಚುತ್ತಿದೆ ? ಗಿರಣಿ ಗಳ ಉತ್ಪನ್ನವು ಕಡಿಮೆಯಾಗಿದೆಯೆಂದು. ಇನ್ನೊಂದು ಮಹಾಯುದ್ಧವು ಆರಂಭವಾದರೆ, ಗಿರಣಿಗಳು ಯುದ್ಧದ ಸಾಮುಗ್ರಿಯನ್ನು ವಿಪುಲವಾಗಿ ಸಿದ್ಧಪಡಿಸುವವು, ಮತ್ತು ನಿರುದ್ಯೋಗ ಸಮಸ್ಯೆಯು ತಾನೇ ಒಗೆಹರಿ ಯುವುದು.

ಅತ್ತ ಲಾಝೂಂ ಪರಿಷತ್ತಿನ ಫಲವನ್ನಷ್ಟು ವಿಚಾರಿ ಸುವಾ. ಯಾವುದೊಂದು ಕಾರ್ಯವನ್ನು ಅದರ ಪರಿ ಣಾಮದಿಂದಲೇ ಪರೀಕ್ಷಿಸಬೇಕಲ್ಲವೆ? ಪರಿಷತ್ತು ಅಪೇ ಕ್ಷೆಯನ್ನು ಮೀರಿ ಯಶಸ್ವಿಯಾಯಿತು; ಇನ್ನು ಜಗ ತ್ತಿನ ಆರ್ಥಿಕನಿಕೃಷ್ಟಾವಸ್ಥೆಯು ತೊಲಗಿ ಹೋಗಿ, ಒಳ್ಳೆಯ ದಿನಗಳು ಬರಲು ಆತಂಕವಿಲ್ಲ-ಎಂದು, ಸಾರು ವಯ್ಯನವರು ಸಾರಿ ಸಾರಿ ಹೇಳಿದುದಾಯಿತು. ಫ್ರಾನ್ಸಿಗೆ ಜರ್ಮನಿಯಿಂದ ಸಲ್ಲತಕ್ಕ 'ಪ್ರಾಯಶ್ಚಿತ್ತ ಧನ' ದಲ್ಲಿ ಬಹುಭಾಗವು 'ಯುರೋಪಿನ ಪುನರ್ಘಟ ನಾನಿಧಿ ' ಗೆ ಕೊಡಲ್ಪಡತಕ್ಕುದೆಂದೂ ವರ್ಸೇಲ್ಸ್ ಒಪ್ಪಂದದಲ್ಲಿನ ಜರ್ಮನಿಯ ಅಪರಾಧನಿರ್ದೇಶವನ್ನು (War Guilt clause) ಇನ್ನು ಅಳಿಸಿ ಬಿಡತಕ್ಕುದೆಂದೂ ಸದ್ಯಕ್ಕೆ ಜರ್ಮನಿಗೆ ಸಾಲ ಮುಟ್ಟಿಸಲು ಮತ್ತೆ ಅವಧಿ ಯನ್ನು ಕೊಡಬೇಕೆಂದೂ ಜರ್ಮನಿಯನ್ನು ಹಿಡಿದು ಕೊಂಡು ಎಲ್ಲ ರಾಷ್ಟ್ರಗಳು ಏಕವಾಕ್ಯತೆಯಿಂದ ಒಪ್ಪಿ ಕೊಂಡವೆಂದೂ ಸುದ್ದಿ ಬಂದಿತು. ಮ್ಯಾಕ್ಡೊನಾಲ್ಡ್ ಸಾಹೇಬರಿಗೆ ಇಂಗ್ಲಂಡಿನಲ್ಲಿ ಜಯಜಯಕಾರ ವಾಯಿತು. ಅಷ್ಟರಲ್ಲಿ ಜರ್ಮನಿಯ ಹಿಟ್ಲರ್ ಪಂಥೀ ಯರು ಪರಿಷತ್ತಿನ ನಿರ್ಣಯಗಳಿಗೆ ತಮ್ಮ ಸರ್ವಾತ್ಮಕ ವಿರೋಧವನ್ನು ಪ್ರಕಟಿಸಿದುದರ ವರ್ತಮಾನವು ಬಂದಿತು. ಅಲ್ಲದೆ ಇಂಗ್ಲಂಡು, ಫ್ರಾನ್ಸು, ಇಟಲಿ ಗಳ ನಡುವೆ 'ಸಂಭಾವಿತರ ಒಡಂಬಡಿಕೆ' ಯೊಂದು-'Gentlemen's Agreement ' ಗುಪ್ತ ವಾಗಿ (!) ಮಾಡಲ್ಪಟ್ಟದು, ಇಂಗ್ಲಿಷ್ ಜನತೆಯ ಕೋಲಾಹಲದ ಮೂಲಕ ಬೆಳಕಿಗೆ ತರಲ್ಪಡಲೇಬೇಕಾ ಯಿತು. ಆ ಒಡಂಬಡಿಕೆಯ ಮಥಿತಾರ್ಥವಿಷ್ಟು: ಹೊರ ಹೊರಗೆ ಜರ್ಮನಿಯನ್ನು ದೋಷಮುಕ್ತವನ್ನಾಗಿ ಮಾಡಿ, ಅದರ ಮೇಲಿನ ಸಾಲದ ಭಾರವನ್ನು-ಅಂಶ ರೂಪವಾಗಿಯೇ ಆಗಲಿ-ಕಡಿಮೆ ಮಾಡಿದಂತೆ ಮಾಡಿ ದ್ದರೂ ಅಮೇರಿಕೆಯು ತನಗೆ ಯುರೋಪೀಯ ರಾಷ್ಟ್ರ ಗಳಿಂದ ಸಲ್ಲತಕ್ಕ ಹಣದ ಬಗ್ಗೆ ಒಂದು ತೃಪ್ತಿಕರವಾದ ನಿರ್ಣಯಕ್ಕೆ ಬರುವವರೆಗೆ, ಲಾಝೂಂ ಪರಿಷತ್ತಿನ ನಿರ್ಣ ಯವನ್ನು ಬಳಕೆಯಲ್ಲಿ ತರಲೇ ಬಾರದು ! ಅಂತೂ ಪರಿ ಷತ್ತಿನ ಕೊನೆ ಏನಾಯಿತು ? ಏತರಲ್ಲಿಯೂ ಇಲ್ಲ ! ಇದನ್ನು ನೋಡಿಯೇ ಲಾಯಿಡ್‌ಜಾರ್ಜರು ಕಾಮನ್ಸ ಸಭೆಯಲ್ಲಿ ಉದ್ಗರಿಸಿದರು: ' ಇಷ್ಟಕ್ಕೇ ಪರಿಷತ್ತಿನ ಅವಾಸ್ತವ ಪ್ರಸ್ಥವನ್ನು ಹೂಡುವುದು ಏತಕ್ಕೆ ಬೇಕಿತ್ತು? ಇದನ್ನು ೩-೪ ತಿಂಗಳ ಹಿಂದೆಯೇ ತಂತಮ್ಮ ನಡುವೆ ಮಾಡಿಬಿಡಬಹುದಾಗಿತ್ತಲ್ಲ ! ' .... ಮತ್ತೆ ' ದುಡ್ಡೇ ದೊಡ್ಡಪ್ಪ ! ' ಅಮೇರಿಕೆಯವರಿಗೆ ತಮ್ಮ ಹಣವನ್ನು ಕಳೆದುಕೊಳ್ಳುವುದು ಬೇಕಿಲ್ಲ; ಇಂಗ್ಲಂಡು ಫ್ರಾನ್ಸು ಗಳಿಗೆ ತಮಗೆ ಸಲ್ಲತಕ್ಕುದನ್ನು ಬಿಡಲು ಮನಸ್ಸಿಲ್ಲ.

ಕಳೆದ ೩-೪ ತಿಂಗಳಲ್ಲಿ ನಡೆದ ಅಂತರರಾಷ್ಟ್ರೀಯ ಪರಿಷತ್ತುಗಳ ಇತಿವೃತ್ತವನ್ನು ನೋಡಿದರೆ, ಜಿನಿವಾ ದಲ್ಲಿ ನಡೆದ ಕೊನೆಯಿಲ್ಲದ 'ಹೊಟ್ಟು ಕುಟ್ಟುವ ಕೆಲಸ' ವನ್ನು ನೆನೆದರೆ, ಒಟಾವಾ ಪರಿಷತ್ತಿನ ಫಲಶ್ರುತಿಯನ್ನು ಈಗಲೇ ಹೇಳಬಹುದು. ಆದರೆ ಮ್ಯಾಕ್ಡೊನಾಲ್ಡ್ ಸಾಹೇಬರಿಗೆ ಇಂತಹ 'ಯಶಸ್ವಿ ಪರಿಷತ್ತುಗಳ' ತಂದೆ ಯಾಗುವುದರ ಹುಚ್ಚೇ ಹಿಡಿದಿದೆ.

ಈ ರೀತಿ ದುಡ್ಡು ದೊಡ್ಡಸ್ತಿಕೆಗೇರಿದುದು ಫ್ರೆಂಚ್ ಕ್ರಾಂತಿಯ ತರುವಾಯದಲ್ಲಿ. ಯುರೋಪಿನಲ್ಲೆಲ್ಲ ಪ್ರಬ ಲವಾಗಿರುವ ಸರದಾರಿಕೆ(Feudal System)ಯನ್ನು ಸದೆ ಬಡಿದು, ಫ್ರೆಂಚ್ ರಾಜ್ಯಕ್ರಾಂತಿಯು 'ಸ್ವಾತಂತ್ರ್ಯ, ಸಮಾನಾಧಿಕಾರ,ಬಾಂಧವ್ಯ (Liberty, Equality and Fraternity) ' ಎಂದು ಮೂರು ಮಂತ್ರಗಳನ್ನೆ ನೋ ಉಚ್ಚರಿಸಿತು. ಆದರೆ ಅದೇ ಸುಮಾರಿಗೆ, ಉಗಿಯ ಉಪ

CC-0. Jangamwadi Math Collection. Digitized by eGangotri

ಯೋಗವನ್ನು ಯಂತ್ರಗಳಿಗಾಗಿ ಮಾಡುವ ಸಂಶೋಧ ನೆಯಿಂದ ಇಂಗ್ಲಂಡಿನಲ್ಲಿ ಹುಟ್ಟಿದ ಔದ್ಯೋಗಿಕ ಕ್ರಾಂತಿಯ ಮೂಲಕ, ಹಳ್ಳಿಯ ಕಸಬು ಕೈಗಾರಿಕೆ ಗಳೆಲ್ಲಾ ಹಾಳಾಗಿ, ಪಟ್ಟಣಗಳಲ್ಲಿ ದೊಡ್ಡ ದೊಡ್ಡ ಗಿರಣಿಗಳು ಹುಟ್ಟಿ, ಅಲ್ಲಿ ಸಂಪತ್ತಿನ ಸಂಚಯವಾಗ ತೊಡಗಿ, ಕೂಲಿ ಬಂಡವಾಳಗಳ ಹೊಸ ವ್ಯವಸ್ಥೆ ತಲೆದೋರಿ, ಬಂಡವಾಳಗಾರರು ಮುಂಚಿನ ಸರದಾರರ ಸ್ಥಾನವನ್ನು ಆಕ್ರಮಿಸಿ,' ವಿನಿರ್ಮುಕ್ತ ವ್ಯಾಪಾರ ( Free Trade )' ಎಂಬ ಚೆಂದ ಹೆಸರಿನಲ್ಲಿ ಜನಸಾಮಾನ್ಯರನ್ನು ಮುಂಚಿ ಗಿಂತಲೂ ಕೆಡುಕಾದ ಬಂಧನಗಳಿಂದ ಜಿಗಿದರು. ಬಂಡ ವಾಳಗಾರರ ಪುಂಡಾಟಕ್ಕೆ ಪ್ರಾರಂಭವಾಯಿತು. ಅದು ಹಾಗೆಯೇ ಸಾಗುತ್ತ ಬಂದು, ಇದೀಗ ಆ ಬಂಡು ವ್ಯವ ಸ್ಥಿತಸ್ವರೂಪಕ್ಕೆ ಬಂದಿದೆ,– ಈ ಹತ್ತಿಪ್ಪತ್ತು ವರುಷ ಗಳಲ್ಲಿ ರಾಜ್ಯಾಂಗಗಳ ಸೂತ್ರಚಾಲನೆಯು, ರಾಷ್ಟ್ರಗಳ ಅಂತಃಸ್ಥ– ಪರರಾಷ್ಟ್ರೀಯ ಧೋರಣೆಗಳನ್ನು ಗೊತ್ತು ಪಡಿಸುವುದು ಬ್ಯಾಂಕು ಮೊದಲಾದ ಆರ್ಥಿಕಸಂಸ್ಥೆ ಗಳ ಚಾಲಕರ ಕೈಯಲ್ಲಿ ಒಂದುಬಿಟ್ಟಿದೆ. ಅವರು ಏನನ್ನೂ ಕಟ್ಟಬಲ್ಲರು, ಕೆಡಿಸಬಲ್ಲರು. ಹೊಳೆಯಾಗಿ ನಾಡಿನ ಹೊನ್ನು ತಮ್ಮ ಬೊಕ್ಕಸಗಳಲ್ಲಿ ಹರಿದು ಬರುತ್ತಿದ್ದುದನ್ನು ಅಲ್ಲಿಯೇ ಕೊಳೆಯಿಸಬೇಕೆಂದು ಅವರ ಬಯಕೆಯಲ್ಲದೆ, ನಾಡಿಗರ ಯೋಗಕ್ಷೇಮಕ್ಕಾಗಿ ಅದನ್ನು ಮರಳಿ ಹರಿಬಿಡುವುದು ಅವರಿಗೆ ಇಷ್ಟವಿಲ್ಲ. ಧರ್ಮದ ಪಾಲನೆಗಾಗಿ ಕ್ಷತ್ರಿಯರ ರಣಸಿದ್ಧತೆಯೂ, ಧರ್ಮಕ್ಕೆ ಅವಿರೋಧವಾಗಿ ವೈಶ್ಯರ ವಿತ್ತಾರ್ಜನೆಯೂ ಅನುಗೊಳ್ಳಬೇಕೆಂದು (ಒಂದು ಕಾಲಕ್ಕೆ) ನಮ್ಮ ವರ್ಣಾ ಶ್ರಮದ ಸೂತ್ರವಾಗಿತ್ತು. ಅದೀಗ ತಿರುವುಮುರು ವಾಗಿದೆ. ವೈಶ್ಯರ ಧನಲಾಲಸೆಗೆ ಧರ್ಮವು ವೇಶ್ಯಾ ವೃತ್ತಿಯನ್ನನುಸರಿಸಬೇಕು, ಕ್ಷಾತ್ರವೃತ್ತಿಯು ಕಾವ ಲಾಗಿ ನಿಲ್ಲಬೇಕು, ಶೂದ್ರರು ಸಕಲಸಾಮಗ್ರಿಯನ್ನು ಒದಗಿಸಬೇಕು........ ಅಂತೂ ಪ್ರಜಾಪ್ರಭುತ್ವದ ವಿಡಂ ಬನವು ಚರಮಸೀಮೆಯನ್ನು ಮುಟ್ಟಿದಂತಾಯಿತು. ಮುಂಚಿನ ಚಕ್ರವರ್ತಿಗಳ ಹಾವಳಿಯು ಬೇಕಿತ್ತು: ಏಕೆಂದರೆ ಅವರು ಸ್ವತಃ ನಿರಂಕುಶರಾಗಿದ್ದರೂ ಹಳ್ಳಿಪಳ್ಳಿ ಗಳಲ್ಲಿ ವೈಷಮ್ಯವಿಲ್ಲದೆ ನೆಲೆಗೊಂಡ ಆರ್ಥಿಕವ್ಯವಸ್ಥೆ ಯಲ್ಲಿ ಉತ್ಪಾತಗಳನ್ನೆಬ್ಬಿಸಲು ಹಾತೊರೆಯುತ್ತಿರಲಿಲ್ಲ. ಇದೀಗ ಏನಾಗಿದೆಯೆಂದರೆ, ಮುಂಚೆ ಒಬ್ಬ ನಿರಂಕುಶ ನಾಯಕನಿದ್ದ ಸ್ಥಾನದಲ್ಲಿ ಹತ್ತುಸಾವಿರ ಮಂದಿ ಪಾಳೆಯಗಾರರು ಸಮಾಜವನ್ನು ಸುಲಿಯುತ್ತಿದ್ದಾರೆ.

ದುಡ್ಡು ಹುಟ್ಟುಗುರುಡ. ಅದಕ್ಕೆ ಸ್ವಾರ್ಥವೊಂದೇ ತಿಳಿಯುತ್ತಿದೆ. ಆದುದರಿಂದ ಅದು ವ್ಯಕ್ತಿನಿಷ್ಠ–(individualistic). ಸಮಾಜದ ಸಾಮೂಹಿಕಹಿತಾಹಿತಗಳು ಅದರ ಪರಿಘದಲ್ಲಿ ಬರುವುದಿಲ್ಲ. ತಾನು ಮಾಡುವ ಕೆಲಸ ಗಳ ಪರಿಣಾಮವು ಸಮಾಜದ ಮೇಲಂತೂ ಇರಲಿ, ಕೊನೆಗೆ ತನ್ನ ಮೇಲೆಯೇ ಯಾವ ಬಗೆಯದಾದೀತೆಂ ಬುದು ಅದರ ಗಮನಕ್ಕೆ ಬಾರದು. ತಾನು ಮಾಡುವ ಮೋಡಿಯು–ಭಸ್ಮಾಸುರನಂತೆ–ನಾಳೆ ತನ್ನನ್ನೇ ಬೂದಿ ಯನ್ನಾಗಿ ಮಾಡೀತೆಂಬುದರ ಅರಿವು ಅದಕ್ಕಿಲ್ಲ. ಯುದ್ಧದ ಸಾಲಗಳ ಪ್ರಶ್ನೆಯು ಪ್ರಪಂಚವನ್ನೇ ಜರ್ಜರ ವನ್ನಾಗಿ ಮಾಡಿದೆ. ಅವುಗಳನ್ನು ನಿರ್ನಾಮವಾಗಿಸ ದಿದ್ದರೂ ಕೊನೆಗದನ್ನು ಒಂದು ವ್ಯಾವಹಾರಿಕರೀತಿ ಯಲ್ಲಾದರೂ ಬಿಡಿಸಬೇಕೆಂಬುದು ಈವೊತ್ತು ಕುನ್ನಿಗೆ ಕೋಳಿಗೆ ಕೂಡ ತಿಳಿಯುತ್ತದೆ. ಆದರೆ 'ದುಡ್ಡು' ಅಜೇಯವಾದ ಆತ್ಮಶ್ರದ್ಧೆಯಿಂದ ಮುಂದೆ ಸಾಗಿದೆ. ಇನ್ನೂ ಶಸ್ತ್ರಾಸ್ತ್ರಸಾಹಿತ್ಯದ ಉಪ್ಪರಿಗೆಯನ್ನೇ ಕಟ್ಟು ತ್ತಿದೆ. ನಾಗರಿಕತೆಯು ಕಡಿದುಕೊಂಡು ಬಿದ್ದು, ಮಾನವಸಂಸ್ಕೃತಿಯು ಹುಳುಹುಪ್ಪಡಿಗಳ ಪಾಲಾಗಿ, ಸಮಾಜದ ಅಸ್ತಿವಾರವೇ ಕಾಲಕೆಳಗೆ ಕುಸಿಬಿದ್ದುದನ್ನು ಕಂಡೂ ಕಂಡೂ, ಅದು ನಿರ್ಬಾಧವಾಗಿ ತನ್ನ ಕಾಯಕ ವನ್ನೇ ನಡೆಯಿಸಿದೆ.

## ಪ್ರಜಾಪ್ರಭುತ್ವದ ಬಗ್ಗೆ ಅವಿಶ್ವಾಸ

ಪ್ರಜಾಪ್ರಭುತ್ವದ ಸಾಧುವೇಷದಲ್ಲಿ ಬಂಡವಾಳದ ಬಂಡುಗಾರಿಕೆಯು ನಡೆದು, ಸಮಾಜವು ತಲೆಕೆಳಗಾಗು ತ್ತಿರುವುದನ್ನು ನೋಡಿ, ಪ್ರಜಾಪ್ರಭುತ್ವದ ಬಗೆಗೆ ಜನ ರಲ್ಲಿದ್ದ ವಿಶ್ವಾಸವು ಕಡಿಮೆಯಾಗಿದ್ದರೆ ಸೋಜಿಗವಿಲ್ಲ. ನಿಜವಾಗಿ ನೋಡಿದರೆ, ಜನಸಾಮಾನ್ಯರ ಅಂತಃಕರ ಣದ ಸಮ್ಮತಿಯ ವಿಶಾಲವಾದ ಅಸ್ತಿವಾರದ ಮೇಲೆಯೇ ಆಡಳಿತದ ರಚನೆಯಾಗಬೇಕು. ಸಮಾಜವ್ಯವಸ್ಥೆಯಲ್ಲಿ ಇನ್ನೂ ಆರೋಗ್ಯವಿದ್ದಿರುವಾಗ, ಪ್ರಜಾಪ್ರಭುತ್ವವೇ ಯೋಗ್ಯವಾದ ರಾಜ್ಯಪದ್ಧತಿಯಾಗಿರುತ್ತದೆ. ಆದರೆ ಇದೀಗ ತೀರಾ ವಿಪರೀತಪರಿಸ್ಥಿತಿಗೆ ಪ್ರಪಂಚವು ತುತ್ತಾಗಿದೆ. ಎಂತಲೇ, ಸರ್ವಾಧಿಕಾರಿತ್ವಗಳು ( dicta-

CC-0. Jangamwadi Math Collection. Digitized by eGangotri

torships) ಪ್ರಜಾಪ್ರಭುತ್ವವನ್ನು ಪ್ರತಿಭಟಿಸುತ್ತಲಿವೆ.
ರಶಿಯಾ ಮತ್ತು ಇಟಲಿಗಳು ಈ ಪ್ರವೃತ್ತಿಗೆ ಒಳ್ಳೆಯ
ಉದಾಹರಣೆಗಳಾಗಿವೆ. ಇವೆರಡರ ಉದ್ದೇಶ–ಸಾಧನ
ಗಳಲ್ಲಿ ಪೂರ್ವಪಶ್ಚಿಮದಷ್ಟು ದೂರವಿದ್ದರೂ, ಎರಡೂ
ಈಗಿನ ಸಮಾಜವ್ಯವಸ್ಥೆಯ ತ್ರಿಶಂಕುಸ್ವರ್ಗದ ಕಡುಹಗೆ
ಗಳಾಗಿವೆ. ಒಂದು ಕಡೆ (ರಶಿಯಾ ದೇಶದಲ್ಲಿ) ಶೂದ್ರರ
ಕಾಯಕಶಕ್ತಿಯು ರುದ್ರರೂಪವನ್ನು ತಾಳಿ, ವೈಶ್ಯ
ರಿಗೆ ಮಣ್ಣುಮುಕ್ಕಿಸಿ, ಧರ್ಮಕ್ಕೆ ಅರದಾಳ ಹಚ್ಚಿ,
ತನ್ನ ಸರ್ವಾಧಿಕಾರವನ್ನು ಪ್ರಸ್ಥಾಪಿಸಿ, ಜಗತ್ತಿನಲ್ಲೆಲ್ಲ
ಬಂಡವಾಳದೆದೆಯಲ್ಲಿ ನಡುಗು ಹುಟ್ಟಿಸಿದ್ದರೆ, ಇನ್ನೊಂದು
ಕಡೆ (ಇಟಲಿಯಲ್ಲಿ) ರಾಷ್ಟ್ರವೇ ಪರದೈವತವೆಂದು,
ರಾಷ್ಟ್ರೀಯರ ವಿಜೃಂಭಣೆಗಾಗಿ ಒಬ್ಬ ವ್ಯಕ್ತಿಯ
ಕೈಯಲ್ಲಿ ಸಕಲಸೂತ್ರಗಳನ್ನು ಒಪ್ಪಿಸಿ, ಫ್ರಾನ್ಸು
ಇಂಗ್ಲಂಡು ಮೊದಲಾದ ಸಾಮ್ರಾಜ್ಯಗಳ ಮಗ್ಗಲಲ್ಲಿ
ಒಂದು ಮುಳ್ಳಾಗಿ, ಜರ್ಮನಿ ಮೊದಲಾದ ಕಡೆಯಲ್ಲಿ
ತನಗೆ ಸಹಾನುಭೂತಿಪರವಾದ ಪ್ರತಿಧ್ವನಿಗಳನ್ನೆಬ್ಬಿಸಿ–
ಹಿಟ್ಲರ್ ಮೊದಲಾದ ತನ್ನ ಪಂಥದ ಹೊಸ ಅಧ್ವರ್ಯು
ಗಳನ್ನು ನಿರ್ಮಿಸಿ, ಯುರೋಪೀಯ ರಾಜಕಾರಣದಲ್ಲಿ
ಫಾಸಿಸ್ಟ್ ಸಂಪ್ರದಾಯವು ಕೋಲಾಹಲವನ್ನೆಬ್ಬಿಸಿದೆ.
ಎರಡೂ ಅತಿರೇಕದ ಕೂಸುಗಳಾಗಿದ್ದರೂ, ಎರಡರ
ಲ್ಲಿಯೂ ಕೆಲವು ಒಳ್ಳೆಯ ಮಾತುಗಳು ಕಂಡು ಬರುತ್ತಿವೆ.
ಎರಡಕ್ಕೂ ಈಗಿನ ಪ್ರಜಾಪ್ರಭುತ್ವದ ಸಂದಿಗ್ಧಸ್ವರ್ಗದ
ಬೇಸರವು ತುಂಬಾ ಇದೆ. ಎರಡೂ ತಂತಮ್ಮ ಪರಿ
ಯಿಂದ ಜನಸಾಮಾನ್ಯರ ಯೋಗಕ್ಷೇಮವನ್ನು ನೋಡಿ
ಕೊಳ್ಳುತ್ತಿವೆ. ರಶಿಯದಲ್ಲಿ ನಡೆದ ಪ್ರಜಾಸಾಮಾನ್ಯರ
ಅಭ್ಯುದಯಸಾಧನೆಯ ಪ್ರಯೋಗವನ್ನು ಕುರಿತು ಇಲ್ಲಿ
ವಿವರಿಸಬೇಕಾಗಿಲ್ಲ. ಆದರೆ ಈ ವರೆಗೆ ಬಂಡವಾಳಗಾ
ರರ ಕೇವಲ ಪಕ್ಷಪಾತಿಯೆಂದು ತಿಳಿಯಲ್ಪಟ್ಟಿದ್ದ ಇಟ
ಲಿಯ ಸರ್ವಾಧಿಕಾರಿಯಾದ 'ಮುಸೊಲಿನಿ'ಯ ಲೇಖ
ನವೊಂದು ಇಂಗ್ಲಿಷ್ ಪತ್ರಿಕೆಯೊಂದರಲ್ಲಿ ಬಂದುದು
ಕ್ರಾನಿಕಲ್ಲಿನಲ್ಲಿ ಮೊನ್ನೆ ಮೊನ್ನೆ ಪ್ರಕಟವಾಗಿದ್ದಿತು.
ಅದರಲ್ಲಿ ಮುಸೊಲಿನಿಯು ಕೆಲವಂಶದಲ್ಲಿ ರಶಿಯದ
ಕಮ್ಯುನಿಸ್ಟರ ಪದ್ಧತಿಗಳನ್ನೇ ಪುರಸ್ಕರಿಸುತ್ತಾನೆಂದು
ಹೇಳಿದರೆ ಹಲವರಿಗೆ ಆಶ್ಚರ್ಯವಾಗದಿರದು. ಅಂತರ
ರಾಷ್ಟ್ರೀಯ ಪರಿಷತ್ತುಗಳು ಒಂದರ ಹಿಂದೊಂದು
ಅಪಯಶಸ್ಸಿಗೆ ತುತ್ತಾಗುತ್ತಿರುವುದನ್ನು ನೋಡಿ ಆತ
ನಿಗೆ ಬೇಜಾರು ಬಂದಿದೆ. ಈ ರಾಷ್ಟ್ರಧುರೀಣರು
ಬಾಯ್ದೆರೆದು ನಿಂತ ಕುತ್ತಿನಿಂದ, ತಾವಾಗಿ ತಮ್ಮನ್ನೂ
ತಮ್ಮ ರಾಷ್ಟ್ರಗಳನ್ನೂ ಉಳಿಸಿಕೊಳ್ಳಲಾರರು;
ಪ್ರಾಣಾಂತಸ್ಥಿತಿಯು ಒದಗುವ ವರೆಗೂ ಅವರು ಕಣ್ಣು
ತೆರೆಯಲಾರರು – ಎಂದು ಆತ ಹೇಳುತ್ತಾನೆ. ' ದೊಡ್ಡ
ಕಾರಖಾನೆಗಳು, ಸಹಕಾರಸಂಘಗಳು ಮೊದಲಾದ
ಆರ್ಥಿಕಸಂಸ್ಥೆಗಳು ತೋರಿಕೆಯಲ್ಲಿ ಚಿಕ್ಕಪುಟ್ಟ ಪಾಲು
ಗಾರರ (investors) ಪ್ರಾತಿನಿಧ್ಯವನ್ನು ಒಪ್ಪಿಕೊಳ್ಳುತ್ತಿ
ದ್ದರೂ, ಅವುಗಳ ನಿಜವಾದ ನಿಯಂತ್ರಣವು ಕೆಲವೊಂದು
'ಉಳ್ಳವರ' ಕೈಯಲ್ಲಿಯೇ ಇರುತ್ತದೆ. ಈವೊತ್ತು
'ಸರಕಾರ (State)'ದ ಮೇಲೆ ವಿಶೇಷವಾದ ಹೊಣೆ
ಯೊಂದಿದೆ. 'ಸರಕಾರವು ಜನತೆಯ ಮೇಲೆ ಈಗಾಗಲೆ
ತನಗಿದ್ದ ಅಧಿಕಾರದ ಕ್ಷೇತ್ರವನ್ನು ಇನ್ನೂ ಹಬ್ಬಿಸ
ಬೇಕು. ಕೆಲವೊಂದು ವ್ಯಕ್ತಿಗಳು ಚಿಕ್ಕಪುಟ್ಟ ಬಂಡ
ವಾಳಗಾರರ ದುಡ್ಡಿನ ಮೇಲೆ ಬೇಕಾದ ಹಾಗೆ ಮೆರೆದು,
ಸಮಾಜದ ಸ್ವಾಸ್ಥ್ಯದಲ್ಲಿ ಉತ್ಪಾತಗಳನ್ನೆಬ್ಬಿಸುತ್ತಿರು
ವುದಕ್ಕೆ ಇನ್ನು ಒಡ್ಡುಹಾಕಬೇಕು. ' ಬಂಡವಾಳ
(Capital) ' ವನ್ನೂ ' ವೈಯಕ್ತಿಕ ಸಾಹಸ ( Private
enterprise) ' ವನ್ನೂ ನಾಶಗೊಳಿಸಬೇಕೆಂದು ನನ್ನ
ಮತವಲ್ಲ. ಆದರೆ ಅವುಗಳನ್ನು ಸರಕಾರವು ಪ್ರಜಾಹಿತಾ
ರ್ಥವಾಗಿ ಬಲವಾಗಿ ನಿಯಮನಗೊಳಿಸುವುದು ಅತ್ಯಗತ್ಯ
ವಾಗಿದೆ. ' ಎಂದು ಮುಂತಾಗಿ ಆತನು ತನ್ನ ಅಭಿಪ್ರಾ
ಯವನ್ನು ಹೊರಪಡಿಸಿದ್ದಾನೆ. ಆ ಅಭಿಪ್ರಾಯದ
ಮೇರೆಗೆ ಈಗಾಗಲೆ ' ಸಂರಕ್ಷಕಸಂಸ್ಥೆಗಳು (Trusts) '
ಎಂದರೆ ಸರಕಾರದ ಪರವಾಗಿ ದೊಡ್ಡ ದೊಡ್ಡ ಉದ್ಯೋಗ
ಗಳನ್ನು ಆರ್ಥಿಕಸಂಸ್ಥೆಗಳನ್ನು ನಿಯಂತ್ರಣಗೊಳಿಸುವ
ಉಪಕ್ರಮವು ಇಟಲಿಯಲ್ಲಿ ಆರಂಭವಾಗಿದೆಯೆಂದು
ಕೇಳುತ್ತೇವೆ. ರಶಿಯದವರ ಮತದಲ್ಲಿ ವೈಯಕ್ತಿಕ
ಬಂಡವಾಳವೆಲ್ಲಾ ನಿರ್ಮೂಲವಾಗಿ, ದುಡ್ಡಿನ ಸೂತ್ರ
ಗಳೆಲ್ಲಾ ಪೂರಾ ಸರಕಾರದ ವಶವಾಗಬೇಕಿದ್ದರೆ, ಇಟಲಿ
ಯವರ ಮತದಲ್ಲಿ ದೊಡ್ಡ ದೊಡ್ಡ ದುಡ್ಡಿನ ಸಂಸ್ಥೆ
ಗಳೆಲ್ಲಾ ಸರಕಾರದ ಇಚ್ಛಾನುವರ್ತಿಯಾಗಿಯೇ ನಡೆ
ಯಬೇಕು. ಎರಡರಲ್ಲಿ ಇಷ್ಟೇ ಅಂತರ. ಇಟಲಿಯವರ
ಈ ಪ್ರಯೋಗವನ್ನು ಇನ್ನೂ ಚೆನ್ನಾಗಿ ನಿರೀಕ್ಷಿಸ
ಬೇಕಾಗಿದೆ.

CC-0. Jangamwadi Math Collection. Digitized by eGangotri

### ಹಿಂಸೆ ಪ್ರತಿಹಿಂಸೆಗಳು

ಅತಿರೇಕದ ಅಪತ್ಯವು ಅತಿರೇಕವೇ ಆಗುವುದು ಕ್ರಮ ಪ್ರಾಪ್ತ. ದುಡ್ಡನ್ನು ಕಲೆಹಾಕುವ ಪ್ರವೃತ್ತಿಯು ಅತಿರೇಕವನ್ನು ಮುಟ್ಟಿದ ಬಳಿಕ, ಅದಕ್ಕೆ ಪ್ರತಿಯಾಗಿ ಅಷ್ಟೇ ಪ್ರಬಲವಾದ ವಿರೋಧಿಪ್ರವೃತ್ತಿಗಳು ಹುಟ್ಟುವುದು ಸಾಹಜಿಕ. ರಶಿಯಾ ಇಟಲಿಗಳು ಅಂತಹ ಉದಾಹರಣೆಗಳಾಗಿವೆ. Militarism must beget Terrorism. ಬಂಡವಾಳವು ತನ್ನ ರಕ್ಷಣೆಗಾಗಿ ವಿಪರೀತಸಂಗ್ರಾಮ ಸಿದ್ಧತೆಯನ್ನು ನಡೆಯಿಸಿದ್ದರೆ,ಅದಕ್ಕೆ ಪ್ರತಿಯಾಗಿ ಅಷ್ಟೇ ವಿಪರೀತವಾದ 'ಕ್ರಾಂತಿ'ಯ, 'ತೀವ್ರ ಪರಿವರ್ತನೆ'ಯ ಪ್ರವೃತ್ತಿಯು ತಲೆದೋರುವುದು ಕಟ್ಟಿಟ್ಟದ್ದು. ಜಪಾನು ಇದೀಗ ಸೇನಾಧಿಕಾರಿಗಳ ಪ್ರಾಬಲ್ಯಕ್ಕೆ ವಶವಾಗಿದ್ದುದು ಎಲ್ಲರೂ ಬಲ್ಲ ವಿಷಯ. ಆ ಯುದ್ಧಮದವೇ ಅದನ್ನು ಚೀನದೊಡನೆ ಕಾಳಗಕ್ಕೆ ಪ್ರವರ್ತಿಸಿತು; ರಶಿಯವನ್ನು ಕೆಣಕಹಚ್ಚಿದೆ; ಅಮೇರಿಕೆಯೊಡನೆ ಪ್ರತಿದ್ವಂದ್ವಿಸಲು ಮುಂದುವರಿಸುತ್ತಲಿದೆ. ಇದರ ಪ್ರತಿರೋಧರೂಪವಾಗಿ,ಜಪಾನಿನ ಎಂಬತ್ತು ವರ್ಷದ ಮುಖ್ಯಮಂತ್ರಿಯ ಮತ್ತು ಬೇರೆ ದೊಡ್ಡ ಗೃಹಸ್ಥರ ಕೊಲೆಗಳಾದುವು; ಶಾಂಘಾಯದಲ್ಲಿ ಹಲವು ಜಪಾನಿಮುಖಂಡರು ಹಿಂಸಿಸಲ್ಪಟ್ಟರು. ಮೊನ್ನೆ ಮೊನ್ನೆ ಫ್ರಾನ್ಸಿನ ವಯೋವೃದ್ಧನಾದ ಮುಖ್ಯಮಂತ್ರಿಯು ಕೊಲ್ಲಲ್ಪಟ್ಟನು. ಇದೀಗ ಬಂಗಾಲದಲ್ಲಿ ನಡೆದ ಅತ್ಯಾಚಾರಗಳು ಇನ್ನೊಂದು ಸುಸಂಘಟಿತವಾದ ಅತ್ಯಾಚಾರದ ಅಪತ್ಯಗಳೇ ಆಗಿವೆ. ಇಂತಹ ಹಿಂಸೆಗಳನ್ನು ಕುರಿತು 'The Japan Magazine' ಎಂಬ ಜಪಾನಿನ ಇಂಗ್ಲಿಷ್ ಪತ್ರಿಕೆಯೊಂದು ಹೀಗೆ ಹೇಳುತ್ತಿದೆ: 'War is war; and war means that the individual no less than the nation will be determined to kill the alleged enemy. It is obvious that the tendeucy is increasing to see no difference between individul and internatoinal war; and consequenty murder and assassination are on the increase everywhere.' (ಯುದ್ಧವು ಕೊನೆಗೂ ಯುದ್ಧವೇ; ಆ ಯುದ್ಧಕ್ಕೆ ವ್ಯಕ್ತಿಯೇ ಪ್ರವೃತ್ತವಾಗಿರಲಿ, ರಾಷ್ಟ್ರವೇ ಆಗಿರಲಿ,ವೈರಿಯನ್ನು ಯಮಸದನಕ್ಕಟ್ಟುವುದು ನಿಶ್ಚಿತವಾದ ಉದ್ದೇಶವಾಗಿರುತ್ತದೆ. ವೈಯಕ್ತಿಕ ಮತ್ತು ರಾಷ್ಟ್ರೀಯ ಯುದ್ಧಗಳಲ್ಲಿನ ಅಂತರವು ದಿನೇ ದಿನೇ ಕಡಿಮೆಯಾಗುತ್ತಲಿದೆ; ಹೀಗಾಗಿ ಕೊಲೆಗಳೂ ಅತ್ಯಾಚಾರಗಳೂ ದಿನದಿನಕ್ಕೆ ಬೆಳೆಯುತ್ತ ನಡೆದಿವೆ.)

### ಉಪಸಂಹಾರ

ತಾತ್ಪರ್ಯವೇನೆಂದರೆ, ದುಡ್ಡು ಮತ್ತು ದಂಡಿನ ದಾಂಪತ್ಯದ ಅಪತ್ಯವು ಅತ್ಯಾಚಾರವಾಗಲೇಬೇಕು. ಮಾನವ ಕುಲವು ಈ ಅನಾರೋಗ್ಯಕ್ಕೆ ಎಷ್ಟು ಬೇಗ [illegible] ಯಾಗಬೇಕು, ಎಂಬುದೊಂದು ಅತ್ಯಗತ್ಯವಾಗಿ ಚಿಂತಿಸತಕ್ಕ ತೊಡಕಾಗಿದೆ. ಈ ವರೆಗೆ ಬಂಡವಾಳ-ಕೂಲಿಯ ಕದನ, ದಂಡಿನವರ ಪುಂಡಾಟ ಮೊದಲಾದ ಮಾತುಗಳ ಧ್ವನಿಯು ಅಮೇರಿಕೆಯಲ್ಲಿಯೋ, ಜರ್ಮನಿಯಲ್ಲಿಯೋ, ರಶಿಯದಲ್ಲಿಯೋ, ಇನ್ನೆಲ್ಲಿ ದೂರದಲ್ಲಿಯೋ ಕೇಳಿಸುತ್ತಲಿದ್ದಿತು. ಈಗ ದೂರದಿಂದ ಗುಡ್ಡ ಚೆಂದವೆನ್ನುವ ದಿನಗಳು ಹೋದುವು. ಇದೀಗ ಪ್ರಲಯಾಗ್ನಿಯು ನಮ್ಮ ಬಾಗಿಲಿನ ವರೆಗೆ ಬಂದಿದೆ. ನಮಗೆ-ನಿಮಗೆ-ಪ್ರತಿಯೊಬ್ಬ ವ್ಯಕ್ತಿಗೆ ಸಾಮಾನ್ಯ ಚರಿತಾರ್ಥವು ಕೂಡ ಕಠಿನಸಮಸ್ಯೆಯಾಗಿದೆ. ನಾವಿನ್ನು ಎದ್ದೇಳಬೇಕು. ಇದೆಲ್ಲಿಯೋ ಗಹನವಾದ - ನಮಗೆ ನಿಲುಕದ - ನಾವು ತೊಂದರೆಪಟ್ಟುಕೊಳ್ಳಲು ಆಗತ್ಯವಿಲ್ಲದ-ಇಡಿಯ ಪ್ರಪಂಚಕ್ಕೆ ಸಂಬಂಧಿಸಿದ ವಿಷಯವೆಂದು ಅಪ್ಪುಗೈಹಾಕಿಕೊಂಡು ಕುಳಿತುಕೊಳ್ಳುವ ದಿನಗಳು ತೊಲಗಿದುವು. ನಮ್ಮ ನಾಡಿನಲ್ಲಿದೀಗ ತೋರುತ್ತಲಿರುವ ದೃಶ್ಯವು—ಸರಕಾರದ ದಬ್ಬಾಳಿಕೆ, ಮುಷ್ಟಿ, ಕಾಂಗ್ರೆಸಿನ ಪ್ರತಿಭಟನೆ, ಆರ್ಥಿಕಪ್ರಳಯ ಇವೆಲ್ಲ—ಆ ದೊಡ್ಡದಾದ ದುಡ್ಡಿನ ತೊಡಕಿನ ಒಂದು ಸಣ್ಣ ಸಿಕ್ಕೆಂಬುದನ್ನು ನಾವು ಮನದಟ್ಟು ಮಾಡಿಕೊಳ್ಳಬೇಕು. 'ದುಡ್ಡಿನ ಪಾಳೆಯಗಾರಿಕೆ'ಯಲ್ಲಿ ನೀತಿಗೆ ಅವಕಾಶವಿಲ್ಲ. ಅದು ನಿಷ್ಠುರವಾಗಿ ತನ್ನ—ತನ್ನವರ—ತನ್ನ ನಾಡಿನ—ತನ್ನ ವರ್ಗದ—ತನ್ನ ವರ್ಣದ ಹಿತವನ್ನು ಮಾತ್ರ ಬಯಸಿ, ಅಂತೂ ಸಮಷ್ಟಿಯ ವಿಶಾಲ-ವಿಶ್ವವ್ಯಾಪಿ ದೃಷ್ಟಿಗೆ ಎರವಾಗಿ, ಕೇವಲ ಅಹಂಕಾರಜನಿತವಾದ ವೈಯಕ್ತಿಕ ಆಕುಂಚಿತ ದೃಷ್ಟಿಯಿಂದ ಜಗತ್ತಿನ ವ್ಯವಹಾರವನ್ನು ನೋಡುತ್ತಿದೆ. ಉಚ್ಚತರವಾದ ನೈತಿಕ-ಸಾಂಸ್ಕೃತಿಕ-ಆಧ್ಯಾತ್ಮಿಕ ಸಂಗತಿಗಳಿಗಂತೂ ಅಲ್ಲಿ ಎಡೆಯೇ ಇಲ್ಲ. ಕೆಲವೊಂದು ಮೇಲ್ತರಗತಿಯ ತತ್ತ್ವದ ರಾಶಿಗಾಗಿ ವೈಯಕ್ತಿಕ ಜೀವನವನ್ನೂ ರಾಷ್ಟ್ರಜೀವ

CC-0. Jangamwadi Math Collection. Digitized by eGangotri

ವನ್ನು ನೇರ್ಪಡಿಸಬೇಕು—ಎಂಬ ವಿಚಾರಕ್ಕೆ ಅಲ್ಲಿ ಬಹು ಪ್ಪಾರವಿದೆ. ಎಂದ ಮೇಲೆ, ರಾಷ್ಟ್ರನಿರ್ಮಾಣವನ್ನು ಕುರಿತು ವಿಚಾರಿಸುವ ನಾವು, ಈಗಿನ ಈ 'ಸಂಪತ್ತಿನ ಸಾರ್ವಭೌಮತ್ವ' ವು ತನ್ನ ರಾಜದಂಡವನ್ನು ಕೆಳಗಿರಿಸುವಂತೆ ಪ್ರಯತ್ನಿಸುವುದು ಅಗತ್ಯ. ಈ ವಿಷಮ ಸಮಾಜವ್ಯವಸ್ಥೆಗೆ ಕಾರಣವಾದ ದುಡ್ಡಿನ ವಿಭಜನಾ ಕ್ರಮವು ನಮಗೆ ಸಮ್ಮತವಿಲ್ಲವೆಂದು ನಾವು ಒತ್ತಿ ಹೇಳುವುದು ಅಗತ್ಯ. ಎಂದರೆ ಇಲ್ಲಿ ಫಾಸಿಝುಂ, ಅಥವಾ ಕಮ್ಯುನಿಝುಂ ಎಂಬ ಸಂಪ್ರದಾಯಗಳನ್ನು ನಾವು ಪುರಸ್ಕರಿಸಬೇಕೆಂದು ಹೇಳಿದಂತಾಗಲಿಲ್ಲ. ಸಾಧ್ಯವನ್ನು ನಾವು ಅಸಂದಿಗ್ಧವಾಗಿ ಎದುರಿಸಲ್ಲಿಟ್ಟು ಕೊಳ್ಳೋಣ. ಜಗತ್ತು ಒಂದು ಮನೆತನ ಎಂಬುದು ನಮ್ಮ ಶ್ರದ್ಧೆಯಾಗಿರಲಿ; ನೀತಿಯ ಅಸ್ತಿವಾರದ ಮೇಲೆ ಸಾಮೂಹಿಕಜೀವನವನ್ನು ರಚಿಸುವುದೆ ನಮ್ಮ ಗುರಿಯಾಗಿರಲಿ;ಧನದ ವಿನಿಯೋಗವು ಸಮಷ್ಟಿಯ ಸ್ವಾಸ್ಥ್ಯಕ್ಕಾಗಿ- ಸಂಸ್ಕರಣಕ್ಕಾಗಿ ಆಗಿ, ಬರಬರುತ್ತ ಸಮಾಜವು ವ್ಯಕ್ತಿಯ ಸಾಂಸ್ಕೃತಿಕ ಆಧ್ಯಾತ್ಮಿಕ ಉತ್ಕರ್ಷಕ್ಕೂ ಸಕಲ ಸಲಕರಣೆಗಳನ್ನು ಒದಗಿಸಲಿಯೆಂಬುದೇ ನಮ್ಮ ಸಮ ನ್ವಯಾತ್ಮಕವಾದ ಸಾಧ್ಯವಾಗಿರಲಿ. ಇವೊತ್ತು 'ನಾಗರಿಕತೆ' ಯು ಕೆಲವೊಂದು ವ್ಯಕ್ತಿಗಳ ವೈಷಯಿಕ ಲಾಲಸೆಗಳನ್ನು ಪೂರೈಸಿಕೊಡಲು ಏರ್ಪಟ್ಟಿದೆಯಲ್ಲದೆ, ಬಹುಸಂಖ್ಯಾಕರ ಐಹಿಕಾಮುತ್ರಿಕ ಸುಖಸಾಧನೆಗಾಗಿಯಲ್ಲ. ಇದನ್ನು ನಾವು ಮಾರ್ಪಡಿಸಬೇಕು. ಇದಕ್ಕೆ ಸಂತತವಾದ, ಅವಿಚ್ಛಿನ್ನವಾದ ಕಾರ್ಯಾಸಕ್ತಿಯು ಬೇಕು; ಜನರಲ್ಲಿನ ಪ್ರಸುಪ್ತವಾದ ವಿಚಾರಶಕ್ತಿಯನ್ನು ಎಚ್ಚರಿಸಲು ಬೇಕು. ಫಾಸಿಝುಂ, ಕಮ್ಯುನಿಝುಂ ಮೊದಲಾದ ತೀವ್ರವಾದ ಪ್ರತಿಗಾಮಿಯಾದ ಮಾರ್ಗಗಳ ದುಡುಕು ನಮಗೆ ಉಚಿತವಲ್ಲ. (ಆದರೆ ಈಗಿನ 'ಬಂಡವಾಳ' ದ ಅಭಿಮಾನಿಗಳು ಅದನ್ನು ದೂರುವಂತೆ ನಾವು ದೂರಲೂ ಆಗದು.) ಈಗ ನಮಗೆ ಬೇಕಾದುದು ಕರ್ಮಪ್ರವೃತ್ತವಾಗಿ ಮಾಡುವ ಜ್ಞಾನಸಾಧನೆ—ಸಮಷ್ಟಿಯೋಗದ ನಿರಲಸ ಆಚರಣೆ. ನಮ್ಮ ಮಾರ್ಗವು ನಮ್ಮ ಸಂಸ್ಕೃತಿಗೆ ಒಪ್ಪುವಂತೆ ಅತಿಭಿನ್ನವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ. ಅದರ ಮುಂಗುರುತನ್ನು ಗಾಂಧಿಯವರು ತೋರಿದ್ದಾರೆ. ವೈಯಕ್ತಿಕ ಜೀವನದ ದೃಷ್ಟಾಂತದಿಂದ ಪ್ರತಿಸ್ಪರ್ಧಿಗಳ ಮನಸ್ಸಿನೊಳಗಿನ ಸಾತ್ತ್ವಿಕಭಾವನೆಗಳನ್ನು ಎಚ್ಚರಿಸುವ ಕಾರ್ಯದಲ್ಲಿ ಅವರು ತೊಡಗಿದ್ದಾರೆ. ರಾಮಕೃಷ್ಣ—ವಿವೇಕಾನಂದರು ಈ ಮೊದಲು ಸಮಷ್ಟಿಯೋಗದ ದೀಕ್ಷೆಯನ್ನು ಭಾರತೀಯರಿಗೆ ಕೊಟ್ಟರು. ಇದೀಗ ಅರವಿಂದರು ಅದನ್ನು ಪ್ರಗಲ್ಭವಾಗಿ, ವಿದಗ್ಧವಾಗಿ, ಮನೋಜ್ಞವಾಗಿ ಹೇಳುತ್ತಿದ್ದಾರೆ. ಈ ಎಲ್ಲ ಆಚಾರ್ಯಪುರುಷರ ಆಹ್ವಾನವನ್ನು ನಾವು ಲಾಲಿಸೋಣ. ಐನ್ಸ್ಟೈನ್ನನು 'ಭೌತಿಕಶಾಸ್ತ್ರವು ಮಾನವನ ಅಂತಃಕರಣದ ಅತಿಸೂಕ್ಷ್ಮವಾದ, ಧಾರ್ಮಿಕ ಆಧ್ಯಾತ್ಮಿಕ ಸ್ಪಂದನಗಳನ್ನು ನಿರಾಕರಿಸುವುದಿಲ್ಲ; ಏಕೆ, ಪುಷ್ಟಿಗೊಳಿಸುತ್ತಿದೆ' ಎಂದು ಹೇಳುತ್ತಿರುವುದನ್ನು ನಮ್ಮ ಹೃತ್ಫಲಕದಲ್ಲಿ ಕೊರೆದಿಟ್ಟು, ಸಾಮೂಹಿಕ ಕಲ್ಯಾಣಕ್ಕಾಗಿ 'ವಿಜ್ಞಾನ' ವು ಎಸಗುತ್ತಲಿರುವ ಸಾಹಸಗಳಲ್ಲಿ ಭಾಗಿಗಳಾಗೋಣ. ಇದೀಗ ಭೌತಿಕ ಶಾಸ್ತ್ರವೂ, ಅಧ್ಯಾತ್ಮಶಾಸ್ತ್ರವೂ ('ಈಶಾವಾಸ್ಯ' ದ ಭಾಷೆಯಲ್ಲಿ 'ವಿದ್ಯಾವಿದ್ಯೆಗಳು') ಕೈಯಲ್ಲಿ ಕೈಹಾಕಿವೆ. ಈ ಮಧುರ ಸಮ್ಮೇಲನವನ್ನು ನಮ್ಮ ಜೀವನದಲ್ಲಿ ಮಾಡಿಕೊಳ್ಳೋಣ. ಕಠೋರವಿಮರ್ಶೆ ಮತ್ತು ಕೋಮಲ ಭಕ್ತಿಗಳು ನಮ್ಮ ಬಾಳುವೆಯಲ್ಲಿ ಬೆರೆಯಲಿ! ಅತ್ತ, ನಮ್ಮ ಈಗಿನ ಸಮಾಜವು ರೂಢಿಗೆ ತೊತ್ತಾಗಿ, ವಿಚಾರ-ವಿವೇಕಗಳನ್ನು ಎರವಲಾಗಿ ಇಟ್ಟು, ಅಂಧತಮಸ್ಸಿಗೆ ಈಡಾಗಿರುವುದನ್ನು ನೆನೆದು, ನಮ್ಮ ಶರಣರ 'ಅರಿವೇ ಗುರು, ಆಚಾರವೇ ಶಿಷ್ಯ' ಎಂಬ ಜ್ಞಾನಯೋಗದ ಉಪಾಸನೆಯನ್ನು ಅದು ಮರಳಿ ಮಾಡುವಂತೆ ಉಜ್ಜುಗಿಸೋಣ; ಇತ್ತ, ವೈಯಕ್ತಿಕ ಜೀವನವು ಸೂಕ್ತವಾಗಿ, ಸಮಂಜಸವಾಗಿ, ಒಂದು ಸಾಮರಸ್ಯಕ್ಕೆ ಬರುವ ವಿನಾ—ತನ್ನನ್ನಿಲ್ಲಿ ತಂದ ದೈವದ ಆಂತರಿಕ ಉದ್ದೇಶವನ್ನು ತಿಳಿದುಕೊಳ್ಳುವ ವಿನಾ ಸಮಾಜಯೋಗದಲ್ಲಿ ಪ್ರಶಸ್ತವಾಗಿ ಸಹಕರಿಸುವುದು ಕಷ್ಟವೆಂದು ಕಿವಿಯಲ್ಲಿ ಹೇಳುವ ಆ ಒಳದನಿಯನ್ನೂ ಲಾಲಿಸೋಣ. ಅತ್ತ, ವೈಯಕ್ತಿಕಮೋಕ್ಷದ ಮಾತಿಗೆ ರಾಮಕೃಷ್ಣ ವಿವೇಕಾನಂದಾದಿಗಳು ಹಿಡಿಮಣ್ಣು ಕೊಟ್ಟುದನ್ನು ಮರೆಯದಿರೋಣ; ಇತ್ತ, ಅಂತರಂಗಿಕ ಜೀವನದ ಸಂದೇಹ ಸಮಸ್ಯೆಗಳಿಗೆ ಸಮಾಧಾನವನ್ನು ಹುಡುಕುವುದು ಸಮಷ್ಟಿಯೋಗಕ್ಕೆ ಅಸಮ್ಮತವಲ್ಲವೆಂಬುದನ್ನೂ ನೆನೆಯೋಣ. ನಮ್ಮ ಪರಂಪರೆಗೆ, ಸಂಸ್ಕೃತಿಗೆ, ನಾಡಿನ ಚರಿತ್ರೆಗೆ ಒಪ್ಪುವಂತೆ ಈ 'ದುಡ್ಡಿನ ತೊಡಕ' ನ್ನು ಬಿಡಿಸೋಣ.


CC-0. Jangamwadi Math Collection. Digitized by eGangotri

# ಜನಪದಸಾಹಿತ್ಯ

## ಕೊಣವೆಗೌಡನ ಚರಿತ್ರೆ

ಸಂಗ್ರಾಹಕರು:—ಶ್ರೀ. ಹೊನ್ನೇನಹಳ್ಳಿ ಶೇಷಭಟ್ಟರು, 'ತರುಣರ ದಂಡು', ಮೈಸೂರು

೧

ಕೇಳು ಕೇಳು ನನ್ನ ಕೊಣವೇಗೌಡ;*
ಕೊಡಗಿನ ಮಾರಿ ತಂಟಲಮಾರಿ.
ಸಮ್ಮೂರಲ್ಲಿದ್ದ ಕೊಣವೇಗೌಡ,
ಜೀನನೆಂದರೆ ಹೆಸರ್ಹೇಳ್ಬೇಕವನ;
ಅವನು ಹೆಂಡ್ತೀ ಕೈಲಿ ಹೀಂಗೆ
ಒಂದು ದಿನಾ ಹೇಳ್ದ ಅವನು.
" ವಂದ್ಪಾವ್ಜೋಳವಳಕೊಳ್ಹೆಣ್ಣೆ !
ಸುರ ಕೊಂಡೀಗ ತಗೊಂಡು ನಡಿಯೆ,
ತಕೊಂಡು ನಡಿಯೇ ಹೊಲಕೇ ನೀನು, "
ಜೋಳಾನಾದ್ರೆ ಬಿತ್ತೀ ಆಯ್ತು.
ಮೂರು ವರುಸಾ ಮಳೆಯೇ ಹೋಯ್ತು.
ಇರುವೆ ಕಾಳ ಹೊತ್ಕೊಂಡ್ಹೋದೋ,
ಗೌಡನು ಇರೀಗೆ ಸಂಕಲೆ ಹಾಕಿ,
ಕಾಳನೆಲ್ಲಾ ತೆಗದು ತುಂಬ್ದ.
ಹೊಟ್ಗಿಲ್ದೋರು ಕೇಳಿದರವನ
ಬಿಕ್ಸನಾದರೆ ಕೊಡಿಗಡಿಯೆಂದು.
ಬಿಕ್ಸದೋರ್ಕೊಟ್ಲಿ ತಡೀಲಾರ್ದೆ
ಕರೆದು ಹೆಂಡ್ತಿಗ್ಹೇಳ್ದಾ ಹಿಂಗೆ.
"ಭಿಕ್ಸದವರು ಬಂದ್ಗಿಂದಾರು
ಬಿಕ್ಸಕಾದರೆ ಒಂದಾರೀಗ.
ಸತ್ತಂಗೆ ನಾನು ಬಿದ್ಕೋತೀನಿ,
ಅಳತ ಬಾಕ್ಲಲ್ಕುಳಿತ್ಕೊಳ್ಹೆಣ್ಣೆ,
ದಾಸಯ್ಯನಾದ್ರೆ ಬತ್ತಾನಾಗ,
ಇದ್ಯಾಕಮ್ಮ ಅನ್ನೋತಾನೆ.
ಗಂಡ ಸತ್ಹೋದ ಅಂತ ಹೇಳು.
ದೇವ್ರು ಸೂತಕ್ಕೆ ಸಿಕ್ಕೇಹೊಯ್ತು.
ದಾಸಯ್ಯನಾದ್ರೆ ಓಡ್ತಾನಾಗ"
ಹಂಗಂತ ಹೇಳಿ ಗೌಡನು ಮಲಿಗ್ದ;
ಸತ್ತಂಗೆ ಮೂಲೇಲಿ ಬಿದ್ದುಕೊಂಡ.
ಗೌಡ್ನ ಹೆಂಡ್ತೀ ಬಾಕ್ಲಲ್ಕುಂತುಕೊಂಡ್ಳು,
ಅಳತ ಇದ್ಲು ಗೌಡ ಹೇಳ್ದಂಗೆ.

೨.

ಕೇಳು ಕೇಳು ನನ್ನ ಕೊಣವೇಗೌಡ.
ಕೊಡಗಿನಮಾರಿ ತಂಟಲಮಾರಿ
ಗೌಡಗೆ ಬುದ್ಧೀ ಕಲಿಸಾಲೆಂತ
ದಾಸಯ್ನ ವೇಸವ ಹಾಕಿಕೊಂಡು,
ತೊಳಸೀಮಣಿಯ ಕತ್ತಿಗೆ ಹಾಕಿ,
ಕೈಲಿ ಜಾಂಗ್ಟೆ ಶಂಕುಳ್ಳಂಕು,
ಹಣೆಯುಲ್ನಾಮವನಿಟ್ಟುಕೊಂಡು,
" ಗೋವಿಂದ, ತಿಮ್ಮಪ್ಪ " ಎಂದ್ಹೇಳುತ್ತ,
ಗೌಡ್ನ ಹಟ್ಟೀ ಬಾಕ್ಲಿಗೆ ಬಂದ್ಲು.
ನೋಡಿದಳಲ್ಲಿ ಗೌಡನ ಹೆಂಡ್ತಿ
ಅಳುತ ಬಾಕ್ಲಲ್ಕುಂತಿರೋದ.
" ಇದ್ಯಾಕಮ್ಮ ಅಳತೀ "ಯೆಂದ್ಲು.
" ಗೌಡ ಸತ್ಹೋದ, ಕೆಟ್ನಾಕಣಪ್ಪ
ಹೊರ್ಗೋರು ಹೆಣವ ದಿಕ್ಕಿಲ್ಲಪ್ಲೋ,
ನನಗೆ ಮುಂದಕೆ ದಿಕ್ಕಿಲ್ಲ ತಂದೆ,
ಕೆಟ್ನ್ಯಲ್ಲಪ್ಪೋ ಕೆಟ್ನ್ಯಲ್ಲಪ್ಪೋ"
ಅಂತ ಹೇಳೀ ಬಿಕ್ಕಿ ಬಿಕ್ಕಿ ಅತ್ಲು.
ಕಣ್ಣಲ್ಲಿ ತೊಟ್ಟು ನೀರೇಯಿಲ್ಲಾ.
" ಅಯ್ಯೋ ಕೊಣವಪ್ಪ ಸತ್ಯಾ ನೀನು!
ಚಿನ್ನದಂತಾ ಮನುಸನು ನೀನು
ನಿನ್ನಂತಾ ದಾನ್ಗಾರ್ರಸತ್ಮೇಲೆ
ನಮಗೆ ಹೊಟ್ಗ್ಯಾರ್ಕೊಡ್ತಾರಪ್ಪ"
ಅಂತಾ ತುಂಬಾ ಬಗೇಲಿ ದಾಸಯ್ಯಾ
ತಲೆಯತಲೆಯ ಹೊಡಕೊಂಡತ್ತ.
" ಏಟ್ಹೊತ್ತು ಬಡಕೊಂಡ್ರು ಇದ್ದೇ ಆದೆ
ಹೆಣವ ಹೊರೋರು ದಿಕ್ಕಿಲ್ಲಂತೆ "
ಅಂತ ಹೇಳಿ ದಾಸಯ್ಯನಾಗ

* ಪ್ರತಿ ಚರಣದ ಕೊನೆಗೂ " ಗೋವಿಂದಾ ಗೋವಿಂದಾ " ಎಂದು ಸೇರಿಸಿ ಹೇಳುವರು.

CC-0. Jangamwadi Math Collection. Digitized by eGangotri

ಶಂಕು ಜಾಗಟಿ ತೆಗದು ಮಡಗಿ,
ಉಟ್ಟದ್ದೊದ್ದಿದ್ದಟ್ಟೆ ತೆಗದು,
ಒಂದು ಕಡೀಕೆ ಗಂಟ್ಕಟ್ಟಿಟ್ಟು,
ಗೌಡನ ಮೊಕವಾ ನೋಡಾಕ್ಹೋದ.

೩.

ಹೊರಗಡೆ ನಡೆಯೋ ಪರಸಂಗ ಕೇಳಿ,
ದಾಸಯ್ಯ ಬರುವ್ರೋ ಗುರುತಾಸರ್ತು,
ಗೌಡಽ ಬಿಗೀಲಿ ಉಸರಾ ಕಟ್ಟಿ,
ಕಣ್ಣುಗುಡ್ಡೇ ಮೇಗ್ಕ ಸಿಕ್ಕಿಸಿಕೊಂಡು,
ಬಾಯ ಅಗಲಾಗಿ ತಾ ತೆರಕೊಂಡು,
ಕೈಕಾಲ್ತಾಸು ಮುದರೀಕೊಂಡು
ಸತ್ಹಂಗೆ ತಾನು ಬಿದ್ಕೊಂಡಿದ್ದ.
ಗೌಡ್ನ ರುಣವ ತೀರ್ಸೋ ನೆವ್ದಿ,
ದಾಸಯ್ಯಽ ಒಂದ್ಹಿಡಿ ಅಕ್ಕಿ ತಂದು,
ಮೊಕ್ದಽ ಮುಸಕಾ ಒಕ್ಕಡೀಕೆಳೆದು,
ಕಿಸಿದಿದ್ಬಾಯ್ಗೇ ಅಕ್ಕೀ ತುಂಬಿ
"ಅಯ್ಯೋ ಅಪ್ಪಽ ಸತ್ಯಾ ಗೌಡ?
ನಿನ್ನಂತಾ ಗೌಡಾ ಹುಟ್ತಾನೇನೋ"
ಅಂತಽ ಅಳ್ತಽ ಹೊರೀಕೆಽ ಒಂದು,
ಬಿದಿರ ಹಿಂಡ್ಲಲ್ಬಿದಿರಾ ತಂದು,
ಚಟ್ಟವನಾದ್ರೆ ಕಟ್ಟೀಕೊಂಡು
ಹೆಣವ ತಂದು ಅದ್ರುಮೇಲಿಡುಕಿ
ಒಂದು ನೋಡ್ತಾನಲ್ಲಿ ಹೆಣವ.
ಹೆಣೀನ ಮುಸಕಽ ತೆಗೆದು ನೋಡಿದ್ರೆ
ಅಕ್ಕೀ ಒಂದ್ಕಾಳಿರಲೇ ಯಿಲ್ಲ;
ತೆರದಿದ್ಬಾಯಿ ಮುಚ್ಕೊಂಡಿತ್ತು.
ಮುದರಿದ್ದ ಕಾಲು ನೀಡಿಕೊಂಡಿತ್ತು.
ಹೆದರೀದೋನ್ಹಂಗೆ ದಾಸಯ್ಯಽ ನೋಡಿ,
"ದೆವ್ವಽ ಬಂದದೆ ಹೆಣದಾ ಮ್ಯಾಲೆ,
ಅದ್ನಽ ಈಗ್ಲೇ ಓಡ್ಸಲೇ ಬೇಕು"
ಅಂತಽ ಹೇಳೀ ಬರಿಗುಳಾವ
ಬೆಂಕೀಲ್ಹಾಕಿ; ಚಂದಾಗ್ಕಾಸಿ
ತಕೊಂಡು ಬಂದು ಹೆಣದಾ ಹತ್ರ,
"ಓಡಽಲೇ ಹಾಳು ದೆವ್ವೇ ನೀನು,
ಹೆಣಾನ ಯಾಕೇ ಹಿಡಕೊಂಡಿದ್ದಿ"
ಅಂತಽ ಹೇಳೀ ಗೌಡ್ನಽ ಬೆನ್ಮೇಲೆ
ಬರೆಗುಳ ಎಳೆದ; ಚೊರ ಚೊರ ಎಂತು.
"ಅಯ್ಯಯ್ಯಪ್ಪ" ಎಂದಾ ಗೌಡ,
ಉರಿಗೆ ಬಾಯ್ಬಾಯ್ಬಡಕೊಂಡ್ಬಿಟ.
ದಾಸಯ್ಯನಾದ್ರೆ ಕಿಸಿ ಕಿಸಿ ನಗ್ತಾನೆ.
ಗೌಡ್ನ ಹೆಂಡ್ತೀ ಬೀದೀಲಿದ್ದೋಳು
ಒಳೀಕೆ ಬಂದು ನೋಡ್ತಾಳಲ್ಲಿ,
ಗಂಡಗೆ ಬರೆಗುಳ ಬಿದ್ದೀರೋದಾ,
ಜೀನ ಗಂಡನಾ ಗತಿಯಾ ಕಂಡ್ಳು.
ಅಳುವಿನ ಜತ್ಗೇ ನಗುವೂ ಬಂತು.
ದಾಸಯ್ಯ ಶಂಕು ಜಾಗಟೆ ತಂದು
ಭಿಕ್ಸವ ಹಾಕವ್ಮ ಎಂತ ಎಂದ.
ಕೊಣವೆ ಗ್ಔಡ್ನಿಗೆ ಈಟುಹೊತ್ಗೆ
ಬಂದಿತ್ತು ಬುದ್ಧಿ ಚನ್ನಾಗೀಯೆ.
"ಹಾಕೇ ಒಂದ್ಹಿಡಿ ಜೋಳಾ ಅವನ್ಗೆ"
ಅಂತ ಹೇಳ್ದಽ ಹೆಂಡ್ತೀಗವನು.
ಸತ್ತೋದಽ ಗೌಡಾ ಬದಿಕ್ಕೊಂಡವ್ನೆ.
ಒಂದ್ಹಿಡಿ ಜೋಳಾ ನನಗೆ ಸಾಲ್ದು,
ಕೊಡಬೇಕ್ನನಗೆ ಒಂದುಹೇರು,
ಅಂತಾ ಹೇಳಿ ಹಟವಾ ಹಿಡಿದ.
ಕೋಪಽವು ಬತ್ತು ಗೌಡನಿಗೆ ಬಾಳಾ
ಪೊದ್ಲೇ ಬರೆಗುಳ ಬಿದ್ದಾ ನೋವು,
ಇದ್ದದ್ದು ತುಂಬಾ ಕೋಪ ಬತ್ತು.
ದೊಣ್ಣೇ ತಕೊಂಡು ಹೊಡೆಯೋಕ್ಬಂದ.
ದಾಸಯ್ಯನಾಗಽ ಹೆಂಗ್ಸಾಗಿದ್ಲು.
ನೋಡಿದರವಳು ಕೊಡಗಿನಮಾರಿ.
ಗೌಡನು ಹೆದರಿ ಕಾಲಿಗೆ ಬಿದ್ದು
"ತಾಯೀ ನನ್ನಽ ಕಾಪಾಡವ್ವ"
ಅಂತ ಅವಳಽ ಕೇಳಿಕೊಂಡು
ತನ್ನಲ್ಲಿದ್ದಽ ಎಲ್ಲಾವನ್ನೂ
ತಂದು ಮಾರಿಗೆ ಬಲಿಯಾಕೊಟ್ಟು,
ಕಾವಿಯನುಟ್ಕೊಂಡ್ಬೀದಿಯಲ್ಲಿ
ಏಕ್ನಾದಾ ತಕ್ಕೊಂಡ್ನನಗೋಳೀಗೆ
ಜೀಽನರಾಗ್ಬೇಡ್ರಪ್ಪಽ ಎಂತ
ಹೇಳ್ತ ಅವನು ತಿರಗ್ತಾ ಅವ್ನೆ.

CC-0. Jangamwadi Math Collection. Digitized by eGangotri

# ನಾನು ಹೇಡಿ ಹೇಗಾದೆ?



ತಾಯಿ— 'ಸುಮ್ಮಗೆ ಮಲಕೋ, ಬಾವಾ ಬಂತು!'



ತಾಯಿ— 'ಕಟ್ಟೀ ಮೇಲಿಂದ ಬೀಳ್ಳಿಕ್ಕೆ ನಿನಗೇನಾಗಿತ್ತೋ ಪೋಡಿ!'



ತಂದೆ— 'ನಡೆ ಹೊರಗೆ! ಇಲ್ಲೇನು ಕೆಲಸ ಹಿರಿಯರೊಳಗೆ?'



ಗುರುಗಳು— 'ನಾ ಇಡಲಿಕ್ಕೆ ಯಾಕೆ ಹೊಡೆದಿ ಆ ಹುಡುಗನ್ನ!'



ಮೇಲಧಿಕಾರಿ— 'ಹೇಳಿದಷ್ಟು ಕೇಳಬೇಕು, ನಿಮ್ಮ ಬುದ್ಧಿವಂತಿಕೆ ಬೇಕಾಗಿಲ್ಲ.'




"'ಸ್ವರಾಜ್ಯ' 'ಕ್ರಾನಿಕಲ್' ಓದಿದರೆ ಪೆನ್ಶನ್ ಹೋದೀತು 'ಟೈಮ್ಸ್' ನೇ ಓದೋಣ!"

ವ್ಯಂಗ್ಯ ಚಿತ್ರಕಾರ:— ಬಾಬ್ಲಿ, ಹೈದ್ರಾಬಾದು

CC-0. Jangamwadi Math Collection. Digitized by eGangotri



ಸಂಗ್ರಾಹಕರು:— ಶ್ರೀ. ದ. ಕೃ. ಭಾರದ್ವಾಜ ಎಂ. ಏ. (ಆಯುರ್ವೇದ)

## ಜೀವನದಲ್ಲಿ ವಾಙ್ಮಯದ ಸ್ಥಾನ

ಪ್ರಸಿದ್ಧ ಹಿಂದೀಸಾಹಿತ್ಯಸೇವಕರಾದ ಶ್ರೀ. ಪ್ರೇಮಚಂದ್ ಅವರು 'ಜೀವನ್‌ಮೇ ಸಾಹಿತ್ಯಕಾ ಸ್ಥಾನ' ಎಂಬ ಒಂದು ಮನೋಹರವಾದ ಲೇಖನವನ್ನು ಬರೆದಿರುವರು. ಅದರಲ್ಲಿಯ ಕೆಲವು ವಿಷಯಗಳನ್ನು ವಾಙ್ಮಯದ ವಿದ್ಯಾರ್ಥಿಗಳು ತಿಳಿಯುವುದಾವಶ್ಯಕವೆಂದು ಅದರ ಸಾರಾಂಶವನ್ನು ಇಲ್ಲಿ ಕೊಡಲಾಗಿದೆ. ಅವರು ಹೇಳುವುದೇನೆಂದರೆ:— "ಜೀವನದ ತಳಹದಿಯ ಮೇಲೆ ವಾಙ್ಮಯದ ಕಟ್ಟಡವು ನಿರ್ಮಿತವಾಗುತ್ತಿರುವುದು ವಾಙ್ಮಯವು ಮಾನವಸೃಷ್ಟಿಯು. ಆದುದರಿಂದ ಈಶ್ವರನಿರ್ಮಿತ ಸೃಷ್ಟಿಯಂತೆ ಅದು ಅನಂತವೂ, ಅತರ್ಕ್ಯವೂ, ಅಮರ್ಯಾದಿತವೂ ಆಗಿಲ್ಲ. ಇದಕ್ಕೆ ಮೇರೆಯಿದೆ, ಅಂತ್ಯವಿದೆ. ಮನುಷ್ಯರೆಲ್ಲರೂ ಆನಂದಲಾಭಕ್ಕಾಗಿ ಚಡಪಡಿಸುತ್ತಿರುವರು. ಆದರೆ ಸೌಂದರ್ಯದಿಂದ ಲಭಿಸುವ ಆನಂದವು ಅತಿಶ್ರೇಷ್ಠವಾದುದು. ನವರಸದಲ್ಲಿ ಬೀಭತ್ಸರಸವೂ ಸೇರಿದೆ. ಹಾಗಾದರೆ ಬೀಭತ್ಸರಸವೂ ಆನಂದದಾಯಕವಲ್ಲವೇ? ಎಂದು ಕೇಳಬಹುದು. ಅದಕ್ಕೆ ಹೌದು ಎಂತಲೇ ಉತ್ತರವನ್ನೀಯಬೇಕಾಗುವುದು. ಏಕೆಂದರೆ ವಾಙ್ಮಯವು ಎಂತಹ ವಿಷಯದಲ್ಲಾದರೂ ಆನಂದವನ್ನೇ ಹುಡುಕುತ್ತಿರುವುದು. ಉಷೆ, ಮೇಘಾಚ್ಛನ್ನವಾದ ರಾತ್ರಿ, ಕಲ್ಲುಗುಡ್ಡೆ, ರಾಜಪ್ರಾಸಾದ, ಗುಡಿಸಲು ಎಲ್ಲ ವಿಷಯಗಳೂ ತನಗೇ ಸೇರಿದುವೆಂದು ವಾಙ್ಮಯಕ್ಕೆ ಭಾಸವಾಗುವುದು. ಸತ್ಯದಿಂದ ಆತ್ಮದೊಂದಿಗೆ ಮೂರು ಬಗೆಯ ಸಂಬಂಧವು ಉಂಟಾಗಬಹುದು. ಮೊದಲನೆಯದು ಜಿಜ್ಞಾಸೆ, ಎರಡನೆಯದು ಪ್ರಯೋಜನ, ಮೂರನೆಯದು ಆನಂದ. ಹಿಮಾಲಯದ ಮೇಲೆ ಉಷೆಯ ದೃಶ್ಯವನ್ನು ನೋಡಿದಬಳಿಕ ತತ್ವಜ್ಞರು ಚಿಂತನೆಗಾರಂಭಿಸಬಹುದು; ಶಾಸ್ತ್ರಜ್ಞರು ಅದರ ಪೃಥಕ್ಕರಣವನ್ನು ಮಾಡಲುಯತ್ನಿಸಬಹುದು; ಆದರೆ ಕವಿಯು ವಿಹ್ವಲನಾಗಬಹುದು. ಆತ್ಮಸಮರ್ಪಣೆಯು ವಿಹ್ವಲತೆಯ ಬಗೆಯು. ಆದರೆ ಅದಕ್ಕೆ ಮನುಷ್ಯನ ಮನಸ್ಸು ವಿಶಾಲವಾಗಿರಬೇಕು. ಸತ್ಯವು ಆನಂದರೂಪದಿಂದ ಪ್ರವಹಿಸಲಾರಂಭಿಸಿದಾಗ ಅದಕ್ಕೆ ಸಾಹಿತ್ಯವೆಂದು ಹೇಳುವರು. ಸಾಹಿತ್ಯವು ಹೃದಯಕ್ಕೆ ಸಂಬಂಧಪಟ್ಟುದೇ ವಿನಾ ಮಿದುಳಿಗೆ ಸಂಬಂಧಿಸಿಲ್ಲ. ಮನುಷ್ಯನಲ್ಲಿ ಉಚ್ಚವಾಗಿದ್ದರೂ ಸುಪ್ತವಾಗಿರುವ ಭಾವನೆಯನ್ನು ಜಾಗೃತಗೊಳಿಸುವುದೇ ಸಾಹಿತ್ಯದ ಮುಖ್ಯಕಾರ್ಯವಾಗಿರುವುದು. ಮಾನವರೆಲ್ಲರ ಸುಖದುಃಖಗಳೊಂದಿಗೆ ಸಮರಸಭಾವವನ್ನು ತಾಳುವುದು ನಿಜವಾದ ಸಾಹಿತ್ಯಕಾರನ ಲಕ್ಷಣವಾಗಿರುವುದು. ತತ್ವಜ್ಞಾನ ಮತ್ತು ಶಾಸ್ತ್ರಗಳ ತತ್ವದಲ್ಲಿ ಕಾಲಮಾನಾನುಸಾರವಾಗಿ ಬದಲಾವಣೆಗಳುಂಟಾಗಬಹುದು. ಆದರೆ ಸಾಹಿತ್ಯದಲ್ಲಿ ಆದಾಗದು. ರಾಮಾಯಣ-ಮಹಾಭಾರತಾದಿ ಶ್ರೇಷ್ಠ ಸಾಹಿತ್ಯಗ್ರಂಥಗಳ ಸೌಂದರ್ಯವು ಸಾವಿರಾರು ವರ್ಷಗಳಿಂದ ಇಂದಿಗೂ ಅಬಾಧಿತವಾಗಿರುವುದು. ಸಾಹಿತ್ಯವು ಉಚ್ಚ ಆದರ್ಶವನ್ನು ನಿರ್ಮಿಸುವುದು. ಎಂದರೆ ಅದು ನಷ್ಟವಾದಾಗ ಸಮಾಜವು ಪತನವನ್ನೈದುವುದು. ಹೊಸ ಸಂಸ್ಕೃತಿಯ ಸಮಗ್ರ ಆಯುಷ್ಯವು ೧೦೦—೧೫೦ ವರ್ಷಗಳಾಗಿರುವುದು. ಆದರೆ ಇಷ್ಟರಲ್ಲಿ ಮನುಷ್ಯರಲ್ಲಿ ಒಂದುಬಗೆಯ ಅಸಂತೋಷವು ಹರಡಿರುವುದು. ಯುರೋಪೀಯ ಸಂಸ್ಕೃತಿಯಲ್ಲಿ ನಿರಾಶೆಯ ಕ್ರೂರ ಬಲವಿದೆ, ಆಶೆಯ ಉದಾರ ಶಕ್ತಿಯಿಲ್ಲ. ಹೀಗಿರುವಾಗ ಸಾಹಿತ್ಯದ



CC-0. Jangamwadi Math Collection. Digitized by eGangotri

ಮಹತ್ವವನ್ನು ಲಕ್ಷ್ಯದಲ್ಲಿಟ್ಟುಕೊಂಡು ಹೊಸ ಲೇಖಕರು ಸಾಹಿತ್ಯನಿರ್ಮಾಣದ ಹೊಣೆಯನ್ನು ವಹಿಸಬೇಕು. ಕೇವಲ ನಗ್ನಚಿತ್ರಗಳನ್ನು ಚಿತ್ರಿಸಬೇಕು ಅಥವಾ ಕೇವಲ ವಿಧ್ವಂಸಕ ಅಭಿಪ್ರಾಯಗಳನ್ನು ಪ್ರತಿಪಾದಿಸಬೇಕು ಎಂದು ನವೀನಲೇಖಕರಿಗೆ ಈಗ ತೋರುತ್ತಿರುವುದು. ಆದರೆ ಶಾಶ್ವತವಾದ ಯೋಗ್ಯತೆಯುಳ್ಳ ವಾಙ್ಮಯವು ವಿಧ್ವಂಸ ಮಾಡುವುದಿಲ್ಲ, ರಚನೆಯನ್ನು ಮಾಡುವುದು. ಅದು ಮಾನವಜೀವನದ ದುರ್ಬಲಪಕ್ಷವನ್ನು ತೋರುವುದಿಲ್ಲ, ಉಜ್ವಲಪಕ್ಷವನ್ನು ತೋರುವುದು. ದೊಡ್ಡ ಸಾಹಿತ್ಯಸೇವಕರೆನಿಸಿಕೊಳ್ಳಲಿಚ್ಛಿಸುವ ಯುವಕರಿಗೆ ಆತ್ಮಸಂಯಮನದ ಆವಶ್ಯಕತೆಯಿರುವುದು. ಸಾಧನೆ, ಸಂಯಮ, ತತ್ವಜ್ಞಾನ ಇವು ವಾಙ್ಮಯನಿರ್ಮಾಣಕ್ಕೆ ಅತ್ಯಾವಶ್ಯಕವಾದ ಗುಣಗಳು. ವ್ಯಾಸ, ವಾಲ್ಮೀಕಿ, ತುಳಸೀದಾಸ, ಕಬೀರ ಇವರೇ ಮೊದಲಾದ ವಾಙ್ಮಯಪ್ರಭುಗಳು ಎಂತಹ ವಿರಕ್ತರೂ ಶೀಲವಂತರೂ ಆಗಿದ್ದರು! ನಿಜವಾದ ಸಾಹಿತ್ಯಸೇವಕನು ಆತ್ಮಜ್ಞಾನಿಯೂ, ತಪಸ್ವಿಯೂ ಆಗಿರಬೇಕು."

—ಹಂಸ ( ಹಿಂದಿ )

## ಸ್ಮೃತಿನಾಶ

ಮನುಷ್ಯನ ಮಾನಸಿಕ ಶಕ್ತಿಗಳಲ್ಲಿ ಜ್ಞಾಪಕ ಶಕ್ತಿಯು ವಿಶೇಷ ಮಹತ್ವವುಳ್ಳುದು. ಜಗತ್ತಿನ ವ್ಯವಹಾರ ಮತ್ತು ಜ್ಞಾನದ ಪ್ರಗತಿಯು ಈ ಜ್ಞಾಪಕ ಶಕ್ತಿಯನ್ನವಲಂಬಿಸಿರುವುದು. ವಿದ್ಯುಳಿನ ಕೆಲಸವು ಸುಸೂತ್ರವಾಗಿ ನಡೆಯುತ್ತಿರುವಾಗ ಜ್ಞಾಪಕಶಕ್ತಿಯು ಸರಿಯಾಗಿರುವುದು. ಮಜ್ಜಾತಂತುಗಳಿಗೆ ದುರ್ಬಲತೆಯುಂಟಾದಾಗ ಮಾತ್ರ ಸ್ಮೃತಿಭ್ರಂಶವಾಯಿತೆಂಬಂತೆ ಭೀತಿಯುಂಟಾಗುವುದು. ಆದರೆ ಆ ಭೀತಿಯಲ್ಲಿ ಅರ್ಥವಿಲ್ಲ. ಕೆಲವರಿಗೆ ಮರೆವುಂಟಾಗಿರುವುದು. ಹಾಗೆಂದ ಮಾತ್ರಕ್ಕೆ ಆವರಲ್ಲಿ ಜ್ಞಾಪಕ ಶಕ್ತಿ ಕಡಿಮೆಯೆಂದು ತಿಳಿಯಬಾರದು. ಆದರೆ ಆ ಜನರಿಗೆ ಜ್ಞಾಪಕ ಶಕ್ತಿಗೆ ಒಂದುಬಗೆಯ ಶಿಸ್ತು ದೊರೆಯುತಿರುವುದಿಲ್ಲ. ಚಿಕ್ಕಂದಿನಿಂದಲೂ ಯಾವುದಾದರೊಂದು ವಿಷಯಕ್ಕೆ ಅವರು ಎಷ್ಟು ಲಕ್ಷ್ಯ ಕೊಡಬೇಕೋ ಅಷ್ಟು ಲಕ್ಷ್ಯವನ್ನು ಕೊಟ್ಟಿರುವುದಿಲ್ಲ. ನಮಗೆ ಸ್ಮೃತಿಭ್ರಂಶವಾಗುತ್ತಿದೆಯೆಂಬ ಲಕ್ಷಣವು ತೋರಿದ ಕೂಡಲೆ ಸ್ಮೃತಿಮಾರ್ಗದ ಕಡೆಗೆ ಲಕ್ಷ್ಯವನ್ನು ತಿರುಗಿಸಿದರೆ ಸ್ಮೃತಿಭ್ರಂಶವಾಗುವುದಿಲ್ಲ. ಅದರಂತೆ ಪ್ರಕ್ಷುಬ್ಧ ಭಾವನೆ ಅಥವಾ ಭಯದಿಂದ ಸ್ಮೃತಿಗೆ ಧಕ್ಕೆಯಾಗುವುದೆಂದು ಕೆಲವರು ತಿಳಿದಿರುವರು. ಆದರೆ ಅದು ಸುಳ್ಳು. ವಯಸ್ಸು ಹೆಚ್ಚುವುದರಿಂದಲೂ ಸ್ಮೃತಿಯಲ್ಲಿ ಆವ ಬದಲಾವಣೆಯೂ ಉಂಟಾಗದು. ಇನ್ನು ದೇಹದ ಸಮಗ್ರಶಕ್ತಿಯು ಶಿಥಿಲವಾದಾಗ ಮಾತ್ರ ಅದರ ಪರಿಮಾಣದಲ್ಲಿ ಸ್ಮೃತಿಯು ದುರ್ಬಲವಾಗುವುದು ಬೇರೆ ವಿಚಾರವಾಯಿತು. ಸ್ಮೃತಿಭ್ರಂಶಕ್ಕೆ ರಾಮಬಾಣದಂತಿರುವ ಔಷಧವೆಂದು ಬರುವ ಅಂದವಾದ ಆಕರ್ಷಕವಾದ ಜಾಹೀರಾತುಗಳ ವಿಚಾರದಲ್ಲಿ ಎಚ್ಚರಿಕೆಯಿಂದಿರಬೇಕು. ಏಕೆಂದರೆ ಅವುಗಳು ಅಪಾಯಕಾರಕವಾದುವುಗಳೇ ಹೆಚ್ಚಾಗಿರುವವು. ಮಜ್ಜಾತಂತುಗಳು ಏತರಿಂದ ಕೆಟ್ಟುಹೋಗಿರುವವೆಂಬುದನ್ನರಿತು ಅದಕ್ಕೆ ತಕ್ಕ ಚಿಕಿತ್ಸೆಯನ್ನು ಮಾಡುವುದೇ ಜ್ಞಾಪಕಶಕ್ತಿಯನ್ನು ಸುಧಾರಿಸಲು ನಿಜವಾದ ಮಾರ್ಗವಾಗಿರುವುದು.

--Scientific American

## ನಾವಿಕರ ಮೂಢವಿಶ್ವಾಸ

ಪಾಶ್ಚಾತ್ಯನಾವಿಕರು ಶಕುನಭಕ್ತರು. ಒಬ್ಬ ನಾವಿಕನು ಮತ್ತೊಬ್ಬ ನಾವಿಕನಿಗೆ ಯಾವುದಾದರೊಂದು ಹಡಗಿನ ಸಾಮಾನನ್ನು ಕೊಡುವುದು ದೊಡ್ಡ ಅಪಶಕುನವೆಂದು ಭಾವಿಸಲ್ಪಟ್ಟಿದೆ. ಕೆಂಪು ಕೂದಲಿನ ಅಥವಾ ನೇರವಾದ ಪಾದದ ( foot ) ಮನುಷ್ಯರು ದೋಣಿಯಲ್ಲಿ ಕುಳಿತದ್ದನ್ನು ನೋಡಿದಕೂಡಲೆ ಅವರು ಭೀತಿಗೊಳ್ಳುವರು. ಏಕೆಂದರೆ ಕೆಂಗೂದಲೂ ನೇರವಾದ ಪಾದವೂ ಅವರಿಗೆ ಕೆಟ್ಟ ಚಿನ್ಹೆಗಳಾಗಿರುವವು. ಏಣಿ (ಸಿಚ್ಚಣಿಕೆ) ಮತ್ತು ಮೀನಿನ ಬಲೆ ಮೊದಲಾದುವುಗಳನ್ನು ತಯಾರಿಸುವಾಗ ಭಿಕ್ಷುಕರು ಅಭಿಮಂತ್ರಿಸಿದ ಸುರೆಯನ್ನು ಅದರ ಮೇಲೆ ಸುರಿಯುವ ಪದ್ಧತಿಯು ಅವರಲ್ಲಿರುವುದು. ದೋಣಿಯ ಮೇಲೆ ಪ್ರವಾಸಕ್ಕೆ ಹೊರಡುವ ಮುಂಚೆ ಮನೆಯಲ್ಲಿ ವಿಶೇಷವಾಗಿ ಜಗಳವಾಡುವುದು ಶುಭಶಕುನವೆಂದು ಅನೇಕ ನಾವಿಕರು ತಿಳಿದಿರುವರು. ಅದರಲ್ಲಿ ಬೈಗಳು, ಹೊಡೆದಾಟಗಳಾದರಂತೂ ಅಮೃತಸಿದ್ಧಿಯೋಗವೆ! ಪ್ರತಿಯೊಂದು ಗುದ್ದಿಗೂ ಮೂರು ಮೂರು ಸುಂದರವಾದ ಮೀನುಗಳು ಸಿಕ್ಕುವವೆಂದು ಅವರ ತಿಳಿವಳಿಕೆ. ಕಾಂಗೋದಲ್ಲಿರುವ ನಾವಿಕರು ಮನೆಯಲ್ಲಿ ನಿರ್ಜೀವರುವ ಸಜೀವಮನುಷ್ಯರಿಗೆ ಹೊಡೆಯದೆ

CC-0. Jangamwadi Math Collection. Digitized by eGangotri

ಮೂರ್ತಿಗಳನ್ನು ಹೊಡೆದು ತಮ್ಮ ಮನಸ್ಸಿಗೆ ಸಮಾಧಾನ ಪಡೆದುಕೊಳ್ಳುವರು. ಸ್ಕಾಟ್‌ಲಂಡ್, ಬ್ರಿಟನ್ ಮೊದಲಾದ ದೇಶಗಳಲ್ಲಿ ಪ್ರವಾಸಕ್ಕೆ ಹೊರಟಿರುವ ನಾವಿಕರನ್ನು "ಎಲ್ಲಿಗೆ ಹೊರಟೆ?" ಎಂದು ಕೇಳಿದರೆ ಅವನು ಪ್ರಯಾಣವನ್ನು ನಿಲ್ಲಿಸಿಬಿಡುವನು. ಈ ಪ್ರಶ್ನೆಯನ್ನು ಹೆಂಗಸು ಕೇಳಿದರಂತೂ ಇದ್ದದ್ದೂ ಅಪಶಕುನ. ಆ ಜನರಿಗೆ ದರ್ಜಿಯರನ್ನು ಕಂಡರೆ ಭಯ, ಮತ್ತೆ ಕೆಲವರಿಗೆ ಭಿಕ್ಷುಕರು ಎದುರಿಗೆ ಬಂದರೆ ಭಯ, ಸ್ತ್ರೀಯರನ್ನು ದೋಣಿಯಲ್ಲಿ ಕರೆದುಕೊಂಡು ಹೋಗುವುದು ಕೂಡ ಕೆಲವರಿಗೆ ಕೆಟ್ಟ ಶಕುನವೆನಿಸುವುದು.

—John o' London's Weekly

## ಕ್ಷಯ ಚಿಕಿತ್ಸೆ

ಹಿಂದುಸ್ಥಾನದಲ್ಲಿ ಕ್ಷಯ ಅಥವಾ ರಾಜಯಕ್ಷ್ಮ ರೋಗಕ್ಕೆ ತುತ್ತಾಗುವವರ ಸಂಖ್ಯೆಯು ಹೆಚ್ಚುತ್ತಿದೆ. ಇಂಗ್ಲೆಂಡಿನಂತಹ ದೇಶದಲ್ಲಿ ಕ್ಷಯರೋಗಿಗಳ ವಸತಿಗೃಹಗಳಿಗಾಗಿ ಸರಕಾರದವರು ಕೋಟಿಗಟ್ಲೆ ಪೌಂಡುಗಳನ್ನು ವೆಚ್ಚಮಾಡುತ್ತಿರುವರು. ಹಿಂದುಸ್ಥಾನದಲ್ಲಿ ೩೫ ಕೋಟಿ ಜನರಿಗೆ ಸರಕಾರದವರು ೨೫ ವಸತಿಗೃಹಗಳನ್ನು ಕೂಡ ಕಟ್ಟಿಸಿಲ್ಲ! ದಾರಿದ್ರ್ಯದ ಅಭಿವೃದ್ಧಿ, ಶಾರೀರದೌರ್ಬಲ್ಯ, ವಿಲಾಸಪ್ರಿಯತೆ ಇತ್ಯಾದಿಗಳಿಂದ ಈ ರೋಗವು ಹೆಚ್ಚುತ್ತಿದೆ. ಆದರೆ ಇದರ ಪ್ರತಿಕಾರಕ್ಕೆ ಯಾವ ಉಪಾಯವನ್ನೂ ಯೋಜಿಸಿಲ್ಲ. ಇದರ ಹೊರತು ಉಪಾಯವಿಚಾರದಲ್ಲಿ ಜನರ ಅಜ್ಞತೆಯು ಬಲವತ್ತರವಾಗಿರುವುದೂ ಕಾರಣವಾಗಿದೆ. ವ್ಯಾಯಾಮದಿಂದ ಶರೀರವನ್ನು ದೃಢವಾಗಿ ಮಾಡಿಕೊಳ್ಳುವುದು, ಸೂರ್ಯಪ್ರಕಾಶ ಮತ್ತು ಶುದ್ಧವಾದ ಗಾಳಿಯಲ್ಲಿ ಸಂಚರಿಸುವುದು, ಪೌಷ್ಟಿಕವಾದ ಮತ್ತು ಮಿತವಾದ ಆಹಾರ, ಮತ್ತೆ ವಿಷಯಾಸಕ್ತಿ, ಯೋಚನೆ, ಮದಿರಾಪಾನದ ಅತಿರೇಕಗಳನ್ನು ವರ್ಜಿಸುವುದು ಮತ್ತು ಕ್ಷಯರೋಗಿಗಳೊಂದಿಗೆ ಸಂಕರ್ಪವಿರದಿರುವುದು – ಇವೇ ಅದಕ್ಕೆ ಉಪಾಯಗಳು. ಅತಿಸೂಕ್ಷ್ಮರೋಗಜಂತುಗಳು ಶ್ವಾಸಕೋಶದಲ್ಲಿ ಪ್ರವೇಶಿಸುವುದರಿಂದ ಈ ರೋಗವು ಉಂಟಾಗುವುದು. ಈ ರೋಗಜಂತುಗಳು ಬಹುಸೂಕ್ಷ್ಮವಾಗಿರುವುದರಿಂದ ಯಾವ ಡಾಕ್ಟರೀ ಅಥವಾ ಹೋಮಿಯೋ ಔಷಧಿಗಳಿಂದ ಇದನ್ನು ಸಮೂಲವಾಗಿ ನಾಶ ಮಾಡಲಾಗುವುದಿಲ್ಲ. ಅದನ್ನು ಸಮೂಲವಾಗಿ ನಾಶಗೊಳಿಸಲು ಉಪಾಯವನ್ನು ಅಥರ್ವವೇದ (ಮಂಡಲ ೧, ೬೩, ಸೂಕ್ತ ೧೧) ದಲ್ಲಿ ಸೂಚಿಸಲಾಗಿದೆ. ಅನುಭವದಿಂದ ಅದು ನಿಜವೆಂದು ಕಂಡುಬಂದಿದೆ. ಚರಕಗ್ರಂಥದಲ್ಲಿ (ಚಿಕಿತ್ಸಾಸ್ಥಾನ ೮ ೧೮೪) ಇದರ ನಿರ್ದೇಶವನ್ನು ಮಾಡಲಾಗಿದೆ. ಮುಂದೆ ಹೇಳುವ ದ್ರವ್ಯಗಳ ಹೋಮ ಮಾಡುವುದೆ ಆ ಉಪಾಯವಾಗಿದೆ:-ಮಂಡೂಕಪರ್ಣೀ, ಬ್ರಾಹ್ಮೀ, ಇಂದ್ರಾಯಣೀ ಬೇರು, ಶತಾವರೀ, ಅಶ್ವಗಂಧ, ವಿಧಾರಾ, ಶಾಲಪರ್ಣೀ, ವಾಸಾ, ಗುಲಾಬಿ ಹೂ, ತಗರಾ, ರಾಸ್ನಾ, ವಂಶಲೋಚನ (ಬಿದಿರುಪ್ಪು), ಜಟಾಮಾಂಸಿ, ಗೋಕ್ಷುರ(ಆನೆನೆಗ್ಗಿಲು), ಬಾದಾಮಿ, ದೀಪದ್ರಾಕ್ಷಿ, ಜಾಕಾಯಿ, ಕೇಸರಿ, ಜೇನುತುಪ್ಪ, ಕರ್ಪೂರ, ಮತ್ತು ತುಪ್ಪ (ಇವುಗಳ ಧೂಮವು ಶ್ವಾಸಕೋಶಕ್ಕೆ ಪ್ರವೇಶಿಸುವುದರಿಂದ ಕ್ಷಯಕ್ರಿಮಿಗಳು ನಾಶವಾಗುವವು. ಇದಕ್ಕೆ ಇಷ್ಟೀ ಯಜ್ಞವೆಂದು ಹೆಸರು. ದ. ಕೃ. ಭಾ.)

—ಮಾಧುರೀ (ಹಿಂದೀ)

## ಪ್ಲೇಗ್ ಧೂಮ

ಮೇಲಿನದನ್ನು ಬರೆವಾಗ ನನ್ನ ಮತ್ತೊಬ್ಬ ಮಿತ್ರರು ಸ್ವಾನುಭವದಿಂದ ನನಗೆ ತಿಳಿಸಿದ ಮತ್ತೊಂದು ಧೂಮದ ಬಗೆಯನ್ನು ವಾಚಕರ ಉಪಯೋಗಕ್ಕಾಗಿ ಇಲ್ಲಿ ಕೊಡುವೆನು.

ಮುಸ್ತ (ಜೇಕಿನಗಡ್ಡೆ), ಬಿಳಿಯ ಜೀರಿಗೆ, ಕರೀಗೇರು, ನಸುಗುನ್ನಿಕಾಯಿ, ಬೆಲ್ಲ, ಚಂದನ, ಎಕ್ಕೆಯ ಹೂ, ಮತ್ತು ರಾಳ ಇವುಗಳನ್ನು ಸಮಭಾಗದಲ್ಲಿ ತೆಗೆದುಕೊಂಡು, ಕುಟ್ಟಿ, ಬೆಳಿಗ್ಗೆ, ಸಾಯಂಕಾಲ ಮನೆಯಲ್ಲಿ ಧೂಪವನ್ನು ಹಾಕಬೇಕು. ಅದರ ವಾಸನೆಯಿಂದ ಮನೆಯಲ್ಲಿರುವ ತಗಣೆ, ಸೊಳ್ಳೆ, ಚಿಗಟ, ಸರ್ಪ, ಇಲಿ ಮತ್ತು ಇತರ ಎಲ್ಲ ವಿಷಕೀಟಕಗಳು ಮನೆಯನ್ನು ಬಿಟ್ಟೋಡುವವು. ಇದರಿಂದ ಆರೋಗ್ಯವು ಕೂಡ ಸುಧಾರಿಸುವುದು. ಇದಕ್ಕೆ ಗ್ರಂಥಾಧಾರವೂ ಈ ಬಗೆಯಾಗಿರುವುದು.— "ಮುಸ್ತಸಿದ್ಧಾರ್ಥ ಭಲ್ಲಾತಕಪಿಕಚ್ಛುಫಲಂ ಗುಡಂ। ಚೂರ್ಣಂ ಭಾನುಫಲೋಪೇತಂ ದಹೇತ್ಸರ್ಜರಸಾನ್ವಿತಂ॥೧॥ ಮತ್ಕುಣಾ ಮಶಕಾಃ ಸರ್ಪಾಮೂಷಕಾ ವಿಷಕೀಟಕಾಃ। ಪಲಾಯಂತೇ ಗೃಹಂ ತ್ಯಕ್ತ್ವಾ ಯಥಾ ಯುದ್ಧೇಷು ಕಾತರಾಃ ॥೨॥" ಇನಾಕ್ಯುಲೇಷನ್

CC-0. Jangamwadi Math Collection. Digitized by eGangotri

ಮೊದಲಾದ ಸೌಕರ್ಯಗಳಿಲ್ಲದೆಡೆಗಳಲ್ಲಿ ಈ ಪ್ರಯೋಗವನ್ನು ಮಾಡುವುದುತ್ತಮ.

—ಡ. ಕೃ. ಭಾ.

## ರಾಷ್ಟ್ರೀಯ ಚಳವಳದಲ್ಲಿ ಯೋಗಿಗಳೇಕೆ?

ನಮ್ಮ ರಾಷ್ಟ್ರೀಯ ಚಳವಳವು ಪ್ರಾಪಂಚಿಕವಾದುದರಿಂದ ಅದರಲ್ಲಿ ಸಾಧುಸಂತರು, ಸನ್ಯಾಸಿಗಳು, ಮಹಾತ್ಮರು, ಯೋಗಿಗಳು ಏಕೆ ಕೈಯಿಕ್ಕಬೇಕೆಂದು ಕೇಳುವವರಿಗೆ "ಪ್ರಬುದ್ಧಭಾರತ" ವೆಂಬ ಆಂಗ್ಲ ಮಾಸಪತ್ರಿಕೆಯ ಸಂಪಾದಕರು ಉತ್ತರವಾಗಿ ಒಂದು ಲೇಖನವನ್ನು ಬರೆದಿರುವರು. ಅದರ ಸಾರಾಂಶವಿಂತಿದೆ:— "ಯಾವುದಾದರೊಂದು ಧ್ಯೇಯಸಾಧನೆಯ ಮಾರ್ಗದಲ್ಲಿ ಮೂರು ದೊಡ್ಡ ಮೆಟ್ಟಿಲುಗಳಿರುವವು. ಮೊದಲನೆಯದು ಧ್ಯೇಯದರ್ಶನ. ಆ ಸ್ಥಿತಿಯಲ್ಲಿ ಧ್ಯೇಯದ ಮೋಹಕಸ್ವರೂಪವನ್ನು ನೋಡಿ, ಮನುಷ್ಯರ ಭಾವನಾತರಂಗಗಳು ಉಕ್ಕೇರುವವು. ಮತ್ತು ಮನುಷ್ಯನು ವ್ಯಾವಹಾರಿಕ ಅಡಚಣೆಗಳನ್ನು ಲಕ್ಷ್ಯದಲ್ಲಿಡುವುದಿಲ್ಲ. ಎರಡನೆಯ ಮೆಟ್ಟಿಲು ಧ್ಯೇಯ ಮತ್ತು ವ್ಯಾವಹಾರಿಕ ಮಾರ್ಗಗಳ ಮಧ್ಯದಲ್ಲಿರುವ ದ್ವಂದ್ವವು. ಭಾವನೆಗಳು ಕ್ಷಣಭಂಗುರ. ಅವು ದುರ್ಬಲವಾಗಿ, ವಸ್ತುಸ್ಥಿತಿಯ ಭಯಂಕರ ಸ್ವರೂಪವು ಕಾಣಿಸಲಾರಂಭಿಸಿದರೆ ರಾಷ್ಟ್ರೀಯ ಚಳವಳಗಾರರ ಕೈಕಾಲುಗಳು ತಣ್ಣಗಾಗಲಾರಂಭಿಸುವವು. ಆಗ ಧ್ಯೇಯದ ಮೋಹಕ್ಕೆ ಬಲಿಬಿದ್ದು ತಾವು ವ್ಯಾವಹಾರಿಕ ನಷ್ಟವನ್ನುಂಟು ಮಾಡಿಕೊಂಡಿರುವೆವೆಂದು ಅನೇಕರು ಪಶ್ಚಾತ್ತಾಪಪಡುತ್ತಿರುವರು. ಮತ್ತೆ ಇನ್ನು ಮುಂದೇನು ಮಾಡಬೇಕು? ಎಂದು ಅವರ ಮನಸ್ಸಿನಲ್ಲಿ ಗದ್ದಲವೇಳುವುದು. ದೃಢವಾದ ಆತ್ಮಬಲವುಳ್ಳವರು ಮಾತ್ರ ಅಂಥಾ ಸಮಯದಲ್ಲಿ ಅಚಲರಾಗಿರುವರು. ಉಳಿದವರು ನಿಷ್ಕ್ರಿಯರಾಗಿ ಕುಳಿತುಕೊಳ್ಳುವರು. ಆತ್ಮಬಲದ ಪ್ರಭಾವದಿಂದ ಯಾರು ಧ್ಯೇಯಸಾಧನೆಯ ಕಾರ್ಯವನ್ನು ಮುಂದರಿಸುವರೊ ಅಂತವರುಮಾತ್ರ ಮೂರನೆಯ ಮೆಟ್ಟಿಲನ್ನು ಹತ್ತುವರು. ಧ್ಯೇಯಪ್ರಾಪ್ತಿಯೆ ಆ ಮೂರನೆಯ ಮೆಟ್ಟಿಲು. ಐಹಿಕ ಉತ್ಕರ್ಷಸಾಧನೆಯು ಇಂದು ಹಿಂದುಸ್ಥಾನದ ಧ್ಯೇಯವಾಗಿದೆ. ಅದನ್ನು ಸಾಧಿಸಿ, ಅಂತಿಮಧ್ಯೇಯದ ಕಡೆಗೆ – ಮೋಕ್ಷದ ಕಡೆಗೆ – ಹೋಗಬೇಕಾಗಿದೆ. ಇಂತಹ ಸಮಯದಲ್ಲಿ ಯಾರಲ್ಲಿ ಅಚಲವಾದ ಆತ್ಮಬಲವಿದೆಯೊ ಅಂತಹ ಮಹಾತ್ಮರ ವಿನಾ, ಯೋಗಿಗಳ ಹೊರತು, ಧ್ಯೇಯ ಮತ್ತು ವ್ಯವಹಾರಗಳ ಮಧ್ಯದಲ್ಲಿರುವ ದ್ವಂದ್ವದಲ್ಲಿ ವಿಜಯಿಗಳಾದವರಲ್ಲದೆ ಮತ್ತಾರು ಆದರ್ಶಮಾರ್ಗದರ್ಶಕರಾಗಬಲ್ಲರು? ಎಂದು ಜನರು ವಿಚಾರ ಮಾಡಿ ನೋಡಬೇಕು. ಕರ್ತೃತ್ವಶಾಲಿಗೆ ಪ್ರೇರಣೆಯನ್ನುಂಟು ಮಾಡುವ ಕೆಲಸವನ್ನು ಇಂದಿನವರೆಗೆ ಯೋಗಿಗಳೇ ಮಾಡುತ್ತ ಬಂದಿರುವರೆಂದು ಇತಿಹಾಸವು ತಿಳಿಸುವುದು. ರಾಷ್ಟ್ರಪುರುಷರಿಗೆ ಮಾರ್ಗದರ್ಶಕರೂ ಪ್ರೇರಕರೂ ಆದ ಈ ಗುರುಗಳು ಕಾಲಮಹಿಮೆಯನ್ನರಿತವರೂ ಕರ್ತೃತ್ವಶಾಲಿಗಳೂ ಆಗಿರಬೇಕು. ಎಲ್ಲ ಯೋಗಿಗಳೂ ಹಾಗಿರುವುದಿಲ್ಲ. ಆದರೆ ಹಾಗಿರುವವರು ಮಾತ್ರ ರಾಷ್ಟ್ರೀಯಚಳವಳದ ನೊಗವನ್ನು ಹೊರಲುಯೋಗ್ಯರು. ಯಾರ ಆತ್ಮಬಲವು ಲೋಕಪ್ರಸಿದ್ಧವಾಗಿದೆಯೊ, ಯಾರು ಲೌಕಿಕವ್ಯವಹಾರದಲ್ಲಿ ಇಳಿದು ತಮ್ಮ ಕರ್ತೃತ್ವಶಕ್ತಿಯನ್ನು ತೋರುವರೊ ಅಂಥವರೇ ಏನಾದರೂ ಕೆಲಸವನ್ನು ಮಾಡುವರು. ಆದುದರಿಂದಲೆ ರಾಷ್ಟ್ರೀಯ ಚಳವಳಗಾರರಲ್ಲಿ ಯೋಗಿಗಳ ಸ್ಥಾನವು ಉಚ್ಚವಾಗಿರುವುದು.

—Prabuddha Bharata

## ಶಾಸ್ತ್ರಕ್ಕಾಗಿ ಆತ್ಮಸಮರ್ಪಣೆ

ದೇವತೆಗಳನ್ನು ರಕ್ಷಿಸುವುದಕ್ಕಾಗಿ ದಧೀಚಿ ಋಷಿಯು ತನ್ನ ದೇಹವನ್ನಿತ್ತನು. ಅದರಂತೆಯೆ ದೇಶ ಮತ್ತು ಧರ್ಮ, ಇವೇ ಮೊದಲಾದ ಪೂಜ್ಯವಿಷಯಗಳಿಗಾಗಿ ಸ್ವಂತ ಪ್ರಾಣವನ್ನರ್ಪಿಸಿರುವ ಉದಾಹರಣೆಗಳು ಇತಿಹಾಸದಲ್ಲಿ ಬೇಕಾದಷ್ಟು ಸಿಕ್ಕುವವು. ಆದರೆ ತಮ್ಮ ಅಭಿರುಚಿಯಿರುವ ಶಾಸ್ತ್ರಕ್ಕಾಗಿ, ಎಂದರೆ ಅದರಲ್ಲಿ ನವೀನ ಸಂಶೋಧನೆಯಾಗಬೇಕು ಮತ್ತು ಮಾನವರ ಕ್ಲೇಶವು ದೂರವಾಗಬೇಕು ಎಂಬ ಉದ್ದೇಶದಿಂದ ಯಾವ ಮಹಾತ್ಮರು ತಮ್ಮ ದೇಹವನ್ನು ಬಲಿಯಾಗಿ ಅರ್ಪಿಸಿರುವರೊ ಅವರು ದೊಡ್ಡವರಲ್ಲವೆ? ಮೊನ್ನೆ ತಾನೆ ಡಾ। ಹಿಡಿಯೊ ನೋಗು, ಎಂಬ ಪ್ರಸಿದ್ಧ ಜಪಾನೀ ವೈದ್ಯನು ಆಫ್ರಿಕಾ ಖಂಡದಲ್ಲಿ ಶೀತಜ್ವರನಿವಾರಣೆಗಾಗಿ ಪ್ರಯತ್ನಪಡುತ್ತಿರುವಾಗ ಅದೇ ಜ್ವರದಿಂದ ಮರಣವನ್ನೈದಿದನು. ಡಾ. ವಿಲ್ಸನ್ ಎಂಬಾತನು ತನ್ನ ಪ್ರಯೋಗಶಾಲೆಯಲ್ಲಿ ಮೂರು ಗ್ಯಾಸಿನ ಪ್ರಯೋಗವನ್ನು ಮಾಡುತ್ತಿರುವಾಗ ಮೂರು

CC-0. Jangamwadi Math Collection. Digitized by eGangotri

ಪಾಯಿಗಳಲ್ಲಿ ಗ್ಯಾಸ್ ನುಗ್ಗಿ ಆತನು ಗತಪ್ರಾಣನಾದನು. (ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಆಚೆಯ ವರುಷ ರಸಾಯನಶಾಸ್ತ್ರದ ಅಧ್ಯಾಪಕರಾಗಿದ್ದ ಶ್ರೀ. ಎಂ. ಜಿ. ಶ್ರೀನಿವಾಸರಾವ್ ಎಂಬವರು ಅದೇ ರೀತಿಯಾಗಿ ಮರಣವನ್ನೈದಿದರು! ) ಒಂದು ಬಗೆಯ ರೋಗ ಜಂತುಗಳಿಂದ ಶರೀರದ ಮೇಲೆ ಆವ ಪರಿಣಾಮವಾಗುವುದೆಂದು ನೋಡುವುದಕ್ಕಾಗಿ ಅಮೇರಿಕೆಯ ಹೋಮಿಯೋಪಥಿಕ್ ಮೆಡಿಕಲ್ ಕಾಲೇಜಿನ ಹದಿನೈದು ಮಂದಿ ವಿದ್ಯಾರ್ಥಿಗಳು ೬ ತಿಂಗಳವರೆಗೆ ಆ ರೋಗ ಜಂತುಗಳನ್ನು ತಮ್ಮ ದೇಹದಲ್ಲಿಟ್ಟುಕೊಂಡು, ಆದರಿಂದ ಅನೇಕ ಕಷ್ಟಗಳನ್ನು ಅನುಭವಿಸಿದರು. ಕಳೆದ ಮಹಾಯುದ್ಧದ ಸಮಯದಲ್ಲಿ ಒಂದು ಬಗೆಯ ಜ್ವರವನ್ನು ನಿವಾರಿಸಬೇಕೆಂದು ಮಿಸ್ ಮೇರಿ ಎಂಬ ಒಬ್ಬ ಆಂಗ್ಲ ಸ್ತ್ರೀಯು ಆ ಜ್ವರದ ಜಂತುಗಳನ್ನು ತನ್ನ ಶರೀರದಲ್ಲಿ ಬಿಟ್ಟುಕೊಂಡು ಆತ್ಮಾಹುತಿಯನ್ನಿತ್ತಳು. ಸರ್ ಹೆನ್ರಿ ಹಾಯಿಡ್ ಎಂಬ ಪ್ರಸಿದ್ಧ ವೈಜ್ಞಾನಿಕನು ೨೦ ವರುಷಗಳಿಗೆ ಹಿಂದೆ ಪಾರ್ಶ್ವವಾಯುವಿನ ವಿಕಾರವನ್ನು ಸರಿಯಾಗಿ ತಿಳಿದುಕೊಳ್ಳಬೇಕೆಂದು ತನ್ನ ಎಡಗೈಯ ಸ್ನಾಯುಗಳನ್ನು ಕತ್ತರಿಸಿದನು. ಇಂದು ಆ ಶಾಸ್ತ್ರಜ್ಞನು ಶಾಶ್ವತವಾಗಿ ಕೈ ಇಲ್ಲದವನಾಗಿರುವನು. ಗಳೆನೆಯ ಶತಮಾನದಲ್ಲಿ ಸ್ಪಾಲಂಜಾನಿ ಎಂಬ ಶಾಸ್ತ್ರಜ್ಞನು ಜಠರ ಕ್ರಿಯೆಯು ಹೇಗೆ ನಡೆಯುವುದೆಂಬುದನ್ನು ನೋಡುವುದಕ್ಕಾಗಿ ಅನೇಕ ಕಠಿಣವೂ ರುಕ್ಷವೂ ಆದ ಪದಾರ್ಥಗಳನ್ನು ಸೇವಿಸಿ ದೇಹದಂಡನೆಯನ್ನನುಭವಿಸಿದನು. ಡಾ. ಫಿಶರ್ ಮತ್ತು ಬಿ. ಎಸ್. ಹಾಲ್ಡೇನ್ ಎಂಬ ವೈಜ್ಞಾನಿಕರು ಸಂಶೋಧನೆಗಾಗಿ ಇದೇ ಬಗೆಯ ಕಾಯಕ್ಲೇಶಗಳನ್ನನುಭವಿಸಿದರು. ಈ ಪ್ರಸಿದ್ಧವ್ಯಕ್ತಿಗಳಲ್ಲಿ ಇನ್ನೂ ಅನೇಕ ಅಜ್ಞಾತರತ್ನಗಳು ಎಂದರೆ ಶಾಸ್ತ್ರದ ಪ್ರಗತಿಗಾಗಿ ತಮ್ಮ ಜೀವದ ಮೇಲಿನ ಆಶೆಯನ್ನು ತೊರೆದವರು ಎಷ್ಟೋ ಜನರಿದ್ದಾರೆ. 'ಧ್ಯೇಯವೇ ದೇವರು' ಎಂಬ ನಿಶ್ಚಲಶ್ರದ್ಧೆಯಿಂದ ಅವರಿಗೆ ನಶ್ವರವಾದ ಶರೀರದ ಮೇಲೆ ಲಕ್ಷ್ಯವಿರಲಿಲ್ಲ. ಯಾವುದಾದರೊಂದು ಬಗೆಯ ಸತ್ಕಾರ್ಯಕ್ಕಾಗಿ ಉದ್ಯುಕ್ತರಾದ ಕಾರ್ಯಕರ್ತರು ಇದೇ ವೃತ್ತಿಯನ್ನವಲಂಬಿಸಬೇಕಲ್ಲವೆ?

—ಪ್ರವಾಸಿ (ಬಂಗಾಳಿ)

## ಬೌದ್ಧಧರ್ಮವೂ ಹಿಂದುಧರ್ಮವೂ

ಬುದ್ಧಧರ್ಮವು ಹಿಂದೂಧರ್ಮದ ವಿರುದ್ಧವಾಗಿ ಎದ್ದ ದಂಗೆ (ಬಂಡಾಯ) ಅಲ್ಲ. ನಿಸರ್ಗದೊಂದಿಗೆ ತಾದಾತ್ಮ್ಯವನ್ನು ಹೊಂದಬೇಕೆಂಬ ಪ್ರಾಚೀನ ಮಹರ್ಷಿಗಳ ಮೂಲತತ್ವವನ್ನು ಬುದ್ಧನು ಸಂಪೂರ್ಣವಾಗಿ ಆಚರಣೆಯಲ್ಲಿ ತಂದನು. ಋಷಿಗಳಂತೆ ಬುದ್ಧನಾದರೂ ರುಕ್ಷವಾದ ಅರಸಿಕವೃತ್ತಿಯವನಾಗಿರಲಿಲ್ಲ. ಸುಜಾತಾ ಎಂಬ ಹುಡುಗಿಯು ಕೊಟ್ಟ ಹಾಲನ್ನೂ ಅಕ್ಕಿಯನ್ನೂ ವಿಶೇಷ ಪ್ರೇಮದಿಂದ ಸ್ವೀಕರಿಸಿ ಅವನು ಅವಳಿಗೆ ಆಶೀರ್ವಾದವನ್ನಿತ್ತನು. ಸಂನ್ಯಾಸವೃತ್ತಿಯ ಅತಿರೇಕವೂ ವೈಯಕ್ತಿಕ ಸುಖೋಪಭೋಗಗಳ ಲಾಲಸೆಯೂ ತ್ಯಾಜ್ಯವೆಂದು ಅವನು ತನ್ನ ಧರ್ಮಕ್ಕೆ ಸುವರ್ಣಮಧ್ಯ ಮಾರ್ಗವನ್ನು ಹುಡುಕಿದನು. ಪೂರ್ವದ ಋಷಿಗಳಂತೆ ಅವನಿಗೂ ತಪಸ್ಸಿನಲ್ಲಿ ವಿಶ್ವಾಸವಿತ್ತು. ಆದರೆ ದೇಹದಂಡದಿಂದ ಜ್ಞಾನಪ್ರಾಪ್ತಿಯಾಗುವುದು ಎಂಬ ಕಲ್ಪನೆಯು ಅವನಿಗೆ ಸ್ವಲ್ಪವೂ ಸಮ್ಮತವಿರಲಿಲ್ಲ. ಬುದ್ಧಿ ಮತ್ತು ಸಂಯಮದಿಂದ ಜ್ಞಾನಪ್ರಾಪ್ತಿಯಾಗುವುದೆಂದು ಅವನು ಹೇಳುತ್ತಿದ್ದನು. ಪೂರ್ವಾಶ್ರಮದಲ್ಲಿ ತಾನು ಮಾಡಿದ ದೇಹದಂಡದ ವಿಚಾರವಾಗಿ ಅವನೇ ಹಾಸ್ಯ ಮಾಡುತ್ತಿದ್ದನು. ಹಿಂದೂ ಧರ್ಮವು ಪ್ರಾಚೀನಕಾಲದಿಂದಲೂ ಕರ್ಮ ಮತ್ತು ಸ್ವಾವಲಂಬನ ವಿಚಾರವನ್ನು ಘೋಷಿಸಿತು, ಬುದ್ಧನು ಕೂಡ ಅದನ್ನೇ ಬೋಧಿಸುತ್ತಿದ್ದನು.

—Kalpaka





CC-0. Jangamwadi Math Collection. Digitized by eGangotri



## ಸತ್ಯಾಗ್ರಹಕ್ಕೆ ಕಾನೂನಿನಿಂದ ಪ್ರಾಶಸ್ತ್ಯವು ದೊರೆಯಬೇಕು!

ಹೀಗೆಂದು ಪ್ರೊಫೆಸರ್ ಎ. ಈ. ಝಿಮರ್ನ್ ಎಂಬ ಒಬ್ಬ ದೊಡ್ಡ ಆಂಗ್ಲವಿಚಾರಿಗಳು 'ಸ್ಪೆಕ್ಟೇಟರ' ಎಂಬ ಇಂಗ್ಲಿಷ್ ಪತ್ರಿಕೆಯಲ್ಲಿ ಪ್ರತಿಪಾದಿಸುತ್ತಾರೆ. ಅವರ ಕಣ್ಣಮುಂದೆ ಹಿಂದುಸ್ಥಾನದ ವಿಶಿಷ್ಟ ಪರಿಸ್ಥಿತಿಯೂ, ಅದರ ಮೂಲಕ ಜನಿಸಿದ 'ಸತ್ಯಾಗ್ರಹ'ವೆಂಬ ಪ್ರತೀಕಾರಶಾಸ್ತ್ರವೂ ಇಲ್ಲ. ಅವರು ತಮ್ಮಲ್ಲಿನ ಪ್ರಶ್ನೆಗಳ ಬಗೆಗೂ ತಾವು ಅವುಗಳಿಗೆ ಕೊಡುತ್ತಿರುವ ಉತ್ತರಗಳ ಬಗೆಗೂ ವಿವೇಚನೆಯನ್ನು ನಡೆಯಿಸಿದ್ದಾರೆ. 'ಮಹಾಯುದ್ಧ'ದ ರುದ್ರಹಿಂಸೆಯನ್ನು ಕಣ್ಣಾರೆ ಕಂಡವರೂ ಅನುಭವಿಸಿದವರೂ ಆದ ಪಾಶ್ಚಾತ್ಯರು ಈಗಿನ ಕಾಲದ ಯುದ್ಧವೆಂದರೇನು, ಭೌತಿಕಶಾಸ್ತ್ರದ ಶೋಧಗಳು ಯುದ್ಧಕಲೆಗೆ ನೆರವಾದಂದಿನಿಂದ ಹಿಂಸೆಯೂ ಹೇಗೆ ಶಾಸ್ತ್ರೀಯಪದ್ಧತಿಯಿಂದ ಮಾಡಲ್ಪಡುತ್ತಿದೆ—ಎಂಬುದನ್ನು ಮನಗಂಡಲ್ಲಿ ಸೋಜಿಗವಿಲ್ಲ. ಅವರಲ್ಲಿನ ವಿಚಾರಿಗಳು ಹಲವರು ಈ ಯುದ್ಧಸಂಸ್ಥೆಯನ್ನು ಪ್ರತಿಭಟಿಸಿ, ಸೆರೆಮನೆಗಂಡಿದ್ದಾರೆ. ನಮ್ಮ ಮನಸ್ಸಿನ ರಾಜ್ಯವನ್ನು ಸ್ವಲ್ಪ ನಿರೀಕ್ಷಿಸಿದೆವಾದರೆ, ಅತ್ತ ರಾಜಸಿಕಪ್ರವೃತ್ತಿಗಳು ಇನ್ನಿಷ್ಟು ಐಶ್ವರ್ಯವನ್ನು – ಇನ್ನಿಷ್ಟು ಭೋಗಭಾಗ್ಯಗಳ ಬಿಸಿಲ್ಗುದುರೆಯನ್ನು ಬೆಂಬತ್ತಿದರೆ, ಇತ್ತ ಸದಸದ್ವಿವೇಕವು ಇನ್ನಿಷ್ಟು ಸೂಕ್ಷ್ಮವೂ ವಿಮರ್ಶಕವೂ ಆಗುತ್ತ ನಡೆದಿರುವುದು ಕಂಡುಬರುವುದು; ಪಾಶ್ಚಾತ್ಯರ ಸಂಸಾರಕ್ಕೆ ಈ ದೃಷ್ಟಾಂತವನ್ನು ಕೊಡಬಹುದು.

ಅತ್ತ ವೈಯಕ್ತಿಕ ಅಹಂಕಾರವು ಸಾಮೂಹಿಕ ಅಹಂಕಾರದ ರೂಪವನ್ನು ತಳೆದು, ಸ್ವಾರ್ಥವು ವಿಶ್ವರೂಪವನ್ನು ಧರಿಸಿ ಜಗತ್ತಿನ ಶಾಂತಿಗೆ ರಾಹುವಾಗಿ ತೋರುತ್ತಿದ್ದರೆ, ಇತ್ತ ನ್ಯಾಯಪ್ರಿಯರೂ ಸತ್ಯಸಂಧರೂ ಆದ ಹಲವು ಜೀವಿಗಳು ಈ ಅನೀತಿಮೂಲವಾದ ವ್ಯವಸ್ಥೆಯನ್ನೆದುರಿಸಿ ತಮ್ಮ ಮನೋಧೈರ್ಯವನ್ನು ಪ್ರಕಟಿಸಿದ್ದಾರೆ; ಮತ್ತವರ ಸಂಖ್ಯೆಯು ದಿನದಿನಕ್ಕೆ ಬೆಳೆಯುತ್ತಲಿದೆ. ಅವರಿಗೆ ಸಿಕ್ಕುತ್ತಿರುವ ಯಶಸ್ಸು ಪಾಶ್ಚಾತ್ಯರಾ ನೀತಿಗೊಂದು ತೊಡಕಾಗಿದೆ. ಹಲವು ಸಮಸ್ಯೆಗಳಿಗೆ ಪಾಶ್ಚಾತ್ಯರು ತಮ್ಮ ನಿರ್ಧೀತವಿಚಾರಪದ್ಧತಿಯ ಸಮಾಧಾನಗಳನ್ನು ಹೇಳುತ್ತಿರುವಂತೆ, ಇದಕ್ಕೂ ಹೇಳಲು ಪ್ರಯತ್ನಿಸುತ್ತಿದ್ದಾರೆ. ಪ್ರೊ. ಝಿಮರ್ನ್ ಅವರದು ಈ ಬಗೆಯ ಪ್ರಯತ್ನ.

ಪ್ರೊ. ಝಿಮರ್ನ್ ಅವರು ಸತ್ಯಾಗ್ರಹಿಗಳಲ್ಲಿ ಎರಡು ಬಗೆಗಳನ್ನು ಹೇಳುತ್ತಾರೆ. ಕೆಲವರು ಒಳಗೆ ತೋರುವ ದರ ಅನುರೋಧದಿಂದಲೇ ತಮ್ಮೆಲ್ಲರ ಮಹತ್ತ್ವದ ನಿರ್ಣಯಗಳನ್ನು ಮಾಡುತ್ತಾರೆ; ಇನ್ಯಾವ ಸೂಚನೆಗಳನ್ನೂ ಲಕ್ಷಿಸರು; ಅದೊಂದು ಬಗೆಯ ಅಂತಃಸ್ಫೂರ್ತಿಯಿಂದಲೇ ಅವರು ಪ್ರವೃತ್ತರಾಗುತ್ತಾರೆ; ಹೊರಗಿನ ಪ್ರಮಾಣಗಳನ್ನು ಅನುಸರಿಸಿ ನಡೆಯುವುದು ಅವರ ಸ್ವಭಾವಕ್ಕೆ ವಿರುದ್ಧವಾದುದು. ಅವರು ಸಾಮಾನ್ಯಜನತೆಯೆಂಬ ಮಣ್ಣಿನಲ್ಲಿ ಹೊನ್ನಿನ ಕಣಗಳಂತಿದ್ದಾರೆ. ಒಟ್ಟಾರೆ ಅವರು ಒಳ್ಳೆಯ ನಾಗರಿಕರಾಗಿರುತ್ತಾರೆ; ಆದರೆ ಯಾವುದೊಂದು ಕಾನೂನು ಅನೀತಿಮೂಲವೆಂದು ಅವರಿಗೊಮ್ಮೆ ಪ್ರಮಾಣವಾಯಿತೆಂದರೆ, ಅದನ್ನು ಪ್ರತಿಕರಿಸದೆ ಅವರು ಬಿಡರು.

CC-0. Jangamwadi Math Collection. Digitized by eGangotri

ವ್ಯಕ್ತಿಸ್ವಾತಂತ್ರ್ಯಕ್ಕೆ ಮನ್ನಣೆಯಿದ್ದ ದೇಶಗಳಲ್ಲಿ ಅವರ ಶಾಸನತಿರಸ್ಕಾರಕ್ಕೆ ದುರ್ಲಕ್ಷ್ಯವನ್ನು ತೋರಿಸುವುದುಂಟು. ಆದರೆ ಅವರು ಬುದ್ಧಿಪೂರ್ವಕವಾಗಿ ಅರಾಜಕತೆಯ ಹಾದಿಯನ್ನೇ ಹಿಡಿದಿದ್ದಾರೆಂಬುದನ್ನು ನಾವು ಮರೆಯಕೂಡದು. ಅವರ ಆಚರಣೆಗೆ ತಕ್ಕಂತೆ ರಾಜಸತ್ತೆಯು ತಕ್ಕ ಪಾರುಪತ್ಯವನ್ನು ಮಾಡಿದರೆ, ಅವರು ದೂರಿಕೊಳ್ಳಲು ಕಾರಣವೂ ಇಲ್ಲ, ಅವರು ದೂರಿಕೊಳ್ಳುತ್ತಲೂ ಇಲ್ಲ.

ಅವರ ದಾರಿಯೇ ಬೇರೆ. ಆದರೆ ಪ್ರತಿಕಾರವು ಯೋಗ್ಯವೋ ಅಯೋಗ್ಯವೋ ಎಂಬುದನ್ನು ವಿಚಾರವಿಮರ್ಶೆಗಳ ಒರೆಗೆ ಹಿಡಿದು ನಿರ್ಣಯಿಸುವವರ ವರ್ಗವಿನ್ನೊಂದಿರುತ್ತದೆ. ಎರಡರಲ್ಲಿ ಕಡಿಮೆ ಕೆಡುಕು ಯಾವುದು–ಎಂಬುದನ್ನು ಬುದ್ಧಿಯಿಂದ ನಿಷ್ಕರ್ಷಿಸಿ ಆರಿಸುವುದು ಅವರ ಕೆಲಸವಾಗಿರುತ್ತದೆ. ವ್ಯಕ್ತಿಸ್ವಾತಂತ್ರ್ಯವನ್ನು ಗೌರವಿಸುವ ಕಟ್ಟುಕಟ್ಟಳೆಗಳುಳ್ಳ ನಾಡೆಂದು ಇಂಗ್ಲಂಡಿನ ಬಗ್ಗೆ ಖ್ಯಾತಿಯಿದೆ. (ಝಿಮರ್ನ್‌ರು ಅಲ್ಲಿಯ ಪರಿಸ್ಥಿತಿಯನ್ನು ಕುರಿತೇ ಮಾತನಾಡುತ್ತಿದ್ದಾರೆಂಬುದನ್ನು ಮರೆಯಕೂಡದು.) ತನ್ನ ಪ್ರೀತಿಯ ಧ್ಯೇಯದ ಬಗ್ಗೆ ಜನಜಾಗೃತಿಯನ್ನು ಹುಟ್ಟಿಸಿ, ವ್ಯಕ್ತಿಯು ಅಲ್ಲಿಯ ಶಾಸನಗಳಲ್ಲಿ ತನಗೆ ಇಷ್ಟವಾದ ತಿದ್ದುಪಾಟಗಳನ್ನು ಮಾಡಲು ಅವಕಾಶವಿದೆ. ತನಗೆ ಅಸಮ್ಮತವಾದ ರಾಜಶಾಸನವನ್ನು ಒಮ್ಮೆಲೆ ಧಿಕ್ಕರಿಸಲಿಕ್ಕೂ ಆಗದು, ತನ್ನ ಸದಸದ್ವಿವೇಕವು ಹೇಳುವ ಹಾದಿಯನ್ನು ಬಿಡಲೂ ಆಗದು — ಈ ಬಗೆಯ ಧರ್ಮಸಂಕಟವೊಂದು ಅಲ್ಲಿಯ ವಿಚಾರಿಗಳನ್ನು ಎದುರಿಸುವುದುಂಟು. ಕೆಲವು ಕಡೆ, ಕಟ್ಟುಕಟ್ಟಳೆಗಳು, ಹೊಳೆಯ ಹರಿಯುವಿಕೆಯನ್ನು ಅಡ್ಡಗಟ್ಟಿಯೇ ಬಿಡಬೇಕೆಂದು ಹಾಕಿದ ಒಡ್ಡುಗಳಂತಿರುವವು; ಕೆಲವು ಕಡೆ ಅವು ಹೊಳೆಯ ಸ್ವಚ್ಛಂದಗತಿಯೊಡನೆ ಹಿಗ್ಗುವ ಕುಗ್ಗುವ ದಂಡೆಗಳಂತಿರುವವು. ಇಂಗ್ಲಂಡಿನ ಶಾಸನಗಳು ಅಲ್ಲಿಯ ಜನಜೀವನದ ವಿಮುಕ್ತ ವಿಕಾಸಕ್ಕೆ ಬಹುಮಟ್ಟಿಗೆ ಅವಕಾಶವನ್ನು ಕಲ್ಪಿಸಿಕೊಡುತ್ತಿವೆ. ಸತ್ಯಾಗ್ರಹಿಯ ಉದ್ದೇಶವಾದರೂ ಏನು? ಹಿಂದುಸ್ಥಾನದಲ್ಲಿ ಸತ್ಯಾಗ್ರಹಪ್ರವರ್ತಕರಾಗಿರುವ ಮಹಾತ್ಮ ಗಾಂಧಿಯವರ ಅಭಿಪ್ರಾಯದಲ್ಲಿ, ವ್ಯಕ್ತಿಯು ತನಗೆ ಇಷ್ಟಬಂದ ರೀತಿಯಲ್ಲಿ ಯಾವುದೊಂದು ಶಾಸನವನ್ನು ಉಲ್ಲಂಘಿಸುವುದು ಸತ್ಯಾಗ್ರಹವೆಂತಲ್ಲ. ಶಾಸನವನ್ನು ಮುರಿಯುವ ಪೂರ್ವದಲ್ಲಿ ಅದನ್ನು ಉಲ್ಲಂಘಿಸಿಯೇ ಬಿಡುವಷ್ಟು ಅದು ಸಮಾಜಕ್ಕೆ ಘಾತಕವೋ– ಎಂಬುದನ್ನು ಕೂಲಂಕಷವಾಗಿ ವಿಚಾರಿಸಬೇಕು. ಆಗಿನ ಆಡಳಿತದಲ್ಲಿ ತಕ್ಕ ಬದಲಾವಣೆಗಳನ್ನು ಮಾಡಲು ಸಾಧ್ಯವಿದೆಯೋ ಇಲ್ಲವೋ ಎಂಬುದನ್ನು ತರುವಾಯ ಯೋಚಿಸಬೇಕು. ತಾನು ಶಾಸನೋಲ್ಲಂಘನವನ್ನು ಮಾಡಿದರೆ ಅದರ ಪರಿಣಾಮವು ಸಮಾಜದ ಸುಪ್ತ ಹಿಂಸಾಶಕ್ತಿಗಳನ್ನು ಹರಿಬಿಡುವುದರಲ್ಲಾಗುವುದೋ, ಸಮಾಜವನ್ನು ಸಂಸ್ಕರಿಸಿ, ಅದನ್ನು ಸಾಮೂಹಿಕ ನೀತಿಯ ದಾರಿಯಲ್ಲಿ ಒಂದು ಹೆಜ್ಜೆ ಮುಂದಕ್ಕೊಯ್ಯುವುದರಲ್ಲಾಗುವುದೋ– ಎಂಬುದನ್ನು ಆತನು ಆಳವಾಗಿ ಆಲೋಚಿಸಬೇಕು. ಆಡಳಿತಕ್ಕೆ ಹತ್ತು ಹತ್ತು ಬಾರಿ ಎಚ್ಚರಿಕೆಯನ್ನು ಕೊಟ್ಟು, ಪರಿಸ್ಥಿತಿಯನ್ನು ಹತ್ತುಹತ್ತು ಬಾರಿ ತೂಗಿ ನೋಡಿ, ತರುವಾಯ ಆತನು ತನ್ನ ಅಂತರಾತ್ಮನು ಪ್ರೇರಿಸುವ ಮಾರ್ಗವನ್ನು ಹಿಡಿಯಬೇಕು.

ಈ ರೀತಿಯಲ್ಲಿ ನೋಡಲಾಗಿ, ಸತ್ಯಾಗ್ರಹವು ಸಮಾಜಶಾಸ್ತ್ರದ ಒಂದು ಅಂಗವಾಗುವುದು. ಝಿಮರ್ನರು ಇದನ್ನೇ ಹೇಳುತ್ತಾರೆ. ಅವರು ಅಲ್ಲಿನ ಹುಂಬಗುದಿಕೆಯ ಸತ್ಯಾಗ್ರಹಿಗಳನ್ನು ಕುರಿತು ಹೇಳುವುದೇನೆಂದರೆ, ಅಂಥವರು ಸಾರಾಸಾರವಿಚಾರವನ್ನು ಮಾಡುವುದಿಲ್ಲ; ಹುಂಬಗುದಿಕೆಯಿಂದ, ಇಂಥದು ಕೆಟ್ಟದು– ಎಂದು ಗೊತ್ತುಪಡಿಸಿದೊಡನೆ ಅದನ್ನು ಮುರಿಯಲು ದುಡುಕುತ್ತಾರೆ; ಸೈನ್ಯದಲ್ಲಿ ಸೇರುವುದು ತಪ್ಪೆಂಬುದು ಹೊಳೆದ ಕೂಡಲೆ, ಕಡ್ಡಾಯದ ಸೈನಿಕಕಾಯಿದೆಯನ್ನು ಮುರಿದುಬಿಡುವುದೊಂದೇ ಅವರ ಕೆಲಸ; ಈ ಯುದ್ಧಪ್ರಧಾನ ಸಂಸ್ಕೃತಿಯಿಂದೊದಗುವ ಇತರ ಸೌಕರ್ಯಗಳ ಲಾಭವನ್ನು ಪಡೆಯುವುದನ್ನು ಅವರು ಬಿಡುವುದಿಲ್ಲ; ಯುದ್ಧಕ್ಕಾಗಿ ಸಕಲಪ್ರಜಾವರ್ಗವನ್ನೇ ಸಿದ್ಧಪಡಿಸುತ್ತಿರುವ ಈವೊತ್ತಿನ ಆರ್ಥಿಕ ವ್ಯವಸ್ಥೆಯ ಅನುಕೂಲತೆಗಳನ್ನು ಹೊಂದಲು ಅವರು ಹಿಂದುಮುಂದು ನೋಡುವುದಿಲ್ಲ. ಯುದ್ಧವೇ ಉದ್ದೇಶವಾಗಿರುವ ಸಂಸ್ಕೃತಿಯಿಂದ ಬೇಕಾದ ಸೌಲಭ್ಯಗಳನ್ನು ಪಡೆದು, ಯುದ್ಧವೊಂದಕ್ಕೆ ಮಾತ್ರ ಅಸಮ್ಮತಿಸುವುದು – ಇದು ಪೂರ್ಣಸಮಂಜಸವಾದ ಮಾರ್ಗವಲ್ಲ; ವಿವೇಕಿಯು ಸಮಾಜದಿಂದ ಸರಿದು ನಿಂತು,

CC-0. Jangamwadi Math Collection. Digitized by eGangotri

ಯತಿಜೀವನವನ್ನೇ ಆಶ್ರಯಿಸಬೇಕಾಗುತ್ತದೆ — ಎಂದು ಅವರು ಹೇಳುವರು. (ಮ. ಗಾಂಧಿಯವರು ಬೋಆರ್ ಯುದ್ಧದಲ್ಲಿ ತಾವು ಸಹಕರಿಸಿದುದು, ಮಹಾಯುದ್ಧಕ್ಕೆ ಹಿಂದೀ ಸೈನಿಕರನ್ನು ಒದಗಿಸಿಕೊಟ್ಟುದು ತಮ್ಮ ಸತ್ಯಾಗ್ರಹದ ಕಲ್ಪನೆಯಲ್ಲಿ ತಪ್ಪಲ್ಲವೆಂದು ಹೇಳಿದುದನ್ನು ನಾವಿಲ್ಲಿ ನೆನೆಯಬಹುದು.) ಎಂದರೆ ನಿಜವಾದ ಸತ್ಯಾಗ್ರಹಿಯು ಹರಿಹಾಯುವ ಅರಾಜಕವಾದಿ(Anarchist) ಆಗಿರದೆ, ಸಮಾಜಸ್ವಾಸ್ಥ್ಯದ ಪಕ್ಷಪಾತಿಯಾಗಿರುತ್ತಾನೆ. ಎಂದರೆ ಅವನ ವಿಚಾರಕ್ರಮವು ವಿಘಾತಕವಾಗಿರದೆ, ವಿಧಾಯಕವಾಗಿರುತ್ತದೆ. ಕಟ್ಟಳೆಗಳು ಜಂಗುತಿಂದ ಸಂಕೋಲೆಗಳಾಗಿ, ತನ್ನ ಮೂಲಭೂತವಾದ ಜೀವನ ಸ್ವಾತಂತ್ರ್ಯವನ್ನೇ ಹತ್ತಿಕ್ಕುತ್ತಿವೆಯೆಂದು ಎನಿಸಿದ ಮೇಲೆಯೇ ಆತನು ಶಾಸನಭಂಗಕ್ಕೆ ಪ್ರವೃತ್ತನಾಗುತ್ತಾನೆ.

ಈ ರೀತಿ ಪೂರ್ವಾಪರಪಕ್ಷಗಳನ್ನು ಹಲವುಬಾರ ತೂಗಿ ನೋಡಿ, ಸತ್ಯಾಗ್ರಹಕ್ಕೆ ಪ್ರವೃತ್ತರಾದವರಿಗೆ ಕಾನೂನಿನಿಂದ ಪ್ರಾಶಸ್ತ್ಯವು ದೊರೆಯಬೇಕೆಂದು ಝಿಮರ್ನ್‌ರು ಪ್ರತಿಪಾದಿಸುತ್ತಾರೆ. ಇದು ಅಸಾಧ್ಯಕೋಟಿಯೊಳಗಿನ ವಿಚಾರವೇ? ಮನಸ್ಸಿರಲಿ, ಇಲ್ಲದಿರಲಿ – ಅನೇಕ ಯುರೋಪೀಯ ಸರಕಾರಗಳು ಸೇರಿ ರಾಷ್ಟ್ರಸಂಘವೊಂದನ್ನು ನಿರ್ಮಿಸಿಕೊಂಡು, ಅದರ ನಿರ್ಣಯಕ್ಕೆ ತಮ್ಮ ಸಾರ್ವಭೌಮತ್ವಕ್ಕೆ ಒಳಪಟ್ಟ ಕೆಲವಾದರೂ ವಿಷಯಗಳನ್ನು ಒಪ್ಪಿಸಿ, ತಮ್ಮ ಸ್ವೇಚ್ಛಾಸ್ವಾತಂತ್ರ್ಯಕ್ಕೆ ಒಂದು ಬಗೆಯ ಬಂಧನಗಳನ್ನು ಹಾಕಿಕೊಂಡಿವೆ. ಮನಸ್ಸಿರಲಿ, ಇಲ್ಲದಿರಲಿ - ಈವೊತ್ತಿನ ಯುಗಧರ್ಮದ ಮೂಲಕ, ಜನಸಾಮಾನ್ಯರಿಗೆ ತಮ್ಮ ಮೂಲಭೂತ ಅಧಿಕಾರಗಳ ಎಚ್ಚರಿಕೆ ಹುಟ್ಟಿದುದರ ಮೂಲಕ, ರಾಷ್ಟ್ರಕುಟುಂಬದ ಘಟಕಗಳು ತಾವೆಂದು ಸರಕಾರಗಳು ಇಂದು ಒಪ್ಪಿಕೊಳ್ಳಬೇಕಾಗಿ ಬಂದಿದೆ. ವಿವೇಕಿಗೆ ಇಲ್ಲಿಯೊಂದು ದಾರಿ ದೊರೆಯಬೇಕೆಂದು ಝಿಮರ್ನರು ಹೇಳುತ್ತಾರೆ. ಯುದ್ಧವನ್ನು ಇಂದಿಲ್ಲ ನಾಳೆ, ಪೂರಾ ಬಹಿಷ್ಕರಿಸಬೇಕೆಂಬುದು ರಾಷ್ಟ್ರಸಂಘದ ಸಭಾಸದರಾಷ್ಟ್ರಗಳು ಅಂಗೀಕರಿಸಿದ ತತ್ತ್ವವಾಗಿದೆ. ಈ ಅಂಗೀಕೃತತತ್ತ್ವಕ್ಕೆ ವಿರುದ್ಧವಾಗಿ, ಯಾವುದೊಂದು ರಾಷ್ಟ್ರವು ಯುದ್ಧವನ್ನು ಮನಸಾ ವಿರೋಧಿಸುವ ವ್ಯಕ್ತಿಗೆ ತನ್ನ ಸದಸದ್ವಿವೇಕಕ್ಕೆ ವಿರುದ್ಧವಾಗಿ ಹೋಗಲು ಒತ್ತಾಯಪಡಿಸಿದರೆ, ಆವೊತ್ತಿನ ರಾಷ್ಟ್ರಸಂಘದ ನಿಯಮಾವಳಿಯಲ್ಲಿ ಇದಕ್ಕೊಂದು ದಾರಿಯನ್ನು ಮಾಡಿಕೊಡಬೇಕೆಂದೂ, ಇದು ಅಸಾಧ್ಯವಲ್ಲವೆಂದೂ ಅವರು ಹೇಳುತ್ತಾರೆ. ಲ್ಯಾಂಬೆಥ್ ಕಾನ್ಫರೆನ್ಸಿನಲ್ಲಿ (ಕ್ರಿಸ್ತೀ ಧರ್ಮಾಧಿಕಾರಿಗಳ ವಿಶ್ವಪರಿಷತ್ತಿನಲ್ಲಿ) 'ಪಂಚಾಯತಿಯಿಂದ ಅಥವಾ ಸಂಧಾನದಿಂದ ಆಂತರರಾಷ್ಟ್ರೀಯ ಜಗಳಗಳನ್ನು ಬಗೆಹರಿಸಿಕೊಳ್ಳುವುದಾಗಿ ವಚನಬದ್ಧವಾಗಿದ್ದೂ, ಆ ವಚನವನ್ನು ಲೆಕ್ಕಿಸದೆ ಸಂಗ್ರಾಮಕ್ಕೆ ಉದ್ಯುಕ್ತವಾದ ರಾಷ್ಟ್ರಗಳೊಡನೆ ಚರ್ಚಿನ ಅನುಯಾಯಿಗಳು ಅಸಹಕಾರವನ್ನು ಮಾಡಬೇಕು' ಎಂದು ತೀರ್ಮಾನವೂ ಆಗಿದೆಯಂತೆ. ಇದರ ಮೇಲೆ ವ್ಯಕ್ತಿಯು ವಿವೇಕಪುರಃಸರವಾಗಿ ಯುದ್ಧವನ್ನು ವಿರೋಧಿಸುವುದಕ್ಕೆ ಧರ್ಮಸಂಸ್ಥೆಗಳ ಬೆಂಬಲ ದೊರೆಯುವಂತೆ ಒದಗಿದಂತಾಯಿತು. ಇನ್ನು ಮೇಲೆ ಇಂತಹ ಯುದ್ಧವಿರೋಧಿಗೆ ಆಂತರರಾಷ್ಟ್ರೀಯ ಶಾಸನಯೋಜನೆಯಿಂದ ಮುಕ್ತಮಾರ್ಗವು ದೊರೆಯುವುದು ಅಷ್ಟು ದುಸ್ಸಾಧ್ಯವಿಲ್ಲ. 'ನೆರೆಹೊರೆಯವನ ಯೋಗಕ್ಷೇಮವನ್ನು ವಿಚಾರಿಸು' ಎಂಬ ಕ್ರಿಶ್ಚನ್ ತತ್ತ್ವವೇ 'ನೆರೆಯ ರಾಷ್ಟ್ರೀಯರ ಯೋಗಕ್ಷೇಮವನ್ನೂ ವಿಚಾರಿಸು' ಎಂದು ಹೊಸ ಆವೃತ್ತಿಯನ್ನು ಪಡೆದಿದೆಯಾದ್ದರಿಂದ, ವಿಚಾರವಿಶಿಷ್ಟವಾದ ಈ ಯುಗದಲ್ಲಿ ವ್ಯಕ್ತಿಯನ್ನು ಅಡ್ಡಗಟ್ಟುವ ಧರ್ಮಸಂಕಟವನ್ನು ರಾಷ್ಟ್ರದ ಕಾನೂನುಗಳು ದೂರ ಮಾಡಬೇಕೆಂದೂ, ಅವು ಹಾಗೆ ಮಾಡಲಾರವಾದರೆ, ಕ್ರಿಶ್ಚನ್ ರಾಷ್ಟ್ರಗಳು ರಾಷ್ಟ್ರಸಂಘದ ಸಭಾಸದರಾಗಿ ಉಳಿಯಬಾರದೆಂದೂ ಪ್ರೊ. ಝಿಮರ್ನರು ಅಭಿಪ್ರಾಯಪಡುತ್ತಾರೆ.

## ಹಿಂದೂಗಳ ಹ್ರಾಸ

ಈ ತಲೆಕಟ್ಟಿನ ಕೆಳಗೆ ಮಹಾರಾಷ್ಟ್ರದ ಪ್ರಮುಖ ಪತ್ರಿಕೆಯಾದ 'ಕೇಸರಿ'ಯಲ್ಲಿ ಕೆಳಗಿನ ಅಂಕೆಗಳು ಬಂದಿವೆ.

ಹಿಂದುಸ್ಥಾನದ ಜನಸಂಖ್ಯೆಯು ೧೯೩೧ರಲ್ಲಿ ೩೫ ಕೋಟಿ ೮೯ ಲಕ್ಷವಿದ್ದುದು, ೧೯೪೧ರ ಜನಗಣನೆಯಲ್ಲಿ ೩೮ ಕೋಟಿ ೧೦ ಲಕ್ಷವಿದ್ದುದಾಗಿ ಕಂಡುಬಂದಿತು.

ಜಗತ್ತಿನಲ್ಲಿ ನಾಲ್ಕು ದೊಡ್ಡ ಧರ್ಮಗಳು ಪ್ರಚಾರದಲ್ಲಿವೆ – ಕ್ರಿಸ್ತೀ, ಬೌದ್ಧ, ಮುಸಲ್ಮಾನ ಮತ್ತು ಹಿಂದೂ

CC-0. Jangamwadi Math Collection. Digitized by eGangotri

ಎಂದು. ೧೯೨೧ರಲ್ಲಿ ಹಿಂದುಸ್ಥಾನದಲ್ಲಿ ಹಿಂದೂಗಳ ಜನಸಂಖ್ಯೆಯು ೨೧, ೬೭, ೩೪, ೫೮೬ ಇದ್ದಿತು.

ಇನ್ನು, ೧೮೮೧ರಿಂದ ಈಗಿನ ವರೆಗೆ ಹಿಂದೂಗಳ ಸಂಖ್ಯೆ ಹೇಗೆ ಸೊರಗುತ್ತ ನಡೆದಿದೆಯೆಂಬುದನ್ನು ನೋಡುವಾ.

ನೂರಕ್ಕೆ ಹಿಂದೂಗಳ ಸಂಖ್ಯೆ

| | |
|---|---|
| ಕ್ರಿ. ಶ. ೧೮೮೧ | ೭೪.೬ |
| ,, ,, ೧೮೯೧ | ೭೩.೪ |
| ,, ,, ೧೯೦೧ | ೭೧.೮ |
| ,, ,, ೧೯೧೧ | ೬೯.೨ |
| ,, ,, ೧೯೨೧ | ೬೮.೬ |

ಎಂದರೆ ೪೦ವರ್ಷಗಳಲ್ಲಿ ೧೦೦ಕ್ಕೆ ೬ರಂತೆ ಈ ಸಂಖ್ಯೆಯು ಬಡವಾಯಿತೆಂದು ಹೇಳಬಹುದು. ಇದೇ ಪ್ರಮಾಣವು ಸ್ಥಿರವಾಗಿದ್ದರೆ, ಹಿಂದೂಸಮಾಜವು ಜಗತ್ತಿನಿಂದ ನಷ್ಟವಾಗುವುದಕ್ಕೆ ತಡವಿಲ್ಲ.

ಕ್ರಿ. ಶ. ೧೯೧೧ರಲ್ಲಿ ೨೧, ೭೫, ೮೬, ೮೯೨ ಒಟ್ಟು ಹಿಂದೂಗಳು ಇದ್ದರು. ಆದರೆ ೧೯೨೧ ರಲ್ಲಿ ೨೧, ೬೭, ೩೪, ೫೮೬ ಕ್ಕೆ ಅವರಿಳಿದರು. ಎಂದರೆ ೧೦ ವರ್ಷಗಳಲ್ಲಿ ೮॥ ಲಕ್ಷ ಹಿಂದೂ ಜನರು ಕಡಿಮೆಯಾದರು. ಆದರಿನ್ನು ಕ್ರಿಸ್ತೀ ಸಮಾಜವನ್ನು ನೋಡೋಣ.

೧೯೧೧ ರಲ್ಲಿ ಕ್ರಿಸ್ತರು ೩೮, ೭೬, ೨೦೩ ಇದ್ದರು. ೧೯೨೧ ರಲ್ಲಿ ೪೭, ೫೪, ೦೭೯ ಆದರು. ೧೯೩೧ರಲ್ಲಿ ೬೨ ಲಕ್ಷಗಳಮೇಲೆ ಇದ್ದರೆಂದು ತಿಳಿದು ಬರುತ್ತದೆ. ಸರಕಾರಿ ವರದಿಗಳಿಂದ ನೋಡಲಾಗಿ, ಪ್ರತಿದಿನಕ್ಕೆ ೨೪೪ ಮಂದಿ ಕ್ರಿಸ್ತೀಧರ್ಮವನ್ನು ಸೇರುತ್ತಾರೆ.

೧೮೮೧ರಲ್ಲಿ ಪಂಜಾಬದಲ್ಲಿ ಬರಿ ೩೭೯ ಕ್ರಿಸ್ತರಿದ್ದರು. ೧೯೨೧ ರಲ್ಲಿ ೩,೪೬,೨೩೯ ರ ವರೆಗೆ ಹೆಚ್ಚಿದರು! ಕ್ರಿಸ್ತಪಾದ್ರಿಗಳು ವಿಶ್ವಪ್ರಯತ್ನಗಳನ್ನು ಮಾಡುತ್ತಿದ್ದುದರ ಫಲವಿದು. ಹಿಂದುಸ್ಥಾನದಲ್ಲಿ ಅವರಿಂದ ೫೧ಕಾಲೇಜುಗಳೂ, ೬೧೦ಶಾಲೆಗಳೂ, ೬೧ಟ್ರೇನಿಂಗ್‌ಸ್ಕೂಲುಗಳೂ ನಡೆಸಲ್ಪಡುತ್ತವೆ. ಇವುಗಳಲ್ಲದೆ ಮುದ್ರಣಾಲಯಗಳು, ಕಾರಖಾನೆಗಳು ಅಷ್ಟಿಷ್ಟಲ್ಲ.

ಹಿಂದೂಧರ್ಮದ ಮೇಲೆ ಇನ್ನೊಂದು ದೊಡ್ಡ ಆಘಾತವೆಂದರೆ ಮಹಮ್ಮದೀಯರದು. ಬೇಕಾದ ಮಾರ್ಗಗಳಿಂದ ಧರ್ಮಾಂತರವನ್ನು ಮಾಡಲಾಗುತ್ತದೆ. ೧೯೧೧ರಲ್ಲಿ ಮುಸಲ್ಮಾನರು ೬ಕೋಟಿ ೫೪॥ಲಕ್ಷ ಇದ್ದರು. ೧೯೨೧ರಲ್ಲಿ ಈ ಸಂಖ್ಯೆಯು ೬ ಕೋಟಿ ೮೦ ಲಕ್ಷಕ್ಕೆ ಬೆಳೆಯಿತು. ೧೯೩೧ರಲ್ಲಿ ಮಹಮ್ಮದೀಯರು ೬, ೭೬, ೭೭, ೫೪೫ ಮಂದಿ ಇದ್ದರು.

೧೯೧೧ರಿಂದ ೧೯೨೧ರ ವರೆಗೆ ಮುಂದಿನ ಪ್ರಮಾಣದಲ್ಲಿ ಜನಸಂಖ್ಯೆಯಲ್ಲಿ ಏರಿಕೆ ಅಥವಾ ಇಳಿತಾಯವಾಯಿತು:—

| | | | |
|---|---|---|---|
| ಮುಸಲ್ಮಾನ | ೧೦೦ಕ್ಕೆ | ೩ | ಏರಿಕೆ |
| ಶೀಖ | ,, | ೭॥ | ,, |
| ಬೌದ್ಧ | ,, | ೮॥ | ,, |
| ಕ್ರಿಸ್ತ | ,, | ೨೩॥ | ,, |
| ಹಿಂದೂ | ,, | ೩೯ | ಇಳಿತಾಯ |
| ಜೈನ | ,, | ೫.೫೮ | ,, |

೧೯೩೧ರ ಜನಗಣನೆಯ ಪ್ರಕಾರ ಹಿಂದುಸ್ಥಾನದ ಜನಸಂಖ್ಯೆಯು ೩೫, ೨೮, ೩೭, ೭೭೮ ಇದ್ದಿತು. ಅದರಲ್ಲಿ

| | |
|---|---|
| ಹಿಂದೂ | ೨೩,೯೧,೯೩,೬೩೫ |
| ಮುಸಲ್ಮಾನ | ೭,೭೬,೭೭,೫೪೫ |
| ಶೀಖ | ೪೩,೩೫,೭೭೧ |
| ಜೈನ | ೧೨,೫೨,೧೦೫ |
| ಬೌದ್ಧ (ಬ್ರಹ್ಮದೇಶವನ್ನು ಹಿಡಿದು) | ೧,೨೭,೮೭,೮೦೬ |
| ಮೂಲನಿವಾಸಿಗಳು | ೮೩,೯೧,೦೬೫ |
| ಕ್ರಿಸ್ತ | ೬೨,೯೬,೭೬೩ |
| ಶೆಸ್ಟ್ರೋರಿಯನ್ | ೧,೧೧,೮೫೩ |
| ಯಹುದೀ | ೨೪,೧೪೯ |
| ಬೇರೆ | ೪,೫೯,೮೭೩ |

ಮೇಲಿನ ಅಂಕೆಗಳು ಹೃದಯವಿದಾರಕವಾಗಿವೆಯೆಂಬುದು ಯಾರೊಬ್ಬರಿಗೂ ಹೊಳೆಯಬೇಕಾದ ಸಂಗತಿ. ಬೇರೆ ಸಮಾಜಗಳು ದಿನದಿನಕ್ಕೆ ಸಂಘಟಿತವಾಗಿ ತಮ್ಮವರ ಯೋಗಕ್ಷೇಮವನ್ನು ನೋಡಿಕೊಳ್ಳುವುದಲ್ಲದೆ, ಪರಧರ್ಮೀಯರನ್ನೂ ತಮ್ಮ ಮತಕ್ಕೆ ಆಕರ್ಷಿಸುತ್ತಿದ್ದರೆ, ಹಿಂದೂಸಮಾಜವು ಪರಧರ್ಮೀಯರನ್ನು ತನ್ನ ಮತಕ್ಕೆ ಎಳೆದು ( ಸೆಳೆದು ) ಕೊಳ್ಳುವುದಂತೂ ಇರಲಿ, ತಮ್ಮ ಮತದ ಮೇರೆಯೊಳಗಿನವರ ಯೋಗಕ್ಷೇಮವನ್ನೇ ಸರಿಯಾಗಿ ವಿಚಾರಿಸುತ್ತಿಲ್ಲ. ಆದರೆ 'ಶುದ್ಧಿ', 'ಸಂಘಟನೆ'—

CC-0. Jangamwadi Math Collection. Digitized by eGangotri

ಈ ಎರಡು ಶಬ್ದಗಳಲ್ಲಿಯೇ ಹಿಂದೂಗಳ ವಿಮೋಚನೆಯ— ಅಭ್ಯುದಯದ ಮಂತ್ರವು ಅಡಗಿದೆಯೆಂದು ಕೇಸರೀಕಾರರ ಅಭಿಪ್ರಾಯವು ನಮಗೆ ಸಮ್ಮತವಿಲ್ಲ. ಈ ಜಾತಿಮತಗಳ ಸ್ಪರ್ಧೆಯ ಕೊಳಚೆಯನ್ನು ಎಷ್ಟು ಬೇಗ ಹೊರದೂಡುವೆವೋ ಅಷ್ಟು ಒಳ್ಳೆಯದು. ನಿಜವಾಗಿ ನಾವು ಮಾಡಬೇಕಾದುದು — ನಮ್ಮೊಳಗಿನವರಲ್ಲಿ ಆತ್ಮೀಯ ಭಾವನೆಯನ್ನು – ಏಕಸಂಘಭಾವನೆಯನ್ನು ಹುಟ್ಟಿಸುವುದು. ಒಂದು ಜಾತಿ ಮೇಲು, ಇನ್ನೊಂದು ಕೀಳು ಎಂಬ ಅಸ್ವಾಭಾವಿಕಭೇದವನ್ನು ನಿರ್ಮೂಲನಗೊಳಿಸುವುದು. ತಮ್ಮ ಮತದಲ್ಲಿ ಮನ್ನಣೆಯಿಲ್ಲವೆಂದು ಸಾವಿರಗಟ್ಟಲೆ ಪರಮತಕ್ಕೆ ಸೇರುತ್ತಿರುವ – 'ಅಸ್ಪೃಶ್ಯ' ರೆಂದು ನಮ್ಮಿಂದ ಕರೆಸಿಕೊಳ್ಳುವ ಹಿಂದೂಮತೀಯರ ಮನಸ್ಸಿನಲ್ಲಿ ಅಳುಕುವ ಧಾರ್ಮಿಕ ಅನ್ಯಾಯದ ಮುಳ್ಳನ್ನು ಕಿತ್ತೊಗೆಯುವುದು. ಕೇವಲ ಅಶನದ ಚಿಂತೆಯಿಂದ ಪರಧರ್ಮವನ್ನು ಆಲಿಂಗಿಸುವ ನಮ್ಮವರಿಗೆ ಹೊಟ್ಟೆ ತುಂಬಿಕೊಳ್ಳುವ ಏರ್ಪಾಡನ್ನು ಒದಗಿಸಿ ಕೊಡುವುದು. ಈ ಅಂತಃಸುಧಾರಣೆಯಿಂದಲೇ ನಮ್ಮ ಜಾತಿಯು ಘನತೆಗೇರಿತಲ್ಲದೆ, ಪರಮತಸ್ಪರ್ಧೆಯಿಂದಲ್ಲ. ಇನ್ನು ಜಗತ್ತಿನಲ್ಲಿಯೂ ನಮ್ಮ ಧರ್ಮದ ಹೆಚ್ಚಳವನ್ನು ನಾವು ಕಾಣಬಯಸುವೆವಾದರೆ ರಾಮಕೃಷ್ಣ–ವಿವೇಕಾನಂದರ ಹಾದಿ ನಮಗಿದೆ. ಯಾವ ಮತವನ್ನೂ ಕೀಳ್ಗಾಣದೆ ಹಿಂದೂಧರ್ಮದ- ಸರ್ವಕಾಲಸ್ಥಲಗಳಲ್ಲಿ ನಿರ್ಬಾಧವಾಗಿ ಬೆಳಗುವ-ತತ್ತ್ವಗಳನ್ನು ಅವರು ಜಗತ್ತಿನೆದಿರಿನಲ್ಲಿಟ್ಟರು; ಮತ್ತವರ ಮತಮಂಡನೆಗೆ ಮನ್ನಣೆಯು ದೊರೆಯಿತು. ಒಬ್ಬ ಪರಧರ್ಮೀಯನಿಗೂ ನಾವು ನಮ್ಮ ಮತದ 'ದೀಕ್ಷೆ'ಯನ್ನು ಕೊಡದೆ, ನಮ್ಮ ಧರ್ಮದ ಶ್ರೇಷ್ಠತೆಯನ್ನು ವಿಶ್ವದಲ್ಲಿ ಪ್ರಸ್ಥಾಪಿಸಬಹುದು—ಅಷ್ಟು ಅದರಲ್ಲಿ ನೈಜವಾದ—ಸಹಜವಾದ – ರಕ್ತಗತವಾದ ಘನತೆಯಿದೆ. ರಾಮಕೃಷ್ಣ-ವಿವೇಕಾನಂದರ ಹಾದಿಯನ್ನು ನಾವಿನ್ನೂ ತುಳಿಯಬೇಕಾಗಿದೆ.

## 'ಧರ್ಮಾವತಾರ– ಜಗದ್ಗುರು'

ಕ್ರಿಸ್ತಶಕ ೧೯೩೨ರ ಎಪ್ರಿಲ್ ೨೪ನೆಯ ಭಾನುವಾರವು ಭಾರತೀಯರು ಸುವರ್ಣಾಕ್ಷರಗಳಿಂದ ಬರೆದಿಡಬೇಕಾದ ದಿನ. ಅಂದು ಮ. ಗಾಂಧಿಯವರನ್ನು ಜಗತ್ತಿನಲ್ಲಿ ಧರ್ಮದ ಪ್ರತಿನಿಧಿಗಳೆಂದು – ಎಲ್ಲೆಲ್ಲಿಯೂ ಶಾಂತಿ ಸೌಖ್ಯಗಳು ನೆಲಸಲಿಯೆಂದು ಸವೆಯುವವರಲ್ಲಿ ಅಗ್ರೇಸರರೆಂದು ಅಮೇರಿಕೆಯ 'ಕಮ್ಯುನಿಟಿ ಚರ್ಚ್'ನವರು ಗೌರವಿಸಿದರು. ತಮ್ಮ ಭಕ್ತಿಪ್ರೀತಿಗಳ ಕುರುಹಾಗಿ ಗಾಂಧಿಯವರಿಗೆ ಒಂದು ಸುವರ್ಣಪದಕವನ್ನಿತ್ತರು. ಇದನ್ನು ಕುರಿತು ಶ್ರೀ. ತಾರಕಾನಾಥ ದಾಸರು 'ಮಾಡರ್ನ್ ರಿವ್ಯ್ಯೂ' ದಲ್ಲಿ ಒಂದು ಲೇಖನವನ್ನು ಬರೆದ್ದಾರೆ. ಅದನ್ನು ಪ್ರತಿಯೊಬ್ಬನೂ ಓದಿಕೊಳ್ಳುವುದು ಅಗತ್ಯ.

ಸುಮಾರು ೧೧ವರ್ಷಗಳ ಹಿಂದೆ ನ್ಯೂಯಾರ್ಕಿನ 'ಕಮ್ಯೂನಿಟಿ ಚರ್ಚ್' ನ ಧರ್ಮೋಪದೇಶಕರಾದ ರೆ. ಡಾ. ಜಾನ್ ಹೋಮ್ಸ್ ಅವರು ತಮ್ಮೊಂದು ಪ್ರವಚನದಲ್ಲಿ 'ಗಾಂಧಿಯವರು ಜಗತ್ತಿನಲ್ಲೆಲ್ಲ ಮಹಾಪುರುಷರು' ಎಂದು ಸಾರಿದರು. ಅದೊಂದು ಮಹತ್ತ್ವದ ದಿನ. ಅಂದಿನಿಂದ ಹಲವು ಉಪನ್ಯಾಸಗಳಲ್ಲಿ ಇದನ್ನೇ ಪ್ರತಿಪಾದಿಸುತ್ತ ಬಂದು, ಬೇರೆ ಬೇರೆ ರಾಷ್ಟ್ರಗಳವರು ತಮ್ಮ ಈ ಅಭಿಪ್ರಾಯವನ್ನು ಅನುಮೋದಿಸುವಂತೆ ಮಾಡಿದರು.

ಡಾ. ಹೋಮ್ಸ್ ಅವರು ಯಾವುದೊಂದು ಶಾಸ್ತ್ರ ಗೂಢವಾದದ ಭಕ್ತರಲ್ಲ. ಅವರು ವಿವಿಧ ಧರ್ಮಗಳ ತುಲನಾತ್ಮಕ ವ್ಯಾಸಂಗವನ್ನು ಮಾಡಿದವರು. ಅವರು ಕ್ರಿಸ್ತರು, ಆದರೆ ಅವರ 'ಧರ್ಮ' ವು ಮತಮತಾಂತರಗಳನ್ನು ಮಿಕ್ಕಿ ಇದೆ. ಅವರು ಶಾಂತಿಯ ಉಪಾಸಕರು. ತಮ್ಮ ಧರ್ಮಸಂಸ್ಥೆಯಲ್ಲಿ 'ವಿಶ್ವಬಾಂಧವ್ಯ' ದ ಅಭ್ಯಾಸವು ಸದಸ್ಯರಿಂದ ಸತತವಾಗಿ ನಡೆಯಬೇಕೆಂದು ಧಾವತಿಗೊಳ್ಳುವರು. ಪ್ರತಿ 'ಉಪಾಸನೆ' ಯಲ್ಲಿ ಕೆಳಗಿನ 'ವಿಶ್ವಧರ್ಮದ ಆವಾಹನ' ವು ಉಪಾಸಕರಿಂದ ಮತ್ತು ಉಪದೇಶಕರಿಂದ ಮಾಡಲ್ಪಡುತ್ತಿದೆ:

" ಯಾವುದು ಸಕಲಪ್ರಾಚೀನಜ್ಞಾನದ ಭಾಂಡಾರವೂ ಆಧುನಿಕ ವಿಚಾರ ಸಾರದ ವಿದ್ಯಾನಿಲಯವೂ ಆಗಿದೆಯೊ; ಎಲ್ಲ ಮತಪ್ರವರ್ತಕರಲ್ಲಿ ಒಂದು ಸಮನ್ವಯವನ್ನೂ ಎಲ್ಲ ಧರ್ಮಗ್ರಂಥಗಳಲ್ಲಿ ಒಂದು ಸೂತ್ರವನ್ನೂ ಎಲ್ಲ ಉಪಾಸನೆಗಳಲ್ಲಿ ಒಂದು ಸಾಂಗತ್ಯವನ್ನೂ ಯಾವುದು ಕಾಣುವುದೊ; ಒಡ್ಡುಹಾಕಿ ಒಡಕು ಹುಟ್ಟಿಸುವಂಥ ಎಲ್ಲವನ್ನು ತಿರಸ್ಕರಿಸಿ, ಶಾಂತಿಯೂ ಸೋದರಭಾವವೂ ಕಿರಿದಾಗಿ ದೊರೆತರೂ, ಹಿರಿದಾಗಿ ಯಾವುದು ಭಾವಿಸುವುದೊ; ಯಾವುದು ಸ್ವಾತಂತ್ರ್ಯದಲ್ಲಿ ಸತ್ಯವನ್ನೂ, ಪ್ರೀತಿಯಲ್ಲಿ ನ್ಯಾಯವನ್ನೂ, ಸಾಮಾಜಿಕ ನೀತಿಯಲ್ಲಿ ಆತ್ಮನಿಸಗ್ರಹವನ್ನೂ ಹುಡುಕುವುದೊ; ಯಾವುದು ಎಲ್ಲ ಜಾತಿ- ಮತ-ವರ್ಗ-ಜನಾಂಗ-ರಾಷ್ಟ್ರಗಳನ್ನು ಒಂದು ಮಾನವ

CC-0. Jangamwadi Math Collection. Digitized by eGangotri

ಕುಟುಂಬವಾಗಿ ಕಾಣುವುದೊ – ಅಂತಹ ವಿಶ್ವಧರ್ಮಕ್ಕೆ, ಅದರ ಜ್ಞಾತ ಅಜ್ಞಾತ ಆರಾಧಕರಿಗೆ...ನಮ್ಮ ಭೂಯಿಷ್ಠವಾದ ಪ್ರಣಾಮಗಳು–ನಮ್ಮ ವೈಮನಸ್ಸುಗಳ ನಿವೇದನವು !''

೧೯೩೭ರ ಎಪ್ರಿಲ್ ೨೪ನೆಯ ದಿನ, 'ಕಮ್ಯುನಿಟಿ ಚರ್ಚ್'ನ ಪರವಾಗಿ 'ಪ್ರಥಮಪದಕಪ್ರದಾನ ಮಹೋತ್ಸವವು' ನೆರವೇರಿತು. ಪ್ರತಿವರ್ಷ, ಇಡಿಯ ಜಗತ್ತಿನಲ್ಲಿ ವಿಶೇಷವಾದ ಧಾರ್ಮಿಕ ಕಾರ್ಯವು ಯಾರಿಂದ ಜರುಗುತ್ತದೆಯೊ ಅವರ ಸ್ಮೃತಿಸೂಚಕವಾಗಿ ಈ ಪದಕವನ್ನು ಕೊಡುವುದಾಗಿ ಗೊತ್ತಾಗಿದೆ. ಪ್ರಾಸ್ತಾವಿಕ ಭಾಷಣದಲ್ಲಿ ರೆ. ಹೋಮ್ ಅವರು – 'ಮಹತ್ತ್ವದ ಧಾರ್ಮಿಕ ಕಾರ್ಯವೆಂದರೆ ವಿಶಿಷ್ಟಮತಧರ್ಮದ ಪುರಸ್ಕಾರವೆಂತಲ್ಲ –ಜನಸೇವೆ, ದೈವಭಕ್ತಿ ಎಂಬರ್ಥದಲ್ಲಿ' ಎಂದು ವಿಶದಪಡಿಸಿದರು. ಈ ಪ್ರಮಾಣವನ್ನು ಇಟ್ಟುಕೊಂಡು, ಪಂಚರು ಮಹಾತ್ಮ ಗಾಂಧಿಯವರನ್ನು ಏಕವಾಕ್ಯತೆಯಿಂದ ಆರಿಸಿದರು. ಆ ಪದಕದ ಒಂದು ಮಗ್ಗುಲಿನಲ್ಲಿ ಇಡಿಯ ವಿಶ್ವವೂ ಅಂತರಿಕ್ಷವೂ ಜನತಾಸ್ವರೂಪಿ ಪರಮಾತ್ಮನ ಸೇವೆಯ ವಿಸ್ತಾರವನ್ನು ಸೂಚಿಸಲು ಚಿತ್ರಿಸಲ್ಪಟ್ಟಿವೆ. ಒಬ್ಬ ವಿಭೂತಿಯು ದೇವಾನುಗ್ರಹದ ಮಾರ್ಗವನ್ನು ಮೇಲ್ಗಡೆ ಬೊಟ್ಟಿನಿಂದ ತೋರಿಸುತ್ತಿರುವಂತೆ ತೋರಿಸಿದೆ. ಈ ಮಗ್ಗುಲಿನ ಮೇರೆಗುಂಟ ವರ್ತುಲಾಕಾರವಾಗಿ 'ಯಾರು ಹಲವರಿಗೆ ಸತ್ಪಥದ ದಾರಿಯನ್ನು ತೋರುವರೊ, ಅವರು ನಕ್ಷತ್ರಗಳಂತೆ ಅಕ್ಷಯ್ಯವಾಗಿ ಪ್ರಕಾಶಿಸುವರು' ಎಂದು ಬರೆದಿದೆ. ಇನ್ನೊಂದು ಮಗ್ಗುಲಿನಲ್ಲಿ ಪದಕವನ್ನು ಪಡೆದವರ ಹೆಸರನ್ನೂ, ವರ್ಷವನ್ನೂ ಕಾಣಿಸಿದೆ; ಅಲ್ಲದೆ, ಭೂಗೋಲದ ಸಂಕೇತರೂಪವಾದ ಪಾರ್ಶ್ವಭೂಮಿಯಲ್ಲಿ ಶಾಂತಿಸೂಚಕವಾದ ಕಪೋತವೊಂದನ್ನು ತೋರಿಸಿ, 'ಕಾರ್ಯಪ್ರವೃತ್ತವಾದ ಸದಸದ್ವಿವೇಕವೇ ಧರ್ಮ (Religion is Conscience in action)' ಎಂದು ಬರೆಯಲಾಗಿದೆ.

ಪದಕವು ಯಾರಿಗೆ ಸಲ್ಲಬೇಕಾಗಿದೆಯೊ ಅವರು ಯರವಡೆಯಲ್ಲಿ ಸುರಕ್ಷಿತವಾಗಿ ಇರಿಸಲ್ಪಟ್ಟಿರುವುದರಿಂದ, ಅವರಿಗಾಗಿ ಅವರ ಅನುಯಾಯಿಗಳೂ ದಂಡೀಯಾತ್ರೆಯಲ್ಲಿ ಭಾಗವನ್ನು ತೆಗೆದುಕೊಂಡವರೂ ಆದ ಡಾ. ಹರಿದಾಸ ಮುಜುಮ್ದಾರ ಎಂಬವರು ಅದನ್ನು ಸ್ವೀಕರಿಸಿದರು.

ಎಲ್ಲಕ್ಕೂ ಮಹತ್ತ್ವದ ಭಾಷಣವನ್ನು ಜಗತ್ತಿನಲ್ಲೆಲ್ಲ ಪ್ರಸಿದ್ಧ ವಿಚಾರಿಗಳಾದ, ಯಹುದೀಯರಾದ ರಾಬ್ಬಿ ಸ್ಟಿಫೆನ್ ಎಸ್. ವೈಜ್ ಎಂಬವರು ಮಾಡಿದರು. ಪಾರತಂತ್ರ್ಯದಿಂದ ತಮ್ಮ ಜನಾಂಗವನ್ನು ಹೊರಕ್ಕೆ ತರಲು ಯತ್ನಿಸುವ ಮಹಾತ್ಮರನ್ನು ಅವರು ಮೋಜೆಸನಿಗೆ ಹೋಲಿಸಿದರು. ಸ್ವಾತಂತ್ರ್ಯ, ಸೋದರಭಾವ – ಇವುಗಳನ್ನು ಬೆನ್ನುಕಟ್ಟುವುದೇ ಧರ್ಮದ ಪ್ರತಿನಿಧಿಯ ಹೆಗ್ಗುರುತುಗಳೆಂದು ಹೇಳಿದರು. ೩೫ ಕೋಟಿ ಹಿಂದೀ ಜನರು ಮಾತ್ರವಲ್ಲ, ಎಲ್ಲ ದಲಿತ ಜನಾಂಗಗಳ ಪಕ್ಷವನ್ನು ಕಟ್ಟಿ, ಶತ್ರುಗಳನ್ನೂ ಆತ್ಮಬಾಂಧವರೆಂದಾದರಿಸುವ ಮಹಾತ್ಮರಂತಹ ಉದಾಹರಣೆಗೆ ಜಗತ್ತಿನಲ್ಲಿ ಇನ್ನೊಂದು ಸಾಟಿಯು ದೊರೆಯಲಾರದೆಂದರು. ಹಿಂದೀ ಜನರ ಸ್ವಾತಂತ್ರ್ಯಸಂಗ್ರಾಮಕ್ಕೆ ತಮ್ಮ ಸಂಪೂರ್ಣ ನೈತಿಕ ವರ್ಚಸ್ಸವನ್ನು ನಿವೇದಿಸಿದರು.

ಅಮೇರಿಕಾಖಂಡದಲ್ಲಿ ಧ್ಯೇಯವಾದಿಗಳ, ವಿಚಾರವಂತರ ಹೆಗ್ಗೂಟವೆಂದೆನಿಸಿಕೊಳ್ಳುವ 'ಕಮ್ಯುನಿಟಿಚರ್ಚ್'ನವರು ಧರ್ಮಾವತಾರನೆಂದು – ಶಾಂತಿಯ ನಿಃಸೀಮ ಉಪಾಸಕನೆಂದು ಗಾಂಧಿಯವರಿಗೆ ಪ್ರಥಮಸನ್ಮಾನವನ್ನಿತ್ತುದು ಭಾರತೀಯರಿಗೆ ಭೂಷಣವಿಷ್ಟೆ ಅಲ್ಲ, ಭಾರತೀಯರಿಂದ ಜಗತ್ತು ಏನು ಅಪೇಕ್ಷೆಯನ್ನು ಮಾಡುತ್ತದೆ-ಎಂಬುದನ್ನು ತೋರಿಸುವ ದೀಪಸ್ತಂಭವೂ ಆಗಿದೆ.

CC-0. Jangamwadi Math Collection. Digitized by eGangotri

# ನಮ್ಮಮಾತು

## ಜಯಕರ್ನಾಟಕಮಂಡಲದ ಕಾರ್ಯಕಲಾಪ

### ಚಿತ್ರದುರ್ಗದಲ್ಲಿ ಕವಿತಾವಾಚನ

ಜಯಕರ್ನಾಟಕ ಪತ್ರಿಕೆಯ ಸಂಪಾದಕ ವರ್ಗದಲ್ಲಿದ್ದ ಶ್ರೀ. ಪ್ರಹ್ಲಾದ ಸರೇಗಲ್ಲ, ಬಿ. ಎ. ಅವರು ಇದೀಗ ಮೈಸೂರು ಕರ್ನಾಟಕದಲ್ಲಿ ಸಂಚರಿಸುತ್ತಿದ್ದು, ಚಿತ್ರದುರ್ಗದಲ್ಲಿ ಉತ್ತರಕರ್ನಾಟಕದ ಕವಿತೆಗಳನ್ನು ಹಾಡಿ ತೋರಿಸಿದರು. ಈ ಕಾರ್ಯಕ್ರಮವನ್ನು ಕುರಿತು ಚಿತ್ರದುರ್ಗದ ಸುದ್ದಿಗಾರನೊಬ್ಬನು 'ವಿಶ್ವಕರ್ಣಾಟಕ' ಪತ್ರಿಕೆಯಲ್ಲಿ ಬರೆದುದನ್ನು ಇದರಡಿಯಲ್ಲಿ ಉದ್ಧರಿಸಿದ್ದೇವೆ. ಆ ಪ್ರಸಕ್ತಿಯಿಂದ ಮೈಸೂರು ಕನ್ನಡಿಗರಿಗೆ ಉತ್ತರ ಕರ್ನಾಟಕದ ಸಾಹಿತ್ಯದ ಬಗೆಗಿದ್ದ ಉತ್ಸಾಹ ಪ್ರೀತಿಗಳು ವ್ಯಕ್ತವಾದುವಲ್ಲದೆ, ಅನೇಕ ಸಹೃದಯರ ಸೌಹಾರ್ದವೂ ಮಂಡಲಕ್ಕೆ ದೊರೆತಿದೆ:—

ಧಾರವಾಡದ ಜಯಕರ್ನಾಟಕ ಮಾಸಪತ್ರಿಕೆಯ ಸಂಪಾದಕವರ್ಗದಲ್ಲಿದ್ದ ಶ್ರೀ. ನರೇಗಲ್ಲ ಪ್ರಲ್ಹಾದರವರು ಸದ್ಯಕ್ಕೆ ಈ ಚಿತ್ರದುರ್ಗ ಜಿಲ್ಲೆಯಲ್ಲಿ ಜಯಕರ್ನಾಟಕ ಮಾಸಪತ್ರಿಕೆಯ ಹಾಗೂ ಗ್ರಂಥ ಮಾಲೆಯ ಪ್ರಚಾರಕಾರ್ಯಕ್ಕೋಸ್ಕರ ಧಾರವಾಡದಿಂದ ಬಂದಿದ್ದು ಅದರ ಜೊತೆಗೆ ಗೆಳೆಯರಗುಂಪಿನ ಕವಿಗಳ ಸಾಹಿತ್ಯಪರಿಚಯವನ್ನೂ ಇಲ್ಲಿಯ ಜನರಿಗೆ ಹೋದಹೋದಲ್ಲಿ ಮಾಡಿಸುತ್ತಲಿರುವರು. ಈ ತಿಂಗಳ ೧೨ನೆಯ ತಾರೀಖು ಮಂಗಳವಾರ ದಿವಸ ಚಿತ್ರದುರ್ಗ ನಗರದ ಕರ್ಣಾಟಕ ಸಂಘದ ಪರವಾಗಿಯೂ ಹೈಸ್ಕೂಲಿನ ಶಿಕ್ಷಕ ಮತ್ತು ವಿದ್ಯಾರ್ಥಿವೃಂದದ ಪರವಾಗಿಯೂ ಹೈಸ್ಕೂಲಿನ ಕಟ್ಟಡದಲ್ಲಿ ಸಾಯಂಕಾಲ ೬ರಿಂದ ೨-೨॥ ಗಂಟೆಗಳ ಕಾಲದವರೆಗೂ 'ಗೆಳೆಯರ' ಕವಿತಾವಾಚನ ಕಾರ್ಯಕ್ರಮವನ್ನು ಪ್ರಹ್ಲಾದರಾಯರು ನಡೆಯಿಸಿ ಈ ಊರ ಜನರನ್ನು ಸಂತೋಷಗೊಳಿಸಿದರು. ಶ್ರೀ. ಬೇಂದ್ರೆಯವರ 'ತಿರುಕರ ಪಿಡುಗ'ನ್ನೂ ಓದಿ ತೋರಿಸಿದರು. ಜನರೆಲ್ಲಾ ನಕ್ಕು ನಕ್ಕು ಉತ್ಸಾಹಗೊಂಡರು. 'ಗರತಿಯ ಹಾಡಿ'ನ ಪದ್ಯಗಳನ್ನೂ ಹಾಡಿ ತೋರಿಸಿ ಜನಪದ ಸಾಹಿತ್ಯವನ್ನೂ ಪರಿಚಯ ಮಾಡಿಕೊಟ್ಟರು. ರಸಪುರುಷದ ಧ್ಯಾನ–ಕರ್ಣಾಟಕ ರಾಷ್ಟ್ರದ ಜ್ಞಾನೋದಯ–ಭಾರತ ಭಾಗ್ಯೋದಯ–ಸೌಂದರ್ಯೋಪಾಸನೆ–ಪ್ರೀತಿಯ ಪೂಜೆ–ಗೆಳೆತನದ ಬಾಳು–ಸತಿ ಪತಿ ಸಾಮರಸ್ಯ ಇವೇ ಮೊದಲಾದ ವಿಷಯಕವಾದ ಗೆಳೆಯರ ಕವಿತೆಗಳು ಇಲ್ಲಿಯ ಜನರಿಗೆ ಸರಸವೆನಿಸಿದುವು. ಕೆಲ ಕವಿತೆಗಳನ್ನಂತೂ ಜನರು ಎರಡೆರಡು ಸಲ ಅನ್ನಿಸಿಕೊಂಡರು. ಕಾರ್ಯಕ್ರಮವು ನವೀನ ಉತ್ಸಾಹವನ್ನುಂಟುಮಾಡಿತು. ಊರೊಳಗಿನ ಆಫೀಸರುಗಳು, ಲಾಯರುಗಳು ಮೊದಲಾದ ಕೆಲ ಗೃಹಸ್ಥರೂ ಬಂದಿದ್ದರು. ಮೊದಲಿಗೆ ಹೈಸ್ಕೂಲಿನ ಹೆಡ್‌ಮಾಸ್ತರರುಗಳೂ ಈ ಊರ ಕವಿಪುಂಗವರೂ ಆದ ಶ್ರೀ. ಎಂ. ರಾಜೀರಾಯರು ಪ್ರಲ್ಹಾದರಾಯರ ಪರಿಚಯವನ್ನು ಮಾಡಿಕೊಟ್ಟರು. ಕೊನೆಗೆ ಹೈಸ್ಕೂಲಿನ ಶಿಕ್ಷಕರಲ್ಲೊಬ್ಬರಾದ ಶ್ರೀ. ಗೋವಿಂದರಾಯರು 'ಪ್ರಲ್ಹಾದರ' ಆಭಾರವನ್ನು ಮನ್ನಿಸಿದರು. ಕೊನೆಗೆ ರಾಜೀರಾಯರು ರಚಿಸಿದ 'ಚಿತ್ರದುರ್ಗದ ಲಾವಣಿ'ಯನ್ನೇ ಪ್ರಲ್ಹಾದರು ಅಂದು ತೋರಿಸಿ ಕಾರ್ಯಕ್ರಮವನ್ನು ಮುಗಿಸಿದರು. ೨॥ ಗಂಟೆಗಳ ಕಾಲದವರೆಗೂ ೩೦೦ಕ್ಕಿಂತ ಹೆಚ್ಚಾಗಿ ನೆರೆದ ಜನಸಮುದಾಯದಲ್ಲಿ ಪ್ರತಿಯೊಬ್ಬನೂ ಅಲುಗಾಡದೆ ಕುಳಿತಿದ್ದುದು ಈ ಊರಲ್ಲಿ ಇದೇ ಮೊದಲು. ಇದು ಕರ್ನಾಟಕ ಸಾಹಿತ್ಯಾಭಿರುಚಿಯ ಹಾಗೂ ಜಾಗೃತಿಯ ಲಕ್ಷಣವು. ಎಷ್ಟೋ ಜನರು ಜಾಗವಿಲ್ಲದೆ ಹಿಂತಿರುಗಬೇಕಾಯಿತು.

### ಮೈಸೂರು ಸಂಸ್ಥಾನದಲ್ಲಿ ನಮ್ಮ ಪ್ರತಿನಿಧಿಗಳ ಸಂಚಾರ

ನಮ್ಮ ಪ್ರತಿನಿಧಿಗಳಾದ ಶ್ರೀ. ಕುಲಕರ್ಣಿ ಶೇಷಗಿರಿರಾಯರು (ಜಯಕರ್ನಾಟಕ ಪತ್ರಿಕೆಯ ಪ್ರಕಾಶಕರು) ಮೈಸೂರು ಬೆಂಗಳೂರು ಜಿಲ್ಲೆಗಳಲ್ಲಿಯೂ, ಶ್ರೀ. ನರೇಗಲ್ಲ ಪ್ರಹ್ಲಾದರಾಯರು ಚಿತ್ರದುರ್ಗ ಹಾಸನ ಜಿಲ್ಲೆಗಳಲ್ಲಿಯೂ ಜಯಕರ್ನಾಟಕ ಮಾಸಪತ್ರಿಕೆ ಗ್ರಂಥಮಾಲೆಗಳ ಪ್ರಚಾರಕ್ಕಾಗಿ ಸಂಚರಿಸುತ್ತಲಿದ್ದಾರೆ. ಮೈಸೂರಿನ ಮಹಾಜನರು ಅವರಿಗೆ ಎಲ್ಲ ಬಗೆಯಿಂದ ನೆರವಾಗಿ ಗ್ರಾಹಕರನ್ನು ಒದಗಿಸಿಕೊಟ್ಟು, ನಮ್ಮ ಸಾಲದ ಭಾರವನ್ನು ಕಡಿಮೆ ಮಾಡುವುದರಲ್ಲಿ ಭಾಗಿಗಳಾಗುವರೆಂದು ನಂಬಿದ್ದೇವೆ.

### ಐಮಂಗಲ ಖಾದಿಕೇಂದ್ರ

(ಚಿತ್ರದುರ್ಗ ಡಿಸ್ಟ್ರಿಕ್ಟ್ ಬೋರ್ಡ್)

ಮೈಸೂರು ಕರ್ನಾಟಕದಲ್ಲಿ ಸರಕಾರದ ಪರವಾಗಿ ಬದನವಾಳದಲ್ಲಿಯೂ ಶ್ರೀ. ತಗಡೂರು ರಾಮರಾಯರ ಪ್ರಯತ್ನದ ಫಲವಾಗಿ ತಗಡೂರಿನಲ್ಲಿಯೂ ಕಡಿಮೆ

CC-0. Jangamwadi Math Collection. Digitized by eGangotri

ಡಿಸ್ಟ್ರಿಕ್ಟ್ ಬೋರ್ಡಿನ ಪರವಾಗಿ ಅಜ್ಜಂಪುರದಲ್ಲಿಯೂ ಖಾದಿಯ ಕಾರ್ಯವು ನಡೆಯುತ್ತಿದೆ. ಈಗ ಹೊಸದಾಗಿ ಚಿತ್ರದುರ್ಗ ಡಿಸ್ಟ್ರಿಕ್ಟ್ ಬೋರ್ಡಿನ ಪರವಾಗಿ ಐಮಂಗಲ ಪಲ್ಲಿ ಖಾದಿಯ ಕಾರ್ಯವು ಪ್ರಾರಂಭವಾಗಿದೆ. ಈ ತಿಂಗಳು ಆ ಜಿಲ್ಲೆಯಲ್ಲಿ ಸಂಚರಿಸುತ್ತಿರುವ ನಮ್ಮ ಪ್ರತಿನಿಧಿಗಳು ಅಲ್ಲಿಯ ಕೆಲಸವನ್ನು ಕಂಡು, ವ್ಯವಸ್ಥಾಪಕರಾದ ಶ್ರೀ. ಹೊ. ಶಿ. ನಂಜುಂಡಯ್ಯನವರೊಡನೆ ಮಾತನಾಡಿ, ಕೆಳಗಿನ ಸಂಗತಿಗಳನ್ನು ತಿಳಿಸಿರುತ್ತಾರೆ:—

ಐಮಂಗಲ ಖಾದಿಕೇಂದ್ರವು ೧೯೩೫ನೆಯ ಫೆಬ್ರುವರಿ ತಿಂಗಳ ಎರಡನೆಯ ವಾರದಲ್ಲಿ ಮೊದಲಾಯಿತು. ಆರಂಭದಲ್ಲಿ ಏಳುನೂರು ರೂಪಾಯಿ ಮಾತ್ರ ಬಂಡವಾಳವಾಗಿ ಸಿಕ್ಕಿದ್ದಿತು. ೧೯೩೪-೩೫ರಲ್ಲಿ ಐದುನೂರು ರೂಪಾಯಿಗಳನ್ನು ಸಂಬಳಕ್ಕೆ ಮತ್ತು ಸಾದಿಲ್ವಾರು ಖರ್ಚಿಗೆ ಕೊಟ್ಟರು.

ಆರಂಭದಲ್ಲಿ ಫೆಬ್ರುವರಿ – ಮಾರ್ಚಿ – ಎಪ್ರಿಲ್ ತಿಂಗಳಲ್ಲಿ ಹೇಳಿಕೊಳ್ಳುವಂತಹ ಕೆಲಸವೇನೂ ನಡೆಯದಿದ್ದರೂ, ಜನಗಳ ಪರಿಚಯವನ್ನು ಮಾಡಿಕೊಂಡು, ಕೆಲಸದ ಉದ್ದೇಶವನ್ನು ತಿಳಿಸಿಕೊಟ್ಟು, ಅಸ್ತಿವಾರದ ಕೆಲಸವನ್ನು ಮಾಡಿದ್ದಾಯಿತು. ಮುಂದೆ ಮೇ ಜೂನ್‌ಗಳಲ್ಲಿ ಕೆಲಸವು ಚೆನ್ನಾಗಿಯೇ ನಡೆಯಿತೆಂದು ಧಾರಾಳವಾಗಿ ಹೇಳಬಹುದು.

ಜೂಲೈ ತಿಂಗಳಲ್ಲಿ ಮತ್ತೆ ಡಿಸ್ಟ್ರಿಕ್ಟ್ ಬೋರ್ಡಿನವರು ೧೫೦ ರೂ. ಗಳನ್ನು ಮೂಲಧನಕ್ಕಾಗಿಯೂ ೧೦೦೦ ರೂ. ಗಳನ್ನು ಸಂಬಳ ಮತ್ತು ಸಾದಿಲ್ವಾರು ಖರ್ಚಿಗಾಗಿಯೂ ದಯಪಾಲಿಸಿದರು. ಅಧ್ಯಕ್ಷರಾದ ಶ್ರೀ. ಚಿ. ಚನ್ನಪ್ಪನವರ ಪ್ರಯತ್ನವೂ ಪ್ರೋತ್ಸಾಹವೂ ಬಹಳ ಶ್ಲಾಘನೀಯವಾಗಿದೆ.

ಪರಿಸ್ಥಿತಿಯ ಅನುಕೂಲವನ್ನು ನೋಡಿಕೊಂಡು ಕೆಲಸಕ್ಕೆ ಕೈ ಹಾಕಿದ್ದಾಯಿತು. ೫೫ ನೂಲುವವರೂ ೧೫ ಮಗ್ಗದವರೂ ೪ ಜನ ಪಿಂಜಾರೆಯವರೂ ಕೆಲಸ ಮಾಡುತ್ತಲಿದ್ದಾರೆ. ಜೂನ್ ತಿಂಗಳ ಕೊನೆಗೆ ೫೭೦-೩೬ ರಾತಲು ನೂಲು ಆಗಿದ್ದರೂ ಜೂಲೈ ತಿಂಗಳ ತಾ। ೨೨ ರ ವರೆಗೆ ಸುಮಾರು ೧೦೦೦-೦ ರಾತಲು ನೂಲು ತಯಾರಾಗಿ, ಅದರಿಂದ ೭೦೦-೮೦೦ ರೂ. ಯ ಉತ್ತಮವಾದ ಖಾದಿ ಬಟ್ಟೆಯು ಸಿದ್ಧವಾಗಿದೆ.

ನೂಲಿಸವರು ಬಹಳ ಉತ್ಸಾಹದಿಂದ ಕೆಲಸ ಮಾಡುತ್ತಿದ್ದಾರೆ. ಸಾಮಾನ್ಯವಾಗಿ ೧೦-೧೨ ನಂ. ನೂಲು ಹೆಚ್ಚಾಗಿ ಸಿಕ್ಕುತ್ತಿರುವುದರಿಂದ ಹಸನಾಗಿ ಕೆಲಸ ಮಾಡುವುದಕ್ಕೆ ಹೆಚ್ಚು ಅನುಕೂಲವಾಗಬಹುದೆಂದು ನಿರೀಕ್ಷೆಯಿದೆ.

ಈಗಾಗಲೇ ಎಲ್ಲಾ ಮಾದರಿಯ ಖಾದಿ ಬಟ್ಟೆಗಳು ತಯಾರಾಗಿ ಬಿಕರಿಗೆ ಸಿದ್ಧವಾಗಿವೆ. ಖಾದಿಪ್ರೇಮಿಗಳು ಪ್ರೋತ್ಸಾಹಿಸಬೇಕಾಗಿ ಪ್ರಾರ್ಥನೆ.

## ಸಾಂಸ್ಕೃತಿಕ ವರ್ತಮಾನಗಳು

### ಬಳ್ಳಾರಿಯಲ್ಲಿ ಶ್ರೀ ಬೇಲೂರು ಕೇಶವದಾಸರಿಂದ ಪ್ರಸಿದ್ಧ ಕೀರ್ತನಕಾರರೊಬ್ಬರ ಭಾವಚಿತ್ರದ ಅನಾವರಣ ಸಮಾರಂಭ

ಕೆಳಗಿನ ವೃತ್ತಾಂತವನ್ನು ನಾವು ಸಂತೋಷದಿಂದ ಪ್ರಕಟಿಸುತ್ತೇವೆ:— ಬಳ್ಳಾರಿ ೧೨-೭-೩೬

ಶ್ರೀಮಾನ್ ಬೇಲೂರು ಕೇಶವದಾಸರು ಕರ್ನಾಟಕ ಭಕ್ತವಿಜಯವೆಂಬ ಗ್ರಂಥವನ್ನು ರಚಿಸಲು ಸಾಧುಸಂತರ ಐತಿಹಾಸಿಕಸ್ಥಳಗಳನ್ನು ನೋಡುವ ನಿಮಿತ್ತ ರಾಯಚೂರು-ಬಳ್ಳಾರಿ ಜಿಲ್ಲೆಗಳಲ್ಲಿ ಸಂಚರಿಸುತ್ತಿರುವುದು ಸರಿಯಷ್ಟೆ! ಶ್ರೀ. ದಾಸರವರು ಬಳ್ಳಾರಿಯಲ್ಲಿ ಒಂದು ಕೀರ್ತನಮಾಲೆಯನ್ನು ಮಾಡಿ, ಅನತಿದೂರಕಾಲದಲ್ಲಿಯೇ ಬಳ್ಳಾರಿಯಲ್ಲಿದ್ದು ನ್ಯಾಯವೇದಾಂತ-ಸಾಹಿತ್ಯಶಾಸ್ತ್ರನಿಪುಣರಾಗಿ, ಕನ್ನಡಕೀರ್ತನರಂಗಕ್ಕೆ ಇಡುಮೂವತ್ತು ಆಖ್ಯಾನಗಳನ್ನೂ ವಿವಿಧವರ್ಣಮಟ್ಟುಗಳಲ್ಲಿ ಸಾವಿರಾರು ಪದಪದ್ಯಗಳನ್ನೂ ರಚಿಸಿದ ಜೋಯಿಸ ವೆಂಕಪ್ಪಾಚಾರ್ಯರ ಕೀರ್ತನಗಳನ್ನೇ ಹಾಡಿ, ಬಳ್ಳಾರಿಯ ಜನರಲ್ಲಿ ವಿಚಿತ್ರ ಕನ್ನಡ ಸ್ಫೂರ್ತಿಯನ್ನುಂಟು ಮಾಡಿದರು. ಹಾಗು, ಶ್ರೀ. ವೆಂಕಪ್ಪಾಚಾರ್ಯರ ಭಾವ ಚಿತ್ರವನ್ನು ಬರೆಯಿಸಿ ಬಳ್ಳಾರಿಯ ಪುರಾಧ್ಯಕ್ಷರಾದ ಶ್ರೀ. ಸಿ. ಬಾಳಾಜಿರಾವ ಬಿ. ಎ. ಬಿ. ಎಲ್. ಹೈಕೋರ್ಟು ವಕೀಲ ಇವರ ಅಧ್ಯಕ್ಷತೆಯಲ್ಲಿ ಅನಾವರಣಸಮಾರಂಭವನ್ನು ನಡೆಯಿಸಿದರು. ಬಹುಜನ ದೊಡ್ಡ ಮನುಷ್ಯರು ಉತ್ಸವದಲ್ಲಿ ಭಾಗಿಗಳಾಗಿದ್ದರು. ಅನಾವರಣಸಮಾರಂಭವು ಶ್ರೀ ಲಕ್ಷ್ಮೀನಾರಾಯಣಸ್ವಾಮಿಯವರ ದೇವಾಲಯದಲ್ಲಿ ನೆರವೇರಿತು. ಶ್ರೀ. ಕೇಶವದಾಸರು ವೆಂಕಪ್ಪಾಚಾರ್ಯರ ಕೀರ್ತನಗಳನ್ನು ಹಾಡಿ, ಅವರ ಜೀವನಚರಿತ್ರೆಯಬಗ್ಗೆ



CC-0. Jangamwadi Math Collection. Digitized by eGangotri

ಉಪನ್ಯಾಸ ಮಾಡಿದರು. ಶ್ರೀ. ಸದಾಶಿವಯ್ಯ ಎಂ. ಎ. ಬಿ. ಎಲ್. ವಕೀಲರು ಕನ್ನಡ ಕವಿಗಳ ಜೈನಯುಗ, ವೀರ ಶೈವಯುಗ, ಬ್ರಾಹ್ಮಣಯುಗಗಳಲ್ಲಾದ ವಾಙ್ಮಯ ಸೇವೆಯನ್ನು ತುಲನಾತ್ಮಕದೃಷ್ಟಿಯಿಂದ ಹೃದಯಂಗಮ ವಾಗುವಂತೆ ವಿವರಿಸಿದರು. ಅಧ್ಯಕ್ಷರು ಭಾಷಣ ಪೂರ್ವಕ ಭಾವಚಿತ್ರದ ಅನಾವರಣ ಮಾಡಿದರು. ಕನ್ನಡ ಸಾಹಿತ್ಯಪರಿಷತ್ತು ನಡೆದಾಗಿನಿಂದ ಇದುವರೆಗೆ ನಿದ್ರಿತ ರಾಗಿದ್ದ ಬಳ್ಳಾರಿಯ ಜನರಿಗೆ ಕೇಶವದಾಸರ ಆಗಮನ ದಿಂದ ಪುನಃ ಸ್ಫೂರ್ತಿಯುಂಟಾಯಿತು. ಬಳ್ಳಾರಿಯಂಥ ಊರಿನಲ್ಲಿಯೇ ಏಕೆ, ಇಡೀ ಕರ್ನಾಟಕದಲ್ಲಿಯೇ ಹರಿ ದಾಸರೊಬ್ಬರ ಭಾವಚಿತ್ರದ ಅನಾವರಣವೆಂದರೆ ಇದೇ ಮೊದಲನೆಯದೆನಿಸಿತು.

ಶ್ರೀ. ಕೇಶವದಾಸರು ಇತಿಹಾಸ ಸಂಗ್ರಹಾರ್ಥವಾಗಿ ಇನ್ನೂ ಈ ಪ್ರಾಂತ್ಯದಲ್ಲಿ ಕೆಲವು ಕಾಲ ಸಂಚರಿಸುವರು.

## ಬೆಂಗಳೂರಿನ ಕಲಾಮಂದಿರದವರ ಕಲಾಪ್ರದರ್ಶನ

ಕೆಳಗಿನ ವೃತ್ತಾಂತವು 'ವಿಶ್ವಕರ್ನಾಟಕ' ದಲ್ಲಿ ಬಂದಿದೆ:—

ಕಲಾಮಂದಿರದವರು ಈ ಸಾರೆ ಅನುಗೊಳಿಸಿದ ಪ್ರದ ರ್ಶನಕ್ಕೆ ಅಖಿಲಭಾರತಸ್ವರೂಪ ಬಂದಿದೆ. ಪಂಜಾಬು ಬಂಗಾಳ, ಮುಂಬಯಿ, ಆಂಧ್ರ, ಕರ್ನಾಟಕಮಾರ್ಗ ಗಳ ಆಧುನಿಕಚಿತ್ರಕಳಾಕೋವಿದರು ತಮ್ಮ ಚಿತ್ರ ಕರ್ಮದಲ್ಲಿ ಹಲವನ್ನು ಕಳುಹಿಸಿದ್ದರು. ಅಬ್ದುರ್ ರಹ ಮಾನ್ ಚಗತಾಯ, ಶ್ರೀಮತಿ ಅಂಬಿಕಾಧುರಂಧರ, ಶ್ರೀ. ಬಾಬಲಿ, ಶ್ರೀ. ಮಲ್ಲಯ್ಯ,ಶ್ರೀ. ವೀರಪ್ಪ ಮುಂತಾ ದವರ ಚಿತ್ರಗಳು ಚಿತ್ತಾಕರ್ಷಕವಾಗಿದ್ದವು. ನಿಜಾಮರ ಸೊಸೆಯವರು ಚಗತಾಯರ ೫ ಚಿತ್ರಗಳನ್ನು ಕೊಂಡು ಕೊಂಡರು. ಮುಂಬಯಿ ಕಲಾಶಾಲೆಯ ಶ್ರೀ. ಪಟ ವರ್ಧನರು ಮುತ್ತಿನ ಚಿಪ್ಪಿನಲ್ಲಿ ತೋರಿಸಿರುವ ಮೂರ್ತಿ ಗಳು ಆಶ್ಚರ್ಯವನ್ನುಂಟುಮಾಡಿದುವು. ಇನ್ನು ದಂತದ ಕೆಲಸ, ಶ್ರೀಗಂಧದ ಕೆಲಸ, ಮರದ ಕೆಲಸ, ಲೋಹ ಕರ್ಮಗಳಂತೂ ನೇತ್ರಾನಂದಕರವಾಗಿದ್ದುವು.

ಈ ವರ್ಷದ ಪ್ರದರ್ಶನದ ಮತ್ತೊಂದು ವಿಶೇಷ ವೆಂದರೆ ಸೂರತ್ತಿನ ಶ್ರೀ |ಪರೇಖರು ತಂದ ಸುಮಾರು ೨೦೦೦ ಪ್ರಾಚೀನ ನೇಯ್ಗೆಯ ಮಾದರಿಗಳು. ಇದರಿಂದ ನಮ್ಮ ದೇಶದ ಈ ಕಲೆಯು ಎಷ್ಟು ಉನ್ನತಸ್ಥಿತಿಗೆ ಬಂದಿತ್ತು, ಈಗ ಎಂತಹ ಪತನವಾಗಿದೆ ಎಂಬುದು ಮನ ವರಿಕೆಯಾಗುತ್ತದೆ. ಇಷ್ಟೇ ಅಲ್ಲದೆ ಶ್ರೀ. ಪರೇಖರು ನೂರಾರು ಹಳೆಯ ಚಿತ್ರಗಳನ್ನು, ದಂತದ ಮೂರ್ತಿ ಗಳನ್ನು, ಕೆತ್ತಿರುವ ಮರದ ಕೆಲಸದ ಮಾದರಿಗಳನ್ನು ಸಂಗ್ರಹಿಸಿ ತಂದಿದ್ದರು. ಸಾವಿರಾರು ಮಂದಿ ಬಂದು ಈ ಪ್ರದರ್ಶನದಿಂದ ಆನಂದವನ್ನೂ ಜ್ಞಾನವನ್ನೂ ಪಡೆದು ಹೋದರು.

ಪ್ರದರ್ಶನದೊಂದಿಗೆ ಪ್ರತಿನಿತ್ಯವೂ ಸಂಗೀತ, ಇಲ್ಲವೆ ವ್ಯಾಖ್ಯಾನ, ಇಲ್ಲವೆ ವಾದ್ಯವಿಶೇಷ ಈ ರೀತಿ ಕಾರ್ಯ ಕ್ರಮಗಳೇರ್ಪಾಡಾಗಿದ್ದುವು. ನೇಯ್ಗೆಯ ದಿನ, ಕವಿ ಗಳ ದಿನ, ರಂಗೋಲಿದಿನ, ಮಹಿಳೆಯರ ದಿನ, ಸ್ವದೇಶೀ ದಿನವೆಂಬುದಾಗಿ ಒಂದೊಂದು ದಿನವೂ ಒಂದೊಂದು ವಿಶೇಷಸಮಾರಂಭವು ನಡೆಯಿತು.

## ಬೆಂಗಳೂರಿನಲ್ಲಿ ಕವಿಸಮ್ಮೇಲನ

'ಒಕ್ಕಲಿಗರ ಪತ್ರಿಕೆ'ಯಲ್ಲಿ ಕೆಳಗಿನ ವೃತ್ತಾಂತವು ಬಂದಿದೆ:—

ಕಲಾಮಂದಿರದ ಆಶ್ರಯದಲ್ಲಿ ೨೧-೭-೩೭ರ ಸಾಯಂಕಾಲ ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾ ರರ ಆಧ್ಯಕ್ಷತೆಯಲ್ಲಿ ಕವಿ ಸಮ್ಮೇಳನವು ನಡೆಯಿತು. ಅನೇಕ ಹೊಸ ಕವಿಗಳು ತಮ್ಮ ಪದ್ಯಗಳನ್ನು ರಸಭರಿತ ವಾಗಿ ಓದಿದರು. ಹಳಬರ ಪೈಕಿ ಮ. ಬೆಳ್ಳಾವೆ ನರ ಸಿಂಹಶಾಸ್ತ್ರಿಗಳು ಓದಿದರು. ಹೊಸಬರ ಪದ್ಯಗಳು ಸಭಿ ಕರಿಗೆ ರುಚಿಯನ್ನುಂಟು ಮಾಡಿದುವೆಂದು ನಾವು ಹೇಳ ಬೇಕಾಗಿಲ್ಲ. ಹೊಸಬರಿಗೆ ಹೊಸದೇ ಚಂದ.

ಹೊಸ ಕವಿಗಳು ಓದಿದ ಪದ್ಯಗಳಲ್ಲಿ ಕೆಲವು ಬಹಳ ಚೆನ್ನಾಗಿದ್ದುವು. ಇವುಗಳಲ್ಲಿ ಮ. ರಾ. ಗಳಾದ ಡಿ. ಆರ್. ರಾಮಯ್ಯನವರ 'ಸೆರೆ ಬಿರಿವ ಬೀರಂ' ಎಂಬ ಪದ್ಯವೂ ಡಿ. ಆರ್. ಚೆನ್ನೇಗೌಡರ 'ಕಾಡು ಬೇಕೋ ನನಗೆ ಊರು ಬೇಕೋ' ಎಂಬುದೂ, ಪುರೋಹಿತ ನರ ಸಿಂಹಾಚಾರ್ಯರ 'ನಾಗಿ' ಎಂಬುದೂ, ಇನ್ನೂ ಕೆಲವರ ಪದ್ಯಗಳೂ ಬಹಳ ಚೆನ್ನಾಗಿದ್ದುವು. ಕೊನೆಯಲ್ಲಿ ಶ್ರೀ. ಮಾಸ್ತಿ ವೆಂಕಟೇಶಯ್ಯಂಗಾರ್‌ರವರು ತಮ್ಮ 'ಚೆಲುವು' ಎಂಬ ಕವನಮಾಲೆಯಿಂದ 'ಚಿಕ್ಕಮಲ್ಲಮ್ಮ' ಎಂಬ ಕವಿತೆಯನ್ನು ಬಹು ಸ್ವಾರಸ್ಯವಾಗಿ ಓದಿದರು.

CC-0. Jangamwadi Math Collection. Digitized by eGangotri

## ಟಾಟಾ ವಿಜ್ಞಾನಮಂದಿರದ ಹಿಂದೀ ನಿರ್ದೇಶಕರು

ಕಳೆದ ವರ್ಷವೇ ಪ್ರಸಿದ್ಧ ಹಿಂದೀ ವೈಜ್ಞಾನಿಕರಾದ ಸರ್ ಸಿ. ವಿ. ರಾಮನ್ ಅವರು ಬೆಂಗಳೂರಿನ ಟಾಟಾ ಸೈನ್ಸ್ ಇನ್‌ಸ್ಟಿಟ್ಯೂಟಿನ ಮೇಲ್ವಿಚಾರಕರಲ್ಲೊಬ್ಬರಾಗಿ ನಿಯಮಿಸಲ್ಪಟ್ಟಿದ್ದರು. ಇನ್ನು ೧೫ ವರ್ಷ ಕಾಲ ಅವರೇ ಮುಖ್ಯಾಧಿಕಾರಿ (Director) ಗಳಾಗಿರಬೇಕೆಂಬ ನಿರ್ಣಯವು ತುಂಬಾ ಸಂತೋಷದಾಯಕವಾಗಿದೆ. ವಿಜ್ಞಾನದ ಸಹಾಯ್ಯದಿಂದ ಹಿಂದುಸ್ಥಾನದ ಆರ್ಥಿಕ ಔದ್ಯೋಗಿಕ ಉನ್ನತಿಯನ್ನು ಸ್ವಲ್ಪಾವಧಿಯಲ್ಲಿ ಹೇಗೆ ಮಾಡಬೇಕೆಂಬುದರ ಬಗ್ಗೆ ಅವರದೊಂದು ಯೋಜನೆಯಿದ್ದಿತು. ಅದನ್ನವರು ತಮ್ಮ ಅಧಿಕಾರದ ಅವಧಿಯಲ್ಲಿ ನೆರವೇರಿಸುವರೆಂದು ಆಸೆಯಿದೆ.

## ಅಭಿನಂದನೀಯ ವಿಷಯಗಳು

### ಪ್ರೊ. ವಿಜಯೇಂದ್ರ ಕೆ. ಆರ್. ವಿ. ರಾವ್ ಅವರು

ಇವರು ಮುಂಬಯಿಯ ಎಲ್ಫಿನ್‌ಸ್ಟನ್ ಕಾಲೇಜಿನಲ್ಲಿ ಅರ್ಥಶಾಸ್ತ್ರದ ಅಧ್ಯಾಪಕರಿದ್ದಾರೆ. ಮುಂಬಯಿಯ 'ಸ್ವದೇಶಿ ಲೀಗಿ'ನ ಪರವಾಗಿ 'Swadeshi' ಎಂಬ ಇಂಗ್ಲಿಷ್ ಮಾಸಪತ್ರಿಕೆಯೊಂದನ್ನು ಸಂಪಾದಿಸುತ್ತಲಿದ್ದಾರೆ. ಇವರು ತುಂಬಾ ದೇಶಾಭಿಮಾನಿಗಳೂ ಕರ್ನಾಟಕ ವತ್ಸಲರೂ ಇದ್ದಾರೆ. ಇವರಿಗೆ ಮಂಗಲದಾಸ ನಾಥುಬಾಯಿ ಶಿಷ್ಯವೃತ್ತಿಯೊಂದೂ ಟಾಟಾ ಶಿಷ್ಯವೃತ್ತಿಯೊಂದೂ ದೊರಕಿ, ಇವರು ಕೇಂಬ್ರಿಜಿನಲ್ಲಿ ಹೆಚ್ಚಿನ ವ್ಯಾಸಂಗಕ್ಕಾಗಿ ಕ್ಷಿಪ್ರದಲ್ಲಿ ಇಂಗ್ಲಂಡಿಗೆ ತೆರಳುವವರಿದ್ದಾರೆ. ಇವರ ಪರಿಚಯವನ್ನು ಕಳೆದ ವರ್ಷ ಜಯಕರ್ನಾಟಕದ ವಾಚಕರಿಗೆ ಮಾಡಿಕೊಡಲಾಗಿತ್ತು. ಇವರಿಗೆ ನಮ್ಮ ಅಭಿನಂದನೆಗಳು.

### ಕೆ. ನಾರಾಯಣ ಕಿಣಿ ಎಂ. ಎ. ಪಿ. ಎಚ್. ಡಿ.

ಶ್ರೀ. ಕೆ. ನಾರಾಯಣ ಕಿಣಿಯವರು ೧೮೯೧ ರಲ್ಲಿ ಜನಿಸಿದರು. ಕುಂದಾಪುರ ಹೈಸ್ಕೂಲಿನಲ್ಲೂ ಕೆನರಾ ಹೈಸ್ಕೂಲಿನಲ್ಲೂ ಶಾಲಾಶಿಕ್ಷಣವನ್ನು ಪೂರೈಸಿ, ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಇಂಟರ ತರಗತಿಯಲ್ಲು ತ್ತೀರ್ಣರಾಗಿ, ೧೯೧೭ ರಲ್ಲಿ ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಬಿ. ಎ. (ಆನರ್ಸ್) ಪದವಿ ಪಡೆದು, ಅದೇ ವರ್ಷ ಮೈಸೂರು ವಿದ್ಯಾಖಾತೆಯನ್ನು ಸೇರಿ, ಸೈನ್ಸ್ ಇನ್ಸ್‌ಪೆಕ್ಟರರಾಗಿಯೂ ಆ ಮೇಲೆ ಮೈಸೂರು ಎಲಿಮೆಂಟರಿ ಸರ್ವೆಯಲ್ಲಿ ಸ್ಪೆಶಲ್ ಆಫೀಸರರಾಗಿಯೂ ಕೆಲಸ ಮಾಡಿ, ಅನಂತರ ತುಮಕೂರು ಹೈಸ್ಕೂಲ್ ಹೆಡ್ ಮಾಸ್ಟರರಾಗಿ ನೇಮಕಪಟ್ಟು ೧೯೨೭ ರಲ್ಲಿ ಜಿಲ್ಲಾ



ಕೆ. ನಾರಾಯಣ ಕಿಣಿ ಎಂ. ಎ. ಪಿ. ಎಚ್. ಡಿ.

ವಿದ್ಯಾಧಿಕಾರಿಗಳಾಗಿ ನೇಮಕ ಹೊಂದಿದರು. ೧೯೩೦ ರಲ್ಲಿ ನ್ಯೂಯಾರ್ಕಕ್ಕೆ ತೆರಳಿ ಅಲ್ಲಿಯ ಕೋಲಂಬಿಯಾ ವಿಶ್ವವಿದ್ಯಾಲಯದಲ್ಲಿ ಮೊನ್ನೆ ತಾನೆ ಪಿ. ಎಚ್. ಡಿ. ಪದವಿಯನ್ನು ಹೊಂದಿದರೆಂದು ತಿಳಿಸಲು ಸಂತೋಷ ಪಡುತ್ತೇವೆ. ಜಯಕರ್ನಾಟಕದ ಅಭಿಮಾನಿಗಳೂ ಸಮ್ಮಾ ಪರದೇಶಸ್ಥ ಲೇಖಕರೂ ಆಗಿದ್ದರು. ಮಾತೃಭೂಮಿಗೆ ಶುಭಾಗಮನವನ್ನು ಬಯಸುತ್ತೇವೆ.

## ಮುಂಬಯಿಯಲ್ಲಿ ಕನ್ನಡ ಶಾಲೆಯ ಬಗ್ಗೆ ಪ್ರಯತ್ನ

ಮುಂಬಯಿಯಲ್ಲಿ ೪೦–೫೦ ಸಾವಿರ ಕನ್ನಡಿಗರು—ಅವರಲ್ಲಿ ೧೫೦೦೦ಕ್ಕಿಂತ ಹೆಚ್ಚು ಮಂದಿ ವಿದ್ಯಾವಂತರು

CC-0. Jangamwadi Math Collection. Digitized by eGangotri

ಇದ್ದು, ಅಂತಹ ಪಡಿಮುಖಲೆಯ ಸ್ಥಾನದಲ್ಲಿ ಒಂದೂ ಕನ್ನಡ ಶಾಲೆಯಿಲ್ಲದಿರುವುದು ಶೋಚನೀಯ. ಆದರೆ ಕಳೆದ ಸ್ತಿಂಗಳು ಮುಂಬಯಿ ನಗರಸಭೆಯ ಸಭಾಸದರೊಬ್ಬರಾದ ಶ್ರೀ ವಿ. ಜಿ. ರಾವ್ ಅವರು 'ಕೋಟೆ'ಯ ಭಾಗದಲ್ಲಿ ಒಂದು ಇಂಗ್ಲಿಷ್–ಕನ್ನಡ ಪ್ರಾಥಮಿಕ ಶಾಲೆಯನ್ನು ತೆಗೆಯುವ ಪ್ರಸ್ತಾವವನ್ನು ನಗರಸಭೆಯ ಮುಂದೆ ತಂದರೆಂದು ಕೇಳಿ ಸಂತೋಷಿಸುತ್ತೇವೆ. ಅವರ ಪ್ರಯತ್ನವು ಸಫಲವಾಗಲಿ.

## ಚಿತ್ರಗಳ ಮತ್ತು ಚಿತ್ರಕಾರರ ಪರಿಚಯ

### 'ದೇವಾಲಯದಲ್ಲಿ'

(ಮುಖಚಿತ್ರ)

ಇದನ್ನು ಬರೆದವರು ಮೈಸೂರಿನ ಶ್ರೀ. ಎಂ. ವೀರಪ್ಪನವರು. ವಯಸ್ಸು ೩೦ ವರ್ಷ. ಮೈಸೂರಿನಲ್ಲಿ ಮಿಡಲ್‌ಸ್ಕೂಲ್ ಶಿಕ್ಷಣವನ್ನು ತೀರಿಸಿಕೊಂಡು, ಮುಂಬಯಿಯ ಕಲಾಶಾಲೆಗೆ ಚಿತ್ರಕಲಾಭ್ಯಾಸಂಗಕ್ಕಾಗಿ ಹೋದರು. ಮೈಸೂರು ಸರಕಾರದಿಂದ ಅವರಿಗೊಂದು ಶಿಷ್ಯವೃತ್ತಿಯು ದೊರೆಯುತ್ತಿತ್ತು. ಮುಂಬಯಿಯಲ್ಲಿ ತಮ್ಮ ವಿದ್ಯಾಕ್ರಮವನ್ನು ಮುಗಿಸಿ, ೧೯೩೭ ರಲ್ಲಿ ಚಿತ್ರಕಲೆಯ 'ಡಿಪ್ಲೋಮಾ' ಪರೀಕ್ಷೆಯಲ್ಲಿ ಮೊದಲನೆಯ ತರಗತಿ ಬಂದರು. ಆಗಿನಿಂದ ಅವರು ಮುಂಬಯಿ, ಮದ್ರಾಸು, ಸಿಮ್ಲಾ ಮೊದಲಾದ ಹಲವು ಕಡೆಯ ಪ್ರದರ್ಶನಗಳಲ್ಲಿ ತಮ್ಮ ಕೃತಿಗಳನ್ನು ಪ್ರದರ್ಶಿಸಿ, ಬಹುಮಾನಗಳನ್ನು ಪಡೆದಿದ್ದಾರೆ. ಮೈಸೂರಿನಲ್ಲಿನ ಅವರ ಸ್ಟೂಡಿಯೋವನ್ನು ನೋಡಿದರೆ, ಭಾವಚಿತ್ರ (Poatrait) ಗಳನ್ನೂ ಕಲ್ಪನಾಚಿತ್ರಗಳನ್ನೂ ಬರೆವುದರಲ್ಲಿ ಅವರ ಕುಶಲತೆಯನ್ನು ಕಾಣಬಹುದು. 'ದೇವಾಲಯದಲ್ಲಿ' ಎಂಬ ಚಿತ್ರಕ್ಕೆ ಸಿಮ್ಲಾ ಮೈಸೂರುಗಳ ಪ್ರದರ್ಶದಲ್ಲಿ ಬಹುಮಾನವು ಸಿಕ್ಕಿದೆ.

'ದೇವಾಲಯದಲ್ಲಿ'— ಈ ಚಿತ್ರದಲ್ಲಿ ಅಜಂತಾ ಶೈಲಿಯ ಭಾರತೀಯರೀತಿ: ಪಾಶ್ಚಾತ್ಯ ಚಿತ್ರಕಲೆಯ ಆ ನುಣುಪು, ಹಸನು, ವಿವರಣಚಾತುರ್ಯ–ಇವುಗಳ ಸವಿಯಾದ ಬೆರಕೆಯನ್ನು ಕಾಣಬಹುದು. ಈ ಚಿತ್ರದಲ್ಲಿ ಕಲ್ಪಿಸಿದ ಸಮಾಜಸ್ಥಿತಿಯು ನಮ್ಮ ಭಾರತೀಯ ನಾಗರಿಕತೆಯು ಹೂಣ ಯವನ ಮೊದಲಾದ ಅನ್ಯಜನಾಂಗಗಳ ಸಂಪರ್ಕವನ್ನು ಇನ್ನೂ ಪಡೆಯದೆ ಇದ್ದ ಕಾಲದು. ಆಗಿನ ಸ್ತ್ರೀಯರ ವೇಷಭೂಷಣೆಗಳು ಇಲ್ಲಿ ತೋ... ಟ್ಟಿವೆ. ಇಲ್ಲಿ ಚಿತ್ರಿತವಾದ ಸ್ತ್ರೀಯರು ದೇವದಾ... ವಾರಾಂಗನೆಯರು ಎಂದು ನೋಟಕರ ಕಲ್ಪನೆಯಾ... ಸಂಭವವಿದೆ. ನಮಗೆ ಹಾಗೆ ತೋರುವುದಿಲ್ಲ. ... ತೀಯ ನಾಗರಿಕತೆಯು ನೈಜವೈಭವದಿಂದ ವಿ... ತ್ತಿರುವಾಗ, ಉಚ್ಚಕುಲದ ಹೆಣ್ಣುಮಕ್ಕಳಿಗೆ ... ವಿಶಾಲವಾದ ಉದಾರವಾದ ಸ್ವಾತಂತ್ರ್ಯವಿದ್ದಿ... ನಮ್ಮ ಕಾವ್ಯೇತಿಹಾಸಗಳಿಂದ ತೋರುತ್ತಿದೆ. ... ಕತ್ತಲೆಕೋಣೆಯ ಸೆರೆಯಾಳುಗಳಂತೆ ಅಂತಃ... ಇರಲೇ ಇಲ್ಲ. ಸ್ವೇಚ್ಛೆಯಿಂದ ಅವರು ಸಮಾ... ವಿಹರಿಸುತ್ತಿದ್ದರು. ಅವರ ವೇಷಭೂಷಣೆಗಳೂ ... ಸಮಾಜಸ್ವಾತಂತ್ರ್ಯಕ್ಕೆ ತಕ್ಕವುಗಳಾಗಿದ್ದುವು. ... ಮೊಲೆಕಟ್ಟನ್ನು ಕಟ್ಟಿಕೊಳ್ಳುತ್ತಿದ್ದರು. ಚಲ್ಲಣವನ್ನಾ... ಮೊಣಕಾಲವರೆಗೆ ಚಿಕ್ಕದಾದ ವಸ್ತ್ರವನ್ನಾಗಲಿ ... ತ್ತಿದರು. ಉತ್ತರೀಯವನ್ನು ಮೇಲಕ್ಕೆ ಹೊತ್ತುಕೊ... ತ್ತಿದ್ದರು. ಹೆಳಲನ್ನು ಬೇರೆಬೇರೆ ಬಗೆಯಿಂದ ಹಾಕಿ... ತ್ತಿದ್ದರು. ತಮ್ಮ ಪ್ರಿಯಕರರೊಡನೆ ಬೆಳ್ದಿಂಗಳಿನಲ್ಲಿ ... ಯವಿಹಾರವನ್ನು ಮಾಡಲು ಅವರಿಗೆ ಆತಂಕವಿ... ಇದೆಲ್ಲ ಆಗಿನ ಕವಿಗಳ ಕಲ್ಪನಾಲೋಕದಲ್ಲಿಯಷ್ಟೇ ... ರದೆ, ಆಗಿನ ವಾಸ್ತವಪ್ರಪಂಚದಲ್ಲಿಯೂ ಇದ್ದಿ... ಊಹಿಸಲು ಅವಕಾಶವಿದೆ. ಅಜಂತಾ ಮೊದಲಾದ ... ನಮ್ಮ ಹಿಂದಣ ಚಿತ್ರಕಲೆಯ ಅವಶೇಷಗಳೂ, ... ವಾಗಿ ದೊರಕುವ ಮೂರ್ತಿಶಿಲ್ಪವೂ ಈ ಮಾತಿಗೆ ... ಯಾಗಿದೆ. ಮಹಮ್ಮದೀಯರ ದಾಳಿಯು ... ದಂದಿಂದ ನಮ್ಮ ಹೆಣ್ಣುಮಕ್ಕಳ ಆಚಾರಸ್ವಾತಂತ್ರ್ಯ... ಕಟ್ಟುಗಳುಂಟಾದವೆಂದು ತೋರುತ್ತಿದೆ......... ಅಂತಹ ಕುಲೀನ ಹೆಣ್ಣುಮಕ್ಕಳು ದೇವಾಲಯ... ಪೂಜೆಗಾಗಿ ಬಂದಿರುವಂತೆ ಇಲ್ಲಿ ತೋರಿಸಲ್ಪ... ಒಬ್ಬಳು ಉತ್ತರೀಯವನ್ನು ಧರಿಸಿದ್ದಾಳೆ, ಒಬ್ಬಳು ... ಒಬ್ಬಾಕೆ ಭಕ್ತಿಭಾವದಿಂದ ವಿಗ್ರಹದ ಎದುರಿನಲ್ಲಿ ... ಯನ್ನು ಬೆಳಗುತ್ತಿದ್ದಾಳೆ. ಇನ್ನೊಬ್ಬಾಕೆ ಕೈಮು... ಕೊಂಡು ನಿಂತಿದ್ದಾಳೆ. ಹುಡುಗನೂ ಮುಗ್ಧಭಾವ... ಕೈ ಜೋಡಿಸಿಕೊಂಡು ನಿಂತುದನ್ನು ಚಿತ್ರಕಾ... ಮನಮುಟ್ಟುವಂತೆ ತೋರಿಸಿದ್ದಾನೆ. ಗರ್ಭಗುಡಿ... ಳಗಿನ ಕತ್ತಲೆಯಲ್ಲಿ ವಿಗ್ರಹದ ಮೇಲೆ ಆರತಿಯ ...

CC-0. Jangamwadi Math Collection. Digitized by eGangotri

ಬಿದ್ದು, ಅದೊಂದು ಬಗೆಯ ಉಗ್ರ-ಗಂಭೀರ ವಾತಾವರಣವು ಹರಡಿಕೊಂಡಂತೆ ಕಾಣುತ್ತದೆ. ಒಂದೊಂದು ವಿವರವನ್ನು ಮನವು ತಣಿಯುವಂತೆ ದಣಿಯುವಂತೆ ನೋಡುವ ಹಾಗಿದೆ. ಕೆಳಗಿನ ತಟ್ಟೆಯೊಳಗಿನ ಪೂಜಾ ಸಾಹಿತ್ಯ! ದೇವಾಲಯದ ವಾಸ್ತುಶಿಲ್ಪದ ಕುಸುರು ಇವನ್ನೆಲ್ಲ ನಿಧಾನವಾಗಿ ನಿರೀಕ್ಷಿಸುವಂತಿದೆ.

ಈ ಚಿತ್ರಕ್ಕೆ ಮೈಸೂರಿನ 'ಲಲಿತಕಲಾ ಸಂಘ'ದವರು ಜೂನ ತಿಂಗಳಲ್ಲಿ ಏರ್ಪಡಿಸಿದ ಪ್ರದರ್ಶನದಲ್ಲಿ ಮೊದಲನೆಯ ಬಹುಮಾನದರ್ಶಕವಾಗಿ ರಜತಪದಕವೊಂದು ಕೊಡಲ್ಪಟ್ಟಿತು. ಈ ಚಿತ್ರವನ್ನೂ, ಬಹುಮಾನವನ್ನು ಹೊಂದಿದ (ಕೆಳಗೆ ಕೊಟ್ಟಿರುವ) ಇನ್ನೊಂದು ಚಿತ್ರವನ್ನೂ ಪ್ರಕಟನಾರ್ಥವಾಗಿ 'ಲಲಿತಕಲಾ ಸಂಘ'ದವಿತ್ತುದಕ್ಕಾಗಿ ಅವರಿಗೆ ನಾವು ಕೃತಜ್ಞರಿದ್ದೇವೆ.

## 'ನನ್ನ ಅಡಿಗೆಯವ'

ಚಿತ್ರಕಾರರು ಶ್ರೀ ಎಸ್ ಎಸ್. ಸ್ವಾಮಿಯವರು. ಇವರು ಮೈಸೂರಿನ ಟೆಕ್ನಿಕಲ್ ಇನ್‌ಸ್ಟಿಟ್ಯೂಟಿನಲ್ಲಿ ಕೆಲ



ಕಾಲ ಕಲಿತು ಮುಂಬಯಿ ಕಲಾಶಾಲೆಯಲ್ಲಿ ಭಾವಚಿತ್ರಕರ್ಮ (portraiture) ವನ್ನು ಅಭ್ಯಾಸಿಸಿದರು. ಇವರು ಆನುವಂಶಿಕವಾಗಿ 'ಸ್ಥಪತಿ' ಗಳು (ಶಿಲ್ಪಿಗಳು). ಪ್ರಾಚೀನ ಶೈಲಿಯಲ್ಲಿಯೂ ಇವರಿಗೆ ಚೆನ್ನಾದ ಕೈಯಿದೆ. ಈವೊತ್ತು,ಅವರು ನುರಿತ ಭಾವಚಿತ್ರಕಾರರೆಂದು ಹೆಸರು ಪಡೆದಿದ್ದಾರೆ. ಇವರಿಗೆ ಹಲವು ಪ್ರದರ್ಶನಗಳಲ್ಲಿ ಹಲವು ಬಹುಮಾನಗಳು ದೊರೆತಿವೆ. ಈ ಚಿತ್ರವು ಅವರ ಭಾವಚಿತ್ರಣ ಕೌಶಲಕ್ಕೆ ಚೆನ್ನಾದ ಸಾಕ್ಷಿಯಾಗಿದೆ.

## ದಿವಂಗತ ಪಾಂಡಂಡ ಮುತ್ತಣ್ಣನವರು

ಕೊಡಗಿನ ಶ್ರೀಯುತರಾದ ಪಾಂಡಂಡ ಮುತ್ತಣ್ಣನವರು ಮೂರ್ನಾಡಿನಲ್ಲಿ ಜೂನ್ ೩ರಲ್ಲಿ ಮೃತರಾದರೆಂದು ತಿಳಿಸಲು ಅತ್ಯಂತ ವಿಷಾದವೆನಿಸುತ್ತದೆ. ಅವರು ಜಯಕರ್ನಾಟಕದ ವಾಚಕರಿಗೆ ಚಿರಪರಿಚಿತರು. ಈ ಪತ್ರಿಕೆಯಲ್ಲಿ ಕಳೆದ ೨ ವರ್ಷ ಆಗಾಗ ಲೇಖಗಳನ್ನು ಬರೆಯುತ್ತಿದ್ದರು. ೧೧ ಗಂಟೆ ರಾತ್ರಿಯವರೆಗೆ ಆರೋಗ್ಯವಿದ್ದವರು ಮನೆಗೆ ಹೋಗಿ ಪತ್ರಿಕೆಯನ್ನು ಓದುತ್ತಿದ್ದಾಗ ಫಕ್ಕನೆ ಶಿವಾಧೀನರೆಂದು ವರ್ತಮಾನ. ಇವರು ಕೊಡಗಿನ-ಕೊಡವರ ಅಭಿಮಾನಿಗಳಾಗಿದ್ದರೂ, ವಿಶಾಲ ಕರ್ನಾಟಕದ ಅಂಗವಾಗಿಯೇ ಕೊಡಗು ಪರಿಪುಷ್ಟವಾಗಬೇಕೆಂದೂ ಅವರ ಮತವಾಗಿದ್ದಿತು. ಸಾರ್ವಜನಿಕ ಜೀವನಕ್ಕೆ ದಂಭಾಚಾರದ ಮೈಲಿಗೆ ಸೋಂಕದೆ, ಅದು ಪವಿತ್ರವಾಗಿ ಉಳಿಯಬೇಕೆಂದು ಅವರ ಹಾರೈಕೆಯಿದ್ದಿತು. ಇವರು ರಾಷ್ಟ್ರೀಯ ಮನೋವೃತ್ತಿಯವರಾಗಿದ್ದರು. 'ಕೊಡಗಿನ ಕೈಪಿಡಿ,' 'ಕುಲವೃದ್ಧಿ ಸ್ವರ್ಗದಾಗಮನ,' 'ನಾಗರಿಕತೆಯ ಪರಿಣಾಮ' ಎಂಬ ಕನ್ನಡ ಪುಸ್ತಕಗಳನ್ನಲ್ಲದೆ, 'ಕೊಡಗೂ ಕೊಡವರೂ' ಎಂಬ ಇಂಗ್ಲಿಷ್ ಪುಸ್ತಕವನ್ನೂ ಬರೆದ ಇವರ ಹೆಸರನ್ನು ಕೊಡಗಿನಲ್ಲಿ ಕೇಳದಿರುವವರು ಅಪರೂಪ. ಇವರಿಗೆ ಕಿವಿಯ ಶಕ್ತಿ ಕಡಿಮೆಯಾಗಿರದಿದ್ದರೆ, ಇವರ ಸಾರ್ವಜನಿಕ ಕಾರ್ಯವು ಇನ್ನೂ ಹೆಚ್ಚಾಗುತ್ತಿತ್ತು. ಇವರ ಮರಣದಿಂದ ಕೊಡಗೂ ಕರ್ನಾಟಕಕ್ಕೂ ವಿಶೇಷವಾದ ಹಾನಿಯಾಗಿದೆ. ಇವರ ಆತ್ಮಕ್ಕೆ ಪರಮಾತ್ಮನು ಶಾಂತಿಯನ್ನೀಯಲೆಂದು ಪ್ರಾರ್ಥಿಸಿ, ಅವರ ಕುಟುಂಬದವರಿಗೆ ನಮ್ಮ ಸಹಾನುಭೂತಿಯನ್ನು ತಿಳಿಸಲಪೇಕ್ಷಿಸುತ್ತೇನೆ.

CC-0. Jangamwadi Math Collection. Digitized by eGangotri

# ಸಾದರ ಸ್ವೀಕಾರ

೧೩೬ 'ಮರಿಗಳ ಕೂಗು' ಲೇಖಕರು—ಶ್ರೀ ಕಶ್ಯಪರು ಬೆಂಗಳೂರು. ಕ್ರೌ. ಅ. ಪುಟಗಳು. ಬೆಲೆ ೧-೦-೦

೧೩೭ 'ವಿಜಯನಗರದ ಸಾಮ್ರಾಜ್ಯ' ಲೇಖಕರು—ಶ್ರೀಯುತರಾದ ಕುಲಕರ್ಣಿ ಪ್ರಲ್ಹಾದರಾಯರು. ಬೋಳೆ ಅನಂತರಾಯರು. ಭುವನೇಶ್ವರೀ ಗ್ರಂಥಮಾಲೆಯ ಮೂರನೆಯ ಗ್ರಂಥ. ಪ್ರಕಾಶಕರು: ಬಿ. ಕಲ್ಯಾಣಶರ್ಮ ಬೆಳಗಾವಿ. ಕ್ರೌ. ಅ. ಪುಟಗಳು ೧೩೪. ಬೆಲೆ ೧ ರೂ.

೧೩೮ 'ಹಾಳು ಹಂಪೆ' ಲೇಖಕರು—ಶ್ರೀಯುತ ಕುಲಕರ್ಣಿ ಪ್ರಲ್ಹಾದರಾಯರು. ಇದು ಭುವನೇಶ್ವರೀ ಗ್ರಂಥಮಾಲೆಯ ನಾಲ್ಕನೇ ಗ್ರಂಥ. ಕ್ರೌ ಅ. ಪುಟಗಳು. ೩೯ ಬೆಲೆ ೪ ಆಣೆ.

೧೩೯ 'ಯಜ್ಞಕುಂಡ' (ನಾಟಕ) ಶ್ರೀ. ಕಡೆಂಗೋಡ್ಲು ಶಂಕರಭಟ್ಟರು ಬರೆದುದು. ಮಂಗಳೂರಿನ ಬಾಲಸಾಹಿತ್ಯ ಮಂಡಲದ ಪ್ರಕಟನೆ. ಕ್ರೌ. ಅ. ೧೭೭ ಪುಟ ಬೆಲೆ ೧ ರೂ. ೪ ಆಣೆ.

೧೪೦ 'ಕಾಸಿಗೆ' (ತುಳು ಕವಿತಾಸಂಗ್ರಹ) ಕೆ. ಬಿ. ನಾರಾಯಣ ಕಿಲ್ಲೆಯವರು ಬರೆದುದು. ಉಡುಪಿಯ ಎಸ್. ಯು. ಪಣಿಯಾಡಿಯವರು ತುಳುವ ಸಾಹಿತ್ಯ ಮಾಲೆಯ ೫ನೆಯ ಪುಷ್ಪವಾಗಿ ಪ್ರಕಟಿಸಿದ್ದಾರೆ. ಕ್ರೌ. ಅ. ೫೦ ಪುಟಗಳು. ಬೆಲೆ ೪ ಆಣೆ.

೧೪೧ 'ತಿಲಾಂಜಲಿ' (ಕವಿತೆ) ಶ್ರೀ. ಸಾಲಿ ರಾಮಚಂದ್ರರಾಯರು ಬರೆದುದು. ಪುಟ್ಟ ಪುಟಗಳು ೨೪. ಬೆಲೆ ೪ ಆಣೆ.

**'ಮೈಸೂರಿನ ಖನಿಜಸಂಪತ್ತಿ' ಎಂಬ ಲೇಖನವನ್ನು ಬರೆದವರ ಹೆಸರು 'ಎಸ್. ನಾರಾಯಣರಾಯರು' ಎಂದು ತಪ್ಪಿ ಬಿದ್ದಿದೆ. ಅದನ್ನು 'ಎಸ್. ಲಕ್ಷ್ಮಣರಾಯರು' ಎಂದು ಓದಿಕೊಳ್ಳಬೇಕು.**

ಸಂ. ಜ. ಕ.



ದಾವಣಗೆರೆಯ ಪ್ರಸಿದ್ಧ ವರ್ತಕರೂ ಜೀವವಿಮಾಸಂಘದ ಪ್ರೋತ್ಸಾಹಕರೂ ರಾಜಪ್ರಜಾಸಭೆಯ ಸಾಮಾಜಿಕರೂ ಆದ **ದಿವಂಗತ ಬ್ರಹ್ಮಪ್ಪನವರ ತವನಪ್ಪನವರ ದೇವೇಂದ್ರಪ್ಪನವರು.**

CC-0. Jangamwadi Math Collection. Digitized by eGangotri

# ಜಯಕರ್ನಾಟಕದ ವಿಶೇಷ ಸಂಚಿಕೆ

ಪ್ರತಿಸಲದಂತೆ ೧೧ನೆಯ ಸಂಪುಟದ ೧೧ನೆಯ ಸಂಚಿಕೆಯನ್ನು ವಿಶೇಷ ಸಂಚಿಕೆಯಾಗಿ ಪ್ರಕಟಿಸುವೆವು. ಕರ್ನಾಟಕದ ಮತ್ತು ದೇಶ ವಿದೇಶಗಳ ಪ್ರಸಿದ್ಧ ಲೇಖಕರ ಸಚಿತ್ರ ಲೇಖಗಳನ್ನೂ ತ್ರಿವರ್ಣ ಚಿತ್ರಗಳನ್ನೂ ಒಳಗೊಂಡ ವಿಶೇಷ ಸಂಚಿಕೆಯು ಡಿಸೆಂಬರ ೧೧ನೆಯ ತಾರೀಖಿಗೆ ತಪ್ಪದೆ ಹೊರಬೀಳುವದು. ಪ್ರತಿಗಳು ಬೇಗನೆ ತೀರಿ ಹೋಗುವ ವಾದ್ದರಿಂದ ಚಂದಾದಾರರಾಗಲಿಚ್ಛಿಸುವವರು ಮತ್ತು ಗ್ರಾಹಕರು ತ್ವರೆ ಮಾಡಬೇಕು. ವಿಶೇಷ ಸಂಚಿಕೆಯ ಬೆಲೆ ೧ ರೂ. ವಿಶೇಷ ಸಂಚಿಕೆಯು ಕರ್ನಾಟಕದ ಎಲ್ಲಾ ಭಾಗಗಳಲ್ಲಿ ಹೋಗುವದಾದ್ದರಿಂದ ಜಾಹೀರಾತುದಾರರು ಬೇಗನೆ ತಂತಮ್ಮ ಜಾಹೀರಾತುಗಳನ್ನು ಕಳಿಸಬೇಕು.

ಸೊಗಸಾದ ಮುದ್ರಣ, ಮನೋಹರ ಚಿತ್ರಗಳು, ತಜ್ಞರ ಲೇಖನಗಳು, ಮೊದಲಾದವುಗಳ ನ್ನೊಳಗೊಂಡು ವಿಶೇಷ ಸಂಚಿಕೆಯು ಅಂತರಂಗ, ಬಹಿರಂಗ ಸೌಂದರ್ಯಸಂಪನ್ನವಾಗುವಂತೆ ವಿಶೇಷ ಲಕ್ಷ್ಯವನ್ನು ಕೊಡಲಾಗುವದು.

---

## ಜಯಕರ್ನಾಟಕ ಗ್ರಂಥಮಾಲೆಯ ಎರಡನೇ ವರ್ಷ

## ಚಂದಾ ಕಡಿಮೆ ಮಾಡಿದೆ

ವರ್ಷದಲ್ಲಿ ಸುಲಲಿತ, ಸುಮನೋಹರವಾದ ಶೈಲಿಯ ಆರುಗ್ರಂಥಗಳು.

ಚಂದಾ:— ಜ. ಕ. ಚಂದಾದಾರರಿಗೆ ೩-೦-೦ ರೂ. ಮಿಕ್ಕವರಿಗೆ ೩-೮-೦.

ಹೃದಯವನ್ನು ಕರಗಿಸುವ ೩ ಕತೆಗಳುಳ್ಳ ಶ್ರೀ. ಆನಂದಕಂದರ

## ಬಡತನದ ಬಾಳು

**ಬೆಲೆ ೦-೮-೦**

ಇದೀಗ ಹೊರಟಿದೆ ! **ಶ್ರೀ. ಟೇಂಗ್ಸೆ ಗೋವಿಂದರಾಯರು ಬರೆದ** ಓದಿ ನೋಡಿರಿ !!

## ದೇವರ ಬಾಗಿಲು

ಮನೋಹರವಾದ ಸಾಮಾಜಿಕ ನಾಟಕ

**ಬೆಲೆ ೦-೮-೦**

ಹೋದ ವರ್ಷದಲ್ಲಿಯ ಗ್ರಂಥಮಾಲೆಯ ಎಲ್ಲ ಪುಸ್ತಕಗಳನ್ನೂ ಕೊಳ್ಳುವವರಿಗೆ ಬರೇ ೩-೮-೦ ಕ್ಕೆ ಕೊಡುತ್ತೇವೆ. ತ್ವರೆ ಮಾಡಿರಿ ಪತ್ರಿಕೆಗಳು ತೀರುತ್ತಾ ಬಂದಿವೆ.

ಗುಂಪಿನ ಗೆಳೆಯರ ಬೇರೆ ಹಲವು ಪುಸ್ತಕಗಳೂ ಇವೆ ಕ್ಯಾಟಲಾಗಿಗಾಗಿ ಬರೆದುಕೊಳ್ಳಿ.

---

**ಅತಿ ಅಗ್ಗ !** **ಅರ್ಧ ಬೆಲೆ !!**

'ಜಯಕರ್ನಾಟಕ'ದಲ್ಲಿ ಇಂದಿನವರೆಗೆ ಅಚ್ಚಾದ ಎಲ್ಲ ಬ್ಲಾಕುಗಳನ್ನು ಅರ್ಧ ಬೆಲೆಗೆ ಮಾರುತ್ತೇವೆ. ಬೇಕಾದವರು ಯಾವ ಸಂಚಿಕೆ ಎಷ್ಟನೆಯ ವರ್ಷ ಎಂಬುದನ್ನು ಬರೆದರೆ ಕಳಿಸುತ್ತೇವೆ. ಬಾಡಿಗೆಯಿಂದ ಬೇಕಾದರೂ ಕೊಡುತ್ತೇವೆ.

ವ್ಯವಸ್ಥಾಪಕ ಜಯಕರ್ನಾಟಕ
ಧಾರವಾಡ.

---

**ಕನ್ನಡದಲ್ಲಿ ಒಳ್ಳೇ ಕಾದಂಬರಿಗಳೇ ಇಲ್ಲವಲ್ಲ !!! ಎಂದೇಕೆ ಕಳವಳ ಪಡುವಿರಿ.**

## ' ಮಯೂರ '

ಶ್ರೀ. ದೇವುಡು ಬರೆದುದು. ಇದನ್ನು ಓದಿ ನೋಡಿರಿ. ಐತಿಹಾಸಿಕ ಕಾದಂಬರಿ. ಈಗಾಗಲೇ ಮೊದಲ ಭಾಗ ಬಂದು ಕೆಲವರಿಗೆ ಪರಿಚಯವಾಗಿರುವದು. ಭಾಗ ೨, ೧೬೦ ಪುಟ ಬೆಲೆ ಒಂದೇ ರೂಪಾಯಿ. ಪೂರ್ಣ ೩೦೦ ಪುಟ ಬೆಲೆ ಒಂದೂ ವರೆ ರೂಪಾಯಿ.

ಸಿಕ್ಕುವ ಸ್ಥಳ:— ಕರ್ನಾಟಕ ಸಾಹಿತ್ಯಮಂದಿರ
ಮಾರ್ಕೇಟರೋಡ, ಧಾರವಾಡ.

CC-0. Jangamwadi Math Collection. Digitized by eGangotri

# ಪರಿವಿಡಿ

ವಿ. ಸೂ. ಬರೆಹಗಾರರ ಹೆಸರುಗಳ ಹಿಂದೆ ' ಶ್ರೀಯುತ ' ಎಂದು ಸೇರಿಸಿ ಓದಿಕೊಳ್ಳಬೇಕು



CC-0. Jangamwadi Math Collection. Digitized by eGangotri



# ವನದೇವತೆ

ಚಿತ್ರಶಿಲ್ಪಿ:—ಶ್ರೀ. ಎಸ್. ಎಸ್. ಕಟ್ಟಿ, ಬೆಳಗಾವಿ.

CC-0. Jangamwadi Math Collection. Digitized by eGangotri

ಜಯಕರ್ನಾಟಕ

ಸಂಪುಟ ೧೦ | ಆಂಗಿರಸ ಸಂವತ್ಸರ, ನೂಲು ಹುಣ್ಣಿವೆ | ಸಂಚಿಕೆ ೧೦

ಚಾಲುಕ್ಯ ವಿಕ್ರಮ ವರ್ಷ ೮೫೭

# ಅರವಿಂದರ ತಿರುನುಡಿ

ಸದ್ಯದ ಕಾಲದಲ್ಲಿ ನಡೆದ ಸಾಧನೆಗಳಲ್ಲೆಲ್ಲಾ ಕರ್ಮಭಕ್ತಿಗಳ ಪ್ರಾಬಲ್ಯವೇ ಹೆಚ್ಚು. ಶಕ್ತಿಯೂ ಪ್ರೇಮವೂ ವಿಶಾಲಸಾಗರದ ತೆರೆಗಳೇನೋ ಅಹುದು. ಆದರೆ ಬರಿ ತೆರೆಗಳನ್ನೇ ಅವಲಂಬಿಸಿ ಕುಳಿತರೆ ಸಾಗದು. ಮೂಲ ಸೆಲೆಗೆ ಮುಟ್ಟಬೇಕು. ಆ ಸೆಲೆಯೇ ನಾವಾಗಬೇಕು. ಆಗ ಶಾಂತಾವಸ್ಥೆಯು ಬರುವುದು. ಆಗ ಜೀವನದ ಒಳಹುರುಳು ತಿಳಿಯಾಗುವುದು. ಬರಿ ತೆರೆಗಳಿಗೆ ಅಂಟಿಕೊಂಡು ಕುಳಿತರೆ, ಅವು ಒಣಗಿ ಹೋಗುವವು. ಜ್ಞಾನಸಮುದ್ರದಲ್ಲಿ ಹಾರಿಕೊಂಡರೆ, ಆಗ ಅದರಲ್ಲಿ ಶಕ್ತಿ ಮತ್ತು ಪ್ರೇಮ, ಕರ್ಮ ಮತ್ತು ಭಕ್ತಿ— ಇವೆರಡೂ ದೊರಕುವವು. ಅಲ್ಲಿ ಎಲ್ಲವೂ ಸಮಾನವಾಗಿ ಸಿಕ್ಕುವುದು. ಈ ಜ್ಞಾನವು ಸಾಧಾರಣವಾದ ಜ್ಞಾನವಲ್ಲ. ಅದು ಪೂರ್ಣಜ್ಞಾನವು. ವಿಜ್ಞಾನವೇ ಅದರ ತಳಹದಿಯು. ಈ ವಿಜ್ಞಾನದಲ್ಲಿ ಜ್ಞಾನ, ಭಕ್ತಿ ಹಾಗೂ ಕರ್ಮ— ಇವೆಲ್ಲಾ ಇರುವವು.

ಈ ಪೂರ್ಣಜ್ಞಾನವನ್ನು ಶೇಖರಿಸಿಕೊಳ್ಳುವುದಕ್ಕೆ ಒಂದು ಮೂಸೆ ( mould ) ಸಿದ್ಧವಾಗಬೇಕು. ಈ ಮೂಸೆಯು ಸಿದ್ಧವಾದರೆ ಜ್ಞಾನದ ಪರಿಪೂರ್ಣತೆಯು ಬರುವುದಕ್ಕೆ ವಿಲಂಬವಾಗಲಾರದು. ದೇಹ, ಪ್ರಾಣ, ಮನಸ್ಸು—ಇವೆಲ್ಲವೂ ಸಂಪೂರ್ಣವಾಗಿ ಸಮರ್ಪಿತವಾದರೆ ಭಗವಂತನು ಅವುಗಳಲ್ಲಿ ಜ್ಞಾನಧಾರೆಯುನ್ನು ತೆರಪಿಲ್ಲದೆ ಎರೆಯುವನು. ಮೂಸೆಯು ಸಿದ್ಧವಾದರೆ ಪೂರ್ಣಜ್ಞಾನದ ಪ್ರತಿಷ್ಠೆಯು ತಾನೇ ಆಗುವುದು. ಜೊತೆಜೊತೆಗೆ ಕಾರ್ಯವೂ ವಿಶಾಲವಾಗಿ ಬಿಡುವುದು. ಪೂರ್ಣತೆ ಬಂದ ಮೇಲೆಯೇ ಕರ್ಮವನ್ನು ಆರಂಭಿಸಬೇಕೆಂತಲ್ಲ. ಜ್ಞಾನವು ಮೂಡುವುದಕ್ಕೆ ಆರಂಭಿಸಿದರೆ, ಕರ್ಮವನ್ನು ಮಾಡುಮಾಡುತ್ತಲೆ ಅದು ಪೂರ್ಣತೆಗೆ ಬರುತ್ತದೆ.

— ‘ ಅರವಿಂದಮಂದಿರೇ ’ ಎಂಬ ಬಂಗಾಲಿಪುಸ್ತಕದಿಂದ

CC-0. Jangamwadi Math Collection. Digitized by eGangotri

# ಪೂರ್ಣಯೋಗದ ಪೂರ್ವಸೂಚನೆ

ಬರೆದವ—ಮಧುರಚೆಂನ

ಭರತಖಂಡದ ನೂತನ ಧರ್ಮವಿಪ್ಲವದ ಮಂಗಳ ಪದ್ಯವು ನವಶಿಕ್ಷಿತರ ನಿರೀಶ್ವರವಾದದಿಂದ ಮೊದಲಾಯಿತು. ಬಳಿಕ ದಯಾನಂದ, ರಾಮಮೋಹನ, ದೇವೇಂದ್ರನಾಥರು ಬಹುದೇವತಾವಾದ ಮತ್ತು ಮೂರ್ತಿಪೂಜೆಗೆ ಪ್ರತಿಭಟಿಸಿ, ನಿರಾಕಾರ ಏಕೇಶ್ವರವಾದವನ್ನು ಸಮರ್ಥಿಸಿದರಾದರೂ ಅನುಭವಿಕ ಆಸ್ತಿಕತೆಯು ರಾಮಕೃಷ್ಣರ ನಿಜಸಂಪತ್ತಾಗಿದೆ. ವೈಷಮ್ಯದ ವಿಷಮಾಂಧಕಾರದಲ್ಲಿ ಸಮನ್ವಯದ ಸತ್ಯಜ್ಯೋತಿಯನ್ನು ಮೊದಲಿಗೆ ಕಂಡವರು ರಾಮಕೃಷ್ಣರೆ. ಅನಂತರ ನೆಲಹಿಡಿದ ನಿಷ್ಕ್ರಿಯ ವೇದಾಂತವನ್ನು ಪುಟಗೊಳಿಸಿ ಕೋಣೆಯಿಂದ ಬೀದಿಗೆಳೆದವರು ವಿವೇಕಾನಂದ-ರಾಮತೀರ್ಥರು. ಹೀಗೊಮ್ಮೆ ಆಧ್ಯಾತ್ಮ ರಾಜ್ಯದ ತಳಹದಿಯು ಗಟ್ಟಿಯಾದಮೇಲೆ ಅದನ್ನೀಗ ಮುಂದರಿಸುವವರು ಮುಂದೆ ಬಂದಿದ್ದಾರೆ.



ಶ್ರೀ. ಅರವಿಂದರು

ಅನಿರ್ವಚನೀಯವನ್ನು ವಚನಕ್ಕಿಳಿಸಿ, ಹೃದಯಂಗಮಗೊಳಿಸುತ್ತಿರುವವರು ರವೀಂದ್ರರು. ಏಕಾಂತಸುಲಭವಾದದ್ದನ್ನು ಲೋಕಾಂತದಲ್ಲಿ ಆಚರಿಸಿ ತೋರಿಸುತ್ತಿರುವವರು ಮಹಾತ್ಮಾಜಿಯವರು. ರವೀಂದ್ರರ ರಸಾನುಭೂತಿ, ಮಹಾತ್ಮರ ಸಹಾನುಭೂತಿ ಇವೆರಡರ ಪುಣ್ಯಪ್ರಭಾವದಲ್ಲಿ ಪಾವನವಾಗುತ್ತಿರುವದರಿಂದ ಭಾರತವರ್ಷವು ಅರವಿಂದರ ದಿವ್ಯಾನುಭೂತಿಗಾಗಿ ಭೂಮಿಕೆಯನ್ನು ಸಿದ್ಧಪಡಿಸಿಕೊಳ್ಳುತ್ತಲಿದೆ.

ಶ್ರದ್ಧೆಯು ಸತ್ತ್ವಾನುರೂಪವಾಗಿರುತ್ತಿರುವದರಿಂದ ಸತ್ತ್ವವು ಶುದ್ಧವಾದಂತೆ ಶ್ರದ್ಧೆಯು ಕಳೆಯೇರುವದು. ಸ್ವಭಾವವು ಸತ್ತ್ವದ ದ್ಯೋತಕವಾಗಿರುವದರಿಂದ ಸತ್ತ್ವದ ಪಲ್ಲಟವೆಂದರೆ ಸ್ವಭಾವದ ಮಾರ್ಪಾಡೆ. ಆದ್ದರಿಂದ ನಿರೀಶ್ವರವಾದದಿಂದ ಇಂದಿನ ತಾತ್ತ್ವಿಕ ಭಾವನೆಯವರೆಗೆ ಬೆಳೆಯುತ್ತ ಬಂದ ಶ್ರದ್ಧೆಯು ಭಾರತೀಯರ ಸ್ವಭಾವ ಪರಿವರ್ತನದ ನಿದರ್ಶನವಾಗಿದೆ.

ಮಾನುಷಸತ್ತ್ವವು ಮೂಲತಃ ಎರಡು ಪಕ್ಷವಾಗಿದೆ. ಒಂದು ಜ್ಞಾನಪ್ರಧಾನ, ಇನ್ನೊಂದು ಶಕ್ತಿಪ್ರಧಾನ. ಒಂದು ಸಾತ್ತ್ವಿಕ, ಇನ್ನೊಂದು ರಾಜಸಿಕ. ಇವೆರಡೂ ಇಲ್ಲದ್ದೇ ಅಂಧತಮಸ್ಸು. ಈ ಮೂರನೆಯ ಭೂಮಿಕೆಯಲ್ಲಿ ತೋರುವ ಶ್ರದ್ಧೆ ಅಂಧಶ್ರದ್ಧೆ. ತೋರಿಕೆಯಲ್ಲಿ ಅದು ಯಾವ ವರ್ಗದ ಶ್ರದ್ಧೆಯನ್ನಾದರೂ ಅನುಕರಿಸಬಹುದು. ಆದರೂ ನಿಜವಾಗಿ ಅದು ಕಗ್ಗತ್ತಲೆಯೆ. ಇಂದಿಗೊಂದು ಶತಮಾನದ ಹಿಂದೆ ಭರತಖಂಡದ ಜನಜೀವನವು ಈ ಮೆಟ್ಟಲಿಗೆ ಇಳಿದಿತ್ತು. ಆದರಲ್ಲಿ ಶಕ್ತಿಪ್ರಧಾನವಾದ ರಜಃಪ್ರಕೃತಿಯ ಸುಶಿಕ್ಷಿತ ನವಯುವಕರುಂಟಾದುದರಿಂದ ಆ ಜಡತ್ವದಲ್ಲಿ ಚಲನವುಂಟಾಗಿ ನಾಸ್ತಿಕತೆಯೂ ಸಂದೇಹವಾದವೂ ಮೊಳೆತುವು. ಬಳಿಕ ಸತ್ತ್ವಪ್ರಧಾನ ಸಾಧಕರಿಂದ ಇಂದಿನ ಪಾರಮಾರ್ಥಿಕ ಶ್ರದ್ಧೆಯು ಕ್ರಮದಿಂದ ಬೆಳೆಯುತ್ತಿರುವದು.

CC-0. Jangamwadi Math Collection. Digitized by eGangotri

ದೇಶದಲ್ಲಿ ಇನ್ನೂ ಅಸಂಖ್ಯ ಅಂಧಶ್ರದ್ಧಾವಾದಿಗಳಿದ್ದಾರೆ. ಅನೇಕ ನಾಸ್ತಿಕಯುವಕರೂ ಇದ್ದಾರೆ. ಇವರ ಜೊತೆಗೆ ಶಾಸ್ತ್ರೀಯಪ್ರಬುದ್ಧರೂ ಹೊರಟಿದ್ದಾರೆ. ಅಂಧಶ್ರದ್ಧೆಯ ದುರ್ಘಟಪ್ರತಿಕ್ರಿಯೆಯು ಕುಂಠಿತಾಗಿದೆ. ನಾಸ್ತಿಕಯುವಕರಿಗೆ ಮಹಾತ್ಮರ ಮತ್ತು ರವೀಂದ್ರರ ಗುಟುಕು ಸಿಗಹತ್ತಿದ್ದರಿಂದ ಅವರ ಪ್ರಕೃತಿಯು ಪಲ್ಲಟಿಸಹತ್ತಿದೆ. ಈ ಸತ್ತ್ವಶುದ್ಧಿಯ ಪ್ರಗತಿಯು, ಮುಂದೆ ಬರಲಿರುವ ಉನ್ನತಶ್ರದ್ಧೆಯ ಮತ್ತು ಉಚ್ಚಜೀವನದ ಮುಂಗುರುತಾಗಿದೆ.

ರಾಮಕೃಷ್ಣರ ಭಕ್ತಿಯನ್ನು ರವೀಂದ್ರರು ಹಾಡಿ ತೋರಿಸುತ್ತಿದ್ದರೆ, ವಿವೇಕಾನಂದರ ವೇದಾಂತವನ್ನು ಮಹಾತ್ಮರು ಮಾಡಿತೋರಿಸುತ್ತಿರುವ ಕಾಲವಿದು. ಅವರ ಮಾಧುರ್ಯ, ಇವರ ಗಾಂಭೀರ್ಯ — ಈ ತ್ಯಾಗಭೋಗದ ಸಿಧಿಯು ಇಂದಿನ ನವಸಂತಾನಕ್ಕೆ ಅನಾಯಾಸ ಪ್ರಾಪ್ತವಾಗಲಿರುವದು. ಅರವಿಂದರ ಯೋಗವು ಈ ಭೂಮಿಕೆಯಿಂದ ಮುಂದೆ ಮೊದಲಾಗುವದು.

ದೇವರಿದ್ದಾನೋ ಇಲ್ಲವೋ? ಆತ್ಮವು ಅಮರವೋ ಅಲ್ಲವೋ? ಪರಮಾತ್ಮನೂ ಪರಬ್ರಹ್ಮವೂ ಒಂದೆಯೋ ಭಿನ್ನವೋ? ನಿಜವಾದದ್ದು ದ್ವೈತವೋ ಅದ್ವೈತವೋ? ಮುಂತಾದ ವಿಷಮಪ್ರಶ್ನೆಗಳೊಡನೆ ಗುದ್ದಾಡುವದಕ್ಕೆ ಅರವಿಂದರ ಯೋಗದಲ್ಲಿ ಆಶ್ರಯವಿಲ್ಲ. ಜನನಮರಣ ರಾಟಳದಿಂದ ಪಾರಾಗುವದೂ ಭವರೋಗವನ್ನು ನೀಗಿಸಿಕೊಂಡು ಪರಾತ್ಪರದಲ್ಲಿ ಲಯವಾಗಬೇಕೆನ್ನುವುದೂ ಅರವಿಂದರ ಯೋಗದ ಸಮಿಾಪಕ್ಕೆ ಸುಳಿಯವು.

ವಿಶ್ವವು ಅಂಧಚಕ್ರವಾಗಿರದೆ ಸಜ್ಞಸಂಚಲನವಾಗಿದೆ. 'ಅದು' ಏಕಮೇವಾದ್ವಿತೀಯವಾಗಿ ಇದ್ದೂ ಕೂಡ ತಾನೇ ಬಹುತ್ವವನ್ನು ತಾಳಿದೆ. ಮನುಷ್ಯನಿಗೆ ತಾನು ಅಜ್ಞನೂ ಅಸಮರ್ಥನೂ ಇರುವೆನೆಂಬ ಅನಿಸಿಕೆಯು ಅವನ ಪ್ರಕೃತಿಯ ಅಶುದ್ಧಿಗೆ ಅನುರೂಪವಾಗಿದೆ. ಅವನ ಸತ್ತ್ವವು ಸಂಪೂರ್ಣ ಶುದ್ಧವಾದರೆ ಅವನ ಪರಾಪ್ರಕೃತಿಯಲ್ಲಿ ಅಹಂಕಾರರಹಿತವಾದ ಅಕ್ಷಯ ಜ್ಞಾನಶಕ್ತಿಗಳ ಸೆಲೆಯೊಡೆಯುವದು. ಆಗ ಅವನು ಅರಿತರಿತು ಬರುವ ಅವ್ಯರ್ಥಪ್ರೇರಣೆಯ ಆಗರವಾಗುವನು. ನಿರರ್ಥವೂ ಅನರ್ಥವೂ ಅವನ ರಾಜ್ಯದಲ್ಲಿರಲಾರವು. ಅವನ ಪ್ರೇರಣೆಗೆ ಪ್ರತಿಭಟಿಸಿ ಪ್ರತಿಕೂಲವಾಗುವ ವ್ಯಕ್ತಿಗಳೂ ಶಕ್ತಿಗಳೂ ಉಳಿಯಲಾರವು. ಅವನಿಗೆ ಆನಂದದ ಹೊರತು ಅನ್ಯಸಂಪರ್ಕವಿಲ್ಲ. ಒಟ್ಟಿಗೆ ಇವನೊಬ್ಬನು ವಿಶ್ವೇಶ್ವರಿಯ ಆಜ್ಞೆಯ ಸ್ವಯಂಸೇವಕನು. ಇವನೇ ಅರವಿಂದರೆನ್ನುವ ಪೂರ್ಣಯೋಗಿ. ಈ ಅವಸ್ಥೆಗೆ ಬರುವದಕ್ಕೆ ಮನುಷ್ಯನಿಗೆ ಅವನ ಪರಂಪರಾಪ್ರಾಪ್ತವಾದ ಪ್ರಕೃತಿಗತ ಅಶುದ್ಧಿಯೇ ಅಂತರಾಯವಾಗಿದೆ. ಇದಕ್ಕೆ ಉಪಾಯವೆಂದರೆ ವಿಶ್ವಸಂಚಾಲಕ ಮಹಾಶಕ್ತಿಗೆ ಅರಿತರಿತು ಅಧೀನನಾಗುವದೊಂದು; ಮತ್ತು ಆ ಶಕ್ತಿಯ ಕಿಡಿಯೇ ಆಗಿ, ನಮ್ಮೊಳಗಡಗಿರುವ ಸಂಕಲ್ಪಶಕ್ತಿಯೆಂಬುದನ್ನು ನಮ್ಮ ಪ್ರಾಕೃತಿಕ ಸ್ವಭಾವದ ಪ್ರತಿಪಕ್ಷಿಯನ್ನಾಗಿ ಎಬ್ಬಿಸಿ ನಿಲ್ಲಿಸುವದು ಇನ್ನೊಂದು; ಇವೆರಡರ ಸರ್ವಾಂಗೀಣ ಪ್ರಯೋಗದಿಂದ ತಾನು ಆ ಮಹಾಮಾತೆಯ ದಿವ್ಯಕರ್ಮಿಯಾದ ಆಜ್ಞೆಯ ಸೇವಕನಾಗುವದೇ ತನ್ನ ಜೀವನೋದ್ದೇಶವೆಂಬ ನಿಜಾಕಾಂಕ್ಷೆ ಮೂಡನೆಯದು. ಸಮರ್ಪಣ, ಸಂಕಲ್ಪ, ನಿಜಾಕಾಂಕ್ಷೆ ಇವೇ ಈ ಪೂರ್ಣಯೋಗದ ಸಾರ್ವಭೌಮ ಮಹಾವ್ರತಗಳು. ಸಮಸ್ತ ಮಾನವಕೋಟಿಯು ದಿವ್ಯಾನಂದದ ಅಧಿಕಾರಿಯಾಗಬೇಕೆಂಬುದೇ ಈ ಯೋಗದ ಧ್ಯೇಯವು.*

---

ಪೂರ್ಣಯೋಗದ ಸಂಪೂರ್ಣಸಾಧನಪದ್ಧತಿಯನ್ನು ಸ್ವಲ್ಪದರಲ್ಲಿ ಅರಿಯಬೇಕೆನ್ನುವವರು ಅರವಿಂದಯೋಗಿಗಳು ಬರೆದ ಕೆಳಗಿನ ನಾಲ್ಕು ಪುಟ್ಟಪುಸ್ತಕಗಳನ್ನು ಅಗತ್ಯವಾಗಿ ಓದಬೇಕು. :—

(೧) Yoga and its objects. ಹಿಂದೀ ಭಾಷಾಂತರ "ಭಗವಾನಕೀ ಲೀಲಾ". ಬಂಗಾಲೀ ಅನುವಾದ "ಲೀಲಾ"
(೨) Yogic Sadhana. ಬಂಗಾಲಿಯಲ್ಲಿ "ಯೌಗಿಕಸಾಧನ"
(೩) Mother. ಹಿಂದಿಯಲ್ಲಿ "ಮಾತಾ"
(೪) ಅರವಿಂದಮಂದಿರೇ (ಬಂಗಾಲಿ). ಇದರ ಹಿಂದೀ ಅನುವಾದ "ಅರವಿಂದಮಂದಿರಮೇ"

ಇವುಗಳಲ್ಲಿ ಮೊದಲಿನ ಮೂರು ಪುಸ್ತಕಗಳಲ್ಲಿ ಕ್ರಮವಾಗಿ ಪೂರ್ಣಯೋಗದ ಮೂರು ಮಹಾವ್ರತಗಳ ಪೂರ್ಣ ವಿವರಣೆಯಿದೆ. ನಾಲ್ಕನೆಯದರಲ್ಲಿ ಪ್ರತ್ಯಕ್ಷ ಅರವಿಂದರಿಗೆ ಈ ವಿಷಯದಲ್ಲಿ ಕೇಳಿದ ನಾನಾ ಪ್ರಶ್ನೆಗಳ ವಿಸ್ತಾರವಾದ ಉತ್ತರಗಳಿವೆ.

ಇಂಗ್ಲೀಷು ಮತ್ತು ಬಂಗಾಲಿ ಪುಸ್ತಕಗಳು— "ಪ್ರವರ್ತಕ ಪಬ್ಲಿಶಿಂಗ್ ಹೌಸ್ ೬೧ ಬೋಬಜಾರ್, ಕಲಕತ್ತಾ" ಎಂಬಲ್ಲಿಯೂ — ಹಿಂದೀ ಪುಸ್ತಕಗಳು — "ಹಿಂದೀ ಪುಸ್ತಕ ಎಜನ್ಸಿ, ೨೦೬ ಹಾರಿಸನ್ ರೋಡ್, ಕಲಕತ್ತಾ" ಎಂಬಲ್ಲಿಯೂ ಸಿಗುವವು.

CC-0. Jangamwadi Math Collection. Digitized by eGangotri

# ಗ್ರಂಥಾಲಯಗಳೆ ಈ ಯುಗದ ದೇವಾಲಯಗಳು

ಲೇಖಕರು:— ಪ್ರೊ. ಕೆ. ಎಸ್. ಶ್ರೀಕಂಠನ್, ಎಂ. ಎ. ಎಫ್. ಆರ್. ಇ. ಎಸ್. (ಲಂಡನ್), ಮದುರಾ

ಮುಕ್ತಿಯೇ ಧರ್ಮದ ಗುರಿಯಾಗಿದ್ದರೆ, 'ಗ್ರಂಥಾಲಯ'ದ ಚಳವಳಿಯು 'ಧರ್ಮ'ವೆಂದು ಕರೆಯಲ್ಪಡಲು ಅರ್ಹವಾಗಿದೆ. ಏಕೆಂದರೆ ಗ್ರಂಥಾಲಯಗಳಿಗೆ ದೊರೆಯುವ ಔನ್ನತ್ಯದ ಮೇಲೆಯೆ ಭಾರತವರ್ಷದ ಬೌದ್ಧಿಕವಿಮೋಚನೆಯು – ಆಬಾಲವೃದ್ಧರ ಅಭ್ಯುದಯವು–ಏಕೆ, ನಮ್ಮವರ ರಾಜಕೀಯ ವಿಮೋಚನೆಯು ಕೂಡ ಅವಲಂಬಿಸಿದೆ. ಗ್ರಂಥಾಲಯದ ಹೊರತು ಜ್ಞಾನಕ್ಕೊಂದು ಕೊರತೆ. ಶಾಲೆಗಳಲ್ಲಿ ನಾವೇನು ಶಿಕ್ಷಣವನ್ನು ಪಡೆಯುವೆವೋ, ಆದರ ಸಂರಕ್ಷಣ ಸಂವರ್ಧನಗಳ ಬಗೆಗೆ ತಕ್ಕರೀತಿಯಲ್ಲಿ ದುಡ್ಡು ವೆಚ್ಚ ಮಾಡದಿದ್ದರೆ ಆ ಶಾಲೆಗಳ ಕಟ್ಟುವಿಕೆಯನ್ನು ಕುರಿತು ಹಣದ ಸುಗಿಮಳೆಯನ್ನು ಸುರಿಸುವುದೆಲ್ಲ ವ್ಯರ್ಥ. ಯಾವ ಕಟ್ಟಡವನ್ನು ನಾವು ಕಟ್ಟುವೆವೊ, ಅದನ್ನು ಸುಸ್ಥಿತಿಯಲ್ಲಿ ಇರಿಸುವುದಿಲ್ಲವಾದರೆ, ಅದಕ್ಕಾಗಿ ದುಡ್ಡಿನ ಹೊಳೆ ಹರಿಸುವುದು ಹುಚ್ಚುತನವಲ್ಲವೆ? ಇದೆಲ್ಲ ನಮಗೆ ಅರಿದಲ್ಲ— ಆದರೂ ಹಿಂದುಸ್ಥಾನದಲ್ಲಿ ಪ್ರತಿನಿತ್ಯ ಇದೇ ನಡೆಯುತ್ತಿದೆ. ಜ್ಞಾನಾತುರರಿಗೆ ಗ್ರಂಥಗಳನ್ನು ಪೂರೈಸದಿರುವುದು, ಬಾಯಾರಿಕೆಯಾದವರಿಗೆ ನೀರಿಲ್ಲವೆನ್ನುವುದು— ಎರಡೂ ಸರಿಸಮಾನವಾದ ಪಾಪಕರ್ಮಗಳು. ಎರಡನೆಯದರಿಂದ ಭೌತಿಕಮರಣವು ಒದಗುತ್ತಿದ್ದರೆ, ಮೊದಲನೆಯದರ ಮೂಲಕ ಬುದ್ಧಿಗೆ ಉಪೋಷಣೆಯು ಲಭಿಸುತ್ತಿದೆ. ಇಂತಹ ಪಾತಕವು ಹಲವು ಧರ್ಮಗಳ ತವರುಮನೆಯಾದ ನಮ್ಮಾ ನಾಡಿನಲ್ಲಿ ಪ್ರತಿದಿನವೂ ಆಚರಿಸಲ್ಪಡುತ್ತಿದೆ. ವಿದ್ಯಾವಂತರಾದ ತರುಣರು ತಮ್ಮ ವ್ಯಾಸಂಗವನ್ನು ಅಭಿವೃದ್ಧಿಗೊಳಿಸುವ ಸೌಕರ್ಯವಿಲ್ಲದೆ ತಂಡತಂಡವಾಗಿ ಅಲೆಯುತ್ತಿದ್ದಾರೆ. ವಿಶೇಷತಃ ಹಿಂದುಸ್ಥಾನದಲ್ಲಿ ನಿರುದ್ಯೋಗಸಮಸ್ಯೆಯು ಭೀಕರರೂಪವನ್ನು ತಾಳಿದೆ. ಕಾಲೇಜುಗಳಿಂದ ಹೊರಬಿದ್ದ ನಮ್ಮ ಯುವಕರ ಜ್ಞಾನದ ಹಸಿವು ಇನ್ನೂ ಪ್ರಖರವಾಗಿರುತ್ತದೆ; ಆದರೆ ತಕ್ಕ ಸಂದರ್ಭ-ಸನ್ನಿವೇಶಗಳು ದೊರೆಯದ ಮೂಲಕ ಅವರು ನಿರಾಶರಾಗುತ್ತಾರೆ. ತಮ್ಮ ಜ್ಞಾನಸಂಗ್ರಹವು ಇನ್ನೂ ವಿಪುಲವಾಗಿ ಸಮೃದ್ಧವಾಗಬೇಕೆಂಬ ಆಕಾಂಕ್ಷೆಯು ವ್ಯರ್ಥವಾಗುವುದರಿಂದಲೆ ತರುಣರು ನೌಕರಿಗಳಿಗಾಗಿ ಬಾಯಿಬಾಯಿ ಬಿಡುತ್ತಾರೆ; ಜ್ಞಾನ[illegible]ತಾವಂತರು ತಮಗೆ ಅನನುರೂಪವಾದ ವೃತ್ತಿಯನ್ನು ಅಗತಿಕರಾಗಿ ಕೈಕೊಳ್ಳುತ್ತಾರೆ. ಭೌತಿಕಶಾಸ್ತ್ರವನ್ನು ವ್ಯಾಸಂಗವಿಷಯವನ್ನಾಗಿಟ್ಟುಕೊಂಡವನೊಬ್ಬನು ಪದವೀಧರನಾಗಿ ಒಂದು ವರ್ಷವಾಗುವುದರಲ್ಲಿ, ಬೀದಿಯ ಬಿಡಾಡಿಗಳಲ್ಲೊಬ್ಬನಾಗಿ ಬಿಡುತ್ತಾನೆ. ತಾನು ಕಲಿತುದನ್ನೆಲ್ಲ ಮರೆಯದ ಹೊರತು ಆತನಿಗೆ ಬೇರೆ ಹಾದಿಯೇ ಉಳಿಯುವುದಿಲ್ಲ. ಮತ್ತೆಲ್ಲಿಯಾದರೂ ಹೋರೆ ದೊರೆತರೆ, ತನ್ನ ಜ್ಞಾಪಕಶಕ್ತಿಯನ್ನು ಎಚ್ಚರಿಸಲು ಪ್ರಾಥಮಿಕಪಠ್ಯಪುಸ್ತಕಗಳನ್ನು ಮರಳಿ ಓದಿಕೊಳ್ಳಬೇಕಾಗುತ್ತದೆ. ಇದು ಧನದ ದುರ್ವಿನಿಯೋಗವಲ್ಲವೆ? ಈ ತರುಣರಲ್ಲಿ ಪ್ರತಿಯೊಬ್ಬನು ಪುಸ್ತಕಾಲಯಗಳಲ್ಲಿ ಸಂಶೋಧನಕಾರ್ಯದಲ್ಲಿ ತೊಡಗಿದರೆ, ನಮ್ಮ ರಾಷ್ಟ್ರೀಯ ಸಂಪತ್ತು ಎಷ್ಟು ವೃದ್ಧಿಗೊಳ್ಳಬಹುದೆಂದು ಯಾರಾದರೂ ಲೆಕ್ಕ ಮಾಡಿರುವರೆ? ಇಂಗ್ಲಂಡು ಹಿಂದುಸ್ಥಾನಗಳಲ್ಲಿ ಇದೀಗ ಆರ್ಥಿಕಸಂಕಟವು ತಲೆಯೆತ್ತಿರುವುದರಿಂದ, 'ಚಲನದ ಪ್ರಶ್ನೆ (Currency question)'ದ ಬಗ್ಗೆ ಹಲವರಲ್ಲಿ ಕುತೂಹಲವು ಹುಟ್ಟಿದೆ. ಈ ವಿಷಯದಲ್ಲಿ ಜ್ಞಾನವನ್ನು ಒದಗಿಸಿಕೊಡುವ ಸಂಸ್ಥೆಗಳು ನಮ್ಮ ನಾಡಿನಲ್ಲಿ ಎಷ್ಟಿವೆ? ದೊಡ್ಡ ದೊಡ್ಡ ಪಟ್ಟಣಗಳಲ್ಲಿನ ಗ್ರಂಥಭಾಂಡಾರಗಳಲ್ಲಿ ಕೂಡ 'ಚಲನ'ದ ಮೇಲೆ ಪ್ರಾಥಮಿಕ ಪುಸ್ತಕಗಳೂ ಇಲ್ಲ. ಕಾಲೇಜಿನ ಅಧ್ಯಯನದ ತರುವಾಯ ವ್ಯಾಸಂಗವನ್ನೇ ಬಿಟ್ಟುಕೊಟ್ಟು [illegible]ಕ್ಕಾಗಿ ಅಶಿಕ್ಷಿತರಿಂದ ಮೂದಲಿಸಿಕೊಳ್ಳುವುದು ನಿರುದ್ಯೋಗಿಗಳ ಸಂಕಟದ ಉರಿಯಲ್ಲಿ ಎಣ್ಣೆ ಹೊಯ್ದಂತೆ. ಸೌಕರ್ಯಗಳಿಲ್ಲದಿದ್ದರೆ ಅಭ್ಯಾಸವನ್ನು ಮುಂದುವರಿಸುವುದೆಂತು? ಅವರೇನು ಬಯಲಿನೊಡನೆ ಗುದ್ದಾಡ

CC-0. Jangamwadi Math Collection. Digitized by eGangotri

ಬೇಕೆ? ಜೀವನದ ವಿಷಮನಿಮಿಷಗಳಲ್ಲಿ, 'ನಾವು ನಿರಾಶ್ರಿತರು, ನಿರ್ಗತಿಕರು' ಎಂದು ಹಳಿದುಕೊಳ್ಳುವ ಹೊತ್ತಿನಲ್ಲಿ, ಗ್ರಂಥಾಲಯದ ಗಂಭೀರ ವಾತಾವರಣವು ಎಲ್ಲವನ್ನೂ ಮರೆಯಲಿಕ್ಕೆ ಹಚ್ಚಿ, ನಮ್ಮನ್ನು ಇನ್ನೂ ಉನ್ನತವಾದ ಜ್ಞಾನವನ್ನು ಸಂಪಾದಿಸಲು ಪ್ರೇರೇಪಿಸುತ್ತದೆ.

ಭಾರತವರ್ಷವು ಹಲವು ಶ್ರೇಷ್ಠಧರ್ಮಗಳ ಮಾತೃಭೂಮಿಯಾಗಿದೆ. ಜಗತ್ತಿನಲ್ಲಿ ಎಲ್ಲೆಲ್ಲಿಯೂ ಅದ್ಭುತವೇಗದಿಂದ ಹಬ್ಬುತ್ತಿರುವ ಈ ನವಧರ್ಮವನ್ನೂ ಅದು ಅಂಗೀಕರಿಸುವುದೆಂದು ಬಲವಾದ ಆಶೆಯಿದೆ. ಭರತಖಂಡದ ಒಂದು ಭಾಗವು ಈ ಧರ್ಮದ ದೀಕ್ಷೆಯನ್ನು ಈಗಾಗಲೆ ಪಡೆದುಕೊಂಡಿರುವುದು ಸಂತೋಷದ ಸಂಗತಿ. ಬಡೋದೆಯ ಉದಾರವಿಚಾರದ ಮಹಾರಾಜರ ಉತ್ಸಾಹದ ಮೂಲಕ, ಗ್ರಂಥಾಲಯದ ಚಳವಳಿಯ ಬೀಜಗಳು ಬಡೋದಾ ಸಂಸ್ಥಾನದಲ್ಲಿ ಚೆನ್ನಾಗಿ ಬಿತ್ತಲ್ಪಟ್ಟಿವೆ. ಅಲ್ಲಿ ಆ ಚಳವಳಿಯು ಇಷ್ಟು ವಿಲಕ್ಷಣ ರೀತಿಯಲ್ಲಿ ಪ್ರಸಾರವನ್ನು ಹೊಂದಿದುದು, ಮಹಾರಾಜರು ದೈವಿಕಪ್ರೇರಣೆಯಿಂದಲೇ ಉದ್ಯುಕ್ತರಾದರೋ ಎಂಬ ಭಾವನೆಯನ್ನು ತರುವಂತಿದೆ. ಮದ್ರಾಸಿನ 'ಗ್ರಂಥಾಲಯ ಸಂಘ'ವು ಈ ನವಮತಪ್ರಚಾರಕ್ಕಾಗಿ ಪಡುತ್ತಿರುವ ಸಾಹಸವು ಸ್ತೋತ್ರಾರ್ಹವಾಗಿದೆ. ಆದರೂ ಒಟ್ಟಾರೆ ಬಹುಜನಸಮಾಜವು ಈ ಉದ್ಯಮವನ್ನು ಮಲತಾಯಿಯ ಕಣ್ಣಿಂದ ನೋಡುತ್ತಿರುವುದು ಜುಗುಪ್ಸೆಯನ್ನು ಹುಟ್ಟಿಸುತ್ತಿದೆ.

ಗ್ರಂಥಾಲಯಗಳ ಮಹತ್ತ್ವವು ಅಷ್ಟಿಷ್ಟಲ್ಲ; ನಮ್ಮ ಶಕ್ತಿಗೇ ಜ್ಞಾನವನ್ನು ನಮಗೆ ಮಾಡಿಕೊಟ್ಟು, ನಮ್ಮನ್ನು ಭವಿಷ್ಯತ್ತನ್ನು ಎದುರಿಸಲಿಕ್ಕೆ ಸಮರ್ಥರನ್ನಾಗಿ ಮಾಡುವುದು, ಸಾಮಾಜಿಕ ಜೀವನದಲ್ಲಿ ಸಂಸ್ಕೃತಿಯ ಸಾರವನ್ನು ತಂದಿಳಿಸುವುದು, ಸಮಾಜವನ್ನು ಸರಿದಾರಿಯಲ್ಲಿ ಒಯ್ಯಬಲ್ಲ ಯೋಗ್ಯನಾಗರಿಕರನ್ನು ಸಜ್ಜುಗೊಳಿಸುವುದು ಇದು ಎಲ್ಲ ಧರ್ಮಗಳ ಕೆಲಸವಾಗಿರುವಂತೆ ಈ ಗ್ರಂಥಾಲಯ ಚಳವಳಿಯದೂ ಇದೆ. ಇಂದು 'ಗ್ರಂಥಾಲಯ' ಎಂಬ ಶಬ್ದಕ್ಕೆ ಮುಂಚೆ ಎಂದೂ ತೋರದ ಅರ್ಥವ್ಯಾಪ್ತಿಯು ಉಂಟಾಗಿದೆ. ಕೆಲವೊಂದು ಕೂಪಮಂಡೂಕವೃತ್ತಿಯ ಗ್ರಂಥಾಭ್ಯಾಸಜಡರ ಏಕಾಂತನಿವಾಸವು ಅದಲ್ಲ. ಗ್ರಂಥಾಲಯದ ವ್ಯವಸ್ಥಾಪಕನು ಪೋಲೀಸಿನವನಲ್ಲ. ಆಳರಸರ ಬಿಗುಮಿಗೂ, ಅನುದಾರ ಪರಂಪರಾಭಿಮಾನಕ್ಕೂ ಗ್ರಂಥಮಂದಿರಗಳಲ್ಲಿ ಅವಕಾಶವಿಲ್ಲ. ಸುತ್ತುಮುತ್ತಲಿನ ಜನಸಾಮಾನ್ಯರಿಗೆ ಎಲ್ಲ ಬಗೆಯಿಂದ ಉಪಯೋಗಬೀಳುವ ಪುಸ್ತಕಗಳ ಸಂಗ್ರಹವುಳ್ಳ ಸಂಸ್ಥೆಯು ಅದಾಗಿದೆ. ಅದರ ಬಾಗಿಲುಗಳು ಅಹೋರಾತ್ರಿ ಜ್ಞಾನಾರ್ಥಿಗಳಿಗೆ ತೆರೆದಿಡಲ್ಪಟ್ಟಿರುತ್ತವೆ. ಬಾಲಕರು ಪ್ರಬುದ್ಧರು, ಪಂಡಿತರು ಪಾಮರರು, ಕಸಬುಗಾರರು ವರ್ತಕರು—ಎಲ್ಲರ ಪರಾಮರಿಕೆಯನ್ನು ಅದು ತೆಗೆದುಕೊಳ್ಳುತ್ತಿದೆ. ಪ್ರತಿಯೊಬ್ಬನ ಅಭಿರುಚಿಗೆ ತಕ್ಕಂತೆ ಪುಸ್ತಕಗಳನ್ನು ಪೂರೈಸುವುದಷ್ಟೇ ಅದರ ಕಾರ್ಯವಾಗಿರದೆ, ಆ ಅಭಿರುಚಿಯನ್ನು ಸಂಸ್ಕಾರಗೊಳಿಸುವುದೂ ಅದರ ಕರ್ತವ್ಯವಾಗಿರುತ್ತದೆ. ಕಾವ್ಯಶಾಸ್ತ್ರವಿನೋದ, ಆಧಾರಗ್ರಂಥಗಳ ನಿರೀಕ್ಷಣ, ವ್ಯಾಸಂಗ, ಸಂಶೋಧನಗಳು ಅವಿರತವಾಗಿ ನಡೆಯುವ ತಪೋಭೂಮಿಯೂ ಗ್ರಂಥಾಲಯವು. ಪ್ರತಿ ಪುಸ್ತಕಕ್ಕೊಬ್ಬ ಪಾಠಕನನ್ನೂ ಪ್ರತಿಪಾಠಕನಿಗೊಂದು ಪುಸ್ತವನ್ನೂ ಒದಗಿಸಿಕೊಡುವುದು ಗ್ರಂಥಾಲಯ ಚಳವಳಿಯ ಒಂದು ಮೂಲತತ್ತ್ವವಾಗಿದೆ.

ಧರ್ಮದಷ್ಟೇ ಮಹತ್ತ್ವವು ಗ್ರಂಥಾಲಯಗಳಿಗಿರುವುದೆಂಬ ಮಾತು ಮನದಟ್ಟಾದ ಬಳಿಕ, ಧಾರ್ಮಿಕಭಾವನೆಯನ್ನು ಚಿಕ್ಕಂದಿನಲ್ಲಿಯೇ ನಾವು ಬೇರೂರಿಸುತ್ತಿರುವಂತೆ, ಗ್ರಂಥಾಲಯಗಳು ದೇವಾಲಯಗಳೆಂಬ ಸಂಸ್ಕಾರವು ಬಾಲಕರ ಎಳಮನಸ್ಸಿನಲ್ಲಿಯೇ ಮೂಡುವಂತೆ ಮಾಡುವುದು ಕ್ರಮಪ್ರಾಪ್ತವು. ಬರಿ ಪೂಜೆಪುನಸ್ಕಾರಗಳಿಂದ ಸಾಗದು. ಹಿಂದುಸ್ಥಾನದಲ್ಲಿ ಹೊತ್ತಗೆಗಳ ಪೂಜೆ ನಡೆಯುತ್ತಿದೆ; ಅಮೇರಿಕೆಯಲ್ಲಿ ಅವುಗಳ ಸದ್ವಿನಿಯೋಗವಾಗುತ್ತಿದೆ! ನಮ್ಮಲ್ಲಿ ಆಕಳುಗಳಿಗೆ ಷೋಡಶೋಪಚಾರಪೂಜೆಯಾಗುತ್ತಿದೆ; ಡೆನ್ಮಾರ್ಕಿನಲ್ಲಿ ಆಕಳುಗಳು ಈಡಾಗಿ ಹಾಲನ್ನು ಕರೆಯುತ್ತಿವೆ! ದೈವದುರ್ವಿಪಾಕವಲ್ಲವೆ ಇದು? ಅಮೇರಿಕೆಯು ಗ್ರಂಥಾಲಯ ಚಳವಳಿಯ ಆಗರವಾಗಿದೆ. ನಾಡಿನ ಭವಿತವ್ಯದಲ್ಲಿ ಚಿಕ್ಕಮಕ್ಕಳ ಸ್ಥಾನವೇನೆಂಬುದನ್ನು ಅದು ಅರಿತಿರುತ್ತದೆ. ಅಲ್ಲಿ ಗ್ರಂಥಾಲಯಗಳು ಮಕ್ಕಳ ಕ್ರೀಡಾಭವನಗಳಾಗಿವೆ. ಮಕ್ಕಳು ಗ್ರಂಥಾಲಯಗಳಲ್ಲಿಯೇ ಆಟಪಾಟಗಳನ್ನು ಮಾಡುವಂತೆ ಅವರಿಗೆ ಉತ್ತೇಜನವು ಕೊಡಲ್ಪಡುತ್ತಿದೆ. ಕತೆಗಳನ್ನು ಹೇಳುವುದು, ಮ್ಯಾಜಿಕ್



CC-0. Jangamwadi Math Collection. Digitized by eGangotri

ಲ್ಯಾಂಟರ್ನ್ರ್, ಉಪನ್ಯಾಸಗಳು, ಪ್ರೀತಿಯ ಆಟಗಳು, ಬಣ್ಣಬಣ್ಣದ ಚಿತ್ರಗಳು ಮೊದಲಾದ ಹಲವು ಬಗೆಗಳಿಂದ ಬಾಲಕರ ಮನಸ್ಸು ಗ್ರಂಥಾಲಯಗಳಲ್ಲಿ ಆಹ್ಲಾದಿತವಾಗುವಂತೆ ಏರ್ಪಾಟವು ಮಾಡಲ್ಪಡುತ್ತಿದೆ. 'ಚಿಕ್ಕ ಮಕ್ಕಳ ಗ್ರಂಥಾಲಯ'ವು ಇತ್ತ ಶಾಲೆಯೂ ಅಲ್ಲ, ಇತ್ತ ಮನೆಯೂ ಅಲ್ಲ—ಹೀಗೆ ನಡುವಿನ ಸ್ಥಾನದಲ್ಲಿರುತ್ತದೆ: ಆದರಲ್ಲಿ ಶಾಲೆಯೊಳಗಿನ ಕಟ್ಟುಕಟ್ಟಳೆಗಳ ಬಿಗಿಯೂ ಇಲ್ಲ, ಮನೆಯೊಳಗಿನ ವಿಪರೀತ ಲಾಲನೆಯೂ ಇಲ್ಲ. ಅಮೇರಿಕೆಯವರ ಮಿಗಿಲಾದ ಸಾಹಸವೆಂದರೆ, ಕುರುಡರಿಗಾಗಿ ಗ್ರಂಥಾಲಯಗಳನ್ನು ಏರ್ಪಡಿಸಿರುವುದು. ಸ್ಪರ್ಶದ ಮೂಲಕ ತಿಳಿವಳಿಕೆಯಾಗುವ ಹಾಗೆ ದಪ್ಪನ್ನ ರೀತಿಯಲ್ಲಿ ಅಚ್ಚುಹಾಕಿಸಿದ (Embossed) ಪುಸ್ತಕಗಳು ಪ್ರತ್ಯೇಕವಾಗಿ ಇರಿಸಲ್ಪಟ್ಟು, ಕುರುಡರು ಅವುಗಳನ್ನು ಅನಿರ್ಬಂಧವಾಗಿ ಉಪಯೋಗಿಸುವರು.

ಒಳ್ಳೆಯ ಗ್ರಂಥಾಲಯಗಳು ನಾಡಿನ ತುಂಬುಜೀವನದ ಸಾಧನೆಗಳಲ್ಲೊಂದು. ಗ್ರಂಥಾಲಯಗಳ ಶ್ರೇಷ್ಠತೆ ಕನಿಷ್ಠತೆಗಳು ಆಡಳಿತದ ಮೇಲುಕೀಳುಗಳನ್ನಳೆಯಲು ಸಹಾಯಕವಾಗಿವೆ. ಯಾವ ನಾಡಿನ ಪುಸ್ತಕಾಲಯಗಳ ಬಾಗಿಲುಗಳಿಗೆ ಬೀಗವಿದೆಯೊ, ಆ ನಾಡಿನಲ್ಲಿ ಪ್ರಜಾಪ್ರಭುತ್ವವಿನ್ನೂ ನೆಲೆಸಿಲ್ಲವೆಂದೆನ್ನಬಹುದು. ಮತ್ತು ಓದಲು ಹಸಿವೆಯುಳ್ಳವರಿಗೆ ಪುಸ್ತಕದ ಕವಾಟುಗಳ ಬಾಗಿಲು ತೆರೆಯದಿರುವಂತಹ ಅವಮಾನವು ಇನ್ನೊಂದಿಲ್ಲ. ನಮ್ಮ ದೇಶದಲ್ಲಿ, ಪುಸ್ತಕಾಲಯಗಳೆಂದರೆ ಉಗ್ರಾಣಗಳೆಂಬ ಕಲ್ಪನೆಯು ಇನ್ನೂ ತೊಲಗಿ ಹೋಗಿಲ್ಲ. ಗ್ರಂಥಾಲಯಗಳ ಬಾಗಿಲುಗಳನ್ನು ವಾಚನಾಭಿಲಾಷಿಗಳಿಗೆ ವಿಮುಕ್ತವಾಗಿ ತೆರೆದಿಡಲು ನಮ್ಮವರಿನ್ನೂ ಹಿಂಜರಿಯುತ್ತಾರೆ. ಆತ್ಮಕ್ಕೆ ಧಾರ್ಮಿಕಸ್ವಾತಂತ್ರ್ಯವು ಎಷ್ಟು ಅಗತ್ಯವೋ, ಬುದ್ಧಿಗೆ ವಾಚನಸ್ವಾತಂತ್ರ್ಯವು ಅಷ್ಟೇ ಅಗತ್ಯವಾಗಿದೆ.

ಗ್ರಂಥಾಲಯದ ಚಳವಳಿಯನ್ನು ಯಶಸ್ವಿಯನ್ನಾಗಿ ಮಾಡುವುದು ಸರಕಾರಕ್ಕಿಂತಲೂ ಜನತೆಯನ್ನೇ ಕೂಡಿದೆ. ವೆಚ್ಚಕ್ಕೆ ಎಲ್ಲಾ ಕಡೆ ಕೊಡಲಿಯ ಪೆಟ್ಟು ಬೀಳುತ್ತಿರುವ ಈ ದಿನಗಳಲ್ಲಿ ಸರಕಾರದಿಂದ ಸಹಾಯವನ್ನು ಅಪೇಕ್ಷಿಸುವುದು ಮರುಳುತನ. ನಮ್ಮಲ್ಲಿನ ಶ್ರೀಮಂತರೇ ಈ ಚಳವಳಿಯನ್ನು ಎತ್ತಿಹಿಡಿಯತಕ್ಕದು. ಅಮೇರಿಕೆಯ ಸಾರ್ವಜನಿಕಉದ್ಯಮಗಳಲ್ಲಿ ಗ್ರಂಥಾಲಯದ ಚಳವಳಿಗೆ ವೈಯಕ್ತಿಕವಾಗಿ ಕೊಡಲ್ಪಟ್ಟಷ್ಟು ಕಾಣಿಕೆಗಳು ಇನ್ನಾವುದಕ್ಕೂ ದೊರೆತಿಲ್ಲ. ಪ್ರತ್ಯಕ್ಷ ಧನಸಹಾಯ ಮತ್ತು ವೃತ್ತಪತ್ರಿಕೆಗಳ ಮುಖಾಂತರ ಕೊಡಲಾದ ಕಾಣಿಕೆಗಳು—ಇವೆಲ್ಲ ಕೂಡಿ ಇ. ಸ. ೧೯೩೧ ರಲ್ಲಿ ೩೩೩ ಲಕ್ಷ ಡಾಲರುಗಳು ದೊರೆತವೆಂದು ಆಲ್ಲಿ ಅಮೇರಿಕೆಯ ಗ್ರಂಥಾಲಯಸಂಘದ ಪ್ರಕಟನೆಯಿಂದ ತಿಳಿದುಬರುತ್ತಿದೆ. ನಮ್ಮಲ್ಲಿಯೂ ಸಾರ್ವಜನಿಕಕಾರ್ಯಗಳಿಗಾಗಿ ನೆರವನ್ನು ನೀಡುವ ಧನಿಕರಿಗೆ ಕೊರತೆಯಿಲ್ಲ. ವಿಶ್ವವಿದ್ಯಾಲಯಗಳಿಗಾಗಿ ಮತ್ತು ದೇವಾಲಯಗಳಿಗಾಗಿ ದುಡ್ಡನ್ನು ಕೊಡುಗೈಯಿಂದ ಕೊಡುವ ಬಲ್ಲಿದರು ಹಲವರಿದ್ದಾರೆ. ಅವರೀಗ ಕೊಡುತ್ತಿರುವುದರ ಅರ್ಧದಷ್ಟು ಆವರಿತ್ತರೂ, ಗ್ರಂಥಾಲಯ ಚಳವಳಿಯು ನಮ್ಮ ನಾಡಿನ ಜೀವನದಲ್ಲಿ ಬೇರೂರಿಕೊಳ್ಳಬಲ್ಲುದೆಂದು ಧಾರಾಳವಾಗಿ ಹೇಳಬಹುದು. 'ವಿಶ್ವಧರ್ಮ' ವು ಸಾಧ್ಯಸೃಷ್ಟಿಯೊಳಗಿನ ವಿಷಯವಾಗಿದ್ದರೆ, ಗ್ರಂಥಾಲಯವು ನಾಳೆಯ ವಿಶ್ವಧರ್ಮದ ಉಪಾಸನಾಮಂದಿರವಾಗಲಿದೆ. ಸಾರ್ವತ್ರಿಕಶಿಕ್ಷಣವಿಲ್ಲದೆ ಪ್ರಜಾಪ್ರಭುತ್ವವು ಅನಾಥ. ಗ್ರಂಥಾಲಯಗಳ ವಿಪುಲಪ್ರಸಾರವಿಲ್ಲದೆ ಸಾರ್ವತ್ರಿಕ ಶಿಕ್ಷಣವನ್ನು ಕಲ್ಪಿಸಲೂ ಬಾರದು.

ಕೆಲವಂಶಗಳಲ್ಲಿ ಗ್ರಂಥಾಲಯವು 'ಧರ್ಮ'ಕ್ಕಿಂತ ಮಿಗಿಲಾಗಿದೆ. ಅದು ಆತ್ಮನ ಆರೋಗ್ಯಭವನವಾಗಿದೆ. ಅದು ಚಿಕ್ಕಮಕ್ಕಳ ಮನಸ್ಸಿಗೆ ಆಡುಂಬೊಲವೂ, ದೊಡ್ಡವರಿಗೆ ವಿವಿಧವಿಷಯಗಳ ಜ್ಞಾನಮಂಟಪವೂ, ವಿಜ್ಞರಿಗೆ ಸಂಶೋಧನಮಂದಿರವೂ, ನಿರುದ್ಯೋಗಜರ್ಜರರಿಗೆ ಹೃದಯಶಾಂತಿನಿವಾಸವೂ ಆಗಿರುತ್ತದೆ.

CC-0. Jangamwadi Math Collection. Digitized by eGangotri

# ಉಂಗುರಗಳ ಕಥೆ

ಅನುವಾದಕರು—ಚಿಚ್ಚಿಕೋರ

ಹನ್ನೆರಡನೆಯ ಶತಮಾನದ ಸಂಗತಿ. ತುರ್ಕಸ್ಥಾನದ ಸದ್ಭಾವದ ಸುಲ್ತಾನನಾದ ಸಾಲಾಡಿನನು 'ಪವಿತ್ರ ಪಟ್ಟಣ'ವಾದ ಜೆರುಸಲೆಮನ್ನು ಆಕ್ರಮಿಸಿದ್ದಾನೆ. ಸತತಯುದ್ಧದ ಮೂಲಕ ಸುಲ್ತಾನರಿಗೆ ದುಡ್ಡಿನ ಕೊರತೆ ಬಹಳವಾಗಿದೆ. ಅಲ್ಲಿಯ ಧನಾಢ್ಯವರ್ತಕನಾದ 'ಜಾಣ ನಾಥನ್' ನನ್ನು ಸುಲಿಯಬೇಕೆಂದು ಸುಲ್ತಾನನ ತಂಗಿಯು ಸೂಚಿಸುತ್ತಾಳೆ. ಸುಲ್ತಾನನು ಧರ್ಮ ಚರ್ಚೆಗೆ ನಾಥನ್‌ನನ್ನು ಕರೆಯಿಸುತ್ತಾನೆ. ನಾಥನ್‌ನು ಬರುವನು. ದುಡ್ಡಿನ ಮಾತು ಒತ್ತಟ್ಟಿಗೆ ಉಳಿದು, ಧರ್ಮಚರ್ಚೆಯೇ ನಡೆಯಿತು !

ಸುಲ್ತಾನ:—ಪ್ರಿಯ ನಾಥನ್ ! ನೀವು 'ಜಾಣ'ರೆಂದು ಹೆಸರಾದವರು ! ಅದಕ್ಕಾಗಿ ಕೇಳುವೆನು. ನಿಮಗೆ ಯಾವ ಧರ್ಮದಲ್ಲಿ ಹೆಚ್ಚಿನ ಪ್ರೀತಿ-ಗೌರವ ?

ನಾಥನ್:—ಸಾಹೇಬ ! ನಾನು 'ಜ್ಯೂ' ಧರ್ಮದವನೆಂಬುದು ತಮಗೆ ತಿಳಿದ ವಿಷಯವೇ ಅಲ್ಲವೆ ?

ಸುಲ್ತಾನ:—ನೀವು ಜ್ಯೂ ಇರುವಂತೆ ನಾನು ಮುಸಲ್ಮಾನನು. ನನ್ನ ರಾಜ್ಯದಲ್ಲಿ ಕ್ರೈಸ್ತರೂ ಇರುವರು. ಇವೆಲ್ಲ ಧರ್ಮಗಳಲ್ಲಿ ಒಂದೇ ಧರ್ಮವು ನಿಜವಾದದ್ದಿರಬಲ್ಲುದು; ಅಲ್ಲವೇ ? ನಿಮ್ಮಂಥ ಸುಜ್ಞರು, ಅಪಾತತಃ ಹುಟ್ಟಿದ ಧರ್ಮದಲ್ಲಿಯೇ ಕೊನೆಯವರೆಗೆ ನಿಲ್ಲುವವರಲ್ಲ. ನಿಂತರೆ ಸಾರಾಸಾರ ವಿಚಾರ ಮಾಡಿಯೇ ನಿಲ್ಲುವಿರಿ. ಆದುದರಿಂದ, ನೀವು ಜ್ಯೂಧರ್ಮವನ್ನೇ ಆರಿಸಿದ ಕಾರಣವೇನು ? ಈ ಕಾರಣಗಳನ್ನು ಶೋಧಿಸಲು ನನಗೆ ಅವಕಾಶವಿಲ್ಲ. ಆದರೆ ಅವುಗಳನ್ನರಿತು ಉಪಯೋಗಿಸುವ ಇಚ್ಛೆ ಇದೆ. ಹೇಳುವಿರಾ ಅವುಗಳನ್ನು ?........ಏನು ? ಬೆರಗಾದಿರಿ ? ನಿಮ್ಮ ತೀಕ್ಷ್ಣವಾದ ದೃಷ್ಟಿಯಿಂದ ನನ್ನನ್ನು ಪರೀಕ್ಷಿಸುತ್ತಿರುವಿರಾ ? ಇಂಥ ವಿಲಕ್ಷಣವಾದ ಪ್ರಶ್ನೆಗಳನ್ನು ಹಿಂದಿನ ಸುಲ್ತಾನರಾರೂ ಕೇಳಿರಲಿಕ್ಕಿಲ್ಲ. ಆದರೇನು ? ಇವು ನನ್ನಂಥ ಸುಲ್ತಾನನಿಗೆ ಒಪ್ಪುವುದಿಲ್ಲವೆಂದು ನನಗೆ ಅನಿಸುವುದಿಲ್ಲ. ಹೇಳಿರಿ ! ಇದಕ್ಕೆ ನಿಮ್ಮ ಉತ್ತರವೇನು ?

ನಾಥನ್:—ತಮಗೊಂದು ಕಥೆಯನ್ನು ಹೇಳಬೇಕಾಗಿದೆ ! ಅಪ್ಪಣೆಯಿದೆಯೇ ?

ಸುಲ್ತಾನ:—ಆಗಬಹುದು ! ಚೆನ್ನಾಗಿರುವ ಕಥೆಗಳನ್ನು ನಾನು ತುಂಬಾ ಪ್ರೀತಿಸುವೆನು.

ನಾಥನ್:—ಚೆನ್ನಾಗಿ ಹೇಳಬಲ್ಲೆನೆಂದು ಹೇಳಲಾರೆ !

ಸುಲ್ತಾನ್:—(ಸ್ವಗತ) ಎಂತಹ ವಿನಯ ? (ಪ್ರಕಟ) ಇರಲಿ ! ಆಗಲಿ ನಿಮ್ಮ ಕಥೆಗೆ ಪ್ರಾರಂಭ !

ನಾಥನ್:—ಅತಿ ಪ್ರಾಚೀನಕಾಲದಲ್ಲಿ ಪೂರ್ವದೇಶದಲ್ಲೊಬ್ಬ ಅರಸನಿದ್ದನು. ಆತನಿಗೆ ಒಬ್ಬ ಸತ್ಪುರುಷನಿಂದ ಉಂಗುರವೊಂದು ದೊರಕಿತ್ತು. ಅದರ ಹರಳು ಸಾವಿರಾರು ಬಣ್ಣಗಳಿಂದ ಹೊಳೆಯುತ್ತಿದ್ದಿತು. ವಿಶ್ವಾಸದಿಂದದನ್ನು ಧರಿಸುವವನು ದೇವ-ಮಾನವರಿಗೆ ಪ್ರಿಯನಾಗುತ್ತಿದ್ದನು. ಉಂಗುರದ ಈ ಗುಪ್ತಸಾಮರ್ಥ್ಯವನ್ನು ಅನುಭವದಿಂದ ಕಂಡುಹಿಡಿದ ಆ ಅರಸನು, ಅದನ್ನು ತನ್ನ ಬೆರಳೊಳಗಿಂದ ಎಂದೂ ತೆಗೆಯುತ್ತಿದ್ದಿಲ್ಲ. ಬರಬರುತ್ತ ಆತನಿಗೆ ಆ ಉಂಗುರವು ತನ್ನ ಮನೆತನದಲ್ಲಿಯೇ ನಿರಂತರವಾಗಿ ನಿಲ್ಲಬೇಕೆಂದೆನಿಸಿತು. ಮರಣಕಾಲವು

---

ಟೀಪು:—[ ಜರ್ಮನಿಯ ವಿಖ್ಯಾತ ಕವಿಪ್ರವರನಾದ 'ಲೆಸಿಂಗ' ನ 'ಜಾಣನಾಥನ್' ಎಂಬ ನಾಟಕದಲ್ಲಿಯ ಒಂದು ದೃಶ್ಯದ ಅನುವಾದವಿದು' ಮೇಲ್ತರಗತಿಯ ಧರ್ಮಪಾಠಗಳನ್ನು ಕಲಿಸುವ ದೃಷ್ಟಿಯಿಂದ ಈ ನಾಟಕಕ್ಕೆ ಸರಿಹೋಲುವ ನಾಟಕವೇ ಜರ್ಮನ್ ವಾಙ್ಮಯದಲ್ಲಿಲ್ಲ. ಇತಿಹಾಸದಲ್ಲಿ ಹೆಸರಾದ ಎಲ್ಲ ಧರ್ಮಗಳಲ್ಲಿ ಸತ್ಯವಿರುವದು; ಯಾವಧರ್ಮಕ್ಕೂ ಸತ್ಯಸೌಭಾಗ್ಯಗಳ ಗುತ್ತಿಗೆಯನ್ನು ಕೊಟ್ಟಿಲ್ಲ. ಆದುದರಿಂದ ಎಲ್ಲ ಧರ್ಮಗಳನ್ನು ಸಹಿಷ್ಣುತೆಯಿಂದ, ಸಮಭಾವದಿಂದ, ಹಾಗೂ ಸಹಾನುಭೂತಿಯಿಂದ ಕಾಣಬೇಕು. ವೈಯಕ್ತಿಕ ನಡೆಯಲ್ಲಿ ಸತ್ಯ, ಬಾಂಧವರಲ್ಲಿ ಪ್ರೀತಿ, ಭಗವಂತನಲ್ಲಿ ಆದರಯುಕ್ತ ಭಕ್ತಿ; ಇವೇ ಮುಂತಾದ ತತ್ವಗಳು ಎಲ್ಲ ಧರ್ಮಗಳಲ್ಲಿರುತ್ತಿರಲು, ಅವುಗಳಿಗೆ ತಕ್ಕ ಮರ್ಯಾದೆಯನ್ನು ಕೊಡುವುದು ಪ್ರತಿಯೊಬ್ಬನ ಕರ್ತವ್ಯವೇ ! ಜೀವನವೇ ಜನರನ್ನು ಪರೀಕ್ಷಿಸುವ ಒರೆಗಲ್ಲು. ಮತ-ಪಂಥಗಳಲ್ಲ. ಈ ನಾಟಕರತ್ನವು ಜನರೆದುರು ಇಡುವ ತತ್ವರತ್ನಗಳಿವು ! ಮತಮತಾಂತರಗಳ ಗಲಾಟೆಯಲ್ಲಿ ತುಂಡುತುಂಡಾಗುತ್ತಿರುವ ಕನ್ನಡಸಮಾಜವು ಇವುಗಳನ್ನುಪಯೋಗಿಸುವದು ಅವಶ್ಯವಲ್ಲವೇ ?—ಅನುವಾದಕ]

CC-0. Jangamwadi Math Collection. Digitized by eGangotri

ಸಮೀಪಿಸಲು, ಒಂದು ದಿನ ಅವನು ತನ್ನ ಪ್ರೀತಿಯ ಮಗನನ್ನು ಕರೆದು — ' ಇದೊಂದು ಅದ್ಭುತವಾದ ಉಂಗುರ ! ತೆಗೆದುಕೊ ಇದನ್ನು ! ನಿನ್ನ ಪ್ರೀತಿ ವಿಶ್ವಾಸಗಳು ಯಾವ ಮಗನಲ್ಲಿವೆಯೋ ಆತನಿಗೆ ಇದನ್ನು ಕೊಡು. ಅವನೇ ನಿನ್ನ ತರುವಾಯ ಪಟ್ಟಕ್ಕೆ ಬರಬೇಕು' ಎಂದು ಹೇಳಿದನು. ತಿಳಿಯಿತೇ ?

ಸುಲ್ತಾನ:—ಹುಂ ! ಮುಂದೆ ಸಾಗಲಿ !

ನಾಥನ್:—ಮುಂದೆ ಆ ಅರಸನ ಮನೆಯಲ್ಲಿ ಒಬ್ಬನಿಗೆ ಮೂವರು ಮಕ್ಕಳಾದರು; ಎಲ್ಲರೂ ಒಳ್ಳೇ ಆಜ್ಞಾ ಧಾರಕರು—ಸಾಧುವೃತ್ತಿಯವರು; ಮೂವರಲ್ಲಿಯೂ ತಂದೆಗೆ ಒಂದೇ ಬಗೆಯ ಮಮತೆ ! ಆದ್ದರಿಂದ ಮೂವರೂ ಉಂಗುರವನ್ನು ಧರಿಸಲು ಯೋಗ್ಯರೆಂದು ಆತನಿಗೆ ಎನಿಸಿತು, ಮತ್ತು ಉಂಗುರವನ್ನು ಕೊಡುವೆ ನೆಂದು ಆತನು ಮೂವರಿಗೂ ವಚನಕೊಟ್ಟನು. ಈ ರೀತಿ ಕೆಲವು ಕಾಲ ಹೋಯಿತು. ಮುಂದೆ ಆ ತಂದೆಯ ಮರಣ ಕಾಲ ಒದಗಿತು. ಆತನಿಗೆ ತುಂಬಾ ವ್ಯಸನ; ಒಬ್ಬನಿಗೇ ಉಂಗುರವನ್ನು ಕೊಟ್ಟು ತನ್ನನ್ನು ನಂಬಿದ ಇಬ್ಬರನ್ನು ವಂಚಿಸುವದು ಅವನ ಜೀವದ ಮೇಲೆ ಬಂದಿತು. ಆದರೆ ಮಾಡುವದೇನು ? ........ದೀರ್ಘಕಾಲ ವಿಚಾರಿಸಿದ........ಒಂದು ಹಂಚಿಕೆ ಹೊಳೆಯಿತು........ ಯಾರಿಗೂ ತಿಳಿಯದಂತೆ ಒಬ್ಬ ಅಕ್ಕಸಾಲಿಗನನ್ನು ಕರೆ ಯಿಸಿದ. ' ನಿನ್ನಲ್ಲಿದ್ದ ಕೌಶಲ್ಯವನ್ನೆಲ್ಲ ಉಪಯೋಗಿಸಿ ಇಂಥ (ತನ್ನ ಉಂಗುರವನ್ನು ತೋರಿಸಿ) ಎರಡು ಉಂಗುರ ಗಳನ್ನು ಕೂಡಲೇ ಮಾಡಿಕೊಡು ' ಎಂದು ಆವನಿಗೆ ಕಟ್ಟಪ್ಪಣೆಯನ್ನಿತ್ತ. ಸುದೈವದಿಂದ ಅಕ್ಕಸಾಲಿಗನ ಕೌಶ ಲ್ಯವು ಕೈಗೂಡಿತು. ಉಂಗುರಗಳನ್ನು ದೊರೆಯ ಮುಂದಿಡಲು, ಆತನಿಗೂ ತನ್ನದನ್ನು ಗುರುತಿಸಲು ಬರ ಲಿಲ್ಲ. ಇಷ್ಟು ಅವುಗಳಲ್ಲಿ ಹೋಲಿಕೆ. ದೊರೆಗೆ ಸಂತೋಷ ವಾಯಿತು. ಮಕ್ಕಳನ್ನು ಒಬ್ಬೊಬ್ಬರನ್ನೇ ಕರೆದನು. ತನ್ನ ಆಶೀರ್ವಾದದೊಂದಿಗೆ ಪ್ರತಿಯೊಬ್ಬನಿಗೂ ಉಂಗುರ ವೊಂದನ್ನು ಕೊಟ್ಟು, ಆತನು ಪರಲೋಕವಾಸಿ ಯಾದನು. ಕೇಳುತ್ತೀರಲ್ಲವೇ ? ( ಸುಲ್ತಾನನು ಬೇರೆ ಕಡೆಗೆ ನೋಡುತ್ತಿದ್ದನು.)

ಸುಲ್ತಾನ:—ಕೇಳುತ್ತೇನೆ ! ನಿಮ್ಮ ಕಥನವು ಮುಂದುವರಿಯಲಿ !

ನಾಥನ್:—ಕಥೆಯು ಮುಗಿಯಿತು. ಉಳಿದದ್ದನ್ನು ನೀವೇ ಸಹಜವಾಗಿ ಊಹಿಸಬಲ್ಲಿರಿ ! ತಂದೆಯು ತೀರಿ ಕೊಂಡಕೂಡಲೆ ಪ್ರತಿಯೊಬ್ಬ ಮಗನು ಉಂಗುರವನ್ನು ತೋರಿಸಿ, ಪಟ್ಟಕ್ಕೆ ಬಾಧ್ಯತೆಯನ್ನು ಹೇಳತೊಡಗಿದ. ವ್ಯಾಜ್ಯವು ಬಲಿತು ನ್ಯಾಯಾಸನಕ್ಕೆ ಹೋಯಿತು. ನಿಜ ವಾದ ಉಂಗುರವನ್ನು ಗುರುತಿಸುವದು ಅಸಾಧ್ಯವಾ ದುದರಿಂದ, ಅಲ್ಲಿಯೂ ನಿರ್ಣಯವು ದೊರೆಯಲಿಲ್ಲ. (ಸ್ವಲ್ಪ ತಡೆದು) ನಮಗೆ ನಿಜವಾದ ಧರ್ಮವು ತಿಳಿಯದಾಗಿರು ವಂತೆ ಆ ನ್ಯಾಯಾಧೀಶರ ಅವಸ್ಥೆಯಾಯಿತು.

ಸುಲ್ತಾನ:—ನಾಥನ್ ! ಇದೇ ನಿಮ್ಮ ಉತ್ತರವೇ ನನ್ನ ಪ್ರಶ್ನೆಗೆ ?

ನಾಥನ್:—ಅಹುದು ! ಆದರೆ ಉದ್ದೇಶಪೂರ್ವಕ ವಾಗಿ ಅನುಗೊಳಿಸಿದ ಉಂಗುರಗಳಲ್ಲಿ ನಿಜವಾದುದು ಯಾವುದು– ಎಂಬುದನ್ನು ಮಾತ್ರ ಹೇಳಲಾರದ್ದು; ಕ್ಷಮಿಸಿರಿ !

ಸುಲ್ತಾನ:—ಏನು ? ನಗೆಯಾಟ ಮಾಡುವಿರಾ ನನ್ನ ಕೂಡ ? ಉಂಗುರಗಳೆತ್ತ ? ಧರ್ಮಗಳೆತ್ತ ? ಉಂಗುರ ಗಳನ್ನು ಗುರುತಿಸಲು ಬಂದಿರಲಿಕ್ಕಿಲ್ಲ ! ಆದರೆ ಅನ್ನ ಪಾನಗಳಿಂದಲೂ – ಉಡುಪು ತೊಡಪುಗಳಿಂದಲೂ– ಧರ್ಮಗಳನ್ನು ಗುರುತಿಸಲು ಬರುವದಿಲ್ಲವೇ ?

ನಾಥನ್:—ಹೊರಗಿನ ಕುರುಹುಗಳಿಂದ ಧರ್ಮಗಳ ಮರ್ಮವು ತಿಳಿಯುವಂತಿಲ್ಲ. ರೂಢವಾದ ಹಾಗೂ ಬರೆ ದಿಟ್ಟ ಇತಿಹಾಸವೇ ಧರ್ಮಗಳ ತಳಹದಿಯಲ್ಲವೇ ? ಇನ್ನು ಇತಿಹಾಸವನ್ನು ನಂಬಿಯೇ ಸ್ವೀಕರಿಸಬೇಕು. ನಾವು ಹೆಚ್ಚಾಗಿ ನಂಬುತಿರುವದು ಯಾರನ್ನು ? ನಮ್ಮ ವರನ್ನೇ ಅಲ್ಲವೇ ? ನಮ್ಮ ರಕ್ತದವರನ್ನೇ ಅಲ್ಲವೇ ! ಚಿಕ್ಕಂದಿನಿಂದ ನಮ್ಮನ್ನು ಒಲವಿನಿಂದ ಕಾಪಾಡಿದವ ರನ್ನೇ ಅಲ್ಲವೇ ? ನಿಮ್ಮ ಪೂರ್ವಜರಲ್ಲಿ ನೀವಿಟ್ಟ ನಂಬಿಗೆ ಯಷ್ಟೇ ನಾನೂ ನನ್ನ ಪೂರ್ವಜರಲ್ಲಿಡಬೇಕಲ್ಲವೇ ! ಇದನ್ನೇ ತಿರುವು ಮುರುವು ಮಾಡಿರಿ ! ನಿಮ್ಮವರನ್ನು ಬಿಟ್ಟು ನಮ್ಮವರನ್ನು ನಂಬಿರೆಂದು ನಾನು ನಿಮಗೆ ಹೇಳುವದು ಹೇಗೆ ? ಇದರಂತೆಯೇ ಕ್ರೈಸ್ತರ ಮಾತು.

ಸುಲ್ತಾನ:—(ಸ್ವಗತ) ಅಲ್ಲಾ ! ಈತನು ಆಡುವದು ದಿಟ ! ಇದಕ್ಕೆ ನನ್ನ ಉತ್ತರವಿಲ್ಲ.

CC-0. Jangamwadi Math Collection. Digitized by eGangotri

ನಾಥನ್:—ಇನ್ನು ನಮ್ಮ ಕಥೆಯ ಕಡೆಗೆ ಮರಳುವಾ! ವ್ಯಾಜ್ಯವು ನ್ಯಾಯಾಸನದೆದುರು ಹೋದುದನ್ನು ಹೇಳಿದೆನಷ್ಟೇ? ಪೂರ್ವದಲ್ಲಿ ವಚನಕೊಟ್ಟ ಮೇರೆಗೆ ತಂದೆಯೇ ತನಗೆ ಉಂಗುರವನ್ನಿತ್ತನೆಂದು ಪ್ರತಿಯೊಬ್ಬ ಮಗನೂ ನ್ಯಾಯಾಧೀಶನಿಗೆ ಶಪಥಪೂರ್ವಕವಾಗಿ ಹೇಳಿದನು. ಇದೆಲ್ಲವೂ ನಿಜವಾದ ಸಂಗತಿಯೇ! ಆದರೆ ತಂದೆಯು ವಿಶ್ವಾಸಘಾತ ಮಾಡುವುದು ಶಕ್ಯವಿಲ್ಲ; ತನ್ನನ್ನುಳಿದ ಇನ್ನಿರ್ವರೇ ಮೋಸ ಮಾಡಿರಬಹುದೆಂದು ಪ್ರತಿಯೊಬ್ಬನ ಭಾವನೆ. ಅವರ ನೀಚತನವನ್ನು ಬಯಲಿಗೆಳೆದು, ಅವರನ್ನು ಚೆನ್ನಾಗಿ ದಂಡಿಸಬೇಕೆಂದು ಪ್ರತಿಯೊಬ್ಬನ ಹವಣಿಕೆ!

ಸುಲ್ತಾನ:—ಆದರೆ ನ್ಯಾಯಾಧೀಶನೆಂದದ್ದೇನು?

ನಾಥನ್:—ನ್ಯಾಯಾಧೀಶನು—ನಿಮ್ಮ ತಂದೆಯನ್ನು ಇಲ್ಲಿ ಬರಮಾಡಿರಿ! ಇಲ್ಲವೆ ಇಲ್ಲಿಂದ ತೆರಳಿರಿ! ನಿಮ್ಮ ಒಗಟಗಳನ್ನು ಬಿಡಿಸಲು ನಾನು ಇಲ್ಲಿ ಇರುವೆನೇ? ನಿಜವಾದ ಉಂಗುರವು ತನ್ನ ಕಥೆಯನ್ನು ತಾನೇ ಸಾರುವವರೆಗೆ ನೀವು ತಡೆಯಬೇಕು! ಇದರಲ್ಲೊಂದು ವಿಲಕ್ಷಣವಾದ ಶಕ್ತಿಯಿದೆಯಂತೆ! ಅದನ್ನು ಧರಿಸುವವರು ದೇವ-ಮಾನವರಿಗೆ ಪ್ರಿಯರಾಗುವರಂತೆ! ಸಟೆಯಾದ ಉಂಗುರದಲ್ಲಿ ಈ ಸಾಮರ್ಥ್ಯವಿರುವದು ಸಾಧ್ಯವಿಲ್ಲ. ನಿಮ್ಮಲ್ಲಾವನು ಉಳಿದ ಇಬ್ಬರನ್ನು ಹೆಚ್ಚಾಗಿ ಪ್ರೀತಿಸುವನು?—ಯಾಕೆ? ಸ್ತಬ್ಧರಾದಿರಿ?— ಈ ಉಂಗುರಗಳೆಲ್ಲವು ವಿಪರೀತ ಪರಿಣಾಮವನ್ನುಂಟು ಮಾಡಿದಂತೆ ಕಾಣುತ್ತದೆ. ನೀವು ನಿಮ್ಮನ್ನೇ ಹೆಚ್ಚಾಗಿ ಪ್ರೀತಿಸುವಿರಾ? ಹೀಗಿದ್ದರೆ ನೀವೆಲ್ಲರೂ ಮೋಸ ಹೋಗಿರುವಿರಿ! ಉಂಗುರಗಳೆಲ್ಲವೂ ಸಟೆಯಾದ ಉಂಗುರಗಳು! ನಿಜವಾದ ಉಂಗುರವು ಕಳೆದು ಹೋಗಿದೆ. ಅದನ್ನು ಮರೆಮಾಡಲು ತಂದೆಯು ಬೇರೆ ಉಂಗುರಗಳನ್ನು ಮಾಡಿಸಿರುವನು!

ಸುಲ್ತಾನ:—ಭಲೆ! ಭಲೆ!

ನಾಥನ್:— ಆದ್ದರಿಂದ ನಡೆಯಿರಿ! ನಿಮಗೆ ನಾನು ಶಿಕ್ಷೆಯನ್ನು ಕೊಡಲು ಇಚ್ಛಿಸುವದಿಲ್ಲ. ಕೊನೆಗೆ ಇದೇ ನನ್ನ ಉಪದೇಶ! ನೀವೆಲ್ಲರೂ ತಂದೆಯಿಂದಲೇ ಉಂಗುರಗಳನ್ನು ಪಡೆದಿದ್ದರೆ, ಅವು ನಿಜವಾದ ಉಂಗುರಗಳೆಂದೇ ಭಾವಿಸಿರಿ! ತಂದೆಯು ನಿಮ್ಮೆಲ್ಲರನ್ನು ಸಮನಾಗಿ ಪ್ರೀತಿಸಿರಬಹುದು. ಒಬ್ಬನನ್ನೇ ಘನತೆಗೇರಿಸಿ ಎಕ್ಕವರ ಮಾನಹಾನಿಯನ್ನು ಮಾಡಲು ಬಯಸದೆ ಮೂವರಿಗೂ ಮೂರು ಉಂಗುರಗಳನ್ನು ಕೊಟ್ಟಿರಬಹುದು! ಆದುದರಿಂದ ಉಂಗುರಗಳ ಸಾಮರ್ಥ್ಯವನ್ನು ಹೊರಗೆಡಹಲು ಸ್ಪರ್ಧಿಸಿರಿ! ಮತ್ತು ತಂದೆಯ ಪ್ರೀತಿಗೆ ಪಾತ್ರರಾಗಿರಿ!! ವಿನಯ, ಶಾಂತಿಪ್ರಿಯತೆ, ಉಪಕಾರ ಬುದ್ಧಿ ಮತ್ತು ಪರಮಾತ್ಮನಲ್ಲಿಯ ನಲ್ಮೆ—ಇವೆಲ್ಲವೂ ನಿಮ್ಮಲ್ಲಿ ಒಡಮೂಡಲಿ! ಈ ಮೇರೆಗೆ ಉಂಗುರದ ಶಕ್ತಿಯು ನಿಮ್ಮ ಮಕ್ಕಳು ಮರಿಮಕ್ಕಳಲ್ಲಿ ಹೊರಹೊಮ್ಮಿದ ಮೇಲೆ, ಸಾವಿರಾರು ವರ್ಷಗಳ ತರುವಾಯ ಈ ವ್ಯಾಜ್ಯವು ಮತ್ತೆ ಇದೇ ನ್ಯಾಯಾಸನದ ಮುಂದೆ ಬರಲಿ. ಆಗ ನನಗಿಂತ ಜಾಣನಾದ ಪುರುಷನು ಈ ಆಸನವನ್ನಲಂಕರಿಸುವನು. ಆತನು ಯೋಗ್ಯ ತೀರ್ಮಾನವನ್ನು ಕೊಡಬಹುದು! ಹೋಗಿರಿ! ಎಂದು ನ್ಯಾಯಾಧೀಶನು ಅವರನ್ನು ಕಳುಹಿಸಿದನು.

ಸುಲ್ತಾನ:—ಅಲ್ಲಾ !!!

ನಾಥನ್:—ಸುಲ್ತಾನ! ನ್ಯಾಯಾಧೀಶನು ಹೇಳಿದ ಜ್ಞಾನಿಗಳು ನೀವೇ ಎಂದು ನಿಮಗೆನಿಸಿದರೆ—

ಸುಲ್ತಾನ:—(ಒಮ್ಮೆಲೆ ಆತನ ಬಳಿ ಬಂದು ಕೈಹಿಡಿದು) ನಾನು? ಧೂಳಿಗೆ ಸಮಾನನಾದ ನಾನು? ಅಲ್ಲ! ಸುತರಾಂ ಅಲ್ಲ!! ಅಲ್ಲಾ!

ನಾಥನ್:—ಭಾವಪರವಶರಾದಿರಿ ಸುಲ್ತಾನ್?

ಸುಲ್ತಾನ:—ನಾಥನ್!! ನಿಮ್ಮ ನ್ಯಾಯಾಧೀಶನು ಹೇಳಿದ ಸಾವಿರ ವರ್ಷಗಳು ಇನ್ನೂ ಆಗಿಲ್ಲ. ಆ ನ್ಯಾಯಾಸನವನ್ನಲಂಕರಿಸುವ ಯೋಗ್ಯತೆಯು ನನ್ನದಲ್ಲ! ನೀವೀಗ ಹೋಗಬಹುದು! ಆದರೆ ನಿರಂತರವೂ ನನ್ನ ಗೆಳೆಯರಾಗಲೂ ಮಾತ್ರ ಮರೆಯಬೇಡಿರಿ!



CC-0. Jangamwadi Math Collection. Digitized by eGangotri

# ವಿಕಾಸವಾದದ ಪರಿಚಯ

ಲೇಖಕರು—ಶ್ರೀ. ಗ್ರಾ. ತಿ. ನಾರಾಯಣಯ್ಯಂಗಾರ್ಯರು, ಎಂ. ಎ. ಬೆಂಗಳೂರು

(ಶ್ರೀಮಾನ್ ಎಲ್. ರಾಮರಾವ್ ಎಂ. ಎ. ಅವರ ಇಂಗ್ಲಿಷ್ ಲೇಖನವನ್ನು ಅನುಸರಿಸಿ ಬರೆದುದು)

ಸೃಷ್ಟ್ಯಾದಿಯಿಂದ ಈ ವರೆಗೆ ಪ್ರಪಂಚದಲ್ಲಿ ಎಷ್ಟೋ ಜಾತಿಯ ಸಸ್ಯಗಳೂ ಜಂತುಗಳೂ ಆಗಿ ಹೋಗಿವೆ. ಕಾಲಾನುಕ್ರಮದಲ್ಲಿ ಒಂದೊಂದು ಜಾತಿಯಲ್ಲಿಯೂ ಎಷ್ಟೋ ಒಳಭೇದಗಳು ಕಾಣಬಂದಿವೆ. ಜೀವಜಗತ್ತಿನಲ್ಲಿ ನಿಮಿಷ ನಿಮಿಷಕ್ಕೂ ಅನೇಕ ಮಾರ್ಪಾಡುಗಳುಂಟಾಗುತ್ತಿವೆ. ಈ ಮಾರ್ಪಾಡುಗಳು ಆಗಾಗಲೇ ನಮ್ಮ ಸ್ಥೂಲ ದೃಷ್ಟಿಗೆ ಖಚಿತವಾಗಿ ಗೋಚರವಾಗದಿದ್ದರೂ, ಅವು ಕೆಲವು ಕಾಲದಮೇಲೆ ಒಟ್ಟುಗೂಡಿ ಎದ್ದುಕಾಣುವುವು. ಸಸ್ಯ ಜಂತು ಜಗತ್ತಿನಲ್ಲಿ ಇಂತಹ ಪರಿವರ್ತನಗಳು ಏಕುಂಟಾಗುತ್ತವೆ, ಹೇಗುಂಟಾಗುತ್ತವೆ–ಎಂಬುದನ್ನು ತಿಳಿಯುವುದು ಆವಶ್ಯಕ. ಅನೇಕ ವಿದ್ವಾಂಸರು ಈ ವಿದ್ಯಮಾನವನ್ನು ಕುರಿತು ಅನೇಕ ರೀತಿಯಲ್ಲಿ ಅಭಿಪ್ರಾಯಪಟ್ಟಿರುವರು. ಆದರೆ ಈ 'ನಿರಂತರ ಪರಿವರ್ತನ'ದ ಸಮಸ್ಯೆಯನ್ನು ಕೂಡಿದ ಮಟ್ಟಿಗೂ ಬಿಡಿಸುವ ಅಂಶವೆಂದರೆ ವಿಕಾಸವಾದವೇ* ಎಂದು ಪ್ರಕೃತಿಶಾಸ್ತ್ರಜ್ಞರೆಲ್ಲರೂ ಒಮ್ಮತದಿಂದ ಒಪ್ಪುವರು. ಸಸ್ಯಜಂತುಗಳ ಪ್ರತಿಯೊಂದು ಜಾತಿಯೂ ತನ್ನ ಜೀವಿತ ಕಾಲದಲ್ಲಿ ಆಗಿಂದಾಗ್ಗೆ ಹೊಂದಿದ ವಿಕಾಸದ ಸ್ವರೂಪವೇನು, ಅವುಗಳ ಅಭಿವೃದ್ಧಿಯು ಯಾವ ಕ್ರಮದಲ್ಲಿ ಉಂಟಾಯಿತು, ಈ ಪರಿವರ್ತನಗಳುಂಟಾಗಲು ಕಾರಣಭೂತವಾಗಿರಬಹುದಾದ ಅಂಶಗಳಾವುವು–ಎಂಬುದನ್ನು ಕುರಿತು ಇತ್ತೀಚೆಗೆ ಅನೇಕ ಸಂಗತಿಗಳು ತಿಳಿಯಬಂದಿದ್ದರೂ "ಜೀವನವು ಏಕೆ ವಿಕಾಸಗೊಳ್ಳಬೇಕು" ಎಂಬ ಮೂಲಪ್ರಶ್ನೆಗೆ ಮಾತ್ರ ಇದುವರೆಗೆ ಉತ್ತರ ಬಂದಿರುವಂತೆ ತೋರಲಿಲ್ಲ. ವಿಜ್ಞಾನ ಪ್ರಪಂಚದಲ್ಲಿಯ ಅನೇಕ ಮೂಲತತ್ತ್ವಗಳ ವಿಚಾರವೆಲ್ಲವೂ ಹೀಗೆಯೇ; ಅವುಗಳ ವಿಷಯದಲ್ಲಿ ಏಕೆ, ಏನು, ಎಂತು? ಎಂದು ಕೇಳಿದರೆ ಉತ್ತರ ಕೊಡುವುದು ಕಷ್ಟ. ಮೊದಲು ಈ ತತ್ತ್ವಗಳನ್ನು ನಂಬಿ ಅನಂತರ ಅವುಗಳ ಅಸ್ತಿಭಾರದ ಮೇಲೆ ನಮ್ಮ ವೈಜ್ಞಾನಿಕ ವಿಚಾರವನ್ನು ಬೆಳಸಬೇಕು. ಇದರಂತೆಯೇ ಜೀವಶಾಸ್ತ್ರ (Biology) ದಲ್ಲಿಯೂ ವಿಕಾಸವೆಂಬುದು ಪ್ರಕೃತಿಯ ಒಂದು ನಿಯಮವೆಂದು ನಂಬಿ, ಈ ವಿಕಾಸವು ಪ್ರಪಂಚದ ಜೀವನ[illegible]ಗಳಲ್ಲಿ ಸರ್ವದಾ ಜರುಗುತ್ತಿದೆಯೆಂದಿಟ್ಟುಕೊಂಡು, [illegible] ನಂತರವೇ ಜೀವನದ ಪ್ರಗತಿಯಲ್ಲಿ ಈ ನಿಯಮವು ಪ್ರಯೋಗವಾಗುವುದು ಹೇಗೆ–ಎಂಬುದನ್ನು ಪರೀಕ್ಷಿಸಬೇಕು. ಮೊಟ್ಟಮೊದಲು ನಾವು ಎರಡು ವಿಷಯಗಳನ್ನು ಗಮನಿಸುವುದು ಉತ್ತಮ:- ಒಂದು, ವಿಕಾಸಧರ್ಮ [illegible] ವಿಕಾಸವಾಗೋಣ; ಎರಡು, ವಿಕಾಸಕ್ರಮ ಅಥವಾ ವಿಕಾಸವು ಹೇಗುಂಟಾಗುತ್ತದೆ–ಎಂಬುವು. ಇವೆರಡು [illegible] ವಿಕಾಸಧರ್ಮವು ಬಹಳ ಹಿಂದೆಯೇ–ಎಂದರೆ ಕ್ರಿ. ಪೂ. ೬ನೆಯ ಶತಮಾನಕ್ಕೆ ಮುಂಚೆಯೇ ಗ್ರೀಕ್ ಮತ್ತು ರೋಮನ್ ದಾರ್ಶನಿಕರಿಗೆ ತಿಳಿದಿತ್ತು. ಆದರೆ ವಿಕಾಸಕ್ರಮದ ವ್ಯಾಸಂಗವೂ ವಿವರಣೆಯೂ ಕೇವಲ ಈಚಿನ [illegible] ಮೊದಲು ಮೊದಲು ಈ ವಿಷಯವನ್ನು ಕುರಿತು ಯೋಚಿಸಿದವರಲ್ಲಿ ಪ್ರಮುಖರಾದ ಎಂಪಿಡೋಕ್ಲಿಸ್, ಲುಕ್ರೆಸಿಯಸ್ ಮುಂತಾದವರು ಜೀವರಾಶಿಗಳು ಸ್ವಭಾವ [illegible] ವ್ಯತ್ಯಾಸವನ್ನು ಹೊಂದುತ್ತಿವೆಯೆಂದೂ, ಹಿಂದೆ [illegible] ಸಸ್ಯಜಂತುಜಾತಿಗಳೇ ಮಾರ್ಪಾಡು ಹೊಂದು[illegible] [illegible]ಬಂದ ಈಗಿನ ಜೀವರಾಶಿಗಳಿಗೆ ಮೂಲವಾಗಿ ಪರಿಣ[illegible]ಸಿವೆಯೆಂದೂ ತಿಳಿದಿದ್ದರು. ಇದನ್ನೇ ಅವರು ಪರಿಣಾಮ[illegible] ಸೃಷ್ಟಿಮಾರ್ಗ (Derivative Creation) ಎಂದು [illegible]ದರು. ಆಧುನಿಕರು ವಿಕಾಸವಾದದಲ್ಲಿ ಹೇಳುವ ಭಾವ[illegible] ಸಾರವು ಕೊಂಚ ಹೆಚ್ಚು ಕಡಿಮೆ ಈ ಸಂಕೇತನಾ[illegible]ದಲ್ಲಿಯೇ ಅಡಗಿದೆ. ಕೇವಲ ಆಧುನಿಕನಾದ ಅಸ[illegible]

* ಇದೇ ಅರ್ಥದಲ್ಲಿ '[illegible]' ಎಂಬ ಪದವು ಸಂಸ್ಕೃತ ಸದುಕ್ತಿ ಗ್ರಂಥಗಳಲ್ಲಿ ಪ್ರಯೋಗವಾಗಿದೆ.

CC-0. Jangamwadi Math Collection. Digitized by eGangotri

ಎಂಬ ಶಾಸ್ತ್ರಜ್ಞನು ಹೇಳುವ "ವೈಕಾಸಿಕೋತ್ಪಾದನ" (Creation by evolution) ಅಥವಾ "ಉತ್ಪಾದಕ ವಿಕಾಸ" (Creative evolution) ವೆಂಬೀ ಸಂಕೇತ ಗಳಿಂದ ಪೂರ್ವಿಕರು ಹೇಳಿಟ್ಟ "ಪರಿಣಾಮಕ ಸೃಷ್ಟಿ ಮಾರ್ಗ" ವೆಂಬಂಶವನ್ನೇ ಬೇರೆ ಮಾತಿನಲ್ಲಿ ನಿರೂಪಿಸಿ ದಂತಾಯಿತು.

ಇನ್ನೊಂದು ಸಂಗತಿ—ಈಗ ನಾವು ಯಾವ ಯಾವ ಅಂಶಗಳನ್ನು ವಿಕಾಸವಾದವೆಂಬ ಶರೀರಕ್ಕೆ ಮುಖ್ಯಾಂಗ ಗಳೆಂದು ಪರಿಗಣಿಸಿರುವೆವೋ, ಹೆಚ್ಚು ಕಡಿಮೆ ಅದೇ ಅಂಶಗಳನ್ನು ಪ್ರಾಚೀನ ಶಾತ್ತ್ವಿಕರೂ ಮುಖ್ಯವೆಂದೆಣಿ ಸಿದ್ದರು. ವಿಕಾಸವಾದದಲ್ಲಿ ಹೇಳುವ ಪ್ರಕ್ರಿಯೆಗಳಿಗೆ ಒಂದು ಮೆರುಗು ಕೊಟ್ಟು ವೈಜ್ಞಾನಿಕರೂಪಕ್ಕೆ ತಂದಿ ಟ್ಟವನು ಬಫನ್ ಎಂಬಾತನು. (ಜನನ ೧೭೦೭.) ಪ್ರಕೃತಿಶಾಸ್ತ್ರಜ್ಞರಲ್ಲಿ ಇವನೊಬ್ಬ ಆದಿಪುರುಷ. ಈತನು ನಾನಾಜೀವಿಗಳ ಲಕ್ಷಣವನ್ನು ಪರಿಶೀಲಿಸಿ "ವಾಯು ಗುಣ, ಆಹಾರದ ಸ್ವರೂಪ ಮತ್ತು ದಾಸ್ಯದ ದುಷ್ಪರಿ ಣಾಮ (Climatic temperature, quality of nutriment, and the ills of slavery) ಇವು ಮೂರೂ ಪ್ರಾಣಿಗಳಲ್ಲಿ ಉಂಟಾಗುವ ಮಾರ್ಪಾಡುಗಳೆಲ್ಲಕ್ಕೂ ಮೂಲಕಾರಣ" ಎಂದು ನಿರ್ಧರಿಸಿದನು. ಎಂದರೆ, ಜೀವ ಕೋಟಿಗಳ ದೇಹರಚನೆಯಲ್ಲಿ ಆಗುವ ಮಾರ್ಪಾಡುಗಳಿಗೆ ಹೊರಗಿನ ಸನ್ನಿವೇಶವು ಮುಖ್ಯವಾದ ಕಾರಣವೆಂಬು ದನ್ನು ಆತನು ಸ್ಪಷ್ಟಪಡಿಸಿದನಲ್ಲದೆ ಈಚಿನ ಶಾಸ್ತ್ರಜ್ಞರು ಹೇಳುವ "ಜೀವಜಾತಿಪರಿವರ್ತನ" (mutation of species) ವೆಂಬ ತತ್ತ್ವವನ್ನೂ ಚೆನ್ನಾಗಿ ಸೂಚಿಸಿ ದಂತೆಯೇ ಆಯಿತು. ಬಫನ್ನನ ತರುವಾಯ ಬಂದ ಪ್ರಸಿದ್ಧತಾತ್ತ್ವಿಕನೆಂದರೆ ಇರ್ರ್ಯಾಸ್ಮಸ್ ಡಾರ್ವಿನ್ (೧೭೩೧). ಪ್ರಕೃತಿಶಾಸ್ತ್ರ ಸಂಬಂಧವಾಗಿ ಈತನು ಉಪ ಪಾದಿಸಿದ ಕೆಲವು ಭಾವಗಳನ್ನೇ ಈಚಿನ ಶಾಸ್ತ್ರಜ್ಞರು ವಿಸ್ತರಿಸಿರುತ್ತಾರೆ. ಅಂಗಾಂಗಗಳ ಉಪಯೋಗ–ನಿರು ಪಯೋಗಗಳೇ 'ವಿಕಾಸ' ಶಬ್ದದಲ್ಲಿ ಗರ್ಭಿತವಾದ ಅನೇಕ ಬದಲಾವಣೆಗಳಿಗೆ ಮುಖ್ಯಕಾರಣವೆಂದು ಒತ್ತಿ ಹೇಳಿ ದವನು ಈತನೇ. ಇತ್ತೀಚಿನ ಹಲವರು ವಿಕಾಸವಾದಿ ಗಳೂ ಈಯಭಿಪ್ರಾಯವನ್ನು ಸಂಪೂರ್ಣವಾಗಿ ಅನು ಮೋದಿಸಿರುವರು. ಇದಲ್ಲದೆ ವಿಕಾಸತತ್ತ್ವವನ್ನು ವಿವ ರಿಸುವಲ್ಲಿ "ಸ್ತ್ರೀಪುರುಷಜಾತಿಗಳ ಪರಸ್ಪರಾಂಗೀ ಕಾರ"ದ (sexual selection) ಪ್ರಾಮುಖ್ಯವನ್ನು ಈತನೇ ಮೊದಲು ಕಂಡುಹಿಡಿದನು. ಈತನ ಮೊಮ್ಮಗನೂ ಸುಪ್ರಸಿದ್ಧನೂ ಆದ ಛಾರ್ಲ್ಸ್ ಡಾರ್ವಿನ್ನನು ಇದೇ ವಿಷಯವನ್ನು ಕುರಿತು ವಿಜೃಂಭಿಸಿ ಬರೆದಿರುವನು. ಇರ್ರ್ಯಾಸ್ಮಸ್ ಡಾರ್ವಿನ್ನನ ಸಮಕಾಲಿಕನಾದ ಲಾಮಾರ್ಕ್ (೧೭೪೪) ಎಂಬವನು ಆಗಿನ ಪ್ರಕೃತಿಶಾಸ್ತ್ರಜ್ಞರಲ್ಲಿ ಹೆಸ ರೆತ್ತಿದವನು. ಈತನ ದೃಷ್ಟಿಯೂ ಬಫನ್ ಮತ್ತು ಇರ್ರ್ಯಾ ಸ್ಮಸ್ ಡಾರ್ವಿನ್ನರ ದೃಷ್ಟಿಯೂ ಅನೇಕ ಕಡೆಗಳಲ್ಲಿ ಒಂದಾ ಗುತ್ತವೆ. ಅಷ್ಟೇ ಅಲ್ಲ, ಈತನ ಅಭಿಪ್ರಾಯಗಳನ್ನು ಆಧುನಿಕ ಶಾಸ್ತ್ರಜ್ಞರು ಅಲ್ಲಲ್ಲಿ ಸ್ವಲ್ಪ ಬದಲಾಯಿಸಿ ಕೊಂಡಿರುವರಾದರೂ ಅವನ ಮೂಲಾಭಿಪ್ರಾಯಗಳಿಗೆ ಈಗಲೂ ವಿಶೇಷವಾದ ಗೌರವವುಂಟು. ಈತನು ೧೮೧೫ ರಲ್ಲಿ ಪ್ರಕಟಿಸಿದ ವೈಕಾಸಿಕ ನಿಯಮಗಳ ಸಾರಾಂಶವೇ ನೆಂದರೆ:— ಸುತ್ತುಮುತ್ತಲಿನ ಸನ್ನಿವೇಶಗಳ (ಎಂದರೆ ಭೂಗುಣ, ವಾಯುಗುಣ ಮತ್ತು ಆಹಾರ) ಪ್ರಭಾವ ದಿಂದ ಜೀವಿಗಳ ದೇಹರಚನೆ ಮತ್ತು ಗುಣಗಳಲ್ಲಿ ಬದ ಲಾವಣೆಗಳುಂಟಾಗುತ್ತವೆ; ಇಂತಹ ಬದಲಾವಣೆಗಳಿಂ ದುಂಟಾಗಬಹುದಾದ ನವೀನಲಕ್ಷಣಗಳು "ತಂದೆಯಂತೆ ಮಗ" ಎಂಬ ನಿಯಮವನ್ನನುಸರಿಸಿ ಅವುಗಳ ಸಂತತಿ ಯಲ್ಲೂ ಕಾಣಬರುತ್ತವೆ; ಇಂತಹ ಮಾರ್ಪಾಡುಗಳು ಹೆಚ್ಚಾಗುತ್ತಾಗುತ್ತಾ ಹೊಸ ಜಾತಿಗಳು ತಲೆದೋರು ತ್ತವೆ. ಇರ್ರ್ಯಾಸ್ಮಸ್ ಡಾರ್ವಿನ್ನನು ಮುಂದು ಮಾಡಿದ ಅಂಗಾಂಗಗಳ ಉಪಯೋಗ ನಿರುಪಯೋಗಭಾವವನ್ನು ಈತನು ಇನ್ನಷ್ಟು ವಿಸ್ತರಿಸಿದನಲ್ಲದೆ ಪ್ರಾಣಿಗಳಲ್ಲಿ ಪರಿ ವರ್ತನವುಂಟಾಗುವುದಕ್ಕೂ ಕ್ರಮೇಣ ಹೊಸ ಜಾತಿ ಗಳು ಹುಟ್ಟುವುದಕ್ಕೂ ಈಯಂಶವೂ ಒಂದು ಬಲ ವಾದ ಕಾರಣವೆಂದು ಹೇಳಿದನು.

ಹೀಗೆ ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗ ದಲ್ಲಿ ಲಾಮಾರ್ಕನ ಭಾವಬೀಜಗಳು ಜಿಜ್ಞಾಸುಗಳ ಮನೋಭೂಮಿಯಲ್ಲಿ ಅಂಕುರಿಸುತ್ತಿರಲು ಛಾರ್ಲ್ಸ್ ಡಾರ್ವಿನ್ನನ "ಜೀವಜಾತಿಗಳ ಮೂಲ" (On the Origin of species) ಎಂಬ ಉದ್ಗ್ರಂಥವು ೧೮೫೯ ರಲ್ಲಿ ಹೊರ ಬಿದ್ದಿತು. ಛಾರ್ಲ್ಸ್ ಡಾರ್ವಿನ್ನನು ಕೂಡ ತನ್ನ ಹಿಂದಿನ ಶಾಸ್ತ್ರಜ್ಞರನೇಕರಂತೆ ವಿಕಾಸಧರ್ಮದ ಗತಿ, ತತ್ಫಲವಾಗಿ

CC-0. Jangamwadi Math Collection. Digitized by eGangotri

ಆಗುವ ನೂತನಜಾತಿಗಳ ಜನನ—ಇವುಗಳ ವಿಷಯದಲ್ಲಿ ತನಗೆ ತೋಚಿದ ಭಾವಗಳಿಗೆ ರೂಪುಗೊಟ್ಟನೇ ಹೊರತು ಅನ್ಯಥಾ ಇಲ್ಲ. ವಿಕಾಸಧರ್ಮವನ್ನು ಕಂಡುಹಿಡಿದವನು ಡಾರ್ವಿನ್ ಎಂದಾಗಲೀ ವಿಕಾಸಭಾವವನ್ನು ಜನರಿಗೆ ಮೊದಲು ಪರಿಚಯಮಾಡಿಕೊಟ್ಟವನು ಆತನೇ ಎಂದಾಗಲೀ ಯಾರಾದರೂ ಹೇಳಿದರೆ ಅದು ಸರ್ವಥಾ ನಿಜವಲ್ಲ ವೆಂಬುದು ಮೇಲೆ ಹೇಳಿದ ಸಂಗತಿಗಳಿಂದ ವಿಶದವಾಗುತ್ತದೆ. ಆದುದರಿಂದ ನಾವು ಆತನ ಗ್ರಂಥದ ಸ್ವಾರಸ್ಯಕ್ಕೆ ಮರುಳಾಗಿ ಆತನ ಪೂರ್ವಿಕರಿಗೆ ಸಲ್ಲಬೇಕಾದ ಗೌರವ ವನ್ನು ಸಲ್ಲಿಸಲು ಮರೆಯಬಾರದು. ಒಬ್ಬೊಬ್ಬ ಶಾಸ್ತ್ರಜ್ಞನೂ ವಿಕಾಸಧರ್ಮವೆಂಬ ಸಮಸ್ಯೆಯನ್ನು ಬಿಡಿಸಲು ಪ್ರಯತ್ನಿಸಿರುವನು; ಇಂತಹವರಲ್ಲಿ ಡಾರ್ವಿನ್ನನೂ ಒಬ್ಬ.

ಛಾರ್ಲ್ಸ್ ಡಾರ್ವಿನ್ನನ ಅಭಿಪ್ರಾಯಗಳನ್ನು ವಿಮರ್ಶಿಸುವ ಮುಂಚೆ ನಾವು ಒಂದು ವಿಷಯವನ್ನು ನೆನಪಿನಲ್ಲಿಡಬೇಕು. ಆಧುನಿಕ ಭೂಶಾಸ್ತ್ರಕ್ಕೆ ಆದಿಪುರುಷನೆನಿಸಿದ ಛಾರ್ಲ್ಸ್ ಲಯೆಲ್ ಎಂಬಾತನು ೧೮೩೦ರಷ್ಟು ಹಿಂದೆಯೇ 'ಭೂಶಾಸ್ತ್ರ ನಿಯಮಗಳು' ಎಂಬ ಗ್ರಂಥವನ್ನು ಪ್ರಕಟಿಸಿದ್ದನು. ಈ ಗ್ರಂಥವು ಹುಟ್ಟುವ ಮುಂಚೆ ಭೂಸಂಬಂಧವಾದ ಅನೇಕ ಪರಿವರ್ತನಗಳು ಇದ್ದಕ್ಕಿದ್ದಂತೆಯೇ ಹಠಾತ್ತಾಗಿ ಸಂಭವಿಸುತ್ತವೆಂಬ ನಂಬಿಕೆಯು ಜನರಲ್ಲಿ ರೂಢಮೂಲವಾಗಿತ್ತು. ಈ ಗ್ರಂಥಕರ್ತನಾದರೊ ಈ ಮತವನ್ನು ಮೂಲೆಗೊತ್ತಿ, ಭೂಮಿಯ ಮೇಲುಂಟಾಗುವ ಯಾವವ್ಯಾಪಾರವೂ ಸರ್ವದಾ, ಕ್ರಮವಾಗಿ, ಒಂದೇಸವನೆ ಉಂಟಾಗುವುವೇ ವಿನಾ ಆಕಸ್ಮಿಕವಾಗಿ ಉಂಟಾಗುತ್ತವೆಯೆನ್ನಲು ಯಾವ ಆಧಾರವೂ ಇಲ್ಲವೆಂಬುದಾಗಿ ಸ್ಥಾಪಿಸಿದನು. ತಾನು ಹೂಡಿದ ವಾದಕ್ಕೆ ಸಹಾಯಕವಾಗಿ ಲಯೆಲ್ಲನು ತೋರಿಕೊಟ್ಟ ನಿದರ್ಶನಗಳಲ್ಲಿ ಯಾವ ಲೋಪವೂ ಕಾಣದೆ ಎಲ್ಲರೂ ಒಪ್ಪಿಕೊಳ್ಳಬೇಕಾಗಿ ಬಂದುದರಿಂದ, ಹಿಂದಿನವರ ಆಕಸ್ಮಿಕ ಕ್ರಿಯಾವಾದವು ( Catastrophism ) ಬುಡ ಕಳಚಿ ಬಿದ್ದು ಈತನ ಏಕಪ್ರಕಾರ ಕ್ರಿಯಾವಾದಕ್ಕೆ ( Uniformitarianism ) ಶಾಶ್ವತಸ್ಥಾನವು ದೊರಕಿತು. ತನ್ನ ಎಳೆಯತನದಲ್ಲಿಯೇ 'ಭೂಶಾಸ್ತ್ರನಿಯಮಗಳ' ನ್ನು ಓದಿದ್ದ ಡಾರ್ವಿನ್ನನಿಗೆ ನಿರವಯವ ( Inorganic ) ಪ್ರಪಂಚದಲ್ಲಿ ಆಗುವ ಸಮಸ್ತ ಪರಿವರ್ತನಗಳೂ ಸದಾಕಾಲದಲ್ಲಿ ಏಕರೀತಿಯಾಗಿ ಸಂಭವಿಸುತ್ತಿರಲು, ಸಾವಯವ ( Organic ) ಪ್ರಪಂಚದಲ್ಲಿ ಉಂಟಾಗುವ ಬದಲಾವಣೆಗಳ ಪರಿಸ್ಥಿತಿಯೂ ಅದೇ ಕ್ರಮದಲ್ಲಿ ಏಕಿರಲಾಗದು-ಎಂಬ ಶಂಕೆಯು ತೋರಿತು. ಪ್ರಾಪ್ತವಯಸ್ಕನಾದ ಮೇಲೆ ಆತನು ಈ ದೃಷ್ಟಿಯಿಂದ ಜೀವಿಜಗತ್ತನ್ನು ಪರಿಶೀಲಿಸಿ ತೃಪ್ತನಾಗಿ, ತದನುಗುಣವಾದ ಅಭಿಪ್ರಾಯಗಳನ್ನು ಜನರ ಮುಂದಿಟ್ಟನು. ಛಾರ್ಲ್ಸ್ ಲಯೆಲ್ಲನ 'ಭೂಶಾಸ್ತ್ರ ನಿಯಮಗಳು' ಎಂಬ ಗ್ರಂಥವನ್ನು ಓದಿದ್ದ ಜನರಿಗೆ ೩೦ ವರ್ಷಗಳ ತರುವಾಯ ಪ್ರಕಟಿತವಾದ ಛಾರ್ಲ್ಸ್ ಡಾರ್ವಿನ್ನನ ಗ್ರಂಥದ ಮುಖ್ಯಾಂಶಗಳು ಅಷ್ಟೇನೂ ಅಪರಿಚಿತವಾಗಿರಲಿಲ್ಲ. ಎಂದರೆ ಛಾರ್ಲ್ಸ್ ಡಾರ್ವಿನ್ನನ ಅಭಿಪ್ರಾಯಗಳು ಬೇರೂರಲು ಲಯೆಲ್ಲನು ಭೂಮಿಯನ್ನು ಹದಮಾಡಿಟ್ಟಿದ್ದಂತಾಯಿತು. ಇದೂ ಅಲ್ಲದೆ ಮಾಲ್ಥೂಸ್ ( malthus ) ಎಂಬ ಮತ್ತೊಬ್ಬ ಮೇಧಾವಿಯು ಜನಸಂಖ್ಯೆಯ ವಿಷಯದಲ್ಲಿ ಬರೆದ ಸ್ಫೂರ್ತಿದಾಯಕವಾದ ಒಂದು ಲೇಖನವನ್ನು ( Essay on Population ) ಡಾರ್ವಿನ್ನನು ಇನ್ನೂ ತರುಣನಾಗಿರುವಾಗಲೇ ಓದಿದ್ದನು. ಇದರಿಂದ ಅವನಿಗೆ ಬಹಳ ಪ್ರಯೋಜನವಾಯಿತು; ಹೇಗೆಂದರೆ, ಛಾರ್ಲ್ಸ್ ಡಾರ್ವಿನ್ನನು ತನ್ನ ಗ್ರಂಥದಲ್ಲಿ ಪ್ರಕೃತಿಯ ಪರಿಶೋಧನಧರ್ಮವನ್ನು ( Natural selection ) ಪ್ರತಿಪಾದಿಸುವಾಗ ಮಾಲ್ಥೂಸನು ಹೇಳಿಟ್ಟ ಜೀವನಸಂಗ್ರಾಮ (struggle for Existence ) ವೆಂಬ ಭಾವವನ್ನು ಉಪಯೋಗಿಸಿಕೊಂಡನು. ಈ ಭಾವದ ಸೂಚನೆಯು ಮಾಲ್ಥೂಸನ ಲೇಖನದಲ್ಲಿಯೇ ಕಾಣಬರುತ್ತಿದೆಯಾದ್ದರಿಂದ ಆತನು ಡಾರ್ವಿನ್ನನಿಗೆ ಈ ದೃಷ್ಟಿಯಿಂದಲೂ ಮಾರ್ಗದರ್ಶಕನಾಗಿರುವನು. ಡಾರ್ವಿನ್ನನು ಹೇಳುವ ಪ್ರಕಾರ—ಪ್ರತಿಯೊಂದು ಜೀವಿಯೂ ದೇಹರಚನೆಯಲ್ಲಿಯಾಗಲೀ ಗುಣದಲ್ಲಿಯಾಗಲೀ ತನ್ನ ಮಾತಾಪಿತೃಗಳನ್ನು ಸಂಪೂರ್ಣವಾಗಿ ಹೋಲುವುದಿಲ್ಲ; ತಂದೆತಾಯಿಗಳಿಗೂ ಅವರ ಮಕ್ಕಳುಮರಿಗಳಿಗೂ ಏನಾದರೊಂದಂಶದಲ್ಲಿ ಬಹು ಸೂಕ್ಷ್ಮವಾದ ವ್ಯತ್ಯಾಸವಿದ್ದೇ ಇರುತ್ತದೆ; ಮಕ್ಕಳಲ್ಲಿ ಹೀಗೆ ವ್ಯತ್ಯಾಸ ಕಾಣಬರುವುದು ಜೀವಿಗಳ ಹುಟ್ಟುಗುಣ; ಜೀವನಸಂಗ್ರಾಮವಾದಾಗ ಯಲ್ಲಿ ಪರಿವರ್ತನಗಳೆಂಬ ತರಂಗಗಳೆದ್ದು, ಕೆಲವು ಸನ್ನಿವೇಶಗಳಿಗೆ ಕೆಲವು ಪರಿವರ್ತನಗಳು ಅನುಕೂಲವಾಗಿ ಕಾಣಬಂದಾಗ 'ಪ್ರಕೃತಿಯು' ಅಂತಹ ಪರಿವರ್ತನ

CC-0. Jangamwadi Math Collection. Digitized by eGangotri

ಗಳನ್ನು 'ಅಂಗೀಕರಿಸುತ್ತದೆ;' ಹೀಗೆ ಅಂಗೀಕೃತವಾದ ಪರಿವರ್ತನಗಳು ಸ್ಥಾಯಿಯಾಗಿ ನಿಂತು ತಿರಸ್ಕೃತವಾದುವು ಕ್ಷೀಣವಾಗಿ ಕಡೆಗೆ ನಾಶ ಹೊಂದುವುವು. -ಈ ರೀತಿಯಲ್ಲಿ 'ಪರಿವರ್ತನ' 'ಜೀವನಸಂಗ್ರಾಮ' 'ಪ್ರಕೃತಿ ಪರಿಶೋಧನ' ವೆಂಬೀ ಪದತ್ರಯದಲ್ಲಿ ಡಾರ್ವಿನ್ನನ ಸಿದ್ಧಾಂತದ ಸಾರವು ಅಡಗಿದೆ. ಡಾರ್ವಿನ್ನನು ತಕ್ಕ ಆಧಾರಗಳನ್ನು ಕೊಡದೆ ಯಾವ ಅಭಿಪ್ರಾಯವನ್ನೂ ಮುಂದು ಮಾಡಿಲ್ಲ. ಜೀವನದಲ್ಲಿ ಕಾಣಬರುವ ಪ್ರತಿಯೊಂದು ಸಂಘಟನೆಯನ್ನೂ ವೈಜ್ಞಾನಿಕದೃಷ್ಟಿಯಿಂದ ಕೂಲಂಕಷವಾಗಿ ಪರಿಶೀಲಿಸಿ ತಾನು ತೃಪ್ತನಾದ ಮೇಲೆಯೇ ತನ್ನ ಅಭಿಪ್ರಾಯಗಳನ್ನು ಇಂತಹ ನೂರಾರು ನಿದರ್ಶನಗಳೊಡನೆ ಕೊಡುವ ಸಂಪ್ರದಾಯದವನು. ಆತನು ಜೀವಜಾತಿಗಳಲ್ಲುಂಟಾಗುವ ನಿರಂತರಪರಿವರ್ತನದ ಕ್ರಮವನ್ನು ವರ್ಣಿಸುವಾಗ ಕೊಡುವ ಪ್ರಮಾಣಭೂತವಾದ ಆಧಾರಗಳನ್ನು ನೋಡುವಲ್ಲಿ, ಅವನ ನಿರ್ಣಯಗಳು ಸಕಾರಣವಾಗಿಯೂ ನ್ಯಾಯವಾಗಿಯೂ ಇವೆಯೆನ್ನಬೇಕೇ ಹೊರತು ಅದರಲ್ಲಿ ತಪ್ಪನ್ನೆಣಿಸುವುದು ಕಷ್ಟ. ಒಟ್ಟಿನಲ್ಲಿ ವಿಕಾಸವಾದವೆಂಬುದು ವಿಜ್ಞಾನಶಾಸ್ತ್ರದಲ್ಲಿ ಚರ್ಚಿಸಲ್ಪಡಲು ಯೋಗ್ಯವಾದ ವಿಷಯವೆಂದೂ ಆ ಶಾಸ್ತ್ರದಲ್ಲಿ ಅದಕ್ಕೊಂದು ಗೌರವಸ್ಥಾನವು ಸಲ್ಲಬೇಕೆಂದೂ ಎನ್ನುವಮಟ್ಟಿಗೆ ಮಾಡಿಟ್ಟವರಲ್ಲಿ ಡಾರ್ವಿನ್ನನಿಗೇ ಅಗ್ರತಾಂಬೂಲವು ಸಲ್ಲತಕ್ಕುದು. ನಾವು ಆತನ ಗ್ರಂಥವನ್ನು ಅಷ್ಟು ಪೂಜ್ಯಬುದ್ಧಿಯಿಂದ ಕಾಣುವುದಕ್ಕೆ ಇದೇ ಕಾರಣ.

ಡಾರ್ವಿನ್ನನ ಸಮಕಾಲಿಕನಾದ ವ್ಯಾಲೆಸ್ (Wallace) ಎಂಬ ಬೇರೊಬ್ಬ ಪ್ರಕೃತಿಶಾಸ್ತ್ರಜ್ಞನೂ ಜೀವಿಜಗದ್ವ್ಯಾಪಾರವನ್ನು ಸ್ವತಂತ್ರವಾಗಿ ಪರಿಶೀಲಿಸಿ ಜೀವಿಗಳ ಜಾತಿಭೇದಕ್ಕೆ 'ಪ್ರಕೃತಿಪರಿಶೋಧನ'ವೇ ಮೂಲಕಾರಣವೆಂಬುದಾಗಿ ನಿರ್ಣಯಿಸಿದನು. ಹೀಗೆನ್ನುತ್ತಲೇ ಡಾರ್ವಿನ್ನನ ಮತವೂ ವ್ಯಾಲೆಸ್ಸನ ಮತವೂ ಈ ವಿಷಯ ದಲ್ಲಿ ಒಂದಾದ ಹಾಗಾಯಿತು. ಜೀವಜಾತಿಪರಿವರ್ತನ ಸಿದ್ಧಾಂತದ ನಿರೂಪಣಾವಸರದಲ್ಲಿ ಡಾರ್ವಿನ್ನನು ಪ್ರಕೃತಿ ಪರಿಶೋಧನವೆಂಬ ತನ್ನ ಮತದ ಪ್ರಾಮುಖ್ಯವನ್ನು ಸ್ಥಾಪಿಸುವುದಕ್ಕೆ ಸಹಾಯಕವಾಗಿ ಬೇಕಾದಷ್ಟು ಪ್ರಮಾಣಾಂಶಗಳನ್ನೊದಗಿಸಿದ್ದರೂ, ಲಾಮಾರ್ಕ್ ಮುಂತಾದ ಪೂರ್ವಿಕರು ಅದೇ ಸಿದ್ಧಾಂತವನ್ನು ಉಪಪಾದನ ಮಾಡುವಾಗ್ಗೆ ಕಾರಣವಾಗಿ ಕೊಡುವ ಸುತ್ತುಮುತ್ತಲಿನ ಸನ್ನಿವೇಶವೇ (ಭೂಗುಣ, ವಾಯುಗುಣ, ಆಹಾರ) ಮೊದಲಾದ ಇತರ ಅಂಗಗಳೂ ಗಣನೀಯವಾದುವೆಂದು ನಂಬಿದ್ದನು. ವ್ಯಾಲೆಸ್ಸನ ಹೃದಯವಾದರೋ ಇಷ್ಟು ವಿಶಾಲವಾದುದಲ್ಲ; ವೈಕಾಸಿಕಪರಿವರ್ತನಗಳೆಲ್ಲಕ್ಕೂ ಪ್ರಕೃತಿಪರಿಗ್ರಹಣ (Natural selection) ವೆಂಬ ಧರ್ಮವೊಂದೇ ಸಾಕಾದಷ್ಟು ಕಾರಣವೆಂಬುದು ಅವನ ದೃಢಮತ.

'ಜೀವಜಾತಿಗಳ ಮೂಲ'ಎಂಬ ಡಾರ್ವಿನ್ನನ ಗ್ರಂಥವು ಪ್ರಕಟವಾದ ಕೂಡಲೇ ಆಗಿನ ಕಾಲದ ಪ್ರಕೃತಿಶಾಸ್ತ್ರಜ್ಞರು ಆತನು ಕೊಡುವ ನಿದರ್ಶನಗಳಿಗೂ ಮಾಡುವ ಯುಕ್ತಿಯುಕ್ತವ್ಯಾಖ್ಯಾನಗಳಿಗೂ ಮನಸೋತು 'ಪ್ರಕೃತಿಪರಿಗ್ರಹಣ' ಸಿದ್ಧಾಂತವನ್ನು ಬಹುಮಾನಪೂರ್ವಕವಾಗಿ ಬರಮಾಡಿಕೊಂಡರಲ್ಲದೆ, ಅಲ್ಲಿಗೆ ವಿಕಾಸವಾದ ಸಮಸ್ಯೆಯ ಸಂಪೂರ್ಣಪರಿಚ್ಛೇದವು ಆದಂತಾಯಿತೆಂದೂ ಭಾವಿಸಿದರು. ಆದರೆ ಆಗ ಕೂಡ ಡಾರ್ವಿನ್ನನ ಅಭಿಪ್ರಾಯಗಳಿಗೆ ಮೋಹಿತರಾಗದೆ ಅವನಿಗಿಂತ ಹಿಂದಿನವನಾದ ಲಾಮಾರ್ಕನ ಹಳೆಯ ಸಿದ್ಧಾಂತಗಳನ್ನೇ ಅನುಮೋದಿಸಿದವರು ಹಲಕೆಲವರಾದರೂ ಇಲ್ಲದಿರಲಿಲ್ಲ. ಅಂದಿನಿಂದಲೇ ವೈಜ್ಞಾನಿಕರಲ್ಲಿ ಒಂದಕ್ಕೊಂದು ವಿರುದ್ಧವಾದ ಎರಡು ಪಂಗಡಗಳುಂಟಾಗಿ ಈಗಲೂ ಲಾಮಾರ್ಕ್ ಮತ್ತು ಡಾರ್ವಿನ್ನರ ಮತಾವಲಂಬಿಗಳಿಗೆ ಪರಸ್ಪರ ವಾಕ್ಕಲಹಗಳಾಗುತ್ತಲೇ ಇವೆ. ಒಬ್ಬರಿಗೆ ಒಂದು ಪಕ್ಷದಲ್ಲಿ ಅಭಿಮಾನವುಂಟಾಯಿತೆಂದರೆ, ಎದುರುಕಕ್ಷಿಯವರನ್ನು ಪ್ರತಿಭಟಿಸುವ ಹುರುಪಿನಲ್ಲಿ ಅವರ ಅಭಿಮಾನವು ಮೇರೆ ಮೀರುವ ಸಂಭವವೂ ಉಂಟು. ಇಲ್ಲಿಯಾದರೂ ಅದೇ ಮಾತು ಅನ್ವಯಿಸುತ್ತದೆ. ತನ್ನೊಡೆಯನಿಗೇ ಗೆಲುವುಂಟಾಗಬೇಕೆಂದು ಡಾರ್ವಿನ್ನನ ಪಕ್ಷಪಾತಿಗಳೂ, ತಮ್ಮ ಗುರುವಿಗೇ ಜಯವಾಗಬೇಕೆಂದು ಲಾಮಾರ್ಕನಶಿಷ್ಯರೂ ಈರ್ಷೆಯಿಂದ ಹೊಡೆದಾಡಿ ಅವರವರ ಮೂಲಪುರುಷನು ಕೂಡ ಆಶಿಸದಷ್ಟು ಗೌರವವನ್ನು ಆತನಿಗೆ ಸಂಪಾದಿಸಿ ಕೊಡಲು ಯತ್ನಿಸುತ್ತಾರೆ. ಇದು ಶುದ್ಧ ಅನ್ಯಾಯ. ಅನೇಕ ವೇಳೆಗಳಲ್ಲಿ ಡಾರ್ವಿನ್ನನಿಗೆ ಅವನ ವಿರೋಧಪಕ್ಷದವರಾದ ಲಾಮಾರ್ಕ್ ಮತಾವಲಂಬಿಗಳಿಗಿಂತಲೂ ತನ್ನ



CC-0. Jangamwadi Math Collection. Digitized by eGangotri

ಶಿಷ್ಯವರ್ಗದವರಿಂದಲೇ ಹೆಚ್ಚು ಅನ್ಯಾಯವು ನಡೆಯುತ್ತಿರುವಂತೆ ಕಾಣುತ್ತದೆ; ಲಾಮಾರ್ಕನ ಗತಿಯಾದರೂ ಇಷ್ಟೇ. ಈ ಎರಡು ಪಕ್ಷದವರಿಗೂ ಆಗನಿಂದ ನಡೆದು ಬಂದಿರುವ ವಾದವಿವಾದದಿಂದ ಒಂದು ಮುಖ್ಯವಾದ ಪ್ರಯೋಜನವಾಗಿದೆ. ಅದೇನೆಂದರೆ, ಲಾಮಾರ್ಕನ ಭಾವ ಬೃಂದದಲ್ಲಿ ಗುಣದೋಷವೇನೇ ಇರಲಿ, ಲಾಮಾರ್ಕೀಯ ವೈಕಾಸಿಕ ಸಿದ್ಧಾಂತವು ಸಿಲ್ಲಲಿ ಸಿಲ್ಲದಿರಲಿ, ಈ ವಿವಾದವು ಡಾರ್ವಿನ್ನನ ಸಿದ್ಧಾಂತದಲ್ಲಿರುವ ಹಲವು ಕುಂದುಕೊರತೆಗಳ ಕಡೆಗೆ ಆಧುನಿಕ ಪ್ರಕೃತಿಶಾಸ್ತ್ರಜ್ಞರನೇಕರ ದೃಷ್ಟಿಯನ್ನು ಎಳೆದಿದೆ. ಅಲ್ಲದೆ, ವಿಕಾಸವಾದದ ತೊಡಕನ್ನು ಬಿಡಿಸಲು ಡಾರ್ವಿನ್ನನ ಪ್ರಕೃತಿಪರಿಶೋಧನಸಿದ್ಧಾಂತವೊಂದೇ ವೇದವಾಕ್ಯವಲ್ಲ, ಈ ವಿಷಯದಲ್ಲಿ ಯೋಚಿಸಬೇಕಾದ ಸಂಗತಿಗಳು ಇನ್ನೂ ಅನೇಕವಿವೆ– ಎಂಬುದು ಜನರಿಗೆ ಗೋಚರವಾಯಿತು. ಇದರಿಂದ ಈಗ ಏನಾಗಿದೆಯೆಂದರೆ, ವೈಕಾಸಿಕಕ್ರಮವನ್ನು ನಿರೂಪಿಸುವಲ್ಲಿ ಡಾರ್ವಿನ್ನನು ತೋರಿರುವ ಅಸಾಧಾರಣಕೌಶಲ್ಯಕ್ಕೆ ಪಂಡಿತರು ಮೆಚ್ಚಿ, ಆತನಿಗೆ ಯೋಗ್ಯವಾದ ಗೌರವವನ್ನು ಈಗಲೂ ಸಲ್ಲಿಸುತ್ತಿದ್ದರೂ ಅದೇ ಪಂಡಿತರು ಜೀವಕೋಟಿಯಲ್ಲಿ ಸಂಭವಿಸುತ್ತಿರುವ ಮಾರ್ಪಾಟುಗಳೆಲ್ಲವನ್ನೂ ಡಾರ್ವಿನ್ನನ ಸಿದ್ಧಾಂತರೀತ್ಯಾ ವಿವರಿಸುವುದಸಾಧ್ಯವೆಂದು ಅಭಿಪ್ರಾಯಪಡುವರು. "ಡಾರ್ವಿನ್ನನೂ ಆತನ ಭಾವವೈಖರಿಯೂ ಸಂಪನ್ನವೇನೋ ಅಹುದು, ಆದರೆ ಅದು ಆಗಿನ ಕಾಲಕ್ಕೆ; ಈಗಲೋ ಎಂದರೆ, ಆತನ ನಿರ್ಣಯಗಳು ಆಮೂಲಾಗ್ರಪರಿಶೋಧಿತವಾಗಿ ತಕ್ಕಂತೆ ಮಾರ್ಪಾಡಾದ ಹೊರತು ಅವುಗಳನ್ನು ನಾವು ಪರಿಗ್ರಹಿಸುವಂತಿಲ್ಲ" ಎಂದು ಹೇಳಲು ಈಗಿನ ಶಾಸ್ತ್ರಜ್ಞರಲ್ಲಿ ಪ್ರಮುಖರಾದ ಅನೇಕರು ಹಿಂದೆಗೆಯರು. ಆದುದರಿಂದ ವೈಜ್ಞಾನಿಕಪ್ರಪಂಚದಲ್ಲಿ ಹರಡಿರುವ ಡಾರ್ವಿನೀಯ ಪ್ರಭಾವವು ಕೊನೆಗಾಣುವ ಕಾಲವು ಬಹು ದೂರವಿರಲಾರದು!

ಆದರೆ ಇದಕ್ಕಾಗಿ ಯಾರೂ ದುಃಖಿಸಬೇಕಾದುದಿಲ್ಲ; ಇದು ಡಾರ್ವಿನ್ನನಿಗೇನೂ ಅವಮಾನವಲ್ಲ. ದಿನದಿನಕ್ಕೂ ಅಭಿವೃದ್ಧಿಯನ್ನೈದುತ್ತಿರುವ ವಿಜ್ಞಾನಶಾಖೆಗಳ ಮಾತೆಲ್ಲವೂ ಹೀಗೆಯೇ. ಹೊಸ ಭಾವಗಳು ಬರುವುವು, ಹಳೆಯ ಭಾವಗಳು ಹೋಗುವುವು. ಜ್ಞಾನವು ವೃದ್ಧಿಯಾಗುವುದು ಹೀಗಲ್ಲದೆ ಮತ್ತೆ ಹೇಗೆ? "ವೈಕಾಸಿಕೋತ್ಪಾದನ" ಎಂಬ ತನ್ನ ಗ್ರಂಥಕ್ಕೆ ಮುನ್ನುಡಿಯನ್ನು ಬರೆಯುತ್ತಾ ಆಸ್ಬಾರ್ನನು ಆಧುನಿಕ ವಿಕಾಸವಾದಿಗಳ ಪರಿಸ್ಥಿತಿಯನ್ನು ಕುರಿತು ಹೀಗೆಂದು ಅಭಿಪ್ರಾಯಪಟ್ಟಿರುವನು. "ಡಾರ್ವಿನೀಯ ಸಿದ್ಧಾಂತವು ವಿಶೇಷವಾದ ಅರ್ಥವೈಶಾಲ್ಯವನ್ನುಳ್ಳದಾದರೂ ಅದು ಜೀವನದ ವಿಕಾಸಕ್ರಮವನ್ನು ಸಾಂಗೋಪಾಂಗವಾಗಿ ವಿವರಿಸಲಾರದು; ಅದು ಒಂದು ದೃಷ್ಟಿ ಮಾತ್ರ. ಜೀವನದಲ್ಲಿ ಡಾರ್ವಿನ್ನನ ಕಣ್ಣಿಗೆ ಬೀಳದ ಮತ್ತು ಡಾರ್ವಿನ್ನನ ಸಿದ್ಧಾಂತದ ಅವಧಿಯಿಂದ ಹೊರಗಾದ, ಅಷ್ಟೇಕೆ, 'ವಿಕಾಸ' ಎಂಬುವ ಮಹದರ್ಥಬೋಧಕವಾದ ಶಬ್ದಕ್ಕೂ ಮೀರಿದ ಹೊಸ ಸಂಗತಿಗಳು ಅನೇಕವಾಗಿವೆ. ಭೌತಿಕಶಾಸ್ತ್ರಕ್ಷೇತ್ರದಲ್ಲಿ ನ್ಯೂಟನ್ ಆದ ಮೇಲೆ ಐನ್‌ಸ್ಟೈನನು (Einstein) ಹೇಗೆ ಬಂದನೋ ಜೀವಿಶಾಸ್ತ್ರರಂಗದಲ್ಲಿಯೂ ಡಾರ್ವಿನ್ನನ ತರುವಾಯ ಜೀವನರಹಸ್ಯವನ್ನು ಚೆನ್ನಾಗಿ ಬಲ್ಲ ಮತ್ತೊಬ್ಬ ತಾತ್ತ್ವಿಕನೂ ಅವತರಿಸಬಹುದು. ಆಗ್ಗೆ ಜೀವಿಶಾಸ್ತ್ರದ ಸೌಂದರ್ಯವು ಈಗಿನಂತ ನೂರುಪಾಲು ಹೆಚ್ಚಿ ಮತ್ತಷ್ಟು ಅದ್ಭುತವಾಗಿ ಕಾಣುವುದರಲ್ಲಿ ಸಂದೇಹವಿಲ್ಲ."



CC-0. Jangamwadi Math Collection. Digitized by eGangotri

# ಹೂವಡಿಗಿತ್ತಿ

ಆನಂದಕಂದ

೧

ಕೊಳ್ಳಿರಮ್ಮಾ ಹೂವ ಕೊಳ್ಳಿರಮ್ಮಾ !
ಸಂಪಗೆಯ ಮಲ್ಲಿಗೆಯ
ಸೊಂಪು ಸೇವಂತಿಗೆಯ
ಕಂಪೊಗೆವ ಜಾಜಿಯನು ಕೊಳ್ಳಿರಮ್ಮಾ !



ಚಿತ್ರಕಾರ ಬಾಬ್ಲಿ

ಕೆಂಪು ಬಿಳಿ ತಾವರೆಯ
ಸುರಯಿ ಸುರಹೊನ್ನೆಗಳ
ಪೆಂಪುವಡೆದರಳುಗಳ ಕೊಳ್ಳಿರಮ್ಮಾ !
ಕೊಳ್ಳಿರಮ್ಮಾ ಹೂವ ಕೊಳ್ಳಿರಮ್ಮಾ !

೨

ಒಮ್ಮೆಯೇ ಮೂಸಿದರು
ಜುಮ್ಮು ಜುಮ್ಮೆನುವುದೆದೆ
ಕಮ್ಮನೆಯ ಹೂಗಳಿವು ಕೊಳ್ಳಿರಮ್ಮಾ !
ನಮ್ಮ ತೋಟಿಗರಣ್ಣ
ಹೆಮ್ಮೆಯಲಿ ಬೆಳೆಯಿಸಿದ
ಸೊಮ್ಮು ಈ ಅರಳುಗಳು, ಕೊಳ್ಳಿರಮ್ಮಾ !
ಕೊಳ್ಳಿರಮ್ಮಾ ಬೇಗ ಕೊಳ್ಳಿರಮ್ಮಾ !

೩

ಬರಿಯೆ ಹೊರಬಣ್ಣದಲಿ
ಮಿರುಗಿ ಕಣ್ಣನು ಸೆಳೆವ
ಬರಡುಗಂಪಿನವಲ್ಲ ಕೊಳ್ಳಿರಮ್ಮಾ !
ಹುರುಳನೆಲ್ಲೆಡೆಯಲಿಯು
ಹರಡಿ ಮಂದಿಯ ಮನವ
ಬೆರಗುಗೊಳಿಸುವ ಅರಳು, ಕೊಳ್ಳಿರಮ್ಮಾ !
ಕೊಳ್ಳಿರಮ್ಮಾ ಹೂವ ಕೊಳ್ಳಿರಮ್ಮಾ !

೪

ಬೆಳಗು ಜಾವದಿ ಮೂಡ-
ದೆಳ ನೇಸರನು ನೋಡಿ
ನಲಿದು ಬಾಯ್ದೆರೆದರಳ ಕೊಳ್ಳಿರಮ್ಮಾ !
ಎಳೆಯ ನೇಸರು ಹೊನ್ನ
ಸೆಳೆಗದಿರ ಸೋಂಕಿಸಲು
ತಳೆದಿಹವು ಹೊಸಚೆಲುವ ಕೊಳ್ಳಿರಮ್ಮಾ !
ಕೊಳ್ಳಿರಮ್ಮಾ ಹೂವ ಕೊಳ್ಳಿರಮ್ಮಾ !

೫

ಅಳಿಯ ಬಳಗದ ಕಣ್ಣು-
ಗಳನು ತಪ್ಪಿಸಿ ತಂದೆ
ಗಳಿಲನೇ ನೀವೀಗ ಕೊಳ್ಳಿರಮ್ಮಾ !
ಅಳಿಯ ಬಳಗದ ಬಾಯ್ಗೆ
ಸಿಲುಕಿದರೆ ಈ ಅರಳೆ-
ನೆಳ ಎಸಳು ಸಹ ಸಿಗದು ಕೊಳ್ಳಿರಮ್ಮಾ !
ಕೊಳ್ಳಿರಮ್ಮಾ ಹೂವ ಕೊಳ್ಳಿರಮ್ಮಾ !

CC-0. Jangamwadi Math Collection. Digitized by eGangotri

೬

ದೂರ ದೂರದಿ ನೋಡೆ
ತೋರದಿವುಗಳ ಸೊಬಗು
ಸೇರಿಸಲು ಮುಡಿಗಿವನು ಕೊಳ್ಳಿರಮ್ಮಾ !
ಸೇರಿಸಲು ಮುಡಿಗಿವನು
ಮುನಿದಿರೆಯು ನಿಮ್ಮನಿಯ
ಸಾರಿ ಬರುವನು ಬಳಿಗೆ ಕೊಳ್ಳಿರಮ್ಮಾ !
ಕೊಳ್ಳಿರಮ್ಮಾs ಹೂವ ಕೊಳ್ಳಿರಮ್ಮಾ !

೭

ಸುರಲೋಕದಲರುಗಳು
ಸರಿಯೆನಿಸವಿವುಗಳಿಗೆ
ಗರತಿಯರು ನೆರೆದೀಗ ಕೊಳ್ಳಿರಮ್ಮಾ !
ಗರತಿಯರೆ ನೀವೀಗ
ಧರಿಸಿದರೆ ಈ ಅರಳ
ಸುರರನ್ನು ಮೀರುವಿರಿ ಕೊಳ್ಳಿರಮ್ಮಾ !
ಕೊಳ್ಳಿರಮ್ಮಾs ಹೂವ ಕೊಳ್ಳಿರಮ್ಮಾ !

೮

ಮಡದಿಯರು ಮುಡಿಗಿರಿಸಿ
ಬೆಡಗ ಬಳೆಯಿಸಿರೆಂದು
ಪಡುವೆನಾ ತವಕವನು ಕೊಳ್ಳಿರಮ್ಮಾ !
ಮುಡಿಯದಿರೆ ಅರಳುಗಳು
ಕೆಡುತೆ ಸುಮ್ಮನೆ ಬಾಡಿ
ಹುಡಿಗೂಡಿ ಹೋಗುವವು ಕೊಳ್ಳಿರಮ್ಮಾ !
ಕೊಳ್ಳಿರಮ್ಮಾs ಹೂವ ಕೊಳ್ಳಿರಮ್ಮಾ !

೯

ಬೆಡಗಿನರಳಿವು ಬರಿದೆ
ಹುಡಿಗೂಡಿದರೆ ನಾನು
ತಡೆಯೆನೆದೆಯುಡುಕನ್ನು ಕೊಳ್ಳಿರಮ್ಮಾ !
ಒಡೆಯ ತೋಟಿಗರಣ್ಣ
ಒಲವಿನಲಿ ಕೊಟ್ಟರಳ
ಕೆಡಿಸುವುದು ಸರಿಯುಹುದೆ ಕೊಳ್ಳಿರಮ್ಮಾ !
ಕೊಳ್ಳಿರಮ್ಮಾs ಹೂವ ಕೊಳ್ಳಿರಮ್ಮಾ !

೧೦

ಹುಡಿಯ ಕೂಡಿಸಿ ಹೂವ
ಕೆಡಿಸುವುದಕಿಂತಲೂ
ಕೊಡುವೆ ಹಾಗೆಯೆ ಮುಡಿದುಕೊಳ್ಳಿರಮ್ಮಾ !
ಮುಡಿಯೆ ಅರಳನು ನಿಮ್ಮ
ಬೆಡಗನ್ನು ನೋಡುತಲಿ
ಪಡೆವೆನಾ ನಲಿವನ್ನು ಕೊಳ್ಳಿರಮ್ಮಾ !
ಕೊಳ್ಳಿರಮ್ಮಾs ಹೂವ ಕೊಳ್ಳಿರಮ್ಮಾ !

೧೧

ಸಂಪಗೆಯ ಮಲ್ಲಿಗೆಯ
ಸೊಂಪು ಸೇವಂತಿಗೆಯ
ಕಂಪೊಗೆವ ಜಾಜಿಯನು ಕೊಳ್ಳಿರಮ್ಮಾ !
ಕೆಂಪು ಬಿಳಿತಾವರೆಯ
ಸುರಯಿ ಸುರಹೊನ್ನೆಗಳ
ಪೆಂಪುವಡೆದಲರುಗಳ ಮುಡಿಯಿರಮ್ಮಾ !
ಮುಡಿಯಿರಮ್ಮಾs ಬೆಡಗ ಪಡೆಯಿರಮ್ಮಾ !



CC-0. Jangamwadi Math Collection. Digitized by eGangotri

# ಹಿಂದುಸ್ಥಾನದ ವ್ಯಾಪಾರವು ಲಾಭಕರವೆ ?

## Has India a Favourable Balance of Trade ?

ಲೇಖಕರು:—ಪ್ರೊ. ವಿಜಯೇಂದ್ರ ಕೆ. ಆರ್. ವಿ. ರಾವ್., ಎಂ. ಎ., ವಿಲ್ಸನ್ ಕಾಲೇಜು, ಮುಂಬಯಿ

ಬಹಳದಿಸಗಳಿಂದ ಒಂದು ಕಟ್ಟುಕಥೆಯು ಪ್ರಚಾರದಲ್ಲಿದೆ: ಅದು ಯಾವುದೆಂದರೆ, ಹಿಂದುಸ್ಥಾನದ ವ್ಯಾಪಾರವು ಒಟ್ಟಿನಲ್ಲಿ ಲಾಭಕರವಾಗಿದೆ— India has a favourable balance of trade ಎಂದು. ಈ ಶಬ್ದ ಸಮೂಹದ ಮರ್ಮವನ್ನು ತಿಳಿದುಕೊಳ್ಳುವುದು ಅಗತ್ಯ. ಇಂಗ್ಲಂಡಿಗೆ ಹಿಂದುಸ್ಥಾನವು ಅಧೀನವಾಗಿರುವುದು ಎರಡು ಬಗೆಯಲ್ಲಿ: ಒಂದು ರಾಜಕೀಯ, ಇನ್ನೊಂದು ಆರ್ಥಿಕ. ನಮ್ಮ ಆರ್ಥಿಕದಾಸ್ಯವು ರಾಜಕೀಯದಾಸ್ಯಕ್ಕಿಂತಲೂ ಹೆಚ್ಚು ಭೀಕರವಾಗಿದೆಯೆಂದು ದಿವಂಗತ ರಮೇಶಚಂದ್ರದತ್ತರು ಹೇಳಿದುದು ತುಂಬಾ ನಿಜ. ಇಂಗ್ಲಿಷರು ನಮ್ಮ ರಾಜ್ಯರಕ್ಷಣೆಯ ದೆಸೆಯಿಂದ ಮತ್ತು ತಮ್ಮ ಇಲ್ಲಿನ ರಾಜ್ಯದಾಡಳಿತದ ದೆಸೆಯಿಂದ ಪಡುವ ಶ್ರಮಕ್ಕಾಗಿ ನಾವು ಅವರಿಗೆ ಹಲವು ಬಗೆಯ ಪ್ರತಿಫಲವನ್ನು ಕೊಡಬೇಕಾಗುತ್ತದೆ. ಇಲ್ಲಿಯ ದಂಡಿನ ಅಧಿಕಾರಿಗಳ ವೆಚ್ಚ, ಐ. ಸಿ. ಎಸ್. ಅಧಿಕಾರಿಗಳ ವೆಚ್ಚ, ಗವರ್ನರ-ವ್ಹಾಯಿಸ್ರಾಯರ ವೆಚ್ಚ, ಇಂಗ್ಲಂಡಿನಲ್ಲಿರುವ ಇಂಡಿಯಾ ಆಫೀಸಿನ ವೆಚ್ಚ, ಇಲ್ಲಿಯ ಇಂಗ್ಲಿಷ್ ಅಧಿಕಾರಿಗಳು ನಿವೃತ್ತರಾದ ಮೇಲೆ ಅವರಿಗೆ ಸಲ್ಲುವ ಪೆನ್ಶನ್ನು ಮೊದಲಾದುವು ಅವರು ಸಲ್ಲಿಸುವ 'ರಾಜಕೀಯ ಸೇವೆ' (Political services) ಗಳಿಗಾಗಿ ನಾವು ಕೊಡುವ ಪ್ರತಿಫಲವಾಗಿದ್ದರೆ, ಬೇರೆ ರೀತಿಯಲ್ಲಿ-ಅವರ ಹಡಗುಗಳನ್ನು ನಾವು ಉಪಯೋಗಿಸುವುದು, ಅವರ ಇನ್ಶ್ಯುರನ್ಸ ಕಂಪನಿಗಳಿಗೆ ಆಶ್ರಯವನ್ನು ಕೊಡುವುದು, ಅವರ ಬ್ಯಾಂಕುಗಳಲ್ಲಿ ಹಣವನ್ನಿಡುವುದು-ಅವುಗಳಿಂದ ಹಣವನ್ನು ಕಡ ತೆಗೆದುಕೊಳ್ಳುವುದು, ಅವರ ದೇಶಕ್ಕೆ ನಮ್ಮ ವಿದ್ಯಾರ್ಥಿಗಳನ್ನು ಶಿಕ್ಷಣಕ್ಕಾಗಿ ಕಳಿಸುವುದು, ಆ ದೇಶದಲ್ಲಿ ಇಲ್ಲಿಯ ಸರಕಾರದವರು ತೆಗೆದ ಸಾಲಗಳ ಮೇಲಿನ ಬಡ್ಡಿಯನ್ನು ಕೊಡುವುದು ಈ ಮೊದಲಾದ ಬಗೆಯಲ್ಲಿ ಅವರ ಆರ್ಥಿಕಸೇವೆ (Economic services) ಗಳಿಗಾಗಿ ನಾವು ಪ್ರತಿಫಲವನ್ನು ಮುಟ್ಟಿಸುವುದುಂಟು. ಆರ್ಥಿಕ ಸೇವೆಗಳಿಗಾಗಿ ಸಲ್ಲಿಸುವುದನ್ನೂ ರಾಜಕೀಯ ಸೇವೆಗಳಿಗಾಗಿ ಕೊಡಬೇಕಾದುದರಲ್ಲಿ ಅವಶುಳಿಸುವ ಎಷ್ಟೆಷ್ಟೋ ಹಣವನ್ನೂ ಕೂಡಿಸಿ 'ಅಪ್ರತ್ಯಕ್ಷ ಪ್ರತಿಫಲ' ವೆಂದು ಕರೆಯಬಹುದು. ಇದೆಲ್ಲ ಅಲ್ಲದೆ ಅವರಿಂದ ಸಕ್ಕರೆ,ಬಟ್ಟೆ, ಯಂತ್ರದ ಸಾಮುಗ್ರಿ, ಔಷಧಿಗಳು ಮೊದಲಾದ ಹಲವು ಬಗೆಯ 'ಸಿದ್ಧ ವಸ್ತು (manufactured articles)' ಗಳನ್ನು ನಾವು ತರಿಸುವುದುಂಟು. ಇವುಗಳಿಗಾಗಿ ನಾವು ಕೊಡುವ ಬೆಲೆಯನ್ನು 'ಪ್ರತ್ಯಕ್ಷ ಪ್ರತಿಫಲ' ವೆಂದು ಕರೆಯಬಹುದು. ಇವೆಲ್ಲವು ಸೇರಿ 'ಆಯಾತ (Imports)' ಗಳಲ್ಲಿ ಬರುತ್ತವೆ. ಇಷ್ಟು ವೆಚ್ಚವನ್ನು ನಾವು ಮುಟ್ಟಿಸುವುದು ಹೆಚ್ಚಾಗಿ ಹತ್ತಿ, ಸಣಬು, ಗೋದಿ, ಅಕ್ಕಿ, ಎಣ್ಣೆಕಾಳುಗಳು ಮೊದಲಾದ ನಮ್ಮ ಕಚ್ಚಾಮಾಲಿನ ಪೂರೈಕೆಯ ಮೂಲಕ. ಇವೆಲ್ಲ 'ನಿರ್ಯಾತ (Exports)' ಗಳಲ್ಲಿ ಬರುತ್ತವೆ. ಮೇಲೆ ಹೇಳಿದ ಆರ್ಥಿಕ – ರಾಜಕೀಯಸೇವೆಗಳಿಗಾಗಿ ನಾವು ಕೊಡುವ ಪ್ರತಿಫಲ, ಪರದೇಶದಿಂದ ಬರುವ ಸಿದ್ಧವಸ್ತುಗಳು-ಇವೆರಡರ ಒಟ್ಟು ಬೆಲೆಗಿಂತ ನಮ್ಮ ನಿರ್ಯಾತ ವ್ಯಾಪಾರದ ಒಟ್ಟುಬೆಲೆಯು ಹೆಚ್ಚಾಯಿತೆಂದರೆ,ಒಟ್ಟಿನಲ್ಲಿ ನಮ್ಮ ದೇಶದ ವ್ಯಾಪಾರವು ಲಾಭಕರವಾಯಿತೆಂದು-ಎಂದರೆ ನಮ್ಮದು Favourable balance of trade ಆಯಿತೆಂದು ನಮಗೆ ಆಪ್ತವಾಕ್ಯವನ್ನು ಹೇಳುವುದುಂಟು. ಮೇಲಿನ ಕೆಲವು ಸಂಗತಿಗಳನ್ನು ಚೆನ್ನಾಗಿ ನೆನಪಿನಲ್ಲಿಟ್ಟರೆ, ಈ ಮಾತು ಎಷ್ಟು ಹುಸಿಯಾಗಿದೆ ಯೆಂಬುದು ತಾನೇ ತಿಳಿದು ಬರುವುದು. ಈ ಸಂದರ್ಭದಲ್ಲಿ ಕೆಳಗಿನ ಅಂಕಿಗಳು ಬೋಧಪ್ರದವಾಗದಿರವು:—



CC-0. Jangamwadi Math Collection. Digitized by eGangotri

### (ಅ)

ಕಚ್ಚಾಮಾಲಿನ ಮತ್ತು ಸಿದ್ಧವಸ್ತುಗಳ ವಿನಿಮಯವಾಗಿ ಒಟ್ಟು ಉಳಿತಾಯವು

| | |
|---|---|
| ೧೯೨೯-೩೦ ರಲ್ಲಿ | ೭೮ ಕೋಟಿ ೯೮ ಲಕ್ಷ ರೂ. |
| ೧೯೩೦-೩೧ ರಲ್ಲಿ | ೬೨ ,, ೩ ,, ,, |
| ೧೯೩೧-೩೨ ರಲ್ಲಿ | ೩೪ ,, ೮೬ ,, ,, |

### (ಆ)

ಬೆಳ್ಳಿಬಂಗಾರಗಳ ಚಲನದ ಆಯಾತ ನಿರ್ಯಾತಗಳ ನಡುವಿನ ಅಂತರ

| | |
|---|---|
| ೧೯೨೯-೩೦ ರಲ್ಲಿ | -೨೬ ಕೋಟಿ ೨೦ ಲಕ್ಷ ರೂ. |
| ೧೯೩೦-೩೧ ರಲ್ಲಿ | -೨೪ ,, ೪೩ ,, ,, |
| ೧೯೩೧-೩೨ ರಲ್ಲಿ | +೫೫ ,, ೬೪ ,, ,, |

[ಇಲ್ಲಿ ಉಣೆ (—) ಚಿಹ್ನವು ಅಷ್ಟುಮಟ್ಟಿಗೆ ಆಯಾತ ವ್ಯಾಪಾರವು ಹೆಚ್ಚಾದುದನ್ನೂ, ಅಧಿಕ(+) ಚಿಹ್ನವು ಅಷ್ಟುಮಟ್ಟಿಗೆ ನಿರ್ಯಾತ ವ್ಯಾಪಾರವು ಹೆಚ್ಚಾದುದನ್ನೂ ತೋರಿಸುತ್ತದೆ.]

### (ಇ)

ಒಟ್ಟು ಉಳಿತಾಯವು

| | |
|---|---|
| ೧೯೨೯-೩೦ ರಲ್ಲಿ | ೫೨ ಕೋಟಿ ೭೮ ಲಕ್ಷ ರೂ. |
| ೧೯೩೦-೩೧ ರಲ್ಲಿ | ೩೭ ,, ೬೦ ,, ,, |
| ೧೯೩೧-೩೨ ರಲ್ಲಿ | ೯೦ ,, ೫೦ ,, ,, |

'ಒಟ್ಟು ಉಳಿತಾಯ'ವು ೫೨ ಕೋಟಿ, ೩೭ ಕೋಟಿ, ೯೦ ಕೋಟಿ ರೂ.-ಈ ರೀತಿ ಬೆಳೆಯುವ ಪ್ರಮಾಣದಲ್ಲಿರುವುದರ ಕಡೆಗೆ ಬೆರಳು ತೋರಿಸಿ, 'ಇಕೊ ನೋಡಿ! ಹಿಂದುಸ್ಥಾನದ ವ್ಯಾಪಾರವು ಎಷ್ಟು ಲಾಭದಾಯಕವಿದೆ! ಹಿಂದುಸ್ಥಾನದ ಆರ್ಥಿಕಸ್ಥಿತಿಯು ಎಷ್ಟು ಭದ್ರವಾಗಿದೆ!' ಎಂದು ಅರ್ಥಶಾಸ್ತ್ರದಲ್ಲಿನ ಉದ್ದಾಮಪಂಡಿತರು ಕೂಡ ಹೇಳುವುದುಂಟು; ಮತ್ತು ನಾವುಗಳು ಅದನ್ನು ಭಕ್ತಿವಿಶ್ವಾಸಗಳಿಂದ ನಂಬುವುದುಂಟು. ಹಾಗಿದ್ದಲ್ಲಿ ೧೯೩೧-೩೨ರಲ್ಲಿ ಸುಮಾರು ೫೫ ಕೋಟಿ ರೂಪಾಯಿ ಬೆಲೆ ಬಾಳುವ ಬಂಗಾರವು (ಆ) ಹೊರಗೆ ಹೋದುದರಿಂದ ಒಟ್ಟು ಉಳಿತಾಯವು ೯೦ ಕೋಟಿ ರೂ. ಗೆ ಒಮ್ಮೆಲೆ ಏರಿದ ಸಂಗತಿಯು (ಇ) ನಮ್ಮಲ್ಲಿ ಹರ್ಷಲಹರಿಗಳನ್ನು ಹುಟ್ಟಿಸಬೇಕಾಯಿತು. ಆದರೆ, ಪರದೇಶದೊಡನಿದ್ದ ವ್ಯಾಪಾರದ ಗಾತ್ರವು ದೊಡ್ಡದಾಗುವುದು, ನಮ್ಮ ಆರ್ಥಿಕ ಸ್ಥಿರಸ್ಥಾಪಕತೆಯ ಚಿಹ್ನವೆಂದು ತಿಳಿಯುವುದು ಶುದ್ಧ ಹುಚ್ಚು. ಕಚ್ಚಾಮಾಲನ್ನೂ ಆಹಾರ ಪದಾರ್ಥಗಳನ್ನೂ ಹೊ[illegible] ಕಳಿಸಿ, ಸಿದ್ಧ ವಸ್ತುಗಳನ್ನು ಬರಮಾಡಿಕೊಳ್ಳುವ [illegible] ತಹ ನಾಡಿನ ಮಟ್ಟಿಗಂತೂ ಅದು ನಮ್ಮ [illegible] ದಾಸ್ಯದ ಕುರುಹೇ ಆಗಬಹುದು. ಪರದೇಶೀಯ ವ್ಯಾ[illegible]ರವು ಹಿತಕಾರಿಯೋ ಅಲ್ಲವೋ-ಎಂಬುದಕ್ಕೆ ನಾವು [illegible]ಗಿನ ಕೆಲವು ಪ್ರಶ್ನೆಗಳನ್ನು ಕೇಳಿಕೊಳ್ಳಬೇಕು: [illegible] ಜನರಿಗೆ ಹೆಚ್ಚು ಹೆಚ್ಚು ಉದ್ಯೋಗಗಳನ್ನು [illegible] ಕೊಡುತ್ತದೆಯೋ? ಅದು ಜನರ ಉತ್ಪಾದಕಶಕ್ತಿಯನ್ನು ಪುಟಗೊಳಿಸುತ್ತದೆಯೋ? ವ್ಯಾಪಾರದಲ್ಲಿ [illegible]ಗಾರರಾದ ರಾಷ್ಟ್ರಗಳಲ್ಲಿ ಅದು ತುಂಬುಜೀವ[illegible] ಉಂಟುಮಾಡುತ್ತದೆಯೋ?.... ನಮ್ಮ ನಾಡಿನ ಮ[illegible] ಎಲ್ಲ ಪ್ರಶ್ನೆಗಳಿಗೂ 'ಇಲ್ಲ'ವೆಂದೇ ಉತ್ತರವು ಬರುವು[illegible] ಈ ಒರೆಯಿಂದ ನೋಡಲಾಗಿ, ನಮ್ಮ ಪರದೇಶೀ[illegible] ವ್ಯಾಪಾರವು ನಮ್ಮ ಆರ್ಥಿಕಜೀವನದ ಅನಾರೋಗ್ಯ[illegible] ಗುರುತೇ ಆಗಿರುವುದು.

ಇನ್ನೊಂದು ಮಾತು. ಮೇಲೆ ತೋರಿಸಿದ 'ಒ[illegible] ಲಾಭದ ಲೆಕ್ಕ'ದಲ್ಲಿ ಸುವರ್ಣರೌಪ್ಯಚಲನದ ಆಯಾ[illegible] ನಿರ್ಯಾತಗಳನ್ನು (ಆ) ಹಿಡಿದಿದೆ. ಬೆಳ್ಳಿಬಂಗಾರ[illegible] ದೊಡ್ಡ ದೊಡ್ಡ ಕಣಿಗಳುಳ್ಳ ಆಫ್ರಿಕೆ, ಅಮೇರಿಕೆ [illegible]ಲಾದ ದೇಶಗಳ ಮಾತು ಬೇರೆ. ಆ ದೇಶಗಳ 'ಒ[illegible] ವ್ಯಾಪಾರದ ಲಾಭ'ದಲ್ಲಿ ಚಿನ್ನವನ್ನು ಹೊರಕ್ಕೆ [illegible] ಬರುವ ಪ್ರತಿಫಲವನ್ನು ಎಣಿಸುವುದು ತಪ್ಪಾಗ[illegible] ಏಕೆಂದರೆ, ಆ ನಾಡುಗಳ ಮಟ್ಟಿಗೆ, ಪರದೇಶಕ್ಕೆ ಮಾ[illegible] ಹೋಗುವ ಉಳಿದ ಸರಕುಗಳ ಜಾತಿಯಲ್ಲಿಯೇ [illegible]ಗಳ ಚಿನ್ನವೂ ಬರುತ್ತಿದೆ. ನಾವು ಗಡಿಗಾ[illegible] ಚಿನ್ನವೋ- ಅದು ನಾವೆಲ್ಲ ದುಡಿದು ದುಡಿದು, [illegible] ಹೊಟ್ಟೆಯಿದ್ದು, ಜೀನತನದಿಂದ ಕಲೆಹಾಕಿದ [illegible]ನಿಂದ ಕೊಂಡುಕೊಂಡ ಬದುಕು. ನಾವದನ್ನು ಮಾ[illegible]ವುದೆಂದರೆ, ಇದ್ದಬಿದ್ದ ನಮ್ಮ ಆಪದ್ಧನಕ್ಕೆ ಎರವಾ[illegible]ವುದು. ಆದುದರಿಂದ 'ಒಟ್ಟು ಉಳಿತಾಯ'ದ ಲೆಕ್ಕ[illegible] ಸುವರ್ಣಚಲನದ ನಿರ್ಯಾತವನ್ನು ಹಿಡಿಯುವು[illegible] ತಪ್ಪು.

**ಈ 'ಒಟ್ಟು ಉಳಿತಾಯ'ವೆಂಬುದು ದೊ[illegible]ದೊಂದು ಬುರುಡೆ:**-ನಿಜವಾಗಿ ಆಗಬೇಕಾದುದೆಂ[illegible] (ಅ) ಮತ್ತು (ಆ) ಒಂದಕ್ಕೊಂದು 'ಸಾಟಿ' (Set-[illegible]

CC-0. Jangamwadi Math Collection. Digitized by eGangotri

ಯಾಗಿ, (ಇ) ಸೊನ್ನೆಯಾಗಬೇಕು; ಎಂದರೆ ಹೊರಗೆ ಹೋಗುವ ಚಲನದ ಬೆಲೆಗಿಂತ ಪರದೇಶದಿಂದ ಬರುವ ಚಲನದ ಬೆಲೆಯು ಹೆಚ್ಚಾಗಿ,ಅವೆರಡರಲ್ಲಿನ ಅಂತರವೂ ಕಚ್ಚಾ- ,ಪಕ್ಕಾಮಾಲುಗಳ ವಿನಿಮಯಗಳಿಂದಾದ ಉಳಿತಾಯವೂ ಅಷ್ಟೇ ಆಗಿ, 'ಒಟ್ಟುಲಾಭ'ವು ಸೊನ್ನೆಯಾಗಬೇಕು. ಇದು ಹೇಗೆಂಬುದನ್ನು ಒಂದೆರಡು ಉದಾಹರಣೆಗಳನ್ನು ತೆಗೆದು ಕೊಂಡು ನೋಡುವಾ. ಒಂದು ವರ್ಷ, ಕಚ್ಚಾಮಾಲು ಪಕ್ಕಾಮಾಲುಗಳ ವಿನಿಮಯದಿಂದ ೪೦ ಕೋಟಿ ರೂ. ಲಾಭವಾಗಿದೆಯೆಂದು ತಿಳಿಯುವಾ. ಅದೇ ವರ್ಷ, ೩೦ಕೋಟಿ ರೂ. ಯಷ್ಟು ಬಂಗಾರವು ಹೊರಗೆ ಹೋಗಿ, ೭೦ಕೋಟಿ ರೂ. ಯಷ್ಟು ಬಂಗಾರವು ಪರದೇಶದಿಂದ ಚಲನರೂಪವಾಗಿ ಬಂದು, ಒಟ್ಟಿನಲ್ಲಿ ೪೦ ಕೋಟಿ ರೂ. ಯಷ್ಟು ಹೆಚ್ಚು ಬಂಗಾರವು ನಮ್ಮ ದೇಶಕ್ಕೆ ಬಂದಿದೆಯೆಂತಲೂ ತಿಳಿಯುವಾ. ಹೀಗೆ ಜರುಗಿದರೆ, ಅದು ಇದ್ದುದರಲ್ಲಿ ಒಳ್ಳೆಯದಾದ ಸಂಗತಿ. ಏಕೆಂದರೆ, ಸರಕುಗಳ (Merchandise) ವಿನಿಮಯದಿಂದಾದ ಉಳಿತಾಯದಿಂದ, ಅಷ್ಟೇ ಬೆಲೆಬಾಳುವ ಚಿನ್ನವನ್ನು ನಾವು ಕೊಂಡಂತಾಯಿತು. ಇದರಿಂದ 'ಒಟ್ಟು ಲಾಭ'ವು ಸೊನ್ನೆಯಾದಂತೆನಿಸಿದರೂ, ನಮ್ಮ ಈಗಿನ ಪರತಂತ್ರ ಪರಿಸ್ಥಿತಿಯಲ್ಲಿ ನಾವು ಜೀವಧಾರಣೆಯನ್ನಾದರೂ ಮಾಡಬಲ್ಲೆವು-ಎಂಬುದನ್ನು ಅದು ತೋರಿಸುತ್ತದೆ. ಇದಕ್ಕೆ ಪ್ರತಿಯಾಗಿ, ಒಂದು ವರ್ಷ, ಕಚ್ಚಾ-ಪಕ್ಕಾಮಾಲುಗಳ ವಿನಿಮಯದಿಂದ, ೪೦ಕೋಟಿ ರೂ. ಗಳು ಉಳಿದವೆಂದೂ ಅದೇ ವರ್ಷ ಸುವರ್ಣಚಲನದ ಆಯಾತಕ್ಕಿಂತ ನಿರ್ಯಾತವು (ಹೊರಗೆ ಹೋದುದು) ಹೆಚ್ಚಾಗಿ, ಅದರಿಂದ ೪೦ ಕೋಟಿ ರೂ. ಯಷ್ಟು ಬಂಗಾರವನ್ನು ನಾವು ಹೊರಗೆ ದೂಡುವ ಪ್ರಸಂಗವು ಬಂದಿತೆಂದೂ ತಿಳಿಯುವಾ. ಇದರಿಂದ ಆ ವರುಷದ 'ಒಟ್ಟು ಲಾಭ'ವೇನೋ ೮೦ ಕೋಟಿ ರೂ. ಆದಂತೆ ತೋರಿದರೂ, ಅದು ನಾವು 'ದಿವಾಳಿ' ತೆಗೆದುದರ ಗುರುತೇ ಅಲ್ಲದೆ, ನಮ್ಮ ಆರ್ಥಿಕಭದ್ರತೆಯ ಚಿಹ್ನೆಯಲ್ಲ.

ಅದು ಹೇಗೆಂಬುದನ್ನು ತಿಳಿದುಕೊಳ್ಳಲಿಕ್ಕೆ, ಲೇಖನದ ಪ್ರಾರಂಭದಲ್ಲಿ ಹೇಳಿದ ಕೆಲವು ಸಂಗತಿಗಳನ್ನು ನಾವು ಗಮನಿಸಬೇಕು. ನಮ್ಮ ಪಾರತಂತ್ರ್ಯದ ಮೂಲಕ, ನಾವು ನಮ್ಮ ರಾಜ್ಯಕರ್ತರ 'ರಾಜಕೀಯ' ಮತ್ತು 'ಆರ್ಥಿಕ' 'ಸೇವೆ'ಗಳಿಗಾಗಿ ಎಷ್ಟೆಷ್ಟೋ ಹಣವನ್ನು (ಅಪ್ರತ್ಯಕ್ಷಪ್ರತಿಫಲರೂಪವಾಗಿ) ಸಲ್ಲಿಸಲೇಬೇಕಾಗುತ್ತದೆ. ಒಳಗೆ ಬರುವ ರೌಪ್ಯಸುವರ್ಣಚಲನವು ಹೊರಗೆ ಹೋಗುವ ಚಲನಕ್ಕಿಂತ ಹೆಚ್ಚಾಗುವುದು ('ಆ' ನೋಡಿರಿ) ಆ 'ಅಪ್ರತ್ಯಕ್ಷಪ್ರತಿಫಲ'ವನ್ನು ಮುಟ್ಟಿಸುವ ಒಂದು ಅತಿಮಹತ್ವದ ದಾರಿಯಾಗಿರುತ್ತದೆ. ಆ ಪ್ರತಿಫಲವನ್ನು ಇದುವರೆಗೆ ನಾವು Excess of Exports ದಿಂದ-ಎಂದರೆ ಒಳಗೆ ಬರುವ ಸಿದ್ಧವಸ್ತುಗಳ ಬೆಲೆಗಿಂತ ಹೆಚ್ಚು ಬೆಲೆಯುಳ್ಳ ಅಸಿದ್ಧವಸ್ತು(ಕಚ್ಚಾಮಾಲು)ಗಳನ್ನು ಕಳಿಸಿ, ಅದರಿಂದಾಗುವ ಉಳಿತಾಯದಿಂದ ಮುಟ್ಟಿಸುತ್ತಿದ್ದೆವು. ಇದೀಗ ಎಲ್ಲ ವಿಪರೀತವಾಗಿದೆ. ಸರಕುಗಳ ವಿನಿಮಯದಿಂದಾಗಬಹುದಾದ ಉಳಿತಾಯದಿಂದ, ನಮ್ಮೊಡೆಯರಿಗೆ ನಾವು ಕೊಟ್ಟೇ ತೀರಬೇಕಾದ ಹಣವನ್ನು ಮುಟ್ಟಿಸಲು ಅಸಮರ್ಥರಾಗಿದ್ದೇವೆ. ಮೇಲಿನ ಕೋಷ್ಟಕಗಳನ್ನು ('ಅ' ನೋಡಿರಿ) ಚೆನ್ನಾಗಿ ಪರೀಕ್ಷಿಸಿದರೆ, ಇದು ತಿಳಿದು ಬಿಡುವುದು. ೧೯೨೯-೩೦, ೧೯೩೦-೩೧, ೧೯೩೧-೩೨ ರಲ್ಲಿ ಸರಕುಗಳ ವಿನಿಮಯದಿಂದಾಗುವ ಉಳಿತಾಯವು, ೭೮ ಕೋಟಿ ರೂ., ೬೨ಕೋಟಿ ರೂ., ೩೪ಕೋಟಿ ರೂ.- ಈ ರೀತಿ ಅನುಕ್ರಮವಾಗಿ ಸೊರಗುತ್ತಲೇ ನಡೆದಿರುವುದು ಕಂಡು ಬರುವುದು. ಇಂಗ್ಲಿಷ್ ರಾಜ್ಯಕರ್ತರಿಗೆ ಸಲ್ಲಬೇಕಾದ 'ಪೊಗದಿ' (Tribute)ಯೂ ಸೊರಗುತ್ತಿಲ್ಲ, ಅದನ್ನು ತೀರಿಸಲು ವಿನಿಮಯಲಾಭವೂ ಸಾಲದು, ಈ ವಿಪರೀತ ಪರಿಸ್ಥಿತಿಯ ಮೂಲಕವೇ ನಾವು ಸುಮಾರು ೫೬ಕೋಟಿ ರೂಪಾಯಿ ಬೆಲೆ ಬಾಳುವ ಬಂಗಾರವನ್ನು ಹೊರಕ್ಕಟ್ಟಬೇಕಾಯಿತು! ಈ ವರ್ಷದ ನಮ್ಮ ಸುವರ್ಣನಿರ್ಯಾತದ ಪ್ರಚಂಡ ಪ್ರಮಾಣದ ಗುಟ್ಟು ಇದರಲ್ಲಿದೆ! ತೀರಾ ಆದರ್ಶಪ್ರಾಯವಾದ ಪರಿಸ್ಥಿತಿಯೆಂದರೆ, ನಾವು ನಮ್ಮನ್ನಾಳುವವರಿಗೆ ಪ್ರತ್ಯಕ್ಷವಾಗಿಯಾಗಲಿ, ಅಪ್ರತ್ಯಕ್ಷವಾಗಿಯಾಗಲಿ ಪ್ರತಿಫಲವನ್ನು ಮುಟ್ಟಿಸದಿರುವುದು; ಎಂದರೆ, ಸಿದ್ಧವಸ್ತುಗಳನ್ನು ಬರಮಾಡಿಕೊಳ್ಳುವುದು ತಪ್ಪಿಹೋಗಿ, ಅಸಿದ್ಧವಸ್ತುಗಳನ್ನು ಸಿದ್ಧವಸ್ತುಗಳಲ್ಲಿ ರೂಪಾಂತರಿಸುವ ಏರ್ಪಾಟವಾಗಿ (ಎಂದರೆ ಸಿದ್ಧವಸ್ತುಗಳನ್ನು ನಮ್ಮಲ್ಲಿಯೇ ಹುಟ್ಟಿಸುವ ಗಿರಣಿಗಳಾಗಿ), ರಾಜ್ಯಸೂತ್ರಗಳು ನಮ್ಮ ಕೈಯಲ್ಲಿಯೇ ಬಂದು,

CC-0. Jangamwadi Math Collection. Digitized by eGangotri

ರಾಜ್ಯವ್ಯವಸ್ಥೆಗಾಗಿ ನಾವು ಕೊಡಬೇಕಾದುದು ನಿಂತು ಹೋಗಿ, ನಮ್ಮವರ ಬ್ಯಾಂಕು – ಇನ್ಶ್ಯುರನ್ಸ್‌ಕಂಪನಿ– ಹಡಗುಗಳಿಗಾಗಿಯೇ ನಮ್ಮ ದುಡ್ಡು ವೆಚ್ಚವಾಗಿ– ಅಂತೂ ಹೊರಗೆ ಹಲವುದಾರಿಗಳಿಂದ ಹೋಗುವ ಹಣವು ನಮ್ಮಲ್ಲಿಯೇ ಉಳಿಯುವುದು: ಎಂದರೆ ನಮ್ಮ ರಾಜಕೀಯ ಆರ್ಥಿಕ ಸೂತ್ರಗಳು ನಮ್ಮ ಕೈಯಲ್ಲಿರುವುದು. ಇನ್ನು ಮಧ್ಯಮಸ್ಥಿತಿಯೆಂದರೆ, ನಮ್ಮ ರಸರಿಗೆ ನಾವು ಸಲ್ಲಿಸಲೇ ಬೇಕಾದುದನ್ನು ಸರಕುಗಳ ವಿನಿಮಯಲಾಭದಿಂದ ಮುಟ್ಟಿಸುವುದು. ಕನಿಷ್ಠಸ್ಥಿತಿಯೆಂದರೆ, ಸರಕುಗಳ ವಿನಿಮಯಲಾಭದಿಂದ ಅದನ್ನು ಮುಟ್ಟಿಸಲಾಗದೆ, ಇಡು ಗಂಟಿನಿಂದ – ಆಪದ್ಧನದಿಂದ– ಮದುವೆಮುಂಜಿಗಳಿಗಾಗಿ ಬೇನೆ ಬೇಸರಿಕೆಗಳಿಗಾಗಿ ಹೊಟ್ಟೆಗೆ ಕೇರುಹಾಕಿಕೊಂಡು ಕೂಡಿಸಿಟ್ಟ ಬದುಕಿನಿಂದ ಅದನ್ನು ತೀರಿಸುವುದು. ನಾವು ಸದ್ಯಕ್ಕೆ ಆ ಸ್ಥಿತಿಗೆ ಬಂದಿದ್ದೇವೆ.

೧೯೩೭–೩೮ರಲ್ಲಿ ಸರಕುಗಳ ವಿನಿಮಯಲಾಭವು ಸುಮಾರು ೩೫ ಕೋಟಿ ರೂ. ಗೆ ಇಳಿಯಿತು. ಸಿದ್ಧ ವಸ್ತುಗಳ ಆಯಾತವೂ ಕಡಿಮೆಯಾಗಿದ್ದರೂ, ಆಯಾತದ ಇಳಿತಾಯಗ ಪ್ರಮಾಣಕ್ಕಿಂತ ನಿರ್ಯಾತದ ಇಳಿತಾಯದ ಪ್ರಮಾಣವು ತೀರಾ ಹೆಚ್ಚಾಗಿ ಬೆಳೆದುಬಿಟ್ಟಿದೆ. ಎಂದರೆ, ನಾವು ಈವರೆಗೆ ಹೊರಗೆ ಕಳಿಸುತ್ತಿರುವ ಹತ್ತಿ, ಗೋದಿ ಮೊದಲಾದ ಸರಕುಗಳು ಈಗ ಅಮೇರಿಕಾ, ರಶಿಯಾ, ಆಫ್ರಿಕಾ ಮೊದಲಾದ ದೇಶಗಳಲ್ಲಿ ವಿಪುಲವಾಗಿ ಬೆಳೆಯುತ್ತಿದ್ದು, ಆ ದೇಶದವರು ಅವುಗಳನ್ನು ಬಹಳ ಅಗ್ಗವಾಗಿ ಮಾರುತ್ತಿರುವುದರಿಂದ ನಮ್ಮ ಕಚ್ಚಾ ಮಾಲಿಗೆ ಹೊರನಾಡುಗಳಲ್ಲಿ ಪೇಟೆಯಿಲ್ಲದಾಗಿದೆ. ಮೊನ್ನೆ ಮೊನ್ನೆ ಹತ್ತಿಯ ಧಾರಣೆಯು ಇಳಿದುದಕ್ಕೂ ಇದೇ ಕಾರಣವು. ಅಮೇರಿಕೆಯ ಹತ್ತಿಯು ಅಗ್ಗದರದಲ್ಲಿ ಹೇರಳವಾಗಿ ಮುಂಬಯಿಪೇಟೆಯಲ್ಲಿ ಬಂದುದರಿಂದ ನಮ್ಮ ಹತ್ತಿಗೆ ಧಾರಣೆಯಿಲ್ಲದಾಯಿತು. ನಮ್ಮ ನಿರ್ಯಾತ ವ್ಯಾಪಾರವು ಹತ್ತಿ ಮತ್ತು ಸಣಬುಗಳ ವ್ಯಾಪಾರವನ್ನೆ ಹೆಚ್ಚಾಗಿ ಅವಲಂಬಿಸಿರುವುದರಿಂದ, ‡ ಇವೆರಡು (ಹೊರಗಿನವರ ದಾಳಿಯಮೂಲಕ) ಅಗ್ಗವಾಗಿ ಬಿಟ್ಟ ಕೂಡಲೆ, ನಮ್ಮ ನಿರ್ಯಾತವ್ಯಾಪಾರವು ನೊರಗಿ ಬಿಡುವುದು. ಈಗ ನಮ್ಮ ನಿರ್ಯಾತವ್ಯಾಪಾರದ ಪ್ರಾಪ್ತಿಯು ತೀರಾ ಕಡಿಮೆಯಾದುದರಿಂದ, 'ಸೇವಾಪ್ರತಿಫಲ'ರೂಪವಾಗಿ ಕೊಡಲೇ ಬೇಕಾದುದನ್ನು ಅಗತಿಕವಾಗಿ ಸುವರ್ಣದಾನರೂಪದಿಂದ ಮುಟ್ಟಿಸಬೇಕಾಯಿತು.

ಇದೀಗ ನಮ್ಮೆದುರಿಗೆ ಎರಡು ದಾರಿಗಳಾಗಿವೆ. ನಾವು ವರುಷ ವರುಷ ಹೀಗೆಯೆ ನಮ್ಮ ಸುವರ್ಣನಿಧಿಯನ್ನು 'ಸಮುದ್ರಾರ್ಪಸ್ತ್ವೃಪ್ಯಂತು' ಮಾಡುತ್ತ ಹೋಗುವುದೊಂದು. ನಮ್ಮ ಎಲ್ಲ ಬಗೆಯ ಆಯಾತವ್ಯಾಪಾರ (Imports)ಕ್ಕೆ ಒಡ್ಡುಹಾಕುವುದು ಇನ್ನೊಂದು. ನಿರ್ಯಾತವ್ಯಾಪಾರದ ಪ್ರಾಪ್ತಿಯು ಕಟ್ಟಾಯಿತೆಂದು, 'ಸೇವಾಪ್ರತಿಫಲ'ವನ್ನು ಮನೆಯೊಳಗಿನ ಬಂಗಾರವನ್ನು ಕೋಟಿಗಟ್ಟಲೆ ಮಾರಿ ಮುಟ್ಟಿಸಬೇಕೋ; ಆಯಾತ ವ್ಯಾಪಾರವನ್ನೇ ಸೊನ್ನೆಗೆ ತಂದಿರಿಸಿ, ನಮ್ಮ ಆಪದ್ಧನವನ್ನು ಕಾಯ್ದಿಡಬೇಕೋ – ಎಂದರಡು ಪ್ರಶ್ನೆಗಳು ನಮ್ಮೆದುರಿನಲ್ಲಿವೆ. ಉಚಿತವಾದುದನ್ನು ಆರಿಸುವುದು ನಮ್ಮ ಕೈಯಲ್ಲಿದೆ. ಇಲ್ಲಿ 'ಆಯಾತ' ಶಬ್ದಕ್ಕಿದ್ದ ವ್ಯಾಪಕಾರ್ಥವನ್ನು ನೆನಪಿನಲ್ಲಿಡುವುದು ಅಗತ್ಯ. ಮೊಟ್ಟಮೊದಲಿಗೆ ಮಾಡಿದ ವಿವರಣೆಯನ್ನು ನೋಡಿದರೆ, 'ಆಯಾತ'ದ ಹೊಟ್ಟೆಯಲ್ಲಿ – ಸರಕಾರಿ ಅಧಿಕಾರಿಗಳ ಸಂಬಳ, ಇಂಡಿಯಾ ಆಫೀಸಿನ ವೆಚ್ಚ, ಪೆನ್ಶನ್ ಮೊದಲಾದ 'ರಾಜಕೀಯ ಸೇವೆ'ಯೂ ಪರಕೀಯರ ಬ್ಯಾಂಕು, ಇನ್ಶ್ಯುರನ್ಸ್, ಹಡಗುಗಳು ಮೊದಲಾದ 'ಆರ್ಥಿಕ ಸೇವೆ'ಯೂ ಪರದೇಶೀಯರು ಪ್ರತ್ಯಕ್ಷವಾಗಿ ನಮ್ಮಲ್ಲಿ ತರುವ ಸಿದ್ಧವಸ್ತುಗಳೂ ಬರುತ್ತಿವೆ. ಈ ಎಲ್ಲ ಬಗೆಯ ಆಯಾತವನ್ನು ನಾವು ಕಟ್ಟುಮಾಡಬೇಕು. ಇಲ್ಲವಾದರೆ ನಮ್ಮ ಸುವರ್ಣಸಂಚಯರೂಪಿಯಾದ ಮೂಲಧನದಿಂದಲೇ ಮೇಲೆ ಹೇಳಿದ ವಿವಿಧ ಆಯಾತಗಳ ಪ್ರತಿಫಲವನ್ನು ಮುಟ್ಟಿಸುತ್ತ ಸಾಗುವುದಕ್ಕೆ ತಡೆಬಾರದೆ, ಕೆಲವುದಿನಗಳಲ್ಲಿಯೇ ನಾವು ಸಾಮೂಹಿಕವಾಗಿ ದಿವಾಳಿ ತೆಗೆಯಬೇಕಾಗುವುದು. ಇದು ಆತ್ಮಘಾತಕ ವೃತ್ತಿಯು ಇದಕ್ಕೊಂದೇ ಒಂದು ಉಪಾಯವು. ಅದೆಂದರೆ ಪರದೇಶಕ್ಕೆ ಹಲವು ಬಗೆಯಿಂದ ಹೋಗುವ ದುಡ್ಡನ್ನು–ಅದನ್ನು ಹಾಗೆ ಹೋಗಗೊಡದೆ– ನಮ್ಮ

‡ ೧೯೩೮–೩೯ರಲ್ಲಿ, ಒಟ್ಟು ನಿರ್ಯಾತವ್ಯಾಪಾರವು ೩೧೦ ಕೋಟಿ ರೂ. ಗಳದಾಗಿದ್ದರೆ, ಅದರಲ್ಲಿ ಹತ್ತಿ ಸಣಬುಗಳ ನಿರ್ಯಾತವು ೧೧೫ ಕೋಟಿ ರೂ. ಬೆಲೆಯದಾಗಿದ್ದಿತು. ಎಂದರೆ ಒಟ್ಟು ನಿರ್ಯಾತವ್ಯಾಪಾರದಲ್ಲಿ ನೂರಕ್ಕೆ ೩೭ರಷ್ಟು ಇದ್ದಿತು.

CC-0. Jangamwadi Math Collection. Digitized by eGangotri

ಲ್ಲಿಯೇ ಇರಿಸುವುದು; ಇಂಗ್ಲಿಷ್ ಅಧಿಕಾರಿಗಳ ಸಂಬಳ, ಪೆನ್ಶನ್ನು ಮೊದಲಾದವುಗಳನ್ನು ಸೊರಗಿಸುವ ಭಾರವು ಸರಕಾರದ ಮೇಲೆ ಇದೆ. ಅದೊಂದು ನಮ್ಮ ಕೈಯ್ಯಲ್ಲಿಲ್ಲವೆಂದರೂ, ಪರಕೀಯರ ಹಡಗುಗಳು, ಬ್ಯಾಂಕುಗಳು, ಇನ್ಶ್ಯುರನ್ಸ್ ಕಂಪನಿಗಳು ಮೊದಲಾದುವುಗಳಿಗೆ ಬದಲಾಗಿ ಸ್ವದೇಶೀಯ ಹಡಗು ಮೊದಲಾದುವುಗಳನ್ನು ಪುರಸ್ಕರಿಸುವುದು ನಮ್ಮೆಲ್ಲರಿಗೂ ಸುಲಭಸಾಧ್ಯವಾಗಿದೆ. ಇದಲ್ಲದೆ ಪರದೇಶಗಳಿಂದ ಬರುವ ಹಲವು ಬಗೆಯ ಸರಕುಗಳನ್ನು ಬಹಳ ಮಿತಿಯಿಂದ ಬಳಸುವುದೂ ನಮ್ಮೆಲ್ಲರ ಕೈಯಲ್ಲಿದೆ. ೧೯೩೧-೩೨ ರಲ್ಲಿ ನಮ್ಮ ದೇಶದಲ್ಲಿ ಬಂದ ಸರಕುಗಳ ಪಟ್ಟಿಯನ್ನು ನೋಡಿದರೆ, ಬಟ್ಟೆಯೊಂದಲ್ಲದೆ ಇನ್ನೂ ಹಲವು ಬಗೆಯ ಪದಾರ್ಥಗಳ ಬಗೆಗೆ ನಾವು ಮಿತೋಪಯೋಗವನ್ನು ಆಚರಿಸುವಂತಿದೆ:—

| ಸರಕುಗಳು | ಬೆಲೆ (ರೂ. ಗಳಲ್ಲಿ) |
| --- | --- |
| ಹಣ್ಣು, ಕಾಯಿಪಲ್ಲೆ | ೧,೩೪,೪೭,೦೦೦ |
| ಧಾನ್ಯ, ಬೇಳೆ ಮತ್ತು ಹಿಟ್ಟು | ೧,೧೭,೬೧,೦೦೦ |
| ಆಹಾರ ಪದಾರ್ಥಗಳು ಇ. | ೩,೪೧,೨೬,೦೦೦ |
| ಮಸಾಲೆ ಜಿನಸುಗಳು | ೨,೦೮,೨೨,೦೦೦ |
| ಸಕ್ಕರೆ | ೬,೧೬,೫೩,೦೦೦ |
| ತಂಬಾಕು | ೯೪,೩೪,೦೦೦ |
| ಎಣ್ಣೆಗಳು | ೯,೭೨,೨೬,೦೦೦ |
| ಹತ್ತಿ (ಕಚ್ಚಾಮಾಲು) | ೭,೦೩,೪೦,೦೦೦ |
| ರಾಸಾಯನಿಕ ಪದಾರ್ಥಗಳು ಮತ್ತು ಔಷಧಿಗಳು | ೪,೭೯,೦೮,೦೦೦ |
| ಕಬ್ಬಿಣದ ಒಡವೆಗಳು | ೪,೪೨,೭೪,೦೦೦ |
| ಬಣ್ಣಗಳು | ೩,೬೫,೧೪,೦೦೦ |
| ಕಾಜಿನ ಮತ್ತು ಮಣ್ಣಿನ ಪದಾರ್ಥಗಳು | ೧,೬೦,೬೮,೦೦೦ |
| ವಾಹನಗಳು | ೪,೪೮,೪೭,೦೦೦ |
| ಕುದುರೆಗಳು | ೪೦,೧೧,೦೦೦ |

ನಮ್ಮ ದೇಶದ ವ್ಯಯವಿಭಾಗದ ಎಲ್ಲಾ ಅಂಗಗಳಲ್ಲಿ ಕಠೋರವಾದ ಮಿತಿಯನ್ನಾಚರಿಸುವುದೊಂದೇ ಮದ್ದು ನಮ್ಮೀಗಿನ ಆರ್ಥಿಕಪಾರತಂತ್ರ್ಯರೋಗಕ್ಕೆ. 'ಹಿಂದುಸ್ಥಾನದ ವ್ಯಾಪಾರವು ಒಟ್ಟಿನಲ್ಲಿ ಲಾಭಕರವಾಗಿದೆ' ಎಂಬ ಕಲ್ಪಿತಕಥೆಯು ನಮ್ಮ ಆರ್ಥಿಕಸ್ವಾತಂತ್ರ್ಯದ ಸಾಧನೆಯ ಹಾದಿಯಲ್ಲಿ ದೊಡ್ಡದೊಂದು ಕೊಡ್ಡವಾಗಿದೆ. ಬಹು ವ್ಯಾಪಕಾರ್ಥದಲ್ಲಿ 'ಸ್ವದೇಶೀವ್ರತ'ವನ್ನು ರಾಷ್ಟ್ರೀಯರೆಲ್ಲರು ಆಚರಿಸುವುದೇ ನಾವು ಹಿಡಿಯಬೇಕಾದ ಹಾದಿಯಾಗಿರುತ್ತದೆ.

## ಗೆ—

( ನಾರಾಯಣ, ಶಾಂತಿನಿಕೇತನ )

ನನ್ನಿನಲಿವುಗಳ ಮುನ್ನೀರಿನಲಿ
ಮೀಯುವ ಮೀನವಿದು
ನಿನ್ನ ಹೃದಯಗಂಗಾಜಲದಲ್ಲಿಯು
ಮೀಯಲು ಕೋರಿಹುದು.

ಪೂತಪ್ರೇಮಲತಿಕಾವಿತಾನದೊ—
ಳಡಗಿದ ಕಂಪುಸುರು
ಮಾತುಮಾತಿಗೂ ಮೆಲ್ಲುಲಿಗೊಡುತಿದೆ
'ಕೂರು—ಕೂರು—ಕೂರು.'
ಹಕ್ಕಿಪಕ್ಕಿಗಳು ಹಾಡಿ ಹೇಳುತಿವೆ
'ಕೂರು—ಕೂರು—ಕೂರು;'
ಚಿಕ್ಕ ಚಿಕ್ಕೆಗಳು ನಕ್ಕು ನುಡಿಯುತಿವೆ
'ಕೂರು—ಕೂರು—ಕೂರು.'

ಭೃಂಗ—ಭ್ರಮರ—ಭೋರಂಗಿಗಳೆಲ್ಲಾ
ಭಂಗಿ—ಭಂಗಿಯಲ್ಲಿ
ಭೋರಿಡುತಿರಲು ಭೇರಿಯ ಹೊಡೆದು,
ಪ್ರೇಮನಾದವಲ್ಲಿ.
ಅಲ್ಲಗಳೆವೆನೇ ಎಲ್ಲರ ನುಡಿಯನು?
ಇಲ್ಲ—ಇಲ್ಲ—ಇಲ್ಲ!
ನಲ್ಲನಲ್ಲೆಯರ ಲಲ್ಲೆಮಾತಿನೊಳು
ನಂಬು ನನ್ನ ಸೊಲ್ಲ!



CC-0. Jangamwadi Math Collection. Digitized by eGangotri

# ಪಾಷಂಡನ ಪ್ರಾಯಶ್ಚಿತ್ತ

ಹಾಸನದ ರಾಜೇರಾಯರು, ಪ್ಯಾರೀಸ್

ಕೇಳಿ, ಕೇಳಿ,
ಮಹನಿಯರೇ ಕೇಳಿ.
ಕರ್ನಾಟಕದಾಸನು
ಮುಸುಗುಟ್ಟುತಿಹನು,
ಕೇಳಿ, ಕೇಳಿ,
ಮಹನೀಯರೇ ಕೇಳಿ.

ಹುಟ್ಟಿದ್ದು ಹಾಸನ,
ಕರ್ನಾಟಕದ ಹೃದಯಕಮಲದಲ್ಲಿ;
ಬೆಳೆದದ್ದು ಭಾಗ್ಯನಗರ,
ಕರ್ನಾಟಕದ ಬಲತಾಯ ಭಯದಲ್ಲಿ,
ಮೆರೆದುದು ಗಂಗಾಯಮುನಾ ತೀರಗಳಲ್ಲಿ,
ಇರುವುದು ಪಾಶ್ಚಾತ್ಯಪ್ರಪಂಚದಲ್ಲಿ.
ಹೇ, ಮಹನೀಯರೇ ಕೇಳಿ,
ಕರ್ನಾಟಕದಾಸನು
ಮುಸುಗುಟ್ಟುತಿಹನು.

ರನ್ನನ ಹೆಸರನು ಕೇಳಲಿಲ್ಲ.
ಪಂಪನ ಹೆಸರದು ಮೊದಲೇ ಇಲ್ಲ.
ಸೋಮೇಶ್ವರನ ಶತಕವ ತಿಳಿಯಲಿಲ್ಲ.
ಜೈಮಿನಿಯ ಝುಂಕಾರವ ಕೇಳಲಿಲ್ಲ.

ಕಾವೇರಿಯ ಸೊಗಸನ್ನು ನೋಡಿದ್ದೆ.
ಹೇಮಾವತಿಯ ದಡದಲ್ಲಿ ಹಾಯ್ದಿದ್ದೆ.
ಬೇಲೂರಿನ ಬೆಳಕನ್ನು ನೋಡಿದ್ದೆ.
ಹಳೆಯಬೀಡಿನ ಹಾಳನ್ನು ಕಂಡಿದ್ದೆ.

ಕನಕನ ಕೀರ್ತನೆಗಳ ಕಲಿಯಲಿಲ್ಲ.
ಪುರಂದರನ ಪಲ್ಲವಿಗಳ ನುಡಿಯಲಿಲ್ಲ.
ಶಂಕರನ ತತ್ತ್ವವನು ಗ್ರಹಿಸಲಿಲ್ಲ.
ಬಸವನ ಭಕ್ತಿಯ ಬೇಡಲಿಲ್ಲ.

ಕೃಷ್ಣರಾಜನ ಮೈಸೂರ ನೋಡಿದ್ದೆ.
ಬೆಂಗಳೂರಿನ ಷೋಕನ್ನು ಹೇಸಿದ್ದೆ.
ತಲಕಾಡಿನ ಮರಳಲ್ಲಿ ಆಡಿದ್ದೆ.
ತಿರುಕಣಾಂಬಿಯ ಕೆರೆಯ ಕಂಡಿದ್ದೆ.

ಕೇಳಿ, ಕೇಳಿ,
ಮಹನೀಯರೇ,
ಕರ್ನಾಟಕದಾಸನು
ಮುಸುಗುಟ್ಟುತಿಹನು.

* * *

ರಾತ್ರಿಯೆಲ್ಲಾ ನಿದ್ರೆಯಿಲ್ಲ
ಬಿದ್ದು ಬಿದ್ದು,
ಎದ್ದು ಎದ್ದು,
ಉರುಳುತಿರುವೆನು;

(೧) 'ಆಲ್ಪ' ಪರ್ವತದ ಚಳಿಗಾಳಿಯು
ಬೀಸುತಿರುವುದು.

(೨) 'ಲಾಮನ್' ಸರೋವರದ ಹಸುರು
ಮಿರುಗುತಿರುವುದು.

---

**ಟೀಪು:**—ಕೆಳಗಿನ ಸಾಲುಗಳು ಮಾತೃಭೂಮಿಗಾಗಿ ಲೇಖಕರ ಮನಸ್ಸಿನಲ್ಲೇಳುತ್ತಿರುವ ತಳಮಳಕ್ಕೆ ಸಾಕ್ಷಿಯಾಗಿವೆ. ಆ ತಳಮಳವು ಕಾವ್ಯಸಂಸ್ಕಾರವನ್ನು ಪಡೆದಿರದಿದ್ದರೂ, ಅದು ಆಭಾಸಾತ್ಮಕವಾಗಿರದೆ, ತಾನಾಗಿ ತನ್ನ ಪ್ರಾಕೃತಿಕರೂಪದಲ್ಲಿ ಹರಿದು ಬಂದಿರುವುದು ಓದುಗರಿಗೆ ತೋರದಿರದು. ಪರದೇಶಸ್ಥ ಕನ್ನಡಿಗರೆಲ್ಲರು ತಮ್ಮ ನಾಡಿಗಾಗಿ ಇದೇ ಬಗೆಯಾಗಿ ಕುದಿಯುತ್ತಿದ್ದರೆ, ಕರ್ನಾಟಕಾಂಬೆಯ ಭಾಗ್ಯದಿನಗಳು ಸಮೀಪಿಸಿದಂತೆಯೆ.
—ಸಂ. ಜ. ಕ.

(೧) ಸ್ವಿಟ್ಸರ್ಲಂಡಿನಲ್ಲಿಯ ಒಂದು ಪರ್ವತ (೨) ಲೇಕ್ ಲಾಮನ್

CC-0. Jangamwadi Math Collection. Digitized by eGangotri

ಮೋಡವಿಲ್ಲದ ಆಕಾಶದಲ್ಲಿ
ಚಂದ್ರನು ನಗುತಿರುವನು.

ಹೊರಗೆ ಇಂಪು,
ಒಳಗೆ ಹಾಳು.
ಹೊರಗೆ ಸೊಗಸು,
ಒಳಗೆ ಶೋಕ.
ಇಗೊ ಎದ್ದೆ
ಇಗೊ ಮತ್ತೆ ಬಿದ್ದೆ.
ದೇವ ನನ್ನದೇನು ತಪ್ಪೊ ?
ಹೇಳು,
ದೇವ ನನ್ನದೇನು ತಪ್ಪೊ ?
ಕನವರಿಕೆ........
ಇಲ್ಲದ ಹೆದರಿಕೆ........
ಎಲ್ಲೆಲ್ಲಿಯೂ ಪರ್ವತಗಳು,
ಕುಣಿಯುತಿರುವುವು !

ಕೊನೆಗೆ ಬೆಳಗಿನ ಕೋಳಿಯು
ಕೂಗಿತು,
ಹಸುವು ತನ್ನ ಎಳೆಯ ಕರುವನ್ನು
ಕರೆಯಿತು,
ಸಂಪಿಗೆಯ ಗಂಧವಲ್ಲಾ,
ರೋಜಿನ ಕಂಪು—
ಹೃದಯವು ತನಗೆ ತಾನೆ
ಹಾಡಲಾರಂಭಿಸಿತು.
ಅದೇನು ಹೇಳಿತು ಕೇಳಿ:—

" ಹೊಲೆಯನಾದರೇನು
ಬ್ರಹ್ಮಜ್ಞಾನವು ಬರುವುದು, ಏಳು !
ಶತ್ರುವಾದರೇನು
ಸ್ನೇಹದ ಶಾಂತಿಯ ಕಾಣುವೆ, ಏಳು !
ನಿಶ್ಶಕ್ತನಾದರೇನು,
ಆತ್ಮಶಕ್ತಿಯು ಹುಟ್ಟುವುದು, ಏಳು !
ನನ್ನ ತೊರೆದರೇನು,
ನನ್ನ ಕೀರ್ತಿಯ ಸ್ಮರಿಸುವೆ, ಏಳು....
ಏಳು, ಏಳು,
ಮಗುವೇ
ಏಳು........! "

ಕಣ್ತೆರೆದು ನೋಡಿದೆ........
ಕರ್ನಾಟಕದೇವಿಯು
ನಿಂತಿದ್ದಳು !
ಮಲೆನಾಡಿನ ಹಸುರಿನ ಸೀರೆ,
ಕೋಲಾರದ ಚಿನ್ನದ ಓಲೆ,
ಧಾರವಾಡದ ಕುಪ್ಪಸ,
ಮಂಗಳೂರಿನ ಮಾಣಿಕ್ಯ........
ತಲೆಯ ಮೇಲೆ ಗೋದಾವರಿ,
ಕಾಲಕೆಳಗೆ ನೀಲಗಿರಿ........
ಆ ಕಣ್ಣುಗಳ ಹೇಗೆ ತಾನೆ ಬಣ್ಣಿಸಲಾದೀತು !
ಅವುಗಳ ತೇಜಸ್ಸೇ ಸರ್ವತೇಜಸ್ಸು
ನೋಡಿದೆ,
ಹಾಡಿದೆ,
ಕರ್ನಾಟಕದಾಸನಾದೆ.

ಕೇಳಿ, ಕೇಳಿ,
ಮಹನೀಯರೆ ಕೇಳಿ.
ಕರ್ನಾಟಕದಾಸನು
ಮುಸುಗುಟ್ಟುತಿಹನು.
ಕೇಳಿ, ಕೇಳಿ,
ಮಹನೀಯರೆ ಕೇಳಿ.



CC-0. Jangamwadi Math Collection. Digitized by eGangotri

# ಗುಬ್ಬಿಗಳ ಸಂಸಾರ

(ಸಣ್ಣ ಕತೆ)

ಬರೆದವರು:—ಶ್ರೀ. ಕೃಷ್ಣಕುಮಾರ ಕಲ್ಲೂರ

ಸಾಹಿತ್ಯವು ಜನಜೀವನದ ಪಡಿನೆಳಲೆಂದು, ತಿಳಿದವರು ಹೇಳುವದುಂಟು. ಈ ಮಾತನ್ನೇ ಇನ್ನೂ ಸ್ವಲ್ಪ ಹಿಂಜಿ ನೋಡಿದರೆ, ಇಡೀ ಜೀವನವೇ ಸಾಹಿತ್ಯಕ್ಕೆ ಮೂಲಬಿಂಬ ವಾಗಬಹುದೆಂದು ತೋರುವದು. ಮಾನವಜೀವನದಲ್ಲಿ ಹೇಗೊ, ಹಾಗೆಯೇ ಇನ್ನುಳಿದ ಪ್ರಾಣಿಕೋಟಿಗಳ ಜೀವ ನದಲ್ಲಿಯೂ ಒಂದೊಂದು ಬಗೆಯ ರಸಸಂವಿಧಾನವಿದೆ ಯೆಂದು ಹಲವು ಸಲ ಕಂಡುಬರುವದು. ಆದರೆ, ಮಾನ ವನು ತನ್ನ ಸಂಸಾರದ ಸುಖದುಃಖಗಳ ಸಂಕೋಲೆಯಲ್ಲಿ ಸಿಕ್ಕಿಬಿದ್ದು ಅದರಿಂದ ಪಾರುಗಾಣದೆ ನರಳುತ್ತಿರುವಾಗ, ಆತನಿಗೆ ತನ್ನ ಜೀವನದ ರಸನಿಮಿಷಗಳ ಆನಂದವನ್ನೇ ಅನುಭವಿಸುವದು ಆಗದು; ಅಂತಹದರಲ್ಲಿ, ಆತ ಇನ್ನುಳಿದ ಜೀವಿಗಳ ಸುಖದುಃಖಗಳಿಗಾಗಿ ಹಿಗ್ಗು - ಕುಗ್ಗುವ ಗೋಜಿಗೆ ಹೋಗಲಾರದೆ ಇರಬಹುದು. ಆದರೂ, ಸಂಸಾರದ ಅನಂತಯಾತನೆಗಳಿಂದ ನೊಂದು ಬೆಂದು, ತಾಪಪರಿಪೂತರಾದ ರಸಜೀವಿಗಳಿಗೆ ಶೇಕ್ಸಪಿಯರನು ಹೇಳುವಂತೆ ವಿಶ್ವವೆಲ್ಲವೂ ತಮ್ಮದೇ ಒಂದು ಬಳಗವಾಗಿ ತೋರದಿರದು. ಅಂಥವರಿಗೆ ವಿಶ್ವಶಕ್ತಿಯ ಕೈತಾಲ ದೊಂದಿಗೆ ಕುಣಿಯುವ ಚಿಕ್ಕ ಚಂದ್ರಾಮರಿಂದ ಹುಲ್ಲು-ಹಣಜಿಯವರೆಗೆ ಈ ಸೃಷ್ಟಿಯ ಅಣುರೇಣುಗಳಲ್ಲೆಲ್ಲಿಯೂ ಮನುಷ್ಯಜೀವನದಷ್ಟೇ ಮಹತ್ತರವಾದ ಒಂದೊಂದು ಚರಿತ್ರಾಂಶವು ಕಂಡುಬರುವದು.

೧

ನನ್ನ ಮದುವೆ ಶಿರೂರಿನಲ್ಲಿ ನಡೆಯಿತು. – ಇದೀಗ ಹತ್ತು ಹನ್ನೆರಡು ವರ್ಷದ ಮಾತು. – ನಮ್ಮ ಬಳಗ ದೊಡ್ಡದು. ಅಂತೆಯೇ ನಮ್ಮನ್ನೆಲ್ಲ ಒಂದು ದೊಡ್ಡ ಮನೆಯಲ್ಲಿ ಇಳಿಸಿದ್ದರು. ಅದಕ್ಕೆ ಮನೆಯೆಂಬುದಕ್ಕಿಂತ, ಒಂದು ವಠಾರ, ಇಲ್ಲವೆ ವಾಡೆ ಎಂದರೆ ಹೆಚ್ಚು ಒಪ್ಪೀತು. ಅದೇನು ಅಂಥಿಂಥ ಮನೆಯಲ್ಲ; ಈಗಿನ ಪಟ್ಟಣಿಗರ ಲೆಕ್ಕ ದಂತೆ ಹತ್ತು ಹನ್ನೆರಡು ಸಂಸಾರಗಳು ಅಲ್ಲಿ ನೆಮ್ಮದಿ ಯಾಗಿ ಇರಬಹುದು. ಸಾಮಾನ್ಯವಾಗಿ, ಆ ವನೆಯಲ್ಲಿ ಒಬ್ಬಿಬ್ಬರೇಕೆ ? – ಹತ್ತು ಹನ್ನೆರಡು ಜನರು ಸಹ ಇರಲು ಹೆದರಬಹುದು. ಮೇಲುಪ್ಪರಿಗೆಗೆ ಹೋಗುವಾಗ ಜೊತೆಯಿ ಲ್ಲದೆ ಯಾರೂ ಹೋಗುವಂತಿರಲಿಲ್ಲ. ಅದರಲ್ಲಿಯೂ ಮನೆ ಬಹಳ ಹಳೆಯಕಾಲದ್ದು. ಹಳೆಯವಾಗಿ ಇಲ್ಲಿ ಹತ್ತಿ ಕಪ್ಪುಗಟ್ಟಿದ ತೊಲೆಜಂತೆಗಳು, ಒಬ್ಬೊಬ್ಬರ ತಕ್ಕೆಗೂ ಅಮರದಂಥ ಕಂಬಗಳು, ಮಾರು ಮಾರು ದಪ್ಪವಾದ ಗೋಡೆಗಳು, ಗುದ್ದು ಮೊಳದಾಳದ ಗೂಡು ಗಳು, ಜೇಡರ ಹುಳುಗಳ ಜಾಳಿಗೆಗಳಿಂದೊಪ್ಪುವ ಮೂಲೆ ಗಳು, ಮಸುಕುಗತ್ತಲೆಯ ಕೋಣೆಗಳು, ಇವೆಲ್ಲ ಆ ಮನೆಗೆ ಒಂದು ಬಗೆಯ ಭೀಕರತೆಯನ್ನುಂಟುಮಾಡಿದ್ದವು. ಅಲ್ಲದೆ, ಭವ್ಯವಾದ ಅಂಗಳ, ವಿಶಾಲವಾದ ಹಿತ್ತಲು, ಆ ಹಿತ್ತಲ ತುಂಬಾ ತರಗೆಲೆಗಳ ತಳಿಹಾಕುವ ಒಂದೆರಡು ಹುಣಿಸೆ – ಬೇವಿನ ಮರಗಳು, ಹಿತ್ತಲಗೋಡೆಯಾಚೆಗಿನ ಅಗಳತ, ಅದಕ್ಕೆ ಹೊಂದಿ ಅರ್ಧ ಹಾಳಾಗಿ ನಿಂತ ಹೂದೆ –ಇವುಗಳೆಲ್ಲ ಆ ಮನೆಯ ಭೀಷಣತೆಗೆ ರಂಗು ಹೊಯ್ದ ದಂತೆ ಇದ್ದುವು. ಇರುಳು ಮಲಗಿಕೊಂಡರೆ, ಜಂತೆಗಳ ಲ್ಲೋಡಾಡುವ ಇಲಿಗಳ ಕಿರಿಚಾಟದಿಂದಲೂ, ಅವುಗಳ ಓಡಾಟಕ್ಕೆ ಉದುರುವ ಮಾಳಿಗೆಯ ಮಣ್ಣಿನ ಸಪ್ಪಳ ದಿಂದಲೂ, ಮೂಲೆ ಮೂಲೆಗಳಲ್ಲೆಲ್ಲ ಮನೆಮಾಡಿ ಕೊಂಡಿದ್ದ ಹಲ್ಲಿಗಳ ಲೊಚಲೊಚ ಶಬ್ದದಿಂದಲೂ, ಹಿತ್ತಲ ಗಿಡಗಳಲ್ಲಿ ನೆಲೆನಿಂತ ತೊಗಲಬಾವುಲಿಗಳ ಚೀರಾಟ ದಿಂದಲೂ, ಅಲ್ಲಿ ಇದ್ದಷ್ಟು ದಿನವೆಲ್ಲ ನಿದ್ದೆಗೇಡಾದ ಸಮ್ಮೆ ದೆಗಳು ಬರೀ ಡವಡವಿಸುತ್ತಿರುವದೇ! ಇಂಥ ರೌದ್ರ ನಿವಾಸವು ನಮಗೆ ಮದುವೆಯ ಮನೆಯಾಗಿತ್ತು!

೨

ನಾವು ಇಳಕೊಂಡ ಆ ಮನೆಗೆ ಒಂದು ಮೇಲುಪ್ಪ ರಿಗೆ, ಆದರ ಮೊಗಸಾಲೆಯ ಮುಂಬದಿಗೆ ಒಂದು ಲೋವಿ.

CC-0. Jangamwadi Math Collection. Digitized by eGangotri

ಆದರ ಚಿಟ್ಟಿನ ಒಳಮಗ್ಗಲು ಒಂದು ಬಿರುಕಿನಲ್ಲಿ ಒಂದು ಗುಬ್ಬಿಯ ಜೋಡು ಮನೆ ಮಾಡಿಕೊಂಡಿದ್ದಿತು. ಆ ಗುಬ್ಬಿಗಳಿಗೆ ಆದೇ ಹೊಸದಾಗಿ ಹುಟ್ಟಿದ ಎರಡು ಮಕ್ಕಳು. ಅವುಗಳಿಗಾಗಿ ಆ ಗುಬ್ಬಿಗಳೆರಡೂ ಮೆತ್ತನ್ನ ಹುಲ್ಲು ಕಡ್ಡಿಗಳಿಂದ ಸೊಗಸಾದ ಗೂಡನ್ನೊಂದು ಕಟ್ಟಿದ್ದವು.

ಆ ಮನೆಗೆ ಹೋದ ದಿನವೇ ಆ ಗುಬ್ಬಿಗಳ ಸಂಸಾರವು ನನ್ನ ಮನವನ್ನೆಳೆಯಿತು. ನನ್ನ ಬಾಳುವೆಯ ಗಾಳಿ ಗೋಪುರಕ್ಕೆ ಕಳಸವನ್ನಿಡುತ್ತಲಿದ್ದ ನನಗೆ ಆಗ ಎಲ್ಲ ಬಗೆಯ ಸಂಸಾರವೂ ಒಂದೊಂದು ಸೊಬಗಿನ ಬೀಡೆಂಬಂತೆ ಎನಿಸುತ್ತಿದ್ದಿತು. ಆ ಗುಬ್ಬಿಗಳ ಸಂಸಾರವೂ ನನ್ನ ಹರೆಯದ ಸವಿಗನಸುಗಳಿಗೆ ಬಣ್ಣ ಬರೆಯುವಂತೆ ತೋರಲು ನಾನು ಅವುಗಳ ಕಾರ್‍ಯಕಲಾಪಗಳನ್ನು ಕಣ್ಮನಗಳು ತಣಿಯುವಂತೆ ನೋಡಿ ನೋಡಿ ನಲಿಯುತ್ತಿದ್ದೆ. ಹಿರಿಯ ಗುಬ್ಬಿಗಳು ತಮ್ಮ ಮರಿಗಳನ್ನು ಲಲ್ಲೆಗೈಯುವದು, ಅವಕ್ಕೆ ಗುಟುಕು ಕೊಡುವದು, ಅವನ್ನು ಮುಂಡಾಡಿ ಸಂತೈಸುವದು, ಅವುಗಳಿಗಾಗಿ ಹೊಸ ಹೊಸ ತಿನಿಸನ್ನು ತಂದುಕೊಡುವದು ಮೊದಲಾದ್ದನ್ನೆಲ್ಲ ನೋಡುತ್ತಿದ್ದ ನನಗೆ, ಅವುಗಳ ಸಂಸಾರವು ಒಂದು ಮನುಷ್ಯಸಂಸಾರದಂತೆಯೇ ತೋರತೊಡಗಿತು.

ಹಿರಿಯ ಗುಬ್ಬಿಗಳೆರಡೂ ತಮ್ಮತಮ್ಮೊಳಗೆ ಚಿಲಿಪಿಲಿಗುಟ್ಟುತ್ತಿರುವಾಗ – ಗಂಡಹೆಂಡಿರಾದ ಮನುಷ್ಯರಿಬ್ಬರು "ನಾನು ಕಚೇರಿಗೆ ಹೋಗಬೇಕು; ಬೇಗ ಅಡಿಗೆ ಮಾಡು."–"ಸರಿ, ಪೇಟೆಯಿಂದ ಕಾಯಿಪಲ್ಯವನ್ನೆ ತರದಿದ್ದರೆ ಅಡಿಗೆ ಏನು ಮಾಡಲಿ, ನನ್ನ ತಲೆ "–"ಆಗಲಿ; ಹಾಗಾದರೆ ಪೇಟೆಯಿಂದ ಬರುವಾಗ ಮಗುವಿಗೆ ಏನು ತರಲಿ."–"ಹೌದು, ನನ್ನ ಕೂಸಿಗೆ ಮೊನ್ನೆ ನೋಡಿದ್ದ ಜೇನು ತೆಗೆದುಕೊಂಡು ಬರ್ರಿ"....ಎಂದು ಮುಂತಾಗಿ ಮುದ್ದುಮಾತಾಡುತ್ತಿರುವಂತೆ ನನಗೆ ಎನಿಸುತ್ತಿತ್ತು. ನೋಡುತ್ತ ನಿಂತಿರುವಂತೆ, ಅದಾವದೋ ಒಂದು ತನ್ಮಯತೆಯು ನನ್ನ ತನುವಿನಲ್ಲಿಳಿಯಲು, ನಾನೇ ಆ ಗಂಡು ಗುಬ್ಬಿಯಂತೆಯೂ, ನನ್ನ ಕನಸುಗಳ ರಾಣಿಯಾಗಿ– ಬೆಳಗಾದರೆ ನನ್ನ ಕೈಹಿಡಿಯಲಿರುವವಳೇ ಆ ಹೆಣ್ಣು ಗುಬ್ಬಿಯಂತೆಯೂ, ನಮ್ಮಿಬ್ಬರ ಭಾಗ್ಯದ ಬೆಳಕಿನಂತೆ ಮುಂದೆ ಹುಟ್ಟಿ ಬರಲಿರುವ ನಮ್ಮ ಮಕ್ಕಳೇ ಆ ಚಿಕ್ಕ ಗುಬ್ಬಿಮರಿಗಳಂತೆಯೂ ಭಾವನೆಯಾಗಲು, ನನ್ನ ಹೃದಯವು ತನ್ನಲ್ಲಿ ತಾನೇ ನಲಿದಾಡುವದು.

೩

ನಾವು ಶಿರೂರಿಗೆ ಹೋದ ಮರುದಿನ ನಾನು, ಅಪ್ಪಣ್ಣ, ಅನಂತ, ನಮ್ಮ ಅಬಚಿಯ ಗಂಡ ಶೇಷಪ್ಪ, ನನ್ನ ಕಕ್ಕನ ಮಗ ಲಕ್ಷ್ಮಣ, ನನ್ನ ಹಿರಿಯ ಭಾವ ವೆಂಕಟರಾಯ ಇಷ್ಟು ಜನವೆಲ್ಲ ಸೇರಿ ಮೇಲಟ್ಟದ ಮೊಗಸಾಲೆಯಲ್ಲಿ ಮಲಗಿಕೊಂಡಿದ್ದೆವು. ವಾಡಿಕೆಯಂತೆ ಇಲಿ-ಹಲ್ಲಿ-ತೊಗಲಬಾವುಲಿಗಳ ತೊಂದರೆಯೆಲ್ಲವೂ ಸಾಗಿಯೆ ಇತ್ತು. ಆದರೂ ಹತ್ತು ತರದ ಗಡಿಬಿಡಿಯಿಂದ ದಣಿದ ಕಾರಣ ಎಲ್ಲರಿಗೂ ಗಾಢನಿದ್ರೆ. ಜಿದ್ದುಕಟ್ಟಿದಂತೆ ಒಬ್ಬರಿಗಿಂತ ಒಬ್ಬರು ಹೆಚ್ಚಾಗಿ ಗೊರಕೆ ಹೊಡೆಯುವವರೇ. ಆದರೆ, ನಾಳೆ ನನ್ನ ಸಂಸಾರಸ್ವರ್ಗದ ಶಚಿದೇವಿಯಾಗಬೇಕಾದವಳ ಚಿಂತನೆಯಲ್ಲಿ ತೊಡಗಿದ ನನಗೆ ಮಾತ್ರ ಉಳಿದವರಷ್ಟು ಬೇಗ ನಿದ್ರೆ ಬಾರದಿದ್ದುದು ಸ್ವಭಾವಿಕವೇ ಸರಿ. ಆದರೂ ನಡುರಾತ್ರಿಗೆ ಹಾಯಾಗಿ ತನ್ನಷ್ಟಕ್ಕೆತಾನೇ ನಿದ್ದೆ ಹತ್ತಿಬಿಟ್ಟಿತು. ನಡುವೆ ಅಕಸ್ಮಾತ್ತಾಗಿ ಎಚ್ಚರಿಯುವ ಹೊತ್ತಿಗೆ ನನ್ನ ಹಗಲುಗನಸುಗಳ ಅಧಿಷ್ಠಾತೃದೇವಿಯಾದ ನನ್ನ ಭಾವೀರಾಜ್ಞಿಯು ನನ್ನ ನಿದ್ದೆಗನಸುಗಳನ್ನು ಸವಿಗೊಳಿಸುತ್ತಿದ್ದಳು. ಆಗ ಈ ಲೋಕದ ಬಂಧನವನ್ನೆಲ್ಲ ಮೀರಿನಿಂತ ಅಮರನಂತೆ ನಾನು ಅದಾವುದೋ ಒಂದು ಆನಂದನಿಕೇತನದಲ್ಲಿ ವಿಹರಿಸುತ್ತಿದ್ದೆ; ಅಂತೆ ತಿರುಗಿ ಬೇಗ ನಿದ್ರೆ ಹತ್ತಿದಾಗಿತ್ತು.

೪

ಚಾವಡಿಯಲ್ಲಿ ಎರಡು ಹೊಡೆಯಿತು. ಲೋವಿಯ ಚಪ್ಪರದಲ್ಲಿ ಆರ್ತ ಚೀತ್ಕಾರವೊಂದು ಕೇಳಬಂತು. ಕನಸಿನಲ್ಲಿ ಹೆದರಿಕೊಂಡವರಂತೆ ಎಚ್ಚತ್ತು ಗಡಬಡಿಸುವಾಗ ನನಗೆ ಎಲ್ಲವೂ ಒಂದು ಕಲಸುಮಲಸಿನ ಹಳವಂಡದಂತೆ ತೋರಿತು. ನಿಚ್ಚಳವಾಗಿ ಎಚ್ಚರವಾಗುವ ಹೊತ್ತಿಗೆ ಆ ಆರ್ತ-ಸ್ವರವು ಕರುಳೊಡೆಯುವಂತೆ ಡಬಡಬಿಯನ್ನುತ್ತಿದ್ದ ನನ್ನ ಎದೆಯನ್ನು ಇನ್ನೂ ಹೆಚ್ಚಾಗಿ ತಟ್ಟಹತ್ತಿತು. ಚಟ್ಟನೆದ್ದು ಕುಳಿತು ತಲೆದಿಂಬುದೆಸೆಯ ದೀಪವನ್ನು ದೊಡ್ಡದು ಮಾಡಿ ನೋಡಿದೆ. ಆ ಚೀತ್ಕಾರವು ಆ ಗುಬ್ಬಿಗಳ ಗೂಡಿನಿಂದ ಬರುತ್ತಿದ್ದಿತು. ಆಗ ನನ್ನ ನಾಡಿಗಳಲ್ಲೆಲ್ಲ ಒಂದು ತೆರದ ಗಾಬರಿಯು ತುಂಬಿ ಹರಿಯುತ್ತಿರುವಂತೆ ತೋರಿತು. ಅಂತಹದರಲ್ಲಿಯೇ, ನಡುಗುವ ಕೈಗಳಿಂದ ದೀಪವನ್ನು ಎತ್ತಿಹಿಡಿದು ನೋಡಿದೆ; ಕಾಲ



CC-0. Jangamwadi Math Collection. Digitized by eGangotri

ಕರಾಲವಾದ ಘಟಸರ್ಪವೊಂದು, ಅಖಂಡವಾಗಿ ಕಿರಿಚುತ್ತಿರುವ ಗಂಡುಗುಬ್ಬಿಯನ್ನು ಬಾಯಲ್ಲಿ ಕಚ್ಚಿಕೊಂಡು ಲೋವಿಯ ದುಂಡುಕಟ್ಟಿನ ಗುಂಟ ಮೆಲ್ಲನೆ ಹಿಂದಕ್ಕೆ ಸರಿದು ಹೋಗುತ್ತಲಿತ್ತು. ಹಾವು ಅಂಥಿಂಥದಲ್ಲ; ನಾಗರ ಹಾವು. ಒಂದು ಒಂದೂವರೆ ಮಾರು ಉದ್ದವಾಗಿತ್ತು. ಒನಕೆಯಂತೆ ದಪ್ಪವಾಗಿ ಕರ್ರಗೆ ಮಿರಿ ಮಿರಿ ಮಿಂಚುತ್ತಿತ್ತು. ಮೈಮೇಲೆ ಬೆರಳುದ್ದಾದ ಬಿರುಸಾದ ನಿಡುಗೂದಲು. ಬೊಗಸೆಯಗಲದ ಹೆಡೆ. ದೀಪದ ಬೆಳಕಿಗೆ ಥಳ ಥಳ ಹೊಳೆಯುವ ಕಣ್ಣಿನ ವಕ್ರವಾದ ಉಗ್ರದೃಷ್ಟಿಯು ನನ್ನ ಕೈಕಾಲುಗಳನ್ನು ಇದ್ದಲ್ಲಿಯೇ ತಣ್ಣಗೆ ಮಾಡಿತು. ನಡುಗುವ ಕೈಯಿಂದ ದೀಪವು ಒಮ್ಮಿಂದೊಮ್ಮೆ ಜಾರಿ ಬಿದ್ದು ಆರಿಹೋಯಿತು; ಆದರೂ ಇದ್ದುದರಲ್ಲಿಯೇ ಸಾವರಿಸಿಕೊಂಡು ನಾನು ಒದಿಯಲ್ಲಿ ಮಲಗಿದವರನ್ನೆಲ್ಲ ಒಡಿದೆಬ್ಬಿಸಿದೆ.

ಗಂಡುಗುಬ್ಬಿಯನ್ನು ಹಾವು ಕಚ್ಚಿಕೊಂಡು ಹೋದದ್ದರಿಂದ, ಹೆಣ್ಣುಗುಬ್ಬಿಯ ಸಂತಾಪಕ್ಕೆ ಸೀಮೆಯಿಲ್ಲದಾಗಿತ್ತು. ಅದು ತೆರಪಿಲ್ಲದೆ ಹಾಹಾಕಾರ ಮಾಡುತ್ತ ದಿಕ್ಕು ದಿಕ್ಕು ಹಾಯುತ್ತಿತ್ತು. ಹಾವಿನ ಬಾಯಲ್ಲಿ ತನ್ನ ಜೀವನದ ಜೊತೆಗಾರ ಕಿರುಚುತ್ತಿದ್ದಾನೆ. ಗೂಡಿನಲ್ಲಿ ತನ್ನಕ್ಕರೆಯ ಚಿಕ್ಕ ಮಕ್ಕಳೆರಡು ಚಿಲಿಪಿಲಿಗುಟ್ಟುತ್ತಿವೆ. ಮೇಲೆ ತನ್ನ ಪ್ರಾಣಸಂಕಟವೊಂದು. ಹೀಗೆ ಕಂಗೆಟ್ಟು ಕತ್ತಲಲ್ಲಿ ಅತ್ತಿತ್ತ ಸುತ್ತಾಡುವಾಗ ಆ ಹೆಣ್ಣು ಗುಬ್ಬಿಯು ಎಷ್ಟೋ ಸಲ – ಹೌಹಾರಿ ಕುಳಿತ ನಮ್ಮ ಮೈಕೈಗೆ ತಾಕಿ ತಡವರಿಸುತ್ತಿತ್ತು. ಆ ಗಲಭೆಯನ್ನು ನೋಡಿ ನಮ್ಮೆಲ್ಲರಿಗೂ ಗಾಬರಿ ಇಮ್ಮಡಿಸಿಬಿಟ್ಟಿತು. ಆಗೀಗೊಮ್ಮೆ ಬೆಂಕಿಯ ಕಡ್ಡಿಗಳನ್ನು ಕೊರೆದು ಬೆಳಕು ಮಾಡಿಕೊಳ್ಳುತ್ತ ನಾವೆಲ್ಲರೂ ಸಮ್ಮ ಜೀವರಕ್ಷಣೆಯ ಹವಣಿಕೆಯಲ್ಲಿದ್ದೆವು.

ಇಷ್ಟರಲ್ಲಿ ಮೇಲಿನವರ ಗದ್ದಲವನ್ನು ಕೇಳಿ ಕೆಳಗಿನವರು ದೀಪ ಹೆಚ್ಚಿಕೊಂಡು ಮೇಲೆ ಬರುವದರಲ್ಲಿದ್ದರು. ಆದರೆ ಅದಕ್ಕೂ ಮೊದಲೇ ನಮ್ಮ ಕಾಮಿ (ಬೆಕ್ಕು) ಯಾವ ಮಾಯದಿಂದಲೋ ಅಲ್ಲಿಗೆ ಬಂದು ದಿಕ್ಕೆಟ್ಟು ಅಲ್ಪರಿಯುತ್ತ ಮೊಗಸಾಲೆಯ ತುಂಬೆಲ್ಲ ಸುತ್ತಾಡುತ್ತಿದ್ದ ಹೆಣ್ಣುಗುಬ್ಬಿಯನ್ನು ಹಾರಿ ಹಿಡಿದುಬಿಟ್ಟಿತ್ತು. ಕೆಳಗಿನವರು ದೀಪ ತೆಗೆದುಕೊಂಡು ಮೇಲೆ ಬರುವದಕ್ಕೂ, ಹೆಣ್ಣು ಗುಬ್ಬಿಯನ್ನು ಬಾಯಲ್ಲಿ ಕಚ್ಚಿಕೊಂಡು ಕಾಮಿ ಕೆಳಗೋಡುವದಕ್ಕೂ ಗಂಟೇ ಬಿತ್ತು. ಎಲ್ಲರೂ ಸೇರಿ ಕಾಮಿಯನ್ನು ಹಿಡಿದು, ಹೊಡೆದು, ಬಡಿದು ಗುಬ್ಬಿಯನ್ನು ಬಿಡಿಸಿಕೊಳ್ಳುವ ಹೊತ್ತಿಗೆ ಅದು ಗುಬ್ಬಿಯನ್ನು ಅರ್ಧಕ್ಕರ್ಧ ತಿಂದೇಬಿಟ್ಟಿತ್ತು. ಇತ್ತ ನಾವೆಲ್ಲ ನೋಡುತ್ತಿರುವಂತೆಯೇ, ಗಂಡುಗುಬ್ಬಿಯನ್ನು ಹಿಡಿದುಕೊಂಡು ಹೊರಟ ಹಾವು, ಗುಬ್ಬಿಯ ಗೂಡಿನಿಂದ ಹತ್ತೆಂಟು ಮೊಳ ದೂರದಲ್ಲಿದ್ದ ಗುದ್ದಿನಲ್ಲಿ ಹೊಕ್ಕುಬಿಟ್ಟಿತು. ಹಾವು ಗುದ್ದಿನ ಒಳವೊಳಗೆ ಸೇರಿ ಹೋದಂತೆ, ಅದರ ಬಾಯಲ್ಲಿದ್ದ ಗುಬ್ಬಿಯ ಕರುಣಾಸ್ವರವು ಮಂದಮಂದವಾಗಿ ಕುಂದುತ್ತ ಕೊನೆಗೊಮ್ಮೆ ಸಿಂತುಹೋಯಿತು.

೫

ಇತ್ತ ಆ ಗುಬ್ಬಿಗಳ ಚಿಕ್ಕಮಕ್ಕಳೆರಡೂ ಹುಟ್ಟು ಹುಟ್ಟುತ್ತಲೆ ಅನಾಥವಾಗಿ, ತಮ್ಮ ಪ್ರೇಮಕ್ಕೆ ಆಸರೆ ಗೊಲೇ ಇಲ್ಲದಾಗಲು, ಆದೆಷ್ಟೊ ಹೊತ್ತು ಹಲುಬಿ ಹಲುಬಿ, ಅತ್ತತ್ತು ದಣಿದು, ಸುಮ್ಮನೆ ಬಿದ್ದುಕೊಂಡವು.

೬

ನಮಗೆಲ್ಲ ನಮ್ಮ ನಮ್ಮ ಜೀವದ ಭಯ. ಆಗಳವನ್ನು ಗಳನ್ನಾರು ಕೇಳಬೇಕು! ಬಿಟ್ಟ ಕೆಲಸವನ್ನೆಲ್ಲ ಬಿಟ್ಟು ಅಪ್ಪಣ್ಣನೂ ವೆಂಕಟರಾಯನೂ ಹೋಗಿ, ಆ ಅಪರಾತ್ರಿಯಲ್ಲಿ ಒಬ್ಬ ಮಾಂತ್ರಿಕನನ್ನು ಹುಡುಕಿಕೊಂಡು ಬಂದರು. ಮಾಂತ್ರಿಕನು ಮನೆತನಕ ಬಂದಮೇಲೆ ಅದು ದೇವರ ಹಾವೆಂದೂ, ಅದನ್ನು ತಾನು ಹಿಡಿಯಲಾಗದೆಂದೂ, ಅದು ಇನ್ನೊಮ್ಮೆ ಯಾರ ಕಣ್ಣಿಗೂ ಬೀಳದಂತೆ ತಾನು ಮಂತ್ರಬಂಧನವನ್ನು ಮಾಡಬಲ್ಲೆನೆಂದೂ ಹೇಳಿ, ಏನೇನೋ ಒಟಗುಟ್ಟುತ್ತ, ಅತ್ತಿತ್ತ ನಾಲ್ಕೆಂಟು ಗೆರೆ ಹಾಕಿದಂತೆ ಮಾಡಿ, ನಮ್ಮ ನಾಲ್ಕೈದು ಹಿಡಿ ಅಕ್ಕಿಯ ಕಾಳು ಹಾಳುಮಾಡಿ, ಮೇಲೆ ಒಂದು ರೂಪಾಯಿ ಕಿತ್ತುಕೊಂಡು ಹೊರಟು ಹೋದನು.

ಆದರೆ ನಮ್ಮದು ಮನುಷ್ಯ ಜೀವ! ಸುಮ್ಮನೆ ಹೇಗೆ ಕುಳಿತೀತು? ನಮ್ಮ ಹೆದರಿಕೆ ನಮಗೆ. ಆ ಮಾಂತ್ರಿಕನು ಬಂದುಹೋದ ಮೇಲೆಯೂ ನಮಗೆ ಜೀವದಲ್ಲಿ ಜೀವ ಎಲ್ಲ. ಆಗಿನಿಂದಲೇ ಎರಡು ಮೂರು ಕಂದೀಲು ಹಚ್ಚಿಕೊಂಡು, ಎಲ್ಲರೂ ಇಸ್ಪೇಟು ಆಡುತ್ತ ಬೆಳತನಕ ಕುಳಿತುಬಿಟ್ಟೆವು.

CC-0. Jangamwadi Math Collection. Digitized by eGangotri

ಸಸುಕು ಹರಿಯುವ ಸಮಯ. ನನ್ನ ತಾಯಿ ಬಂದು "ಸುರಗಿ ಎರಕೊಳ್ಳಲು ತಡವಾಯಿತು – ಈಗ ಬೀಗರು ಬಂದುಬಿಡುತ್ತಾರೆ – ಎಲ್ಲದಕ್ಕೂ ನಾನೇ ಬಡಕೊಳ್ಳ ಬೇಕು – ಒಬ್ಬರೂ ಕಿವಿಯ ಮೇಲೆ ಹಾಕಿಕೊಳ್ಳುವದಿಲ್ಲ- ಹೀಗಾದರೆ ನಾನೇ ಎಷ್ಟೆಂತ ಸಾಯಲಿ" – ಎಂದು ಮೊದ ಲಾಗಿ ಎಲ್ಲರ ಮೇಲೆಯೂ ಹರಿಹಾಯ್ದು ಹೋದರು. ಅಕ್ಕ ಬಂದು 'ಆರತಿಗೆ ತಡವಾಗುವದು - ಬೇಗನೇಳು' ಎಂದು ಬಲುಮೆ ಮಾಡಿದಳು. ಆದರೆ ಹೊತ್ತು ಹರೆ ಯುತ್ತ ಬಂದಂತೆ ಇಸ್ಪೇಟಿನಸಲ್ಲಿ ಹೆಚ್ಚು ಹೆಚ್ಚು ತಲ್ಲೀನ ರಾಗುತ್ತಲಿದ್ದ ನಾವು, ಅವರಿಬ್ಬರಸ್ನೂ ಹೂ ಹೂ ಎಂದು ಹೇಳಿ ಹಿಂದಕ್ಕಟ್ಟಿ ಬಿಟ್ಟೆವು. ನನಗಂತೂ ಅಂದಿನ ಆಟದಲ್ಲಿ ಇಲ್ಲದ ಹುರುಪು. ಏಕೆಂದರೆ ನಾನೇ ಮುಂದಾಳಾಗಿ ಅಪ್ಪಣ್ಣನ ಪಾರ್ಟಿಯ ಮೇಲೆ ನಾಲ್ವತ್ತೆರಡು ಹೊರಿಸಿ ಬಿಟ್ಟಿದ್ದೆ.

ಹೀಗೆ ನಾವೆಲ್ಲರು ಸಮ್ಮಾಟದ ರಂಗಿನಲ್ಲಿಯೇ ಗುಂಗಾ ಗಿ ಕುಳಿತಾಗ ಗುಬ್ಬಿಯ ಗೂಡಿನಿಂದ ಮತ್ತೆ ಚೀತ್ಕಾರ! ಬೆಚ್ಚಿಬಿದ್ದು ಎಲ್ಲರೂ ನೋಡುವ ಹೊತ್ತಿಗೆ ಅದೇ ಹಾವು! ಅದೇ ಭಯಾನಕ ದೃಶ್ಯ! ಮತ್ತೆ ಆ ಹಾವು ಮೆಲ್ಲನೆ ಲೋವಿಯ ಗುಂಟ ಹರಿದು ಬಂದು ಆ ಗುಬ್ಬಿಯ ಗೂಡಿ ನಲ್ಲಿ ಹೆಡೆಯನ್ನು ಸೇರಿಸಿ, ಮರಿಗಳನ್ನು ಹಿಡಿದುಕೊಳ್ಳು ವದರಲ್ಲಿತ್ತು. ಅದನ್ನು ಕಂಡು ಎಲ್ಲರ ಆಟವು ಮುಗಿದೇ ಹೋಯಿತು. ಎಲ್ಲರಿಗೂ ದಿಗ್ಭ್ರಮೆ. ನೀ ಹೊಡಿ, ನಾ ಹೊಡಿ ಎನ್ನುವದರೊಳಗೆ ಹಾವು ಒಂದು ಮರಿಯನ್ನು ಹಿಡಿದುಕೊಂಡು ಮತ್ತೆ ತನ್ನ ಹೋರನ್ನು ಸೇರಿಕೊಂಡಿತು. ಎಲ್ಲರೂ ಬರೀ ಮಾತನಾಡಿದೆವೇ ಹೊರ್ತು ಎದ್ದು ಹೋಗಿ ಹಾವನ್ನು ಹೊಡೆಯುವಷ್ಟು ನೀರು ಒಬ್ಬ ನಲ್ಲಿಯೂ ಇಲ್ಲ. ಕೊನೆಗೆ 'ಮಾಂತ್ರಿಕ ದೇವರ ಹಾವೆಂದು ಹೇಳಲಿಲ್ಲವೇ; ಅದನ್ನು ಹೇಗೆ ಹೊಡೆಯು ವದು?' ಎಂದು ಒಬ್ಬರಿಗೊಬ್ಬರು ಸಮಾಧಾನ ಹೇಳಿ ಕೊಂಡು ಸುಮ್ಮನಾದೆವು.

ಹಾವು ಗೂಡಿನೊಳಗಿಂದ ಒಂದು ಮರಿಯನ್ನು ಹಿರಿ ಯುವಾಗ, ಇನ್ನೊಂದು ಮರಿಯೂ ಗೂಡಿನಿಂದ ಜಾರಿ ಹೊರಗೆ ಬಿದ್ದು ಪ್ರಾಣಸಂಕಟದಿಂದ ಒದೆದಾಡಹತ್ತಿತು. ಮೂರು ಜೀವಿಗಳ ಸಾವನ್ನು ಕಂಡು ಬೇಸರಗೊಂಡ ನನ್ನ ಕರುಳು ಆ ಮರಿಯ ತೊಳಲಾಟದಿಂದ ಮತ್ತೂ ಕಳವಳಿಸಿತು. ಒಂದು ಬಾಳೆಯ ದೊನ್ನೆಯಲ್ಲಿ ಆ ಮರಿ ಯನ್ನು ಮೆಲ್ಲನೆ ಎತ್ತಿ ಮಲಗಿಸಿ ಸ್ವಲ್ಪ ಹಾಲನ್ನು ಹಾಕಿ ಇಟ್ಟೆನು. ಪಾಪ! ತನ್ನ ಕರುಳುಬಳ್ಳಿಯೇ ಕತ್ತ ರಿಸಿ ಹೋಗಿರಲು, ಕಮರುವ ಹೀಚಿನಂತಿದ್ದ ಆ ಮರಿಗೆ ನಮ್ಮ ಆರೈಕೆಯು ವಿಷವಾಯಿತೋ ಅಮೃತವಾ ಯಿತೋ – ಯಾರು ಹೇಳಬೇಕು?

೭

ಅಷ್ಟೊತ್ತಿಗೆ ನನ್ನ ತಾಯಿ – ಅಕ್ಕ ಮತ್ತೊಮ್ಮೆ ಬಂದು ಬಲವಂತದಿಂದ ಎಬ್ಬಿಸಿಕೊಂಡು ಹೋದರು. ಮುಂದೆ ಸುರಗಿ – ಪುಣ್ಯಾಹವಾಚನ – ಆರತಿಅಕ್ಷತೆಗ ಳೆಲ್ಲ, ಯಥಾಕ್ರಮವಾಗಿ ಸಾಂಗವಾದವು. ಮದುವೆಯ ಪ್ರಮೋದವು ಮೈತುಂಬಿದಂತಿದ್ದ ನಾವೆಲ್ಲರು ನಮ್ಮ ನಮ್ಮ ಸಂತೋಷದಲ್ಲಿ ಈಸುತ್ತಿದ್ದೆವು. ಆದರೆ ಸರಿಯಾಗಿ ಅಕ್ಕಿಯಕಾಳು ಬೀಳುವ ಹೊತ್ತಿಗೆ ಸುದ್ದಿ ಬಂತು-ಅದೂ ಒಂದು ಮರಿಯು ಹಾಲಿನ ದೊನ್ನೆಯಲ್ಲಿಯೇ ಪ್ರಾಣ ನೀಗಿತೆಂದು. ಅಂತೂ, ಹೀಗೆ ಹನ್ನೆರಡು ತಾಸಿನ ಅವಧಿ ಯಲ್ಲಿ ಆ ಗುಬ್ಬಿಯ ಸಂಸಾರದ ಮೂಲೋತ್ಪಾಟನ ವಾಗಿಬಿಟ್ಟಿತೆಂದು ಹೇಳಿದರೆ, ಇದೂ ಒಂದು ಕಟ್ಟಿದ ಕತೆ ಯಂತೆ ತೋರುವದು. ಆದರೂ ಆ ಸಂಗತಿಯು ನನ್ನ ಮದುವೆಯ ಕಾಲದಲ್ಲಿ ನಡೆದ ಪ್ರತಿಯೊಂದು ಸಂಗತಿ ಯಂತೆ ಸತ್ಯಸತ್ಯವಾದ ಮಾತಾಗಿದೆ.

* * * *

ಹೊಸ ಸಂಸಾರದ ಹೊಸ್ತಿಲಲ್ಲಿ ಕಾಲಿಡುತ್ತಿದ್ದ ನನ್ನ ಮನೆಯಲ್ಲಿ ಅಂದು ಮದುವೆಯ ಮಾಂಗಲ್ಯ ನಡೆದಾಗ ಆ ಗುಬ್ಬಿಗಳ ಸಂಸಾರದಲ್ಲಿ 'ಅಂತಕನ ಕೋಲಾಹಲ'ವು ನಡೆದು ಹೋಯಿತು.

* * * *

ಇದೀಗ ನನಗೆ ಚಿನ್ನರನ್ನದಂತಹ ಎರಡು ಮಕ್ಕಳಿವೆ. ನಮ್ಮಿಬ್ಬರಿಗೂ ಆ ಮಕ್ಕಳೆಂದರೆ ಹೆಚ್ಚಿನ ವ್ಯಾಮೋಹ. ಅವುಗಳಿಂದಲೇ ನಮ್ಮ ಸಂಸಾರದಲ್ಲೆಲ್ಲೆಲ್ಲಿಯೂ ಸುಖ ಸಂತೋಷಗಳು ಓಲಾಡುತ್ತಿವೆ. ನಮ್ಮ ಬಾಳ್ವೆಗೆ ಇಂಥದು ಕಡಮೆ ಎಂಬ ಮಾತೇ ಇಲ್ಲ. ದುಃಖವೆಂದರೆ ಏನೋ! – ಎಂಬಂತೆ ನಾವಿದ್ದೇವೆ. ಈ ಜಗತ್ತಿನಲ್ಲಿ ನಮ್ಮಂಥ ಸಂಸಾರಸುಖಿಗಳು ಇನ್ನಾರೂ ಇರಲಾರ ರೆಂದೇ ನನ್ನ ಭಾವನೆಯಾಗುತ್ತಲಿದೆ.

CC-0. Jangamwadi Math Collection. Digitized by eGangotri

ನಾವು ಗಂಡ-ಹೆಂಡತಿ, ಮಕ್ಕಳೊಂದಿಗೆ ಒಟ್ಟಿಗೆ ಕೂಡಿ ಕುಳಿತೆವೆಂದರೆ ನನ್ನ ಹರೆಯದ ಕನಸು ಕೈಯಲ್ಲಿ ಹಿಡಿದು ಕುಣಿಯುವಂತೆ ಭಾಸವಾಗುವದು............ಆದರೆ ಹೀಗಿರುವಾಗಲೇ ಎಂದಾದರೊಮ್ಮೊಮ್ಮೆ ಆ ಗುಬ್ಬಿಗಳ ಸಂಸಾರದ ನೆನಪು ಒಮ್ಮಿಂದೊಮ್ಮೆ ನನ್ನ ತಲೆಯಲ್ಲಿ ತೋರಿಬಿಡುವದು. ಆಗ ಹಿಂದಿನಂತೆಯೆ ಈಗಲೂ ಆ ಗುಬ್ಬಿಗಳ ಸಂಸಾರದೊಂದಿಗೆ ಒಂದು ಬಗೆಯ ತನ್ಮಯತೆಯು ಎನ್ನಿಸುವುದು. ಆದರೆ ಅಂದಿನ ಸೊಗಸಿನ ಬದಲು, ಇಂದು ನನ್ನೆದೆಯು ಒಂದು ಬಗೆಯ ವೇದನೆಯಿಂದ ಗದಗದ ನಡುಗುವದು........ ಮನುಷ್ಯನ ಬುದ್ಧಿ ಭಾವನೆಗಳನ್ನು ಲೆಕ್ಕಿಸದೆ, ಆತನ ಕಲ್ಪನೆಯು ಕಣ್ಮರೆಯಾಗಿ, ಎಲ್ಲಿಯೋ ಯಾವುದೋ ಒಂದು ಹೋರಿನಲ್ಲಿ ಹೊಂಚಿ ಕುಳಿತ ಸಾವೆಂಬ ಹಾವು ಎಲ್ಲಿ ನನ್ನ ಸಂಸಾರವನ್ನು ಸೂರೆಗೊಂಡೀತೋ ಎಂದು ನನಗೆ ಇಲ್ಲದ ಭಯವುಂಟಾಗಿ ದಿಗ್ಭ್ರಮೆಯಾದಂತೆನಿಸುವದು. ಹೀಗೆ ಬೇಡ ಬೇಡವೆಂದರೂ ಬಲುವೆಯಿಂದ ಆ ಹಿಂದಿನ ನೆನಪು ನನ್ನ ಮನಸದಲ್ಲಿ ಮೂಡಿಕೊಂಡಾಗೆಲ್ಲ, ನನ್ನ ಕಣ್ಮನಗಳೂ ಬುದ್ಧಿಭಾವನೆಗಳೂ ಕುರುಡಾದಂತೆನಿಸಿ ನಾನು ಯಾವುದೋ ಒಂದು ಲೋಕಾಂತರದಲ್ಲಿ ಹವಣ ತಪ್ಪಿ ಅಲೆಯುತ್ತಿರುವಂತೆ ಭಾಸವಾಗುವದು.

# ಅಭಿನಂದನೆಗಳು



ಶ್ರೀ. ಭೀಮಾಚಾರ್ಯ ಚಿಮ್ಮಲಗಿ

ಹೈದರಾಬಾದ್ ವಾಸಿಗಳಾದ ಇವರು ಅಲ್ಲಿನ ಕನ್ನಡ ಚಳವಳಿಯ ಕೇಂದ್ರವೆಂದರೆ ಸಂದೀತು. ವೃತ್ತಿಯಿಂದ ವ್ಯಾಪಾರಿಗಳಿದ್ದರೂ, ಸ್ವಭಾವದಿಂದ ಸಮಾಜಸೇವಾನಿರತರು. ಮಾತು ಕಡಿಮೆ. ಕೈಕೊಂಡ ಕೆಲಸದಲ್ಲಿ ಹಿಡಿತ ಬಹಳ. ನಿಜಾಮು ಕರ್ನಾಟಕದಲ್ಲಿ ಕನ್ನಡಿಗರೆಂದರೆ ಹೆಸರಿಗೆ ಮಾತ್ರ. ಕೆಲಸಾರಿ ಹೆಸರೂ ಕನ್ನಡರೀತಿಯದಿರುವುದಿಲ್ಲ. ಮಾತು ಅರೆಬರೆ ಕನ್ನಡ, ಬರೆಹ ಮರಾಠಿ, ಉರ್ದು. ಇಂಥ ವಿಚಿತ್ರಪರಿಸ್ಥಿತಿಯಲ್ಲಿ ಕನ್ನಡಿಗರಿಗೆ ತಾವು ಯಾರೆಂಬುದರ ನೆನಪೂ ಅರಿವೂ ಇಲ್ಲದಾಗಿದೆ. ಒಮ್ಮೊಮ್ಮೆ ಕನ್ನಡವೆಂದರೆ ಕಿರಿಕಿರಿಯಾಗುವ ಕನ್ನಡಿಗರೂ ಇದ್ದಾರೆ. ಈ ಎದೆಗುದಿಯುವ ಸ್ಥಿತಿಗೆ ಬೇಸತ್ತು- ಚಿಮ್ಮಲಗಿಯವರು ಕನ್ನಡಿಗರಿಗೆ ತಾಯಿನುಡಿಯಿಂದಲೇ ಶಿಕ್ಷಣವನ್ನು ಕೊಡುವುದೇ ತರಣೋಪಾಯವೆಂದು ತಿಳಿದು, ಈಗ ನಾಲ್ಕುವರ್ಷಗಳ ಕೆಳಗೆ ನೃಪತುಂಗ ವಿದ್ಯಾಲಯವನ್ನು ತೆರೆದು, ನೆರವಿಗೆ ಬರುವ ಸಜ್ಜನರು ಯಾರೂ ದೊರೆಯದಿದ್ದರೂ ನೂರಾರು ರೂಪಾಯಿ ನಷ್ಟದಿಂದ ಒಬ್ಬರೇ ಎದೆಗೊಟ್ಟು ನಡೆಯಿಸಿದರು. ಅವರು ಬಿತ್ತಿದ ಬೆಳೆಯೆಂದು-ಈಗ ಕನ್ನಡಿಗ ತರುಣರಲ್ಲಿ ಕಳೆ ತೋರಿ ವಿದ್ಯಾಲಯವು ಕಾರ್ಯಕಾರಿ ಮಂಡಲದವರ ನೇತೃತ್ವದಲ್ಲಿ ನಡೆಯಿಸಲ್ಪಡುತ್ತಿದೆ. ತಾಯಿನುಡಿ, ತಾಯಿನಾಡಿನ ಬಗ್ಗೆ ಇವರ ಮಮತೆಯು ದೃಢ; ತೀವ್ರ. ಇವರ ಚಳವಳಿಯು ಸಫಲವಾಗಿ ನಿಜಾಮ ಕರ್ನಾಟಕಕ್ಕೆ ತನ್ನ ಸಂಸ್ಕೃತಿ, ತನ್ನ ಸ್ವರೂಪದ ಅರಿವು ಬೇಗನೇ ಆಗಲೆಂದು ಹಾರೈಸುತ್ತೇವೆ.

CC-0. Jangamwadi Math Collection. Digitized by eGangotri

# ಹೊಸದಿಲ್ಲಿಯ ಅಖಿಲಭಾರತೀಯ ಕೃಷಿಸಂಶೋಧನ ಮಂದಿರ

## The Imperial Council of Agricultural Research, New Delhi

ಲೇಖಕರು—ಶ್ರೀ. ಶಂಭು ಶಂಭುಭಟ್ಟ, ಎಂ. ಎ ಜಿ., ಪುಣೆ

ಹಿಂದೂದೇಶದಲ್ಲಿ ಒಕ್ಕಲತನವೇ ಜನರ ಮುಖ್ಯ ಉದ್ಯೋಗವು. ಇದನ್ನು ಜನರು ಯುಗಯುಗಾಂತರಗಳಿಂದ ನಡೆಯಿಸಿಕೊಂಡು ಬಂದಿರುವರು. ಇದರಲ್ಲಿ ಎಷ್ಟೋ ಸುಧಾರಣೆಗಳೂ ಬದಲಾವಣೆಗಳೂ ಆಗಿರುವವು. ಈಗಲೂ ಆಗುತ್ತಿರುವವು. ಕಳೆದ ಇಪ್ಪತ್ತು ಮೂವತ್ತು ವರ್ಷಗಳಲ್ಲಿ ಈ ದೇಶದ ಬೇರೆ ಬೇರೆ ಇಲಾಖೆಗಳಲ್ಲಿ ಒಕ್ಕಲತನದ ಸ್ವತಂತ್ರ ಖಾತೆಗಳು ನಿರ್ಮಿಸಲ್ಪಟ್ಟಿವೆ. ಅವು ಆಯಾ ಇಲಾಖೆಗಳ ಒಕ್ಕಲತನದ ನ್ಯೂನತೆಗಳನ್ನು ಸಾಧ್ಯವಾದಷ್ಟು ಹೋಗಲಾಡಿಸಿ, ಹೊಸ ಶೋಧಗಳಿಂದಲೂ ವಿಚಾರ ವಿನಿಮಯದಿಂದಲೂ ಒಕ್ಕಲಿಗನ ಪ್ರಶ್ನೆಗಳನ್ನು ಬಿಡಿಸಿ, ಅವನ ಕಷ್ಟನಷ್ಟಗಳನ್ನು ದೂರಪಡಿಸುತ್ತಲಿವೆ. ಕೃಷಿಪ್ರಧಾನವಾದ ನಮ್ಮ ದೇಶದಲ್ಲಿ ಒಕ್ಕಲತನಕ್ಕೆ ಸಿಗಬೇಕಾದ ದುಡ್ಡಿನ ಯೋಗ್ಯ ಬೆಂಬಲವೂ, ಶಾಸ್ತ್ರೀಯ ಶೋಧಗಳ ಸಲಹೆಯೂ, ಸರಕಾರದ ಉತ್ತೇಜನವೂ, ಜನಸಾಮಾನ್ಯರಲ್ಲಿ ಸನ್ಮಾನ್ಯಸ್ಥಾನವೂ ಇನ್ನೂ ಸಾಕಷ್ಟು ದೊರೆತಿಲ್ಲವೆಂಬುದು ಶೋಚನೀಯವು. ಇತ್ತಿತ್ತಲಾಗಿ ಈ ಸ್ಥಿತಿಯು ತಕ್ಕಮಟ್ಟಿಗೆ ಸುಧಾರಿಸುತ್ತಿರುವದು.

ಈ ದೇಶದ ಒಕ್ಕಲತನಕ್ಕೆ ಸಂಬಂಧಿಸಿದ ಸ್ಥಾನಿಕ ಪ್ರಶ್ನೆಗಳಿರುವಂತೆ, ರಾಷ್ಟ್ರೀಯಪ್ರಶ್ನೆಗಳೂ ಅನೇಕವಿರುತ್ತವೆ. ಸ್ಥಾನಿಕಪ್ರಶ್ನೆಗಳನ್ನು ಆಯಾ ಇಲಾಖೆಗಳ ಒಕ್ಕಲತನದ ಖಾತೆಯವರು ಬಿಡಿಸಲು ಯತ್ನಿಸುತ್ತಿದ್ದಾರೆ. ಪ್ರತಿಯೊಂದು ಖಾತೆಯೂ ತನ್ನ ಇಲಾಖೆಯ ಮುಖ್ಯಪ್ರಶ್ನೆಗಳನ್ನಷ್ಟೇ ನೋಡಿಕೊಳ್ಳುತ್ತಿದೆ. ಒಂದೇ ಪ್ರಶ್ನೆಯನ್ನು ಎರಡು ಮೂರು ಇಲಾಖೆಗಳ ಖಾತೆಗಳು ಸ್ವತಂತ್ರವಾಗಿ ಬಿಡಿಸುತ್ತಲಿವೆ. ಕೆಲವರು ಮುಂದಾಗುತ್ತಲೂ ಕೆಲವರು ಹಿಂದಾಗುತ್ತಲೂ ಎಲ್ಲರೂ ಒಂದೇ ಮೆಟ್ಟನ್ನು ಮುಟ್ಟಲು ಯತ್ನಿಸುತ್ತಿದ್ದಾರೆ. ಒಂದು ಇಲಾಖೆಯಲ್ಲಿ ಬಿಡಿಸಿದ ಪ್ರಶ್ನೆಗಳನ್ನು ಇನ್ನೊಂದು ಇಲಾಖೆಯಲ್ಲಿ ಹೊಸದಾಗಿ ಬುಡದಿಂದ ಬಿಡಿಸಲು ಯತ್ನಿಸುವದೂ ಉಂಟು. ಇದರಿಂದ ಶ್ರಮವೂ ದುಡ್ಡೂ ವ್ಯರ್ಥವಾಗಿ ವೆಚ್ಚವಾಗಿ, ಒಬ್ಬರಿಗೊಬ್ಬರ ಸಲಹೆಯೂ ಸಹಾನುಭೂತಿಯೂ ದೊರೆಯುತ್ತಿರುವದಿಲ್ಲ.

ರಾಷ್ಟ್ರೀಯಪ್ರಶ್ನೆಗಳನ್ನು ಬಿಡಿಸಲಿಕ್ಕೆಂದು ಹಿಂದುಸ್ಥಾನ ಸರಕಾರದವರು ತಮ್ಮದೊಂದು ಪ್ರತ್ಯೇಕವಾದ ಒಕ್ಕಲತನದ ಖಾತೆಯನ್ನು ನಿರ್ಮಿಸಿ ಪೂಸಾ ಎಂಬಲ್ಲಿ ಒಂದು ಮುಖ್ಯ ಸಂಶೋಧನಾಲಯವನ್ನು ಸ್ಥಾಪಿಸಿಕೊಂಡಿದ್ದಾರೆ. ಇದರಲ್ಲಿ ಇಡೀ ಹಿಂದುಸ್ಥಾನಕ್ಕೆ ಸಂಬಂಧಿಸಿದ ವಿಷಯಗಳ ಬಗೆಗೆ ಶೋಧವು ನಡೆದಿರುತ್ತದೆ. ಆದಾಗ್ಯೂ ಪೂಸಾದಲ್ಲಿ ನಡೆದ ಶೋಧಗಳಿಗೂ ಇತರ ಇಲಾಖೆಗಳಲ್ಲಿ ನಡೆದ ಶೋಧಗಳಿಗೂ ಇರಬೇಕಾದಷ್ಟು ನಿಕಟಸಂಬಂಧವೂ ವ್ಯಾಪಕತೆಯೂ ಇಲ್ಲದಿರುವದರಿಂದ, ಅವೆಲ್ಲವುಗಳಲ್ಲಿ ಸರಿಯಾದ ಮೇಳವು ಇಲ್ಲವೆನ್ನಬಹುದು. ಹೀಗೆ ಪ್ರತಿಯೊಂದು ಇಲಾಖೆಯವರೂ ಪೂಸಾದವರೂ ತಮ್ಮಷ್ಟಕ್ಕೆ ತಾವೇ ಸ್ವತಂತ್ರವಾಗಿ ಕಾರ್ಯವನ್ನು ನಡೆಯಿಸಿದ್ದರಿಂದ, ಅವರೆಲ್ಲರ ಐಕ್ಯದಿಂದ ಆಗಬಹುದಾದಷ್ಟು ದೇಶ ಕಲ್ಯಾಣವು ಆಗುತ್ತಿದ್ದಿಲ್ಲ.

೧೯೨೬ನೆಯ ಇಸ್ವಿಯಲ್ಲಿ ಸರಕಾರದವರು ನಿಯಮಿಸಿದ ಒಕ್ಕಲತನದ ವಿಚಾರಣಾಮಂಡಲದವರು (ರಾಯಲ್ ಕಮಿಶನ್ ಆನ್ ಅಗ್ರಿಕಲ್ಚರ್ ಇನ್ ಇಂಡಿಯಾ) ಈ ಪರಿಸ್ಥಿತಿಯನ್ನು ಸುಧಾರಿಸಿ, ಹಿಂದುಸ್ಥಾನ ಸರಕಾರದ ಒಕ್ಕಲತನದ ಖಾತೆಯವರೂ ಇತರ ಸ್ಥಾನಿಕಖಾತೆಗಳೂ ಇಡಿ ದೇಶದ ಪ್ರಶ್ನೆಗಳನ್ನು ಸ್ಥಾನಿಕದೃಷ್ಟಿಯಿಂದಲೂ, ರಾಷ್ಟ್ರೀಯದೃಷ್ಟಿಯಿಂದಲೂ, ಒಮ್ಮನಸ್ಸಿನಿಂದಲೂ, ಪರಸ್ಪರ ಸಲಹೆ ಸಹಾನುಭೂತಿಗಳಿಂದಲೂ ಬಿಡಿಸಲು ಯತ್ನಿಸಬೇಕೆಂದು ತಮ್ಮ ವರದಿಯಲ್ಲಿ ಸೂಚಿಸಿರುತ್ತಾರೆ. ಇದರ ಪುಷ್ಟ್ಯರ್ಥವಾಗಿ ಇಂಪೀರಿಯಲ್



CC-0. Jangamwadi Math Collection. Digitized by eGangotri

ಕೌನ್ಸಿಲ್ ಆಫ್ ಅಗ್ರಿಕಲ್ಚರಲ್ ರಿಸರ್ಚ್ ಎಂಬ ಮಧ್ಯವರ್ತಿ ಸಂಸ್ಥೆಯನ್ನು ಸ್ಥಾಪಿಸಿ, ಅದರ ಮುಖಾಂತರವಾಗಿ ಇಡೀ ರಾಷ್ಟ್ರದ ಒಕ್ಕಲತನಕ್ಕೆ ಸಂಬಂಧಿಸಿದ ಪ್ರಶ್ನೆಗಳನ್ನೂ ಸ್ಥಾನಿಕಪ್ರಶ್ನೆಗಳನ್ನೂ ಏಕಮುಖವಾಗಿ ಬಿಡಿಸುವ ಏರ್ಪಾಡು ಮಾಡಲ್ಪಡಬೇಕೆಂದೂ ಸೂಚಿಸಿರುತ್ತಾರೆ. ಈ ಮಧ್ಯವರ್ತಿ ಸಂಸ್ಥೆಯಲ್ಲಿ ಹಿಂದೂದೇಶದ ಎಲ್ಲ ಭಾಗಗಳ ಶಾಸ್ತ್ರಜ್ಞರೂ ಶೋಧಕರೂ ಒಕ್ಕಲಿಗರ ಹಾಗೂ ವ್ಯಾಪಾರಿಗಳಪ್ರತಿನಿಧಿಗಳೂ ಕೂಡಿ, ವಿಚಾರ ವಿನಿಮಯದಿಂದ ಇಡೀ ದೇಶದ ಕಲ್ಯಾಣವನ್ನು ಚಿಂತಿಸಿ, ಅನೇಕ ಮಹತ್ವದ ಪ್ರಶ್ನೆಗಳನ್ನೂ ಅಲ್ಲಲ್ಲಿ ನಡೆದಿರುವ ಶೋಧಗಳನ್ನೂ ಹೋಲಿಸಿ ನೋಡಿ, ಅನವಶ್ಯವಾದುವುಗಳನ್ನು ಮುಗಿಸಿ ಅವಶ್ಯವಿದ್ದ ಹೊಸ ಶೋಧಗಳನ್ನು ಏರ್ಪಡಿಸಿ ನಡೆಯಿಸುವದು ಶಕ್ಯವೆಂದು ತೋರಿಸಿಕೊಟ್ಟಿರುತ್ತಾರೆ. ಈ ವ್ಯವಸ್ಥೆಯಿಂದ ಆಗುವ ಲಾಭಗಳನ್ನು ವಿವರಿಸಿರುತ್ತಾರೆ.

ಇದಕ್ಕನುಸರಿಸಿ ಗರ್ವ್ಹರ್ನೆಯು ಇಸ್ವಿಯಲ್ಲಿ ಇಂಪೀರಿಯಲ್ ಕೌನ್ಸಿಲ್ ಆಫ್ ಅಗ್ರಿಕಲ್ಚರಲ್ ರಿಸರ್ಚ್(ಹಿಂದುಸ್ಥಾನದ ಒಕ್ಕಲತನದ ಶೋಧಗಳ ಮಧ್ಯವರ್ತಿ ಮಂಡಲ) ಎಂಬ ಸಂಸ್ಥೆಯು ಹೊಸ ದಿಲ್ಲಿಯಲ್ಲಿ ಸ್ಥಾಪಿಸಲ್ಪಟ್ಟಿರುತ್ತದೆ. ವೈಸ್ರಾಯರು ಇದರ ಅಧ್ಯಕ್ಷರು. ಇಂಗ್ಲಂಡಿನಲ್ಲಿ ಗರ್ತಿಳ ನೆಯ ಇಸ್ವಿಯಲ್ಲಿ ಏರ್ಪಡಿಸಲ್ಪಟ್ಟ, ಇಡೀ ಬ್ರಿಟಿಶ್ ಸಾಮ್ರಾಜ್ಯದ ಒಕ್ಕಲತನದ ಮತ್ತು ಔದ್ಯೋಗಿಕ ವಸ್ತುಗಳ ವೆಂಬ್ಲೀ ಪ್ರದರ್ಶನದ ಮುಖ್ಯ ಕಾರ್ಯದರ್ಶಿಗಳೂ ವ್ಯವಸ್ಥಾಪಕರೂ ಆಗಿ ಹೆಸರುಪಡೆದ ದಿವಾಣಬಹದ್ದೂರ ಸರ್, ಟಿ. ವಿಜಯರಾಘವಾಚಾರ್ಯರು ಉಪಾಧ್ಯಕ್ಷರು. ಈ ಸಂಸ್ಥೆಗೆ ಎರಡು ಮುಖ್ಯ ಅಂಗಗಳು; ಒಂದು ಎಡ್ವೈಜರಿ ಬೋರ್ಡ್. ಇನ್ನೊಂದು ಗವ್ಹರ್ನಿಂಗ್ ಬೊಡಿ. ಎಡ್ವೈಜರಿ ಬೋರ್ಡ (ಸಲಹೆಗಾರ ಮಂಡಲ) ನಲ್ಲಿ ಈ ದೇಶದ ಎಲ್ಲ ಭಾಗಗಳ ಪ್ರಮುಖ ಶಾಸ್ತ್ರಜ್ಞರು ತುಂಬಿರುತ್ತಾರೆ. ಗವ್ಹರ್ನಿಂಗ್ ಬೊಡಿ (ಕಾರ್ಯಕಾರಿಮಂಡಲ) ಯಲ್ಲಿ ಅನುಭವಿಕರಾದ ಪ್ರಮುಖ ವ್ಯಾಪಾರಿಗಳೂ ಒಕ್ಕಲತನದ ಮುಖಂಡರೂ ಹೆಚ್ಚು. ಒಕ್ಕಲತನದ ಪ್ರಶ್ನೆಯನ್ನು ಶೊಧಗಳಿಂದ ಬಿಡಿಸಬೇಕೆಂದು ಕಲ್ಪಿಸಿದ ಯಾವದೊಂದು ಯೋಜನೆಯು ಮೊದಲು ಎಡ್ವೈಜರಿ ಬೋರ್ಡಿನಲ್ಲಿ ಮಂಜೂರಾಗಬೇಕು; ಎಂದರೆ ಶಾಸ್ತ್ರಜ್ಞರೆಲ್ಲ ಕೂಡಿ ಶಾಸ್ತ್ರೀಯದೃಷ್ಟಿಯಿಂದ ಆ ಪ್ರಶ್ನೆಯ ಮಹತ್ವವನ್ನೂ ವ್ಯಾಪಕತೆಯನ್ನೂ ಚೆನ್ನಾಗಿ ವಿಮರ್ಶಿಸಿ, ಆ ವಿಷಯದಲ್ಲಿ ಶೋಧವನ್ನು ಕೈಕೊಳ್ಳಬಹುದೋ ಇಲ್ಲವೋ—ಎಂಬದನ್ನು ನಿರ್ಣಯಿಸುವರು. ಕೈಕೊಳ್ಳುವದಾದರೆ ಯಾವ ದೃಷ್ಟಿಯಿಂದ ಯಾವ ಯಾವ ಸ್ಥಳಗಳಲ್ಲಿ ಶೋಧವು ನಡೆಯಬೇಕೆಂಬುದನ್ನೂ, ಅದು ಎಷ್ಟು ವರ್ಷಗಳು ನಡೆಯಬೇಕೆಂಬುದನ್ನೂ, ಅದಕ್ಕೆ ತಗಲಬಹುದಾದ ವೆಚ್ಚವನ್ನೂ ನಿರ್ಣಯಿಸುವರು. ಇಷ್ಟಾದ ಬಳಿಕ ಈ ಯೋಜನೆಯು ಗವ್ಹರ್ನಿಂಗ್ ಬೊಡಿಗೆ ಕಳಿಸಲ್ಪಡುವದು. ಅಲ್ಲಿ ಇದರ ವಿಷಯವಾಗಿ ಮತ್ತೊಮ್ಮೆ ಚರ್ಚೆಯಾಗಿ, ಜನಸಾಮಾನ್ಯರಿಗೆ ಈ ಯೋಜನೆಯಿಂದ ಎಷ್ಟು ಉಪಯೋಗವಾಗಬಹುದೆಂಬ ವಿಷಯವು ವಿಚಾರಿಸಲ್ಪಡುವದು. ಶಾಸ್ತ್ರೀಯದೃಷ್ಟಿಯಿಂದ ಬಹಳ ಮಹತ್ವವುಳ್ಳ ಯೋಜನೆಯಾದರೂ, ಜನತೆಗೆ ಅದರಿಂದ ಅಷ್ಟು ಉಪಯೋಗವಾಗಲಾರದೆಂದು ಕಂಡು ಬಂದರೆ, ಅದನ್ನು ಗವ್ಹರ್ನಿಂಗ್ ಬೊಡಿಯವರು ಕಿತ್ತುಹಾಕುವರು. ಹಾಗಾದರೆ ಯೋಜನೆಯು ನಡೆಯಲಾರದು. ಸಂಸ್ಥೆಯ ಭಾಂಡಾರದ ಬೀಗದ ಕೈಯು ಗವ್ಹರ್ನಿಂಗ್ ಬೊಡಿಯ ಕೈಯಲ್ಲಿರುವದು. ಅವರು ಕಿತ್ತೊಗೆದ ಯೋಜನೆಗೆ ದುಡ್ಡೇ ಸಿಗುವದಿಲ್ಲ.

ಒಕ್ಕಲಿಗರ ನಿಜವಾದ ಹಿತವನ್ನು ಸಾಧಿಸುವ ದೃಷ್ಟಿಯಿಂದ ಈ ಏರ್ಪಾಡು ಬಹಳ ಮಹತ್ವದ್ದು; ಯಾಕೆಂದರೆ ಶಾಸ್ತ್ರಜ್ಞರ ದೃಷ್ಟಿಯು ಅನೇಕ ಸಾರೆ ವ್ಯಾವಹಾರಿಕವಾಗಿರುವದಿಲ್ಲ. ಶೋಧಗಳಲ್ಲಿ ಮುಳುಗಿದವರಂತೂ ಹೊಸ ಹೊಸ ತತ್ವಗಳೂ ಜ್ಞಾನವೂ ಕಂಡು ಬಂದಂತೆ ಹುಚ್ಚರಾಗಿ ಹೋಗುತ್ತಾರೆ. ಇಂಥವರ ಶೋಧಗಳಿಂದ ಯಾವುದೊಂದು ವಿಷಯದ ಜ್ಞಾನವು ಅಪ್ರತಿಮವಾಗಿ ಬೆಳೆಯುತ್ತದೆಂಬದು ನಿಜ; ಆದರೆ ಈ ಜ್ಞಾನದಿಂದ ಜನರ ಹಿತವೂ ದೇಶದ ಅಭಿವೃದ್ಧಿಯೂ ಎಷ್ಟರ ಮಟ್ಟಿಗೆ ಸಾಧಿಸಬಹುದೆಂಬುದನ್ನು ಅವರು ನೋಡುವದಿಲ್ಲ. ಹೊಸ ಸಂಗತಿಗಳನ್ನು ಹುಡುಕಿ ತೆಗೆಯುವದೇ ಅವರ ಮುಖ್ಯ ಧ್ಯೇಯವು. ಅದರಲ್ಲಿ ತಲ್ಲೀನರಾದ ಅವರು, ಕೋಲಂಬಸನು ಹಿಂದುಸ್ಥಾನವನ್ನು ಹುಡುಕ ಹೊರಟು ಅಮೇರಿಕೆಗೆ ಮುಟ್ಟಿದಂತೆ, ಎಲ್ಲಿಯೋ ಎಲ್ಲಿಗೋ ಹೊರಟು ಇನ್ನೆಲ್ಲಿಗೋ ಮುಟ್ಟುವದೂ ಡಲೋ ಎಲ್ಲಿಗೋ ಹೊರಟು ಇನ್ನೆಲ್ಲಿಗೋ ಮುಟ್ಟುವದೂ

CC-0. Jangamwadi Math Collection. Digitized by eGangotri

ಉಂಟು. ಹೀಗಾಗಬಾರದೆಂದು ಗವ್ಹರ್ನಿಂಗ್ ಬೊಡಿಯು ವ್ಯವಹಾರಕುಶಲರಾದ ಮತ್ತು ಶಾಸ್ತ್ರಜ್ಞರಲ್ಲದ ಮುಖಂಡರಿಂದ ತುಂಬಿರುತ್ತದೆ. ಇವರ ದೃಷ್ಟಿಯು ಯಾವಾಗಲೂ ಶ್ರಮವನ್ನೂ ದುಡ್ಡನ್ನೂ ಉಳಿಸಿಕೊಂಡು ಲಾಭಪಡೆಯಬೇಕೆಂಬದರ ಕಡೆಗೆ ಇರುವದರಿಂದ ಇವ ರಿಂದಲೇ ಜನರ ನಿಜವಾದ ಹಿತವು ಸಾಧಿಸಲ್ಪಡುವದು. ಹೀಗಿದ್ದರೂ ಇವರು ಶಾಸ್ತ್ರೀಯಶೋಧಗಳ ಮಹತ್ವ ವನ್ನರಿತು ಅವುಗಳ ಉಪಯೋಗವನ್ನು ಶಕ್ಯವಿದ್ದಷ್ಟು ಮಾಡಿಕೊಳ್ಳುವರು.

ಮಧ್ಯವರ್ತಿಮಂಡಲದ ಭಾಂಡಾರಕ್ಕೆ ಹಿಂದುಸ್ಥಾ ನದ ಸರಕಾರವು ೧೯೩೯ನೆಯ ಇಸ್ವಿಯಲ್ಲಿ ೨೫ ಲಕ್ಷ ರೂ. ಗಳನ್ನು ಮಂಜೂರ ಮಾಡಿತು. ಅದರಲ್ಲಿ ೧೫ ಲಕ್ಷ ರೂ. ಗಳನ್ನು ಈಗಾಗಲೆ ಕೊಟ್ಟಿರುತ್ತದೆ. ಮುಂದೆ ಆವಶ್ಯಕ ತೆಯುಂಟಾದಂತೆ ಉಳಿದ ೧೦ ಲಕ್ಷಗಳನ್ನು ಕೊಡುವದು. ಇದರ ಹೊರ್ತಾಗಿ ಪ್ರತಿವರ್ಷ ೫ ಲಕ್ಷ ರೂಪಾಯಿಗ ಗಳನ್ನು ವಾರ್ಷಿಕ ವರ್ಗಣಿಯೆಂದು ಕೊಡುವದು. ಬ್ರಿಟಿಶ್ ಹಿಂದುಸ್ಥಾನದ ಇಲಾಖೆಗಳಲ್ಲದೆ ನಿಜಾಮ ಹೈದ ರಾಬಾದ್, ಮೈಸೂರು, ಬಡೋದೆ ಸಂಸ್ಥಾನಗಳೂ ಈ ಮಂಡಲದ ಭಾಂಡಾರಕ್ಕೆ ವರ್ಗಣಿಯನ್ನು ಕೊಟ್ಟು, ಅದರ ಲಾಭವನ್ನು ಪಡೆದುಕೊಳ್ಳುತ್ತಿದ್ದಾರೆ. ಈ ಎಲ್ಲ ಹಣದಿಂದ ಮಂಡಲದ ವೆಚ್ಚವೂ ಅದರ ಅನೇಕ ಶೋಧ ಗಳ ಯೋಜನೆಗಳ ವೆಚ್ಚವೂ ಸಾಗುತ್ತಲಿವೆ. ಇದಿಷ್ಟು ಹಣವು ಹಿಂದುಸ್ಥಾನದಂಥ ವಿಸ್ತಾರವಾದ ದೇಶಕ್ಕೆ ಏನೂ ಸಾಲದು. ಆಸ್ಟ್ರೇಲಿಯಾ ದೇಶದಲ್ಲಿ ಒಕ್ಕಲ ತನದ ಶೋಧಗಳ ಮಧ್ಯವರ್ತಿಮಂಡಲಕ್ಕೆ ಅಲ್ಲಿಯ ಸರ ಕಾರವು ಪ್ರತಿವರ್ಷ ೧೫ ಲಕ್ಷ ರೂಪಾಯಿಗಳನ್ನು ಕೊಡು ತ್ತದೆ. ಅಮೇರಿಕೆಯ ಸಂಯುಕ್ತ ಸಂಸ್ಥಾನದಲ್ಲಿ ಮಧ್ಯ ವರ್ತಿ ಮಂಡಲಕ್ಕೆ ೨॥ ಕೋಟಿ ರೂಪಾಯಿಗಳು ಪ್ರತಿ ವರ್ಷ ದೊರೆಯುತ್ತವೆ. ಆ ದೇಶಗಳಲ್ಲಿ ಒಕ್ಕಲತನದ ಸುಧಾರಣೆಯೂ ಅಷ್ಟೇ ತೀವ್ರ ಗತಿಯಿಂದ ನಡೆದಿರು ತ್ತದೆ.

ಮಧ್ಯವರ್ತಿ ಮಂಡಲದ ಸಹಾಯವು ಹಿಂದುಸ್ಥಾನದ ಯಾವ ಭಾಗಕ್ಕಾದರೂ ಯಾರಿಗಾದರೂ ದೊರೆಯಲು ಅಡ್ಡಿಯಿಲ್ಲ. ಬೇಕಾದ ಶಾಸ್ತ್ರಜ್ಞರಾಗಲಿ, ವಿಶ್ವವಿದ್ಯಾ ಲಯಗಳಾಗಲಿ, ಹೊಣೆಗಾರರಾದ ಮುಖಂಡರಾಗಲಿ ಯೋಗ್ಯವಾದ ಪ್ರಶ್ನೆಗಳನ್ನು ಬಿಡಿಸಲು ಶೋಧಗಳಾಗ ಬೇಕೆಂದು ಯೋಜನೆಗಳನ್ನು ಕಳಿಸಬಹುದು. ಸಾಮಾ ನ್ಯವಾಗಿ ಇಂಥ ಯೋಜನೆಗಳನ್ನು ಆಯಾ ಸ್ಥಾನಿಕ ಒಕ್ಕಲತನದ ಖಾತೆಯ ಮತ್ತು ಸರಕಾರದ ಮುಖಾಂ ತರವಾಗಿ ಕಳಿಸಿದರೆ ಅವುಗಳಿಗೆ ಇನ್ನಷ್ಟು ಪುಷ್ಟಿಯು ದೊರೆಯಬಹುದು. ಈ ಮಂಡಲದ ಸಹಾಯವು ಸ್ಥಾನಿಕ ಯೋಜನೆಗಳಿಗೂ ರಾಷ್ಟ್ರೀಯ ಯೋಜನೆಗಳಿಗೂ ಸರಿ ಯಾಗಿಯೇ ದೊರೆಯುವದು. ಕಳೆದ ಮೂರು ವರ್ಷ ಗಳಲ್ಲಿ ಮಂಡಲವು ಅನೇಕ ಯೋಜನೆಗಳನ್ನು ಮಂಜೂರು ಮಾಡಿ ದ್ರವ್ಯಸಹಾಯವನ್ನಿತ್ತು ನಡೆಯಿಸಲಾರಂಭಿಸಿರು ತ್ತದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ:—

(೧) ಸಂಯುಕ್ತ ಪ್ರಾಂತಗಳಲ್ಲಿ ಗೋದಿಯ ಬೆಳೆಗೆ ಆಗುವ ಕೆಂಪು ರೋಗದ ನಿವಾರಣೆ. ಈ ರೋಗದಿಂದ ಗೋದಿಯ ಗಿಡಗಳ ಬೆಳೆವಣಿಗೆಯು ಕುಂದಿ, ಕಾಳುಗಳ ಉತ್ಪನ್ನವೂ ಶ್ರೇಷ್ಠತೆಯೂ ಕಡಿಮೆಯಾಗಿ ಅಪಾರ ಹಾನಿಯಾಗುತ್ತಲಿದೆ.

(೨) ಹಿಂದುಸ್ಥಾನದಲ್ಲಿ ಕಬ್ಬಿನ ಬೆಳೆಯನ್ನು ಸುಧಾ ರಿಸಿ, ಸಕ್ಕರೆಯ ಕಾರಖಾನೆಗಳನ್ನುಂಟುಮಾಡಿ, ಸ್ವದೇಶೀ ಸಕ್ಕರೆಯಿಂದಲೇ ಇಡೀ ದೇಶದ ಬೇಡಿಕೆಯನ್ನು ಪೂರೈ ಸುವದು. ಇದರ ಸಲುವಾಗಿ ಕೋಯಿಮ್ಮತ್ತೂರು ಮುಂತಾದ ಸ್ಥಳಗಳಲ್ಲಿ ಈ ಮೊದಲು ಸಣ್ಣ ಪ್ರಮಾಣ ದಲ್ಲಿ ನಡೆದಿರುವ ಪ್ರಯೋಗಗಳಿಗೆ ಹೆಚ್ಚಿನ ಹುರುಪು, ಬೆಂಬಲಗಳನ್ನು ಕೊಟ್ಟು ಅವುಗಳನ್ನು ನಡೆಯಿಸಲಾರಂ ಭಿಸಿದ್ದು. ಮುಂಬಯಿ ಇಲಾಖೆಯಲ್ಲಿ ನೀರಾ ಕಾಲು ವೆಯ ಮೇಲೆ ಪಡೇಗಾಂವ ಎಂಬಲ್ಲಿ ಪ್ರಯೋಗಕ್ಷೇತ್ರ ವನ್ನು ಸ್ಥಾಪಿಸಿ, ಕಬ್ಬಿನ ಪ್ರಯೋಗಗಳನ್ನು ನಡೆಯಿಸಲು ಮುಂದಾದದ್ದು. ಪಡೇಗಾಂವ ಯೋಜನೆಗೆ ಐದುವರ್ಷ ಗಳ ಬಗ್ಗೆಯೆಂದು ಐದುಲಕ್ಷ ರೂಪಾಯಿಗಳನ್ನು ಮಂಜೂರು ಮಾಡಿದೆ. ಈ ರೀತಿ ಪ್ರಯೋಗಗಳನ್ನು ನಡೆ ಯಿಸುತ್ತಿರುವದರೊಡನೆ ಜಾವಾ ಮುಂತಾದ ಪರದೇಶದ ಸಕ್ಕರೆಯ ಆಯಾತದ ಮೇಲೆ ಭಾರಿಯಾದ ಸಂರಕ್ಷಕ ಕರ ವನ್ನು ಹೇರಿ, ದೇಶೀ ಸಕ್ಕರೆಯ ಕಾರಖಾನೆಗಳಿಗೆ ಉತ್ತೇ ಜನವನ್ನು ಕೊಡಲಾಗಿದೆ. ಹೀಗೆ ಹದಿನೈದು ವರ್ಷಗಳ ವರೆಗೆ ಸಂರಕ್ಷಕ ಕರವನ್ನು ಪಡೆಕೊಂಡು ಆ ಅವಧಿ ಯಲ್ಲಿ ನಮ್ಮ ದೇಶದ ಸಕ್ಕರೆಯ ಉದ್ಯೋಗವು ಸರಿ

CC-0. Jangamwadi Math Collection. Digitized by eGangotri

ಯಾಗಿ ಬಲಿತು ಪರದೇಶದ ಸಕ್ಕರೆಯ ಕೂಡ ಮೇಲಾಟ ಮಾಡಲು ಸಿದ್ಧವಾಗುವಂತೆ ಮಾಡುವದೇ ಮಂಡಲದ ಉದ್ದೇಶವು. ಪ್ರತಿ ವರ್ಷ ಹಿಂದುಸ್ಥಾನಕ್ಕೆ ೯,೦೦,೦೦೦ ಟನ್ನು (೧೫ ಕೋಟಿ ರೂಪಾಯಿಗಳ) ಸಕ್ಕರೆಯು ಪರದೇಶದಿಂದ ಬರುತ್ತದೆ. ಇದನ್ನು ತಪ್ಪಿಸಿದರೆ ಇದಿಷ್ಟು ದುಡ್ಡು ನಮ್ಮ ದೇಶದಲ್ಲೇ ಉಳಿಯುತ್ತದಲ್ಲವೇ ?

(೩) ಪಂಜಾಬ, ಸಿಂಧ, ರಜಪೂತಾನಾ ಮುಂತಾದ ದೇಶಗಳಲ್ಲಿ ಬೆಳೆಗಳಿಗೆ ಹಾವಳಿಯನ್ನು ಮಾಡುವ ಜಿಟ್ಟಿ ಹುಳುಗಳನ್ನು ನಾಶಮಾಡುವ ಯೋಜನೆ. ಈ ಯೋಜನೆಗಾಗಿ ಅನೇಕ ಶಾಸ್ತ್ರಜ್ಞರು ಹಿಂದುಸ್ಥಾನದಲ್ಲೂ ಬಲೂಚಿಸ್ಥಾನದಲ್ಲೂ ಅಲ್ಲಲ್ಲಿ ದುಡಿಯುತ್ತಿದ್ದಾರೆ. ಜಿಟ್ಟಿ ಹುಳುಗಳ ಜೀವನಕ್ರಮವನ್ನೂ ಅವುಗಳಿಗೆ ಅನುಕೂಲವಾದ ಪರಿಸ್ಥಿತಿಗಳನ್ನೂ ಸೂಕ್ಷ್ಮರೀತಿಯಿಂದ ಅಭ್ಯಸಿಸಿ, ಅವುಗಳನ್ನು ನಾಶಮಾಡುವದಕ್ಕೆ ಉಪಾಯವನ್ನು ಹುಡುಕುವದೇ ಈ ಯೋಜನೆಯ ಮುಖ್ಯ ಉದ್ದೇಶವು.

(೪) ಮುಂಬಯಿ ವಿಶ್ವವಿದ್ಯಾಲಯದ ಪ್ರೊಫೆಸರ್ ದಸ್ತೂರರವರಿಗೆ ಭತ್ತದ ಪೈರಿನ ಸಂಶೋಧನಕ್ಕಾಗಿ ಕೊಟ್ಟ ಸಹಾಯವು. ಭತ್ತದ ಸಸಿಗಳ ಅಂತರ್ಯಕ್ರಿಯೆಗಳನ್ನು ಅಭ್ಯಸಿಸಿ, ಅವಕ್ಕನುಸರಿಸಿ ಬೇಕಾಗುವ ಗೊಬ್ಬರ ನೀರು ಮುಂತಾದವುಗಳನ್ನು ಸೂಚಿಸುವದು.

(೫) ಹಣ್ಣುಹಂಪಲುಗಳನ್ನೂ ಪಲ್ಲೆ ಕಾಯಿ, ಮುಂತಾದ ಬೇಗನೆ ಕೆಡುವ ಪದಾರ್ಥಗಳನ್ನೂ ದೂರದೂರದ ಪೇಟೆಗಳಿಗೂ ಪರದೇಶಗಳಿಗೂ ಸುಲಭವಾಗಿ ಕಳಿಸಿ, ಮಾರಿ, ತೋಟಿಗನಿಗೆ ಯೋಗ್ಯ ಬೆಲೆಯು ಬರುವಂತೆ ಮಾಡುವದಕ್ಕಾಗಿ ಅವುಗಳನ್ನು ಬರ್ಫದಲ್ಲಿಟ್ಟು ಕಳಿಸುವ ಯೋಜನೆ. ಈ ಯೋಜನೆಯಲ್ಲಿ ಯಾವ ಯಾವ ಹಣ್ಣುಗಳಿಗೆ ಎಷ್ಟೆಷ್ಟು ಅಂಶ ಉಷ್ಣತೆಯು ಬೇಕಾಗುತ್ತದೆಂಬುದನ್ನು ಪ್ರಯೋಗಗಳಿಂದ ಅರಿತುಕೊಂಡು, ಅದಕ್ಕನುಸರಿಸಿ ಉಗೆಬಂಡಿ ಉಗೆಹಡಗುಗಳಲ್ಲಿ ಏರ್ಪಾಡು ಮಾಡಿಸಿ, ತೋಟಿಗರಿಗೆ ಅನುಕೂಲತೆ ಮಾಡಿಕೊಡುವದೇ ಮುಖ್ಯ ಉದ್ದೇಶವು. ಈಗೆರಡು ವರ್ಷಗಳಿಂದ ರತ್ನಾಗಿರಿಯ ಆಫೂಸ ಮಾವಿನ ಹಣ್ಣುಗಳನ್ನು ಯುರೋಪಖಂಡಕ್ಕೆ ಕಳಿಸುವದರಲ್ಲಿ ಆದ ಪ್ರಯತ್ನಗಳೂ, ಸಿಕ್ಕಿದ ಯಶಸ್ಸೂ ಈ ಯೋಜನೆಗೆ ಮೂಲವು. ಈ ಯೋಜನೆಗೊಳಪಟ್ಟ ಶೋಧಗಳು ಮುಖ್ಯವಾಗಿ ಪುಣೆಯಲ್ಲಿ ನಡೆಯುವವಾದರೂ, ಸಂಯುಕ್ತಪ್ರಾಂತ, ಬಿಹಾರ ಮತ್ತು ಓಡಿಸಾ, ಮತ್ತು ಮದ್ರಾಸ ಇಲಾಖೆಗಳು ಇದಕ್ಕೆ ಒಳಪಟ್ಟಿವೆ.

ಇವಲ್ಲದೆ ಇನ್ನೂ ಅನೇಕ ಯೋಜನೆಗಳಿವೆ. ಇವುಗಳಿಂದ ಇಡೀ ಹಿಂದುಸ್ಥಾನದ ಒಕ್ಕಲತನದ ಏಕೀಕರಣವು ಯಾವ ಮಾರ್ಗದಿಂದ ನಡೆದಿದೆಯೆಂಬುದನ್ನು ಅರಿತುಕೊಳ್ಳಬಹುದು. ಇದೀಗ ಮಧ್ಯವರ್ತಿಮಂಡಲವು ನಡೆಯಿಸಿದ ಕಾರ್ಯವು; ಇದನ್ನುಳಿದು ಆಯಾ ಸ್ಥಾನಿಕ ಖಾತೆಗಳು ತಮ್ಮ ಕಾರ್ಯವನ್ನು ನಡೆಯಿಸಿಯೇ ಇವೆ. ಅವುಗಳಿಗೂ ಬೇಕಾದ ಸಲಹೆಯನ್ನೂ ದ್ರವ್ಯಸಹಾಯವನ್ನೂ ಮಂಡಲವು ಮಾಡುವದು. ಇದಲ್ಲದ ಸ್ಥಾನಿಕ ಮಂಡಲಗಳನ್ನೂ ನಿಯೋಜಿಸಿದ್ದಾರೆ. ಈ ರೀತಿಯಲ್ಲಿ ಇಡೀ ರಾಷ್ಟ್ರದಲ್ಲೂ ವ್ಯಾಪಕವಾಗಿ ಒಕ್ಕಲತನದ ಪ್ರತಿಯೊಂದು ಭಾಗದಲ್ಲೂ ಸುಧಾರಣೆಯು ನಡೆಯುತ್ತಿದ್ದು, ಒಂದೆಡೆಯಲ್ಲಾದ ಶೋಧಗಳಿಂದ ಇನ್ನೊಂದೆಡೆಯ ಜನರೂ ಲಾಭಹೊಂದುತ್ತಿರುವದು ಒಕ್ಕಲತನದ ಐಕ್ಯದ ಗುಟ್ಟಾಗಿರುತ್ತದೆ.

---

[ ಮೇಲಿನ ಬರೆಹದಿಂದ ಕೆಲಮಾತುಗಳು ಗೊತ್ತಾಗುತ್ತಿವೆ: ಕನ್ನಡಿಗರು ಈ 'ಕೃಷಿಸಂಶೋಧನಮಂದಿರ'ದ ಲಾಭವನ್ನು ಪಡೆದುಕೊಂಡಿಲ್ಲ—ಅಥವಾ ಸರಕಾರವು ಅವರಿಗೆ ಅದನ್ನು ದಯಪಾಲಿಸಿಲ್ಲ. ಮೈಸೂರ ಸಂಸ್ಥಾನವು ನಿಜಾಂ ಸರಕಾರವು 'ವಂತಿಗೆ'ಯನ್ನು ಕೊಟ್ಟು, ಅಲ್ಲಿಯ ಸಂಶೋಧನದ ಪ್ರಯೋಜನಗಳಲ್ಲಿ ಭಾಗಿಗಳಾಗುತ್ತಿರುವುದು ಸಂತೋಷದ ವಿಷಯ. ನಾವೀಗ ಬ್ರಿಟಿಶ್ ಕರ್ನಾಟಕದ ವಿಷಯವಾಗಿ ಮಾತನಾಡುತ್ತಿದ್ದೇವೆ. ಉತ್ತರಕರ್ನಾಟಕವು ಕೃಷಿಪ್ರಧಾನವು. ಹತ್ತಿ, ಗೋದಿ ಮೊದಲಾದ ವಿವಿಧ ಬೆಳೆಗಳನ್ನು ಬೆಳೆಯುತ್ತದೆ. ಮೊನ್ನೆ ಮೊನ್ನೆ ಜಾರ್ಜ ಬಾದಶಹರು ರತ್ನಾಗಿರಿಯತ್ತ ಕಡೆಯ ಕಲಮಿ ಮಾವಿನಹಣ್ಣುಗಳನ್ನು ಸೇವಿಸಿ ಸಂತುಷ್ಟರಾದರೆಂದು ವರ್ತಮಾನ ಬಂದಿದೆ. ನಮಗೆ ಗೊತ್ತಿದ್ದ ಮಟ್ಟಿಗೆ ಧಾರವಾಡ, ಹುಬ್ಬಳ್ಳಿ. ಗದಗು ಮೊದಲಾದ ಕಡೆಯ ಕಲಮಿ ಮಾವಿನಹಣ್ಣುಗಳು ಬೆಂಗಳೂರಿನ ಮತ್ತು ಬೇರೆ ಕಡೆಯ ಕಲಮುಗಳಿಗಿಂತ ಮೇಲ್ತರಗತಿಯವಲ್ಲದೆ, ಆಫೂಸಿನ ಜಾತಿಯೊಡನೆಯೂ ಸ್ಪರ್ಧಿಸಬಲ್ಲವು. ಇವುಗಳಿಗೆ ಪೇಟೆಯನ್ನು ದೊರಕಿಸುವ ವಿಷಯದಲ್ಲಿಯಾಗಲಿ, ಇವುಗಳನ್ನು ಪರದೇಶಕ್ಕೆ ಕಳಿಸುವ ಬಗೆಗಾಗಲಿ ಯಾವ ಏರ್ಪಾಟುಗಳು ಮಾಡಲ್ಪಟ್ಟವೆ ? ಜನರು ತಾವಾಗಿ ಸಂಶೋಧನದಲ್ಲಿ ಎಷ್ಟು ಆಸಕ್ತಿಯನ್ನು ತೋರಿಸಿದ್ದಾರೆ, ಸರಕಾರದವರು ಅವರಿಗೆ ಎಷ್ಟು ಉತ್ತೇಜನವನ್ನು ಕೊಟ್ಟಿದ್ದಾರೆ, ನಮ್ಮ ಕೆರೆಕಾಲುವೆಗಳ ಬಗ್ಗೆ ಏನು ಪ್ರಯತ್ನವು ಮಾಡಲ್ಪಟ್ಟಿದೆ— ಈ ಎಲ್ಲ ಅಂಶಗಳು ವಿಚಾರಣೀಯವಾಗಿವೆ. ಸಂ. ಜ. ಕ. ]

CC-0. Jangamwadi Math Collection. Digitized by eGangotri

# ಲಕ್ಷ್ಮೀಶಕವಿಯು ಚಿತ್ರಿಸಿರುವ ಸ್ತ್ರೀಪಾತ್ರಗಳು

ಲೇಖಕರು:—ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರು ಎಂ. ಎ. ಎಲ್ ಎಲ್. ಬಿ. ಬೆಂಗಳೂರು

ಪ್ರಮೀಳೆ:– ಸ್ತ್ರೀರಾಜ್ಯದ ಒಡತಿಯಾದ ಪ್ರಮೀಳೆಯ ಪಾತ್ರವು ಕೇವಲ ಕಲ್ಪಿತವಾದ ಮಾದರಿಯಾಗಿ ಚಿತ್ರಿತವಾಗಿದೆಯೋ, ಇಲ್ಲವೆ ಊಹೆ ಉತ್ಪ್ರೇಕ್ಷೆಗಳಿಂದ ತುಂಬಿ ಜನಜನಿತವಾಗಿ ಹರಡಿದ್ದ "ಸ್ತ್ರೀಮಲೆಯಾಳ"ದ ಕಟ್ಟುಕಥೆಗಳ ಆಧಾರದ ಮೇಲೆ ಚಿತ್ರಿತವಾಗಿದೆಯೋ ತಿಳಿಯದು. ಒಂದು ವೇಳೆ ಕಲ್ಪಿತವಾದ ಮಾದರಿಯಾಗಿ ಅದು ಚಿತ್ರಿತವಾಗಿದ್ದರೂ ಕವಿಯು ಸ್ತ್ರೀಜಾತಿಗೇ ಅನ್ಯಾಯಮಾಡಿದ್ದಾನೆ. ಏಕೆಂದರೆ ಅವಳ ರಾಜ್ಯದ ಹೆಂಗಸರೆಲ್ಲರೂ ವಿಷಕನ್ಯೆಯರೆಂದೂ, ಅವರನ್ನು ಸೇರಿದವರೆಲ್ಲರೂ ಮೃತರಾಗುವರೆಂದೂ ಹೇಳಿರುವುದು ಯುಕ್ತವಲ್ಲ.

> "ವಿಷಕನ್ನಿಕೆಯರಿವರ್ಕಂಡ ಮಾತ್ರದೋಳಾಕ–।
> ರುಷಣಮಂ ಮಾಡುವರ್ಬೆರಸಿದೊಡೆ ಪುರುಷನಾ–
> ಯುಷವನಪಹರಿಪರಿದು ಸಿಕ್ಷ್ಟಯಂ ನೀವಿಲ್ಲಿ
> ಮರೆದಾದೊಡಂ ಮನದೊಳು ॥
> ವಿಷಯಕೆಳಸದೆ ಬುದ್ಧಿವಂತರಾಗಿಹುದೆಂದು ।
> ವೃಷಕೇತು ಮೊದಲಾದ ವೀರರ್ಗೆ ನುಡಿದನಸಿ–।
> ಮಿಷನಗರದೊಡೆಯ ಲಕ್ಷ್ಮೀಪತಿಯ ಮೈದುನಂ
> ಕಟಕದೊಳ್ಸಾರಿಸಿದನು ॥"

ಎಂಬ ಪದವನ್ನೋದಿದಾಗ ಕವಿಯಲ್ಲಿ ಪರಾಮರ್ಶಬುದ್ಧಿಯೇ ಇಲ್ಲದೆ ಹೋಯಿತೆಂದು ವಿಷಾದವಾಗುತ್ತದೆ. ಕವಿಯು ಸ್ತ್ರೀರಾಜ್ಯವನ್ನೂ, ಅಲ್ಲಿಯ ವೀರರಮಣಿಯರನ್ನೂ ವರ್ಣಿಸಿ ತೃಪ್ತನಾಗಿದ್ದರೆ ಬಹು ಚೆನ್ನಾಗಿದ್ದಿತು. ಲಕ್ಷ್ಮೀಪತಿಯ ಮೈದುನನು ಕಟಕದಲ್ಲಿ ಹೀಗೆ ಸಾರಿಸಿದನೆಂದ ಮೇಲೆ ವೃಷಕೇತು ಮೊದಲಾದ ವೀರರ ಶೀಲಶುದ್ಧಿಯು ಕೂಡ ಸಂಶಯಾಸ್ಪದವಲ್ಲವೇ? ಸ್ತ್ರೀರಾಜ್ಯದಲ್ಲಿ ಅವರು "ಮರೆದಾದೊಡಂ ಮನದೊಳು ವಿಷಯಕೆಳಸದೆ ಬುದ್ಧಿವಂತ"ರಾಗಿರಬೇಕೆಂದ ಮೇಲೆ, ಧ್ವನಿಯಿಂದ ವ್ಯಕ್ತವಾಗುವ ಸಬಳದ ಮೊನೆಯನ್ನು ನೋಡೋಣ. ಅವರು ಇತರ ಕಡೆಗಳಲ್ಲಿ ಅಷ್ಟೇನೂ ಶೀಲಶುದ್ಧಿಯನ್ನಿಟ್ಟುಕೊಂಡಿರಲಿಲ್ಲವೆಂದು ಕೂಡ ಇದರಿಂದ ತೋರುವುದಿಲ್ಲವೆ? ವೃಷಕೇತುವಿನ ಪ್ರಿಯವಲ್ಲಭೆಯು—ಪ್ರೇಮಪುತ್ಥಳಿಯಾದ ಕಿಶೋರವಯಸ್ಸಿನ ಆ ವೀರರಮಣಿಯು–ಅವನನ್ನು ಯಾವ ಮಾತುಗಳಿಂದ ಬೀಳ್ಕೊಟ್ಟಿದ್ದಾಳೆಂಬುದನ್ನು ನಾವು ಹಿಂದೆಯೇ ನೋಡಿದ್ದೇವೆ. ಅವಳ ಮನೋವಲ್ಲಭನಾದ ವೃಷಕೇತುವಿನ ವಿಚಾರದಲ್ಲಿ ಒಂದು ಮನೋಜ್ಞವಾದ ಭಾವನೆಯನ್ನಿಟ್ಟುಕೊಂಡು ಅವನನ್ನು ಹೃದಯಸಿಂಹಾಸನದಲ್ಲಿ ಕುಳ್ಳಿರಿಸಿಕೊಂಡಿರುತ್ತೇವೆ. ಅಂತಹವನನ್ನು ಕೆಸರಿನಲ್ಲಿ ಅದ್ದುವುದಾಗಿಯೂ ಇಡೀ ಸ್ತ್ರೀಜಾತಿಗೇ ಅನ್ಯಾಯಮಾಡುವುದಾಗಿಯೂ ಇರುವ ಈ ಪದ್ಯವನ್ನು ಕವಿಯು ಬರೆಯದೆ ಹೋಗಿದ್ದರೆ ಯಾವ ನಷ್ಟವೂ ಇರುತ್ತಿರಲಿಲ್ಲ. ಇನ್ನು "ಸ್ತ್ರೀಮಲೆಯಾಳ"ದ ಕಟ್ಟುಕಥೆಗಳ ಆಧಾರದ ಮೇಲೆ ಸ್ತ್ರೀರಾಜ್ಯವು ಚಿತ್ರಿತವಾಗಿದ್ದರಂತೂ, ಸ್ತ್ರೀಜಾತಿಗೆ ಅನ್ಯಾಯ ಮಾಡುವುದರ ಜೊತೆಗೆ ಮಲೆಯಾಳ ರಾಜ್ಯದ ವನಿತೆಯರಿಗೆ ಅಗೌರವವನ್ನು ಮಾಡಿದಂತೆಯೂ ಆಯಿತು. ಕವಿಯು ಸಮುದ್ರವನ್ನು ನೋಡದೆಯೇ ಪುಸ್ತಕಗಳಲ್ಲಿ ಸಮುದ್ರದ ವರ್ಣನೆಗಳನ್ನು ಓದಿಕೊಂಡು ತನ್ನ ಗ್ರಂಥದಲ್ಲಿ ಸಮುದ್ರವನ್ನು ವರ್ಣಿಸಿರುವುದನ್ನಾದರೂ ಸಹಿಸಬಹುದು. ಆದರೆ ಕವಿಯು ಬೀಭತ್ಸರಸಭರಿತವಾದ ಬೀದಿಯ ಮಾತುಗಳನ್ನೇ ನಂಬಿ, ಕಾಲಿಲ್ಲದ ಕಟ್ಟುಕಥೆಗಳನ್ನೇ ಕೊರಳಗಳನ್ನೇ ಮಾಲೆಯಾಗಿ ಮಾಡಿ, ಕವಿತೆಯ ಮಾಲಿಕೆಯೆಂಬ ಭ್ರಾಂತಿಯಿಂದ ಓದುವವರ ಕೊರಳಿಗೆ ನೇಣುಬಿಗಿದಿರುವುದು ಮಾತ್ರ ಅಕ್ಷಮ್ಯವಾದ ಅಪರಾಧವೇ ಸರಿ. ಏಕೆಂದರೆ,

> "ಮರಣಮಹುದೆಂದರಿದು ವಡಮುರಿದ ವಲ್ಲಭನ।
> ಚರಣಕೆರಗುವರೊಡಂಬಡಿಸುವರ್ದೈನ್ಯದಿಂ ।
> ಕರುಣಭಾವಂಗಳಂ ತೋರುವರ್ಮೀರಿದೊಡೆ
> ಚೀರುವರ್ಘಾತಿಸುವರು ॥



CC-0. Jangamwadi Math Collection. Digitized by eGangotri

ಅರುಣಾಧರದ ಚುಂಬನವನಿತ್ತು ಕರಜಪ್ರ–।
ಹರಣದಿಂ ಕಲೆಗಳಂ ತುಡುಕಿ ಸೊಗಸಂ ಬಲಿದು ।
ಹರಣಮಳಿವಲ್ಲಿ ಪರಿಯಂತರಂ ಬಿಡರವನ–
ನಲ್ಲಿಯ ಪಿಶಾಂಗನೆಯರುರು ॥ ''

ಎಂಬ ಪದ್ಯವನ್ನೋದಿದರೆ ಮತ್ತಾವ ಅಭಿಪ್ರಾಯವನ್ನು ಸೂಚಿಸುವುದೂ ಸಾಧ್ಯವಿಲ್ಲ. ಯಾವುದೊಂದು ದೇಶದಲ್ಲಿಯೇ ಆಗಲಿ ಕುಲಟೆಯರಾದ ಸ್ತ್ರೀಯರೂ ಕೆಲವರಿರಬಹುದು. ಆದರೆ ಒಂದು ರಾಜ್ಯದಲ್ಲಿಯೇ ಕೊಲೆಪಾತಕಿಯರಾದ ಪಿಶಾಂಗನೆಯರು ತುಂಬಿರುವರೆಂದು ವರ್ಣಿಸುವುದು ಅನ್ಯಾಯವೆನ್ನಲು ಅಡ್ಡಿಯಿಲ್ಲ. ಆದರೂ ಪ್ರಮೀಳೆಯ ದರ್ಪವನ್ನೂ ಮತ್ತು ಅವಳ ಪ್ರಜೆಗಳಾದ ನಾರಿಯರ ಶೌರ್ಯಸಾಹಸಗಳನ್ನೂ ಅರ್ಜುನನು ಹಿಂಬಾಲಿಸುತ್ತ ಬಂದ ಯುಧಿಷ್ಠಿರನ ಯಜ್ಞಾಶ್ವವನ್ನು ಕಟ್ಟಿದ ಅವರ ಅಥಟನ್ನೂ ಕವಿಯು ಮನೋಹರವಾಗಿ ಬಣ್ಣಿಸಿದ್ದಾನೆ. ವೀರಾಗ್ರಣಿಗಳಲ್ಲೊಬ್ಬನಾದ ಅರ್ಜುನನೊಡನೆ ತನಗೆ ಕಾಳಗವು ಕೈಗಟ್ಟುವುದೆಂಬುದನ್ನು ತಿಳಿದು ತಿಳಿದೂ ಪ್ರಮೀಳೆಯು ಯಜ್ಞದ ಕುದುರೆಯನ್ನು "ನಸುನಗುತ ಲಾಯದೊಳ್ಕಟ್ಟಿಸಿ" ಭದ್ರಾಸನವನ್ನಿಳಿದು ಸಂಗ್ರಾಮಕ್ಕೆ ಹೊರಡುವ ಸೊಬಗನ್ನು ಎಲ್ಲರೂ ಮೆಚ್ಚಿ ಕೊಂಡಾಡಲೇ ಬೇಕು.

" ತೆಗೆದುಟ್ಟ ಚಲ್ಲಣದ ಬಿಗಿದ ಮೊಲೆಕಟ್ಟುಗಳ।
ವೊಗರೊಗುವ ವೇಣಿಗಳ ಮೃಗಮದದ ಬೊಟ್ಟುಗಳ।
ತಿಗುರಿದನುಲೇಪನದ ಮಘಮಘಿಪ ಕಂಪುಗಳ
ಝುಗಝುಗಿಸುವಾಭರಣದ ॥
ನಗೆಮೊಗದ ಮಿಂಚುಗಳ ದೃಗುಯುಗಳ ಕಾಂತಿಗಳ।
ಮಿಗೆ ತೊಳಗುವಂಘ್ರಿಗಳ ಸೊಗಯಿಸುವ ಬಾಹುಗಳ।
ಬಗೆಬಗೆಯ ಕೈದುಗಳ ವಿಗಡೆಯರ್ನೆರೆದು ಕಾಳಗಕೆ
ಮುಂಕೊಳುತಿರ್ದರು ॥ "

ಎಂಬ ಪದ್ಯವನ್ನೋದುವಾಗ ಕೋಮಲೆಯರಾದರೂ ಕಾಠಿನ್ಯವನ್ನು ಹೊರಹೊಮ್ಮಿಸಿ ಕೆಚ್ಚೆದೆಯ ಕಟ್ಟಾಳು ತನದಿಂದ ಕೂಡಿ, ಮಂದಹಾಸದಿಂದಲೇ ಸಾವನ್ನು ಅಪ್ಪುವುದಕ್ಕೆ ಸಿದ್ಧರಾಗಿ ಮುಂದೆ ಸಾಗುತ್ತಿರುವ ವೀರವನಿತೆಯರ ಸಮೂಹವು ನಮ್ಮ ಮನೋನೇತ್ರದ ಮುಂದೆ ಪಸರಿಸಿ, ನಮ್ಮ ಹೃದಯಕ್ಕೆ ಹಬ್ಬವನ್ನೊದಗಿಸುವುದು. ಅವರೆಲ್ಲರಿಗೂ ಅಧಿಷ್ಠಾತೃವಾಗಿ ಮುಖಕಾಂತಿಯಿಂ ಕಳಕಳಿಸುತ್ತಿರುವ ಪ್ರಮೀಳೆಯ ಸೊಬಗನ್ನಂತೂ ಹೇಳಲಳವಲ್ಲ. ಅವಳು ಅರ್ಜುನನನ್ನು ನಗುವೊಗದಿಂದ ಮಾತನಾಡಿಸಿ " ಫಲುಗುಣಂ ನೀನೆ ಸನ್ನಿಶ್ಚಮಂ ತಪ್ಪಿದ ನಾಂ। ಛಲವೊ ವಿನಯವೊ ಬಿಡಿಸಿಕೊಂಬ ಬಗೆಯಾವುದಿನ್ನು " ಎಂದು ಕೇಳುವಳು. ಇದಕ್ಕೆ ಉತ್ತರವಾಗಿ ಕವಿಯು ಅರ್ಜುನನಿಂದ

" ನಾರಿಯೋಳ್ಕಾಳಗವೆ ತನಗಕಟ ಕಡುಗಿಪುದ।
ನಾರಿಯೋಳ್ಕಾದಿದುಗ್ಗಡದ ಸಿಜಕಾರ್ಮುಕದ।
ನಾರಿಯೋಳ್ಕಣೆಯಂ ತೊಡುವೆನೆಂತೊ ಶಿವಶಿವಾ
ಪರ್ಯಂಕಮಂ ಸಾರ್ದೊಡೆ॥
ನೀರಜಶರಾಹವದೊಳೊದಗುವಡೆ ಕಡು ಜದುರೆ..."

ಎಂದು ಹೇಳಿಸಿ ಶಿವನಿಂದ ಪಾಶುಪತಾಸ್ತ್ರವನ್ನು ಪಡೆದ ಸಾಧಕಶ್ರೇಷ್ಠನಾದಅರ್ಜುನನನ್ನು, ಆತನ ವಿನಯಶೀಲತೆಯನ್ನು ಬಲಿಹೊಡೆದು ಸಂಸ್ಕೃತಿಹೀನರಾದ ಹೀನ ವಿಟರಿಗಿಂತ ಕೀಳಾಗುವಂತೆ ಮಾಡಿದ್ದಾನೆ. ಪ್ರಮೀಳೆಯಂತೂ ಸರಿಯೇ ಸರಿ. ಅವಳು ಅವನಿಗೆ ಕೊಡುವ ಉತ್ತರವು ತುಚ್ಛವರ್ಗದ ಅಭಿಸಾರಿಕೆಯೂ ಲಜ್ಜೆಯಿಂದ ಹೇಸುವಂತಹದು. ಅವರೀರ್ವರ ವಾಗ್ವಾದವೂ ಸ್ವಲ್ಪ ಮುಂದುವರಿದ ಮೇಲೆ ಪ್ರಮೀಳೆಯು ಅರ್ಜುನನೊಡನೆ ಅವನು ತನ್ನ ಸಂಗಡ ಕಾದಿಮಡಿಯಬೇಕೆಂದೂ, ತಪ್ಪಿದರೆ ತನ್ನನ್ನು ವರಿಸಿ ಮಡಿಯಬೇಕೆಂದೂ, ಅಂತೂ ಇವೆರಡರಲ್ಲಿ ಯಾವುದೊಂದು ಮಾರ್ಗದಿಂದಲಾದರೂ ಅವನು ಮಡಿಯಬೇಕೆಂದೂ, ಅವೆರಡರಲ್ಲಿ ಯಾವ ಸಾವಿನ ಮಾರ್ಗವನ್ನು ಬೇಕಾದರೂ ಅವನು ಆರಿಸಬೇಕೆಂದೂ ಸೂಚಿಸಿ,

" ಕಾದಲಂಬಿಂದ ಕೊಂದಪನೀಗಳಲ್ಲದೊಡೆ।
ಕಾದಲಂ ನಿನಗಾಗಿ ಸುರತ ಮೋಹಸಕೆಪ।
ಕ್ಕಾದಲಂಪಿನ ಸೌಖ್ಯಮಂ ತಳೆದ ಒಳಿಕಹುದು
ಮೃತಿತಪ್ಪದೆಂದುಮಳಿವು॥
ಸಾದರದೊಳೆನ್ನೊಡನೆ ರಮಿಸುವುದು ನಿನಗೆ ಸೊಗ-।
ಸಾದರಸುಕರಿಸು ಮೇಣ್ಕಾಲಹವೇ ಬೇಕೆ ಲೇ –
ಸಾದರಥಟಂ ತೋರಿಸೆಂದಾ ಪ್ರಮೀಳೆ........"

ನುಡಿವುದನ್ನು ಕೇಳಿ, ವೀರ ವನಿತೆಯಾದ ಜ್ವಾಲೆಯನ್ನು ಚಿತ್ರಿಸಿದ ಕೈಯಿಂದ ಅರ್ಜನ ಪ್ರಮೀಳೆಯರಿಗೆ ಈ ಬಗೆಯ ಚಿತ್ರವೆ? –ಎಂದು ನಮ್ಮ ಮನಸ್ಸು ವಿಷಾದದಿಂದ ಕಳೆಗುಂದುವುದು. ಅಂತೂ ಅರ್ಜುನನು ಪ್ರಮೀಳೆಯ

CC-0. Jangamwadi Math Collection. Digitized by eGangotri

ಮೇಲೆ ಬಿಟ್ಟ ಬಾಣವನ್ನು— ಸಮ್ಮೋಹನಾಸ್ತ್ರವನ್ನು— ಅವಳು ಕಡಿದು ಮಂದಸ್ಮಿತವದನೆಯಾಗಿ ನಿಲ್ಲುವಳು. ಅರ್ಜುನನು ಮತ್ತೊಂದು ದಿವ್ಯಮಾರ್ಗಣವನ್ನು ಬಿಲ್ಲಿಗೆ ಹೂಡುವನು. ಅವನು ಮಹಾಸ್ತ್ರವನ್ನು ತೊಡಕೂಡ ದೆಂದೂ, ಹತ್ತುಸಾವಿರ ವರ್ಷ ಅವನು ಅವಳೊಡನೆ ಕಾದಿ ದರೂ ಜಯವಾಗದೆಂದೂ, ಅವಳನ್ನು ವರಿಸಿ ದರೆ ಒಳ್ಳೆಯದಾಗುವುದೆಂದೂ ಅಶರೀರವಾಣಿಯಾಗು ವುದು. ಅರ್ಜುನನು ಅದನ್ನಾಲಿಸಿ, ಬಾಣವನ್ನಿಳುಹಿ ವಿವಾಹಕ್ಕೊಪ್ಪುವನು. ಅರ್ಜುನನ ಶೌರ್ಯಕ್ಕೆ ಆಕ ಸ್ಮಿಕವಾಗಿ ಹೀಗೆ ಮುಪ್ಪು ಬರಬಹುದೇ — ಎಂದು ನಮ್ಮ ಮನಸ್ಸು ತಲ್ಲಣಗೊಳ್ಳುವುದು. ಆಧಟನಿಂದ ಶಬರವೇಷಧಾರಿ— ಪರಶಿವನೊಡನೆ ಕಾದಿದ ವೀರಾಗ್ರ ಣಿಯು ಹೀಗೆ ಹೇಡಿಯಾಗದೆ, ಪ್ರಮೀಳೆಯೊಡನೆ ಕಾದಿ ಮಡಿದುಬಿದ್ದು ಅವನ ಮರಣದಿಂದ ಯುಧಿಷ್ಠಿರನ ಯಜ್ಞಕ್ಕೆ ಚ್ಯುತಿಯುಂಟಾಗಿದ್ದರೂ ಲೇಸೆನಿಸುತ್ತಿದ್ದಿ ತೆಂದು ನಮಗೆ ತೋರುತ್ತದೆ. ವೀರಾಗ್ರಣಿಯಾಗಿದ್ದ ವನು ವಿಟನಿಗಿಂತಲೂ ಕೀಳಾದುದಕ್ಕಾಗಿ ಸಂಕಟವಾಗು ವುದು. ಅಂತಹ ಅರ್ಜುನನನ್ನು ವರಿಸಲು ಒಪ್ಪಿದ ಪ್ರಮೀ ಳೆಯು ತುರಗವನ್ನು ಕಟ್ಟಿದರ್ಶನ ವೀರಭಾಮಿನಿಯಲ್ಲ. ಹೇಡಿಯಂತೆ ಶರಣಾಗತಳಾಗಿ ಯಮನಂದನನನ್ನು ಕಾಣುವ ತವಕದಿಂದ ವಿವಿಧರತ್ನಾಳಿಗಳೇ ಮುಂತಾದ ಕಾಣಿಕೆಗಳೊಡನೆ ಹೊರಡುವ ಪ್ರಮೀಳೆಯು ಅದಕ್ಕೆ ಬದಲಾಗಿ ಶೌರ್ಯರತ್ನದ ಕೈಗಾಣಿಕೆಯೊಡನೆ ಯಮ ನನ್ನೇ ಕಾಣುವುದಕ್ಕಾಗಿ ರಂಗಭೂಮಿಯಲ್ಲಿ ದೇಹವನ್ನು ಈಡಾಡಿದ್ದರೆ ಬಹಳ ಸೊಗಸಾಗಿರುತ್ತಿದ್ದಿತು.

**ಚಿತ್ರಾಂಗದೆ:—** ಅರ್ಜುನನು ತೀರ್ಥಯಾತ್ರೆಗೆ ಬಂದಿದ್ದಾಗ ಉಲೂಪಿ, ಚಿತ್ರಾಂಗದೆಯರೆಂಬ ನಾಗ ಕನ್ನಿಕೆಯನ್ನು ವರಿಸಿ ಅವರೊಡನೆ ಕೆಲಕಾಲ ಸುಖದಿಂದ ಇದ್ದು ಹೋಗುವನು. ಚಿತ್ರಾಂಗದೆಯು ಬಭ್ರುವಾಹನ ನೆಂಬ ವೀರಪುತ್ರನನ್ನು ಪಡೆಯುವಳು. ಬಭ್ರುವಾಹ ನನು ಮಣಿಪುರದಲ್ಲಿ ಪ್ರಭುತ್ವಮಾಡುತ್ತಿರುವಲ್ಲಿ, ಚಿತ್ರಾಂಗದೆಯು ಅರ್ಜುನನ "ಗುಣಾವಳಿಗಳಂ ಸತತಂ ನೆನೆದು ಚಿಂತಿಸುವ" ಪತಿಪರಾಯಣೆ; ಆದರೆ ಅರ್ಜುನನ ಮೇಲಣ ಪ್ರೀತಿಯೊಂದನ್ನು ಬಿಟ್ಟರೆ, ಅವಳಲ್ಲಿ ಉತ್ತಮ ತರಗತಿಯ ಮತ್ತಾವ ಸದ್ಗುಣವೂ ಇಲ್ಲ. ಹೆಚ್ಚೇಕೆ? ಒಂದು ದೃಷ್ಟಿಯಿಂದ ನೋಡಿದರೆ ಸ್ತ್ರೀಯು ಅರಳಿದ ಹೂವಿನಂತೆ ಕಂಗೊಳಿಸುವುದಕ್ಕೆ ಪತಿಪ್ರೇಮದ ಜೊತೆಗೆ ಅತ್ಯಾವಶ್ಯಕವಾಗಿರಬೇಕಾದ ಮತ್ತಾವ ಗುಣವೂ ಅವಳ ಲ್ಲಿಲ್ಲ. ಸತ್ಯಭಾಮೆಯ ರಸಿಕತನವಾಗಲಿ, ಜ್ವಾಲೆಯ ಕ್ಷಾತ್ರತೇಜವಾಗಲಿ, ಪ್ರಭಾವತಿಯ ಸರಳತೆಯಾಗಲಿ, ಪ್ರಮೀಳೆಯ ದರ್ಪವಾಗಲಿ, ಸೀತಾದೇವಿಯ ವಿಶ್ವ ಸ್ನೇಹದ ಸಾತ್ತ್ವಿಕಸ್ವಭಾವವಾಗಲಿ ಚಿತ್ರಾಂಗದೆಯಲ್ಲಿಲ್ಲ. ಅವಳ ಮಗನಾದ ಬಭ್ರುವಾಹನನ ವಿಷಯದಲ್ಲಂತೂ ಅವನ ಜನ್ಮಾಂತರದ ದುಷ್ಕರ್ಮಫಲವೇ ತಾಯಿಯ ರೂಪವನ್ನು ಧರಿಸಿ ಅವನನ್ನು ಕಾಣುವಂತೆ ತೋರುತ್ತದೆ.

ವೀರಶ್ರೇಷ್ಠನಾದ ಅವನ ಹೃದಯವನ್ನರಿಯದೆ, ಶ್ಲಾಘ ನೀಯವಾದ ಅವನ ವರ್ತನೆಯನ್ನೂ ಹಳಿದು ಹಳಿದು, ಅವನ ಕರುಳನ್ನು ಕೊರೆಯುವಂತಹ ಕಟಕಿವಾತಿನ ಸುರಿ ಮಳೆಯನ್ನು ಸುರಿಸುವ ಚಿತ್ರಾಂಗದೆಯ ಹೀನಗುಣ ವನ್ನು ಕವಿಯು ಬಹು ಚೆನ್ನಾಗಿ ತೋರ್ಪಡಿಸಿರುವನು. ಅರ್ಜುನನ ಸೈನ್ಯವು ಅನುಸರಿಸಿ ಬರುತ್ತಿರುವ ಯಜ್ಞಾ ಶ್ವವು ಬಭ್ರುವಾಹನನ ರಾಜ್ಯಕ್ಕೆ ಬರುವುದು. ಕ್ಷಾತ್ರ ತೇಜದಿಂದ ಕೂಡಿರುವ ಬಭ್ರುವಾಹನನು ಕುದುರೆ ಯನ್ನು ಕಟ್ಟಿಹಾಕಿಸಿ, ಯುದ್ಧಸನ್ನದ್ಧನಾಗುವನು. ಅತ್ತ ಅಂತಃಪುರದಲ್ಲಿ ಈ ವೃತ್ತಾಂತಗಳನ್ನೆಲ್ಲವನ್ನೂ ಕೇಳಿದ ರಾಜಮಾತೆಯಾದ ಚಿತ್ರಾಂಗದೆಯು 'ಸಂತೋ ಷಮಂ ತಾಳ್ದು ತನಯನೋಲಗಕೆ' ಭರದಿಂದ ತೆರಳು ವಳು. ಬಭ್ರುವಾಹನು ಮಾಡಿರುವ ವೀರೋಚಿತವಾದ ಕಾರ್ಯವನ್ನು ನೆನೆದುದು ಅವಳ ಸಂತೋಷಕ್ಕೆ ಕಾರ ಣವಲ್ಲ. ಅರ್ಜುನನನ್ನು ಕಾಣುವ ಸುಯೋಗವು ಲಭಿಸಿ ತೆಂಬ ವಿರಹಿಣಿಯ ಸಂತೋಷವೇ ಹೊರತು ವೀರಶ್ರೀಯ ಆರಾಧಕಳಾದ ವೀರವನಿತೆಯ ಸಂತೋ ಷವು ಅವಳದಲ್ಲ. ತಾನು ಬಭ್ರುವಾಹನನನ್ನು ಭಂಗಿಸಿ, ಯಜ್ಞಾಶ್ವವನ್ನು ಅವನು ಅರ್ಜುನನಿಗೆ ಒಪ್ಪಿಸುವಂತೆ ಮಾಡಿ, ಪತಿಯೊಡನೆ ಸುಮ್ಮಾನಸಾಗರದಲ್ಲಿ ತೇಲಾಡು ವುದಾಗಿ ಅವಳು ಸುಖದ ಕನಸುಗಳನ್ನು ಕಾಣತೊಡಗಿ ದುದೇ ಅವಳು "ಸಂತೋಷಮಂ ತಾಳ್ದು ತನಯನೋ ಲಗಕೆ ಭರದಿಂ" ತೆಳರ್ದುದಕ್ಕೆ ಕಾರಣ. ಮಾತೆಯು ಬಂದುದಕ್ಕೆ (ಸತ್ಪುತ್ರನಾದ) ಬಭ್ರುವಾಹನನು ಇದಿ ರೆದ್ದು ಭಕ್ತಿಯಿಂದ ನಿಂತಿರುವನು. ಬಭ್ರುವಾಹನನಿಗೆ

CC-0. Jangamwadi Math Collection. Digitized by eGangotri

ವ್ಯಥೆಯಾಗುವಂತೆ " ಕುಂತೀಕುಮಾರನ ವಾಜಿಯಂ ಕಟ್ಟಿದೈ ಲೇಸುಮಾಡಿದೆ" ಎಂದು ಕಟಕಿವಾತುಗಳನ್ನಾಡುವಳು. ಆ ಬಳಿಕ ಚಿತ್ರಾಂಗದೆಯು,

" ಕ್ಷುದ್ರಬುದ್ಧಿಯನೆಲ್ಲಿ ಕಲಿತೆ ನೀನೀಪರಿ ಗು– ।
ರುದ್ರೋಹಕೆಂತೊಡರ್ದುದು ನಿನ್ನ ಮನಮಕಟ ।
ಮದ್ರಮಣನಾಗಮಂ ನಿನಗೆ ವಿರಹಿತಮಾದುದಾ—
ತನುದರದೊಳೆ ಜನಿಸಿ ॥

ಉದ್ರೇಕದಿಂದ ಕಟ್ಟಿದೆಯೆಲಾ ತುರಗಮಂ ।
ಭದ್ರಮಾದುದು ರಾಜಕಾರ್ಯವೆಂದು..........."

ಎಂದು ಭಂಗಿಸುವಳು. ಅವಳ ಪತಿಪ್ರೇಮವು ಶ್ಲಾಘ್ಯತರವಾದುದು. ಆದರೂ ಬಭ್ರುವಾಹನನನ್ನು ಅವಳು ಹಂಗಿಸಿ, ಭಂಗಿಸಿ, ದೂರಬೇಕಾದ ಆವಶ್ಯಕತೆಯೇ ಇರಲಿಲ್ಲ. ಅರ್ಜುನನ ಮೇಲೆ ಅವಳಿಗಿರುವ ಪ್ರೇಮಕ್ಕಾಗಿ ಅವಳನ್ನು ಅಭಿನಂದಿಸಲೇ ಬೇಕು. ಆದರೂ ತಾಯಿಯ ಹೃದಯವೇ ಅವಳಿಗಿಲ್ಲದೆ ಹೋಯಿತೆಂದು ವಿಷಾದಪಡಲೂ ಬೇಕು.

" ಅಮೃತಕೆ ಸಮುದ್ರಮಂ ಮಥಿಸೆ ವಿಷಮುದಯಿಸಿದೊಲಾಯ್ತು ನಿನ್ನುದ್ಭವಂ ತನಗೆಂದಳು "

ಎಂಬುದನ್ನು ಓದಿದಾಗ, ಇಂತಹುದೇ ಸನ್ನಿವೇಶದಲ್ಲಿ ರಾಮಚಂದ್ರನೇ ಮುಂತಾದವರನ್ನು ಸೋಲಿಸಿ ಅವರ ಆಭರಣಗಳನ್ನು ತಂದ ತನ್ನ ಮಗನನ್ನು ನೋಡಿ ಸೀತಾದೇವಿಯು ವರ್ತಿಸುವ ಬಗೆಯನ್ನು ಇದೇ ಕವಿಯು ವರ್ಣಿಸಿರುವ ವೈಖರಿಯನ್ನು ನೆನೆದು, ಕ್ಷಾತ್ರತೇಜದ ತಮೋಗುಣ, ರಜೋಗುಣಗಳ ಸೋಂಕೇ ಇಲ್ಲದೆ, ಕ್ಷಾತ್ರತೇಜದ ಸಾತ್ತ್ವಿಕತೆಯ ಶಾಂತಿಸೌರಭದಿಂದ ಕೂಡಿರುವ ಸೀತಾದೇವಿಯ ಪದಕಮಲಗಳಿಗೆರಗಿದ ನಮ್ಮ ಮನಸ್ಸು ಭಕ್ತಿನಮ್ರವಾಗಿ ಜಗನ್ಮಾತೆಯನ್ನು ಕೊಂಡಾಡುವುದು. ಅಂತೂ ಅರ್ಜುನನನ್ನು ವರಿಸಿಯೂ ಬಭ್ರುವಾಹನನಂತಹ ವೀರಪುತ್ರನನ್ನು ಪ್ರಸವಿಸಿಯೂ, ಚಿತ್ರಾಂಗದೆಯು ಕ್ಷಾತ್ರತೇಜದ ಲವಲೇಶವನ್ನೂ ಅರಿಯದ ಮುಗ್ಧವನಿತೆಯಾಗಿರುವಳು. " ಕ್ಷತ್ರಿಯರ ಪಂಥದಿಂದಾತನ ತುರಂಗಮಂ ಕಟ್ಟಿದೆಂ " ಎಂಬ ಬಭ್ರುವಾಹನನ ಮಾತುಗಳನ್ನು ಕೇಳಿಯೂ ಇವಳು ಅವನ ಆಶಯವನ್ನು ಗ್ರಹಿಸಲಾರದೆ ಆಕ್ರೋಶದಿಂದಲೇ ನಿಂತಿರುವಳು. ಮಾತೃಭಕ್ತನಾದ ಬಭ್ರುವಾಹನನು ಅವಳು ಪ್ರೀತಿಯಿಂದ ಬೆಸೆಸಿದುದನ್ನು ತಾನು ಮಾಡುವುದಾಗಿ ಹೇಳುವನು. ಹಿಂದೆ ಅರ್ಜುನನು ತನ್ನನ್ನು ಅಗಲಿ ಹೊರಟು ಹೋದ ಕಾಲದಿಂದಲೂ ತಾನು (ಅವನನ್ನು ಅಗಲಿದ) ಸಂತಾಪದಿಂದ ತಪಿಸುತ್ತಿದ್ದುದಾಗಿಯೂ ತನ್ನ ಪುಣ್ಯದಿಂದ ಅವನು ಈಗ ಬಂದಿರುವುದಾಗಿಯೂ ಬಭ್ರುವಾಹನನು ಸರ್ವಸ್ವವನ್ನೂ ತಂದೆಯಂಘ್ರಿಗೆ ಸಮರ್ಪಿಸಿದರೆ ತಾನು ಮಾಡಿದ " ತಪೋನಿಷ್ಠೆ " ಸಫಲವಾಗುವುದಾಗಿಯೂ ಅವಳು ಸೂಚಿಸುವಳು. ನಿರಪರಾಧಿಯಾದ ಬಭ್ರುವಾಹನನ ವಿಷಯದಲ್ಲಿ ಬಿರುನುಡಿಗಳನ್ನಾಡದೆಯೇ ಅವಳು ಈ ಅಂಶಗಳನ್ನು ತಿಳಿಸಬಹುದಾಗಿದ್ದಿತು. ವಿರಹಕಾತರತೆಯೂ ತಪೋನಿಷ್ಠೆಯೆಂದು ಅವಳ ಅಭಿಪ್ರಾಯ. ಅವಳು ನಿಜವಾಗಿಯೂ ತಪೋನಿಷ್ಠೆಯನ್ನರಿತಿದ್ದರೆ ಅವಳೆಂದಿಗೂ ಬಭ್ರುವಾಹನನನ್ನು ಆರೀತಿ ಭಂಗಿಸುತ್ತಿರಲಿಲ್ಲ. ಬಭ್ರುವಾಹನನು ಮಾತೆಯನ್ನು ಅಂತಃಪುರಕ್ಕೆ ಕಳುಹಿಸಿದ ಬಳಿಕ ತನ್ನ ಮಂತ್ರಿಗಳೊಡನೆ (ಅರ್ಜುನನನ್ನು ಕಾಣುವುದು ಉಚಿತವೋ ಅನುಚಿತವೋ ಎಂದು) ಮಂತ್ರಾಲೋಚನೆ ಮಾಡಿ, ಕೊನೆಗೆ ಅರ್ಜುನನ ಬಳಿಗೆ ಹೋಗಿ ಶರಣಾಗತನಾಗುವುದಾಗಿ ತಿಳಿಸಿ, ಅರ್ಜುನನಿಂದ ಬೈಗಳನ್ನು ಕೇಳಿ ಕಳೆಗುಂದಿ ಹಿಂದಿರುಗುವನು. ಅರ್ಜುನನು ಅಭಿಮನ್ಯುವೊಬ್ಬನೇ ತನ್ನ ಮಗನೆಂದೂ, ಬಭ್ರುವಾಹನನಂತಹ ಹಂದೆಯು ತನ್ನ ಮಗನಾಗಿರಲಾರನೆಂದೂ, ಅವನು ನಿಜವಾಗಿಯು ತನ್ನ ಮಗನಾಗಿದ್ದರೆ ಕುದುರೆಯನ್ನು ಒಪ್ಪಿಸುತ್ತಿರಲಿಲ್ಲವೆಂದೂ ಕರ್ಣಕಠೋರವಾಗಿ ಅವನನ್ನು ಜರಿಯುವನು. ಬಭ್ರುವಾಹನನು ಕಾಳಗವನ್ನು ಕೊಡುವುದೇ ಸರಿಯೆಂದು ನಿಶ್ಚೈಸಿ ಹಿಂತಿರುಗುವನು. ಘೋರವಾಗಿ ಯುದ್ಧವು ನಡೆಯುವುದು. ಬಭ್ರುವಾಹನನ ಮುಡಿಗೆಯಲ್ಲಿ ಕೂರಂಬಾಗಿ ಸೇರಿದ್ದ ಜ್ವಾಲೆಯ ದೆಸೆಯಿಂದ ಅರ್ಜುನನು ಮೃತನಾಗುವನು. ಬಭ್ರುವಾಹನನು ಅರಮನೆಗೆ ಹಿಂತಿರುಗುವನು. ಪತಿಯು ಮೃತನಾದನೆಂದು ಕೇಳಿ ಉಲೂಪಿಚಿತ್ರಾಂಗದೆಯರು ರೋದಿಸುವರು. ಅವರ ದುಃಖದಲ್ಲಿ ಅನುಕಂಪವನ್ನು ತೋರುವುದು ಯುಕ್ತವಾದರೂ, ಚಿತ್ರಾಂಗದೆಯು

" ಲೇಸನಾಡಿದೆ ಮಗನೆ ಪಗೆಯಾದನೇ ನರಂ ।
ವಾಸಿ ಬಂದುದೆ ನಿನಗೆ ಪುತ್ಕಾಂತನಳಿದನೇ ।

CC-0. Jangamwadi Math Collection. Digitized by eGangotri

ವಾಸವನ ಸೂನು ಮೃತನಾದನೇ ಧರ್ಮಾನುಜಂ
ಪ್ರಾಣಮಂ ತೊರೆದನೇ ॥

ವಾಸುದೇವನ ಸಖಂ ಮಡಿದನೇ ನಿನ್ನಿಂದ ।
ದಾನುರಪರಾಕ್ರಮದೊಳಾತ್ಮಪಿತೃಘಾತಿಯಂ ।
ಹೇಸದೆನ್ನುದರುಂಟೆ ನುಡಲಿ ಸುತರೇಕೆಂದು......."

ನುಡಿಯುವ ಬಿರುನುಡಿಗಳಿಂದ ಅವಳ ಆಂತರವಾದ ಮತ್ತು ಅಪಾರವಾದ ಶೋಕವು ವ್ಯಕ್ತವಾಗುವಂತೆಯೇ ಅವಳು ಬಭ್ರುವಾಹನಸಂತಸವನಿಗೆ ಮಾತೆಯೆನಿಸಲು ಸರ್ವಥಾ ಅರ್ಹಳಲ್ಲವೆಂಬುದೂ ವ್ಯಕ್ತವಾಗುತ್ತದೆ. ಅದೂ ಹಾಗಿರಲಿ. ಅರ್ಜುನನು ಬಭ್ರುವಾಹನನನ್ನು ವೈಶ್ಯಸಂಭವನೆಂದು ದುರ್ಭಾಷೆಯಿಂದ ಜರಿದುದಲ್ಲದೆ

"ಅಹಹ ನರ್ತಕಿಯಲಾ ಗಂಧರ್ವನಾಯಕನ ।
ದುಹಿತೃವಲ್ಲಾ ನಿನ್ನ ಮಾತೆ ಚಿತ್ರಾಂಗದೆಯು ।
ವಿಹಿತವಿದು ನಿನಗೆ ಭೂಪಾಲಕರ ವೇಷಮಂ ತಳೆದ
ನಾಟಕದ ರಚನೆ"

ಎಂದು ಮುಂತಾಗಿ ಚಿತ್ರಾಂಗದೆಯನ್ನೂ (ಆ ನರ್ತಕಿಯ ಮಗನಾದ ಮತ್ತು ಭೂಪಾಲಕರ ವೇಷವನ್ನು ತಳೆದ ನಾಟಕದ ರಚನೆಯುಳ್ಳವನಾಗ) ಬಭ್ರುವಾಹನನನ್ನೂ ಹಳಿದು ಅವಮಾನಪಡಿಸಿರುವನು. ಹೀಗಿರುವಲ್ಲಿ ನಿರ್ವಾಹವಿಲ್ಲದೆ ಯುದ್ಧವನ್ನು ಹೂಡಿರುವ ವೀರಶ್ರೇಷ್ಠನನ್ನು ಆತ್ಮಗೌರವಕ್ಕೆ ಕುಂದಕವೆಂದು ಕಂಡು ಕಂಡೂ ಮಾತೃವಾಕ್ಯಪರಿಪಾಲನೆಮಾಡುವ ಪ್ರಯತ್ನದಲ್ಲಿ ಮಂತ್ರಿಪರಿಜನರೆದುರಿಗೆ ಅರ್ಜುನನ ದುರ್ಭಾಷೆಗಳನ್ನು ಕೇಳಿ ಕೇಳಿ, ನಿರ್ವಾಹವಿಲ್ಲದೆ ಯುದ್ಧವನ್ನು ಹೂಡಿದ ಶೀಲವಂತನನ್ನು ಚಿತ್ರಾಂಗದೆಯು ಮೂದಲಿಸಿದುದೇ ತಪ್ಪು. ಅದರ ಮೇಲೆ ಅವಳಾಡುವ

"ಈ ಕಂಠಸೂತ್ರವಿವೇ ಕರ್ಣತಾಟಂಕವಿವೇ ।
ಶ್ರೀಕರಂ ನಿಜಜನನಿಗೇಕೆಂದು ಬಿಡಿಸಿದೈ ಸಾಕಿನ್ನು"

ಎಂಬ ಮಾತುಗಳಂತೂ ಮೂಳೆಮೂಳೆಗಳನ್ನೂ ಕೊರೆಯುವ ವಜ್ರಬೈರಿಗೆಗಳಂತಿರುವುವು. ನಿಷ್ಠುರೆಯಾದ ಚಿತ್ರಾಂಗದೆಯು ಅಲ್ಲಿಗೂ ಸುಮ್ಮನಾಗದೆ ಆ ಬಳಿಕ ಕುಮಾರನನ್ನು ನೋಡಿ

"........................................ಕೊಲೆ ।
ಗೆಳಸಿದೈ ಜನಕಂಗೆ ಜನನಿಯರ್ನ್ನಾವಿರ್ಪ
ರುಳಿಯಲೇಕಿನ್ನಕಟ ವೈಧವ್ಯಮಂ ತಾಳಬಲ್ಲೆವೆ
ಮಹೀತಳದೊಳು ॥

ಸೆಳೆದು ಪೊಡೆ ಖಡ್ಗದಿಂದೆಮ್ಮೀ ಶಿರಂಗಳಂ ।
ಬಳಿಕೈದೆ ಭಾರ್ಗವಂ ಕೊಂದುದಿಲ್ಲವೆ ತಾಯ ।
ನಳುಕದಿರ್ ಪಿತೃಮಾತೃದಾಯಾದವಧೆ ನಿನಗೆ ಸಫಲ
ಮಾದಪುದು"

ಎಂದು ಹೇಳುವಳು. ಅದನ್ನು ಕಂಡು ಅವಳ ವೈಧವ್ಯ ದುಃಖದಿಂದ ವಿಷಾದಪಡುತ್ತಿದ್ದ ನಮ್ಮ ಮನಸ್ಸು ಕ್ರೋಧದಿಂದ ಕಂಪಿಸುವುದು. ಬಭ್ರುವಾಹನನು ಕ್ಷಾತ್ರಧರ್ಮಕ್ಕನುಸಾರವಾಗಿ ಪಿತೃವಧೆಯನ್ನೂ ದಾಯಾದವಧೆಯನ್ನೂ (ಅರ್ಜುನ ವೃಷಕೇತುಗಳ ವಧೆಯನ್ನು) ಮಾಡಿದುದೇನೋ ನಿಜ: ಅವನು ಮಾತೆಯರಿರ್ವರನ್ನೂ ಸಂಹರಿಸುವ ಕೊಲೆಗಡುಕನಲ್ಲ. ಅಂತಹ ಸತ್ಪುತ್ರನಿಗೆ ಇಂತಹ ಕುಮಾತೆಯು ದೊರೆತುದು ಕರ್ಮಫಲವಲ್ಲದೆ ಮತ್ತೇನು? ಕೊನೆಗೆ ಬಭ್ರುವಾಹನನು ಪಾತಾಳ ಲೋಕಕ್ಕೆ ಹೋಗಿ ಆದಿಶೇಷನ ಬಳಿಯಲ್ಲಿದ್ದ ಸಂಜೀವಕದ ಮಣಿಯನ್ನು ತಂದು ಅರ್ಜುನನೇ ಮುಂತಾದವರನ್ನು ಬದುಕಿಸಿದಾಗಲಾದರೂ ಚಿತ್ರಾಂಗದೆಯು ಮಗನನ್ನು ಕೊಂಡಾಡಿದ್ದರೆ ಎಷ್ಟೋ ಚೆನ್ನಾಗಿದ್ದಿತು. ಆಗಲೂ ಅವಳು ಒಂದು ಒಳ್ಳೆಯ ಮಾತನ್ನೂ ಆಡುವುದಿಲ್ಲ. ಅವಳು ಕೃಷ್ಣಾರ್ಜುನರೇ ಮುಂತಾದವರಿಗೂ, ಕುಂತಿ, ದೇವಕಿ, ಯಶೋದೆ ಮುಂತಾದವರಿಗೂ

"ನಿತ್ಯ ಕೃತ್ಯದ ಭೋಗ ವಿಭವಂಗಳಿಂ ।
ನೃತ್ಯಗೀತಂಗಳ ವಿಲಾಸಗೋಷ್ಠಿಗಳಿಂದ ॥"

ಉಪಚಾರದ ಮೇಲೆ ಉಪಚಾರವನ್ನು ಮಾಡಿ, ತನ್ನ ಕರ್ತವ್ಯಪರಾಯಣತೆಯನ್ನೂ, ಗುರುಜನರಲ್ಲಿ ತನಗಿರುವ ಭಕ್ತಿಯನ್ನೂ ಬಹುವಾಗಿ ತೋರ್ಪಡಿಸುವಳು. ಆದರೂ ನಮ್ಮ ಮನಸ್ಸಿನಲ್ಲಿ ಚಿತ್ರಾಂಗದೆಯು ಚಂಡಿಗಿಂತಲೂ ಕ್ರೂರೆಯೆಂದೂ ಬಭ್ರುವಾಹನನ ಜನ್ಮಾಂತರದ ದುಷ್ಕರ್ಮಧುರ್ವಿಪಾಕದ ಸ್ತ್ರೀರೂಪವೇ ಅವನ ಜನನಿಯಾದ ಚಿತ್ರಾಂಗದೆಯ ರೂಪವೆಂದೂ, ಅಚ್ಚಳಿಯದಂತೆ ನಿಂತುಹೋಗಿರುವ ಅಭಿಪ್ರಾಯವು ಲೇಶಮಾತ್ರವೂ ಮಾರ್ಪಡುವ ಹಾಗಿಲ್ಲ. (ಚಂಡಿಯ ವಿಚಾರವು ಸಮಸ್ತರಿಗೂ ತಿಳಿದೇ ಇರುವುದರಿಂದ ಅವಳ ವಿಷಯವನ್ನು ಹಿಂದೆ ವಿಶದವಾಗಿ ಪ್ರಸ್ತಾಪಿಸಿಲ್ಲ. ಗಂಡನು ಹೇಳಿದ ಪ್ರತಿಯೊಂದು ಮಾತಿಗೂ ವ್ಯತಿರಿಕ್ತವಾಗಿ ಹೇಳುವ ವಕ್ರಮಾರ್ಗವನ್ನನುಸರಿಸಿ ಕೊನೆಗೆ ಅದರ ದೆಸೆಯಿಂದಲೇ



CC-0. Jangamwadi Math Collection. Digitized by eGangotri

ಶಾಪವನ್ನು ಹೊಂದಿ ಶಿಲೆಯಾಗಿ ಹೋದ ಆ ಮೂರ್ಖಳ ಪಾತ್ರದಲ್ಲಿ ಗಮನಿಸಬೇಕಾದ ಅಂಶಗಳು ಮತ್ತಾವುವೂ ಇಲ್ಲ. ಆದರೂ ಕವಿಯು ಚಂಡಿಯ ಕಥೆಯನ್ನು ಹೇಳುವ ಮಾರ್ಗವು ಮಾತ್ರ ಹೃದಯಂಗಮವಾಗಿದೆ.)

**ವಿಷಯೆ:**—ಸಂಸ್ಕೃತಿಗಿಂತಲೂ ಸುಖದ ಸೊಂಪಿಗೇ ಹೆಚ್ಚಾಗಿ ಗಮನಕೊಟ್ಟು, ಭೋಗದಿಂದ ತೃಪ್ತಿಪಡೆಯುವವರ ಗುಂಪಿಗೆ ಸೇರತಕ್ಕ ಪಾತ್ರವನ್ನಾಗಿ ಕವಿಯು ವಿಷಯೆಯನ್ನು ಸೇರಿಸಿದ್ದಾನೆಂದು ತೋರುವುದು. ಮಂತ್ರಿಯಾದ ದುಷ್ಟಬುದ್ಧಿಯ ಮಗಳಾದ ವಿಷಯೆಯಂತೆಯೇ ರಾಜನ ಮಗಳಾದ ಚಂಪಕಮಾಲಿನಿಯೂ ಆಗಿದ್ದಾಳೆಂದೂ ತೋರುವುದು. ಆದರೂ ಇವರಿಬ್ಬರ ವಿಷಯದಲ್ಲಿಯೂ ನಮಗೆ ನಿರ್ಧಾರಕವಾದ ಹೆಚ್ಚು ಸಂಗತಿಗಳನ್ನು ಕವಿಯು ತಿಳಿಸಿಲ್ಲವಾದಕಾರಣ ಖಂಡಿತವಾಗಿ ಏನೊಂದನ್ನೂ ಹೇಳುವಂತಿಲ್ಲ. ಜಲಕ್ರೀಡೆ ಮುಂತಾದುವುಗಳಲ್ಲಿ ಆಸಕ್ತಳಾಗಿರುವುದು, ತಂದೆಯು ಹೇಳಿದಾಗ ಚಂದ್ರಹಾಸನನ್ನು ಮದುವೆಯಾಗುವುದು ಇವೆರಡರ ಹೊರತು ಚಂಪಕಮಾಲಿನಿಯ ವೈಶಿಷ್ಟ್ಯವಂತಿರುವ ಮತ್ತಾವ ಗುಣವೂ ನಮಗೆ ತೋರುವುದಿಲ್ಲ. ತನಗೊಬ್ಬ ಸವತಿಯಿರುವಳೆಂಬ ಯೋಚನೆಯನ್ನು ಕೂಡ ಮಾಡದೆ, ವಿಷಯೆಯ ಪತಿಯಾದ ಚಂದ್ರಹಾಸನನ್ನು ಅವಳು ತಾನೂ ವಿವಾಹ ಮಾಡಿಕೊಳ್ಳಲು ತಂದೆಯ ಕೋರಿಕೆಯಂತೆ ಒಡನೆಯೇ ಸಮ್ಮತಿಸುವಳು. ವ್ಯಕ್ತಿವೈಶಿಷ್ಟ್ಯ ವಿಚಾರದಲ್ಲಿ ವಿಷಯೆಯು ಚಂಪಕಮಾಲಿನಿಗಿಂತಲೂ ಮೇಲೆಂದು ಹೇಳಬಹುದು.

ವಿಷಯೆಯು ಚಾತುರ್ಯವತಿ. ದುಷ್ಟಬುದ್ಧಿಯು ಚಂದ್ರಹಾಸನೊಡನೆ ಮದನನಿಗೆ ಕಳುಹಿಸಿರುವ ಕಾಗದದಲ್ಲಿ ಪ್ರಮಾದವಶದಿಂದ "ವಿಷವನೋಹಿಸುವಂತೆ" ಎಂಬ ಪದಗಳು ಬಿದ್ದಿರಬೇಕೆಂದು ಅವಳು ನಿರ್ಧರಿಸಿದೊಡನೆಯೇ ಚಾತುರ್ಯದಿಂದಲೂ ಸಮಯಸ್ಫೂರ್ತಿಯಿಂದಲೂ ಅವಳು ಕಣ್ಣಿನ ಕಾಡಿಗೆಯನ್ನು ಮಸಿಯಂತೆಯೂ ಉಗುರನ್ನು ಲೇಖನಿಯಂತೆಯೂ ಉಪಯೋಗಿಸಿ "ವಿಷವನೋಹಿಸುವಂತೆ" ಎಂದಿದ್ದುದನ್ನು "ವಿಷಯೆ ಮೋಹಿಸುವಂತೆ" ಎಂದು ಮಾರ್ಪಡಿಸುವಳು. "ವ" ಎಂಬುದನ್ನು "ಯ" ಮಾಡುವುದು ಅಷ್ಟೇನೂ ಕಷ್ಟವಾಗಿರಲಿಲ್ಲವಾದಕಾರಣ, ವಿಧಿಯೂ ಈ ಅಕ್ಷರವಿನ್ಯಾಸಭಾಗದಲ್ಲಿ ಅವಳಿಗೆ ಸುಖಮಯವಾಗಿಯೇ ಇದ್ದಿತು. ಚಂದ್ರಹಾಸನನ್ನು ಕಂಡು ಮೋಹಿಸಿದ ವಿಷಯೆಯು ಅವನಲ್ಲಿದ್ದ ಕಾಗದವನ್ನು ಹಿರಿದುಕೊಂಡು, ಅದನ್ನು ಅಲ್ಲಿಯೇ ಒದಿ ನೋಡಿ, ಅದರ ಬರೆವಣಿಗೆಯಲ್ಲಿ ತಾನು "ವರ್ಣಪಲ್ಲಟ"ವೆಂದು ಭಾವಿಸಿದುದನ್ನು ಮಾರ್ಪಡಿಸುವಳು. ತನ್ನ ಗೆಳತಿಯರೆಲ್ಲಿ ತನ್ನನ್ನು ಹುಡುಕಿಕೊಂಡು ಅಲ್ಲಿಗೆ ಬಂದುಬಿಡುವರೋ— ಎಂಬ ಕಳವಳವೂ, ಚಂದ್ರಹಾಸನಿಗೆಲ್ಲಿ ಎಚ್ಚರವಾಗುವದೋ— ಎಂಬ ಶಂಕೆಯೂ, ಅವಳನ್ನು ಬಾಧಿಸುತ್ತಿದ್ದರೂ ಅವಳು ಬಹಳ ಧೈರ್ಯದಿಂದ ಅಷ್ಟು ಕೆಲಸಮಾಡುವಳು. ತನ್ನ ಸಖಿಯರೊಡನೆ ಕ್ರೀಡಿಸುತ್ತಿದ್ದು, ಓಡಿಬಂದು ಆಕಸ್ಮಿಕವಾಗಿ ಚಂದ್ರಹಾಸನನ್ನು ಕಂಡು, ಮೋಹಿಸಿ ಅವನ ಬಳಿಗೆ ಹೋಗುವುದಕ್ಕೇ ಅಳುಕಿದವಳು; ಒಡನೆಯೇ ಅವನ ಕಂಚುಕದಲ್ಲಿ ಕಟ್ಟಿದ್ದ ಪತ್ರವನ್ನು ಬಿಚ್ಚಿ ಅದನ್ನು ತಿದ್ದುವುದನ್ನು ನೋಡಿದರೆ, ಅವಳು ಎಷ್ಟು ಧೈರ್ಯವತಿಯೆಂಬುದು ವ್ಯಕ್ತವಾಗುವುದು. ಅಲ್ಲದೆ

"ಸುತ್ತ ನೋಡುವಳೊಮ್ಮೆ ನೂಪುರವಲುಗದಂತೆ।
ಹತ್ತೆ ಸಾರುವಳೊಮ್ಮೆ ನೋಂಕಲೆಂತಹುದೆಂದು।
ಮತ್ತೆ ಮುರಿದಪಳೊಮ್ಮೆ ಹೆಜ್ಜೆಹೆಜ್ಜೆಯ ಮೇಲೆ
ಸಲ್ಪಳಮ್ಮದೆ ನಿಲ್ವಳು॥
ಚಿತ್ತದೊಳ್ ಶ್ರೈಸಿ ನೆರೆಯಲೆಳಸುವಳೊಮ್ಮೆ।
ಹೊತ್ತಲ್ಲದನುಚಿತಕೆ ಬೆದರಿ ಹಿಂಗುವಳೊಮ್ಮೆ।
ತತ್ತಳದ ಬೇಟದೊಳ್ಬೆಂಡಾಗಿ ವಿಷಯೆ ನಿಂತಿರ್ದಳಾತನ
ಪೊರೆಯೊಳು॥"

ಎಂಬ ಪದ್ಯವನ್ನೋದಿದರಂತೂ, ಅವಳು ಧೈರ್ಯವತಿಯಾಗಿರುವುದರ ಜೊತೆಗೆ ಎಷ್ಟು ಜಾಗರೂಕಳೂ ಆಗಿದ್ದಳೆಂಬುದು ವ್ಯಕ್ತವಾಗುವುದು. ಚಂದ್ರಹಾಸನ ರೂಪದಿಂದ ಮೋಹಿತಳಾಗಿ ಅವನ ಗುಣದೋಷಗಳ ವಿಚಾರವೇ ಇಲ್ಲದೆ, ಒತ್ತಡವೆಗೇ ಅವಳು ಆ ರೀತಿ ಮಾಡಿದುದು ಆಶ್ಚರ್ಯಕರವಾಗಿ – ಅಥವಾ ಸ್ವಲ್ಪಮಟ್ಟಿಗೆ ವಿಲಕ್ಷಣವಾಗಿ – ತೋರಿದರೂ ಅದಕ್ಕೆ ಕಾರಣವುಂಟು. ತನ್ನ ತಂದೆಯು ತನಗೆ ಅನುರೂಪನಾದ ವರನನ್ನೇ ಕಳುಹಿಸಿ,

"ಈತಂ ತಮಗೆ ಮಹಾಹಿತನೆಂದು ತಮ್ಮ ಧರೆ।
ಗೀತನರಸಹನೆಂದು ಕುಲಶೀಲ ವಿದ್ಯೆಗಳ—।

CC-0. Jangamwadi Math Collection. Digitized by eGangotri

ನೀತನೊಳರಸಬೇಡವೆಂದು ಮುಂದಕೆ ಸರ್ವಥಾ
ಮಿತ್ರಸಹಸು " ಎಂದು ॥

ಬಣ್ಣಿಸಿರುವಲ್ಲಿ ವರ್ಣಪಲ್ಲಟದಿಂದಲೊ ಮೋಸದಿಂದಲೊ "ಈತಂಗೆ ವಿಷಯೆ ಮೋಹಿಸುವಂತೆ, ಕೊಡುವುದೆಂದು" ಬರೆದಿರುವುದು ನಿಸ್ಸಂದೇಹವೆಂದು ಅವಳು ನಿರ್ಧರಿಸುವಳು. ದುಷ್ಟಬುದ್ಧಿಯು, ಅವನ ಹೆಸರೇ ಸೂಚಿಸುವಂತೆ, ಹೇಗೆ ಸಂಸ್ಕೃತಿದೂರನಾದ ಪ್ರತಿಷ್ಠಾಕಾಮಿಯೋ ಹಾಗೆಯೇ ವಿಷಯೆಯೂ ರೂಪ, ಪದವಿ, ಸುಖ ಮುಂತಾದ ಭೋಗಸಾಮಗ್ರಿಗಳಿಗೆ ಮಾತ್ರವೇ ಹೆಚ್ಚಾಗಿ ಬೆಲೆಕೊಡುವಳು. ದುಷ್ಟಬುದ್ಧಿಯು ಬರೆದ ಓಲೆಯಲ್ಲಿರುವ ಶ್ಲೇಷಾರ್ಥವನ್ನು ಅವಳು ಗ್ರಹಿಸದೆ ತನಗೆ ಅನುಕೂಲವಾಗುವಂತೆಯೇ ಅರ್ಥ ಮಾಡಿ, ಚಂದ್ರಹಾಸನು ತಂದೆಗೆ ಮಹಾಹಿತನೆಂದೂ, ಕುಂತಳದೇಶಕ್ಕೆ ಅರಸಾಗತಕ್ಕವನೆಂದೂ, ಮುಂದೆ ಸರ್ವಥಾ ಮಿತ್ರನಾಗುವನೆಂದೂ ಭಾವಿಸಿ, ಅಷ್ಟರಿಂದಲೇ ತೃಪ್ತಳಾಗುವಳು. "ಕುಲ ಶೀಲ ವಿದ್ಯಗಳನೀತನೊಳರಸಬೇಡೆಂದು" ಇರುವ ಮಾತಿಗೆ ಅವಳು ಅಷ್ಟೇನೂ ಗಮನ ಕೊಟ್ಟಂತೆಯೆ ತೋರುವುದಿಲ್ಲ. ಆದುದರಿಂದಲೇ ಭೋಗಪ್ರಧಾನವಾದ ಸ್ವಭಾವವೊಂದೇ ಅವಳ ವೈಶಿಷ್ಟ್ಯವೆಂದೂ ಅದೇ ಬಹುತರವಾಗಿ ಅವಳ ಚಿತ್ತವೃತ್ತಿಯೆಂದೂ ನಾವು ಊಹಿಸಬೇಕಾಗಿರುವುದು. ಆದಾಗ್ಯೂ, ಅವಳಲ್ಲಿದ್ದರೂ ಇರಬಹುದಾದ ಇತರ ಅಮೂಲ್ಯಗುಣಗಳು ಸ್ಫುಟವಾಗಿ ತೋರುವ ಮತ್ತಾವ ಯುಕ್ತಸನ್ನಿವೇಶಗಳಲ್ಲಿಯೂ ನಾವು ಅವಳನ್ನು ಕಾಣುವುದಿಲ್ಲವಾದ ಕಾರಣ, ನಿರ್ಧರವಾಗಿ ಯಾವುದೊಂದನ್ನೂ ಹೇಳುವುದಕ್ಕೆ ಅವಕಾಶವಿಲ್ಲ. ಕಾಳಿಕಾಲಯದಲ್ಲಿ ತಂದೆಯ ಮೃತಿಗಾಗಿ ಅವಳು ರೋದಿಸುವುದು ಬಂಧುಧರ್ಮವಾಗುವುದೇ ಹೊರತು, ಅವಳ ಸಂಸ್ಕೃತಿಯ ಅಂತಸ್ತನ್ನು ತೋರಿಸಲು ಸಹಕಾರಿಯಲ್ಲ. ಅವಳು ವಿವಾಹಕ್ಕೆ ಮುಂಚಿತವಾಗಿ (ತಂದೆಯ ಪತ್ರವನ್ನು ತಿದ್ದಿ, ಉದ್ಯಾನದಿಂದ ಅರಮನೆಗೆ ಬಂದ ಮೇಲೆ) ಚಂದ್ರಹಾಸನಿಗೆ ಮನವನ್ನರ್ಪಿಸಿ ಕಾಮತಾಪದಿಂದ ಪಾಡುಪಡುವುದನ್ನು ವರ್ಣಿಸಿರುವ

" ಪುರುಹೂತಸಂಭೂತ ಕೇಳ್ಬವನದೊಳ್ವಿಷಯೆ ।
ವಿರಹತಾಪದೊಳೊಂದು ಘಳಿಗೆಯಂ ಪತ್ತುಸಾ- ।
ವಿರಯುಗಕೆ ಸಮನಾಗಿ ಭಾವಿಪಳ್ನಿಂದಲ್ಲಿ ನಿಲ್ಲಲಾರ-
ಳ್ನೋಡಳು ॥
ಪರಿಚರಿಯಬಲೆಯ ವರ್ಗಳ ನಗಿಸಳಾಪ್ತಸಖಿ- ।
ಯರ ಮಾತನಾಲಿಸಳ್ಸಿಂಗರಕೆ ಮೈಗೊಡ- ।
ಳ್ಕರೆವ ಪಂಜರದ ಗಿಳಿಯಂ ನುಡಿಸಳಾಡಿಸಳ್ನಾಕುತಿಹ
ಖಗಮೃಗವನು ॥ "

ಎಂಬ ಪದ್ಯವನ್ನೋದಿದರಂತೂ ಅವಳು ಸತ್ವವಿಹೀನೆಯೆಂದರೂ ತಡೆಯುವಂತಿದೆ. ಅವಳು ಪರಿಜನರನ್ನು ನಗಿಸುತ್ತಲೂ ಗಿಳಿಗಳು, ಖಗಮೃಗಗಳು ಮುಂತಾದುವುಗಳನ್ನು ಸಾಕುತ್ತಲೂ ಇದ್ದವಳಾದ ಕಾರಣ ಅವಳಸ್ನಿಗ್ಧಭಾವವೂ ಈ ಪದ್ಯದಿಂದ ಸ್ವಲ್ಪಮಟ್ಟಿಗೆ ವ್ಯಕ್ತವಾಗುವುದು. ಆದರೂ ಅವಳು ಸಂಸ್ಕೃತಚೇತನೆಯಾದ ಸತ್ವಶಾಲಿನಿಯಲ್ಲದ ಕಾರಣದ ದೆಸೆಯಿಂದ ಅವಳಸ್ನಿಗ್ಧಭಾವದ ಬೆಲೆಯೂ ಸ್ವಲ್ಪಮಟ್ಟಿಗೆ ಕಡಿಮೆಯಾಗುವುದು. ಅಂತೂ, ವಿಷಯೆಯು ಆಂತರಿಕ ಸೌಂದರ್ಯಕ್ಕಿಂತಲೂ ಬಾಹ್ಯಸೌಂದರ್ಯವೇ ಹೆಚ್ಚಾಗಿ ಪರಿಸ್ಫುಟವಾಗಿರುವ ಮಾದರಿಯಾಗಿರುವಂತೆ ಕವಿಯು ಅವಳನ್ನು ಚಿತ್ರಿಸಿದ್ದಾನೆ. ಈ ಚಿತ್ರವೂ ಒಂದು ವಿಧದಲ್ಲಿ ಮನೋಹರವಾಗಿಯೇ ಇದೆ.

**ಸೀತಾದೇವಿ:**—ಸೀತಾದೇವಿಯನ್ನು ಮೀರಿಸಿರುವ ಪಾತ್ರವು ಜಗತ್ತಿನ ಸಾಹಿತ್ಯಸೃಷ್ಟಿಯಲ್ಲಿಯೇ ಮತ್ತೊಂದಿಲ್ಲ. ವಾಲ್ಮೀಕಿಮಹರ್ಷಿಯ ಯಶಸ್ಸು ಶಾಶ್ವತವಾಗಿರಲು ಅದೊಂದು ಪಾತ್ರವೇ ಸಾಕು. ಶ್ರೀರಾಮನಂತಹರು ಜಗತ್ತಿನಲ್ಲಿ ಅವತರಿಸುವುದು ಒಂದು ವೇಳೆ ಸಾಧ್ಯವಾದರೂ ಆಗಬಹುದೆಂದೂ, ಆದರೆ ಜಗತ್ತು ಸೀತಾದೇವಿಯಂತಹ ಸ್ತ್ರೀಜಾತಿಯ ಚೂಡಾರತ್ನವನ್ನು ಮತ್ತೊಮ್ಮೆ ಕಾಣಲಾರದೆಂದೂ ಶ್ರೀವಿವೇಕಾನಂದಸ್ವಾಮಿಗಳು ಅಪ್ಪಣೆ ಕೊಡಿಸಿರುವುದು ಅಕ್ಷರಶಃ ನಿಜ. ಒಟ್ಟಿನಲ್ಲಿ ವಾಲ್ಮೀಕಿಮಹರ್ಷಿಯು ಹಾಕಿಕೊಟ್ಟಿರುವ ಎಲ್ಲೆಕಟ್ಟುಗಳಿಗೆ ಮೀರದಂತೆ, ಕಾಳಿದಾಸನೇ ಮುಂತಾದ ಅನೇಕಕವಿಗಳೂ ಬಗೆಬಗೆಯಾಗಿ ಸೀತಾದೇವಿಯ ಯಶೋಗೀತೆಯನ್ನು ಹಾಡಿದ್ದಾರೆ. ಅಲ್ಲದೆ ಅವರು ತಂತಮ್ಮ ಪ್ರತಿಭೆ—ಪಾಂಡಿತ್ಯಗಳಿಗನುಸಾರವಾಗಿ ಸೀತಾದೇವಿಯ ಪಾತ್ರವನ್ನು ಚಿತ್ರಿಸಿದ್ದಾರೆ.

ಲಕ್ಷ್ಮೀಶ ಕವಿಯು ಚಿತ್ರಿಸಿರುವ ಸೀತಾದೇವಿಯ ಪಾತ್ರವೂ ಮನೋಜ್ಞವಾಗಿದೆ. ಶ್ರೀರಾಮನು ಗರ್ಭಿಣಿಯಾದ ಸೀತಾದೇವಿಯನ್ನು ಅಪವಾದಬಂದಿತೆಂಬ ಕಾರಣದಿಂದ ಕಾಡಿಗೆ ಕಳುಹಿಸಿದಾಗಿನಿಂದ ಹಿಡಿದು

CC-0. Jangamwadi Math Collection. Digitized by eGangotri

ಮುಂದೆ ಲವಕುಶರೊಡನೆ ಸೀತಾದೇವಿಯು ಅಯೋಧ್ಯೆಯಲ್ಲಿ ಸುಖವಾಗಿ ಪತಿಸೇವೆಮಾಡಿಕೊಂಡಿರುವ ಕಥಾವಸ್ತುವನ್ನು ಲಕ್ಷ್ಮೀಶಕವಿಯು ಚಿತ್ರಿಸಿರುವನು. ಅವನು ಚಿತ್ರಿಸಿರುವಂತೆ ಸೀತಾದೇವಿಯ ಸದ್ಗುಣಗಳ ವಿಮರ್ಶೆಯನ್ನು ಬಿನ್ನವಿಸುವುದೇ ಈ ಲೇಖಕನ ಉದ್ದೇಶವಾಗಿದೆ.

ಸೀತಾದೇವಿಯು ಲಜ್ಜಾವತಿಯಾದ ಮುಗ್ಧೆಯಂತಿದ್ದರೂ ಸತ್ವಶಾಲಿನಿಯಾದ ದೇವಿಯಾಗಿದ್ದಾಳೆ. ಶ್ರೀರಾಮಚಂದ್ರನೂ ಸೀತಾದೇವಿಯೂ ಚಿರಕಾಲ ಸುಖವಾಗಿರುವರು. ಅವರಿಗೆ "ಸರ್ವಸಂಪತ್ಸಮೃದ್ಧಿ" ಯಿದ್ದರೂ ಸಂತಾನಭಾಗ್ಯವೊಂದು ದೊರೆಯದಿರುವುದಕ್ಕಾಗಿ ಶ್ರೀರಾಮನು ಮನನೊಂದು ತನ್ನ ಪತ್ನಿಯೊಡನೆ

"ನೀರಿರ್ದ ಕಾಸಾರಕರವಿಂದವಿಲ್ಲದೊಡೆ ।
ತಾರಕೆಗಳಿರ್ದ ಗಗನಕೆ ಚಂದ್ರನಿಲ್ಲದೊಡೆ ।
ಚಾರುಯೌವನಮಿರ್ದ ಪೆಣ್ಗೆ ನಿಯನಿಲ್ಲದೊಡೆ ಸನ್ನುತಪ್ರಜೆಗಳಿರ್ದ ॥
ಧಾರಿಣಿಗೆ ಧರ್ಮದರಸಿಲ್ಲದೊಡೆ ಸಿರಿಯಿರ್ದ- ।
ದಾರವಂಶಕೆ ಕುವರನಿಲ್ಲದೊಡೆ ಮೆರೆವುದೇ ।"

ಎಂದು ತಿಳಿಸುವನು. ಸೀತಾದೇವಿಯು ಲಜ್ಜೆಯಿಂದ ತಲೆಬಾಗುವಳು. ಆದರೂ ಸತ್ವಶಾಲಿನಿಯೂ ಸಮತೆ ತಪ್ಪದವಳೂ ಆದ ಸೀತಾದೇವಿಯು ತನ್ನ ಪ್ರಿಯಕಾಂತನಿಗೆ ತಾನೇ ಸಮಾಧಾನ ಹೇಳಿ ಸಂತೈಸಿ, ಪುತ್ರವತಿಯಾಗುವುದು ಜನ್ಮಾಂತರದ ಪುಣ್ಯವೆಂದು ಬಿನ್ನಹ ಮಾಡುವಳು. ಆದಮಾತ್ರವೇ ಮಕ್ಕಳಿಲ್ಲವೆಂಬ ಚಿಂತೆಯು ಅವಳಿಗಿಲ್ಲವೆಂದೇನೂ ಅರ್ಥವಲ್ಲ. ಮಕ್ಕಳನ್ನು ಪಡೆದು ಮುದ್ದಿಸಬೇಕೆಂಬುದಾಗಿ ಅವಳಿಗೆಷ್ಟು ಆಶೆಯುಂಟೆಂಬುದು

"ಕಂದನಾಡುವ ಬಾಲಲೀಲೆಯಂ ನೋಡಿ ತೊದ- ।
ಲೊಂದಿದಿನಿವಾತನುರೆ ಕೇಳ್ದು ಮುದ್ದಿನ ಮುದ್ದೆ ।
ಯಂದಸಂಗವನೆತ್ತಿಕೊಂಡು ನಳಿತೋಳ್ಗಳಿಂದಪ್ಪಿ ಕೆಂಗುರುಳ್ಗಳೆಸೆವ ॥
ಮುಂದಲೆಯ ಕಂಪನಾಘ್ರಾಣಿಸಿ ತೊರೆದ ಜೊಲ್ಲಿ ।
ಕೆಂದುಟಿಯ ಬಾಯ್ದೆರೆಯನೈದೆ ಚುಂಬಿಸಿ ಸೊಗಸು- ।
ಗುಂಪದಾಯೆಂದು ಪಂಚೇಂದ್ರಿಯಪ್ರೀತಿಯಂ ಪಡೆವರಿನ್ನಾವ ಕೃತರೋ ॥"

ಎಂಬ ಪದ್ಯದಿಂದ ಸ್ಪಷ್ಟವಾಗುತ್ತದೆ. "ಮುದ್ದಿನ ಮುದ್ದೆಯಂಡದಂಗ" ಎನ್ನುವುದಂತೂ ಮನೋಹರವಾಗಿದೆ. (ಕವಿಗೆ ಮಕ್ಕಳ ಮೇಲೆ ವಿಶೇಷಪ್ರೀತಿಯಿದ್ದಿರಬೇಕೆಂಬುದೂ ಇದರಿಂದ ಗೊತ್ತಾಗುತ್ತದೆ.) ಮಕ್ಕಳಿಲ್ಲವೆಂಬ ಚಿಂತೆಯು ತನ್ನ ಮನಸ್ಸನ್ನಾವರಿಸಿ ಕೀಟದಂತೆ ಕೊರೆಯುತ್ತಿದ್ದರೂ, ಸೀತಾದೇವಿಯು ಚಿತ್ತವನ್ನು ಬಿಗಿಹಿಡಿದು, ಪುತ್ರವತಿಯಾಗುವುದು ಜನ್ಮಾಂತರದ ಪುಣ್ಯವೆಂದು ಶ್ರೀರಾಮನೊಡನೆ ಹೇಳುವುದು ಶ್ಲಾಘನೀಯವಾಗಿದೆ. ಮಕ್ಕಳಾಗಬೇಕೆಂದು ಸೀತಾದೇವಿಗಿರುವ ಆಶೆಯೂ ಲಕ್ಷ್ಮೀಶಕವಿಯ ಪರಿಶೀಲನಾ ಸಾಮರ್ಥ್ಯವೂ

"ತೇಲ್ಗೊಳ್ಪಸರಿಸಿ ಮೇಲುಡಂ ಸಳೆವ ಕಮಲದಂ
ಪೋಲ್ದ ಕಣ್ಗೊನೆಯಿಂದ ತಾಯ ಮೊಗಮಂ ನೋಳ್ಪ ।
ಕಾಲ್ದುದಿಗಳಂ ಬಿದಿರಿ ತಡಸರಿಸಿ ಕೈಪಿಡಿವ ಬಾಲಂಗೆ ಮೋಹದಿಂದ ॥
ಜೋಲ್ದೊಲೆವ ಹಾರಮಂ ಸರಿದು ಮೇಲುದ ಸಾರ್ಚಿ
ಪಾಲ್ದೊರೆದ ಮೊಲೆಯನೂಡಿ ಕೂಡೆ ತೊಟ್ಟಿಲೊಳಿಟ್ಟು
ಸಾಲ್ದ ಸೈಪಿಂದ ಜೋಗುಳವಾಡಿ ತೂಗುವಳದೇಂ ಸುಕೃತಿಯೋ ಧರೆಯೊಳು ॥"

ಎಂಬ ಪದ್ಯದಿಂದ ವಿಶದವಾಗುವುವು.

ಸೀತಾದೇವಿಯ ರೂಪವು ಅಪ್ರತಿಮ ಮನೋಹರವಾದುದೆಂಬುದು.

"ಮಲ್ಲಿಕಾಸ್ಮಿತರುಚಿರೆ ಕುಂಪಕುಟ್ಮಲರದನೆ ।
ಪಲ್ಲವಾಧರೆ ಭೃಂಗಕುಂತಳೆ ಕುಸುಮಗಂಧಿ ।
ಸಲ್ಲಲಿತ ಕೋಕಿಲಾಲಾಪೆ ಚಂಪಕವರ್ಣೆ ಮೃದು ಮಧುರ ಕೀರವಾಣಿ ।
ಫುಲ್ಲಲೋಚನೆ ಚಾರುಚಂದ್ರಬಿಂಬಾನನೆಯು ।
ಸಲ್ಲಲಿತಗಾತ್ರೆ ಜಾನಕಿ ವಿರಾಜಿಸಿದಳ್- ।
ಮುಲ್ಲಾಸದಿಂ ಪುಷ್ಪವತಿಯಾಗಿ ವಿದಳಿತವಸಂತ ಲಕ್ಷ್ಮಿಯ ತೆರದೊಳು" ।

ಎಂಬ ಪದ್ಯದಿಂದ ವ್ಯಕ್ತವಾಗುವುದು. ಈ ಪದ್ಯವು ಕೇವಲ ಉಪಮಾನಗಳ ಕಂತೆಯೆಂದು ತೋರಿದರೂ

CC-0. Jangamwadi Math Collection. Digitized by eGangotri

ಕ್ಷೊಣೆಯ ಉಪಮಾನದಲ್ಲಿ ಸೀತೆಯು ವಸಂತಲಕ್ಷ್ಮಿ
ಮಂತಿದ್ದಳೆಂದು ಹೇಳಿರುವ ಹೋಲಿಕೆಯು ನಿಜವಾ
ಗಿಯೂ ಹೃದಯಂಗಮವಾಗಿದೆ. ವಸಂತಲಕ್ಷ್ಮಿಯ
ಉಪಮಾನವನ್ನು ಕೊಟ್ಟ ಬಳಿಕ, ಕವಿಯು ಸೀತಾದೇವಿ
ಯನ್ನು 'ನಿಮಿಷದೊಳ್ತ್ರಿಜಗಮಂ' ಗೆಲ್ವೆನೆಂದು
ಮನ್ಮಥನು 'ಮಸೆದಾಯುಧೋತ್ತಮವೆನೆ' ಎಂಬು
ದಾಗಿ ವರ್ಣಿಸುವುದು ಮಾತ್ರ ವೀಣೆಯನ್ನು ಬಾರಿ
ಸಿದ ಬಳಿಕ ಏಕನಾದವನ್ನು ಮೀಟಿದಂತೆ ತೋರುತ್ತದೆ.
ಇಲ್ಲದೆ ಇತರ ಮಾನಿನಿಯರಿಗೆ ಒಪ್ಪಬಹುದಾಗಿದ್ದ ಈ
ಹೋಲಿಕೆಯು ಸೀತಾದೇವಿಯಂತಹ ಮಹಾ ಮಾಂಗಲ್ಯ
ಮಾನಿನಿಯ ದೊಡ್ಡ ಅಂತಸ್ತಿಗೆ ತಕ್ಕುದೆನಿಸಿಲ್ಲ. ಅಲ್ಲದೆ
ಸೀತಾದೇವಿಯನ್ನು ಹಾಗೆ ವರ್ಣಿಸಿರುವುದು ಹಿತವಾ
ಗಿಯೂ ಇಲ್ಲ. ಆದರೆ ಮತ್ತೆ ಬರುವ

"ನೊಸಲೊಳಾರಾಜಿಸುವ ತಿಲಕದಿಂದಲಕದಿಂ।
ಮಿಸುಪ ಮೈನಸುದೋರ್ವ ವಸನದಿಂದಶನದಿಂ।
ಪಸರಿಪೆಳನಗೆಯ ತೆಳ್ಗದಪಿನಿಂ ಪದಪಿನಿಂ—
ದಮರ್ದ ಪೊಂದೊಡಿಗೆಯಿಂದ ॥
ಅಸಿವೆರಳೊಳೊಪ್ಪುವ ಉಗುರ್ಗಳಿಂ ತಿಗುರ್ಗಳಿಂ।
ಪೊಸತೆನಿಪ ಕುಂಕುಮದ ಕಂಪಿನಿಂದಿಂಪಿನಿಂ।
ತ್ರಿಸರದೊಳ್ಮೆರೆವ ಗುರುಕುಚದಿಂದ ಕಚದಿಂದ"
ಕಾಂತೆ ಕಣ್ಗೆಸೆದಿರ್ದಳು ॥

ಎಂಬ ವರ್ಣನೆಯು ಮನೋಜ್ಞವಾಗಿದೆ. ಹಣೆಯಲ್ಲಿ
ಕಸ್ತೂರಿಯ ತಿಲಕವನ್ನಿಟ್ಟು, ದೇಹವು ಸ್ವಲ್ಪವಾಗಿ ಕಾಣ
ಬರುವ ವಸನದಿಂದಲೂ, ಲಾಕ್ಷಾರಸಸೇಚನೆಯಿಂದೊ
ಪ್ಪುವ ಉಗುರುಗಳಿಂದಲೂ, ಮೂರೆಳೆಯ ಮುತ್ತಿನ
ಹಾರವೇ ಮುಂತಾದ ಆಭರಣಗಳ ಅಲಂಕಾರದಿಂದಲೂ
ಕೂಡಿ, ಮಂದಹಾಸದಿಂದ ಬರುವ ಸೀತಾದೇವಿಯು
ವಸಂತಲಕ್ಷ್ಮಿಗಿಂತಲೂ ರೂಪವತಿಯೆಂದರೂ ಸಲ್ಲು
ವುದು. ಅಂತೂ ಸೀತಾದೇವಿಯನ್ನು ವಸಂತಲಕ್ಷ್ಮಿಗೆ
ಹೋಲಿಸುವುದರಲ್ಲಿ ಕವಿಯು ಸೌಂದರ್ಯ, ಸೌಕು
ಮಾರ್ಯಗಳ ಒಂದು ಹೊಸ ಪ್ರಪಂಚವೇ ನಮ್ಮ ಕಣ್ಣು
ಗಳೆದುರಿಗೆ ನಿಲ್ಲುವಂತೆ ಮಾಡಿದ್ದಾನೆ. ಜಗನ್ಮಾತೆಯಾದ
ಸೀತಾದೇವಿಯ ಅನುಪಮಲಾವಣ್ಯಕ್ಕೆ ತಕ್ಕ ಉಪ
ಮಾನ.

ಸೀತಾದೇವಿಯು ಸ್ನೇಹಮಯಿಯೆಂಬುದನ್ನು
ಲಕ್ಷ್ಮೀಶನು ರಮಣೀಯವಾಗಿ ತೋರ್ಪಡಿಸಿದ್ದಾನೆ.
ಸೀತಾದೇವಿಯು ವೈಭವದ ಮಧ್ಯದಲ್ಲಿದ್ದೂ ಮುನಿ
ವಧುಗಳ ಸ್ನೇಹಮಮತೆಗಳನ್ನು ಸ್ಮರಿಸಿಕೊಂಡು
ಮತ್ತೊಮ್ಮೆ ಆಶ್ರಮಕ್ಕೆ ಹೋಗಲಿಚ್ಛಿಸುವಳು. ರಾಮ
ಚಂದ್ರನೂ ಅದಕ್ಕೆ ಸಮ್ಮತಿಸುವನು. ರಜಕನೊಬ್ಬನ
ದೂಷಣೆಯ ಮಾತಿಗೆ ಬೆಚ್ಚಿ, ಗರ್ಭಿಣಿಯಾದ ಧರ್ಮಪತ್ನಿ
ಯನ್ನು ಕಾಡಿಗೆ ಕಳುಹಿಸುವುದಕ್ಕೆ ರಾಮಚಂದ್ರನಿಗೆ
ಸರಿಯಾದ ನೆಪವೇ ಸಿಕ್ಕುವುದು. ತನ್ನ ಪತಿಯು,
ತನ್ನನ್ನು ಪರಿತ್ಯಾಗಮಾಡುವುದಕ್ಕಾಗಿ, ಲಕ್ಷ್ಮಣನೊ
ಡನೆ, ತನ್ನನ್ನು ಕಳುಹಿಸುತ್ತಿರುವನೆಂಬುದನ್ನು ಸೀತಾ
ದೇವಿಯು ಅರಿಯಳು. ತನ್ನ ಪ್ರಾರ್ಥನೆಯನ್ನು ಲಾಲಿಸಿ
ಆಶ್ರಮಕ್ಕೆ ತನ್ನನ್ನು ಕಳುಹಿಸುತ್ತಿರುವನೆಂದೇ ಅವಳು
ಭಾವಿಸಿ ಮುನಿಪತ್ನಿಯರಿಗೆ ಕೊಡುವುದಕ್ಕಾಗಿ "ಅಗುರು
ಚಂದನ ಕುಂಕುಮಾನುಲೇಪನ"ಗಳನ್ನೂ, ಬಗೆಬಗೆಯ
ದಿವ್ಯಾಂಬರಗಳನ್ನೂ, ವಿವಿಧಮಣಿಭೂಷಣಗಳನ್ನೂ
ಕಟ್ಟಿಸಿ ತೆಗೆದುಕೊಂಡು, ಸಡಗರದಿಂದ ರಥವನ್ನೇರುವಳು.
ತನ್ನ ಪತಿಯು ತನ್ನ ಕೋರಿಕೆಯನ್ನು ಸಲ್ಲಿಸಿದನೆಂದು
ಅವಳಿಗುಂಟಾಗಿರುವ ಸಂತೋಷವನ್ನು ಹೇಳಲಳವಲ್ಲ.
ಅವಳು ತನ್ನ ಸಂತೋಷದ ಹೆಚ್ಚಳದಿಂದ

"ನಂಬಿದರಭೀಷ್ಟಮಂ ಸಲಿಸುವ ಕೃಪಾಳು ತಾ—
ನೆಂಬುದಂ ಕಾಣಿಸಿದನಿಂದೆನ್ನ ಕಾಂತನೆನಗೆಂದು॥"

ಕೌಸಲ್ಯೆಗೆ ಕೂಡ ಹೇಳುವಳು. ಸ್ನೇಹಮಯಿಯೂ,
ಪ್ರೇಮಮಯಿಯೂ ಆದ ಸೀತಾದೇವಿಯು ಅತ್ತೆಯರು
ಮೂವರಿಗೂ ನಮಸ್ಕಾರಮಾಡಿ "ತುಂಬಿದ ಪರಕೆ
ವೆತ್ತು," ಸಖಿಯರಂ ಸಂತೈಸಿ ಬೀಳ್ಕೊಂಡು ಪ್ರಯಾಣ
ಮಾಡುವಳು.

ಸೀತಾದೇವಿಯ ಪತಿಭಕ್ತಿಯೂ, ಪತಿಪ್ರೇಮವೂ,
ಅಸಾಧಾರಣವಾದುವುಗಳು. ಪತಿಯು ತನ್ನನ್ನು ಪರಿತ್ಯಜಿ
ಸಿದನೆಂಬುದನ್ನು ಕೇಳಿ

"ಬಿರುಗಾಳಿ ಪೊಡೆಯಲ್ಕೆ ಕಂಪಿಸಿ ಫಲಿತಕದಳಿ
ಮುರಿದಿಳೆಗೊರಗುವಂತೆ................"

ಅವಳು ಮೂರ್ಛಿತಳಾಗಿ ಕೆಳಗೆ ಬೀಳುವಳು. ಗರ್ಭಿಣಿ
ಯಾದ ಸೀತಾದೇವಿಯು ಆ ದಾರುಣವಾರ್ತೆಯನ್ನು
ಕೇಳಿ, ನಡುಗುತ್ತ ಕೆಳಗೆ ಬಿದ್ದುದಕ್ಕೆ ಕವಿಯು ಈ
ಉಪಮಾನವನ್ನು — ಅದೂ ಫಲಿತ ಗೊನೆಯಿಂದ



CC-0. Jangamwadi Math Collection. Digitized by eGangotri

ಕೊಡಿರುವ ಕದಳಿಯ ಉಪಮಾನವನ್ನು-ಕೊಟ್ಟಿರುವುದು ಬಹಳ ಸ್ವಾರಸ್ಯವಾಗಿಯೂ, ಹೃದಯಂಗಮವಾಗಿಯೂ ಇದೆ. ಮೂರ್ಛೆಯಿಂದೆಚ್ಚತ್ತ ಮೇಲೆ, ಸೀತಾದೇವಿಯು ಹಲುಬಿ ಹಂಬಲಿಸುವ ಶೋಕಾಲಾಪವಂತೂ ಕಲ್ಲು ಮನಸ್ಸನ್ನೂ ಕರಗಿಸುವಂತಹದು. ಆಗಿನ ಸ್ಥಿತಿಯಲ್ಲಿಯೂ ಅವಳು ರಾಮನನ್ನು ಸ್ವಲ್ಪವೂ ಆಕ್ಷೇಪಿಸಿಲ್ಲ. ಕೌಶಿಕಮುನಿಯೊಡನೆ ಮಿಥಿಲಾಪುರಕ್ಕೆ ಬಂದು ತನ್ನನ್ನು ಮದುವೆಯಾದಂದಿನಿಂದಲೂ ರಾಮನು ತನ್ನೊಡನೆ ಸುಖಿಸಿ, ವಿರಹವು ಸಂಭವಿಸಿದಾಗ ನವೆದುದಲ್ಲದೆ, ರಾವಣನನ್ನು ಕೊಂದು ತನಗಾಗಿ ಕಷ್ಟಪಟ್ಟು ಕೂಡ, ಕೊನೆಗೆ ತನ್ನನ್ನು ಪರಿತ್ಯಜಿಸಿದನೆಂದು ಮಾತ್ರವೇ ಅವಳು ಗೋಳಾಡುವಳು.

"ತೊಳಪನಾಸಿಕದ ಸುಗ್ಗದಪುಗಳ ಪೊಳೆವಕಂ-।
ಗಳ ತುರುಗಿದೆವೆಯ ಸಿಡುಪುರ್ಬುಗಳ ಪೆರೆನೊಸಲ॥
ಥಳಥಳಿಪ ಮಕುಟದ ಕಿವಿಯ ಮಕರಕುಂಡಲದ
ಕೋಮಲಿತ ಚುಬುಕಾಗ್ರದ ॥
ಲಲಿತಾರುಣಾಧರದ ಮಿರುಗುವ ರದನಪಙ್ಕ್ತಿ।
ಗಳ ಸೂಸುವೆಳನಗೆಯ ಮೋಹನದ ಚೆಲ್ವಿನೊ-।
ಬ್ಬುಳಿಯೆನಿಪ ರಾಘವನ ಸಿರಿಮೊಗವನೆಂತು
ನೋಡದೆ ಮಾಣ್ಬೆನಕಟೆಂದಳು ॥

ಎಂಬ ಪದ್ಯವನ್ನೋದಿದಾಗ ನಮ್ಮ ಅಂತರಾತ್ಮವೇ ದುಃಖದಿಂದ ಬೇಗುದಿಗೊಳ್ಳುವುದು. ಸೀತಾದೇವಿಯು ಹಲವು ವಿಧಗಳಲ್ಲಿ ಹಂಬಲಿಸಿ ಗೋಳಾಡಿದ ಬಳಿಕ,

"ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ"

ಎಂದು ಹೇಳುವುದನ್ನು ಕೇಳಿದಾಗ ಅನನ್ಯಸುಲಭವಾದ ಅವಳ ಪತಿಪ್ರೇಮವನ್ನು ಕಂಡು ನಾವು ಕಣ್ಣೀರಿನ ಕಾಣಿಕೆಯನ್ನೊಪ್ಪಿಸಬೇಕಾಗುವುದು. ಅವಳು ಲಕ್ಷ್ಮಣನನ್ನು ಹರಸಿ ಕಳುಹಿಸುವುದಂತೂ, ನಮ್ಮ ಹೃದಯವನ್ನೇ ದುಃಖದಿಂದಲೂ, ಅನುಕಂಪದಿಂದಲೂ ಕಲಕಿಬಿಡುವ ದೃಶ್ಯವೇ ಸರಿ. ಅಂತಹ ಸೀತಾದೇವಿಯ ದುಃಖವನ್ನು ಕಂಡು, ಕಾನನದ ಮೃಗಪಕ್ಷಿಗಳು ಕೂಡ ತಮ್ಮ ವ್ಯಾಪಾರವನ್ನು ಮರೆತು ಅವಳನ್ನು ಸೇವಿಸಿದುವೆಂಬುದರಲ್ಲಿ ಆಶ್ಚರ್ಯವೇನು ? ನಿರಪರಾಧಿಯಾದ ತನ್ನನ್ನು ಶ್ರೀರಾಮಚಂದ್ರನು ಕಾಡಿಗೆ ಕಳುಹಿಸಿದ್ದರೂ, ಕರುಣಾಳುವಾದ ರಾಘವನಲ್ಲಿ ತಪ್ಪಿಲ್ಲವೆಂದು ಹೇಳುವ ಸೀತಾದೇವಿಯ ಸಾತ್ವಿಕತೆಯು ಎಷ್ಟು ಶ್ರೇಷ್ಠವಾದುದೆಂಬುದನ್ನು ಕೊಂಡಾಡಲು ಹತ್ತು ಬಾಯಿಗಳಾದರೂ ಸಾಲದು.

ಸೀತಾದೇವಿಯು ಅನುಪಮವಾದ ಪುತ್ರವಾತ್ಸಲ್ಯವುಳ್ಳವಳೂ ಆಗಿದ್ದಾಳೆ. ಮಕ್ಕಳಾಗಬೇಕೆಂದು ಅವಳಿಗೆಷ್ಟು ಆಶೆಯಿದ್ದಿತೆಂಬುದನ್ನು ನಾವು ಮೊದಲೇ ನೋಡಿದ್ದೇವೆ. ಕಾಡಿನಲ್ಲಿ ಹಂಬಲಿಸುತ್ತಿದ್ದ ಸೀತಾದೇವಿಯನ್ನು ವಾಲ್ಮೀಕಿಮುನಿಯು ತನ್ನ ಆಶ್ರಮಕ್ಕೆ ಕರೆದೊಯ್ಯುವನು. ಆ ಬಳಿಕ ಚೆಲ್ವೆರಡು ರೂಪಾದಂತೆ ವಿಮುಕ್ತಿ ಕವಲ್ತಂತೆ ತೋರುವ, ರೂಪರಾಶಿಗಳಾದ ಮತ್ತು ತೇಜಸ್ವಿಗಳಾದ ಲವಕುಶರನ್ನು ಅವಳು ಪಡೆದು ತನ್ನ ಪ್ರಾಣಗಳಿಗಿಂತಲೂ ಹೆಚ್ಚಾಗಿ ಅವರನ್ನು ಪ್ರೀತಿಸುತ್ತಿರುವಳು. (ಆ ಬಾಲಕರನ್ನು ಲಾಲಿಸುವುದರಲ್ಲಿ ವಾಲ್ಮೀಕಿಯು ಜಪತಪಸಮಾಧಿಗಳ ಕಾಲವನ್ನು ಕೂಡ ಬಗೆಯುತ್ತಿರಲಿಲ್ಲವೆಂಬ ಭಾವವನ್ನು ಕವಿಯು ತಂದಿರುವುದು ಬಹಳ ಮನೋಹರವಾಗಿದೆ.) ಮುಂದೆ ಲವಕುಶರು ರಾಮನನ್ನು ಯುದ್ಧದಲ್ಲಿ ಸೋಲಿಸುವರು. ವಾಲ್ಮೀಕಿ ಮಹರ್ಷಿಯು, ವರುಣನು ಮಾಡಿದ ಯಜ್ಞವನ್ನು ಪೂರೈಸಿಕೊಂಡು ಪಾತಾಳಲೋಕದಿಂದ ಬಂದ ಮೇಲೆ, ಲವಕುಶರಾರೆಂಬುದು ರಾಮಚಂದ್ರನಿಗೆ ತಿಳಿಯುವುದು. ಅವನು ಮಕ್ಕಳನ್ನು ಮುದ್ದಿಸಿ ತನ್ನೊಡನೆ ಕರೆದುಕೊಂಡು ಹೋದ ಬಳಿಕ ಒಂಟಿಯಾಗಿ ಬಂದ ವಾಲ್ಮೀಕಿಯನ್ನು ಸೀತಾದೇವಿಯು ಆಶ್ರಮದ್ವಾರದಲ್ಲಿಯೆ ಕಂಡು,

"....ಏನಾದರೆಲೆತಾತ ಕುಶಲವರೊಡಲ್ಪಿಡಿವೆನೆಂತೋ!
ಪೆತ್ತಂದು ಮೊದಲಾಗಿ ಪತಿವಿರಹಮಂ ಮರೆದು।
ಪೊತ್ತಿರ್ದೆನೀ ದೇಹಮಂ ತನ್ನ ಸುತರನಾ-।
ರ್ಗಿತ್ತು ನೀನ್ನೈತಂದೆ ತಂದೆ ಹೇಳೆಂದು......."

ಕೇಳುತ್ತಾ ಅವನ ಕಾಲಿಗೆರಗುವಳು. ಇದನ್ನು ನೋಡಿದರೆ ಅವಳ ಪುತ್ರಪ್ರೇಮವು ಸ್ಪಷ್ಟವಾಗಿ ಗೊತ್ತಾಗುತ್ತದೆ. ಆ ಬಳಿಕ ವಾಲ್ಮೀಕಿಯು ಅವಳಿಗೆ ನಿಜಸ್ಥಿತಿಯನ್ನು ವಿವರಿಸಿ, ಅವಳನ್ನು ಸಮಸ್ತ ವೈಭವಗಳೊಡನೆ ಅಯೋಧ್ಯೆಗೆ ಕಳುಹಿಸಿ ಕೊಡುವನು. ಸೀತಾರಾಮರು ಆಶ್ರಮದಲ್ಲಿಯೆ ಒಬ್ಬರನ್ನೊಬ್ಬರು ನೋಡಿದ್ದರೆ ಸುಖ–ದುಃಖ–ಸಂತಾಪಗಳೂ ಏಕಕಾಲದಲ್ಲಿ ಹೊರಹೊಮ್ಮಬೇಕಾದ ಆಗಿನ ದೃಶ್ಯವನ್ನು ವರ್ಣಿಸುವುದೇ

CC-0. Jangamwadi Math Collection. Digitized by eGangotri

ಅಸಾಧ್ಯವಾಗುತ್ತಿದ್ದಿತು. ಕವಿಯು ಅದನ್ನು ಎಷ್ಟೇ ಚೆನ್ನಾಗಿ ವರ್ಣಿಸಿದ್ದರೂ ನಮ್ಮ ಊಹೆಗೇ ಅದನ್ನು ಬಿಟ್ಟಿರುವುದರಿಂದ ಈಗ ಒದಗಿರುವ ಸೊಗಸು ಬೇರೆ ಆಗೆಂದಿಗೂ ಇರುತ್ತಿರಲಿಲ್ಲ.

**ಪರಿಸಮಾಪ್ತಿ:-** ಲಕ್ಷ್ಮೀಶನು ಚಿತ್ರಿಸಿರುವ ಮುಖ್ಯಮುಖ್ಯವಾದ ಸ್ತ್ರೀಪಾತ್ರಗಳನ್ನು ಕುರಿತು ಇಲ್ಲಿ ಸ್ವಲ್ಪಮಟ್ಟಿಗೆ ವಿಮರ್ಶೆ ಮಾಡಿದ ಹಾಗಾಯಿತು. ಅವನ ಸಂವಿಧಾನಕೌಶಲವೂ ಅವನ ಪ್ರತಿಭೆಯೂ ಶ್ರೇಷ್ಠವಾಗಿವೆ. ಅವನ ಕವಿತಾಧೋರಣೆಯೂ, ಶಬ್ದಸಂಪತ್ತೂ, ಕಥಾಕೌಶಲವೂ ಶ್ಲಾಘನೀಯವಾಗಿವೆ. ಜಾಣರನ್ನು ತಲೆದೂಗಿಸುವಂತೆ ಕಾವ್ಯರಚನೆ ಮಾಡುವುದಾಗಿ ಗ್ರಂಥದ ಆರಂಭದಲ್ಲಿ ಅವನು ಮಾಡಿರುವ ಪ್ರತಿಜ್ಞೆಯನ್ನು ಚೆನ್ನಾಗಿ ಕಾಪಾಡಿಕೊಂಡಿದ್ದಾನೆ. 'ಕರ್ಣಾಟಕ ಕವಿಚೂತವನಚೈತ್ರ ಲಕ್ಷ್ಮೀಶನೆಂಬ ಹೆಸರಿಗೆ ತಕ್ಕಹಾಗೆ ಉತ್ತಮರೀತಿಯಲ್ಲಿ ಅವನು ಕಾವ್ಯವನ್ನು ಬರೆದು ಶಾಶ್ವತವಾದ ಕೀರ್ತಿಯನ್ನು ಗಳಿಸಿದ್ದಾನೆ. ಲಕ್ಷ್ಮೀಶನ ಜೈಮಿನಿಭಾರತಕ್ಕೆ ಇಂದಿಗೂ ಆದರಮನ್ನಣೆಗಳುಂಟು, ಮುಂದೆಕೂಡ ಅದು ಕಡಿಮೆಯಾಗುವ ಭಯವಿಲ್ಲ.

ಕೀರ್ತಿಶೇಷರಾದ

## ಜೋಯಿಸ ವೆಂಕಪ್ಪಾಚಾರ್ಯರು



(ವಿಶ್ವಕರ್ನಾಟಕದ ಕೃಪೆಯಿಂದ ಪಡೆದುದು)

ಬಳ್ಳಾರಿಯಲ್ಲಿ ಹುಟ್ಟಿ, ಬೆಳೆದು, ೧೦೩ ವರ್ಷಗಳ ಕಾಲ ಜೀವಿಸಿ, ಸುಪ್ರಸಿದ್ಧ ಕೀರ್ತನಕಾರರೆನಿಸಿ, ಕನ್ನಡ ನಾಡಿನ ಮತ್ತು ನುಡಿಯ ಸೇವೆ ಮಾಡಿದರು. ಇವರು ಸುಮಾರು ೫೦-೬೦ ಕೀರ್ತನೆಗಳನ್ನು ಬರೆದಿದ್ದಾರೆ. ಇವರ ಚಿತ್ರಪಟವನ್ನು ಬಳ್ಳಾರಿಯ ಪೌರಸಭಾಧ್ಯಕ್ಷರು (೧೦-೭-೩೭) ಶ್ರೀ ಲಕ್ಷ್ಮೀನಾರಾಯಣ ದೇವಸ್ಥಾನದಲ್ಲಿ ಅನಾವರಣ ಮಾಡಿದರು. ಈ ಸಮಾರಂಭವನ್ನು ಕುರಿತು ಕಳೆದ ಸಂಚಿಕೆಯಲ್ಲಿ ವಿಸ್ತಾರವಾಗಿ ಬರೆಯಲಾಗಿದೆ.

CC-0. Jangamwadi Math Collection. Digitized by eGangotri

# ಹಿಂದು—ಇಂದು—ಮುಂದು

೧೮೦೦-೧೯೦೦



ಸುಖಸಂತೋಷ-ದೈವಭಕ್ತಿ-ಪತಿಪರಾಯಣತೆ-ಮನೆತುಂಬ ಮಕ್ಕಳು
ನಿಲುವಂಗಿ-ತಲೆತುಂಬಾ ಸೆರಗು-ಹಣೆತುಂಬ ಕುಂಕುಮ

೧೯೦೦-೧೯೨೦



ನವನಾಗರಿಕತೆಯ ಪ್ರವೇಶ-ಸ್ವಾತಂತ್ರ್ಯಪ್ರಿಯಳಾದ ಹೆಂಡತಿ-
ಒಂದು ಮಗು

೧೯೨೦-೧೯೪೦



ಸ್ತ್ರೀದಾಕ್ಷಿಣ್ಯ-ಕೂಸಿಲ್ಲದ್ದಕ್ಕೆ ತೊಡೆಯಮೇಲೊಂದು ಕುನ್ನಿ-ಗಿಡ್ಡ
ಕೋಟು-ಉದ್ದ ಚಣ್ಣ

೧೯೪೦-೬೦



ಬಾಲಕಪ್ರೌಢಾವಿವಾಹ-ಕುಪ್ಪಸಕ್ಕೆ ಬಹಿಷ್ಕಾರ-ಗಂಡಸೊಂದು
ಗೊಂಬೆ-ತೊಂಡ ತಲೆಭಾರ ಹೆಂಡತಿ

CC-0. Jangamwadi Math Collection. Digitized by eGangotri

# ಸೇವಾಧರ್ಮ

ಬರೆದವ—ಅಭಿರಾಮ

ಜ್ಞಾನವು ವಿಕಾಸಗೊಳ್ಳದಿದ್ದರೆ ವಿಶಾಲನಿರ್ಮಿತಿಯು ಅಸಂಭವವು. ಜ್ಞಾನದಿಂದಲೇ ಭಗವಂತನನ್ನು ಅನಂತವಿಧದಲ್ಲಿ ಗ್ರಹಿಸಬಹುದು. ಅನಂತ ವೈಚಿತ್ರ್ಯಗಳನ್ನು ಒಂದೆಡೆಗೆ ಸಮಾವೇಶಗೊಳಿಸಲು ಬಾರದೆ ಹೋದರೆ ಕ್ಷುದ್ರನಿರ್ಮಾಣವೇ ಪ್ರಾಪ್ತವಾಗುವದು. ಕ್ಷುದ್ರತೆಯು ಭಾಗವತ ಇಚ್ಛೆಯ ಪ್ರಬಲ ವೈರಿಯು. ಅದು ಪ್ರತಿ ಆಘಾತಕ್ಕೆ ಒಡೆದು ಪುಡಿಪುಡಿಯಾಗುವದು. ನೀವು ವಿಶಾಲರಾಗಿರಿ. ಜ್ಞಾನದ ಒರೆಗಲ್ಲನ್ನು ಕೈಯಲ್ಲಿ ಹಿಡಿಯಿರಿ. ಸಮತೆಯು ಜ್ಞಾನವನ್ನೇ ಅವಲಂಬಿಸಿದೆ. ಸಮತೆಯೇ ವಿಶಾಲರಚನೆಯ ಬೀಜಮಂತ್ರವು. —ಶ್ರೀ ಅರವಿಂದರು

Faith requires a purpose that shall embrace the whole of *life*;... the profound conviction of a mission and the obligation to fulfil it; finally, the consciousness of a supreme power that guards the believer's progress to his goal. These are the indispensable elements; and where any one is wanting, we may have a sect, a school, a political party; not a faith, not an hourly self-sacrifice for the sake of a high religious ideal.

—ಜೊಸೆಫ್ ಮ್ಯಾಝಿನಿ

ಸಾಮಾನ್ಯವಾಗಿ ಯೌವನವು ನಮ್ಮ ಜೀವನದಲ್ಲೊಂದು ಸಂಧಿಕಾಲವಾಗಿರುತ್ತದೆ. ನಾವು ಏಳುವೆವೊ, ಬೀಳುವೆವೊ—ಕರ್ತೃತ್ವಶಾಲಿಗಳಾಗುವೆವೊ, ಕೈಲಾಗದವರಾಗುವೆವೊ ಎಂಬುದನ್ನು ನಿರ್ಧಾರಗೊಳಿಸುವ ಕಾಲವದು. ತರುಣನು ವಿಚಾರಶೀಲನಾಗಿದ್ದರೆ, ಸುತ್ತುಮುತ್ತಲಿನ ಹೀನ-ದೀನಪರಿಸ್ಥಿತಿಯಿಂದ ಆತನಲ್ಲಿ ಕಳವಳವು ಹುಟ್ಟಿ, ಜನತಾಸೇವೆಗಾಗಿ ತನ್ನನ್ನು ಮುಡುಪಿಡಲು ಆತನು ಪ್ರೇರಿತನಾಗುತ್ತಾನೆ.

ಪ್ರತಿಯೊಂದು ಮಾನವಜೀವಿಗೆ ತನ್ನ ವಿಮುಕ್ತವಿಕಾಸವನ್ನು ಮಾಡಿಕೊಳ್ಳುವದಕ್ಕೆ ಅವಸರವು ದೊರೆಯಲೇಬೇಕು. ಉಚ್ಚಧ್ಯೇಯಪ್ರೇರಿತರಾಗಿ ಊರ್ಜಿತಕರ್ಮದ ಕನಸನ್ನು ಕಾಣುವ ತರುಣರಿಗೆ ಸರಿದಾರಿಯನ್ನು ತೋರಿಸುವ ಹೊಣೆಯು ಸಮಾಜದ ಮೇಲಿದೆ.

ಆದರೆ ನಮ್ಮ ಸಮಾಜದಲ್ಲೇನು ಕಾಣುತ್ತಿದೆ? ಎಲ್ಲಾ ತಿರುವುಮುರುವು. ಪ್ರಾಯದವರು ತಮಗೂ ಸಮಾಜಕ್ಕೂ ಕೀರ್ತಿ ಬರುವಂತೆ ಮುನ್ನಡೆಯುವರೋ ಇಲ್ಲವೋ ಎಂಬುದನ್ನು ನೋಡುವದು ಹಿರಿಯರ ಕೆಲಸ. ಹಿರಿಯರು ಮುಂದೊಡ್ಡಿದ ಕೈಯ ಹರಕೆಯನ್ನು ತಲೆಬಗ್ಗಿ ಹೊತ್ತುಕೊಂಡೇ ಕಿರಿಯರು ಮುಂದಡಿಯಿಡಬೇಕು. ಹಿರಿಯರ ಚಾರಿತ್ರ್ಯವು ದಿವ್ಯಧ್ಯೇಯದ ಪಥಿಕರಾದ ಯುವಕರಿಗೊಂದು ದೀಪಸ್ತಂಭವಾಗಬೇಕು. ಆದರಿಂದ ಹಿರಿಯರು ಯುಕ್ತಜೀವನದ ದೃಷ್ಟಾಂತವನ್ನು ತರುಣರೆದುರಿನಲ್ಲಿ ಹಿಡಿಯಲಾರರು. ತಮಗೇ ಸತ್ಯದ ಯಥಾರ್ಥದರ್ಶನವಿಲ್ಲದವರಾದ ಅವರು ನವೋತ್ಸಾಹದ ತರುಣರಿಗೆ ಮಾರ್ಗದರ್ಶಕರಾಗಲಾರರು. ಅರ್ಥವಿಲ್ಲದ ಆಚಾರಗಳೆಂಬ ಬಿಸಿಲ್ಗುದುರೆಯನ್ನು ಬೆಂಬತ್ತಿದವರು ಹೆರರಿಗೆ ಸತ್ಯದ ಕಾಣ್ಕೆಯನ್ನು ಕೊಡಲಾರರು.

ಹೀಗಾಗಿ ತರುಣರು ಅನಾಯಕರಾಗಿದ್ದಾರೆ. ಯೌವನೋಚಿತ ಉತ್ಸಾಹಕ್ಕೆ ದಾರಿಯಂತೂ ದೊರೆಯಲೇಬೇಕು; ಆದರೆ ದಾರಿ ಯಾವುದು—ಎಂಬುದು ಹೊಳೆಯದು. ಈ ವಿಪತ್ತಿನಲ್ಲಿ ತರುಣರ ಶಕ್ತಿಯು ಚೆಲ್ಲಾಪಿಲ್ಲಿಯಾಗಿ ಬೇಕುಬೇಕಾದತ್ತ ಹರಿದುಹೋಗುತ್ತಿದೆ.

ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ।
ಬಹುಶಾಖಾ ಅನಂತಾಶ್ಚ ಬುದ್ಧಯೋಽವ್ಯವಸಾಯಿನಾಂ॥

ಎಂದು ಗೀತೆಯಲ್ಲಿ ಬಹು ಮಾರ್ಮಿಕವಾಗಿ ಹೇಳಿದೆ. ನಿಶ್ಚಯಾತ್ಮಕವಾದ ಬುದ್ಧಿಯು ಒಂದೇ ತೆರನಾಗಿರುತ್ತದೆ. ಒಂದೇ ದಾರಿಯನ್ನು ಹಿಡಿದಿರುತ್ತದೆ. ನಿರ್ಣೀತ ಧ್ಯೇಯವಿಲ್ಲದ ಮಂಗಮನಸ್ಸು ಟೊಂಗೆಯಿಂದ ಟೊಂಗೆಗೆ ಜಿಗಿದಾಡಬೇಕೆನ್ನುತ್ತದೆ. ಇದೆಲ್ಲ ನಿಜ. ಆದರೆ ಆ ನಿಶ್ಚಿತ ಧ್ಯೇಯದ ಗುರುತಿಲ್ಲದೆ ಮುಂದೆಸಾಗುವದಾದರೂ ಎಂತು?



CC-0. Jangamwadi Math Collection. Digitized by eGangotri

ತರುಣರಿಗೆ ದೂರಾಲೋಚನೆಗಿಂತಲೂ ಉತ್ಸಾಹವೇ ಸಹಜ. ಅವರು ತಟ್ಟನೆ ಮುಂದೆ ಬಂದ ನಿಟ್ಟನ್ನು ಹಿಡಿದು ಹೊರಟುಬಿಡುತ್ತಾರೆ. ಒಬ್ಬನು ರಾಜಕೀಯ ಮುಖಂಡನಾಗಲು ಹವಣಿಸುತ್ತಾನೆ. ಒಬ್ಬನು ಸುಧಾರಕನಾಗಲು ಬಯಸುತ್ತಾನೆ. ಒಬ್ಬನು ಸಂಪಾದಕನಾಗಲು ಹಾತೊರೆಯುತ್ತಾನೆ. ಒಬ್ಬನು ಪೌರಸಭೆಯ ಅಧ್ಯಕ್ಷಪದವಿಗಾಗಿ ತನ್ನ ಜೀವನವನ್ನು ನೀಡಿಕೊಳ್ಳುತ್ತಾನೆ....ಅಂತೂ ಮುಂದೆ ಬಂದುದಕ್ಕೆ ತೆಕ್ಕೆಹಾಯ್ದು ಆದರ ತೆಕ್ಕೆಯಲ್ಲಿ ತಾವು ಸಿಕ್ಕಿಬೀಳುತ್ತಾರೆ. ಅವರಜೀವನವು ಆರೀತಿಯಾಗಿ ಮಾರ್ಪಟ್ಟು ಹೋಗುತ್ತದೆ. ಶ್ರದ್ಧಾಮಯೋಽಯಂ ಪುರುಷಃ। ಯೋ ಯಚ್ಛ್ರದ್ಧಃ ಸ ಏವ ಸಃ ॥ ಯಾರ ಶ್ರದ್ಧೆಯು ಯಾವ ತೆರನಾಗಿರುವದೊ, ಆ ಶ್ರದ್ಧೆಯೆ ಅವರಾಗಿ ಬಿಡುತ್ತಾರೆ. ಆ ಶ್ರದ್ಧೆಯಲ್ಲಿಯೆ ಅವರಿಗೆ ಜೀವನವೆಂಬುದೆಲ್ಲ ಒಳಪಟ್ಟಿರುತ್ತದೆ. ಆ ಶ್ರದ್ಧೆಯ ಹೊರಗೂ 'ಜೀವನ' ವೆಂಬ ವಿರಾಟನ ವಿಶ್ವದೇಹವು ವಿಸ್ತಾರಗೊಂಡಿರಬಹುದು-ಎಂಬುದು ಅವರಿಗೆ ಹೊಳೆಯುವದಿಲ್ಲ.

ಶ್ರದ್ಧೆಯೇನೋ ಸರಿಯಾದುದು. ಆದರೆ ಶ್ರದ್ಧೆಗೆ ವಿಶಾಲಜ್ಞಾನದ ಆಸರವು ದೊರೆಯಬೇಕು. ಆಗ ಅದು ತನ್ನ ಕಣ್ಣಿನಿಂದ ತನ್ನ ದಾರಿಯನ್ನು ಕಾಣುತ್ತ ಸಾಗುವದು. ಇಲ್ಲವಾದರೆ ಕುರುಡನು ಇನ್ನೊಬ್ಬರ ಕೈಯಾಸರವನ್ನು ಹಿಡಿದು ನಡೆದಂತೆ: ಆ ಆಸರ ತಪ್ಪಿದರೆ ತಡವರಿಸಲೇಬೇಕು. ಆದರೆ ಸಜ್ಞಾನಶ್ರದ್ಧೆಯು ನಿರಾಲಂಬವಾಗಿ ನಡೆಯಬಲ್ಲುದು.

ಜನತಾಸೇವೆಗಾಗಿ ಉತ್ಸುಕನಾದವನು ಬುದ್ಧಿಯೋಗವನ್ನು ಅತ್ಯಗತ್ಯವಾಗಿ ಆಚರಿಸಲುಬೇಕು. ಈಗಿನ ಕಾಲವೋ–ಆ ಯೋಗಮಾರ್ಗದಿಂದ ಪರಾವೃತ್ತನನ್ನಾಗಿ ಮಾಡಲು ಎಷ್ಟುಬೇಕಷ್ಟು ರಂಭೆಮೇನಕೆಯರನ್ನೊದಗಿಸುತ್ತದೆ. 'ಕೂರ್ಮೋಽಂಗಾನೀವ ಸರ್ವಶಃ'—ಆಮೆಯು ತನ್ನ ಅವಯವಗಳನ್ನು ತನ್ನೊಳಕ್ಕೆ ಎಳಕೊಳ್ಳುವಂತೆ, ತನ್ನ ಪ್ರವೃತ್ತಿಗಳನ್ನು ನಿಗ್ರಹಿಸಿ, ಜ್ಞಾನದ ಉಪಾಸನೆಗೆ ಅವುಗಳನ್ನು ಹೂಡಲು ಪ್ರಯತ್ನಿಸುವದು ಈಗಿನ ಯುಗದಲ್ಲಿ ಅನಾಗರಿಕತೆಯ ಚಿಹ್ನೆಯಾಗಿದೆ. ಇದಕ್ಕೆ ಪ್ರತಿಯಾಗಿ ಆ ಪ್ರವೃತ್ತಿಗಳನ್ನು ತಡೆಯಿಲ್ಲದಂತೆ ಹೊರಕ್ಕೆ ಹರಿಬಿಟ್ಟು ಅವುಗಳ ಹರಿಯುವಿಕೆಯಲ್ಲಿ ತನ್ನನ್ನು ತೂರಿಕೊಂಡು ಬಿಡುವದು, ಅವುಗಳ ಹಸಿವಿಗೆ ಹೊಸ ಹೊಸ ಉರುವಲನ್ನು ತಂದೀಯುವದು – ಇದು ಆಧುನಿಕನ್ನ ಅಭಿಮಾನದಿಂದ ಪ್ರತಿನಿತ್ಯ ಮಾಡುವ ಕೆಲಸವಾಗಿದೆ.

ಇಂತು ಮನಸ್ಸಿನ ಏಕಾಗ್ರತೆಗೆ ತುಂಬ ಅನನುಕೂಲವಾದ ಈ ಕಾಲದಲ್ಲಿ ಸೇವಾಪೇಕ್ಷಿಯಾದ ತರುಣನು ಕಣ್ಣಿಗೆ ಬಿದ್ದ ಯಾವುದಾದರೊಂದು ಕೆಲಸಕ್ಕೆ ಅಂಟಿಕೊಂಡು ಬಿಡುವನು. ಆತನಿಗೆ ಕಾರ್ಯವೇ ಮಹತ್ವದ್ದಾಗಿ ಬಿಡುತ್ತದಲ್ಲದೆ, ಅದರ ಹಿಂದಿದ್ದ ಹೇತುಪರಾಮರ್ಶೆಯಲ್ಲ. ಆತನಿಗೆ ತನ್ನ ಕಾರ್ಯಕ್ಕೂ ಇನ್ನೊಬ್ಬರ ಅಂಗೀಕೃತಕಾರ್ಯಕ್ಕೂ ಜಾತಿವೈರವು ಕಾಣುತ್ತದೆ. ಕವಿವರ್ಯರು ಕರ್ಮವೀರರು ಒಬ್ಬರನ್ನೊಬ್ಬರು ಹಳಿಯುತ್ತಿರುವದನ್ನು ನಾವು ನಿತ್ಯದಲ್ಲಿ ಕಾಣುವದುಂಟು. ಮಾನವಜೀವನವನ್ನು ವಿವಿಧರೀತಿಗಳಿಂದ ಸಮೃದ್ಧವಾಗಿ ಮಾಡಲು ಬರುತ್ತಿದೆ–ಮಾಡುವದು ಅಗತ್ಯ ಎಂಬುದನ್ನು ಅವರು ಅರಿಯರು.

ನಿಜವಾದ ಕಾರ್ಯಾಪೇಕ್ಷಿಗೆ ಈ ಏಕಾಂಗದೃಷ್ಟಿಯು ಉಚಿತವಲ್ಲ. 'ಅವಿಭಕ್ತಂ ವಿಭಕ್ತೇಷು' ಆತ ಕಾಣಬಲ್ಲವನಾಗಿರಬೇಕು. ನೂರೊಂದುಗಳನ್ನು ಒಂದರಲ್ಲಿ ಮೇಳವಿಸಲು ಆತನಿಗೆ ಬರಲುಬೇಕು. ಆತನದು ಸಮನ್ವಯದೃಷ್ಟಿಯಾಗಿರಬೇಕು.

ಹಲವರು 'ಕೆಲಸವೊಂದು ಬೆಳೆವಣಿಗೆಯನ್ನು ಹೊಂದಲಿ' ಎಂದು ಹಂಬಲಿಸುತ್ತಿರುತ್ತಾರೆ. ಕಾರ್ಯದ ಗಾತ್ರವು ದೊಡ್ಡದಾದಂತೆ ಅವರಿಗೊಂದು ಬಗೆಯ ಹುಮ್ಮಸವೆನಿಸುತ್ತದೆ. 'ಕಾರ್ಯಕ್ಕಾಗಿ ಕಾರ್ಯ' ಎಂದು ಅವರ ಮಂತ್ರವಾಗಿರುತ್ತದೆ. ಆದರೆ ಗಾತ್ರವು ಪರ್ವತಪ್ರಾಯವಾಗಿ ಬೆಳೆಯುವದರಲ್ಲಿ, ಸೂತ್ರವು ಎಲ್ಲಿಯೋ ತಪ್ಪಿಹೋಗಿರುತ್ತದೆ. ಕಾರ್ಯದ ವಿಶಾಲ ವಿಸ್ತಾರದಲ್ಲಿ ತಮ್ಮನ್ನೇ ತಾವು ಕಳೆದುಕೊಳ್ಳುತ್ತಾರೆ. ಇದಕ್ಕಾಗಿಯೇ ಏಸುಕ್ರಿಸ್ತನು 'ನೀನು ಜಗತ್ತನ್ನು ಗೆದ್ದವರಾದರೂ ನಿನ್ನ ಆತ್ಮವನ್ನು ನೀನು ಕಳೆದುಕೊಂಡರೆ?' ಎಂದಂದನು.

ಹಾಗಾದರೆ ನಮ್ಮ ಸೇವಾದರ್ಶವು ಏನಾಗಿರಬೇಕು? ಬರೀ ಕಾರ್ಯವಿಸ್ತಾರವು ನಮ್ಮ ಉದ್ದೇಶವಾಗಕೂಡದು. ಮಾನವನ ಬುದ್ಧಿಯನ್ನು ವಿಕಾಸಗೊಳಿಸುವದೇ ನಮ್ಮ ಗುರಿಯಾಗಿರಬೇಕು. ನೀವು ನೂರು ಭವ್ಯವಾದ ವಿದ್ಯಾಮಂದಿರಗಳನ್ನು ಕಟ್ಟಿಸಿರಬಹುದು; ನೀವು ನೂರು ಆರೋಗ್ಯಭವನಗಳನ್ನು ಏರ್ಪಡಿಸಿರಬಹುದು; ಒಂದು

CC-0. Jangamwadi Math Collection. Digitized by eGangotri

ನವಮತವನ್ನು ಸ್ಥಾಪಿಸಿ ಸಾವಿರಗಟ್ಟಲೆ ಅನುಯಾಯಿಗನ್ನು ದೊರಕಿಸಿರಬಹುದು: ಆದರೆ ನೀವು ಒಂದು ಜೀವವನ್ನಾದರೂ ಕತ್ತಲೆಯ ಮುತ್ತಿಗೆಯಿಂದ ಬಿಡಿಸಿ, ಬೆಳಕಿನ ಬೀದಿಗೆ ಕರೆತಂದಿದ್ದರೆ, ನಿಮ್ಮ ಜೀವನವು ಸಾರ್ಥಕವಾಯಿತು.

'ಸೇವಾಧರ್ಮವು ಪರಮಗಹನವು — ಯೋಗಿಗಳಿಗೂ ಅಗಮ್ಯವು' ಎಂದು ನಮ್ಮ ಪೂರ್ವಿಕರು ಹೇಳಿದುದು ತುಂಬಾ ನಿಜ. ಏಕೆಂದರೆ ಈ ಧರ್ಮದೀಕ್ಷೆಯನ್ನು ಹೆರರಿಗೆ ಕೊಡಹೋಗುವವರು ಮೊದಲು ತಮಗೇ ಆ ದೀಕ್ಷೆಯನ್ನು ಕೊಟ್ಟುಕೊಳ್ಳಬೇಕಾಗುತ್ತದೆ. ತಮ್ಮ ಮನಸ್ಸನ್ನು ಅದೊಂದು ಬಗೆಯ ವಿಶಾಲ ಔನ್ನತ್ತ್ಯಕ್ಕೆ ಒಯ್ಯಬೇಕಾಗುತ್ತದೆ. ಅದೊಂದು ಉದಾರವಾದ — ಸರ್ವಸ್ಥಿತಿಗಳಲ್ಲಿಯೂ ಸಮವಾಗುಳಿಯಬಲ್ಲ ದೃಷ್ಟಿಯನ್ನು ಸಿದ್ಧಿಸಿಕೊಳ್ಳಬೇಕಾಗುತ್ತದೆ. ಬುದ್ಧಿಯ ನಿಪುಣತೆಯನ್ನು — ಕಿರುಕುಳವನ್ನು — ಕೀಳುತನವನ್ನು ಕಳೆದುಕೊಳ್ಳಬೇಕಾಗುತ್ತದೆ.

ಬಡತನ, ಹೊಲೆತನ, ಹೆಣ್ಣುಮಕ್ಕಳ ಹೀನಾಯ, ಜಾತಿಮತಗಳ ಸೆಣಸಾಟ — ಈ ಮೊದಲಾದ ನಮ್ಮ ನಾಡಿನ ಹಲವು ದೋಷಗಳನ್ನು ನೀಗಲಾಡಿಸುವದರ ಗುಟ್ಟು ಈ ಬುದ್ಧಿಯೋಗದಲ್ಲಿದೆ — ಈ ಸಾಮ್ಯಸಾಧನೆಯಲ್ಲಿದೆ. ಈ ವಿಶಾಲ ಉದಾರತೆಯೊಂದು ಸಿದ್ಧಿಸಿತಾದರೆ, ನಮ್ಮ ನಮ್ಮ ಗೇಣುದ್ದ ಗುಡಿಸಲಿನಲ್ಲಿಯೂ ಜನತಾರೂಪಿಯಾದ ಜನಾರ್ದನನ ಪೂಜೆಯನ್ನು ನಾವು ಮಾಡಬಲ್ಲೆವು. ಮಾನವನ ಬುದ್ಧಿಯನ್ನು ಬಿಡುಗಡೆಗೊಳಿಸಿ, ಒಳಗಿನ ಕಳೆಕೊಳೆಯನ್ನೆಲ್ಲ ಕಿತ್ತುತೆಗೆದು, ಅಲ್ಲಿ ಹೊಸ ಹೊಸ ಬೆಳೆಯನ್ನು ಬೆಳಸುವದೆ ನಮ್ಮ ಸಾಧನೆಯ ಸೂತ್ರವಾಗಿರಲಿ. ಸಂಪೂರ್ಣ ಮಾನವನೆ ನಮ್ಮ ಸೇವಾಯೋಗದ ಗುರಿಯಾಗಿರಲಿ.

# ತೋಟಗಾರ ಬಂದ

**(ಸಾಂಗತ್ಯದಂತೆ)**

'ರಂಗಪ್ಪ'

ತೋಟಿಗಬಂದ— ತೋಟಿಗಬಂದ— ತೋಟಿಗಬಂದನು ॥ಪ॥
ತೋಟಾಗೆಲ್ಲ ಬಳ್ಳಿಗಳನು ಕಟ್ಟುವ ನಿಪುಣನು ॥ಅನು॥

ಬಳ್ಳಿಗೆಲ್ಲ ತಾಯಿಯೊಂದೆ ಭೂಮಿಯೆಂದನು ।
ಜೊಳ್ಳುನುಡಿಗಳನ್ನು ಜವದೆ ತಳ್ಳಿರೆಂದನು ॥೧॥

ಎಳೆಯ ಬಳ್ಳಿಗಳಿಗೆ ಕಸಿಯು ಕೂಡದೆಂದನು ।
ಬಲಿತ ಬಳ್ಳಿಗಿಷ್ಟಕ್ಕೆ ಬಿಡುವುದೆಂದನು ॥೨॥

ಕಳೆಯನೆಲ್ಲ ಬೇರುಸಹಿತ ಕೀಳಿರೆಂದನು ।
ತಿಳಿಯನೀರಿನಿಂದ ಲತೆಯ ಪಾಲಿಸೆಂದನು ॥೩॥

ಹುಳುವು ತಿಂದ ತರಗೆಲೆಯಾ ತೆಗೆಯಿರೆಂದನು ।
ಕಳೆಯದಿರಲು ಬಳ್ಳಿಯೆಲ್ಲ ಕೆಡುವುದೆಂದನು ॥೪॥

ಹೊಟ್ಟೆನೊಳಗೆ ರುಚಿಯಭೇದ ಕಾಂಬುದೆಂದನು ।
ಹುಟ್ಟನೊಳಗೆ ರುಚಿಯು ಸವಿಯು ಒಂದೆಯೆಂದನು ॥೫॥

ಬಳ್ಳಿಹೂವ ಬಿಡುವ ತೆರದಿ ಬೆಳೆಯಿಸೆಂದನು ।
ಮುಳ್ಳು ಮುದುರು ಮುರುಕುಗಳನು ಕಳೆಯಿರೆಂದನು ॥೬॥

ಪರಿಮಳವನು ಬೀರಿ ಸುಮವು ಸೊರಗಿತೆಂದನು ।
ಕೊರಗುವುದೇ ಮರಳಿ ಸೊಗಸೆ ಬೀಜವೆಂದನು ॥೭॥

ಬಳ್ಳಿಗಳಿಗೆ ಭಾರಹೊರಿಸಬಾರದೆಂದನು ।
ತಳ್ಳಿಭಾರವನ್ನು ವನವ ಸೇರಿರೆಂದನು ॥೮॥

ನೆರವು ಹೋದ ಲತೆಯ ನೋಡಿ ಕರುಣಿಸೆಂದನು ।
ಮರಳಿ ಜತೆಯನದಕೆ ಬೇಗ ಜೋಡಿಸೆಂದನು ॥೯॥

ನೆಲನ ಸಗ್ಗಮಾಡಿ ಸೊಗದಿ ಬಾಳಿರೆಂದನು ।
ನೆಲೆಯು ನಿಜದ ನಿಜದಿ ನಿಮ್ಮೊಳಿರ್ಪುದೆಂದನು ॥೧೦॥

ಪ್ರೇಮಮೂರ್ತಿ ಪರಮಜ್ಞಾನಿ ಗುರುಮಹಾತ್ಮನು ।
ಈಮಹೀ ವನವ ತಿದ್ದೆ ಚಿನ್ಮಯಾತ್ಮನು ॥೧೧॥

ಗೆಜ್ಜೆಕಟ್ಟಿ ನಡೆಯಿರಣ್ಣ ಸುದ್ದಿಹರಡಲು ।
ಸಜ್ಜುಮಾಡಿ ಪಯಣಕೀಗ ಸಿದ್ಧರಾಗಲು ॥೧೨॥

CC-0. Jangamwadi Math Collection. Digitized by eGangotri

# ಚಂದ್ರಸೇನ ನಿಷಿಧಿ

(ಗೆಳೆಯರ ಗುಂಪಿನ 'ಸಜಾಂಕರ್ನಾಟಕ ಇತಿಹಾಸಸಂಶೋಧನಸಮಿತಿ' ಕೊಪ್ಪಳ)

ಕೊಪ್ಪಳದ ಪಶ್ಚಿಮದಲ್ಲಿ ಕೊಂಚ ನೈಋತ್ಯದಿಶೆಗೆ ಒಂದು ಬೆಟ್ಟವಿದೆ. ಆ ಬೆಟ್ಟವು ಎರಡು ಭಾಗವಾಗಿ, ಒಂದು ಸುಮಾರು ೧೫೦ ಅಡಿ ಎತ್ತರವಾಗಿಯೂ ಇನ್ನೊಂದು ಸು. ೪೦೦ ಅಡಿ ಎತ್ತರವಾಗಿಯೂ ಇದೆ. ಈ ಬೆಟ್ಟವನ್ನು ಕೊಪ್ಪಳದಿಂದ ಪೂರ್ವದಿಕ್ಕಿನಲ್ಲಿ ನಿಂತು ನೋಡಲು ಗದ್ದುಗೆ ( ಪ್ರಭಾವಳಿ ) ಯಾಕಾರವಾಗಿ ತೋರುವುದು. ಎತ್ತರವಾದ ಬೆಟ್ಟದ ಮೇಲೆ ದುರ್ಗವನ್ನು ಕಟ್ಟಿದ್ದಾರೆ. ದುರ್ಗದ ವಾಯುವ್ಯದಿಶೆಯಿಂದ ಆ ದುರ್ಗವನ್ನೂ ಸಣ್ಣ ಬೆಟ್ಟವನ್ನೂ ಒಳಗೆ ಮಾಡಿಕೊಂಡು, ಕೋಟೆಯ ಗೋಡೆಯು ದುರ್ಗದ ನೈಋತ್ಯದಿಶೆಗೆ ಮುಟ್ಟಿದೆ. ಈ ಗೋಡೆಯು ಗಚ್ಚುಕಲ್ಲುಗಳಿಂದ ಕಟ್ಟಲ್ಪಟ್ಟಿದ್ದು, ಇದರಾಚೆ ಎರಡು ಎರಡುವರೆ ಫರ್ಲಾಂಗಿನ ಅಂತರದಲ್ಲಿ ಮಣ್ಣುಗೋಡೆಯೂ ಉಂಟು. ಗಚ್ಚಿನ ಗೋಡೆಯು ಒಳಬದಿಯಲ್ಲಿರುವ ಪ್ರದೇಶಕ್ಕೆ 'ಗಚ್ಚಿನ ಕೋಟೆ' ಎಂದೂ ಮಣ್ಣು ಗೋಡೆಯಿಂದ ಸುತ್ತಲ್ಪಟ್ಟ ಪ್ರದೇಶಕ್ಕೆ 'ಮಣ್ಣುಕೋಟೆ' ಎಂದೂ ಹೆಸರು.

ದುರ್ಗದ ಮುಂಬದಿಯಲ್ಲಿರುವ ಸಣ್ಣ ಬೆಟ್ಟಕ್ಕೆ 'ಚಂದ್ರಬಂಡೆ' ಎಂದು ಹೆಸರು. ಹೆಬ್ಬೆಟ್ಟವು ತ್ರಿಕೋಣಾಕಾರವಾಗಿದೆ. ದಕ್ಷಿಣ - ಪಶ್ಚಿಮ-ಉತ್ತರಗಳ ಕಡೆಯಲ್ಲಿ ಬೆಟ್ಟದ ನಿಲುಗೋಡೆಗಳಿದ್ದು, ಪೂರ್ವದಿಕ್ಕಿನಲ್ಲಿ ಮಾತ್ರ ಒಂದು ಕೋನವಿದೆ. ದುರ್ಗದ ನೈಋತ್ಯಕೋನದಲ್ಲಿ 'ಚಂದ್ರಬಂಡೆಯು' ಉಗಮವಾಗಿ, ದುರ್ಗದ ದಕ್ಷಿಣದ ಗೋಡೆಗೆ ಇದಿರಾದ ಗೋಡೆಯಾಗಿ.ಇದೂ ಸಾಗುತ್ತ ಬಂದು,ಕ್ರಮವಾಗಿ ಇಳಿಯುತ್ತ ಭೂಮಿಯಲ್ಲಿ ಹುದುಗಿದೆ. ಇದೇ ನುಗ್ಗುಲಲ್ಲಿ, ಎಂದರೆ ದುರ್ಗಾಭಿಮುಖವಾಗಿ 'ಚಂದ್ರಬಂಡೆ'ಯ ಉತ್ತರಭಾಗದಲ್ಲಿ ಮೇಲ್ಗಡೆಗೆ ಆರು, ಕೆಳಬದಿಯಲ್ಲಿ ಎರಡು ಹೀಗೆ ಎಂಟು ನಿಷಿಧಿಗಳುಂಟು. ಇವುಗಳ ಪಾರ್ಶ್ವದಲ್ಲಿರುವ ಶಾಸನದಲ್ಲಿ, 'ನಿಷಿಧಿ' ಎಂದಿರುವದರಿಂದ ಇವಕ್ಕೆ ಈ ರೀತಿಯಾದ ಹೆಸರನ್ನಿಟ್ಟಿದೆ. Epigraphica Carnatica Vol II ದಲ್ಲಿ 'ನಿಷಧಿಗೆ' 'ನಿಸ್ತಿಗೆ' 'ನಿಷೀಧಿಗೆ' ಮೊದಲಾದ ರೂಪಗಳಿರುವ ಎಷ್ಟೋ ಶಾಸನಗಳುಂಟು. ಆ ಶಾಸನಪುಸ್ತಕದ Introduction P. 25 ರಲ್ಲಿ ಇವುಗಳ ಅರ್ಥವು, 'Epitaph' ಎಂದು ಮಾಡಿದೆ. ಆದರೆ ಅದೇ ಶಾಸನಗ್ರಂಥದ ೬೬ ನೆಯ ಶಾಸನದಲ್ಲಿ 'ನಿಷಧ್ಯಾಲಯಂ' ಎಂದೂ ೧೫೮ ನೆಯ ಶಾಸನದಲ್ಲಿ 'ನಿಷಿಧಿಗೆಯಂ........ನಿಲಿಸಿ ಪ್ರತಿಷ್ಠೆ ಮಾಡಿ' ಎಂದೂ ಇರುವದರಿಂದ, 'ನಿಷಿಧಿ' ಎಂಬುದು ಒಂದು ತೆರನಾದ ಸ್ಮಾರಕಶಬ್ದವೆಂದೂಹಿಸಬಹುದು.

ಮೇಲೆ ನಿರ್ದೇಶಿಸಿದ ಆ ನಿಷಿಧಿಗಳಲ್ಲಿ,ಕೆಳಬದಿಯಲ್ಲಿರುವ ಒಂದು ನಿಷಿಧಿಯ ಎಡಬದಿಯಲ್ಲಿ ೨೫ ಅಕ್ಷರಗಳಿಂದೊಡಗೂಡಿದ ೫ ಸಾಲಿನ ಪುಟ್ಟದೊಂದು ಶಾಸನವುಂಟು.

> " ಶ್ರೀ ಕೊಪಣದ
> ಚಂದ್ರಸೇನ ದೇವ
> ರ ಗುಡ್ಡಗುಡಗಳ
> ಚಂದಪ್ಪನ ನಿ
> ಸಿಧಿ। "

ಸದ್ಯಕ್ಕೆ ಕೊಪ್ಪಳದಲ್ಲಿ ಸಂಶೋಧಿತವಾದ ಎಲ್ಲ ಲೇಖನಗಳಲ್ಲಿ, ಇದೊಂದೇ ಸ್ಥಾನಿಕಲೇಖನವು "ಕೊಪಣ" ಎಂಬ ಹೆಸರಿನಿಂದ ಕೂಡಿ ಉಪಲಬ್ಧವಾದುದು.

'ಚಂದ್ರಸೇನ' ಎಂಬ ಹೆಸರು ಪ್ರಾಯಿಕವಾಗಿ ಜೈನಗುರುಪರಂಪರೆಯಲ್ಲಿ ಬಹುವಾಗಿಲ್ಲ. 'ಚಾವುಂಡರಾಯನು' (ಕ್ರಿ. ವ. ೯೭೮) ತನ್ನ 'ಆದಿಪುರಾಣ'ದಲ್ಲಿ (೧೬) 'ಕೋಪಣಾದ್ರಿಯಲ್ಲಿ ಮುಡಿಪಿದ ಕುಮಾರಸೇನ'ನನ್ನು ನೆನೆದು—

> " ವಸುಧೆಗೆ ನೆಗಳ್ದರ್ ತಪದೊ-
> ಳ್ಪೆಸೆದಿರೆ ತಮ್ಮಿಂದ ಜೈನಸಮಯೋನ್ನತಿ ರಂ-
> ಜಿಸೆ ನಾಗಸೇನರುಂ ವೀ-
> ರಸೇನರುಂ "ಚಂದ್ರಸೇನ" ಮುನಿಪುಂಗ
> ವರುಂ ॥ ೧೬ ॥

CC-0. Jangamwadi Math Collection. Digitized by eGangotri

ಎಂಬೊಬ್ಬ 'ಚಂದ್ರಸೇನ' ನನ್ನು ಸ್ತುತಿಸಿದ್ದಾನೆ. ಇವನೇ ಇವನಾಗಿರಬಹುದೆ? ಈ ಅಕ್ಷರಗಳ ಮೇಲಿಂದ ಕಾಲವನ್ನೇನಾದರೂ ಗುರುತಿಸಬಹುದೆ? ಇದೇ 'ಚಂದ್ರಸೇನ' ಎಂಬ ಹೆಸರಿನಿಂದೇ ಆ ಬೆಟ್ಟಕ್ಕೆ 'ಚಂದ್ರಬಂಡೆ' ಎಂಬ ಹೆಸರು ಬಂದಿರಬಹುದೇ?

ಇಲ್ಲಿ ಕೊಟ್ಟಿರುವ ಚಿತ್ರದಲ್ಲಿ 'ಚಂದ್ರ' ಎಂಬಲ್ಲಿಯ 'ದ'ಕಾರದ ವರ್ತುಲವು ತಲೆಕಟ್ಟಿಗೆ ಕೂಡಿದಂತೆ ಕಂಡರೂ ಮೂಲದಲ್ಲಿ ಹಾಗೆ ಕೂಡಿಲ್ಲ. ಕಲ್ಲಿನಲ್ಲಿಯ ಹುರುಬರಕಿನ ಛಾಯೆಯಿಂದ ಹಾಗೆ ಕಾಣುವದು.

ಮೇಲೆ ನಿಂತುದು ತೀರ್ಥಂಕರನಮೂರ್ತಿಯು; ಛತ್ರತ್ರಯ–ಚಾಮರದ್ವಯಯುತವಾಗಿದೆ. ಕೆಳಬದಿಯಲ್ಲಿ



(ಚಿತ್ರದ) ಬಲಕ್ಕೆ ಕುಳಿತ ಮೂರ್ತಿಯು ಆಚಾರ್ಯನದು. ಕೈಯಲ್ಲಿ ಪುಸ್ತಕಪತ್ರವಿದೆ. ಆವನು, ಮುಂದೆ ಕುಳಿತವರಿಗೆ ಧರ್ಮಶ್ರವಣವನ್ನು ಮಾಡಿಸುತ್ತಿರಬೇಕು. ಅವನ ಮುಂದಿನುವುದು ವ್ಯಾಸಪೀಠ. ಆದರ ಕೆಳಬದಿಯಲ್ಲಿ ದುಂಡಾಗಿ ಕಾಣುವುದು ಕಮಂಡಲು; ಆಚಾರ್ಯನ ಸಮ್ಮುಖದಲ್ಲಿ ಭಕ್ತಿಪೂರ್ವತರಾಗಿ ಕೈಮುಗಿದು ಕುಳಿತವರು 'ನೋಂಪಿ'ಗಳು. ಅವರಲ್ಲಿ ಕಡೆಗೆ ಕುಳಿತ ಮೂರ್ತಿಯು ಸ್ತ್ರೀಯದಾಗಿದೆ. ಮುಂದಿನದು ಪುರುಷನದು. ಇಲ್ಲಿಯ ಮತ್ತೆ ಕೆಲವು 'ನಿಷಿಧಿ'ಗಳಲ್ಲಿ ಮೇಲಿನ 'ಜಿನ'ಮೂರ್ತಿಯು ಕುಳಿತದ್ದಿದ್ದು ಆಚಾರ್ಯನ ಹಿಂದೆ ಶಿಷ್ಯ, ಹಾಗೂ ನಾಲ್ಕುಜನ ಶ್ರೋತೃಗಳೂ ಉಂಟು. ಎಷ್ಟು ಜನ ವ್ರತಸ್ಥರಿರುವರೋ ಅಷ್ಟು ಜನರ ಮೂರ್ತಿಗಳನ್ನು ಕೆತ್ತುತ್ತಿರಬೇಕು.

ಜೈನಧರ್ಮದಲ್ಲಿ 'ಸಲ್ಲೇಖನ' ಎಂಬುದೊಂದು ವ್ರತ. ಆ ಧರ್ಮಿಗಳೆಲ್ಲರೂ ಧರ್ಮ-ನಿಯಮಪಾಲನೆಗೆ ಆತಂಕ ಉಂಟಾದಲ್ಲಿ, ಈ ವ್ರತದೀಕ್ಷೆ ಪಡೆದು ತನುವ ಮುಡಿಪಿಸಬೇಕೆಂದು ಜಿನಧರ್ಮಾಜ್ಞೆ. ಈ ವ್ರತವಿಷಯಕವಾಗಿ ಸಮಂತಭದ್ರಾಚಾರ್ಯನು ರತ್ನಕರಂಡಕದಲ್ಲಿ:–

"उपसर्गे दुर्भिक्षे जरसि रुजायांच निःप्रतीकारे।
धर्माय तनुविमोचनमाहुः सल्लेखनं आर्याः॥

ವ್ರತವಿಧಾನವು ಮುಂದಣಶ್ಲೋಕಗಳಲ್ಲಿ ಹೀಗೆ ಹೇಳಲ್ಪಟ್ಟಿದೆ:–

"आहारं परिहाप्य क्रमशः स्निग्धं विवर्धयेत् पानम्।
स्निग्धंच हापयित्वा खरपानं पूरयेत् क्रमशः॥
खरपानहापनमपि कृत्वा कृत्वोपवासमपिशक्त्या
पंचनमस्कारमनास्तनुं त्यजेत् सर्वयत्नेन॥"

ಇಂತಹ ವ್ರತದೀಕ್ಷೆಯಿಂದ ಧರ್ಮಕ್ಕಾಗಿ ತನುವನ್ನು ಮುಡಿಪಿಟ್ಟ ಮಹಾತ್ಮರ ಸ್ಮಾರಕಗಳೇ ಈ 'ನಿಷಿಧಿ'ಗಳು

—'ನಾ. ಭಾ.'



CC-0. Jangamwadi Math Collection. Digitized by eGangotri

# ವೈದ್ಯರಾಜ

## (ಪುಸ್ತಕಾವಲೋಕನ)

ಶ್ರೀ. ರಂಗನಾಥ ಮುಗುಳಿ, ಎಂ. ಎ.

(ಪುಸ್ತಕ ಬರೆದವರು:—ಶ್ರೀರಂಗ. ಪ್ರಕಾಶಕರು:— ನಾಟ್ಯಸಂಘ ಕರ್ನಾಟಕ ಕಾಲೇಜ ಧಾರವಾಡ.)

ಇದು 'ಉದರವೈರಾಗ್ಯ'ದ ತರುವಾಯ ಹೊರಟ 'ಶ್ರೀರಂಗ'ರ ಎರಡನೆಯ ಸಾಮಾಜಿಕನಾಟಕ. ಇದಾದರೂ ಮೊದಲು ರಂಗಭೂಮಿಯ ರಾಜ್ಯದಲ್ಲಿ ಸುಳಿದಾಡಿ, ಆ ಮೇಲೆ ಅಚ್ಚಿನ ನಾಡಿನಲ್ಲಿ ನೆಲೆಗೊಂಡಿದೆ. ಸಾಮಾಜಿಕದೃಶ್ಯವೇ ಇಂದು—ನೀರಡಿಸಿದ ಕನ್ನಡನುಡಿ-ಪಕ್ಕಿಗೆ ಬೇಕಾದ ಸೀರಹನಿಯೆಂದು ಸರಿಯಾಗಿ ಅರಿತು, ಅದರ ಪೂರೈಕೆಯ ಪಂತವನ್ನೆ ತೊಟ್ಟು ನಡೆದಿರುವ 'ಶ್ರೀರಂಗ' ರಿಗೆ ನಾವು ಅಭಿಸಂದನೆಗಳನ್ನು ಕೊಡುವೆವು.

ಇಲ್ಲಿ ಮೊದಲಿರುವುದು 'ಎದೆವಯ್ಯ'ನ ಮುನ್ನುಡಿ, 'ಉದರವೈರಾಗ್ಯ'ದಿಂದ ತೊಟ್ಟು 'ಎದೆವಯ್ಯ'ನೆಂಬ ಹೆಸರನ್ನು, ಮುನ್ನುಡಿಯ ಮಟ್ಟಿಗೆ ನಾಟಕಕಾರರು ತಮಗೆ ಇಟ್ಟುಕೊಂಡಿದ್ದಾರೆ. ಅವರೇ ಇಟ್ಟುಕೊಂಡಿರುವ ರೂಢಿನಾಮಕ್ಕೆ ನಮ್ಮದಾವುದೂ ಆಕ್ಷೇಪವಿಲ್ಲ. ಆದರೆ, "ಎದೆವಯ್ಯ" ಪದವು ಅನ್ವರ್ಥಕವಾಗಬೇಕಾದರೆ 'ಎದೆಯೊಯ್ಯ' ಇಲ್ಲವೆ 'ಎದೆಯಯ್ಯ' ಎಂಬ ರೂಪದಲ್ಲಿ ಇರುವುದು ಒಳಿತೆಂದು ತೋರುತ್ತದೆ. ಹೊಸಪದಗಳ ನಿರ್ಮಾಣದಲ್ಲಿ ನಿಷ್ಕಾರಣವಾಗಿ ವ್ಯಾಕರಣದ ಕಟ್ಟುಗಳನ್ನು ಕೀಳಿಣಿಸಬಾರದು. ಈ ಮುನ್ನುಡಿಯಲ್ಲಿ ಹೆಚ್ಚುಭಾಗವು ಪಾಪದಲ್ಲಿ ಪುನರ್ಜನ್ಮವೆಂಬ ರೂಢಿಯ ನಂಬಿಗೆಯನ್ನು ಹೋಗಲಾಡಿಸುವ ಯತ್ನವಿದೆ; ಕಡೆಗೆ ಪಾಪಕ್ಕೆ ಪುನರ್ಜನ್ಮವಿಲ್ಲ, ಪುಣ್ಯಕ್ಕೆ ಪುನರ್ಜನ್ಮವಿಟ್ಟಿಲ್ಲ—ಎಂಬ ಸಿದ್ಧಾಂತವಿದೆ. ನಂಬಿಗೆಯಿಂದ ಆಚಾರವಿಚಾರಗಳು ಹೇಗೆ ದೂರಾಗುವವೆಂಬ ಮುಂದಿನ ವಿಚಾರಕ್ಕೆ ಈ ಸಿದ್ಧಾಂತವು ಸಹಾಯ್ಯಕವಾಗಬಹುದಾದರೂ ಅದರ ವಿಸ್ತಾರವು ಅನಾವಶ್ಯಕವಾಗಿತ್ತು. ಸಿದ್ಧಾಂತದ ಮಟ್ಟಿಗೆ, ರೂಢಿಯಲ್ಲಿ ಮಾತ್ರ 'ಪಾಪದಿಂದ ಪುನರ್ಜನ್ಮ' ಎಂಬ ತಿಳಿವಳಿಕೆಯಿದ್ದರೂ 'ಪುಣ್ಯದಿಂದ ಪುನರ್ಜನ್ಮವಿಲ್ಲ, ಪುಣ್ಯದಿಂದ ಮುಕ್ತಿ' ಎಂಬ ನಿಶ್ಚಿತವಾದ ನಂಬಿಗೆಯಿಲ್ಲ. ಇದು ತಿಳಿವಳಿಕೆಯು ತಿಳಿಯಾಗಿರದ ಜನಸಮಾಜದ ಮಾತು. ಆದರೆ ತಿಳಿವಳಿಕೆ ಬೆಳೆದ ಅನೇಕರು, ಶಾಸ್ತ್ರವನ್ನು ಅನುಸರಿಸಿ 'ಪಾಪಪುಣ್ಯಗಳೆರಡಕ್ಕೂ ಪುನರ್ಜನ್ಮವಿದೆ; ಪಾಪಪುಣ್ಯಗಳೆರಡನ್ನೂ ಮೀರಿದಾಗ, ಕರ್ಮದಿಂದಲೂ ಪುನರ್ಜನ್ಮದಿಂದಲೂ ಮುಕ್ತಿ' ಎಂದು ತಪ್ಪದೆ ತಿಳಿದಿರುವರು. ಹೀಗಿರುವಾಗ 'ಪುಣ್ಯಕ್ಕೆ ಪುನರ್ಜನ್ಮ'ವೆಂಬುದೊಂದು ಹೊಸಸಿದ್ಧಾಂತವಲ್ಲ. ತೀರ ಸಾಮಾನ್ಯರ ನಂಬಿಗೆಯನ್ನು ಮಾತ್ರ ನೆನೆದರೆ, ಅದು ಹೊಸದಾಗಿ ಸ್ವಲ್ಪಮಟ್ಟಿಗೆ ತೋರಬಹುದಾದರೂ ಅದು ವೇದದಷ್ಟು ಹಳೆಯದು. ಆದರೆ 'ಪಾಪಕ್ಕೆ ಪುನರ್ಜನ್ಮವಿಲ್ಲ' ಎಂಬುದೇನೋ ಹೊಸವಿಚಾರ. ಇದನ್ನು ಹೆಚ್ಚುಕಡಿಮೆ ನಗೆಮಾತಿನಲ್ಲಿ 'ಎದೆವಯ್ಯ'ನು ಪ್ರಸ್ತಾಪಿಸಿರುವುದರಿಂದ ಅದರ ಚರ್ಚೆಯನ್ನು ಈಗ ಯುಕ್ತಿಪ್ರಯುಕ್ತಿಗಳಿಂದ ಬೆಳೆಯಿಸುವುದು ಅಪ್ರಸ್ತುತ. ಒಟ್ಟಿನಲ್ಲಿ, ಮುನ್ನುಡಿಯ ಈ ಭಾಗದಲ್ಲ ವಿಚಾರದ ತಿಳಿಯಾದ ತೊರೆಯಿಲ್ಲ. ಹೊಸ ಕೋಟಿಕ್ರಮದಿಂದ ಬೆರಗುಗೊಳಿಸುವ ಸರಣಿಯಲ್ಲಿ ಶೈಲಿಯ ಅಸ್ಪಷ್ಟತೆಯೊಂದು ಅಲ್ಲಲ್ಲಿ ಬೆರೆತಿದೆ. 'ವ್ಯವಹಾರವು ನಂಬಿಗೆಯ ಕಂಬದ ಮೇಲೆ ನಿಂತಿಲ್ಲ; ವ್ಯವಸಾಯವು ನಿಂತಿದೆ ನಂಬಿಗೆಯ ಕಂಬದ ಮೇಲೆ' ಎಂಬಲ್ಲಿಯ ವ್ಯವಹಾರ-ವ್ಯವಸಾಯಗಳ ಭೇದವು ಸ್ಪಷ್ಟವಾಗಿಲ್ಲ. 'ವ್ಯವಹಾರವು ನಂಬಿಗೆಯ ಮೇಲೆಯೇ ನಿಂತಿದೆ-ಎಂದು ನನ್ನ ಮತ' ಎಂಬ ಇನ್ನೊಂದು ಹೇಳಿಕೆಗೂ ಮೇಲಿನದಕ್ಕೂ ಒಡೆದುಕಾಣುವ ವಿರೋಧವನ್ನು ಬಿಡಿಸಿ ತಿಳಿಸಿಲ್ಲ. 'ಆಚಾರವು ಈಗಿನ ಕಾಲದಲ್ಲಿ ನಡೆಯುವುದು, ವಿಚಾರವು ಹಿಂದಿನಿಂದ ನಡೆದು ಬಂದದ್ದು' ಈ ಮುಂತಾದ ಕೆಲವು ಮಾತುಗಳ ಸೃಷ್ಟೀ

CC-0. Jangamwadi Math Collection. Digitized by eGangotri

ಕಣವು ಬೇಕು. ಆದರೆ ಆಚಾರವನ್ನು ಮುದುಕನ
ಕೈಯ್ಯಲ್ಲಿಯ ಬಡಿಗೆಗೂ, ವಿಚಾರವನ್ನು ಮನೆಯಲ್ಲಿಟ್ಟು
ಪೂಜಿಸುವ ವಿಗ್ರಹದ ದೇವನಿಗೂ ಹೋಲಿಸಿ 'ಎಡೆವ
ಯ್ಯಸು ಬಹಳ ಸ್ಪಷ್ಟವಾಗಿ ಸೊಗಸಾಗಿ ಲೋಕರೂಢಿ
ಯನ್ನು ಬಣ್ಣಿಸಿರುವನು. ಈ ಮುಂದೆ, ಕಡೆಯ ಒಂದೆರಡು
ಪುಟಗಳಲ್ಲಿ ನಾಟಕದ ಪ್ರಸ್ತಾಪ ಒಂದಿದೆ. 'ವ್ಯವಹಾರದ
ಕನ್ನಡಿಯೇ ನಾಟಕ' ಎಂದೂ, 'ರೂಢಿಯ ಸತ್ಯಗಳನ್ನು
ತೋರಿಸುವ ನಾಟಕಗಳೇ ನಿಜವಾದ ನಾಟಕಗಳು,
ಮಿಕ್ಕವುಗಳೆಲ್ಲ ಹುಡುಗಾಟಿಕೆಯ ಕೀಟಕಗಳು' ಎಂದೂ
'ಉದರ ವೈರಾಗ್ಯ'ದ ಮುನ್ನುಡಿಯಲ್ಲಿ ಉಸುರಿಡ ಅಭಿ
ಪ್ರಾಯವನ್ನೇ ಎಡೆವಯ್ಯಸು ಗಟ್ಟಿಗೊಳಿಸುವನು;
ನಮಗೆ ಕೂಡ ಈ ಅಭಿಪ್ರಾಯವು ತುಂಬಾ ಸತ್ಯಪೂರ್ಣ
ವಾಗಿದೆ. ಆದರೆ ಸಾಮಾಜಿಕನಾಟಕಗಳ ಆವಶ್ಯಕತೆ
ಎಷ್ಟೋ, ಅಷ್ಟೇ ಅವುಗಳ ದುಸ್ತರತೆ. ಕೇವಲವಾಸ್ತವ
ದಿಂದ ಸಾಮಾಜಿಕನಾಟಕವು ಕೂಡ ತೃಪ್ತಿಹೊಂದಲಾ
ಗದು. ಒಮ್ಮೊಮ್ಮೆ ಹಾಗೆ ಮಾಡಿದಾಗ ಕಲೆಯ
ಪೂರ್ಣತೆ ಅದಕ್ಕೆ ಬಂದರೂ ಸಮಾಜಕ್ಕೆ ಸಲ್ಲಿಸಬೇಕಾದ
ಕಾಣಿಕೆ ಎಂಬರ್ಥದಲ್ಲಿ,ಅದು ವಾಸ್ತವ್ಯವನ್ನು ಬಣ್ಣಿಸಿಯೂ
ಧ್ಯೇಯವನ್ನು ಸೂಚಿಸಬೇಕು; ರೂಢಿಯ ಸತ್ಯವನ್ನು
ತೋರಿಸಿಯೂ, ಮುಂದೆ ಮಾಡಬೇಕಾದ ಬಾಳುವೆಯ
ಚೆಕ್ಕೆಯನ್ನೂ ತೋರಿಸಬೇಕು. ಆಗ ಅದು ರೋಗಿಯಾದ
ಸಮಾಜಕ್ಕೆ ಸರಿಯಾದ ಔಷಧ, ಪಥ್ಯ; ಇಲ್ಲದಿದ್ದರೆ ಬರೀ
ಚಿಕಿತ್ಸೆ. ಆದರೂ ಬರೀ ಚಿಕಿತ್ಸೆಯ ಸಾಮಾಜಿಕನಾಟಕ
ಗಳ ಬೆಲೆಯು ಎಳ್ಳಷ್ಟೂ ಕಡಿಮೆಯಿಲ್ಲ. ಧ್ಯೇಯಸೂಚನೆ
ಯಿಲ್ಲವೆಂದು ಅವುಗಳ ಬೆಲೆಯಿಳಿಸುವ ವಿಮರ್ಶೆಯು
ಸಮಂಜಸವಲ್ಲ; ಆದರೆ ಅವು ಸಂಪೂರ್ಣವಲ್ಲ. ಇಷ್ಟೇ–
ಇದಂತಿರಲಿ; ಮುಖ್ಯವಾಗಿ, ಸಾಮಾಜಿಕನಾಟಕಗಳ
ವಾಸ್ತವವರ್ಣನೆಯಲ್ಲಿಯೂ ಬಹಳ ನಿಪುಣವಾದ
ಆಯ್ಕೆ ಬೇಕು, ಆಯ್ದ ಸಂಗತಿ-ಸಂನಿವೇಶಗಳ ಜೋಡಣೆ
ಯಲ್ಲಿಯೂ ಅಂಗವಣೆ ಬೇಕು; ಮಾತುಗಳ ಮಾಲೆಗಿಂತ,
ಕೃತಿಗಳ ಹೆಣಿಕೆ ಬೇಕು; ರಂಗಸ್ಥಲವನ್ನು ಮರೆಯದೆ,
ಅತ್ಯಂತ ಸ್ವಾಭಾವಿಕವಾಗಿ ಅತ್ಯಂತಪರಿಣಾಮಕಾರಕ
ವಾಗುವ ಮಾತುಗಳ – ನಡತೆಗಳ – ಹೊಂದಿಕೆ ಬೇಕು.
ತದ್ರೂಪತೆ ಹಾಗೂ ಕಲ್ಪಕತೆಗಳ ನಡುವಿನ ತೂಕದ
ತಪ್ಪದರಿವು ಬೇಕು. ಭಾಷೆಯು ಮಾತಿನದಾದರೂ
ಸಾಹಿತ್ಯಕ್ಕೊಪ್ಪುವ ಬಿರುಗು-ಮೇಲ್ಮೆ ಬೇಕು. ಇವೆ
ಲ್ಲಕ್ಕೂ, ಸಮಾಜದ ಕುಂದುಕೊರತೆಗಳನ್ನೂ ಒಳಿತು
ಲೇಸುಗಳನ್ನೂ ಅನೇಕ ಸ್ವರೂಪಗಳಲ್ಲಿ ಅನೇಕದೃಷ್ಟಿ
ಗಳಿಂದ ನೋಡಿ, ನಿಷ್ಠುರತೆ ಕಾರುಣ್ಯಗಳ ಸರಿಯಾದ
ಬೆರಕೆಯಿಂದ ರೂಢಿಯ ಸತ್ಯಗಳಿಗೆ ಕಲಾರೂಪಕೊಟ್ಟು
ತೋರಿಸುವ ನಾಟ್ಯಪ್ರತಿಭೆಯ ನಿರ್ಮಾಣಶಕ್ತಿ ಬೇಕು,
ಹೀಗಿರಲು, ತದ್ರೂಪತೆ ಕಲ್ಪಕತೆಗಳ ನಡುವಣ ತೂಕ
ತಪ್ಪಿಯೋ, ಕಲಿಯದ ಹಾಗೂ ಕಲಿತ ಜನದ ಅಭಿರುಚಿ
ತೃಪ್ತಿಗಳ ಗೊಂದಲದಿಂದಲೋ, ಅನೇಕ ಸಾಮಾಜಿಕ
ನಾಟಕಗಳು ಅಸಾಮಾಜಿಕವಾಗಿವೆ. ಕೇವಲ ಇಂದಿನ
ಸಮಾಜದ ಚಿತ್ರವನ್ನು ಕೊಡುವುದೆಂದಮಾತ್ರಕ್ಕೆ
ಸಾಮಾಜಿಕನಾಟಕದ ಕಾರ್ಯವರ್ಣನೆಯಾಗದು.
ಸಾಮಾಜಿಕನಾಟಕದ ಎಲ್ಲ ಬಗೆಯ ಹೊಣೆಯನ್ನು
ತಿಳಿಯದ ಮೂಲಕವೋ ಏನೋ, ಕೆಲವು ಸಾಮಾಜಿಕ
ನಾಟಕಗಳು ತೀರ ವಿದ್ವತ್‌ಪ್ರಚುರ, ಕೆಲವು ತೀರ
ಸಾಮಾನ್ಯ. ಕೆಲವು ತೀರ ತದ್ರೂಪ, ಕೆಲವು ತೀರ ಕಲ್ಪ
ನಾತ್ಮಕ. ಹೀಗೆ ಹೇಳುವಾಗ, ಕೈಲಾಸಂ ಮೊದಲಾದ
ಕೆಲವರ ದೃಶ್ಯಗಳು ಯಶಸ್ವಿಯಾದುವುಗಳೆಂಬುದನ್ನು
ನಾವು ಮರೆತಿಲ್ಲ. ಆದರೆ ಸಾಮಾನ್ಯವಾಗಿ, ಸ್ವತಂತ್ರ
ವಾದ ಸರ್ವಮಾನ್ಯವಾದ ಸಾಮಾಜಿಕಕೃತಿಗಳು
ಕನ್ನಡದಲ್ಲಿ ವಿರಳ–ಎಂಬುದನ್ನು ಎಲ್ಲರೂ ಒಪ್ಪಲೇಬೇಕು.
ಇಂಥ ಪರಿಸ್ಥಿತಿಯಲ್ಲಿ 'ಶ್ರೀರಂಗ'ರ ಕಾರ್ಯದ ಬೆಲೆ
ಯನ್ನು ಈಗಲೇ ನಿರ್ಣಯಿಸುವುದು ಒಳಿತಲ್ಲ. ಆದರೂ
ಈಗ ಪ್ರಕಟವಾದ ಎರಡು ನಾಟಕಗಳಿಂದ ತಾತ್ಪೂರ್ತಿಕ
ವಾಗಿ ಹೇಳುವುದಾದರೆ, ಇನ್ನೂ ಇವರ ನಾಟಕಗಳು
ಹೆಚ್ಚಾಗಿ ವಿದ್ಯಾವಂತರ ನಾಟಕಗಳು; ಇವರಲ್ಲಿ ನಾಟ್ಯ
ಪ್ರತಿಭೆ ಉಜ್ವಲವಾಗಿ ಇದ್ದರೂ ಅದರ ಪ್ರಕಟನದಲ್ಲಿ
ಏಕಾಂತವಾದ,ನಿಯತವಾದ ನಿರ್ವಿರ್ತಿಯಿಲ್ಲ. ಕೆಲವು ಕಡೆ
ಗಳಲ್ಲಿ ವಿದ್ಯಾವಂತರಿಗೆ ಕೂಡ ಬೆಕ್ಕಸಗೊಳಿಸುವ ಕಲ್ಪ
ನೆಯ, ಭಾಷೆಯ ಚಮತ್ಕಾರಗಳು ಬರುವುದರಿಂದ
ರಂಗಭೂಮಿಯ ಮೇಲೆ ಅವೆಲ್ಲ ಹುಸಿಹೋಗುವ ಸಂಭವ
ಬಹಳವಾಗಿ, ನಾಟಕಸೃಷ್ಟಿಗೆ ಬೇಕಾದ ತತ್‌ಕ್ಷಣಗ್ರಹಣ
ವಾಗುವಂತಹ ನಿರ್ಮಾಣವು ಇವರ ಕೃತಿಗಳಲ್ಲಿ ಕಡಿಮೆ.
ಆದರೂ ಸಾಮಾಜಿಕ ದೃಶ್ಯರಚನೆಯೇ ಇಂದಿನ ಕನ್ನಡ
ನಾಡುನುಡಿಗಳ ಜೀರ್ಣಸ್ಥಿತಿಯಲ್ಲಿ ಗಡುಚಾಗಿರುವಾಗ,

CC-0. Jangamwadi Math Collection. Digitized by eGangotri

ಶ್ರೀರಂಗರ ನಾಟಕಗಳು ನಿಃಸಂಶಯವಾಗಿ ಮೇಲಿನ ಮಟ್ಟಿನವು ಎಂದು ನಾವು ಸಾರಬಲ್ಲೆವು.

ಈ 'ವೈದ್ಯರಾಜ'ದ ಆರಂಭಕ್ಕೆ ನನ್ನದೀ ಇಲ್ಲವೆ ನಾಂದೀ ಎಂಬುದೊಂದು ಪ್ರವೇಶ ಇದೆ. ಇದೊಂದು ಹೊಸಬಗೆಯ ಪ್ರಸ್ತಾವನೆ. ಇದು ಮುಂದೆ ಬರುವ ದೃಶ್ಯಕ್ಕೆ ಮಂಗಲಾಚರಣದಂತೆ ಇರುವುದೆಂದು ಇದಕ್ಕೆ ನಾಂದೀ ಎಂದಿರಬೇಕು. ನಾಂದಿಯಲ್ಲಿ 'ನನ್ನದೀ' ಎಂದರೆ 'ಆತ್ಮೀಯ'ವಿರುವುದರಿಂದ ಆ ಹೆಸರನ್ನು ಪ್ರಮುಖವಾಗಿ ಇಟ್ಟಿರಬೇಕು. ಈ ಚಮತ್ಕಾರದಲ್ಲಿ ನೂತನ ಸೂಚನೆ ಇದ್ದರೂ ಸಹಜತೆ ಇಲ್ಲ. ನಾಂದಿಯಿಂದ ನನ್ನದೀ – ಎಂಬ ಮಾರ್ಪಾಟು ಎಳೆದು ತಂದುದು. ಹಾಗೂ ನಾಂದಿಯು ನಿಜವಾಗಿ ಪ್ರಸ್ತಾವನೆಯ ಮೊದಲ ಪ್ರಾರ್ಥನೆಯ ಪದ್ಯ. ಅದಕ್ಕೆ ವಿಶಾಲವಾದ ಅರ್ಥವನ್ನು ಇಲ್ಲಿ ಕೊಡುವುದಕ್ಕೆ ಕಾರಣವಿಶೇಷವಿಲ್ಲ. ಈ 'ನನ್ನದಿ'ಯಲ್ಲಿ ಮುಸುಕು ಹಾಕಿದ ಪರಮಾತ್ಮನೂ ನಾಟಕದೊಳಗಿನ ನಾಟಕಕಾರನೊಬ್ಬ ವ್ಯಕ್ತಿಯೂ ಬೆಟ್ಟಿಯಾಗುತ್ತಾರೆ. ತಂತಮ್ಮ ಶ್ರೇಷ್ಠತೆಯನ್ನು ಹೊಗಳಿಕೊಳ್ಳುವ ಪಂಟುನುಡಿಗಳನ್ನಾಡುವಾಗ, ನಾಟಕಕಾರನು ಪರಮಾತ್ಮನಿಗೆ ಎಷ್ಟೋ ಬೈಗಳನ್ನೇ ಬೈಯ್ಯುತ್ತ ತಾನು ಆವನಿಂತ ಹೇಗೆ ಹೆಚ್ಚಿನವನೆಂಬುದನ್ನು ತೋರಿಸುವನು. ನಾಟಕಕಾರನ ಕೆಲವು ಮಾತುಗಳಿಂದ, ಈ 'ನನ್ನದೀ'ಯ ಉದ್ದೇಶವು ಏನಿರಬೇಕೆಂಬುದು ತಿಳಿಯುತ್ತವೆ. ಸಮಾಜದಲ್ಲಿ ನಾಟಕಕರ್ತೃ ಎಂಬವನು ಎಂಥ ಮಹತ್ತ್ವದ ವ್ಯಕ್ತಿಯು – ಎಂಬ ಕಲ್ಪನೆಯನ್ನು ಕೊಡಲು ಅವನು ಪರಮಾತ್ಮನಿಗಿಂತ ಶ್ರೇಷ್ಠನು—ಎಂಬ ಅತಿಶಯೋಕ್ತಿಯಿಂದ ಸಾಧಿಸಬೇಕಾಗಿದೆ. ಆದರೆ ಈ ಉದ್ದೇಶವು ಎಷ್ಟೂ ಸಫಲವಾಗಿಲ್ಲ. ಇಲ್ಲಿಯ ನಾಟಕಕಾರನಾಗಲಿ, ಪರಮಾತ್ಮನಾಗಲಿ ಇಬ್ಬರೂ ವಂದ್ಯರಾಗಿಲ್ಲ. ನಾಟಕಕಾರನದು ಹುಚ್ಚು ಹೆಮ್ಮೆ, ಪರಮಾತ್ಮನದು ಹೆಚ್ಚಿನ ಪೆದ್ದತನ. ನಾಟಕವೆಂದರೇನೆಂದು ಗೊತ್ತಿಲ್ಲದ ಪರಮಾತ್ಮನನ್ನು ಪೆದ್ದನೆನ್ನದೆ ಏನೆನ್ನಬೇಕು? ಆದುದರಿಂದ ಕೀಳುಬಗೆಯ ಎರಡು ವ್ಯಕ್ತಿಗಳ ವ್ಯಾಜ್ಯವಿನೋದದ ವಿರಸತೆಯಲ್ಲಿ ಮಾತ್ರ ಈ 'ನನ್ನದೀ'ಯ ಕೊನೆಯಾಗುವುದಲ್ಲದೆ, ಉದ್ದಿಷ್ಟ ಫಲವು ದೊರೆಯುವುದಿಲ್ಲ. ತಮ್ಮ ಕಲ್ಪನೆಗೆ ಸರಿಯಾದ ಪೂರ್ತರೂಪ ಬರಬೇಕಾದರೆ, ನಾಟಕಕಾರ ಪರಮಾತ್ಮರಲ್ಲಿ ಪರಸ್ಪರ ಗೌರವಪೂರ್ವಕವಾದ ವೃತ್ತಿ ತೋರಿಸುತ್ತ ಪರಮಾತ್ಮನ ವರ್ಣನೆಯನ್ನು ನಾಟಕಕಾರನು ಮಾಡುತ್ತಿರಲು, ನಾಟಕಕಾರನ ಶ್ರೇಷ್ಠತೆಯನ್ನು ಪರಮಾತ್ಮನೇ ಬಣ್ಣಿಸುವಂತೆ ಮಾಡಿದ್ದರೆ ಬಹಳ ಒಳ್ಳೆಯದಾಗುತ್ತಿತ್ತು. ನಿಜವಾದ ಶ್ರೇಷ್ಠನನ್ನು ಅನ್ಯರು ಶ್ರೇಷ್ಠ ಎನ್ನಬೇಕು, ತಾನು ಹೊಗಳಿಕೊಳ್ಳಬಾರದು.

ಇನ್ನು ಮುಂದಿರುವುದು ನಾಟಕಾರಂಭ. ಇದರ ಕಥಾನಕವು ಇಷ್ಟಿದೆ: ಹರಿಹರರಾಯನೆಂಬ ಮುಂದಾಳು ವಕೀಲನು ತಾನು ಸಾಕಿ ಸಲಹಿದ ವಿದ್ಯಾಧರನೆಂಬ ತರುಣ ಡಾಕ್ತರನಿಗೆ ಮದುವೆಯಾಗಬೇಕಾದ ಮನೋರಮೆಯೆಂಬ ತರುಣಿಯನ್ನು, ತನ್ನ ಎರಡನೆಯ ಹೆಂಡತಿಯನ್ನಾಗಿ – ಹಣದ ಮಳೆಗರೆದು ಮಾಡಿಕೊಳ್ಳುವನು. ಮನೋರಮೆಯು ತನ್ನ ಕೈ ಹಿಡಿಯಲಿಲ್ಲೆಂಬ ನೋವಿನ ಪಂಚು ಹಿಡಿದು ವಿದ್ಯಾಧರನು ಹರಿಹರರಾಯನ ಸಿರಿಯನ್ನೆಲ್ಲ ಎತ್ತಿ ಹಾಕಬೇಕೆಂದು ಮನೋರಮೆಯ ಕೂಡ ಕಪಟಹೂಡುವನು. ಹರಿಹರರಾಯನಿಗೆ ಬಹಳ ಕೆಟ್ಟರೋಗವಿದೆಯೆಂದೂ ಅದಕ್ಕೆ ತಕ್ಕ ಆರೈಕೆ ಬೇಕೆಂದೂ ಹೇಳುತ್ತಹೇಳುತ್ತ, ಮನೋರಮೆಯು ತನ್ನದೊಂದು ಇಚ್ಛೆಯನ್ನು ಪೂರ್ಣಗೊಳಿಸದಿದ್ದರೆ ತನ್ನ ಪತಿಯ ಪ್ರಾಣವೇ ಉಳಿಯಲಾರದೆಂದೂ ಸೂಚಿಸುವನು. ಇದಕ್ಕೆ ಗಾಬರಿಗೊಂಡ ಮನೋರಮೆಯು ನಿರ್ವಾಹವಿಲ್ಲದೆ ಒಪ್ಪಿಕೊಳ್ಳಲು 'ಹರಿಹರರಾಯನ ಮೃತ್ಯುಪತ್ರ ಇಲ್ಲವೆ ಅವನ ಮೊದಲನೆಯ ಹೆಂಡತಿಯಿಂದ ಹುಟ್ಟಿದ ಹದಿನಾಲ್ಕು ವರ್ಷದ ಮೋಹಿನಿ' ಇವುಗಳಲ್ಲಿ ಒಂದನ್ನು ಕೊಡಬೇಕೆಂದು ಹಟತೊಡುವನು. ಒಂದು ದಿನ ಹರಿಹರರಾಯನು ಮನೋರಮೆಯನ್ನು ಮನೆಯಲ್ಲಿ ಬಿಟ್ಟು ನಾಟಕಕ್ಕೆ ಹೋದಾಗ, ವಿದ್ಯಾಧರನು ಒಂದು ಮತ್ತು ಕಾಡಿ, ಮೃತ್ಯುಪತ್ರವನ್ನು ಇಸುಗೊಂಡು ಹೊರಡಬೇಕೆನ್ನುವಷ್ಟರಲ್ಲಿ ಹರಿಹರರಾಯನ ಕಾರಕೂನ ತಿಮ್ಮಾಜಿಯು ಮಗ-ಕಾಮಿಯು ಮೋಹಿನಿಯ ಮೇಲಣ ಮರುಳು ಆಕ್ಕರೆಯಿಂದ ಅವಳನ್ನು ಕಾಣಲುಬಂದು ಅಡಗಿಕೊಂಡವನು ಏಳುತ್ತಾನೆ. ಆಗ ವಿದ್ಯಾಧರನ ಕೈಯಿಂದ ಕಳಚಿ ಬಿದ್ದ ಕಾಗದವನ್ನು ನೋಡಲಾಗಿ 'ವಿದ್ಯಾಧರನು ನನ್ನ ಮಗನು, ಅವನ ತಾಯಿಯು ನನ್ನ ಮದುವೆ

ಆಗದ ಹೆಂಡತಿ' ಎಂದು ಗುಪ್ತವಾಗಿ ಹರಿಹರರಾಯನು ಬರೆದಂತೆ ತಿಳಿಯುತ್ತದೆ. ಈಗ ಆ ಮೃತ್ಯುಪತ್ರವು ವಿದ್ಯಾಧರನನ್ನು 'ಮೃತ್ಯುವಿನ ಬಾಯಿಯಲ್ಲಿ ಬೀಸಾಡುವ ಪತ್ರ'ವಾಗುತ್ತದೆ. ತನ್ನ ಕುಂದುಳ್ಳ ಹುಟ್ಟಿನ ನೆಲೆಯರಿತು ಅವನು ಹಲಬುತ್ತಿರಲು ಹರಿಹರರಾಯನು ನಾಟಕದಿಂದ ಮರಳಿ ಬಂದು, ಮೋಹಿನಿಯನ್ನು ವಿದ್ಯಾಧರನಿಗೆ ಕೊಡಬೇಕೆಂಬ ತನ್ನ ಹಟವನ್ನು ಎಲ್ಲರಿಗೆ ಹೇಳುವಾಗ, ತನ್ನ ಗುಪ್ತಕಾಗದವು ಹೊರಬಿದ್ದುದು ತಿಳಿದು ಹಣೆ ಹಣೆ ಬಡಿದುಕೊಂಡು 'ಅಯ್ಯೋ ಸತ್ತೆ' ಎನ್ನುವುದಕ್ಕೆ ನಾಟಕವು ಮುಗಿಯುತ್ತದೆ. ವಿದ್ಯಾಧರನು ತನ್ನ ಮಗನಿರುವನೆಂಬುದು ಎಲ್ಲರಿಗೂ ಅರಿಕೆಯಾದೊಡನೆ ಮೋಹಿನಿಯು ವಿದ್ಯಾಧರನ ತಂಗಿಯಾಗುವುದರಿಂದ ಅವನನ್ನು ಮದುವೆಯಾಗಲಾರಳು — ಎಂದು ಪಶುವಿನಂತಾದ ಯೋಚನೆಗಳಿಂದ ಅವನು ತತ್ತರಿಸುವನು. ವಿದ್ಯಾಧರ ಡಾಕ್ತರನು ವೈದ್ಯರಾಜನಾಗಿ ಹೇಗೆ ತನ್ನ ಕುನಸಿನ ಅಟವನ್ನಾಡಿಸನೆಂಬುದಿರುವುದರಿಂದ ಈ ನಾಟಕದ ಹೆಸರು "ವೈದ್ಯರಾಜ" ಎಂದಿದೆ. ವ್ಯವಹಾರದಲ್ಲಿ ಕಂಡುಬರುವ ಹರಿಹರರಾಯನಂತಹ ಇಬ್ಬಗೆಯ ಕವಡುಬಾಳ್ವೆ, ವಿದ್ಯಾಧರನಂತಹ ಸೇಡಿನ ಕೇಡುಬಗೆ ಮುಂತಾದ 'ಕಣ್ಣಿಗೆ ಕಾಣುವ, ಕಿವಿಯಿಂದ ಕೇಳುವ ಸ್ವಭಾವಚಿತ್ರವನ್ನು' ತೋರಿಸುವುದಕ್ಕಾಗಿ ಈ ಕತೆಕಟ್ಟಲಾಗಿದೆ. 'ವ್ಯವಹಾರದ ಕನ್ನಡಿಯು ನಾಟಕ' ಎಂಬ ದೃಷ್ಟಿಯಿಂದ ಕತೆಯನ್ನು ನಿರುಕಿಸಲು, ಹರಿಹರರಾಯನ ಜಾತಿಯ ಜನರಲ್ಲಿ, ತಮ್ಮ ಮದುವೆ ಆಗದೆ ಸಂಬಂಧ ಬಂದ ಭಿನ್ನ ಜಾತಿಯ ಸ್ತ್ರೀಯೊಬ್ಬಳ ಮಗನನ್ನು ಅಳಿಯನನ್ನು ಮಾಡಿಕೊಳ್ಳುವ ಹವಣಿಕೆಯಿಂದ ಗುಪ್ತಕಾರಸ್ಥಾನವು ಕಂಡುಬರುವದೇ? ಎಂಬುದು ಮೂಲಪ್ರಶ್ನೆ. ನಮಗೇನೋ ಹೊರಗೊಂದು ಒಳಗೊಂದು ಬಾಳ್ವೆಯಿರುವ ಮುಂದಾಳು ವಕೀಲ ವರ್ಗದಲ್ಲಿ ಈ ನಡತೆಯ ಪ್ರತ್ಯಕ್ಷತೆಯ ಅರಿವಿಲ್ಲ. ಆದರೆ ಪ್ರತ್ಯಕ್ಷತೆಯೊಂದೇ ಯಾವಾಗಲೂ ಒರೆಯಲ್ಲ—ಎಂಬುದು ನಿಜ. ಸ್ವಭಾವಚಿತ್ರವೊಂದನ್ನು ತೋರಿಸುವುದಕ್ಕಾಗಿ ಕತೆಯು ಕಲ್ಪಿತವಾಗಬಹುದು. ಆದರೆ ಅಲ್ಲಿಯೂ ಸಾಧ್ಯಾಸಾಧ್ಯತೆಯ ಒಂದು ಪ್ರಮಾಣವಿದ್ದೇ ಇರುವುದು. ಈಗಿರುವ ಸಮಾಜದ ಆ ವ್ಯಕ್ತಿಗಳ ಮನೋರಚನೆಯು ಮಟ್ಟನ್ನು ನೋಡಿದರೆ ಹರಿಹರರಾಯನ ಸಂಚು ಒಂದಿನಿಸು ಅಸಾಧ್ಯವೆನಿಸದೆ ಇರದು. ಇದಾದಮೇಲೆ, ವಿದ್ಯಾಧರನ ಜನ್ಮವೃತ್ತಾಂತವು, ಅವನು ಹರಿಹರರಾಯನಲ್ಲಿಯೇ ಬೆಳೆದು ಡಾಕ್ತರನಾಗಿ ಎಷ್ಟೋ ದಿನಗಳಾಗುವವರೆಗೆ ತೀರ ತಿಳಿಯದೆ ಉಳಿಯುವುದೂ ಸಾಧ್ಯಕೋಟಿಯ ಸಂಗತಿಯಲ್ಲ. ಇಂಥ ವಿಷಯಗಳು ಒಂದೇ ಊರಲ್ಲಿ ಜರುಗಿದ್ದರೆ ರಹಸ್ಯವನ್ನು ಕಾಯುವುದು ಹರಿಹರರಿಗೂ ಒಮ್ಮೊಮ್ಮೆ ಕಷ್ಟ! ಇದಲ್ಲದೆ, ಆ ಬಗ್ಗೆ ವಿದ್ಯಾಧರನ ಪರಿಚಿತರೆಲ್ಲರು ಸಂಶಯಗಳೇನೂ ಇಲ್ಲದೆ, ಅವನ ಜನ್ಮಕಥೆಯು ಗೂಢವೆಂದು ಗೃಹೀತವಾಗಿ ಇಟ್ಟುಕೊಂಡು ನಡೆಯುವುದು ಮುಂದಣ ಅಸಾಧ್ಯ. ಇನ್ನು ತನ್ನನ್ನು ಸಂರಕ್ಷಿಸಿದ ಹರಿಹರರಾಯನು ತಾನು ಪ್ರೀತಿಸುವ ಮನೋರಮೆಯನ್ನು ಮದುವೆಯಾದ ತಪ್ಪಿಗಾಗಿ, ಅವನನ್ನು ಮುಳುಗಿಸುವ ವಿದ್ಯಾಧರನ ಕಪಟ ನಾಟಕದ ಸ್ವರೂಪವು ಸಂಭಾವ್ಯವಾಗಿದೆ. ತನ್ನ ಪ್ರೀತಿಯ ವಸ್ತು ಅನ್ಯರ ಕೈಸೇರಿತೆಂದು ತಿಳಿದ ಖಲವ್ಯಕ್ತಿಯು ಆ ವಸ್ತುವಿನ ಪ್ರಾಪ್ತಿಗಾಗಿ ಹೆಣಗುವುದು ಹೆಚ್ಚು ಸಾಧ್ಯವೋ ಅಥವಾ ಅವನನ್ನು ಕಸಿದುಕೊಂಡ ಸಾಕುತಂದೆಯ ಗಂಟು ಮುಳುಗಿಸುವ ಸಾಹಸವು ಹೆಚ್ಚು ಸಾಧ್ಯವೋ? ನಮಗೆ ಮೊದಲನೆಯದೇ ಹೆಚ್ಚು ಸಾಧ್ಯವೆನಿಸುತ್ತದೆ. ಒಟ್ಟಾರೆ, ಈ ನಾಟಕದ ಕಥಾವಸ್ತುವು ಕೆಲವು ಸತ್ಯವಾದ ಸ್ವಭಾವಚಿತ್ರಗಳನ್ನು ತೋರಿಸುವುದಕ್ಕಾಗಿ ವ್ಯವಹಾರಕ್ಕಿಂತ ಎಷ್ಟೋ ಮುಂದೆ ಹೋಗಿದೆ; ಕಲ್ಪಿಸಿದ ಕಥೆ ಅಷ್ಟು ವ್ಯವಹಾರದ ಕನ್ನಡಿಯಲ್ಲ.

ಇನ್ನಿದರ ಸಂವಿಧಾನಕ. ಕಡೆಯವರೆಗೂ ಒಂದು ಸಂಗತಿಯು ಗುಪ್ತವಾಗಿದ್ದು ಕಡೆಯಲ್ಲಿ ಅದು ಗೊತ್ತಾದ ಬಗೆ, ಕೊನೆಯ ಪ್ರಸಂಗ, ಆ ವ್ಯಕ್ತಿಗಳ ಮೇಲೆ ಅದರ ಪರಿಣಾಮವು ಇವೆಲ್ಲ ಚೊಕ್ಕಟವಾಗಿವೆ. ಆದರೆ ಅದನ್ನು ಕುರಿತು ಸಂಶಯಗಳು ಮೊದಲಿನಿಂದ ಉಂಟಾದರೂ ಕುತೂಹಲವು ಬೆಳೆಯುವದಿಲ್ಲ. ಆದುದರಿಂದ ವಿದ್ಯಾಧರ—ಹರಿಹರರಾಯರ ಮಾತುಕಥೆಗಳಲ್ಲಿ ಹರಿಹರರಾಯನು ತಂದೆಯ ಸಲಿಗೆಯಿಂದ ಮಾತಾಡಹೋಗಿ ತಡೆದ ಪ್ರಾಸಂಗಿಕ ಸಂನಿವೇಶಗಳಿಂದಲೂ ಸ್ವಂತ ವಿದ್ಯಾಧರನ ಸ್ವವಿಷಯಕ ಯೋಚನೆಗಳಿಂದಲೂ ಇಡಿಯ ವಸ್ತುವಿನಲ್ಲಿ ಪ್ರಮುಖವಾದ ಒಂದು ಗುಪ್ತವಾರ್ತೆಯ ಕುರಿತು ಕುತೂಹಲವನ್ನು ಪಕ್ವಗೊಳಿಸಬಹುದಾಗಿತ್ತು. ಹಾಗೆ



CC-0. Jangamwadi Math Collection. Digitized by eGangotri

ಶ್ರೀರಂಗರ ನಾಟಕಗಳು ನಿಃಸಂಶಯವಾಗಿ ಮೇಲಿನ ಮಟ್ಟಿನವು ಎಂದು ನಾವು ಸಾರಬಲ್ಲೆವು.

ಈ 'ವೈದ್ಯರಾಜ'ದ ಆರಂಭಕ್ಕೆ ನನ್ನದೀ ಇಲ್ಲವೆ ನಾಂದೀ ಎಂಬುದೊಂದು ಪ್ರವೇಶ ಇದೆ. ಇದೊಂದು ಹೊಸಬಗೆಯ ಪ್ರಸ್ತಾವನೆ. ಇದು ಮುಂದೆ ಬರುವ ದೃಶ್ಯಕ್ಕೆ ಮಂಗಲಾಚರಣದಂತೆ ಇರುವುದೆಂದು ಇದಕ್ಕೆ ನಾಂದೀ ಎಂದಿರಬೇಕು. ನಾಂದಿಯಲ್ಲಿ 'ನನ್ನದೀ' ಎಂದರೆ 'ಆತ್ಮೀಯ'ವಿರುವುದರಿಂದ ಆ ಹೆಸರನ್ನು ಪ್ರಮುಖವಾಗಿ ಇಟ್ಟಿರಬೇಕು. ಈ ಚಮತ್ಕಾರದಲ್ಲಿ ನೂತನ ಸೂಚನೆ ಇದ್ದರೂ ಸಹಜತೆ ಇಲ್ಲ. ನಾಂದಿಯಿಂದ ನನ್ನದೀ – ಎಂಬ ಮಾರ್ಪಾಟು ಎಳೆದು ತಂದುದು. ಹಾಗೂ ನಾಂದಿಯು ನಿಜವಾಗಿ ಪ್ರಸ್ತಾವನೆಯ ಮೊದಲ ಪ್ರಾರ್ಥನೆಯ ಪದ್ಯ. ಆದಕ್ಕೆ ವಿಶಾಲವಾದ ಅರ್ಥವನ್ನು ಇಲ್ಲಿ ಕೊಡುವುದಕ್ಕೆ ಕಾರಣವಿಶೇಷವಿಲ್ಲ. ಈ 'ನನ್ನದಿ'ಯಲ್ಲಿ ಮುಸುಕು ಹಾಕಿದ ಪರಮಾತ್ಮನೂ ನಾಟಕದೊಳಗಿನ ನಾಟಕಕಾರನೊಬ್ಬ ವ್ಯಕ್ತಿಯೂ ಬೆಟ್ಟಿಯಾಗುತ್ತಾರೆ. ತಂತಮ್ಮ ಶ್ರೇಷ್ಠತೆಯನ್ನು ಹೊಗಳಿಕೊಳ್ಳುವ ಪಂಟುನುಡಿಗಳನ್ನಾಡುವಾಗ, ನಾಟಕಕಾರನು ಪರಮಾತ್ಮನಿಗೆ ಎಷ್ಟೋ ಬೈಗಳನ್ನೇ ಬೈಯ್ಯುತ್ತ ತಾನು ಅವನಿಂತ ಹೇಗೆ ಹೆಚ್ಚಿನವನೆಂಬುದನ್ನು ತೋರಿಸುವನು. ನಾಟಕಕಾರನ ಕೆಲವು ಮಾತುಗಳಿಂದ, ಈ 'ನನ್ನದೀ'ಯ ಉದ್ದೇಶವು ಏನಿರಬೇಕೆಂಬುದು ತಿಳಿಯುತ್ತವೆ. ಸಮಾಜದಲ್ಲಿ ನಾಟಕಕರ್ತೃ ಎಂಬವನು ಎಂಥ ಮಹತ್ತ್ವದ ವ್ಯಕ್ತಿಯು – ಎಂಬ ಕಲ್ಪನೆಯನ್ನು ಕೊಡಲು ಅವನು ಪರಮಾತ್ಮನಿಗಿಂತ ಶ್ರೇಷ್ಠನು—ಎಂಬ ಅತಿಶಯೋಕ್ತಿಯಿಂದ ಸಾಧಿಸಬೇಕಾಗಿದೆ. ಆದರೆ ಈ ಉದ್ದೇಶವು ಎಷ್ಟೂ ಸಫಲವಾಗಿಲ್ಲ. ಇಲ್ಲಿಯ ನಾಟಕಕಾರನಾಗಲಿ, ಪರಮಾತ್ಮನಾಗಲಿ ಇಬ್ಬರೂ ವಂದ್ಯರಾಗಿಲ್ಲ. ನಾಟಕಕಾರನದು ಹುಚ್ಚು ಹೆಮ್ಮೆ, ಪರಮಾತ್ಮನದು ಹೆಚ್ಚಿನ ಪೆದ್ದತನ. ನಾಟಕವೆಂದರೇನೆಂದು ಗೊತ್ತಿಲ್ಲದ ಪರಮಾತ್ಮನನ್ನು ಪೆದ್ದನೆನ್ನದೆ ಏನೆನ್ನಬೇಕು? ಆದುದರಿಂದ ಕೀಳುಬಗೆಯ ಎರಡು ವ್ಯಕ್ತಿಗಳ ವ್ಯಾಜ್ಯ ಪಸೋದದ ವಿರಸತೆಯಲ್ಲಿ ಮಾತ್ರ ಈ 'ನನ್ನದೀ'ಯ ಕೊನೆಯಾಗುವುದಲ್ಲದೆ, ಉದ್ದಿಷ್ಟಫಲವು ದೊರೆಯುವುದಿಲ್ಲ. ತಮ್ಮ ಕಲ್ಪನೆಗೆ ಸರಿಹೊಂದ ಪೂರ್ತರೂಪ ಬರಬೇಕಾದರೆ, ನಾಟಕಕಾರ ಪರಮಾತ್ಮರಲ್ಲಿ ಪರಸ್ಪರ ಗೌರವಪೂರ್ವಕವಾದ ವೃತ್ತಿ ತೋರಿಸುತ್ತ ಪರಮಾತ್ಮನ ವರ್ಣನೆಯನ್ನು ನಾಟಕಕಾರನು ಮಾಡುತ್ತಿರಲು, ನಾಟಕಕಾರನ ಶ್ರೇಷ್ಠತೆಯನ್ನು ಪರಮಾತ್ಮನೇ ಬಣ್ಣಿಸುವಂತೆ ಮಾಡಿದ್ದರೆ ಬಹಳ ಒಳ್ಳೆಯದಾಗುತ್ತಿತ್ತು. ನಿಜವಾದ ಶ್ರೇಷ್ಠನನ್ನು ಅನ್ಯರು ಶ್ರೇಷ್ಠ ಎನ್ನಬೇಕು, ತಾನು ಹೊಗಳಿಕೊಳ್ಳಬಾರದು.

ಇನ್ನು ಮುಂದಿರುವುದು ನಾಟಕಾರಂಭ. ಇದರ ಕಥಾನಕವು ಇಷ್ಟಿದೆ: ಹರಿಹರರಾಯನೆಂಬ ಮುಂದಾಳು ವಕೀಲನು ತಾನು ಸಾಕಿ ಸಲಹಿದ ವಿದ್ಯಾಧರನೆಂಬ ತರುಣ ಡಾಕ್ತರನಿಗೆ ಮದುವೆಯಾಗಬೇಕಾದ ಮನೋರಮೆಯೆಂಬ ತರುಣಿಯನ್ನು, ತನ್ನ ಎರಡನೆಯ ಹೆಂಡತಿಯನ್ನಾಗಿ – ಹಣದ ಮಳೆಗರೆದು ಮಾಡಿಕೊಳ್ಳುವನು. ಮನೋರಮೆಯು ತನ್ನ ಕೈ ಹಿಡಿಯಲಿಲ್ಲೆಂಬ ಸೇಡಿನ ಪಂಚು ಹಿಡಿದು ವಿದ್ಯಾಧರನು ಹರಿಹರರಾಯನ ಸಿರಿಯನ್ನೆಲ್ಲ ಎತ್ತಿ ಹಾಕಬೇಕೆಂದು ಮನೋರಮೆಯ ಕೂಡ ಕಪಟಹೂಡುವನು. ಹರಿಹರರಾಯನಿಗೆ ಬಹಳ ಕೆಟ್ಟರೋಗವಿದೆಯೆಂದೂ ಆದಕ್ಕೆ ತಕ್ಕ ಆರೈಕೆ ಬೇಕೆಂದೂ ಹೇಳುತ್ತಹೇಳುತ್ತ, ಮನೋರಮೆಯು ತನ್ನದೊಂದು ಇಚ್ಛೆಯನ್ನು ಪೂರ್ಣಗೊಳಿಸದಿದ್ದರೆ ತನ್ನ ಪತಿಯ ಪ್ರಾಣವೇ ಉಳಿಯಲಾರದೆಂದೂ ಸೂಚಿಸುವನು. ಇದಕ್ಕೆ ಗಾಬರಿಗೊಂಡ ಮನೋರಮೆಯು ನಿರ್ವಾಹವಿಲ್ಲದೆ ಒಪ್ಪಿಕೊಳ್ಳಲು 'ಹರಿಹರರಾಯನ ಮೃತ್ಯುಪತ್ರ ಇಲ್ಲವೆ ಅವನ ಮೊದಲನೆಯ ಹೆಂಡತಿಯಿಂದ ಹುಟ್ಟಿದ ಹದಿನಾಲ್ಕು ವರ್ಷದ ಮೋಹಿನಿ' ಇವುಗಳಲ್ಲಿ ಒಂದನ್ನು ಕೊಡಬೇಕೆಂದು ಹಟತೊಡುವನು. ಒಂದು ದಿನ ಹರಿಹರರಾಯನು ಮನೋರಮೆಯನ್ನು ಮನೆಯಲ್ಲಿ ಬಿಟ್ಟು ನಾಟಕಕ್ಕೆ ಹೋದಾಗ, ವಿದ್ಯಾಧರನು ಒಂದು ಮತ್ತೆ ಕಾಡಿ, ಮೃತ್ಯುಪತ್ರವನ್ನು ಇಸುಗೊಂಡು ಹೊರಡಬೇಕೆನ್ನುವಷ್ಟರಲ್ಲಿ ಹರಿಹರರಾಯನ ಕಾವಲಿನ ತಿಮ್ಮಾಜಿಯ ಮಗ-ಕಾಮಿಯು ಮೋಹಿನಿಯ ಮೇಲಣ ಮರುಳು ಅಕ್ಕರೆಯಿಂದ ಅವಳನ್ನು ಕಾಣಲುಬಂದು ಅಡಗಿಕೊಂಡವನು ಎಳುತ್ತಾನೆ. ಆಗ ವಿದ್ಯಾಧರನ ಕೈಯಿಂದ ಕಳಚಿ ಬಿದ್ದ ಕಾಗದವನ್ನು ನೋಡಲಾಗಿ 'ವಿದ್ಯಾಧರನು ನನ್ನ ಮಗನು, ಅವನ ತಾಯಿಯು ನನ್ನ ಮದುವೆ

CC-0. Jangamwadi Math Collection. Digitized by eGangotri

ಆಗದ ಹೆಂಡತಿ' ಎಂದು ಗುಪ್ತವಾಗಿ ಹರಿಹರರಾಯನು ಬರೆದಂತೆ ತಿಳಿಯುತ್ತದೆ. ಈಗ ಆ ಮೃತ್ಯುಪತ್ರವು ವಿದ್ಯಾಧರನನ್ನು 'ಮೃತ್ಯುವಿನ ಬಾಯಿಯಲ್ಲಿ ಜೀಸಾಡುವ ಪತ್ರ'ವಾಗುತ್ತದೆ. ತನ್ನ ಕುಂದುಳ್ಳ ಹುಟ್ಟಿನ ನೆಲೆಯರಿತು ಅವನು ಹಲಬುತ್ತಿರಲು ಹರಿಹರರಾಯನು ನಾಟಕದಿಂದ ಮರಳಿ ಬಂದು, ಮೋಹಿನಿಯನ್ನು ವಿದ್ಯಾಧರನಿಗೆ ಕೊಡಬೇಕೆಂಬ ತನ್ನ ಹಟವನ್ನು ಎಲ್ಲರಿಗೆ ಹೇಳುವಾಗ, ತನ್ನ ಗುಪ್ತಕಾಗದವು ಹೊರಬಿದ್ದುದು ತಿಳಿದು ಹಣೆ ಹಣೆ ಬಡಿದುಕೊಂಡು 'ಅಯ್ಯೋ ಸತ್ತೆ' ಎನ್ನುವಲ್ಲಿ ನಾಟಕವು ಮುಗಿಯುತ್ತದೆ. ವಿದ್ಯಾಧರನು ತನ್ನ ಮಗನಿರುವನೆಂಬುದು ಎಲ್ಲರಿಗೂ ಅರಿಕೆಯಾದೊಡನೆ ಮೋಹಿನಿಯು ವಿದ್ಯಾಧರನ ತಂಗಿಯಾಗುವುದರಿಂದ ಅವನನ್ನು ಮದುವೆಯಾಗಲಾರಳು — ಎಂದು ಮುಂತಾದ ಯೋಚನೆಗಳಿಂದ ಅವನು ತತ್ತರಿಸುವನು. ವಿದ್ಯಾಧರ ಡಾಕ್ತರನು ವೈದ್ಯರಾಜನಾಗಿ ಹೇಗೆ ತನ್ನ ಕುನಸಿನ ಆಟವನ್ನಾಡಿಸನೆಂಬುದಿರುವುದರಿಂದ ಈ ನಾಟಕದ ಹೆಸರು "ವೈದ್ಯರಾಜ" ಎಂದಿದೆ. ವ್ಯವಹಾರದಲ್ಲಿ ಕಂಡುಬರುವ ಹರಿಹರರಾಯನಂತಹ ಇಬ್ಬಗೆಯ ಕವಡುಬಾಳ್ವೆ, ವಿದ್ಯಾಧರನಂತಹ ಸೇಡಿನ ಕೇಡುಬಗೆ ಮುಂತಾದ 'ಕಣ್ಣಿಗೆ ಕಾಣುವ, ಕಿವಿಯಿಂದ ಕೇಳುವ ಸ್ವಭಾವಚಿತ್ರವನ್ನು' ತೋರಿಸುವುದಕ್ಕಾಗಿ ಈ ಕತೆಕಟ್ಟಲಾಗಿದೆ. 'ವ್ಯವಹಾರದ ಕನ್ನಡಿಯು ನಾಟಕ' ಎಂಬ ದೃಷ್ಟಿಯಿಂದ ಕತೆಯನ್ನು ನಿರುಕಿಸಲು,ಹರಿಹರರಾಯನ ಜಾತಿಯ ಜನರಲ್ಲಿ, ತಮ್ಮ ಮದುವೆ ಆಗದೆ ಸಂಬಂಧ ಬಂದ ಭಿನ್ನ ಜಾತಿಯ ಸ್ತ್ರೀಯೊಬ್ಬಳ ಮಗನನ್ನು ಅಳಿಯನನ್ನು ಮಾಡಿಕೊಳ್ಳುವ ಹವಣಿಕೆಯಿಂದ ಗುಪ್ತಕಾರಸ್ಥಾನವು ಕಂಡುಬರುವದೇ? ಎಂಬುದು ಮೂಲಪ್ರಶ್ನೆ. ನಮಗೇನೋ ಹೊರಗೊಂದು ಒಳಗೊಂದು ಬಾಳ್ವೆಯಿರುವ ಮುಂದಾಳು ವಕೀಲವರ್ಗದಲ್ಲಿ ಈ ನಡತೆಯ ಪ್ರತ್ಯಕ್ಷತೆಯ ಅರಿವಿಲ್ಲ. ಆದರೆ ಪ್ರತ್ಯಕ್ಷತೆಯೊಂದೇ ಯಾವಾಗಲೂ ಒರೆಯಲ್ಲ—ಎಂಬುದು ನಿಜ. ಸ್ವಭಾವಚಿತ್ರವೊಂದನ್ನು ತೋರಿಸುವುದಕ್ಕಾಗಿ ಕತೆಯು ಕಲ್ಪಿತವಾಗಬಹುದು. ಆದರೆ ಅಲ್ಲಿಯೂ ಸಾಧ್ಯಾಸಾಧ್ಯತೆಯ ಒಂದು ಪ್ರಮಾಣವಿದ್ದೇ ಇರುವುದು. ಈಗಿರುವ ಸಮಾಜದ ಆ ವ್ಯಕ್ತಿಗಳ ಮನೋರಚನೆಯ ಮಟ್ಟನ್ನು ನೋಡಿದರೆ ಹರಿಹರರಾಯನ ಸಂಚು ಒಂದಿನಿಸು ಅಸಾಧ್ಯವೆನಿಸದೆ ಇರದು. ಇದಾದಮೇಲೆ, ವಿದ್ಯಾಧರನ ಜನ್ಮವೃತ್ತಾಂತವು, ಅವನು ಹರಿಹರರಾಯನಲ್ಲಿಯೇ ಬೆಳೆದು ಡಾಕ್ತರನಾಗಿ ಎಷ್ಟೋ ದಿನಗಳಾಗುವವರೆಗೆ ತೀರ ತಿಳಿಯದೆ ಉಳಿಯುವುದೂ ಸಾಧ್ಯಕೋಟಿಯ ಸಂಗತಿಯಲ್ಲ. ಇಂಥ ವಿಷಯಗಳು ಒಂದೇ ಊರಲ್ಲಿ ಜರುಗಿದ್ದರೆ ರಹಸ್ಯವನ್ನು ಕಾಯುವುದು ಹರಿಹರರಿಗೂ ಒಮ್ಮೊಮ್ಮೆ ಕಷ್ಟ! ಇದಲ್ಲದೆ, ಆ ಬಗ್ಗೆ ವಿದ್ಯಾಧರನ ಪರಿಚಿತರೆಲ್ಲರು ಸಂಶಯಗಳೇನೂ ಇಲ್ಲದೆ, ಅವನ ಜನ್ಮಕಥೆಯು ಗೂಢವೆಂದು ಗೃಹೀತವಾಗಿ ಇಟ್ಟುಕೊಂಡು ನಡೆಯುವುದು ಮುಂದಣ ಅಸಾಧ್ಯ. ಇನ್ನು ತನ್ನನ್ನು ಸಂರಕ್ಷಿಸಿದ ಹರಿಹರರಾಯನು ತಾನು ಪ್ರೀತಿಸುವ ಮನೋರಮೆಯನ್ನು ಮದುವೆಯಾದ ತಪ್ಪಿಗಾಗಿ, ಅವನನ್ನು ಮುಳುಗಿಸುವ ವಿದ್ಯಾಧರನ ಕಪಟನಾಟಕದ ಸ್ವರೂಪವು ಸಂಬಲಸಾಧ್ಯವಾಗಿದೆ. ತನ್ನ ಪ್ರೀತಿಯ ವಸ್ತು ಅನ್ಯರ ಕೈಸೇರಿತೆಂದು ತಿಳಿದ ಖಲವ್ಯಕ್ತಿಯು ಆ ವಸ್ತುವಿನ ಪ್ರಾಪ್ತಿಗಾಗಿ ಹೆಣಗುವುದು ಹೆಚ್ಚು ಸಾಧ್ಯವೋ ಅಥವಾ ಅದನ್ನು ಕಸಿದುಕೊಂಡ ಸಾಕುತಂದೆಯ ಗಂಟು ಮುಳುಗಿಸುವ ಸಾಹಸವು ಹೆಚ್ಚು ಸಾಧ್ಯವೊ? ನಮಗೆ ಮೊದಲನೆಯದೇ ಹೆಚ್ಚು ಸಾಧ್ಯವೆನಿಸುತ್ತದೆ. ಒಟ್ಟಾರೆ, ಈ ನಾಟಕದ ಕಥಾವಸ್ತುವು ಕೆಲವು ಸತ್ಯವಾದ ಸ್ವಭಾವಚಿತ್ರಗಳನ್ನು ತೋರಿಸುವುದಕ್ಕಾಗಿ ವ್ಯವಹಾರಕ್ಕಿಂತ ಎಷ್ಟೋ ಮುಂದೆ ಹೋಗಿದೆ; ಕಲ್ಪಿಸಿದ ಕಥೆ ಅಷ್ಟು ವ್ಯವಹಾರದ ಕನ್ನಡಿಯಲ್ಲ.

ಇನ್ನಿದರ ಸಂವಿಧಾನಕ. ಕಡೆಯವರೆಗೂ ಒಂದು ಸಂಗತಿಯು ಗುಪ್ತವಾಗಿದ್ದು ಕಡೆಯಲ್ಲಿ ಅದು ಗೊತ್ತಾದ ಬಗೆ, ಕೊನೆಯ ಪ್ರಸಂಗ,ಆ ಆ ವ್ಯಕ್ತಿಗಳ ಮೇಲೆ ಅದರ ಪರಿಣಾಮವು ಇವೆಲ್ಲ ಚೊಕ್ಕಟವಾಗಿವೆ. ಆದರೆ ಅದನ್ನು ಕುರಿತು ಸಂಶಯಗಳು ಮೊದಲಿನಿಂದ ಉಂಟಾದರೂ ಕುತೂಹಲವು ಬೆಳೆಯುವದಿಲ್ಲ. ಆದುದರಿಂದ ವಿದ್ಯಾಧರ—ಹರಿಹರರಾಯರ ಮಾತುಕಥೆಗಳಲ್ಲಿ ಹರಿಹರರಾಯನು ತಂದೆಯ ಸಲಿಗೆಯಿಂದ ಮಾತಾಡಹೋಗಿ ತಡೆದ ಪ್ರಾಸಂಗಿಕ ಸಂನಿವೇಶಗಳಿಂದಲೂ ಸ್ವಂತ ವಿದ್ಯಾಧರನ ಸ್ವವಿಷಯಕ ಯೋಚನೆಗಳಿಂದಲೂ ಇಡಿಯ ವಸ್ತುವಿನಲ್ಲಿ ಪ್ರಮುಖವಾದ ಒಂದು ಗುಪ್ತವಾರ್ತೆಯ ಕುರಿತು ಕುತೂಹಲವನ್ನು ಪಕ್ವಗೊಳಿಸಬಹುದಾಗಿತ್ತು. ಹಾಗೆ



CC-0. Jangamwadi Math Collection. Digitized by eGangotri

ಆಗುವುದು ಸ್ವಾಭಾವಿಕವೆಂಬುದೂ ಇನ್ನೊಂದು ಪ್ರಬಲ ಕಾರಣ. ಪ್ರೇಕ್ಷಕ ಅಥವಾ ವಾಚಕರಿಗೆ ವಿದ್ಯಾಧರನ ಖಲತಂತ್ರವೊಂದು ಮಾತ್ರ ಕೊನೆವರೆಗೆ ಒಂದುಬಗೆಯ ಆಸಕ್ತಿಯನ್ನುಂಟು ಮಾಡುತ್ತ ಹೋಗುತ್ತದೆ. ಆದರೆ ನಾಟಕಕಾರರು ಅಪೇಕ್ಷಿಸಿದ ಪರಿಣಾಮವು ವಿಕಾಸವಾಗಿ ಆಗುವದಿಲ್ಲ. ವಿದ್ಯಾಧರನು ಮನೋರಮೆಯ ಕೂಡ ಮಾತನಾಡುವಾಗ ಅವನು ಯಾವುದಕ್ಕಾಗಿ ಅವಳನ್ನು ಗಾಬರಿಗೊಳಿಸುವನೆಂಬುದು ತಿಳಿಯುತ್ತ ಹೋದರೂ ಅವಳಿಂದ ಏನನ್ನು ಬಯಸುವನೆಂಬುದು ಗೂಢತಮವಾಗಿ ಉಳಿಯುತ್ತದೆ. ಇಂಥ ಮೊದಲಿನ ಒಂದೆರಡು ಪ್ರವೇಶಗಳಲ್ಲಿ ಸಹಜವಾಗಿ, ಮನೋರಮೆಯ ಮೈಮನಗಳನ್ನು ವಶೀಕರಿಸುವುದಕ್ಕಾಗಿ ಅವನು ಆಟ ಹೂಡಿರುವನೆಂದು ನಾಟಕಕಾರರು ಉಳಿಸಿದ ಗೂಢಕ್ಕೆ ಪ್ರೇಕ್ಷಕ ವಾಚಕರು ಅರ್ಥ ಹಚ್ಚುತ್ತಾರೆ. 'ಮುಂದೆ ಮುಂದೆ ಇದರಲ್ಲಿ ಒಂದು ಜೀವವು ಅಡಗಿ ಕುಳಿತಿದೆ..... **ಕೈ ಹಿಡಿದರೆ** ಇನ್ನೊಂದು ಜೀವ ಉಳಿಯುವುದು' 'ನಿನ್ನ ಮೋಹದಿಂದ ಆಕರ್ಷಿತವಾದ ಇವೆರಡು ಜೀವಗಳು' 'ನನ್ನ ಮನಸ್ಸನ್ನು ಒಯ್ದು ನೀನು' ಎಂಬ ತರದ ಮಾತುಗಳಿಂದ ದುಷ್ಕಾಮದಿಂದ ವಿದ್ಯಾಧರನು ಪ್ರೇರಿತನಾಗಿರಬೇಕೆಂದು ಎನಿಸುವಷ್ಟರಲ್ಲಿಯೇ 'ನಿನಗೆ ಆಣೆ ಮಾಡಿ ಹೇಳುವೆ, ಮನೋರಮೆಯ ಶರೀರ ನನ್ನದಲ್ಲ, **ಎಂದಿಗೂ ಅದು ನನಗೆ ಬೇಡವೆಂದು**' ಎಂಬ ಭಿನ್ನವೃತ್ತಿಯು ತಲೆದೋರಿ, ಹರಿಹರರಾಯನ ಸಂಪತ್ತಿಗಾಗಿ ಹೂಡಿದ ಸಂಧಾನವು ಇದೆಲ್ಲ—ಎಂದು ಉತ್ತರಕ್ಷಣದಲ್ಲಿ ವಿಶದವಾಗುತ್ತದೆ. ನಾಟಕಕರ್ತರ ಅಪೇಕ್ಷೆಯೆಂದರೆ, ಪ್ರೇಮದ ಗಂಟನ್ನು ಕದ್ದ ಹರಿಹರರಾಯನ ಗಂಟಿನಪ್ರೇಮದಿಂದ ವಿದ್ಯಾಧರನು ತನ್ನ ಕುತಂತ್ರವೆಸಗಿದನೆಂದೂ ಅದರ ಪ್ರಾಪ್ತಿಗಾಗಿ ಮನೋರಮೆಯನ್ನು ತನ್ನ ವಶೀಕರಣಮಂತ್ರದಿಂದ ತನ್ನ ಕೈಯಲ್ಲಿ ಕುಣಿಯುವ ಗೊಂಬೆಯಂತೆ ಮಾಡಲೆಳಸಿದನೆಂದೂ ಪರಿಣಾಮವುಂಟಾಗಬೇಕು. ಆದರೆ ಈ ಆಶಯವು ಮೂರನೆಯ ಅಂಕದ ಎರಡನೆಯ ಪ್ರವೇಶದವರೆಗೆ ತಿಳಿಯದೆ ಉಳಿದು, ಮೊದಲಿನ ಅರ್ಥವಾದವು ಬೇರೆಯಾಗಿ ಭಾವಗಳ ಗೊಂದಲವನ್ನೇ ಎಬ್ಬಿಸಿ 'ಮನೋರಮೆಯನ್ನು ಬಯಸುತ್ತಿರುವ ವಿದ್ಯಾಧರನು ಒಮ್ಮೆಲೆ ಹರಿಹರರಾಯನ ಸಂಪತ್ತು ಕೊಡುವ ಅವನ ಮೃತ್ಯುಪತ್ರ ಇಲ್ಲವೆ ಮೋಹಿನಿಯನ್ನೇಕೆ ಬಯಸತೊಡಗಿದ!' ಎಂಬ ಉದ್ಗಾರಗಳು ಸಹಜವಾಗಿ ಬಾಯಿಗೆ ಬರುತ್ತವೆ. ಆದುದರಿಂದ ಮೊದಲಿನಿಂದಲೂ ವಿದ್ಯಾಧರನ ಖಲನಾಟದ ಗಮ್ಯವನ್ನು ತಿಳಿತಿಳಿಯಾಗಿ ಸೂಚಿಸಿ, ವಿದ್ಯಾಧರ-ಮನೋರಮೆಯರ ಸಂವಾದಗಳಲ್ಲಿ ಈಗ ಇಟ್ಟಿರುವ ಅತಿಸೂಕ್ಷ್ಮತೆ ಸಂದಿಗ್ಧತೆಗಳನ್ನು ಕಳೆಯಬೇಕಾಗಿತ್ತು. ಸಮಗ್ರವಾಗಿ ಸಂವಿಧಾನವನ್ನು ನೋಡಲಾಗಿ, ತೀರ ಮೊದಲನೆಯ, ಹಾಗೂ ತೀರ ಕಡೆಯ ಪ್ರವೇಶಗಳಲ್ಲಿ ಸಾಚಲೊಬಾದೆ. ಎರಡನೆಯಂಕದ ಒಂದನೆಯ ಪ್ರವೇಶದಲ್ಲಿಯ ಏಕಪಾತ್ರದ ಪ್ರಹಸನವು ಎಷ್ಟು ಸ್ವಾಭಾವಿಕ ರಮ್ಯವಾಗಿದೆಯೋ ಅಷ್ಟು ಒಂದನೆಯಂಕದ ಎರಡನೆಯ ಪ್ರವೇಶವು ಅಸ್ವಾಭಾವಿಕವೂ ರಸಾಭಾಸಮಯವೂ ಆಗಿದೆ. ಊರಲ್ಲಿಯೇ ಆದ ಸಭೆಯೊಂದರಿಂದ ಕತ್ತಲೆಯಲ್ಲಿ ತಿರುಗಿ ಬರುವಾಗ ಮೋಹಿನೀ ಕಾಮಿಯರು ಹಾದಿತಪ್ಪಿ ದಟ್ಟಡವಿ ಸೇರಿದೆವೆಂದು ತಿಳಿದುಕೊಳ್ಳುವುದು ತೀರ ಅಸ್ವಾಭಾವಿಕ. ಅಂತೇ ಮೋಹಿನಿಯ ಭಯ, ಕಾಮಿಯ ಶೃಂಗಾರ ಎಲ್ಲವೂ ಆಭಾಸಪೂರ್ಣ. ನಡುವೆ ವಿದ್ಯಾಧರ—ಮನೋರಮೆಯರು ಬರಲು, ಅವರ ಮಾತು ತೀರುವವರೆಗೆ ಹೆದರಿದ ಮೋಹಿನಿಯು ಕಾಮಿಯನ್ನು ಬಿಟ್ಟು ತೆರೆಮರೆಯಾಗುವುದೂ ಕಾಮಿಯು ತಟಸ್ಥನಾಗಿರುವುದೂ ನಾಟಕದ ರಚನೆಯಲ್ಲಿ ಕುಂದು. ಈ ನಾಟಕರಚನೆಯಲ್ಲಿ ಗೋಚರವಾಗುವ ಒಂದು ಅಪೂರ್ವತೆಯಿದೆ. ಪಾತ್ರಗಳ ಪರಿಚಯಮಾಡಿಕೊಡುವ, ಸಂನಿವೇಶಸಮಯಗಳನ್ನು ಬಣ್ಣಿಸುವ ರಂಗಸ್ಥಲದ ಸೂಚನೆಗಳಲ್ಲಿ ( Stage directions ) ಎಷ್ಟೋ ವಿಸ್ತೃತವಾದ ವರ್ಣನೆ-ವಿಮರ್ಶೆಗಳು ಬಂದಿರುವವಲ್ಲದೆ ಯಾವುದಾದರೊಂದು ಪ್ರವೇಶದ ಕೊನೆಗೆ ತೆರೆಯು ಹೇಗೆ ಬಿದ್ದಿತೆಂದು ಹೇಳುವಾಗ, ಪ್ರಕೃತವಾದ ಸಂಗತಿಗೆ ಅದರ ಸಂಬಂಧ ಹಚ್ಚುವಿಕೆಯೂ ಇದೆ. ಹರಿಹರರಾಯನ ವೈಭವಕಳಸದಂತೆ, ಮನೋಭೀತಿಯ ಕರಾಳಸ್ವರೂಪದ ನೆರಳಿನಂತೆ— ( ತೆರೆ ) ಮೋಹಿನಿಯು ಹೇಗೆ ನಾಚಿದಳೆಂದು ಹೇಳುವಾಗ ಕಾವ್ಯಲಹರಿಯು ತೋರಿದೆ. ಹೀಗಿರುವ ಪರಿಪಾಠವು ಪೂರ್ವದ ನಾಟಕಗಳಲ್ಲಿ ಇಲ್ಲ. ರಂಗಸ್ಥಲದ ಸೂಚನೆಗಳೆಂದರೆ ಮುಂಚೆ ಎಷ್ಟು ಬೇಕೋ ಅಷ್ಟು. ಈ ನಾಟಕದ ಸೂಚನೆಗಳು/ ರಂಗಸ್ಥಲಕ್ಕೆ ಪ್ರಯೋಜಕವಾಗಿರದೆ,

CC-0. Jangamwadi Math Collection. Digitized by eGangotri

ವಾಚಕವೃಂದಕ್ಕೆ ಮಾತ್ರ ಆನಂದಕೊಡಬಹುದು. ಈ ಸೂಕ್ಷ್ಮ ಗುಣವನ್ನು ಅಭಿನಂದಿಸಿಯೂ ಕೆಲವೆಡೆಗಾದ ಟನ ಅತಿಶಯವು ನಾಟಕವನ್ನು ಬರಬರುತ್ತ ಕಾದಂಬರಿಯ ಸ್ಥಾನಕ್ಕೆ ತರಬಹುದಾದ್ದರಿಂದ, ಹೆಚ್ಚಿನ ವಿನೋದ, ಹೆಚ್ಚಿನ ಮಾತುಗಾರಿಕೆ ಸ್ತುತ್ಯವಲ್ಲವೆಂದು ಹೇಳದಿರೆವು.

ಕೃತಿಯಲ್ಲಿಯ ಪಾತ್ರಗಳು ಬರಿಯ ಒಳ್ಳೆಯವು ಇಲ್ಲವೆ ಬರಿಯ ಕೆಟ್ಟವು ಇರದೆ ಪ್ರತ್ಯಕ್ಷವಾಗಿ ಜಗತ್ತಿನಲ್ಲಿರುವ ವ್ಯಕ್ತಿಗಳಂತೆ ಮಿಶ್ರರಾಗಿರುವರು. ಆವರೂ ಈ ಮಿಶ್ರತೆಯು ಕೂಡ ಪ್ರತಿಯೊಬ್ಬ ವ್ಯಕ್ತಿಗೂ ವಿಶಿಷ್ಟವಾಗಿರುವುದರಿಂದ ಪಾತ್ರವಿಕಾಸದಲ್ಲಿ, ಬಹಳ ಸೂಕ್ಷ್ಮವಾದ ಚಿತ್ರವು ಅತ್ಯವಶ್ಯ. ಅದನ್ನು ನಾಟಕಕಾರರು ಹರಿಹರರಾಯ, ಮನೋರಮೆಯರ ವಿಷಯದಲ್ಲಿ ತೋರಿಸಿದಂತೆ, ವಿದ್ಯಾಧರ, ತಿಮ್ಮಾಜಿಯವರ ವಿಷಯದಲ್ಲಿ ತೋರಿಸಿಲ್ಲ. ವಿದ್ಯಾಧರನ ಪಾತ್ರವು ಮೂಡಿಸುವ ಭಿನ್ನಭಾವಗಳನ್ನು ಆಗಲೇ ಹೇಳಿರುವೆವು. ತಿಮ್ಮಾಜಿಗೆ ಮರೆಯುವ ಸ್ವಭಾವವಿದೆಯೆಂದು ಮೊದಲೇ ತಿಳುಹಿಸಿ, ಕೊನೆಯವರೆಗೆ ಅದರ ವಿನೋದವನ್ನಾಗಲಿ ಕರುಣವನ್ನಾಗಲಿ ಬಿಟ್ಟುಬಿಡದೆ ಪೋಷಿಸಿಲ್ಲ. ಅನೇಕ ಪ್ರಸಂಗಗಳಲ್ಲಿ ತನ್ನ ಮರೆಯುವ ಸ್ವಭಾವವನ್ನು ತೋರ್ಗಿಸಿದ ತಿಮ್ಮಾಜಿಯು ಮಾವಾಗಲೊಮ್ಮೆ 'ನನಗೆ ಮರೆಯುವ ಕೆಟ್ಟ ಚಟವಿದೆ, ನೋಡಿರಿ' ಎನ್ನಲು 'ಅದು ಕೂಡ ನಿಮಗೆ ಮರೆಯುತ್ತಿದೆ ಆಗಾಗ!' ಎನ್ನಬೇಕಾಗುತ್ತದೆ. ಅಪ್ಪಾಜಿಯ ಸ್ವಭಾವಚಿತ್ರವು ಸೊಗಸಾಗಿದೆ. ಅವನ ಕೆಲವು ಮಾತುಗಳಲ್ಲಿ ಸಂಪರಕರುಣವಿದೆ. 'ಹೆಣ್ಣು ಹುಡುಗೆಯ ತಂದೆಯು ಸರಳ ಮಾತನಾಡಬೇಕೆ?........ಇಷ್ಟೊಂದು ಸಾಹಸದಲ್ಲಿ ಕಬ್ಬಿಣ ಕೂಡ ಕಾದು ಮಣಿದು ಡೊಂಕಾಗಬಹುದು, ಸ್ವಾಮಿ, ಮನುಷ್ಯರ ಪಾಡೇನು?' ಇಡೀ ದೃಶ್ಯದಲ್ಲಿ ಇಂಥ ಕೆಲವು ವಾಕ್ಯಗಳು ಶ್ರೀರಂಗರ ಲೇಖನಶಕ್ತಿಯ ದ್ಯೋತಕಗಳಾಗಿವೆ. ಕಾಮಿಯು ಈ ರೂಪಕದಲ್ಲಿ ವಿದೂಷಕ. ಮೋಹಿನಿಯ ಮೇಲೆ ಪ್ರೇಮ, ಕಾವ್ಯಸ್ಫೂರ್ತಿ ಅವನ ಹುಚ್ಚುಮೆಚ್ಚುಗಳು. ಆದರೆ ಅವನಿಂದ ದೊರೆಯುವ ಹಾಸ್ಯವು ದಾರಿತಪ್ಪಿದ ಪ್ರವೇಶಕ್ಕಿಂತ ಗೆಳೆಯರ ಕೂತ ನಡೆದ ನಗೆಚಾಟಿಕೆಗಳಲ್ಲಿ ಹೆಚ್ಚಾಗಿ ದೊರೆಯುತ್ತದೆ.

ಈ ನಾಟಕದ ಭಾಷಾಶೈಲಿಯು ಮನೆಮಾತಿಗೆ ಒಪ್ಪಕೊಟ್ಟ ಗ್ರಾಂಥಿಕಭಾಷೆ. ಸಾಮಾನ್ಯವಾಗಿ ಈ ಶೈಲಿಯಲ್ಲಿ ಸರಳತೆ ಇದ್ದರೂ ಅನೇಕ ತಾಣಗಳಲ್ಲಿ ಸಾಹಿತ್ಯಬಲ್ಲವರಿಗೇ ತಿಳಿಯಬಹುದಾದ ವಿಚಾರ-ವಿನೋದಗಳೂ, ಕೆಲವೆಡೆ ಬಲ್ಲವರನ್ನೂ ಕೂಡಿಯೇ ದಂಗುಬಡಿಸುವ ತಿರುಗುಮುರುಗಿನ ಗಂಟುನುಡಿಗಳೂ, ದೃಶ್ಯವಾದ ಸಾಮಾಜಿಕ ನಾಟಕದಲ್ಲಿ ಬೇಕಾದ ಪ್ರಸಾದವನ್ನು ಕಳೆಯುತ್ತವೆ. ಇಂಗ್ಲಿಷಿನ ಪ್ರಭಾವದಿಂದ ಬಳಸಿದ 'ಮಾಳಿಗೆಯಿಂದ ಕೂಗಿ ಕೇಳು' (Cry from house tops ಇದರಿಂದ) ಎಂಬ ತೆರದ ಪ್ರಯೋಗಗಳು ಶೈಲಿಯನ್ನು ಕೆಲವು ಕಡೆಗಳಲ್ಲಿ ವಿಚಿತ್ರಗೊಳಿಸುತ್ತವೆ. ಆದರೆ ಒಟ್ಟಿನಲ್ಲಿ ಭಾಷೆಯು ಸಾರವತ್ತಾಗಿದೆ; ಭಾವಾವೇಶಕ್ಕೆ ಬೇಕಾದ ಬಲವುಳ್ಳುದಾಗಿದೆ; ಇನ್ನೂ ಬೇಕಾದುದು ಪ್ರಸಾದಗುಣ ಮಾತ್ರ. ಕೆಲವು ಶಬ್ದಗಳ ಸೂಕ್ಷ್ಮಭೇದಗಳನ್ನು ನಾವು ಅರಿತುಕೊಂಡಂತೆ ಜನತೆಯು ಅರಿಯದಿರುವಾಗ, ಅವನ್ನು ಅಶಿಕ್ಷಿತ ಪಾತ್ರಗಳ ಬಾಯಲ್ಲಿ ಹಾಕುವುದು ಉಚಿತವಲ್ಲ. ಈ ದೃಷ್ಟಿಯಿಂದ ಪಾತ್ರಕ್ಕುಚಿತವಾದ, ವಿವಿಧವಾದ ವಿಚಾರ ಶೈಲಿಗಳನ್ನು ಈ ನಾಟಕದಲ್ಲಿ ಅಷ್ಟಾಗಿ ಕಾಣೆವು. ಮನೋರಮೆಯು ಒಮ್ಮೆ ''ಬುದ್ಧಿಯಂಕಿಂತ ನನ್ನ ಮನಸ್ಸೇ ಕಲ್ಲಾಗಬಾರದಿತ್ತೇ?'' ಎನ್ನುವಳು. ಈ ಬಗೆಯ ಬುದ್ಧಿ ಮನಸ್ಸುಗಳ ವ್ಯತ್ಯಾಸವನ್ನು ಅವಳು ಅರಿತಿರುವುದು ಸಾಧ್ಯವೇ? ಹೀಗಿರುವಾಗ ಅವಳಿಗೆನಿಸಿದುದನ್ನು ಅವಳ ಶೈಲಿಯಲ್ಲಿಯೇ ಹೇಳಬೇಕಲ್ಲವೇ?

ಈ ಎಲ್ಲ ವಿಮರ್ಶೆಯೊಡನೆ ನಾವು ಕಡೆಯಲ್ಲಿ ಹೇಳಲು ಒತ್ತಾಸೆಪಡುವ ಮಾತೆಂದರೆ, ಶ್ರೀರಂಗರ ಈ ನಾಟಕವು ನೂತನ ಸಾಮಾಜಿಕನಾಟಕಗಳಲ್ಲಿ ಗಣ್ಯವೆನಿಸಿಕೊಳ್ಳುವ ದೃಶ್ಯಗಳಲ್ಲಿ ಒಂದಿದ್ದು ಎಲ್ಲ ಭಾಗದ ಕನ್ನಡಿಗರ ವಾಚನಾಭಿನಯಗಳಿಗೆ ನಿಜವಾಗಿ ಯೋಗ್ಯವಾದುದಿದೆ. ಇದರ ಗುಣದೋಷಗಳು ಯೋಗ್ಯತೆಯ ಕಲಾಶಾಲಿಯ ಗುಣದೋಷಗಳೆಂಬುದನ್ನರಿತು ನಾಟಕದ ಕಡೆಗೂ ವಿಮರ್ಶೆಯ ಕಡೆಗೂ ನೋಡಬೇಕು.

CC-0. Jangamwadi Math Collection. Digitized by eGangotri



**ನಲ್ಮೆ**—( ಕವನಸಂಗ್ರಹ ) ಶ್ರೀ. ಕಡೆಂಗೋಡ್ಲು ಶಂಕರಭಟ್ಟರು ಮಂಗಳೂರು.

ಒಂದೇಮಾತಿನಲ್ಲಿ ಹೇಳುವುದಾದರೆ, ನಲ್ಮೆಯು ನಲ್ಮೆಯನ್ನು ಹುಟ್ಟಿಸುವುದು; ಇಷ್ಟೇ ಏಕೆ, ನಲ್ಮೆಯನ್ನು ಬೆಳೆಯಿಸಿ ನೆಲೆಗೊಳಿಸುವುದು. ನಲ್ಮೆ – ಎಂದರೆ ಪ್ರೀತಿಯೇ ಸಾಮಾನ್ಯವಿಷಯವಾದ 'ಹೊನ್ನಿಯ ಮದುವೆ,' 'ಮಾದ್ರಿಯ ಚಿತೆ,' 'ಮುರಲೀನಾದ' ಎಂಬ ಮೂರು ನಿಡಿದಾದ ನಲ್ಗತೆಗಳು ಕವಿತೆಗಳಾಗಿ ಇಲ್ಲಿ ಜತೆಗೂಡಿ ಇವೆ. ಮೂರರಲ್ಲಿಯೂ, ಜಗದ ಅರ್ಥದಲ್ಲಿ ಹೊರಗಣಿಂದ ಸೋತ ನಲ್ಮೆಯು, ತನ್ನೊಳಗೆ ಪಡೆದ ಗೆಲುವಿನ ಬೇರೆ ಬೇರೆ ಪ್ರಕಾರಗಳಿವೆ. ಪ್ರೀತಿಗೆ ಇರುವ ಜಯದ ರೀತಿಯನ್ನು ಬೇರೆ ಬೇರೆಯಾಗಿ ನಾವಿಲ್ಲಿ ಕಾಣುವೆವು. 'ಹೊನ್ನಿಯ ಮದುವೆ' ಯಲ್ಲಿ ತನಗೆ ತಂದೆಯು ಗೊತ್ತುಪಡಿಸಿದ ಗೌಡನ ಮಗನನ್ನು ಮದುವೆಯಾಗಲಾರದೆ ಹೊನ್ನಿಯು ತನ್ನ ಹೃದಯ ವರಿಸಿದ ಚೆನ್ನನೊಬ್ಬನ ಕೂಡ ಮದುವೆಯ ದಿನವೇ ಕಡಲು ಕೂಡಿ ಕಣ್ಮರೆಯಾಗುವಳು. 'ಮಾದ್ರಿಯ ಚಿತೆ' ಯಲ್ಲಿ ಮುನಿಶಾಪದಿಂದ ಅಗಲಿದ ಪಾಂಡು ಮಾದ್ರಿಯರೆಂಬ ನಲ್ಲನಲ್ಲೆಯರು ವಿರಹದುಃಖದಲ್ಲಿ ಬೆಂದು ಬಳಲುತಿರಲು ಮಾದ್ರಿಯು ಮಾತ್ರ 'ವಲ್ಲಭನಗಲಿದರು ಮೆರೆಯುತಿರ್ದು' ವಿರಹದಲ್ಲಿಯೂ ಆನಂದವನ್ನು ಕರಗಿಸದೆ ಕಡೆವರೆಗಿದ್ದು ಚಿತೆಯೇರುವಳು. 'ಮುರಲೀನಾದ' ದಲ್ಲಿ ಕೊಳಲಿನ ನುಣ್ದನಿ ಕೇಳ್ದು ಕೊಳಲಿಗನೊಬ್ಬನಿಗೆ ಮಾರುವೋದ ಕನ್ನೆಯು ಅವನಿಗಾಗಿ ಕೊರಗುತ್ತ ತನ್ನ ಕತೆಯನ್ನು ಒಬ್ಬ ಸನ್ಯಾಸಿಯಿದಿರು ಹೇಳಲು, ಅವನೇ ಮೊದಲು ಕಂಡ ಆಕೆಯ ಮನದನ್ನನಾಗುವನು. ಇಬ್ಬರೂ ಕೂಡುವರು. ಮರಣದಲ್ಲಿ ಸಂಯೋಗ, ಕಡೆವರೆಗು ವಿರಹ, ದೀರ್ಘವಿರಹಾನಂತರ ಸಂಯೋಗ ಈ ಮೂರು ಬಗೆಯ ಚಿತ್ರಗಳು ಈ ಈ ಕತೆಗಳಲ್ಲಿ ಇವೆ. ನಲ್ಮೆಯು ಕ್ರೂರವಿಧಿಯೊಡನೆ ಕಾದಾಡಿ, ಈ ಈ ಪ್ರಕಾರದ ಪರಿಣಾಮಗಳಲ್ಲಿ ಕಾಣಬರುವುದೆಂದೂ ಯಾವಪರಿಣಾಮದಲ್ಲಿಯೂ ನಲ್ಮೆಗೆ ತನ್ನ ಗೆಲುವು, ತನ್ನ ಏಳ್ಗೆ, ತನ್ನ ನಲಿವು ನಸುವೂ ಕಡಿಮೆಯಾಗವೆಂದೂ ಬಹುರಮ್ಯವಾದ ಸೂಚನೆ ಈ ನಲ್ಮೆಯಲ್ಲಿದೆ. "ಒಲವು, ಗೆಲವು, ನಗೆ, ಬಗೆಗಳ ಬುಗ್ಗೆ । ಗುಳುಗುಳಿಸಲಿ, ಅದೆ ಜೀವನದೊಸಗೆ" ಎಂಬುದೇ ಈ ನಲ್ಮೆಯ ಸಂದೇಶ.

ಕವಿಯು ಯಾವಾಗಲೂ ಅವಿರತವಾದ ಆಶೆಯ, ಆನಂದದ ಕುರುಹಾಗಿರಬೇಕು. ಸೋಲಿನಲ್ಲಿ ಗೆಲವನ್ನು ನಿರಾಶೆಯಲ್ಲಿ ಆಶೆಯನ್ನೂ ಸಹಜವಾಗಿ ಕಂಡು, ಬತ್ತಿಕ್ಕಲಾರದೆ ಹೊರಹೊಮ್ಮಿಸುತ, ಸೊಗದ ಸಿರಿಯನ್ನು ಕಳೆದುಕೊಂಡು ಬಡವಾದ ಜೀವಗಣಕ್ಕೆ, ಸಂತತವಾದ ಸಹಜಸ್ಫೂರ್ತವಾದ ಆನಂದನಿಧಿಯನ್ನು ಕೊಡುವ ಹೊಸ ಕುಬೇರನಾಗಿರಬೇಕು. ಆ ಕವಿಕಾರ್ಯವನ್ನು ನಲ್ಮೆಯ ಕವಿಗಳು ಯಶಸ್ವಿಯಾಗಿ ಮಾಡಿದ್ದಾರೆನ್ನಲು ನಾವು ಬಹಳ ಹಿಗ್ಗುವೆವು. ವಿಶೇಷವಾಗಿ ಇಲ್ಲಿಯ 'ಮಾದ್ರಿಯಚಿತೆ' ಯು ಅಂತಹ ಕಿಡಿಗಳಿಂದ ಚಕಚಕಿಸುತ್ತದೆ !

'ಹೊನ್ನಿಯ ಮದುವೆ' ಯು ಹೊಸ ಷಟ್ಪದಿಯ ಕಿರಿರಚನೆಯಲ್ಲಿ ಕತೆಹೇಳುವ ಸ್ವಾಭಾವಿಕತೆಯನ್ನೂ ನುಡಿಯ ಕಮನೀಯತೆಯನ್ನೂ ಸೊಗಸಾಗಿ ಬೆರಯಿಸಿದೆ. ಸೂತನರೇಖೆ ಕವಿಚಿತ್ರಕಾರನ ಕುಂಚವು ನುಡಿನುಡಿಗೆ

CC-0. Jangamwadi Math Collection. Digitized by eGangotri

ಗಳನ್ನು ಎಳೆದಿಡೆ. 'ಚಪ್ಪನವೆನ್ನಲೆ? ಮದವಿಲ್ಲದ ಮನ! ಶೈಶವವೆನ್ನಲೆ? ಕದಡುನಗೆ' 'ಅಕ್ಕರವೆಂಬುದೆ! ಅಕ್ಕರವೆನಗದೆ! ಬರೆದೊಪ್ಪಿಸಿತೀ ಸವಿಸೊಲ್ಲ' ಈ ಬಗೆಯ ನುಡಿಗಳಲ್ಲಿ ಬರೆಹದ ಬಿಗುವಿನಲ್ಲಿ ಬೆರೆತ ಕವಿಯ ಸಾಚಸೋನೆಯಿದೆ. ಪಡುವಣತೀರದ ಕಾರ್ಗಾಲದ ವರ್ಣನೆಯೂ ಕತೆಯ ಕರುಣಪರ್ಯವಸಾನಕ್ಕೆ ಸರಿಯಾದ ಹಿನ್ನೆಲ (Backgraund) ವಾಗಿದೆ. ಆದರೆ ಅಂತ್ಯಪ್ರಾಸವನ್ನು ಇಟ್ಟುಕೊಂಡ ಮೂಲಕ ಸ್ವಲ್ಪ ಕಡೆಗಳಲ್ಲಿ ಪದ್ಯಕ್ಕೆ ಬೇಕಾದ ಮುಗಿತಾಯವಿಲ್ಲದೆ, ಬೇಕೆಂದು ತಂದ ಪ್ರಾಸಬದ್ಧತೆ ತೋರಿಬರುತ್ತದೆ. ಇದಲ್ಲದೆ ಮಾತ್ರೆಗಳ ವಶವಾಗಿ, ಮಾಡದೆ ಉಳಿದ ಸಂಧಿಗಳು ಕವಿತೆಯ ಓಟಕ್ಕೆ ತಡೆಯುಂಟು ಮಾಡುತ್ತವೆ. 'ಕೊಸಾಗಿರೆ ಪ್ರೇಮಕೆ ಉಪವಾಸವು' ಎಂಬಲ್ಲಿ ಕೂಸಾಗಿದ್ದಾಗ ಪ್ರಣಯಕ್ಕೆ, ಸತಿಪತಿಪ್ರೇಮಕ್ಕೆ ಎಂಬ ಆಶಯವಿದ್ದಲ್ಲಿ ಅದು ಸರಿಯಾಗಿ ಹೊರಪಡುವುದಿಲ್ಲ.

'ಮಾದ್ರಿಯ ಚಿತೆ' ಯು ಈ ಮೂರು ಕವನಗಳಲ್ಲಿ ಹಿರಿದಾದುದು. ಕವಿಯಲ್ಲಿ ಹುಚ್ಚು ಹಿಗ್ಗು ಬೇಕು, ಅದರೊಡನೆ ನುಡಿಯ ಕೆಚ್ಚು ಬೇಕು. ಯತಿಯ ತಾಳ್ಮೆ ಬೇಕು, ತನ್ನ ಪರಿವೆತಪ್ಪದ ಪ್ರಜ್ಞೆ ಬೇಕು; ಆವಾಗ ಆತನು ಪೂರ್ಣ ಕಲಾಪುರುಷನಾಗುವನು. ಹಿಗ್ಗಿನ ಹೊನಲಲ್ಲಿ ತೇಲುತಲಿದ್ದರೂ ಅಲ್ಲಿ ಮುಳುಗಿ ಬಿಡಬಾರದು. ಆನಂದದ ಅತ್ಯುಚ್ಚಾವಸ್ಥೆಯಲ್ಲಿಯೂ ಕವಿಗೆಂದೂ ಸ್ವವಿಸ್ಮೃತಿಯಾಗಕೂಡದು. ತನ್ನ ಈ ತೂಕವನ್ನು ಕಾಯ್ದುಕೊಂಡು, ತನ್ನ ಅಂಕುಶದಿಂದ ತಾನೇ ತಿವಿದುಕೊಳ್ಳುತ್ತ ತನ್ನ ರಭಸದಲ್ಲಿ ಹೊರಟ ಹೊಸದೊಂದು ಮದದಾನೆಯಿರುವನು ಕವಿ. ಈ ಕವಿಮದವನ್ನು, ಪ್ರತಿಭೆಯ ಕಿರಣ ಕಿರಣಗಳ ಹೊಳೆಯನ್ನು, ದುಃಖನಿರಾಶೆಗಳಿಗೆ ಎನಿತೂ ಸೋಲದ ಒಲವು ನಲಿವುಗಳ ಉಕ್ಕುಗಡಲನ್ನು, ಈ ಕವನದಲ್ಲಿ ಕಂಡು ರೋಮಹರ್ಷಣ ಪಡೆದೆವು. ಅದಕ್ಕಾಗಿ ಕವಿಗೆ ಹೃತ್ಪೂರ್ವಕವಾದ ಧನ್ಯವಾದಗಳು. ಕವಿಯ ಉತ್ಸಾಹದ ಊರ್ಜಿಯನ್ನೂ ಬಣ್ಣನೆಯ ಹೊಸಹುಮ್ಮಸನ್ನೂ ಕೆಳಗಣ ಒಂದು ಪದ್ಯದಿಂದ ಉದಾಹರಿಸಬಹುದು.

(ಮಾದ್ರಿಯಿಂದದ್ದು)

ಮರೆತು ಹೋಗಲಿ ವಿರಹ! ಜಾರಿಹೋಗಲಿ ದುಗುಡ!
ಕಂಬನಿಯ ಬುಗ್ಗೆ ಬತ್ತಲಿ! ಸುಯ್ಯರೋದನದ
ಬಿಡುಕ ಮರೆಹೊಗಲಿ ಸುಗ್ಗಿಯ ಚಿಗುರ ಕೆಂಪುಗಳ!
ಉಸಿರು ಹಸರಿಸಲಿ ಕಮ್ಮೆಲರ ಸುಳಿಸುಳಿನಲಿ!
ಯೌವನವಸಂತರಾಜರ ಬರವಿನಲಿ ನಲಿದು
ಪುಲಕಗಳ ಗುಡಿಗಟ್ಟಿ ನಗೆಯಮಾಲೆಯ ಕೋದು
ಉತ್ಸವದಿ ಕುಣಿದು ಕಾಲಂದುಗೆಯ ದನಿಯಿಂದೆ
ಮೃತ್ಯುವಾಗಮನವಾರ್ತೆಯ ಮರೆಸಿ ಮರದಿರ್ಪೆ

ಇದಲ್ಲದೆ, 'ನಲ್ಮೆಯ ತುಟಿಯ ಕೋದ ಮುತ್ತು' 'ಕೆಂಬಿಸಿಲ ಕೆತ್ತನೆಯ ಹಾಸ' ಇಂತಹ ಎನಿತೋ ನುಡಿರನ್ನಗಳು ನಿಜಕಾಂತಿಯಿಂದ ಬೆಳಗುತ್ತಿವೆ. 'ಒಂದೆ ಅನುಭವದ ಜೀವಿಗಳು ಬೇರೆ' ಎಂಬ ಆಧ್ಯಾತ್ಮಿಕ ಅನುಭವಶಿಖರದ ಭಾವಗಳು ಅಲ್ಲಲ್ಲಿ ತಲೆದೋರಿ, ಈ ಕವನದ ಮಟ್ಟನ್ನು ಮೇಲುಮೇಲಾಗಿಸಿವೆ. ಚರಿತ್ರಪರ ಕಾವ್ಯದಲ್ಲಿಯೂ ಈಗಣ ಕಾಲದ ಕವಿಯು ಆತ್ಮೀಯವಾದ ಎನಿಸಿಕೆಗಳನ್ನು ಹೆಣೆದಿರುವುದ ನೋಡಿದರೆ ಹಳೆಯ ಕವಿಗಳ ಅಂತರಂಗವು ಅವರ ಕಾವ್ಯದಲ್ಲಿ ನಮಗೆ ತಿಳಿಯದೆ ಹುದುಗಿರಬಹುದೇನೋ—ಎಂದು ಎಣಿಸಬಹುದಾಗಿದೆ.

'ಮುರಲೀನಾದ' ದಲ್ಲಿ ಅಂತ್ಯಪ್ರಾಸವು 'ಹೊನ್ನಿಯ ಮದುವೆ'ಗಿಂತ ಚೆನ್ನಾಗಿ ಸಾಧಿಸಿರುವುದಲ್ಲದೆ ದ್ವಿತೀಯ ಪ್ರಾಸವೂ ಕೂಡಿ ಕಿರಿವಾತಿನ ಕಳೆಗೆ ಹೆಚ್ಚು ಎಡೆದೊರೆತಿದೆ. ಅದಕ್ಕೆ 'ಮುಡುರುವ ಮಾಗಿಯ ಮೆಯ್ಯೊಳಗೊಳಗೆ! ಉದಿಸುವ ಸುಗ್ಗಿಯು ಬಾರದೆ ಮೊಳೆಗೆ?' ಎಂಬೊಂದು ಮಾದರಿ ಸಾಕು.

— ರಂಗನಾಥ ಮುಗುಳಿ

**Pranayama** (Part one) By Kuvalayananda Price 2-8-0 Kaivalyadhama Lonavla (G. I. P.)

ಶ್ರೀಮತ್ ಕುವಲಯಾನಂದರು ಯೋಗಾಸನಗಳನ್ನು ಲೋಕಪ್ರಿಯ ಮಾಡಬೇಕೆಂದು ನಡೆಯಿಸಿರುವ ಅವಿಶ್ರಾಂತಪರಿಶ್ರಮಗಳ ವಾರ್ತೆಯು ಕರ್ನಾಟಕದೊಳಗೂ ಅನೇಕರಿಗೆ ತಿಳಿದಿರಲಿಕ್ಕೆ ಸಾಕು. ಲೋಣಾವಳದ ಕೈವಲ್ಯಧಾಮವು ಇವರ ಮುಖ್ಯ ಆಶ್ರಮವು. ಮುಂಬೈ, ಲಖನೌ ಮೊದಲಾದ ಕಡೆಗಳಲ್ಲಿಯೂ ಶಾಖೋಪಶಾಖೆಗಳನ್ನು ತೆರೆವ ಕಾರ್ಯವು ಆರಂಭವಾಗಿದೆ. ಇವರ ಪ್ರಮುಖ ಶಿಷ್ಯರಲ್ಲಿ ಒಬ್ಬರಾದ ಶ್ರೀ. ಭೂಷಣರು ಕನ್ನಡಿಗರಿದ್ದು, ಇವರಮುಖಾಂತರ ಕರ್ನಾಟಕದಲ್ಲಿಯೂ ಒಂದು ಯೋಗಾಶ್ರಮವು ಹೊರಡಲಿರುವುದೆಂದು ಕೇಳಿಕೆಯಲ್ಲಿದೆ. ಹಿಂದುಸ್ಥಾನದ ಬೇರೆ ಬೇರೆ ಭಾಗಗಳಲ್ಲಿ ಈ ಬಗೆಯ ಆಶ್ರಮಗಳನ್ನು ಸ್ಥಾಪಿಸುವ ಮೊದಲು, ಆಸನ



CC-0. Jangamwadi Math Collection. Digitized by eGangotri

ಪ್ರಾಣಾಯಾಮಗಳನ್ನು ಕುರಿತು ಜನಸಾಮಾನ್ಯರಲ್ಲಿ ತಿಳಿವಳಿಕೆಯನ್ನು ಹುಟ್ಟಿಸಬೇಕೆಂದು ಶ್ರೀಕುವಲಯಾನಂದರು ಈ ವಿಷಯದ ಸುಲಭಗ್ರಂಥಮಾಲೆಯನ್ನು ಹೊರಡಿಸಿದ್ದಾರೆ. ಪ್ರಸ್ತುತ ಪ್ರಾಣಾಯಾಮದ ಪುಸ್ತಕವು ಈ ಮಾಲೆಯ ಎರಡನೆಯ ಗ್ರಂಥವು. ಆಸನಗಳನ್ನು ಕುರಿತು ಬರೆದಿರುವ ಮೊದಲನೆಯ ಗ್ರಂಥವು ಅಚ್ಚಾಗುತ್ತಲಿದೆ.

ಪ್ರಾಣಾಯಾಮದ ಈ ಗ್ರಂಥದಲ್ಲಿ ಗಡುಚಾದ ಶಾಸ್ತ್ರೀಯ ವಿಚಾರಗಳನ್ನು ಸೇರಿಸಿ, ಸಾಮಾನ್ಯ ವಾಚಕರಿಗೆ ಗಡುಚು ಆಗುವಂತೆ ಮಾಡಿಲ್ಲ. ಶ್ವಾಸೋಚ್ಛ್ವಾಸದ ಬಗೆ, ೨ ಪ್ರಾಣಾಯಾಮಕ್ಕೆ ಆವಶ್ಯಕವಾದ ಆಸನಗಳು, ೩ ಪ್ರಾಣಾಯಾಮ, ೪ ಉಜ್ಜಾಯಿ, ೫ ಕಪಾಲಭಾತಿ, ೬ ಭಸ್ತ್ರಿಕಾ ೭ ಶಾರೀರಿಕ ಮತ್ತು ಆಧ್ಯಾತ್ಮಿಕ ದೃಷ್ಟಿಯಿಂದ ಪ್ರಾಣಾಯಾಮದ ಮಹತ್ವ—ಈ ಪ್ರಕಾರ ಏಳು ಅಧ್ಯಾಯಗಳಲ್ಲಿ ಸುಲಭವಾಗಿ ತಿಳಿಯುವಂತೆ ವಿವೇಚನೆ ಮಾಡಿದ್ದಾರೆ. ಅಲ್ಲಿಗಲ್ಲಿಗೆ ಆಸನಾದಿಗಳ ತಕ್ಕ ಚಿತ್ರಗಳನ್ನು ಕೊಟ್ಟಿರುವುದರಿಂದ, ವಿಷಯವು ಮನದಟ್ಟಾಗಿ ತಿಳಿಯಲಿಕ್ಕೆ ಇನ್ನೂ ಇಷ್ಟು ಅನುಕೂಲವಾಗಿದೆ. ಒಟ್ಟು ೪೦ ಅಂದವಾದ ಚಿತ್ರಗಳಿವೆ. ಪರಿಶಿಷ್ಟಗಳಲ್ಲಿ ಅಭ್ಯಾಸಕ್ರಮಾದಿ ಉಪಯುಕ್ತವಾದ ಮಾತುಗಳಿವೆ. ಒಟ್ಟಿಗೆ ಪುಸ್ತಕದ ದೃಷ್ಟಿಯಿಂದ ೨ ರೂ. ಬೆಲೆ ಹೆಚ್ಚಲ್ಲ.

ಪ್ರಾಣಾಯಾಮ, ಯೋಗಾಸನಗಳೆಂದರೆ ಅದೇನೊ ಒಂದು ಗೂಢವಾದ ಅಗಮ್ಯವಾದ ವಿಷಯವೆಂದು ಜನರ ತಿಳುವಳಿಕೆಯಿತ್ತು. ಅದರಿಂದ ತಿಳಿಗೇಡಿತನದ ಎಷ್ಟೋ ಕಲ್ಪನೆಗಳೂ ಜನರಲ್ಲಿ ಮನೆಮಾಡಿಕೊಂಡಿದ್ದುವು. ಅವುಗಳೆಷ್ಟೋ ಈ ಬಗೆಯ ಗ್ರಂಥಗಳ ಅಭ್ಯಾಸದಿಂದ ಕಡಿಮೆಯಾಗದೆ ಇರವು. ಆಸನಾದಿಗಳನ್ನು ಸನ್ಯಾಸಿಗಳೂ ಮನೆಮಾರು ತೊರೆದವರೂ ಅಷ್ಟೇ ಮಾಡಿ ಲಾಭ ಪಡೆಯಬೇಕೆಂತಲ್ಲ; ಸುಖದಿಂದ ಬಾಳಿ ಬದುಕಿ, ತನಗೂ ತನ್ನ ನಾಡಿಗೂ ತನ್ನ ದೇಹದ ಯೋಗ್ಯ ಉಪಯೋಗವು ಆಗಬೇಕೆಂದು ಇಷ್ಟ ಪಡುವ ಪ್ರತಿಯೊಬ್ಬನೂ ಇವನ್ನು ಕಲಿಯಬಹುದು. ಅಂತಹರೆಲ್ಲ ಈ ಪುಸ್ತಕವನ್ನು ಅವಶ್ಯವಾಗಿ ಸಂಗ್ರಹಿಸಬೇಕೆಂದು ಬೇರೆ ಹೇಳಬೇಕಾಗಿಲ್ಲ.

—ಶಂ. ಬಾ.



## ಶ್ರೀರಾಮಕೃಷ್ಣ ಚರಿತಾಮೃತವು. (ಶ್ರೀಯುತ ರಂ. ರಾ. ದಿವಾಕರರು ಬರೆದುದು.)

ರಾಜಕೀಯಕ್ಷೇತ್ರದಲ್ಲಿಯ ನಮ್ಮ ಏಳುಬೀಳುಗಳ ನಿರ್ಣಯವನ್ನು ನಾಡಿನ ಇತಿಹಾಸದಿಂದ ಕಾಣುತ್ತಿರುವಂತೆ, ಆಧ್ಯಾತ್ಮಿಕವಿಚಾರದಲ್ಲಿ ನಮ್ಮ ಆತ್ಮದ ವಿಕಾಸ-ನಿರ್ವಿಕಾಸಗಳ ನಿರ್ಣಯವನ್ನು ಶ್ರೀರಾಮಕೃಷ್ಣರಂತಹ ಸತ್‌ಪುರುಷರ ದಿವ್ಯ ಜೀವನಚರಿತ್ರದಿಂದ ಕಂಡುಕೊಳ್ಳುವೆವು. ನಮ್ಮ ಪೌರಾಣಿಕವಾಙ್ಮಯದಲ್ಲಿ ಸತ್‌ಪುರುಷರ ಚರಿತ್ರೆಗಳಿಗೇನು ಕಡಿಮೆಯಿಲ್ಲ. ಆಮೇಲಿನ ಭಕ್ತವಾಙ್ಮಯದಲ್ಲಿಯೂ ಇವುಗಳಿಗೆ ಕೊರತೆಯಿಲ್ಲ. ಆದರೆ ಅವೆಲ್ಲವೂ ಅವತಾರಿಗಳೆಂಬ ಭಾವನೆಯ ತಳಹದಿಯ ಮೇಲೆ ಕಟ್ಟಿದುವುಗಳು. ಅವುಗಳಲ್ಲಿ ಆಯಾ ಸತ್‌ಪುರುಷರ ಸಾಧನಜೀವನದ ವಿವರಣೆಗಿಂತ ಸಿದ್ಧರಾದ ಮೇಲಿನ ಪವಾಡಗಳ ಪಲ್ಲವಿಗಳೇ ತುಂಬಿರುವುವು. ಶ್ರೀ. ದಿವಾಕರರ ಮಾತಿನಲ್ಲಿಯೇ ನಾವು ಹೇಳುವುದೇನೆಂದರೆ “ಈ ದೃಷ್ಟಿಯಿಂದ ಬರೆದ ಚರಿತ್ರೆಗಳು ರಮ್ಯವಾಗಬಹುದು; ಚರಿತ್ರನಾಯಕನ ಬಗ್ಗೆ ಒಂದು ಬಗೆಯ ವಿಲಕ್ಷಣವಿಸ್ಮಯವನ್ನು ವಾಚಕರಲ್ಲಿ ಹುಟ್ಟಿಸಬಹುದು. ಆದರೆ ಯಾವ ಕಾರ್ಯದ ಸಲುವಾಗಿ ಇಂಥವರ ಜನ್ಮವಿರುವುದೋ ಆ ಕಾರ್ಯಕ್ಕೆಯೆ ಈ ಬಗೆಯ ಚರಿತ್ರಗಳಿಂದ ಹಾನಿಯುಂಟಾಗುವುದು.” “ಮಹಾತ್ಮರು ಮಾಡಿದ ಚಮತ್ಕಾರಗಳಿಂದ ನಾವು ವಿಸ್ಮಿತರಾಗಿ ‘ಓಹೋ! ಆ ಸಾಮರ್ಥ್ಯವು ಯಾರಿಗೆ ಬಂದೀತು? ಅವರದು ಅವರಿಗೆ ನಮ್ಮದು ನಮಗೆ’ ಎಂದು ನಾವು ಇದ್ದಲ್ಲಿಯೇ ಇದ್ದು ಬಿಡುವೆವು.”

ಈ ಮಾತನ್ನು ಚೆನ್ನಾಗಿ ತಿಳಿದವರಾದುದರಿಂದಲೆ ಶ್ರೀ. ದಿವಾಕರರು, ಜನತೆಗೆ ಹೆಚ್ಚು ಉಪಯುಕ್ತವಾಗುವಂತೆ ಶ್ರೀರಾಮಕೃಷ್ಣರ ಆಧ್ಯಾತ್ಮಿಕಸಾಧನೆಯ ವಿವರಣೆಗೇ ವಿಶೇಷಮಹತ್ವವನ್ನು ಕೊಟ್ಟಿದ್ದಾರೆ. ಇವರು ಬರೆದುದು ಭೂಮಿಗಿಳಿದು ಬಂದ ದೇವನ ಚರಿತ್ರೆಯನ್ನಲ್ಲ; ಸಾಮಾನ್ಯ ಮಾನವನೇ ತನ್ನ ಸಾಧನೆಯ ಬಲದಿಂದ ದೇವಪದವಿಯನ್ನು ಪಡೆದುದರ ಕಥೆಯನ್ನು. ಬಡತನದಲ್ಲಿ ಹುಟ್ಟಿ ಬಡತನದಲ್ಲಿ ಬಳೆದು, ಕೊನೆಗೆ ನಿದ್ದೆಯಲ್ಲಿಕೂಡ ಹಣಹೊನ್ನುಗಳ ಸೋಂಕನ್ನು ಬಯ

CC-0. Jangamwadi Math Collection. Digitized by eGangotri

ಸದ ಮಹಾತ್ಮನ ಕಥೆಯನ್ನು. ಸರ್ವಸಮಾಜಕ್ಕೂ
ಆಧ್ಯಾತ್ಮಿಕಜೀವನದ ಪಾಠವನ್ನು ಕಲಿಸಲು ಹೊರಟ
ಸದ್ಗುರುವಿನ ಸತ್ಕಥೆಯನ್ನು.

'ರಾಮಕೃಷ್ಣರು ಮಾಡದಿದ್ದ ಆಧ್ಯಾತ್ಮಿಕಸಾಧನ
ವಿಲ್ಲ; ಮತ್ತು ಅವರು ಮಾಡಿದ ಸಾಧನದ ವಿವರಣಾ
ತ್ಮಕ ಇತಿಹಾಸವಿಲ್ಲದಿಲ್ಲ' ಎಂದು ಪ್ರಸ್ತಾವನೆಯಲ್ಲಿ
ಶ್ರೀ. ದಿವಾಕರರು ಹೇಳಿದ ಮಾತಿನ ಸತ್ಯತೆಯನ್ನು
ಶ್ರೀರಾಮಕೃಷ್ಣರ ಜೀವನಚರಿತ್ರೆಯನ್ನು ಓದಿಯೇ
ಕಂಡುಕೊಳಬೇಕು. 'ನಮ್ಮ ಧರ್ಮ ಹೆಚ್ಚು ತಮ್ಮ
ಧರ್ಮ ಹೆಚ್ಚು' ಎಂದು ಸುಮ್ಮಸುಮ್ಮನೆ ವಾದಬಳೆ
ಯಿಸುವವರು,ಸರ್ವಧರ್ಮಗಳ ಸಮನ್ವಯವನ್ನು ಸಾಧ
ನೆಯಿಂದ ಕಂಡುಕೊಂಡು ಅನುಷ್ಠಾನದಲ್ಲಿ, ತಂದ ಈ
ಮಹಾತ್ಮರ ಚರಿತ್ರವನ್ನು ಅಭ್ಯಾಸಿಸಿದರೆ, ವ್ಯರ್ಥವಾದ
ಧಾರ್ಮಿಕಕಲಹಗಳು ಅಡಗದಿರವೆಂದು ನಮ್ಮ ಖಂಡಿತ
ವಾದ ಭಾವನೆ.

ಶ್ರೀರಾಮಕೃಷ್ಣರಿಗೂ ಹಳೆಯಧರ್ಮದ ಹುಚ್ಚು
ಇರಲಿಲ್ಲವೆಂತಲ್ಲ. ರಾಣೀ ರಾಸಮಣಿಯು ಶೂದ್ರಸ್ತ್ರೀ
ಯೆಂದು ಅವಳ ಆಶ್ರಯವನ್ನು ಮೊದಮೊದಲು ನಿರಾಕ
ರಿಸಿದರು. ಮನೆಯನ್ನು ಬಿಟ್ಟು- ಧರ್ಮರಕ್ಷಣೆಗೆಂದು
ಹೊಳೆಯ ದಂಡೆಯಮೇಲೆ, ಅನ್ನವನ್ನು ತಾವೇ ತಮ್ಮ
ಕೈಯಿಂದ ಕುದಿಸಿಕೊಂಡು ತಿಂದರು. ಆದರೆ ಅದೇ
ರಾಮಕೃಷ್ಣರು ಮುಂದೆ, ಕ್ರೈಸ್ತಧರ್ಮ- ಮಹಮ್ಮ
ದಿಯಧರ್ಮಗಳ ಆಚಾರಗಳನ್ನು ಆಚರಿಸಲಿಕ್ಕೆ ಹಿಂದೆ
ಮುಂದೆ ನೋಡಲಿಲ್ಲ. ಭಕ್ತಿಯ ಆವೇಶದಲ್ಲಿ ರಾಧೆ
ಯಾಗಿ-ತಾನು ಗಂಡುಸಿದ್ದೇನೆಂಬುದನ್ನು ಮರೆತ ರಾಮ
ಕೃಷ್ಣರು, ತಂತ್ರಸಾಧನೆಗಾಗಿ ಬ್ರಾಹ್ಮಣಿಯ ಹೇಳಿಕೆ
ಯಂತೆ ಬೇಕಾದಂತಹ ವಾಮಾಚಾರಗಳನ್ನೂ ಆಚರಿಸಿ
ದರು. ಇವರ ಚರಿತ್ರೆಯೆಂದರೆ ಪೂರ್ಣವಿಕಾಸವನ್ನು
ಪಡೆದ ಮಾನವಜೀವಿಯದೊಂದು ಚರಿತ್ರೆ. ಪ್ರಪಂಚಕ್ಕೆ
ಪ್ರಪಂಚವೇ ಶ್ರೀರಾಮಕೃಷ್ಣರನ್ನು ಹಾಡಿಹೊಗಳು
ತ್ತಿದೆ. ಮಿ. ರೋಮಾಂ ರೋಲಾನಂತಹ ಫ್ರಾನ್ಸ್
ದೇಶದ ತತ್ವವಿದನೊಬ್ಬನು ಅವರ ಜೀವನದ ಹುರುಳನ್ನು
ಜಗತ್ತಿನೆದುರಿಗೆ ಇಡಲುತೊಡಗಿದ್ದಾನೆ. ನಮ್ಮ ಕನ್ನಡಿ
ಗರಿಗೂ ಅಂತಹ ಜೀವರತ್ನದ ಪರಿಚಯವು ಅವಶ್ಯವಾಗಿ
ಆಗಬೇಕಾಗಿದೆ. ಆದರೆ ಇಂತಹವರ ಪರಿಚಯಮಾಡಿಕೊ
ಡುವವರಲ್ಲಿಯೂ ಒಂದು ಬಗೆಯ ವಿಶೇಷವಾದ ಅಧಿಕಾರ
ವಿರಬೇಕಾಗುತ್ತದೆ. ಶ್ರೀ. ದಿವಾಕರರು ಈ ಮೊದಲೆ
ತಮ್ಮ 'ಉಪನಿಷತ್‌ಪ್ರಕಾಶ' 'ಗೀತೆಯ ಗುಟ್ಟು' ಉಪ
ನಿಷದ್ರಹಸ್ಯ' ಮೊದಲಾದ ಕೃತಿಗಳಿಂದ ತಮ್ಮಲ್ಲಿರುವ
ಆ ವಿಶೇಷಾಧಿಕಾರವನ್ನು ಜನತೆಗೆ ಮನಗಾಣಿಕೆ ಮಾಡಿ
ಕೊಟ್ಟಿದ್ದಾರೆ.

ಈ ಗ್ರಂಥದಲ್ಲಿ ನಾಲ್ಕು ಮುಖ್ಯಭಾಗಗಳನ್ನು ಮಾಡಿ
ದ್ದು, ಮೊದಲನೆಯ ಭಾಗವು ಶ್ರೀರಾಮಕೃಷ್ಣರ ಚರಿತ್ರೆ
ಯನ್ನೊಳಗೊಂಡಿದೆ. ಎರಡನೆಯ ಭಾಗವು ಅವರ ಆಧ್ಯಾ
ತ್ಮಿಕಸಾಧನೆಯ ರೀತಿಯನ್ನು ವಿವರಿಸುತ್ತದೆ. ಮೂರ
ನೆಯ ಭಾಗದಲ್ಲಿ ಶ್ರೀರಾಮಕೃಷ್ಣರ ಸಿದ್ಧಾವಸ್ಥೆಯ ವಿವ
ರಣೆಯಿದೆ. ನಾಲ್ಕನೆಯ ಭಾಗವು ಅವರ ಉಪದೇಶ-
ವಚನ-ಕಥೆಗಳಿಂದಕೂಡಿದೆ.ಕೊನೆಗೆಪರಿಶಿಷ್ಟರೂಪವಾಗಿ,
ಶ್ರೀರಾಮಕೃಷ್ಣರ ಪಟ್ಟಶಿಷ್ಯರಾದ ಶ್ರೀವಿವೇಕಾನಂದರ
**'ಹಿಂದೂಧರ್ಮ ಮತ್ತು ಶ್ರೀರಾಮಕೃಷ್ಣರು'** ಎಂಬ
ಉಪನ್ಯಾಸದ ಅನುವಾದವಿದೆ. ಶ್ರೀ. ದಿವಾಕರರು ಬರೆದ
ಇಲ್ಲಿಯ ಭಾಷೆಯು ಅಖಿಲಕರ್ನಾಟಕಕ್ಕೂ ಒಪ್ಪಿಗೆ
ಯಾಗುವುದರಲ್ಲಿ ಸಂದೇಹವಿಲ್ಲ. ಮುದ್ರಣವೂ ಕಟ್ಟೂ
ಅಂದವಾಗಿವೆ. ಸುಮಾರು ೩೭೫ ಪುಟಗಳುಳ್ಳ ಈ ಪುಸ್ತ
ಕಕ್ಕೆ ಒಂದೇ ರೂಪಾಯಿ ಬೆಲೆಯೆಂದರೆ ತುಂಬ ಸುಲಭ
ಬೆಲೆಯೆಂದೇ ಹೇಳಬೇಕು. ಓದಬಲ್ಲ ಪ್ರತಿಯೊಬ್ಬ ಕನ್ನಡಿ
ಗನ ಬಳಿಯಲ್ಲಿಯೂ **'ಶ್ರೀರಾಮಕೃಷ್ಣ ಚರಿತಾ
ಮೃತವು'** ಇರಬೇಕು.

ಕೃ. ಶ್ರೀ. ಬೆ.

CC-0. Jangamwadi Math Collection. Digitized by eGangotri




## ಜೋಗುಳ ಹಾಡುಗಳು

( ಮೈಸೂರುದೇಶದಲ್ಲಿ ಪ್ರಚಾರದಲ್ಲಿದ್ದುವುಗಳು )

ಸಂಗ್ರಾಹಕರು:— ಶ್ರೀಮತಿ ಶಾರದಮ್ಮ, ಬೆಂಗಳೂರು.

ಅಳಿಯನರಮನೆಗಿಂತ ಮಗನ ಹಂದರ ಲೇಸು
ಹೆರವರನುಕಾಡಿ ತಿರಿತಂಡ ಶಾಲ್ಗಿಂತ
ಕರಿಯಕಂಬಳಿಯು ಕಡುಲೇಸು ॥೧॥

ಅತ್ತಿsಗೆ ತವರಲ್ಲ ಹಿತ್ತಾಳೆ ಕೊಪ್ಪಲ್ಲ
ಹತ್ತೆವೆಮ್ಮೆ ಹೈನು ಧನವಲ್ಲ ಹೆಣ್ಮಕ್ಕಳಿಗೆ
ಹುಟ್ಟೀದ ಮನೆಯು ಸ್ಥಿರವಲ್ಲ ॥೨॥

ಆಳಿಯ ಬಂದನು ಎಂದು ಬಿಳಿಯ ಹಚ್ಚಡ ತಂದು
ಎಳೆಪ್ರಾಯವುಳ್ಳ ಹುಡುಗೀಯ ಇತ್ತಾರು
ಹರಳುಂಗುರೆಂದು ಮುನಿದಾನು ॥೩॥

ಅಂಜೋರು ಬೆಚ್ಚೋರು ಅಂಗಳಕೆ ಬರಬೇಡಿ
ಕೆಂಗಣ್ಣು ಮೀಸೆ ಕುಡಿಹುಬ್ಬು ನರಸಿಂಹ
ಸಂಜೆಗಾವಲಿಗೆ ಬರುತಾನೆ ॥೪॥

ಅಳುವ ಕಂದನ ಬಾಯಿ ಹವಳದ ಕುಡಿಯಂತೆ
ಕುಡಿಹುಬ್ಬು ಬೇವಿನೆಸಳಂತೆ
ಕುಡಿಹುಬ್ಬು ಬೇವಿನೆಸಳು ಕಂಗಳ ಥಾಳ
ಶಿವನ ಕೈಯಲಗು ಹೊಳದಂತೆ ॥೫॥

ಅಳುಬುರುಕಿ ಅಚ್ಚಮ್ಮಗೆ ತಳಿಗೇಲಿ ಪಾಯಸ
ಕರದಲ್ಲಿ ಮೂರು ಅರಳುಂಡೆ ಕೊಟ್ಟರೆ
ಅದು ಸಾಲದೆಂದು ಅಳುತಾಳೆ ॥೬॥

ಅತ್ತಾಳು ಕರದಾಳು ಮತ್ತೇನು ಬೇಡಿಯಾಳು
ಮೆತ್ತಾನವೆರಡು ಹುಳಿದೋಸೆ ಕೊಟ್ಟಾರೆ
ಗಪ್ಪುಚಿಪ್ಪಾಗಿ ಮಲಗೋಳು ॥೭॥

ಕೊರಳಿಗರಳೆಲೆ ಬೇಕು ಬೆರಳಿಗುಂಗುರ ಬೇಕು
ಮುಗುವಿಗೇ ಬೇಕು ಮಾಗಾಯಿ ನನ್ನಯ್ನ
ನಡುವಿಗೆ ಬೇಕು ಉಡಿದಾರ ॥೮॥

ಅಂಗಳಿಗೆ ಅಗುಳಾಸೆ ತಂಗಳಿಗೆ ಮೊಸರಾಸೆ
ಹೆಂಗಳಿಗೆ ತೌರುಮನೆಯಾಸೆ ನನ್ನಮ್ಮ
ನಿನ್ನಾಸೆ ನನಗೆ ಅನುಗಾಲ ॥೯॥

ಅತ್ತಿಗೆ ನಾನಿನ್ನ ಹೆತ್ತತಾಯಿ ಎನುತಿದ್ದೆ
ಹಿತ್ತಲಲಿ ಬೆಳೆದ ಬದನೇಯ ಮುಳ್ಳಿನಂತೆ
ಚುಚ್ಚುsವಳೆಂದು ಅರಿಯೇನೆ ॥೧೦॥

ಅಕ್ಕನೂರು ಆಲೂರು ತಂಗಿಯೂರು ಬೇಲೂರು
ಚಿಕ್ಕಕ್ಕನೂರು ಕುಣಿಗಲು ಕೊಳ್ಳೆಗಾಲ
ಹೊಕ್ಕು ಬಾರೈಯ್ಯ ಬಳೆಯೋನೆ ॥೧೧॥

ಅಂಗಿಯಾ ಮೇಲಂಗಿ ಶೃಂಗಾರದ ನಡುಕಟ್ಟು
ತಂಗಿಮನೆಗ್ಹೋಗಿ ಬರುವಾಗ ನನ್ನೈಯ್ಯನ
ಉಂಗುರವು ಬಿಸಲಿಗ್ಹೊಳದಾವು ॥೧೨॥

ಆಡೊ ಮಕ್ಕಳಿರ ನನ್ನರಗಿಣಿಯ ಕಾಣೀರ
ಕಂಡ ಮಕ್ಕಳಿರ ಕರತನ್ನಿ ನನ್ನೈಯ್ಯ
ಉಂಡ್ಹೋಗಲಿಲ್ಲ ಹಸಿದಾನು ॥೧೩॥

ಆಯುಸ್ಸು ಹೆಚ್ಚಾಗಲಿ ಅಪಮೃತ್ಯು ತೊಲಗಲಿ
ಯಾರು ಕಂಡವರು ಹರಸಲಿ ಈ ಮಗುವಿಗೆ
ದೀರ್ಘಾಯುಸ್ಸೆಂಬ ಹರಕೆಯ ॥೧೪॥

CC-0. Jangamwadi Math Collection. Digitized by eGangotri




ಸಂಗ್ರಾಹಕರು:— ಶ್ರೀ. ದ. ಕೃ. ಭಾರದ್ವಾಜ ಎಂ. ಡಿ. ( ಆಯುರ್ವೇದ ) ಬೆಂಗಳೂರು.

## ಜಪಾನಿನಲ್ಲಿ ಸೇವಕರ ಸ್ಥಾನ

ಜಪಾನಿನಲ್ಲಿ ಸ್ತ್ರೀಪುರುಷರು ಸಾಮಾನ್ಯವಾಗಿ ಬೇರೆಯವರ ಮೇಲೂ ಅವಲಂಬಿಸಿಕೊಂಡಿರುವುದಿಲ್ಲ. ತಮ್ಮ ಸ್ವಂತ ಚರಿತಾರ್ಥಕ್ಕೆ ಸಾಕಾದಷ್ಟು ಕೆಲಸವನ್ನು ಪ್ರತಿಯೊಬ್ಬರೂ ಮಾಡಲೇಬೇಕು – ಎಂಬುದು ಜಪಾನರ ಮುಖ್ಯ ತತ್ವವು. ದೊಡ್ಡ ಮನುಷ್ಯರ ಮನೆಗಳಲ್ಲಿ ಕೂಡ ಆಳುಗಳನ್ನು ಕೂಲಿಗಳಂತೆ ಅಥವಾ ಗುಲಾಮರಂತೆ ದುಡಿಸಿಕೊಳ್ಳುವುದಿಲ್ಲ. ಸೇವಕರೆಂದರೆ ಸಹಾಯಕರು ಎಂದು ಜಪಾನಿಗಳು ತಿಳಿದಿರುವರು. ಮನೆಯಲ್ಲಿ ತಂಗಳು ಗಿಂಗಳು ಉಳಿದರೆ ಅದನ್ನು ನಮ್ಮಂತೆ ಜಪಾನಿಗಳು ಆಳುಕಾಳುಗಳಿಗೆ ಕೊಡಕೂಡದು. ಯಜಮಾನನ ಸಹಾಯಕರು–ಎಂಬ ದರ್ಜೆಯಲ್ಲಿ ಸೇವಕರನ್ನಿಟ್ಟಿರುವುದರಿಂದ ಮಾಲಿಕರು ತಿಂದುಳಿದ ಅನ್ನವನ್ನು ಸ್ವೀಕರಿಸುವುದು ಸೇವಕರಿಗೆ ಅಪಮಾನಾಸ್ಪದವಾಗಿದೆ. ಕೆಲವು ಜನ ಶ್ರೀಮಂತರ ಕುಟುಂಬಗಳನ್ನು ಬಿಟ್ಟು ಇತರ ಕುಟುಂಬಗಳಲ್ಲಿ ಸೇವಕರು ಯಜಮಾನನೊಂದಿಗೆ ಕುರ್ಚಿಗಳ ಮೇಲೆ ಕುಳಿತು ಊಟಮಾಡುವರು. ಜಪಾನಿಗಳ ಸೇವಕರ ಸ್ಥಿತಿಯನ್ನು ನಮ್ಮ ಸೇವಕರ ಹೀನ ಅವಸ್ಥೆಯೊಂದಿಗೆ ಹೋಲಿಸಿ ನೋಡಿದರೆ ಹೃದಯವು ಕಾತರಗೊಳ್ಳದಿರದು.

—ಕುಮಾರ (ಗುಜರಾತಿ)

## ಜಹಾನ್ ಆರಾ

ಇವಳು ಷಹಾಜಹಾನ್ ಚಕ್ರವರ್ತಿಯ ಅನುಪಮ ಸುಂದರಿಯೂ ಆಜ್ಞಾಧಾರಕಳೂ ಆದ ಮಗಳಾಗಿದ್ದಳು. ಔರಂಗಜೇಬ ಚಕ್ರವರ್ತಿಯು ರಾಜ್ಯದಾಸೆಯಿಂದ ತನ್ನ ತಂದೆಯನ್ನು ( ಷಹಾಜಹಾನನ್ನು ) ಕಾರಾಗೃಹದಲ್ಲಿಟ್ಟಾಗ ಪಿತೃಪ್ರೇಮಪರಾಯಣಳಾದ ಈ ಹುಡುಗಿಯು ತನ್ನ ತಂದೆಯೊಂದಿಗೆ ಕಾರಾಗೃಹದಲ್ಲಿ ವಾಸಿಸುತ್ತ ಅವನ ಶುಶ್ರೂಷೆಯನ್ನು ಮಾಡುತ್ತಿದ್ದಳು. ಈಕೆಯು ಫಾರಸೀ ಭಾಷೆಯಲ್ಲಿ ಸುಂದರವಾದ ಕವಿತೆಗಳನ್ನು ರಚಿಸಿರುವಳು. ಔರಂಗಜೇಬನು ಕಾರಾಗೃಹದಲ್ಲಿದ್ದ ತನ್ನ ತಂದೆಗೆ ನೀರು ಕೂಡ ಸಿಕ್ಕದಂತೆ ಮಾಡಿರುವಾಗ, ಔರಂಗಜೇಬನನ್ನು ಉದ್ದೇಶಿಸಿ, ಆಕೆ ಒಂದು ಕವಿತೆಯನ್ನು ರಚಿಸಿ, ಅದರ ಒಂದು ಪದ್ಯದಲ್ಲಿ ಹೀಗೆ ಹೇಳಿರುವಳು – "ಎಲೋ ಔರಂಗಜೇಬಾ, ತಂದೆಯು ಮೃತನಾದನಂತರವೂ ಅವನಿಗೆ ತರ್ಪಣದ ಮೂಲಕ ನೀರನ್ನು ಕೊಡುವ ಹಿಂದುವೇ ಧನ್ಯನಲ್ಲವೆ? ನೀನು ನಿಜವಾದ ಮುಸಲ್ಮಾನನಾಗಿದ್ದರೂ, ಜೀವಂತನಾಗಿರುವ ನಿನ್ನ ತಂದೆಗೆ ನೀರು ಕೂಡ ಕೊಡದೇ ಕಷ್ಟಪಡಿಸುತ್ತಿರುವೆಯಲ್ಲ." – ಮತ್ತೊಂದು ಸಮಯದಲ್ಲಿ ಅವಳ ದಾಸಿಯೊಬ್ಬಳು ಅಮೌಲ್ಯವಾದ ದೊಡ್ಡ ಕನ್ನಡಿಯೊಂದನ್ನು ತರುತ್ತಿರುವಾಗ ಎಡಹಿಬಿದ್ದು, ಕನ್ನಡಿಯು ಒಡೆದುಹೋಯಿತು. ಇನ್ನು ತನ್ನ ಯಜಮಾನಿಯು ಏನೆನ್ನುವಳೊ– ಎಂದು ಅವಳು ಭೀತಿಯಿಂದ ನಡುಗುತ್ತ, ಜಹಾನ್ ಆರಾಳ ಎದುರಿಗೆ ನಿಂತಳು. ಜಹಾನ್ ಆರಳು – 'ಏನಾಯಿತು?' ಎಂದು ಕೇಳಲು ದಾಸಿಯು ನಡೆದ ಸಂಗತಿಯನ್ನು ಹೇಳಿದಳು. ಅದನ್ನು ಕೇಳಿ ಜಹಾನ್ ಆರಳು ನಕ್ಕು – "ಲೇ, ಒಳ್ಳೆಯದಾಯಿತು ಬಿಡೆ! ಅಹಂಕಾರವನ್ನು ಹೆಚ್ಚಿಸುವ ಒಂದು ಸಾಧನವು ನಷ್ಟವಾಯಿತು. ಅಷ್ಟೆ!" ಎಂದುಬಿಟ್ಟಳು. ಈ ವಾಕ್ಯದಲ್ಲಿ ಎಂತಹ ಅರ್ಥವಡಗಿರುವುದು!

—ಸುಧಾ ( ಹಿಂದಿ )

## ಸಾಹಿತ್ಯನಿರ್ಮಾಣದ ನಿಜವಾದ ಅಧಿಕಾರಿಗಳು

ಪೂರ್ವಕಾಲದಲ್ಲಿ ಆಧ್ಯಾತ್ಮಿಕ ಉನ್ನತಿಶಿಖರವನ್ನಡ



CC-0. Jangamwadi Math Collection. Digitized by eGangotri

ರಿದ ಜ್ಞಾನಿಗಳು, ಏಕಾಂತದಲ್ಲಿ ಕುಳಿತುಕೊಂಡು ಗ್ರಂಥ ರಚನೆಯನ್ನು ಮಾಡುತ್ತಿದ್ದರು. ತಮ್ಮ ಅನುಭವದ ಲಾಭವು ಮುಂದಿನ ಪೀಳಿಗೆಯವರಿಗೆ ಆಗಬೇಕೆಂದು ಉಚ್ಚಹೇತುವನ್ನು ಮನಸ್ಸಿನಲ್ಲಿಟ್ಟುಕೊಂಡು ಅವರ ವಾಙ್ಮಯನಿರ್ಮಿತಿಯಾಗುತ್ತಲಿತ್ತು. ಈ ಕಾರಣದಿಂದ ಗ್ರಂಥಕರ್ತರು ತಮಗೆ ಉಪಕಾರ ಮಾಡುವ ಮಹಾತ್ಮರೆಂಬ ಪೂಜ್ಯಭಾವನೆಯು ಜನರ ಮನಸ್ಸಿನಲ್ಲಿತ್ತು. ಈ ಬಗೆಯ ಉಪಕಾರಿಗಳೂ ಉದಾತ್ತಹೇತು ಪ್ರೇರಿತರೂ ಆದ ಗ್ರಂಥಕಾರರು ಯಾವಾಗಲಾದರೂ ಅಲ್ಪಸಂಖ್ಯಾಕರೇ ಆಗಿರುವರು. ಎಂದರೆ ವಾಙ್ಮಯನಿರ್ಮಾಣವು ಅಲ್ಪಪ್ರಮಾಣದಲ್ಲಿ ಆಗುತ್ತಿತ್ತು. ಆದರೆ ಅದು ಉಚ್ಚವರ್ಗದ್ದಾಗಿರುತ್ತಿತ್ತು. ಕಾಲಕ್ರಮೇಣ ಈ ಸ್ಥಿತಿಯು ಬದಲಾಯಿಸಿ, ವಾಙ್ಮಯನಿರ್ಮಿತಿಯು ಕೇವಲ ಮನೋರಂಜನೆಗಾಗಿ ಆಯಿತು. ಆಧ್ಯಾತ್ಮಿಕತಪೋಧನವು ಇಲ್ಲದಿದ್ದರೂ ಬರೆಹಬಲ್ಲ ನೂರಾರು ಜನ ಲೇಖಕರು ಹುಟ್ಟಿದರು. ಸಾವಿರಗಟ್ಟಲೆಯಾಗಿ ಪುಸ್ತಕಗಳು ಹೊರಬೀಳಲಾರಂಭಿಸಿದುವು. ಇಂದಿನ ಅವಸ್ಥೆಯೂ ಇದೇ ಆಗಿದೆ. ಇಂದು ವಾಚಕರಿಗಿಂತಲೂ ಲೇಖಕರ ಸಂಖ್ಯೆಯೆ ಹೆಚ್ಚಾಗಿರುವುದೆಂದರೆ ಅತಿಶಯೋಕ್ತಿಯಾಗದು. ಈ ಬಗೆಯ ಅನಧಿಕಾರಿಗಳಾದ ಲೇಖಕರ ಅಭಿಪ್ರಾಯದ ಮುದ್ರೆಯು ಸಮಾಜದ ಮೇಲೆ ಹೇಗೆ ಬೀಳಬೇಕು? ಭಗವಾನ್ ಶ್ರೀಕೃಷ್ಣನು ಶ್ರೇಷ್ಠನಾದ ಕರ್ಮಯೋಗಿಯಾದುದರಿಂದ, ಅವನ ಉಪದೇಶದಿಂದ ಅರ್ಜುನನ ಮೋಹನಿರಸನವಾಯಿತು. ಇಂದು ಅರ್ಜುನನಂತಹ ಜಿಜ್ಞಾಸುವು ದೊರೆಯುವುದು ದುರ್ಲಭ. ಒಂದುವೇಳೆ ದೊರೆತರೂ ಅವನಿಗೆ ಗೀತೆಯನ್ನು ಹೇಳುವ ಶ್ರೀಕೃಷ್ಣನು ದೊರೆಯುವದಂತೂ ಅತಿ ದುರ್ಲಭವು. ಇಂದಿನ ಶ್ರೀಕೃಷ್ಣರು ಕ್ರಿಯಾಶೂನ್ಯರಾದ ಉಪದೇಶಕರಾಗಿರುವರು. ಈ ಸ್ಥಿತಿಯು ಬದಲಾಯಿಸಬೇಕಾದರೆ 'ಕೆಲಸ ಮೊದಲು, ಮಾತು ಆ ಮೇಲೆ' ಎಂಬ ನ್ಯಾಯದಂತೆ ಸಾಹಿತ್ಯಸೇವಕರು ತಮ್ಮ ಆಧ್ಯಾತ್ಮಿಕಉನ್ನತಿಯನ್ನು ಸಾಧಿಸಿಕೊಂಡು, ಮನೋರಂಜನೆಯೊಂದನ್ನೇ ಸಾಹಿತ್ಯನಿರ್ಮಿತಿಯ ಧ್ಯೇಯವಾಗಿಟ್ಟುಕೊಳ್ಳದೆ, ಗ್ರಂಥರಚನೆಯನ್ನು ಮಾಡಬೇಕು. ಪ್ರಾಚೀನಲೇಖಕರಂತೆಯೆ ಅವರ ಹೆಸರೂ ಅವರ ಗ್ರಂಥಗಳೂ ಅಜರಾಮರವಾಗುವುವು.

—ನಾರಾಯಣ ( ಹಿಂದೀ )

## ಪ್ರಾಚೀನಭಾರತದ ಕಲೆ

ಹಿಂದುಸ್ಥಾನದ ಪ್ರಾಚೀನಜನರಲ್ಲಿ ಸಮಾಜ ಮತ್ತು ಧರ್ಮಗಳಿಗೋಸ್ಕರ ಸ್ವಂತಪ್ರತಿಷ್ಠೆಯನ್ನೂ ಸ್ವಂತ ಲೌಕಿಕವನ್ನೂ ಒಂದು ಬದಿಗಿಡಬೇಕು - ಎಂಬ ತತ್ತ್ವವು ಮನೆಮಾಡಿತ್ತೆಂದು ಹೇಳಬಹುದು. ಹಾಗೆಂದರೆ ಆ ಕಾಲದಲ್ಲಿ ಪ್ರತಿಯೊಂದು ವ್ಯಕ್ತಿಯಲ್ಲಿ ವೈಶಿಷ್ಟ್ಯವಿರಲಿಲ್ಲವೆಂದಲ್ಲ. ಆದರೆ ಆ ವೈಶಿಷ್ಟ್ಯವನ್ನು ಸಮಾಜಕ್ಕಾಗಿ ಮೂಲೆಯಲ್ಲಿರಿಸಬೇಕೆಂಬ ವೃತ್ತಿಯು ಇದ್ದಂತೆ ಕಂಡುಬರುವುದು. ಈ ವಿಚಾರವು ಆ ಕಾಲದ ಕಲಾಕೃತಿಯಿಂದಲೂ ವ್ಯಕ್ತವಾಗುವಂತಿದೆ. ಆ ಕಾಲದ ಕಲ್ಲಿನಲ್ಲಿ ಕೊರೆದ ಗುಡಿಗಳನ್ನು ನೋಡಿರಿ. ಆ ಗುಡಿಗಳನ್ನು ಕೊರೆಯಲು ನೂರಾರು ಜನರಲ್ಲ; ಸಾವಿರಾರು ಜನರು ಸೇರಿ ಕೆಲಸ ಮಾಡಿರಬೇಕು. ಒಬ್ಬ ಮನುಷ್ಯನೇ ಹೆಸರನ್ನು ಸಂಪಾದಿಸಲು ಕೆಲಸಮಾಡಿದ್ದರೆ, ಸ್ವಲ್ಪ ಸ್ಥಳದಲ್ಲಿ ಎಷ್ಟೋ ಬುದ್ಧಿವಂತಿಕೆಯನ್ನು ತೋರಿಸುತ್ತಿದ್ದನು. ಆದರೆ ಅಂತಹ ಪ್ರಚಂಡ ಗುಹಾಲಯಗಳು ಒಬ್ಬನ ಕೈಯಿಂದಾಗುವುದು ಸಾಧ್ಯವೆ? ಅಂತಹ ದೊಡ್ಡ ಕೆಲಸವನ್ನು ಮಾಡಲು, ನೂರಾರು ಜನ ಶ್ರೇಷ್ಠಕಲಾವಿದರು ಆ ಸ್ಥಳದಲ್ಲಿ ಸೇರಿ ಕೆಲಸವನ್ನು ಪೂರೈಸುತ್ತಿದ್ದರು. ಆದುದರಿಂದ ಆ ಕಾಲದ ಶ್ರೇಷ್ಠ ಕೆಲಸವು ಮಾತ್ರ ಹಿಂದುಳಿಯಿತು. ಆದರ ನಿರ್ಮಾಣಕಾರರ ಹೆಸರು ಕೂಡ ಸಿಕ್ಕುವುದು ಕಷ್ಟವಾಗಿದೆ. ಆದರಂತೆಯೆ ಶಿಲ್ಪಶಾಸ್ತ್ರದ ಶಿಕ್ಷಣಕ್ಕೆ ಒಂದು ಕ್ರಮವಾದ ಮಧ್ಯವರ್ತಿ ವಿದ್ಯಾಲಯವಿಲ್ಲದೆಯೂ ಆ ಯುಗದಲ್ಲಿ ತಯಾರಾದ ಶಿಲ್ಪಕೃತಿಗಳು ಒಂದು ಪದ್ಧತಿಯನ್ನನುಸರಿಸಿದುವಾಗಿರುವವು. ರಜಪುತಾನ ಮತ್ತು ಗುಜರಾತ ಮೊದಲಾದ ಸ್ಥಳಗಳಲ್ಲಿ ದೊರೆಯುವ ಬುದ್ಧನ ಅಥವಾ ಶಂಕರನ ಪ್ರತಿಮೆಗಳು ಸಾಮಾನ್ಯವಾಗಿ ಒಂದೇ ಬಗೆಯುವಾಗಿರುವವು. ಇದರಿಂದ ಆ ಕಾಲದ ಕಲಾವಿದರೆಲ್ಲರೂ ಒಂದೇ ಭಾವನೆ, ಒಂದೇ ಕಲ್ಪನೆ ಮತ್ತು ಒಂದೇ ಧ್ಯೇಯವನ್ನು ಹೇಗೆ ವ್ಯಕ್ತಪಡಿಸುತ್ತಿದ್ದರೆಂಬುದು ಸ್ಪಷ್ಟವಾಗುವುದು. ಪ್ರಾಚೀನ ಭಾರತವು ಧ್ಯೇಯದೃಷ್ಟಿಯಿಂದ ಅಖಂಡವಾಗಿದ್ದಿತು.

—Triveni

## ಓಡುತ್ತಿರುವಜಗತ್ತು

ವಿಶಾಲವಾದ ಮರಳಿನ (ಉಸುಕಿನ) ಮರುಭೂಮಿ

CC-0. Jangamwadi Math Collection. Digitized by eGangotri

ಯಲ್ಲಿ ಯಾವುದೊ ಒಂದು ಕಣದಂತೆ, ಆ ಅನಂತವಾದ ಆಕಾಶದಲ್ಲಿ ನಮ್ಮ ಪೃಥ್ವಿಯು ಇರುವುದು. ಒಟ್ಟಿನಲ್ಲಿ ಎಲ್ಲ ಗ್ರಹಮಾಲೆಗಳೂ ನಕ್ಷತ್ರಗಳೂ ವಾಯುವೇಗ ದಿಂದ ಎಲ್ಲಿಗೋ ಹೋಗುತ್ತಿವೆ. ಸಾಬೂನಿನ (ಸಾಬಣದ) ಬುರುಗಿನ ಗುಳ್ಳೆಗಳನ್ನು ಊದಿದರೆ ಅವು ಹಾರಿಹೋಗು ವಂತೆ ಲಕ್ಷಾಂತರ ಗ್ರಹತಾರೆಗಳು ಎಲ್ಲಿಗೋ ಓಡಿ ಹೋಗುತ್ತಿರುವವು. ಮೌಂಟ್ ವಿಲ್ಸನ್ ಎಂಬ ದೊಡ್ಡ ದೂರದರ್ಶಕಯಂತ್ರದಿಂದ, ಪೃಥ್ವಿಯಿಂದ ಬಹು ಬಹು ದೂರದಲ್ಲಿರುವ ನಕ್ಷತ್ರಗಳ ಪ್ರಕಾಶದ ಕಿರಣಗಳು ನಮ್ಮ ಪೃಥ್ವಿಗೆ ಬಂದು ಸೇರಲು ೧೪ ಕೋಟಿ ವರುಷ ಗಳು ಬೇಕಾಗುವವೆಂದು ತಿಳಿದುಬಂದಿದೆ! ನಮ್ಮಿಂದ ೯ ಕೋಟಿ ಮೈಲು ದೂರದಲ್ಲಿರುವ ಸೂರ್ಯಪ್ರಕಾಶವು ಬರುವುದಕ್ಕೆ ಕೇವಲ ಎಂಟೇ ನಿಮಿಷಗಳು ಸಾಕಾಗು ವವು. ಇದರಿಂದ ಮೇಲೆ ಹೇಳಿದ ಗ್ರಹತಾರೆಗಳು ಎಷ್ಟು ದೂರದಲ್ಲಿರುವವೆಂಬುದನ್ನು ಕಂಡು ಹಿಡಿಯಬಹುದು. ತಿರುಗುತ್ತಿರುವ ಒಂದು ಪ್ರಕಾಶದ ಸಹಾಯದಿಂದ ನಾವು ಆ ಗ್ರಹತಾರೆಗಳನ್ನು ನೋಡಬಹುದು. ಆ ಪ್ರಕಾಶವು ಸಂಚರಿಸಲಾರಂಬಿಸಿದಾಗ ಮಾನವಜಾತಿಯೆ ಹುಟ್ಟಿರಲಿಲ್ಲ. ಆಗ ಸಮಗ್ರಪೃಥ್ವಿಯು ಬೇರೆ ಬೇರೆ ಭಯಂಕರವಾದ ಪ್ರಾಣಿಗಳಿಂದ ತುಂಬಿಹೋಗಿತ್ತು. ಅನಂತರ ಪೃಥ್ವಿಯಲ್ಲಿ ಇಷ್ಟು ಬದಲಾವಣೆಗಳಾಗಿದ್ದರೂ ಆ ಪ್ರಕಾಶದ ಸಂಚಾರಗತಿಯು ಏಕರೀತಿಯಾಗಿರು ವುದು. ಆ ಪ್ರಕಾಶದ ಸಹಾಯದಿಂದ ನಮಗೆ ಕಂಡು ಬರುವ ಇತರ ಗ್ರಹಗಳಾದರೂ ನಿಮಿಷಕ್ಕೆ ಎಷ್ಟೋ ಲಕ್ಷ ಮೈಲುಗಳ ವೇಗದಲ್ಲಿ ಸಂಚರಿಸುತ್ತಿರುವವು. ಈ ಸಂಧ್ಯವು ಎಂದು ಆರಂಭಿಸಿತು, ಯಾವಾಗ ನಿಲ್ಲುವುದು— ಎಂಬುದೇ ದೊಡ್ಡ ಸಮಸ್ಯೆಯಾಗಿದೆ.

—Morning Post

## ಸ್ನಾನವಿಲ್ಲದ ಮಹಾತ್ಮರು

ಹಿಂದುಧರ್ಮದಲ್ಲಿ ತ್ರಿಕಾಲಸ್ನಾನವನ್ನು ಮಾಡ ಬೇಕೆಂಬ ವಿಧಿಯಿದೆ. ಆದರೆ ಸ್ನಾನವನ್ನು ಬಿಟ್ಟಂತೆ ಪುಣ್ಯವು ಹೆಚ್ಚುವುದೆಂಬ ನಂಬಿಕೆಯುಳ್ಳ ಜಾತಿಗಳೂ ಹಿಂದುಸ್ಥಾನದಲ್ಲಿ (ಟಿಬೇಟಿನಲ್ಲಿ) ಇವೆ. ಆ ಜಾತಿಗಳ ಲ್ಲೊಂದರ ಧರ್ಮಗುರುವಿನ ಮಹಿಮೆಯನ್ನು ವರ್ಣಿ ಸುವಾಗ ಭಕ್ತರು “ಅವರು ೪೦ ವರುಷಗಳ ವರೆಗೆ ಸ್ನಾನವನ್ನೆ ಬಿಟ್ಟ ಮಹಾತ್ಮರು” ಎಂದು ಭಜನೆ ಮಾಡುತ್ತಾರೆ. ಆರೋಗ್ಯ ಮತ್ತು ಸ್ವಚ್ಛತೆಯ ವಿಚಾರ ದಲ್ಲಿ ಪ್ರಸಿದ್ಧರಾಗಿರುವ ಯುರೋಪಿಯನರು ಕೂಡ ನಿತ್ಯಸ್ನಾನದ ಆವಶ್ಯಕತೆಯನ್ನು ಅರಿತುಕೊಂಡಿಲ್ಲ. ಸ್ನಾನದ ನಿಷ್ಪ್ರಯೋಜಕತ್ವವು ಪ್ರಜೆಗಳ ಮನಸ್ಸಿನ ಮೇಲೆ ಪರಿಣಾಮಕರವಾಗುವಂತೆ, ಸ್ಪೇನ್ ದೇಶದ ಪ್ರಜಾಪ್ರಭುತ್ವದ ಸರಕಾರವು ಪ್ರಯತ್ನಿಸುತ್ತಿದೆ. ೧-೨ ತಿಂಗಳಿಗೊಂದಾವರ್ತಿ ಸ್ನಾನಮಾಡಿದಾಗ್ಯೂ ದೇಹಾರೋಗ್ಯವು ಕೆಡುವುದಿಲ್ಲವೆಂದು ಕೆಲವು ಜನ ಸ್ಪಾನಿ ಯರ್ಡರ ತಿಳಿವಳಿಕೆಯಾಗಿದೆ. ಮ್ಯಾಡ್ರಿಡ್ (ಸ್ಪೇನದ ರಾಜಧಾನಿ) ಎಂಬ ಒಂದು ಕಡೆಯ ಲೆಕ್ಕದಿಂದ ಆ ನಗರ ನಿವಾಸಿಗಳ ಸ್ನಾನಸಂಖ್ಯೆಯು ವರುಷಕ್ಕೆ ತಲೆಗೆ ೩೦೭೫ರಂತೆ ಬರುವುದು! ಇದರಲ್ಲಿ ಸ್ವಲ್ಪ ಅತಿಶಯೋಕ್ತಿ ಯಿರಬಹುದು; ಆದರೆ ಇದರಿಂದ ಸ್ನಾನವಿಚಾರವಾಗಿ ಜನರಲ್ಲಿ ಎಷ್ಟು ತಿರಸ್ಕಾರವುಂಟಾಗುತ್ತಿದೆಯೆಂದು ತಿಳಿದು ಆಶ್ಚರ್ಯವಾಗುವುದು.

—The Hindu

## ಸಂಪಾದಕರೂ ತರುಣಲೇಖಕರೂ

ಉತ್ತಮವಾದ ಲೇಖಕರಿಂದ ಲೇಖನಗಳನ್ನು ಪಡೆ ಯುವ ಆಸೆಯನ್ನು ಸಂಪಾದಕರು ಇಟ್ಟುಕೊಳ್ಳಬಾ ರದು. ಏಕೆಂದರೆ ಅವರ ಲೇಖನಿಗೆ ಆಮಂತ್ರಣಗಳು ಹೆಚ್ಚು. ಲೇಖನಗಳಿಗೆ ಬೆಲೆಯನ್ನೀಯುವ ಪರಿಪಾಠವಿ ರುವ ಇಂಗ್ಲೆಂಡಿನಂತಹ ದೇಶಗಳಲ್ಲಿ ಪ್ರಸಿದ್ಧವಾಗಿ ತಮ್ಮ ಲೇಖಕವರ್ಗವನ್ನು ಸಂಪಾದಕರು ತಾವೇ ತರಬೇತು ಮಾಡುವ ಪದ್ಧತಿಯಿದೆ. ಯುರೋಪಿನ ಸಂಪಾದಕರು ಬುದ್ಧಿವಂತರಾದ ತರುಣಲೇಖಕರ ಶೋಧನೆಯಲ್ಲಿರು ವರು. ಮತ್ತೆ ಅಭಿವೃದ್ಧಿಗೆ ಬರಲಿರುವ ತರುಣರಿಗೆ ಅವರು ತಪ್ಪದೆ ಅವಕಾಶವನ್ನೀಯುವರು. ಇಂಗ್ಲೆಂಡಿ ನಲ್ಲಿ ಶ್ರೇಷ್ಠರೆನಿಸಿರುವ ಲೇಖಕರೆಲ್ಲರನ್ನೂ ಚಾಣಾ ಕ್ಷರಾದ ಸಂಪಾದಕರೆ ಮೊದಲು ಮುಂದೆ ತಂದವರು. ಮೆಕಾಲೆ, ಮಾರ್ಲೆ ಇವರೇ ಮೊದಲಾದವರ ಚರಿತ್ರೆ ಯಿಂದ ಈ ವಿಚಾರವೇ ತಿಳಿದುಬರುವುದು. ಈಗ ಪ್ರಸಿದ್ಧ ಇಂಗ್ಲಿಷ ಲೇಖಕನೆಂದು ಹೆಸರು ಪಡೆದಿರುವ ಎಚ್. ಜಿ. ವೆಲ್ಸ್ ಎಂಬಾತನ ಉದಾಹರಣೆಯನ್ನೇ ತೆಗೆದುಕೊಳ್ಳುವ:- ಒಂದು ದಿನ “ಸೆಟರ್ಡೇ ರಿವ್ಯೂ”

CC-0. Jangamwadi Math Collection. Digitized by eGangotri

ಸಂಪಾದಕನು ತನ್ನ ಬಳಿಗೆ ಬಂದ ಲೇಖನಗಳನ್ನು ಆರಿಸುತ್ತ ಕುಳಿತಿದ್ದನು. ಆಗ ಆತನಿಗೆ ಒಂದು ಲೇಖನವು ಸಿಕ್ಕಿತು. ಆದರ ಪ್ರಾರಂಭಶೈಲಿಯೂ ವಿಷಯವೂ ಆಶ್ಚರ್ಯಕರವಾಗಿದ್ದುದರಿಂದ ಆತನು ಅದನ್ನು ಲಕ್ಷ್ಯಪೂರ್ವಕವಾಗಿ ಓದಲಾರಂಭಿಸಿದನು. ಆ ನಿಬಂಧದಲ್ಲಿ ಪ್ರತಿಯೊಂದು ವಿಷಯವನ್ನೂ ಸ್ವತಂತ್ರವಾಗಿ ಪರೀಕ್ಷಿಸಬೇಕೆಂದು ಪ್ರತಿಪಾದಿಸಲಾಗಿತ್ತು. ಒಂದು ಗಿಡದ ಎರಡು ಎಲೆಗಳು, ಇಬ್ಬರು ಮನುಷ್ಯರ ಮೂಗಿನ ತುದಿಗಳು ಒಂದೇ ಸಮನಾಗಿರುವದಿಲ್ಲವಾದ್ದರಿಂದ, ಇನ್ನು ಅಪ್ರತಿಮವೆನಿಸಿದ ಒಂದು ವಿಷಯಪ್ರತಿಪಾದನೆಯಲ್ಲಿ ಏಕರೂಪತೆಯೆಂತಿರಬೇಕು ? ಆ ಲೇಖನಶೈಲಿ ಮತ್ತು ವಿವೇಚನಾಪದ್ಧತಿಯ ಕಡೆಗೆ ಸಂಪಾದಕನ ಮನಸ್ಸು ತಿರುಗಿ ಅವನು ಪ್ರಸನ್ನನಾದನು. ಆ ಲೇಖಕನು ಪ್ರಸಿದ್ಧ ಪುರುಷನಾಗಿರಬೇಕೆಂದು ಆತನ ಹೆಸರನ್ನು ನೋಡಿದರೆ, ಆತನೊಬ್ಬ ಅಪ್ರಸಿದ್ಧ ಮನುಷ್ಯನಾಗಿದ್ದನು. – ವೆಲ್ಸ್ ಸಾಹೇಬನು ಕೇವಲ ಚಿಕ್ಕವನಾಗಿದ್ದನು. ಅವನ ಹೆಸರೇ ಯಾರಿಗೂ ತಿಳಿದಿರಲಿಲ್ಲ. ಸಂಪಾದಕನು ತನ್ನ ಕಾರ್ಯದರ್ಶಿಯನ್ನು ಕರೆದು " ನೀವು ವೆಲ್ಸ್ ಎಂಬಾತನ ಹೆಸರು ಕೇಳಿರುವಿರಾ ? " ಎಂದು ಕೇಳಲು, ಆತನು ಇಲ್ಲವೆಂದು ತಲೆಯಲ್ಲಾಡಿಸಿದನು. ಆಗ ಸಂಪಾದಕನು- " ಈ ಮನುಷ್ಯನೇ ಮುಂದೆ ಪ್ರಸಿದ್ಧನಾಗುವುದನ್ನು ನೀವು ನೋಡುವಿರಿ. ಆತನಿಗೆ ಪತ್ರ ಬರೆದು ನನ್ನ ಭೇಟಿಗೆ ಬರಬೇಕೆಂದು ತಿಳಿಸಿರಿ " ಎಂದನು. ಆ ಅಪ್ರಸಿದ್ಧ ಹುಡುಗನೇ ಇಂದು ಜಗತ್ತಿನಲ್ಲಿ ದೊಡ್ಡ ವಿಚಾರವಂತನೆಂದು ಪ್ರಖ್ಯಾತನಾಗಿರುವನು. ಬುದ್ಧಿವಂತರಾದ ಲೇಖಕರನ್ನಾರಿಸಿ ತಮ್ಮ ವಿಶಿಷ್ಟಸಂಪ್ರದಾಯದಲ್ಲಿ ಏಕರೂಪತೆಯುಂಟಾಗುವಂತೆ ಅವರನ್ನು ತರಬೇತು ಮಾಡುವ ಪದ್ಧತಿಯು ಅಲ್ಲಿನ ಸಂಪಾದಕರಲ್ಲಿರುವುದರಿಂದ, ಅಲ್ಲಿ ನಿಯತಕಾಲಿಕಪತ್ರಿಕೆಗಳ ಆಯುರ್ಮರ್ಯಾದೆಯು ಚೆನ್ನಾಗಿರುವುದು. ಮತ್ತೆ ಅವುಗಳ ಧೋರಣೆಯೂ ಬದಲಾಗುವುದಿಲ್ಲ. ನಮ್ಮ ದೇಶದ ವೃತ್ತಪತ್ರಕಾರರು ಇದರಿಂದ ಎಷ್ಟೋ ಪಾಠವನ್ನು ಕಲಿಯುವಂತಿದೆ. —ಸುಧಾ (ಹಿಂದೀ)

### ಶಾಸ್ತ್ರವಚನಗಳ ಅರ್ಥವನ್ನು ಹೇಗೆ ಮಾಡಬೇಕು ?

ಈಗಿನ ಕಾಲದಲ್ಲಿವಿಚಾರಸ್ವಾತಂತ್ರ್ಯದ ಕೂಗು ಎಲ್ಲೆಲ್ಲಿಯೂ ಕೇಳಬರುತ್ತಲಿದೆ. ಆದರೆ ಅದರೊಂದಿಗೆ ಕರ್ತೃತ್ವಶಕ್ತಿಯೂ ಕಂಡು ಬರುತ್ತಲಿದ್ದರೆ ಆ ಸ್ವಾತಂತ್ರ್ಯವು ಶ್ಲಾಘ್ಯವೆಂದು ಹೇಳಬಹುದಾಗುತ್ತಿತ್ತು. ಸುಸಂಸ್ಕೃತಬುದ್ಧಿಯಿಂದ ಸುವಿಚಾರಗಳು ನಿರ್ಮಾಣವಾಗುತ್ತಿರಬೇಕು. ವಿಚಾರಗಳ ಮೇಲೆ ಪರಿಸ್ಥಿತಿಯ ನಿಯಂತ್ರಣವಿರುವುದು. ಈ ನಿಯಂತ್ರಣದಿಂದ ಬಿಡುಗಡೆ ಹೊಂದಲಾಗುವುದಿಲ್ಲ. ಶಾಸ್ತ್ರಗಳು, ಗತಕಾಲೀನ ಆಚಾರವಿಚಾರಗಳ, ಯಮನಿಯಮಾದಿಗಳ ದ್ಯೋತಕಗಳು. ಅವುಗಳ ಅರ್ಥವನ್ನು ಪರಿಸ್ಥಿತಿಗನುಸಾರವಾಗಿ ಮಾಡಿದರೆ ಅದು ಯೋಗ್ಯವಾಗುವುದು. ಹಾಗೆ ಮಾಡದಿದ್ದುದರಿಂದ ಅನೇಕ ಭಾಷ್ಯಕಾರರೂ ಟೀಕಾಕಾರರೂ ಮಾಡಿರುವ ಶಾಸ್ತ್ರವಚನಗಳ ಅರ್ಥವು ತಪ್ಪಾಗಿರುವುದು. ಉದಾಹರಣಾರ್ಥವಾಗಿ ಮನುಸ್ಮೃತಿಯಲ್ಲಿ (ಅ ೧೧. ಶ್ಲೋಕ ೬೪) " ಸರ್ವಾಕರೇಷ್ವಾಧಿಕಾರೋ ಮಹಾಯಂತ್ರಪ್ರವರ್ತನಮ್ " ಎಂಬ ಶ್ಲೋಕದಲ್ಲಿ 'ಮಹಾಯಂತ್ರಪ್ರವರ್ತನ'ವು ನಿಷಿದ್ಧವೆಂದು ನಿಶ್ಚಯಿಸಲಾಗಿದೆ. ಮೇಧಾತಿಥಿ ಎಂಬ ಟೀಕಾಕಾರನು ಮನುವಿನ ಸಂತರ ಸಾವಿರಾರು ವರುಷಗಳ ಮೇಲೆ ಹುಟ್ಟಿದವನು. ಅವನಿಗೆ 'ಮಹಾಯಂತ್ರ'ದ ಮನುವಿನ ಕಾಲದ ಅರ್ಥವು (ಶ್ರಮವಿಲ್ಲದೆ ಕಾರ್ಯವನ್ನು ಸುಲಭವಾಗಿ ಜರುಗಿಸುವ ಸಾಧನವು) ತಿಳಿಯದಿದ್ದುದರಿಂದ, ಮಹಾಯಂತ್ರವೆಂದರೆ ಯಾವುದೋ ಒಂದು ಪ್ರಚಂಡ ಮತ್ತು ಆಶ್ಚರ್ಯಕರವಾದ ವಸ್ತುವಾಗಿರಬೇಕೆಂದು ಆತನು ತಿಳಿದುಕೊಂಡಿರಬೇಕು. ಆದುದರಿಂದಲೆ ಅವನು 'ನದಿಯ ಮೇಲಿನ ಸೇತುವೆ ' ಎಂಬ ಅರ್ಥವನ್ನು ತನ್ನ ರಸವತ್ತಾದ ಮಿದುಳಿನಿಂದ ತೆಗೆದು ಆ ಶಬ್ದಕ್ಕೆ ಜೋಡಿಸಿರಬೇಕು ! ಆದರಿಂದ ನದಿಯ ಮೇಲೆ ಸೇತುವೆ ಕಟ್ಟುವುದು ನಿಷಿದ್ಧವೆಂದು ಮನುವಿನ ಕಾಲದಲ್ಲಿ ತಿಳಿವಳಿಕೆಯಿತ್ತು—ಎಂಬ ತಪ್ಪು ಅಭಿಪ್ರಾಯವು ಜನರಲ್ಲಿ ಹಬ್ಬಿಕೊಂಡಿತು. ಆದರೆ ಮನುವಿನ ನಿಜವಾದ ಅಭಿಪ್ರಾಯವು:- ಅಲ್ಪಕಾಲದಲ್ಲಿ ಹೆಚ್ಚು ಪದಾರ್ಥಗಳನ್ನು ತಯಾರಿಸುವ ಯಂತ್ರಗಳು ಹುಟ್ಟಿದರೆ, ದೇಶದಲ್ಲಿ ಜನರಿಗೆ ಉದ್ಯೋಗವಿಲ್ಲದೆ ದಾರಿದ್ರ್ಯವು ಹೆಚ್ಚುವುದೆಂದು, ಅಂಥ ಯಂತ್ರಗಳನ್ನು ನಿಷೇಧಿಸಬೇಕೆಂದು ಇತ್ತು. ನದಿಯ ಮೇಲೆ ಸೇತುವೆಯನ್ನು ಕಟ್ಟುವುದು ಪರೋಪಕಾರಕೃತ್ಯ(ಪುಣ್ಯಕರ್ಮ)ವಾಗಿದೆ. ಆದನ್ನು ಮನುವು ನಿಷೇಧಿಸುವನೆ ? ಆದರೆ ಪರಿಸ್ಥಿತಿಯ

CC-0. Jangamwadi Math Collection. Digitized by eGangotri

...ಸವಕಿಯಿಲ್ಲದೆ, ಚೆನ್ನಾಗಿ ವಿಚಾರಮಾಡದೆ ಟೀಕಾ ಕಾರು ಶಾಸ್ತ್ರವಚನಗಳಿಗೆ ಅರ್ಥವನ್ನು ಬರೆಯಲಾರಂ ಭಿಸಿದರೆ ಅರ್ಥಕ್ಕೆ ಅನರ್ಥವಾಗುವುದರಲ್ಲಿ ಸಂದೇಹವಿಲ್ಲ.

—ವಸುಮತಿ (ಬಂಗಾಳಿ)

## ಭಗವದ್ಗೀತೆಗೆ ಅಪೂರ್ವವಾದ ಅರ್ಥ

ಮುಂಬೈಯ ಡಾಕ್ಟರ್ ರೇಳೆ ಅವರು ಗೀತೆಗೆ ಇಂಗ್ಲೀಷಿನಲ್ಲಿ ಅಪೂರ್ವವಾದ ಭಾಷ್ಯವನ್ನು ಬರೆದಿರುವರು. ಅದು ವಿಜ್ಞಾನದ ದೃಷ್ಟಿಯಿಂದ ಶಂಕರಾಚಾರ್ಯ, ಮಧ್ವಾಚಾರ್ಯ, ರಾಮಾನುಜಾಚಾರ್ಯರ ಭಾಷ್ಯಗಳಿಗೆ ಸಮ ನಾದ್ದರೂ, ಅವರ ಭಾಷ್ಯಗಳಿಂದ ಭಿನ್ನವಾಗಿರುವುದು. ಅದರ ಅಲ್ಪ ಪರಿಚಯವನ್ನು ಹೀಗೆ ಮಾಡಿಕೊಡಬಹುದು. ಕೌರವ ಪಾಂಡವಬಂಧುಗಳ ವೃತ್ತಿಯು ಹೇಗೆ ಭಿನ್ನ ಭಿನ್ನವಾಗಿತ್ತೆಂದು ಡಾಕ್ಟರರು ತೋರಿಸುವರು. ಯುಧಿಷ್ಠಿರನು ಧರ್ಮಾತ್ಮನಾಗಿದ್ದನು. ಅರ್ಜುನನ ಮನಸ್ಸಿನ ಮೇಲೆ ಬಾಹ್ಯಜಗತ್ತಿನ ಪರಿಣಾಮವಾಗಿತ್ತು. ಆದರೆ ಅವುಗಳ ಮೇಲಿನ ವಾಸನೆಯನ್ನು ಸಂಯಮದಲ್ಲಿಟ್ಟು ಕೊಳ್ಳುವ ಸಾಮರ್ಥ್ಯವು ಅವನ ಧರ್ಮಬುದ್ಧಿಯಲ್ಲಡಕ ವಾಗಿತ್ತು. ಭೀಮನು ಬಾಹ್ಯಸಂಸ್ಕಾರಗಳಿಗೆ ವಶನಾಗಿ ದ್ದನು. ನಕುಲ ಸಹದೇವರಲ್ಲಿ ಸ್ವತಂತ್ರವಿಚಾರವು ವಿಕಾಸಗೊಂಡಿರಲೇ ಇಲ್ಲ. ಅರ್ಜುನನು ಯುದ್ಧದಲ್ಲಿ ಗುರುಗಳನ್ನೂ ಬಂಧುಜನರನ್ನೂ ಹೇಗೆ ಕೊಲ್ಲಬೇಕೆಂದು ಸಂಕಟಪಡುತ್ತಿದ್ದನು. ಅದಕ್ಕಾಗಿಯೆ ತ್ರೈಲೋಕ್ಯದ ರಾಜ್ಯವು ಲಭಿಸಿದರೂ ತಾನು ಅಂತಹ ದುಷ್ಕರ್ಮವನ್ನೆ ಸಗಲಾರೆನೆಂದು ಹೇಳಿಬಿಟ್ಟನು. ವಸ್ತುತಃ ಅದು ಮನ ಸ್ಸಿನ ಒಂದು ಉಚ್ಚ ಅವಸ್ಥೆಯಾಗಿದ್ದಿತು. ಆದರೆ ಡಾ.ರೇಳೆ ಯವರು ಅದಕ್ಕೆ ಮನಸ್ಸಿನ ರೋಗನೆಂದು ಹೇಳಿರುವರು. ಅವರು ೧೩ನೆಯ ಅಧ್ಯಾಯದ ಕ್ಷೇತ್ರ-ಕ್ಷೇತ್ರಜ್ಞ ವಿಚಾರ ವನ್ನು ತಮ್ಮ ಭಾಷ್ಯಕ್ಕೆ ಅಡಿಗಲ್ಲಾಗಿಟ್ಟುಕೊಂಡು, ಗೀತೆಯ ಎಲ್ಲ ಸಂಗತಿಗಳಿಗೂ ಯೋಗಶಾಸ್ತ್ರದ ಆಧಾರ ವನ್ನಿತ್ತಿರುವರು. ಗೀತೆಯ ಸಾರವನ್ನು ಅವರು ಸಂಕ್ಷೇಪ ವಾಗಿ ಹೀಗೆ ವರ್ಣಿಸಿರುವರು.—ಆತ್ಮನಿಗೆ ಮೂರು ಸ್ವರೂಪಗಳಿವೆ—೧. ಬುದ್ಧಿ ಅಹಂಕಾರಾದಿ ೨. ಅವ್ಯಕ್ತ (ಪುರುಷ) ಮತ್ತು ೩. ಪರಮಾತ್ಮ ಸ್ವರೂಪ. ಮೊದಲ ನೆಯದನ್ನು ಎರಡನೆಯದರಲ್ಲಿ ಲೀನವಾಗಿಸಿ, ಎರಡನೆಯ ದನ್ನು ಮೂರನೆಯದರೊಂದಿಗೆ ಯೋಜಿಸುವುದು ಎಂದರೆ ಪುರುಷನ ಪುರುಷೋತ್ತಮ ಸ್ವರೂಪವನ್ನು ಅನುಭವಿಸ ಲುಬೇಕಾದ ಸಾಧನೆ. ಅದನ್ನೇ ಗೀತೆಯಲ್ಲಿ ಹೇಳಿರುವುದು. ಗೀತೆಯಲ್ಲಿರುವ ಅಶ್ವತ್ಥದ ರೂಪಕಕ್ಕೆ ಡಾ. ರೇಳೆಯವರು ಹೊಸ ಅರ್ಥವನ್ನು ಹೇಳಿರುವರು. ಅಶ್ವತ್ಥವೆಂದರೆ ಸಾಂಪ್ರ ದಾಯಿಕವಾಗಿ "ಸಂಸಾರವೃಕ್ಷ" ಎಂದು ಹೇಳಿದರೆ ಅವರು ಒಪ್ಪರು, ಮನುಷ್ಯನಲ್ಲಿರುವ ನಾಡಿಸಂಸ್ಥೆ (Nervous System)ಗೆ ಅವರು ಅಶ್ವತ್ಥವೆಂದು ಹೇಳು ವರು. ಮತ್ತೆ ಆ ವೃಕ್ಷದ ಶಾಖೆ, ಎಲೆ, ಸೋಪ., ಓಷಧಿ ಇತ್ಯಾದಿಗಳ ಪರಿಭಾಷೆಯನ್ನು ಅವರು ಡಾಕ್ಟರೀ ಜ್ಞಾನ ದಿಂದ ಮಾಡಿರುವರು. ಛಂದಾಂಸಿ=ಇಚ್ಛೆ, ಅವ್ಯಯಮ್= ಅವಯವ. ಅವರೀ ಅರ್ಥವು ಕೇವಲ ತಪ್ಪು. "ಮಹರ್ಷ ಯಃ ಸಪ್ತಪೂರ್ವೇ ಚತ್ವಾರೋ" ಇತ್ಯಾದಿ ಶ್ಲೋಕಕ್ಕೆ ಡಾ. ರೇಳೆಯವರ ಅಭಿಪ್ರಾಯದಂತೆ ಸಾಂಖ್ಯದ ೨೫ ನಿತ್ಯತತ್ವಗಳು ಎಂಬ ಅರ್ಥವನ್ನು ಮಾಡಬೇಕು. ಸಪ್ತ ಋಷಿಗಳು=ಎರಡು ಕಣ್ಣು, ಎರಡು ಕಿವಿ, ಎರಡು ಮೂಗಿನ ಹೊಳ್ಳೆ, ಏಳನೆಯದು ಮುಖ. ಹದಿನಾಲ್ಕು ಮನುಗಳು=ಕರ್ಮ, ಪ್ರಾಣ, ಅಹಂಕಾರ, ಬುದ್ಧಿ, ಮನಸ್ಸು, ಪೃಥ್ವೀ, ಜಲ, ತೇಜಸ್ಸು, ಐದು ಕರ್ಮೇಂ ದ್ರಿಯಗಳು ಮತ್ತು ತ್ವಕ್. ಒಟ್ಟಿನಲ್ಲಿ ಡಾ. ರೇಳೆಯವರು ಗೀತೆಯಲ್ಲಿರುವ ಬ್ರಹ್ಮಾಂಡದ ಪ್ರತಿಪಾದನೆಯನ್ನು ಪಿಂಡಕ್ಕೆ ಹೊಂದಿಸಿರುವರು. ಅದರಲ್ಲಿಯೆ ಅವರ ಭಾಷ್ಯದ ಅಪೂರ್ವತೆಯಿರುವುದು.

—ವಸಂತ (ಗುಜರಾತಿ)



CC-0. Jangamwadi Math Collection. Digitized by eGangotri



## ಜಾಗತಿಕ ಯುದ್ಧವಿರೋಧಕರ ಪರಿಷತ್ತು

ಬಹಳ ದೊಡ್ಡ ಪ್ರಯತ್ನವನ್ನು ಮಾಡದಿದ್ದರೆ,ಮಹಾ ಯುದ್ಧದ ಬೇಗೆಯು ಇಡಿಯ ಜಗತ್ತನ್ನೇ ವ್ಯಾಪಿಸಿ ಬಿಡುವುದರ ಸೂಚನೆಗಳು ಎಲ್ಲೆಲ್ಲಿಯೂ ಕಾಣುತ್ತಿವೆ. ಅಲ್ಲಲ್ಲಿ ಕದನದ ಕಿಡಿಗಳು ಹಾರುತ್ತಿವೆ. ಜರ್ಮನಿಯಲ್ಲಿ ಹೊಸ ಚುನಾವಣೆಯ ಸಮಯದಲ್ಲಿ ಹಲವು ರಾಜಕೀಯ ಅತ್ಯಾಚಾರಗಳಾದುವು. ಜರ್ಮನಿಯ ರಾಜಕೀಯ ಉತ್ಪಾತಗಳು ಯುರೋಪೀಯ ರಾಜನೀತಿಯ ಮೇಲೆ ಬಹುಮಹತ್ತ್ವದ ಪರಿಣಾಮವನ್ನು ಮಾಡಬಲ್ಲುವಾಗಿವೆ. ಅಲ್ಲಿ ನಾಝಿಪಕ್ಷದ ಕೈಯಲ್ಲಿ ಅಧಿಕಾರಸೂತ್ರಗಳು ಬಂದರೆ, ಇಟಲಿಯ ಫಾಸಿಸ್ಟ್ ಪ್ರಭುತ್ವಕ್ಕೆ ದೊಡ್ಡದೊಂದು ಬೆಂಬಲವು ದೊರೆತು, ಯುರೋಪಿನಲ್ಲೆಲ್ಲ ಅತಿರಾಷ್ಟ್ರವಾದಿಪಕ್ಷಗಳು ಪ್ರಾಬಲ್ಯಕ್ಕೆ ಬರುವುದರ ಸಂಭವವಿದೆ. ಸದ್ಯಕ್ಕೆ ಜರ್ಮನಿಯಲ್ಲಿ ಅಧಿಕಾರಾರೂಢವಾದ ಆಡಳಿತದಲ್ಲಿ ಯುದ್ಧಮಂತ್ರಿಯಾಗಿರುವ ಸೇನಾಪತಿ 'ಶ್ಲೀಚರ್' ಎಂಬಾತನು 'ವ್ಹರ್ಸೇಲ್ಸ ಒಪ್ಪಂದವನ್ನು ಮುರಿದಾದರೂ ಜರ್ಮನಿಯ ಸೈನ್ಯಸಿದ್ಧತೆಯನ್ನು ಮಾಡಬೇಕಾಗಿ ಬರಬಹುದೆಂ'ದು ಉದ್ಘೋಷಿಸಿದನು. ಇದು 'ಲೀಗ್ ಆಫ್ ನೇಶನ್ಸಿ'ಗೆ– ವಿಶೇಷತಃ ಫ್ರಾನ್ಸಿಗೆ ಜರ್ಮನಿಯು ಕೊಟ್ಟ ಆಹ್ವಾನವೇ ಸರಿ. ಶ್ಲೀಚರನು ಈ ರೀತಿ ಪ್ರತಿಭಟಿಸಿ ಒಂದು ವಾರವಾಗುವುದರಲ್ಲಿಯೆ ಇಟಲಿಯ ಸರ್ವಾಧಿಕಾರಿಯಾದ ಮುಸೊಲಿನಿಯ ಲೇಖನವೊಂದು ಆ ದೇಶದ ಒಂದು ಪ್ರಸಿದ್ಧಪತ್ರಿಕೆಯಲ್ಲಿದ್ದು ಪ್ರಕಟವಾಯಿತು. ಅದರಲ್ಲಿ 'ಜಗತ್ತಿನಲ್ಲಿ ಶಾಂತಿಸಾಮ್ರಾಜ್ಯವು ನೆಲಸಬೇಕೆಂಬ ಸವಿಮಾತಿನಲ್ಲಿ ಫಾಸಿಝಮ್ಮಿಗೆ ವಿಶ್ವಾಸವಿಲ್ಲ. ಅದು ಹಾಗೆ ನೆಲಸೀತೆಂದೂ ತೋರುವುದಿಲ್ಲ. ಮನುಷ್ಯನ ಶಕ್ತಿಗಳ ಅನಿರ್ಬಂಧವಾದ ವಿಹಾರಕ್ಕೆ ತಕ್ಕ ಅವಸರವನ್ನು 'ಯುದ್ಧ' ವೊಂದೇ ಕೊಡಬಲ್ಲುದು. ಕಾಳಗದ ಕುಲುಮೆಯಲ್ಲಿ ಜನಾಂಗಗಳ ಧೈರ್ಯ-ಶೌರ್ಯಗಳ ಪರೀಕ್ಷೆಯಾಗಿ, ಜನತೆಯ ಶೀಲಸ್ವಭಾವಗಳು ಪುಟಗೊಳ್ಳುತ್ತವೆ' ಎಂದು ಸಾರಿ ಹೇಳಿದೆ. ಇದು–ಇಟಲಿಯು ಶಸ್ತ್ರಸಂನ್ಯಾಸ ಪರಿಷತ್ತಿನ ಕಾರ್ಯಾಡಂಬರಕ್ಕೆ ಬೇಸತ್ತು, ಸಿಡಿಮಿಡಿಗೊಂಡು, ಜರ್ಮನಿಯೊಡನೆ ಗುಟ್ಟಿನ ಗೆಳೆತನವನ್ನು ಬೆಳೆಸಿ, 'ರಾಷ್ಟ್ರಸಂಘ'ದ ಸೂತ್ರಧಾರ ರಾಷ್ಟ್ರಗಳನ್ನು ಕೆಣಕಲುದ್ಯುಕ್ತವಾದುದರ ಸೂಚನೆಯಾಗಿದೆಯೆಂದು ಯುರೋಪೀಯ ರಾಜನೀತಿಯ ಗುಟ್ಟುಮಟ್ಟುಗಳನ್ನು ಬಲ್ಲವರು ಹೇಳುತ್ತಿದ್ದಾರೆ. ಅದೇ ಲೇಖನದಲ್ಲಿ 'ಅಂತರ ರಾಷ್ಟ್ರೀಯ ಕಾರ್ಯಾಂತರಗಳ ನಿರ್ವಾಹಕ್ಕಾಗಿ ಏರ್ಪಟ್ಟ ವ್ಯವಸ್ಥೆ–ಸಂಸ್ಥೆಗಳು, ಅವುಗಳ ತಾತ್ಪೂರ್ತಿಕಪ್ರಯೋಜನದ ದೆಸೆಯಿಂದ ಮಾತ್ರ ಕ್ಷಮ್ಯವಾಗಿವೆ; ಆದರೆ, ಫಾಸಿಸ್ಟರ ಸಮಾಜರಚನೆಯಲ್ಲಿ ಅವುಗಳಿಗೆ ನಿರಂತರವಾದ ಸ್ಥಾನವಿಲ್ಲ' ಎಂದೂ ಬರೆದಿದೆ. ಇದು ಮೇಲಣ ವಿಧಾನಕ್ಕೆ ಇನ್ನಿಷ್ಟು ಪುಷ್ಟಿಯನ್ನು ಕೊಡುತ್ತಿದೆ. ಬ್ರಿಟಿಶ್ ಮತ್ತು ಫ್ರೆಂಚ್ ಸರಕಾರಗಳು ಶಸ್ತ್ರನಿಯಮನಕ್ಕೆ ನಿಷ್ಕ್ರಿಯಸಹಾನುಭೂತಿಯನ್ನು ತೋರಿಸುತ್ತಿರುವುದನ್ನು ಬಿಟ್ಟುಕೊಟ್ಟು, ಅಮೇರಿಕೆಯ ಅಧ್ಯಕ್ಷರಾದ ಹೂವರರ ಹೇಳಿಕೆಯ

CC-0. Jangamwadi Math Collection. Digitized by eGangotri

ಮೇರೆಗೆ ತಂತಮ್ಮ ಯುದ್ಧಸಾಮಗ್ರಿಯ ಪ್ರಮಾಣ ವನ್ನು ಒಮ್ಮಿಗೆಲೆ ಇಳಿಸುವುದಕ್ಕೆ ಒಪ್ಪಿಕೊಳ್ಳದಿದ್ದರೆ, ಜರ್ಮನಿ–ಇಟಲಿಗಳ ಈಗಿನ ಮಾತಿನ ವಿರೋಧವು ಕೃತಿ ಯಲ್ಲಿ ಬಂದು, ಯುರೋಪನ್ನೂ–ಅದರ ಬೆನ್ನ ಹಿಂದೆಯೆ ಇಡಿಯ ಜಗತ್ತನ್ನೂ ರಣಕುಂಡದಲ್ಲಿ ನೂಕಿಬಿಡುವ ಸಂಭವವಿದೆಯೆಂಬ ಇಂಗ್ಲಂಡಿನ 'ಮ್ಯಾಂಚೆಸ್ಟರ್ ಗಾರ್ಡಿಯನ್' ಪತ್ರಿಕೆಯು ಭಯಸೂಚನೆಯನ್ನು ಮಾಡುತ್ತಿದೆ....ಇನ್ನು ಇಂಗ್ಲಂಡು ಐರ್ಲಂಡುಗಳ ನಡು ವಿನ ವೈಮನಸ್ಯದ ಕಥೆಯು ಎಲ್ಲರಿಗೂ ಗೊತ್ತಿರಲಿಕ್ಕೆ ಸಾಕು. ಈ ರಾಷ್ಟ್ರಗಳ ನಡುವೆ ಸದ್ಯಕ್ಕೆ ಶಸ್ತ್ರಸಹಿತ ವಾದ ಯುದ್ಧವಿರದಿದ್ದರೂ, 'ಸಂರಕ್ಷಕಸುಂಕ' ಗಳ ಯುದ್ಧವು (Tariff war) ಈಗಾಗಲೆ ಆರಂಭವಾಗಿದೆ. ಇಂಗ್ಲಿಷರು ಐರಿಷ್‌ಸರಕುಗಳ ಮೇಲೆ ವಿಪರೀತ ಕರ ವನ್ನು ಹೇರಿ, ಐರ್ಲಂಡಿನಿಂದ ಬರಬೇಕಾದ 'ವಾರ್ಷಿಕ ಪೊಗದಿ'ಯ ಹಣವನ್ನು ಸಂಪಾದಿಸಲು ಪ್ರಯತ್ನಿಸು ತ್ತಿರುವರಾದರೆ, ಐರಿಷರೂ (ಡಿ ವೇಲರಾನ ನೇತೃತ್ವದಲ್ಲಿ) ಇಂಗ್ಲೀಷ್ ಸರಕುಗಳ ಮೇಲೆ ಕರವನ್ನು ಕೂಡಿಸಿ, ಇಂಗ್ಲಿಷ್ ಗಿರಣಿಗಳೊಡೆಯರು ತಮ್ಮ ದೇಶದಲ್ಲಿಂದ ಹೊರಟು ಹೋಗುವ ಹಾಗೆ ಒಂದು ಕಾಯಿದೆಯನ್ನು ಮಾಡಿಕೊಂಡು, 'ಇಂಗ್ಲಿಷ್ ವಸ್ತುಗಳ ಬಹಿಷ್ಕಾರ' ವೆಂಬ ಉಗ್ರಶಸ್ತ್ರವನ್ನೆತ್ತಿ, ಆಫ್ರಿಕಾ, ಕಾನಡಾ ಮೊದ ಲಾದ ಬೇರೆ 'ಒಕ್ಕಲುನಾಡುಗಳ' ಒಡನೆ ವ್ಯಾಪಾರ ವಿನಿಮಯದ ಸಂಧಾನವನ್ನು ಈಗಾಗಲೆ ಮಾಡಿಕೊಂಡು ಇದ್ದಾರೆ. ಇದೆಲ್ಲದರ ಪರಿಣಾಮವು ಬೇಗನೆ ತಿಳಿಯ ಲಿದೆ.....ದಕ್ಷಿಣ ಅಮೇರಿಕೆಯ ಎರಡು ಸಂಸ್ಥಾನಗಳ ನಡುವೆ ಯುದ್ಧವಾರಂಭವಾದುದರ ವಾರ್ತೆ ಬಂದಿದೆ. ಸದ್ಯಕ್ಕೆ ಉಪಶಮನವಾದಂತೆ ತೋರುತ್ತಿದೆ. ಆದರೂ ನೋಡಬೇಕು.....ಜಪಾನು ರಶಿಯಗಳ ನಡುವಿನ ಮನ ಸ್ತಾಪ, ರಶಿಯದ ಆಗ್ನೇಯ ದಿಕ್ಕಿನ ಗಡಿನಾಡನ್ನು ಜಪಾನಿನ ಸೈನ್ಯಗಳು ಮುತ್ತಿದುದು–ಈ ಮೊದಲಾದ ವರ್ತಮಾನಗಳು ಮುಂದೆ ಎಲ್ಲಿಗೆ ಬಂದುವು ಎಂಬುದು ತಿಳಿದಿಲ್ಲ. ಆದರೆ ಅಮೇರಿಕೆಯ 'ದಿ ನ್ಯೂ ರಿಪಬ್ಲಿಕ್' ಎಂಬ ಪ್ರಸಿದ್ಧ ಪತ್ರಿಕೆಯ ಅಭಿಪ್ರಾಯದ ಮೇರೆಗೆ, ಜಪಾನಿಗಳು ತಾವು ಆಕ್ರಮಿಸಿದ ಪ್ರದೇಶದಲ್ಲಿ ಕಠೋರ ವಾದ 'ಪತ್ರಿಕಾನಿಯಂತ್ರಣ (Censorship)' ವನ್ನು ಪ್ರಸ್ಥಾಪಿಸಿದ ಹಾಗೆ ತೋರುತ್ತದೆ. ಹಾಗೆಂತಲೇ, ಯಾವ ಸುದ್ದಿಗಳೂ ಹೊರಗಿನ ಜಗತ್ತಿಗೆ ತಿಳಿದು ಬಂದಿಲ್ಲ. ಆ ಪತ್ರಿಕೆಯು ಹೇಳುವುದೆಂದರೆ 'ಜಪಾನಿಗಳು ಈಗಾ ಗಲೆ ಕೈವಶಮಾಡಿಕೊಂಡ ಭಾಗದಲ್ಲಿ, ಬರುವ ಬೇಸ ಗೆಯ ಹೊಸ ಆಕ್ರಮಣದ ಸಿದ್ಧತೆಯನ್ನು ನಡೆಸಿರಬೇಕು. ಅಂತೂ, ಅಲ್ಲಲ್ಲಿ ಭೂಕಂಪಗಳು ಆಗುತ್ತಿವೆ. ಜ್ವಾಲಾ ಮುಖಿಯು ಎಂದು ಸ್ಫೋಟವಾಗುವುದೋ ಹೇಳಲಿ ಕ್ಕಾಗದು. ಈ ಸಂದರ್ಭದಲ್ಲಿ, ಪ್ರಪಂಚದ ವಿಚಾರಿ ಗಳಲ್ಲಿ ಅಗ್ರಗಣ್ಯರಾದ ಹಲವು ಮಹಾಜನರು 'ಇಡಿಯ ಜಗತ್ತಿನ ಯುದ್ಧವಿರೋಧಕ ಪರಿಷತ್ತ'ನ್ನು ಜಿನೀವಾ ದಲ್ಲಿ ಕರೆದುದು ಸಮಯೋಚಿತವೇ ಆಗಿದೆ. ಹೆನ್ರಿ ಬಾರ್ ಬೂಸ್, ಐನ್‌ಸ್ಟಿನ್, ರೋಮೆನ್ ರೋಲಾ, ಹೆನ್ರಿ ಮಾನ್, ಎಚ್. ಜಿ. ವೆಲ್ಸ್, ಬರ್ನಾಡ್ ಶಾ, ಮಾಕ್ಸಿಂ ಗೋರ್ಕಿ, ದಿವಂಗತ ಡಾ. ಸನ್‌ಯತ್ ಸೇನರ ಪತ್ನಿ– ಈ ಮೊದಲಾದ ದೇಶವಿದೇಶಗಳ ಮಹಾನುಭಾವರು ಆ ಪರಿಷತ್ತಿಗೆ ಆಮಂತ್ರಣವನ್ನಿತ್ತಿದ್ದಾರೆ. ಅದರ ವಿಶೇಷ ವೆಂದರೆ, ಬೇರೆ ಬೇರೆ ದೇಶಗಳ ರಾಜಕಾರ್ಯ ಧುರಂಧ ರರ ಅಂಗವೇನೂ ಅದರಲ್ಲಿರದೆ, ಕಳೆದ ಮಹಾಯುದ್ಧದಲ್ಲಿ ಭಾಗವನ್ನು ವಹಿಸಿದ ಅಥವಾ ಬರುವ ಮಹಾಯುದ್ಧ ದಲ್ಲಿ ಭಾಗವನ್ನು ವಹಿಸಬಹುದಾದ ಜನರಷ್ಟೇ ಆ ಪರಿಷ ತ್ತಿನಲ್ಲಿ ಕಲೆತು ಯುದ್ಧಸಂಸ್ಥೆಗೆ 'ಮೂಲೇ ಕುಠಾರ' ವನ್ನು ಹೇಗೆ ಹಾಕಬಹುದೆಂದು ವಿಚಾರಮಾಡಲಿದ್ದಾರೆ. ಬೇರೆ ಬೇರೆ ದೇಶಗಳ ಕೂಲಿಕಾರರ ಸಂಘಗಳು (ವಿಶೇಷ ವಾಗಿ, ಯುದ್ಧಸಾಮಗ್ರಿಯನ್ನು ಸಿದ್ಧಪಡಿಸುವ ಕಾರ ಖಾನೆಗಳಲ್ಲಿ ಕೆಲಸ ಮಾಡುವವರ ಸಂಘಗಳು), ಮತ್ತು ಶಾಂತಿಗಾಗಿ ಹೆಣಗಾಡುವ ಸಂಸ್ಥೆಗಳು ಅಲ್ಲಿ ಸೇರತಕ್ಕ ವಿವೆ. ಅಂತೂ, ಯುದ್ಧದ ದೇವತೆಯ ಸೂತ್ರದ ಗೊಂಬೆ ಗಳಂತಿರುವ ರಾಜ್ಯಕರ್ತರೂ, ರಾಜನೀತಿನಿಪುಣರೂ ಬಾಯಿಂದ ಒಂದು, ಕೈಯಿಂದ ಇನ್ನೊಂದು ಮಾಡುವು ದನ್ನು ಪ್ರಬಲವಾಗಿ ವಿರೋಧಿಸಿ, ಅವರ ಹಂಚಿಕೆಗಳಿಗೆ ಮಣ್ಣುಮುಕ್ಕಿಸುವುದೆಂತು – ಎಂಬುದನ್ನು ವ್ಯವ ಹಾರ್ಯರೀತಿಯಲ್ಲಿ ಯೋಚಿಸುವುದು ಈ ಪರಿಷತ್ತಿನ ಕೆಲಸವಾಗಿದೆ. ಇಷ್ಟುಮಂದಿ ಕೆಲಸಗಾರರು 'ಕಟ್ಟು' (Strike) ಮಾಡುವರು; ಇಷ್ಟು ಮಂದಿ ಕಡ್ಡಾಯದ ಸೈನಿಕಶಾಸನವನ್ನು ಮುರಿಯುವರು—ಎಂದು

CC-0. Jangamwadi Math Collection. Digitized by eGangotri

ಅಂಕೆಗಳಿಂದ ಸ್ಪಷ್ಟವಾಗಿ,ಯುದ್ಧಾತುರರಿಗೆ ಮನಸದಟ್ಟಾಗುವಂತೆ ಮಂಡಿಸುವುದೇ ಇದರ ಉದ್ದೇಶವಾಗಿದೆ. ಸಮಾಜಸಮತಾವಾದಿಗಳು (Socialists), ಸಂಘವಾದಿಗಳು (Communists), ಅರಾಜಕರು (Anarchists), ಸ್ವತಂತ್ರವಿಚಾರಿಗಳು, ಶಾಂತಿವಾದಿಗಳು-ಅಂತೂ ಎಲ್ಲ ಬಗೆಯ ಯುದ್ಧವಿರೋಧಕರಿಗೆ ಅಲ್ಲಿ ಸ್ಥಾನವನ್ನು ಕಲ್ಪಿಸಲಾಗಿದೆ.

(ಈ ಪರಿಷತ್ತು ಜಿನೀವಾದಲ್ಲಿ ನೆರೆಯಲಿಕ್ಕೆ ಸ್ವಿಸ್ ಸರಕಾರವು ಒಪ್ಪಿಗೆಯನ್ನು ಕೊಡದಿದ್ದುದರಿಂದ,ಅದನ್ನು ಆಮ್‌ಸ್ಟರ್ಡಾಂನಲ್ಲಿ ಜರುಗಿಸಬೇಕೆಂದು ನಿರ್ವಾಹಕರು ತೀರ್ಮಾನಿಸಿದ್ದಾರೆಂದು ಇದೇ ಈಗ ತಿಳಿದು ಬಂದಿದೆ. ಅಲ್ಲಿಯ ಸರಕಾರವು ಕೂಡ ರಶಿಯದ ಇಬ್ಬರು ಮೂವರು ಕಮ್ಯುನಿಸ್ಟ್ ಪ್ರತಿನಿಧಿಗಳಿಗೆ ಬರಗೊಡಲು ಸಿದ್ಧವಿಲ್ಲವೆಂತಲೂ ವರ್ತಮಾನ. ಶ್ರೀ. ವಿ. ಜೆ. ಪಟೇಲರು ಪರಿಷತ್ತಿನಲ್ಲಿ ಭಾಗವಹಿಸಲು ಇಂಗ್ಲಂಡಿನಿಂದ ಹೊರಟಿದ್ದಾರೆ. —ಸಂ. ಜ. ಕ.)

## ಒಟಾವಾ ಮತ್ತು ಹಿಂದುಸ್ಥಾನ

ಒಟಾವಾ ನಗರದ ಸಾಮ್ರಾಜ್ಯಪರಿಷತ್ತಿಗಾಗಿ ಸರಕಾರದಿಂದ ನೇಮಿಸಲ್ಪಟ್ಟ ಹಿಂದೀ ಸಭಾಸದರು ಬ್ರಿಟಿಶ್ ಪ್ರತಿನಿಧಿಗಳೊಡನೆ ಮಾತುಕಥೆಗಳನ್ನಾಡಿ, ಬ್ರಿಟನು ಮತ್ತು ಹಿಂದುಸ್ಥಾನವು ಕೆಲವು ಪರಸ್ಪರ ವ್ಯಾಪಾರವಿಷಯಕ ಸೌಕರ್ಯಗಳನ್ನು ಕೊಡಬೇಕಾಗಿ ಒಪ್ಪಂದವನ್ನು ಮಾಡಿಕೊಂಡಿದ್ದಾರೆಂದು ವರ್ತಮಾನವು ಬಂದಿದೆ. ಆ ಒಪ್ಪಂದವು ಹಿಂದೀ ರೈತರಿಗೆ ಬಹಳ ಕಲ್ಯಾಣಕರವಾಗಿದೆಯೆಂತಲೂ ಸಾಧಿಸುತ್ತಲಿದ್ದಾರೆ. ವ್ಯಾಪಾರಿವರ್ಗದ ದೊಡ್ಡ ಮುಖಂಡರಲ್ಲೊಬ್ಬರಾದ ಶ್ರೀ. ಪುರುಷೋತ್ತಮದಾಸ ಅವರು ಈ ವಿಷಯದಲ್ಲಿ, ಕೆಳಗೆ ಬರೆದ ಮೇರೆಗೆ, ತಮ್ಮ ಅಭಿಪ್ರಾಯವನ್ನು ಸೂಚಿಸಿದ್ದಾರೆ:—

ಸರಕಾರಿ ಪತ್ರಕವು ಹೇಳಿದಂತೆ ಒಟಾವಾ ಒಪ್ಪಂದವು ಹಿಂದೀ ಒಕ್ಕಲಿಗರಿಗೆ ನಿಜವಾಗಿಯೂ ಲಾಭದಾಯಕವಾಗಿದ್ದರೆ ಯಾರಿಗೆ ಸಂತೋಷವಾಗಲಿಕ್ಕಿಲ್ಲ ? ಆದರೆ ಆ ಒಪ್ಪಂದದ ವಿವರಗಳನ್ನಷ್ಟು ಪರೀಕ್ಷಿಸುವಾ.

ಹಿಂದುಸ್ಥಾನದ ನಿರ್ಯಾತವ್ಯಾಪಾರ (Exports)ದಲ್ಲಿ ಇಂಗ್ಲಂಡಿಗೆ ಹೋಗುವ ಸರಕುಗಳು ನೂರಕ್ಕೆ ೨೧ರಿಂದ ೨೭ ರಷ್ಟು ಇವೆ. ನಮ್ಮ ಒಟ್ಟು ಆಯಾತ (Imports)ಗಳಲ್ಲಿ ಇಂಗ್ಲಂಡಿನಿಂದ ಬರುವ ಸರಕುಗಳು ಮಹಾಯುದ್ಧದ ಪೂರ್ವದಲ್ಲಿ ನೂರಕ್ಕೆ ೬೪ರಷ್ಟಿದ್ದುವು. ೧೯೩೪-೩೫ರಲ್ಲಿ ನೂರಕ್ಕೆ ೫೪ರಷ್ಟಕ್ಕೂ, ೧೯೩೧-೩೨ರಲ್ಲಿ ನೂರಕ್ಕೆ ೩೫ರಷ್ಟಕ್ಕೂ ಇಳಿದಿವೆ. ಅಂತೂ ೧೯೩೧-೩೨ರಲ್ಲಿ ಬ್ರಿಟನಿನಿಂದ ಬಂದ ಸರಕುಗಳು, ಒಟ್ಟು ಆಯಾತವ್ಯಾಪಾರದಲ್ಲಿ, ನೂರಕ್ಕೆ ೩೫ರಷ್ಟಿದ್ದರೆ, ಬ್ರಿಟನಿಗೆ ಹೋಗುವ ಸರಕುಗಳು, ಒಟ್ಟು ನಿರ್ಯಾತವ್ಯಾಪಾರದಲ್ಲಿ, ನೂರಕ್ಕೆ ೨೭ರಷ್ಟಿದ್ದುವು. ಎಂದರೆ, ಹಿಂದುಸ್ಥಾನವು ಇಂಗ್ಲಂಡಿಗೆ ಕಳಿಸಿದುದಕ್ಕಿಂತ ಇಂಗ್ಲಂಡಿನಿಂದ ಬರಮಾಡಿದುದು ೧೦೦ಕ್ಕೆ ೮ರಷ್ಟು ಹೆಚ್ಚಿಗೆಂದಂತಾಯಿತು. ಸರಕಾರನಿಯುಕ್ತ ಹಿಂದೀ ಪ್ರತಿನಿಧಿಗಳು, ತಮ್ಮ ದೇಶದ ಒಟ್ಟು ಆಯಾತವ್ಯಾಪಾರದಲ್ಲಿನ ಇಂಗ್ಲಂಡಿನ ವ್ಯಾಪಾರದ ಪ್ರಮಾಣವನ್ನು ನೂರಕ್ಕೆ ೧೦ರಂತೆ ಇನ್ನೂ ಹೆಚ್ಚಿಗೆ ಬೆಳೆಯಿಸಬೇಕೆಂದು ಒಪ್ಪಿಕೊಂಡಿದ್ದಾರೆ. ಇಂಗ್ಲಂಡು ನಮಗೆ ಕಳಿಸುವ ಸರಕುಗಳ ವ್ಯಾಪಾರವು ಹೀಗೆ ವಿಪರೀತವಾಗಿ ಹೆಚ್ಚಾಗುವುದರಿಂದ, ನಮಗೆ ಯಾವ ಲಾಭವಾಗುವುದೋ ಹೇಳುವುದು ಕಠಿನ. ಈ ಒಪ್ಪಂದದಿಂದ ಇಂಗ್ಲಂಡಿಗೆ ಹೋಗುವ ನಮ್ಮ ಸರಕುಗಳ ವ್ಯಾಪಾರವೇನಾದರೂ ಬೆಳೆಯುವುದೆಂದು ಕೆಲವರು ನಂಬಿದ್ದರೆ, ಅವರ ಆಶೆಯು ವಿಫಲವಾಗುವುದು ಖಂಡಿತ.

ಇನ್ನು ಇಂಗ್ಲಂಡು ನಮಗೆ ದಯಪಾಲಿಸಲು ಒಪ್ಪಿದ ವಿವರಗಳನ್ನು ನೋಡಲಾಗಿ, ಇಂಗ್ಲಂಡಿನಲ್ಲಿ ಪರದೇಶಗಳಿಂದ ಸುಂಕವಿಲ್ಲದೆ ಬರುವ ಕುಸುಬೆಯ ಮೇಲೆ ಇನ್ನು ಮೇಲೆ ನೂರಕ್ಕೆ ೧೦ರ ಹಾಗೆ ಸುಂಕವನ್ನು ಹೇರಲು ಇಂಗ್ಲಂಡು ಒಪ್ಪಿಕೊಂಡುದು ಕಂಡು ಬರುವುದು. ಇದರಿಂದ ಇಂಗ್ಲಂಡಿನೊಳಗೆ ನಮ್ಮ ಕುಸುಬೆಯ ವ್ಯಾಪಾರವು ಕೆಲಮಟ್ಟಿಗೆ ಬೆಳೆಯುವಂತಿದೆ. ಬೀಡು (ಕಚ್ಚಾ ಕಬ್ಬಿಣ), ಅರ್ಧಸಿದ್ಧವಾದ ಉಕ್ಕು ಮತ್ತು ಅರಳೆ ಇವುಗಳನ್ನು ನಮ್ಮಿಂದ ತಮ್ಮಲ್ಲಿ ಹೆಚ್ಚಿನ ಪ್ರಮಾಣದಲ್ಲಿ ತರಿಸುವುದನ್ನು ಕುರಿತು ವಿಚಾರವಾಗತಕ್ಕದ್ದಿದೆ.

ಈ ವಿಚಾರದ ಫಲಿತಾಂಶವು ಹಿಂದುಸ್ಥಾನಕ್ಕೆ ಲಾಭದಾಯಕವಾಗಿ ಕಂಡು ಬಂದರೆ ಮಾತ್ರ, ಈಗ ಇಂಗ್ಲಂಡಿಗೆ ನೂರಕ್ಕೆ ೧೦ರಷ್ಟು ತೋರಿಸಲಾದ ಸವಲತ್ತು ಬಂಧನಕಾರಿಯಾಗುವುದೆಂದು ಈ ಒಪ್ಪಂದದಲ್ಲಿ ನಿರ್ದಿಷ್ಟ

CC-0. Jangamwadi Math Collection. Digitized by eGangotri

ವಾಗಿಲ್ಲ. ಎಂದರೆ ಕಬ್ಬಿಣ ಉಕ್ಕುಗಳ ಬಗ್ಗೆ ಆಗಲಿರುವ ತೀರ್ಮಾನವು ನಮಗೆ ಲಾಭಕರವಿರಲಿ, ಇಲ್ಲದಿರಲಿ – ಇಂಗ್ಲಂಡಿಗೆ ನಾವು ತೋರಿಸುವ ಪಕ್ಷಪಾತವು ಮಾತ್ರ ಉಳಿಯತಕ್ಕದೇ ಎಂದಂತಾಯಿತು.

ಈ 'ಸಾಮ್ರಾಜ್ಯದ ಪಕ್ಷಪಾತ'ದ ಯೋಜನೆಯಿಂದ ಇಂಗ್ಲಂಡಿನ ಹೊರತು ಉಳಿದ ದೇಶಗಳೊಡನಿದ್ದ ನಮ್ಮ ವ್ಯಾಪಾರಕ್ಕೆ ತೊಂದರೆಯುಂಟಾದೀತೆಂದು ಎನಿಸುತ್ತದೆ. ಮತ್ತು, ಭಾವಿ ರಾಜ್ಯರಚನೆಗೂ ಈಗಿನ ಆಡಳಿತಕ್ಕೂ ನಡವೆ ಇರಲೇಬೇಕಾದ 'ಸಾಂಕ್ರಾಮಿಕ ಅವಧಿ'ಯು (Transitional Stage) ಇಷ್ಟೇ ಎಂದು ನಿರ್ಣಯವಾಗದಿದ್ದುದರಿಂದ, ಹಿಂದೀ ರೈತರು ಈ ಒಪ್ಪಂದದ ಅನಿಷ್ಟ ನಿರ್ಬಂಧನೆಗಳ ಮೂಲಕ ಎಷ್ಟು ಕಾಲದ ವರೆಗೆ ಬಳಲಬೇಕಾಗಿಬಂದೀತೆಂಬುದನ್ನೂ ಹೇಳಲಾಗುವುದಿಲ್ಲ. ಬರಿ ಆರ್ಥಿಕದೃಷ್ಟಿಯಿಂದಲೇ ನೋಡಲಾಗಿ, ಈ ಒಪ್ಪಂದವು ನಮ್ಮವರಿಗೆ ಲಾಭದಾಯಕವೆಂದು ಹೇಳಲಾಗದು.

ಈ ಒಪ್ಪಂದವು ಮಧ್ಯಶಾಸನಸಭೆ (ಲೆಜಿಸ್ಲೇಟಿವ್ ಅಸೆಂಬ್ಲಿ)ಯಿಂದ ಅಂಗೀಕೃತವಾಗುವ ವರೆಗೆ ಅದನ್ನು ಬಳಕೆಯಲ್ಲಿ ತರುವುದಿಲ್ಲವೆಂದು ಸರಕಾರವು ಈ ಮೊದಲೇ ಪ್ರಕಟಿಸಿರುವುದರಿಂದ, ಲೋಕನಿಯುಕ್ತ ಸಭಾಸದರಿಗಷ್ಟೇ ಇದರ ಚರ್ಚೆಯನ್ನೂ ನಿರ್ಣಯವನ್ನೂ ಮಾಡಲು ಅಧಿಕಾರವು ದೊರೆಯಬೇಕೆಂದೂ, ಸರಕಾರೀ ಮತ್ತು ಸರಕಾರನಿಯುಕ್ತ ಸಭಾಸದರು ಭಾಗವನ್ನು ತೆಗೆದುಕೊಳ್ಳಬಾರದೆಂದೂ, ಎಲ್ಲಕ್ಕೂ ಒಳ್ಳೆಯದಾದ ಮಾರ್ಗವೆಂದರೆ ಈ ಒಪ್ಪಂದವನ್ನು ಇದ್ದಕ್ಕಿದ್ದ ಹಾಗೆ ಇರಗೊಟ್ಟು, ಹೊಸ ಸ್ವರಾಜ್ಯಘಟನೆಯ ಮೇರೆಗೆ ಏರ್ಪಾಟವಾಗಲಿರುವ ಕೇಂದ್ರಶಾಸನಸಭೆಯಿಂದಲೇ ಈ ಎಲ್ಲ ಮಾತುಗಳ ನಿರ್ಣಯವಾಗುವುದು ಹಿತವೆಂತಲೂ ಸರ್ ಪುರುಷೋತ್ತಮದಾಸರು ಅಭಿಪ್ರಾಯಪಡುತ್ತಾರೆ.

## ಮುಖ್ಯಪ್ರಧಾನರ ಪಂಚಾಯತಿ

ಮುಖ್ಯಪ್ರಧಾನರು ಜಾತಿಪ್ರಾತಿನಿಧ್ಯದ ವಿಷಯವಾಗಿ ಕೊಟ್ಟ ತೀರ್ಪಿನ ಮುಖ್ಯಾಂಶಗಳನ್ನು ಇಲ್ಲಿ ಸಂಕ್ಷೇಪವಾಗಿ ಸೂಚಿಸಲಪೇಕ್ಷಿಸುತ್ತೇವೆ.

೧. ಪಂಜಾಬ ಬಂಗಾಲ ಪ್ರಾಂತಗಳಲ್ಲಿ ಮುಹಮ್ಮದೀಯರು ಶಾಸನದಿಂದಲೇ ಬಹುಮತವು ದೊರೆಯಬೇಕೆಂದು ಸಾಹಸಬಡುತ್ತಿದ್ದರು. ಶಾಸನದಿಂದಲೇ ಬಹುಮತವು ಕೊಡಲ್ಪಡದಿದ್ದರೂ ಮುಸಲ್ಮಾನರಿಗೆ ಕಾರ್ಯತಃ ಬಹುಮತವು (effective majority) ದೊರೆತಿದೆ. ಪಂಜಾಬ ಕೌನ್ಸಿಲಿನಲ್ಲಿ ೧೦೦ ರಲ್ಲಿ ೪೮ರಷ್ಟು ಜಾಗೆಗಳು ಮುಹಮ್ಮದೀಯಮತದಾರಸಂಘದಿಂದಲೇ ಸಿಗುವ ಹಾಗೆ ಏರ್ಪಾಟವಾಗಿದೆ. ಜಮೀನುದಾರರ ಪ್ರತ್ಯೇಕ ಚುನಾವಣೆಯಲ್ಲಿಯೂ ಮೂವರು ಮುಹಮ್ಮದೀಯರು ಬರುವುದು ಸಾಧ್ಯವಿದ್ದುದರಿಂದ ಒಟ್ಟಿನಲ್ಲಿ ಅವರಿಗೆ ೧೦೦ಕ್ಕೆ ೫೧ರಂತೆ ಪ್ರಾತಿನಿಧ್ಯವು ದೊರೆಯುವುದು ಖಂಡಿತ.

೨. ಬಂಗಾಲದಲ್ಲಿ ಮುಸಲ್ಮಾನರ ಪ್ರಾತಿನಿಧ್ಯವು ಇದೀಗ ೧೦೦ಕ್ಕೆ ೩೪ರಷ್ಟಿದ್ದುದು, ಈ ತೀರ್ಪಿನ ಪ್ರಕಾರ ೪೮.೪ಕ್ಕೆ ಏರುವಂತಿದೆ. ಅಲ್ಲಿಯೂ ಜಮೀನುದಾರರ ಮತ್ತು ಕೂಲಿಕಾರರ ಸ್ಥಾನಗಳಲ್ಲಿ ಕೆಲವು ಅವರಿಗೆ ದೊರೆತು, ಕಾರ್ಯತಃ ಬಹುಮತವು ಅಲ್ಲಿಯೂ ಒದಗುವಂತೆ ವ್ಯವಸ್ಥೆಯಾಗಿದೆ.

೩. ಪಂಜಾಬದಲ್ಲಿ ಮುಸಲ್ಮಾನರ ಪ್ರಾತಿನಿಧ್ಯಕ್ಕೆ ಧಕ್ಕೆ ತಗಲದಂತೆ, ಆದರೆ ಹಿಂದೂಗಳಿಗೆ ಸಲ್ಲಬಹುದಾದ ಕೆಲವು ಜಾಗೆಗಳನ್ನು ಕಸಿದುಕೊಂಡು, ಶೀಖರಿಗೆ ಅವರ ಜನಸಂಖ್ಯೆಯ ಪ್ರಮಾಣವನ್ನು ಮೀರಿ ಪ್ರಾತಿನಿಧ್ಯವನ್ನು ಕೊಡಲಾಗಿದೆ. ಎಂದರೆ ಹಿಂದೂಗಳಿಗೆ ನೂರಕ್ಕೆ ೨೭ ಜಾಗೆಗಳೂ ಶೀಖರಿಗೆ ೧೮.೮ ಜಾಗೆಗಳೂ ಕಾದಿಡಲ್ಪಟ್ಟಿವೆ. ಮುಸಲ್ಮಾನರು, ಶೀಖರು, ಅಸ್ಪೃಶ್ಯರು, ಹಿಂದುಳಿದವರು, ಹಿಂದೀ ಕ್ರಿಶ್ಚನರು, ಯುರೋಪಿಯನರು, ವ್ಯಾಪಾರೀ ವರ್ಗದವರು, ಕೂಲಿಕಾರರು, ವಿಶ್ವವಿದ್ಯಾಲಯದವರು– ಇವರಿಗೆಲ್ಲ ಇಂತಿಷ್ಟು ಜಾಗೆಗಳೆಂದು ಕಾದಿಟ್ಟಮೇಲೆ, ಉಳಿದ ಹಿಂದೂಗಳಿಗೆ ಮಾತ್ರ 'ಸಾಧಾರಣ ಮತದಾರ ಸಂಘ (General Elctorate)' ಎಂದು ವಿಚಿತ್ರನಾಮಕರಣವನ್ನೂ ಮಾಡಲಾಗಿದೆ.

೪. ಒಂದು ವಿಚಿತ್ರವೆಂದರೆ, ಅಸ್ಪೃಶ್ಯರು ಎಲ್ಲಿ ಹೆಚ್ಚಾಗಿರುವರೊ, ಆ ಭಾಗಗಳಲ್ಲಿ ಅವರು ತಮ್ಮ ಪ್ರತ್ಯೇಕ ಮತದಾರಸಂಘದಲ್ಲಿ ಮತವನ್ನು ಕೊಡಬಲ್ಲರಲ್ಲದೆ, ಸಾಧಾರಣ ಮತದಾರಸಂಘದಲ್ಲಿಯೂ ಮತದಾನದ ಅಧಿಕಾರವುಳ್ಳವರಾಗಿದ್ದಾರೆ. ಇದರಿಂದ ಸ್ವತಂತ್ರ ಮತದಾರ ಸಂಘದಿಂದಲ್ಲದೆ, ಸಾಧಾರಣ ಮತದಾರ ಸಂಘದಿಂದಲೂ ಅವರ ಪ್ರಾತಿನಿಧ್ಯವು ಹೆಚ್ಚಬೇಕೆಂದು ಅಪೇಕ್ಷೆ



CC-0. Jangamwadi Math Collection. Digitized by eGangotri

ಯಿದ್ದಂತೆ ತೋರುತ್ತದೆ. ಅಸ್ಪೃಶ್ಯರಿಗೆ ಪ್ರತ್ಯೇಕ ಪ್ರಾತಿನಿಧ್ಯವು ೨೦ವರ್ಷಗಳವರೆಗೆ ಕೊಡಲ್ಪಡುವುದೆಂದು ಮಾತು ಕೊಡಲಾಗಿದೆ.

೫. ಇದಕ್ಕೂ ಹೆಚ್ಚಿನ ವಿಚಿತ್ರವೆಂದರೆ, ಹೆಣ್ಣುಮಕ್ಕಳಲ್ಲಿಯೂ ಜಾತಿದ್ವೇಷದ ಭೂತಕ್ಕೆ ಎಡೆಗೊಟ್ಟುದು. ವರ್ತುಲಪರಿಷತ್ತಿನ ಹಿಂದೂ ಮುಹಮ್ಮದೀಯ ಸ್ತ್ರೀ ಪ್ರತಿನಿಧಿಗಳಿಬ್ಬರೂ ಸ್ತ್ರೀಯರಿಗೆ ಪ್ರತ್ಯೇಕ ಮತದಾರ ಸಂಘವು ಬೇಕಾಗಿಲ್ಲವೆಂದು ಸ್ಪಷ್ಟವಾಗಿ ಹೇಳಿದ್ದರು. ಇದರಿಂದ ಕಾಯಿದೆಮಂದಿರಗಳಲ್ಲಿ — ಪೇಟೆಗಳಲ್ಲಿಯಷ್ಟೇ ಅಲ್ಲದೆ ಮನೆಮನೆಗಳಲ್ಲಿಯೂ ಜಾತಿಯ ಭೂತವನ್ನು ಎಬ್ಬಿಸಿದಂತಾಯಿತು.

೬. ಕೂಲಿಕಾರರಿಗಿಂತ ವ್ಯಾಪಾರಿವರ್ಗಕ್ಕೆ ಒಟ್ಟಿನಲ್ಲಿ ಹೆಚ್ಚು ಪ್ರಾತಿನಿಧ್ಯವು ದೊರೆತಿದೆಯೆಂದು ಹೇಳಬಹುದು. ವ್ಯಾಪಾರಿ ವರ್ಗಕ್ಕೆ ಒಟ್ಟಿನಲ್ಲಿ ೫೪ ಜಾಗೆಗಳೂ ಕೂಲಿಕಾರರಿಗೆ ೩೮ ಜಾಗೆಗಳೂ ಕಾದಿಡಲ್ಪಟ್ಟಿವೆ.

೭. ಯುರೋಪಿಯನರ ಜನಸಂಖ್ಯೆಯ ಮಾನದಿಂದ ಅವರಿಗೆ ವಿಪರೀತ ಪ್ರಾಶಸ್ತ್ಯವು ಕೊಡಲ್ಪಟ್ಟಿದೆ. ಬಂಗಾಲದಲ್ಲಿ ಅವರು ಬೆರಳಮೇಲೆ ಎಣಿಸುವಷ್ಟು ಜನರಿದ್ದರೂ, ಅವರಿಗೆ ನೂರರಲ್ಲಿ ೧೦ ರಷ್ಟು ಜಾಗೆಗಳು ಕಾದಿಡಲ್ಪಟ್ಟಿವೆ. ಆಸಾಮದಲ್ಲಿಯೂ ಹಾಗೆಯೆ. ಒಟ್ಟಿನಲ್ಲಿ ಹಿಂದೀ ವ್ಯಾಪಾರಿಗಳಿಗಿಂತ ಯುರೋಪಿಯ ವ್ಯಾಪಾರಿಗಳಿಗೆ ಅವಾಸ್ತವ ಪ್ರಾತಿನಿಧ್ಯವು ದೊರೆತಿದೆ. ಅಂತು ಬಂಗಾಲ ಪಂಜಾಬ ಮುಂತಾದಪ್ರಾಂತಗಳಲ್ಲಿ ಯುರೋಪೀಯರು ಮುಹಮ್ಮದೀಯರೊಡನೆ ಕಲೆತುಕೊಂಡು ಹಿಂದೂಗಳಿಗೆ ಮತ್ತು ರಾಷ್ಟ್ರೀಯವೃತ್ತಿಯವರಿಗೆ ತಲೆಯೆತ್ತಗೊಡದಂತೆ ಮಾಡಲಾಗಿದೆ.

೮. ಈ ಜಾತಿಪ್ರಾತಿನಿಧ್ಯದ ವ್ಯವಸ್ಥೆಯು ೧೦ ವರ್ಷಗಳವರೆಗೆ ಬಳಕೆಯಲ್ಲಿ ಇರತಕ್ಕುದು. (ಹೊಸ ರಾಜ್ಯಸುಧಾರಣೆಯು ಪ್ರಕಟವಾಗುವ ಮೊದಲು ವಿವಿಧ ಜಾತಿ ಸಂಗಡಗಳು ಬೇಕಾದರೆ ಐಕಮತ್ಯದಿಂದ ಇನ್ನೊಂದು ಪ್ರಾತಿನಿಧ್ಯದ ಪದ್ಧತಿಯನ್ನು ಏರ್ಪಡಿಸಿಕೊಳ್ಳಬಹುದು. ಆದರೆ ಆ ಮೇಲೆ ಮಾತ್ರ ೧೦ ವರ್ಷಗಳ ತನಕ ಅದರ ಕೂದಲನ್ನೂ ಕೊಂಕಿಸಲು ಬರುವಂತಿಲ್ಲ.) ೧೦ ವರ್ಷಗಳ ತರುವಾಯ ಕೂಡ ಬಹುಜನಸಮುದಾಯಕ್ಕೆ ಈ ವ್ಯವಸ್ಥೆಯನ್ನು ಬದಲುಮಾಡಲಿಕ್ಕೆ ಅಧಿಕಾರವಿರದೆ, ಕಾಯಿದೆಮಂಡಲದ ಸಭಾಸದರು ಬಹುಮತದಿಂದ ಅದನ್ನು ಬದಲುಮಾಡಲು ಅಧಿಕಾರವುಳ್ಳವರಾಗುವರೆಂದು ತೋರುತ್ತದೆ.

೯. ಕೇಂದ್ರಶಾಸನ ಸಭೆಯಲ್ಲಿನ ಪ್ರಾತಿನಿಧ್ಯದ ಪ್ರಮಾಣವನ್ನು ಇನ್ನೂ ನಿರ್ಣಯಿಸಿಲ್ಲ. ಇದರಿಂದ ಬ್ರಿಟಿಶ್ ಸರಕಾರವು ಕೇಂದ್ರಸ್ವಾಯತ್ತತೆಯ ಪ್ರಶ್ನೆಯನ್ನು ಹಾಗೇ ಅಂತರಾಳದಲ್ಲಿ ತೂಗಬಿಡುವ ಅಪೇಕ್ಷೆಯುಳ್ಳವರಿದ್ದಾರೆಂಬ ಅನೇಕರ ಸಂಶಯಕ್ಕೆ ಪುಷ್ಟಿಯು ದೊರೆಯುತ್ತಿದೆ.

೧೦. ಸಿಂಧವನ್ನು ಪ್ರತ್ಯೇಕಿಸುವ ವಿಚಾರವು ಇನ್ನೂ ಖಂಡಿತಕ್ಕೆ ಬಂದಿಲ್ಲ. ಆದರೆ, ಅದು ಪ್ರತ್ಯೇಕವಾಗುವುದು ಪ್ರಾಪ್ತವೆಂದು ಒಟ್ಟಾರೆ ಎನಿಸುವ ಹಾಗೆ ಇದೆ.

ಎಲ್ಲ ಹಿಂದೂ ಶೀಖ ಮುಖಂಡರು ಪಂಜಾಬ ಬಂಗಾಲಗಳಲ್ಲಿ ಮುಸಲ್ಮಾನರ ರಾಜ್ಯವು ನಡೆಯದಂತೆ ನೋಡಿಕೊಳ್ಳುವುದಾಗಿಯೂ,ಎಲ್ಲ ರಾಷ್ಟ್ರೀಯ ಮನೋವೃತ್ತಿಯವರು — ಈ ತೀರ್ಪು ಭಾರತವರ್ಷವನ್ನು ಶಕಲಶಕಲವಾಗಿ ವಿಭಾಗಿಸುತ್ತಿರುವುದಾದ್ದರಿಂದ ತ್ಯಾಜ್ಯವೆಂದೂ, ಹಲವು 'ಉದಾರ ಮತವಾದಿಗಳು' ಇದು ದೇಶಪಾತಘಾತಕವೆಂದೂ, ಎಲ್ಲ ರಾಷ್ಟ್ರೀಯಮುಸಲ್ಮಾನರು ಈ ಭೇದನೀತಿಗೆ ತಮ್ಮ ಸಮ್ಮತಿಯಿಲ್ಲವೆಂದೂ ಒಡಂಬಡಿಸಿದ್ದಾರೆ. ಹಿಂದುಸ್ಥಾನದಲ್ಲಿ ಹಿಂದು — ಮುಸಲ್ಮಾನ, ಶೀಖ — ಮುಸಲ್ಮಾನ, ಕಪ್ಪು — ಬಿಳಿ, ಸ್ಪೃಶ್ಯರು—ಅಸ್ಪೃಶ್ಯರು, ಗಂಡು — ಹೆಣ್ಣು, ಕೂಲಿ — ಬಂಡವಾಳ, ರೈತರು-ಜಮಿನಾನುದಾರರು — ಈ ಹಲವುಬಗೆಯ ಜಾತಿ-ವರ್ಗ-ವರ್ಣಭೇದಗಳನ್ನು ಶಾಶ್ವತವೂ ಜಾಜ್ವಲ್ಯತರವೂ ಆಗಿಸುವುದೇ ಈ 'ಪಂಚಾಯತಿ'ಯ ಫಲಿತಾಂಶವಾಗಿದೆಯೆಂದು ವಿಚಾರಿಗಳೆಲ್ಲ ಏಕವಾಕ್ಯತೆಯಿಂದ ಹೇಳುತ್ತಿದ್ದಾರೆ.

## ಪಾಪಧನ

ಹಿಂದೀಯರ ಆಕಾಂಕ್ಷೆಗಳನ್ನು ಬಲವಾಗಿ ಬೆಂಬಲಿಸುವ ಲಂಡನ್ನಿನ 'ದಿ ಇಂಡಿಯಾ ರಿವ್ಯೂ' ಎಂಬ ಪತ್ರಿಕೆಯಲ್ಲಿ, ಇಲ್ಲಿಯ ಸರಕಾರದ ಮದ್ಯಪಾನದ ಪ್ರಾಪ್ತಿಯನ್ನು ಕುರಿತು, ಫ್ರೆಡ್‌ರಿಕ್ ಗ್ರಬ್ ಎಂಬವರು ಈ ತೆರನಾಗಿ ಬರೆದಿದ್ದಾರೆ:—

ಹಿಂದುಸ್ಥಾನ ಸರಕಾರದ ಈಗಿನ ರಾಜ್ಯದಾಡಳಿತಕ್ಕೆ ವಿರುದ್ಧವಾಗಿ ಗಾಂಧಿಯವರು ಹೂಡಿದ ಸತ್ಯಾಗ್ರಹ ಚಳವಳಿಯಲ್ಲಿ ಮದ್ಯಪಾನವಿರೋಧಕ್ಕೆ ಮಹತ್ತ್ವ

CC-0. Jangamwadi Math Collection. Digitized by eGangotri

ಸ್ಥಾನವಿರುವುದರಿಂದ, ಆ ವಿಷಯವನ್ನು ಕುರಿತು ಕೆಲವು ನಿಜ ಸಂಗತಿಗಳನ್ನು ಇಲ್ಲಿ ಹೇಳುವೆನು. ಯುರೋಪೀಯರಿಂದಲೇ ಹಿಂದೀ ಜನರು ಮದ್ಯಪಾನದ ಚಟವನ್ನು ಕಲಿತರೆಂದು ಹೇಳುವುದು ಅತಿಶಯೋಕ್ತಿಯೇ ಸರಿ. ಹಿಂದೂ ಶಾಸ್ತ್ರಗ್ರಂಥಗಳಲ್ಲಿ ಸುರಾಪಾನವನ್ನು ನಿಷೇಧಿಸುವ ಹಲವು ವಚನಗಳು ದೊರೆಯುತ್ತಿದ್ದರೂ, ಸುರಪಾನಾಸಕ್ತಿಯು ತೀರ ಪ್ರಾಚೀನಕಾಲದಿಂದ ಕೆಲವೊಂದು ಪ್ರಮಾಣದಲ್ಲಿ ಹಿಂದುಸ್ಥಾನದಲ್ಲಿದ್ದಿತೆಂಬ ಬಗ್ಗೆ ಹಲವು ಆಧಾರಗಳು ದೊರೆಯುತ್ತಿವೆ.

ಆದರೂ, ಮೂರು ಮಾತುಗಳು ನಿರ್ವಿವಾದವಾಗಿವೆ:-

(೧) ಬ್ರಿಟಿಶರ ಆಗಮನದ ಪೂರ್ವದಲ್ಲಿ ಆ ಚಟವು ಇಡೀ ಜನಸಂಖ್ಯೆಯ ಸ್ವಲ್ಪ ಪ್ರಮಾಣವನ್ನು ಮಾತ್ರ ಬಾಧಿಸಿದ್ದಿತು.

(೨) ಈ ಚಟದ ಅತಿರೇಕವಂತೂ ತೀರಾ ಇತ್ತೀಚೆಗಿನದಾಗಿದೆ; ಮತ್ತು ಕಳೆದ ಅರುವತ್ತು ವರುಷಗಳಲ್ಲಿ ಕುಡಿತದ ಪ್ರಮಾಣವು ವಿಪರೀತವಾಗಿ ಬೆಳೆದಿದೆ.

(೩) ಬ್ರಿಟಿಶ ಪೂರ್ವದ ಪ್ರಭುತ್ವದಲ್ಲಿ ಮದ್ಯವಿಕ್ರಯವು ಈಗಿನ ಹಾಗೆ ವ್ಯವಸ್ಥಿತವೂ ಸರಕಾರದಿಂದ ಮಾನ್ಯತೆಯನ್ನು ಪಡೆದುದೂ ಆಗಿರಲಿಲ್ಲ. ಇದೀಗ ಅದು ಸರಕಾರದ ಧನಪ್ರಾಪ್ತಿಯ ಬಹು ದೊಡ್ಡ ಸಾಧನೆಯಾಗಿದೆ.

ಐವತ್ತು ವರ್ಷಗಳ ಪೂರ್ವದಲ್ಲಿ ಬ್ರಿಟಿಶ್ ಹಿಂದುಸ್ಥಾನದ ಮದ್ಯಪಾನಪ್ರಾಪ್ತಿಯು ೩ ಕೋಟಿ ರೂ. ಗೆ ಕಡಿಮೆಯೇ ಆಗಿದ್ದಿತು. ಈವೊತ್ತು ಅದು ಪ್ರತಿ ವರುಷಕ್ಕೆ ೨೨ ಕೋಟಿ, ೫ ಲಕ್ಷಕ್ಕೆ ಏರಿದೆ. ಮುಂಬಯಿ ಮದ್ರಾಸ ಮೊದಲಾದ ಹಿರಿಯ ಪ್ರಾಂತಗಳಲ್ಲಿ ದೇಶೀ ಸೆರೆಯ ಕುಡಿತವೇ ೬೨ ಲಕ್ಷ ಗ್ಯಾಲನ್ನಿನಷ್ಟಿದೆ. ಒಟ್ಟು ಪ್ರಾಂತಿಕ ಉತ್ಪನ್ನದಲ್ಲಿ ಮದ್ಯಪಾನದ ಪ್ರಾಪ್ತಿಯೇ ೪೦ ರಷ್ಟಿದೆ: ಕೆಲಕೆಲವು ಪ್ರಾಂತಗಳಲ್ಲಿ ಪ್ರಮಾಣವು ಇನ್ನೂ ಹೆಚ್ಚಾಗಿದೆ;- ಬಿಹಾರ ಓರಿಸಾ ಪ್ರಾಂತಗಳಲ್ಲಿ ನೂರಕ್ಕೆ ೩೨ರಷ್ಟು, ಮದ್ರಾಸದಲ್ಲಿ ೩೩.೩ ರಷ್ಟು ಇದೆ. ಮದ್ಯಪಾನವನ್ನು ಗಡಿಗಾಣಿಸುವ ಹೊಣೆಯು ಪ್ರಾಂತಿಕ ಸರಕಾರಗಳ ಮೇಲೆಯೆ ಇದೆ: ಬಹುಶ: ಎಲ್ಲ ಪ್ರಾಂತಿಕ ಸರಕಾರಗಳು ಮದ್ಯಪಾನ ಪ್ರತಿಬಂಧ ವಿಷಯದಲ್ಲಿ ವಾಗ್ಬದ್ಧವಾಗಿವೆ; ಆದರೆ ಮಾದಕದ್ರವ್ಯಗಳ ಉತ್ಪನ್ನವು ಪ್ರಾಪ್ತಿಯ ಬಹು ದೊಡ್ಡ ಅಂಗವಾಗಿದ್ದುದರಿಂದ, ಅವುಗಳ ಪ್ರತಿಬಂಧವನ್ನು, ರಾಷ್ಟ್ರೀಯರ ಬೇಡಿಕೆಯ ಮೇರೆಗೆ, ಒಮ್ಮೆಲೆ ಬಳಕೆಯಲ್ಲಿ ತರುವುದು ಪ್ರಾಂತಿಕ ಸರಕಾರಗಳಿಗೆ ಕಠಿನವಾಗಿದೆ.

ತಮ್ಮ ಹಿಂದಿನವರು ಬಿತ್ತಿದುದನ್ನು ಈಗಿನ ಆಡಳಿತದವರು ಬೆಳಕೊಳ್ಳುತ್ತಿದ್ದಾರೆ. ಕಂದಾಯದ ಉತ್ಪನ್ನವು ವೃದ್ಧಿಂಗತವಾಗುವ ಹಾಗೆ, ಸೆರೆಯನ್ನು ಹುಟ್ಟಿಸುವ ಮತ್ತು ಹಂಚುವ ಅತ್ಯುತ್ತಮವಾದ ವ್ಯವಸ್ಥೆಯು ಯಾವುದು ಎಂಬುದನ್ನು ಹುಡುಕಿ ತೆಗೆಯುವದೇ ಹಳೆಯ ಆಡಳಿತದ ಉದ್ದೇಶವಾಗಿದ್ದಿತು. ಸರಕಾರದ ನಿಯಮನದಲ್ಲಿ ಸೆರೆಯ ನಿರ್ಮಾಣವನ್ನೂ ವಿಕ್ರಯವನ್ನೂ ಇರಿಸುವುದರಿಂದ ಮದ್ಯಪಾನದ ಅತಿರೇಕವು ಅಂಕೆಯಲ್ಲುಳಿಯುವುದೆಂದು ಆಗಿನವರ ಭಾವನೆಯಿದ್ದಿತು. ಕುಡಿತದ ವ್ಯಾಪಾರವು ಈವೊತ್ತು ಸರಕಾರದ ಗುತ್ತಿಗೆಯೇ ಆಗಿದೆಯೆಂದರೆ ಅತ್ಯುಕ್ತಿಯಾಗದು. ಇಂತಹ ವ್ಯವಹಾರದಲ್ಲಿ ಸರಕಾರದ ಅಂಗವಿದ್ದುದು ಪ್ರತಿಯೊಬ್ಬ ವಿವೇಕಿಯಾದ ಹಿಂದುವಿಗೆ ಮತ್ತು ಮಹಮ್ಮದೀಯನಿಗೆ ಹೇಸಿಗೆಯನ್ನು ಹುಟ್ಟಿಸುವುದಾಗಿದೆ.

ಮದ್ಯಪಾನಕ್ಕೆ ಪೂರಾ ಪ್ರತಿಬಂಧವಾಗಬೇಕೆಂಬುದೇ ಹಿಂದೀ ಮದ್ಯಪಾನವಿರೋಧಕರ ಬೇಡಿಕೆಯಾಗಿದೆ. ಆದರೂ, ಕೆಲಕೆಲವು ಕಡೆ ಕ್ರಮೇಣ ಆ ಗುರಿಯನ್ನು ಮುಟ್ಟುವುದಕ್ಕೆ ಯೋಚಿಸಬಹುದಾದ ಉಪಾಯಗಳಿಗೆ ಅವರು ಸಮ್ಮತಿಯನ್ನು ತೋರಿಸದಿರಲಾರರು. ಈ ವಿಷಯದಲ್ಲಿ ಇಂಗ್ಲಂಡಿನಲ್ಲಿ ಎಷ್ಟು ಜನಮತಜಾಗೃತಿಯಿದೆಯೋ ಅದಕ್ಕಿಂತ ಹೆಚ್ಚು ಹಿಂದುಸ್ಥಾನದಲ್ಲಿದೆಯೆಂದು ನಾನು ಹೇಳಬಲ್ಲೆನು.



CC-0. Jangamwadi Math Collection. Digitized by eGangotri

# ನಮ್ಮ ಮಾತು

## ರಾಷ್ಟ್ರಯೋಗಿಗೆ ವಂದನೆಗಳು

ಯುಗಧರ್ಮವನ್ನರಿತು, ಭಾರತೀಯ ಧರ್ಮ–ತತ್ತ್ವ ಯೋಗಪ್ರಣಾಲಿಕೆಗಳನ್ನು ಆಧುನಿಕರ ವಿಚಾರಸರಣಿಗೂ ಒಪ್ಪುವಂತೆ ಮಾಡಿದ ಶ್ರೇಯಸ್ಸು ಶ್ರೀಅರವಿಂದರಿಗಿದೆ. ಎಲ್ಲೆಲ್ಲಿಯೂ ವಿಚಾರಸಂಕರವು ವ್ಯಾಪಿಸಿಕೊಂಡಿರಲು, ವಿಚಿತ್ರರಾಜಕೀಯ ಪರಿಸ್ಥಿತಿಯ ಮೂಲಕ ನಮ್ಮ ನಾಡಿನ ತರುಣಲೋಕವು ದಿಙ್ಮೂಢವಾಗಿರಲು, ಶ್ರೀಅರವಿಂದರ ದರ್ಶನವು ವಿಚಾರಶೀಲರಿಗೆ ಬೆಳಕು ದೋರದಿರಲಾರದೆಂದು ನಮ್ಮ ಅಭಿಪ್ರಾಯವಿದೆ. ೧೫ನೆಯ ಅಗಸ್ಟಿನ ದಿನ ಜರುಗಿದ ಅವರ ಜನ್ಮದಿನೋತ್ಸವದ ನಿಮಿತ್ತವಾಗಿ ನಮ್ಮ ಭಕ್ತಿಭಾವದ ಕುಸುಮವನ್ನು ಅವರ ಪಾದತಲದಲ್ಲಿ ಸಲ್ಲಿಸುತ್ತೇವೆ.

## ಜಯಕರ್ನಾಟಕಮಂಡಲದ ಕಾರ್ಯಕಲಾಪ

ನಮ್ಮ ಸಂಪಾದಕಮಂಡಲದಲ್ಲೊಬ್ಬರಾದ ಶ್ರೀ. ನರೇಗಲ್ಲ ಪ್ರಲ್ಹಾದರಾಯರು ಚಿತ್ರದುರ್ಗ ಜಿಲ್ಲೆಯ ದಾವಣಗೆರೆ, ಮೊಳಕಾಲ್ಮುರು, ಜಗಳೂರು, ಹರಿಹರ ಇಲ್ಲೆಲ್ಲ ಆಧುನಿಕ ಕಾವ್ಯಪರಿಚಯಾತ್ಮಕವಾದ ಉಪನ್ಯಾಸವನ್ನು ಮಾಡಿದರಲ್ಲದೆ, ಹೊಸಕವಿಗಳ ಕವಿತೆಗಳನ್ನು ಓದಿ ತೋರಿಸಿ ಜನರಿಗೆ ಹೊಸ ಸಾಹಿತ್ಯದ ರುಚಿಯನ್ನು ತೋರಿಸಿದರು. ಒಂದೇ ದಾವಣಗೆರೆಯಲ್ಲಿ ಬೇರೆ ಬೇರೆ ಐದು ಕೂಟಗಳು ನಡೆದುವೆಂಬುದನ್ನು ಕೇಳಿದರೆ ಜನರಿಗುಂಟಾದ ಕವಿತೆಯ ಹಸಿವಿನ ಕಲ್ಪನೆಯಾಗದಿರದು. ಈಗಿನ ರುಕ್ಷಜೀವನದಲ್ಲಿ ಸ್ನಿಗ್ಧತೆಯನ್ನು ತಂದುಕೊಳ್ಳಬೇಕಾಗಿದ್ದರೆ ಸಾಹಿತ್ಯವೇ ಸರಿಯಾದ ಸಾಧನವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಗೆ. ಪ್ರಲ್ಹಾದರಾಯರನ್ನು ಆದರದಿಂದ ಕಂಡು, ಅಲ್ಲಲ್ಲಿ ಅವರ ಕಾರ್ಯಕ್ರಮಗಳು ನಡೆಯುವಂತೆ ಏರ್ಪಾಡು ಮಾಡಿದ ಮಹನೀಯರೆಲ್ಲರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

## ಆದಿಕರ್ಣಾಟಕರಿಗೆ ಎಚ್ಚರಿಕೆ

ಮೈಸೂರು ಸರಕಾರದವರು 'ಅಸ್ಪೃಶ್ಯರು' ಅಂತ್ಯಜರು, ಎಂಬ ತಿರಸ್ಕಾರದರ್ಶಕವಾದ ಹೆಸರನ್ನು ಉಪಯೋಗಿಸದೆ, ಅಲ್ಲಿಯ ಪಂಚಮರನ್ನು 'ಆದಿಕರ್ಣಾಟಕರು' ಎಂಬ ಹೆಸರಿನಿಂದ ಕರೆಯಬೇಕೆಂದು ಕಟ್ಟಳೆಯನ್ನೇ ಮಾಡಿಬಿಟ್ಟಿದ್ದಾರೆ. ಅವರ ಉದ್ಧಾರಕ್ಕಾಗಿ ಹಲವು ರೀತಿಯಿಂದ ಪ್ರಯತ್ನಿಸುತ್ತಿದ್ದಾರೆ. ಪಾಠಶಾಲೆಗಳಲ್ಲಿ ಆದಿಕರ್ಣಾಟಕರ ಬಾಲಕರು ಎಲ್ಲರ ಜೊತೆಯಲ್ಲಿ ಓದುವಂತೆ ಏರ್ಪಾಡು ಮಾಡಿದ್ದಾರೆ. ಇಷ್ಟಾದರೂ ಪರಮತಸ್ಥರ ಹುರುಳಿಲ್ಲದ ಹೇಳಿಕೆಗೆ ಮರುಳಾಗಿ ಅವರ ಮತಕ್ಕೆ ಸೇರುತಿರುವುದು ತುಂಬ ವಿಷಾದಕರವೆಂದು ಮೈಸೂರು ಪ್ರ. ಪ್ರ. ಸಭೆಯ ಮೆಂಬರಾದ ಶ್ರೀ ರಾಮಲಿಂಗಂ ಅವರೂ ಚಿತ್ರದುರ್ಗದ ಡಿ. ಬೋ. ಮೆಂಬರಾದ ಶ್ರೀ. ಆಟದ ಪೆನ್ನಯ್ಯನವರೂ ಸೇರಿ ಒಂದು ವಿಜ್ಞಾಪನಾ ಪತ್ರಿಕೆಯನ್ನು ತೆಗೆದಿದ್ದಾರೆ. ಅದರಲ್ಲಿ ಎಲ್ಲ ಕಡೆಯ ಆದಿದ್ರಾವಿಡ–ಆದಿಕರ್ಣಾಟಕರೂ ಓದಿ ನೆನಪಿನಲ್ಲಿಟ್ಟುಕೊಂಡು ನಡೆಯಬಹುದಾದ ವಿಷಯಗಳಿವೆ. ಅಸ್ಪೃಶ್ಯರ ಉದ್ಧಾರಕ್ಕಾಗಿ ಉತ್ತಮಜಾತಿಯವರಲ್ಲಿಯೂ ಧರ್ಮಪೀಠಗಳಲ್ಲಿಯೂ ಬಿನ್ನವಿಸಿಕೊಳಲಾಗಿದೆ, ಆ ಪತ್ರಿಕೆಯಲ್ಲಿ. ದಿನದಿನಕ್ಕೆ ಖಿಲವಾಗುತ್ತ ನಡೆದ ಹಿಂದುಸಮಾಜವು ತನ್ನ ಭೌತಿಕಬಲವನ್ನು ಕಾಯ್ದುಕೊಳಲಿಕ್ಕಾದರೂ ನಮ್ಮ ಆದಿದ್ರಾವಿಡ- ಆದಿಕರ್ಣಾಟಕರನ್ನು ಒಳಗೊಳ್ಳುವುದು ಆವಶ್ಯಕವಾಗಿದೆ. ಆದಿಕರ್ಣಾಟಕರು ಸ್ವಮತದಲ್ಲಿಯೇ ಇದ್ದುಕೊಂಡು ತಮ್ಮ ಹಕ್ಕಿಗಾಗಿ ಹೋರಾಡಲಿ. ಪರಧರ್ಮಕ್ಕೆ ಸೇರಿ ಇಹಪರಗಳೆರಡೂ ಇಲ್ಲದೆ ತೊಳಲಾಡದಿರಲಿ !

## ಅಭಿನಂದನೆಗಳು

ದಕ್ಷಿಣಕನ್ನಡ ಜಿಲ್ಲೆಯವರಾದ ಶ್ರೀ. ಎನ್. ನರಸಿಂಹಮೂರ್ತಿ ಬಿ. ಎ. ಅವರು 'ಪಿ. ಎಚ್. ಡಿ; ಡಿ. ಎ. ಸಿ.' ಪದವಿಯನ್ನು ಪಡೆದು ಇಂಗ್ಲಂಡಿನಿಂದ ಮರಳಿ ತಾಯಿನಾಡಿಗೆ ಬಂದರು. ಈಗ ಅಹಮ್ಮದಾಬಾದ್ ಜಿಲ್ಲೆಯಲ್ಲಿ ನ್ಯಾಯಾಧೀಶರಾಗಿರುವ ಶ್ರೀ. ನಾ. ಸ್ವಾ. ಲೋಕೂರ ಅವರ ತಮ್ಮಂದಿರಾದ ಶ್ರೀ. ಸ್ವಾಮಿರಾವ ಲೋಕೂರ ಬಿ. ಎಸ್. ಸಿ. ಅವರು 'ಫಿಲಾಡೆಲ್ಫಿಯಾ ವಿಶ್ವವಿದ್ಯಾಲಯದಲ್ಲಿದ್ದು 'ಟೆಕ್ಸ್‌ಟೈಲ್ ಎಂಜನಿಯರಿಂಗ್' ಅಭ್ಯಾಸಿಸಲು ಅಮೇರಿಕೆಗೆ ಹೊರಡಲಿರುವರೆಂದು ವಾರ್ತೆಯಿಂದ ಜಯಕರ್ನಾಟಕವು ಇಬ್ಬರನ್ನೂ ಆತ್ಮೀಯ

CC-0. Jangamwadi Math Collection. Digitized by eGangotri

ಭಾವದಿಂದ ಅಭಿನಂದಿಸುತ್ತದೆ. ಮರಳಿ ಬಂದವರೂ ಪೊರ ಚಲಿರುವವರೂ ಕರ್ನಾಟಕವನ್ನು ಕಣ್ಣೆದುರಿಗೆ ಇಟ್ಟು ಕೊಂಡಿರಲಿ!

## ಸಾಂಸ್ಕೃತಿಕ ಸಮಾಚಾರಗಳು

### ಬೆಳಗಾಂವಿಯ ವೀರಶೈವ ತರುಣಸಂಘ

ಕಳೆದ ಬಸವಜಯಂತಿಯ ದಿನವೆ ಉತ್ಸಾಹಿಗಳಾದ ಕೆಲವು ತರುಣರಿಂದ ಇದು ಪುನರುಜ್ಜೀವನಗೊಂಡಿದೆ. ವಿದ್ಯಾರ್ಥಿಗಳು ವಕೀಲರು ವರ್ತಕರು ಎಲ್ಲಬಗೆಯ ಜನರೂ ಇದಕ್ಕೆ ಕೈಗೊಟ್ಟಿರುವರು. ಸಮಾಜಸಂಸ್ಕಾರ; ಮತ-ಪಂಗಡಗಳ ಐಕ್ಯ ಇವೇ ಈ ಸಂಘದ ಉದ್ದೇಶಗಳು. ಈ ಸಂಘವು ಬೆಳಗಾಂವಿಯ ಮ್ಯುನಿಸಿಪಾಲಿಟಿಯ ಮೇರೆಯ ಲ್ಲಿಯ ಜನಗಣನೆಯ ಕಾರ್ಯವನ್ನು ಕೈಕೊಂಡು ನೆರ ವೇರಿಸಿದುದು ಪ್ರಶಂಸನೀಯವಾದ ಕಾರ್ಯ. ದೇಹ ಬಲದ ಬೆಳವಣಿಗೆಗೆ ವ್ಯಾಯಾಮಪರ್ಗವೊಂದನ್ನು ನಡೆ ಯಿಸಲಾಗಿದೆ. ಬುದ್ಧಿಯಬಲದ ಬೆಳೆವಣಿಗೆಗೆ ಆಗಾಗ ಬಲ್ಲಿದರಾದವರಿಂದ ಉಪನ್ಯಾಸ ಪ್ರವಚನಗಳ ಕಾರ್ಯಕ್ರ ಮಗಳು ಜರುಗುವವು. ಬೇಗನೆ ಈ ಸಂಘವು ಶಹಾಪುರ ದಲ್ಲಿಯೂ ಒಂದು ವ್ಯಾಯಾಮಶಾಲೆಯನ್ನು ತೆರೆಯು ವುದರಲ್ಲಿದೆ. ಸಂಘದ ಕಾರ್ಯವು ಕರ್ನಾಟಕತ್ವಕ್ಕೆ ಪೋಷಕವಾಗಿ ಸಾಗುತ್ತಿದೆಯೆಂಬ ಬಗ್ಗೆ ನಮಗೆ ಸಂದೇಹ ವಿಲ್ಲ. ಸಂಘದ ಕಾರ್ಯವನ್ನು ಹೆಚ್ಚು ಉತ್ಸಾಹದಿಂದ ವಹಿಸಿಕೊಂಡ ಶ್ರೀಯುತರಾದ ಎಸ್. ವಿ. ಅಡ್ಡಣಿಗಿ, ಬಿ. ಎ. ಹಿರೇಮಠ, ತಲ್ಲೂರ, ಮತ್ತು ಕೆ. ಎಸ್. ಪಾಟೀಲ ಇವರಿಗೆ ನಮ್ಮ ಅಭಿನಂದನೆಗಳು.

### ಸಾಂಗಲಿಯ ವಿಲಿಂಗ್ಡನ್ ಕಾಲೇಜಿನ ಕರ್ನಾಟಕಸಂಘದ ಕಾರ್ಯಕಲಾಪ.

ಜುಲೈ ತಿಂಗಳಲ್ಲಿ ಪ್ರೊ. ಜಹಗೀರದಾರರನ್ನು ಕರೆ ಯಿಸಿ, 'ಕನ್ನಡ ಸಾಹಿತ್ಯದ ಬೆಳೆವಣಿಗೆ', 'ಗೀತೆಯ ಸಂದೇಶ' ಇವುಗಳ ವಿಚಾರವಾಗಿ ಉಪನ್ಯಾಸಮಾಡಿಸಲಾಯಿತು. ಆಗಸ್ಟ ಹದಿನೇಳನೆಯ ತಾರೀಖಿಗೆ ಮುಂಬಯಿಯ ಏರ್ಸ್ಟ್ನ್ ಕಾಲೇಜಿನ ಅರ್ಥಶಾಸ್ತ್ರವಿಶಾದರಾದ ಪ್ರೊ. ವಿಜಯೇಂದ್ರರಾಯರನ್ನು ಕರೆಯಿಸಿ ಈ ಸಂಘವು ಅವರ ಯುರೋಪಿನ ಪ್ರವಾಸದ ಬಗ್ಗೆ 'ಸುಖ ಪ್ರಯಾಣ'ವನ್ನು ಏರ್ಪಡಿಸಿತು. ಈ ಸಂದರ್ಭದಲ್ಲಿ ಶ್ರೀ. ರಾಯರು 'ಕರ್ನಾ ಟಕ ಯುವಕರ ಮುಂದಿದ್ದ ಕಾರ್ಯ' ಎಂಬ ವಿಚಾರದ ನೈತ್ತಿ ಮಾತನಾಡಿದರು. ಅದರಲ್ಲಿ ಅವರು "ಕರ್ನಾಟಕ ದಲ್ಲಿದ್ದ ಜಾತಿಯ ಭೂತವನ್ನು ಬದಿಗೊತ್ತುವ ಭಾರವು ಯುವಕರ ಹೆಗಲಮೇಲಿದೆ. ಆದ್ದರಿಂದ ಅಲ್ಲಲ್ಲಿ ಬ್ರಾಹ್ಮಣ ಬ್ರಾಹ್ಮಣೇತರವೆಂಬ ಭೇದಭಾವವನ್ನಳಿದು ಎಲ್ಲ ಜಾತಿ ಯುವರನ್ನೊಳಗೊಂಡ ಸಂಘಗಳು ಅಲ್ಲಲ್ಲಿ ಒಗೆಯುವಂತೆ ಯತ್ನಿಸಬೇಕು. ಕರ್ನಾಟಕ ಏಕೀಕರಣವೆಂದು ಕೆಮ್ಮನೆ ಕಿರುಚಿದರೆ ಕಾರ್ಯವಾಗದು. ಅದು ಕೇವಲ ಕಾಲಾ ಧೀನವಾದ ಮಾತು. ಆದರೆ ಆ ಕೆಲಸಕ್ಕೆಯೇ ನಮ್ಮ ಶಕ್ತಿಸರ್ವಸ್ವವನ್ನೆಲ್ಲ ಸೂರೆಗೊಳ್ಳುವ ಮೊದಲು ಸಮಾಜ ವೃಕ್ಷವು ಮೊಳೆತು, ಚಿಗಿತು, ಪಲ್ಲವಿಸಿ, ಫಲದಾಯಕವಾ ಗುವಂತೆ ಪ್ರಯತ್ನಮಾಡುವದು ಹರಯದವರ ಹಂಬಲ ವಾಗಿರಬೇಕು. ಇದೇ ಸಂದರ್ಭದಲ್ಲಿ ಬ್ರಿಟಿಷ್ ಕರ್ನಾಟಕ ವನ್ನಷ್ಟೇ ಒಟ್ಟುಗೂಡಿಸುವದು ಉಚಿತವಾಗದು. ಮೈಸೂರು ಸಂಸ್ಥಾನವನ್ನೂ ಸೇರಿಸಿಕೊಂಡು ನಾವೆ ಲ್ಲರೂ ಏಕೀಕೃತರಾಗಬೇಕು. ಆನುಷಂಗಿಕವಾಗಿ ಕನ್ನಡ ವಲ್ಲದ ಜನರು ಕರ್ನಾಟಕದಲ್ಲಿ ಅನೇಕರು ನೆಲೆಗೊಂಡಿ ರುವರು. ಅವರಾವರೂ ಕರ್ನಾಟಕದ ಆಶೆಆಕಾಂಕ್ಷೆ ಗಳಲ್ಲಿ ಸಮರಸವಾಗಿ ಕೆಲಸಮಾಡಬೇಕು. ........" ಇತ್ಯಾದಿಯಾಗಿ ಹೇಳಿದರು. ಸಂಘವು ಕನ್ನಡದ ಏಳಿ ಗೆಯ ಅನೇಕ ಕೆಲಸಗಳನ್ನು ಕೈಕೊಂಡು ಸಾಗಿದೆ. ಅದಕ್ಕೆ ನಮ್ಮ ಶ್ರೇಯಃಪ್ರಾರ್ಥನೆಗಳು.

### ಪುಣೆಯ ಕರ್ನಾಟಕಸಂಘದ ವಾರ್ಷಿಕೋತ್ಸವ

ತಾ॥ ೨೮-೭-೩೬ರ ದಿವಸ ಈ ಉತ್ಸವವು ಜರು ಗಿತು. ಪುಣೆಯ ಸರ್ವಂಟ್ಸ್ ಆಫ್ ಇಂಡಿಯಾ ಸೊಸಾ ಯಿಟಿಯ ಕಾರ್ಯದರ್ಶಿಗಳೂ, "ಸರ್ವಂಟ್ ಆಫ್ ಇಂಡಿಯಾ" ಪತ್ರದ ಸಂಪಾದಕರೂ ಆದ ಶ್ರೀಯುತ ಕೋದಂಡರಾಯರು ಅಧ್ಯಕ್ಷಪದವಿಯನ್ನು ವಹಿಸಿದ್ದರು

ತಮ್ಮ ಭಾಷಣದಲ್ಲಿ ಅವರು:-"ಈಗ ಹೀನದಿಸ ಪರಿಸ್ಥಿ ತಿಯಲ್ಲಿರುವ ಹಿಂದೀಜನಾಂಗದಲ್ಲಿ ಕಂಡುಬರುವ ಪ್ರತಿ ಯೊಂದು ದೋಷಕ್ಕೂ ಪರಪ್ರಭುತ್ವದ ಪ್ರಭಾವವೇ ಕಾರಣವೆಂದು ಹೇಳಲಾಗದು. ಅದೊಂದು ಪ್ರಬಲಕಾರ ಣವಾಗಿದ್ದರೂ, ನಮ್ಮ ಜನರಲ್ಲಿಯ ಆತ್ಮನಿರೀಕ್ಷಣೆಯ ಅಭಾವವೇ ಇವೆಲ್ಲದೋಷಗಳ ಹಿರಿದಾದ ಉಗಮವೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ನಾವು ನಮ್ಮ ಮತ್ತು ನಮ್ಮ ಜನಾಂಗದ ಗುಣದೋಷಗಳನ್ನು ಬಳ

CC-0. Jangamwadi Math Collection. Digitized by eGangotri

ಗಣ್ಣಿನಿಂದ ಪರೀಕ್ಷಿಸಿ ನೋಡಿ, ಆದರಿಂದ ಕಂಡುಬಂದ ನಮ್ಮಲ್ಲಿಯ ಕುಂದುಕೊರತೆಗಳನ್ನು ಕೈಲಾದಮಟ್ಟಿಗೆ ಸರಿಪಡಿಸಿಕೊಳ್ಳುತ್ತ ಹೋಗುವದೇ ಸಮಾಜಸೇವೆಯ ಮತ್ತು ಆತ್ಮೋನ್ನತಿಯ ಜೀವಾಳವು" ಎಂಬಾಶಯ ವನ್ನು ಇಂಗ್ಲೀಷಿನಲ್ಲಿ ಬೇರೆ ಬೇರೆ ದೃಷ್ಟಾಂತಗಳ ಮೂಲಕ ವ್ಯಕ್ತಗೊಳಿಸಿದರು. ಆನಂತರದಲ್ಲಿ ಪ್ರೊ. ಗೊಕಾಕ ಇವರು ಎದ್ದು ಶ್ರೀ. ಕೊದಂಡರಾವ, ಪ್ರಿನ್ಸಿಪಾಲ್ ಮಹಾಜನಿ, ಮತ್ತು ಪ್ರಿ. ಭಾಟೆ ಇವರ ಆಭಾರ ವನ್ನು ಮನ್ನಿಸಿದ ನಂತರ ಸಭಾವಿಸರ್ಜನವಾಯಿತು.

### ಚಿತ್ರಪರಿಚಯ

**ವನದೇವತೆ**:–ಇದನ್ನು ಬರೆದವರಾದ ಬೆಳಗಾಂವಿಯ ಶ್ರೀ. ಎಸ್. ಎಸ್. ಕಟ್ಟಿಯವರು ಮುಂಬಯಿಯ ಜೆ. ಜೆ. ಆರ್ಟ್‌ಸ್ಕೂಲಿನಲ್ಲಿ ಶಿಕ್ಷಣವನ್ನು ಪಡೆದವರಾಗಿದ್ದು ಚಿತ್ರಕಲೆಯಲ್ಲಿ ಇನ್ನೂ ದುಡಿಯಬೇಕೆಂಬ ಅಪೇಕ್ಷೆಯುಳ್ಳವರಾಗಿದ್ದಾರೆ. ಭಾರತೀಯ - ಪಾಶ್ಚಾತ್ಯಕಲೆಗಳ ಸೊಗಸನ್ನು ಬೆರೆಯಿಸುವ ಪ್ರಯತ್ನವು ಮುಂಬಯಿಯ ಕಲಾಶಾಲೆಯವರ ಇತ್ತೀಚಿನ ಕೃತಿಗಳಲ್ಲಿ ಕಂಡುಬರುತ್ತಿದೆ. ಶ್ರೀಯುತರಾದ ಕಟ್ಟಿಯವರೂ ಅದೇ ಹಾದಿಯನ್ನು ಹಿಡಿದಿದ್ದಾರೆ.

## ಸಾದರ ಸ್ವೀಕಾರ

೧೪೨ ರಸರತ್ನಾಕರ: (ಸಾಳ್ವಕವಿ ವಿರಚಿತ ರಸವಿಚಾರ ಗ್ರಂಥ) ಮದ್ರಾಸ ವಿಶ್ವವಿದ್ಯಾನಿಲಯದ ಕನ್ನಡಪ್ರಕಟನೆಯ ಎರಡನೆಯ ಗ್ರಂಥವಿದು. ಸಂಪಾದಕರು ಶ್ರೀ. ಎ. ವೆಂಕಟರಾವ ಬಿ. ಎ. ಎಲ್. ಟಿ. ಮತ್ತು ಪಂಡಿತ ಶೇಷಯ್ಯಂಗಾರ್ ಅವರು. ಡೆ. ಅ. ೩೦೦ ಪುಟಗಳು ಬೆಲೆ ೨-೪-೦

೧೪೩ ಸತ್ಯಾರ್ಥ-ಪ್ರಕಾಶ: ಆರ್ಯಸಮಾಜದ ಸಂಸ್ಥಾಪಕರಾದ ಶ್ರೀದಯಾನಂದರು ಹಿಂದೀಭಾಷೆಯಲ್ಲಿ ಬರೆದ ಇದೇ ಹೆಸರಿನ ಗ್ರಂಥದ ಅನುವಾದ. ಅನುವಾದಕರು ಬ್ರಹ್ಮಶ್ರೀ ಭಾಸ್ಕರಪಂತ್-ಸುಬ್ಬನರಸಿಂಹಶಾಸ್ತ್ರಿ-ವಿಶಾರದರು. ಬೆಂಗಳೂರಿನ ಆರ್ಯಸಮಾಜದ ಪ್ರಕಟನೆ. ರಾಯಲ್ ಅ. ೨೦+೬೩೫ ಪುಟಗಳು. ಬೆಲೆ ೨-೦-೦

೧೪೪ ಜೈಮಿನಿಭಾರತಕಥಾಸಂಗ್ರಹ: ಮೈಸೂರು ಶಾಸನದ ಇಲಾಖೆಯ ಅಸಿಸ್ಟಂಟ್ ಶ್ರೀ. ರಾ. ರಾಮರಾವ್ ಬಿ. ಎ. ಅವರು ವಿರಚಿಸಿದುದು. ಡೆ.ಅ ೩೨+೩೧೪ ಪುಟಗಳು. ಬೆಲೆ ೧-೪-೦

೧೪೫ ರೇವಾಕೋಟ್ಯಾಚಾರ್ಯಪ್ರಣೀತಂ ವೊಡ್ಡಾರಾಧಣಂ: (ಮೂರು ಕಥೆಗಳು ಮಾತ್ರ) ಸಂಪಾದಕರು ಶ್ರೀ. ಡಿ. ಎಲ್. ನರಸಿಂಹಾಚಾರ್ಯರು. ಕರ್ಣಾಟಕ ಸಾಹಿತ್ಯಪರಿಷತ್ತು ಪ್ರಕಟಿಸಿದುದು. ರಾಯಲ್ ಅ. ೬೦ ಪುಟಗಳು, ಬೆಲೆ?

೧೪೬ ವೈದಿಕ ವಿವಾಹಪದ್ಧತಿ: (ಮೊದಲನೆಯಭಾಗ) ಲೇಖಕರು ಶ್ರೀ. ಭಾಸ್ಕರಪಂತ್-ಸುಬ್ಬನರಸಿಂಹಶಾಸ್ತ್ರಿ. ಸುಧಾರಣಾಪ್ರೇಮಿಗಳಾದ ಕೆಲವು ಮಂದಿ ಮೈಕ್ಕೆ ಮಹೋದಯರ ಸಹಾಯದಿಂದ ಪ್ರಕಟಿಸಲ್ಪಟ್ಟಿದೆ. ಕ್ರೌ. ಅ. ೧೬೦ ಪುಟಗಳು. ಬೆಲೆ ೦-೪-೦

೧೪೭ ಕೂಲಿ: (ನಾಟಕ) ಲೇಖಕರು. ಶ್ರೀ. ಎ. ಎನ್. ಸುಬ್ಬರಾಯರು. ಕಲಾಮಂದಿರ ಬಳೇಪೇಟೆ ಬೆಂಗಳೂರು ಕ್ರೌ. ಅ. ೬೦ಪುಟಗಳು ಬೆಲೆ ೦-೪-೦

೧೪೮ ಆಯ್ದ ಹೂಗಳು (ಕೆಲವು ಕವಿತೆಗಳ ಸಂಗ್ರಹ) ರಚಿಸಿದವರು ಶ್ರೀ. ಹೊಮ್ಮರಡೀ ಮಲ್ಲನಗೌಡರು. ಪ್ರಕಾಶಕರು ಸರಸ್ವತೀಕಾರ್ಯಾಲಯ, ಚಾಮರಾಜಪೇಟೆ; ಬೆಂಗಳೂರು ಸಿಟಿ. ಕ್ರೌ. ಅ. ೧೭ ಪುಟ, ಬೆಲೆ ೩-೦-೦

೧೪೯ ಕನ್ನಡಿಗರ ಕಡೆಯ ಕಾಳಗ: ಶ್ರೀ. ಕರಿಯಪ್ಪನು ಬರೆದುದು. ಪ್ರಕಾಶನಸ್ಥಳ, ಕನ್ನಡ ಗ್ರಂಥಮಾಲಾನಿಲಯ, ಅಗಡಿ. ಕ್ರೌ. ಅ. ೨೦ ಪುಟ. ಬೆಲೆ ೦-೨-೦

೧೫೦ ಛಾಯಾಮಹಾತ್ಮೆ: (ವಿಜಯರಾಯರ ಸುಳಾದಿ ಸಹಿತ) ಲೇಖಕರು ಶ್ರೀ. ಭೀಮರಾವ ಹುನಗುಂದ, ಗಾಜಗಾರ ಪೇಟೆ, ರಾಯಚೂರು ಕ್ರೌ. ಅ. ೨೦ಪುಟ ಬೆಲೆ ೦-೨-೦

೧೫೧ ನನ್ನ ಮತಾಂತರ (ಮೂರನೆಯ ಭಾಗ) ವೈದಿಕ ಧರ್ಮಾಚರಣೆ. ಲೇಖಕರು ಶ್ರೀ. ಜ್ಞಾನೇಂದ್ರ ಪ್ರಭು ತೀರ್ಥಹಳ್ಳಿ, ಕ್ರೌ. ಅ. ೫೨ಪುಟ.

CC-0. Jangamwadi Math Collection. Digitized by eGangotri

ಹಿಂದುಸ್ಥಾನದ ದುಡ್ಡು ಇಲ್ಲಿಯೇ ಉಳಿಯಬೇಕೆಂದಿದ್ದರೆ.

ಸ್ವದೇಶೀ ಕೈಗಾರಿಕೆಗೆ ಉತ್ತೇಜನ ಕೊಡಿರಿ

TRADE MARK

# ದಿ ಡೆಕ್ಕನ್ ಪೇಪರ್ ಮಿಲ್ಸ ಕಂಪನಿ ಲಿ.

## ಪುಣೆ ಮತ್ತು ಮುಂಬಯಿ.

ಪೂರ್ಣ ಸ್ವದೇಶಿ !

ದೇಶೀಯರದೇ ದುಡ್ಡು ! ದೇಶೀಯರದೇ ಆಡಳಿತ !

---

೫೦ ವರ್ಷಗಳಿಂದಲೂ ಅವ್ಯಾಹತನಾಗಿ ನಡೆದು ಬಂದು ಹಿಂದುಸ್ಥಾನದಲ್ಲೆಲ್ಲ ಹೆಸರು ಪಡೆದು ಇದೀಗ ಮೂಲನಧವನ್ನು ಹೆಚ್ಚಿಸಿದೆ.

ಕಾಗದದ ಹುಟ್ಟುವಳಿಯೂ ಮುಂಚಿಗಿಂತ ಮುಮ್ಮಡಿಯಾಗಿದೆ.

---

ಕೈಬರೆಹಕ್ಕೆ, ಮುದ್ರಣಕ್ಕೆ ಬೇಕಾಗುವ ಎಲ್ಲ ಮಾದರಿಯ ಕಾಗದಗಳೂ ತಯಾರಾಗುವವು.

ನಮೂನೆಗಳಿಗಾಗಿ ಕ್ಯಾಟಲಾಗು ತರಿಸಿಕೊಳ್ಳಿರಿ.

---

**ಈ ಮಾಸಪತ್ರಿಕೆಯು ನಮ್ಮ ಕಾಗದಗಳ ಮೇಲೆಯೇ ಅಚ್ಚಾಗಿದೆ.**

ಧಾರವಾಡದಲ್ಲಿ ನಮ್ಮ ಎಜಂಟರು:—

**ಕೆ. ಜಿ. ರಾಯದುರ್ಗ**

**ಜಯಕರ್ನಾಟಕ ಪ್ರೆಸ್, ಧಾರವಾಡ.**

CC-0. Jangamwadi Math Collection. Digitized by eGangotri

# ಪರಿವಿಡಿ

ವಿ. ಸೂ. ಬರೆಹಗಾರರ ಹೆಸರುಗಳ ಹಿಂದೆ 'ಶ್ರೀಯುತ' ಎಂದು ಸೇರಿಸಿ ಓದಿಕೊಳ್ಳಬೇಕು




**ಲಂಡನ್ ಮೊದಲಾದ ಅನೇಕ ದೇಶಗಳಲ್ಲಿ ಬಹುಮಾನ ಹೊಂದಿರುವ**
**ಅತ್ಯುತ್ತಮವಾದ ಸುಗಂಧ ದ್ರವ್ಯಗಳು**

೮೦ ವರ್ಷದ ಅನುಭವದಿಂದ ತಯಾರಿಸುತ್ತಿರುವ ಅಗರ್ ಬತ್ತಿಗಳು ಮತ್ತು ಇತರ ಎಲ್ಲ ವಿಧವಾದ ಸುಗಂಧ ದ್ರವ್ಯಗಳು ನಮ್ಮಲ್ಲಿ ಸುಲಭ ಕ್ರಯಕ್ಕೆ ದೊರೆಯುತ್ತವೆ. ಕ್ಯಾಟಲಾಗಿಗೆ ಬರೆಯಿರಿ.

ಟಿ. ಯಲ್. ಉಪಾಧ್ಯಾಯ ಆಂಡ್ ಸನ್ಸ.
ಸುಗಂಧಕಾರೀ
ಮೈಸೂರು


CC-0. Jangamwadi Math Collection. Digitized by eGangotri



ಪುರುಷವೇಷದಲ್ಲಿ

(ಜಯಕರ್ನಾಟಕ ಮಂಡಲದ ಒಂದು ಹಳೆಯ ಚಿತ್ರ)

CC-0. Jangamwadi Math Collection. Digitized by eGangotri




ಸಂಪುಟ ೧೦ ಆಂಗಿರಸ ಸಂವತ್ಸರ, ಅನಂತನ ಹುಣ್ಣಿವೆ ಸಂಚಿಕೆ ೧೧

ಚಾಲುಕ್ಯ ವಿಕ್ರಮ ವರ್ಷ ೮೫೭

# ಇದೊ ಪಂಜರ!

( ಅಂಬಿಕಾತನಯದತ್ತ )

ಇದೊ ಪಂಜರ, ಅದೊ ಮುಗಿಲು !
ಒಂದು ಕಿರಿದು, ಒಂದಗಲು !

ಅಲ್ಲಿ ಇರುಳಿನಲ್ಲು ಬೆಳಗು
ಕತ್ತಲಲ್ಲಿ ಒಳಗು ಹೊರಗು.
ಸೊಣ ನೊರಜಿಗು ಸೊಳ್ಳೆಗಳಿಗು
ಹಾರಲಿಂಬು ಎಲ್ಲಬಳಿಗು

ಅಲ್ಲಿ; – ಇಲ್ಲಿ ಒಂದೆ ಗೋಡೆ
ಸುತ್ತುಮುತ್ತು ಎತ್ತ ನೋಡೆ.
ಬರುವ ವರೆಗೆ ಒಳಗಡೆಗೆ
ಬೆಲೆಯು ಬರದು ಬಿಡುಗಡೆಗೆ.

ಸಂಕಟಗಳದದು ಮಾಲೆ:
ಹರಿಯು ಕಲಿಸಲಿದು ಶಾಲೆ.
ಆ—ತಿಳಿವಿಗೆ ಇಲ್ಲಿ ಹಗಲು,
ಮುಗಿಲಿಗು ಪಂಜರ ಮುಗಿಲು.

CC-0. Jangamwadi Math Collection. Digitized by eGangotri

# ಕುಮಾರವ್ಯಾಸ

ಲೇಖಕರು:— ಶ್ರೀ. ಮಂ. ಅ. ದೊರೆಸ್ವಾಮಿ ಅಯ್ಯಂಗಾರ್ಯರು, ಎಂ. ಎ. ಬಿ. ಎಲ್., ಮೈಸೂರು

## ೧. ಅವತರಣಿಕೆ*

ಕುಮಾರವ್ಯಾಸಕವಿಯು ತನ್ನ ಹೆಸರು, ಜನ್ಮಸ್ಥಳ, ಜೀವನವೃತ್ತಾಂತ, ಜಾತಿ, ಕುಲ, ವೃತ್ತಿ, ಕಾಲ, ಮತ ಮೊದಲಾದ ಯಾವ ವಿಚಾರವನ್ನೂ ಸ್ಪಷ್ಟವಾಗಿ ತಿಳಿಸಿಲ್ಲ. ಆದ್ದರಿಂದ ಪಂಡಿತರು ಈ ವಿಚಾರವಾಗಿ ದೊರೆಯಬಹುದಾದ ಅಂತಃಸಾಕ್ಷ್ಯ ಬಾಹ್ಯಸಾಕ್ಷ್ಯಗಳನ್ನು ಶೋಧಿಸಿ, ಶಾಸ್ತ್ರೀಯವಾಗಿ ವಿಮರ್ಶಿಸಿ, ಲಭ್ಯವಾದಷ್ಟು ದೂರ ತಿಳಿಯಬೇಕಾಗಿದೆ.

## ೨ ಕವಿಯ ವೃತ್ತಾಂತ

ಕವಿಯ ಕುಮಾರವ್ಯಾಸನೆಂಬ ಹೆಸರು ಗ್ರಂಥದ ಪೀಠಿಕಾಸಂಧಿಯಲ್ಲಿ ಮೂರು ಸಲ ಬರುತ್ತದೆ. ಮೊದಲು ಕವಿಯು:-

> ವೀರನಾರಾಯಣನೆ ಕವಿಲಿಪಿ- ।
> ಗಾರ ಕುಮಾರವ್ಯಾಸ........ ॥ ೬ ॥

ಎಂದು ಹೇಳಿ ಅನಂತರ ತನ್ನ ಗುರುವಿನ ಅನುಗ್ರಹವನ್ನು ಕುರಿತು:-

> ತರಳನನು ತನ್ನವನೆನುತ ಪತಿ- ।
> ಕರಿಸಿ ಮಗನೆಂದೊಲಿದು ಕರುಣದಿ ।
> ವರವನಿತ್ತನು ದೇವ ವೇದವ್ಯಾಸಗುರುರಾಯ ॥ ೮ ॥

ಎಂದು ತಿಳಿಸುವನು. ಆ ಬಳಿಕ ತನ್ನ ಪ್ರಶಂಸೆಯನ್ನು ತಿಳಿಸುವಾಗ:-

> ಶುಕರೂಪನಲ್ಲದೆ ।
> ಕುಣಿಸಿ ನಗನೇ ಕವಿ ಕುಮಾರವ್ಯಾಸನುಳಿದವರ ॥ ೧೧ ॥

ಎಂದು ಹೇಳಿಕೊಳ್ಳುವನು. ಮೊದಲು ತಾನು ಬರಿಯ ಲಿಪಿಗಾರನೆಂದು ಉಪಚಾರ ಹೇಳಿಕೊಂಡಿದ್ದರೂ ಮುಂದೆ:-

> ರಚಿಸಿದ ಕುಮಾರವ್ಯಾಸ ಭಾರತವ ॥ ೧೩ ॥

ಎಂದು ಸ್ಪಷ್ಟಪಡಿಸಿರುವನು. ಗ್ರಂಥದ ಕೊನೆಯ ಸಂಧಿಯಲ್ಲಿ:-

> ಕವಿ ಕುಮಾರವ್ಯಾಸ ಸೂಕ್ತ....। ॥ ೩೮ ॥

ಎಂದು ಹತ್ತೊಂದು ಸಲ ಈ ಹೆಸರು ಬಂದಿದೆ. ಗ್ರಂಥಾಂತ್ಯದ ಗದ್ಯದಲ್ಲಿ ಈ ಹೆಸರು "ಶ್ರೀ ಮತ್ಕುಮಾರವ್ಯಾಸಯೋಗೀಂದ್ರ" ಎಂದು ಹೇಳಲ್ಪಟ್ಟಿದೆ. ಗದ್ಯದ ಈ ಮರ್ಯಾದಾಪುರಸ್ಸರವಾದ ಹೆಸರನ್ನು ನೋಡಿದರೆ, ಇವನ 'ಭಕ್ತ' ನಾವನೋ ಹೀಗೆ ಸಂಬೋಧಿಸುತ್ತಿರುವಂತೆ ತೋರುವುದು. 'ಯೋಗೀಂದ್ರ' ಎಂಬ ಪದವು ಈತನು ಸನ್ಯಾಸಿಯಾಗಿದ್ದರೂ ಇರಬಹುದೆಂಬ ಅಂಶವನ್ನು ಸೂಚಿಸುವುದು. ಹಾಗಿಲ್ಲದಿದ್ದರೆ ಇವನ ಹೆಸರಿನ ಕಡೆಯಲ್ಲಿ ಕವೀಂದ್ರ ಎಂದು ಇರುತ್ತಿತ್ತು. ಕುಮಾರವ್ಯಾಸನ ಅನುವರ್ತಕರಾದ ತಿಮ್ಮಣ್ಣ ಮತ್ತು ಕುಮಾರವಾಲ್ಮೀಕಿಗಳಲ್ಲಿ ಇದನ್ನು ನೋಡಬಹುದು. ತಿಮ್ಮಣ್ಣಕವಿಯು ಕವೀಂದ್ರಮಾತ್ರನಾಗಿರುವನು.

೨ ಕುಮಾರವಾಲ್ಮೀಕಿಯು ತನ್ನ ಹೆಸರು 'ನರಹರಿ'

---

೧ ಲೇಖನದಲ್ಲಿ ಉದಾಹೃತವಾಗುವ ಗ್ರಂಥಪಂಗ್ತಿಗಳ ವಿವರಣೆ: ಅಂಗಡಿ ಮುದ್ರಣದ ಕರ್ಣಾಟಕಭಾರತಪಾಠವು ಇಲ್ಲಿ ಉದಾಹರಿಸಲ್ಪಡುವುದು. ಸಭಾ. i. ೫ ಎಂದರೆ ಸಭಾಪರ್ವ ಒಂದನೆಯಸಂಧಿ ಐದನೆಯ ಪದ್ಯ ಎಂದರ್ಥ. ಕವಿಚರಿತೆ II. ೧೯೦ ಎಂದರೆ ಎರಡನೆಯ ಭಾಗ ೧೯೦ನೆಯ ಪುಟ ಎಂದರ್ಥ. ಕ. ಸಾ. ಪರಿ. v. iii. ೧೫. ಎಂದರೆ ಕರ್ಣಾಟಕಸಾಹಿತ್ಯಪರಿಷತ್ಪತ್ರಿಕೆ ಐದನೆಯ ಸಂಪುಟ ಮೂರನೆಯಸಂಚಿಕೆ ೧೫ನೆಯ ಪುಟ- ಎಂದರ್ಥ ಪ್ರಾ. ಪು. VI. ಎಂದರೆ ಮೈಸೂರು ಪ್ರಾಚ್ಯ ಪುಸ್ತಕಾಲಯ ಗ್ರಂಥಾವಳಿ ಕರ್ಣಾಟಕ ಭಾರತ ಆರನೆಯ ಸಂಪುಟ ಎಂದು ಭಾವ. ಮೂಲಭಾರತ ಎಂದರೆ, ಪುರಾಣಂ ಹಯಗ್ರೀವಶಾಸ್ತ್ರಿ ಪ್ರಚಾರಿತ ವಿವೇಕಾದರ್ಶಮುದ್ರಾಕ್ಷರಶಾಲಾಮುದ್ರಿತ ತೆಲುಗು ಅಕ್ಷರದ ಆದಿಪಂಚಕ ಪರ್ವಗಳುಳ್ಳ ಗ್ರಂಥ- ಎಂದು ತಿಳಿಯಬೇಕು. ೨. ಕವಿಚರಿತೆ. II. 190.

CC-0. Jangamwadi Math Collection. Digitized by eGangotri

ಎಂದು ಹೇಳಿರುವುದರಿಂದ ಕುಮಾರವಾಲ್ಮೀಕಿ ಎಂಬುದು ಇವನ ಬಿರುದುಮಾತ್ರವಾಗಿರಬಹುದು. ಕುಮಾರವ್ಯಾಸ ಎಂಬುದು 'ವ್ಯಾಸನಿಗೆ ಎರಡನೆಯವನು' ಎಂಬರ್ಥದ ಬಿರುದು ಮಾತ್ರವಾಗಿರಲಾರದು. ಹಾಗಿದ್ದ ಪಕ್ಷ ಇವನು ತನ್ನ ಜನ್ಮನಾಮವನ್ನು ಹೇಳದೆ ಮರೆಯಿಸಲು ಯಾವ ಕಾರಣವೂ ಇರಲಿಲ್ಲ. ಕುಮಾರವ್ಯಾಸ ಎಂದರೆ ವ್ಯಾಸಪುತ್ರ (=ಶಿಷ್ಯ), ಶುಕರೂಪ, ಎಂದು ಕವಿಯು ತಾನೇ ಅರ್ಥಮಾಡಿ ಬಿಟ್ಟಿರುವನು. ಆದ್ದರಿಂದ ಕುಮಾರವ್ಯಾಸ ಎಂಬ ಹೆಸರು ಇವನ ಸನ್ಯಾಸಾಶ್ರಮದ ಹೆಸರಾಗಿರಬಹುದೇ ಹೊರತು, ಬರಿಯ ಬಿರುದಾಗಿರಲಾರದು. ಕವಿಯು ತನ್ನ ಗುರುವೆಂದು ಹೇಳತಕ್ಕ ವ್ಯಾಸನನ್ನು

"ನಿಖಿಳಯತಿಪತಿ ದಿವಿಜವಂದಿತನು" ೩

ಎಂದು ಸ್ತುತಿಸಿರುವನಮಾತಿನಲ್ಲಿ ವಿಶೇಷಾರ್ಥವಿರಬಹುದು. ಗ್ರಂಥಾಂತ್ಯದ ದೇವತಾಸ್ತುತಿಯಲ್ಲೂ 'ಯತಿಪತಿದಿವಿಜವಂದಿತ' ೪ ಎಂಬ ಮಾತು ಬಂದಿದೆ. ಜನಕಥೆ ಹೇಳುವ 'ನಾರಣಪ್ಪ' ಎಂಬ ಹೆಸರಿಗೆ ಮತ್ತಾವ ಆಧಾರವೂ ಇಲ್ಲ. ಕವಿಯು ವೀರನಾರಾಯಣಾಂಕಿತದಿಂದ ಗ್ರಂಥಬರೆದಿರುವುದೇನೋ ನಿಜ. ಇದು ಇವನ ಇಷ್ಟದೇವತೆಯ ಹೆಸರಾಗಿದೆ. ಅನೇಕ ಕವಿಗಳು ತಮ್ಮ ಇಷ್ಟದೇವರ ಹೆಸರನ್ನೇ ತಾವು ಇಟ್ಟುಕೊಳ್ಳುವ ಸಂಪ್ರದಾಯವನ್ನೂ ಗ್ರಂಥಾವತರಣದಲ್ಲಿ ತಮ್ಮ ಹೆಸರನ್ನು ತಮ್ಮ ದೇವರ ಹೆಸರಿಗೆ ಸಮಾಕರಣ ಮಾಡುವ ಪದ್ಧತಿಯನ್ನೂ ಪ್ರಮಾಣಿಸುವುದಾದರೆ ಕವಿಯ ಹೆಸರು ವೀರನಾರಾಯಣ ಎಂದು ಹೇಳಬೇಕಾಗುವುದು. ಜನಕಥೆ ಈ ಹೆಸರನ್ನು ಹೇಳುತ್ತಿಲ್ಲ. ಕವಿಯು ಗ್ರಂಥಕರ್ತೃವಾದ ತಾನು ವೀರನಾರಾಯಣನ ಕಿಂಕರ ೫ ಮಾತ್ರನೆಂದು ಎರಡಾವರ್ತಿ ಒತ್ತಿಹೇಳಿ ತನ್ನ ಹೆಸರು ವೀರನಾರಾಯಣನಲ್ಲ– ಎಂಬ ಧ್ವನಿಯನ್ನು ಸೂಚಿಸಿರುವನು. ಕವಿಯನ್ನು ಮುಂದೆ ಸ್ಮರಿಸತಕ್ಕವರೆಲ್ಲರೂ ಕುಮಾರವ್ಯಾಸ, ಶುಕರೂಪ ಎಂಬ ಹೆಸರುಗಳನ್ನು ಮಾತ್ರವೇ ಹೇಳಿರುವರು. ೬ ಈಚೆಗೆ ದೊರೆತಿರುವ ಕ್ರಿ. ಶ. ೧೫೩೯ನೆಯ ವರ್ಷದ– ಗದುಗು ದೇವಾಲಯದ ಶಾಸನದಲ್ಲಿ ೭ ಸಹ ಕುಮಾರವ್ಯಾಸ ಎಂಬ ಹೆಸರು ಮಾತ್ರ ಬಂದಿದೆ.

ಜನಕಥೆಯು ಇವನನ್ನು ಶಾನುಭೋಗಕುಲಕ್ಕೆ ಸೇರಿಸುವುದು. ಗ್ರಂಥದಲ್ಲಿ ಇದಕ್ಕೆ ಯಾವ ಸಾಕ್ಷ್ಯವೂ ದೊರೆಯುವುದಿಲ್ಲ. ಕರಣಿಕರ ಮೋಸ, ಲಂಚಸುಲಿಗೆ, ಸುಳ್ಳುಲೆಕ್ಕಗಳನ್ನು ಕುರಿತು ಒಂದೆರಡು ಪದ್ಯಗಳು ೮ ದೊರೆತ ಮಾತ್ರಕ್ಕೆ ಇವನನ್ನು ಶಾನುಭೋಗಕುಲದವನೆನ್ನಲಾಗುವುದಿಲ್ಲ. ಇಂತಹ ವರ್ಣನೆಗಳು ಕರ್ಣಾಟಕ ಕಾವ್ಯಮಾಲೆಯಲ್ಲಿ ಸಾಂಪ್ರದಾಯಿಕವಾಗಿ ಬರುತ್ತಿವೆ. ಅಲ್ಲದೆ ಈ ಕವಿಯು ಮನಮುಟ್ಟ ವರ್ಣಿಸುವ ಯುದ್ಧವೇ ಮೊದಲಾದ ವಿಷಯಗಳನ್ನು ನೋಡಿದರೆ ಇವನು ಸೇನಾಜೀವಿ, ಚಿತ್ರಗಾರ, ಸಂಗೀತಗಾರ, ರಾಯಭಾರಿ, ಗರುಡಿಯ ಜಟ್ಟಿಗ ಎಂದು ಮುಂತಾಗಿ ಸಹ ಹೇಳಬಹುದು.

ಕವಿಯು ಅವಿದ್ಯಾವಂತನಾದರೂ ತನ್ನ ಇಷ್ಟದೇವರ ಮತ್ತು ಅಶ್ವತ್ಥಾಮನ ಅನುಗ್ರಹದಿಂದ ವರಕವಿಯಾಗಿ ಭಾರತವನ್ನು ರಚಿಸಿದನೆಂದು ಜನಕಥೆ ಹೇಳುವ ಮಾತಿಗೆ ಗ್ರಂಥದ ಅಂತಃಸಾಕ್ಷ್ಯವು ಸಹಕಾರಿಯಾಗಿಲ್ಲ. ಕವಿಯು ಹಿಂದೂ ಪುರಾಣಾವಳಿಯನ್ನೆಲ್ಲಾ ಆಮೂಲಾಗ್ರವಾಗಿ ಬಲ್ಲ ಪಂಡಿತನು. ಧರ್ಮಶಾಸ್ತ್ರ, ಮಂತ್ರಶಾಸ್ತ್ರ, ವೇದಾಂತಾದಿ ದರ್ಶನಶಾಸ್ತ್ರಗಳು, ರಾಜನೀತಿ, ಯುದ್ಧಶಾಸ್ತ್ರ, ಗಾನಚಿತ್ರಾದಿ ಕಲಾಶಾಸ್ತ್ರ ಇವುಗಳ ಲಕ್ಷಣಗಳನ್ನೆಲ್ಲಾ ತಿಳಿದಿರುವ ಪ್ರೌಢವಿದ್ವಾಂಸನು. ಇವುಗಳನ್ನು ಈತನು ನಿರಕ್ಷರಕುಕ್ಷಿಯರಾದ ಮುತ್ತಜ್ಜಿಯರಂತೆ ಬಾಯಿಪುರಾಣವಾಗಿ ತಿಳಿದು ಹೇಳುತ್ತಿಲ್ಲ. ಸಂಸ್ಕೃತಭಾರತದ ಪರಿಚಯವೂ ಸಂಸ್ಕೃತಸಾಹಿತ್ಯದ ವ್ಯಾಸಂಗವೂ ಇವನಿಗೆ ಚೆನ್ನಾಗಿ ಉಂಟು. ಅವುಗಳಿಂದ ಎಷ್ಟೋ ಶ್ಲೋಕಗಳನ್ನು ತದ್ವತ್ತಾಗಿ ಪರಿವರ್ತಿಸಿರುವನು. ೯ ಪಂಪರನ್ನಾದಿ ಪ್ರಾಚೀನರ ಅನೇಕಪದ್ಯಗಳನ್ನು ಷಟ್ಪದೀರೂಪಕ್ಕೆ ತಿರುಗಿಸಿರುವನು. ಇಂಥವನು ನಿರಕ್ಷರಕುಕ್ಷಿಯೇ? ಈ ಜಾತಿಯ ಕಥೆಯು ವಾಲ್ಮೀಕಿ ಕಾಳಿದಾಸರಿಂದ ಹಿಡಿದು ಸಾವಿರಾರು ಕವಿಗಳ ತಲೆಗೆ ಕಟ್ಟಲ್ಪಟ್ಟಿರುವುದರಿಂದ ಅದನ್ನು ನಾವು ಗಮನಿಸಬೇಕಾ

೩. ಆದಿ i. 8. ೪. ಗದಾ XIII. 42. ೫ ಆದಿ i. 9–10. ೬. ಕವಿಚರಿತೆ II, 142; III, 16, 62, 67. ೭ Ins. No. 14 of 26–7. Suppliment to Annual Report on S. I. Epigraphy for the year 1927. ೮ ಉದ್ಯೋಗ —iii; 18. VIII. 40. ೯ ಪ್ರಾ. ಪು. VI. ಉದ್ಯೋಗ — ಅವತರಣಿಕೆ ii. XIV.

CC-0. Jangamwadi Math Collection. Digitized by eGangotri

ಗಿಲ್ಲ. ಕವಿಯು ಗ್ರಂಥದಲ್ಲಿ ಅಶ್ವತ್ಥಾಮನಿಗೆ ವಿಶೇಷ ಪುರಸ್ಕಾರವನ್ನೇನೂ ಮಾಡುತ್ತಿಲ್ಲ. ತನ್ನ ಗುರುವು ವೇದವ್ಯಾಸನೆಂದು ಸ್ಪಷ್ಟವಾಗಿ ಹೇಳಿರುವನು. ಇವನ ಗ್ರಂಥವು ಅಶ್ವತ್ಥಾಮಪಮಾನ ಕಥೆಯಲ್ಲಿ ಮುಗಿದಿದೆ.

ಕವಿಯು ಕೃಷ್ಣಚರಿತ್ರೆಯನ್ನು ಬರೆದು, ವೀರನಾರಾಯಣನ ಹೆಸರನ್ನು ಪದೇ ಪದೇ ಸಾರುತ್ತಿದ್ದರೂ ವಿಷ್ಣುಮೂರ್ತಿಗಳಲ್ಲಿ ಇವನು ಶ್ರೀರಾಮನನ್ನು ಮಾತ್ರ ಮುಖ್ಯವಾಗಿ ನಿರ್ದೇಶಿಸಿ ಧ್ಯಾನಿಸಿರುವನು. ಗ್ರಂಥಾದಿ ಪದ್ಯದಲ್ಲಿ ಸಹ 'ರಾವಣಾಸುರಮಥನ' ಎಂದು ರಾಮಮೂರ್ತಿ ಮಾತ್ರವೇ ಪೃಥಕ್ಕಾಗಿ ನಿರ್ವಚಿಸಲ್ಪಟ್ಟಿರುವುದು. ಪೀಠಿಕಾಸಂಧಿಯ ೭ನೆಯ ಪದ್ಯವು ಮಾರ್ಪಟ್ಟು ಅಂತ್ಯಸಂಧಿಯ ೬೩ನೆಯ ಪದ್ಯವಾಗಿ ಪುನರುಕ್ತವಾಗಿದೆ. ಈ ಪದ್ಯಗಳೂ ಅಂತ್ಯಸಂಧಿಯ ೬೨ನೆಯ ಪದ್ಯವೂ ಶ್ರೀರಾಮನನ್ನೇ ಸ್ತೋತ್ರಮಾಡುತ್ತಿವೆ. ಕವಿಯು ಮೊದಲು ರಾಮಾಯಣವನ್ನೇ ಬರೆಯಲು ಉದ್ದೇಶಪಟ್ಟಿದ್ದಂತೆ ತೋರುತ್ತದೆ. ಈ ಸಂದರ್ಭಗಳನ್ನೆಲ್ಲಾ ನೋಡಿದರೆ ಶ್ರೀರಾಮನು ಕವಿಯ ಧ್ಯಾನಮೂರ್ತಿಯಾಗಿರಬಹುದೆಂದು ಕಾಣುತ್ತದೆ.

ಕವಿಯು ಜಾತಿಯಲ್ಲಿ ಬ್ರಾಹ್ಮಣನೆಂದು ಹೇಳಬೇಕು. ಈ ವಿಚಾರವು ಮುಂದೆ ಪ್ರಸ್ತಾಪಿಸಲ್ಪಡುವುದು.

### ೩ ಕವಿಯ ಕಾಲ

ಕವಿಯ ಕಾಲದ ವಿಚಾರವಾಗಿ ಸುಮಾರು ನಾಲ್ಕು ಪಕ್ಷಗಳು ಇರುವವು. ಇವನು ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ (೧೫೦೯–೨೯) ಭಾರತವನ್ನು ರಚಿಸಿದನು, ಎಂಬ ಜನಕಥೆಯನ್ನು ಕಿಟಲ್ ಮತ್ತು ರೈಸ್ ಇವರು ಅಂಗೀಕರಿಸಿರುವರು. ಈ ಅಭಿಪ್ರಾಯಕ್ಕೆ ಸಾಕಾದಷ್ಟು ಆಧಾರವೇನೂ ಇಲ್ಲ. ಕವಿಯು ಶ್ರೀಕೃಷ್ಣನನ್ನು ಬಹುಕಡೆ ಕೃಷ್ಣರಾಯ ಎಂದು ಕರೆದಿರುವನು. ಆದರೆ ಇದು ಪ್ರಯತ್ನಪೂರ್ವಕ ವಿಜಯನಗರದ ಕರ್ಣಾಟಕ ರಾಜ್ಯರಮಾರಮಣನನ್ನು ಸೂಚಿಸುವ ಅಭಿಪ್ರಾಯದಿಂದ ಆದುದು– ಎಂದು ಹೇಳಲಾಗುವುದಿಲ್ಲ. ಮತ್ತು ವ್ಯಾಸರನ್ನು ಇವನು ವ್ಯಾಸರಾಯ ಎಂದು ಹಲವು ಬಾರಿ ಹೇಳುವುದು ಸಹ ಈ ಕಾಲದಲ್ಲಿದ್ದ ಮಾಧ್ವರ ಗುರು ವ್ಯಾಸರಾಯ ಸ್ವಾಮಿಗಳನ್ನು (೧೪೪೭-೧೫೩೯) ಸಂಬೋಧಿಸುವ ಸಂಜ್ಞೆ– ಎಂದು ಹೇಳಲಾಗುವುದಿಲ್ಲ.

ಶ್ರೀಮಾನ್ ನಾರಾಯಣ ಶ್ರೀನಿವಾಸ ರಾಜಪುರೋಹಿತರು ಸಂಸ್ಕೃತದಿಂದ ಇತಿಹಾಸಪುರಾಣಗಳನ್ನು ಕನ್ನಡಿಸಬೇಕೆಂಬ ಚಳವಳಿಯು ಕ್ರಿ. ಶ. ೧೬ನೆಯ ಶತಮಾನದ ಆದಿಯಲ್ಲಿ ಬ್ರಾಹ್ಮಣರಲ್ಲಿ ಪ್ರಾರಂಭವಾಯಿತೆಂದೂ, ವಿಜಯನಗರದ ಸಮ್ರಾಜರ ಆಶ್ರಯ ಮತ್ತು ಪ್ರೋತ್ಸಾಹದಿಂದ ಕುಮಾರವ್ಯಾಸ, ತಿಮ್ಮಣ್ಣ, ಲಕ್ಷ್ಮೀಶ, ಚಾಟುವಿಠಲನಾಥ, ಕುಮಾರವಾಲ್ಮೀಕಿ ಇವರು ಸರಿಸಮಾನರಾಗಿ ಒಂದೇ ಕಾಲದಲ್ಲಿ (೧೫೦೦ ರಿಂದ ೧೫೪೫ ರೊಳಗೆ) ತಮ್ಮ ಗ್ರಂಥಗಳನ್ನು ಬರೆದರೆಂದೂ ಅಭಿಪ್ರಾಯಪಟ್ಟಿದ್ದಾರೆ.[೧೦] ತಿಮ್ಮಣ್ಣಕವಿಯು ಭಾರತವನ್ನು ರಾಜಾಜ್ಞೆಯಂತೆ ಪೂರ್ತಿಮಾಡಿರುವುದರಿಂದ ಕುಮಾರವ್ಯಾಸನು ಕೃಷ್ಣದೇವರಾಯನಿಗೆ ಸ್ವಲ್ಪ ಹಿಂದೆ ಸು. ೧೫೨೦ರಲ್ಲಿ ಇದ್ದಿರಬೇಕೆಂದು ಇವರು ನಿಶ್ಚೈಸುತ್ತಾರೆ. ಈ ಪಕ್ಷವು ಮೊದಲನೆಯದರಿಂದ ತೀರ ಭಿನ್ನವಾಗಿಲ್ಲ. ರಾಜಪುರೋಹಿತರು ಹೇಳುವ ಕವಿಗಳಲ್ಲಿ ಕಾವ್ಯಪ್ರತಿಭೆಯಲ್ಲಿ ಕನಿಷ್ಠನಾಗಿ ತೋರುವ ತಿಮ್ಮಣ್ಣನು ಕರ್ಣಾಟಕಕವಿಕುಲಸಾರ್ವಭೌಮನೆಂದು ಬಿರುದನ್ನು ಪಡೆದು ಕೃಷ್ಣದೇವರಾಯನ ಆಸ್ಥಾನಕವಿಮುಖ್ಯನಾಗಬೇಕಾದರೆ ಉಳಿದವರು ಅವನ ಸಮಕಾಲೀನರಾಗಿದ್ದಿರಲಾರರು– ಎಂದು ಶಂಕೆ ಹುಟ್ಟುವುದು; ಅಲ್ಲದೆ ತಿಮ್ಮಣ್ಣನು ಹೇಳುವ ಮಾತಿನಿಂದ ಕುಮಾರವ್ಯಾಸನು ಅವನಿಗೆ ಸ್ವಲ್ಪಮಟ್ಟಿಗೆ ಪ್ರಾಚೀನನೆಂಬ ಧ್ವನಿತೋರುತ್ತಿದೆ. ಲಕ್ಷ್ಮೀಶನ ಕಾಲನಿರ್ಣಯವು ನಮಗೆ ಅಪ್ರಕೃತವಾದರೂ ರಾಜಪುರೋಹಿತರು ಹೇಳುವಂತೆ ಕುಮಾರವ್ಯಾಸನು ಅವನ ಸಮಕಾಲೀನನಾಗಿರದೆ[೧೧] ಅವನಿಗೆ ಪ್ರಾಚೀನನೆಂದು ಹೇಳಬೇಕು. ಭಾರತಕಾರನು ಒಂದುಕಡೆ ಲಕ್ಷ್ಮೀಶನ ಗ್ರಂಥವನ್ನು ಸ್ಮರಿಸುವಂತೆ ಊಹಿಸಬಹುದಾದ ಒಂದು ಸೂಚನೆ ಇದೆ. ಗ್ರಂಥದ ಕಡೆಯ ಸಂಧಿಯಲ್ಲಿ ಕೆಳಗಿನ ಪದ್ಯವಿದೆ:–

ರಚಿತಮಂತ್ರಿ ಪಸಾಯ್ತರು ಘಟೋ ।
ತ್ಕಚನ ತನಯನು ಮೇಘನಾದನು ।

೧೦. ಕ. ಸಾ. ಪರಿಷತ್ಪತ್ರಿಕೆ VIII. IV. 242 (ಜನವರಿ 1924). ೧೧ ಜೈಮಿನಿಭಾರತ ಗದ್ಯಕಥಾಸಂಗ್ರಹಕಾರರಾದ ಆರ್. ರಾಮರಾಯರು ಸಹ ಲಕ್ಷ್ಮೀಶನಿಗೆ ಇದೇ ಕಾಲವನ್ನು ಸಾಧಿಸುತ್ತಾರೆ. (ಪೀಠಿಕೆ, XXXi)

CC-0. Jangamwadi Math Collection. Digitized by eGangotri

ಪ್ರಚುರತರನಾ ಕರ್ಣಸುತ ವೃಷಕೇತು
ಮೊದಲಾದ ॥

ಸಚಿವರಾಪ್ತಕುಮಾರಬಾಂಧವ ।
ನಿಚಯವರ್ಗದಲರಸ ರಂಜಿಸಿ ।
ಉಚಿತದಿಂ ಪಾಲಿಸಿದನೇಕಚ್ಛತ್ರದಲಿ ನೆಲನ
॥ ೨೩॥

ಮುಂದೆ ೨೫ನೆಯ ಪದ್ಯದಲ್ಲಿ:—

ವಾಸವನ ವೈಭವಕೆ ಮಿಗಿಲೆಂ ।
ದಾಸುರರು ಕೊಂಡಾಡೆ ಶ್ರೀಲ— ।
ಕ್ಷ್ಮೀಶಸಂಘ್ರಿಯ ಭಜಿಸುತಲೆ ಸಾಮ್ರಾಜ್ಯ
ಭೋಗದಲಿ ॥

ಎಂಬ ವಾಕ್ಯವಿದೆ. ವ್ಯಾಸಭಾರತದಲ್ಲಿ ಕರ್ಣನ ಸುಪ್ರಸಿದ್ಧನಾದ ಪುತ್ರನು ವೃಷಸೇನನು. ತದ್ಭಿನ್ನನಾದ ವೃಷಕೇತು ಎಂಬ ಮಗನಾರೂ ಕರ್ಣನಿಗೆ ಇದ್ದ ಹಾಗೆ ಹೇಳಿಲ್ಲ. ಜೈಮಿನಿಭಾರತದಲ್ಲಿ ಇವನ ಹೆಸರನ್ನು ವೃಷಕೇತು ಎಂದು ಹೇಳಿದೆ. ಕುಮಾರವ್ಯಾಸನು ವೃಷಸೇನವಧೆಯನ್ನು ನಿರೂಪಿಸಿ ಜೈಮಿನಿಭಾರತದಲ್ಲಿ ಮಾತ್ರ ಬರುವ ವೃಷಕೇತುವಿನ ಹೆಸರನ್ನು ಹೇಳಲು ಕಾರಣವೇನು? ಇದಲ್ಲದೆ ಇವನು ಘಟೋತ್ಕಚನಮಗನಿಗೆ ಸಂಸ್ಕೃತ ಜೈಮಿನಿಭಾರತದಲ್ಲಿ ಬರುವ 'ಮೇಘಕರ್ಣ'[೧೨] ಎಂಬ ಹೆಸರನ್ನು ಬಿಟ್ಟು, ಕನ್ನಡ ಜೈಮಿನಿಯಲ್ಲಿ ಬರುವ 'ಮೇಘನಾದ' ಎಂಬ ಹೆಸರನ್ನು ಹೇಳಿರುವನು. ಇದರಿಂದ ಮುಂದೆ ೨೫ನೆಯ ಪದ್ಯದಲ್ಲಿ ಬರುವ ಲಕ್ಷ್ಮೀಶ ಎಂಬ ಹೆಸರಿನಲ್ಲಿ ವಿಶೇಷಾರ್ಥಸೂಚನೆಯುಂಟು- ಎಂದು ಊಹಿಸಬಹುದಲ್ಲವೇ? ಮೇಲಿನ ೨೩ನೆಯ ಪದ್ಯವು ಪ್ರಕ್ಷಿಪ್ತವಿರಬಹುದು. ಅದರಲ್ಲಿ ಕುಮಾರವ್ಯಾಸನ ಬಿಗಿಯೂ ಕಳೆಯೂ ಇಲ್ಲ. ಲಕ್ಷ್ಮೀಶನ ಶೈಲಿಯು ಭಾರತಕಾರನ ಶೈಲಿಗಿಂತಲೂ ಹೊಸಗನ್ನಡದ ಜಾತಿಯಲ್ಲಿ ಒಂದು ಘಟ್ಟ ಮುಂದುವರಿದಿರುವುದು. ಲಕ್ಷ್ಮೀಶನು ಘೌಟು, ಸಿಡಿಗುಂಡು ಮೊದಲಾದ ಪದಗಳನ್ನು ಉಪಯೋಗಿಸಿರುವನು. ಕುಮಾರವ್ಯಾಸನು ಲಕ್ಷ್ಮೀಶನಗ್ರಂಥವನ್ನು ನೋಡಿದ್ದ ಪಕ್ಷ, ಅವನ ಪದ್ಯಗಳ ಛಾಯೆಯು ಇವನ ಗ್ರಂಥದಲ್ಲಿ ಕಾಣುತ್ತಿತ್ತು. ಕುಮಾರವ್ಯಾಸನು ಲಕ್ಷ್ಮೀಶನಿಗಿಂತ ಪ್ರಾಚೀನನೆಂದು ಹೇಳುವುದು ಸಾಧುವಾಗಿರುವುದು.

ಹದಿನೇಳನೆಯ ಶತಮಾನದಿಂದೀಚಿನ ಕೆಲವು ವೀರಶೈವ ಕವಿಗಳು ತಿಳಿಸುವ ಕಟ್ಟುಕಥೆಯ ಆಧಾರದಿಂದ ಕುಮಾರವ್ಯಾಸನ ಕಾಲವನ್ನು ಕವಿಚರಿತಕಾರರು 'ಸು. ೧೪೩೦' ಎಂದೂ,[೧೪] ಟಿ. ಎನ್. ಸುಬ್ಬರಾಯಶಾಸ್ತ್ರಿಗಳು 'ಸು. ೧೧೬೫' ಎಂದೂ[೧೫] ನಿರ್ಣಯಿಸಲು ಪ್ರಯತ್ನಿಸಿರುವರು. ಈ ವಾದದಲ್ಲಿ ಕುಮಾರವ್ಯಾಸನು ಚಾಮರಸನ ತಂಗೆಯ ಗಂಡನೆಂಬುದು ಒಂದು ಘಟ್ಟವು; ಚಾಮರಸನು ಹರೀಶ್ವರನ ಸಮಕಾಲೀನನೆಂಬುದು ಮತ್ತೊಂದು ಘಟ್ಟವು. ಕವಿಚರಿತಕಾರರು ಮೊದಲನೆಯ ಘಟ್ಟವನ್ನು ಮಾತ್ರ ಒಪ್ಪುವರು. ಕಥೆಯಲ್ಲಿ ಒಂದು ಘಟ್ಟವನ್ನು ಒಪ್ಪಿದ ಮೇಲೆ ಮತ್ತೊಂದನ್ನು ಅಂಗೀಕರಿಸಬೇಕೆಂದು ಸುಬ್ಬರಾಯಶಾಸ್ತ್ರಿಗಳು ವಾದಿಸುವುದು ನ್ಯಾಯವೆಂದು ಹೇಳಬೇಕು. ನಮ್ಮ ಬುದ್ಧಿಗೆ ಈ ಕಥೆಯಲ್ಲಿ ಎರಡನೆಯದಕ್ಕಿಂತಲೂ ಮೊದಲನೆಯ ಘಟ್ಟವು ಹೆಚ್ಚು ಅನಾದರಣೀಯವಾಗಿ ಕಂಡುಬರುತ್ತದೆ. ಮತಾಭಿಮಾನ ಮೊದಲಾದ ಅಸಾಧುಕಾರಣಗಳಿಂದ ಕವಿಗಳಿದ್ದ ಕಾಲಕ್ಕೆ ಎಷ್ಟೋ ಶತಮಾನಾನಂತರ ಹುಟ್ಟಿ, ದೇಶದಲ್ಲಿ ವಾಡಿಕೆಯಲ್ಲಿರುವ ಇಂಥಾ ಜಾತಿಯ ಕಟ್ಟುಕಥೆಗಳನ್ನು ಐತಿಹಾಸಿಕಶೋಧನಾಕಾರ್ಯಕ್ಕೆ ಉಪಯೋಗಿಸಬಾರದೆಂದು ನಮ್ಮ ಅಭಿಪ್ರಾಯ. ಚಾಮರಸನೂ ಹರೀಶ್ವರನೂ ಸಮಕಾಲೀನರಾಗಲಾರರೆಂದು ಕವಿಚರಿತಕಾರರು ಹೇಳುವ ಖಂಡನೆಯೇ[೧೬] ಈ ವೀರಶೈವಕಥೆಯ ಅಪ್ರಾಮಾಣಿಕತೆಗೆ ಸಾಕಾಗಿರುವಾಗ ಅದು ಹೇಳುವ ಚಾಮರಸ- ಕುಮಾರವ್ಯಾಸರ ಬಾಂಧವ್ಯವನ್ನು ಹೇಗೆ ಅಂಗೀಕರಿಸಬಹುದು? ಪ್ರಭುಲಿಂಗಲೀಲಾಕಾರನು ತನ್ನ ಹೆಸರನ್ನು ಹೇಳಿಲ್ಲ. ಸಿದ್ಧನಂಜೇಶನ ವರೆಗೂ ಮತ್ತಾರೂ ಅವನ ಹೆಸರು ಚಾಮರಸನೆಂದು ತಿಳಿಸಿಲ್ಲ. ಶೈಲಿ, ಪರಿಸ್ಥಿತಿ ಮೊದಲಾದ ಅಂಶಗಳಲ್ಲಿ ಪ್ರಭುಲಿಂಗಲೀಲೆಯು ಈಚಿನದೆಂದು ಹೇಳಬಹುದು. ಭಾರತದಲ್ಲಿ ಕಾಣಿಸುವ ಮತಾರಿಯ ಸಂಪರ್ಕವು ಪ್ರಭುಲಿಂಗಲೀಲೆಯಲ್ಲಿ ಇಲ್ಲ. ಇದರಿಂದ ಎರಡು ಗ್ರಂಥಗಳೂ ಒಂದೇ ಪ್ರಾಂತದುವೆಂದು

---

೧೨. ರಾ. ರಾಮರಾವ್– ಜೈಮಿನಿಭಾರತ ಕಥಾಸಂಗ್ರಹ (1925), Vi. ೧೪. ಕವಿಚರಿತೆ. III. 64. ೧೫. ಪ್ರಾ. ಪು. VI. ಉದ್ಯೋಗ XXi–XXXV; ಪ್ರಬುದ್ಧಕರ್ಣಾಟಕ 12 ದುಂದುಭಿ– ರಜಸಾವಳಿ. ಪು. 5–16; ೧೬. ಕವಿಚರಿತೆ I. ಅವತರಣಿಕೆ 21.



CC-0. Jangamwadi Math Collection. Digitized by eGangotri

ಸಹ ಹೇಳುವುದು ಕಷ್ಟ. ಗ್ರಂಥಗಳಲ್ಲಿ ಪರಸ್ಪರಛಾಯಾನುಕರಣದ ಸೂಚನೆಯಾವುದೂ ಕಾಣಿಸುವುದಿಲ್ಲ. ೧೬ ಮೇಲ್ಕಂಡ ಕಥೆಯನ್ನು ಹೇಳುವ ಗ್ರಂಥಗಳಲ್ಲೇ ಎಷ್ಟೋ ವಿರೋಧಗಳೂ ಅಬದ್ಧಗಳೂ ತುಂಬಿವೆ. ಕುಮಾರವ್ಯಾಸನು ಭಾರತದ ಉತ್ತರಾರ್ಧವನ್ನು ಎಂದರೆ ಕಡೆಯ ೯ ಪರ್ವಗಳದನ್ನು ರಚಿಸಿದನೆಂದು ಚೋರಬಸವಚರಿತ್ರೆಯು (೧೭೬೩) ಹೇಳುವ ಮಾತು ಸಕಲ ಸಾಕ್ಷ್ಯಕ್ಕೂ ವಿರುದ್ಧವಾಗಿದೆ, ಕ್ರಿ. ಶ. ೧೪೩೦ರಲ್ಲಿ, ಈ ಗ್ರಂಥಗಳು ಹೇಳುವಂತೆ, ಗದುಗಿನಲ್ಲಿ ದೇವರಾಜನೆಂಬ ರಾಜನಿದ್ದುದಕ್ಕಾಗಲಿ ಹಂಪೆಯಲ್ಲಿ ೧೦೧ ವೀರಶೈವಶರಣರಿದ್ದುದಕ್ಕಾಗಲಿ ಮತ್ತಾವ ಆಧಾರವೂ ದೊರೆಯುವುದಿಲ್ಲ. ಒಂದು ಕಡೆ, ಚಾಮರಸನು ಹಂಪೆಗೆ ಹೋಗಿ ಹರೀಶ್ವರನಿಗೆ ಪ್ರಭುಲಿಂಗಲೀಲೆಯನ್ನು ತಿಳಿಸಿದನೆಂದು ಹೇಳಿದೆ. ಹಾಗಿದ್ದರೆ ಅವನು ಜಾತ್ಯಾ ವೀರಶೈವನೇ ಆಗಿರಬೇಕು. ಹಾಗಾದರೆ ಅವನು ಉದ್ದಾನ ವೀರಭದ್ರನಿಂದ ವೀರಶೈವ ದೀಕ್ಷೆಯನ್ನು ಪಡೆದಂತೆ ಚೋರಬಸವಚರಿತ್ರೆ ಹೇಳಿರುವ ಮಾತಿಗೆ ಗತಿಯೇನು ? ಚಾಮರಸನ ಸಂಟನೆನ್ನಿಸತಕ್ಕ ಕುಮಾರವ್ಯಾಸನು ಎಂದಿಗೂ ಜಾತ್ಯಾ ವೀರಶೈವನಾಗಲಿ ಶೈವನಾಗಲಿ ಆಗಿರಲಾರನು. ಗುರುರಾಜ ಚಾರಿತ್ರೆಯ ಪ್ರಕಾರ ರಾಘವಾಂಕನೇ ಕುಮಾರವ್ಯಾಸನನ್ನು ಸೋಲಿಸಿರುವಾಗ ೧೭ ಆ ಕೆಲಸಕ್ಕೆ ಚಾಮರಸನಿಗೆ ಅವಕಾಶವೇ ಇದ್ದಿರಲಾರದು. ಈ ಕಥೆಯಲ್ಲಿ ಬರುವ ಹರೀಶ್ವರ- ರಾಘವಾಂಕಾದಿಗಳು ವೀರಶೈವರಾದರೂ ಬಸವನ ಅನುಯಾಯಿಗಳಲ್ಲ. ಅವರು ಶೈವಬ್ರಾಹ್ಮಣರು; ಬಸವನಂತೆ ಸ್ಮೃತೀತಿಹಾಸಾದಿಗಳ ಪ್ರಮಾಣವನ್ನೂ ಜಾತಿಧರ್ಮವನ್ನೂ ನಿರಾಕರಿಸಿದವರಲ್ಲ. ಇವರಾರೂ ಬಸವನ ಹೆಸರನ್ನು ಸಹ ಹೇಳರು. ಆದರೆ ಮುಂದೆ ವೀರಶೈವರಲ್ಲಿ ಬಸವನ ಪ್ರಾಬಲ್ಯವು ತಾನೇ ತಾನಾಗಿ ಬಳೆದ ಮೇಲೆ ಇವರೂ ಬಸವನ ಸಹಾಯಕರೆಂಬ ಕಥೆ ಪ್ರಾರಂಭವಾಯಿತು. ಇದನ್ನು ಮೊದಲು ಪದ್ಮರಾಜಚರಿತೆ(ಸು. ೧೩೦೫) ಯಲ್ಲಿ ನೋಡಬಹುದು. ೧೮ ಇಷ್ಟಾದರೂ ಇವರೆಲ್ಲಾ ಬಸವನ ಅನುಯಾಯಿಗಳೆಂಬ ಮಾತು ಬರಲಿಲ್ಲ. ಆದರೆ ಚೋರಬಸವಚರಿತ್ರೆಯಲ್ಲಿ ಹರೀಶ್ವರನು ಚಾಮರಸನ ಬೋಧಾರ್ಥವಾಗಿ ಬಸವಮಾಹಾತ್ಮ್ಯವನ್ನು ಕೊಂಡಾಡುವಂತೆ ಹೇಳಿದೆ. ೧೯ ಇತ್ಯಾದಿ ಕಾರಣಗಳಿಂದ ಕುಮಾರವ್ಯಾಸ- ಚಾಮರಸ- ಹರಿಶ್ವರರ ಸಂಬಂಧವಾದ ಕಥೆಯನ್ನು ಸಂಪೂರ್ಣವಾಗಿ ನಿರಾಕರಿಸುವುದು ಉತ್ತಮ. ೨೦

ಕುಮಾರವ್ಯಾಸನು ೧೧೬೫ ರಲ್ಲಿ ಇದ್ದನೆಂಬುದಕ್ಕೆ, ಅವನು ಹರೀಶ್ವರನ ಸಮಕಾಲೀನನೆಂಬ ಕಥಾಂಶವೊಂದೇ ಸುಬ್ಬರಾಯ ಶಾಸ್ತ್ರಿಗಳಿಗೆ ಆಧಾರವಾಗಿದೆ. ಭಾರತದ ಶೈಲಿ, ವ್ಯಾಕರಣ, ಛಂದಸ್ಸುಗಳೆಲ್ಲವೂ ಶುದ್ಧ ಹೊಸಗನ್ನಡ ಜಾತಿಗೆ ಸೇರಿವೆ. ಇಂತಹ ಭಾಷೆಯು ಕ್ರಿ. ಶ. ೧೨ನೆಯ ಶತಮಾನದಲ್ಲಿ ಶಬ್ದಮಣಿದರ್ಪಣಕಾರನಿಗೆ ಒಂದು ಶತಮಾನದ ಹಿಂದೆ ಇದ್ದಿತೆಂದು ಹೇಳಲು ಆಧಾರವಿಲ್ಲ. ಇಷ್ಟು ಜನರಂಜಕವಾದ ಗ್ರಂಥವನ್ನು ೩೦೦ ವರ್ಷಗಳವರೆಗೆ ಯಾರೂ ಸ್ಮರಿಸದೆ ಇರುವುದು ಅಸಂಭವ. ಕವಿಯು ವಿಜಯನಗರದ ಸಮ್ರಾಜರ ವಿಶೇಷಾಂಕಿತವಾದ ರಾಯ ಎಂಬ ಪದವನ್ನು ನೂರಾರು ಕಡೆ ಪ್ರಯೋಗಿಸಿರುವುದರಿಂದ ಅವನು ಆ ಸಾಮ್ರಾಜ್ಯವು ಸ್ಥಾಪಿತವಾದ ಮೇಲೆ ಇದ್ದಿರಬೇಕೆಂದು ಕೆಲವರು ಊಹಿಸಿದರು. ಕ್ರಿ. ಶ. ೧೨ನೆಯ ಶತಮಾನದಲ್ಲಿದ್ದ ನೇಮಿಚಂದ್ರನು ತನ್ನ ಅರ್ಧನೇಮಿಪುರಾಣದ ಕಡೆಯ ಆಶ್ವಾಸಕ್ಕೆ ವೀರನಾರಾಯಣ ಪ್ರತಾಪ ವರ್ಣನಂ ಎಂದು ಹೆಸರಿಟ್ಟು ವೀರನಾರಾಯಣನ ಹೆಸರಿನಿಂದ ಆಶ್ವಾಸವನ್ನು ಮುಗಿಸಿರುವುದರಿಂದ ಆ ಕಾಲದಲ್ಲಿ ವೀರನಾರಾಯಣಾಭಿಧಾನವುಳ್ಳ ಒಬ್ಬ ಪೋಷಕನಿದ್ದಿರಬೇಕೆಂದೂ ಅವನ ಪ್ರಶಂಸನಾರ್ಥವಾಗಿಯೇ ಕುಮಾರವ್ಯಾಸನೂ ತನ್ನ ಗ್ರಂಥ

---

೧೬. ಪರಸ್ಪರಛಾಯಾನುಕರಣ ಕಾಣುವ, ಒಂದೆರಡು ಉದಾಹರಣೆಗಳು:- ಪ್ರಭು ii. 26=ದ್ರೋಣ XVIII. 52. ಪ್ರಭು. IV. 25-33= ಆದಿ XIII. 28-43. ೧೭. ಕವಿಚರಿತೆ. I, 236. ೧೮ ಕವಿಚರಿತೆ 1. 221, ೧೯. ಕವಿಚರಿತೆ III. 117. ೨೦. ಚಾಮರಸನ ಕಥಾನಾಯಕನಾದ ಅಲ್ಲಮನು ಹರೀಶ್ವರ, ರಾಘವಾಂಕ, ಬಸವರ ಸಮಕಾಲೀನನು. ಇದೇ ಕಾಲದಲ್ಲಿ ಚಾಮರಸನೂ ಇದ್ದನೆಂದು ಹೇಳಲಾಗುವದಿಲ್ಲ. ಬಸವನನ್ನು ಸದ್ದೆ ಮಾಡದ ಹರೀಶ್ವರಾದಿಗಳು ಅವನ ಪಕ್ಷದವನಾದ ಅಲ್ಲಮನನ್ನು ಗೌರವಿಸಲಾರರು. ಇವರಿಗೆ ಚಾಮರಸನು ಪ್ರಭುಲಿಂಗಲೀಲೆಯನ್ನು ಹೇಳಿದನೆಂದರೆ ನಂಬಲಾಗುವುದಿಲ್ಲ.

CC-0. Jangamwadi Math Collection. Digitized by eGangotri

ವನ್ನು ಏಕೆ ಬರೆದಿರಬಾರದೆಂದೂ ಕೆಲವರು ಕೇಳಬಹುದು. ೨೧ ಈ ಊಹೆಗೆ ಯಾವ ಆಧಾರವೂ ಇಲ್ಲ. ಅರ್ಧನೇಮಿಪುರಾಣದ ಪೋಷಕನಾದ ಸೆಜ್ಜೆವಳ್ಳ ಪದ್ಮನಾಭನಿಗೆ ವೀರನಾರಾಯಣನೆಂಬ ಹೆಸರು ಇದ್ದಂತೆ ಎಲ್ಲೂ ತಿಳಿದುಬರುವುದಿಲ್ಲ. ಕುಮಾರವ್ಯಾಸನು ತಾನು ಹೇಳುವ ವೀರನಾರಾಯಣನು ಗದುಗಿನ ದೇವರೆಂದು ಸ್ಪಷ್ಟವಾಗಿ ಹೇಳಿರುವನು. ಗದುಗು ದೇವಾಲಯದ ಹೊಸ ಶಾಸನವೂ ಇದೇ ಮಾತನ್ನು ಹೇಳುವುದು. ೨೨ ವೀರನಾರಾಯಣ ಎಂಬ ಬಿರುದು ಬಹಳ ಹಿಂದೆ ನೃಪತುಂಗನಿಗೆ ಇದ್ದಿತು. ಇತ್ಯಾದಿ ಕಾರಣಗಳಿಂದ ಕುಮಾರವ್ಯಾಸನು ೧೩ನೆಯ ಶತಮಾನದಲ್ಲಿದ್ದನೆಂದು ಹೇಳಲು ಸಾಧ್ಯವಿಲ್ಲ.

ಕವಿಚರಿತೆಕಾರರು ಊಹಿಸುವ ಸು. ೧೪೩೦ ಎಂಬ ವರ್ಷವು ಮೇಲೆ ಹೇಳಿದ ಅಸತ್ಯವಾದ ಕಥೆಯಲ್ಲಿ ಬರುವ ದೇವರಾಜನ ಮತ್ತು ಚಕ್ಕಣಾರ್ಯನ ಹೆಸರಿನ ಆಧಾರದಿಂದ ಹುಟ್ಟಿದೆ. ಕುಮಾರವ್ಯಾಸನು ಅದಕ್ಕೆ ಒಂದು ಶತಮಾನ ಕಾಲ ಹಿಂದೆ ಇದ್ದಿರಬಹುದೆಂದು ಅನುಮಾನಪಡಲು ಅವಕಾಶವಿದೆ. ಕವಿಯು ಎಲ್ಲೂ ವಿಜಯನಗರದ ಸಾಮ್ರಾಜ್ಯದ ಹೆಸರನ್ನೇ ಎತ್ತುವುದಿಲ್ಲ. ದಿಗ್ವಿಜಯಪರ್ವದಲ್ಲಿ ಸಹದೇವನು (ಸಭಾ. v. ೬)

> ಉರವಣಿಸಿದನು ತುಂಗಭದ್ರಾ ।
> ವರನದಿಯನುತ್ತರಿಸಿ ಪಂಪಾ ।
> ಸರದ ತಡಿಯಲಿ ಬಿಟ್ಟುದು ವಿರೂಪಾಕ್ಷ
> ಸೀಮೆಯಲಿ ॥

ಎಂಬ ವರ್ಣನೆ ಇದೆ. ಮೂಲಭಾರತದಲ್ಲಿರುವಂತೆಯೇ ಇಲ್ಲಿ ಕಿಷ್ಕಿಂಧಾ ರಾಜ್ಯವಿದ್ದಿತೆಂದು ಕವಿಯು ಹೇಳುತ್ತಾನಲ್ಲದೆ ಇಲ್ಲಿ ಕಳನಗೊಂಡ ವಿಜಯನಗರದ ಮಾತನ್ನು ಎತ್ತುವುದಿಲ್ಲ. ಆದರೆ ಮೂಲಭಾರತಕ್ಕೆ ಹೊರಚ್ಚಾದ ವಿರೂಪಾಕ್ಷವಿಚಾರವನ್ನು ಮಾತ್ರ ಇವನು ಸೇರಿಸಿ ವಿದ್ಯಾನಗರದ ವಿಚಾರವನ್ನು ಹೇಳದೆ ಇರುವುದರಿಂದ ಆ ರಾಜ್ಯದ ಉದಯವು ಇವನ ಕಾಲದಲ್ಲಿ ಆಗಿರಲಾರದು. ಕವಿಯು ತುರುಕರ ಹೆಸರನ್ನು ಹೇಳಿದರೂ ೨೩ ದೇಶವು ಅವರಿಂದ ಇಲ್ಲವೆ ಮ್ಲೇಚ್ಛರಿಂದ ಆಕ್ರಾಂತವಾಗಿದೆ ಎಂಬ ಸಂಗತಿಯನ್ನೂ ಎಲ್ಲಿಯೂ ಸೂಚಿಸಿಲ್ಲವಾದ್ದರಿಂದ, ಇವನು ದಕ್ಷಿಣದೇಶಕ್ಕೆ ದೇಹಲಿಯವರ ಬಾಧೆತಟ್ಟುವ ಪೂರ್ವದಲ್ಲಿದ್ದಿರಬಹುದೆಂದು ಹೇಳಬಹುದು. ವಿದ್ಯಾನಗರದ ಸಾಮ್ರಾಜ್ಯವು ಹುಟ್ಟಿದ ಮೇಲೆ ನಾಮಾವಶಿಷ್ಟವಾದ ಚೋಳ, ಪಾಂಡ್ಯ, ಕೇರಳ, ಹೊಯ್ಸಳರಾಜ್ಯಗಳ ಹೆಸರನ್ನು ಮಾತ್ರ ಕವಿಯು ಹೇಳುತ್ತಾ ವಿಜಯನಗರದ ಹೆಸರನ್ನು ಉಚ್ಚರಿಸದಿರಲು ಕಾರಣವೇನು? ಚೋಳ ಪಾಂಡ್ಯ, ಕೇರಳರು ಪಾಂಡವರ ಆಪ್ತಬಂಧುಗಳೆಂದೂ ಅವರನ್ನು ವನದಲ್ಲಿ ದುಃಖ ವಿಚಾರಿಸಲು ಬಂದಿದ್ದರೆಂದೂ ಹೇಳಿರುವನು. ೨೪ ಮಾಧವಸಾಯಣರ ನೇತೃತ್ವದಲ್ಲಿ ೧೪ನೆಯ ಶತಮಾನದಲ್ಲಿ ನಡೆದ ಅದ್ಭುತವಾದ ಬ್ರಾಹ್ಮಣ ವಿದ್ಯಾಪ್ರವರ್ತನೆಯ ಸೊಲ್ಲು ಈ ಕವಿಯಲ್ಲಿ ಎಲ್ಲಿಯೂ ಕೇಳಿಸುವುದಿಲ್ಲ. ಕುಮಾರವಾಲ್ಮೀಕಿಕೃತವೆಂದು ಕವಿಚರಿತೆಕಾರರು ಒಪ್ಪುವ ಮೈರಾವಣನ ಕಾಳಗದಲ್ಲಿ ಕವಿಯು ಪರಮಹಂಸ ವಿದ್ಯಾಶಂಕರ ಎಂಬ ಗುರುವನ್ನು ಸ್ತುತಿಸುವನು. ೨೫ ಈ ಗುರುವು ಶೃಂಗೇರಿಯ ವಿದ್ಯಾತೀರ್ಥ (ಮ. ಸು. ೧೩೩೩)ನೇ ಆದರೆ ಕುಮಾರವಾಲ್ಮೀಕಿಯು ಸು. ೧೩೦೮ರಲ್ಲಿ ಇದ್ದಿರಬೇಕಾಗುವುದು. ಆಗ ಕುಮಾರವ್ಯಾಸನ ಕಾಲವು ಸು. ೧೩೦೦ ಆಗಬೇಕು. ಒಂದು ಪಕ್ಷ ಕುಮಾರವಾಲ್ಮೀಕಿಯು ೧೬ನೆಯ ಶತಮಾನದವನೆಂದು ಹೇಳಿದರೂ ಕುಮಾರವ್ಯಾಸನ ಕಾಲಕ್ಕೆ ಮತ್ತೊಂದು ಆಧಾರವು ದೊರೆಯುವುದು: ಕೃಷ್ಣದೇವರಾಯನ ಕಾಲದಲ್ಲಿ ತಿಮ್ಮಣ್ಣನು ಭಾರತದಲ್ಲಿ ಉತ್ತರಾರ್ಧವನ್ನು ಬರೆದು ಪೂರ್ತಿಮಾಡಿದಂತೆಯೇ ಅವನ ಶಿಷ್ಯನಾದ ನಾರಾಯಣಕವಿಯು ರಾಮಾಯಣದಲ್ಲಿ ಉತ್ತರಕಾಂಡವನ್ನು ಬರೆದು ಪೂರ್ತಿಮಾಡಿರುವನು. ೨೬ ಈ ನಾರಾಯಣನು ವಾಲ್ಮೀಕಿವ್ಯಾಸರ ತರುವಾಯ

---

೨೧. ರಾಜಪುರೋಹಿತರು ಲಕ್ಷ್ಮೀಶಕವಿಗೆ ಅದೇ ಹೆಸರಿನ ಪೋಷಕನೊಬ್ಬನನ್ನು ತಲೆಗೆ ಕಟ್ಟಿರುವರು. (ಕ. ಸಾ. ಪರಿಷತ್ಪತ್ರಿಕೆ VIII IV. 242 (ಜನವರಿ 1924) ಇದೇ ರೀತಿ ಭಾರತಕಾರನ ವಿಚಾರದಲ್ಲಿ ಯಾರೂ ಇನ್ನೂ ಏನೂ ಕಂಡು ಹಿಡಿದಿಲ್ಲ. ೨೨. ಈ ಶಾಸನದಲ್ಲಿ 16 ಪಂಗ್ತಿಗಳಿವೆ. ಶಕ 1461ನೆಯ ವಿಕಾರಿ ಭಾದ್ರಪದ ಶುದ್ಧ ಶ್ರವಣ ಮಂಗಳವಾರ, ಮಾಧವ ಪ್ರೀತ್ಯರ್ಥವಾಗಿ ಕೊಟ್ಟ 'ಆನಂದನಿಧಿ' ಎಂಬ ದಾನದ ಪ್ರಶಸ್ತಿಯನ್ನು 'ಕವಿ ಕುಮಾರವ್ಯಾಸಂಗೆ ಪ್ರಸನ್ನನಾದ ಗದುಗಿನ ಶ್ರೀ ವೀರನಾರಾಯಣನ ಸನ್ನಿಧಿಯಲಿ' ಶಿಲಾಶಾಸನಕ್ಕೆ ಬರೆಯಿತೆಂದು ಇಲ್ಲಿ ಹೇಳಿದೆ. ೨೩. ಉದ್ಯೋಗ xi. 22, ದ್ರೋಣ XI. 10 ೨೪ ವನ, II. 34. ೨೫. ಕವಿಚರಿತೆ, II. 144; ಪೀಠಿಕಾಸಂಧಿ ಪದ್ಯ ೬ ೨೬ ಕ. ಸಾ. ಪರಿಷತ್ಪತ್ರಿಕೆ xii. II. ಉಗ್ರಾಣ ಮಂಗೇಶರಾಯರು— ನಾರಾಯಣ ಕವಿಯ ಉತ್ತರಕಾಂಡ ರಾಮಾಯಣ ಪುಟ 100–116 (ಜುಲೈ 1927)

CC-0. Jangamwadi Math Collection. Digitized by eGangotri

ಕುಮಾರವ್ಯಾಸನೊಬ್ಬನನ್ನು ಮಾತ್ರವೇ ಸ್ತುತಿಸಿ ಕುಮಾರವಾಲ್ಮೀಕಿಯನ್ನು ಸ್ಮರಿಸುವುದಿಲ್ಲವಾದ್ದರಿಂದ [೨೭] ಇವನು ಪೂರ್ತಿಮಾಡಿರಬಹುದಾದ ಪೂರ್ವಕಾಂಡ ರಾಮಾಯಣವು ಹಿಂದಣ ಮಹಾತ್ಮನೋ ಕವಿಯದಾಗಿರಬೇಕು. ಈಚೆಗೆ ಹಂಪೆಯ ಕೃಷ್ಣದೇವಾಲಯದಲ್ಲಿ ದೊರೆತಿರುವ ಸು. ೧೪೧೫ನೆಯ ವರ್ಷದ ಶಾಸನದ ಪ್ರಕಾರ ಮಾಧವನಾಯಣರ ತಂಗೆಯ ಮಗನಾದ ಲಕ್ಷ್ಮೀಧರಾಮಾತ್ಯನು ನೀತಿವಾಕ್ಯಾಮೃತ, ಆನಂದರಾಮಾಯಣ, ಕೃಷ್ಣಲೀಲೆ ಎಂಬ ಗ್ರಂಥಗಳನ್ನು ರಚಿಸಿರುವಂತೆ ತಿಳಿದುಬರುವುದು. [೨೮] ಈ ರಾಮಾಯಣವು ಆನಂದಾರಾಮರೆಂಬ [೨೯] ಕುಲಗುರುಗಳ ಅಂಕಿತದಿಂದ ಬರೆಯಲ್ಪಟ್ಟಿರುವ ವಾಲ್ಮೀಕಿರಾಮಾಯಣವೋ ಅಥವಾ ತದ್ಭಿನ್ನವಾದ ಆನಂದರಾಮಾಯಣವೋ ಗೊತ್ತಾಗುವುದಿಲ್ಲ. ಇದು ಆನಂದರಾಮಾಯಣವೇ ಆಗಿದ್ದರೆ ಸರ್ವಪ್ರಸಿದ್ಧವಾದ ವಾಲ್ಮೀಕಿರಾಮಾಯಣವು ಕನ್ನಡದಲ್ಲಿ ಹುಟ್ಟದೆ, ಈತನು ಆನಂದರಾಮಾಯಣವನ್ನು ಕನ್ನಡಿಸುವುದು ಅಸಂಭವವಾದ್ದರಿಂದ ಇದಕ್ಕೆ ಮೊದಲೇ ವಾಲ್ಮೀಕಿರಾಮಾಯಣವು ಹುಟ್ಟಿರಬೇಕು. ಬ್ರಾಹ್ಮಣಕವಿಗಳ ಕನ್ನಡರಾಮಾಯಣದಲ್ಲಿ ತೊರವೆಯ ರಾಮಾಯಣವೇ ಮೊದಲನೆಯದು— ಎಂದು ಕವಿಚರಿತೆಕಾರರು ಹೇಳುವ ಮಾತನ್ನು [೩೦] ಸಾಧಿಸಬೇಕಾದರೆ ಕುಮಾರವಾಲ್ಮೀಕಿಗೆ ಸು. ೧೩೭೫ನ್ನೇ ಕೊಡಬೇಕಾಗುವುದು. ಆದರೆ ಕುಮಾರವ್ಯಾಸನೇ [ಆದಿ, I. ೧]

> ತಿಣಿಕಿದನು ಫಣಿರಾಯ ರಾಮಾ।—
> ಯಣದ ಕಪಿಗಳ ಭಾರದಲಿ ತಿಂ- ।
> ಥಿಣಿಯ ರಘುವರ ಚರಿತೆಯಲಿ ಕಾಲಿಡಲು
> ತೆರಪಿಲ್ಲ ॥

ಎಂದು ಹೇಳುವಂತೆ ಅವನಿಗೆ ಹಿಂದೆಯೇ ಬೇಕಾದಷ್ಟು ಬ್ರಾಹ್ಮಣ ರಾಮಾಯಣಗಳು ಇದ್ದಿರಬೇಕು. ನಾರಾಯಣಕವಿಯು ಕುಮಾರವ್ಯಾಸನನ್ನು ಇವುಗಳ ಕಾಲಕ್ಕೆ ಸೇರಿಸುತ್ತಾನಾದ್ದರಿಂದ ಅವನು ಲಕ್ಷ್ಮೀಧರನಿಗಿಂತ ಹಿಂದೆಯೇ ಇದ್ದಿರಬೇಕು.

ಮೇಲ್ಕಂಡ ಸಾಕ್ಷ್ಯಗಳೆಲ್ಲವೂ ಪರೀಕ್ಷ್ಯವಾದುವೇ ಸರಿ. ಕವಿಯು ಮೂಲಭಾರತಕ್ಕೆ ಹೊರಚ್ಯಾದ ತನ್ನ ಪರಿಸ್ಥಿತಿಗತವಾದ ನವೀನಸಂಗತಿಗಳನ್ನು ಅಲ್ಲಲ್ಲಿ ಹೇಳುತ್ತಿರುವುದರಿಂದ ಈ ಸಾಕ್ಷ್ಯಗಳು ವಿಚಾರಕ್ಕೆ ಅರ್ಹವಾದುವು— ಎಂದು ಹೇಳಬೇಕಾಗಿದೆ. ಕವಿಯ ಈ ಸ್ವಭಾವಕ್ಕೆ ಕೆಲವು ನಿದರ್ಶನಗಳನ್ನು ಕೊಡಬಹುದು. ದಿಗ್ವಿಜಯಪರ್ವದಲ್ಲಿ ಕವಿಯು ವಿರಾಟದೇಶವನ್ನು ಮೂಲಭಾರತಕ್ಕನುಸಾರವಾಗಿ ಚರ್ಮಣ್ವತೀ (ಚಂಬಲ್) ನದಿಗೆ ಉತ್ತರವಾಗಿ ನಿರೂಪಿಸಿದರೂ [೩೧] ಮುಂದೆ ವಿರಾಟಪರ್ವದಲ್ಲಿ ಕೌರವನ ಮಲ್ಲರ ಪ್ರಯಾಣವನ್ನು ಹೀಗೆ ವರ್ಣಿಸಿರುವನು (ವಿರಾಟ II. ೧೮).

> ಸುರನದಿಯನುತ್ತರಿಸಿ ನಾನಾ।
> ಪರಿಯ ದೇಶವ ಹೊಕ್ಕು ಗೋದಾ- ।
> ವರಿಯ ತೀರದ ಪಟ್ಟಣವ ಶೋಧಿಸುತ
> ಪಯಣದಲಿ ॥
>
> ಬರುತಲಂತಾ ತುಂಗಭದ್ರಾ ।
> ವರನದಿಯ ರಾಜ್ಯಾಂಗದೊಳು ವಿಗೆ ।
> ಪರಿಕಿಸುತ ಭೀಮಾತ ನಡೆದನು ಮಲ್ಲಜನ-
> ವೆರಸೀ ॥

ಆನಂತರ

> ಹಲವು ಪಯಣದ ಮೇಲೆ ಮತ್ಸ್ಯನ ।
> ಹೊಳಲ ಹೊರಗೈತಂದು...........

ಎಂಬ ಮಾತಿದೆ (ಪ. ೨೫). ಈ ಪ್ರಯಾಣದ ವರ್ಣನೆಯು ಮೂಲ ಭಾರತದಲ್ಲಿ ಇಲ್ಲ. [೩೨] ಕುಮಾರವ್ಯಾಸನು ಇಲ್ಲಿ ಹೇಳುವ ತುಂಗಭದ್ರಾನದಿಯ ರಾಜ್ಯಾಂಗವು ಹೊಸ್ಪಳ ವಿರಬಹುದೇ ? ಕವಿಯು ವಿರಾಟನಗರಿಯನ್ನು ತುಂಗಭದ್ರೆಯ ಸಮೀಪದಲ್ಲಿ ನಿರೂಪಿಸುವುದರಿಂದ ಧಾರವಾಡದ ಹಾನಗಲ್ಲು ಮತ್ಸ್ಯನಗರಿಯಾಗಿತ್ತು— ಎಂಬ ಐತಿಹ್ಯವನ್ನು ಸೂಚಿಸುವಂತೆ ತೋರುವುದು. ಧರ್ಮಜನ ಪಟ್ಟಾಭಿಷೇಕಕ್ಕೆ ಕೆಳಗಿನ ರಾಜ್ಯಗಳ ರಾಜರು ಬಂದಿದ್ದರೆಂದು ಕವಿ ವರ್ಣಿಸಿರುವನು. (ಗದಾ xiii ೧೪-೧೬)

---

೨೭. ಅದೇ, ಪು. 102; ೨೮. ದಕ್ಷಿಣ ಇಂಡಿಯಾಶಾಸನಗಳು IV. ಸಂಖ್ಯೆ 267. ಈ ಶಾಸನಪಾಠವನ್ನು ವಿವರಣೆಯೊಡನೆ ಸಂಪೂರ್ಣವಾಗಿ ತಿ. ತಾತಾಚಾರ್ಯ ಶರ್ಮರವರು ಕ. ಸಾ. ಪರಿಷತ್ಪತ್ರಿಕೆ XIV. I. 17–36 (ಎಪ್ರೆಲ್ 1929) ರಲ್ಲಿ ಕೊಟ್ಟಿರುವರು. ೨೯. ಅದೇ. ಈ ಗುರುವಿನ ಹೆಸರು ಶಾಸನದ ೨೫ ನೆಯ ಪದ್ಯದಲ್ಲಿ ಬಂದಿದೆ. ೩೦. ಕವಿಚರಿತೆ II. 143. ೩೧. ಸಭಾ. V. 2-4. ೩೨. ವಿರಾಟ- ೧೩ ಅಧ್ಯಾಯ

CC-0. Jangamwadi Math Collection. Digitized by eGangotri

ಗೌಳ ಬರ್ಬರ ಮಗಧ ಸಿಂಧು ನೇ।
ಪಾಳ ಆಂಧ್ರ ವಿದೇಹ ಕುರು ಮಲೆ।
ಯಾಳ ವತ್ಸ ತ್ರಿಗರ್ತ ಮತ್ಸ್ಯ ವಿದರ್ಭ
ಕರ್ಣಾಟ॥

ಮಾಳವಂಗ ಕಿರಾತ (ಮ)ಥಲಿ ಬಂ।
ಗಾಳ ಬೋನಕ ಚೀನ ಖರ್ಪರ।
ಚೋಳ ಕೊಡಗ ನೃಪಾಲ ಕೊಂಕಣ ಕರುಶ
ಮಹರಾಷ್ಟ್ರ॥

ಶೂರಸೇನ ಮರಾಟ ಬಾಹ್ಲಿಕ।
ಕೇರಳ ಯುಗಂಧರ ಕುಕುರ ಸಂ।
ವೀರ ತೆಂಕಣ ಚೇದಿ ಕೋಸಲ ನಿಷಧ
ಸೌರಾಷ್ಟ್ರ॥

ಪಾರಶಿಕ ಪಾಂಚಾಲ ವರ ಗಾಂ–।
ಧಾರ ಕರ್ಣಾಟಕ ಪುಳಿಂದ ಕಾ–।
ಶ್ಮೀರ ನಿಷಧ ವಿದರ್ಭ ಘೋಟಕವಂತಿ
ಕಾಂಭೋಜ॥

ಅಂಗ ಕುಂತಲ ಲಾಟ ಪೌಂಡ್ರ ಕ–।
ಳಿಂಗ ಗುಜ್ಜರ ಪಾಂಡ್ಯ ಕೇಕಯ।
ಸಿಂಗಳ ದಶಾರ್ಣವ ತುರುಷ್ಕ ಸಮುದ್ರ
ಹೋಸಲದಾ॥

ಈ ಪದ್ಯಗಳ ಪಾಠವು ಬಹು ತಪ್ಪಾಗಿದೆ. ಹೋಸಲವು ಹೊಯ್ಸಳವಿರಬೇಕು. ಮರಾಟಕ್ಕೂ ಮಹಾರಾಷ್ಟ್ರಕ್ಕೂ ಗೌಳಬಂಗಾಳಗಳಿಗೂ ಇಲ್ಲಿ ಭೇದಮಾಡಲ್ಪಟ್ಟಿದೆ. ಮಥಲಿಗೂ ಆಂಧ್ರಕ್ಕೂ ವ್ಯತ್ಯಾಸಮಾಡಿದೆ. ಕರ್ಣಾಟಕ ವಿದರ್ಭಗಳ ಹೆಸರು ಎರಡಾವರ್ತಿ ಬಂದಿದೆ. ಕರ್ಣಾಟಕಕ್ಕೆ ಸೇರುವ ಹೊಯ್ಸಳ, ಕೊಡಗು, ಕುಂತಲ, ಕೊಂಕಣ ರಾಜ್ಯಗಳು ಬೇರೆಯಾಗಿ ಹೇಳಲ್ಪಟ್ಟಿವೆ. ಕವಿಯು ಕರ್ಣಾಟಕದ ಹೆಸರನ್ನು ಮತ್ತೊಂದು ಕಡೆ ಹೇಳಿದ್ದಾನೆ.[೩೩] ದ್ರಾವಿಡ ಎಂಬ ಹೆಸರು ಎರಡು ಕಡೆ ಬಂದಿದೆ.[೩೪] ತುಳುವ ಎಂಬುದು ಒಂದು ಕಡೆ ಬಂದಿದೆ.[೩೫] ತಿಗುಳ ಎಂಬುದೂ ಒಂದು ಸಲ ಬಂದಿದೆ.[೩೬]

ಅರ್ಜುನನ ತೀರ್ಥಯಾತ್ರಾಸಂಧಿಯಲ್ಲಿ ಕವಿಯು ಪಂಚವಟಿ, ಕಾಂಚಿ, ರಾಮೇಶ್ವರ, ಅನಂತಶಯನ, ಹರಿಹರಕ್ಷೇತ್ರಗಳನ್ನು ಹೆಚ್ಚಾಗಿ ಹೇಳಿರುವನು.[೩೭] ಮತ್ತೊಂದು ಕಡೆ ಮಾಯಾವತೀ ಜಾಲಂಧರಕ್ಷೇತ್ರಗಳನ್ನು ತಿಳಿಸುವನು.[೩೮] ಸಹದೇವ ದಿಗ್ವಿಜಯ ಕಾಲದಲ್ಲಿ ಮಾಹಿಷ್ಮತಿಯು ಕಾವೇರೀನದಿಯ ಬಳಿ ಇದ್ದಂತೆ ವರ್ಣಿಸಿರುವನು.[೩೯] ಇಲ್ಲಿಂದ ಮುಂದೆ ಸಹದೇವನು ಸಹ್ಯಾದ್ರಿಪ್ರಾಂತವನ್ನು ಜಯಿಸುವನೆಂದು ಹೇಳಿರುವುದರಿಂದ[೪೦] ಇದು ಮೈಸೂರಿನ ಕಾವೇರಿಯೇ ಆಗಿರಬೇಕು. ಪುರಾಣಪ್ರಸಿದ್ಧವಾದ ಮಾಹಿಷ್ಮತಿಯು ನರ್ಮದಾತೀರದಲ್ಲಿತ್ತು. ಆ ನಗರವು ನರ್ಮದಾ ಮತ್ತು ಅದರ ಸಣ್ಣ ಉಪನದಿಯಾದ ಕಾವೇರಿಗಳ ಸಂಗಮದಲ್ಲಿ, ಈಗಿನ ಮಾಂಧಾತ ಎಂಬ ಸ್ಥಳದಲ್ಲಿ ಇದ್ದಿತು.[೪೧] ಕುಮಾರವ್ಯಾಸನು ದಕ್ಷಿಣಮಾಹಿಷ್ಮತಿಯನ್ನು ಹೇಳಿರುವನು. ಪರಶುರಾಮನು ಉತ್ತರಮಾಹಿಷ್ಮತಿಯ ಸಾಮ್ರಾಜ್ಯವನ್ನು ಮುರಿದಾಗ ಅಲ್ಲಿನ ಕೆಲವರು ಸ್ವಾತಂತ್ರ್ಯವನ್ನು ಬಯಸಿ ದಕ್ಷಿಣಕ್ಕೆ ವಲಸೆಬಂದು ದಕ್ಷಿಣಮಾಹಿಷ್ಮತೀರಾಜ್ಯವನ್ನು ಕಟ್ಟಿರಬೇಕು. ಇದರಿಂದಲೇ ದಕ್ಷಿಣದ ಕಾವೇರಿಗೆ ಆ ಹೆಸರು ಉತ್ತರದ ನದಿಯಿಂದ ಆರೋಪಿತವಾಗಿ ಬಂದಿರಬಹುದು. ಅಥವಾ ಅದಕ್ಕೆ ದ್ರಾವಿಡಭಾಷೆಯ ಹೆಸರಾದ ಕಾವಿರಿ[೪೨] ಎಂಬುದನ್ನು ಅವರು ಕಾವೇರಿ ಎಂದು ಮಾಡಿರಬೇಕು. ಈ ದಕ್ಷಿಣದ ಮಾಹಿಷ್ಮತಿದೇಶದ ಹೆಸರು ಕ್ರಮವಾಗಿ ಮಾಹಿಷಕ,[೪೩] ಮಹಿಷ, ಮೈಸ, ಮೈಸೂರು ಎಂಬ ರೂಪಾಂತರಗಳನ್ನು ಪಡೆದಿರುವಂತೆ ತೋರುವುದು.[೪೪] ಮತ್ಸ್ಯಪಾದ್ಮಕೂರ್ಮಪುರಾಣಗಳು ಉತ್ತರ ದಕ್ಷಿಣ ಕಾವೇರಿಗಳೆರಡನ್ನೂ ಹೇಳುವುವು. ಮಹಾಭಾರತದ ಕನ್ನಡ ವಾಣೀವಿಲಾಸ ಪಾಠದಲ್ಲಿ ದಕ್ಷಿಣಕಾವೇರಿಯ ಪ್ರಸ್ತಾಪ ಒಂದರೂ (ಅ. ೩೪, ಪು. ೫೧) ಹಯಗ್ರೀವಶಾಸ್ತ್ರಿ ಪ್ರಚಾರಿತಪಾಠದಲ್ಲಿ ಬರುವುದಿಲ್ಲ. ಕವಿಯು ಮೈಲಾರಕ್ಷೇತ್ರದ ಹೆಸರನ್ನು[೪೫] ಸಹ ಹೇಳಿರುವಂತಿದೆ.

---

೩೩. ಭೀಷ್ಮ. IV. 63. ೩೪. ಕರ್ಣ XI. 7 (ದ್ರವಿಳ); ಕರ್ಣ XV. 5. ೩೫. ಕರ್ಣ xv. 5. ೩೬. ಭೀಷ್ಮ IV. 37. ತಿಗುಳ=ತಮಿಳ.
೩೭. ಆದಿ. xix. 13–17. ೩೮. ಆದಿ. xiii ೩. ೩೯. ಸಭಾ. V. 10. ೪೦. ಸಭಾ V. 19. ೪೧. P. R. A. S. 1910, P. 867
೪೨. P. T. Shrinivas Iengar – History of the Tamils (1929) P. 222. ೪೩. ಮಹಾಭಾರತ ಭೀಷ್ಮಪರ್ವ ix. 59.
೪೪. ದೇವಸ್ವಾಮಿ ಐಯ್ಯಂಗಾರ್– ಶ್ರೀವಿದ್ಯಾರಣ್ಯವೈಭವ ಪು. 19–20 ೪೫. ವಿರಾಟ. ix. 70. ಪದ್ಯಕ್ಕೆ ಸರಿಯಾಗಿ ಅರ್ಥವಾಗುವುದಿಲ್ಲ.



CC-0. Jangamwadi Math Collection. Digitized by eGangotri

ಕುಮಾರವ್ಯಾಸನು ಉಪಯೋಗಿಸಿರುವ ಕೂಲಿ,[೪೬] ಭಂಗಿ,[೪೭] ಸಾರಾಯಿ,[೪೮] ಖರ್ಜೂರ[೪೯] ಮೊದಲಾದ ಪದಗಳಿಂದ ಅವನ ಕಾಲನಿರ್ಣಯಕ್ಕೆ ಸಹಾಯವಾಗಲಾರದೆಂದು ತೋರುತ್ತದೆ.

ಕವಿಯು ಹರಿಹರದ ದೇವರನ್ನು ಹೇಳುವುದು ನಿಜವಾದರೆ ಆ ದೇವಾಲಯವನ್ನು ಪೋಲಾಳ್ವ ದಂಡನಾಥನು[೫೦] ಕಟ್ಟಿಸಿ (ಕೆಲವರು ಹೇಳುವ ಪ್ರಕಾರ ಪುನರುತ್ಥಾಪಿಸಿ)ರುತ್ತಾನಾದ್ದರಿಂದ ಕುಮಾರವ್ಯಾಸನು ೧೨೨೪ ರಿಂದ ಈಚೆಗೆ ಇದ್ದಿರಬೇಕಾಗುವುದು. ಆದರೆ ಅರ್ಜುನನು ರಾಮೇಶ್ವರ, ಅನಂತಶಯನಗಳನ್ನು ಹೊಕ್ಕು ಪ್ರಭಾಸಕ್ಕೆ ಹೋಗುವಾಗ ಹರಿಹರಪದಯುಗಳಕ್ಕೆ ಅಭಿನಯಿಸಿದನೆಂದು ಹೇಳಿರುವುದರಿಂದ ಕವಿಯು ತುಂಗಭದ್ರಾ ತೀರದ ಕ್ಷೇತ್ರವನ್ನು ಸೂಚಿಸುತ್ತಾನೆಂದು ಊಹಿಸಲು ಸ್ವಲ್ಪ ಕಷ್ಟವಾಗುವುದು.

ಕುಮಾರವ್ಯಾಸನು ಪದೇಪದೇ ಪ್ರಯೋಗಿಸುತ್ತಿರುವ ರಾಯ ಎಂಬ ಬಿರುದು ಹಿಂದೆ ಚಾವುಂಡರಾಯನಿಗೆ ಇತ್ತು. ಕವಿರನ್ನನು ತನ್ನ ಮಗನಿಗೆ ಆ ಹೆಸರಿಟ್ಟಿದ್ದನು. ಚಾಳುಕ್ಯಚಕ್ರವರ್ತಿ ಜಯಸಿಂಹ ಜಗದೇಕಮಲ್ಲ I (೧೦೧೫–೧೦೪೨)ನಿಗೆ ರಾಯಗಜಕೇಸರಿ, ವಿದಗ್ಧರಾಯಪವಿತ್ರಚೂಡಾಮಣಿ, ಅರಿರಾಯ ತಳೆಯ ಕರವತ್ತಂ, ಅರಿರಾಯ ಶೆಳೆಸಂ, ರಾಯ ಪ್ರತಾಪಾದಿತ್ಯಂ, ರಾಯ ನೀರಜಪಜಾಸಳ, ರಾಯ ಜಗಝಂಪಂ– ಎಂಬ ಬಿರುದುಗಳಿದ್ದುವು.[೫೧] ಅವನ ಮುಂದಣ ತ್ರೈಲೋಕ್ಯಮಲ್ಲ ಸೋಮೇಶ್ವರ (೧೦೪೨–೧೦೬೮)ನಿಗೆ 'ರಾಯನಾರಾಯಣಂ' ಎಂಬ ಬಿರುದು ಇದ್ದಿತ್ತು.[೫೨] ತ್ರಿಭುವನಮಲ್ಲ ವಿಕ್ರಮಾದಿತ್ಯನು (೧೦೭೬–೧೧೨೬) ಗದುಗಿನ ಶಾಸನದಲ್ಲಿ (೧೦೯೮) 'ರಿಪುರಾಯಭಯಂಕರನುಭಯರಾಯ ಬೆಂಕೊಳ್ವನಿಳಾಪ್ರಭುರಾಯಜಗದಳಂ' ಎಂದು ವರ್ಣಿಸಲ್ಪಟ್ಟಿದ್ದಾನೆ.[೫೩] ವಿಷ್ಣುದಂಡಾಧೀಶನ ತಂದೆಯ ಹೆಸರು ರಾಯಣ ಎಂದು ಇತ್ತು.[೫೪] ಹೊಯ್ಸಳರಾಜರಿಗೆ ಬಲ್ಲಾಳರಾಯರೆಂಬ ಹೆಸರು ಮುಖ್ಯವಾಗಿ ವೀರಬಲ್ಲಾಳನ ಕಾಲದಿಂದ ಮುಂದಕ್ಕೆ ಪ್ರಸಿದ್ಧವಾಗಿದ್ದಂತೆ ತೋರುವುದು.[೫೫] ಈ ಬಿರುದನ್ನು ಕುಮಾರವ್ಯಾಸನು ಬಹು ಪ್ರಸಿದ್ಧಿಗೆ ತಂದುದರಿಂದ ವಿಜಯನಗರದವರು ಅದನ್ನು ತಮಗಂಕಿತ ಮಾಡಿಕೊಂಡಿದ್ದಿರಬಹುದು.[೫೬]

ಇತ್ಯಾದಿ ಕಾರಣಗಳಿಂದ ಕುಮಾರವ್ಯಾಸನ ಕಾಲವನ್ನು ೧೪ನೆಯ ಶತಮಾನದ ಪ್ರಾರಂಭಕ್ಕೆ ಹಾಕಬಹುದೆಂದು ತೋರುತ್ತದೆ. ಈ ವಿಚಾರವಾಗಿ ಯಾವ ನಿಶ್ಚಯವನ್ನೂ ಹೇಳಲಾಗುವುದಿಲ್ಲ.

ಕವಿಯ ಮತಧರ್ಮವನ್ನು ನಿರ್ಣಯಿಸಿದರೆ ಅವನ ಕಾಲವೂ ವೃತ್ತಾಂತವೂ ಮತ್ತಷ್ಟು ಸ್ಪಷ್ಟವಾಗಿ ಹೊರಪಡಬಹುದು.[೫೭]

---

೪೬. ವನ. VII. 15. ೪೭. ಸಭಾ. ii. 81; ಕರ್ಣ. ix. 21. ೪೮. ಆದಿ. xi. 13. ೪೯. ಆದಿ. xx. 27. ೫೦. ಕವಿಚರಿತೆ I 344. ೫೧. ಶಿಕಾರಿಪುರ ಶಾಸನ 126. ೫೨. ನಾಗಾಯಿ ಶಾಸನ B. 1058. ಕ. ಸಾ. ಪರಿಷತ್ಪತ್ರಿಕೆ xiv. i. (ಏಪ್ರಿಲ್ 1929)-ರಾ. ನರಸಿಂಹಾಚಾರ್ಯ: ಶಾಸನಪದ್ಯಮಂಜರಿಯ ಅನುಬಂಧ ಪು. 4. ೫೩. ಅದೇ. xii. I. 5. (ಏಪ್ರಿಲ್ 1927) ೫೪. ಕವಿಚರಿತೆ I 137. ಇದು ರಾಧೆಯ ತಂದೆಯ ಹೆಸರು (ಬ್ರಹ್ಮವೈವರ್ತ ಪುರಾಣ). ೫೫. ದಾವಣಗೆರೆ ಶಾಸನ 25. ೫೬. ರಾಯ. ಎಂದರೆ ವಿಜಯನಗರದಧೀಶನೆಂದು ಮುಸಲ್ಮಾನ ಚರಿತ್ರಕಾರರು ಹೇಳಿರುವರು. ೫೭. ಈ ಲೇಖಕನು ಇವನ ಮತವಿಮರ್ಶೆಯನ್ನು ಬೇರೊಂದು ಲೇಖನದಲ್ಲಿ ಮಾಡಿರುತ್ತಾನೆ.

CC-0. Jangamwadi Math Collection. Digitized by eGangotri

# ನಾಮಕರಣ

(ಹರಟೆ)

(ರಾಮಚಂದ್ರ, ಪುತ್ತೂರು)

ನಮ್ಮ ಕೂಸಿಗೆ ಇಪ್ಪತ್ತಿನ ವರೆಗೂ ಸರಿಯಾದ ಹೆಸರಿಲ್ಲ. ಪುಣ್ಯಕ್ಕೆ ನನ್ನ ಜವಾಬುದಾರಿಯೇನೊ ತಪ್ಪಿತು. ನನ್ನನ್ನು ಕೇಳಲೇ ಇಲ್ಲವೆಂದಲ್ಲ. ಕೇಳಿದ್ದರು. ತಂದೆಯೆಂಬ ಮೇಲೆ ಕೂಸಿಗೆ ಹೆಸರಿಡುವ ಮೊದಲು ಒಂದು ಮಾತು ಕೇಳಬೇಡವೆ? ಆದರೆ ನಾನು ಹೇಳಿದ್ದು ಆಗುಹೋಗುವ ಮಾತು ಅಲ್ಲವೆಂದು ಅವರು ಮೊದಲೇ ನಿರ್ಣಯಿಸಿಕೊಂಡಿದ್ದರು.

ಅಪ್ಪೊತ್ತಿನ ವರೆಗೆ 'ಮೋಹನ' ಎಂದು ಮುಕ್ಕಾಲು ಪಾಲು ಖಂಡಿತವಾಗಿತ್ತು. 'ಮೋಹನ? ಯಾಕೆ?' ಎಂದು ನಾನು ಕೇಳಿದೆ. ನಮ್ಮಲ್ಲಿ ಈವರೆಗೆ 'ಮೋಹನ' ಎಂದು ಯಾರೂ ಇರಲಿಲ್ಲ. ಬೇಕುಬೇಕಾದ ಹೆಸರುಗಳು ಇರುವಾಗ ಈ ವಿಚಿತ್ರ ಹೆಸರು ಯಾಕಪ್ಪಾ? ಮನಸ್ಸಿಗೆ ಬಂದ ಹೆಸರಿಡಬಾರದು. ಒಂದು ಹಿರಿಯರ ಹೆಸರಿಡಬೇಕು; ಒಂದು ದೇವರ ಹೆಸರಿಡಬೇಕು. ಇಲ್ಲವೆ ನಮ್ಮ ದೇಶದ ದೊಡ್ಡದೊಡ್ಡ ಮಹನೀಯರ ಹೆಸರಿಡಬೇಕು. ಬರೀ 'ಮೋಹನ' ಅಂದರೆ ಅತ್ತಲಾಗೂ ಇಲ್ಲ, ಇತ್ತಲಾಗೂ ಇಲ್ಲ. ಮಾಲವೀಯರ ಹೆಸರಲ್ಲಿ ಮೋಹನ ಎಂದು ಇದೆ, ನಿಜ. ಆದರೆ 'ಮದನಮೋಹನ' ಎಂದಿದೆ. ಗಾಂಧಿಯ ಹೆಸರಿನದೂ ಅದೇ ರೀತಿ. 'ಮೋಹನದಾಸ' ಎಂದಿದೆ. ಅಥವಾ ನಿಮಗೆ ನವೀನ ಕಾದಂಬರಿ........"

ಇಷ್ಟರಲ್ಲಿ ಕೂಸಿನ ಅಜ್ಜಿಗೆ ಗಾಬರಿಯಾಗಿ, 'ಬೇಡ, ಬೇಡ. ಅಂಥವರ ಹೆಸರೇ ಬೇಡ. ಸುಡುಗಾಡು. ನಾಳೆ ಜೈಲಿಗೆ ಹೋಗೋದಕ್ಕೇನೂ? ಬೇಡ. ಹೆಸರಿಲ್ಲದಿದ್ದರೆ ಅಷ್ಟೇ ಹೋಯಿತು.' ಎಂದುಬಿಟ್ಟಳು. ಕೊನೆಗೆ ಕೂಸಿನ ತಾಯನ್ನು ನೋಡುತ್ತ "ನಿನ್ನ ಗಂಡಗೆ ಇತ್ತಲ್ಲ ಐದು ಹೆಸರು. ಈಗ ಮಾತ್ರ ಯಾವ ಹೆಸರು ಹೇಳಿದರೂ ನೂರು ರೂಪಾಯಿ ಸಾಲ ಸಿಕ್ಕೋದಿಲ್ಲ" ಅಂದಳು. ಇಷ್ಟು ಅನ್ನಿಸಿಕೊಂಡ ಮೇಲೆ ಅದೃಶ್ಯವಾಗುವುದೇ ಮೇಲು-ಎಂದು ಎಣಿಸಿದೆ. ಆದರೆ ಅವಳು ಎದ್ದು ಹೋಗಿಬಿಟ್ಟಳು.

ಆ ಮೇಲೆ ನಾನು ಮತ್ತೆ "ಗೋಪಾಲ? ಪುಟ್ಟ ಹೆಸರು ಮೂರೇ ಅಕ್ಷರ. ಕರೆಯುವುದಕ್ಕೂ ಸುಲಭ, ದಸ್ಕತಿಗೂ ಸುಲಭ. ಪವಿತ್ರವಾದ ಹೆಸರು. ಇದಕ್ಕೇನಡ್ಡಿ?" ಅಂದೆ. ಯಾರೂ ಉತ್ತರ ಕೊಡಲಿಲ್ಲ. ಎಲ್ಲರಿಗೂ ಸಮ್ಮತವಾಯಿತು. ನನ್ನ ಮರ್ಯಾದೆ ಉಳಿಸಿಕೊಂಡೆ—ಅಂತ ಹಿಗ್ಗುತ್ತ ಬಂದುಬಿಟ್ಟೆ. ಮರುದಿನ ಕೂಸಿನ ಅಜ್ಜಿ ನಿದ್ದೆ ಮಾಡುತ್ತಿದ್ದಾಗ ಎರಡನೆಯ ಚಕ್ರಗೋಷ್ಠಿಗೆ ಪ್ರಾರಂಭವಾಯಿತು. ನಾನು ನನ್ನಷ್ಟಕ್ಕೇ ಹೋದೆ. "ಗೋಪಾಲ-ಬೇಡಪ್ಪ ಎಲ್ಲಿ ಹೋದರೂ ಗೋಪಾಲ, ಗೋಪಾಲ! ಮೊನ್ನೆ ಅವಲಕ್ಕಿ ಕುಟ್ಟುವವಳ ಸೊಸೆಗೆ ಒಂದು ಕೂಸು ಹುಟ್ಟಿತು. ಅದಕ್ಕೂ 'ಗೋಪಾಲ' ಅಂತ ಹೆಸರು. ಬೇಡ ಅದು, ಸಿಕ್ಕಕಟ್ಟ ಹೆಸರು. ಬೇಕಾದರೆ 'ರಾಮಚಂದ್ರ' ಅಂತಿರಲಿ. ಎಷ್ಟು ಸರಳವಾದ ಹೆಸರು! ಎಷ್ಟು ಮೆತ್ತಗೆ! ತುಂಬಿದ ಬೆಳದಿಂಗಳ ನೆನಪಾಗುತ್ತದೆ. ಮುದ್ದು ಹೆಸರು" ಅಂದಳು ನನ್ನ ನಾದಿನಿ.

"ನನಗಂತೂ ಕಾಫಿಹೋಟಲಿನ ರಾಮಚಂದ್ರನ ನೆನಪಾಗುತ್ತದೆ" ಅಂದೆ. "ಅದಕ್ಕೇನು ಮಾಡುವುದು? ಅವರವರಿಗೆ ಬೇಕಾದವರ ಹೆಸರ ನೆನಪು ಅವರವರಿಗೆ ಆಗುತ್ತದೆ. ನನಗೆ ಶ್ರೀರಾಮನ ನೆನಪಾಗುತ್ತದೆ. ಹಾಗೆ ತಪ್ಪು ಹುಡುಕಿದರೆ ಯಾವ ಹೆಸರೂ ಸಿಕ್ಕದು' ಅಂದಳು.

ಮಾತಿನ ಮುಖವನ್ನೇ ಬದಲಾಯಿಸಬೇಕೆಂದು ನಾನು 'ಬರೀ ಹೆಸರಿನಲ್ಲೇನಿದೆ? ಷೆಕ್ಸ್‌ಪಿಯರ್ ಹೇಳಲಿಲ್ಲವೆ!...' ಅನ್ನುವಷ್ಟರಲ್ಲಿ 'ನೀನು ಸಿಕ್ಕಿದವರ ಹತ್ತಿರ ಕೇಳುತ್ತಾ ಇದ್ದೀಯಾ. ಏನು ಅವ ಏನು ಬೇಕಾದರೂ ಹೇಳಲಿ! ಕೂಸು ನಮ್ಮದು, ಹೆಸರು ಮುದ್ದಾಗಿರಬೇಡವೆ?' ಅಂದಳು ಕೂಸಿನ ಸೋದರತ್ತೆ.

"ಆಗಲಿ, ಹಾಗಾದರೆ, ಮಾಧವ ಆಗಬಹುದಲ್ಲವೆ" ಅಂದೆ.

"ಆಗಬಹುದಷ್ಟೆ, ಮೊನ್ನೆ ಒಂದಿಡೀದಿನ ಆ ಹೆಸರು ಮೆರೆದುಬಿಟ್ಟಿತು. ಮತ್ತ್ಯಾಕೊ ಬೇಡವೆಂದು ಆಯಿತು.

CC-0. Jangamwadi Math Collection. Digitized by eGangotri

ಯಾರೋ....ಯಾಕೇ, ಸಾವಿತ್ರಿ ಬೇಡ–ಅಂತ ತೆಗೆದು ಹಾಕಿದ್ದು. ನೀನಲ್ಲವೆ? ಬೇಡವೆಂದು ಹಟ ಹಿಡಿದದ್ದು? ಅಯ್ಯೋ, ಹೌದು." ಎಲ್ಲರೂ ನನ್ನನ್ನು ನೋಡುತ್ತ ನಕ್ಕುಬಿಟ್ಟರು. 'ನೀನೇ ಹೇಳಿಬಿಡೆ ಸಾವಿತ್ರಿ!' ಅಂದರು.

ಸಾವಿತ್ರಿಯು ಸ್ವಲ್ಪ ನಾಚಿಕೊಳ್ಳುತ್ತ ನಗುತ್ತ, 'ಮತ್ತೇನಿಲ್ಲಪ್ಪ, ಆವೊತ್ತು ಮಧ್ಯರಾತ್ರಿ ನಿಮ್ಮನ್ನು ಒಬ್ಬರು ಕಕ್ಷಿಗಾರರು ಕೂಗಿ, ಬಾಗಿಲು ಗುದ್ದಿ, ಎಬ್ಬಿಸಿ, ನೀವು ಗಾಬರಿಯಿಂದ 'ಏನು' ಅಂತ ವಿಚಾರಿಸಿದ್ದಕ್ಕೆ ನಂಬ್ರದ ವ್ಯಾದೆ ಬರಕೊಟ್ಟಿದ್ದ ಚೀಟು ಕಳೆದುಹೋಯಿತು-ಅನ್ನಲಿಲ್ಲನೆ? ಮಾಧವಭಟ್ಟರು ಅಂತ! ಅದಕ್ಕೆ ಆ ಹೆಸರು ಬೇಡವೇ ಬೇಡ ಅಂದೆ" ಎಂದಳು.

ಅಜ್ಜಿ ಹೇಳಿದ್ದಾಳಮ್ಮ 'ಶೇಷಗಿರಿರಾಯ' ಅಂತ ಹೆಸರಿಡಬೇಕಂತೆ" ಅಂತ ಕೂಸಿನ ಅಕ್ಕ ನೆನಪು ಮಾಡಿದಳು.

'ಇರಲಿಯೇ ಸುಮ್ಮಗಿರು, ಶೇಷಗಿರಿರಾಯ? ಶೇಷಪ್ಪಯ್ಯ–ಅಂತ ಹೆಸರಿಡುವ. ಈಗ ನಾನು ಹೇಳುವುದು ಇಷ್ಟೇ. ಹೆಸರು ಸಣ್ಣದಿರಬೇಕು. ಉಚ್ಚರಿಸಲಿಕ್ಕೆ ಸುಲಭವಿರಬೇಕು. ಅತಿ ವಿಚಿತ್ರವಾಗಿರಬಾರದು. ಹಾಗೆಂತ ಲಕ್ಷಣವಾಗಿರಬೇಕು. ನಾಳೆವರೆಗೆ ಬಾಕಿ ಇರಲಿ; ಮನೋರಮಾ ಬಂದಾಳು ಅವಳ ಹತ್ತಿರ ಕೇಳುವ' ಅಂತ ತೀರ್ಪು ಕೊಟ್ಟಳು ತಾಯಿ.

ಮರುದಿನದ ಸಭೆಯಲ್ಲಿ ಮನೋರಮಾದೇವಿಯವರು ಅಗ್ರಾಸನವನ್ನು ಅಲಂಕರಿಸಿದ್ದರಿಂದ ನನಗೆ ಪ್ರವೇಶ ದೊರೆಯಲಿಲ್ಲ. 'ನಾಳೆಯದಿನ ನಾಮಕರಣವಾಗಬೇಕು. ಈವೊತ್ತಿನ ವರೆಗೂ ಹೆಸರೇ ನಿಶ್ಚಯವಾಗಲಿಲ್ಲ. ಏನು ಅನ್ಯಾಯ! ಹೇಳಿಕಳುಹಿಸಿದ್ದರೆ ನಾನು ಬೇಕಾದಾಗ ಕೂಡಲೆ ಒಂದು ಬಿಡುತ್ತಿದ್ದೆನಲ್ಲ! ಇರಲಿ ಚಿಂತಿಲ್ಲ. ಈಗ ಒಂದು ಹೆಸರನ್ನು ನಿಶ್ಚಯಿಸಬೇಕಾದರೆ ನೆನಪಿಟ್ಟುಕೊಳ್ಳತಕ್ಕ ವಿಷಯಗಳೇನಿವೆ? ನಮ್ಮ ಹೆಸರೆಂದರೆ ನಾವು ಬದುಕಿರುವ ವರೆಗಾದರೂ ಇತರರನ್ನು ಸಂತೋಷಪಡಿಸುವಂಥದಾಗಿರಬೇಕು. ನಾವು ಸತ್ತ ನಂತರವೂ ನಮ್ಮ ಖ್ಯಾತಿಯನ್ನು ಸೂಚಿಸುವಂಥ ಹೆಸರಾಗಬೇಕು. ನಮ್ಮ ಸ್ಥಿತಿಗತಿಗಳು ಎಷ್ಟು ಬಡತನದವಾಗಿದ್ದರೂ ನಮ್ಮ ಮಕ್ಕಳಿಗೆ ಹೆಸರಿಡುವಾಗಲಾದರೂ ನಾವು ಸಂಕೋಚಪಡದೆ ಇಂಪಾಗಿರುವ ಗಂಭೀರವಾದ ಹೆಸರು ಹುಡುಕಿ ಇಡಬೇಕು. ಅದಕ್ಕೇನಾದರೂ ಕಷ್ಟಪಡಬೇಕೇ? ವೆಚ್ಚ ಮಾಡಬೇಕೆ? ಹೆಸರಿಡುವಾಗಲೆ ಬಾಯಿಗೆ ಬಂದಹಾಗೆ ಮಾಡಿದ ತಂದೆ ತಾಯಿಗಳು ಏನು ಸಾಕಿಯಾರು! ಏನು ನೋಡಿಯಾರು! ಏನು ಕಲಿಸಿಯಾರು? ನಾಮಕರಣವಾದ ಮೇಲೆ ಕೂಸಿನ ಅದೃಷ್ಟವೇನೆ ಇರಲಿ; ಹೆಸರಿನಲ್ಲಿ ದೊಡ್ಡಸ್ತಿಕೆ ಇರಬೇಕು. ಅದನ್ನು ಕೇಳಿದಾಕ್ಷಣ ಸಂತೋಷವಾಗಬೇಕು. ಆ ಹೆಸರಿನವರು ಏನು ಕೇಳಿದರೂ ಇಲ್ಲವೆನ್ನುವುದಕ್ಕೆ ಸಾಧ್ಯವಾಗದಂತಿರಬೇಕು. ಅದರ ಉಚ್ಚಾರದಲ್ಲೇ ನಮ್ಮ ದೇಶದ ವೈಭವವು ತುಂಬಿ ತುಳುಕಬೇಕು. ಅದರಲ್ಲಿ ಸೊಬಗಿರಬೇಕು. ಸಂಪತ್ತಿರಬೇಕು. ನವನಾಗರಿಕತೆಯು ಬಂದು ಗೀತೆಯಂತಿರಬೇಕು. ಅಂದರೆ ಇಷ್ಟೆ, ನೋಡು ಸಾವಿತ್ರಿ, ನನ್ನ ಕೂಸಾಗಿದ್ದರೆ 'ಸತೀಶಚಂದ್ರ' ಅಂತ ನಾಮಕರಣ ಮಾಡುತ್ತಿದ್ದೆ. ಇನ್ನು ನಿನ್ನ ಇಷ್ಟ; ಕೂಸು ನಿನ್ನದು." ಎಂದು ಭಾಷಣವನ್ನು ಮುಗಿಸಿದಳು. ಗಂಡಸರ ಸಭೆಯಾಗಿದ್ದರೆ ಚಪ್ಪಾಳೆ ಹೊಡೆಯುತ್ತಿದ್ದರು. ಹೆಂಗಸರ ಸಭೆಯಾದುದರಿಂದ ಎಲ್ಲರೂ ತಕ್ಷಣ ಒಟ್ಟಿಗೆ ಮಾತಾಡುವುದಕ್ಕೆ ಮೊದಲು ಮಾಡಿದರು.

"ಎಷ್ಟು ಸೊಗಸಾದ ಹೆಸರೇ!"

"ನಮಗ್ಯಾಕೆ–ಅಂತಹ ಆಲೋಚನೆಗಳೇ ಬರಲಿಲ್ಲ!"

"ನಾನು ಮೊದಲೇ ಹೇಳಲಿಲ್ಲವೆ–ಇದು ನಮ್ಮಿಂದಾಗತಕ್ಕ ಕೆಲಸವಲ್ಲ–ಅಂತ"

"ನಾವೆಲ್ಲ ನಿಷ್ಪ್ರಯೋಜಕ"

"ಸತೀಶಚಂದ್ರ, ಸತೀಶಚಂದ್ರ, ಅಹ! ಊಟ, ತಿಂಡಿ, ನಿದ್ದೆ, ಒಂದೂ ಬೇಡ"

ಮರುದಿನ ನಾಮಕರಣಸಮಾರಂಭವು ಗದ್ದಲದಲ್ಲಿ ನಡೆಯಿತು. ಮನೋರಮಾದೇವಿಯ ಹೊರತು ಮಿಕ್ಕವರೆಲ್ಲರೂ ಬಂದಿದ್ದರು. ಕೈತುಂಬ ಉಡುಗರೆ ಮಾಡಿದರು. ನಾನಿರಲಿಲ್ಲ. ಮನೆಗೆ ಬಂದೊಡನೆ ಕೇಳಿದೆ. ಸಾವಿತ್ರಿ ಒಬ್ಬಳೆ ಇದ್ದಳು. ಮಗು ಹಾಲು ಕುಡಿಯುತ್ತ ನಿದ್ರಿಸುತ್ತಿದ್ದಿತು.

"ನಿದ್ದೆ ಬಂತೆ, ಸತೀಶಚಂದ್ರನಿಗೆ?"

"ಯಾರಿಗೆ?"

"ಯಾರಿಗೆ! ಕೂಸಿಗೆ ಹೆಸರೇನಿಟ್ಟಿತು ಕೊನೆಗೆ?"

"ಐದು ಹೆಸರಿಟ್ಟಿತು. ಶೇಷಗಿರಿ, ಗೋಪಾಲ, ಮೋಹನ, ರಾಮಚಂದ್ರ, ಸತೀಶ.

"ಕರಿಯೋದು?"

"ಪುಟ್ಟು–ಅಂತ"

"ಅಥವಾ ಕಿಟ್ಟು" ಅಂದೆ.

CC-0. Jangamwadi Math Collection. Digitized by eGangotri

# ರತ್ನಪಕ್ಷಿ

## ( ಒಂದು ದೃಶ್ಯ )

ಬರೆದವರು:—ಪ್ರೊ. ವಿ. ಕೃ. ಗೋಕಾಕ ಎಂ. ಎ.

(ಒಂದು ನಿಬಿಡಾರಣ್ಯದ ಬದಿಯಲ್ಲಿಯವಾರಿ. ಇರ್ವರು ಬಾಲಕರು ಮಾತಾಡುತ್ತಾ ಸಾಗಿದ್ದಾರೆ. ಎದುರಿನಲ್ಲಿ ಒಂದು ಅರಮನೆಯ ಹೊಂಗಳಸಗಳು ಕಾಣಿಸುತ್ತಿವೆ

**ಸುಕುಮಾರ:-**

ಅಲ್ಲಿ ನೋಡದೊ ಗೆಳೆಯ.
ನನ್ನ ಕನಸಿನ ಗುರಿಯು ಒಡೆದು ಕಾಣುತಲಿಹುದು.
ನೂಪುಸಲ ಮುಗಿಲಿನಲಿ ರೆಕ್ಕೆಗಳ ಮೇಲೇಸಿ
ಕಂಡ ತುಂಗೋತ್ತುಂಗ ಪರ್ವತದ ಸೀಮೆಯಲಿ
ಒಂದು ಬಸವಿದ್ದುದನು ನಿನಗೆ ಪೇಳುತಲಿದ್ದೆ.
ನನ್ನ ಮುಂದಿನ ಕಾಣ್ಕೆ ಬಸದ ಮೇರೆಯ ಮೀರಿ
ಆವರಿಂದೆಸು ನಾಡಿನೊಳಗೊಂದು ಪ್ರಾಸಾದವನು
ಕೂಡಿ ನಿಂದಂತಿತ್ತು. ಅದರೊಳಕೆ ಪೊಕ್ಕೊಂಡೆ
ನನ್ನ ಮನವನು ಸೋಲಿಸಿದ ರತ್ನಪಕ್ಷಿಯನು!
ಅದರ ಬಹುವಿಧದ ಮೋಹದ ಕರೆಯನಾಲಿಸುತ
ಮನದಿ ಜನಿಸಿತು ಅದನು ಪಡೆಯಬೇಕೆಂಬಾಸೆ.
ಕನಸಿನಲಿ ಜಯಿಸಿರುವ ಕರೆಯು ದಿಗ್ವಲಯದಲಿ
ಒಂದು ಶುಭನಿಲಯದಿಂದೈತಂದುದೆಂದೆನಿಸಿ
ಅವಸಲಸುರಾಗವಿರೆ,— ಒಡನಾಡಿ ನೀ ಬಂದೆ!
ಇತ್ತ ಕಡೆ ನೋಡಯ್ಯ! ಅರಮನೆಯ ಹೊಂಗಳಸ
ಹೊಂಗೇದಗೆಯ ತೆರದಿ ಹಸನಾಗಿ ಹೊಳೆಯುತಿದೆ!
ಕಲ್ಲುಮುಳ್ಳಿನದಾರಿ ಇಲ್ಲದಾಯಿತು ಇಂದು!
ಲಭಿಸದವು ಹಂಬಲಿಕೆಯೂ ದಿವ್ಯ ತೇಜಗಳು!

**ಕುಮಾರ:-**

ಅಚ್ಚರಿಯು! ನಿನ್ನ ಬಣ್ಣನೆಯ ಕನಸನು ಮೀರಿ
ಮೆರೆಯುತಿದೆ ಸತ್ಯವಿದು. ಇದುವೆ ಯಾತನೆಯ ಕೊನೆ.
ನಿನ್ನ ಮೇಲಿನ ಮೋಹವೆನ್ನ ನೆಸೆದಿತು ಇಲ್ಲಿ.
ಇರಲಿಲ್ಲವೆನಗೆ ಈ ರತ್ನಪಕ್ಷಿಯ ಬಯಕೆ,
ಆದರಾ ನಿನ್ನ ಬಗೆಗೊಳುವ ಸ್ವಪ್ನಗಳನ್ನು
ಕೇಳಿ ಹಾತೊರೆದಿದ್ದೆ ಆ ಪಕ್ಷಿ ಬೇಕೆಂದು.
ನೀನೆ ಸಾಹಸಭೀಮ, ಕುಂದದಿಹ ಎದೆಗಾರ.
ನಿನ್ನ ಬೆಂಗಾವಲಿಗ, — ನಾನೇನ ಗೆಯ್ಯುವೆನು!
ನಿನ್ನ ಕೆಯ್ಮೆಯ ಮೈಮೆಯನ್ನು ಪಾಲಾಗಿಸಲು
ಜೀವಿಸಿರುವೆನು ಮಾತ್ರ! ಆದರೂ ಈ ದಾರಿ, —
ಕೇಡುಗಾಲದ ಕೂಸಿಗಾದರೂ ಬೇಡವಿದು!—
ಹಿಂತುಳಿದು ಮುಂತುಳಿದು ಬೇಸರಾಯಿತು ಜೀವ

**ಸುಕುಮಾರ:-**

ಇಂತು ನುಡಿವುದೆ ಗೆಳೆಯ! ಅರಮನೆಯ ನೋಟವನು
ಕುಡಿಯ:ಲೆಳಸಿದ ಕಂಗಳೆಂದೊ ಕುರುಡಾಗಿಹವು
ನೋವ ನೆಣಸಾಟಕ್ಕೆ. ಉಳಿದುದೆಲ್ಲವು ಬಯಲು.
ಅದರ ಚೆಲುವಿಕೆಯೊಂದು ನನ್ನ ಕಣ್ತುಂಬಿಹುದು.
ಅಂದು ಕಂಡಿಹ ಕನಸನಿಂದಿಲ್ಲಿ ಕಾಣ್ವನಕ
ಎಚ್ಚರಿಲ್ಲದೆ ಬಂದೆ ದೂರೊಂದು ಜ್ಯೋತಿಯನು
ಕಂಡಿರುವ ಹುಳದಂತೆ. ನಡೆದುದರ ನೆನಪಿಲ್ಲ.
ಇಂದು ಕಾಣುವೆ ನಚ್ಚುಮೆಚ್ಚಿನ ವಿಹಂಗಮವ!

**ಕುಮಾರ:-**

ನನ್ನಿಗನೆ! ಪಕ್ಷಿಯನು ಹಿಡಿದುಕೊಂಡಾ ಮೇಲೆ?
ನೆನಪಿಹುದು ನೀನೊರೆದ ಮಾತು. ಸಂಪದವೆಲ್ಲ
ಪದತಲದಿ ಪವಡಿಸುವದೆಂದೆ. ಕಲ್ಪದ್ರುಮವ
ನಮ್ಮಾಣತಿಯ ತಾಣದಲ್ಲಿ ಎಸೆಯುವದೆಂದೆ.
ಕಾಮಧೇನುವು ಕ್ಷೀರವನ್ನು ಸುರಿಸುವದೆಂದೆ.
ಇದು ನಿಜವೆ? ಅರಸುಗಳಿಗರಸು ನಾವಾಗುತ್ತ
ಸೂರೆಗೊಂಡಿಳೆಯೊಳಿಹ ಸಕಲ ಸುಖಸಾಧನೆಯ
ಇಂದ್ರನಮರಾವತಿಯನೇಳಿಸುವ ನಗರದಲಿ
ಮೆರೆಯಬಹುದೆಲೆ ಗೆಳೆಯ?



CC-0. Jangamwadi Math Collection. Digitized by eGangotri

**ಸುಕುಮಾರ:-**

ಕುರಿವಾಸಿಸರೆ ನಾವು?
ಇವ್ರುಗಳೋಜೆಯು ನಾಜುಪಂಥ ಬಾಳೊಂದಿಪುದು;
ರತ್ನಪಕ್ಷಿಯ ನೋಡಿ ಕಣ್ಣೆದುರು ಕಟ್ಟಿಹುದು
ಬಾಳುವೆಯ ಪಡಿಸೆಳಲು. ಅದರ ದರ್ಶನ ಹೊಂದಿ,
ಕಾಲಾಂತರದ ಸ್ಮೃತಿಯು ತಾ ಚಿಗಿತು ಸುಮವಾಗೆ,
ನಿನ್ನೆದೆಯ ಪೊದೆಯಲ್ಲಿ ಕರಕರೆಯ ಪಡುತಿರುವ
ಕಾಡು ಬಾನಾಡಿಗಡರವಿತ ಬಂಧುವ ತೋರಿ
ಪುಣ್ಯವನು ಗಳಿಸಯ್ಯ. ಉದಯವಾಗಲಿ ಪಾಡು
ಅವರ ಕ್ಷುಧೆ ಶಾಂತವಾಗುತ ಬಂದು. ಇಂತಿರಲು
ಲೋಕದೊಡೆತನದಲ್ಲಿ ಇನ್ನಾವ ಬನ್ನಾಣ?
ರತ್ನಪಕ್ಷಿಯು ನುಡಿದ ಮಾತು ಸೋಜಿಗವಹುದು.
"ಪರಿಸಗಲ್ಲಿಗೆ ತಗಲಿ ಕಾರ್ಪೊನ್ನು ಪೊನ್ನಾಯ್ತು.
ನಿನ್ನ ಜೀವದ ಹಸುಳೆಹಕ್ಕಿ ನನ್ನನು ಸೋಂಕಿ
ರತ್ನಮಯವಾಗುವದು. ಆಗ ನೋಡುವೆಯಂತೆ!
ಬಹುರತ್ನಭೂಷಿತೆ ವಸುಂಧರೆಯು ಎಲ್ಲೆಡೆಗೆ
ರತ್ನಪಕ್ಷಿಗಳನ್ನು ತೋರುವಳು. ಕೋಕಿಲವು
ನಿನ್ನ ಜೊತೆಯಾಗುವದು. ನವಿಲು ನೆರಳಾಗುವದು.
ಅರಸಿಯರ ಹೃದಯಸರಸಿಯಲಿ ವೇದನೆಪಡುವ
ರಾಜಹಂಸವು ಈಜಿ ನಿನ್ನೆಡೆಗೆ ಮರಳುವದು.
ಭೂಮಿಯಲಿ ಎರಡು ವಿಧ, - ರತ್ನ ಇಲ್ಲವೆ ಮಳಲು.
ನೀ ರತ್ನಮಯವಾಗಿ ದಾರಿಮಳಲನು ಕೂಡ
ರತ್ನವಾಗಿಸು ಕಂದ!" ಎಂದು ಕರೆದಿತು ಪಕ್ಷಿ

**ಕುಮಾರ:-**

ದಾರಿಹೋಕರು ತಿಳಿಯರೀ ನುಡಿಯ ಭಾವವನು.
ಆ ಪಕ್ಷಿಯೊಂದೆಮಗೆ ದೊರೆತು ಸಂಪ್ರೀತಿಯನು
ಇತ್ತುದಾದರೆ ಮುಂದೆ ನಮಗೆ ಬೇಕಿಹುದೇನು?
ಪಕ್ಷಿಗೆಂದೆಮ್ಮ ವೃಕ್ಷವು ಬೆಳೆಯಲನುವಾಯ್ತು.
ಪಕ್ಷಿಯೊಂದೆಯೆ ಸಾಕು; ಪಕ್ಷಿಸಂಕುಲವೇಕೆ?

**ಸುಕುಮಾರ:-**

ವಿಹಗದಾ ಕರೆಯುಲಿಯ ಮೇಲಿಂತು ನಡೆಯುತ್ತ
ಬಂದಿಹೆನು ನನ್ನ ಬಾಳಿನ ಮುಡುಪ ಸಲ್ಲಿಸುತ
ಪ್ರತಿಯಾಗಿ ರತ್ನಭಾಂಡಾರವನು ಕೈಗೊಂಡು
ನನ್ನೆದೆಯ ಪೀಠದಲಿ ಪಕ್ಷಿಯನು ಕುಳ್ಳಿರಿಸಿ
ಅದರ ನುಡಿಯಂತೆನ್ನ ಜೀವನವ ಮಾರ್ಪಡಿಸಿ
ಸೂರೆಗೊಳಿಸುವೆನಿಳೆಯೊಳಾ ರತ್ನರಾಶಿಯನು!

**ಕುಮಾರ:-**

ಇರಲಿ ನಡೆ. ಮೊದಲು ಪಕ್ಷಿಯನು ಕಾಣುವೆನಂತೆ.
ಕಾನನದಿ ಚಿಂತಿಸುತ ಕುಳಿತ ತವಸಿಯು ತೆರದಿ
ತಲ್ಲೀನನಾಗಿಹುದು ಕಾಂತಾರವರಮನೆಯು.
ಸ್ಫೂರ್ತಿಗೆಂಡಾ ಋಷಿಯು ತನ್ನಂತರಂಗವನು
ತೆರೆದಂತೆ ಅದರ ದ್ವಾರಗಳೆರಡು ತೆರೆದಿಹವು.

**ಸುಕುಮಾರ:—**

ಕನಸಿಗೆಂದಾರತಿಯ ಬೆಳಗಿ ನಿಂತಿಹ ನಾನು
ಸತ್ಯವನು ಪೂಜಿಸಿದೆ! ಮನದಂತರಿಕ್ಷದಲಿ
ಮೆರೆದ ನೋಟವು ತುಂಬಿತೀ ಚರ್ಮಚಕ್ಷುಗಳ.
ನೂರು ಸಲ ಗಾನಸರಿಯಿಂದೆನ್ನ ರಮಿಸಿರುವ
ರತ್ನಪಕ್ಷಿಯ ನೆಲೆಯು ಕಡೆಗೆ ಅನಗತವಾಯ್ತು.
ಇನ್ನು ವಿಶ್ವದ, ನನ್ನ, ಬಾಳುವೆಗಳೊಂದಿಹವು.

(ಪರದೆ ಏಳುವುದು. ಅರಮನೆಯ ಎದುರಿನ ಭಾಗದ ದೃಶ್ಯವು ಬಾಲಕರ ಕಣ್ಣಿಗೆ ಬೀಳುವುದು.)

**ಕುಮಾರ:—**

ಗೆಳೆಯ ನೋಡೀ ಪವಡಿಸಿರುವ ಸೌಂದರ್ಯವನು!

**ಸುಕುಮಾರ:—**

ಇವನಿವನೆ ಅರಮನೆಯ ದ್ವಾರಪಾಲಕನಿವನು!
ಓ! ಎನ್ನ ಕನಸಿನೊಳಗಾದರಿಸಿರುವ ಬಂಧು!
ಇವನಿವನೆ! ಪಕ್ಕಗಳನೊಯ್ಯನೆತ್ತಿಹ ರೀತಿ
ಇವನದಿದು! ಕೈಯಲಿಹ ದಂಡ! ಕಾಲುಗಳನ್ನು
ತೊಡಕಿ ನಿಂತಿರುವೆನಕ! ಅನಿಮಿಷರ ಕಳೆಯಿಹುದು.
ಬೆಸನವೇನೆಂದೆನ್ನ ನಗುತ ಕರಪಿಡಿದೊಯ್ದು
ದ್ವಿಜರತ್ನದೆದುರೆನ್ನ ನೂರು ಸಲ ನಿಲ್ಲಿಸಿದ
ಅನಿಮಿತ್ತ ಬಾಂಧವನೆ! ನಾನಾಗಿ ಬಂದಿಹೆನು.
ದೇಹವನು ತಳೆದು ಸಮುಭಾಗಿಯಾಗುತ ನಿನ್ನ
ಕಂಡಿರುವದಿದೆ ಮೊದಲು! ನಿನ್ನಭಯವಿರಲೆನಗೆ.

(ಎರಗುವನು) (ಸುಮ್ಮನಿರುವದು)

**ಕುಮಾರ:—**

ನಾನಿವನ ಸಂಗಡಿಗ. ಇವನೊಡನೆ ಸಂಚರಿಸಿ
ಕಾಣಬಯಸುವೆನೆಂದು ಆ ರತ್ನಪಕ್ಷಿಯನು.

CC-0. Jangamwadi Math Collection. Digitized by eGangotri

**ಸುಕುಮಾರ:—**

ನಿನ್ನ ವಾಕ್ಸುಧೆಯಿಂದು ನನ್ನೆಡೆಯ ತೋಯಿಸಲಿ.
ಇಂದೆನಗೆ ನಿಜವಾದ ಜೀವನವು. ನುಡಿಯಯ್ಯ!
ಇನ್ನು ಪ್ರೀತಿಯ ರತ್ನಪಕ್ಷಿಯೆಡೆ ತೆರಳುವೆನು.

**ಕುಮಾರ:—**

ಅಹುದಹುದು. ಪಕ್ಷಿಯನು ಕಾಣುವೆವು. ತ್ವರೆಮಾಡು.

**ಸುಕುಮಾರ:—** (ನೋಡುತ್ತ)

ಅರರೆ! ಏಳಸಗೆಯು ತಾ ಮಿನುಗುತಿರುವಲ್ಲಿಲ್ಲಿ
ಜೀವದಾಭಾಸವಿದು. ಉಸಿರಿಗಾಸರೆಯೆಲ್ಲಿ
ಈ ಮೂರ್ತಿಯಂತರಾಳದಲಿನ್ನು? ಅಕಟಕಟ!
ಮೂರ್ತಿಯಿದು! ಬರಿ ಮೂರ್ತಿ! ಪ್ರಾಣದೇವನು ತೊರೆದ
ದೇಹದೊಳಗುಡಿಯಹುದು. ಅಯ್ಯೋ! ವಂಚಿತನಾದೆ
ಬಾಳ್ಮೆಯೆಂದವರ ಪಡಿನೆಳಲನ್ನು ತಳ್ಕಿಸುತ!
ಅದರಚ್ಚಳಿಯದಿದೆ. ಆ ರೂಪು, ಆ ರೇಷೆ-
ಒಡಮೂಡಿದಂತಿಹುದು. ಆದರಿದರೊಳಗಿಲ್ಲ
ಅನುಪಮನ ಕೋಮಲತೆ, ಚಿರಜೀವಿಗಿಹ ಬೆಳಕು.
ಪ್ರತಿಬಿಂಬವನು ಮಾತ್ರ ನನ್ನೆದುರು ನೋಡುವೆನು.
ಇಲ್ಲಿಹುದು ಜೀವನದ ಮಾಯೆ. ಕವಿಪುಂಗವರು
ಅವರ ದಿವ್ಯತೆಗಳನು ನೆನೆದು ಬಣ್ಣಿಸಲೆಸಗಿ
ನುಡಿಯ ಜಾಲವನೊಂದು ಹಣೆಯುವರು. ಶಿಲ್ಪಿಗಳು
ಸಂಜೆಮುಂಜಾವುಗಳನೆಲ್ಲ ಮೂಡಿಸಲೆಳಸಿ
ಬಣ್ಣದನುಕೃಪುವನ್ನು ಬರೆಯುವರು. ದೈವಿಕತೆ-
ನಿರ್ಮಾಣಕಾರ್ಯದಲಿ ದೇವನಿತ್ತಿಹ ಬೆಳಕು-
ಅದು ಮಾಯವಾಗುವದು. ಅಕಟಕಟ! ಇದರಂತೆ
ನನ್ನ ಜೀವವನುಂಡ ಕನಸುಗಳು ಜೀವನದಿ
ಮೂಡಿ ಬರಬೇಕೆಂದು ನಾನೆಳಸುತಿರುವಾಗ
ಮಣ್ಣಿನಲಿ ತಲೆಯೆತ್ತಿ ಮಲಿನತೆಯ ಹೊಂದಿಹವು.
ಅಲ್ಲ, ನನ್ನಯ ಪಯಣ ಮುಗಿವ ಕಾಲವಿದಲ್ಲ.
ಕನಸುಗಳು ನನ್ನ ಕೊಂಡೊಯ್ವನಕ ಬಳಲಿಕೆಯು!
ಇಲ್ಲದಿರೆ ಅವನೆಲ್ಲ ಪಡೆವನಕ ಇರುವಿಕೆಯು!

**ಕುಮಾರ:—**

ಅಲಾಪವೇನಯ್ಯ? ಮಾತನಾಡಿದ ಬೊಂಬೆ
ಮಾತನಾಡಿಸದಿರಲು ಕೊರತೆಯೇನಿಹುದಿಲ್ಲಿ?
ಸಾಗಿ ಬಾ ಬಯಲುಚಿಂತೆಯ ತೊರೆದು. ಪಕ್ಷಿಯದು
ಹಾರಿ ಹೋಗಲು ಬಹುದು. ಆಗ ನಡೆದಿಹ ದಾರಿ
ಫಲವಿಲ್ಲದಾಗುವದು.

**ಸುಕುಮಾರ:—**

ಅಹುದು ತೀರದ ದಾರಿ!

(ಅವನೊಡನೆ ಪ್ರವೇಶಿಸಿ)

ಅಯ್ಯೋ! ಮುತ್ತಿಲ್ಲಿಹುದು ಒಡೆದ ಕನ್ನಡಿಯಂತೆ
ಏದುರೂಪವಿಹ ಕನಸು. ಚಿಮ್ಮುತಿಹ ಕಾರಂಜಿ
ನೀರಿನಾಟವನಾಡಿ ದಣಿಯುತಿದೆ. ಮೊದಲದುವೆ
ಮನದೆಮರು ತಿಳಿಬೆಳಕ ಬೀರಿ ಕುಣಿಯುತಲಿತ್ತು.
ಭೂಮಿತಾಯಿಯೆ! ನಿನ್ನ ಸ್ಪರ್ಶವದು ಪಾವನವು.
ಆದರೀ ನಿನ್ನ ಉಗರಾಟನೋಟಗಳಲ್ಲಿ
ಒಯಕೆಬೆರಕೆಗಳಲ್ಲಿ ಚಲಿಸದಲೆ ನೆಲಸಿಹುದು
ಬೆಳಕನೆಲ್ಲವನಿಲ್ಲದಾಗಿಸುವ ಕಾರಿರುಳು.

**ಕುಮಾರ:-**

ಇತ್ತ ನೋಡೆಲೆ ಗೆಳೆಯ! ರಂಗಮಹಲಿನ ಚೆಲುವ.
ಮಾಣಿಕದ ಮೂರ್ತಿಗಳು ಸಾಲುಸಾಲಾಗಿಹವು
ಸ್ವರ್ಣಸ್ತಂಭಗಳಲ್ಲಿ. ಬಹು ಬೆಲೆಯ ಪೀಠಗಳು
ಕೂಡಲಿಕೆ ಕರೆಯುವವು. ಮುತ್ತುಗಳ ಪರದೆಗಳು
ಮುದ್ದು ಮುದ್ದಾಗಿಹವು. ಯಾವ ರಜನಿಯಲೇನೊ
ಇವರ ರಾಣಿಯು ಹೊತ್ತಿಸಿರುವ ದೀಪಾವಳಿಯು
ಕಳೆಗುಂದದುರಿಯುತಿದೆ. ನಿನ್ನ ಕಾಣ್ಕೆಯು ದಿಟವು.
ಕನಸಿನಲಿ ಕಂಡಿಲ್ಲವೇ ತೆರದ ಐಸಿರಿಯು!
ನಡೆ ಬೇಗ! ರತ್ನಪಕ್ಷಿಯ ಕಂಡು ಮೊರೆವೊಕ್ಕು
ಇದನೆಲ್ಲ ದೊರಕಿಸುವ!

(ಅರಮನೆಯ ಮಂದಿರಗಳಲ್ಲಿ ಹುಡುಕಲು ಒಳಗೆ ಹೋಗುವನು)
(ಕೋಣೆಗಳಲ್ಲಿ ಹುಡುಕಾಡುವನು)

**ಸುಕುಮಾರ:—**

ಓ ಮರುಳು ಕಲ್ಪನೆಯೆ!

ನೀನು ಕಂಡಿರುವದಕೆ ಇಲ್ಲಿ ನಾ ಕಾಣ್ಬುದಕೆ
ಅಂತರವದೆನಿತೆನಿತೊ! ಮುಗಿಲಿನಿಂದಿಳಿದಂತೆ
ಇಳಿದಿಳೆಯ ಮೇಲ್ಬಂತ ದಿವ್ಯ ವೈಭವದಂತೆ
ಕಂಗೊಳಿಸುತಿರುವ ಪ್ರಾಸಾದವಿಂದಿಳೆಯಾಣ್ಮ-
ರೆಲ್ಲ ತಮ್ಮೈಸಿರಿಯ ಬಣ್ಣಿಸಲು ನಿರ್ಮಿಸಿದ
ಹರ್ಮ್ಯದಂತಿರುತಿಹುದು. ವಿಳಿರ್ವ ರೆಕ್ಕೆಗಳಿಂದ

CC-0. Jangamwadi Math Collection. Digitized by eGangotri

ಸಂಚರಿಪ ಸುರಸಿಕಾಯವು ಶಿಲ್ಪಸಮುದಾಯ
ವಾಗಿಹುದು. ಇದಕಲ್ಲ ನಾನಿಲ್ಲಿ ಬಂದಿಹುದು.
ಅಕ್ಕರೆಯ ರತ್ನಪಕ್ಷಿಯನು ಕಾಣಲು ಬಂದೆ.
ಅದರ ಸಂಪಗವೆಲ್ಲವೀ ರೂಪುವೆತ್ತಿರಲು
ನನ್ನ ಪಕ್ಷಿಯನಾವ ಮೋಡಿಯಲಿ ಕಾಣುವೆನೊ!
ದೇವದೇವನೆ ಗತಿಯು! ಮುಡುಪನ್ನು ಸಲ್ಲಿಸಲು
ಆಣತಿಯನಿತ್ತಿಲ್ಲ! ಸೌಂದರ್ಯದಿಂಚರದ–
ರಾಜತೇಜಕೆ ಸಾಜವಾಗಿ ಸಿರಿವನೆಯಾದ–
ವಿಹಗವನು ಗಮನಿಸಲು ಏಳು ಕಡಲನು ದಾಟಿ
ಮಲ್ಲಿಗೆಯ ಮುಡಿದಂದು ಅಮೃತದಿನವಿದೆಯೆಂದೊ?!

**ಕುಮಾರ:—** (ರಭಸದಿಂದ) (ಒಳಗಿನಿಂದ)

ಸುಕುಮಾರ! ಇಲ್ಲಿ ಬಾ! ನಿನ್ನ ಕನಸಿನ ಪಕ್ಷಿ!
ಮೌನವಾಗಿರುತಿಹುದು. ಮಾತನಾಡಿಸಲೇಳು!

**ಸುಕುಮಾರ:—** (ಆತುರನಾಗಿ)

ಎಲ್ಲಿ? ಪಕ್ಷಿಯದೆಲ್ಲಿ? ಆರ್ಣವವ ಕಾಣದಲೆ
ಭೂಮಿಯಲಿ ತೊಳಲುತ್ತ ಕಡೆಗೊಮ್ಮೆ ಕಂಡಿರುವ
ತೊರೆಯಂತೆ ಬೆರೆಯುವೆನು. ರತ್ನಪಕ್ಷಿಯದೆಲ್ಲಿ?

(ಒಳಗೆ ಹೋಗುವನು)

**ಕುಮಾರ—:**

ಇಲ್ಲಿ! ಅರಸಿದೆನದನು ಕಡುಜಾಣ್ಮೆಯನು ತೋರಿ.
ರಂಗಮಹಲನು ತೊರೆದು ಅರಸಿಯಂತಃಪುರದ
ಇರ್ಕಡೆಯ ದ್ವಾರಗಳ ತೆರೆದಲ್ಲಿ ಕಾಣದಲೆ
ಒಳನುಸುಗಿ, ಸ್ವರ್ಣಸಿಂಹಾಸನದಿ ಕುಳ್ಳಿರ್ದು
ಅರಸ ತನ್ನರಸಿಯೊಡನೆನಿವೇಟವಾಡಿರ್ದ
ಪುಣ್ಯದಾಗರದಲ್ಲಿ ಎಸೆದಿರುವ ಹೂವುಗಳ
ಜಸವೆಲ್ಲ ಕಳೆಗುಂದಿ ಅದರ ವಾಸನೆಯೊಂದು
ಮನವನ್ನು ರಮಿಸುತಿರೆ, ಅಲ್ಲಿ ನಿಲ್ಲದೆ ಜಾರಿ
ಸಕಲ ಪಾವನತೆಗೆಂದೆಂದವರು ಕಾಯ್ದಿರಿಸಿ–
ದಾಲಯದಿ ಕಾಲಿಟ್ಟೆ ಒಡನೆ ತಡೆಯಿತು ಬೆಳಕು.
ನವರತ್ನಗಳ ಕೆಚ್ಚಿ ಹೆಚ್ಚಿಸಿದ ಪ್ರಭೆಯಿಂದ
ಸೂಸುತಿಹ ಗದ್ದಿಗೆಯ ಮೇಲೆ ಸೂರ್ಯಾರುಣರು
ಕರಗಿ ಜರುಗಿದ ಬೆಳ್ಳಿಯೆಂದು ಮಾಮರವಾದ
ಶೋಭೆಯಿರೆ ರೆಂಬೆಗಳು ಸೌದಾಮಿನಿಯ ತೆರದಿ
ನುಣ್ಪುವೆತ್ತವು, ಎಲೆಗೆ ಪಚ್ಚೆವರುಣವು ಬಂತು.

ನೀಲವರ್ಣದ ಪಕ್ಷಿ ಮರದ ತುದಿಯಲಿ ಕುಳಿತು
ಮನದಿ ಧೇನಿಸುತ್ತಿತ್ತು. ನಾನು ಬಳಿಸಾರುತಿರೆ
ರೆಕ್ಕೆಗಳ ಕದಲಿಸುತ ನಿಮಿಷಮಾತ್ರದಿ ರತ್ನ–
ಮಯವಾಗಿ ಬಣ್ಣವನು ಬದಲಿಸಿತು. ಕನಸಿಗನು
ನೀನದನು ಕಾಣಬೇಕೆಂದೆಣಿಸಿ ಕರೆತಂದೆ.
ನೋಡದನು; ಇಂದೆಮ್ಮ ಬಯಕೆ ಕೈಗೂಡುವನು!

**ಸುಕುಮಾರ:—**

ಅಯ್ಯೋ! ನಾ ತಿಳಿದಂತೆ ಇಲ್ಲಿ ಬೆಳೆ ಬಂದಿಹುದು.
ರತ್ನಪಕ್ಷಿಯು ಮಾಯವಾಗಿ ನೀಲಾಂಬರದಿ
ಇಲ್ಲೆಲ್ಲ ಕನಸು ವಿದ್ರೂಪವನು ತಳೆದಂತೆ
ಪಾರ್ಶ್ವದೃಷ್ಟಿಯ ಮಾತ್ರ ಪ್ರೇರಿಸುವ ನೋಟವಿದು–
ಹಕ್ಕಿಗಿಹ ದೇಹಪಂಜರವೊಂದು– ನಿಂತಿಹುದು.
'ರತ್ನಪಕ್ಷಿಯೆ' ಎಂದು ಅದನು ಕರೆದುದು ನಿಜವು.
ಅದರೆನ್ನಯ ಬಗೆಯ ನವಿಯನುಂಡಿಹ ಪಕ್ಷಿ
ನೀಲವರ್ಣದ ಪಕ್ಷಿ! ಗಗನಕಿಹ ನೀಲಿಮತೆ
ಅದರ ತಾಯ್ನಾಡಹುದು. ಅದರಸಂತತೆಯಲ್ಲಿ
ಮುಳುಗುತೇಳುತ ಸಾಗಿ ಕಾಲಪಥವನು ಮೀರಿ
ಹಕ್ಕಿ ಲೀಲೆಯಲಿಹುದು. ಅದನು ಕಾಣ್ಬುದು ಗೆಳೆಯ!
ಇಲ್ಲಿಹುದು ರತ್ನಪಕ್ಷಿಯ ನಾನಾರೂಪವದು.

(ಮುಂದೆ ಬರುವರು)

**ಕುಮಾರ:—**

ಇಲ್ಲಿ ನಮ್ಮಯದಾರಿ ಕೊನೆವಗುವುದೆಂದಿದ್ದೆ.
ಸಹಿಸೆನೀ ವೇದನೆಯ ಅಲೆಯುವದು ಸಾಕಿನ್ನು!
ಮಾಯವಾಗಿಹ ಪಕ್ಷಿ ತನ್ನ ಬೀಡಾರವನು
ಬಿಟ್ಟಿಹುದು. ಎಲ್ಲ ವೈಭವವನ್ನು ಭೋಗಿಸುತ
ನಲಿಯುತಿರುವೆನು ಕುರುಹಿಗೆಂದಿಲ್ಲಿ ನೆಲಸಿರುವ
ರೂಪವನು ಪೂಜಿಸುತ; ನೀನು ಮುಂದಕೆ ಸಾಗು
ಕಣ್ದೆರೆದು ನಾನೊಮ್ಮೆ ಕಂಡಿರುವ ಪಕ್ಷಿಯನು
ನೋಳ್ಪುದಾದರೆ ನೀನು ಈ ಕಾಡುಜೀವವನು
ಮರೆಯಬೇಡೆಲೆ ಗೆಳೆಯ!

**ಸುಕುಮಾರ:—**

ಅಹುದು ತೀರದ ದಾರಿ.
ನಿನ್ನುಳಿದು ನಾ ನಡೆವುದೆಂತು? ಇರ್ವರು ಕೂಡಿ
ಇಲ್ಲಿಗೈತಂದಿಹೆವು. ಲಭಿಸೆ ಮೋಕ್ಷವದೊಂದು

CC-0. Jangamwadi Math Collection. Digitized by eGangotri

ಇರ್ವರಿಗೆ – ಇಲ್ಲದಿರೆ ದಾರಿ ಬಳಲಿಕೆಯೆಮಗೆ.
ನಿನಗೆ ಬೇಸರವೆನಿಸೆ ಹೆಗಲಲ್ಲಿ ಕುಳ್ಳಿರ್ದುದ
ಪಯಣವನು ಬೆಳಸಯ್ಯ, ಕಾಣುವೆವು ಪಕ್ಷಿಯನು.

(ಪಕ್ಷಿಯು ದೂರ ಆಕಾಶದಲ್ಲಿ ಕಾಣಿಸಿಕೊಳ್ಳುವದು. ಸುಕುಮಾರನು ಅದರ ರೂಪವನ್ನು ನೋಡಿ ಸ್ವರವನ್ನು ಆಲಿಸುವನು.)

ಬಾ ಕಾಣುತಿವೆ ನೋಡು ! ಮುಗಿಲೆಡೆಗೆ ಸಂಚರಿಸಿ !

(ಕೈಯೆತ್ತಿ)

ಬೆಳಗುವ ದಾರಿಗದು ನಾವು ರಕ್ಷಿಸು ಪಕ್ಷಿ !
ರತ್ನಮಯವಾಗಿಸೀ ಕಾಡು ಜೀವಗಳನ್ನು !

ಕುಮಾರ:—

ಎಲ್ಲಿಹುದು ? ಎಲ್ಲಿಹುದು ? ಹಕ್ಕಿಯಂದದಿ ಹಾರಿ
ಅದರ ಸಾನ್ನಿಧ್ಯವನು ಪಡೆಯುವೆನು. ಇಹುದೆಲ್ಲಿ ?

ರತ್ನಪಕ್ಷಿ:— (ದೂರ ಮುಗಿಲೊಳಗಿಂದ ಹಾಡುವದು)

"ಪರ್ವತಶ್ರೇಣಿಗಳ ಶೃಂಗಗಳನೇರಿ
ಸೊಂಪುನಡೆಯಿಹ ಬಸಿದ ಮೋರೆಗಳ ಮೀರಿ
ತಾರೆಗಳ ಕಿರುನಗೆಯನೆಲ್ಲೆಡೆಗೆ ಬೀರಿ
ರತ್ನಪಕ್ಷಿಯ ಪಡೆಯು
ಲೆಂದು ಮನಸಿರಲು
ಕಾಂತಿಮಯವಾಗಿಸಲು
ಒಂದು ಕನಸಿರಲು
ಹಿಂತಿರುಗುವರೆ ಕಂದ ! ನೋಡುವರೆ ಹಿಂದೆ !
ಬಾ ಮುಂದೆ ! ಬಾ ಮುಂದೆ ! ಬಾ ಮುಂದೆ ಮುಂದೆ !

ಬಾಳಿನಲಿ ಬೀಳಾದ ಭಾವಗಳನುಳಿದು
ಉಜ್ಜ್ವಲೋಜ್ಜ್ವಲಿತವಹ ಜ್ವಾಲೆಗಳ ತಳೆದು
ಅವುಗಳಿಂದಂತ್ಯವಿಲ್ಲದ ಪ್ರಭೆಯ ಬೆಳೆದು
ರತ್ನಪಕ್ಷಿಯ ಪಡೆಯ–
ಲೆಂದು ಮನಸಿರಲು,
ಕಾಂತಿಮಯವಾಗಿಸಲು
ಒಂದು ಕನಸಿರಲು
ಹಿಂತಿರುಗುವರೆ ಕಂದ ? ನೋಡುವರೆ ಹಿಂದೆ ?
ಬಾ ಮುಂದೆ ! ಬಾ ಮುಂದೆ ! ಬಾ ಮುಂದೆ ಮುಂದೆ !!
ವಿಶ್ವಜೀವನದೊಳಗೆ ಜೀವವನು ಬೆರಸಿ
ಕ್ಷಣಿಕ ವೈಭವದಾಸೆಗಳನೆಲ್ಲ ಮರಸಿ
ಮುಂದೆ ಬಹ ಚೆಂದದಲಿ ಜೀವಿತವನಿರಿಸಿ
ರತ್ನಪಕ್ಷಿಯ ಪಡೆಯ
ಲೆಂದು ಮನಸಿರಲು
ಕಾಂತಿಮಯವಾಗಿಸಲು
ಒಂದು ಕನಸಿರಲು
ಹಿಂತಿರುಗುವರೆ ಕಂದ ? ನೋಡುವರೆ ಹಿಂದೆ ?
ಬಾ ಮುಂದೆ ! ಬಾ ಮುಂದೆ ! ಬಾ ಮುಂದೆ, ಮುಂದೆ !!

ಕುಮಾರ:—

ಕೇಳಿದೆಯ ಆ ದಿವ್ಯವಾಣಿಯನು ? ನಡೆಯಿನ್ನು.
ದಾರಿ ಕೊನೆವುಗುವನಕ ಜೀವಕಾಸರೆಯೆಲ್ಲಿ ?

ಸುಕುಮಾರ:—

ಅಹುದು. ತೀರದ ದಾರಿ. ಆದರದರಿನಿದನಿಯು
ಕರೆಯುತಿರೆ ಮುಂಬರಿಯದಿರುವ ಮಾನವನಿಹನೆ !
ನಡೆ ಮುಂದೆ. ಬಾಳ್ಮೆಯಿದೆ ಮುಂದೆ– ಬಹುಮುಂದೆ ?




CC-0. Jangamwadi Math Collection. Digitized by eGangotri

# ಜಪಾನದೇಶದ ಗಾಂಧಿ

ಲೇಖಕರು :—ಶ್ರೀ. ಹನುಮಂತರಾವ ಮಾಂಜರೇಕರ, ಬಿ. ಎ., ಸುಂಕೇರಿ, ಕಾರವಾರಜಿಲ್ಲೆ.

ಬಹು ಪ್ರಾಚೀನಕಾಲದಿಂದ ಏಶಿಯಾಖಂಡವು ಸಾಧು ಪುರುಷರಿಗೂ ಪ್ರವಾದಿಗಳಿಗೂ ತವರುಮನೆಯಾಗಿದೆ. ಕ್ರೈಸ್ತಧರ್ಮದ ಸಂಸ್ಥಾಪಕನಾದ ಕ್ರಿಸ್ತನು ಏಶಿಯಾದಲ್ಲಿಯೇ ಜನಿಸಿದನು; ಬುದ್ಧನೂ ಮುಹಮ್ಮದನೂ ಹುಟ್ಟಿದುದು ಏಶಿಯಾದಲ್ಲಿಯೇ; ಏಶಿಯವೇ ಕನಫ್ಯೂಶಿಯಸನ ತಾಯ್‌ನಾಡು. ನಮ್ಮ ಕಾಲದ ಮ. ಗಾಂಧಿಯವರಾದರೂ ಇವರ ಮಾಲಿಕೆಗೇ ಸೇರಿದವರು. ಇವರೆಲ್ಲರೂ ಜಗತ್ತಿಗೆ ಸಾರಿರುವ- ಸಾರುತ್ತಿರುವ ತತ್ವವು ಒಂದೇ. "ಪ್ರೇಮವೇ ನಿತ್ಯಜೀವನದ ಜೀವಾಳವು" ಎಂಬುದೇ ಆ ತತ್ವದ ತಿರುಳು.

ಜಪಾನಿನ ಟೋಯೋಹಿಕೊ ಕಾಗಾವಾನನ್ನೂ ಭವಿಷ್ಯತ್ಕಾಲದ ಇತಿಹಾಸಕಾರರು ಮೇಲಣ ಮಾಲಿಕೆಯಲ್ಲಿಯೇ ಪೋಣಿಸುವರು. ಪ್ರವಾದಿಯಲ್ಲಿ ಬುದ್ಧಿಜ್ಞಾನಗಳಿರುವವು; ಅವನಿಗೆ ಉಜ್ಜ್ವಲವಾದ ಭವಿಷ್ಯವೂ ಕಾಣುವುದು. ಕಾಗಾವಾನಲ್ಲಿ ಇವೆಲ್ಲವೂ ತುಂಬಿರುವವು. ಗಾಂಧೀಜಿಯವರು ಯಂತ್ರದಲ್ಲಿಯೂ ರಾಜ್ಯತಂತ್ರದಲ್ಲಿಯೂ ಕೇಡನ್ನು ಕಾಣುವರು; ಅವುಗಳನ್ನು ಅವರು ಧಿಕ್ಕರಿಸುವರು. ಕಾಗಾವಾನು ಅವುಗಳನ್ನು ಮನ್ನಿಸಿ, ಅವುಗಳಲ್ಲಿ ಹೊಸ ಜೀವಕಳೆಯನ್ನು ತುಂಬಲು ಹೆಣಗಾಡುವನು. ಯಾಂತ್ರಿಕಯುಗದ ದುಷ್ಪರಿಣಾಮಗಳನ್ನು ಕುರಿತು ಎಲ್ಲರೂ ಬೊಬ್ಬಿಡುವುದನ್ನು ನಾವು ಕೇಳುತ್ತೇವೆ. ಸುತ್ತಲೂ ನಿರಾಶೆಯ ಮಬ್ಬು ಕವಿದದ್ದನ್ನು ನಾವು ನೋಡುತ್ತೇವೆ. ತಿಂದುಂಡು ಸರಸವಾಡಿ ಸಾಯುವುದನ್ನು ಬಿಟ್ಟು ಬೇರೊಂದು ಧ್ಯೇಯವೇ ನಮ್ಮ ಮುಂದೆ ಇಲ್ಲ. ಬಂಡವಲುಶಾಹಿಯೂ, ರಾಷ್ಟ್ರಧರ್ಮವೂ, ಆಧಿಭೌತಿಕ ಸುಖವಾದವೂ ತಾಂಡವವಾಡುವುದನ್ನು ನಾವು ಕಣ್ಣಾರೆ ಕಾಣುತ್ತೇವೆ. ಇವುಗಳ ಹೆಚ್ಚಳವನ್ನು ಕುಗ್ಗಿಸಲು ಮಾಡುವ ಪ್ರಯತ್ನಗಳೆಲ್ಲವೂ ಕಾಡಿನಲ್ಲಿಯ ಬೆಳದಿಂಗಳಂತೆ ವ್ಯರ್ಥವಾದದ್ದು ಕಂಡುಬರುತ್ತದೆ. ಇಂತಹ ಸಮಯದಲ್ಲಿ ಜಪಾನಿನಲ್ಲಿ ಕಾಗಾವಾನು ಉದಯಹೊಂದಿದ್ದಾನೆ. ಇವನ ಉಲ್ಲಾಸವೂ, ಉತ್ಸಾಹವೂ, ಜ್ಞಾನವೂ, ಪ್ರಜ್ಞೆಯೂ, ತತ್ವಜ್ಞಾನವೂ ಇವನನ್ನು ಈ ಮೊದಲೇ ಜಗತ್ತಿನ ಮಹಾಪುರುಷರಲ್ಲಿ ಎಣಿಸಲ್ಪಡುವಂತೆ ಮಾಡಿದೆ.

"ಮನುಷ್ಯನು ಹೇಗೆ ಬದುಕುತ್ತಾನೆ?" ಎಂಬ ಕತೆಯಲ್ಲಿ ಟಾಲಸ್ಟಾಯನು ತೋರಿಸಿದಂತೆ, ಪ್ರೇಮವೇ ಜೀವನಕ್ಕೆ ಆಧಾರವೆಂದು ಕಾಗಾವಾನು ನಂಬುವನು. ಪ್ರೇಮದಿಂದಲೇ ಜಗತ್ತಿನ ರಕ್ಷಣೆಯಾಗಬೇಕೆಂದು ಇವನ ದೃಢವಾದ ಶ್ರದ್ಧೆ. ಈ ತತ್ವವನ್ನು ಇವನು ಸ್ವಂತ ಅನುಭವದಿಂದಲೂ ಅಂತರ್ಮುಖವಾದ ದಿವ್ಯದೃಷ್ಟಿಯಿಂದಲೂ ಕಂಡುಹಿಡಿದಿರುವನು. ಮಾಯಾವಾದಿಗಳಂತೆ ಜಗತ್ತನ್ನು ಅಲ್ಲಗಳೆಯದೆ ಅದನ್ನು ಧೈರ್ಯದಿಂದ ಎದುರಿಸುವನು.

ಕಾಗಾವಾನು ೧೮೮೮ರಲ್ಲಿ ಪ್ರತಿಷ್ಠಿತಕುಲದಲ್ಲಿ ಹುಟ್ಟಿದನು. ಇವನ ಶಿಕ್ಷಣವು ಬುದ್ಧಧರ್ಮದ ಜಪಾನೀ ಶಾಲೆಯೊಂದರಲ್ಲಾಯಿತು. ಇವನು ಕನಫ್ಯೂಶಿಯಸನ ಪಂಥದ ಗ್ರಂಥಗಳನ್ನು ಅಭ್ಯಾಸಿಸಿದನು. ಎಳೆಯ ಪ್ರಾಯದಲ್ಲಿಯೇ ಈವನಿಗೆ ಅನೇಕ ನೈತಿಕ ತೊಡಕುಗಳು ಒದಗಿದವು. ಈತನ ಮನಸ್ಸಿನ ಮೇಲೆ ಕ್ರಿಸ್ತೀಧರ್ಮದ ಸಾರಕರ ಬೋಧೆಯ ಪರಿಣಾಮವು ಹೆಚ್ಚಾಗಿ ಆಯಿತು. ಮುಂದೆ ಇವನು ಕಾಲೇಜನ್ನು ಸೇರಿದನು. ಅಲ್ಲಿರುವಾಗ ದೇಹಾರೋಗ್ಯವು ಕೆಡಲು ಬೆಸ್ತರಂತಹ ಹಳ್ಳಿಯಲ್ಲಿ ಬಡತನದಲ್ಲಿ ಹೊತ್ತುಗಳೆಯಬೇಕಾಯಿತು. ಪ್ರಕೃತಿಯು ಸುಧಾರಿಸಿದೊಡನೆ ಕೋಬನಗರದಲ್ಲಿಯ ಕಾಲೇಜಿಗೆ ಮರಳಿದನು. ಅಲ್ಲಿಂದ ಇವನು ಕಿರುಕರ ಕೇರಿಗೆ ಹೋಗಿ, ತೀರ ಬಡತನದಲ್ಲಿ ಬಾಳುತ್ತಿರುವ ಕಿರುಕರ

CC-0. Jangamwadi Math Collection. Digitized by eGangotri

ಮಧ್ಯದಲ್ಲಿ ನಾಲ್ಕು ವರುಷ ಪರ್ಯಂತರ ನೆಲಸಿ, ಅವರಿಗೆ ಕೈಲಾಸ ಮಟ್ಟಿಗೆ ನೆರವಾಗಲು ಯತ್ನಿಸಿದನು. ಬಡತನವನ್ನೂ ದುಃಖವನ್ನೂ ಹಿಂಗಿಸುವ ದಾರಿಯೊಂದನ್ನು ಕಾಣಬಹುದೆಂದು ಕ್ರಿಸ್‌ಟೋನಿಗೆ ಹೋದನು. ಆದರೆ ಇವನು ತತ್ವಜ್ಞಾನದ ಬೆಳಕನ್ನು ಕಂಡುದು ಅಂತರ್ಮುಖ ಧ್ಯಾನದಿಂದಲೇ.

ಅಲ್ಲಿಂದ ಮರಳಿದ ಕೂಡಲೆ ಇವನು ಮೊದಲಿನ ದಿನವೇ ತಿರುಕರ ಕೇರಿಯಲ್ಲಿ ವಾಸವಾಗಲು ಹೋದನು. ಮಕ್ಕಳಾಗುವವರೆಗೂ ಅಲ್ಲಿಯೇ ಇದ್ದನು. ಮಕ್ಕಳು ಆಷ್ಟು ಕಟ್ಟಾದ ಮನೆಗೆ ಹೋಗಲು ಇವನನ್ನು ಒತ್ತಾಯ ಪಡಿಸಿದರು. ಮಕ್ಕಳಿಗೆ ೧೨ ವರುಷ ತುಂಬುತ್ತಲೇ ತಿರುಗಿ ತಿರುಕರ ಕೇರಿಗೆ ಮರಳಬೇಕೆಂಬ'ಇವನ ಹಂಬಲ. ಹೆಂಡತಿಯನ್ನು ಮಾಡಿಕೊಂಡುದಾದರೂ ತಾನು ಸೇವೆಮಾಡುತ್ತಿದ್ದ ಬಡವರ ಕಡೆಗೆ ಆಕೆ ಒಲವು ತೋರಿಸಿದುದರಿಂದಲೇ. ದೊಡ್ಡಸ್ತಿಕೆಯ ಕುರುಹು ಯಾವುದೂ ಅವಳಲ್ಲಿರಲಿಲ್ಲ.

ಕಣ್ಣುಬೇನೆಯಾಗಿ, ಈಗ ಕಾಗಾವಾನು ಅರೆಗುರುಡನಾಗಿರುವನು. "ನಾನು ಎಲ್ಲರನ್ನು ಪ್ರೀತಿಯಿಂದಲೇ ಕಾಣುತ್ತೇನೆ" ಎಂಬುದರಿಂದಲೆ ಇವನ ತತ್ತ್ವಜ್ಞಾನಕ್ಕೆ ಮೊದಲಾಗುತ್ತದೆ. ಕ್ರಿಸ್ತನು ತನ್ನ ಸ್ವಂತ ಉದಾಹರಣೆಯಿಂದ ತೋರಿಸಿಕೊಟ್ಟ 'ಪ್ರೇಮದಿಂದಲೇ ಜಗತ್ತಿನ ಪುನರುಜ್ಜೀವನವಾಗಬಹುದು' ಎಂಬ ಮಾತಿನಲ್ಲಿ ಕಾಗಾವಾನು ತುಂಬಾ ನಂಬುಗೆ; ಪ್ರೇಮದ ಕಾರ್ಯಕ್ಷಮತೆಯಲ್ಲಿ ಇವನದು ಅಚಲವಾದ ಶ್ರದ್ಧೆ. ಇವನ ಜ್ಞಾನವು ವಿಶಾಲವಾದುದು. ಕಾಲೇಜುಗಳಲ್ಲಿಯ ಉಪಾಧ್ಯಾಯರಲ್ಲಿಯೂ ಈತನಲ್ಲಿರುವಷ್ಟು ಅಗಾಧವಿದ್ವತ್ತೆಯನ್ನು ಕಾಣಲಾಗದು. ಜರ್ಮನ್ ತತ್ವಜ್ಞಾನವನ್ನು, ಇತಿಹಾಸ-ಅರ್ಥಶಾಸ್ತ್ರ-ಮಾನಸಶಾಸ್ತ್ರಗಳನ್ನು ಕಾಗಾವಾನು ಚೆನ್ನಾಗಿ ಅಭ್ಯಾಸಿಸಿರುವನು. ಅಮೇರಿಕೆಯ ಅಬ್ರಾಹಮ್ ಲಿಂಕನ್, ಇಮರ್ಸನ್‌ರ ಪರಿಚಯವು ಇವನಿಗಿದೆ. ಇವನು ಉಚ್ಚತರಗತಿಯ ಕಾದಂಬರೀಕಾರನು. ಇವನ ಆರೋಗ್ಯವು ಕೆಟ್ಟಿರುವುದಾದರೂ ಈಗಾಗಲೇ ನಾಲವತ್ತೈದಕ್ಕೆ ಮಿಕ್ಕಿ ಗ್ರಂಥಗಳನ್ನು ಬರೆದಿರುವನು. ಇನ್ನೂ ಹಲವನ್ನು ಬರೆಯಲು ಅಣಿಮಾಡಿದ್ದಾನೆ. ಇದಲ್ಲದೆ ಪ್ರತಿ ವರುಷ ಸಾವಿರಾರು ಉಪನ್ಯಾಸಗಳನ್ನು ಕೊಡುವನು. ಇವನನ್ನು ನೋಡಲಿಕ್ಕೂ [illegible]

ಗಟ್ಟಲೆ ಜನರು ನೆರೆಯುವುದುಂಟು. ಸಾಮಾನ್ಯಜನತೆಯ (Masses) ಕಡೆಗೆ ಇವನ ಒಲವು ಹೆಚ್ಚು. ಶಿಕ್ಷಿತವರ್ಗದೊಡನೆಯೂ, ಸರಕಾರದೊಡನೆಯೂ ಇವನಿಗೆ ಗೆಳೆತನವುಂಟು; ಆದರೂ ಮೇಲಿಂದ ಮೇಲೆ ಸರಕಾರದ ಕೂಡ ವಿರೋಧವನ್ನೂ ಬೆಳೆಯಿಸುವನು.

"ಬಡವರ ಮಾನಸಶಾಸ್ತ್ರ"ಎಂಬ ಅವನ ಮೂರು ಕಾದಂಬರಿಗಳೊಳಗಿನ ಅವತರಣಗಳುಳ್ಳ ಪುಸ್ತಕವನ್ನು ಜಪಾನದ ಪ್ರಭುಗಳ ಸಭೆಯ ಸದಸ್ಯರಲ್ಲಿ ಹಂಚಲು, ಅದರಿಂದ ದೇಶದಲ್ಲಿ ಬಡತನದ ಬಳಲಿಕೆಯು ಎಷ್ಟರಮಟ್ಟಿಗೆ ಉಂಟೆಂಬುದು ನಿದರ್ಶನಕ್ಕೆ ಬಂದಿತು. ಇದರ ಫಲವಾಗಿ ಪ್ರಭುಗಳು ತಿರುಕರ ಕೇರಿಯ ಸುಧಾರಣೆಗಾಗಿ ಮೂರು ಕೋಟಿನಾಣ್ಯಗಳನ್ನು ಸಹಾಯಧನವಾಗಿ ಕೊಡಿಸಿದರು.

ಕಾಗಾವಾನು ಒಮ್ಮೆಲೇ ಹೆಸರು ಪಡೆದದ್ದು ಅವನ ಮೊದಲನೆಯ ಕಾದಂಬರಿಯಿಂದ. ಅದರಲ್ಲಿ ಅವನ ಸ್ವಂತ ತತ್ತ್ವಜ್ಞಾನದ ಛಾಯಾಚಿತ್ರವಿದ್ದು ಇಷ್ಟರಲ್ಲಿಯೇ ಅದರ ೧೮೦ ಆವೃತ್ತಿಗಳು ಹೊರಟಿವೆ. ಇವನು ಸಾಹಿತ್ಯಸೇವಕರ ಕೂಟದಲ್ಲಿ ಸೇರಿ ಮೆರೆಯಬಹುದಾಗಿತ್ತಾದರೂ, ನರಕಕೇರಿಯಲ್ಲಿರುವುದೇ ಇವನಿಗೆ ಆನಂದ. ಕೋಬ ಪಟ್ಟಣದಲ್ಲಿಯ ಗೋದಿಯೊಳಗಣ ಕೂಲಿಯಾಳುಗಳ ಮುಷ್ಕರದಲ್ಲಿ ನೆರವಾದ ಬಗ್ಗೆ ಸರಕಾರವು ಇವನನ್ನು ಬಂಧಿಸಿ ಸೆರೆಮನೆಗೆ ಅಟ್ಟಿತು. ಅದೇ ಕಾಲಕ್ಕೆ ಈತನದೊಂದು ಗ್ರಂಥವು ಜಪಾನದಲ್ಲಿ ಎಲ್ಲೆಡೆಯಲ್ಲಿಯೂ ಒಂದೇ ಹೊತ್ತಿಗೆ ಹೊರಬೀಳುವುದು ಗೊತ್ತಾಗಿತ್ತು. ಅದರ ಬರೆಹಗಾರನು ಕಾರಾಗೃಹದಲ್ಲಿದ್ದರೂ ಜನರು ಅದನ್ನು ಕೊಂಡುಕೊಳ್ಳಲು ಎಲ್ಲ ಕಡೆಗೆ ಅದೇ ಹೊತ್ತಿಗೆ ಆತುರದಿಂದ ಕಾಯ್ದುಕೊಂಡಿದ್ದರು. ಇದರ ಮೇಲಿಂದ ಈತನು ಎಷ್ಟು ಲೋಕಪ್ರಿಯನಾಗಿರುವನೆಂಬುದು ಕಂಡು ಬರುವುದು. ಸೆರೆಮನೆಯಲ್ಲಿಯೂ ಇವನು ಇನ್ನೊಂದು ಪುಸ್ತಕವನ್ನು ಬರೆದನು. ಪುಸ್ತಕಗಳನ್ನು ಬರೆಯುವುದರಲ್ಲಿ ಇವನು ಎರಡು ಗುರಿಗಳನ್ನಿಟ್ಟುಕೊಂಡಿರುವನು; ತನ್ನ ವಿಚಾರಗಳನ್ನು ಜನರಲ್ಲಿ ಹರಡುವುದು ಒಂದು; ತನ್ನ ಬಹುವಿಧವಾದ ಕಾರ್ಯಕಲಾಪಗಳಿಗೆ ಹಣವನ್ನೆತ್ತುವುದು ಇನ್ನೊಂದು. ತಾನು ಸ್ವತಃ ಬಡತನದಲ್ಲಿರುವನಾದರೂ ಬಡಬಗ್ಗರಿಗೆ ಕೊಡಗೈಯಿಂದ ದಾನ ಮಾಡುವನು.

CC-0. Jangamwadi Math Collection. Digitized by eGangotri

ಕೂಲಿಕಾರ ಆಂದೋಲನದ ಕಡೆಗೆ ಈತನ ಒಲವುಹೆಚ್ಚು. ಕೂಲಿಕಾರರ ಅನೇಕ ಸಂಘಗಳನ್ನೂ ಸಂಸ್ಥೆಗಳನ್ನೂ ಏರ್ಪಡಿಸಿರುವನು. ಬೆಂಬಲವಿದ್ದರೂ ಅಲ್ಲಿಯ ಪ್ರಜಾ ಪ್ರತಿನಿಧಿ ಸಭೆಗೆ ಸ್ವತಃ ಆರಿಸಿಬರಲು ಈತನು ಇಷ್ಟಪಡುವದಿಲ್ಲ. ಜಪಾನದ ಕೂಲಿಕಾರವರ್ಗದ ಮೇಲೆ ಕಾರ್ಲ್ ಮಾರ್ಕ್ಸ್‌ನ ಭೌತಿಕಸಮಾಜ ಸಮತಾವಾದದ ಪರಿಣಾಮವು ಹೆಚ್ಚಾಗಿ ಆದದ್ದು ಕಂಡು ಬರುತ್ತದೆ. ಅವನ ಅನೇಕ ಮತಗಳಿಗೆ ಕಾಗಾವಾನು ಅನುಕೂಲನೂ ಸಹಾನುಭೂತಿಯುಳ್ಳವನೂ ಆಗಿದ್ದರೂ, ಆಧಿಭೌತಿಕ ಸುಧಾರಣೆಯು- ಅದು ಸಮಾಜಸಮತಾವಾದಕ್ಕೆ ಸಂಬಂಧಿಸಿರಲಿ, ಇಲ್ಲವೆ ಬಂಡವಲುಶಾಹಿಗೆ ಸಂಬಂಧಿಸಿರಲಿ- ಫಲಕಾರಿಯಾಗಲಿಕ್ಕಿಲ್ಲವೆಂದು ಇವನಿಗೆ ಅನಿಸುತ್ತದೆ. ಜಗತ್ತು ಹೊಸಹಾದಿಯನ್ನೇ ಹಿಡಿಯಬೇಕೆಂದು ಈತನು ಅನ್ನುತ್ತಾನೆ.

ಕಾಗಾವಾನು ಕ್ರೈಸ್ತಧರ್ಮದ ಇವೆಂಜೆಲಿಸ್ಟಿಕ್ ಪಂಥಕ್ಕೆ ಸೇರಿದವನು. ಅವನಲ್ಲಿ ಪ್ರಚಂಡ ಉತ್ಸಾಹವೂ, ಆಕರ್ಷಣೆಯೂ, ಜಾಣ್ಮೆಯೂ, ಮೇಧಾಶಕ್ತಿಯೂ ಇರುವವು. ಕ್ರಿಸ್ತನಿಗೆ ಅನುರೂಪವಾದ ನುಡಿಗಳನ್ನೇ ಇವನು ಆಡುವನಾದರೂ ಈತನ ಮೇಲೆ ಏಶಿಯಾಖಂಡಕ್ಕೆ ನೈತಿಕ- ಆಧ್ಯಾತ್ಮಿಕ ಬಲವನ್ನು ಕೊಟ್ಟ ಕನಫ್ಯೂಶಿಯಸ್, ಬುದ್ಧ ಇವರ ತತ್ತ್ವಜ್ಞಾನದ ಪರಿಣಾಮವಾದದ್ದೂ ಕಂಡುಬರುತ್ತದೆ. ಇದರ ಬಲದಿಂದಲೇ ಇವನು ಕ್ರಿಸ್ತನ ತತ್ತ್ವಗಳನ್ನು ಜನರಲ್ಲಿ ಬೇರೂರಿಸುವುದಕ್ಕೆ ಯತ್ನಿಸಿರುವನು.

ಹೀಗಿದ್ದರೂ ಇವನು ಜಗತ್ತಿನ ಸಾಮಾಜಿಕ ಪುನರ್ಘಟನೆಗಾಗಿ ಬೆಳಗುವ ಸಜೀವಜ್ಯೋತಿಯಾಗಿರುವನು. ಇವನು ಪ್ರವಾದಿಯೆನಿಸಿಕೊಳ್ಳಲು ಅರ್ಹನೇಕೆಂದರೆ- ಇವನು ಮಾಡುತ್ತಿರುವ ಕೆಲಸದಿಂದ ಕ್ರೈಸ್ತಧರ್ಮವು, ಇದು ಹೊಸ ಧರ್ಮವೇ ? ಎನ್ನುವ ಹಾಗೆ ಮಾರ್ಪಾಟುಗಳನ್ನು ಹೊಂದುವುದು. ಯುರೋಪ- ಅಮೇರಿಕೆಗಳಲ್ಲಿ ಕ್ರೈಸ್ತಧರ್ಮವು ಸೊರಗುತ್ತಿದೆ. ಅದನ್ನು ನಿಜವಾಗಿ ಮನ್ನಿಸುವವರು ಕಡಿಮೆ. ಪಾಶ್ಚಾತ್ಯ ನಾಗರಿಕತೆಯು ಹೆಗ್ಗುರುತೆಂದು ಏನೋ ಅದರಲ್ಲಿ ಅಲ್ಪ ಸ್ವಲ್ಪಶಕ್ತಿ ಉಳಿದಿದೆ. ಕ್ರೈಸ್ತಧರ್ಮವು ಏಶಿಯಾದ ಒಂದು ತುದಿಯಲ್ಲಿ ಜನ್ಮವೆತ್ತಿದಂತೆ ಇನ್ನೊಂದು ತುದಿಯಲ್ಲಿ ಪುನರುಜ್ಜೀವನಗೊಳ್ಳಬಹುದೆಂದು ತೋರುತ್ತಿದೆ. ಅಂತಹದೊಂದು ನೂತನವಾದ ಅಮೋಘಶಕ್ತಿಯು ಕಾಗಾವಾನಲ್ಲಿದೆ. ಇವನ ಅಭಿಪ್ರಾಯವು "ಪ್ರೇಮವೇ ಕ್ರಿಸ್ತಧರ್ಮದ ತಿರುಳು; ಎಲ್ಲ ತೊಡಕುಗಳನ್ನೂ ಅದರ ಬಲದಿಂದಲೇ ಬಿಡಿಸಬಹುದು' ಎಂಬುದು. ಇದರಲ್ಲಿ ಕಾಗಾವಾನಿಗೆ ಬಲವಾದ ವಿಶ್ವಾಸ. ಇದನ್ನು ತನ್ನ ಸ್ವಂತ ಉದಾಹರಣೆಯಿಂದಲೇ ತಿಳಿಸಿಕೊಡಬಹುದೇ ಹೊರತು ಸಮಾಜಶಾಸ್ತ್ರವನ್ನು ಓದಿಸಿ ಅಲ್ಲವೆಂದೂ, ಒಂದು ತಲೆಮಾರಿನವರೆಗೆ ಜನರಿಗೆ ರಾಜಕೀಯಶಿಕ್ಷಣವನ್ನು ಕೊಡಬೇಕೆಂದೂ ಕೂಲಿಕಾರರ ಕೂಟಗಳಿಗೆ ಅವನು ಹೇಳುತ್ತಾನೆ.

ಕಾಗಾವಾನು ಪ್ರತಿಯೊಂದು ಸಂಗತಿಯ ಕಡೆಗೆ ಜಪಾನೀ ಪದ್ಧತಿಯಿಂದ ನೋಡುವದುಂಟು. ಸಂಕಟವಿದ್ದಾಗ ಜಪಾನಿಯರು ನಗುತ್ತಾರೆ, ಭೂಕಂಪದಲ್ಲಿ ತಮ್ಮ ಇಷ್ಟು ಜನ ಮಂದಿಮಕ್ಕಳು ಸತ್ತರೆಂದು ಹೇಳುವಾಗಲೂ ಅವರು ನಗುತ್ತಾರೆ. ಅದರಂತೆಯೇ ನಾವನ್ನು ಕುರಿತು ಮಾತಾಡುವಾಗ ಇವನು ಜನರನ್ನು ನಗಿಸಿಬಿಡುತ್ತಾನೆ.

ಕೂಲಿಕಾರರ ಪ್ರಶ್ನೆಯನ್ನು ಕುರಿತು ಇವನು ಅನ್ನುವದೇನೆಂದರೆ- "ಪ್ರೇಮವನ್ನೂ ಸದ್ಧೇತುವನ್ನೂ ಬರಿ ಉಪದೇಶಿಸುವುದರಿಂದೇನೂ ಪ್ರಯೋಜನವಿಲ್ಲ. ಅವುಗಳನ್ನು ಕಾರ್ಯರಂಗಕ್ಕಿಳಿಸುವ ಉಪಾಯಗಳೇನಾದರೂ ಬೇಕು. ಈಗಿದ್ದ ವ್ಯವಸ್ಥೆಯನ್ನು ಬುಡಮೇಲು ಮಾಡುವುದು ಧರ್ಮದ ಕಾರ್ಯವಲ್ಲ. ಜೀವನದಲ್ಲಿ ಪ್ರೇಮವನ್ನೂ ಸದ್ಧೇತುವನ್ನೂ ನೆಲೆಗೊಳ್ಳುವಂತೆ ಮಾಡಿದರೆ, ಮುಂದೆ ಎಂದಾದರೂ ಅದರೊಳಗಿಂದ ಒಳಿತು ಹೊರಡಬಹುದು. ನಾನು ಬಂಡವಲಿಗರ ವಿರೋಧಿಯಲ್ಲ. ಸ್ವಾರ್ಥದಿಂದ ಪ್ರೇರಿತರಾಗಿ ಅವರು ಕೆಲಸಗಾರರ ಹಿತವನ್ನು ಮರೆಯುತ್ತಾರೆಂದು ನನಗೆನಿಸುತ್ತದೆ. ಕೂಲಿಕಾರರ ಕೆಲಸವನ್ನು ಕಡಿಮೆ ಮಾಡಿ ಸುಖವನ್ನೊದಗಿಸಿ ಕೊಡುವುದು ನನಗೆ ಸಮ್ಮತವಿಲ್ಲ. ಜೀವನದ ಕಡೆಗೆ ನೋಡುವ ನಮ್ಮ ದೃಷ್ಟಿಕೋನವೇ ಬದಲಾಗಬೇಕು. ಹೊಟ್ಟೆಹೊರಕೊಳ್ಳುವುದನ್ನುಳಿದು ಬೇರೊಂದು ಧ್ಯೇಯವು ಜನರ ಮುಂದಿರಬೇಕು. ಕಾರ್ಲ ಮಾರ್ಕ್ಸ್‌ನ ಪುಸ್ತಕಗಳನ್ನು ಲಕ್ಷಾವಧಿ ಜನರು ಓದುತ್ತಾರೆ. ಸಮಾಜಸಮತಾವಾದವು ಕಾಳ್ಗಿಚ್ಚಿನಂತೆ ಹಬ್ಬುತ್ತಿದೆ. ಹೀಗಾಗುವುದಕ್ಕೆ ಕಾರಣಗಳಿವೆ. ಅವು ಯಾವುವೆಂದರೆ ಅತ್ಯಲ್ಪ ಕೂಲಿಯು, ಹುಡುಗರ ದುಡಿ

CC-0. Jangamwadi Math Collection. Digitized by eGangotri

ನೆಯು (child labour), ಸಿರುದ್ಯೋಗವು, ಹಾಗೂಬಂಡವಲಿಗರ ಸುಲಿಗೆಯು. ಬಹಳ ಜನರನ್ನು ಸರಕಾರವು ಸೆರೆಮನೆಗೆ ಕಳಿಸಿರುತ್ತದೆ; ಈ ಹಾದಿಯು ಸಾಧುವಾದುದಲ್ಲ. ಅವಕ್ಕೆ ದಯೆ, ಪ್ರೀತಿಗಳೇ ಯೋಗ್ಯವಾದ ಉಪಾಯಗಳು. ಕೂಲಿಕಾರರ ಬಗೆಗೆ ನಾನು ಸಹಾನುಭೂತಿಯುಳ್ಳವನಾಗಿದ್ದೇನೆ. ಅವರು ಬಲುಮೆಗೆ ಗುರಿಯಾಗಿದ್ದಾರೆಂಬುದು ನನಗೆ ಗೊತ್ತು; ಆದರೆ ಕ್ರಾಂತಿಕಾರರ ಒತ್ತಾಯದಿಂದೇನೂ ಲಾಭವಿಲ್ಲ. ಒತ್ತಾಯ– ಬಲುಮೆಯಿಂದ ಹಿತವಾದದ್ದು ಎಂದೂ ಇಲ್ಲ. ಬೇಕಾದದ್ದು ಒತ್ತಾಯವಲ್ಲ ಪ್ರೇಮವು. ಜಪಾನಿನಲ್ಲಿ ಕ್ರಿಸ್ತನ ನಿಜವಾದ ತತ್ವಗಳನ್ನು ಹಬ್ಬಿಸಲು ನಾನು ಹೆಣಗಾಡುತ್ತಿದ್ದೇನೆ."

ಕಾಗಾವಾನು ರವೀಂದ್ರನಾಥರಂತಹ ವಿಶ್ವಪ್ರೇಮಿಯು. ಎಲ್ಲ ರಾಷ್ಟ್ರಗಳನ್ನೂ ಪ್ರೀತಿಸುವವನು. ಈತನು ವ್ಯಾವಹಾರಿಕಧ್ಯೇಯವಾದಿಯೂ, ರಾಜಕೀಯ ಮುಖಂಡನೂ, ಸಮಾಜಸುಧಾರಣಾಸಂಸ್ಥೆಗಳಿಗೆ ಆಧಾರನೂ ಆಗಿದ್ದಾನೆ. ಕುಷ್ಠರೋಗಿಗಳ ಶುಶ್ರೂಷಾಗೃಹಕ್ಕೆ ಸಹಾಯಮಾಡುತ್ತಾನೆ; ಸಂಶೋಧನಶಾಲೆಯೊಂದನ್ನು ನಡೆಸಿಯಿರುತ್ತಾನೆ, ಒಂದು ದೊಡ್ಡ ಸಹಕಾರಿಸಂಸ್ಥೆಗೆ ಹಿರಿಯನಾಗಿದ್ದಾನೆ. ಬೇಗಿನ ಆರುಘಂಟೆಗೆ ಭಾಷಣ ಮಾಡಲು ಮೊದಲುಮಾಡುವವನು, ಬೈಗಿನಲ್ಲಿಯೂ ತಪ್ಪದೆ ಉಪನ್ಯಾಸಗಳನ್ನು ಕೊಡುವವನು. ಬರೆಯುವ ಕಾರಖಾನೆಯಂತೂ ಅವ್ಯಾಹತವಾಗಿ ನಡೆದೇ ಇರುತ್ತದೆ. ಬಡತನದ ಬಾಳಿಕೆಯ ಪುರಸ್ಕರ್ತನಾದರೂ ತನ್ನ ಮನೆಯಲ್ಲಿ ತಕ್ಕಮಟ್ಟಿಗೆ ವೈಭವದಿಂದಿರುವವನು. ಜಪಾನಿನಲ್ಲಿ ಭೂಕಂಪವಾದ ಕೆಲವುದಿನಗಳಲ್ಲಿಯೇ ಅವನು ಸೆರೆಮನೆಯಿಂದ ಬಿಡುಗಡೆ ಹೊಂದಿದನು. ಈತನನ್ನು ಬಂಧಿಸಿದ ಸರಕಾರವು ಭೂಕಂಪಕಷ್ಟನಿವಾರಣಾಕಾರ್ಯದಲ್ಲಿ ನೆರವಾಗಲು ಇವನನ್ನೇ ಬಿನ್ನವಿಸಿತು. ಟೋಕಿಯೋದ ನಗರಾಧ್ಯಕ್ಷನು ಪೌರಸಭೆಯ ಸಮಾಜಸುಧಾರಣಾಕೂಟದ ಹಿರಿಯನಾಗಲು ಇವನನ್ನು ಕೇಳಿಕೊಂಡನು.

ಮಹಾತ್ಮಾಜಿಯವರ ಹಿಂದೆ ಮಹಾದೇವ ದೇಸಾಯಿ ಪ್ಯಾರೇಲಾಲರು ಇರುವಂತೆ, ಕಾಗಾವಾನ ಹಿಂದೆ ಕೆ. ಹೇಲೇನ್ ಟೊಪ್ಪಿಂಗ ಎಂಬವಳು ಇದ್ದಾಳೆ. ಇವನ ಬಾಯಿಂದ ಹೊರಬೀಳುವುದನ್ನೆಲ್ಲ ಬರೆದಿಡಲಿಕ್ಕೆ ಅವಳೂ ಅವಳ ತಂದೆಯೂ ಪ್ರಯತ್ನಪಡುವರು. ಈ ಯುಗದ ಒರ್ವ ಮಹಾಮಹಿಮನಾದ ಮಹಾನುಭಾವನ ಸಾನ್ನಿಧ್ಯದಲ್ಲಿ ತಾವು ಇರುತ್ತೇವೆಂದು ಅವರು ತಿಳಿಯುತ್ತಾರೆ. ರಾಮಕೃಷ್ಣ ಪರಮಹಂಸರ ವಚನಗಳಂತೆ ಇವನ ಮಾತುಗಳಾದರೂ ಬರೆದಿಡಲು ಯೋಗ್ಯವಾಗಿರುತ್ತವಂತೆ!

ಕಾಗಾವಾನ ವ್ಯಾವಹಾರಿಕ ಜೀವನವು ಸ್ಫಟಿಕದಂತೆ ಶುಭ್ರವಾಗಿರುವುದು. ಇಷ್ಟರಿಂದಲೇ ಇವನು ಪ್ರವಾದಿಗಳಲ್ಲಿ ಎಣಿಸಲ್ಪಡುವದಿಲ್ಲ. ಜಗತ್ತಿಗೇ ದಿಗಿಲುಗೊಳಿಸುವಂತಹ ಕಠಿನವಾದ ಸಮಸ್ಯೆಗಳು ಇಂದು ಜಗತ್ತಿನ ಮುಂದೆ ಇವೆ. ಬಹುಮಂದಿ ಅನುಯಾಯಿಗಳುಳ್ಳ ನಿರಾಶಾವಾದದ ಪ್ರವಾದಿಗಳು ಮುಂದೆ ಹುಟ್ಟಬಹುದು. "ಮಾನವ ಸ್ವಭಾವವನ್ನು ಬದಲಾಯಿಸಲಾಗುವದಿಲ್ಲ" ಎಂಬ ಮಾತನ್ನು ಆಗಾಗ ಕೇಳುತ್ತೇವೆ. ಮಾನವೀಯ ಸ್ವಭಾವವನ್ನು ಮೇಲಿನ ಮಟ್ಟವನ್ನು ಮುಟ್ಟುವಂತೆ ಮಾರ್ಪಡಿಸಬಹುದೆಂದು ಎಲ್ಲ ಧರ್ಮಗಳೂ ನಂಬಿಗೆಯಿಂದ ಸಾರುತ್ತವೆ. ಕಾಗಾವಾನು ಈ ಮಾತಿನಲ್ಲಿ ತುಂಬ ಶ್ರದ್ಧೆಯುಳ್ಳವನಾಗಿದ್ದು, ಜಗತ್ತಿನ ಬಿಗಿಯಾದ ತೊಡಕುಗಳನ್ನು ಸಂಪೂರ್ಣವಾಗಿ ಬಿಡಿಸಬಹುದೆಂದೂ, ಮನುಷ್ಯಸ್ವಭಾವವನ್ನು ಉಜ್ಜ್ವಲಗೊಳಿಸಬಹುದೆಂದೂ ಇವನು ಅನ್ನುತ್ತಾನೆ. ಈ ಯುಗಕ್ಕೆ ಬೇಕಾದ ಪ್ರವಾದಿಯ ಸಂದೇಶದ ಗುಟ್ಟು ಇಂತಹದ್ದೇ ಇರಬೇಕಾಗಿದೆ. ಅಂತಹ ಪ್ರವಾದಿಯೊಬ್ಬನು ಜಪಾನಿನಲ್ಲಿರುವನು. ಇವನೇ ಜಪಾನದೇಶದ ಗಾಂಧಿ! ಗಾಂಧೀಜಿಯವರು ಹಿಂದುಸ್ಥಾನದಲ್ಲಿ ಮಾಡುತ್ತಿರುವ ಕೆಲಸವನ್ನೇ ಕಾಗಾವಾನು ಜಪಾನಿನಲ್ಲಿ ಮಾಡುತ್ತಿರುವವನು. ಜಗತ್ತಿನ ಪ್ರತಿಯೊಂದು ಭಾಗದಲ್ಲಿ ಒಬ್ಬೊಬ್ಬ ಗಾಂಧಿಯು ಹುಟ್ಟಿದರೆ ಜಗತ್ತಿನ ಉದ್ಧಾರವು ಬಹು ಬೇಗನೆ ಆಗಬಹುದಲ್ಲವೇ?



CC-0. Jangamwadi Math Collection. Digitized by eGangotri

# ಭಾಷಾವಿಜ್ಞಾನ

## ( ಪ್ರಾಕೃತಜನ್ಯಭಾಷೆಗಳ ಇತಿಹಾಸ )

ಲೇಖಕರು:—ಕೆ. ಭುಜಬಲಿಶಾಸ್ತ್ರಿ, ನ್ಯಾಯಭೂಷಣಾಚಾರ್ಯ, ಆರಾ ( ಬಿಹಾರ )

### ಭಾಷಾವಿಜ್ಞಾನದ ಜನ್ಮದಾತರು.

ಹದಿನೆಂಟನೆಯ ಶತಮಾನದ ಅಂತಿಮಚರಣದಲ್ಲಿ ಯುರೋಪಿಯರಲ್ಲಿ ಸಂಸ್ಕೃತಪಠನ-ಪಾಠನದ ಅಭಿರುಚಿಯು ಉಂಟಾಯಿತು. ಸನ್ ೧೭೮೫ರಲ್ಲಿ, ಚಾರ್ಲ್ಸ್ ವಿಲ್ಕಿಂಸನು ಭಗವದ್ಗೀತೆ ಮತ್ತು ೧೭೮೭ರಲ್ಲಿ, ಹಿತೋಪದೇಶ ಇವುಗಳ ಇಂಗ್ಲೀಷ್ ಅನುವಾದವನ್ನು ಮಾಡಿದನು. ತದನಂತರ ಸರ್ ವಿಲಿಯಮ್ ಜೋಂಸನು ಶಕುಂತಲಾ, ಮನುಸ್ಮೃತಿ, ಋತುಸಂಹಾರ ಇವುಗಳ ಇಂಗ್ಲಿಷ್ ಅನುವಾದವನ್ನು ಪ್ರಕಟಮಾಡಿದನು. ಆ ಬಳಿಕ ಹೆನ್ರೀ ಟಾಮ್ಸ್ ಕೊಲಬ್ರೂಕ್, ಡಾ. ಎಚ್. ಎಲ್. ವಿಲ್ಸನ್, ಬರ್ನೂಫ್ ಆದಿ ಹಲವು ಪಾಶ್ಚಾತ್ಯ ವಿದ್ವಾಂಸರು ಸಂಸ್ಕೃತದ ಅಧ್ಯಯನವನ್ನು ಮಾಡಿ ಹಲವು ಸಂಸ್ಕೃತಗ್ರಂಥಗಳ ಇಂಗ್ಲಿಷ್ ಅನುವಾದವನ್ನು ಪ್ರಕಟಮಾಡಿದರು. ಅಲೇಕ್ಝೆಂಡರ್ ಹೆಮಿಲ್ಟನ್ ಎಂಬ ಇಂಗ್ಲಿಷ್ ಸೈನಿಕನೊಬ್ಬನು ಭಾರತದಲ್ಲಿದ್ದು ಸಂಸ್ಕೃತಜ್ಞಾನವನ್ನು ಪ್ರಾಪ್ತಮಾಡಿಕೊಂಡನು. ಇಂಗ್ಲೆಂಡ್ ಮತ್ತು ಫ್ರಾಂಸಿನಲ್ಲಿ ಯುದ್ಧವು ಪ್ರಾರಂಭವಾದಾಗ ಇವನು ಇಂಗ್ಲೆಂಡಿಗೆ ಹೋಗುವಾಗ ಫ್ರಾಂಸಿನಲ್ಲಿ ತಡೆಯಲ್ಪಟ್ಟನು; ಹಾಗೂ ಕೆಲವು ದಿವಸಗಳವರೆಗೆ ಪ್ಯಾರಿಸಿನಲ್ಲಿ ಕಾರಾಗಾರದಲ್ಲಿ ಇಡಲ್ಪಟ್ಟನು. ಕಾರಾಗಾರದಲ್ಲಿರುವಾಗಲೇ ಇವನು, ಹಲವು ಫ್ರೆಂಚ ವಿದ್ವಾಂಸರಿಗೆ ಮತ್ತು ಜರ್ಮನ್ ಕವಿ 'ಶ್ಲೇಗ್ಲೆ' ಇವರಿಗೆ ಸಂಸ್ಕೃತವನ್ನು ಓದಿಸಿದನು. ಶ್ಲೇಗ್ಲೆ ಮಹಾಶಯನು "ಭಾರತವಾಸಿಗಳ ಭಾಷೆ ಮತ್ತು ಬುದ್ಧಿ" ಎಂಬ ಗ್ರಂಥವೊಂದನ್ನು ಬರೆದಿರುವನು. ಇದರಲ್ಲಿ ಅವನು ಸಂಸ್ಕೃತಸಾಹಿತ್ಯದ ಪರಿಚಯವನ್ನು ಕೊಟ್ಟು ಭಾರತೀಯರನ್ನು ಬಹಳವಾಗಿ ಹೊಗಳಿರುತ್ತಾನೆ. ಈ ಗ್ರಂಥದಿಂದ ಅನ್ಯಾನ್ಯ ಅನೇಕ ಜರ್ಮನ್ ವಿದ್ವಾಂಸರಲ್ಲಿ ಸಂಸ್ಕೃತಭಾಷೆಯನ್ನು ಅರಿಯಬೇಕೆಂಬ ಉತ್ಕಂಠತೆಯು ತಲೆದೋರಿತು. ಅವರಲ್ಲಿಯೆ ಆಧುನಿಕ ಭಾಷಾವಿಜ್ಞಾನದ ಜನ್ಮದಾತೃವಾದ "ಬಾಪ್" ಮಹಾಶಯನೂ ಒಬ್ಬನು. "ಬಾಪ್" ಮಹೋದಯನು ಗ್ರಿಮ್ ಮತ್ತು ಹಂಬೋಲ್ಟನ್ ಇವರ ಜೊತೆಯಲ್ಲಿ ಸಂಸ್ಕೃತ ಧಾತುಗಳ ಅಧ್ಯಯನವನ್ನು ಬಹಳ ವಿಚಾರಪೂರ್ವಕವಾಗಿ ಮಾಡಿ ಸಂಸ್ಕೃತ, ಯೂನಾನಿ, ಲ್ಯಾಟಿನ್, ಟ್ಯೂಟೋನಿಕ್, ಅದರಂತೆಯೆ ಕೆಲ್ಟಿಕ್ ಭಾಷೆಗಳ ಪಾರಸ್ಪರಿಕ ಸಂಬಂಧವನ್ನು ಹುಡುಕಿದನು. ಅವನು, ಈ ಎಲ್ಲಾ ಭಾಷೆಗಳು ವಾಸ್ತವವಾಗಿ ಯಾವುದೋ ಒಂದೇ ಒಂದು ಭಾಷೆಯಿಂದ ಹೊರಟಿವೆಯೆಂದು ಹಲವು ಪ್ರಮಾಣಗಳಿಂದ ಸಿದ್ಧ ಮಾಡಿ ತೋರಿಸಿರುವನು.

### ಭಾಷಾವಿಜ್ಞಾನದ ಉದ್ದೇಶ.

ಯಾವುದಾದರೊಂದು ಸಮುದಾಯಸಂಬಂಧವಾದ ಭಿನ್ನ ಭಿನ್ನ ಭಾಷೆಗಳ ಅಧ್ಯಯನ ಅನುಶೀಲನೆಗಳನ್ನು ಮಾಡಿ, ಅವುಗಳ ಪಾರಸ್ಪರಿಕ ಸಮಾನತೆಗಳ ಶೋಧನೆಯನ್ನೂ ಕಾರಣಗಳ ಅನುಸಂಧಾನವನ್ನೂ ಮಾಡುವುದೇ ಭಾಷಾವಿಜ್ಞಾನದ ಉದ್ದೇಶವಾಗಿದೆ.

### ಭಾಷೆಯು ಒಂದು ಅರ್ಜಿತ ಸಂಪತ್ತಿಯು.

ಭಾಷೆಯು ಪರಂಪರಾಗತವಾದ ಒಂದು ಸಾಮಾಜಿಕ ಬಂಧನದಂತಿರುವುದು. ಆದರೆ ಇದು ಯಾವುದೋ ಒಂದು ಜಾತಿ ಅಥವಾ ವಂಶದ-ಯಾವುದೋ ಒಂದು ವೈಶಿಷ್ಟ್ಯದ ಸೂಚಕವೆಂದೂ ಮನುಷ್ಯನು ಅದನ್ನು ತನ್ನ ಪೂರ್ವಜರಿಂದ ಪಡೆದಿದ್ದಾನೆಂದೂ ಅರಿಯಬಾರದು. ಏತಕ್ಕೆಂದರೆ ಒಬ್ಬ ಬಾಲಕನು ತನ್ನ ಮಾತೃಭಾಷೆಯಂತೆಯೇ ಬೇರೆ ಯಾವುದಾದರೊಂದು ಭಾಷೆಯನ್ನು ಸುಲಭವಾಗಿ ಕಲಿಯಬಲ್ಲನು. ವಂಶ ಅಥವಾ ಜಾತಿಯೊಡನೆ ಭಾಷಾಜ್ಞಾನಕ್ಕೆ ಯಾವುದೊಂದೂ ವಿಶೇಷಸಂಬಾಧವು ಇಲ್ಲ.

CC-0. Jangamwadi Math Collection. Digitized by eGangotri

ಬಂಗಾಳದ ಮಹಮ್ಮದೀಯರು ವಂಗಭಾಷೆಯನ್ನೂ ಪಂಜಾಬಿನ ಮಹಮ್ಮದೀಯರು ಪಂಜಾಬಿಯನ್ನೂ ಆಡುತ್ತಾರೆ. ಭಾರತವರ್ಷದಲ್ಲಿ ವಾಸಮಾಡುವ ಪಾರ್ಸಿಗಳು ತಮ್ಮ ಪೂರ್ವಜರ ಅಥವಾ ತಮ್ಮ ಮೂಲನಿವಾಸಸ್ಥಳದ ಫಾರ್ಸೀ ಭಾಷೆಯನ್ನಾಡದೆ, ಗುಜರಾತಿನಲ್ಲಿ ವಾಸಮಾಡುವವರು ಗುಜರಾತಿಯನ್ನೇ ಆಡುತ್ತಾರೆ. ಆದುದರಿಂದ ಭಾಷೆಯು ಒಂದು ಅರ್ಜಿತ ಸಂಪತ್ತಿಯಾಗಿದೆ—ಎಂದು ಹೇಳಬಹುದು.

## ಭಾಷೆಯಲ್ಲಿ ನಿರಂತರ ಪರಿವರ್ತನೆ.

ಯದ್ಯಪಿ ಕೇಳುವವರಿಗೆ ಈ ಮಾತು ಆಶ್ಚರ್ಯಜನಕವಾಗಿ ತೋರಬಹುದು. ಆದರೆ ಎಲ್ಲಾ ಭಾಷೆಗಳಲ್ಲಿ ನಿರಂತರಪರಿವರ್ತನೆಯು ಆಗುತ್ತದೆ. ಇಷ್ಟೇ ಅಲ್ಲ; ಕ್ರಮಶಃ ಒಂದು ಮುಖ್ಯ ಭಾಷೆಯಲ್ಲಿ ಆ ಭಾಷೆಯನ್ನಾಡುವವರ ಸಮುದಾಯವು ಎಷ್ಟಿದೆಯೋ ಪ್ರಾಯಃ ಅಷ್ಟೇ ವಿಭೇದಗಳಾಗುವವು. ಭಾಷಣದ ಅವಲಂಬನದಲ್ಲಿ ಪ್ರಾಕೃತಿಕ ತಥಾ ಮಾನಸಿಕಕ್ರಿಯೆಗಳುಂಟಾಗುವುವೆಂದೂ ಈ ಕ್ರಿಯೆಗಳು ಮನುಷ್ಯಮಾತ್ರದಲ್ಲಿ ಸರ್ವಥಾ ಒಂದೇ ಪ್ರಕಾರವಾಗಿರುವದು ಅಸಂಭವವೆಂದೂ ನಾವು ಅರಿತಿರುತ್ತೇವೆ. ಇದಲ್ಲದೆ ಭಾಷೆಯು ಒಂದು ಪ್ರಕಾರವಾದ ಅರ್ಜಿತಸಂಪತ್ತಿಯೆಂಬುದಾಗಿ ಮೊದಲೇ ನಾವು ಹೇಳಿರುತ್ತೇವೆ. ಇದರ ಅರ್ಜನೆಯಲ್ಲಿ ಕೆಲವು ಹಳೆಯ ತಥ್ಯಗಳು ಲುಪ್ತವಾಗುವವು; ಕೆಲವು ಹೊಸತಥ್ಯಗಳು ಆವಿರ್ಭವಿಸುವವು. ಏತಕ್ಕೆಂದರೆ— ಯಾವುದಾದರೊಂದು ಸಂಪತ್ತಿಯ ಅರ್ಜನೆಯು, ಅರ್ಜನೆಯನ್ನು ಮಾಡುವವನ ಯೋಗ್ಯತೆ ಹಾಗೂ ಸ್ಥಿತಿಯನ್ನು ಅವಲಂಬಿಸಿರುವುದು. ಇದೇ ಪ್ರಕಾರವಾಗಿ ಭಾಷೆಯ ಅರ್ಜನೆಯಲ್ಲಿಯೂ ಪ್ರತ್ಯೇಕ ಮನುಷ್ಯನ ಕೇಳುವ ಮತ್ತು ಮಾತಾಡುವ ಯೋಗ್ಯತೆ ಹಾಗೂ ಅವನ ಭೌಗೋಲಿಕ ಪರಿಸ್ಥಿತಿ – ಇವುಗಳ ಪ್ರಭಾವವು ಬೀಳುವುದು.

## ಮಾತು.

ಯಾವುದರಿಂದ ಒಂದು ಸಮುದಾಯದ ಮನುಷ್ಯರಿಂದು ಸುಲಭವಾಗಿ ತಿಳಿಯಲಾಗುವುದೋ ಯಾವುದರ ಮೂಲಕವಾಗಿ ಪರಸ್ಪರಭಾವ ಮತ್ತು ವಿಚಾರಗಳ ವಿನಿಮಯವು ಆಗುತ್ತಿರುವುದೋ ಅಂತಹ ಮಾತು ಒಂದು ವಿಶಿಷ್ಟಸಮುದಾಯದ ಭಾಷೆಯಾಗಿದೆ. ಯದ್ಯಪಿ ಪ್ರತ್ಯೇಕ ವ್ಯಕ್ತಿಯ ಭಾಷಣದಲ್ಲಿ ಯಾವುದಾದರೊಂದು ವಿಶೇಷವು ಇದ್ದೇ ಇರುವುದು. ಆದರೆ ಆ ವೈಶಿಷ್ಟ್ಯಗಳಿಂದ ಪ್ರತ್ಯೇಕ ವ್ಯಕ್ತಿಯ ಭಾಷಣವನ್ನು "ಮಾತು" ಎಂದು ಹೇಳಲಾಗುವುದಿಲ್ಲ. ಭಿನ್ನ ಭಿನ್ನ ಸಾಮಾಜಿಕ, ಧಾರ್ಮಿಕ, ರಾಜನೈತಿಕ, ಅಥವಾ ವ್ಯಾಪಾರಿಕ ಸಂಪ್ರದಾಯಗಳ ಮನುಷ್ಯರ ಪರಸ್ಪರವಾದ ಮುಖ್ಯಭಾಷೆಯಲ್ಲಿ ಯಾವ ವಿಭಿನ್ನತೆಯು ಉಂಟಾಗುವದೊ ಅದಕ್ಕೆ "ಮಾತು" ಎಂದೆನ್ನುವರು. ಒಬ್ಬ ಬ್ರಾಹ್ಮಣನು "ಏಕಾದಶಿ" ಶಬ್ದವನ್ನು ಪ್ರಯೋಗಿಸುವನು; ಸಾಧಾರಣ ಜನಸಮುದಾಯದಲ್ಲಿಯೂ "ಏಕಾದಶಿ" ಶಬ್ದವು ಪ್ರಯೋಗಿಸಲ್ಪಡುವುದು. ಆದರೆ ಅಶಿಕ್ಷಿತಜನರಲ್ಲಿ "ಇಕಾಸತಿ" ಶಬ್ದವು ನಡೆಯುವುದು. ಇದೇ ಪ್ರಕಾರವಾಗಿ "ಅಷ್ಟಮಿ"ಗೆ "ಅಸಟಮಿ" "ಆಸಟಿ" ಶಬ್ದವು ಪ್ರಯೋಗಿಸಲ್ಪಡುವುದು. ಈ ಶಬ್ದಗಳು ವಾಸ್ತವವಾಗಿ ಒಂದೇಯಾಗಿವೆ. ಆದರೆ ಭಿನ್ನ ಭಿನ್ನ ಶ್ರೇಣಿಯ ಮನುಷ್ಯರಲ್ಲಿ ಇವು ಭಿನ್ನ ಭಿನ್ನ ರೂಪವನ್ನು ಧಾರಣೆ ಮಾಡಿರುವುವು. ಸಂಪ್ರದಾಯಭೇದದಿಂದ ಒಂದೇ ಭಾವವನ್ನು ಬೋಧಿಸುವುದಕ್ಕೋಸ್ಕರ ಪ್ರತ್ಯೇಕ ಪ್ರತ್ಯೇಕವಾದ ಶಬ್ದಗಳು ಪ್ರಯೋಗಿಸಲ್ಪಡುವವು. ಸಾಧಾರಣ ಜನರು ಭೋಜನ ಅಥವಾ ಊಟ ಶಬ್ದದ ಪ್ರಯೋಗವನ್ನು ಮಾಡುವಲ್ಲಿ ವೈಷ್ಣವರು ಇದೇ ಭಾವವನ್ನು ಪ್ರಕಟಮಾಡುವುದಕ್ಕೋಸ್ಕರ ಪ್ರಸಾದತೆಗೆದುಕೊಳ್ಳುವುದೆಂಬ ಶಬ್ದವನ್ನು ಪ್ರಯೋಗಿಸುವರು. ಇದೇ ಪ್ರಕಾರವಾಗಿ ಉಪ್ಪಿಗೆ "*ರಾಮರಸ" ಹಾಗೂ ಹಳದಿಮಣ್ಣಿಗೆ "ರಾಮರಜ" ಮೊದಲಾದ ಶಬ್ದಗಳು ಪ್ರಯೋಗಿಸಲ್ಪಡುವುವು. ಶಿಕ್ಷಣೆ ಮತ್ತು ಶಿಷ್ಟತೆ ಇವು ಒಂದು ಕಡೆ ಭಾಷೆಯಲ್ಲಿ ವಿಭಿನ್ನತೆಯನ್ನೂ ಇನ್ನೊಂದು ಕಡೆ ರಾಷ್ಟ್ರೀಯಭಾವವನ್ನೂ ಉಂಟುಮಾಡಿ ಐಕ್ಯತೆಯನ್ನು ಸ್ಥಾಪಿಸುವುದರಲ್ಲಿ ಸಹಾಯಕವಾಗುವವು. ಒಬ್ಬ ಶಿಕ್ಷಿತ ಪುರುಷನು "ವ್ಯಕ್ತಿಗತ ಭಾವ" "ನಿಸರ್ಗಸಿದ್ಧ ಅಧಿಕಾರ" "ಪ್ರಾಕೃತಿಕ ಸೌಂದರ್ಯ" "ಸಾಮ್ಯವಾದ" ಆದಿ ಶಬ್ದಗಳ ಭಾವವನ್ನು ಎಷ್ಟು ಸುಲಭವಾಗಿ

* ಉತ್ತರ ಹಿಂದುಸ್ಥಾನದಲ್ಲಿ.

CC-0. Jangamwadi Math Collection. Digitized by eGangotri

ತಿಳಿಯಬಲ್ಲನೋ ಅಷ್ಟು ಸುಲಭವಾಗಿ ಅನ್ಯಜನರು ಅರಿಯ ಲಾರರು. ಆದರೆ ಈ ವಿಭೇದಗಳನ್ನು ವಿವೇಚನೆ ಮಾಡು ವಾಗ ಭಿನ್ನ ಭಿನ್ನ ಮಾತುಗಳ ಪ್ರವಾಹವು ಒಂದೇ ಮೂಲ ಭಾಷೆಯಲ್ಲಿರುವುದೆಂಬುದು ಸ್ಪಷ್ಟವಾಗುವುದು. ಆದರಿಂದಲೇ ಭಿನ್ನ ಭಿನ್ನ ಮಾತುಗಳು ಅಥವಾ ದೇಶ ಭಾಷೆಗಳು ಕ್ರಮಶಃ ಪರಿವರ್ತನೆಯನ್ನು ಹೊಂದಿ ಹೊರಡುತ್ತವೆ. "ನಾವು" ಎಂಬುದರ ಭಾವವನ್ನು ಪ್ರಕಟ ಮಾಡುವುದಕ್ಕೋಸ್ಕರ ಮರಾಠಿಯಲ್ಲಿ 'ಆಮ್ಹೀ' ಗುಜರಾತಿಯಲ್ಲಿ "ಅಹ್ಮೆ" ಬಂಗಾಳಿಯಲ್ಲಿ "ಆಮಿ" ಹಿಂದಿಯಲ್ಲಿ "ಹಮ್" ಶಬ್ದವು ಪ್ರಯೋಗಿಸಲ್ಪಡುವುದು. ಪರಂತು ಶೋಧನೆ ಮಾಡುವುದರಿಂದ ಈ ಎಲ್ಲ ಶಬ್ದಗಳೂ ಸಂಸ್ಕೃತದ "ಅಸ್ಮದ್" ಶಬ್ದದಿಂದ ಹೊರಟಿವೆಯೆಂದು ಗೊತ್ತಾಗುವುದು. ಇದೇ ಪ್ರಕಾರವಾಗಿ ಸಹೋದರಿ ಗೋಸ್ಕರ ಹಿಂದಿಯಲ್ಲಿ "ಬಹಿನ್" ಮರಾಠಿಯಲ್ಲಿ "ಬಹೀಣ" ಗುಜರಾತಿಯಲ್ಲಿ "ಬೆಹೇಣ" ಪಂಜಾಬಿ ಯಲ್ಲಿ "ಭೈಣ" ಶಬ್ದವು ಪ್ರಯೋಗಿಸಲ್ಪಡುವುದು. ಈ ಎಲ್ಲಾ ಶಬ್ದಗಳು ಸಂಸ್ಕೃತದ 'ಭಗಿನೀ' ಶಬ್ದ ದಿಂದ ಹೊರಟಿವೆ. ಅತಏವ ಈ ಪ್ರತ್ಯಕ್ಷ ವಿಭಿನ್ನತೆಯ ಲ್ಲಿಯೂ ಅಗೋಚರರೂಪದಿಂದ ಏಕತೆಯು ಅಡಗಿರು ವುದೆಂದು ಪ್ರಕಟವಾಗುವುದು. ಅರ್ಥಾತ್–ಭಾರತ ವರ್ಷದಲ್ಲಿ ಭಿನ್ನ ಭಿನ್ನ ಭಾಷೆಗಳನ್ನಾಡುವವರು ಯದ್ಯಪಿ ವರ್ತಮಾನಸಮಯದಲ್ಲಿ ಒಬ್ಬರು ಇನ್ನೊಬ್ಬರಿಂದ ಸರ್ವಥಾ ಭಿನ್ನರಾಗಿಯೇ ತಿಳಿದು ಬರುತ್ತಾರೆ; ಆದರೆ ವಾಸ್ತವವಾಗಿ ಭಾಷೆಗಳು ಒಂದೇ ಮೂಲಪ್ರವಾಹದಿಂದ ಹೊರಟಿವೆ. ಈ ಮೂಲಭಾಷೆಯು ಸಂಸ್ಕೃತವಾಗಿದೆ.

## ಮೂಲಭಾಷೆಗಳು.

ಪರಂತು ಇಷ್ಟರಲ್ಲಿಯೇ ಈ ಅನುಸಂಧಾನವು ಸಮಾ ಪ್ತವಾಗುವುದಿಲ್ಲ. ಯಾವಾಗ ನಾವು ಕೆಲ ವೊಂದು ಭಾಷೆಗಳ ಪರಸ್ಪರತುಲನೆಯನ್ನು ಮಾಡು ತ್ತೇವೆಯೋ ಆಗ ನಮಗೆ ಅವುಗಳಲ್ಲಿ ಬಹಳವಾಗಿ ಸಮಾ ನತೆಯು ಪ್ರತ್ಯಕ್ಷವಾಗುವುದು. ಈ ಸಮಾನತೆಯ ಆಧಾರ ದಿಂದಲೇ ನಾವು ಭಾಷೆಗಳ ಸಮುದಾಯವನ್ನು ಕಂಡು ಹಿಡಿಯುತ್ತೇವೆ. ಸಂಸ್ಕೃತದ ಪಿತೃ ಶಬ್ದವು ಲ್ಯಾಟಿನ್ ಭಾಷೆಯಲ್ಲಿ (Pater), ಯೂನಾನಿಯಲ್ಲಿ (Peter), ಜರ್ಮ ನಿಯಲ್ಲಿ (Vater), ಹಳೆ ಇಂಗ್ಲಿಷಿನಲ್ಲಿ (Foeder), ಮತ್ತು ಆಧುನಿಕ ಇಂಗ್ಲಿಷಿನಲ್ಲಿ (Father) ರೂಪದಲ್ಲಿ ಸಿಗು ವುದು. ಇದೇ ಪ್ರಕಾರವಾಗಿ ಮಾತೃಶಬ್ದವು ಕ್ರಮಶಃ Mather, Meter, Matter, Modor ಮತ್ತು Mother ಭಾತೃಶಬ್ದವು Frater, Fhrater, Bruder, ಮತ್ತು Brothor, Brother ರೂಪದಲ್ಲಿರುವದು. ಇದೇ ಶಬ್ದವು ಪಾರ್ಸಿಯಲ್ಲಿ ಪಿದರ್, ಮಾದರ್ ಮತ್ತು ಬಿರಾದರ್ ರೂಪದಲ್ಲಿ ಸಿಗುವವು. ಅಂತಹ ಶಬ್ದಗಳನ್ನು ಕಂಡು ಹಾಗೆಯೆ ಭಿನ್ನ ಭಿನ್ನ ಸಜಾತೀಯ ಭಾಷೆಗಳ ವ್ಯಾಕರಣ ಸಂಬಂಧದ ಸಂಘಟನೆಯ ವಿವೇಚನೆಯನ್ನು ಮಾಡಿ ಯಾವ ಭಾಷೆಗಳು ಹಲವು ಮಾತುಗಳಲ್ಲಿ ಪರಸ್ಪರ ಸಮಾನವಾಗಿರುವವೋ ಅವು ಒಂದೇ ಮೂಲಭಾಷೆ ಯಿಂದ ಹೊರಟಿವೆಯೆಂಬ ಸಿದ್ಧಾಂತವನ್ನು ಸ್ಥಿರಮಾಡು ವುದು ಅನಿವಾರ್ಯವಾಗಿದೆ. ಅಥವಾ ಈ ಭಾಷೆಗಳು ಸಜಾತೀಯಗಳೆಂದು ಹೇಳಬಹುದು. ಅಂತಹ ಸಜಾ ತೀಯಭಾಷೆಗಳ ಸಮುದಾಯಗಳು ಹಲವಿರುವವು. ಅವಾವುವೆಂದರೆ:– ಆರ್ಯಭಾಷೆಗಳು, ಧಾತವಿಕಭಾಷೆ ಗಳು, ದ್ರಾವಿಡಭಾಷೆಗಳು, ತೂರಾನಿಭಾಷೆಗಳು, ಸೆಮೆ ಟಿಕ್ ಭಾಷೆಗಳು, ಹೆಮೆಟಿಕ್ ಭಾಷೆಗಳು ಮತ್ತು ಮಾಲಯ ಪಾಲೀನೀಶಿಯನ್ ಭಾಷೆಗಳು.

## ಆರ್ಯರ ಆದಿಮನಿವಾಸಸ್ಥಾನ.

ನಮ್ಮ ಸಂಬಂಧವು ಆರ್ಯಭಾಷೆಯೊಡನಿರುವುದ ರಿಂದ ಆರ್ಯಭಾಷೆಗಳ ಮೂಲಭಾಷೆಯನ್ನಾಡುತ್ತಿದ್ದ ವರು ಯಾರು? ಅವರು ಎಲ್ಲಿ ಇರುತ್ತಿದ್ದರು? ಅವರಲ್ಲಿ ಪರಸ್ಪರ ವಿಯೋಗ ಉಂಟಾದುದೇಕೆ? ಪ್ರಕೃತ ಅವರ ಭಾಷೆಯ ಮುಖ್ಯ ಮುಖ್ಯ ಶಾಖೆಗಳಾವುವು? ಎಂಬಿತ್ಯಾ ದಿಗಳನ್ನು ತಿಳಿಯಬೇಕು. ಆರ್ಯರ ಆದಿಮ ನಿವಾಸ ಸ್ಥಾನದ ವಿಷಯದಲ್ಲಿ ವಿದ್ವಾಂಸರಲ್ಲಿ ಅನೇಕ ಮತ ಭೇದಗಳಿರುವುವು. ಆದರೆ ಈಚೆಯ ಸಂಶೋಧನದಿಂದ ಆರ್ಯರು ಏಶಿಯಾ ಮತ್ತು ಯೂರೋಪಿನ ಎಲ್ಲೆಯ ಮಧ್ಯವರ್ತಿಮೈದಾನುಗಳಲ್ಲಿ ವಾಸಮಾಡುತ್ತಿದ್ದರೆಂದೂ ಆ ಮೈದಾನುಗಳು ರೂಸಿನ ದಕ್ಷಿಣದಲ್ಲಿವೆಯೆಂದೂ ತಿಳಿದು ಬಂದಿದೆ.

## ಆರ್ಯರ ಮೂಲಭಾಷೆ.

ತಮ್ಮ ಆದಿಮ ನಿವಾಸಸ್ಥಾನದಿಂದ ಪ್ರಯಾಣವನ್ನು ಬೆಳಸಿದ ಆರ್ಯರ ಪೂರ್ವಶಾಖೆಯೊಡನೆ ಸಂಸ್ಕೃತ ಮತ್ತು

CC-0. Jangamwadi Math Collection. Digitized by eGangotri

ಇರಾನೀ ಇವುಗಳ ಸಂಬಂಧವೂ ಪಶ್ಚಿಮಶಾಖೆಯೊಡನೆ ಆರ್ಮೇನಿಯನ್, ಯೂನಾನಿ, ಆಲ್ಬೇನಿಯನ್, ಇಟಾಲಿಯನ್, ಕೆಲ್ಟಿಕ್, ಜರ್ಮನ್, ಸ್ಲಾವ್ಹಿಕ್ ಮತ್ತು ತುಖಾರಿಯನ್ ಈ ಭಾಷೆಗಳ ಸಂಬಂಧವೂ ಇರುವುದು. ಭಾರತವರ್ಷಕ್ಕೆ ಬಂದ ಆರ್ಯರ ಪ್ರಾಚೀನಭಾಷೆಯು ವೈದಿಕ ಸಂಸ್ಕೃತವಾಗಿತ್ತು. ಇದೇ ಭಾಷೆಯಲ್ಲಿ ವೇದಗಳ ಅಧಿಕಾಂಶಭಾಗವು ರಚಿಸಲ್ಪಟ್ಟಿತು. ಪ್ರಾಚೀನ ವೈಯಾಕರಣಿಗಳು ವೈದಿಕ ಮತ್ತು ಲೌಕಿಕ ಈ ಎರಡು ಪ್ರಕಾರದ ಭಾಷೆಗಳನ್ನು ಒಪ್ಪಿ ಪ್ರತಿಯೊಂದರ ನಿಯಮವನ್ನು ಪ್ರತ್ಯೇಕ ಪ್ರತ್ಯೇಕವಾಗಿ ಹೇಳಿರುತ್ತಾರೆ. ಇವುಗಳಲ್ಲಿ ಪರಸ್ಪರ ಅಧಿಕ ಅಂತರವಿರುವುದು. ಅಶೋಕನ ಧರ್ಮಲಿಪಿ ಮತ್ತು ಪತಂಜಲಿಯ ವ್ಯಾಕರಣ ಇವುಗಳಿಂದ ಕ್ರಿ. ಪೂ. ಮುನ್ನೂರು ವರ್ಷಗಳ ಮೊದಲು ಉತ್ತರಭಾರತದಲ್ಲಿ ಹಲವು ಮಾತುಗಳ ಸಮ್ಮೇಲನದಿಂದ ಹುಟ್ಟಿದ ಒಂದು ಭಾಷೆಯು ಪ್ರಚಲಿತವಾಗಿತ್ತೆಂದು ತಿಳಿದು ಬರುತ್ತದೆ. ಸ್ತ್ರೀಯರು, ಬಾಲಕರು ಮತ್ತು ಸಾಧಾರಣ ಜನರು ಇವರಿಂದ ಆರ್ಯಭಾಷೆಯ ಶಬ್ದಗಳ ಉಚ್ಚಾರಣೆಯು ಸರಿಯಾಗಿ ಆಗುತ್ತಿರಲಿಲ್ಲ. ಅತಃ ಈ ಭಾಷೆಯು ಜನ್ಮವನ್ನೆತ್ತಿತು. ಮತ್ತು ಇದು ಪ್ರಾಕೃತವೆಂಬ ಹೆಸರಿನಿಂದ ವಿಖ್ಯಾತವಾಯಿತು. ವೇದಗಳಲ್ಲಿ "ಗಾಥೆ" ಯ ಹೆಸರಿನಿಂದಿರುವ ಛಂದಗಳ ಭಾಷೆಯು ಪ್ರಾಚೀನ ಸಂಸ್ಕೃತದಿಂದ ಭಿನ್ನವಾಗಿದೆ. ಇದರಿಂದ ವೇದಗಳ ಸಮಯದಲ್ಲಿಯೂ ಸರ್ವಸಾಧಾರಣವಾಗಿ ಆಡುವ ಮಾತು ಪ್ರತ್ಯೇಕವಾಗಿತ್ತೆಂದು ಸಿದ್ಧವಾಗುತ್ತದೆ. ವಿದ್ವಾಂಸರು ವೈದಿಕಕಾಲಸಂಬಂಧಿ ಭಾಷೆಗೆ ಮೊದಲನೆಯ ಪ್ರಾಕೃತವೆಂದೂ ಅಶೋಕನ ಲೇಖ ಮೊದಲಾದುವುಗಳಲ್ಲಿರುವ ಭಾಷೆಗೆ ಎರಡನೆಯ ಪಾಕೃತವೆಂದೂ ಹೆಸರಿಟ್ಟಿರುವರು. ಇದಕ್ಕೆ "ಪಾಲಿ" ಎಂದೂ ಹೆಸರಿರುವುದು. ಮೊದಲನೆಯ ಪ್ರಾಕೃತದ ಪ್ರಚಾರದ ಹಲವು ಶತಮಾನಗಳ ಹಿಂದೆ ಎರಡನೆಯ ಪ್ರಾಕೃತವು ಆವಿರ್ಭವಿಸಿರಬೇಕು. ವೈದಿಕಕಾಲದ ವಿದ್ವಾಂಸರು ತಮ್ಮ ಆರ್ಯವೈದಿಕ ಭಾಷೆಯನ್ನು ವ್ಯವಹಾರದಲ್ಲಿರುವ ಭಾಷೆಯಿಂದ ರಕ್ಷಿಸುವುದಕ್ಕೋಸ್ಕರ ವ್ಯಾಕರಣಗಳನ್ನು ರಚಿಸಿ ತಮ್ಮ ಸಂಸ್ಕಾರಯುಕ್ತ ಭಾಷೆಗೆ ಸಂಸ್ಕೃತವೆಂದು ಹೆಸರಿಟ್ಟರು. ಈ ಸಂಸ್ಕೃತವೂ ಪ್ರಥಮಪ್ರಾಕೃತದ [illegible] ಒಂದು ಶಾಖೆಯಿಂದ ಶುದ್ಧವಾಗಿ ಉತ್ಪನ್ನವಾಯಿತು. ಮೊದಲನೆಯ ಪ್ರಾಕೃತದಲ್ಲಿ ವ್ಯಂಜನಗಳ ಪ್ರಯೋಗವು ಅಧಿಕವಾಗಿದ್ದುದರಿಂದ ಕರ್ಣಕಟುತ್ವವು ಅಧಿಕವಾಗಿತ್ತು. ಅತಃ ಎರಡನೆಯ ಪ್ರಾಕೃತವು ಕರ್ಣಕಟು ವ್ಯಂಜನಗಳ ಸ್ಥಾನದಲ್ಲಿ ಸ್ವರಗಳನ್ನು ಪ್ರಯೋಗಿಸಿ ಮಧುರತೆಯನ್ನು ತಂದಿತು. ಎರಡನೆಯ ಪ್ರಾಕೃತ ಅಥವಾ ಪಾಲಿಯಲ್ಲಿ ಕ್ರಮಶಃ ಹಲವು ಶಾಖೆಗಳು ಹುಟ್ಟಿದುವು. ಅವುಗಳಲ್ಲಿ ಮಾಗಧಿ, ಶೌರಶೇನಿ ಮತ್ತು ಮಹಾರಾಷ್ಟ್ರಿ ಇವು ಮುಖ್ಯವಾದುವು. ಮಾಗಧಿಯ ಪ್ರಚಾರವು ಮಗಧ ಅಥವಾ ಬಿಹಾರಿನಲ್ಲಿತ್ತು; ಶೌರಸೇನಿಯು ಸಂಯುಕ್ತ ಪ್ರದೇಶದ ಮಧ್ಯದಲ್ಲಿತ್ತು. ಮತ್ತು ಮಹಾರಾಷ್ಟ್ರಿಯ ಪ್ರಚಾರವು ಮಹಾರಾಷ್ಟ್ರ ಮೊದಲಾದ ಪ್ರಾಂತಗಳಲ್ಲಿತ್ತು. ಮಾಗಧಿ ಮತ್ತು ಶೌರಸೇನಿಯ ಸಮ್ಮಿಶ್ರಣದಿಂದ ಹುಟ್ಟಿದ ಭಾಷೆಗೆ ಅರ್ಧಮಾಗಧಿಯೆಂದು ಹೆಸರಾಯಿತು. ಕ್ರಮಶಃ ಪ್ರಾಕೃತಗಳೂ ಸಂಸ್ಕೃತದಂತೆ ಸಾಹಿತ್ಯದ ರೂಪವನ್ನು ಧರಿಸಿ ವ್ಯಾವಹಾರಿಕಭಾಷೆಯಿಂದ ಭಿನ್ನವಾಗತೊಡಗಿದುವು. ಈ ವ್ಯಾವಹಾರಿಕಭಾಷೆಯು ಈಗ ಅಪಭ್ರಂಶವೆಂಬ ಹೆಸರಿನಿಂದ ಅಭಿಹಿತವಾಗಲಾರಂಭಿಸಿತು. ಭಿನ್ನಭಿನ್ನ ಪ್ರಾಂತದಲ್ಲಿ ಭಿನ್ನಭಿನ್ನ ಅಪಭ್ರಂಶವು ಪ್ರಚಾರದಲ್ಲಿತ್ತೆಂದು ವಿದ್ವಾಂಸರಮತವಾಗಿದೆ. ಯಾವಾಗ ಈ ಅಪಭ್ರಂಶದಲ್ಲಿಯೂ ಕಾವ್ಯಗಳ ರಚನೆಯು ಪ್ರಾರಂಭವಾಯಿತೋ ಆಗ, ಆಧುನಿಕ ದೇಶಭಾಷೆಗಳ ವಿಕಾಸವು ಆರಂಭವಾಯಿತು. ಅಪಭ್ರಂಶಭಾಷೆಯ ನಿಶ್ಚಿತಸಮಯವು ಇದು ವರೆಗೆ ತಿಳಿಯದಿದ್ದರೂ ಕ್ರಿ. ಶ. ಹನ್ನೊಂದನೆಯ ಶತಮಾನದ ವರೆಗೆ, ಅಪಭ್ರಂಶಭಾಷೆಗಳಲ್ಲಿ ಕವಿತೆಯ ರಚನೆಯಾಗುತ್ತಿದ್ದಿತೆಂದು ಪ್ರಮಾಣಗಳಿಂದ ಸಿದ್ಧವಾಗುವುದು. ಪ್ರಾಕೃತಭಾಷೆಯ ಅಂತಿಮ ವೈಯಾಕರಣಿಯಾದ ಹೇಮಚಂದ್ರನು ಹನ್ನೆರಡನೆಯ ಶತಮಾನದಲ್ಲಿದ್ದನು. ಅವನು ತನ್ನ ವ್ಯಾಕರಣದಲ್ಲಿ ಅಪಭ್ರಂಶಗಳ ಮಾದರಿಯನ್ನು ಕೊಟ್ಟಿರುವನು. ಅದೇ ಸಮಯದಿಂದ ಅಥವಾ ಅದರಿಂದ ಸ್ವಲ್ಪ ಹಿಂದೆ ಅಪಭ್ರಂಶಗಳಲ್ಲಿ ಸಂಯೋಗಾತ್ಮಕವು ನಷ್ಟವಾಗಿ, ವಿಯೋಗಾತ್ಮಕವು ಆದರ ಸ್ಥಾನವನ್ನು ಗ್ರಹಣಮಾಡುತ್ತಿತ್ತೆಂದು ತಿಳಿದುಬರುತ್ತದೆ. ಉಲ್ಲಿಖಿತ ಆ ಅಪಭ್ರಂಶಗಳಿಂದಲೇ, ಮುಂದೆ ಆಧುನಿಕ ಭಾರತೀಯ ಭಾಷೆಗಳ ಜನ್ಮ ಹಾಗೂ ವಿಕಾಸವು ಆದುವು.


Jangamwadi Math Collection. Digitized by eGangotri

ಆರ್ಯಭಾಷೆಯ ಪೂರ್ವಶಾಖೆಯ ಎರಡನೆಯ ಪ್ರಧಾನ ಭಾಷೆಯು ಈರಾನಿಯಾಗಿದೆ. ಆರ್ಯರ ಪೌರ್ವಿಯ ಶಾಖೆಯಲ್ಲಿ, ಆರಂಭದಲ್ಲಿ ಯಾವ ಭೇದವೂ ಇರಲಿಲ್ಲ. ಪರಂತು ಕ್ರಮಶಃ ಈರಾನಿ ಭಾಷೆಯಲ್ಲಿ ಮೂರು ರೂಪಗಳಾದುವು:- ಪ್ರಾಚೀನ ಈರಾನಿ ಅಥವಾ ಜಂದಭಾಷೆ, ಪಲ್ಲವಿ ಮತ್ತು ಪಾರ್ಸಿ.

### ವೈದಿಕಭಾಷೆ ಮತ್ತು ಸಂಸ್ಕೃತ.

ಆರ್ಯರ ಪ್ರಾಚೀನಭಾಷೆಯನ್ನು ನಾವು ವೈದಿಕ ಮತ್ತು ಸಂಸ್ಕೃತ-ಈ ಎರಡು ಮುಖ್ಯ ಭಾಗಗಳಲ್ಲಿ ವಿಭಾಗಿಸಬಲ್ಲೆವು. ವೈದಿಕಭಾಷೆಯ ಮಾದರಿಯು ನಮಗೆ ಪ್ರಥಮತಃ ಋಗ್ವೇದದ ಸಂಹಿತೆಗಳಲ್ಲಿ,ಹಾಗೂ ಮುಂದೆ ಬ್ರಾಹ್ಮಣಗ್ರಂಥಗಳಲ್ಲಿ ಏವಂ ಸೂತ್ರಗಳಲ್ಲಿ ಸಿಗುವುದು. ಇದೇ ಭಾಷೆಯ ವಿಕಾಸದಿಂದ ಹಿಂದೆ ಸಂಸ್ಕೃತವು ಹುಟ್ಟಿತು. ವೈದಿಕಭಾಷೆಯು ವ್ಯಾವಹಾರಿಕ ಭಾಷೆಯಾಗಿತ್ತೆಂದೂ, ಅದು ಯಾವಾಗ ಶುದ್ಧಸಾಹಿತ್ಯದ ರೂಪವನ್ನು ಹೊಂದಿತೊ ಆಗ ಸಂಸ್ಕೃತವೆಂಬ ಹೆಸರಿನಿಂದ ಕರೆಯಲ್ಪಟ್ಟಿತೆಂದೂ, ಕೆಲವು ವಿದ್ವಾಂಸರ ಮತವಾಗಿದೆ. ವೈದಿಕಕಾಲದಲ್ಲಿದ್ದ ವ್ಯಾವಹಾರಿಕ ಭಾಷೆಗಳಲ್ಲಿ ಒಂದು ಪ್ರಧಾನಭಾಷೆಯನ್ನು ತೆಗೆದುಕೊಂಡು ವೇದಮಂತ್ರಗಳು ರಚಿಸಲ್ಪಟ್ಟುವೆಂದು, ಇನ್ನೂ ಕೆಲವು ವಿದ್ವಾಂಸರ ಮತವಾಗಿದೆ.

### ಪ್ರಾಕೃತ.

ನಾನು ಹಿಂದೆ ಹೇಳಿದಂತೆ ಸಾಮಾನ್ಯಜನರ ವ್ಯಾವಹಾರಿಕಭಾಷೆಯು ಪ್ರಾಕೃತವಾಗಿತ್ತು. ವ್ಯಾವಹಾರಿಕ ಸರ್ವ ಪ್ರಾಚೀನಭಾಷೆಯ ಆಧಾರದ ಮೇಲೆಯೇ ವೇದಮಂತ್ರಗಳು ರಚಿಸಲ್ಪಟ್ಟುವು. ಅದರ ಪ್ರಚಾರವು ಬ್ರಾಹ್ಮಣ ಮತ್ತು ಸೂತ್ರಗ್ರಂಥಗಳ ವರೆಗಿತ್ತು. ಹಿಂದೆ ಅದು ಪರಿಮಾರ್ಜಿತವಾಗಿ ಸಂಸ್ಕೃತರೂಪದಲ್ಲಿ ಪ್ರಯೋಗಿಸಲ್ಪಟ್ಟಿತು. ಇದರೊಡನೆಯೇ ವ್ಯಾವಹಾರಿಕ ಭಾಷೆಯ ಅಸ್ತಿತ್ವವು ನಷ್ಟವಾಗಿರಲಿಲ್ಲ. ಆದರೆ ವರ್ತಮಾನಸಮಯದಲ್ಲಿ ನಮಗೆ ಅದರ ಪ್ರಾಚೀನತಮ ಉದಾಹರಣೆಯು ಉಪಲಬ್ಧವಾಗುವುದಿಲ್ಲ. ಆದರೆ ಅದರ ತೀರ ಪ್ರಾಚೀನ ರೂಪವು ಈಗ ನಮಗೆ ಅಶೋಕನ ಧರ್ಮಲೇಖದಲ್ಲಿ ಹಾಗೂ ಪ್ರಾಚೀನ ಬೌದ್ಧ ಮತ್ತು ಜೈನ ಗ್ರಂಥಗಳಲ್ಲಿ ಸಿಕ್ಕುವುದು. ಇದನ್ನು ಪ್ರಾಕೃತದ ಪ್ರಥಮರೂಪವನ್ನಾಗಿ ಹೇಳುವುದಕ್ಕೆ ಅಡ್ಡಿಯೇನೂ ತೋರುವುದಿಲ್ಲ. ಆ ರೂಪಕ್ಕೆ [illegible] ಭಿನ್ನವಾಗಿದೆ.

"ಪಾಲಿ"ಯೆಂದೂ ಹೆಸರಿರುವುದು. ತದನಂತರ ಮಧ್ಯಕಾಲದ ಪ್ರಾಕೃತ ಮತ್ತು ಅಂತ್ಯದಲ್ಲಿ ಉತ್ತರ ಕಾಲದ ಪ್ರಾಕೃತ ಅಥವಾ ಅಪಭ್ರಂಶದ ಸಮಯವು ಬರುವುದು. ಈ ಉತ್ತರಕಾಲದ ಪ್ರಾಕೃತ ಅಥವಾ ಅಪಭ್ರಂಶದ ಅನಂತರ ಆಧುನಿಕದೇಶಭಾಷೆಗಳು ಹುಟ್ಟಿದುವು. ಪ್ರಾಕೃತಶಬ್ದದ ಅರ್ಥವು ಪ್ರಕೃತಿಯಿಂದ ಹುಟ್ಟಿದ್ದು ಎಂದಾಗುವುದು.

### ಮೊದಲನೆಯ ಪ್ರಾಕೃತ ಅಥವಾ ಪಾಲಿ.

ಮೊದಲನೆಯ ಪ್ರಾಕೃತ ಅಥವಾ ಪಾಲಿ ಭಾಷೆಯ ಉದಾಹರಣೆಯು ನಮಗೆ ಪ್ರಾಚೀನ ಬೌದ್ಧ ಮತ್ತು ಜೈನ ಗ್ರಂಥಗಳಲ್ಲಿಯೂ ಶಿಲಾಲೇಖಗಳಲ್ಲಿಯೂ ಸಿಕ್ಕುವುದು. ಶಿಲಾಲೇಖಗಳಲ್ಲಿ ಅಶೋಕನ ಲೇಖಗಳು ಅಧಿಕ ಮಹತ್ತ್ವವುಳ್ಳವುಗಳು. ಈ ಲೇಖಗಳು ಖರೋಷ್ಟ್ರಿ ಮತ್ತು ಬ್ರಾಹ್ಮಿ ಈ ಎರಡು ಲಿಪಿಗಳಲ್ಲಿ ಬರೆಯಲ್ಪಟ್ಟಿರುವವು. ಈ ಎಲ್ಲಾ ಲೇಖಗಳ ವಿವೇಚನೆಯಿಂದ ಅಶೋಕನ ಸಮಯದಲ್ಲಿ ತೀರ ಕಡಿಮೆಯೆಂದರೆ ನಾಲ್ಕು ಭಾಷೆಗಳು ಪ್ರಚಲಿತವಾಗಿದ್ದುವೆಂದು ಸ್ಪಷ್ಟವಾಗುವುದು. ಅವುಗಳಲ್ಲಿ ಮಗಧದ ಪಾಲಿಯೇ ಎಲ್ಲವಕ್ಕಿಂತ ಮುಖ್ಯವಾಗಿತ್ತು. ಪ್ರಾಯಃ ಇದರಲ್ಲಿಯೇ ಮೊಟ್ಟಮೊದಲು ಲೇಖವು ಬರೆಯಲ್ಪಟ್ಟಿತು. ಪ್ರಾಕೃತ ವೈಯಾಕರಣಿಗಳು ಮಹಾರಾಷ್ಟ್ರದ ವಿಷಯದಲ್ಲಿ ವಿಶೇಷರೂಪವಾಗಿ ಬರೆದಿರುತ್ತಾರೆ. ಅವರು ಎರಡನೆಯ ಪ್ರಾಕೃತಗಳ ವಿಶೇಷನಿಯಮಗಳನ್ನು ಕೊಟ್ಟು ಉಳಿದ ಎಲ್ಲಾ ಭಾಷೆಗಳು ಮಹಾರಾಷ್ಟ್ರದ ಹಾಗೆ ಇವೆಯೆಂದು ಬರೆದಿರುತ್ತಾರೆ. ಪ್ರಾಕೃತದ ಅಧಿಕಾಂಶಸಾಹಿತ್ಯವು ಮಹಾರಾಷ್ಟ್ರಿಯಲ್ಲಿದೆ. ಶೌರಸೇನಿಯು ಮಧ್ಯದೇಶದ ಪ್ರಾಕೃತವಾಗಿದೆ. ಅದು ಶೂರಸೇನದೇಶ (ಆಧುನಿಕವ್ರಜಮಂಡಲ) ದಲ್ಲಿ ಪ್ರಚಾರದಲ್ಲಿತ್ತು. ಇದರಿಂದಲೇ ಅದು ಶೌರಸೇನಿಯೆಂದು ಕರೆಯಲ್ಪಟ್ಟಿತು. ಮಾಗಧಿಯ ಪ್ರಚಾರವು ಮಗಧ (ಆಧುನಿಕ ಬಿಹಾರ) ದಲ್ಲಿತ್ತು. ಶೌರಸೇನಿ ಮತ್ತು ಮಾಗಧಿಯ ಮಿಶ್ರಣದಿಂದ ಅರ್ಧಮಾಗಧಿಯು ಹುಟ್ಟಿತೆಂದು ಹೇಳುತ್ತಾರೆ. ಪರಂತು ವಾಸ್ತವವಾಗಿ ಹಾಗಿಲ್ಲ. ಅದು ಅನೇಕ ಅಂಶಗಳಲ್ಲಿ ಮಾಗಧಿ ಮತ್ತು ಮಹಾರಾಷ್ಟ್ರಿ ಇವುಗಳೊಡನೆ ಹೋಲುವುದು. ಪರಂತು ಕೆಲವಂಶಗಳಲ್ಲಿ ಇವುಗಳಿಂದ ಭಿನ್ನವೂ ಆಗಿದೆ. ಆದರೆ ಶೌರಸೇನಿಯಿಂದ ಅದು ಅಧಿಕ

(ಮುಂದುವರಿಯುವುದು.)

CC-0. Jangamwadi Math Collection. Digitized by eGangotri

# ಕರುಳಿನ ಕೊರಗು

( ಆನಂದಕಂದ )

ರಾಗ ಯಮನ್

೧

ಮನವು ನಿಸಗಾಗಿಯೇ ಮೊರೆಯುತಿದೆಯೇ– ಚಿನ್ನ !
ನೆನಹು ನಿಡುಸುಯಿಲುಗಳ ಕರೆಯುತಿದೆಯೆ.
ಕನಸು ನಿನ್ನದೆ ಚಿತ್ರ ಬರೆಯುತಿದೆಯೇ– ನಿನ್ನ
ಇನಿದುದನಿ ಕಿವಿಗಳನು ಕೊರೆಯುತಿದೆಯೆ.

೨

ತೆಳುದುಟಿಯ ತಿಳಿಜೊಲ್ಲು, ಬಿಳಿಯ ಮೊಳೆವಲ್ಲು– ಆ
ಎಳಗಲ್ಲಗಳ ಚೆಲ್ಲು, ಮೆಲುನಗೆಯ ಸೊಲ್ಲು,
ಎಳೆಯುತ್ತಲಿಹವು ನನ್ನೊಳಗ ನಿನ್ನೊಡನೆಯೇ
ಎಳಗೂಸೆ! ನಿನ್ನೆದುರು ನನ್ನ ಬಲ ಹುಲ್ಲು.

೩

ಕೆಳೆಯ ಬಳ್ಳಿಯ ಮೊಳೆಯು ನೀನೆಂದು ಇದ್ದೆ; – ಕಂ-
ಮಲರು ತನಿವಣ್ಣುಗಳ ಬೆಳೆವೆನೆಂದಿದ್ದೆ.
ಅಳಿಯಾಶೆಯಲಿ ಕಾಲ ಸೆಳೆದೊಯ್ಯೆ ತನಗೆಂದು
ಅಳಿದು ಕೆಳೆಯಾಶೆ ಕಳವಳದಿ ಬಿದ್ದೆ.

೪

ಸಾಕಾಯಿತೇನೆ ಸವಿಸವಿಯ ಕೂಳು– ನಿನಗೆ
ಬೇಕಾಯಿತೇನೆ ಕಣ್ಣೀರ ಕಾಳು ?
ಸಕ್ಕರೆಯ ತನಿವಾಲನೊಕ್ಕರಿಸಿ ನವಳುಪ್ಪ –
ನಿಕ್ಕಿರುವ ನೀರ ಬಯಸುವರೆ– ಹೇಳು !

೫

ಆಗಸದ ತೊಟ್ಟಿಲಲಿ ತೂಗಾಡಲೆಂದು– ನೀ
ಹೋಗಿರುವೆಯೆನುತ ಬಗೆ ಹೇಳುತಿಹುದು.
ತೂಗುತೊಟ್ಟಿಲ ಹಗ್ಗವಾಗಬೇಕೆಂದು– ತಾ-
ನೇಗಲೂ ಕರುಳು ಹುರಿಗೊಳ್ಳುತಿಹುದು.

೬

ಎಂದಿನಂದದ ನಗೆಯ ಚೆಂದವೊಗದಿಂದ– ನೀ
ಬಂದು ಕುಳಿತಿರಲು ತೊಡೆಯಲ್ಲಿ ಕಂದ!
ಒಂದು ಸವಿಮುತ್ತಿಡುವೆನೆಂದಿರಲು ಎಚ್ಚತ್ತು
ಕಂದೆರೆಯಲರಿತೆ ಹಾಳ್‌ಗನಸಿನಂದ.

೭

ಎನಿತೊ ಮುತ್ತಿಟ್ಟಿದ್ದೆ ನಲಿವ ಪಟ್ಟಿದ್ದೆ– ಮೈ
ಮನಗಳನು ತಣಿವಿನಲಿ ತೇಲಬಿಟ್ಟಿದ್ದೆ.
ಕನಸಿನೀ ಮುತ್ತಿನಾ ಗುಣವೇನೊ! ಎದ್ದಾಗ
ಮನಸು ಮೈ ಮುಳ್‌ಬಲೆಗೆ ಬಿದ್ದಹಾಗಿದ್ದೆ.

೮

ಸಂತೆ ಬಯಲಾದಂತೆ ಹೃದಯ ಹಾಳು– ಹೆರರ
ಸಂತಸದ ಸುಗ್ಗಿಯದು ನನಗೆ ಬೀಳು;
ತಂತಿ ಕಿತ್ತಿಹ ವೀಣೆಯಂತೆ ಬಾಳು– ಇದರ
ಅಂತವೆಲ್ಲಿದೆ ಮಗುವೆ ಹೇಳು ಹೇಳು !

CC-0. Jangamwadi Math Collection. Digitized by eGangotri

# ಎಲ್ಲಿತ್ತೋ ಅಲ್ಲಿಗೇ ಹೋಗಲಿ!

## (ಸಣ್ಣಕತೆ)

ಬರೆದವರು:—ಟೇಂಗ್ಸೆ ಗೋವಿಂದರಾಯರು ಬಿ. ಏ. ಎಲ್‌ಎಲ್. ಬಿ., ಧಾರವಾಡ

"ಶರಣರೀ ಸೆಟ್ರು, ಯಾವೂರು ತಮ್ಮದು?"

"ಹಳೇ ಹುಬ್ಬಳ್ಳಿ. ಇಲ್ಲೇ ಬನಶಂಕರೀ ಜಾತ್ರಿಗೆ ಹೊಂಟೇವಿ."

"ವರ್ಸಾ ಹೊಕ್ಕೀರೋ, ಇದs ವರ್ಸೊ?"

"ವರ್ಸಾನೂ ಹೊಕ್ಕೇವು; ಆದರಾಗ ಈ ವರ್ಸ ದೇವಿಗೆ ಹರಕೀ ಮುಟ್ಟಿಸಬೇಕಾಗೈತಿ; ಅದಕ ಕುಟುಂಬಾ ಕರಕೊಂಡು ಹೊಂಟೇವಿ. ನಿಮ್ಮದು ಯಾವೂರು?"

"ನಮ್ಮದು ಅದರಗುಂಚಿ. ಅದರಗುಂಚೀ ಆಗ ಸಾಲರು. ಮನ್ನೆ ಪರದರ್ಶನಕ್ಕ ಬಂದಿದ್ದಿಲ್ಲರೆ? ಅಲ್ಲೆ ಮ್ಯಾಣದಗೊಂಬೀ ಇಟ್ಟಿದ್ದೆ. ಶಾರದೂರಮಂದಿ, ಸೀನೆಮಾ ಪನೆಮಾ ನೋಡಿದ್ದು; ನಮ್ಮದು ಹ್ಯಾಂಗ ರೀಜ ಬಿದ್ದೀತರಿ ಅವರಿಗೆ? ರೊಕ್ಕನs ಆಗಲಿಲ್ಲ. ಅಡಕs ಗುಡಚಾಪೀ ಕಿತ್ತಿಕೊಂಡು ಹೊಂಟೇನಿ—ಏನೋ ಹಳ್ಳೀ ಊರಾಗ ಜಾತ್ರೀ ಪಾತ್ರೀಗೆ ರೊಕ್ಕಾದರ ನೋಡಬೇಕಂತ. ವರ್ಸಾ ಏನು ಯಾಪಾರಕ್ಕ ಹೊಕ್ಕೀರೇನು ಅಲ್ಲಿಗೆ?"

"ಹುಂ, ದುರ್ಗದಬೈಲಿನ್ಯಾಗ ಕೇಸ್ನರೀ ಅಂಗಡಿ, ಹಳೇ ಹುಬ್ಬಳ್ಳ್ಯಾಗ ಬ್ಯಾಗು, ಟ್ರಂಕು ಮಾಡೊ ಕಾರಕಾನಿ ಎರಡೂ ಅದಾವ. ಇಲ್ಲೀದ ಹೋಗಬೇಕಾರ ಕಸಡಿ, ಸುಣ್ಣದಕಾಯಿ, ಸಾಬೂನು, ಬುರುಸು ಇಂತಾವೇನsರ ವೈದು ಅಲ್ಲೀ ಜಾಲಗಾರ—ಮೀನಗಾರ ಮಂದಿಗೆ ಕೊಡೋದು; ಅವಕ್ಕೇನ ಗೊತ್ತಾಗತೈತಿ ಅದರ ಕಿಮ್ಮತ್ತು! ಅವರ ಕಡಿಂದ ಎಳ್ಕೊಳ್ಳೋದು ಮುಸಳೀ ಚರ್ಮ. ಬಲು ಮಜಬೂತ ನೋಡ್ರಿ. ನಮ್ಮ ಕಾರಕಾನ್ಯಾಗ ಬ್ಯಾಗು ಮಾಡಿಸಿದರ ಹುಚ್ಚು ಕಿಮ್ಮತ್ತು ಬರಾಣಾ."

"ನಿಮ್ಮದೆಲ್ಲಾ ಪಾಡ ಐತಿ. ಬನಶಂಕರಿ ನಮ್ಮದು ಹ್ಯಾಂಗ ಮಾಡಸ್ತಾಳೋ ನೋಡಬೇಕಿನ್ನ. ಏನ್ರಿ, ಹರಕ ಬಾಳೇವು. ಟೀಕೀಟ ಕಲೇಕಟರಗ ಚಾಕ್ಕ ಎಡ್ಡಾಣೆ ರೊಕ್ಕಾ ಕೊಟ್ಟು ಗೊಂಬೀ ಪೆಟಿಗೀ ಹ್ಯಾಂಗೋ ಪಾರ ಮಾಡಿಕೊಂಡು ಬಂದೆ. ಇನ್ನೂ ಬದಾಮಿ ಕೇಸನ್‌ದಿಂದ ಬನಸಂಕರೀ ಬಾಡಗೀ ಕೊಟ್ಟು ಏನರs ಹೊಡಬೇಕೆಂತೇನಿ. ಬಂಡವಲರs ಇಲ್ಲಾ. ಎಲ್ಲಾ ಪಂಚೇತಿ ಐತಿ. ಕೈಯಾಗ ಒಂದೀಸ ರೊಕ್ಕಿದ್ರು ಮತ್ತ ಇದರಂತಾ ದಂದೇನs ಇಲ್ಲಾ."

"ಹಂಗಾರ ನಾ ಹೇಳತೇನಿ ಹಂಗ ಕೇಳು. ಕೇಸನ್‌ದಿಂದ ವೈಯಾಕ, ಅಲ್ಲೆ ಡೇರೆಪಾರೆ ಹೊಡ್ಯಾಕ ಹತ್ತೋ ರೊಕ್ಕಾ ನಾ ಕೊಡತೇನಿ. ಎಂಟಣೆ ಹುಸೆ ನಂದು. ಹ್ಯಾಂಗ? ಕಬೂಲಿದ್ರು ಹೇಳ ಮತ್ತ."

ಅದೂ ಇಲ್ಲದೆ ಅಡಗಾಣಿಸಿದ ವೀರಭದ್ರಪ್ಪನು ಮಹಾರುದ್ರಶೆಟ್ಟರ ಈ ಮಾತಿಗೊಪ್ಪಿದನು. ಈ ರೀತಿಯಾಗಿ ಈ ರುದ್ರ–ಭದ್ರರ ಕಸರತ್ತು ಸುರುವಾಯಿತು.

* * * *

ಬನಶಂಕರಿಯೊಂದು ಕೊಂಪೆ. ಅಲ್ಲಿ ಕೀಳುಜನರ ವಸತೀಯೇ ಬಹಳ. ಮೀನುಗಾರಿಕೆಯಿಂದಲೇ ಬಹುಜನರ ಉಪಜೀವಿಕೆ. ಅವರಲ್ಲಿ ಗಟ್ಟಿಗರಾದವರು ಮೊಸಳೆಹಿಡಿಯುವ ಉದ್ಯೋಗ ಮಾಡುವರು.

ಮಧ್ಯಾಹ್ನದಲ್ಲಿ ಗುಡಿಸಲ ಮುಂದಿನ ಬಯಲು ಜಾಗೆಯನ್ನು ಇಬ್ಬರು ಅಳೆಯುತ್ತಿರುವದನ್ನು ನಾಗಪ್ಪನು ಕಂಡನು. 'ಎಲೇ ಯಾರವಾ?' ಎಂದು ಬೆದರಿಸಲು ಹೋದನು. ಅಷ್ಟರಲ್ಲಿ ಮಹಾರುದ್ರಸೆಟ್ಟರು ಬಂದರು. ಕಂಡಕೂಡಲೆ ಕುಡುಕರ ಕಳೇ ಕಟ್ಟಿ ಅವರ ಕೂಡ ವ್ಯವಹಾರ ಮಾಡುವ ಕಲೆಯನ್ನು ಸೆಟ್ಟರು ಚೆನ್ನಾಗಿ ಬಲ್ಲರು. "ಜಾತ್ರ್ಯಾಗ ಗೊಂಬೀ ಆಟಕ್ಕ ಡೇರೀ ಹೊಡೀತೇವಿ. ಇರ್ಲೇಳು."

"ಬ್ಯಾಡ್ರೆಪಾ, ನಮ್ಮನೀ ಮುಂದ ಗೊಂದಲಾ ಕಿತಿಕೊಂಡು ಏಳ್ರಿಲ್ಲೀದ. ಮತ್ತೆಲ್ಲ್ಯಾರ ಹೊಡಿಕೊಳ್ರಿ ನಿಮ್ಮ ಕಿತಬಿ."

CC-0. Jangamwadi Math Collection. Digitized by eGangotri

"ಹುಚ್ಚ ಇದ್ದೀ ತೀರಿತು. ಬರೋ ರೊಕ್ಕಾ ಕಳ ಕೊಂಡು ಏನು ಮಾಡತೀ! ನೀ ಬ್ಯಾಡಂದ್ರ ಇಲ್ಲೆ ಹಾಳ ಜಾಗಾಕ್ಕೇನು ಕಡಿಮಿ? ಸುಮ್ಮಗಿರ ಹಿಡಿ; ಇಕಾ ತಗೋ ಖುಶಿ; ಇದೊಂದು ರೂಪಾಯಿ ಅಡವಾನಸು ತೊಗೊ. ಎರಡು ರೂಪಾಯಿ ಬಾಡಗೀ ಕೊಡತೇವಿ, ಸುಮ್ಮನಿರು."

ನಾಗಪ್ಪನ ದುಡಿತವೂ ಕಡಿಮೆ, ಮೇಲಾಗಿ ಮಗಳ ಅಪಘಾತದಲ್ಲಿ ಇವನ ಹೆಂಡಕ್ಕೆ ರೊಕ್ಕವಿಲ್ಲದಂತಾಗಿ ಬಹು ದಿವಸವಾಗಿತ್ತು. ಇಂಥ ಸಂಧಿಯನ್ನು ವ್ಯರ್ಥ ಕಳೆದು ಕೊಳ್ಳುವನೇ! ಮಗಳಿಗೆ ಈ ಮಾತಿನ ಸುದ್ದಿ ಕೂಡ ಗೊತ್ತಾಗಬಾರದೆಂದು ಕರಾರು ಮಾಡಿ ನಾಗಪ್ಪನು ಒಪ್ಪಿದನು.

ಸಂಜೆಯ ಹೂಬಿಸಿಲಿನಲ್ಲಿ ಯುವಕಯುವತಿಯರಿಬ್ಬರು ತಮ್ಮ ದಿನದ ದುಡಿತದ ಫಲವನ್ನು ಹೊತ್ತುಕೊಂಡು ಬರುತ್ತಿದ್ದರು. ಅವರ ಮುಖಮುದ್ರೆಯ ಮೇಲಿಂದ ಅವರಿಗೆ ಅಂದು ವಿಶೇಷಲಾಭವಾಗಿರಬೇಕೆಂದು ಸಹಜ ವಾಗಿ ಹೇಳಬಹುದಾಗಿತ್ತು. ಅಂಬೆಯು ಮನೆಯ ಹತ್ತಿರ ಬಂದಂತೆ, ಮನೆಯಮುಂದಿನ ಗೊಂದಲವೇನೂ ತಿಳಿಯದೆ ಹುಬ್ಬುಗಂಟಿಕ್ಕಿದಳು. ಮೊದಲೇ ಯೋಚಿಸಿಟ್ಟಿದ್ದ ಉತ್ತರ ವನ್ನು ನಾಗಪ್ಪನು ಕೊಟ್ಟನು. "ಹಳೇ ಗುರ್ತು. ಸೆಟ್ಟರು ಬಾಯಿತೆಗೆದು ಕೇಳೋದು ಹೆಚ್ಚೋ, ನಾವು ಕೊಡೋದು ಹೆಚ್ಚೋ!" ಎಂದು.

* * * *

ಅಂದು ರಾತ್ರಿ ೧೧–೧೨ ಘಂಟೆಯ ಸುಮಾರಿಗೆ ಗುಡಿ ಸಲ ಹಿಂದೆ ಗಿಡದ ಬುಡದಲ್ಲಿ ಸಂಕೇತದಂತೆ ದರಿಯನು ತಗ್ಗು ತೆಗೆದು ಏನೋ ಬಚ್ಚಿಡುವದರಲ್ಲಿ ತೊಡಗಿದ್ದನು. ನಾಗಪ್ಪನು ಸ್ತಬ್ಧನಾಗಿದ್ದದ್ದನ್ನು ಕಂಡು ನಿದ್ದೆಹತ್ತಿತೆಂ ದು ತಿಳಿದು ಅಂಬೆಯೂ ಮೆಲ್ಲಗೆ ಅಲ್ಲಿ ಬಂದಿದ್ದಳು. ವಯ ಸ್ಸಾದವರ ನಿದ್ದೆ ಎತರದು? ತುಸು ಹೊತ್ತಿನಲ್ಲಿಯೇ ಆ ಮುದುಕ ಹೊರಕ್ಕೆ ಬಂದನು. ನೋಡಿಯೂ ನೋಡದವ ನಂತೆ ತಿರುಗಿಹೋಗಿ ಮಲಗಿಕೊಂಡನು. ಅಂಬೆಯದೃಷ್ಟಿಗೆ ಅವಳ ತಂದೆಯು ಬಿದ್ದಿದ್ದರೂ ಹೋದಾಗ ಮಾತೇನೂ ಆಡದ್ದರಿಂದ ಅವಳೂ ಸುಮ್ಮನಿದ್ದಳು. ಯಾರು ಎಷ್ಟು ಕಂಡಿದ್ದರೋ ಅವರೇ ಬಲ್ಲರು; ಹೆಚ್ಚಿಗೆ ಮಾತು ತೆಗೆದರೆ ಮೈಮೇಲೆ ಬರುವ ಸಂಭವ ಹೆಚ್ಚು. ಆದ್ದರಿಂದ ಇಬ್ಬರೂ ಸುಮ್ಮನಿದ್ದರು.

* * * *

ಹುಣ್ಣಿವೆಯ ದಿನ ಮೂರು ತಾಸು ಹೊತ್ತು ಏರಿದೆ. ಹೊಂಡದ ಸುತ್ತಲೂ ಜನರು ನೆರೆದಿದ್ದಾರೆ. ಬಾಳೆಯ ದಿಂಡಿನ ತೆಪ್ಪವನ್ನು ಮಾಡಿ ಪೂಜಿಮಾಡಿ, ದೇವಿಯನ್ನು ನೆನೆದು, ನುಹಾರುದ್ರುಸೆಟ್ಟರು ತಮ್ಮ ಮಗುವನ್ನು ಬಿಟ್ಟರು. ದೇವಿಯ ಹೊಂಡದಲ್ಲಿ ಮೊಸಳೆಗಳ ಪ್ರಾಬಲ್ಯ ಬಹಳ. ಉಳಿದ ದಿನ ಅದರಲ್ಲಿ ಕಾಲಿಡಲು ಧೈರ್ಯವಾರಿಗೂ ಇಲ್ಲ. ಜಾತ್ರೆಯ ದಿನ ಮಾತ್ರ ದೇವಿಯ ಮೇಲೆ ಭಾರ ಹಾಕಿ–ಕೊಟ್ಟ ಮಗುವನ್ನು ಕಸಿದುಕೊಳ್ಳಲಾರಳೆಂಬ ನಂಬಿಗೆಯಿಂದ–ಹರಕೆ ತೀರಿಸುವದಕ್ಕಾಗಿ ತೆಪ್ಪ ಬಿಡು ವರು. ತೆಪ್ಪವನ್ನು ಈ ದಂಡೆಯಿಂದ ಆ ದಂಡೆಯವರೆಗೆ ದಾಟಿಸಲು ಒಂದು ದೋಣಿಯಲ್ಲಿ ದರಿಯನು ಸಿದ್ಧನಾಗಿ ಹೊರಟನು. ತೆಪ್ಪವಾಗಲೇ ಎರಡನೆಯ ದಂಡೆಯ ಸಮೀಪ ಬಂದಿತ್ತು. ಅಷ್ಟರಲ್ಲಿ ಒಂದು ಮೊಸಳೆಯ ಮೂಗು ಮೇಲಕ್ಕೆದ್ದಿತು. ನೋಡು ನೋಡುವದರಲ್ಲಿ ದರಿಯನು ನೀರಲ್ಲಿ ಹಾರಿ ತನ್ನ ಕೈಯಲ್ಲಿಯ ಚೂರಿ ಯನ್ನು ಮೊಸಳೆಯ ನೆತ್ತಿಯಲ್ಲಿ ಚುಚ್ಚಿದನು. ತೆಪ್ಪ ವನ್ನು ದಂಡೆಗೆ ತಂದು ಹಚ್ಚಿದನು. ಸೆಟ್ಟರ ಹೆಂಡತಿಯು ದರಿಯನನ್ನೊಮ್ಮೆ ಕೃತಜ್ಞತೆಯಿಂದ ನೋಡಿ, ಮಗುವ ನ್ನಪ್ಪಿಕೊಂಡಳು. ಸೆಟ್ಟರು ಅವನಿಗೆ ಬಕ್ಷೀಸ್ ಕೊಡಹೋ ದರೆ 'ದೇವಿಯ ಸೇವೆ; ಏನು ಕೊಡೋದು ದೇವಿಗೇ ಕೊಡಿರಿ' ಎಂದು ದರಿಯನು ಹೇಳಿದನು.

* * * *

ಜಾತ್ರೆಯಾಗಿ ೨–೩ ದಿನಗಳಾಗಿದ್ದವು. ಕೂಡಿದ ಜನ ರೆಲ್ಲರೂ ಇನ್ನೂ ಹೋಗಿದ್ದಿಲ್ಲ. ಸಮೀಪದ ಹಳ್ಳಕ್ಕೆ ನೀರಿಗೆಂದು ಹೋದಾಗ ದಂಡೆಯ ಮೇಲೆ ಅಂಬೆಯ ದೃಷ್ಟಿಗೆ–ಅವಳೂ ದರಿಯನೂ ಅಂದು ರಾತ್ರಿ ಉಂಗುರ ಬಚ್ಚಿಟ್ಟಿದ್ದ ಡಬ್ಬಿಯು ಬಿತ್ತು. ಅಹುದೋ! ಅಲ್ಲವೋ– ಎಂದು ಅನುಮಾನಿಸಿ ಕೈಯಲ್ಲೆತ್ತಿ ನೋಡಿದಳು. ಒಂದು ಬದಿಯಲ್ಲಿ ನೆಗ್ಗಿದ ಅದೇ ಗುರುತು. ಅದೇ ಡಬ್ಬಿಯೆಂದು ಮನವರಿಕೆಯಾದೊಡನೆ ಅವಳೆದೆ ಧಸ್ಸೆಂದಿತು. ದರಿಯನೇ ತನಗೆ ಹೇಳದೆ ತೆಗೆದಿರಬಹುದೇ? ಶಕ್ಯವಿಲ್ಲ! ಹಾಗಾದರೆ



CC-0. Jangamwadi Math Collection. Digitized by eGangotri

ಯಾರು? ಮತ್ತಾರಿಗೂ ಬಿಚ್ಚಿಟ್ಟ ಸಂಗತಿಯ ಸುಳಿವು ಸಹ ಇರಲಿಲ್ಲ. ಅಷ್ಟರಲ್ಲಿ ಗಿಡದಡಿಗೆ ತಾವಿಬ್ಬರೂ ಬಚ್ಚಿಡುವದರಲ್ಲಿ ತೊಡಗಿದಾಗ, ಗುಡಿಸಲ ಹೊರಗೆ ಬಂದು ಹೋದ ನಾಗಪ್ಪನ ನೆನಪಾಯಿತು. ಮೋರೆಯೊಮ್ಮೆಲೆ ಕಪ್ಪಿಟ್ಟಿತು. ಶೂನ್ಯಮನಸಿನಿಂದ ಗುಡಿಸಿಲಿಗೆ ಬಂದಳು. ನಾಗಪ್ಪನು ಎಷ್ಟು ವ್ಯಸನಾಧೀನನಾದರೂ ತುಡುಗುಮಾಡುವಷ್ಟು ನೀಚನಾಗಿರಬಹುದೆಂದು ಅವಳ ಕಲ್ಪನೆಯಿರಲಿಲ್ಲ. ಬಂದು ಚೂಪುಗಲ್ಲಿನಿಂದ ಗುರುತಿನ ಸ್ಥಳದಲ್ಲಿ ಅಗೆಯಹತ್ತಿದಳು. ಅವಳು ಆಗ ಹುಡುಕುತ್ತಿದ್ದುದು ಹರಳಿನುಂಗುರವಲ್ಲ; ಅದಕ್ಕೂ ಅಮೂಲ್ಯವಾದ ಅವಳ ತಂದೆಯ ಶೀಲವು. ಉಂಗುರದಂತೆಯೇ ಅದೂ ಮಾಯವಾಗಿತ್ತು. ಕ್ಷಣಮಾತ್ರ ಸ್ತಬ್ಧಳಾಗಿದ್ದು ಮುಂದೇನು ಮಾಡಬೇಕೆಂಬುದನ್ನು ನಿಶ್ಚಯಿಸಿ, ಗುಡಿಸಿಲಿನೊಳಗೆ ಹೊಕ್ಕಳು. ಇತ್ತೀಚೆ ೨-೩ ದಿನದ ತಂದೆಯ ನಿಶೆಗೂ ಜಾತ್ರೆಯ ದಿನ ಪ್ರೀತಿಯಿಂದ ತಂದುಕೊಟ್ಟ ಮಣಿಮಾಲೆಗೂ ದುಡ್ಡೆಲ್ಲಿಂದ ಬಂದಿತೆಂಬ ಅವಳ ಗೂಢಕ್ಕೆ ಆಗ ಉತ್ತರದೊರೆಯಿತು. ಅವಳಿಗೆ ಕೊರಳಲ್ಲಿ ಚೇಳಿನ ಸರ ಹಾಕಿಕೊಂಡಂತಾಯಿತು. ಬಾಗಿಲಲ್ಲಿಯೇ ಹರಿದೊಗೆದು ಒಲೆಯ ಮುಂದೆ ಕುಳಿತಿದ್ದ ನಾಗಪ್ಪನೆಡೆಗೆ ಸಾಗಿಬಂದಳು.

"ಅಪ್ಪಾ! ಇದೇನ ಮಾಡಿದೀ?" ದುಃಖೋದ್ವೇಗದಿಂದ ಕೇಳಿದಳು.

"ಏನದು?" ಇಲ್ಲದ ಹುಚ್ಚು ಮೋರೆಯಮೇಲೆ ತಂದು ನಾಗಪ್ಪನು ನುಡಿದನು.

"ಉಂಗುರಾ ಯಾಕ ತೊಗೊಂಡಿ?"

ಅವಳ ಸ್ಥಿರದೃಷ್ಟಿಯ ಮುಂದೆ ನಾಗಪ್ಪನ ಧೈರ್ಯ ತತ್ತರಿಸಿತು. ಆದರೂ ತುಂಟನೆವವನ್ನೊಂದು ಮುಂದು ಮಾಡಿದನು.

"ಯಾಕ? ನನ್ನ ಗಿಡದ ಬುಡಕಿಂದ. ನಾ ತೊಗೋಳಿಕ್ಕೆ ಯಾರದ್ದೇನಂಜಿಕಿ?"

"ನಿಂದೇನದು? ತುಡುಗ್ಯಾಕ ಮಾಡಿದೀ?"

"ನಂದs; ನನ್ನ ಗಿಡದ ಬುಡಕ ಇದ್ದದ್ದೆಲ್ಲಾ ನನ್ನದs ನೈ."

"ಅಲ್ಲಾ. ದರಿಯಂದದು. ಸುಮ್ಮಗs ಅವಂದವಗ ಕೊಡತೇನಿ ಕೊಡು!"

"ಅಂವೆಲ್ಲೀದ ತರತಾನು! ಅವಂದಂತ ಅವಂದು!"

"ಮನಸೀ ಹೊಟ್ಯಾಗ ಸಿಕ್ಕದ್ದು. ನಾ ಬೇಕಾತೂ ಸುಮ್ಮಗs ಕೊಡು. ಇಲ್ದಿದ್ರ ನಾ ಹೋಗಿ ಹೊಳೀ ಹಾರಿಕೋತೇನಿ ನೋಡು. ಕಳ್ಳನ ಮಗಳು–ಅನಿಸಿಗೋತ ನಾ ಬದಕಲಾರೆ!"

ಅಂಬೆಯು ಅಂದಂತೆ ಮಾಡುವಳೆಂದು ಗೊತ್ತು. ನಾಗಪ್ಪನು ಬೆದರಿ "ತಕಾ, ಹಾಳಭಾವೀ ಬೀಳು. ನಾಕವರಾ ಉಳದಾವು. ತೊಗೋ. ಸೆಟ್ಟರಲ್ಲಿಟ್ಟು ಐದು ವರಾ ಇಸಗೊಂಡ ಬಂದಿದ್ದೆ. ಬೇಕಾದ್ದು ಮಾಡಿಕೋ ಹೋಗು." ಎಂದು ಆಸಿರ್ವಾದದಿಂದ ೧೩ ರೂಪಾಯಿ ಕೊಟ್ಟನು.

* * * *

ಅಂದು ಸಂಜೆಯ ಮುಂದೆ ಗುಡಿಯ ಹಿಮ್ಮಗ್ಗಲು, ಸೆಟ್ಟರೂ ವೀರಭದ್ರಪ್ಪನೂ ಲೆಕ್ಕಾಚಾರಮಾಡಿಕೊಳ್ಳುತ್ತಿದ್ದರು.

"ಫಾಯದೇ ಎಲ್ಲೀದ ಮುಣ್ಣಾಗ ಬರತೈತಿ. ಖರ್ಚ, ಬಾಡಿಗಿ ತೇಲಜೇಕಾರ ಕರೀ ಕ್ಯಾಣ ಬಿದ್ದು ಹೋತು."

"ಹಾಂಗಾರ ಇನ್ನ ಮುಂದ ಗತಿ! ಕೈಗಡಾ ಅಂತರ ಯಾಕೊಲ್ಲದು, ಇಲ್ಲೀದ ಮುಂದ ಹೋಗಾಕ ಖರ್ಚಿಗರs ಕೊಡ್ರೀ."

"ನನ್ನ ಹತ್ತರರ ಎಲ್ಲ್ಯದಾವ ರೂಪಾಯಿ. ಇರೋವs ಇಪ್ಪತ್ತು. ಹೆಂಡರು ಮಕ್ಕಳನ ಕಟಿಗೊಂಡ ಊರರs ಕಾಣಬೇಕs! ೫ ರೂಪಾಯಿ ಕೊಡತೇನಿ ನೋಡು, ಅದಕೂ ಹೆಚ್ಚಿಲ್ಲ."

ಇಷ್ಟರಲ್ಲಿ ಅಂಬೆಯು ಬಂದು ಸೆಟ್ಟರನ್ನು ಕರೆದಳು. ಅವಳು ನಿಂತಿದ್ದ ಗಿಡದಡಿಗೆ ಸೆಟ್ಟರು ಹೋದರು. ಮೊದಮೊದಲು ಸಣ್ಣದನಿಯಲ್ಲಿಯೇ ನಡೆಯಿತವರ ಸಂವಾದ. ಅಂಬೆಯಂತಹ ತಲೆಯಮೇಲಿನ ಮಾಸವಾರದ ಹುಡಿಗಿಗೆ ಸೆಟ್ಟರು ಉಂಗುರದ ಅಂತು ಹತ್ತುಗೊಡುವರೇ! ತಮಗೇನೂ ಗೊತ್ತಿಲ್ಲೆಂದು ಹಾರಿಸಿಬಿಟ್ಟರು. ಅದು ಪರರದೆಂದೂ ರೂಪಾಯಿ ತಕ್ಕೊಂಡು ಉಂಗುರಕೊಡಬೇಕೆಂದೂ ಆಕೆ ಪರಿಪರಿಯಿಂದ ಬೇಡಿಕೊಂಡಳು. ರಂಗಿಗೆದ್ದಳು. ಕಣ್ಣೀರು ತೆಗೆದಳು. ಹೊಳೆ ಹಾರಿಕೊಳ್ಳುವೆನೆಂಬ ಕೊನೆಯ ಬೆದರಿಕೆಯನ್ನೂ ಹಾಕಿ ನೋಡಿದಳು. ಯಾವುದಕ್ಕೂ ಸೆಟ್ಟರು ಸೊಪ್ಪುಹಾಕಲಿಲ್ಲ. ನಿರುಪಾಯಳಾಗಿ ತಿರುಗಿ ಹೋದಳು.

CC-0. Jangamwadi Math Collection. Digitized by eGangotri

ಇವರ ಸಂವಾದದಲ್ಲಿ ಕಿವಿಗೆ ಬಿದ್ದ ಷಟ್ಪರ ಮೇಲಿಂದಲೇ ಚಾಣಾಕ್ಷನಾದ ವೀರಭದ್ರಪ್ಪನು ಆ ವ್ಯವಹಾರದ ಸ್ವರೂಪವನ್ನು ತಿಳಿದುಕೊಂಡನು. ಬಂದೊಡನೆಯೇ ಸೆಟ್ಟರನ್ನು ಕೇಳಿದನು 'ಯಾಕ ಸೆಟ್ರು, ೨೦ ರೂಪಾಯಿಗಿಂತ್ಲ ಹೆಚ್ಚಿಗೆ ಲ್ಲಿಂದನರು ಉಂಗರಾ ಎಲ್ಲೀದs ತಂದಿರಿ?'' 'ಯಾವ ಉಂಗುರ? ಎಲ್ಲೀದು? ಎಂದು ಮೊದಮೊದಲು ಸೆಟ್ಟರು ಗುಣುಗುಟ್ಟಿದರು. ನಾಗಪ್ಪನು ತನ್ನೆಡೆಗೆ ಬಂದದ್ದನ್ನು ವೀರಭದ್ರಪ್ಪನು ಕಂಡವನಾದ್ದರಿಂದ ಪೋಲೀಸರಿಗೆ ತಿಳಿಸುವನೆಂಬ ಅವನ ಬೆದರಿಕೆಗೆ ಅಂಜಿ, ಅರ್ಧಪಾಲು ಕೊಡಲಿಕ್ಕೆ ಸೆಟ್ಟರು ಒಪ್ಪಿದರು. ಇಬ್ಬರೂ ಕೂಡಿ ತೋಪಿನ ಕಡೆಗೆ ಹೊರಟರು. ಇದನ್ನೆಲ್ಲ ಮರೆಗೆ ನಿಂತು ಕೇಳಿದ ಒಂದು ವ್ಯಕ್ತಿಯು ಅವರನ್ನು ಹಿಂಬಾಲಿಸಿತು. ಮೂರೂ ಸಂಜೆಯ ಮಸುಕು. ದಟ್ಟ ಗಿಡಗಳಿದ್ದುದರಿಂದ ತೋಪಿನಲ್ಲಾಗಲೇ ಕತ್ತಲಾಗಿತ್ತು. 'ಎಲ್ಲಿದ? ಉಂಗರಾ ತೋರಸ ಮನ್ಲಿ' ಎಂದು ವೀರಭದ್ರಪ್ಪನೆಂದನು. ಇಬ್ಬರ ಮನದಲ್ಲಿಯೂ ಒಂದೇ ವಿಚಾರ. ''ಮತ್ತೊಬ್ಬ ನಿಲ್ಲದಂತೆ ಮಾಡಿದರೆ ಎಲ್ಲವೂ ತನ್ನದೇ'' ಎಂದು. ಸೆಟ್ಟರು ಉಂಗುರವನ್ನು ಜೇಬಿನೊಳಗಿಂದ ತೆಗೆದರು. ಕತ್ತಲೆಯಲ್ಲಿ ಮಿಂಚಿದ ಅದರ ಕಿರಣವು ವೀರಭದ್ರಪ್ಪನ ಪಾಪದ ಸುರಂಗಕ್ಕೆ ಕೊನೆಯ ಕಿಡಿಯಿಕ್ಕಿತು. ಬಚ್ಚಿಟ್ಟಿದ್ದ ಚೂರಿಯನ್ನೊಮ್ಮೆಲೆ ಹಿರಿದು ಸೆಟ್ಟರ ಮೇಲೆ ಮುಗಿಬಿದ್ದನು. ಸರ್ಪವು ತನ್ನ ಆಹಾರಕ್ಕಾಗಿ ಕ್ರಿಮಿಕೀಟಕಗಳನ್ನು ಆಕರ್ಷಿಸುವದಕ್ಕಾಗಿಯೇ ತನ್ನ ಹೆಡೆಯಲ್ಲಿಯ ಮಣಿಯನ್ನು ಪಯೋಗಿಸುವದಂತೆ. ಸೆಟ್ಟರಾದರೂ ಅವನನ್ನು ಕೈಯಳತೆಯೊಳಗೆ ಎಳೆಯಬೇಕೆಂದೇ ಉಂಗುರವನ್ನು ಜೇಬಿನೊಳಗಿಂದ ತೆಗೆದದ್ದು. ಏಕಕಾಲಕ್ಕೆ ಇಬ್ಬರ ಚೂರಿಗಳೂ ಪ್ರತಿಪಕ್ಷಿಗಳ ಹೃದಯದಲ್ಲಿ ನೆಟ್ಟವು. ಗಿಡದ ಮರೆಗೆ ಅಡಗಿದ್ದ ದರಿಮನ ದೃಷ್ಟಿಗೂ ಆ ಉಂಗುರ ಬಿದ್ದಿತ್ತು. ಅವನಂತೂ ಒಡೆತನದ ಆತ್ಮವಿಶ್ವಾಸದಿಂದ ಅದನ್ನು ಕಸಿದುಕೊಳ್ಳಲು ಮುಂದುವರಿದನು. ಬೇಡ, ಗಿಡಗಗಳ ಕೈಯೊಳಗಿಂದ ಪಾರಾದ ಪಾರಿವಾಳದ ಜೀವದಂತೆ, ಅನಾಯಾಸವಾಗಿ ಅವನ ಉಂಗುರವು ಅವನ ಕೈ ಸೇರಿತು. ಸೇರುವವರೆಗೆ ಅದು ಉಂಗುರ. ಮುಂದೆ ಅವನ ಕಣ್ಣಿಗೆ ಅದು ಬೆಂಕಿ. ಅಂಬೆಯಲ್ಲಿ ಈವರೆಗೂ ಅವನಿಟ್ಟಿದ್ದ ಪ್ರೇಮ-ವಿಶ್ವಾಸಗಳ ಮೂರ್ತಿಮಂತ ಚಿತೆ. ಅಂಬೆಯು ವಿಶ್ವಾಸಘಾತಕಳೇ! ಯಾವಳನ್ನು ತನ್ನ ಯಜಮಾನತಿಯನ್ನಾಗಿ ಮಾಡಿ ಆನಂದದಿಂದ ಅವಳಕೂಡ ಬಾಳಬೇಕೆಂದು ಈ ವರೆಗೂ ಅವನ ಹೃದಯವು ಹವಣಿಸುತ್ತಿತ್ತೋ ಆ ಅಂಬೆಯು ಕಳ್ಳಿಯೆ? ಸಂಶಯವೇನದರಲ್ಲಿ! ಸೆಟ್ಟಿಯಕೂಡ ಆಕೆ ಮಾತಾಡುವದನ್ನು ಅವನು ಕಣ್ಣಾರೆ ಕಂಡಿದ್ದನು. ಅವನ ನಿರಾಶೆಯ ಕಿಚ್ಚು ಅಂಶತಃ ಆದರೂ ಕಡಿಮೆಯಾಗಬೇಕಾದರೆ ತನ್ನ ಆಶಾ ಗೋಪುರಕ್ಕೆ ಕೊಳ್ಳಿಯಿಕ್ಕಿದವಳನ್ನು ಕಾಣಬೇಕು. ಹಳ್ಳದಕಡೆಗೆ ಅವಳು ಹೋದದ್ದನ್ನು ನಾಗಪ್ಪನಿಂದ ತಿಳಿದು, ಅವನೂ ಅತ್ತ ಹೊರಟನು. ದಂಡೆಗೆ ಬಂದು ನೋಡುತ್ತಾನೆ. ಮಿನುಗುವ ತಾರೆಗಳ ಬೆಳಕಿನಲ್ಲಿ ದೋಣಿಯಲ್ಲಿ ಸ್ತಬ್ಧವಾಗಿ ನಿಂತ ಅಂಬೆಯ ಆಕೃತಿಯು. ಭಾವನೆಗಳ ತಳಕಿನಲ್ಲಿ ಅವನ ಮನಸಿಗೆ ಅವಳಿದ್ದಲ್ಲಿಗೆ ಹೋಗಬೇಕೆಂಬುದೊಂದೇ ಗೊತ್ತು. ಏತಕ್ಕೆಂದರೆ ಸ್ಪಷ್ಟವಾಗಿ ಹೇಳಲರಿಯದು ಅವನ ಹೃದಯ. ಆತ್ಮಹತ್ಯೆಗೆ ತೊಡಗಿದವಳೆಂದು ಆಗಲೇ ಹೊಳೆದಿತ್ತು. ಅವಳಿಗೆ ಆ ಸಮಾಧಾನವನ್ನು ಕೊಡದೆ, ಅವಳ ವರ್ತನದಿಂದ ತನ್ನ ಬಾಳುವೆಗೆ ಹತ್ತಿದ ಬೆಂಕಿಯನ್ನು ತೋರಿಸಿ, ಅದರ ಫಲವೆಂದು ತನ್ನ ಕೈಯಿಂದಲೇ ಅವಳಿಗೆ ಮರಣದಂಡನೆಯನ್ನು ವಿಧಿಸಬೇಕೆಂದಿತ್ತೋ ಏನೋ? ಅವಳನ್ನು ಕೊಲ್ಲಬೇಕೆಂದಂತೂ ಖಂಡಿತವಾಗಿ ಅವನು ಈಸಿ ಹೋಗಲಿಲ್ಲ.

ದೋಣಿಯಲ್ಲೇರಿ ದರಿಯನು ಬಂದ ಅರಿವು ಅಂಬೆಗೆ ಇರಲಿಲ್ಲ. ಅವಳ ಹೆಗಲ ಮೇಲೆ ಎರಡೂ ಕೈಗಳನ್ನಿಟ್ಟಾಗ ಬೆಚ್ಚಿ ಬಿದ್ದಳು.

ತೀಕ್ಷ್ಣ ಶೋಧಕ ದೃಷ್ಟಿಯಿಂದ ತನ್ನ ಕಣ್ಣುಗಳನ್ನು ಅವಳ ಕಣ್ಣುಗಳಲ್ಲಿ ನೆಟ್ಟನು. ತಪ್ಪಿತಸ್ಥರ ಕಳ್ಳಮನದ ಚಂಚಲತೆಯಿರಬಹುದೆಂದು ಅವನ ಅಪೇಕ್ಷೆ ಇತ್ತು. ಎರಡನೆಯವರ ಪಾಪಕಲಂಕಗಳ ಶುದ್ಧಿಗಾಗಿ ಆತ್ಮಯಜ್ಞ ಮಾಡಲು ಹೊರಟವರ ಹೃದಯವು ಕಲುಷಿತವಿದ್ದೀತೆ! ನಿರ್ಭಯತೆಯಿಂದ ಅವಳೂ ನೋಡತೊಡಗಿದಳು. ಕ್ಷಣದಲ್ಲಿ ಅವಳು ನಿಷ್ಕಲಂಕಳೆಂಬ ಮನವರಿಕೆಯಾಯಿತು. ನೋಡನೋಡುತ್ತ ಅವರಿರ್ವರ ಕಣ್ಣುಗಳಲ್ಲಿ ಹೊಸ ತೇಜವು ತೋರಲು ತೊಡಗಿತು. ಅದು ಹೃದಯಗಳ ಐಕ್ಯದ ದ್ಯೋತಕವಾದ ತೇಜ. ಅಂಬೆಯು ನಡುಗುವ ದನಿಯಿಂದ ಕೇಳಿದಳು 'ಉಂಗುರೆಲ್ಲಿದ?'

CC-0. Jangamwadi Math Collection. Digitized by eGangotri

ಎಂದು. “ಇಕಾ, ಇಲ್ಲ್ಯದ. ಈ ಹಾಳು ಉಂಗುರಾನ್ನ ಈ ಸೆಲ್ಲಾ ಮಾಡಿದ್ದು. ಎಲ್ಲಿತ್ತೋ ಅಲ್ಲಿಗೇ ಹೋಗಲಿ” ಎಂದು ಅದನ್ನು ನೀರಿನಲ್ಲಿ ಬಿಸಾಟಿ ಅವಳನ್ನಪ್ಪಿದನು.

ಬೇಗೆಯ ಬಳದಿಂದ ತುಸು ಕನುರಿದ ತರುಲತೆಗಳು ಅಮೃತಮಯವಾದ ವಸಂತನ ಆಗಮನದಿಂದ ಪುನಃ ಚಿಗುರಿ ಕಳೆಯೇರಲು ತೊಡಗಿದವು.

# ಆದರ್ಶ ದಾಂಪತ್ಯ



ನಾಗಪೂರದ ಖಂಡೇಲವಾಲಾ ಪಾಠಶಾಲೆಯ
ಮುಖ್ಯೋಪಾಧ್ಯಾಯರಾದ
ಶ್ರೀಮಾನ್
**ಬಿ. ಶಾಂತಿರಾಜ ಶಾಸ್ತ್ರಿಗಳು.**



ಶ್ರೀ. ಶಾಂತಿರಾಜಶಾಸ್ತ್ರಿಗಳ ಧರ್ಮಪತ್ನಿಗಳೂ ಕಲಕತ್ತಾ
ವಿಶ್ವವಿದ್ಯಾನಿಲಯದ ‘ಕಾವ್ಯತೀರ್ಥ’
ಪದವಿಯನ್ನು ಪಡೆದವರೂ ಆದ
**ಶ್ರೀಮತಿ ಚಿನ್ನಮ್ಮನವರು.**

ಈ ಪಂಡಿತದಾಂಪತ್ಯವು ತನ್ನ ಕಾರ್ಯವಿಶೇಷದಿಂದ ಹೆಚ್ಚುಹೆಚ್ಚು ಗೌರವವನ್ನು ಹೊಂದಿ, ಕನ್ನಡನಾಡಿನ ಹೆಸರನ್ನು ಹೆಚ್ಚಿಸುವುದೆಂದು ನಮ್ಮಾಶೆ. ಸಂ. ಜ. ಕ.

CC-0. Jangamwadi Math Collection. Digitized by eGangotri

# ಮಾದರಿಯ ತಾಲ್ಲೂಕಿನ ಯೋಜನೆ

ಲೇಖಕರು:— ಶ್ರೀ. ತಗಡೂರು ರಾಮಚಂದ್ರರಾಯರು ಸತ್ಯಾಗ್ರಹಾಶ್ರಮ, ತಗಡೂರು

## ಉದ್ದೇಶ.

ಹಿಂದುಸ್ಥಾನಕ್ಕೆ ಸದ್ಯದಲ್ಲಿಯೇ ಸಂಪೂರ್ಣಸ್ವರಾಜ್ಯವಾಗಲಿ ಅಥವಾ ಅಂತರ್ಗತಸ್ವರಾಜ್ಯವಾಗಲಿ ದೊರಕುವುದು ಖಂಡಿತ. ಅದರ ಪೂರ್ವಸಿದ್ಧತೆಗಾಗಿಯೂ ಸಂಪಾದಿಸಿದ ಸ್ವರಾಜ್ಯವನ್ನು ಸಂರಕ್ಷಿಸಿಕೊಳ್ಳುವುದಕ್ಕಾಗಿಯೂ ಯೋಗ್ಯಪ್ರಜೆಗಳನ್ನು ತಯಾರುಮಾಡುವುದೇ ಇದರ ಗುರಿ. ವ್ಯಕ್ತಿ ಹಾಗೂ ರಾಷ್ಟ್ರದ ನಡುವೆ ಇರಬೇಕಾಗಿರುವ ಜವಾಬ್ದಾರಿಯ ಸಂಬಂಧವನ್ನು ಜನರು ತಾವು ತಿಳಿದುಕೊಂಡು, ಅದರಂತೆ ನಡೆಯುವುದರ ಮೇಲೆ ಪ್ರತಿಯೊಬ್ಬನಿಗೂ ತಿಳಿಸಿಕೊಡುವುದೂ ಅದರಂತೆಯೆ ಆಚರಿಸುವಂತೆ ಮಾಡುವುದೂ ತೀರ ಆವಶ್ಯಕವಾದದ್ದು. ಈ ಮಾದರಿಯ ತಾಲ್ಲೂಕಿನ ಪ್ರತಿಯೊಂದುವ್ಯಕ್ತಿಗೂ ಉಳಿದ ಸ್ವತಂತ್ರರಾಷ್ಟ್ರದ ಪ್ರಜೆಯಂತೆ ತಾನೂ ಪೂರ್ಣಸ್ವತಂತ್ರನು, ಹಾಗೂ ತನ್ನ ರಾಷ್ಟ್ರವಾದ ಹಿಂದುಸ್ಥಾನವೂ ಉಳಿದ ಸ್ವತಂತ್ರರಾಷ್ಟ್ರಗಳಂತೆ ಸ್ವತಂತ್ರವು—ಎಂಬ ತಿಳುವಳಿಕೆಯು ಸಂಪೂರ್ಣವಾಗಿ ಉಂಟಾಗಬೇಕು. ಪ್ರಜಾಪ್ರಭುತ್ವವನ್ನು ಸಂಪೂರ್ಣವಾಗಿ ತಿಳಿದುಕೊಳ್ಳುವುದಲ್ಲದೆ ಪ್ರಭುತ್ವವನ್ನು ನಿರ್ಮಿಸುವ ಶಕ್ತಿಯು ಕೂಡ ತನ್ನಲ್ಲಿರುವುದೆಂದೂ ಪ್ರಸಂಗ ಬಂದಾಗಿದರೆ ಹಾಗೆ ನಿರ್ಮಿಸಿಕೊಳ್ಳುವುದು ತನ್ನ ಕರ್ತವ್ಯವೆಂದೂ ತಿಳಿದುಕೊಳ್ಳಬೇಕು. ಈ ಎಲ್ಲ ಉದ್ದೇಶಪೂರ್ತಿಗಾಗಿ ಈ ಕೆಳಗಿನ ಕಾರ್ಯಕ್ರಮವನ್ನು ಕೈಕೊಳ್ಳಬೇಕೆಂದು ಗೊತ್ತುಮಾಡಲ್ಪಟ್ಟಿದೆ.

## ಬಡತನವನ್ನೂ ಶ್ರೀಮಂತಿಕೆಯನ್ನೂ ಸಮಮಾಡುವುದು.

ಜಗತ್ತು ಈಶ್ವರನದು. ನಾವು ಅವನ ಮಕ್ಕಳು. ಸಂಪತ್ತೆಲ್ಲವೂ ರಾಷ್ಟ್ರದ ಅಧೀನವಾದದ್ದು. ಯಾವ ವ್ಯಕ್ತಿಯೂ ಅದನ್ನು ತನ್ನದಾಗಿ ಮಾಡಿಕೊಳ್ಳಲಾರನು. ರಾಷ್ಟ್ರದ ಪ್ರಜೆಗಳಲ್ಲಿ ರಾಷ್ಟ್ರದ ಅಧೀನವಾದ ಸಂಪತ್ತು ಸರಿಯಾಗಿ ಹಂಚಲ್ಪಡಬೇಕು. ಮತ್ತು ಅದರಂತೆಯೆ ಸಂಪಾದನೆಯ ಮಾರ್ಗವಾದ ಪ್ರತಿಯೊಂದು ಕೈಗಾರಿಕೆಯೂ ರಾಷ್ಟ್ರದ ವಶದಲ್ಲಿರತಕ್ಕದ್ದು. ಒಬ್ಬನು ತನ್ನ ಹೊಟ್ಟೆ ತುಂಬ ಹಿಟ್ಟನ್ನು ಸಂಪಾದಿಸಲು ಹಗಲೆಲ್ಲಾ ದುಡಿಯುವುದು; ಹೀಗೆ ದುಡಿದರೂ ಕೂಡ ಸಾಕಾದಷ್ಟು ಹಿಟ್ಟು ದೊರೆಯದೆ ಇರುವುದು ಒಂದು ಕಡೆ. ಏನೂ ದುಡಿಯದೆ, ಒಂದು ಬೆವರಹನಿಯನ್ನೂ ಕೂಡ ಹರಿಸದೆ ಹಂಸತೂಲಿಕಾತಲ್ಪದ ಮೇಲೆ ಮೆರೆಯುವ ಶ್ರೀಮಂತರ ಚಿತ್ರವು ಇನ್ನೊಂದು ಕಡೆ. ಹೀಗಿರುವ ಈ ಸಮಾಜವ್ಯವಸ್ಥೆಯನ್ನು ತಳಬುಡ ಮಾಡಲೇಬೇಕು. ರಾಷ್ಟ್ರದ ಐಶ್ವರ್ಯವಂತರ ಐಶ್ವರ್ಯವೆಲ್ಲವೂ ರಾಷ್ಟ್ರಭಾಂಡಾರಕ್ಕೆ ಸೇರಿಸಲ್ಪಡಬೇಕು. ರಾಷ್ಟ್ರದ ಸಂಪತ್ತು ರಾಷ್ಟ್ರದ ಪ್ರಜೆಗಳಲ್ಲಿ ಸಮನಾಗಿ ಹಂಚಲ್ಪಡಬೇಕು. ಹೊಟ್ಟೆಗಾಗಿ ಎಲ್ಲರೂ ದುಡಿಯಬೇಕು. ಅಥವಾ ದುಡಿಯದೆ ಎಲ್ಲರಿಗೂ ಹಿಟ್ಟು ಸಿಕ್ಕಬೇಕು. ಶ್ರೀಮಂತರ ಹಾಗೂ ಬಡವರ ನಡುವಿನ ಭೇದಭಾವವು ಅಳಿಯಬೇಕು. ಜೀವಸಂರಕ್ಷಣಾರ್ಥವಾಗಿ ಬೇಕಾಗುವ ಆಹಾರವೂ ಮಾನರಕ್ಷಣೆಗಾಗಿ ಮೈತುಂಬ ಬಟ್ಟೆಯೂ ಸಂಸಾರರಕ್ಷಣಾರ್ಥವಾಗಿ ಮನೆಯೂ ಎಲ್ಲರಿಗೂ ಸಿಕ್ಕುವುದು ಜನ್ಮಸಿದ್ಧವಾದ ಹಕ್ಕು. ಇದು ಮೊದಲನೆಯ ಮಾರ್ಗ.

## ಬಡವರು ಮತ್ತು ಭಾಗ್ಯವಂತರು ಇವರಲ್ಲಿ ಕೈಗಾರಿಕೆಯ ಹಂಚುವಿಕೆ.

ದುಡಿಯಬೇಕೆಂದು ಮನಃಪೂರ್ವಕವಾಗಿ ಪ್ರಯತ್ನಪಡುವ ಪ್ರತಿಯೊಬ್ಬನಿಗೂ ಉದ್ಯೋಗವು ಸಿಕ್ಕಲೇಬೇಕು. ಇಂದಿನ ಯಂತ್ರಯುಗದಲ್ಲಿ ಯಂತ್ರಗಳು ಹೆಚ್ಚಿ ಕೋಟ್ಯಂತರ ಜನರಿಗೆ ಕೂಲಿಯು ದೊರೆಯದೆ ಹೋಗುತ್ತಿರುವುದು ಯಾರಿಗೂ ತಿಳಿಯದ ವಿಷಯವಲ್ಲ. ಹಣ ಸಂಪಾದನೆಯ ಮಾರ್ಗಗಳು ಎರಡು. ಒಂದು ಸಣ್ಣ ರೀತಿಯಲ್ಲಿ ಪ್ರತಿಯೊಬ್ಬ ವ್ಯಕ್ತಿಯು ತನಗೆ ಬೇಕಾಗುವುದನ್ನೆಲ್ಲ ಕಲ್ಪಿಸಿಕೊಳ್ಳುವುದು. ಇನ್ನೊಂದು ಯಂತ್ರಸಹಾಯದಿಂದ ತನಗೆ ಬೇಕಾದುದಕ್ಕಿಂತ ಅದೆಷ್ಟೋಪಟ್ಟು ಕಲ್ಪಿಸಿ



CC-0. Jangamwadi Math Collection. Digitized by eGangotri

ಕೊಂಡು ಉಳಿದವರನ್ನು ನಿರುದ್ಯೋಗಿಗಳನ್ನಾಗಿ ಮಾಡುವುದು. ರಾಷ್ಟ್ರದ ಹಿತದೃಷ್ಟಿಯಿಂದ ಹೀಗೆ ಯಂತ್ರ ಸಹಾಯದಿಂದಾದ ಕಸಬು ಕೈಗಾರಿಕೆ ಅಥವಾ ಉದ್ಯೋಗಗಳು ರಾಷ್ಟ್ರಕ್ಕೆ ವಿಘಾತಕವಾದುವುಗಳು. ಕೃಷಿಪ್ರಧಾನವಾದ ನಮ್ಮ ಹಿಂದುಸ್ಥಾನಕ್ಕಂತೂ ಸದ್ಯದಲ್ಲಿ ಯಂತ್ರಗಳಿಂದ ಪ್ರಯೋಜನವೇ ಇಲ್ಲ.

ಯಾವುದೇ ಒಂದು ರಾಷ್ಟ್ರದ ಉನ್ನತಿ ಅವನತಿಗಳು ಆ ರಾಷ್ಟ್ರದ ಶ್ರೀಮಂತರನ್ನೇ ಅವಲಂಬಿಸಿರುವುವು. ಸದ್ಯದಲ್ಲಿ ನಮ್ಮ ಶ್ರೀಮಂತರೆಲ್ಲರೂ ಪರದೇಶದ ದೊಡ್ಡ ದೊಡ್ಡ ಬಂಡವಾಳಗಾರರ ದಲ್ಲಾಳಿಗಳೆಂದು ಧಾರಾಳವಾಗಿ ಹೇಳಬಹುದು. ಅವರು ಮಾಡುತ್ತಿರುವ ಯಾವ ವ್ಯಾಪಾರವೇ ಆಗಲಿ, ಅದರಿಂದ ಹಳ್ಳಿಗಳ ಬೊಕ್ಕಸವೆಲ್ಲವೂ ಹನಿ ಹನಿ ಸೇರಿ ಹೊಳೆಯಾಗಿ ಪರದೇಶಕ್ಕೆ ಹರಿದುಹೋಗುತ್ತಿರುವುದು. ರಾಷ್ಟ್ರಹಿತದ ದೃಷ್ಟಿಯಿಂದ ಇದನ್ನು ತಡೆದು ನಿಲ್ಲಿಸಲೇ ಬೇಕು. ಹಳ್ಳಿಗಳಿಂದಲೂ ಪಟ್ಟಣಗಳಿಂದಲೂ ಪರದೇಶಗಳಿಗೆ ಹೋಗುತ್ತಿರುವ ಸಂಪತ್ತನ್ನು ತಡೆದು ನಿಲ್ಲಿಸಲೇ ಬೇಕು. ಇವೆಲ್ಲವುಗಳಿಗೆ ಉಪಾಯವೆಂದರೆ ಬಡವರಿಂದ ಕೈಗಾರಿಕೆಗಳನ್ನು ಕಸಿದುಕೊಂಡಿದ್ದ ಶ್ರೀಮಂತರಿಂದ ಅವುಗಳನ್ನು ಕಿತ್ತುಕೊಂಡು, ಮೊದಲಿನಂತೆ ಬಡವರಿಗೆ ಕೊಟ್ಟುಬಿಡುವುದು. ಶ್ರೀಮಂತರ ಕೈಗಾರಿಕೆಗಳನ್ನು ಶ್ರೀಮಂತರಿಗೇ ಬಿಟ್ಟುಕೊಡುವುದು. ಬಡವರ ಕೈಗಾರಿಕೆಗಳನ್ನು ಮೊದಲು ಶ್ರೀಮಂತರಿಂದ ಸರಕಾರವು ಕಿತ್ತುಕೊಳ್ಳಲೇಬೇಕೆಂಬುದೂ ಶ್ರೀಮಂತರ ಕೈಗಾರಿಕೆಗಳನ್ನು ಶ್ರೀಮಂತರಿಗೆ ಬಿಟ್ಟುಕೊಡಲೇಬೇಕೆಂಬುದೂ ಸ್ಪಷ್ಟವಾದಂತಾಯಿತು. ಹೀಗೆ ಶ್ರೀಮಂತರಿಂದ ಕಿತ್ತುಕೊಂಡ ಕೈಕಸಬುಗಳನ್ನೆಲ್ಲಾ ಬಡವರಿಗೆ ತಿರುಗಿ ಕೊಟ್ಟುಬಿಡಬೇಕು. ಇದರಿಂದ ದೇಶದ ಪ್ರಜೆಗಳಲ್ಲಿ ನೆಲಸಿರುವ ನಿರುದ್ಯೋಗತನವು ಹೊರಟು ಹೋಗುವುದು. ಕಸಬು ಮಾಡುವ ಪ್ರತಿಯೊಬ್ಬನಿಗೂ ಕೆಲಸ ಸಿಕ್ಕಿ ತನ್ನ ಸಂಸಾರರಕ್ಷಣೆಯಾಗುವುದು. ಹಾಗೂ ನಮ್ಮ ದೇಶದ ಸಂಪತ್ತು ನಮ್ಮ ದೇಶದಲ್ಲಿಯೇ ಉಳಿಯುವುದು.

ಇನ್ನು ನಮ್ಮ ಶ್ರೀಮಂತರೆಂಬವರ ಪಾಡು ಏನೆಂದು ಪ್ರಶ್ನೆಯು ಉದ್ಭವಿಸುವುದು. ಅವರಾದರೂ ನಮ್ಮವರೇ. ನಮ್ಮ ದೇಶದವರೇ. ಸ್ವಜನರಾದ ಅವರಲ್ಲಿದ್ದ ಧನವು ಸ್ವದೇಶಹಿತಕ್ಕಾಗಿಯೆ ಉಪಯೋಗಿಸಲ್ಪಡಬೇಕೆಂಬುದೇ ದೇಶದ ಕೈಗಾರಿಕೆಗಳು ಬಡವರಲ್ಲಿಯೂ ಶ್ರೀಮಂತರಲ್ಲಿಯೂ ಸಮನಾಗಿ ಹಂಚಲ್ಪಡಬೇಕೆಂಬ ತತ್ವದ ತಾತ್ಪರ್ಯವು. ಆದ್ದರಿಂದ ಕೈಗಾರಿಕೆಗಳನ್ನು ಬಡವರಿಗಾಗಿ ಶ್ರೀಮಂತರು ಬಿಟ್ಟುಕೊಟ್ಟಮೇಲೆ, ಅವರು ತಮ್ಮ ದರ್ಜೆಗನುಗುಣವಾದ ದೊಡ್ಡ ದೊಡ್ಡ ಉದ್ಯೋಗಗಳನ್ನು ಕೈಕೊಂಡು, ದೇಶದ ಅಭ್ಯುದಯವನ್ನು ಕಣ್ಣು ಮುಂದಿಟ್ಟುಕೊಂಡು ಕಾರ್ಯನಡೆಯಿಸಬೇಕು. ಆ ಉದ್ಯೋಗಗಳಾವುವೆಂದರೆ ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳೆ, ಕಬ್ಬಿಣ, ಉಕ್ಕು, ಮೋಟಾರು, ರೈಲು, ಜಹಜು ವಿದ್ಯುತ್‌ಶಕ್ತಿ ಮೊದಲಾದವುಗಳು.

ಇನ್ನು ಬಡವರ ಕೈಗೆ ಬರಬೇಕಾದ ಕೈಗಾರಿಕೆಗಳೆಂದರೆ ಯಾವುವೆಂಬುದು ತಿಳಿದ ವಿಷಯ. ನಮ್ಮಲ್ಲಿಯ ಕೈಗಾರಿಕೆಗಳ ಹೆಚ್ಚಳಿಕೆಯಿಂದ ನಮ್ಮ ಸಂರಕ್ಷಣೆಯಾಗುವುದಲ್ಲದೆ, ಕೃಷಿಪ್ರಧಾನವಾದ ನಮ್ಮ ದೇಶದ ಕೃಷಿಕರ್ಮಕ್ಕೆ ಅವಶ್ಯವಿರುವ ದನಗಳ ಸಂರಕ್ಷಣೆಯೂ ತನ್ನಷ್ಟಕ್ಕೆ ತಾನೆ ಆಗುತ್ತ ಹೋಗುವುದು.

ಪ್ರತಿಯೊಬ್ಬ ಮನುಷ್ಯನಿಗೂ ತಿನ್ನಲು ಆಹಾರ, ಉಡಲು ಬಟ್ಟೆ, ಇರಲು ಮನೆ, ಇವುಗಳ ಜೊತೆಗೆ ರೋಗರುಜಿನಗಳಿಂದ ಪಾರಾಗಲು ಬೇಕಾಗುವ ಔಷಧ ಸಹಾಯ—ಇವುಗಳಕೊರತೆಗಳೇ ಪ್ರಧಾನವಾದುವುಗಳು. ನಮ್ಮ ಆರೋಗ್ಯರಕ್ಷಣೆಗೆ ನಮ್ಮ ದೇಶದ ಸೊಪ್ಪು ತೊಪ್ಪಲ ವನಸ್ಪತಿಗಳೇ ಸಿಗಬೇಕು. ಅವುಗಳಿಂದಲೇ ನಾವು ಬದುಕಬೇಕು ಇಲ್ಲವೆ ಸಾಯಬೇಕು. (ಡಾಕ್ಟರರ ಔಷಧಗಳಿಂದ ಎಷ್ಟು ಜನರು ಸತ್ತಿಲ್ಲ! ನಮ್ಮ ವೈದ್ಯರ ಔಷಧಗಳಿಂದ ಎಷ್ಟು ಜನರು ಬದುಕಿಲ್ಲ!) ಇವುಗಳನ್ನೆಲ್ಲಾ ಪೂರಯಿಸಿ ಕೊಡುವುದೇ ಸರಕಾರದ ಕೆಲಸ.

ಪ್ರತಿಯೊಂದು ಹಳ್ಳಿಯ ಒಕ್ಕಲಿಗರಿಂದ ಬೆಳೆಯಿಸಲ್ಪಟ್ಟ ಹತ್ತಿಯನ್ನು ಅಲ್ಲಿಯೇ ಅರೆದು, ಆ ಅರಳೆಯನ್ನು ಅಲ್ಲಿಯೇ ನೂತು, ಆ ನೂಲನ್ನು ಅಲ್ಲಿಯೇ ಬಟ್ಟೆಮಾಡಿಸಿ, ಅದನ್ನು ಉಡಲು ಉಪಯೋಗಿಸಬೇಕು. ಇದರಿಂದ ಜನರಿಗೆ ಇತ್ತ ಉಡಲು ಬಟ್ಟೆಯಾಗುವುದು; ಹಾಗೂ ಹತ್ತಿಯಲ್ಲಿ ಹೊರಡುವ ಕಾಳು ದನಕ್ಕೆ ಒಳ್ಳೆ ಆಹಾರವಾಗುವುದು. ಇದರಂತೆಯೇ ಕುಟ್ಟುವುದೂ ಬೀಸುವುದೂ ಎಣ್ಣೆ ತೆಗೆಯುವುದೂ ಉಪ್ಪುತಯಾರಿಸಿಕೊಳ್ಳುವುದೂ ಕಂಬಳಿಮಾಡುವುದೂ ಚರ್ಮದ ಕೆಲಸವೂ ಮರದ ಕೆಲ

CC-0. Jangamwadi Math Collection. Digitized by eGangotri

ವೂ ಇವೆಲ್ಲವುಗಳು ಹಳ್ಳಿಹಳ್ಳಿಯಲ್ಲಿಯೂ ಹೆಚ್ಚಾಗ ಬೇಕು. ಪ್ರತಿಯೊಂದು ಕೈಕಸಬೂ ಜನಕ್ಕೂ ದನಕ್ಕೂ ಸಮನಾದ ಸಹಾಯಕವಾಗಿರುವುದು. ಕುಟ್ಟುವುದರಿಂದ ಕಾಳು ಜನಗಳಿಗೂ ತೌಡು ದನಗಳಿಗೂ, ಎಣ್ಣೆ ತೆಗೆಯು ವುದರಿಂದ ಎಣ್ಣೆ ಜನಗಳಿಗೂ ಹಿಂಡಿ ದನಗಳಿಗೂ, ಉಪ್ಪು ಮಾಡುವುದರಿಂದ ಉಪ್ಪು ಜನಗಳಿಗೂ ಅತಿಪುಷ್ಟಕರ ವಾದ ಉಪ್ಪಿನ ಕೆನೆಯ ಚಕ್ಕೆಗಳು ದನಗಳಿಗೂ ದೊರೆಯು ವವು. ಕಂಬಳಿಗಳ ನೇಯ್ಗೆಯಿಂದ ಇತ್ತ ಜನಗಳು ಚಳಿ ಮಳೆಗಾಳಿಗಳಿಂದ ಕಾಪಾಡಲ್ಪಡುತ್ತಾರೆ; ಅತ್ತ ಕುರಿಗಳ ಗೊಬ್ಬರವು ಹೊಲಗಳಲ್ಲಿ ಬೆಳೆದು ದನಗಳಿಗೂ ಹೊಲ ಗಳಿಗೂ ಅನುಕೂಲವಾಗುತ್ತದೆ. ಹೀಗೆ ಉಭಯದಾಯಕ ವಾದ ಈ ಯೋಜನೆಯೆಂದರೆ ರಾಷ್ಟ್ರದ ಪ್ರತಿಯೊಂದು ಅಂಗವೂ ಪುಷ್ಟವಾಗುವಂತೆ ಬದಲಾವಣೆಯು. ಇದೆಂದರೆ ಹಸಿದು ಕಂಗಾಲಾಗಿರುವ ನಮ್ಮ ಬಡ ಜನರಿಗೆ ಅನ್ನ ವನ್ನು ಕೊಡುವುದು. ಇದೆಂದರೆ ಸದ್ಯಕ್ಕಿರುವ ನಿರು ದ್ಯೋಗತನದ ಹಾಹಾಕಾರವನ್ನು ಹೊಡೆದೋಡಿಸು ವುದು. ಇಂತಹ ಈ ಕೈಗಾರಿಕೆಗಳನ್ನು ಮುಂದೆ ಬರುವ ಯಾವುದೇ ಸ್ವರಾಜ್ಯವಾಗಲಿ —ಶ್ರೀಮಂತರಿಂದ ಕಿತ್ತು ಕೊಂಡು ಬಡವರಲ್ಲಿ ಹಂಚಲೇಬೇಕು. ಶ್ರೀಮಂತರ ಕೈ ಗಾರಿಕೆಗಳನ್ನು ಶ್ರೀಮಂತರಿಗೆ ಕೊಡಲೇಬೇಕು. ಸ್ವತಃ ಸರಕಾರವೇ ವ್ಯಾಪಾರದ ಗೊಂದಲದಲ್ಲಿ ಬೀಳಬಾರದು. ಅದು ನಮ್ಮ ವ್ಯಾಪಾರದ ರಕ್ಷಣೆಯ ಹಾಗೂ ನಮ್ಮ ಸಂರಕ್ಷಣೆಯ ಸಂಸ್ಥೆಯಾಗಬೇಕಲ್ಲದೆ ವ್ಯಾಪಾರಸೂತ್ರ ಗಳೆಲ್ಲ ಪ್ರಜೆಗಳ ಅಧೀನದಲ್ಲಿರಲೇಬೇಕು.

## ವ್ಯಾಪಾರಸ್ಥರಿಗೆ ಎಚ್ಚರಿಕೆ.

ಪಟ್ಟಣಗಳಿಂದಲೇ ಹಳ್ಳಿಗಳ ಸಂರಕ್ಷಣೆಯಾಗಬೇಕು. ಪಟ್ಟಣವಾಸಿಗಳ ಎಲ್ಲ ವ್ಯಾಪಾರವೂ ಹಳ್ಳಿಗಳ ಕೈಗಾರಿ ಕೆಗಳ ಮೇಲೆ ಅವಲಂಬಿಸಿರಬೇಕು. ಯಾರೇ ಆಗಲಿ, ತಾನು ಕೈಕೊಳ್ಳುವ ವ್ಯಾಪಾರದಿಂದಾಗುವ ಅನಾಹುತ ಗಳನ್ನು ಮೊದಲು ತಿಳಿದುಕೊಳ್ಳಬೇಕು. ತಾನು ಕೈ ಕೊಂಡ ವ್ಯಾಪಾರವು ತನ್ನ ದೇಶದ ಜನಕ್ಕೆ ಹಿತವನ್ನುಂ ಟುಮಾಡುವುದೇ ಬಿಡುವುದೇ—ಎಂಬುದನ್ನು ವಿಮರ್ಶಿಸಿ ಅದಕ್ಕೆ ಕೈಹಾಕಬೇಕು. ರಾಷ್ಟ್ರಘಾತಕ, ಎಂದರೆ ಹಳ್ಳಿಗಳಕೈಗಾರಿಕೆಗಳ ಮೇಲೆ ಗದಾಪ್ರಹಾರವನ್ನು ತರು ವ ಯಾವ ವ್ಯಾಪಾರವೇ ಆಗಲಿ ಅದಕ್ಕೆ ನಮ್ಮ ಸ್ವತಂತ್ರ ಭಾರತದಲ್ಲಿ ಸ್ಥಾನ ಸಿಕ್ಕಬಾರದು. ಕಾಂಗ್ರೆಸ್ಸಿನವರು ಕೈಕೊಂಡ ವೇರೆಗೆ ಪರದೇಶೀ ಮಾಲುಗಳನ್ನು ಮಾರುವ ಅಂಗಡಿಗಳ ಬಹಿಷ್ಕಾರವಾದಂತೆ, ಹಳ್ಳಿಗಾಡಿನ ಕೈಗಾ ರಿಕೆಗಳನ್ನು ಮುರಿದೊಗೆಯಬೇಕೆಂದು ಹೊರಟ ಯಂ ತ್ರಾರಾಧಕರಾದ ಪಟ್ಟಣದ ವರ್ತಕರ ಬಹಿಷ್ಕಾರವಾದ ರೂ ಆಗುವುದೆಂದು ಘಂಟಾಘೋಷವಾಗಿ ಹೇಳಬಲ್ಲೆವು. ರಾಷ್ಟ್ರದ ನೈತಿಕಬಲವನ್ನೂ ಆರೋಗ್ಯವನ್ನೂ ಹಾ ಳುಮಾಡುವ ಸರೆ ಸೇಂದಿ ಅಂಗಡಿಗಳೆದುರಿನಲ್ಲಿ ಪಿಕೆಟಿಂಗ್ ಆದಂತೆ, ರಾಷ್ಟ್ರದ ಕೈಗಾರಿಕೆಯನ್ನು ಹಾಳುಮಾಡಿ ರಾಷ್ಟ್ರದ ಸಂಪದಭಿವೃದ್ಧಿಯನ್ನು ತಡೆಗಟ್ಟುವಂತಹ ವ್ಯಾಪಾರಸ್ಥರ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡು ವುದು ಪ್ರಜೆಗಳ ಸ್ವಭಾವಸಿದ್ಧವಾದ ಹಕ್ಕು. ಪಟ್ಟಣ ಹಳ್ಳಿಗಳೆರಡೂ ಪರಸ್ಪರಾವಲಂಬಿಗಳಾಗಿರಬೇಕು. ಪಟ್ಟ ಣಕ್ಕೆ ಬೇಕಾದುದನ್ನು ಹಳ್ಳಿಯು ಪೂರಯಿಸಬಹುದಾದು ದನ್ನು ಪಟ್ಟಣವು ಕೊಳ್ಳಬೇಕು. ಇದು ಎರಡನೆಯ ಮಾರ್ಗ.

## ಯಂತ್ರಗಳ ಅನಾಹುತ

ಯಂತ್ರಗಳನ್ನೇ ಅವಲಂಬಿಸಿರುವ ರಾಷ್ಟ್ರಗಳ ಹೀನಾ ವಸ್ಥೆಯು ಈಗೀಗ ಹೆಚ್ಚು ಸ್ಪಷ್ಟವಾಗಿ ಕಂಡುಬರ ಹತ್ತಿದೆ. ಯಂತ್ರಸಹಾಯದಿಂದ ನಮಗೆ ಬೇಕಾಗಿರು ವುದಕ್ಕಿಂತ ಹೆಚ್ಚು ಮಾಲನ್ನು ಪ್ರತಿಯೊಂದು ರಾಷ್ಟ್ರ ವೂ ತಯಾರಿಸಿ, ಅದನ್ನು ಇತರರು ಕೊಳ್ಳುವಂತೆ ಮಾಡಲು ತಮ್ಮ ಎಲ್ಲ ಶಕ್ತಿಯುಕ್ತಿಗಳನ್ನೂ ಉಪ ಯೋಗಿಸುತ್ತಿದ್ದರೂ ಸಾಧ್ಯವಾಗದೆ ಇರುವುದು. ಇದ ರಿಂದ ರಾಷ್ಟ್ರರಾಷ್ಟ್ರಗಳಲ್ಲಿ ಯುದ್ಧಗಳಾಗಿರುವುವು. ಮುಂದಾದರೂ ಇವುಗಳ ಅವಸ್ಥೆಯೇನೆಂಬುದು ಇಂದಿನ ಅವುಗಳ ಶೋಚನೀಯಸ್ಥಿತಿಯನ್ನು ನೋಡಿದರೆ ಭಯಂ ಕರವಾಗಿರುವುದು. ಇತ್ತ ಜಪಾನ್, ಚೈನಾ ಕಲಹವೂ, ಅತ್ತ ರಷ್ಯಾ ಹಾಗೂ ಯುರೋಪ್‌ಖಂಡದ ಭಿನ್ನಾಭಿ ಪ್ರಾಯವೂ ಇವುಗಳ ಜೊತೆಗೆ ಇಂಗ್ಲೆಂಡಿನ ಸಾರ್ವ ಭೌಮತ್ವವನ್ನು ಸಂರಕ್ಷಿಸಲು ಪರರನ್ನು ದಾಸ್ಯದಲ್ಲಿ ಶಾಶ್ವತವಾಗಿಟ್ಟು ತಮ್ಮ ಮಾಲನ್ನೇ ಕೊಳ್ಳುವಂತೆ ಮಾಡ ಬೇಕೆಂಬ ಪ್ರಯತ್ನವೂ, ಜರ್ಮನಿಯ ಆರ್ಥಿಕ ವಿಪ್ಲವವೂ ಅಮೆರಿಕೆಯ ಸಾಹುಕಾರಿಕೆಯ ಹುಚ್ಚೂ ಜನರ ಗೊಂದಲ ವನ್ನು ಹೆಚ್ಚಿಸಿದನ್ನು ನೋಡಿದರೆ ಆ ರಾಷ್ಟ್ರಗಳಿಗೂ

CC-0. Jangamwadi Math Collection. Digitized by eGangotri

ಕೂಡ ಯಂತ್ರಗಳಿಂದ ಸುಖಶಾಂತಿಗಳು ಲಭಿಸಲಿಲ್ಲವೆಂದು ಧಾರಾಳವಾಗಿ ಹೇಳಬಹುದು.

## ಶ್ರೀಮಂತರಿಗೆ ಎಚ್ಚರಿಕೆ.

ಶ್ರೀಮಂತರೇ! ಮೇಲಿನ ಎರಡು ಮಾರ್ಗಗಳಲ್ಲಿ ಯಾವುದನ್ನು ನೀವು ಹಿಡಿಯುವಿರಿ? ನಿಮ್ಮ ಸಂಪತ್ತೆಲ್ಲವನ್ನೂ ಬಡವರಲ್ಲಿ ಹಂಚಿ, ಎಲ್ಲರೂ ಸರಿಸಮಾನಸ್ಕಂಧರಾಗುವಂತೆ ಮಾಡುವಿರೋ? ಅಥವಾ ಬಡವರ ಕೈಗಾರಿಕೆಗಳನ್ನು ಅವರಿಗೆ ತಿರುಗಿ ಬಿಟ್ಟುಕೊಡುವಿರೋ? ನಿಮ್ಮಲ್ಲಿರುವ ಸಂಪತ್ತು ದೇಶದ ಸಂಪತ್ತು. ಅದನ್ನು ಜೀವವಿಲ್ಲದ ದೇಹದಂತೆ ನಿಮ್ಮಲ್ಲಿ ಇಟ್ಟುಕೊಳ್ಳದೆ ಸಚೇತನವನ್ನಾಗಿರಿಸಿ, ಸರ್ವರಿಗೂ ಅದರ ಸಹಾಯದಿಂದ ಹೊಟ್ಟೆಬಟ್ಟೆಯನ್ನು ಕಲ್ಪಿಸಿಕೊಡುವುದು ಪ್ರತಿಯೊಬ್ಬನ ಕರ್ತವ್ಯವು. ಇದಕ್ಕೆ ಸರ್ವ ರೀತಿಯಿಂದಲೂ ಸಹಾಯಮಾಡುವುದು ನಮ್ಮ ಸ್ವರಾಜ್ಯದ ಸಂಕಲ್ಪ.

## ಮೂರುವರ್ಷಗಳ ಕಾರ್ಯಕ್ರಮ.

ತಗಡೂರಿನ ಸುತ್ತುಮುತ್ತಲೂ ಇರುವ ಸುಮಾರು ನೂರು ಗ್ರಾಮಗಳನ್ನು ಸೇರಿಸಿ, ನಮ್ಮ ಕೆಲಸ ಕಾರ್ಯಗಳಿಗಾಗಿ ಮಾದರಿಯ ತಾಲ್ಲೂಕನ್ನು ಮಾಡಿಕೊಂಡಿದೆ.

ಸುಮಾರು ಇಪ್ಪತ್ತು ಗ್ರಾಮಗಳಿಗೆ ಒಂದರಂತೆ ಐದು ಕೇಂದ್ರಗಳನ್ನು ಸ್ಥಾಪಿಸುವುದು. ಖಾದಿಯ ಹುಟ್ಟುವಳಿಗಾಗಿ ಖಾದೀಸಂಸ್ಥೆಯೂ ಶಿಕ್ಷಣಕಾರ್ಯಕ್ಕಾಗಿ ಒಂದು ಪಾಠಶಾಲೆಯೂ ಹಾಗೂ ಜನರಿಗೂ ದನಗಳಿಗೂ ಕೂಡಿ ಆಸ್ಪತ್ರೆಯೂ, ರಾಷ್ಟ್ರಭಾಷೆಯಾದ ಹಿಂದೀಭಾಷೆಯನ್ನು ಕಲಿಸಲು ತಕ್ಕ ವ್ಯವಸ್ಥೆಯೂ, ಹಳ್ಳಿಗಳ ಆರೋಗ್ಯಸಂರಕ್ಷಣೆಯ ಕಾರ್ಯಕ್ಕಾಗಿ "ಗ್ರಾಮ ನಿರ್ಮಲೀಕರಣ" ಸಂಘವೂ ಸ್ಥಾಪನೆಯಾಗಬೇಕು.

ಪ್ರತಿ ಕೇಂದ್ರದಲ್ಲಿ ಕೆಲಸ ಮಾಡುವವರು ಐದು ಜನರು. ಒಬ್ಬರು ಅಲ್ಲಿಯೇ ಇದ್ದು 'ಖಾದೀ ಸಂಸ್ಥೆಯ' ಹಾಗೂ ಇತರ ಮೇಲ್ವಿಚಾರಣೆಯ ಕೆಲಸವನ್ನು ನೋಡಿಕೊಳ್ಳತಕ್ಕದ್ದು. ಒಬ್ಬ ವೈದ್ಯರು, ಒಬ್ಬ ಉಪಾಧ್ಯಾಯರು ಹಾಗೂ ಇಬ್ಬರು ನೂಲುವ ಪ್ರಚಾರಕರು ಇರತಕ್ಕದ್ದು. ಇವರೆಲ್ಲರಿಗೂ ಸಮನಾಗಿ ಹದಿನೈದರಂತೆ ಸಂಬಳ ಕೊಡತಕ್ಕದು. ಎಂದರೆ ಎಪ್ಪತ್ತೈದು ರೂಪಾಯಿಗಳು. ಅಲ್ಲದೆ ಸಾದಿಲವಾರು ಮತ್ತು ಇತರ ಪ್ರಚಾರದ ಕೆಲಸಕ್ಕಾಗಿ ತಿಂಗಳೊಂದಕ್ಕೆ ಇಪ್ಪತ್ತೈದು ರೂಪಾಯಿಗಳು. ಹೀಗೆ ಒಟ್ಟು ಪ್ರತಿಯೊಂದು ಕೇಂದ್ರಕ್ಕೂ ನೂರು ರೂಪಾಯಿಗಳಂತೆ ನಾಲ್ಕು ಕೇಂದ್ರಗಳಿಗೆ ತಿಂಗಳಿಗೆ ನಾಲ್ಕುನೂರು ರೂಪಾಯಿಗಳು ಬೇಕಾಗುತ್ತವೆ. ಅಲ್ಲದೆ ತಗಡೂರಿನಲ್ಲಿರುವ ಹೆಡ್ ಆಫೀಸ ವೆಚ್ಚಕ್ಕಾಗಿ ತಿಂಗಳಿಗೆ ಸುಮಾರು ಇನ್ನೂರು ರೂಪಾಯಿಗಳು ಬೇಕಾಗುತ್ತವೆ. ಹೀಗೆ ಒಟ್ಟಿನಲ್ಲಿ ಪ್ರತಿ ತಿಂಗಳಿಗೆ ಈ ಕೆಲಸಕ್ಕಾಗಿ ಆರು ನೂರು ರೂಪಾಯಿಗಳು ಬೇಕು. (ಎಸ್ಟಾಬ್ಲಿಶ್‌ಮೆಂಟ್). ಈಗಾಗಲೇ ತಗಡೂರಿನಲ್ಲಿ ಸ್ಥಾಪಿತವಾಗಿರುವ ಖಾದೀ ಕೇಂದ್ರದ ಹುಟ್ಟುವಳಿಯಿಂದ ಈ ಕೆಲಸಕ್ಕೆ ಬೇಕಾಗುವ ಎರಡುನೂರು ರೂಪಾಯಿಗಳು ದೊರೆಯಬಹುದೆಂದು ತೋರುವುದರಿಂದ ಅದರ ವೆಚ್ಚವನ್ನು ಅದು ನೋಡಿಕೊಳ್ಳುತ್ತದೆ. ಇದೇ ರೀತಿಗೆ ಇನ್ನುಳಿದ ನಾಲ್ಕು ಕೇಂದ್ರಗಳಲ್ಲಿ ಒಂದೊಂದು ಖಾದೀಸಂಸ್ಥೆಯನ್ನು ಸ್ಥಾಪಿಸಿದಲ್ಲಿ ಅವುಗಳಿಗೆ ಬೇಕಾಗಿರುವ ಒಂದೊಂದು ನೂರು ರೂಪಾಯಿಗಳ ಹುಟ್ಟುವಳಿಯಾಗಬಹುದು. ಈ ಖಾದೀ ಕೇಂದ್ರಗಳನ್ನು ಸ್ಥಾಪಿಸಲು ಪ್ರತಿ ಕೇಂದ್ರಕ್ಕೂ ಬೇಕಾಗುವ ಬಂಡವಾಳವು ಎರಡುಸಾವಿರದ ಐದುನೂರು ರೂಪಾಯಿಗಳಂತೆ ನಾಲ್ಕು ಕೇಂದ್ರಗಳಿಗೂ ಒಟ್ಟು ಹತ್ತು ಸಾವಿರ ರೂಪಾಯಿಗಳನ್ನು ಈ ಮೂರು ವರ್ಷಗಳಲ್ಲಿ ಕೂಡಿಸಬೇಕು.

ಈ ಮೂರು ವರ್ಷದಲ್ಲಿ ಈ ತಾಲ್ಲೂಕಿನ ಎಲ್ಲ ಹಳ್ಳಿಗಳ ಜನಸಂಖ್ಯೆಯನ್ನೂ ಕೈಗಾರಿಕೆಗಳ ತಪಸೀಲನ್ನೂ ತಾಲ್ಲೂಕಿನ ನಕಾಶೆಯನ್ನೂ ನಾಲ್ಕು ಕೇಂದ್ರಗಳಿಗೂ ನಾಲ್ಕು ಸ್ವತಂತ್ರ ಕಟ್ಟಡಗಳನ್ನೂ ತಯಾರು ಮಾಡಬೇಕು.

ಈ ಮೇಲ್ಕಂಡ ಮಾದರಿಯ ತಾಲ್ಲೂಕಿನ ರಚನಾಕ್ರಮವನ್ನೂ ಮೂರು ವರ್ಷಗಳ ಕಾರ್ಯಕ್ರಮಗಳನ್ನೂ ಸಂಪೂರ್ಣವಾಗಿ ಓದಿ ಈ ದೇಶದ ಮುಖಂಡರುಗಳು ತಮ್ಮ ಅಭಿಪ್ರಾಯಗಳನ್ನು ಕೊಡಬೇಕಾಗಿ ಪ್ರಾರ್ಥಿಸುತ್ತೇನೆ.

CC-0. Jangamwadi Math Collection. Digitized by eGangotri

# ಚಲಚ್ಚಿತ್ರ

ಶ್ರೀ. ಕೋಟ ಶಿವರಾಮಕಾರಂತ, ಪುತ್ತೂರು.

ಐದನೆಯ ಬರೆಹ

## ಚಿತ್ರರಚನೆ

ಸಾಮಾನ್ಯ ಪ್ರೇಕ್ಷಕರಿಗೆ, ಚಲಚ್ಚಿತ್ರವೊಂದರಲ್ಲಿ ನಟ ನಟಿಯರ ಹೆಸರು ಸ್ಮರಣೆಗೆ ಬರುವುದಲ್ಲದೆ, ಅವರ ನಿರ್ದೇಶಕನ ಹೆಸರು ಬರುವುದಿಲ್ಲ. ಯಾರು ವಿಮರ್ಶಾದೃಷ್ಟಿಯಿಂದ ಚಿತ್ರವನ್ನು ಪರೀಕ್ಷಿಸುವರೋ, ಅಂಥವರಿಗೆ ಮಾತ್ರ ಚಿತ್ರಸೃಷ್ಟಿಯಲ್ಲಿ ನಿರ್ದೇಶಕನಿಗೆ ಯಾವ ಸ್ಥಾನವಿದೆಯೆಂದು ತಿಳಿಯುವುದು. ನಾವು ವಿಚಾರ ಮಾಡಿದಲ್ಲಿ ನಮಗೆ–ಎಂಥ ಪ್ರಾಮುಖ್ಯನಟನಾದರೂ ಅವನು ಕೇವಲ ವಸ್ತುಮಾತ್ರ – ಎಂದು ತಿಳಿದೀತು. ಪಟಲದ ಮೇಲೆ ಅವನನ್ನು ಉಪಯೋಗಿಸಿಕೊಳ್ಳುವ ನಿರ್ದೇಶಕನೇ ಸೃಷ್ಟಿಕರ್ತನು. ಅವನಿಂದಾಗಿ ನಟನಿಗೆ ಸ್ಥಾನಮಾನಗಳಿವೆ. ಹೀಗೆಂದರೆ ನಟನಿಗೆ ಅಥವಾ ನಟನೆಗೆ ಸ್ಥಾನವಿಲ್ಲೆಂದಲ್ಲ. ಆದರೆ ಯಾರೊಬ್ಬರ ಕೆಲಸವೂ ನಿರ್ದೇಶಕನ ಅಧೀನವಾಗಿರಬೇಕು. ನಟನಟಿಯರ ಯೋಗ್ಯತೆಯನ್ನು ಮೆರೆಯಿಸುವುದು ಎರಡೂ ಅವನ ಕೈಯಲ್ಲಿದೆ. ಇದಕ್ಕಾಗಿಯೇ ನಿಜವಾದ ನಿರ್ದೇಶಕನು ಎಂಥವನೆಂದು ನಾವು ತಿಳಿಯುವುದು ಅವಶ್ಯ. ಒಂದು ಕಥೆಯು ನಿರ್ದೇಶಕನ ಕೈಗೆ ಒಮ್ಮೆ ಅರ್ಪಿಸಲ್ಪಟ್ಟಿತೆಂದರೆ, ಅದು ಪೂರ್ಣವಾಗುವತನಕ, ಉಳಿದವರಿಗೆ ಅದರಲ್ಲಿ ಸ್ವಾತಂತ್ರ್ಯವೇ ಇಲ್ಲ. ಯೋಗ್ಯ ನಿರ್ದೇಶಕನು– ತನ್ನ ಮನಸ್ಸಿಗೊಪ್ಪದ ಕಥೆಯನ್ನು ಸ್ವೀಕರಿಸಲಾರನು. ಅದರ ಕಾರಣವಿಷ್ಟೆ; ಅದನ್ನು ಅವನು ಚಿತ್ರರೂಪವಾಗಿ ಪರಿವರ್ತಿಸಬೇಕಾದರೆ ತನ್ನ ಕೆಲಸದ ಮೇಲೆ, ಅರ್ಥಾತ್ ಹಿಡಿದಕಥೆಯ ಮೇಲೆ ಅವನಿಗೆ ಶ್ರದ್ಧೆ ವಿಶ್ವಾಸಗಳಿರಬೇಕು. ಅದಿಲ್ಲದೆ ಅವನು ಕೇವಲ ದ್ರವ್ಯಕ್ಕಾಗಿ ಯಾವ ಕಥೆಯನ್ನೂ ಆರಿಸುವುದಾದರೆ, ಅವನಿಂದಾದ ಸೃಷ್ಟಿಯು ಎಂದಿಗೂ ಕಲೆಯೆನಿಸಲಾರದು. ಕಲೆಯ ನೆಲಗಟ್ಟೇ ಈ ರೀತಿಯ ಪ್ರಾಮಾಣಿಕತೆಯನ್ನು ಹೊಂದಿದೆ. ಚೆನ್ನಾಗಿ ನಿರ್ದೇಶಿಸಬಲ್ಲ ನಿರ್ದೇಶಕನು ತನಗೆ ಬೇಕಾದ ಕಥೆಯನ್ನು ತಾನೇ ಆರಿಸಲೂ ಬಹುದು. ಇಲ್ಲವೆ ಬರೆಯಲೂ ಬಹುದು.



ರಸಿಯದ ಪ್ರಸಿದ್ಧ ನಿರ್ದೇಶಕ ಎಸೆನ್‌ಸ್ಟೈನ್‌ನ "ದಿ ಜನರಲ್‌ಲೈನ್" ಎಂಬುದರೊಳಗಿನ ಚಿತ್ರ.

ಈಗ ಅವನು ಅಂಥದೊಂದು ಕಥೆಯನ್ನು ಆರಿಸಿದನೆಂದು ತಿಳಿಯುವ. ಅವನ ಮುಂದಿನ ಕೆಲಸವೇನು? ಹೆಚ್ಚಾಗಿ ಕಥೆಯ ಸಾರಾಂಶವನ್ನು ಅವನ ಮುಂದಿರಿಸುವುದು ರೂಢಿ. ಅವನು ಅದನ್ನು ಓದಿಕೊಂಡು, ಕಥೆಯ ಕೇಂದ್ರವಿಚಾರವೇನೆಂದು ನಿರ್ಧರಿಸಿ, ಅದಕ್ಕೆ ತಕ್ಕಂತೆ ಪಾತ್ರಗಳ ಲಕ್ಷಣಗಳು ಹೇಗಿರಬೇಕೆಂದು ನಿರ್ಣಯಿಸುವನು. ಕಥಾಪ್ರವಾಹವು, ಕಾವ್ಯದ ದೃಷ್ಟಿಯಿಂದಲ್ಲ. ಯಾವ ಬಗೆಯಲ್ಲಿ ಸಾಗಿದರೆ, ಬಲು ಹೆಚ್ಚಿನ ಭಾವನೋದ್ರೇಕಶಕ್ತಿಯನ್ನು ಗಳಿಸಬಹುದು–ಎಂದು ಯೋಚಿಸುವನು. ಹೀಗೆ ಯೋಚಿಸುವ ಕಾಲದಲ್ಲಿ, ತನ್ನ ಯಾವ ನಟನಟಿಯರು ಯಾವಯಾವ ಭೂಮಿಕೆಗಳನ್ನು ವಹಿಸ

CC-0. Jangamwadi Math Collection. Digitized by eGangotri

ಬಹುದು–ಎಂಬ ಯೋಚನೆಗೇ ಹೋಗಕೂಡದು. ಹಾಗೆ ಎಣಿಸುತ್ತ ಹೋದಲ್ಲಿ, ಚಿತ್ರರಚನೆಯು ಆಯಾಯ ನಟ ನಟಿಯರ ಯೋಗ್ಯತೆಯನ್ನು ಅನುಸರಿಸಿ, ಕಲಾಸೃಷ್ಟಿಯು ಸತ್ವಹೀನವಾಗುವುದು.

ಕಥೆಯ ಮುಖ್ಯಸರಣಿಯನ್ನು ಯೋಚಿಸಿದ ಬಳಿಕ ಅವನು ಅದರ ವಿವರವನ್ನು ಬರೆಯಬೇಕಾಗುತ್ತದೆ. ಚಿತ್ರಪಂಕ್ತಿಯಲ್ಲಿ ಭಾವನೆಗಳೆಲ್ಲ ಯಾವಾವ ರೀತಿಯ ರೂಪಗಳನ್ನು ಧರಿಸಬೇಕು–ಎಂಬುದನ್ನು ಬಿಡಿಸಿ, ಬಿಡಿಸಿ, ಬರೆಯಬೇಕು. ಕಥೆಯ ಬೇರೆ ಬೇರೆ ಭಾಗಗಳು ಯಾವಾವ ರೀತಿಯಲ್ಲಿ ಅಭಿನಯಿಸಲ್ಪಡಬೇಕು? ಯಾವಾವ ಭಾವರಸಗಳನ್ನು ಚಿತ್ರವಸ್ತುಗಳ ಸಹಾಯದಿಂದ– ಯಾವಾವ ರೀತಿಯಲ್ಲಿ ಪರಿವರ್ತಿಸಿದರೆ ಒಳಿತು? ಎಂಬ ಕುರಿತು ಸ್ಪಷ್ಟ ನಿರ್ಧಾರವು ಅವಶ್ಯ. ಚಿತ್ರದ ಪ್ರಭಾಲೇಖನಕ್ಕೆ ತೊಡಗುವ ಮೊದಲು ಯೋಚಿಸುವ ಅಂಶಗಳನ್ನೆಲ್ಲಾ ಯೋಚಿಸಿ ಮುಗಿಸಿರಬೇಕು. ಚಿತ್ರದಲ್ಲಿ ತೋರಿಬರಬೇಕಾದ ವಿಷಯಗಳನ್ನು ತನ್ನ ಕಣ್ಮುಂದೆ ತಾನೇ ಚಿತ್ರಿಸಿಕೊಂಡು, ಅದರ ಗುಣದೋಷಗಳನ್ನು ವಿಮರ್ಶಿಸಿ, ಯಾವಾವ ಪ್ರಸಂಗಗಳಿಗೆ ಎಷ್ಟೆಷ್ಟು ಉದ್ದವಾದ ಪಟಲವು ಬೇಕು? ಅಂಥ ಒಂದೊಂದು ತುಂಡಿನ ಮೇಲೆ ಯಾವಾವ ಪ್ರಹಾರ (Shot)ಗಳು ಬೇಕು? ಅವುಗಳು ಯಾವಕ್ರಮದಲ್ಲಿರಬೇಕು? ಒಂದೊಂದು ಪ್ರಹಾರವು ಸರಿಯಾದ ಭಾವಪ್ರಕಟನೆಗೆ ಎಷ್ಟು ಅಡಿ– ಇಷ್ಟೇ ಅಲ್ಲ, ಎಷ್ಟು ಚೌಕಟ್ಟು (Frame ಒಂದು ಬಿಂಬದಷ್ಟು ವಿಸ್ತಾರ)ಗಳನ್ನು ಆವರಿಸಬೇಕು? ಎಂಬವೇ ಸೂಕ್ಷ್ಮನಿರ್ಧಾರಗಳಲ್ಲಿ ಸಾಗಬೇಕು. ಇದನ್ನು ನಿರ್ಣಯಿಸಲು, ಅವನು ಕಥೆಯು ತನ್ನ ಮುಂದೆ ನಡೆಯುತ್ತಿದೆಯೆಂದು ಊಹಿಸಿ, ಅದರ ಪ್ರತಿಯೊಂದು ಅಂಶವು ಎಷ್ಟೆಷ್ಟು ನಿಮಿಷಕಾಲವನ್ನು ಆವರಿಸುವುದು–ಎಂಬುದನ್ನು ಅವರು ಎಣಿಕೆಹಾಕಬೇಕು. ಪಟಲದ ತುಂಡು ಸ್ವಲ್ಪ ಹೆಚ್ಚು ಉದ್ದವಿದ್ದರೆ ಬೇಸರವುಂಟಾಗುವುದು. ಕಡಿಮೆಯಾದರೆ ಅಭಿಪ್ರಾಯವನ್ನೇ ಕೊಡಲಾರದು. ಯಾವುದಾದರೊಂದು ಪ್ರಹಾರಕ್ಕೆ ಎಷ್ಟಾದರೂ ಉದ್ದದ ಪಟಲವನ್ನು ಉಪಯೋಗಿಸಿದರೆ ಸಾಕು–ಎಂಬ ವಿಚಾರವು ತಪ್ಪು. ಕಥೆಯ ಒಂದೊಂದು ಪ್ರಹಾರಕ್ಕೆ ಬೇಕಾಗುವ ಪಟಲವು ನಿಶ್ಚಿತ ಉದ್ದವಿರಬೇಕು. ಆ ನಿಶ್ಚಿತ ಅಳತೆಗಿಂತ ಉದ್ದ ಇಲ್ಲವೆ ಗಿಡ್ಡವಾಗಿದ್ದರೆ ಎಂದೂ ಸರಿಯಾದ ಭಾವಪ್ರೇರಣೆಯು ಉಂಟಾಗಲಾರದು. ಅದೆಷ್ಟು ಅಳತೆಯ ಪಟಲವು ಬೇಕೆಂದು ನಿರ್ಧರಿಸುವಶಕ್ತಿಯು ಜಾಣನಾದ ನಿರ್ದೇಶಕನಿಗೆ ಮಾತ್ರ ಇರುವುದು. ಈಗಿನ ಹಲವು ನಿರ್ದೇಶಕರು ಒಂದು ಅಡಿ ಪಟಲವು ಚಿತ್ರಕ್ಕೆ ಬೇಕಾದರೆ ನಾಲ್ಕಾರು ಅಡಿ ಪಟಲವನ್ನು ಸಂಗ್ರಹಿಸಿ, ಅದರಿಂದ ಒಂದು ಅಡಿಯನ್ನು ಆರಿಸಿ ತೆಗೆಯುವುದು ರೂಢಿ. ೮೦೦೦ ಅಡಿಯುದ್ದದ ಚಿತ್ರಕ್ಕೆ ೮೦,೦೦೦ ಅಡಿಯುದ್ದದ ಪಟಲವನ್ನು ಸಂಗ್ರಹಿಸುವ ನಿರ್ದೇಶಕರು ಪಾಶ್ಚಾತ್ಯದೇಶಗಳಲ್ಲಿ ವಿರಳರಲ್ಲ. ನಮ್ಮ ದೇಶವು ಬಡದೇಶವಾದುದರಿಂದ ೮೦೦೦ ಅಡಿಬೇಕಾದಲ್ಲಿ ೧೫–೨೦,೦೦೦ದ ವರೆಗೂ ತೆಗೆಯುವುದುಂಟು. ಈ ರೀತಿ ಹೆಚ್ಚು ಹೆಚ್ಚು ಪಟಲವನ್ನು ಉಪಯೋಗಿಸಿದರೆ ತನ್ನ ಯೋಗ್ಯತೆಯು ತೋರಿಸುವುದೆಂದು ತಿಳಿಯುವವರೂ ಉಂಟು. ಆದರೆ ವಿಚಾರ ಮಾಡಿದಲ್ಲಿ, ಈ ರೀತಿಯ ದುರ್ವ್ಯಯವು ಅವನ ಅಲ್ಪಯೋಗ್ಯತೆಯನ್ನು ಸೂಚಿಸುವುದು. ಅವನಿಗೆ ಚಿತ್ರದ ಸ್ಪಷ್ಟವಾದ ಕಲ್ಪನೆಯಿಲ್ಲದೆ ಮನಸ್ಸಿಗೆ ತೋರಿದಂತೆ ಆರಿಸುವವನವನು. ಇಂಥವನ ಚಿತ್ರವು ಅದೃಷ್ಟವು ಸರಿಬಂದಾಗ ಮಾತ್ರ ಸರಿತೋರಬಹುದು.

ಹೀಗೆ ಪಟಲದ ತುಂಡುಗಳ ಅಳತೆಯನ್ನು ನಿರ್ಣಯಿಸಿದಂತೆ, ಯಾವ ಕೋಣದಿಂದ ಪ್ರಭಾಲೇಖನವನ್ನು ಸಂಗ್ರಹಿಸಿದರೆ ಒಳಿತು – ಎಂಬ ತಿಳಿವೂ ಅವಶ್ಯ. ಇದರಲ್ಲೂ ವಿಚಾರಶೀಲತೆಯು ಬೇಕು. ಒಂದು ಭಾವವು ಒಂದೇ ನಿಶ್ಚಿತಕೋಣದಿಂದ ಕಂಡಲ್ಲಿ, ಸಂಪೂರ್ಣ ವಿಕಸಿತವಾಗುವುದು. ಉಳಿದ ಕೋಣಗಳಿಂದ ಸಂಗ್ರಹಿಸಿದ ಚಿತ್ರಗಳೆಲ್ಲ ಎಷ್ಟೆಂದರೂ ಅಪೂರ್ಣವೇ ಸರಿ. ಸಂಪೂರ್ಣವಾದುದಾವುದು?–ಎಂಬುದನ್ನು ಚಿತ್ರಲೇಖನ, ದೃಶ್ಯಲೇಖನಕ್ಕೆ ಪೂರ್ವದಲ್ಲೇ ನಿರ್ಧರಿಸಬಲ್ಲವರು ಸಮರ್ಥರು. ಹಲವರು ಒಂದು ಚಿತ್ರವನ್ನು ನಾಲ್ಕಾರು ಪ್ರಭಾಲೇಖಕಗಳಿಂದ ಸಂಗ್ರಹಿಸಿ, ಅವುಗಳಲ್ಲಿ ಒಳಿತಾದುದನ್ನು ಸಂಗ್ರಹಿಸುವರು. ಇದೂ ಸಹ ಹಣವಿದ್ದವರು ಮಾಡುವ ಅದೃಷ್ಟಪರೀಕ್ಷೆ. ಈ ರೀತಿ ಕೋಣನಿರ್ಧಾರವನ್ನು ಮಾಡಬೇಕಾದರೆ ಅವನ ಮಾನಸಿಕ ಚಿತ್ರದಲ್ಲಿ, ನಟನಟಿಯರ ಉಡುಗೆತೊಡುಗೆ, ಬೆಳಕಿನ ವ್ಯವಸ್ಥೆ, ನಟನಟಿಯರ ಚಲನವಲನ– ಇತ್ಯಾದಿಗಳು ಹೇಗಿರಬೇಕೆಂದು ಎಣಿಸಿಕೊಳ್ಳಬೇಕಾಗುವುದು. ಆದರ ಬದಲು ಹತ್ತೆಂಟು ಕೋಣಗಳಿಂದ

CC-0. Jangamwadi Math Collection. Digitized by eGangotri

ಸಂಗ್ರಹಿಸಿ, ಅವುಗಳಲ್ಲೊಂದನ್ನು ಆರಿಸುವವನು ಪಂಡಿತನೇ? ಅಥವಾ ಅದರಿಂದ ಕಲೆಯು ಉನ್ನತಿಯಿದೆಯೇ? ಸಾವಿರಾರು ರೂಪಾಯಿಗಳನ್ನು ವ್ಯಯಿಸಿ ಒಂದು ದೃಶ್ಯ ಸಂಯುಕ್ತವನ್ನು ಸ್ಥಾಪಿಸುವಾಗ, ಎಲ್ಲಾದರೂ ಹಾಳಾದೀತು—ಎಂಬ ಭೀತಿಯಿಂದ ಮೂರು ನಾಲ್ಕು ಪ್ರಭಾಲೇಖಕಗಳನ್ನು ಉಪಯೋಗಿಸುವುದರಲ್ಲಿ ಅರ್ಥವುಂಟು. ಕಾರಣ ಒಂದು ಚಿತ್ರವು ಹಾಳಾಯಿತೆಂದು, ತಿರುಗಿ ಸಾವಿರಾರು ರೂಪಾಯಿಗಳನ್ನು ವ್ಯಯಿಸಿ ಚಿತ್ರಸಂಗ್ರಹ ಮಾಡಲು ಸಾಧ್ಯವಿಲ್ಲ. ಕೇವಲ ಒಂದು ಸರಿಯಾದ "ಕೋಣ"ದ ನಿರ್ಧಾರ ಮಾಡಲು ಬಾರದೆ ಈ ರೀತಿ ಪರೀಕ್ಷೆ ಮಾಡುವುದು ಒಳಿತಲ್ಲ. ಅಡಿಗೆ ಮಾಡುವವನೊಬ್ಬನು ಹೀಗೆ ಮಾಡಿದರಾದೀತೆ? ಒಂದೊಂದು ಬಗೆಯ ಪದಾರ್ಥವನ್ನು ಹತ್ತೆಂಟು ಸಾರಿ ಬೇರೆಬೇರೆಯಾಗಿ ಮಾಡಿ ಅವುಗಳ ಸವಿ ನೋಡಿ, ಉತ್ತಮವಾದುದೊಂದನ್ನು ಆರಿಸಿ ಬಡಿಸುವವನಿಗೆ ಪಾಕಶಾಸ್ತ್ರದ ಅರಿವುಂಟೆಂದು ಯಾರಾದರೂ ಅನ್ನಬಲ್ಲರೇ?

ಈ ದೃಶ್ಯಲೇಖನಕಾಲದಲ್ಲಿ ನಿರ್ದೇಶಕನು ವಹಿಸಬೇಕಾದ ಕೆಲವು ಹೆಚ್ಚಿನ ಎಚ್ಚರಗಳಿವೆ. ಬೆಳಕಿನ ಯೋಜನೆಯು ಹೇಗಿರಬೇಕು? ಉಡುಗೆ ತೊಡುಗೆಗಳು ಹೇಗಿದ್ದಲ್ಲಿ ಕಥೆಗೆ ಒಪ್ಪಬಹುದು? ಸಂಯುಕ್ತವು ಯಾವ ರೀತಿಯಲ್ಲಿದ್ದರೆ ಕಥಾಭಾವವು ಚೆನ್ನಾಗಿ ಪ್ರಕಟವಾಗಬಹುದು? ಪ್ರಭಾಲೇಖನದ ಯಾವಾವ ಸಲಕರಣೆಗಳು ತನ್ನ ಕೆಲಸಕ್ಕೆ ಹಿತಕಾರಿಯಾಗಬಹುದು?—ಎಂಬೆಲ್ಲ ತಿಳಿವುಗಳು ಅವನಿಗಿದ್ದರೇನೆ ಅವನು ತನ್ನ ಕರ್ತವ್ಯವನ್ನು ಸರಿಯಾಗಿ ಮಾಡಬಲ್ಲನು. ಈ ಎಲ್ಲ ಶಕ್ತಿಗಳನ್ನು ಉಪಯೋಗಿಸಿ, ದೃಶ್ಯಚಿತ್ರವನ್ನು ಲೇಖನರೂಪದಲ್ಲಿ ಬರೆದಿಡಬೇಕು. ಇಂಥ ಲೇಖನಕ್ಕೆ— ದೃಶ್ಯಲೇಖ (Scenerio) ಎಂದು ಹೆಸರು. ಪಾಶ್ಚಾತ್ಯದೇಶಗಳಲ್ಲಿ ಈ ಕೆಲಸವನ್ನು ಮಾಡುವ ಜನರೇ ಬೇರೆ; ಆದರೆ ಕಥಾರಚನಾಕರ್ತನ ಅಂತರಂಗವನ್ನು ಸರಿಯಾದ ರೀತಿಯಲ್ಲಿ ಅರಿಯಬಲ್ಲ ದೃಶ್ಯಲೇಖಕನಿಲ್ಲದಿದ್ದರೆ, ಚಿತ್ರವು ತನ್ನ ತೇಜಸ್ಸನ್ನು ಕುಂದಿಸಿಕೊಳ್ಳುವುದು. ಹಾಗೆಯೇ ದೃಶ್ಯಲೇಖಕನ ಅಂತರಂಗವನ್ನು ಅರಿಯಲಾರದ ನಿರ್ದೇಶಕನಿದ್ದರೂ ಅದೇ ಪಾಡು. ಈ ಕಾರಣಗಳಿಂದ ದೃಶ್ಯಲೇಖನವನ್ನು ನಿರ್ದೇಶಕನೇ ಮಾಡುವುದು ಒಳ್ಳಿತು. ಕಾರಣ ನಿಜವಾದ ಸೃಷ್ಟಿಯು ಅಲ್ಲಿಂದಲೇ ಆಗುವುದು. ಪರಿಪೂರ್ಣವಾದ ಲೇಖನವೊಂದಿದ್ದರೆ ನಿರ್ದೇಶಕನ ಮುಕ್ಕಾಲುಮೂರುವೀಸ ಕೆಲಸ ಮುಗಿಯಿತು.

ನಟನಟಿಯರ ಇಲ್ಲವೆ ಚಿತ್ರದಲ್ಲಿ ಉಪಯೋಗಿಸುವ ವಸ್ತುಗಳ ಚಲನೆಯನ್ನು ಪೂರ್ವದಲ್ಲೇ ನಿರ್ಧರಿಸುವುದು ಅವಶ್ಯ. ಚಲಚ್ಚಿತ್ರವು ತನ್ನ ಚಲನೆಯ ದೆಸೆಯಿಂದಲೇ ಜೀವವನ್ನು ತಳೆಯುವುದು. ಆದುದರಿಂದಲೇ ಅದರ ಪೂರ್ವಯೋಜನೆಯೂ ಅವಶ್ಯ. ಕೆಲವು ಬಾರಿ ಪ್ರಭಾಲೇಖಕನೇ ವಸ್ತುವಿನೆಡೆಗೂ, ಇನ್ನು ಕೆಲವು ಬಾರಿ ವಸ್ತುಗಳೇ ಪ್ರಭಾಲೇಖಕದ ಮುಂದೆಯೂ ಚಲಿಸಬೇಕಾಗುವುದು. ಈ ಎಲ್ಲಾ ಸಮಯಗಳಲ್ಲೂ ಪಟಲದ ಚಲನೆಯಂತು ಇದ್ದೇ ಇದೆ. ಇಷ್ಟೆಲ್ಲವನ್ನು ಗಮನಿಸಿ ಮುಂದುವರಿಸಬೇಕಾಗುವುದು. ಈ ಚಲನೆಯು ಸರಿಯಾದ ರೀತಿಯಲ್ಲಿದ್ದರೆ ಭಾವೋದ್ರೇಕವೂ, ಇಲ್ಲದಿದ್ದರೆ ಅದರ ವಿಪರ್ಯಾಸವೂ ಉಂಟಾಗಬಹುದು. ಕೆಲವು ಉದಾಹರಣೆಗಳನ್ನು ಕೆಳಕ್ಕೆ ಸೂಚಿಸುವೆವು.

ವೃತ್ತಾಕಾರದಲ್ಲಿ ಸಂಚರಿಸುವ ಒಡವೆಗಳು ಆನಂದವನ್ನು ಸೂಚಿಸುವುವು. ಅದಕ್ಕಾಗಿ ಎಷ್ಟೋ ನರ್ತನಗಳ ದೃಶ್ಯಗಳನ್ನು ವೃತ್ತಾಕಾರದಲ್ಲಿ ತೋರಿಸುವರು. ಒಬ್ಬ ಕೈದಿಯ ಬಂಧನಸ್ಥಿತಿಯನ್ನು ಚಿತ್ರಿಸಲು ಅವನನ್ನು ಅತ್ತಿತ್ತ ಹೆಜ್ಜೆಯಿಡುವವನಂತೆ ತೋರಿಸುವರು. ಸ್ವಲ್ಪ ಮುಂದೆ ಸರಿಯುವುದು, ಇದು ಅವನ ಅಸ್ಥಿರಮನಸ್ಸನ್ನು ಸ್ಪಷ್ಟವಾಗಿ ತೋರಿಸುವುದು. "ಜೆವಿಂಗೋರಾ" ಎಂಬ ಚಿತ್ರದಲ್ಲಿ ಕುದುರೆ ಸವಾರರ ಕೂಟವೊಂದನ್ನು ತೋರಿಸುವರು. ಕುದುರೆಗಳ ಸಹಜಗತಿಯನ್ನು ತೋರಿಸುವ ಬದಲು ಅದನ್ನು ಮತ್ತಷ್ಟು ನಿಧಾನಿಸಿ ತೋರಿಸುವರು. ಇದರಿಂದ ಸವಾರರು ಗಾಳಿಯಲ್ಲಿ ತೇಲಾಡುವಂತೆ ಕಾಣಿಸುತ್ತಿತ್ತು. ಈ ಚಲನೆಯು ಬಿಸಿಲಿನಲ್ಲಿ ಸಂಚರಿಸುತ್ತಿರುವ ಅವರ ಆಲಸ್ಯ, ಶ್ರೀಮಂತಿಕೆಗಳನ್ನು ತೋರಿಸುತ್ತಿತ್ತಲ್ಲದೆ, ಸೆಕೆಯದಿನವು ನಮ್ಮಲ್ಲಿ ಉಂಟುಮಾಡುವ ಔದಾಸೀನ್ಯ ಬೇಸರಗಳನ್ನು ತೋರಿಸುತ್ತಿತ್ತು. ಈ ಎಲ್ಲ ಭಾವನೆಗಳನ್ನು, ಸಹಜಗತಿಯಲ್ಲಿ ತೋರಿಸಿದ್ದರೆ, ಚಿತ್ರಿಸುವುದು ಸಾಧ್ಯವಿತ್ತೇನು?

ವೇಗ, ಮೃತ್ಯುಕಾರಕವಾದ ಚಲನೆಗಳನ್ನೆಲ್ಲಾ ತೋರಿಸುವಾಗ, ಚಲಿಸುವ ವಸ್ತುವು ಎಡದಿಂದ ಬಲಕ್ಕೆ ಸಮ

CC-0. Jangamwadi Math Collection. Digitized by eGangotri

ಏತಾನವಾಗಿ ಹಾದುಹೋದಂತೆ ತೋರಿಸದೆ, ಚಿತ್ರದ ಮೇಲುಭಾಗದ ಮೂಲೆಯಿಂದ ಕೆಳಭಾಗದ ಇನ್ನೊಂದು ಮೂಲೆಗೆ ಸಾಗಿದಂತೆ ತೋರಿಸುವರು. ಇದರಿಂದ ಆ ಒಡವೆಯ ಚಿತ್ರವು ಒರಬರುತ್ತ ದೊಡ್ಡದಾಗಿ ಒಂದು ರೀತಿಯ ಭೀತಿಯನ್ನು ಉಂಟುಮಾಡಿಸಿ, ವೇಗದ ಕಲ್ಪನೆಯನ್ನು ಕೊಡುವುದು. ಒಂದು ದೃಶ್ಯದಲ್ಲಿ ತಳಮಳವನ್ನು ತೋರಿಸುವ ಉದ್ದೇಶವಿದೆಯೆಂದು ಎಣಿಸುವ. ತಳಮಳಕ್ಕೆ ಬಲಿಯಾದ ಜನರು ಒಂದೇ ದಿಕ್ಕಿಗೆ ಸಾಗಿದಂತೆ ತೋರಿಸುವುದರಿಂದ ಈ ಭಾವವು ಹುಟ್ಟುವುದಿಲ್ಲ. ಅದರ ಬದಲು, ಅವರೆಲ್ಲರೂ ಒಂದು ಕೇಂದ್ರಸ್ಥಾನದಿಂದ ಉಚ್ಚಾಲಿತರಾದಂತೆ (Diverge) ದೂರಸರಿದಂತೆ ತೋರಿಸಿದರೆ, ಆ ಅನುಭವವು ಪ್ರೇಕ್ಷಕರ ಮನಸ್ಸಿನಲ್ಲಿ ಉಂಟಾಗುವುದು. ಹೀಗೆ, ಚಲನೆಗಳನ್ನು ಚಿತ್ರದ ಭಾವಕ್ಕೆ ಸರಿಯಾದ ರೀತಿಯಲ್ಲಿ ತೋರಿಸಿದರೆ, ಚಿತ್ರಕ್ಕೊಂದು ಚೈತನ್ಯವುಂಟಾಗುವುದು. ಸಾಮಾನ್ಯವಾಗಿ, ಡೌಗ್ಲಾಸ್ ಫೇರ್‌ಬೇಂಕ್ಸನ ಚಿತ್ರಗಳನ್ನು ನೋಡದವರಾಗಲಿ, ಅದನ್ನು ಕಂಡು ಆನಂದಿಸದವರಾಗಲಿ ಇಲ್ಲ. ಇದು ಏತರಿಂದ? ಅವನಲ್ಲಿ ಅತ್ಯುತ್ತಮ ನಟನಾಶಕ್ತಿಯಿದೆಯೆಂಬುದರಿಂದಲ್ಲ. ಅವನು ಡೊಂಬರಾಟದವನಂತೆ ಬೇಕಾದ ಹಾಗೆ ಹಾರಬಲ್ಲನು, ಕುಣಿಯಬಲ್ಲನು—ಎಂಬುದರಿಂದಲೇ? ಅವನಂತೆಯೇ ಅದ್ಭುತವಾದ ಕಸರತ್ತುಗಳನ್ನು ತೋರಿಸುವ ಇನ್ನಿತರರ ಮೇಲೆ ನಮಗೆ ಅದೇ ರೀತಿಯ ಅಭಿಮಾನವುಂಟಾದುದುಂಟೇ? ಇಲ್ಲ. ಅದೇತಕ್ಕೆ? ಅವರ ಮತ್ತು ಇವನ ಚಲನೆಗಳಲ್ಲಿ ಅತಿ ಹೆಚ್ಚಿನ ವ್ಯತ್ಯಾಸವಿದೆ. ಅವರದು ಚಲನೆ ಮಾತ್ರ, ಇವನದು ಅರ್ಥಪೂರಿತ ಚಲನೆ. ಅವನು ಕುದುರೆಯನ್ನು ಏರಲಿ; ಮರದಿಂದ ಮರಕ್ಕೆ ಹಾರಲಿ, ನೂಲೇಣಿಯಿಂದಿಳಿಯಲಿ ಅವುಗಳಲ್ಲೊಂದು ಬಗೆಯ ಲಾಲಿತ್ಯವಿದೆ. ಉತ್ಸಾಹ ಗೌರವಗಳನ್ನು ಹುಟ್ಟಿಸತಕ್ಕ ಸೊಬಗು ಅವುಗಳಲ್ಲಿದೆ. ಆನಂದದಿಂದ ಜಿಗಿದಾಡುವ ಹರಿಣದ ಮರಿಯನ್ನೋ ಆಡಿನ ಮರಿಯನ್ನೋ ನಾವು ಕಂಡಿಲ್ಲವೇ? ಅಲ್ಲಿ ಕಂಡುಬರುವ ಲಘುತ್ವವೂ ಇವನಲ್ಲಿದೆ. ಈ ಶಕ್ತಿಗಳೇ ಅವನ ಚಿತ್ರಗಳಲ್ಲಿ ಚೇತನವನ್ನೀಯುವಂಥವು. ಅವನು ಖಡ್ಗಯುದ್ಧವನ್ನು ಮಾಡಲು ನಿಂತರೆ, ಅವನ ಕೈವಾಡದ ಜಾಣ್ಮೆಯಷ್ಟೇ ಅದರಲ್ಲಿ ಬರುವುದಿಲ್ಲ. ಅವನು ಜಯಿಸಲಿ, ಹೊಡೆಯಲಿ, ಸೋಲಲಿ, ಬೀಳಲಿ ಆ ಚಲನೆಗಳಲ್ಲೆಲ್ಲ ಈ ರೀತಿಯ ಅರ್ಥಗರ್ಭಿತ ಸೊಬಗು ತೋರಿಬರುವುದು. ಪ್ರತಿಯೊಂದು ಹೊಡೆತವೂ ಈ ರೀತಿಯಾಗಿದೆ. ಅದಕ್ಕಾಗಿಯೇ, ಖಡ್ಗಯುದ್ಧವೊಂದರಲ್ಲಿ ಅವನಿಂದ ಸಿಗುವ ಭಾವಪ್ರೇರಣೆಯು ಅವನಿಗಿಂತ ಜಾಣನಾದ ಖಡ್ಗಪಾಣಿಯಿಂದ ಸಿಗಲಾರದು. ಈಗೀಗ ನಮ್ಮ ದೇಶದಲ್ಲಿಯೂ "ಇಮಿಟೇಶನ್" ಡೌಗ್ಲಾಸರು ಹುಟ್ಟಿರುವರು. ಅಂಥ ಹೆಸರಿನಿಂದ ಮೆರೆಯುವರಲ್ಲಿ "ಮಾಸ್ಟರ್ ವಿಠ್ಠಲ" ನೊಬ್ಬನು. ಅವನ ಓಡಾಟ ಹಾರಾಟಗಳನ್ನು ಕಂಡರೆ ಅಸಹ್ಯವೆನಿಸುವುದು. ಅವನ ಕಾಳಗಗಳಲ್ಲಿ ಲವಲೇಶ ಸೊಬಗಿಲ್ಲ. ಡೌಗ್ಲಾಸನ ಮಹಿಮೆಯು ಏತರಿಂದ ಬಂದಿತ.-ಎಂಬುದನ್ನು ಸಹ ಅರಿಯದವರು "ಡೌಗ್ಲಾಸ" ರಾಗಬಲ್ಲರೇನು?

ಇದೇ ರೀತಿಯಲ್ಲಿ ಮನುಷ್ಯರ ಇಲ್ಲವೆ ಒಡವೆಗಳ ಚಲನೆಯಿರುವಂತೆಯೇ ಪ್ರಭಾಲೇಖಕನ ಚಲನೆಯೂ ಇದೆ. ಪ್ರಭಾಲೇಖಕವು ಕೆಲವೊಂದು ಚಿತ್ರಗಳಲ್ಲಿ, ಪ್ರತಿ ಮೂಲೆಗೂ ಸಂಚರಿಸಿ ಚಿತ್ರದ ವಿಷಯವನ್ನೆ ಪ್ರಕಟಿಸುವುದು. ಸರಿಗೆಗಳ ಮೇಲೆ ತೂಗಾಡಿಸಿಯೋ, ಸೈಕಲಿನ ಮೇಲಿರಿಸಿಯೋ ಅಥವಾ ಇನ್ನಾವ ಸಲಕರಣೆಗಳ ಸಹಾಯದಿಂದಲೋ ಪ್ರಭಾಲೇಖಕದ ಚಲನೆಯನ್ನು ಸಾಧ್ಯವನ್ನಾಗಿ ಮಾಡಿರುವರು. ಆದರೆ, ಈ ರೀತಿಯ ಸಲಕರಣೆಯುಂಟೆಂದು ಸಿಕ್ಕು ಸಿಕ್ಕಿದ ಹಾಗೆ ಅವನ್ನು ಉಪಯೋಗಿಸಿಕೊಂಡರೆ ಅರ್ಥವಿಪರ್ಯಾಸವಾಗಲೂಬಹುದು. ಪ್ರಭಾಲೇಖಕವು ಬೇಕಾದ ರೀತಿಯಲ್ಲಿ ತನ್ನ ಸ್ಥಾನವನ್ನು ಬಿಟ್ಟು ಚಲಿಸಲು ಸ್ವಾತಂತ್ರ್ಯವಿತ್ತವರು ಜರ್ಮನರು. "ಜೀನನೇ, ಮೆಟ್ರೊಪೊಲಿನ್, ಪೆಂಡೋರಾಸ್ ಬಾಕ್ಸ್" ಎಂಬ ಚಿತ್ರಗಳು ಇದಕ್ಕೆ ಉದಾಹರಣೆಗಳು. ಇವುಗಳಲ್ಲಿ ಪ್ರಭಾಲೇಖಕದ ಚಲನೆಯಿಂದ ಅವರು, ದುಃಖ, ಆನಂದ, ಉನ್ನತಿ, ಬೇಸರ, ಭೀತಿ ಮೊದಲಾದ ಭಾವಗಳನ್ನು ತೀರ ಯಶಸ್ವಿಯಾಗಿ ಪ್ರೇರಿಸಿರುವರು. ಇದೇ ರೀತಿಯ ಪ್ರಭಾಲೇಖಕದ ಚಲನೆಯು ಅಮೇರಿಕದ ಚಿತ್ರಗಳಲ್ಲೂ ಉಂಟು. ಆದರೆ ಅವು ವಿಚಿತ್ರವೆಂದು ಉಪಯೋಗಿಸಲ್ಪಡುವುವೇ ಹೊರತು, ಭಾವಾವಲಂಬನಕ್ಕಾಗಿ ಅಲ್ಲ. ಇಷ್ಟು ಪಟಲವು ವ್ಯಯವಾಯಿತು.. ಇಷ್ಟು ಖಂಡಿ ಬಣ್ಣವು ವ್ಯಯವಾಯಿತು. ಇಷ್ಟು ಖಂಡಿ ಸಿಡಿಮದ್ದುಗಳು ಬೇಕಾ

CC-0. Jangamwadi Math Collection. Digitized by eGangotri

ಸುತ್ತ, ಇಷ್ಟು ವಿಲೆಯ ಹಣವು ವ್ಯಯವಾಯಿತು ಎಂಬ ಅವರ ಪ್ರಕಟನೆಯ ಮಾರ್ಗವನ್ನು ಇದೂ ಹಿಡಿಯುವುದು. ಎಂದೂ ಕಂಡಿರಲಾರದ 'ಕೆಪುರದ ಚಲನೆ' ಎನ್ನು ಸಾರುವರು. ಯುನಿವರ್ಸಲ್ ಚಿತ್ರ ಮಂಡಲದ ಪ "ಬ್ರಾಡ್ವೇ' ಯು ಇದಕ್ಕೆ ತೀರಪ್ರಸಿದ್ಧವಾದುದು. ಈ ರೀತಿಯ ಚಲನೆಯು ಸಾಧ್ಯವಾಗುವಂತೆ ನೂರಾರು ಉಪಕರಣಗಳನ್ನು ಅವರು ತಯಾರಿಸುವರು. ಆದರೆ ಕಲಾದೃಷ್ಟಿಯಿಂದ ಅವುಗಳ ಉಪಯೋಗವನ್ನು ಹೇಗೆ ಮಾಡಬೇಕೆಂಬ ವಿಚಾರದಲ್ಲಿ ಮಾತ್ರ ಅವರ ಲಕ್ಷ್ಯವು ಹರಿಯುವುದಿಲ್ಲ. ಅವರ ಪಾಲಿಗೆ ವಿಚಿತ್ರ ದೃಷ್ಟಿಯ ಚಿತ್ರಗಳು ದೊರಕಿದರಾಯಿತು. ಈ ರೀತಿ ಅರ್ಥಹೀನ ಚಲನೆಯಿಂದ ಯಾವ ಉಪಯೋಗವೂ ಆಗಲಾರದು.

ಈಗ ನಿರ್ದೇಶಕನು ಯೋಚಿಸತಕ್ಕ ಭಾಗವು ತಕ್ಕ ದೃಶ್ಯಾವಳಿಗಳ ವ್ಯವಸ್ಥೆ. ಅಂತರಂಗದ (Interior) ಸಂಯುಕ್ತಗಳಾದಲ್ಲಿ ಅವುಗಳ ರಚನೆಯೂ, ಬಹಿರಂಗದಲ್ಲಿ (Exterior) ತಕ್ಕ ದೃಶ್ಯಾವಳಿಗಳನ್ನು ಆರಿಸುವುದೂ ಅವನ ಕೆಲಸ. ಇದಕ್ಕಾಗಿ ಬೇರೆ ಜನರು ನೇಮಕ ಪಟ್ಟವರಾದರೂ, ಅವು ಆಯಾಯ ಘಟನೆಗಳ ಭಾವಕ್ಕೆ ತಕ್ಕುದಾಗಿದೆಯೇ—ಎಂಬುದನ್ನು ನೋಡುವವನು ಅವನು. ಈ ವಿಷಯವಾಗಿ ಮುಂದೆ ಸವಿಸ್ತಾರವಾಗಿ ಬರೆಯುವೆವು.

ಇನ್ನು ಲಾಕ್ಷಣ್ಯ ವಿಚಾರಗಳು (Character studies). ಒಂದೊಂದು ಪಾತ್ರವು ಯಾವ ರೀತಿಯಲ್ಲಿ ವ್ಯವಹರಿಸಿದರೆ ಅದರ ಯೋಗ್ಯತೆಯು ಪೂರ್ಣವಾಗಿ ಪ್ರಕಟವಾಗಬಹುದು—ಎಂಬ ವಿಚಾರ. ಈ ತೆರನ ವಿಚಾರಶೀಲತೆಯು ಚಾರ್ಲಿಚಿಪಲೀನನಲ್ಲಿ[೧] ತುಂಬಾ ಇದೆ. ಅವನ ಪ್ರತಿಯೊಂದು ಅತಿಸೂಕ್ಷ್ಮದ ಚಲನೆಗೂ ಪೂರ್ವನಿರ್ಧಾರವಿದೆ. "ಗೋಲ್ಡರಶ್" ಎಂಬಚಿತ್ರದಲ್ಲಿ, ಒಮ್ಮೆಗೇ ಬಡವನಿದ್ದವನು ದೊಡ್ಡವನಾಗುವನು. ಹಾದಿಯಲ್ಲಿ ತನ್ನಂತೆ ಶ್ರೀಮಂತನಾದ ಇನ್ನೊಬ್ಬ ಗೆಳೆಯನೊಡನೆ ಸಂಚರಿಸುವಾಗ, ದಾರಿಯಲ್ಲಿ ಬಿದ್ದಿದ್ದ ಒಂದು ಚೂರು ಹೊಗೆಬತ್ತಿಯನ್ನು ಆಯ್ದುಕೊಳ್ಳುವನು. ಹಿಂದಿನ ದಾರಿದ್ರ್ಯದಲ್ಲಿ ಬಂದ ಹುಟ್ಟುಗುಣವನ್ನು ಈ ಸೂಕ್ಷ್ಮ ಕ್ರಿಯೆಯು ಎಷ್ಟು ರಸವತ್ತಾಗಿ ಪ್ರತಿಪಾದಿಸುವುದು! ಅವನಿಗೆ ಬೇಕಾದ ನಗುವಿನ ಮಳೆಯನ್ನು ಕರೆಯಿಸುವ ಶಕ್ತಿ ಆ ಕೌಶಲ್ಯದಲ್ಲಿದೆ. ಇನ್ನೊಂದು ಚಿತ್ರದಲ್ಲಿ ಇನ್ನೊಬ್ಬ ನಿರ್ದೇಶಕನು ಸೆರೆಮನೆಯಿಂದ ಹೊರಕ್ಕೆ ಬಂದ ಒಬ್ಬ ಕ್ರೂರಮನುಷ್ಯನ ಲಕ್ಷಣವನ್ನು ಹೀಗೆ ಚಿತ್ರಿಸಿರುವನು೧:- ಸೆರೆಮನೆಯಿಂದ ತಪ್ಪಿಸಿಕೊಂಡು ಒಂದು ಕಡೆಯಲ್ಲಿ ಬಂದು ನಿಂತಾಗ, ಅವನ ದೃಷ್ಟಿಯು ಆಕಸ್ಮಿಕವಾಗಿ ಬಿಸಿಲಿನಲ್ಲಿ ಮಲಗಿಕೊಂಡು ನಿದ್ರಿಸುತ್ತಿರುವ ಒಂದು ಬೆಕ್ಕಿನ ಕಡೆಗೆ ಹರಿಯುವುದು. ಅವನಾಗ, ಒಂದು ಕಲ್ಲನ್ನು ಹೆಕ್ಕಿ ತೆಗೆದು ಅದನ್ನು ಹೊಡೆಯಲು ಕೈಯೆತ್ತುವನು. ಅಷ್ಟರಲ್ಲಿ ಯಾರೋ ಹಾದಿಹೋಕರು ಅವನನ್ನು ಹಾದು ಮುಂದೆ ಸರಿಯುವುದರಿಂದ ಇವನಿಗೆ ಬೆಕ್ಕಿನ ಮರೆವೆಯಾಗುವುದು. ಈ ಚಿಕ್ಕ ಘಟನೆಯು ಆ ಅಪರಾಧಿಯ ಸ್ವಭಾವವನ್ನು ಎಷ್ಟು ಸ್ಪಷ್ಟವಾಗಿ ಮಂದಟ್ಟು ಮಾಡುವುದು. ಈ ರೀತಿಯಲ್ಲಿ, ಒಂದು ಕಥಾಭಾಗದ ಪ್ರಾಮುಖ್ಯ ಪಾತ್ರಗಳ ಲಕ್ಷಣಗಳು, ಕಥೆಗೆ ಒಪ್ಪುವ ರೀತಿಯಲ್ಲಿ ಯೋಜಿತವಾದರೇನೆ ಆ ಕಥೆಯಲ್ಲಿ ತೇಜಸ್ಸು ತುಂಬಿ ಹರಿಯುವುದು.

ಈಗ ನಾವು, ಚಿತ್ರವೊಂದರ ವಿವಿಧಭಾಗಗಳಲ್ಲಿ ಬರುವ ಭಿನ್ನ ಭಿನ್ನ ರಸಗಳನ್ನು ಹೇಗೆ ಪ್ರತಿಪಾದಿಸಬಹುದು—ಎಂಬ ವಿಚಾರವಾಗಿ ಯೋಚಿಸುವ. ಹೆಚ್ಚಿನ ಚಿತ್ರಗಳಲ್ಲಿ ದುಃಖ, ಆನಂದ, ಕೋಪ ಮೊದಲಾದ ರಸಗಳಲ್ಲಿ ಆವೇಷಿತರಾದವರ ಚಿತ್ರವನ್ನು ಸಂಗ್ರಹಿಸಿ ತೋರಿಸುವರು. ಇದು ಕೇವಲ ರಂಗಭೂಮಿಯ ಅನುಕರಣೆಯಾಯಿತು; ಚಿತ್ರ ವೈಶಿಷ್ಟ್ಯವೆನಿಸಲಿಲ್ಲ. ಇಂಥ ಪ್ರಸಂಗಗಳಲ್ಲಿ ಭಾವಪ್ರಕಾಶನಕ್ಕೆ ತಾದ್ರೂಪಿಕ ಅನುಕರಣೆಯ ಮಾರ್ಗವನ್ನು ಬಿಟ್ಟು, ಬೇರೆ ಹಾದಿಯನ್ನು ಹಿಡಿಯುವುದು ಲೇಸು. ನಮ್ಮ ಮನೋಧರ್ಮಕ್ಕೆ (Mental Phsycology) ಗೆ ಸರಿಯಾದ ರೀತಿಯಲ್ಲಿ, ಒಂದು ರಸ ಪ್ರಕಟನೆಯನ್ನು ಹಲವು ತುಂಡುಗಳಾಗಿ ಮುರಿದು, ಬಳಿಕ ಅವೇ ತುಂಡುಗಳನ್ನು ಒಂದೊಂದಾಗಿ ತೋರಿಸುವುದು ಒಂದು ಕ್ರಮ. ಉದಾಹರಣೆಗಾಗಿ, ಒಬ್ಬ ತೀರ ದರಿದ್ರನಿಗೆ ಒಮ್ಮೆಗೇ ಅಪಾರಸಂಪತ್ತು ದೊರೆಯಿತೆಂದು ತಿಳಿಯುವ. ಆಗವನ ಹರುಷವನ್ನು ಹೇಗೆ ಪ್ರತಿ

೧. Pudovkin's– "Film Technique"



CC-0. Jangamwadi Math Collection. Digitized by eGangotri

ಪಾದಿಸಬಹುದು ? ಅವನು ಬೇಸರದಿಂದ ಕುಳಿತಿರುವ ಗಳಿಗೆಯಲ್ಲಿ ಶುಭಸೂಚಕವಾದ ಒಂದು ಪತ್ರವು ಅವನ ಕೈಗೆ ಸಿಗುವುದು. ಅವನದನ್ನು ಓದಿ ನೋಡಿ ಸಂತೋಷ ಗೊಂಡು ನಗುವನು—ಇದು ಅವನ ಆನಂದದ ಚಿತ್ರ ಪರಿವರ್ತನೆಯೆನಿಸಬಹುದೇ ? ಎಲ್ಲರೂ ಅನುಸರಿಸುವ ಈ ಹಾದಿಯನ್ನು ಬಿಟ್ಟು ನಾವು ಇನ್ನೊಂದು ಹಾದಿಯನ್ನು ಹಿಡಿಯುವ. ಅವನು ಬೇಸರದಿಂದ ಕುಳಿತಾಗ ಪತ್ರವು ಸಿಗುವುದು. ಅದನ್ನವನ ಕೈಗಳು ( ಕೈಗಳ ಚಿತ್ರ ಮಾತ್ರ) ಉದಾಸೀನತೆಯಿಂದ ಹಿಡಿಸುವುವು. ಕಣ್ಣುಗಳು (ಕಣ್ಣುಗಳ ಚಿತ್ರ) ಅದನ್ನು ದಿಟ್ಟಿಸಿ ನೋಡುವುವು. ನೋಡ ನೋಡುತ್ತ ಅವುಗಳ ತೇಜಸ್ಸು ಉಕ್ಕಿ ಬರುವುದು. ಕೈಗಳು (ಕೈಗಳ ಚಿತ್ರ) ಆನಂದದಿಂದ ಒಮ್ಮೆಗೇ ಕುಣಿಯುವುವು. ಹಿಡಿಸಿದ ಬೆರಳುಗಳು ಮುಷ್ಟಿಯಾಗಿ ಮಡುಚುವುವು. ಪಾದಗಳು (ಪಾದಗಳ ಚಿತ್ರ) ನೆಲವನ್ನು ಉತ್ಸಾಹಪೂರ್ವಕವಾಗಿ ತಳ್ಳುವುವು. ಅವನ ತುಟಿಗಳು (ತುಟಿಗಳ ಚಿತ್ರ ಮಾತ್ರ) ಅರಳುವುವು. ಈ ಚಿತ್ರಮಾಲೆಯು ಮೊದಲಿನ ಚಿತ್ರಕ್ಕಿಂತ ಅತಿಶಯವಾದ ಭಾವಪ್ರೇರಣೆಯನ್ನು, ಅರ್ಥಾತ್ ಆನಂದ ರಸ ಪ್ರತಿಪಾದನೆಯನ್ನು ಮಾಡುವುದಿಲ್ಲವೇ ? ಆದರೆ ಈ ಎರಡನೆ ಬಾರಿಯ ಚಿತ್ರದಲ್ಲಿ, ಹರುಷವು ಉಕ್ಕಿ ಬರುವಾಗ ಅವನ ಪೂರ್ಣ ಚಿತ್ರವನ್ನು ಒಮ್ಮೆ ಸಹ ತೋರಿಸಲಿಲ್ಲ. ಆದರೆ ಎರಡನೆಯ ಯೋಜನೆಗಿರುವ ಉನ್ಮೇಷ ಶಕ್ತಿಯು ಮೊದಲಿನ ತಾದ್ರೂಪಿಕ ಅನುಕರಣೆಗಿಲ್ಲ. ಇದೇ ರೀತಿಯ ಭಿನ್ನ ಭಿನ್ನ ರಸಗಳು ನಮ್ಮಲ್ಲಿ ಉಂಟು— ಮಾಡುವ ಪ್ರಕಾಶದ ಕ್ರಿಯೆಯನ್ನು ಭೇದಿಸಿ, ಭೇದಿಸಿ ಕ್ರಮಗತವಾಗಿ ಮೇಳೈಸುವುದರಿಂದ ಹೆಚ್ಚಿನ ಭಾವೋದ್ರೇಕವಾಗುವುದು.

ಈ ಪದ್ಧತಿಯಲ್ಲದೆ ರಸಪ್ರಕಾಶನದ ಇನ್ನೊಂದು ಕ್ರಮವೂ ಇದೆ. ಈ ಮಾರ್ಗದ ಶೋಧಕರು ರುಸ್ಯಾ ದೇಶದ ನಿರ್ದೇಶಕರು. ಈ ನವೀನ ಮಾರ್ಗಕ್ಕಿರುವ ಚೇತನವು ಇನ್ನಾವುದಕ್ಕೂ ಇರುವುದಿಲ್ಲ. ಪುಡೋವ್ಕಿನನೆಂಬ ರುಸ್ಯಾ ದೇಶದ ನಿರ್ದೇಶಕನ ಚಿತ್ರವೊಂದರಲ್ಲಿನ ಪ್ರಯೋಗವನ್ನು ಉದಹರಿಸುವೆವು. ಒಬ್ಬನಿಗೆ ಮರಣ ದಂಡನೆಯು ವಿಧಿಸಲ್ಪಟ್ಟು ತನ್ನ ಕೊನೆಯನ್ನು ಅವನು ಸೆರೆಮನೆಯಿಂದ ನಿರೀಕ್ಷಿಸುತ್ತಲಿರುವನು. ಆ ಸಮಯದಲ್ಲಿ ಅವನಿಗೆ ಬಂಧಮುಕ್ತತೆಯಾದ ಸುದ್ದಿಯು ಸಿಗುವುದು. (ಈ ಪ್ರಸಂಗವು ಹಿಂದಿನ ಪ್ರಸಂಗದಂತೆಯೇ ಇದೆ.) ಪುಡೋವ್ಕಿನನು ಅವನ ಆನಂದವನ್ನು ಬಿಂಬಿಸಿದ ಬಗೆಯನ್ನು ನೋಡಿರಿ. ಅವನ ಕೈಗಳು ಆನಂದದಿಂದ ಮುಡುಚುವುವು. ಅವನ ಮೃದುಹಾಸವನ್ನು ತೋರುವ ತುಟಿಗಳುಳ್ಳ ಮುಖದ ಕೆಳಗಿನ ಅರ್ಧಭಾಗ, ಸೂರ್ಯ ಕಿರಣಗಳಿಂದ ಮಿನುಗುವ ಅಲೆಗಳಿಂದ ತುಂಬಿದ ಒಂದು ಚಿಕ್ಕ ಹಳ್ಳ, ಚಿಕ್ಕ ಪಕ್ಷಿಗಳು ನೀರಿನ ಹೊಂಡವೊಂದರಲ್ಲಿ ರೆಕ್ಕೆಗಳನ್ನು ಬಡಬಡಿಸಿ ಸ್ನಾನಮಾಡುವ ಚಿತ್ರ, ನಗುತ್ತಿರುವ ಚಿಕ್ಕ ಮಗು—ಇಷ್ಟೆಲ್ಲ ಚಿತ್ರಗಳನ್ನು ಅನುಕ್ರಮವಾಗಿ ತೋರಿಸಿದನು. ಇದರಿಂದ ಉಂಟಾಗುವ ಭಾವವೈಖರಿಯು ಮೊದಲು ವಿವರಿಸಿದ ಎರಡು ಬಗೆಗಳಿಂದಲೂ ಉಂಟಾಗದು. ಈ ಉದಾಹರಣೆಯಲ್ಲಿ ಚಿತ್ರದ ವಿಷಯಕ್ಕೆ ಸಂಬಂಧಿಸದ ವಸ್ತುಗಳಿವೆ. ಅವು ವಿಷಯಕ್ಕೆ ಸಂಬಂಧಿಸದಿದ್ದರೂ ಅದರ ಭಾವಕ್ಕೆ ಸಂಬಂಧಿಸುವಂಥವು. ಪುಡೋವ್ಕಿನನಿಗೆ ಒಂದು ಸಿಡಿಗುಂಡಿನ (Bomb) ಸ್ಫೋಟನವನ್ನು ತೋರಿಸುವ ಪ್ರಸಂಗವು ಬಂದಿತು. ಅವನು ಅದರ ತಾದ್ರೂಪಿಕ ಚಿತ್ರವನ್ನು ತೋರಿಸುವ ಗೊಡವೆಗೆ ಹೋಗಲಿಲ್ಲ. ಬದಲು ಸ್ಫೋಟನವನ್ನು ಈ ರೀತಿಯಾಗಿ ರಚಿಸಿದನು: ಐದಾರು ಚೌಕಟ್ಟುಗಳ ಉದ್ದಕ್ಕೆ ಬೇರೆ ಬೇರೆ ಚಿತ್ರದ ತುಂಡುಗಳನ್ನು ಜೋಡಿಸಿದನು. ಒಂದು ನಾಲ್ಕು ಚೌಕಟ್ಟು ಹೊಗೆಯ ಚಿತ್ರ, ನಾಲ್ಕು ಚೌಕಟ್ಟುಗಳ ಉದ್ದಕ್ಕೆ ಮೆಗ್ನೇಸಿಯಂ ಲೋಹವು ಉರಿಯುವ ಚಿತ್ರ, ತಿರುಗಿ ಹೊಗೆ, ತಿರುಗಿ ಉರಿ, ತಿರುಗಿ ಹೊಗೆ, ತಿರುಗಿ ಉರಿ,.... ಹೀಗೆಯೇ ಕೆಲವಾವೃತ್ತಿ ಜೋಡಿಸಿ ಅದರ ನಡುವೆ ಬೆಳಕನ್ನು ಪ್ರತಿಫಲಿಸುವ ಒಂದು ನದಿಯ ಮೈಯಿಯ ಚಿತ್ರವನ್ನು ಸೇರಿಸಿದನು. ಹೀಗೆ ತಾಲಬದ್ಧ ಸೌರಸ್ಯವನ್ನುಂಟುಮಾಡಿ, ಈ ಭಿನ್ನ ಭಿನ್ನ ಪಟಲದ ತುಂಡುಗಳು ಚಲಿಸುವಾಗ ಸಹಜ ಸ್ಫೋಟನಕ್ಕೆ ಅತಿಶಯವಾದ—ಭಾವನೆಯನ್ನು ಹುಟ್ಟಿಸಿದನು.

ರುಸ್ಯಾ ದೇಶದ ಏಸೆಸ್ಸ್ಟಿನ್ ಎಂಬ ಇನ್ನೊಬ್ಬ ಪ್ರಸಿದ್ಧ ನಿರ್ದೇಶಕನ ವಿಧಾನಗಳೂ ಹೀಗೆ ನವೀನವಾಗಿವೆ. "ಅಕ್ಟೋಬರ" ವೆಂಬ ಚಿತ್ರವು ಅವನದು. ರುಸ್ಯಾ ದೇಶದ ಕ್ರಾಂತಿಯ ಚಿತ್ರವದು. ಈ ಚಿತ್ರದಲ್ಲಿ ರೈತರ ಬಡತನವನ್ನು ಒತ್ತಿ ತೋರಿಸಲು, ಶ್ರೀಮಂತರ ವಿಲಾಸ

CC-0. Jangamwadi Math Collection. Digitized by eGangotri

ವನ್ನು ಖಂಡಿಸುವ ಆವಶ್ಯವಿದ್ದಿತ್ತು. ಅದಕ್ಕಾಗಿ ಅವನು ಒಂದೆಡೆಯಲ್ಲಿ—ಎತ್ತರವಾದ ಕೊತ್ತಳಗಳ, ಗೋಪುರಗಳ, ಶಿಖರಗಳ, ಕಟ್ಟಡಗಳ ಚಿತ್ರಗಳನ್ನು, ತೀರ ಕೆಳಗಿನಿಂದ ನೋಡುವವರ ಕಣ್ಣಿಗೆ ಗೋಚರಿಸುವ ರೀತಿಯಲ್ಲಿ ಸಾಲಾಗಿ ತೋರಿಸಿರುವನು. ಈ ಚಿತ್ರಮಾಲೆಯು ಶ್ರೀಮಂತರ ದುಂಡುಗಾರಿಕೆಯನ್ನು ಸ್ಪಷ್ಟವಾಗಿ ತೋರಿಸುವುದು. ಅವನು ರಚಿಸಿದ ' ಪೊಟೆಮ್ಕಿನ್ " ಎಂಬ ಯುದ್ಧನಾವೆಯಲ್ಲೂ ಇಂಥ ನೂರಾರು ಉದಾಹರಣೆಗಳಿವೆಯಂತೆ. ಈ ರೀತಿಯಲ್ಲಿ ಭಾವವನ್ನು ನಿರ್ಮಿಸಿ ಪ್ರಕಟಿಸುವುದು ಚಲಚ್ಚಿತ್ರದ ವೈಶಿಷ್ಟ್ಯವು. ಆದರಿಂದ ನಿರ್ದೇಶಕನ ರಚನಾ ಕೌಶಲ್ಯವೂ, ಶಕ್ತಿಯೂ ಪ್ರಕಟವಾಗುವುದು. ಭಾವಗಳನ್ನು ಶಾಪೂರ್ಪಿಕವಾಗಿ ಚಿತ್ರಿಸಬಲ್ಲವನು ರಂಗಭೂಮಿಯ ನಿರ್ದೇಶಕನಾಗಬಹುದು; ಚಲಚ್ಚಿತ್ರಕ್ಕೆ ಅವನು ತಕ್ಕವನಲ್ಲ. ಇಂಥ ಯೋಜನೆಗಳೊಂದಿಗೆ ಸರಿಯಾದ ಛಾಯಾತೇಜದ ವ್ಯವಸ್ಥೆಯೂ, ದೃಶ್ಯಾವಳಿಗಳ ವ್ಯವಸ್ಥೆಯೂ ನಡೆಯಿತೆಂದರೆ ಆಗ ಕಥೆಯು ಸೊಗಸಿನಿಂದ ಮೆರೆಯಬಲ್ಲದು. ಇದೇ ನಿಜವಾದ ಚಿತ್ರಸಂಪಾದನೆ (Editing). ಅದಕ್ಕಾಗಿಯೇ ಪುಡೋವ್ಕಿನನು "ಚಲಚ್ಚಿತ್ರದ ಸತ್ಯವನ್ನು ಸೃಷ್ಟಿಸಬಲ್ಲ ಶಕ್ತಿಯೇ ಸಂಪಾದನೆ" ಎಂದಿರುವನು. ಈ ಸೃಷ್ಟಿಕ್ರಮಕ್ಕೆ ಯುಕ್ತವಾದ ದೃಶ್ಯಲೇಖವು ಮೊದಲಗೇ ಸಿದ್ಧಪರಬೇಕು.

ಹೀಗೆ ಸಿದ್ಧವಾದ ದೃಶ್ಯಲೇಖನವನ್ನು ಹಿಡಿದುಕೊಂಡು ತಕ್ಕವರಾದ ನಟನಟಿಯರನ್ನು ಆರಿಸಿ ಅವರಿಂದ ಬೇಕಾದ ರೀತಿಯ ನಟನೆಯನ್ನು ಮಾಡಿಸುವುದು ನಿರ್ದೇಶಕನ ಕೆಲಸ. ಈಗಿನ ದಿನಗಳಲ್ಲಿ, ಕೇವಲ ನಟರನ್ನು ನಿರ್ದೇಶಿಸುವುದೇ ನಿರ್ದೇಶಕನ ಕೆಲಸವೆಂದು ತಿಳಿಯುವವರೂ ಉಂಟು. ಅವನು ಬರೇ ರಂಗಭೂಮಿಯ ಸೂತ್ರದಾರನಲ್ಲ. ಚಿತ್ರರಚನೆಯೂ ಅವನದೇ, ಈ ಅಭಿನಯ ನಿರ್ದೇಶನವೂ ಅವನದೆ, ಮುಂದೆ ತಾನು ಸಂಗ್ರಹಿಸಿದ ಬೇರೆ ಬೇರೆ ಪಟಲ ಚೂರುಗಳು, ತನ್ನ ಉದ್ದೇಶವನ್ನು ಪೂರೈಸುವಂತಿವೆಯೇ ಎಂಬುದನ್ನು ಅವುಗಳ ಜೋಡಿಸುವಿಕೆಯಿಂದ ನಿರ್ಣಯಿಸುವುದೂ ಅವನ ಕೆಲಸ. ಈ ಜೋಡಣೆಯ ಕೆಲಸವನ್ನು ಬೇರೆಯವರು ಮಾಡುವುದರಿಂದ, ನಿರ್ದೇಶಕನ ಸೃಷ್ಟಿಯು "ಕುಂಬಾರಗೆ ವರುಷ ದೊಣ್ಣೆಗೆ ನಿಮಿಷ" ಎಂಬಂತೆ ಆದರೂ ಆಗಬಹುದು. ಸರಿಯಾದ ಪಟಲಭೇದನ (Film Cutting) ವಿದ್ಯೆಯು ನಿರ್ದೇಶಕನಿಗಿರಬೇಕು.

ಇಂಥದೊಂದು ಸೃಷ್ಟಿಯು ನಿರ್ಮಾಣವಾಯಿತೆಂದರೆ ಅದನ್ನು ಕೆಡಿಸಬಲ್ಲ ಇನ್ನೊಂದು ಶಕ್ತಿಯು ಪ್ರತಿಯೊಂದು ದೇಶದಲ್ಲಿಯೂ ಇದೆ. ಅದು ಆಯಾಯ ದೇಶಗಳ ' ಬೋರ್ಡ್ ಆಫ್ ಸೆನ್ಸರ್ಸ್ ' ಗಳು. ಈ ಮಂಡಲಗಳು, ಜನತೆಯ ಹಿತದ ದೃಷ್ಟಿಯಿಂದ ಚಿತ್ರಗಳ ಗುಣದೋಷಗಳನ್ನು ಪರಿಶೀಲಿಸಿ ದೋಷಗಳನ್ನು ಕತ್ತರಿಸಿ ಬಿಡುವವರಂತೆ. ಈ ಮಂಡಲದವರು ಎಷ್ಟೆಷ್ಟೋ ಅಸಭ್ಯ, ಅಶ್ಲೀಲ, ಚಿತ್ರಾಂಶಗಳನ್ನು ಸಾಗಗೊಡುವರು. ಈಗಿನ ಚಿತ್ರಗಳಲ್ಲಿನ ಅಸಭ್ಯ ಉಡುಗೆ ಇಲ್ಲದಿರುವಿಕೆ, ಅಭಿನಯ, ನರ್ತನಗಳಿಗೆ ಅವರ ಪೂರ್ಣ ಸಹಾನುಭೂತಿಯಿದೆ. ಆದರೆ ಜನರ ಬುದ್ಧಿಯನ್ನು ಒಳಿತಿನ ಕಡೆಗೆ ಹರಿಸುವ ನವವಿಚಾರವಾವುದಾದರೂ ಇದ್ದರೆ ಅವರು ಅದನ್ನು ಬಿಡುವಂತಿಲ್ಲ. ಆದರಿಂದಲೇ ರುಸ್ಯಾದೇಶದ ಚಿತ್ರಗಳು ನಮ್ಮ ದೇಶಕ್ಕಾಗಲಿ, ಇಂಗ್ಲಾಂಡಿಗಾಗಲಿ ಬರುವದಿಲ್ಲ. ಅವುಗಳು ಪ್ರತಿಪಾದಿಸುವ ಸತ್ಯವೂ, ಅವುಗಳಿಗಿರುವ ಉನ್ಮೇಷಕ ಶಕ್ತಿಯೂ ಅತ್ಯಧಿಕ. ಆದರಿಂದಲೇ ಅವಕ್ಕೆ ಪ್ರವೇಶವಿಲ್ಲ. ಒಮ್ಮೆ ಅಂಥ ಚಿತ್ರಗಳು ಬರುವುದಾದರೆ, ಅವುಗಳ ಕೈಕಾಲುಗಳನ್ನು ತಮ್ಮ ಮನಸ್ಸಿಗೆ ತೋರಿದ ರೀತಿಯಲ್ಲಿ ಮುರಿದು ವಿನಾಯಕನನ್ನು ಮರ್ಕಟನನ್ನಾಗಿ ಪರಿವರ್ತಿಸಿ ತೋರಿಸುವರು. ವ್ಯಾಪಾರೀ ದೃಷ್ಟಿಯಿಂದ ಈ ಚಿತ್ರಗಳನ್ನು, ಇಷ್ಟು ವಿರೂಪಗೊಳಿಸಿಯಾದರೂ ಪರದೇಶಗಳಿಗೆ ಕಳುಹಿಸಬೇಕಾಗುವುದು. ಹೀಗೆ ಅವುಗಳು, ಪರಿಶೀಲಕರ ಕೈಗಳಿಗೆ ಸಿಕ್ಕಿದುವೆಂದರೆ, ತಮ್ಮ ಮೂಲ ಸ್ವರೂಪವನ್ನು ಸಂಪೂರ್ಣವಾಗಿ ಮರೆತು ಬಿಡುವುದುಂಟು. ತನ್ನ ಸೃಷ್ಟಿಯ ಮೇಲೆ ಈ ರೀತಿಯಲ್ಲಿ ಪರಿಶೀಲಕರ ಕಟಾಕ್ಷವಾದುದನ್ನು ಕಂಡರೆ, ಯೋಗ್ಯ ನಿರ್ದೇಶಕನು ಆತ್ಮಹತ್ಯೆಯನ್ನು ಮಾಡಿಕೊಳ್ಳಬಹುದು. ಕಾರಣ ಅವನ ಚಿತ್ರದಲ್ಲಿ ಕಡಿಯುವ ಭಾಗವನ್ನು ಅವನೇ ಕಡಿದಿರುವನು.

ಮುಖ್ಯವಾಗಿ ಚಿತ್ರಕಾರನು ಸತ್ಯವನ್ನು ಇದ್ದಕ್ಕಿದ್ದಂತೆ ಹೇಳಬಾರದು. ಬದಲು, ಎಂಥ ಅಸತ್ಯವನ್ನಾದರೂ ಬೆಡಗಿನ ಆಚ್ಛಾದನದೊಂದಿಗೆ ಪ್ರಕಟಿಸಬಹುದು. ಸರಕಾರಗಳು ಕಲಾಸೃಷ್ಟಿಗಳ ಮೇಲೆ ತೋರುವ ಕೃಪೆಯಿದು. ಈ ಕೃಪೆಗೆ ಗುರಿಯಾಗದ ನಿರ್ದೇಶಕನೆಂಥ ಅಪ್ಪುಟನಾಗಿ!

CC-0. Jangamwadi Math Collection. Digitized by eGangotri

# ವಾದಭೂಮಿ

## ಕನ್ನಡ ಷಟ್ಪದಿಗಳು.

### ಆಕ್ಷೇಪಗಳಿಗೆ ಪ್ರತ್ಯುಕ್ತಿ.

ಲೇಖಕರು:—ಶ್ರೀ. ಗೋವಿಂದ ಪೈ.

### ೧. ಶ್ರೀ. ಕುಲಕರ್ಣಿ ಪ್ರಹ್ಲಾದರಾಯರ ಆಕ್ಷೇಪಗಳಿಗೆ ಪ್ರತ್ಯುಕ್ತಿ.

(೧) ಚಂದ್ರರಾಜನ 'ಮದನ ತಿಲಕ' ದಲ್ಲಿರುವ ಆ ಘನಮಂಜರೀ ವೃತ್ತದಲ್ಲಿ ಅಡಕವಾಗಿರುವ ಅನೇಕ ಚಮತ್ಕಾರಗಳಲ್ಲಿ 'ಎರಡು ಷಟ್ಪದಿಯುಂ.... ಅಕ್ಕುಂ ಎಂಬಲ್ಲಿರುವ ಎರಡು ಎಂಬುದು **ಬರೇ** ಸಂಖ್ಯಾವಾಚಿಯಲ್ಲ, ಜಾತಿವಾಚಿಯಾಗಿರಲಾರದೇ?' ಎಂದು ನಾನು ಊಹಿಸಿರುತ್ತೇನೆಂಬುದು ನಿಜ. ಆದರೆ ನನ್ನ ಈ ಮಾತುಗಳನ್ನು ಶ್ರೀ. ಪ್ರಹ್ಲಾದರಾಯರು ತಮ್ಮ ಆಕ್ಷೇಪದಲ್ಲಿ ಉದ್ಧರಿಸಿರುವಲ್ಲಿ ಅವಲ್ಲಿಯ '**ಬರೇ**' ಎಂಬೊಂದು ಪ್ರಧಾನವಾದ ಶಬ್ದವು ಮರವೆಯಿಂದಲೋ, ಅವಸರದಿಂದಲೋ, ಅಚ್ಚಿನ ಹುಳುಕಿನಿಂದಲೋ ಬಿಟ್ಟು ಹೋದುದರಿಂದ, ಆ ಮಾತುಗಳ ಕೊರಳು ಹಿಸುಕಿದಂತಾಗಿ ಅಪಾರ್ಥಕ್ಕೆ ಕಾರಣವಾಗುತ್ತದೆ— ಎರಡು ಎಂಬುದು ಸಂಖ್ಯಾವಾಚಿಯಲ್ಲವೆಂದು ನಾನು ಮಾಡಿಲ್ಲದ, ಯಾರೂ ಮಾಡಲೊಲ್ಲದ, ಸಾಧನೆಯನ್ನು ನನ್ನಿಂದ ಮಾಡಿಸಿದಂತಾಗುತ್ತದೆ. ಏಕೆಂದರೆ ಎರಡೆಂಬುದು ಸಂಖ್ಯಾವಾಚಿಯೇ ಸರಿಯಾದರೂ, ಆ ಎಡೆಯಲ್ಲಿ ಅದು **ಬರೇ** ಸಂಖ್ಯಾವಾಚಿಯಾಗಿರದೆ (ಅಂದರೆ ಸಂಖ್ಯಾವಾಚಿ ಮಾತ್ರವಲ್ಲದೆ) ಜಾತಿವಾಚಿಯೂ ಆಗಿರಲಾರದೇ? ಎಂಬ ಶಂಕೆಯಾಗುತ್ತದೆ, ಎಂದರೆ ಒಂದೇ ಬಗೆಯ ೨ ಷಟ್ಪದಿಗಳೆಂದು ಮಾತ್ರವಲ್ಲ, ಎರಡು ಬಗೆಯ ಷಟ್ಪದಿಗಳೆಂದೂ ಅರ್ಥವಾಗುವಂತೆ ತೋರುತ್ತದೆ ಎಂದು ನನ್ನ ಹೇಳಿಕೆ. ನನ್ನೀ ಹೇಳಿಕೆ ಸರಿಯಾಗಿಲ್ಲವಂತೆ ಶ್ರೀ. ಪ್ರಹ್ಲಾದರಾಯರಿಗೆ. ಏಕೆಂದರೆ ನನಗೆ ತೋರುವಂತೆ ೨ ಬಗೆಯ ಷಟ್ಪದಿಗಳೆಂಬ ಅರ್ಥಕ್ಕೆ ಆಸ್ಪದವಿರಬೇಕಾಗಿದ್ದರೆ 'ಎರಡು ಷಟ್ಪದಿಗಳುಂ' ಎಂದು ಬಹುವಚನದ ರೂಪವಿರಬೇಕಾಗಿತ್ತಂತೆ; ಹಾಗಿಲ್ಲದೆ ಏಕವಚನದ ('ಎರಡು ಷಟ್ಪದಿಯುಂ') ರೂಪವಿರುವುದರಿಂದ, ತ್ರಿಪದಿ–ಚೌಪದಿಗಳಂತೆ ಷಟ್ಪದಿ ಎಂಬುದು ಒಂದು ಜಾತಿವಾಚಿವೃತ್ತವೇ ಎಂದೂ 'ಎರಡು' ಎಂಬುದು ಸಂಖ್ಯಾವಾಚಿಯೇ ಇರುವುದೆಂದೂ ಹೇಳಬೇಕಾಗುತ್ತದಂತೆ. ನೋಡೋಣ. ನಮ್ಮೀ ಮತಭೇದವನ್ನು ನಾಗವರ್ಮ – ಕೇಶಿರಾಜರತಂಹ ಹಿರಿಯರಿಗೆ ಒಪ್ಪಿಸಿ ಅವರೇನು ಹೇಳುವರೋ ನೋಡೋಣ.

(ಕ) ನಾಗವರ್ಮನ 'ಛಂದೋಂಬುಧಿ' ಯಲ್ಲಿ[೧]— 'ಈ ಗಣಗಳಿಂದಾದ ಅಯ್ದು ಅಕ್ಕರದ ಲಕ್ಷಣಮಂ ಪೇಳ್ವೆಂ' (ಪು. ೭೫). ಈ ೫ ಅಕ್ಕರಗಳೆಂದರೆ ಪಿರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ, ಮತ್ತು ಕಿರಿಯಕ್ಕರಗಳೆಂಬ ಬೇರೆ ಬೇರೆ ಬಗೆಯವು; ನನ್ನ ಊಹನೆಯ ಶರ—ಪರಿವರ್ಧಿನಿ ಷಟ್ಪದಿಗಳಂತೆ ಅನ್ಯಾನ್ಯ ಬಗೆಯವು. ಆದರೂ ನಾಗವರ್ಮನು ಅವನ್ನು ಕುರಿತು ಹೇಳುವಲ್ಲಿ '**ಅಯ್ದು ಅಕ್ಕರದ**' ಎಂದಿರುವನಲ್ಲದೆ, '**ಅಯ್ದು ಅಕ್ಕರಂಗಳ**' ಎಂದಿಲ್ಲ! ನಾಗವರ್ಮನ ಈ ಮಾತೇನೂ ಪದ್ಯಬದ್ಧವಾಗಿಲ್ಲ, ಬರೇ ಗದ್ಯದಲ್ಲಿದೆ ಎಂಬುದನ್ನೂ ಗಮನಿಸತಕ್ಕುದು.

(ಖ) ಕೇಶಿರಾಜನ 'ಶಬ್ದಮಣಿದರ್ಪಣ' ದಲ್ಲಿ[೨]— (೧) 'ಅಕ್ಕುಮಿಂಪೆಯ್ದು ಯೋಗವಾ**ಹಂ**' (ಪು. ೨೫); '**ಯೋಗವಾಹಂಗಳ್**' ಎಂದಿಲ್ಲ. ಇವು ಬೇರೆ ಬೇರೆ

---

೧ 'ಕರ್ಣಾಟಕ ಕಾವ್ಯಕಲಾನಿಧಿ' ಯಲ್ಲಿ ಪ್ರಕಟವಾದ ಆವೃತ್ತಿ. ೨ ಮಂಗಳೂರಿನಲ್ಲಿ ಅಚ್ಚಾದ ಆವೃತ್ತಿ. (1899)

CC-0. Jangamwadi Math Collection. Digitized by eGangotri

...ವು ನಾಲ್ಕು ಎಂದು ಅಲ್ಲಿಯೇ ಅವನ್ನು ಹೆಸರಿಸಿರು ...ದರಿಂದ, ಒಂದೇ ಬಗೆಯ ನಾಲ್ಕಲ್ಲವಷ್ಟೇ; (೨) 'ಮೊದ ...ವು ವಿಭಕ್ತಿಯೊಳಂ' (ಪು. ೧೪೬); 'ವಿಭಕ್ತಿ ...ಗಳೊಳಂ' ಎಂದಿಲ್ಲ. ಇವು ಪ್ರಥಮೆ–ದ್ವಿತೀಯೆ ಎಂಬ ...ಬಗೆಯ ವಿಭಕ್ತಿಗಳೆಂದು ಬಲ್ಲೆನಷ್ಟೇ. (೩) 'ನಾಲ್ಕುಂ ...ದವನಾಳ್ದಿ ಕರ್ಣಂ' (ಪು. ೧೫೫); ನಿರೋಪಿಸಿರುವ ...ದಗಳು ಅನ್ಯಾನ್ಯವಾದ ನಾಲ್ಕಾದರೂ, 'ನಾಲ್ಕುಂ ...ದಂಗಳಂ' ಎಂದಿಲ್ಲ, ಇತ್ಯಾದಿ.

...ದರಿಂದ 'ಎರಡುಂ ಷಟ್ಪದಿಯುಂ' ಎಂಬಾ ...ತಿಂದ ಒಂದೇ ಬಗೆಯ ೨ ಷಟ್ಪದಿಗಳೆಂದು ಮಾತ್ರ ...ಲ್ಲ, ೨ ಬಗೆಯ ಷಟ್ಪದಿಗಳೆಂದೂ ಅರ್ಥವಾಗುವಂತೆ ...ರುತ್ತದೆಂದ ನನ್ನ ಹೇಳಿಕೆ ಸರಿಯೋ ತಪ್ಪೋ ಎಂಬು ...ನ್ನು ಸುಜ್ಞರಾದ ವಾಚಕರು ನಾಗವರ್ಮ–ಕೇಶಿರಾಜ ...ಹ ಸೀಮಾಪುರುಷರ ಈ ಮೇಲಣ ಉದಾಹರಣೆ ...ಬೇಕಿಸಲ್ಲಿ ವಿಚಾರಿಸಿ ನೋಡಲಿ. ನಾನು ತಪ್ಪಿರುವೆ ...ವದರೆ, ನಾಗವರ್ಮ–ಕೇಶಿರಾಜರೊಂದಿಗೆ; 'ಎರಡು ...ಗೆಯ ಷಟ್ಪದಿಗಳೆಂಬ ಅರ್ಥಕ್ಕೆ ಆಸ್ಪದವಿರಬೇಕಾಗಿ ...ದ್ದರೆ, ಎರಡು ಷಟ್ಪದಿಗಳುಂ ಎಂದು ಬಹುವಚನ ರೂಪ ...ರಬೇಕಾಗಿತ್ತು' ಎಂಬೀ ಅಲಂಘ್ಯವಾದ ವ್ಯಾಕರಣ ...ತ್ರವನ್ನು ನಾಗವರ್ಮ–ಕೇಶಿರಾಜರೇ ಅರಿತಿಲ್ಲವೆಂದ ...ಮೇಲೆ ಅಜ್ಞನಾದ ನನ್ನ ಪಾಡೇನು ?

(೨) "ನಾಗವರ್ಮನ 'ಛಂದೋಂಬುಧಿ'ಯಲ್ಲಿ 'ಮಂದ ...ರಧರಗಣ' ಎಂಬುದೊಂದು ಶರಷಟ್ಪದಿ ಕಾಣಸಿಗು ...ವದರಿಂದ, ಅದೊಂದು ಮಾತ್ರವಲ್ಲ, ಷಟ್ಪದಿಗಳೆಲ್ಲವೂ ಆ ನಾಗವರ್ಮನಿಂದ ಸಾಕಷ್ಟಾದರೂ ಹಿಂದಣಕಾಲದಿಂದ ಕನ್ನಡ ಛಂದಸ್ಸಿನಲ್ಲಿ ನೆಲಸಿರಬೇಕು" ಎಂದು ನಾನು ಹೇಳಿರುವ ಮಾತಿನಲ್ಲಿ ಅರ್ಥವಿಲ್ಲವಂತೆ. ನನ್ನ ಮಾತಿನಲ್ಲಿ ...ಲ್ಲದ ಅರ್ಥವು ಇವರ ಮಾತಿನಲ್ಲಾದರೂ ಇದೆಯೋ ನೋಡೋಣ. "ನಾಗವರ್ಮನ ಛಂದಸ್ಸಿನಲ್ಲಿ ಮಂದರ ಧರಗಣ' ಎಂಬ ಷಟ್ಪದಿಯೇ ಇಲ್ಲ" ವೆಂದು ಹೇಳು ...ಷಸೆಯೇ ಇವರು ಅದೇ 'ಮಂದರಧರಗಣ' ವೆಂಬ ನುಡಿಗಳಿಂದ ಮೊದಲಾಗುವ ಷಟ್ಪದಿಯನ್ನು ಅಲ್ಲಿಯೇ ಉದ್ಧರಿಸಿ, "ಅಧರಲ್ಲಿ ತ್ರಿಪದಿ–ಚೌಪದಿಗಳಂತೆ ಷಟ್ಪದಿ ಎಂಬ ಒಂದು ಜಾತಿಯ ವೃತ್ತದ ಲಕ್ಷಣ ಹೇಳಿದೆ" ಎಂದಿರುತ್ತಾರೆ. ಅದು ವೃತ್ತವಾಗಿರಲಿ ಬೇರೇನೂ ಆಗಿ ರಲಿ, ಅದಕ್ಕಿರುವ ಚರಣಗಳು ಆರು, ಅದರ ಹೆಸರು 'ಛಂದೋಂಬುಧಿ' ಯಲ್ಲಿಯೇ ಹೇಳಿರುವಂತೆ 'ಷಟ್ಪದಿ' ಎಂದು, ಅದನ್ನು 'ಛಂದೋಂಬುಧಿ'ಯ ಗ– ಪ್ರತಿಯಲ್ಲಿ ಎಂದದೆ 'ಶರಷಟ್ಪದಿ' ಎಂದು;[೧] ಹಾಗಾದರೆ ನನ್ನ ಮಾತಿನಲ್ಲಿರುವ ತಪ್ಪೇನು ? ನಾನು 'ಮಂದರಧರಗಣ' ವೆಂದು ಸಂಕ್ಷೇಪವಾಗಿ ಹೇಳಿದುದು ಆ ನುಡಿಗಳಿಂದ ಮೊದಲಾಗುವ ಷಟ್ಪದಿಯನ್ನು ಕುರಿತು ತಾನೇ ವಿನಾ ಮತ್ತೇನನ್ನೂ ಅಲ್ಲ; ಮತ್ತು ಆ ಷಟ್ಪದಿ ನ್ಯೂನಾತಿರಿಕ್ತ ವಿಲ್ಲದೆ ಶರಷಟ್ಪದಿಯ ಕ್ರಮದಲ್ಲಿಯೇ ಇರುವುದ ರಿಂದಲೂ, ಅದನ್ನು ಆ ಗ್ರಂಥದ ಗ– ಪ್ರತಿಯಲ್ಲಿ ಶರಷಟ್ಪದಿ ಎಂದಿರುವುದರಿಂದಲೂ, ಅದನ್ನು 'ಮಂದರಧರಗಣ' ಎಂಬು ದೊಂದು ಶರಷಟ್ಪದಿ ಎಂದು ಸಂಕೇತಿಸಿದೆನಲ್ಲದೆ, 'ಮಂದರ ಧರಗಣ' ಎಂದ ಮಾತ್ರಕ್ಕೆ ಶರಷಟ್ಪದಿ ಎಂಬ ಅರ್ಥದಿಂದಲ್ಲ ಎಂಬುದು ಸುಜ್ಞರಾದ ವಾಚಕರಿಗೆ ತಿಳಿಯದಿರದು.

ನನ್ನ ಲೇಖದಲ್ಲಿ ಪ್ರತಿಪಾದ್ಯವಾದ ವಿಷಯದಲ್ಲಿ ಕುತೂಹಲವುಳ್ಳ ವಾಚಕರು ನಾಗವರ್ಮನ 'ಛಂದೋಂ ಬುಧಿ 'ಯನ್ನು ಓದಿರುವರೆಂಬ ಭಾವನೆಯಿಂದ ಅದ ರಲ್ಲಿ 'ಒಂದಿದ **ಋತು** (೬) ಷಟ್ಪದಿ' (ಪು. ೮೧) ಎಂದೂ 'ಶರಕುಸುಮ ಭೋಗ ಭಾವಿನಿ। ಪರಿವರ್ಧಿನಿ ವಾರ್ಧಿ ಕಂಗಳೆಂದಾರು ತೆರಂ ॥' (ಡಿ) ಎಂದೂ ಇಷ್ಟು ಸ್ಪಷ್ಟ ವಾಗಿ ಅವಾರು ಷಟ್ಪದಿಗಳನ್ನು ಹೇಳಿರುವಂದು, ಪುನಃ ಪಿಷ್ಟಪೇಷಣವೇಕೆ? ಎಂದೆಣಿಸಿ, ಮೂಲ ಲೇಖವನ್ನು ಬರೆ ವಂದು, 'ಷಟ್ಪದಿಗಳೆಲ್ಲವೂ ನಾಗವರ್ಮನಿಂದ ಸಾಕಷ್ಟಾ ದರೂ ಹಿಂದಣಕಾಲದಿಂದ ಕನ್ನಡ ಛಂದಸ್ಸಿನಲ್ಲಿ ನೆಲಸಿರ ಬೇಕು' ಎಂದು ಫಲಿತಾರ್ಥವನ್ನು ಮಾತ್ರ ಸೂಚಿಸಿದೆ. ಅದು ಸಾಲದೆಂದು ಈಗ ತಿಳಿಯುತ್ತದೆ; ಆಗಲೇ ತಿಳಿದಿ ದ್ದರೆ ಇಷ್ಟು ಮಾತಾಟಕ್ಕೆ ಕಾರಣವಾಗುತ್ತಿದ್ದಿಲ್ಲ.

---

೧ 'ಛಂದೋಂಬುಧಿ' ಯ ಗ–ಪ್ರತಿಯಲ್ಲಿ (ಪು. ೮೦ *f.* ಟಿ. ೪) ಈ ಷಟ್ಪದಿಯ ೬ನೇಯ ಚರಣವು 'ಯಂದದೊಳಿರೆ ಷಟ್ಪದಿಯೀ' ಎಂದಿರುವುದರಿಂದ ಅದು ಶರಷಟ್ಪದಿಯೇ ಎಂದು ವಿಶದವಾಗುತ್ತದೆ. ಆ ಗ್ರಂಥದ ಟಿಪ್ಪಣದಲ್ಲಿ (ಪು. ೩೩), ಈ ಪಾಠವು ಅಶುದ್ಧವೆಂದು ಹೇಳಿ, ಅದು ಶರಷಟ್ಪದಿಯೇ ಎಂದು ಹೇಳಲು ಕಾರಣವಿಲ್ಲನೆಂದಿವೆ; ಕಾರಣವಿಲ್ಲವೆಂಬುದೇ ಆಪಾಠವು ಅಶುದ್ಧನೆಂಬುದಕ್ಕೆ ಕಾರಣವಾಗಿರಬಹುದೇನೋ. ಶರಷಟ್ಪದಿಯ ಪ್ರಸ್ತಾರಕ್ಕೆ ಚಾಚೂ ತಪ್ಪದ ಆ ಷಟ್ಪದಿ ಶರಷಟ್ಪದಿಯಲ್ಲವಾದರೆ, ಬೇರಾವುದಾಗಿರಬೇಕು ?

CC-0. Jangamwadi Math Collection. Digitized by eGangotri

ಛಂದೋಂಬುಧಿ'ಯ ಸಂಪಾದಕರು ಈ ಮೇಲಣ ಕಂದ ಪದ್ಯಗಳು ಗ್ರಂಥಕರ್ತ (ಅಂದರೆ ಛಂದೋಂಬುಧಿಕಾರನಾದ ನಾಗವರ್ಮ)ನದಲ್ಲವೆಂದು ತೋರುತ್ತವೆ ಎಂದಿರುವುದರಿಂದ (ಪು. ೮೧)ತಾನೇ ಅವು ಅನ್ಯಕರ್ತೃಕವೆಂದಾಗಲಿ, ನಾಗವರ್ಮನಿಂದ ಈಚೆಯ ಪ್ರಕ್ಷೇಪವೆಂದಾಗಲಿ ಸಿದ್ಧವಾಗದು; ಹಾಗೆ ಹೇಳಲಿಕ್ಕೆ ತಕ್ಕ ಆಧಾರಗಳನ್ನು ಕೊಡಬೇಕು, ಹಾಗೇನೂ ಅವರು ಕೊಟ್ಟಿಲ್ಲ. ನನಗಾದರೋ ಆ ಪದ್ಯಗಳು ಗ-ಪ್ರತಿಯಲ್ಲಿ ಇರುತ್ತವೆಂಬುದು ಅವು ಪ್ರಕ್ಷಿಪ್ತವಲ್ಲ ಎಂಬುದನ್ನು ಸಾಕಷ್ಟು ಆಧರಿಸುತ್ತದೆಂದು ತೋರುತ್ತದೆ; ಏಕೆಂದರೆ, ಇತರ ಪ್ರತಿಗಳಲ್ಲಿ ಹೇಳದೆ ಗ-ಪ್ರತಿಯಲ್ಲಿ ಮಾತ್ರ ಇರುವ 'ಸುಮುಖಿ'–'ನೀತಿಕೆ' (ಪು. ೩೮), 'ವೈಶ್ವದೇವ'–'ಕುಸುಮ ವಿಚಿತ್ರ' (ಪು. ೪೧), 'ಮಂಜುಭೂಷಣಿ' – 'ಕೋಮಲರುಚಿರ' –'ಮಂಗಳಿಕ' (ಪು. ೪೩), 'ಪಂಚಚಾಮರ' (ಪು. ೪೭), 'ವನಜದಳ' (ಪು. ೪೮), 'ಹಂಸಕ' (ಪು. ೪೯,) ಮೊದಲಾದ ವಿವಿಧ ವೃತ್ತಗಳು, 'ಗುರುವೊಂದಾದಿಯೊಳುತ್ಪಲಂ' (ಪು. ೪೯) ಎಂಬ ಮತ್ತೇಭವಿಕ್ರೀಡಿತ, ರಘುಟೆಗಳ ಪ್ರಭೇದಗಳನ್ನು ಅರುಹುವ ಕಂದ (ಪು. ೬೫), ಇವೇ ಮೊದಲಾದುವನ್ನು ಪರಿಶೀಲಿಸುವಂದು, ಬೇರೆ ಪ್ರತಿಗಳಿಗಿಂತ ಗ-ಪ್ರತಿ ಸಾಕಷ್ಟು ಸಮಗ್ರವಿದೆ ಎಂದೂ, ಅತ ಏವ ಅದರಲ್ಲಿರುವ ಹಲವು ಹೆಚ್ಚಿಗೆ ವಿಷಯಗಳನ್ನೋ ಪದ್ಯಗಳನ್ನೋ, ಅವು ಇತರ ಪ್ರತಿಗಳಲ್ಲಿ ದೊರೆವುದಿಲ್ಲವೆಂಬ ಕಾರಣದಿಂದ ಮಾತ್ರ ಪ್ರಕ್ಷೇಪವೆನ್ನಲಾಗದೆಂದೂ ಹೇಳಬೇಕು. ಹೇಗೂ ಸಾಧಾರವಾಗಿ ಸಿದ್ಧಾಂತೀಕರಿಸುವ ವರೆಗೆ ಗ-ಪ್ರತಿಯನ್ನು ಕ-ಪ್ರತಿಗಿಂತ ಹೆಚ್ಚಿಗೆ, ಅಥವಾ ಕ-ಪ್ರತಿಯಷ್ಟೇ ಆದರೂ, ವಿಶ್ರಂಭಣೀಯವೆಂದು ಭಾವಿಸಬೇಕು. ಆದರಿಂದ ಎತ್ತಿಕೊಟ್ಟಿರುವ ಪಾಠಗಳನ್ನು (ಮುಖ್ಯತಃ ಅನ್ಯ ಪ್ರತಿಗಳಲ್ಲಿ ದೊರಕದ ಪಾಠಗಳನ್ನು) ನಾನಾದರೋ ನಾಗವರ್ಮನ ಕೃತಿ ಎಂದೇ ಮನ್ನಿಸುತ್ತೇನೆ. ಆದಕಾರಣವೇ ಆ ಗ-ಪ್ರತಿಯ ಆಧಾರದಿಂದ ತಾನೇ, ಅವಾರು ಷಟ್ಪದಿಗಳೂ ನಾಗವರ್ಮನಿಂದ ಸಾಕಷ್ಟಾದರೂ ಹಿಂದಣಕಾಲದಿಂದ ಕನ್ನಡ ಛಂದಸ್ಸಿನಲ್ಲಿ ನೆಲಸಿರಬೇಕೆಂದು ಅಷ್ಟು ದೃಢತೆಯಿಂದ ಹೇಳಿದನಷ್ಟೇ.

ರನ್ನನೂ ನಾಗವರ್ಮನೂ ಸಮಸಾಮಯಿಕರಾಗಿದ್ದರೊಳಲ್ಲಿ ಆಕ್ಷೇಪವಿಲ್ಲವೆಂದಾದರೆ, ನಾಗವರ್ಮನಿಗಿಂತ ಹಿಂದಣಿಂದ ಇದ್ದಿರಬೇಕೆಂದು ನಿಶ್ಚಿತವಾಗುವ ಅವಾರು ಷಟ್ಪದಿಗಳು ರನ್ನನಿಗಿಂತ ಅಷ್ಟೇ ಕಾಲಕ್ಕೆ ಹಿಂದಣಿಂದಲೂ ಇದ್ದಿರಬೇಕಷ್ಟೇ. ರನ್ನನ 'ಗದಾಯುದ್ಧ'ದಲ್ಲಿರುವ (IX ೫೧) 'ಮಾತ್ರಾ ಸಮಕಷಟ್ಪದಿ' ಎಂದು ಯಾರೇನೋ ಹೆಸರಿಕ್ಕಿರುವ ಆ ಷಟ್ಪದಿ ಪರಿವರ್ಧಿನಿಯೇ ಸರಿ; ಆದರೆ ಅದು ಸರ್ವಥಾ ರನ್ನನ ಕೃತಿಯಲ್ಲವೆಂದು ಆಗಲೂ ಹೇಳಿದೆ, ಈಗಲೂ ಹೇಳುತ್ತೇನೆ. ಆತನ ಕಾಲಕ್ಕಿಂತ ಹಿಂದಣಿಂದಲೇ ಷಟ್ಪದಿಗಳೆಲ್ಲವು ಇದ್ದುದರಿಂದ, ಆತನಿಂದ ತಕ್ಕಷ್ಟು ಅರ್ವಾಚೀನನಾದ ಯಾವನೊಬ್ಬ ಸಂಪ್ರತಿಕಾರನೋ ಹರಿಗಬ್ಬಿಗನೋ (ಏತಕ್ಕೆಂದು ಆತನೇ ಬಲ್ಲ!) ಅದನ್ನಲ್ಲಿ ಸಿಕ್ಕಿಸಿರಬೇಕು. ಅಂಥಾ ಪ್ರಕ್ಷೇಪವು ರನ್ನನ ಕಾಲಾನಂತರ ಹೆಚ್ಚಾದರೆ ಒಂದೆರಡು ಶತಕಗಳೊಳಗೆ ಆಗಿರಬೇಕು; ಇಲ್ಲವಾದರೆ ಅದು ಆತನ ಕೃತಿಯಲ್ಲಿ ಕಲೆತು ಹೋಗಿ ಈಗ ತೋರುವಂತೆ ಅದರದೇ ಒಂದು ಅಂಗವೆಂದು ಭಾವಿಸಲ್ಪಡುತ್ತಿದ್ದಿಲ್ಲ, ಆ ಕಾವ್ಯದಲ್ಲಿಯ ನಿಸ್ಸಂಶಯವಾದ ರನ್ನನ ಇತರ ಅನೇಕ ಪದ್ಯಗಳಂತೆ, ರನ್ನನದೇ ಕೃತಿಯೆಂದು ಆಗಿಂದ ಈಗಣವರೆಗೆ ಮನ್ನಿಸಲ್ಪಡುತ್ತಿದ್ದಿಲ್ಲ. ರನ್ನನ ಕಾಲದಲ್ಲಿ ವೃತ್ತ- ಕಂದಗಳಿದ್ದುವೇ ವಿನಾ ಷಟ್ಪದಿಗಳು ಇದ್ದಿಲ್ಲವಾದರೆ, ಅವಲ್ಲಿಯೂ ಪರಿವರ್ಧಿನಿ ಷಟ್ಪದಿ ಇದ್ದಿಲ್ಲವಾದರೆ, ಪ್ರಕ್ಷೇಪಕನು ತಾನು ರನ್ನನಿಂದ ಎಷ್ಟು ಈಚೆಯವನಾದರೂ, ಆತನ ಕಾಲದಲ್ಲಿ ಇದ್ದಿರಲಾರದ, ಆ ಕಾಲಕ್ಕೆ ಸಲ್ಲದ ಛಂದಸ್ಸಿನಲ್ಲಿ ತನ್ನ ಕೃತಿಯನ್ನು ರಚಿಸುತ್ತಿದ್ದಿಲ್ಲ. ಅದನ್ನು ಯಾವುದೊಂದು ವೃತ್ತದಲ್ಲಿಯೋ ಕಂದದಲ್ಲಿಯೋ ಹೂಡಿಡುತ್ತಿದ್ದನಲ್ಲದೆ, ಆ ಕಾಲದಲ್ಲಿ ಇಲ್ಲದ ಛಂದಸ್ಸಿನಲ್ಲಿ ತನ್ನ ಪ್ರೌಢಿಮೆಯನ್ನು ಮೆರಸುವಷ್ಟು ಸಾಹಸಪಡುತ್ತಿದ್ದಿಲ್ಲ. ನಾಗವರ್ಮನ 'ಛಂದೋಂಬುಧಿ'ಯಲ್ಲಿ (ಆರೂ ಷಟ್ಪದಿಗಳಿವೆ) ಶರಷಟ್ಪದಿ ಹೇಗೂ ಇದೆ, ರನ್ನನ 'ಗದಾಯುದ್ಧ'ದಲ್ಲಿ ಪ್ರಕ್ಷಿಪ್ತವಾದ ಈ ಪರಿವರ್ಧಿನಿ ಇದೆ ಎಂಬುದರಿಂದ, ಇತರ ಷಟ್ಪದಿಗಳನ್ನು ಕುರಿತು ಹೇಳಿರುವುದನ್ನು ಯಾರಾದರೂ ಒಪ್ಪಲಿ, ಒಪ್ಪದಿರಲಿ, ರನ್ನ-ನಾಗವರ್ಮರಿಗಿಂತ ಹಿಂದಣಿಂದಲೇ ಶರ-ಪರಿವರ್ಧಿನಿಗಳಾದರೂ ಇದ್ದಿರಬೇಕೆಂಬಲ್ಲಿ ಸಂಶಯವಿಲ್ಲ.

(೩) ಷಟ್ಪದಿಗಳು ಸಂಸ್ಕೃತವೃತ್ತಗಳಿಂದ ಹುಟ್ಟಿರಬೇ

CC-0. Jangamwadi Math Collection. Digitized by eGangotri

ಕೆಂದು ನಾನು ನಿರ್ಧರಿಸಿರುವುದು ಸರಿಯಾಗಿರುವುದಿಲ್ಲ[೪] ಎಂಬುದು ಮೂರನೆಯ ಆಕ್ಷೇಪ; ಕಾರಣವೇನೆಂದರೆ ನಾಗವರ್ಮನು ಷಟ್ಪದಿಯನ್ನು ತನ್ನ 'ಛಂದೋಂಬುಧಿಯ ಕರ್ಣಾಟ ವಿಷಯ ಜಾತಿ ವೃತ್ತ ವಿವರಣ'ವೆಂಬ ಪಂಚಮಾಧಿಕಾರದಲ್ಲಿ ವಿವರಿಸುತ್ತಾನೆ, ಆತ ಏವ ಏತದಧಿಕಾರದಲ್ಲಿ ಹೇಳಿರುವ ಮಿಕ್ಕ ವೃತ್ತಗಳಂತೆ ಷಟ್ಪದಿಯೂ ಅಚ್ಚಗನ್ನಡ ವೃತ್ತವೆಂದು ಆತನ ಕಲ್ಪನೆ ಇದ್ದಿತಾಗಿ ಹೇಳಬೇಕೆಂಬುದು. ಆ ಪಂಚಮಾಧಿಕಾರದಲ್ಲಿ ಸಲಕ್ಷಣವಾಗಿ ಉದಾಹರಿಸಿರುವ ೧೦ಬಗೆಯ ವಿವಿಧ ವೃತ್ತಗಳನ್ನು ಪ್ರಥಮಾಧಿಕಾರದಲ್ಲಿ ಹೀಗೆ ಹೆಸರಿಸಿದೆ—

> ಮದನವತಿಯುಕ್ಕರಂ ಚೌ
> ಪದಿ ಗೀತಿಕೆಯೇಳೆ ತಿವದಿಯುತ್ಸಾಹಂ ಷ।
> ಟ್ಪದಿಯಕ್ಕರಿಕೆ ಕರಂ ಜೆ
> ಲ್ಪೊದವಿದ ಛಂದೋವತಂಸಮುಬ್ಬದಳಾಕ್ಷೀ ॥
> (I ೪೭. ಪು. ೧೯)

ಈಗ ನೋಡೋಣ, ಈ ೧೦ ವೃತ್ತಗಳೆಲ್ಲವೂ ಏಕರೀತಿಯಾಗಿ ಅನನ್ಯಭಾಷಾಜನ್ಯವಾದ ಅಚ್ಚಗನ್ನಡ ವೃತ್ತಗಳೋ, ಅಥವಾ ಇವಲ್ಲಿ ಕೆಲವಾದರೂ ಸಂಸ್ಕೃತಜನ್ಯವೆವೆಯೋ ನೋಡೋಣ.

(೧) ಮದನವತಿ (ಛಂದೋ. ಪು. ೭೯), ಇದು ಮೂರು ತೆರನಾಗಿ ಆಗಬಹುದಾದರೂ, ಮಾತ್ರೆಗಳ ಮೊತ್ತವನ್ನು ತಿಳಿವ ಬಗ್ಗೆ ಇದೊಂದು ಚರಣ ಸಾಕು—

UUUU— U U — UU UU U U U UU—
ಮದನಹರ ತ್ರಯದಿಂ ಹರಿ ಕಡೆ ಪಡೆ ಮದನವತೀ।

ಇದನ್ನು ೧೬ನೆಯ ಅಷ್ಟಿ ಎಂಬ ಛಂದಸ್ಸಿನಲ್ಲಿ ಹುಟ್ಟುವ 'ಜಗದ್ವಂದಿತ' (ಛಂದೋ, ಪು. ೪೭) ಎಂಬ ಅಚ್ಚ ಸಂಸ್ಕೃತ ಸಮವೃತ್ತದೊಡನೆ ಹೋಲಿಸಿ ನೋಡಿ—

—UU — UU —U U — UU
ಇಂದುಗ। ಣಂ ಶರ। ಸಂಖ್ಯೆಯೊ। ಳೊಂದಿರೆ।
—U U —
ಚಂದ್ರಧ। ರಂ

ಇವಲ್ಲಿ (ಭೇದವಿದೆಯೋ ಎಂದು ವಾಚಕರೇ ನಿರ್ಣಯಿಸಲಿ. ಜಗದ್ವಂದಿತವೆಂಬ ಆ ಸಂಸ್ಕೃತ ಸಮವೃತ್ತದಿಂದ ತಾನೆ ಮದನವತಿ ಎಂಬೀ ಮೂಲಾವೃತ್ತವು ಹುಟ್ಟಿರಬೇಕಲ್ಲದೆ, ಇದು ಸ್ವತಂತ್ರವಾದ ಅಚ್ಚಗನ್ನಡವೃತ್ತವಲ್ಲವೆಂದು ಬೇರೆ ಹೇಳಬೇಕೆ?

(೨) 'ಉತ್ಸಾಹ' (ಛಂದೋ. ಪು. ೮೦)–

> ಭೂಹಿತಾರ್ಥಮೆನಿಸುವಜನ ಗಣಮವೆರಡು
> ಸಪ್ತ ಸಂ।

ಇದನ್ನು ೧೫ನೆಯ ಅತಿಶಕ್ವರಿಯಲ್ಲಿ ಹುಟ್ಟಿದ 'ಉತ್ಸಾಹ'ವೆಂಬ ಸಂಸ್ಕೃತ ಸಮವೃತ್ತದೊಂದಿಗೆ ಹೋಲಿಸಿ ನೋಡಿ—

> ಆ ಸಮುದ್ರಮಂ ಕಲಂಕಿದಂ ಸದಾಶಿವೋರ್ವಿಪಂ ॥
> (ಕೆಳದಿ ನೃಪವಿಜಯ)

ಹಾಗೆಯೇ, ಆ ಸಂಸ್ಕೃತ ಉತ್ಸಾಹವೃತ್ತದಿಂದಲೇ ಹುಟ್ಟಿ ಅದೇ ಹೆಸರಾಂತಿರುವ 'ಉತ್ಸಾಹರಗಳೆ'ಯೊಂದಿಗೂ ಹೋಲಿಸಿ ನೋಡಿ—

> ಎಚ್ಚೊಡಸುರನಿಟ್ಟ ಬೆಟ್ಟನೊಂದು ವಜ್ರಶರದಿನಾ।
> (ಪಂಪಭಾರತ XII ೧೩)

(೩) ಛಂದೋವತಂಸ (ಛಂದೋ ಪು. ೭೪)—

> ಮಂದರಧರಗಣಮೆಸೆದಿರೆ ಮೊದಲೊಳೆ[೫]।

ಇದನ್ನು ೧೦ ಯ ಪಂಕ್ತಿ ಛಂದಸ್ಸಿನ 'ಮಂದಾನಿಲ' ವೃತ್ತದೊಡನೆಯೂ

> ನೀತಿಯುತೇ ಮಂದಾನಿಲ ವೃತ್ತಂ। (ಛಂದೋ ಪು. ೩೪)

---

೪. 'ಹರಿಶ್ಚಂದ್ರ ಕಾವ್ಯಸಂಗ್ರಹ'ದ (ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೧) ಸಂಪಾದಕರೂ ಹೀಗೆಯೇ ಅಭಿಪ್ರಾಯ ಪಟ್ಟಿರುತ್ತಾರೆಂದು. ಅದರ ಉಪೋದ್ಘಾತದಲ್ಲಿಯ (ಪು, Liv) 'ಸಾಂಗತ್ಯ, ತ್ರಿಪದಿ, ಚೌಪದಿ ಮುಂತಾದವುಗಳಂತೆ ಷಟ್ಪದಿಯಲ್ಲಿಯೂ ಅಚ್ಚಗನ್ನಡದ ಹಾಡುಗಬ್ಬವಾಗಿದ್ದು ಬಹಳ ಹಿಂದಿನಿಂದಲೂ ಕನ್ನಡಿಗರಲ್ಲಿ ರೂಢವಾಗಿದ್ದಂತೆ ತೋರುತ್ತದೆ' ಎಂಬ ಮಾತುಗಳಿಂದ ತಿಳಿಯುತ್ತದೆ.

೫ 'ಛಂದೋಂಬುಧಿ'ಯಲ್ಲಿ ಉದಾಹರಣೆಯಾಗಿ ಕೊಟ್ಟಿರುವ ಈ ಪದ್ಯವು ಲಕ್ಷಣಕ್ಕೆ ಸರಿಯಾಗಿಲ್ಲ, ಪ್ರಸ್ತಾರಕ್ಕೆ ತಪ್ಪುತ್ತದೆ. ಮಿ| ಕಿಟ್ಟೆಲರಿಂದ ಪ್ರಕಟವಾದ ನಾಗವರ್ಮನ ಕನ್ನಡ ಛಂದಸ್ಸಿನಲ್ಲಿ (ಪು. ೧೧೧ ಪದ್ಯ ೩೧೦) ಕೊಟ್ಟಿರುವ ಉದಾಹರಣೆಯಲ್ಲಿ ಮೊದಲನೆಯ ೩ ಚರಣಗಳು ಸರಿಯಾಗಿವೆ. ೪ನೆಯದರಲ್ಲಿ ಮಾತ್ರ ಛಂದವತಂಸ ಅಥವಾ ಛಂದೋವತಂಸ (ದೊ–ಹ್ರಸ್ವ) ಎಂದು ಓದಿಕೊಂಡು ಹಾಗೆ ಪ್ರಸ್ತಾರ ಮಾಡಬೇಕಾಗುತ್ತದೆ.

CC-0. Jangamwadi Math Collection. Digitized by eGangotri

ಆ ಮಂದಾನಿಲ ವೃತ್ತದಿಂದಲೇ ಹುಟ್ಟಿ ಅದೇ ಹೆಸರಾಂತಿರುವ ಮಂದಾನಿಲರಗಳೆಯೊಂದಿಗೂ ಹೋಲಿಸಿ ನೋಡಿ—

ಆ ವೇಳೆಯೊಳತಿ ಸಂಭ್ರಮಮೆಸೆದಿರೆ। (ರಾಜಶೇಖರ—IX)

(ಳ) ಚೌಪದಿ (ಛಂದೋ ಪು. ೭೮)

ಮದನನ ತಂದೆಯ ಮುಂ।

ಇದನ್ನು ೭ನೆಯ ಉಪ್ಲಾಕ್ಕೆಂಬ ಛಂದಸ್ಸಿನ 'ಕಮಳ' (ಅಥವಾ ಅಮಳ) ವೆಂಬ ವೃತ್ತದೊಡನೆ (ಛಂದೋ ಪು. ೨೯) ಹೋಲಿಸಿ ನೋಡಿ–

ಸುಂದರಿ ಕೇಳ್ ಕಮಳಂ ।[೬]

(೩) ಅಕ್ಕರಿಕೆ (ಛಂದೋ ಪು. ೭೮) –

 U UUU — — U U UU — —

ಮುರರಿಪು। ಬೊಮ್ಮಂ। ಮುರರಿಪು। ಬೊಮ್ಮಂ।

U UUU —UU—

ಮುರರಿಪು। ಶೂಲಧರಂ।

ಇದನ್ನು ೨೦ನೆಯ ಕೃತಿ ಎಂಬ ಛಂದಸ್ಸಿನಲ್ಲಿ ಹುಟ್ಟತಕ್ಕ ೧೦೪೮೫೭೬ ವೃತ್ತಗಳಲ್ಲಿ ಒಂದಾಗಿರಬೇಕಾದ

UUU |U– – | UUU|U– – |UUU|U-U|U–

ಎಂಬ ಹೆಸರರಿಯದ ವೃತ್ತದೊಂದಿಗೆ ಹೋಲಿಸಿ ನೋಡಬಹುದು.

ಹೀಗೆ ಇವೈದಾದರೂ ಸಂಸ್ಕೃತ ವೃತ್ತಗಳಿಂದ ತಾನೆ ಹುಟ್ಟಿರಬೇಕೆಂಬುದು (ಇವುಗಳ ಹೆಸರುಗಳಾದರೂ ಅಚ್ಚಗನ್ನಡವೇ?) ಇಷ್ಟು ಸ್ಪಷ್ಟವಿರುವಾಗ, ನಾಗವರ್ಮನು ಇವನ್ನು ಕರ್ನಾಟಕ ವಿಷಯ ಜಾತಿ ಎಂದಿರುತ್ತಾನೆಂಬ ಆದೊಂದು ಕಾರಣದಿಂದ ತಾನೆ ಆ ಮಾತಿಗೆ ತಲೆಬಾಗಿ ಅದನ್ನೊಪ್ಪಿಕೊಳ್ಳಬೇಕೋ? ಅಥವಾ ಸತ್ಯವು ಹೇಗದೆ ಎಂದು ಸಂಶೋಧಿಸಿ ತಿಳಕೊಂಡು ಅದನ್ನೊಪ್ಪಬೇಕೋ? ಎಂಬುದನ್ನು ನಾಗವರ್ಮನ ಮಾತೇ ಮಾಕೆಂದು ನಚ್ಚಿ ಸತ್ಯದ ಮಾತನ್ನು ಅಲ್ಲಗಳೆಯುಲೊಲ್ಲದ ಸುಜ್ಞರಾದ ವಾಚಕರು ನಿರ್ಧರಿಸಲಿ. ಕರ್ನಾಟಕ ವಿಷಯ ಜಾತಿಯೆಂದು ನಾಗವರ್ಮನು ಹೇಳಿರುವ ಮದನವತಿಯೇ ಮೊದಲಾದ ಈ ಮೇಲೆ ನಿರೂಪಿಸಿರುವ ಐದು ವೃತ್ತಗಳು ಎಷ್ಟರ ಮಟ್ಟಿಗೆ ಅಚ್ಚಗನ್ನಡ ವೃತ್ತಗಳು ಎನಿಸಬಹುದೋ ಅದಕ್ಕಿಂತ ಹೆಚ್ಚಿನ ಮಟ್ಟಿಗೆ ಷಟ್ಪದಿಗಳನ್ನು ಕನ್ನಡವೃತ್ತಗಳೆನ್ನಬಹುದು; ಏಕೆಂದರೆ ಸಂಸ್ಕೃತ ವೃತ್ತಗಳಲ್ಲಿ ಇಲ್ಲದ ಆರು ಚರಣಗಳ ಅದೊಂದು ವೈಶಿಷ್ಟ್ಯವಾದರೂ ಷಟ್ಪದಿಗಳಲ್ಲಿದೆ. ಇದೊಂದು ಕಾರಣದಿಂದ, ಅವುಗಳ ಬಿತ್ತನ್ನು ಸಂಸ್ಕೃತ ವೃತ್ತಗಳಿಂದ ಆಯ್ದುಕೊಂಡರೂ, ಕನ್ನಡದಲ್ಲಿ ಅವುಗಳ ಮೊಳವೂ ಬೆಳವೂ ಸಂಸ್ಕೃತ ವೃತ್ತಗಳಿಂದ ಭಿನ್ನವಾಗಿರುತ್ತದೆಂಬುದು ನಿಜವೇ; ಆದರೆ ಆ ಕಾರಣದಿಂದ ಅವುಗಳ ತಾಯ್ಬೇರು ಸಂಸ್ಕೃತ ಛಂದಸ್ಸಿನಲ್ಲಿ ಇರಲಾರದೆಂದರೆ, ಸತ್ಯವನ್ನು ಮರೆಮಾಡಿದಂತಾಗದಿರದು.

('ಹುಕ್ಷಂದ್ರ ಕಾವ್ಯಸಂಗ್ರಹ'ದ ಉಪೋದ್ಘಾತದಲ್ಲಿ (ಪು. Liv) ಷಟ್ಪದಿಗಳ ಹಿರೇ ಚರಣಗಳ ನಿರ್ಮಾಣದಲ್ಲಿ ಕಂದ ಪದ್ಯದ ಹಿರೇ ಚರಣದ ಘಟನೆಯನ್ನು ಅನುಸರಿಸಿರಬಹುದೆಂದು [illegible] ಊಹಿಸಿರುವಂತೆ ತೋರುತ್ತದೆ. ಆದರೆ ಕಂದವೇನು ಅಚ್ಚಗನ್ನಡ ಛಂದಸ್ಸೇ? ನಾಗವರ್ಮನ 'ಛಂದೋಂಬುಧಿ'ಯಲ್ಲಿ 'ಸ್ಕಂಧ (ಕಂದ) ಜಾತಿ'ಯನ್ನು (ಪು. ೬೯) ಕರ್ನಾಟಕ ವಿಷಯ ಜಾತಿಯಲ್ಲಿ ಕೂಡಿಸಿಲ್ಲ ಮಾತ್ರವಲ್ಲ, ಆ ಜಾತಿವಿಶೇಷದಲ್ಲಿ ಆರ್ಯೆಯೇ ಮೊದಲಾದ ಶುದ್ಧ ಸಂಸ್ಕೃತ ಛಂದಸ್ಸನ್ನೂ ಹೇಳಿದೆ. ಇದಲ್ಲದೆ ನಾಗವರ್ಮನಿಗಿಂತ ಎಷ್ಟೋ ಹಿಂದಣ ಐಹೊಳೆಯ ಶಾಸನದಲ್ಲಿ (ಕ್ರಿ. ಶ. ೬೩೪), ಇದೊಂದು

'ಯೇನಾಯೋಜಿ ನವೇಶ್ಮಸ್ಥಿರಮರ್ಥವಿಧೌ ವಿವೇಕಿನಾ ಜಿನವೇಶ್ಮ।

ಸ ವಿಜಯತಾಂ ರವಿಕೀರ್ತಿಃ ಕವಿತಾಶ್ರಿತ ಕಾಳಿದಾಸ ಭಾರವಿ ಕೀರ್ತಿಃ॥ ೩೭॥'

ಸಂಸ್ಕೃತ ಕಂದಪದ್ಯವೂ ಇದೆ. ನಾಗವರ್ಮನಿಗಿಂತ ಸುಮಾರು ೨೦೦ ವರ್ಷಕ್ಕೆ ಈಚೆಯ ಅಗ್ಗಳನ 'ಚಂದ್ರಪ್ರಭ ಪುರಾಣ'ದಲ್ಲಿಯೂ ಸಂಸ್ಕೃತ ಸ್ಕಂಧಕವೆಂಬೀ

ತ್ರಿಭುವನ ಚೂಡಾಮಣಯಃ ಕಾಳೋರಗ ವಿಷಮ ಗರಳ ವಿಷಹರ ಮಣಯಃ॥

ನತಜನ ಚಿಂತಾಮಣಿಯೋ ಮಮ್ಮ ಹೃದಿ ನಿವಸಂತುಃ ಜೈನಪದನಖಮಣಯಃ॥ (xii. ೧೫೬)

ಕಂದಪದ್ಯವಿದೆ. ಆದುದರಿಂದ ಷಟ್ಪದಿಗಳ ಹಿರೇ ಚರಣಗಳ ನಿರ್ಮಾಣಕ್ಕೆ ಕಂದಪದ್ಯದಿಂದ ಆಧಾರ ದೊರೆತಿರಬಹು

೬. 'ಸುಂದರಿ ಕೇಳಮಳಂ ||' ನಾಗವರ್ಮನ 'ಕನ್ನಡಛಂದಸ್ಸು'—ಪ. ೧೮೧; ಪು. ೩೩.)

CC-0. Jangamwadi Math Collection. Digitized by eGangotri

ವೆಂದರೆ, ಷಟ್ಪದಿಗಳ ರಚನೆ ಸಂಸ್ಕೃತ ಛಂದಸ್ಸಿಗೆ ಸಾಕ ಷ್ಟಾದರೂ ಸಾಲಗಾರನೆಂದಾಗುತ್ತದೆ ಮಾತ್ರವಲ್ಲ; ಆ ಕಾರಣದಿಂದ ಸಂಸ್ಕೃತ ಛಂದಸ್ಸಿನಲ್ಲಿ ಕಂದವು ಹುಟ್ಟುವ ಮುಂಚೆ ಕನ್ನಡದಲ್ಲಿ ಷಟ್ಪದಿ ಹುಟ್ಟಲಾರದೆಂದೂ ಆಗು ವುದರಿಂದ, ಸಂಸ್ಕೃತ ಛಂದಸ್ಸಿನ ಅನುಸಂಧಾನವು ಕನ್ನ ಡಕ್ಕೆ ಒದಗದ ಮುಂಚೆ ಕನ್ನಡದಲ್ಲಿ ಷಟ್ಪದಿ ಒಗೆದಿರ ಲಾರದೆಂದೂ ನಿಷ್ಪನ್ನವಾಗುತ್ತದೆ. ]

'ಷಟ್ಪದಿಯ ಲಕ್ಷಣವು ಅಚ್ಚಗನ್ನಡ ಗಣಗಳಾದ ವಿಷ್ಣುರುದ್ರಗಣಗಳಲ್ಲಿ ಹೇಳಿದೆ' ಎಂದೂ, 'ಈ ಗಣಗಳಿಂ ದಾಗುವ ವೃತ್ತಗಳಾದರೂ ಅಚ್ಚ ದ್ರಾವಿಡ ವೃತ್ತಗಳು. ಸಂಸ್ಕೃತ ಜನ್ಯಗಳೆಂದೂ ಆಗಲಾರವು' ಎಂದೂ ಶ್ರೀ. ಪ್ರಹ್ಲಾದರಾಯರ ಹೇಳಿಕೆ. ಈಗ ಉದಾಹರಣೆಗಾಗಿ ಹೇಳುವುದಾದರೆ, –UU ಎಂಬುದು ಸಂಸ್ಕೃತ ಅಕ್ಷರಗಣ ಗಳಲ್ಲಿ ಭಗಣವಷ್ಟೇ. ಅದರ ಮೊದಲನೆಯ ಗುರುವನ್ನು ಬಿಡಿಸಿದ ಮಾತ್ರಕ್ಕೆ ಅದು UUUU ಎಂದು ನಾಲ್ಕು ಲಘು ಗಳುಳ್ಳ 'ಮುರರಿಪು' ಎಂಬ ವಿಷ್ಣುಗಣವಾಗುತ್ತದೆ; ಹಾಗೆಯೇ ಅದರ ೨-೩ನೆಯ ಅಕ್ಷರಗಳನ್ನು ಮಡಿಸಿದ ಮಾತ್ರಕ್ಕೆ ಅದು – – ಎಂದು ಎರಡು ಗುರುಗಳುಳ್ಳ 'ಬ್ರಹ್ಮಂ' ಎಂಬ ಬ್ರಹ್ಮಗಣವಾಗುತ್ತದೆ. ಹೀಗಿರುವಾಗ ಅಕ್ಷರಗಣಬದ್ಧವಾದ ಸಂಸ್ಕೃತ ವೃತ್ತಗಳ ಆಯಾ ಅಕ್ಷ ರಗಣಗಳನ್ನು ಆಯಾ ಷಟ್ಪದಿಗಳ ತಾಳಕ್ಕೆ ಅನುಕೂಲ ವಾಗಿ ಬಿಡಿಸಿಕೊಂಡರೆ ಹಾಗೂ ಮಡಿಸಿಕೊಂಡರೆ, ಆ ಮೂಲಗಣಗಳೂ ಮಾರ್ಪಟ್ಟು, ಬೇರೆಯೇ ಯಾವಾವ ಗಣಗಳು ಹುಟ್ಟಿ, ಅವು ಮಾತ್ರಾಗಣಗಳಾದ ಬ್ರಹ್ಮಾದಿ ಗಣಗಳ ರೂಪವನ್ನೆತ್ತುವುದು ಸಾಹಜಿಕವೆಂಬುದರಿಂದ, ಅಂತಹ ರೂಪುಗಳಿಗೆ ಮರುಳಾಗಿ ಅವೇ ಮೂಲರೂಪುಗ ಳೆಂದು ನಂಬಿ ನೆಮ್ಮದಿಯಾಗಿರಬೇಕೋ? ಅವೇ ಮೂಲ ಸ್ವರೂಪಗಳೋ ಅಥವಾ ಅವುಗಳ ಮೂಲಸ್ವರೂಪಗಳು ಬೇರೆ ಇವೆಯೋ ಎಂಬುದನ್ನು ವಿಚಾರಿಸಬೇಕೋ? ಎಂ ಬುದನ್ನು ವಾಚಕರೇ ಇತ್ಯರ್ಥಿಸಲಿ. ಇನ್ನೂ ಹೇಳುವುದಾ ದರೆ, ಯ–ಗಣಾದಿ ಅಕ್ಷರಗಣಬದ್ಧವಾದ ಮಂದಾನಿಲ– ಲಲಿತಪದ– ಉತ್ಸಾಹ ಎಂಬೀ ೩ ಸಂಸ್ಕೃತ ವೃತ್ತಗಳ ತಾಳಗಳನ್ನು[೭] ಸ್ಥಾಯಿಯಾಗಿಟ್ಟುಕೊಂಡು, ಆ ವೃತ್ತ ಗಳ ಆಯಾ ಗಣಗಳಲ್ಲಿರುವ ಗುರು–ಲಘುಗಳನ್ನು (ವೈವಿ ಧ್ಯಕ್ಕಾಗಿಯೋ ರಚನೆಯ ಸೌಕರ್ಯಕ್ಕಾಗಿಯೋ) ಆಯಾ ತಾಳಕ್ಕೆ ತಪ್ಪದಂತೆ ಬಿಡಿಸಿಯೋ ಮಡಿಸಿಯೋ ಮಾಡಿಕೊಂಡಿರುವ ಮಂದಾನಿಲ–ಲಲಿತ– ಉತ್ಸಾಹ ರಗ ಳೆಗಳನ್ನೂ, 'ಮಲ್ಲಿಕಾಮಾಲೆ' ಎಂಬ ಸಂಸ್ಕೃತ ಸಮವೃ ತ್ತದಿಂದ ಅದೇ ರೀತಿಯಲ್ಲಿ ಮಾಡಿಕೊಂಡಿರುವ 'ತ್ರಿಪುಡೆ' ಯನ್ನು ಪರಿಶೀಲಿಸಿದರೆ, ಈ ರಗಳೆಗಳಲ್ಲಿಯೂ ತ್ರಿಪುಡೆ ಯಲ್ಲಿಯೂ ನಿಂತಿರುವ ಗಣಗಳು ಬ್ರಹ್ಮಾದಿಗಣಗಳಂತೆ ತೋರಿದರೂ, ಅವು ಮೂಲ ಬ್ರಹ್ಮಾದಿಗಣಗಳಲ್ಲ, ಸಂಸ್ಕೃತ ಯ–ಗಣಾದಿಗಳಿಂದ ಬೇಕಾದಂತೆ ಪಲ್ಲಟಿಸಿ ಮಾಡಿಕೊಂಡಿರುವ ಮಾತ್ರಾಗಣಗಳಷ್ಟೇ ಎಂಬ ಸತ್ಯವು, ರಗಳೆ–ತ್ರಿಪುಡೆಗಳ ಮೂಲವನ್ನು ಬಲ್ಲವರಿಗೆ ವಿಶದ ವಾಗದಿರದು.

ಇನ್ನು 'ಬ್ರಹ್ಮ ವಿಷ್ಣು ರುದ್ರಗಣಗಳು ಸಂಸ್ಕೃತ ಅಕ್ಷರಗಣಗಳಿಂದ ಹುಟ್ಟಿದವುಗಳೇ ಅಲ್ಲ' ಎಂದು ಶ್ರೀ ಪ್ರಹ್ಲಾದರಾಯರ ಹೇಳಿಕೆ. ಸಂಸ್ಕೃತ ಛಂದಸ್ಸಿನಲ್ಲಿ ಅಕ್ಷರಗಣಗಳು ಮೂಲಗಣಗಳಲ್ಲವೆಂಬುದು, ಆ ಛಂದ ಸ್ಸಿನ ಪ್ರಾಚೀನತಮ ಗ್ರಂಥವಾದ ಋಗ್ವೇದದ ಬಂತಿ ಬಂತಿಯಿಂದ ತೋರುತ್ತದೆ; ಉದಾ:—

– – ——— UU–U ––
ಆತ್ಮಾ ದೇವಾನಾಂ ಭುವನಸ್ಯ ಗರ್ಭೋ
U—U– UUU—U ––
ಯಥಾವಶಂ ಚರತಿ ದೇವ ಏಷಃ।
— — U–U–U—U——
ಘೋಷಾ ಇದಸ್ಯ ಶೃಣ್ವಿರೇ ನ ರೂಪಂ
—— ——UUU– U– U(–)
ತಸ್ಮೈ ವಾತಾಯ ಹವಿಷಾ ವಿಧೇಮ ॥
(ಋಗ್ವೇದ. X.೧೬೮)

ಇದರಲ್ಲಿ ಒಂದೇ ಒಂದಾದರೂ ಅಕ್ಷರಗಣವಿಲ್ಲ, ಎಲ್ಲವೂ ಮಾತ್ರಾಗಣಗಳೇ; ಆತವಿವ ಮೊತ್ತ ಮೊದಲನೆಯವು

೭. ರಗಳೆಗಳ ರಚನೆಯನ್ನು ಕುರಿತು ಹೇಳುವಲ್ಲಿ 'ತಾಳದ ಗಣನೆಗೊಡಂಬಟ್ಟೊಡದುವೆ ರಘುಟಾ ಬಂಧಂ' (ಛಂದೋ, ಪು. ೬೬) ಎಂದಿರುವ ನಾಗವರ್ಮನ ಮಾತಿಂದ, ಕನ್ನಡ ಛಂದಸ್ಸಿನಲ್ಲಿ ತಾಳಕ್ಕೆ ಪ್ರಧಾನಸ್ಥಾನವಿದೆ ಎಂದು ಸಿದ್ಧವಾಗುವದರಿಂದ, ಷಟ್ಪದಿಗಳ ಹುಟ್ಟಿಗೆ ಆಯಾ ತಾಳಗಳು ಕಾರಣವೆಂದೂ, ತಾಳಕ್ಕೆ ಸಲ್ಲದ ಷಟ್ಪದಿ ಇರಲಾರದೆಂದೂ ನಾನು ಮಾಡಿರುವ ನಿಷ್ಕರ್ಷೆಗೆ ಆಕ್ಷೇಪವಿರುತ್ತದೆಂದು ಭಾವಿಸುತ್ತೇನೆ.

೮. 'ತಾನ್ನಿಮಿರ್ಚುಗೆ ಕಬ್ಬಮುಮಂ ನಯದಿಂ ಗುಣಾರ್ಣವ ಭೂಪನಾ ॥', ಪಂ. ಭಾ. ೧. ೭)

೯. ತುರಗ ಖುರಕೆಂದಕಟ ಪತ್ತಿನ ಕುವರ ನಸ್ಸಂ ಕಂಠೀರವ ॥' ರಾಜಶೇಖರ—೪॥)

CC-0. Jangamwadi Math Collection. Digitized by eGangotri

ಶಿಥಿಲವಾದ ಮಾತ್ರಾಗಣಗಳು, ಅವುಗಳಿಂದ ತಾನೆ ಕಾಲಾಂತರದಲ್ಲಿ ದೃಢವಾದ ಅಕ್ಷರಗಳು ನಿಷ್ಪನ್ನವಾಗಿ ಕಟ್ಟಕಡೆಗೆ ಸಂಸ್ಕೃತ ಸಾಹಿತ್ಯದಲ್ಲಿ ಅವೇ ಪ್ರಬಲವಾಯಿತೆಂದು ತಿಳಿಯುತ್ತದೆ. ಈಗ ಈ ಋಕ್ಕಿನ ಮೊದಲ ಒಂತಿಯನ್ನು ಪ್ರಸ್ತಾರ ಮಾಡಿ ಗಣಗಳನ್ನು ವಿಂಗಡಿಸಿದರೆ,

— — — — — ᴗ ᴗ – ᴗ – —

ಆತ್ಮಾ। ದೇವಾನಾಂ। ಭುವನಸ್ಯ। ಗರ್ಭೋ

ಎಂದಾಗುವಲ್ಲಿ,

— — — – – ᴗ ᴗ – ᴗ – —

'ಬ್ರಹ್ಮಂ- ಗೋವಿಂದಂ- ನರಕಾರಿ-- ಬ್ರಹ್ಮಂ'

ಎಂಬೀ ಬಗೆಯ ಬ್ರಹ್ಮ—ವಿಷ್ಣುಗಳು ಹುಟ್ಟುತ್ತವೆ. ವೇದಕಾಲದ ಛಂದಸ್ಸಿನಲ್ಲಿ ಈ ಗಣಗಳಿಗೆ ಬ್ರಹ್ಮಾದಿ ಹೆಸರುಗಳು ಇದ್ದುವೋ ಇಲ್ಲವೋ ನಾನರಿಯೆನಾದರೂ, ಈಗ ಹಾಗೆಂದು ಕರೆಯಲ್ಪಡುವ ಗಣಗಳು ಆ ಋಕ್ಕಿನ ಒಂತಿಯಿಂದ ಹುಟ್ಟುತ್ತವೆಂಬುದು ಪ್ರತ್ಯಕ್ಷ ಇದೆಯಷ್ಟೇ. ಅವು ಆಗ್ಗೆ ಹೇಗೆಂದು ಕರೆಯಲ್ಪಟ್ಟರೂ, ಆ ಗಣಗಳು ಆಗಲೇ ಇದ್ದುವೆಂಬುದು ಕಂಡಿತವೆಂದಾಗುವುದರಿಂದ, ಋಗ್ವೇದದ ಕಾಲಕ್ಕಿಂತ ಹಿಂದಣಿಂಗಲೂ ಕನ್ನಡದಲ್ಲಿ ಛಂದಸ್ಸು ಇದ್ದಿತೆಂದಾದರೆ ಮಾತ್ರ ಅವನ್ನು ಅಚ್ಚಗನ್ನಡ ಗಣಗಳೆಂದು ಒಪ್ಪಿಕೊಳ್ಳಬಹುದೇ ಹೊರತು, ಹಾಗೆ ಇದ್ದಿಲ್ಲವಾದರೆ ಬ್ರಹ್ಮಾದಿ ಗಣಗಳು ಅಚ್ಚ ದ್ರಾವಿಡ ಗಣಗಳೇ ಎಂದು ಒಪ್ಪಿಕೊಳ್ಳಲಿಕ್ಕೆ ಮನಸ್ಸು ಒಡಂಬಡದು. ಅದಲ್ಲದೆ ಆ ಗಣಗಳು ದ್ರಾವಿಡಗಣಗಳೇ 'ಎಂದಾದರೆ, ಅವಕ್ಕೆ ಆ ಮೂರು ಆರ್ಯದೇವತೆಗಳ ಹೆಸರು ಬಂದುದು ದ್ರಾವಿಡಜನಾಂಗಗಳಿಗೆ, ದ್ರಾವಿಡಭಾಷೆಗಳಿಗೆ ಆರ್ಯರ, ಆರ್ಯಧರ್ಮದ, ಆರ್ಯಭಾಷೆಯ ಹಾಗೂ ಆರ್ಯ ಸಾಹಿತ್ಯದಸಂಸ್ಕೃತಿ ಒದಗುವುದಕ್ಕಿಂತ ಮುಂಚೆಯೋ? ಆ ಮೇಲೋ? ಆ ಮುಂಚೆಯಾದರೆ ಆರ್ಯದೇವತೆಗಳ ಹೆಸರುಗಳು ದ್ರಾವಿಡ ಛಂದೋಗಣಗಳಿಗೆ ಹೇಗೆ ತಾನೆ ಬಂದುವು? ಆ ಮೇಲೆ ಎಂದಾದರೆ ಯಾವೊಂದು ಕಾಲದಲ್ಲಾದರೂ ಸಂಸ್ಕೃತಗಣಗಳಿಗೆ ಅಂಥ ಹೆಸರುಗಳು ಇದ್ದಿಲ್ಲದೆ, ಅವೆಲ್ಲಿಂದ ತಾನೆ ದ್ರಾವಿಡಛಂದಸ್ಸಿನಲ್ಲಿ ಬಂದಾವು?

ಉದಾಹರಣೆಯಾಗಿ ಹೇಳುವುದಾದರೆ, ತಿರುವಳ್ಳುವರ್ ಎಂಬಾ ಮಹಾಜ್ಞಾನಿ ತಮಿಳು ಭಾಷೆಯಲ್ಲಿ ಎಷ್ಟೋ ಹಿಂದೆ ರಚಿಸಿದ 'ತಿರುಕ್ಕುರಳ್' ಎಂಬ ಆ ಮಹಾಕಾವ್ಯದ 'ಕುರಳ್ ವೆಣ್ಬಾ' ಎಂಬ ಛಂದಸ್ಸು ಅಚ್ಚ ತಮಿಳಿನದಾಗಿರಬೇಕೆಂದೇ ಎಲ್ಲರ ಭಾವನೆಯಷ್ಟೇ? ದ್ರಾವಿಡ ದೇಶದಲ್ಲಿ ಆರ್ಯಧರ್ಮದ ಸಂಸ್ಕೃತಿ ದೃಢವಾಗಿ ನೆಲಸಿದ ಸಾವಿರಾರು ವರ್ಷಗಳ ಬಳಿಕ ತಾನೇ ಆ ಗ್ರಂಥವು ರಚಿತವಾಗಿರಬೇಕೆಂಬುದು ಅದರಿಂದ ಬೇಕಾದಷ್ಟು ವಿಶದವಾಗುತ್ತದೆ ಎಂಬುದನ್ನು ಜಾಗ್ರತೆಯಾಗಿ ನೆನಪಿನಲ್ಲಿ ಇಟ್ಟುಕೊಂಡು, ಅದರಲ್ಲಿಯ

— — — – ᴗ — — – ᴗ — — —

ಯಾಕಾವಾರಾಯಿನುಮ್ ನಾಕಾಕ್ಕ ಕಾವಾಕ್ಕಾಲ್।

— — — — ᴗ – — – ᴗ (–)

ಸೋಕಾಪ್ಪರ್ ಸೊಲ್ಲಿಳುಕ್ಕುಪ್ಪಟ್ಟು॥ xiv. ೭)೧೦

ಎಂಬೀ ಕುರಳನ್ನು ಋಗ್ವೇದದಲ್ಲಿ ಜಗತೀ-ಗಾಯತ್ರೀ ಛಂದಸ್ಸುಗಳ ಮಿಶ್ರಣದಿಂದ ಮಾಡಿಕೊಂಡಿರುವ

— – — — ᴗ – ᴗ – ᴗ – ᴗ —

ಪಾಶೀವೋಕೋ ಬಿಭರ್ತಿ ಹಸ್ತ ಆಯುಸೀಮ್।

– — — ᴗ – ᴗ —

ಅಂತರ್ದೇವೇಷು ನಿಧ್ರುವಿಃ॥ (viii. ೨೯)

ಎಂಬೀ ದ್ವಿಪದಿಯೊಂದಿಗೆ ಹೋಲಿಸಿದರೆ, ಏತರ ಶಂಕೆಯಾಗದಿರದು?

ರನ್ನನ ಕಾಲಕ್ಕೆ ಬಹಳ ಹಿಂದಣಿಂದಲೇ ಕನ್ನಡ ಛಂದಸ್ಸಿನಲ್ಲಿ ತ್ರಿಪದಿ ಇದ್ದಿತೆಂದು ಕ್ರಿ. ಶ. ಸು. ೭೦೦ರ ಬಾದಾಮಿಯ ಶಾಸನದಿಂದ ತಿಳಿಯುತ್ತದೆಂದು ನನ್ನ ಮೂಲ ಲೇಖದಲ್ಲಿ ಹೇಳಿರುವೆನಷ್ಟೇ. ಅದು ಪ್ರಾಯಶಃ ಅಚ್ಚಗನ್ನಡ ಛಂದಸ್ಸಾಗಿರಬಹುದೇನೋ. ಅದನ್ನೇ ಇಮ್ಮಡಿಸಿ ಷಟ್ಪದಿಗಳನ್ನು (ಕಟ್ಟಕಡೆಗೆ ೨೦ ಮಾತ್ರೆಗಳ ವಾರ್ಧಿಕ ಷಟ್ಪದಿಯನ್ನಾದರೂ) ಮಾಡಿಕೊಂಡರೇನೋ, ಹಾಗಾದರೆ ಷಟ್ಪದಿಗಳು ಅಚ್ಚಗನ್ನಡ ಛಂದಸ್ಸಾಗಿರಲಾರವೇ? ಎಂದರೆ, ತ್ರಿಪದಿಯ ಚರಣಗಳು ಒಂದರಂತೆ ಒಂದಿಲ್ಲ; ೩ನೆಯ ಚರಣವು ೧ನೆಯ ಚರಣಕ್ಕಿಂತ ಕಿರಿದಾಗಿದೆ ಮಾತ್ರವಲ್ಲ, ಅದರಲ್ಲಿ ೫ ಮಾತ್ರೆಯ ಗಣಗಳಷ್ಟೇ ಅಲ್ಲ, ಇತರ ಬಗೆಯವೂ ಇವೆ; ೩ನೆಯ ಚರಣವು ಇನ್ನೂ

---

೧೦. ಈ ಪದ್ಯವನ್ನು 'The Sacred Kural' ('Heritage of India' Series) ಎಂಬ ಪುಸ್ತಕದಿಂದ ಉದ್ಧರಿಸಿದೆ.

CC-0. Jangamwadi Math Collection. Digitized by eGangotri

ಕಿರಿದು, ಅದರ ರಚನೆ ಇನ್ನೂ ಪೃಥಕ್ಕಾಗಿದೆ. ಇಂಥಾ ಮಿಶ್ರಣಗಳ ವಿಲಕ್ಷಣ ಪದ್ಯದಿಂದ ಸಮಾನ ಮಾತ್ರೆಯ ೪ ಕಿರಿಯಗಣಗಳೂ ಅವುಗಳ ಒಂದುವರೆಯಷ್ಟರ ಮಾತ್ರಸಮಕವಾದ ೨ ಹಿರಿಯಗಣಗಳೂ ಉಳ್ಳ ಷಟ್ಪದಿಯನ್ನು ಹೇಗೆ ಕಲ್ಪಿಸಿಕೊಳ್ಳಬಹುದೋ ನಾನರಿಯೆ.

ಷಟ್ಪದಿಗಳು ಮೂಲತಃ ಸ್ವತಂತ್ರವಾದ ಕನ್ನಡ ಛಂದಸ್ಸಲ್ಲ, ಅವುಗಳ ಮಾತೃಕೆ ಸಂಸ್ಕೃತ ವೃತ್ತಗಳಾಗಿರಬೇಕು, ಆ ವೃತ್ತಗಳಿಗೆ ಸಂಗೀತದ, ಮುಖ್ಯತಃ ತಾಳದ ಅನುಸಂಧಾನವು ಬದಿಗಿರದ ಮುಂಚೆ ಷಟ್ಪದಿಗಳು ಬಗೆದಿರಲಾರವು ಎಂದಿಷ್ಟೇ ಹೇಳಿರುವೆನಲ್ಲದೆ, ಅವುಗಳ ಪ್ರತ್ಯಕ್ಷ ಸ್ವರೂಪದಲ್ಲಿ ಕನ್ನಡ ಛಂದಸ್ಸಿನ ರೂಪಲಕ್ಷಣಗಳ ದ್ಯೋತನವಿರಲಾರದೆಂದು ನಾನೇನೂ ಸಾಧಿಸಿಲ್ಲ. ಏಕೆಂದರೆ (೧) ಬ್ರಹ್ಮನಿಗೆ 'ಅಜಂ' (U—) ಎಂದೂ, ವಿಷ್ಣುವಿಗೆ 'ಮುರಾರಿ' (U—U) ಎಂದೂ 'ರಮೇಶಂ' (U--) ಎಂದೂ ಹೆಸರಿದ್ದರೂ, ಲಘುವಿನ ಹಿಂದೆಯೇ ಗುರುವಿರತಕ್ಕ ಈ ಮೂರೂ ಗಣಗಳು ಕನ್ನಡ ಛಂದಸ್ಸಿನ ಗಣಗಳೆನಿಸುವ ಆ ಬ್ರಹ್ಮಾದಿ ೨೮ ಗಣಗಳಲ್ಲಿ ತೀರ ಅವಿದ್ಯಮಾನವಾಗಿರುವುದರಿಂದ, ಸಂಸ್ಕೃತ ಛಂದಸ್ಸಿನಲ್ಲಿ ಇವು ಯಥೇಷ್ಟವಾಗಿದ್ದರೂ, ಕನ್ನಡ ಛಂದಸ್ಸಿನಲ್ಲಿ ಇವು ಸಲ್ಲವೆಂದು ಸ್ವತಃ ಸಿದ್ಧವಾಗುತ್ತದಷ್ಟೇ; ಆತಏವ ಈ ಬಗೆಯ ಗಣಗಳು ಕರ್ಣಾಟಕ ವಿಷಯ ಜಾತಿಯವೆಂದು ಹೇಳಲ್ಪಟ್ಟಿರುವ ಷಟ್ಪದಿಗಳಲ್ಲಿ ಬಾರವೆಂಬುದೂ ಸ್ವತಃ ಸಿದ್ಧವಷ್ಟೇ. (೨) ಹಾಗೆಯೇ ಷಟ್ಪದಿಗಳಲ್ಲಿ ಆವಿರ್ಭವಿಸಿ ಇರುವೀ ಆರು ಚರಣಗಳ ವೈಶಿಷ್ಟ್ಯವು ನಾನರಿತಿರುವ ಮಟ್ಟಿಗೆ ಸಂಸ್ಕೃತ ಛಂದಸ್ಸಿಗೆ ಸಹಜವಲ್ಲ ಎಂಬುದರಿಂದ, ಆ ವೈಶಿಷ್ಟ್ಯವನ್ನೂ ಅವು ಕನ್ನಡದಲ್ಲಿ ಸ್ವಾಯತ್ತವಾಗಿ ಹೊಂದಿರಬೇಕು. ಹೀಗೆಂಬುದರಿಂದ ಅವುಗಳ ಮೊಳಕೆ ಸಂಸ್ಕೃತವೃತ್ತಗಳಿಂದಲೇ ಆದರೂ, ಕನ್ನಡ ಛಂದಸ್ಸಿಗೆ ಸಲ್ಲದ ಗಣಗಳನ್ನು ನೀಗಿ ಅವುಗಳ ಗಣಕ್ರಮವನ್ನು ಕನ್ನಡ ಛಂದಸ್ಸಿಗೆ ಸೇರ್ಪಡಿಸಿರುವುದರಿಂದಲೂ, ಅವುಗಳ ವಿಕಾಸದಲ್ಲಿ ತೋರುವ ಆರು ಚರಣಗಳ ವೈಶಿಷ್ಟ್ಯವು ಸಂಸ್ಕೃತ ಛಂದಸ್ಸಿಗೆ ಅಸಂಗತವೆಂಬುದರಿಂದಲೂ, ಷಟ್ಪದಿಗಳು ಅಚ್ಚಗನ್ನಡ ಛಂದಸ್ಸೆಂದು ಭಾವಿಸಲ್ಪಡಬಹುದು. ಆದರೆ ರೆಂಬೆಗಳನ್ನು ನಚ್ಚಿ ಬೇರುಗಳನ್ನು ಅಲ್ಲಗಳೆಯಲೇ ?

೨ ಶ್ರೀ. ಪ್ರಹ್ಲಾದರಾಯರ ಹಾಗೂ ಶ್ರೀ. ಎಮ್. ರಾಜೇರಾಯರ ಆಕ್ಷೇಪಗಳಿಗೆ ಪ್ರತ್ಯುಕ್ತಿ.

(೪) ಒಟ್ಟಾರೆ ಹುಟ್ಟತಕ್ಕ ಷಟ್ಪದಿಗಳು ೧೨ ಮಾತ್ರವೆಂದೂ, ಅವಲ್ಲಿ ಈಗ ಇಲ್ಲದ ಅವಾವು ಏಕೆ ಹುಟ್ಟಿಲ್ಲ ಅಥವಾ ಬಳಕೆಗೆ ಬಂದಿಲ್ಲವೆಂದೂ ನನ್ನ ಮೂಲ ಲೇಖನದಲ್ಲಿ ಯಥಾಮತಿಯಾಗಿ ನಿರ್ಧರಿಸಿರುವಲ್ಲಿ ಆ ೧೨ ಷಟ್ಪದಿಗಳ ಶ್ರೇಢಿಯಲ್ಲಿ ಸಂ. ೯ ನೆಯದೆಂದು ನಮೂದಿಸಿರುವ ಕಿರೇಚರಣದಲ್ಲಿ ೪+೫+೪+೫=೧೮ರಂತೆ ಮಾತ್ರಾಗಣಕ್ರಮ ಉಳ್ಳ ಆ ಷಟ್ಪದಿ ತಾಳಕ್ಕೆ ನೇರವಾಗಿಲ್ಲ, ಅದರ ಕ್ರಮದಂತೆ ಮಾತ್ರೆಗಳುಳ್ಳ ತಾಳವಿಲ್ಲ ಎಂಬ ಕಾರಣದಿಂದ ಅದು ಸಾಧ್ಯವಲ್ಲ ಎಂದು ಹೇಳಿರುವೆನಷ್ಟೇ. ಅಂಥಾ ತಾಳವಿಲ್ಲವೆಂಬುದನ್ನು (ಅತಏವ ಆ ಬಗೆಯ ಗಣಕ್ರಮ ಉಳ್ಳ ಷಟ್ಪದಿಯೂ ಹುಟ್ಟಿರಲಾರದೆಂಬುದನ್ನು) ಈ ವಿದ್ವಾಂಸರಿಬ್ಬರೂ ಒಪ್ಪಿರುತ್ತಾರೆ. ಆದರೆ ಇವರಿಬ್ಬರ ಆಕ್ಷೇಪವೂ ಏನೆಂದರೆ ೫+೪+೫+೪=೧೮ರಂತೆ ವಿಭಾಗಿಸತಕ್ಕ ಮಿಶ್ರಣಗಳ ಖಂಡತ್ರಿಪುಟನೆಂಬ ತಾಳವು ಸಾಧ್ಯವಿರುವುದರಿಂದ, ಆ ಬಗೆಯ ಗಣಕ್ರಮ ಉಳ್ಳ ಷಟ್ಪದಿಯೂ ಸಾಧ್ಯವಿರಬೇಕೆಂಬುದು. ಆದರೆ 'ಆ ತಾಳವನ್ನನುಸರಿಸುವುದು ಸಾಮಾನ್ಯರಿಗೆ ಕಷ್ಟವೆಂದು ಶ್ರೀ. ಪ್ರಹ್ಲಾದರಾಯರು ಅಲ್ಲಿಯೇ ಹೇಳಿರುತ್ತಾರೆ. ಇನ್ನು ಮುಂದೆ ಖಂಡತ್ರಿಪುಟದಲ್ಲಿ ೫+೪+೫+೪=೧೮ ರಂತಹ ಆದೊಂದು ಹೊಸ ಬಗೆಯ ಷಟ್ಪದಿಯನ್ನು ನಿರ್ಮಿಸುವವರಿಗೆ ನಾವು ಹೇಳತಕ್ಕ ಮಾತಿಲ್ಲ; ಹಿಂದಣಕನ್ನಡದ ಹಳೆಯ ಛಂದಸ್ಸಿನಲ್ಲಿ ಈ ಬಗೆಯ ಷಟ್ಪದಿ ಇದ್ದಿತೋ? ಇದ್ದಿಲ್ಲವಾದರೆ ಕಾರಣವೇನಿರಬಹುದು ? ಎಂಬುದನ್ನು ವಿಚಾರಿಸುವುದಷ್ಟೇ ನಮ್ಮ ಕೆಲಸ.

ಪ್ರತ್ಯೇಕ ಷಟ್ಪದಿಯ ಪ್ರತ್ಯೇಕ ಚರಣವನ್ನು ನಿದಾನವಾಗಿ ಓದುತ್ತ ಹಾಗೂ ಪ್ರಸ್ತರಿಸುತ್ತ ಹೋದರೆ, ಪರಸ್ಪರ ಗಣಗಳ ನಡುವೆ ಹೇಗೋ ಹಾಗೆ ಆಯಾ ಗಣದ ಒಳಗಡೆಯಲ್ಲಿ ಕೂಡ ಉಸುರ್ದಾಣವಿದೆ ಎಂದೂ, ಇದು ೩ ಹಾಗೂ ೪ಕ್ಕೆ ಮಿಕ್ಕಿರುವ ಮಾತ್ರೆಗಳುಳ್ಳ ಗಣಗಳಲ್ಲಿ ಇದೆಯೇ ವಿನಾ ೩ ಹಾಗೂ ೪ ಮಾತ್ರೆಗಳಷ್ಟೇ ಇರುವ ಗಣಗಳ ಒಳಮೆಯ್ಯಲ್ಲಿ ಒದಗದು ಎಂದೂ ತಿಳಿಯುವುದರಿಂದ, ೩ ಹಾಗೂ ೪ ಮಾತ್ರೆಗಳ ಇವೆರಡು ಮೊತ್ತಗ

CC-0. Jangamwadi Math Collection. Digitized by eGangotri

ಳನ್ನು ಷಟ್ಪದಿಗಳ ಗಣಕ್ರಮದ ಸಮ-ವಿಷಮ ಮಟ್ಟ (Unit) ಗಳೆನ್ನಬಹುದು. ಉದಾ:—

ಶರ— ಚರ–ಣಿಗ । ಳೆರ–ಡಕೆ ।
ಕರಿ–ಲಘು । ಗಳು–ಬರೆ ।
ನಿರು–ತದಿ । ಮೂ–ರನೆ । ಯಟ–ಗಳಿ । ಗೆ ॥

ಕುಸುಮ– ಧರೆ–ಯೊಳಗೆ । ಕುಸು–ಮಕ್ಕೆ ।
ಚರ–ಣಗಳು । ನಾ–ಲ್ಕಕ್ಕೆ ।
ನೆರೆ–ಮಾತ್ರೆ । ನಾ–ಲ್ವತ್ತು । ಮೂ–ಕ್ಕೆರಡ । ಕೆ ॥

ಭೋಗ - ಮುನ್ನ । ನಂಘ್ರಿ । ಗಳ್ಗೆ । ಮಾತ್ರೆ ।
ಪನ್ನೆ । ರಡು ವಿ । ರಾಜಿ । ಸುವದು ।
ಚನ್ನೆ । ಮೇಲ । ಣಡಿಗೆ । ಮಾತ್ರೆ । ಪತ್ತು ।
ಮೆರಡು । ಮಂ ॥

ಭಾಮಿನಿ– ಭಾಮಿ । ನಿಯ–ಷ । ಟ್ಪದಿಯ । ಮೊದ–ಲೊಳ
ಗಾಮ । ಹಾ–ಪಾ । ದ ದ್ವ । ಯಂ–ಗಳು ।
ನೇಮಿ । ಸಲು–ಮನು । ಮಾತ್ರೆ । ಮೇ–ಲಣ
ಪಾದ । ವೊಂ–ದೊಂ । ದು ॥

ಆದಕಾರಣ ಷಟ್ಪದಿಗಳ ಗಣಕ್ರಮದಲ್ಲಿ ೨ ಹಾಗೂ ೩ ಮಾತ್ರೆಗಳ ಇವೆರಡೇ ಮಟ್ಟಗಳಲ್ಲದೆ, ಅವಕ್ಕಿಂತ ಕಿರಿದಾದ ೧ ಮಾತ್ರೆಯುದೂ ಸಲ್ಲದು, ಹಿರಿದಾದ ೪-೫ ಇತ್ಯಾದಿ ಮಾತ್ರೆಯವುಗಳೂ ಸಲ್ಲವೆಂದು ಬೇರೆ ಹೇಳಬೇಕೆಂದಿಲ್ಲವಷ್ಟೇ. ಈಗ ಕಿರೇ ಚರಣದಲ್ಲಿ ೫+೪+೫+೪=೧೮ರಂತೆ ಗಣಗಳುಳ್ಳ ಈ ಷಟ್ಪದಿ ಎಂದರೆ ಪ್ರತ್ಯಕ್ಷತಃ ಕುಸುಮ ಷಟ್ಪದಿಯು ಹಾಗೂ ಶರಷಟ್ಪದಿಯ ಗಣಗಳ ಮಿಶ್ರಣದಿಂದ ಮಾಡಿದಂತಿರುವ ಷಟ್ಪದಿ ಎಂಬುದರಿಂದ, ಅದರ ಪ್ರತ್ಯೇಕ ಗಣದ ಒಳರಚನೆ ಶರ-ಕುಸುಮಗಳ ಗಣದ ಒಳರಚನೆಗೆ ವ್ಯತಿರಿಕ್ತವಾಗಬಾರದಷ್ಟೇ; ಅಂದರೆ ಅದರ ಕಿರಿಯ ಚರಣವು ೨+೩।೨+೨ ೨+೩।೨+೨ ಎಂದು ಹೀಗಿರಬೇಕು. ಖಂಡ ತ್ರಿಪುಟವೆಂಬ ತಾಳದ ಪ್ರತ್ಯಾವರ್ತದ ರಚನೆ ೫+೨+೨ ಎಂದು ಹೀಗಡೆ ಮಾತ್ರವಲ್ಲ, ಪ್ರತ್ಯೇಕ ತಾಳದ ಖಂಡ ಜಾತಿಯಲ್ಲಿ ೫ ಅಕ್ಷರಗಳು ಇರಬೇಕು ಎಂಬಷ್ಟೇ ನೇಮ ವಿನಾ ಆ ೫ ಎಂಬುದು ಕುಸುಮಷಟ್ಪದಿಯ ಗಣದಂತೆ ೨+೩ ಎಂದೇ ವಿಭಾಗಿಸಲ್ಪಡಬೇಕು ಎಂಬ ನೇಮವೇನೂ ಇರುವಂತೆ ತೋರುವುದಿಲ್ಲ; ಅದು ೩+೨=೫ ಆಗಲೂಬಹುದು. ೪+೧=೫ ಆಗಲೂ ಬಹುದು ಎಂಬಂತೆ ತೋರುತ್ತದೆ. ಆದರೆ ಷಟ್ಪದಿಗಳಲ್ಲಿ ೫-ಮಾತ್ರೆಯ ಗಣವು ೨+೩=೫ ಎಂದೇ ವಿಭಾಗಿಸಲ್ಪಡಬೇಕು, ೧ ಮಾತ್ರೆಯ ಗಣವು ಷಟ್ಪದಿಗಳಲ್ಲಿ ತೀರ ಅವಿದ್ಯಮಾನ. ಆದಕಾರಣ ೫+೪+೫+೪=೧೮ರಂತೆ ಕಿರೇ ಚರಣದಲ್ಲಿ ಗಣಗಳುಳ್ಳ ಷಟ್ಪದಿ ಯಾವುದೊಂದು ತಾಳಕ್ಕೆ ನೇರಾಗಿರಬಹುದಾದರೂ ಷಟ್ಪದಿಯ ನಿಯಮಯುಕ್ತವಾದ ಸರಣಿಯಲ್ಲಿ ಸಲ್ಲದು. ತಾಳಕ್ಕೆ ನೇರಲ್ಲದ ಷಟ್ಪದಿಯು ಸಲ್ಲದೆಂಬುದರಿಂದ, ತಾಳಕ್ಕೆ ನೇರಾಗಿರುವ ಯಾವ ಆರಡಿಯ ಪದ್ಯವಾದರೂ ಷಟ್ಪದಿಯೇ ಎಂದಾಗಲಾರದು; ಷಟ್ಪದಿ ಎಂದಾಗಬೇಕಾದರೆ ಅದು ಷಟ್ಪದಿಗಳ ದೃಢವಾದ ಇತರ ಆಂತರಿಕ ನಿಯಮಗಳಿಗೂ ವಿಧೇಯವಾಗಿರಬೇಕು. ಏಕೆಂದರೆ

( ಕ ) ನಿನ್ನ ಪಡ । ಸಾಲೆಯಲಿ ।
ಸಸಿನೊಂದು । ಮೂಲೆಯಲಿ ।
ಮರೆಸಂದು । ನಿಲುವೆಡೆಯ । ನನಗೀಯೆ ।
— —
ಸಾಕು ॥

ಎಂಬೀ ಪದ್ಯವು ಕುಸುಮಷಟ್ಪದಿಯಂತೆ ತೋರಬಹುದಾದರೂ, ಹಿರೇ ಚರಣದ ಕೊನೆಯಲ್ಲಿ ೨ ಗುರುಗಳಿರುವುದರಿಂದ, ಇದು ಕುಸುಮ ಷಟ್ಪದಿಯಲ್ಲ ಮಾತ್ರವಲ್ಲ, ಆರಡಿಯೊಂದು ಪದ್ಯವಷ್ಟೇವಿನಾ, ನಿಯಮಬದ್ಧವಾದ ಷಟ್ಪದಿಯೂ ಅಲ್ಲ, ಹಳೆಯ ಕನ್ನಡ ಛಂದಸ್ಸಿನ ಷಟ್ಪದಿ ಎಂಬಾ ಸುಲಕ್ಷಣವಾದ ಸರಣಿಯಲ್ಲಿ ಇದಕ್ಕೆ ಎಡೆಯೂ ಇಲ್ಲ.

⏑–⏑
( ಖ ) ನಿರರ್ಗ । ಲ ಮನವ ।
⏑–⏑
ಪರರ್ಗೆ । ರೆವನವ ।
ವಿರಹಿಯೆ ? । ಕವಿಯ । ಲ್ಲವೆ ? ಕವಿಯೆ ॥

ಇದಕ್ಕೆ ಶರಷಟ್ಪದಿಯ ಪೂರ್ಣ ಆಭಾಸವಿದ್ದರೂ, ಲಘು

CC-0. Jangamwadi Math Collection. Digitized by eGangotri

ಏಸ ಹಿಂದೆಯೇ ಗುರು ಬರತಕ್ಕ ‿— ಅಥವಾ ‿—‿ ಅಥವಾ ‿– – ಎಂಬೀ ಬಗೆಯ ಗಣಗಳು ಷಟ್ಪದಿಯ ರಚನೆಗೆ ಎಂದಿಗೂ ಸಲ್ಲವೆಂಬುದರಿಂದ, ಇದು ಶರಷಟ್ಪದಿಯಲ್ಲ, ಆರಡಿಯೊಂದು ಪದ್ಯವಷ್ಟೇ.

೫+೪+೫+೪=೧೮ ರಂತಹ ಷಟ್ಪದಿ ಇದ್ದಿಲ್ಲವೇಕೆ? ಅಥವಾ ಇರಬಾರದೇಕೆ? ಎಂಬುದಕ್ಕೆ ಅದರ ಚರಣಗಳಲ್ಲಿ ಹಿರೇ ಸಂಖ್ಯೆಯ (೫) ಮಾತ್ರೆಗಳ ಗಣಗಳ ಹಿಂದೆ ಕಿರೇ ಸಂಖ್ಯೆಯ (೪) ಮಾತ್ರೆಗಳ ಗಣಗಳು ಬರುತ್ತವೆಂಬ ಇದೊಂದು ಬೇರೆ ಕಾರಣವೂ ಇರಬಹುದು. ಈಗ ಇರುವ ಆವಾರು ಷಟ್ಪದಿಗಳಲ್ಲಿ ಹೀಗೆ ವಿಷಮ ಗಣಗಳುಳ್ಳ ಷಟ್ಪದಿ ಎಂದರೆ ಭಾಮಿನಿಯೊಂದೇ:– ೩+೪+೩+೪=೧೪; ಆದರೆ ಅದರಲ್ಲಿ ಹಿರೇ ಸಂಖ್ಯೆಯ (೪) ಮಾತ್ರೆಗಳ ಗಣಗಳನ್ನು ಕಿರೇ (೩) ಸಂಖ್ಯೆಯವು ಹಿಂಬಾಲಿಸದೆ, ಕಿರೇ ಸಂಖ್ಯೆಯ (೩) ಮಾತ್ರೆಗಳ ಗಣಗಳನ್ನು ತಾನೇ ಹಿರೇ (೪) ಸಂಖ್ಯೆಯವು ಹಿಂಬಾಲಿಸುತ್ತವೆ ಎಂಬುದರಿಂದ ನಿಯಮಬದ್ಧವಾದ ಷಟ್ಪದಿಗಳ ರಚನೆಯಲ್ಲಿ ಬರಲಾಪ ಗಣಗಳ ಅನುಕ್ರಮದಲ್ಲಿ ಇದೊಂದು ನಿಯಮವೂ ಆವಶ್ಯಕವಾಗಿರುವಂತೆ ತೋರುತ್ತದೆ. ಅಥವಾ ಆದೇ ಭಾಮಿನಿಯ ಗಣಗಳ ಅನುಕ್ರಮವನ್ನು ಹಿಂದುಮುಂದಾಗಿಸಿದರೆ ೪+೩ ೪+೩=೧೪ರಂತೆ ಕಿರೇ ಚರಣದಲ್ಲಿ ಗಣಗಳುಳ್ಳ ಆರಡಿಯ ಪದ್ಯವು ಸುಲಭಸಾಧ್ಯವಾದ ಝಂಪೆಯ ಚತುಸ್ರ ಜಾತಿಯ (೪+೧+೨) ತಾಳದಲ್ಲಿ ನೇರಾಗಿ ಹಾಡಲಿಕ್ಕೆ ಬರುತ್ತದಾದರೂ, ಅಂತಹದೊಂದು ಷಟ್ಪದಿ ಈ ವರೆಗೂ ಕನ್ನಡ ಛಂದಸ್ಸಿನಲ್ಲಿ ಇಲ್ಲವೇಕೆ? ಇತ್ಯಲಮ್.

# ಮುಗಿಲದೇವಿ

ಜರದ ಹೂವಿರುವ,–
ನೀಲೀಯ ಮಡಿಯನ್ನು ಉಟ್ಟು;
ಅವ್ವಾ?
ಎಲ್ಲಿ ಹೊರಟಿಹಳೇ? ನಸುನಗುತ,
ಈ ಮುಗಿಲದೇವಿ!

* * *

ನಗೆಮೊಗದ ಕೂಸೊಂದು,–
ನಗೆನಗುತ ಮಲಗಿಹುದು,–
ಆ ತಾಯ ತೊಡೆಯಮೇಲೆ;
ಅದು ಎಷ್ಟು ಮಮತೇ?
ಅವಳಿಗಾ ಪುಟ್ಟಕಂದನಲ್ಲಿ!!
ನೋಡೂ??

ಮಳೆ ಬಿಡುವ ಮೋಡಗಳು,
ಹತ್ತಿರವೆ ಇವೆ ಅದಕೆ,
ತನ್ನ ಆ ಪುಟ್ಟ ಮುದ್ದನಿಗೆ,–
ಚಳಿಯು ತಟ್ಟೀತೆಂದು,
ಮೊಗ ಒಂದು ಬಿಟ್ಟೂ–
ಉಳಿದ ಮಯ್ಯುಂಬಾ,–
ಜರದ ಹೂವಿರುವ, ಆ ನೀಲೀಯ ಮಡಿಯ–
ಶರಗಿನಿಂದೇ,–ಹೊದಿಸಿ ಬಿಟ್ಟಿಹಳು.
ಮೊಗವನೇತಕೆ ಹೊದಿಸದೇ ಬಿಟ್ಟಿಹಳೆ ಆಕೆ?
ಚಳಿಹತ್ತದೇನು?

ಹೊದಿಸಿದರೆ–
ನಗೆನಗುವ ಆ ಪುಟ್ಟ ಕೂಸೂ
ಅಳುವುದೆಂದೇನೆ?

—'ನಾ. ಭಾ.'

CC-0. Jangamwadi Math Collection. Digitized by eGangotri




# ಟೀಕುಡುಕನ ಬಾಳ್ವೆ !



೧. ಇವನ ಹೆಂಡತಿಗೆ 'ಸುಂದರೀಸಾಥಿ' 'ಫೆಲ್ಯುಸಾ' ಮೊದಲಾದವುಗಳು ಇಲ್ಲದೆ ಗತ್ಯಂತರವಿಲ್ಲ.

೨. ಇವನ ಮಕ್ಕಳಿಗೆ 'ಗ್ಲ್ಯಾಕ್ಸೊ' 'ಡೊಂಗ್ರೆ ಬಾಲಾಮೃತ' ಇವೇ ಅನ್ನ.

೩. ಇವನಿಗೆ 'ಕ್ಯಾಫೀ ಎಸ್ಪಿರಿನ್' 'ಓವಲ್ಟಾಯಿನ್' ಪ್ರಕೃತೀ ಕಾಯ್ದುಕೊಳ್ಳಲಿಕ್ಕೆ ಬೇಕೇಬೇಕು.

೪. ಇಷ್ಟಾದ ಮೇಲೆ—ಬರೀ ಚಹಾದ ತಬ್ಬಿ, ಒಡಕ ಕಪ್ಪು ಬಸಿ, ಜಹಾದ ಡಬ್ಬಿಯೊಳಗಿನ ಅಮೂಲ್ಯವಾದ 'ಕ್ರೀಸೆಂಟ ಟಿಕೀಟುಗಳು' .... .... .... ಇವೇ ಇವನು ಮಕ್ಕಳಿಗಾಗಿ ಬಿಟ್ಟು—ಇಟ್ಟು ಹೋಗುವ ಆಸ್ತಿ!

೫. ಅನ್ನಕ್ಕೆ ಅಭಾವ! ಭಿಕ್ಷಾಪಾತ್ರೆ ಸಿದ್ಧ! ಯಾಕೆಂದರೆ ಇವನ ಪುಷ್ಟವಾದ ದೇಹವನ್ನು ನೋಡಿ, ಇವನ ಇಹಲೋಕ ಯಾತ್ರೆಯು ಮುಗಿದ ಮೇಲೆ, ಹಿಂದುಳಿದವರಿಗಾಗಿ ಯಾವ 'ಇನ್ಶ್ಯೂರನ್ಸ' ಕಂಪನಿಯವರೂ ಹೊಣೆಯಾಗಲು ಒಲ್ಲರು.

CC-0. Jangamwadi Math Collection. Digitized by eGangotri



**ಸತಿ** (ಸಾಮಾಜಿಕ ಕಾದಂಬರಿ) ಬೆಂಗಳೂರಿನ ಶ್ರೀ. ಆರ್. ವ್ಯಾಸರಾಯರು ಬರೆದುದು.

ಈ ಕಾದಂಬರಿಯು ಬಂಗಾಲಿ ಸಾಹಿತ್ಯ ಪ್ರಪಂಚದಲ್ಲಿ ಹೆಸರುವಾಸಿಯನ್ನು ಪಡೆದ ಶ್ರೀ. ಶರಚ್ಚಂದ್ರ ಚಟ್ಟೋಪಾಧ್ಯರ "ಸ್ವಾಮಿ" ಎಂಬ ಕಾದಂಬರಿಯನ್ನು ಅನುಸರಿಸಿ ಬರೆದುದು—ಎಂಬ ಮಾತನ್ನು ಲೇಖಕರು ಹೇಳಿದ್ದಾರೆ. "ಸೌದಾಮಿನಿ" ಎಂಬ ಹೆಸರಿನ ಗೃಹಿಣಿಯು ತನ್ನ ಮುಗ್ಧ ಭಾವದಲ್ಲಿಯ ಪ್ರಥಮ ಪ್ರಣಯದ ಹುಚ್ಚಿಗೆ ಬಿದ್ದು, ವಿಧಿಪೂರ್ವಕವಾಗಿ ಮದುವೆಯಾದ ಸಾಧುಸ್ವಭಾವದ ಗಂಡನೊಡನೆ ಸರಿಯಾಗಿ ಬಾಳಿಕೊಂಡಿರದೆ ತಿಳಿದು ತಿಳಿದು ತಪ್ಪುದಾರಿಯನ್ನು ಹಿಡಿಯಹೋಗಿ ಪಶ್ಚಾತ್ತಾಪಪಟ್ಟುದರ ಕಥೆಯನ್ನು ಇದರಲ್ಲಿ ಹೆಣೆಯಲಾಗಿದೆ. ಇದರಲ್ಲಿ ಮೂಡಿದ ವಾಸ್ತವವಾದ ಮನಶ್ಚಿತ್ರಗಳು ಓದುಗರನ್ನು ತಲೆದೂಗಿಸದೆ ಬಿಡವು. ಸಾಪತ್ನ ಮಾತೆಯ ಸಂಸಾರದಲ್ಲಿದ್ದುಕೊಂಡು ಕ್ಷಣಕ್ಷಣಕ್ಕೂ ತನ್ನ ಅವಮಾನವಾಗುತ್ತಿದ್ದರೂ ಅದನ್ನೆಲ್ಲ ತನ್ನ ಸಂಯಮ ಬಲದಿಂದ ಸಹನೆ ಮಾಡಿಕೊಂಡು ನಗುನಗುತ್ತಿರುವ ಸೌದಾಮಿನಿಯ ಗಂಡನ ಸ್ವಭಾವ ಚಿತ್ರವು ಆದರ್ಶವ್ಯಕ್ತಿಯದಾದರೂ ಮಾನವತೆಯ ಮೇರೆಯನ್ನು ಮೀರಿರುವುದಲ್ಲವಾದುದರಿಂದ ವಾಚಕರ ಕರುಳನ್ನು ಕುದಿಸುವುದು. ಮನವನ್ನು ಮರುಗಿಸುವುದು. 'ಅಯ್ಯೋ' ಎಂಬ ಕನಿಕರದ ಉದ್ಗಾರವನ್ನು ಬಾಯಿ ತೆರೆಯುತಿರುವಾಗಲೆ ಅದಾವುದೋ ಒಂದು ಅವಿದಿತ ಆನಂದವು ಹೃದಯವನ್ನು ಹಿಗ್ಗಿಸುವುದು. ಕಣ್ಣಿನಿಂದೊಗೆಯುವ ನೀರು ಕರುಣೆಯುನ್ನೋ ಆನಂದದುವ್ವೋ ಎಂಬುದು ತಿಳಿಯದಾಗುವುದು. ವಸ್ತು ಚಮತ್ಕೃತಿಯೇ ಪ್ರಧಾನವಾಗಿದ್ದ ಕಾದಂಬರಿಗಳನ್ನು ಬೇಕಾದಷ್ಟು ದೊಡ್ಡ ದೊಡ್ಡವಾಗಿ ಬರೆಯಬಹುದು. ಆದರೆ ಇಂತಹ ಮನಸ್ಸಿನ ತೊಡಕುಗಳನ್ನು ಯಥಾವತ್ತಾಗಿ ಚಿತ್ರಿಸುವ ಕಾದಂಬರಿಗಳನ್ನು ಬರೆಯುವುದು ತುಂಬ ಕಠಿನವಾದ ಕಾರ್ಯ. ಎಪ್ಪತ್ತಾರು ಪುಟಗಳುಳ್ಳುದೇ ಆದರೂ ಈ ಪುಸ್ತಕವು ನೂರಾರು ಪುಟದ ಕಥೆ ಕಾದಂಬರಿಗಳಿಗಿಂತ ಹೆಚ್ಚಾಗಿ ಕೆಲಸಮಾಡಬಲ್ಲದು.

ಅನುವಾದದ ಭಾಷೆ ಮಾತ್ರ ತೀರ ಕುಂಟುತ್ತ ಸಾಗುವುದು. ಪರಭಾಷೆಯ ಛಾಯೆ ಅಲ್ಲಲ್ಲಿ ಬಿದ್ದಿದೆ. ಕೆಲಕೆಲವು ವಾಕ್ಯಗಳು ಬೇಗನೆ ಅರ್ಥವಾಗದಷ್ಟು ವೈಚಿತ್ರ್ಯವನ್ನು ಪಡೆದಿವೆ. ಬಂಗಾಲದಲ್ಲಿ ನಡೆದ ಸಂವಿಧಾನಕವನ್ನು ಲೇಖಕರು ಕರ್ಣಾಟಕದಲ್ಲಿಯೇ ನಡೆದಂತೆ ಮಾರ್ಪಡಿಸಿಕೊಂಡಿದ್ದಾರೆ. ಇದನ್ನು ಎಲ್ಲರೂ ಓದಬೇಕೆಂದು ನಮ್ಮ ಆಶೆ.

—ಕೃ. ಶ್ರೀ.

೧. **ವಿಜಯನಗರ ಸಾಮ್ರಾಜ್ಯ:**— ಬರೆದವರು: ಬೋಕೆ ಅನಂತ, ಮತ್ತು ಕುಲಕರಣಿ ಪ್ರಲ್ಹಾದರು. ಬೆಲೆ ೧ ರೂ.

೨. **ಹಾಳುಹಂಪೆ:**— ಬರೆದವರು: ಕುಲಕರಣಿ ಪ್ರಲ್ಹಾದ. ಬೆಲೆ ೪ ಆಣೆ. ಪ್ರಕಾಶಕರು ಭುವನೇಶ್ವರೀ ಗ್ರಂಥಮಾಲೆ, ಬೆಳಗಾಂವಿ.

೧. ವಿಜಯನಗರ ಇತಿಹಾಸವು ಸಮಗ್ರವಾಗಿ, ಸಮರ್ಪಕವಾಗಿ ಇನ್ನೂ ಬರೆಯಲ್ಪಟ್ಟಿಲ್ಲ. ಮೈಸೂರ ಸರಕಾರದ ಕೃಪೆಯಿಂದ ಆ ಭಾಗದಲ್ಲಿ ದೊರೆತ ಅನೇಕ ಶಾಸನಗಳು 'ಎಪಿಗ್ರಾಫಿಯಾ ಕರ್ನಾಟಿಕಾ' ದಲ್ಲಿ ಪ್ರಕಟವಾದವು. ಆದರೂ ಕರ್ನಾಟಕದ ಉಳಿದ ಭಾಗದಲ್ಲಿ ದೊರೆವ

CC-0. Jangamwadi Math Collection. Digitized by eGangotri

ಇತಿಹಾಸದ ಸಾಧನಗಳನ್ನು ಸಂಗ್ರಹಿಸಿ ಶೇಖರಿಸುವ ಪ್ರಯತ್ನಗಳು ಇನ್ನೂ ಆಗಿಯೆ ಇಲ್ಲ. ಶೃಂಗೇರಿಯ ಮಠದಲ್ಲಿ ಎಷ್ಟೋ ಕಡತಗಳು ವಿಜಯನಗರದ ಕಾಲಕ್ಕೆ ಸಂಬಾಧಪಟ್ಟವುಗಳುಂಟಂತೆ. ಅವುಗಳನ್ನು ಸಂಪಾದಿಸಿ ಅಚ್ಚು ಹಾಕಿಸುವ ಮಹತ್ಕಾರ್ಯವು ಯಾವ ಪುಣ್ಯವಂತರ ಪಾಲಿಗಿದೆಯೊ ತಿಳಿಯದು. 'ಪರದಾರ ಸೋಮನಾಥನ ಚರಿತ್ರೆ'ಯಂತಹ ಐತಿಹಾಸಿಕ ಕಾವ್ಯಗಳು ಇನ್ನೂ ಬೆಳಕಿಗೆ ಬರಬೇಕಾಗಿದೆ. ಇಷ್ಟೆಲ್ಲ ಪೂರ್ವಸಿದ್ಧತೆಯಾದಬಳಿಕ ವಿಜಯನಗರದ ವಿಸ್ತ್ರತವಾದ ಇತಿಹಾಸವು ಸಿದ್ಧವಾಗಬೇಕು. ಆದರೆ ಅಲ್ಲಿಯವರೆಗೆ ನಮ್ಮ ಸ್ಫೂರ್ತಿದಾಯಕ ಮಹಾಪುರುಷರ ಪರಿಚಯವನ್ನು ಮಾಡಿಕೊಳ್ಳಬೇಕಂಬ ಹಸಿವನ್ನು ತಡೆದು ಹಿಡಿಯಲಿಕ್ಕಾದೀತೆ? 'ವಿಜಯನಗರವು ಹಿಂದೂಧರ್ಮ ಸಂಸ್ಕೃತಿಗಳನ್ನು ಕಾಯ್ದು ಹಿಂದುಸ್ತಾನದ ಮಾನವನ್ನುಳಿಸಿತು' ಎಂದು ಯಾವ ಸಾಮ್ರಾಜ್ಯಕ್ಕೆ ಅಖಿಲ ಭಾರತವರ್ಷೀಯರೆ ಕೃತಜ್ಞರಾಗಿರುವರೊ, ಯಾವ ವಿಜಯನಗರ ಸಾಮ್ರಾಜ್ಯದವೈಭವವನ್ನು ಕಂಡು, ಕೇಳಿ ಪರಕೀಯರೂ ಸೋಜಿಗಗೊಂಡು ಬೆರಲು ಕಚ್ಚಿದರೊ ಆ ವಿಜಯನಗರದ ಇತಿಹಾಸವನ್ನು ಅಂದರೆ ತಮ್ಮ ಇತಿಹಾಸವನ್ನೇ ಕುರಿತು ಅವರು ತಿಳಿಗೇಡಿಗಳಾಗಿದ್ದಾರೆ. ಆದುದರಿಂದಲೆ ಕನ್ನಡಿಗರಿಗೆ ತಾವು ಒಂದು ಕಾಲಕ್ಕೆ ಏನಿದ್ದೆವು, ಈಗ ಏನಾಗಿರುವೆವು ತಮ್ಮ ಬೆಲೆ ಏನಿದೆ ಎಂಬುದರ ಅರಿವು ಇಲ್ಲದೆ ತಾನಾರೆಂಬುದನ್ನು ಮರೆತು ಕುರಿಗಳ ಹಿಂಡಿನಲ್ಲಿ ಸೇರಿದ ಸಿಂಹದ ಮರಿಯಂತಾಗಿದೆ ಇವರ ಹಾಡು. ಇದಕ್ಕೆ ಒಳ್ಳೆಯ ಉಪಾಯವೆಂದರೆ ನಮ್ಮ ಪ್ರಾಚೀನ ಇತಿಹಾಸವನ್ನು ಕುರಿತು ಎಷ್ಟು ವಿಧದ ಎಷ್ಟು ಪುಸ್ತಕಗಳನ್ನು ಬರೆದು, ಬರೆಯಿಸಿ ಪ್ರಕಟಿಸಿದರೂ ಸಾಲದು. ಈ ದೃಷ್ಟಿಯಿಂದ ಭುವನೇಶ್ವರಿ ಗ್ರಂಥಮಾಲೆಯ ಈ ಪ್ರಯತ್ನವು ಹೊಗಳುವಂತಹದಾಗಿದೆ. ಧಾರವಾಡದ ವಿದ್ಯಾವರ್ಧಕ ಸಂಘದವರು ಹಿಂದೊಮ್ಮೆ ಪ್ರಕಟಿಸಿದ್ದ 'ಮರೆತುಹೋದ ಸಾಮ್ರಾಜ್ಯವು' ಎಂದೊ ತೀರಿ ಕೈಗೆ ಸಿಕ್ಕದಾಗಿದೆ. ಅದರ ಪುನರ್ಮುದ್ರಣವು ಆದರೆ ಈಗ ಬೇಕಿದೆ. ೧೯೩೬ನೆಯ ಇಸವಿಗೆ ಆಗಬೇಕಾಗಿರುವ ಕರ್ನಾಟಕ ಸಿಂಹಾಸನಸ್ಥಾಪನಾ ದಿನದ ೬೦೦ ವರುಷಗಳ ಮಹಾ ಸ್ಮಾರಕೋತ್ಸವದ ಬಗೆಗೆ ಜಾಗೃತಿಯನ್ನು ಮಾಡುವುದಕ್ಕಾಗಿ ಇಂತಹ ಪುಸ್ತಕಗಳು ಅತ್ಯಂತ ಅವಶ್ಯಕವು. ಶ್ರೀ. ಬೋಕೆ ಮತ್ತು ಕುಲಕರ್ಣಿ ಅವರು ಪರಿಶ್ರಮಬಟ್ಟು ಸಾಲೆಯ ಹುಡುಗರಿಗಾಗಿ ಸ್ವಲ್ಪದರಲ್ಲಿ ವಿಜಯನಗರದ ಇತಿಹಾಸವನ್ನು ಬರೆದುದು ಈ ಸಮಯದಲ್ಲಿ ಬಹಳ ಒಳ್ಳೆಯ ಕೆಲಸವಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ. ಈ ಪುಸ್ತಕಕ್ಕೆ ಉತ್ತೇಜನ ಕೊಟ್ಟು ಈ ಸಂಬಂಧದ ಇನ್ನೂ ಹೆಚ್ಚಿನ ಅಭ್ಯಾಸಮಾಡಿ ಇದಕ್ಕೂ ದೊಡ್ಡಬೆಲೆಯ ಗ್ರಂಥವನ್ನು ಬರೆಯಲು ಕನ್ನಡಿಗರು ನೆರವಾಗಬೇಕೆಂದು ಬಿನ್ನಹವು.

೨. ಹಾಳು ಹಂಪೆಯನ್ನು ನೋಡದಿದ್ದರೆ ಹುಟ್ಟಿದ್ದೆ ಹಾಳುಎಂದರೆ ತಪ್ಪಾಗಲಿಕ್ಕಿಲ್ಲ. ಹಾಳು ಹಂಪೆಯಲ್ಲಿ ನೋಡಬೇಕಾದ್ದೇನು? ಅಲ್ಲಿ ಹೋಗುವುದೇತಕ್ಕೆ? ಎಂದು ಕೆಲರು ಗೊಣಗಬಹುದು. ಹಂಪೆಯ ಹಾಳುಗುಡಿಗೋಪುರಗಳಲ್ಲಿ ನಿರ್ಜೀವರಲ್ಲಿಯೂ ಚುಚ್ಚಿ ಚುಚ್ಚಿ ಹೊಸ ಹುರುಪನ್ನು ತುಂಬಿ ಮುಂದಕ್ಕೆ ನೂಕುವ ಶಕ್ತಿಯಿದೆ. ಇಂತಹ ದೊಡ್ಡ ಸಾಮ್ರಾಜ್ಯವನ್ನು ಕಟ್ಟಿ ಆಳುವುದು ಒಂದು ಕಾಲಕ್ಕೆ ಯಾವ ಕನ್ನಡಿಗರಿಗೆ ಸಾಧ್ಯವಾಯಿತೋ ಅದೇ ಕನ್ನಡಿಗರಿಗೆ ಇಂದಿನ ದಿನಕ್ಕೆ ತಕ್ಕಂತಹ ಶಕ್ತಿ ಸಾಹಸಗಳನ್ನು ತೋರಿ ಮೇಲ್ಮೆಯನ್ನು ಪಡೆವುದು ಅಸಾಧ್ಯವೇ ? ಎಂಬ ವಿಚಾರವು ತಲೆದೋರಿ ಹಂಪೆಯ ಯಾತ್ರಿಕನಲ್ಲಿ ನವಜೀವನವು ಮೈದುಂಬದೆ ಎಂದೂ ಇರಲಾರದು. ಆದುದರಿಂದಲೆ ಹಂಪೆ, ಹಳೆಬೀಡು ಮೊದಲಾದವು ಈಗಿನ ತರುಣ ಕನ್ನಡಿಗರ ಕಾಶಿರಾಮೇಶ್ವರಗಳು. ಕನ್ನಡಿಗರಿಗೆ ದಿವ್ಯದೃಷ್ಟಿಯನ್ನೀವ ಪವಿತ್ರ ಕ್ಷೇತ್ರಗಳು. ಇಂತಹ ಪುಣ್ಯಸ್ಥಳಗಳ ಪರಿಚಯವನ್ನು ಮಾಡಿಕೊಡುವ 'ಸ್ಥಲ ಪುರಾಣ' 'ದಾರಿಗನು' ಮೊದಲಾದುವು ಪ್ರಕಟವಾದಷ್ಟು ಬೇಕೇಬೇಕು. ಹಂಪೆಯ ಪರಿಚಯವನ್ನು ಸ್ವಲ್ಪದರಲ್ಲಾದರೂ ಮಾಡಿಕೊಡುವಂತಹ ಈ ಪುಸ್ತಕವು ಹಂಪೆಯನ್ನು ಹೊಸದಾಗಿ ನೋಡಬಯಸುವ ಪ್ರತಿಯೊಬ್ಬರಿಗೂ ದಾರಿತೋರಲು ಬಹಳ ಸಹಕಾರಿಯಾಗಿದೆ.

—ಶಂ. ಬಾ.

**ಕನ್ನಡಿಗರ ಕಡೆಯ ಕಾಳಗ**—ಇದು ಅಗಡಿಯ ಕನ್ನಡ ಗ್ರಂಥಮಾಲೆಯ ಮೊದಲನೆಯರಳು. ಕರಿಯಪ್ಪನವರು ಬರೆದವರು. ೨೦ ಪುಟದ....ಐತಿಹಾಸಿಕ ಕಾದಂಬರಿಯಂತೆ! ಬೆಲೆ ೦-೨-೮. ಅಲ್ಲಿಯ ಶೇಷಾಚಲ ಮುದ್ರಾಲಯದಲ್ಲಿ ಅಚ್ಚಾಗಿದೆ.

ಹೆಸರನ್ನು ನೋಡಿದೊಡನೆ 'ತಾಳೀಕೋಟೆಯ

CC-0. Jangamwadi Math Collection. Digitized by eGangotri

ಕಾಳಗ'ವೆಂದು ಎಲ್ಲರೂ ಊಹಿಸಬಹುದು. ವಿಷಯ ಪ್ರಾಥಮ್ಯಅದ್ಭುತವಾದುದು. ಇದು ಲೇಖಕರ ಪ್ರಥಮ ಪ್ರಯತ್ನವಿದ್ದಂತೆ ಒಡೆದು ಕಾಣುವದು. ಇಂಥದನ್ನು ಬರೆಯಲು ಮೊದಲು ಮಾಡಿದುದು ಅನೇಕ ದೃಷ್ಟಿಯಿಂದ ಯುಕ್ತವಾಗಲಾರದು. ಅವಸರದಿಂದಲೂ ಹೊರಬಿದ್ದು ಬಂದಿದೆ. ಅಲ್ಲಲ್ಲಿ ಅಸ್ಪಷ್ಟ ವಿಚಾರಗಳು ಸಂದರ್ಭಾನುಸಾರವಾಗಿ ಬಂದು ಹೆಣಿಗೆಯು ಸಾಧಿಸಿಲ್ಲ. ಕನ್ನಡಾಭಿಮಾನ ಪ್ರೇರಣೆಯೇ ಬರೆಯಿಸಿರಬೇಕು. ಅರಿತುಸುರಿತು ಈ ಗ್ರಂಥಮಾಲೆಯಲ್ಲಿ ಚನ್ನಾದ ಅರಳುಗಳನ್ನು ಪೋಣಿಸುವ ಪ್ರಯತ್ನ ಮಾಡಬೇಕು.

**ಛಾಯಾ ಮಹಾತ್ಮೆ**—(ವಿಜಯರಾಯರ ಸುಳಾದಿ ಸಹಿತ.)

ಬರೆದವರು:— ಭೀಮರಾವ ಹುನಗುಂದ. ರಾಯಚೂರ. ಹನ್ನೆರಡು ಪುಟಗಳು. ಬೆಲೆ ೦-೨-೦. ಇದಕ್ಕೂ ಅಗ್ಗವಾದರೆ ಒಳಿತು. ಛಾಯಾಕ್ಷೇತ್ರವು ಸುರಪುರ ತಾಲೂಕಿನಲ್ಲಿ ಕೃಷ್ಣಾ ತಟಾಕದಲ್ಲಿದೆ. ಪುರಾಣದಲ್ಲಿಯೂ ಬಂದಿದೆ. ಛಾಯಾ ಇವಳು ಸೂರ್ಯನ ಮಡದಿಯೆಂಬುದು ವಾಚಕರಿಗೆ ಗೊತ್ತಿರಬಹುದು. ಅವಳ ಹೆಸರಿನಿಂದ ಹೆಸರಾಗಿದೆ. ಈ ಯಾತ್ರೆ ಮಾಡಬಯಸುವವರಿಗೆ ಇದನ್ನು ಉಪಯೋಗಿಸಿದರೆ ಯಾತ್ರಾಕ್ರಮ ಪೊದಲಾದುವು ತಿಳಿಯುವವು.

ಇದೇ ಇವರ ಮೊದಲ ಲೇಖವೆಯೆಂದ ಮೇಲೆ ವಿಶೇಷ ಣಗಳ ವರ್ಣನೆ ಬೇಡ. ಬಹು ಮುಖಿಯಾಗಿ ಪ್ರವಾಹಗೊಂಡ ಕನ್ನಡ ಸಾಹಿತ್ಯಕ್ಕೆ ಮಲಗಿದ ನಮ್ಮ ನಿಝಾಂ ಕರ್ನಾಟಕಸ್ಥರೂ ತಮ್ಮ ಸೇವೆಯನ್ನು ಸಲ್ಲಿಸುತ್ತಿರುವದು ಅಭಿನಂದನೀಯವಾದುದು.

—ಗೋ. ವೆ.

## ಕನ್ನಡಿಗರಲ್ಲಿ ನನ್ನದೊಂದು ಬಿನ್ನಹ!

ಕನ್ನಡಿಗರು ಸರ್ವತೋಮುಖವಾಗಿ ಮುಂದುವರಿದಿದ್ದಾರೆ, ಮುಂದುವರಿಯುತ್ತಲಿದ್ದಾರೆ. ಸಂಗೀತದಲ್ಲಿಯೂ ನಿಷ್ಣಾತರಾದವರು ಕನ್ನಡಿಗರಲ್ಲಿ ಇಲ್ಲದೆ ಇಲ್ಲ. ಹೀಗಿದ್ದರೂ ಆ ಸಂಗೀತವನ್ನು ಕೇಳುವ ಭಾಗ್ಯವು ಎಲ್ಲರಿಗೂ ದೊರೆತಿಲ್ಲ. ಇದರ ಕಾರಣವು ಇಷ್ಟೇ, ಇನ್ನಿತರರಂತೆ ಹಾಡಬಲ್ಲ ಕನ್ನಡಿಗರ 'ರಿಕಾರ್ಡು' ಗಳು ಸಾಕಷ್ಟು ಹೊರಬಿದ್ದಿಲ್ಲ. ಈ ಕೊರತೆಯನ್ನೇ ಕುರಿತು 'ಕನ್ನಡಿ'ಗದಲ್ಲಿ ಈಗೆರಡು ವರ್ಷಗಳ ಕೆಳಗೆ ಕೃಷ್ಣಾಜಿ ಕಡಿವಾಳ ಇವರು ೧೩ ಲೇಖಗಳನ್ನು ಪ್ರಸಿದ್ಧ ಮಾಡಿದ್ದು ಸರ್ವಶ್ರುತವಾದ ಸಂಗತಿ. ಅವುಗಳನ್ನು ಓದಿ ನನಗೆ ಕಳವಳವಾಯಿತು. ಆ ಬಗ್ಗೆ ನಾನು ಯೋಚನೆಮಾಡಿ 'ಗ್ರಾಮೋಫೋನೋ' ಕಂಪನಿಯೊಡನೆ ಪತ್ರವ್ಯವಹಾರ ಮಾಡಿ ನೀಲಕಂಠಬುವಾ ಗಾಡಗೋಳಿ ಇವರ 'ರಿಕಾರ್ಡು' ಗಳನ್ನು ಹಿಂದುಸ್ಥಾನಿ ದಾಟಿ, ಹಾಗು ಇನ್ನಿತರ ರಾಗಗಳಲ್ಲಿಯೂ ಕೊಡಿಸುವಂತೆ ಮಾಡಿದ್ದೇನೆ. ಒಂದೆರಡು ಈಗಲೇ ಹೊರಬಿದ್ದಿರುವವು. ಇನ್ನುಳಿದವು ಹೊರಬೀಳಲಿರುವವು. ಕನ್ನಡದಲ್ಲಿ ರಿಕಾರ್ಡುಗಳೇ ಇಲ್ಲ ಎಂದು ಕೊರಗುವವರು ಶ್ರೀ. ನೀಲಕಂಠಬುವಾ ಇವರ 'ರಿಕಾರ್ಡು' ಕೇಳಿ ಕೆಲಮಟ್ಟಿಗಾದರೂ ಸಂತೋಷ ಪಡದೆ ಇರಲಾರರು. 'ಗ್ರಾಮೋಫೋನೋ' ವ್ಯಾಪಾರಿಗಳೂ ಕೂಡ ಇವನ್ನು ತರಿಸಿ ಎಲ್ಲರೂ ಕೇಳುವಂತೆ ಮಾಡಬೇಕೆಂದು ನನ್ನ ಪ್ರಾರ್ಥನೆ.

ನಾನು ಕೇವಲ ಇವರೊಬ್ಬರ ಸಲುವಾಗಿಯೇ ಪ್ರಯತ್ನಪಟ್ಟಿದ್ದೇನೆಂದು ಮಾತ್ರ ತಿಳಿಯಬಾರದು. ಕರ್ನಾಟಕದ ಎಲ್ಲ ಗಾಯಕರ ಗಾನರಸವನ್ನು ಕನ್ನಡಿಗರೆಲ್ಲರಿಗೂ ಅಲ್ಲದೆ ಪರಪ್ರಾಂತ್ಯದವರಿಗೂ ಕೂಡಾ ಉಣಿಸಬೇಕೆಂಬುದೇ ನನ್ನ ಹಂಬಲ. ಶ್ರೀ. ದೇಶಪಾಂಡೆ ಗುರುರಾಯರ 'ರಿಕಾರ್ಡಿ'ಗೂ ಪ್ರಯತ್ನವನ್ನು ನಡೆಯಿಸಿದ್ದೇನೆ. ಬೇಗನೆ ಸಾಧ್ಯವಾಗುವ ಹಾಗೆ ತೋರುತ್ತಿದೆ. ಆದ್ದರಿಂದ ಗಾಯಕರಷ್ಟೇ ಅಲ್ಲದೆ, ಕನ್ನಡದಲ್ಲಿ ಒಳ್ಳೇ ಲಾವಣಿ ಪದಗಳನ್ನು ಹೇಳುವವರೂ ಕೂಡಾ ತಮ್ಮ ವಿಳಾಸವನ್ನು ತಿಳಿಸಿ ನನ್ನಗೂಡ ಪತ್ರವ್ಯವಹಾರ ಮಾಡಬೇಕೆಂದು ಪ್ರಾರ್ಥಿಸುತ್ತೇನೆ.

ತಮ್ಮ

**ಬಿ. ಜಿ. ಚಿಮ್ಮಲಗಿ**

ಗೌಳೀಗುಡ್ಡ ಹೈದರಾಬಾದ

( ದಕ್ಷಿಣ )



CC-0. Jangamwadi Math Collection. Digitized by eGangotri

# ಜನಪದ ಸಾಹಿತ್ಯ

ಸಂಗ್ರಾಹಕರು—ಶ್ರೀ. ಟೇಂಗ್ಸೆ ಗೋವಿಂದರಾಯರು, ಬಿ. ಎ. ಎಲ್ ಎಲ್. ಬಿ.

## ಮಲ್ಲಾಡದ ಹುಡುಗಿ

ಮಲ್ಲಾಡ ದೇಶದ ಹುಡಗಿ ಈಕಿ । ಮಲ್ಲಿಗಿ ಹೂವಿನ
ಕಿಂತಾ ಚೆಲವಿ ।
ಇಲ್ಲಿ ಯಾರೂ ಇಲ್ಲ ಈಕೀ । ಜೋಡಿ ಜೋಡಿ ॥ ಪಲ್ಲ ॥
ಇಲ್ಲೆ ಹಾದು ಹೋದಳಂಣಾ । ಎಲ್ಲೆಲ್ಲಿ ಹುಡುಕಿದರಿಲ್ಲ ।
ನೋಡಿ ಕಾಣೆ ಈಕಿ ರೂಪಾ । ನೋಡೀ ನೋಡೀ ॥ ಅ. ಪ. ॥
ಮದಗ ಮಂಜಗಾರ ಹುಡುಗ ನೋಡ್ರಿ । ಬಾಗಿಲದಾಗ
ನಿಂತಿತ್ತು
ಹೋಗತಾಳಂತಾನ ಹಿಡೀ ಹಿಡೀ ।
ಖಾಲಿ ವಡದ ಜೋಲೀ ಹೊಡೆದು । ಖಡೇ ತೋಪೆ
ತೋರಸತಾನ್ರೀ ।
ಎಲ್ಲಾರಕಿಂತ ಕೈ ಮ್ಯಾಲಕ ಮಾಡೀ ಮಾಡೀ ॥
ಅಲ್ಲೆ ಕುಂತಿದ್ದಗಸಾಲ್ರು ಹುಡುಗಾ । ಅಲಕ್ ಅಂತ
ಬೇಲೀಹಾರ ।
ದಾರೀ ಹಿಡಿದು ಹೋಂಟಾನ್ರೀ ಭರರಾರ ॥
ಮಳೀ ಗಾಳೀ ಬಂದ್ಹಾಂಗಾತನೀ ಸರರಾರಾ ॥
ಸುದ್ದೀ ಕೇಳಿ ಸುಳ್ಳದ ಹುಡುಗಾ, ಎದ್ದೋಡೀ
ಬರೂವಾಗ ।
ಬಿದ್ದೂ ಹಲ್ಲು ಮುರಕೊಂಡತರಿ ಸಿರೀಗೇಡಿ ।
ಶಿವಳ್ಳಿ ಸಿದ್ದಾಪುರ ಹುಡುಗಾ । ಶಿಟ್ಟಿಗೆದ್ದು ಬರೂವಾಗ ।
ಹೇಣ್ತಿಕೊಳ್ಳಾಸ ಕಟ್ಟಾಣಿ ಹರಕೊಂಡ್ ಬಂದಾ
ಅವಸರಾಮಾಡಿ ॥
ಭದ್ರಾಪುರದ ಬಳಿಗಾರ ಹುಡುಗಾ । ಬಸಾಪುರದ
ಬಣಗಾರ ಹುಡಗಾ ।
ಆಕಿ ಕಾಲಪ್ಯಾಗ ರೂಪಾಯಿ ಸುರೂವತಾರ ಪಡೀಪಡೀ॥
ರಾಜೇಕ ಹೆಂಗಸು ಹಿರದಾ ।
ಆಕೀ ಸುತ್ತಮುತ್ತ ಜಾತ್ರಿ ನೆರೆದಾ ।
ಉಡದಾರ ತಾಯಿತಾ ಹರದಾ ।
ಕೊಡತಾರ ನೋಡ್ರಿ ಇಲ್ಲಾ ಗರದಾ ॥

ಮುದಕರು ಹರೇದವರು ಬಿದ್ದ ಬಿದ್ದ ನೋಡಿ ।
ಸದ್ದ ಅಡಗೀತು ಆಕಿನ್ನೋಡಿನೋಡೀ ॥ ೧ ॥
ಗಾಡದನರ ಪುಣ್ಣೂರ ಹುಡುಗಾ । ನೋಡಲಾಕ
ನಿಂತಿದ್ದ ಜಾತ್ರಿ ।
ಅಂತರಲೆ ಕಳಕೊಂಡ್ರು ಅಂಚಿಸದೋತರ ಜೋಡಿ ॥
ಕಣಕೀಕೊಪ್ಪದ ಕನ್ಮಾರ ಹುಡುಗಾ । ಕಳಕೊಂಡ
ಹುಡಕ್ಯಾಡತೈತ್ರಿ ।
ಇವನ ಬಯ್ಯಾನಂತಾರವನ ತುಡುಗನ್ನ ಮಾಡೀ ॥
ಮಂಟೂರ ಐನಾರ ಹುಡುಗಾ । ಕಂಟೀ ಗೋಪು
ತೋರಸ್ತಾನ ।
ಅಂತರಲೇ ಬಯ್ಯಾರ್ಯಾರೋ ಕೈಯಾಗಿಸ್ಪು ಕಳವು ಮಾಡಿ॥
ಪರವಾಪುರದ ಪತ್ತಾರ ಹುಡುಗಾ । ಪಾಡಮಾಡಿ
ಸುತ್ತೀದಾನ ।
ತಿದ್ದೀತೀಡಿ ಬರಾ ಮೇಲ್ ಮಾಡೀಮಾಡಿ ॥
ಸಾಪೀಕಟ್ಟೀ ಕೊರವರ ಹುಡುಗನ್ನ । ಸಂದ್ಯಾಗ ನಾಕೀ
ಒತ್ತೀದರ ।
ಸನಾದಿ ಬಟ್ಲಾ ಒಡದು ಆಯಿತ್ರೀ ಪುಡೀ ಪುಡೀ॥
ಸರಟಿಗಾಡಿ ಸಾಹಿತ ಸಾಮಾನ । ಜಾತ್ರಿಗಂತ
ಹೇರ್ಕೊಂಡ ಬಂದು ।
ಕುದರೀ ಕಳಕೊಂಡು ಹುಡಕ್ಯಾಡತಾವರೀ ಹೆಣಗೇಡಿ॥
ಅವರ ಗುದ್ಯಾಟ ನಡದೀತೋ ಪೂರಾ ।
ಆಕಿ ಹೋಗಿದ್ದು ನೋಡಲಿಲ್ಲ ಯಾರಾ ।
ಆಕಿ ಇರುವದು ಬ್ಯಾಹಟ್ಟಿ ಊರಾ ।
ರಂಗದಾಸಗ ಹೇಳಿವರ್ಯಾರಾ ।
ಅಲ್ಲಿಗೆ ಬಂದ ಕವಿಗಾರಾ ।
ಶ್ಯಾರದ ಬ್ಯಾಹಟ್ಟಿ ಪೂರದ ರಂಗ ಮಾದರೀ । ಅಲ್ಲೆ
ನಿಂತು ಪದಾ ಮಾಡಿ ಹೇಳತಾನ ಸಾರಿ ಸಾರಿ ॥ ೨ ॥

CC-0. Jangamwadi Math Collection. Digitized by eGangotri



ಸಂಗ್ರಾಹಕರು — ಶ್ರೀ. ಡಿ. ಕೆ. ಭಾರದ್ವಾಜ ಎಂ. ಡಿ. (ಆಯುರ್ವೇದ)

## ಶಾಸ್ತ್ರವಚನಗಳ ಅರ್ಥವನ್ನು ಹೇಗೆ ಮಾಡಬೇಕು ?

ಈಗಿನ ಕಾಲದಲ್ಲಿ ವಿಚಾರ ಸ್ವಾತಂತ್ರ್ಯದ ಕೂಗು ಎಲ್ಲೆಲ್ಲಿಯೂ ಕೇಳಬರುತ್ತಲಿದೆ. ಆದರೆ ಅದರೊಂದಿಗೆ ಕರ್ತೃತ್ವಶಕ್ತಿಯೂ ಕಂಡುಬರುತ್ತಲಿದ್ದರೆ ಆ ಸ್ವಾತಂತ್ರ್ಯವು ಕ್ಷಮ್ಯವೆಂದು ಹೇಳಬಹುದಾಗಿತ್ತು. ಸುಸಂಸ್ಕೃತ ಬುದ್ಧಿಯಿಂದ ಸುವಿಚಾರಗಳು ನಿರ್ಮಾಣವಾಗುತ್ತಿರಬೇಕು. ವಿಚಾರಗಳ ಮೇಲೆ ಪರಿಸ್ಥಿತಿಯ ನಿಯಂತ್ರಣವಿರುವುದು. ಈ ನಿಯಂತ್ರಣದಿಂದ ಬಿಡುಗಡೆ ಹೊಂದಲಾಗುವದಿಲ್ಲ. ಶಾಸ್ತ್ರಗಳು ಗತಕಾಲೀನ ಆಚಾರ ವಿಚಾರಗಳ ಯಮನಿಯಮಾದಿಗಳ ದ್ಯೋತಕಗಳು. ಅವುಗಳ ಅರ್ಥವನ್ನು ಪರಿಸ್ಥಿತಿಗನುಸಾರವಾಗಿ ಮಾಡಿದರೆ ಅದು ಯೋಗ್ಯವಾಗುವುದು. ಹಾಗೆ ಮಾಡದಿದ್ದುದರಿಂದ ಅನೇಕ ಭಾಷ್ಯಕಾರರೂ ಟೀಕಾಕಾರರೂ ಮಾಡಿರುವ ಶಾಸ್ತ್ರವಚನಗಳ ಅರ್ಥವು ತಪ್ಪಾಗಿರುವುದು. ಉದಾಹರಣಾರ್ಥವಾಗಿ ಮನುಸ್ಮೃತಿಯಲ್ಲಿ (ಅ. ೧೧ ಶ್ಲೋ. ೬೪) 'ಸರ್ವಾಕರೇಷ್ವಾಧಿಕಾರೋ ಮಹಾಯಂತ್ರ ಪ್ರವರ್ತಿತಮು' ಎಂಬ ಶ್ಲೋಕದಲ್ಲಿ 'ಮಹಾಯಂತ್ರ ಪ್ರವರ್ತನ' ವು ನಿಷಿದ್ಧವೆಂದು ನಿಶ್ಚಯಿಸಲಾಗಿದೆ. ಮೇಧಾತಿಥಿ ಎಂಬ ಟೀಕಾಕಾರನು ಮನುವಿನ ನಂತರ ಸಾವಿರಾರು ವರ್ಷಗಳ ಮೇಲೆ ಹುಟ್ಟಿದವನು. ಅವನಿಗೆ 'ಮಹಾಯಂತ್ರ' ದ ಮನುವಿನ ಕಾಲದ ಅರ್ಥವು (ಶ್ರಮವಿಲ್ಲದೆ ಕಾರ್ಯವನ್ನು ಸುಲಭವಾಗಿ ಜರುಗಿಸುವ ಸಾಧನವು.) ತಿಳಿಯದಿದ್ದುದರಿಂದ ಮಹಾಯಂತ್ರವೆಂದರೆ ಯಾವುದೋ ಒಂದು ಪ್ರಚಂಡ ಮತ್ತು ಆಶ್ಚರ್ಯಕರವಾದ ವಸ್ತುವಾಗಿರಬೇಕೆಂದು ಆತನು ತಿಳಿದುಕೊಂಡಿರಬೇಕು. ಆದುದರಿಂದಲೇ ಅವನು 'ನದಿಯ ಮೇಲಿನ ಸೇತುವೆ' ಎಂಬ ಅರ್ಥವನ್ನು ತನ್ನ ರಸವತ್ತಾದ ಮಿದುಳಿನಿಂದ ತೆಗೆದು ಆ ಶಬ್ದಕ್ಕೆ ಜೋಡಿಸಿರಬೇಕು ! ಅದರಿಂದ ನದಿಯ ಮೇಲೆ ಸೇತು ಕಟ್ಟುವುದು ನಿಷಿದ್ಧವೆಂದು ಮನುವಿನ ಕಾಲದಲ್ಲಿ ತಿಳಿವಳಿಕೆಯಿತ್ತು, ಎಂಬ ತಪ್ಪು ಅಭಿಪ್ರಾಯವು ಜನರಲ್ಲಿ ಹಬ್ಬಿಕೊಂಡಿತು. ಆದರೆ ಮನುವಿನ ನಿಜವಾದ ಅಭಿಪ್ರಾಯವು ಅಲ್ಪ ಕಾಲದಲ್ಲಿ ಹೆಚ್ಚು ಪದಾರ್ಥಗಳನ್ನು ತಯಾರಿಸುವ ಯಂತ್ರಗಳು ಹುಟ್ಟಿದರೆ, ದೇಶದಲ್ಲಿ ಜನರಿಗೆ ಉದ್ಯೋಗವಿಲ್ಲದೆ ದಾರಿದ್ರ್ಯವು ಹೆಚ್ಚುವುದೆಂದು ಅಂಥ ಯಂತ್ರಗಳನ್ನು ನಿಷೇಧಿಸಬೇಕೆಂದು ಇತ್ತು. ನದಿಯ ಮೇಲೆ ಸೇತುವೆಯನ್ನು ಕಟ್ಟುವುದು ಪರೋಪಕಾರ ಕೃತ್ಯ, (ಪುಣ್ಯಕರ್ಮ) ವಾಗಿದೆ. ಅದನ್ನು ಮನುವು ನಿಷೇಧಿಸುವನೇ ? ಆದರೆ ಪರಿಸ್ಥಿತಿಯ ತಿಳಿವಳಿಕೆಯಿಲ್ಲ. ಚೆನ್ನಾಗಿ ವಿಚಾರ ಮಾಡದೆ ಟೀಕಾಕಾರರು ಶಾಸ್ತ್ರವಚನಗಳಿಗೆ ಅರ್ಥವನ್ನು ಬರೆಯಲಾರಂಭಿಸಿದರೆ ಅರ್ಥಕ್ಕೆ ಅನರ್ಥವಾಗುವುದರಲ್ಲಿ ಸಂದೇಹವಿಲ್ಲ. —ವಸುಮತಿ (ಬಂಗಾಳಿ)

## ಔಷಧಿಗೆ ಸಂಗೀತದ ಉಪಯೋಗ

ಎಂದರೆ ರೋಗನಿವಾರಣೆಗೆ ಕಲೆಯ ಉಪಯುಕ್ತತೆಯೆಂದರೆ ಎಲ್ಲರಿಗೂ ಏನೋ ಅನ್ನಿಸುವುದು. ಏಕೆಂದರೆ ಕಲೆಯೊಂದಿಗೆ ಉಪಯುಕ್ತತೆಯನ್ನು ಸೇರಿಸುವುದು ಅಸಾಧ್ಯವೆನಿಸುವುದು. ಆದಾಗ್ಯೂ ಈ ದೃಷ್ಟಿಯಿಂದ ಅಮೆರಿಕೆಯಲ್ಲಿ ಹಲವು ಪ್ರಯತ್ನಗಳು ನಡೆಯುತ್ತಲಿವೆ. ರೋಗದ ನಿದಾನ-ವಿಶೇಷವಾಗಿ ಮಾನಸಿಕ ನಿದಾ

CC-0. Jangamwadi Math Collection. Digitized by eGangotri

ಸವು ಒಂದುಸಲ ಸರಿಯಾಗಿ ತಿಳಿದರೆ ಅದರ ಮೇಲೆ ಕಲೆಯ ಪ್ರಭಾವವನ್ನು ಬೀರಿ ರೋಗವನ್ನು ಗುಣಪಡಿಸುವುದಕ್ಕೆ ಸಹಾಯವನ್ನಾದರೂ ಮಾಡುವ ಪದ್ಧತಿಯು ಈಗ ಹೊರಟಿದೆ. ಪ್ಲಾಸ್ಟರಿನ ಚಿತ್ರಗಳನ್ನು ರಚಿಸುವುದು, ಡ್ರಾಯಿಂಗ್ ಬರೆಯುವುದು ಇತ್ಯಾದಿ ಕೆಲಸಗಳಿಂದ ಏಕಾಗ್ರತೆಗೆ ಸಹಾಯವಾಗುವುದು. ಆದರೆ ಕಲೆಗಳಲ್ಲಿ ಸಂಗೀತವು ವಿಶೇಷ ಆರೋಗ್ಯವರ್ಧಕವಾದುದು. ಹಾಲೆಂಡಿನ ಒಂದು ಔಷಧಾಲಯದಲ್ಲಿ ರೋಗಿಗಳನ್ನು ಸರ್ತಿಯಿಂದ ಸಂಗೀತದ ಕೋಣೆಗೆ ಕರೆದುಕೊಂಡು ಹೋಗಿ ಸಂಗೀತ ಸಂಜೀವನಿಯನ್ನು ಕೊಡುವರು. ಈಗ ಪಾಶ್ಚಾತ್ಯದೇಶದ ದೊಡ್ಡ ದೊಡ್ಡ ಔಷಧಾಲಯಗಳಲ್ಲಿ ರೇಡಿಯೊಗಳನ್ನು ಕೇಳಿಸುವರು. ಆದರಿಂದ ಹಾಸಿಗೆಯಲ್ಲಿ ಮಲಗಿಕೊಂಡೇ ರೋಗಿಯು ಸಂಗೀತವನ್ನು ಕೇಳುವ ಸಂಧಿಯು ಸಿಕ್ಕುವುದು. ಆದರೆ ಇದರಲ್ಲಿ ಒಂದು ದೋಷ ಇದೆ. ಬೇರೆ ಬೇರೆ ರೋಗಿಗಳು ಬೇರೆ ಬೇರೆ ರೋಗಗಳಿಂದ ನರಳುತ್ತಿರುವರು. ಹಾಗಿರುವಾಗ ಒಂದು ರಾಗವು ಒಬ್ಬನಿಗೆ ರುಚಿಸಿದರೆ ಮತ್ತೊಬ್ಬನಿಗೆ ಮತ್ತೊಂದು ರಾಗವು ರುಚಿಸಬಹುದು. ಆದ್ದರಿಂದ ಯಾವ ಯಾವ ರೋಗಕ್ಕೆ ಯಾವ ಯಾವ ರಾಗವು ಗುಣಕರವಾದ್ದು ಎಂಬುದನ್ನು ತಿಳಿದುಕೊಂಡು ಅದರಂತೆ ಸಂಗೀತವನ್ನು ನಡೆಯಿಸಬೇಕಾಗುವುದು. ಈಗ ಈ ಬಗೆಯ ಸುಧಾರಣೆಯ ಪ್ರಯತ್ನಗಳೂ ಅಲ್ಲಿ ನಡೆಯುತ್ತಿವೆಯೆಂದು ತಿಳಿದು ಸಂತೋಷವಾಗುತ್ತಿದೆ.

—Scholar

## ಮಹಾತ್ಮಾ ಗಾಂಧೀಜಿಗಳ ಸ್ವಭಾವ

ಮಹಾತ್ಮಾ ಗಾಂಧಿಯವರು ಜಗತ್ತಿನ ಅತ್ಯಂತ ಶ್ರೇಷ್ಠ ಪುರುಷರಲ್ಲೊಬ್ಬರೆಂದು ಗಣಿಸಲ್ಪಟ್ಟಿರುವರು. ಇದಕ್ಕೆ ಅವರ ನಿಷ್ಕಪಟತೆ, ಮನಶ್ಶುದ್ಧಿ, ಪವಿತ್ರ ಆಚರಣಾದಿಗಳೇ ಕಾರಣವಾಗಿರುವವು. ಬಾಲಸ್ವಭಾವದಲ್ಲಿರುವ ಶುದ್ಧಾಂತಃಕರಣವು ಅವರಲ್ಲಿ ಮನೆಮಾಡಿಕೊಂಡಿದೆ. ಈ ವಿಷಯದಲ್ಲಿ ಒಂದು ಸಂಗತಿಯನ್ನು ಹೇಳಬೇಕಾಗಿದೆ. ಬಾಪೂಜಿ (ಮಹಾತ್ಮ) ಯವರು ಆಹಮದಾಬಾದಿನಲ್ಲಿದ್ದಾಗ ನಿತ್ಯವೂ ಸಾಯಂಕಾಲ ಆಶ್ರಮದ ಚಿಕ್ಕಮಕ್ಕಳನ್ನು ಜತೆಯಲ್ಲಿ ಕರೆದುಕೊಂಡು ಜೈಲಿನ ಕಡೆ ತಿರುಗಾಡುವುದಕ್ಕೆ ಹೋಗುತ್ತಿದ್ದರು. ಆಗ ಜೈಲಿನ ಬಾಗಿಲನ್ನು ಯಾರು ಮೊದಲು ಓಡಿ ಹೋಗಿ ಮುಟ್ಟುವರು ಎಂಬ ಪಂದ್ಯಾಟವು ನಡೆಯುತ್ತಿತ್ತು. ಆಗ ಬಾಪೂಜಿಯವರೂ ಸ್ವತಃ ಭಾಗಿಗಳಾಗುತ್ತಿದ್ದರು. ಒಂದು ವೇಳೆ ಮಕ್ಕಳಾರೂ ಇಲ್ಲದಿದ್ದರೆ, ಅವರು ಒಬ್ಬಂಟಿಗರಾಗಿ ಹೋದಾಗಲೂ, ಅವರು ಓಡಿ ಹೋಗಿ ಜೈಲಿನ ಬಾಗಿಲನ್ನು ಮುಟ್ಟಿ ಬರುವ ಪದ್ಧತಿಯು ತಪ್ಪುತ್ತಿರಲಿಲ್ಲ. ಹಾಗೆ ಮಾಡದ ವಿನಾ ಅವರ ಮನಸ್ಸಿಗೆ ಸಂತೋಷವುಂಟಾಗುತ್ತಿರಲಿಲ್ಲ. ಅದರಂತೆ ಅವರಿಗೆ ವಿಶೇಷ ಪರಿಚಯವಿದ್ದವರಾರಾದರೂ ಅವರ ಪಾದಗಳಿಗೆರಗಿದರೆ ಆಶೀರ್ವಾದವೆಂದು ಅವರ ತಲೆಯ ಮೇಲೆ ತಟ್ಟಿಬಿಡುತ್ತಿದ್ದರು. ಅವರು ಕೂತುಕೊಳ್ಳುವ ಜಾಗೆಯನ್ನಂತೂ ಮಹಾದೇವ ಭಾಈ ಅಥವಾ ಸತೀಶಬಾಬು ಅವರಿಂದ ತಿಳಿಯಬೇಕು! ವಾರಕ್ಕೊಂದು ಸಲ ಒಂದು ದಿನ ಮೌನವ್ರತವನ್ನು ಪಾಲಿಸುವುದರಲ್ಲಿ ಅವರಿಗೆ ಸಂತೋಷವೂ ಶಾಂತಿಯೂ ಉಂಟಾಗುತ್ತದೆ. ಆದರೆ ಮೂಕನಂತೆ ಕುಳಿತುಕೊಳ್ಳುವುದೂ ಅವರ ಸ್ವಭಾವಕ್ಕೆ ವಿರುದ್ಧವಾಗಿದೆ. ಮಕ್ಕಳು ಮೂಕರಂತೆ ಎಂದಾದರೂ ಕೂತುಕೊಳ್ಳುವರೆ? ಅದೇ ಬಾಲಸ್ವಭಾವವು ನಮ್ಮ ಬಾಪೂಜಿಯವರದು. ಒಂದು ಸಲ ನಗುವುದಕ್ಕಾರಂಭಿಸಿದರೆ ಮಕ್ಕಳಂತೆಯೆ ಹಃ ಹಃ ಹಃಹ್ಹಾಃ ಎಂದು ನಗಲಾರಂಭಿಸುವರು. ಅವರ ಸ್ವಭಾವದಲ್ಲಿರುವ ಈ ಬಾಲಸ್ವಭಾವವೆಂದಿಗೂ ನಾಶವಾಗಲಾರದು.

—ಪ್ರಸ್ಥಾನ (ಗುಜರಾತಿ)

## ಪಾಶ್ಚಾತ್ಯ ವೈದ್ಯಕೀಯ ಜ್ಞಾನದ ಪ್ರಗತಿ

ಕಳೆದ ೧೦-೧೨ ವರ್ಷಗಳಲ್ಲಿ ಪಾಶ್ಚಾತ್ಯ ವೈದ್ಯಶಾಸ್ತ್ರವು ಮಾಡಿರುವ ಪ್ರಗತಿಯಿಂದ, ಅದು ಹಲವು ಆಶ್ಚರ್ಯಕರವಾದ ಕೆಲಸಗಳನ್ನು ಮಾಡಿರುವಂತೆ ತಿಳಿದು ಬರುವುದು. ಮೃತ್ಯುವಾದನಂತರ ಮಾನವ ಹೃದಯವನ್ನು ೩೦ ಗಂಟೆಗಳ ಕಾಲ ಜೀವಂತವಾಗಿಡಬಹುದು. ಈಗ ಅದರಂತೆಯೆ ಮನುಷ್ಯ ರುಂಡವನ್ನು ಮುಂಡದಿಂದ ಪ್ರತ್ಯೇಕಿಸಿದರೂ ಮೂರು ಗಂಟೆಗಳ ವರೆಗೆ ಅವುಗಳ ಶಿರೆಗಳ ಎಲ್ಲ ಕ್ರಿಯೆಯನ್ನೂ ಮುಂಡದಲ್ಲಿರುವ ರುಧಿರಾಭಿಸರಣವನ್ನೂ ಯಥಾಪ್ರಕಾರ ನಡೆಯುವಂತೆ ಮಾಡುವ ಉಪಾಯವನ್ನು ಒಬ್ಬ ಶಾಸ್ತ್ರಜ್ಞನು ಕಂಡು ಹಿಡಿದಿರುವನು! ಮುದುಕರ ಅಂಗದಲ್ಲಿ ಮಂಗನ ಶರೀರದಲ್ಲಿರುವ ಒಂದು ವಿಶಿಷ್ಟ ಗ್ರಂಥಿಯನ್ನು ಹಾಕುವುದರಿಂದ, ಅವರಿಗೆ ತರುಣರಿಗಿಂತಲೂ ಅಧಿಕವಾದ ತಾರು

CC-0. Jangamwadi Math Collection. Digitized by eGangotri

...ತ್ತ ಪ್ರಾಪ್ತಿಯಾಗುವುದು. ಆ ತಾರುಣ್ಯವು ೩ ರಿಂದ ...ವರುಷಗಳ ವರೆಗೆ ಇರುವ್ರದೆಂದು ಈಗ ಅನುಭವದಿಂದ ...ಕಟಿಸಲಾಗಿದೆ. 'ವ್ಹಿಟಮಿನ್' ಎಂಬ ಜೀವಸತತ್ವ ...ನ್ನು ಶೋಧಿಸಿರುವ ಡಾ. ಕಾಸಿಮಿರ್ ಫಂಕ್ ಎಂಬಾ ...ತು 'ಎಸೆನ್ಸ್ ಆಫ್ ಮ್ಯಾಸ್‌ಕ್ಯುಲಾರಟಿ ( Essence of masculurity) ಎಂಬ ಒಂದು ಔಷಧಿಯನ್ನು ತಯಾ ...ರುವನು. ಅದರ ಬಿಲ್ಲೆಗಳನ್ನು ತಿನ್ನುವುದರಿಂದ ...ಮುದುಕರಿಗೆ ಕಳೆದುಕೊಂಡ ಸ್ನಾಯುಶಕ್ತಿಯು ಮತ್ತೆ ...ದು ಅದು ಅಭಿವೃದ್ಧಿಗೊಳ್ಳುವುದು. ಸೋಡಾವಾಟರ ...ಟಲಿಯಲ್ಲಿ 'ಫಸ್' ಎಂದು ಶಬ್ದ ಮಾಡುವ ಗ್ಯಾಸಿನ (ಕಾರ್ಬನ್ ಡೈಆಕ್ಸೈಡ್) ಗೆ ರೇಡಿಯಮಿನ ಸಂಸ್ಕಾರ ...ಸ್ಸಿತ್ತು ಆದರಿಂದ ಫುಪ್ಫುಸ ಜ್ವರ (ನ್ಯುಮೋನಿಯಾ), ...ಕುವ ವ್ರಣ (ಕ್ಯಾನ್ಸರ್)– ಇವುಗಳನ್ನು ಗುಣಪಡಿ ...ಬಹುದೆಂದು ಶೋಧನೆಯಾಗಿದೆ. ರಕ್ತಪಿತ್ತದಿಂದ ಸರ ...ವ ಮನುಷ್ಯನ ಶರೀರದಲ್ಲಿ ಯಾವ ವಿಷವಿರುವುದೆಂ ...ಬುದನ್ನು ಈಗ ಕಂಡು ಹಿಡಿದು, ಆ ವಿಷವನ್ನು ವನಸ್ಪತಿ ...ಯಿಂದ ನಿವಾರಿಸುವ ಪ್ರಯತ್ನವು ಈಗ ನಡೆಯುತ್ತಿರು ...ವುದು. (ಇದನ್ನು ಆಯುರ್ವೇದವು ಎಷ್ಟೋ ಸಾವಿರ ...ವರುಷಗಳ ಹಿಂದೆ ನಿರೂಪಿಸಿದೆ–ದ. ಕೃ. ಭಾ.) ಹೊಟ್ಟೆ ...ಯಲ್ಲಿ ಆಮ್ಲಾತಿಶಯದಿಂದ ಆಗುವ ರಕ್ತಕ್ಷಯ ರೋಗ ...ವನ್ನು ಅಲ್ಟ್ರಾ–ವೈಯೊಲೆಟ್ (Ultra-violet) ಪ್ರಕಾಶ ...ಣದಿಂದ ನಾಶಮಾಡಲಾರಂಭಿಸಿದ್ದಾರೆ. ಮನುಷ್ಯ ...ನಲ್ಲಿ ಅವನ ಇಚ್ಛೆಗನುಸಾರವಾಗಿ ರಾಗ, ದ್ವೇಷ, ಸುಖ ...ದುಃಖಾದಿ ಭಾವನೆಗಳನ್ನು ಉತ್ಪನ್ನ ಮಾಡಬಹುದೆಂಬ ...ಸಂಗತಿಯು ಈಗ ಸಂಭವನೀಯವಾಗಿದೆ. ಮಧು ...ಮೇಹಕ್ಕೆ ಇನ್‌ಶುಲೀನ್ ಎಂಬ ದ್ರವ್ಯವು ರಾಮಬಾಣ ...ವಾಗಿದೆ. ವನಸ್ಪತಿಯಿಂದ ಮಕ್ಕಳಿಗೆ ಉಪಯೋಗಕರ ...ವಾದ ಕೃತ್ರಿಮ ಹಾಲನ್ನು ತಯಾರು ಮಾಡಲಾರಂಭಿಸಿ ...ದ್ದಾರೆ. ಶಸ್ತ್ರಕ್ರಿಯೆಯ ಕಾಲದಲ್ಲಿ ರೋಗಿಯ ಸಂವೇ ...ದನಾ ಶಕ್ತಿಯನ್ನು ಕೆಲಕಾಲ ಸ್ಥಗಿತವಾಗಿರಿಸಲು ...ಕ್ಲೋರೋಫಾರ್ಮಿಗಿಂತಲೂ ಅಧಿಕ ಉಪಯುಕ್ತ,ಆದರೆ ...ಅದಕ್ಕಿಂತ ಕಡಿಮೆ ಅಪಾಯಕರವಾದ 'ಸಾಯ್‌ಕ್ಲೋ ...ಪ್ರೋಪೇನ್' ಎಂಬ ವಾಯುವನ್ನು ಹೈಡ್ರೋಜನ (ಜಲ ...ಜನಕ) ವಾಯುವಿನಿಂದ ತೆಗೆಯಲಾರಂಭಿಸಿದ್ದಾರೆ. ಆದ ...ಮಸ್ತಪ್ಪ ಮನುಷ್ಯನ ಎದುಳಿನಲ್ಲಿ ವಿದ್ಯುತ್ತಿನ ಮಂದ ...ಪ್ರವಾಹವನ್ನು ಬಿಟ್ಟು ಅದರಿಂದ ಅವನಿಗೆ ಮೂರು ನಾಲ್ಕು ಗಂಟೆಗಳ ಸುಖನಿದ್ರೆಯು ಬರುವಂತೆ ಮಾಡ ಬಹುದೆಂಬುದು ಈಗ ಸಿದ್ಧವಾಗಿದೆ.

—Popular science

## ಸ್ವತಂತ್ರ ದೇಶಗಳ ಭವಿತವ್ಯ

ಆಧುನಿಕ ಕಾಲದ ಪ್ರಜಾಪ್ರಭುತ್ವರಾಜ್ಯವ್ಯವಸ್ಥೆಯ ಪರೀಕ್ಷೆಯು ಕಳೆದ ೫೦ ವರುಷಗಳಿಂದಲೂ ಆಗು ತ್ತಲೇ ಇದೆ. ಅಲ್ಪಸಂಖ್ಯೆಯ ಜನರ ಹಿತವನ್ನು ದುರ್ಲಕ್ಷಿಸುವುದು ಆ ರಾಜ್ಯಪದ್ಧತಿಯ ಒಂದು ದೊಡ್ಡ ನ್ಯೂನತೆಯಾಗಿರುವುದು. ಆದ್ದರಿಂದ ಪ್ರಜೆಗಳ ಎಲ್ಲ ಬಗೆಯ ದುಃಖಗಳಿಗೆ ಅದು ರಾಮಬಾಣವಾಗಿದೆ ಎಂಬ ತಿಳಿವಳಿಕೆಯು ತಪ್ಪಾಗಿರುವುದು. ಆದಾಗ್ಗೂ ಇನ್ನೂ ಈ ೨೦ನೆಯ ಶತಮಾನದಲ್ಲಿಯೂ–ಅದೇ ಶ್ರೇಷ್ಠವಾದ ಪದ್ಧತಿಯೆನಿಸಿದೆ. ಅಬಿಸೀನಿಯಾ, ಅಫಗಾನಿಸ್ಥಾನ, ಮೊರಾಕೊ, ಮತ್ತು ಹಿಂದುಸ್ಥಾನ–ಈ ನಾಲ್ಕು ದೇಶ ಗಳಲ್ಲಿ ಮಾತ್ರ ಪ್ರಜಾಪ್ರಭುತ್ವರಾಜ್ಯಪದ್ಧತಿಯಿಲ್ಲ. ಉಳಿದ ದೇಶಗಳಲ್ಲಿ ಹೆಚ್ಚುಕಡಿಮೆಯಾಗಿ ಪ್ರಜೆಗಳ ಕೈಯಲ್ಲಿಯೆ ಆಡಳಿತಸೂತ್ರವಿರುವುದು. ಆದರೆ ಆ ಸ್ವತಂತ್ರ ದೇಶಗಳ ಸ್ವಾತಂತ್ರ್ಯವು ಇನ್ನೊಂದೆರಡು ಶತ ಮಾನಗಳ ವರೆಗೆ ಈಗ ಇದ್ದಂತೆಯೆ ಇರಬಲ್ಲದೆ ಎಂಬ ಪ್ರಶ್ನೆಯು ಹುಟ್ಟುವುದು. ವೈಕೌಂಟ್ ಬ್ರಾಯಿಸ್‌ನ ಮತವಂತೆ ಪ್ರಜಾಪ್ರಭುತ್ವವು ಚಿರಸ್ಥಾಯಿಯಾಗಿರ ಬೇಕಾದರೆ, ಪ್ರಜೆಗಳಲ್ಲಿ ಬುದ್ಧಿಮತ್ತೆಯು ಮಾತ್ರವ ಲ್ಲದೆ, ಧರ್ಮಶ್ರದ್ಧೆ, ಅಭಿಮಾನ ಜನಹಿತಬುದ್ಧಿ, ಕರ್ತವ್ಯನಿಷ್ಠೆ ಇತ್ಯಾದಿ ಗುಣಗಳಿರಬೇಕಾಗುವವು. ಈ ಗುಣಗಳನ್ನು ಪ್ರಜೆಗಳಲ್ಲಿ ಹುಟ್ಟಿಸಬೇಕಾದರೆ ಜನರು ದೊಡ್ಡ ಪ್ರಮಾಣದಲ್ಲಿ ಪ್ರಯತ್ನಗಳನ್ನು ಮಾಡಬೇಕು. ಕೂಲಿಕಾರರ ಚಳವಳ, ಶ್ರಮಜೀವಿಗಳ ಸಂಘ, ಕಮ್ಯೂ ನಿಸ್ಟರ ಚಳವಳ ಇವೇ ಮೊದಲಾದ ಈಗಿನ ಚಳವಳಗಳು ಈ ಕಾರ್ಯಕ್ಕಾಗಿ ಹುಟ್ಟಿವೆ. ಆದರೆ ಪ್ರಜಾಪ್ರಭುತ್ವದ ಚಿರಸ್ಥಾಯಿತ್ವವು ಕೊನೆಗೆ ಪ್ರಜೆಗಳ ನೀತಿಮತ್ತೆಯನ್ನ ವಲಂಬಿಸಿಕೊಂಡಿರುವುದು. ವಿಶೇಷ ಸಂಖ್ಯಾಕರ ವಿಶೇಷ ಹಿತವೆಂಬ ತತ್ವವು ಕೇವಲ ಉಪಯುಕ್ತತೆಯ ದೃಷ್ಟಿ ಯಿಂದ ಚೆನ್ನಾಗಿದ್ದರೂ ಅದು ಬಹುಕಾಲ ಬಾಳಲಾ ರದು. ಇದಕ್ಕೆ ಶಾಶ್ವತವಾದ ಉಪಾಯವೆಂದರೆ–ರಾಜ ಕಾರಣದಲ್ಲಿ ಧರ್ಮನಿಷ್ಠೆಯನ್ನು ಪಾಲಿಸುವುದು–ಅವರ

CC-0. Jangamwadi Math Collection. Digitized by eGangotri

ವರು ವ್ಯಕ್ತಿಧರ್ಮವನ್ನು ಪಾಲಿಸುತ್ತ, ಒಟ್ಟಿನಲ್ಲಿ ಸಮಾಜಹಿತದ ಕಡೆಗೆ ಗಮನವಿಡುವುದು-ಇದೊಂದೆ. ಇದನ್ನು ದುರ್ಲಕ್ಷಿಸಿ ಈಗಿನ ರಾಜ್ಯವ್ಯವಸ್ಥೆಗಳು ಆತ್ಮಘಾತವನ್ನೆಸಗಿಕೊಳ್ಳುತ್ತಿರುವವು. ಈ ದೃಷ್ಟಿಯಿಂದ ಇನ್ನು ಒಂದೆರಡು ಶತಮಾನಗಳ ವರೆಗಾದರೂ ಪ್ರಜಾಪ್ರಭುತ್ವವನ್ನು ಸ್ಥಾಯಿಯಾಗಿರಿಸಲು ಪ್ರಯತ್ನಿಸುವ ರಾಷ್ಟ್ರಗಳು ಅಪರೂಪವಾಗಿವೆಯೆಂದು ಹೇಳಬಹುದು.

—Hindusthan review

## ಪಶುಗಳ ಕಥೆಗಳೂ ರಾಜಕಾರಣವೂ

ಹಿಂದುಸ್ಥಾನವು ಮಾತ್ರವಲ್ಲದೆ ಇತರ ರಾಷ್ಟ್ರಗಳೂ ಕೌಟಿಲೀಯ ಅರ್ಥಶಾಸ್ತ್ರದ ಮಹತ್ವವನ್ನು ಸ್ವೀಕರಿಸಿರುವರು. ಪಶುವಿಚಾರಕ ರೂಪಕಗಳನ್ನಾಯ್ದು ಅದರ ಮೂಲಕ ವ್ಯಾವಹಾರಿಕ ನೀತಿತತ್ವವು ಮನಸ್ಸಿನಲ್ಲಿ ನಾಟುವಂತೆ ಮಾಡುವ ಚಾಣಕ್ಯನ ಪದ್ಧತಿಯು ಒಳ್ಳೆಯದೆಂದು ನಿಶ್ಚಿತವಾಯಿತು. ಆ ಕಥೆಗಳು ಹಿಂದೂಸ್ಥಾನದ ಹೊರಗೂ ಪ್ರಚಲಿತವಾದವು. ಗೌತಮಬುದ್ಧನು ನೀತಿ ಉಪದೇಶವನ್ನು ಮಾಡುವಾಗ ರೂಪಕಾತ್ಮಕ ಕಥೆಗಳನ್ನು ಹೇಳುತ್ತಿದ್ದನು. ಏಸುಕ್ರಿಸ್ತನು ಕೂಡ ಇಂಥಾ ಕಥೆಗಳನ್ನು ಹೇಳಿ, ತನ್ನ ಅನುಯಾಯಿಗಳ ಮನಸ್ಸಿನಲ್ಲಿ ತನ್ನ ತತ್ವಗಳು ನಾಟುವಂತೆ ಮಾಡುತ್ತಿದ್ದನು. ಬುದ್ಧಪೂರ್ವಜಗತ್ತಿನಲ್ಲಿ ಮತ್ತೆ ಬುದ್ಧನ ಕಾಲದಲ್ಲಿ ಪ್ರಚಾರವಾಗಿದ್ದ ಕಥೆಗಳು ನಿಧಾನವಾಗಿ ಗ್ರಂಥರೂಪದಲ್ಲಿ ಸಂಕಲಿತವಾಗಲಾರಂಭಿಸಿದವು. ಪಂಚತಂತ್ರ ಮತ್ತು ಹಿತೋಪದೇಶದಂತಹ ಕಥಾಸಂಗ್ರಹಗಳು ರಾಜಕುಮಾರರಿಗೆ ರಾಜನೀತಿಯನ್ನು ಬೋಧಿಸಲು ಸಹಾಯಕವಾದವು. 'ಒಡೆಯಿರಿ ಮತ್ತೆ ಜೋಡಿಸಿರಿ.' ಎಂಬ ಈಗಿನ ರಾಜನೈತಿಕ ಸೂತ್ರವು ಸಿಂಹ ಮತ್ತು ಎತ್ತಿನ ಸ್ನೇಹದಲ್ಲಿ ಭೇದವನ್ನುಂಟು ಮಾಡುವ ನರಿಯ ಕಥೆಯಲ್ಲಿ ಜೋಡಿಸಿರುವುದು ದೃಷ್ಟಿಗೆ ಬೀಳುವುದು. ಖುಶ್ರೂನ ಶೀರಖಾನ್ ಎಂಬ ಇರಾಣದೇಶದ ರಾಜನಿಗೆ ಈ ಕಥೆಗಳನ್ನು ಕೇಳುವುದರಲ್ಲಿ ಅಭಿರುಚಿಯು ಹೆಚ್ಚಿ ಅವನು ಆ ಕಥೆಗಳನ್ನು ಫಾರಶೀ ಭಾಷೆಗೆ ಭಾಷಾಂತರ ಮಾಡಿಸಿದನು. ಫಾರಶೀ ಭಾಷೆಯಿಂದ ಅವು ಉತ್ತರ ಆಫ್ರಿಕಾ, ಸ್ಪೇನ್, ಪೋರ್ಚುಗಲ್ ಮೊದಲಾದ ದೇಶಭಾಷೆಗಳಿಗೆ ಪರಿವರ್ತನ ಹೊಂದಿದವು. ಯುರೋಪಿಯ ಲೋಕಕಥಾವಾಙ್ಮಯವೆಂದು ಪ್ರಸಿದ್ಧವಾಗಿರುವ ಸಾಹಿತ್ಯವು ಪ್ರಾಚೀನ ಭಾರತೀಯ ಕಥೆಗಳ ರೂಪಾಂತರವೆಂದು ಹೇಳಬಹುದು. ಯುರೋಪಿಯ ರಾಜನೀತಿಯನ್ನು ಸೂಕ್ಷ್ಮ ದೃಷ್ಟಿಯಿಂದ ಪರೀಕ್ಷಿಸುವವರಿಗೆ ಮೇಲಿನ ಕಥೆಗಳಲ್ಲಿರುವ ಶ್ರೇಷ್ಠ ವ್ಯಾವಹಾರಿಕ ತತ್ವದ ಮೇಲೆ ಆ ರಾಜನೀತಿಯು ಆಧರಿಸಿರುವುದೆಂದು ಮನಗಾಣದಿರಲಾರದು.

—Political Science Quarterly.

## ಈ ಕಾಲದ ತರುಣರು

ಮಿ. ಹೆರಾಲ್ಡ್ ವುಲ್ಫ ಫುಲ್ಲರ್ ಎಂಬ ಒಬ್ಬ ಅಮೇರಿಕನ್ ವಿದ್ವಾಂಸನು ಪಾಶ್ಚಾತ್ಯ ತರುಣರ ಗುಣದೋಷವರ್ಣನೆಯ ಮೇಲೆ ತನ್ನ ವಿಚಾರವನ್ನು ಪ್ರದರ್ಶಿಸಿರುವನು. ಅವರಲ್ಲಿ ಅನೇಕ ಅಂಶಗಳು ನಮ್ಮ ತರುಣರಿಗೂ ಅವಲಂಬಿಸುವಂತಿರುವವು. ಆತನು ಹೇಳಿರುವುದೇನಂದರೆ —' ನಾವು ಮಕ್ಕಳಾಗಿದ್ದಾಗ ನಮ್ಮಲ್ಲಿದ್ದ ಧಾರ್ಮಿಕ ಶ್ರದ್ಧೆಯು ಈಗಿನ ತರುಣರಲ್ಲಿಲ್ಲ. ನಾವು ಭಕ್ತಿಭಾವನೆಯಿಂದ ಚರ್ಚಿಗೆ ಹೋಗುತ್ತಿದ್ದೆವು. ಸಮಾಜಸುಧಾರಣೆಗೆ ಧರ್ಮವು ಅತ್ಯಾವಶ್ಯಕವೆಂಬ ವಿಶ್ವಾಸವಿದ್ದುದರಿಂದ ಧರ್ಮತತ್ವವಿಚಾರದಲ್ಲಿ ಅಶ್ರದ್ಧೆಯನ್ನು ಪ್ರಕಟಿಸುವುದೆಂದರೆ ನಮ್ಮ ಕಾಲದಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಅಪರಾಧವನ್ನೆಸಗಿದಂತಾಗುತ್ತಿತ್ತು. ಎಂದರೆ ನಾಸ್ತಿಕವಾದದಲ್ಲಿ ಅಚಲವಾದ ವಿಶ್ವಾಸವೂ ಮನೋಧೈರ್ಯವೂ ಇಲ್ಲದ ಹೊರತು ಯಾರೂ ಧರ್ಮವಿರುದ್ಧವಾಗಿ ಉಸಿರೆತ್ತುತ್ತಿರಲಿಲ್ಲ. ಇಂದು ಆ ಧಾರ್ಮಿಕ ಶ್ರದ್ಧೆಯು ಶಿಥಿಲವಾಗಿರುವುದರಿಂದ, ಹೊಣೆಯನ್ನರಿಯದ ತರುಣರು ಧರ್ಮವಿರುದ್ಧವಾಗಿ ಬಾಯಿಗೆ ಬಂದಂತೆ ಮಾತಾಡುತ್ತಿರುವರು. ಅವರನ್ನು ತೀವ್ರವಾಗಿ ಯಾರೂ ವಿರೋಧಿಸುವುದಿಲ್ಲ. ಅದಕ್ಕೆ ಬದಲಾಗಿ ಅನೇಕರು ಅವರ ವಿಚಾರಗಳನ್ನು ಕೇಳಿ ಆಶ್ಚರ್ಯದಿಂದ ಬಾಯಿಮೇಲೆ ಬೆರಳಿಟ್ಟುಕೊಳ್ಳುವರು. ನಮ್ಮ ಕಾಲದಲ್ಲಿ ಹುಡುಗ ಹುಡುಗಿಯರ ಲಗ್ನವು ಬೇಗ ಆಗುತ್ತಿತ್ತು. ಈಗಿನ ಜೀವನ ಕ್ರಮವೇ ಬೇರೆಯಾಗಿರುವುದರಿಂದ ಮದುವೆಯು ಕೂಡ ಒಂದು ಆರ್ಥಿಕ ವಿಷಯವಾಗಿದೆ. ಈಗಿನ ತರುಣನು ಲಗ್ನವಿಚಾರವನ್ನು ಸಾಮಾಜಿಕ ಮತ್ತು ಧಾರ್ಮಿಕ ಕರ್ತವ್ಯವೆಂಬ

CC-0. Jangamwadi Math Collection. Digitized by eGangotri

ದೃಷ್ಟಿಯಿಂದ ಮಾಡದೆ, ಕೇವಲ ಆರ್ಥಿಕದೃಷ್ಟಿಯಿಂದಲೇ ಮಾಡುವನು. ಈ ಕಾರಣದಿಂದಲೇ ಈಗ ಸಂತತಿನಿಯಮನವೇ ಮುಂತಾದ ಚಳವಳಿಗಳು ಹುಟ್ಟಿರುವವು. ಪೂರ್ವದಲ್ಲಿ ಸಂತತಿನಿಯಮನದ ಕಲ್ಪನೆಯು ಕೂಡ ಇರಲಿಲ್ಲ. ಹುಡುಗಿಯರಿಗೆ ಈಜುವುದು, ಓಡುವುದು ಇವೇ ಮೊದಲಾದವುಗಳ ಗಂಧವೇ ಇರಲಿಲ್ಲ. ಆದರೆ ಈಗಿನ ಹುಡುಗಿಯರು ಅವರಲ್ಲಿ ಅವರು ಶ್ರೇಷ್ಠಸ್ಥಾನವನ್ನು ಪಡೆಯಲೆತ್ನಿಸುತ್ತಿರುವರು. ಈಗಿನ ತರುಣರಿಗೆ ಧರ್ಮ ಮತ್ತೆ ರಾಜಸತ್ತೆಯಲ್ಲಿಯೂ ವಿಶ್ವಾಸವಿಲ್ಲ. ಸೋಸಿಯಾಲಿಜಮ್, ಬೋಲ್ಶೆವಿಜಿಮ್ ಮೊದಲಾದ ಚಳವಳಿಗಳೂ ಈ ಕಾರಣದಿಂದಲೆ ಉಂಟಾಗಿರುವವು. ಈಗಿನ ತರುಣರ ಮನಸ್ಸು ಆದಿಭೌತಿಕದ ಕಡೆ ತಿರುಗಿರುವುದು. ಷೇಕ್ಸ್‌ಪಿಯರನು ತನ್ನ ಕಲ್ಪನಾಶಕ್ತಿಯ ಪ್ರಭಾವದಿಂದ ವನಸವಸೃಷ್ಟಿಯಲ್ಲಿ ವಿಹರಿಸಿದನು. ಆದರೆ ಇಂದಿನ ಹಿಂಡನ್‌ಬರ್ಗನು ಆದಿಭೌತಿಕಶಕ್ತಿಯಿಂದ ಜಗತ್ತನ್ನ ಅಲ್ಲಾಡಿಸಲು ಪ್ರಯತ್ನಿಸುತ್ತಿರುವನು. ಇದರಿಂದ ಆದಿಭೌತಿಕ ಆಕರ್ಷಣಶಕ್ತಿಯು ಇಂದಿನ ಜಗತ್ತಿನ ಮೇಲೆ ಎಷ್ಟು ಬಲವಾಗಿದೆಯೆಂಬುದು ವ್ಯಕ್ತವಾಗುವುದು '

— North American review

## ಪ್ರತಿಭಾಶಾಲಿಗಳಾದ ಪುರುಷರ ಜೀವನ

ಪ್ರತಿಭಾಶಾಲಿಗಳಾದ ಪುರುಷರ ಜೀವನವು ಎಷ್ಟು ಸಂಕಟಮಯವಾಗಿಯೂ ಕಠಿಣವಾಗಿಯೂ ಧಕ್ಕೆಗಳನ್ನೆದುರಿಸಬೇಕಾಗಿಯೂ ಇರುವುದೆಂಬುದರ ಕಲ್ಪನೆಯು ಅನೇಕರಿಗೆ ಇರುವುದಿಲ್ಲ. ಅವರಿಗೆ ಆಗುವ ಯಾತನೆಗಳು ಯಮಯಾತನೆಗಿಂತಲೂ ದಾರುಣವಾಗಿರುವವು. ರೋಗ, ಶೋಕ ಇತ್ಯಾದಿಗಳ ಪೀಡನೆಯನ್ನು ಅವರು ಅಷ್ಟು ಲಕ್ಷಿಸುವುದಿಲ್ಲ. ಆದರೆ ಅವರ ಸ್ವಂತ ವಿಚಾರಗಳೇ ಅವರನ್ನು ತಿನ್ನುವಂತಿರುವವು. ಸಾಮಾನ್ಯ ಮನುಷ್ಯರೇ ಅಧಿಕ ಸುಖಿಗಳೆಂದು ಅವರು ಭಾವಿಸುವರು. ಕೌಂಟ್ ಟಾಲ್‌ಸ್ಟಾಯ್ ಅಥವಾ ಮಹಾತ್ಮಾ ಗಾಂಧಿಯವರ ಹೆಸರನ್ನುಚ್ಚರಿಸಿದ ಕೂಡಲೆ ಶಾಂತವೂ, ಗಂಭೀರವೂ, ನಿರ್ವಿಕಾರವೂ ಆದ ಮೂರ್ತಿಯು ನಮ್ಮ ಕಣ್ಣೆದುರಿಗೆ ನಿಲ್ಲುವುದು. ಆದರೆ ಅದು ಭ್ರಮೆ. ಅಂತಃಕರಣದಲ್ಲಿ ಪ್ರಬಲವಾದ ಭಾವನೆಗಳ ದಂಗೆಯೇಳುವುದು! ಮತ್ತು ಬಲವಾದ ಇಂದ್ರಿಯಗಳ ವೇಗವು ಅಸಹನೀಯವಾಗುವುದು–ಇಂತಹ ಸ್ಥಿತಿಯಲ್ಲಿ ಆ ಮಹಾತ್ಮರು ಅನುಭವಿಸುವ ಕ್ಲೇಶಗಳನ್ನು ಯಾರು ವರ್ಣಿಸಬೇಕು? ಈ ಬಗೆಯ ಪ್ರಶಾಂತಿಯು ಯಾವನಾದರೊಬ್ಬ ವಿಶಿಷ್ಟ ವ್ಯಕ್ತಿಯ ಪ್ರತಿಭಾವಂತನಲ್ಲಿ ಮಾತ್ರ ಇರುವುದೆಂದಲ್ಲ. ಸಾಮಾನ್ಯವಾಗಿ ನಿಜವಾದ ಕವಿ, ಯೋಧ, ರಾಜನೀತಿಜ್ಞರು, ತತ್ವಜ್ಞರು ಇವರೇ ಮೊದಲಾದವರ ಸ್ಥಿತಿಯು ಈ ಬಗೆಯದಾಗಿರುವುದು. ಮಹಾ ಕವಿಯೆನಿಸಿದ ಷೇಕ್ಸ್‌ಪಿಯರನ ಜೀವನವೆಲ್ಲ ಅಶಾಂತಿಯೊಂದಿಗೆ ಹೋರಾಡುವುದರಲ್ಲಿ ಕಳೆಯಿತು. ರೂಸೋ ಎಂಬಾತನು ತನ್ನ ದುರಾಚರಣೆಯ ವಿಚಾರಗಳನ್ನು ತಾನೇ ಬರೆದಿಟ್ಟಿರುವನು. ಗೆಟಿಯ ಜೀವನವು ಇದೇ ರೀತಿ ಅಶಾಂತಿಮಯವಾಗಿತ್ತು. ಪ್ರಾಚೀನ ಗ್ರಂಥಗಳಲ್ಲಿ ಕೂಡ ನಳಯುಧಿಷ್ಠಿರಂತಹ ದ್ಯೂತ ವ್ಯಸನಗಳಲ್ಲಿ ಮಗ್ನರಾಗಿದ್ದ ಪುರುಷರು ಪುಣ್ಯಶ್ಲೋಕ ಪದವಿಗೆ ಏರಿರುವುದು ಕಂಡುಬರುವುದು. ಭಗವಾನ್ ಶ್ರೀಕೃಷ್ಣನು ಕುಟಿಲ ನೀತಿಯಲ್ಲಿ ಪ್ರಸಿದ್ಧನಾಗಿರುವನು. ಆದರೆ ಆತನು ಇಂದು ಜಗದ್ವಂದ್ಯನಾಗಿರುವನು. ಇದಕ್ಕೆ ಕಾರಣವೇನೆಂದರೆ ಪ್ರತಿಭಾಶಾಲಿಗಳಾದ ಮನುಷ್ಯರು ತಮ್ಮ ಧ್ಯೇಯಸೃಷ್ಟಿಯಲ್ಲಿ ಯಾವಾಗಲೂ ವಿಹರಿಸುತ್ತಿರುವರು. ಮತ್ತೆ ದೊಡ್ಡ ದೊಡ್ಡ ವಿಚಾರಗಳು ಅವರ ಮನಸ್ಸನ್ನಾವರಿಸಿರುವವು. ಸಾಮಾನ್ಯ ಜಗತ್ತಿನ ವಿಚಾರವಾಗಿ ಅವರು ಉದಾಸೀನರಾಗಿರುವರು. ಆದರೆ ಅವರ ಜೀವನಯಾತ್ರೆಯು ಸುಸೂತ್ರವಾಗಿ ನಡೆಯಬೇಕಾಗಿರುವುದರಿಂದ, ಅವರು ಆ ಔದಾಸೀನ್ಯದಿಂದ ಆಗಾಗ್ಗೆ ಧಕ್ಕೆಹೊಂದುತ್ತಿರುವರು. ಆದುದರಿಂದ ಪ್ರತಿಭಾಶಾಲಿಗಳಾದ ಮನುಷ್ಯರ ಜೀವನವು ದುಃಖಮಯವಾಗಿರುವುದು.

—ಸುಧಾ ( ಹಿಂದಿ )

## ಸ್ತ್ರೀಯರೂ ರಂಗಭೂಮಿಯೂ

ಇತ್ತೀಚೆಗೆ ಕುಲೀನ ಸ್ತ್ರೀಯರು ರಂಗಭೂಮಿಯ ಮೇಲೆ ಕೆಲಸ ಮಾಡಬೇಕೊ ಬೇಡವೊ ಎಂಬ ಸಮಸ್ಯೆಗೆ ವಿಶೇಷ ಮಹತ್ವವು ಬಂದಿದೆ. ನಮ್ಮ ಸಮಾಜದಲ್ಲಿ ಸ್ತ್ರೀಪುರುಷರ ಸಾಮಾಜಿಕ ಸಂಬಂಧವು ಪಾಶ್ಚಾತ್ಯ ಸಮಾಜದಿಂದ ಪ್ರತ್ಯೇಕವಾಗಿರುವುದರಿಂದ ನಮ್ಮ ಸಮಾಜ ಪದ್ಧತಿಯು ಬದಲಾಗದ ವಿನಾ ನಮ್ಮ ಕುಲೀನ ಸ್ತ್ರೀಯರು ರಂಗಭೂಮಿಯ 'ಮೇಲೆ ಕೆಲಸಮಾಡುವುದಕ್ಕೆ ಬರಲಾಗದು. ಪಾಶ್ಚಾತ್ಯರಲ್ಲಿ ಕುಲೀನಮತ್ತು ಅಕುಲೀನ ಎಂಬ

CC-0. Jangamwadi Math Collection. Digitized by eGangotri

ಎರಡು ವರ್ಗಗಳಲ್ಲದೇ, ಅನ್‌ಕನ್ವೆಂಶನಲ್ ಎಂದರೆ ಶಿಷ್ಟಾಚಾರದಿಂದ ಬದ್ಧರಾಗದ ಸ್ತ್ರೀಯರು ಎಂಬ ಮೂರನೆಯ ವರ್ಗದವರೂ ಇರುವರು. ಆ ವರ್ಗದಲ್ಲಿ ಕೆಲಜನ ಸ್ತ್ರೀಯರು ಕುಲೀನಸ್ತ್ರೀಯರ ಸಹವಾಸದಲ್ಲಿದ್ದು ಸದಾಚರಣೆಯಲ್ಲಿ ಆಯುಷ್ಯವನ್ನು ಸವೆಸುವರು. ಅಂಥವರು ಅರ್ಧ-ಕುಲೀನರೆನ್ನಿಸಿಕೊಳ್ಳುವರು. ಮೂರನೆಯ ವರ್ಗದಲ್ಲಿ ಸ್ವೈರಿಣಿಯರಾಗಿರುವವರು ಅಸಭ್ಯಸ್ತ್ರೀಯರೊಂದಿಗೆ ಸೇರಿ ಹೀನವೃತ್ತಿಯನ್ನು ಕೈಕೊಳ್ಳುವರು. ಅವರು ಅರ್ಧ-ಅಕುಲೀನರೆನಿಸುವರು. ಈ ಬಗೆಯಾಗಿ ಕುಲೀನ, ಅರ್ಧ-ಕುಲೀನ, ಅರ್ಧ-ಅಕುಲೀನ, ಅಕುಲಿನ-ಎಂಬ ನಾಲ್ಕು ಭೇದಗಳು ಪಾಶ್ಚಾತ್ಯಸ್ತ್ರೀಸಮಾಜದಲ್ಲಿರುವವು. ಇವರಲ್ಲಿ ಮೊದಲನೆಯ ಮೂರು ವರ್ಗದ ಸ್ತ್ರೀಯರು ಸಂತೋಷಕೂಟ, ನರ್ತನೆ ಮೊದಲಾದ ಸಾಮಾಜಿಕ ವಿಚಾರಗಳಲ್ಲಿ ಭಾಗಿಗಳಾಗಬಹುದು. ಶಿಷ್ಟಸಮಾಜದವರೊಂದಿಗೆ ಅವರ ವಿವಾಹವಾಗಬಹುದು. ನಾಲ್ಕನೆಯ ವರ್ಗದವರಾದ (ಅಕುಲೀನ) ಸ್ತ್ರೀಯರು ಸಾಮಾಜಿಕ ದೃಷ್ಟಿಯಿಂದ ಬಹಿಷ್ಕೃತರಾದವರು. ಪಾಶ್ಚಾತ್ಯಸಮಾಜದಲ್ಲಿ ರಂಗಭೂಮಿಯ ಮೇಲೆ ಕೆಲಸ ಮಾಡಲು ಕುಲೀನ ಸ್ತ್ರೀಯರು ಹೋಗುವುದಿಲ್ಲ. ಒಂದುವೇಳೆ ಒಬ್ಬ ಅಭಿನಯೇಚ್ಛುವಾದ ಸ್ತ್ರೀಯು ಧೈರ್ಯದಿಂದ ನಟಿಯ ಕೆಲಸವನ್ನು ಮಾಡಲಾರಂಭಿಸಿದರೆ ರಂಗಭೂಮಿಯಲ್ಲಿರುವ ದೂಷಿತವಾತಾವರಣದ ಪರಿಣಾಮವು ಅವಳ ಮನಸ್ಸಿನ ಮೇಲೆ ಆಗಿ ಅವಳು ಬೇಗ ಅಧಃಪತಿತಳಾಗುವಳು. ಈ ವಿಪತ್ತಿನಿಂದ ದೂರವಾಗಿರಲು ಪಾಶ್ಚಾತ್ಯ ಕುಲೀನ ಸ್ತ್ರೀಯರು ಉಪಜೀವಿಕೆಗಾಗಿ ರಂಗಭೂಮಿಯನ್ನವಲಂಬಿಸದೇ ಬೇರೆ ವೃತ್ತಿಗೆ ಸೇರುವರು. ಸುಧಾರಿತ ದೇಶದ ಈ ಪರಿಸ್ಥಿತಿಯನ್ನು ಚೆನ್ನಾಗಿ ಪರಿಶೀಲಿಸಿ, ನಂತರ ನಮ್ಮ ಸುಧಾರಕರು ರಂಗಭೂಮಿಯ ಮೇಲೆ ಸ್ತ್ರೀಯರು ಒರಬೇಕೊ ಬೇಡವೊ ಎಂಬುದನ್ನು ನಿಶ್ಚಯಿಸಬೇಕು. ಏಕೆಂದರೆ ಈ ಸುಧಾರಣೆಯನ್ನು ಆಚರಣೆಗೆ ತರುವುದು ಕಲ್ಯಾಣಪ್ರದವಾಗಿದೆಯೊ ಇಲ್ಲವೊ ಎಂಬುದನ್ನು ಮೊದಲು ಚೆನ್ನಾಗಿ ಯೋಚಿಸಿ, ನಿರ್ಧರಿಸಬೇಕಾಗಿದೆ.

—ಪ್ರವರ್ತಕ (ಬಂಗಾಳಿ)

## ಪ್ರಾಚೀನ ವಿವಾಹದ ಕೆಲವು ವಿಚಿತ್ರ ಕಲ್ಪನೆಗಳು.

(೧) ರೋಮನ್ ನಾಗರಿಕನು ಗುಲಾಮಗಿರಿಯಿಂದ ಬಿಡುಗಡೆ ಹೊಂದಿದ ಸ್ತ್ರೀಯನ್ನಾಗಲೀ—ಅಥವಾ ರೋಮದ ನಾಗರಿಕರಾಗದ ಉಳಿದ ಸ್ತ್ರೀಯನ್ನಾಗಲೀ ಮದುವೆಯಾಗಲು ನಿರ್ಬಂಧವಿತ್ತು. ಆ್ಯಂಟನಿಯು ದಾಸ್ಯದಿಂದ ಬಿಡುಗಡೆ ಹೊಂದಿದವನ ಮಗಳಾದ ಫಲ್ವಿಯಾನನ್ನು ಮದುವೆಯಾದುದಕ್ಕೆ ಸಿಸರೋನ ನಿರ್ಭತ್ಸನೆಗೊಳಗಾದನು. ಮುಂದೆ ಪರಕೀಯಳಾದ ಕ್ಲಿಯೋಪುತ್ರಿಯನ್ನು ಮದುವೆಯಾದುದಕ್ಕೆ ಜನತೆಯ ಜಾಹೀರನಿಂದೆಗೆ ಗುರಿಯಾದನು.

(೨) ವರನು ವಧುವನ್ನು ತನ್ನ ಪೌರುಷದಿಂದಲೇ ಗೆದ್ದು ತರಬೇಕೆಂಬ ತತ್ವದ ಕುರುಹು ಪ್ರಾಚೀನ ಗ್ರೀಕರ ವಿವಾಹವಿಧಿಯಲ್ಲಿ ಬಹುಕಾಲದವರೆಗಿತ್ತು. ವಿವಾಹ ಸಮಯದಲ್ಲಿ ವಧುವರರು ವಿಶಿಷ್ಟವಾದ ಝುರಿಯಲ್ಲಿ ಬಳಕನಾಡಿ ಸ್ತುತಿ-ಗೀತಗಳೊಡನೆ ದೇವಾಲಯಕ್ಕೆ ಹೋಗುವರು. ಅಲ್ಲಿ ಪೂಜೆ-ಬಲಿದಾನಗಳಾದಮೇಲೆ ವಧುವನ್ನು ಅವಳ ನೂತನಗೃಹಕ್ಕೆ ಎತ್ತು-ಇಲ್ಲವೇ ಹೇಸರುಗತ್ತೆಗಳ ಬಂಡಿಯಲ್ಲಿ ತಂದು ಮುಟ್ಟಿಸುವ ಸಂಪ್ರದಾಯವಿತ್ತು.

(೩) ಚೀನ ಜನರಿಗೆ ವಿವಾಹವು ಅದೊಂದು ವಿಧಿವಿಲಸಿತವೇ ಆಗಿರುವದು. ವಿವಾಹದ ಪೂರ್ವದಲ್ಲಿ ಕುಟುಂಬದ ಜನರೆಲ್ಲರೂ ಮೂರುದಿನಗಳವರೆಗೆ ಸೂತಕವನ್ನಾಚರಿಸುವರು. ಆ ದಿನಗಳಲ್ಲಿ ಸೊಗಸಿನ ಆಟಪಾಟಗಳಿಂದ ಎಲ್ಲರೂ ದೂರವಾಗಿರುವರು. ಚೀನ ಜನರು ತಮ್ಮ ಮಕ್ಕಳ (ಹೆಣ್ಣೇ ಆಗಲಿ—ಗಂಡೇ ಆಗಲಿ) ಮದುವೆಯೆಂದರೆ ಅದೊಂದು ತಮ್ಮ ಮರಣದ **ಮೊದಲು ಸೂಚನೆ**ಯೆಂದು ಭಾವಿಸುವರು. ಈ ಭಾವನೆಯಿಂದಲೇ ಅವರು ವಿವಾಹದ ಪೂರ್ವದಲ್ಲಿ ಅಮಂಗಲವಾದ ಸೂತಕವನ್ನಾಚರಿಸುವರು.

(೪) ಅಬ್ರಾಹಿಮ್‌ನ ಅನುಯಾಯಿಗಳಾದ ಹೆಬ್ರೂ ಜನರಲ್ಲಿ ವಧುವನ್ನು ಕೊಂಡುಕೊಳ್ಳುವ ಪರಿಪಾಠವಿತ್ತು. ಹೀಗೆ ಕೊಂಡುಕೊಳ್ಳಲು ಹಣವಿಲ್ಲದ ಬಡವನು ವಧುವಿನಮನೆಯಲ್ಲಿ ಸೇವೆಗೆ-ಜೀತದ ಆಳಾಗಿನಿಂದಿರಬೇಕು. ಹನ್ನೆರಡು ವರುಷದೊಳಗಿನ ಹುಡುಗ-ಹುಡಿಗೆಯರೂ ಕೂಡ ಲಗ್ನವಾಗುತ್ತಿದ್ದರು. ಮದುವೆಯಾದ ಮೇಲೆ ದೀವಟಿಗೆಗಳ ಬೆಳಕಿನಲ್ಲಿ ಗೀತ-ವಾದ್ಯಗಳೊಡನೆ ವಧು-ವರರ ಮೆರವಣಿಗೆಯು ಹೊರಡುವದು. ಮಾರ್ಗದಲ್ಲಿ ಎಲ್ಲರೂ ಅದಕ್ಕೆ ಹಾದಿಬಿಟ್ಟುಕೊಡಬೇಕು.

— 'Reason'

CC-0. Jangamwadi Math Collection. Digitized by eGangotri

# ಪ್ರಾಯೋಪವೇಶನವ್ರತದ ಪರಿಸಮಾಪ್ತಿಯೂ ತದನಂತರವೂ

ಲೇಖಕ:— ಸಂಪಾದಕ.

"ಈ ನಾಟಕವು ಅದ್ಭುತರಮ್ಯವಾದುದು. ಇದರ ರಂಗಭೂಮಿಯು ಪುಣೆ–ಸಿಮ್ಲಗಳಿಂದ ಲಂಡನ್ನಿನವರೆಗೆ ಹಬ್ಬಿದೆ. ಇದರಲ್ಲಿ ಪಾತ್ರಗಳನ್ನು ವಹಿಸಿದವರು ಭರತ ಖಂಡದ ಬಹುಸಂಖ್ಯಾಕರೂ ಇಂಗ್ಲಿಷ ರಾಜ್ಯಸೂತ್ರಧಾರರೂ ಆಗಿದ್ದಾರೆ. ಇದರ ನಾಯಕ ಮೂಳೆಗಳ ಒಂದು ಮೊಟ್ಟೆ." ಈ ಮೊದಲಾದ ಶಬ್ದಗಳಲ್ಲಿ ಬ್ರಿಟಿಶ್ ಉದಾರ ಮತವಾದಿಯಾದ 'ನ್ಯೂಜ್ ಕ್ರಾನಿಕಲ್' ಎಂಬ ಪತ್ರಿಕೆಯು ಮಹಾತ್ಮರ ಪ್ರಾಯೋಪವೇಶನ ವ್ರತವನ್ನು ಕುರಿತು ಬರೆದುದು ಯಥಾರ್ಥವಾಗಿದ್ದರೆ, ಜಯಕರ್ನಾಟಕದ ವಾಚಕರು– ಈ ಸಲ ಈ ವಿಷಯವು 'ಕಾಲಚಕ್ರ'ದ ಸ್ಥಾನವನ್ನು ಆಕ್ರಮಿಸಿದುದನ್ನು ಮನ್ನಿಸದಿರಲಾರರೆಂದು ನಮ್ಮ ನಂಬಿಗೆಯಿದೆ.

ಇಂತಹ ನಾಟಕದ(ಚಿರಪರಿಚಿತವಾಗಿ ಬಿಟ್ಟ) ಸುರಮ್ಯ ರೋಮಹರ್ಷಕ ಪ್ರಸಂಗಗಳನ್ನು ಒಂದೊಂದಾಗಿ ವಿವರಿಸುವ ಬದಲು, ಒಟ್ಟಾರೆ ಈ ವ್ರತದ ಬಗೆಗೆ ತಿರುತಿರುಗಿ ಬರುವ ಕೆಲ ವಿಚಾರಗಳನ್ನು ಹೊರಗೆಡಹುವುದು ಅಪ್ರಸ್ತುತವಾಗಲಾರದೆಂದು ನಂಬಿದ್ದೇವೆ.

ಇದೀಗ ಎಲ್ಲವೂ ಪರಿಣಾಮರಮಣೀಯವೇನೋ ಆಗಿದೆ. ಆದರೆ ನಮ್ಮ ಭಾವನೆಗಳನ್ನು ಅತ್ಯಂತವಾಗಿ ಉದ್ರೇಕಗೊಳಿಸುವ – ಉತ್ತೇಜನಗೊಳಿಸುವ ಸಂದರ್ಭಗಳು ಒದಗಿದಾಗ ಮಾತ್ರ ನಮಗೆ ನಮ್ಮ ಜವಾಬ್ದಾರಿಕೆಯ ಅರಿವುಂಟಾಗಿ, ನಾವು ಕಾರ್ಯಪ್ರವೃತ್ತರಾಗುವುದುಂಟು; ಉಳಿದ ಹೊತ್ತಿನಲ್ಲಿ ಮತ್ತೆ ಜಾಡ್ಯದ ಮುಸುಕನ್ನು ಹೊತ್ತುಕೊಂಡು ಬಿದ್ದುಕೊಳ್ಳುವುದುಂಟು; ಗಾಂಧಿಯವರು – ಕ್ಷಣಿಕವಾಗಿ ನಾವು ಕಾರ್ಯತತ್ಪರರಾಗಬೇಕೆಂದು ಅಂತೂ ಉಪವಾಸವನ್ನು ಖಂಡಿತವಾಗಿ ಅಂಗೀಕರಿಸಲಿಲ್ಲ. ಅವರು ನಮ್ಮ ವಿಕಾರಗಳನ್ನಲ್ಲ– ವಿಚಾರಗಳನ್ನು ಎಚ್ಚರಿಸಲು ಎಬ್ಬಿಸಲು ವ್ರತವನ್ನು ಕೈಕೊಂಡರೆಂದು ನಮ್ಮ ಮನಸ್ಸು ಹೇಳುತ್ತಿದೆ.

ಇದೀಗ ಎಲ್ಲವೂ ಸರಿ: ಆದರೆ ಆಗ? ಒಂದು ವಾರದ ಹಿಂದೆ? ಏನಾಗುವುದೋ ಎಂತಾಗುವದೋ ಎಂದು ನಮ್ಮ ರಾಷ್ಟ್ರದ ಜೀವಾತ್ಮವೇ ತಳಮಳಿಸುತ್ತಿದ್ದಿತು. 'ಗಾಂಧಿಯವರನ್ನು ಉಳಿಸಬಲ್ಲೆವೊ? ಎಂದೂ ಹೊಂದಿಕೊಳ್ಳದ ನಮ್ಮ ರಾಜಕೀಯ ಮತಪತಿಗಳು ಒಂದಾಗುವರೊ? ಸರಕಾರವು ಒಮ್ಮೆ ಕೊಟ್ಟ ನಿರ್ಣಯವನ್ನು ಹಿಂದಕ್ಕೆ ತೆಗೆದುಕೊಳ್ಳಬಹುದೊ?' ಎಂದು ನಮ್ಮೆಲ್ಲರ ಅಂತಃಕರಣವು ಗದ್ಗದವಾಗಿ ಕೇಳಿಕೊಳ್ಳುತ್ತಿದ್ದಿತು. ಮತ್ತು ನಮ್ಮ ಕಾತರಭಾವವೇ ಮಾರ್ನುಡಿಗುಡುತ್ತಿದ್ದಿತು.

ವಿಧಿಯನ್ನು ಯಾರು ಬಲ್ಲವರಾಗಿದ್ದರು? ಅದನ್ನು ಹೊರಳಿಸುವುದು ನಮ್ಮ ಕೈಯ್ಯಲ್ಲಿದ್ದಿತೇ? ನಮ್ಮ ಪಕ್ಷ ವಿಪಕ್ಷಗಳು ಒಮ್ಮಾತಿಗೆ ಬರುವುದು ದೊಡ್ಡ ದೊಡ್ಡ ಮುಖಂಡರ ಕೈಯಲ್ಲಿ. ಮುಖ್ಯ ಪ್ರಧಾನರ ಮತ್ತು

## ಕನ್ನಡಿಗರಿಗೆ ಮಹಾತ್ಮರ ಸಂದೇಶ.

ಬೆಂಗಳೂರು ದಂಡಿನ ಕಾಂಗ್ರೆಸ್ ಕಾರ್ಯದರ್ಶಿಗಳಾದ ಭೀಮರಾಯರಿಗೆ ಮಹಾತ್ಮರು ಈ ರೀತಿ ಉತ್ತರವನ್ನು ಬರೆದು ಕಳಿಸಿದರು:—

ಪ್ರಿಯ ಭೀಮರಾಯರೇ,

ನಿಮ್ಮ ಪ್ರೀತಿಪೂರ್ವಕವಾದ ತಂತಿಯು ಮುಟ್ಟಿತು. ಭಗವಂತನ ಹೆಸರಿನಲ್ಲಿ ಮತ್ತು ಪ್ರೇರಣೆಯಿಂದ ಉಪವಾಸವು ಕೈಕೊಳ್ಳಲಾಗಿದೆ. ಅದನ್ನು ಈಗ ತಡೆಗಟ್ಟುವುದು ಸರಿಯಲ್ಲ. ಹಾಗೆ ತಡೆಯುವುದು ಹೇಡಿತನ. ಭಗವಂತನ ಕೃಪೆಯಿಂದ ನನಗೆ ಸಾಮರ್ಥ್ಯವುಂಟಾಗುವುದು. **ಆತನ** ಅನುಜ್ಞೆಯಿಲ್ಲದೆ ಯಾರೂ ಜೀವಿಸಲರಿಯರು. ಜೀವಿಸುವುದರಿಂದ ಇನ್ನೂ ಹೆಚ್ಚು ಪ್ರಯೋಜನವುಂಟೆಂದು **ಆತನ** ಇಷ್ಟವಿರುವುದಾದರೆ ಅದನ್ನು ಹೇಗೆ ವಿನಿಯೋಗಿಸಬೇಕೆಂಬುದು **ಆತನಿಗೆ** ಗೊತ್ತಿರದೆ ಇರಲಾರದು.

ತಮ್ಮ ವಿಶ್ವಾಸಪಾತ್ರ

(ಅಂಕಿತ) ಎಂ. ಕೆ. ಗಾಂಧಿ



CC-0. Jangamwadi Math Collection. Digitized by eGangotri

ಭಾರತಮಂತ್ರಿಗಳ ಮೇಲೆ ಪರಿಣಾಮವನ್ನು ಮಾಡು ವುದು ಸಾಧ್ಯವಿದ್ದಿತೇ ? ಅದೂ ದೊಡ್ಡವರಿಗೆ ಒಳಪಟ್ಟ ವಿಷಯ.

ಹಾಗಾದರೆ, ನಾವು ನೀವು - ರಾಜನೀತಿಯ ನೆಲೆ ಯನ್ನರಿಯದ ಸಾಮಾನ್ಯವ್ಯಕ್ತಿಗಳು ಏನೂ ಮಾಡ ಲಾರೆವೇ? ನಾವು ಅಗತಿಕರಾಗಿಯೇ ಕೂಡಬೇಕೇ? ಹಾಗೆನ್ನ ಲಾಗದು. ನಮ್ಮ ನಾಡಿನಲ್ಲಿ ತಿಳಿವಳಿಕೆಯು ರವಷ್ಟಾ ದರೂ ಇದ್ದುದು ನಿಜವಾದರೆ, ನಮ್ಮ ಹಳೆಯ ಹಿರಿಯರು ಸರಿದಾರಿಯನ್ನು ಇನ್ನೂ ಹಿಡಿಯಬಹುದು; ಗಾಂಧಿಯ ವರ ಜೀವವು ಇನ್ನೂ ಉಳಿಯಲು ಸಾಧ್ಯವು....ಆದರೆ.... ಹಳಬರು ಹೊಸ ಬಾಳುವೆಯ ಬೆಳಕನ್ನು ಕಂಡಕೊಳ್ಳಲಿಕ್ಕೆ ಕಣ್ಣಿಲ್ಲದವರಾಗಿದ್ದಾರೆ?........

ಹಾಗೆ ಆಗಿದ್ದರೆ, ಗಾಂಧಿಯವರನ್ನು ಕಳೆದುಕೊಳ್ಳು ತ್ತಿದ್ದೆವು. ಆದರೆ ನಮ್ಮ ನಿಮ್ಮ - ಸಾರ್ವಸಾಮಾನ್ಯ ವ್ಯಕ್ತಿಗಳ ಕಾರ್ಯಕ್ಕೆ ಮಾತ್ರ ಸಾಕಷ್ಟು ಅವಕಾಶವಿರು ತ್ತಿತ್ತು. ( ಈಗಲೂ ಇದೆ. ) ನಾವು ನೀವು ( ಗಾಂಧಿಯ ವರಿಗೆ - ಹೊಲೆತನವು ನಮ್ಮ ಸಂಸ್ಕೃತಿಗೇ ಕಲಂಕವನ್ನು ತರುವುದೆಂದು ಎನಿಸುವಂತೆ, ನಮಗೂ ನಿಮಗೂ ಎನಿಸು ತ್ತಿದ್ದರೆ ) ನಮ್ಮ ಸುತ್ತುಮುತ್ತಲಿನ ಪ್ರದೇಶದಲ್ಲಿ ಸಾಕಷ್ಟು ಕೆಲಸವನ್ನು ಮಾಡಬಹುದಾಗಿದ್ದಿತು. ಈಗಲೂ ಮಾಡಬಲ್ಲೆವು.

ನಮ್ಮ ರಾಷ್ಟ್ರಕ್ಕೆ ಇನ್ನೂ ಆತ್ಮಪ್ರಜ್ಞೆಯಿರುವುದ ರಿಂದಲೇ, ಅದು ವಿಶ್ವಪ್ರಯತ್ನವನ್ನು ಮಾಡಿ ಗಾಂಧಿ ಯವರನ್ನು ಉಳಿಸಿಕೊಂಡಿತು. ಮತ್ತದರಿಂದ, ಹಿಂದೂ ಜನಾಂಗವು ಇನ್ನೂ ಜೀವಂತವಿದೆಯೆಂಬ ಸಂಗತಿಯನ್ನು ಜಗತ್ತಿನ ಜನರಿಗೆ ಮನವರಿಕೆ ಮಾಡಿಕೊಟ್ಟಿತು. ಆದರೂ, ಎಲ್ಲವೂ ಮುಗಿಯಿತೆಂಬ ಕಾಲ್ಪನಿಕ ಸುಖಸ್ವರ್ಗದಲ್ಲಿ ನಮ್ಮನ್ನು ನಾವು ಮರೆತು ಮಲಗಿಕೊಂಡರೆ, ನಮ್ಮಂಥ ಮರುಳರು ನಾವೇ.

ದೇವರು ಗಾಂಧಿಯವರನ್ನು ಒದುಕಿಸಿದನು; ಆತನಲ್ಲಿ ನಮ್ಮ ಅನಂತವಂದನೆಗಳು: ಅಥವಾ ಜನತೆಯ ಹೃದಯ ದಲ್ಲಿ ಹುದಗಿಕೊಂಡ ಜನಾರ್ದನನು, ತನ್ನ ನಿಃಸೀಮ ಸೇವಕನೊಬ್ಬನ ಕೂಗನ್ನು ಲಾಲಿಸಿದನು; ಆ ಜನಾರ್ಧ ನನಿಗೆ ನಮ್ಮ ಅನಂತ ವಂದನೆಗಳು. ಆದರೆ.... ನಮ್ಮ ಯುಗಯುಗಗಳಿಂದ ಬೇರೂರಿಕೊಂಡ ಅನುದಾರ ಅಜ್ಞಾ ನವನ್ನು ಕಿತ್ತೊಗೆಯಲು, ಈ ಅಭಿನವದಧೀಚಿಯ ಆತ್ಮ ದಾನವೊಂದೇ ಹಾದಿಯೇನೋ - ಮತ್ತು ಆ ತ್ಯಾಗದಿಂದ ಹುಟ್ಟಬಹುದಾದ ಹೊಸ ವಜ್ರವೊಂದೇ ಅಸ್ತ್ರವೇನೋ ಎಂದೆನಿಸುವ ಹಾಗಿದ್ದಿತು. ನಮ್ಮ ಸಂಸ್ಕೃತಿಯ ನಾಡಿ ಗಳು ಇನ್ನೂ ಸತ್ತಿಲ್ಲವೆಂಬುದರ ಗುರುತು, ಗಾಂಧಿಯ ವರು ಪ್ರಾಯೋಪವೇಶನವ್ರತವನ್ನು ಆಚರಿಸಿ ಒಂದು ವಾರವಾಗುವುದರಲ್ಲಿಯೇ ತಿಳಿದುಬಂದಿತು

"ದೀಪಾದ್ದೀಪ ಇವೋತ್ಥಿತಃ' ಎಂಬ ಕಾಳಿದಾಸನ ಉಕ್ತಿಯಂತೆ ಗಾಂಧಿಯು ತನ್ನ ಯಜ್ಞದಿಂದ ನಮ್ಮ ಜೀವಜ್ಯೋತಿಗಳನ್ನು ಹೊತ್ತಿಸಿದ್ದಾನೆ. ಈ ಯಜ್ಞವು- ಹಳಬರು ಲಾಲಿಸಲಿ, ಲಾಲಿಸದಿರಲಿ - ನಮ್ಮ ಹೊಸಬರ ಅಂತರಂಗದಲ್ಲಿ ಅಖಂಡವಾಗಿ ಸಾಗಿಯೇ ತೀರುವುದು. ನಾವು ನಮ್ಮನ್ನಷ್ಟೇ ಸುಟ್ಟುಕೊಳ್ಳುವುದಲ್ಲದೆ, ಈ ಪಾವನ ಪಾವಕನಿಂದ ಸುತ್ತಲಿನ ಕೊಳೆಕೊಳೆಚೆಯನ್ನೂ ಬೂದಿ ಮಾಡಲಿರುವೆವು. ನಾವು ಸಿದ್ಧರಿರಲಿ, ಇರದಿರಲಿ - ಈ ಪಾವಕನು ನಮ್ಮ ಹಿರಿನಾಡಿನ ಅಗಲವನ್ನೆಲ್ಲ ತನ್ನ ಯಜ್ಞ ಕುಂಡವನ್ನಾಗಿ ಮಾಡಲಿದ್ದಾನೆ. ಎಂದಮೇಲೆ, ನಾವಾಗಿ- ಪೂರ್ಣ ತಿಳಿವಳಿಕೆಯಿಂದ - ಈ ಸವಯಜ್ಞದ ಯಜಮಾನ ರೇಕಾಗಬಾರದು ? ನಮ್ಮ ನಮ್ಮ ಮನಸ್ಸಿನೊಳಗಿನ ಹೊಲೆತನದ ಪೂರ್ಣಾಹುತಿಯನ್ನು ಈ ಇಡಿ ಬೆಂಕಿಯಲ್ಲಿ ಆತ್ಮಸಂತೋಷದಿಂದ ಏಕೆ ಹಾಕಬಾರದು ?

'ಬೋಧಿವೃಕ್ಷದ ಕೆಳಗಿನ ಬುದ್ಧನಂತೆ, ಮಾವಿನ ಮರದ ಕೆಳಗಿನ ಈ ಮಹಾತ್ಮ' ನನ್ನೂ ನಾವು ನಮ್ಮ ಮನಸ್ಸಿನ ಮನೆಯಲ್ಲಿ ಕರೆದುಕೊಳ್ಳಲಾರೆವೋ ? ರವೀಂ ದ್ರರ ಹೇಳಿಕೆಯಂತೆ - ಈತನೊಬ್ಬ ದೈವಿಕಪುರುಷನೆಂದು, ವರ್ಷಕ್ಕೊಮ್ಮೆ ಸಪ್ಟಂಬರ ೨೦ನೆಯ ದಿನ ಉಪವಾಸ ವನ್ನು ಮಾಡುತ್ತ, ನಮ್ಮ ವ್ರತವೈಕಲ್ಯಗಳ ಮೊಟ್ಟೆಗೆ ಇನ್ನೊಂದು ಕಟ್ಟಿಗೆಯ ತುಂಡನ್ನು ಕೂಡಿಸುವೆವೋ- ಅಥವಾ ನಮ್ಮ ಪ್ರತಿನಿತ್ಯದ - ಪ್ರತಿನಿಮಿಷದ ಆಚರಣೆ ಯಲ್ಲಿ ಅಸ್ಪೃಶ್ಯತಾ ಬಹಿಷ್ಕಾರದ ನಿರ್ಧಾರವು ಪ್ರತಿ ಬಿಂಬಿತವಾಗುವಂತೆ, ಈಗ - ಈ ನಿಮಿಷ ಎದ್ದೇಳುವೆವೋ ? ಮಹಾಕಾಲನೇ ಪಡಿನುಡಿಗೊಡಲಿ !

CC-0. Jangamwadi Math Collection. Digitized by eGangotri

# ನಮ್ಮ ಮಾತು

## ಜಯಕರ್ನಾಟಕ ಮಂಡಲದ ಕಾರ್ಯಕಲಾಪಗಳು

ನಮ್ಮ ಸಹಸಂಪಾದಕರಾದ ಗೆ. ನರೇಗಲ್ಲ ಪ್ರಲ್ಹಾದಾಚಾರ್ಯರೂ ಪ್ರಕಾಶಕರಾದ ಗೆ. ಕುಲಕರ್ಣಿ ಶೇಷಗಿರಿರಾಯರೂ ಬೆಂಗಳೂರಲ್ಲಿ ನಮ್ಮ ಪತ್ರಿಕೆಯ ಪ್ರಚಾರವನ್ನು ಮಾಡುತ್ತಿರುವರು. ಅವರ ಕಾರ್ಯದಲ್ಲಿ ಅತ್ಯಂತ ಆತ್ಮೀಯಭಾವದಿಂದ ನೆರವಾದ **ಶ್ರೀ. ಎಸ್. ಜಿ. ಶಾಸ್ತ್ರಿಗಳು** (ಮೈಸೂರು ಸೋಪ್ ಫ್ಯಾಕ್ಟರಿಯ ಮೇಲಧಿಕಾರಿಗಳು) **ಶ್ರೀ. ಕೆ. ಎಚ್. ರಾಮಯ್ಯನವರು, ಶ್ರೀ. ಮಾಸ್ತಿ ವೆಂಕಟೇಶ ಐಯ್ಯಂಗಾರ್ಯರು** ಇವರೆಲ್ಲರ ಉಪಕಾರವನ್ನು ಅದೆಷ್ಟು ಸ್ಮರಿಸಿದರೂ ಕಡಿಮೆಯೆ. ಮೈಸೂರಿನ ದಿವಾನರಾದ **ಸರ್. ಮಿರ್ಝಾ ಇಸ್ಮಾಯಿಲ್** ಅವರು ನಮ್ಮ ಪ್ರಕಾಶಕರೊಡನೆ ಆಡಿದ ಮಾತುಗಳು ತೀರ ಆಪ್ತಭಾವದುವು. ಕರ್ನಾಟಕದ ಹಿತವನ್ನು ಬಯಸುವಂಥಹವು. **ಸರ್. ಎಂ. ವಿಶ್ವೇಶ್ವರಯ್ಯನವರು** ಮಂಡಲದ ಗುರುಸರಿಯನ್ನೆಲ್ಲ ಕೇಳಿ ಹಿರಿಯತನದ ಹಂಕೆಯ ಕೈಯ್ಯನ್ನು ನಮ್ಮ ತಲೆಯ ಮೇಲೆ ಹಿಡಿದಿದ್ದಾರೆ. ಮಂಡಲದ ಯಶಸ್ಸನ್ನು ಬಯಸಿದ್ದಾರೆ. ಶ್ರೀ. ಕೆ.ಎಚ್. ರಾಮಯ್ಯ (ಬಾರ್, ಆಟ್ ಲಾ) ಅವರು ಅಲ್ಲಿಯ ಸಹಕಾರ ಸಂಘಗಳ ಮೇಲ್ವಿಚಾರಕರು. ಎಲ್ಲ ಸಹಕಾರೀ ಸಂಘಗಳೂ ಜಯಕರ್ನಾಟಕವನ್ನು ತರಿಸಬಹುದೆಂದು ಅಪ್ಪಣೆ ಕೊಡಿಸಿದುದಕ್ಕಾಗಿ ಮಂಡಲವು ಹೃತ್ಪೂರ್ವಕವಾದ ಅಭಿನಂದನೆಗಳನ್ನವರಿಗೆ ಸಲ್ಲಿಸುತ್ತದೆ. ಮೈಸೂರು ದೇಶದ ಶ್ರೀ. ಚಂದ್ರಮೌಳೀಶ್ವರ ನಾಟಕಮಂಡಲದವರು ಕನ್ನಡದ ಅಭಿಮಾನದಿಂದ ಜಯಕರ್ನಾಟಕ ಮಂಡಲದ ಸಲುವಾಗಿ ಬೆಂಗಳೂರಲ್ಲಿ ಒಂದು ನಾಟಕವನ್ನಾಡಿ ವೆಚ್ಚ ಕಳೆದು ಉಳಿದ ಹಣವನ್ನು ಸಲ್ಲಿಸುವದಕ್ಕಾಗಿ ನಾಟಕ ಮಂಡಲದ ಒಡೆಯರಾದ ಶ್ರೀ. ಮಲ್ಲಪ್ಪನವರಿಗೆ ನಮ್ಮ ಕೃತಜ್ಞತಾಪೂರ್ವಕ ಅಭಿನಂದನೆಗಳು.

ಜ. ಕ. ಮಂಡಲದ ಸದಸ್ಯರಾದ ಗೆ. ಮುಗಳಿಯವರು ಗಜಾನನೋತ್ಸವದ ಸಲುವಾಗಿ ಅಥಣಿಗೆ ಹೋಗಿ ಅಲ್ಲಿ "ಕನ್ನಡದ ನುಣ್ಪು" ಎಂಬ ವಿಷಯವನ್ನು ಕುರಿತು ಉಪನ್ಯಾಸಮಾಡಿ ಬಂದರು. ಅಲ್ಲದೆ ಅಲ್ಲಿಯ ಹೈಸ್ಕೂಲಿನಲ್ಲಿ 'ಆಧುನಿಕ ಕನ್ನಡ ಕವಿತೆ' ಎಂಬ ವಿಚಾರದಲ್ಲಿ ಕೆಲವು ಮಾತುಗಳನ್ನು ಹೇಳಿ ಹೊಸ ಕವಿತೆಗಳನ್ನು ಓದಿ ತೋರಿಸಿದರು.

## ಕೊಪ್ಪಳದ ಗೆಳೆಯರ ಗಜಾನನೋತ್ಸವ.

ಈ ಸಲ ಕೊಪ್ಪಳದಲ್ಲಿ ಗುಂಪಿನವರಿಂದ ಗಜಾನನೋತ್ಸವವನ್ನು ನಡೆಯಿಸಲಾಯಿತು. ಶ್ರೀ. ಶಿವರಾಮಶಾಸ್ತ್ರಿ



ಅವರು ರಚಿಸಿದ ಕತ್ತರಿಯ ಕಲೆಯ ಕಾಗದದ [illegible]

CC-0. Jangamwadi Math Collection. Digitized by eGangotri

ಪವು ಕಣ್ಮನಗಳನ್ನು ಸೆಳೆಯುತ್ತಿದ್ದಿತು. ಉತ್ಸವದ ಕಾರ್ಯಕ್ರಮದಲ್ಲಿ 'ಆಧುನಿಕ ಕನ್ನಡಸಾಹಿತ್ಯಪರಿಚಯ'ವೂ ಒಂದಾಗಿದ್ದಿತು. ಆ ಕಾರ್ಯವು ತುಂಬ ಯಶಸ್ವಿಯಾಗಿ ನೆರವೇರಿತು. ಶ್ರೀ. ಚಾಕ್ಲಬ್ಬಿಯವರು "ತಿರಕರ ಪಿಡುಗು" "ಹಾಳ್ಗಂಡು" "ಯಮನಸೋಲು" ಮೊದಲಾದುವುಗಳನ್ನು ಓದಿತೋರಿಸಿದರು. ಮೊದಲಿನವೆರಡನ್ನು ಓದುತ್ತಿರುವಾಗ ನಕ್ಕುನಕ್ಕು ಶ್ರೋತೃಗಳ ಹೊಟ್ಟೆ ಹುಣ್ಣಾಯಿತು. ಗೆ. ನಾ. ಭಾ. ಶಾಸ್ತ್ರಿ ಅವರು 'ಭೂಮಿತಾಯಿಯ ಚೊಚ್ಚಲುಮಗ' 'ತುತ್ತಿನ ಚೀಲ' ಮೊದಲಾದ ಹೊಸಕವಿತೆಗಳನ್ನು ಪರಿಣಾಮಕಾರಕವಾಗಿ ಅಂದುತೋರಿಸಿದರು. ಉತ್ಸವದ ಕಾಲಕ್ಕೆ ಕೊಪ್ಪಳದಲ್ಲಿ ದೊರೆತ ಐತಿಹಾಸಿಕವಸ್ತುಗಳ ಚಿಕ್ಕ ಪ್ರದರ್ಶನವನ್ನೂ ಜರುಗಿಸಲಾಯಿತು. ಇದೇ ಕಾಲಕ್ಕೆ ಗುರಪಿನ ಇತಿಹಾಸಶಾಖೆಯಾದ 'ನಿಜಾಂಕರ್ನಾಟಕ ಇತಿಹಾಸ ಸಂಶೋಧನ ಸಮಿತಿಯ'ವರ. ಪರಿಶ್ರಮದಿಂದ ಹೈದರಾಬಾದ್ ಆರ್ಕಿಯಾಲಾಜಿಕಲ್ ಡಿಪಾರ್ಟಮೆಂಟಿನವರಿಂದ ಪ್ರಸಿದ್ಧಿಸಲ್ಪಟ್ಟ 'ಗವಿಮಠದ ಹಾಗೂ ಕಣಿಗುಂಡಿನ ಅಶೋಕ ಶಾಸನ' ಎಂಬ ಪುಸ್ತಕವೂ ಬಂದಿದ್ದಿತು. ಇದಲ್ಲದೆ ಬೇರೆ ಪ್ರದರ್ಶಿತವಾದ ನೂರಾಐವತ್ತು ಜಿನಮೂರ್ತಿಗಳಿದ್ದ ೨೧ ಅಡಿ ಉದ್ದ ೧೮ ಅಡಿ ಅಗಲು ಇರುವ ಕರಿಯ ಕಲ್ಲಿನ ಹಲಗೆಯೂ ಪ್ರೇಕ್ಷಣೀಯವಾಗಿತ್ತು. ಇದರಂತೆಯೆ ನಮ್ಮ ನಾಡಿನ ಯಾವ ಹಬ್ಬಗಳೂ ಸಂಸ್ಕೃತಿ ಸಂವರ್ಧಕ ಕಾರ್ಯವನ್ನು ಮುಖ್ಯವಾಗಿಟ್ಟುಕೊಂಡು ನೆರವೇರಿದರೆ ಜನಸಾಮಾನ್ಯಕ್ಕೆ ಅನುಕೂಲವಾಗುವುದು.

## ನಾಡಹಬ್ಬ

ಕನ್ನಡನಾಡಿನ ಮುಖ್ಯಮುಖ್ಯ ಕೇಂದ್ರಗಳಲ್ಲೆಲ್ಲ ಈಸಲ ನವರಾತ್ರಿಯ ಉತ್ಸವವು ನೆರವೇರಲಿರುವುದು ಆನಂದದ ಸಂಗತಿ. ಎಲ್ಲಕಡೆಯ ಉತ್ಸವದ ಕಾರ್ಯಕರ್ತರು ತಮ್ಮಲ್ಲಿ ನಡೆದ ಕಾರ್ಯಕ್ರಮವನ್ನೂ ಉತ್ಸವಕ್ಕೆ ಸಂಬಂಧಿಸಿದ ಚಿತ್ರಗಳನ್ನೂ ಮರೆಯದೆ ನಮ್ಮ ಕಡೆಗೆ ಕಳುಹಿಸಬೇಕಾಗಿ ಪ್ರಾರ್ಥನೆ. ಉತ್ಸವದ ವರದಿಯು ಹೆಚ್ಚು ಉದ್ದವಾಗಿರದೆ ಆದಷ್ಟು ಕಡಿಮೆ ಮಾತುಗಳಿಂದ ಬರೆದುದಾಗಿದ್ದರೆ ಅನುಕೂಲವಾಗುವುದು.

## ಕರ್ನಾಟಕತ್ವದ ಪ್ರಚಾರ

ಪರಪ್ರಾಂತದಲ್ಲಿರುವ ಕನ್ನಡಿಗರಿಗೆ ತಮ್ಮ ಭಾಷೆ ಸಂಸ್ಕೃತಿಗಳನ್ನು ಕಾಯ್ದುಕೊಳ್ಳಬೇಕೆಂಬ ಜಾಗೃತಿಯುಂಟಾದುದು ಅಲ್ಲಲ್ಲಿ ಕಂಡುಬರುತ್ತಿದೆ. ಇದೊಂದು ಒಳ್ಳೆಯ ಲಕ್ಷಣವೆ. ಇದುವರೆಗಿನ ರೀತಿಯನ್ನು ನೋಡಿದರೆ ಪರಪ್ರಾಂತಗಳಲ್ಲಿ ನೆಲಸಿದ ಕನ್ನಡಿಗರು ಸಮ್ಮ ಕನ್ನಡತನವನ್ನು ಮರೆತು ಬಿಟ್ಟುದೇ ಹೆಚ್ಚು. ಈಗ ಬಡೋದೆಯಲ್ಲಿಯೂ ಒಗಲೇವಾಡಿಯಲ್ಲಿಯೂ ಒಂದೊಂದು ಕರ್ನಾಟಕ ಸಂಘಗಳು ಏರ್ಪಟ್ಟಿವೆ. ಬಡೋದೆಯ ಸಂಘಕ್ಕೆ **ಮೇಜರ್ ವಿ. ಜಿ. ಸಾದೇಕಾರ್ ಪವಾರ್** ಇವರು ಅಧ್ಯಕ್ಷರಾಗಿರುವರು. ಕಳೆದ ತಿಂಗಳಲ್ಲಿ ಈ ಸಂಘದ ಸಾಧಾರಣ ಸಭೆಯೊಂದು ಸೇರಿ ಸಭಾದಿಗಳನ್ನು ಜರುಗಿಸಲು ಒಂದು ಪ್ರತ್ಯೇಕ ಸ್ಥಳವಿರಬೇಕೆಂದೂ ಅದು ಕರ್ನಾಟಕಪ್ರಾಂತದಿಂದ ಅಲ್ಲಿಗೆ ಹೋಗುವ ಕನ್ನಡಿಗರಿಗೆ ತಾತ್ಕಾಲಿಕ ಆಶ್ರಯಕ್ಕೆ ಉಪಯೋಗವಾಗಬೇಕೆಂದೂ ಸಂಘಕ್ಕೊಂದು ಕನ್ನಡ ಗ್ರಂಥಾಲಯವಿರಬೇಕೆಂದೂ ನಿರ್ಣಯಗಳಾದುವು. ಈ ಸಂಘದಲ್ಲೀಗ ೩೫ ಜನ ಸದಸ್ಯರಿರುವರು. ಅತ್ತಣಭಾಗದಲ್ಲಿ ಬಡೋದೆಯಿಂದ ನೂರಾರು ಮೈಲು ದೂರವಿದ್ದ ಕನ್ನಡಿಗರೂ ಅಭಿಮಾನದಿಂದ ಈ ಸಂಘದ ಕಾರ್ಯದಲ್ಲಿ ಸಹಕಾರಿಗಳಾಗುತ್ತಿರುವುದು ಪ್ರಶಂಸನೀಯವಾದ ಸಂಗತಿ.

ಒಗಲೆವಾಡಿಯು ಕಾಜಿನ ಕಾರಖಾನೆಯಿಂದ ಸರ್ವಶ್ರುತವಾಗಿದೆ. ಅಲ್ಲಿಯ ಕನ್ನಡಿಗರೆಲ್ಲ ಸೇರಿ ಸುಸಂಘಟಿತ ರೀತಿಯಿಂದ ಕನ್ನಡತನವನ್ನು ಕಾಯ್ದುಕೊಳ್ಳುವ ತವಕದಿಂದ. ಕರ್ನಾಟಕಸಂಘವೊಂದನ್ನು ಸ್ಥಾಪಿಸಿದ್ದಾರೆ. ಶ್ರೀ. ಶ್ರೀಪಾದ ಪರಶುರಾಮ ನಾಗಪುರ ಎಂಬವರು ಸಂಘದ ಕಾರ್ಯದರ್ಶಿಗಳಾಗಿದ್ದಾರೆ. ಇವೆರಡೂ ಸಂಘಗಳೂ ಚಿರಕಾಲ ಬಾಳಿ ಕರ್ನಾಟಕದ ಉನ್ನತಿಯ ಕಾರ್ಯದಲ್ಲಿ ಸಹಭಾಗಿಗಳಾಗಲೆಂದು ನಮ್ಮ ಹಾರಯ್ಕೆ.

## ಸುಖಪ್ರಯಾಣೇಚ್ಛೆ

ಕಳೆದ ವರ್ಷ ಮುಂಬಯಿ ವಿಶ್ವವಿದ್ಯಾಲಯದ ಬಿ. ಎಜಿ. ಪರೀಕ್ಷೆಯಲ್ಲಿ ಪ್ರಥಮಸ್ಥಾನವನ್ನು ಪಡೆದ **ಶ್ರೀ. ಬಿ. ಎಸ್. ಶೇಷಗಿರಿ** ಅವರು ಹೆಚ್ಚಿನ ವಿದ್ಯಾವ್ಯಾಸಂಗಕ್ಕಾಗಿ ಇಂಗ್ಲಂಡಿಗೆ ತೆರಳಲಿರುವರು. ಶ್ರೀ. ಶೇಷಗಿರಿ ಅವರು ವೀರಜಸಂಸ್ಥಾನದ-ಧಾರವಾಡ ಜಿಲ್ಲೆಯಲ್ಲಿರುವ ಲಕ್ಷ್ಮೇಶ್ವರ ಗ್ರಾಮದವರು. ಲಿಂಗಾಯತರು. ಇವರು ಧಾರವಾಡದ ಮುರುಘಾರಾಜೇಂದ್ರ ಶ್ರೀ

CC-0. Jangamwadi Math Collection. Digitized by eGangotri

ಪ್ರೋತ್ಸಾಹಿಸಲ್ಲಿದ್ದು ಲಿಂಗಾಯತ ಫಂಡಿನ ಸಹಾಯು ದಿಂದ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಮಾಡಿದರು. ಪ್ರೀವ್ಹಿಯಸ್ ಪರೀಕ್ಷೆಯಾದೊಡನೆ ಪುಣೆಯ ಒಕ್ಕಲು ತನದ ಕಾಲೇಜು ಸೇರಿ ಅಲ್ಲಿಯ ಇಂಟರ ಪರೀಕ್ಷೆಯಲ್ಲಿ ಮೊದಲನೆಯ ತರಗತಿಯಲ್ಲಿ ಉತ್ತೀರ್ಣರಾದರು. ಮರು ವರುಷವೇ ಬಿ. ಏಜಿ. ಪರೀಕ್ಷೆಯಲ್ಲಿ ಇಡೀ ವಿಶ್ವವಿದ್ಯಾ ಲಯಕ್ಕೆ ಮೊದಲನೆಯ ನಂಬರನ್ನು ಪಡೆದರು. ಇವರ ಪ್ರಗತಿಯನ್ನು ಕಂಡು ಸಿರಸಂಗೀ ದೇಸಾಯಿಯವರ ಫಂಡಿನ ಸಂಚಾಲಕರು ಇವರನ್ನು ಕೆಂಬ್ರಿಜ್ ವಿದ್ಯಾಲ ಯಕ್ಕೆ ಕಳುಹಲಿರುವರು. ಹೆಚ್ಚಿನ ವೆಚ್ಚದ ಭಾರವನ್ನು ಶ್ರೀಯುತರಾದ ಬ್ಯಾಡಗಿಯ ಸಜ್ಜನಸೆಟ್ಟರೂ ಹುಬ್ಬ ಳ್ಳಿಯ ಗುರಪ್ಪಣ್ಣಾ ಒದ್ನಿಯವರೂ ಹೊತ್ತುಕೊಳ್ಳಲು ಒಪ್ಪಿದ್ದಾರೆ. ಈ ಕನ್ನಡ ತರುಣರು ಸುಖಪ್ರಯಾಣ ವನ್ನು ಮಾಡಿ, ವಿದ್ಯೆಯನ್ನು ಸಂಪಾದಿಸಿ, ಕರ್ಣಾಟಕದ ಏಳಿಗೆಯ ಕಾರ್ಯದಲ್ಲಿ ತಮ್ಮ ವಿದ್ಯೆಯ ಉಪಯೋಗ ಮಾಡುವರೆಂದು ನಮ್ಮ ನಂಬುಗೆ.

### ಐ. ಸಿ. ಎಸ್. ಪರೀಕ್ಷೆ ಮತ್ತು ಕನ್ನಡ.

ಐ. ಸಿ. ಎಸ್. ಪರೀಕ್ಷೆಯ ವಿಷಯಗಳಲ್ಲಿ ಹಿಂದು ಸ್ಥಾನದ ಬೇರೆ ಬೇರೆ ಮುಖ್ಯ ದೇಶಭಾಷೆಗಳು ಸೇರಿವೆ. ಆದರೆ ಕನ್ನಡಕ್ಕೆ ಅವುಗಳಲ್ಲಿ ಎಡೆದೊರೆತಿಲ್ಲ. ಇದರ ಸಲು ವಾಗಿ ಶ್ರೀಮಾನ್ ದಿವಾಕರ ರಂಗರಾಯರು ಹಿಂದು ಸ್ಥಾನ ಸರಕಾರಕ್ಕೆ ಬರೆದು ಕೇಳಿದ್ದರು. ಅಲ್ಲದೆ ಮೈಸೂರ ವಿಶ್ವವಿದ್ಯಾಲಯದವರೂ ಒಂದು ವಿಜ್ಞಾಪನಾಪತ್ರಿಕೆಯ ನ್ನು ಬರೆದುಕೊಂಡಿದ್ದರು. ಅದಕ್ಕೆ ಹಿಂದುಸ್ಥಾನ ಸರಕಾ ರದವರು ಬರೆದ ಉತ್ತರದ ಸಾರಾಂಶವೇನೆಂದರೆ:–'ಈಗಾ ಗಲೆ ದೇಶಭಾಷೆಗಳು ಬಹಳವಾಗಿ ಬಿಟ್ಟಿವೆ. ಹೊಸದಾಗಿ ಸೇರಿಸಿದ ಭಾಷೆಗಳಲ್ಲಿ ಪರೀಕ್ಷೆ ತೆಗೆದುಕೊಳ್ಳುವುದೇ ಕಷ್ಟ ವಾಗಿದೆ. ವ್ಯರ್ಥವಾಗಿ ಹಣವನ್ನು ವೆಚ್ಚಮಾಡಬೇಕಾ ಗುತ್ತದೆ. ಇದರಬಗೆಗೆ ಮದರಾಸ್ ಸರಕಾರಕ್ಕೆ ಬರೆದು ಕೇಳಿದರೆ 'ಕನ್ನಡಕ್ಕೆ ಎಡೆಕೊಟ್ಟರೆ ಮಲೆಯಾಳಿಗೂ ಕೊಡ ಬೇಕಾಗುವುದು. ಕನ್ನಡಕ್ಕಿಂತ ಮಲೆಯಾಳಿಗೆ ಕೊಟ್ಟರೆ ಉತ್ತಮ' ಎಂದು ಉತ್ತರ ಬಂದಿತು. ಇವೆಲ್ಲ ಕಾರಣ ಗಳ ಮೂಲಕ ಐ. ಸಿ. ಎಸ್. ಪರೀಕ್ಷೆಯ ವಿಷಯಗಳಲ್ಲಿ ಕನ್ನಡಕ್ಕೆ ಸ್ಥಾನದೊರೆಯುವುದು ಸಾಧ್ಯವಿಲ್ಲ'

ನಮ್ಮಲ್ಲಿ ಇದುವರೆಗೆ ಇದರಬಗ್ಗೆ ಸಾಕಷ್ಟು ಚಳವ ಳಿಯೇ ನಡೆದಿಲ್ಲ. ಮಲೆಯಾಳಿಭಾಷೆಯು ಪ್ರತ್ಯೇಕವು ಅಖಂಡವಾಗಿ ಮದ್ರಾಸ ಇಲಾಖೆಗೆ ಸೇರಿದೆ. ಕರ್ಣಾಟ ಕದ ಕೆಲವು ಭಾಗವು ಮಾತ್ರ ಸೇರಿದೆ. ಆದುದರಿಂದ ಮದ್ರಾಸ ಸರಕಾರಕ್ಕೆ ಕನ್ನಡಕ್ಕಿಂತ ಮಲೆಯಾಳಿಯ ಪ್ರಾಶಸ್ತ್ಯವು ಹೆಚ್ಚಾಗಿ ತೋರಬಹುದು. ಮದ್ರಾಸ ಇಲಾಖೆಯಂತೆಯೆ ಮುಂಬಯಿ ಇಲಾಖೆಯ ಗತಿ. ಇಲ್ಲಿಯ ಸರಕಾರವೂ ಕನ್ನಡಕ್ಕೆ ಪ್ರಾಶಸ್ತ್ಯಕೊಡಲಾರದು. ಆದುದರಿಂದ ಅಖಂಡಕರ್ಣಾಟಕದ ಜನರೆಲ್ಲ ಏಕಮುಖ ದಿಂದ ಸರಕಾರದೊಳಗೂ ಹೊರಗೂ ಚಳವಳಿಯನ್ನೆಬ್ಬಿಸಿ ತಮ್ಮ ಭಾಷೆಗೊದಗಿದ ಅಪ್ರಾಶಸ್ತ್ಯವನ್ನೂ ವ್ಯಕ್ತಿತ್ವ ರಾಹಿತ್ಯವನ್ನೂ ಕಳೆದುಹಾಕುವಂತೆ ಮಾಡುವುದು ಅನಿ ವಾರ್ಯಸಂಗತಿಯಾಗಿದೆ. ಕನ್ನಡಿಗರು ಇತ್ತಕಡೆಗೆ ಲಕ್ಷ್ಯಕೊಡುವರೇ?

### ನಮ್ಮ ಮಂಡಲದ ಸಹಾಯಕರು

ಜಯಕರ್ನಾಟಕ ಮಂಡಲದ ಕಾರ್ಯವು ಸುಯಂತ್ರಿ ತವಾಗಿ ಸಾಗಲೆಂಬ ಸದುದ್ದೇಶದಿಂದಲೂ ಕನ್ನಡಭಾ ಷೆಯ ಅಭಿಮಾನದಿಂದಲೂ ಮಹನೀಯರನೇಕರು ನೂರು ರೂಪಾಯಿಗಳನ್ನು ಸಲ್ಲಿಸಿ ಆಜೀವ ಚಂದಾದಾರರಾಗಿ ರುವರು. ಇನ್ನು ಕೆಲವರು ಕೈಯಲ್ಲಾದಷ್ಟು ಸಹಾಯ ದ್ರವ್ಯವನ್ನು ಪ್ರತಿಫಲಾಪೇಕ್ಷೆಯಿಲ್ಲದೆ ಕೊಟ್ಟಿರುವರು. ಅವರೆಲ್ಲರಿಗೂ ನಮ್ಮ ಮಂಡಲದ ಅನಂತ ಪ್ರಣಾಮಗಳು.

### ಆಜೀವ ಚಂದಾದಾರರು

೧ ಶ್ರೀ. ಎಸ್. ಎಸ್. ಲೋಕೂರ ಡಿ. ಜಜ್ಜ್ ಅಹ ಮ್ಮದಾಬಾದ. (ಹಣ ಪೂರ್ತಿ ಸಂದಿದೆ)

೨ ಶ್ರೀ. ಬಳವಂತ ವೆಂಕಟೇಶ ಬೆಳವಿ ವಕೀಲರು ಮುಂಬಯಿ. [ಹಣ ಪೂರ್ತಿ ಸಂದಿದೆ]

೩ ಪ್ರೊ. ಹಿರಿಯಣ್ಣಯ್ಯನವರು ಎಂ. ಎ. ಮೈಸೂರು. (ಹಣ ಪೂರ್ತಿ ಸಂದಿದೆ.)

೪ ಶ್ರೀ. ಜಿ, ಎಲ್. ಕೊಟ್ಟೂರ ಧಾರವಾಡ ಫಾರ್ಮ. (ಹಣ ಪೂರ್ತಿ ಸಂದಿದೆ)

೫ ಶ್ರೀ. ಆರ್. ಎ. ಜಹಗೀರದಾರ್ ಹೈಕೋರ್ಟ ವಕೀಲ ಮುಂಬಯಿ. (೭೫ರೂ. ಬಂದಿವೆ)

೬ ಶ್ರೀ. ಮಾಸ್ತಿ ವೆಂಕಟೇಶಯ್ಯಂಗಾರ್ಯರು ಎಂ. ಎ. ಬೆಂಗಳೂರು. (೬೦ರೂ. ಬಂದಿವೆ)

೭ ಶ್ರೀ. ಆರ್. ಜಿ. ದೇಶಪಾಂಡೆ ಎಂ. ಎ. ಇನ್‌ಕಂ ಟ್ಯಾಕ್ಸ ಆಫೀಸರ್ ಧಾರವಾಡ. (೪೦ರೂ. ಬಂದಿವೆ)

CC-0. Jangamwadi Math Collection. Digitized by eGangotri

೮ ಶ್ರೀ. ಬಿ. ಜಿ. ಜಿಮ್ಮಲಗಿ ಹೈದರಾಬಾದ್ (ದಕ್ಷಿಣ) (೩೦ರೂ. ಬಂದಿವೆ)

೯ ಶ್ರೀ. ಟಿ. ಭೀಮರಾವ ಇಂದೂರು (೨೦ರೂ.ಬಂದಿವೆ)

೧೦ ಶ್ರೀ, ಹೊಸಕೊಪ್ಪ ಕೃಷ್ಣರಾಯರು ಚಿಕ್ಕಮಗಳೂರು. (೧೫ರೂ. ಬಂದಿವೆ)

೧೧ ಶ್ರೀ. ನಾಟಕಾಲಂಕಾರ ಗರುಡ ಸದಾಶಿವರಾಯರು (೧೦ರೂ. ಬಂದಿವೆ)

೧೨ ಶ್ರೀ. ಅಶ್ವತ್ಥರಾವ ಮಹಿಷಿ ವಕೀಲರು ಶಿರಹಟ್ಟಿ. (೧೦ರೂ. ಬಂದಿವೆ.)

ಇನ್ನೂ ಪೂರ್ತಿಯಾಗಿ ಹಣವನ್ನು ಕೊಡದಿದ್ದವರು ಕ್ರಮಕ್ರಮವಾಗಿ ಸಲ್ಲಿಸಲಿರುವರು. ಮತ್ತು ಶ್ರೀ. ಸ್ಹಿ. ಎನ್. ಅಡವಿ ಅವರೂ ಶಿರಹಟ್ಟಿಯ ಮಂಗಸೂಳಿ ಬಾಳ ಕೃಷ್ಣರಾಯರೂ ಅಲ್ಲದೆ ಇನ್ನೂ ಕೆಲ ಮಹನೀಯರು ಆಜೀವ ಚಂದಾದಾರರಾಗಲು ಒಪ್ಪಿ ಭಾಗ ಭಾಗವಾಗಿ ಹಣ ಸಲ್ಲಿಸಬೇಕಿಂದಿರುವರು.

### ಸಹಾಯದ್ರವ್ಯವನ್ನಿತ್ತವರು

೧ ಡಿಸ್ಟ್ರಿಕ್ಟ ಸೆಂಟ್ರಲ್ ಕೋ-ಆಪರೇಟಿವ್ಹ ಬ್ಯಾಂಕ ಲಿಮಿಟೆಡ್ ವಿಜಾಪೂರ. (೩೦ರೂ. ಬಂದಿವೆ)

೨ ಶ್ರೀಮತಿ ಡಿ. ಸಾಕಮ್ಮನವರು ಕೊಡಗು (೨೫ ರೂ. ಬಂದಿವೆ)

೩ ಶ್ರೀ. ಜಿ. ಎಚ್. ಗುಗ್ಗಳಿ ಐ. ಸಿ. ಎಸ್. ಬೆಳಗಾಂವಿ (೧೦ರೂ. ಬಂದಿವೆ)

ಸಾಲದ ಹೊಣೆಯನ್ನು ಹೊತ್ತು ಸೋತು ಮಾಡುತ್ತಿರುವ ಜಯಕರ್ನಾಟಕದ ಕಾರ್ಯವು ಆದರ ಹೊರೆಯಿಳಿದರೆ ಹತ್ತುಮಡಿ ಹೆಚ್ಚಾಗಿ ಸಾಗಬಹುದು. ಕನ್ನಡಿಗರು ಕೊಡುಗೈಯ್ಯವರಾಗಿ ಮುಂದೆ ಬಂದರೆ ಯಾವುದಕ್ಕೇನು ಕೊರತೆ?

### ಧಾರವಾಡದಲ್ಲಿ ಶ್ರೀಮತಿ ರಾಗಿಣೀದೇವಿಯವರು

ಇವರು ಇದುವರೆಗೆ ಹಿಂದುಸ್ಥಾನದ ಪ್ರಮುಖ ನಗರಗಳಲ್ಲೆಲ್ಲ ತಮ್ಮ ಸಂಗೀತ ಸಮೇತವಾದ ನೃತ್ಯಾಭಿನಯದ ಪ್ರಯೋಗಗಳನ್ನು ಜರುಗಿಸಿ, ಧಾರವಾಡದಲ್ಲಿಯೂ ತಮ್ಮ ಕಲಾನೈಪುಣ್ಯವನ್ನು ಪ್ರದರ್ಶಿಸುವ ಅಪೇಕ್ಷೆಯಿಂದ ಜಯಕರ್ನಾಟಕ ಮೂಲಕ್ಕೆ ಬರೆದರು. ನಾವು ಅವರಿಗೆ ಬೇಕಾಗಬಹುದಾದ ನೆರವನ್ನೆಲ್ಲ ಕೊಡಲು ಒಪ್ಪಿಕೊಂಡು, ಧಾರವಾಡಕ್ಕೆ ಬರಲು ಆಮಂತ್ರಿಸಿದ ಮೇರೆಗೆ, ಶ್ರೀಮತಿಯವರು ಧಾರವಾಡಕ್ಕೆ ಬಂದಿದ್ದಾರೆ; ಮತ್ತು ಆಕ್ಟೋಬರ ೩ರಿಂದ ತಮ್ಮ ಪ್ರಯೋಗಗಳನ್ನು ಜರುಗಿಸುವವರಿದ್ದಾರೆ. ಮುಂದಿನ ಸಲ ಇವರ ಇಲ್ಲಿಯ ಕಾರ್ಯಕ್ರಮವನ್ನು ಕುರಿತು ಬರೆಯುವೆವು. ಶ್ರೀಮತಿಯವರು ನಮ್ಮ ವಿಶೇಷ ಸಂಚಿಕೆಗಾಗಿ ತಮ್ಮ ನೃತ್ಯಾಭಿನಯವನ್ನು ಕುರಿತು ಒಂದು ಸಚಿತ್ರಲೇಖನವನ್ನು ಬರೆಯಲು ಒಪ್ಪಿಕೊಂಡಿದ್ದಾರೆಂದು ತಿಳಿಸಲು ಸಂತೋಷಪಡುತ್ತೇವೆ.

### ನೂತನ ಬಂಧುಗಳಿಗೆ ಸುಸ್ವಾಗತ

'ರಂಗಭೂಮಿ'ಯು ಪುನರುಜ್ಜೀವಿತವಾದುದನ್ನೂ 'ಪ್ರಬುದ್ಧಕರ್ಣಾಟಕ'ವು ಭದ್ರವಾದ ಅಸ್ತಿವಾರದ ಮೇಲೆ ನೆಲಸಿರುದನ್ನೂ, ಕಂಡು ನಮಗೆ ನಿಜವಾಗಿಯೂ ಹರ್ಷವಾಗುತ್ತಿದೆ. 'ಪ್ರಬುದ್ಧಕರ್ಣಾಟಕ'ದ ಹೊಸ ಸಂಚಿಕೆಯನ್ನು ನೋಡಲಾಗಿ, ಕರ್ನಾಟಕ ಸಂಸ್ಕೃತಿಯ ಸೇವಾಕಾರ್ಯವನ್ನು ಅದು ಚೆನ್ನಾಗಿ ಮಾಡುವ ಗುರುತು ಕಂಡುಬರುತ್ತಿದೆ. ಶ್ರೀಮಾನ್ ದೇವುಡು ಅವರ ನೇತೃತ್ವದಲ್ಲಿ 'ರಂಗಭೂಮಿ'ಯು ತನ್ನ ಪೂರ್ವದ ಅಂತರಂಗಬಹಿರಂಗ ಸೌಂದರ್ಯವನ್ನು ಪಡೆದಿರುವುದಲ್ಲದೆ, ನಾಟ್ಯಕಲೆಯನ್ನು ಕುರಿತು ಪ್ರೌಢ ಲೇಖನಗಳನ್ನೂ ಪ್ರಕಟಿಸುವ ಪೂರ್ವಸೂಚನೆಯನ್ನು ತೋರಿಸುತ್ತಲಿದೆ.

### ಚಿತ್ರಪರಿಚಯ

ಇದು ನಮ್ಮ ಹಳೆಯ ಚಿತ್ರಸಂಗ್ರಹದಲ್ಲಿಯದೊಂದು ಚಿತ್ರವು. ಮೊಗಲ್ ಅಥವಾ ರಜಪೂತ ಕಲಾ ಸಂಪ್ರದಾಯಕ್ಕೆ ಸೇರಿದುದು. ಮೂಲಚಿತ್ರವು ವಿವಿಧ ಬಣ್ಣಗಳಿಂದ ಕೂಡಿದ್ದು. ಇದು ಅದರ ಛಾಯಾಚಿತ್ರ. ರಾಜಪುತ್ರರಮಣಿಯೊಬ್ಬಳು ಪುರುಷವೇಷವನ್ನು ತಳೆದಂತೆ ಇದರಲ್ಲಿ ಚಿತ್ರಿತವಾಗಿದೆ. ವೇಷ ಪುರುಷನದಾದರೂ ಮುಖದಲ್ಲಿ ಹೆಣ್ಣಿನಕಳೆಯು ಉಕ್ಕುತಿರುವುದನ್ನು ಸಹಜವಾಗಿ ಗುರುತಿಸುವಂತಿದೆ.

CC-0. Jangamwadi Math Collection. Digitized by eGangotri

# ಅಗಲಿಕೆ

## ಕೈಲಾಸವಾಸಿ ಪ್ರೊ. ಕೆ. ಬಿ. ಪಾಠಕ ಅವರು

ಪ್ರೊ. ಪಾಠಕರು ಕೆಲದಿನಗಳಿಂದ ಹಣ್ಣಣ್ಣ ಮುದುಕರಾಗಿ ಕಾಲಾಧಿಸರಾದರೆಂದು ತಿಳಿಸಲು ವ್ಯಸನವಾಗುತ್ತದೆ. ಇವರ ನಿಧನದಿಂದ, ಉತ್ತರಕರ್ನಾಟಕದ ಒಬ್ಬ ದೊಡ್ಡ ವಿದ್ಯಾಭಿಮಾನಿಗಳೂ, ಇತಿಹಾಸ ಸಂಶೋಧಕರೂ ಕೋದರೆಂದು ಹೇಳಲು ಪ್ರತ್ಯವಾಯವಿಲ್ಲ. ಇವರ ವಿಸ್ತಾರವಾದ ಚರಿತ್ರೆಯನ್ನು ಜಯಕರ್ನಾಟಕದಲ್ಲಿ ಈಸಲ ಪ್ರಸಿದ್ಧಿಸಲು ಅನುಕೂಲವಾಗಲಿಲ್ಲವೆಂಬುದಕ್ಕಾಗಿ ವಿಷಾದಿಸುತ್ತೇವೆ. ಇವರು ಹಲವು ದಿನ ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ಪ್ರೊಫೆಸರರಾಗಿದ್ದರಲ್ಲದೆ, ಅಲ್ಲಿಯ ಭಾಂಡಾರಕರ ಸಂಶೋಧನಮಂದಿರದಲ್ಲಿ ಕರ್ನಾಟಕ ಚರಿತ್ರೆಗೆ ಸಂಬಂಧಿಸಿದ ಹಲವು ಬಗೆಯ ಸಂಶೋಧನಕಾರ್ಯಗಳನ್ನು ನಡೆಸಿದರು. ಇವರು ಕಾರ್ಯನಿವೃತ್ತರಾದಮೇಲೂ ತಮ್ಮ ವ್ಯಾಸಂಗವನ್ನು ಬಿಡಲಿಲ್ಲ. ಸುಮಾರು ಒಂದು ಒಂದೂವರೆ ತಿಂಗಳ ಹಿಂದೆ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ 'ಗುಪ್ತ ಶಕ'ದ ವಿಷಯವಾಗಿ ಉಪನ್ಯಾಸವಾಯಿತು. ಇಲ್ಲಿಯ ಇತಿಹಾಸಮಂಡಲಕ್ಕೆ ದೊರೆತ 'ಚಾಮುಂಡರಾಯ ಪುರಾಣ'ದ ಪ್ರತಿಯ ಮೇಲಿಂದ ಆ ಶಕದ ಕಾಲನಿರ್ಣಯ ಮಾಡಲು ಎಷ್ಟೋ ಅನುಕೂಲವಾಗಿದೆಯೆಂದು ಅವರು ಹೇಳಿದರು. ಇದೇ ಅವರ ಕೊನೆಯ ವ್ಯಾಖ್ಯಾನವು. ಇಲ್ಲಿಯ ಇತಿಹಾಸಮಂಡಲವನ್ನು ಸಂದರ್ಶಿಸಿ, ತಮ್ಮ ಎಲ್ಲ ಲೇಖನಗಳನ್ನು ಕಾಣಿಕೆಯಾಗಿ ಕೊಟ್ಟರು. ಇತಿಹಾಸಮಂಡಲದವರು ಅವರನ್ನು ಕರೆಯಿಸಿ, ಅವರ ಭಾವಚಿತ್ರದ ಅನಾವರಣ ಸಮಾರಂಭವನ್ನು ಜರುಗಿಸಬೇಕೆನ್ನುವಷ್ಟರಲ್ಲಿ, ಅವರಿಗೆ ದೇವಾಜ್ಞೆಯಾಯಿತು! ದೇವರು ಅವರ ಆತ್ಮಕ್ಕೆ ಶಾಂತಿಯನ್ನೀಯಲಿ!

## ವೈ. ಅಣ್ಣಾಚಾರ್ಯ ಮುಂಡಗಿಯವರು

ಕನ್ನಡ ಬರಹಗಾರರಾದ ವೈ. ಅಣ್ಣಾಚಾರ್ಯ ಭೀಮಾಚಾರ್ಯ ಮುಂಡಗಿ ಇವರು ತಾರೀಖು ೯-೯-೧೯೩೩ ಇಸವಿ ದಿವಸ ವೈಕುಂಠವಾಸಿಗಳಾದರೆಂದು ತಿಳಿಸಲು ತುಂಬಾ ವಿಷಾದವಾಗುತ್ತದೆ. ಈಗೆರಡು ತಿಂಗಳುಗಳಿಂದ ಅವರು ಹಾಸಿಗೆಯನ್ನು ಹಿಡಿದಿದ್ದರು. ಮರಣ ಸಮಯದಲ್ಲಿ ಅವರ ವಯಸ್ಸು ೬೫ ವರ್ಷವಾಗಿದ್ದಿತು. ಶ್ರೀ. ಮುಂಡಗಿಯವರು ಸುಚಿತ ನಾಟಕಕಾರರೂ ಕವಿಗಳೂ ಆಗಿದ್ದರು. ಅವರು ೧೫ ನಾಟಕಗಳನ್ನೂ ಬೇರೆ ಕೆಲವು ಗ್ರಂಥಗಳನ್ನೂ ಬರೆದಿದ್ದಾರೆ. ಉತ್ತರಕರ್ನಾಟಕದಲ್ಲಿ ನಾಟಕಸಂಘಗಳ ಆರಂಭವನ್ನು ಮಾಡಿದವರು ಇವರೇ. ಕರ್ನಾಟಕದೊಳಗಿನ ಎಲ್ಲ ನಾಟಕಸಂಘಗಳಿಗೂ ಅದರಲ್ಲಿ ವಿಶೇಷವಾಗಿ ಶಿರಹಟ್ಟಿ ಮತ್ತು ಕೊಣ್ಣೂರ ನಾಟಕಸಂಘಗಳಿಗೂ ಇವರ ಸಂಬಂಧವಿತ್ತು. ಹುಲಗಿಯಲ್ಲಿ ಇವರು ಸ್ವಂತ ಒಂದು ನಾಟಕಸಂಘವನ್ನು ಏರ್ಪಡಿಸಿದ್ದರಂತೆ. ಜ್ಯೋತಿಷವನ್ನಾದರೂ ಇವರು ಬಲ್ಲವರಾಗಿದ್ದರು. ಇವರ ಮರಣದಿಂದ ಒಬ್ಬ ಕನ್ನಡ ನುಡಿಯಾಳು ಮರೆಯಾದನೆಂದು ಹೇಳಲು ಯಾವ ಬಾಧಕವೂ ಇಲ್ಲ. ದೇವರು ಇವರಿಗೆ ಸದ್ಗತಿಯನ್ನೀಯಲಿ!

—( ಅರುಣೋದಯದಿಂದ )

## ಶ್ರೀಮಂತ ಸರದಾರ ಸಂಗಪ್ಪಾ ಸರದೇಸಾಯಿ

ಶ್ರೀಮಂತ ಸರದಾರ ಸಂಗಪ್ಪಾ ಸರದೇಸಾಯಿ ಇವರು ಬಹಳ ದೊಡ್ಡ ಜಹಾಗೀರದಾರ ಮನೆತನದವರು. ಇವರ ಮನೆತನದವರು ಮುನ್ನೂರು ವರುಷಗಳ ಮುಂಚೆ ವಿಜಾಪುರದ ಆದಿಲ್‌ಶಾಹಿಯವರಿಂದ ಈ ಜಹಾಗೀರನ್ನು ಪಡೆದುಕೊಂಡರು. ಶ್ರೀಮಂತರಿಗೆ ಈ ಜಹಾಗೀರು ವಂಶಪರಂಪರೆಯಿಂದ ಸನ್ ೧೯೦೧ನೇ ಇಸವಿಯಲ್ಲಿ ಪ್ರಾಪ್ತವಾಯಿತು.

ಶ್ರೀಮಂತ ಸರದಾರರು ಸುರಪುರ ಇಲಾಖೆಯಲ್ಲಿ ಕಾಡಂಗಿರಿ ಎಂಬಲ್ಲಿ ೧೮೭೬ರಲ್ಲಿ ತಮ್ಮ ಸೋದರ ಮಾವಂದಿರ ಮನೆಯಲ್ಲಿ ಜನಿಸಿದರು. ಇವರ ತಂದೆಯವರಾದ ಶ್ರೀಮಂತ ರಾಮಪ್ಪಾ ದೇಸಾಯಿ ಇವರು ಅಮರಾವತಿ ದೇಸಾಯರಿದ್ದು ಮುಂಬೈ ಇಲಾಖೆಯಲ್ಲಿಯೂ ನಿಜಾಮಸಂಸ್ಥಾನದಲ್ಲಿಯೂ ಪ್ರಸಿದ್ಧರಿದ್ದರು. ಅವರು ಧಾರ್ಮಿಕರಿದ್ದು ಔದಾರ್ಯಶಾಲಿಗಳೂ ಪರೋಪಕಾರಪರಾಯಣರೂ ಇದ್ದರೆಂದು ಜನರು ಈವೊತ್ತಿನವರೆಗೂ

Jangamwadi Math Collection. Digitized by eGangotri

ಹಾಡಿ ಹರಸುತ್ತಾರೆ. ಶ್ರೀಮಂತ ರಾಮಪ್ಪನವರಿಗೆ ಮೂವರು ಗಂಡುಮಕ್ಕಳು ಮತ್ತು ಒಬ್ಬ ಹೆಣ್ಣು ಮಗಳು. ಅವರಲ್ಲಿ ಹಿರಿಯರಾದ ಲಿಂಗಪ್ಪನವರು ಧರ್ಮಶೀಲರೂ ಗುಣಪಕ್ಷಪಾತಿಗಳೂ ರಸಿಕಾಗ್ರಣಿಗಳೂ ಆಗಿದ್ದರು. ಅವರ ವಿದ್ಯಾಪಕ್ಷಪಾತವು ಪ್ರಶಂಸನೀಯವಾದದ್ದು ಇದ್ದಿತು. ಅವರು ಪಂಡಿತರಿಗೂ ಕಲಾವಿದರಿಗೂ ಕಲ್ಪವೃಕ್ಷದಂತಿದ್ದರೆಂದು ಖ್ಯಾತಿ. ದೊಡ್ಡವರನ್ನು ಔಪಚಾರಿಕವಾಗಿ ಹೊಗಳುವದುಂಟು; ಆದರೆ ಲಿಂಗಪ್ಪನವರ ಕೀರ್ತಿಯು ಅವರ ಔದಾರ್ಯದ ಆಧಾರದ ಮೇಲೆ ಸ್ಥಿರವಾಗಿ ನಿಂತಿದೆ. ಅಂತಹ ಮಹನೀಯರಾದ ಲಿಂಗಪ್ಪನವರ ತಮ್ಮಂದಿರೇ ಈ ಸರದಾರ ಸಂಗಪ್ಪನವರು.

ಶ್ರೀಮಂತ ಸಂಗಪ್ಪನವರ ಶಿಕ್ಷಣವು ಗದಗು ಪುಣೆಗಳಲ್ಲಿ ಆಯಿತು. ಇವರು ಪುಣೆಯಲ್ಲಿ ಮ್ಯಾಟ್ರಿಕ್ ಓದುತ್ತಿರುವಾಗ ರಕ್ಕಸಗಿಯ ಮೂಲ ಮನೆತನಕ್ಕೆ ದತ್ತಕವಾಗಿ ಹೋದರು. ಅಂದಿನಿಂದ ಸಂಸ್ಥಾನದ ಆಡಳಿತದ ಭಾರವು ಇವರ ಮೇಲೆ ಬಿದ್ದುದರಿಂದ, ಮುಂದಿನ ಶಿಕ್ಷಣಕ್ಕೆ ಅಭ್ಯಂತರವುಂಟಾಯಿತು. ಆ ಕಾಲಕ್ಕೆ ಇವರು ಚಿಕ್ಕವರಿದ್ದರೂ ಒಳ್ಳೇ ಸಮಾಧಾನದಿಂದ ತಮ್ಮ ಕಾರ್ಯಭಾರವನ್ನು ನಿರ್ವಹಿಸಿದರು. ತಮ್ಮ ಸೌಮ್ಯವಾದ ಸ್ವಭಾವದಿಂದ ಪ್ರಜೆಗಳಿಗೆಲ್ಲರಿಗೂ ಬೇಕಾದವರಾದರು. ಮುಂದೆ ಸಂಸ್ಥಾನದ ಆಡಳಿತವು ಸುಸೂತ್ರವಾಗಿಯೂ ವ್ಯವಸ್ಥಿತವಾಗಿಯೂ ನಡೆಯಲು ಲೋಕಹಿತದ ಕಾರ್ಯಗಳಲ್ಲಿ ಮನಸ್ಸು ಹಾಕತೊಡಗಿದರು. ಇವರು ವಿಜಾಪುರ ಡಿ. ಲೋ. ಬೊ. ದಲ್ಲಿ ವ್ಹಾಯಿಸ್ ಪ್ರೆಸಿಡೆಂಟರಾಗಿ ಎಷ್ಟೋ ಲೋಕೋಪಕಾರ್ಯಗಳನ್ನು ಮುಂದುವರಿಸಿದರು. ಅಲ್ಲಿ ಜನಹಿತದ ಅನುಭವವು ದೊರೆತು ನುರಿತ ಮೇಲೆ ಕಾಯಿದೆ ಕೌನ್ಸಿಲ್ ಉಮೇದವಾರರಾಗಿ ನಿಂತು, ಅಲ್ಲಿಯೂ ಆರಿಸಿಬಂದರು. ಇದರಿಂದ ಅವರ ಲೋಕಪ್ರಿಯತೆಯು ವ್ಯಕ್ತವಾಗುತ್ತದೆ.

ಇವರ ಶಿಕ್ಷಣಪಕ್ಷಪಾತವು ಸ್ತೋತ್ರಾರ್ಹವಾಗಿದೆ. ಇವರು ಜಾತಿ ಧರ್ಮಗಳ ಕಟ್ಟನ್ನೆಣಿಸದೆ, ಎಷ್ಟೋ ವಿದ್ಯಾರ್ಥಿಗಳಿಗೆ ದುಡ್ಡಿನ ಸಹಾಯ ಮಾಡಿ ಬಿ. ಎ. ಎಲ್. ಎಲ್. ಬಿ. ಯವರೆಗೆ ಶಿಕ್ಷಣವು ದೊರೆಯುವಂತೆ ಮಾಡಿರುವರು. ಶ್ರೀಮಂತರು ಶಿವಾಧೀನರಾಗುವವರೆಗೂ ವಿಜಾಪುರ ಜಿಲ್ಹೆಯ ಲಿಂಗಾಯತ ಎಜ್ಯುಕೇಶನ್ ಅಸೋಸಿಯೇಶನ್‌ದ ಅಧ್ಯಕ್ಷರಿದ್ದರು. ಅದಕ್ಕೆ ಸಾವಿರಗಟ್ಲೆ ದುಡ್ಡಿನ ಸಹಾಯಮಾಡಿರುವರು. ಸಿದ್ಧೇಶ್ವರ ಹಾಯಸ್ಕೂಲ ಸಂಸ್ಕೃತ ಪಾಠಶಾಲಾ ಇವುಗಳು ಇದೇ ಅಸೋಸಿಯೇಶನ್‌ದ ಕೆಳಗೆ ನಡೆಯುತ್ತಿರುವವು. ವಿಜಾಪುರದಲ್ಲಿ ಕಾಲೇಜ ಸ್ಥಾಪಿಸಬೇಕೆಂದು ಇವರ ಉತ್ಕಟವಾದ ಇಚ್ಛೆಯಿದ್ದಿತು. ಇವರ ಆ ಇಚ್ಛೆಯು ಪೂರ್ಣವಾಗುವದರೊಳಗಾಗಿ ಪರಮಾತ್ಮನು ಅವರನ್ನು ಕರೆದೊಯ್ದನು. ಇವರ ವಾಚನಾಭಿರುಚಿಯು, ಬಹಳವಾಗಿದ್ದಿತು. ಎಲ್ಲ ಲೋಕಹಿತದ ವಿಷಯಗಳ ಬಗ್ಗೆ ಬಲ್ಲವರೊಡನೆ ಚರ್ಚೆಮಾಡುತ್ತಿದ್ದರು. ಇವರು ವ್ಯಾಪಾರ, ಉದ್ಯೋಗ, ಕೃಷಿ, ಶಿಕ್ಷಣ ಮೊದಲಾದವುಗಳಲ್ಲಿ ಸುಧಾರಣೆಯಾಗಿ ಹಿಂದುಸ್ಥಾನದ ಆರ್ಥಿಕ ಉನ್ನತಿಯಾಗಬೇಕೆಂದು ಯಾವಾಗಲೂ ಅನ್ನುತ್ತಿದ್ದರು. ಆದರೆ ಪಾಶ್ಚಿಮಾತ್ಯ ಸುಧಾರಣಾಪದ್ಧತಿಯ ಹುಚ್ಚು ಅವರಿಗೆ ಬಹಳ ವಾಗಿದ್ದಿತು.

ಇವರ ಸ್ವಭಾವವು ಯಾವಾಗಲು ಶಾಂತವಾದುದೂ ಉದಾರವಾದದ್ದೂ ಇದ್ದಿತು. ಇವರು ಸಿಟ್ಟಿನಿಂದ ಮಾತಾಡಿ ಯಾರ ಮನಸ್ಸನ್ನು ಎಂದೂ ನೋಯಿಸಲಿಲ್ಲ. ಒಟ್ಟಿನಲ್ಲಿ ಇವರು ನಡೆಯುಲ್ಲಿಯೂ ನುಡಿಯುಲ್ಲಿಯೂ ನಿಜವಾದ ಸಭ್ಯಗೃಹಸ್ಥರಾಗಿದ್ದರು.

ಇಂತಹ ಮಹನೀಯರು ಇದೇ ತಿಂಗಳ ೨೨ನೇ ತಾರೀಖಿನ ದಿವಸ ಮಿರಜಿಯಲ್ಲಿ ಕೈಲಾಸವಾಸಿಗಳಾದರು. ಇವರ ಆತ್ಮಕ್ಕೆ ಜಗದೀಶನು ಶಾಂತಿಯನ್ನೀಯಲಿ.

CC-0. Jangamwadi Math Collection. Digitized by eGangotri



ಪ್ರೊ. ಕೆ. ಬಿ. ಪಾಠಕರು

ಶ್ರೀ. ಅಪ್ಪಾಚಾರ್ಯ ಮುಂಡಗಿಯವರು



CC-0. Jangamwadi Math Collection. Digitized by eGangotri



ಶ್ರೀಮಂತ ಸರದಾರ ಸಂಗಪ್ಪ ಸರದೇಸಾಯಿ, ರಕ್ಕಸಗಿ

CC-0. Jangamwadi Math Collection. Digitized by eGangotri

# ಸಾದರಸ್ವೀಕಾರ

೧೫೨ ಪಂಡಿತ ಜವಾಹರಲಾಲ ನೆಹರು ಇವರ ಚರಿತ್ರೆ (ಮರಾಠಿಯ ಅನುವಾದ) ಶ್ರೀ. ಮಧ್ವಭೀಮರಾವ ಶಿರೂರ, ಬಾಗಲಕೋಟೆ ಅವರು ಅನುವಾದಿಸಿದುದನ್ನು ಪುಣೆಯ ಚಿತ್ರಶಾಳಾಪ್ರೆಸ್ಸಿನವರು ಮುದ್ರಿಸಿ ಪ್ರಕಟಿಸಿದ್ದಾರೆ. ಕ್ರೌ. ಅ. ೧೩೨ ಪುಟ. ಬೆಲೆ ೦-೭-೧.

೧೫೩ ಪ್ರಳಯತಾಂಡವ (ಕವನಸಂಗ್ರಹ) ಬೆಂಗಳೂರಿನ ಶ್ರೀ. ಜಿ. ವಾಸುದೇವರಾಯರ ಮೂರು ಕವನಗಳನ್ನು ಪಿ. ಜಿ. ಟಿ. ಜನರಲ್ ಏಜನ್ಸಿ ಬಳೇಪೇಟೆ ಬೆಂಗಳೂರು ನಗರ, ಇವರು ಅಂದವಾಗಿ ಅಚ್ಚುಹಾಕಿಸಿ ಪ್ರಕಟಿಸಿರುವರು. ಬಿ. ಎಂ. ಶ್ರೀಕಂಠಯ್ಯನವರ ಚಿಕ್ಕ ಮುನ್ನುಡಿಯಿದೆ. ಕೌ. ಅ. ೩೨ ಪುಟಗಳು ಬೆಲೆ ೦-೬-೦

೧೫೪ ಶ್ರೀಮಜ್ಜಗನ್ನಾಥದಾಸರಾಯರ ಚರಿತ್ರೆಯು: ಬರೆದವರು ಶ್ರೀ. ನಾ. ಭೀ. ಕಲಮದಾನಿ; ಉಡಪಿಯ ಮಧ್ವಸಿದ್ಧಾಂತ ಗ್ರಂಥಾಲಯದ ಪ್ರಕಟನೆ. ಕೌ. ಅ. ೪೨ಪುಟ. ಬೆಲೆ ೦-೪-೦.

೧೫೫ ತುತ್ತೂರಿ (ಚಿಕ್ಕಮಕ್ಕಳಿಗಾಗಿ ಬರೆಗ ಪದ್ಯಸಂಗ್ರಹ) ಶ್ರೀ. ಜಿ. ಪಿ. ರಾಜರತ್ನಂ ಅವರು ಬರೆದುದನ್ನು ಮೈಸೂರಿನ ಪ್ರೋಗ್ರೆಸ್ ಬುಕ್‌ಸ್ಟಾಲಿನವರು ಪ್ರಕಟಿಸಿರುವರು. ಕ್ರೌ. ಅ. ೪೪ ಪುಟಗಳು.

೧೫೬ ಯೆಂಡ್ಕುಡ್ಕ ರತ್ನ (ಮೈಸೂರು ಕಡೆಯ ಹಳ್ಳಿಗರ ಭಾಷೆಯಲ್ಲಿ ಬರೆದ ಹಾಸ್ಯಗೀತಗಳು) ಬರೆದವರು 'ಜಿ. ಪಿ. ರಾಜರತ್ನ' ಮೈಸೂರಿನ ಪ್ರೋಗ್ರೆಸ್ ಬುಕ್‌ಸ್ಟಾಲಿನಲ್ಲಿಯೂ ಬೆಂಗಳೂರಿನ ರಾಮಮೋಹನ ಕಂಪನಿಯಲ್ಲಿಯೂ ಸಿಕ್ಕುವುದು. ಕ್ರೌ. ಅ. ೨೪ ಪುಟ.

೧೫೭ ಮಾತ್ಸರ್ಯ ಅಥವಾ ಕಳವಾದ ಆಭರಣ. (ಕಥೆ) ಶ್ರೀ. ಎಚ್. ಆರ್. ಸ್ವಾಮಿಯವರು ಬರೆದುದು. ಬೆಂಗಳೂರಿನ ಚೆನ್ನಕೇಶವ ಪ್ರಸನ್ನ ಪುಸ್ತಕಮಾಲೆಯ ಮೊದಲನೆಯ ಪುಷ್ಪವಾಗಿ ಪ್ರಕಟವಾಗಿದೆ. ಕ್ರೌ. ಅ. ೪೦ ಪುಟ ಬೆಲೆ ೦-೨-೦

೧೫೮ ಅದೃಷ್ಟವಲ್ಲ ಅದೃಷ್ಟಿ (ಕಥೆ) ಬರೆದವರು ಶ್ರೀ. ಎನ್. ಆರ್. ಕುಲಕರ್ಣಿ ಎಂ. ಎ. ಎಲ್. ಎಲ್. ಬಿ. ಬೆಳಗಾವಿಯ ತುಂಟರ ತಂಡದ ಒಂದಾಣೆ ಗ್ರಂಥಮಾಲೆಯಲ್ಲಿ ಪ್ರಕಟವಾದುದು. ಕೌ. ಅ. ೧೫ ಪುಟ.

೧೫೯ ಕಮಲಾ: (ಕಲ್ಪಿತ ಕಾದಂಬರಿ) ಲೇ. ಶ್ರೀ. ಹೊಮ್ಮರಡಿ ಮಲ್ಲನಗೌಡರು. ಚನ್ನಪಟ್ಟಣದ ಕರ್ತವ್ಯ ಕಾರ್ಯಾಲಯದವರಿಂದ ಪ್ರಕಟಿಸಲ್ಪಟ್ಟದು. ಡೆ. ಅ. ೧೮ ಪುಟಗಳು. ಬೆಲೆ ೦-೪-೦.

೧೬೦ ಕರೇಹಾಡು: (ಕವನ) ರಸದಿರುಕನದು. ಸಂ. ಪ್ರ. ರಾಷ್ಟ್ರೀಯಶಾಲಾ ಕುಕನೂರು. ಕೌ. ಅ. ೮ ಪುಟ.

೧೬೧ ಶೌರ್ಯದೇವಿ (ಕಥೆ) 'ಮೂಢಭಕ್ತ'ನು ಬರೆದುದು. ಸಂ. ಪ್ರ. ವಿದ್ಯಾರ್ಥಿಸಂಘ, ರಾಯಚೂರು ಕೌ. ಅ. ೧೨ ಪುಟ.

೧೬೨ ಲೊೀ. ಬೋ. ಲೋ. ಬೋ. (ಕಥೆ) ಬರೆದವರು 'ಭರತ' ಬೆಳಗಾವಿಯ ತುಂಟರತಂಡದ ಒಂದಾಣೆ ಗ್ರಂಥಮಾಲೆಯ ಪ್ರಕಟನೆ ಕ್ರೌ. ಅ. ೨೬ ಪುಟಗಳು.

೧೬೩ ಬಾಲ್ಯವಿವಾಹ ಶಾಸ್ತ್ರಾರ್ಥ. ಶ್ರೀ. ವೀರಕೇಸರಿ ಸೀತಾರಾಮಗಳವರಿಗೂ ಶ್ರೀ. ಧರ್ಮದೇವ ವಿದ್ಯಾವಾಚಸ್ಪತಿಯವರಿಗೂ ನಡೆದ ಸಂಭಾಷಣೆ. ಪ್ರಕಾಶಕರು ಶ್ರೀ. ಭಾಸ್ಕರಪಂತ್-ಸುಬ್ಬನರಸಿಂಹಶಾಸ್ತ್ರಿ ಬೆಂಗಳೂರು. ಡೇ. ಅ. ೨೬ ಪುಟಗಳು, ಬೆಲೆ ೦-೧-೦.

೧೬೪ **ವಾಗೀಶ್ವರೀ** (ಮರಾಟಿ ಮಾಸಪತ್ರಿಕೆ) ಮೂರನೆಯ ವರ್ಷದ ಮೂರನೆಯ ಸಂಚಿಕೆಯು ಬಂದಿದೆ. ನಾಲ್ಕು ಜನರದೊಂದು ಸಂಪಾದಕ ಮಂಡಲದ ನೇತೃತ್ವದಲ್ಲಿ ನಡೆಯುವುದು. ಪ್ರಕಾಶಕರು ಶ್ರೀ. ಜಯಕೃಷ್ಣ ಕೇಶವ ಉಪಾಧ್ಯೇ. ನಾಗಪೂರಶಹರ ರಾಯಲ್ ಅ. ೬೦ ಪುಟಗಳು. ವಾ. ಚ. ಅಂ. ವೆ. ಸೇರಿ ೪-೮-೦

೧೬೫ ವಿನೋದ ಪ್ರಪಂಚ (ಹಾಸ್ಯರಸಭರಿತ ವಿಚಿತ್ರ ಸಚಿತ್ರ ಮಾಸಪತ್ರಿಕೆ. ಸಂಪಾದಕ:- ಶ್ರೀ. ತಿರುಮಲೆ ಗೋಪಾಲಾಚಾರ್ಯ ಶರ್ಮ ಬೆಂಗಳೂರ ನಗರ. ವಾ. ವ. ೧-೮-೦.

೧೬೬ ಕರ್ನಾಟಕ ವಣಿಕ್ ಸಂಘದ ೧೯೩೧-೩೨ ೩ನೆಯ ವಾರ್ಷಿಕವರದಿ; ಮತ್ತು ತಾ. ೩೧-೩-೧೯೩೨ ೩ನೆಯ ದಿನ ಬಳ್ಳಾರಿಯಲ್ಲಿ ಸೇರಿದ ೩ನೆಯ ವಾರ್ಷಿಕ ಸಾಧಾರಣ ಸಭೆಯ ಕಾರ್ಯಕ್ರಮ. ಭಾಗಲಕೋಟೆಯ ಕಾರ್ಯಾಲಯದಲ್ಲಿ ಪ್ರಕಟವಾಗಿದೆ.

CC-0. Jangamwadi Math Collection. Digitized by eGangotri

೧೬೭ ಲಿಂಗಾಯತ ಎಜ್ಯುಕೇಶನ್ ಅಸೋಶಿಯೇಶನ್ ಧಾರವಾಡ; ಇದರ ೧೯೩೧-೩೨ನೆಯ ವರ್ಷದ ವರದಿಯು. ಪ್ರಕಾಶಕರು ಶ್ರೀ. ಎಮ್. ಬಿ. ಇನಾಮತಿ ಬಿ. ಎ. ಎಲೆಲ್. ಬಿ. ಅಡ್ವೋಕೇಟ ಧಾರವಾಡ.

೧೬೮ ಮೂಲ್ಕಿ 'ಶ್ರೀದುರ್ಗಾದೇವಿ ಧರ್ಮಾರ್ಥ ರಾತ್ರೀಶಾಲೆ'ಯ ಪಂಚಮವಾರ್ಷಿಕ ವರದಿ.

೧೬೯ Census of India, 1931: Volume XXV Mysore (Part II-Tables)- ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಎಂ. ಎ. ಅವರಿಂದ ರಚಿತ. ಬೆಲೆ ೬ರೂ. ಫುಲ್‌ಸ್ಕೇಪ್ ೨೬೪ ಪುಟಗಳು.

೧೭೦ ಧಾರವಾಡ ವನೀತಾಸೇವಾಸಮಾಜದ ಚತುರ್ಥ ವಾರ್ಷಿಕ ವರದಿ.

೧೭೧ ಧಾರವಾಡ ವನೀತಾಸೇವಾಸಮಾಜದ ವರ್ಗಣಿ ಮತ್ತು ದೇಣಗೀದಾರರು; ಮತ್ತು ಸಮಾಜದ ಸಲುವಾಗಿ ಮಹನೀಯರ ಅಭಿಪ್ರಾಯಗಳು.

೧೭೨ ಅಭ್ಯಾಸಪತ್ರಿಕೆ:- ವನಿತಾಸೇವಾಸಮಾಜ ಧಾರವಾಡ.

೧೭೩ ಇಲಕಲ್ಲಿನ ಶ್ರೀ. ವಿಠ್ಠಲವಾಚನಾಲಯದ ೪ನೆಯ ವರ್ಷದ ವರದಿಯು.

೧೭೪ **कल्याण** (ಈಶ್ವರಾಂಕ) ಅನೇಕ ಚಿತ್ರಗಳಿಂದಲೂ ಉಪಯುಕ್ತವಾದ ವಿಷಯಗಳಿಂದಲೂ ತುಂಬಿದ ವಿಶೇಷ ಸಂಚಿಕೆ ಕ್ರಾ.೭೫೬ ಪುಟಗಳು ಬೆಲೆ ೩-೦-೦. 'ಗೀತಾ ಪ್ರೆಸ್ ಗೋರಖಪೂರ' ಇವರಲ್ಲಿ ದೊರೆಯುವುದು.


**ಚಂದಾದಾರರಾಗಿ ಪ್ರೋತ್ಸಾಹಿಸಿರಿ:**

**ಉತ್ಕೃಷ್ಟ ಕನ್ನಡ ವಾರಪತ್ರಿಕೆ.**

# ನವಯುಗ

**ಸಂಪಾದಕ:— ಎ. ಬಿ. ಶೆಟ್ಟಿ, ಎಮ್. ಎಲ್. ಸಿ.**

ಉತ್ಕೃಷ್ಟ ಲೇಖನ, ಮುದ್ದಾದ ಮುದ್ರಣ, ವಿವಿಧ ಚಿತ್ರಗಳಿಂದ ವಾರಪತ್ರಿಕೆಗಳಲ್ಲಿರಬೇಕಾದ ಯಾವತ್ತು ಸಲ್ಲಕ್ಷಣಗಳು ಈ ಪತ್ರಿಕೆಯಲ್ಲಿವೆ.

**ವಾರ್ಷಿಕಚಂದಾ (ಅಂಚೆವೆಚ್ಚ ಕೂಡಿ) ೩-೪-೦**

ಕರ್ನಾಟಕಪ್ರಾಂತ್ಯದಲ್ಲೆಲ್ಲಾ ಮುಖ್ಯವಾಗಿ ದಕ್ಷಿಣ ಕನ್ನಡದ ಜನಗಳಲ್ಲಿ ಅನೇಕ ಚಂದಾದಾರರನ್ನು ಪಡೆದು ಕಳೆದ ೧೧ ವರ್ಷಗಳಿಂದ ಅವಿಶ್ರಾಂತವಾಗಿ ಜನಸೇವೆ ಮಾಡುತ್ತಿರುವ ಈ ಪತ್ರಿಕೆಯ ಮಾದರಿ ಸಂಚಿಕೆಗೆ ಕೂಡಲೆ ಬರೆದುಕೊಳ್ಳಿರಿ.

ಜಾಹೀರಾತುಗಳನ್ನು ಪ್ರಕಟಿಸಬೇಕೆಂದಿರುವವರು ಈ ಕೆಳಗಿನ ವಿಳಾಸಕ್ಕೆ ಬರೆದುಕೊಳ್ಳಿರಿ.

**ಮೆನೇಜರ್ ('ನವಯುಗ')**

**ಹಂಪನಕಟ್ಟಾ, ಮಂಗಳೂರು.**

## "ಕಲಾ"—ಚಿತ್ರಗಳಿಂದ ತುಂಬಿದ ಮಾಸಪತ್ರಿಕೆ.

ಸಂಪಾದಕ:—ಎ. ಯನ್. ಸುಬ್ಬರಾವ, ಕಲಾಮಂದಿರ.

ಚಿತ್ರ ಬರೆಯುವುದು, ಬಣ್ಣಗಳಿಂದ ಚಿತ್ರಗಳನ್ನು ಬಿಡಿಸುವುದು, ನಮೂನೆಗಳು, ಕುಸುರುಗಳು, ಕೆತ್ತನೆಗಳು, ಫೋಟೋ ಕೆಲಸ, ಮುಂತಾದ ಕುಶಲಕಲೆಗಳನ್ನು ಉಚಿತವಾಗಿ ಕಲಿಸಿಕೊಡುವ ಕಲಾಮಂಧಿರದಿಂದ ಹೊರಡುವ ಮಾಸಪತ್ರಿಕೆ.

ಕಥೆ, ಕವಿತೆ, ನಾಟಕ, ವಿಮರ್ಶೆ, ಕಲಾಶಾಸ್ತ್ರ, ಹಳೆಯ ಮತ್ತು ಹೊಸ ಪದ್ಧತಿಯ ಚಿತ್ರಗಳು, ರಂಗಭೂಮಿಯ ಸಲಹೆ, ಮತ್ತು ಸೂಚನೆ ಮುಂತಾದ ಅನೇಕ ಉಪಯುಕ್ತ ಲೇಖನಗಳು ಇದರಲ್ಲಿ ಅಡಕವಾಗಿರುತ್ತವೆ. ಅಖಿಲಕರ್ನಾಟಕದಲ್ಲಿ ಇಂತಹ ಇನ್ನೊಂದು ಪತ್ರಿಕೆಯಿಲ್ಲ.

**ವರುಷದ ಚಂದ ೩-೮-೦** **ವಿ. ಪಿ. ಮೂಲಕ ವರುಷಕ್ಕೆ ೩-೧೨-೦**

ನಮ್ಮಲ್ಲಿ ದೊರೆಯುವ ಇತರ ಪುಸ್ತಕಗಳು:—

ಕಲಾನಿವೇದನ ೧-೦-೦; ಕಲಾ ೧ನೆಯ ವರುಷದ ಸಂಪುಟ ೪-೦-೦; ಕಲಾ ೨ನೆಯ ವರುಷದ ಸಂಪುಟ ೧-೮-೦ ರಂಗಪ್ಪನ ಓದು (ಕಥೆ), ಶೇಖರಪ್ರಿಯಾ (ಕಥೆ), ಒಂದೇ ಒಂದು (ನಾಟಕ), ಗುಮಾಸ್ತ (ನಾಟಕ) ಕೂಲಿ (ನಾಟಕ), ಇವೆಲ್ಲಾ ಪ್ರತಿ ೧ಕ್ಕೆ ೪ ಆಣೆಗಳು.

**ಕಲಾಮಂದಿರಂ, ಬೆಂಗಳೂರು ನಗರ.**


CC-0. Jangamwadi Math Collection. Digitized by eGangotri

# ವಿಶೇಷ ಸಂಚಿಕೆಯ

# ಸಾರಸ್ವತ ಸಂಪತ್ತಿ

**ಕೆಲವು ಲೇಖಕರು:—**

ಸರ್ ಎಂ. ವಿಶ್ವೇಶ್ವರಯ್ಯನವರು, ಕೆ. ಸಿ. ಐ. ಇ; ಎಲ್. ಎಲ್. ಡಿ; ಮೈಸೂರ ದೇಶದ ವಿದ್ಯಾ ಇಲಾಖಾಧಿಪತಿಗಳೂ ಅರ್ಥಶಾಸ್ತ್ರಪ್ರವೀಣರೂ ಆದ ಶ್ರೀ. ಎನ್. ಎಸ್. ಸುಬ್ಬರಾಯರು, M. A. Ph. D ಡಾ. ವ್ಹಿ. ಆರ್. ಕೊಕಟನೂರು, M. S. c. Ph.D ( America ); ಶ್ರೀಮತಿ ರಾಗಿಣಿದೇವಿ; ಪ್ರೊ. ಆರ್. ವಿ. ಜಹಾಗೀರದಾರ, M. A (London;) ಪ್ರೊ. ವಿ. ಕೆ. ಗೋಕಾಕ; ಪ್ರೊ. ಎನ್. ಎಸ್. ನಾರಾಯಣಶಾಸ್ತ್ರಿ, M. A. ( ಪ್ರಾಯೋಗಿಕ ಮನಃಶಾಸ್ತ್ರ ವಿಷಯವಾಗಿ ); ಪ್ರೊ. ಕೆ. ವಿ, ಅಯ್ಯರ್; ಪ್ರೊ. ಜಿ. ಎಮ್. ಮೋರಿಸ್, M. A.; ಪ್ರೊ. ನಾಡಕರ್ಣಿ ವಾವ. ನರಾಯರು M. A.; ಪ್ರೊ. ಎಸ್. ರಾಮರಾವ್ M. S. c; ಪ್ರೊ. ಎಲ್. ನಾರಾಯಣರಾವ್, M. S. c; ಪ್ರೊ. ಕೆ. ಎಸ್. ಶ್ರೀಕಂಠನ್ M. A. F. R. E. S. ( London ), ಮಧುರಾ; ಪ್ರೊ. ಡಿ. ಕೆ. ಭೀಮಸೇನರಾವ್, M. A. ಹೈದರಾಬಾದು; ಪ್ರೊ. ತೀ. ನಾ. ಶ್ರೀಕಂಠಯ್ಯನವರು; ದಕ್ಷಿಣಕನ್ನಡದ ಮಾನ್ಯ ಲೇಖಕರಾದ ಶ್ರೀಯುತರುಗಳಾದ ಕಡೆಂಗೊಡ್ಲು ಶಂಕರಭಟ್ಟರು, ಗೋವಿಂದ ಪೈಗಳು, ಗಣಪತರಾವ್ ಐಗಳ್, ಕೆ. ಪರಮೇಶ್ವರಮಯ್ಯನವರು, ಕೆ. ಎಸ್. ಕಾರಂತರು ಮೊದಲಾದವರು; ಉತ್ತರಕನ್ನಡದ ಶ್ರೀ. ಎಮ್. ಎಲ್. ಕೋಟ; ಕೊಡಗಿನ ಡಿ. ಸಾಕಮ್ಮನವರು; ಹೈದ್ರಾಬಾದಿನ ಶ್ರೀಮಂತ ಕಾರವಾನ ಶ್ರೀನಿವಾಸರಾಯರು ಇವರೇ ಮೊದಲಾದವರಲ್ಲದೆ ಉತ್ತರಕರ್ನಾಟಕದ ಅನೇಕ ಮಿತ್ರರು, ಹಿತೈಷಿಗಳು ಇವರೆಲ್ಲರು ಬರೆದ ವಿಜ್ಞಾನ, ಸಾಹಿತ್ಯ, ಸಂಗೀತ, ಕಲೆ ಮೊದಲಾದ ವಿವಿಧವಿಷಯಾತ್ಮಕವಾದ ಲೇಖನಗಳು ಅಚ್ಚಾಗುವವು.

ಜಾಹೀರಾತುಗಳನ್ನು ಕೊಡುವವರು ತ್ವರೆಮಾಡಬೇಕು. **ವಿಶೇಷ ಸಂಚಿಕೆಯ ದರಗಳನ್ನು ವಾಡಿಕೆಯಂತೆ ಈ ಸಲ ಹೆಚ್ಚಿಸಿಲ್ಲ.** ವ್ಯಾಪಾರದ ಮುಗ್ಗಟ್ಟನ್ನು ಕಂಡು ಜಾಹೀರಾತುದಾರರಿಗೆ ಈ ಸೌಲಭ್ಯವನ್ನು ತೋರಿಸಲಾಗಿದೆ. ಇದರ ಉಪಯೋಗವನ್ನು ಅವರು ಪಡೆದುಕೊಳ್ಳಲಿ. ೧ ಪುಟಕ್ಕೆ ೨೦ ರೂ; ½ ಪುಟಕ್ಕೆ ೧೨ ರೂ; ¼ ಪುಟಕ್ಕೆ ೭ ರೂ. ⅛ ಪುಟಕ್ಕೆ ೪ ರೂ. ಮಾತ್ರ.

ಪ್ರತಿಗಳು ಬೇಗನೆ ತೀರಿ ಹೋಗುವವಾದ್ದರಿಂದ ಚಂದಾದಾರರಾಗಲಿಚ್ಛಿಸುವವರು ಮತ್ತು ಗ್ರಾಹಕರು ಬೇಗನೆ ತಮ್ಮ ಹೆಸರುಗಳನ್ನು ದಾಖಲು ಮಾಡಬೇಕು.

ವ್ಯವಸ್ಥಾಪಕರು

**ಜಯಕರ್ನಾಟಕ**

CC-0. Jangamwadi Math Collection. Digitized by eGangotri

# ಪರಿವಿಡಿ

ವಿ. ಸೂ :—ಬರೆಹಗಾರರ ಹೆಸರುಗಳ ಹಿಂದೆ 'ಶ್ರೀಯುತ' ಎಂದು ಸೇರಿಸಿ ಓದಿಕೊಳ್ಳಬೇಕು.



CC-0. Jangamwadi Math Collection. Digitized by eGangotri




ಸಂಪುಟ ೧೦ | ಆಂಗಿರಸ ಸಂವತ್ಸರ, ಸೀಗೆಯ ಹುಣ್ಣಿವೆ | ಸಂಚಿಕೆ ೧೨

ಚಾಲುಕ್ಯ ವಿಕ್ರಮ ವರ್ಷ ೮೫೭

# ವಿಜ್ಞಾನ-ವೇದಾಂತ-ಧರ್ಮಗಳ ತ್ರಿಕೂಟ

ಲೇಖಕರು:— ಶ್ರೀ. ಗುರುರಾಜ ಭೀ. ಜೋಶಿ, ಬಿ. ಎ. ಗದಗು

(" ಪ್ರಸ್ತುತ ತತ್ವವಿಚಾರದಲ್ಲಿ ಧರ್ಮದ ಪ್ರಾಬಲ್ಯ " ಎಂಬ ಪ್ರೊ. ರಾಧಾಕೃಷ್ಣರ ಗ್ರಂಥದ ಆಧಾರದಿಂದ ಬರೆದದ್ದು )

ಬಹುದಿವಸಗಳಿಂದ ವೇದಾಂತಕ್ಕೂ ವ್ಯವಹಾರಕ್ಕೂ ತೀಕ್ಷ್ಣವಾದ ವಿರೋಧವು ಕಂಡು ಬಂದಿರುವದು. ವೇದಾಂತವು ಕಾಲ್ಪನಿಕತರಂಗಗಳಲ್ಲಿ ಲೋಲಾಡುವದರಿಂದ ವ್ಯವಹಾರದಲ್ಲಿ ಆಭಾಸವಾಗಿ ತೋರುವದು. ಈಗಂತೂ ವಿಜ್ಞಾನಶಾಸ್ತ್ರದ ಪ್ರಜ್ವಲಪ್ರಕಾಶದಲ್ಲಿ ವೇದಾಂತದ ಛಿದ್ರಗಳು ಒಡೆದುಕಾಣುವವು. ತತ್ವವಿಚಾರದ ಅವಸ್ಥೆಯೇ ಹೀಗಾದ ಮೇಲೆ, ಧರ್ಮವಂತೂ ಅಂಧ-ವಿಶ್ವಾಸವೆಂದು ತೀರ ನಿಂದ್ಯವಾಗಿರುವದು. ವಿಜ್ಞಾನಶಾಸ್ತ್ರಕ್ಕೂ ಧರ್ಮಕ್ಕೂ ನಿಜವಾದ ವಿರೋಧವಿರುವದೇನು? ತತ್ವವಿಚಾರಕ್ಕೂ ವಿಜ್ಞಾನಶಾಸ್ತ್ರಕ್ಕೂ ಆಗಿಬರುವದಿಲ್ಲವೇನು? ಇದನ್ನು ವಿಚಾರಿಸುವದೇ ಪ್ರಸ್ತುತ ಲೇಖನದ ಪ್ರಸಕ್ತಿಯು.

**ವೇದಾಂತ** (Philosophy) ವೆಂದರೇನು ? ತತ್ವಸ್ವರೂಪವನ್ನು ನಿರ್ಣಯಿಸಲು ಯತ್ನಿಸುವ ಬುದ್ಧಿವ್ಯಾಪಾರವೇ ವೇದಾಂತವು. ತತ್ವದ ಮೂಲರೂಪವನ್ನು ಶೋಧಿಸುವ ಸುಸಂಗತ ವಿಚಾರವಿದು. ಆದುದರಿಂದ ಇದು ವಿಜ್ಞಾನಶಾಸ್ತ್ರದಿಂದ ವಿಲಕ್ಷಣವಿರುವದು; ಮತ್ತು ಧರ್ಮಕಲೆಗಳಿಂದ ಭಿನ್ನವಾಗಿರುವದು.

**ವಿಜ್ಞಾನಶಾಸ್ತ್ರ** (Science) ವಾದರೂ ಸುಸಂಗತ ತತ್ವವಿಚಾರವನ್ನೇ ಗಮ್ಯವಾಗಿಟ್ಟುಕೊಂಡಿದೆ. ಆದರೆ ಅದು ತತ್ವವೆಲ್ಲವನ್ನೂ ಒಳಗೊಂಡಿಲ್ಲ. ಸಜೀವವಸ್ತುಗಳಲ್ಲಿ ವಿಂಗಡವಾಗದೆ ಹೊಂದಿಕೊಂಡಿದ್ದ ಗುಣಧರ್ಮಗಳನ್ನು ಹೊರಗೆ ಕಿತ್ತುಕೊಂಡು ವಿವೇಚಿಸುವದು ವಿಜ್ಞಾನಶಾಸ್ತ್ರದ ಪದ್ಧತಿಯು. ಆದರೆ ವೇದಾಂತವು ಅನುಭವವೆಲ್ಲವನ್ನೂ ಏಕತ್ರ ಶೇಖರಿಸಿ, ವಿವೇಚಿಸಿ, ವಿಚಾರಿಸಿ ನೆಲೆ [illegible] ವಿಜ್ಞಾನಕ್ಕೆ, ವಿಚಾರ್ಯವಾದ ವಿಷಯಗಳ

CC-0. Jangamwadi Math Collection. Digitized by eGangotri

ಗುರುತೇ ಗುರುತು. ವಿಚಾರಿಸುವ ಕರ್ತೃವಿನ ಅರಿವು ಅರಿದು. ಬಾಹ್ಯದೃಷ್ಟಿಯಿಂದ ಪರಾಕ್ (Objective) (ಹೊರಗಿನ) ವಿಷಯಗಳನ್ನು ಅರಿತು,ಪ್ರತ್ಯಕ್ (Subjective) (ಒಳಗಿನ) ಪುರುಷನನ್ನು ಮರೆತಿರುವದು. ವೇದಾಂತವು-ಪ್ರತ್ಯಕ್‌ಪುರುಷನಿಗೆ ಪರಾಗ್‌ವಿಷಯಗಳು ಹೇಗೆ ಸಂಬಂಧಪಟ್ಟಿರುವವು, ಅವುಗಳ ವಿಷಯವಾಗಿ ಈ ಪುರುಷನ ಹಂಬಲವಾವದು, ಮಮತೆ ಯಾವದು- ಇದೆಲ್ಲವನ್ನು ಸೂಕ್ಷ್ಮವಾಗಿ ನಿರೀಕ್ಷಿಸುವದು. ಬೇರೆ ಬೇರೆ ಶಾಸ್ತ್ರಗಳ ನಿರ್ಣಯಗಳು ಭಿನ್ನಭಿನ್ನವಾದರೂ ವೇದಾಂತವು ಅವೆಲ್ಲವುಗಳನ್ನು ಏಕತಾತ್ಪರ್ಯವಾಗಿ ಜೋಡಿಸಬೇಕಾಗುವದು. ಸೃಷ್ಟಿಶಾಸ್ತ್ರದಲ್ಲಿ ಎಲ್ಲವು ವಿಶ್ವಬಂಧಕ ನಿಯಮಕ್ಕೆ ಒಳಪಟ್ಟಿದೆಯೆಂದು ಗೊತ್ತಾಗಿದ್ದರೂ ಮಾನವನ ಸ್ವಾತಂತ್ರ್ಯವನ್ನು ಇನ್ನೊಂದು ಶಾಸ್ತ್ರವು ಘಂಟಾಘೋಷವಾಗಿ ಹೇಳುತ್ತದೆ. ಈ ವಿರೋಧವನ್ನು ದೂರ ಮಾಡಿ, ಏಕವಾಕ್ಯತೆಯನ್ನು ತರುವದು ವೇದಾಂತದ ಕಾರ್ಯವು. ಇದು ಅಲ್ಲದೆ ವಿಜ್ಞಾನವು ಕೆಲವು ಮಾತುಗಳನ್ನು ಗೃಹೀತವಾಗಿಟ್ಟುಕೊಳ್ಳುವದು. ಪದಾರ್ಥವಿಜ್ಞಾನಶಾಸ್ತ್ರವು (Physics) ಸ್ವತಂತ್ರವಾದ ಪ್ರಕೃತಿಯನ್ನೊಪ್ಪುವದು. ಭೂಮಿತಿಯು ದೇಶವನ್ನಿಟ್ಟುಕೊಳ್ಳುವದು. ಹೀಗೆ ವಿಜ್ಞಾನವು ವಿಚಾರದ ಆಧಾರವಿಲ್ಲದೆ ಒಪ್ಪಿದ ಮೂಲ ಮಾತುಗಳನ್ನು ವೇದಾಂತವು ವಿಚಾರಕ್ಕಾಗಿ ಮುಖ್ಯಪ್ರಶ್ನೆಗಳೆಂದಿಟ್ಟುಕೊಳ್ಳುವದು. ವಿಚಾರಕ್ಕೆ ಸರಿದೋರಿದ್ದು ಗ್ರಾಹ್ಯವು;ವಿಚಾರಕ್ಕೆ ಬಾರದ್ದು ತ್ಯಾಜ್ಯವು. ವೇದಾಂತಕ್ಕೆ ಅಂಧಶ್ರದ್ಧೆಯು ಬೇಡ; ಅಂಧಶ್ರದ್ಧೆಗಿಂತಲೂ ಅಶ್ರದ್ಧೆಯನ್ನು ಹೆಚ್ಚಾಗಿ ಪ್ರೀತಿಸುವದು; ಪ್ರತ್ಯಕ್ಷ ಪ್ರತೀತಿಗೆ ಬರುವ ಅನುಭವಗಳನ್ನು ಮೂಲವಾಗಿಟ್ಟುಕೊಂಡು, ತನ್ನ ಮಂದಿರವನ್ನು ಕಟ್ಟುವದು; ವ್ಯವಹಾರಕ್ಕೆ ಬೆದರಿ ಕತ್ತಲೆಯ ಕೋಣೆಯಲ್ಲಿ ಕುಳಿತು ಕಲ್ಪನಾಲೋಕದಲ್ಲಿ ಸುತ್ತಾಡುವದು ತತ್ವವಿಚಾರವಲ್ಲ-ಮೂಢ ಮಾರ್ಗವು.

ವಿಜ್ಞಾನಕ್ಕೂ ವೇದಾಂತಕ್ಕೂ ತತ್ವವಿಚಾರವೇ ವಿಷಯವಾದರೂ ವಿಜ್ಞಾನವು ಪೂರ್ಣ ವಿಚಾರಮಾಡುವದಿಲ್ಲ; ಪ್ರತ್ಯಗಾತ್ಮನನ್ನು ನೋಡುವದಿಲ್ಲ.ವೇದಾಂತವು ಪೂರ್ಣ ವಿಚಾರಮಾಡುವದು; ಪ್ರತ್ಯಗಾತ್ಮನನ್ನು ಮರೆಯದೆ, ಪರಾಗ್ವಿಷಯಗಳನ್ನು ವಿವೇಚಿಸುವದು.

ಧರ್ಮವಾದರೂ ಇದೇ ಉದ್ದೇಶದಿಂದಲೇ ಹೊರಟಿರುವದಲ್ಲವೆ? ಧರ್ಮವೇದಾಂತಗಳೆರಡೂ ದೃಶ್ಯಜಗತ್ತು ಏಕೆ ಮತ್ತು ಎಲ್ಲಿಂದ ಬಂತು – ಇವೇ ಮೊದಲಾದ ಗೂಢಪ್ರಶ್ನೆಗಳನ್ನು ಬಿಡಿಸಲಿಕ್ಕೆ ಯತ್ನಮಾಡುವವು. ಆದರೂ ಇವೆರಡರ ಗಮ್ಯಗಳೂ ಪದ್ಧತಿಗಳೂ ಬೇರೆಬೇರೆ. ಆತ್ಮನ ಉದ್ಧಾರವು ಧರ್ಮದ ಉದ್ದೇಶವು; ಸತ್ಯದ ಶೋಧವು ವೇದಾಂತದ ಗುರಿಯು. ನಿಜವಾದ ಧರ್ಮವು ನಿರಂತರಧ್ಯಾನದಿಂದ ಹುಟ್ಟಿದ ಅಪರೋಕ್ಷ (Immediate Spiritual vision) ವನ್ನವಲಂಬಿಸಿದ್ದರೂ ಸಾಮಾನ್ಯರ ಧರ್ಮಕ್ಕೆ ಮತಪ್ರವರ್ತಕರ ಅಥವಾ ಮತಸ್ಥಾಪಕರ ವಚನದ ಮೇಲಿನ ವಿಶ್ವಾಸವೇ ಆಧಾರವಾಗಿರುವದು. ಆದುದರಿಂದ ಧರ್ಮಕ್ಕೆ ವಿಶ್ವಾಸವೇ ತಳಹದಿಯು; ದೊಡ್ಡವರು ಹೇಳಿದ ಮಾತುಗಳನ್ನು ನಂಬುವದು ಧರ್ಮದ ದಾರಿಯು. ವಿಚಾರವನ್ನು ಕೆಳಗೊತ್ತುವದು ಧರ್ಮದಕಾರ್ಯವು.ವೇದಾಂತವು ವಿಚಾರಮಾಡುವದು; ಧರ್ಮವು ವಿಶ್ವಾಸವಿಡುವದು. ವೇದಾಂತಿಯು ಹಿಂದೆ ಮುಂದೆ ಆಲೋಚಿಸಿ ವಿಚಾರದಲ್ಲಿ ಬೀಳುವನು; ಧಾರ್ಮಿಕನು ನಂಬಿ ನಡೆಯುವನು;ಪ್ರೇಮದಿಂದ ಜೀವಿಸುವನು. ಏನೇ ಆದರೂ ಸಾಮಾನ್ಯ ಜನತೆಯನ್ನು ಜಾಗೃತಗೊಳಿಸಿ ಅವರ ಹೃದಯವನ್ನು ಆನಂದಗೊಳಿಸುವದು ಧರ್ಮವು. ಆದುದರಿಂದ ಧರ್ಮವನ್ನು ಹಿಂಬಾಲಿಸುವವರು ಬಹಳ. ವೇದಾಂತವನ್ನನುಸರಿಸುವವರು ಅಲ್ಪರು.

ಆದರೆ ಪ್ರಚಲಿತಧರ್ಮವು ಮಾತ್ರ ವೇದಾಂತಕ್ಕೆ ಅಡ್ಡಬರುವದು. ದೃಶ್ಯಜಗತ್ತಿನಲ್ಲಿ ತನ್ನ ಆಟವು ನಡೆಯದೆ ಇದ್ದದ್ದನ್ನು ನೋಡಿ, ಅದೃಶ್ಯ ಜಗತ್ತಿಗೆ ಈ ಧರ್ಮವು ಓಡಿ ಹೋಯಿತು. ಧರ್ಮವು ವಿಜ್ಞಾನಶಾಸ್ತ್ರದೊಡನೆ ವಿರೋಧವನ್ನು ಬೆಳಿಸಿ, ಹೆಣಗಾಡಿ, ಪ್ರಬಲವೈರಿಯನ್ನು ಕಂಡು, ಅದರೊಡನೆ ಒಪ್ಪಂದವನ್ನು ಮಾಡಿಕೊಂಡಿತು. ಅದೃಶ್ಯಜಗತ್ತಿನಲ್ಲಿಯೇ ಸುಳಿದಾಡುವ ವೇದಾಂತಕ್ಕೂ ಧರ್ಮಕ್ಕೂ ವಿರೋಧವು ಪ್ರಬಲವಾಗುತ್ತ ನಡೆಯಿತು. ವಿಚಾರವು ಮನುಷ್ಯನಲ್ಲಿ ಹೆಚ್ಚಾದಾಗ ವಿಶ್ವಾಸದ ಆಟವು ನಡೆಯಲಾರದು. ಪ್ರಚಲಿತ ಮೂಢಭಾವನೆಗಳ ಮೂರ್ಖತನವನ್ನು ಸಾಕ್ರೇಟಿಸ್, ಕ್ರೈಸ್ತ, ಬ್ರುನೋ, ಗ್ಯಾಲಿಲಿಯೋ ಮೊದಲಾದ ಮಹಾಪುರುಷರು ತಮ್ಮ ಜೀವಗಳನ್ನೇ ಧಾರೆಯೆರೆದು, ಪ್ರಕಟಗೊಳಿಸಿದ್ದಾರೆ.

CC-0. Jangamwadi Math Collection. Digitized by eGangotri

ಈಗಿನ ಸ್ವಾತಂತ್ರ್ಯದ ದಿವಸಗಳಲ್ಲಿ ಸಹ, ಜನರ ಮೂಢ ರೂಢಿಗಳಿಗೂ, ಸರಕಾರಗಳ ದುರಾಗ್ರಹಕ್ಕೂ ಇರುವ ಮನ್ನಣೆಯನ್ನು ನೋಡಿದರೆ, ಸ್ವತಂತ್ರರಾಷ್ಟ್ರಗಳು ಕೂಡ ಸತ್ಯವನ್ನು ಬಿಟ್ಟು ಬಹುಮತಕ್ಕೆ ಮರುಳಾದದ್ದು ಸ್ಪಷ್ಟವಾಗಿ ತೋರುತ್ತದೆ. ಜರ್ಮನ್‌ದೇಶದಲ್ಲಿ ಸರಕಾರವನ್ನು ಹೊಗಳುವ ಹೊರತು ಯಾವ ವೇದಾಂತಿಯೂ ಬಾಳಲಾರನು. ಮೊನ್ನೆಯ ಮಹಾಯುದ್ಧವು ಬಹುಪಾಪಕರವಾದದ್ದೆಂದು ಯಾರಾದರೂ ನಂಬಿದರೆ, ಅವನು ಇಂಗ್ಲಂಡಿನಲ್ಲಿ ನಿಲ್ಲಲಾರನು; ಕ್ರೈಸ್ತನು ಪಾದ್ರಿಗಳ ಕಿಸೆಯಲ್ಲಿ ಮಾತ್ರ ಇರುವನು. ವ್ಯವಹಾರದಲ್ಲಿ ಹುಸಿಯಾಗಿರುವನು. ಸತ್ಯಾಗ್ರಹಿಯಾದ ಕ್ರೈಸ್ತನ ಧರ್ಮವು ದುರಾಗ್ರಹಿಗಳ ಕೈಯಲ್ಲಿ ಸಿಕ್ಕಿದೆ. ಅವನ ಅಹಿಂಸೆಯು ಹಿಂಸೆಗೆ ಅನುವಾಗಿದೆ. ಇಂಥ ಧರ್ಮಕ್ಕೆ ವೇದಾಂತವೂ ಬೆಂಬಲವಾಗಿದೆ.

ಈಗ ಪ್ರಚಲಿತ ಮತಕ್ಕೆ ಅನುಕೂಲವಿರುವ ತತ್ವವಿಚಾರವೇ ವೇದಾಂತವಾಗಿರುವದು. ನಿಷ್ಪಕ್ಷಪಾತದ ಸತ್ಯಾನ್ವೇಷಣವು ವೇದಾಂತದ ತಳಹದಿಯೆಂಬದನ್ನು ಮರೆತುಬಿಟ್ಟಿರುವರು. ಸತ್ಯವೇ ಅದರ ಗುರಿಯು; ವಿಚಾರವೇ ಅದರ ದಾರಿಯು. ಇಂಥ ಸ್ವತಂತ್ರ ವೇದಾಂತವು ಇನ್ನಾವದಕ್ಕೂ ದಾಸಿಯಾಗಲಾರದು. ಜೀವದ ನಿಜವಾದ ಜೀವಾಳವನ್ನು ಗುರುತಿಸುವದು ಅದರ ಕರ್ತವ್ಯವು. ಜೀವದ ಕೆಲವು ಅನುಕೂಲತೆಗಳನ್ನು, ಆವಶ್ಯಕತೆಗಳನ್ನು ಗಮನಿಸಿ, ವೇದಾಂತವು ಇವುಗಳನ್ನು ಎತ್ತಿಹಿಡಿಯಬೇಕೆಂದು ನಾವು ಬಯಸುವದುಂಟು. ಆದರೆ ನಿಜವಾದ ತತ್ವವಿಚಾರಿಯು ನಿರ್ದಾಕ್ಷಿಣ್ಯದಿಂದ ಸತ್ಯವನ್ನೇ ಮುಂದೆಮಾಡಿಕೊಂಡು, ಮುಂದಿನ ಪರಿಣಾಮಕ್ಕೆ ಮನಸೋಲದೆ, ದೃಢಮನಸ್ಸಿನಿಂದ ಸತ್ಯದೇವತೆಯ ಉಪಾಸಕನಾಗುವನು. ಎಂಥ ಪ್ರಸಂಗದಲ್ಲಿಯೂ ಕರಿದು ಬಿಳಿದಾಗಲಾರದು. ಕರಿದು ಕರಿದೇ; ಬಿಳಿದು ಬಿಳಿದೇ. ಮರುಳು ಧಾರ್ಮಿಕರು ಎಷ್ಟೋ ಸಾರೆ, ಹಲಕೆಲವು ಮತಗಳನ್ನು ಬಿಟ್ಟರೆ ಜಗತ್ತು ಮುಳುಗುವದೆಂದು ಕಿರುಚುತ್ತಿದ್ದರು. ಅಂಥ ಮತಗಳನ್ನು ಬಿಟ್ಟರೂ ಜಗತ್ತು ಸುಸೂತ್ರವಾಗಿ ನಡೆದಿರುವದು.

ಮನುಷ್ಯನಲ್ಲಿ ಮೂರು ಶಕ್ತಿಗಳಿರುವವು: ಬುದ್ಧಿ, ಭಾವನೆ ಮತ್ತು ಸಂಕಲ್ಪ. ಬುದ್ಧಿಯಿಂದ ವಿಚಾರಿಸುವನು; ಭಾವನೆಯಿಂದ ಧ್ಯಾನಿಸುವನು; ಸಂಕಲ್ಪದಿಂದ ನಿರ್ಣಯಿಸುವನು. ಬುದ್ಧಿಯ ಮೇಲೆ ತತ್ವವಿಚಾರವು, ಭಾವನೆಯಮೇಲೆ ಧರ್ಮವು, ಸಂಕಲ್ಪದಮೇಲೆ ನೀತಿಯು ಅವಲಂಬಿಸಿರುವವು. ಮನುಷ್ಯನ ಅನುಭವವು ಹೀಗೆ ಮೂರು ತೆರನಾಗಿದೆ. ಅವನ ದೃಷ್ಟಿಯೂ ಮೂರು ವಿಧ. ಇದರಿಂದ ತತ್ವವಿಚಾರವು ಭಾವನಾಮಯವಾಗಬೇಕೆಂದರ್ಥವಲ್ಲ. ತತ್ವವಿಚಾರವು ಬುದ್ಧಿಪ್ರಧಾನವೇ. ಅದು ಮನೋಭಾವನೆಗಳಿಗೆ ಅನಿಸಿದ ಅನುಭವಕ್ಕೂ ಸಂಕಲ್ಪಕ್ಕೆ ನಿಲುಕಿದ ನಿರ್ಣಯಕ್ಕೂ ಮರ್ಯಾದೆಯನ್ನು ಕೊಟ್ಟು, ಜಗತ್ತಿನ ಎಲ್ಲ ಅನುಭವಕ್ಕೂ ಒಂದು ಸಂಘಟಿತಸ್ವರೂಪವನ್ನು ಕೊಡುವದು.

'ಅನುಭವ' ಎಂಬ ಶಬ್ದವು ಸಂದಿಗ್ಧವಿರುವದು. ವಿಜ್ಞಾನಶಾಸ್ತ್ರಜ್ಞನೂ ಅನುಭವವನ್ನು ಅವಲಂಬಿಸುತ್ತಾನೆ. ಆದರೆ ಅವನ ಅನುಭವವು ಹೊರಗಿನ ಪದಾರ್ಥಗಳಿಂದ ಹುಟ್ಟಿದ್ದು. ಒಳಗಿನ ಅನುಭವಿಸುವವನನ್ನೂ ಅವನ ಎನಿಸುತಿನಿಸುಗಳನ್ನೂ ಮರೆಯುತ್ತಾನೆ. ಏಕೆಂದರೆ ಇವುಗಳನ್ನು ಸ್ವೀಕರಿಸಿದರೆ ಧರ್ಮದ ಮೋಹವು ಎಲ್ಲಿ ತನ್ನನ್ನು ಮುಚ್ಚುವದೋ ಎಂದು ಬೆದರುತ್ತಾನೆ. ಧರ್ಮವು ಒಳಗೆ ಅಡಗುತ್ತದೆ. ವಿಜ್ಞಾನವು ಹೊರಗೆ ಓಡುತ್ತದೆ. ಧರ್ಮವು ಹೊರಗಿನ ಜಗತ್ತನ್ನು ಬಿಡಬಾರದು; ವಿಜ್ಞಾನವು ಒಳಗಿನ ಆತ್ಮನನ್ನು ಮರೆಯಬಾರದು. ವಿಜ್ಞಾನದ ನಿರೀಕ್ಷಣೆಯೂ, ಧರ್ಮದ ಧ್ಯಾನವೂ ತತ್ವಜ್ಞಾನದ ಕ್ಷೇತ್ರವು. ಇವೆರಡನ್ನೂ ಶೇಖರಿಸಿಕೊಂಡು, ಇವೆರಡರಲ್ಲಿರುವ ಹೆಚ್ಚುಕಡಿಮೆಗಳನ್ನು ವಿಚಾರದ ಒರೆಗಲ್ಲಿಗೆ ಇಟ್ಟು ಹಚ್ಚುವದು. ಕೆಲವರು ದೇವರಿದ್ದಾನೆನ್ನುವರು. ಇನ್ನು ಕೆಲವರು ದೇವರಿಲ್ಲವೆನ್ನುವರು. ಉಳಿದವರು ಇದ್ದರಿರಬಹುದು, ಇಲ್ಲವಾದರೆ ಇಲ್ಲವೆಂದು ಸಂಶಯವುಳ್ಳವರಾಗಿರುವರು. '(ದೇವರಿದ್ದುದೇ ಆದರೆ!) (ದೇವಾ!) (ಆತ್ಮವಿದ್ದುದೇ ಆದರೆ) ನನ್ನ ಆತ್ಮನನ್ನು ಉದ್ಧರಿಸು!' ಎಂದು ಎರಡೂ ದಂಡೆಯ ಮೇಲೆ ಕೈಯಿಟ್ಟು ಪ್ರಾರ್ಥಿಸುವವರು ಬಹುಜನರು. ತತ್ವವಿಚಾರವು ಇಂಥ ಎಲ್ಲ ಮತಗಳನ್ನು ಚೆನ್ನಾಗಿ ವಿಮರ್ಶಿಸಿ, ಎಲ್ಲ ದೇಶಗಳ ಪ್ರಾಚೀನ ಧಾರ್ಮಿಕ ಗ್ರಂಥಗಳನ್ನು ಅವಲೋಕಿಸಿ, ಅದರೊಳಗಿನ ಸರಳ ವಿಚಾರಕ್ಕೆ ಸರಿದೋರದ ಮೂಢ ಭಾವನೆಗಳನ್ನೂ ದುರಾಗ್ರಹಗಳನ್ನೂ ಕಿತ್ತುಹಾಕಿ, ಜಗತ್ತಿಗೂ ಜೀವಕ್ಕೂ ಯೋಗ್ಯಪರಿಣಾಮನ್ನೂ ಪ್ರಯೋಜನವನ್ನೂ ಕಲ್ಪಿಸಿ,

CC-0. Jangamwadi Math Collection. Digitized by eGangotri

ಒಂದು ಸಂಬದ್ಧವಾದ ಸಿದ್ಧಾಂತವನ್ನು ಮುಂದೆ ಇಡುವದು.

ತತ್ವವು ಸಿದ್ಧಾಂತವನ್ನು ಜಗತ್ತಿಗೆ ಕೊಡುವದು; ಆದರೆ ಅದು ಜಗತ್ತನ್ನು ಮರೆಯದು. ಜಗತ್ತನ್ನು ಬಿಟ್ಟು ಕಲ್ಪನೆಯಲ್ಲಿ ಕೂಡುವ ವೇದಾಂತವು ತನ್ನ ಕಾಲಕೆಳಗಿನ ಟೊಂಗೆಯನ್ನು ತಾನೇ ಕಡಿದುಕೊಂಡಂತಾಗುವದು. ತತ್ವದ ಸಿದ್ಧಾಂತವು ಜೀವನದ ಸಿದ್ಧಾಂತವು; ಜಗತ್ತಿನ ಸಿದ್ಧಾಂತವು; ಈ ಬಾಳುವೆಗೆ ಬುಡ-ತುದಿಗಳನ್ನು ಕೊಡುವ ಸಿದ್ಧಾಂತವು. ಅದು ಜಗತ್ತನ್ನು ಹೇಗೆ ಮರೆತೀತು. ಆದರೂ ಧರ್ಮದ ಪ್ರಭಾವವು ತತ್ವವಿಚಾರದ ಮೇಲೆ ಬೀಳಬಾರದು; ತಾನು ಸ್ವತಂತ್ರವಾಗಿದ್ದು ಧರ್ಮಕ್ಕೆ ಬೆಂಬಲವಾಗಬೇಕು. ಧರ್ಮವು ತತ್ವವಿಚಾರವನ್ನನುಸರಿಸಿದ್ದರೆ ಅದಕ್ಕೆ ಮಹತ್ವವು ಹೆಚ್ಚು; ಇಲ್ಲವಾದರೆ ಧರ್ಮವೆಂದರೆ ಮೂಢಭಾವನೆಗಳ ಮೂರ್ಖತನವೇ ಹೊರತು, ಆತ್ಮನನ್ನುದ್ಧರಿಸುವ ವಿಚಾರಮಾರ್ಗವಲ್ಲ.

ಕಾಡುಜನರು ಕಲ್ಲು, ಕಂಟಿಗಳನ್ನು ಪೂಜಿಸಿದರು. ದೆವ್ವ ಭೂತಗಳೇ ಇಷ್ಟದೇವತೆಗಳಾದವು. ಜಗತ್ತು ಸುಧಾರಿಸಿದಂತೆ ಈ ಕರಾಳಸ್ವರೂಪಗಳನ್ನು ಬಿಟ್ಟು ಸುಂದರ ಮೂರ್ತಿಗಳನ್ನು ಕಲ್ಪಿಸಿದರು. ಹೀಗೆ ಬಹುದೇವತಾ ಮತವು ಬೆಳೆಯಿತು. ಬುದ್ಧಿಗೆ ಇದೂ ಸಮಂಜಸವಾಗಿ ತೋರಲಿಲ್ಲ. ಪರಬ್ರಹ್ಮವಾದವು ಮುಂದಿನ ಮೆಟ್ಟಲು.

ಹೀಗೆ ಕಲ್ಲುಕಂಟಿಗಳನ್ನು ಬಿಡಿಸಿ, ಪರಬ್ರಹ್ಮನನ್ನು ಪೂಜಿಸಲಿಕ್ಕೆ ಹಚ್ಚಿದ್ದು ವಿಚಾರವೇ ಅಲ್ಲವೆ? ಧರ್ಮಕ್ಕೆ ತತ್ವವಿಚಾರದ ಕತ್ತರಿ ಇರದಿದ್ದರೆ, ಅದೊಂದು ಕಾಡುಗಿಡವಾಗುತ್ತಿತ್ತು. ತತ್ವವಿಚಾರವು ಅಡ್ಡಬಡೆದ ಟೊಂಗೆಗಳನ್ನು ಕತ್ತರಿಸಿ, ಅದನ್ನು ಅಂದವಾದ ಗಿಡವನ್ನು ಮಾಡಿದೆ.

ನಿಜವಾದ ವೇದಾಂತವು ಧರ್ಮದಲ್ಲಿ ಪರಿಣಮಿಸುವದು. ಏಕೆಂದರೆ ವಿಚಾರಕ್ಕೂ ವಿಶ್ವಾಸಕ್ಕೂ ವಿರೋಧವಿಲ್ಲ. ನಿಜವಾದ ಧರ್ಮವೆಂದರೆ ಈ ಧರ್ಮ, ಆ ಧರ್ಮವಲ್ಲ—ಅದು ತತ್ವದ ಮೇಲೆ ತಳವೂರಿದ ಧರ್ಮವು. ಧರ್ಮವನ್ನು ಸುಧಾರಿಸುವ, ಸಂರಕ್ಷಿಸುವ, ಸಾಕುವ ಈ ತತ್ವವು ಧರ್ಮದೆದುರು ಮೂಗೆಳೆಯಬಾರದು. ನಿರಾತಂಕ ಧಿಟ್ಟತನದಿಂದ ಧರ್ಮದ ತಪ್ಪುಗಳನ್ನು ಅದಕ್ಕೆ ಒಪ್ಪಿಸಿದರೆ, ತತ್ವವಿಚಾರವು ತನ್ನ ಕರ್ತವ್ಯವನ್ನು ಮಾಡಿದಂತಾಯಿತು.

ಹೀಗೆ ಧರ್ಮಕ್ಕಿಂತಲೂ ವೇದಾಂತವು ಮಿಗಿಲಾದದ್ದೆಂದು ಹೇಳಿದರೆ ಧರ್ಮವು ಅನಾವಶ್ಯಕವೆಂದು ತಿಳಿಯಕೂಡದು. ಮನುಷ್ಯನು ತನ್ನಲ್ಲಿರುವ ಪಶುವೃತ್ತಿಯನ್ನು ಬಿಟ್ಟು, ಆತ್ಮೋದ್ಧಾರಕ್ಕಾಗಿ ಹೆಣಗಾಡಲಿಕ್ಕೆ ಸಾಕಷ್ಟು ಶಕ್ತಿಯನ್ನೂ ಸಾಹಸವನ್ನೂ ಧರ್ಮದಿಂದಲೇ ಹೊಂದುತ್ತಾನೆ. ದುಃಖದಿಂದ ತೊಳಲುವ ಅಂತಃಕರಣಕ್ಕೆ ಶಾಂತಿಯನ್ನೂ ಸುಖವನ್ನೂ ಕೊಡುವದು ಧರ್ಮವೇ. ತತ್ವ ತಿಳಿದ ಆತ್ಮನಿಗೆ ಸ್ವರ್ಗ – ನರಕಗಳು ತುಚ್ಛವಾದರೂ— ಸಾಮಾನ್ಯ ಮನುಷ್ಯನಿಗೆ ಸ್ವರ್ಗಸುಖವು ಸಾಹಸಕ್ಕೆ ಅನುವಾಗಿಯೂ ನರಕವು ಪಾಪದಿಂದ ದೂರಿರಿಸಲಿಕ್ಕೂ ನೆರವಾಗುತ್ತವೆ. ಇದರಂತೆ ಧರ್ಮದ ಅವಗುಣವೆಂದರೆ, ಧರ್ಮದ ಹೆಸರಿನಲ್ಲಿ ಬಹುದಿವಸಗಳಿಂದ ನಡೆದ ಗುಲಾಮಗಿರಿ. ಧರ್ಮದ ಹೆಸರಿನಿಂದ ಕೊಲೆಪಾತಕಳಾಗಿವೆ. ವಿಚಾರವು ಈ ಧರ್ಮಕ್ಕೆ ಬೆಂಬಲವಿಲ್ಲದ್ದರಿಂದ ಧರ್ಮವು ಶಿವಗುಣವನ್ನು ಬಿಟ್ಟು ಅವಗುಣವನ್ನು ಹಿಡಿಯಿತು.

ಸತ್ಯಾನ್ವೇಷಿಯಾದ ತತ್ವವಿಚಾರವು ನಿಜವಾದ ಸುಖವನ್ನು ಕೊಡುವದು. ನಮ್ಮ ಸ್ಥೂಲದೃಷ್ಟಿಗೆ ಈ ಜಗತ್ತು ದುಃಖಮಯವಾದ ಸ್ಥಾನದಂತೆ ತೋರುತ್ತದೆ. ದೋಷಗಳು ಇಲ್ಲಿ ತುಂಬಿರುತ್ತವೆ. ಸುಖದುಃಖಗಳು ಜಗ್ಗುತ್ತವೆ. ಆತ್ಮನು ಇದಕ್ಕೆ ಬೇಸತ್ತು, ಇದರ ಅಪೂರ್ಣತೆಯನ್ನು ಅರಿತು, ಧರ್ಮಕ್ಕೆ ಮೊರೆಹೋಗುವನು. ಮೂಢವಿಶ್ವಾಸವು ಬಹಳದೂರ ಒಯ್ಯಲಾರದು; ವಿಚಾರದಿಂದ ಇದ್ದದ್ದನ್ನು ಕೂಡಿಸಿ, ಇಲ್ಲದ್ದನ್ನು ಬಯಸಿ ಸುಖದ ಸಂಸಾರವನ್ನು ಹುಡುಕುವನು. ಆದುದರಿಂದ ವೇದಾಂತವು ಯಾವನೊಬ್ಬನ ಸೊತ್ತು ಅಲ್ಲ; ಸುಖವನ್ನು ಹಂಬಲಿಸುವ ಎಲ್ಲರಿಗೂ ತೊತ್ತು ಅದು. ಎಲ್ಲರೂ ಒಂದಿಲ್ಲೊಂದು ರೀತಿಯಿಂದ ತತ್ವವಿಚಾರವನ್ನು ಮಾಡಿಯೇ ಇರುತ್ತಾರೆ. ಆದರಲ್ಲಿ ಉಚ್ಚನೀಚ ಭಾವವು ತೋರಬಹುದು. ಆದರೆ ಪಶುವಿಗಿಂತ ಮಿಗಿಲಾದ ಮಾನವಸಾಮಾನ್ಯರಿಗೂ ವೇದಾಂತವು ಅರಿಯದ ಮಾತಲ್ಲ. ಯಾವದಾದರೂ ಸಂಶಯ ಬಂದರೆ, ಆದರ ಸತ್ಯವೇನೆಂದು ಎಲ್ಲರೂ ಶೋಧಿಸುವರು.

CC-0. Jangamwadi Math Collection. Digitized by eGangotri

# ಕನ್ನಡ ವಿಚಾರ

ಲೇಖಕರು—ಶ್ರೀ. ದ. ರಾ. ಬೇಂದ್ರೆ ಮತ್ತು ಶ್ರೀ. ಬೆಟಗೇರಿ ಕೃಷ್ಣಶರ್ಮ

(ಜಯಕರ್ನಾಟಕದ ಇದೇ ಸಲದ ೮ ನೆಯ ಸಂಚಿಕೆಯಲ್ಲಿ ಈ ವಿಚಾರವನ್ನೆತ್ತಿ "ಕನ್ನಡ ನುಡಿ" "ಕನ್ನಡ ನಾಡು" ಇವುಗಳ ಬಗೆಗೆ ಬರೆಯಲಾಗಿದೆ. ಇಲ್ಲಿ ಅದರ ಮುಂದಣ ಭಾಗವಾದ "ಕನ್ನಡಿಗರು" ಎಂಬ ವಿಷಯವನ್ನೆತ್ತಿ ವಿವರಿಸಲಾಗಿದೆ. ಲೇ.)

ಕನ್ನಡ ಮಾತನಾಡುವ ಜನರೇ ಕನ್ನಡರು ಅಥವಾ ಕನ್ನಡಿಗರು. ನಮ್ಮನ್ನು ಕನ್ನಡರೆಂದು ತಮಿಳರು ಎರಡನೆಯ ಶತಮಾನದಲ್ಲಿ ಕರೆದಿದ್ದುದನ್ನು ಹಿಂದೆಯೇ ಹೇಳಿದೆ. 'ಕನ್ನಡಿಗ' ಎಂಬುದು ಮುಂದೆ ಜಾತಿವಾಚಕವಾಗಿಯೂ ಕುಲವಾಚಕವಾಗಿಯೂ ವ್ಯವಹಾರದಲ್ಲಿ ಒಂದಿದ್ದಿತೆಂದು ತೋರುವುದು. ಕನ್ನಡ, ಕಮ್ಮೆ, ವಾಣಿಜ್ಯ (ತೆಲುಗುಬಣಜಿಗ), ತಿಗುಳ, ಎಂದು ತೆಂಕಣನಾಡಿನಲ್ಲಿ ಬೇರೆ ಬೇರೆ ನಾಲ್ಕು ಕುಲಗಳೆಂದು ಚೆನ್ನಬಸವೇಶ್ವರರು ತಮ್ಮ 'ಕರಣಹಸುಗೆ'ಯಲ್ಲಿ ಹೇಳಿದ್ದಾರೆ. ನಿಜಗುಣಶಿವಯೋಗಿಗಳೂ ತಮ್ಮ ವಿವೇಕಚಿಂತಾಮಣಿಯಲ್ಲಿ ತಮ್ಮ ನಾಡಿನ ಜಾತಿಗಳನ್ನು ವಿಂಗಡಿಸಿ ಹೇಳುವಾಗ "ಕನ್ನಡ, ಕಮ್ಮೆ, ತೆಲುಗು, ತಿಗುಳ" ಎಂದು ಬರೆದಿಟ್ಟಿರುವರು. ವಿದ್ಯಾರಣ್ಯರ ಕುಲವು ಕನ್ನಡಿಗ ಕುಲ. ಹದಿಮೂರನೆಯ ಶತಮಾನದ ಚೌಂಡರಸಕವಿಯೂ ತಾನು ಕನ್ನಡಿಗ ಕುಲದವನೆಂದು ಹೇಳಿಕೊಳ್ಳುವನು. ವಿಜಯನಗರದ ಅಮಾತ್ಯಶ್ರೇಷ್ಠನಾದ ಲಕ್ಷ್ಮೀಧರನೂ ಕನ್ನಡಿಗಕುಲದವನೆಂದು ಉಲ್ಲೇಖಿತವಾಗಿದೆ. ಶಾಸನಗಳಲ್ಲಿ ದಾನ ಕೊಟ್ಟ ಅನೇಕ ಬ್ರಾಹ್ಮಣರ ಮನೆಯ ಹೆಸರುಗಳು "ಕನ್ನಡ" ಎಂದಿದ್ದುದು ಅಲ್ಲಲ್ಲಿ ಕಂಡುಬರುವುದು. ಈ ಮಾತುಗಳಿಂದ ನೋಡಿದಲ್ಲಿ, ಕನ್ನಡಿಗರು ತಮ್ಮದೊಂದು ಜನಾಂಗವನ್ನು ಸಾವಿರಾರು ವರ್ಷಗಳಿಗೆ ಮೊದಲಿನಿಂದಲೂ ಕಟ್ಟಿಕೊಂಡಿದ್ದರೆಂಬುದು ಸ್ಪಷ್ಟವಾಗುವುದು. ಒಳಭೇದಗಳು ಬೇಕಾದಷ್ಟಿದ್ದರೂ ತಾವೆಲ್ಲ ಕನ್ನಡಿಗರು—ಒಂದೇ ನೆತ್ತರಿನವರು—ಎಂಬ ಹೆಮ್ಮೆಯಿಂದ ಹಿಗ್ಗುತ್ತಿದ್ದರೆಂಬುದು ಕಂಡುಬರುವುದು.

ಕನ್ನಡಿಗರು ವೀರರು, ಧೀರರು, ಧೀಮಂತರು. ಅವರು ಬೇಡಿದುದನ್ನು ಕೈಯೆತ್ತಿ ಕೊಡಲು ಕನ್ನಡತಾಯಿ ಸಿದ್ಧಳಾಗಿಯೇ ಇರುತ್ತಿದ್ದಳು. ಯಾವ ಮಾತಿನ ಕೊರತೆಯೂ ಇರಲಿಲ್ಲ. ಇವರು ಧನ–ವೀರ್ಯ–ವಿದ್ಯಾಶಕ್ತಿಗಳ ಉಪಾಸನೆಯನ್ನು ಮೊದಲಿನಿಂದಲೂ ಚೆನ್ನಾಗಿ ಮಾಡುತ್ತ ಬಂದಿರುವರು. ವರ್ತಕರು ಕಡಲಬೇಹಾರವನ್ನು ಮಾಡಿ, ನಾಡಿನ ಸಿರಿಯನ್ನು ಬೆಳೆಯಿಸಿ, ಬಡತನದ ಮಾತನ್ನು ಮರೆಯಿಸಿ, ನಾಡಿನ ಸುಖಶಾಂತಿಗಾಗಿ ಕೈಕಟ್ಟಿ ನಿಂತಿದ್ದರೆಂಬುದು ನಮ್ಮ ಇತಿಹಾಸದಿಂದ ಕಂಡುಬರುವುದು. ಕ್ಷತ್ರಿಯರು ರಾಜ್ಯಸಾಮ್ರಾಜ್ಯಗಳನ್ನು ಕಟ್ಟಿ, ಭರತಖಂಡದಲ್ಲಿ ಕನ್ನಡನಾಡಿನ ಹೆಸರನ್ನು ಮೆರೆಯಿಸಿದರು. ಕರ್ನಾಟಕ ಬಲವು ತೆಂಕಣದಲ್ಲಿ ಸಿಂಹಳದ್ವೀಪದ ವರೆಗೆ ಸಾಗಿಹೋಗಿದ್ದಂತೆಯೆ ಬಡಗಣಕ್ಕೆ ನರ್ಮದೆಯ ತಡಿಯನ್ನೂ ತಲ್ಪಿದ್ದಿತು. ಕರ್ಣಾಟಕ–ಬ್ರಹ್ಮಕ್ಷತ್ರಿಯರದೊಂದು ಕುಲವು ಬಂಗಾಲದಲ್ಲಿ ಆಳುತ್ತಿದ್ದಿತೆಂದು ಚರಿತ್ರೆಯು ಹೇಳುತ್ತದೆ. ಈ ಬ್ರಹ್ಮಕ್ಷತ್ರಿಯರಾರೂ ತಿಳಿಯದು. ಕದಂಬರಾಜರ ಮೂಲಪುರುಷ, ಮಯೂರಶರ್ಮನೆಂಬ ಬ್ರಾಹ್ಮಣ. ಈತನೇ ಮುಂದೆ ಕ್ಷತ್ರಿಯ ದೀಕ್ಷೆ ಪಡೆದು ಕನ್ನಡದಲ್ಲಿ ರಾಜ್ಯವನ್ನು ಕಟ್ಟಿದನೆಂದು ಇತಿಹಾಸವಿದೆ. ಬಂಗಾಲದಲ್ಲಿ ಆಳಿದ ಕರ್ಣಾಟಕ ಬ್ರಹ್ಮಕ್ಷತ್ರಿಯರು ಈತನ ವಂಶಜರಾಗಿಯೆ ಇರಬಹುದೆಂದೂ ಊಹಿಸಬಹುದಾಗಿದೆ.

ಉತ್ತರಭಾರತದಲ್ಲಿ ಬೌದ್ಧಧರ್ಮದ ಪ್ರಚಾರವು ಅತಿಶಯವಿದ್ದಾಗ ವೈದಿಕಧರ್ಮದ ಸಂರಕ್ಷಣೆಯನ್ನು ತಮ್ಮ ನಾಡಿನಲ್ಲಿ ಮಾಡಬೇಕೆಂದು ಹೆಣಗಿದ ಕನ್ನಡದೊರೆಗಳೂ ಇತಿಹಾಸದಲ್ಲಿ ದೊರೆಯುತ್ತಾರೆ. ಅಶ್ವಮೇಧಾದಿ ಮಹಾಯಾಗಗಳನ್ನು ಮಾಡಿದ ದೊರೆಗಳು ಸಿಕ್ಕುತ್ತಾರೆ.

ಧರ್ಮ–ನೀತಿಗಳ ಹೊಳೆಯು ತಮ್ಮ ನಾಡಿನಲ್ಲಿಯೆ ಹುಟ್ಟಿ ಎಲ್ಲೆಲ್ಲಿಯೂ ಹರಿಯುವಂತೆ ಮಾಡಿದವರು ಕನ್ನ

CC-0. Jangamwadi Math Collection. Digitized by eGangotri

ಡಿಗರು. ಭಕ್ತಿವನಿತೆಯನ್ನು ಪೋಷಿಸಿ ಬಳೆಯಿಸಿದವರು ಕನ್ನಡಿಗರು. ವೇದೋಪನಿಷತ್ತುಗಳ ಹುರುಳನ್ನು ಭಾರತೀಯರಿಗೆ ತಿಳುಹಿಸಲು ತಿರುಗಾಡಿದವರು ಕನ್ನಡಿಗರು. ತಮ್ಮದೇ ಆದ ಒಂದು ಬಗೆಯ ಶಿಲ್ಪನೈಪುಣ್ಯದಿಂದ ಬಂಡೆಗಲ್ಲುಗಳಿಗೆ ಬಾಯಿ, ಉಸಿರುಗಳನ್ನಿತ್ತವರು ಕನ್ನಡಿಗರು. ಸಂಗೀತಶಾಸ್ತ್ರದಲ್ಲಿಯೂ ತಮ್ಮದೊಂದು ವೈಶಿಷ್ಟ್ಯವನ್ನು ಜಗತ್ತಿಗೆ ತೋರಿಸಿ ತಣಿಸಿದವರು ಕನ್ನಡಿಗರು. ಕಾಶ್ಮೀರದ ಶಾರದಾಂಬೆಯನ್ನು ಶಂಕರಾಚಾರ್ಯರು ಕೈಹಿಡಿದು ಕರೆತಂದು ಕೂಡಿಸಿದುದು ಕನ್ನಡದಲ್ಲಿ. ಒಂದೇ ಎರಡೇ! ಹಿಂದೆ ಒಂದು ಕಾಲಕ್ಕೆ ಕನ್ನಡಿಗರು ಗ್ರೀಕರಂತೆ ಭಾಷೆ, ದೇಶ, ವೀರ್ಯ, ಧೈರ್ಯ, ಶಿಲ್ಪ, ಸಂಗೀತ, ಸಾಹಿತ್ಯ ಮೊದಲಾದ ಪ್ರತಿಯೊಂದರಲ್ಲಿಯೂ ಆದರ್ಶರಾಗಿ ಮೆರೆದರು. ಸಾಹಿತ್ಯವಂತೂ ಕನ್ನಡಿಗರ ಉಸಿರು. ಅವರ ಜೀವನವೇ ಸಾಹಿತ್ಯಕ್ಕೆ ಒಂದು ವಸ್ತು. ಎಲ್ಲದರಲ್ಲಿಯೂ ಆದರ್ಶರಾಗಿದ್ದಂತೆ ಸಾಹಿತ್ಯಶಾಸ್ತ್ರದಲ್ಲಿಯೂ ನಮ್ಮವರು ಆದರ್ಶತೆಯನ್ನು ಹೊಂದಿದ್ದರು.*

## ಬೇಕು

(ಮುಕ್ತಾಲಿ ಲಕ್ಷ್ಮಣರಾಯರು)

ಬೇಕೇ ಬೇಕು ಬೇಕೇ ಬೇಕು.
ದಿನದ ಸಾವೇ ಬೇಕು ॥

ತಾರೆ ಮಿನುಗಲು ಬೇಕು
ಜೀವ ಕಂದಲು ಬೇಕು
ಕಾಣದ ದಾರಿಯ ತುಳಿಯಲೆ ಬೇಕು ॥
ಮುಳ್ಳುಹಾಸಿಗೆ ಬೇಕು
ನೀಲಕಂಠನು ಬೇಕು
ಸಾವಿಗೆ ಎಡೆಯಾಗಿ ನಿಲ್ಲಲೆ ಬೇಕು ॥
ಉರಿವ ಕಿಚ್ಚನು ಮುಚ್ಚಿ
ಮರುಳ ಮಾಟವ ಕೊಚ್ಚಿ
ಹಿರಿದಾದ ಹಿಗ್ಗನು ತೋರಲೆ ಬೇಕು ॥
ಶರದ ತುದಿ ಏರಲು
ಜೇನುಗಾಗಿ ಜೀವಿಸಿ
ಜಗದೊಳು ಜನುಮವ ಕಳೆಯಲೆ ಬೇಕು ॥
ಕಾಣದ ಕೈಯನು
ಹಿಡಿದು ಕುಣಿದಾಡಲು
ಮನದ ಮರುಗುವಿಕೆಯು ಕೂಡಲೇ ಬೇಕು ॥

ಒಡೆಯನ ಕಾಣಲು
ತೆರೆದಿದೆ ಬಾಗಿಲು
ಒಳಗೆ ಹಣಿಯಿಕ್ಕಲು ಒಂದಾಗ ಬೇಕು ॥
ಪ್ರೀತಿಯ ಹೂಣಿಕೆ
ಜೀವದ ಬೇಡಿಕೆ
ಒಂದಾಗಿ ಒಂದಾಗಿ ಬೆರೆಯಲೇ ಬೇಕು ॥
ನಾವನು ನಡಿಸಲು
ನಾವಿಬ್ಬರೂ ಬೇಕು
ಒಡೆಯನ ಕೋರಿಕೆ ಕೈಗೂಡ ಬೇಕು ॥
ಕರೆ ಬರುವ ವರೆಗಿದ್ದು
ಆ ಮೇಲೆ ನಡೆದೆದ್ದು
ಸಾಗುತ ಸಾಗುತ ಸಾಗಲೆ ಬೇಕು ॥
ಆಳವಿಲ್ಲದ ಸಿಧಿ
ಅಯ್ಯೋ! ಎನ್ನುತ ವಿಧಿ
ಮುಗಿಯದು, ಮುಗಿಯದು, ಬೇಕೇ ಬೇಕು ॥

---

* ಕವಿ ಚರಿತ್ರೆಯ ಮೂರು ಭಾಗಗಳು, ಕವಿರಾಜಮಾರ್ಗ, ಬೇರೆ ಬೇರೆ ಕನ್ನಡ ಕಾವ್ಯಗಳು, ಶ್ರೀ. ಎಚ್. ನಾರಾಯಣರಾಯರ 'ಕನ್ನಡದ ಕಥಾನಕ' ಶ್ರೀ. ರಾ. ಹ. ದೇಶಪಾಂಡೆಯವರ ಕರ್ನಾಟಕಸಾಮ್ರಾಜ್ಯ ಇವುಗಳ ಆಧಾರದಿಂದ ಈ ಬರೆಹವನ್ನು ಅನುಗೊಳಿಸಲಾಗಿದೆ.

CC-0. Jangamwadi Math Collection. Digitized by eGangotri

# ಭಾಷಾವಿಜ್ಞಾನ

## ( ಪ್ರಾಕೃತಜನ್ಯ ಭಾಷೆಗಳ ಇತಿಹಾಸ )

ಲೇಖಕರು:—ಶ್ರೀ. ಕೆ. ಭುಜಬಲಿ ಶಾಸ್ತ್ರಿಗಳು, ನ್ಯಾಯಭೂಷಣಾಚಾರ್ಯ, ಆರಾ (ಬಿಹಾರ)

### ಪ್ರಾಕೃತಭಾಷೆಗಳ ವೈಶಿಷ್ಟ್ಯ.

ಪ್ರಾಕೃತಭಾಷೆಗಳು ಸಂಶ್ಲೇಷಾವಸ್ಥೆಯಲ್ಲಿರುವುವು; ಮತ್ತು ಅವುಗಳ ವ್ಯಾಕರಣವು ಸಂಸ್ಕೃತಕ್ಕಿಂತ ಅಧಿಕ ಸರಲವಾಗಿರುವುದು. ಅವುಗಳಲ್ಲಿ ಕಾರಕಾಂತ ಪ್ರತ್ಯಯ ಹಾಗೂ ಕ್ರಿಯಾಪದಗಳ ಸಂಖ್ಯೆಯು ಕಡಿಮೆಯಾಗಿರುವಂತೆ ಕಾಣುತ್ತದೆ. ಆದರೆ ಹಾಗೆ ಮಾಡುವುದರಿಂದ, ಅಲ್ಲಿ-ಇಲ್ಲಿ ಭ್ರಮೆಗೆ ಸ್ಥಾನವಾಗುವುದಾದರೂ ದೂರಮಾಡುವುದಕ್ಕೋಸ್ಕರ ಅನ್ಯ ಉಪಾಯಗಳು ಮಾಡಲ್ಪಟ್ಟಿರುವುವು. ಕ್ರಮಶಃ ಈ ಭಾಷೆಗಳು ಮತ್ತೂ ಮತ್ತೂ ವಿಕಾಸವನ್ನು ಹೊಂದುತ್ತ, ಆಧುನಿಕ ದೇಶಭಾಷೆಗಳಲ್ಲಿ ವಿಶ್ಲೇಷಾವಸ್ಥೆಯನ್ನು ಹೊಂದಿರುವುವು. ಪ್ರಾಕೃತಭಾಷೆಗಳಲ್ಲಿ ಸಂಪ್ರದಾನಕಾರಕವು ಸರ್ವಥಾ ಲುಪ್ತವಾಗುವುದು; ಹಾಗೂ ಕರ್ತೃ ಮತ್ತು ಕರ್ಮಕಾರಕಗಳ ಬಹುವಚನ ರೂಪವು ಪ್ರಾಯಃ ಸಮಾನವಾಗುತ್ತ ಹೋಗುವುದು. ಇದರಲ್ಲಿ ದ್ವಿವಚನದ ಆವಶ್ಯಕತೆಯು ಇರುವುದಿಲ್ಲ. ಲಙ್, ಲಿಟ್ ತಥಾ ಲುಙ್ ಪ್ರಕಾರಗಳು ಲೋಪವಾಗುವುವು. ಆತ್ಮನೇಪದದ ಪ್ರಯೋಗವು ಕಡಿಮೆಯಾಗುತ್ತ ಹೋಗುವುದು. ವ್ಯಾಕರಣಸಂಬಂಧದ ಈ ಸಾಧಾರಣ ಪರಿವರ್ತನೆಗಳ ಅತಿರಿಕ್ತ, ಶಬ್ದಗಳ ರೂಪಗಳಲ್ಲಿಯೂ ವಿಶೇಷ ಪರಿವರ್ತನೆಗಳಿರುವುವು. ಸಂಯುಕ್ತ ವ್ಯಂಜನ ವರ್ಣಗಳ ಸ್ಥಾನದಲ್ಲಿ ದ್ವಿತ್ವವ್ಯಂಜನಗಳ ಪ್ರಯೋಗವು ಅಧಿಕವಾಗುವುದು. ಹೇಗೆಂದರೆ—"ರಕ್ತ"ದ ಸ್ಥಾನದಲ್ಲಿ "ರತ್ತ" "ಸಪ್ತ"ದ ಸ್ಥಾನದಲ್ಲಿ "ಸತ್ತ". ಅಧಿಕಾಂಶ ಪ್ರಾಕೃತಗಳಲ್ಲಿ ಋ, ಐ, ಔ, ಥ, ಶ ಮತ್ತು ಷ ಇವುಗಳ ಪ್ರಯೋಗವು ಇರುವುದಿಲ್ಲ. ಕೇವಲ ಮಾಗಧಿಯಲ್ಲಿ ಥ ಮತ್ತು ಶ ಇವುಗಳ ಪ್ರಯೋಗವು ಇರುವುದು. ಶಬ್ದಾಂತವ್ಯಂಜನಗಳ ಪ್ರಯೋಗವೂ ಇರುವುದಿಲ್ಲ. ಒಂದು ಹ್ರಸ್ವಸ್ವರದ ಹಿಂದೆ ಎರಡರಿಂದ ಅಧಿಕವ್ಯಂಜನ ಅಥವಾ ಒಂದು ದೀರ್ಘಸ್ವರದ ಹಿಂದೆ ಒಂದರಿಂದ ಅಧಿಕವ್ಯಂಜನವು ಬರುವುದಿಲ್ಲ. ಪ್ರಾಕೃತಗಳಲ್ಲಿ ಶಬ್ದಗಳ ರೂಪಗಳಲ್ಲಿ ಅತ್ಯಧಿಕ ಪರಿವರ್ತನೆಯು ಇರುವುದೆಂದೇ ಇದರ ಸಾರಾಂಶವಾಗಿದೆ. ಕೆಲವು ಸಮಯ ಅನೇಕ ಪರಿವರ್ತನೆಗಳು ಒಂದೇ ಸಾರಿ ಶಬ್ದಗಳ ರೂಪವನ್ನು ಸರ್ವಥಾ ಬದಲಾಯಿಸುವುದರಿಂದ, ಅವುಗಳ ವ್ಯುತ್ಪತ್ತಿ ಅಥವಾ ಪರಿವರ್ತನೆಗಳ ಇತಿಹಾಸವನ್ನು ಕಂಡುಹಿಡಿಯುವುದೇ ಕಠಿನವಾಗುವುದು. ಹೇಗೆಂದರೆ— "ವಾಕ್ಪತಿರಾಜ" ಎಂಬುದರ ಪ್ರಾಕೃತರೂಪವು "ವಪ್ಪಈರಾಅ" ಎಂದಾಗುವುದು. "ಅವತೀರ್ಣ" ಎಂಬುದರ ರೂಪವು 'ಓಈಣ್ಣ' ಎಂದಾಗುವುದು. ಆದುದರಿಂದ ಇವುಗಳ ಸಂಸ್ಕೃತರೂಪವು ಸಾಧಾರಣತಃ ಧ್ಯಾನಕ್ಕೆ ಬರುವುದಿಲ್ಲ.

### ಪೈಶಾಚಿಪ್ರಾಕೃತ—

ಹಲವು ವಿದ್ವಾಂಸರು ಪೈಶಾಚಿಭಾಷೆಯನ್ನು ಪ್ರಾಕೃತದಲ್ಲಿಯೇ ಗರ್ಭೀಕರಿಸುವರು. ವರರುಚಿಯು ಪ್ರಾಕೃತಗಳೊಳಗೆ ನಾಲ್ಕು ಭಾಷೆಗಳನ್ನು ಅಡಕಮಾಡಿರುವನು—ಮಹಾರಾಷ್ಟ್ರೀ, ಪೈಶಾಚೀ, ಮಾಗಧೀ ಹಾಗೂ ಶೌರಸೇನಿ. ಹೇಮಚಂದ್ರನು ಕೇವಲ ಮೂರು ಪ್ರಕಾರವಾದ ಪ್ರಾಕೃತಗಳ ಹೆಸರನ್ನು ಉಲ್ಲೇಖಿಸಿರುವನು.- ಅರ್ಧಮಾಗಧಿ ಚೂಲಿಕಾಪೈಶಾಚಿಕಾ ಹಾಗೂ ಅಪಭ್ರಂಶ. ಹಿಂದಿನ ವೈಯಾಕರಣಿಗಳು ಹೇಮಚಂದ್ರನನ್ನೇ ಅನುಸರಿಸಿರುವರು. ಮಹಾರಾಷ್ಟ್ರೀ ಮೊದಲಾದುವುಗಳ ವಿಷಯದಲ್ಲಿ ಸಂದೇಹವೇ ಇಲ್ಲ. ಆದರೆ ಪೈಶಾಚಿಯ ವಿಷಯದಲ್ಲಿ ಅಧಿಕ ಮತಭೇದವು ಇದೆ. ಈ ಭಾಷೆಯ ಎರಡನೆಯ ಹೆಸರು ಭೂತಭಾಷೆಯು, ಈ ಭಾಷೆಯಲ್ಲಿ ಗುಣಾಢ್ಯನಿಂದ ರಚಿತವಾದ "ಬಡ್ಡಕಹಾ" ಎಂಬ ಗ್ರಂಥವೇ ಹೊರತು ಇನ್ನಾವುದೂ ಇಲ್ಲ. ಅದೂ ಈಗ ಸಿಕ್ಕುವುದಿಲ್ಲ. ಆದರೆ ಅದರ ಸಂಸ್ಕೃತ ಟೀಕೆಗಳೆರಡು ಸಿಕ್ಕುವುವು. ಪೈಶಾಚಿಯು ಆರು ಪ್ರಕಾರವಾಗಿರುವುದು.

CC-0. Jangamwadi Math Collection. Digitized by eGangotri

## ಪ್ರಾಚೀನಹಿಂದಿ

ಪ್ರಾಕೃತದಂತೆ ಅಪಭ್ರಂಶವೂ ವ್ಯಾಕರಣದ ನಿಯಮಗಳಿಗೊಳಪಟ್ಟು ಸಾಹಿತ್ಯಕ್ಷೇತ್ರದಲ್ಲಿ ವ್ಯವಹರಿಸಲ್ಪಟ್ಟಿತು. ಪರಂತು ಅದರ ಸ್ವಾಭಾವಿಕ ಪ್ರವಾಹವು ಹರಿಯುತ್ತಲೇ ಇತ್ತು. ಕ್ರಮಶಃ ಅದು ಕೆಲವಂಶಗಳಲ್ಲಿ ನಮ್ಮ ಆಧುನಿಕ ಭಾಷೆಗಳರೂಪದಲ್ಲಿಯೂ ಇನ್ನೂ ಕೆಲವಂಶಗಳಲ್ಲಿ ಅಪಭ್ರಂಶದ ರೂಪದಲ್ಲಿಯೂ ಪರಿಣಮಿಸಿತು. ಆಧುನಿಕ ಭಾಷೆಯಾದ ಹಿಂದೀ ಹಾಗೂ ಶೌರಸೇನೀ ಅಪಭ್ರಂಶದ ಮಧ್ಯದ ಅವಸ್ಥೆಗೆ ಕತಿಪಯ ವಿದ್ವಾಂಸರು "ಪ್ರಾಚೀನ ಹಿಂದಿ" ಎಂದು ಹೆಸರಿಟ್ಟಿರುವರು.

## ಭಾಷೆಗಳ ವರ್ಗೀಕರಣ

ಈಗ ನಾವು ಅಂತರಂಗ ಮತ್ತು ಬಹಿರಂಗ ಭಾಷೆಗಳನ್ನು ವರ್ಗೀಕರಿಸಿ, ಅವುಗಳ ಕೆಲವು ಮುಖ್ಯ ಮಾತುಗಳನ್ನು ಹೇಳಬೇಕೆಂದಿರುವೆವು. ಅಂತರಂಗಭಾಷೆಗಳ ಮುಖ್ಯ ಭೇದಗಳು ಎರಡು:- ಪಶ್ಚಿಮ ವಿಭಾಗ ಉತ್ತರ ವಿಭಾಗ. ಪಶ್ಚಿಮವಿಭಾಗದಲ್ಲಿ ಪಶ್ಚಿಮಿಯಹಿಂದಿ, ರಾಜಸ್ಥಾನಿ, ಗುಜರಾತಿ ಮತ್ತು ಪಂಜಾಬಿ-ಈ ನಾಲ್ಕು ಭಾಷೆಗಳು. ಉತ್ತರವಿಭಾಗದಲ್ಲಿ ಪಶ್ಚಿಮೀಯ ಪಹಾಡಿ (ಪರ್ವತ ಪ್ರದೇಶದಲ್ಲಿ ಆಡುವ ಮಾತು,) ಮಧ್ಯಪಹಾಡಿ ಮತ್ತು ಪೂರ್ವೀಯಪಹಾಡಿ-ಈ ಮೂರು ಭಾಷೆಗಳು.

ಬಹಿರಂಗಭಾಷೆಗಳಲ್ಲಿ ಮೂರು ವಿಭಾಗಗಳಿರುವುವು:- ಉತ್ತರ ಪಶ್ಚಿಮವಿಭಾಗ, ದಕ್ಷಿಣವಿಭಾಗ ಮತ್ತು ಪೂರ್ವವಿಭಾಗ. ಇವುಗಳಲ್ಲಿ ಉತ್ತರ ಪಶ್ಚಿಮವಿಭಾಗದಲ್ಲಿ ಕಾಶ್ಮೀರಿ, ಕೋಹಿಸ್ತಾನಿ, ಪಶ್ಚಿಮೀಯಪಂಜಾಬಿ ಮತ್ತು ಸಿಂಧಿ-ಈ ನಾಲ್ಕು ಭಾಷೆಗಳು. ದಕ್ಷಿಣವಿಭಾಗದಲ್ಲಿ ಉಡಿಯಾ, ಬಿಹಾರಿ, ವಂಗ ಮತ್ತು ಆಸಾಮಿ-ಈ ನಾಲ್ಕು ಭಾಷೆಗಳು. ಈ ಅಂತರಂಗ ಮತ್ತು ಬಹಿರಂಗ ಭಾಷೆಗಳ ಮಧ್ಯದಲ್ಲಿ ಮತ್ತೊಂದು ವಿಭಾಗವು ಇರುವುದು. ಅದು ಮಧ್ಯವರ್ತಿ ವಿಭಾಗವು. ಇದರಲ್ಲಿ ಮೊದಲಿನ ಹಿಂದಿಯೂ ಇದೆ.

## ಕಾಶ್ಮೀರೀಭಾಷೆ—

ಕಾಶ್ಮೀರೀಭಾಷೆಯು ಬಹಿರಂಗಭಾಷೆಗಳ ಉತ್ತರ ಪಶ್ಚಿಮವಿಭಾಗ ಸಂಬಂಧಿಯಾದ ಒಂದು ಭಾಷೆಯಾಗಿದೆ. ಇದರ ಪ್ರಚಾರವು ಕೇವಲ ಕಾಶ್ಮೀರದೇಶದಲ್ಲಿರುವುದು. ಇದು ಸಂಸ್ಕೃತಜನ್ಯ ಭಾಷೆಯಾಗಿದೆ. ಆದರೂ ಇದರಲ್ಲಿ ಅಸಂಸ್ಕೃತಭಾಷೆಗಳ ಅಲ್ಪ ಸ್ವಲ್ಪ ಪ್ರಭಾವವು ಕಂಡುಬರುವುದು. ಇದು ವಿಚ್ಛೇದಾವಸ್ಥೆಯನ್ನು ತೊರೆದು ಸಂಶ್ಲೇಷಾವಸ್ಥೆಯನ್ನು ಹೊಂದುತ್ತಿರುವುದು. ಇದರಲ್ಲಿ ತತ್ಸಮಶಬ್ದಗಳು ಬಹಳ ಕಡಿಮೆಯಾಗಿವೆ. ಅಧಿಕಾಂಶ ತದ್ಭವಶಬ್ದಗಳು ವ್ಯವಹರಿಸಲ್ಪಡುತ್ತವೆ. ಈ ಭಾಷೆಯ ಶಬ್ದಗಳಲ್ಲಿ ಅಕ್ಷರಗಳ ಆಗಮವು ಅಧಿಕವಾಗಿದೆ. ಹಾಗೂ ಸಾಧಾರಣ, ಅಕ್ಷರಗಳ ಉಚ್ಚಾರಣೆಯೂ ಸ್ವಲ್ಪ ವಿಲಕ್ಷಣವಾಗಿದೆ. ಅತ ಏವ ಈ ಭಾಷೆಯ ಉಚ್ಚಾರಣೆಯು ವಿದೇಶಿಯರಿಗೆ ಅಧಿಕ ಕಠಿನವಾಗುವುದು. ಈ ಭಾಷೆಯಲ್ಲಿ ಬಹಳ ಉತ್ತಮವಾದ ಸಾಹಿತ್ಯವು ಇದೆ. ಇದು ಪ್ರಾಯಶಃ ಪ್ರಾಚೀನ ಶಾರದಲಿಪಿಯಲ್ಲಿ ಬರೆಯಲ್ಪಡುವುದು.

## ಕೋಹಿಸ್ತಾನೀಭಾಷೆ

ಕೋಹಿಸ್ತಾನೀ ಭಾಷೆಯಲ್ಲಿ ಕೆಲವು ಕಾಡುಜಾತಿಗಳಿರುವುವು. ಅವು ಮೈಯಾ, ಗಾರ್ವಿ ಮತ್ತು ತೋರವಾಲಿ ಎಂಬ ಹೆಸರಿನಿಂದ ವ್ಯವಹರಿಸುವುವು. ಈ ಮೂರು ಭಾಷೆಗಳ ಸಮೂಹಕ್ಕೆಯೆ ಕೋಹಿಸ್ತಾನಿಯೆಂದು ಹೆಸರು. ನಾವಿದನ್ನು ಸಿಂಧಿ, ಪಶ್ಚಿಮಪಂಜಾಬಿ ಮತ್ತು ಕಾಶ್ಮೀರಿ ಭಾಷೆಗಳ ಸಂಯೋಜಕಶೃಂಖಲೆಯನ್ನಾಗಿ ಹೇಳಬಹುದು.

## ಪಶ್ಚಿಮಪಂಜಾಬಿ

ಪಶ್ಚಿಮಪಂಜಾಬಿನಲ್ಲಿ ಕಾಶ್ಮೀರದ ಎಲ್ಲೆಯಿಂದ ಸಿಂಧದ ಎಲ್ಲೆಯ ವರೆಗೂ- ಅರ್ಥಾತ್ ಗುಜರಾನ್‌ವಾಲಾ ಜಿಲ್ಲೆಯ ಕೊಂಚ ಉತ್ತರ ಪಶ್ಚಿಮವಿಭಾಗ, ಮುಲ್ತಾನ್ ಮಾಟಂಗೋಮರಿ, ಝುಂಗ ಮತ್ತು ಬಹಾಬಲ್‌ಪುರ ಮೊದಲಾದ ಸ್ಥಾನಗಳಲ್ಲಿ- ಆಡುವಭಾಷೆಯೇ ಪಶ್ಚಿಮ ಪಂಜಾಬಿಯು. ಆಧುನಿಕ ಭಾಷಾವಿಜ್ಞಾನಿಗಳು ಈ ಭಾಷೆಗೆ ಲಹಂದೇಯೆಂದೂ ಹೇಳುವರು. ಪಶ್ಚಿಮ ಪಂಜಾಬಿ ಅಥವಾ ಲಹಂದೇಭಾಷೆಯಲ್ಲಿ ಎರಡು ಸ್ವರಗಳ ಮಧ್ಯದಲ್ಲಿ ಒಂದು "ತ" ವು ಬರುವುದು. ಹೇಗೆಂದರೆ- "ಕೀತಾ" (ಕಿಯಾ) "ಸೀತಾ" (ಸೀ ಆ) ಆದಿ.

## ಸಿಂಧೀಭಾಷೆ

ಸಿಂಧೀಭಾಷೆಯು ಸಮಸ್ತ ಸಿಂಧಪ್ರದೇಶದ ಮತ್ತು ಅದರ ನೆರೆಕರೆಯ ಕಚ್ಛ ಮೊದಲಾದ ಒಳರಾಜ್ಯಗಳಲ್ಲಿ

CC-0. Jangamwadi Math Collection. Digitized by eGangotri

ಪ್ರಚಾರದಲ್ಲಿರುವುದು. ಈ ಪ್ರದೇಶ ಮತ್ತು ಅದರ ನೆರೆಕರೆಗಳಲ್ಲಿ ಮಹಮ್ಮದೀಯರ ಸಂಖ್ಯೆಯು ಅಧಿಕವಾಗಿರುವುದರಿಂದ ಸಿಂಧೀಭಾಷೆಯಲ್ಲಿ ಪಾರ್ಶಿಶಬ್ದಗಳು ಅಧಿಕವಾಗಿ ಸೇರಿರುವುವು. ಇದರ ಲಿಪಿಯೂ ಪ್ರಾಯಃ ಪಾರ್ಶಿಯಂತಿರುವುದು.

## ಮರಾಟೀಭಾಷೆ

ಬಹಿರಂಗಭಾಷೆಗಳ ದಕ್ಷಿಣವಿಭಾಗದಲ್ಲಿ ಮರಾಟೀಭಾಷೆಯೊಂದೇ ಇರುವುದು. ಇದರಲ್ಲಿ ಹಲವು ಪ್ರಾಂತೀಯ ಭಾಷೆಗಳು ಸಮ್ಮಿಲಿತವಾಗಿರುವುವು. ಇದು ಮುಖ್ಯವಾಗಿ ಮುಂಬಯಿ ಪ್ರದೇಶದ ಭಾಷೆಯಾಗಿದೆ. ಪರಂತು ದಕ್ಷಿಣದಲ್ಲಿ ಗೋವೆಯ ವರೆಗೂ ಉತ್ತರದಲ್ಲಿ ಬೆರಾರ್ ಮತ್ತು ಮಧ್ಯಪ್ರದೇಶದ ಹಲವು ಸ್ಥಾನಗಳಲ್ಲೂ ಈ ಭಾಷೆಯು ಹಲವು ರೂಪಗಳಿಂದ ವ್ಯವಹಾರದಲ್ಲಿದೆ. ಮರಾಟೀಭಾಷೆಗೆ ಉತ್ಕಲಭಾಷೆಯೊಡನೆ ಅಧಿಕಸಂಬಂಧವಿರುವುದು. ಏಕೆಂದರೆ ಉತ್ಕಲಭಾಷೆಯೂ ಬಹಿರಂಗಭಾಷೆಯಾಗಿದೆ. ಮರಾಟಿಯ ಕ್ರಿಯೆಗಳ ಭೂತಕಾಲೀನ ರೂಪಗಳ ಕೊನೆಯಲ್ಲಿ "ಲಾ" ಅಥವಾ "ಲ" ಬರುವುದು. ಹೇಗೆಂದರೆ—ಉಠಲಾ (ಅವನು ಎದ್ದನು). ಈ "ಲಾ" ಪ್ರತ್ಯಯವು ಎಲ್ಲಾ ಬಹಿರಂಗಭಾಷೆಗಳಲ್ಲಿ ಕಂಡುಬರುವುದು. ಹೇಗೆಂದರೆ—ಉತ್ಕಲದಲ್ಲಿ ಉಠಿಲಾ, ವಂಗದಲ್ಲಿ ಉಠಿಲ ಅಥವಾ ಉಠಿಲೋ, ಬಿಹಾರಿಯಲ್ಲಿ ಉಠಿಲ, ಆಸಾಮಿಯಲ್ಲಿ ಉಠಿಲ. ಇದರಿಂದ ಈ ಎಲ್ಲಾ ಭಾಷೆಗಳಲ್ಲಿಒಂದು ವಿಶೇಷಪ್ರಕಾರವಾದ ಸಮಾನತೆಯು ಇರುವುದೆಂಬುದು ಸಿದ್ಧವಾಗುವುದು. ಮರಾಟೀಭಾಷೆಯು ಮೂರು ಮುಖ್ಯಭಾಗಗಳಲ್ಲಿ ವಿಭಾಗಿಸಲ್ಪಟ್ಟಿದೆ:—ದೇಶೀ ಮರಾಟಿ, ಕೊಂಕಣೀಮರಾಟಿ ಮತ್ತು ಬೆರಾರ್ ತಥಾ ಮಧ್ಯಪ್ರದೇಶ ಸಂಬಂಧಿ ಮರಾಟಿ. ಪುಣೆಯ ನೆರೆಕರೆಯ ಭಾಷೆಯು ದೇಶೀಮರಾಟಿಯು. ಇಂದೋರು, ಬರೋಡಾ, ಮಧ್ಯಪ್ರದೇಶ ಮತ್ತು ಮಧ್ಯಭಾರತದ ಹಲವು ಸ್ಥಾನಗಳಲ್ಲಿ ಆಡಲ್ಪಡುವ ಮರಾಟಿಯೂ ಇದೇ ದೇಶೀಮರಾಟಿಯ ಪರಿವರ್ತನರೂಪವು. ದಕ್ಷಿಣದ ಕಡೆ ಸಂಗಮೇಶ್ವರಿ, ಬಾಣಕೋಟಿ, ಕುದಾಲಿ ಮತ್ತು ಮಾಲವಾನಿ ಎಂದು ನಾಲ್ಕು ಪ್ರಾಂತೀಯಭೇದಗಳಿರುವುವು. ಈ ಭಾಷೆಗಳು ದೇಶೀ ಮತ್ತು ಕೊಂಕಣೀಮರಾಟಿಯ ಮಧ್ಯವರ್ತಿರೂಪಗಳು. ಕೊಂಕಣ, ಉತ್ತರಕನ್ನಡ ಮತ್ತು ದಕ್ಷಿಣಕನ್ನಡಗಳಲ್ಲಿ ಕೊಂಕಣೀ ಮರಾಟಿಯು ಆಡಲ್ಪಡುವುದು. ಗೋವೆಯ ಭಾಷೆಯು ಇದರ ಒಂದು ರೂಪಾಂತರವಾಗಿದೆ. ಆದರೆ ಇದು ದೇಶೀ ಅಥವಾ ಮುಖ್ಯ ಮರಾಟಿಯಿಂದ ಅತ್ಯಧಿಕ ಭಿನ್ನವಾಗಿರುವುದು. ಹೆಚ್ಚು ಹೆಚ್ಚು ದಕ್ಷಿಣಕ್ಕೆ ಹೋದರೆ, ಇದರಲ್ಲಿ ಕನ್ನಡ ಮತ್ತು ತೆಲುಗು ಭಾಷೆಯ ಅಧಿಕಾಂಶಶಬ್ದಗಳು ಸಿಗುವುವು.

## ಉತ್ಕಲೀಭಾಷೆ

ಪೂರ್ವವಿಭಾಗದಲ್ಲಿ ಉತ್ಕಲೀ (ಉಡಿಯಾ) ಬಿಹಾರೀ, ವಂಗ (ಬಂಗಲಾ) ಮತ್ತು ಆಸಾಮೀ ಈ ನಾಲ್ಕು ಭಾಷೆಗಳಿವೆ. ಈ ಎಲ್ಲಾ ಭಾಷೆಗಳು ಕಾಶಿಯಿಂದ ಪೂರ್ವಕ್ಕೆ ಆಡಲ್ಪಡುವುವು. ಉತ್ಕಲಪ್ರದೇಶದಲ್ಲಿ ಆಡಲ್ಪಡುವ ಆರ್ಯಭಾಷೆಯು ಉಡಿಯಾ ಅಥವಾ ಉತ್ಕಲಿಯೆಂದು ಕರೆಯಲ್ಪಡುವುದು. ಇದು ಮಿದಾನ್‌ಪುರ, ಬಾಲಾಸೋರು ಮತ್ತು ಸಿಂಹಪುರಿಯ ಕೆಲವು ಭಾಗಗಳಲ್ಲಿ, ಹಾಗೂ ಚಿಕ್ಕನಾಗಪುರದ ಹಲವು ಒಳರಾಜ್ಯಗಳಲ್ಲಿ ಆಡಲ್ಪಡುವುದು. ಪಶ್ಚಿಮದಲ್ಲಿ ಇದು ಸಂಭಲಪುರ ಮತ್ತು ರಾಯಪುರದ ಕೆಲವು ವಿಭಾಗಗಳಲ್ಲಿಯೂ ಆಡಲ್ಪಡುವುದು. ದಕ್ಷಿಣದಕಡೆಗೆ ಇದರ ವಿಸ್ತಾರವು ಗಂಜಾಂ ಮತ್ತು ವಿಶಾಖಪಟ್ಟಣದವರೆಗೆ ಇರುವುದು. ಉಡಿಯಕ್ಕೆ ವಂಗಭಾಷೆಯೊಡನೆ ಅತ್ಯಧಿಕ ಸಂಬಂಧವೂ ಸಾಮ್ಯವೂ ಇರುವುದು. ಈ ಎರಡೂ ಭಾಷೆಗಳು ಮಾಗಧಅಪಭ್ರಂಶದಿಂದ ಹೊರಟಿರುವುವು. ಇದೇ ಇದಕ್ಕೆ ಕಾರಣವು. ಇದರ ಬಹುವಚನದಲ್ಲಿ ಯಾವುದೊಂದೂ ಸ್ವತಂತ್ರರೂಪವು ಆಗುವುದಿಲ್ಲ. ಬಹುವಚನದ ಬೋಧಕ್ಕಾಗಿ ಶಬ್ದಗಳೊಡನೆ ಕೇವಲ ಸಮೂಹವಾಚಕ ಶಬ್ದಗಳು ಜೋಡಿಸಲ್ಪಡುತ್ತವೆ. ವಂಗಭಾಷೆಗಿಂತ ಇದರಲ್ಲಿ ವಿಶೇಷವು ಏನೆಂದರೆ– ಇದು ಹೇಗೆ ಬರೆಯಲ್ಪಡುತ್ತದೆಯೋ ಹಾಗೆಯೇ ಓದಲ್ಪಡುತ್ತದೆ. ಅದಕ್ಕಿಂತ ಇದರ ಉಚ್ಚಾರಣೆಯು ಸ್ಪಷ್ಟವೂ ಶುದ್ಧವೂ ಆಗಿದೆ. ಇದರ ವ್ಯಾಕರಣವು ಅಧಿಕಪೂರ್ಣವಾಗಿದೆ. ಇದು ಕಾವ್ಯಕ್ಕೂ ಸಂಗೀತಕ್ಕೂ ಬಹಳ ಉಪಯುಕ್ತವಾದುದೆಂದು ಎಣಿಸಲ್ಪಟ್ಟಿದೆ.

## ಬಿಹಾರಿ

ಇಡೀ ಬಿಹಾರ್ ಪ್ರದೇಶದಲ್ಲಿ, ಹಾಗೂ ಅದರ ನೆರೆಕರೆಯ ಸಂಯುಕ್ತ ಪ್ರದೇಶದಲ್ಲಿ, ಚಿಕ್ಕನಾಗಪುರ ಮತ್ತು ಬಂಗಾಳದಲ್ಲಿ ಸ್ವಲ್ಪದೂರದವರೆಗೆ ಈ ಭಾಷೆಯು ಆಡಲ್ಪ



CC-0. Jangamwadi Math Collection. Digitized by eGangotri

ಡುವುದು. ವಂಗ ಮತ್ತು ಉತ್ಕಲಿಯಂತೆ ಬಿಹಾರಿಯೂ ಅಪಭ್ರಂಶದಿಂದ ಹುಟ್ಟಿದೆಯಾದರೂ ಹಲವು ಕಾರಣಗಳಿಂದ ಇದರ ಗಣನೆಯು ಹಿಂದಿಯಲ್ಲಿಯೇ ಮಾಡಲ್ಪಡುವುದು. ವಂಗ, ಆಸಾಮೀ ಮತ್ತು ಉತ್ಕಲೀ ಮೊದಲಾದುವುಗಳಂತೆ ಇದರಲ್ಲಿ 'ಸ'ದ ಉಚ್ಚಾರಣೆಯು 'ಶ' ಆಗುವುದಿಲ್ಲ. ಶುದ್ಧವಾಗಿ 'ಸ' ಆಗುವುದು. ಆದುದರಿಂದಲೇ ಇದನ್ನು ಹಿಂದಿಯಲ್ಲಿ ಗರ್ಭೀಕರಿಸಿರುವುದು ಉಪಯುಕ್ತವಾಗಿದೆ. ಇದರ ಹೊರತು ಅದರ ಅತ್ಯಧಿಕವಾತುಗಳು ಪೂರ್ವಹಿಂದಿಯೊಡನೆ ಹೋಲುವುವು. ಬಿಹಾರೀಭಾಷೆಯಲ್ಲಿ ಮೈಥಿಲಿ, ಮಗಹಿ ಮತ್ತು ಭೋಜಪುರಿ ಎಂದು ಮೂರು ಬೇದಗಳಿರುವುವು. ಮಿಥಿಲಾ ಅಥವಾ ತಿರುಹತ ಮತ್ತು ಅದರ ನೆರೆಕರೆಯ ಸ್ಥಾನಗಳಲ್ಲಿ ಮೈಥಿಲಿಯು ಆಡಲ್ಪಡುವುದು. ಆದರೆ ಅದರ ಶುದ್ಧರೂಪವು ದರಭಂಗಾದಲ್ಲಿರುವುದು. ದಕ್ಷಿಣ ಬಿಹಾರ್ ಮತ್ತು ಹಜಾರಿಬಾಗಿನ ಭಾಷೆಯು ಮಗಹಿಯೆಂದು ಕರೆಯಲ್ಪಡುವುದು. ಪ್ರಾಚೀನಕಾಲದಲ್ಲಿ ಇದೇ ಪ್ರದೇಶವು ಮಗಧವೆಂದು ಕರೆಯಲ್ಪಡುತ್ತಿತ್ತು. ಈ ಭಾಷೆಯಲ್ಲಿ ಯಾವುದೊಂದೂ ಸಾಹಿತ್ಯವಿಲ್ಲ. ಭೋಜಪುರಿಯು ಶಾಹಜಾದ್ ಮತ್ತು ಅದರ ನಾಲ್ಕೂಕಡೆಗೆ ಪಶ್ಚಿಮಬಿಹಾರ್, ಸಂಯುಕ್ತಪ್ರಾಂತದ ಪೂರ್ವವಿಭಾಗ, ರಾಂಚಿ, ಆಜಮ್‌ಗಢ್ ಆದಿ ಸ್ಥಾನಗಳಲ್ಲಿ ಅಲ್ಪಸ್ವಲ್ಪವಾಗಿ ಪರಿವರ್ತನೆಯನ್ನು ಹೊಂದಿ ಆಡಲ್ಪಡುವುದು.

## ವಂಗಭಾಷೆ

ಸಮಸ್ತ ಬಂಗಾಳ ಮತ್ತು ಅದರ ಅಕ್ಕಪಕ್ಕದ ಪ್ರದೇಶಗಳಲ್ಲಿ ಸ್ವಲ್ಪ ದೂರದವರೆಗೆ ವಂಗಭಾಷೆಯು ಆಡಲ್ಪಡುವುದು. ಸಾಧಾರಣವಾಗಿ ಆಡುವ ಭಾಷೆಯಿಂದ ಪುಸ್ತಕ-ಪತ್ರಿಕೆಗಳಲ್ಲಿ ಬರೆಯಲ್ಪಡುವ ಭಾಷೆಯು ಭಿನ್ನವಾಗಿರುವುದೇ ಈ ಭಾಷೆಯಲ್ಲಿರುವ ಒಂದು ವೈಲಕ್ಷಣ್ಯವು. ಬರೆಯುವ ಹಾಗೂ ಓದುವ ವಂಗಭಾಷೆಯಲ್ಲಿ ಪ್ರಾಯಃ ಸಂಸ್ಕೃತಶಬ್ದಗಳ ವಿಶೇಷತಃ ಸಂಜ್ಞೆಗಳ ಪ್ರಯೋಗವು ಅಧಿಕವಾಗಿರುವುದು. ಇದೇ ಕಾರಣದಿಂದ ಕೆಲವರು ಇದನ್ನು ಕಲ್ಪಿತಭಾಷೆಯನ್ನಾಗಿ ಹೇಳುತ್ತಾರೆ. ವಂಗಭಾಷೆಯು ಉಚ್ಚಾರಣೆಯ ವೈಲಕ್ಷಣ್ಯದಲ್ಲಿ ಅಧಿಕಪ್ರಸಿದ್ಧವಾಗಿದೆ. ಎಂದರೆ ವಂಗಭಾಷೆಯ ಉಚ್ಚಾರಣೆಯು ವಿಚಿತ್ರವಾಗಿದೆ. ಅದರಲ್ಲಿ 'ಅ' 'ಆ'ದ ಉಚ್ಚಾರಣೆಯು ಪ್ರಾಯಃ 'ಒ'ದಂತೆ ಆಗುವುದು. ಆದುದರಿಂದ 'ಕ' 'ತ' ಎಂದು ಬರೆಯಲ್ಪಟ್ಟರೂ 'ಕೋ' 'ತೋ' ಎಂದೇ ಓದಲ್ಪಡುವುವು. ಇದೇ ಪ್ರಕಾರವಾಗಿ 'ಮನ'ದ ಉಚ್ಚಾರಣೆಯು 'ಮೋನ' ಎಂದೂ 'ಕರೀಬ'ದ ಉಚ್ಚಾರಣೆಯು 'ಕೋರಿಬೊ' ಎಂದೂ ಆಗುವುದು. ಇವುಗಳ ಹೊರತು ಇಂತಹ ಇನ್ನೂ ಹಲವು ವೈಲಕ್ಷಣ್ಯಗಳಿರುವುವು. ಹಲವು ಸಂಯುಕ್ತ ಅಕ್ಷರಗಳನ್ನು ಸರಿಯಾಗಿ ಉಚ್ಚರಿಸುವುದರಲ್ಲಿ ಬಂಗಾಳಿಗಳು ತುಂಬ ಅಸಮರ್ಥರಾಗಿರುವರು. ಅವರು 'ಕ್ಷ'ವನ್ನು 'ಕ್ಖ' ಎಂದೂ 'ಹ್ಯ'ವನ್ನು 'ಜ್ಝ'ಎಂದೂ ಉಚ್ಚರಿಸುವರು. ಹೇಗೆಂದರೆ - 'ಲಕ್ಷ್ಮೀ' ಈ ಶಬ್ದವನ್ನು 'ಲೋಕ್ಖಿ' ಎಂದೂ 'ಬಾಹ್ಯ' ವನ್ನು 'ಬಾಜ್ಝ' ಎಂದೂ ಅವರು ಹೇಳುವರು. 'ಸ'ವನ್ನು ಸದಾ 'ಶ' ಎಂದೇ ಉಚ್ಚರಿಸುವರು. ಆದರೆ ಕೆಲವು ಸಮಯ 'ಥ' ಎಂದೂ ಉಚ್ಚರಿಸುವುದುಂಟು. ಹೇಗೆಂದರೆ- 'ಸೂಜಿ'ಗೆ 'ಥೂಂಥ' ಎಂದು. 'ವ'ದ ಉಚ್ಚಾರಣೆಯ ಸ್ಥಾನದಲ್ಲಿ ಅವರು 'ಬ' ಎಂದೇ ಉಚ್ಚರಿಸುವರು. ಬಂಗಾಳಿಗಳ ಕಂಠವು ಸಂಸ್ಕೃತಶಬ್ದಗಳನ್ನು ಸರಿಯಾಗಿ ಉಚ್ಚರಿಸಲಾರದೆಂದೇ ಇದರ ತಾತ್ಪರ್ಯವು. ವಂಗಭಾಷೆಯ ಪ್ರಾಚೀನ ಹಾಗೂ ಅರ್ವಾಚೀನ ಸಾಹಿತ್ಯಗಳೆರಡೂ ಪೂರ್ಣವಾಗಿವೆ. ಅವುಗಳಲ್ಲಿ ಉತ್ತಮೋತ್ತಮವಾದ ಗ್ರಂಥಗಳಿರುವುವು. ಅದಕ್ಕೊಂದು ಸ್ವತಂತ್ರವಾದ ಲಿಪಿಯಿದೆ.

## ಆಸಾಮೀಭಾಷೆ

ಆಸಾಂ ಪ್ರದೇಶದ ಭಾಷೆಯು ಆಸಾಮೀಯೆಂದು ಕರೆಯಲ್ಪಡುವುದು. ಆ ಪ್ರದೇಶದಲ್ಲಿ ಇದೊಂದೇ ಆರ್ಯಭಾಷೆ. ಇದರ ಹೊರತು ಅಲ್ಲಿ ಆಡಲ್ಪಡುವ ಇತರಭಾಷೆಗಳು ಆರ್ಯಭಾಷೆಗಳಲ್ಲ. ಆಸಾಂ ನಿವಾಸಿಗಳು ತಮ್ಮ ದೇಶವನ್ನು ಬಿಟ್ಟು ಹೊರಗೆ ಹೋಗುವುದಿಲ್ಲ. ಆದುದರಿಂದಲೇ ಅವರ ಭಾಷೆಯು ಅವರ ಪ್ರದೇಶದ ಹೊರಗೆ ಪ್ರಚಾರದಲ್ಲಿಲ್ಲ. ಉತ್ಕಲಿಯಂತೆ ಆಸಾಮಿಯು ವಂಗಭಾಷೆಯಿಂದ ಹುಟ್ಟಲಿಲ್ಲ. ಆಸಾಮಿ ಮತ್ತು ವಂಗಭಾಷೆಯ ಉಚ್ಚಾರಣೆಯಲ್ಲಿ ಅಧಿಕವಾಗಿ ಅಂತರವು ಇರುವುದು. ಆಸಾಂ ನಿವಾಸಿಗಳು ಹ್ರಸ್ವ ಮತ್ತು ದೀರ್ಘಸ್ವರಗಳಲ್ಲಿ ಯಾವ ಭೇದವನ್ನೂ ಮಾಡುವುದಿಲ್ಲ. ಅವರು 'ಚ'ವನ್ನು 'ಸ' ಎಂದೂ 'ಛ'ವನ್ನು 'ಝ' ಎಂದೂ ಉಚ್ಚರಿಸುವರು. ಅವರ 'ಸ'ದ ಉಚ್ಚಾರಣೆಯು ಪ್ರಾಯಃ 'ಹ'ದಂತೆ ಆಗು

CC-0. Jangamwadi Math Collection. Digitized by eGangotri

ವುದು. ಆಸಾಮಿಯಾ ಕ್ರಿಯೆಗಳ ರೂಪವು ಬಂಗಾಲೀಕ್ರಿಯೆಗಳ ರೂಪದಿಂದ ಅಧಿಕಭಿನ್ನವಾಗಿರುವುದು. ಇದರಲ್ಲಿ ವಂಗಭಾಷೆಗಿಂತ ತತ್ಸಮ-ಶಬ್ದಗಳು ತೀರ ಕಡಿಮೆಯಾಗಿರುವುವು. ಇದರ ಪ್ರಾಚೀನಸಾಹಿತ್ಯವು ಉಚ್ಚಕೋಟಿಯ ಸಾಹಿತ್ಯವಾಗಿದೆ.

## ಪೂರ್ವಹಿಂದಿ

ಈಗ ನಾವು ಅಂತರಂಗ ಮತ್ತು ಬಹಿರಂಗ ಭಾಷೆಗಳ ಮಧ್ಯವರ್ತಿಯಾದ ಪೂರ್ವಹಿಂದಿಯನ್ನು ತೆಗೆದುಕೊಳ್ಳುವೆವು. ಈ ಭಾಷೆಯು ಅರ್ಧಮಾಗಧಿಯಿಂದ ಹೊರಟಿದೆ. ಇದು ಅವಧ, ಬಘೇಲಖಂಡ, ಬುಂದೇಲಖಂಡ, ಚಿಕ್ಕನಾಗಪೂರ ಮತ್ತು ಮಧ್ಯಪ್ರದೇಶದ ಕೆಲವು ಭಾಗ ಇವುಗಳಲ್ಲಿ ಆಡಲ್ಪಡುವುದು. ಇದರಲ್ಲಿ ಅವಧಿ, ಬಘೇಲಿ ಮತ್ತು ಛತ್ತೀಸಘಡಿ ಈ ಮೂರು ಭಾಷೆಗಳೂ ಸಮ್ಮಿಲಿತವಾಗಿರುವುವು. ಪೂರ್ವ ಹಿಂದಿಯಲ್ಲಿ ಎರಡೂ ಪ್ರಕಾರವಾದ ಭಾಷೆಗಳ ಕೆಲವು ಮಾತುಗಳು ಕಂಡುಬರುವುದರಿಂದ ಇದನ್ನು ಅಂತರಂಗ ಮತ್ತು ಬಹಿರಂಗ-ಇವುಗಳ ಮಧ್ಯವರ್ತಿಯನ್ನಾಗಿ ಹೇಳಬೇಕಾಯಿತು. ಯಾವ ಪ್ರಕಾರವಾಗಿ ಒಂದು ಸಮಯದಲ್ಲಿ ಅರ್ಧಮಾಗಧಿಯು ಮಧ್ಯವರ್ತಿಯಾದ ಭಾಷೆಯಾಗಿತ್ತೋ ಅದೇ ಪ್ರಕಾರವಾಗಿ, ಅದರ ಸ್ಥಾನಾಪನ್ನವಾದ ಈ ಪೂರ್ವಹಿಂದಿಯೂ ಮಧ್ಯವರ್ತಿಭಾಷೆಯಾಗಿದೆ. ಅವಧಿಭಾಷೆಯ ಸಾಹಿತ್ಯವು ಎಷ್ಟೊಂದು ಉನ್ನತವಾಗಿದೆ ಎಂಬುದನ್ನು ಹಿಂದೀಭಾಷಾಭ್ಯಾಸಿಗಳೆಲ್ಲರೂ ಪ್ರಾಯಃ ಅರಿತೇ ಇರುವರು. ಈ ಭಾಷೆಯಲ್ಲಿ ಹಲವು ಉತ್ತಮೋತ್ತಮವಾದ ಕಾವ್ಯಗಳೂ ಮಹಾಕಾವ್ಯಗಳೂ ಇರುವುವು. ಬಘೇಲೀ ಸಾಹಿತ್ಯವು ಅಷ್ಟೊಂದು ದೊಡ್ಡದಾಗಿರದಿದ್ದರೂ ಕಡಿಮೆಯಾಗಿಲ್ಲ. ಛತ್ತೀಸಘಢಿಯ ಸಾಹಿತ್ಯವು ಅಷ್ಟೊಂದು ಅಧಿಕವೂ ಮಹತ್ವಪೂರ್ಣವೂ ಆಗಿಲ್ಲ. ಇದೇ ಪ್ರಕಾರವಾಗಿ ಅಂತರಂಗಭಾಷೆಯ ಪಶ್ಚಿಮ-ಶಾಖೆಯಲ್ಲಿ ಪಶ್ಚಿಮಹಿಂದಿ, ರಾಜಸ್ಥಾನಿ, ಗುಜರಾತಿ ಮತ್ತು ಪಂಜಾಬಿಗಳೂ ಹಾಗೆಯೇ ಉತ್ತರಶಾಖೆಯಲ್ಲಿ ಪಶ್ಚಿಮಪಹಾಡಿ, ಮಧ್ಯಪಹಾಡಿ ಮತ್ತು ಪೂರ್ವಪಹಾಡಿ ಭಾಷೆಗಳೂ ಇರುವುವು. ಈ ಪ್ರಕಾರವಾಗಿ ಭಾರತವರ್ಷದಲ್ಲಿ ವರ್ತಮಾನ ಸಮಯದಲ್ಲಿ, ಹದಿನೇಳು ಮುಖ್ಯವಾದ ಆರ್ಯಭಾಷೆಗಳಿರುವುವು.

## ಸಂಸ್ಕೃತದ ವಿಕಾಸ

ನಮಗೆ ಸಂಸ್ಕೃತಭಾಷೆಯು ಪ್ರಥಮಾವಸ್ಥೆಯು ಋಗ್ವೇದ ಮತ್ತು ಅಥರ್ವವೇದ ಇವುಗಳ ಸಂಹಿತೆಗಳಲ್ಲಿ ಹಾಗೂ ಯಜುರ್ವೇದದ ಮಂತ್ರಭಾಗಗಳಲ್ಲಿ ಸಿಕ್ಕುವುದು. ಯಾಸ್ಕನ ಹಾಗೂ ಪಾಣಿನಿಯ ಸಮಯದಲ್ಲಿ ಇದು ತನ್ನ ದ್ವಿತೀಯಾವಸ್ಥೆಯಲ್ಲಿ ಪ್ರವೇಶಮಾಡಿದಂತೆ ಕಂಡುಬರುವುದು. ಇದರ ಅನಂತರ ಕಾತ್ಯಾಯನನ ಸಮಯದಲ್ಲಿಯೂ ತರುವಾಯದಲ್ಲಿಯೂ ಸಂಸ್ಕೃತವು ನಮಗೆ ಮೂರನೆಯ ಅವಸ್ಥೆಯಲ್ಲಿ ಸಿಗುವುದು. ಇದೇ ಮೂರನೆಯ ಅವಸ್ಥೆಯಲ್ಲಿ ನಾವು ಪ್ರಾಚೀನಸಂಸ್ಕೃತದ ನಾಟಕ, ಕಾವ್ಯ, ಮಹಾಕಾವ್ಯ ಮತ್ತು ಸ್ಮೃತಿ ಮುಂತಾದುವುಗಳನ್ನು ನೋಡುವೆವು. ಪಾಣಿನೀಯ ವ್ಯಾಕರಣವು ಮಧ್ಯ ಅಥವಾ ದ್ವಿತೀಯಾವಸ್ಥೆಯದು. ಕಾತ್ಯಾಯನನ ವ್ಯಾಕರಣವು ಅಂತಿಮದ ಅಥವಾ ಮೂರನೆಯ ಅವಸ್ಥೆಯದು. ಈ ಮೂರನೆಯ ಅವಸ್ಥೆಯಲ್ಲಿ ಭಾಷೆಯು ಯಾವ ರೂಪವನ್ನು ಧಾರಣೆಮಾಡಿತ್ತೋ ಅದು ಪ್ರಾಯಃ ಅದೇ ರೂಪದಲ್ಲಿ ಕೊನೆಯ ವರೆಗೂ ಇದ್ದಿತು! ಹೆಚ್ಚಾಗಿ ಸಂಸ್ಕೃತದ ಎಲ್ಲಾ ಗ್ರಂಥಗಳಲ್ಲಿ ಭಾಷೆಯು ತನ್ನ ಅದೇ ಮೂರನೆಯ ರೂಪವನ್ನು ತೋರಿಸುವುದು. ಅದಕ್ಕೆ ಈ ರೂಪವು ಕ್ರಿ. ಪೂ. ಹಲವು ಶತಮಾನಗಳ ಪೂರ್ವದಲ್ಲಿಯೇ ಪ್ರಾಪ್ತವಾಗಿತ್ತು. ಅಂದಿನಿಂದ ಇದರಲ್ಲಿ ಯಾವುದೊಂದು ವಿಶೇಷ ಉಲ್ಲೇಖನೀಯ ಪರಿವರ್ತನೆಯು ಆಗಲಿಲ್ಲ.

## ದೇಶಭಾಷೆಗಳ ವಿಕಾಸ

ಆಧುನಿಕ ದೇಶಭಾಷೆಗಳು ಅಧಿಕಾಂಶಗಳಲ್ಲಿ ಪ್ರಾಕೃತಗಳ ವಿಕಸಿತರೂಪಗಳೇ ಆಗಿವೆ. ಅಪಭ್ರಂಶಗಳು ಪ್ರಾಕೃತಗಳಿಂದಲೇ ವಿಕಸಿತವಾಗಿ ಹುಟ್ಟಿರುವುದರಿಂದ ನಾವಿಲ್ಲಿ ಅವುಗಳ ವಿಷಯದಲ್ಲಿ ಹೆಚ್ಚು ಬರೆಯುವುದಿಲ್ಲ. ಪ್ರಾಕೃತಗಳ ಯಾವ ತತ್ವಗಳಿಂದ ಅಪಭ್ರಂಶಗಳ ಸೃಷ್ಟಿಯು ಆಗಿರುವುದೋ ಅದೇ ತತ್ವಗಳಿಂದ ಪ್ರಾಕೃತ ಹಾಗೂ ಅಪಭ್ರಂಶ ಇವುಗಳಿಂದ ಆಧುನಿಕ ದೇಶಭಾಷೆಗಳು ಹುಟ್ಟಿದುವು. ಭಾರತೀಯ ಆರ್ಯರ ಮೂಲಭಾಷೆಯು ಪ್ರಾಕೃತವಾಗಿತ್ತೆಂದೂ ಅಪಭ್ರಂಶಭಾಷೆಗಳು ಪ್ರಾಕೃತ ಹಾಗೂ ಆಧುನಿಕ ದೇಶಭಾಷೆಗಳ ಸಂಯೋಜಕ ಶೃಂಖಲೆಗಳಾಗಿವೆ ಯೆಂದೂ ತಾತ್ಪರ್ಯವು. *

---

* ಕಾಶೀ ನಿವಾಸಿಗಳಾದ ಶ್ರೀಯುತ ಶ್ಯಾಮಸುಂದರದಾಸ ಬಿ. ಎ. ಅವರ "ಭಾಷಾವಿಜ್ಞಾನ"ದಿಂದ ಅನುವಾದಿತ. ಶೀ.

CC-0. Jangamwadi Math Collection. Digitized by eGangotri

# ಬೀರಿಯ ಪ್ರೀತಿಯ ಕರೆ

(ರಂಗ ವಿನಾಯಕ)

ಬೀರಿ:—ಏಳು ನನ ಗಿರಿಮಲ್ಲ, ಏಳು ನನ ನಲ್ಲ.
ಹೊರಗ ಬೆಳಗ್ಯಾನ ದಿನಮಣಿ.

ಗಿರಿಮಲ್ಲ:—ಯಾರವರು ಕರೆದಾರ ಏಳೆಂದು ಗಿರಿಮಲ್ಲ
ಕೇಳುವೆನು ಯಾರ ಇನಿದನಿ.

ಬೀ:—ನಾನಿನ್ನ ಕರೆತೇನು ನಿನ್ನ ನೆಚ್ಚಿನ ಬೀರಿ.
ಏಳಿನ್ನು ಮ್ಯಾಗ ನನ ಗೆಣೆಯ!
ಏಳು ಕಾಯ್ದೋಣ ಕುರಿಮರಿ!

ಗಿ:—ಹೌದೇನ ನನ ಬೀರಿ ಅಚ್ಚುಮೆಚ್ಚಿನ ಬೀರಿ.
ಬಂದೇನ ಬಂದೆ ನಿನ ಗೆಣೆಯ—
ಬಂದೆ ಕಾಯಾಕ ಕುರಿಮರಿ.

ಬೀ:—ನೋಡಿಲ್ಲಿ ಗಿರಿಮಲ್ಲ ನೀರಲ ಕಳತಾವ.
ತಂದೇನು ತಿನ್ನು ನಿನಗಾಗಿ

ಗಿ:—ನೋಡಿಲ್ಲಿ ನನ ಚೆನ್ನಿ ಬಿದಿರು ಕೊಳಲಾಗ್ಯಾವ
ನುಡಿಯಿಸು ನಿನ್ನ ಸುಖಕಾಗಿ.

ಬೀ:—ಇಲ್ಲಿರುವ ನೂಲೆಳಿಗೆ ರೇಶಿಮಿ ನಾಚ್ಯಾವ
ನೆಯ್ದೇನು ನಿನಗೆ ಚೆನ್ನಿಗ
ನೆಯ್ದೇನು ಹಾಲಬಿಳಿ ವಲ್ಲಿ.

ಗಿ:—ಇಲ್ಲಿರುವ ಕುರಿ ಉಣ್ಣೀ ಮೈತುಂಬ ಚಾಚ್ಯಾವ!
ಹೊಸದೇನ ನಿನ್ನ ಬೆನ್ನಿಗ
ಹೊಸದೇನ ಚಳಿಗೆ ಕಂಬಳಿ.

ಬೀ:—ಹರಿವೇನು ಹೂವೆಲ್ಲ ಗಿರಿಮಲ್ಲ ಇರಿಸೇನು
ಪಾವಡಕ ಒಂದು ಬಾಸಿಗ

ಗಿ:—ನನ್ನ ಮೋಹದ ಬೀರಿ ಉಡಿತುಂಬ ಸುರಿಸೇನ
ನೇರಲದ ಹಣ್ಣು ಏಸೀಗ.

ಬೀ:—ನನ ನಲ್ಲ ಮಲ್ಲಗ ದಡಿಯುಳ್ಳ ದೋತರ
ಮಾನಮ್ಮಿಗೆಂದು ತರುವೇನ
ಮಾರಾಯ್ನು ಮೈಗೆ ಮುಡುಪಾಗಿ.

ಗಿ:—ನನ ನಾರಿ ಬೀರಿಗೆ ಸೀರಿಯು ತರತರ
ಮಾನಮ್ಮಿಗೆಂದು ತರುವೇನ
ಮಾಟನ್ನ ನಡುವಿಗುಡುಪಾಗಿ.

ಬೀ:—ದಿನ್ನೀಯತುದಿಮ್ಯಾಲ ನನ ಮಲ್ಲ ಕುಳಿತಾಗ
ಕೊಳಲದನಿಯೊಂದು ಮಾಡುತ—

ಗಿ:—ರಾಟಿಯು ಬಳಿಹೋಗಿ ನನ ಚೆನ್ನಿ ಕುಳಿತಾಗ
ನವಿಹಾಡನೊಂದು ಹಾಡುತ—

ಬೀ:—ಸುಳ್ಳಲ್ಲ ಅನಸೀತ ನನ ಮಲ್ಲ ವಿಚಾರ್ಯಾನ
ಸ್ವಾದನಕ, ನಲ್ಲ, ಸ್ವಾದನಕ
ಸ್ವಾಮಿ ನಮ್ಮಪ್ಪ ಬೀರಯ್ಯನ.

ಗಿ:—ಜಾಣೆ ನನಗನಸೀತ ನನ ರಾಣಿ ವಿಚಾರ್ಯಾಳ
ಚೆಲುವಿನಗೆ, ನಲ್ಲೆ, ಚೆಲುವಿನಗೆ,

ಬೀ:—ನನ ನಲ್ಲ ಗಿರಿಮಲ್ಲ ದಮಯಂತಿ ಸ್ವಯಂವರಕ
ಹೋದವನಲ್ಲ, ಹೋದರ—

ಗಿ:—ನನ ಚೆನ್ನಿ ಅಂಬಿಗರ ವಸುಗಂಧಿ ಸನಿಯಕ
ಇದ್ದವಳಲ್ಲ, ಇದ್ದರ—

ಬೀ:—ನಳದೊರಿಯು ಕಳುಹಿಸಿ ದಮಯಂತಿ ಗುಣವಂತಿ
ವರಿಸ್ಯಾಳ, ದೇವಿ, ವರಿಸ್ಯಾಳ
ಮಲ್ಲನ, ನನ್ನ ನಲ್ಲನ.

ಗಿ:—ಮರೆತವಳ ಶಂತನು ಬಂದಾನು ನಿನ ಹಂತಿ
ವರಿಸ್ಯಾನ, ಧಾರಿ, ವರಿಸ್ಯಾನ
ತನುಮನಧನವನೆಲ್ಲನ.

ಬೀ:—ಅಪ್ಪಯ್ಯ! ಗಿರಿಮಲ್ಲ! ಬಂದಳು ನನ ತಾಯಿ
ಮಾತಾಯಿ! ಎಲ್ಲಿಗೋಡಲಿ?

ಗಿ:—ಆಲದ ಮರದ್ಹಿಂದ ಮರೆಯಾಗ ನಿನ್ನ ತಾಯಿ
ಕೋಲೂರಿ ಮುಂದ ನೋಡಲಿ!

ಬೀ:—ಮನದನ್ನಿ ಬಂದಿಲ್ಲ ಎಂದು ನುಡಿ ಅವಳೀಗೆ
ನೆನಪಿರಲಿ, ನಲ್ಲ, ನೆನಪಿರಲಿ
ನಾಳ್ಯೊಂದು ದಿವಸ ಇರುವುದ.

ಗಿ:—ಇತಿಮಿತಿ ನಿನಗ್ಯಾಕ ಬೇರೊಂದ ತಿಳಿಬ್ಯಾಡ
ಬರುವೇನು, ಚೆನ್ನಿ, ಬರುವೇನು
ಪರಶಿವನ ಒಲುಮಿ ಕಾಯುವುದ.

CC-0. Jangamwadi Math Collection. Digitized by eGangotri

# ಖಾಯಿಲೆಯಿಂದ ಕಲ್ಯಾಣ

ಕಥೆಗಾರರು :—ಕಶ್ಯಪ, ಬೆಂಗಳೂರು

ನಾನು ಬಿ. ಎ. ಪರೀಕ್ಷೆಯಲ್ಲಿ ಫೇಲಾದುದು ಯಾರೂ ಅರಿಯದ ವಿಷಯವಲ್ಲ. ಆದರೂ ನಾನು ಫೇಲನ್ನು ಅನುಭವಿಸಿದುದು ಇದೇ ಮೊದಲು. ಈ ಸಮಾಚಾರವು ತಿಳಿದ ನಂತರ ನಾನು ನನ್ನ ಕೊಠಡಿಯಲ್ಲಿ ತಲೆಯನ್ನು ಕೈಗಳಲ್ಲಿ ಅಡಗಿಸಿಕೊಂಡು ಕುಳಿತಿದ್ದೆ.

" ಚಂದ್ರು, ಆಗೋದು ಆಗಿಹೋಯಿತು; ಈಗ ಅತ್ತು ಏನು ಫಲ? ಅದೃಷ್ಟವಿಲ್ಲ, ಏನ್ಮಾಡೋದು ! "

ನಾನು ಕತ್ತೆತ್ತಿ ನೋಡಿದೆ. ನನ್ನ ತಂದೆಯು ಬಂದು ಬಾಗಿಲಿನ ಬಳಿ ನಿಂತಿದ್ದರು. ಆ ಮೇಲೆ ನಮ್ಮ ತಾಯಿಯೂ ಬಂದು ಅನೇಕ ಸಮಾಧಾನದ ಮಾತುಗಳನ್ನಾಡಿದರು. ಈ ಮಾತುಗಳೆಲ್ಲವೂ ನನ್ನ ದುಃಖವೆಂಬ ಬಡಬಾಗ್ನಿಯನ್ನು ಆರಿಸಬಲ್ಲುವೆ ! ತರಗತಿಯಲ್ಲಿ ಬುದ್ಧಿವಂತನೆನ್ನಿಸಿಕೊಂಡು ಅಚಾತುರ್ಯದಿಂದ ಆ 'ಆಪ್‌ಷನಲ್' ಗೆ ಹೆಚ್ಚು ಗಮನ ಕೊಟ್ಟು ಈಗ ' ಇಂಗ್ಲಿಷ್ ಗ್ರೂಪಿ 'ನಲ್ಲಿ ಫೇಲು ! ನಾನು ಈ ಹಾಳು ಮುಖವನ್ನು ಇನ್ನು ನನ್ನ ತಂದೆತಾಯಿಗಳಿಗೆ, ಮುಖ್ಯವಾಗಿ ಸ್ನೇಹಿತರಿಗೆ ತೋರಿಸಲೇ ಕೂಡದು- ಎಂದು ನಿರ್ಧರಿಸಿದ್ದರೂ, ಸಂಶಯಕ್ಕೆ ಆಸ್ಪದವಾಗದಂತೆ ವರ್ತಿಸುತ್ತಿದ್ದೆ.

ಆ ದಿನ ರಾತ್ರಿಯೇ ನಾನು ಸ್ವಲ್ಪ ಸಾಮಾನುಗಳನ್ನು ಕಟ್ಟಿ, ಸಿದ್ಧಪಡಿಸಿಟ್ಟುಕೊಂಡು , ಅರ್ಧರಾತ್ರಿಯ ಸಮಯದಲ್ಲಿ ಎಲ್ಲರೂ ಮಲಗಿದ್ದಾಗ - ಮೆಲ್ಲನೆ ಎದ್ದು ಮನೆಯಿಂದ ಹೊರಟೇ ಬಿಟ್ಟೆ; ನಾನು ಪ್ರಾಣವನ್ನು ಕಳೆದುಕೊಳ್ಳುವುದಿಲ್ಲವೆಂದೂ ಕೆಲಸವನ್ನು ಹುಡುಕಲು ಹೊರಟಿರುವುದಾಗಿಯೂ ಒಂದು ಚಿಕ್ಕ ಕಾಗದದಲ್ಲಿ ಬರೆದು ಮೇಜಿನ ಮೇಲೆ ಇಟ್ಟಿದ್ದೆ.

ಬೆಳಗಿನ ಝಾವಕ್ಕೆ, ಬೊಂಬಾಯಿಗೆ ಹೊರಡುತ್ತಿದ್ದ ರೈಲನ್ನು ಹತ್ತಿದೆ. ಎರಡು ದಿನಗಳನಂತರ ನಾನು ಬೊಂಬಾಯನ್ನು ತಲುಪಿದ ಕೂಡಲೆ, ಆರೋಗ್ಯವಾಗಿ ಬಂದು ತಲುಪಿರುವುದಾಗಿಯೂ, ಆರೋಗ್ಯಕ್ಕೆ ತಪ್ಪದೆ ಪ್ರತಿವಾರವೂ ಕಾಗದವನ್ನು ಬರೆಯುವುದಾಗಿಯೂ ನಮ್ಮ ತಂದೆಗೆ ತಂತಿ ಕೊಟ್ಟೆ.

ಬೊಂಬಾಯನ್ನು ತಲುಪಿದ ಸಾಯಂಕಾಲವೇ, ನಾನು ಇಳಿದುಕೊಂಡಿದ್ದ ಹೋಟೇಲಿನಿಂದ ಹೊರಟು, ಕಂಪನಿಗಳ ಬೋರ್ಡುಗಳನ್ನು ಹುಡುಕುತ್ತಾ, ಎಂಟೊಂಬತ್ತು ವಿಳಾಸಗಳನ್ನು ಒಂದು ಪುಸ್ತಕದಲ್ಲಿ ಬರೆದುಕೊಂಡು ಬಂದು, ಅವುಗಳಿಗೆಲ್ಲಾ ಕೆಲಸಕ್ಕೆ ಅಪ್ಲಿಕೇಷನ್ನನ್ನು ಹಾಕಿಕೊಂಡೆ. ಅತಿ ಶೀಘ್ರದಲ್ಲಿಯೇ, ಎಂದರೆ ಎರಡು ಮೂರು ದಿವಸಗಳೊಳಗಾಗಿಯೇ ಅವುಗಳೆಲ್ಲದರಿಂದಲೂ 'ಕೆಲಸ ಖಾಲಿ ಇಲ್ಲಾ ' ಎಂಬ ನಿರಾಶದಾಯಕ ಉತ್ತರವು ಬಂತು.

ನನ್ನಲ್ಲಿದ್ದ ದುಡ್ಡೆಲ್ಲವೂ ಮುಗಿಯುತ್ತ ಬಂತು. ಮುಂದೇನು ಗತಿ-ಎನ್ನಿಸಿತು. 'ನಾನು ಖಂಡಿತವಾಗಿಯೂ ಈ ವಾರದೊಳಗಾಗಿಯೇ ಕೆಲಸಕ್ಕೆ ಸೇರಬೇಕು. ಇಲ್ಲದಿದ್ದರೆ ನನಗೆ ಹುಚ್ಚು ಹಿಡಿಯುತ್ತದೆ.' ಎಂದುಕೊಂಡೆ. ಏಕೆಂದರೆ ನನಗೂ ಉಪವಾಸಕ್ಕೂ ಮಧ್ಯೆ ಹದಿನೈದು ರೂಪಾಯಿಗಳು ಮಾತ್ರ ಇದ್ದುವು. ' ಈ ಅಪ್ಲಿಕೇಷನ್ನುಗಳನ್ನು ಕಳುಹಿಸುವುದರಿಂದ ಏನೂ ಪ್ರಯೋಜನವಿಲ್ಲ. ಯಾವುದಾದರೂ ಒಂದು ಭಾರಿ ಕಂಪೆನಿಯ ಮ್ಯಾನೇಜರನ್ನು ಮುಖತಃ ನೋಡುವುದೇ ಮೇಲು; ನೋಡಿ ನನ್ನ ಅದೃಷ್ಟವನ್ನು ಪರೀಕ್ಷಿಸಿಯೇ ಬಿಡಬೇಕು. " ಎಂದುಕೊಂಡು ಮನಸ್ಸನ್ನು ದೃಢಪಡಿಸಿಕೊಂಡೆ.

ಮಾರನೆಯ ಪ್ರಾತಃಕಾಲ ಸ್ವಲ್ಪ ಕಾಫಿಯನ್ನು ಕುಡಿದು, ಹೊರಗೆ ಬಂದು ಹೋಟೇಲಿನ ಬಾಗಿಲಿನಲ್ಲಿ ನಿಂತಿದ್ದೆ ಹಾಗೆಯೇ ಸುತ್ತಲೂ ನೋಡಿ ಒಬ್ಬ Taxi ಯವನನ್ನು ಹತ್ತಿರಕ್ಕೆ ಕರೆದೆ.

" ಏನಯ್ಯಾ, ಈ ಊರಿನಲ್ಲೆಲ್ಲಾ ಅತ್ಯಂತ ದೊಡ್ಡದಾದ ಕಾರ್ಖಾನೆ ಯಾವುದು ?"



CC-0. Jangamwadi Math Collection. Digitized by eGangotri

ಆವನು ಇವರು ಯಾರೋ ಪರಸ್ಥಳದವರಿರಬೇಕೆಂದು ತಿಳಿದು, ಸ್ವಲ್ಪ ನಕ್ಕು, "ಈ ಊರಿನಲ್ಲೇನು ಸ್ವಾಮೀ, ಬೇಕಾದಷ್ಟಿವೆ" ಅಂದ.

"ಅದು ನನಗೆ ಗೊತ್ತು; ಆದರೆ ಕೆಲಸವನ್ನು ಹುಡುಕಲು ನಾನು ಈ ಊರಿಗೆ ಬಂದಿರುವುದು. ಆದುದರಿಂದ ಕೇಳಿದೆ."

"ಹಾಗಾದರೆ .... ಕಂಪೆನಿಯಲ್ಲಿ ಕೆಲಸ ಸಿಕ್ಕಿದರೂ ಸಿಕ್ಕಬಹುದು ಸ್ವಾಮೀ."

"ಆ ಕಂಪೆನಿಯ ಮ್ಯಾನೇಜರು ಇರುವ ಸ್ಥಳವನ್ನು ನೀನು ನೋಡಿದ್ದೀಯಾ ?"

"ನಾನು ನೋಡದೆ ಏನು ಸ್ವಾಮಿ ? ಅವರ ಬಾಗಲೆಯ ಮುಂದೇ ನಾನು ದಿನಕ್ಕೆ ಎಂಟುಹತ್ತು ಸಲ ಗಾಡಿಯನ್ನು ಹೊಡೆದುಕೊಂಡು ಹೋಗುತ್ತೇನೆ."

ನಾನು ಇನ್ನೇನೂ ಮಾತನಾಡಲಿಲ್ಲ. ಸುಮ್ಮನೆ ಗಾಡಿಯಲ್ಲಿ ಕುಳಿತೆ. ಆವನೂ ಹೆಚ್ಚು ಮಾತನಾಡದೆ ನನ್ನನ್ನು ನೇರವಾಗಿ ಆ ಬಂಗಲೆಗೆ ಕರೆದುಕೊಂಡುಹೋದ.

ನಾನು ನನ್ನ 'ಕಾಣ್ಕೆಯ ಚೀಟಿ'ಯನ್ನು ಒಳಕ್ಕೆ ಕಳುಹಿಸಿದೆ. ನನ್ನ ಬಾಗ್ಯೋದಯವೇ ಎನ್ನಬೇಕು. ಆಗ ಆ ಮ್ಯಾನೇಜರು ಹಸನ್ಮುಖದಿಂದಿದ್ದನು. ನಾನು ಬೊಂಬಾಯಿಗೆ ಬಂದ ಉದ್ದಿಶ್ಯದ ಕಥೆಯನ್ನೆಲ್ಲಾ ಹೇಳಿದ ನಂತರ ಆತನು "ನಿಮ್ಮ ಕ್ವಾಲಿಫಿಕೇಷನ್ ಏನು ?" ಎಂದು ಕೇಳಿದುದಕ್ಕೆ ನಾನು ಎಲ್ಲವನ್ನೂ ಹೇಳಿ, ಅಸಂಬದ್ಧವಾಗಿದ್ದರೂ "ಕಾಲೇಜಿನಲ್ಲಿ ಓದುತ್ತಿದ್ದಾಗ ನಾನು ಬುದ್ಧಿವಂತನಾಗಿದ್ದೆ," ಎಂದು ಹೇಳಿದೆ.

"ಹಾಗಾದರೆ ನೀವು ಅಂಡರ್ ಗ್ರ್ಯಾಜುಯೇಟ್; ಅದರಲ್ಲೂ ಬುದ್ಧಿವಂತ ಅಂಡರ್ ಗ್ರ್ಯಾಜುಯೇಟ್. ನಿಮಗೆ ಬುಕ್‌ಕೀಪಿಂಗ್, ಅಕೌಂಟೆನ್ಸಿ, ಟೈಪಿಂಗ್ ಬರುತ್ತದೆಯೋ ?"

"ಬರುತ್ತದೆ ಸಾರ್. ಎಸ್. ಎಸ್. ಎಲ್. ಸಿ. ತರಗತಿಯಲ್ಲಿ ಬುಕ್‌ಕೀಪಿಂಗ್ ಮತ್ತು ಅಕೌಂಟೆನ್ಸಿಯೇ ನನ್ನ "ವಕೇಷನ್ ಸಬ್‌ಜಕ್ಟ್ಸ್". ಇದರಲ್ಲಿ ನಾನು ಫಸ್ಟ್ ಕ್ಲಾಸಿನಲ್ಲಿ ಪ್ಯಾಸ್ ಮಾಡಿದೆ. ಈಚೆಗೆ "ಟೈಪಿಂಗ್" ಅನ್ನೂ ಕಲಿತಿದ್ದೇನೆ."

"ನಿಮಗೆ ಟೆನಿಸ್ ಆಡಲು ಬರುತ್ತದೆಯೋ ?"

ನಾನು ತಮಾಷೆ ಮಾಡುವುದಕ್ಕಾಗಿ ಹಾಗೇ ಕೇಳುತ್ತಿದ್ದಾನೆಂದು ತಿಳಿದರೂ, ಧೈರ್ಯವನ್ನು ತಂದುಕೊಂಡು "ಬರುತ್ತದೆ; ಫುಟ್‌ಬಾಲ್, ಕ್ರಿಕೆಟ್, ಹಾಕಿ ಮೊದಲಾದ ಆಟಗಳೆಲ್ಲಾ ಬರುತ್ತವೆ. ನಾನು ಕಾಲೇಜಿನಲ್ಲಿ ಸ್ಪೋರ್ಟ್ಸ್ ಕ್ಯಾಪ್ಟನ್ ಆಗಿದ್ದೆ" ಎಂದು ಸ್ವಲ್ಪ ಸುಳ್ಳನ್ನೂ ಸ್ವಲ್ಪ ನಿಜವನ್ನೂ ಬೆರಸಿ ಹೇಳಿದೆ.

"ನಮ್ಮ ಆಫೀಸಿನಲ್ಲಿ ಒಂದು ಕೆಲಸವೇನೋ ಖಾಲಿ ಇದೆ. ಆದರೆ ಅದು ಬಹಳ ಜವಾಬ್ದಾರಿಯ ಕೆಲಸವಾದ್ದರಿಂದ, ಅದಕ್ಕೆ ಸರಿಯಾದ ಒಬ್ಬನನ್ನು ನಾನು ಹುಡುಕುತ್ತಿದ್ದೇನೆ. ಆಗಲಿ, ನೀವು ಇಷ್ಟೆಲ್ಲಾ ಹೇಳುವುದರಿಂದ ನಿಮಗೇ ಒಂದು ಛಾನ್ಸನ್ನು ಕೊಟ್ಟು ನೋಡುತ್ತೇನೆ. ಅದು ತಿಂಗಳಿಗೆ ನೂರಇಪ್ಪತ್ತು ರೂಪಾಯಿನ ಕೆಲಸ. ಈ ಮೊದಲು ತಿಂಗಳಿನಲ್ಲಿ ಅರವತ್ತು ರೂಪಾಯನ್ನು ಕೊಡುತ್ತೇನೆ. ಕೆಲಸ ಸಮರ್ಪಕವಾಗಿದ್ದರೆ ಖಾಯಂ" ಎಂದು ಹೇಳಿ ಆತನು ಎದ್ದು ಒಳಕ್ಕೆ ಹೊರಟೇಹೋದನು.

ಕೆಲಸಕ್ಕೆ ಸೇರಿದ ತಿಂಗಳಲ್ಲಿಯೇ ನಾನು ಅಕೌಂಟೆನ್ಸಿಗೆ ಸಂಬಂಧಪಟ್ಟ ಒಂದು ಪರೀಕ್ಷೆಯನ್ನು ಪಾಸ್ ಮಾಡಿದ್ದರಿಂದಲೂ, ಕೆಲಸವನ್ನು ಬಹಳ ಚತುರತೆಯಿಂದ ಮಾಡುತ್ತಿದ್ದುದರಿಂದಲೂ ಆ 'ಜವಾಬ್ದಾರಿಯ ಕೆಲಸ'ವು ನನಗೇ 'ಖಾಯಂ' ಆಯಿತು. ಆದರೆ ನಾನು ನನ್ನ ಕೆಲಸದ ಸುಖವನ್ನು ಬಹುಕಾಲ ಅನುಭವಿಸಲಿಲ್ಲ. ಐದಾರು ತಿಂಗಳುಗಳು ಪೂರೈಸುವುದರೊಳಗಾಗಿಯೇ ನನಗೆ ಜ್ವರ ಬಂತು. ನಾನು ಹೊಟೇಲಿನಲ್ಲಿ ಒಂಟಿಯಾಗಿ ಇದ್ದುದರಿಂದ ನನ್ನನ್ನು ಆದರಿಸುವವರು ಯಾರೂ ಇರಲಿಲ್ಲ. ಆದುದರಿಂದ ಹೊಟೇಲಿನ ಯಜಮಾನನ ಹೇಳಿಕೆಯ ಮೇಲೆ ನಾನು ಹತ್ತಿರದಲ್ಲಿಯೇ ಇದ್ದ ಒಂದು ಆಸ್ಪತ್ರೆಯಲ್ಲಿ 'ಇನ್-ಪೇಷಂಟ್' ಆಗಿ ದಾಖಲಾದೆ. ಆ ದಿನ ಜನವರಿ ೧೦ನೆಯ ತಾರೀಖು ಖಾಯಿಲೆಯು ಜೋರಾಯಿತು; ಸಾಮಾನ್ಯ ಜ್ವರದಿಂದ ವಿಷಮಶೀತಕ್ಕೆ ತಿರುಗಿತು. ನನಗೆ ಮೈಮೇಲಿನ ಪ್ರಜ್ಞೆ ತಪ್ಪಿತು. ಜ್ವರವು ಆರಿ ಸ್ವಲ್ಪ ಚೆನ್ನಾಗಿ ನೋದಯವಾಗಿ, ಚೇತರಿಸಿಕೊಂಡ ನಂತರ, ನನ್ನನ್ನು ಉಪಚರಿಸುತ್ತಿದ್ದ ದಾದಿಯನ್ನು ಒಂದು ದಿನ ತಾರೀಖನ್ನು ಕೇಳಿದೆ. ನಾನು ಆಸ್ಪತ್ರೆಗೆ ಬಂದು ಆಗಲೇ ಮೂರುವಾರಗಳಾಗಿದ್ದುವು.

ನಾನು ಸಾಯುವಹಾಗೆ ಆಗಿದ್ದೆನು. ಮೈಯಲ್ಲಿರಕ್ತವೇ ಇರಲಿಲ್ಲ. ಶರೀರದ ಅಂಗಾಂಗಗಳೆಲ್ಲವೂ ಬಿಳಿಚಿಕೊಂಡಿದ್ದುವು. ಮುಖದಲ್ಲಿ ಎರಡು ಕಣ್ಣುಗಳು ಮಾತ್ರ ಒಂದೇ

CC-0. Jangamwadi Math Collection. Digitized by eGangotri

ಮಾತಿನಲ್ಲಿ, ಚರ್ಮವನ್ನು ಹೊದಿಸಿದ ಅಸ್ಥಿಪಂಜರವೇ ಎನ್ನಬೇಕು.

ನನ್ನ ದಾದಿಯು ನನ್ನನ್ನು ಸರಿಯಾಗಿ ನೋಡಿಕೊಳ್ಳದಿದ್ದರೆ ನಾನು ಉಳಿಯುವ ಸಂಭವವೇ ಇರಲಿಲ್ಲ. ಹದಿನೆಂಟು ವರುಷದ ಆ ತರುಣ ಸುಂದರಿಯು ಆ ಶುಭ್ರವಾದ ವಸ್ತ್ರದಿಂದ ಅಲಂಕೃತಳಾಗಿ ಹಸನ್ಮುಖದಿಂದ ಬಂದು ನನ್ನನ್ನು ಉಪಚರಿಸುತ್ತಿದ್ದಳು. ನಾನು ಅವಳನ್ನು ಬಹಳ ಗೌರವದಿಂದ ಕಾಣುತ್ತಿದ್ದೆ.

ಪುರಸತ್ತಿದ್ದಾಗ ಅವಳು ನನ್ನಲ್ಲಿಗೆ ಬಂದು, ಮಂಚದ ಅಂಚಿನಲ್ಲಿ ಕುಳಿತುಕೊಂಡು, ನನ್ನ ವಿಷಯಗಳನ್ನೆಲ್ಲಾ ಬಹಳ ಉತ್ಸಾಹದಿಂದ ಕೇಳುತ್ತಿದ್ದಳು. ನಾನು ನನ್ನ ಕಾಲೇಜಿನ ಚರ್ಯೆಗಳನ್ನೆಲ್ಲಾ ಅವಳಿಗೆ ಹೇಳುತ್ತಿದ್ದೆ. ಒಬ್ಬ ಅಪ್ರಯೋಜಕ ಅಧ್ಯಕ್ಷನನ್ನು ನಮ್ಮ ಕ್ಲಬ್ಬಿಗೆ ಚುನಾಯಿಸಿದುದಕ್ಕಾಗಿ ನಾನು ಹುಡುಗರನ್ನೆಲ್ಲಾ ದಂಗೆ ಎಬ್ಬಿಸಿದ್ದು; ಒಂದು ದಿನ ಕ್ಲಬ್ಬಿನಲ್ಲಿ ತಿಲಕ್–ಗಾಂಧಿ, ಇಬ್ಬರಲ್ಲಿ ಯಾರು ಹೆಚ್ಚು ಎಂಬ ಚರ್ಚೆ ಬಂದು, ಹುಡುಗರು ಮಾರಾಮಾರಿಗೆ ಬಂದದ್ದು; ಒಂದು ದಿನ ರಾತ್ರಿ ಹಾಸ್ಟಲ್ ವಾರ್ಡನ್ನನ್ನು ದೆವ್ವದ ಆಕಾರದಿಂದ ಕತ್ತಲಿನಲ್ಲಿ ಮರದ ಮೇಲಿನಿಂದ ಹೆದರಿಸಿ, ಅವನು ರಾತ್ರಿಯ ವೇಳೆಗಳಲ್ಲಿ ಗಸ್ತಿಗೆ ಬರದಂತೆ ಮಾಡಿದ್ದು; ರಾತ್ರಿಯ ವೇಳೆಗಳಲ್ಲಿ ಜವಾನನಿಗೆ ಗೊತ್ತಾಗದಂತೆ, ನಾನು ನನ್ನ ಸ್ನೇಹಿತರೊಂದಿಗೆ ಕದ್ದು ಸಿನಿಮಾ ನಾಟಕಗಳಿಗೆ ಹೋಗುತ್ತಿದ್ದುದು; ಇವೇ ಮೊದಲಾದ ವಿಷಯಗಳನ್ನೆಲ್ಲಾ ವಿವರಿಸುತ್ತಿದ್ದೆ.

ಅವಳು ನನ್ನನ್ನು ಬಹಳ ಗೌರವದಿಂದ ಕಾಣುತ್ತಿದ್ದುದಕ್ಕೆ ಇನ್ನೂ ಕೆಲವು ಕಾರಣಗಳಿದ್ದುವು. ನಾನು ನನ್ನ ವಯಸ್ಸಿಗೆ ಮೀರಿದ ಗೌರವದ ಕೆಲಸದಲ್ಲಿದ್ದೆನೆಂದೇ ಅವಳ ಭಾವನೆ. ಇದೂ ಅಲ್ಲದೆ ನಾನು ಇದ್ದ ಕಂಪನಿಯ ಮ್ಯಾನೇಜರು ತಮ್ಮ ಸ್ನೇಹಿತರಾದ ಆ ಆಸ್ಪತ್ರೆಯ ಡಾಕ್ಟರಿಗೆ ನನ್ನ ಯೋಗಕ್ಷೇಮದ ವಿಚಾರವಾಗಿ ಆಗಾಗ ಕಾಗದನನ್ನು ಬರೆಯುತ್ತಿದ್ದುದಲ್ಲದೆ, ತಾವೇ ಖುದ್ದಾಗಿ ಎರಡಾವರ್ತಿ ಬಂದು, ನನ್ನ ಸ್ಥಿತಿಯನ್ನು ನೋಡಿಕೊಂಡು ಹೋಗಿದ್ದರು. ಕಂಪನಿಯ ನನ್ನ ಜೊತೆಯ ಕೆಲಸಗಾರರೂ ಕೂಡ ಆಗಾಗ ಬಂದು, ನನಗೆ 'ಛಾಕಲೇಟ್', ಸೇಬು, ಕಿತ್ತಳೆ, ದ್ರಾಕ್ಷಿ ಮೊದಲಾದ ಹಣ್ಣುಗಳನ್ನು ತಂದು ಕೊಡುತ್ತಿದ್ದರು. ಇವನ್ನೆಲ್ಲಾ ನೋಡುತ್ತಿದ್ದ ಅವಳಿಗೆ ನನ್ನಲ್ಲಿದ್ದ ಗೌರವವು ಇಮ್ಮಡಿಯಾಯಿತು.

ಅವಳಿಗೆ ನನ್ನಲ್ಲಿ ಪೂರ್ಣ ಭರವಸೆಯಾದ ನಂತರ ಒಂದು ದಿನ ತನ್ನ ಕಥೆಯನ್ನು ಹೇಳಿದಳು. "ನಾನು ಚಿಕ್ಕಂದಿನಲ್ಲಿಯೇ ಎಂದರೆ ಇನ್ನೂ ಮೂರು ವರ್ಷದ ವಯಸ್ಸಿನವಳಿದ್ದಾಗಲೇ ನಮ್ಮ ತಾಯಿ ತಂದೆಗಳನ್ನು ಕಳೆದುಕೊಂಡೆನಂತೆ. ಆ ಮೇಲೆ ಮಕ್ಕಳಿಲ್ಲದ ನನ್ನ ಚಿಕ್ಕಪ್ಪನೇ ನನ್ನನ್ನು ಪ್ರೀತಿಯಿಂದ ಸಾಕಿ, ಸ್ವಲ್ಪ ವಿದ್ಯಾಭ್ಯಾಸವನ್ನು ಮಾಡಿಸಿದ. ಹೋದ ವರ್ಷ ಆತನೂ ಕಾಲವಾದಾಗ ನಾನು ಜೀವನೋಪಾಯಕ್ಕಾಗಿ ಈ ಕೆಲಸಕ್ಕೆ ಸೇರಿದೆ. ಇಲ್ಲಿ ಫ್ರೀ ಕ್ವಾರ್ಟರ್ಸ್; ತಿಂಗಳಿಗೆ ಮೂವತ್ತು ರೂಪಾಯಿ" ಎಂದು.

ಒಂದು ದಿನ ಸಾಯಂಕಾಲ ನಾನು ಹಾಸಿಗೆಯ ಮೇಲೆ ಕುಳಿತಿದ್ದೆ. ಅವಳೂ ಒಂದು ಎಂದಿನಂತೆ ಮಂಚದ ಅಂಚಿನಲ್ಲಿ ಕುಳಿತುಕೊಂಡು ಮಾತನಾಡುತ್ತಿದ್ದಳು. ನಾನು ಮೊದಲು ಮಾಡಿದೆ. 'ನಾನು ಬಿ. ಎ. ಕ್ಲಾಸಿನಲ್ಲಿ ಓದುತ್ತಿದ್ದಾಗ, ನಮ್ಮ ಜೊತೆಯಲ್ಲಿ ಒಬ್ಬಳು ವಿದ್ಯಾರ್ಥಿನಿಯಿದ್ದಳು. ಅವಳಿಂದ ಕ್ಲಾಸಿಗೇ ಅನೇಕ ವೇಳೆ ಬಹಳ ತೊಂದರೆಗಳಾಗುತ್ತಿದ್ದುವು. ಅವಳು ಇದ್ದಕ್ಕಿದ್ದ ಹಾಗೆಯೇ ಅರ್ಧದಲ್ಲೇ ಕ್ಲಾಸಿನಿಂದ ಎದ್ದುಹೋಗಿ, ಇಂಥ ಇಂಥ ಹುಡುಗನು ನನ್ನನ್ನು ದುರುಗುಟ್ಟಿ ನೋಡುತ್ತಿದ್ದನೆಂದು ಪ್ರಿನ್ಸಿಪಾಲನಿಗೆ ಹೇಳುತ್ತಿದ್ದಳು. ಒಂದು ದಿನ ಅವಳ ಹಿಂದೆಯೇ ಕುಳಿತಿದ್ದ ನನ್ನ ಸ್ನೇಹಿತನೊಬ್ಬನ ಕಾಲು ಅವಳಿಗೆ ಆಕಸ್ಮಾತ್ತಾಗಿ ತಗುಲಿತಂತೆ. ಕೂಡಲೆ ಅವಳು ಎದ್ದುಹೋಗಿ ಪ್ರಿನ್ಸಿಪಾಲನ್ನು ಕರೆದುಕೊಂಡು ಬಂದು, ಪಾಪ, ಅವನಿಗೆ ಒಂದು ರೂಪಾಯಿ ಫೈನ್ ಹಾಕಿಸಿಬಿಟ್ಟಳು.''

ಹೀಗೆಯೇ ಕೆಲವು ದಿನಗಳು ಕಳೆದುವು. ನಮ್ಮ ಕರುಣವು ಸ್ನೇಹಕ್ಕೆ ಬೆಳೆಯಿತು. ಸ್ನೇಹದಿಂದ ಅನುರಾಗ. ಅನುರಾಗದಿಂದ ಪ್ರೀತಿ.

ಇದು ನಮ್ಮಿಬ್ಬರಲ್ಲಿ ಯಾರಲ್ಲಿ ಮೊದಲಾಯಿತೋ ಹೇಳುವುದು ಕಷ್ಟ. ಈ ವಿಷಯಗಳನ್ನು ನಾನು ಅನೇಕ ಕಾದಂಬರಿಗಳಲ್ಲಿ ಓದಿ, ಅವುಗಳನ್ನು ಅಪಹಾಸ್ಯಮಾಡಿದ್ದೆ. ಆದರೆ ಈಗ ಅದು ನನ್ನ ಪಾಲಿಗೇ ಬಂತು. ನನಗೆ ಅವಳನ್ನು ಅನೇಕಾವರ್ತಿ ನೋಡಬೇಕೆನ್ನಿಸುವುದು. ಅವಳೂ

CC-0. Jangamwadi Math Collection. Digitized by eGangotri

ಅನೇಕಾವರ್ತಿ ನನ್ನನ್ನು ನೋಡಲು ಬರುವಳು. ಅವಳ ಕಣ್ಣುಗಳಿಂದಲೇ ನಾನು ಅವಳ ಇಂಗಿತವನ್ನು ತಿಳಿಯಲು ಸಾಧ್ಯವಾಗಿತ್ತು. ಅವಳೂ ಹಾಗೆಯೇ ತಿಳಿದಿದ್ದಿರ ಬಹುದು.

ಒಂದುದಿನ ಸಾಯಂಕಾಲ ಅವಳು ಬಂದು, ನಿಮಗೆ ಪೂರ್ಣ ಗುಣವಾಗಿರುವುದರಿಂದ ನಿಮ್ಮನ್ನು ಇನ್ನು ಮೂರು ನಾಲ್ಕು ದಿವಸಗಳಲ್ಲಿ ಆಸ್ಪತ್ರೆಯಿಂದ 'ಡಿಸ್ ಛಾರ್ಜ್' ಮಾಡಬೇಕೆಂದು ಡಾಕ್ಟರು ಬರೆದು ಕಳುಹಿಸಿದ್ದಾರೆ'' ಎಂದಳು.

ಇದರಿಂದ ನನಗೆ ಸುಖ ದುಃಖಗಳೆರಡೂ ಒಂದೇ ಏಟಿಗೆ ಮೇಲೆ ಬಿದ್ದಂತಾಯಿತು. ಸುಖವೇಕೆಂದರೆ, ರೋಗದಿಂದ ನರಳುತ್ತಾ ಎಷ್ಟು ದಿನಗಳ ವರೆಗೆ ಆಸ್ಪತ್ರೆಯಲ್ಲಿ ಮಲಗಿರುವುದು ಎಂದು; ದುಃಖವೇಕೆಂದರೆ.... ಹೇಳಲು ನಾಚಿಕೆಯಾಗುತ್ತದೆ. ನೀವೆ ಊಹಿಸಿಕೊಳ್ಳಿ.

ನನ್ನನ್ನು 'ಡಿಸ್‌ಛಾರ್ಜ್' ಮಾಡುವ ದಿನವು ಬಂದೇ ಬಂತು. ನಾನು ಹೊರಡಲು ಸಿದ್ಧನಾದೆ. ನಮ್ಮ ಕಂಪನಿಯ ಮ್ಯಾನೇಜರು ತಮ್ಮ ಮೋಟಾರನ್ನು ನನಗಾಗಿ ಕಳುಹಿಸಿದ್ದರು. ಆ ದಿನ ದಾದಿಯ ಮುಖವು ಏಕೋ ಎಂದಿನಂತೆ ಇರಲಿಲ್ಲ. ನಾನು ಹತ್ತುರೂಪಾಯಿಯ ಒಂದು ನೋಟನ್ನು ತೆಗೆದು ಅವಳ ಕೈಗೆ ಕೊಟ್ಟೆನು. ಅವಳು ತೆಗೆದುಕೊಳ್ಳಲಿಲ್ಲ. ನಾನು '' ನಿಮ್ಮಿಂದಲೇ ನನ್ನ ಪ್ರಾಣವು ಉಳಿದುದು; ನೀವು ನನ್ನನ್ನು ಬಹಳ ಚೆನ್ನಾಗಿ ಉಪಚರಿಸಿರುತ್ತೀರಿ.ಆದುದರಿಂದ ನೀವು ತೆಗೆದುಕೊಳ್ಳಲೇ ಬೇಕು' ಎಂದು ಪುನಃ ಬಲವಂತ ಮಾಡಿ ಕೊಟ್ಟೆನು. ಅವಳ ಕಣ್ಣುಗಳಲ್ಲಿ ನೀರು ತುಂಬಿತು. ಆದರೂ ಅವಳು ನಗುಮುಖವನ್ನು ತೋರ್ಪಡಿಸುತ್ತ '' ನೀವು ಎರಡು ಸೀಸೆ ಟಾನಿಕ್ ಅನ್ನು ತೆಗೆದುಕೊಳ್ಳಿ''. ಎಂದಳು.

'' ಆಗಲಮ್ಮಾ, ಹಾಗೆಯೇ ಮಾಡುತ್ತೇನೆ. ಹೋಗಿ ಬರುತ್ತೇನೆ. ವಿಶ್ವಾಸವಿರಲಿ ''

ಮೋಟಾರು ಮುಂದಕ್ಕೆ ಹೊರಟೇ ಬಿಟ್ಟಿತು. ಕಿಟಕಿಯಲ್ಲಿ ಹಿಂತಿರುಗಿ ನೋಡಿದೆ. ಅವಳು ಇನ್ನೂ ಅಲ್ಲಿಯೇ ನಿಂತಿದ್ದಳು.

೩

ಆಸ್ಪತ್ರೆಯಿಂದ ಬಂದ ಮೇಲೆ ಒಂದು ವಾರದ ವರೆಗೆ ಸ್ವಲ್ಪ ಸುಧಾರಿಸಿಕೊಂಡು, ನಂತರ ಆಫೀಸಿಗೆ ಹೋದೆ. ನನ್ನ ಆಫೀಸಿನವರೆಲ್ಲರೂ, 'ಚಂದ್ರರಾಯರೇ, ನೀವು ಗುಣಹೊಂದಿ ಬಂದದ್ದು ನಮಗೆಲ್ಲಾ ಬಹಳ ಸಂತೋಷ' ಎಂದರು. ನಾನು ನನ್ನ ಕೆಲಸಕ್ಕೆ ಕೈಹಾಕುವುದಕ್ಕೆ ಮೊದಲು, ಮ್ಯಾನೇಜರು ನನ್ನನ್ನು ಕರೆಯಕಳುಹಿಸಿ, ನನ್ನ ಆರೋಗ್ಯಸ್ಥಿತಿಯನ್ನು ವಿಚಾರಿಸಿ, ಆಹಾರದ ವಿಷಯದಲ್ಲಿ ಎಚ್ಚರಿಕೆಯಿಂದಿರುವಂತೆ ಬುದ್ಧಿವಾದವನ್ನು ಹೇಳಿದರು.

ನಾನು ಆ ದಾದಿಯನ್ನು ಮರೆಯೋಣವೆಂದು ಪಟ್ಟ ಪ್ರಯತ್ನಗಳೆಲ್ಲವೂ ನಿಷ್ಫಲವಾದುವು.ಅಷ್ಟುದಿನಗಳವರೆಗೆ ಕಷ್ಟಪಟ್ಟು ಸಂಪಾದಿಸಿದ ಪ್ರೀತಿಯನ್ನು ಮರೆಯುವುದು ತಾನೇ ಹೇಗೆ! '' ನಾನು ಅಲ್ಲಿಯೇ........ ಮಾತನ್ನು ಯಾಕೆ ಎತ್ತಬಾರದಾಗಿತ್ತು? ಈಗ ಯಾವ ನೆಪದಿಂದ ನಾನು ಆಸ್ಪತ್ರೆಗೆ ಹೋಗಲಿ? ಹೇಗೆ ಅವಳನ್ನು ನೋಡಲಿ?'' ಎಂಬ ಪ್ರಶ್ನೆಗಳನ್ನು ನನ್ನಷ್ಟಕ್ಕೆ ನಾನೇ ಕೇಳಿದೆ. ಉತ್ತರ ಕೊಡಲು ಯಾರೂ ಇರಲಿಲ್ಲ.

'' ನಾನು ಪುನಃ ಖಾಯಿಲೆಯನ್ನು ತಂದುಕೊಂಡು ಅದೇ ಆಸ್ಪತ್ರೆಗೆ-ಅಷ್ಟೇ ಅಲ್ಲ, ಅದೇ ವಾರ್ಡಿಗೆ ಹೋದರೆ ಆಗ ಅವಳೊಂದಿಗೆ ಧೈರ್ಯವಾಗಿ ಮನಸ್ಸನ್ನು ಬಿಚ್ಚಿ ಮಾತನಾಡಬಹುದು. ಒಂದು ವೇಳೆ ಖಾಯಿಲೆಯನ್ನು ತಂದುಕೊಂಡು, ಅದೇ ಆಸ್ಪತ್ರೆಗೆ, ಹೋದರೂ ಅದೇ ವಾರ್ಡಿಗೆ ದಾಖಲು ಮಾಡುತ್ತಾರೋ ಇಲ್ಲವೋ! ಆ ವಾರ್ಡಿಗೇ ದಾಖಲು ಮಾಡಿದರೂ ಅಲ್ಲಿ ಆ ದಾದಿಯೇ ಇರುತ್ತಾಳೋ ಇಲ್ಲವೋ! ಇರಲಿ ಮೊದಲು ಆಸ್ಪತ್ರೆಯನ್ನು ಸೇರೋಣ' ಆ ಮೇಲೆ ಏನಾಗುತ್ತದೆಯೋ ಆಗಲಿ'' ಹೀಗೆಲ್ಲಾ ನಾನಾ ತೆರನಾಗಿ ಯೋಚಿಸಿದೆ.

ಈ ವಿಷಯವು ನಿಮಗೆಲ್ಲಾ ಹಾಸ್ಯಾಸ್ಪದವಾಗಿರಬಹುದು. ನನ್ನನ್ನು ನೋಡಿ ನಗಬೇಡಿ! ಏಕೆಂದರೆ ಪ್ರೀತಿಗೆ ಸಿಕ್ಕಿಬಿದ್ದವನೂ, ಹುಚ್ಚನೂ ಒಂದೇ!

ಶನಿವಾರದ ದಿವಸ ನಾನು ಮನೋವ್ಯಥೆಯಿಂದ ತೊಂದರೆಪಟ್ಟು, ಆಫೀಸಿನಿಂದ ಜಾಗ್ರತೆಯಾಗಿ ಹಿಂತಿರುಗಿದೆ. ನನ್ನ ಕೊಠಡಿಯಲ್ಲಿ ಕುಳಿತುಕೊಂಡು, '' ನಾನು ಈ ಯೋಚನೆಯಲ್ಲಿ ಇನ್ನಿರಲಾರೆ. ಅವಳಿಗೆ ಕಡಾಖಂಡಿತವಾಗಿ ನಾನು ಅವಳನ್ನು ಪ್ರೀತಿಸುವುದಾಗಿ ಹೇಳಿ ಬಿಡುತ್ತೇನೆ. ಅವಳು ಒಪ್ಪಿಕೊಂಡರೇನೊ ಸರಿ, ಇಲ್ಲದಿದ್ದರೆ ........ಇಲ್ಲದಿದ್ದರೆ........'' ಎಂದು ಹುಚ್ಚನಂತೆ ನನ್ನ

CC-0. Jangamwadi Math Collection. Digitized by eGangotri

ಷ್ಟಕ್ಕೆ ನಾನೇ ಮಾತನಾಡಿಕೊಳ್ಳುತ್ತಿದ್ದೆ. ಕಾಗದವನ್ನು ಬರೆಯೋಣವೆಂದು ಯೋಚಿಸಿದೆ. ಆದರೆ ಅದು ಯೋಗ್ಯ ವಲ್ಲವೆಂದು ತೋರಿತು.

ರಾತ್ರಿಯೆಲ್ಲಾ ನಿದ್ರೆಯೇ ಹತ್ತಲಿಲ್ಲ. ಹಾಸಿಗೆಯ ಮೇಲೆಯೇ ಹೊರಳಾಡುತ್ತ ಏನೇನೋ ಯೋಚನೆ ಮಾಡುತ್ತಿದ್ದೆ. ಮನಸ್ಸಿನಲ್ಲಿ ಏನೇನೋ ಹೊಳೆಯಿತು. ಎದ್ದು ದೀಪವನ್ನು ಹತ್ತಿಸಿ ಕುಳಿತುಕೊಂಡು, ಕಾಗದ ವನ್ನು ಬರೆಯತೊಡಗಿದೆ. ಏನೇನೋ ಬರೆದೆ, ಪುನಃ ಓದಲು ನನಗೇ ನಾಚಿಕೆಯಾಗಿ ಹರಿದುಹಾಕಿ ಬಿಟ್ಟೆ. ಮತ್ತೆ ದೀಪವನ್ನಾರಿಸಿ ಹೋಗಿ ಮಲಗಿದೆ. ಯೋಚನೆ ಮಾಡಿ, ಮಾಡಿ, ಕಡೆಗೆ ನಾಳೆಯ ದಿವಸ ಸಾಯಂಕಾಲ ಆಸ್ಪತ್ರೆಗೇ ಹೋಗಿ ಆವಳನ್ನು ನೋಡಿ ಬಿಡುವುದು– ಎಂದು ನಿರ್ಧರಿಸಿಕೊಂಡೆ.

ಮಾರನೆಯದಿನ ಸಾಯಂಕಾಲ ಪ್ರಶ್ನೋತ್ತರಗಳನ್ನು ಮನಸ್ಸಿನಲ್ಲಿ ಗುಣಾಕಾರ ಮಾಡುತ್ತ, ಅಲಂಕೃತನಾಗಿ ಹೊರಟೆ. ಹೆಂಗಸರನ್ನು ನೋಡುವುದಕ್ಕೆ ಹೋಗುವಾಗ ಸುಮ್ಮನೆ ಹೋಗುವುದೇ. ಸ್ವಲ್ಪ ಹೂವು, ಎಲೆ, ಅಡಿಕೆ, ಕೆಲವು ಬಗೆಯ ಹಣ್ಣುಗಳು ಇವೆಲ್ಲವನ್ನೂ ತೆಗೆದು ಕೊಂಡೇ ಹೋದೆ. ಹೋದವನು ನಾನು ಹಿಂದೆ ಮಲ ಗಿದ್ದ ವಾರ್ಡಿನ ಬಾಗಿಲಿನ ಹತ್ತಿರ ನಿಂತುಕೊಂಡು ಸುತ್ತಲೂ ನೋಡಿದೆ. ಎದುರು ಮಹಡಿಯಿಂದ ಯಾರೋ ಇಳಿದು ಬಂದರು. ನಾನು ಮಾತನಾಡಿಸಿಯೇ ಬಿಡಬೇ ಕೆಂದು ಧೈರ್ಯವಾಗಿ ಅಂಗಾಂಗಗಳನ್ನೆಲ್ಲಾ ನೆಟ್ಟಗೆ ಮಾಡಿಕೊಂಡು:—

"ನಮಸ್ಕಾರ, ನಿಮ್ಮ ಹಳೆಯ ರೋಗಿಯ ಜ್ಞಾಪಕ ವಿದೆಯೆ?" ಎಂದೆ.

"ಅಯ್ಯೋ, ಜ್ಞಾಪಕವಿಲ್ಲದೆ ಏನು! ನೀವು ಇಲ್ಲಿಂದ ಹೋದಾಗಿನಿಂದಲೂ ಆರೋಗ್ಯವಾಗಿದ್ದೀರಿ ತಾನೇ?"

"ಆರೋಗ್ಯವಾಗಿಯೇ ಇದ್ದೇನೆ. ನೀವು ಹೇಳಿದ ಹಾಗೆ ಟಾನಿಕ್‌ಅನ್ನು ತೆಗೆದುಕೊಳ್ಳುತ್ತಿದ್ದೇನೆ. ಆದರಿಂದ ನನಗೆ ಬಹಳ ಗುಣವು ಕಂಡುಬಂದಿದೆ."

"ನಾನು ನಿಮ್ಮನ್ನು ನೋಡಬೇಕೆಂದಿದ್ದೆ. ನಿಮ್ಮ ಅಡ್ರೆಸ್ಸೇ ಗೊತ್ತಾಗಲಿಲ್ಲ."

"ನಾನೂ ನಿಮ್ಮನ್ನು ನೋಡಬೇಕೆಂದೇ ಈಗ ಬಂದೆ. ನಿಮಗೆ ಪುರಸತ್ತಿದೆಯೇನು?"

ಈ ಮಾತುಗಳನ್ನು ನಾನು ಹೇಗೆ ಆಡಿದೆನೋ ಕಾಣೆ. ಆಂತು ಆಡಿಬಿಟ್ಟೆ. ಅವಳು ಕುಪಿತಳಾಗಬಹುದೆಂದಿದ್ದೆ. ಆದರೆ ಅವಳ ಮುಖವು ಅವಳು ಅದಕ್ಕೆ ಸಮ್ಮತಿಸಿರುವ ಳೆಂದು ಹೇಳಿತು.

"ನಾನು ಇವತ್ತಿನ ಕೆಲಸವನ್ನೆಲ್ಲಾ ಆಗಲೆ ಪೂರೈಸಿ ಕೊಂಡುಬಂದೆ. ನಾಳೆಯ ಬೆಳಗಿನ ತನಕ ನನಗೆ ಪುರಸತ್ತು. ಬನ್ನಿ, ನಮ್ಮ ಕ್ವಾರ್ಟರ್ಸ್‌ಗೆ ಹೋಗೋಣ."

ನಾನು ಮಾತನಾಡದೆ ಕತ್ತನ್ನು ಬಗ್ಗಿಸಿಕೊಂಡು ಅವಳ ಹಿಂದೆಯೇ ಹೋದೆ. ಅವಳು ನನ್ನನ್ನು ತನ್ನ ಮನೆಯ ಒಂದು ಕೊಠಡಿಯಲ್ಲಿ ಕೂರಿಸಿ, ಒಂದು ಪತ್ರಿ ಕೆಯನ್ನು ನನ್ನ ಮುಂದೆಹಾಕಿ, "ಇದನ್ನು ನೋಡು ತ್ತಿರಿ, ಬಂದೆ." ಎಂದು ಹೇಳಿ ಒಳಕ್ಕೆ ಹೋದಳು.

ಸ್ವಲ್ಪ ಹೊತ್ತಿನಲ್ಲಿಯೇ ಅವಳು ಒಳಗಿನಿಂದ ಒಂದು ಲೋಟ ಕಾಫಿಯನ್ನು ತಂದುಕೊಟ್ಟಳು. ನಾನು, ಸಂಪ್ರ ದಾಯದ ಕೆಲವು ಉಪಚಾರದ ಮಾತುಗಳಾದ ಮೇಲೆ ಕುಡಿದೆ. ಸ್ವಲ್ಪಹೊತ್ತು ಇಬ್ಬರೂ ಸುಮ್ಮನೆ ಕುಳಿತಿ ದ್ದೆವು. ಕಡೆಗೆ ಅವಳೇ ನಿಶ್ಶಬ್ದತೆಯನ್ನು ಒಡೆದು ಮಾತ ನಾಡಿದಳು.

"ಈಚೆಗೆ ನಮ್ಮ ಆಸ್ಪತ್ರೆಯಲ್ಲಿ ರೋಗಿಗಳ ಸಂಖ್ಯೆಯು ಬಹಳ ಹೆಚ್ಚಾಗಿದೆ. ನನಗೆ ಬೇಜಾರಾಗಿ ಈ ಕೆಲಸವನ್ನೇ ಬಿಟ್ಟುಬಿಡಬೇಕೆನ್ನಿಸುತ್ತದೆ."

"ಅಷ್ಟುಬೇಜಾರಾಗಿದ್ದರೆ ಬಿಟ್ಟೇಬಿಡುವುದು ತಾನೇ."

ಅವಳು ನನ್ನ ಮಾತಿನ ಅಂತರಾರ್ಥವನ್ನು ಗ್ರಹಿಸಿ ದಳು. ಅದಕ್ಕೇನು ಅವಳು ಸಿದ್ಧಳಾಗದೆ ಇರಲಿಲ್ಲವೆಂದು ತೋರಿತು. ನನ್ನನ್ನು ರಾತ್ರಿ ಅಲ್ಲಿಯೇ ಇರುವಂತೆ ಬಲವು ಮಾಡಿದಳು. ನನ್ನ ರೊಟ್ಟಿಯು ಜಾರಿ ತುಪ್ಪದಲ್ಲಿ ಬಿದ್ದಂ ತಾಯಿತು. ನಾನು ಮನಸ್ಸಿನಲ್ಲಿಯೇ ನನ್ನ ಭುಜವನ್ನು ತಟ್ಟಿಕೊಂಡರೂ, ಮುಖದಲ್ಲಿ ಮಾತ್ರ ಏನೋ ಬಹಳ ಕೆಲಸವಿದ್ದವನಂತೆಯೂ, ಅವಳ ಬಲವಂತಕ್ಕಾಗಿ ನಿಂತು ಕೊಳ್ಳಬೇಕಾದವನಂತೆಯೂ ಭಾವತಂದುಕೊಂಡಿದ್ದೆ.

ಆ ಮನೆಯಲ್ಲಿದ್ದವಳು ಅವಳೊಬ್ಬಳೇ. ಅವಳ ಸಹಾಯ ಕ್ಕಾಗಿ ಒಬ್ಬ ಜವಾನಿಯು ಇದ್ದಳಂತೆ. ಆದರೆ ದೇಹಾ ಲಸ್ಯದಿಂದ ಆದಿನ ಅವಳು ಬಂದಿರಲಿಲ್ಲ. ಇದೂ ನನ್ನ ಪುಣ್ಯೋದಯವೆ.

CC-0. Jangamwadi Math Collection. Digitized by eGangotri

ರಾತ್ರಿ ಊಟವಾಯಿತು. ಇಬ್ಬರೂ ತಾಂಬೂಲವನ್ನು ಹಾಕಿಕೊಳ್ಳುತ್ತಾ, ಆ ಮಾತು ಈ ಮಾತುಗಳನ್ನಾಡುತ್ತಾ ಕುಳಿತಿದ್ದೆವು. ಅವಳ ಮೇಜಿನಮೇಲಿದ್ದ 'ಬಿಗ್ ಬೆನ್' ಗಡಿಯಾರವು ಹತ್ತು ಗಂಟೆಯನ್ನು ತೋರಿಸಿತು. ನಾನು ಮಾತಿನಮಧ್ಯೆ:—

"ಹಾಗಾದರೆ ಕೆಲಸಕ್ಕೆ ರಾಜಿನಾಮೆ, ನಾಳೆಯೇ ತಾನೇ?" ಎಂದು ಕೇಳಿದೆ.

"ನಾಳೆ ಆಗುವುದಿಲ್ಲ. ಈವೊತ್ತು ತಾರೀಖು ೨೫. ಈ ತಿಂಗಳಿನ ಕೊನೆಯ ತನಕ ಇದ್ದು ಬಿಟ್ಟು, ಆ ಮೇಲೆ. ಏಕೆಂದರೆ ಈ ತಿಂಗಳಿನ ಸಂಬಳವನ್ನು ಪಡೆಯಬೇಕು?"

ಇದನ್ನು ಹೇಳುತ್ತಿದ್ದ ಹಾಗೆಯೇ ಅವಳು ಇನ್ನೂ ಹತ್ತಿರಕ್ಕೆ ಸರಿದಳು. ನಾನು ಏನು ಮಾಡುತ್ತಿದ್ದೇನೆಂಬುದು ನನಗೇ ಗೊತ್ತಿಲ್ಲದಾಯಿತು.

# ರಷ್ಯಾದಲ್ಲಿನ ಜನತಾಶಿಕ್ಷಣ

ಲೇಖಕ:—ಬಿ. ಅಶ್ವತ್ಥನಾರಾಯಣರಾವ್, ಬೆಂಗಳೂರು

## ಮುನ್ನುಡಿ

ಇಂದು ಸೋವಿಯಟ್ ರಷ್ಯಾ ದೇಶವು ಜಗತ್ತಿನ ಮಹತ್ಕಲ್ಯಾಣದ ಅದ್ಭುತ ಪ್ರಯೋಗಶಾಲೆಯೆಂಬುದು ವಿಶ್ವವಿದಿತವಾಗಿದೆ. ರಷ್ಯಾದ ಕಡೆಗೆ ಕುತೂಹಲದಿಂದ ನೋಡಿದರೆ, ಅಲ್ಲಿನ ರಾಜಕೀಯ, ಆರ್ಥಿಕ ಸಮಸ್ಯೆಗಳು ಮುಂದೆಮುಂದೆ ಒತ್ತಿ ಬಂದು ನೂತನರೂಪವನ್ನು ತಾಳುವುವು; ಅವುಗಳ ವೈಲಕ್ಷಣ್ಯವು ಎದ್ದು ಕಾಣುವುದು. ಮನದಲ್ಲಿ ರಷ್ಯಾದ ಬಗ್ಗೆ ನಾನಾ ವಿಧವಾದ ಭಾವನಾತರಂಗಗಳು ಏಳುವುವು; ಆದರೂ ಜನತೆಯ ಜೀವರಸವಾಹಿನಿಯಾದ ಸಂಸ್ಕೃತಿಶಿಕ್ಷಣವು ಅತ್ಯಂತ ಮಹತ್ವವಾದ ಕಾರ್ಯಕ್ರಮವಾಗಿರುವುದರಿಂದಲೂ, ಅದರ ವಿಸ್ತಾರವಾದ ಹಬ್ಬುವಿಕೆಯಿಂದಲೂ ಅದು ತಟ್ಟನೆ ದೃಗ್ಗೋಚರವಾಗುವುದಿಲ್ಲ. ಕ್ರಾಂತಿಯಿಂದ ಸುಗಮವಾದ ಜೀವನವು ಕಣ್ಮುಂದೆ ಬೆಳಗಿ ರಾರಾಜಿಸಬಹುದು. ಆದರಿಂದ ಸಂಸ್ಕೃತಿರೂಪವಾದ ಶಿಕ್ಷಣದ ಪ್ರಭೆಯು ಮಂದವಾಗುವುದಿಲ್ಲ.

ಹಲಕೆಲವು ಪಾಶ್ಚಾತ್ಯರು ವಿಪ್ಲವವಾದಿಯಾದ ರಷ್ಯಾದೇಶವನ್ನೂ ಅದರ ಸುಖಸಂಪತ್ತಿನ ಶೋಭೆಯನ್ನೂ ವಕ್ರದೃಷ್ಟಿಯಿಂದ ನೋಡುವರು. ಆದರೆ ಜನಾಂಗವನ್ನು ಮುಂದುವರಿಸಲು ಸೋವಿಯಟರು ಮಾಡುತ್ತಿರುವ ವಿಪುಲವಾದ ಸುವ್ಯವಸ್ಥೆಗಳನ್ನು ಯಾರೂ ಕೆಂಗಣ್ಣಿನಿಂದ ನೋಡಲಾರರು. ಇದಕ್ಕೆ ಪ್ರತಿಯಾಗಿ ಅನೇಕರು ಆಶಾಭರಿತವಾದ ವಿಶ್ವಾಸದಿಂದಲೂ ಉತ್ಸುಕತೆಯಿಂದಲೂ ಮನಗೊಟ್ಟು, ಅವುಗಳ ತತ್ವವನ್ನು ಗ್ರಹಿಸಲು, ಸಾದರಪ್ರಯತ್ನಗಳನ್ನು ಮಾಡುತ್ತಿರುವರು.

## ಜನತೆಯ ಸುಧಾರಣೆ

ರಾಜಕೀಯ ಆರ್ಥಿಕ ಕಾರ್ಯಕ್ರಮಗಳು ಜನರ ಸಂಪೂರ್ಣಚರಿತಾರ್ಥದ ಸುಧಾರಣೆಯೊಂದಿಗೆ ಎಷ್ಟರ ಮಟ್ಟಿಗೆ ಹೊಂದಿಕೊಂಡಿರುವುವೆಂಬುದನ್ನು ಮನದಟ್ಟು ಮಾಡಿಕೊಳ್ಳಬೇಕಾದರೆ ಅವುಗಳ ಸಂಬಂಧವು ಪ್ರಗತಿರೂಪವಾದ ಸಂಸ್ಕೃತಿಯ ಶಿಕ್ಷಣದೊಡನೆ (Cultural Education) ಅನ್ಯೋನ್ಯ ಬೆಳೆದಿರುವುದನ್ನು ನೋಡಿ, ಅವುಗಳ ನಿಕಟ ಸಹವಾಸವು ಸಹಜವೆಂದು ತಿಳಿದುಕೊಳ್ಳಬಹುದು. ಪಾಶ್ಚಾತ್ಯರಲ್ಲನೇಕರು ರಷ್ಯಾದ ಉದ್ಯಮಗಳನ್ನು ಕ್ರಾಂತಿಕಾರಿಯೆಂದು ನಿಷೇಧಿಸುವರು; ಅವುಗಳನ್ನು ಆಕಾಶಕುಸುಮಗಳೆಂದೂ, ತೀರ ಕೀಳೆಂದೂ, ಜೀವಾಳವಿಲ್ಲದುವೆಂದೂ ಎಡೆಬಿಡದೆ ಸಾರುತ್ತಿರುವರು. ಆದರೆ ಅವರು ಒಕ್ಕಣ್ಣಿನಿಂದ ನೋಡುತ್ತಿರುವರೇ ವಿನಾ ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದ ನಿರೀಕ್ಷಿಸುತ್ತಿಲ್ಲ. ಜನರ ಜೀವನವು ಹಿಂದಿನ ಕಾಲದಲ್ಲಿದ್ದುದಕ್ಕಿಂತಲೂ ಈಗ ಎಷ್ಟು ಸುಧಾರಿಸಿ ಉತ್ತಮ ಸ್ಥಿತಿಗೇರಿರುವುದೆಂಬು

CC-0. Jangamwadi Math Collection. Digitized by eGangotri

ದನ್ನು ನೋಡಿದರೆ ಅವರ ತಪ್ಪು ಭಾವನೆಯು ಮಾಸಿ ಹೋಗುವುದು. ಯಾವ ಪಕ್ಷದ ಹಿತವನ್ನೂ ಕೋರದ ಪ್ರವಾಸಿಗಳು ಅವರ ಸುಖ ಸಂತೋಷಗಳನ್ನು ಕಣ್ಮುಟ್ಟ ನೋಡಿದವರು; ಸರಕಾರದವರು ಪ್ರಸಿದ್ಧ ಮಾಡಿರುವರು; ವಿದ್ವಾಂಸರು ಬರೆದು ಜಗತ್ತಿಗೆ ತಿಳಿಯಹೇಳಿರುವರು. ಅವರ ಸುಧಾರಣೆಯು ಪೊಳ್ಳು ಸಮಾಚಾರವಲ್ಲ.ಪ್ರತ್ಯಕ್ಷ ವಾಗಿ ಕಾಣಬಹುದಾದ ಸಂಗತಿ. ಈ ವಿಚಾರದ ಸತ್ಯಾಂಶ ವನ್ನು ಪೂರ್ವಪದ್ಧತಿಯ ಪ್ರೇಮಿಗಳು ಕೂಡ ಒಪ್ಪಿ ಕೊಂಡಿರುತ್ತಾರೆ.

ಇನ್ನು ಹಲವರಿಗೆ ಭೀತಿಭಾವನೆಗಳುಂಟು: ಈ ರಾಜ್ಯ ದಾಡಳಿತವು ಸುಸ್ಥಿರವಲ್ಲವೆಂದು; ಇಂದೋ ನಾಳೆಯೋ ಬುಡಮೇಲಾಗಬಹುದೆಂದು. ಈ ಹೆದರಿಕೆಗೆ ಯಾವ ಆಧಾರವೂ ಇರುವುದಿಲ್ಲ. ಸೋವಿಯಟರ ರಾಜ್ಯವು ಇಂದು ಸುಸ್ಥಿರ, ಬಾಹ್ಯಭದ್ರತೆಯು ಸುರಕ್ಷಿತ. ಈಗ ಅದಕ್ಕೆ ಒದಗಬಹುದಾದ ಆಪತ್ತೆಂದರೆ ಕ್ರಾಂತಿ ಯಲ್ಲ, ದಂಗೆಯಲ್ಲ. ಆಡಳಿತಗಾರರಲ್ಲಿ ಒಡಕುಹುಟ್ಟಿ ಕಂದುಂಟಾಗಬಹುದು. ಇದಕ್ಕೆ ಉದಾಹರಣೆಯಾಗಿ ೩ ವರ್ಷಗಳ ಹಿಂದೆ ನಡೆದ ಟ್ರಾಟ್‌ಸ್ಕಿ ( Trotsky ) ಯ ವಿಚಾರವನ್ನು ತೋರಿಸಬಹುದು. ಆದರೂ ಇಂತಹ ಅಂತಃ ಕಲಹಗಳಿಂದ ರಾಜ್ಯಕ್ಕೆ ಹಾನಿಯಾಗುವಂತಿಲ್ಲ. ಅದಕ್ಕೆ ಕಾರಣವೆಂದರೆ ಜನರಲ್ಲಿ ತಮ್ಮಲ್ಲಿನ ತತ್ವಗಳ ಮೇಲೆ ಪೂರ್ಣ ವಿಶ್ವಾಸವುಂಟು. ಈ ವಿಶ್ವಾಸಕ್ಕೆ ಜನರ ಸುಧಾ ರಣೆಯೇ ಪ್ರಥಮಸೋಪಾನವೆಂದು ನಿರ್ವಿವಾದವಾಗಿ ಹೇಳಬಹುದು. ಅದರಲ್ಲಿಯೂ ಸಂಸ್ಕೃತಿಸಂವರ್ಧಕವಾದ ಶಿಕ್ಷಣವೂ ಕಾರಣವೆಂದು ಹೇಳಿದರೆ ತಪ್ಪಾಗುವುದಿಲ್ಲ.

## ರೈತರ ಹಿತಸಾಧನೆ

ರಷ್ಯಾದ ಪ್ರಜೆಗಳಲ್ಲಿ ಬಹುಮಂದಿ ಹಳ್ಳಿಗಳಲ್ಲಿ ವಾಸ ಮಾಡುತ್ತಾರೆ. ಎಲ್ಲರೂ ಪ್ರಾಯಃ ರೈತರು. ಸಾಮ್ರಾ ಜ್ಯದ ಕಾಲದಲ್ಲಿ ಅವರನ್ನು ಕೇಳುವವರೇ ಇರಲಿಲ್ಲ. ಅವರ ಉನ್ನತಿಗಾಗಿ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಸರಕಾರದವರೂ ವಿಚಾರಿಸುತ್ತಿರಲಿಲ್ಲ. ಅವರ ಹಿತಚಿಂತ ನೆಯು ಲಕ್ಷ್ಯವು ಅರಸರಿಗೆ ಹತ್ತಿರಲಿಲ್ಲ. ಇವರೇ ಏಕೆ? ಔದ್ಯೋಗಿಕ ಸಂಘಗಳಲ್ಲಿದ್ದ ಕೂಲಿಗಳ ಯೋಚನೆಯೂ ಇರಲಿಲ್ಲವೆಂದು ನಿರಾತಂಕವಾಗಿ ಹೇಳಬಹುದು. ಅವರು ಬೆವರುಸುರಿಯುವಂತೆ ದುಡಿದ ಸಂಪಾದನೆಯನ್ನು ಅರ ಸರು ಕಿತ್ತು ತಿನ್ನುತ್ತಿದ್ದರು. ಆದರೆ ಈಗ ಮಾತ್ರ ಅವರನ್ನು ಉತ್ತಮಾವಸ್ಥೆಗೇರಿಸಲು ಅನೇಕ ಯತ್ನ ಗಳು ನಡೆದಿರುತ್ತವೆ. ಹಳ್ಳಿಗರ ಉದ್ಧಾರಕ್ಕಾಗಿ ಸರ ಕಾರವು ನಿರಂತರವೂ ತೊಡಗಿರುತ್ತದೆ. ಅವರ ಹಿತ ಕ್ಕಾಗಿ ಅನೇಕ ಅನುಕೂಲ್ಯಗಳನ್ನು ಏರ್ಪಡಿಸಲಾಗಿದೆ. ಈಗ ಹಳ್ಳಿಗಳಲ್ಲಿ ಶಾಲೆಗಳನ್ನು ತೆರೆದು ಬಾಲಕರಿಗೆ ವಿದ್ಯೆಯನ್ನು ಕಲಿಸುತ್ತಾರೆ. ವಯಸ್ಸು ಬಂದವರಿಗೆ ತೋಟಿಗತನ ( Farming ), ಬೇಸಾಯ ಮೊದಲಾದು ವುಗಳ ಶಿಕ್ಷಣವೂ, ಯಂತ್ರಗಳನ್ನು ಉಪಯೋಗಿಸುವ ರೀತಿ, ಆರೋಗ್ಯಶಾಸ್ತ್ರ, ಗ್ರಾಮನೈರ್ಮಲ್ಯ, ಸಂಘಟನೆ ಮುಂತಾದುವನ್ನೂ ಬೋಧಿಸುವರು. ರೋಗ ಬಾರದಂತೆ ನೋಡಿಕೊಳ್ಳುವುದಕ್ಕಾಗಿಯೂ, ರೋಗಿಗಳ ಉಪಚಾರಕ್ಕಾಗಿಯೂ ಆಸ್ಪತ್ರೆಗಳನ್ನಿಟ್ಟು ಜನರಿಗೆ ಸೌಕರ್ಯಗಳನ್ನು ಕಲ್ಪಿಸಿರುವರು. ಸಾಲದುದಕ್ಕೆ ವೈದ್ಯರು ಹಳ್ಳಿಗಳಲ್ಲಿ ತಿರುಗಾಡಿ, ಚಿಕಿತ್ಸೆಯ ಕಾರ್ಯ ವನ್ನೂ ಶಿಕ್ಷಣದ ಕಾರ್ಯವನ್ನೂ ಮುಂದೆ ಸಾಗಿಸು ವರು. ರಾಜಕಾರಣವನ್ನು ತಿಳಿಯಹೇಳುವುದಲ್ಲದೆ ಜಗ ತ್ತಿನ ಬಗ್ಗೆ ಸಾಕಾದಷ್ಟು ಪರಿಚಯ ಮಾಡಿಕೊಡುವರು. ಅಲ್ಲಲ್ಲಿ ವಾಚನಾಲಯಗಳನ್ನಿಟ್ಟು ಜನರು ಅಲ್ಲಿ ಕಲೆಯು ವಂತೆ ಪ್ರೇರೇಪಿಸುವರು. ಸೋವಿಯಟ್‌ರ ಧ್ಯೇಯವೆಂ ದರೆ ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದೊಂದು ಶಿಕ್ಷಣ ಕೇಂದ್ರವಿರಬೇಕೆಂದು. ಅಲ್ಲಲ್ಲಿ ರೇಡಿಯೋಗಳನ್ನು ಹಾಕಿ ರುವರು. ಇದರಿಂದ ನಾನಾಕಡೆಗಳಿಂದ ಸುದ್ದಿ ತಿಳಿಯು ವುದಲ್ಲದೆ ಮಾಸ್ಕೋ ನಗರದಿಂದ ( Moscow ) ಹಳ್ಳಿಗರಿ ಗಾಗಿ ಸಂಗೀತವನ್ನು ಏರ್ಪಡಿಸಿರುವರು. ಹೀಗೆ ಅಪ್ರ ತ್ಯಕ್ಷ ರೀತಿಯಿಂದ ಲಲಿತಕಲೆಗೆ ಉತ್ತೇಜನಕೊಡುವು ದಲ್ಲದೆ ಆಗಾಗ ರಾಜಕೀಯವಿಚಾರಗಳನ್ನು ಉಪನ್ಯಾ ಸದಮೂಲಕ ಜನರಲ್ಲಿ ಪ್ರಚಾರ ಮಾಡುವರು.

ಈ ವಿಧವಾದ ಶಿಕ್ಷಣವು ವಿಶಾಲವಾದ ರಷ್ಯಾದಲ್ಲಿ ಎಲ್ಲೆಲ್ಲಿಯೂ ಪ್ರಚಲಿತವಿದೆಯೆ ?—ಎಂದು ಮನಸ್ಸಿನಲ್ಲಿ ಸಹಜವಾದ ಪ್ರಶ್ನೆಯು ಬರುವುದು. ಅವರ ಪದ್ಧತಿಯ ಮಹತ್ವವು ಪ್ರಸ್ತುತದ ವಿಸ್ತಾರದಲ್ಲಿ ಅಲ್ಲ. ಅದರ ಸಾಧ್ಯ ತೆಯೂ ಉಪಯುಕ್ತತೆಯೂ ಮನದಲ್ಲಿ ಮೂಡಿ ಪ್ರಶ್ನೆಗೆ ಉತ್ತರ ದೊರೆಯಬೇಕು. ಅನೇಕ ವೇಳೆ ಸಾಮಾಜಿಕ ಶಾಸ್ತ್ರಗಳ ಅಂಗೀಕೃತ ತತ್ವಗಳನ್ನು (Hyphothesis of

CC-0. Jangamwadi Math Collection. Digitized by eGangotri

the social sciences ) ವಿಜ್ಞಾನ ಶಾಸ್ತ್ರದ ಸಂಶೋಧನೆಯು ಒಮ್ಮೆಲೇ ನಾಶಪಡಬಹುದು; ಹೊಸದನ್ನು ಅದರ ಸ್ಥಾನದಲ್ಲಿ ಮಂಡಿಸಬಹುದು. ಹಾಗೆಯೇ ಜನ ಜೀವನದಲ್ಲಿ, ಒಂದು ಕೇಂದ್ರದಲ್ಲಿ ತಂದುದನ್ನು ಬೇರೊಂದರಲ್ಲಿ ಸ್ವಾಭಾವಿಕವಾಗಿ ಸಾಗಿಸಬಹುದು. ಈ ಸಿದ್ಧಾಂತವನ್ನು ರಷ್ಯನ್ನರು ತಮ್ಮ ದಿನಚರ್ಯೆಗಳಿಂದಲೇ ಜಗತ್ತಿಗೆ ಪ್ರಮಾಣಮಾಡಿ ಕೊಟ್ಟಿರುತ್ತಾರೆ.

ಆದರೂ ಜನತಾಶಿಕ್ಷಣವೆಂದರೆ ಈ ಪ್ರಶ್ನೆಯನ್ನು ಹೊರದೂಡಲು ಸಾಧ್ಯವಿಲ್ಲ. ಪಸರಣೆಯ ಅವಲಂಬನದಿಂದಲೇ ಇತರ ಸಂಗತಿಗಳನ್ನು ಗೊತ್ತುಮಾಡಬೇಕಿರುತ್ತದೆ. ಸಂಖ್ಯೆಗಳ ಮೇಲೆಯೇ ಪೂರ್ಣ ಭರವಸೆಯಿಡುವುದು ಒಳಿತಾದ ಕೆಲಸವಲ್ಲ. ಇವಕ್ಕೆ ಕಾರಣವಾದರೂ ಉಂಟು. ಸ್ವಾಭಾವಿಕವಾಗಿ ದೃಷ್ಟಿಯು ಸಂಕುಚಿತವಿರುತ್ತದೆ. ಆದರೂ ಒಂದು ಉದಾಹರಣೆಯನ್ನು ಕೊಡಬಹುದು. ಮಾಸ್ಕೋನಗರಕ್ಕೆ ೧೫೦೦ ಮೈಲಿಗಳ ದೂರದಲ್ಲಿ ೩೧೦ ಗ್ರಾಮುಗಳನ್ನೊಳಗೊಂಡ ಒಂದು ಜಿಲ್ಲೆ ಇರುವುದು. ಸರಕಾರದವರು ಇಲ್ಲಿನ ೬೫ಹಳ್ಳಿಗಳಲ್ಲಿ ಪೂರ್ಣಕೇಂದ್ರಸ್ಥಾನ ಮಾಡಿರುತ್ತೇವೆಂದೂ ಇನ್ನು ೧೫ ಹಳ್ಳಿಗಳಲ್ಲಿ ಗ್ರಾಮಸ್ಥರೇ ಕೇಂದ್ರವನ್ನು ನೆಲೆಗೊಳಿಸಿರುವರೆಂದೂ ಪ್ರಕಟಿಸಿದ್ದರು. ಪ್ರತಿಯೊಂದು ಹಳ್ಳಿಯಲ್ಲಿ ಶಾಲೆಯಿರುವುದು; ಒಂಬತ್ತು ಆಸ್ಪತ್ರೆಗಳನ್ನಿಡಲಾಗಿದೆ. ಇನ್ನು ಶಿಷ್ಟದಷ್ಟು ಭಾಗದಲ್ಲಿ ಸಂಘಟನೆಯ ಕೆಲಸವನ್ನು ಮಾಡಬೇಕಿರುತ್ತದೆ—ಎಂದೂ ಬರೆದಿದ್ದರು. ಇದರ ನಿಜಾಂಶವನ್ನು ತಿಳಿಯಲು ಹೋಗಿದ್ದ ಪಾಲ್ ಮೌರಫ್ ಎಂಬವರು ಹೀಗೆ ಬರೆದಿರುತ್ತಾರೆ:

" ನಾನು ಹತ್ತು ಗ್ರಾಮುಗಳನ್ನು ಸ್ವತಃ ನೋಡಿಕೊಂಡು ಬಂದೆ. ಇನ್ನೂ ಅನೇಕ ಹಳ್ಳಿಗಳಲ್ಲಿ ಮೋಟಾರಿನಿಂದ ಹಾಯ್ದು ಹೋದೆ. ಪ್ರತಿಯೊಂದು ಹಳ್ಳಿಯಲ್ಲಿಯೂ ಶಾಲೆಗಳಿದ್ದುವು. ನಾನು ನೋಡಿದೆಡೆಗಳಲೆಲ್ಲಾ ಶಾಲೆಗಳು ಇದ್ದೇ ಇದ್ದುವು. ಐದು ಗ್ರಾಮುಗಳಲ್ಲಿ ವಾಚನಾಲಯಗಳಿದ್ದುವು. ಮೂರು ಹಳ್ಳಿಗಳಲ್ಲಿ ಆಸ್ಪತ್ರೆಗಳಿದ್ದುವು. ಇಲ್ಲಿನ ಎಲ್ಲಾ ಕೆಲಸಗಳು ಯೋಗ್ಯವಾದ ರೀತಿಯಿಂದ ನಡೆಯುವುವಲ್ಲದೆ, ಜನರಿಗೆ ಇದುವರೆಗೆ ದೊರೆಯದೆ ಇದ್ದ ಅನೇಕ ಸೌಕರ್ಯಗಳನ್ನೂ ಕಲ್ಪಿಸಿಕೊಡಲಾಗಿದೆ. ಚಿಕಿತ್ಸೆ ಹೊಂದುತ್ತಿದ್ದ ರೋಗಿಗಳ ಸಂಖ್ಯೆಯನ್ನು ನೋಡಿದರೆ ಹೃದಯವು ಜಲ್ಲೆನ್ನುವುದು. ವಾಚನಾಲಯಗಳಲ್ಲಿ ಸಣ್ಣ ಸಣ್ಣ ಪುಸ್ತಕ ಭಂಡಾರಗಳುಂಟು. ಅಲ್ಲದೆ ಯಂತ್ರೋಪಯೋಗ, ಶಿಶುಸಂಗೋಪನ, ರೋಗಚಿಕಿತ್ಸೆ, ನೈರ್ಮಲ್ಯ, ರಾಜಕಾರಣ, ಹಾಗೂ ಮತನಾಶಕವಾದ (Anti-religions) ಲೇಖನಗಳನ್ನು ಪ್ರಸಿದ್ಧ ಪತ್ರಿಕೆಗಳ (Posters) ಮುಖಾಂತರವಾಗಿ ಜನರಿಗೆ ಉಪದೇಶಿಸುವ ಕೆಲಸವನ್ನು ಮುಂದುವರಿಸುವರು. ಕೆಲವೆಡೆಗಳಲ್ಲಿ " ರೇಡಿಯೋ "ಗಳುಂಟು. ಈ ಕೇಂದ್ರದಲ್ಲಿ ವ್ಯವಸ್ಥೆಯನ್ನು ಒಂದು ಸಮಿತಿಯು ಸಾಗಿಸುತ್ತದೆ. ಅಲ್ಲದೆ ಈ ಆಶ್ರಮಗಳು ಜನರು ಬೆರೆತು ಅನ್ಯೋನ್ಯವಿಶ್ವಾಸವನ್ನು ಹೆಚ್ಚಿಸಿಕೊಳ್ಳಬಹುದಾದ ಸ್ಥಳಗಳಾಗುತ್ತವೆಯಲ್ಲದೆ ಅವರ ಅಭಿವೃದ್ಧಿಯ ರಂಗಭೂಮಿಯೂ ಆಗುತ್ತವೆ."

## ನಗರಗಳಲ್ಲಿ

ರಷ್ಯಾದ ಹಳ್ಳಿಗಳಲ್ಲಿನ ಈ ವಿಧವಾದ ಶಿಕ್ಷಣಕ್ರಮದಿಂದ ಒಂದು ವಿಶೇಷವಾದ ತತ್ವವು ಹೊರಬೀಳುತ್ತದೆ. ದೇಶವೇ ಆಗಲಿ, ಜನಾಂಗವೇ ಆಗಲಿ, ಮುಂದುವರಿಯಬೇಕಿದ್ದರೆ ಅಲ್ಲಿನ ಜನರ ಸ್ಥಿತಿಗತಿಗಳನ್ನು ಹಿಡಿದುಇದು ದಾರಿಯನ್ನು ಕ್ರಮಿಸುತ್ತದೆ – ಎಂಬ ಸಿದ್ಧಾಂತವನ್ನು ಬೇರೆಹೇಳಬೇಕಾಗಿಲ್ಲ. ಇದಕ್ಕೆ ಸಹಕಾರಿಯೆಂದರೆ ವಿದ್ಯಾಭ್ಯಾಸ, ಶಿಕ್ಷಣಕ್ರಮ. ಈ ಶಿಕ್ಷಣವು ಕೇವಲ ಹುಡುಗರಿಗೆ ಮಾತ್ರವಾದರೆ ಜನಾಂಗದ ಬೆಳವಣಿಗೆಯು ಆಗುವಂತಿಲ್ಲ. ಅದು ಜನರಲ್ಲಿ ವಿಸ್ತಾರವಾಗಿ ಪ್ರವಹಿಸಬೇಕು. ಹೀಗೆ ಮಾಡದಿದ್ದರೆ ವಿದ್ಯಾಭ್ಯಾಸದ ಉದ್ದೇಶವು ಸಹ ಕೆಡುವ ಸಂಭವವುಂಟು. ಈ ಒಳಗುಟ್ಟನ್ನರಿತ ರಷ್ಯನರು ತಮ್ಮಲ್ಲಿ ಯಾವತ್ತು ಮುಂದಿಗೂ ಶಿಕ್ಷಣವು ದೊರೆಯುವಂತೆ ಹವಣಿಸುತ್ತಾರೆ. ಇದರ ಪರಿಪೂರ್ಣತೆಯನ್ನು ಹಳ್ಳಿಗಳಲ್ಲಿ ನೋಡಲು ಸಾಧ್ಯವಿಲ್ಲ. ನಗರಗಳಲ್ಲಿ ಈ ಶಿಕ್ಷಣವಲ್ಲಿಯು ಕುಡಿವರಿದು ಹಬ್ಬಿ, ಕಾಯಿಹಣ್ಣುಗಳು ಬಿಟ್ಟುದನ್ನು ಈಕ್ಷಿಸಿ ಸಂತಸಗೊಳಬಹುದು. ನಗರಗಳಲ್ಲಿ ಪ್ರಗತಿಪರವಾದ ಶಿಶುರಕ್ಷಣಾಲಯಗಳು (Creches), ಕಿಂಡರ್‌ಗಾರ್ಟನ್ ( Kindegartens ), ಪ್ರಾಥಮಿಕಶಾಲೆ ಮಾಧ್ಯಮಿಕ ಶಾಲೆಗಳು, ಪ್ರೌಢವಯಸ್ಕರ ಶಿಕ್ಷಣಾಲಯಗಳು–ಇವುಗಳನ್ನು ಪರಿಶೀಲಿಸಿ, ಅವುಗಳ ಉಪಯುಕ್ತತೆಯನ್ನು ಅರಿತುಕೊಳ್ಳಬಹುದು.

CC-0. Jangamwadi Math Collection. Digitized by eGangotri

ದೊಡ್ಡ ದೊಡ್ಡ ಕಾರಖಾನೆಗಳಲ್ಲಿರುವ (Factory) ಪ್ರದೇಶದಲ್ಲಿ ಶಿಶುಸಂರಕ್ಷಣಾಲಯವನ್ನು ಅಣಿ ಮಾಡಿರುವರು. ಇಲ್ಲಿ ಕೆಲಸಗಾರರ ಸಣ್ಣ ಮಕ್ಕಳನ್ನು ಜೋಪಾನ ಮಾಡುವರು; ತಾಯಂದಿರನ್ನು ನಾಲ್ಕು ಗಂಟೆಗಳಿಗೊಮ್ಮೆ ಹೊರಗೆ ಬಿಟ್ಟು, ಮಕ್ಕಳನ್ನು ನೋಡಿಕೊಳ್ಳಲು ಅನುಕೂಲಮಾಡಿಕೊಟ್ಟಿರುವರು. ಇಲ್ಲಿನ ಕಿಂಡರ್‌ಗಾರ್ಟನ್ನುಗಳು ಇತರ ದೇಶಗಳಲ್ಲಿನವುಗಳಿಗಿಂತಲೂ ಉತ್ತಮೋತ್ತಮವಾಗಿರುವುವು. ಬಾಲಕರಿಗಾಗಿ ವಿಶ್ರಾಂತಿಗೃಹ, ಭೋಜನಶಾಲೆ, ಕೈಗೆಲಸದ ಕೊಠಡಿ, ತೋಟ ಮುಂತಾದುವನ್ನು ಮನಸೆಳೆಯುವಂತೆ ಅಣಿ ಮಾಡಿರುವರು. ಮಕ್ಕಳು ಬೇಸರಗೊಳ್ಳದಂತೆ ಎಲ್ಲಾ ವ್ಯವಸ್ಥೆಯನ್ನೂ ಮಾಡಿರುವರು.

## ಸಂಗ್ರಹಾಲಯಗಳು

ಎಲ್ಲಾ ದೇಶಗಳಲ್ಲಿಯೂ ವಸ್ತುಸಂಗ್ರಹಾಲಯ (Museums) ಗಳುಂಟು. ಆದರೆ ಅಲ್ಲಿನ ಸಾಮಗ್ರಿಗಳಿಗೆ ಒಂದು ಚೀಟಿಯನ್ನು ಬರೆದು ಇಟ್ಟಿರುವುದನ್ನೂ ಅವುಗಳ ವ್ಯವಸ್ಥೆಯನ್ನೂ ನೋಡಿದರೆ ವಸ್ತುಸಂಗ್ರಾಲಯಗಳ ಉದ್ದೇಶವು ತೋರುವುದಿಲ್ಲ. ಅವುಗಳನ್ನು ಕಣ್ಣಿಂದ ನೋಡಿ 'ಹೌದು ಜಗತ್ತು ಚಿತ್ರಮಯ' ಎಂದು ಬೋಧೆಯಾಗುವುದೇ ಹೊರತು ಉದ್ದೇಶವು ಒಡೆದು ತೋರುವುದಿಲ್ಲ. ರಷ್ಯದಲ್ಲಿನ ಪದ್ಧತಿಯು ಹೀಗಿಲ್ಲ. ಕಲಾ, ವಿಜ್ಞಾನ, ಆರೋಗ್ಯಶಾಸ್ತ್ರ, ರಾಜಕಾರಣ ಇವುಗಳ ವಸ್ತುಸಂಗ್ರಹಾಲಯಗಳನ್ನು ನಗರಗಳಲ್ಲಿ ಸ್ಥಾಪಿಸಿರುವರು. ಪ್ರತಿಯೊಂದು ಸಂಸ್ಥೆಯಲ್ಲಿಯೂ ಒಂದು ಶಿಕ್ಷಕರ ಗುಂಪುಂಟು. ಶಿಕ್ಷಣಪದ್ಧತಿಗೆ ಅನುಸರಿಸಿ ವ್ಯವಸ್ಥೆಯಿಂದ ಸಾಮಾನುಗಳನ್ನು ಜೋಡಿಸಿರುವರು. ತಂಡೋಪತಂಡವಾಗಿ ನೋಡಲು ಬರುವ ಜನರನ್ನು, ಬಾಲಕರನ್ನು ಒಬ್ಬೊಬ್ಬ ಶಿಕ್ಷಕನು ತನ್ನ ವಶಕ್ಕೆ ತೆಗೆದುಕೊಂಡು ಅವರಿಗೆ ಎಲ್ಲ ಸಾಮಗ್ರಿಯ ಪರಿಚಯವನ್ನು ಮಾಡಿಕೊಡುವನು. ಈ ರೀತಿ ಪ್ರತಿಯೊಂದು ಸಾಮಾಜಿಕಸಂಸ್ಥೆಯೂ ಶಿಕ್ಷಣಕ್ರಮದಲ್ಲಿ ಭಾಗಿಯಾಗುತ್ತಿದೆ. ಶಾಲೆಗಳಿಂದ ಎಷ್ಟು ಶಿಕ್ಷಣವು ದೊರೆಯುವುದೋ, ಅಷ್ಟೇ ಶಿಕ್ಷಣವು ಈ ವಸ್ತುಸಂಗ್ರಹಾಲಯಗಳಿಂದ ಸಿಕ್ಕುವುದು.

ಇವು ಅಲ್ಲದೆ ಮಾಧ್ಯಮಿಕಶಾಲೆಗಳಲ್ಲಿ (Higher Educational Institutions) ಡಾರ್ವಿನಿಯನ್ ಮ್ಯೂಜಿಯಂ (Darwinian Museum) ಎಂಬ ಸಂಗ್ರಹಾಲಯಗಳುಂಟು. ಇಲ್ಲಿ ವಿಕಾಸವಾದದ ರೀತಿಯಿಂದ ವಿಜ್ಞಾನಪರಿಚಯವನ್ನು ಮಾಡಿಕೊಡುವರು. ಇದರ ಮುಖ್ಯಹೇತುವೇನೆಂದರೆ, ಮತಸಂಬಂಧವಾದ ನಂಬಿಗೆಗಳನ್ನು ದೂರಮಾಡಬೇಕೆಂಬುದು. ಇಲ್ಲಿ ಬಹಳ ವಿಚಕ್ಷಣೆಯಿಂದ ವಿಜ್ಞಾನಶಾಸ್ತ್ರದ ಸಾಮಗ್ರಿಗಳನ್ನು ಶೇಖರಿಸಿರುವರಲ್ಲದೆ, ಮತನಾಶಕವಾದ (Anti-religious) ಉಪದೇಶವು ಇಲ್ಲಿ ನಡೆಯುತ್ತಿದೆಯೆಂದು ಹೇಳಬಹುದು.

## ಬಾಲಕರ ಶಿಕ್ಷಣ

ಪ್ರಪಂಚದ ಪರಿಚಯವನ್ನು ಮಾಡಿಕೊಡುವುದಕ್ಕಾಗಿ ಬಾಲಕರನ್ನು ಕಾರಖಾನೆಗಳಿಗೆ, ಅಂಗಡಿಗೆ, ಸರಕಾರದ ಇಲ್ಲವೆ ಖಾಸಗೀ (Private) ಕಚೇರಿಗಳಿಗೆ ಕರೆದುಕೊಂಡು ಹೋಗಿ, ಅಲ್ಲಿನ ಎಲ್ಲ ಸಂಗತಿಗಳನ್ನೂ ಸರಳ ರೀತಿಯಿಂದ ಬೋಧಿಸುವರು. ಸಂಗೀತಶಾಲೆಗಳಲ್ಲಿ, ರಂಗಮಂದಿರಗಳಲ್ಲಿ, ದೇವಾಲಯಗಳಲ್ಲಿ, ಈ ಸಣ್ಣ ಹುಡುಗರ ಸಮೂಹವನ್ನು ನೋಡಬಹುದು. ಅವರು ಪ್ರತಿಯೊಂದು ಸಂಸ್ಥೆಯನ್ನು ಸ್ವತಃ ನೋಡಿ, ಅದರ ಪೂರ್ಣ ಪರಿಚಯವನ್ನೂ, ಅನುಭವವನ್ನೂ ಮಾಡಿಕೊಳ್ಳಬೇಕೆಂಬ ಕಾರಣದಿಂದ ಹೀಗೆ ಒಯ್ಯುವರು. ಇದರಿಂದ ಪ್ರವಾಸವಾಗುವುದು; ಕುತೂಹಲವು ಹೆಚ್ಚುವುದು; ಜ್ಞಾನಸಂಪಾದನೆಯಾಗುವುದು. ಹಳ್ಳಿಯಲ್ಲಿನ ಮಕ್ಕಳನ್ನು ನಗರಗಳಿಗೂ, ನಗರದ ಮಕ್ಕಳುಗಳನ್ನು ಹಳ್ಳಿಗಳಿಗೂ ಕರೆದುಕೊಂಡು ಹೋಗಿ, ಅಲ್ಲಿನ ವಿಶೇಷಗಳನ್ನು ತೋರಿಸಿ ಕೊಡುವರು. ಹೀಗೆ ಸಮಾಜದ ಜೀವನದೊಡನೆ ಶಿಕ್ಷಣದ ಜೊತೆಯನ್ನು ಬೆಳೆಯಿಸುವ ಕೆಲಸಗಳಲ್ಲಿ ಯಾವಾಗಲೂ ತೊಡಗಿರುವರು.

ಶಿಕ್ಷಣದ ಮೂರನೆಯ ಕ್ರಮವೆಂದರೆ ಬಾಲಕರು ಸಮಾಜಕ್ಕೆ ಅನುಕೂಲವಾದ ಕೆಲಸಗಳನ್ನು ಮಾಡಬೇಕೆಂಬುದು. ಇದನ್ನು ಅವರು ಅಮೇರಿಕಾ ದೇಶದವರಿಂದ ತೆಗೆದುಕೊಂಡಿರುವರು. ಆದರೆ ಅದಕ್ಕೆ ನೀರೆರೆದು, ತಮ್ಮ ಸ್ವಂತದ್ದೆಂದೇ ಭಾವಿಸಿ, ಬೆಳೆಯಿಸುತ್ತಿರುವರು. ತೌರೂರು ಅಮೇರಿಕಾದೇಶವಾದರೂ ಪದ್ಧತಿಯ ಪೂರ್ಣಪ್ರಯೋಜನವನ್ನು ರಷ್ಯಾದವರು ಹೊಂದಲು ಅನವರತವಾಗಿ ಯತ್ನಮಾಡುತ್ತಿರುವರು.


CC-0. Jangamwadi Math Collection. Digitized by eGangotri

### ಒಳಗುಟ್ಟು

ಪಾಶ್ಚಾತ್ಯರಲ್ಲಿ ವ್ಯಕ್ತಿಗಳಿಂದ ಪ್ರಚಾರದ (Propaganda) ಕೆಲಸವು ನಡೆಯುತ್ತಿರುವುದರಿಂದ, ಆದರಿಂದ ಹೊರಗಡೆ ಇರಲು ಶಾಲೆಗಳಿಗೆ ಕಠಿಣವಾದ ಕೆಲಸವಾಗಿರುತ್ತದೆ. ಆದರ ಆಘಾತದಲ್ಲಿ ಸಿಕ್ಕಿ ಬಾಲಕರು ಮುಂದೆ ಏನಾಗುವರೋ ತಿಳಿಯದೇ ಹೋಗುವುದು. ಇದನ್ನು ತಪ್ಪಿಸುವುದಕ್ಕಾಗಿ ರಷ್ಯಾಡಲ್ಲಿ ಮೇಲಿನರೀತಿಯ ಶಿಕ್ಷಣ ಕ್ರಮವನ್ನು ಅವಲಂಬಿಸಿರುವರು. ಶಾಲೆಗಳಿಗೂ ಕೇಂದ್ರಗಳಿಗೂ ಪರಸ್ಪರಸಂಬಂಧವನ್ನು ಮಾಡಿರುವರು; ಇವೆರಡಕ್ಕೂ ಜೀವನಜೀವನಕ್ಕೂ ಆರ್ಥಿಕ, ರಾಜಕೀಯ ಸಂಸ್ಥೆಗಳಿಗೂ ಅನ್ಯೋನ್ಯಸಂಬಂಧವು ಬರುವಂತೆ ಮಾಡಿರುವರು. ಈ ವಿಧವಾದ ಪರಸ್ಪರಾವಲಂಬನೆಯಿಂದ ತಮ್ಮ ಗುರಿಯನ್ನು ಸಾಧಿಸಿದಂತಾಗುವುದು. ಕೆಲಸವು ಭರದಿಂದ ಸಾಗುವುದು. ಅವರ ಜೀವಜ್ಯೋತಿಯಾದ ಕಮ್ಯೂನಿಸ್ಟ್ ತತ್ವಗಳ ಪ್ರಚಾರವಾಗುವುದು.

### ಉಪಸಂಹಾರ

ಶಿಕ್ಷಣಪದ್ಧತಿಯ ಹಾಗೂ ರಾಜ್ಯವ್ಯವಸ್ಥೆಯ ಎಲ್ಲಾ ರೂಪವಿಶೇಷಗಳನ್ನು ವಿಹಂಗಮದೃಷ್ಟಿಯಿಂದ ನೋಡಿದರೆ, ಹಿಂದೂಗಳಾದ ನಮಗೆ ಒಂದು ವೈಚಿತ್ರ್ಯವು ತೋರಿಬರುವುದು. ಅಲ್ಲಿ ಜಾತಿಮತಗಳ ಕಡೆಗೆ ಅಷ್ಟು ಲಕ್ಷ್ಯಕೊಡುವುದಿಲ್ಲ. ಈಗಿದ್ದ ಜನಾಂಗದ ಆಚಾರ ವ್ಯವಹಾರಗಳಿಗೆ ಪ್ರತಿರೋಧಿಸುವುದೂ ಇಲ್ಲ. ಕಳೆದ ಈಸ್ಟರ್ (Easter) ಹಬ್ಬದಲ್ಲಿ, ಬೇಕಾದ ಹೆಚ್ಚು ಹಾಲನ್ನು ಜನರಿಗೆ ಕೊಡಲು ವ್ಯವಸ್ಥೆ ಮಾಡಿದ್ದರು. ಅಸಂಖ್ಯಾತಜನರು ದೇವಾಲಯಗಳಿಗೆ (Churches) ಹೋಗಿದ್ದರು. ಆದರೂ ರಷ್ಯನರು ಮತದ ವಿಚಾರಕ್ಕೆ ಪೂರ್ಣವಿರೋಧಿಗಳಾಗಿದ್ದಾರೆ. ಇದಕ್ಕೆ ಹಲವು ಕಾರಣಗಳುಂಟು.

೧. ಪ್ರಚಲಿತಮತದಲ್ಲಿ ಅಜ್ಞಾನ, ಅಂಧಶ್ರದ್ಧೆಗಳು ತುಂಬಿರುತ್ತವೆ.

೨. ಅನಾರೋಗ್ಯಕರವಾದ ಅನೇಕ ಪದ್ಧತಿಗಳು ಅಡಗಿರುತ್ತವೆ.

೩. ವಿಜ್ಞಾನಶಾಸ್ತ್ರದ ಅಭಿವೃದ್ಧಿಗೆ ಸಾಕಷ್ಟು ಅವಕಾಶಕೊಡುವದಿಲ್ಲ.

ಇವಕ್ಕೂ ಹೆಚ್ಚಿನ ಕಾರಣವೆಂದರೆ ಮಾರ್ಕ್ಸ್‌ನು ಹೀಗೆ ಬರೆದಿರುವನು.

" Religion is the opiate of the masses."

ಅವರು ಇಷ್ಟು ವಿರುದ್ಧವಿದ್ದರೂ ಜನರಲ್ಲಿ ಪೂರ್ಣ ನಂಬುಗೆಯು ನಷ್ಟವಾಗಲಿಲ್ಲ. ಅಲ್ಲಲ್ಲಿ ಮತೋದ್ಧಾರದ ಹಲವು ಪ್ರಯತ್ನಗಳು ನಡೆದಿರುವುದೆಂದು ಸುದ್ದಿ ಬಂದಿದೆ. ಇದರಲ್ಲಿ ತಥ್ಯಾಂಶವು ತಿಳಿಯದು. ಆದಾಗ್ಯೂ ಶಾಲೆಗಳಲ್ಲಿ ನಡೆಸಿದ ತನಿಖೆಯಿಂದ (Tests and investigations) ಇಷ್ಟು ತಿಳಿದು ಬಂದಿದೆ: ಅನೇಕ ಮಂದಿ ಬಾಲಕರು ದೇವರೆಂಬ ವಸ್ತುವನ್ನು ನಂಬುವರು.

ಇವು ಏನೇ ಇರಲಿ, ರಷ್ಯನರು ಶಿಕ್ಷಣದ ಹವ್ಯಾಸದಲ್ಲಿ ಬಹು ಮುಂದುವರಿದಿರುವರೆಂಬ ಸಂಗತಿಯು ನಿರ್ವಿವಾದವಾದ ಮಾತು.

ಹಿಂದುಸ್ಥಾನವೂ ಅದರ ಸಹಪಾಠಿಯಾಗಬಲ್ಲುದೇ?



CC-0. Jangamwadi Math Collection. Digitized by eGangotri

# ಕನ್ನಡ ಸಾಹಿತ್ಯಲೋಕದಲ್ಲಿ ಕ್ರಾಂತಿ

ಬರೆದವರು:—ಶ್ರೀ. ಹೊನ್ನೇನಹಳ್ಳಿ ಶೇಷಭಟ್ಟ, "ತರುಣರ ದಂಡು", ಮೈಸೂರು

ಪ್ರಪಂಚದ ಎಲ್ಲ ಭಾಷೆಗಳಲ್ಲಿಯೂ ಈಗಲ್ಲದಿದ್ದರೆ ಹಿಂದೆ ಒಂದಾನೊಂದು ಕಾಲದಲ್ಲಿಯಾದರೂ ಪ್ರಚಂಡ ಕ್ರಾಂತಿಯು ನಡೆದೇ ನಡೆದಿದೆ. ಎಲ್ಲ ಸಜೀವ ಸಾಹಿತ್ಯಗಳ ಶುಭ ಸೂಚನೆಯೇ ಕ್ರಾಂತಿ. ಸಾಹಿತ್ಯವು ಮೇರೆಮೀರಿ ಹಬ್ಬುವುದಕ್ಕೆ ಅದೊಂದು ಕಾಲ. ಸಮಯಸಂದರ್ಭ ಅರಿತು, ಜನಾಂಗದ ತಿಳಿವಿನ ಮಟ್ಟವು ಏರಿದಂತೆಲ್ಲಾ ಸಾಹಿತ್ಯವೂ ತನ್ನ ಮೇರೆಯನ್ನು ಮೀರುತ್ತ ಬೆಳೆಯುತ್ತದೆ. ಹಾಗೆಯೇ ಕನ್ನಡದಲ್ಲಿಯೂ ಈಗ ಪ್ರಚಂಡಕ್ರಾಂತಿಯು ತಲೆದೋರಿದೆ. ನಮ್ಮ ಕನ್ನಡ ಸಾಹಿತ್ಯದಲ್ಲಿ ಅದು ಹೊಸದಲ್ಲ. ಹಿಂದೆ ಅನೇಕಬಾರಿ ಇಂತಹ ಕ್ರಾಂತಿಗಳು ನಡೆದೇ ಭಾಷೆಯು ಈಗಿನ ಸ್ಥಿತಿಗೆ ಬಂದಿದೆ. ಅದನ್ನು ವಿವರಿಸಬೇಕೆಂಬುದೇ ಈ ಲೇಖನದ ಆಶಯ.

ಸಾಹಿತ್ಯವೆಂದರೇನು? ಜನರಾಡುವ ಮಾತೆಲ್ಲ ಸಾಹಿತ್ಯವೇ? ಸಾಹಿತ್ಯಕ್ಕೆ ಆದಿ ಯಾವುದು; ಅಂತ್ಯ ಯಾವುದು? ಎಂದು ಹಲವು ಬಗೆಯಲ್ಲಿ ಪ್ರತಿಯೊಬ್ಬ ಸಂಸ್ಕೃತ ಮಾನವನ ಹೃದಯದಲ್ಲಿಯೂ ಜಿಜ್ಞಾಸೆ ನಡೆಯುತ್ತಿರುತ್ತದೆ. ಆದರೆ ಅನೇಕ ಬಗೆಯಲ್ಲಿ ಜಿಜ್ಞಾಸೆ ಮಾಡಿ ಕೊನೆಗೆ ಅದರ ಸ್ವರೂಪವನ್ನು ಹಲವು ಬಗೆಯಲ್ಲಿ ಹೇಳುತ್ತಾರೆ. "ಸಾಹಿತ್ಯವು ಜನಜೀವನದ ವಿಮರ್ಶೆ;" "ಹೃದಯದಲ್ಲಿ ಜನಿಸುವ ಭಾವಗಳಿಗೆ ರೂಪುಗೊಡುವುದೇ ಸಾಹಿತ್ಯ; ಆದರೆ ಆ ಭಾವಗಳು ಮಾನವನ ಹೆಜ್ಜೆಹೆಜ್ಜೆಗೂ ತೋರಿಬರುವ ಅನುಭವದ ರೂಪಗಳಾಗಿರಬೇಕು;" ಸಾಹಿತ್ಯವು ಜನಜೀವನದ ವಾಣಿ;" "ಕಾವ್ಯಂ ಸವಿಶೇಷ ಶಬ್ದರಚನಂ ವಿವಿದಾರ್ಥ ವ್ಯಕ್ತಿ ವರ್ತಿತಾಲಂಕಾರಂ;" ಎಂದು ಅನೇಕ ಬಗೆಯಲ್ಲಿ ಹಲವರು ತಮ್ಮ ತಮ್ಮ ಅನುಭವವನ್ನು ಸಾರಿದ್ದಾರೆ. ಇದರಲ್ಲಿ ಸರಿತಪ್ಪುಗಳನ್ನು ಹುಡುಕಿದರೆ, ಇವೆಲ್ಲವುಗಳಿಂದ ಮಿಳಿತವಾದ ವಾದವೇ ಸಾಹಿತ್ಯದ ಸ್ವರೂಪವೆಂದು ತೋರುತ್ತದೆ. ಸಾಹಿತ್ಯವು ಜೀವನದ ವಿಮರ್ಶೆಯೂ ಹೌದು, ವಾಣಿಯೂ ಹೌದು, ಹೃದಯದಲ್ಲಿ ಜನಿಸುವ ಭಾವಗಳ ರೂಪವೂ ಹೌದು; ಸವಿಶೇಷ ಶಬ್ದರಚನೆಯೂ, ವಿವಿದಾರ್ಥ ವ್ಯಕ್ತಿವರ್ತಿತಾಲಂಕಾರವೂ ಹೌದು.

ಸಾಹಿತ್ಯಕ್ಕೆ ಆದಿ, ಕವಿಯ ಹೃದಯ; ಅಂತ್ಯ, ಪಾಠಕನ ಹೃದಯ. ಇವೆರಡಕ್ಕೂ ಸಂಬಂಧವನ್ನು ಕಲ್ಪಿಸುವುದೇ ವಿಮರ್ಶೆಯ ಹೃದಯ.

ಜೀವನದ ಪ್ರತಿಯೊಂದು ಘಟನೆಯೂ ಸಾಹಿತ್ಯದ ವಸ್ತು. ಘಟನೆಯು ದೈವಿಕವಿರಲಿ, ಮಾನುಷಿಕವಿರಲಿ,— ಜೀವನದಲ್ಲಿ ಜನಿಸುವುದು. ಅದರ ದೆಸೆಯಿಂದ ಶಕ್ತಿವ್ಯಕ್ತಿಗಳ ಸಂಘರ್ಷಣವೋ, ಅಥವಾ ಅದೃಷ್ಟ ಮಾನವವ್ಯಕ್ತಿ ಸಂಘರ್ಷಣವೋ— ಅಂತು ಹೇಗೋ ಒಂದು ಸಂಘರ್ಷಣದ ಘಟನೆ ಬೇಕು. ಘಟನೆಗಳೆಲ್ಲ ಜನಿಸುವುದು ಮಾನವನ-ಜನಾಂಗದ ಹೃದಯದಲ್ಲಿ. ಜೀವನವು ಸಂಸ್ಕೃತವಾದಂತೆಲ್ಲ, ಹೃದಯದಲ್ಲಿ—ಸಮಾಜದಲ್ಲಿ ಬರುವ ಘಟನೆಗಳು ಸಂಸ್ಕೃತವಾಗಿರುವುವು. ಘಟನೆಯು ಸಂಸ್ಕೃತವಾದಂತೆಲ್ಲಾ ಹೇಳುಮಾತೂ ಸಂಸ್ಕೃತವಾಗಿರುವುದು. ಆ ಸಂಸ್ಕೃತ ಮಾತೇ ಸಂಸ್ಕೃತಸಾಹಿತ್ಯದ ರೂಪ. ಅಂತಹ ಸ್ವರೂಪವನ್ನು ಪಡೆಯುವಾಗಲೇ ಸಾಹಿತ್ಯಪ್ರಪಂಚದಲ್ಲಿ ಪ್ರಚಂಡಬದಲಾವಣೆಯು ತೋರುವುದು. ಜೀವನವನ್ನನುಸರಿಸಿ ಸಾಹಿತ್ಯವೂ ಉನ್ನತಪದವಿಗೇರುವುದು.

ಎಲ್ಲ ಸಾಹಿತ್ಯಗಳ ಮೂಲವೂ 'ಜನಪದಸಾಹಿತ್ಯ'ವೇ. ಜನಪದಸಾಹಿತ್ಯವು ಒಬ್ಬರದಲ್ಲ; ಇಬ್ಬರದಲ್ಲ; ಜನಾಂಗದ್ದು. ಜನಾಂಗದ ವಿವಿಧಭಾವಗಳು ಅದರಲ್ಲಿವೆ. ಅದೆಲ್ಲ ಒಬ್ಬನ ಹೃದಯದಲ್ಲಿ ಮೂಡಿದುದಲ್ಲ; ಜನಾಂಗವು ಅನುಭವಿಸಿ, ಅನುಭವದ ಪ್ರಮಾಣದ ಮೇಲೆ ಮೂಡಿರುವ ಸಾಹಿತ್ಯವದು. ಅದಕ್ಕೆ ಎಲ್ಲೆಯಿಲ್ಲ. ಅಂತಹ ಮೇರೆಯರಿಯದ ಸಾಹಿತ್ಯಕ್ಕೆ ಸೀಮೆಯನ್ನು ಕಲ್ಪಿಸಲು, ಜನಾಂಗದ ಇತರ ಎಲ್ಲರಿಗಿಂತ ಸಂಸ್ಕೃತಜೀವಿಯಾದ ಮಹಾತ್ಮನೊಬ್ಬನು ಪ್ರಯತ್ನಿಸುವನು. ಆತನು ಜನಾಂ

CC-0. Jangamwadi Math Collection. Digitized by eGangotri

ಗದ ರೀತಿನೀತಿಗಳನ್ನು ಅನುಸರಿಸಿ ಜನಿಸಿದ ಉತ್ತಮವಾದ ಭಾವನೆಗೆ, ಲಕ್ಷಣವಾದ ರೂಪವನ್ನಿತ್ತು, ಜನಾಂಗವನ್ನು ತನ್ನದೊಂದು ರಥದಲ್ಲಿ ನಡೆಯಿಸಲು ಸಾಧ್ಯವೇ ಎಂದು ಪರೀಕ್ಷೆ ನಡೆಯಿಸುವನು. ಹಾಗೆ ನಡೆಯಿಸಿದ ಪರೀಕ್ಷೆಯಲ್ಲಿ ಸರಿತೋರಿದಹಾದಿಗೆ ರೂಪಗೊಟ್ಟು, ಜನಾಂಗದ ತಿಳಿವಿನ ಮಟ್ಟವನ್ನು ಎತ್ತರಿಸುವನು. ಆಗ ಹಿಂದಿದ್ದ ಸಾಹಿತ್ಯದ ಸ್ವರೂಪವು ಬದಲಾಯಿಸಿ, ಆ ಹೊಸರೀತಿಯನ್ನನುಸರಿಸುವುದು. ತಿಳಿವಿನ ಮಟ್ಟವು ಮೇಲೇರಿದಂತೆಲ್ಲ ಭಾವಗಳು ವಿಕಾಸವಾಗಬೇಕಷ್ಟೆ? ಭಾವಗಳು ವಿಕಾಸವಾದಂತೆಲ್ಲ ಹೊಸತರದ ಸಾಹಿತ್ಯವನ್ನು ಮನವು ಬಯಸುವುದು. ಅಂತಹ ಬಯಕೆಯನ್ನು ಹೊಸಮಾರ್ಗವನ್ನನುಸರಿಸಿದ ಸಾಹಿತ್ಯವು ಪೂರ್ತಿಗೊಳಿಸುವುದು.

ಇಲ್ಲಿಗೆ ಸಾಹಿತ್ಯವು ಜನಪದಸಾಹಿತ್ಯದಿಂದ ಮುಂದಕ್ಕೆ ಒಂದಡಿಯಿಟ್ಟಂತಾಯಿತು. ಇನ್ನೂ ಭಾಷೆಯ— ಸಾಹಿತ್ಯದ ಸ್ವರೂಪವು 'ಹೀಗೆಯೇ' ಇರಬೇಕೆಂದು ನಿರ್ಧರಿಸಲ್ಪಟ್ಟಿರುವುದಿಲ್ಲ. ಇನ್ನೂ ಅದು ಮೇರೆಯಿಲ್ಲದೆ ಇರುತ್ತದೆ. ಪದಗಳು ಹೀಗೆಯೇ ಇರಬೇಕು; ಹಾಗೆಯೇ ಇರಬೇಕು— ಎನ್ನುವ ನಿಯಮವಿಲ್ಲ. ಹೊಸರೀತಿಯ, ಜನತೆಗೆ ರುಚಿಸಿದ ಕಾವ್ಯವನ್ನು— ಸಾಹಿತ್ಯವನ್ನು ಪ್ರಮಾಣವಾಗಿಟ್ಟುಕೊಂಡು, ಮುಂದೆ ಜನಿಸುವ ಕಾವ್ಯಕ್ಕೆ- ಸಾಹಿತ್ಯಕ್ಕೆ ಲಾಕ್ಷಣಿಕ ಸಂಕೋಲೆಯನ್ನು ಹಾಕುವರು. ಅಲ್ಲಿಂದ ಮುಂದೆ ಬರುವ ಕಾವ್ಯವೆಲ್ಲವೂ—ಸಾಹಿತ್ಯವೆಲ್ಲವೂ ಆ ಸಂಕೋಲೆಗೆ ಸುಲಭವಾಗಿ ಸೆರೆಯಾಗಿ ಹೋಗುವುದು; ವಿಶಾಲ ಪ್ರಪಂಚದಲ್ಲಿ ಹಾರಾಡುವ, ಮನಬಂದ ಪರಿಯಲ್ಲಿ ಸುಸ್ವರದಿಂದ ಗಾನಮಾಡುವ ಹಕ್ಕಿಯನ್ನು 'ಇಷ್ಟಗಲದಲ್ಲೇ ಹಾರಾಡಬೇಕು, ಇಂತಹ ಸ್ವರದಿಂದಲೇ ಹಾಡಬೇಕು' ಎಂದು ನಿಯಮಿಸಿದಂತಾಗುತ್ತದೆ. ಆ ಹಕ್ಕಿಯೇನೋ ಸುಸ್ವರದಿಂದ ಹಾಡಬಹುದು. ಆದರೆ ಮುಂದೆ ಬರತಕ್ಕ ಹಕ್ಕಿಗಳು ಅದೇ ರೀತಿಯಲ್ಲಿ ಹಾಡಹೋಗಿ, ಯಾವ ಕಾರಣದಿಂದ ಆಸಿಯಮಿತ ರೀತಿಯ ಗಾನವು ಜನಾಂಗವನ್ನೇ ಆಕರ್ಷಿಸಿತೋ ಅದನ್ನು ಮರೆತು, ಅನುಕರಣ ಮಾಡಹೋಗಿ, ಆ ಸ್ವರದ ಅಂದವನ್ನೇ ಕೆಡಿಸಿ, ಕೇಳಲು ಬೇಸರ ತರುತ್ತವೆ. ಕೆಲವು ದಿನ ಆ ಗಾನವೇ ಜನರ ಮನವನ್ನಾಕರ್ಷಿಸಬಹುದು. ಆದರೆ ಎಷ್ಟು ದಿನ ಒಂದೇ ಗಾನವನ್ನು ಕೇಳಲು ಸಹ್ಯವಾದೀತು? ಎಂದು ಅಸಹನೆ ತೋರಿತೋ ಅಂದಿನಿಂದ ಬೇರೊಂದು ತರದ ಸಾಹಿತ್ಯವು ಸೃಷ್ಟಿಸಲ್ಪಡುತ್ತದೆ. ಆಗ ಮತ್ತೊಮ್ಮೆ ಲಾಕ್ಷಣಿಕರ ಸಂಕೋಲೆಯನ್ನು ಕಿತ್ತೊಗೆಯಬೇಕಾಗುತ್ತದೆ. ಅದೇ ಕ್ರಾಂತಿ. ಹೀಗೆಯೇ ಬೆಳೆಯುತ್ತಿರುವ ಸಾಹಿತ್ಯದಲ್ಲಿ ಕ್ರಾಂತಿಯ ಆಂದೋಲನವಿದ್ದೇ ಇದೆ.

ಮೇಲೆ ಹೇಳಿದ ಮಾತು ಎಲ್ಲ ಸಾಹಿತ್ಯಗಳಿಗೂ ಅನ್ವಯಿಸುತ್ತದೆ. ಎಲ್ಲ ಸಾಹಿತ್ಯಗಳಿಗೂ ಎಂದಮೇಲೆ ಕನ್ನಡಕ್ಕೂ ಸಂಬಂಧಿಸಿದೆಯೆಂದು ಮತ್ತೊಮ್ಮೆ ಹೇಳಬೇಕಾಗಿಲ್ಲ. ಮೊದಲು ಹೇಳಿದಂತೆ ಜನಪದಸಾಹಿತ್ಯವೇ ಉನ್ನತಪದಕ್ಕೇರುತ್ತಿರುವ, ಅಧಃಪತನವಾಗುತ್ತಿರುವ ಸಾಹಿತ್ಯಗಳಿಗೆಲ್ಲ ಮಾತೃಸ್ಥಾನ. ಅತ್ಯುನ್ನತ ಶಿಖರವನ್ನೇರಿ, ಜನಜೀವನವನ್ನು ತನ್ನದೇ ಒಂದು ಮಾರ್ಗದಲ್ಲಿ ಸೆಳೆಯೊಯ್ದ ಸಂಸ್ಕೃತವಾದರೂ ಅಷ್ಟೆ; ಉನ್ನತ ಪದಕ್ಕೇರಿರುವ ಆಂಗ್ಲಭಾಷೆಯಾದರೂ ಅಷ್ಟೆ; ಜನಪದಸಾಹಿತ್ಯಕ್ಕೆ ವಂದಿಸಿಯೇ ಮುಂದೆ ನಡೆದಿವೆ. ಜನಪದಸಾಹಿತ್ಯವೇ ಅವುಗಳು ನಿರ್ಮಿಸಿರುವ ದಿವ್ಯಮಂದಿರಕ್ಕೆ ತಳಹದಿ. ಅದನ್ನು ಯಾರೂ ಕೀಳಲಾರರು. ಸುಂದರಮಂದಿರನಿರ್ಮಾಣಕ್ಕೆ ಪ್ರಯತ್ನಿಸುವ ಯಾವ ಸಾಹಿತ್ಯವಾದರೂ, ಆ ತನ್ನ ತಳಹದಿಯ ಮೇಲೆಯೇ ಭವನವನ್ನು ನಿರ್ಮಿಸಬೇಕು. ನಿರ್ಮಿಸಿದ ಮಂದಿರವನ್ನು ಯಾವ ರೀತಿ ಬೇಕಾದರೂ ಅಲಂಕರಿಸಬಹುದು; ಆದರೆ ಅದು ಜನಾಂಗದ ರುಚಿಯನ್ನನುಸರಿಸಿ ನಡೆಯುತ್ತದೆ.

ನಮ್ಮ ಕನ್ನಡವೂ ಸಜೀವ ಸಾಹಿತ್ಯಗಳಲ್ಲೊಂದು. ಅದರಲ್ಲಿಯೂ ಕ್ರಾಂತಿಗಳೆಷ್ಟೋ ನಡೆದಿವೆ. ಎಷ್ಟೇ ಕ್ರಾಂತಿ ನಡೆಯಲಿ; ತನ್ನ ಜನಾಂಗವು ನೆಟ್ಟಿ ನಿಲ್ಲಿಸಿರುವ ತಳಹದಿಯನ್ನು ಕೀಳಲಾಗಲಿಲ್ಲ; ಆಗುವುದೂ ಇಲ್ಲ. ಆ ತಳಹದಿಯ ಮೇಲೆಯೇ ದಿವ್ಯ ಭವನವೊಂದನ್ನು ಕಟ್ಟಿಕೊಂಡಿದೆ. ಆ ಮಂದಿರವನ್ನು ಸಾಹಿತ್ಯದೇವಿಯ ಭಕ್ತರನೇಕರು ವಿವಿಧರೀತಿಯಿಂದ ಅಲಂಕರಿಸಿ, ಮೂರ್ತಿಯನ್ನು ಭವನದ ಮಧ್ಯದಲ್ಲಿ ಪ್ರತಿಷ್ಠಿಸಿ, ರತ್ನಹಾರಗಳನ್ನು ಕೊರಳಿಗೆ ಹಾಕಿ, ಮೂರ್ತಿಯನ್ನು ನೋಡಿ ನೋಡಿ ಆನಂದಭರದಲ್ಲಿ ತೇಲಿ ಹೋಗಿದ್ದಾರೆ.

ಕನ್ನಡಸಾಹಿತ್ಯದ ಚರಿತ್ರೆಯು—ಅದು ಜನಪದಸಾಹಿತ್ಯದಿಂದ ಮೂಡಿ, ಹಜ್ಜೆಯಿಟ್ಟು, ಸಂಸ್ಕೃತದ ಸಂಬಂಧವನ್ನು ಬೆಳೆಯಿಸಿರುವವರೆಗೆ ವಿಶದವಾಗಿ ತಿಳಿದಿಲ್ಲ. ಸಂಸ್ಕೃತದೊಡನೆ ಬಾಂಧವ್ಯವನ್ನು ಮಾಡಿದಂದಿನಿಂದ ಈಚೆಗೆ ಅದರ

CC-0. Jangamwadi Math Collection. Digitized by eGangotri

ಚರಿತ್ರೆಯು ವಿವರವಾಗಿ ತಿಳಿಯ ಬಂದಿದೆ. ಆದರಲ್ಲಿಯೇ ಕನ್ನಡದಲ್ಲಿ ನಡೆದಿರತಕ್ಕ ಕ್ರಾಂತಿಗೆ ಉದಾಹರಣೆಗಳು ನಾಲ್ಕೈದು ಸಿಕ್ಕುತ್ತವೆ.

ಯಾವ ನದಿಯಾಗಲಿ, ಹೊಳೆಯಾಗಲಿ ಮೂಲದಿಂದ ಹೊರಡುವಾಗ ಅತಿ ಚಿಕ್ಕದಾಗಿರುತ್ತದೆ. ಮುಂದೆ ಹರಿಯುತ್ತ ಹರಿಯುತ್ತ ಇತರ ಉಪನದಿಗಳನ್ನು ಸ್ವೀಕರಿಸಿ ದೊಡ್ಡದಾಗುತ್ತ ಆಗುತ್ತ, ಕೊನೆಗೆ ದೊಡ್ಡ ಪ್ರವಾಹವಾಗಿ ಹರಿದು, ವಿಶಾಲವಾದ ಸಾಗರವನ್ನು ಸೇರುತ್ತದೆ. ಹಾಗೆಯೇ ಕನ್ನಡಸಾಹಿತ್ಯವೂ ಮೂಲದಿಂದ ಹೊರಡುವಾಗ ಚಿಕ್ಕದಾಗಿತ್ತು. ಅದಕ್ಕೆ ತಮಿಳೂ ಮತ್ತು ಇತರ ದ್ರಾವಿಡ ಭಾಷೆಗಳೂ ಸಹಾಯಮಾಡಲು ದೊಡ್ಡದಾಗಿ ಹರಿದು ಬರುತ್ತಿರುವಾಗ, ಸಂಸ್ಕೃತವೆಂಬ ದೊಡ್ಡ ಉಪನದಿಯೊಂದು ಅದಕ್ಕೆ ಸೇರಿ, ಪ್ರವಾಹವನ್ನು ಹೆಚ್ಚಿಸಿತು. ಸಂಸ್ಕೃತವು ಕನ್ನಡಕ್ಕೆ ಸಹಾಯಮಾಡಿದಾಗ, ಕನ್ನಡ ಪ್ರಪಂಚವು ವಿಶಾಲವಾಯಿತು. ವಿಶಾಲಸಂಸ್ಕೃತ ಪ್ರಪಂಚದ ಭವ್ಯಭಾಗಗಳು ಕನ್ನಡದಲ್ಲಿ ಉಪಯೋಗಿಸಲ್ಪಟ್ಟುವು. ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಅದ್ವಿತೀಯ ಪಂಡಿತರಾದ ಪಂಪ, ರನ್ನರು ಸಂಸ್ಕೃತ ಚಂಪೂಕಾವ್ಯಗಳ ಮಾದರಿಯಲ್ಲಿ, ಕನ್ನಡಧಲ್ಲಿ ಪ್ರಸಿದ್ಧಗ್ರಂಥಗಳನ್ನು ರಚಿಸಿದರು. ಕನ್ನಡದಲ್ಲಿ ಮೊರಡು ಮೊರಡಾಗಿದ್ದ ಕತೆ ಹೇಳುವ ಸೊಗಸು, ಕಡೆತಕ್ಕೆ ಕೊಟ್ಟ ಕಂಭಗಳಂತೆ ನೋಡಲು ಮನೋಹರವಾದ ರೂಪುದಾಳಿತು. ಸಂಸ್ಕೃತವೃತ್ತಗಳೆಲ್ಲ ಕನ್ನಡದಲ್ಲಿ ಪ್ರಚಾರಕ್ಕೆ ಬಂದುವು. ಸಂಸ್ಕೃತವ್ಯಾಕರಣವೇ ಕನ್ನಡಕ್ಕೂ ವ್ಯಾಕರಣವಾಯಿತು.

ಎರಡು ಮೂರು ಶತಮಾನಗಳ ವರೆಗೆ, ಜನಾಂಗವು ಸಂಸ್ಕೃತಕಾವ್ಯಗಳ ಮಾದರಿಯಲ್ಲಿ ಹುಟ್ಟಿದ ಕನ್ನಡದ ಗ್ರಂಥಗಳಿಗೆ ಮಾರುಹೋಯಿತು. ನೂರಾರು ಗ್ರಂಥಗಳು ಕನ್ನಡದಲ್ಲಿ ಹುಟ್ಟಿದುವು. ಕೊನೆಕೊನೆಗೆ ಬರೆದ ಕೃತಿಗಳಲ್ಲಿ ಹಿಂದಿನದನ್ನೇ ಅನುಸರಿಸಿ ಬರೆಯುವ ಭರದಲ್ಲಿ ಪದ್ಯ-ಗದ್ಯವೆಲ್ಲವೂ ಸಂಸ್ಕೃತದ ಮುದ್ದೆಯಾದುವು. ದಿನ ದಿನಕ್ಕೆ ಇಂಚರದ ಗೀತವು, ಕರ್ಕಶ ಗೀತವಾಗುತ್ತ ಬಂತು. ಭಾವವು, ಶ್ಲೇಷ ಮೊದಲಾದುವುಗಳ ಹಿಂದೆ ನಿಂತಿತು. ಗ್ರಂಥಗಳ ಅರ್ಥವರಿಯುವುದಂತೂ ಕಬ್ಬಿಣದ ಕಡಲೆಯಾಯಿತು. ಲಾಕ್ಷಣಿಕರ ಸಂಕೋಲೆಯಂತೂ ದಿನ ದಿನಕ್ಕೆ ಬಿಗಿಯಾಗುತ್ತ ಬಂತು. "ಹೇಳುವ ಮಾತೆಲ್ಲವೂ ಇದೇ ರೀತಿಯಲ್ಲಿರಬೇಕು; ಮೂಡುವ ಭಾವಗಳೆಲ್ಲವೂ ಇದೇ ರೀತಿಯಲ್ಲಿರಬೇಕು." ಎಂಬ ಕಡ್ಡಾಯದ ನಿಯಮವಂತೂ ತುಂಬ ಬೇಸರ ಹುಟ್ಟಿಸಿತು.

ಲಾಕ್ಷಣಿಕರು ಎಷ್ಟೇ ಬಿಗಿಯಾದ ಚಿನ್ನದ ಸಂಕೋಲೆಗಳನ್ನು ಸೃಜಿಸಲಿ; ಕೆಲವು ದಿನ ಆ ನಿಯಮಕ್ಕೆ ಕೆಲವರು ಒಳಗಾಗಬಹುದು. ಆದರೆ ಅದೇ ನಿರಂತರವೂ ಇರಲೆಂದರೆ ಬೆಳೆಯುತ್ತಿರುವ ಸಾಹಿತ್ಯದಲ್ಲಿ ಸಾಧ್ಯವಿಲ್ಲ. ಬದಲಾವಣೆಯು ಬಸರುಚಿಗೆ ತಕ್ಕಂತೆ ಬದಲಾವಣೆಯಾಗುತ್ತಲೇ ಇರಬೇಕು. ಇದು ವಿಶ್ವನಿಯಮ. ಸಂಸ್ಕೃತದ ಮಾದರಿಯ ಗ್ರಂಥಗಳನ್ನು ಓದಲು ಕನ್ನಡಿಗರಿಗೆ ಬೇಸರವಾಯಿತು. ಕಾವ್ಯವು ಪಂಡಿತ-ಪಾಮರರಿಗೆ ತಕ್ಕುದಾಗಿರಬೇಕೆಂಬ ವಾದವು ಜನಸಾಮಾನ್ಯದಲ್ಲಿ ತಲೆದೋರಿತು.

ಇಷ್ಟರ ವೇಳೆಗೆ ಸರಿಯಾಗಿ ವೀರಶೈವಮತವು ತಲೆಯೆತ್ತುತ್ತಿತ್ತು. ಮತವಿಚಾರದಲ್ಲಿ ವೀರಶೈವರು ಹೇಗೆ ತಮ್ಮದೇ ಒಂದು ಮಾರ್ಗವನ್ನು ಕಲ್ಪಿಸಿಕೊಂಡರೋ ಹಾಗೆಯೆ, ಸಾಹಿತ್ಯದಲ್ಲಿಯೂ ಹೊಸ ಹೊಸ ಮಾರ್ಗಗಳನ್ನು ಕಲ್ಪಿಸಿದರು. ಹಳೆಯ ಕಟ್ಟುಪಾಡುಗಳೆಲ್ಲ ಮೂಲೆಗೆ ಬಿದ್ದುವು. ಹೇಳುವ ಪ್ರತಿಯೊಂದು ತತ್ವವನ್ನೂ ಮಾತನ್ನೂ ಸಾಹಿತ್ಯದಲ್ಲಿ ಹೇಳುವಾಗ ತಿಳಿಗನ್ನಡದಲ್ಲಿ ಬರೆದರು. ಅಚ್ಚಗನ್ನಡ ವೃತ್ತಗಳು ಬಳಕೆಗೆ ಬಂದುವು. ಭಾವಗಳು ಹೊಸರೀತಿಯನ್ನನುಸರಿಸಿದುವು. ಹೇಳುವ ಪ್ರತಿಯೊಂದು ನುಡಿಯೂ ಜೀವನದ ಒಂದೊಂದು ಅಂಶವನ್ನು ವಿಮರ್ಶಿಸಿ, ಜನಾಂಗವನ್ನು ಉತ್ತಮಮಾರ್ಗದಲ್ಲಿ ಇಡತಕ್ಕುದಾಗಿತ್ತು. ಚಂಪೂಕಾವ್ಯದಲ್ಲಿ ಭಾವಗಳು ಎಷ್ಟು ಲಕ್ಷಣವಾಗಿ ಮೂರ್ತಿಗೊಳ್ಳಬಹುದಾಗಿತ್ತೋ ಅಷ್ಟಕ್ಕಿಮ್ಮಡಿಯಾಗಿ ರಗಳೆ, ಷಟ್ಪದಿ, ತ್ರಿಪದಿಗಳಲ್ಲಿ ಮೂರ್ತಿಗೊಂಡು ನಲಿದುವು. ಎಲ್ಲಿ ನೋಡಿದರೂ ಷಟ್ಪದಿಗಳ ಮಂಜುಳನಿನಾದ! ಕನ್ನಡನಾಡೇ ಷಟ್ಪದಿಗಳ ಮಂಜುಳನಿನಾದದಲ್ಲಿ ಮುಳುಗಿಹೋಯಿತು!

ಲಾಕ್ಷಣಿಕರು ಇಲ್ಲಿಯೂ ಸುಮ್ಮನಿರಲಿಲ್ಲ. ಅಚ್ಚಗನ್ನಡ ವೃತ್ತಗಳಿಗೂ ಮೇರೆಯನ್ನು ಕಲ್ಪಿಸಿದರು. ಭಾವಗಳನ್ನೂ, ಕತೆ ಹೇಳುವ ಸೊಗಸನ್ನೂ ರನ್ನದಂತಹ ಕಟ್ಟುಗಳಿಂದ ಬಿಗಿದರು. ಅನೇಕ ಕವಿಗಳು ಸುಲಭವಾಗಿ ಆ ಕಟ್ಟುಪಾಡಿಗೆ ಸಿಕ್ಕಿಕೊಂಡು ನರಳಿದರು.



CC-0. Jangamwadi Math Collection. Digitized by eGangotri

ಮೊದಮೊದಲು ಷಟ್ಪದಿಗಳ ಮತ್ತು ಇತರ ಕನ್ನಡವೃತ್ತಗಳ ಗಾನವನ್ನು ಆನಂದದಿಂದಾಲಿಸಿದ ಶ್ರೋತ್ರೇಂದ್ರಿಯಕ್ಕೆ ಅವುಗಳ ಗಾನವು ಬೇಸರ ತಂದಿಟ್ಟಿತು. ಅಚ್ಚಗನ್ನಡ ವೃತ್ತಗಳೂ ಸಂಸ್ಕೃತದ ಮುದ್ದೆಯಾದುವು. ವಾಚಕಲೋಕಕ್ಕೆ ಅವುಗಳ ಅರ್ಥವನ್ನರಿಯುವುದೇ ಕಷ್ಟಕ್ಕಿಟ್ಟುಕೊಂಡಿತು. ಷಟ್ಪದಿ ಮೊದಲಾದುವುಗಳಲ್ಲಿ ಜನತೆಗೆ ಅಭಿರುಚಿ ಕಡಿಮೆಯಾಯಿತು.

ಹಳೆಯದರಲ್ಲಿ ಅಭಿರುಚಿ ಕಡಿಮೆಯಾದೊಡನೆಯೇ ಕನ್ನಡಿಗರು ಹೊಸಮಾರ್ಗವನ್ನವಲಂಬಿಸಿದ ಸಾಹಿತ್ಯಕ್ಕೆ ಹಂಬಲಿಸಹತ್ತಿದರು. ಈ ಕಾಲಕ್ಕೆ ಸರಿಯಾಗಿ ವೈಷ್ಣವ ದಾಸರು ತಮ್ಮ ಮತತತ್ವಗಳನ್ನು ತಿಳಿಗನ್ನಡದಲ್ಲಿ ಹಾಡತೊಡಗಿದರು. ಮತದ ತತ್ವಗಳನ್ನು ಮನೆಬಳಕೆಯಮಾತಿನಲ್ಲಿ ಹಾಡತೊಡಗಿದ ಅವರ ಹಾಡುಗಳು ಜನಾಂಗದಮನಸನ್ನೇ ಸೂರೆಗೊಂಡುವು. ಜನಾಂಗವು, ಅದರ ಫಲವಾಗಿ ಹೊಸ ತಾತ್ವಿಕಮಾರ್ಗದಲ್ಲಿ ಕಾಲಿಕ್ಕಿತು. ದಾಸರಕೂಟಗಳೂ, ಶಿವಶರಣರ ಕೂಟಗಳೂ ಹೆಚ್ಚಿ, ತತ್ವದಸಾರವನ್ನು ಕನ್ನಡಿಗರಿಗೆ ಸವಿಯುಣಿಸನ್ನಾಗಿ ಮಾಡಿಕೊಟ್ಟುವು. ಹೊಸ ಮಾರ್ಗವನ್ನೇ ಕಾಯುತ್ತಿದ್ದ ಕನ್ನಡಿಗರಿಗೆ ಇದಕ್ಕಿಂತ ಸವಿಯುಣಿಸು ಬೇರೊಂದುಂಟೆ?

ಇಷ್ಟೇ ಅಲ್ಲ. ಇದೇ ಕಾಲದಲ್ಲಿ ಅಥವಾ ಸ್ವಲ್ಪಕಾಲದ ನಂತರ ಯಕ್ಷಗಾನದ ಭಾಗವತರ ಆಟಗಳು (ಬಯಲು ನಾಟಕ) ಪ್ರಚಾರಕ್ಕೆ ಬಂದುವು. ಪುರಾಣಗಳೂ, ಭಗವದ್ಭಕ್ತರ ಚರಿತ್ರೆಗಳೂ ದೃಶ್ಯಕಾವ್ಯಗಳಾಗಿ ಮಾಡಲ್ಪಟ್ಟುವು. ಇಂದಿನ ರಂಗಭೂಮಿಗೆ ಮಾತೃಸ್ಥಾನವಾದ ಈ ಬಯಲುನಾಟಕಗಳಲ್ಲಿ, ಯಾವುದನ್ನು ಓದಿ ಅರಿಯಲು ಕಷ್ಟವಾಗಿತ್ತೋ ಅಂತಹ ಭಾಗಗಳನ್ನು ಎದುರಿಗೆ ಆಡಿ, ಭವ್ಯವಿಷಯಗಳು ಜನಾಂಗದ ಹೃದಯವನ್ನು ನೇರವಾಗಿ ಹೊಗುವಂತೆ ಮಾಡಬಹುದಾಗಿದ್ದುದರಿಂದ, ಅವು ಜನಾಂಗದ ಹೃದಯವನ್ನೇ ಮಾರುಗೊಂಡುವು. ಏಕಾದಶಿ, ಶಿವರಾತ್ರಿ ಮೊದಲಾದುವು ಬಂದುವೆಂದರೆ, ಭಾಗವತರಾಟದ ಮಾತೇ! ದಾಸರ ಮತ್ತು ಶಿವಶರಣರ ಕೂಟಗಳ ಹಾಡಿನ ಸುಣ್ದಸಿಗಳೇ!

ಎರಡು ಶತಮಾನಗಳು ಕಳೆದುವು. ಕಾಲಚಕ್ರವು ಸುತ್ತುತ್ತಿರುವುದನ್ನು ನಿಲ್ಲಿಸಬಲ್ಲವರಿಲ್ಲ. ಪಾಶ್ಚಾತ್ಯ ಭಾಷೆಗಳು ನಮ್ಮ ನಾಡಿನಲ್ಲಿ ಪ್ರಚಾರವಾದಾಗ ನಮ್ಮ ಜನಾಂಗದ ರುಚಿಯೇ ಬದಲಾಯಿಸಿತು. ಅದರಲ್ಲಿಯೂ ಉನ್ನತಶಿಖರದ ತುದಿಯನ್ನೇರಿ ನಿಂತು ಜಯಪತಾಕೆಯನ್ನು ಹಾರಿಸಿ, ಮೆರೆಯುತ್ತಿರುವ, ಆಂಗ್ಲಭಾಷೆಯು ಪ್ರಚಾರವಾದಾಗಲಂತೂ ನಮ್ಮವರ ಹೃದಯದಲ್ಲಿ 'ಕನ್ನಡ'ವೆಂದರೆ ನಿಕೃಷ್ಟಭಾವ ಜನಿಸಿತು. ಕನ್ನಡವನ್ನು ಆಂಗ್ಲಭಾಷೆಯೊಡನೆ ಹೋಲಿಸಿ ನೋಡಲು, ಇರುವೆಯನ್ನು ಪರ್ವತದೊಂದಿಗೆ ಹೋಲಿಸಿದಂತಾಯಿತು. ದಿನಬಳಕೆಯ ಮಾತನ್ನು ಸಹಿತ "ಕನ್ನಡಿಗ"ರೆನಿಸಿಕೊಳ್ಳುವ ನಮಗೆ ಆಡಲು ನಾಚಿಕೆಯಾಯಿತು. ಒಂದು ವಾಕ್ಯ ಹೇಳಲು ಇಪ್ಪತ್ತೆಂಟು ಆಂಗ್ಲಪದಗಳ ಉಪಯೋಗ ಬೇಕಾಯಿತು. ಆಂಗ್ಲಪದಗಳನ್ನು ಉಪಯೋಗಿಸಿದರೆ ತಾವು 'ದೊಡ್ಡ' ಮನುಷ್ಯರೆಂದು ಜನರು ಭಾವಿಸುತ್ತಿದ್ದರು. ಆಗಿನ ಕನ್ನಡದ ಸ್ಥಿತಿಯನ್ನು ನೋಡಿದರೆ, ಖಂಡಿತ ಅದು ಉಳಿಯುವಂತೆ ತೋರುತ್ತಿರಲಿಲ್ಲ.

ಕನ್ನಡ ಸಾಹಿತ್ಯದೇವಿಯ ಪುತ್ರರಸಿಬರಲ್ಲಿ ಮಾತೃಪ್ರೇಮಿಗಳು ಯಾರೂ ಇರಲಿಲ್ಲವೆ? ಇದ್ದರು; ಇರುವರು. ಹಗಲೆನ್ನದೆ ಇರುಳೆನ್ನದೆ ದೇವಿಯ ಸೇವೆ ಮಾಡಿದರು. ಕ್ಷಯರೋಗ ತಗಲುತಿದ್ದ ಮಾತೆಗೆ ಔಷಧಿಯಿತ್ತು ಉಪಚರಿಸಿದರು. ಮಲಿನವಾಗಿದ್ದ ರತ್ನಗಳನ್ನೆಲ್ಲ ತೊಳೆದು, ಒಪ್ಪವಿಕ್ಕಿ, ಜೀವರತ್ನಗಳನ್ನಾಗಿ ಮಾಡಿ, ದೇವಿಗೆ ಹಾರ ಹಾಕಿದರು. ಧೂಳಿನಿಂದಲೂ, ಕಸದಿಂದಲೂ ತುಂಬಿದ್ದ ಮಂದಿರವನ್ನು ಗುಡಿಸಿ, ಹೊಸಬಣ್ಣವನ್ನು ಗೋಡೆಗೆ ತೊಡೆದು, ಮಂದಿರವನ್ನು ಶೋಭಿಸುವಂತೆ ಮಾಡಿದರು. ಜತೆಗೆ ಆಂಗ್ಲಸಾಹಿತ್ಯವೂ ನೆರವಾಯಿತು. ಸಾಮಾನ್ಯವಾಗಿ ಆಂಗ್ಲಸಾಹಿತ್ಯವು ಸಾಹಿತ್ಯಗಳ ದೊರೆಯೆನ್ನಬಹುದು. ವಿಶ್ವಜೀವನವೇ ಅದರಲ್ಲಿ ಅಡಕವಾಗಿದೆ. ಎಲ್ಲವನ್ನೂ ಪರೀಕ್ಷೆ ಮಾಡಿ, ಕಸವನ್ನು ಮೂಲೆಗೆ ಹಾಕಿ, ರಸವನ್ನು ಮಾತ್ರ ಆಂಗ್ಲೇಯರು ತುಂಬಿಕೊಂಡಿದ್ದಾರೆ. ಅಂತಹ ಭಂಡಾರದಲ್ಲಿರುವ ರಸವನ್ನೂ ವಿಜ್ಞಾನದ ಸಹಾಯದಿಂದ ಪರೀಕ್ಷೆ ಮಾಡಿ, ತಮ್ಮ ಜನನಿಗೆ ತತ್‌ಕ್ಷಣ ಹಿಡಿಯುವಂಥ ದಿವ್ಯರಸವನ್ನು ಕುಡಿಸಿದರು. ಆಗ ಮಾತೆಯ ಮೊಗದಲ್ಲಿ ಜೀವಕಳೆ ಮೂಡಿತು.

ಹಿಂದಿನ ಸಂಪ್ರದಾಯಗಳೆಲ್ಲ ಮೂಲೆಗುಂಪಾಗಿ ಬಿದ್ದುವು. ವಿಜ್ಞಾನವು ಸಾಹಿತ್ಯವನ್ನು ಹೊಕ್ಕು, ಜೊಳ್ಳನ್ನು ತೂರಿ ಗಟ್ಟಿಯನ್ನು ಮಾತ್ರ ಸಂಗ್ರಹಿಸಿತು. ಸತ್ಯ,

CC-0. Jangamwadi Math Collection. Digitized by eGangotri

ಸೌಂದರ್ಯಗಳು ಮಾನವನ ಹೃದಯವನ್ನು ಹೊಕ್ಕುವು. ಭವ್ಯದೃಶ್ಯಗಳ ಸ್ನೇಹದಿಂದ ವಿಸ್ಮಲಗೊಂಡ ಮನವು ದೇವನನ್ನು ಸತ್ಯ, ಸೌಂದರ್ಯಸ್ವರೂಪನೆಂದರಿಯಲು ಸಾಧ್ಯವೇ—ಎಂಬುದನ್ನು ಪರೀಕ್ಷೆಮಾಡಿ, ಪರೀಕ್ಷೆಯಲ್ಲಿ ಸತ್ಯಸೌಂದರ್ಯಗಳೇ ದೇವನೆಂಬುದನ್ನು ಕಂಡುಕೊಂಡರು.

ಇದೆಲ್ಲಕ್ಕಿಂತ ಹೆಚ್ಚಿನದೆಂದರೆ, ವಿಮರ್ಶಾಪೂರ್ವಕವಾದ ಸಾಹಿತ್ಯ. ವಿಮರ್ಶೆಯು ಕಾವ್ಯದೊಡನೆಯೇ ಮೂಡುವುದೆಂಬುದನ್ನು ವಿಜ್ಞಾನವು ಬಯಲಿಗೆ ತಂದಿದೆ. ಕಾವ್ಯದಲ್ಲಿ ತಿಳಿಯಲಶಕ್ಯವಾದ ಸಂಗತಿಗಳನ್ನು ವಿಮರ್ಶೆಯು ವಿವರಿಸುತ್ತದೆ; ಭವ್ಯವಿಷಯಗಳನ್ನು ಕೊಂಡಾಡುತ್ತದೆ. ನ್ಯೂನತೆಗಳನ್ನು ಖಂಡಿಸುತ್ತದೆ. ವಿಜ್ಞಾನಪೂರ್ವಕವಾದ ವಿಮರ್ಶೆಯು ಸಾಹಿತ್ಯವನ್ನು ಕಡೆತಕ್ಕೆ ಕೊಟ್ಟು, ಓರೆ ಕೋರೆಗಳನ್ನು ತಿದ್ದಿ, ಅದು ಕಳೆಗೊಂಡು ಮೆರೆಯುವಂತೆ ಮಾಡಿದೆ.

ಹಾಗಾದರೆ ಸಾಹಿತ್ಯಕ್ಕೂ ವಿಜ್ಞಾನಕ್ಕೂ ಇರುವ ಸಂಬಂಧವೇನು? ವಿಜ್ಞಾನವೇ ಸಾಹಿತ್ಯವೋ? ಸಾಹಿತ್ಯವೇ ವಿಜ್ಞಾನವೋ? ಅಥವಾ ಅವುಗಳೆರಡರ ಸಮ್ಮೇಳನವೇ ಸಾಹಿತ್ಯದ ಹೃದಯವೋ? ಎಂಬ ಪ್ರಶ್ನೆ ಹುಟ್ಟಬಹುದು. ಬರಿಯ ವಿಜ್ಞಾನವು ಸಾಹಿತ್ಯವಲ್ಲ; ಬರಿಯ ಸಾಹಿತ್ಯವು ವಿಜ್ಞಾನವೂ ಅಲ್ಲ. ವಿಜ್ಞಾನದ ಸಹಾಯದಿಂದ ಸಾಹಿತ್ಯಕ್ಕೆ ಜೀವಕಳೆ ಬರುತ್ತದೆ. ಸಾಹಿತ್ಯವು ಹೇಳಿದುದನ್ನು ವಿಜ್ಞಾನವು ವಿಮರ್ಶಿಸುತ್ತದೆ; ಸಾಹಿತ್ಯಕ್ಕೆ—ಕಾವ್ಯಕ್ಕೆ ತಕ್ಕ ವಸ್ತುಗಳನ್ನು ಆರಿಸಿಕೊಡುತ್ತದೆ. ಹೊಸ ಭಾವಗಳು ಸಾಹಿತ್ಯದಲ್ಲಿ ಮೂಡಲು ಅವಕಾಶವನ್ನು ಕಲ್ಪಿಸಿಕೊಡುತ್ತದೆ. ಜನಜೀವನಕ್ಕನುಗುಣವಾದ ಸಾಹಿತ್ಯವನ್ನು ಬೆಳೆಯಿಸಿ, ಜನಾಂಗವನ್ನೇ ಅದಕ್ಕೆ ಮಾರು ಹೋಗುವಂತೆ ಮಾಡುತ್ತದೆ. ಅದೇ ಸಾಹಿತ್ಯಕ್ಕೆ—, ವಿಜ್ಞಾನವು ವಿವೇಚಿಸಿದುದನ್ನು ವಿಮರ್ಶಿಸುವ ಶಕ್ತಿಯಿಲ್ಲ; ಆದರೆ ವಿಜ್ಞಾನವು ವಿವೇಚಿಸಿದುದನ್ನು ನಾನಾವಿಧವಾಗಿ ವಿವರಿಸಿ, ಜನಸಾಮಾನ್ಯಕ್ಕೆ ತಿಳಿಯುವಂತೆ ಮಾಡುವ ಶಕ್ತಿಯಿದೆ. ಆದುದರಿಂದ ವಿಜ್ಞಾನಕ್ಕೆ ತಾನು ವಿವೇಚಿಸಿದುದನ್ನು ವಿವರಿಸಲು ಸಾಹಿತ್ಯದ ಸಹಾಯ ಬೇಕು. ಸಾಹಿತ್ಯಕ್ಕೆ— ತಾನು ಹೇಳಿದುದನ್ನು ವಿಮರ್ಶಿಸಲು ವಿಜ್ಞಾನದ ನೆರವು ಬೇಕು. ವಿಜ್ಞಾನನ ಪ್ರಭಾವವು ಸಾಹಿತ್ಯದಲ್ಲಿ ಮೂರ್ತಿಮತ್ತಾಗಿ ಕಂಡು ಬರುವುದರಿಂದಲೂ, ಅನೇಕರು, "ವಿಜ್ಞಾನವೇ ಸಾಹಿತ್ಯವನ್ನು ಉಳಿಸಿರುವುದು; ಸಾಹಿತ್ಯಕ್ಕೆ ವಿಜ್ಞಾನದಲ್ಲಿ ಕಾರ್ಯವೇ ಇಲ್ಲ" ಎನ್ನುತ್ತಾರೆ ಅದು ಅಷ್ಟು ಸಮಂಜಸವಾಗಿ ತೋರುವುದಿಲ್ಲ. ಸಾಹಿತ್ಯವು ವಿಜ್ಞಾನವನ್ನು ಬಿಟ್ಟಿರುವುದಕ್ಕೂ ಆಗುವುದಿಲ್ಲ; ವಿಜ್ಞಾನವು ಸಾಹಿತ್ಯವನ್ನು ಬಿಟ್ಟಿರುವುದಕ್ಕೂ ಆಗುವುದಿಲ್ಲ. ಒಂದರ ಹೃದಯ ಮತ್ತೊಂದರ ಹೃದಯದಲ್ಲಿ ಸೇರಿಹೋಗಿದೆ. ಭಿನ್ನದೃಷ್ಟಿಯಿಂದ ನೋಡಿದರೆ ಬೇರೆಬೇರೆ ಕಾಣುತ್ತದೆ ಅಷ್ಟೆ.

ಇದುವರೆಗೆ ಕನ್ನಡಸಾಹಿತ್ಯವು ಆಳವಾದ ಕಮರಿಯಲ್ಲಿ ಹರಿಯುತ್ತಿತ್ತು. ಭಗೀರಥಪ್ರಯತ್ನಮಾಡಿ, ಆ ನೀರನ್ನು ಗದ್ದೆಗಳಿಗೆ ಹಾಯಿಸಿ, ಬೆಳೆಗಳನ್ನು ಬೆಳೆಯಬೇಕಾಗಿತ್ತು. ಈಗ ಹಾಗಿಲ್ಲ; ಒಂದು ದೊಡ್ಡ ಆಣೆಯನ್ನು ಹಾಕಿ, ನೀರನ್ನು ಬಯಲಲ್ಲಿ ಹರಿಯುವಂತೆ ಮಾಡಿದ್ದಾರೆ. ನೀರನ್ನು ಗದ್ದೆಗೆ ಹಾಯಿಸಿಕೊಂಡು, ತರತರದ ಹೊಸಹೊಸ ಬೆಳೆಯನ್ನು ಯಾರು ಬೇಕಾದರೂ ಮಾಡಬಹುದು. ಇಂತಹುದನ್ನೇ ಮಾಡಬೇಕೆಂಬ ನಿಯಮವಿಲ್ಲ. ಜನಾಂಗದ ರುಚಿಗನುಗುಣವಾದ ಬೆಳೆಯನ್ನು ಬೆಳೆಯಬಹುದು. ಆಳವಾದ ಕಣಿವೆಯಲ್ಲಿ ವ್ಯರ್ಥವಾಗಿ ಹರಿದು ಹೋಗುತ್ತಿದ್ದ ಪ್ರವಾಹವನ್ನು ಬಯಲಿಗೆ ತಿರುಗಿಸಿ, ವಿವಿಧ ಬೆಳೆಗಳಿಗೆ ಆ ನೀರನ್ನು ಉಪಯೋಗಿಸಿಕೊಳ್ಳುವಂತೆ ಮಾಡಿದುದು ವಿಜ್ಞಾನದ ಪ್ರಭಾವ.

ಈಗ ನಾವು ನಮ್ಮ ಸಾಹಿತ್ಯದಲ್ಲಿಯೇ ಕ್ರಾಂತಿ ನಡೆದಿರುವುದಕ್ಕೆ ಮೂರು ನಾಲ್ಕು ಉದಾಹರಣೆಗಳನ್ನು ಕಂಡಂತಾಯಿತು. ಹಿಂದೆ ನಡೆದ ಕ್ರಾಂತಿಗಳಂತಹದೇ ಈಗ ನಡೆಯುತ್ತಿರುವ ಕ್ರಾಂತಿಯಾದರೂ. ಇದು ಹೊಸದಲ್ಲ. ಇದನ್ನು ಸಂಪ್ರದಾಯಶರಣರರಿತು ಹೊಸ ಮಾರ್ಗಪ್ರವರ್ತಕರಾದ ಆಧುನಿಕ ಲೇಖಕರಿಗೆ ತಾವೂ ನೆರವಾದರೆ, ಕನ್ನಡರಸಪ್ರವಾಹವು ಇತೋಪ್ಯತಿಶಯವಾಗಿ ಹರಿಯುವಂತೆ ಮಾಡುವುದೇನೂ ಮಹತ್ತಾದ ಕಾರ್ಯವೆಂದು ತೋರುವುದಿಲ್ಲ. ಗಂಧದ ಬಿಲ್ಲೆಯಲ್ಲಿ ಸುವಾಸನೆ ಬೇಕಾದಷ್ಟಿದೆ; ಆದರೆ ಜತೆಗೆ ಪನ್ನೀರು ಸೇರಿಸಿದರೆ ಇಮ್ಮಡಿಯಾಗುವುದಲ್ಲವೆ ಅದರ ಕಂಪು! ಹಾಗೆ. ಪ್ರಾಚೀನತಾಪ್ರೇಮಿಗಳೂ ಆಧುನಿಕರೂ ಇಬ್ಬರೂ ಒಮ್ಮನಸ್ಸಿನಿಂದ ಕೆಲಸ ಮಾಡಿದರೆ, ಸಾಹಿತ್ಯವು ಪುಟವಿಟ್ಟ ಚಿನ್ನದಂತಾಗುವುದರಲ್ಲಿ ಸ್ವಲ್ಪವೂ ಸಂಶಯವಿಲ್ಲ.

CC-0. Jangamwadi Math Collection. Digitized by eGangotri

# ಕರ್ನಾಟಕ ಸಂಕ್ಷಿಪ್ತಲಿಪಿ

ಲೇಖಕರು :— ಶ್ರೀ. ಎಂ. ಎಸ್. ಅನಂತಪದ್ಮನಾಭರಾವ್, ಮಡಿಕೇರಿ

ಕರ್ನಾಟಕದೇಶದಲ್ಲಿ ಉದ್ದಾಮ-ಭಾಷಣಕಾರರೂ, ಗ್ರಂಥಕರ್ತರೂ, ಕವಿಗಳೂ ಇರುವರು. ಗ್ರಂಥಗಳೂ, ಕಾವ್ಯಗಳೂ ಪ್ರಚಾರವಾಗಿ ಕರ್ನಾಟಕ ಭಾಷಾಭಿಮಾನಿಗಳ ಅವಗಾಹನೆಗೆ ಬರಲು ಅವಕಾಶಗಳಿರುವುವಾದರೂ, ವಿದ್ವಾಂಸರ, ಪಂಡಿತರ, ಉತ್ತಮವರ್ಗದ ಭಾಷಣಕರ್ತರ ಭಾಷಣಗಳು ವಾತಾವರಣದಲ್ಲಿ ಲೀನವಾಗುತ್ತಿರುವುವು. ಬರೆದು ಓದಿದ ಭಾಷಣಗಳು ಮಾತ್ರ ಅಲ್ಲಲ್ಲಿ ಪ್ರಕಾಶಕ್ಕೆ ಬರುತ್ತಿರುವುವೇ ಹೊರತು ಇತರ ಭಾಷಣಗಳು ಇತರರ ಅನುಭವಕ್ಕೆ ಬರುವವಕಾಶವಿಲ್ಲದಾಗಿದೆ. ಆಂಗ್ಲಭಾಷೆಯಲ್ಲಿ ಸಂಕ್ಷಿಪ್ತಲಿಪಿ (Short-hand)ಯ ಮುಖಾಂತರ ಭಾಷಣಗಳೆಲ್ಲವೂ ಬರೆಯಲ್ಪಟ್ಟು, ಪತ್ರಿಕೆಗಳಲ್ಲಿಯಾಗಲಿ, ಪುಸ್ತಕರೂಪದಲ್ಲಾಗಲಿ ಪ್ರಕಟವಾಗಿ, ಯಾವತ್ತು ಜನರ ಗೋಚರಕ್ಕೆ ಬಂದು ವೃದ್ಧಿಗೊಳ್ಳುತ್ತಿರುವಾಗ, ನಮ್ಮ ಮಾತೃಭಾಷೆಯಲ್ಲಿ ಇಂತಹ ಸಂದರ್ಭವನ್ನು ಕಳಕೊಳ್ಳುತ್ತಿರುವೆವು.

ಕರ್ನಾಟಕಭಾಷೆಯಲ್ಲಿ ಸಂಕ್ಷಿಪ್ತಲಿಪಿಯು ಪ್ರಕಾಶಕ್ಕೆ ಬಂದು ಈಗಾಗಲೇ ಹನ್ನೊಂದು ಸಂವತ್ಸರಗಳಾಗಿದ್ದರೂ ನಮ್ಮ ಜನರ ಅನುಷ್ಠಾನಕ್ಕೆ ಅದು ಸಿಕ್ಕದೆ ಹೋದುದು ಕನ್ನಡಿಗರ ದುರ್ದೈವವೋ ಅಥವಾ ಭಾಷಾಮಾತೆಯಲ್ಲಿನ ಕೊರತೆಯೋ ತಿಳಿಯದಾಗಿದೆ. ಪರಂತು ಕರ್ನಾಟಕ ಸಂಕ್ಷಿಪ್ತಲಿಪಿಯು ಕಲಿಯುವುದಕ್ಕೆ ಕಷ್ಟತರವಾಗಿದ್ದರೆ, ಭಾಷಾಸೇವೆಯನ್ನು ಮಾಡಬೇಕೆಂಬ ಆತುರವುಳ್ಳವರಿಗೆ ಆ ಆವೇಶಭರದಲ್ಲಿ ಅನುಷ್ಠಾನಕ್ಕೆ ತರತಕ್ಕ ಆಯಾಸವು ತೋರಲಾರದು. ಇದು ಅನುಭವದ ಮಾತಾಗಿದೆ. ಗರ್ಭಿಣಿಯ ಸಂವತ್ಸರದಲ್ಲಿಯೇ ಹೊರಬಿದ್ದ ಈ ಶಿಶುವನ್ನು ಆದರಿಸುವವರು ಸಿಕ್ಕದೆ ಕರ್ನಾಟಕಪ್ರಪಂಚದಲ್ಲಿ ಅದು ಅಜ್ಞಾತವಾಸವನ್ನು ಕೈಕೊಂಡಂತೆ ಕಾಣುವುದು.

ಇಂಗ್ಲೀಷಿನಲ್ಲಿ "ಪಿಟ್‌ಮನ್ಸ್ ಷಾರ್ಟ್‌ಹ್ಯಾಂಡ್" ಎಂಬ ಆಂಗ್ಲೇಯರ ಸಂಕ್ಷಿಪ್ತಲಿಪಿಯು ಲೋಕಪ್ರಸಿದ್ಧವಾಗಿದೆ. ಕೇವಲ ನಾದವನ್ನೇ ಅನುಸರಿಸಿ ಬರೆಯತಕ್ಕ ಈ ವಿಧಾನವನ್ನು ಯಾವ ಭಾಷೆಗಾದರೂ ಸುಲಭದಲ್ಲಿ ಪರಿವರ್ತಿಸಿಕೊಳ್ಳಬಹುದು. ಹಾಗೆಯೇ ಹಿಂದುಸ್ಥಾನದ ಎಲ್ಲಾ ಭಾಷೆಗಳಲ್ಲಿಯೂ ಈ ಕ್ರಮವು ಅನುಷ್ಠಾನಕ್ಕೆ ಬಂದಿದೆ. ಇದೇ ರೀತಿಯಾಗಿ ಮದ್ರಾಸ್ ಸರಕಾರದ ಆಶ್ರಯದಲ್ಲಿ ರಾವ್‌ಸಾಹೇಬ್ ಎಂ. ಶ್ರೀನಿವಾಸರಾವ್ (F. I.P. S.) ರವರು ತೆಲುಗು, ತಮಿಳು ಮತ್ತು ಕರ್ನಾಟಕಭಾಷೆಗಳಿಗೂ ಈ ಪಿಟ್‌ಮನ್ಸ್ ಷಾರ್ಟ್‌ಹ್ಯಾಂಡನ್ನು ಪರಿವರ್ತನಗೊಳಿಸಿ, ಇಡಿ ದಕ್ಷಿಣಹಿಂದುಸ್ಥಾನದವರ ಆದರಕ್ಕೆ ಪಾತ್ರರಾಗಿರುವರು. ರಾವ್ ಸಾಹೇಬರವರು ವೆಲ್ಲೂರಿನ ಪೋಲೀಸ್ ಟ್ರೈನಿಂಗ್ ಶಾಲೆಯಲ್ಲಿ ಇಂಗ್ಲಿಷ್ ಷಾರ್ಟ್‌ಹ್ಯಾಂಡಿನ ಅಧ್ಯಾಪಕರಾಗಿದ್ದು, ಮದ್ರಾಸ್ ಲೆಜಿಸ್ಲೆಟಿವ್ ಕೌನ್ಸಿಲಿನ ಅಧ್ಯಕ್ಷರಾಗಿದ್ದ ಮಾನ್ಯರಾದ ಸ್ವಾಮಿಕಣ್ಣು ಪಿಳ್ಳೆಯವರ ಪ್ರೇರಣೆಯಿಂದಲೂ ಸರಕಾರದವರ ಆಶ್ರಯದಿಂದಲೂ ಈ ಮಹತ್ಕಾರ್ಯವನ್ನು ಕೈಕೊಂಡು ಕೃತಕೃತ್ಯರಾದರು. ಈಗ ಪ್ರತ್ಯೇಕವಾಗಿ ಷಾರ್ಟ್‌ಹ್ಯಾಂಡ್ ಬ್ಯೂರೊ (Short-hand Bureau) ಎಂಬ ಒಂದು ಸಂಸ್ಥೆಯನ್ನು ವೆಲ್ಲೂರಿನಲ್ಲಿ ಏರ್ಪಡಿಸಿಕೊಂಡು ಇಂಗ್ಲಿಷ್, ತೆಲುಗು, ತಮಿಳು, ಕನ್ನಡ ಮತ್ತು ಉರ್ದು—ಸಂಕ್ಷಿಪ್ತ ಲಿಪಿಗಳನ್ನು ಬಳಕೆಗೆ ತಂದಿರುವರು. ಆದರೆ ಇವು ಸಾಮಾನ್ಯವಾಗಿ ಸರಕಾರಿ ಉಪಯೋಗಕ್ಕೆ ಮಾತ್ರ ಆಗಿವೆ.

ಕರ್ನಾಟಕ ಸಾಹಿತ್ಯಸಮ್ಮೇಳನದ ಮುಖಂಡರು ಈ ಲಿಪಿಯನ್ನು ಅನುಷ್ಠಾನಕ್ಕೆ ತರುವ ವಿಷಯದಲ್ಲಿ ಮನವಿಟ್ಟರೆ ಕ್ಷಿಪ್ರದಲ್ಲಿಯೇ ಹಿಂದೂದೇಶದ ಇತರ ಭಾಷೆಗಳಲ್ಲಿನ ನುಡಿಹಿಡಿಯಂತೆ ಕನ್ನಡನುಡಿಹಿಡಿಯೂ ಎಲ್ಲಾ ಕಡೆಯಲ್ಲಿಯೂ ಪ್ರಸಾರವಾಗುವುದರಲ್ಲಿ ಸಂಶಯವಿಲ್ಲ. ವಿವಿಧಭಾಷಣಕಾರರ ವಾಗ್ಝರಿಯು ಕರ್ನಾಟಕದೇಶದಲ್ಲೆಲ್ಲಾ ಹರಿದು, ಸರ್ವರಿಗೂ ಹೃದಯಂಗಮವಾಗುವುದರಲ್ಲಿ ಸಂದೇಹವಿಲ್ಲ. ಕರ್ನಾಟಕಸಂಕ್ಷಿಪ್ತ ಲಿಪಿಯ

CC-0. Jangamwadi Math Collection. Digitized by eGangotri

ಪ್ರಾಥಮಿಕ ಪುಸ್ತಕವು (Kanarese Shorthand Manual) ಗವರ್ನಮೆಂಟು ಪ್ರೆಸ್ಸಿನಿಂದ ಪ್ರಕಟವಾಗಿ ಸನ್ಮಾನಿಸಲ್ಪಟ್ಟು ಪ್ರಕಾಶಕ್ಕೆ ಬಂದಿದೆ. ಇದರ ಮೌಲ್ಯವು ರೂ. ೭–೮–೦. Superintendent of Government press, Madras ಇವರಲ್ಲಿ ಕ್ರಯಕ್ಕೆ ದೊರೆಯುವುದು.

ಉತ್ತಮವರ್ಗದ ಕರ್ನಾಟಕ ಭಾಷಣಕರ್ತರ ಭಾಷಣಗಳು ಕರ್ನಾಟಕ ವಾತಾವರಣದಲ್ಲಿ ಸೇರಿಹೋಗುತ್ತಿರುವುವಲ್ಲದೆ, ಯಾವತ್ತು ಕನ್ನಡಿಗರ ಅವಗಾಹನೆಗೆ ಬಾರದಿರುವ ಈ ದೊಡ್ಡ ಕೊರತೆಯನ್ನು ಹೋಗಲಾಡಿಸಿಕೊಳ್ಳಲು ನಮಗೆ ಸುಲಭದಾರಿಯಿರುತ್ತಿರುವಾಗ ಆ ಸುಸಂಧಿಯನ್ನು ವ್ಯರ್ಥ ಕಳೆದುಕೊಳ್ಳುತ್ತಿರುವುದು ತುಂಬಾ ಶೋಚನೀಯ. ಕನ್ನಡನುಡಿಯ ಸೇವೆ ಮಾಡಬೇಕೆಂಬ ಆತುರವುಳ್ಳವರು ಈ ಮೂಲಕವೂ ಸೇವೆಮಾಡಬಹುದು. ಇದರಿಂದ ಯಾವ ಪ್ರತಿಫಲವನ್ನೂ ಬಯಸದೆ ಇದೂ ತನ್ನದೊಂದು ಕರ್ತವ್ಯವೆಂದು ಭಾವಿಸಿ ಸೇವಿಸಿದರೆ ಇದರಿಂದ ಕನ್ನಡಿಗರಿಗೆ ಮಹದುಪಕಾರವಾಗುವುದರಲ್ಲಿ ಸಂಶಯವಿಲ್ಲ.

ಕರ್ನಾಟಕ ಸಂಕ್ಷಿಪ್ತಲಿಪಿಯು ಯಾವ ಪ್ರಕಾರ ಅನುಷ್ಠಾನಕ್ಕೆ ಬಂದಿದೆಯೆಂದು ಇಲ್ಲಿ ಸ್ವಲ್ಪಮಟ್ಟಿಗೆ ವಿವರಿಸುವುದು ಅವಶ್ಯವಾಗಿದೆ. ಆಂಗ್ಲಭಾಷೆಯು ನಮ್ಮ ಜನ್ಮಭೂಮಿಯ ಭಾಷಾರೀತಿಗಳಷ್ಟು ಸೌಮ್ಯವಾದುದಲ್ಲವೆಂದು ಹೇಳಬಹುದು. ಅದರಲ್ಲಿರುವ ಅಕ್ಷರಗಳ ಜೋಡಣೆಯಂತೆ ಅದರ ಉಚ್ಚಾರಣೆಯು ಇರುವುದಿಲ್ಲ; ಅಲ್ಲದೆ ಸಮುಚ್ಚಯಗಳೂ, ಪ್ರತ್ಯಯಗಳೂ ಪ್ರತ್ಯೇಕಶಬ್ದಗಳಾಗಿ ಗಣಿಸಲ್ಪಟ್ಟಿವೆ. ಹಿಂದೂದೇಶದ ಭಾಷೆಗಳು ಸರಳವಾಗಿದ್ದರೂ ಮೂಲಭಾಷೆಯಾದ ಸಂಸ್ಕೃತದ ಮೇಲೆ ಹೊಂದಿಕೊಂಡಿರುವುದರಿಂದ, ಸಂಸ್ಕೃತಮಿಶ್ರವಾಗಿವೆ. ಮತ್ತು ಶೈಲಿಯು ನಾದವನ್ನೇ (Sound) ಅನುಸರಿಸಿರುವುದರಿಂದ ಸಂಕ್ಷಿಪ್ತಲಿಪಿಯ ಪರಿವರ್ತನೆಗೆ ತುಂಬಾ ತೊಡಕಾಗಿವೆ. ಆಂಗ್ಲಭಾಷೆಯಲ್ಲಿ ಭಾಷೆಗೆ ಬೇಕಾದಷ್ಟು ಅಕ್ಷರಗಳೂ ಇಲ್ಲ. ಆದರೂ ಸಂಕ್ಷಿಪ್ತಲಿಪಿಯ ಪ್ರಚಾರಕರು ಈ ಕೊರತೆಗಳನ್ನೆಲ್ಲಾ ಹೋಗಲಾಡಿಸಿಕೊಂಡು, ಅವಶ್ಯವಿದ್ದಷ್ಟು ಅಕ್ಷರಗಳಿಗೆ ಸಂಜ್ಞೆಗಳನ್ನು ಏರ್ಪಡಿಸಿಕೊಂಡು ಅನಾವಶ್ಯಕಗಳಾದ ವ್ಯಂಜನಾಕ್ಷರಗಳನ್ನು ಬಿಟ್ಟುಬಿಟ್ಟಿರುವರು. ಕನ್ನಡಭಾಷೆಯಲ್ಲಿ ಸ್ವರಗಳೂ ವ್ಯಂಜನಗಳೂ ಸೇರಿ ೫೨ ಅಕ್ಷರಗಳೂ, ಪ್ರತಿಯೊಂದು ವ್ಯಂಜನಕ್ಕೂ ಹದಿನಾರು ಉಪರೂಪಗಳೂ, ಹಾಗೆಯೇ ಒತ್ತಕ್ಷರಗಳೂ ಸೇರಿ ತುಂಬಾ ತೊಡಕಾಗಿರುವುದು. ಇಷ್ಟು ಅಕ್ಷರಗಳನ್ನಾಗಲಿ ಅಥವಾ ಶಬ್ದಗಳನ್ನಾಗಲಿ ಕರ್ನಾಟಕ ಸಂಕ್ಷಿಪ್ತಲಿಪಿಯಲ್ಲಿ ಪ್ರಯೋಗಿಸಿರುವುದಿಲ್ಲ. ವರ್ಗೀಯಗಳಲ್ಲಿ ಪ್ರತಿಯೊಂದಕ್ಷರಕ್ಕೂ ಅಲ್ಪಪ್ರಾಣ ಮಹಾಪ್ರಾಣವೆಂಬ ಎರಡು ಸ್ವರೂಪಗಳಿವೆ. ಇವುಗಳಲ್ಲಿ ಯಾವುದಾದರೊಂದು ನಾದವು ಸಾಕಾಗಿದೆ. ಹಾಗೆಯೇ ಹ್ರಸ್ವ–ದೀರ್ಘಾಕ್ಷರಗಳಲ್ಲಿ ಯಾವುದಾದರೂ ಒಂದು ನಾದವು ನಮ್ಮ ಲಿಪಿಯ ಅನುಷ್ಠಾನಕ್ಕೆ ಸಾಕು. ಕನ್ನಡ ಸಂಕ್ಷಿಪ್ತಲಿಪಿಯಲ್ಲಿ ಐದು ಸ್ವರಗಳೂ ಇಪ್ಪತ್ತನಾಲ್ಕು ವ್ಯಂಜನಗಳೂ ಈ ಕೆಳಗೆ ಕಂಡಂತೆ ಇರುವುವು.

ಸ್ವರಗಳು. ಅ. ˙| ಒ. -|
ಎ. ·| ಉ. _|
ಇ. .|

. ಒಂದು ಸಣ್ಣ ಚುಕ್ಕೆಯು ಮೊದಲನೆಯ ಮೂರು ಸ್ವರಗಳನ್ನೂ – ಈ ಸಣ್ಣ ಗೀಟು ಕೊನೆಯ ಎರಡು ಸ್ವರಗಳನ್ನೂ ಸೂಚಿಸುವುವು. ಅವುಗಳ ಸಂಕೇತಸ್ಥಾನಗಳನ್ನು ಮೇಲಿನ ಉದಾಹರಣೆಯಲ್ಲಿ ತೋರಿಸಿದೆ. ಇವುಗಳ ಸಂಜ್ಞೆಗಳನ್ನೇ ದೀರ್ಘಾಕ್ಷರಗಳಿಗೂ ಉಪಯೋಗಿಸಿ ಸಂದರ್ಭಾನುಸಾರವಾಗಿ ಕನ್ನಡಲಿಪಿಗೆ ಪರಿವರ್ತಿಸಿಕೊಳ್ಳುವಾಗ ಸರಿಯಾದ ಸ್ವರಗಳನ್ನು ಉಪಯೋಗಿಸಿಕೊಳ್ಳಬೇಕು.

ವ್ಯಂಜನಾಕ್ಷರಗಳು :—

ಪ, ಬ, ಟ, ಡ, ಚ, ಜ, ಕ, ಗ, ತ, ದ, ವ, ಷ, ಸ,
ನ, ಙ, ಮ, ಜ್ಞ, ಣ, ಲ, ರ, ಹ, ಯ, ಳ, ಕ್ಷ,

ಪ, ಟ, ಚ, ಕ, ತ, ಷ, ಸ, ನ, ಮ, ಲ, ರ, ಹ, ಳ, ಕ್ಷ. ಈ ಚಿನ್ಹೆಗಳನ್ನು ಸಾಧಾರಣಸಂಜ್ಞೆಯಿಂದಲೂ, ಉಳಿದವುಗಳನ್ನು ದಪ್ಪಸಂಜ್ಞೆಯಿಂದಲೂ ಸೂಚಿಸಬೇಕು. ಮೇಲೆ ಹೇಳಿದ ಸ್ವರಸಂಜ್ಞೆಗಳೂ ಮತ್ತು ಈ ವ್ಯಂಜನಸಂಜ್ಞೆಗಳೂ ಕರ್ನಾಟಕಸಂಕ್ಷಿಪ್ತಲಿಪಿಯ ಆಧಾರವಾಗಿರುತ್ತವೆ. ಆದರೆ ಚುರುಕಾಗಿಯೂ, ಸುಲಭವಾಗಿಯೂ ಬರೆಯಲು ಅನುಕೂಲಿಸುವುದಕ್ಕಾಗಿ ಈ ವ್ಯಂಜನಸಂಜ್ಞೆಗಳಿಗೆ ಕೆಲವು ಇತರ ಉಪಚಿನ್ಹೆಗಳನ್ನು ಆದಿಯಲ್ಲಾಗಲೀ ಅಂತ್ಯದಲ್ಲಾಗಲೀ ಕೂಡಿಸುವುದರಿಂದ

CC-0. Jangamwadi Math Collection. Digitized by eGangotri

ಬೇರೊಂದು ಶಬ್ದವನ್ನೇ ಸೂಚಿಸುವ ಅನುಕೂಲತೆಗಳಿವೆ. ತ, ದ, ಡ, ಸ, ರ, ಲ, ಳ, ಸ. ಈ ಅಕ್ಷರಗಳು ಹೇರಳವಾಗಿ ಕನ್ನಡಶೈಲಿಯಲ್ಲಿ ಉಪಯೋಗಿಸಲ್ಪಡುವುದರಿಂದ ಮೇಲೆ ಕಾಣಿಸಿದ ಸಂಜ್ಞೆಗಳಿಂದ ಮಾತ್ರವಲ್ಲದೆ ಇತರ ಉಪಚಿನ್ಹೆ (ಕೊಕ್ಕೆಗಳಿಂದ ಉದಾ:—ꓶ⌈JL; ಬಿಂದುಗಳಿಂದ ೧೦) ಗಳಿಂದ ಸಂದರ್ಭಾನುಸಾರವಾಗಿ ಸೂಚಿಸಬಹುದು. ಅಭ್ಯಾಸತ್ವೇನ ಈ ಉಪಚಿನ್ಹೆಗಳು ಸುಲಭವಾಗುವುವು. (ಲ, ಳ) (ಸ, ಣ) (ತ, ದ, ಡ) ಈ ಅಕ್ಷರಗಳ ಭೇದಾಭೇದಗಳನ್ನೆಣಿಸದೆ ಶಬ್ದಗಳ ಅರ್ಥಗ್ರಾಹ್ಯಮಾಡಿಕೊಂಡು ಕೂಡಲೆ ಸಂಕ್ಷಿಪ್ತಲಿಪಿಯಲ್ಲಿ ಬರೆದುಕೊಳ್ಳಬೇಕು. ಈ ವಿಷಯಗಳು ಇಂಗ್ಲಿಷ್ ಷಾರ್ಟ ಹಾಂಡ್ ತಿಳಿದವರಿಗೆ ಪರಿಷ್ಕಾರವಾಗಿ ಗೊತ್ತಿವೆ. ಆಂಗ್ಲಭಾಷೆಯಲ್ಲಿರುವಂತೆ ನಮ್ಮ ತಾಯ್ನುಡಿಯಲ್ಲಿ ಶಬ್ದಗಳು ಬೇರೆ ಬೇರೆಯಾಗಿ ವಿಂಗಡವಾಗಿರದೆ ಸಂಧಿಸಮಾಸಗಳಾಗಿ ಕೂಡಿರುವುದರಿಂದ ಆ ಶಬ್ದಸರಣಿಗಳನ್ನು ಸಂಧಿಬಿಡಿಸಿ ಪೂರ್ಣ ಅರ್ಥ ಕೊಡಬಹುದಾದ ಅಂತಹ ಶಬ್ದಗಳನ್ನು ಪ್ರತ್ಯೇಕ ಒಂದು ಶಬ್ದವಾಗಿ ಗಣಿಸಬೇಕು. ಪ್ರತ್ಯಯಗಳು ವಿಂಗಡಿಸಲ್ಪಟ್ಟು ಪ್ರತ್ಯೇಕ ಚಿನ್ಹೆಯಿಂದ, ಅದಕ್ಕೆ ಸಂಬಂಧಪಟ್ಟ ಶಬ್ದದ ಸಮೀಪದಲ್ಲೇ, ಸೂಚಿಸಲ್ಪಡಬೇಕು. ಕೆಲವು ಸಂದರ್ಭಗಳಲ್ಲಿ ಮಾತ್ರ ತಾತ್ಪೂರ್ವಿಕ ಶಬ್ದದೊಡನೆ ಜೋಡಿಸಿ ಬರೆಯಬಹುದು. ಉತ್ತಮ ಭಾಷಣಕಾರರು ನಿಮಿಷಕ್ಕೆ ೮೦ ರಿಂದ ೧೨೦ ಶಬ್ದಗಳವರೆಗೆ ಮಾತನಾಡಬಲ್ಲರು. ಈ ಪದ್ಧತಿಯಿಂದ ಬರೆದುಕೊಳ್ಳಲು ಸಾಧ್ಯವೂ ಇದೆ. ಈ ಅಭ್ಯಾಸದಿಂದ ಶ್ರಮವಾಗಬಹುದಾದರೂ ಕನ್ನಡ ಭಾಷಾಸೇವೆಯ ದೃಷ್ಟಿಯಿಂದ ಕರ್ನಾಟಕಸಹೋದರರು ಪ್ರಯತ್ನಪಟ್ಟರೆ ಅದು ವ್ಯರ್ಥವಾಗದು. "ಕನ್ನಡ ಕಸ್ತೂರಿ"ಯ ಪರಿಮಳವು ಸಾರ್ವತ್ರಿಕ ಪ್ರಸರಿಸುವುದು. ಈ ಕರ್ನಾಟಕಸಂಕ್ಷಿಪ್ತಲಿಪಿಯಿಂದ ಕನ್ನಡ ಭಾಷೆಗೆ ಆಗಬಹುದಾದ ಮಹತ್ವಪ್ರಯೋಜನಗಳನ್ನು ಇಲ್ಲಿ ಬರೆಯತಕ್ಕ ಅವಶ್ಯಕತೆಯಿರುವುದಿಲ್ಲ.

ಕರ್ನಾಟಕ ಸೀಮೆಯಲ್ಲಿ ಇದು ವರೆಗೂ ಈ ಲಿಪಿಯು ಪ್ರಚಾರಕ್ಕೆ ಬಾರದಿರುವುದು ತುಂಬಾ ವ್ಯಸನಕರ. ಈ ಲಿಪಿಯನ್ನು ಶಿಕ್ಷಣವಿಲ್ಲದೆ ಸ್ವತಃ ಅಭ್ಯಾಸಮಾಡಲು ಅನೇಕ ತೊಂದರೆಗಳಿವೆ. ಏಕೆಂದರೆ ಈ ಲಿಪಿಯು ಪ್ರಚಾರಕ್ಕೆ ಬಾರದೆ ಹಿಂದುಳಿದುದರಿಂದ ಅದನ್ನು ಇನ್ನೂ ಸುಲಭರೀತಿಗೆ ಇಳಿಸಿಕೊಳ್ಳಲು ಅವಕಾಶವಿಲ್ಲದೆ ಪುಸ್ತಕದಲ್ಲಿ ಇದ್ದುದನ್ನು ಇದ್ದಂತೆಯೇ ಅಭ್ಯಾಸಮಾಡುವುದು ಕಷ್ಟವಾಗಿದೆ. ಆದುದರಿಂದ ಈ ವಿಷಯಗಳನ್ನು ಕುರಿತು ಈ ಲೇಖಕನಿಗಾಗಲೀ ಅಥವಾ ಮೈಸೂರಿನ ಷಾರ್ಟ್‌ಹ್ಯಾಂಡ ಬ್ಯೂರೋದಲ್ಲಿರುವ ಕನ್ನಡ ಷಾರ್ಟ್‌ಹ್ಯಾಂಡ್ ರಿಪೋರ್ಟರಿಗಾಗಲೀ ಬರೆದು ತಿಳುಹಿಸಿದರೆ ಅದಕ್ಕೆ ತಕ್ಕ ಉತ್ತರವು ದೊರೆಯುವುದರಲ್ಲಿ ಸಂಶಯವಿಲ್ಲ. ಆದರೆ ಕರ್ನಾಟಕರು ಉದಾರಮನಸ್ಸಿನಿಂದ ಈ ಕರ್ನಾಟಕಸಂಕ್ಷಿಪ್ತಲಿಪಿಯೆಂಬ ಎಳೆಯ ಶಿಶುವನ್ನು ಆದರಿಸುವರಾಗಿ ನಂಬಿರುತ್ತೇನೆ. ಈ ಲಿಪಿಯನ್ನು ಅಭ್ಯಾಸಮಾಡುವುದಕ್ಕೆ ಮೊದಲು ಕರ್ನಾಟಕ ವ್ಯಾಕರಣವನ್ನು ಚೆನ್ನಾಗಿ ಮನನಮಾಡಿದ್ದರೆ ತುಂಬಾ ಅನುಕೂಲ. ಈ ಪ್ರಕಾರ ಲಿಪಿಗೆ ಪುರಸ್ಕಾರ ದೊರೆತರೆ ಕರ್ನಾಟಕಭಂಡಾರವು ವೃದ್ಧಿಗೊಂಡಂತಾಗುವುದು.



CC-0. Jangamwadi Math Collection. Digitized by eGangotri

# ಚಲಚ್ಚಿತ್ರ

ಆರನೆಯ ಬರಹ

## ಚಿತ್ರ-ಪ್ರಬಂಧ

ಶ್ರೀ. ಕೋ. ಶಿವರಾಮಕಾರಂತರು, ಪುತ್ತೂರು.

ಚಿತ್ರಪ್ರಬಂಧ (Picture Composition) ಎಂದು ಈ ಅಧ್ಯಾಯವನ್ನು ಬೇರೆ ಶಿರೋಲೇಖದ ಕೆಳಗೆ ಬರೆಯುತ್ತಿರುವೆವಾದರೂ ಇದು ಹಿಂದಿನ ಅಧ್ಯಾಯದೊಡನೆಯೇ ಸಮ್ಮಿಳಿತವಾಗುವುದು. ಇಲ್ಲಿ ಬರುವ ವಿಷಯಗಳು ಪ್ರತ್ಯಕ್ಷಚಿತ್ರಸಂಗ್ರಹದ ಕಾಲಕ್ಕೆ ಅನುಕೂಲಿಸುವವು ಅವುಗಳು ಹೇಗೆ ನಿರ್ಮಿತವಾಗಬೇಕು ಎಂಬುದನ್ನು ವಿವರವಾಗಿ ಚರ್ಚಿಸುವುದವಶ್ಯ.

ಮೊದಲಿಗೆ ಛಾಯಾತೇಜಗಳನ್ನು ಕುರಿತು ಪರಿಶೀಲಿಸುವ. ಇದನ್ನು ತಿಳಿಯಲು, ಎರಡನೆಯ ಭಾಗದಲ್ಲಿ ಕೊಟ್ಟಿರುವ ಬೆಳಕಿನ ಮೇಲಣ ಪ್ರಕರಣವನ್ನು ಓದಿಕೊಳ್ಳುವುದು



"ಅಲಿಯ ಸುಖದ ಕನಸು"—"ಸೀಕ್ರೆಟ್ಸ್ ಆಫ್ ದಿ ಈಸ್ಟ್" ಎಂಬ ಉಫಾಚಿತ್ರದಿಂದ

ಗಳು. ಚಿತ್ರದ ಭಾವಕ್ಕೆ ಅನುಕೂಲವಾದ ಛಾಯಾತೇಜವ್ಯವಸ್ಥೆಯೂ, ದೃಶ್ಯವ್ಯವಸ್ಥೆಯೂ ಎಷ್ಟು ಆವಶ್ಯವೆಂದು ಹಿಂದೆ ಹೇಳಿರುವೆವು. ನಾವು ಪಟಲದಿಂದ ಯಾವುದೊಂದು ಚಿತ್ರದ ತುಂಡನ್ನು ಹರಿದು ತೆಗೆದರೂ ಅದು ಕಥಾರಸಕ್ಕೊಂದು ಸೂಚಿ (Index) ಯಂತಿರಬೇಕು. ಇದರಿಂದ, ಒಳಿತು. ಭಿನ್ನಭಿನ್ನ ವಸ್ತುಗಳು ಸರಿಯಾದ ಶುದ್ಧತೆಯಲ್ಲಿ ಕಾಣಿಸಬೇಕಾದರೆ ಯಾವ ರೀತಿಯಲ್ಲಿ ಅವುಗಳ ಮೇಲೆ ಬೆಳಕು ಬೀಳತಕ್ಕದು- ಎಂಬುದನ್ನಿಷ್ಟೇ ಆ ಅಧ್ಯಾಯದಲ್ಲಿ ಸೂಚಿಸಿರುವೆವು. ಈಗ ನಾವು ಚಿತ್ರಗತವಸ್ತುಗಳ ಮೇಲೆ ಬೀಳುವ ಬೆಳಕು ಎಲ್ಲಿಂದ ಬಂದಿತು?-ಎಂಬುದನ್ನು

CC-0. Jangamwadi Math Collection. Digitized by eGangotri

ತೋರಿಸುವುದವಶ್ಯ. ಸಹಜವಾಗಿ ಅದು ಸೂರ್ಯನಿಂದ ಇಲ್ಲವೆ ವಿದ್ಯುತ್‌ದೀವಿಗೆಗಳಿಂದ ಒರುವುದಾದರೂ, ಚಿತ್ರದಲ್ಲಿ, ಅದು ಅಲ್ಲಿನ ಪರಿಸ್ಥಿತಿಗೆ ಸರಿಯಾದ ವಸ್ತುವಿನಿಂದ ಬಂದಿತೆಂದು ತೋರಿಸಬೇಕು. ಅಂತರಂಗದೃಶ್ಯವಾದರೆ-ಕಿಟಕಿಯಿಂದಾಗಲಿ, ರಾತ್ರೀಕಾಲವಾದರೆ ದೀಪಗಳಿಂದಾಗಲಿ ಅದು ಬರಬಹುದು. ಬಹಿರಂಗದಲ್ಲಿ- ಹಗಲಾದರೆ ಸೂರ್ಯನ ಬೆಳಕು; ರಾತ್ರಿಯಾದರೆ ಬೀದಿಯ ಲಾಂದ್ರುಗಳು, ಕಟ್ಟಿಗೆಯ ಉರಿ, ಚಂದ್ರ- ಇವಾವುವಾದರಿಂದ ಅದು ಬರಬಹುದು. ಈ ರೀತಿ ನಾವು ಚಿತ್ರದಲ್ಲೂ ತೋರಿಸಬೇಕಾಗುವುದು. ಆದುದರಿಂದ ಬೆಳಕಿನ ಪ್ರವಾಹವು ಎಲ್ಲಿಂದಲೇ ಹುಟ್ಟಿರಲಿ, ಚಿತ್ರದ ಮಟ್ಟಿಗೆ, ಅಲ್ಲಿ ಕಾಣಿಸಬೇಕಾದ ಉದ್ಗಮಸ್ಥಾನದಿಂದ ಬಂದಂತೆ ಅವನ್ನು ಪ್ರತಿಫಲಿಸಿ (Reflect) ತೋರಿಸಬೇಕು.

ಈಗ ನಾವು ತೆರೆಯಮೇಲೆ ಬೀಳುವ ಒಂದು ಚಿತ್ರವನ್ನು ಪರೀಕ್ಷೆಗಾಗಿ ಸ್ಥಾಯಿಯಾಗಿರಿಸುವ. ಒಂದು ಚಿತ್ರವನ್ನು ಕಾಣುವಾಗ ನಮ್ಮ ದೃಷ್ಟಿಯು ಅದರ ಕೆಳಭಾಗದ ಎಡಬದಿಯಿಂದತೊಡಗಿ,ಮೇಲ್ಭಾಗದಬಲಬದಿಯವರೆಗೆ ಚಲಿಸುವುದು. ಹೀಗೆ ನಮ್ಮ ದೃಷ್ಟಿಯು ಹರಿಯುವಾಗ ಅದರ ದಾರಿಯಲ್ಲಿ ಯಾವ ವಸ್ತುವಿನಮೇಲೆ ಅಧಿಕ ತೇಜವಿದೆಯೋ ಅದು ನಮ್ಮನ್ನು ಆಕರ್ಷಿಸುವುದು. ಆದುದರಿಂದ ಚಿತ್ರದಲ್ಲಿನ ಬೇರೆಬೇರೆ ವಸ್ತುಗಳ ಸ್ಥಾನವೂ, ಅವುಗಳ ಮೇಲೆ ಬೀಳುವ ಬೆಳಕಿನ ಪರಿಮಾಣವೂ ಅವುಗಳ ಪ್ರಾಮುಖ್ಯತೆಗೆ ತಕ್ಕಂತೆ ಇರುವುದು ತೀರ ಅವಶ್ಯ. ಶ್ರೇಷ್ಠ ಚಿತ್ರಕಾರರ (Painters) ಚಿತ್ರಗಳಿಂದ ನಾವು ಈ ಬಗೆಯ ಛಾಯಾತೇಜಪ್ರಬಂಧವನ್ನು ಕಲಿಯಬಹುದು.

ಒಂದು ಚಿತ್ರದಲ್ಲಿನ ನೆರಳೂ (Shadow),ಬೆಳಕೂ ಸೌರಸ್ಯದಿಂದಿರುವಂತೆ ಚಿತ್ರದ ಮೈಮೇಲೆ ಹರಡಿಕೊಂಡಿರಬೇಕು. ಛಾಯೆಗಳು ಒಂದೇ ಮೂಲೆಯಲ್ಲಿ ಅಧಿಕವಾಗಿ ಕಂಡುಒಂದರೆ ಆಭಾಗವು ಕುಸಿದುಬಿದ್ದಂತೆ ಕಾಣುವುದು. ಈ ದೋಷವನ್ನು ಹೋಗಲಾಡಿಸಲು, ಸಾಮಾನ್ಯವಾಗಿ, ಛಾಯೆಯು ಚಿತ್ರದ ತಳದಲ್ಲಿ ಅಧಿಕವಾಗಿದ್ದು ಮೇಲೇರುತ್ತ ಹೋದಂತೆ, ರಾಶಿಯಂತೆ ಕಡಿಮೆ ಕಡಿಮೆಯಾಗಿ ಕಾಣಿಸುವುದು ಲೇಸು. ಚಿತ್ರದ ಮುಂಭಾಗವು ಬೆಳಕಿನಿಂದ ತುಂಬಿ, ಹಿಂದೆ ನೆರಳು ಕವಿದಿದ್ದರೂ ಚಿತ್ರದಲ್ಲಿನ ಸಮತೋಲವು (Balance) ನಾಶವಾಗುವುದು.

ಚಿತ್ರವೊಂದರ ಒಟ್ಟು ಪ್ರಕೃತಿಯನ್ನು ಎಣಿಸುವಾಗ, ಅದರಲ್ಲಿ ಛಾಯೆಯು ಅಧಿಕವಾಗಿದ್ದರೆ ಅದು ಕೀಳಾದ ಸ್ಥಾಯಿಯೆಂದೂ, ತೇಜವು ಅಧಿಕವಾಗಿದ್ದರೆ ಅದು ಉಚ್ಚ ಸ್ಥಾಯಿಯಲ್ಲಿದೆಯೆಂದೂ, ಸರಿಸಮನಾಗಿದ್ದರೆ ಸಮ ಇಲ್ಲವೆ ಮಧ್ಯಮಸ್ಥಾಯಿಯಲ್ಲಿದೆಯೆಂದೂ ಹೇಳಬಹುದು. ಸ್ಥಾಯಿಯು ಉಚ್ಚವಾದಂತೆ ಲಘುತ್ವ, ಉತ್ಸಾಹ, ಆನಂದಗಳೂ ನೀಚವಾದಂತೆ ಬೇಸರ, ದುಃಖ ಮೊದಲಾದ ವಿರುದ್ಧಭಾವಗಳೂ ಉತ್ಪನ್ನವಾಗುವುವು.

ಈ ದೃಷ್ಟಿಯಿಂದ ನಾವು ಚಿತ್ರನಿರೀಕ್ಷಣೆಯನ್ನು ಮಾಡತೊಡಗಿದರೆ, ವಿದೇಶದ ಹಲವು ಚಿತ್ರಗಳಲ್ಲಿ ನಾವಿರಾರು ದೋಷಗಳನ್ನು ಕಾಣುವೆವು. ಅಲ್ಲಿನ ಚಿತ್ರಗಳ ಛಾಯಾಯೋಜನೆಗಳನ್ನು ಎರಡು ರೀತಿಯಾಗಿ ವಿಭಾಗಿಸಬಹುದು; ವ್ಯಕ್ತಿಪರ (Personal) ಅವ್ಯಕ್ತಿಪರ (Impersonal) ಎಂದು. ಮೊದಲನೆಯ ಮಾರ್ಗವು- ಕೆಲವೊಂದು ವ್ಯಕ್ತಿಗಳ ಅನುಕೂಲತೆಗೆ ಸರಿಯಾದ (ಪ್ರತಿಕೂಲತೆಗಲ್ಲ) ಛಾಯಾತೇಜವ್ಯವಸ್ಥೆಯಿಂದ ಕೂಡಿರುವುದು. ತನಗೆ ಮುಖ್ಯವೆನಿಸಿದ ನಟನಟಿಯರನ್ನು ಆದಷ್ಟು ಸೊಗಸಾಗಿ ಜನರ ಮುಂದಿರಿಸುವುದು ಇದರ ಧ್ಯೇಯ. 'ಸ್ಟಾರ್' ಪದ್ಧತಿಯನ್ನು ಇರಿಸಿಕೊಳ್ಳುವ ಚಿತ್ರಗಳ ಅವಸ್ಥೆಯೆಲ್ಲ ಹೀಗೆ. ಒಂದೇ ಚಿತ್ರದಲ್ಲಿ ನಾಲ್ಕಾರು ಪ್ರಾಮುಖ್ಯಪಾತ್ರಗಳಿದ್ದು, ಚಿತ್ರದ ಪ್ರಸಿದ್ಧನಟನಿಗೆ ಅಲ್ಲಿ ಪ್ರಾಮುಖ್ಯತೆಯೇ ಇಲ್ಲದಿದ್ದರೂ ಚಿತ್ರದ ಛಾಯಾತೇಜಪ್ರಬಂಧವು, ಆ ಪ್ರಮುಖನಟನಿಗೆ ಹಿತಕರವಾಗಿದ್ದು, ಉಳಿದವರನ್ನು ಉದಾಸೀನ ದೃಷ್ಟಿಯಿಂದ ನೋಡುವುದು. ಇದರಿಂದ ಕಥಾವಿಷಯಕ್ಕಿರುವ ಮೇಲ್ಮೆಯು ತನ್ನಂತೆ ನಾಶವಾಗುವುದು. ಈ ರೀತಿಯ ಬೆಳಕಿನ ಯೋಜನೆಯನ್ನು ನಾವು 'ದಿ ವೆಗಬಾಂಡ್ ಕಿಂಗ್' ಮೊದಲಾದ ಹಲವು ಚಿತ್ರಗಳಲ್ಲಿ ಕಾಣಬಹುದು.

ಇದಕ್ಕಿಂತ ಅವ್ಯಕ್ತಿಪರಮಾರ್ಗವೇ ಶ್ರೇಷ್ಠವಾದುದು. ಆದರೆ ಅದರಲ್ಲಿರುವ ಬೇರೆಬೇರೆ ಕ್ರಮಗಳಲ್ಲಿ ಎಲ್ಲವೂ ಸರಿಯೆಂದು ತೋರಲಾರವು. ಇವನ್ನು ಎರಡು ಕ್ರಮವಾಗಿ ವಿಂಗಡಿಸಬಹುದು. ಮೊದಲನೆಯ ವರ್ಗವು ಚಿತ್ರಶೋಭೆಯನ್ನು ಲಕ್ಷಿಸುವುದು. ಎರಡನೆಯದು ವಿಷಯ ಶೋಭೆಯನ್ನು ಗಮನಿಸುವುದು. ಈಗ ಈ ಮೊದಲನೆಯ ಪದ್ಧತಿಯನ್ನು ವಿಮರ್ಶಿಸುವ. ಎಷ್ಟೋ ಪಟಲಗಳಲ್ಲಿ ನಮಗೆ

CC-0. Jangamwadi Math Collection. Digitized by eGangotri

ತೀರ ರಮಣೀಯವಾದ ಚಿತ್ರಪಂಕ್ತಿಯು ಕಾಣಸಿಗುವುದು. ಅವುಗಳನ್ನು ಕಂಡಷ್ಟು ನಮಗೆ ತೃಪ್ತಿಯಾಗದು. ಯಾವುದಕ್ಕಾಗಿ? ಅವಕ್ಕಿರುವ ರಮಣೀಯತೆ ಇಲ್ಲವೆ ಮೋಹಕತೆಗಾಗಿ– ಚಿತ್ರಗತವಿಷಯಕ್ಕಾಗಿ ಅಲ್ಲ. ಆದರೆ ಚಿತ್ರವು ಎಂದು ಕಥೆಯ ಒಂದು ಅಂಶವೆನಿಸಿತೋ ಆಗ ಅದು ಅದರ ಅಡಿಯಾಳಾಗಬೇಕು. ಒಬ್ಬ ಮನುಷ್ಯನಿರುವನೆಂದೂ ಅವನ ಮೋರೆಯ ವಿಮರ್ಶೆಯನ್ನು ವಿಮರ್ಶಿಸುತ್ತೇವೆಂದೂ ತಿಳಿಯುವ. ಅವನ ಮೂಗೊಂದನ್ನೇ ಎಣಿಸಲು ಅದು ಚೆನ್ನಾಗಿ ಕಾಣಬಹುದು; ಕಿವಿಯೂ ಹಾಗೆಯೇ. ತುಟಿಗಳೂ ಅಂತೆಯೇ. ಗಲ್ಲ, ಕಣ್ಣುಗಳು, ಹಣೆ, ಕೂದಲು, ಕಪೋಲ,–ಇವೆಲ್ಲವನ್ನು ಬೇರೆ ಬೇರೆಯಾಗಿ ಎಣಿಸಿದಲ್ಲಿ ಚೆಂದವಾಗಿ ಕಾಣಿಸಬಹುದು. ಆದರೆ ಇಷ್ಟನ್ನು ಒಟ್ಟಿಗೆ ನೋಡುವಾಗ ಅದೇ ಬಗೆಯ ಸೌಂದರ್ಯವು ಕಾಣಿಸದಿರಲು ಸಾಧ್ಯವಿದೆ! ಅವುಗಳಲ್ಲಿ ಪರಸ್ಪರ ಮೇಳವಿಲ್ಲದಿದ್ದರೆ ಆಗ ಸೊಗಸಿನ ಬದಲು ಅಸಹ್ಯತೆಯು ಉಂಟಾಗುವುದು. ಮೂಗು ಚೆಂದವಾಗಿರಬಹುದು, ಮೋರೆಯೂ ಚೆಂದವಾಗಿರಬಹುದು, ಆದರೆ ಈ ಚೆಂದವಾದ ಮೂಗು, ಚೆಂದವಾದ ಮೋರೆಗೆ ತೀರ ಉದ್ದವಾಗಿದ್ದರೆ?



"ಸಿಟೀಸ್ ಎಂಡ್ ಇಯರ್ಸ್" ಎಂಬ ರಶ್ಯನ್ ಚಿತ್ರಪಟದಲ್ಲಿ ಭೀಕರ ಘಟನೆಯೊಂದು.

ಈ ರೀತಿಯ ಯೋಜನೆಯಿಂದ ಇನ್ನೊಂದು ದೋಷವಿದೆ. ಅದೇನೆಂದರೆ ನಮಗೆ ಕಥಾವಿಷಯವು ಮರವೆಯಾಗಿ ಕೇವಲ ಚಿತ್ರಾವಳಿಗೆ ಮನಸೋಲುವೆವೆಂದು. ಡಾ. ಕಸಿನ್ಸ್‌ರವರು ಒಬ್ಬ ಚಿತ್ರಕಾರನ ಚಿತ್ರವನ್ನು ವಿಮರ್ಶಿಸುವಾಗ ಈ ಅಭಿಪ್ರಾಯವನ್ನು ಸೂಚಿಸಿದ್ದರು. ಸರಸ್ವತಿಯ ಚಿತ್ರವದು. ಅದರಲ್ಲಿ ವಿಗ್ರಹದ ಬಹಿರಂಗ ಸೌಂದರ್ಯವು ಅತ್ಯಧಿಕವಾಗಿ, ಪೂಜಕನಿಗೆ, ಚಿತ್ರಗತ ವ್ಯಕ್ತಿಯ ಶರೀರಸೌಂದರ್ಯವನ್ನು ಕಂಡು ವಿಸ್ಮಯಗೊಳ್ಳುವುದರಲ್ಲೇ ಮನವು ತಲ್ಲೀನವಾದೀತಲ್ಲದೆ, ಭಕ್ತಿಯು ಅವನ ಒಡಲಲ್ಲಿ ಅಂಕುರಿಸಲಾರದು. ಪಾಲ್‌ರೋತಾ ಎನ್ನುವವರು "ಜೋನ್ ಆಫ್ ಆರ್ಕ್" ಎಂಬ ಚಿತ್ರದ ವಿಮರ್ಶೆ ಮಾಡುವಾಗ ಈ ತೆರದ ಅಭಿಪ್ರಾಯವನ್ನೇ ಸೂಚಿಸಿದ್ದರು. ಪಟಲದ ಪ್ರತಿಯೊಂದು ತುಂಡು ತನ್ನಷ್ಟಕ್ಕೆ ಅಷ್ಟು ಚೆನ್ನಾಗಿ ಕಾಣಿಸುತ್ತಿತ್ತಂತೆ. ಅದರಲ್ಲಿ ಒಂದೊಂದು ಚಿತ್ರದ ತುಂಡು, ತನ್ನ ಮೋಹವನ್ನು ಪ್ರೇಕ್ಷಕನ ಮೇಲೆ ಬೀರಿ, ಅದನ್ನು ಹರಿದು ಇರಿಸಿಕೊಂಡು ಬಿಡುವಾ ಎಂಬ ಬುದ್ಧಿಯನ್ನು ಪ್ರೇರಿಸುವಂತಿತ್ತಂತೆ. ಸೌಂದರ್ಯವು ಪತಿವ್ರತೆಗೆ ಕೆಡುಕು–ಎಂಬ ಮಾತಿನಂತಾಯಿತಿದು.

ಈಗ ವಿಷಯವನ್ನು ಪುಷ್ಟೀಕರಿಸುವ ಛಾಯಾತೇಜದ ಪ್ರಬಂಧವನ್ನು ಪರಿಶೀಲಿಸುವ. ಇದೇ ಸರ್ವೋತ್ಕೃಷ್ಟವಾದುದೆಂಬುದು ನಿರ್ವಿವಾದದ ಸಂಗತಿ. ಅದಕ್ಕಾಗಿಯೇ ಹರ್ಬರ್ಟ್‌ಮೆಕೇ ಎನ್ನುವವನು – "ಬೆಳಕೆಂಬುದು ಚಲಚ್ಚಿತ್ರಕಾರನು ತನ್ನ ಚಿತ್ರವನ್ನು ಬಿಡಿಸಲು ಉಪಯೋಗಿಸುವ ಕುಂಚ[೧]" ಎಂದಿರುವನು. ಬೆಳಕು ಕೀಳು ಸ್ಥಾಯಿಯಲ್ಲಿದ್ದರೆ ದುಃಖವು ಸೂಚಿತವಾಗುವುದಷ್ಟೆ. ಡಾ. ಫೂಮಂಚು ಎಂಬ ಚಿತ್ರದಲ್ಲಿ ವಿವಾಹಕಾಲದಲ್ಲಿ ದಂಪತಿಗಳು ಬರುವ ಘಟನೆಯೊಂದಿದೆ. ಅಂಥ ಸಂತೋಷದ ಗಳಿಗೆಯಲ್ಲಿ, ಬೆಳಕು ಎಲ್ಲವನ್ನೂ ಬೆಳಗದೆ ದಂಪತಿಗಳಿರ್ವರನ್ನಷ್ಟೇ ಬೆಳಗುವುದು. ಸುತ್ತಲೂ ಕವಿದಿರುವ ಛಾಯೆಯು, ಕಥಾಭವಿಷ್ಯವು, ದುಃಖದಾಯಕವಾಗಿದೆಯೆಂದು ಸೂಚಿಸುವಂತಿದೆ. 'ಜರ್ನೀಸ್ ಎಂಡ್' 'ಕೇಸ್ ಆಫ್ ಸಾರ್ಜಂಟ್ ಗ್ರೀಷಾ'– ಎಂಬ ಚಿತ್ರಗಳಲ್ಲಿ ಈ ರೀತಿಯಿಂದ ಕಥೆಯ ಭೀಕರಸ್ವರೂಪವನ್ನು ಹೆಜ್ಜೆಹೆಜ್ಜೆಗೂ ಪ್ರತಿಪಾದಿಸಿರುವರು. ರುಷ್ಯನರ 'ಅಕ್ಟೋಬರ' ನೊಡನಾದ ಯಾವತ್ತು ಚಿತ್ರಗಳನ್ನು

೧ Amateur movie-making.

CC-0 Jangamwadi Math Collection. Digitized by eGangotri

ಕಂಡಿಲ್ಲವಾದರೂ, ಅವುಗಳ ಸ್ಥಿರಚಿತ್ರ (Stills) ಗಳಿಂದ ಅವುಗಳಲ್ಲಿನ ಅಗಾಧವಾದ ಛಾಯಾತೇಜಪ್ರಬಂಧವು ಒಡೆದು ಮೂಡುವುದು. 'ದಿ ವಿಂಡ್' ಎಂಬ ಚಿತ್ರದಲ್ಲಿನ ಕಠಿನವಾದ ಉಚ್ಚಸ್ಥಾಯಿಯ ಬೆಳಕು, ಸಂತೋಷವನ್ನು ಸೂಚಿಸುವ ಬದಲು, ಪ್ರಸಂಗಕ್ಕೆ ತಕ್ಕಂತೆ ಜೀವವನ್ನು ದಹಿಸುವ ಉರಿಯಂತೆ ಕಾಣಿಸುತ್ತದೆ. ನಿಜವಾಗಿ ಬಹಿರಂಗದ ಮರಳು ಕಾಡನ್ನು ಸೂಚಿಸುವಂತೆ ಅಂತರಂಗದ ತಾಪವನ್ನು ಸೂಚಿಸುತ್ತದೆ. ಈ ದೃಷ್ಟಿಯಿಂದ ಯೋಚಿಸಲು, ಬಹುವರ್ಣಚಿತ್ರಗಳು ಚಿತ್ರದ ಭಾವಹಾನಿಯನ್ನು ಮಾಡುವುವೆಂದು ತೋರುವುದು. ಮೋಹಕವಾದ ಬಣ್ಣವೇ ಕಥಾಸಾರವನ್ನು ಭಂಗಿಸುವುದು. ಮುಂಬಯಿಯ ಇಂಪೀರಿಯಲ್ ಮಂಡಲದವರ ಒಂದು ಚಿತ್ರದಲ್ಲಿ- ಉಳಿದ ಸ್ಥಳಗಳನ್ನು ಬಿಟ್ಟು ತೀರ ದುಃಖಮಯ ಪ್ರಸಂಗವನ್ನು ಬಹುವರ್ಣ (Multi-colour) ದಿಂದ ಚಿತ್ರಿಸಿರುವರು.

ಪಾಶ್ಚಾತ್ಯಚಿತ್ರಗಳಲ್ಲಿ ಶೃಂಗಾರರಸಭರಿತ ಭಾಗಗಳು ಮಾತ್ರ, ಯುಕ್ತ ತೇಜಪ್ರಬಂಧದಿಂದ ಅತ್ಯಧಿಕ ಲಾವಣ್ಯವನ್ನು ತೋರುತ್ತವೆ. ಶೃಂಗಾರ, ಆನಂದಗಳಲ್ಲಿ ಬೆಳಕು ಉಚ್ಚಸ್ಥಾಯಿಯಲ್ಲಿರುವುದು. ಆಗ ಅವುಗಳಿಗೆ ಅಧಿಕ ರಮಣೀಯತೆಯು ಇದೆ. ಆದರೆ ಕಥಾನಾಯಕಿಯು ಅಳುವಾಗಲೂ, ತಳಮಳಕ್ಕೆ ಸಿಲುಕಿರುವಾಗಲೂ, ಕುಪಿತಳಾಗಿರುವಾಗಲೂ, ಉಚ್ಚಸ್ಥಾಯಿಯೊಂದನ್ನು ಕಂಡರೆ, ಅವು ಅರ್ಥಹೀನಯೋಜನೆಗಳೆಂದು ಸ್ಪಷ್ಟವಾಯಿತು. ನಮ್ಮ ದೇಶದ ಚಿತ್ರಗಳಲ್ಲಿ ಬೆಳಕಿನ ಪ್ರಬಂಧವೆಂಬುದೇ ಇರುವುದಿಲ್ಲ. ಒಮ್ಮೆ ಇದ್ದರೆ ಅದು ಚಿತ್ರದ ರಮಣೀಯತೆಯನ್ನು ಪ್ರತಿಪಾದಿಸುವುದೇ ಹೊರತು ಕಥೆಯ ಭಾವವನ್ನಲ್ಲ. ರಣಜಿತ್, ಇಂಪೀರಿಯಲ್, ಪ್ರಭಾತ ಕಂಪೆನಿಗಳ ಪ್ರಭಾಲೇಖನಕ್ಕೆ ಪ್ರಸಿದ್ಧವಾದ ಚಿತ್ರಗಳಲ್ಲ ಈ ಸಾಲಿನವು.

"ಮಾಡನ್ ಮೈಡನ್ಸ್" "ಡೆವಿಲ್ ಮೇಕೇರಾ" ಎಂಬಿತ್ಯಾದಿ ಮಿಟ್ರೊಗೊಲ್ಡ್ವಿನ್ ಚಿತ್ರಗಳಲ್ಲಿನ ಶೃಂಗಾರಭಾಗಗಳು ರಮಣೀಯವಾಗಿವೆ. ಪ್ರಸಿದ್ಧ ನಿರ್ದೇಶಕನೆನಿಸುವ ಅರ್ನೆಸ್ಟ್ ಲುಬಿಟ್‌ನ 'ಲೌವ್ ಪೆರೇಡ್' ಚಿತ್ರವಿದೆ. ಇಲ್ಲಿನ ಬೆಳಕಿನ ಯೋಜನೆಯು ಅವ್ಯಕ್ತಿಪರವಾದುದು. ಕಥಾನಾಯಕಿಯು ಒಬ್ಬಳು ರಾಣಿ; ಅವಳು ಅತ್ತು ಅತ್ತು ತನ್ನ ಪತಿಯ ಹಿಂದೆ ಸರಿಯುವಾಗಲೂ ಸಹ ಅವಳ ವ್ಯಥೆಯೊಡನೆ ಅನುಸರಿಸುವ ಛಾಯತೇಜಪ್ರಬಂಧವಿರುವುದಿಲ್ಲ. ಚಿತ್ರಕಾರನು ವಿಷಯ, ವ್ಯಕ್ತಿಗಳ ರಮಣೀಯತೆಯನ್ನು ಮರೆತು, ಕೇವಲ ಚಿತ್ರದ ರಮಣೀಯತೆಯನ್ನು ತೋರಿಸಲು ಹೊರಟಂತೆ ಕಾಣುವುದು.

ಈಗ ನಾವು ಚಿತ್ರಗಳ ರೇಖೆಗಳ ವಿಚಾರವಾಗಿಯೂ, ಭಾವವಿಂಬಕ್ಕೆ ಅನುಕೂಲವಾದ ವಾತಾವರಣದ ವಿಚಾರವಾಗಿಯೂ ಯೋಚಿಸುವ. ಚಿತ್ರವೆಂದರೆ ಗತಿ ಸೌರಸ್ಯಗಳಿಂದ ಕೂಡಿದ ರೇಖೆ, ಛಾಯೆ, ಮತ್ತು ತೇಜಗಳ ಸಮೂಹ. ಇವುಗಳಲ್ಲಿ ರೇಖೆಯೇ ಪ್ರಧಾನವಾದುದು. ನಾವು ಭಿನ್ನ ಭಿನ್ನ ದೃಶ್ಯಗಳನ್ನು ಆರಿಸುವಾಗ, ಅವುಗಳಲ್ಲಿನ ರೇಖೆಗಳು ಆಯಾಯ ಪ್ರಸಂಗಗಳಲ್ಲಿನ ಭಾವಗಳೊಡನೆ ಮೇಳೈಸುವುವೋ ಎಂಬುದನ್ನು ವಿಚಾರಿಸಬೇಕು. ತೀರ ರಮಣೀಯವಾದ ದೃಶ್ಯಾವಳಿಯನ್ನು ತೋರಿಸುವುದು ನಮ್ಮ ಉದ್ದೇಶವಾಗಿರಬಾರದು. ಸೂತಕದ ದಿನ, ಜಿಡಗಿನ ಉಡುಗೆಯನ್ನು ಧರಿಸುವವನು ಹುಚ್ಚನೆನಿಸನೇನು?

ಒಂದು ಚಿತ್ರದಲ್ಲಿ ಕಂಡುಬರುವ ಮರ, ಗುಡ್ಡ, ಸ್ತಂಭ ಮೊದಲಾದುವುಗಳಲ್ಲಿ ಲಂಬರೇಖೆಗಳಿದ್ದರೆ ಅವು ಗಾಂಭೀರ್ಯ, ಗೌರವ, ಅಹಂಕಾರಗಳನ್ನು ಸೂಚಿಸುವುವು. ಆದರೆ ದಿಗಂತ, ಅದಕ್ಕೆ ಸಮವಿತಾನದಲ್ಲಿರುವ ಮೋಡಗಳು, ಜಲಾಶಯಗಳ ಮೇಲ್ಭಾಗ ಮೊದಲಾದುವುಗಳು- ಶಾಂತಿ, ವಿಶ್ರಾಂತಿ, ಮೊದಲಾದುವನ್ನು ತೋರಿಸುವುವು. ಬಂಡೆ ಮೊದಲಾದುವುಗಳ ವಕ್ರ ವಕ್ರ ಅಂಚುಗಳು, ಕಲ್ಲೋಲಸಮುದ್ರದ ಅಲೆಗಳ ಬಡಿತದಿಂದುಂಟಾಗುವ ವಕ್ರ ವಕ್ರ ಅಂಚುಗಳು, ವಕ್ರ ವಕ್ರ ರೇಖೆಗಳು, ತಳಮಳ, ಚಾಂಚಲ್ಯ, ಭೀತಿ ಮೊದಲಾದುವನ್ನು ತೋರಿಸುವುವು. ನಾವು ಒಂದು ಕೃತ್ರಿಮಸಂಯುಕ್ತವನ್ನು ರಚಿಸಿದರೂ ಅಲ್ಲಿ ರೇಖೆಗಳು ವಹಿಸುವ ಭಾಗವನ್ನು ಕುರಿತು ನಾವು ತೀರ ಹೆಚ್ಚಿನ ಗಮನವನ್ನಿರಿಸಬೇಕು. ವಾರ್‌ಬಗ್ ಎನ್ನುವವನು ತನ್ನೊಂದು ಲೇಖನದಲ್ಲಿ ಆಡಿರುವ ಮಾತುಗಳನ್ನು ಪರಿಶೀಲಿಸಿರಿ:

" ಶಾಂತವಾದ ಸಮುದ್ರವೂ, ಸರಳವಾದ ದಿಗಂತವೂ, ಅದರ ಮೇಲೆ ಸಮಾನಾಂತರವಾಗಿ ಚಾಚಿರುವ ಮೋಡಗಳೂ, ಮೆಲ್ಲಗೆ ಇಳಿಜಾರಾಗಿ ಕಾಣಿಸುವ ಮೈದಾನು

CC-0. Jangamwadi Math Collection. Digitized by eGangotri

ಗಳೂ, ಅವುಗಳ ಮುಂದಿರುವ ಚಿಕ್ಕದೊಂದು ಗುಡಿಸಿಲಿನಿಂದ ಹೊರಡುವ ಹೊಗೆಯ ಸುರಳಿಗಳೂ ಮನಸ್ಸಿನಲ್ಲಿ ಎಂಥ ಶಾಂತಭಾವವನ್ನು ಪ್ರೇರಿಸುವುದಿಲ್ಲ. ಇವನ್ನು— ಉಬ್ಬಿ ಬರುವ ಅಲೆಗಳು, ಬಿರುಗಾಳಿಗೆ ಸಿಲುಕಿದ ಮೋಡಗಳು, ಬಂಡೆಗಲ್ಲುಗಳ ಹರಕುಮುರುಕು ಅಂಚುಗಳು, ಬಿರುಗಾಳಿಯ ಬಡಿತದಿಂದ ತಿರುಪಿ ತಿರುಪಿ ಮುರಿಯಲ್ಪಟ್ಟ ಮರಗಳ ದಿಂಡುಗಳು— ಇವುಗಳೊಡನೆ ಹೋಲಿಸಿರಿ. ಇವು ಎಂಥ ಭಿನ್ನ ಭಾವವನ್ನು ಪ್ರೇರಿಸುವುದಿಲ್ಲ" ೧ ಶಾಂತಿಯ ಬದಲು ಅಶಾಂತತೆಯ ತೆರೆಯೇ ಉಕ್ಕಿ ಬರುವಂತೆ ಕಾಣಿಸುವುದು. ಒಂದು ಚಿತ್ರದ ಯಾವತ್ತು ರೇಖೆಗಳು ಚಿತ್ರದ ಒಂದೇ ದಿಕ್ಕಿಗೆ ಇಳಿಯುವುದಾದರೆ ಆ ಭಾಗಕ್ಕೆ ಕುಸಿದಂತೆ ಕಾಣಿಸುವುದು. ಇದನ್ನು ತಪ್ಪಿಸಲು ನಾವು ಆ ಭಾಗದ ಮುಂದೆ ನೇರವಾಗಿ ನಿಂತ ಮರ, ದಿನ್ನೆ, ಏನಿಲ್ಲದಿದ್ದರೆ ಪ್ರತಿರೇಖೆಯನ್ನು ಕೊಡಬಲ್ಲ ಒಂದು ಮುಗಿಲನ್ನಾದರೂ ಸೇರಿಕೊಂಡು ಸಮತೋಲಗೊಳಿಸಬೇಕು. ಈ ಕಾರಣದಿಂದಲೇ, ಬಹಿರಂಗದ ದೃಶ್ಯಗಳಲ್ಲಿ ದಿಗಂತವು ತಳದಿಂದ ⅔ ಅಂಶದಷ್ಟು ಮೇಲಕ್ಕಿರುವುದು ಲೇಸು.

ದೃಶ್ಯಾವಳಿಯೊಂದರಲ್ಲಿ ಚಿಕ್ಕಪುಟ್ಟ ವಸ್ತುಗಳು ಸಹ ಭಾವೋತ್ಪಾದಕವಾಗಿರಬೇಕು. ಸೊಗಸಾದ ಅರಮನೆಗಳನ್ನು ತೋರಿಸುವುದರಿಂದ ಚಿತ್ರವು ಪ್ರಸಿದ್ಧವಾಗಲಾರದು. ಪ್ರಭಾತ ಚಿತ್ರಮಂಡಲದವರು ತಮ್ಮ "ಖೂನೀ ಖಂಜೀರ್" ಎಂಬ ಚಿತ್ರದಲ್ಲಿ, ೩೦ ಅಡಿ ಎತ್ತರದ ಸಂಯುಕ್ತಗಳನ್ನು ಉಪಯೋಗಿಸಿರುವರು. ಅದರ ಮುಂದೆ ಮನುಷ್ಯನು ನಿಂತರೆ, ಕೇವಲ ಚಿಕ್ಕವನಾಗಿ ಕಾಣಿಸುವನು. ಈ ರೀತಿ ಪಶ್ಚಾದ್ಭೂಮಿಯು (Back ground) ಮಾನವನ ಅಲ್ಪತೆ ಇಲ್ಲವೆ ಕ್ಷುದ್ರತೆಯನ್ನು ಪ್ರತಿಪಾದಿಸುವಂತೆ ಕಾಣುವುದು. ಆದರೆ ಚಿತ್ರದ ಅಂಶವು ಕೇವಲ ಮಾನವೀಯ ಸಾಹಸವನ್ನು ಪ್ರತಿಪಾದಿಸುವಂಥದು.

ಪುಸ್ತಕವನ್ನೋದಿದವನೇ ಜಾಣನಲ್ಲ, ಓದಿ ತಿಳಿದು, ಅದನ್ನು ವ್ಯವಹಾರಕ್ಕೆ ತಕ್ಕರೀತಿಯಲ್ಲಿ ತರಬಲ್ಲವನು ಜಾಣನು.

"ಕೆಬಿನೆಟ್ ಡಾ. ಕೆಲಿಗರಿ" ಎಂಬ ಚಿತ್ರವನ್ನು ವರ್ಣಿಸುವಾಗ ಪಾಲರೋತನು ಈ ಮಾತುಗಳನ್ನು ಬರೆದಿರುವನು: "ನೆಲದ ಮೇಲೆ ಬರೆದಿರುವ ರೇಖೆಗಳು, ಅದರಲ್ಲೂ ಪ್ರಾಮುಖ್ಯವಾಗಿ ಸರಳರೇಖೆಗಳು, ಕಥಾಕೇಂದ್ರವೆನಿಸುವ ಒಡವೆಗಳ ಕಡೆಗೆ ಹರಿಯುವುವು. ಸೆರೆಮನೆಯ ಗೋಡೆಗಳಲ್ಲಿ ಎತ್ತರವಾದ ಲಂಬರೇಖೆಗಳು ಚಿತ್ರಿತವಾಗಿದ್ದು, ಬಂದಿಯ ಹತಾಶಜೀವನವನ್ನು ಸೂಚಿಸುತ್ತಿದ್ದುವು. ಆವನು ಕಾಲುಚಾಚಿ ಕುಳಿತ ದಿಕ್ಕನ್ನೇ ನೆಲದ ರೇಖೆಗಳೆಲ್ಲ ತೋರಿಸುವಂತಿದ್ದುವು." ಇದರಿಂದ ಆ ಚಿತ್ರದ ದೃಶ್ಯಾವಳಿಯ ಅರ್ಥಗರ್ಭಿತ ಸೂಕ್ಷ್ಮಯೋಜನೆಯನ್ನು ತಿಳಿಯಬಹುದು. ಅದರ ಸ್ಥಿರಚಿತ್ರಗಳೂ ಸಹ ಇಷ್ಟೇ ಭಾವಗರ್ಭಿತವಾಗಿವೆ.

ಸ್ಟ್ರಾನ್ ಹೈಮ್‌ನ "ಲೋಭ" (Greed) ಎಂಬ ಚಿತ್ರದಲ್ಲಿ ಬಡತನದ ಪ್ರಸಂಗಗಳಿವೆ. ಅಂಥ ದೃಶ್ಯಗಳಲ್ಲೆಲ್ಲ ನಿರುತ್ಸಾಹಕಾರಕವಾದ ವಸ್ತುಗಳನ್ನೇ ನಾವು ಕಾಣುವೆವು. ಕಸ, ಕೊಳೆಗಳನ್ನು ಚದರಿಸುವುದರಿಂದ ಲೋಭ, ದಾರಿದ್ರ್ಯ ಮೊದಲಾದ ಭಾವಗಳು ಹುಟ್ಟುವುವು. ಒಂದು ಚೆಲುವಿನ ಕೊಟಡಿಯಲ್ಲಿ ಮಿರುಗುವ ಒಡವೆಗಳನ್ನಿರಿಸಿ, ಮಿರುಗುವ ಮಂಚವನ್ನು ಹಾಕಿ, ಅದರ ಮೇಲೆ ಜರತಾರೀ ಬಟ್ಟೆಗಳನ್ನು ಹರಡಿ, ಒಬ್ಬನನ್ನು ಅದರ ಮೇಲೆ ಮಲಗಿಸಿ, ಅವನ ಮುಖವನ್ನು ಅಧಿಕ ಬೆಳಕಿನಿಂದ ಬೆಳಗುತ್ತಿದ್ದರೆ— ಆ ಚಿತ್ರವನ್ನು ಗಮನಿಸಿದೊಡನೆಯೇ ಅವನ ವಿಲಾಸದ ಸ್ಮರಣೆಯು ನಮಗುಂಟಾಗುವುದಿಲ್ಲವೇ? ಅದರ ಬದಲು ಮುರುಕುಮನೆ, ಗುಡಿಸಿಲಿನ ನೆಲ, ಎಣ್ಣೆಯಿಲ್ಲದ ದೀಪ, ತೂಗುತ್ತಿರುವ ಚಿಂದಿ ಅರಿವೆಗಳು, ಕತ್ತಲು— ಇವೆಲ್ಲವುಗಳು ಸೇರಿರುವ ಇನ್ನೊಂದು ಚಿತ್ರವನ್ನು ಕಂಡರೆ ಅದಕ್ಕೆ ವಿರುದ್ಧವಾದ ಭಾವನೆಯುಂಟಾಗುವುದಿಲ್ಲವೆ?

'ಪೊಟೆಮ್ಕಿನ್ ಯುದ್ಧನಾವೆ' —(Battle-ship of Potemkin ಈ ಚಿತ್ರದಲ್ಲಿ ಎಲ್ಲೆಲ್ಲಿಯೂ ಕಾಣಿಸುವ ಜನಸ್ತೋಮ, ಸೈನಿಕರ ಸಾಲುಗಳು, ಹಡುಗುಗಳ ದೊಡ್ಡ ದೊಡ್ಡ ಹಾಯಿಗಳು, ಸಮುದ್ರದ ವಿಶಾಲವಾದ ತೆರೆಗಳು— ಇವೆಲ್ಲ ಭೀತಿಕಾರಕವಾಗಿವೆಯಂತೆ. ಲಾ ಮಿಸರೆಬಲ್ಸ್ ಚಿತ್ರದಲ್ಲಿ ಜೀನ ವಾಲ್ಜನನು, ಒಬ್ಬ ಬಾಲಕನ ನಾಣ್ಯವನ್ನು ಅರಿಯದೆ ಅಪಹರಿಸಿ, ಅದನ್ನವನಿಗೆ ಮರಳಿ ಸಲ್ಲಿಸಲು ಓಡುವಾಗ ಅವನು ದೊರೆಯದಿರಲು, ಅವನ ಮನಸ್ಸಾಕ್ಷಿಯ ತಳಮಳವನ್ನು ಚಿತ್ರದಲ್ಲಿ ನಡುನಡುವೆ ಹಾಯಿಸಿದ,

೧. Cinematographic annual 1930. P. 291.

CC-0. Jangamwadi Math Collection. Digitized by eGangotri

ಬಿರುಗಾಳಿಗೆ ಕಲ್ಲೋಲವಾಗುತ್ತಿರುವ ಕರಿಮೋಡಗಳ ಸಮೂಹವು ಎಷ್ಟು ಮನಸನಾಟುವಂತೆ ಮಾಡುವುದಿಲ್ಲ? 'ದೈವಿಕನಾರಿ' (Divine woman) ಎಂಬ ಚಿತ್ರದಲ್ಲಿ ಹೆಮಿಲ್ಟನಳು, ನೆಲ್ಸನನನ್ನು ಯುದ್ಧಕ್ಕೆ ಕಳುಹಿಸಿ, ಮನೋವ್ಯಥೆಯಿಂದ ಮೃತ್ಯುಸಮ್ಮುಖದಲ್ಲಿ ಮಲಗಿರುವ ಸಮಯದಲ್ಲಿ, ತೋರಿಸಿರುವ ಬಿರುಗಾಳಿಯ ಬಡಿತಕ್ಕೆ ಸಿಕ್ಕಿ ಬಡಿದಾಡುವ ಮರಗಳ ಚಿತ್ರವು ಎಷ್ಟು ಉನ್ಮೇಷಕವಾಗಿಲ್ಲ? 'ದಿ ವಿಂಡ್' ಎಂಬ ಚಿತ್ರದಲ್ಲಿ ಪದೇ ಪದೇ ಬೀಸುತ್ತಿರುವ ಬಿರುಗಾಳಿಯು ನಾಯಕಿಯ ಅಂತರಂಗದ ಪ್ರತಿಬಿಂಬವೇ ಆಗಿತ್ತು.

ಈ ರೀತಿಯಲ್ಲಿ, ಪ್ರತ್ಯಕ್ಷ ದೃಶ್ಯಗಳಲ್ಲಿ ಭಿನ್ನ ಭಿನ್ನ ವಸ್ತುಗಳ ಪ್ರಬಂಧದಿಂದಲೂ, ಸಾಂಕೇತಿಕ ಇಲ್ಲವೆ ಸಂಜ್ಞಾರ್ಥ ವಸ್ತುಗಳನ್ನು ಸೇರಿಸುವುದರಿಂದಲೂ, ಚಿತ್ರಕ್ಕೆ ತಕ್ಕ ವಾತಾವರಣವನ್ನು ಕಲ್ಪಿಸಲು ಒರುವುದು.

ಕಿಂಗ್ ವಿಡರ್‌ನ "ದಿ ಬಿಗ್ ಪರೇಡ್" ಎಂಬ ಚಿತ್ರದಲ್ಲಿನ- "ಗಡಬಡಿಸಿ ಸಾಗುವ ಒಂಡಿಗಳು, ಅಲ್ಲಲ್ಲಿ ಬಿದ್ದ ವಿಮಾನದ ತುಂಡುಗಳು, ಕಲ್ಲುರಾಶಿಯು ಮಾಯವಾಗುತ್ತ ಹೋದಂತೆ ಕಾಣಿಸುತ್ತ ಬರುವ ಕಾಡುಗಳು-" ಯುದ್ಧದ ಭೀಕರಸ್ವರೂಪವನ್ನು ಚೆನ್ನಾಗಿ ಸೂಚಿಸುವುವು.

"ವಿಲಾಸ-ದಾರಿದ್ರ್ಯ" ಎಂಬೊಂದು ಚಿತ್ರವನ್ನು ನಿರ್ಮಿಸಬೇಕೆಂದು ತಿಳಿಯಿರಿ; ಆಗ ಅವುಗಳ ಪರಸ್ಪರ ವೈಷಮ್ಯವನ್ನು ಆಯಾಯ ಪ್ರಸಂಗಗಳಲ್ಲಿ ಉಪಯೋಗಿಸುವ ಸಲಕರಣೆಗಳಿಂದ ತೋರಿಸಬಹುದು. ವಿಶಾಲ ಪ್ರದೇಶ-ಇಕ್ಕಟ್ಟಾದ ನೆಲ, ಅಧಿಕತೇಜ-ಅಧಿಕ ಛಾಯೆ, ಚಟುವಟಿಕೆಯ ಲಘುವಾದ ನಡಿಗೆ-ನಿರುತ್ಸಾಹದ ಮೆಲ್ಲಡಿಗೆ ಈ ಆ ವೈಷಮ್ಯವನ್ನು ತೋರಿಸುವುದಿಲ್ಲವೇ? ನಮ್ಮ ಮನಸ್ಸಿಗೆ ನವರಸಗಳ ಬೋಧೆಯನ್ನುಂಟು ಮಾಡುವ ಅನೇಕವಸ್ತುಗಳಿವೆ. ಅಂಥವುಗಳನ್ನು ಸಾಂಕೇತಿಕವಾಗಿಯಾಗಲಿ, ಸಹಾಯಕವಾಗಿಯಾಗಲಿ ತೆಗೆದುಕೊಂಡು, ಚಿತ್ರಸೃಷ್ಟಿಯನ್ನು ಮಾಡುವುದರಿಂದ ಅತಿ ಹೆಚ್ಚಿನ ಭಾವೋದ್ರೇಕವಾಗುವುದು. "ದಿ ಲಾಫಿಂಗ್ ಪೇಸ್" ಎಂಬ ಚಿತ್ರದಲ್ಲಿ, ಮಕ್ಕಳನ್ನು ತ್ಯಜಿಸುವ ಪ್ರಸಂಗದಲ್ಲಿ ತೋರಿಸುವ ಮಂಜಿನ ಮುಸುಕು 'ಮರಣ'ದ ಭೀತಿಯನ್ನು ಪ್ರೇರಿಸುವಂತಿಲ್ಲವೆ? ನಿರ್ದೇಶಕನ ಮುಂದೆ ಚಿತ್ರಸೃಷ್ಟಿಗೆ ಅನುಕೂಲವಾದ ಅನಂತಾನಂತ ವಸ್ತುಗಳಿವೆ. ಅವುಗಳ ಉಪಯೋಗವನ್ನು ಮಾಡಿಕೊಳ್ಳಲು ಸಾಕಷ್ಟು ಬಿಡುಗಳು ಬೇಕು. ಅದರ ಬದಲು ತಾನು ವ್ಯಯಿಸಿದ ಹಣ ಇಲ್ಲವೆ ಪಟಲದ ಪರಿಣಾಮವನ್ನು ಹೊಂದಿ, ಚಿತ್ರದ ಯೋಗ್ಯತೆಯು ನೆಲಸಿದೆಯೆಂದು ತಿಳಿದರೆ ಕಲೆಯ ನಾಶವೇ ಸರಿ.

## ಜಸ ಬೇಡ

(ದಿನಕರ್ ದೇಸಾಯಿ)

೧

ಜಸ ಬೇಡ; ರಸವಿರಲಿ
ಹಿರಿದೇಕೆ? ಕಿರಿದಿರಲಿ
ಕಡಲ ಬುಡದೊಳಗಿರುವ ಮುತ್ತಿನಂತೆ.

೨

ಹೊರಗೇಕೆ? ಅಡಗಿರಲಿ
ಕಾರಣವು ತಾನಿರಲಿ
ಕುಸುಮಹಾರದೊಳಿರುವ ದಾರದಂತೆ.

೩

ಒಳಗೆ ತಾ ಸೇರುವುದು
ಕೃತಿಯು ಹೊರದೋರುವುದು
ಭೂಮಿಯಲಿ ಹೂತಿರುವ ಬೀಜದಂತೆ.

CC-0. Jangamwadi Math Collection. Digitized by eGangotri

# ಕಳೆದ ಚುಕ್ಕಿಗಳು*

ಅನುವಾದಕರು:—ಶ್ರೀ. ಜಿ. ಪಿ. ರಾಜರತ್ನಂ, ಎಂ. ಎ., ಮೈಸೂರು

ಒಂದು ಸಾಸೆಟ್ಟಿನ ಐದನೆಯ ಪಾದವನ್ನು ನಾನು ಮುಗಿಸುತ್ತಿರುವಾಗ ನನ್ನ ಜವಾನನು ಬಂದು 'ಸ್ವಾಮಿಾ! ತಮ್ಮೊಡನೆ ಮಾತನಾಡಲು ಬಯಸಿ ಇಬ್ಬರು ದೇವ ದೂತರು ಕಾದಿರುವರು' ಎಂದ.

"ತಮ್ಮ 'ಕಾರ್ಡು'ಗಳನ್ನು ಕೊಟ್ಟಿರುವರೊ?" ಎಂದೆ.

"ಇದೊ ಇಲ್ಲಿವೆ, ಸ್ವಾಮಿ."

ಒಂದರ ಮೇಲೆ 'ಹೆಲಿಯಲ್' ಎಂದಿತ್ತು. ಮತ್ತೊಂದರ ಮೇಲೆ 'ಜೇಫೇಲ್' ಎಂದಿತ್ತು. ಇಬ್ಬರು ದೇವ ದೂತರು! ಅನುಮಾನವೇ ಇಲ್ಲ!

"ಒಳಗೆ ಬರಲಿ" ಎಂದೆ.

ಆ ಘನವಾದ ಆಗಂತುಕರನ್ನು ನಾನು ಸಂತೋಷವಿಲ್ಲದೆ ಬರಮಾಡಿಕೊಳ್ಳಲಿಲ್ಲ. ಏಳು ಗರಿಗಳ ಮಹಾ ರೆಕ್ಕೆಗಳೆರಡು ಅವರಿಗಿದ್ದುವು. ಶಕ್ರಕಾರ್ಮುಕದ ಸಪ್ತವರ್ಣಗಳೂ ಉಷೆಯ ಮಂಜಿನಂತೆ ಹಗುರವಾದ ಆ ರೆಕ್ಕೆಗಳಲ್ಲಿ ಬಸಿದು ಬರುತ್ತಿದ್ದುವು. ಪಾರದರ್ಶಕವಾದ ಐಕಿಲಿನಲ್ಲಿ ನಸುಗೆಂಪು ಬೆರೆದಂತೆ ಅವರ ದೇಹಗಳಿದ್ದುವು. ಕೈಬೀಸಿ, ಅವರನ್ನು ಕುಳ್ಳಿರಬಯಸಿ, ಅವರು ನನ್ನನ್ನು ದರ್ಶಿಸುವ ನಿಮಿತ್ತವೇನೆಂದು ಕೇಳಿದೆನು.

"ನಾವು ಸಂಕ್ಷೇಪವಾಗಿ ನುಡಿವೆವು. ಹದಿನಾರು ವರುಷಗಳ ಹಿಂದೆ, ಜೂಲೈ ತಿಂಗಳ ರಮಣೀಯ ರಾತ್ರಿಯೊಂದು, ಆಕಾಶದ ಹಸುರು ಕಂಬಳಿಯ ಮೇಲೆ ಜೇಫೇಲನೂ ನಾನೂ 'ಬಿಲಿಯರ್ಡ್ಸ್' ಆಡುತ್ತಿದ್ದೆವು" ಎಂದು ಹೆಲಿಯಲನೆಂದ.

ನಾನು ನಡುವೆ ಬಾಯಿಕ್ಕಿ "ಕ್ಷಮಿಸಿ! ಆಕಾಶವು ನೀಲಿಯೆಂದಿದ್ದೆ." ಎಂದೆ.

"ಆಕಾಶದ ಅನಂತದಲ್ಲಿ ಹಲವು ಭಾಗಗಳು ನೀಲಿಯಾಗಿವೆ. ಆದರೆ ಪಟ್ಟಣಗಳ ಮತ್ತು ಪರ್ಸಿಯಾ ದೇಶದ ಮೇಲಿನ ಭಾಗಗಳ ವರ್ಣವು ಹರಿತವಾಗಿದ್ದು ಅವು ಕಣ್ಣಿಗೆ ಒಪ್ಪುತ್ತವೆ."

ನಾನು ನುಡಿಯಲಿಲ್ಲ,

ಹೆಲಿಯಲನು ಮುಂದೆ ಹೇಳಿದ:

"ನಮಗೆ ಕಂಡುಬಂದುದರಲ್ಲಿ ಅತ್ಯುತ್ತಮವಾದ ನಕ್ಷತ್ರಗಳನ್ನು ಚಂಡಿನಂತೆ ಇಟ್ಟುಕೊಂಡೆವು."

"'ಕ್ಯೂ'ಗಳಿಗೆ?"

"ಧೂಮಕೇತುವಿನ 'ಕ್ಯೂ' (ಬಾಲ)ಗಳನ್ನು ತೆಗೆದುಕೊಂಡೆವು. ಆಟವು ಸಹಜವಾಗಿಯೇ ಚಿತ್ತಾಕರ್ಷಕವಾಗಿತ್ತು. ನಾನೇ ಗೆಲ್ಲುವ ಹಾಗಿತ್ತು; ಆ ವೇಳೆಗೆ ನಾನು ತಳ್ಳಿದುದು ಕೊಂಚ ಹೆಚ್ಚಾಗಿ, ಎರಡು ಚಂಡುಗಳು ಅಂಚನ್ನು ದಾಟಿದುವು."

"ಯಾವ ಅಂಚನ್ನು?"

"ದಿಗಂತದ ಅಂಚನ್ನು. ನಮ್ಮ ದುರದೃಷ್ಟ. ಆಕಾಶದಲ್ಲಿ ಎರಡು ಚುಕ್ಕಿಗಳು ಕಡಿಮೆಯಾಗುವುದೆಂದರೆ ಬೇಕಾಬಿಟ್ಟಿಯಲ್ಲ. ಕಳೆದ ಚುಕ್ಕಿಗಳನ್ನು ತಂದು ಪುನಃ ಕೂಡಿಸಿದ ಹೊರತು ನಾವು ಸ್ವರ್ಗದ ಸುಖಗಳನ್ನು ನವೆಯಕೂಡದೆಂದು ಸ್ವರ್ಗದ ಸಾಮ್ರಾಟನು ನಮಗೆ ಎಚ್ಚರಿಸಿದನು. ನಕ್ಷತ್ರಗಳು ಭೂಮಿಗೆ ಬಿದ್ದಂತಿತ್ತು. ಅದಕ್ಕಾಗಿ ನಾವು ಭೂಮಿಯ ಮೇಲೆ ಕೆಳಗುಗಳಲ್ಲಿ ಹದಿನಾರು ವರುಷಗಳು ಹೇಗೆ ಹುಡುಕಿದೆವೆಂಬುದನ್ನು ನೀನು ಊಹಿಸಬಲ್ಲೆ. ಆದರೆ ನಮ್ಮ ಪ್ರಯತ್ನಗಳೆಲ್ಲವೂ ನಿಷ್ಫಲವಾದುವು. ಕಡೆಗೆ, ನಾವು ಭ್ರಷ್ಟರಾದೆವೆಂದು ತೆಪ್ಪಗಿರ

* 'Catulle Mendes' ಎಂಬ ಫ್ರೆಂಚ್ ಬರೆಹಗಾರರ 'The lost stars' ಎಂಬ ಕತೆಯ ಸರಳಾನುವಾದವಿದು. ಸ್ವಲ್ಪ ಕಾಲದ ಹಿಂದೆ ಪ್ರಕಟಿತವಾದ ನನ್ನ 'ನೆನಪು' ಎಂಬ ಭಾವರೂಪಕಕ್ಕೆ ಈ ಕತೆಯ ಆನಿಕೆ ಇತ್ತೆಂಬುದು ಅಂದು ಅಚ್ಚಿನಿಂದ ಜಗುಳಿದ್ದರೂ, ಇಂದು ಅದನ್ನೇ ನುಡಿದರೆ ಅನವಸರವೆನಿಸಲಾರದು—ರಾಜರತ್ನಂ.

CC-0. Jangamwadi Math Collection. Digitized by eGangotri

ಬೇಕೆಂದು ಇರುವ ವೇಳೆಗೆ, ನಿನ್ನ ಪ್ರೇಯಸಿಯಾದ ಯುವತಿಯ ಅನನ್ಯಸಾಮಾನ್ಯವಾದ ಕಂಗಳನ್ನು ಕೇಳಿ ಬಂದೆವು. ನಾವು ಕೇಳಿದುದರಲ್ಲಿ ಅವಳ ಕಣ್ಣುಗಳಲ್ಲಿ ಪಾರ್ಥಿವನಯನಗಳಿಗೆ ಬದಲು ನಮ್ಮ ಅಪಾರ್ಥಿವ ಜ್ಯೋತಿಗಳು ಇರುವುವೆಂದು ತಿಳಿಯಿತು. ಅವಳು ದಯಯಿಟ್ಟು ಅವುಗಳನ್ನು ನಮಗೆ ಹಿಂದಿರುಗಿ ಕೊಟ್ಟಾಳೊ!"

ನನಗೆ ಕಕ್ಕಬಿಕ್ಕಾಯಿತು. ನನ್ನ ಮನದನ್ನೆಯ ಕಣ್ಣುಗಳನ್ನು ಯಾರಾದರೂ ತೆಗೆದುಕೊಳ್ಳಬಹುದೆಂಬ ಯೋಚನೆಯು ನನ್ನನ್ನು ತಳಮಳಿಸುವ ಹಾಗೆ ಮಾಡಿತು. ಆದರೆ ಪದಚ್ಯುತರಾದ ದೇವತೆಗಳನ್ನು ಸ್ವಸ್ಥಾನಕ್ಕೆ ಸೇರಿಸುವುದು ನನ್ನ ಕೈಲಿತ್ತು. 'ಮೋಡೆಮ್ವಾಯಿಸಲ್' -ಮೆಸಾಂಜಳನ್ನು ಕರೆದು ಸಂದರ್ಭವನ್ನು ಅವಳಿಗೆ ವಿಶದಗೊಳಿಸಿದೆ.

ಅವಳಿಗೆ ಆಶ್ಚರ್ಯವಾಗಲಿಲ್ಲ, ಅವಳು ತೊಂದರೆ ಪಡಲಿಲ್ಲ. ಕೆಲವು ಕ್ಷಣಗಳು ಚಿಂತಿಸಿ, ಬಂದವರ ಕಡೆ ತಿರುಗಿ, ಕಣ್ಣುಗಳನ್ನು ಅರಳಿಸಿ "ದೇವದೂತರೆ! ನೋಡಿ, ನಿಮ್ಮ ನಕ್ಷತ್ರಗಳನ್ನು ಇಲ್ಲಿ ಕಾಣುವಿರಾ!" ಎಂದಳು.

ಅವರು ಹತ್ತಿರ ಬಂದರು. ಸೂಕ್ಷ್ಮವಾಗಿ, ಅವಳ ತಿಳಿಯಾದ ಕಣ್ಣುಗಳನ್ನು ಪರೀಕ್ಷಿಸಿದರು. ಕೆಲವು ಕ್ಷಣಗಳು ಪಿಸುಗುಟ್ಟಿದರು—ಅಭಿಪ್ರಾಯಗಳನ್ನು ಬದಲಾಯಿಸಿಕೊಳ್ಳುವ ನ್ಯಾಯಾಧೀಶರಂತೆ. ಆ ಮೇಲೆ "ಅಲ್ಲ. ಹದಿನಾರು ವರುಷಗಳ ಕೆಳಗೆ ಮಾಯವಾದ ಬೆಳಕುಗಳು ಇವಲ್ಲ. ನಮ್ಮವು ಜೂಲೈ ತಿಂಗಳಲ್ಲಿ ಅಷ್ಟು ಪ್ರಕಾಶಿಸುತ್ತಿದ್ದರೂ, ಅವುಗಳಿಗೆ ಇಷ್ಟು ಹೊಳಪಾಗಲಿ ಪ್ರಭೆಯಾಗಲಿ ಇರಲಿಲ್ಲ" ಎಂದು ಹೆಲಿಯುಲನು ಹೇಳಿದನು.

ಅವರು ದುಃಖಭಾರಾಕ್ರಾಂತರಾಗಿ ಹೊರಟರು. ನನ್ನ ಪ್ರಿಯೆಯ ಕಣ್ಣುಗಳನ್ನು ಅವರು ತೆಗೆಯಲಿಲ್ಲವೆಂದು ನನಗೆ ಹರುಷವಾದರೂ ಅವರ ಸ್ಥಿತಿಯನ್ನು ಕಂಡು 'ಅಯ್ಯೋ' ಎನ್ನಿಸಿತು.

ಇತ್ತ ಮೆಸಾಂಜಳು ನಗುವನ್ನು ಸಿಡಿಸಿದಳು.

"ಅವರಿಗೆ ಚೆನ್ನಾಗಿ ಮೋಸಮಾಡಿದೆನಲ್ಲವೆ! ಹೌದು—ನಾನು ಹುಟ್ಟಿದ ಸ್ವಲ್ಪ ಕಾಲದಲ್ಲಿಯೆ ನನ್ನ ರೆಪ್ಪೆಗಳ ನಡುವೆ ಎರಡು ನಕ್ಷತ್ರಗಳು ತೆರೆದ ಕಿಟಿಕಿಯಿಂದ ಬಿದ್ದುವೆಂದು ನನ್ನ ತಾಯಿಯು ನೂರಾವರ್ತಿ ಹೇಳಿದ್ದಾಳೆ. ಆದರೆ ಆ ದೇವದೂತರು ನನ್ನನ್ನು ನೋಡುತ್ತಿದ್ದಾಗ, ನೀನು ನನ್ನ ತುಟಿಗಳಿಗೆ ಮೊದಲು ಚುಂಬನವಿತ್ತ ಕಾಲವನ್ನು ನೆನೆಯುತ್ತಿದ್ದೆ. ಆ ನೆನಪಿನ ಆನಂದವು ನನ್ನ ಕಣ್ಣುಗಳಿಗೆ, ಮುನ್ನಿನ ನಕ್ಷತ್ರಗಳನ್ನು ಮಾತ್ರವೇ ಅಲ್ಲ, ಸ್ವರ್ಗೀಯ ಪ್ರಭೆಗಳಲ್ಲಿ ಎಲ್ಲವನ್ನೂ ಮೀರಿಸಿದ ಬೆಳಕನ್ನು ತರುವುದೆಂದು ಹಾಗೆ ಮಾಡಿದೆನು" ಎಂದಳು.

CC-0. Jangamwadi Math Collection. Digitized by eGangotri

# ಭರತಖಂಡದ ಬಡತನ

ಲೇಖಕರು:— ಶ್ರೀ. ಕೆ. ವಿ. ಉಪಾಧ್ಯ, D. Com [C. M. I.]

ಅತಿಶಯ ಫಲದ್ರೂಪವಾದಂತಹ ಹಿಂದುಸ್ಥಾನಕ್ಕೆ ಈಗ ದುಃಸ್ಥಿತಿಯು ಪ್ರಾಪ್ತವಾಗಿದ್ದುದನ್ನು ನೋಡಲಾಗಿ ಯಾವ ಹಿಂದಪುತ್ರನಿಗೆ ಖೇದವಾಗಲಿಕ್ಕಿಲ್ಲ! ಹಿಂದುಸ್ಥಾನದಲ್ಲಿ ಹಿಂದೆ ಬಂಗಾರದ ಹೊಗೆಯು ಹಾಯುತ್ತಿದ್ದಿತಂತೆ ಆದರೆ ಇಂದು ನೋಡಿದಲ್ಲೆಲ್ಲ ಕೆಲಸವಿಲ್ಲದೆ ತಿರುಗಾಡುವಂತಹ ಜನರೇ ಕಾಣಿಸುವರು. ಹೀಗಾಗಲಿಕ್ಕೆ ಎಷ್ಟೋ ಕಾರಣಗಳುಂಟು,

ಮೊದಲು ಹಿಂದುಸ್ಥಾನವು ಕೈಗಾರಿಕೆಯಲ್ಲಿಯೂ, ಕಲಾಕೌಶಲ್ಯಗಳಲ್ಲಿಯೂ ಪ್ರಸಿದ್ಧಿಯನ್ನು ಹೊಂದಿತ್ತು. ಅಲ್ಲಲ್ಲಿ ರಾಜರ ಆಶ್ರಯದಲ್ಲಿ ಶಿಲ್ಪಿಗರೂ, ನಾನಾವಿಧಕಲೆಗಳಲ್ಲಿ ನೈಪುಣ್ಯವನ್ನು ಹೊಂದಿದ ಜನರೂ, ಬೇರೆ ಬೇರೆ ರಾಜಧಾನಿಗಳಲ್ಲಿ ತುಂಬಿ ತುಳುಕುತ್ತಿದ್ದರು. ಅವರ ಜಾಣತನದ ಬೆಳಕು ಜಗತ್ತಿನಲ್ಲೆಲ್ಲ ಬೆಳಗಿತ್ತು. ಹಿಂದುಸ್ಥಾನದಿಂದ ಜಿನುಗಾದ ವಸ್ತ್ರ, ಕೈಗಾರಿಕೆಯ ಒಡವೆ ಮುಂತಾದುವುಗಳು ಇಂಗ್ಲಂಡೇ ಮುಂತಾದ ಪಾಶ್ಚಿಮಾತ್ಯ ದೇಶಗಳಿಗೆ ಹೋಗುತ್ತಿದ್ದುವು. ಆದರೆ ಬ್ರಿಟಿಷರ ಆಳಿಕೆಯು ಪ್ರಾರಂಭವಾದಂದಿನಿಂದ ನಮ್ಮಲ್ಲಿಯ ಪ್ರಾಚೀನಕಲಾಕೌಶಲ್ಯಗಳು ಕುಗ್ಗುತ್ತ ನಡೆದುವೆಂಬುದು ಎಲ್ಲರೂ ಕಂಡುಂಡಮಾತು. ಯಂತ್ರಸಾಮಗ್ರಿಗಳು ಪ್ರಸಾರವಾಗುತ್ತ ನಡೆದಿರುವುದರಿಂದ, ನಮ್ಮ ಕಲೆ ಕೈಗಾರಿಕೆಗಳು ತಮ್ಮ ತಲೆಯನ್ನು ಮೇಲಕ್ಕೆತ್ತಲಾರವು. ಜನರ ಈ ಎಲ್ಲ ಉದ್ಯೋಗಗಳು ನಷ್ಟವಾದುದರಿಂದ, ಒಕ್ಕಲತನವೊಂದೇ ಹೊಟ್ಟೆಹೊರಕೊಳ್ಳುವ ಸಾಧನವಾಗಿ ಉಳಿತಿದೆ. ಸುಮಾರು ನೂರಕ್ಕೆ ೭೫ರಂತೆ ಜನರು— ಅಪ್ರತ್ಯಕ್ಷವಾಗಿಯೊ ಪ್ರತ್ಯಕ್ಷವಾಗಿಯೊ— ಒಕ್ಕಲತನದ ಮೇಲೆ ಅವಲಂಬಿಸಿರುತ್ತಾರೆ. ಬೆಳೆಯುತ್ತಿರುವ ನಮ್ಮ ಜನಸಂಖ್ಯೆಗೆ ಅನ್ಯ ವ್ಯವಸಾಯವನ್ನು ಅನುಸರಿಸಲಿಕ್ಕೆ ಮಾರ್ಗವಿಲ್ಲದುದರಿಂದಲೂ, ಒಕ್ಕಲತನದ ಸಾಮಗ್ರಿಗಳಲ್ಲಿ ಇನ್ನೂ ಸುಧಾರಣೆಗಳು ಆಗಿಲ್ಲವಾದುದರಿಂದಲೂ, ೧೦೦ಕ್ಕೆ ಸುಮಾರು ೯೦ರಂತೆ ಜನರು ಅಜ್ಞಾನಿಗಳಾಗಿದ್ದುದರಿಂದಲೂ (ಕಲಿಯದೆ ಇದ್ದವರು) ಪ್ರತಿಯೊಬ್ಬನ ಸರಾಸರಿ ಉತ್ಪನ್ನವು ಬಹಳೇ ಕಡಿಮೆಯಾಗಿದೆ. ಹಿಂದುಸ್ಥಾನದ ಜನರು ಈ ಬಡತನದ ಸ್ಥಿತಿಗೆ ಬಂದುದಕ್ಕೆ ಬೇರೊಂದು ಕಾರಣವೆಂದರೆ, ಪರಕೀಯರ ಆಳಿಕೆಯೆಂದು ಹೇಳಬಹುದು. ಮೊದಲು ಹಿಂದುಸ್ಥಾನದಲ್ಲಿ ಮೊಗಲ್, ಅಫಗಾನ್ ಮುಂತಾದ ಅನೇಕ ಪರಕೀಯ ರಾಜರು ಆಳಿಹೋದರು. ಆದರೆ ಅವರು ಇಲ್ಲಿಯೇ ವಾಸವಾಗಿದ್ದುದರಿಂದ, ಇಲ್ಲಿಯ ಸಂಪತ್ತು ಇಲ್ಲಿಯೇ ಉಳಿಯುತ್ತಿತ್ತು. ಆದರೆ ಕಂಪನಿ, ಸರಕಾರವು ಬಂದಂದಿನಿಂದ ವ್ಯಾಪಾರವೂ ರಾಜ್ಯಕಾರಭಾರವೂ ಅವರಿಂದಲೇ ನಾಗಿತು. ಕಾರಣ ದುಡ್ಡಿನ ವ್ಯವಹಾರವು ಸಾವಿರಾರು ಮೈಲಿಗಳಾಚೆಗೆ ಹರಿದುಹೋಗುತ್ತಲಿದೆ. ಅದರಿಂದ ಜನರು ದರಿದ್ರರಾಗುತ್ತ ನಡೆದಿದ್ದಾರೆ. ಅದರಲ್ಲಿಯೂ ಒಕ್ಕಲಿಗರ ಗೋಳನ್ನು ಕೇಳಲಾಗಲ್ಲ. ತಕ್ಕ ವೇಳೆಗೆ ಮಳೆಯು ಆಗದೆ ಇರುವುದರಿಂದಲೂ, ಭೂಮಿಯ ಮೇಲೆ ಸರಕಾರೀ ಕರವು ಹೆಚ್ಚಾಗಿರುವುದರಿಂದಲೂ, ಬಹಳ ರೈತರು ನಿರ್ವಾಹವಿಲ್ಲದೆ, ಸಾವುಕಾರರನ್ನು (Money-Lenders) ಆಶ್ರಯಿಸಬೇಕಾಗಿರುವುದರಿಂದಲೂ ಸ್ವಲ್ಪಬಡ್ಡಿಯಿಂದ ಧನಸಾಹಾಯ್ಯವನ್ನು ಪಡೆಯುವ ಅನ್ಯಮಾರ್ಗವಿಲ್ಲದುದರಿಂದಲೂ, ಅವರು ಸಾವುಕಾರರ ಕಡೆಯಿಂದಲೇ ಹೆಚ್ಚಿನ ದರದ ಬಡ್ಡಿ (High rate of interest) ಯನ್ನು ಕೊಟ್ಟು ಧನಸಾಹಾಯ್ಯವನ್ನು ಪಡೆಯಬೇಕಾಗುತ್ತದೆ. ಎಷ್ಟೋ ಸಾರೆ, ರೈತರು ಬಿತ್ತುವ ಮುಂದೆ ಒಯ್ದ ಸಾಲವನ್ನು, ಸಾವುಕಾರರು ಅವರ ಭೂಮಿಗಳ ಬೆಳೆಗಳ ಮೇಲೆಯೇ ತೀರಿಸಿಕೊಳ್ಳುತ್ತಾರೆ. ಇದರಿಂದ ಸಾವುಕಾರರು ಬೇಡಿದ ಧಾರಣೆಯಿಂದಲೇ ರೈತರು ನಿರ್ವಾಹವಿಲ್ಲದೆ ತಮ್ಮ ಬೆಳೆಗಳನ್ನು ಮಾರಬೇಕಾಗುವುದು. ಒಂದು ವೇಳೆ, ಯೋಗ್ಯ ವೇಳೆಯು ಪ್ರಾಪ್ತವಾಗುವವರೆಗೆ ತಡೆದು ಬೆಳೆಗಳನ್ನು ಮಾರಿದರೆ, ರೈತರಿಗೆ ಚೆನ್ನಾಗಿ ಲಾಭವಾಗಬಹುದು. ಆದರೆ ಹಣದ ಕೊರತೆಯಿದ್ದ ಇಂತಹ ಜನರು ತಡೆಯುವುದು ಹೇಗೆ? ನಮ್ಮ

CC-0. Jangamwadi Math Collection. Digitized by eGangotri

ಅವರು ಸಾವುಕಾರರ ಜಾಲದಲ್ಲಿ ಸಿಕ್ಕರೆ, ಅದರಿಂದ ಮುಕ್ತರಾಗುವುದೇ ಕಠಿನ, ಇವರ ಕಾಟವನ್ನು ತಪ್ಪಿಸಿ ಕೊಳ್ಳುವ ಉಪಾಯವೇ ತೋರದಾಗುವುದು.

ಕಾರಣ, ಈಗ ಅಲ್ಲಲ್ಲಿ ಸಹಕಾರತತ್ವವನ್ನು ಅನುಸರಿಸುವ ಸಂಸ್ಥೆಗಳು (Co-operative Societies etc.) ಬೇಕಾಗಿವೆ. ಅದರಿಂದ ಜನರಿಗೆ ತಮ್ಮ ಕಾಲುಗಳ ಮೇಲೆಯೇ ಎದ್ದು ನಿಲ್ಲಲಿಕ್ಕೆ ಬರುವುದು. ಇಂತಹ ಸಂಸ್ಥೆಗಳು ತೀರ ಬಡವನಿಗೆ ಸಹ ಧನದಿಂದ ಸಹಾಯಮಾಡಿ, ಅವನ ವ್ಯಾಪಾರೋದ್ಯೋಗವನ್ನು ಪುಷ್ಟೀಕರಿಸುತ್ತವೆ. ಆದರೆ ಇದರ ಲಾಭವನ್ನು ಪಡೆಯಬೇಕಾದರೆ, ಜನರು ಜಾಣರಾಗಿರಬೇಕು. ನಾಲ್ಕು ಜನರು ಒಕ್ಕಟ್ಟಾಗಿ, ಒಬ್ಬರೊಬ್ಬರಿಗೆ ಸಹಾಯ ಮಾಡಿದರೆ, ಎಲ್ಲರಿಗೂ ಕಲ್ಯಾಣವಾಗುವುದು. ಆದರೆ ಅಜ್ಞಾನವೆಂಬ ಕತ್ತಲೆಯಲ್ಲಿದ್ದ ಜನರಿಗೆ ಇದರ ಉಪಯೋಗವನ್ನು ಮಾಡಿಕೊಳ್ಳಬೇಕಾದರೆ, 'ತಾವು ಒಬ್ಬರಿಗೊಬ್ಬರು ಸಹಾಯ ಮಾಡಿ, ತಮ್ಮ ಸ್ಥಿತಿಯನ್ನು ತಾವೇ ಸುಧಾರಿಸಿಕೊಳ್ಳಬೇಕು' ಎಂಬ ಲವಲವಿಕೆಯೂ ಅದರ ಸಂಬಂಧವಾಗಿ ತಕ್ಕ ಶಿಕ್ಷಣವೂ ಅತ್ಯಂತ ಅವಶ್ಯವಾಗಿವೆ. ಶಿಕ್ಷಣಪ್ರಸಾರವಾಗಲು ಜನರಲ್ಲಿ ಬೇರೂರಿದ್ದ ಅಂಧಶ್ರದ್ಧೆ, ಮೂಢತನಗಳ ರೋಗಗಳು ಹೇಳಹೆಸರಿಲ್ಲದೆ ಹೋಗುವವು. ಬಾಲವಿವಾಹಾದಿ ಮೂಢಪರಂಪರೆಯ ದುಷ್ಪರಿಣಾಮಗಳ ಅರಿವು ಉಂಟಾಗುವುದು. ಒಂದೇ ಸವನೆ ಬೆಳೆಯುತ್ತಿದ್ದ ಈ ಜನಸಂಖ್ಯೆಯನ್ನು ಪೋಷಿಸುವುದಕ್ಕೆ ಬೇರೆ ಯಾವುದೂ ಉತ್ತಮಮಾರ್ಗವಿಲ್ಲದುದರಿಂದ, ಅದರ ಭಾರವೆಲ್ಲ ಒಕ್ಕಲತನದ ಮೇಲೆಯೇ ಬಿದ್ದು ಈಗ ಪಾಲಿಗೆ ಬರುತ್ತಿದ್ದ ಸ್ವಲ್ಪ ಉತ್ಪನ್ನವೂ ಕೂಡ ಹರಿದು ಹಂಚಿಹೋಗುತ್ತದೆ. ಮೇಲಾಗಿ ಬಾಲವಿವಾಹದಿಂದ ದುರ್ಬಲಸಂತತಿಯೇ ಹುಟ್ಟುವುದರಿಂದ ದೇಶಕ್ಕೇನೂ ಕಲ್ಯಾಣವಾಗುವುದಿಲ್ಲ. ಏಕೆಂದರೆ ಸುದೃಢವಾದ ಸಂತತಿಯು ದೇಶದ ಏಳ್ಗೆಯ ಆಧಾರಸ್ತಂಭವಾಗಿರುವುದು. ಪಾಶ್ಚಾತ್ಯದೇಶಕ್ಕಿಂತಲೂ ನಮ್ಮ ದೇಶದಲ್ಲಿಯೇ ಶಿಶುಮರಣದ ಸಂಖ್ಯೆಯು ಹೆಚ್ಚಾಗಿರುವುದರ ಕಾರಣವನ್ನು ಶೋಧಿಸಿದರೆ, ಈ ಮಾತು ಸ್ಪಷ್ಟವಾಗಿ ಕಂಡುಬರುವುದು. ಒಟ್ಟಿನ ಮೇಲೆ ಹಿಂದೂಜನರ, ಅದರಲ್ಲಿಯೂ ರೈತರ ಗೋಳು, ಕೇಳಲಿಕ್ಕೆ ಸಹ ಅಸಹ್ಯವಾಗಿರುತ್ತದೆ. ಧಾರಣೆಗಳು ಇಳಿದುದರಿಂದ ಹೀಗಾಗಿರುವುದೆಂದು ಪ್ರತಿಯೊಬ್ಬನೂ ಹೇಳುವನು. ಆದರೆ ಧಾರಣೆ ಇಳಿಯಲಿಕ್ಕೆ ಕಾರಣವೇನಿರಬಹುದೆಂಬುದನ್ನು ತಿಳಿದುಕೊಳ್ಳಲಿಕ್ಕೆ ಪ್ರಯತ್ನಿಸುವುದಿಲ್ಲ. ಸರಕುಗಳನ್ನು ಕೊಳ್ಳುವವರೂ, ಬೆಳೆಗಳ ಗ್ರಾಹಕರೂ (Consumers) ಸ್ವಲ್ಪಹಣದಲ್ಲಿಯೇ-ಮೊದಲಿನಷ್ಟೇ ಸರಕುಗಳನ್ನು (Commodities) ಕೊಳ್ಳಲಿಕ್ಕೆ ಬರುತ್ತದೆಂದು ಆನಂದಪಡುತ್ತಿರುವರು. ಆದರೆ ದೇವರ ದಯೆಯಿಂದ ಸಮೃದ್ಧವಾದ ಪೈರುಗಳನ್ನು ಪಡೆದರೂ ರೈತರು ಮಾತ್ರ ಬಹಳೇ ಪೇಚಿನಲ್ಲಿರುವರು. ಅವರು ಸರಕಾರದ ತೆರಿಗೆಗಳನ್ನು ಕೊಡಲಿಕ್ಕೆ ಅಸಮರ್ಥರಾಗಿದ್ದಾರೆ. ಸಾವುಕಾರರ ಸಾಲವನ್ನು ತೀರಿಸುವುದು ಬಹಳೇ ದುಸ್ತರವಾಗಿದೆ. ಇಷ್ಟು ಅನರ್ಥಕ್ಕೆಲ್ಲ ಮೂಲಕಾರಣವಾವುದೆಂದರೆ ಹಣವು (Means of money). ಹಣವೆಂಬ ಚಕ್ರದ ವೇಗವು (Quantity of money in circulation) ಸರಕುಗಳ ಬೆಲೆಯನ್ನು ಒಮ್ಮೆಲೆ ಬಹಳ ಅಗ್ಗವಾಗಿಯೂ ಮತ್ತೊಮ್ಮೆ ತುಟ್ಟಿಯನ್ನಾಗಿಯೂ ಮಾಡುವುದು. ರೂಪಾಯಿಯ ಸಂಬಂಧವನ್ನು ಬಂಗಾರದ ಕೂಡ ಹಚ್ಚಿದ್ದರಿಂದ ಸರಕುಗಳ ಧಾರಣೆಗಳಲ್ಲಿ ಇಷ್ಟು ಬದಲಾವಣೆಗಳು ಆಗುತ್ತವೆ. ರೂಪಾಯಿಯ ಸಂಬಂಧವನ್ನು ಬಂಗಾರದ ಕೂಡ ಹಚ್ಚಿದ್ದರಿಂದ, ಪರದೇಶದವರ ಕೂಡ ವ್ಯಾಪಾರವು ಸುಸೂತ್ರವಾಗಿ ಸಾಗುವುದೇನೊ ನಿಜ; (ಅಂದರೆ ಪರದೇಶದವರ ಕೂಡ ಕೊಡುವ ಮತ್ತು ತಕ್ಕೊಳ್ಳುವ ವ್ಯವಹಾರದಲ್ಲಿ ಬಹಳ ಬದಲಾವಣೆ ಆಗುವುದಿಲ್ಲ Fluctuation in exchange.) ಆದರೆ ಪರದೇಶಗಳ ಸಂಗಡ ಇರುವ ವ್ಯಾಪಾರಕ್ಕಿಂತಲೂ (Foreign trade) ಹಿಂದುಸ್ಥಾನದೊಳಗಿನ ವ್ಯಾಪಾರವೇ (Home trade) ಸುಮಾರು ೧೫ ಮಡಿಗಿಂತ ಮಿಕ್ಕಿದೆ. ರೂಪಾಯಿಯ ಸಂಬಂಧವನ್ನು ಬಂಗಾರಕ್ಕೆ ಜೋಡಿಸಿದ್ದರಿಂದ, ಬಹಳ ಬದಲಾವಣೆಗಳು (Fluctuation in exchange) ಆಗುವುದಿಲ್ಲವಾದುದರಿಂದ ಪರದೇಶದವರ ಕೂಡ ವ್ಯಾಪಾರ ಮಾಡುತ್ತಿದ್ದ ಸ್ವಲ್ಪಜನರಿಗೆ ಮಾತ್ರ (ಇಡಿ ಹಿಂದುಸ್ಥಾನದ ಒಟ್ಟು ಜನಸಂಖ್ಯೆ ಹೋಲಿಸಲಾಗಿ) ಇದರಿಂದ ಲಾಭವು ಆಗಬಹುದು. ಆದರಂತೆ ಹಿಂದುಸ್ಥಾನದಲ್ಲಿ ಗಳಿಸಿದ್ದ ಹಣವನ್ನು ತಮ್ಮ ದೇಶಕ್ಕೆ ಕಳಿಸುವ ಯುರೋಪಿಯನ್ನರಿಗೂ ಇದರಿಂದ ಸಾಕಷ್ಟು ಹಿತವಾಗಬಹುದು. ಆದರೆ ಅದಕ್ಕಿಂತಲೂ ೧೫ ಮಡಿಯಿಂದ ಹೆಚ್ಚಾದ ಅಂತ

CC-0. Jangamwadi Math Collection. Digitized by eGangotri

ತ ವ್ಯಾಪಾರದಲ್ಲಿ ತೊಡಗಿದ ಜನರ ಗತಿ ಏನು? ಯಾಯಿಯ ಸಂಬಂಧವು ಸರಕುಗಳ ಸಂಗಡ (Commodities) ಇರಬೇಕು. ಅಂದರೆ ಧಾರಣೆಗಳಲ್ಲಿ ಬಹಳ ಏರುಪೇರುಗಳು (wild fluctuations) ಆಗುವುದಿಲ್ಲ. ಸರಕುಗಳ ಸಹಾಯ್ಯದಿಂದ ರೂಪಾಯಿಯ ಬೆಲೆಯನ್ನು ಕ್ಕೆ ಗೊತ್ತುಮಾಡಬೇಕೆಂಬುದನ್ನು ನಮ್ಮಲ್ಲಿಯ ಷ್ಟೋ ತಜ್ಞರು ಈ ಮೊದಲೇ ಸೂಚಿಸಿದ್ದಾರೆ. ಪೂರ್ವ ಕಾಲದಿಂದ ಇದೇ ಪದ್ಧತಿಯೇ ಹಿಂದುಸ್ಥಾನದಲ್ಲಿ ನೆಲೆ ನಿಂತಿತ್ತು. ಆದರೆ ಅದರಲ್ಲಿ ಈಗ ಶಾಸ್ತ್ರೋಕ್ತ ಸುಧಾರಣೆಯು ಮಾತ್ರ ಬೇಕು.

ಜನರಲ್ಲಿದ್ದ ಅಲ್ಪಸ್ವಲ್ಪ ಹಣವನ್ನು ಸರಕಾರದವರು ಕ್ಯಾಶ್ ಸರ್ಟಿಫಿಕೇಟಿನ (Cash certificates) ದ್ವಾರ ದಿಂದಲೂ ಪೋಸ್ಟಲ್ ಸೇವ್ಹಿಂಗ್ಸ ಬ್ಯಾಂಕಿನ (Postal Savings Bank) ದ್ವಾರದಿಂದಲೂ ಆಕರ್ಷಿಸಿಕೊಳ್ಳುತ್ತಾರೆ. ಆದರೆ ಈ ಹಣವು ದೇಶದ ಏಳ್ಗೆಗೆ ಎಂದರೆ ವ್ಯಾಪಾರೋದ್ಯೋಗಗಳ ಅಭಿವೃದ್ಧಿಯ ಸಲುವಾಗಿ ಉಪಯೋಗಿಸಲ್ಪಡುವುದಿಲ್ಲ. ಮೂರೂ ಇಲಾಖೆಯ ಮುಖ್ಯ ಬ್ಯಾಂಕುಗಳು (Presidency Banks) ಕೂಡಿ ಸ್ಥಾಪಿತವಾದ ಇಂಪೀರಿಯಲ್ ಬ್ಯಾಂಕು (Imperial Bank of India) ಸರಕಾರದ ಹೇರಳವಾದ ಹಣವನ್ನು ಬಡ್ಡಿಯಿಲ್ಲದೆ ಉಪಯೋಗಿಸುತ್ತಿರುವುದರಿಂದ, ತನ್ನ ವರ್ಚಸ್ಸನ್ನು ಎಲ್ಲ ಕಡೆಗೂ ಪಸರಿಸಲಿಕ್ಕೆ ಸಮರ್ಥವಾಗಿದೆ. ಈಗ ನಾವು ಇಂಗ್ಲಂಡಿನಲ್ಲಿಯ ಬ್ರಿಟಿಷ್ ಸರಕಾರದ ಬ್ಯಾಂಕಿನ ಉದಾಹರಣೆಯನ್ನು ತಕ್ಕೊಳ್ಳುವಾ. ಇಂಗ್ಲಂಡಿನ ಬ್ಯಾಂಕು (Bank of England) ದೇಶಕ್ಕೆ ಆಪತ್ತಿಯು ಬಂದಾಗ ಉಳಿದ ಬ್ಯಾಂಕುಗಳಿಗೆ ಸಹಾಯ ಮಾಡುತ್ತದೆ; ಆದರೆ ನಮ್ಮಲ್ಲಿಯ ಈ ಇಂಪೀರಿಯಲ್ ಬ್ಯಾಂಕು ನಮ್ಮಲ್ಲಿಯ ಉಳಿದ ಬ್ಯಾಂಕುಗಳ ಕೂಡ ಸ್ಪರ್ಧಿಸುತ್ತದೆ. ವ್ಯಾಪಾರೋದ್ಯೋಗಗಳ ಬೆಳವಣಿಗೆಗೂ, ಬ್ಯಾಂಕುಗಳ ಬೆಳವಣಿಗೆಗೂ ನಿಕಟಸಂಬಂಧವಿರುವುದರಿಂದ, ಒಂದರ ಮೇಲೆ ಆಪತ್ತು ಬಂದರೆ, ಮತ್ತೊಂದರ ಮೇಲೆ ಬಂದಂತೆಯೇ ಸರಿ. ಆದುದರಿಂದಲೆ ಸರಕಾರದವರು ಹಿಂದೀ ಜನರ ಸಹಾಯದಿಂದ ಮತ್ತು ಹಿಂದೀ ಜನರ ದುಡ್ಡಿನಿಂದ 'ಇಂಡಸ್ಟ್ರಿಯಲ್ ಬ್ಯಾಂಕ್ಸ್ (Industrial Banks', 'ಕಮರ್ಸಿಯಲ್ ಬ್ಯಾಂಕ್ಸ್ (Commercial Banks)' ಗಳನ್ನು ಸ್ಥಾಪಿಸಿದ್ದಾದರೆ, ವ್ಯಾಪಾರವು ಬೆಳೆದು, ಜನರ ಕಲ್ಯಾಣವಾಗುವುದು.



ಬಂಕಾಪುರದ ಶ್ರೀಶಿವಾನಂದ ಮಹಾರಾಜರ ಅರುವತ್ತೆರಡನೆಯ ವರ್ಧಂತ್ಯುತ್ಸವದ (ಆಷಾಢ. ವ. ೧೪ ಸೋಮವಾರ ತಾ|| ೧-೮-೧೯೩೨) ದಿವಸ ದಾವಣಗೇರಿಯ ಭಕ್ತಜನರು ಹೊರಡಿಸಿದ ಪಲ್ಲಕ್ಕಿಯ ಮೆರವಣಿಗೆ.

CC-0. Jangamwadi Math Collection. Digitized by eGangotri

# ಕುಮಟಗಿಯ ಜಲಮಂದಿರ

ಲೇಖಕರು:— ಶ್ರೀ. ಬಿ. ಪ್ರಲ್ಹಾದರಾಯರು

ವಿಜಾಪುರದ ಪೂರ್ವಕ್ಕೆ ಹಿಪ್ಪರಗಿಯ ಮಾರ್ಗದ ಮೇಲೆ ಸರಾಸರಿ ೧೩ ಮೈಲು ಅಂತರದ ಮೇಲೆ **ಕುಮಟಗಿ** ಎಂಬ ಸಣ್ಣ ಹಳ್ಳಿಯೊಂದುಂಟು. ಅಲ್ಲಿ ಈಗ ಆದಿಲ್ ಶಾಹೀಕಾಲದ ಕೆರೆಯೂ ಕೆಲವು ಕಟ್ಟಡಗಳೂ ಇವೆ. ಈ ಕೆರೆಯ ನೀರಿನಿಂದ ಈಗಲೂ ಎಷ್ಟೋ ಭೂಮಿಯು ನೀರು ಉಣ್ಣುತ್ತದೆ. ಬಾದಶಾಹೀಕಾಲದ ಒಡ್ಡು ಇನ್ನೂ ಗಟ್ಟಿ ಸುತ್ತುಮುತ್ತಲೂ ಕಲ್ಲುಹಾಸಿಗೆಯ ಸಪಾಟಾದ ಗಟ್ಟಿ ನೆಲವೇ ಇದ್ದು ಮಳೆಗಾಲದಲ್ಲಿ ಕೆರೆಗೆ ರಾಡಿಯ ಅಂಶವು ತೀರ ಕಡಿಮೆ ಬರುವದರಿಂದ ಇನ್ನೂ ಎಷ್ಟೋ ಶತಮಾನಗಳವರೆಗೂ ಈ ಕೆರೆಯು ಹೀಗೆಯೇ ಉಪಯೋಗವಾಗ ಬಹುದೆಂದು ತೋರುತ್ತದೆ.

ಎತ್ತ ನೋಡಿದತ್ತ ಹಸನಿಸಿದ ಕಲ್ಲುಹಾಸಿಗೆಯು. ಒಂದು



ಮುಟ್ಟಾಗಿದ್ದು ತೋಟಗಳಿಗೆ ನೀರು ಬಿಡುವ ವ್ಯವಸ್ಥೆಯು ಸಹ ಉತ್ತಮಸ್ಥಿತಿಯಲ್ಲಿರುತ್ತದೆ. ಕೆರೆಗಳಿಂದ ತಮಗೆ ಬೇಕಾದಷ್ಟು ಮಾತ್ರ ನೀರನ್ನು ಹೊರಗೆ ಬಿಡತಕ್ಕ ಈ ತೆರದ ವ್ಯವಸ್ಥೆಯು ವಿಜಾಪುರದ ಪಶ್ಚಿಮಕ್ಕೆ ಮಹಮ್ಮದ ಸರೋವರದ ಹತ್ತಿರಿರುವ ಕೆರೆಯಲ್ಲಿಯೂ, ಬೇಗಮ್ ತಲಾವದಲ್ಲಿಯೂ ಉಂಟು. ಕುಮಟಗಿಯ

ಗೇಣು ಸಹ ಮಣ್ಣಿಲ್ಲದ ಮೇಲೆ ಗಿಡಗಂಟಿಗಳನ್ನು ಕಾಣುವದೆಂತು? ಅಂತೂ ಈ ಸಪಾಟಾದ ರುಕ್ಷ ಪ್ರದೇಶವನ್ನು ಆದಿಲ್ ಶಾಹೀಕಾಲದಲ್ಲಿ ಕುದುರೆ ಹತ್ತುವದಕ್ಕೆಂದು ಆರಿಸಿಟ್ಟಿದ್ದರು.[೧] ಈ ಅಪಾರವಾದ ಬೈಲಿನಲ್ಲಿ ಕುದುರೆಹತ್ತಿ ಮನದಣಿ ಓಡಾಡಿಸಿ, ಆಟವಾಡಿ, ದಣಿದು ಕುಮಟಗಿಗೆ ಬರಲು ತಿಳಿಯಾದ ನೀರಿನಿಂದ ತುಂಬಿತುಳುಕುತ್ತಿರುವ

---

(೧) It was, at one time, a placo frequented by the nobles and perhaps the court of Bijapur, as a pleasure resort. — Cousins

CC-0. Jangamwadi Math Collection. Digitized by eGangotri

ಈ ಕೆರೆಯನ್ನು ಕಂಡು ಆವರಿಗೆ ಎಷ್ಟು ಆನಂದವಾಗುತ್ತಿರಬಹುದು? ಕೆರೆಯ ಹತ್ತಿರವೇ ಇದ್ದ ಕುದುರೆಯ ಹಕ್ಕೆಗಳಲ್ಲಿ ದಣಿದ ಕುದುರೆಗಳನ್ನು ಕಟ್ಟಿ, ತಾವು ಕೆರೆಯಲ್ಲಿ ಧುಮುಕಿ ಈಸಾಡುತ್ತಿದ್ದರು! ಕೆರೆಯ ಮಧ್ಯದಲ್ಲಿಯೂ ಒಂದು ಚೌಕಾದ ಸಣ್ಣಮಂದಿರವುಂಟು. ಈಸಾಡಲಿಕ್ಕೆ ಹೋದವರು ಅಲ್ಲಿ ತುಸು ವಿಶ್ರಾಂತಿ ತೆಗೆದುಕೊಳ್ಳಲು ಅನುಕೂಲವಿದೆ. ಕೆರೆಯ ಹತ್ತಿರವಿದ್ದ ಕುದುರೆಯ ಹಕ್ಕೆಗಳು ಮಾತ್ರ ಬೀಳತೊಡಗಿರುತ್ತವೆ. ಆದರೆ ಹತ್ತಿರವೇ ಇದ್ದ ದೊಡ್ಡ ಕಮಾನು ಮಾತ್ರ ಇನ್ನೂ ಗಟ್ಟಿಮುಟ್ಟಾಗಿದೆ.

ಕೆರೆಯ ದಂಡೆಯ ಹತ್ತಿರ "ಜಲಮಂದಿರ" ಎಂಬ ಪುರಾತನ ಕಾಲದ ಕೆಲವು ಕಟ್ಟಡಗಳುಂಟು. ಇವುಗಳಲ್ಲಿ ಒಂದನ್ನು ಸ್ವಚ್ಛಮಾಡಿಸಿ ಕಾದಿಟ್ಟಿರುವರು. ಈ ಕಟ್ಟಡವು ವಿಸ್ತಾರವಾದ ಪಟಾಂಗಣದಲ್ಲಿದ್ದು, ಇದರ ಎದುರಿಗೆ ಚೌಕಾದ ತೊಟ್ಟಿಯ ಮಧ್ಯದಲ್ಲಿ ಎರಡುತಸ್ತಿನ ಕಲ್ಲು ಗಚ್ಚಿನ ಸುಂದರವಾದ ಕಾರಂಜಿಯಿರುತ್ತದೆ.[೧] ಅಲ್ಲಿ ಮೇಲಂತಸ್ತಿನಿಂದ ಪುಟಿದ ನೀರು ಕೆಳಗಿನಂತಸ್ತಿನ ಸುತ್ತಲಿರುವ ಕಲ್ಲಿನ ಹರಿಯಲ್ಲಿ ಬಿದ್ದು, ಅಲ್ಲಿಂದ ಸಾಲಾಗಿ ಹೊಂದಿಸಿದ ಕಲ್ಲಿನ ಸಿಂಹಮುಖಗಳಿಂದ ಸುತ್ತಲೂ ಹೊರಬಿದ್ದು, ಕೊನೆಗೆ ಕೆಳಗಿರುವ ತೊಟ್ಟಿಯಲ್ಲಿ ಬೀಳುತ್ತಿದ್ದಿತಂತೆ. ಈ ಕಾರಂಜಿಗೆ ನೀರುಬಂದು ಪುಟಿದು ಬೀಳಬೇಕಾದರೆ ಇದಕ್ಕೂ ಹೆಚ್ಚು ಎತ್ತರದ ಸ್ಥಳದಲ್ಲಿ ನೀರು ಇದ್ದರೆ ಮಾತ್ರ ಅದು ಸಾಧ್ಯವು. ಅದಕ್ಕಾಗಿ ಹತ್ತಿರವೇ ಒಂದು ದೊಡ್ಡದಾದ-ಬಹು ಎತ್ತರವಾದ ಬುರುಜನ್ನೂ, ಅದರ ಸುತ್ತಲೂ ಹೊರಬದಿಗೆ ಮೇಲೇರಲಿಕ್ಕೆ ಪಾವಟಿಗೆಗಳನ್ನೂ, ಬುರುಜಿನ ಮೇಲ್ಭಾಗಕ್ಕೆ ನೀರುತುಂಬುವದಕ್ಕಾಗಿ ತೊಟ್ಟಿಯನ್ನೂ ಕಟ್ಟಿಸಿದ್ದು, ಈ ತೊಟ್ಟಿಯಿಂದ ಜಲಮಂದಿರವೆನುರಿನ ಕಾರಂಜಿಯ ಮೇಲಂತಸ್ತಿನ ವರೆಗೆ ಹಂಚಿನ ಕೊಳವೆಗಳೊಳಗಿಂದ ನೀರು ಹರಿದುಬಂದು, ಪುಟಿಯುತ್ತಿದ್ದಿತೆಂದು ಈಗಲೂ ಒಡೆದು ಕಾಣುವದು. ರುಕ್ಷಪ್ರದೇಶದಲ್ಲಿ, ಡೋಣಿಸಾಲಿನ ಪ್ರಖರವಾದ ಬಿಸಿಲಿನಿಂದ ತ್ರಸ್ತರಾಡವರಿಗೆ ಈ ತೆರದ ಸೌಂದರ್ಯಯುತವಾದ ಕಾರಂಜಿಯು ಆನಂದವನ್ನೇ ಬೀರುತ್ತಿರುವದರಲ್ಲಿ ಸಂದೇಹವೇನು? ಆಗಿನ ವೀರರು ದಣಿದುಬಂದು ಈ ಸ್ವರ್ಗತುಲ್ಯವಾದ ಮಂದಿರದಲ್ಲಿ ವಿಶ್ರಮಿಸಿ, ದಣಿವಾರಿಸಿಕೊಳ್ಳುತ್ತಿದ್ದ ಕಲ್ಪನೆಯು ಸಹ ರಮಣೀಯವಾಗಿರುವದು! ಸದ್ಯಕ್ಕಂತೂ ಇಲ್ಲಿ ಕಾರಂಜಿಯಲ್ಲಿ ನೀರಿಲ್ಲ; ಜಲಮಂದಿರದಲ್ಲಿ ಸ್ನಾನ (Shower Bath)ದ ವ್ಯವಸ್ಥೆ ಇಲ್ಲ. ಆದರೂ ಕೆಟ್ಟ ಬಿಸಿಲಿನಲ್ಲಿ ಸಹ ಈ ಸ್ಥಾನವು ಎಷ್ಟು ತಂಪಾಗಿರುವದೆಂಬ ಕಲ್ಪನೆಯು ಅಲ್ಲಿಗೆ ಹೋಗದ ಹೊರತು ಆಗಲು ಶಕ್ಯವಿಲ್ಲ.

ಕಾರಂಜಿಯ ಹತ್ತಿರಿದ್ದ ಜಲಮಂದಿರವು ಗಚ್ಚುಕಲ್ಲಿನಿಂದ ಕಟ್ಟಲ್ಪಟ್ಟಿದ್ದು ಇನ್ನೂ ಭದ್ರವಾಗಿದೆ. ಇದರ ಮೇಲೇರಲಿಕ್ಕೆ ಮುಂಭಾಗದಲ್ಲಿ ಎರಡೂ ಬದಿಗೂ ಪಾವಟಿಗೆಗಳುಂಟು- ಮತ್ತು ಮಾಳಿಗೆಯ ಮೇಲೆ ನೀರು ತುಂಬಲಿಕ್ಕೆ ತೊಟ್ಟಿಗಳನ್ನು ಕಟ್ಟಿರುವರು. ಈ ತೊಟ್ಟಿಗಳಿಂದ ಕೆಳಕ್ಕೆ ನೀರು ಬಿಡಲಿಕ್ಕೆ ತೂತುಗಳಿದ್ದು, ಅವುಗಳಲ್ಲಿ ಬೆಣೆ ಜಡಿದು ನೀರುತುಂಬುತ್ತಿದ್ದರು. ಈ ಜಲಮಂದಿರದಲ್ಲಿ ಒಂದೇ ಒಂದು ಭಾಗವಿದ್ದು ಕೋಣೆ ಮುಂತಾದವುಗಳಿಲ್ಲ. ನೀರುತುಂಬಿದ ಮಾಳಿಗೆಯ ಭಾರವನ್ನು ಹೊರಲಿಕ್ಕೆ ಕಲ್ಲುಗಚ್ಚಿನ ಕಂಬಗಳೂ ಕಮಾನುಗಳೂ ಮಾತ್ರ ಇರುವವು. ಇಲ್ಲಿ ಉಚ್ಚತರಗತಿಯವರು ಮಾತ್ರ ಬಂದು ಸ್ನಾನ (Shower Bath) ಮಾಡುತ್ತಿದ್ದರೆಂದು ತೋರುತ್ತದೆ. ಅವರು ಅಲ್ಲಲ್ಲಿ ಕಟ್ಟಿಸಿಟ್ಟ ಬಚ್ಚಲಿನಂಥ ಸ್ಥಳಗಳಲ್ಲಿ ಹೋಗಿ ನಿಲ್ಲುವದೇ ತಡ, ಮಾಳಿಗೆಯ ಮೇಲಿನ ತೊಟ್ಟಿಯೊಳಗಿನ ಬೆಣೆತೆಗೆಯಲಾಗಿ ಸಣ್ಣ ಕಾರಂಜಿಯೇ ಬೀಳಹತ್ತುತ್ತಿದ್ದಿತೇನೋ! ಆಗಿನ ಸ್ನಾನದ ಸೌಖ್ಯವನ್ನೇನು ಬಣ್ಣಿಸುವದು?[೨]

---

(೧) Out in front of the painted pavilion and rising out of a large square tank is a two-storied building, through the masonry of which, pipes are carried up to scores of jets on both stories. These all open outwards and when the water was turned on and spouted forth from every conceivable point, falling splashing into the tank below, it must have been a very refreshing sight. —Cousins.

(೨) Surely those proud old warriors who made the welkin ring with the clash of steel, knew, too, how to make the best of life in their idle moments! —Cousins

CC-0. Jangamwadi Math Collection. Digitized by eGangotri

ಈ ಕಟ್ಟಡದಲ್ಲಿ ಹೋದಕೂಡಲೆ ಗೋಡೆಗಳ ಮೇಲೂ ಕಮಾನುಗಳ ಮೇಲೂ ಆದಿಲ್‌ಶಾಹೀ ಕಾಲದ ತೈಲಚಿತ್ರಗಳು ಕಾಣುತ್ತವೆ. ಕಝಿನ್ಸರು ಎನ್ನುವಂತೆ ಅವು ಪುರಾತನಕಾಲದ ಚಿತ್ರಗಳೆಂಬುದರಲ್ಲಿ ಏನೂ ಸಂದೇಹವಿಲ್ಲ.

"On the walls of one of these (i.e. ಜಲಮಂದಿರ) are some very remarkable and interesting frescoes, which must be over two hundred years old."

"The colouring of this part (Mehrat in the Bijapur Juma Masjid) was conceived and carried out by Sultan Mahammad who appears to have been very partial to painted decoration. He adorned the walls of the Asar Mahal and the painting in the water pavilion at Kumatgi is probably his work."

ಈ ಸುಲ್ತಾನ್ ಮಹಮ್ಮದನು ಸನ್ ೧೬೨೬ರಿಂದ ೧೬೫೬ರ ವರೆಗೆ ಆಳಿದನು. ಅಂದ ಮೇಲೆ ಈ ಚಿತ್ರಗಳು ೨ ರಿಂದ ೩ ನೂರು ವರ್ಷಗಳ ಹಿಂದಿನವಿರಲಿಕ್ಕೆ ಸಾಕು. ತಲೆಬಾಗಿಲಿನಿಂದ ಒಳಕ್ಕೆಹೋಗಲು ಎಡಬದಿಗಿರುವ ಕಮಾನಿನ ಮೇಲೆ ಒಂದು ಮಹತ್ವದ ಚಿತ್ರವಿರುತ್ತದೆ. ಆ ಚಿತ್ರದಲ್ಲಿ ಇಬ್ಬರು ಕುದುರೆಯ ಮೇಲೆ ಕುಳಿತು, ಕೈಯಲ್ಲಿ ಉದ್ದ ಕೋಲುಗಳನ್ನು ಹಿಡಿದುಕೊಂಡು, ಉತ್ಸಾಹದಿಂದ ಆಟವಾಡುತ್ತಿದ್ದಾರೆ. ಇಬ್ಬರ ಕೈಯೊಳಗಿನ ಕೋಲುಗಳ ತುದಿಗಳು ಕೂಡಿದಲ್ಲಿ, ಒಂದು ಚಂಡು ಇರುತ್ತದೆ. ಚಂಡಾಟವು ಒಳ್ಳೇ ಉತ್ಸಾಹದಿಂದಲೂ, ರಭಸದಿಂದಲೂ ನಡೆದಿರುವದೆಂದು ಆಟಗಾರರ ಮತ್ತು ಕುದುರೆಗಳ ಹುರುಪಿನ ಲಕ್ಷಣದ ಮೇಲಿಂದ ಒಡೆದು ಕಾಣುವಂತಿರುತ್ತದೆ. ಇದು ಈಗ ತಾನೇ ಜಗಪ್ರಸಿದ್ಧವಾದ 'ಪೋಲೋ' ಆಟವಲ್ಲದೆ ಮತ್ತೇನು? ಕುಮಟಗಿಯ ವಿಸ್ತಾರವಾದ ಬೈಲಿನಲ್ಲಿ ಕುದುರೆಗಳನ್ನೇರಿದ ನಮ್ಮ ಕರ್ನಾಟಕದ ವೀರರು ಈ 'ಪೋಲೋ' ಆಟವನ್ನು ಯಥೇಷ್ಟವಾಗಿ ಆಡಿ, ದಣಿದು ಕೆರೆಯಲ್ಲಿ ಈಸಾಡಿಯಾಗಲಿ, ಜಲಮಂದಿರದಲ್ಲಿ ಸ್ನಾನ ಮಾಡಿಯಾಗಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರೆಂಬುದರಲ್ಲಿ ಸಂದೇಹವೇನು? ಈ ಪೋಲೋ ಆಟವು ಹಿಂದುಸ್ಥಾನದವರದೇ ಇದ್ದು, ಕರ್ನಾಟಕದಲ್ಲಿ ೨-೩ ನೂರು ವರ್ಷಗಳ ಹಿಂದೆ ಜನರು ಬಹಳೇ ಉತ್ಸಾಹದಿಂದ ಅದನ್ನು ಆಡುತ್ತಿದ್ದರೆಂದು ಈ ಚಿತ್ರವು ಇನ್ನೂ ಸಾರಿ ಸಾರಿ ಹೇಳುತ್ತಿರುವದಲ್ಲವೇ? ಕಝಿನ್ಸರು ಎನ್ನುವದೇನಂದರೆ:—

"It has been said that the game of Polo is an Indian game. Here, in this little hunting chateau at Kumatgi, the statement is fully confirmed."

ಈ ಜಲಮಂದಿರದ ಗೋಡೆ, ಕಮಾನುಗಳ ಮೇಲೆ ತೆಗೆದ ಚಿತ್ರಗಳೆಲ್ಲವೂ ಮಸಮಸಕಾಗುತ್ತ ನಡೆದಿವೆ. ಅರಸಿಕರಾದ ಪ್ರೇಕ್ಷಕರ ಗೀಚಾಟದಿಂದಲೂ, ಕೆಲಸಮಾಡುವ ಕೂಲಿಕಾರರ ಗಚ್ಚು, ಸುಣ್ಣಗಳ ಸಿಡಿತದಿಂದಲೂ ಈ ಚಿತ್ರಗಳು ಯಾವಾಗಲೂ ಗಂಡಾಂತರದಲ್ಲಿದ್ದಂತೆಯೇ ಸರಿ. ಒಬ್ಬ ನಿಷ್ಣಾತಚಿತ್ರಕಾರನಿಂದ ಎಲ್ಲ ಚಿತ್ರಗಳನ್ನು ಬರೆಯಿಸಿ, ಅವುಗಳನ್ನು ವಿಜಾಪುರದ ಮ್ಯೂಝಿಯಮ್ (ವಸ್ತುಸಂಗ್ರಹಾಲಯ)ದಲ್ಲಿಡುವ ಏರ್ಪಾಡು ಆಗಬೇಕೆಂದು ನಮ್ಮ ಸೂಚನೆಯು. ಈಗಿದ್ದ ಚಿತ್ರಗಳ ಜೀರ್ಣೋದ್ಧಾರದ ಗೋಜಿಗೆ ಹೋಗುವದುಚಿತವಲ್ಲ. ಒಮ್ಮೊಮ್ಮೆ ಅವು ಹೆಚ್ಚು ಕೆಡುವದೂ ಉಂಟು. ಅದ್ದರಿಂದ ಈ ಚಿತ್ರಗಳಂತೆ ತೈಲಚಿತ್ರಗಳನ್ನು (Oil paintings) ಚಿತ್ರಿಸಿ ಇಡುವದಾಗಬೇಕು. ಸ್ವಲ್ಪ ಕಾಲದಲ್ಲಿಯೇ ಈ ಚಿತ್ರಗಳು ಈಗಿದ್ದುದಕ್ಕೂ ಮಸಕಾಗಿ ಹೋದರೆ, ಅವನ್ನು ನೋಡಿ ಚಿತ್ರಿಸುವದು ಸಹ ಕಷ್ಟವು. ಇಲ್ಲಿಯ ಗೋಡೆಯಮೇಲಿದ್ದ ಒಬ್ಬ ಯುರೋಪಿಯನ್ನನ ಚಿತ್ರದ ಪ್ರತಿಯು ಈಗ ವಿಜಾಪುರದ ವಸ್ತುಸಂಗ್ರಹಾಲಯದಲ್ಲಿರುತ್ತದೆ.

ಇದೇ ಮಾದರಿಯ ಕಾರಂಜಿಸಹಿತ ಜಲಮಂದಿರವೊಂದು ವಿಜಾಪುರದಲ್ಲಿ ಜುಮ್ಮಾಮಸೀದೆಯ ಹತ್ತಿರವಿದ್ದು ಅದಕ್ಕೆ "ಮುಬಾರಕಖಾನನ ಮಹಾಲು" ಎಂಬ ಹೆಸರಿದೆ. ಆದರೆ ಅದರ ಗೋಡೆ, ಕಮಾನುಗಳ ಮೇಲೆ ಚಿತ್ರ ಮುಂತಾದವುಗಳೇನೂ ಇಲ್ಲ. ಇದರ ಹೊರತು ವಿಜಾಪುರದ ಹತ್ತಿರ ಈ ತೆರದ ಕಾರಂಜಿ ಅಥವಾ ಜಲಮಂದಿರಗಳಿಲ್ಲ.

CC-0. Jangamwadi Math Collection. Digitized by eGangotri

# ಧರ್ಮಪ್ರಕಾಶ ಬನುಮಯ್ಯನವರು

ಲೇಖಕರು:—ಶ್ರೀ. ಅಗರಂ ರಂಗಯ್ಯ, ಮೈಸೂರು.

ಮೈಸೂರು ದೇಶದಲ್ಲಿ ಬನುಮಯ್ಯನವರ ಹೆಸರನ್ನು ಕೇಳದಿರುವವರಿಲ್ಲ. ಕರ್ನಾಟಕದಲ್ಲಿಯೂ ಇವರು ಸುಪ್ರಸಿದ್ಧರೇ ಆಗಿದ್ದರು. ಸರ್ವತೋಮುಖವಾದ ಧರ್ಮಕಾರ್ಯಗಳನ್ನು ಮಾಡುವುದರಲ್ಲಿ ಇವರು ಅಗ್ರಗಣ್ಯರಾಗಿದ್ದರು. ಇವರು ಮಾಡಿದ ಅನೇಕ ಪ್ರಜಾಹಿತ ಕಾರ್ಯಗಳಿಂದ ಇವರು ರಾಜಮನ್ನಣೆಗೂ ಪ್ರಜಾವಾತ್ಸಲ್ಯತೆಗೂ ಪಾತ್ರರಾದರು. ಇವರ ಮರಣದಿಂದ ಮೈಸೂರುದೇಶದ ಸಾರ್ವಜನಿಕ ಜೀವನಕ್ಕೂ ಅನೇಕ ಧರ್ಮಕಾರ್ಯಗಳಿಗೂ ಅತ್ಯಂತ ನಷ್ಟವುಂಟಾಗಿರುತ್ತದೆ. ಅವರ ಸ್ಥಾನವನ್ನು ಅಲಂಕರಿಸಲು ಅವರೊಡನೆ ಹೋಲುವ ವ್ಯಕ್ತಿಗಳು ಸಿಕ್ಕುವುದೂ ದುರ್ಲಭ.

ಸಾಹುಕಾರ್ ಬನುಮಯ್ಯನವರು ಕೇವಲ ದುಡ್ಡಿನಿಂದಲೇ ದೊಡ್ಡವರಾದವರಲ್ಲ. ಹಣವನ್ನು ಗಳಿಸುವುದರಲ್ಲಿಯೂ ಬಹಳ ಶ್ರಮಪಟ್ಟು ಗಳಿಸಿದರು. ಅವರು ಚಿಕ್ಕಂದಿನಲ್ಲಿ ಮೈಸೂರಿನ ಒಬ್ಬ ದೊಡ್ಡ ವರ್ತಕರಲ್ಲಿ ಕೇವಲ ನಾಲ್ಕುರೂಪಾಯಿನ ಸಂಬಳಕ್ಕೆ ಸೇರಿ, ಎಲ್ಲಾ ವಿಧವಾದ ಸೇವಾರೀತಿಯನ್ನೂ ಪರಿಪಾಲಿಸಿ, ಅದರಿಂದ ಬಂದ ಅನುಭವದಿಂದಲೂ, ವ್ಯಾಪಾರಕೌಶಲ್ಯದಿಂದಲೂ, ಮುಖ್ಯವಾಗಿ ಪ್ರಾಮಾಣಿಕತೆಯಿಂದಲೂ ಮುಂದಕ್ಕೆ ಬಂದರು. ಹತ್ತಾರುಲಕ್ಷ ರೂಪಾಯಿಗಳನ್ನು ತಮ್ಮ ವ್ಯಾಪಾರಶಕ್ತಿಯಿಂದಲೇ ಸಂಪಾದಿಸಿದರು. ಈ ರೀತಿಯಲ್ಲಿ ಸಣ್ಣ ದರ್ಜೆಯಿಂದ ದೊಡ್ಡ ದೊಡ್ಡ ಕಾಂಟ್ರಾಕ್ಟ್ ಮುಂತಾದವುಗಳನ್ನು ಮಾಡಿ ಹೇರಳವಾದ ದ್ರವ್ಯವನ್ನು ಸಂಪಾದಿಸಿದವರು ಬಹಳ ಕಡಿಮೆ. ಇವರಿಗೆ ಮುಖ್ಯವಾಗಿ ಮೈಸೂರುಅರಮನೆ ಮತ್ತು ಬೆಂಗಳೂರು ಮಿಲಿಟರಿಗೆ ಬೇಕಾದ ಸಾಮಾನುಗಳ ಕಂಟ್ರಾಕ್ಟುಗಳು ಇರುತ್ತಿದ್ದವು. ಇವರ ಪ್ರಾಮಾಣಿಕತೆಗಾಗಿ ಮೇಲ್ಕಂಡ ಕಂಟ್ರಾಕ್ಟುಗಳು ಇವರಿಗೇ ದೊರೆಯುತ್ತಿದ್ದವು.



ಧರ್ಮಪ್ರಕಾಶ ಬನುಮಯ್ಯನವರು.

ಬನುಮಯ್ಯನವರು ಅಷ್ಟೇನೂ ಓದುಬರಹವನ್ನು ಅರಿತವರಲ್ಲ. ಲೋಯರ್ ಸೆಕೆಂಡರಿಪರೀಕ್ಷೆಯೂ ಆಗಿರಲಿಲ್ಲ. ಇಂಗ್ಲಭಾಷೆಯ ಗಂಧವೇ ಇರಲಿಲ್ಲ. ಆದರೂ ಲೋಕವ್ಯವಹಾರಜ್ಞಾನದಲ್ಲಿ ಅವರು ಯಾವ ಸುಶಿಕ್ಷಿತರಿಗೂ ಕಡಿಮೆಯಿರಲಿಲ್ಲ. ಪ್ರತಿದಿನವೂ ಆಹಾರವನ್ನು ಬಿಟ್ಟರೂ ಪತ್ರಿಕೆಗಳನ್ನು ಓದಿಸಿ ಪ್ರಪಂಚದ ಹೊಸ ಹೊಸ ವಿದ್ಯಮಾನಗಳನ್ನು ತಿಳಿದುಕೊಳ್ಳುವುದನ್ನು ಮಾತ್ರ ಬಿಡುತ್ತಿರಲಿಲ್ಲ. ಎಲ್ಲಾ ರೀತಿಯ ಪತ್ರಿಕೆಗಳನ್ನೂ ಓದಿಸಿ ಎಲ್ಲರ ಅಭಿಪ್ರಾಯಗಳನ್ನೂ ಗ್ರಹಿಸುತ್ತಿದ್ದರು. ಆಂಗ್ಲಭಾಷೆಯನ್ನು ಕಲಿತವರು ಕೂಡ ಅಷ್ಟು ಮಟ್ಟಿಗೆ ಹೊಸವರ್ತಮಾನಗಳನ್ನು ಮುಂಚಿತವಾಗಿ ತಿಳಿಯುತ್ತಿರಲಿಲ್ಲವೆಂದು ಹೇಳಬಹುದು.



CC-0. Jangamwadi Math Collection. Digitized by eGangotri

ಧರ್ಮಪ್ರಕಾಶ ಬಸುಮಯ್ಯನವರ ಜೀವನಕ್ರಮದ ಸರಳತೆಯೂ, ನಿಯಮಿತ ಕಾರ್ಯಾಚರಣೆಯೂ ಆದರ್ಶಪ್ರಾಯವಾದುವುಗಳು. ಮುದುಕರಾದರೂ ಅವರು ಬೆಳಗಿನ ನಾಲ್ಕು ಗಂಟೆಗೆ ಏಳದ ದಿನವಿಲ್ಲ. ಎದ್ದಕೂಡಲೆ ಮೈಸೂರು ನಗರಕ್ಕೆ ಒಂದೇ ಮೈಲಿ ದೂರದಲ್ಲಿರುವ ಚಾಮುಂಡಿಬೆಟ್ಟದಕಡೆ ಸಂಚಾರಹೊರಟು ಬೆಟ್ಟದ ಕೆಲವು ಹಂತಿಗಳನ್ನು ಹತ್ತುತ್ತಲೂ ಇದ್ದರು. ಅನಂತರ ಪಟ್ಟಣದ ಒಂದೊಂದು ಭಾಗದಲ್ಲಿ ಒಂದೊಂದು ದಿವಸ ಸಂಚರಿಸಿ, ಅಲ್ಲಿನ ಕುಂದುಕೊರತೆಗಳನ್ನೂ, ಆರೋಗ್ಯ ನೈರ್ಮಲ್ಯಗಳ ವಿಚಾರವನ್ನೂ, ದೀಪ ನೀರು ಮುಂತಾದ ಸೌಕರ್ಯಗಳ ಅವಶ್ಯಕತೆಯನ್ನೂ, ತಿಳಿದುಕೊಳ್ಳುತ್ತಿದ್ದರು.

ಬಸುಮಯ್ಯನವರ ವ್ಯಾಪಾರದ ಸೊಬಗೇ ಒಂದು ಲಕ್ಷಣವಾಗಿದ್ದಿತು! ಬೆಳಿಗ್ಗೆ ಎಂಟೂವರೆ ಗಂಟೆಯಿಂದ ಒಂಭತ್ತೂವರೆ ಗಂಟೆಯವರೆಗೆ ಅಂಗಡಿಯಲ್ಲಿ ಕುಳಿತು ಒಂದು ದರ್ಬಾರಿನಂತೆ ಅಂಗಡಿಯ ಆಡಳಿತಗಳನ್ನೆಲ್ಲಾ ವಿಚಾರಿಸಿ, ಪದಾರ್ಥಗಳ ಬೆಲೆಗಳನ್ನು ಗೊತ್ತುಮಾಡಿ, ಕೆಲಸಗಾರರು ಮಾಡಬೇಕಾದ ಕರ್ತವ್ಯಗಳನ್ನು ನೇಮಿಸಿ, ಲೆಕ್ಕಪತ್ರಗಳನ್ನು ಅಜಮಾಯಿಷಿ ಮಾಡಿ, ಪ್ರತಿದಿನವೂ ಸಹಸ್ರಾರು ರೂಪಾಯಿನ ವ್ಯಾಪಾರವನ್ನು ನಡೆಸುತ್ತಿದ್ದರು. ಅವರ ವ್ಯಾಪಾರವೆಲ್ಲಾ ಒಟ್ಟುಗಟ್ಟಲೆಯಾಗಿ ನಡೆಯುತ್ತಿದ್ದಿತು. ಸಹಸ್ರಾರು ಮೂಟೆಯ ದಿನಸು, ಸಹಸ್ರಾರು ಡಬ್ಬದ ಎಣ್ಣೆ, ನೂರಾರು ಗಾಡಿಗಳ ಸಾಮುಗ್ರಿಗಳು, ಇವೇ ಅವರ ವ್ಯಾಪಾರದ ಅಳತೆಯಾಗಿದ್ದವು. ಹೀಗೆ ಬಸುಮಯ್ಯನವರು ಬಹಳ ಸ್ವಲ್ಪಕಾಲದಲ್ಲಿ ಮಹದೈಶ್ವರ್ಯವನ್ನು ಸಂಪಾದಿಸಿದರು. ಅವರು ಕೇವಲ ರಿಕ್ತದೆಶೆಯಿಂದ ಉನ್ನತಸ್ಥಿತಿಗೆ ಬಂದವರಾದುದರಿಂದ ದುಡ್ಡಿನ ಬೆಲೆಯನ್ನೂ ಹಣಸಂಪಾದಿಸುವುದರ ಕಷ್ಟನಿಷ್ಠುರಗಳನ್ನೂ ಚೆನ್ನಾಗಿ ತಿಳಿದಿದ್ದರು. ಹೀಗಿದ್ದರೂ ದಾನ ಮಾಡುವಾಗ ಅವರು ಸ್ವಲ್ಪವೂ ಹಿಡಿತವಿಲ್ಲದೆ ಧಾರಾಳವಾಗಿ ಮಾಡುತ್ತಿದ್ದರು. ಒಂದು ರೂಪಾಯನ್ನು ನಿರೀಕ್ಷಿಸಿದವರು ಹತ್ತು ರೂಪಾಯನ್ನು ಪಡೆದು ಆಶ್ಚರ್ಯದಿಂದಲೂ ಸಂತುಷ್ಟಿಯಿಂದಲೂ ಹಿಂದಿರುಗುತ್ತಿದ್ದರು.

ಬಸುಮಯ್ಯನವರು ಮಾಡಿರುವ ದ್ರವ್ಯದಾನವನ್ನು ಇಷ್ಟೆಂದು ಕ್ಲಪ್ತವಾಗಿ ಹೇಳಲು ಸಾಧ್ಯವಿಲ್ಲ. ಒಟ್ಟು ಸುಮಾರು ಮೂರು ಲಕ್ಷ ರೂಪಾಯಿಗಳನ್ನು ದಾನ ಮಾಡಿರುವುದಾಗಿ ತಿಳಿಯಬರುತ್ತದೆ. ಇವರ ಉದಾರತೆಯು ಮೈಸೂರಿನಲ್ಲಿ ಇವರು ಕಟ್ಟಿಸಿರುವ ಹೈಸ್ಕೂಲಿನಲ್ಲಿ ಪ್ರತಿಬಿಂಬಿತವಾಗಿದೆ. ಅದಕ್ಕೆ ಕಡೆಯ ಪಕ್ಷ ಒಂದು ಲಕ್ಷ ರೂಪಾಯನ್ನು ಸ್ವಹಸ್ತದಿಂದ ಕೊಟ್ಟಿರುವರು. ಮತ್ತು ಅದರ ಉಸ್ತುವಾರಿಗಾಗಿ ಪ್ರತಿವರ್ಷವೂ ವಿಶೇಷ ಹಣವನ್ನು ಕೊಡುತ್ತಲೇ ಇದ್ದರು. ಅದೇ ಸಮಯದಲ್ಲಿಯೇ ಅವರ ಅಮೋಘವಾದ ಸ್ವಾರ್ಥತ್ಯಾಗವನ್ನು ಕಂಡು ಮೈಸೂರು ಶ್ರೀಮನ್ಮಹಾರಾಜರವರು ಅವರಿಗೆ 'ಧರ್ಮಪ್ರಕಾಶ' ಎಂಬ ಬಿರುದನ್ನು ಕೊಟ್ಟರು. ಅನಂತರ ಬಸುಮಯ್ಯನವರ ಧರ್ಮಬುದ್ಧಿಯು ಮತ್ತೂ ವಿಕಾಸಗೊಂಡು ನಾನಾರೂಪದಲ್ಲಿ ಪರಿಣಮಿಸಲಾರಂಭಿಸಿತು. ಮೈಸೂರಿನ ಸಾರ್ವಜನಿಕ ಸಂಸ್ಥೆಗಳಲ್ಲಿ ಅವರ ಸಹಾಯವನ್ನು ಪಡೆಯದ ಒಂದು ಸಂಸ್ಥೆಯೂ ಇಲ್ಲ. ಶ್ರೀರಾಮಕೃಷ್ಣಾಶ್ರಮ, ಪ್ರಾಣಿಸಂರಕ್ಷಣಾಲಯ (ಪಿಂಜ್ರಾಪೋಲ್), ಗೋರಕ್ಷಣಸಭಾ, ಹಿಂದೀಪ್ರಚಾರಸಭಾ, ಆಸ್ಪತ್ರೆ ಮುಂತಾದುವುಗಳಿಗೆ ಸಹಸ್ರಾರು ರೂಪಾಯಿಗಳನ್ನು ಕೊಟ್ಟಿರುತ್ತಾರೆ. ಅನೇಕ ಬಡಬಗ್ಗರಿಗೆ ಗುಪ್ತಮಾಸಾಶನಗಳನ್ನು ಕೊಡುತ್ತಿದ್ದರು. ಒಂದು ಕೇಳಿದವರಿಗೆ ಇಲ್ಲವೆನ್ನುವ ಸ್ವಭಾವವೇ ಅವರಿಗಿರಲಿಲ್ಲ. ಮೈಸೂರಿನಲ್ಲಿ ಯಾವ ಕೆಲಸವನ್ನು ಮಾಡಬೇಕಾದರೂ ಬಸಮಯ್ಯನವರೊಬ್ಬರನ್ನು ಆಶ್ರಯಿಸಿದರೆ ಸಾಕಾಗಿತ್ತು. ಮತ್ತೆ ಯಾರ ಸಹಾಯವೂ ಬೇಕಿರಲಿಲ್ಲ.

ಮಹಾತ್ಮ ಗಾಂಧಿಯವರು ಕರ್ನಾಟಕ ದೇಶದಲ್ಲಿ ಸಂಚರಿಸಿದಂದಿನಿಂದ ಶ್ರೀ॥ ಬಸುಮಯ್ಯನವರಲ್ಲಿ ಹೊಸ ಚೇತನವುಂಟಾಯಿತು. ಮಹಾತ್ಮರ ಸ್ವಾಗತ ಸಮಿತಿಗೆ ಅವರೇ ಅಧ್ಯಕ್ಷರಾಗಿದ್ದರು. ಮಹಾತ್ಮರಿಗೆ ಅರ್ಪಿಸಲು ತಾವೊಬ್ಬರೇ ಒಂದು ಸಾವಿರದ ಐದುನೂರು ರೂಪಾಯಿಗಳನ್ನು ಕೊಟ್ಟರು. ಮಹಾತ್ಮರು ಇವರ ಉದಾರತೆಯನ್ನು ಬಹಳವಾಗಿ ಮೆಚ್ಚಿದರು. ಅಂದಿನಿಂದ ಬಸುಮಯ್ಯನವರು ಸಂಪೂರ್ಣ ಖಾದಿಭಕ್ತರಾಗಿ ಯಾವಜ್ಜೀವವೂ ಖಾದಿಬಟ್ಟೆಯನ್ನಲ್ಲದೆ ಪರದೇಶದ ಒಂದು ಚೂರು ಬಟ್ಟೆಯನ್ನೂ ಧರಿಸುತ್ತಿರಲಿಲ್ಲ. ಮಹಾರಾಜರ ದರ್ಬಾರಿಗೂ ಖಾದಿ ಉಡುಪಿನಲ್ಲಿಯೇ ಹೋಗುತ್ತಿದ್ದರು.

ಖಾದಿ ಪ್ರಚಾರಕ್ಕೆ ಶ್ರೀ. ಬಸುಮಯ್ಯನವರು ಮಾಡಿರುವಷ್ಟು ಸಹಾಯವನ್ನು ನಮ್ಮ ಕನ್ನಡ ನಾಡಿನಲ್ಲಿ

CC-0. Jangamwadi Math Collection. Digitized by eGangotri

ಇನ್ನಾರೂ ಮಾಡಿಲ್ಲವೆಂದು ಧಾರಾಳವಾಗಿಹೇಳಬಹುದು. ಶ್ರೀ. ತಗಡೂರು ರಾಮಚಂದ್ರರಾಯರು ಖಾದಿಕೇಂದ್ರವನ್ನು ತೆರೆಯುವುದಕ್ಕಾಗಿ ಮನೆಮನೆಯ ಮುಂದೆ ಉಪವಾಸವ್ರತವನ್ನು ಹೂಡಿದಾಗ ಬಸುವಯ್ಯನವರು ತಾವಾಗಿಯೇ ರಾಮಚಂದ್ರರಾಯರನ್ನು ಕರೆದು ಐದುನೂರು ರೂಪಾಯಿಗಳನ್ನು ಕೊಟ್ಟು ಸಂಸ್ಥೆಗೆ ಅಧ್ಯಕ್ಷರಾಗುವುದಾಗಿ ತಿಳಿಸಿದರು. ಅದಕ್ಕೆ ಮುಂಚೆ ಹಳ್ಳಿಗಳಲ್ಲಿ ಕೈರಾಟೆಯ ಪ್ರಚಾರಮಾಡುವುದಕ್ಕಾಗಿ ಶ್ರೀ. ರಾಯರಿಗೆ ಐದುನೂರು ರೂಪಾಯಿಗಳನ್ನು ಕೊಟ್ಟಿದ್ದರು. ಶಾಲೆಗಳ ಬಾಲಕರಲ್ಲಿ ಖಾದಿಯನ್ನು ಹೆಚ್ಚಿಸುವುದಕ್ಕೋಸ್ಕರ ಪರದೇಶಿ ಟೋಪಿಗಳನ್ನು ತೆಗೆಸಿ ಖಾದಿ ಟೋಪಿಗಳನ್ನು ಸಾವಿರಗಟ್ಟಲೆ ಕೊಡಿಸಿದರು. ತಮ್ಮ ಹೈಸ್ಕೂಲಿಗೆ ಸೇರಿದಂತೆ ಒಂದು ಖಾದಿಸಂಘವನ್ನೂ ಏರ್ಪಡಿಸಿದ್ದರು. ಚಿಕ್ಕ ಚಿಕ್ಕ ಬಾಲಕರು ಏರ್ಪಡಿಸಿದ್ದ ಅನೇಕ ಸಂಘಗಳಿಗೆ ರಾಟೆಗಳನ್ನೂ ತಕಲಿಗಳನ್ನೂ ಕೊಡಿಸಿದರು. ಖಾದಿಯೇ ಜೀವನದ ಒಂದು ದೊಡ್ಡ ವ್ರತವೆಂದು ನಂಬಿದ್ದರು.

ಕಾಂಗ್ರೆಸ್ ಸಂಸ್ಥೆಗೆ ಇವರು ಅಧ್ಯಕ್ಷರಾಗಿದ್ದುದು ಒಂದು ವಿಶೇಷ ಸಂಗತಿ. ವಿದ್ಯಾವಂತರೂ ಶಿಕ್ಷಿತರೂ ಆದ ಅನೇಕರು ಈ ಸಂಸ್ಥೆಗೆ ಚಾಲಕರಾಗಿ ಕಾರ್ಯ ಮಾಡಲು ಹೆದರುತ್ತಿರುವಲ್ಲಿ ಅದರ ಪೂರ್ಣ ಜವಾಬ್ದಾರಿಯನ್ನು, ಕಷ್ಟನಿಷ್ಠುರಗಳನ್ನು ಚೆನ್ನಾಗಿ ಅರಿತು ಬಸುಮಯ್ಯನವರು ಈ ಭಾರವನ್ನೂ ವಹಿಸಿದ್ದುದು ಅವರ ಮುಂದಾಳುತನವನ್ನು ಸೂಚಿಸುತ್ತದೆ.

ಕಳೆದ ಹತ್ತುವರ್ಷಗಳಿಂದೀಚೆಗೆ ಬಸುಮಯ್ಯನವರ ಧರ್ಮಕಾರ್ಯಗಳು ಅಗಾಧವಾಗಿದ್ದುವು. ಯಾವ ವಿಷಯಕ್ಕಾಗಲಿ ಅವರು ಅಲ್ಪಸ್ವಲ್ಪವನ್ನು ಕೊಡುತ್ತಿರಲಿಲ್ಲ. ಹತ್ತುಸಾವಿರ ಹದಿನೈದುಸಾವಿರ ಹೀಗೆಯೇ ಕೊಡುತ್ತಿದ್ದರು. ಮಕ್ಕಳ ಪೋಷಣೆಯ ಸಂಸ್ಥೆಗೆ ಹದಿನೈದು ಸಾವಿರ ರೂಪಾಯಿಗಳನ್ನು ಕೊಟ್ಟರು. ಆಯುರ್ವೇದ ಕಾಲೇಜಿಗೆ ಹತ್ತು ಸಾವಿರವನ್ನು ಕೊಟ್ಟರು. ಆಸ್ಪತ್ರೆಗೆ ಐದುಸಾವಿರವನ್ನು ಕೊಟ್ಟರು. ಶ್ರೀರಾಮಕೃಷ್ಣಾಶ್ರಮದ ಕಟ್ಟಡಕ್ಕೆ ಮೂರು ಸಾವಿರವನ್ನು ಕೊಟ್ಟರು. ಕುದುರೆ ಗಾಡಿಗಳು ಬಿಸಿಲಿನಲ್ಲಿ ನಿಲ್ಲುವುದನ್ನು ಕಂಡು ಅವಕ್ಕೆ ನೆರಳಿಗಾಗಿ ಒಂದು ಸ್ಟ್ಯಾಂಡನ್ನು ಕಟ್ಟಿಸಿದರು. ದನಕರುಗಳಿಗೆ ನೀರಿನ ತೊಂದರೆಯಿದ್ದುದನ್ನು ನೋಡಿ ಅಲ್ಲಲ್ಲಿ ನೀರಿನ ತೊಟ್ಟಿಗಳನ್ನು ಮಾಡಿಸಿದರು. ವಿದ್ಯಾರ್ಥಿಗಳ ಅಂಗಸಾಧನೆಗಾಗಿ ನೂರಾರು ರೂಪಾಯಿನ ವ್ಯಾಯಾಮ ಸಾಮಗ್ರಿಗಳನ್ನು ತರಿಸಿಕೊಟ್ಟರು. ಇದೇ ರೀತಿ ಕಣ್ಣಿಗೆ ಬಿದ್ದ ಕೊರತೆಗಳನ್ನೆಲ್ಲಾ ನಿವಾರಿಸಲು ಅವಶ್ಯಕವಾದ ಸಹಾಯಗಳನ್ನು ಮಾಡಿರುವರು.

ಇವರು ದಾನಮಾಡುವಾಗಲೆಲ್ಲಾ ಕೇವಲ ಈಶ್ವರ ಪ್ರೀತ್ಯರ್ಥವಾಗಿ ಮಾಡುತ್ತಿದ್ದರು. "ನನಗೆ ಏನೂ ಗೊತ್ತಿಲ್ಲ; ಶಿವಾರ್ಪಿತವಾಗುವಂತೆ ಮಾಡಿರಿ," ಎಂದಿಷ್ಟೆ ಹೇಳುತ್ತಿದ್ದರು. "ಶಿವನು ಕೊಡುತ್ತಾನೆ; ಶಿವನು ತೆಗೆದುಕೊಳ್ಳುತ್ತಾನೆ. ನಾನು ಬಂದಾಗ ಏನನ್ನೂ ತರಲಿಲ್ಲ; ಹೋಗುವಾಗ ಏನನ್ನೂ ಕೊಂಡು ಹೋಗುವುದಿಲ್ಲ" ಎಂಬುವು ಅವರ ಸುಪ್ರಸಿದ್ಧ ವಾಕ್ಯಗಳು. ಯಾವ ವಿಧವಾದ ಜಾತಿ, ಮತ, ಕೋಮುಗಳ ಭೇದಭಾವವೂ ಇಲ್ಲದೆ ಸಕಲ ಪ್ರಾಣಿಗಳ ಹಿತಾರ್ಥವಾಗಿ ಧರ್ಮಗಳನ್ನು ಮಾಡುತ್ತಿದ್ದರು. ಇಂತಹ ಮಹನೀಯರ ಅದ್ಭುತ ತ್ಯಾಗಗಳನ್ನು ಕಂಡು ಈಚೆಗೆ ಬ್ರಿಟಿಷ್ ಸರ್ಕಾರದವರೂ ಕೂಡ ಅವರಿಗೆ ರಾವ್‌ಬಹದ್ದೂರ್ ಎಂಬ ಬಿರುದನ್ನು ಕೊಟ್ಟರು.

ಈ ಪ್ರಕಾರವಾಗಿ ಅನೇಕ ಸತ್ಕಾರ್ಯಗಳನ್ನು ಮಾಡಿ ಸಕಲಜನರ ಪ್ರೀತಿಗೌರವಗಳಿಗೂ ಪಾತ್ರರಾಗಿ ಮನುಷ್ಯತ್ವದ ಉತ್ತಮ ಆದರ್ಶವನ್ನು ತೋರಿ ಶ್ರೀ. ಬಸುಮಯ್ಯನವರು ತಮ್ಮ ಎಪ್ಪತ್ತೈದನೆಯ ವಯಸ್ಸಿನಲ್ಲಿ ಪುಣ್ಯತರವಾದ ಸೋಮವಾರ ಏಕಾದಶಿದಿನ ಶಾಂತಚಿತ್ತದಿಂದ ಪರಮಾತ್ಮನ ಪಾದಾರವಿಂದಾಭಿಮುಖರಾದರು.

ಅವರ ಆತ್ಮಕ್ಕೆ ಶಾಂತಿಯನ್ನಿತ್ತು ಇಂತಹ ಮಹನೀಯರು ನಮ್ಮ ನಾಡಿನಲ್ಲಿ ಇನ್ನೂ ಅನೇಕರು ಉದ್ಭವಿಸುವಂತೆ ಅನುಗ್ರಹಿಸಲೆಂದು ಭಗವಂತನನ್ನು ಪ್ರಾರ್ಥಿಸೋಣ.

CC-0. Jangamwadi Math Collection. Digitized by eGangotri

# ವಾದಭೂಮಿ

## ಕನ್ನಡ ಛಂದಸ್ಸಿನ ಇತಿಹಾಸ

ಲೇಖಕರು:—ಕುಲಕರ್ಣಿ ಪ್ರಲ್ಹಾದರಾಯರು, ಬೆಳಗಾಂವಿ

ಕನ್ನಡವು ಗ್ರಂಥಸ್ಥಭಾಷೆಯಾಗಿ ಕನ್ನಡಿಗರು ಕಾವ್ಯಗಳನ್ನು ರಚಿಸತೊಡಗಿದಾಗ ಸಂಸ್ಕೃತದ ವೃತ್ತಗಳನ್ನೇ ಉಪಯೋಗಿಸಿದರು. ಕನ್ನಡಛಂದಸ್ಸೆಂದರೆ ಸಂಸ್ಕೃತ ವೃತ್ತಗಳ ಲಕ್ಷಣಗಳನ್ನೊಳಗೊಂಡ ಹೊತ್ತಿಗೆಯೇ ಆಯಿತು. ಹೀಗಿದ್ದರೂ ತಮ್ಮ ನಾಡಿನಲ್ಲಿ ವಿಶೇಷವಾಗಿ ರೂಢಿಯಲ್ಲಿರುವ ದಾಟಿಗಳನ್ನೂ ಪೂರ್ಣವಾಗಿಬಿಡುವುದು ಅವರಿಂದಾಗಲಿಲ್ಲ. ಅವುಗಳ ಮೂಲದಾಟಿಯನ್ನು ಲಕ್ಷ್ಯದಲ್ಲಿ ತಂದು ನಿಯಮಬದ್ಧವಾಗಿ ಮಾಡಿ ಅವುಗಳನ್ನೂ ತಮ್ಮ ಗ್ರಂಥಗಳಲ್ಲಿ ಉಪಯೋಗಿಸಿಕೊಂಡರು. ಇಂತಹ ವೃತ್ತಗಳು ಪ್ರಾಚೀನ ಜೈನಕಾವ್ಯಗಳಲ್ಲಿ ಅಲ್ಲೊಂದಿಲ್ಲೊಂದು ದೃಷ್ಟಿಗೆ ಬೀಳುವುವು. ಈ ರೀತಿಯಲ್ಲಿ ಸಂಸ್ಕೃತಕ್ಕೆ ಭಿನ್ನವಾದ ಅಚ್ಚಗನ್ನಡ ಛಂದಸ್ಸೊಂದು ಪೂರ್ವದಿಂದಲೂ ಬೆಳೆದುಬಂದಿತು. ಅದಿಕ್ಕಿಂದು ನಾನಾ ಬಗೆಯ ಶಾಖೆಗಳೊಡೆದಿವೆ. ಇಂದಿಲ್ಲ ನಾಳೆ ದೊಡ್ಡ ವೃಕ್ಷವಾಗುವುದರಲ್ಲಿ ಸಂದೇಹವಿಲ್ಲ.

ನಾಗವರ್ಮನು (ಕ್ರಿ. ಶ. ೯೮೪ – ೧೦೫೨ರ ನಡುವೆ) ಛಂದೋಂಬುಧಿಯ ಪಂಚಮಾಧಿಕಾರದಲ್ಲಿ "ಸರ್ವವಿಷಯ ಭಾಷಾದಿಗಳಂ ನಿರ್ಣಯಮಾಗಿರಿಪಿದೆನಿಂ ಕರ್ಣಾಟವಿಷಯಜಾತಿಯಂ ಕೇಳ್ ಪೇಳ್ವೆಂ" ಎಂದು ಹೇಳಿ ಮದನವತಿ ಅಕ್ಕರ, ಚೌಪದಿ, ಗೀತಿಕೆ, ತ್ರಿಪದಿ, ಉತ್ಸಾಹ, ಷಟ್ಪದಿ, ಅಕ್ಕರಿಕೆ ಛಂದೋವತಂಸ ಎಂಬ ವೃತ್ತಗಳ ಲಕ್ಷಣ ಕೊಟ್ಟಿರುವನು. ಅಧಿಕಾರದ ಕೊನೆಯಲ್ಲಿಯೂ "ಕರ್ಣಾಟವಿಷಯ ಜಾತಿಯೆಂಬ ಪಂಚಮಾಧಿಕಾರಂ ಸಮಾಪ್ತಂ" ಎಂದಿರುವನು. ಇದರಿಂದ ಈ ವೃತ್ತಗಳೂ ಈ ವೃತ್ತಗಳನ್ನು ಮಾಡುವ ಬ್ರಹ್ಮ ವಿಷ್ಣು ರುದ್ರ ಗಣಗಳೂ ಅಚ್ಚಗನ್ನಡದವೆಂಬುದು ಸ್ಪಷ್ಟವಿದೆ. ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಿಕಗಳೆಂಬ ಷಟ್ಪದಿಗಳು ಆಗ ಇನ್ನೂ ಮೂರ್ತಸ್ವರೂಪಕ್ಕೆ ಬಂದಿರಲಿಲ್ಲ.

ಕನ್ನಡದ ದಾಟಿಗಳನ್ನು ತೆಗೆದುಕೊಂಡು ನಿಯಮಬದ್ಧವಾಗಿ ಮಾಡಿ ವೃತ್ತಗಳ ಸ್ವರೂಪವನ್ನು ಕೊಡುವ ಕೆಲಸವು ಯಾವ ಕಾಲದಲ್ಲಿ ನಡೆಯಿತೆಂಬುದನ್ನು ಸ್ಪಷ್ಟವಾಗಿ ಹೇಳಲಿಕ್ಕೆ ಬರುವುದಿಲ್ಲ. ಕ್ರಿ. ಶ. ೭೦೦ರ ಸುಮಾರಿನಲ್ಲಿ ಹುಟ್ಟಿದ ಬಾದಾಮಿಯ ಶಾಸನದಲ್ಲಿ ಲಕ್ಷಣಬದ್ಧವಾದ ತ್ರಿಪದಿಯು ದೊರೆಯುವುದರಿಂದ ಅದಕ್ಕೂ ಪೂರ್ವದಲ್ಲಿಯೆ ಕನ್ನಡಛಂದಸ್ಸಿಗೆ ವ್ಯವಸ್ಥಿತವಾದ ಸ್ವರೂಪವು ಬಂದಿದ್ದಿತೆಂದು ಹೇಳಬಹುದು.

ಕನ್ನಡದ ಛಂದಸ್ಸು ನಿಯಮಬದ್ಧವಾದುದು ಅಕ್ಷರಗಳ ಎಣಿಕೆಯ ಮೇಲೆಯೆ, ಮಾತ್ರೆಗಳ ಎಣಿಕೆಯ ಮೇಲೆಯೆ? ಎಂದರೆ ಕನ್ನಡಿಗರಲ್ಲಿ–ದ್ರಾವಿಡರಲ್ಲಿ–ಸ್ವಾಭಾವಿಕವಾಗಿರುವ ದಾಟಿಯನ್ನೇ ಲಕ್ಷಕ್ಕೆ ತಂದು ಅದಕ್ಕೆ ವ್ಯವಸ್ಥಿತ ಸ್ವರೂಪ ಕೊಡುವುದರಲ್ಲಿ ಬಂದಿತೆಂದು ಹೇಳಬಹುದು. ಈ ಬಗೆಯ ಛಂದಸ್ಸು ದ್ರಾವಿಡಭಾಷೆಗಳಿಂದ ತಮಿಳು ತೆಲುಗುಗಳಲ್ಲಿಯೂ ಉಂಟು. ನಿಯಮಬದ್ಧವಾಗಿ ಮಾಡುವಾಗ ಬೇರೆ ಬೇರೆ ಭಾಷೆಗಳಲ್ಲಿ ಅಲ್ಪಸ್ವಲ್ಪ ಹೆಚ್ಚುಕಡಿಮೆಯಾಗಿದೆ, ಇಷ್ಟೆ. ನಾವು ಕನ್ನಡಛಂದಸ್ಸಿನ ಮೂಲಸ್ವರೂಪವನ್ನು ನೋಡಬೇಕಾದರೆ ಉಳಿದ ದ್ರಾವಿಡ ಭಾಷೆಗಳ ಛಂದಸ್ಸನ್ನೂ ಅರಿತುಕೊಳ್ಳಬೇಕು.

### ತಮಿಳು ಛಂದಸ್ಸು.*

ಅಚ್ಚಗನ್ನಡ, ಶುದ್ಧತೆಲುಗು ಛಂದಸ್ಸುಗಳಲ್ಲಿ ಗುರು, ಲಘು, ಗಣ ಮೊದಲಾಗಿ ಸಂಸ್ಕೃತ ಶಬ್ದಗಳಲ್ಲದೆ ಉಳಿದ ಪಾರಿಭಾಷಿಕ ಶಬ್ದಗಳು ಬರುವುದಿಲ್ಲ; ತಮಿಳು ಛಂದಸ್ಸಿನಲ್ಲಿ ಪಾರಿಭಾಷಿಕ ಶಬ್ದಗಳ ಗೊಂದಲವು ಬಹಳವಾಗಿದೆ. ತಮಿಳು ಭಾಷೆಯಲ್ಲಿ ಗಣಕ್ಕೆ 'ಸೀಯರ' ಎಂದು ಹೆಸರು.

* ತಮಿಳು ಛಂದಸ್ಸು ಮಹಾರಾಷ್ಟ್ರೀಯ ಜ್ಞಾನಕೋಶವನ್ನವಲಂಬಿಸಿ ಬರೆಯಲ್ಪಟ್ಟಿದೆ.

CC-0. Jangamwadi Math Collection. Digitized by eGangotri

ಈ ನೀಯರದ ಅವಯವಗಳು ಸಂಸ್ಕೃತದಂತೆ ಒಂದೊಂದು ಅಕ್ಷರದಿಂದಲೇ ಆಗುವುದಿಲ್ಲ; ಕೆಲವೆಡೆ ಒಂದಕ್ಷರದ ಅವಯವವಿರುತ್ತದೆ. ಈ ಅವಯವಗಳಿಗೆ 'ಅಸಯಿ' ಎಂದು ಹೆಸರು. ಒಂದಕ್ಷರದ ಅವಯವವು 'ನರೆ ಅಸಯಿ' ಎನಿಸುತ್ತದೆ; ಎರಡಕ್ಷರದ ಅವಯವವು 'ನಿರೆ ಅಸಯಿ' ಎನಿಸುತ್ತದೆ. ಗುರುವಿಗೆ ತಮಿಳಿನಲ್ಲಿ 'ನೇದಿಲ್' ಎಂದು ಹೆಸರು; ಲಘುವಿಗೆ 'ಕುರಿಲ್' ಎಂದು ಹೆಸರು.

ನರೆ ಅಸಯಿಯು ನಾಲ್ಕು ತರದಿಂದಾಗುತ್ತದೆ (೧) ಒಂದು ಲಘ್ವಕ್ಷರದಿಂದ-ಲ.(೨)ಒಂದು ಲಘ್ವಕ್ಷರ ಹಾಗೂ ಅದರ ಮುಂದಿರುವ ಸ್ವರರಹಿತ ವ್ಯಂಜನದಿಂದ – ಲವ್. (೩) ಒಂದು ಗುರ್ವಕ್ಷರದಿಂದ – ಗಾ (೪) ಒಂದು ಗುರ್ವಕ್ಷರ ಹಾಗೂ ಅದರ ಮುಂದಿರುವ ಸ್ವರರಹಿತ ವ್ಯಂಜನದಿಂದ–ಗಾಮ್.

ನಿರಯಿ ಅಸಯಿಯೂ ನಾಲ್ಕು ತರದಿಂದಾಗುತ್ತದೆ. (೧) ಎರಡು ಏಕತ್ರ ಲಘುಗಳಿಂದ (೨) ಎರಡು ಏಕತ್ರ (ಕೂಡಿ ಉಚ್ಚರಿಸಲ್ಪಡುವ) ಲಘುಗಳು ಹಾಗೂ ಅವುಗಳ ಮುಂದಿರುವ ಸ್ವರರಹಿತ ವ್ಯಂಜನಗಳಿಂದ (೩) ಏಕತ್ರವಾದ ಒಂದು ಲಘು ಹಾಗೂ ಅದರ ಮುಂದಿರುವ ಗುರುವಿನಿಂದ (೪) ಏಕತ್ರವಾದ ಒಂದು ಲಘು ಒಂದು ಗುರು ಹಾಗೂ ಅವುಗಳ ಮುಂದಿರುವ ಸ್ವರರಹಿತ ವ್ಯಂಜನದಿಂದ.

ಸಂಸ್ಕೃತದಲ್ಲಿಯೂ ಕನ್ನಡ-ತೆಲುಗುಗಳಲ್ಲಿಯೂ ಗಣಗಳ ಲಕ್ಷಣ ಹೇಳುವಾಗ ಸ್ವರರಹಿತ ವ್ಯಂಜನಗಳನ್ನು ಹಿಡಿಯುವುದಿಲ್ಲ; ಸ್ವರರಹಿತ ವ್ಯಂಜನವು ಒಂದಲ್ಲಿ ಅದರ ಹಿಂದಿನ ಅಕ್ಷರವನ್ನು ಗುರುವಾಗಿ ತಿಳಿದು ಅದನ್ನು ಬಿಟ್ಟು ಬಿಡುವರು. ಎಂದರೆ ಆ ಸ್ವರರಹಿತ ವ್ಯಂಜನವು ಮುಂದಿನ ಅಕ್ಷರದಲ್ಲಿ ಕೂಡಿ ಸಂಯುಕ್ತಾಕ್ಷರವೊಂದು ಆಗಿದೆಯೆಂದೇ ಭಾವನೆಯನ್ನಿಟ್ಟುಕೊಂಡಿರುವರಲ್ಲಿ. ತಮಿಳಿನಲ್ಲಿ ಆ ಸ್ವರರಹಿತ ವ್ಯಂಜನವನ್ನು ಮುಂದಿನ ಅಕ್ಷರದಲ್ಲಿ ಕೂಡಿಸಿ ಎಣಿಸುವರು. ಹೇಗಿದ್ದರೂ ಅದಕ್ಕೆ ಸ್ವತಂತ್ರ ಅಸ್ತಿತ್ವವು ಇರುವುದಾಗಿ ತಿಳಿಯುವುದಿಲ್ಲ. ಈ ಸ್ವರರಹಿತ ವ್ಯಂಜನವನ್ನು ಬಿಟ್ಟರೆ ಒಂದಕ್ಷರದಿಂದ ಎರಡು ಬಗೆಯ ನರೆ ಅಸಯಿಯೂ ಏಕತ್ರವಾಗುಚ್ಚರಿಸಲ್ಪಡುವ ಎರಡಕ್ಷರಗಳಿಂದ ಎರಡು ಬಗೆಯ ನಿರೆ ಅಸಯಿಯೂ ಆಗುವುವೆಂಬುದು ಸ್ಪಷ್ಟವಾಗುವುದು.

ಗಣದ ಆರಂಭದಲ್ಲಿ ಇಲ್ಲವೆ ಮಧ್ಯದಲ್ಲಿ ಬರುವ ಲಘುಗಳಿಂದ ಎರಡಕ್ಷರದ ನಿರಯಿಯಾಗುತ್ತದೆ. ಲಘ್ವಕ್ಷರವು ಗಣದ ಆರಂಭದಲ್ಲಿ ಇಲ್ಲವೆ ಮಧ್ಯದಲ್ಲಿ ಬಂದಾಗ ಅದು ಸ್ವತಂತ್ರವಾಗಿ ಒಂದು ಅವಯವವಾಗುವುದಿಲ್ಲ. ಅದರ ಮುಂದಿರುವ ಅಕ್ಷರದೊಡನೆ ಕೂಡಿಕೊಂಡೇ – ಅದು ಲಘುವೇ ಇರಲಿ ಗುರುವೇ ಇರಲಿ – ಒಂದು ಅವಯವವಾಗುತ್ತದೆ. ಈ ಎರಡಕ್ಷರದ ಅವಯವವೇ ನಿರಯಿ ಅಸಯಿಯು. ಗಣದ ಅಂತ್ಯದಲ್ಲಿರುವ ಲಘುವು ಮಾತ್ರ ಸ್ವತಂತ್ರವಾಗಿ ಒಂದು ಅವಯವವಾಗುತ್ತದೆ. ಆಗ ಅದು ನರೆ ಅಸಯಿಯಾಗುತ್ತದೆ. ಎಂದರೆ ಒಂದು ಲಘ್ವಕ್ಷರದ ನರೆ ಅಸಯಿಯು ಗಣದ ಅಂತ್ಯದಲ್ಲಿ ಮಾತ್ರ ಇರುತ್ತದೆ.

ಸಂಸ್ಕೃತದ ಅಕ್ಷರ ಗಣಗಳು ಮೂರಕ್ಷರಗಳಿಂದಾಗುವಂತೆ ತಮಿಳು ಗಣಗಳು ಎರಡವಯವಗಳಿಂದಾಗಲಿ ಮೂರವಯವಗಳಿಂದಾಗಲಿ ಆಗುತ್ತವೆ. ಸಂಸ್ಕೃತ ಛಂದಸ್ಸಿನಲ್ಲಿ ಎರಡಕ್ಷರದ ಪ್ರಸ್ತಾರದಿಂದ ನಾಲ್ಕು ತರದ ವೃತ್ತಗಳೂ ಮೂರಕ್ಷರಗಳ ಪ್ರಸ್ತಾರದಿಂದ ಎಂಟು ವೃತ್ತಗಳೂ ಹುಟ್ಟುವಂತೆ ಎರಡವಯವದಿಂದ ನಾಲ್ಕು ಗಣಗಳೂ ಮೂರವಯವಗಳಿಂದ ಎಂಟು ಗಣಗಳೂ ಹುಟ್ಟುತ್ತವೆ. ತಮಿಳಿನಲ್ಲಿ ಅವಕ್ಕೆ ಬೇರೆ ಬೇರೆ ಹೆಸರುಗಳೂ ಉಂಟು.

**ಎರಡವಯವಗಳಿಂದಾಗುವ ಗಣಗಳು**

| | ೧ | ೨ | ಹೆಸರುಗಳು. |
|---|---|---|---|
| ೧ | ನರೆ | ನರೆ | ತೇಮ್‌ಸೀಯರ |
| ೨ | ನಿರಯಿ | ನರೆ | ಪುಲಿಮ್‌ಸೀಯರ |
| ೩ | ನರೆ | ನಿರಯಿ | ಕುವಿಲಮ್‌ಸೀಯರ |
| ೪ | ನಿರಯಿ | ನಿರಯಿ | ಕರುವಿಲಮ್‌ಸೀಯರ |

**ಮೂರವಯವದ ಗಣಗಳು**

| | ೧ | ೨ | ೩ | ಹೆಸರು. |
|---|---|---|---|---|
| ೧ | ನರೆ | ನರೆ | ನರೆ | ತೇಮಂಗಯಿ |
| ೨ | ನಿರಯಿ | ನರೆ | ನರೆ | ಪುಲಿಮಂಗಯಿ |
| ೩ | ನರೆ | ನಿರಯಿ | ನರೆ | ಕುವಿಲಂಗಯಿ |
| ೪ | ನಿರಯಿ | ನಿರಯಿ | ನರೆ | ಕರುವಿಲಂಗಯಿ |
| ೫ | ನರೆ | ನರೆ | ನಿರಯಿ | ತೇಮಂಗನಿ |
| ೬ | ನಿರಯಿ | ನರೆ | ನಿರಯಿ | ಪುಲಿಮಂಗನಿ |
| ೭ | ನರೆ | ನಿರಯಿ | ನಿರಯಿ | ಕುವಿಲಂಗನಿ |
| ೮ | ನಿರಯಿ | ನಿರಯಿ | ನಿರಯಿ | ಕರುವಿಲಂಗನಿ |



CC-0. Jangamwadi Math Collection. Digitized by eGangotri

## ಅಚ್ಚಗನ್ನಡ–ಶುದ್ಧತೆಲುಗು ಛಂದಸ್ಸು

ಅಚ್ಚಗನ್ನಡ,-ಶುದ್ಧತೆಲುಗು ಛಂದಸ್ಸುಗಳಲ್ಲಿ ವಿಶೇಷ ಹೆಚ್ಚು ಕಡಿಮೆಯಿಲ್ಲ. ತೆಲುಗಿನ ಸೂರ್ಯಗಣವೇ ಕನ್ನಡದ ಬ್ರಹ್ಮಗಣ; ತೆಲುಗಿನ ಇಂದ್ರ ಚಂದ್ರ ಗಣಗಳೇ ಕನ್ನಡದ ವಿಷ್ಣು ರುದ್ರ ಗಣಗಳು.

ತೆಲುಗು ಛಂದಸ್ಸಿನಲ್ಲಿ ಸೂರ್ಯ ಇಂದ್ರ ಚಂದ್ರ ಗಣಗಳ ಲಕ್ಷಣವು ಈ ಪ್ರಕಾರ ಹೇಳಲ್ಪಟ್ಟಿದೆ:—

"ಮಿತ್ರಾ ನಲಗಾವಿಂದ್ರಾ ಸಲನಗ ಸಲ ಭರತಾ ಶ್ಚಂದ್ರಾ ಮಲಘಃ ರಲ ರಗ ತಲ ತಗ ಸವ ಸಹ ಭಲ ಸಲಲ ನಲಲ ನಗಗ ಸವ ಸಹಾಃ"

—ಅಪ್ಪ ಕವೀಯಮು. ಆ. ೪ ಸೂ. ೫

ನಾಗವರ್ಮಛಂದಸ್ಸಿನಲ್ಲಿ ಹೇಳಿದ ಕನ್ನಡ ಬ್ರಹ್ಮ ವಿಷ್ಣು ರುದ್ರ ಗಣಗಳ ಲಕ್ಷಣವಿದು:—

ಕರಪುರವಾರ್ಧಿಯೊಳಗೆ ಗುರುವಾ ಗುರುವಿಂದ ಮಧೋವಿಭಾಗಮಾ।
ಗಿರೆ ಲಘುಯುಗ್ಮಮಾಕ್ರಮದೆ ಮುಂತೆ ಸಮಂ ಕಡೆವಟ್ಟ ಜಿಣ್ಪಿನೊಳ್ ॥
ಬರೆ ಲಘುವೊಂದೆ ಪಿಂತೆಗುರು ಮುಂತೆ ಸಮಂ ಮೊದಲಿಂತಗುಳ್ದಪಂ।
ಕರುಹ ದಳೇಕ್ಷಣೇ ಗಣಮನಿಂತಿಡು ಸರ್ವಲಘುತ್ವಮಪ್ಪಿಸಂ ॥

—ಛಂದೋಂಬುಧಿ

ಸಂಸ್ಕೃತದ ಎರಡಕ್ಷರದ ಅತ್ಯುಕ್ತಾಛಂದದ ಪ್ರಸ್ತಾರದಲ್ಲಿ ಮೊದಲು ಲಘುವಿರುವ ಕಡೆಗಳಲ್ಲಿ ಅವಕ್ಕೆ ಜೊತೆಯಾಗಿ ಇನ್ನೊಂದು ಸೇರಿಸಿದರೆ ಹುಟ್ಟುವ ನಾಲ್ಕು ಗಣಗಳು ಕನ್ನಡದ ಬ್ರಹ್ಮಗಣಗಳಾಗುವುವು. ಇದರಂತೆ ಮೂರಕ್ಷರ ನಾಲ್ಕಕ್ಷರ ಛಂದಗಳಿಂದ ಹುಟ್ಟುವ ಗಣಗಳು ಕ್ರಮವಾಗಿ ವಿಷ್ಣು ರುದ್ರ ಗಣಗಳಾಗುವುವು. ಪ್ರಸ್ತಾರಕ್ರಮದಲ್ಲಿ ಹುಟ್ಟುವ ಗಣಗಳಲ್ಲಿ ಮೊದಲಿನವೆರಡನ್ನು ಬಿಟ್ಟರೆ ಉಳಿಯುವುವು ತೆಲುಗಿನಲ್ಲಿ ಕ್ರಮವಾಗಿ ಸೂರ್ಯ ಇಂದ್ರ ಚಂದ್ರ ಗಣಗಳೆನಿಸಿಕೊಳ್ಳುವುವು.

**ಬ್ರಹ್ಮ (ಸೂರ್ಯ) ಗಣ.**

೧ ∪ ∪
೨ ॥ ∪
೩ ∪ |
೪ ॥ |

**ವಿಷ್ಣು (ಇಂದ್ರ) ಗಣ**

೧ ∪ ∪ ∪
೨ ॥ ∪ ∪
೩ ∪ | ∪
೪ ॥ | ∪
೫ ∪ ∪ |
೬ ॥ ∪ |
೭ ∪ | |
೮ ॥ | |

**ರುದ್ರ (ಚಂದ್ರ) ಗಣ.**

೧ ∪ ∪ ∪ ∪ ∪
೨ ॥ ∪ ∪ ∪
೩ ∪ | ∪ ∪
೪ ॥ | ∪ ∪
೫ ∪ ∪ | ∪
೬ ॥ ∪ | ∪
೭ ∪ | | ∪
೮ ॥ | | ∪
೯ ∪ ∪ ∪ |
೧೦ ॥ ∪ ∪ |
೧೧ ∪ | ∪ |
೧೨ ॥ | ∪ |
೧೩ ∪ ∪ | |
೧೪ ॥ ∪ | |
೧೫ ∪ | | |
೧೬ ॥ | | |

ತಮಿಳುಛಂದಸ್ಸಿಗೂ ಈ ತೆಲುಗು-ಕನ್ನಡಛಂದಸ್ಸಿಗೂ ಹೆಚ್ಚು ಕಡಿಮೆಯೆಂದರೆ ತಾಮಿಳಿನಲ್ಲಿ ಎರಡಕ್ಷರದ ಅವಯವವು ಗಣಗಳ ಮಧ್ಯದಲ್ಲಿಯೂ ಬರುವುದು. ಆದರೆ ಕನ್ನಡದಲ್ಲಿ ಗಣದ ಆದಿಯಲ್ಲಿ ಮಾತ್ರ ಬರುವುದು. ಎರಡಕ್ಷರದ ಅವಯವವು ತಾಮಿಳಿನಲ್ಲಿಲಘುಗುರುವಾಗಿಯೂ ಇರುವುದು; ಕನ್ನಡದಲ್ಲಿ ಎರಡು ಲಘುಗಳಿಂದಲೇ ಆಗುವುದು; ಗಣದ ಮಧ್ಯದಲ್ಲಿ ಬರುವ ಪ್ರತಿಯೊಂದು ಲಘುವೂ ಸ್ವತಂತ್ರವಾದ ಅವಯವವೇ ಆಗುವುದು. ತಾಮಿಳಿನಲ್ಲಿ ೨–೩ ಅವಯವಗಳಿಂದ ಮಾತ್ರ ಗಣಗಳು ಆಗುತ್ತವೆ. ಕನ್ನಡ-ತೆಲುಗುಗಳಲ್ಲಿ ೪ ಅವಯವಗಳಿಂದಲೂ ಗಣಗಳಾಗಿವೆ. ಆದರೆ ಈ ನಾಲ್ಕನೆಯ ಅವಯವವು ಬಹುತರವಾಗಿ ಚರಣದ ಕೊನೆಯಲ್ಲಿ ಇರುತ್ತದೆ. ಎಂದರೆ ಒಂದು ವಿಷ್ಣುಗಣವೂ ಮುಂದಿರುವ ಗುರುವೂ ಕೂಡಿ ಈ ರುದ್ರಗಣವೆಂದು ತಿಳಿಯುವುದರಲ್ಲಿ ಬಾದಂತೆ ತೋರುತ್ತದೆ. ಎರಡು ಇಲ್ಲವೆ ಮೂರವಯವಗಳ ಗಣಗಳೇ ಕನ್ನಡ ತೆಲುಗುಗಳಲ್ಲಿ ಇರುವುವೆಂದು ತಿಳಿದರೆ ಅದೇನು ತಪ್ಪಾಗಲಿಕ್ಕಿಲ್ಲ.

ಇನ್ನು ಎರಡಕ್ಷರದ ಅವಯವ ಒಂದಕ್ಷರದ ಅವಯವಗಳು ಹೇಗೆ ಆಗುತ್ತವೆಂಬುದನ್ನೂ ಬೇರೆ ಬೇರೆ ಭಾಷೆಗಳಲ್ಲಿ ಈ ಗಣಗಳ ಸ್ವರೂಪವು ಬೇರೆ ಬೇರೆಯಾಗಿ ಏಕಾಯಿತೆಂಬುದನ್ನೂ ನೋಡೋಣ.

ಊರು ಸನಿಹದಲಿಲ್ಲ ನೀರೊಂದು ಗಾವುದವು
ಸೇರಿ ನಿಲ್ಲುವರೆ ನೆರಳಿಲ್ಲ। ಬಡಗಲನ
ದಾರಿ ಬೇಡೆಂದ ಸರ್ವಜ್ಞ.

CC-0. Jangamwadi Math Collection. Digitized by eGangotri

ಆನೆ ನೀರಾಟವೊಳು ವಿಶಾಸ ಕಂಪಂಜುಪದೆ
ಹೀಸ ಮಾಸವರ ಬಿರುಸುಡಿಗೆ । ತತ್ವದ
ಜ್ಞಾನಿಯಂಜುವನೆ ಸರ್ವಜ್ಞ.

ಇವೆರಡು ಸರ್ವಜ್ಞ ತ್ರಿಪದಿಗಳು. ಈ ತ್ರಿಪದಿಗಳನ್ನು ಅಚ್ಚಗನ್ನಡ ದಾಟಿಯಾದ ಛಲರೆ (ಬಲೂರಿ) ಪದದಂತೆ ಎಂಪರೆ ಕೆಲವೆಡೆ ಒಂದೊಂದೇ ಅಕ್ಷರವು ಕೆಲವೆಡೆ ಎರಡೆರಡು ಅಕ್ಷರಗಳು ಕೂಡಿ ಉಚ್ಚರಿಸಲ್ಪಡುವುವು. ಅದು ಈ ಪ್ರಕಾರ—

ಊ – ರೂ – ಸಸಿ । ಹದ – ಲೀ – ಲ್ಲಾ
ನೀ – ರೊಂ – ದೂ । ಗಾ – ವುದ – ವೂ
ಸೇ – ರೀ – ಸೀ । ಲ್ಲುವ–ರೇ–ऽऽ । ನೆರ–ಳೀ–ಲ್ಲಾ
ಸೇ – ರೀ – ಸೀ । ಲ್ಲುವ – ರೇ ऽऽ । ನೆರ–ಳೀ–ಲ್ಲಾ ।
ಬಡ – ಗಲ – ದ ।
ದಾ – ರೀ – ಬೇ – ಡೆಂ – ದ ऽऽ । ಸ – ರ್ವ – ಜ್ಞ
ಆ – ನೇ – ನೀ । ರಾ – ಟವೊ – ಳು ।
ವಿಶಾ - ಸ - ಕಂ । ಪಂ – ಜುವ – ದೇ
ಹೀ – ಸ – ಮಾ । ಸವ–ರ– ऽऽ । ಬಿರು–ಸುಡಿ–ಗೆ
ಹೀ – ಸ – ಮಾ । ಸವ–ರ– ऽऽ । ಬಿರು – ಸುಡಿ–ಗೆ
ತ – ತ್ವ – ದ
ಜ್ಞಾ – ನಿ – ಯಂ । ಜುವ–ನೇ– ऽऽ । ಸ–ರ್ವ–ಜ್ಞ.

ಇಲ್ಲಿ ಕೆಲವೆಡೆ ಎರಡು ಲಘುಗಳನ್ನು ಏಕತ್ರವಾಗಿಯೂ ಕೆಲವೆಡೆ ಲಘುವನ್ನೇ ಎಳೆದು ಗುರುವನ್ನಾಗಿಯೂ ಉಚ್ಚರಿಸಿದುದು ಕಂಡುಬರುವುದು. ಏನಿದ್ದರೂ ಮೂರು ಅವಯವಗಳಿಗೆ ಒಂದು ತಾಳ ಮುಗಿಯುವುದು. ಆ ತಾಳವೇ ಒಂದು ಗಣ. ಮೂರವಯವದ ತಾಳಕ್ಕೆಯೆ ವಿಷ್ಣುಗಣ ಎಂದು ಹೆಸರು. ಕೆಲವೆಡೆ ಎರಡೇ ಅವಯವಗಳಿದ್ದು ಮುಂದೆ ರಾಗ ಮಾಡಲು ಎಳೆಯಬೇಕಾಗುತ್ತದೆ. ಅಲ್ಲಿ ಎರಡೇ ಅವಯವಗಳಿರಬೇಕು. ಆ ಎರಡವಯವಗಳ ಗಣವೇ ಬ್ರಹ್ಮಗಣ. ಇಲ್ಲಿ ಎರಡಕ್ಷರಗಳ ಅವಯವಗಳು ಗಣದ ಪ್ರಾರಂಭದಲ್ಲಿಯಷ್ಟೇ ಬಂದಿಲ್ಲ; ಗಣದ ಮಧ್ಯದಲ್ಲಿಯೂ ಅಂತ್ಯದಲ್ಲಿಯೂ ಸಹ ಬಂದಿವೆ. ದ್ರಾವಿಡ ದಾಟಿಯಲ್ಲಿ ಹೀಗೆ ಮನಸಿಗೆ ಬಂದಲ್ಲಿ ಎರಡಕ್ಷರಗಳ ಅವಯವಗಳು ಬರುತ್ತವೆ. ದಾಟಿ ಸರಿಯಾದರೆ ತೀರಿತು. ಹೀಗಿದ್ದರೂ ಈ ದ್ರಾವಿಡ ದಾಟಿಗಳಿಗೆ ಛಂದಸ್ಸಿನ ಸ್ವರೂಪ ಕೊಡುವಾಗ ಕನ್ನಡಿಗರು ಈ ಎರಡಕ್ಷರದ ಅವಯವವು ಗಣದ ಪ್ರಾರಂಭದಲ್ಲಿ ಮಾತ್ರ ಬರಬಹುದೆಂದೂ ಗಣದ ಮಧ್ಯದಲ್ಲಿ ಬರುವ ಪ್ರತಿಯೊಂದು ಲಘುವನ್ನೂ ಎಳೆದು ಒಂದು ಸ್ವತಂತ್ರ ಅವಯವವನ್ನೇ ಮಾಡಿಕೊಳ್ಳಬೇಕೆಂದೂ ನಿಯಮಮಾಡಿಕೊಂಡರು. ಛಂದಸ್ಸಿಗೆ ಅನುಸರಿಸಿ ಪದ್ಯಗಳನ್ನು ಮಾಡುವವರು ಈ ನಿಯಮವನ್ನು ಪಾಲಿಸಿದರು. ಆದರೂ ಛಂದಸ್ಸನ್ನು ಹಿಡಿಯದೆ ದಾಟಿಯನ್ನು ಮಾತ್ರ ಹಿಡಿದು ಪದ್ಯಗಳನ್ನು ರಚಿಸಿದವರಲ್ಲಿ ಈ ನಿಯಮವು ಕಂಡಬರುವುದಿಲ್ಲ. ಸರ್ವಜ್ಞನು ಈ ಛಂದಸ್ಸಿನ ನಿಯಮವನ್ನು ಪಾಲಿಸಿದವನಲ್ಲ. ತಾಮಿಳಿನಲ್ಲಿ ಗಣದ ಮೊದಲಲ್ಲಾಗಲಿ ಮಧ್ಯದಲ್ಲಾಗಲಿ ಬರುವ ಲಘುವನ್ನು ಸ್ವತಂತ್ರವಾಗಿ ಅವಯವ ಮಾಡಿಕೊಳ್ಳಲೇಬಾರದೆಂದೂ ಅದರ ಮುಂದಿನ ಅಕ್ಷರ ಕೂಡಿಸಿಯೇ ಅವಯವ ಮಾಡಿಕೊಳ್ಳಬೇಕೆಂದೂ ನಿಯಮಮಾಡಿಕೊಂಡರು. ಮುಂದಿರುವ ಅಕ್ಷರವು ಗುರುವಿರಬಹುದೆಂದೂ ಹೇಳಿದರು. ಆದರೆ ಕನ್ನಡಿಗರು ಎರಡು ಲಘುಗಳೇ ಇರಬೇಕೆಂದರು. ದಾಸರಪದಗಳನ್ನು ಎನ್ನುವಾಗಲೂ ಈ ಎರಡಕ್ಷರದ ಅವಯವವು ಹಲವೆಡೆ ಬರುವುದನ್ನು ಕಾಣಬಹುದು. ಕನ್ನಡದಲ್ಲಿ ಎಲ್ಲೆಲ್ಲಿಯೂ ಈ ಎರಡಕ್ಷರದ ಅವಯವವು ಎರಡು ಲಘುಗಗಳಿಂದಲೇ ಆಗುತ್ತದೆ.

ಕನ್ನಡ–ತೆಲುಗು ಛಂದಸ್ಸುಗಳಲ್ಲಿ ವಿಶೇಷ ಸಾಮ್ಯವುಂಟು. ಗಣದಲ್ಲಿರುವ ಸಾಮ್ಯವು ಮೇಲೆ ಕೊಟ್ಟೇ ಇದೆ. ವೃತ್ತಗಳ ಹೆಸರಿನಲ್ಲಿಯೂ ಇರುವ ಸಾಮ್ಯವು ಕಡಿಮೆಯಾಗಿಲ್ಲ. ತೆಲುಗು–ಕನ್ನಡ ವೃತ್ತಗಳಲ್ಲಿರುವ ಸಾಮ್ಯವನ್ನು ಈ ಕೆಳಗಿನ ಹೆಸರುಗಳಿಂದ ಕಂಡುಕೊಳ್ಳಬಹುದು.

| ಕನ್ನಡ. | ತೆಲುಗು. |
|---|---|
| ಪಿರಿಯಕ್ಕರ | ಮಹಾಕ್ಕರ |
| ದೊರೆಯಕ್ಕರ | ಮಧ್ಯಾಕ್ಕರ |
| ನಡುವಣಕ್ಕರ | ಮಧುರಾಕ್ಕರ |
| ಎಡೆಯಕ್ಕರ | ಅಂತರಾಕ್ಕರ |
| ಕಿರಿಯಕ್ಕರ | ಅಲ್ಪಾಕ್ಕರ |
| ಉತ್ಸಾಹ | ಉತ್ಸಾಹ |
| ತ್ರಿಪದಿ | ತ್ರಿಪದ |
| ಷಟ್ಪದಿ | ಷಟ್ಪದ |

ಕನ್ನಡದಲ್ಲಿರುವ ದಾಟಿಗಳಿಗೆ ವೃತ್ತಗಳಸ್ವರೂಪವನ್ನು ಕೊಡುವ ಕೆಲಸವು ಪೂರ್ಣವಾಗಿ ಆಗಲಿಲ್ಲ. ಎಲ್ಲಿಯೋ

CC-0. Jangamwadi Math Collection. Digitized by eGangotri

ಹತ್ತಾರು ದಾಟಿಗಳಿಗೆ ಮಾತ್ರ ವೃತ್ತಗಳ ಸ್ವರೂಪವು ಬಂದಿತು. ಉಳಿದುವುಗಳೆಲ್ಲ ಹಾಡುಗಳಾಗಿಯೇ ಉಳಿದು ಬಿಟ್ಟವು. ಈ ದಾಟಿಗಳಲ್ಲಿ ಬರೆದ ಕಾವ್ಯಗಳನ್ನು ಕನ್ನಡ ಲಕ್ಷಣಕಾರರು ಹಾಡುಗಬ್ಬಗಳೆಂದು ಕರೆದರು. ನೃಪತುಂಗ ನಾಗವರ್ಮರು ತಮ್ಮ ಗ್ರಂಥಗಳಲ್ಲಿ, 'ಕಾವ್ಯಗಳಲ್ಲಿ ಚತ್ತಾಣ, ಬೆದಂಡೆ, ಪದ, ಮೆಲ್ವಾಡು, ಬಾಜನೆಗಬ್ಬ, ಪಾಡು, ಪಾಡುಗಬ್ಬಗಳೆಂದು ಭೇದಗಳಿರುವು'ವಾಗಿ ಹೇಳುತ್ತಾರೆ. ಪಾಡುಗಬ್ಬ ಬಾಜನೆಗಬ್ಬ ಎಂಬಿವು ಛಂದಸ್ಸಿನ ಸ್ವರೂಪಕ್ಕೆ ಬರದ ದ್ರಾವಿಡ ದಾಟಿಗಳಲ್ಲಿ ರಚಿತವಾದುವೆಂದು ಹೇಳಬಹುದು. (ಕನ್ನಡದಲ್ಲಿ ಸಾಂಗತ್ಯಗಳಲ್ಲಿ ಬರೆಯಲ್ಪಟ್ಟ ಅನೇಕ ಕಾವ್ಯಗಳುಂಟು. ಅವು ಈ ವರ್ಗಕ್ಕೆ ಸೇರಿದುವು)

ದ್ರಾವಿಡರಲ್ಲಿರುವ ಹಾಡಿನ ದಾಟಿಗಳು ಎರಡು. ಒಂದು ರಾಗದಿಂದ ಎಳೆದೆಳೆದು ಎನ್ನುವುದು; ಇನ್ನೊಂದು ಅವಸರದಿಂದ ಸಾಗುವುದು. ರಾಗದಿಂದ ಎಳೆದೆಳೆದು ಎನ್ನುವ ದಾಟಿಗೆ ಮೇಲಿಸಂತೆ ಛಂದಸ್ಸಿನ ಸ್ವರೂಪವು ಬಂದಿತು. ಅವಸರದಿಂದ ಸಾಗುವ ದಾಟಿಯಲ್ಲಿ ಮೇಲಿಸಂತೆ ಅವಯುವಗಳನ್ನು ಮಾಡಿಕೊಳ್ಳುವ ಕಾರಣ ಬೀಳ್ಳುವುದಿಲ್ಲ. ಅಲ್ಲಿಯ ತಾಳವು ಸರಿಯಾದ ಮಾತ್ರೆಯ ಮೇಲೆ ಗೊತ್ತು ಮಾಡಲ್ಪಟ್ಟಿತು. ಎಂದರೆ ಮಾತ್ರಾಗಣವಾಗಿ ಪರಿಣಮಿಸಿತು. ಈ ಅವಸರದಿಂದ ಎನ್ನುವ ದಾಟಿಗಳೇ ಛಂದಸ್ಸಿನಲ್ಲಿ ರಗಳೆಗಳಾಗಿ ಪರಿಣಮಿಸಿದುವು. ಇದರಿಂದ ರಾಗದಿಂದ ಎನ್ನುವ ದಾಟಿಯುಲ್ಲಿ ತಾಳಗಳು ಮಾತ್ರೆಯ ಲೆಕ್ಕಕ್ಕೆ ಕೂಡುವುದಿಲ್ಲವೆಂದು ಮಾತ್ರ ತಿಳಿಯಬಾರದು. ತಾಳವೆಂದರೆ ಮಾತ್ರೆಯ ಲೆಕ್ಕ ಇದ್ದುದೆ. ಬ್ರಹ್ಮ ವಿಷ್ಣು ರುದ್ರಗಳ ಪ್ರತಿಯೊಂದು ಅವಯುವವು ಎರಡು ಮಾತ್ರೆಯದು.

ಅಚ್ಚಕನ್ನಡವೃತ್ತಗಳೆಂದು ತಿಳಿಯುವ ವೃತ್ತಗಳಲ್ಲಿ ಕನ್ನಡಿಗರಲ್ಲಿ ಹೆಚ್ಚು ಪ್ರಚಾರದಲ್ಲಿರುವುದೆಂದರೆ ತ್ರಿಪದಿ. ಈ ವೃತ್ತವು ಕನ್ನಡಿಗರ ರೋಮರೋಮಗಳಲ್ಲಿಯೂ ಭೇದಿಸಿದೆಯೆಂದು ಹೇಳಬಹುದು. ಹೆಣ್ಣುಮಕ್ಕಳು ಹೇಳುವ ಬಸಕೆವಾಡುಗಳು, ಲಾಲಿಪದಗಳು, ಶೋಭನ (ಸೋಬಾನ) ಹಾಡುಗಳು ಎಲ್ಲವುಗಳಲ್ಲಿಯೂ ಪ್ರಮುಖವಾದುದು ತ್ರಿಪದಿ; ಗಂಡಸರು ಹೇಳುವ ಭಲರೆ (ಬಲೂರಿ) ಹಾಡುಗಳು. ಹಂತಿಯ ಹಾಡುಗಳು, ಹೋಳಿಯ ಪದಗಳು ಮೊದಲಾದವುಗಳಲ್ಲಿಯ ಪ್ರಮುಖಸ್ಥಾನವು ತ್ರಿಪದಿಗೆಯೆ. ಪ್ರಾಚೀನ ಕನ್ನಡ ಕವಿಗಳು ಈ ವೃತ್ತಕ್ಕೆ ಅಷ್ಟೊಂದು ಮಹತ್ವದ ಸ್ಥಾನವನ್ನು ಕೊಡದಿದ್ದರೂ ಜನಸಾಮಾನ್ಯವು ಅಕ್ಕರೆಯಿಂದ ಇಂದಿನವರೆಗೆ ಬೆಳೆಸಿಕೊಂಡು ಬಂದಿದೆ. ಈ ತ್ರಿಪದಿಯೇ ಹಲವು ಕನ್ನಡ ಹೊಸ ವೃತ್ತಗಳಿಗೆ ಜನ್ಮ ಕೊಟ್ಟಿದೆ. ಕನ್ನಡಿಗರ ಛಂದಸ್ಸಿನ ತಳಹದಿಯೇ ಈ ತ್ರಿಪದಿಯೆಂದರೂ ಸಲ್ಲುವುದು. ತ್ರಿಪದಿಯ ಎರಡನೆಯ ಚರಣವನ್ನು ಅರ್ಧ ಎಂದು, ಆಮೇಲೆ ಮತ್ತೊಮ್ಮೆ ಪೂರ್ಣ ಎನ್ನುವರು. ಈ ತಿರುಗಿ ಎನ್ನುವ ಚರಣದ ಸ್ಥಳದಲ್ಲಿ ಹೊಸದೊಂದು ಚರಣವನ್ನು ಸೇರಿಸಿದರೆ ಆಗುವ ದಾಟಿಗೆ ಬೇರೊಂದು ಲಕ್ಷಣವನ್ನು ಹೇಳಿ, ಕನ್ನಡ ಛಂದಸ್ಸಿನಲ್ಲಿ ಷಟ್ಪದಿಯೆಂದು ಕರೆಯುವ. ಕಂಡುಬರುವುದು. ಈ ಷಟ್ಪದಿಯೇ ಮುಂದೆ ಪ್ರಚಾರದಲ್ಲಿ ಬಂದ ಷಟ್ಪದಿಗಳ ತಳಹದಿ. ಈ ಷಟ್ಪದಿಯಲ್ಲಿಯೇ ಬರೆದ ಸ್ವತಂತ್ರ ಕಾವ್ಯಗಳು ಅಷ್ಟೊಂದು ವಿಪುಲವಾಗಿರದಿದ್ದರೂ ಇದರದೊಂದುರೂಪವಾದ ಸಾಂಗತ್ಯದಲ್ಲಿ ಬರೆದ ಹಲವು ಕಾವ್ಯಗಳು ಪ್ರಚಾರದಲ್ಲಿವೆ. ಸಾಂಗತ್ಯವೆಂಬುದು ಲಕ್ಷಣಬದ್ಧವಾಗದ ಷಟ್ಪದಿಯ ರೂಪ. ತ್ರಿಪದಿಯಿಂದ ಸಾಂಗತ್ಯ ಷಟ್ಪದಿಗಳು ಹೇಗೆ ಉತ್ಪನ್ನವಾದುವೆಂಬುದು ಕೆಳಗಿನ ಅವುಗಳ ಲಕ್ಷಣದಿಂದ ತಿಳಿದು ಬರುವುದು.

### ತ್ರಿಪದಿಯ ಲಕ್ಷಣ.

೧ ವಿಷ್ಣುಗಣ ವಿಷ್ಣುಗಣ ವಿಷ್ಣುಗಣ ವಿಷ್ಣುಗಣ
೨ ವಿಷ್ಣುಗಣ ಬ್ರಹ್ಮಗಣ ವಿಷ್ಣುಗಣ । ವಿಷ್ಣುಗಣ
೩ ವಿಷ್ಣುಗಣ ಬ್ರಹ್ಮಗಣ ವಿಷ್ಣುಗಣ

ಈ ತ್ರಿಪದಿಯನ್ನು ಎನ್ನುವಾಗ ಎರಡನೆಯ ಚರಣವನ್ನು ಅರ್ಧಕ್ಕೆ ನಿಲ್ಲಿಸಿ ತಿರುಗಿ ಎನ್ನುವೆವೆಂದು ಹೇಳಿದೆಯಷ್ಟೆ. ಅಲ್ಲಿ ಬೇರೊಂದು ಚರಣ ಸೇರಿಸಿದರೆ ಅದರ ಲಕ್ಷಣ ಹೀಗಾಗುವುದು.

೧ ವಿಷ್ಣುಗಣ ವಿಷ್ಣುಗಣ ವಿಷ್ಣುಗಣ ವಿಷ್ಣುಗಣ
೨ ವಿಷ್ಣುಗಣ ಬ್ರಹ್ಮಗಣ ವಿಷ್ಣುಗಣ
೩ ವಿಷ್ಣುಗಣ ಬ್ರಹ್ಮಗಣ ವಿಷ್ಣುಗಣ ವಿಷ್ಣುಗಣ
೪ ವಿಷ್ಣುಗಣ ಬ್ರಹ್ಮಗಣ ವಿಷ್ಣುಗಣ

ತ್ರಿಪದಿಯಲ್ಲಿ ಬ್ರಹ್ಮಗಣವಿದ್ದಲ್ಲಿ ಯತಿಯಿರುವುದು. ಅಲ್ಲಿ ಎಳೆದು ರಾಗಮಾಡುವೆವು. ಆ ಸ್ಥಳದಲ್ಲಿ ಇನ್ನೊಂದು ಅವಯುವ ಕೂಡಿಸಿ ವಿಷ್ಣುಗಣ ಮಾಡಿಕೊಂಡರೆ ಸಾಂಗ

CC-0. Jangamwadi Math Collection. Digitized by eGangotri

ತ್ಯವಾಗುವುದು. ಈ ಸಾಂಗತ್ಯದ ೧–೨ ಚರಣಗಳಲ್ಲಿ ಎರಡು ವಿಭಾಗ ಮಾಡಿಕೊಂಡು ಬರೆದರೆ ಷಟ್ಪದಿಯಾಗುವುದು. ಷಟ್ಪದಿಯಲ್ಲಿ ವಿಶೇಷವೆಂದರೆ ಪದ್ಯಾರ್ಧದ ಕೊನೆಗೆ ಹೆಚ್ಚಾಗಿ ಗುರುವಿರುವುದು. ಒಟ್ಟಿನಲ್ಲಿ ಎಲ್ಲವೂ ತ್ರಿಪದಿಯ ದಾಟಿಯೇ.

ಷಟ್ಪದಿಯ ಲಕ್ಷಣ.

೧ ವಿಷ್ಣುಗಣ ವಿಷ್ಣುಗಣ
೨ ವಿಷ್ಣುಗಣ ವಿಷ್ಣುಗಣ
೩ ವಿಷ್ಣುಗಣ ವಿಷ್ಣುಗಣ ವಿಷ್ಣುಗಣ+ಗುರು
(ರುದ್ರಗಣ)

–ಷಟ್ಪದಿಯ ಅರ್ಧ.

೧೧ನೆಯ ಶತಮಾನದ ವರೆಗೂ ವೃತ್ತಸ್ವರೂಪಕ್ಕೆ ತರದ ಕನ್ನಡದಾಟಿಗಳಲ್ಲಿ ಬರೆದ ಕಾವ್ಯಗಳಿಗೆ ಅಷ್ಟೊಂದು ಪ್ರಶಸ್ತಿ ದೊರೆಯುತ್ತಿರಲಿಲ್ಲ. ಚಂಪೂಗ್ರಂಥಗಳಿಗೆಯೇ ಪ್ರಾಶಸ್ತ್ಯ. ಅದರಿಂದ ಆ ಕಾಲದಲ್ಲಿ ರಚಿತವಾದ ಹಾಡುಗಬ್ಬಗಳು ಇಂದು ದೊರೆವುದಿಲ್ಲ. ಆದರೆ ೧೧ನೆಯ ಶತಮಾನದಲ್ಲಿ ಕರ್ಣಾಟಕದ ಜನಜೀವನದಲ್ಲಿ ಅದೊಂದು ದೊಡ್ಡ ಕ್ರಾಂತಿಯಾಯಿತು. ಸಮಾಜದಲ್ಲಿಯ ಶ್ರೇಷ್ಠ ಕನಿಷ್ಠ ಭಾವವು ದೂರಾಗಬೇಕೆಂದು ವಿಶೇಷ ಪ್ರಯತ್ನವಾಯಿತು. ಈ ಕ್ರಾಂತಿಯನ್ನು ಮಾಡಿದವರು ಶಿವಶರಣರು. ಈ ಕ್ರಾಂತಿಯಿಂದ ಸಾಮಾನ್ಯರಿಗಾಗಿ ಬರೆದ ಕಾವ್ಯಗಳಿಗೆ ಪ್ರಾಶಸ್ತ್ಯ ದೊರೆಯತೊಡಗಿತು. ಇದರ ಪರಿಣಾಮವಾಗಿ ಕನ್ನಡಛಂದಸ್ಸು ಹೊಸದೊಂದು ದಾರಿ ಹಿಡಿಯಲು ಹೊಸ ಹೊಸ ಛಂದಗಳು ಉತ್ಪನ್ನವಾದುವು.

ಅಚ್ಚ ದ್ರಾವಿಡ ದಾಟಿಯ ಮೇಲೆ ಹೊಸ ಸಂಸ್ಕಾರವಾಯಿತು. ಅಚ್ಚ ದ್ರಾವಿಡದಾಟಿಗಳು ಹಳ್ಳಿಗರ ಪದಗಳಲ್ಲಿ ಮಾತ್ರ ಉಳಿದು ಒರಟುರಾಗವೆನಿಸಿಕೊಂಡವು. ಅದನ್ನೇ ಮೃದುವಾಗಿ ಮಾಡಿದಾಗ ದ್ರಾವಿಡದಾಟಿಯ ಲಕ್ಷಣವು ಪೂರ್ಣವಾಗಿ ಅದರಲ್ಲಿ ಉಳಿಯಲಿಲ್ಲ. ಆದರಿಂದ ದ್ರಾವಿಡ ದಾಟಿಗಳು ಮಾತ್ರಾಗಣದ ಸ್ವರೂಪಕ್ಕೆ ಬರತೊಡಗಿದುವು. ೧೦–೧೧ನೆಯ ಶತಮಾನದಲ್ಲಿದ್ದ ನಾಗವರ್ಮನು ಛಂದೋಂಬುಧಿಯಲ್ಲಿ ಅಚ್ಚಗನ್ನಡ ಛಂದಸ್ಸಿನ ಬಗ್ಗೆ ಒಂದು ಅಧಿಕಾರವನ್ನು ಬರೆದಿರುವನೇನೋ ನಿಜ. ಆದರೆ ಅದು ಹಿಂದಿನ ಗ್ರಂಥಗಳಿಂದ ಸಂಗ್ರಹಿಸಿದುದಾಗಿರಬೇಕು. ಛಂದೋಂಬುಧಿಯ ಪಂಚಮಾಧಿಕಾರದಲ್ಲಿ ಹೇಳಿದ ಅದೆಷ್ಟೋ ವೃತ್ತಗಳ ಲಕ್ಷಣಗಳು ಅಚ್ಚಗನ್ನಡಗಣಗಳಿಂದ ಹೇಳಲ್ಪಟ್ಟಿದ್ದರೂ ಲಕ್ಷಣಪದ್ಯಗಳು ಮಾತ್ರಾವೃತ್ತದ ಸ್ವರೂಪಕ್ಕೆ ತಿರುಗಿವೆ. ಚೌಪದಿ, ಅಕ್ಕರಿಕೆ, ಉತ್ಸಾಹ, ಷಟ್ಪದಿ, ಇವುಗಳ ಲಕ್ಷಣಪದ್ಯಗಳು ಮಾತ್ರಾಗಣದ ಸ್ವರೂಪಕ್ಕೆ ಇಳಿದಿವೆ ಎಂದರೆ, ೧೦–೧೧ನೆಯ ಶತಮಾನದಲ್ಲಿಯೇ ಕನ್ನಡದ ವೃತ್ತಗಳು ಮಾತ್ರಾಗಣದ ಸ್ವರೂಪಕ್ಕೆ ಇಳಿಯತೊಡಗಿದುವೆಂದು ಹೇಳಬಹುದು.

೧೧ನೆಯ ಶತಮಾನದಲ್ಲಾದ ಸಾಮಾಜಿಕ ಕ್ರಾಂತಿಯಿಂದ ಮತ್ತೆ ಕೆಲವು ಕನ್ನಡ ದಾಟಿಗಳಿಗೆ ವೃತ್ತಗಳ ಸ್ವರೂಪವು ಬಂದಿತು. ಆದರೆ ಆಗ ಆ ಹಳೆಯ ಅಚ್ಚಗನ್ನಡ ಗಣಗಳಿಂದ ಅವು ಲಕ್ಷಣಬದ್ಧವಾಗಲಿಲ್ಲ. ಮಾತ್ರಾಗಣದ ಮೇಲೆ ಅವುಗಳ ರಚನೆಯಾಯಿತು. ಮೊದಲು ವಿಷ್ಣುಗಣದಲ್ಲಿದ್ದ ಷಟ್ಪದಿಯೇ ೪ ಮಾತ್ರೆಯ ಗಣದ ಶರಷಟ್ಪದಿಯಾಯಿತು. ಈ ಷಟ್ಪದಿಯೇ ಹೊಸಛಂದದ ತಳಹದಿಯಾಯಿತು. ಇದಲ್ಲದೆ ಮತ್ತೆ ಮೂರು ಕನ್ನಡ ದಾಟಿಗಳಿಗೂ ಷಟ್ಪದಿಯ ಸ್ವರೂಪ ಕೊಡುವುದರಲ್ಲಿ ಬಂದಿತು. ಅವೇ ಕುಸುಮ, ಭೋಗ, ಭಾಮಿನಿ ಷಟ್ಪದಿಗಳು. ಈ ಷಟ್ಪದಿಗಳು ಅಚ್ಚಗನ್ನಡ ದಾಟಿಯಿಂದ ಹುಟ್ಟಿದವುಗಳೇ ಆಗಿರುವವು. ಆದಾವ ಸಂಸ್ಕೃತವೃತ್ತಗಳಿಂದಲೂ ಹುಟ್ಟಲಿಲ್ಲ.

ಅಚ್ಚಗನ್ನಡ ಗಣಗಳಿಂದಾದ ಷಟ್ಪದಿಯ ವಿಷ್ಣುಗಣಗಳು ನಾಲ್ಕು ಮಾತ್ರೆಯವಾದಾಗ ಒಂದು ದಾಟಿಯೂ ೫ – ೬ ಮಾತ್ರೆಯವಾದಾಗ ಬೇರೊಂದು ದಾಟಿಯೂ ಮಾತ್ರಾಗಣದ ಮಟ್ಟಿನ ಮೇಲೆ ಎನ್ನುವಾಗ ಆಗುವುದು ಸಹಜ. ಆ ೫ ಮಾತ್ರೆಯ ಗಣದ ಮಟ್ಟಿನಿಂದ ಕುಸುಮ ಷಟ್ಪದಿಯೂ ಆರು ಮಾತ್ರೆಗಳಿಂದ ಭೋಗ ಷಟ್ಪದಿಯೂ ಉತ್ಪನ್ನವಾದುವು. ಆರು ಮಾತ್ರೆಯ ಗಣವನ್ನು ಕನ್ನಡಿಗನು ಇಟ್ಟುಕೊಳ್ಳದುದರಿಂದ ಭೋಗಷಟ್ಪದಿಯಲ್ಲಿ ೩ ಮಾತ್ರೆಯ ೪ ಗಣಗಳಾದುವು. ೫ ಮಾತ್ರೆಯ ಮಟ್ಟಿನ ಮೇಲೆ ಎನ್ನುವ ಈ ಕೆಳಗಣ ಸಾಂಗತ್ಯವು ಕುಸುಮ ಷಟ್ಪದಿಯು ಹುಟ್ಟಲಿಕ್ಕೆ ಆಸ್ಪದ ಕೊಡುವುದೋ ಇಲ್ಲವೋ ನೋಡಬೇಕು.

ಕರಿಯ ಹೂವಿನ ಸೀರೆ ಬಿಳಿಯ ಹೂವಿನ ಸೀರೆ
ಜರಕಾಟಿ ಕೆಂಪು ಹೂವಿನ ಸೀರೆಯು ॥



CC-0. Jangamwadi Math Collection. Digitized by eGangotri

ಸರಿಯಾಗಿ ಕೂಡಿಸಿಯೆ ಇಟ್ಟಿದ್ದೆನಿವು ಮೂರು
ಬರಿಪ್ಯೆಲಿ ಹೋಗೋದು ತೆರನಾಯಿತು ॥

—ಜಲಕ್ರೀಡೆಯ ಹಾಡು.

ಕರಿಯ ಹೂವಿನ ಸೀರೆ
ಬಿಳಿಯ ಹೂವಿನ ಸೀರೆ
ಜರಕಾಟಿ ಕೆಂಪು ಹೂವಿನ ಸೀರೆಯು
ಸರಿಯಾಗಿ ಕೂಡಿಸಿಯೆ
ಇಟ್ಟಿದ್ದೆನಿವು ಮೂರು
ಬರಿಪ್ಯೆಲಿ ಹೋಗೋದು ತೆರನಾಯಿತು.

ಗೋವಿನ ಕಥೆಯ ಮಟ್ಟು ಭಾಮಿನಿಷಟ್ಪದಿಗೆ ಅವಕಾಶವನ್ನು ಕಲ್ಪಿಸಿ ಕೊಡುವುದೊ ಇಲ್ಲವೊ ನೋಡಿ.

ಖಂಡವಿದಕೋ ಮಾಂಸವಿದಕೋ ।
ಗುಂಡಿಗೆಯ ಬಿಸುರಕ್ತವಿದಕೋ ।
ಚಂಡ ವ್ಯಾಘ್ರನೆ ನೀನಿದೆಲ್ಲವ ।
ನುಂಡು ಸಂತಸದಿಂದಿರು ॥

—ಗೋವಿನ ಕಥೆ

ಖಂಡವಿದಕೋ ಮಾಂಸವಿದಕೋ
ಗುಂಡಿಗೆಯ ಬಿಸುರಕ್ತವಿದಕೋ
ಚಂಡ ವ್ಯಾಘ್ರನೆ ನೀನಿದೆಲ್ಲವನುಂಡು
ಸಂತಸದಿಂದಿರು.

ಈ ಮಟ್ಟಿಗೂ ಭಾಮಿನಿ ಷಟ್ಪದಿಯ ಅರ್ಧಕ್ಕೂ ಹೆಚ್ಚು ಕಡಿಮೆಯೆಂದರೆ ಒನೆಯ ಚರಣದಲ್ಲಿ ೨ ಮಾತ್ರೆಗಳು ಹೆಚ್ಚು ಆಗುವುದಷ್ಟೆ. ಷಟ್ಪದಿಯ ಅರ್ಧಕ್ಕೆ ನಾವು ಎಳೆದು ರಾಗ ಮಾಡುವುದಿಲ್ಲವೇನು ? ಅಂತೂ ಅಚ್ಚಗನ್ನಡ ಸಾಂಗತ್ಯದ ಮಟ್ಟುಗಳಿಂದಲೇ ಶರ ಕುಸುಮ ಭೋಗ ಭಾಮಿನಿಯೆಂಬ ನಾಲ್ಕು ಷಟ್ಪದಿಗಳು ಉಂಟಾದವೆಂದು ಹೇಳಬೇಕು.

ಪರಿವರ್ಧಿನಿ ವಾರ್ಧಿಕಗಳೆರಡು ಮೊದಲಿನ ಸಾಂಗತ್ಯದ ಮಟ್ಟಿನಿಂದ ಹುಟ್ಟಿದವುಗಳಲ್ಲ. ಮೊದಲಿನ ನಾಲ್ಕು ಷಟ್ಪದಿಗಳಲ್ಲಿ ಭೋಗ ಭಾಮಿನಿ ಷಟ್ಪದಿಗಳು ಹುಟ್ಟಿದ ತರುವಾಯ ಅವುಗಳನ್ನು ಬೆಳಿಸುವುದರಿಂದ ಹುಟ್ಟಿದವುಗಳು. ಮೊದಲಿದ್ದ ನಾಲ್ಕು ಷಟ್ಪದಿಗಳಲ್ಲಿ ಭೋಗ ಭಾಮಿನಿ ಷಟ್ಪದಿಗಳು ಇನ್ನೆರಡು ಷಟ್ಪದಿಗಳು ಹುಟ್ಟುವ ಕಲ್ಪನೆಯನ್ನು ತಂದು ಕೊಟ್ಟವು. ಮೊದಲಿನ ಷಟ್ಪದಿಗಳಲ್ಲಿ ಶರ ಕುಸುಮ ಷಟ್ಪದಿಗಳ ಮೊದಲು ಚರಣಗಳಲ್ಲಿ ಎರಡೆರಡು ಗಣಗಳು ಇದ್ದುವು. ಭೋಗ ಭಾಮಿನಿಗಳಲ್ಲಿ ನಾಲ್ಕು ನಾಲ್ಕು ಗಣಗಳಿದ್ದುವು. ಭೋಗ ಭಾಮಿನಿಗಳಂತೆ ಶರ ಕುಸುಮ ಷಟ್ಪದಿಗಳನ್ನೂ ನಾಲ್ಕು ನಾಲ್ಕು ಗಣಗಳಿಗೆ ಬೆಳಿಸುವ ಕಲ್ಪನೆಯಿಂದ ಮತ್ತೆರಡು ಷಟ್ಪದಿಗಳು ಹುಟ್ಟಿದವು. ಅವುಗಳಿಗೆ ಪರಿವರ್ಧಿನಿ ವಾರ್ಧಿಕಗಳೆಂಬ ಅನ್ವರ್ಥಕ ಹೆಸರುಗಳೇ ಕೊಡಲ್ಪಟ್ಟಿತು. ಶರ ಕುಸುಮ ಷಟ್ಪದಿಗಳನ್ನು ಬೆಳಿಸಿದಂತೆ ಭೋಗ ಭಾಮಿನಿಗಳ ಅರ್ಧವನ್ನು ಮಾಡುವ ಕಲ್ಪನೆಯೂ ಬಂದಿರಬೇಕು. ಆದರೆ ಆ ಕಾಲದ ಕಾವ್ಯಕ್ಕೆ ತಕ್ಕ ವೃತ್ತಗಳು ಅವಾಗಿರಲಿಲ್ಲವಾದುದರಿಂದ ಅವು ಹುಟ್ಟಲಿಲ್ಲ. ಶರ ಕುಸುಮ ಷಟ್ಪದಿಗಳೂ ಆ ಕಾಲದ ಕಾವ್ಯಕ್ಕೆ ತಕ್ಕ ವೃತ್ತಗಳೆನಿಸದೆ ಹೋದುದರಿಂದಲೇ ಅವುಗಳನ್ನು ದ್ವಿಗುಣಿಸುವ ಕಲ್ಪನೆಯು ಬಂದಿರಬೇಕು. ಕನ್ನಡದಲ್ಲಿ ಭಾಮಿನಿ ವಾರ್ಧಿಕಗಳಲ್ಲಿ ಬರೆದ ಕಾವ್ಯಗಳೇ ಹೆಚ್ಚು. ಅವುಗಳ ತರುವಾಯ ಪರಿವರ್ಧಿನಿಯ ಕ್ರಮಾಂಕ.

ನಾಗವರ್ಮನ ಛಂದೋಂಬುಧಿಯಲ್ಲಿ ಒಂದೇ ಒಂದು ಷಟ್ಪದಿಯು ಕಂಡುಬರುತ್ತದೆ. ಅದೂ ವಿಷ್ಣು ರುದ್ರ ಗಣಗಳಿಂದ ಆದುದು. ಚಾಳುಕ್ಯ ಜಯಸಿಂಹ ಜಗದೇಕ ಮಲ್ಲನ ಆಳಿಕೆಯಲ್ಲಿ ( ೧೦೧೫–೪೨ ) ಚಂದ್ರರಾಜನೆಂಬ ಕವಿಯಿಂದ ರಚಿತವಾದ ಮದನತಿಲಕ ಎಂಬ ಚಂಪೂ ಗ್ರಂಥದಲ್ಲಿರುವ

ಅಂಗನ್ಯಪಾಯತಿ ತುಂಗಭುಜಂ ಕಲಿಯಂಗಿತ ಶಿಕ್ಷಿತ
ನಿದುಯಶಂ
ಪಿಂಗಜದೊಂಗಕ ಭೃಂಗಕಚಂಕಲಿ ಮಂಗಳ ಲಕ್ಷಣ
ಯುಕ್ತನಿಸಂ
ಸಂಗರಕೇಸರಿ ಸಂಗಗುಣಂ ಬಲಿ ಭೃಂಗರ ದಕ್ಷನು
ವಾಯುತಸುಂ
ಸಂಗದಸನ್ಮತಿ ರಂಗನಹಂ ಸಲೆ ಭಂಗಿಯಸೀಕ್ಷಿಸಿ
ಮಾಹನೃಪಂ

ಎಂಬ ಮದನಮಂಜರಿ ವೃತ್ತದಲ್ಲಿ "ಎರಡು ಷಟ್ಪದಿಯುಂ ಅಕ್ಕುಂ" ಎಂದು ಹೇಳಲ್ಪಟ್ಟಿದೆ. ಇಲ್ಲಿಯ ಏಕವಚನದ ಪ್ರಯೋಗದಿಂದ ಆ ಕಾಲದಲ್ಲಿ ಷಟ್ಪದಿಯೆಂಬ ಒಂದೇ ವೃತ್ತವೇ ಇದ್ದಿತೆಂದು ಬೋಧೆಯಾಗುತ್ತದೆ. ಅದೂ ನಾಗವರ್ಮನ ಛಂದೋಂಬುಧಿಯಲ್ಲಿ ಹೇಳಿದ ಷಟ್ಪದಿಯ ಲಕ್ಷಣಕ್ಕೆ ಹೊಂದುತ್ತದೆ. ಆದರಿಂದ ಆ ಕಾಲದಲ್ಲಿ ಷಟ್ಪದಿಯೆಂಬ ಒಂದೇ ವೃತ್ತವು ಇದ್ದಿತೆಂಬುದು ನಿರ್ವಿವಾದ. ರನ್ನನ ಗದಾಯುದ್ಧದಲ್ಲಿರುವ ( ೯೮೨–೧೦೧೮ )

CC-0. Jangamwadi Math Collection. Digitized by eGangotri

ಮಾತ್ರಾಸಮಕ ಷಟ್ಪದಿಯೆಂದು ಯಾರೇನೋ ಹೆಸರಿಕ್ಕಿರುವಾ ಹರಕಮುರುಕ ಷಟ್ಪದಿಯು

ಹಾ ಹಾ ಕುರುಕುಲ ಮೂಲಸ್ತಂಭಾ
ಹಾ ಹಾ ಕುರುನೃಪಕುಲಮೃಗರಾಜಾ
ಹಾ ಹಾ ಕುರುನೃಪಪತ್ನಾ ಹಾ ಸುಹೃದ್ವ್ಯಸನ
ಭಂಜನಾ ॥
ಹಾ ಹಾ ಕುಂಭಕಸಂಭವಶಿಷ್ಯಾ
ಹಾ ಹಾ ನೃಪಮುಕುಟಾಸತಚರಣಾ
ಹಾ ಹಾ ಸಕಲನೃಪಪೂಜಿತಾ ಹಾ....ಟ ಪನ್ನಗ
ಕೇತೂ

ಎಂದಿರಬೇಕೆಂದೂ, ಅದು ರನ್ನನ ಕೃತಿಯಾಗದೆ, ಪ್ರಕ್ಷಿಪ್ತವಾಗಿರಬೇಕೆಂದೂ ಮ. ಗೋವಿಂದ ಪೈಗಳು ಹೇಳಿದುದು* ಸರಿಯಾಗಿ ಕಾಣುತ್ತದೆ. ಪ್ರಕ್ಷಿಪ್ತವಾದುದು, ೧೨೫೦ರ ನಂತರ ಷಟ್ಪದಿಗಳೆಲ್ಲ ಹುಟ್ಟಿದ ತರುವಾಯದಲ್ಲಿಯೇ ರಚಿತವಾದುದಾಗಿ ಹಿಂದಿನಿಂದ ಸೇರಿರಬೇಕು. ಸಮಗ್ರ ದೊರೆತ ಷಟ್ಪದೀಗ್ರಂಥಗಳಲ್ಲಿ ೧೩ನೆಯ ಶತಮಾನದ ರಾಘವಾಂಕನ ಗ್ರಂಥಗಳೇ ಮೊದಲಿನವು. ಆದರಿಂದ ಈ ಷಟ್ಪದಿಗಳು ೧೨ನೆಯ ಶತಮಾನದಲ್ಲಿ ಬಳಕೆಯಲ್ಲಿ ಬಂದುವೆಂದು ಹೇಳಬಹುದು. "ರಾಘವಾಂಕನ ಪೂರ್ವದಲ್ಲಿ ಯಾರೂ ಷಟ್ಪದಿಗಳಲ್ಲಿ ಗ್ರಂಥಗಳನ್ನು ಬರೆದಿರಲಿಲ್ಲವೆಂದೂ ಆತನೆ ಅವುಗಳನ್ನು ಸೃಷ್ಟಿಸಿದನೆಂದೂ" ಸಿದ್ಧನಂಜೇಶನ ರಾಘವಾಂಕ ಚರಿತ್ರದಲ್ಲಿ ಹೇಳಿದೆ, ಎಲ್ಲ ಷಟ್ಪದಿಗಳನ್ನಲ್ಲದಿದ್ದರೂ ಪರಿವರ್ಧಿನಿ ವಾರ್ಧಿಕಗಳನ್ನು ಸೃಷ್ಟಿಸುವಲ್ಲಿ ರಾಘವಾಂಕನ ಅಂಗವಿದ್ದರೂ ಇರಬಹುದು. ಅವನ ಗ್ರಂಥಗಳೆಲ್ಲ ವಾರ್ಧಿಕಷಟ್ಪದಿಗಳಲ್ಲಿರುವವು.

ಕನ್ನಡದಲ್ಲಿ ಸುಸಂಗತವಾದ ಛಂದಸ್ಸಿನ ಸ್ವರೂಪವೊಂದನ್ನು ಬಳಕೆಯಲ್ಲಿ ತರುವ ಪ್ರಯತ್ನವೊಂದು ನಡೆದಿದ್ದಿತೆಂಬುದು ೧೭ನೆಯ ಶತಮಾನದಲ್ಲಿ ರಚಿತವಾದ 'ಛಂದಸ್ಸಾರ' ಎಂಬ ಗ್ರಂಥದಿಂದ ತಿಳಿದುಬರುವುದು. ಕರ್ಣಾಟಕ ಸಂಗೀತದಲ್ಲಿ ಏಳು ಬಗೆಯ ತಾಳಗಳಿರುವವು; ಆ ತಾಳಗಳನ್ನೇ ಲಕ್ಷ್ಯದಲ್ಲಿಟ್ಟುಕೊಂಡು ಏಳು ಜಾತಿಯ ತಾಳ ವೃತ್ತಗಳಿರುವುವೆಂದು ಆ ಗ್ರಂಥದಲ್ಲಿ ಹೇಳಿದೆ.

ಧ್ರುವತಾಳ ಮಟ್ಟತಾಳಂ
ತ್ರಿವುಡಂ ರೂಪಕಮು ಮಟ್ಟ ಝಂಪೆಯುಮೇಕಂ
ತೀವುಗುಮಿಂತೇಳುವಿಧಂ
ಸೇವಿಸುವರ ವೃತ್ತಬಂಧರಚನೆಗಳಿಂದಂ ॥

—ಛಂದಸ್ಸಾರ.

ಈ ರೀತಿಯಲ್ಲಿ ರಚಿತವಾದ ತ್ರಿಪುಡೆ ಎಂಬ ವೃತ್ತವೂ ರಾಜಶೇಖರವಿಳಾಸದಲ್ಲಿ ದೊರೆಯುತ್ತದೆ. ಆದರೆ ಈ ಕಲ್ಪನೆಯು ಪೂರ್ಣವಾಗಿ ಯಶಸ್ವಿಯಾಗಲಿಲ್ಲ. ೧೫೬೫ರಲ್ಲಾದ ಕರ್ಣಾಟಕಸಾಮ್ರಾಜ್ಯದ ನಾಶದ ಕೂಡ ಕನ್ನಡ ಕಾವ್ಯರಮಣಿಯು ಹಾಸಿಗೆಹಿಡಿದಳು.

೨೦ನೆಯ ಶತಮಾನದಲ್ಲಿ ಪಾಶ್ಚಾತ್ಯಭಾಷಾಕೋವಿದರು ಸಿದ್ಧಪಡಿಸಿದ ರಾಸಾಯನಿಕ ಇಂಜೆಕ್ಶನ್ನಿನಿಂದ ಮತ್ತೆ ಕನ್ನಡ ಕಾವ್ಯರಮಣಿಗೆ ತುಸು ಜೀವಕಳೆಬಂದಿದೆ. ಇದೀಗ ಹೊಸಹೊಸ ಛಂದಗಳಲ್ಲಿ ಅನೇಕಾನೇಕ ಕವನಗಳು ರಚಿಸಲ್ಪಡುತ್ತಿವೆ.. ಇವುಗಳಿಗೂ ಮಾತ್ರಾಗಣಗಳೇ ಆಧಾರ. ಆದರೇನು ಇಂತಿಷ್ಟೇ ಗಣಗಳು ಇಂತಿಷ್ಟೇ ಚರಣಗಳು ಇದ್ದರೆ ಇಂತಹ ವೃತ್ತವಾಗುವುದೆಂದು ಹೆಸರಿಕ್ಕಿ ಜರೆಯುವುದು ಇನ್ನೂ ಬಂದಿಲ್ಲ. ಕನ್ನಡ ಛಂದಸ್ಸಿಗೆ ಹಲವು ಶಾಖೆಗಳು ಒಡೆಯತೊಡಗಿವೆ. ಇಂತಹ ಶಾಖೆಯೇ ದೊಡ್ಡದಾಗಿ ಉಳಿಯುವುದೆಂಬುದನ್ನು ಈಗಲೆ ಹೇಳಲಿಕ್ಕೆ ಬರುವುದಿಲ್ಲ. ಗಿಡವು ಬೆಳೆವ ಸಾರೆಗೊಮ್ಮೆ ಈ ಕ್ರಿಯೆಯು ನಡೆಯತಕ್ಕುದೆ. ಸಂಸ್ಕೃತದಲ್ಲಿ ಹುಟ್ಟುವಗಳು ಕೋಟಿ ವೃತ್ತಗಳಲ್ಲಿ ರೂಢಿಯಲ್ಲಿ ಬಂದುವು ಇನ್ನೂರರ ಮನೆಯನ್ನು ಕಂಡಿಲ್ಲ. ಅವುಗಳಲ್ಲಿಯೇ ಕನ್ನಡದಲ್ಲಿ ಬಂದುವುಗಳಲ್ಲಿ ಮುಖ್ಯವಾದುವು ಆರು ಮಾತ್ರ. (ಚಂಪಕಮಾಲೆ, ಉತ್ಪಲಮಾಲೆ. ಮತ್ತೇಭವಿಕ್ರೀಡಿತ, ಶಾರ್ದೂಲವಿಕ್ರೀಡಿತ, ಸ್ರಗ್ಧರಾ, ಮಹಾಸ್ರಗ್ಧರಾ.) ಕನ್ನಡದಲ್ಲಿರುವ ಅನೇಕ ದಾಟಿಗಳಲ್ಲಿ ಛಂದಸ್ಸಿನ ಸ್ವರೂಪ ಹೊಂದಿದುವು ಇಪ್ಪತ್ತು ಮಾತ್ರ. ಹಲವು ಬಗೆಯಾಗಿರಬಹುದಾದ ಷಟ್ಪದಿಗಳಲ್ಲಿ ಬಳಕೆಯಲ್ಲಿ ಬಂದುವು ೬ ಮಾತ್ರ. ಅವುಗಳಲ್ಲಿಯೇ ಕವಿಗಳ ಆದರಕ್ಕೆ ಪಾತ್ರವಾದುವು ಭಾಮಿನಿ ವಾರ್ಧಿಕಗಳೆರಡೆ. ಅದರಂತೆ ಮಾತ್ರಾಗಣಗಳಿಂದ ಹುಟ್ಟಬಹುದಾದ ಅಗಣ್ಯ ಹೊಸ ವೃತ್ತಗಳಲ್ಲಿ ಹೆಸರು ಪಡೆದು ಮುಂದಿನ ಪೀಳಿಗೆಗೆ ಉಳಿಯತಕ್ಕುವು ಕೆಲವು ಮಾತ್ರ. (ಈ ಎಲ್ಲ ವೃತ್ತಗಳನ್ನೂ ಏಳು ಜಾತಿಯ ತಾಳ ವೃತ್ತಗಳಲ್ಲಿ ಸೇರಿಸಬಹುದು.) ಆ ಕೆಲವು ಯಾವುವೆಂಬುದನ್ನು

* ಜಯಕರ್ನಾಟಕ ಸಂಪುಟ ೯, ಸಂಚಿಕೆ ೩.

CC-0. Jangamwadi Math Collection. Digitized by eGangotri

ಈಗಲೆ ಹೇಳಲಿಕ್ಕೆ ಬರುವುದಿಲ್ಲ. ಕವನದ ಮಹತ್ವ, ಕವಿಯ ಮಹತ್ವ, ಆ ಕವನದ ದಾಟಿಯ ಮಹತ್ವವನ್ನವಲಂಬಿಸಿ ಸಾಮಾನ್ಯರಿಗೂ ಪ್ರಿಯವಾದುವುಗಳು ಮಾತ್ರ ಹೆಸರು ಪಡೆದುಕೊಂಡು ಉಳಿಯಬಹುದು. ಕಾಲಚಕ್ರದಲ್ಲಿ ಸಿಕ್ಕು ಸಾಯುವವು ಯಾವವೊ, ಹೆಚ್ಚು ದಿವಸ ಬಾಳುವವು ಯಾವವೊ ಎಂಬುದನ್ನು ಈಗಲೇ ಹೇಗೆ ಹೇಳುವುದು ?

(ಶ್ರೀ. ಗೋವಿಂದ ಪೈಗಳು ಷಟ್ಪದಿಗಳ ವಿಷಯದಲ್ಲಿ ನಾನು ಎತ್ತಿದ ಆಕ್ಷೇಪಗಳಿಗೆ ಜಯಕರ್ನಾಟಕದ ೧೧ನೆಯ ಸಂಚಿಕೆಯಲ್ಲಿ ಪ್ರತ್ಯುಕ್ತಿಯನ್ನು ಕೊಟ್ಟಿದ್ದಾರೆ. ನಾನು ಈ ಲೇಖವನ್ನು ಬರೆದು ಬಹುದಿವಸವಾಯಿತು. ಗೋವಿಂದ ಪೈಗಳ ಪ್ರತ್ಯುಕ್ತಿಗೆ ಉತ್ತರ ಕೊಡಬೇಕಾದರೆ ಇದರಲ್ಲಿಯ ಬಹುಭಾಗವನ್ನು ಬೇರೆ ರೂಪದಿಂದ ಹೇಳಬೇಕಾಗುತ್ತಿದ್ದಿತಾದುದರಿಂದ ಈ ಲೇಖವನ್ನೇ ಪ್ರಸಿದ್ಧಿಸಿರುವೆನು. ಬ್ರಹ್ಮ ವಿಷ್ಣು ರುದ್ರಗಣಗಳು ಸಂಸ್ಕೃತದಿಂದ ಹುಟ್ಟಿದವುಗಳಲ್ಲವೆಂಬುದಿದರಿಂದ ಸ್ಪಷ್ಟವಾಗಬಹುದು. ಕನ್ನಡದಂತೆಯೇ ತೆಲುಗಿನಲ್ಲಿಯೂ ಈ ಗಣಗಳೂ ಗಣಗಳಿಂದಾದ ವೃತ್ತಗಳೂ ಇರುವವು. ಅಲ್ಲಿ 'ಷಟ್ಪದ' ಎಂಬ ಒಂದೇ ವೃತ್ತವಿರುವುದು. ಕನ್ನಡದಲ್ಲಿಯೂ ಮೂಲದಲ್ಲಿ 'ಷಟ್ಪದ' ಎಂಬ ಒಂದೇ ಷಟ್ಪದಿಯು ಇದ್ದಿರಬೇಕೆಂಬುದು ವ್ಯಕ್ತವಾಗುತ್ತದೆ. ಉಳಿದ ಪ್ರತಿಗಳನ್ನು ಬಿಟ್ಟು ಗ–ಪ್ರತಿಯೊಂದರಲ್ಲಿಯೇ ದೊರೆವ ಉಳಿದ ಷಟ್ಪದಿಗಳು ಹಿಂದಿನಿಂದ ಸಿದ್ಧವಾದುವೆಂಬುದು ಇದರಿಂದ ವ್ಯಕ್ತವಾಗುವುದಿಲ್ಲವೆ ? ಗ–ಪ್ರತಿಯ ಸಮಗ್ರತೆಯೇ, ಅದರಲ್ಲಿ ಹಿಂದಿನಿಂದ ಆ ವಿಷಯವು ಸೇರಿರಬೇಕೆಂದು ಸೂಚಿಸುವುದಲ್ಲವೆ ? --ಲೇಖಕ )

ನಮ್ಮ ದೇಶದಲ್ಲಿ ಸರಾಸರಿಯಾಗಿ ಪ್ರತಿಯೊಬ್ಬನಿಗೆ ಬರುವ ಆದಾಯ ನಿಮಗೆ ಗೊತ್ತೋ ? ೦–೧–೬ ಯೆಂದು ಅರ್ಥಶಾಸ್ತ್ರಿಗಳು ಹೇಳುತ್ತಾರೆ. ಅದೂ ಸರಿಯಾಗಿಲ್ಲ. ಒಂದು ಕಡೆ ೬ ಅಡಿ ಆಳ, ಒಂದುಕಡೆ ೨ ಅಡಿ ಆಳ ಇರುವ ಹೊಳೆಗೆ ಸರಾಸರಿ ೪ ಅಡಿ ಆಳವೆಂದು ಅಂದಾಜು ಕಟ್ಟಿ ಅದನ್ನು ದಾಟಲು ಯಾರಾದರೂ ಪ್ರಯತ್ನಪಟ್ಟರೆ ಅವನು ಮುಳುಗಿಹೋಗುವದಿಲ್ಲವೇ ? ಹೀಗೇ ಈ ಲೆಕ್ಕ ತಪ್ಪು ಹಾದೀ ಹಿಡಿಸುವುದು. ಇತ್ತ ಕಡುಬಡವರ, ಅತ್ತ ವೈಸರಾಯ ಮತ್ತು ಕೋಟ್ಯಾಧೀಶರ ವರಮಾನಗಳನ್ನು ಕೂಡಿಸಿ ಸರಾಸರಿ ತೆಗೆದಿರುವರು. ಆದರೆ ನಿಜವಾಗಿ ಬೋರೇಗೌಡನಿಗೆ ವರಮಾನ ದಿನಕ್ಕೆ ಮೂರು ಬಿಲ್ಲೆ ಬಂದರೆ ಅಲ್ಲಿಗೆ ಅವನ ಪುಣ್ಯ.

—ಮಹಾತ್ಮಾ ಗಾಂಧಿ.

❖ ❖ ❖ ❖

ನಾನು ಹತ್ತಿರದ ಹಳ್ಳಿಗೊಂದಕ್ಕೆ ಹೋಗಿದ್ದಾಗ ಅಲ್ಲಿನ ಹೆಂಗಸರ ಉಡುಪು ಬಹಳ ಕೊಳೆಯಾಗಿದ್ದುದನ್ನು ಕಂಡು, ಅವರು ಸೀರೆಗಳನ್ನೇಕೆ ಒಗೆಯುವುದಿಲ್ಲವೆಂದು ವಿಚಾರಿಸಲು ನನ್ನ ಹೆಂಡತಿಗೆ ಹೇಳಿದೆ. ನನ್ನ ಹೆಂಡತಿ ಅವರನ್ನು ಕೇಳಿದಳು. ಅವರೊಳಗೊಬ್ಬಾಕೆ ಈಕೆಯನ್ನು ತನ್ನ ಗುಡಿಸಲಿಗೆ ಕರೆದುಕೊಂಡು ಹೋಗಿ 'ಇಲ್ಲಿ ಬಟ್ಟೆಗಳ ಬೀರುವೂ ಇಲ್ಲ. ಪೆಟ್ಟಿಗೆಯೂ ಇಲ್ಲ. ಬೇರೆ ಬಟ್ಟೆಗಳೇ ಇಲ್ಲ. ನಾನುಟ್ಟಿರುವುದೊಂದು ಸೀರೆಯೇ ನನಗಿರುವುದು. ಇದನ್ನು ಹೇಗೆ ಒಗೆಯುವುದು ? ಮಹಾತ್ಮಾಜಿಗೆ ಹೇಳು: ತಾನು ಇನ್ನೊಂದು ಸೀರೆ ಕೊಟ್ಟರೆ ದಿನವೂ ಸ್ನಾನಮಾಡಿ ಈ ಸೀರೆ ಒಗೆಯುತ್ತೇನೆಂತ ವಚನ ಕೊಡುತ್ತೇನೆಂದು ಹೇಳು.' ಎಂದಳು. ಇಂಥ ಹೆಂಗಸರೇನು ಅಪರೂಪವಲ್ಲ. ಹಿಂದುಸ್ತಾನದಲ್ಲಿ ಲೆಕ್ಕವಿಲ್ಲದಷ್ಟು ಜನ ಎರಡನೆಯ ಬಟ್ಟೆಗೂ ಗತಿಯಿಲ್ಲದೆ ಮಾನಕಾಯಲಿಕ್ಕೆ ಚಿಂದಿಗಳನ್ನುಟ್ಟು ಕಾಲಸೂಕುತ್ತಾರೆ.

—ಮಹಾತ್ಮಾ ಗಾಂಧಿ.

CC-0. Jangamwadi Math Collection. Digitized by eGangotri




## ಗಂಗೆಗೌರಿಯರ ಹಾಡು

(ಕೋಲಾಟ)

ಸಂಗ್ರಾಹಕರು:—ಶ್ರೀ. ಬೆಟಗೇರಿ ಕೃಷ್ಣಶರ್ಮ.

ಶಿವ:—ಹಳ್ಳ್ಯಾದ ದಂಡ್ಯಾಗs ಮಲ್ಲಿಗಿಹೂವ
ಕೊಯ್ಯ ಜಾಣಿ!
ದೇವsರಿಗೈದ್ಹೂವ ದಯಮಾಡ ಕೋಲs।

ಗಂಗೆ:—ದೇವರಿಗೈದ್ಹೂವ ನಾನು ದಯಮಾಡಿದರ
ನಮ್ಮವರು ನನಗs ಬೈದಾರು ಕೋಲs॥

ಶಿವ:—ನಿಮ್ಮವರು ಬೈಯುದ್ಹಾಂಗs ನಿಮ್ಮವರು
ಕಾಣದ್ಹಾಂಗs।
ನುಮ್ಮsನ ಜಾ ಗಂಗೀ ಜಡಿಯಾಗ ಕೋಲs॥

ಗಂಗೆ:—ಒಂದsರು ಬಂದೇನು ನಂಪೀಗಿ ಕಾಣದು
ರಂಪೀ ಇದ್ದಾಳು ನಿನ್ನ ಮನೆಯಾಗ ಕೋಲs॥

ಶಿವ:—ಉಕ್ಕೂ ಹಾಲನ್ನೇ ತಾರs ಸತ್ಯಾ ಮಾಡುವೆ
ಜಾರs!
ರಂಬಿಲ್ಲ ಜಾರs ಮನೆಯಾಗ ಕೋಲs॥
ಆನೀದ್ಹಾಲನ್ನೇ ತಾರs ಆಣೀ ಮಾಡುವೆ ಜಾರs!
ರಾಣಿಲ್ಲ ಜಾರs ಮನಿಯಾಗ ಕೋಲs॥

❖ ❖ ❖ ❖ ❖

ಶಿವ:—ದೇಶಾದೇಶವ ತಿರುಗೀ ಬ್ಯಾಸತ್ತು ಬಂದೇನಿ
ಉಗ್ಗರಡ ಗೌರೀ ನೀರ ಕೊಡ ಕೋಲs॥
ಒಂದ್‌ಗಿಂಡಿ ಬೇಡಿದಕ ಎರಡ್ ಗಿಂಡಿ ಕೊಟ್ಟಿಲ್ಲ
ಇದು ಏನು ಗೌರೀ ನಿನ ಭಾವ ಕೋಲs॥

ಗೌರಿ:—ಎರಡ್‌ಭಾವ ಮಾಡಿದ್ರ ಜಾಳೇವ
ಮಾಡಾಕಿಲ್ಲ!
ಸಿರಿಗಂಗಿಗೊಂದು ನಿನಗೊಂದು ಕೋಲs॥

ಜಾಗೀ ಜಾ ಶಿವರಾಮಾ ಜಾಗೀಲ ಬಡಿದಾವು।
ಜಾಯಾಗಿನೆರಡ್ಹಲ್ಲು ಉದರ್ಯಾವು ಕೋಲs॥
ಜಾಯಾಗಿನೆರಡ್ಹಲ್ಲು ಉದರ್ಯಾವು ತಲಿಮ್ಯಾಗಿನ
ಜಾಲೀಯನಿಳಿಪೀ ಬರಬೇಕು ಕೋಲs॥

❖ ❖ ❖ ❖ ❖

ಶಿವನಾರ ಮನೀಮುಂದs ಮಾಪೀನ ಮರ ಹುಟ್ಟಿ
ಎಲಿಎಲಿಗೊಂದು ಗಿಳಿ ಕೂತು ಕೋಲs॥
ಎಲಿಎಲಿಗೊಂದೂ ಗಿಳಿಕೂತು ನುಡಿದಾವು
'ಶಿವರಾಯ ನಿನ್ನ ಮ್ಯಾಲ ಸವತೀ ತಂದ'
ಕೋಲs॥
ಗಿಳಿಯ ಮಾತನ್ನ ಕೇಳಿ ಮೈಮುರಿದೆದ್ದಾಳು.
ತಣ್ಣೀರಗಿಂಡಿಲಿ ಮುಕತೊಳೆದು ಕೋಲs॥
ತಣ್ಣೀರಗಿಂಡೀಲಿ ಮುಕತೊಳೆದು ಸಿರಿಗೌರಿ
ನಡದಾಳು ತನ್ನs ತವರೀಗೆ ಕೋಲs॥

ತಾಯಿ:—"ಎಂದಿಲ್ಲs ಸಿರಿಗೌರೀ ಇಂದೇನ ಬಗಿ
ಬಂದೇ
ಕುಂಪ್ರಾಕ ಕೊಡರೇ ಮಣೀಚೌಕಿ ಕೋಲs॥
ಕುಂಪ್ರಾಕ ಕೊಡರೇ ಮಣಿಚೌಕಿ ಗೌರಿಗೆ
ಮುಕತೊಳ್ಯಾಕೊಡರೆ ಬಿಸಿನೀರ" ಕೋಲs॥

ಗೌರಿ:—"ಕುಂಪ್ರಾಕ ಬಂದಿಲ್ಲ ಸಿಂದ್ರಾಕ ಬಂದಿಲ್ಲ
ಶಿವರಾಯ ಎನ್ನಮ್ಯಾಲ ಸವತೀಯ ಕೋಲs॥
ಶಿವರಾಯ ನನ್ನ ಮ್ಯಾಲ ಸವತೀಯ ತಂದಾನಂತ।
ಚಿಂತೇಲಿ ನಾ ಬಂದೆನಿಲ್ಲೀಗೆ ಕೋಲs॥



CC-0. Jangamwadi Math Collection. Digitized by eGangotri

ತಾಯಿ :—“ ದೇಶವನಾಳುವವಗ ಏಸ ಮಂದಿ ಹೆಂಡರೊ
ಈಸೊಂದು ಚಿಂತೀ ನಿನಗ್ಯಾಕ ಕೋಲs ॥
ಈಸೊಂದು ಚಿಂತೀ ನಿನಗ್ಯಾಕs ಗೌರವ್ವ
ಲೇಸ್ಹೋಗು ನಿನಗs ನಮ್ಮsನಿ ಕೋಲs ॥

## ಹರವಿಯೊಡೆದ ಹೆಂಣು

ಸಂಗ್ರಾಹಕ:—ಶ್ರೀ. ಪುಟ್ಟಣ್ಣ.

ಈ ಹಾಡಿನ ನಾಯಿಕೆಯಾದ ಹೆಂಗುಸಿಗೆ ಮೆಚ್ಚಿದಿನಿಯ ಮಾಗಡಿ ರಂಗನೆಂಬವನು. ದೈವದುರ್ವಿಪಾಕದಿಂದ ಮತ್ತೊಬ್ಬನ ಮಡದಿಯಾದವಳಿವಳು.

ಹರದs ಹೊಸಾಹಳ್ಳಿ ಪುರದ ಏರಿಯ ಮೇಗೆ ।
“ ಮಾಗsಡೀರಂಗಾ ಮಡಿದು ಹೋದಾ ” ॥
ಮಾಗsಡೀರಂಗಾ ಮಡಿದೆಂಬ ಸುದ್ದಿಯು ।
ನಾರೀಗೆ ಹೊಳಿಯಾಗ ತಿಳಿದೀತು ॥ ೧ ॥
ನಾರೀಗೆ ಹೊಳಿಯಾಗ ತಿಳಿದೇಸು ಮಾಡ್ಯಾಳು ।
ಹೊತ್ತಿದ್ದs ನೀರ್ಹರವೀ ದುಪ್ಪsನೆ ॥
ಹೊತ್ತಿದ್ದs ನೀರ್ಹರವೀ ದುಪ್ಪನೆ ಎತ್ಹಾಕಿ ।
ಹಾಡಾಡಿಕೊಂಡು ಅಳುತಾಳೆ ॥ ೨ ॥

### ಜನರು ಕೇಳಿದರು.

“ ಚಿನ್ನsದ ಹರವೆಲ್ಲ ರನ್ನsದ ಹರವೆಲ್ಲ ” ।
“ ಮಣ್ಣಾರವೀಗ್ಯಾಕಿಷ್ಟು ಅಳುವೋದು ” ॥

### ನಾರಿ ಹೇಳಿವಳು.

ಅತ್ತೇ ಕಾಣದೀರಾ ! ಮಾವಾ ಕಾಣದೀರಾ ।
ಮನೆಪುರುಷಾ ! ಕಡುಚೆಲ್ವ ಕಾಣದಿರಾ ! ॥
ಇಪ್ಪತ್ತೊಂಪುವರ್ಷ ಬಳಸಿದಂತಾ ಹರವ ।
ಮುಕ್ಕಾಗಿ ಹೋದರೆ ದುಃಖಬರದೇನೆ ? ॥ ೩ ॥

## ಜೋಗುಳ ಹಾಡುಗಳು

( ಮೈಸೂರು ದೇಶದಲ್ಲಿ ರೂಢವಾಗಿದ್ದುವುಗಳು )

ಸಂಗ್ರಾಹಕರು:— ಶ್ರೀಮತಿ ಶಾರದಮ್ಮ , ಬೆಂಗಳೂರು.

ಇತ್ತ ಬಾ ಮಹಲಕ್ಷ್ಮಿ ಹೊಸ್ತಿಲೊಳಗ್ಯಾಕಿದ್ದಿ ।
ಮಿತ್ರೆ ಒಳ್ಳೆವಳು, ಗುಣವಂತಿ; ಕಂದಮ್ಮನ ।
ಕೊಪ್ಪೀನ ಕೆಳಗೆ ನೆಲಸಮ್ಮ ॥ ೧ ॥
ಹಸುದಾರೆ ಉಣಲಿಕ್ಕಿ ಕೆಲಸ ಮೆಲ್ಲಗೆ ಹೇಳಿ ।
ಹಸುವಿನಂತೆ ಸಲಹಿದರೆ ಅತ್ತೆsಗೆ ।
ಸೊಸೆಯು ಮಗಳಾಗಲರಿಯಾಳೆ ॥ ೨ ॥
ಗಂಗೆಯಷ್ಟುs ತಂಪು ಗೌರೀಗೆ ಬಾರsದು ।
ಸಡುನೀರ ತಂಪು ಡಡಕಿಲ್ಲ ಲೋಕದಲಿ ।
ಮಗಳಷ್ಟು ಮೋಹ ಸೊಸೆಗಿಲ್ಲ ॥ ೩ ॥
ಅಜ್ಜಿ ಸಾಕಿದ ಕಂಪ ಕಜ್ಜಾಯ ಮೆಲುವಾಗ ।
ಗಜ್ಜುಗಡ ಕಾಯಿ ಉದುರಾಲು ನಡುಗುತ್ತ ।
ಅಜ್ಜೀಯ ಮರೆಗೆ ಓಡೀದ ॥ ೪ ॥
ಮುದ್ದೀಗೆ ಮೊಡಲುಂಟೆ ಹದ್ದೀಗೆ ಮನೆಯುಂಟೆ ।
ಬುದ್ಧಿವಂತನಿಗೆ ಭಯವುಂಟೆ ಲಕ್ಷ್ಮೀಯ ।
ಹೊದ್ದಿದವಗುಂಟೆ ಬಡತಾಸ ॥ ೫ ॥



CC-0. Jangamwadi Math Collection. Digitized by eGangotri



**ತಿಲಾಂಜಲಿ. ಲೇ. ಶ್ರೀ. ಸಾಲಿ ರಾಮಚಂದ್ರರಾಯರು.**

ಇದು ರಾಮಚಂದ್ರರಾಯರಿಗೆ ಪುತ್ರನಿಧನದಿಂದಾದ ಶೋಕವನ್ನು ವ್ಯಕ್ತಪಡಿಸುವ ಒಂದು ಚಿಕ್ಕ ಕವಿತೆಯಾಗಿದೆ. ರಾಮಚಂದ್ರರಾಯರ ಕಾವ್ಯವು ಜೀವನದಲ್ಲಿಯ ಅನೇಕ ಯಾತನೆಗಳನ್ನು ಮೀರಿ ಹೇಗೆ ಗಂಭೀರವಾಗಿ ನಿಂತಿದೆ ಯೆಂಬುದನ್ನು ಅನೇಕರು ಬಲ್ಲರು. ಪುತ್ರನಿಧನವು ಇಲ್ಲಿ ಒಂದು ತಾತ್ಕಾಲಿಕ ಕಾರಣವಾಗಿದೆ. ಈ ಶೋಕ ವಾಯುವಿನಿಂದ ಅವರ ಹಿಂದಿನ ನೋವುಗಳೆಲ್ಲ ಮತ್ತೆ ಪ್ರಜ್ವಲಿತವಾಗಿ ಹೃದಯದ ಕಾಳ್ಗಿಚ್ಚಿನಲ್ಲಿ ಪಾವಿತ್ರ್ಯವನ್ನು ಪಡೆದು ಇಲ್ಲಿ ಮೂರ್ತಿಮಂತವಾಗಿ ನಿಂತಿವೆ.

'ತಿಲಾಂಜಲಿ' ಕಾವ್ಯವು ( Elegy ) ಕನ್ನಡಕ್ಕೇನು ಹೊಸತಲ್ಲ. ತಿರುಕೊಳವ ನಾಚಿಯ ಪ್ರಲಾಪ, ಹರಿಶ್ಚಂದ್ರ ಕಾವ್ಯದಲ್ಲಿ ಬರುವ ಆಕ್ರೋಶದ ಶ್ಲೋಕಗಳು,- ಇವೆಲ್ಲ ನಿಧನಗೀತೆಗಳು. ( elegies ). ಇತ್ತೀಚೆಗೆ ಬಂದವುಗಳಲ್ಲಿ ಬೇಂದ್ರೆಯವರ "ಏನೆಂದು ಕೂಗಲಿ ನಿನ್ನ," 'ಹೊನ್ನಮ್ಮ' ಹಾಗು ವನಮಾಲಿಯ "ಮಸಣದ ದಾರಿಯಲ್ಲಿ" ಮೊದಲಾದ ಕವಿತೆಗಳನ್ನು ಈ ಮಾಲಿಕೆಯಲ್ಲಿ ಸೇರಿಸಬಹುದು. ನಿಧನಗೀತೆಯಲ್ಲಿ ಸಂಗತಿ ವಿಶೇಷವು ಸೂಚ್ಯವಿರಲಿ, ಇರದಿರಲಿ,—ಸಕಲರಿಗೂ ವಿದಿತವಾಗಿ ಹೃದಯಸ್ಪರ್ಶಿಯಾದ ಭಾವ ಭಾವನೆಗಳಿಂದ ಅದು ತುಂಬಿರಬೇಕು. ಈ ಪವಾಡವು 'ತಿಲಾಂಜಲಿ'ಯಲ್ಲಿ ಜರುಗಿದೆ. ವಸ್ತುವಿನ ಹಾಗು ಸ್ವಂತದ ದುಃಖದ ವರ್ಣನೆಗಾಗಿ ಕೆಲವು ಶ್ಲೋಕಗಳನ್ನು ಇಲ್ಲಿ ಬಳಸಿಕೊಂಡಿದ್ದರೂ ಉಳಿದ ಭಾಗಗಳಲ್ಲಿ ಸರ್ವಸಾಧಾರಣತೆಯು (Universality) ಅಚ್ಚಳಿಯದಿದೆ. ಒಂದೇ ಒಂದು ದೀಪದ ಕುಡಿಯು ಅಲುಗದೆ ಉರಿಯುತ್ತಲಿದೆ.

"ಅಂದು ಪತಿಸತಿಯರೊಲ-
ವಿಂದೆ, ತಂದೆಯೆ, ನಿನ್ನ
ಮುಂದೆ ಹಚ್ಚಿದ ದೀಪ-
ವಿಂದು ನಂದಿಹುದಕಟ!" ಎಂಬಲ್ಲಿ ದುಃಖದ ಉದ್ವೇಗವೂ

"ಜಲಧಿಯಲ್ಲಿ ಗುರಿಯಿಲ್ಲ-
ದಲೆಗಳಲ್ಲಿ ತೇಲುತಿಹ
ತೊಲೆಯವೊಲು ಜೀವವೇ-
ನಲೆಯುಲಿರುವದೆ ಇಲ್ಲಿ" ಎಂಬಲ್ಲಿ ತತ್ವತಃ ವಿಹ್ವಲಗೊಂಡ ಮನಸ್ಸಿನ ಪರಿತಾಪವೂ ಹಾಗು

"ಆದುದಾಗಲಿ ನಿನ್ನ
ಪಾದದಾಸರವಿರಲಿ
ಈ ದಿನದೆ ಮುಂದೆನಗೆ
ಹೇ ದಯಾಂಬುಧಿ ದೇವ" ಎಂಬಲ್ಲಿ ಮನಸ್ಸಿನ ಪರಿಪಕ್ವತೆಯೂ ಗೋಚರವಾಗುವವು. 'ಗ್ರೇ' ಕವಿಯ Elegy ಯಲ್ಲಿ ಶ್ಲೋಕದ ಕಟ್ಟು ತಿಲಾಂಜಲಿ ಕಾವ್ಯದ ಧ್ಯಾನಮಗ್ನತೆಗೆ (meditativeness) ಯೋಗ್ಯವಾಗಿದೆ ಯೆಂದು ಹೇಳುವ ವಾಡಿಕೆಯುಂಟು. ಅದರಂತೆ ಇಲ್ಲಿಯ ಶ್ಲೋಕ (stanza) ವಾದರೂ ಒಂದರಮೇಲೊಂದು ಸಾವಕಾಶವಾಗಿ ಮೂಡಿ ಹೋಗುವ ಭಾವಗಳ ಸರಣಿಗೆ ತಕ್ಕುದಾಗಿದೆ.

—ವಿ. ಕೃ. ಗೋ.

**ಜಯಂತೀಕ್ಷೇತ್ರ ಮಹಿಮಾ. (ಬನವಾಸಿಕ್ಷೇತ್ರ).**
ನಮ್ಮ ನಾಡಿನಲ್ಲಿ ಮೊದಲಿನಿಂದ ಹೆಸರುವಾಸಿಯನ್ನು

CC-0. Jangamwadi Math Collection. Digitized by eGangotri

ಪಡೆದುಬಂದ ತೀರ್ಥಕ್ಷೇತ್ರಗಳಿಗೆಲ್ಲ ಸಂಸ್ಕೃತ ಭಾಷೆಯಲ್ಲಿ ಒಂದೊಂದು ಸ್ಥಳಪುರಾಣಗಳಿವೆ. ಈ ಸ್ಥಳ ಪುರಾಣಗಳು ಯಾವುದಾದರೊಂದು ಮಹಾಪುರಾಣದ ಅಂತರ್ಗತವಾಗಿರುತ್ತವೆ. ಆ ಸ್ಥಳಕ್ಕೂ ಪೌರಾಣಿಕ ಪ್ರಸಿದ್ಧವ್ಯಕ್ತಿಗಳಿಗೂ ಸಂಬಂಧವನ್ನು ಕಲ್ಪಿಸಿ ಸ್ಥಳ ಮಹಾತ್ಮ್ಯವನ್ನು ಹೆಚ್ಚಿಸಿ ತೋರಿಸಬೇಕೆಂದು ಮಾಡಿದ ಪ್ರೌಢಪ್ರಯತ್ನವಿದು. ನಮ್ಮಲ್ಲಿ ಯಾವ ಹಳ್ಳಿಗೆ ಹೋಗಿ ಕೇಳಿದರೂ ಆ ಹಳ್ಳಿಯ ಹುಟ್ಟಿನ ಬಗೆಗಿದ್ದ ಪರಂಪರಾಗತ ಪವಾಡದ ಕತೆಯು ಸಿಕ್ಕುವುದು. ಅವು ಜಾನಪದ ಕಥೆಗಳಾಗಿ ಜನರ ಬಾಯಲ್ಲಿಯೆ ಉಳಿದುವು. ಪ್ರಸಿದ್ಧಕ್ಷೇತ್ರದಲ್ಲಿಯ ಪಂಡಿತರು ತಮ್ಮ ಸ್ಥಳದ ಪವಾಡವನ್ನು ಬರೆದಿಟ್ಟು ಅದರ ಸತ್ಯತೆಯನ್ನು ಪ್ರಸ್ತಾಪಿಸಲು ಮಹಾಪುರಾಣದ ಸಂಬಂಧವನ್ನು ಆಡಕ್ಕೆ ಕಲ್ಪಿಸಿದರು. ಪ್ರಸ್ತುತಗ್ರಂಥವಾದರೂ ಕದಂಬರಾಜರ ಆಳಿಕೆಯಿಂದ ಇತಿಹಾಸಪ್ರಸಿದ್ಧವಾದ ಬನವಾಸಿಯ ಸ್ಥಳ ಮಹಾತ್ಮ್ಯದಿಂದ ಕೂಡಿದೆ. ಆಧುನಿಕ ವಿಮರ್ಶಾಪದ್ಧತಿಯಿಂದ ಇದನ್ನು ನೋಡಿದಲ್ಲಿ ಇದರಲ್ಲಿಯ ವಿಷಯವು ತುಂಬ ವಿಸಂಗತವಾಗಿ ಕಾಣಬಹುದು. ಪರಸ್ಪರ ಸಂಬಂಧವಿಲ್ಲದ ವಿವರಣೆಗಳನ್ನು ನೋಡಿ ಜುಗುಪ್ಸೆಯಿಂದ ಸಕ್ಕು ಬಿಡಬಹುದು. ಆದರೆ ಭಾವಿಕಜನರು ಇದನ್ನೋದಿ ಧನ್ಯರಾದೆವೆಂದು ಸಂತೋಷವನ್ನು ಪಡದೆ ಇರಲಾರರೆಂದು ನಮ್ಮ ನಂಬುಗೆ. ಎಲ್ಲ ಪುರಾಣಗಳಂತೆ ಇದನ್ನೂ 'ಸೂತರು ಶೌನಕಾದಿಗಳನ್ನು ಕುರಿತು' ಹೇಳಿದ್ದಾರೆ. ಒಮ್ಮೆ ಎಲ್ಲ ಋಷಿಗಳ ಸಭೆ ಸೇರಿವಾಗ ಮೋಕ್ಷದ ಸಾಧನದ ಬಗೆಗೆ ವಿವಾದವುಂಟಾಗುವುದು. ಒಬ್ಬರು ಸತ್ಯದಿಂದ ಸಿದ್ಧಿಯೆಂದರು. ಇನ್ನೊಬ್ಬರು ತಪಸ್ಸಿನಿಂದಲೇ ಮುಕ್ತಿಯೆಂದರು. ಮತ್ತೊಬ್ಬರು ಧರ್ಮದಿಂದ ಮೋಕ್ಷವೆಂದರು. ಹೀಗೆಯೆ ಒಬ್ಬೊಬ್ಬರು ಒಂದೊಂದನ್ನು ಎತ್ತಿ ಹಿಡಿದು ವಿವಾದಿಸುತ್ತಿರಲು ಸೂತಪುರಾಣಿಕರು ಬರುವರು. ಋಷಿಗಳೆಲ್ಲರೂ, ಅವರಿಗೆ ತಮ್ಮ ವಿವಾದ ಕಾರಣವನ್ನು ಹೇಳಿ, ಅದನ್ನು ತೀರಿಸಬೇಕೆಂದು ಕೇಳುವರು. ಸೂತರು ಜಯಂತೀಕ್ಷೇತ್ರದ ಹೆಸರನ್ನೆತ್ತಿ ಅದರ ದರ್ಶನ ಮಾಡಿದರೆ ಮುಕ್ತಿಯನ್ನು ಸುಲಭವಾಗಿ ಹೊಂದಬಹುದೆಂದು ಹೇಳಿ, ಋಷಿಗಳ ವಿಜ್ಞಾಪನೆಯಂತೆ ಆ ಕ್ಷೇತ್ರದ ಪವಾಡಗಳನ್ನು ಒಂದೊಂದಾಗಿ ಹೇಳುವರು. ಒಟ್ಟು ನಲವತ್ತು ಅಧ್ಯಾಯಗಳಲ್ಲಿ ಗ್ರಂಥವು ಕೊನೆಗಂಡಿದೆ. ಮೂಲ ಸಂಸ್ಕೃತಗ್ರಂಥಗಳನ್ನು ಸುಲಭವಾದ ಕನ್ನಡ ಗದ್ಯದಲ್ಲಿ ಬರೆದು ಬಹುಜನರ ಉಪಯೋಗಕ್ಕೆ ಒದಗುವಂತೆ ಮಾಡಿದುದಕ್ಕಾಗಿ ಶ್ರೀ. ಮುರಗೋಡು ಹನುಮಂತಾಚಾರ್ಯರು ಅಭಿನಂದನಾರ್ಹರು. ಬೇಕಾದವರು ಇದರ ಪ್ರಯೋಜನವನ್ನು ಪಡೆಯಬಹುದು.

—ಕೃ. ಶ್ರೀ. ಬಿ.

## ಶ್ರೀಮಜ್ಜಗನ್ನಾಥದಾಸರಾಯರ ಚರಿತ್ರೆ.

ಶ್ರೀ. ನಾ. ಭೀ. ಕಲಮದಾನಿಯವರು ಬರೆದುದು. ಇದರಲ್ಲಿ ೩ ಭಾಗಗಳಿದ್ದು ಮೊದಲನೆಯ ಭಾಗದಲ್ಲಿ ದಾಸರ ಚರಿತ್ರೆಯಿದೆ. ಎರಡನೆಯ ಭಾಗದಲ್ಲಿ ದಾಸರ ಬೇರೆ ಬೇರೆ ಹದಿನಾರು ಪವಾಡಗಳನ್ನು ಬಣ್ಣಿಸಲಾಗಿದೆ. ಮೂರನೆಯ ಭಾಗದಲ್ಲಿ ಅವರ ಮಹಿಮೆಯನ್ನು ಕೊಂಡಾಡಿದ ದಾಸರಾಯರ ಬೇರೆ ಬೇರೆ ಶಿಷ್ಯರಿಂದ ರಚಿತವಾದ ಆರು ಕೀರ್ತನೆ (ಹಾಡು) ಗಳುಂಟು. ಜಗನ್ನಾಥದಾಸರು ಸಾಹಿತಿಗಳೂ ಅಹುದು; ವೇದಾಂತಿಗಳೂ ಅಹುದು. ಅವರು ಕನ್ನಡವಾಙ್ಮಯದಲ್ಲಿ ಮಾಡಿದ ಕಾರ್ಯವು ಅಷ್ಟಿಷ್ಟಲ್ಲ. "ಹರಿಕಥಾಮೃತಸಾರ" ಎಂಬ ಅವರ ಗ್ರಂಥವು ದ್ವೈತವೇದಾಂತದ ತಿರುಳಿನಿಂದ ತುಂಬಿದೆ. ದ್ವೈತಮತಾನುಯಾಯಿಗಳಿಗೆ ಅದೊಂದು ಪ್ರಮುಖವಾದ ಆಧಾರಗ್ರಂಥ. ಇಷ್ಟಲ್ಲದೆ ಅವರು ರಚಿಸಿದ ಕೀರ್ತನೆ ಸುಳಾದಿ-ಉಗಾಭೋಗಗಳು ಬಹುಜನ ಕನ್ನಡಿಗರಿಗೆ ಪರಿಚಿತವಾಗಿರುವುವು. ಇಂತಹ ಮಹನೀಯರ ಚರಿತ್ರೆಯನ್ನು ತಮಗೆ ಸಿಕ್ಕಷ್ಟು ಸಂಗ್ರಹಿಸಿ ಜನರ ಕೈಯಲ್ಲಿ ಕೊಟ್ಟು ಗ್ರಂಥಕರ್ತರು ಕನ್ನಡಿಗರ ಉಪಕಾರಕ್ಕೆ ಪಾತ್ರರಾಗಿದ್ದಾರೆ.

**ಕರೇಹಾಡು.** (ರಸದಿರುಕನು ಬರೆದುದು.)

ಮೂವತ್ತಾರು ಸಾಂಗತ್ಯವೃತ್ತಗಳಲ್ಲಿ ಕೃತಿಯು ಕೊನೆಗಂಡಿದೆ. ಇದರಲ್ಲಿ

"ಎಲ್ಲ ಬಣ್ಣಗಳಲಿ ಶಾಂತವು ಕಣ್ಣಿಗೆ।
ಎಲ್ಲ ಬಣ್ಣಗಳಲಿ ಶ್ರೇಷ್ಠ॥
ಎಲ್ಲ ಬಣ್ಣಗಳಲಿ ಶೋಭಿಸುವುದಾ।
ನಲ್ಲವೆ ನೀಲಿಯ ಬಣ್ಣ"॥

ಎಂದು ನೀಲಿಯ ಬಣ್ಣದ ಮೇಲ್ಮೆಯನ್ನು ಕೊಂಡಾಡಿದ್ದು, ಬಳಿಕ ನೀಲಿಯ ಬಣ್ಣವನ್ನೂ ಕಪ್ಪು ಬಣ್ಣವನ್ನೂ ಒಂದಾಗಿ ಭಾವಿಸಿ, ಲೋಕದಲ್ಲಿ ಶ್ರೇಷ್ಠವೆನ್ನುವುವೆಲ್ಲ

CC-0. Jangamwadi Math Collection. Digitized by eGangotri

ಕಪ್ಪುಬಣ್ಣದವಾಗಿವೆ ಎಂದು ಹೇಳುತ್ತ ಹೊರಟಿರುವರು. ಇದರಲ್ಲಿನ ರೀತಿ ಅದೆಷ್ಟೊ ಜನರಿಗೆ ಮೆಚ್ಚಿಕೆಯಾಗಿ ಮನೋರಂಜಕವಾಗಿ ತೋರಬಹುದು. ಕವಿತೆ ಮಾಡಬೇಕೆಂಬ ಹಂಬಲದಿಂದ ವಿಷಯವನ್ನು ಸಂಶೋಧಿಸುತ್ತಲಿರುವವರು ತಾವೂ ಒಂದು ಬೇರೆ ಬಣ್ಣದ ಹೆಚ್ಚಳವನ್ನು ಹಾಡಿ ಹೊಗಳಬೇಕೆಂದು ಆ ಬಣ್ಣದಲ್ಲಿದ್ದ ಶ್ರೇಷ್ಠವಸ್ತುಗಳನ್ನು ಪದ್ಯದಲ್ಲಿ ಪೋಣಿಸಬಹುದು. ಅಲ್ಲಲ್ಲಿ ವರ್ಣನೆಗಳು ಚೆನ್ನಾಗಿ ಬಂದಿವೆ. 'ರಸದಿರುಕನು' ರಸಿಕರು ಮೆಚ್ಚುವಂತಹ ಕೃತಿಯನ್ನು ರಚಿಸಿ ಯಶಸ್ಸನ್ನು ಪಡೆಯಲೆಂದು ನಮ್ಮ ಬಯಕೆ.

### ಜೈಮಿನಿಭಾರತ ಕಥಾಸಂಗ್ರಹ (ಸಮಗ್ರ)

ಮೈಸೂರು ಶಾಸನದ ಇಲಾಖೆಯ ಅಸಿಸ್ಟೆಂಟ್ ಶ್ರೀ. ರಾ. ರಾಮರಾವ್ ಬಿ. ಎ. ಇವರು ಅನುವಾದಿಸಿರುವರು.

ಈ ಗ್ರಂಥದ ಮೊದಲನೆಯ ಭಾಗವು ೧೯೩೩ರಲ್ಲಿ ಪ್ರಕಟವಾಗಿತ್ತು. ಈಗ ಕವಿಯ ಕುಲ, ಜಾತಿ ಮೊದಲಾದ ವಿಚಾರಗಳಿದ್ದ ಪೀಠಿಕೆ ಸಹಿತ, ಸಮಗ್ರಗ್ರಂಥದ ಕಥಾಸಂಗ್ರಹವು ಇದರಲ್ಲಿದೆ. ತೆಲುಗುಭಾಷೆಯಲ್ಲಿ ಜೈಮಿನಿಭಾರತದ ವಚನಗ್ರಂಥವೊಂದಿದೆ. ಅದರಂತೆಯೆ ಕನ್ನಡದಲ್ಲಿ ಪಂಡಿತಪಾಮರರ ಮನರಂಜನೆಮಾಡುವ ಲಕ್ಷ್ಮೀಶನ ಜೈಮಿನಿಭಾರತಪದ್ಯಕಾವ್ಯವನ್ನು ಇವರು ಗದ್ಯದಲ್ಲಿ ಇಳಿಸಿರುವರು. ಪದ್ಯಕಾವ್ಯವು ಎಷ್ಟೇ ಸುಲಭವಿದ್ದರೂ ಅರ್ಥಹಚ್ಚಲು ಕಠಿನವಾಗುವದು ಸಹಜ; ಆದರೆ ಗದ್ಯದ ಮಾತು ಹಾಗಲ್ಲ. ಸುಲಭವಾಗಿ ಓದಿ ತಿಳಿದುಕೊಳ್ಳಲು ಗದ್ಯದ ರೀತಿಯಿಂದ ಬಲು ಸಹಾಯವಾಗುವದು. ಪದ್ಯದ ರಾಗರಂಜಕತೆಯು ಗದ್ಯಕ್ಕೆ ಬಾರದಿದ್ದರೂ—ಭಾವವು ಸ್ಪಷ್ಟವಾಗಿ ಒಡೆದುಕಾಣದಿರಲಾರದು. ಅವನ್ನು ತಿಳಿದುಕೊಳ್ಳಲು ಬಹುಜನರಿಗೆ ಸುಲಭೋಪಾಯವನ್ನು ಮಾಡಿಕೊಟ್ಟದ್ದಕ್ಕಾಗಿ ಶ್ರೀ. ರಾ. ರಾಮರಾಯರನ್ನು ಅಭಿನಂದಿಸುವೆವು.

ಇನ್ನು ಪೀಠಿಕೆಯಲ್ಲಿ ಚರ್ಚಿಸಿದ ವಿಷಯಗಳು ಅನಿರ್ಣೀತ ವಾದಗ್ರಸ್ತವಿಷಯವಾಗಿಯೇ ಈ ವರೆಗೂ ಉಳಿದಿವೆ. ಸಂಶೋಧಕರ ಸಂಶಯ ದೂರವಾಗಿ ನಿಜವಾದ ವಸ್ತುಸ್ಥಿತಿಯನ್ನು ಕಂಡುಹಿಡಿಯುವದು ಅನುಮಾನ ಸಾಧನಗಳಿಂದ ಯಶಸ್ವಿಯಾಗಲಾರದು. ಅನೇಕಾನೇಕ ಪಂಡಿತರ ಅಭಿಪ್ರಾಯಗಳು ಭಿನ್ನ ಭಿನ್ನವಾಗಿರಲು ನಿಜ ಯಾವುದೆಂಬದನ್ನು ಗೊತ್ತುಮಾಡಲು ಶಕ್ಯವಾಗಲಾರದು. ಲಕ್ಷ್ಮೀಶನ ಕಾಲ, ಜಾತಿ, ಮೊದಲಾದವುಗಳನ್ನು ನಿರ್ದಿಷ್ಟವಾಗಿ ಹೇಳಲು ಬಾರದಾಗಿದೆ ಇನ್ನೂ. ಚೆನ್ನಬಸವ ಪುರಾಣದ ಪರಿಣಾಮವು ಜೈಮಿನಿಯ ಮೇಲಾಗಿದೆಯೋ—ಜೈಮಿನಿಯ ಪರಿಣಾಮವು ಚೆನ್ನಬಸವಪುರಾಣದ ಮೇಲಾಗಿದೆಯೋ ಇದನ್ನು ಒರೆಗೆ ಹಚ್ಚಿತೋರಿಸಲು ಸರಿಸಮಾನವಾದ ಕೆಲವು ಪದ್ಯಗಳನ್ನು ಆರಿಸಿ ಹಾಕಿರುವರು. ಮೂಲಸಂಸ್ಕೃತ ಜೈಮಿನಿಯ ಅನುವಾದವು ಲಕ್ಷ್ಮೀಶನ ಜೈಮಿನಿಯಲ್ಲಿಲ್ಲ. ಹಲಕೆಲವು ವ್ಯತ್ಯಾಸಗಳು ಕಂಡುಬರುವವು. ಮೂಲವೇನೋ ಆಧಾರವಾಗಿದೆ ಅಷ್ಟೆ! ಲಕ್ಷ್ಮೀಶನ ಕಾವ್ಯದ ವಿಷಯದಲ್ಲಿ ಎಷ್ಟು ಬಣ್ಣಿಸಿದರೂ ಕಡಿಮೆಯೆ. ಮಾನವನ ಹೃದಯದಲ್ಲಿ ಪರಮಾತ್ಮನಿಗೆ ಸ್ಥಾನವಿದ್ದಂತೆ ಕನ್ನಡನಾಡಿನ ಹೃದಯದಲ್ಲಿ ಜೈಮಿನಿಗೆ ಸ್ಥಾನವಿದೆ. ಇನ್ನು ಗದ್ಯಾನುವಾದದ ವಿಷಯ. ಕೇವಲ ಅನುವಾದಮಾಡುವದೂ ಕಷ್ಟ. ಯಾಕೆಂದರೆ ಮೂಲದಂತೆ ಇಳಿಸುವದು ಹೊಸದೊಂದನ್ನೇ ನಿರ್ಮಿಸುವದಕ್ಕಿಂತ ಕಠಿನತರವಾದ ಕಾರ್ಯ.

ಕೇವಲ ಭಾಷಾಂತರಕ್ಕಿಂತ Free Translation Rendering ಮಾಡುವದು ಯಾವಾಗಲೂ ಒಳಿತು. 'ಯುದ್ಧಸ್ಯ ವಾರ್ತಾ ರಮ್ಯಂ' ಎಂಬಂತೆ ಜೈಮಿನಿಯ ಕಥೆಯು ಬಹು ಸ್ವಾದಮಯವಾದುದು. ಅನುವಾದವು ಇತ್ತೀಚಿನ ಹೊಸಶೈಲಿಗೆ ಇಳಿಯದಿದ್ದರೂ ವಾಚಕವೃಂದವು ಓದಲಾರಂಭಿಸಿದರೆ, ನಿರರ್ಗಳವಾಗಿ ಸಾಗುತ್ತ ಹೋಗಬಹುದಾದ ಶೈಲಿಯಿದೆ. ಈ ಗ್ರಂಥದ ಉಪಯೋಗವನ್ನು ಕನ್ನಡ ಗದ್ಯಪ್ರಿಯರು ಮಾಡಿಕೊಳ್ಳಬೇಕೆಂಬ ನಮ್ಮ ಅಭಿಪ್ರಾಯ.

—ಗೋ. ವೆ. ಚು.

### ಮೂಢಭಕ್ತನ 'ಶೌರ್ಯದೇವಿ'—

ಸಂ. ಪ್ರ. ವಿದ್ಯಾರ್ಥಿಸಂಘ ರಾಯಚೂರು. ಇದರಂತಹವುಗಳನ್ನು ಮಾತ್ರ ಇನ್ನು ಮುಂದೆ ಪ್ರಕಟಿಸಬಾರದು. ವಿದ್ಯಾರ್ಥಿಸಂಘದವರು ಪ್ರಕಟಿಸಬೇಕಾದವುಗಳನ್ನು ಚೆನ್ನಾಗಿ ಪರಿಶೀಲಿಸಿ ಪರಾಮರ್ಶಿಸಿ ಹೊರಗೆಡವಬೇಕು. ಹೊರಗೆ ಬೇಗ ಬಾರದಿದ್ದರೂ ಚಿಂತೆಯಿಲ್ಲ— ಎಂದು ಉಪದೇಶಿಸದಿರಲಾರೆವು. ಅದಕ್ಕಾಗಿ ಸಂಘದವರು ತಪ್ಪೆಣಿಸಲಾರರೆಂದು ನಂಬುವೆವು.



CC-0. Jangamwadi Math Collection. Digitized by eGangotri

ಒಂದಾಣೆ ಮಾಲೆಯ ಪುಸ್ತಕಗಳು:—

**(೧) ಅದೃಷ್ಟವಲ್ಲ; ಅದೃಷ್ಟಿ—**

ಒಂದಾಣೆಮಾಲೆಯ ೨ನೆಯ ವರುಷದ ೨ನೆಯ ಪುಸ್ತಕವು. ಬರೆದವರು ಶ್ರೀ. ಎನ್. ಆರ್. ಕುಲಕರ್ಣಿ ಎಂ. ಎ. ಎಲ್‌ಎಲ್. ಬಿ. ಇವರು, ವಿಕಾಸವಾದ ಅಥವಾ ದೇವರು ಸತ್ತನೇ ಎಂಬ ಹೊಸಮಾದರಿಯ ಪುಸ್ತಕವನ್ನು ಬರೆದು ಕನ್ನಡಿಗರಿಗೆ ಚಿರಪರಿಚಿತರಾಗಿದ್ದಾರೆ. ಈ ಚಿಕ್ಕ ಕತೆಯನ್ನು ಇವರೇ ಬರೆದಿರುವರು. 'ಕತೆಕಟ್ಟುವವನಲ್ಲ; ಹುಟ್ಟ ಕತೆಗಾರನೂ ಅಲ್ಲ. ಹೊಸ ವಿಚಾರಗಳನ್ನು ಪ್ರಬಂಧರೂಪದಿಂದ ಇಟ್ಟು ನೋಡಿದೆ' ವಿಫಲ—ಪ್ರತಿಫಲವು ದೊರಕಿದ್ದರಿಂದ ಕತೆಗೆ ಮೊದಲು ಮಾಡಿದ್ದೇನೆ.' ಇತ್ಯಾದಿ............ಓದುಗರಿಗೆ ಹೇಳಿಕೊಂಡಿದ್ದಾರೆ. ಕತೆಯಲ್ಲಿಯೂ ಕೂಡ ಹೊಸವಿಚಾರಗಳನ್ನು ಮಂಡಿಸುವದೇ ತಮ್ಮ ಕೃತಿಗಳ ಉದ್ದೇಶವೆಂದು ಬರೆದಿರುವರು. ಕತೆಯೆಂದು ಕರೆಯಲಿಕ್ಕೆ ಬಾರದಿದ್ದರೂ ಲೇಖಕರ ಉದ್ದೇಶವು ಚೆನ್ನಾಗಿ ಸಾಧಿಸಿದೆಯೆಂದು ಈ ಕತೆ ಓದಿದವರೆಲ್ಲರೂ ಅಭಿಪ್ರಾಯಪಡದಿರಲಾರರೆಂದು ನಾವು ನಂಬುವೆವು. ಇಂಥವರಿಗೆ ದುಂಬಾಲು ಬಿದ್ದಾದರೂ ಬರೆಯಿಸಿಕೊಂಡು ಕನ್ನಡಸಾಹಿತ್ಯಸಂಪತ್ತನ್ನು ವೃದ್ಧಿಗೊಳಿಸುವ ಸಂಪಾದಕರನ್ನು ಅಭಿನಂದಿಸುವೆವು.

**ಲೋ. ಬೋ. ಲೋ. ಬೋ. —**

ಬರೆದವರು ಭರತ. ಲೋ. ಬೋ. ಲೋ. ಬೋ. ಎಂಬ ಈ ಶಬ್ದವು ಹೋಳೀಹಬ್ಬದಲ್ಲಿಯ ಶುಭದಾಯಕವಾದ ಶಬ್ದವಲ್ಲ. ಆಗ ಹೊಯ್ಕೊಂಡರೆ ಹೋಳಿಗೆ—ತುಪ್ಪವಾದರೂ ಸಿಗುವದು. ಆದರೆ ಇಲ್ಲಿಯ ಲೋ. ಬೋ. ಲೋ. ಬೋ ಶಬ್ದವು ಸಾಯುವದೇ ಲೇಸೆಂದು ಸೂಚಿಸುವ ಶಂಖನಾದವೆಂದೇ ಕೇಳಿಸದಿರದು. ಮುಂಗೈಗೆ ಎಣ್ಣೆ ಹಚ್ಚಿ, ದಕ್ಷಿಣಕ್ಕೆ ಮುಖ ತಿರುವಿ ಹೊಡೆಯುವ ಈ ಪಾಂಚಜನ್ಯನಿನಾದವು ಈಗಿನಂಥ ಸ್ವತ್ವ—ಸತ್ವ ಹೀನವಾದ ಲೋಕಲ್‌ಬೋರ್ಡಿನ ಆಡಳಿತದ ಪ್ರತ್ಯಕ್ಷದರ್ಶನವನ್ನು ಮಾಡಿಕೊಟ್ಟಿರುವದು. ಇದಕ್ಕೂ ಭೀಕರವಾದ ದೃಶ್ಯಗಳನ್ನು ನೋಡಿ ಕೇಳಿದವರಿಗೆ ಈ ಚಿತ್ರವು ಅಷ್ಟೊಂದು ಎದೆಯನ್ನು ಒಡೆಯಿಸಲಾರದೆಂದು ನಾವೆನ್ನುವೆವು. ಇದ್ದಕ್ಕಿದ್ದ ಸಂಗತಿಗಳನ್ನು ಬೆಡಗಿನ ಭಾಷೆಯಲ್ಲಿ ಶ್ರೀ. ಭರತರು ಚೆನ್ನಾಗಿ ವರ್ಣಿಸಿದ್ದಾರೆ. ಇದರಲ್ಲಿಯ ಟೀಕೆಯೋ ಉಪದೇಶವೋ—ಆಡಳಿತವನ್ನು ಯೋಗ್ಯಹಾದಿಗೆ ತರಬೇಕೆಂಬ ಬುದ್ಧಿಯು ಲೋ. ಬೋ. ಕ್ಕೆ ಬರದಿದ್ದರೂ—ಈಗ ಮೆರೆಮೆರೆದು ಮಾಡುವ ಕಾರಭಾರವು ತೀರ ಹೊಲೆಗೆಲಸವೆಂಬುದನ್ನು ಮಾತ್ರ ತಿಳಿದುಕೊಂಡರೆ ಸಾಕು. ಇದೂ ತಿಳಿಯದೆ ಹೋದರೆ ಕುಟ್ಟಲೆ **ಲೋ. ಬೋ. ಲೋ. ಬೋ. ಲೋ. ಬೋ.**

**ಹಿಂದೂ ಮುಸಲ್ಮಾನ—**

೧೧ನೆಯ ಪುಷ್ಪ. ಬರೆಹಗಾರ ಶ್ರೀ. ಪ್ರ. ಗೋ. ಕುಲಕರ್ಣಿ. ಪ್ರೇಮಚಂದರ ಒಂದು ಕತೆಯ ಅನುವಾದ. ಮೂಲಕತೆಗೆ ಬೆಲೆಯಿದೆ ಎಂದ ಮೇಲೆ ಅನುವಾದಕ್ಕಾದರೂ ಬೆಲೆಯುದೆಯೆಂದು ಹೇಳುವುದೇ ಬೇಡ. ಹಿಂದೂ ಮುಸಲ್ಮಾನರೊಂದಾಗಿ ಕೆಲವು ದಿನ ಕಾರ್ಯಮಾಡಿದುದು, ಒಡಕು ಹುಟ್ಟಿ ಎದುರಿಸಿನಿಂದುದು. ಇದೀಗ ಮತ್ತೆ ಒಂದಾಗುವ ಸುಚಿಹ್ನ ತೋರುವ ಈ ಸಂಧಿಕಾಲದಲ್ಲಿ ಒಳೆಯದ ಒಗಟವನ್ನು ಬಿಡಿಸುವದು ಬಲುದುಸ್ತರ. ಈ ಕತೆಯು ಆ ಒಗಟವನ್ನು ಬಿಚ್ಚಿ ಹೇಳದಿರುವದು ಒಳಿತಾದರೂ ಕಡೆಯಲ್ಲಿ ಕತೆಗೆ ಬೇರೊಂದು ಸ್ವರೂಪವು ಬಂದು, ಸೇವ್ಯ—ಸೇವಕ ಭಾವದ ಫಲವು ಚೆನ್ನಾಗಿ ವ್ಯಕ್ತವಾಗಿದೆ. ಸಮಾಜಸಮಸ್ಯೆಗಳನ್ನು ಸೂಕ್ಷ್ಮವಾಗಿಯೂ ರಹಸ್ಯವಾಗಿಯೂ ಬಿಡಿಸುವ ವಿಚಾರಪೂರ್ಣ ಗ್ರಂಥಗಳ ಅಭಾವದಲ್ಲಿ ಈ ಚಿಕ್ಕ ಕತೆಯೊಂದು ಮುಂದೆ ಬಂದುದು ಒಳ್ಳೆಯ ಕೆಲಸ.

—ಗೋ. ವೆ. ಚು.

**ಕಮಲಾ—**(ಕಾಲ್ಪನಿಕ ಕಾದಂಬರಿ) ಶ್ರೀ. ಹೊಮ್ಮರಡಿ ಮಲ್ಲನಗೌಡರು ಬರೆದುದು. ಗ್ರಂಥಕರ್ತರು ಈಗಾಗಲೆ ಸುಮಾರು ನಾಲ್ಕು ಪುಸ್ತಕಗಳನ್ನು ಪ್ರಕಟಿಸಿ ಕನ್ನಡ ವಾಚಕವರ್ಗಕ್ಕೆ ತಮ್ಮ ಹೆಸರನ್ನು ಪರಿಚಯಮಾಡಿಕೊಟ್ಟಿದ್ದಾರೆ. 'ತಾಯ್‌ನುಡಿಯ ಸೇವೆಯನ್ನು ಕೊಂಚಮಟ್ಟಿಗಾದರೂ ಮಾಡಿ ತಮ್ಮ ಜನ್ಮಸಾರ್ಥಕ ಮಾಡಿಕೊಳ್ಳಬೇಕೆಂಬ ಆಶೆಯಿಂದ **ಈ ಅಲ್ಪಕೃತಿಯನ್ನು** ಕನ್ನಡಿಗರೆದುರು ಇಟ್ಟಿರುವರು. ಶ್ರೀ. ಮಲ್ಲನಗೌಡರಿಂದ ಬರಿ 'ಅಲ್ಪಕೃತಿ' ಗಳೇ ಹೊರಕ್ಕೆ ಬಾರದೆ ಮಹಾಕೃತಿಗಳು ಬಂದು ಅವರ ಆಶೆಯು ನೆರವೇರಲೆಂದು ನಮ್ಮ ಆಶೆ.

CC-0. Jangamwadi Math Collection. Digitized by eGangotri



## ನಾ ಕಂಡ 'ಇಂಗ್ಲೆಂಡ್'

[ ಲಂಡನ್ ನಗರವಾಸಿಗಳಾದ 'ಚಿತ್ರಗುಪ್ತ' ಎಂಬ ಮರುವೆಸರನ್ನು ಇಟ್ಟುಕೊಂಡ ಕನ್ನಡಿಗರೊಬ್ಬರು ಬರೆದುದನ್ನು ಬೆಂಗಳೂರಿನ 'ವಿಶ್ವಕರ್ನಾಟಕ'ವು ಪ್ರಕಟಪಡಿಸಿದೆ. 'ಇಂಗ್ಲೆಂಡು ದೇಶವು ಭೂಲೋಕದ ಸ್ವರ್ಗ, ಅಲ್ಲಿಯವರೆಲ್ಲರೂ ಪುಣ್ಯವಂತರು; ಹಸಿವೆಯ ಸಂಕಟವನ್ನು ಅನುಭವಿಸದೆ ಇದ್ದಾರೆ, ಎಂದಿರುವ ನಮ್ಮ ಜನಸಾಮಾನ್ಯರಿಗೆ ಈ ಮಾತು ಸ್ಪಷ್ಟವಾಗಿ ತಿಳಿಯಲೆಂದು ನಾವಿದನ್ನು ಇಲ್ಲಿ ಮತ್ತೊಮ್ಮೆ ಪ್ರಕಟಿಸಿದ್ದೇವೆ —ಸಂ. ಜ. ಕ. ]

ನಮ್ಮ ದೇಶದಲ್ಲಿ 'ವಿಲಾಯಿತಿ'ಯೆಂದರೆ ನಿದ್ದೆಯಿಂದೆದ್ದು ಎದುರಿಗೆ ಹುಲಿನೋಡಿದಷ್ಟು ಎಲ್ಲರಿಗೂ ಗಾಬರಿ! 'ವಿಲಾಯಿತಿ'! ಅಬ್ಬಬ್ಬಾ! ಅಲ್ಲೆಲ್ಲಾ ಅರಮನೆಗಳಂತೆ; ಅಲ್ಲಿನ ಜನರೆಲ್ಲಾ ಲಕ್ಷಾಧೀಶ್ವರರಂತೆ; ಅಲ್ಲಿನ ಹೆಂಗಸರೆಲ್ಲಾ ರಂಭೆ ಊರ್ವಶಿಯರ ಬಲಮಕ್ಕಳಂತೆ; ಅಲ್ಲಿನವರೆಲ್ಲಾ ಸರ್ವಜ್ಞಮೂರ್ತಿಯ ಮರುಕುಗಳಂತೆ! ಎಂದು ಎಲ್ಲರಿಗೂ ಆಶ್ಚರ್ಯವೇ ಆಶ್ಚರ್ಯ!

ಇಲ್ಲಿಗೆ ಬಂದು ನೋಡಿದೆ. ಏನಪ್ಪಾ ಈ ಇಂಗ್ಲೆಂಡ್ ಹೇಗೆ ಇದೆಯೋ? ಎಂದುಕೊಂಡಿದ್ದೆ. ಭ್ರಮೆ ಸ್ವಾಮಿ, ಇದೆಲ್ಲಾ ಬರೀ ಭ್ರಾಂತಿ! ಇಲ್ಲಿಯೂ ಗುಡಿಸಲುಗಳಿವೆ; ಹಿಮಕಾಲದಲ್ಲಿ ಸುರಿಯುವ ಹಿಮದಲ್ಲಿ ಉದ್ಯಾನಗಳಲ್ಲಿ ಕೊರೆಯುವ ಶಿಲಾಸನಗಳ ಮೇಲೆ ಕುಳಿತು, ಹಸಿದಹೊಟ್ಟೆಯಲ್ಲಿ ನಡುಗುತ್ತಾ, ಲೋಕೇಶ್ವರನನ್ನು "ನೀನು ದೀನದಯಾಳುವೆಂದು ಹೇಳುತ್ತಾರಲ್ಲ! ನನ್ನನ್ನೇಕೆ ಹುಟ್ಟಿಸಿದೆ ದೇವರೇ!" ಎಂದು ಮೊರೆಯಿಡುವ ಜನರಿದ್ದಾರೆ. ಲಂಡನ್ ಮಹಾನಗರದ ಪೂರ್ವಕ್ಕೆ ಸುರಂಗಮಾರ್ಗದಲ್ಲಿಯೋ ಬಸ್ಸಿನಲ್ಲಿಯೋ ಕುಳಿತು ಹೊರಟರೆ ಅಲ್ಲಿನ ದೃಶ್ಯವೇ ಬೇರೆ! ಅಲ್ಲಿ 'ಪಿಕ್ಕಡಿಲ್ಲಿ'ಯಲ್ಲಿರುವ ಪ್ರಾಸಾದಗಳಿಲ್ಲ; 'ವೆಸ್ಟ್‌ಮಿನಸ್ಟರ್'ನಲ್ಲಿರುವ ರಾಜಕಾರ್ಯನಿರತಂಡಗಳಿಲ್ಲ; 'ಫ್ಲೀಟ್' ಸ್ಟ್ರೀಟಿನಲ್ಲಿರುವ ಲೇಖಕವೈಭವವಿಲ್ಲ. ಅಲ್ಲಿರುವುದು ದಾರಿದ್ರ್ಯದ ಮಹಾಸಾಗರದಲ್ಲಿ ಈಜಾಡಿ ಸೋತು ಬೇಸತ್ತು ಬಳಲಿದವರ ಗುಂಪು! ಹರಿದ ಬಟ್ಟೆಯನ್ನುಟ್ಟು ಚಳಿಯಲ್ಲಿ ನಡುಗುತ್ತಿರುವ ಮಕ್ಕಳ ತಂಡ! ಮುಖದ ತುಂಬಾ ಬಣ್ಣ ಬಳಿದುಕೊಂಡು ದೇಹವನ್ನು ವಿಕ್ರಯ ಮಾಡಲು ಸಿದ್ಧರಾಗಿರುವ ಸಹೋದರಿಯರ ಭೀಷಣ ದೃಶ್ಯ! ಇಲ್ಲಿನ ಬಡವರಿಗೆ ನಮ್ಮ ದೇಶದ ಬಡವರಿಗಿಂತ ಹೆಚ್ಚು ದುಡ್ಡು ಬರಬಹುದು; ಆದರೆ ಇಲ್ಲಿನವರು ನಮ್ಮ ದೇಶದವರಂತೆ ಪ್ರಕೃತಿಮಾತೆಯ ಪ್ರೀತಿಪುತ್ರರಲ್ಲ. ಪ್ರಕೃತಿ ಮಾತೆಯು ತನ್ನ ಮಹಾಶಕ್ತಿಯನ್ನು ಇಲ್ಲಿ ವರ್ಷವೆಲ್ಲಾ ಪ್ರಯೋಗಮಾಡುವಳು. ಈಕ್ಷಣ ಮಳೆ; ಮತ್ತೊಂದು ಕ್ಷಣ ತಲೆ ಸಿಡಿದುಹೋಗುವಂತೆ ಬಿಸಿಲು; ಮಗದೊಂದು ಕ್ಷಣ ತಲೆಯೊಡೆಯುವಂತೆ ನಿರ್ದಾಕ್ಷಿಣ್ಯವಾಗಿ ಸುರಿಯುವ ಆಣೆಕಲ್ಲುಗಳು! ಇದು "ಇಂಗ್ಲೆಂಡಿ"ನ ಹವೆ!

ಒಂದು ಕತೆ ಇದೆ; ಕೇಳಿ!

ಲಂಡನ್ನಿನಲ್ಲಿ ಒಂದು ಸಲ ಒಬ್ಬ ಕತ್ತಲೆಯಲ್ಲಿ ಬರುತ್ತಾ ಒಬ್ಬ ಕಳ್ಳನ ಕೈಗೆ ಸಿಕ್ಕಿದನಂತೆ. ಕಳ್ಳ ದೊಣ್ಣೆಯೆತ್ತಿ

"ಎಲಾ! ನಿನ್ನ ಹತ್ತಿರ ಇರುವ ದುಡ್ಡೆಲ್ಲಾ ಕೊಡು! ಇಲ್ಲದಿದ್ದರೆ ನಿನ್ನ ಬುರುಡೆ ಹಾರಿಸುತ್ತೇನೆ" ಎಂದನಂತೆ.

ಅದಕ್ಕೆ ಅವನು, "ಹಾರಿಸಿಕೋ! ಲಂಡನ್ನಿನಲ್ಲಿ ಬುರುಡೆ ಇಲ್ಲದಿದ್ದರೂ ಪರವಾಯಿಲ್ಲ, ದುಡ್ಡು ಮಾತ್ರ ಇದ್ದೇ ಇರಬೇಕು." ಎಂದನಂತೆ! ಇಲ್ಲಿ ಯಾರೂ ನಿಮಗೆ ಭಿಕ್ಷೆ ಹಾಕೋಲ್ಲ; ಇಲ್ಲಿನ ಮನೆಗಳಿಗೆ ಮಲಗಲು ಅನುಕೂಲವಾಗಿ ಜಗುಲಿಗಳಿಲ್ಲ; ಇಲ್ಲಿ ಮಳೆ ಬಂತೆಂದರೆ ಬೆಂಗಳೂರಿ

CC-0. Jangamwadi Math Collection. Digitized by eGangotri

ನಲ್ಲಿ ಓಡಿಹೋಗಿ ಯಾರಮನೆಯ ಹಜಾರದಲ್ಲಿಯೋ ನಿಲ್ಲು ವಂತೆ ನಿಲ್ಲಲು ಸಾಧ್ಯವಿಲ್ಲ. ಹಾಗೆಂದರೆ ಇಲ್ಲಿನವರೆಲ್ಲಾ ರಾಕ್ಷಸರೆಂದು ತಿಳಿಯಬೇಡಿ! ಇವರ ಧರ್ಮದೃಷ್ಟಿಯೇ ಬೇರೆ. ಇಲ್ಲಿನ 'ಆಸ್ಪತ್ರೆ'ಗಳೆಲ್ಲಾ ಜನರ ಧರ್ಮದಿಂದ ಉಳಿದಿವೆ; ಇಲ್ಲಿನ ವಿಶ್ರಾಂತಿಮಂದಿರಗಳೆಲ್ಲ ಜನರ ಧರ್ಮದ ಬಲದಿಂದ ನಿಂತಿವೆ. ಇಲ್ಲಿನ ಪಾಠಶಾಲೆಗಳೆಲ್ಲಾ ಪ್ರಜಾ ಕೋಟಿಯ ದಾನದ ಫಲಗಳು!

ಆದರೆ ಇಂಗ್ಲೆಂಡಿನಲ್ಲಿ ಒಂದು ವಿಶೇಷ. ಅವರಿಗೆ ತಮ್ಮ ದೇಶವೆಂದರೆ ಬಹಳ ಹೆಮ್ಮೆ. ಒಂದು ಹಬ್ಬವಾಯಿತೆಂದರೆ ಎಳೆ ಹುಡುಗರೆಲ್ಲಾ ರಾಷ್ಟ್ರಬಾವುಟವಾದ 'ಯೂನಿಯನ್ ಜಾಕ'ನ್ನು ಹಿಡಿದು ಹೆಮ್ಮೆಯಿಂದ ತಿರುಗುತ್ತಾರೆ. ಇವರಿಗೆ ತಮ್ಮ ದೇಶದ ಜನರೆಂದರೆ ದೇವತಾಂಶಸಂಭೂತರೆಂಬ ದುರಭಿಮಾನವುಂಟು; ಕೊನೆಗೆ ಫ್ರಾನ್ಸ್, ಜರ್ಮನಿ ದೇಶದವರೂ ಕಾಡುಜನರೆಂದು ಹೇಳಬಲ್ಲ ಅಹಂಕಾರ ಇವರಿಗುಂಟು. ಕಪ್ಪುಬಣ್ಣದ ಮನುಷ್ಯರೆಂದರೆ ಇವರಿಗೆ ಅಸಹನೆ. ನಮ್ಮ ದೇಶದಿಂದ ವಿಲಾಯತಿಗೆ ಹೋಗಿ ಬಂದವರಿಗೆ ಎಷ್ಟು ದುರಹಂಕಾರವಿರುತ್ತೆ, ನೋಡಿ! ಅವರೆಲ್ಲಾ ಇಲ್ಲಿ ಬೇಸಿಗೆ ತಿಂದು ಹೋದವರು!! ಅವರನ್ನೆಲ್ಲಾ ಇಲ್ಲಿನ ಹುಡುಗರು "ಲೇ! ಕರಿ!" ಎಂದು ಗೇಲಿ ಎಬ್ಬಿಸುತ್ತಾರೆ. ಆದರೂ ನಮ್ಮ ದೇಶಕ್ಕೆ ಬಂದರೆ ಅವರಿಗೆ ಒಳ್ಳೇ ಜಂಭ; ಏನೋ ಏಳುಕೋಟೆ ಗೆದ್ದು ಬಂದಂತೆ. ಈ ಬೂಟಾಟಿಕೆಗೆಲ್ಲಾ ಇನ್ನು ಮೇಲೆ ನೀವು ಮರುಳಾಗಬೇಡಿ!

ನಮ್ಮೂರಿನಲ್ಲಿ "ಸ್ಟ್ರಾಂಡ್" "ಛೇರಿಂಗ್‌ಕ್ರಾಸ್" ಎಂಬ ಹೆಸರುಗಳನ್ನು ಕೇಳಿ, "ಏನಪ್ಪಾ; ಇವೆಲ್ಲಾ ಎಂತಹ ದೊಡ್ಡ ದೊಡ್ಡ ಸ್ಥಳಗಳೋ ಎಂದು ಬಾಯಿ ಬಿಟ್ಟುಕೊಂಡಿದ್ದೆ. ಇಲ್ಲಿಗೆ ಬಂದು ನೋಡಿದರೆ, ಮದುವೆ ದಿನ ಘರದೆ ತೆಗೆದ ಮೇಲೆ ಗಂಡನ್ನ ನೋಡಿ, 'ಅಯ್ಯೋ! ಇವನೇ ನನ್ನ ಗಂಡ!" ಎಂದುಕೊಂಡು ಪೆಚ್ಚಾಗುವ ಹೆಣ್ಣಿನ ಸ್ಥಿತಿಗಿಳಿದೆ. ಬೆಂಗಳೂರಿನ ರೈಲ್ವೆ ಸ್ಟೇಷನ್ 'ಛೇರಿಂಗ್‌ಕ್ರಾಸ್'ಗಿಂತ ನೋಡಲು ಸುಂದರವಾಗಿವೆ. (ನೀವು ನನ್ನ ಮಾತು ನಂಬದಿದ್ದರೆ ಇಲ್ಲಿಗೇ ಬಂದು ನೋಡಿ; ಊಟದ ಛಾರ್ಜು ಬೇಕಾಗಿದ್ದರೆ ನಾನು ವಹಿಸುತ್ತೇನೆ)

ಇಲ್ಲಿನ ವಿಚಾರಗಳನ್ನೆಲ್ಲಾ ಭೂತಕನ್ನಡಿಯಲ್ಲಿ ತೋರಿಸಿ 'ಅಭಿವೃದ್ಧಿ ಸಂದೇಶ'ವನ್ನು ತಮು ಸಾನದಿಯ ಮಹಾತೀರ್ಥದೊಂದಿಗೆ ತಂದು, ನಮಗೆಲ್ಲಾ ಕೆಲವು ಮಹನೀಯರುಗಳು ಹಂಚಿದರು. ನಿಮಗೆ ಅಭಿವೃದ್ಧಿ ಸಂದೇಶ ಬೇಕಾಗಿದ್ದರೆ ನನ್ನ ಜೊತೆಯಲ್ಲಿ ಬನ್ನಿ; 'ಮ್ಯಾನ್‌ಚೆಸ್ಟರ್' 'ಲಾಂಕಷೈರ್' ಪಟ್ಟಣಗಳಿಗೆ ಹೋಗಿ, ಅಲ್ಲಿ ಕೂಳಿಗೋಸ್ಕರ ಹಗಲಿರುಳೂ ಧನಪಿಶಾಚಿಯೆದುರಿಗೆ ಮೈರಕ್ತ ಬಸಿದು, ಮೂಳೆ ಚರ್ಮಗಳನ್ನು ಧರಿಸುವ ಯೋಗಿಗಳನ್ನು ಕೇಳೋಣ! ಹರಿದ ಬಟ್ಟೆಯನ್ನುಟ್ಟು, ಸುರಿಯುವ ಹಿಮದಲ್ಲಿ ಹಸಿದ ಹೊಟ್ಟೆಯಲ್ಲಿ 'ಹೈಡ್‌ಪಾರ್ಕಿ'ನಲ್ಲಿ ಮಲಗುವ ಬಿಕಾರಿಯನ್ನು ಕೇಳೋಣ; ಕಳೆದ ಮಹಾಯುದ್ಧದಲ್ಲಿ ಫಿರಂಗಿಗಳ ಆರ್ಭಟಕ್ಕೆ ಸಿಕ್ಕಿ 'ಷೆಲ್'ನ ಹೊಡೆತಕ್ಕೆ ತುತ್ತಾಗಿ ಅಂಗವಿಹೀನನಾಗಿ ಬೀದಿಯಲ್ಲಿ ಬೆಂಕಿಪೆಟ್ಟಿಗೆಗಳನ್ನು ಮಾರುತ್ತಾ ನಿಂತಿರುವ ದೇಶಪುತ್ರನನ್ನು ಕೇಳೋಣ!

ಇದುವರೆಗೆ ಅಭಿವೃದ್ಧಿ ಸಂದೇಶವನ್ನು ತಂದ ಮಹನೀಯರುಗಳೆಲ್ಲಾ ಸತ್ಪಾತ್ರದಲ್ಲಿ ತರಲಿಲ್ಲ. ಗಾಬರಿಯಾಗಬೇಡಿ; ಇದು ಸತ್ಯ! ಸಂದೇಶವನ್ನು 'ವೆಸ್ಟ್ ಮಿನ್ಸಿಟರ್' ರಾಜಭವನದಲ್ಲಿ ಹುಡುಕಿದರು; ಪಿಕ್ಕೆಡೆಲ್ಲಿಯ ಮಹಾಜ್ಯೋತಿಗಳ ಆಡಂಬರದಲ್ಲಿ ಹುಡುಕಿದರು. ಆದರೆ ಅದೇ ಪಿಕ್ಕಡೆಲ್ಲಿಯ ನೆರಳಿನಲ್ಲಿ ರಾತ್ರಿಯೆಲ್ಲಾ ದೇಹವನ್ನು ವಿಕ್ರಯಮಾಡಲು ಸಿದ್ಧರಾಗಿ ನಿಂತ ಸಹೋದರಿಯರ ಭಗ್ನಹೃದಯದ ಅಂಧಕಾರದಲ್ಲಿ ಹುಡುಕಲಿಲ್ಲ!

ಈಗ ನಾವು ಕಳುಹಿಸಬೇಕೆಂದಿರುವ ಸಂದೇಶವೇ ಬೇರೆ. ಇಂಗ್ಲೆಂಡ್ 'ಕಡಲರಾಣಿ'ಯಾಗಿದ್ದರೂ ಸುಖವಾಗಿದೆಯೇ? ಇಂಗ್ಲೆಂಡಿನ ಕಷ್ಟ ಸುಖಗಳೇನು? ಚಕ್ರಾಧಿಪತ್ಯದ ಹುಮ್ಮಸು ಯಾರಿಗೆ ಸುಖವನ್ನು ತಂದಿದೆ? ಲಾಂದ್ರಕಂಭಕ್ಕೊರಗಿ ನಿದ್ರಿಸುವ ಬಿಕಾರಿಯ ಅಭಿಪ್ರಾಯವಾದರೂ ಏನು? ಎಂಬ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕಲು ಸೊಂಟಕಟ್ಟಿ ಹೊರಟಿದ್ದೇವೆ!

—ವಿಶ್ವಕರ್ನಾಟಕ

## ಚಾಯನಾ ಗ್ರಾಸ್ (Agar)

ಬೇರೆ ಬೇರೆ ದೇಶಗಳಲ್ಲಿ ಬೆಳೆಯುವ ಮತ್ತು ಸಿಕ್ಕುವ ಪದಾರ್ಥಗಳನ್ನು ರಫ್ತು ಮಾಡುವ ಸಾಧನಸೌಕರ್ಯಗಳು ಜಗತ್ತಿನಲ್ಲಿ ಹೆಚ್ಚಾಗತೊಡಗಿದುದರಿಂದ, ಯಾವ ಪದಾರ್ಥವನ್ನು ರಫ್ತುಮಾಡುವುದೂ ದುಸ್ತರವೆಂದು ಕಂಡುಬರುವುದಿಲ್ಲ. ಒಂದು ದೇಶದಲ್ಲಿ ಸಿಕ್ಕುವಂತಹ ಪದಾರ್ಥವು ಅಲ್ಲಿ ನಿಷ್ಪ್ರಯೋಜನಕಾರಿಯೆಂದು ಕಂಡು ಬಂದರೆ, ಅದನ್ನು ಬೇರೊಂದುಕಡೆಯಲ್ಲಿ ರಫ್ತುಮಾಡಿ

CC-0. Jangamwadi Math Collection. Digitized by eGangotri

ಅದಕ್ಕೆ ತಕ್ಕ ಬೆಲೆಯನ್ನೂ ಉಪಯುಕ್ತತೆಯನ್ನೂ ಕಂಡುಹಿಡಿಯಲಾಗುವುದು. ಮತ್ತು ಈಗಿನ ಶಾಸ್ತ್ರೀಯ ಯುಗದಲ್ಲಿ ಯಾವ ಪದಾರ್ಥವೂ ನಿಷ್ಪ್ರಯೋಜಕವೆನಿಸಿ ಉಪೇಕ್ಷೆಗೆ ಒಳಗಾಗುವುದಿಲ್ಲ. ಯೋಗ್ಯತೆಯನ್ನು ಕಂಡುಹಿಡಿಯುವ ಯೋಜಕರು ಎಲ್ಲಿಯಾದರು ಸಿಕ್ಕಿಯೆ ಸಿಕ್ಕುವರು. ಪ್ರಕೃತಕ್ಕೆ ವಿವರಿಸುವ ಪದಾರ್ಥವು ತೀರ ನಿಕೃಷ್ಟ ಪ್ರತಿಯದಲ್ಲ. (Algae) ಎಂಬ ವರ್ಗಕ್ಕೆ ಸೇರಿದ-ಸಮುದ್ರದ ದಂಡೆಯ ಮೇಲೆ ಬೆಳೆಯುವ ವನಸ್ಪತಿಯಾಗಿರುವುದು. ಇದಕ್ಕೆ "ಚಾಯನಾಗ್ರಾಸ್" ಎಂದರೆ ಚೀನದೇಶದ ಹುಲ್ಲು ಅಥವಾ ಸಿಂಹಳದ್ವೀಪದ ಹಾವಸೆ (Moss) ಎನ್ನುತ್ತಾರೆ. ಇದು ಸಿಂಹಳದ್ವೀಪ, ಬ್ರಹ್ಮದೇಶ, ಮಲಯಾ ಸಿಂಗಾಪೂರ ಮೊದಲಾದ ದ್ವೀಪಗಳ ಸಮುದ್ರದ ದಂಡೆಗುಂಟ ಬೆಳೆಯುವುದು. ಇದು ಸಮುದ್ರದಲ್ಲಿ ಬೆಳೆಯುವ (Sea-weed) ವನಸ್ಪತಿಯಾಗಿರುವದು. ಇದೇ ವರ್ಗಕ್ಕೆ ಸೇರಿದ ಬೇರೆ ವನಸ್ಪತಿಗಳು ಪಶ್ಚಿಮದಂಡೆಯ ಮೇಲೆ ಮಳೆಗಾಲದಲ್ಲಿ ತೇಲಿಬರುವುದನ್ನು ಎಷ್ಟೋಜನರು ನೋಡಿರಬಹುದು. ಮೇಲೆ ಹೇಳಿದ ದೇಶಗಳಲ್ಲಿ ಕೆಲವು ಕಡೆಯಲ್ಲಿ ಮಾತ್ರ ಇವು ಸಿಕ್ಕುವುವು. ಸಿಂಗಾಪೂರ ದ್ವೀಪಕಲ್ಪವು ೩೭ ಮೈಲು ಉದ್ದ, ೧೩-೧೪ ಮೈಲು ಅಗಲ, ಇರುವುದು. ಇಲ್ಲಿಯ ಪೂರ್ವದಂಡೆಯ ಮೇಲೆ ಈ ವನಸ್ಪತಿಯು ಸಿಕ್ಕುವುದು. ಇದರ ಶಾಸ್ತ್ರೀಯವಾದ ಹೆಸರು "Glacilaria Lichenoides". ಸಿಂಗಾಪೂರದಲ್ಲಿಯ "ಪಾಯಾಲೇಬರ್" ಎಂಬ ಭಾಗದಲ್ಲಿ ಚೀನೀಜನರು ವಸಾಹತುಮಾಡಿರುವರು; ಇಲ್ಲಿ ಮಾತ್ರ ಈ ವನಸ್ಪತಿಯು ಬಹಳವಾಗಿರುವುದು. ಸಮುದ್ರದ ದಂಡೆಯ ಮೇಲೆ ನೀರಿನ ಭರತದಲ್ಲಿ ತೇಲಿಬಂದು ಬೀಳುವುದು. ಮೂಲತಃ ಇದರ ಬಣ್ಣ ಹಸಿರು. ಇದನ್ನು ೩-೪ ಸಲ ಬಿಸಿನೀರಿನಲ್ಲಿ ತೊಳೆದು, ಅದರೊಳಗಿನ 'Chorophyll' ಎಂಬ ಎಲೆಯೊಳಗಿರುವ ಹಸಿರು ಪದಾರ್ಥವನ್ನು ಹೋಗಲಾಡಿಸುವರು. ಎಂದರೆ ಬಣ್ಣವು ಬದಲಾಯಿಸಿ ಶುಭ್ರವಾಗಿ (Transperent) ಕಾಣುವುದು. ಬಿಸಿಲಿನಲ್ಲಿ ೨-೩ ದಿವಸ ಒಣಗಿಸಿ ೯-೧೨ ಇಂಚು ಉದ್ದವಾದ ತುಂಡುಗಳನ್ನು ಮಾಡಿ ಗಟ್ಟಿಯಾಗಿ ಕಟ್ಟುವರು. ಇದೇ ಮುಂಬೈ ಪುಣೆ ಮೊದಲಾದ ದೊಡ್ಡಪಟ್ಟಣಗಳಲ್ಲಿ ಮಾತ್ರ ಪಾರಾಟಕ್ಕೆ ಸಿಕ್ಕುವ ಚೈನಾಹುಲ್ಲು. ಈ ಪದಾರ್ಥವು ಸಮುದ್ರದಲ್ಲಿ ಸಿಕ್ಕುವುದರಿಂದ ಇದಕ್ಕೆ ಪ್ರಾಣಿಜಪದಾರ್ಥವೆಂತಲೂ ಮೀನು-ಮತ್ಸ್ಯಗಳಹೊಟ್ಟೆಯೊಳಗಿನ ಕರುಳು ಎಂತಲೂ ತಪ್ಪು ಭಾವನೆಯು ಜನರಲ್ಲಿ ಹುಟ್ಟಿರುವುದರಿಂದ, ಫಾರ್ಸಿ-ಯುರೋಪಿಯನ್ ಜನರ ಹೊರತು ಇತರ ಶಾಕಾಹಾರಿ ಜನರಿಗೆ ಇದರ ಪರಿಚಯವು ತಕ್ಕಷ್ಟು ಇಲ್ಲವಾಗಿದೆ. ಇದನ್ನು ಮುರಬ್ಬಾ ಬರ್ಫಿ (Pudding) ಮೊದಲಾದುವನ್ನು ಮಾಡಲಿಕ್ಕೆ ಉಪಯೋಗಿಸುವರು. ಇದು ಬಹಳ ಶೀತಕರವಾಗಿ ಬಹಳ ಪೌಷ್ಟಿಕವಾಗಿರುವುದು. ಇದನ್ನು ಉಪಯೋಗಿಸುವ ಕ್ರಮ.

(೧) ಸುಮಾರು ೮೦ ತೊಲೆ ನೀರನ್ನು ಒಳಿತಾಗಿ ಕಾಯಿಸಿ ೧ ತೊಲಿ ಚೈನಾಹುಲ್ಲನ್ನು ಹಾಕಿ ಕುದಿಸುವರು. ಸರಿಯಾಗಿ ಕಡಡಿದ ಮೇಲೆ ಸಕ್ಕರೆ ಮತ್ತು ಯಾಲಕ್ಕಿಗಳನ್ನು ಹಾಕಿ, ಪಾತ್ರೆಯನ್ನು ಅಗಲವಾದ ನೀರಿನ ಪಾತ್ರೆಯಲ್ಲಿಟ್ಟು ತಣ್ಣಗೆ ಮಾಡುವರು. ಬಣ್ಣದಸಲುವಾಗಿ ಕೇಸರಿಯನ್ನೋ ಇನ್ನಾವ ವನಸ್ಪತಿ ಬಣ್ಣವನ್ನೋ ಉಪಯೋಗಿಸುವರು. ಬಳಿಕ ಇದು ಗಟ್ಟಿಯಾಗಿ ಗಿಣ್ಣದಂತೆ ರುಚಿಕರವಾಗುವುದು.

(೨) ಇದರಿಂದ "ಆಯ್ಸ್‌ಕ್ರೀಮ್" "ಮೊದಲಾದ ತಿನಿಸುಗಳನ್ನೂ ತಯಾರಿಸುವರು.

ಈ ರೀತಿಯಲ್ಲಿ ಸಮುದ್ರದ ದಂಡೆಯ ಮೇಲೆ ತೇಲಿ ಬರುವ ಹುಲ್ಲಿನಂತಹ ಕೊಳೆತು ಹೋಗುವ ವನಸ್ಪತಿಯು ಶ್ರೀಮಂತರೂ ವಿಲಾಸಿಗಳೂ ಉಪಯೋಗಿಸುವ ಆಹಾರವಾಗಿ ಘನತೆಯನ್ನು ಹೊಂದುವದು

ಶಾಸ್ತ್ರೀಯ ಯುಗದಲ್ಲಿ ಯಾವ ಪದಾರ್ಥಕ್ಕೂ ಬೆಲೆ ಇರದೇ ಹೋಗಲಾರದು. 'ಅಲಿಗೆ' ಎಂಬ ವರ್ಗದ ವನಸ್ಪತಿಗಳಿಂದ "Iodin" ಮೊದಲಾದ ರಾಸಾಯನಿಕ ಪದಾರ್ಥಗಳನ್ನು ತಯಾರಿಸುವುದುಂಟು.

—ಚಿತ್ರಮಯ ಜಗತ್

## ಗೋಮಾಂಸ

ಪ್ರಾಚೀನಕಾಲದಲ್ಲಿ ನಮ್ಮ ಹಿರಿಯರು ಗೋಮಾಂಸವನ್ನು ಪರಿಗ್ರಹಿಸುತ್ತಿದ್ದರೆಂಬುದಕ್ಕೆ ಶಾಸ್ತ್ರಗ್ರಂಥಗಳಲ್ಲಿ ಹಲವು ಉಲ್ಲೇಖಗಳು ದೊರೆಯುತ್ತವೆ. ಆದರೆ ಈ ಪದ್ಧತಿ ಆಗ ಸಹ ಸರ್ವತ್ರ ರೂಢಮೂಲವಾಗಿದ್ದಿ



CC-0. Jangamwadi Math Collection. Digitized by eGangotri

ತೆಂದು ಹೇಳಲು ಸಾಧ್ಯವಿಲ್ಲ. ಅತಿ ಪ್ರಾಚೀನ ಕಾಲ ದಿಂದಲೂ ಕೆಲವು ಮತಶಾಖೆಗಳವರು ಅದನ್ನು ವಿರೋಧಿಸಿ ಕಡೆಗೆ ಸರ್ವರನ್ನೂ ತಮ್ಮ ಪಕ್ಷಕ್ಕೆ ಒಲಿಸಿಕೊಂಡು ದೇಶದಲ್ಲಿ ಅದನ್ನು ನಿರ್ಮೂಲನ ಮಾಡಿದರೆಂದು ಹೇಳಲು ಆಧಾರವಿದೆ.

ಯಜ್ಞದಲ್ಲಿ ಬ್ರಾಹ್ಮಣರು ಮಾಂಸಭೋಜನ ಮಾಡುತ್ತಿದ್ದರೆಂಬುದು ನಿರ್ವಿವಾದವಾದ ಮಾತಾಗಿದೆ. ಹಿಂದೆ ಗೋಮೇಧ ಎಂಬ ಯಜ್ಞವು ಪ್ರಚಾರದಲ್ಲಿದ್ದಿತು. ಅಶ್ವಮೇಧದಲ್ಲಿ ೬೩೭ ಪ್ರಾಣಿಗಳನ್ನು ವಧಿಸುತ್ತಿದ್ದರು. ಅದರಲ್ಲಿ ಗೋವು ಒಂದಾಗಿತ್ತು. ರಾಜಸೂಯದಲ್ಲಿ ಅಶ್ವಮೇಧವು ಒಂದು ಅಂಗವಾಗಿದ್ದಿತು.

ಶ್ರಾದ್ಧಕ್ಕೂ ಮಧುಪರ್ಕಕ್ಕೂ ಬ್ರಾಹ್ಮಣರಿಗೆ ಗೋಮಾಂಸವನ್ನು ಸಮರ್ಪಿಸುವ ಪದ್ಧತಿಯು ಇದ್ದಿತು. ಇತಿಹಾಸ ಪುರಾಣಗಳಲ್ಲಿ ಋಷಿಗಳಿಗೆ ರಾಜರು ಮಧುಪರ್ಕಕ್ಕೆ ಗೋವನ್ನು ಕೊಡುತ್ತಿದ್ದುದಕ್ಕೆ ಎಷ್ಟೋ ಉದಾಹರಣೆಗಳು ದೊರೆಯುವುವು. ಹೇಮಾದ್ರಿಯು "ಗೋಹನನ ನಿಮಿತ್ತಂ ಗೋಸವಃ ಪಿತೃಯಜ್ಞಃ ಮಧುಪರ್ಕಃ" ಎಂದು ಹೇಳಿರುವನು. ಕಲಿಯುಗದಲ್ಲಿ ಗೋವಧ ಅಥವಾ ಗವಾಲಂಭವು ನಿಷೇಧಿಸಲ್ಪಟ್ಟಿದೆ ಎಂಬ ಮಾತು ಆ ಪದ್ಧತಿಯ ಪ್ರಾಚೀನ ಕಾಲದ ರೂಢಿಯನ್ನು ಪ್ರಮಾಣೀಕರಿಸುತ್ತದೆ.

ರಂತಿದೇವನು ಪ್ರತಿದಿನವೂ ಎರಡುಸಾವಿರ ಗೋವುಗಳನ್ನು ವಧಿಸಿ ಬ್ರಾಹ್ಮಣರನ್ನು ತೃಪ್ತಿಪಡಿಸುತ್ತಿದ್ದನೆಂದು ಮಹಾಭಾರತದಲ್ಲಿ ಹೇಳಿದೆ. ಸ್ವಾಯಂಭುವ ಮನು ಮೊದಲಾದವರ ಗೋಮೇಧಾದಿಗಳನ್ನು ಪುರಾಣಗಳು ತಿಳಿಸುವುವು.

ಆಪಸ್ತಂಭ ಧರ್ಮಶಾಸ್ತ್ರವು ಗೋಮಾಂಸದ ಶ್ರೇಷ್ಠತೆಯನ್ನೂ ಶ್ರಾದ್ಧದಲ್ಲಿ ಅದರ ಆವಶ್ಯಕತೆಯನ್ನೂ ಸ್ಪಷ್ಟವಾಗಿ ಕೊಂಡಾಡುತ್ತದೆ. ಮತ್ತು ಗೋವಧೆಯು ಅತಿಥಿ ಪೂಜೆಗೂ ಶ್ರಾದ್ಧಕ್ಕೂ ವಿವಾಹಕ್ಕೂ ಧರ್ಮವೆಂದು ಹೇಳುತ್ತದೆ.

ಶ್ರಾದ್ಧಾದಿಗಳಲ್ಲಿ ಮಾಂಸವನ್ನು ತಿನ್ನಲು ಹಿಂಜರಿಯತಕ್ಕ ಬ್ರಾಹ್ಮಣನು ನರಕಭಾಜನನಾಗುವನೆಂದು ಪುರಾಣ ವಚನಗಳು ದೊರೆಯುತ್ತವೆ.

—ಶ್ರೀ. ದೊರೆಸ್ವಾಮಿ ಅಯ್ಯಂಗಾರ್ ಎಂ. ಎ.

## ಜನ್ಮವೆತ್ತಿದ, ಜೀವನಗಳನ್ನೆಲ್ಲಾ ಭೂಮಿಯು ಹೊರಬಲ್ಲದೇ ?

ಇಲ್ಲ. ನಿಜವಾಗಿಯೂ ಇಲ್ಲ. ಒಂದೊಂದು ಮೀನು ಒಂದೊಂದು ಕೋಟಿ ಮೊಟ್ಟೆಗಳನ್ನು ಇಟ್ಟರೂ, ಸಮುದ್ರದಲ್ಲಿರುವ ಮೀನುಗಳ ಸಂಖ್ಯೆಯು ಮಾತ್ರ ಯಾವಾಗಲೂ ಒಂದೇ ಸಮನಾಗಿಯೇ ಇರುತ್ತದೆ. ಸರಿಯಾದ ಆಹಾರವಿದ್ದದ್ದೇ ಆದರೆ, ಒಂದು ಸಣ್ಣ ಕ್ರಿಮಿಯು ಕೆಲವು ಘಂಟೆಗಳ ಕಾಲದಲ್ಲಿ ಸಂಖ್ಯೆಯಿಲ್ಲದಷ್ಟಾಗಬಲ್ಲುದು. ಮೊಲಗಳಾದರೋ ಅವುಗಳ ಬೆಳೆವಳಿಗೆಗೆ ಬೇಕಾದ ಆಹಾರವು ಹೇರಳವಾಗಿರುವಂತಹ ಆಸ್ಟ್ರೇಲಿಯಾ ದೇಶದಲ್ಲಿಟ್ಟದ್ದೇ ಆದರೆ, ಕೊಂಚ ಕಾಲಗಳಲ್ಲಿಯೇ ಅವುಗಳ ಸಂಖ್ಯೆಯು ಮಿತಿಯಿಲ್ಲದಷ್ಟು ಹೆಚ್ಚಿ, ಆಸ್ಟ್ರೇಲಿಯಾ ದೇಶವನ್ನೇ ಕ್ಷಾಮದಲ್ಲಿ ಮುಳುಗಿಸಿ ಬಿಡಬಹುದು. ಸಸ್ಯ ಮತ್ತು ಪ್ರಾಣಿಗಳಾದರೋ ತಮ್ಮ ತಮ್ಮ ಸಂಖ್ಯೆಯನ್ನು ಅಭಿವೃದ್ಧಿಮಾಡುವ ಸಡಗರದಲ್ಲಿ ಹಗಲಿರುಳು ಮಗ್ನವಾಗಿರುತ್ತವೆ. ಅದ್ಭುತವಾಗಿ ಬೆಳೆಯುತ್ತಿರುವ ಈ ಜೀವಕೋಟಿಗಳ ಸಮುದಾಯವನ್ನೂ; ಅವಕ್ಕೆ ಬೇಕಾದ ಆಹಾರವನ್ನೂ ಕುರಿತು ಯೋಚಿಸಿದ್ದೇ ಆದರೆ, ಭೂಮಿಯ ಮೇಲೆ ಜನ್ಮವೆತ್ತಿದ ಜೀವಗಳೆಲ್ಲವೂ ಏಕೆ ಉಳಿಯುವುದಿಲ್ಲವೆಂಬುದು ಗೋಚರವಾಗುತ್ತದೆ. ಇದಕ್ಕೆ ಮುಖ್ಯಕಾರಣ, ಎಲ್ಲಾ ಜೀವಿಗಳಿಗೂ ಸಾಕಾದಷ್ಟು ಆಹಾರವಿಲ್ಲದಿರುವುದೇ?

—ಶ್ರೀ. ವಿ. ಆರ್. ಅಣ್ಣಾಸ್ವಾಮಿರಾವ್.

CC-0. Jangamwadi Math Collection. Digitized by eGangotri




## ಈ ಚಿತ್ರ ←—— ——→ ಈ ಚಿತ್ರ

### ( ಸ್ವಾಭಿಮಾನಿ–ಸದಾನಮ್ರರ ಕಥೆ )




ಸ್ವಾಭಿಮಾನಿ—ತರುಣ, ಪದವೀಧರ. ಸದಾನಮ್ರ—ಇಳಿವಯಸ್ಸಿನವ, ಕೆಲಸಕ್ಕಾಗಿ ಅಲೆದಾಡುವದೇ ಅವನ ಆಯುಷ್ಕಾರ್ಯ. ಇಬ್ಬರೂ ಕೆಲಸ ಹುಡುಕುತ್ತ ಹೋಗುವರು. ಇಬ್ಬರಿಗೂ ಒಂದೇ ಉತ್ತರ—ಜಾಗಾ ಇಲ್ಲ! ಜಾಗಾ ಇಲ್ಲ!



ತರುಣನು ಅವಮಾನವನ್ನು ಸಹಿಸಲಾರ. ಬೀದಿಬೀದಿಯಲ್ಲಿ ಅಲೆದು, ವೃತ್ತಪತ್ರಗಳನ್ನು ಮಾರಿಯಾದರೂ ಹೊಟ್ಟೆ ಹೊರಕೊಳ್ಳುವೆನಲ್ಲದೆ, ಹೆರರಮುಂದೆ ತಲೆಬಾಗಿಸಲಾರೆ ಎನ್ನುವನು.



ಸದಾನಮ್ರನು ರಾಯರ ಮನೆಗೆ ಹೋಗಿ, ಬೂಟುಗಾಲುಗಳನ್ನು ತಲೆಯಲ್ಲಿ ಹೊತ್ತು, ಕೆಲಸ ಸಂಪಾದಿಸುವನು.

CC-0. Jangamwadi Math Collection. Digitized by eGangotri



ತರುಣನು ಹೊತ್ತು ಸಿಕ್ಕಿದಾಗ, ಪತ್ರಿಕೆಗಳಿಗಾಗಿ 'ತುಣುಕು ಮಿಣುಕು'ಗಳನ್ನು ಬರೆದು ಜೀವನ ವನ್ನು ಸಫಿಮಾಡಿಕೊಳ್ಳುವನು.



ಸದಾನಮ್ಮನಿಗೆ ರಾಯರು ಹಾಕಿಕೊಟ್ಟ ಬಳ್ಳಿಯನ್ನು ತೀಡುವದೊಂದೇ ಕೆಲಸ. ಸ್ವತಂತ್ರಬುದ್ಧಿ ಸುತರಾಂ ಇಲ್ಲ.



ತರುಣನ 'ಹರಟೆ'ಗಳು 'ಜಯಕರ್ನಾಟಕ'ದಲ್ಲಿ ಬರುತ್ತಿವೆ! ತರುಣನಿಗೆ ದುಡ್ಡಿನ ಕೊರತೆಯಿದ್ದರೂ ಹಿಗ್ಗಿಗೆ ಅಳತೆಯಿಲ್ಲ. ತಾನು ದುಡಿದು, ತಾನು ಪಡೆದೆನೆಂಬ ಧನ್ಯಭಾವ ಆತನಿಗೆ. ತನ್ನ ಕಷ್ಟದ ಫಲವಾಗಿ ತುತ್ತು ರೊಟ್ಟಿಯನ್ನುಣ್ಣುತ್ತ, ತನ್ನ ತಲೆಯನ್ನು ದುಡಿಸಿ ಆತ್ಮವಿನೋದನವನ್ನು ಮಾಡಿಕೊಳ್ಳುವನು.



ಸದಾನಮ್ಮನ ಜೀವನದಲ್ಲಿ ಸ್ವಾರಸ್ಯವಿಲ್ಲ. ಕದಡಿದ ಮಿದುಳು, ಬಾಳು ಹಾಳುಹಾಳು. ತಲೆಯಲ್ಲಿ ಪೆನ್ಶನ್, ಪ್ರೊಮೋಶನ್, ಗ್ರೇಡ್‌ಗಳ ಚಿಂತೆಯ ಸಂತೆ. ನಿರುದ್ಯೋಗದ ಭೀತಿಯು ಭೂತವಾಗಿ ಕಾಡುತ್ತಿದೆ.



CC-0. Jangamwadi Math Collection. Digitized by eGangotri

# ನಮ್ಮ ಮಾತು

### ಜ. ಕ. ಮಂಡಲದ ಕಾರ್ಯಕಲಾಪ

ಕರ್ಣಾಟಕದಲ್ಲಿ ಅಲ್ಲಲ್ಲಿ ನಾಡಹಬ್ಬದ ಕಾರ್ಯಕ್ರಮಗಳು ಜರುಗಿದುವಷ್ಟೇ ! ಅದಕ್ಕಾಗಿ ನಮ್ಮ ಗೆಳೆಯರಾದ ಶ್ರೀ. ಮುಗುಳಿ ರಂಗನಾಥರಾಯರು ಹೈದರಾಬಾದಿಗೆ ಹೋಗಿ, ತಮ್ಮ ಉಪನ್ಯಾಸ, ಕವಿತಾವಾಚನಗಳಿಂದ ಅಲ್ಲಿಯ ಕನ್ನಡಿಗರಲ್ಲಿ ಕನ್ನಡದ ಅಭಿಮಾನವು ಜಾಗೃತವಾಗುವಂತೆ ಮಾಡಿಬಂದರು. ಶ್ರೀ. ಬೆಟಗೇರಿ ಕೃಷ್ಣಶರ್ಮರು ಹುಬ್ಬಳ್ಳಿ, ಬೆಳಗಾವಿ, ಪುತ್ತೂರುಗಳಿಗೆ ಹೋಗಿಬಂದರು. ಪುತ್ತೂರು ಬೆಳಗಾವಿಗಳಲ್ಲಿ ಅವರು ಜನಪದ ಸಾಹಿತ್ಯದ ವಿಚಾರವಾಗಿ ಉಪನ್ಯಾಸಗಳನ್ನು ಕೊಟ್ಟರಲ್ಲದೆ, ಧಾರವಾಡದಲ್ಲಿ ಒಂದು ದಿನ ಇದೇ ವಿಚಾರದಲ್ಲಿ ಮಾತನಾಡಿದರು. ಶ್ರೀ. ಗೋಕಾಕ ವಿನಾಯಕರಾಯರು ಮೊನ್ನೆ ಮೊನ್ನೆ ಬೆಳಗಾಂವಿಗೆ ಹೋಗಿ, ಅಲ್ಲಿಯ ಕರ್ಣಾಟಕ ಸಾಹಿತ್ಯಮಂಡಲದ ಪರವಾಗಿ ಗಿಲಗಂಚೀ ಆರ್ಟಾಟ ಹೈಸ್ಕೂಲಿನಲ್ಲಿ ಕನ್ನಡದ ಮಹತಿಯ ವಿಚಾರದಲ್ಲಿ ಮಾತನಾಡಿದರು.

ಮೈಸೂರು ರಾಜಧಾನಿಯಲ್ಲಿ ನಡೆದ ದಸರೆಯ ಪ್ರದರ್ಶನ, ಪ್ರಜಾಪ್ರತಿನಿಧಿ ಸಭೆ, ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿವೃಂದದ ಕುಶಲಕಲಾಪ್ರದರ್ಶನಗಳಿಗೆಂದು ಗೆಳೆಯರಾದ ಕುಲಕರ್ಣಿ ಶೇಷಗಿರಿರಾಯರೂ ನರೇಗಲ್ಲ ಪ್ರಹ್ಲಾದರಾಯರೂ ಜಯಕರ್ನಾಟಕದ ಪ್ರತಿನಿಧಿಗಳಾಗಿ ಹೋಗಿದ್ದರು. ಬದನವಾಳ ಹಾಗೂ ತಗಡೂರು ಖಾದೀಸಂಸ್ಥೆಗಳ ಸಂತೋಷಕೂಟಗಳಿಗೂ ಪ್ರೊ. ಎನ್. ಎಸ್. ನಾರಾಯಣಶಾಸ್ತ್ರಿಗಳು ಕನ್ನಡಿಸಿದ 'ಪಂಚರಾತ್ರ' ನಾಟಕದ ಅಭಿನಯಕೌಶಲ್ಯದ ಕಾಲಕ್ಕೂ ಈ ಗೆಳೆಯರು ಹೋಗಿ, ಮೈಸೂರಿನ ಮಿತ್ರರೊಡನೆ ಋಣಾನುಬಂಧವನ್ನು ಇತೋಪ್ಯತಿಶಯವಾಗಿ ಬೆಳೆಯಿಸಿದರು. ಇದೇ ಕಾಲಕ್ಕೆ ಮೈಸೂರಿಗೆ ಆಗಮಿಸಿದ ದೇಶವತ್ಸಲ ಟಿ. ಪ್ರಕಾಶಂ ಅವರೊಡನೆಯೂ ಮಂಡಲದ ಬಗೆಗೆ ಮಾತನಾಡಿ ಅವರ ಶುಭಾಶೀರ್ವಾದವನ್ನು ಹೊಂದಿದರು. ಆ ಮೇಲೆ ಅಕ್ಟೋಬರದ ಕೊನೆಯ ವಾರದಲ್ಲಿ ಮಹಾರಾಜಾ ಕಾಲೇಜಿನ ಕರ್ಣಾಟಕಸಂಘದ ಪರವಾಗಿ ಗುಂಪಿಸ ಗೆಳೆಯರೆಲ್ಲರ ಕವಿತೆಗಳನ್ನು ಗೆ. ಪ್ರಹ್ಲಾದರಾಯರು ಓದಿ ತೋರಿಸಿದರು. ಮಹಾರಾಣೀ ಕಾಲೇಜಿನ ಕರ್ಣಾಟಕಸಂಘದ ಹಾಗೂ ಭಗಿನೀ ಸೇವಾಸಮಾಜದ ಸಹೋದರಿಯರೆದುರಿಗೂ ಬೇರೆ ಬೇರೆಯಾಗಿ ಇದೇ ಬಗೆಯ ಕಾರ್ಯಕ್ರಮಗಳಾದುವು. ಕಾಲೇಜಿನ ಕಾರ್ಯಕ್ರಮವನ್ನು ತಪ್ಪಿಸಿಕೊಂಡ ಗೆಳೆಯರನೇಕರ ಪ್ರೇಮಕ್ಕಾಗಿ ಮತ್ತೊಂದು ಕಾರ್ಯಕ್ರಮವನ್ನೂ ಪ್ರಹ್ಲಾದರಾಯರು ಮಾಡಿದರು.

### ನಾಡಹಬ್ಬ

ರಾಜಕೀಯ ವಿಷಮಪರಿಸ್ಥಿತಿಯ ಮೂಲಕ ನಾಡಹಬ್ಬದ ಕಾರ್ಯಕ್ರಮಗಳು ಸಾಕಷ್ಟು ಸಮರ್ಪಕವಾಗಿ ನಡೆಯಲು ಅವಕಾಶ ದೊರೆಯಲಿಲ್ಲವಾದರೂ, ಅಲ್ಲಲ್ಲಿ ನಾಡಹಬ್ಬವನ್ನು–ಇದ್ದುದರಲ್ಲಿಯೇ ತಕ್ಕಮಟ್ಟಿಗೆ–ನಡೆಯಿಸಿದುದು ಸಂತೋಷದ ಸಂಗತಿ. ಈ ಸಲ ನಡೆದ ಒಂದು ವಿಶೇಷಸಂಗತಿಯೆಂದರೆ: ನಾಡಹಬ್ಬದ ಕಾರ್ಯಕ್ರಮವು ಇದುವರೆಗೆ ಉತ್ತರಕರ್ಣಾಟಕದಲ್ಲಿ ಮಾತ್ರ ನಡೆಯುತ್ತಿದ್ದುದು, ಈ ಸಲ ದಕ್ಷಿಣಕನ್ನಡ ಜಿಲ್ಲೆಯಲ್ಲೂ ಹೈದರಾಬಾದ ಸೀಮೆಯಲ್ಲೂ ಪ್ರವೇಶಿಸಿತು.

ನಮಗೆ ಗೊತ್ತಿದ್ದ ಮಟ್ಟಿಗೆ ಈ ವರ್ಷ ನಾಡಹಬ್ಬದ ಉತ್ಸವವು ಉತ್ತರಕರ್ಣಾಟಕದಲ್ಲಿಯ **ಬೆಳಗಾಂವಿ, ರಬಕವಿ, ಧಾರವಾಡ, ಹುಬ್ಬಳ್ಳಿ, ವಿಜಾಪುರ, ಬಾಗಿಲುಕೋಟೆ**ಗಳಲ್ಲಿಯೂ ದಕ್ಷಿಣಕನ್ನಡ ಜಿಲ್ಲೆಯ **ಪುತ್ತೂರಿ**ನಲ್ಲಿಯೂ **ನಿಜಾಂ ಹೈದರಾಬಾದಿ**ನಲ್ಲಿಯೂ ಜರುಗಿತು. ಎಲ್ಲವುಗಳಲ್ಲಿ ಹೆಚ್ಚು ಯಶಸ್ವಿಯನ್ನಾಗಿ ಮಾಡಿ ತೋರಿಸಿದರು–ಪುತ್ತೂರಿನ ಕನ್ನಡಿಗರು. ಅಲ್ಲಿಯ ತಾಲ್ಲೂಕಾಬೋರ್ಡಿನ ಅಧ್ಯಕ್ಷರಾದ ಶ್ರೀಮಾನ್ ಮೊಳಹಳ್ಳೀ ಶಿವರಾಯರೂ ಸಂಸ್ಕೃತಿಪ್ರಸಾರ ಕಾರ್ಯವನ್ನೇ ಜೀವನದ ಗುರಿಯನ್ನಾಗಿಟ್ಟುಕೊಂಡ ಶ್ರೀಮಾನ್ ಶಿವರಾಮ ಕಾರಂತರೂ ಅಲ್ಲಿಯ ತರುಣ ವಕೀಲರಾದ ಶ್ರೀಮಾನ್ ಬಿ. ರಾಮಚಂದ್ರರಾವ್, ಶ್ರೀಮಾನ್ ಶಾಸ್ತ್ರಿಗಳವರೂ ಇನ್ನುಳಿದ ಮಹಾಜನರೂ ಕಲೆತು, ಕೈಗೊಟ್ಟು ಇದನ್ನು ನಿಜವಾಗಿಯೂ ಕನ್ನಡನಾಡಿನ ಸಂಸ್ಕೃತಿಯ ಹಬ್ಬವನ್ನಾಗಿ ಮಾಡಿ ತೋರಿಸಿದರು. ದಕ್ಷಿಣಕನ್ನಡ ಜಿಲ್ಲೆಯಲ್ಲಿ ಪುತ್ತೂರು ಒಂದು ಮಹತ್ವದ ಕೇಂದ್ರ



CC-0. Jangamwadi Math Collection. Digitized by eGangotri

ಸ್ಥಾನವು. ತಮ್ಮ ಜಿಲ್ಲೆಯೊಳಗಿನ ಶ್ರೀಯುತರುಗಳಾದ ಪಂಜೇ ಮಂಗೇಶರಾಯರು, ಎಂ. ಎನ್. ಕಾಮತರು, ಉಗ್ರಾಣ ಮಂಗೇಶರಾಯರು, ಗೋವಿಂದ ಪೈಗಳವರು, ಕೇ. ಶಂಕರಭಟ್ಟರು ಇವರನ್ನೆಲ್ಲ ಕರೆಯಿಸಿಕೊಂಡುದಲ್ಲದೆ ಮೈಸೂರು ಕಡೆಯಿಂದ, ಶ್ರೀಮಾನ್ ಟಿ. ಟಿ. ಶರ್ಮ, ಅವರ ಸಹಧರ್ಮಿಣಿ ಶ್ರೀಮತಿ ರಾಜಮ್ಮ, ಪ್ರೊ. ಕೆ. ವಿ. ಐಯರ್, ಪಂಡಿತ ಅನಂತಕೃಷ್ಣಶರ್ಮ ಅವರನ್ನೂ ಉತ್ತರಕರ್ಣಾಟಕದಿಂದ ಪ್ರೊ. ಜಹಾಗೀರದಾರ್, ಶ್ರೀ. ಬೆಟಗೇರಿಕೃಷ್ಣಶರ್ಮ ಅವರನ್ನೂ ಕರೆಯಿಸಿಕೊಂಡಿದ್ದರು. ಇವರೆಲ್ಲರ ಉಪನ್ಯಾಸಗಳಲ್ಲದೆ ಅಲ್ಲಿಯ ಶಾಲಾ ಬಾಲಕರ ವ್ಯಾಯಾಮಪ್ರದರ್ಶನ, ಕವಾಯತುಗಳೂ ಹೊಸ ಚಿಕ್ಕ ಚಿಕ್ಕ ನಾಟಕಪ್ರದರ್ಶನಗಳೂ ನಡೆದುವು. ಮುಂದಿನ ಸಲಕ್ಕೆ ದಕ್ಷಿಣಕನ್ನಡ ಜಿಲ್ಲೆಯ ಎಲ್ಲ ದೊಡ್ಡ ದೊಡ್ಡ ಊರುಗಳೂ ಪುತ್ತೂರಿನ ಮಾದರಿಯನ್ನು ತೆಗೆದುಕೊಳ್ಳದಿರಲಾರವೆಂದು ನಮ್ಮ ಭರವಸೆ.

ಬೆಳಗಾಂವಿಯವರೂ ಉತ್ಸವವನ್ನು ಹುರುಪಿನಿಂದಲೆ ನಡೆಯಿಸಿದರೆಂದು ಹೇಳಬೇಕು. ಅವರೂ ಬೇರೆ ಬೇರೆ ವಿದ್ವಾಂಸರನ್ನು ಆಮಂತ್ರಿಸಿದ್ದರಾದರೂ ಕಾರ್ಯಗೌರವದಿಂದ ಅವರಿಗೆ ಬರಲಾಗಲಿಲ್ಲ. ಆದರೂ ಒಂಬತ್ತು ದಿವಸದ ಬೇರೆ ಬೇರೆ ಕಾರ್ಯಕಲಾಪಗಳು ವ್ಯವಸ್ಥಿತವಾಗಿ ಸಾಗಿದುವು. ಅಲ್ಲದೆ ಕೊನೆಯ ದಿನದ ಸಭೆಯಲ್ಲಿ ಕರ್ಣಾಟಕ ಏಕೀಕರಣದ ಗೊತ್ತುವಳಿಯನ್ನು 'ಪಾಸ್' ಮಾಡಲಾಗಿದೆ. ಬೇರೆ ಬೇರೆ ಕಾರ್ಯಕ್ಷೇತ್ರಗಳಲ್ಲಿ ಕೆಲಸವನ್ನು ಮಾಡುತ್ತಿರುವ ಬೆಳಗಾಂವಿಯ ವೀರಶೈವ ತರುಣಸಂಘ, ಕಲಾಸಂಘ, ತುಂಟರತಂಡ, ನಾಡನರಿಗಳ ಸಂಘ ಈ ನಾಲ್ಕು ಸಂಸ್ಥೆಯ ಕಾರ್ಯಕರ್ತರೂ ಒಂದುಗೂಡಿ, ಈ ಸಾಂಸ್ಕೃತಿಕ ಹಬ್ಬವನ್ನು ಯಶಸ್ವಿಯಾಗಿ ನೆರವೇರಿಸಿದುದು ಪ್ರಶಂಸನೀಯವಾದ ಕಾರ್ಯ.

ಧಾರವಾಡ, ಹುಬ್ಬಳ್ಳಿಗಳಲ್ಲಿ ಕಳೆದ ಸಲದಷ್ಟು ವೈಭವದಿಂದ ಈ ಉತ್ಸವವು ನಡೆಯದಿರುವುದಕ್ಕೆ ಬೇಕಾದಷ್ಟು ಕಾರಣಗಳಿವೆ. ಆದರೂ ಹೊಸ ಹೊಸ ಕಾರ್ಯಕರ್ತರು ಮುಂದೆ ಒಂದು, ಪರಂಪರೆಯನ್ನು ನಡೆಯಿಸಿಕೊಂಡು ಬಂದರಲ್ಲ! – ಎಂಬುದೇ ಸಂತೋಷದ ಸಂಗತಿ. ಮುಂದಿನ ವರ್ಷ ನಾಡಿನಲ್ಲಿ ಸುಖಶಾಂತಿಗಳು ನೆಲೆಗೊಂಡು ನಮ್ಮ ನಾಡಹಬ್ಬವು ಹೆಚ್ಚು ಉತ್ಸಾಹದಿಂದ ನೆರವೇರಲೆಂದು ನಮ್ಮ ಹಾರೈಕೆ

## ನಿಜಾಮ್ ಕರ್ನಾಟಕ ಸಾಹಿತ್ಯಸೇವಾಸಮಿತಿ

ಕಳೆದ ಅಗಸ್ಟ ೨೬ನೆಯ ತಾರೀಖಿನ ದಿನ ಹೈದರಾಬಾದಿನಲ್ಲಿ ಪ್ರೊ. ಸೀತಾರಾಮರಾವ್ ಅವರ ಅಧ್ಯಕ್ಷತೆಯಲ್ಲಿ ಕನ್ನಡಿಗರ ಸಭೆಯೊಂದು ಕೂಡಿ, ನಿಜಾಮ ಕರ್ಣಾಟಕದಲ್ಲಿ ಸಾಹಿತ್ಯ–ಸಂಸ್ಕೃತಿಗಳ ವಿಷಯವಾಗಿ ಜನತೆಯನ್ನು ಜಾಗೃತಗೊಳಿಸುವ ಉದ್ದೇಶದಿಂದ 'ಸಾಹಿತ್ಯ ಸಮಿತಿ'ಯೊಂದನ್ನು ಸ್ಥಾಪಿಸಿ ಆಯಿತು. ರಾಜಾಸಾಹೇಬ ಶ್ರೀನಿವಾಸರಾವ್ ಕಾರವಾಸಕರ್ ಬಾರ್–ಆಟ್–ಲಾ ಅವರು ಅಧ್ಯಕ್ಷರು. ಹೈಕೋರ್ಟ್ ವಕೀಲರಾದ ಶ್ರೀ. ಜನಾರ್ದನರಾಯರು ಉಪಾಧ್ಯಕ್ಷರು. ಶ್ರೀ. ಕೆ. ಹನುಮಂತಾಚಾರ್ಯ ಬಿ. ಎ. ಅವರು ಗೌರವ ಕಾರ್ಯದರ್ಶಿಗಳು. ಶ್ರೀ. ಡಿ. ಕೆ. ಭೀಮಸೇನರಾವ್ ಎಂ. ಎ. ಅವರು ಕೋಶಾಧ್ಯಕ್ಷರು. ಇವರಲ್ಲದೆ ಏಳು ಜನರದೊಂದು ಸಹಾಯಕ ಸದಸ್ಯರ ಮಂಡಲವುಂಟು. ಈ ಸಾಹಿತ್ಯ ಸಮಿತಿಯ ಕಾರ್ಯವು ಯಶಸ್ವಿಯಾಗಿ ಸಾಗಿ, ಕನ್ನಡ ನಾಡಿನ ಉನ್ನತಿಯ ಕಾರ್ಯದಲ್ಲಿ ಸಹಭಾಗಿಯಾಗಲೆಂದು ನಮ್ಮ ಅಪೇಕ್ಷೆ. ಸಮಿತಿಯ ಸ್ಥಾಪನೆಯ ಪ್ರಚೋದಕರಿಗೆ ನಮ್ಮ ಹೃತ್ಪೂರ್ವಕ ಅಭಿನಂದನೆಗಳು.

## ಕೈ. ವಾ. ರಾ. ಬ. ಅರಟಾಳ ರುದ್ರಗೌಡರು.

ಕನ್ನಡನಾಡಿನ ಅವರಲ್ಲಿಯೂ ವೀರಶೈವ ಸಮಾಜದ ಉನ್ನತಿಗಾಗಿ ತನುಮನಧನದಿಂದ ಕಾರ್ಯ ಮಾಡಿದ



ಪ್ರಮುಖ ಮುಂದಾಳುಗಳಲ್ಲಿ ಮೊದಲನೆಯ ತರಗತಿಯವರು ಈ ಮಹನೀಯರು. ಲಿಂಗಾಯತ ಎಜ್ಯುಕೇಶನಲ್

CC-0. Jangamwadi Math Collection. Digitized by eGangotri

ಫಂಡ್, ಸಿರಸಂಗೀ ದೇಸಗತಿ ಫಂಡ್ ಇವುಗಳಿಂದ ವೀರಶೈವ ಸಮಾಜದ ಸುಶಿಕ್ಷಣಕ್ಕೆ ವಿಶೇಷ ನೆರವನ್ನು ಒದಗಿಸಿ ಕೊಟ್ಟರಲ್ಲದೆ ಧಾರವಾಡದ ಕರ್ಣಾಟಕ ಕಾಲೇಜಿನ ಸ್ಥಾಪನೆಗಾಗಿ ವಿಶೇಷವಾಗಿ ಶ್ರಮಪಟ್ಟು ಸಹಾಯ ಮಾಡಿದವರಿವರು. ವೀರಶೈವಸಮಾಜಕ್ಕೆ ಇಂತಹ ಒಬ್ಬ ಕಾರ್ಯಕರ್ತೃವು ದೊರಕಿದುದರಿಂದಲೆ ೨೦ - ೩೦ ವರ್ಷಗಳಲ್ಲಿಯೆ ಅದು ಕಲ್ಪನೆಗೆ ನಿಲುಕದಷ್ಟು ವಿದ್ಯಾಭ್ಯಾಸದಲ್ಲಿ ಮುಂದುವರಿದುದನ್ನು ನಾವೆಂದು ನೋಡುತ್ತಲಿದ್ದೇವೆ. ಒಂದೊಂದು ಸಮಾಜದ ಉತ್ಕರ್ಷದ ಧ್ಯೇಯವನ್ನಿಟ್ಟುಕೊಂಡು ಕಾರ್ಯಮಾಡುವ ಒಬ್ಬೊಬ್ಬ ಮುಂದಾಳುವು ಹೊರಟಲ್ಲಿ ನಮ್ಮ ನಾಡಿನ ಸಾಂಸ್ಕೃತಿಕ ಉನ್ನತಿಯು ಅದರೊಡನೆಯೆ ರಾಜಕೀಯ ಪ್ರಗತಿಯು ಹಾಂ ಹಾಂ ಎನ್ನುವುದರಲ್ಲಿ ಆಗಬಹುದು. ರಾ. ಬ. ಆರಟಾಳರವರು ಹಾಕಿಕೊಟ್ಟ ಮಾದರಿಯನ್ನು ಇನ್ನುಳಿದ ಸಮಾಜದ ಮುಂದಾಳುಗಳು ಆವಶ್ಯಕವಾಗಿ ತಿಳಿಯಬೇಕಾಗಿದೆ.

ರಾ. ಬ. ಆರಟಾಳರವರು ಧಾರವಾಡ ಜಿಲ್ಲೆಯ ಅರಟಾಳ ಎಂಬ ಹೆಸರಿನ ಗ್ರಾಮದಲ್ಲಿ ೧೮೪೯ರಲ್ಲಿ ಹುಟ್ಟಿದರು. ಕಷ್ಟಪಟ್ಟು ಇಂಗ್ಲಿಷ್ ಅಭ್ಯಾಸವನ್ನು ಮಾಡಿ, ರೆವಿನ್ಯೂ ಖಾತೆಯಲ್ಲಿ ಕೆಲಸಕ್ಕೆ ಸೇರಿ, ಕೊನೆಗೆ ಡಿ. ಡಿ. ಕಲೆಕ್ಟರ್ ಅಧಿಕಾರದವರೆಗೆ ಏರಿ ಕಾರ್ಯನಿವೃತ್ತರಾದರು. ಸರಕಾರವು ಇವರ ಕಾರ್ಯಪದ್ಧತಿಗೆ ಮೆಚ್ಚಿ 'ರಾವ ಬಹಾದ್ದೂರ್' 'ಸಿ. ಐ. ಓ' ಮೊದಲಾದ ಬಿರುದುಗಳನ್ನು ಕೊಟ್ಟಿದ್ದಿತು. ಕಳೆದ ಅಕ್ಟೋಬರ್ ತಿಂಗಳ ೪ನೆಯ ತಾರೀಖು ಮಂಗಳವಾರ ಹಗಲು ೪ಕ್ಕೆ ಗಂಟೆಗೆ ರಾ. ಬ. ಅವರು ಕೈಲಾಸವಾಸಿಗಳಾಗಿ, ಕನ್ನಡನಾಡಿನಲ್ಲಿ ಕಂಬನಿಯ ಕಾಲುವೆ ಹರಿಯುವಂತೆ ಮಾಡಿ ಹೋದರು. ಅಂತ್ಯಸಮಯದಲ್ಲಿ ಅವರಿಗೆ ೮೩ ವರ್ಷದ ವಯಸ್ಸು.

ಲೋಕದಲ್ಲಿ ಹುಟ್ಟುವವರೆಷ್ಟೊ ಸಾಯುವವರೆಷ್ಟೊ! ಅವರೆಲ್ಲರ ಹೆಸರು ಎಲ್ಲಿರುವುದು? ಅವರ ಜೀವನದ ಕೊನೆಯೊಡನೆ ಅವರ ಹೆಸರೂ ಅಳಿಸಿ ಹೋಗುವುದು. ರಾ. ಬ. ಆರಟಾಳ ಅವರ ಕೀರ್ತಿಶರೀರವು ಕನ್ನಡನಾಡಿನಲ್ಲಿ ಬಹುಕಾಲ ಬಾಳುವಂತಹದಾಗಿದೆ. ಪರಮಾತ್ಮನು ಅವರ ಆತ್ಮಕ್ಕೆ ಶಾಂತಿಯನ್ನು ಕೊಡಲಿ!

## ದಿವಂಗತ ವಿ. ಎಸ್. ಕಾಮತರು

ಮಂಗಳೂರಿನ ಸ್ವದೇಶಾಭಿಮಾನಿ ಪತ್ರಿಕೆಯ ಸಂಪಾದಕರೂ 'ಕೆನರಾ ಪಬ್ಲಿಕ್ ಕನ್ವೇಯೆನ್ಸ್ ಕಂಪನಿ'ಯ ಸೂತ್ರಧಾರರೂ ಆಗಿದ್ದ ಶ್ರೀ. ವಿ. ಎಸ್. ಕಾಮತರು ಇತ್ತೀಚೆಗೆ ಅಗ್ನಿಮಾಂದ್ಯ ರೋಗದಿಂದ ಪೀಡಿತರಾಗಿದ್ದು ಇದೇ ತಿಂಗಳ ೧೫ನೆಯ ತಾರೀಖಿನ ದಿವಸ ಕಾಲವಶರಾದರೆಂದು ತಿಳಿಸಲು ಅತಿ ವಿಷಾದವಾಗುತ್ತದೆ. ದಿವಂಗತರು ಗೌಡಸಾರಸ್ವತಸಮಾಜದ ಸುಪ್ರಸಿದ್ಧ ವ್ಯಕ್ತಿಗಳೂ ದಕ್ಷಿಣ ಕನ್ನಡದ ಪ್ರಮುಖ ವ್ಯಕ್ತಿಗಳಲ್ಲಿ ಗಣನೀಯರೂ ಅಸಾಮಾನ್ಯಕಾರ್ಯಕೌಶಲವುಳ್ಳವರೂ ಆಗಿದ್ದು, ಕಳೆದ ೩೦ ವರ್ಷಗಳಿಂದಲೂ ಸ್ವತಂತ್ರವ್ಯವಹಾರದಲ್ಲಿ ವಿಖ್ಯಾತರಾಗಿದ್ದರು. ದಕ್ಷಿಣಕನ್ನಡದಲ್ಲಿ ಜೀವಂತವಾಗಿರುವ ಕನ್ನಡ ವಾರಪತ್ರಿಕೆಗಳಲ್ಲಿ ಹಿರಿಯದೆನಿಸುವ ಸ್ವದೇಶಾಭಿಮಾನಿಯ ಜನ್ಮದಾತೃಗಳೆಂದರೆ ಇವರೆ; ಅಲ್ಲಿಯ ಪ್ರಸಿದ್ಧ ಮುದ್ರಣಾಲಯಗಳಲ್ಲಿ ಒಂದಾದ ಶಾರದಾ ಮುದ್ರಾಲಯದ ಸ್ಥಾಪಕರು ಇವರೆ; ಸುವ್ಯವಸ್ಥಿತವಾದ ಮೋಟರ್ ಕಂಪನಿಗಳಲ್ಲಿ ಅಗ್ರಗಣನೀಯವಾಗಿ ಸರ್ವತ್ರ ಹೆಸರುಗೊಂಡ ಕನ್ವೇಯೆನ್ಸ್ ಕಂಪನಿಯ ಪ್ರಾಣರೂಪರೂ ಇವರೆ ಆಗಿದ್ದರು. ಇಂಥವರ ಮರಣದಿಂದ ದಕ್ಷಿಣಕನ್ನಡದ ಸಾರ್ವಜನಿಕ ಜೀವನದ ಜ್ಯೋತಿಯೊಂದು ಕಣ್ಮರೆಯಾಯಿತೆಂದರೆ ಅತಿಶಯೋಕ್ತಿಯಲ್ಲ. ದಿವಂಗತರ ಆತ್ಮಕ್ಕೆ ಪರಮಾತ್ಮನು ಶಾಂತಿಯನ್ನೀಯಲಿ!



CC-0. Jangamwadi Math Collection. Digitized by eGangotri

# ಸಾದರಸ್ವೀಕಾರ

೧೭೫ ಮಯೂರ (ಐತಿಹಾಸಿಕ ಕಾದಂಬರಿ) ಶ್ರೀ. ದೇವುಡು ನರಸಿಂಹಶಾಸ್ತ್ರಿಗಳು ಬರೆದು, ಬೆಂಗಳೂರಿನ ಬಳೇಪೇಟೆಯಲ್ಲಿರುವ ಕೃಷ್ಣಾ ಕಂಪನಿಯವರು ಪ್ರಕಟಿಸಿದುದು. ಕ್ರೌ. ಅ. ೨೬೭ ಪುಟ. ಬೆಲೆ ೧-೮-೦

೧೭೬ ನವೀನ ವಿದ್ಯಾಭ್ಯಾಸ ಮತ್ತು ಆಧುನಿಕ ಶಿಕ್ಷಣ ಪದ್ಧತಿಗಳು. (ಭಾಗ ೧-ಸಚಿತ್ರ). ಲೇಖಕರು:-ಶ್ರೀ. ಎಂ. ವೆಂಕೋಬಾಚಾರ್ಯ ಬಿ. ಎ. ಬಿ. ಟಿ. (ಮೈಸೂರು ಎಡ್ಯುಕೇಷನಲ್ ಸರ್ವಿಸ್). ಪುಸ್ತಕ ದೊರೆಯುವ ಸ್ಥಳ: "ಸುಬೋಧ ಪ್ರಕಟನಾಲಯ ನ್ಯೂಮಾರ್ಕೆಟ್-ಬೆಂಗಳೂರು ನಗರ" ಕ್ರೌ. ಅ. ೧೨೫ ಪುಟಗಳು. ಬೆಲೆ ೧-೪-೦

೧೭೭ ಶ್ರೀರಾಮಕೃಷ್ಣವಚನಾಮೃತ (ಪ್ರಥಮ ಭಾಗ, ಸಚಿತ್ರ). ಬೆಂಗಳೂರು ಬಸವನ ಗುಡಿಯಲ್ಲಿರುವ ಶ್ರೀರಾಮಕೃಷ್ಣಾಶ್ರಮದಿಂದ ಪ್ರಕಟಿಸಲಾಗಿದೆ. ಡೆ. ಅ. ೨೭೨ ಪುಟ. ಬೆಲೆ ೧-೪-೦

೧೭೮ ನನ್ನ ಹಿಮಾಲಯಯಾತ್ರೆ. (ಚಿತ್ರಮಯ) ಲೇಖಕರು:-ಶ್ರೀ. ಕೃಷ್ಣ ಗೋಸಾವಿ, ಭಾರತಸಂಚಾರಿ. ಪ್ರಕಾಶಕರು:- ಶ್ರೀ. ಸು. ಶಿ. ದೇಸಾಯಿ ಎಂ. ಎ. ಕಾರ್ಯದರ್ಶಿ ಕರ್ನಾಟಕ ಶಿಕ್ಷಣಸಮಿತಿ ಧಾರವಾಡ. ಕ್ರೌ. ಅ. ೧೨೦ ಪುಟ. ಬೆಲೆ ೧-೦-೦

೧೭೯ ಉಪದೇಶ ಸಾಹಸ್ರಿ. (ಗದ್ಯ ಭಾಗ) ಅನುವಾದಕರು ಶ್ರೀ. ವೈ. ಸುಬ್ಬರಾಯರು. ಅಧ್ಯಾತ್ಮಪ್ರಕಾಶ ಕಾರ್ಯಾಲಯ, ಬೆಂಗಳೂರು ಸಿಟಿ. ಅವರಲ್ಲಿ ದೊರೆಯುವುದು. ಕ್ರೌ. ಅ. ೨೬ ಪುಟ. ಬೆಲೆ ೧-೦-೦

೧೮೦ ತತ್ತ್ವಸಮಾಸ (ವಿವರಣೆಯಿಂದೊಡಗೂಡಿದ ಕಪಿಲಸೂತ್ರಗಳು). ಅನುವಾದಕರು ಶ್ರೀ. ವೈ. ಸುಬ್ಬರಾಯರು. ಕ್ರೌ. ಅ. ೪೬ ಪುಟ. ಬೆಲೆ ೦-೪-೦

೧೮೧ ಗಣೇಶಾಷ್ಟಕ (ಭಾವಾರ್ಥ ವಿವರಣೆಗಳೊಡನೆ) ವಿವರಣಕಾರ:- ಶ್ರೀ. ವೈ. ಸುಬ್ಬರಾಯರು. ಕ್ರೌ. ಅ. ೨೪ ಪುಟ. ಬೆಲೆ ೦-೩-೦

೧೮೨ ಹಿಂದೂ-ಮುಸಲ್ಮಾನ (ಚಿಕ್ಕ ಕಥೆ) ಬರೆದವರು:- ಶ್ರೀ. ಪ್ರ. ಗೋ. ಕುಲಕರ್ಣಿಯವರು. ಬೆಳಗಾಂವಿಯ ಒಂದಾಣೆಮಾಲೆಯ ಹನ್ನೊಂದನೆಯ ಪುಷ್ಪವಿದು. ಕ್ರೌ. ಅ. ೧೭ ಪುಟಗಳು.

೧೮೩ ಶ್ರೀಮನ್ಮಹಾರಾಜ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್ ಮಹಾಸ್ವಾಮಿಯವರ ಸಂಕ್ಷಿಪ್ತ ಚರಿತ್ರೆ. (ಮಕ್ಕಳ ಸಲುವಾಗಿ ಪ್ರಕಟಿಸಿದುದು) ಲೇ. ಶ್ರೀ. ಎಲ್. ಸ್ವಾಮಿರಾಯರು ಬಿ. ಎ. ಬೆಂಗಳೂರು. ಕ್ರೌ. ಅ. ೧೧ ಪುಟಗಳು.

೧೮೪ ಗಾಂಧಿ-ಚರಕ: ಮ. ಶ್ರೀ. ನಾ. ಪೈ ಅವರಿಂದ ರಚಿಸಲ್ಪಟ್ಟು ಉಡುಪಿಯ ಖಾದೀಸಿಲಯದಿಂದ ಶ್ರೀ. ಗಾಂಧಿ ಜಯಂತಿಯ ಕಾಣಿಕೆಯಾಗಿ ಪ್ರಕಟಿತವಾದುದು. ಕ್ರೌ. ಅ. ೯೮ ಪುಟಗಳು.

೧೮೫ ಸತ್ತ್ವಪರೀಕ್ಷೆ. ಶ್ರೀ. ಎನ್. ಎಸ್. ಜೈನಿ ಅವರು ಬರೆದುದನ್ನು ದಕ್ಷಿಣಕನ್ನಡ ಜಿಲ್ಲೆಯ ನೆಲ್ಲಿಕಾರು ಪಣಪಿಲ ಅರಮನೇ ಶ್ರೀ. ದೇಜಮ್ಮನವರು ಪ್ರಕಟಿಸಿದ್ದಾರೆ. ೧೬ ಪುಟ್ಟ ಪುಟ. ಬೆಲೆ "ಸತೀತ್ವರಕ್ಷಣೆ"

೧೮೬ ಸ್ವದೇಶೀ ಪ್ರಚಾರಕ. ಕನ್ನಡ ಮಾಸಪತ್ರಿಕೆ ೧ನೆಯ ವರ್ಷದ ೧ನೆಯ ಸಂಚಿಕೆ. ಸಂಪಾದಕರು ಶ್ರೀ. ಎಂ. ಬಾಬೂರಾಯ ಪ್ರಭು, ಬಿ. ಎ. ದಕ್ಷಿಣಕನ್ನಡ ಜಿಲ್ಲೆಯ ಸ್ವದೇಶೀ ಯುವಕಸಂಘದಿಂದ ಮಂಗಳೂರಲ್ಲಿ ಹೊರಡುವುದು. ಡೆ. ೧/೪ ದ ೨೪ ಪುಟ. ವಾ. ಚಂ. ಅ. ಪೆ. ಸೇರಿ ೧-೪-೦.

೧೮೭ ಬೆಂಗಳೂರಿನ ಶಂಕರಸಪ್ತಾಹದ ವೃತ್ತಾಂತ; (ಅಂಗಿರಸ ಸಂವತ್ಸರ-ಶಕೆ ೧೮೫೪) ಅಧ್ಯಾತ್ಮಪ್ರಕಾಶ ಮುದ್ರಣಾಲಯದಲ್ಲಿ ಅಚ್ಚಾಗಿ ಪ್ರಕಟವಾಗಿದೆ.

೧೮೮ ಮೈಸೂರು ಭಗಿನೀ ಸೇವಾಸಮಾಜದ ಒಂಬತ್ತನೆಯ (೧೯೩೧-೩೨) ವಾರ್ಷಿಕ ವರದಿ.

೧೯೦ ಬೆಳಗಾಂವಿಯ ಕರ್ನಾಟಕ ಸಾಹಿತ್ಯಸೇವಾ ಮಂಡಲದ (ತುಂಟರ ತಂಡ) ಮೂರನೆಯ ವರ್ಷದ ವರದಿ.

೧೯೧ ಪಂಚರಾತ್ರ:- ಶ್ರೀ. ನಾರಾಯಣಶಾಸ್ತ್ರಿಗಳು ಕನ್ನಡಿಸಿದ ಭಾಸಕವಿಯ ನಾಟಕ. ಸುಂದರವಾದ ಗರಿಯ ಕಾಗದಗಳ ಮೇಲೆ ಸುಂದರವಾದ ಅಚ್ಚು. ಬಣ್ಣದ ಚೆಲುವಾದ ಹೊದಿಕೆ. ಸು. ೭೫ ಪುಟಗಳು. ಶ್ರೀ. ಕೆ. ಎಂ. ಪುಟ್ಟಪ್ಪನವರ ಮುನ್ನುಡಿಯಿದೆ. ಬೆಲೆ ೧-೪-೦

CC-0. Jangamwadi Math Collection. Digitized by eGangotri

# ದಿವಂಗತ ಗುಂಜಿ ಕೃಷ್ಣರಾಯರು

ಹಳೆಯ ಪೀಳಿಗೆಯಲ್ಲಿನ ಕರ್ನಾಟಕ ವತ್ಸಲರನ್ನೂ ಸಮಾಜಸೇವಕರನ್ನೂ ಕನ್ನಡನಾಡು ಒಬ್ಬೊಬ್ಬರನ್ನಾಗಿ ಕಳೆದುಕೊಳ್ಳುತ್ತಿದೆ. ಈ ತಿಂಗಳ 'ಜಯಕರ್ನಾಟಕ'ದ ಅಚ್ಚೆಲ್ಲ ಮುಗಿದು ಹೋಗುವುದರೊಳಗಾಗಿ ಶ್ರೀಮಾನ್ ಗುಂಜಿ ಕೃಷ್ಣರಾಯರ ನಿಧನವಾರ್ತೆಯನ್ನು ಕೇಳಿದೆವು. ಈ ಹೆಚ್ಚೋಲೆಯಲ್ಲಿ, ಅವರ ಅಗಲಿಕೆಯಿಂದ ಸಮ್ಮತ್ತ ಕಡೆಯ ಹಲವು ಬಗೆಯ ದೇಶಸೇವೆಯ ಕಾರ್ಯಗಳಿಗೆ ಎಂತಹ ಧಕ್ಕೆ ತಗಲಿದೆಯೆಂಬುದನ್ನು ಸೂಚಿಸಲಪೇಕ್ಷಿಸುವೆವು.



೧೮೭೩ನೆಯ ಇಸ್ವಿಯ ಎಪ್ರಿಲ್ ೧೦ನೆಯ ತಾರೀಖು ಅವರ ಜನ್ಮದಿನ. ಅವರು ಪ್ರಾಥಮಿಕ ಶಾಲೆಯಿಂದ ಪ್ರೌಢ ವಿದ್ಯಾಭ್ಯಾಸದ ವರೆಗೂ ಎಲ್ಲ ಶಿಕ್ಷಣವನ್ನು, ಹಿರಿಯರ ಸಾಹಾಯ್ಯವಿಲ್ಲದೆ, ತಮ್ಮ ಕಾಲಮೇಲೆಯೆ ಸಂಪಾದಿಸಿದರೆಂಬುದು ಒಂದು ವಿಶೇಷ. ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ಅವರಿಗೆ ಭಾವುದಾಜಿಯವರ ಮೆಚ್ಚು ದೊರೆತಿತಲ್ಲದೆ, ಅವರು ಪ್ರಸಿದ್ಧರಾದ ಡಾ. ಸೆಲ್ಬಿಯವರ ವಿಶ್ವಸ್ತ ವಿದ್ಯಾರ್ಥಿಗಳಿದ್ದು, ಮೂರುವರ್ಷಕಾಲ ಆ ಕಾಲೇಜಿನ ಫೆಲೊ ಆಗಿದ್ದರು. (ಹೀಗೆ, ಮೂರನೆಯವರ್ಷ ಪರ್ಯಂತರ ಫೆಲೊ ಶಿಪ್ಪನ್ನು ಈ ವರೆಗೆ ಇನ್ನಾರೂ ಪಡೆದಿಲ್ಲ.) ಆಟಗಳಲ್ಲಿ ಅವರು ಒಳ್ಳೆಯ ನಿಪುಣರಾಗಿದ್ದರು. ಅವರ ಪ್ರೌಢ ವಯಸ್ಸು ಸರಕಾರಿ ಕೆಲಸಗಳಲ್ಲಿ ಹೋಯಿತು. ಅವರು ಮೊದಲು ರೆವಿನ್ಯೂ ಖಾತೆಯಲ್ಲಿ ಸೇರಿದ್ದು, ಡಿ. ಡಿ. ಸಿ. ಸ್ಥಾನದ ವರೆಗೆ ಏರಿ, ೧೯೨೮ರಲ್ಲಿ ನಿವೃತ್ತರಾದರು.

ಅವರ ಜೀವನದ ವಿಶೇಷವೆಂದರೆ, ವಿದ್ಯಾಭಿಮಾನ, ಸಾರ್ವಜನಿಕ ಕಾರ್ಯವಾತ್ಸಲ್ಯ ಮತ್ತು ಕನ್ನಡನಾಡಿನ ಏಳ್ಗೆಯ ಬಗೆಗೆ ಅವ್ಯಾಜ ಪ್ರೇಮ. ಇವರ ತಾರುಣ್ಯದ ಬಗೆಗೆ ಒಂದು ಕಥೆಯಿದೆ. ಮೊತ್ತಮೊದಲು ಇಲ್ಲಿಯ ರೆವಿನ್ಯೂ ಖಾತೆಯಲ್ಲಿ ನೇಮ್ಣಡಿಯಾದಾಗ, ಅತ್ಯಲ್ಪ ವೇತನವಿದ್ದರೂ, ಅವರು ತಮ್ಮ ಮೇಲಧಿಕಾರಿಯ ಅಪ್ಪಣೆಯನ್ನು ಪಡೆದು ಇಲ್ಲಿಯ ಹೈಸ್ಕೂಲಿನಲ್ಲಿ ಪ್ರತಿದಿನ ಕೆಲ ಹೊತ್ತು ಗೌರವಶಿಕ್ಷಕರಾಗಿ ಕೆಲಸಮಾಡಿ ಹೋಗುತ್ತಿದ್ದರಂತೆ. ಕಾರ್ಯನಿವೃತ್ತರಾದ ಮೇಲೆ, ಹೆಣ್ಣುಮಕ್ಕಳಲ್ಲಿ ವಿದ್ಯಾಪ್ರಸಾರವಾಗಬೇಕೆಂದು, ಆದೇ ಸ್ಥಾಪಿತವಾದ ಇಲ್ಲಿನ ಕರ್ನಾಟಕ ಮಹಿಳಾವಿದ್ಯಾಲಯದಲ್ಲಿ ಗೌರವ ಶಿಕ್ಷಕರಾಗಿ ಕೆಲಸ ಮಾಡಿದರಲ್ಲದೆ, ಆ ಸಂಸ್ಥೆಯ ಅಧ್ಯಕ್ಷರಾಗಿಯೂ ಇದ್ದರು. ಇಲ್ಲಿಯ ಕರ್ನಾಟಕ ಎಜ್ಯುಕೇಶನ್ ಬೋರ್ಡಿನ ಗೌರವಾಧ್ಯಕ್ಷರಾಗಿದ್ದು, ಮಾನವಮಿ ಉತ್ಸವವೇ ಮೊದಲಾದ ಎಲ್ಲ ಬಗೆಯ ಕರ್ನಾಟಕಾಭ್ಯುದಯದ ಕೆಲಸಗಳಲ್ಲಿ ಮುಂದಾಗಿರುತ್ತಿದ್ದರು. ಮುಪ್ಪಿನ ಮುದುಕರಾಗಿದ್ದರೂ, ಹರಯದವರ ಆಶೆ ಆಕಾಂಕ್ಷೆಗಳನ್ನು ಅರಿತುಕೊಂಡು, ತಮ್ಮ ಸಕ್ರಿಯ ಸಹಾನುಭೂತಿಯನ್ನು ತೋರುತ್ತಿದ್ದರೆಂಬುದು ಅವರ ದೊಡ್ಡ ಗುಣ. ಧಾರವಾಡದಲ್ಲಿ ತರುಣರು ಕೈಕೊಂಡಿರುವ ಎಲ್ಲ ಸಾಹಿತ್ಯ–ಸಂಸ್ಕೃತಿವಿಷಯಕ ಉದ್ಯಮಗಳಿಗೂ ಇವರ ಬೆಂಬಲವಿದ್ದಿತು. ಇವರ ಮೂವರು ಮಕ್ಕಳೂ ಒಳ್ಳೆಯ ವಿದ್ಯಾವಂತರಾಗಿದ್ದಾರೆ. ತೀರ ಮೊನ್ನೆ ಮೊನ್ನೆ ಇಲ್ಲಿಯ ಮಾನವಮಿ ಉತ್ಸವ ಮಂಡಲದ ಅಧ್ಯಕ್ಷರಲೊಬ್ಬರು ಇವರಿದ್ದುದು ಇವರ ಕರ್ನಾಟಕ ಪ್ರೇಮಕ್ಕೆ ಸಾಕ್ಷಿಯಾಗಿದೆ. ಇವರ ಮನೆತನದವರ ಶೋಕದಲ್ಲಿ ಕನ್ನಡಿಗರೆಲ್ಲರೂ ಭಾಗಿಗಳಾಗಿದ್ದಾರೆಂದು ನಾವು ಸೂಚಿಸಲಪೇಕ್ಷಿಸುತ್ತೇವೆ.

JADGURU VISHWARADHYA
SIMHASAN JNANAMANDIR
LIBRARY
Jangamawadi Math, Varanasi
Acc. No. ......4828.......

CC-0. Jangamwadi Math Collection. Digitized by eGangotri

# ಕಿರ್ಲೋಸ್ಕರ

## 'ಕಲ್ಯಾಣ' ಪೊವರ ಶೇಂಗಾ ಒಡೆಯುವ ಯಂತ್ರ

೮ ಅಶ್ವಶಕ್ತಿ
ಏಂಜಿನದಿಂದ
ತಿರುಗುವದು.

---

ತಾಸಿನಲ್ಲಿ
೭೫ ರಿಂದ ೮೦
ಚೀಲ ಶೇಂಗಾ
ಒಡೆಯುವದು.



ಪೇಟಂಟ
ನಂ. ೧೪೦೪೫

---

ಸಾದಾಮಾಟ
ಬಲಿದಾದ ರಚನೆ.
ಹಿರಿದಾದ ಶಕ್ತಿ

---

ತಾಸಿಗೆ ೩೫ರಿಂದ ೩೭ ಚೀಲ
ಶೇಂಗಾಕಾಳುಗಳನ್ನು
ತಯಾರಿಸುವದು.

**ಬೀಟರ ಯಂತ್ರವನ್ನು ಪಯೋಗಿಸಿದಲ್ಲಿ**

ಕಾಳು ಒಡೆಯಲ್ಪಟ್ಟು ಬೇಳೆಗಳಾಗುವವು. ಈ ಯಂತ್ರದಲ್ಲಿ ಬೀಟರ ಇಲ್ಲ. ಮೂವ್ಹಿಂಗಪ್ಲೇಟುಗಳು ಜಾಳಿಯ ಮೇಲೆ ಅಂಗೈಯಿಂದ ತಿಕ್ಕಲ್ಪಡುವಂತೆ ಶೇಂಗಾಗಳನ್ನು ತಿಕ್ಕಿ ಕಾಳುಗಳನ್ನು ಬೇರೆ ಮಾಡುವವು

ಇದಕ್ಕೆ ಸ್ಟೋನ್ಸ ಸಪರೇಟರ ಅಂದರೆ ಹರಳು ಕಲ್ಲುಗಳನ್ನು ಬೇರೆ ಮಾಡುವ ಯಂತ್ರವನ್ನು ಜೋಡಿಸಿರುತ್ತದೆ. ಅದರಿಂದ ಶೇಂಗಾಗಳಲ್ಲಿಯ ಹರಳು ಕಲ್ಲುಗಳು ಬೇರೆಯಾಗಿ ಜಾಳಿಗೆಯನ್ನು ಕೆಡಿಸುವದಿಲ್ಲ. ಬೆಲೆ ೫೧೦ರೂ. ವರ್ತಕರಿಗೆ ಸವಲತ್ತು. ಇಂದೇ ಕಾಗದಬರೆಯಿರಿ.

ಕಿರ್ಲೋಸ್ಕರ ಬಂಧುಗಳು- ಲಿ.
ಕಿರ್ಲೋಸ್ಕರವಾಡಿ, ಜಿ. ಸಾತಾರಾ.

ನಮ್ಮ ಏಜಂಟರು
೧ ಹುದ್ದಾರ ಬಂಧುಗಳು ಧಾರವಾಡ. ೨ ಎಸ್. ಎಚ್. ರಾಯಚೂರ, ಹುಬ್ಬಳ್ಳಿ;
೩ ಖರೇ, ಹರೋಲೀಕರ, ಕುರುಡಗೀ ಚೌಕ ಗದಗು.

CC-0. Jangamwadi Math Collection. Digitized by eGangotri

ಭಿಷಗ್ರತ್ನ

## ಪಾಳ್ಯದ ವೆಂಕಟಾಚಲ ಪಂಡಿತರ ಸಿದ್ಧೌಷಧಗಳು.

### ಲೋಕಾಮಯಹರ ಕಸ್ತೂರಿ ಮಾತ್ರೆಗಳನ್ನು ಈಗಲಾದರೂ ಪರೀಕ್ಷಿಸಿ ನೋಡಿರಿ!

### ಪ್ರತಿವರ್ಷವೂ ಲಕ್ಷಾಂತರ ಸೀಸೆಗಳು ವಿಕ್ರಯವಾಗುತ್ತಿವೆ.

ಇಂಡಿಯದವರು ಮಾತ್ರವಲ್ಲ; ಬರ್ಮಾ, ಸಿಲೋನ, ಮಲೇಯಸ್ಟೇಟ, ಗೋವಾ, ಫಿಜಿಐಲೇಂಡ್, ಈಸ್ಟಾಫ್ರಿಕಾ ಮೊದಲಾದ ಕಡೆಯವರೂ ಕೂಡ ಈ ಸಿದ್ಧೌಷಧಿಯನ್ನು ಉಪಯೋಗಿಸುತ್ತಿರುತ್ತಾರೆ.




ಮಹಾಭಾಗ, ಒಂದೇ ಒಂದು ಲೋಕಾಮಯಹರ ಕಸ್ತೂರಿ ಮಾತ್ರೆಯ ಸೀಸೆಯು ನಿಮ್ಮ ಮನೆಯಲ್ಲಿದ್ದರೆ ಮಾತುಮಾತಿಗೂ ವೈದ್ಯರ ಸಮಯವನ್ನು ಕಾದು ಮೋರೆಯಿಡುವದು ನಿಜವಾಗಿಯೂ ತಪ್ಪುವದು.

ಶೀತ, ಶೀತವಾಯು, ಅಜೀರ್ಣ, ಪಾರ್ಶ್ವವಾಯು, ಜ್ವರ, ಮಂದ, ಮಲಬದ್ಧ, ಕೆಮ್ಮು ಗಸಬೇನೆ, ಬಲಹೀನತೆ, ಕೆಟ್ಟಹವಾ ಮತ್ತು ಕೆಡುಕಾದ ಎಳವು, ಕೆಮ್ಮು, ವಾಯು ಇನ್ನೂ ಅನೇಕ ರೋಗಗಳನ್ನು ಈ ಸಿದ್ಧಾಮೃತವು ಆಶ್ಚರ್ಯವಾಗುವಂತೆ ಗುಣಪಡಿಸುತ್ತದೆ.

ರೆಜಿಸ್ಟರಾದ ಈ ವ್ಯಾಪಾರದ ಗುರ್ತು ಪ್ರತಿ ಸೀಸೆಯ ಮೇಲೂ ಇರುವುದನ್ನೇ ನೋಡಿ ತೆಗೆದುಕೊಳ್ಳಬೇಕು. ಅನುಪಾನ ಪ್ರತಿ ಸೀಸೆಯೊಡನೆಯೂ ಇರುವುದು. ೨೦೦ ಮಾತ್ರೆಗಳುಳ್ಳ ಕುಪ್ಪಿಗೆ ೪ ಆಣೆ ಮಾತ್ರ.

| | | | |
|---|---|---|---|
| ಪ್ರತಿ ೬ ಸೀಸೆಗಳನ್ನು ಒಟ್ಟಿಗೆ ತರಿಸಿದರೆ ಟಪ್ಪಾಲು ಖರ್ಚು ಸೇರಿ ರೂ. | | | ೧—೮—೦ |
| ,, ೧೨ | ,, | ,, | ೨—೧೨—೦ |
| ,, ೨೫ | ,, | ,, | ೫—೨—೦ |

### ಯೋಗ್ಯತಾ ಪತ್ರಗಳು

ಡಾಕ್ಟರ ಪ್ರಭಾಕರ, ಫೆಲೋ ಆಫ್ ದಿ ಆಯುರ್ವೇದಿಕ್ ಯೂನಿವರ್ಸಿಟಿ ಗ್ರಾಜ್ಯುಯೇಟ, ಎನ್ ವೈ ಇನ್‌ಸ್ಟಿಟ್ಯೂಟ ಆಪ್ ಸೈನ್‌ಸ್, ಯುನೈಟೈಡ್ ಸ್ಟೇಟ್ಸ ಅಮೇರಿಕ, ಎಂಡ್ ಆಫ್ ದಿ ಸ್ಯಾನಿಟರಿ ಇನ್ ಸ್ಟಿಟ್ಯೂಟ್, ಲಂಡನ್, ಕನ್‌ಸಲ್ಟಿಂಗ್ ಕೆಮಿಸ್ಟ್, ಎಗಿಯರೀವಿನ್ ಸಂ. ೨ ಬೊಂಬೈ ಇವರು ಬರೆದಿರುವದು " ತಮ್ಮ ಲೋಕಾಮಯಹರ ಕಸ್ತೂರಿ ಮಾತ್ರೆಗಳನ್ನು ಉಪಯೋಗಿಸುವದರಲ್ಲಿ ಶ್ವಾಸೋಚ್ಛ್ವಾಸಗಳ ವ್ಯತ್ಯಾಸ, ಅಜೀರ್ಣ, ಮಲಬದ್ಧತೆ, ಪಕ್ಕೆಯ ನೋವು, ಹೊಟ್ಟೆ ನೋವು ದಿನಗಟ್ಟಲೆಯ ಜ್ವರ, ಪಿತ್ತಸಂಬಂಧವಾದ ರೋಗ, ಮಕ್ಕಳ ಎಳವು ವಾಯುಗಳೆಲ್ಲವೂ ಗುಣವಾಗಿರುತ್ತವೆ. ತಮ್ಮಲ್ಲಿಗೆ ಪ್ರತಿನಿತ್ಯವೂ ಬರುವ ರೋಗಿಗಳಿಗೆ ಈ ಕಸ್ತೂರಿ ಮಾತ್ರೆಗಳನ್ನೇ ಸ್ವದೇಶೀ ವೈದ್ಯರು ಮುಖ್ಯವಾಗಿ ಕೊಡಬೇಕೆಂದು ಶಿಫಾರಸ ಮಾಡುತ್ತೇನೆ. "

ಡಾಕ್ಟರ ಪಿ. ಎಸ್. ಅಚ್ಯುತರಾವ, ಲೇಟ್ ಸೀನಿಯರ ಸರ್ಜನ್ ಮತ್ತು ಸ್ಯಾನಿಟರಿ ಕಮಿಶನರ್ ಮೈಸೂರ ಗೌರ್ನಮೆಂಟ ಇವರು ಬರೆದಿರುವದು—ಲೋಕಾಮಯಹರ ಕಸ್ತೂರಿ ಮಾತ್ರೆಗಳನ್ನು ನಾನು ಉಪಯೋಗಿಸಿದ್ದೇನೆ. ಪಂಡಿತರವರಿಂದ ಪ್ರಸಿದ್ಧಪಡಿಸಿರುವಂತೆ ಅನೇಕ ಉತ್ಕೃಷ್ಟವಾದ ಗುಣಗಳನ್ನು ಈ ಗುಳಿಗೆಗಳು ಹೊಂದಿವೆ ಎಂಬದಾಗಿ ತಿಳಿಸಲು ನಾನು ತುಂಬಾ ಆನಂದಭರಿತನಾಗಿದ್ದೇನೆ. ವೈದ್ಯಶಾಲೆಯಲ್ಲಿ ಅನೇಕ ತರಹ ಉಪಯುಕ್ತವಾದ ಕರ್ನಾಟಕ ಮೂಲಿಕೆಗಳಿಂದಲೇ ಇವರ ಔಷಧವನ್ನು ತಯಾರು ಮಾಡುತ್ತಿರುತ್ತಾರೆ.

**ಸಮಸ್ತ ರೋಗಗಳಿಗೂ ನಮ್ಮಲ್ಲಿ ಆಯುರ್ವೇದೀಯ ಸಿದ್ಧೌಷಧಿಗಳು ದೊರೆಯುತ್ತವೆ.**

**ಕ್ಯಾಟಲಾಗು ಉಚಿತ.**

**ವಿಳಾಸ:—ಶ್ರೀ ಸೀತಾರಾಘವ ವೈದ್ಯಶಾಲಾ, ಮೈಸೂರು**


ಈ ಪತ್ರಿಕೆಯನ್ನು ಕೃಷ್ಣ ಗು. ರಾಚಾರ್ಯ ರಾಯದುರ್ಗ ಇವರು ಜಯಕರ್ನಾಟಕ ಮುದ್ರಾಲಯ ಧಾರವಾಡದಲ್ಲಿ ಮುದ್ರಿಸಿದರು.
ಮತ್ತು ಶೇ. ಷೋ. ಗೋವಿಂದ ಕುಲಕರ್ಣಿಯವರು ಧಾರವಾಡ ಸಾಧನಕೇರಿಯಲ್ಲಿರುವ ಜಯಕರ್ನಾಟಕ ಕಾರ್ಯಾಲಯದಲ್ಲಿ ಪ್ರಸಿದ್ಧಿಸಿದರು

CC-0. Jangamwadi Math Collection. Digitized by eGangotri

